**Government Oriental Library Series**

EDITED BY PANDITS UNDER THE SUPERVISION OF
THE CURATOR, GOVERNMENT ORIENTAL
LIBRARY, MYSORE.

**Kannada Section No. IV.**

ಕುಮಾರವ್ಯಾಸಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತದ
# ಆದಿಪರ್ವದೊಳ್
# ಸಂಭವಪರ್ವಂ

THE

# KARNATAKA MAHABHARATA

## SAMBHAVA PARVA

BY

KUMARAVYASA MAHAKAVI

EDITED BY

V. SYAMACHARYA,

*Pandit, Govt. Oriental Library,*
*Mysore.*

PUBLISHED UNDER THE AUTHORITY OF THE
GOVERNMENT OF HIS HIGHNESS THE
MAHARAJA OF MYSORE

MYSORE:
PRINTED AT THE GOVERNMENT BRANCH PRESS
1912

# ಅವತರಣಿಕೆ.

ಈ ಪುಸ್ತಕವು ಕರ್ಣಾಟಕಮಹಾಭಾರತದ ಮೊದಲನೆಯ ಸಂಚಿಕೆಯಾಗಿರುವುದು. ಈ ಮಹಾಭಾರತಗ್ರಂಥವು ತಿಳಿಗನ್ನಡದಲ್ಲಿ 'ಕುಮಾರವ್ಯಾಸ' ನೆಂದು ಪ್ರಸಿದ್ಧನಾದ ಕವಿಯಿಂದ ಭಾಮಿನೀಷಟ್ಪದಿಯಲ್ಲಿ ರಚಿಸಲ್ಪಟ್ಟಿದೆ. ಈ ಕವಿಯ ಭಾಷೆಯ ವಿಷಯದಲ್ಲಿಯೂ ಶೈಲಿಯ ವಿಷಯದಲ್ಲಿಯೂ ಹೇಳಬೇಕಾದ ವಿಷಯವೆಲ್ಲಾ (ಕನ್ನಡ ಸೆಕ್ಷನ್ ನಂಬರು ಮೂರನೆಯದಾದ) ಉಪೋದ್ಘಾತಸಂಚಿಕೆಯ ಅವತರಣಿಕೆಯಲ್ಲಿ ಹೇಳಿರುವುದಕ್ಕಿಂತಲೂ ಹೆಚ್ಚಿಲ್ಲವಾದುದರಿಂದ ಅವುಗಳನ್ನಿಲ್ಲಿಯೂ ಹೇಳಲಾವಶ್ಯಕವಿಲ್ಲ. ಪ್ರಕೃತ ಈ ಕವಿಯ ವಿಷಯದಲ್ಲಿ ಮಾತ್ರ ವಿಚಾರವು ಆವಶ್ಯಕವಾಗಿದೆ.

ಈ ಕರ್ಣಾಟಕಮಹಾಭಾರತಕ್ಕೆ ಕರ್ತನಾದ ಕವಿಗೆ 'ಕುಮಾರವ್ಯಾಸ' ನೆಂಬ ಪ್ರಸಿದ್ಧಿಯಿರುವುದು. ಇದು ವಾಸ್ತವವಾಗಿ ಬಿರುದಾಗಿರಬಹುದೇ ಹೊರತು ರೂಢನಾಮವಲ್ಲ. ಈತನ ಸಂಕೇತನಾಮವು 'ಗದುಗಿನ ನಾರಣಪ್ಪ' ಎಂದು ಕೆಲವರು ಹೇಳುವರು. ಮತ್ತು ಕೆಲವರು ಈತನಹೆಸರು ಗೊತ್ತಿಲ್ಲವೆಂದೆನ್ನುವರು. ಈತನ ವಿಷಯವನ್ನು ವಿಚಾರಿಸಲಾಗಿ ಗದುಗಿನ ಸಮೀಪದ ಜನರಹೇಳಿಕೆಯಿಂದ ಈತನ ಪೂರ್ವಿಕರು ಕುಲಕ್ರಮವಾಗಿ ಶಾನಭೋಗರೆಂತಲೂ ವೈಷ್ಣವಬ್ರಾಹ್ಮಣರೆಂತಲೂ ತಿಳಿದು ಬರುತ್ತದೆ. ಆದರೆ ಮತ್ತೆ ಕೆಲವರು ಬೇರೆ ವಿಧವಾಗಿ ಹೇಳುವರು, ಅದೆಂತೆಂದರೆ: ಸಂಧಿಗಳ ಕೊನೆಯಲ್ಲಿ ವೀರನಾರಾಯಣ ನಾಮಾಂಕನಮಾತ್ರದಿಂದಲೇ ಈತನು ವೈಷ್ಣವನೆಂದು ಹೇಳಲಾಗದು. ಅಲ್ಲದೆ ಆದಿಪರ್ವದ ಹದಿನಾಲ್ಕನೆಯ ಸಂಧಿಯ 37ನೆಯ ಪದ್ಯದಲ್ಲಿ

" ಹರಹರ ಮಹಾದೇವೆನುತ ತೆಗೆದಪ್ಪಿದನು ಬಾಲಕನ "

ಎಂದೂ ಇನ್ನೂ ಇದೇರೀತಿಯಲ್ಲಿ ಅನೇಕಸ್ಥಳಗಳಲ್ಲಿ " ಶಿವ ಶಿವ " ಎಂದು ಹೇಳಿರುವುದರಿಂದಲೂ, ಅರಣ್ಯಪರ್ವದ 4-5-6ನೆಯ ಸಂಧಿಗಳಲ್ಲಿ ಶಿವಭಕ್ತಿಯನ್ನು ಚೆನ್ನಾಗಿ ತೋರ್ಪಡಿಸಿ ಇರುವುದರಿಂದಲೂ, ಈತನು ಅದ್ವೈತಿಯೆಂದು ನಿರ್ಧರಿಸಬಹುದೆಂದು ಹೇಳುವರು.

ಈ ಉಭಯಪಕ್ಷಗಳಿಗೂ ಇರುವ ಬಲಾಬಲಗಳನ್ನು ಸ್ವಲ್ಪವಾಗಿ ತೋರಿಸುವುದು ಯುಕ್ತವಾಗಿದೆ. ಸಾಧಾರಣವಾಗಿ ಕವಿಗಳು ಮತ್ತು ಇತರ ಗ್ರಂಥಕರ್ತರು ತಾವು ರಚಿಸುವ ಗ್ರಂಥದ ಆದಿಮಧ್ಯಾಂತಭಾಗ ಗಳಲ್ಲಿ ತಾವು ಉಪಾಸಿಸುವ ಇಷ್ಟದೇವತೆಯನ್ನು ಪ್ರಾರ್ಥಿಸುವುದು ಅಂತ ಹ ದೇವತೆಯ ನಾಮಾಂಕನವನ್ನು ಮಾಡುವುದು ಸುಪ್ರಸಿದ್ಧವಲ್ಲವೆ? ಈ ಕವಿಯು ಗ್ರಂಥಾದಿಯಲ್ಲಿ ವೀರನಾರಾಯಣನನ್ನೇ ಭಜಿಸಿರುವನು. ಮತ್ತು ಸಂಧ್ಯಂತಗಳಲ್ಲಿಯೂ ಆತನ ನಾಮವನ್ನೇ ಅಂಕಿತಮಾಡಿರುವನು. ಇದು ನಾರಾಯಣಭಕ್ತನಲ್ಲದವನಿಗೆ ಸಲ್ಲಲಾರದು. ಆದರೆ ಅಲ್ಲಲ್ಲಿ ' ಹರ ಹರ ' ' ಶಿವಶಿವ ' ಎಂದು ಶಿವನಾಮವನ್ನು ಉಪಯೋಗಿಸುತ್ತಾ ಬಂದಿ ರುವುದರಿಂದ ಈತನನ್ನು ಶಿವಭಕ್ತನೆಂದು ಏಕೆ ಹೇಳಬಾರದು? ಎನ್ನ ಬಹುದು. ಮೇಲೆ ತೋರಿಸಿದ ಸ್ಥಳಗಳಲ್ಲಿ ' ಹರಹರ ' ' ಶಿವಶಿವ ' ಇವೇ ಮೊದಲಾದ ಪದಗಳು ಪ್ರಕರಣವನ್ನು ಪರ್ಯಾಲೋಚಿಸಲಾಗಿ ಭಕ್ತಿ ಪೂರ್ವಕ ಶಿವಸ್ಮರಣಾರ್ಥವಾಗಿ ಉಪಯೋಗಿಸಿದಂತೆ ತೋರಿ ಬರುವು ದಿಲ್ಲ. ಅಲ್ಲದೆ ಆಶ್ಚರ್ಯಾದ್ಯರ್ಥದಲ್ಲಿಯೇ ಉಪಯೋಗಿಸಿರುವನು. ಇಂತಹ ಪ್ರಯೋಗಗಳು ಸಂಸ್ಕೃತದಲ್ಲಿಯೂ ಕಾಣಬರುವುದು. ಹೇಗೆಂದರೆ—

" शिव शिव परितापं कोवदेत्कोमलांग्याः ॥

ಎಂದು (ಪುಷ್ಪಬಾಣ ವಿಲಾಸದಲ್ಲಿ) ಖೇದಾತಿಶಯದಲ್ಲಿಯೂ

" शिलाकंपं धत्ते शिव शिव "

ಎಂದು ಆಶ್ಚರ್ಯಾರ್ಥದಲ್ಲಿಯೂ

**" गणयति करुणापराङ्मुखोसौ शिव शिव तान्यपि**
**वासराणि वेधाः ॥**

ಎಂದು ವೇದದಲ್ಲಿಯೂ, ಹೀಗೆಯೇ ಅನೇಕ ಸ್ಥಳಗಳಲ್ಲಿ ಪ್ರಯೋಗಗಳಿರುವುವು. ಮತ್ತು

**" आश्चर्येपि भये शोके क्षुभिते नाम वा मम ।**
**व्याजेन वा स्मरेद्यस्तु मम सायुज्यमाप्नुयात् ॥**

ಎಂದು (ಪದ್ಮಪುರಾಣದಲ್ಲಿ,) ಆಶ್ಚರ್ಯಾದಿಪರವಶರಾದವರು ಶಿವನಾಮಕೀರ್ತನದಿಂದ ತಮ್ಮ ಆಶ್ಚರ್ಯಾದಿಗಳನ್ನು ವ್ಯಕ್ತಪಡಿಸುವರೆಂದು ಅಂತಹ ಶಿವನಾಮಕೀರ್ತನವು ಕೂಡ ಮಹಾಫಲವನ್ನು ಕೊಡುವುದೆಂದು ಹೇಳಿದೆ.

ಅರಣ್ಯಪರ್ವದಲ್ಲಿರುವ ಶಿವಭಕ್ತಿನಿರೂಪಣಪ್ರಕಾರವನ್ನು ಆ ಪರ್ವದ ಸಂಚಿಕೆಯಲ್ಲಿಯೇ ವಿಚಾರಮಾಡುವೆವು. ಅಂತು ಗ್ರಂಥಮಧ್ಯದಲ್ಲಿ ಪ್ರಕರಣಾನುಸಾರವಾಗಿ ಇತರರ ಶಿವಭಕ್ತ್ಯಾದಿಗಳನ್ನು ಈತನು ವಿವರಿಸಿರುವೆದರಿಂದಲೇ ಕವಿಯು ಶಿವಭಕ್ತನೆಂದು ಹೇಳಲು ಎಷ್ಟುಮಾತ್ರವೂ ಅವಕಾಶವಿರುವುದಿಲ್ಲ. ಒಂದು ವೇಳೆ ಶಿವಭಕ್ತನೆಂದು ಹೇಳಬಹುದಾದರೂ ಅದ್ವೈತಿಯೆಂದು ಹೇಳಲು ಏನೂ ಸಾಧಕ ತೋರುವುದಿಲ್ಲ. ಶಿವಭಕ್ತರೆಲ್ಲರೂ ಅದ್ವೈತಿಗಳಲ್ಲ. ಅದ್ವೈತಿಗಳೆಲ್ಲರೂ ಶಿವಭಕ್ತರಲ್ಲ. ಅದ್ವೈತಿಗಳಲ್ಲಿ ವಿಷ್ಣುಭಕ್ತ್ಯಾದಿಗಳು ಇರುವುದೆಂಬುದು ಮತವಿವೇಕವುಳ್ಳವರಿಗೆ ವಿಶದವೆ. ಅಲ್ಲದೆ ಅದ್ವೈತಸಿದ್ಧಾಂತದ ಪರಮಪ್ರಮೇಯವಾದ ಜೀವಬ್ರಹ್ಮೈಕ್ಯವೇ ಮೊದಲಾದುವುಗಳನ್ನು ಈ ಗ್ರಂಥದಲ್ಲಿ ಯಾವಭಾಗದಲ್ಲಿಯೂ ನಿರೂಪಿಸಿರುವುದಿಲ್ಲ. ಹೀಗೆ ಇರಲು ಈ ಕವಿಯು ಅದ್ವೈತಿ ಯೆಂದು ಹೇಗೆ ಹೇಳಬಹುದು ?

ಈ ಕವಿಯು ಯಾವರೀತಿಯಿಂದ ಈ ಭಾರತರಚನೆಯಂ ಮಾಡಲುಜ್ಜುಗಿಸಿದನೋ ಆರೀತಿಯನ್ನು ಕುರಿತು ಗದುಗಿನ ಪ್ರಾಂತದವರು ಹೇಳುವ ಕಥೆ ಏನೆಂದರೆ—

ಈ ಕವಿಯು ಮೊದಲು ಕೋಳಿವಾಡು ಎಂಬ ಗ್ರಾಮದ ಶಾನ ಭೋಗನಾಗಿ ಗದುಗಿನ ವೀರನಾರಾಯಣಸ್ವಾಮಿಗೆ ಭಕ್ತನಾಗಿದ್ದನು. ಈತನನ್ನು 'ನಾರಣಪ್ಪ' ಎಂದು ಕರೆಯುತ್ತಿದ್ದರು. ಈತನು ಶ್ರೀವೀರನಾರಾಯಣಸ್ವಾಮಿಯ ಭಕ್ತನಾದುದರಿಂದ ಅಂತಹ ಭಗವಂತನ ವಿಷಯದಲ್ಲಿ ಏನಾದರೂ ಒಂದು ಗ್ರಂಥವನ್ನು ಬರೆಯಬೇಕೆಂಬ ಅಭಿಲಾಷೆಯಿಂದ ಭಗವಂತನನ್ನು ತನಗೆ ಈಕಾರ್ಯಕ್ಕೆ ತಕ್ಕ ಶಕ್ತಿಯನ್ನೊದಗಿಸಿಕೊಡಲು ಪ್ರಾರ್ಥಿಸುತ್ತಿದ್ದನು. ಹೀಗಿರಲು ಶ್ರೀವೀರನಾರಾಯಣಸ್ವಾಮಿಯು ಒಂದುದಿನ ಈತಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಉಪದೇಶಿಸಿದಪ್ರಕಾರ ಈ ನಾರಣಪ್ಪನು ಲಕ್ಷಬ್ರಾಹ್ಮಣಸಂತರ್ಪಣೆ ನಡೆಯುವ ಸ್ಥಳವನ್ನು ವಿಚಾರಿಸುತ್ತಿರುವಾಗ ಆಸಮೀಪಪ್ರಾಂತದಲ್ಲಿ ಒಬ್ಬಾನೊಬ್ಬ ಧಾರ್ಮಿಕನು ಲಕ್ಷಬ್ರಾಹ್ಮಣಸಂತರ್ಪಣೆಯನ್ನು ನಡೆಸುವನೆಂದು ತಿಳಿದು ಬಂತು. ಅಲ್ಲಿಗೆ ಈತನು ಪ್ರಯಾಣವಂ ಮಾಡಿ ಆಸಂತರ್ಪಣಸ್ಥಳದಲ್ಲಿ ಸೇರಿರುವ ಬ್ರಾಹ್ಮಣಸಮುದಾಯದೊಳಗೆ ತನಗೆ ಸ್ವಪ್ನದಲ್ಲಿ ಸೂಚಿಸಲ್ಪಟ್ಟ ಲಕ್ಷಣಗಳುಳ್ಳ ಬ್ರಾಹ್ಮಣನನ್ನು ಎಷ್ಟು ಅನ್ವೇಷಿಸಿದಾಗ್ಯೂ ಕಾಣದೆ, ನಿರಾಶನಾಗುವ ಸಮಯದಲ್ಲಿ ನಡೆದುದೇನಂದರೆ—ಒಬ್ಬನು ಬಾಳೆಯ ಎಲೆಯನ್ನು ಹಾಕುತ್ತಲೂ ಮತ್ತೊಬ್ಬನು ದೊನ್ನೆಗಳನ್ನು ಕೊಡುತ್ತಲೂ ಇರುವಾಗ ಹುಡುಗರು ತಮತಮಗೆ ಬೇಕಾದ ಎಲೆದೊನ್ನೆಗಳನ್ನು ಕುರಿತು ವಿವಾದವನ್ನು ಮಾಡುತ್ತಿದ್ದಾಗ ಅಲ್ಲಿನ ಜನಗಳು ಎಷ್ಟು ಸಮಾಧಾನವನ್ನು ಮಾಡಿದಾಗ್ಯೂ ಕೇಳದೇ ಇರುವ ಒಬ್ಬ ಹುಡುಗನನ್ನು ಕುರಿತು "ಏನೋ ನೀನು ದುರ್ಯೋಧನನಿಗಿಂತ ಹೆಚ್ಚು ದುರಭಿಮಾನವುಳ್ಳವನಾಗಿದೀಯೆ" ಎಂದು ಎಲೆದೊನ್ನೆಗಳನ್ನು ಕೊಡುವವರು ನುಡಿದರು. ಅದನ್ನು ಕೇಳಿ ಅಲ್ಲಿ ಸಮೀಪದಲ್ಲಿದ್ದ ಒಬ್ಬ ಬ್ರಾಹ್ಮಣನು ತನ್ನ ಕಣ್ಣಿನಿಂದ ನೀರನ್ನು ಸುರಿಸಿದನು. ಅದನ್ನು ನೋಡಿ ಈ ನಾರಣಪ್ಪನು ತನ್ನ ಮನಸ್ಸಿನಲ್ಲಿ ವಿಚಾರಮಾಡತೊಡಗಿದನು. ಈ ಬ್ರಾಹ್ಮಣನಿಗೆ ದುರ್ಯೋಧನನ ಹೆಸರನ್ನು ಕೇಳುತಲೇ ಕಣ್ಣಿನಲ್ಲಿ ನೀರು ಸುರಿಯಲು ಕಾರಣವೇನು ? ಮಹಾಪಾಪಿಯಾದ ದುರ್ಯೋಧನನ ಹೆಸರು ನೆನಪಿಗೆ

ಬಂದುದು ಈತನಿಗೆ ಶೋಕಕಾರಣವಾಗಬೇಕಾದರೆ ಈ ಬ್ರಾಹ್ಮಣನಿಗೂ ದುರ್ಯೋಧನನಿಗೂ ಹೆಚ್ಚು ಸಂಬಂಧವಿದ್ದಿರಬೇಕೆಂದು ವಿಚಾರ ಮಾಡುತ್ತಿರುವಾಗ ಆಬ್ರಾಹ್ಮಣನಲ್ಲಿ ಸ್ವಪ್ನಸೂಚಿತವಾದ ಕೆಲವು ಲಕ್ಷಣಗಳು ಕಂಡು ಬಂದುದರಿಂದ, ನಾರಣಪ್ಪನಿಗೆ ಮನಸ್ಸಮಾಧಾನವಾಯಿತು.

ಭೋಜನವಾದ ಬಳಿಕ ಆಬ್ರಾಹ್ಮಣನು ಪ್ರಯಾಣಮಾಡತೊಡಗಲು ನಾರಣಪ್ಪನು ಹಿಂಬಾಲಿಸಲು ಅವನು ಹಿಂದಿರುಗಿ ನೋಡಿ ನಾರಣಪ್ಪನಿಗೆ ಹಿಂದೆ ಬರಬೇಡವೆಂದು ಎಷ್ಟು ಹೇಳಿದಾಗ್ಯೂ ಕೇಳದೆ ಇರುವಾಗ ಆ ಬ್ರಾಹ್ಮಣನು ನಿಂತು ಏಕೆ ನನ್ನನ್ನು ಬಿಡದೆ ಹಿಂಬಾಲಿಸುತ್ತಿ? ಎಂದು ಕೇಳಿದರು. ಅದಕ್ಕೆ ನಾರಣಪ್ಪನು ಹೇಳಿದುದೇನೆಂದರೆ—ತಾವು ಸಾಕ್ಷಾತ್ ಅಶ್ವತ್ಥಾಮಾಚಾರ್ಯರೆಂದು ನಾನು ನಂಬಿರುವೆನು. ತಮ್ಮಿಂದ ಜ್ಞಾನೋಪದೇಶವಂ ಪಡೆದು ಶ್ರೀಮಹಾಭಾರತವನ್ನು ಕನ್ನಡಿಸುವ ಯತ್ನವಂ ನಡಿಸಲು ನನ್ನನ್ನು ಶ್ರೀವೀರನಾರಾಯಣದೇವರು ಪ್ರೇರಿಸಿರುವರು. ಆದುದರಿಂದ ಅನುಗ್ರಹಿಸಿ ಮೇಲೆ ಹೇಳಿದ ಕಾರ್ಯಕ್ಕೆ ತಕ್ಕಷ್ಟು ಜ್ಞಾನಶಕ್ತಿಗಳನ್ನು ಕೊಟ್ಟು ನನ್ನನ್ನು ಉದ್ಧರಿಸಬೇಕೆಂದು ಬೇಡಿಕೊಳ್ಳುವೆನು ಎನಲು ಅಶ್ವತ್ಥಾಮಾಚಾರ್ಯರು ಸಂತುಷ್ಟರಾಗಿ "ನಾನು ದುರ್ಯೋಧನನ ಮರಣದವರೆಗೂ ಯುದ್ಧದಲ್ಲಿ ಆಸಕ್ತನಾಗಿದ್ದುದರಿಂದ ಆವರೆಗಿನ ಕಥೆಗಳು ನಿನಗೆ ಚೆನ್ನಾಗಿ ಸ್ಫುರಿಸುವಂತೆ ಅನುಗ್ರಹಿಸಿರುವೆನು; ಹೋಗು, ಗ್ರಂಥವನ್ನು ಆರಂಭಿಸು. ಸ್ನಾನವನ್ನು ಮಾಡಿ ನೀನುಟ್ಟ ಬಟ್ಟೆಯು ಒಣಗದೇ ಇರುವವರಿವಿಗೂ ನೀನು ಹೇಳುವ ಗ್ರಂಥವೆಲ್ಲವೂ ಶ್ಲಾಘ್ಯವಾಗಿರಲಿ, ಶ್ರೀವೀರನಾರಾಯಣದೇವರ ಕೃಪೆಯಿಂದ ದುರ್ಯೋಧನಪಾತಪರ್ಯಂತ ನಿನ್ನ ಗ್ರಂಥವು ನಿರ್ವಿಘ್ನವಾಗಿ ಬೆಳೆಯಲಿ. ನಮ್ಮ ದರ್ಶನಾದಿವೃತ್ತಾಂತಗಳನ್ನು ಯಾರೊಡನೆಯಾದರೂ ನೀನು ತಿಳಿಸಿದರೆ ನಿನ್ನ ದೇಹ ಉಳಿಯಲಾರದು" ಎಂದು ಉಪದೇಶಿಸಿ ಅಂತರ್ಹಿತರಾದರು.

ಬಳಿಕ ಈತನು ಆ ಮಹಾತ್ಮರ ಅಪ್ಪಣೆಯಂತೆ ನಿಯಮಪೂರ್ವಕವಾಗಿ ಗ್ರಂಥವನ್ನು ರಚಿಸುತ್ತಾ, ಒಬ್ಬ ಸ್ನೇಹಿತನ ಕಡೆಯಿಂದ ಬರೆ

ಸುತ್ತಾ ಬಂದನು. ದಶಪರ್ವಗಳು ಮುಗಿದುವು. ಸಂತೋಷವಶ ದಿಂದ ಈ ವರ್ತಮಾನವನ್ನು ತನ್ನ ಸ್ನೇಹಿತನೊಡನೆ ಹೇಳಿಕೊಂಡುದ ರಿಂದಲೇ ಆತಗೆ ಮರಣವೂ ಸಂಭವಿಸಿತೆಂದು ಹೇಳುವರು.

ಇದೇ ರೀತಿಯಾಗಿ ಈತನು ಅಕ್ಷರಾಭ್ಯಾಸವನ್ನು ಕೂಡ ಮಾಡ ದವನಾಗಿದ್ದು ಕೇವಲ ದೈವಾನುಗ್ರಹದಿಂದೇ ಗ್ರಂಥವನ್ನು ರಚಿಸಿರುವ ನೆಂದು ಅನೇಕರು ಅನೇಕವಿಧವಾಗಿ ಹೇಳುವರು. ಇವುಗಳಲ್ಲಿ ಆವುದು ಸಮೂಲವೋ ಆವುದು ನಿರ್ಮೂಲವೋ ಗೊತ್ತಾಗುವುದು ಕಷ್ಟವಾಗಿದೆ. ಅದು ಹೇಗಿದ್ದರೂ ಇರಲಿ. ಈ ಗ್ರಂಥಸ್ಥಿತಿಯನ್ನು ಪರ್ಯಾಲೋಚಿಸಿ ವಿಮರ್ಶೆಮಾಡುವಾಗ ಈ ಕವಿಯು ವೀರನಾರಾಯಣಭಕ್ತನೆಂದು ನಿಶ್ಚಿತವಾಗಿ ತೋರಬರುತ್ತದೆ. ಅದ್ವೈತಿಯೆನಲು ತಕ್ಕ ಸಾಧಕಗಳಾ ವವೂ ಕಾಣಬರುವುದಿಲ್ಲ. ಮತ್ತು ಕೆಲವರು ಹೇಳುವಂತೆ ವೈಷ್ಣವ ಬ್ರಾಹ್ಮಣನೆಂದು ನಂಬುವುದಕ್ಕೆ ಕೆಲವು ಸಾಧಕಗಳೂ ದೊರೆಯುವುವು. ಹೇಗೆಂದರೆ:—

ಪೀಠಿಕಾಸಂಧಿಯಲ್ಲಿ 12ನೆಯ ಪದ್ಯವು—

ವಂದಿತಾಮಳಚರಿತನಮರಾ
ನಂದ ಯದುಕುಲಚಕ್ರವರ್ತಿಯ
ಕಂದ ನತಸಂಸಾರಕಾನನಘನದವಾನಳನು ।
ನಂದನಂದನಸನ್ನಿಭನು ಸಾ
ನಂದದಿಂದವೆ ನಮ್ಮುವನು ಕೃಪೆ
ಯಿಂದ ಸಲುಹುಗೆ ದೇವ ಜಗದಾರಾಧ್ಯಗುರುರಾಯ ॥

ಎಂದು ಇರುವುದು. ಈ ಕವಿಯು ಮೊದಲಿನ ಮೂರು ಪದ್ಯಗ ಳಿಂದ ವೀರನಾರಾಯಣನನ್ನು ನಾಲ್ಕನೆಯ ಪದ್ಯದಿಂದ ಲಕ್ಷ್ಮಿಯನ್ನು ಐದನೆಯ ಪದ್ಯದಿಂದ ಬ್ರಹ್ಮನನ್ನು ಆರನೆಯ ಪದ್ಯದಿಂದ ಸರಸ್ವತಿ ಯನ್ನು ಏಳನೆಯ ಪದ್ಯದಿಂದ ಮಹಾದೇವನನ್ನು ಎಂಟನೆಯ ಪದ್ಯ ದಿಂದ ಪಾರ್ವತಿಯನ್ನು ಒಂಬತ್ತನೆಯ ಪದ್ಯದಿಂದ ಗಣಪತಿಯನ್ನು

ಹತ್ತು ಹನ್ನೊಂದನೆಯ ಪದ್ಯಗಳಿಂದ ವೇದವ್ಯಾಸರನ್ನು ಭಜಿಸಿರುವೆನು. ಬಳಿಕ ಮೇಲೆ ತೋರಿಸಿದ ಪದ್ಯದಲ್ಲಿ ಯಾರನ್ನು ಪ್ರಾರ್ಥಿಸಿರುವೆನೋ ಅಲ್ಲಿನ ಪದಗಳಿಂದ ಸ್ಪಷ್ಟವಾಗುವುದಿಲ್ಲ. 'ಗುರುರಾಯ' ಎಂಬ ಪದ ದಿಂದ ಒಬ್ಬ ಗುರುಗಳನ್ನು ಪ್ರಾರ್ಥಿಸಿದನೆಂದು ಮಾತ್ರ ಹೇಳಬಹುದು. ಆ ಗುರುಗಳು ಪೂರ್ವಪದ್ಯಗಳಲ್ಲಿ ಪ್ರಸಕ್ತರಾದ ವ್ಯಾಸರೇ ಎಂದು ನಿಶ್ಚಯಿಸುವುದಕ್ಕೆ 'ಯದುಕುಲಚಕ್ರವರ್ತಿಯ ಕಂದ' 'ನಂದನಂದನಸನ್ನಿಭನು' ಎಂಬ ವಿಶೇಷಣಗಳು ವಿರೋಧಿಸುತ್ತವೆ. ವ್ಯಾಸರು ಪರಾಶರ ಪುತ್ರರೆಂದು ಪ್ರಸಿದ್ಧರು. ಯದುಕುಲದವರಲ್ಲ. ವಿಷ್ಣ್ವಂಶರಾದುದ ರಿಂದ 'ನಂದನಂದನಸನ್ನಿಭ' ಎಂದು ಕೃಷ್ಣಸಾದೃಶ್ಯಜ್ಞಾಪನೆಯು ಸರಿಯಲ್ಲ. ಆದುದರಿಂದ ಈ ಪದ್ಯದಿಂದ ಸ್ತುತ್ಯರು ಇಂತಹರೆಂದು ಹೇಳುವುದು ಅಸಾಧ್ಯವಾಗಿರುವುದಷ್ಟೆ? ಹೀಗಿರಲು ನಾವು ಶೋಧನಾರ್ಥವಾಗಿ ಉಪಯೋಗಿಸುತ್ತಿರುವ ಪುಸ್ತಕಗಳಲ್ಲಿ 'ಘ' 'ಠ' ಎಂದು ಗುರ್ತು ಮಾಡಿರುವ ಪುರಾತನವಾದ ತಾಳಪ್ರತಿಯ ಎರಡು ಪುಸ್ತಕಗಳಲ್ಲಿ ಮೇಲೆ ಕಂಡಪದ್ಯದ ಆದಿಭಾಗದ ಪಾಠವು —

> ವಂದಿತಾಮರಸೇವ್ಯನಾಯಕ
> ನಂದಮುನಿ ಯತಿಚಕ್ರವರ್ತಿಯ
> ಕಂದ . . . . . . . . . . . . . . |

ಎಂದು ಕಂಡು ಬರುವುದು. ಈ ಪಾಠದಲ್ಲಿ ಈ ಗುರುರಾಯರೆಂಬುವರು 'ನಂದಮುನಿ' ಎಂದು ಪ್ರಸಿದ್ಧರಾದ ಶ್ರೀಮಧ್ವಾಚಾರ್ಯರೆಂದು ನಿಶ್ಚಯಿಸಬಹುದು. ಇವರಲ್ಲಿ ಸಕಲ ವಿಶೇಷಣಗಳೂ ಒಪ್ಪುವುವು. ಇವರು ಈ ಸಂಪ್ರದಾಯಪ್ರಕಾರ ದೇವತಾಶ್ರೇಷ್ಠರಾದ ವಾಯುದೇವರಾದುದರಿಂದ 'ಅಮರಸೇವ್ಯ' ಎಂಬ ವಿಶೇಷಣವು, ಶ್ರೀಮದಚ್ಯುತಪ್ರೇಕ್ಷಸ್ವಾಮಿಗಳವರ ಶಿಷ್ಯರಾದುದರಿಂದ 'ಯತಿಚಕ್ರವರ್ತಿಯ ಕಂದ' ಎಂಬ ವಿಶೇಷಣವು, 'ಮಧ್ವಾಖ್ಯನಾರಾಯಣಃ' ಎಂದು ಪ್ರಾಚೀನಗ್ರಂಥಾನುಸಾರವಾಗಿ 'ನಂದನಂದನಸನ್ನಿಭನು' ಎಂಬ ವಿಶೇಷಣವು ಕೂಡ

ಯಾವ ಬಾಧೆಯೂ ಇಲ್ಲದೆ ಹೊಂದುತ್ತವೆ. ಈ ಪಾಠವನ್ನೊಪ್ಪುವ ಪಕ್ಷದಲ್ಲಿ ಈ ಕವಿಯು ವೈಷ್ಣವನೆಂದು ಹೇಳಬೇಕಲ್ಲವೆ?

ಮತ್ತು ಇದೇ ಪರ್ವದ 15 ನೆಯ ಸಂಧಿಯಲ್ಲಿ ಭೀಮೋತ್ಪತ್ತಿ ಪ್ರಕರಣದಲ್ಲಿ—

> ಎಂದು ಬಟಿಕರವಿಂದಲೋಚನೆ
> ಯಂದು ಸಾಕ್ಷಾದ್ದೇವಮಧ್ವರ
> ತಂದೆಯನು ರಜಗುಣದ ಮುಖ್ಯಪ್ರಾಣದೇವನನು ।
> ಇಂದುಮುಖಿ ವರಮಂತ್ರದಿಂದವೆ
> ಕಂದೆಱೆದು ಕಳುಹಿದಳು . . . . ॥

ಎಂಬ ಪದ್ಯವು 'ಜ' 'ಗ' ಎಂದು ಗುರ್ತು ಮಾಡಿರುವ ಪ್ರಾಚೀನ ವಾದ ತಾಳಪ್ರತಿಯ ಪುಸ್ತಕಗಳಲ್ಲಿ ದೊರಕುವುದು. ಈ ಪದ್ಯದಲ್ಲಿ ಕವಿಯು ಸ್ವತಂತ್ರವಾಗಿ ಉಪಯೋಗಿಸಿರುವ 'ಸಾಕ್ಷಾದ್ದೇವಮಧ್ವರ ತಂದೆಯನು' ಎಂಬ ಮುಖ್ಯ ಪ್ರಾಣವಿಶೇಷಣವು ಈ ಕವಿಯು ವೈಷ್ಣ ವನೆಂಬುದಕ್ಕೆ ಸಾಕಾದಷ್ಟು ಸಾಧಕವು.

ಮತ್ತು ಕವಿಯು ಅಲ್ಲಲ್ಲಿ ದ್ವೈತಸಿದ್ಧಾಂತದ ಪ್ರತಿತಂತ್ರ ವಿಷ ಯಗಳನ್ನು—ಅಂದರೆ, ಇತರಸಿದ್ಧಾಂತದವರು ಒಪ್ಪದೆ ಇವರು ಮಾತ್ರ ಒಪ್ಪಿರುವ ವಿಷಯಗಳನ್ನು—ಮೂಲಾಭಿಪ್ರೇತವನ್ನಾಗಿ ನಿರೂಪಿಸಿರು ವನು. ಉದಾಹರಣೆಗಾಗಿ ಕೆಲವು ಇಲ್ಲಿ ತೋರಿಸಲ್ಪಡುವುದು.

ಇದೇ ಪರ್ವದ ಆರನೆಯ ಸಂಧಿಯಲ್ಲಿ ಅಮೃತಮಥನಕಥಾ ಪ್ರಕ ರಣದಲ್ಲಿ, ಹುಟ್ಟಿದ ವಿಷವನ್ನು ವಾಯುದೇವರು ನೀರಸವಂ ಮಾಡಿ ಮಹಾದೇವರಿಗೆ ಕೊಟ್ಟ ಕಥೆಯನ್ನು ಕೆಳಗೆ ಬರೆಯುವ 19ನೆಯ ಪದ್ಯದಿಂದ ಹೇಳಿರುವನು.

> ಹೊಸೆಯಲಿಕೆ ವಾಸುಗಿಯ ಹೊಟ್ಟೆಯು
> ಹಸರಕಾಯ್ದಂತುರಿಯನುಗುಳಿತು
> ವಿಷವ ಹಾಲಾಹಲವೆನಮರಾಸುರರು ಬೇಯಲಿಕೆ ।

ವಿಷದ ಕ್ರೂರತೆ ಲೋಕವೆಲ್ಲವ
ಘಸಣಿಸುತ ಬರಲಾಸಮೀರಣ
ಹೊಸೆದನಂಗೈತಳದಿ ಕೋಪದಿ ನೋಡಿ ಪಡಿಸಣವ ॥

ಈಪದ್ಯದಲ್ಲಿ 5ನೆಯ ಪಾದದ 'ಬರಲಾಸಮೀರಣ' ಎಂಬ ಸ್ಥಳದಲ್ಲಿ 'ಬರೆ ಲೋಕವಾಕ್ಷಣ' ಎಂದು ಕ. ಖ. ಎಂದು ಗುರ್ತುಮಾಡಿರುವ ಪುಸ್ತಕಗಳ ಪಾಠವು ಅನನ್ವಿತವಾಗಿರುವುದರಿಂದ 'ಆಸಮೀರಣ' ಎಂಬ ಪಾಠವೇ ಸಾಧುವಾದುದು. ಈಪಕ್ಷಕ್ಕೆ ಅನುಸಾರಿಯಾದ ಕಥೆಯು

"वा॒युर॑स्मा उपा॑मंथत् पि॒नष्टि॑स्माकुनन्न॒मा। के॒शी वि॒षस्य॒ पात्रे॑ण॒ यद्रु॒द्रेणापि॑बत्स॒ह"

ಎಂದು ಋಗ್ವೇದದ 8—7—24ರಲ್ಲಿ ಸಿದ್ಧವಾಗಿರುವುದಲ್ಲದೆ, ಶ್ರೀ ಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯದ 10ನೆಯ ಅಧ್ಯಾಯದಲ್ಲಿ ನಿರೂಪಿಸಿರುವ ಕಥೆಗೆ ಅನುಸಾರವಾಗಿ ಇರುವುದು. ಈ ಕಥೆಯನ್ನು ಇತರ ಮತದವರು ಒಪ್ಪುವುದಿಲ್ಲವೆಂಬುದಕ್ಕೆ ಶ್ರೀಸಾಯಣಾಚಾರ್ಯರು ಮೇಲೆ ತೋರಿಸಿದ ವೇದಮಂತ್ರಕ್ಕೆ ಬೇರೆ ರೀತಿಯಿಂದ ವ್ಯಾಖ್ಯಾನಮಾಡಿರುವುದೇ ಸಾಕ್ಷಿಯಾಗಿರುವುದು.

. ಮತ್ತು ಇದೇ ಪರ್ವದ 8ನೆಯ ಸಂಧಿಯಲ್ಲಿ 132ನೆಯ ಪದ್ಯದಿಂದ 140ನೆಯ ಪದ್ಯದವರೆಗೂ ಹರಿದ್ವೇಷಿಗಳಾದ ದೈತ್ಯರಿಗೆ ನಿತ್ಯನರಕವೇ ಲಭಿಸುವುದು ಹೊರತು ಮೋಕ್ಷವು ದೊರಕುವುದಿಲ್ಲವೆಂದು ಹಿರಣ್ಯಕಶಿಪುವಿನ ಗತಿವಿಚಾರಾವಸರದಲ್ಲಿ ನಿರೂಪಿಸಿರುವೆನು. ಈ ವಿಷಯವು ಅದ್ವೈತಿಗಳಿಂದ ಅಂಗೀಕರಿಸಲ್ಪಟ್ಟುದುದಲ್ಲ. ಇದೇರೀತಿಯಾಗಿ ಅಲ್ಲಲ್ಲಿ ದ್ವೈತಸಿದ್ಧಾಂತ ವಿಷಯುಗಳನ್ನು ನಿರೂಪಿಸಿರುವೆನು.

ಮತ್ತು ಈ ಪರ್ವದ 8ನೆಯ ಸಂಧಿಯಲ್ಲಿ ಪ್ರಹ್ಲಾದಹಿರಣ್ಯಕಶಿಪುಗಳ ವಿವಾದನಿರೂಪಣ ಪ್ರಕರಣದಲ್ಲಿ ಹಿರಣ್ಯಕಶಿಪುವು ತನ್ನನ್ನು ಬಿಟ್ಟು ದೇವರು ಬೇರೇ ಇಲ್ಲವೆಂದುದಕೆ—

. . . ಇಹಪರತ್ರಕೆ

ಭೇದವಹುವ ಶ್ರುತಿಗಳವುಂಟು ತತ್ತ್ವದಲಿ' (72 ಪ.)

ಎಂದು ಪಾರಮಾರ್ಥಿಕಭೇದಸಾಧನೆಯನ್ನು

'ಲಾಲಿಸುವೊಡದ್ವೈತಪಕ್ಷಕೆ
ಕಾಳು ನಿಮ್ಮಯ ಕರ್ಮಕಾಂಡವು
ಮೇಲೆ ನೀನೊದೆದು ಕಳಯ್ಯ . . . । 74 ಪ.

ಎಂದು ಅದ್ವೈತನಿರಾಕರಣವನ್ನು ವಿಶದವಾಗಿ ಮಾಡಿರುವನು. ಇದರಿಂದಲೂ ಇವನು ದ್ವೈತಿಯೆಂದೂ ಅದ್ವೈತಿಯಲ್ಲವೆಂದೂ ಹೇಳಬಹುದಾಗಿದೆ. ಈಗ ಉದಾಹರಿಸಿದ ವಾಕ್ಯಗಳಲ್ಲಿ ಪುಸ್ತಕಭೇದದಿಂದ ಪಾಠಭೇದಗಳೂ ದೊರೆಯುವುದಿಲ್ಲ. ಆದರೆ ಈ ಕವಿಯನ್ನು ದ್ವೈತಿಯೆಂದು ತೋರ್ಪಡಿಸುವುದಕ್ಕಾಗಿ ಇಂತಹ ವಾಕ್ಯಗಳನ್ನು ಹೊಸದಾಗಿ ರಚಿಸಿ ಕೆಲವರು ಮಧ್ಯಮಧ್ಯದಲ್ಲಿ ಸೇರಿಸಿರಬಹುದೆಂದು ಕೆಲವರು ಹೇಳಬಹುದು. ಹೀಗೆಯೇ ಮತ್ತೆ ಕೆಲವರು ಬೇರೇಮತದವನೆಂದು ತೋರ್ಪಡಿಸುವುದಕ್ಕಾಗಿ ಕವಿಯು ರಚಿಸಿದ ಗ್ರಂಥದಿಂದ ಇಂತಹ ಭಾಗಗಳನ್ನು ತೆಗೆದುಹಾಕಿ ಬೇರೆ ರೀತಿಯಾಗಿ ಪುಸ್ತಕಗಳನ್ನು ಬರೆದು ಕೊಂಡಿರುವುದಾಗಿಯೂ ಕೆಲವರು ಹೇಳಬಹುದಾಗಿದೆ.

ಈ ವಿವಾದವನ್ನು ಪರೀಕ್ಷಕರು ತಾವುತಾವೇ ವಿಚಾರಪೂರ್ವಕವಾಗಿ ಪರಿಹರಿಸಿಕೊಳ್ಳತಕ್ಕದಾಗಿ ಇರುವುದರಿಂದ ನಾವು ಇರುವ ಸ್ಥಿತಿಯನ್ನು ಸೂಚಿಸಿರುವೆವೇ ಹೊರತು ಯಾವ ಪಕ್ಷವನ್ನು ನಿರ್ಧರಿಸಲು ಯತ್ನಿಸಿರುವುದಿಲ್ಲ.

ಈ ಕವಿಯು ಏನೂ ಓದಿದವನಲ್ಲದೆ ಇದ್ದು ದೇವತಾನುಗ್ರಹದಿಂದೇ ಗ್ರಂಥವನ್ನು ರಚಿಸಿರುವನೆಂದು ಹೇಳುವ ವಿಷಯದಲ್ಲಿ ಸ್ವಪ್ನ

ವಿಚಾರಮಾಡತಕ್ಕದ್ದಿದೆ. ಏನೂ ಓದಿದವನಲ್ಲವೆಂದು ಹೇಳುವುದಕ್ಕೆ ಆರಂಭದಲ್ಲಿ—

> ಹಲಗೆ ಬಳಹವ ಹಿಡಿಯದೊಂದ
> ಗ್ಗಳಿಕೆ ಪದವಿಟ್ಟುಪದೊಂದ
> ಗ್ಗಳಿಕೆ ಪರರೊಡ್ಡವದ ರೀತಿಯ ಹಿಡಿಯದಗ್ಗಳಿಕೆ ।
> ಬಳಸಿ ಬರೆಯಲು ಕಂಠಪತ್ರದ
> ಉಲುಹು ಗೆಡದಗ್ಗಳಿಕೆ ಯೆಂಬೀ
> ಬಲುಹು ಸಲುವುದು ವೀರನಾರಾಯಣನ ಕಿಂಕರಗೆ ॥

ಎಂದು ಹೇಳಿಕೊಂಡಿರುವುದೇ ಸಾಧಕವೆಂದು ಹೇಳಬಹುದಷ್ಟೆ! ಸರಿಯಾಗಿ ವಿಚಾರಿಸಲಾಗಿ ಈ ಪದ್ಯದ ತಾತ್ಪರ್ಯವು ತನ್ನ ಸಕಲ ಸಾಮರ್ಥ್ಯವೂ ವೀರನಾರಾಯಣನ ಅನುಗ್ರಹದ ಫಲವೇ ಹೊರತು ತನ್ನದಲ್ಲವೆಂಬುದಾಗಿಯೇ ಇರುತ್ತದೆ. ಹೀಗಿರುವಲ್ಲಿ ಇವನು ಓದಿಕೊಂಡವನಲ್ಲವೆಂದು ಹೇಳುವುದಕ್ಕೆ ಏನೂ ಅವಕಾಶವಿರುವುದಿಲ್ಲ. 'ಹಲಗೆ ಬಳಹವ ಹಿಡಿಯದ ಅಗ್ಗಳಿಕೆ' ಎಂದರೆ ಅಕ್ಷರಾಭ್ಯಾಸ ಮಾಡಲಿಲ್ಲವೆಂದು ಅರ್ಥವಲ್ಲ. ಸಾಧಾರಣ ಕವಿಗಳಂತೆ ಮೊದಲು ಹಲಗೆಯ ಮೇಲೆ ಬರೆದುಕೊಂಡು ಅದು ಸರಿಯಾಗಿದೆಯೇ ಇಲ್ಲವೇ ಎಂದು ಯೋಚಿಸಿ ಸರಿಯಾಗಿದ್ದ ಪಕ್ಷದಲ್ಲಿ ಗ್ರಂಥದಲ್ಲಿ ಸೇರಿಸಿರುವಂತೆ ಈ ಕವಿಯು ಮೊದಲೇ ಬರೆದಿಟ್ಟುಕೊಂಡು ಆಲೋಚನೆ ಮಾಡಿ ಗ್ರಂಥರಚನೆಯನ್ನು ಮಾಡಿರುವವನಲ್ಲ ಆಆಕಾದಲ್ಲಿಯೇ ಸರಿಯಾಗಿ ವಿಷಯಗಳು ಸ್ಫುರಿಸಲು ಗ್ರಂಥವನ್ನು ರಚಿಸಿದನೆಂದು ಹೇಳಬೇಕು. ಈ ವಿಧವಾಗಿ ಗ್ರಂಥಕಾರರು ತಮ್ಮಲ್ಲಿರುವ ಅಸಾಧಾರಣಸಾಮರ್ಥ್ಯವನ್ನು ದೈವಾಯತ್ತವೆಂದು ತಾವಾಗಿ ಹೇಳಿಕೊಳ್ಳುವ ಪದ್ಧತಿ ಇರುವುದು. ಅಲ್ಲದೆ ಇತರರು ಗ್ರಂಥಕಾರರ ಸಾಮರ್ಥ್ಯವನ್ನು ಅದ್ಭುತವೆಂದು ಹೇಳುವುದಕ್ಕಾಗಿಯೂ ಹೀಗೆ ಹೇಳುವರೆಂಬುದು—

" उक्तं नो वक्ति भूयः क्वचिदपि लिखितं नैव निर्मार्ष्टि "

ಇವೇ ಮೊದಲಾದ ಸಂಸ್ಕೃತ ಗ್ರಂಥಗಳನ್ನು ಪರಿಶೀಲಿಸಿದವರಿಗೆ ವಿಶದವೆ.

ಅಲ್ಲದೆ ಈತನ ಶೈಲಿಯನ್ನು ಪದಗುಂಭನವನ್ನು ತನ್ನ ಅಭಿಪ್ರಾಯವಂ ನಿರೂಪಿಸುವ ಭಂಗಿಯನ್ನು ಚೆನ್ನಾಗಿ ಪರಿಭಾವಿಸಲಾಗಿ, ಈ ಕವಿಯು ಸಂಸ್ಕೃತಕರ್ಣಾಟಕ ಭಾಷೆಗಳಲ್ಲಿ ಪಂಡಿತನೆಂದೇ ಹೇಳಬೇಕಾಗಿದೆ. ಈತನು ಕೆಲವು ಸಂಸ್ಕೃತ ಶ್ಲೋಕಗಳನ್ನು ಪರಿವರ್ತನೆಮಾಡಿ ಕೂಡ ಸೇರಿಸಿರುವನು. ಉದಾಹರಣೆಗಾಗಿ ಇದರಡಿಯಲ್ಲಿ ಕೆಲವು ಪದ್ಯಗಳು ಬರೆಯಲ್ಪಟ್ಟಿವೆ.

ಪೀಠಿಕಾಸಂಧಿಯಲ್ಲಿ—

> "ಎರಡುತೋಳಿನ ವಿಷ್ಣು ಮುಖವೊಂ
> ದಱಲಿ ಪೆುಱೆವ ಬ್ರಹ್ಮ ನೊಸಲಲಿ
> ವರನಯನವೊಂದಿಲ್ಲದಾ ಸನ್ನುತಪರಮಶಿವ ॥"

ಎಂದು ವ್ಯಾಸರ ವರ್ಣನೆಯು

> 'अचतुर्वदनो ब्रह्मा द्विबाहुरपरो हरिः ।
> अफाललोचनश्शंभुर्भगवान्बादरायणः ॥'

ಎಂಬ ಪ್ರಾಚೀನಶ್ಲೋಕದ ಅಭಿಪ್ರಾಯವಾಗಿದೆ.

ಹೀಗೆಯೇ ಇದೇ ಪರ್ವದ ಆರನೆಯ ಸಂಧಿಯಲ್ಲಿ ಲಕ್ಷ್ಮೀಸ್ವಯಂವರಪ್ರಕರಣದ—

> ಸರಸಿರುಹಸಂಭವನು ಬರ ಬರ
> ಹಿರಿಯನತಿವೃದ್ಧಾಪ್ಯದಾತನು
> ಪುರಹರನು ಭಸ್ಮಾಂಗಭಿಕ್ಷುಕನುರಗಭೂಷಣನು ।
> ಸುರಶಿರೋಮಣಿ ಗರ್ವಿಯುಷ್ಮಾ
> ಕರನು ದಿನಪತಿ ಇಂದು ಕ್ಷಯಕಳ
> ತರಳ ವೈಶ್ವಾನರನು ವಂತಕನೀತ ನಿಷ್ಕರುಣಿ ॥ (43 ಪ.)

> ಆತ ರಾಕ್ಷಸಯೋನಿ ನಿರುರುತಿ
> ಈತನೇ ಜಡರಾಶಿಗಧಿಪತಿ

ವಾತ ಮಿಗೆ ಚಂಚಲನು ಯಕ್ಷನು ನೀತಿಬಾಹಿರನು ।
ಈತ ಧನಪತಿ ಲುಬ್ಧಕನು ತಾ
ನೀತನುದ್ಧತ ನಾತ್ರಿಯಂಬಕ
ನೀತರೆಲೆ ಕಿಗ್ಗಿಖಿಯರಶ್ವಿನಿದೇವರಿವರೆಂದು ॥ (44 ಪ.)

ಎಂಬ ಪದ್ಯಗಳು

**एष ब्रह्मातिवृद्धस्तपति दिनपतिश्चंचलो मातरिश्वा**
**दिग्वासा नीलकंठस्त्रिदशपतिरसौ गर्वितः क्षीयतेब्जः ॥**
**इत्थं देव्या विचिंत्य भ्रमरकुलकलागीतशब्दप्रफुल्ला**
**दत्ता माला मुरारेः सुरतरुकुसुमालंकृता पातु युष्मान् ॥**

ಎಂಬ ಪ್ರಾಚೀನ ಶ್ಲೋಕದ ಛಾಯೆಯಾಗಿರುವುವು.

ಇದೇ ರೀತಿಯಾಗಿ ಅಲ್ಲಲ್ಲಿರುವುದು. ಇವುಗಳನ್ನು ಪರ್ಯಾಲೋಚಿಸಲಾಗಿ ಈ ಕವಿಯು ಭಾಷಾದ್ವಯದಲ್ಲಿಯೂ ವ್ಯಾಸಂಗಿಯೆಂದು ಬಹುದರ್ಶಿಯೆಂದು ಹೇಳಬೇಕು.

ಈ ಕವಿಯು ಕರ್ಣಾಟಕವ್ಯಾಕರಣಾದಿಗಳನ್ನು ಅನುಸರಿಸದೆ ಗ್ರಂಥವನ್ನು ರಚಿಸಿರುವುದರಿಂದ ಈ ಕವಿಯು ಓದಿಕೊಂಡವನಲ್ಲವೆಂದು ಒಂದು ವೇಳೆ ಊಹಿಸಬಹುದು. ಆದರೆ ಸುಲಭ ಶೈಲಿಯಿಂದ ರಚಿಸಲುದ್ದೇಶಿಸುವ ಕವಿಗಳು ಷಟ್ಪದಿಗಳಲ್ಲಿ ಧಾರಾಳವಾಗಿ ಅಕ್ಷರ ಸಂಖ್ಯಾದಿ ನಿಯಮವಿಲ್ಲದೆ, ಮತ್ತು ಸಾಮಾನ್ಯರಿಗೆ ಸುಬೋಧವಲ್ಲದ ಹಳಗನ್ನಡಪದಗಳನ್ನು ಹೆಚ್ಚಾಗಿ ಉಪಯೋಗಿಸದೆ, ಬಳಕೆಯಲ್ಲಿರುವ ಕನ್ನಡಪದಗಳಿಂದೇ ಗ್ರಂಥವನ್ನು ರಚಿಸುವ ಪದ್ಧತಿಯನ್ನವಲಂಬಿಸಿ ಇರುವನೆಂದೂ, ಇಂತಹ ಗ್ರಂಥಗಳಿಗೆ ಶಬ್ದಮಣ್ಯಾದಿವ್ಯಾಕರಣ ವಿರೋಧವು ದೂಷಣವಲ್ಲವೆಂದೂ ಪೀಠಿಕಾಸಂಚಿಕೆಯ (ಕನ್ನಡಸೆಕ್ಷನ್ 3 ನೆಯ ನಂಬರಿನ) ಅವತರಣಿಕೆಯಲ್ಲಿ ವಿಶದವಾಗಿ ನಿರೂಪಿಸಲ್ಪಟ್ಟಿದೆ.

ಆದುದರಿಂದ ಇಷ್ಟುಮಾತ್ರದಿಂದಲೇ ವಿದ್ಯೆಯನ್ನು ಅಭ್ಯಾಸಮಾಡಿದವನಲ್ಲ ವೆಂದು ಹೇಳಲಾಗದು.

ಈ ಕವಿಯ ಜೀವಿತಕಾಲವು ಆವುದೆಂಬುದನ್ನು ಸರಿಯಾಗಿ ನಿಶ್ಚಯಿಸಲು ಈ ಕವಿಯ ಗ್ರಂಥದಿಂದ ಏನೂ ಸಾಧಕ ದೊರೆಯುವುದಿಲ್ಲ. ಆದರೆ ಕೆಲವರು ಕವಿಚರಿತ್ರವಿಮರ್ಶಕರು 1508—1530 ರವರೆಗೂ ಗಣನೆಗೆ ಬರುವ ಕ್ರೈಸ್ತವಾಬ್ದಗಳಲ್ಲಿ ಇದ್ದ ವಿಜಯನಗರದ ಕೃಷ್ಣರಾಯರ ಕಾಲದಲ್ಲಿ ಈ ಕವಿಯು ಈಗ್ರಂಥವನ್ನು ರಚಿಸಿರಬಹುದೆಂದು ಹೇಳುವರು. ಅಲ್ಲದೆ ಈ ಕವಿಯನ್ನು 1590ನೆಯ ಕ್ರೈಸ್ತವಾಬ್ದದಲ್ಲಿದ್ದ ಕುಮಾರವಾಲ್ಮೀಕಿಯು ತೊರವೆ ರಾಮಾಯಣದ ಕೊನೆಯಲ್ಲಿ—

ಸರಸವರ್ಣಕಕವಿಗಳೊಳು ಭಾ<br>
ಸುರಕುಮಾರವ್ಯಾಸನೊಬ್ಬನು<br>
ಪರಕಿಸುವೊಡಾನೊಬ್ಬ ಮಗುಟೆರತನೆಯ ಮಾರ್ಣಕಕೆ ।<br>
ವರಕುಮಾರವ್ಯಾಸನೊಬ್ಬನು<br>
ಎರಡನೆಯಲಾನೊಬ್ಬ ಮಿಕ್ಕನ<br>
ಬರಡು ಕವಿಗಳ ಲೆಕ್ಕಿಸುವನೇ ಕುಮಾರವಾಲ್ಮೀಕಿ ॥

ಎಂದು ಹೊಗಳಿರುವುದರಿಂದ ಆತನಿಗಿಂತಲೂ ಪ್ರಾಚೀನನೆಂದು ಹೇಳಬೇಕು.

ಈ ಭಾರತದ ದಶಪರ್ವಗಳು ಬೆಂಗಳೂರು ಮತ್ತು ಮಂಗಳೂರು ಸ್ಥಳಗಳಲ್ಲಿ ಮುದ್ರಿತವಾಗಿ ಪ್ರಚುರವಾಗಿರುವಾಗ ಹೊಸದಾಗಿ ಮುದ್ರಿಸಲು ಯತ್ನಿಸುವುದಕ್ಕೆ ಕಾರಣಗಳನ್ನು ಹೇಳಬೇಕಾಗಿದೆ.

ಮೇಲೆಕಂಡ ಸ್ಥಳಗಳಲ್ಲಿ ಮುದ್ರಿತವಾದ ಪ್ರತಿಗಳನ್ನು ನಮಗೆ ದೊರೆತಿರುವ ಭಾರತದ ಲಿಖಿತಪ್ರತಿಗಳೊಡನೆ ಹೋಲಿಸಿ ನೋಡುವಾಗ ಮುದ್ರಿತಪುಸ್ತಕಗಳಲ್ಲಿ ಕವಿರಚಿತಗ್ರಂಥವು ಸಂಪೂರ್ಣವಾಗಿ ಪ್ರಕಟವಾಗಿರುವುದಿಲ್ಲವೆಂದು ನಾವು ಇದರಡಿಯಲ್ಲಿ ತೋರಿಸುವ ರೀತಿಯಿಂದ ವ್ಯಕ್ತವಾಗುವುದು.

| ಪರ್ವ | ಮುದ್ರಿತಪುಸ್ತಕದಲ್ಲಿ ಕಂಡು ಬರುವ ಸಂಧಿಗಳು | ಓಲೆಯಪುಸ್ತಕದಲ್ಲಿ ಕಂಡು ಬರುವ ಸಂಧಿಗಳು |
|---|---|---|
| ಆದಿಪರ್ವ | 20 ಸಂಧಿಗಳು. | * 53 ಸಂಧಿಗಳು. |
| ಸಭಾಪರ್ವ | 16 ,, | 17 ,, |
| ಅರಣ್ಯಪರ್ವ | 23 ,, | 34 ,, |
| ಉದ್ಯೋಗಪರ್ವ | 11 ,, | 12 ,, |
| ಭೀಷ್ಮಪರ್ವ | 9 ,, | 31 ,, |
| ದ್ರೋಣಪರ್ವ | 19 ,, | 23 ,, |

ಈ ರೀತಿಯಾಗಿ ಸಂಧಿವ್ಯತ್ಯಾಸವು ಇರುವುದಲ್ಲದೆ, ಕೆಲವು ಸಂಧಿಗಳಲ್ಲಿ ಪದ್ಯಗಳ ಸಂಖ್ಯೆಯಲ್ಲಿಯೂ ಸಹ ವ್ಯತ್ಯಾಸಗಳಿರುವುವು.

ಹೀಗೆ ಮುದ್ರಿತಪುಸ್ತಕಗಳಲ್ಲಿ ತೋರಿಬರುವ ಅಸಂಪೂರ್ಣತೆಯು ಭಾಷಾಭಿಮಾನಿಗಳಲ್ಲಿ ಬಹುಜನಗಳಿಗೆ ಸಾಮಾನ್ಯವಾಗಿ ಕಂಡುಬಂದುದರಿಂದ ಪ್ರಾಚೀನವಾದ ಪುಸ್ತಕಗಳನ್ನನುಸರಿಸಿ ಸಂಪೂರ್ಣವಾಗಿ ಸರಿಯಾದ ಮುದ್ರಣವು ಆವಶ್ಯಕವೆಂಬ ಅಭಿಪ್ರಾಯದಿಂದ ಈ ಪುಸ್ತಕದ ಮುದ್ರಣಕಾರ್ಯವು ಆರಂಭಿಸಲ್ಪಟ್ಟಿತು. ಇದರ ಶೋಧನಕ್ಕಾಗಿ ಉಪಯೋಗಿಸಿರುವ ಪುಸ್ತಕಗಳ ವಿವರಣೆ—

| ಗುರ್ತು | ಗ॥ ಓ॥ | ಲೈಬ್ರರಿ ನಂಬರು | ವಿಶೇಷ |
|---|---|---|---|
| ಕ. | ನಂ॥ | 70 | ಸಮಗ್ರ. 1763 ನೆಯ ಶಕವರ್ಷ॥ ಬರೆದುದು. |
| ಖ. | ,, | | ಸಮಗ್ರ. ಕ್ಲೇಪ್ರಸ್ ಪ್ರೊಪ್ರೈಟರಿಂದ ಬಂದದ್ದು. |
| ಗ. | ,, | 218 | ಅಸಮಗ್ರ. |
| ಘ. | ,, | 210 | ಅಸಮಗ್ರ. |
| ಚ. | ,, | 251 | ಸಮಗ್ರ. |
| ಛ. | ,, | 57 | ಅಸಮಗ್ರ. |
| ಜ. | ,, | 2 | ಪ್ರಾಯಿಕ ಸಮಗ್ರ. ಪುರಾತನಪ್ರತಿ. |
| ಝ. | ,, | 266 | ಅಸಮಗ್ರ. |
| ಟ. | ,, | 205 | ಸಮಗ್ರ. |
| ಠ. | ,, | 273 | ಅಸಮಗ್ರ. |

* ಉಪೋದ್ಘಾತಸಂಚಿಕೆಯಲ್ಲಿ ಪ್ರಕಟಿಸಿರುವ ಸಂಧಿಗಳು ಈ ಸಂಖ್ಯೆಯಲ್ಲಿ ಸೇರಿವೆ.

ಮೇಲೆ ತೋರಿಸಿರುವ ಪ್ರತಿಗಳಲ್ಲಿ ಮೂರು—ಅಂದರೆ ಚ, ಛ, ಟ, ಗುರ್ತುಗಳ—ಪುಸ್ತಕಗಳು ಮಾತ್ರ ಬೆಂಗಳೂರು ಮೊದಲಾದ ಸ್ಥಳಗಳಲ್ಲಿ ಮುದ್ರಿಸಲ್ಪಟ್ಟಿರುವ ಪುಸ್ತಕಗಳ ಪಾಠಕ್ಕೆ ಸರಿಹೋಗುವುವು. ಉಳಿದ 7 ಪ್ರತಿಗಳೂ ಈಗ ಪ್ರಚುರಪಡಿಸುತ್ತಿರುವ ಪಾಠಕ್ಕೆ ಆಧಾರಗಳಾಗಿವೆ. ಈ ಪುಸ್ತಕಗಳಲ್ಲಿ ಅಲ್ಲಲ್ಲಿ ಸ್ವಲ್ಪ ಸ್ವಲ್ಪವಾಗಿ ಪಾಠಭೇದಗಳು ಕಂಡುಬರುವುವು. ಕೆಲವೆಡೆಯಲ್ಲಿ ಬೇರೆಬೇರೆ ಪದಗಳು ಮಾತ್ರವಿದ್ದು ಅರ್ಥಭೇದವಾಗದಂತಿರುವುದು, ಕೆಲವೆಡೆಗಳಲ್ಲಿ ಕೆಲವು ಪದ್ಯಗಳೇ ಹೆಚ್ಚಾಗಿರುವುವು. ಹಾಗೆ ಹೆಚ್ಚಾಗಿರುವ ಪದ್ಯಗಳು ಹೇಳಿದ ವಿಷಯಗಳನ್ನೇ ಹೇಳುವುವು. ಅವುಗಳಲ್ಲಿ ಅನೇಕ ಪುಸ್ತುಕಗಳಲ್ಲಿ ಕಂಡು ಅತ್ಯಂತ ಸಂಗತವಾಗಿ ಇರುವುದನ್ನು ಪುಸ್ತಕಮಧ್ಯದಲ್ಲಿ ಸೇರಿಸಿ ಉಳಿದ ಏನೋ ಒಂದುರೀತಿಯಿಂದ ಹೊಂದಿಸಿಕೊಳ್ಳಬಹುದಾದ ಪುಸ್ತುಕಾಂತರಪಾಠಗಳನ್ನು ಆಯಾಪುಟಗಳ ಕೆಳಭಾಗದಲ್ಲಿ ಪುಸ್ತಕದ ಚಿಹ್ನದೊಡನೆ ತೋರಿಸಿದೆ. ಹೇಗೂ ಹೊಂದದೇ ಇರುವ ಪಾಠಭೇದಗಳನ್ನು ಬಿಟ್ಟಿದೆ. ಮತ್ತು ಅಲ್ಲಲ್ಲಿ ಸಂಧಿಇಲ್ಲದೆಯೂ ಅಪಸಂಧಿಯಾಗಿಯೂ ಪಾಠಗಳು ಇರುವುವು. ಅಂತಹ ಸ್ಥಳಗಳಲ್ಲಿ ಯಾವುದಾದರೊಂದು ಪುಸ್ತಕದಲ್ಲಿ ಕಂಡು ಬಂದ ಯುಕ್ತಪಾಠವು ಅನುಸರಿಸಲ್ಪಟ್ಟಿದೆ. ಮತ್ತು ಪೂರ್ವೋತ್ತರಾನುಗುಣ್ಯದಿಂದ ಆಲೋಚಿಸಲಾಗಿ ಯಾವಪುಸ್ತಕಪಾಠವೂ ಹೊಂದದೇ ಇರುವ ಸ್ಥಳಗಳಲ್ಲಿ ಸಂಧರ್ಭವನ್ನು ಅನುಸರಿಸಿ ಬಹುಸ್ವಲ್ಪವಾಗಿ ಸ್ವತಂತ್ರಶೋಧನೆಯೂ ಮಾಡಲ್ಪಟ್ಟಿದೆ. ಅಂತು ನಿರ್ಮೂಲವಾಗಿಯೂ ಅನಾವಶ್ಯಕವಾಗಿಯೂ ಅಸಂಗತವಾಗಿಯೂ ಯಾವಶೋಧನೆಯೂ ಮಾಡಲ್ಪಟ್ಟಿರುವುದಿಲ್ಲ. ಪ್ರಾಮಾದಿಕದೋಷಗಳೇನಾದರೂ ಇದ್ದರೆ ಗುಣಜ್ಞರು ಕ್ಷಮಿಸಲರ್ಹವಾಗಿವೆ.

ಈಗ ಮುದ್ರಿಸಿರುವ ಪಾಠಕ್ರಮದಲ್ಲಿ ಸೇರಿದ ಮತ್ಸ್ಯಾದ್ಯವತಾರ ಚರಿತ್ರಭಾಗವು ಮತ್ತು ಐರಾವತದ ಕಥೆಯು ಸಂಸ್ಕೃತಮೂಲಭಾರತದಲ್ಲಿ ಇಲ್ಲವಾದುದರಿಂದ ಈ ಭಾಗದ ಗ್ರಂಥಗಳು ಕುಮಾರವ್ಯಾಸಕೃತಿಯಲ್ಲಿ ಸೇರಲರ್ಹವೇ ಅಲ್ಲವೆ? ಎಂಬುದು ವಿಚಾರಕ್ಕೆ ತಕ್ಕ ವಿಷಯ

ವಾಗಿದೆ. ಇದರ ನಿರ್ಧಾರಣಕ್ಕಾಗಿ ಸಂಸ್ಕೃತಭಾರತಸ್ಥಿತಿಯನ್ನು ಸ್ವಲ್ಪ ವಾಗಿ ಹೇಳಬೇಕಾಗಿದೆ. ಮತತ್ರಯಭಾಷ್ಯಕಾರರಲ್ಲಿ ದ್ವೈತಭಾಷ್ಯ ಕಾರರೊಬ್ಬರೆ ಭಾರತದ ವಿಷಯವನ್ನು ವಿಚಾರ ಮಾಡಿದವರು. ಅವರು ಸ್ವತಂತ್ರವಾಗಿ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯವೆಂಬ ಗ್ರಂಥ ವನ್ನು ರಚಿಸಿರುವರು. ಭಾರತಕ್ಕೆ ಪದಾರ್ಥಕಥನಪೂರ್ವಕ ವ್ಯಾಖ್ಯಾನ ವನ್ನು ಮಾಡದೆ ತಾತ್ಪರ್ಯನಿರ್ಣಯವನ್ನು ಮಾಡುವುದಕ್ಕೆ ಕಾರಣ ವನ್ನು ಹೇಳುವಾಗ—

**क्वचिद्ग्रंथान् प्रक्षिपंति क्वचिदंतरितानपि ।**
**कुर्युः क्वचिच्च व्यत्यासं प्रमादात्क्वचिदन्यथा ॥**
**अनुत्सन्ना अपि ग्रंथा व्याकुला इति सर्वशः ।**
**उत्सन्नाः प्रायशस्सर्वे कोट्यंशोपि न वर्तते ॥**
**ग्रंथोप्येवं विलुलितः .. .. ..**
**देशे देशे तथा ग्रंथान् दृष्ट्वा चैव पृथग्विधान् ॥**

ಎಂಬ ಭಾಗದಿಂದ ಅವರ ಕಾಲದಲ್ಲಿ ಭಾರತಪುಸ್ತಕಗಳು ಹೇಗೆ ಇದ್ದುವು ಎಂಬ ವಿಷಯವನ್ನು ಹೇಳಿರುವರು. ಇದರಿಂದ ಅವರ ಕಾಲದಲ್ಲಿಯೇ ಅಂದರೆ ಸುಮಾರು ಈಗ್ಗೆ 800 ವರ್ಷಗಳಿಗೆ ಹಿಂದೆ ಭಾರತಗ್ರಂಥದಲ್ಲಿ ಅನೇಕ ಅಧಿಕಭಾಗಗಳು ಸೇರಿದ್ದುವೆಂದೂ ಇದ್ದ ಭಾಗಗಳು ಅಧಿಕ ವಾಗಿ ಹೋಗಿದ್ದುವೆಂದೂ ಒಂದೊಂದುಮನೆಯಲ್ಲಿರುವ ಪುಸ್ತಕಗಳ ಪಾಠವೂ ಒಂದೇ ರೀತಿಯಾಗಿರಲಿಲ್ಲವೆಂದೂ ವ್ಯಕ್ತವಾಗುತ್ತದೆ. ಅಲ್ಲದೆ ಈಗ ಮದ್ರಾಸು ಬೊಂಬಾಯಿ ಮೊದಲಾದ ಸ್ಥಳಗಳಲ್ಲಿ ಪ್ರಕಟಿಸಲ್ಪಟ್ಟಿ ರುವ ಭಾರತಗ್ರಂಥಗಳಲ್ಲಿಯೂ ಪಾಠಭೇದವು ಹೆಚ್ಚಾಗಿ ಕಂಡು ಬರು ತ್ತದೆ. ಭಾರತಗ್ರಂಥದ ಸಂಖ್ಯೆಯು ಸಪಾದಲಕ್ಷವೆಂದು ಪ್ರಸಿದ್ಧಿ ಇರುವುದು. ಇಷ್ಟು ಪರಿಮಾಣವುಳ್ಳ ಭಾರತದಲ್ಲಿ ಮತ್ಸ್ಯಾದ್ಯವತಾರ ಚರಿತ್ರಗಳನ್ನು ನಿರೂಪಿಸಲಿಲ್ಲವೆಂದು ಹೇಳುವುದು ಯುಕ್ತವಾಗಿ ತೋರು ವುದಿಲ್ಲ. ಮತ್ತು ಮೇಲೆ ತೋರಿಸಿದ ಮಹಾಭಾರತತಾತ್ಪರ್ಯನಿರ್ಣ

ಯುವೆಂಬ ಗ್ರಂಥದಲ್ಲಿ ದಶಾವತಾರಚರಿತ್ರೆಯನ್ನು ನಿರೂಪಿಸಿರುವರು. ಆದುದರಿಂದ ಈಕವಿಗೆ ದೊರೆತ ಭಾರತಪುಸ್ತಕದಲ್ಲಿ ಮತ್ಸ್ಯಾದ್ಯವತಾರಗಳುಳ್ಳಭಾಗವೂ ಇತ್ತೆಂದೂ, ಅದನ್ನನುಸರಿಸಿ ಆಚರಿತ್ರಗಳನ್ನು ಈ ಕವಿಯೇ ರಚಿಸಿರುವನೆಂದು ಹೇಳುವುದು ಯುಕ್ತವಾಗಿದೆ. ಅಲ್ಲದೆ ಮೇಲೆ ತೋರಿಸಿರುವ ಪುರಾತನವಾದ ಬಹುಪುಸ್ತಕಗಳಲ್ಲಿ ಈಭಾಗಗಳೆಲ್ಲವೂ ಇವೆ. ಆದುದರಿಂದ ಈಭಾಗಗಳನ್ನು ಬಿಡುವುದು ಯುಕ್ತವಲ್ಲವೆಂದು ಬಹುಪುಸ್ತಕಗಳನ್ನನುಸರಿಸಿ ಶೋಧನಪೂರ್ವಕವಮುದ್ರಣವು ನಡೆದಿರುತ್ತದೆ. ಆದುದರಿಂದ ಈ ವಿಷಯದಲ್ಲಿ ಗುಣಗ್ರಾಹಿಗಳು ಅಭಿಜ್ಞರೂ ಆದವರೆಲ್ಲರೂ ಸಂತೋಷಿಸುವರೆಂದು ನಂಬಿದೆ.

## ವಿ ಷ ಯ ಸೂ ಚಿ ಕೆ .

ವಿಷಯ. ಪುಟ



೬ನೆಯ ಸಂಧಿ—

೯ನೆಯ ಸಂಧಿ—



೧೦ನೆಯ ಸಂಧಿ—

| ವಿಷಯ | ಪುಟ |
|---|---|
| ೧೧ನೆಯ ಸಂಧಿ— | |
| ಲೋಕವಿಸ್ತಾರಪ್ರಶ್ನೆ ಮತ್ತು ಉತ್ತರ .... .... | 160 |
| ೧೨ನೆಯ ಸಂಧಿ— | |
| ಜನಮೇಜಯನ ಪೌರ್ವಿಕರ ವೃತ್ತಾಂತ .... ... | 168 |
| ಅಷ್ಟವಸುಗಳಿಗೆ ಶಾಪಕಾರಣ .... .... | 171 |
| ಗಂಗಾವರುಣರಿಗೆ ಮಾನುಷಜನ್ಮಕಾರಣಪ್ರಶ್ನೆ .... .... | 174 |
| ಬ್ರಹ್ಮಸಭೆಗೆ ಭಾಗೀರಥಿಯು ಆಗಮನ .... .... | ,, |
| ಗಂಗೆಯ ವಸ್ತ್ರವು ಜಾರಲು ವರುಣನು ನೋಡುವಿಕೆ .... | ,, |
| ಆಗ ವರುಣನಿಗೆ ಮನುಷ್ಯನಾಗೆಂದು ಬ್ರಹ್ಮಶಾಪ .... .... | 175 |
| ವರುಣನು ಶಂತನುವಾಗಿ ಜನಿಸುವಿಕೆ .... .... | 176 |
| ಶಂತನುವಿಗೆ ಗಂಗಾದರ್ಶನ .... .... .... | 177 |
| ವಿವಾಹವಾಗುವಿಕೆ .... .... .... | ,, |
| ಈ ಶಿಶುವನ್ನು ಕೊಲ್ಲಬೇಡವೆಂದು ಶಂತನುವಚನ .... .... | 178 |
| ಗಂಗೆಯು ಭೀಷ್ಮನನ್ನು ಶಂತನುವಿಗೆ ಒಪ್ಪಿಸುವಿಕೆ .... .... | |
| ೧೩ನೆಯ ಸಂಧಿ— | |
| ಚಂದ್ರವಂಶದವರ ಮಹಿಮೆ .... .... .... | |
| ಉಪರಿಚರವಸುವಿಗೆ ಪುತ್ರ ಮತ್ತು ಪುತ್ರಿಯು ಜನನ ... | 181 |
| ದಾಶರಾಜನು ಮೀನನ್ನು ತಂದು ಕಡಿಯಲು ಮಕ್ಕಳು ಸಿಕ್ಕುವಿಕೆ ... | 182 |
| ಗಂಡುಮಗುವನ್ನು ಅರಸಗೆ ಕೊಟ್ಟು ಹೆಂಗೂಸನ್ನು ಸಂರಕ್ಷಿಸುವಿಕೆ .... | ,, |
| ಆ ಕನ್ಯೆಯಲ್ಲಿ ಪರಾಶರರಿಂದ ವ್ಯಾಸೋತ್ಪತ್ತಿ .... .... | 183 |
| ಆಗ ಶಂತನುವಿಗೆ ಸತ್ಯವತಿಯು ದರ್ಶನ .... .... | 185 |
| ಸತ್ಯವತಿಯು ಒಪ್ಪದಿರಲು ಚಿಂತೆಯಿಂದಿರುವಿಕೆ .... .... | 187 |
| ಸತ್ಯವತಿಯನ್ನು ತಂದೆಗೆ ಭೀಷ್ಮನು ವಿವಾಹ ಮಾಡುವಿಕೆ .... | 188 |
| ಶಂತನುವಿಗೆ ಚಿತ್ರಾಂಗದವಿಚಿತ್ರವೀರ್ಯರ ಜನನ .... .. | 189 |
| ಚಿತ್ರಾಂಗದನು ಮೃತನಾಗಲು ವಿಚಿತ್ರವೀರ್ಯನ ರಾಜ್ಯಪರಿಪಾಲನ .. | ,, |
| ವಿಚಿತ್ರವೀರ್ಯನ ವಿವಾಹ .... .... .... | 190 |
| ಅಂಬಾಭೀಷ್ಮರ ಕಲಹ ... .... .... | ,, |
| ಪರಶುರಾಮರನ್ನು ಪ್ರಾರ್ಥಿಸೆಂದು ಅಂಬೆಗೆ ನಾರದೋಪದೇಶ .... | 191 |

## ೧೪ನೆಯ ಸಂಧಿ

| ವಿಷಯ | ಪುಟ |
|---|---|

೧೮ನೆಯ ಸಂಧಿ—

ಶ್ರೀ

ಕುಮಾರವ್ಯಾಸಮಹಾಕವಿವಿರಚಿತಂ

# ಕರ್ಣಾಟಕಮಹಾಭಾರತಂ

## ಆದಿಪರ್ವ.

### ಪೀಠಿಕಾಸಂಧಿ.

ದೇವತಾಸ್ತುತಿಗಳು.

ಶ್ರೀವನಿತೆಯರಸನೆ ವಿಮಲರಾ
ಜೀವಪೀಠನ ಜನಕ ಜಗಕತಿ
ಪಾವನನೆ ಸನಕಾದಿಸಜ್ಜನನಿಕರದಾತಾರ ।
ರಾವಣಾಸುರಮಥನ ಶ್ರವಣಸು
ಧಾವಿನೂತನಕಥನಕಾರಣ
ಕಾವುದಾನತಜಗವ ಗದುಗಿನ ವೀರನಾರಯಣ ॥

ಶ್ರೀಮದಮರಾಧೀಶನತಪದ
ತಾಮರಸ ಘನವಿಪುಳನಿರ್ಮಳ
ಧಾಮನನುಪಮವಿಮಳಸುರಮುನಿವಿನುತನಿಜಚರಿತ ।
ರಾಮನೂರ್ಜಿತರಾಮ ರಘುಕುಲ
ರಾಮನಾಹವಭೀಮ ಯದುಕುಲ ।
ರಾಮ ಪಾಲಿಸು ವೊಲಿದು ಗದುಗಿನ ವೀರನಾರಯಣ ॥

ವೇದಪುರುಷನ ಸುತನ ಸುತನ ಸ
ಹೋದರನ ಹೆಮ್ಮಗನ ಮಗನ ತ

ಳೋದರಿಯು ಮಾತುಳನ ಮಾವನ ನತುಳಭುಜಬಲದಿ ।
ಕಾದಿ ಗೆಲಿದನನಣ್ಣನವ್ವೆಯು
ನಾದಿನಿಯು ಜಠರದಲಿ ಜನಿಸಿದ
ನಾದಿಮೂರುತಿ ಸಲಹೊ ಗದುಗಿನ ವೀರನಾರಯಣ ॥ ೩

ಶರಧಿಸುತೆ ಸನಕಾದಿವಂದಿತೆ
ಸುರನರೋರಗವಾತೆ ಸುಜನರ
ಪೂಜಿವ ವಾತೆ ಸುರಾಗ್ರಗಣ್ಯಸುಮುನಿವರಸ್ತುತ್ಯೆ ।
ಪರಮಕರುಣಾಸಿಂಧು ಪಾವನ
ಚರಿತೆ ಪದ್ಮಜಮುಖ್ಯಸಕಲಾ
ಮರಸುಪೂಜಿತೆ ಲಕ್ಷ್ಮಿ ಕೊಡುಗೆಮಗಧಿಕಸಂಪದವ ॥ ೪

ವರಚತುರ್ಮುಖ ಕಮಲಸಂಭವ
ಕರಕಮಂಡಲು ವಿಶ್ವಯೋನಿಜ
ಸುರನರೋರಗವಂದ್ಯಜನ ಪರಮೇಷ್ಠಿ ಲೋಕೇಶ ।
ಸರಸಿರುಹಭವಪೀಠ ನಾರದ
ವರಪಿತಾಮಹ ಹಂಸವಾಹನ
ಹರಿಹರಪ್ರಿಯ ರಕ್ಷಿಸೆನ್ನನು ಭಾರತೀರಮಣ ॥ ೫

ವಾರಿಜಾಸನೆ ಸಕಲಶಾಸ್ತ್ರವಿ
ಚಾರದುದ್ಭವೆ ವಚನರಚನೋ
ದ್ಧಾರೆ ಶ್ರುತಿಪೌರಾಣಿಕಾಗಮಸಿದ್ಧಿದಾಯಕಿಯು ।
ಸೂರಿಸುರಪತಿಸಕಲಮುನಿಜನ
ಭೂರಿಗುಣಗಣಪದದ[1] ಯುಕ್ತಿಯೆ
ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ ॥ ೬

ಶರಣಸಂಗವ್ಯಸನ ಭುಜಗಾ
ಭರಣನಮರಕಿರೀಟಮಂಡಿತ

---

[1] ಸೂರಿಗಳಿಗನುಪಮದ, ಚ.

ಚರಣ ಚಾರುಚರಿತ್ರ ನಿರುಪಮ ಫಾಲಶಿಖಿನೇತ್ರ ।
ಕರಣನಿರ್ಮಳಭಜಕರಘಸಂ
ಹರಣ ದಂತಿಚರ್ಮಾರುಚರ್ಮಾಂ
ಬರನೆ ಸಲಹುಗೆ ಭಕ್ತಜನವನು ಪಾರ್ವತೀರಮಣ ॥ ೭

ಗಜಮುಖನ ವರಮಾತೆ ಗೌರಿಯೆ
ತ್ರಿಜಗದರ್ಚಿತ [1] ಚಾರುಚರಣಾಂ
ಬುಜೆಯೆ ಪಾವನಮೂರ್ತಿ ಪದ್ಮಜಮುಖ್ಯಸುರಪೂಜ್ಯೆ ।
ಭಜಕರಘಸಂಹರಣೆ ಸುಜನ
ವ್ರಜಸುಸೇವಿತೆ ಮಹಿಷಮರ್ದಿನಿ
ಭುಜಗಭೂಷಣನರಸಿ ಕೊಡು ಕಾರುಣ್ಯದಲಿ ಮತಿಯ ॥

ವರಮಣಿಗಳಿಂದೆಸೆವ ಮೌಳಿಯ
ಸರಸಿಜಾರಿಯ ಕಿರಣ ಧೂಳಿಯ
ವಿರಚಿಸುವ ಸಿಂಧೂರಭಾಳದಿ ಕುಣಿವ ಕುಂತಳದ ।
ಕರಿನಿಭಾಕೃತಿಯೆನಿಪ ವದನದ
ಕರದ ಪಾಶದ ಮೋದಕದ ವಿ
ಸ್ತರದ ಗಣಪತಿ ಮಾಡೆಮಗೆ ನಿರ್ವಿಘ್ನದಾನವನು [2] ॥

* ದುರಿತಕುಲಗಿರಿವಜ್ರದಂಡನು
ಧರೆಯ ಜಂಗಮಮೂರ್ತಿ ಕವಿವಾ
ರಿರುಹದಿನಮಣಿ ನಿಖಿಳಯತಿಪತಿದಿವಿಜವಂದಿತನು ।
ತರಳನನು ತನ್ನವನೆನಿಸಿ ಪತಿ
ಕರಿಸಿ ಮಗನೆಂದೊಲಿದು ಕರುಣದಿ
ವರವನಿತ್ತನು ದೇವ ವೇದವ್ಯಾಸಮುನಿರಾಯ ॥ ೧೦

---

[1] ತ್ರಿಜಗವಂದಿತೆ, ಕ.　　[2] ದಾಯಕವ, ಕ. ಖ. ಗ.

* ಮುದ್ರಿತ ಪುಸ್ತಕದಲ್ಲಿರುವ ಗಣಪತಿ ಪ್ರಾರ್ಥನೆಯ ಮತ್ತೊಂದು ಪದ್ಯ ಬಹುಕೋಶಗಳಲ್ಲಿಲ್ಲವಾಗಿ ಬಿಟ್ಟಿದೆ.

ಎಂಡು ತೋಳಿನ ವಿಷ್ಣು ಮುಖವೊಂ
ದಱಲಿ ಮೆಱೆವ ಬ್ರಹ್ಮನೊಸಲಲಿ
ವೆರನಯನ ವೊಂದಿಲ್ಲದಾಸಂನುತಪರಮಶಿವ ।
ಧರೆಯ ಜೀವರ ಜನ್ಮಮರಣಾಂ
ಕುರವಿದಾರಕುಠಾರ ವಿದ್ಯಾ
ಶರಧಿ ವೇದವ್ಯಾಸಮುನಿ ಮಾಟ್ಕೆಮಗೆ ಸನ್ಮತಿಯ ॥ ೧೧

ವಂದಿತಾಮಳಚರಿತನಮರಾ [1]
ನಂದ ಯದುಕುಲಚಕ್ರ [2] ವರ್ತಿಯ
ಕಂದ ನತಸಂಸಾರಕಾನನಘನದವಾನಳನು ॥
ನಂದನಂದನಸನ್ನಿಭನು ಸಾ
ನಂದದಿಂದವೆ ನಮ್ಮವನು ಕೃಪೆ
ಯಿಂದ ಸಲಹುಗೆ ದೇವ ಜಗದಾರಾಧ್ಯಗುರುರಾಯ ॥ ೧೨

ಕೃತಿಯು ಸತ್ಕರ್ಣಾಟಕದ ಭಾ
ರತಕೆ ಮಂಜುಳಮಂಜರಿಯು ಮಹ
ಕೃತಿಗೆ ನಾಯಕನಾದ ಗದುಗಿನ ವೀರನಾರಯಣ ।
ನುತಕುಮಾರವ್ಯಾಸಮುನಿಯಿಾ
ಕೃತಿಗೆ ಕರ್ತೃವೆನಲ್ಕೆ ಸದಲಂ
ಕೃತಿಚಮ [3] ತ್ಕೃತಿಯೆನಿಸದೇತಕೆ ಶೂಲಿ [4] ಸಭೆಯೊಳಗೆ ॥ ೧೩

ವೀರನಾರಾಯಣನ ಸುಕವಿಕು
ಮಾರವ್ಯಾಸರಚನಾಕೃತಿಯ ಕೇಳುವ
ಸೂರಿಗಳು ಸನಕಾದಿಗಳು ಜಂಗಮಜನಾರ್ದನರು ।
ಹಾರಗವಿತೆಯ ಬಳಕೆ ಯಂತೆ ವಿ
ಚಾರಿಸುವೊಡಳವಲ್ಲ ಚಿತ್ತವೆ
ಧಾರು ಹೋ ಸರ್ವಜ್ಞರಾಯರು ಸಲುಗೆ ಬಿನ್ನಪವ ॥ ೧೪

---

[1] ಮರಸೇವ್ಯನಾಯಕ, ಘ.
[2] ನಂದಮುನಿ ಯತಿ ಚಕ್ರ, ಘ.
[3] ಕೃತಿಯೆನಿಸದೆಚಮ, ಕ.
[4] ಸದೆಕವುಲಾದಿ, ಕ

ಕವಿಪಂಡಿತ ಮೊದಲಾದವರನ್ನು ಪ್ರಾರ್ಥಿಸಿ ತಾನು ರಚಿಸುವುದನ್ನು ತಿಳಿಸುವಿಕೆ.

ಕೃತಿಯನವಧರಿಸುವುದು ಸುಕವಿಯು
ಮತಿಗೆ ಮಂಗಳವೀವುದಧಿಕರು
ಸ್ತುತಿಸುವುದು ತಿದ್ದುವುದು ಮೆಚ್ಚುವುದು ಲೇಸ ಚಿಂತಿಪ್ಪು[1] ದು ।
ಅತಿಗುಣರು ಭಾವಕರು ವರಪಂ
ಡಿತರು ಸುಜನರು ಸೂಕ್ತಿಕಾರರು
ಮತಿಯನೀವುದು ವೀರನಾರಾಯಣನ ಕಿಂಕರಗೆ ॥ ೧೫

ತಿಣುಕಿದನು ಫಣಿರಾಯ[2] ರಾಮಾ
ಯಣದ ಕವಿಗಳ ಭಾರದಲಿ ತಿಂ
ಥಿಣಿಯ ರಘುವರಚರಿತೆಯಲಿ ಕಾಲಿಡಲು ತೆರಪಿಲ್ಲ ।
ಬಣಗುಕವಿಗಳ ಬಗೆವನೇ ಸಾ
ಕೆಣಿಸದಿರು ಶುಕರೂಪನಲ್ಲದೆ
ಕುಣಿಸಿ ನಗನೇ ಕವಿಕುಮಾರವ್ಯಾಸನುಳಿದವರ ॥ ೧೬

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀಶ್ವ
ರರ ತತ್ತ್ವವಿಚಾರ ಮಂತ್ರಿಜನಕೆ ಬುದ್ಧಿಗುಣ ।
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ॥ ೧೭

. ಕೋವಿದರಿಗಿದು ಮೆಚ್ಚು ಜಾಣರ
ಜೀವವಿದು ಪರಿಣತರ ಹರಣವು
ಭಾವಕರ ಕುಲದೈವ ಮನುಜರಿಗುಂ[3] ಮಹಾಮಮತೆ ।
ಆವಿಮುಖಖಳಜನದ ಚಿತ್ತ

---

[1] ಸಂಚಿಪ್ಪು, ಕ. ಘ. ಕುಸಿಯಿತು, ಗ.　[2] ಹುಣಿಗಿದನು ಫಣಿರಾಯ, ಕ. ಫಣಿಯದೆಡೆ　[3] ಕುಲವಿದ್ಯವಮುನಿನಿಕರಕೆ, ಕ, ಗ.

ದ್ರಾವಣವು ಮೂರ್ಖರಿಗೆ ಪೀಯೂ
ಷಾವಗಾಹನ ಮತ್ಕೃತಿಯು ಸಕಳರ ಕುತೂಹಳಿಕೆ ॥ ೧೮

ಕವಿಯು ತನ್ನ ಸಾಮರ್ಥ್ಯವನ್ನು ಹೇಳಿಕೊಳ್ಳುವಿಕೆ.

ಹಲಿಗೆ ಬಳಹವ ಹಿಡಿಯದೊಂದ
ಗ್ಗಳಿಕೆಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಹಿಡಿಯದಗ್ಗಳಿಕೆ ।
ಬಳಸಿ ಬರೆಯಲು ಕಂಠಪತ್ರದ
ಮುಲಿಹು ಗೆಡದಗ್ಗಳಿಕೆ ಯೆಂಬೀ
ಬಲುಹು ಸಲುವುದು ವೀರನಾರಾಯಣನ ಕಿಂಕರಗೆ ॥ ೧೯

ಪದದ ಪ್ರೌಢಿಯ ನವರಸಂಗಳ
ಮುದಿತವನುವಭಿಧಾನಭಾವವ
ಬೆದಕಲಾಗದು ಬಲ್ಲಪ್ರೌಢರು ಮಾಕಥಾಂತರಕೆ ।
ಇದ ವಿಚಾರಿಸೆ ಬಱಿಯ ತೊಳಸಿಯ
ಮುದಕದಂತಿರೆ ಯಿಲ್ಲಿ ನೋಳ್ಪುದು
ಪದುಮನಾಭನ ಮಹಿಮೆ ಧರ್ಮವಿಚಾರಮಂತ್ರವನು ॥ ೨೦

ಭುವನನುತಚರಿತನು ಭಕುತಜನ
ಭವವಿಪಿನದಾವಾನಳನು ಪಾಂ
ಡವನೃಪಾಲಪ್ರೀಣಿತಪ್ರಾಣದ ಮಹೋ[1] ನಿಲಯ ।
ದಿವಿಜಪತಿಮೌಳಿಪ್ರಣಿಹಿತ
ಪ್ರವರರತ್ನಶ್ರೇಣಿ ಶೋಭಾ
ಧವಳಿತಾಂಘ್ರಿಸರೋಜ ಗದುಗಿನ ವೀರನಾರಯಣ ॥ ೨೧

ಭಾರತಮಾಹಾತ್ಮ್ಯಕಥನ

ಹೇಮಖುರಶೃಂಗಾಭರಣದಿಂ
ಕಾಮಧೇನು ಸಹಸ್ರಕಪಿಲೆಯ

1 ಮಹಾ, ಕ. ಘ.

ಸೋಮಸೂರ್ಯಗ್ರಹಣದಲಿ ಸುರನದಿಯ ತೀರದಲಿ ।
ಶ್ರೀಮುಕುಂದಾರ್ಪಣವೆನುತ ವರ
ಭೂಮಿದೇವರಿಗಿತ್ತ ಫಲವಹು
ದೀಮಹಾಭಾರತದೊಳೊಂದಕ್ಷರವ ಕೇಳ್ದರಿಗೆ ॥ ೨೦

ವೇದಪಾರಾಯಣದ ಫಲ ಗಂ
ಗಾದಿತೀರ್ಥಸ್ನಾನಫಲ ಕೃ
ಛ್ರಾದಿತಪಸಿನ ಫಲವು ಜ್ಯೋತಿಷ್ಟೋಮಯಾಗಫಲ ।
ಮೇದಿನಿಯನೊಲಿದಿತ್ತ ಫಲವು
ನ್ಮಾದವಸ್ತ್ರಸುದಾನಫಲವಹು
ದಾದರದಿ ಭಾರತದೊಳೊಂದಕ್ಷರವ ಕೇಳ್ದರಿಗೆ ॥ ೨೩

ಜಾರೆ [1] ನಿಂದಿಸಿ ಶಶಿಯು ಬೈದರೆ
ಕ್ಷೀರವನು ಕ್ಷಯರೋಗಿ ಹಳಿದರೆ
ವಾರಣಾಸಿಯ ಹೊಳವೆ ನಿಂದಿಸಿ ನಕ್ಕೊಡೇನಹುದು ।
ಭಾರತದ ಪುಣ್ಯಪ್ರ [2] ಸಂಗವ
ಕ್ರೂರಕರ್ಮಿಗಳತ್ತ ಬಲ್ಲರು
ಘೋರತರದಘಭವವ ಕೆಡಿಸುವುದು [3] ಕೇಳ್ದ ಸಜ್ಜನರ ॥ ೨೪

ತಿಳಿಯಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮಶ್ರುತಿಯನೊರೆವೆನು ಕೃಷ್ಣಮೆಚ್ಚಲಿಕೆ ।
ಹಲವು ಜನ್ಮದ ಪಾಪರಾಶಿಯ
ತೊಳೆವ ಜಲವಿದು ಶ್ರೀಮದಾಗಮ
ಕುಳಕೆನಾಯಕ ಭಾರತಾಕೃತಿಪಂಚಮಶ್ರುತಿಯ ॥ ೨೫

ಸರಸರಿಗೆ ಸಾಹಿತ್ಯರಿಗೆ ಹರಿ
ಶರಣರಿಗೆ ಸುಜನರಿಗೆ ಶಾಂತಾ

---

[1] ಚೋರ, ಘ. ಚ. [2] ಕಥನಪ್ರ, ಘ. ಚ. [3] ಘೋರತರತಾಪವ ಕೆಡಿಸುಗು, ಘ. ಚ.

ತ್ತರಿಗೆ ವರವಿದು ವಶ್ಯಮಂತ್ರದ ಯೋಘ[1] ನದ ಘುಟಿಕೆ ।
ದುರುಳರಿಗೆ ದೂಷಕರಿಗಲ ವೊಗ
ದಿರುಹುವರಿಗಜ್ಞರಿಗೆ ಚಿತ್ತಾ
ಕರುಷಣ ಕವಿಕಲಾವಿಲಾಸದ ವರಚಮತ್ಕಾರ ॥ ೨೬

ಪೃಥ್ವಿಯುಮರರು ಕೇಳ್ ವೇದಪ
ವಿತ್ರರಹರು ಮಹಾವಿಭೂತಿಯು
ಕ್ಷತ್ರಿಯರು ಕೇಳಿದರೆ ಶೌರ್ಯಸಮರ್ಥರೆನಿಸುವರು ।
ಅರ್ಥಪತಿಯೆನಿಸುವರು ವಿಶರು ಚ
ತುರ್ಥಕರು ಧನಧಾನ್ಯದಿಂದ ಸ
ಮರ್ಥರೆನಿಸುಗು ವ್ರೊಲಿದು ಭಾರತಕಥೆಯ ಕೇಳ್ಬಡೆಗೆ ॥ ೨೭

ಹಳಿಲು ಹೊದ್ದದ ಕುಲಕೆ ಖ್ಯಾತಿಯು
ಬಳಗದಲಿ ಬೆಳಗುವುದು ಯಾದವ
ತಿಳಕನನು ಮನಮುಟ್ಟಿ ಹೊಗಳುವ ಪಂಚಮಶ್ರುತಿಯು ।
ಇಳೆಯೊಳದ ಹೇಳುವರ ಕೇಳ್ವರ
ಬಳಗವಾಕ್ಷಣ ಪುಣ್ಯರಾಶಿಯು
ಬಳೆವುದೆಂಬುದನಱಿದು ಭಾರತಕೃತಿಯ ಪೇಳುವೆನು ॥ ೨೮

ಭಾರತವ ಹೇಳಿದರೆ ಕೇಳ್ದರೆ
ಶಾರದೆಯುಲೋದಿದರೆ ಬರೆದರೆ
ಕ್ರೂರಕರ್ಮನಿವಾರಣವ ಮಾಡುವನು ಮುರವೈರಿ ।
ಸಾರಹೃದಯರು ಕೇಳುತಿರಲು ವಿ
ಚಾರದಿಂ ಕಾಳ್ಗಡದ ಮನುಜರ
ಘೋರನರಕದಲಿಕ್ಕುವನು ಹರಿ ವೀರನಾರಯಣ ॥ ೨೯

ಮಾತು ಬೆಱಗಿನ ಬಳಕೆ ರಾಗದ
ರೀತಿ ಕರ್ಣಾಮೃತದ ಬೆಳದ ಸು

1 ದೋಘು, ಗ.

ಧಾತು ಜಾಣರ ಧಾತು ಸೊಗಸಿನ ಸಾಗರದ ಲಹರಿ ।
ನೂತನಾಳಾಪವೆನು ಲೋಕದ
ಧಾತುಗಳ ಬಳಕೆಗಳ ಬೆಳಪ ಸು
ಧಾತು ರಂಗದಸವೆಕುಮಾರವ್ಯಾಸಕೃತಿವಚನ ॥ ೩೦

ಶ್ರೀಗಿರಿಜೆಯರಸನನು ವಿಮಲಗು
ಣಾಗವೋತ್ತಮವರ್ಣ್ಯನನು ವರ
ಯೋಗಾಭಿವಂದ್ಯನನಖಿಳಶ್ರುತಿಪಾರಾಣದಾಯಕನ ।
ನಾಗಭೂಷಣನಮರವಂದಿತ
ಯೋಗಿಜನಹೃದಯನನು ಕರುಣಾ
ಸಾಗರನ ಬಲಗೊಂಡು ಭಾರತಕಥೆಯ ವಿರಚಿಸುವೆ ॥ ೩೧

ಒಂದನೆಯ ಸಂಧಿ ಮುಗಿದುದು.

## ಎರಡನೆಯ ಸಂಧಿ.

### ಸೂಚನೆ.

ರಾಯುಜನಮೇಜಯಗೆ ವೈಶಂ
ಪಾಯನನು ಹೇಳಿದನು ಮುನಿದ್ವೈ
ಪಾಯನನು ವರ್ಣಿಸಿದ ಭಾರತವರಕಥಾಮೃತವ ॥

ಸೂತರು ಬರಲು ಶೌನಕಾದಿಗಳು ಅವರನ್ನು ಸ್ತುತಿಸುವಿಕೆ.

ಸೂತನೈತಂದನು ಜಗದ್ವಿ
ಖ್ಯಾತಶೌನಕಮುಖ್ಯಮುನಿಸಂ
ಘಾತಪಾವನನೈಮಿಶಾರಣ್ಯದ ವರಾಶ್ರಮಕೆ ।
ಆತನನು ಕಂಡುದು ತಪಸ್ವಿ

ವ್ರಾತ ಕುಶಲಕ್ಷೇಮಮಧುರ
ಪ್ರೀತಿವಚನಾಮೃತದಿ ಸಂಭಾವನೆಯ ಮಾಡಿದುದು ॥ ೧

ಪರಮಪೌರಾಣಿಕಶಿರೋಮಣಿ
ಖರವಿದಿತ್ತಣವಾಯ್ತು ಕೌತುಕ
ವರಕಥಾಪೀಯೂಷಸಾರವಿಶೇಷವೇನುಂಟು ।
ಚರಿತಚತುರಾಶ್ರಮತಪೋನಿ
ಷ್ಠರಿಗೆ ವಿಶ್ರಮವೈ ಭವಾದೃಶ
ದರುಶನವು ನಮಗೆಂದು ನುಡಿದರು ರೋಮಹರ್ಷಣಿಯ ॥ ೨

ಸೂತರ ಪ್ರತಿವಚನ

ವಂದಿಸಿದೆನ್ನೆ ಮಂತಪೋಧನ
ವೃಂದ ಚಿತ್ತೈಸುವುದು ತಾನೇ
ನೆಂದು ನುಡಿವೆನು ಕೌತುಕಾಮೃತರಸದ ಕಡುಗಡಲ ।
ಹಿಂದೆ ಕೇಳಿದುದಲ್ಲ ಹೇೞ್ವುದು
ಮುಂದೆ ಹೊಸತಿನು ನಿಗಮಶತವಿದ
ರೊಂದೊರೆಗೆ ನೆಱೆ ಬಾರದೆಂ [1] ದನು ಸೂತ ಕೈಮುಗಿದು ॥ ೩

ತಾವು ಹೇಳುವ ಕಥೆಯು ಸಕಲಪಾಪಹರವು ಸಕಲಪುಣ್ಯಾಕರವು.

ಆಮಹಾಫಲವೀವುದೀಕಥೆ
ಸೋಮಪಾನಾದಿಗಳ ಫಲ ವರ
ಸೋಮಕ್ರತುಗಳನಂತಜ್ಯೋತಿಷ್ಟೋಮಮುಖಸಿಕರ ।
ಭೂಮಿಯಲಿ ಸರಿಯಲ್ಲ ನಿಮ್ಮಯ
ಹೋಮಗಳು ಸರಿಯಲ್ಲ ಮಿಕ್ಕಿನ
ಮಾನುಷರ ಜಪತಪಾದಿಗಳೇಕೆ ಯೀಕಥೆಗೆ ॥ ೪

ಕೇಳಿದನು ಜನಮೇಜಯಕ್ಷಿತಿ
ಪಾಲಕನು ವರಸರ್ಪಯಜ್ಞಾ

1 ದೊರೆಗೆ ಬರಲಱಿಯದೆಂ, ಚ. ಛ.

ಸ್ಥೂಲಪಾಪವಿಘಾತಿಗೋಸುಗವೀಮಹಾಕಥೆಯು ।
ಕೇಳಿದನು ತಾನಲ್ಲಿ ಮುನಿಗಳ
ಮೌಳಿಮಂಡಿತಚರಣಕಮಲವಿ
ಶಾಲವೇದವ್ಯಾಸಕೃತಿಭಾರತಕಥಾಮೃತವ ॥ ೫

ಹಾ ಮಹಾದೇವಾ ಇದೆತ್ತಣ [1]
ರೌಮಹರುಷಣಿ ನಾವು ಮಾಡಿದ
ಸೋಮಪಾನಾದಿಗಳಪೂರ್ವಸ್ತೋಮತರುಗಳಿಗೆ ।
ಈಮಹಾಭಾರತಕಥಾಮೃತ
ರಾಮಣೀಯಕಫಲವಸೀಯಲ
ಸೀಮಪುಣ್ಯರು ಧನ್ಯರಾವೆಂದುದು ಋಷಿಸ್ತೋಮ ॥ ೬

ಹೇಳು ಸಾಕಲೆ ಸೂತ ದುರಿತ
ವ್ಯಾಳವಿಷಜಾಂಗಲಿಕವನು ನೀ
ಕೇಳಿದಂದದೊಳಂದು ಜನಮೇಜಯನ ಯಾಗದಲಿ ।
ಮೌಳಿಗಳಲಾನುವೆವು ನಿನ್ನಯ
ಹೇಳಿಕೆಯನೆನೆ ನಿಖಿಳಮುನಿಗಳ
ನೋಲಗಿಸುವೆನು ನಿಮ್ಮ ನೇಮದಲೆಂದು [2] ಕೈಮುಗಿದ ॥ ೭

ಸರ್ಪಯಜ್ಞದಲಾದ ದುರಿತದ
ದರ್ಪವನು ಕೆಡೆ ಬೀಳುಗುಟ್ಟಲು
ತರ್ಪಣಾದಿಕ್ರಿಯೆಗಳಲಿ ಸಾಮರ್ಥ್ಯವಿಲ್ಲೆಂದು ।
ದರ್ಪಕಾಹಿತಮೂರ್ತಿ ಮುನಿಮುಖ
ದರ್ಪಣನು ಶಿಷ್ಯನನು ಕರೆದು ಸ
ಮರ್ಪಿಸಿದನರಸಂಗೆ ವೇದವ್ಯಾಸ ಮುನಿರಾಯು ॥ ೮

ರಾಯ ಕೇಳ್ಪೂರ್ವ ಪಾಂಡವ
ರಾಯಕಥನವನೆಂದು ವೈಶಂ

---

1 ಇದೆಂತ್ತೈ, ಚ. ಛ. [2] ನಿಮ್ಮನುಜ್ಞೆಯಲೆಂದು, ಚ. ಛ.

ಪಾಯನನನು ಬೆಸಸಿದನು ಕೊಟ್ಟನು ಬಹಳಪುಸ್ತಕವ ।
ರಾಯನತಿಭಕ್ತಿಯಲಿ ವೈಶಂ
ಪಾಯನಗೆ ವಂದಿಸಿ ನಿಜಾಭಿ
ಪ್ರಾಯದಲಿ ಕೇಳಿದನು ಚಿತ್ತೈಸುವುದು ಮುನಿನಿಕರ ॥ ೯

ವಿತತಪುಸ್ತಕವನು ಸುಗಂಧಾ
ಕ್ಷತೆಯೊಳರ್ಚಿಸಿ ಸೋಮಸೂರ್ಯ
ಕ್ಷಿತಿಜಲಾನಲವಾಯುಗಗನಾದಿಗಳಿಗಭಿನಮಿಸಿ ।
ಶತಮಖಾದಿಸಮಸ್ತದೇವ
ಪ್ರತತಿಗೆಱಗಿ ಸರೋಜಭವಪಶು
ಪತಿಗಳಿಗೆ ಕೈಮುಗಿದು ವಿಮಳಜ್ಞಾನಮುದ್ರೆಯಲಿ ॥ ೧೦

ಇನನ ಧೇನುವ ದೇವರಾಯನ
ಮನೆಯ ಧೇನುವ ಜಗವ ಮೋಹಿಪ
ಮನಸಿಜಾರಿಯ ಮನೆಯ ಧೇನುವ ಬ್ರಹ್ಮಧೇನುವನು ।
ಮುನಿಜನಂಗಳ ಧೇನುವೆಲ್ಲವ
ಮುನಿವಸಿಷ್ಠನ ಕಾಮಧೇನುವ
ನೆನೆದು ವಿಸ್ತರಿಸಿದನು ಕಥೆಯನು ಭಾರತಾಖ್ಯವನು ॥ ೧೧

ವೇದನಾಲ್ಕದಱಂಗವಾಱ
ಷ್ಟಾದಶಾದಿಪುರಾಣಸ್ಮೃತಿಗಳೊ
ಳಾದಪೂರ್ವೋತ್ತರದ ಮೀಮಾಂಸಾಪರಿಕ್ರಮದ ।
ವಾದವಿವಿಧನ್ಯಾಯವನು ತಾ
ವಾದಿಯಲಿ ವಿಸ್ತರಿಸಿ ಸಲಹಿದ [1]
ಬಾದರಾಯಣಗೆಱಗಿ ವೈಶಂಪಾಯನನು ಪೇಳ್ದ ॥ ೧೨

ಅರಸ ಕೇಳ್ಕೈ ನಾರದಾದ್ಯರು
ಸರಸಿರುಹಸಂಭವನ ಸಭೆಯಲಿ
ವರಮಹಾಭಾರತವ ಕೊಂಡಾಡಿದರು ತಮತಮಗೆ [2]

---

[1] ರಕ್ಷಿಸಿದ. ಚ. ಛ. [2] ಭಕ್ತಿಯಲಿ, ಗ. ಘ. ಚ. ಛ.

* ವರಮಹಾಭಾರತವಿದೊಂದೇ
ದುರಿತದುರ್ಗೋತ್ತಾರಣಕಾರಣ
ಪರಮಶ್ರುತಿಯೆಂದೆನಿಸಿ ಮೆಱೆವುದೀರೇಳುಲೋಕದಲಿ * ॥ ೧೩

ಹೇಳಿದನು ಪೌಲೋಮಚರಿತ
ವ್ಯಾಳತಾರ್ಕ್ಷ್ಯರ ಚರಿತವನು ಮುನಿ
ಹೇಳಿದನು ಫಣಿನಿಕರಗರುಡಾಸ್ತಿಕರ ಸಂಭ್ರಮವ ।
ಮೇಲೆ ಬಳಿಕ ಪರೀಕ್ಷಿದವನೀ
ಪಾಲಶಾಪವ ಮರಣವನು ನೆಱೆ
ಹೇಳಿದನು ಮುನಿಗಳಿಗೆ ಸರ್ಪಾಧ್ವರದ ಸಂಗತಿಯ ॥ ೧೪

ಕೇಳಿದನು ಜನಮೇಜಯಕ್ಷಿತಿ
ಪಾಲ ವೈಶಂಪಾಯನನು ನಾ
ಭೀಳದುರಿತಂಗಳಿಗೆ ಪ್ರಾಯಶ್ಚಿತ್ತರೂಪದಲಿ ।
ಕೇಳ್ದರೈ ಮುನಿನಿಕರವೀಕಲಿ
ಕಾಲದಲಿ ಫಲಿಸುವುದು ಲಕ್ಷ್ಮೀ
ಲೋಲನಾಮಸ್ಮೃತಿ ಮಹಾಭಾರತಕಥಾಶ್ರವಣ ॥ ೧೫

ರಾಯ ಚಿತ್ತೈಸೆಂದು ವೈಶಂ
ಪಾಯನನು ಹೇಳಿದನು ಕಮಲದ
ಳಾಯತಾಕ್ಷನ ಬಾಲಕೇಳಿವಿಧೂತಕಿಲ್ಬಿಷವ ।
ಕಾಯಕಲ್ಮಷಹರವಖಿಳನಿ
ಶ್ರೇಯಸದ ಶುಶ್ರೂಷೆಯಲಿ ಸಂ[1]
ದಾಯಕವ ನಿರ್ಮಳಮಹಾಭಾರತಕಥಾಮೃತವ ॥ ೧೬

ಎರಡನೆಯ ಸಂಧಿ ಮುಗಿದುದು.

---

* ವರಮಹತ್ತ್ವದಿಭಾರವತ್ತ್ವದಿ । ವರಮಹಾಭಾರತವಿದೊಂದೇ । ದುರಿತದುರ್ಗವಿಭಾಡಕರವೀರೇಳುಲೋಕದಲಿ ॥ * ಗ. ಘ. ಚ. ಛ.

ಸದ್ರೂಪುವಿನಸಂ, ಚ. ಛ.

## ಮೂ ಐ ನೆ ಯ ಸ ಂ ಧಿ .

ಸೂಚನೆ

ಪುತ್ರಕಾಮೇಷ್ಟಿಯನು ಮಾಡಿದ
ಸತ್ರ ಯೋಗ [1] ದಬಟ್ಟಿಕ ವಿಪ್ರ [2] ಪ
ವಿತ್ರರಚನೆಯ ಕೇಳಿವಾಯಿತು ಹತ್ತು ಹದಿನೆಂಟು ॥

ಜನಮೇಜಯನು ರಾಜ್ಯರಕ್ಷಣ ಮಾಡುವಾಗ ವೇದವ್ಯಾಸರ ಆಗಮನ

ಪಿತನು ಸ್ವರ್ಗಕ್ಕೈದಲಿತ್ತಲು
ಕ್ಷಿತಿಯ ಪಾಲಿಸುತಿರಲು ಭೂಪನ
ಪಿತಪಿತಾಮಹರವರ ಮುತ್ತಯ ಬದರಿಕಾಶ್ರಮದಿ ।
ಕ್ರತುಸಹಸ್ರದನಂತಕೋಟಿ
ಕ್ಷಿತಿಯೊಳುಳ್ಳ ಸಮಸ್ತತೀರ್ಥದ
ಗತಿಯನೀವ ಮಹಾನುಭಾವರ ಪಿತನು ನಡೆತಂದ ॥

ಬಟ್ಟಿಕ ವೇದವ್ಯಾಸದೇವರು
ವೊಲಿದು ಜನಮೇಜಯನ ಹೊರೆಗಾ
ಕೆಲವುದಿನವೈತಂದು ಕಾಲಜ್ಞಾನವಾದುದನು ।
ತಿಳುಹಲೋಸುಗ ತಮ್ಮಯಾಶ್ರಮ
ನೆಲೆಯ ತಾವಿಂದಾಗ ಬಂದರು
ವೊಲಿದು ತಮ್ಮನ್ವಯದ ಬಳವಿಗೆಗಾಗ ಲೋಭದಲಿ ॥ ೨

ಬಂದ ವೇದವ್ಯಾಸದೇವರಿ
ಗಂದವಿಟ್ಟನುವಾಸನಾದಿಯೊ
ಳಂದು ಮಧುಪರ್ಕವನು ಸತ್ಕೃತಿಗಳಲಿ ಮನ್ನಿಸಿದ ।

---

1 ಸರ್ಪಯಾಗ, ಗ. ಸತ್ರಯಾಗ, ಕ. ಖ ಘ  2 ರಾಯಬಟ್ಟಿಕ, ಘ

ಬಂದುದನು ಬೆಸಗೊಳಲಿಕಾಕ್ಷಣ
ವೆಂದನೈ ಸತ್ಯವತಿಯ ಸುತನು
ಮುಂದೆ ಹೇಳುವದೊಂದು ಕಾಲಜ್ಞಾನವಿಧಿಯುಂಟು ‖ ೩

ವೇದವ್ಯಾಸರು ಮುಂದೆ ಬರುವ ತೊಂದರೆಯನ್ನು ಹೇಳುವಿಕೆ.

ಅರಸ ಕೇಳ್ಳೈ ಯೇಳುದಿನದೊಳು
ತುರಗ ತಾನೊಂದವುಳಶ್ವೇತದ
ನಿರುತ ತಾನದನೊಬ್ಬ ಭೂಪತಿಯಧಿಕಹರುಷದಲಿ ।
ಪರುಠವಿಸೆ ನೀನದನ ನೋಡದೆ
ಯಿರುತಿಹುದು ನೀ ನೋಡಿದಾದೊಡೆ
ಯರಸ ಕೊಳಲಿಕೆ ಯದಕೆ ಚಿತ್ತವ ಮಾಡದಿರು ಬಿಡಿಕ ‖ ೪

ಆದೊಡೆಯು ನೀ ಕೊಂಡೆಯಾದೊಡೆ
ಮೇದಿನೀಪತಿಯವನು ಲಾಯಕೆ
ವೇದಿಸಿಯೆ ನೀನೇಱಚಿತ್ತವ ಮಾಡದಿರು ಬಿಡಿಕ ।
ಆದರಿಸಿ ರಾವುತಿಕೆಯಾದುವ
ಭೇದವಿಲ್ಲದೆ ಮೆಚ್ಚಿ ಹಯವನು
ಸಾಧನೆಯ ಧನಪತಿಯ ದಿಕ್ಕಿಗೆ ಹೋಗದಿರಿ ಯೆಂದ ‖ ೫

ಎಂದೊಡೆಯು ನೀ ಮೊಣದುತ್ತರ
ದಂವಕೈದುವೆ ಯಾದೊಡಲ್ಲಿಯು
ಮಂದರಾಚಲದಲ್ಲಿ ಕಾಣಿಸಿ ಕೊಂಬಳೊಬ್ಬಬಲೆ ।
ಮುಂದೆ ಕಾಣಲು ನೀನುವಾಕೆಯ
ಮಂದಿರಕೆ ತಂದವಳ ಸತಿಯರ
ವೃಂದನಾಯಕತನದಲಿಕ್ಕದೆ ಯಿಹುದು ಮತ್ತಿದನು ‖ ೬

ಮಿಱಿಯಾಕೆಯ ನೀಱಿತನವ ವಿ
ಚಾರಿಸದೆ ಪತಿಕರಿಪೆ ಯಾದೊಡೆ
ನೀಱಿಯನು ನೀ ಯಜ್ಞಕಾಲಕೆ ಕರೆದು ಪಿಂಡವನು ।

ಹಾಯಿಸುವುದೈ ಯೆನಲು ಮತ್ತದ
ಹಾಯಬಡಿಯದೆ ಯಜ್ಞ ಪಿಂಡವ
ನೀಯೆಯುಳಗಿಕ್ಕಸದೆ ಸರ್ವದ ಯೆಂದನಾಮುನಿಪ ‖ ೭

ಮಿಾಯದಿರು ನಾವೆಂದ ಮಾತನು
ತೋಯಿ ಕಳವುದು ತಾವು ಹೇಳಿದ
ತಾರುಥಟ್ಟನ ಮಾತದೆಲ್ಲವ ನೆನಲಿಕಿಂತೆಂದ ।
ತಾರುಥಟ್ಟನು ಹೇಳ್ವ ನೀಊರು
ತೋಯಿ ನುಡಿಯುರದೇನು ಹಿಂದಣ
ಧೀರರಾಯುರು ನಮ್ಮ ಪೂರ್ವದಲಾಪಿತಾಮಹರು ‖ ೮

ಮುನ್ನ ಪಾಂಡವಕೌರವಾಧಿಪ
ರುನ್ನತದ ಕದನದಲಿ ನೀ ವಿರು
ತೆನ್ನಿರೇ ಕಾಳಗವು ಕಷ್ಟವದೆಂಬ ಮಾತುಗಳ ।
ಮನ್ನಣೆಯುಲದನೇಕೆ ನಿಲಿಸಿರಿ
ಯೆನ್ನ ಸನ್ನೆಯು ಕೇಳಿ ಕಾಳಗ
ಮುನ್ನವೇ ಬೇಡೆಂದು ಮಾಣಿಸಿರೆಂದನಾಭೂಪ । ೯

ಹಮ್ಮಲೇಕದುವೆನಲು ಮುನಿಪತಿ
ಹಮ್ಮ ಹಿಡಿದಿಹ ನೃಪರು ಹಿರಿಯುರು
ನಮ್ಮ ಹೇಳಿದ ಮಾತ ಕೇಳರು ಎಂದನಾಮುನಿಪ ।
ಹೊಮ್ಮಿನಲಿ ಸಿಂಹಾಸನಾಗ್ರದ
ಸೊಮ್ಮಿನಲ್ಲಿರೆ ನೀನು ನಮ್ಮಯು
ರೊಮ್ಮದೀಮಾತಿದನು ಮಾಡಿದ ಸೋಡಿ ಬಳಿಕೆಮಗೆ ‖ ೧೦

ಹೇಳಿತೆಂಬೀ ಕುಂದ ಹೊಯಿಸುವ
ಕೇಳು ಕೌರವರೊಬ್ಬರೆಂದುದು
ತಾಳಲೊಲ್ಲರು ಹಿತರು ಹೇಳಿದ ಪೂರ್ವಸೂಚನೆಯು ।

ಕೇಳು ಜನಮೇಜಯನೆ ನಮ್ಮಯ
ಹೇಳಿಕೆಯನೊಂದೇಳು ದಿನದೊಳು
ಕೇಳಿ ನಡೆವುದು ಎಂದು ವೇದವ್ಯಾಸಮುನಿ ನುಡಿದ ‖ ೧೧

ವೇದವ್ಯಾಸರು ಹೇಳಿದಂತೆ ಹಯವು ಬರಲು ಅದನ್ನು ಲಾಯದಲ್ಲಿ ಕಟ್ಟುವಿಕೆ.

ಬೊಮ್ಮಬೋಧೆಯ ಹೇಳಿ ಕೇಳಿಯು
ಸುಮ್ಮನಿಹ ನೃಪತನವು ಬಂದಿರೆ
ಹೆಮ್ಮೆಯಲಿ ಹಿರಿದಾಗಿ ಕೆಡುವರು ಹಿತರು ಹೇಳಿದರೆ ।
ಒಮ್ಮೆ ಕೇಳರು ಎಂದು ಮುನಿಪತಿ
ತಮ್ಮ ಬದರಿಕೆಗೈದ್ದಲಿತ್ತಲು
ಕರ್ಮವಶದಿಂದಾಗ ಬಂದುದು ತುರಗವಿಭಪುರಿಗೆ ‖ ೧೨

ಅಮ್ಮದಾತುರಗವನು ನೋಡದೆ
ಸುಮ್ಮನಿರುತಿರಲವರು ಸಾಧಿಸಿ
ಒಮ್ಮೆಯೋಲಗ ಕೇಳಿ ತೋಟಲಿಕರಸ ಹರುಷಿಸಿದ ।
ತಮ್ಮ ಪಿತರ ಪಿತಾಮಹರ ನುಡಿ
ಸೊಮ್ಮಿನಲಿ ಪಿರಿದೆನಿಪ ಹಿರಿಯರ
ದೊಮ್ಮೆ ಬುದ್ಧಿಯನೀವ ಋಷಿವಚನವನು ಮೀಱಿದನು ‖ ೧೩

ಕೊಂಡನಾತುರಗವನದಾಕ್ಷಣ
ಗಂಡುಗಲಿ ಮನವಳುಕದಾಗಳು
ದಂಡೆಯಿದು ಲೇಸೆನುತ ಮೀಱಲಿಕೆ ತುರಗ ಖುರಗಳಲಿ ।
ದಿಂಡುದಿರುಹುತ್ತಿರಲದಕ್ಕಾಗ
ಗಂಡುಗಲಿ ಶಾಬರನೃಪನು ಮುಂ
ಕೊಂಡು ಹೊಗಱುತ್ತಿರಲು ತುರಗದ ಪೂರ್ವಪಾಯವನು ‖ ೧೪

ವಿರಚಿಸಿದ [1] ಗುರುವೆಂದ ಮಾತನು
ಭರದಿ ಮೀಱಿದ ನೋಡಿ ಸುಮ್ಮನೆ

[1] ನಿರವಿಸಿದ, ಘ. ಙ.

ಯಿರದೆ ಕೊಂಡನು ಬಟಿಕ ಲಾಯದಿ ಕಟ್ಟಿಸಿದ ಹಯವ ।
ನಿರುತ ಕಟ್ಟಿಸಿ ತಾನು ಗುರುಗಳು
ವೊರೆದ ಮಾತನು ಮೀಱಿ ತನ್ನಯ
ದುರುಳಬುದ್ಧಿಯ ಮಾಡಿ ನಡೆಸಿದ ರಾಜಮಾರ್ಗದಲಿ ॥ ೧೫

ಒಮ್ಮೆಯುಜ್ಜುಗಬಡುತಲೆಂದನು
ಹೆಮ್ಮೆಯಲಿ ಬಂದುದನು ಕೊಂಡೆವು
ಒಮ್ಮೆಯೇಱುವೆ ತನ್ನಿ ಯೆನಲಿಕೆ ನೆರೆದ ಮಂತ್ರಿಗಳು ।
ನಿಮ್ಮ ಗುರುಗಳು ಬೇಡವೆಂದರು
ಕರ್ಮಗತಿಯು ತುರಗವನೆನಲಿಕೆ
ಸುಮ್ಮನೆಲ್ಲರ ಜಱಿದು ತರಿಸಿದನಾಮಹಾಹಯವ ॥ ೧೬

ರಾಜನು ಕುದುರೆಯ ಮೇಲೆ ಏರಲು ಅದು ಮಂದರಾಚಳಕೆ ತಂದು ಬಿಡುವಿಕೆ.

ತರಿಸಿ ಯಾರೋಹಣವ ಮಾಡಿದ
ಬೆರಸಿ ಸೂತರ ನೋಡೆ ಹಯ ತರ
ಹರಿಸದಿರಲಾ ಹಂದಿ ಹಾಯ್ದುದು ಬಡಗದಿಕ್ಕಿನಲಿ ।
ತುರಗವರಸನ ಕೊಂಡು ಮಂದರ
ಗಿರಿಯ ಹೊಗಿಸಿತು ಹಂದಿ ಹಿಂದಕೆ
ಸರಿದು ತಪ್ಪಿತು ಬಟಿಕ ಮತ್ತಾರಾಯ [1] ನನು ಹೊಗಿಸಿ ॥ ೧೭

ಮಂದರಾಚಲದಲ್ಲಿ ಶಾಪದಿಂದ ಮನುಷ್ಯಳಾಗಿದ್ದ ದೇವಸ್ತ್ರೀಯನ್ನು ನೋಡಿ ಆಕೆಯನ್ನು ಅರಮನೆಗೆ ಕರೆದುಕೊಂಡು ಹೋಗುವಿಕೆ.

ಮಂದರಾಚಲದೊಳಗೆ ಶೂಲಿಯ
ಮಂದಿರವು ರಮಣೀಯವಾಗಿರ
ಲಿಂದುವದನೆಯು ವಿದ್ದಳಾಸುರಪತಿಯ ಶಾಪದಲಿ ।
ಒಂದುದಿನ ಸೈರಂಧ್ರಿ ತನ್ನಯ

1 ಪರಿದು ತಪ್ಪಿಸಿ ಮರಳಿ ಬಂದುಧುರಾಯ, ಘ. ಙ.

ಮಂದಿರಕೆ ಬರೆ ಯಾತಿಲೋತ್ತ್ರಮೆ
ಮುಂದು ಗಾಣದೆ ನಗ್ನೆಯಾಗಿರೆ ಶಾಪವೆಶೆಯಾಗಿ ॥ ೧೮

ನರನ ಸ್ತ್ರೀಯಾಗಿರುವುದೊಂದೇ
ವೆರುಷಪರಿಯಂತರವದೆಂಬಾ
ಸುರಪತಿಯ ಶಾಪದಲೆ ಇದ್ದಳ ಕಂಡನಾ ನೃಪನು ।
ಸುರಸತಿಯ ನೋಡಲಿಕೆ ಮೋಹಿಸಿ
ಹರುಷದಲಿ ಪಲ್ಲವವ ಹಿಡಿಯಲಿ
ಕರಸ ನೀ ಯೆನ್ನರಸನಪ್ಪೊಡೆ ನಿನ್ನ ಸತಿಯರೊಳು ॥ ೧೯

ಇಂದು ನಿನ್ನಯ ಪಟ್ಟದರಸಿಯ
ಳೆಂದು ಕೊಂಡಾಡುವೊಡೆ ಬಪ್ಪೆನು
ಎಂದೆನಲು ಕಾಮಾತುರನು ತಾನಧಿಕತಾಪದಲಿ ।
ಎಂದುದನು ಪತಿಕರಿಸಿ ಕೊಟ್ಟನು
ತಂದನಿಭಪುರಿರಾಜಧಾನಿಯೊ
ಳಂದುವದನೆ ಯಿರುತಿರೆ ಕತಿಪಯದಿನಕೆ ಮುನಿ ಬಂದ ॥ ೨೦

ಬಂದು ಭೂಪನ ಕರೆದು ತಾನೇ
ನೆಂದು ಹೇಳಿದದಾಯ್ತೆಯೆನಲಿಕೆ
ವಂದಿಸುತ ಮುನಿವರನ ಚರಣಕೆ ಚಾಚಿದನು ಶಿರವ ।
ತಂದೆ ಸಾಕ್ಷಾದ್ಬ್ರಹ್ಮಕೋಟಿಯ
ತಂದೆ ನಮ್ಮಯ ಕುಲಕೆ ತನ್ನನು
ಮಂದಮತಿಯೆಂದಱಿದು ಕಾವುದು ವ್ಯಾಸಮುನಿರಾಯ ॥ ೨೧

ಮಕ್ಕಳಿಲ್ಲವೆಂದು ಪುತ್ರಕಾಮೇಷ್ಟಿಯನ್ನು ಮಾಡುವಿಕೆ

ಎಂದು ಬಿನ್ನಹ ಮಾಡಿದನು ತನ
ಗಿಂದು ಮೂವತ್ತಾಱುವತ್ಸರ
ಹಿಂದುಗಳದವದೊಬ್ಬ ಪುತ್ರನು ಜನಿಸುವಂದವನು ।
ಇಂದು ಕರುಣಿಸಬೇಹುದೆನಲಿಕೆ

ದೊಂದು ಹಯಮೇಧವನು ಮಾಡಿಸ
ಲಂದು ಸುತ ಜನಿಯಿಸುವನೆನಲಿಕೆ ಭೂಪ ಕೈಕೊಂಡ ॥ ೨೨

ಮತ್ತೆ ಭೂದೇವರನು ನೆರಹಿದ
ಪುತ್ರಕಾಮೇಷ್ಟಿಯನು ಮಾಡಿಸಿ
ಚಿತ್ತವಲ್ಲಭೆಯುಳಿಯುದಂತಿರೆ ನದಿಯ ತೀರದಲಿ ।
ಅತ್ತಲಿರೆ ನಾರದನು ಯುವತಿಗೆ
ಬಿತ್ತಿದನು ತಾ ಯಜ್ಞ ಬೀಜವ
ನೆತ್ತಿದಾಗ್ರಹದಿಂದ ಬಂದಳು ಕೇಳಿದಾಕ್ಷಣಕೆ ॥ ೨೩

ಬರಲಿಕಾ ಯಜ್ಞಾಂತವಾಯಿತು
ಧರಣಿದೇವರು ನೃಪಗೆ ನುಡಿದಪ
ರರಸಿ ಯೊಬ್ಬಳ ಯಾಗಶಾಲೆಗೆ ಕರೆಯ ಕಳುಹೆನಲು 1 ।
ತ್ವರಿತದಲಿ ನೃಪವರನು ಬಿಡೆಯಾಕೆ
ಸುರಸತಿಯು ನೋಡಲಿಕೆ ಪಿಂಡಕೆ
ಧರಣಿದೇವರು ನುಡಿದರಾಕೆಗೆ ತುರಗಸೃಷ್ಟಿಯನು ॥ ೨೪

ಭರದಲೀಕ್ಷಿಸಿ ಯೊತ್ತ ಯೋಸಿಯ
ಬೆರಸಿಕೋ ಯೆನೆ ಯಾಕೆ ಯಾಕ್ಷಣ
ಶಿರವಳಿದ ಹಯಕಿದಿರು ಕುಳ್ಳಿರೆ ನಗ್ನೆತಾನಾಗಿ ।
ನಿರುತ ಲಾವಣಿಗೆಯಲಿ ಹೊಕ್ಕಿರೆ
ಸುರಪತಿಯು ಹಯದಲ್ಲಿ ವಸಿಸಿದ
ನೆರೆದನೈತನ್ನಾತ್ಮಸತಿಯಳ ಯಜ್ಞಕಾಲದಲಿ ॥ ೨೫

ವರಘೃತಾಚಿಯು ರಂಭೆ ಮೇನಕೆ
ಸುರಮನೋಹರಿಯಾತಿಲೋತ್ತಮೆ
ನಿರುತ ಶೃಂಗಾರಾಬ್ಧಿ ಯೂರ್ವಶಿ ಪರಮಸುವ್ಯಾಸಿ ।
ಭರತಜೀವನೆ ಕಾಮಘೋಷಿತೆ

---

1 ಕಳುಹಬೇಹುದೆನೆ, ಜ. ಘ

ಸುರಪತಿಯು ಸತಿನಿಕರ ಮಧ್ಯಕೆ
ವರಸತಿಯೊಳವರಧಿಕ ಮೂವತ್ತಾಱುಲಕ್ಷದಲಿ ॥ ೧೬

ಮಿಗಿಲು ಸುತ್ರಾಮಾದಿಗಾಗಳು
ಹಗಲಿರುಳು ವಲ್ಲಭರು ಮಾಡುವ
ಜಗದ ಯಜ್ಞಗಳೆಲ್ಲ ವಿವರಿಗೆ ಸ್ವರ್ಗಸದನದಲಿ ।
ಹೊಗುವುವಿವರಿಗೆ ಯುಳುಕಿ ಭೂಪರು
ಮಿಗಿಲೆನಿಸುವೀರೇೞುಜಗಗಳ
ಸೊಗಸಿ ಬಾಗಿಲ ಬೋವರಾಗಿಯೆ ಯಿಹರು ಯಾಸತಿಯು ॥ ೧೭

ಬಳಿಕ ರಾಜನು ಪೂರ್ಣಪಾತ್ರೆಯಲ್ಲಿರತಕ್ಕ ಜಲವನ್ನು ಮುಟ್ಟಲು
ಋತ್ವಿಜರು ಸಾಯುವಿಕೆ

ನೆರೆದು ಸುರಪತಿ ಹೋಗಲಾಸತಿ
ತುರಗದುಪಟಳ ತಾಳ[1] ದಾಗಳು
ಧರಣಿಯುಲಿ ಕೆಡೆದಿರಲು ಭೂಪತಿ ದ್ವಿಜರ ಕೇಳಲಿಕೆ ।
ಅರಸಿ ಕೆ[2] ಡೆದಳದೇತಕೆಂಬೀ
ತ್ವರಿತದಲಿ ನಡೆತಂದು ವಿಪ್ರರ
ನರಸಮುಟ್ಟದೆ ಯಜ್ಞದೀಕ್ಷೆಯ ಪೂರ್ಣಪಾತ್ರೆಯಲಿ ॥ ೧೮

ಮಂತ್ರಜಲವಿರಲರಸ ಬ್ರಾಹ್ಮರ
ತಂತ್ರವನು ತಾನಱಿಯುದಾಗ ಸ್ವ
ತಂತ್ರತಳದನದಾಗಳಾಹದಿನೆಂಟು ಋತ್ವಿಜರು ।
ಮಂತ್ರಮುಖಿಗಳು ಬೀಟೆ ಭೂಸುರ
ರಂತರಿಕ್ಷಕೆ ಹಾಯ್ದು ಹೋದರು
ಕಂತುಪಿತನಹ ವ್ಯಾಸವಾಕ್ಯವ ಮೀಱಲಿಂತಾಯ್ತು ॥ ೧೯

ಸುರಸತಿಯು ಪರವಶತೆಯಿಂದಿರ
ಲರಸ ಚಿಂತಾಕ್ರಾಂತನಾಗಿರೆ

---

1 ತಾಗ, ಕ. ಖ. ಗ. 2 ಅರಸಿತ್ತ, ಕ. ಖ. ಪ

ಹಿರಿದು ಚಿಂತಿಸಿ ವುೞದ ಭೂಸುರರೆಲ್ಲರನು ಕೇಳೆ ।

ರಾಜನಿಗೆ ಬ್ರಹ್ಮಹತ್ಯ ಬಂತೆಂದು ಪುರೋಹಿತರು ಹೇಳುವಿಕೆ.

ನಿರುತ ವೆಂದರು ನೀನು ಮಾಡಿದ
ವರಮಹಾಪುತ್ರೇಷ್ಟಿಕಾಮ್ಯವು
ಹರುಷವಾಯಿತು ನಿನಗೆ ಬಂದುದು ಹತ್ಯ ಬ್ರಾಹ್ಮರದು ॥ ೩೦

ಬೞಿಕ ಸುರಸತಿಯಾದ ಪುತ್ರನ
ನಿಳೆಯು ವಲ್ಲಭಗಿತ್ತು ಸ್ವರ್ಗದ
ನೆಲೆಗೆ ಹಾಯ್ದಳು ಶಾಪ ಹಿಂಗಲು ಹೋದಬೞಿಕಿತ್ತ ॥
ಇಳೆಯುವಧುವಲ್ಲಭನ ಪುಣ್ಯ
ಸ್ಥಳಕೆ ಬಂದುದು ಹತ್ಯ ವಿಪ್ರರ
ಬಳಗ ಹದಿನೆಂಟಾಗೆ ದೇವಾಂಗನೆಯು ಸಂಗದಲಿ ॥ ೩೧

ಇಳೆಯೊಳಾವನು ಹಿರಿಯರಾಜ್ಞೆಯು
ನೊಲಿಸಿದವಗೀಪರಿಯು ಪಾತಕ
ನೆಲಸುವುದು ದಿಟವೆಂದು ಸೂತಜನುಸುರೆ ಮುನಿಗಳಿಗೆ ।
ಕೇಳಿರೈ ಮುನಿಗಳಿರ ಹತ್ಯವೆ
ಜಾಳಿಸಲಿಕಿನ್ನಾವುದೆಂದಾ
ಲೋಲಮತಿ ಚಿಂತಿಸುತಲಿರ್ದನು ನೃಪನು ಮನದೊಳಗೆ ॥ ೩೨

ದೇವ ಕಂಡಿರೆ ವ್ಯಾಸದೇವರು
ವೋವಿ ನಿಮಗಂದೆಂದ ಮಾತನು
ನೀವು ಚಿತ್ತವಿಸಿದಿರೆ ಎಂದರು ಮಂತ್ರಿಸಂದೋಹ ।
ಭಾವಿಸಲು ಹದಿನೆಂಟು ದ್ವಿಜವಧೆ
ವೋವಿ ಬಂದವು ನಿಮಗದೆನಲಿಕೆ
ಕೋವಿದನು ತಾ ಬಂದ ವೇದವ್ಯಾಸಮುನಿರಾಯು ॥ ೩೩

ಬ್ರಹ್ಮಹತ್ಯ ಹೋಗಲು ಉಪಾಯುವೇನೆಂದು ಕೇಳಲು ಭಾರತವಂ ಕೇಳೆಂದು ವ್ಯಾಸರ ಉಪದೇಶ.

ಬಿದ್ದು ಹೊರಳದನೆನಗೆ ಹತ್ಯದ
ಮದ್ದದಾವುದೊ ಎನಲು ತತ್ವದ
ಶುದ್ಧಿಬದ್ಧನು ಬಾದರಾಯಣರಾಯನಿಂತೆಂದ ।
ತಿದ್ದಿ ಹೋಹುದು ನಿನ್ನ ಪಾಪಕೆ
ಮದ್ದು ತಾನೊಂದಿಹುದು ಭಾರತ
ವೊದ್ದಿದಡೆ ನೆಗಹುದು ಪಾಪದ ರಾಶಿಯೊಳಗಿಂದ ॥ ೩೪

ಕರಿಯ ಕಂಬಳಿಯಿಂದ ಗದ್ದುಗೆ
ನಿರುತದಲಿ ಹದಿನೆಂಟು ಕೇಳದು
ಯರಸ ಕೇಳ್ಕ ಬಿಚ್ಚಿಕ ಗದ್ದುಗೆಯೆಲ್ಲ ಬಿಳಿದಹುದು ।
ಹರಿಕಥಾಮೃತವೆಂಬ ಭಾರತ
ವರಕಥೆಯ ನೀ ಕೇಳ್ವುದೆಂದಾ
ವರಮುನಿಯು ನೇಮಿಸಿದ ವೈಶಂಪಾಯನವ್ರತಿಗೆ ॥ ೩೫

ಭಾರತಾಧ್ಯಾಯವನು ಮಾಡುವ
ಸಾರಹೃದಯರುಗಳಿಗೆ ಸುಕೃತವು
ಸೇಱುವುದು ವಿಶ್ವಾಸವುಳ್ಳೊಡೆ ಸಕಲಪಾತಕವು ।
ತೀರುವುವಲೆ ಪಾದವೊಂದಱ
ಭಾರಣೆಗೆ ನಿಶ್ಚಯವಾಗಿ ವಿ
ಚಾರವೇತಕೆ ಕೇಳು ಜನಮೇಜಯಮಹೀಪಾಲ ॥ ೩೬

ಒಂದುಪದವನು ಕೇಳದರೆ ಸಾ
ಕೊಂದರೊಳಗರ್ಥವನು ಕೇಳ್ದರೆ
ವೊಂದುಪದದೊಳಗೆರಡುಮಾತನು ಕೇಳದರೆ ಸಾಕು ।
ಒಂದುಪದವನು ಕೇಳದವರಿಗ
ದೊಂದು ಪದವನು ಹೇಳದವರಿಗೆ
ಕುಂದದಿಹ ಪರಸುಖವನೀವನು ವೀರನಾರಯಣ ॥ ೩೭

ನಿರುತದಲು ತಾ ಪುಷ್ಯಮಾಸದ
ವರತ್ರಯೋದಶಿಯಲ್ಲಿ ಶುದ್ಧದ
ಪರಮಶುಭಕ್ರತುವಬ್ದದೊಳಗಂದರಸ ಹರಿಕಥೆಯು ।
ವರಮುನಿಯು ಕಯ್ಯಿಂದ ಕೇಳಲು
ಯುರಸಗಱುಪಿಯು ತಮ್ಮ ಶಿಷ್ಯಗೆ
ನಿರುತದಲಿ ಹೇಳೆನುತಲಾಶ್ರಮಕ್ಕೈದಿದನು ಮುನಿಪ ॥ ೩೮

ಇಷ್ಟಕಥೆಯನು ಸೂತ ಮುನಿಯು
ತ್ಕೃಷ್ಟ ಶೌನಕರಿಂಗೆ ಪೇಳಿದ
ಯಷ್ಟವಿಂಶತಿಯೆನಿಪ ದ್ವಾಪರದಂತ್ಯಸತ್ಕಥೆಯು ।
ಶಿಷ್ಟಸಂರಕ್ಷಣೆಯು ನಿಗ್ರಹ
ದುಷ್ಟಜನರಿಗೆ ಮಾಳ್ಪ ಯಾದವ
ಸೃಷ್ಟಿಪ್ರತಿಪಾಲಕನ ಮಹಿಮೆಯ ಮುನಿಪ ಹೇಳಿದನು ॥ ೩೯

ಫಲಕಥನ.

ರಾಯ ನೀ ಭಾರತವ ಸಾಭಿ
ಪ್ರಾಯದಲಿ ಕೇಳುವುದು ಹೇಳುವೆ
ನ್ಯಾಯದಿಂದೇ ಮನ್ನಿಸೆಂದನು ಭೂಪತಿಗೆ ಮುನಿಪ ।
ರಾಯ ಮುನಿದ್ವೈಪಾಯನಾಂಘ್ರಿಯ
ಗೇಯ ಮಾಡಿದ ಮತ್ತೆ ಪುನರಪಿ
ರಾಯ ಮನದಲಿ ಧ್ಯಾನ ಮಾಡಿದನೇಕಚಿತ್ತದಲಿ ॥ ೪೦

ಕೇಳತೊಡಗಿದನಾಮಹಾಮುನಿ
ಹೇಳಿದಂದದಿ ಗುರುವಿಗೆಱಗಿಯು
ಕಾಳಕಂಬಳಿಗದ್ದುಗೆಯನಳವಡಿಸಿ ಯರ್ಚಿಸಿಯು ।
ಭಾಳನಯನನ ಚರಣಕಮಲವ
ಲೀಲೆಯಲಿ ಧ್ಯಾನಿಸುತ ಲಕ್ಷ್ಮೀ
ಲೋಲನನು ನೆನೆವುತ್ತ ಗುರುವಿಗೆ ನಮಿಸಿ ಕೈಮುಗಿದ ॥ ೪೧

ಹೇಳಿದನು ಹದಿನೆಂಟುಪರ್ವದ
ಯೋಳಿಗೆಯನಾದ್ಯಂತವಾಗಿಯೆ
ಹೇಳಿ ತೊಡಗಿದನಂದು ವೈಶಂಪಾಯಮುನಿವರನು ।
ಕೇಳು ಜನಮೇಜಯಧರಿತ್ರೀ
ಪಾಲ ವೇದವ್ಯಾಸದೇವರು
ಹೇಳಿದಂದದಿ ನಿಮಗೆ ಹೇಳುವೆ ಕೌತುಕಾಮೃತವ ॥ ೪೮

ಅಲಿಸ್ಯ ಹದಿನೆಂಟುಹತ್ಯೆಯು
ಜಾಳಿಸಲಿ ಯೆಂದೆನಲು ಗದ್ದುಗೆ
ಮೇಲೆ ಕುಳ್ಳಿತು ಬಟ್ಟಕರೆಯನು ಬಿಟ್ಟು ಮೊದಲಾಗಿ ।
ಲೋಲ ಹದಿನೆಂಟಗ್ರಹಾರವ
ಕೇಳತೊಡಗಲಿಕಾಗ ಮಂಗಳ
ಲೋಲ ಗದುಗಿನ ವೀರನಾರಾಯಣನ ಕರುಣದಲಿ ॥ ೪೯

ಮೂರನೆಯ ಸಂಧಿ ಮುಗಿದುದು.

---

## ನಾಲ್ಕನೆಯ ಸಂಧಿ.

ಸೂಚನೆ.

ಜನಿಸುವನು ತಾನಮರಹಿತದಲಿ
ಮನು.[1] ಮಹೋತ್ಸಾಹಕನು ಲಕ್ಷ್ಮೀ
ವನಿತೆಯರಸನುವೊಲಿದು ಮತ್ಸ್ಯಾಕೃತಿಯ ತನುವಿಡಿದು ॥

ಮನುವು ಅರ್ಘ್ಯವನ್ನು ಕೊಡುವಾಗ ಮೀನು ಬರಲು ಅದಕ್ಕೆ ಅದರ ಪ್ರಾರ್ಥನೆಯ ಪ್ರಕಾರ ಸ್ಥಳಗಳನ್ನು ಕೊಡುವಿಕೆ.

ಕೇಳು ಜನಮೇಜಯಧರಿತ್ರೀ
ಪಾಲ ಸಾವಣಿಕೆಯನೆಂಬಾ

---

1 ಮುನಿ, ಘ.

ಲೋಲಮನು[1] ಸಂಧ್ಯಾದಿಕರ್ಮದೊಳರ್ಘ್ಯಗೊಡುತಿರಲು ।
ತೋಳ ಕೊನೆಯಲಿ ಕಂಡನರ್ಘ್ಯದ
ಮೇಲುಗುಡುಕೆಯೊಳಲ್ಲಿ ಮತ್ಸ್ಯನ
ಲೋಲಸೂಕ್ಷ್ಮದ ರೂಪ ಕರದಲು ಕಂಡು ಕರುಣದಲಿ ॥ ೧

ಇರಲು ಮನು ಮತ್ಸ್ಯನನು ಬಿಸುಡದೆ
ಕರಕಮಂಡಲುವಿನೊಳಗಿರಿಸಲು
ಧರೆಯ ಜೀವರ ನೋವ ಕಾಣದೆ ಮನು ಮಹೋತ್ಸವದಿ ।
ಧರಣಿಯಲಿ ಚೌರಾಶಿಲಕ್ಕದ
ಕರಣಜೀವರ ಹರಣಕಾಗಳು
ವರಮಹಾಕೃಪೆಯುಳ್ಳನನ್ಯರ ನೋಡನಾತಂಗೆ ॥ ೨

ಅದಕೆ ಪರಮಾಯುಷ್ಯಪರಿಯಲು
ವಿದಿತಸ್ವರ್ಗದೊಳಿರ್ಪರೆಂದ[2] ರೆ
ಮುದದಿ ಜೀವರ ನೋವ ಮಾಡದೆ ಸುಖವ ಬಯಸುವನು ।
ಉದಕವೆಱೆವುತ ತುಷ್ಟಿಕರವಹ
ಮುದದಿ ಹಸಿದರಿಗನ್ನ ವೀವುತ
ನದನಱಿದು ಜಲಪಾತ್ರೆಗಿರಿಸಲು ಬಳೆದನದ ತುಂಬಿ ॥ ೩

ಇಲ್ಲಿ ಮತ್ಸ್ಯಂಗಿರಲಿಕುಬ್ಬಸ
ಮೆಲ್ಲನಲ್ಲಿಂ ತೆಗೆದು ಕೇಲಿನೊ
ಳಲ್ಲಿ ತಾನಂದಿರಿಸೆ ಬಳೆದನು ಕೇಲು ತುಂಬಲಿಕೆ ।
ಅಲ್ಲಿ ಮತ್ಸ್ಯಂಗಿರಲದಾಯುತ
ವಲ್ಲೆನುತ ತಾ ಪರಿಮಳಾಂಬುಗ
ಳಲ್ಲಿ ಸರಸಿಯು ಜಕ್ಕವಕ್ಕಿಯು ಕೊಳನ ಮಧ್ಯದಲಿ ॥ ೪

ಅಲ್ಲಿ ಯಿರಿಸಲಿಕಾಸರೋವರ
ವೆಲ್ಲ ತುಂಬಿತು ಮನುಗೆ ಜಪತಪ

---

1 ಮುನಿ, ಘ. 2 ಠಿಹರುಯೆಂದ, ಕ. ಖ. ಗ. ಘ. ಙ.

ವೆಲ್ಲ ತಾನಂದಿದಕೆ ತೆಗೆತೆಗೆದಾತ ಬಳಲುತಲು ।
ಫುಲ್ಲನಾಭನ ಪ್ರಕೃತಿಯ್ಯ ಸಲೆ
ಬಲ್ಲರಿದನಾರೆನುತ ಮೆಲ್ಲನೆ
ನಿಲ್ಲದೈದಿದ ಮ[1]ತ್ಸ್ಯದೇವರನೊಯ್ದು ಗಂಗೆಯಲಿ । ೫

ಒಯ್ದು ಬಿಡಯಂಗೈಸೆ ಗಂಗೆಯ
ನೈದೆ ತುಂಬಿದನೊಂದುರೂಪಿಲಿ
ಹೊಯ್ದು ಗಂಗೆಯಿ ಕೂರ್ಮಪರಿಯಂತತ್ತ ಬೆಳದಿರ್ದ ।
ಮೇದಿನಿಯು ಹೊಱಿಗಾಱರೆಲ್ಲರು
ವೇದಿಸುತ ಬೆಂಡಾಗುತಿರ್ದರು
ವಾದಯಾಂಬುಧಿ ವರಮಹಾಮನು ದೇವ ಗತಿ ಯೆನುತ ॥ ೬

ಆಗ ಪ್ರಾಪ್ತವಾದ ಪ್ರಳಯದಲ್ಲಿ ಮತ್ಸ್ಯರೂಪನಾದ ಹರಿಯು ಮನುವನ್ನು ಕಾಪಾಡುವಿಕೆ.

ಇರುತಿರಲು ತಾ ನಾಲ್ಕುದಿಕ್ಕಿನ
ಶರಧಿಗಳು ಪರಿತಂದು ಲೋಕವ
ನರಸ ಮುಚ್ಚಲು ಪೃಥ್ವಿ ನಾವೆಯ ರೂಪುಗೊಂಡಿರಲು ।
ಪರಿಹರಿಸುತೀ ಜೀವರಾಶಿಯ
ಕರಣವನು ತಾ ಬೀಜಮೊಡೆಯ
ಹೊಱೆವ ಪರಿಯಲಿ ಹೊಱೆಯೆ ತಾನೀಮನುವು ಮೊದಲಾಗಿ ॥ ೭

ಬಳಿಕ ನಾವೆಯ ಪಾಶ ವಾಸುಗೆ
ಹೊಳವ ಹಗ್ಗವೆಯಾದ ಮತ್ಸ್ಯನು
ಬಿಳಿಯಕೋಡಿಗೆ ಸಿಕ್ಕಿದಂಬಿಗನಾದ ಸಾವರ್ಣಿ ।
ಇಳೆಯ ಜೀವರ ತುಂಬಿ ಭೂಮಿಯ
ನುಱುಹಿದನು ಹರಿ ಮತ್ಸ್ಯರೂಪದಿ
ಪ್ರಳಯಮನ್ವಂತರದಿ ರಕ್ಷಿಸಿದಾಮಹಾಮನುವ[2] ॥ ೮

---

[1] ಯಲ್ಲಿಯಿಂ ವರವ, ಗ. ಘ. ಜ. [2] ಯುಗವ, ಖ ಗ.

ಬ್ರಹ್ಮದೇವರ ದಿನಮಾನಾದಿಕಥನ.

ಕಾದನೈ ಹೊಱದೊಂದುಱೇಪೆಯಿ [1]
ನಾದಯಾಂಬುಧಿ ಮತ್ಸ್ಯನಾಗಿಯೆ
ಮೇದಿನಿಯು ಹದಿನಾಲ್ಕುಮನುವಿನ ರಾಜ್ಯ ಕಮಲಜನ ।
ವೇದಮಾರ್ಗದೊಳೊಂದುದಿನಪರಿ
ತೀದು ಹೋದುದು ಮತ್ತೆ ಕೇಳ್ಳೈ
ಮೇದಿನಿಯುಲೊಂದಬುದ ತಿರುಗಲು ಸುರರಿಗೊಂದುದಿನ ॥ ೯

ವರಮಹಾದಿನವರುಷಯುಗವದು
ನಿರುತದಲಿ ತಾ ನಾಲ್ಕುಯುಗಗಳು
ತಿರುಗಿ ಸಾವಿರಸಂಖ್ಯೆಯಾದರೆ ಬ್ರಹ್ಮಗೊಂದುದಿನ ।
ಇರುತಿರಲು ತಾರಾತ್ರಿಯನ್ನಕ
ವರಮಹಾತಪಸತ್ಯಲೋಕದ
ನಿರುತವಾಪರಿಯಂತವಾಯಿತು ಬಱಕ ಪಾತಾಳ ॥ ೧೦

ನೆಲೆಯಹುದು ತಾ ಸತ್ಯಲೋಕವು
ಇಳೆ ಮೊದಲು ಹದಿಮೂಱುಲೋಕದ
ಸುಱಿವ ಜೀವರಿಗೈದೆ ಮಿಕ್ಕಿನ ಮನುಜರೆಳವೇನು ।
ಮುೞುಗಿದರು ವೀಚಂದ್ರಸೂರ್ಯರು
ಬೆಳಗು ಬೀತುದು ಶಿಖಿಮರೀಚಿಯು
ತಲೆಗಳಡಗಲು [2] ಮೇರುಮೊದಲಾಗಷ್ಟಕುಲಗಿರಿಯು ॥ ೧೧

ಆಮಹಾಕಮಲಜನ ರಾತ್ರಿವಿ
ರಾಮಿಸಿತು ಹದಿಮೂಱುಲೋಕವ
ನೇಮಿಸುವನ್ನೆ ಸರ್ವಜೀವರ ಕರ್ಮವೃತ್ತಿಗಳ ।
ಆಮನೋಜ್ಞಾನಿಯನು ಪುಣ್ಯ

[1] ನೊಂದುಸಾರಿಗೆ, ಗ. [2] ತಲೆಗಳೆದ್ದವು. ಘ. ಜ.

ಸ್ತೋಮದೇಶೆಗ್ಯ ಸತ್ಯಲೋಕದ
ಧಾಮವೆನು ವೋಹರಿಸಿ ಮುಚ್ಚಿತು ತಮಸಿನೊಡ್ಡವಣೆ ॥ ೧೨
ಒಂದು ಚೌಕಡಿ ತಿರುಗೆ ಧರಣಿಯು
ನಂದು ಸೋಕುವುದುದಕ ಚೌಕಡಿ
ಕುಂದದೆಪ್ಪತ್ತೆರಡು ತಿರುಗಲು ಧ್ರುವನ ಮಂಡಲವ ।
ಒಂದು ಸೋಕುವುದರಸ ಚೌಕಡಿ
ವೃಂದಸಾವಿರವಾಗ ಶೂಲಿಯು
ಮಂದಿರವ ಥೆರೆ ಹೊಯ್ವುತಿರ್ಪುದು ಪ್ರಳಯಮೋಚಲಿ ॥ ೧೩

ಆಗ ವೇದವೆಲ್ಲವು ಬ್ರಹ್ಮನಲ್ಲಿರುವಾಗ ತಮನೆಂಬ ದೈತ್ಯನು ಅದನ್ನು ಅಪಹರಿಸುವಿಕೆ.

ಬಲ್ಲನೊಬ್ಬನು ನಿದ್ರೆಗೆಯ್ಯಲು
ಫುಲ್ಲನಾಭನುಪಾಸ್ತಿ ಮಾಡುವ
ನೆಲ್ಲವೇದವು ಬ್ರಹ್ಮಮುಖದಲಿ ಶ್ವಾಸರೂಪದಲಿ ।
ನಿಲ್ಲದೆಡೆಯಾಟದಲಿ ಯಿರುತಿರೆ
ಯಲ್ಲಿ ತಾ ತಮನೆಂಬ ದೈತ್ಯನು
ವೆಲ್ಲವೇದವನೊಯ್ದು ಜೀವನರಾಶಿಯೊಳಗಡಗೆ ॥ ೧೪
ಇಂತು ಕಾರಣವಾದನೊಬ್ಬನು
ಸಂತತವು ಸ್ವಾಧ್ಯಾಯವೇಚುವ
ಪಂಥವಱಿಯದೆ ತಾ ನಿಶಾಚರಕಾಲದೇಶ್ಚಯಲಿ ।
ಸಂತರಾಗಲಸಂತರಾಗಲಿ
ಯಂತಕಾಲದಲವೆರು ಬೀಜ್ವರು
ಮಂತ್ರಗಳು ತಾವಿರವು ಜ್ಯೋತಿಯು ಸಾಕ್ಷಿಯಿಲ್ಲದಿರೆ ॥ ೧೫

ಅಕ್ರಮವಾಗಿ ವೇದವನ್ನು ಪಠಿಸುವವರಿಗೆ ಅನರ್ಥ

ಆವನಸ್ನಾನ[1] ದಲಿಯೋದುವ
ದೇವಲಕರನು ಮುಟ್ಟಿಯೋದುವ

1 ನಸ್ಥಾನ್ನ ಬ.

ದೇವರಿಗೆ ಹೊತ್ತಿಸಿದ ದೀಪದ ಬೆಳಗಿನಲಿ ಪೇಳ್ವ ।
ಆವ ನೀಲಿಯು ವಸ್ತ್ರ ಕೆಂಪಿನ
ಕಾವಿಯುಲು ತಾ ನಗ್ನನಾಗಿಯೆ
ಯಾವನೋದುವ ಯುವತಿಸಂಗದ ಮೇಲೆ ಋತುಮತಿಯು ॥ ೧೬

ನೋಡುತಲು ಸ್ವಾಧ್ಯಾಯಪೇಳುವ
ನೋಡುತಲು ಕುಕ್ಕುರನ ಕುಣಪವ
ನೋಡುತಲು ಪಾಷಂಡಪತಿತರ ಬ್ರಹ್ಮಘಾತಕರ ।
ನೋಡುತಲುವಧ್ಯಯನ ಹೇಳುವ
ಮೂಢಗಹುದತ್ಯಧಿಕನರಕದ
ಗೂಡು ಮುಂದಣಕಥೆಯು ವಿವರವ ನೀನು ಕೇಳೆಂದ ॥ ೧೭

ವೇದಾಭಿಮಾನಿ ದೇವತೆಗಳು ತಮುನಿಂದ ನಮ್ಮನ್ನು ಬಿಡಿಸೆಂದು ಹರಿಯನ್ನು ಮರೆ ಹೋಗುವಿಕೆ.

ನಿಗಮದಧಿದೇವತೆಗಳೆಲ್ಲರು
ಜಗಳುತಲಿ ಸರ್ವೇಶ್ವರೀಶನ
ಸೊಗಸಿ ಹೊಗಳುತ ತಮನ ಕೈಯ್ಯಲು ಸಿಲುಕಿ ಮೊರೆಯಿಡುತ ।
ಮಿಗೆ ಮನೋಮಂತ್ರಾಧಿದೇವತೆ
ಯುಗಧರನೆ ಶ್ರೀಕಾಂತ ಲೋಕದ
ಹಗರಣಿಗ ನೀನೆಮ್ಮ ಕಾವುದು ತಮನ ಕಯ್ಯಿಂದ ॥ ೧೮

ಕಾವುದೈ ಯಜ್ಞಾದಿರಕ್ಷಕ
ಕಾವುದೈ ಕೈವಲ್ಯನಾಥನೆ
ಕಾವುದೈ ನೀ ಸರ್ವಜೀವರ ನಾಥ ನಮ್ಮಮನು ।
ಕಾವುದೈ ಯಘದೂರ ನಿರ್ಮಳ
ಕಾವುದೈ ಕಾರುಣ್ಯಸಾಗರ
ಕಾವುದೈ ವಿಧಿರಹಿತದೈವವೆ ತಮನ ಕೈಯ್ಯಿಂದ ॥ ೧೯

ಹಿಂದೆ ನಾನಾಕಲ್ಪದಲಿ ಮು
ನ್ನೊಂದು ತಾಮಸರಾದಜೀವಕ್ಕೆ

ಸಂದುದಿಲ್ಲೈ ಯಾಗ ತಾಮಸನಾದ ತಮಗೀಗ ।
ಸಂದೆವೈ ನೀನೆಮ್ಮ ರಕ್ಷಿಸು
ತಿಂದು ಸೆಱೆಯನು ಬಿಡಿಸ ಬೇಕೈ
ಯೆಂದು ಹೊಗೞುತ ತಮ್ಮ ತನುಗಳು ಬಯಸಿ ಬಾಯಾಱಿ ‖ ೨೦

ಅಱಿತು ನಿನ್ನನು ಹೊಗೞಲಱಿಯೆವು
ಕುಱುಹಿನಲಿ ಬೊಬ್ಬಾಟಮಾಡುವ
ಬೞಿಯು ಬಾಯಿಯಲಿ ನಿನ್ನ ಹೊಗೞುವ ಭಟ್ಟರಾರೆಂದು ।
ಮೆಱುಕವಿಲ್ಲಲೆ ನಿಮ್ಮ ಕೂಡೆವು
ಗಱಿತ ಮುನ್ನವೆ ಶೂನ್ಯ ತಮ್ಮಯ
ಹೊಱೆಗೆ ನಿಮ್ಮದು ಯೆಂದು ನಿಗಮವು ಬಾಯ ಬಿಡುತಿರಲು ‖ ೨೧

ವೇದಾಭಿಮಾನಿಗಳ ಮೊರೆಯನ್ನು ಕೇಳಿ ತಮನನ್ನು ಸಂಹರಿಸಲು ಮನಸ್ಸನ್ನು ಮಾಡುವಿಕೆ.

ತಮನ ಕಯ್ಯಲು ಬಿದ್ದೆವೆಂದಾ
ಕ್ರಮವು ಬೊಬ್ಬಿಡೆ ಮತ್ಸ್ಯರೂಪದ
ಸುಮನು ಹುಯ್ಯಲ ಕೇಳಿ ತಮನನು ಸೀಳಲನುವಾದ ।
ಪ್ರಮೆಯು ರಹಿತನು ವೇದವಾಕ್ಯದ
ಲಮರನಿಕರದ ದಾತ ಮಂಗಳ
ರಮಣಿಯಾನನಕುಮುದಚಂದ್ರಮ ವೇದವೆಲ್ಲವನು ‖ ೨೨

ಸುಮನಸರಿಗೊಪ್ಪಿಸಲು ಭೂಮಿಯ
ಸುಮನಸರಿಗ್ಗೆದಿಸುವೆನೆನುತಾ
ಸಮಯುಸಮರವ ಮಾಡಿ ಮತ್ಸ್ಯನು ತಮನ ಕೆದಱಿದನು ।
ಅಮಮ ವೇದದ ವಾಕ್ಯದಧಿಕ
ಕ್ರಮಕೆ ತಾ ಕಲಿ ಮತ್ಸ್ಯದೇವರು
ತಮನ ಸೀಳಲಿಕಾಯ್ತು ವೆನುತಲಿ ಸುರರು ಹರುಷಿಸಲು ‖ ೨೩

ಮತ್ಸ್ಯಗಳ ಪರಿಮಾಣ ಕಥನ.

ಮುನ್ನ ಶರಧಿಯೊಳೊಬ್ಬ ನಿಳಿವರ
ನುನ್ನತದ ವಿಸ್ತಾರ ಹುಬ್ಬಿನ
ತನ್ನ ಮಧ್ಯದಯೋಜನಂಗಳು ಮೇಲೆ ಮೂನೂರು ।
ಭಿನ್ನವಿಲ್ಲದೆ ನಿಳಿಯನುಂಗುವ
ತನ್ನ ಪುಚ್ಛದ ಮಧ್ಯಯೋಜನ
ದುನ್ನತಿಯು ತಾನಾದುದೈಯಱುನೂಱು ಯೋಜನವು ॥ ೭೪

ಆತನನು ನುಂಗುವ ತಿಮಿಂಗಿಳ
ನಾತ ಕಂಗಳ ಮಧ್ಯಯೋಜನ
ವ್ರಾತನವಶತದಗಲದ ಗುಣಿತ ಗಣನೆಯುಗಣಿತವು ।
ಭೂತಳಾಧಿಪ ಕೇಳ್ ತಿಮಿಂಗಿಳ
ನಾತನನು ನುಂಗುವತಿಂಗಿಳ
ಖ್ಯಾತಿ ಪುಬ್ಬಿನ ಮಧ್ಯಯೋಜನ ಹನ್ನೆರಡುನೂಱು ॥ ೭೫

ಇವರ ನಾಲ್ವರ ನುಂಗಲೆಳಸುವ
ಭುವನರಕ್ಷಕ ಮತ್ಸ್ಯದೇವರ
ಹವಣನಾರೆಣಿಸುವರು ವೇದದ ರಾಶಿ ಬಳಲಿದವು ।
ಭವಮುಮುಕ್ಷುಗಳವರುವಱಿಯರು[1]
ಭುವನದಲಿ ಪರಮಋಷಿಯರಱಿಯ
ರವನಿಪತಿ ಕೇಳ್ ವೇದವಾಕ್ಯಕೆ ಹತ್ತುಮೊಳ ಮಿಗಿಲು ॥ ೭೬

ಆಮಹಾಪರದೈವವಾದುದು
ಸೋಮಶೇಖರನಳಿನ ಸಂಭವ
ನೇಮಿಸಲು ತಾವಱಿಯೆವೆಂದರು ಮತ್ಸ್ಯಮೂರುತಿಯು ।
ನೇಮಿಸುವರಾರಾಶ್ರಯಂಗಳ
ಸೀಮೆಯಂತವ ನೇನ ಹೇಳುವೆ
ಭೂಮಿ ಬಿರಿಯಲು ಮತ್ಸ್ಯಬಿಂಬದ ಪುಚ್ಛಪವಮಾನ ॥ ೭೭

---

1 ಸವನ ಮುಖದಿಂದಱಿಕಾಣರು, ಛ.

ಭೀಷಣಾಂತವ ಮೂಡುತಸುರರ
ಶೋಷಿಸುತ ತಾ ಜಡದ ರಾಶಿಯು
ಸೀಸಿಸುತ ತಾನಧಿಕಜಲವೆನು ಸುರರ ಗಂಗೆಯಲಿ |
ಆಸುರದಿ ವೆಗುಷಾದಿಖಯತುವಿಗೆ
ಭಾಸುರದಿ ಬೀಸುವ್ರುದು ಪವೆನನ
ಘೋಷದುಬ್ಬರದಿಂದ ಸುಖಿವ್ರುದು ವೃಷ್ಟಿರೂಪದಲಿ ||  ೧೮

ಮತ್ಸ್ಯಾವತಾರನಾದ ಹರಿಯ ಬಾಲದ ಪೆಟ್ಟಿನಿಂದ ತಮನು ಸಾಯುವಿಕೆ.

ಬೀಳುವುದು ತಾ ಮತ್ಸ್ಯವಾಲದಿ
ಜಾಳಿಸಿದ ಜಲವೀಗ ಭೂಮಿಗೆ
ಲೋಲಹರಿ ಮತ್ಸ್ಯಾವತಾರದಿ ತಮನನಜಿಯಟ್ಟ |
ಬೀಳಲಪ್ಪಳಿಸಿದನು ವಾಲದಿ
ಘೋಳನುತ ತಮ ಬೀಟೆ ವೇದದ
ಪಾಳಿಗಳು ಕ್ರಮದಿಂದ ಹರಿಯನು ಹೊಗಳುತಿದಿರಾಗಿ ||  ೧೯

ವೇದಾಭಿಮಾನಿಗಳು ಹರಿಯನ್ನು ಸ್ತುತಿಸುವಿಕೆ.

ದ್ವೈತ ಸಕಳದ ಚಕ್ಷು ವಿಶ್ವದ
ತಾತ ನೀನೇ ಸಕಲಲೋಕದ
ನಾಥ ಭೂತಭವಿಷ್ಯವಾತರ್ಾತೀತ [1] ನೀನೆಂದು |
ಓತು ಹೊಗಳ್ದವು ವೇದರಾಶಿಗ
ಳಾತನನು ಮನವಱಿತು ತಮ್ಮಯ
ನೀತಿಬುದ್ಧಿಯೊಳ್ ನಿತುವಱಿತವನಱಿತನೊಂದುವೆನು ||  ೨೦

ಆಹರಿಯು ವರವೆಹಿಮೆಯಾದುದ
ನೋಹಿ ಮುನಿಕುಲ ಸ್ತುತಿಸಲಱಿಯದು
ಗಾಹೆ ವೇದಗಳಱಿಯವೈ ಸಲೆ ನರರ ಪಾಡೇನು |
ಊಹೆಯಲಿ ನಿಗಮಂಗಳಾರವು

---

1 ನಾಥನಚ್ಯುತಭೂತಭವ್ಯಾತೀತ, ಜ.

ಸಾಹಸಾಂಬುಧಿಕೃಷ್ಣರಾಯನ
ಆಹವಕೆ ತಮನೇನು ನಿಮಿಷಕೆ ಬಿದ್ದ ತಮಸಿನಲಿ॥ ೩೧

ವೇದಗಳನ್ನು ಬ್ರಹ್ಮನಿಗೆ ಕೊಡಲು ಪೂರ್ವದಂತೆ ಪ್ರಪಂಚವನ್ನು ಸೃಜಿಸಿ ಸರ್ವಧರ್ಮಗಳನ್ನು ನಡೆಸುವಿಕೆ.

ಬಳಿಕ ತಾ ಹರಿ ವೇದರಾಶಿಯು
ಬಳಲಿಕೆಯುನಪಹರಿಸಿ ಲೋಕವ
ನಳವಡಿಸಿ ಶ್ರೀಬ್ರಹ್ಮದೇವರಿಗಿತ್ತ ನಿಗಮವನು।
ನಳಿನಸಂಭವಗಾಯ್ತು ಪುನರಪಿ
ಬೆಳಗುಗಳು ಜಲರಾಶಿ ಶೋಷಿಸೆ
ಬಳಿಕ ಮಾಡಿದ ಮತ್ತೆ ಸೃಷ್ಟಿಯ ಪೂರ್ವಕ್ರಮಗಳಲಿ॥ ೩೨

ಹರಿ ಬಳಿಕ ಮನುವಿಂಗೆ ನಾನಾ
ಪರಮಧರ್ಮವ ಹೇಳಿ ಪುನರಪಿ
ತಿರದಿ ಬಿಜಯಂಗೈದು ಹೊಕ್ಕನು ಕ್ಷೀರಸಾಗರವ।
ಮರಳಿ ಯೊಂಭತ್ತನೆಯ ಮನು ತಾ
ಹುರಿಕೊಳಿಸಿ ವರಯಜನವೊದಲಾ
ಗುರುತರದ ಷಟ್ಕರ್ಮವೆಲ್ಲವ ಧರಣಿಸುರರಿಂದ॥ ೩೩

ರೂಢಿಮಾಡಿದ ಧರ್ಮಗತಿಯಲಿ
ಗಾಢವಾಡಿದ ಸರ್ವಜನಗಳ
ಮೂಢತನ ಬಯಲಾಗಿ ಹೋಯಿತು ರಾಯ ಕೇಳೆಂದ।
ಮಾಡಿದನು ಮನು ಪ್ರಜೆಗೆ ಹರುಷವ
ಕೂಡೆ ಸಾಗರವೇಳು ಮುನ್ನಿನ
ರೂಢಿಯಲಿ ನೆಲೆಗೊಂಡು ನಿಂದವು ಸ್ವಾದುಜಲವಾಗಿ॥ ೩೪

ಭೂತಳದ ಮೇಲಾಱು ಋತುಗಳು
ನೋತು ನಡೆದವು ತಮ್ಮ ಕಾಲದ
ಧಾತು ಹರಿಯದೆ ವೊಂದು ತೀವ್ರವ ಮಾಡವ್ಯೆ ಧರೆಗೆ।

ಭೂತಳವು ಮನ್ವಂತರಾದಿಯು
ಲೋತು ಬೆಳದುದು ಸರ್ವಸತ್ವಕೆ
ಕಾತರಿಸರಾರ್ಧೈರ್ಯ್ಯಜೀವರುವನುಪಪತ್ತಿಯಲಿ ॥ ೭೪

ಅರಸ ಕೇಳ್ಳ ಬೇಡಿದಾಗಳ
ವರುಷವೀವುದು ತವ್ಮ ಧರ್ಮದಿ
ಧರಣಿಗೊಂಭತ್ತಾದ ಮನುವಿನ ರಾಜ್ಯ ಲೇಸಾಯ್ತು ।
ನಿರುತವಾಯಿತು ಮತ್ಸ್ಯದೇವರ
ಪರಮಕರುಣದಿ ಹವ್ಯಕವ್ಯವು
ಸುರರು ಮೆಚ್ಚಲಿಕನ್ನಸಂಕುಳದಿಂದಲತಿವಿಭವ ॥ ೭೬

ಮೊದಲ ಕೃತಯುಗದಾದಿಯಲಿ ಹರಿ
ಯುದಿಸಿದನು ಮತ್ಸ್ಯಾವತಾರದಿ
ನದಖಿನುಃಖದವು ವೇದರಾಶಿಗಳಂದು ವಿಪ್ರರಿಗೆ।
ಸದಮಲಶ್ರುತಿವಾಕ್ಯಗೋಚರ
ನದಟುತನವನು ಗಣಿಸಬಹುದೇ
ಸದರ ನಿಮಗಾವೀರನಾರಾಯಣನ ಕೃಪೆಯಿಂದ ॥ ೭೭

ನಾಲ್ಕನೆಯ ಸಂಧಿ ಮುಗಿದುದು.

---

## ಐದನೆಯ ಸಂಧಿ.

---

ಸೂಚನೆ.

ಹೇಳಿದನು ಮುನಿ [1] ಸೃಷ್ಟಿಕ್ರಮವನು
ಮೇಲೆ ಶ್ರೀಕೂರ್ಮಾವತಾರವ
ಕೇಳ ಪೂರ್ವಾಪರದ ದೇವರ ಜನನಸಂಗತಿಯ ॥

---

[1] ಹರಿ, ಭೌ. ಜ.

ಜನಮೇಜಯನನ್ನು ಕುರಿತು ಸೃಷ್ಟಿಕ್ರಮವನ್ನು ಹೇಳಲಾರಂಭಿಸುವಿಕೆ.

ಕೇಳು ಜನಮೇಜಯಧರಿತ್ರೀ
ಪಾಲ ತರದಿಂಲೋಕ [1] ಹುಟ್ಟಿದ
ಲೀಲೆಯನು ಕಮಲನಯನನಯಿದುಮೂರ್ತಿ ವಿಷ್ಣುವಿನ ।
ಆಲತಾಂಗಿಯು ರಮಣಿ ಲಕ್ಷ್ಮಿಯು
ಲೋಲನಾಭಿಯ ತುದಿಯಲಗ್ಗದ
ಲೀಲೆವಿಮ್ಮಡಿಸಿರ್ದ ಲೋಕದ ವರಪಿತಾಮಹನ ॥ ೧

ಸೃಷ್ಟಿಕ್ರಮದಲ್ಲಿ ಬ್ರಹ್ಮಾದಿಗಳ ಉತ್ಪತ್ತಿ.

ಸೃಜಿಸಿದನು ಹರಿ ನಿಮಿಷಮಾತ್ರದೊ
ಳಜನನಾತನ ನೊಸಲ ಮಧ್ಯದಿ
ಪ್ರಜೆಯ ಮಾಡಿದನಾಚತುರ್ದಶಲೋಕಪಿತನೆಂಬ ।
ರಜತಶೈಲಾಧಿಪನ ತಾ ಮಿಗೆ
ಭಜಿಸಲಿಕೆ ಮನ್ವಾದಿನಿಕರವ
ಸೃಜಿಸಿದನು ಶ್ರೀವಾಣಿದೇವಿಯನಜನು ಜಿಹ್ವೆಯಲಿ ॥ ೨

ಜನಿಸಿದರು ವರಬ್ರಹ್ಮದೇವರ
ಮನದ ದೆಸೆಯಲಿ [2] ನಾರದಾದ್ಯರು
ಜನಿಸಿದಳು ಹೆಡತಲೆಯ ದೆಸೆಯಲಿ ಮೃತ್ಯುದೇವತೆಯು ।
ಜನಿಸಿದರು ವರಸಪ್ತಮಾತೃಕೆ
ವಿನುತಕಂಗಳ ಕೊನೆಯಲೂರ್ವಸಿ
ಜನಗಳಾದರುಮವೆಯ ಮಧ್ಯದೊಳಪ್ಸರೋತ್ತಮರು ॥ ೩

ಜನಿಸಿದರು ಬ್ರಹ್ಮಂಗೆ ಮನುಗಳು
ನೆನೆಯಲಿಕೆ ಹದಿನಾಲ್ಕು [3] ಕ್ರಮದಲಿ
ಜನಿಸಿದರು ಮುಖದಲ್ಲಿ ಯಷ್ಟಾಶೀತಿಮುನಿನಿಕರ ।
ಜನಿಸಿದರು ಭೂಭುಜರು ಭುಜದಲಿ

1 ಹರಿಯಿಂದಾತ, ಕ. ಖ. 2 ಕೊನೆಯಲಿ, ಕ. ಘ. 3 ಯಾರೇಟ ಘ.

ಜನಿಸಿದರು ತೊಡೆಯಲ್ಲಿ ವೈಶ್ಯರು
ಜನಿಸಿದರು ಪಾದದಲಿ ಶೂದ್ರರು ಭೂಪ ಕೇಳಂದ ॥ ೪

ಜನಿಸಿದರು ದಕ್ಷಾದಿವಿಭುಗಳು
ನೆನೆಯಲಾದರು ತಾವು ನವ [1] ಜನ
ವಿನಯದಲ್ಲೀ ಸೃಷ್ಟಿಕರ್ತರು ನವಪ್ರಜೇಶ್ವರರು ।
ಜನಪ ಕೇಳಂತಿವರ ಕಡೆಯಲಿ
ಜನಿಸಿದಳು ತಾನೊಬ್ಬ ಕನ್ನೆಯು
ವಿನಯನಿಧಿ ಶೃಂಗಾರತವನಿಧಿ ಗೌತಮಾಂಗನೆಯು ॥ ೫

ಜನಿಸಿದರು ವರಬ್ರಹ್ಮದೇವರ
ತನುವಿನಲ್ಲಿಂದ್ರಾದಿದೇವರು
ತನತನಗೆ ಪವಮಾನ ತಪ್ಪಿಸಿ ಯುಳಿದ ನಾಕಜರು ;
ಜನಿಸಿದನು ಪವಮಾನ ಮಧುಸೂ
ದನನ ದಕ್ಷಿಣಬಾಹುದಂಡದಿ
ಜನಿಸಿದಳು ತ್ರೈಲೋಕ್ಯಜೀವನನರಸಿ ವಾಮದಲಿ ॥ ೬

ಅರಸ ಕೇಳದು [2] ಮೊದಲ ಸೃಷ್ಟಿಯು
ನಿರುತವೀಪರಿ ಬಳಿಕ ಹರಿಯಲಿ
ಕೊರಳ ಮೂರೆಲೆಯಲಿ ಜನಿಸಿದ [3] ಮೀನಕೇತನನು ।
ಅರಸಿ ಜನಿಸಿದಳಾತನಂಗನೆ
ಹರಿಯೆದೆಯ ಹೆಂಗೂಸಿನಂದದಿ
ವರರತಿಯು ಜನಿಸಿದಳು ಮುಂದಣಕಥೆಯ ಕೇಳಂದ । ೭

ಅಮಿತತತ್ವಸಮೂಹದೇವೋ
ತ್ತಮನು ಕರುಣಾಕರನು ಬ್ರಹ್ಮ

---

[1] ವನ, ಘ.		[2] ಕೇಳ್ಯೆ, ಘ.
[3] ಯಾಯ್ತು ಬಳಿಕಾ ಹರಿಗೊರಳವುರೆಬೆಯಲಿ ಹುಟ್ಟಿದ, ...

ದ್ಯಮರರಿಗೆ ವೆಗ್ಗಳನವನೆಣುವುಹೋಚ್ಛರೂಪದಲಿ ।
ಕ್ರಮದೆ ಪದ ಹರಿಯಲ್ಲಿ ಬ್ರಹ್ಮಾ
ದ್ಯಮರರಿಗೆ ನೇಮಿಸಿಯೆ ಬ್ರಹ್ಮವ
ದಮಿತದಲಿ ವೆರಸೃಷ್ಟಿದೇವರು ಜೀವ ತಾನೆನಿಸಿ ॥ ೮

ಈ ಜಗದ ಜೀವರಿಗದೊಂದೇ
ವ್ಯಾಜವಿಲ್ಲದ ಸೃಷ್ಟಿಯುನು ಮಿ
ಕ್ಕೋಜಿಸಲು ಹದಿನಾಲ್ಕುಲೋಕದ ಜೀವರಾಶಿಗಳ ।
ರಾಜಭಾವವು ರಾಜವೌಳಿಗೆ
ರಾಜಿಸಲಿಕೀರೇಋಲೋಕದಿ
ರಾಜಿತತ್ವವು ಸೋಮಸೂರ್ಯರಿಗಂದು ವ್ಯಾಪಿಸಲು ॥ ೯

ರವಿಗದೊಂದೇ ಲೋಕದೀಪ್ತಿಯು
ಭುವನದಲಿ ಮಿಕ್ಕವರು ತವ
ತವಗವಿತಸತ್ವದ ಸಾಧನಂಗಳ ಸರ್ವಸುರನಿಕರ ।
ತವತವಗೆ ಬಲ್ಲಿದರು ಮರುತನ
ಲವಿರಳತ್ವವನೇನ ಹೇಳುವೆ
ಸವೆದಳಿಸಿ ಮದ್ದಳೆಯ ಲೆಕ್ಕದೆ ಕೊರಳಗಿಕ್ಕಿಹುದು ॥ ೧೦

ಈ ಚತುರ್ದಶಲೋಕವನು ತಾ
ಯೋಚಿಸಿಹನ್ಯೆ ಇಂತು ಮುಂದಣ
ವಾಚಕರಲೀ ಸೃಷ್ಟಿಕ್ರಮವನು ಕೇಳು ಭೂಪತಿಯೆ ।
ಯೋಚಿಸುವೊಡಳವಲ್ಲ ನಿಗಮದ
ವಾಚನೆಗದಳವಡದು ಯಂತ್ರದ
ಸೂಚನೆಯು ತಾ ವಿಷ್ಣುಮಾಯೆಯಲಋವಗಳವಡದು ॥ ೧೧

ವಿಮಲವಹ ಸೃಷ್ಟಿಯುನದಾಗಳ
ಕ್ರಮದಲೇ ಸೃಜಿಸಲಿಕೆ ದಕ್ಷನು
ಸುಮನಸರು ಮೊದಲಾಗಿ ಮಿಕ್ಕಾದಖಿಳನಾಕಜರು ।

ದೇವತೆಗಳ ಸತಿಯರ ಸೃಷ್ಟಿ.

ಸುಮನಸರ ವೃಂದಕ್ಕೆ ಸತಿಯರ
ಕ್ರಮದಲೇ ಸೃಜಿಯಿಸಿದನಾಗಲು
ವಿಮಲಮತಿ ಸೌಭಾಗ್ಯಗೌರಿಯು ಶಿವಗೆ ಸತಿಯಳನು ‖ ೧೦

ದ್ವಿಜಪತಿಗೆ ಸೌಪರ್ಣಿ ಶೇಷಗೆ
ಸೃಜಿಸಿದನು ವಾರುಣಿಯನತ್ರಿಗೆ
ತ್ರಿಜಗದಲು ಸೌಭಾಗ್ಯರೂಪಳ ನನಸುಯಾಸತಿಯು ।
ಸೃಜಿಯಿಸಿದನಿಂದ್ರಂಗೆ ಶಚಿಯನು
ಸೃಜಿಸಿದನು ಛಾಯೆಯನು ಸೂರ್ಯಗೆ
ಸೃಜಿಸಿದನು ಚಂದ್ರಂಗಮಿಪ್ಪತ್ತೇಳುತಾರೆಗಳ ‖ ೧೩

ಸೃಜಿಸಿದನು ಶ್ಯಾಮಳೆಯು [1] ಕಾಲಗೆ
ಸೃಜಿಸಿದನು ತಾ ಸರ್ವಋಷಿಯರ
ಯಜನಸೇವೆಗೆ ವರಪತಿವ್ರತೆಯೆನಿಪ ಸತಿಯರನು ।
ಸೃಜಿಸಿದನುಕಶ್ಯಪಗವದಿತಿಯು
ಸೃಜಿಸಿದನು ವಾಸಿಷ್ಠನರಸಿಯು
ಸೃಜಿಸಿದನು ಶ್ರೀಯಜ್ಞದೇವರಿಗಾಗ ಸ್ವಾಹೆಯನು ‖ ೧೪

ಬಳಿಕ ಋಷಿಗಳ ಸೃಷ್ಟಿಯನ್ನು ಹೇಳುವಿಕೆ.

ಅರಸ ಕೇಳ್ಳ ಆದಿಸೃಷ್ಟಿಯು
ನಿರುತವೀಪರಿ ಯಿನ್ನು ಮುಂದಣ
ವರಕಥೆಯು ವಿವರಿಸುವೆ ಮತ್ತಾ ದ್ವಿಜರ ಸೃಷ್ಟಿಯನು ।
ಪರಿವಿಡಿಯು ಕೇಳರಸ ಮೊದಲಲಿ
ಧರೆಯೊಳೀಕಶ್ಯಪನ ಸೃಷ್ಟಿಯು
ಪರಿಯು ಹೇಳುವೆ ನಿನಗೆ ನಿಶ್ಚಯುವಾಗಿ ಕೇಳೆಂದ ‖ ೧೫

---

[1] ಸೌಮಿಳೆಯು, ಘ ಪಾಠ.

ಆತಗಾದರು ಬಹಳ ಸತಿಯರು
ಓತು ದಿತಿ ಕದ್ರುವೆಯು ವಿನತೆಯು
ನೀತಿಯಿಂದಾಯದಿತಿ ಮನು ದನು ಯಕ್ಷಿ ರಾಕ್ಷಸಿಯು ।
ಪ್ರೀತಿಯಿಂದಿವರಿಂದ ಹುಟ್ಟಿದ
ಖ್ಯಾತಿಸೃಷ್ಟಿಯು ಕೇಳು ದಿತಿಯಲಿ
ದೈತೆಯರು ಜನಿಯಿಸಿದರಱುವತ್ತಾಱುಕೋಟಿಗಳು ॥ ೧೬

ಉದಿತರಾಗಲು ಪೂರ್ವದೇವರು
ಯದಿತಿಯಲಿ ತೆತ್ತೀಸಕೋಟಿಯು
ತ್ರಿದಶರಾಕದ್ರುವಿನಲುರಗಗಳೆಂಟುಮಾನಿಸರು ।
ಮುದದಿ ನಾಲ್ವರು ಸುತರು ವಿನತೆಗೆ
ಮುದದಿ ದನುವಿಂಗಸುರಕೋಟಿಯು
ಸುದತಿ ಮನುವಿಗೆ ಮನುಜಕೋಟಿಯು ಯಕ್ಷಿಗವನೀಶ ॥ ೧೭

ಒಬ್ಬನಾದನು ವರಕುಬೇರನ
ದಿಬ್ಬರಾದರು ಮೇಲೆ ರಾಕ್ಷಸಿ
ಗರ್ಭದಲಿ ನೈಋತಿಯು ಮತ್ತಾವಿಪ್ರಚಿತ್ತಿಕನು ।
ನಿರ್ಭರದ ಕಡು ಪಾಪಿ ದೈತ್ಯರ
ಗರ್ಭದುಬ್ಬರ ಹಬ್ಬಿಸಿದರ್ದು
ಗರ್ಭದಿಂದಾ ದೇವ ಸಂಘದಲರಸ ಕೇಳೆಂದ ॥ ೧೮

ದೇವರೊಳಗತ್ಯಧಿಕರಿಬ್ಬರು
ಭಾವಿಸಲಿಕಾದಿತ್ಯಶಕ್ರರು
ತಾವು ದೈತ್ಯರೊಳಬ್ಬರಾದರು ತಾಮಸೋತ್ತಮರು ।
ದೇವದಲ್ಲಣ ಕಾಲನೇಮಿಯು
ಮಾವಿಬುಧಪಕ್ಷಾರಿ ಯಂಧಕ
ತಾವು ದುಷ್ಕರ್ಮಿಗಳು ಮತ್ತಂತಥಮರಿವರೆಂದ ॥ ೧೯

ಪೂತಕುಂಭೀಪಾಕಕರ್ಹರು
ಆತಗಳು ವೆಚ್ಯುತಗೆ ದೂರರು

ನೀತಿಬಾಹ್ಯರು ದಿತಿಜರಱುವತ್ತಾಱುಕೋಟಿಗಳು ।
ಭೂತಳಾಧಿಪ ಕೇಳು ರಾಕ್ಷಸ
ರೀತಿಗಳ ಸುರರೊಡನೆ ವೈರವ
ಭೂತಳೇಶನು ಹರಿಯೆ ಕಾಯ್ವನು ಸುರರ ಕೃಪೆಯಿಂದ ॥ ೨೦

ದೈತ್ಯರಿಗೆ ನಿಮ್ಮಿಷ್ಟದಂತೆ ಜೀವಿಸುವುದೆಂದು ಬ್ರಹ್ಮನ ಅಪ್ಪಣೆ.

ಹೊರೆಯಲಿಕೆ ತಾನಿವರನಾಗಳು
ನಿರುತ ದೈತ್ಯರು ಹರಿಗೆ ವಿಗ್ರಹ
ವೆರಸೆ ಕಶ್ಯಪಋಷಿಯು ಸೃಷ್ಟಿಯು ನಿರುತವೀಪರಿಯು ।
ಹೊರೆಯಲಿಕೆ ಶ್ರೀಬ್ರಹ್ಮದೇವರು
ಕರೆಸಿ ದೈತ್ಯರಿಗೆಂದನೊಂದನು
ಹೊರೆದು ಕೊಂಬುದು ನೀವೆ ಒಡಲನು ಬಲ್ಲ ಬುದ್ಧಿಯಲಿ ॥ ೨೧

ಎನಲಿಕವದಿರಲೊಬ್ಬರೊಬ್ಬರ
ತಿನಲಿಕೆದ್ದರು ಬ್ರಹ್ಮಸೃಷ್ಟಿಯು
ನನುಕರಿಸಿ ಭೂಸುರರ ದೇವಸ್ತೋಮವೊದಲಾಗಿ ।
ಜನರ ತಿನುತಿರೆ ಕಮಳಸಂಭವ
ಕನಲಿ ದೈತ್ಯರ ನಿಲಿಸಿ ದೇವರ
ಜನಕೆ ಯಾಣತಿಗೊಟ್ಟು ನಿಮ್ಮನು ನೀವು ಹೊರೆದಿಹುದು ॥ ೨೨

ಎನಲು ನಾಕಜರೊಂದು ಪ್ರಾಪ್ತಿಯು
ನೆನೆಯಲಱಿಯದೆ ತಾವು ಪೋರದೆ
ಮನೆಯಲಿರುತಿರೆ ಕಂಡು ದಾನವಜನಕೆ ನೇಮಿಸಲು ।
ದನುಜರವದಿರು ಬದುಕಲಱಿಯದೆ
ಕನಲಿ ಶ್ವಾಪದವೆಧೆಯು ಮಾಡಲು
ದನುಜರನು ಕಡೆನೋಂಕಿ ರಾಕ್ಷಸಜನಕೆ ನೇಮಿಸಲು ॥ ೨೩

ನೇಮಿಸಲಿಕವರಾಗ ತಮ್ಮಯ
ಸ್ತೋಮಸಹಿತವರೆಲ್ಲಭೂಮಿಯು

ಕಾಮಿಸಲು ಬಿತ್ತಿಕಱಿಯದೆಲ್ಲರು ತಮ್ಮ ಕೈಕಾಲ ।
ತಾಮಸರು ತಿನುತಿರಲಿಕಾ ಕ್ಷಣ
ನೇಮಿಸಲಿಕಳುಕಿರಲು ರಾಕ್ಷಸ
ಸ್ತೋಮಕೆನಲಿಕೆ ವಿಷವ ಸುಱಿಯಲು ಕಮಲಸಂಭವನು ॥ ೨೪

ಮೋಹಿಸಲು ತಾನವರಿಗಾಗಳು
ಆಣತಿಯ ಕುಡೆ ಬದುಕಹೇೞಲು
ವೋಣದೆಯು ತಾ ಹರಿಯು ಮಂಗಳ ಮನುಜನಿಕರವನು ।
ಹೂಣಿಸಲು ನೀವಿಂದುವಗ್ನಿಯು
ಕಾಣಿಕೆಯಲೈದಿತು ಜಗತ್ತಿನ
ಪ್ರಾಣಿವರ್ಗವ ಸಲುಹಿ ಯೆಂದರೆ ಮನುಜರತಿಮುದದಿ ॥ ೨೫

ಮುನ್ನ ಮಧುಕೈಟಭರನಾಹರಿ
ಭಿನ್ನವಿಲ್ಲದೆ ಕೊಲ್ಲಲವದಿರ
ಬೆನ್ನಡಗನೇ ನೀರಲೊರಸಲಿಕಾಯ್ತು ಮೇದಿನಿಯು ।
ನನ್ನಿಯಿಂದಿರುತಿರಲು ಮಾನವ
ಜನ್ಮರಾಕ್ಷಣ ಭೂಮಿದೇವಿಯು
ಬೆನ್ನನಗುಳದು ಇಲ್ಲಿ ಪರ್ಜನ್ಯಾಂಬು ಬೀೞಲಿಕೆ ॥ ೨೬

ಅನ್ನಧಾನ್ಯವ ಬಿತ್ತಿ ಬೆಳೆಯಲು
ಮುನ್ನ ದೇವಾಸುರರಿಗಿಕ್ಕ್ರುತ
ಮನ್ನಿಸುವರಾಸರ್ವಭೂತವನರಸ ಕೇಳದನು [1] ।
ಉನ್ನತಿಯ ಪದುಮಜನು ಕಂಡನು
ಮನ್ನಿಸಿದನಾ ಮನುಜವರ್ಗವ
ನಿನ್ನು ತಾ ನಿಮಗೊಂದು ಸಾಧನವೀವೆನನುವಾಗಿ ॥ ೨೭

ಈಚತುರ್ದಶಭುವನಜೀವರ
ಸ್ತೋಚಿತ [2] ವ್ರತಪುಣ್ಯವೆಲ್ಲವು

1 ಸ್ವರ್ಗಭೋಗವ ನರಸಕೇಳೆಂದ, ಘ. 2 ಸೌಚತ್ಯ, ಘ.

ಬಾಚಿ ಪುಟ್ಟಿತು ಕಾಮಧೇನುವಿನಂಗಮಧ್ಯದಲಿ ।
ವಾಚಕನಿಗೆ [1] ಯುಳವಲ್ಲ ಲೋಕಕೆ
ಗೋಚರವು ತಾನಲ್ಲ ಧರ್ಮವು
ಯೋಚಿಸಲಿಕೆತ್ತಾಗಿ ಹುಟ್ಟಿತು ಭೂಮಿಮಧ್ಯದಲಿ ॥ ೧೮

ಏಱಬಾರದು ವೃಷಭನಾಗಳ
ದಾರು ಕರ್ಮವನುಳ್ಳ ಜನ್ಮಿಗ
ಳೇಱಿದರೆ ಯಮಲೋಕಸಾಧನ ಶಿವನು ಹೊಱತಾಗಿ ।
ಏಱಲಾಗದು ರುದ್ರವಾಹನ
ವಾಱುಕರ್ಮದ ವಿಪ್ರರೆಲ್ಲರು
ಮೀಱಿ ಯೇಱಿದರವರು ನರಕಿಗಳೀಜಗತ್ತಿನಲಿ ॥ ೧೯

ರಾಯ ಕೇಳ್ಳ ಮನುಜವರ್ಗದು
ಪಾಯಕಿದು ಕೃಪೆಯಾಯ್ತು ಸಾಧನ
ಕೋಯಿದರು ಮಯವಿಶ್ವಕರ್ಮರು ಜನಿಸಿ ಮೊಜಗಕೆ ।
ಪ್ರಾಯದಲಿ ಸಕಲೋಪಕರಣಗ
ಳಾಯುಧಗಳಾದವಖಿಳಕಳಾ
ಕೋಯಿದರು ಜನಿಸಿದರು ಕಡೆಯಲಿ ಸೂರ್ಯನಂಗದಲಿ ॥ ೨೦

ಹುಟ್ಟಿದುದು ದೇವಾಂಗನಾಜನ
ನೆಟ್ಟನೆಯದೀರೇೞುಲೋಕದ
ದಿಟ್ಟವನು ನಿರ್ಮಿಸಲಿಕಾಯ್ತು ಮನುಜವರ್ಗದಲಿ ।
ಹುಟ್ಟಿದವರೊಂದೊಂದುಕೆಲಸವ
ನೆಟ್ಟನಾಶ್ರಯಿಸಿದರು ಲೋಕದ
ಭೀಷ್ಟವನು ನೆಱೆ ಮಾಡುತಿರ್ದರು ಮನುಜಜಾತಿಯೊಳು ॥ ೨೧

ಒಬ್ಬರಿಕ್ಕುವರೊಬ್ಬರುಂಬರ
ದೊಬ್ಬರೇ ಆಕ್ರಮಿಸಿ ಕೊಂಬರು

---

1 ಯೋಚನೆಗೆ, ಘ.

ಸಬ್ಬಜನರುಗಳೊಳಗೆ ಮೂಜೀ ವರ್ಗವಾಗಿಪುದು |
ಹಬ್ಬದಲು ದೇವತೆಗಳುಂಬರು
ಜೊಬ್ಬದಲು ದಾನವರುಂಬರು
ಸಬ್ಬದಿನದಲು ಮನುಜರುಂಬರದೆಂದು ಋಷಿ ನುಡಿದ ‖ ೩೦

ನುಡಿದು ತಾನೆತ್ತಾಗಿ ಕೊಡುವನು
ಬಿಡದೆ ದಾನವದೇವಮಾನವ
ರೊಡಲ ತುಂಬುವ ಪಿತರು ವಿಶ್ವೇದೇವಮೊದಲಾಗೆ |
ಪೊಡವಿಯಲಿ ತನಗಾಯ್ತು ಗ್ರಾಸವು
ಬಿಡದೆ ತೃಣತತಿ ಯುರಗಜಾತಿಗೆ
ದೃಢದಿ ತಾ ಪವಮಾನನಾಹರವರಸ ಕೇಳೆಂದ ‖ ೩೩

ಮನುಜವರ್ಗಕೆ ನಾಲ್ಕು ಭಾಗವು
ಜನರೊಳಾಯಿತದೊಂದು ಪಾದದ
ಮನುಜರಾಗಾಲಸ್ಯವಾಗಿರದುಚ್ಚ ಪೌರುಷದ |
ಜನತತಿಯು ಸೇವೆಯಲಿ ನಿಂದರು
ಮನುಜರಾಮತ್ತೊಂದು ಪಾದದ
ಜನದ ಮೂಲದದೆಲ್ಲ ಕೃಷಿ ತಾನೊಂದು ಪಾದದಲಿ ‖ ೩೪

ಜನಿತವಾಗಲಿಕದಟ ನಾಮಕೆ
ವಿನಿಮಯದೆ ತಾ ನಾಲ್ಕುವರ್ಣವು
ಮನುಜಜಾತಿಯೊಳಾಗಲಾದವು ಪಾದಭೇದದಲಿ |
ಮನವಚನಕಾಯದಲಿ ಬ್ರಾಹ್ಮಣ
ನೆನೆಯಲಾಗದು ಕೃಷಿಯನಾಗಳು
ವಿನಯದಲಿ ತಾ ವೇದಶಾಸ್ತ್ರವನೋದಿ ಸುಖಿಯಿಸುವ ‖ ೩೫

ಜನಪತಿಗಳುಂ ಮತ್ತೆ ಕೃಷಿಯನು [1]
ನೆನೆಯಲಾಗದು ಕ್ಷತ್ರಧರ್ಮವ

---

[1] ಗಳೊಳಗೊಬ್ಬರಿಗೆ ಕೃಷಿ, ಕ. ಖ.

ನನುಭವಿಸಿ ತಾನಿರ್ದ ಮಾತನು ವೈಶ್ಯ ಕೃಷಿಯಿದನು ।
ಜನಪ ಕೇಳ್ಳೈ ಕೃಷಿಯು ತಾನದು
ಜನಿಯಿಸಿತು ಶೂದ್ರಂಗೆ ಮುಂದೂ
ವಿನುತದಾವರಕಾರಣಾರ್ಥ ಸಹಸ್ರಕಾರಣದಿ ॥ ೩೬

ಇವು ಮೊದಲು ಸರ್ವಾನುಭೂತದ
ವ್ಯವಹರಣೆಯಲಿ ಕೃಷಿಯು ಜೀವನ
ವಿವನು ಬಿಟ್ಟಹ ಶೂದ್ರ ಬೀಳುವ ನಿತ್ಯನರಕದಲಿ ।
ಅವನಿಪತಿ ಕೇಳ್ ಸರ್ವಜೀವದ [1]
ನಿವಹ ನಿರ್ಣಯವಾಯ್ತು ದೇವ
ಪ್ರವರರಲಿ ದೈತ್ಯೇಂದ್ರನಿಗ್ರಹವಾದ ಸತ್ಕಥೆಯು ॥ ೩೭

ನೆಲೆಯ ಕೇಳ್ಳೈ ನೀನು ಮುಂದಣ
ಇಳೆಯ ಸೃಷ್ಟಿಯೊಳಾಯ್ತುದೊಮ್ಮೆಯೆ
ಬಳಿಕ ಕಡೆಯಲ್ಲಾತ ಜನಿಸಿದನತ್ರಿ ಕೇಳಂದ ।
ಇಳೆ ಮೊದಲು ಹದಿನಾಲ್ಕು ಲೋಕದ
ಬಳೆಯಿಕಿವರಿಂದಾಯ್ತು ಪ್ರಜೆಗಳ
ನೊಲಿದು ಸೃಜಿಸುವ ನವಪ್ರಜಾಪತಿಸೃಷ್ಟಿ ಕೇಳಂದ ॥ ೩೮

ಇವರನೇ ನವಬ್ರಹ್ಮರೆಂಬರು
ಭವನು ಭಾಳಜ ಯೋನಿಯಲಿ ಸಂ
ಭವಿಸಲುಳಿದಾ ಯೇಳುಜನಗಳು ವಾಣಿಯುವತಿಯಲಿ ।
ವಿವರಿಸಲು ಕಮಳಜಗೆ ಜನಿಸಿದ
ರಿವರು ಸಪ್ತಕರಿವರ ಸೃಷ್ಟಿಯು
ವಿವರ ಹೇಳುವೆ ನಿನಗೆ ಕಶ್ಯಪನಾಗಲೇನೆಂಬೆ ॥ ೩೯

ಸಿಡಿಲುಮಿಂಚುಗಳರುಣ ತಾನಿವ
ರೊಡನೆ ಹುಟ್ಟಿದ ಗರುಡದೇವರು

---

[1] ದೇವರ, ಘ.

ಮಡದಿ ವಿನತಾದೇವಿಗಾದರು ಶುದ್ಧ ಸಾತ್ವಿಕರು ।
ಹೊಡೆದನೊಬ್ಬನು ಸೂರ್ಯ ರಥವನು
ಬಿಡದೆ ಲಕ್ಷ್ಮೀಪತಿಯು ವರವಮ
ಲ್ಲಡಿಯು ಸೇವಿಪನೊಬ್ಬ ಪೊಡವಿಯು ಮೇಲೆ ಸೌಪರ್ಣ ॥ ೪೦

ಒಟ್ಟಿಕ ಕಡೆಯಲಿ ಹರಿಯು ವಹನವ
ನೊಲಿದು ತಾ ಶ್ರೀಗರುಡನಾದನು
ನಳಿನನಾಭಂಗಧಿಕಪ್ರೀತನು ಸುರಸಮೂಹದಲಿ ।
ಎಲೆ ಮಹೀಪತಿ ಕದ್ರುವಿಗೆ ಸುತ
ರೊಲಿದು ಜನಿಸಿದರಷ್ಟಕುಲ
ಗಳ ಉರಗನಾಗಗಳಂತು ಕಶ್ಯಪಸೃಷ್ಟಿ ಕೇಳೆಂದ ॥ ೪೧

ಇವರೊಳಗೆ ಪ್ರತಿಪಕ್ಷವಾಯಿತು
ಭುವನದಲಿ ದಿತಿಸುತರಿಗವದಿತಿ
ಗುವರರಿಗವಿಂತು ವಿನತಾಕದ್ರುಗಳ ತನುಜರಿಗೆ ।
ಅವನಿಪತಿ ಕೇಳ್ ನಿನಗೆ ಮೊದಲಲಿ
ವಿವರಿಸುವೆ ನಾ ವಿನತೆಕದ್ರುಗ
ಳ ವರತನುಜರ ವೈರಮಾರ್ಗವೆನೆಂದನಾಮುನಿಪ ॥ ೪೨

ಕದ್ರುವು ವಿನತೆಯನ್ನು ಸುರಪತಿಯ ಕುದುರೆಯು ಬಿಳಿದೊ ಕರಿದೊ ಎಂದು ಕೇಳುವಿಕೆ.

ಇರಲಿರಲು ಶ್ರೀಗರುಡದೇವರ
ವರಜನನಿಯೊಳಗೊಮ್ಮೆ ನಾಗರ
ನಿರುತಮಾತೆಯು ಸವತಿಮತ್ಸರದಿಂದ ಮತ್ಸರಿಸಿ ।
ಗರುಡದೇವರ ಮಾತೆಗೆಂದಳು
ಸುರಪತಿಯ ಹಯುವಹುದು ಬಿಳದೋ
ಕರಿದೊ ಹೇಳೌ ಅಕ್ಕ ಎಂದಳು ವಿನತೆ ಮನಮುಟ್ಟಿ ॥ ೪೩

ಸುರನದಿಯ ಜಲವಿಂಟುವಾಹಯು
ನಿರುತ ಬಿಳದೌ ತಂಗಿ ಯೆಂದರೆ

ಯುರಗಮಾತೆಯು ನಕ್ಕು ವಂಚಿಸಿ ಕಾದು ಹಯವೆಂದು ।
ಪರಮಪಾವನೆ ವಿನತೆಯುವತಿಯ
ನುರಗಮಾತೆಯು ಕೆಡಿಸ ಬಗೆದಾ
ಪರಿಯ ಕೇಳ್ಕ ಭೂಪ ಸವತಿಯ ಮನದ ಕಷ್ಟವನು ॥ ೪೪

ಎಂದು ತಕ್ಷಣ ಕಟ್ಟಿ ಯೊಡ್ಡವ
ನಿಂದುವದನೆಗೆ ಕದ್ರು ನುಡಿದಳು
ಬಂದು ತುರಗವ ನಾಳೆ ನೋಡುವ ಸೋತೊಡವರಾಗ ।
ಹಿಂದುಗಳೆಯದೆ ತೊತ್ತಿರಾಗುವ
ರೆಂದು ನಾಗರ ಮಾತೆ ತನ್ನಯ
ಮಂದಿರಕೆ ಬಂದಾಗ ದುಗುಡವ ಹಿಡಿದು ಮಲಗಿರಲು ॥ ೪೫

ಬಂದು ನಾಗರು ತಾಯಿಗೆಂದರ
ದಿಂದು ನಿಮ್ಮಯ ದುಗುಡವೇನೆನೆ
ಕಂದ ನೀವಿರಲೆನಗೆ ಸವತಿಯ ತೊತ್ತುತನವಾಯ್ತು ।
ಎಂದೊಡಾಕರ್ಕೋಟನಾಗನು
ಬಂದ ಹದನೇನೆನಲಿಕೆಂದಳು
ಕಂದ ಕೇಳ್ಕ ತಾನದಿಂದ್ರನ ಹಯವ ಕಪ್ಪೆಂದೆ ॥ ೪೬

ನಾಳೆ ಹಯ ನೀರ್ಗುಡಿಯ ಬರಲಿಕೆ
ಮೇಲೆ ಬಿಳಿದಾಗಿರಲು ಸವತಿಯ
ಕೀಳ ತೊತ್ತಹೆನೆಂದು ದುಗುಡವ ಹಿಡಿದೆ ನಾನಿಂದು ।
ಬಾಲಸರ್ಪನು ನುಡಿದ ಜನನಿಗೆ
ಕಾಳನಾಡದಿರವ್ವ ಸತ್ಯವ
ಪಾಲಿಸದೆ ಸತ್ಯವನು ಕೆಡಿಸುವೆನೆಂದು ಮನಮುಟ್ಟ ॥ ೪೭

ನೀವು ನುಡಿದರೆ ನಿಮಗೆ ತಾನಿದು ನ್ಯಾ
ಯವಲ್ಲೆಂದೆನಲು ಸರ್ಪನು
ತಾಯೆ ಚಿಂತಿಸಬೇಡದೆಂದರು ಮಿಕ್ಕ ಸರ್ಪಗಳು ।

ನಾವು ನೀರೊಳು ನಾಳಗಿನಿಬರು
ದೇವರಾಜನ ತುರಗದಂಗವ
ನಾವರಿಸಿ ಕೊಂಡಿರುವೆವಾ ಕ್ಷಣ ನೀವು ವಿನತೆಯನು ॥ ೪೮

ಕರೆದು ತೋಱುವುದಲ್ಲಿಗೆಂದರೆ
ಹರುಷಿಸಿದಳಹಿವೂತೆ ಯಾಕ್ಷಣ
ನಿರುತದಲಿ ಶುಚಿಯಾಗಿ ಮಱುದಿನ ತುರಗ ಬರಲೊಡನೆ ।
ಭರದಿನಾಕೆಯು ಕರೆಯುಲಟ್ಟಲಿ
ಕರಸ ಇಂತಹ ಸತಿಯರಿಗೆ ತಾ
ನಿರುತ ಸ್ವಾತಂತ್ರಕೆಯು ಸಲ್ಲದದೆಂದನಾಮುನಿಪ ॥ ೪೯

ಬಳಿದೆಂದು ಹೇಳಿದ್ದರಿಂದ ವಿನತೆಯು ದಾಸಿಯಾಗುವಿಕೆ.

ಉರವಣಿಸಿ ತಾ ಬರಲಿಕೆಂದಳು
ಸಿರಿಯೆ ಕೀಟಿಂದೆನಿಪ ಪುತ್ರರ
ಸರಕುಗೊಳ್ಳದೆ ಬರಲಿಕಂಜುವೆನೆನಲಿಕಗ್ರದಲಿ ।
ಕರೆದು ವಿನತೆಯ ತೋಱಿಲಾಗಳು
ಕಱಿದದಾಯಿತು ವ್ಯಾಳವೋಹರ
ತುರಗವನು ತಾವೊತ್ತಿ ಹತ್ತಲು ಭೂಪ ಕೇಳಂದ ॥ ೫೦

ಬಟಕ ವಿನತಾದೇವಿಯರ ತಾ
ನಳುಕಿನಲಿ ಸೋಲಿಸಿಯೆ ಸವತಿಯು
ನೊಲಿದು ತೊತ್ತಾಗಿರಿಸಿಕೊಂಡಳು ತನ್ನ ಮಂದಿರಕೆ ।
ಲಲನೆ ಕದ್ರುವಿಗೆಸಗೆ ತೊತ್ತಿನ
ಕೆಲಸ ತಾ ಕಡೆಯೆಂದಿಗೆಂದರೆ
ಎಲೆ ವಿನತೆ ನೀ ಸುಧೆಯನಿತ್ತೊಡೆ ನಿನಗೆ ಕಡೆಯೆಂದು ॥ ೫೧

ಗರುಡನು ತಾಯಿಯ ಅಪ್ಪಣೆಯಿಂದ ಕದ್ರುವಿನ ಮನೆಗೆ ಹೋಗಲು ಅಮೃತವನ್ನು ಅಪೇಕ್ಷಿಸುವಿಕೆ.

ಎನಲು ವಿನತಾದೇವಿ ತೊತ್ತಾ
ಗನಿಮಿಷರಿಗಾ ನೂಱುವತ್ಸರ

ತನಕ ವಿರಲಿಕೆ ತಾಯ ನೋಡುವೆನೆಂದು ಖಗರಾಜ ।
ವಿನತೆಯುರಮನೆಗೈದಿ ಬಾಗಿಲು
ತನತನಗೆ ಮುಚ್ಚಿರಲು ಮಾತೆಯು
ಲನಿತು ದುಗುಡವ ಕೇಳಿ ಬಂದನು ಮನೆಗೆ ಕದ್ರುವಿನ ॥ ೫೨

ಬಂದು ಮಾತೆಯ ಕಂಡು ಚರಣ
ದ್ವಂದ್ವದಲಿ ಚಾಚಿದನು ಶಿರವನು
ಇಂದಿದೇನೌ ನಿಮಗೆ ಸವತಿಯ ದಾಸ್ಯವೆಂದೆನಲು ।
ಎಂದೊಡದಕಂಬುಜಾಕ್ಷಿ ನುಡಿದಳು
ಕಂದ ಕೇಳ್ಳ ಇಂದು ಹಿಂದಣ
ಛಂದವನು ನೆಱೆ ಹೇಳ್ವೆ ನಾಗರ ವೃಂದ ಮಾಡಿದುದ ॥ ೫೩

ಬಳಿಕ ಕರ್ಕೋಟಕನು ತನಗಾ
ಗೊಲಿದು ಮಾಡಿದ ಪರಿಯನಱುಹು
ತ್ತಲೆ ಮಗನೆ ತನಗಿಂದು ತೊತ್ತಿನ ಕೆಲಸ ಕೊಂಡಿಹುದ ।
ನಿಲಿಸುವೊಡೆ ಕದ್ರುವಿಗೆ ಕೊಟ್ಟರೆ
ಯೊಲಿದು ಸುಧೆಯನು ದಾಸಿತನವದು
ತೊಳದು ಹೋಹುದು ತಂದೆ ಕೇಳೆನಲಾಗ ಖಗರಾಜ ॥ ೫೪

ಕನಲಿ ನಾಕಜಪತಿಯ ಮೇಲಕೆ
ವಿನತೆಯಾತ್ಮಜ ಧಾಳಿ ಮಾಡು
ತ್ತನಗೆ ಕೊಡುವುದು ಸುಧೆಯನೆನುತಿರಲಿಂದ್ರ ಕೋಪಿಸಿದ ।
ಕನಲಿ ಕಾಳಗಮಾಡಲಾಕ್ಷಣ
ಕನಿಮಿಷರ ನೆಱೆ ಗೆಲಿದು ಜಿಷ್ಣುವ
ತನುವ ನಪ್ಪಳಿಸಿದನು ಹೊಯ್ದನುದರವನೊಡೆಮೆಟ್ಟಿ ॥ ೫೫

ಕುಲಿಶವನು ತಾ ತೆಗೆದು ಕೊಂಡನು
ಬಲುಹಿನಲಿ ಬಳಿಕಮರಪತಿಯನು
ನೆಲಕೆ ಕೆಡಹುತ್ತೆದೆಯ ಮೆಟ್ಟುತ ಬೇಡಿದನು ಸುಧೆಯ ।

ಬಿಚ್ಚಿಕ ಶಕ್ರನು ವಿಹಗರಾಜನ
ಬಲುಹ ಕಂಡನು ಬಾಯೊಳಗೆ ತಾ
ನಿಳುಹಿ ಬೆರಳನು ಬೇಡಿಕೊಂಡನು ಸುಧೆಯನೀಗಿಂತು ॥ ೫೬

ತರಿಸಿ ಕೊಡುವೆನೆನಲ್ಕೆ ಬಿಟ್ಟನು
ಸುರಪತಿಯು ನಾಕ್ಷಣದೊಳಮೃತವ
ಹರಿದು ತೆಗೆದನು ವಿಹಗನಾಗಲು ಹರಿವ ಠಾವಿನಲಿ ।
ವರಸುಧೆಯು ಹನಿಯೊಂದು ಯಮುನೆಯ
ಪರಿಯೊಳುಕ್ಕಿತು ತೀರಕಾಗಳು
ಧರಣಿಯಲಿ ತರು ಮೂಡಿತಾಕ್ಷಣ ಕದಲು ಕಾಳಗನ ॥ ೫೭

ಅಮೃತವಂ ತಂದುಕೊಟ್ಟು ತಾಯ ದಾಸ್ಯವನ್ನು ಬಿಡಿಸುವಿಕೆ.

ಮಡುವಿನಲಿ ತಳುತಿರಲಿಕಿಂದಿರ
ನಡಿಗೆಱಗಿ ಶ್ರೀಗರುಡದೇವರ
ಝುಡಿತೆಯಲಿ ಕಳುಹಿದನು ಬಂದನು ಕದ್ರುವಿನ ಮನೆಗೆ ।
ತಡೆಯದೈದಿಯೆ ಸುಧೆಯನಿತ್ತಾ
ಗಡಿಗೆಱಗಿ ತನ್ನಾತ್ಮಜನನಿಯು
ಬಿಡಿಸಿದನು ತಾ ಸೆಱೆಯನಾಕ್ಷಣ ಭೂಪ ಕೇಳೆಂದ ॥ ೫೮

ಇನ್ನು ಹೇಳುವೆ ವ್ಯಾಳಜಾತಿಯು
ಕುನ್ನಿಗಳವದಿರೆಲ್ಲಿ ಯೆನುತಲೆ
ಪನ್ನಗಾರಿಯು ವಿತಳಕೈದನು ನಿಮಿಷಮಾತ್ರದಲಿ ।
ಪನ್ನಗರ ಮೋಹರವನೆಲ್ಲವ
ಮನ್ನಿಸದೆ ಲೇಸಾಗಿ ನುಂಗುತ
ತನ್ನಜನನಿಯು ಹುಸಿದು ತೊತ್ತನು ಮಾಡಿ ಕೊಟ್ಟುದಕೆ ॥ ೫೯

ಉರಗಜಾತಿಯನ್ನೈದೆ ನುಂಗಲು
ನೆರೆದು ನಾಗರು ಬಂದು ನಮಗಿ
ನ್ನರಿದು ಬದುಕಲು ನಿಮ್ಮ ಕೈಯೊಳಗೆಂದು ಬಿನ್ನವಿಸೆ ।

ಗರುಡದೇವರು ಬಟ್ಟಕ ನಾಗರ
ಹಿರಿಯರೊಳು ಪರಿವಡಿಯು ನುಡಿದರು
ಸುರರ ದಿನಕೊಮ್ಮೊಮ್ಮೆ ಕೊಡುವುದು ನಮಗೆ ಕಪ್ಪವನು ॥ ೬೦

ಎನಲು ಶ್ರಾವಣಶುದ್ಧ ಪಂಚಮಿ
ದಿನದಿ ಕೊಡುವೆವು ನಿಮಗೆ ಕಪ್ಪವ
ನೆನಲು ಬಿಟ್ಟನು ಕೊಲೆಯನಾಕ್ಷಣ ಗರುಡನಹಿಕುಲದ ।
ಮನವೊಲಿದು ಕರ್ಕೋಟಕನ ತಾ
ವಿನತೆಯಾತ್ಮಜ ಕರೆದು ಹೇಳಿದ
ನನುಜ ಕೇಳ್ಳೆ ನಿನ್ನನಾವನು ಪೂರ್ವಕಾಲದಲಿ ॥ ೬೧

ನೆನೆದ ಮನುಜನ ಮನದೆ ತಾ ಕಲಿ
ತನಗೆ ಸೋಕದೆ ಪೋಗಲೆಂದೀ
ಘನತರದ ವರವಿತ್ತು ಕಳುಹಿಯೆ ತಾರ್ಕ್ಷ್ಯ ತಿರುಗಿದನು ।
ವಿನತೆಯಲ್ಲಿಗೆ ಬಂದು ಜನನಿಯು
ಮನವೊಲಿದು ಬೀಟ್ಕೊಂಡು ವೇಗದಿ
ವನಜಲೋಚನದುಗ್ಧರಾಶಿಗೆ ಬಂದ ಖಗರಾಜ । ೬೨

ಇಂದ್ರನು ಸಪರಿವಾರನಾಗಿ ಬರುವಾಗ ದೂರ್ವಾಸರ ದರ್ಶನ.

ರಾಯ ಕೇಳ್ಳೆ ಬಟಿಕ ನಾಕಜ
ರಾಯನಮರಾವತಿಯಲಿರುತಿರ
ಲಾಯಿತೊಂದಿನ ಹರುಷದಲಿ ದಿವಿಜೇಂದ್ರ ಸುರಕರಿಯ ।
ಲಾಯದಿಂ ತರಿಸಿದನು ಸಿಂಗರ
ದಾಯವನು ಮಾಡಿಸಿದ ವರವ
ಜ್ರಾಯುಧನು ಸತಿಯೆ ಸಹಿತ ಗಜವನೇಱಿ ಬರುತಿರಲು ॥ ೬೩

ಮುಂದೆ ಸುರ ತೆತ್ತೀಸಕೋಟಿಯ
ವೃಂದ ಸಹಿತವೆ ನಾಕಜೇಂದ್ರನು
ಛಂದದಲಿ ಬರುತಿರಲು ವರದೂರ್ವಾಸನಿದಿರಾಗಿ ।

ಬಂದು ಮಂದರಮಾಲೆಯನು ಮುದ
ದಿಂದ ನೀಡಲು ಮುಂದುಗಾಣದ
ಲಂದು ತಾನಾಮುನಿಯ ಕಾಣದೆ ಶಿವನ ತನುವೆಂದು ‖ ೬೪

ದೂರ್ವಾಸರು ಕೊಟ್ಟ ಮಾಲಿಕೆಯನ್ನು ತಾನು ಧರಿಸದೆ ಐರಾವತಕ್ಕೆ ಹಾಕಲು ದೂರ್ವಾಸರ ಕೋಪ.

ಮೆರೆದು ವಜ್ರಾಯುಧದ ಕೊನೆಯಲಿ
ತುರುಗಿ ಯೈರಾವತದ ಮೇಲಕೆ
ತೆರನಱಿಯದಲೆ ಕೊಂಡು ಕುಂಭಸ್ಥಳಕೆ ಹಾಕಿದನು ।
ಕೆರಳಿ ಮಂದರಮಾಲೆಯನು ತರಿ
ದೊರಸಿ ಮೆಟ್ಟಲು ಭದ್ರಮದ
ಕರಿ ಬೆರೆತನಿವನೆಂದಾಗ ಮುನಿಪತಿಯಧಿಕರೋಷದಲಿ ‖ ೬೫

ಇಂದ್ರನೈಶ್ವರ್ಯವನದಾಕ್ಷಣ
ಚಂದ್ರಶೇಖರ ದೇವ ಮುನಿದಾ
ಚಂದ್ರಮನ ತಾಯ್ವನೆಗೆ ಕಳುಹಿದನಾಮಹಾಶ್ರೀಯ ।
ತಂದೆ [1] ಕೇಳ್ಳ ದ್ವಿಜರ ಮುಱಿದರೆ [2]
ಕುಂದುವುವು ರಾಜ್ಯಾದಿವಿಭವವು
ಹಿಂದು ಗಳಯದೆ ಛತ್ರ ಪ್ರಭುತನದಂದವವು ಕುಲಕೆ ‖ ೬೬

ಕುಂದು ಹೊದ್ದುವುದಾಗಮೆಜ್ಞಗೆ
ವಂದನೆಯ ತಾ ಮಾಡದಿರ್ದೊಡ
ದಂದು ಧನ ತಾ ಕೆಡೆಗು ಬ್ರಾಹ್ಮರ ಶಾಪ ಹೊಲ್ಲಯದು ।
ಅಂದು ಕ್ಷೀರಾಂಬುಧಿಯ ಮಧ್ಯಕೆ
ಕುಂದದೀಡಾಡಿದನು ಮುನಿಪತಿ
ಯಿಂದ್ರನೈರಾವತವ ಸುರತರು ಕಾಮಧೇನುವನು ‖ ೬೭

ಹೊಳವ ಚಿಂತಾಮಣಿಯನಾತನ
ಬಿಳಿಯ ಹಯುವನು ಪರುಸದುಪಲವೆ

1 ಕಂದ, ಘ. 2 ಮುರಿದಗೆ, ಗ. ಘ.

ನೊಳೆವ ಶಚಿಯನು ವಜ್ರಲಿಕ್ಕಿದ ಚಂದ್ರತಾರೆಯರ ।
ಹೊಳೆವ ವಜ್ರಾಂಕುಶವ ವಜ್ರವ
ಬಿಳಿಯ ಛತ್ರವನಿಂದ್ರದೇವರ
ನೆಲೆಯ ಸರ್ವೈಶ್ವರ್ಯ ಹೋದುದು ಬಿಸುಡಲಾಕ್ಷಣಕೆ ॥ ೬೮

ಇಂದ್ರಗೆ ದೂರ್ವಾಸಶಾಪದಿಂದ ದಾರಿದ್ರ್ಯ ಪ್ರಾಪ್ತಿ.

ಅಸುವ್ರಾತದು ವಿಬುಧೇಶನಾಲಿಂ
ಗಿಸಿದ ನಾ ದರಿದ್ರಾಂಗನೆಯನನಿ
ಮಿಷರ ವೃಂದದ ಸಹಿತವೆ ಹಲವುಕಾಲದಲಿ ।
ಮಸುಳಿಸಲು ಕಾಳಿಕೆಯ ಮೋರೆಯ
ಮಸಿಯ ಕಪ್ಪಟದಿಂದ ಮಾಸಿದ
ಕುಸುಮಕೇಶಗಳೊಡನೆ ದೇವೋತ್ತಮರೊಳಪದೆಶೆಯು ॥ ೬೯

ಕೆಲವುಕಾಲ ಕಳೆಯಲು ದೇವತೆಗಳು ಹರಿಯನ್ನು ಪ್ರಾರ್ಥಿಸುವಿಕೆ.

ವೆಸಿಸಿ ಯಿರೆ ಹದಿನಾಲುಸಾವಿರ
ವಿಷಮವತ್ಸರವಾಗೆ ಸುರರು
ಬ್ಬಸದಿ ಹರಿಯನು ಸಾರೆ ಕರುಣಾಕರನು ತಾನಱಿದ ।
ಬಿಸರುಹಾಕ್ಷನು ಸುರರ ಕರೆಸಿದ
ವಸುಧೆಯಮರರ ಶಾಪ ತಾಗಿರೆ
ಪಶುಪತಿಯು ಹವಣಿಲ್ಲ ಕಾವರೆ ಬ್ರಹ್ಮಧಿಕ್ಕಾರ ॥ ೭೦

ಎಂದು ಹರಿ ನಾಕಚರ ಖೇದವ
ನೆಂದು ಕಳವೆನೊ ಯೆಂದು ಮಂತ್ರವ
ನಂದು ಮಾಡಿದನಸುರರಮರರು ಕೂಡಬೇಕೆಂದು ।

ಬೃಹಸ್ಪತ್ಯಾಚಾರ್ಯರಂ ಕರೆದು ಶೋಣಿತಪುರಕ್ಕೆ ಕಳುಹಿಸುವಿಕೆ.

ಮಂದರಧರನು ಗುರುವ ಕರೆಸಿದ
ನಂದು ನೀ ಹೋಗಸುರನಾಯಕ
ನಂಧಕಾಸುರವಾಸಶೋಣಿತನಗರಕೆಂತೆಂದು ॥ ೭೧

ನಿರುತ ನೀ ಹೋಗಸುಗನಾಯಕ
ರರಸನಂಧಾಸುರನು ಹೊರೆಗವೆ
ಕರೆದು ನೀನಾರೆನಲು ನುಡಿವುದು ನಮ್ಮ ಚರನೆಂದು ।
ಸುರಗುರುವ ಕಳುಹಿದನು ಶೋಣಿತ
ಪುರಕದಾಕ್ಷಣ ಕಪಟನಾಟಕ
ವೆರನಿರೂಪದಿ ಬಂದನಂಧಾಸುರನ ಪುರಕಾಗ ॥ ೭೦

ಧರಣಿಗದು ಹನ್ನೆರಡುಸಾವಿರ
ನಿರುತವಾಗಿಹುದರಸ ಯೋಜನ
ಸುರಗಿರಿಯು ತಪ್ಪಲಲಿ ಕಟ್ಟಿಹುದಾತ್ರಿಕಾಲದಲಿ ।
ಸುರವಿರೋಧಿಗಳಲ್ಲಿತುಂಬಿಹ
ರೆರಡುಶಂಖಮಹಾರಥರು ಮ
ತ್ತೆರಡುಪದ್ಮದೊಳೆಂಟುಕೋಟಿಯು ಸೈನ್ಯ ನೆರೆದಿಹುದು ॥ ೭೧

ಇರಲಿಕಲ್ಲಿಗೆ ಬಂದು ಸುರಗುರು
ಹರುಷದುಬ್ಬಿನಲಾಗಧೋತ್ರದ
ನೆರೆಯುಡಿಗೆ ತಾನಿಟ್ಟ ದ್ವಾದಶನಾಮತಿಲಕದಲಿ ।
ನಿರುತ ಕಂಕುಳಕುಶೆಯು ಕರಡಿಗೆ
ಬೆರಳ ದರ್ಭೆಯು ಭರದ ಗಮನದ
ಹರುಷದಲಿ ಗುರು ಬರಲು ಶುಕ್ರನು ಕಂಡು ಮನ್ನಿಸಿದ ॥ ೭೪

ಅಲ್ಲಿ ಶುಕ್ರಚಾರ್ಯರ ಆದರ.

ನಡೆಯಿ ಮನೆಗೆಂದವರ ಕೈಗಳ
ಹಿಡಿದು ತಂದನು ತನ್ನ ಭವನಕೆ
ತಡೆದಿರದೆ ಮಧುಪರ್ಕವಿಷ್ಟರದಿಂದ ಮಾನಿಸಿದ ।
ಎಡೆಯುಡಗದಭ್ಯಂಗನಾದಿಯು
ಬಿಡದೆ ಮಾಡಿಸಿ ದೇವಪೂಜೆಯು
ಕಡು ರಹಸ್ಯದಿ ಮಾಡಿದಾತಗೆ ಭೋಜನೋತ್ತಮವ ॥ ೭೫

ನಡೆಸಿ ಷಡ್ರಸದನ್ನದಿಂದವೆ
ಕಡುರಸದ ಭಕ್ಷ್ಯಾದಿಘೃತದಿಂ
ತಡೆಯುದಾವಧಿತಕ್ರದಿಂದವೆ ಯಾದರಣೆವೊಡಿ ।
ಬಡಿಸಿ ಯುಷ್ಣ ಜಲಂಗಳನು ತಾ
ಹಿಡಿದು ಕೈಘಟ್ಟಿಗಳ ನೀಡಿದ
ನೊಡನೆ ಕರ್ಪುರವೀಳಯಂಗಳ ಶುಕ್ರ ತಾನಿತ್ತ ॥ ೭೬

ಏನು ಬಿಜಯಂಗೈದ ಹದ ತಾ
ನೇನಿದಾಣತಿ ಗೊಡುವುದೆಂದರೆ
ದಾನವಾಂತಕನಾಜೆ ದೇವಾಸುರರ ಮೇಳವಿಸಿ ।
ನೀನು ಶುಕ್ರನು ಗೂಡಿ ನಾಕಜ
ದಾನವಾಳಿಗೆ ಸಾಧಿಸಮೃತದ
ಪಾನ ಗಾಣಿಸಿವೆಂದೊಡಾನೈತಂದೆ ನಿಮ್ಮೆಡೆಗೆ ॥ ೭೭

ಲೇಸು ಲೇಸಿದು ಸುಧೆಯ ಮಥನವು
ವಾಸುದೇವನಿರೂಪ ನಾವಿ
ನ್ನೇಸು ಧನ್ಯರೊ ಶಿವಶಿವಾ ಯೆಂದಾತ ಬೆಱಗಾದ ।
ಏಸು ಘನವಿದು ನಮ್ಮ ರಾಕ್ಷಸ
ವಾಸದವಸರವಱಿದು ನಿಮ್ಮಾ
ಸುರದ್ವೇಷಿಯನು ಕಾಣಿಪೆನೆಂದನಾ ಶುಕ್ರ ॥ ೭೮

ನಿಲಿಸಿ ತನ್ನಯ ಮನೆಯುಲವರಿಗೆ
ಕಲಿಸಿದನು ಸಂಜೀವನೌಷಧ [1]
ನೆಲೆಯನಾಗಳು ದೇವಯಾನಿಯುನಾ ಬೃಹಸ್ಪತಿಗೆ ।
ಒಲಿದು ನಿರವಿಸಿ ತಾನು ರಾಕ್ಷಸ
ತಿಲಕನವಸರ ಹಾಱುತಿರ್ದನು
ಬೞಿಕ ತಾನೊಂದಬುದಕಾಯಿತು ದೈತ್ಯನವಸರವು ॥ ೭೯

1 ನಮೃತವ, ಕ. ಖ.

ದ್ಯೂತಮೃಗಯಾಸ್ತ್ರೀವ್ಯಸನವಿರ
ಲಾತ ತಾನುಳಿದಿರ್ದ ಕಾಲವ
ನಾತ ಹಾಱುತಲೊಳಗೆ ಹೊಕ್ಕನು ದೈತ್ಯಗುರು ಬಳಿಕ ।
ಓತು ಮೃತಸಂಜೀವವಿದ್ಯೆಯ
ಧಾತುವೆಲ್ಲವ ದೇವಯಾನಿಯು
ದಾತಗಱುಹುತ್ತಿರಲಿಕಂಧಕನ ಸಭೆಯೊಳಗಾಗ ॥ ೮೦

ಒಲಿದು ಭಾರ್ಗವಗಾಯಿತವಸರ
ಬಳಿಕ ದಾನವರಾಯನೋಲಗ
ಕೊಲಿದು ಶುಕ್ರನು ಬಂದು ಬಿನ್ನಹ ಮಾಡಿದನು ಪ್ರೊಸತ ।
ಎಲೆಯುರಸ ಬಂದಮಳಕಾರ್ಯವ
ನೊಲಿದು ಕೇಳ್ಕೆಯಿಂದು ಹೊಸತಾ
ಗಿಳಯ ಮೇಲಮರತ್ವವಾಯಿತು ನಿಮಗೆ ನಿಶ್ಚಯದಿ ॥ ೮೧

ವೀರನಾರಾಯಣನ ಶಿಷ್ಯರು
ಕ್ಷೀರಸಾಗರದಿಂದ ಬಂದರು
ಹಾಱಯಿಸಿ ಕೊಂಡಿಹರು ನಿಮ್ಮಾಯುವಸರೋತ್ತಮವ ।
ಆರು ಬಂದೊಡನವರನಿಲ್ಲಿಗೆ
ಸೇಱಿಸುವುದೆನೆ ಶುಕ್ರ ಹರುಷದಿ
ವಾರಿಜಾಕ್ಷನ ನೆನೆವುತಲ್ಲಿಗೆ ಬಂದ ಸುರಗುರುವ ॥ ೮೨

ಇತ್ತಲವರಾದೇವಯಾನಿಯ
ಸತ್ತವರನೆಬ್ಬಿಸುವ ವಿದ್ಯೆಯ
ಚಿತ್ತವಿತ್ತು[1] ಕಲಿಸುತಿರಲಿಕೆ ವರುಷದೊಂದಾಯ್ತು ।
ವೃತ್ತವನು[2] ಗುರು ನೆನೆವುತಿರ್ದನು
ಇತ್ತ ದಿನ ಹಿರಿದಾದವೀಗಳು
ಹೊತ್ತ ಕಾರ್ಯದ ಹೊರಿಗೆಯಾವುದೊ ಹದನ ಹರಿ ಬಲ್ಲ॥ ೮೩

---

1 ನರ್ತಿಯಲಿ, ಗ. ಘ. 2 ಉತ್ತಮನು, ಕ. ಖ.

ಭರವಸದಿ ಹರಿತಂದು [1] ಶುಕ್ರನು
ಹಿರಿದು ತಳುವಿದನೆಂದು ಚಿಂತಿಸು
ತಿರಲಿಕವಸರವಡೆದು ದೈತ್ಯರ ಗುರುವು ತಾನಾಗ ।
ಹರುಷ ಮಿಗೆ ಹರಿತಂದು ಶುಕ್ರನು
ಸುರಗುರುವ ಕರೆದೊಯ್ದು ಬಾಗಿಲ
ಹೊಱಗೆ ನಿಲಿಸಿಯೆ ದೈತ್ಯಗೆಂದನು ಗುರುವು ಬಾಗಿಲಲಿ ॥ ೮೪

ಬಂದು ಹೊಱಗಿಹನೆಂದೆನಲಿಕರ
ವಿಂದನಾಭನ ದೂತನನು ನೀ
ವಿಂದು ವೇಳೆಯುಕೆ ಕರೆಯಿರೆನಲಿಕೆ ಶುಕ್ರನೈತಂದ ।
ಅಂದು ಹರುಷದಿ ಸುರವರಂಗುರುವ
ನಂಧಕಾಸುರನೆಡೆಗೆ ತರಲಿಕೆ
ಛಂದದಲಿ ನೋಡಿದನು ಭಯ ಮಿಗೆ [2] ರಾಜದ್ವಾರವನು ॥ ೮೫

ಅಂದು ಬಾಗಿಲ ಪೊಗುತಲೀತನ
ನಂದು ಶುಕ್ರನು ವೇಳೆಯುಕೊಯ್ಯಲು
ಬಂದು ಸುರಗುರುವೈದಿ ಕಂಡನು ದೈತ್ಯನೋಲಗವ ।
ವಂದಿತಾಮಳಮಕುಟವರ್ಧನ
ರಿಂದ ತುಂಬಿಹುದೆಂಟುಯೋಜನ
ದಂದವದು ಬಚ್ಚಿಕಲ್ಲಿ ಮೆಱೆವನು ದೈತ್ಯನದ್ಭುತದಿ ॥ ೮೬

ಓಲಗದಲಿರ್ದವರು ಮುನ್ನಿನ
ಕಾಲನೇಮಿಯು ವಿಪ್ರಚಿತ್ತಿಯು
ಆಳು ಶುಂಭನಿಶುಂಭಕೈಟಭಶಂಖಮಧುಮುಯುರ ।

ಅಂಧಾಸುರನ ಸಭಾ.

ಆಳು ವೃತ್ರಾಸುರಪನೋಲಗ
ದಾಳುಗಳು ಸುಂದೋಪಸುಂದರು
ಮಾಳುವೆಂಧಾಸುರನಿಗೋಲಗ ಗೊಟ್ಟು ಕುಳಿತಿರಲು ॥ ೮೭

---

[1] ಮಿಗೆಹೋಗಿ, ಘ. ಮನೆಗೈದಿ, ಗ   [2] ಅಸುರನ, ಕ. ಖ

ಕೇಳು ಜನಮೇಜಯ ಧರಿತ್ರೀ
ಪಾಲ ಅಂಧಾಸುರನ ರಾಜ್ಯದ
ಮೇಳವನನೇನೆಂಬೆ ಹೊಗಳುವೊಡೆನಗಳವೆಹುದೆ ।
ಏಳುವರೆಯೋಜನದಲೋಲಗ
ಶಾಲೆ ತುಂಬಿತು ಸುಭಟಸಮುದಯ
ದೋಳಿಯಲಿ ಕುಳ್ಳಿರ್ದನಂಧಾಸುರನು ಹರುಷದಲಿ ॥ ೮೮

ಲೀಲೆಯಲಿ ಗುರು ಬಂದು ನಾನಾ
ಮೇಲುವಸನದ ಪಾವುಡವ ಹರಿ
ನೀಲರತ್ನದ ಮುಕುಟಗರುಡೋದ್ಗಾರದಲಗುಗಳ ।
ಸಾಲಭಂಜಿಕೆಗಳನು ಪಚ್ಚೆಯ
ಜಾಳಿಗೆಯ ಮರಕತದ ಸೂಸಕ
ಲೋಲರತ್ನದ ಚನ್ನಗರುಡೋದ್ಗಾರಮೌಕ್ತಿಕವ ॥ ೮೯

ಇರಿಸಿದನು ರುದ್ರಾಕ್ಷವೊಂದೇ
ವರಮುಖದ ಬಲಮುರಿಯ ಶಂಖವ
ಪರಸುರಾಶಿಯ ಮೃಗದ ನಾಭಿಯ ಬಿಳಿಯ ಚಾಮರಿಗಳ ।
ಹರಿಯು ಪಾವುಡವೆಂದು ದೈತ್ಯಗೆ
ಗುರು ನುಡಿದು ಮಂತ್ರಾಕ್ಷತೆಯ ತಾ
ವೆರಸಿ ಕಾಣಿಕೆಗೊಟ್ಟೊಡಾತನನಸುರ ಬೆಸಗೊಂಡ ॥ ೯೦

ಗುರುವು ಮಂತ್ರಾಕ್ಷತೆಕೊಡಲು ಹರಿಯ ಸ್ಥಿತಿಯನ್ನು ಕೇಳುವಿಕೆ

ಹರಿ ಸಮಾಧಾನದಲಿ ತಾ ವರ
ಶರಧಿಯಲಿ ಮಲಗಿಹನೆ ನಿಮ್ಮನು
ಪರುಠವಿಸಿ ಕಳುಹಿದನದೇತಕ್ಕೆಂದು ಬೆಸಗೊಳಲು
ಹರಿಯು ಸುಸ್ಥಿರ ನಿಮ್ಮ ಕಯ್ಯಲು
ಸುರರ ವೆರಸಿಯೆ ಯಮೃತಮಥನವ
ನೊರೆಯೆ ನಿಮಗಮರತ್ವ ವೈದುವುದೆಂದು ನೇಮಿಸಿದ ॥ ೯೧

ಅಂಧಾಸುರನು ಹರಿಯ ಬಳಿ ಬರುವಿಕೆ.

ಎನಲು ಸಲೆ ಲೇಸೆಂದು ರಾಕ್ಷಸ
ನನುಕರಿಸಿ ಕರೆತರಿಸಿ ದೈತ್ಯರ
ಜನಪ ಹೊಱವಂಟೈದಿ ಬಂದನು ಕ್ಷೀರಸಾಗರಕೆ ।
ದನುಜ ದಳ ಮೇಲಾಪಮುನ್ನೂ
ಱನಿಪ್ಪದಕ್ಷೋಹಿಣಿಯ ಸೇನೆಯ
ದನುಜನಾಯಕ ಕಟಕ ಬಿಟ್ಟುದು ಕ್ಷೀರಸಾಗರದಿ ॥ ೯೨

ಅಂಧಕಾಸುರನನುಜರೆಲ್ಲರ
ದೊಂದು ಮೋಹರವಾಗಿ ಯಣ್ಣನ
ಮುಂದೆ ನಡೆದಪರೇಕವಿಂಶತಿದೈತ್ಯರತಿಬಳರು ।
ಬಂದು ಕ್ಷೀರಾಂಬುಧಿಯ ತಡಿಯಲಿ
ನಿಂದು ಕರೆಸಲಿಕಮರಪತಿ ನಲ
ವಿಂದಲಾತೆತ್ತೀಸಕೋಟಿಯ ಕೂಡಿ ತಾ ಬಂದ ॥ ೯೩

ನೆರೆಯಿತಮರರ ವೃಂದ ಪಯಸಾ
ಗರದ ತಡಿಯಲ್ಲಿಂದ್ರ ಮೊದಲಾ
ಗಿರಲು ದಾನವರಾಯ ಸುರಪನ ಕರೆದು ಮನ್ನಿಸುತ ।
ಶರಧಿಯನು ಕಡೆದಮೃತಮಥನವ
ನೊರೆಯಲಿಕೆ ತಾನಮೃತವಹುದೆಂ
ದಱುಹಿದನು ತಮಗಂಬುಜಾಕ್ಷನು ಕೇಳು ನೀನೆಂದ ॥ ೯೪

ಹರಿಯ ಮಾತಿದು ಸತ್ಯ ಮಂದರ
ಗಿರಿಯನೇ ಕಡಗೋಲ ಮಾಡುತ
ದರಣಿಗಾತಿಹ ಸರ್ಪನಾತನ ತಂದು ತೆಗೆ ನೇಣ ।
ಒರೆಯಬೇಕೆನಲಂಧಕಾಸುರ
ಹಿರಿದು ಮನ್ನಿಸಿ ಮಂದರಾಭಿಧ
ಗಿರಿಯ ಕೀಳಲು ದೇವದಾನವರೆರಡುಬಲ ನೆರೆದು ॥ ೯೫

ದೇವದೈತ್ಯರು ಕೂಡಿ ಮಂದರಪರ್ವತವನ್ನು ಕೀಳುವಿಕೆ.

ಗಿರಿಯ ಕಿತ್ತರು ಮೂಱುಸಾವಿರ
ವರುಷಪರಿಯಂತಗುಳಿ ಹೊತ್ತರ
ದೆರಡುಬಲವೊಂದಾಗಲಿಪ್ಪತ್ತೈದುಸಾವಿರದ ।
ನಿರುತ ಯೋಜನದುದ್ದ ಗಿರಿಯದು
ವರಸ ಭೂಮಿಯ ಸಾರಲೀಯದೆ
ಗಿರಿಯನಾಂತರು ಹತ್ತುಸಾವಿರವಿಬುಧರಾಕ್ಷಸರು ॥ ೯೬

ಸುರರಿಗಿತ್ತರು ಬುಡವನಾಗಳು
ಗುರುತರದ ಹದಿನೈದುಸಾವಿರ
ಧರಣಿಯೊಳಗಿಹುದರಸ ಈಪರಿ ಯುಭಯಪಕ್ಷಗಳು ।
ಗಿರಿಯ ಹೊತ್ತೈತರಲಿಕಾಗಳು
ಸುರರು ಬರ ಬೆಂಡಾಗೆ ವಾಲಿಯು
ಗಿರಿಯನಾಂತನು ತಮ್ಮ ಸಹಿತೊಂದಿವಸ ವೀಪರಿಯ [1] ॥ ೯೭

ಹೊತ್ತು ಸಾರಿದರಾನಿಶಾಚರ
ಮೊತ್ತದಲಿ ಹನ್ನೆರಡು ಯೋಜನ
ವತ್ತಲಾಂತರು ಬಳಿಕ ಲಕ್ಷ್ಮೀವರನ ಕರುಣದಲಿ ।
ಅತ್ತ ಬಿಜಯಂ ಗೈದುತಮರರ
ಚಿತ್ತವೃತ್ತಿಯನಱಿದು ರಾಕ್ಷಸ
ಮೊತ್ತಕೆಂದನು ನೀವು ದನುಜರು ಗಿರಿಯ ಕೊನೆಯದನು ॥ ೯೮

ಹೊತ್ತುದುಂಟೇ ಎನಲು ದೇವರ
ಮೊತ್ತವನು ಕಡೆನೋಂಕಿ ರಾಕ್ಷಸ
ಮೊತ್ತ ಹೊತ್ತುದು ಗಿರಿಯ ಬುಡವನು ಸುರರು ಗಿರಿಗೊನೆಯ ।
ಹೊತ್ತು ನಡೆದರು ಹರಿಯ ನೆನೆಯುತ
ಲತ್ತ ತೊಂಭತ್ತಾಱು ಲಕ್ಷದ
ವಿಸ್ತರಿಪಯೋಜನದಿ ಬಂದರು ಮೇರುಪರ್ವತದಿ ॥ ೯೯

---

[1] ಪೊಬ್ಬನೊಂದು ಮುಹೂರ್ತ ಪರಿಯಂತ, ಕ. ಗ. ಘ.

ಗಿರಿಯು ಸಾಗರದೊಳಗೆ ಹಾಕಲು
ತರಹರಿಸಿ ಕೊಳಲಾರದಾಗಳು
ಗಿರಿಯು ತೂಕವೆನಿಪ್ಪ ಸರದಲಿ ಹಾಕೆ ಹರಿ ಬಳಿಕ ।
ಅಜಿತನಾಗಿರಿ ಶರಧಿಯಂತ್ಯಕೆ
ಸಜಿವೆ ಪರಿಯುನು ಶರಧಿ ಮೂವ
ತ್ತೆರಡುಲಕ್ಷದ ಘಾತಕೀಟಿಯಲು ದೇವದೈತ್ಯರಿಗೆ ॥ ೧೦೦

ಅರಸ ಕೇಳ್ಳ ಹರಿಯು ಸತ್ವಕೆ
ಹಿರಿದು ಕೌತುಕವಲ್ಲ ಮಂದರ
ಗಿರಿಯುನೆತ್ತಿದ ನೀಮಹಾಬ್ರಹ್ಮಾಂಡಕೋಟಿಯುನು ।
ಧರಿಸಿಹನು ಪ್ರತಿರೋಮರೋಮದೊ
ಳರಸ ತಾನಾಹರಿಗೆ ಮಂಗಳ
ಪರಿಪರಿಯ ವರಕುಸುಮವರುಷವು ಸುಜಿಯೆ ನಾಕದಲಿ[1] ॥ ೧೦೧

ಬಳಿಕ ರಾಕ್ಷಸರಮರರಾಗಲು
ಬಳಲಿಕೆಯುನಪಹರಿಸಿ ಗಿರಿಯುನು
ನಿಲಿಸಿದರು ಕಡಲೊಳಗೆ ನಿಂದಿರಸಾಗ ತಾವ್ಯೈದೆ ।
ಸೆಳದು ತಂದರು ವಾಸುಗಿಯುನಾ
ಕುಳಸಿ ಸುತ್ತಿದರಾಗ ಗಿರಿಯುನು
ನೆಲೆಯುನಿಪ್ಪತ್ತೈದುಸಾವಿರಸುತ್ತನಳವಡಿಸಿ ॥ ೧೦೨

ಮೇಲೆ ಮಂದರಕಾಗ ಲಕ್ಷ್ಮೀ
ಲೋಲನಾಜ್ಞೆಯು ಶಿಂಶುಮಾರನ
ಕೀಲ ತೆಗೆ ನೇಣಿಂಗೆ ತಂದರು ಭುಜಗವಾಸುಗಿಯು ।
ತಾಳುವಾಧಾರಕ್ಕೆ ಕರವನು
ವಾಲಿಯರಾಂತನದೀಜಗತ್ತನು
ಮೇಲೆ ದೇವಾಸುರರು ಹೊಸೆದರು ನಿಮಿಷಮಾತ್ರದಲಿ ॥ ೧೦೩

---

[1] ನಾಕಜರು. ಗ. ಘ.

ನೆಲೆಗೊಳಿಸಿ ಸರ್ವೋತ್ತಮೋತ್ತಮ
ನೊಲೆಯುದಂತಿರೆ ಕಡೆವ ಕಂಭದ
ಕೆಳಗೆ ಧರಿಸಿದ ಕೂರ್ಮರೂಪದಿ ಮೇರುಮಂದರವ ।
ಒಲಿದು ಕೀಲಕ ಜ್ಯೇಷ್ಠ ಮಾಸದ
ಸುಳುವಿನಲಿ ಶುದ್ಧಾಷ್ಟಮಿಯುಲಂ
ದುಲಿದು ವಿಷ್ಣುತ್ರಯದ ಮಧ್ಯದಲಾಧನಿಷ್ಠೆಯುಲಿ ॥ ೧೦೪

ಹೊಸೆದರೈ ಧರೆಗಗನ ನಡುಗಲು
ಮಸಗಿ ಮಂದರದಿಂದ ದುಗ್ಧದ
ರಸಗಡಲನಾದೇವದಾನವರಂದು ವಾಸುಗಿಯು ।
ಪಸರಿಸಿದ ಫಣೆವಿಡಿದು ನಾಕಿ
ಪ್ರಸರ ಹೊಸೆಯಿತು ದೈತ್ಯಸಾತನ
ನೆಸಗಿದರು ಬಾಲದಲಿ ವಾಸುಗಿ ಕಾದು ಕಾಱಿದನು ॥ ೧೦೫

ವಿಷವನಮರರ ಮೇಲೆ ನಾಕಿ
ಪ್ರಸರ ಕೂಗಿಡುತಿರಲಿಕಾಕ್ಷಣ
ಬಿಸರುಹಾಕ್ಷನು ಬಂದು ದೈತ್ಯರಿಗೆಂದ ವಿನಯುದಲಿ ।
ಎಸಕವುಳ್ಳರು ನೀವು ನಿಮಗನಿ
ಮಿಷರು ಸರಿಯೇ ಫಣವ ಹಿಡಿವುದು
ಮಿಸುಕಲಾಗದು ನೀವು ಬಾಲವನೆಂದೊಡವರುಗಳು ॥ ೧೦೬

ಸಮುದ್ರದಲ್ಲಿ ಮಂದರವಿಟ್ಟು ದೇವದೈತ್ಯರು ಕಡೆಯುಪಿಕೆ.

ಅಮರರನು ಕೆಡೆನೂಂಕಿ ಫಣೆಯನು
ತಮತಮಗೆ ಹಿಡಿದೈದೆ ಹೊಸೆಯಲಿ
ಕಮರರಾಗಳು ಬದುಕಿದೆವು ನಾವೆನುತ ಬಾಲವನು ।
ಸುಮನದಿಂದಲೆ ಹಿಡಿದು ಹೊಸೆದರು
ಕಮಲನಾಭನ ಕೃಪೆಯು ಭಾರದಿ
ಸಮತಳಿಸಿ ತಾವೈದೆ ಮಂದರಮಥನ ಮಾಡಿದರು ॥ ೧೦೭

ಮೂಡಿದರು ಮೂನ್ನೂರು ವತ್ಸರ
ಕೂಡೆ ಸವೆದವು ಬಳಿಕಲಾಗಲು
ಮೂಡಿದವು ಕ್ಷೀರಾಬ್ಧಿ ಮಧ್ಯದೊಳರಸ ಕೇಳೆಂದ |

ಅಲ್ಲಿ ಐರಾವತ ಮೊದಲಾದವುಗಳ ಜನನ.

ನೋಡಲಿಕೆ ಚೌದಂತ ಶ್ವೇತದ
ಗಾಢಹಯುವುಚ್ಚೈಶ್ರವಸುಗಳ
ಜೋಡು ತಾ ವರಪರಶು ಚಿಂತಾಮಣಿಯು ಕಲ್ಪತರು || ೧೦೮

ಕಾಮಧೇನುಗಳಲ್ಲದಲ್ಲಿಯೆ
ರಾಮಣೀಯಕವನಧಿಯಪ್ಸರ
ಸ್ತೋಮ ಪುಟ್ಟಿತು ಮತ್ತೆ ಕುಲಿಶವು ಚಂದ್ರತಾರೆಗಳು |
ಭೂಮಿಗಚ್ಚರಿಯೆನಿಸಲಮರರ
ಸ್ತೋಮ ಜೀವನದಂತೆ ಮೂಡಿದು
ದೀಮಹಾಸುಧೆ ಪೂರ್ಣಕಲಶದಿ ಶ್ರೀಯನೊಡಗೂಡಿ || ೧೦೯

ಹುಟ್ಟಿದವು ಪರಮೌಷಧಿಗಳವು
ಹುಟ್ಟಿದುದು ತಾ ವರವನಸ್ಪತಿ [1]
ನೆಟ್ಟನಾಗಲು ಸುಧೆಯು ಮಥನದಲವರ ಕಡೆಯಿಂದ |
ಪುಟ್ಟಿಸಿದ ಹರಿ ತಾನು ದೈತ್ಯರ
ನಟ್ಟಿಸಲು ನಾರಮಣಿ ಎಂಬಳ
ಭೀಷ್ಟದಲಿ ಸುರವರರ ಕಾಯಲು ಭೂಪ ಕೇಳೆಂದ || ೧೧೦

ಹುಟ್ಟಿದವು ವಿಗೆ ವರಸುವಸ್ತುವು
ನೆಟ್ಟನಾಹದಿನಾಲುಸಾವಿರ
ಯಾಷ್ಟಿಕರುಮಿದಜೊಳಗೆ ನಾನಾವಿಧದ ಕಲ್ಪತರು |
ಪುಟ್ಟಿದವು ವರಕಲ್ಪಲತೆಗಳು
ಪುಟ್ಟಿದವು ನೆಱೆ ಪವ್ಯಕವ್ಯಕೆ
ಶ್ರೇಷ್ಠವಾಗಿಹ ಕಂದಮೂಲಗಳಮೃತಮಥನದಲಿ || ೧೧೧

---

[1] ಹುಟ್ಟಿದಳು ತಾನಿರದೆಯಪ್ಸರೆ

ಶಾಕಪತ್ರವು ನೂಱು ಪೆರಫಲ
ಶಾಕಗಳು ಮುನ್ನೂಱು ಮಿಕ್ಕಿನ
ಶಾಕಗಳು ತಾ ಪೂಜ್ಯವೆಲ್ಲೈ ಭೂಪ ಕೇಳೆಂದ ।
ವ್ಯಾಕುಳರು ತಾ ಮೆಲುವ ಫಲಗಳು
ಲೋಕವರ್ತನೆಯಲ್ಲ ಕೇಳ್ಳೈ
ಜೋಕೆಗಳ ತಾ ಜಾತಿಜಾತಿಯೊಳವರ್ ಲೀಲೆಯಲಿ ॥ ೧೧೦

ಎಳ್ಳು ಜವೆಗೋಧೂಮ ಮುನ್ನವೆ
ಉಳ್ಳವವು ತಾ ಗೂಡಿ ಹುಟ್ಟಿದ
ವೆಲ್ಲ ಮೂವತ್ತಾಱುಶಂಕರಗಂಡಮೊದಲಾಗಿ ।
ಎಲ್ಲಧಾನ್ಯವ ನೆಣಿಸೆ ಹದಿನೆಂ
ಟಲ್ಲಿ ಪಡಿಯಿವರಂದದಿಂದವೆ
ಯೆಲ್ಲ ಮೂವತ್ತಾಱೆ ಎನಿಸುಗು ಲೋಕ ಮೆಚ್ಚಲಿಕೆ ॥ ೧೧೩

ಹುಟ್ಟಿದ ಅಮೃತವನ್ನು ದೈತ್ಯರು ಶಿವನ ಬಳಿ ಕೊಡುವಿಕೆ.

ಕ್ಷೀರಸಾಗರದಲ್ಲಿ ಹುಟ್ಟಿದ
ಸಾರವಸ್ತುವನೈದೆ ತ್ರಿಪುರರ
ವೈರಗಿತ್ತರು ದೇವ ನೀನಿದ ಕಾಯಬೇಕೆಂದು ।
ಧೀರದೇವಾಧಿಪತ್ರಿಯಂಬಕ
ಗೋರಣಿಸದೊಂದಮೆಳವಸ್ತುವ
ನಾರಯಿದು ತಾವ್ ತಂದುಕೊಟ್ಟರು ಪರಮಹರುಷದಲಿ ॥ ೧೧೪

ವಾರಿಜಾಸನಮುಖ್ಯನಾಕಜ
ರೋರಣಿಸಿ ಕುಳ್ಳಿದರು ಪಟ್ಟಿಯ
ನಾರಯಿದು ಪೂರ್ವಕ್ಕೆ ಪಶ್ಚಿಮಮುಖಕೆ ತಾವಸುರರು ।
ಆರು ಪೂರ್ವದ ಮುಖದಲುಂಬರು
ಧಾರುಣಿಯೊಳೀವ್ರತವ ಮಾಳ್ಪರಿ
ಗೋರಣಿಪುದಾಯುಷ್ಯಭಾಷೆಯು ನಿತ್ಯವಿಧಿಯೆಂದ ॥ ೧೧೫

ಗಾವಿಲರು ತಾವಾಗ ದಕ್ಷಿಣ
ಭಾವಕುಂಬವೆರೆಡರು ಬಡತನ
ನೋವಹುದು ವಾಯುಷ್ಯಭಾಷೆಯು ಪಶ್ಚಿಮದ ದೆಸೆಗೆ ।
ನೋವದಹುದಾ ಮತ್ತೆ ಬಡಗಲು
ಜೀವನಿಕರಕದೋತದಾಯುಷ
ವ್ಯೋವ್ಯೊ ಸಮನಿಪುದಿದನು ಬಲ್ಲರೆ ದೈತ್ಯನಿಕರಗಳು ॥　　೧೧೬

ಕುಳ್ಳಿದರು ತಾವಪರದಿಕ್ಕಿಂ
ಗಲ್ಲಿ ಮುಖವಾಗಿರಲು ದೇವರ
ದಲ್ಲಿ ಕುಳ್ಳಿದರಾಗ ಪೂರ್ವದ ಮುಖದ ಪಙ್ಕ್ತಿಯಲಿ ।
ನಿಲ್ಲದಿಹುದಾಪಙ್ಕ್ತಿನಿರ್ಣಯ
ವೆಲ್ಲರಲ್ಲಿದು ಪರಮಮತವಹು
ದಲ್ಲಿ ಕುಳ್ಳಿದರುಭಯಪಕ್ಷದ ಪರಿಯ ಕೇಳೆಂದ ॥　　೧೧೭

ಸುರರು ಕುಳ್ಳಿದರೊಂದುಪಙ್ಕ್ತಿಯೊ
ಳಿರಲು ದೈತ್ಯರದೊಂದು ಪಙ್ಕ್ತಿಯೊ
ಳಿರಲು ಶೂಲಿಯು ದೈತ್ಯರ ಕರೆದು ನಗುತಲಿಂತೆಂದ ।

ಅಮೃತವನ್ನು ಯಾರು ಬಡಿಸಬೇಕೆಂಬ ವಿಚಾರ.

ವರಸುಧೆಯ ನಿಮಗಾರು ಬಡಿಸಲು
ಸಿರವಿಸುವುದೈಯೆನಲು ನಾಕಜ
ರರಸವೊದಲಾಗೆಂದರಾಗಳು ಶಿವಗೆ ತಮ್ಮನುವ ॥　　೧೧೮

ದೇವ ದೈತ್ಯರಿಗಾರು ಬೇಕೈ
ನಾವವರ ಕೈಕೊಂಬೆವೆವರನು
ನೀವು ಕೇಳುವುದೇನಟು ದೈತ್ಯರು ಕರಗಳನು ಮುಗಿದು ।
ದೇವ ನೀನೇ ಶಂಭು ನಮ್ಮನು
ಕಾವ ನೀನೇ ನಮ್ಮ ಪಕ್ಷದ
ದೇವ ನೀ ಕೇಳಯ್ಯ ಮತವನು ಸುಧೆಯ ತಾ ಸಹಿತ ॥　　೧೧೯

ಪುಟ್ಟಿದಾಕೆಯ ಕೈಯ್ಯಲುಂಬುದ
ಭೀಷ್ಟವೆನೆ ಹರಿ ಯುವತಿರೂಪದಿ
ಹುಟ್ಟಿ ಗಂಟಲ ಕೊಯ್ವನೆಂಬುದ ದನುಜರಱಿಯದಿರೆ ।
ನೆಟ್ಟನಾಕೆಯ ನೋಟಸನ್ನೆಯ
ದಿಟ್ಟಿಗವೆದಿರು ಮರುಳುಗೊಂಡರು
ಕೆಟ್ಟ ಕೇಡಿಂಗೇನ ಹೇಳುವೆ ದೈತ್ಯಕೋಟಿಗಳ ॥ ೧೨೦

ದುಷ್ಟಜೀವರು ತಮ್ಮಮೃತನುವನು
ನೆಟ್ಟನಱಿಯದೆ ಕಷ್ಟಭಾವದಿ
ಕೆಟ್ಟರಲ್ಲದೆ ತಮಗೆ ಸುಧೆಯನು ದೇವ ಒಡಿಸುವನೆ ।
ನೆಟ್ಟನಾಸುಧೆ ತಾ ವಿಶಿಷ್ಟರ
ಭೀಷ್ಟವಲ್ಲದೆ ನಷ್ಟರಿಗೆ ತಾ
ಸೃಷ್ಟಿಯಲಿವರಿಗಮೃತ ದೊರಕುವುದೆಂತು ಹೇಳೆಂದ ॥ ೧೨೧

ಎನಲು ದೇವಾಸುರರು ನಾರಾ
ಯಣಿಯನೇ ಪತಿಕರಿಸೆ ಶಂಕರ
ಮನದಲುತ್ಸಾಹಿಸಿದ ಸಾಕ್ಷಾದ್ವಿನಯಪರನಾಗಿ ।
ವನಿತೆ ನಾರಾಯಣಿಯು ಕೋಮಲ
ವನಜಕರಣದಲುತ್ತಮಾಂಗವ
ನನುಕರಿಸಿ ಬಿನ್ನಹವ ಮಾಡಿದನಂದು ಕಮಲಜನು ॥ ೧೨೨

ದೇವದೈತ್ಯರಿಗೆ ಅಮೃತವಂ ಕೊಡಲು ಬ್ರಹ್ಮನ ಪ್ರಾರ್ಥನೆ.

ದೇವಿ ನೀವೀಯಮೃತಕಲಶವ
ನೀ ವಿಬುಧವೃಂದಕೆಯು ದೈತ್ಯ
ಸ್ತೋಮಕುಣಲಿಕ್ಕುವುದದೆಂದರೆ ದೇವಿ ನಸುನಗುತ ।
ಆವಿರಿಂಚಾದಿಗಳ ಮಾತನು
ದೇವಿ ಮನ್ನಿಸೆ ಬಳಿಕ ದೇವಿಯು
ಭ್ರೂವಿಲಾಸವನೇನ ಹೇಳುವೆ ನಯನವಿಭ್ರಮವ ॥ ೧೨೩

ಸುರರ ಶ್ಲಾಘ್ಯೆಂಗೊಳ್ಳದಸುರರ
ಹರಣವನು ಕೊಳಲವರ ನೋಡುತ
ಬರಬರಲು ವರಮಂದಹಾಸವಲವರ ಮೋಹಿಸುತ ।
ಬರುತಿರಲಿಕವರನುವನಾಗಳು
ಪರಿಕಿಸಿದರಾ ರಾಹುಕೇತುಗ
ಳರಿದರಾಕ್ಷಣ ಬಿಟ್ಟು ಬಂದರು ದೈತ್ಯಪಙ್ಕ್ತಿಯನು ॥ ೧೨೪

ರಾಹುಕೇತುಗಳು ಸುರರ ಸಂಘದಲ್ಲಿ ಬರುವಿಕ.

ನೋಟವಿದು ಲೇಸಲ್ಲ ದೈತ್ಯರ
ಕೋಟಿಗದು ಗಂಟಲನು ಕೊಯ್ವಲಿ
ಕಾಟವಿದು ಪರಸತಿಯು ನೋಟವು ಸಲ್ಲದಿಹಪರಕೆ ।
ನೋಟವಿಲ್ಲದ ಸುರರ ಪಂಙ್ಕ್ತಿಯು
ಗೋಟು ಸಾಕೆಮಗೆನುತ ಮೆಲ್ಲನೆ
ಯಾಟವಿಕಬುದ್ಧಿಯಲಿ ಕುಳ್ಳಿದರವರು ವಿನಯದಲಿ ॥ ೧೨೫

ಚಂದ್ರಸೂರ್ಯರ ನಡುವೆ ಉಣಲಿಕೆ
ಬಂದು ಕುಳಿತಿಹ ರಾಹುಕೇತುಗ
ಳಂದವನುವಾಗಿರದದೆನುತಲಿ ನೆನೆದು ಮನದೊಳಗೆ ।
ಬಂದುದನು ತಾವೆಬುಹಲಮ್ಮದೆ
ಇಂದು ರವಿ ತಮ್ಮೊಳಗೆ ಮನದಲಿ
ನೊಂದು ಬಳಲುತ ಬರಲು ನಾರಾಯಣಿಯು ಪಙ್ಕ್ತಿಯಲಿ॥ ೧೨೬

ಬಂದು ಮೋದದೆ ಲಕ್ಷ್ಮಿದೇವಿಯು
ದ್ವಂದ್ವಶ್ರೀಚರಣವನು ಮನದಲಿ
ವಂದಿಸಲು ತಮ್ಮೊಳಗೆ ದೃಢಮನದಿಂದ ತಾವಾಗ ।
ಮಂದರೋದ್ಧರಗಜುಹೆ ಸಂಜ್ಞೆಯು
ಲಂದು ಬಟ್ಟಿಕದ ಕಂಡು ತಾ ಸುರ
ವೃಂದದವರಿಂಗಮೃತವೆಱೆವುತ ರಾಹುಕೇತುಗಳ ॥ ೧೨೭

ಅಮೃತವನುಂಡ ರಾಹುಕೇತುಗಳ ಖಂಡನ.

ಕರದಲಮೃತವನೆಱೆಯೆ ದೈತ್ಯರು
ತರಹರಿಸದದ ನುಂಗೆ ಗಂಟಲ
ಹೊರೆಯ ಸೋಕದ ಮುನ್ನ ಕಡಿದನು ಕೊರಳ ಚಕ್ರದಲಿ ।
ಶಿರವನೊಬ್ಬನ ಎದೆಯನೊಬ್ಬನ
ತರಿದನಾಕ್ಷಣ ಪಙ್ಕ್ತಿದೂರರ
ಸುರರ ಪಂಙ್ಕ್ತಿಗೆ ಬರಲಯೋಗ್ಯರ ಕಡಿಯಲವರಾಗ ॥ ೧೨೮

ಅಮೃತ ಸೋಂಕಿದ ದೇಹವಾಕ್ಷಣ
ಸುಮನಸರ ಸಮವಾಯ್ತು ನವಗ್ರಹ
ಕ್ರಮದ ಪದವಿಗೆ ಸಂದವಮೃತವನುಂಡ ದೇಹಗಳು ।
ಅಮೃತಸೋಂಕದ ಕಾಯ ಕೆಟ್ಟುದು
ವಿಮಲಮತಿ ಕೇಳುತ್ತ ಕಥೆಯನು
ಕಮಲನಾಭನು ಪಙ್ಕ್ತಿಭೇದವ ಮಾಡಿದನು ಬಳಿಕ ॥ ೧೨೯

ಸುರರಿಗಮೃತವನೆಱೆದು ಸಾಕಿದ
ಸುರೆಯನಸುರರಿಗಿರಿಸಿ ಕಳದಾ
ಪರಿಯ ಕೇಳ್ಳ ಒಂದುಕಲಶದೊಳರಡನಳವಡಿಸಿ ।
ಹಿರಿದೆ ತಾನಿದು ಹರಿಯ ಮಾಯೆಗೆ
ಸರಸಿರುಹಗರ್ಭಾಂಡದೊಡಲಲಿ
ನಿರಿಸನೇ ಹರಿ ಜೀವರಾಶಿಯ ಪಂಚಭೂತಗಳ ॥ ೧೩೦

ಎನಲಿಕರಸನು ಮುನಿಪಗೆಂದನು
ವಿನಯದಲ್ಲೀಸಪ್ತಸಾಗರ
ಜನಿಸಿದಂದವ ತನಗೆ ಪೇಳುವುದೆಂದು ಬಿನ್ನವಿಸೆ ।
ಜನಪ ಕೇಳ್ಳ ಪೂರ್ವಕಥನವ
ನಿನಗೆ ಹೇಳುವೆ ಮೊದಲ ಕೃತಯುಗ
ವಿನುತಸ್ವಾಯಂಭುವನ ಮನುವಿನ ರಾಜ್ಯದೊಳಗಲ್ಲಿ ॥ ೧೩೧

ಜನಿಸಿತೊಂದೇ ಕಥನವದನಾ
ನಿನಗೆ ಪೇಳುವೆನದನು ವಿಸ್ಮಯು
ವಿನುತಕರ್ಣಕೆ ಹೊಸತನಬುಪ್ಪವೆ ಸಾಗರದ ಹವಣ ।
ವಿನಯುದಲಿ ಋಷಿನಿಕರವಾದುದ
ನನಿತುವನು ಶಿವ ನೋಡ ಬಂದರೆ
ಘನತರದ ಕೋಪವನು ತಾಳ್ದದ ಕೇಳು ಕೌತುಕವ ॥ ೧೩೭

ಐದನೆಯು ಸಂಧಿ ಮುಗಿದುದು.

## ಆರನೆಯುಸಂಧಿ.

### ಸೂಚನೆ

ಕ್ಷೀರಕಬ್ಬಿನ ರಸಸುರಾಬ್ಧಿಗ
ಳೋರಣದಲಾವರಘೃತಾಬ್ಧಿಯು
ಕಾರಣವನಾ ದಧಿಪಯೋಬ್ಧಿಯು ಸ್ವಾದುಸಾಗರದ ॥

ಋಷಿಗಳ ಮಾನಗ ಶಿವನ ಬರುವಿಕೆ.

ಕೇಳು ಜನಮೇಜಯು ಧರಿತ್ರೀ
ಪಾಲ ಹಿಮಗಿರಿಯುಲ್ಲಿ ಋಷಿಗಳ
ಲೋಲಪುಣ್ಯಾರಣ್ಯ ತಾನೆನಿಸಿಪ್ಪುದಾಶ್ರಮವು ।
ಮೇಲೆ ನಿರ್ಮಿತವಾಗಿ ಶೋಭಿಸೆ
ಭಾಳಲೋಚನ ಬಂದು ಋಷಿಕುಲ
ದಾಲಯುದ ವಿಭವವನು ನೋಡುತ ಬರಲು ಮನೆಮನೆಗೆ ॥

ಒಳಯುಲಿ ನೋಡುತ್ತ ಬರಲಿಕೆ
ಕೇಳು ಋಷಿಗಳ ಬಳಗ ಸಂತತ
ಬೇಳಮೇಳಂಗಳೊಳಗಿರ್ದರು ತಮ್ಮಯಾಶ್ರಮದಿ ।

ಛಲತಾಂಗಿಯರೆಲ್ಲ ಋಷಿಗಳ
ಲೋಲದೇವಾರ್ಚನೆಯ ಪುಷ್ಪವ
ಕಾಲವೆಱದೊಯ್ಯುತಿರೆ ಹಿಂದೊಂದಾಯ್ತು ಕೇಳಂದ ॥ ೨

ಬಂದು ಶಿವೆ ನೋಡುತ್ತ ಹಿರಿಯರ
ಮಂದಿಯನು ಮಂದಿರದಿ ಕಾಣದ
ಲಂದು ಸುಮ್ಮನೆ ಹೋಗುತಿರಲಿಕೆ ನೆರೆದ ಬಾಲಕರು ।

ಶಿವನು ಹಿಂತಿರುಗಿ ಹೋಗೆ ಬಾಲರ ಕಾಟದಿಂದ ಶಿವನು ಶಪಿಸಲು ಆಶ್ರಮದಹನ.

ಅಂದು ಕಾಡಲಿಕಾಯ್ತು ಕೋಪವು
ತಂದೆ ಕೇಳ್ಳೈ ನೃಪಶಿರೋಮಣಿ
ಯಿಂದುಧರ ಭಾಳಾಕ್ಷಿ ದೆಗೆಯಲು ಬೆಂದುದಾಶ್ರಮವು ॥ ೩

ಬೇಯಲಿಕೆ ಋಷಿವೃಂದವಾಕ್ಷಣ
ಬಾಯ ಬಿಡುತವರೈದಿ ಬಂದರು
ರಾಯಧೂರ್ಜಟಿಗಿತ್ತರಾಗಲು ದಿವ್ಯಶಾಪವನು ।
ದಾಯವಿಲ್ಲದೆ ಯಾಶ್ರಮಂಗಳ
ದಾಯವನು ಸುಟ್ಟುದಕೆ ನಿನ್ನಯ
ಕಾಯವುರಿಯಲಿ ಯೆನಲಿಕಾಕ್ಷಣಕುರಿಯ ಕೈಕೊಳಲು ॥ ೪

ಶಾಪದಿಂದ ಶಿವದೇಹವು ಉರಿಯುವಾಗ ಕಾಮಧೇನುವು ಹಾಲುಕರೆಯಲು ಕ್ಷೀರಸಮುದ್ರೋತ್ಪತ್ತಿ.

ಕೊಂಡು ತಾನುರಿಲಿಂಗವಾದನ
ಖಂಡತೇಜೋಮಯನು ನಿಮಿಷಕೆ
ಹಿಂಡಿದನು ಹದಿನಾಲ್ಕು ಲೋಕವನುರುಹಿ ಘೋಳಿಡಿಸೆ ।
ಕಂಡು ದೇವರ ನೆರವಿ ವಿಶ್ವದ
ತಂಡ ಸರಸಿಜಸುತಗೆ ಪೇಳಲು
ಕಂಡು ಕ್ಷೀರಾಬ್ಧಿಯೊಳು ನಾರಾಯಣನು ಪರಿತಂದ ॥ ೫

ನಂದಿಸುವೆನುರಿಲಿಂಗವಾದುದ
ನೆಂದು ತಾ ಕಂಡದಕೆ ತಕ್ಷಣ
ದಿಂಮುಧರಗತಿಶೈತ್ಯವಾಗಲಿಕಂದು ಸೃಜಿಸಿದನು ।
ತಂದು ತಾ ಹರಿ ಕಾಮಧೇನುವ
ಕುಂದದಾಶಿವನುತ್ತಮಾಂಗದೊ
ಳಂದು ಕಱೆಯಲಿಕಾಯ್ತು ದಿನಗಳು ಹಲವು ತೀರಲಿಕೆ ॥ ೬

ಕಱೆಯಲಾತನ ಪಾದಮಸ್ತಕ
ನೆಱೆ ಮುೞುಗೆ ನಾಲ್ವೆರಳುಗಳುಚ್ಚಿಯೆ
ಕಱೆಯಿತ್ತೈ ಸುರಧೇನು ಪಾಲನು ಬೞಿಕ ಶಶಿಮೌಳಿ ।
ಕಱೆಯೆ ಪಾಲಿಂ ಕಡೆಗೆ ಸಾರಿಯೆ
ಪೆಱೆನೊಸಲ ಶಿವಗಾಯ್ತು ಶೈತ್ಯವು
ಕಱಿಗೊರಳ ಕೋಮಳನ ಮಸ್ತಕದುಷ್ಣ ವಾಱಿದಿರೆ ॥ ೭

ಅದಕೆ ಗ್ರೀಷ್ಮಂ ಬರಲಿಕಾಕ್ಷಣ
ವಿಧಿಸಿದರು ಶ್ರೀಬ್ರಹ್ಮದೇವರು
ಮುದದಿ ಶ್ರೀಕೈಲಾಸವಾಸಿಗೆ ಶೈತ್ಯಧಾರೆಯನು ।
ಉದಕವನು ನೆಱೆ ಹತ್ತುಸಾವಿರ
ಸುದತಿಯರು ವರಪೂರ್ಣಕುಂಭದೆ
ಮುದದಲಭಿಷೇಕವನು ಮಾಡಿದರಗ್ರಜಲಗಳಲಿ ॥ ೮

ಆವನಭಿಷೇಕವನು ಮಾಡುವ
ಜೀವಿಗಾಗಲು ಭೂಮಿಸುರರೊಳ
ಗಾವನಗ್ನಿಷ್ಟೋಮಯಾಗವನೊಂದು ಕೋಟಿಯನು ।
ತಾವು ಮಾಡಿದ ಫಲವದೆಂದಾ
ದೇವರೆಲ್ಲರು ಹರಿಯು ಬೞಿಕಾ
ತಾವಿನಲಿ ನೆಲೆಗೊಂಡ ದುಗ್ಧವು ಪಾಲುಗಡಲಾಗೆ ॥ ೯

### ಶ್ವೇತದ್ವೀಪದಧಿಸಮುದ್ರಾದಿಗಳ ಜನನ.

ಅಲ್ಲಿ ಕೆನೆ ಮೇಳವಿಸೆ ಯಾದವ
ಮಲ್ಲಗಾಯಿತು ಶ್ವೇತದ್ವೀಪವ
ವಲ್ಲಿ ತಾ ದಧಿಯಾಯ್ತು ಮಂಗಳವೃಂದ ಮೇಳವಿಸೆ ।
ಅಲ್ಲಿ ಶ್ರೀವಧು ತಾನೆ ವಾಮನ
ನಲ್ಲಿ ದಧ್ಯೋದನವದಾಗಳು
ನಿಲ್ಲದಂತುಪಯೋಗಮಾಡಿದಳಖಿಳವಿಭವದಲಿ ॥ ೧೦

ಆಉಪೇಂದ್ರಂಗಾದ ಶೇಷವ
ನೀವಿಧಾತ್ರನು ಧರೆಗೆ ಹಾಯಿಸ
ಲೀವಿಧದಿ ದಧಿಕಡಲು ಪುಟ್ಟಿದುದರಸ ಕೇಳಂದ ।
ಈಮಹಾಬ್ರಹ್ಮಾಂಡಸೃಷ್ಟಿಯು
ನಾಮಹಾಕಮಲಜನು ಮಾಡಲು
ಹೋಮಸಾಧನಕೋಸುಗರ ಸೃಜಿಸಿದ ಘೃತಾಂಬುಧಿಯು ॥ ೧೧

ಮೊದಲಲಸುರರು ಹುಟ್ಟಲವರಿಗೆ
ಪದುಮಜನು ಸುರೆ ಯೆಂಬ ಕಡಲನು
ವಿಧಿಸಿದನು ಬಳಿಕಮರನಿಕರಕಮಿಕ್ಷುರಸಗಡಲ ।
ಉದಗಿಸಿದ ಬಳಿಕಂದು ಮನುಜರ
ನೊದವಲೋಸುಗ ಮಾಯುಗಸ್ತ್ಯಸ
ದುದರದಲಿ ಮೂತ್ರಿಸಿಯೆ ಮಾಡಿದ ಲವಣಸಾಗರವ ॥ ೧೨

ಆಮಹಾಪ್ರಳಯದಲು ಮರಳಿಯೆ
ಆಮಹಾಜಲ ಶೇಷಭೂಮಿಗೆ
ತಾ ಮಹಾಸುಸ್ವಾದು ಜಲವಾಗಿದ್ದುದನವರತ ।
ಆಮಹಾಸಾಗರಗಳೆಲ್ಲಾ
ಭೂಮಿಯಲಿ ನೆಲೆಗೊಂಡವಾಗಂ
ತಾ ಮಹಾಹರಿ ಯಿರಿಸಿ ಮೆಱೆದನು ಸಪ್ತಸಾಗರವ ॥ ೧೩

ಒರ್ವರೊಂದೊಂದುವನು ನಿರ್ಮಿಸ
ಉರ್ವಿಯಲಿ ಹದಿನಾಲ್ಕು ಲೋಕವ
ಸರ್ವಜೀವರು ತುಂಬಿದೀಬ್ರಹ್ಮಾಂಡಮಂಡಲವ ।
ನಿರ್ವಿಘ್ನದಿಂದಿದನು ನಡೆಸುವ
ಸರ್ವಗನ ಶ್ರೀಹರಿಯ ಮಹಿಮೆಯ
ಶರ್ವಮೊದಲಾಗರಿಯಲಸದಳ ಭೂಪ ಕೇಳೆಂದ ॥ ೧೪

ಒಂದು ಕಲಶದೊಳರಡು ರಸವನು
ಕುಂದಿಸದೆ ತಾ ಬೆರಸಿ ಸುಧೆ ಸುರ [1]
ವೃಂದಕೆಜಿವನು ಸುರೆಯ ದೈತ್ಯರಿಗಸುರಮರ್ದನನು ।
ಅಂದು ಮಂದರಮಥನ ಮಾಡಿಯು
ಹಿಂದು ಗಳೆಯದೆ ದೈತ್ಯನಿಕರವ
ಕೊಂದು ಬ್ರಹ್ಮಾದ್ಯಮರನಿಕರವ [2] ಕಾದು ಸಾಗರವ ॥ ೧೫

ದೇವದೈತ್ಯರನ್ನು ಕುರಿತು ಹರಿಹರಬ್ರಹ್ಮರ ಸಮಾಧಾನ.

ಇರಿಸಿದಾತಗದಾವ ಘನವಿದ
ನರಸ ಕೇಳ್ಳ ದೈತ್ಯರಾಕ್ಷಸ
ಸುರರು ಮತ್ಸರಿಸುತ್ತ ಸಂಗ್ರಾಮವನು ಮಾಡಿದರು ।
ಸರಸಿರುಹಸಂಭವನು ಹರಿಹರ
ರುರುವ ದೈತ್ಯರ ಕಳಕಳವ ಪರಿ
ಹರಿಸುತಿರೆ ಸಟಿ ದೇವಿ ಬಂದಳು ಸಿಂಹವಾದಜೆಯು ॥ ೧೬

ತಾವಿನಲಿ ಜನಿಸಿದಳು ಛಾಯಾ
ದೇವಿಯೆನಲಿಕೆ ದೈತ್ಯನಿಕರಕೆ
ತಾವು ನುಡಿದರು ಶಿವವಿರಿಂಚಾದಿಗಳು ವಿನಯದಲಿ ।
ನೀವು ನಿಮ್ಮಭಿಮತದಿ ಕೆಟ್ಟರಿ

1 ಬೇರ ಬೇರಿವ, ಕ. ಖ. ಗ. 2 ದೇವರ, ಕ. ಖ.

ನೀವು ಮೋಯಾವರಕುಮಾರಿಯು
ಭಾವವನು ಕಂಡದಕೆ ಮರುಳಾಗಿಹರೆ ಹೇಳಿರೆನೆ ॥ ೧೭

ಯುವತಿಯುರ ನಂಬಿದರಿಗೀಪರಿ
ಯುವಗಡವು ತಾನೆನಲು ದಾನವ
ನಿವಹವಾಗಲು ಮತ್ತೆ ಪುನರಪಿ ಯುಮೃತಮಥನವನು ।

ತಿರುಗಿ ಸಮುದ್ರ ಕಡೆಯುವ ಪ್ರಯತ್ನ.

ಸಮತಳಿಸಿ ಮಥಿಸುವುದದೆಂದರೆ
ಕುಮತಿಗಳು ತಮತಮಗೆ ತತ್‌ಕ್ಷಣ
ಕಮರರನು ಕರೆತಂದು ಹೊಸೆದರು[1] ಮತ್ತೆ ಕೇಳೆಂದ ॥ ೧೮

ವಿಷವು ಹುಟ್ಟಲು ವಾಯು ನೀರಸವಾಡಿ ಶಿವನಿಗೆ ಕೊಡುವಿಕೆ.

ಹೊಸೆಯುಲಿಕೆ ವಾಸುಗಿಯು ಹೊಟ್ಟೆಯು
ಹಸರ ಕಾಯ್ದಂತುರಿಯನುಗುಳಿತು
ವಿಷವ ಹಾಲಾಹಲವನಮರಾಸುರರು ಬೇಯುಲಿಕೆ ।
ವಿಷದ ಕ್ರೂರತೆ ಲೋಕವೆಲ್ಲವ
ಘಸಣಿಸುತ ಬರಲಾಸಮೀರಣ[2]
ಹೊಸೆದನಂಗೈತಳದಿ ಕೋಪದಿ ನೋಡಿ ಪಡಿಸಣವ ॥ ೧೯

ವಿಷವ ಬಿಟ್ಟನು ಬಳಿಕ ತಾನದು
ಪಸರಿಸಿತು ಪರಿಪೂರ್ಣವಾಗಿಯೆ
ವಿಷವು ಬರೆ ಬರೆ ಬೆಂಡವಾಡಿತು ಲೋಕ ಹದಿನಾಲ್ಕ ।
ವಿಷದ ಕಡುಹನು ಧರಿಸಲಾರದೆ
ನುಸುಳಿದರು ತೆತ್ತೀಸಕೋಟಿಗ
ಳಸಮಬಲ ಹರಿ ಬಂದು ನಾಕಿಪ್ರಸರಕಿಂತೆಂದ ॥ ೨೦

ಅಂಜದಿರಿ ನೀವೆಂಜದಿರಿ ಸುರ
ರಂಜದಿರಿ ಯೆನೆ ದೇವ ತಮ್ಮೆಯು

---

[1] ಕಡೆದರು, ಘ. [2] ಬರಲೋಕವಾಕ್ಷಣ, ಕ. ಖ.

ನಂಜಿನಂಜಿಕೆಗಭಯ ಕೊಡುತಲು ಬಂದನಾಸುರರ ।
ರಂಜಿಸಿದರಲ್ಲಲ್ಲಿ ನಾಕಜ
ರಂಜಿಕೆಯ ನೆಱೆ ಕಾಯ್ದು ಲೋಕವ
ಭಂಜಿಸುವ ವಿಷಗಳದೊಳಂತನು ಶಿವನು ನಿಮಿಷದಲಿ ॥　೨೧

ಇಂದ್ರ ಯಮನು ಕುಬೇರ ನೈರುತಿ
ಚಂದ್ರ ಸೂರ್ಯ ಕೃಶಾನು ನದಿಪತಿ
ಬಂದು ಚಂದ್ರಕಳಾವತಂಸನ ಕೃಪೆಯ ಭಾರದಲಿ ।

ಶಿವನು ವಿಷವನ್ನು ಕುಡಿದು ಸರ್ವರನ್ನು ಬದುಕಿಸುವಿಕೆ.

ಇಂದ್ರಮೊದಲಾಗುಳಿದರಾಕ್ಷಣ
ದಿಂದ ಸುಡು ವಿಷಕಡ್ಡವಿಸಲಾ
ಚಂದ್ರಮೌಳಿಯು ಕಾಯ್ದುಕೊಂಡನು ಭಕ್ತಜನರುಗಳ ॥　೨೨

ಅಂದವರುಮಾ ವಿಷವಲುಟಿದರು
ಕಂದ ಕೇಳ್ಳ ಬಟ್ಟಕ ಶಿವ ತಾ
ಬಂದು ವಿಷವನು ಧರಿಸಿದನು ವಾಮಾಂಘ್ರಿಕೊನೆಯಿಂದ ।
ಅಂದು ಕಂಡರು ಶಿವನನದಿತಿಯ
ನಂದನರು ತಾವಾಗ ಶಿವನೇ
ದಂದಶೂಕೇಶ್ವರನೆನುತ ಹೊಗಟ್ಟವರು ತಮತಮಗೆ ॥　೨೩

ಬೆರಳಕೊನೆಯುಲ್ಲಿದ್ದ ವಿಷವನು
ಧರಿಸಲಿಕ್ಕನ್ನಾವುದೆಡೆಯೆಂ
ದರಸಿ ಶಿವ ತಾ ಮನದಿ ಧ್ಯಾನಿಸಿ ತನ್ನೊಳಗೆ ತಿಳದು ।
ಧರಿಸಲಿಕ್ಕಂಬಿಲ್ಲವೆಂಗದಿ
* ನಿರುತ ರೋಮದಿ ಲೋಕವಿಹುದಿದ
ನಱಿದು ಶಿವಕಂಧರದೊಳಿಟ್ಟನು ಭೂಪ ಕೇಳೆಂದ ॥　೨೪

---

* ನಿರುತ ರೋಮದಿ ಲೋಕಲೋಕಾಂ
ತರಗಳಿಹವಿದಕೇನು ಹದನೆಂದಱಿದು ಶಶಿಮೌಳಿ ॥
ಕೊಂಡು ಕೊರಳೊಳು ಪೂಸಿದನು ತಾ

ಸಿಡಿದ ವಿಷದಿಂದ ದುಷ್ಟಜಂತುಗಳ ಜನನ.

ಖಂಡಿಸಿದ ವಿಷ ನೆಲಕೆ ಸಿಡಿಯುಲು
ತಂಡ ಪುಟ್ಟಿತು ವ್ಯಾಳವೃಶ್ಚಿಕ
ಕೊಂಡಮುಸು ಕೇಸರಿಯುಮಿರುಹೆಯು ವ್ಯಾಘ್ರತೋಳಗಳು ।
ಚಂಡಸೂಕರಜಾಲ ಖರವಜ
ವೇಡಿ ಮೊಸಳೆಯು ನೆಗಳು ಖೇಚರ
ಹಿಂಡು ಮಾಯುಸವಾದವಾಕ್ಷಣ ಕೊರಳ ಖಂಡಿಯುಲಿ ॥ ೭೫

ಭಂಜಿಸಿದ ವಿಷ ಕಾಳಕೂಟದ
ಲಂಜಿಕೆಯು ಬಟಿಕಾಗ ದೈತ್ಯರು
ರಂಜಿಸಿದರಲ್ಲಲ್ಲಿ ದೇವಾಸುರರು ಯುದ್ಧದಲಿ ।
ಮಂಜು ಮುಸುಕುವ ತೆಱದಿ ದೈತ್ಯರು
ಪಂಜರಿಸಿದರು ದೇವವೃಂದವ
ಕಂಜನಾಭನು ಕಂಡು ಕೈವೀಸಿದನು ಸುರಜನಕೆ ॥ ೭೬

ತಿರುಗಿ ದೇವ ದೈತ್ಯರ ಯುದ್ಧ.

ಆಸುರದ ಸಂಗ್ರಾಮವಾದುದು
ಭಾಸುರದಿ ಹದಿನೆಂಟು ವತ್ಸರ

ಗಂಡುಗಲಿ ವೃಷಸುರರ ವಿಗ್ರಹ
ಚಂಡಿಯುನು ಪರಿಹರಿಸಿ ತಳೆದನು ಬೆರಳ ಕೊನೆಯಿಂದ ।
ಖಂಡಿಸಿದ ವಿಷ ನೆಲಕೆ ಬೀಳಲು
ತಂಡ ಪುಟ್ಟಿತು ವ್ಯಾಳ ವೃಶ್ಚಿಕ
ಕೊಂಡಮುಸು ಕೇಸರಿಯು ಮಿರುಹೆ ವ್ಯಾಘ್ರತೋಳಗಳು ॥
ಚಂಡಸೂಕರಜಾಲಗಳು ಖರ
ಹಿಂಡು ವೃಶ್ಚಿಕ ನೆಗಳು ಖೇಚರ
ಹಿಂಡಿನಲಿ ಪಂಚಾಲವಾಯಸಕ್ರೌಂಚಮೊದಲಾದ ।
ತಂಡ ಹುಟ್ಟಿದುದಾಗ ಶೂಲಿಯು
ಕೊಂಡು ವಿಷವನು ಕೊರಳ ಪೂಸಲು
ಖಂಡಿಯುಲಿ ಸಿಡಿಯುಲಿಕೆ ತಿಗಣಿಗಳಾದವಾಕ್ಷಣಕೆ ॥ ಗ. ಘ. ಜ.

ಸೂಸಿದವು ಯುದ್ಧದಲಿ ದೈತ್ಯಸ್ತೋಮ ಬಯಲಾಗೆ ।
ಲೇಶಹಾನಿಯುಮಿಲ್ಲದಮರಾ
ವಾಸದಲು ಸುಧೆಯಿರಲು ದೈತ್ಯರು
ನಾಶವಾದರು ಮತ್ತೆ ತಾ ವೃಷಪರ್ವ ಮೊದಲಾಗಿ ॥ ೨೭

ವಾಸವನ ಕೈಯಿಂದ ಬಿದ್ದಾ
ಗಾಸುರವ್ರಜ ಪೆಂಟುಕೋಟಿಗ
ಳೋಸರಿಸುತಿರಲೋಡಿತಾ ಹದಿನೆಂಟು ಕೋಟಿಗಳು ।

ದೈತ್ಯರು ಸೋತು ಬೇರೆ ಸ್ಥಳಗಳಿಗೆ ಹೋಗುವಿಕೆ.

ಕಾಶಿಮೊದಲಾಗಮಳಗಯೆಯುನು
ವಾಸಗೊಂಡರು ಮೂಜುಗಯೆಯುನು
ಮಾಸುರದಿ ಸೇಱಿದರು ಕಡಲನು ಕೋಟಿ ಹದಿನಾಲ್ಕು ॥ ೨೮

ಆಸೆಗೊಂಡರು ಕೆಲರು ಲಂಕೆಗೆ
ಸೂಸಿದರುಮೊರಾಱು ಕೋಟಿಯು
ದೇಶದೊಳು ತುಂಬಿದರು ನಾನಾತೀರ್ಥಕ್ಷೇತ್ರವಲಿ ।
ದೋಷಿಗಳು ತಾ ನಾಲ್ಕು ಕೋಟಿಗ
ಳೇಸು ಬಯಲಾಗಲಿಕೆ ಮಿಕ್ಕಿನ
ಲಾಸುರರು ಸುರರಿಂದ ಬಿದ್ದರು ಹತ್ತು ಕೋಟಿಗಳು ॥ ೨೯

ನಾಶವಾಗಲು ಕಂಡು ಸುರರಿಗೆ
ರೋಷದಲ್ಲಿದಿರೆದ್ದನಾಗಲು
ನಾಶಗೊಂಡನು ಕಾಲನೇಮಿಯು ಚಕ್ರಧರನಿಂದ ।
ಈಸು ವೆಗ್ಗಳನಿವನು ಸುರರಿಗೆ
ಘಾಸಿಯುಹನೆಂದು ಮಿಗೆ ಸೆಣಸಿದ
ನಾಸುರದಿ ಬಲಿಕಂದು ಕಡಿದನು ತಲೆಯನಾಶೂಲಿ ॥ ೩೦

ಆವನ ತಲೆಯನು ಕಡಿಯೆ ಸ್ವರ್ಗವೆ
ಭವನವಾಗಲು ವೃಷಪರುವನೆಂ

ಬವಗೆ ಬಟಿಕಾ ವಿಪ್ರಚಿತ್ತಿಯು ತಾನು ಬರೆ ಜವದಿ ।
ಅವನನಾಕ್ಷಣ ಕೆಡಹಿ ಕರುಳಿನ
ನಿವಹದಲಿ ತೋರಣವ ಕಟ್ಟಲು
ಭುವನದಲಿ ಪವಮಾನನಾಗಲದಂಧಕಾಸುರನು ॥ ೩೧

ಎದ್ದು ಪರಿತಹ ದೇವವೃಂದವ
ನದ್ದಿಸುವೆನೆನೆ ಶಂಭು ದಾನವ
ನುದ್ಧುರುಟ ನೆಂದಖಿದು ನಿಂದಾ ದೈತ್ಯಗಿದಿರಾಗಿ ।
ಅದ್ಧರಕ್ಷೆಯೊಳವನನಾಕ್ಷಣ
ಕದ್ದಿದನು ಭಯರಸದಿ ಶಿವ ತಾ
ನುದ್ದುರುಟನಪ್ಪಳಿಸಿ [1] ಕೆಡಹಿದ ಪಾದತಳದಿಂದ ॥ ೩೨

ಮೃತರಾದ ದೈತ್ಯರ ಪುನರ್ಜನ್ಮ.

ಕೆಡಹಿ ನಾಟ್ಯವನಾಡಿ ನಾಕಜ
ರೊಡೆಯನಾಗಲೆ ಯುವನು ಮುಂದಣ
ಪೊಡವಿಯಲಿ ಜನಿಸಿದನು ಬಾಣಾಸುರನು ತಾನೆನಿಸಿ ।
ನುಡಿಯು ಕೇಳ್ಳ ಕಾಲನೇಮಿಯು
ಪೊಡವಿಯಲಿ ಕಂಸಾಭಿಧಾನದಿ
ಬಿಡದೆ ಹುಟ್ಟಿದ ವಿಪ್ರಚಿತ್ತಿಯುಮಾ ಜರಾಸಂಧ ॥ ೩೩

ಹುಟ್ಟಿದನು ವೃಷಪರ್ವ ಮುಂದಣ
ಸೃಷ್ಟಿಯಲಿ ತಾ ನರಕನಾಗಿಯೆ
ಕೆಟ್ಟ ಕೇಡಿಂನಾರುಮಱಿಯರು ದೈತ್ಯಸಂತತಿಯು ।
ಪಟ್ಟಗಟ್ಟಿತು ದೇವವೃಂದಕೆ
ಸೃಷ್ಟಿಯಲಿ ಶ್ರೀಮಾಘಮಾಸದ
ನೆಟ್ಟನಾ ಪೌರ್ಣಮಿಯ ದಿನದಲು ಭೂಪ ಕೇಳೆಂದ ॥ ೩೪

[1] ನುದ್ದುರುಳುವಷ್ಟರಲಿ, ಭ.

ಭಂಜಿಸಿದ ನಾದೈತ್ಯರೆಲ್ಲರ
ಕಂಜನಾಭನು ಖತಿಯ ಭಾರದಿ
ಮಂಜು ಮಧ್ಯಾಹ್ನದಲಿ ಹರಿವಂತಾಯ್ತು ನಿಮಿಷದಲಿ ।
ಅಂಜದಾಸುರವೃಂದ ನೆರೆದಾ
ಕಂಜನಾಭನ ಕೃಪೆಯನೊಲುಮೆಯ
ರಂಜಕರು ಕೈಕೊಳಿಸಿ ವಸ್ತುವ ಕೊಂಬರೊಂದುವನು ॥ ೩೫

ಸಮುದ್ರದಲ್ಲಿ ಹುಟ್ಟಿದ ಪದಾರ್ಥಗಳನ್ನು ದೇವತೆಗಳಿಗೆ ಹಂಚುವಿಕೆ.

ಇಂದು ಭೋಗಿಸಲಾಗ ನಾಕಜ
ವೃಂದ ಕಮಲಜಗೆಂದುದಿದನಾ
ರಿಂದು ಕೊಂಬುದಕರ್ಹರೆಂದರೆ ಕಮಲಸಂಭವನು ।
ನಿಂದು ಲಸದುಚ್ಚೈಶ್ರವವ ತಾ
ನಿಂದು ಕೊಡುವುದಕಿಂದ್ರ ಯೋಗ್ಯನ
ದೆಂದು ಯೋಚಿಸಿ ಕುಲಿಶಪೂರ್ವವ ಕಂಡು ಸುರನಿಕರ ॥ ೩೬

ಕುಂದದಿದ ಭೋಗಿಸುವನಾವನ
ದೆಂದೊಡಾಕ್ಷಣ ಕಮಳಸಂಭವ
ನಂದು ಬಿನ್ನಹ ಮಾಡೆ ಹರಿಗೆಯು ಮಧುರ ವಚನದಲಿ ।
ಎಂದನುಚ್ಚೈಶ್ರವವ ವಜ್ರವ
ಬಂದ ಮದಕರಿ ಕಲ್ಪವೃಕ್ಷವ
ನೆಂದು ಕಜಿವಾ ಕಾಮಧೇನುವ ಚಿಂತಮಣಿಸಹಿತ ॥ ೩೭

ವರವಧೂಸಪ್ತಕವ ಶಚಿಯನು
ವರಪತಿವ್ರತೆಯದಿತಿಕುಂಡಲ
ಸುರಪತಿಗೆ ಕೈವರ್ತಿಸೆಲ್ಲವಪೂರ್ವವಹ ಸುಖವ ।
ಗಿರಿಯ ಹೊತ್ತಿದ್ದಾ ತಗೀವುದು
ವರವಧುವ ತಾರೆಯನು ಚಂದ್ರನ
ಶಿರದಲಿಡುವುದು ಶಂಭುಗಾಗಳದೆಂದು ಹರಿ ಯೆನಲು ॥ ೩೮

ಅಂದೊಡಿಂದ್ರಂಗವುಗಳೊಪ್ಪಿಸ
ಲಿಂದಿರಾಧರನೆಂದ ವಾಲಿಗ
ದಿಂದುಮುಖಿ ತಾರೆಯನು ಮುದದಲಿ [1] ಕೊಟ್ಟರಾತಂಗೆ ।
ಚಂದ್ರಮಸನನುಮೇಶಗಿತ್ತರು
ಕುಂದದಾಗಳ ಶಿವನು ಮೋದಿಸ
ಲಂದು ವರಚಪಮಣಿಯು ಪದ್ಮಜಗೀಯೆ ವಿನಯುದಲಿ ॥ ೩೯

ಸಿಂಧುಮಥನದೊಳಾಗ ಬಹುವಿಧ
ದಿಂದ ಹುಟ್ಟಿದ ವಸ್ತುಗಳನಾ
ನಂದದಿಂ ಕಮಲಜನು ಕೊಟ್ಟ ಸುರರಿಗೆ ತಕ್ಕುದನು ;
ಮಂದರಾಚಲವದನು ಮೇರುವಿ
ಗಂದವಿಟ್ಟನು ಮರಳ ಮಾರುತ
ಬಂದನೊಬ್ಬನು ಬಳಿಕ ಶ್ರೀಪತಿಯೆಡೆಗೆ ಕೇಳೆಂದ ॥ ೪೦

ವರಸುರೋತ್ತಮರೈದೆ ಬಂದಾ
ವರಮಣಿಯನುರಗೇಂದ್ರಗಿತ್ತರು
ಮರಳ ಬಾಲೆಯು ತಂದು ಕೊಟ್ಟರು ಹರಿಯ ಚರಣದಲಿ ।

ಲಕ್ಷ್ಮಿ ವಿಷ್ಣುವನ್ನು ವರಿಸುವಿಕೆ.

ಸುರರು ಬಾಲೆಯ ನೆರೆದು ಬಂದಾ
ದರಿಸಿದರು ಶ್ರೀಪತಿಯನಾಗಳು
ಸರಸಿರುಹಸಂಭವನು ಬಿಂನಹ ಮಾಡಿದನು ಸಿರಿಗೆ ॥ ೪೧

ಎಲೆ ಜನನಿ ನೀನಿಂದು ಸುರಕುಲ
ಬಳಗದೊಳಗತ್ಯಧಿಕರಾದರ
ತಿಳಿದು ಮಾಲೆಯನಿಕ್ಕಿಕೊಂಬುದು ಲೋಕ ಮೆಚ್ಚಲಿಕೆ ।
ಬಲಿದು ವರಿಸುವುದೆನಲು ಲಕ್ಷ್ಮೀ
ಲಲನೆ ಸಾಕ್ಷಾತ್ಪರಮಪುರುಷನ
ನಿಲುವನರಿದುಱೆ ಕಂಡು ಹರುಷೋತ್ಸವದಿ ಕೈಮುಗಿದು ॥ ೪೨

1 ಕೊಡಿಯೆನೆ, ಕ. ಖ.

ಸರಸಿರುಹಸಂಭವನು ಬರಬರ
ಹಿರಿಯುನತಿವೃದ್ಧಾಪ್ಯದಾತನು
ಪುರಹರನು ಭಸ್ಮಾಂಗ ಭಿಕ್ಷುಕನುರಗಭೂಷಣನು ।
ಸುರಶಿರೋಮಣಿ ಗರ್ವಿಯುಷ್ಮಾ
ಕರನು ದಿನಪತಿ ಯಿಂದು ಕ್ಷಯಕಳ
ತರಳ ವೈಶ್ವಾನರನುವಂತಕನೀತ ನಿಷ್ಕರುಣಿ ॥ ೪೩

ಆತ ರಾಕ್ಷಸಯೋನಿ ನಿರುರುತಿ
ಯೀತನೇ ಜಡರಾಶಿಗಧಿಪತಿ
ವಾತ ಮಿಗೆ ಚಂಚಲನು ಯಕ್ಷನು ನೀತಿಬಾಹಿರನು ।
ಈತ ಧನಪತಿ ಲುಬ್ಧಕನು ತಾ
ನೀತನುದ್ಧತನಾ ತ್ರಿಯಂಬಕ
ರೀತರೆಲೆ ಕಿಗ್ಗಿಱಿಸುರಶ್ವಿನಿದೇವರಿವರೆಂದು ॥ ೪೪

ನಾಕಜರ ನೆರವಿಯನು ಮನ್ನಿಸ
ದಾಕೆ ಕಂಡಳು ಭಕ್ತವತ್ಸಲ
ನಾಕಮಲಸಂಭವನ ತಾತನ ಶ್ರುತಿಸುಗೋಚರನ ।
ಆಕಡಲ ನಂದಿನಿಯು ಬಂದಾ
ಲೋಕಕಕಧಿಕನ ಕಂಡು ಹರುಷದಿ
ಜೋಕೆಯಲಿ ಸಂಭ್ರಮಿಸಿ ಸಾಕ್ಷಾದ್ವೇದಪಾಲಕನ ॥ ೪೫

ನೆಲೆಯ ನೋಡಲಿಕಾಕೆ ಬಂದಾ
ಬಟಿಕ ಕಮಲದ ಮಾಲೆಯಿಕ್ಕಿದ
ಳೂಲಿದು ಮಿಕ್ಕಿನ ಸುರರ ಲೆಕ್ಕಿಸದಾಕೆ ಮಾಧವಗೆ ।
ಎಳನಗೆಯ ಶಶಿರುಚಿಯ ಮುಖದಲಿ
ಬೆಳಗು ತೀವಿದ ಕಮಲನಾಭಗೆ
ಲಲನೆ ವೈಯ್ಯಾಳಿಸುತೆ ಬಂದಳು ಪರಮಹರುಷದಲಿ ॥ ೪೬

ಓತಳ್ಳ ಶ್ರೀದೇವಿ ಹರಿಯು
ಲ್ಲೋತು ತೊತ್ತಾಗಿಹಳದೆನಲಿ
ಕ್ಕಾತನಿಂದತ್ಯಧಿಕಸಮಬಲರಿಲ್ಲ [1] ಕೇಳೆಂದ ।
ದಾತ ತಾ ನಾಕಜರ ಬ್ರಹ್ಮನ
ತಾತ ಶಂಕರಪ್ರೀತ ದಿನಕರ
ಶೀತಕರರಿಗೆ ಭಾವ ವರುಣನಿಗಳಿಯು ಕೇಳೆಂದ ॥ ೪೭

ಆತಗಿಕ್ಕಿದಳೊಲಿದು ಮಾಲೆಯು
ನೋತು ಕೇಳ್ಳ ತನ್ನ ಕಡೆಗ
ಣ್ಣಾತುರಿಸಿ ಕಂಡವರು ಗಿರಿಶರು [2] ಕಮಲಸಂಭವರು ।
ಆತತುಕ್ಷಣಕಹರದೆಂದರೆ
ಮಾತೆ ಬ್ರಹ್ಮಾದಿಗಳಿಗೊಬ್ಬಳು
ಭೂತಜಾತದ ಜನನಿ ಕ್ಷೀರಾಂಬುಧಿಯು ಮಗಳಾಗಿ ॥ ೪೮

ಹುಟ್ಟಿದಳು ಹರಿಪಾದಸೇವೆಯು
ನಿಟ್ಟೆಯಲಿ ಕೈವಲ್ಯಗೇಹದಿ
ತುಟ್ಟಸದೆ ತ್ರೈಮೂರ್ತಿಯಿಂದವೆ ಮುನ್ನ ಶಾಶ್ವತಳು ।
ಸೃಷ್ಟಿಯಿಂ ಪೂರ್ವದಲಿ ಶ್ರೀವಧು
ಹುಟ್ಟಿ ಶ್ರೀ ಭೂ ದುರ್ಗೆಯೆಂಬಾ
ನಿಷ್ಟೆಯಲಿ ಹರಿಯೊಡನೆ ನೆರೆದಳು ಬಳಿಕ ಸುರನಿಕರ ॥ ೪೯

ಬಳಿಕ ನಾರಾಯಣನಿಗೆ ತನ್ನ ಸ್ಥಾನಗಮನ.

ಬಂದು ಲಕ್ಷ್ಮೀಪತಿಯು ನಿಬ್ಬಣ
ವಿಂದುಧರಮುಖ್ಯಾಖಿಳಸುರರ
ವೃಂದ ಮಾಡಿದುದೊಲಿದು ಕ್ಷೀರಾಂಬುಧಿಯು ಮಧ್ಯದಲಿ ।
ಅಂದು ಮಧುಸೂದನನು ನಾಕಜ

1 ಸಮರಿಲ್ಲರಸಕೇಳೆಂದ, ಕ. ಖ.  2 ಹಿರಿಯರು, ಕ. ಖ.

ವೃಂದವನು ಸತ್ಕರಿಸಿ ಕಳುಹಿಯೆ
ಬಂದು ಹೊಕ್ಕನು ದೇವದಾನವಬಳಗವೆರಿದೆನಲು ‖ ೫೦

ಕೇಳು ಜನಮೇಜಯ ಧರಿತ್ರೀ
ಪಾಲ ಲಕ್ಷ್ಮೀಪತಿಯು ಕಮಲಜ
ಬೀಳುಕೊಂಡನು ಚಂದ್ರಮೌಳಿಯು ಸಹಿತ ಸುರವೃಂದ ।

ಇಂದ್ರನು ತನ್ನ ಪಟ್ಟಣಕ್ಕೆ ಹೋಗುವಿಕೆ.

ಬೀಳುಕೊಂಡುದು ತಮ್ಮ ಮಂದಿರ
ದಾಲಯುವನೈದಿದರು ಲಕ್ಷ್ಮೀ
ಲೋಲನಾಜ್ಞೆಯುಲಾಗ ಸುರಪತಿ ತನ್ನ ಲೋಕವನು ‖ ೫೧

ವರಮಹಾಕೈವಲ್ಯಗೇಹವ
ಸರಸಿಜಾಕ್ಷನು ಪುಗಲು ನಾರದ
ನಿರುತ ಮಹಮುನಿಮುಖ್ಯ ಸನಕಾದಿಗಳು ಹರುಷದಲಿ ।
ಹಿರಿದು ಸಂತೋಷದಲಿ ನಾಕಜ
ರರಸ ಮುನ್ನಿನ ವರಮಹಾಪುರ
ಸುರಸಭೆಯನೈದಿತ್ತು ಷೋಡಶಸಹಸ್ರಸಂಖ್ಯೆಯಲಿ ‖ ೫೨

ವಿಷ್ಣು ಮಾಹಾತ್ಮ್ಯಕಥನ.

ಹೊಕ್ಕನೈ ಶ್ರೀಹರಿಯು ಕೃಪೆಯಿಂ
ದಕ್ಕಸರದಲಿ ಯಂಧಕಾದ್ಯರ
ಠಕ್ಕಿಸಿಯೆ ಯಿಂದ್ರಾದಿದೇವರಿಗಿತ್ತನಾಸುಧೆಯ ।
ಮಿಕ್ಕನಮರರಿಗಹುದೆ ಯುದಧಿಯ
ಹೊಕ್ಕು ಮಂದರಗಿರಿಯ ಬೆನ್ನಲಿ
ಸೆಕ್ಕಿಸುವುದೆಲೆ ಕೂರ್ಮ[1] ಮಹಿಮೆಯನಾರು ಹೊಗಳುವರು ‖

[1] ಸೆಕ್ಕಿಸಿದ ಶ್ರೀಕೂರ್ಮ, ಕ. ಖ.

ಎಂದು ವೈಶಂಪಾಯನಾನೃಪ
ವೃಂದಮೌಳಿಯ ರತ್ನ ಪಾಂಡವ
ನಂದನಗೆ ಹೇಳಿದನು ನೀವಿದ ಕೇಳಿ ಮುನಿನಿಕರ |
ಅಂದು ಶ್ರೀದೇವಿಯರಿಗಾಗೋ
ವಿಂದನೇ ಪತಿಯಾದನೆಂಬುದ
ಮಂದರಾಚಲಕಥೆಯನಿದ ತಾ ಹೇಳ್ವೆಕೇಳ್ವನು ‖ ೫೪

ಎಂದು ಭಕ್ತರ ಕಾವ [1] ಯಾದವ
ನಂದಗೋಪನ ಕಂದ ಗೋಪೀ
ವೃಂದವಲ್ಲಭ ದೈತ್ಯಭಂಜನ ದೇವಕೀತನಯ |
ಮಂದರೋದ್ಧರ ಕೈಟಭಾಸುರ
ವೃಂದಮರ್ದನ ನಮ್ಮ ರಕ್ಷಿಪ
ನೆಂದು ಗದುಗಿನ ವೀರನಾರಾಯಣನು ಮನಮುಟ್ಟಿ ‖ ೫೫

ಆರನೆಯ ಸಂಧಿ ಮುಗಿದುದು.

---

## ಏಳನೆಯ ಸಂಧಿ.

---

### ಸೂಚನೆ.

ಪರಮಋಷಿಯರ ಶಾಪಭಯದಲಿ
ಸರಿದರಾಜಯವಿಜಯರಿಬ್ಬರು
ಮರಳಿ ಜನಿಸಿದರವರು ದಿತಿಯಲಿ ಮುನಿಪಕಶ್ಯಪಗೆ ‖

ವಿಷ್ಣುವಿನ ವೈಭವವರ್ಣನ

ಕೇಳು ಜನಮೇಜಯ ಧರಿತ್ರೀ
ಪಾಲ ವೇದೋದ್ಧಾರ ಲಕ್ಷ್ಮೀ

---

[1] ಕುಂದದೇತಾ ಕಾವ. ಗ, ಘ.

ಲೋಲ ಕ್ಷೀರಾಂಬುಧಿಯುಲಿದ್ದನು ಕೈಟಭಾಂತಕನು ॥
ಹಾಲಸಾಗರವೇನೆಯು ಸೆಜ್ಜೆಯು
ಮೇಲೆ ಶೇಷನ ಹಾಸು ಕೌಸ್ತುಭ
ಲೋಲ ಶೃಂಗಾರದಲು ಶಂಖಗದಾರಿಪದ್ಮಗಳು ॥ ೧

ಧರೆಯು ಗುಂಜೆಯು ಕಪ್ಪಿನಂತಿಹು
ದುರಗಫಣಿಯುಲು ಜೀವರತ್ನವಿ
ಹರಿಯು ಹಾಸಿಗೆಯಾದನಂತನ ಮಹಿಮೆ ಗೋಚರವೆ ।
ಎರಡುಸಪ್ತಕ ಜಗವ ಮಾಡಿದ
ಸರಸಿರುಹಸಂಭವನೆ ನಾಭಿಯು
ನಿರುತ ತೊಟ್ಟಿಲ ಕೂಸು ದಾಸೀವರ್ಗವಹ ಲಕ್ಷ್ಮಿ ॥ ೨

ಇಳೆಯು ಮುಕ್ತಾಫಲದ ಹೊಸಮೇ
ಖಲೆಯುನಳವಡಿಸಿಕ್ಕಿದನು ಮಿಗೆ
ಜಲಧಿಯುಲಮೃತಗಳುಚಿ ವೆಗ್ಗಳಿಸಿತ್ತು ಮೇದಿನಿಯು ।
ಬಳಿಕ ಬೆಳದಿಂಗಳಲಿ ಬೆಳಸಿದ
ಕಳಗಳಲಿ ಪದ್ಮಚಕ್ರವರ್ತಿಯು
ಜಲಧಿಯುಲಿ ಕಲ್ಲೋಲ ಕವಿದುದು ಬೆಳಗು ಮೌಕ್ತಿಕದ ॥ ೩

ನೆಲೆಗೆ ತಾ ದುಗ್ಧಾಬ್ಧಿಮಧ್ಯದೆ
ನಳಿನನಾಭನ ಶ್ವೇತದ್ವೀಪದ
ನಿಳಯುದನುವದು ಸುತ್ತುವಳಯುವು ಹತ್ತುಸಾವಿರವು ।
ಒಳಗೆ ಹರಿಮಂಟಪದ ರತ್ನದ
ನೆಲೆಗೆ ಕನಕದ ರಚನೆ ಶ್ರೀಶನ
ಹೊಳಲಲನಿಮಿಷರುಗಳು ಸನಕಾದಿಗಳ ಮೇಳದಲಿ ॥ ೪

ದೇವಿ ಲಕ್ಷ್ಮಿಯು ನಾಥನಿರುತಿಹ [1]
ಠಾವೆಯಾಗಿಹಳು [2] ರಗರಾಶಿಯು

[1] ದೇವ ಲಕ್ಷ್ಮೀನಾಥ ಕ್ಷೀರದ, ಕ. ಖ. ಗ. ಘ. [2] ನಾವೆಯಾಗಿಹನು, ಕ. ಖ. ಗ. ಘ.

ದೇವನಂಗದ ಮಂಚಕ ಶ್ರೀವಧುಬಾಹು ತಲೆದಿಂಬು [1] ।
ದೀವಿಗೆಗಳವು ಶೇಷಫಣಿಮಣಿ
ಸಾವಿರಂಗಳು ಕೃಷ್ಣ ಕಾಂತಿಯು
ದೇವನಂಗಕೆ ಕೌಸ್ತುಭಾಮಳರುಚಿಯಲಂಕಾರ ॥ ೫

ಅಲ್ಲಿ ಹರಿಯಿರೆ ಶೇಷಶಯನದಿ
ವಲ್ಲಭೆಯು ತೊಡೆಗಳಲಿ ಪಾದವ
ಫುಲ್ಲನಾಭನು ನೀಡಿ ನಿದ್ರಾಂಗನೆಯ ಮೇಳದಲಿ ।

ಜಯವಿಜಯರಿಗೆ ಸನಕಾದಿಗಳ ಶಾಪ.

ಅಲ್ಲಿ ಯಿರುತಿರೆ ಬ್ರಹ್ಮಪುತ್ರರು
ನಿಲ್ಲದಾಗಲು ಕ್ಷೀರಸಾಗರ
ಕೆಲ್ಲ ಬರುತಿರೆ ಜಯವಿಜಯರುಚಿ ಚಾಚಿ ಬಾಗಿಲನು ॥ ೬

ನಿಲುಕಿ ಹೊಂಗಂಬಿಯಲಿ ಭೂಸುರ
ಬಳಗವೆನು ನೂಕಲಿಕೆ ಕೊಟ್ಟರು
ನಳಿನಸಂಭವಸುತರು ಜಯವಿಜಯರಿಗೆ ಶಾಪವನು ।
ಎಲೆಲೆ ದ್ವಾರ್ಬಾಹಿಕರೆ ತಮ್ಮನು
ನಳಿನನಾಭನ ಕಾಣಲೀಸಿರೆ
ಬಳಿಕೆನುತ ನೀವಿನ್ನು ದೈತ್ಯರ ಕುಲದಿ ಜನಿಸುವುದು ॥ ೭

ಅವರು ಬೆದರಿಯೆ ಹರಿಗೆ ಬಿನ್ನಹ
ಭವನವಳಯಕೆ ಹೋಗಿ ನುಡಿಯಲು
ಭುವನರಕ್ಷಕನೆಂದನಕಟಾ ನೀವು ಮರುಳಾಗಿ ।
ಭವಗೆ ಸರಿ ಸನಕಾದಿಮುನಿಗಳು
ನವಗೆ ಮತ್ತವರಧಿಕಪ್ರಿಯತಮ
ರವರ ಕರೆಕರೆ ಯೆಂದು ಲಕ್ಷ್ಮಿಯ ಕೈಯ್ಯ ಕರೆಸಿದನು ॥ ೮

---

1 ತಲೆಗಿಂಬು, ಕ. ಖ. ಗ. ಘ.

ತಾಯಿ ಮಕ್ಕಳ ಕರೆದು ತಂದೆಯು
ಕಾಯುದಲಿ ಕುಳ್ಳಿರಿಸುವಂದದಿ
ಶ್ರೀಯುತ ತಂದಳು ಹರಿಯು ಹೊರಗಾ ದಿವ್ಯಯೋಗಿಗಳ ।
ಕಾಯದಲಿ ತೆಗೆದಪ್ಪಿ ಕರುಣದಿ
ಬಾಯ ಚುಂಬನವಿಕ್ಕಿ ಬಾಗಿಲ
ಕಾಯುವರು ಕಡು ಮೂರ್ಖರಿಂತಿವ ನಮಗೆ ಮನ್ನಿಪುದು ॥ ೯

ಎಂದೊಡವರುಗಳನ್ನು ನುತಿಯಿಸೆ
ಕುಂದು ಹೆಚ್ಚನು ನೀವು ಕಾಣ್ಬುದು
ಮಂದರೋದರ ಎನಲು ದೇವನು ಕಂಡನವಕೊಂದ ।
ಇಂದು ಸನಕಾದಿಗಳ ಶಾಪವು
ಬಂದುದೀ ಜಯವಿಜಯರಿಬ್ಬರಿ
ಗಿಂದು ನೀವಿವ ಹೇಗೆ ಕಳಯುವಿರೆಂದು ಬೆಸಗೊಳಲು ॥ ೧೦

ಜೀಯ ನೀವೇ ಕಾಣ್ಬುದವರಿಗೆ
ನ್ಯಾಯ ಶಾಪವದೆಂದು ನುಡಿಯಲು
ವಾಯುವಾಹನ ಕರೆದು ನುಡಿದ ವಿಜಯಜಯರಿಗಂದು ।
ನ್ಯಾಯದಲಿ ನಿಮಗೀಗ ದೈತ್ಯರ
ಕಾಯ ಬಂದುದದೇಳುಜನ್ಮದ
ನ್ಯಾಯದಲು ನೀವಿದನು ಕಳವಿರೊ ಭಕ್ತಿಭಾವದಲಿ ॥ ೧೧

ಅಲ್ಲದಿದ್ದೊಡೆ ಮೂರುಜನ್ಮದಿ
ಫುಲ್ಲನಾಭನ ವೈರದಿಂದವೆ
ಇಲ್ಲಿಗೈದುವಿರೊ ಎನಲವರುಗಳದನೆ ಕೈಕೊಂಡು ।

ಅವರು ಹಿರಣ್ಯಾಕ್ಷ ಹಿರಣ್ಯಕಶಿಪುಗಳೆಂದು ಹುಟ್ಟುವಿಕೆ.

ಬಲ್ಲಿದರು ಜಯವಿಜಯರಾಗಳು
ಫುಲ್ಲನಾಭಂಗೆಱಗಿ ಬರುತಿರ
ಲಲ್ಲಿ ಕಶ್ಯಪ ದಿತಿಯು ಸಂಧ್ಯಾಸಮಯರತಿಯೊಳಿರೆ ॥ ೧೨

ವರಮಹಾಜಾನುವಿಜಯರಂಶವು
ನೆರೆದು ತಾ ಕಲಿಯಂಶದಿಂದವೆ
ಬೆರಸಿ ಹುಟ್ಟಿದುವೀ ಹಿರಣ್ಯಹಿರಣ್ಯಲೋಚನರು ।
ನಿರುತ ನಾಮದಿ ಜನಿಸಲಾಕ್ಷಣ
ಧರೆ ನಡುಗೆ ಮಿಗೆ ಕಡಲು ತುಳುಕಲು
ಸುರರು ಹರುಷವ ಮರೆದು ಭಯದಲಿ ಕಱೆದು ಕಂಬನಿಯ ॥೧೩

ಹುಟ್ಟಿ ಶಿಶುಗಳು ಬಳೆದು ಕಾಲನ
ನಟ್ಟಿ ಹೊಯ್ದರು ಸುರರ ಮಕ್ಕಳ
ಕಟ್ಟಿದರು ಕೆಡೆ ಹೊಯ್ದು ತುಱಿದರು ಮೂಱುಲೋಕಗಳು ।
ಕೆಟ್ಟವವದಿರ ದೆಸೆಯೆ ನಾಕಜ
ಶಿಷ್ಟಜನ ಬೆಂಬೀಟೆ ದೈತ್ಯರು
ಕಟ್ಟಿ ಕೌಬೇರನನು ಯಮನನು ಸುರರ ನಾಯಕನ ॥ ೧೪

ಅವರ ಪರಾಕ್ರಮ ಕಥನ.

ಮೆಟ್ಟುವರು ನೀರೊಳಗೆ ವಹ್ನಿಯ
ಕಟ್ಟುವರು ಕೈಮುಟ್ಟಿ ಯಮನನು
ಮುಟ್ಟಲೊಲ್ಲರು ನಿರುತಿ ತಮ್ಮಯ ಜಾತಿಯವನೆಂದು ।
ಬೆಟ್ಟವನು ಮೇಲಿಕ್ಕಿ ವರುಣನ
ನಟ್ಟಿ ಹಿಡಿಯುವರನಿಲರೂಪನ
ಕಷ್ಟರಿಗದಾರಿದಿರು ನಿಲಲಿಕೆ ದೇವದೈತ್ಯರಲಿ ॥ ೧೫

ಮತ್ತೆ ಕೇಳ್ಕ ರಾಯ ಸುರಪನ
ಹಸ್ತಿಯನು ಹಿಡಿದೆಳೆದು ರಜಕರಿ
ಗೊತ್ತೆಯಿಡುವರು ತಗರನೇಱುವರನಲವಾಹನವ ।
ಬತ್ತಿ ಕೋಣನ ಕೊಂಡ ಕೊಱುವರು
ಹಿತ್ತಿಲಲಿ ಕೆಡೆ ಕಟ್ಟಿ ನಿರುತಿಯ
ಹೊತ್ತಿಹಾತನ ವರುಣಮಕರದ ಕಿವಿಯ ಕೀಳುವರು ॥ ೧೬

ಆಮಹಾವಾಯುವ್ಯನೆರಳೆಯು
ದಾಮದಲಿ ಹಿಡಿದಾಡುತಿರ್ಪರು
ಕಾಮಿಸುವರ್ಕೈ ಯಾವಿಮಾನವ ಧನಪನೇಱುವುದ ।
ಸೋಮಶೇಖರನೆತ್ತು ತಂದಾ
ಭೂಮಿಯಲಿ ನೊಗವಿಕ್ಕಿ ಯುಱುವರು
ತಾಮಸರು ಬೇಸರಿಸುತಿರ್ಪರು ಮೂಱುಲೋಕವನು ॥ ೧೭

ಏಱುಕಡಲಿನ ಮೇರೆ ಮುಱಿವರು
ಕೀಲ ಕಳೆವರು ರವಿಯು ಬಂಡಿಯು
ಬೀಱಲಿಡುವರು ಚಂದ್ರಬಿಂಬವ ಬ್ರಹ್ಮನಿದಿರಾಗಿ ।
ಕೀಳುಗೋಡಗವಾಡುತಿರ್ಪರು
ಕೀಳು ನುಡಿಯಲಿ ಸುರರನೆಲ್ಲರ
ಬೀಱುಗುಟ್ಟುವರಿದಿರ ಬಂದರೆ ಭೂಪ ಕೇಳೆಂದ ॥ ೧೮

ಸರಸಿಜಾಸನಹಂಸ ವರಶಿಖಿ
ಪರಸುತನ ವಾಯುವ್ಯನೆರಳೆಯು
ನರ ಕುಬೇರನ ವರುಣಯುಮರಾ ಮಕರಮಹಿಷಗಳು ।
ಸುರಪತಿಯು ಕರಿ ಯುನಲವಾಹನ
ವುರಣ ಘನವಹ ಗೂಳಿ ಗೂಲಿಯು
ನೆರೆದು ಗುಜುಗುಜುಗೊಂಡು ತಮ್ಮೊಳು ಬೆದಱತಡಿಗಡಿಗೆ ॥ ೧೯

ಪಾಪಿಗಳು ದಿತಿಸತಿಯ ಪುತ್ರರು
ಕೋಪಿಸಿಯೆ ಪಾರದಿಗೆ ಬಂದರೆ
ಲೋಪಿಸುತಲಾರಣ್ಯಮೃಗತತಿಗೊಂದಕುಱವಿಲ್ಲ ।
ವ್ಯಾಪಿಸಿದುದ್ದೈ ದೇವಲೋಕಕೆ
ತಾಪಸರ ಕೈಕೊಳ್ಳರಿವದಿರಿ
ಗಾಪವೆರದಾರುಂಟು ದೇವಾಸುರಭುಜಂಗರಲಿ ॥ ೨೦

ಹೀಗೆ ವರ್ತಿಸಬೇಡಿರೆಂದು ಕಶ್ಯಪರ ಬುದ್ಧಿವಾದ.

ಎಂದೊಡಿಂದ್ರಾದಿಗಳು ಕಶ್ಯಪ
ನಂದನರ ಕಡು ಬಾಧೆಗಾರದೆ
ಬಂದು ದೂಱಲು ಸುತರ ಕರೆದನು ಮುನಿಪ ಕಶ್ಯಪನು ।
ನಂದನರ ಕರೆದೆಂದನಾಕಜ
ವೃಂದವನು ಭೇದಿಸಲು ಕೆಡುವಿರಿ
ಮುಂದನಱಿಯದೆ ನಡೆಯಲಾಗದದೆನಲು ಖತಿಗೊಂಡ ॥ ೨೧

ಅದಕ್ಕೆ ವಿರುದ್ಧವಾಗಲು ಅವನ ಪರಿತಾಪ.

ತಂದೆ ಕೇಳಾನಿನ್ನ ಮಕ್ಕಳ
ಕೊಂದು ಹೆಂಡಿರ ಹಿಡಿದು ನಾಕಜ
ವೃಂದಭವನವ ಸುಟ್ಟು ಕೊಂಬೆವು ಸುರರ ಪದವಿಗಳ ।
ಎಂದೊಡತಿದುಃಖಿಸುತ ಕಶ್ಯಪ
ನಂದನರ ದುರುಳುತನ ನಿಲಿಸುವ
ನಿಂದದಾರೈ ಯೆನುತ ನೆನೆದನು ಮಂದರೋದ್ಧರನ ॥ ೨೨

ನೆನೆಯುತಿರಲಿಕೆ ದೈತ್ಯರಿಬ್ಬರು
ಜನಕನನು ಮಿಗೆ ಬೈದು ತೆರಳಲು
ಜನಪ ಕೇಳ್ಳೆ ಬೞಿಕ ಹರಿದರು ಲೋಕ ನಡುಗಲಿಕೆ ।
ತನತನಗೆ ಬಾಯ್ವಿಡಲು ಪರಿದರು
ದನುಜರಥವುರು ಧೂಳಿಗೋಟೆಯು
ಕ್ಷಣಕೆ ಕೊಂಡರದಿಂದ್ರನಮರಾವತಿಯ ವ್ಯಾಹೃತಿಯ ॥ ೨೩

ಗತಿಯನೊಂದಿಸಿ ಹಾಯ್ದು ವೈವ
ಸ್ವತನ ನೊರಸಿಯೆ ಮತ್ತೆ ಕೃಷ್ಣಾ
ವತಿಯ ನುಱುಹಿಯೆ ತವ್ಮ ಗೋತ್ರದ ದೈತ್ಯನೂರೆಂದು ।
ಗತಿಯ ಗಂಗಾವತಿಯ ಶುದ್ಧಾ
ವತಿಯ ನಳಕಾವತಿಯ ಸವರಿಯೆ
ಯುತಿಮುದದಿ ಮತ್ತಾಗ ರಜತಾವತಿಯ ಹೊಕ್ಕೊಳಗೆ ॥ ೨೪

ದಿತಿಯ ಮಕ್ಕಳು ಹರನ ಪೂಜಿಸಿ
ಗತಿಯ ಬೇಡಿಯೆ ಪ್ರತಿಯ ಕಾಣದೆ
ಕ್ಷಿತಿಯ ಸೂಜಿಯ ಗೊಂಡು ಬಂದಾರತ್ನ ಪುರಿಯೊಳಗೆ |

ನಾರದರು ಬರಲು ಶೂರರು ಇದ್ದಾರೆ ಎಂದು ಪ್ರಶ್ನೆ.

ಅತಿಮದದ ನಾಯಿಗಳು ಹೊಕ್ಕಿರೆ
ಕ್ಷಿತಿತಳಕೆ ಸುರಮುನಿಪ ನಾರದ
ಯತಿವರನು ಬರೆ ಕಂಡು ಭಕ್ತಿಯ ಮತಿಯ ಮಾಡಿದರು || ೨೫

ನೆಜಿ [1] ಹಿರಣ್ಯ ಹಿರಣ್ಯಲೋಚನ
ಶಿರದಲೆಱಗಿದರಾಗ ಚರಣಕೆ
ಹರಸಿ ನಾರದ ಬಂದು ಕುಳ್ಳಿದ ಹೇಮಪೀಠದಲಿ |
ವರಮುನೀಶನೆ ತಂಮ ಸರಿಸಕೆ
ಧುರವ ತೊಡಗುವರುಂಟೆ ನೀವೀ
ಧರೆ ಮೊದಲು ಹದಿನಾಲ್ಕು ಲೋಕಕೆ ಸುಱುಪಿರ್ಕೆ ಯೆನಲು || ೨೬

ಎಲ್ಲಿ ಯಾದರೆ ಸುಭಟನೊಬ್ಬನ
ಬಲ್ಲಿದನ ತವೆಗಱುಪಿ ಯೆನಲಿಕೆ
ಮೆಲ್ಲನೆಂದನು ದೈತ್ಯರಿಬ್ಬರಿಗರಸ ಕೇಳೆಂದ |

ಪದ್ಮನಾಭನನ್ನು ಹೇಳಲು ಆತನು ಯುದ್ಧಕ್ಕೆ ಬರುವ
ಉಪಾಯುವನ್ನು ಚಿಂತಿಸುವಿಕೆ.

ಫುಲ್ಲನಾಭನದೆಂಬನೊಬ್ಬನು
ಬಲ್ಲಿದನಸುರವೈರಿನಿಕರದ
ಲಲ್ಲಿ ನಿಮ್ಮಯ ಭುಜದ ತಿಮಿರವು ಶೂನ್ಯವಹುದೆಂದ || ೨೭

ಎಂದೊಡವದಿರು ತಮ್ಮಯುದ್ಧಕೆ
ಮಂದರೋದ್ಧರ ಬಪ್ಪಯನುವೆನ
ದಿಂದೊರೆವುದೆನಲಾಗ ಮುನಿಪತಿ ನುಡಿದ ದೈತ್ಯರಿಗೆ |

---

2 ಅರಿ, ಖ.

ಮಂದರೋದ್ಧರ ಧರಣಿಪಾಲಕ
ನೆಂದು ನಿಂದಿಹ ತಾಗಿ ಧರಣಿಯು
ನಿಂದು ಕದ್ದರೆ ಕಮಲಸಂಭವ ದೂಱುವನು ಹರಿಗೆ ॥ ೨೮

* ಧರೆಯು ಕಾರಣದಿಂದಲಾಗಳು
ನಿರುತದಲಿ ಸಂಗ್ರಾಮವಹುದೈ
ವರಭುಜಾಡಂಬರದ ತೀಟೆಯು ಕಳೆವ ಹರಿಯೆಂದು ।
ವರಮುನಿಪ ತಾ ಸರಿದನಿತ್ತಲು
ಸುರವಿರೋಧಿಗಳಬ್ಬರಿಗೆ ಭೂ
ಸುರರ ಮತದಿಂ ಮದುವೆಯಾದವು ವೈದಿಕೋಕ್ತಿಯಲಿ ॥ ೧

ವಿತಳದಲಿ ವಿಂಧ್ಯಾ ಹಿರಣ್ಯನ
ಸುತೆ ಕಯಾತಿಯು ಹಿರಿಯುಗಾದಳು
ವಿತತದಿಂ ಪ್ರಜ್ಞಾ ಹಿರಣ್ಯನ ಸುತೆಯು ಮಂಗಳೆಯು ।
ಸತಿಯುದಾಕೆಯು ಕಿಱಿಯುಗಾದಳು
ಪತಿತರಿಬ್ಬರು ಬೞಿಕ ಭೂಮಿಯು
ಮತಿಯುಳೇ ಬೆಂಡಾಗುತಿದ್ದರು ಮುನಿಯ ಹೇೞಿಕೆಗೆ ॥ ೨

ಅಂದು ಹದಿನೆಂಟಬುವವಾಗಲಿ
ಕಂದು ಹರಿಯೊಳು ಯುದ್ಧವದು ತಾ
ನೆಂದು ಹಿರಿಯನು ಕಿಱಿಯುಗುಸರಲಿಕಾಹಿರಣ್ಯಕನು ।
ಎಂದೊಡಾಗ ಹಿರಣ್ಯಲೋಚನ
ನಂದು ತಾ ಭೂದೇವಿಯಾಯುತ
ದಿಂದ ತಾನುಱೆ ಸಪ್ತದ್ವೀಪದೊಳಗಧಿದೇವತೆಯು ॥ ೩

ಬಂದು ತಾ ಕದ್ರೂಯುದ್ದ ಕೆಳಗಣ
ಗೊಂದಿಯುಲಿ ಯಾಧಾರಶಕ್ತಿಯು

---

* ಇಲ್ಲಿಂದ ೯ ಪದ್ಯಗಳು ಅಧಿಕಪಾಠವು ಗ. ಘ ಜ.

ಮಂದಿರದ ಹೊಱಕಡೆಯಲಾಡುತ್ತಿರಲು ಕನ್ಯೆಯನು ।
ಅಂದು ತಾನೆಪೆದೊಯ್ಯಲಾಕ್ಷಣ
ಮಂದಮತಿ ನೆಲೆಗೆಟ್ಟು ಮೇಗಣ
ಕುಂದದಾಡುವ ವಾಯುಪಾಶದ ಬಲೆಯೊಳಡಗಿರಲು ॥ ೪

ಧರೆಯಲೀಪರಿ ಧರ್ಮದೂರರು
ನರಕಕೀಟವೆಂದದಲಿ ಭೂಮಿಯ
ಶಿರವ ಕೊಂಕುಟಲಿಕ್ಕಿ ದೈತ್ಯನು ಧರೆಯ ಕ್ಷೋಭೆಯಲಿ ।
ಸುರನರೋರಗನಿಕರವಾಕ್ಷಣ
ನೆರೆದು ತಮತಮಗೆಲ್ಲ ದುಃಖದಿ
ಹಿರಿದು ಬೆಂಬಳಿಯಾಯ್ತು ಸಪ್ತದ್ವೀಪನವಖಂಡ ॥ ೫

ಭೂಮಿದೇವಿಯು ಸೆಱೆಯಲಿಕ್ಕಲು
ತಾ ಮಹಾಭೂಲೋಕ ಜಲಮಯ
ವ್ಯೋಮವಾಗಲಿಕಜಸುರಾದ್ಯರು ನೆರೆದು ಚಿಂತಿಸುತ ।
ಈ ಮಹಾದುರ್ಧರವತಮ್ಮಲಿ
ನೇಮಿಸನು ಶ್ರೀಲೋಲಗಱಪುವ
ಭೂಮಿದೇವಿಯನೆನುತಲಾಗಳು ಸುರರು ಬಾಯ್ಬಿಡುತ ॥ ೬

ಬಂದು ಕ್ಷೀರಾಂಬುಧಿಯ ಬಾಗಿಲ
ಲಂದು ಶೋಭೆಯ ತಳಿರ ಮಱೆಯಲಿ
ನಿಂದು ಕಮಲಜರಾದಿಶಕ್ರಾದ್ಯಖಿಳನಾಕಜರು ।
ಇಂದು ಕಾಯ್ವೆ ತಮ್ಮನಿನಿಬರ
ನಿಂದು ಕಾಯ್ವೆ ಭೂಮಿದೇವಿಯ
ನಿಂದು ಕಾಯ್ವೆ ಯೊಱಚತುರ್ದಶ ಭುವನವಾದುದನು ॥ ೭

ಸುರರ ಮೊಱೆಯನು ಕೇಳಿ ಕರೆಸಲು
ಸುರಪನಾಬ್ರಹ್ಮಾದಿದೇವರು
ಬರಲು ನಾರಾಯಣನು ಮನ್ನಿಸಿ ಸೆಜ್ಜೆಯಂತಿರುವ ।

ಉರಗ ರಾಜನ ಮೇಲೆ ಕುಳಿತುಜಿ
ಸರಸಿಜಾಸನಮುಖ್ಯದಿವಿಜರ
ನಿರುತ ಬೇಗದಿ ಕಂಡು ನುಡಿವನು ನಗೆಯು ಕೃಪೆಗಳಲಿ ॥ ೮

ಏನು ಪೇಳೆನೆ ಸಕಲಸುರಜನ
ರಾಣಿವಾಸಕೆ ಬಂದು ಲಕ್ಷ್ಮೀ
ಮಾನಿನಿಯು ಮರುಳಾಟ ಮಾಡುವ ನಿತ್ಯಪುರುಷನನು ।
ಯೋನಿರಹಿತನ ಯೋಗಸಿದ್ಧನ
ನೇನ ಹೊಗಟಲಿಕಬೆಯುದಾಗಳು
ವಾನಿರೂಢಿಯ ದೇವವೃಂದವು ಬಂದು ಹರಿಪದಕೆ ॥ ೯

ಎಂದು ಮುನಿಪತಿ ಹೇಳೆ ಯಾಕ್ಷಣ
ಸಂದನಿತ್ತ ಹಿರಣ್ಯಲೋಚನ
ಮಂದಮತಿ ತಾನಾಗ ಕದ್ದನು ಧರೆಯ ತಳಕಿಳಿದು ।
ಸಂದ ಸುರರುರುದುಃಖವಾರ್ತೆಯ
ನಂದವಾಗಿಯೆ ಸತ್ಯಲೋಕದೊ
ಳಂದು ಕಮಲಜಗೆಅಗಿ ಬಿನ್ನಹ ಮಾಡಿದರು ಹದನ ॥ ೧೯

ದೇವತೆಗಳು ಹರಿಯನ್ನು ಮರೆಹೋಗುವಿಕೆ.

ಕೇಳಿ ಕರ ಕರನೊಂದು ಸುಮನಃ
ಪಾಲ ನಾಕಜವೃಂದವೆಲ್ಲವ
ಲೋಲಮತಿ ತಾ ಕೂಡಿ ಕೊಂಡೈದಿದನು ವಾರಿಧಿಯ ।
ಶ್ರೀಲತಾಂಗಿಯು ರಮಣ ನಿರುತಿಹ
ವೇಳೆಯುಖಿದಾ ಸುರರು ಹರ ದಿಕ್
ಪಾಲಕರ ಸಹಿತೈದಿ ಕಂಡರು ಕಮಲಲೋಚನನ ॥ ೨೦

ಶಿರಗಳನು ಚಾಚಿದರು ಕರುಣಾ
ಕರನಿಗಾಗಲು ಸೈಗೆಡದು ನಿಂ
ದಿರುತ ಕೈಮುಗಿದೆದ್ದು ಬಿನ್ನಹ ಮಾಡಿದರು ಹರಿಗೆ ।

ಪರಮಮುನಿಪಪರ್ಯಂಕಹೃದಯನೆ
ಸುರನಿಕರವರಸುಖಕೆ ಕಾರಣ
ಪರಮಭಕ್ತರಿಗೊಲುವ ಕಾರಣ ದೇವದೇವನೆನುತ ॥ ೨೧

ಸಕಲಜೀವಚರಾಚರಾತ್ಮನೆ
ಸಕಲ ವೇದಾತೀತಮಹಿಮನೆ
ಭಕುತವತ್ಸಲ ಚಿತ್ತಗೊಡುವುದು ಧರೆಯ ರಾಕ್ಷಸನು ।
ಯುಕುತಿಯಿಲ್ಲದೆ ಕದ್ದನು ದಿತಿಯ
ವಿಕಳಸುತನು ಹಿರಣ್ಯಲೋಚನ
ಸಕಲಲೋಕವನುಚಿದು ಹೊಕ್ಕನು ವಿತಳದಿಂ ಕೆಳಗೆ ॥ ೨೦

ಹೊಕ್ಕನೈವತ್ತೆಂಟುಸಾವಿರ
ಲಕ್ಷಸಂಖ್ಯೆಗಳುಲಬುದ ಸಂದವು
ರಕ್ಕಸನ ಕೈಯೊಳಗಿಳಯಿರಲಿಕತ್ತಲೋಷಧಿಯು ।
ತಕ್ಕ ವಾನಸ್ಪತ್ಯಫಲಗಳ
ಮಿಕ್ಕತುಳವಲಿ ಲೋಕವೆಲ್ಲವ
ಮಿಕ್ಕು ತಾವ್ ಬಯಲಾಗಿ ಹೋದವವೆನ್ನವಿಲ್ಲವೆನೆ ॥ ೨೨

ವರಾಹಾವತಾರ

ಸಿರಿಧರನು ಕೇಳದನು ಬ್ರಹ್ಮನ
ಸುರರ ಬಿನ್ನಹ ಹೊಸತು ಕುಳ್ಳಿರಿ
ಧರೆಯ ಕದ್ದ ಹಿರಣ್ಯಲೋಚನನೆಂದು ಮನ್ನಿಸುತ ।
ಚರಣದಲಿ ಪಾತಾಳನಾಭಿಯು
ನಿರುತದಲಿ ಭೂಭುವನ ಮೇಲಣ
ವರಸುರಾಲಯ ಮಕುಟದೆಡೆಯಲಿ ಹಾಯ್ದು ನಿಂದಿರಲು ॥ ೨೪

ವ್ಯಾಪಿಸಿಯು ಹರಿ ರುದ್ರನಾಗಿಯೆ
ಲೋಪಿಸುವೆ ನಿನಗೆನುತ ದೈತ್ಯನ
ಟೋಪವನು ಕಡಿಖಂಡ ಮಾಡಿಯೆ ತಹೆನು ಮೇದಿನಿಯ ।

ಈಪುರಂದರಗೀವೆನೆನುತಾ
ಕೋಪದಲಿ ನೋಡುತ್ತ ಗಗನವ
ರೂಪ ಹಿಡಿದನು ಯಾದಿವರಾಹನ ಸುರರು ಬೆವಕಾಲಿಕೆ ॥ ೩೫

ಕಿಡಿಗಳನು ಕಂಗಳಲಿ ಕಾಋುತ
ದಡಿಗಿರಿಗಳನು ದಾಡೆಯಿಂದವೆ
ಕೆಡಹುತಾಗಳೆ ಹರಿದ ರಾಕ್ಷಸಗಾಗಿ ಹರಿ ಬೞಿಕ ।

ವರಾಹಹಿರಣ್ಯಾಕ್ಷರಯುದ್ಧ

ನಡೆದು ವಿತಳಕ್ಕಿೞಿದು ರಾಕ್ಷಸ
ದಡಿಗನತ್ತಲು ಹರಿದು ಮೊಱೆವುತ
ಘುಡುಘುಡೆನುತ ವರಾಹನಬ್ಬರ ಬರಲು ಬೊಬ್ಬಿಡುತ ॥ ೩೬

ರಕ್ಕಸರು ತಾವೆಲ್ಲ ಭಯದಲಿ
ಮುಕ್ಕುಱಿಕ್ಕಿದರಾದಿವರಾಹನ
ದೆಕ್ಕಲನು ತಾ ಬಂದನಲ್ಲಿಗೆ ನಮ್ಮ ಭಾಗ್ಯದಲಿ !
ಸಿಕ್ಕಿತೀನವುಗೀಗಲಡವಿಯು
ಮೆಕ್ಕಲನು ಕಪಿ ಯೆನುತ ದೈತ್ಯರು
ಕಕ್ಕಡೆಯು ಮುಂಕೊಂಕುಗತ್ತಿಯು ಸಬಳಮುದ್ಗರವ ॥ ೩೭

ಕೊಂಡು ಬಂದಾ ದೈತ್ಯಗಣವನು
ದಿಂಡು ಗೆಡಹಿಯು ತುೞಿಯೆ ರಾಕ್ಷಸ
ಹಿಂಡು ಬೊಬ್ಬಿಡೆ ಹೊಕ್ಕು ಪಡೆಯನು ಕೆಡಹಿ ಜೀವಿಗೆಯು ।
ಕೊಂಡಿಗಾನೆಯು ಹಂತಿ ಗಟ್ಟಿದ
ಚಂಡಬಲ ನುಗ್ಗಾಯ್ತು ಬಲವುಂ
ಕೊಂಡು ಬರೆ ಬೈರಗಿಯಿನಱಿದಂತಾಯ್ತು ನಿಮಿಷದಲಿ ॥ ೩೮

ಆಮಹಾರಕ್ಕಸರ ಸಾಗರ
ಸ್ತೋಮಕಾಗಲು ಬಡವಸೂಕರ

ಕಾಮರೂಪನು ಕಡಿಯೆ ಕೋಪಿಸಿ ಬಂದು ದೈತ್ಯೇಶ ।
ಭೂಮಿಚೋರ ಹಿರಣ್ಯಲೋಚನ
ಕಾಮುಕನು ಮೊದಲಿಸಿ ಕೊಂಡಾ
ಕ್ಷೇಮಕಾರಿಯು ಕೊಂದಪೆನೆನುತ್ತೊಡನೆ ಬರುತಿರ್ದ ॥　　೩೯

ಎಂದು ರಾಕ್ಷಸನೊದಱೆ ನಾಕಜ
ವೃಂದವು ನಡುಗಿತಾ ವರಾಹನು
ಸಂದ ನಾಗಸದೊಳಗೆ ಕುಳ್ಳಿರ್ದಮರಗಣವಾಗ ।
ಅಂದು ಬೆದಱಲಿಕಾಗ ರಾಕ್ಷಸ
ನೊಂದು ಕತ್ತಿಯುಲಿಡಲು ನುಂಗಲು
ಬಂದನವನಱಿಯುಟ್ಟಿ ಹೊಯ್ಯುತ ದೈತ್ಯಗ:ರುವಣಿಸಿ ॥　　೪೦

ಬಂದು ಮಕುಟವ ಮುಱಿದು ದೈತ್ಯನ
ಮಂದಿಯನು ಸೀಱಿದ ವರಾಹನು
ಕೊಂದು ಕೊಂಡೆತ್ತಿದನು ಭೂಮಿಯು ದೈತ್ಯರನು ವಧಿಸಿ ।
ಮಂದಮತಿ ತನ್ನಂಗಬಲವೆಂ
ತೆಂದು ನೆರಹಿದ ದೈತ್ಯಬಲವನ
ದೊಂದು ಶಂಖದ ಚಾತುರಂಗವನೆರಹಿ ಕಾಳಗಕೆ ॥　　೪೧

ಆಳ ಸಂಹರಿಸುತ್ತ ರಾಕ್ಷಸ
ಕಾಳಗತ್ತಿಯ ತಿರುಪಿ ಯಿಡಲಾ
ಮೇಲೆ ತಾ ಸುರನಿಕರ ಬೊಬ್ಬಿಡಲಶನಿಯುಬ್ಬರದಿ ।
ಬೀಱಲವಕಂಜಿದರು ವರಹನ
ಮೇಲೆ ಕತ್ತಿಯ ಮಟೆಯ ಕಱಿಯಲು
ಜಾಳಿಸಿದ ದಾಡೆಯಲಿ ದೈತ್ಯನ ಕೈದುವೆಲ್ಲವನು ॥　　೪೨

ಒಡಗಲಿಸಿ ಕಾದಿದರದಿಬ್ಬರು
ಬಿಡದೆ ಹನ್ನೆರಡಬುದ ಸವೆಯಲು

ಪೃಥವಿ ನಡುಗಲು ಕಡಲು ಕಂಪಿಸೆ ಯುದ್ಧದದ್ಭುತಕೆ ।
ನಡುಗಿದರು ದಿಗಧಿಪರು ಹಗಲಿರು
ಳೊಡೆಯರಿಬ್ಬರು ಸುರರು ಕಂಪಿಸೆ
ಮೃಡನು ಕಣ್ಣನು ಮುಚ್ಚೆ ಬ್ರಹ್ಮನರಿಯದು ತನಗೆನಲು ॥ ೪೩

ಹಿರಣ್ಯಾಕ್ಷಸಂಹಾರ.

ಈ ಧುರಕೆ ಸರಿಯಾಗಿ ವೀರರು
ಕಾದುವರು ಹುಸಿಯೆನುತಲಿದ್ದೊಡ
ಮಾದಿರೂಪ ವರಾಹದೇವನು ಹಿರಣರಾಕ್ಷಸನ ।
ಭೇದಿಸಿದ ದಾಡೆಯುಲಿದಾಕ್ಷಣ
ಮೇದಿನಿಯು ಕಂಟಕನು ಬೀಳಲಿ
ಕಾದಿವಿಜಯಘೋಷದಿಂದು ಗುಡಿಯನು ಕಟ್ಟಿ ತಮತಮಗೆ ॥ ೪೪

ಹಿರಣ್ಯಾಕ್ಷನಿಗೆ ಪುತ್ರಜನನ.

ಇತ್ತಲಾಗ ಹಿರಣ್ಯಲೋಚನ
ಸುತ್ತಮಾಂಗಿಯು ಪಿತಳರಾಜನ
ಪುತ್ರಿ ಮಂಗಳ ಪೆತ್ತಳ್ಯ ತಾನೊಬ್ಬ ಪುತ್ರನನು ।
ಅತ್ಯಧಿಕಬಲನವನು ರಾಕ್ಷಸ
ಮೊತ್ತದಲಿ ಬಲುಗೈಯೆನಿಸುವ
ನತ್ತ ನರಕಾಸುರನು ಪುಟ್ಟಿದ ರತ್ನಪುರದೊಳಗೆ ॥ ೪೫

ಬಲಭಂಜನು ತಮ್ಮಯ್ಯನಳಿಯು
ಬ್ಬಲಿದು ತೊಟ್ಟಿಲಿನಿಂದ ಕೆಳಯಿಕೆ
ಘೀಳಿಸಿದ್ದನು ಮಾತೆ ಪೊಗ ನೋಡಲಿಕೆ ಬೆಸಗೊಂಡ ।
ಇಳೆಯು ಕದ್ದರೆ ಪಿತನನಾವನೊ
ಯುಳುಕಿಸಿದನವನೊಡನೆ ಯುದ್ಧವ
ನೊಲಿದು ಮಾಡುವೆನೆನಲು ಶಿಶುವನು ಬೇಡಿಕೊಳಲಿತ್ತ ॥ ೪೬

ಶ್ರೀಪತಿಯು ತಾನಖಿಳಜಗಗಳ
ತಾಪಹರ ಭೂವನಿತೆ ಯೊಡಲನು
ಲೋಪಿಸಿದುದಾಕ್ಷಣಕೆ ದಾಡೆಯ ಕೊನೆಯುತ್ತಿವನು ।
ಆಪುರಂದರಮುಖ್ಯದಿವಿಜರು[1]
ಪಾಪರಹಿತರು ಪಾರಿಜಾತವ
ನೋಪಿನಲಿ ಹರಿಯ ಮಕುಟಕೆ ಸುಱಿಯಲವರೊಲಿದು ೪೭

ದೇವದುಂದುಭಿ ಮೊಱಗಲಾಗಲು
ದೇವನಾಕ್ಷಣ ದಿವ್ಯರೂಪದಿ
ಭೂವನಿತೆಯನು ನೆರೆದ ಮಂಗಳರವದ ಘೋಷದಲಿ ।
ಭೂವಧುವು ವಲ್ಲಭನ ಕೊರಳ
ಲ್ಲಾ ವಿರಿಂಚೀಶಾನವಾಸವ
ದೇವತತಿಯಿರೆ ಹರಿಗೆ ಹೂವಿನ ಮಾಲೆ ಯಿಕ್ಕಿದಳು ॥ ೪೮

ಭೂದೇವೀಕೃತಸ್ತೋತ್ರ.

ಜಯತು ನಾರಾಯಣನೆ ಶೌರಿಯೆ
ಜಯ ಜನಾರ್ದನ ಚಕ್ರಪಾಣಿಯೆ
ಜಯ ಜಗತ್ತ್ರಯಜೀವನನೆ ಶ್ರೀವಾಸುದೇವೇಶ ।
ಜಯತು ವರಹನೆ ಜಾಹ್ನವಿಸಂಜರ
ಜಯತು ಶ್ರೀಪತಿ ಶ್ರೀಜಗತ್ಪತಿ
ಜಯತು ಜಯ ತ್ರಯಮೂರ್ತಿದೇವನೆ ಶ್ರೀಹೃಷೀಕೇಶ ॥ ೪೯

ಜಯ ಚತುರ್ಭುಜ ಶಂಕರಪ್ರಿಯ
ಜಯತು ಗರುಡಧ್ವಜನೆ ಜಯಜಯ
ಜಯ ನೃಕೇಸರಿ ಜಯ ಮಹಾದೇವೇಶ ವಿಶ್ವೇಶ ।
ಜಯತು ಭೂಭುವನೇಶ ಶ್ರೀಧರ
ಜಯತು ದೇವಕಿಪುತ್ರ ಪಾರ್ಥಗೆ
ಜಯತು ಸಾರಥಿ ಜಯತು ಯಚ್ಯುತ ಶಂಖಚಕ್ರಧರ ॥ ೫೦

1 ನಾಕಜ. ಗ. ಘ. ಜ.

ಜಯ ಪರಂಜ್ಯೋತಿಸ್ಸ್ವರೂಪನೆ
ಜಯತು ಆತ್ಮಜ್ಯೋತಿ ಜಯಜಯ
ಜಯ ಚರಾಚರ ಜೀವ ಶ್ರೀವತ್ಸಲನೆ ಜಗದೀಶ ।
ಜಯತು ಸರ್ವಗ ಸರ್ವಲೋಕನೆ
ಜಯತು ಭೂರ್ಭುವ ಜಯ ತ್ರಿವಿಕ್ರಮ
ಜಯತು ಕಾಲಜ್ಞಾನಿಧಾಮನೆ ಜಯತು ಹರಿಹರನೆ ॥ ೫೧

ಜಯತು ಕರುಣಾಕರನೆ ಸರ್ವಗ
ಜಯ ಜಯತು ಸರ್ವಜ್ಞ ಸರ್ವನೆ
ಜಯತು ಸರ್ವಗ ಸರ್ವಸಾಕ್ಷಿಯೆ ಸರ್ವತೋಮುಖನೆ ।
ಜಯ ಜಯ ಹಯಗ್ರೀವ ಹರಿಹರ
ಜಯತು ಶಾರ್ಙ್ಗಿಯೆ ಸರ್ಪಶಯನನೆ
ಜಯ ಹಲಾಯುಧ ಕರಸಹಸ್ರನೆ ಬಾಹುಸಾಹಸ್ರ ॥ ೫೨

ಜಯ ಜಯ ಸಹಸ್ರಾಕ್ಷಧೋಕ್ಷಜ
ಜಯ ಗಜೇಂದ್ರವಿಮೋಕ್ಷಣಾರ್ಥಿಯೆ
ಜಯತು ಕೇಶವ ಕೇಶಿಮರ್ದನ ಕೈಟಭಾಂತಕನ ।
ಜಯತು ವಿದ್ಯಾತ್ಮಕನೆ ಕಾಮ್ಯನೆ
ಜಯತು ಕಮಲೇಕ್ಷಣನೆ ಜಯ ಜಯ
ಜಯತು ಕಂಸಾರಾತಿ ಜಯಜಯಯಘದವಾನಳನೆ ॥ ೫೩

ಜಯತು ಕಾಕುಸ್ಥಕನೆ ಖಗಪತಿ
ಜಯತು ವಾಹನಗರುಡರೂಢನೆ
ಜಯತು ಪೀತಾಂಬರನೆ ಯದ್ವಯನಿತ್ಯನೇ ಜಯತು ।
ಜಯ ನಿರವಯವ ನಿತ್ಯತೃಪ್ತನೆ
ಜಯ ನಿರಾಶ್ರಯ ನಿತ್ಯನದ್ವಯ
ಜಯ ಸುರಾಧ್ಯಕ್ಷಕನೆ ನಿರ್ವಿಕಲ್ಪನೇ ಜಯತು ॥ ೫೪

ಜಯ ನಿರಂಜನ ಜಯ ಜಗತ್ಪತಿ
ಜಯತು ಬ್ರಹ್ಮನೆ ಪೃಥಿವಿನಾಥನೆ
ಜಯತು ಲಕ್ಷ್ಮೀವಾಸ ಜಯ ಜಯ ಜಯತು ಮಾಧವನೆ ।
ಜಯತು ನಾನಾವೇದಗರ್ಭನೆ
ಜಯ ವಿಭುವೆ ಜಯ ವಿಷ್ಣುವೇ ಜಯ
ಜಯತು ನೀತ್ರೈಲೋಕ್ಯಭೂಷಣ ಯಜ್ಞಮೂರ್ತಿಕನೆ ॥ ೫೫

ಜಯ ಜಯತು ಶ್ರೀಕರದಮೂರ್ತಿಯೆ
ಜಯತು ವಾಸವರಕ್ಷ ವಾಮನ
ಜಯ ಜಿತೇಂದ್ರಿಯ ದುಷ್ಟಶಮನಕ ಜಯ ಜಿತಕ್ರೋಧ ।
ಜಯ ಸನಾತನಭಕ್ತವತ್ಸಲ
ಜಯ ಜಗತ್ಪೂಜಿತನೆ ಪರತರ
ಜಯತು ಪರಮಾತ್ಮಸ್ವರೂಪನೆ ಸರ್ವಲೋಕೇಶ ॥ ೫೬

ಜಯತು ಅಂತಕಸರ್ವದುರಿತಕೆ
ಜಯ ಅನಂತಯನಂತವಿಕ್ರಮ
ಜಯತು ಮಾಯಾಧಾರ ಜಯಪತಿ ಜಯ ನಿರಾಧಾರ ।
ಜಯತು ಸರ್ವಾಧಾರ ನಿಷ್ಕಳ
ಜಯ ನಿರಾಭಾರಕನೆ ಸಂತತ
ಜಯ ಪ್ರಪಂಚಾತೀತ ನಿರಮಯ ಭಕ್ತಸೇವಿತನೆ ॥ ೫೭

ಜಯತು ಪುಣ್ಯವ್ರಾತಕೀರ್ತಿಯೆ
ಜಯ ಜಯ ಮಹೋದಾರಸಾಗರ
ಜಯ ಪುರಾಣಪುರಾಣರೂಪನೆ ಯೆಂದು ಹೊಗಳುತಲು ।
ನಿಯತಮತಿ ಭೂದೇವಿ ಹರಿಯನು
ಜಯ ಮತಿಯಲತಿಸ್ತುತಿಸಿ ನಿಂದಿರೆ
ದಯಮಹಾಂಬುಧಿ ಭೂಮಿದೇವಿಯ ಧರಿಸಿ ನಿಂದಿರಲು ॥ ೫೮

ನರಕಾಸುರನಿಗೆ ಪ್ರಾಗ್ಜ್ಯೋತಿಪುರದಾನ.

ಅಂದು ಜನಿಸಿದ ನರಕದಾನವ
ನಂದನಗೆ ಪ್ರಾಗ್ಜ್ಯೋತಿಪುರವನು
ಮಂದರೋದ್ಧರನೋತು ಕೊಟ್ಟನದೊಂದು ದಾಡೆಯನು ।
ಬಂದಲಿ ಭೂಭುರ್ವನವೆತ್ತಿದ
ನಂದನಗೆ ಪ್ರತಿ ಸುಪ್ರತೀಕವ
ನಂದು ಕೊಟ್ಟನದಱ ನಿಲವು ಹದಿನೈದುಯೋಜನವು ॥ ೫೯

ಇನಿತು ನೀಳದಿಯುದ್ಧವದು ತಾ
ನನುಕರಿಸಿ ಮೇಲೇಱುಯೋಜನ
ಜನಿಸಿಹುದು ನೋಡುವೊಡದೈದೇ ಯೋಜನದಯುಗಳ ।
ಮನದ ಬಲುಹನನಱಿವರಾರದ
ಅನಿತು ಸತ್ವಕದಷ್ಟಕರಿಯುದು
ಗುಣಿಸಿಕೊಡಲು ಸಮಕೆ ಬಾರವು ಭೂಪ ಕೇಳೆಂದ ॥ ೬೦

ಅದಱಿನಾತನು ವರಕುಬೇರನ
ಬೆದಱಿಸಿಯೆ ಸರ್ವಸ್ವವೆಲ್ಲವ
ನದಟಿನಲಿ ಕೊಳೆ ಬಳಿಕ ತನ್ನಯ ವಿತ್ತದೇಶ್ಗಯಲಿ ।
ಉದಱಿಸಿದ ಭಗದತ್ತನಾತನ
ಹದನ ಕೈಕೊಳಲೆಂದು ಜನಿಸಿದ
ಮುದದಿ ಕೇಳ್ಕೈ ಮುಂದೆ ಕಥೆಯನು ರಾಯ ನೀನೆಂದ ॥ ೬೧

ಹರಿಯು ತನ್ನ ಮನೆಗೆ ಬರುವಿಕೆ.

ದೇವವೃಂದವು ಬೆರಸಿ ನಾನಾ
ದೇವಋಷಿಯರು ಕೂಡಿ ಭೂಮಿ
ದೇವಿಯನು ಸಂತೈಸಿ ಕಮಲಜಮುಖ್ಯಸುರರೊಡನೆ ।
ದೇವದೇವನು ಬಂದು ತನ್ನಯ

ಪಾವನ ಕ್ಷೀರಾಬ್ಧಿಗೆರವಾ
ದೇವಿಯರಸನು ಹರುಷದಿಂದವೆ ಹೊಕ್ಕನರಮನೆಯ ‖ ೬೦

ದೇವತೆಗಳಿಗೆ ಅಭಯದಾನ.

ಸುರರ ಮನ್ನಿಸಿ ಕಳುಹುತೆಂದನು
ನಿರುತ ನಿಮ್ಮಯ ಬಾಧೆ ತನ್ನದು
ಥರಥರದ ಪಟ್ಟಿಗೆಯ ದೈತ್ಯರ ಹವಣು ತನಗೆಂದ ।
ಸರಸಿಜಾಸನ ಮುಖ್ಯದಿವಿಜರು
ಹರಿಗೆ ನಮಿಸಿಯೆ ತಾವು ಹೊಕ್ಕರು
ನಿರುಪಮಿತಸ್ವರ್ಗಾದಿಭೋಗವನರಸ ಕೇಳೆಂದ ‖ ೬೨

ಕಾದನೈ ಹರಿ ಲೋಕಪಾಲರ
ಕಾದನೈ ಹರಿ ಸ್ವರ್ಗಭೋಗವೆ
ಕಾದನೈ ಹರಿ ಭೂಮಿದೇವಿಯ ತನ್ನ ನೆನೆವವರ ।
ಆದುದೈ ಶ್ರೀವರಹದೇವನು
ವೇದಪತಿಯುಲು ಯಜ್ಞ ರೂಪನ
ನಾದಿಪುರುಷನು ನಿಮ್ಮ ರಕ್ಷಿಪನೆಂದನಾಮುನಿಪ ‖ ೬೪

ಮೋದಿಸಿಯೆ ಪೇಳಿದನು ಕಿವಿಗಳ
ಲಾದರಿಸಿ ತಾವ್ ಕೇಳ್ಗೆ ನರರಿಗೆ
ಬಾಧೆ ತಪ್ಪುವುದಾಕ್ಶಾಂತನ ವರಹಚರಿತೆಯಲಿ ।
ಮೇದಿನಿಯ ಪತಿ ಯಿನ್ನು ಮುಂದಣ
ಸಾಧುವೂರ ಹಿರಣ್ಯಲೋಚನ
ಸೋದರನ ವಧೆ ವರನೃಕೇಸರಿಚರಿತ ಕೇಳೆಂದ ‖ ೬೫

ಹಳನೆಯ ಸಂಧಿ ಮುಗಿದುದು.

—✦—

## ಎಂಟನೆಯ ಸಂಧಿ.

---

### ಸೂಚನೆ

ವರನೃಕೇಸರಿ ಕಂಭದೊಳಗವ
ತರಿಸಿಯಾಹಿರಣಕನ ಸೀಳಿಯೆ
ಕರುಳಮಾಲೆಯನಿಕ್ಕಿ ಪ್ರಹ್ಲದ ಗಿತ್ತನತಿಮುದವ ॥

ಕೇಳು ಜನಮೇಜಯ ಧರಿತ್ರೀ
ಪಾಲ ಲಕ್ಷ್ಮೀಲೋಲ ತಾ ಪಾ
ತಾಳ ದೈತ್ಯರ ಸೀಳಿ ಬಿಸುಟನು ಕೋಟಿಸಂಖ್ಯೆಯಲಿ ॥

### ಹಿರಣ್ಯಕಶಿಪುವಿನ ತಪಸ್ಸು.

ಮೇಲೆ ಕೇಳದನಾಹಿರಣ್ಯಕ
ಕಾಲಗಂಡನು ತಮ್ಮನೆಂಬುದ
ಕಾಲನೆರಹಿದನಾತತುಕ್ಷಣ ಹರಿಯ ಸಂಗರಕೆ ॥

ಬೇಗದಲಿ ವರಕಾಯ ಸಿದ್ಧಿಯ
ಲಾಗಿನಲಿ ಶಂಭುವನು ಮೆಚಿಸು
ತೀಗ ಮಾಡುವೆನೆಂದು ಕಶ್ಯಪತನಯ ಶೂಲಿಯನು ।
ಲಾಗಿನಲಿ ಪೂಜೆಸಿಯೆ ಬೇಡುವೆ
ಸಾಗರಾಂತ್ಯದ ಕೈಟಭಾರಿಯ
ಲಾಗಿಸಿಯೆ ನಾಕಜರ ಹೆಂಡಿರ ಕಡಗಪತ್ರವನು ॥ ೧

ತೆಗಿಸಿ ಲೋಕವ ತನಗೆ ನಿತ್ಯವ
ನಗಿದು ಮಾಡುವೆನೆನುತಲಿದಿರಲಿ
ಸೊಗಸಿ ತಾನೇ ಯಿೂಶನೆನಿಸುವೆ ಸರ್ವಕಾಲದಲಿ ।

ಮಿಗಿಸುವೆನು ಶಿವನಾಣೆ ಯೆನುತಲಿ
ಸೊಗಸ ಧೂರ್ಜಟಿ ಗಿರಿಯುನ್ನೈದಿದ
ವಿಗಡತಪವನು ಮಾಡತೊಡಗಿದನಸುರಕರ್ಮದಲಿ ‖ ೩

ಬ್ರಹ್ಮನ ಬಳಿಗೆ ಹೋಗೆಂದು ಹರನ ಅಪ್ಪಣೆ

ಮಾಡಲಿಕೆ ಹರನೆಂದ ತನ್ನಲಿ
ಕೂಡದೀವರವೆಂದು ದೈತ್ಯನ
ನೋಡಿ ಕಳುಹಿದ ಸತ್ಯಲೋಕದ ಪತಿಯು ಹೊರೆಗಾಗಿ ।
ಮಾಡಿದನು ಬ್ರಹ್ಮಗೆ ಹಿರಣ್ಯಾಕ
ರೂಢಿಯಲಿ ಹದಿನಾಱುಸಾವಿರ
ತೀಡಿದಬ್ದದಿ ತಪವ ಮೈಯ್ಯಲಿ ಪುತ್ತು ಜನಿಸಲಿಕೆ ‖ ೪

ಬಳಿಕ ವಾಣೀರಮಣ ಬಂದನು
ಕಲಿ ಹಿರಣ್ಯಾಕ ಮಾಡಿದದಟನ
ಹುಳುಕತಪಸಿಗೆ ವರವ ಕೊಟ್ಟನು ಬೇಡು ನೀನೆನುತ ।

ಆವ ರೀತಿಯಿಂದೂ ತನಗೆ ಮರಣ ಬಾರದಂತೆ ಪ್ರಾರ್ಥನೆ

ನಳಿನಸಂಭವನೆನೆ ಹಿರಣ್ಯಾಕ
ನುಲುಹುಗೆಟ್ಟಾವುಸುರುಮಾತ್ರದಿ
ತಲೆಯ ಬಾಗಿಸಿ ಕಮಲಪುತ್ರನ ವರವ ಬೇಡಿದನು ‖ ೫

ತನಗೆ ಕೊಡುವೊಡೆ ಯಿಂದು ನೀವಿದ
ಜನಕ ಲೋಕಕೆ ಸರಸಿಜಾಸನ
ಯನಿಮಿಷರ ದಿತಿಸುತರ ಮನುಜರ ಪಕ್ಷಿಮೃಗಗಳಲಿ ।
ತನುವಿಗುಹಪತಿ ಯಿಲ್ಲದಂತಿದ
ಕನಕಗರ್ಭನೆ ಮತ್ತೆ ಕೇಳಿದ
ವನಗಳಲಿ ಮಿಗೆ ಸರ್ವಜಾತಿಯುಲಿರುಳು ಹಗಲೊಳಗೆ ‖ ೬

ಮರಣ ಬಾರದ ಪರಿಯ ಮಾಡೈ
ಧರೆಯೊಳಂಬರದಲ್ಲಿ ಯಗ್ನಿಯು
ನಿರುತಯಾಪದಿ ಮರುತಶಿಡಿಲ್ಗಳ ಲೂರಲಡವಿಯಲಿ |
ಶಿರವು ಹರಿಯದ ಪರಿಯನೀವುದು
ವರಮಹಾಸ್ತ್ರಾದಿ ಶಸ್ತ್ರ ಚಾಪದಿ
ವರವ ಕೊಡುವುದದೊಳಗು ಹೊರಗೂ ಮರಣಬಾರದುದ || ೭

ಮತ್ತೆ ಮತ್ತ್ಯ ಈವುದೆನಗಿದ
ಮೃತ್ಯುವಿಲ್ಲದ ಲೆಕ್ಕ ಹಸಿಯಲಿ
ಮತ್ತೆ ತೃಣದಲಿ ವೃಕ್ಷಜಾತಿಯ ಕಾಷ್ಠದೊಣಗಿಲಲಿ |
ಇತ್ತು ಕಳಯ್ಯೆತನಗೆ ಮರಣವ
ನುತ್ತಮದ ಪಂಚೇಂದ್ರಿಯಂಗಳ
ಲಿತ್ತಲಾನಾಲ್ಕಿಂದ್ರಿಯಂಗಳ ಮೂಱಲಿಂದ್ರಿಯದ || ೮

ಊಱದ ಯೆರಡಿಂದ್ರಿಯದ ಬಱಕಾ
ನೞಿಯದಂತಿರೆ ಯೇಕದಿಂದ್ರಿಯ
ಕೊಲಲು ಬಾರದ ಪರಿಯ ಮಾಡುವುದು ಪಂಚಭೂತದಲಿ |
ಬಱಿಕ ನಂದಾಭದ್ರಜಯತಿಥಿ
ಯುಱಿದರಿ ಕ್ತಾ ಪೂರ್ಣದಿನತ್ರಯ
ದೊಳಗೆ ಮರಣವು ಬಾರದಂತಿರೆ ಕರುಣಿಸುವುದೆನಲು || ೯

ಹಿರಣ್ಯಕಶಿಪುವಿಗೆ ವರಲಾಭ

ಎಂದೊಡಾಕ್ಷಣ ನಳಿನಭವ ತಾ
ನಂದು ಕೊಟ್ಟನು ಕಶ್ಯಪಾತ್ಮಜ
ನೆಂದ ವರಗಳ ಕೇಳು ಜನಮೇಜಯಮಹೀಪಾಲ |
ಹಿಂದೆ ಯಿಂದ್ರನ ಧಾಳಿ ರಾಕ್ಷಸ
ಮಂದಿರಕೆ ತಾನೈದಿ ದೈತ್ಯನ
ಯಿಂದುವದನೆಯ ಸೆಱೆಯ ಹಿಡಿದರು ಪುರವನುರುಹಿದರು || ೧೦

ಅಂದು ವರಪ್ರಹ್ಲಾದದೇವನ
ವೆಂದಹಾಸದ ಗರ್ಭವಾಗಿರೆ
ಮಿಂದು ಮಾಸತ್ರಯುಗಳಾಗಿರಲಾ ಕಯಾತಿಯಲಿ ।
ಬಂದು ನಾಕಜವೃಂದದೂತರು
ಸಂದ ಗರ್ಭದ ದನುಜರಮಣಿಯು
ನಂದು ಹಿಡಿದರು ಹಿರಣ್ಯಕಾಸುರ ತಪಕೆ ಹೋದಲ್ಲಿ ॥ ೧೧

ಸಂದುಕಟ್ಟನು ನೋಡಿ ಯಮರರು
ಬಂದು ದನುಜನ ಸತಿಯನೊಯ್ದರು
ತಂದರಮರಾವತಿಯೊಳಿರಿಸಿದರಾಕಯಾತಿಯನು ।

ನಾರದರು ಗರ್ಭದಲ್ಲಿದ್ದ ಶಿಶುವಿನ ಲಕ್ಷಣವನ್ನು ಹೇಳುವಿಕೆ.

ಬಂದನಲ್ಲಿಗೆ ಮುನಿಪ ನಾರದ
ನಂದು ಕರೆಸಿದನಾಕಯಾತಿಯು
ತಂದರಾಸುರದೂತರಾಗಲು ಮುನಿಯ ಸಂನಿಧಿಗೆ ॥ ೧೨

ನಿಂದು ಮುನಿಪನ ಚರಣಕಮಲ
ಕ್ಕಂದುಮುಖಿ ನಮಿಸಲಿಕೆ ನಾರದ
ನೆಂದ ಕೇಳೌ ತಾಯೆ ನಿನಗೀಗರ್ಭವೇಸುದಿನ ।
ಎಂದು ಕೇಳಲಿಕಾಱುಮಾಸವು
ಹಿಂದು ಗಳದವೆಂದೊಡಾಯುತಿ
ಛಂದವನು ನೋಡಿದನು ಗರ್ಭದ ಜೀವಲಕ್ಷಣವ ॥ ೧೩

ಇಂದಿವನು ಹರಿಭಕ್ತ ಯೋಗ್ಯನು
ವೆಂದಱಿಯುತೇಕಾಂತಕಾಮುನಿ
ಬಂದು ವೈಷ್ಣವಮಂತ್ರನೇಮವ ಶಿಶುವಿಗಱುಹಿದನು ।
ಅಂದು ತಾ ಮೊದಲಾಗಿ ವೈಷ್ಣವ
ವೃಂದಕುಲಗಳ ಜನಕೆ ಸಂದನು
ನಂದನನು ತಾ ವರಕಯಾತಿಯ ಜಠರದೊಳಗಿರಲು ೧೪

ವರಗುರುವಿನುಪದೇಶದಿಂದವೆ
ಹರಿಯು ಸಾಕ್ಷಾತ್ ಜ್ಞಾನವಾಯಿತು
ನಿರುತದಿಂದಜ್ಞಾನವೆಲ್ಲವ ಹರಿಸಿ ರಾಜಿಸುವ ।
ಬರಿಸಿ ಸಾತ್ವಿಕುಗುಣವನಂಗೀ
ಕರಿಸಿ ಯಿದ್ದುದರಿಂದಲಾತಗೆ
ಸುರನರೋಗಜನವು ಸರಿಯೇ ರಾಯ ಕೇಳೆಂದ ॥ ೧೪

ಸುರನಿಕರ ಹೆಸರಿಟ್ಟು ಹರುಷದ
ಲಿರಲಿಕತ್ತಲು ಸೆಜೆಯಲಾಸತಿ
ಹಿರಿದು ಬಳಯುತ್ತಿರಲು ಕಂಡನು ದೇವಮುನಿ ಸತಿಯ ।

ಸೆಜೆಯಿಂದ ಬಿಡಿಸಿ ಆಕೆಯನ್ನು ರತ್ನಪುರಿಗೆ ಕಳುಹಿಸುವಿಕೆ

ವರಮುನಿಪನಾಸತಿ[1] ಯನಾಗಲು
ಸುರಪನಿಂದವೆ ಬಿಡಿಸಿ ಯಾಕೆಯು
ಕರಿಯನೇಱಿಸಿ ಕಳುಹಿದನು ತಾ ರತ್ನಪುರವರಕೆ ॥ ೧೭

ವರವನ್ನು ಪಡೆದು ನಾರಾಯಣನ ಬಳಿ ಯುದ್ಧಕ್ಕಾಗಿ ಬರುವಿಕೆ.

* ಇತ್ತ ರಾಕ್ಷಸ ವರವ ಪಡೆದನು
ಮತ್ತೆ ತಿರುಗಿದ ದುಗ್ಧರಾಶಿಗೆ
ಮೊತ್ತದಲಿ ರಾಕ್ಷಸರು ಸಹಿತಾಹರಿಯ ವೈರದಲಿ ।
ಇತ್ತ ಬಂದೊಳಪುಗಲಿಕಾರದೆ
ನಿತ್ಯನನು ನೋಡುತ್ತಲಂಬರ
ಹತ್ತಿ ವೀಕ್ಷಿಸಿ ನೋಡುತಿರ್ದನು ಹಲವು ಕಾಲದಲಿ ॥ ೧೭

---

[1] ನಿರುತದಿ ಮುನಿಸತಿ, ಗ. ಘ. ಜ

*ಇತ್ತ ಕೇಳು ಹಿರಣ್ಯಕಾಸುರ
ಮುತ್ತಯನ ಬೀಳ್ಕೊಂಡು ಸಾಗರ
ದತ್ತ ತಿರುಗಿಯೆ ದುಗ್ಧರಾಶಿಗೆ ಹರಿಯು ವೈರದಲಿ ಗ. ಘ. ಜ.

ಆಮಹಾಲಕ್ಷ್ಮೀಶನಹಿಮನ
ರಾಮಮಂಚದ ಮೇಲೆ ಮಲಗಿರೆ
ಪ್ರೇಮದಲಿ ತಾ ಲಕ್ಷ್ಮಿ, ಯೊತ್ತುತ ಚರಣಕಮಲವನು
ಸೋಮಸನಕಾದಿಗಳು ತತ್ವದ
ನಾಮನಿರ್ಣಯದಿಂದ ಹರಿಯನು
ವಾಮಹಾಶ್ರುತಿಕೋಟಿ ಹೊಗಳಲು ವರವಿಚಾರದಲಿ ॥ ೧೮

ಪರಮಪುರುಷನ ನಾಮಕೀರ್ತಿಯ
ಪರಿಯ ಕೇಳಯೆ ದೈತ್ಯನಡಿಯಿಡ
ಲರಿದೆನುತ್ತಂಜುತ್ತಲಿರ್ದನು [1] ತನುವು ನಡುನಡುಗೆ ।
ಪರಮಮಂತ್ರದ ದುರ್ಗಯಂತ್ರವ
ಬರಹವೇ ತಾನುಪನಿಷತ್ತುಗ
ಳಱಿದು ನಾನಾಪೂರ್ವದೇವರು ಹೊಗಲು ಗಂಡಿಲ್ಲ ॥ ೧೯

ಬೞಿಕ ಮಿಕ್ಕಿನ ಕಾಕುದೈತ್ಯರ
ಬಳಗಕಳವೇ ಹರಿಯ ನಾಮವು
ಮುಳುಕುನಂಜಿನ ಹರಿಯ ನಾಮದ ಘೋಷದಾರ್ಭಟಕೆ ।
ತಲೆಯ ಬೀಱಿಸಿಕೊಂಡು ಬಳಲಿಯೆ
ಕಳವಳಸೆ ಸ್ವಾತಂತ್ರ್ಯಮಹಿಮನ
ಬಳಕೆಗದು ಯೋಗ್ಯವೇ ಜನನಾಥ ಕೇಳಂದ ॥ ೨೦

ವೇದರಾಶಿಯ ಶ್ರುತಿಪುರಾಣದ
ಬೋಧೆ ನೀತಿಯು ಪಂಚಮಶ್ರುತಿ
ಯಾದಿರಾಮಾಯಣವು ಪೊಗೞುವ ಹರಿಯ ಮಹಿಮೆಯನು ।
ಮೇದಿನಿಯ ಕಂಟಕ ಹಿರಣ್ಯಕ
ನಾದಿಸಿದ್ಧನ ಮಹಿಮೆಯೆಲ್ಲವ
ನಾದಿಯಂತವ ಕೇಳ ಮರಳದ ಹೊಗುವೊಡರಿದೆನುತ ॥ ೨೧

---

1 ಸುತ್ತು ಬೆಂಬೀಳುತಿರ್ದನು, ಗ. ಘ. ಜ.

ಹರಿಯು ಪುರದಾ ಹೊಱಗೆ ಚಕ್ರವು
ಘರವಟಿಗೆ ಮಾಡುವುದು ಬಲುವಿಂ
ದುರವಣಿಸಿ ನಾ ಹೊಕ್ಕೆನಾದೊಡೆ ಮರಳಲಲ್ಲೆಂದು ।
ಮರಳಿಸದು ತಾ ಚಕ್ರವಾಗಲು
ಹರಿಯು ಹಗೆಯಿದು ಹಳಸಿ ಕೆಡುವುದು
ನಿರುತವೆನ್ನಿದ್ದೆಡೆಗೆ ಬರಿಸುವೆ ಕಾದಿ ಮರಳಿಸುವೆ ॥ ೨೭

ಹಿರಣ್ಯಕಶಿಪುವಿಗೆ ಸ್ವಪುರಾಗಮನ.

ಎನುತ ರತ್ನದ ಪುರಿಯು ಹೊಕ್ಕನು
ದನುಜ ಚಿಂತಾತುರನವಸ್ಥೆಯು
ನನುಕರಿಸಿ ತಾ ವರಕಯಾತಿಯು ಮನೆಗೆ ಬರುತಿರಲು ।
ಇನಕಳಗೆ ಸರಿಯಾದ ಕಂದನ
ನನಿಮಿಷಾಂತಕ ಕಂಡು ಪುತ್ರನ
ದನುಜಕುಲ ಸಂತೋಷದಿಂದಿರೆ ಕರೆಸಿ ಜೋಯಿಸರ ॥ ೨೩

ಹೇಳಿ ನೀವಿಂದೀತನಂಶವ
ಕಾಲಫಲವನು ಜನಿಸಿದಂದವ
ಕೇಳುವೆನು ತಾನೆನಲು ಹೇಳಿದನಾಗ ಭೃಗುತನಯು ।

ತನ್ನ ಮಗನನ್ನು ಹರಿಭಕ್ತನೆಂದು ತಿಳಿಯುವಿಕೆ.

ಕೇಳು ದನುಜನೃಪಾಲ ನಿನ್ನಯ
ಬಾಲಕನು ಜನಿಸಿದನು ಶ್ರೀಮುಖ
ಕಾಲದಲ್ಲಾ ಶ್ವೀಜಶುದ್ಧದ ದಶಮಿ ಹರಿತಾರೆ ॥ ೨೪

ಜನನವಾಯಿತು ನಿನ್ನ ಪುತ್ರಗೆ
ಜನಕನಾಜ್ಞೆಯು ಮೀಱಿ ಲಕ್ಷ್ಮೀ
ವನಿತೆಯರಸನ ಭಕುತ ಸಂತತನೀತನತಿಬಳನು ।
ಎನಲು ಬಗೆಯದೆ ಭೀತಿಪಡೆಯದೆ
ತನುಜನಲಿ ಭಯವುಂಟೆ ಯೆನುತಲಿ
ದನುಜ ಭೃಗುಸುತಗಿತ್ತನುಡುಗೊಱೆಯಧಿಕಹರುಷದಲಿ ॥ ೨೫

ಆತನಿಂ ಕಿಗ್ಗಿ ಱಿಯುರೇೞ್ವರು
ತಾತ ಬರಲಿಕೆ ಜನನ ಗಂಡರು
ಭೂತಳದಿ ಮುನ್ನವರು ಲೋಕದ ವರವುರುದ್ಗಣರು ।
ಭೀತಿಯಿಂದೂರ್ವಶಿಯು ಶಾಪದಿ
ಭೂತಳದಿ ಜನಿಯಿಸಿದರಿಂದಿರ
ನಾತಳೋದರಿಯೊಡನೆ ನೆರೆದಿರಲಿವರು ಬರುತಿರಲು ॥ ೬೬

ಶಾಪವಾಯಿತ್ತರಡುಜನ್ಮಕೆ
ಭೂಪ ಕೇಳ್ವ ವಧು ಹಿರಣ್ಯಾಕ
ನೋಪಳಿಗೆ ಜನಿಸಿದರು ಮುಂದಕೆ ದ್ವಾಪರಾಂತ್ಯದಲಿ ।
ಗೋಪನಂದನನಿಂದು ಮುನ್ನವೆ
ಯೂಪುರಂದರಶಾಪಭಯದಲಿ
ಪಾಪರಹಿತರು ದೇವಕಿಯುಲಾ ಯೋಱುವೂನಿಸರು ॥ ೬೭

ಜನಿಸುವೆರು ಬೞಿಕವರ ಕಂಸನು
ದನುಜವೈರಿಯು ವೈರಬಂಧದ
ಲನುಜೆಯಾತ್ಮಜರೇೞುಶಿಶುಗಳ ಕೊಲುವನುಱು ಮುೞಿದು ।
ಜನಿಸಿದಾಗಳ ಮರಣಗಾಣಿಸಿ
ಯುನಿಮಿಷೇಶ್ವರನಿತ್ತ ಶಾಪದಿ
ಪುನರಪಿಯು ತಾನೊಬ್ಬ ಹುಟ್ಟಿದ ಶಲ್ಯನಾಮದಲಿ ॥ ೬೮

ಪ್ರಲ್ಲಹಾದಾದಿಗಳು ಪೂರ್ವದಿ
ಬಲ್ಲಿದರು ದೈತ್ಯೋತ್ತಮಾವಳಿ
ಯಲ್ಲಿನಿಚ್ಛಳರಾಕರೂಷಕರೆಂಬರತಿಬಳರು ।
ಫುಲ್ಲನಾಭಂಗಧಿಕಪ್ರೀತರು
ಬಲ್ಲಿದವರು ಹಿರಣ್ಯಗುದಯಿಸ
ಲೆಲ್ಲ ಯಾತಂಗಷ್ಟಪುತ್ರರದಾಗಿ ಪೂರ್ವದಲಿ ॥ ೬೯

### ಹುಟ್ಟಿದ ಎಂಟುಜನಗಳ ಹೆಸರುಗಳು..

ಜನಿಸಿದರು ತಾವಷ್ಟಪುತ್ರರು
ವನುಜನಾಯಕನಂದದವರಿಗೆ
ಮನವೊಲಿದು ತಾ ನಾಮಕರಣವ ಮಾಡತೊಡಗಿದನು ।
ದನುಜಗುರುವಿನ ಮಾತಿನಿಂದವೆ
ತನುಜರಿಗೆ ಹೆಸರಿಟ್ಟನಾಗಲು
ವಿನುತಹರುಷೋತ್ಸವದಿ ವೃದ್ಧಕ್ರಮದಿ ಬಾಲರಿಗೆ ॥ ೩೦

ಈತ ತಾ ಪ್ರಹ್ಲಾದದೇವನು
ಈತ ತಾ ಸಹ್ಲಾದದೇವನು
ಈತ ತಾನುಹ್ಲಾದನೀತನು ಮತ್ತೆ ಬಲ್ಲಾದ ।
ಈತನೆ ತಲ್ಲಾದ ನೆಂಬವ
ನೀತನೇ ಲಲ್ಲಾದನಾಮಕ
ನೀತನೇಜಲ್ಲಾದ ನೀತನುವರ ಸುಸಲ್ಲಾದ ॥ ೩೧

ಬಟುಕ ಪುತ್ರರಿಗಂದು ವೈದಿಕ
ಕಳೆಯ ಕಟ್ಟೆಯೆ ಸ್ವಾಧ್ಯಯನದಾ
ಬಳಿಯಲಿರಿಸಿದನಲ್ಲಿ ಶುಕ್ರಾಚಾರ್ಯವರ್ಯರಲಿ ।
ನಲಿನಲಿದು ಪ್ರಹ್ಲಾದದೇವರು
ತಿಳಿದು ಗುರುಗಳಗಗ್ನಿ ಮೊಳೆಯ
ಬಳಿಗೊಡಲು ಪುನರಪಿಯು ನುಡಿದನು ಗುರುವಿಗಿದಿರಾಗಿ ॥ ೩೨

ಪ್ರಣವ ಪೂರ್ವಕದಿಂದ ನಾರಾ
ಯಣನ ನೆನೆದನು ದನುಜಪುತ್ರನು
ಕ್ಷಣಮನನ್ಯವ್ಯಸನಕಿಕ್ಕದೆ ಹರಿಯ ಮಹಿಮೆಯನು ।
ಎಣಿಸತೊಡಗಿದ ವೇದಶಾಸ್ತ್ರದ
ಭಣಿತಿ ಬಣ್ಣಿಸುವಂತೆ ನೆನೆದನು
ಯಣುಗ ನಾನಕದೇವದುಂದುಭಿಯಮರನಂದನನ ॥ ೩೩

ಈಪರಿಯಲಾ ಶುಕ್ರಭಟ್ಟರು
ತಾ ಪರೀಕ್ಷಿಸಿ ಯುವರ ಶಿಷ್ಯಗೆ
ವ್ಯಾಪಿಸಿದ ಪರತತ್ತ್ವಬೋಧೆಯ ಸಾರದುನ್ನತಿಯು ।
ಆಪರಿಯೆ ತನಗಿಹಪರಂಗಳ
ತಾಪವನು ಕಡಿಯುವುದದೆಂದೇ
ಯಾಪವಿತ್ರೋತ್ತಮನು ನುಡಿದನದೆಂದರಾದ್ವಿಜರು ॥ ೩೪

ಹರಿಯನ್ನು ನೆನೆಯಬೇಡವೆಂದು ತಂದೆಯ ಆಜ್ಞೆ.

ಅದನು ರಾಕ್ಷಸ ಕೇಳಿ ಮಗನನು
ಸದನದೊಳ್ ಸಲೆ ಕರೆದು ಕೋಪಿಸಿ
ಮುದದಿ ನೆನೆವರೆ ಹರಿಯ ಯೆನ್ನಯ ಹಗೆಯ ನೀನಿಂದು ।

ಹರಿಯೇ ಸಂರಕ್ಷಕನೆಂದು ಮಗನ ಉತ್ತರ.

ಕದನ ತಮಗಿಂದಾತನೊಳಗೆಯು
ಮುದದಿ ನೀನೇ ಭಜಿಸೆ ತಮ್ಮಯ
ವಿದಿತಕರ್ಮವನೆಂದರಾತನು ಜನಕಗಿಂತೆಂದ ॥ ೩೫

ಕರ್ಮಫಲದಾಯಕನು ಹರಿ ತಾ
ಬ್ರೊಮ್ಮರೂಪನು ಸರ್ವಲೋಕದ
ಕರ್ಮವನು ನಿರ್ಮಿಸಿದನಾಹರಿ ದೈತ್ಯವನದಹನ ।
ತಮ್ಮಕಾವನು ನಿಗಮರಾಶಿಯ
ಕರ್ಮದುದ್ಧಾರಕನು ನಾಕಜ
ಬ್ರೊಮ್ಮಮುಖ್ಯರಿಗಧಿಕನಾಹರಿ ಯೆಂದು ನೆನೆದಿಹುದು ॥ ೩೬

ಮಗನ ಮಾತಿಗೆ ಬೆಗಡುಗೊಂಡನು
ಸೊಗಸ ಬೇಡೆಲೆ ತಂದೆ ಹರಿಯನು
ಜಗಗಳಂತರ್ಯಾಮಿ ಯಾತನು ಯಿಲ್ಲದೊಂದಿಲ್ಲ ।
ಜಗದ ಜೀವರ ದೇವನಾಹರಿ

ಜಗದ ಜಾಣರು ಬಲ್ಲರಾತನ
ಬಗೆಯುದಾತನು ದುಷ್ಟಜೀವಪ್ರಕರ ಕೇಳೆಂದ ॥ ೩೭

ಮಗನನ್ನು ಸಂಹರಿಸಲು ನಾನಾವಿಧೋಪಾಯ.

ಎನಲು ಬೆದಱಿದನಸುರ ತನುಜನೆ
ಜನಿಸಿದನು ಹಗೆಯಾಗಿ ಯೊಗಳು
ಮನಕೆ ಭಯ ಹಿರಿದಾಗೆ ಪುತ್ರಗೆ ಘಾತಕವ್ರಜವೆ ।
ದನುಜ ಮಾಡಲು ತೊಡಗಿ ನಾನಾ
ಘನತರದ ಘಾತಕವ ಮಾಡಿಸೆ
ಜನಪ ಕೇಳೈ ಯೊಂದುಪಾಯದಿ ನೋಯಿಸಲು ಶಿಶುವ ॥ ೩೮

ಏಸು ಪರಿಯಲಿ ಘಾಸಿಮಾಡಿದೊ
ಡೈಸುವೆನು ಹರಿ ಸೂಸಿ ಬಿಸುಟನು
ವಾಸುದೇವನ ನಾಮ ಕಾಯಿತು ವೈಷ್ಣವೋತ್ತಮನ ।
ಆಸುರದ ಕರಿ ಕೈಯ್ಯಸಿಕ್ಕದು
ಭಾಸುರದ ಜಲ ಮುಳುಗಲೀಯದು
ಕೇಶವನ ಸಿರಿನಾಮ ಕಾಯಿತು ದುಃಖದುನ್ನತಿಯ ॥ ೩೯

ಹೊತ್ತಿದರೆ ಭೂ ನುಂಗಲೊಲ್ಲದು
ಕಾಲಕೂಟಗಳಂಜಿ ಕೊಲ್ಲವು
ಕಾಱಕಿಚ್ಚು ಜೀಮುಟ್ಟಲಮ್ಮದು ವುರಗ ವಿಷಗೊಳದು ।
ಮೇಲೆ ಬೆಟ್ಟವ ಕಟ್ಟಿ ಹಾಕಲು
ಜಾಳಿಸದು ಹುಲುರೋಮ ಮೈಯ್ಯಲಿ
ದೇಟಿಗೆಯ ಬಱಸಿಡಿಲು ಹೊಡೆಯಲಿಕಂಗುರು ಕಂಪಿಸದು ॥ ೪೦

ಇಂತು ನಾನಾಪರಿ ಯುಪದ್ರವ
ಕಂತುಪಿತನಾ ಸ್ಮರಣೆ ಕಾಯಿತು
ಸಂತತ ಪ್ರಹ್ಲಾದದೇವನನರಸ ಕೇಳೆಂದ ।
ಚಿಂತಿಸುತ ಕಶ್ಯಪನ ತನಯನ

ದೆಂತು ಮಾಡುವೆ ನಿಮಗೆ ವಧೆ ಯೆನು
ತಂತರಿಕ್ಷವ ನೋಡಿ ಶುಕ್ರನ ಕರೆದನಾಕ್ಷಣಕೆ ॥ ೪೧

ಬಂದು ಭೃಗುವೇನೆನಲು ರಾಕ್ಷಸ
ನೆಂದನೆಲೆ ಗುರುತನಯ ಮರಣಕ್ಕ
ದೊಂದು ಹೋಮವ ಮಾಡಿ ಕೊಡುವುದು ಮಗನು ಸಾಯಲಿಕೆ।
ಹಿಂದು ಗಳೆಯದಿರಾಭಿಚಾರದಿ [1]
ಮಂದಮತಿಯನು ಕೊಂದು ಕಳೆಯನ
ಲಂದು ಶಿಷ್ಯರ ಕೊಟ್ಟನಿಬ್ಬರ ಶುಕ್ರ ಹರುಷದಲಿ ॥ ೪೨

ಮಗನ ಮರಣಕ್ಕಾಗಿ ಹೋಮವನ್ನು ಮಾಡುವಿಕೆ

ಬಳಿಕ ಹೋಮವ ಮಾಡಲಾಗಳು
ತಲೆಗಳರಡಙ[2]ತೋಳ ಳಾಙಙ
ನೆಲೆಯೊಳಾಗಲು ಕಾಲ್ಗಳೈದಙ ಕೃತ್ಯೆ ಪೊಙಮಡಲು[3]।
ಕಳವಳಿಕೆ ಮಿಗೆ ತಂದು ಕಂದನ
ಕೊಲಲು ಕೆಡಹಿದ ಕುಙಿಯ ಚಂದದಿ
ತಲೆಯ ಕಾಲೊಳಗಿಕ್ಕಿ ಕೈಯ್ಯನು ಬಿಗಿದು ಕೆಡಹಿರಲು ॥ ೪೩

ಪರಮಭಾಗವತೋತ್ತಮನ ನರ
ಹರಿಯ ನಾಮ ಸ್ಮರಣೆ ಕಾಯ್ದುದು
ಶಿರವನಾಗಲು ವಜ್ರಪಂಜರದಂತೆ ಹರಿನಾಮ।
ವರಕುಮಾರೋತ್ತಮನು ನೆನೆವನು
ಮಙಿದಿರದೆ ತಾ ನಾಮಸುಧೆಯನು
ಹರಿ ಹರಿಯೆ ಗೋವಿಂದ ದೇಶಿಗರೊಡೆಯ ನೀನೆನುತ ॥ ೪೪

ಮರಣ ಬಂದಿದೆ ಹರಿಯೆ ತನ್ನಯ
ಹರಣ ನಿನ್ನಾಧೀನವೀಗಳು
ಹರಿಯೆ ನಿನ್ನಯ ನಾಮ ಬಾಯಿಗೆ ಬರಲಿಕಂಜುವೆನೆ।

1ದೆಯಾಭಿಚಾರದಿ ಗ ಘ. ಙ 2ತಲೆಗಳೆಂಟಙ ಕ, ಖ,
3ಚಲಿಪ ಕಾಲ್ಯೆದಙ ಕುಮಾರ್ತಿಯ ಕೃತ್ತಿ ಪೊಙವುಡಲು, ಗಘ. ಙ.

ನಿರುತ ಭೂತವ್ರಾತಕೋಟಿಯು
ಕೊಱಗಿ ಕೊಂಕಿದೊಡಲ್ಲ ಭಕ್ತನು
ಪರಮಕರುಣಾಸಿಂಧು ಯೆನುತಲಿ ನೆನೆದನನವರತ ॥ ೪೫

ನಾರಸಿಂಹನೆ ದಿವ್ಯಸಿಂಹನೆ
ಸಾಱಿದರ ಸಂಸಾರದುಃಖದ
ಬೇಱ ಕೀಳುವ ನಿನಗೆ ಯಂತ್ರದ ಮಂತ್ರತಂತ್ರಗಳು।
ಹೋರಲಾಪವೆ ನಿನ್ನ ನಾಮಕೆ
ಧೀರನಧ್ಭುತನೀಮಹಾಬಲ
ಭೂರಿಭೂತದ ಯಂತ್ರಭಂಜಕ ನೋಡು ನೀನಿದನು॥ ೪೬

ಓಯೆನಲು ಗೋವಿಂದ ಕೇಶವ
ನಾಯೆನಲು ನರಹರಿ ಜನಾರ್ದನ
ಮಾಯೆನಲು ಮಧುಸೂದನಾಯುತಿವಿಕ್ರಮಾಯೆನಲು।
ಶೀಯೆನಲು ಶ್ರೀವಿಷ್ಣು ಜಿಷ್ಣು ವೆ
ವಾಯೆನಲು ವಸುದೇವನಂದನ
ಯಾಯೆನಲು ಯಾದವಕುಲೋತ್ತಮ ರಕ್ಷಿಸುವುದೆಂದ॥ ೪೭

ಎನಲು ಹೂಂಕರಿಸಿತ್ತು ಕೃತ್ಯೆಯು
ತನಗೆ ಬೇಡಿತು ತುತ್ತನಾಕ್ಷಣ
ಕನಲಿ ಶಂಡಾಮರ್ಕರಿಬ್ಬರು ಬೇಡೆಯುವರಾಗ।
ದನುಜಸುತನನು ಕೊಡಲು ಕೋಪದಿ
ಯನಿಮಿಷರು ಬೆದಱಲಿಕೆ ನಿಂದುಱಿ
ತೊನೆದು ಕತ್ತಿಯ ತಿರುಹುತಿರಲಿಕೆ ಸುತನ ನುಂಗೆನಲು॥ ೪೮

ಆದನು ವನಿಮಿಷವೃಂದ ಕಂಡಾ
ಮುದದಿ ಹರಿಯ ಸ್ಮರಣೆಯಿರಲಿಕೆ
ವಿಧಿವಿಧಾತ್ರರು ಕೊಲಲು ನೆರೆಯುರು ಮಿಕ್ಕ ಭೂತಗಳು।

ಹದನವೊಪ್ಪುದು ನಾರಸಿಂಹನ
ವಿದಿತದಲಿ ಬೆಚ್ಚಾಗದಾಯುಷ
ವಿದಿತಕಂಜಿಕೆ ಯುಂಟೆ ಭುವನದೊಳರಸ ಕೇಳೆಂದ ॥ ೪೯

ಮುನಿಗಳನಲಿಕೆ ನೋಡಿತಾಗಳು
ವನಜನೇತ್ರನ ನಾಮಭಜಕನ
ತನಗೆ ನುಂಗಲು ಶಕ್ಯವಲ್ಲದೆ ಶಂಡಮರ್ಕರನು ।
ಕನಲಿ ಮಿಗೆ ಮುಖದೊಗೆಯೆ ಮುನಿಗಳು
ತನುಜಮಾರಣಹೋಮ ತಮ್ಮನ
ನನುಕರಿಸಿ ಬಯಲಾಗಿ ಹೋದರು ಕೃತ್ಯೆಯೊಡಗೂಡಿ ॥ ೫೦

ಯಾವಉಪಾಯದಿಂದೂ ಸಾಯದೇ ಯಿರಲು ಸಮುದ್ರದಲ್ಲಿ ಹಾಕುವಿಕೆ

ನಿಲುಕಲಾಪರೆ ಭೂತಗೀತದ
ಬಳಗವೆನುತಿರೆ ಸುರರು ಹಿರಣ್ಯಕ
ಕಳವಳಿಸಿ ಪ್ರಹ್ಲಾದದೇವನ ನೊಯ್ದು ಪಶ್ಚಿಮದ ।
ಜಲಧಿರಾಶಿಯೊಳಿಕ್ಕಿ ಬೆಟ್ಟವ
ನಿಲಿಸಿದನು ನೀರೊಳಗೆ ಬಾಲಕ
ತಲೆಯ ತಾ ಚೊಟ್ಟಿಕ್ಕಿ ನೆನೆದನು ಭಕ್ತವತ್ಸಲನ ॥ ೫೧

ಆಗಳಾರವಿ ನೋಡಲಾರದೆ
ಬೇಗದಲಿ ಮೆಱೆಗೊಂಡ ಮೇರುವ
ನೀಗಳಾಯಿತೆ ತನ್ನ ಸಂಧ್ಯಾವಂದನೆಗೆ ಹಾನಿ ।
ಸಾಗರದೊಳದ್ದಿದನು ಜನಕನು
ಮೇಗೆ ಬೆಟ್ಟವನಿಕ್ಕಿ ಹೋದನು
ಲಾಗಿ ದುಷ್ಟಾತ್ಮ ರಾಕ್ಷಸನೆನುತ ಚಿಂತಿಸಿದ ॥ ೫೨

ಕಾಯಲಾಪವರುಂಟೆ ತನ್ನಯ
ನಾ
ಬೀಯುವಾಯಿತೆ ದೇವಬ್ರಹ್ಮನೆ ಸಂಜೆ ತನಗೆನುತ।

ಬಾಯು ಬಿಡುತವೆ ನಾರಸಿಂಹನ
ಧ್ಯಾನವೊಡುತ ನೆನೆದನಾಗಲು
ವಾಯುವಾಹನ ದಿವ್ಯಮಂತ್ರವ ಹಿರಣಕಾತ್ಮಜನು ॥ ೫೩

ವರ ನಮೋ ಬ್ರಹ್ಮಣ್ಯದೇವನೆ
ಪರಮಜೀವನ ಗೋವು ದ್ವಿಜರಿಗೆ
ಸರಸಿಜಾಕ್ಷನೆ ಧರೆಯ ಪಾಲಕ ಕೃಷ್ಣ ಗತಿ ಯೆನುತ ।
ವರಯಶೋದಾತನಯ ನೀನೇ
ಹರಣವನು ಕಾಯಲು ಸಮರ್ಥನು
ನಿರುತ ವೇದಾತೀತ ಯಾತ್ಮಾನಿ ರಾಮ ಕೇಳೆಂದ ॥ ೫೪

ಎಂದೊಡಾಕ್ಷಣ ಬೆಟ್ಟ ಖಂಡಿಸಿ
ಮಂದಿ ನೋಡಲು ಮಾಯವಾಯಿತು
ದಂದುಗದಿ ಕಡಲಿಂದ ಹೊಱಮಿಕೆ ಸಾರ್ದು ಬೇಗದಲಿ ।
ಬಂದ ವರಪ್ರಹ್ಲಾದದೇವನ
ದಂದು ಮೆಲ್ಲನೆ ತನ್ನ ಸಂಧ್ಯಾ
ವಂದನೆಯ ನೆಱೆ ಮಾಡಿ ದೇವನ ನೆನೆಯುತಡಿಯಿಟ್ಟ ॥ ೫೫

ಕಾಲದಲಿ ಮಾಡಿದರೆ ಕರ್ಮವ
ದೇಟೀಗೆಯು ಸತ್ಕರ್ಮಸಿದ್ಧಿಯು
ಮೇಲೆ ಕರ್ಮವ ತಾನಕಾಲದ ತಲಹಿನಲಿ ಮಾಡೆ ।
ಕೀಳು ಫಲವೆಹುದರಸ ಸಂಧ್ಯಾ
ಕಾಲ ತಪ್ಪಿದ ಸಂಜೆ ಸ್ತ್ರೀಯಳ
ಕಾಲಿಗೆಱಗಿದ ಪರಿಯ ಫಲವೆಹುದರಸ ಕೇಳೆಂದ ॥ ೫೬

ಅಂತು ಕಾರಣವಾತ ಮಾಡಿದ
ನಂತರಿಸದಾಸಂಜೆ ಕರ್ಮವ
ನಂತದಕೆ ಫಲವಾಯ್ತು ಸಂಧ್ಯಾಕಾಲ ಮೀಱದಿರೆ ।

ಚಿಂತಿಸದೆ ತ್ರೈಲೋಕ್ಯವಿಜಯದ
ಸಂತತಿಯು ನೆಱೆ ಮೊಬ್ಬಿ ಸತ್ವಕೆ
ಕಂತುಪಿತ ಕರುಣಿಸಿದನಾತಗೆ ನಿತ್ಯವಿಜಯವನು ॥ ೫೭

ಸಮುದ್ರದಿಂದೆದ್ದು ರಾಜಗೃಹಕ್ಕೆ ಬರುವಿಕೆ.

ಇಟ್ಟ ದ್ವಾದಶನಾಮ ವೈಯ್ಯಲು
ತೊಟ್ಟನಾ ಯಜ್ಞೋಪವೀತವ
ಬೊಟ್ಟಿನಲಿ ಕುಶೆ ಯಿಱುಕಿ ಬಂದನು ರಾಜಮಂದಿರಕೆ ।
ಕಟ್ಟಿಕೊಂಡನು ತಾನು ತುಲಸಿಯು
ನಿಷ್ಠೆಯಲಿ ತಾ ಹರಿಯು ನಾಮದ
ದಟ್ಟಣೆಯು ಬಿಡದಾಗ ನೆನೆಯುತ ರಾಜಬೀದಿಯಲಿ ॥ ೫೮

ಕಂಡ ಪಾತಕರಾಶಿ ಬೇವುದು
ದಿಂಡುಗೆಡುವುದು ಸಾಧುನಿಕರವು
ತಂಡ ತಂಡವ ಪತಿತರೆಲ್ಲರ ದೋಷ ಹಾಱಿದವು ।
ಕಂಡರಾತನ ಗೆಳೆಯರೆಲ್ಲರು
ಚಂಡಿ ಮಾಡಿದರಾತನನು ತಾ
ವೆಂಡಲೆದು ನಿಮ್ಮ ಯ್ಯಮತವನು ಮಾತು ನೀನೆಂದು ॥ ೫೯

ಎಂದೊಡಾಪ್ರಹ್ಲಾದದೇವನು
ತಂದೆಯುರ ಮತವಲ್ಲ ತಮಗದು
ನಿಂದಿತವು ಗೋವಿಂದನಾಮಕೆ ತಮ್ಮ ಮತವೆಂದ ।
ಇಂದಿರಾಪತಿ ದೂತನನು ನೀವ್
ತಂದೆಯೆಂಬರೆ ನಿಮಗೆ ತಾನರ
ವಿಂದಲೋಚನ ಪಕ್ಷವಾದರೆ ನುಡಿರಿ ತನ್ನೊಳಗೆ ॥ ೬೦

ಅಲ್ಲದಿದ್ದೊಡೆ ಸುಮ್ಮನಿರಿ ನೀ
ವೆಲ್ಲ ನಮ್ಮಯ ಮಾತ ಕೇಳಯೆ

ಫುಲ್ಲನಾಭನ ಚರಣಕಾಸತರಾಗಿ ನೀವೆಂಬ ।
ಮೆಲ್ಲಮೆಲ್ಲನೆ ಸರಿದರಧಮರು
ಫುಲ್ಲನಾಭನ ಭಕ್ತಿಲೋಲುಪ
ದಲ್ಲಿ ಯಿದ್ದರು ತತ್ತ್ವಬೋಧೆಯು ಘನವ ಕೇಳಿದರು ॥ ೬೧

ಹರಿಯೇ ತನಗೆ ಬಂಧುವೆಂದು ಪ್ರಲ್ಹಾದನ ವಚನ

ಹರಿಯೆ ತಮ್ಮಯ ಯಾತ್ಮಬಂಧುವೆ
ಪರಮಜೀವವಿದೆಲ್ಲ ಲೋಕದ
ಹರಣವಾತನು ಸರ್ವಜೀವರ ಹೊರೆವ ತನ್ನೊಡೆಯು ॥ ೬೨

ಆತನನು ಮಱೆದವರು ಪಾಪದ
ಖ್ಯಾತಿ ತಮಸಿಗೆ ಕೆಡುವರಲ್ಲದೆ
ಭೂತಳದ ಮೇಲುಂಟೆ ಯುತ್ತಮಜನ್ಮ ಹರಿಪದವ ।
ನೋತು ಮಱೆಯದೆ ವೇದಶಾಸ್ತ್ರದ
ನೀತಿಯಲಿ ನಡೆವವರದಾರೀ
ಭೂತಳದ ಮೇಲುಂಟೆ ಯೆನಲಿಕೆ ಯಾತನಿಂತೆಂದ ॥ ೬೩

ಸುರರು ಧರ್ಮಂಗಳಲಿ ನಡೆವರು
ಸುರರ ಧರ್ಮದೊಳರ್ಥವಾದುದ
ನಿರತ ನಡೆವರು ಋುಷಿಜನಂಗಳು ಪವರದರ್ಥವನು ।
ಧರಣಿಯಲಿ ವಿಪ್ರೋತ್ತಮರು ತಾ
ವುರವಣಿಸಿ ತಾವ್ ನಡೆಯುತಿರ್ಪರು
ಪರಮ ವೇದಪುರಾಣಧರ್ಮಾದಿ ನಡೆವರಪರೆಂದ ॥ ೬೪

ಎಂದು ತತ್ವಜ್ಞಾನವೆಲ್ಲವ
ನಂದು ವರಪ್ರಹ್ಲಾದ ತನ್ನಯ
ತಂದೆಗಹಿಂತಂಗಙುಹಿ ನೆನೆದನು ನಡೆದಸುರಘನೆಗೆ ।

ಹರಿಯನ್ನು ಪ್ರಹ್ಲಾದನು ಸ್ತುತಿಸುತ್ತಾ ಬರುವಿಕೆ.

ನಂದನಂದನ ಯಿಂದಿರಾಪತಿ
ತಂದೆ ಬ್ರಹ್ಮನ ಸರ್ವನಾಕಜ
ವೃಂದರಕ್ಷಕ ವರನೃಕೇಸರಿ ಭಕ್ತಸುರಧೇನು ॥ ೬೫

ಇಂದು ತನ್ನನು ತಂದೆ ಕೊಲುವನು
ಮಂದರೋದ್ಧರ ಕಾವ್ರುದೆನುತಲಿ
ಬಂದು ಕಂಡನು ತನ್ನ ಜನಕನ ಕಡೆಯು ಸಂಜೆಯಲಿ ।
ಅಂದು ಕುಣಿಯುತ ಸಕಲಶಿಷ್ಯರ
ಮಂದಿ ನೃತ್ಯಂಗಳಲಿ ಪಾಡುತ
ಮುಂದೆ ವೈಷ್ಣವಮಂದಿ ಕೂಡಿಯೆ ಹರುಷದುಬ್ಬಿನಲಿ ॥ ೬೬

ಎಳಯ ತುಳಸಿಯ ಮಾಲೆ ಕೊರಳಲಿ
ನಳಿನನಾಭನ ನಾಮ ಬಾಯಲಿ
ನಲಿದು ಹರಿ ಹರಿ ಯೆನುತ ಹರುಷದಿ ನೃತ್ಯವಾಡುತಲಿ ।
ಗೆಳಯರೆಲ್ಲರ ಕೂಡೆ ಯೂಡುತ
ವೂಲಿದು ನಾರಾಯಣನ ನಾಮದ
ಉಲುಹ ಮಾಡುತ ಬರಲಿಕಿದಿರಲಿ ಕಂಡ ಜೀವರಿಗೆ ॥ ೬೭

ಪಾಪ ಹರಿಯಲಿಕಾಯ್ತು ಲೋಕದ
ತಾಪಸರ ವರಬಂಧು ಬರಲಿಕೆ
ಕೋಪಿಸಲು ತಮ್ಮಯ್ಯನೋಲಗದಖಿಳದಿತಿಸುತರು ।
ಆಪುರಂದರವೈರಿಗಾಗಲು
ಭಾಪೆನುತ ನಡೆತಂದು ತಂದೆಗೆ
ಪಾಪರಹಿತನು ಗೋತ್ರನಾಮದಿ ಬಂದು ಪೊಡವಟ್ಟ ॥ ೬೮

ಎಣಗಲಿಕೆ ಪಿತನಿತ್ತ ಪೀಠವ
ನೆಣಿಕೆಯಲು ಕುಳ್ಳಿರುತ ಹರಿ ಹರಿ
ಶರಣೆನಲು ಕಿವಿಯೊಳಗೆ ಕಾಸಿದ ತೈಲ ಹೊಕ್ಕಂತೆ [1] ।

---

[1] ಸೀಸಹೊಯ್ದಂತೆ, ಗ. ಘ. ಙ.

ಹರಿಯ ನೆನೆಯಬೇಡೆಂದು ತಂದೆಯ ಅಪ್ಪಣೆ.

ಜುರುಜುರಿಸಲೆಲೆ ಕಂದ ತನ್ನಯ
ಶಿರಕಸಹ್ಯವ ನೆನೆವರೇ ಮಿಗೆ
ಹರಿ ಯೆನಗೆ ಛಲದಂಕನಾತನ ನೆನೆಯಬೇಡೆನಲು ॥ ೬೯

ಮೋಣದಾತನ ನೀನು ನೆನೆದೊಡೆ
ಗೋಣ ಕೊಯ್ದು ಪೆನ್ನ ನೀಗಲು
ತ್ರಾಣದಲಿ ನೀ ನೀಗುವೆಂಬೀ ಮಾತ ನೆನೆಯದಿರು ।
ಮಾಣು ನೀನೆಂದೆನಲು ತಂದೆಗೆ
ಜಾಣಿನಲಿ ಪ್ರಹ್ಲಾದ ನುಡಿದನು
ಗೋಣ ಕೊಯ್ದರೆ ನೆನೆಯಲಾಹರಿಯೆನ್ನ ಪ್ರಾಣಿಸುವ ॥ ೭೦

ನೀವು ನೆನೆಯದೆ ಹರಿಯನೀಗಳು
ಸಾವಿಗಂಜುವಿರೆನಲಿಕನಿಮಿಷ
ಭಾವದಲಿ ನೋಡಿದನು ಕಂದನ ದೈತ್ಯ ಕೋಪಿಸುತ ।

ಹರಿಯು ವಿಷಯದಲ್ಲಿ ತಂದೆ ಮಕ್ಕಳ ವಿವಾದ.

ದೈವ ವುಂಟೇ ಮತ್ತೆ ತಾನಿರೆ
ದೈವ ತಾನೇ ಯೆಂಬ ಶ್ರುತಿಗಳು
ತಾವು ಹಲವುಂಟೇಗಲನ್ಯಥ ದೈವವಿಲ್ಲೆಂದ ॥ ೭೧

ವೇದ ತಾನೇ ದೈವವೆಂದರೆ
ಮೇದಿನಿಯ ಜಡಜೀವರೆಲ್ಲರು
ವೇದ ಹೊಗಳುವ ದೈವವಾಗುವರಿಹಪರಂಗಳಲಿ ।
ವೇದ ಸಾಕ್ಷಾದ್ಬ್ರಹ್ಮವೆಂಬೊಡೆ
[illegible]ದಿ ಯಿಹುದೇ ಯಿಹಪರತ್ರಕೆ
[illegible]ವೆಂಬುವ ಹಲವು ಶ್ರುತಿಗಳ ವುಂಟು ತತ್ತ್ವದಲಿ ॥ ೭೨

[illegible] ಶ್ರುತಿವಾಕ್ಯವಾದುದ
ಜಾ[illegible] ಜೀವರು ಹಲರು ಹರಿಯಲಿ
ಕೀಳ[illegible] ಬ್ರಹ್ಮವಿದೇವಹರೆಂಬ ಶ್ರುತಿಕೋಟಿ ।

ಕೀಳಗಾಕಳು ತೊರೆವುದಲ್ಲದೆ
ಮೇಲು ಬೊಂಬಿನಲಾವ ಬಿಡಿಯಕೆ
ಲಾಲಿಸುತವಾಗದಕೆ ತೊರೆವುದೆ ಯೆಂಬ ನೀತಿಯನು ‖ ೭೩

ಕೇಳದೇಕಕಟಕಟ ನೀ ಮರು
ಳೋಳಯಲಿ ಮೊದಲಿಗನದಾದರೆ
ಕೀಳುಗಂಡಿರಬೇಕು ಹರಿಯಲಿ ಸರ್ವಕಾಲದಲಿ ।
ಲಾಲಿಸುವೊಡದ್ವೈತಪಕ್ಷಕೆ [1]
ಕಾಳು ನಿಮ್ಮಯ ಕರ್ಮಕಾಂಡವು
ಮೇಲೆ ನೀನಿದನೊದೆದು ಕಳಯ್ಯ ಸರ್ವಗತ ಹರಿಯು ‖ ೭೪

ಭೂಮಿಯೊಳಗಾಕಾಶವಾಹ
ಸ್ತೋಮದಲಿ ಶಿಖಿಯಲ್ಲಿ ಯನಿಲನ
ಧಾಮದಲಿ ಗಿರಿಯಲ್ಲಿ ಕಾಷ್ಟದಲಿಹನು ಹರಿ ಯೆಂದು ।
ನೇಮಿಸಲು ಹರಿಭಕ್ತರಂದದಿ
ಪ್ರೇಮಪುಳಕದಿ ಹರಿಯ ನಂಬದೆ
ಕಾಮಲೋಭದ್ವೇಷಮತ್ಸರದಿಂದ ತುಂಬಿಹುವು ‖ ೭೫

ಕೋಪದಿಂದ ಹರಿಯನ್ನು ತೋರಿಸೆಂದು ತಂದೆಯ ವಚನ.

ಎಂಬವನು ತಾ ದೈತ್ಯನೆಂದೊಡೆ
ತುಂಬಿ ತಾ ಕೆಕ್ಕರಿಸಿ ನೋಡಿದ
ತಿಂಬೆನೀಗಳ ನಿನ್ನ ಬಕುತಿಯ ವಾದ ಬೇಡೆನುತ ।
ಅಂಬುಜಾಕ್ಷನ ನನ್ನ ಮುಂದಣ
ಕಂಭಮಧ್ಯದಿ ತೋರಿಸಾದೊಡೆ
ನಂಬಿದವ ನೀನೆನಲು ವಿಶ್ವಕದಂಬರಕ್ಷಕನ ‖
ತೋರುವೆನು ತಾನಿನ್ನು ಹಿಂದಕೆ
ಸಾರು ನೀತನ್ನ [illegible]
ಮಾರಪಿತ ಬಾ ಯೆನಲು [illegible]ದನಾಗ ಕಂ[illegible] ।

---

1 [illegible]

ತೋಱಿಸೈ ಕರುಣಾಳುತನವೆನು
ಮಾಱುಗೊಳ್ಳೃ ತನ್ನ ನೀಗಲು
ತೋಱಿಸದೆ ನೀನಿದ್ದ್ದ್ದಡೆ ಭಕ್ತ ತಾನಲ್ಲ ॥ ೭೭

ಎಂದು ತಂದೆಗೆ ನುಡಿದನಾಗಲೆ
ಯಿಂದಿರಾಪತಿ ವರನೃಕೇಸರಿ
ಯೆಂದು ಕರೆ ಕರೆ ಯೆನಲು ಕರೆಯೆನು ನಿನ್ನವನನೆಂದ ।
ಇಂದು ಕರೆವೆನು ನನ್ನ ಯಾಳ್ದನ
ತಂದೆ ಕೇಳೈ ನೀನು ತಡೆ ತಾ
ಛಂದವೆನು ಕೇಳನುತ ಪಿತಗೆಯು ನುಡಿಯೆ ಘುಡಿಘುಡಿಸಿ ॥ ೭೮

ಹೋ ಯೆನುತ ಹಲ್ಕಡಿದು ರಾಕ್ಷಸ
ಕೈಯ್ಯನೆತ್ತಿಯೆ ಹರಿದು ಕಂಭವೆ
ಹೊಯ್ದು ಕರೆಯೋ ನಿನ್ನವನನೀ ಕಂಭಮಧ್ಯದಲಿ ।
ಹೊಯ್ಯೆನುತ ವರವೈಷ್ಣವೋತ್ತಮ
ಜೀಯ ಬಾರೈ ಸರ್ವಲೋಕದ
ಪ್ರಿಯ ಬಾರೈ ಯೆನಲು ದೈತ್ಯನು ನೋಡುತಿಂತೆಂದ ॥ ೭೯

ಎಲವೊ ತರುವಲಿ ತರಳ ಮತಿಯಲಿ [1]
ಬಲಿದೆ ನೀವಾಗ್ವಾದಿಂದವೆ
ತಲೆಯ ಕಾವನ ನೀನು ತೋಱಿದರೀಜಗತ್ತಿನಲಿ ।
ಇಳಗೆ ನೀನೇ ಗುರುವು ಯೆಂಬೆನು
ಬಳಿಕ ವೈಷ್ಣವನೆಂಬೆ ನಿನ್ನನು
ವುಲುಕದೀ ಕಂಭದಲಿ ತೋಱಿಸು ನಿನ್ನವನನೆಂದ ॥ ೮೦

ನೂಕಿದನದೋಲಗದ ಮಧ್ಯದೊ
ಳಾಕುಮಾರನ ಕೋಪದಿಂದವೆ
ವ್ಯಾಕುಲಾಂತಃಕರಣವಾದುದು ಸರ್ವಸುರನಿಕರ ।

1 ತರಳತನದಲಿ, ಗ. ಘ. ಙ.

ಹೋ ಕಳಕಳವಿದೇತಕೀಗೆನು
ತಾಕುಮಾರಕ ಕರವನೆತ್ತಿಯೆ
ಯೇಕಕಟ ತಾ ಕರೆದ ಬಳಿಕವೆ ಹರಿಯು ಬರದಿಹನು ॥ ೮೧

ಕರೆವೆನೇ ತಾ ನೆನಲು ಬಗುಳದೆ
ಕರೆ ಯೆನುತ ಕಿವಿ ಚಪ್ಪೆಯೊಯ್ಯಲು
ವರಕುಮಾರಕನಳುತ ಕರೆದನು ಜಗದ ವಲ್ಲಭನ ।
ವರಹರೂಪನೆ ಜೀಯ ಕರುಣಾ
ಕರನೆ ಹರಿ ಹರಿ ಭಕ್ತವತ್ಸಲ
ತರುವಲಿಯ ಪತಿಕರಿಸಿ ಕೊಂಬುದು ದೇವ ನೀನೆನುತ ॥ ೮೨

ಮುರಳಿಯಾಚಮನೀಯ ಮಾಡಿಯೆ
ವರಯಮಾದ್ಯಷ್ಟಾಂಗಯೋಗದಿ
ನಿರತನಾದನು ವೀಬೃಹಸ್ಪತಿ ಪ್ರತಿಯ ಕರ್ಮದಲಿ ।
ವರಯಶೋದಾನಂದನನ ತಾ
ಸುರಹೃದಯಪರಿಯಂಕಪೀಠನ
ವರಕುಮಾರನು ಮನಕೆ ಗೋಚರವಾಗಿ ಕರೆಯಲಿಕೆ ॥ ೮೩

ಪುಂಕೃತಿಯು ತಾ ಹುಟ್ಟೆ ನೆಲನೆಲ
ದಾಕೃತಿಯ ತವೆ ನೆಲಸಿ ಮೊಳೆಯಲು
ಯಾಕರಿಸುತಿದೆ ಕೇಳು ದೈತ್ಯರ ಮಾರಿದೇವತೆಯು ।
ಲೋಕರಕ್ಷಕ ಮಂತ್ರಕಾರಣ
ನಾಕಜಾಧಿಪಮುಖ್ಯಸುರರಿಗೆ
ತೇಕರೆಯ ಮಾಡಿದರು ನುಂಗುವ ಮೃತ್ಯು ಕೇಳೆನಲು ॥ ೮೪

ಇದಕೆ ತಾನಂಜುವೆನೆ ಮೊಳೆದರೆ
ತಿದಿಯ ನುಚ್ಚುವೆ ನಿನ್ನ ದೇವರ
ಹೃದಯಕಂಪನವೇಕೆ ಬಗುಳದದೀಗ ತೋಳೆನಲು ।

ಸದರವಾದೊಡೆ ನಿನ್ನ ಮಾತಿಗೆ
ಹದನ ಬಲ್ಲೆನು ತಮ್ಮ ಕೇಳೋ
ಯಿದಿರದಾವನು ಮೂರುಲೋಕದೊಳನಗೆ ಹೇಳೆನಲು ॥ ೮೫

ಎನಲು ತಾ ಪ್ರಹ್ಲಾದದೇವನು
ಜನಕಗೆಂದನು ಹೊಲ್ಲದೈವವೆ
ನಿನಿತು ನೀನೋಡುವೆನದೆಂದರೆ ಕರವೆನಾನೀಗ ।
ಮನಕೆ ಗೋಚರವಾದ ದೇವನು
ನೆನೆಯಲಿಕೆ ತಾ ಬಪ್ಪನಿನಿತನು[1]
ದನುಜನಿಕರವು ನೀವು ಪೇಳೀತಂಗೆ ಬುದ್ಧಿಯನು ॥ ೮೬

ಎನಗದೇತಱ ಬುದ್ಧಿಯೆಂದೊಡೆ
ತನಯನಾಚಮನೀಯ ಮಾಡಿಯೆ
ನೆನೆದನಾಸಾಕ್ಷಾತು ದೇವನ ಸಿತ್ಯವಸ್ತುವನು ।

ಪ್ರಹ್ಲಾದಕೃತಸ್ತುತಿ

ಮನದಿ ಧ್ಯಾನವ ಮಾಡಿ ದೇವನ
ವನಜಚರಣವನಲ್ಲಿ ನೆನೆವುತ
ವನುಜಹರ ಸುರರಕ್ಷ ವೇದಾತೀತ ಬಹುದೆಂದು ॥ ೮೭

ದೇವ ಭಕ್ತರ ಕಾಮಧೇನುವೆ
ದೇವ ಭಕ್ತರ ಕಲ್ಪವೃಕ್ಷವೆ
ದೇವ ಭಕ್ತರ ಭಾಗ್ಯನಿಧಿಯೇ ವೈಷ್ಣವೋತ್ತಮರ ।
ಆವ ಬಲ್ಲವ ನಿನ್ನ ಮಹಿಮೆಯ
ನಾವ ದೇವರು ನೆನೆಯ ಬಲ್ಲರು
ಜೀವರಾಶಿಯೊಳೊಂದು ಹುಳು ತಾನೇನ ಬಲ್ಲವನು ॥ ೮೮

ಭಾವಶುದ್ಧಿಯೊಳಪ್ಪ ಜೀವರ
ಕಾವದೇವನೆ ತನ್ನ ರಕ್ಷಿಸು
ಗಾವಿಲರೊಳತ್ಯಧಿಕ ತಾನೇ ನಿನ್ನ ನಂಬಿಹೆನು ।

---

[1] ನಿನಯುದಲಿ ತಾ ಕರೆದು ತೋಱು ವೆ. ಗ. ಫ.

ದೇವ ನಿನ್ನನು ನಂಬಿದಮರ
ಸ್ತೋಮಕಭಯವನಿತ್ತು ತಮನನು
ದೇವ ಕೊಂದಿರಿ ಮತ್ಸ್ಯರೂಪದ ನಿಗಮರಕ್ಷಕನೆ ॥ ೮೯

ದೇವ ದೈತ್ಯರುವಮೃತಮಥನವ
ತಾವು ಮಾಡಿಯೆ ಸುಧೆಯು ಜನಿಸಲು
ಯಿಾವಿಬುಧರ ತತಿಗೆಱೆದಮರರ ಮಾಡಿದೈ ನೀನು ।
ದೇವದಲ್ಲಣರೆನಿಪ ದೈತ್ಯರಿ
ಗೋವಿ ಸುರೆಯನದೆಱೆದು ಸೊಕ್ಕಿಸಿ
ಹಾ ವಿಭುವೆ ಕೂರ್ಮಮೂರ್ತಿಯೆ ಸುರರ ರಕ್ಷಿಸಿದೆ ॥ ೯೦

ಬಳಿಕ ಸುರರನು ನಮ್ಮ ಜನಕನ
ಬಳಿಯು ಜನಿಸಿದ ಕಾಡತೊಡಗಲು
ತಲೆಯು ಸೀಳಿಯೆ ಬಿಸುಟು ಭೂಮಿಯು ಧರಿಸಿ ರಕ್ಷಿಸಿದೆ ।
ಇಳೆಯು ಕಾದೈ ವರಹರೂಪದಿ
ನಳಿನಸಂಭವಮುಖ್ಯಸುರರಿಗೆ
ಪ್ರಳಯಕಾಲನು ತಮ್ಮ ತಾತನು ತನಗೆ ಬಲು ಗರವು ॥ ೯೧

ಈತ ತಾನಾಗಿರಲು ತನ್ನಯ
ಭೀತಿಯನು ಬಿಡಿಸಲಿಕೆ ಬಲ್ಲಿದ
ತಾತ ನಿಲ್ಲೈ ನೀನು ತಪ್ಪದೆ ಯೆನಲು ಕಂಭದಲಿ ।
ವಾತ ಪ್ರಳಯದಿ ಬೀಸುವಂದದಿ
ಭೂತನಾಥನ ರೌದ್ರಡಮರು
ಖ್ಯಾತಿ ಕೋಟಿಗಳಂತೆ ಮೊಱಗಲು ರೂಢಿ ಬಿಱಿಯಲಿಕೆ ॥ ೯೨

ಖಳನನು ಭಟರ ನೆರೆದು ಕೈದುವ
ಕೊಳಲು ರಾಕ್ಷಸ ತಾನು ಝುಮ್ಮನೆ
ಸಲಿಲ ಸೇದದನೆದ್ದು ನಿಂದಿದ ಕಂಭ ಮೊಱೆಯಲಿಕೆ ।

ಹುಳಿತಕಂಭವು ತಮ್ಮತಾ ಜ
ಕ್ಕುಲಿಸಿತೆನುತಲಿ ಬಂದು ತಾ ಕರ
ತಳದೊಳಱಗಿದನಬ್ಧಿ ಕದಡಲು ದೈತ್ಯ ಕಂಭವನು ॥ ೯೩

ಹೊಯ್ದು ಹೋಱವಡು ಬೇಗ ಯಜ್ಞವ
ಸಾಧಿಸುವೆನಿದು ಯೂಪಕಂಭವು
ಯಿಾದುರಾಗ್ರಹವುಳ್ಳ ನಿನ್ನನು ಪಶುವ ಮಾಡುವೆನು ।
ಆದೊಡಹೆ ದೀಕ್ಷಿತನು ತನ್ನಯ
ಕ್ರೋಧಶಿಖಿಗಾಯಿತ್ತು ವೇದಿಕ
ಮೇದಿನಿಯೊಳಹ ಪರಿಜನಗಳುದ್ಗಾತೃಹೋತೃಗಳು ॥ ೯೪

ಹಿರಣ್ಯ ಕಶಿಪುವಿನ ಕೋಪ.

ಕ್ರೋಧದಲಿ ಬಂದೆಱಗಿ ದೈತ್ಯ ವಿ
ಷಾದದಲಿ ಘುಡಿಘುಡಿಸಿ ಮಿಾಸೆಯ
ನಾದುರಾಗ್ರಹಿ ಮುಱಿದು ಕೊಳುತಲಿ ಚೀರಿ ಬೊಬ್ಬಿಡುತ ।
ಆ ದಿತಿಯ ಮಗನೆದ್ದು ತನ್ನನು
ವಾದ ಬಲವನುಕರಿಸಿ ಸಿಂದುದು
ಮೇದಿನೀಕಂಟಕಹಿರಣ್ಯಕ ಕಂಭದಿದಿರಾಗಿ ॥ ೯೫

ಧಗಧಗಿಲು ಭುಗಿಭುಗಿಲು ಛಳಯೆಂ
ದೊಗೆದು ಕಿಡಿಗಳು ನೆಗೆಯೆ ಛಟಛಟ
ನೊಗೆದು ಕರ್ಬೊಗೆ ಸೂಸಿತಾ ಕಿಚ್ಚೊಗೆದು ದಾನವಸಭೆಯು ।
ಬಗೆಯುಡುಗಿತಾ ಸಭೆಯ ರಾಕ್ಷಸ
ರಗಡುತನ ಬೆಂಡೇಳೆ ದಿಕ್ಕಿನ
ದಿಗಿಭ ಘೀಳಿಡೆ ಶರಧಿ ತುಳುಕಲು ಸರ್ವಠಾವಿನಲಿ ॥ ೯೬

ಬೆಗಡು ಬೀಳಲು ವುಳಿಕು ಸುಱಿದವು
ಹಗಲು ಕಂಪಿಸೆ ಸೃಷ್ಟಿ ಸರ್ವವು
ಬಗೆದರಗ್ಗದ ಬ್ರಹ್ಮ ರುದ್ರರದಿಂದು ಕಡೆಗಾಲ ।

ಹಗಲಿರುಳಿಗೆನುತಿರಲಿಕಾಕ್ಷಣ
ಸೊಗೆದ ಕಿಚ್ಚಿನ ತೇಜಮಧ್ಯದಿ
ನಿಗಮ ಹೊಗಳುವ ವರ್ಣದಂದದೊಳರಡುಷೋಡಶದ ॥ ೯೭

ನೃಸಿಂಹಾವತಾರ.

ಮಿಗುವ ಕರ್ಣದ ಹೇಮವರ್ಣದ [1]
ತಗಡಿನುಡಿಗೆಯು ಹೇಮಕೊರಳಿನ
ಸೊಗಸು ಮಿಗಲರವಿಂದಲೋಚನ ರೌದ್ರತೇಜವಲಿ ।
ಜಗಕೆ ಬೆಳಗುವ ಸೂರ್ಯಕೋಟಿಯು
ಬಗೆಯದಾತನ ನಖದ ಕಾಂತಿಯು
ಯೊಗೆದ ಪಾಣಿಯು ಶಂಖಚಕ್ರಗದಾಸಿತೋಮರದ ॥ ೯೮

ದನುಜಮಾರಣಶಾರ್ಙ್ಗಚಾಪವು
ಘನತರಶ್ರೀವೈಷ್ಣವಾಸ್ತ್ರವು
ವಿನುತ ಬತ್ತೀಸಾಯುಧಂಗಳು ಮೆಱೆವಕರಗಳಲಿ ।
ತೊನೆವ ಶ್ರೀಮೂರ್ತಿಯನು ನರಹರಿ
ದನುಜಗಾಗಲೆ ತೋಱುತಿರಲಾ
ಜನಜನಿತವಾಯ್ತುರಸ ಕಂಭಸ್ಥಾನದೇವತೆಯು ॥ ೯೯

ನರಸಿಂಹಮೂರ್ತಿಯು ಮೃಗವೆಂದು ಹಿರಣ್ಯಕಶಿಪುವಿನ ಅಪಹಾಸ.

ಹರಿಯು ರೌದ್ರದ ಕೋಪಶಿಖಿಯನು [2]
ವರಹಿರಣ್ಯಕ ಕಂಡು ಬಗೆಯದೆ
ತರಹರಿಸಿ ಬಿಗಿದಿಕ್ಕಿ ತಳುಕನು ಬಿಸುಟು ಕೈದುವನು ।
ಕರವನುದ್ಧತ ನಗುತ ನುಡಿದನು
ಸುರರು ಹೊಗಳುವ ಬೊಮ್ಮ ತನ್ನಯ
ವರಕುಮಾರನು ಸೃಷ್ಟಿಮಾಡಿದ ಮನೆಯ ಕಂಭದಲಿ ॥ ೧೦೦

---

1 ಮಿಗುವ ಕರಗಳ ಪೀತವರ್ಣದ, ಗ. ಘ.
2 ಹರಿಯು ರೌದ್ರಾಟೋಪಕೋಪದಿ, ಗ. ಘ.

ಮಗನು ಮಾಡಿದ ಮೃಗದ ಮೋಡಿಯು
ಲೊಗೆದುದೀರವಿಕೋಟಿತೇಜದಿ
ಜಗಕೆ ಸೋಜಿಗವಾಯ್ತು ಬೇಡಿನ್ನೇಕೆ ಹಗರಣವು ।
ನಗುತ ತಂಬುಲ ಸೂಸೆ ನುಡಿವನು
ಮಗನೆ ನಿನ್ನಯ ದೇವನೆಂಬನ
ನಿಗಮವರಿಯುವುದೆಂಬೆ ತನ್ನಯ ಬೇಂಟೆ ಬಲದೊಳಗೆ ॥ ೧೦೧

ಬಲ್ಲರೀಗಳು ಲುಬ್ಧರೆಲ್ಲರು
ನಿಲ್ಲದೀತನ ನೀನು ಬಣ್ಣಿಪೆ
ಬಲ್ಲೆನೇ ಹುಲುಮೃಗವನೆನಲಿಕೆ ನುಡಿದ ಪ್ರಹ್ಲಾದ ।
ಇಲ್ಲಿ ಯಿಂದುದಯಿಸಿದ ರೂಪಿದು
ಬಲ್ಲಿದರು ಮಿಗಿಲೆಂಬ ನಿನ್ನಯ
ಯೆಲ್ಲರಾಯುಷಕಿಂದು ಕಡೆ ಯಾಹುದೀತನುಗುರಿಂದ ॥ ೧೦೨

ಈತನಿದಿರೇ ತಂದೆ ಲೋಕ
ವ್ರಾತ ತಾನಿದಿರಲ್ಲ ನೀನಿರ
ದೇತರತಿಶಯವೆನೆ ಹಿರಣ್ಯಕ ಚೀರಿ ಬೊಬ್ಬಿರಿದ ।

ನರಸಿಂಹ ದೇವರು ಮತ್ತು ಹಿರಣ್ಯಕಶಿಪುಗಳ ಸಂವಾದ

ಭ್ರಾತನನು ನುಂಗಿೀಗ ಭೂಮಿಯ
ದಾತನೆನಿಸಿದ ವರಹನೆಂಬೀ
ಮಾತ ಮೆಱೆಯದಿರೀಗ [1] ಕೆಡಹುವೆ ನಿನ್ನ ರಣದೊಳಗೆ ॥ ೧೦೩

ಇಲ್ಲಿ ಸಿಕ್ಕಿದೆ ಯಿನ್ನು ಬಿಡುವೆನೆ
ಬಲ್ಲಿದನು ನೀನೆಂಬ ಸತ್ವವ
ನಿಲ್ಲಿ ತೋಱು ಬೇಗ ಕಳೆಚುವೆ ನಿನ್ನ ಸತ್ವವನು ।

---

1 ಮಾತನುಱೆಯದಿರೀಗ, ಗ, ಘ.

ಬಿಲ್ಲು ನಿನಗೇಕೆನುತ ರಾಕ್ಷಸ
ನಲ್ಲಿ ಖಡ್ಗವ ಕೊಂಡು ನಡೆಯಲಿ
ಕೆಲ್ಲರೆದ್ದರು ದೈತ್ಯನಾಯಕರೆರಡುಬಾಹೆಯಲಿ ॥ ೧೦೪

ಇದ್ದ ರಖುವೆತ್ತಾಖುಕೋಟಿಯು
ದೊದ್ದೆಗರು ಮುನ್ನಮೃತಮಥನದ
ಲಿದ್ದವರು ಮತ್ತಲ್ಲಿ ದೇವಾಸುರರ ಕದನದಲಿ।

ಯುದ್ಧಕ್ಕಾಗಿ ದೈತ್ಯಾಗಮನ.

ಇದ್ದವರು ತಾ ವೃತ್ರದೈತ್ಯನ
ಹೊದ್ದಿ ವೋಲಗಿಸಿದ್ದರೀತನ
ಬುದ್ಧಿಯಲೊಡೆಯರುಗಳಲ್ಲರ ಸೀಗ ಬಂದವರು ॥ ೧೦೫

ಕಾಲನೇಮಿಯು ತಾರಕಾಕ್ಷನು
ವಾಲೆಯಂಥಾಸುರ ಸುಮಾಲಿಯು
ಕಾಲಯುವನನೆನಿಸಿದ ಹಿರಣ್ಯಕಲೋಚನನ ಮನೆಯು।
ಕಾಲಸುಭಟರು ದೋಣಿದಲೆಗಳ
ತೋಳ ಖಂಡಿಯ ಜಾಳುವಲೆಗಳ
ವೋಲಿಯೋರಿನದೋರವಲೆಗಳಲ್ಲೈದೆ ಕೂಡಿದರು [1]॥ ೧೦೬

ವೀರರೆದ್ದರು ಸ್ವಾಮಿದ್ರೋಹರು
ನಾರಸಿಂಹನ ಮೇಲೆ ರೌದ್ರಾ
ಕಾರದಲಿ ಮಂಡಿಸಿದುದಾರ್ಭಟ ಭೂರಘೋಷದಲಿ।
ಆರುತೈತಂದ್ಯೆದೆ ದೇವನ
ನೋರಣಿಸಿ ಯಸಿಚಾಪಮಾರ್ಗಣ
ಕೂರಲಗು ಮುಂಕೊಂಕು ಗತ್ತಿಯ ಭಟರು ಮೇಳವಿಸೆ॥ ೧೦೭

---

[1] ಮುತ್ತಿದರು, ಗ, ಘ.

ಓರಣದಲೈನೂಱುಕೋಟಿಯು
ಭೇರಿ ಹೊಡೆಯಲು ಸೆಳವಸಿಂಧದ
ಧೀರರಱುವತ್ತಾಱುಕೋಟಿಯು ಕಾಳರಕ್ಕಸರು ।
ಧೀರರೆಚ್ಚರು ಶರವನಂಧಾ
ಕಾರ ಕವಿಯಲು ದಿಗಧಿಪಾಲರು
ಮಾರಿಯಾಯ್ತೆಂದೆನಲು ಹಳಚಿತು ನಾರಸಿಂಹನಲಿ ॥ ೧೦೮

ಕೆಳಗೆ ವಾಸುಕಿ ಬಳಲೆ ಯಂಬರ
ದೊಳಗೆ ನಾಕಜರೈದೆ ಬೆದಱಲು
ಕಳವಳಿಸಿ ದಿತಿಸುತನ ಸೇನಾನೀಕವಡಿಗಡಿಗೆ ।
ಉಲಿದು ತಿಂತಿಣಿ [1] ಗೊಂಡು ಸಿಂಹನ
ಮೆಳೆಯು ನರಿಗಳು ಕೆಣಕುವಂದದಿ
ತಲೆಯ ಬರಹವ ತೊಡೆಯ ಹಳಚಿದರಾಗ ಹರಿಯೊಡನೆ ॥ ೧೦೯

ಆಗ ಬೆಚ್ಚದೆ ದೇವನಾಲಿಸಿ
ಲಾಗಿನಲಿ ಘುಡಿಘುಡಿಸಿ ಮೂಱೆಯುತ
ಬಾಗಿಸುತ ಕಣ್ದೆಱೆದು ನೋಡಿದ ದೈತ್ಯನಾಯಕರ ।

ದೈತ್ಯರಸಂಹಾರ.

ಬೇಗದಲಿ ಹರಿ ತಂದು ಹಾಱುತ
ಲಾಗಿಸುತ ಬಳಸಿದನು ಪಾದದಿ
ಲಾಗಿನಲಿ ಘಟ್ಟಿಸುತ ಸಜ್ಜಿಸೆ ಸೀಳಿ ತುಱಿದೈದ ॥ ೧೧೦

ಕೆಲರ ತುಱಿವುತ ಕೆಲರನಂಗೈ
ತಳದಲೊಱಸುತ ಕೆಲರನಂಬರ
ದೊಳೆಯುಕಾಗಲು ಸೀಳಿ ಬಿಸುಟನು ದೈತ್ಯಬಲದೊಳಗೆ ।

1 ಬೆಂಟಣಿ ಕ, ಖ.

ನಲಿದು ದೈತ್ಯರ ಪಡೆಯನೆಲ್ಲವ
ಬಲಿಹರಣ ಮಾಡುತಲು ನೋಡುತ
ಬಲುಹು ಗುಂದದ ರಿಪುಹಿರಣ್ಯಕಶಿಪುವ ನರಹರಿಯು ॥
ಎಲವೊ ನಿನ್ನಯ ಬಲವನೆಲ್ಲವ
ತುಱಿದು ಬರಿಗೈವಂನಬರ ನೀ
ನುಱಿದು ನೋಡಾ ಯೆನುತಲಗಲಕೆ ಚರಣಹತಿ ಮಾಡೆ ।
ಕೆಲರು ರುಧಿರವ ಕಾಱುತಿರ್ದರು
ಕೆಲರು ಕಾಲನ ಪುರಿಗೆ ಸಂದರು
ಕೆಲರು ಜೀವವನಗುಱುತಿರ್ದರು ದೈತ್ಯಬಲದೊಳಗೆ ॥ ೧೧೧

ಮೞರಿಸಿ ಬಂದವರ ಗಂಟಲ
ನುೞು ಗುಟ್ಟುತ ಖಳರನೆಲ್ಲರ
ಕೊೞೆ ಯೊಂದೆಡೆ ಸಿಕ್ಕಿ ತಳದಲಿ ಬಡಿದು ಜೀವಗಳ ।
ನುೞೆನಂದದಲಾಯ್ತು ತುಱಿಯಲು
ಸೞೆದಾನಂದೈಕದೇವನ
ಸೞರಿತ್ರವ ಕಂಡು ನಾಕಜರೈದ ಹೊಗೞದರು ॥ ೧೧೨

ಅಸುರರೆಲ್ಲರನೊಕ್ಕಲಿಕ್ಕುತ [1]
ಹೊಸವಮದೇಭನು ಸೀಳಿ ನಡೆವಂ
ತಸಿಗದಾನಾರಾಚಲಗುಡದ ಮಳೆಯು ಸುಱಿಯುತಿರೆ ।
ಬಿಸರುಹಾಕ್ಷನು ಕಂಡು ರಾಕ್ಷಸ
ರೆಸುಗೆಗಂಜದೆ ವರನೃಕೇಸರಿ
ಯಸುರರನು ನಿಃಕ್ಷೇತ್ರಮಾಡಿದನೊಂದುನಿಮಿಷದಲಿ ॥ ೧೧೩

ಮಾಡಲಿಕೆ ನಲವಿಂದ ಸೂರ್ಯನು
ನೋಡಿ ಪಶಿ ಮಗಿರಿಯು ಸಾಱಲು
ಕೂಡಿತ್ತೈೞಮಲಜನ ವರಗಳು ಹಲವುಕಾಲದಲಿ ।

---

1 ನೊತ್ತುತಲ್ಲಿಯ ಕ, ಖ.

ಬಾಡಿದುದು ಸರಸಿರುಹ ಸಂಧ್ಯಾ
ರೂಢಿಯುವತಿಯು ಮದುವೆಯಾಗಲು
ನೋಡಿ ಕೊಟ್ಟರು ಮೌನಿಕರು ಗೋಧೂಳಿಲಗ್ನವನು ॥ ೧೧೪

ಆ ಮಹಾಗೋಧೂಳಿಲಗ್ನದೊ
ಳೀಮಹಾಸುರವೈರಿ ಸಂಧ್ಯಾ
ಕಾಮಿನಿಗೆ ಕೈಯಿಕ್ಕ ಬಂದಪನಸರಸಂಜೆಯಲಿ ।
ಕಾಮುಕರು ಲಯವಾಯ್ತು ದೈತ್ಯರ
ತಾಮಸನು ಕಯ್ಯಿಕ್ಕಲಾತ್ಮಾ
ರಾಮನಿದಿರಾಗೆದ್ದು ಖಡ್ಗವ ತಿರುಹುತ್ತೈತಂದ? ॥ ೧೧೫

ಹಿರಣ್ಯಕಶಿಪುಸಂಹಾರ.

ಬರಲು ದೈತ್ಯನ ಹಿಡಿದು ತೊಡೆಯಲಿ
ತಿರುಹಿ ಮೇಲಡೆಗೆಡಹಿ ಸಂಜೆಯು
ಸಿರಿಯ ಮಧ್ಯದೊಳಿರಲು ನಾಕಜರೈದೆ ಹರುಷದಲಿ ।
ಮೊಱೆವುತಾಗಲು ದೇವ ಹುಂಕೃತಿ
ಕರದ ನಾಸಾಪುಟದಲಾಗಲು
ವರಹಿರಣ್ಯಕನುರವ ಬಗೆಯಲು ದೇವ ಕೈಕೊಂಡ ॥ ೧೧೬

ಬಸುಱ ನಖದಲಿ ಸೀಳಿ ಕರುಳಿನ
ಮಸಕವನು ಜೋಲಿಸುತ ಕೊರಳಲಿ
ಬಸಿವ ರಕುತದ ದೊಂಡೆಗರುಳನು ಹಾಕಿ ತಾ ಕೊಂಡ ।
ಹೊಸರಣವ ಮಾಡಿದನು ಕಾಳ
ಪ್ರಸರಕಾಗಲು ನೋಡಿ ದೇವನ
ವಸತಿಗಂಜಿತು ಬ್ರಹ್ಮರುದ್ರಾದ್ಯಮರಗಣವೈದೆ ॥ ೧೧೭

ಬ್ರಹ್ಮಾದಿಗಳ ಸ್ತುತಿ.

ಹಿಂದೆ ನಿಂದುದು ಹರಿಯ ನಾನಾ
ಭಂದದಲಿ ಹೊಗಟುತ್ತಲೆಂದರ
ದಿಂದು ಕಂಡೆವು ಬಲವನಾಸುಮಹಿತಮಹಾಬಲನ

ಮುಂದೆ ವೀಕ್ಷಿಸಲಂಜಿ ಹಿಂದಣ
ದಿಂದ ಹೊಗಳ್ದಿದ ಸರಸಿಜಾಕ್ಷನ
ಮುಂದೆ ವರಪ್ರಹ್ಲಾದ ಕಂಪಿಸೆ ದೇವಿ ವಾಮದಲಿ॥ ೧೧೮

ಒಮ್ಮೆ ನೋಡುವೆಳೊಮ್ಮೆ ಸುಮ್ಮನ
ಲಮ್ಮೆ ತಾನೆನುತಿಪ್ಪಳಾಶ್ರೀ
ರಮ್ಯನಾನುವ ನೆನೆವಳೊಮ್ಮೆಯು ಹಿಂಗಿ ನಾಚುವಳು।
ಹಮ್ಮೆ ದೇಸ್ಯೆ ತಾವು ನೋಡಲಿ
ಬೊಮ್ಮಕೋಟಿಗಳದಿರಿಗಂಜಿಯೆ
ಸುಮ್ಮನಾತನ ನೋಡುತಿರ್ದನು ಪೊಮ್ಮ ಕಶ್ಯಪನ॥ ೧೧೯

ವರವ ಬೇಡು ಎಂದು ನರಹರಿಯು ಅಪ್ಪಣೆ

ಓಪನೊಬ್ಬಗೆ ಕೋಪದೋಅದೆ
ಶ್ರೀಪತಿಯು ಕೃಪೆಯಿಂದ ನುಡಿದನು
ಪಾಪಿಗೀಹದನಾಯ್ತು ಪುಚ್ಛದೆ ವರವ ಬೇಡೆನಲು।
ಪಾಪರಹಿತನು ನೀನು ನುಡಿವುದ
ಲೋಪಿಸೆನು ಬೇಡೆಂದೊಡಾತನು
ತಾಪಸರ ವರದೈವಕೆಂದನು ಕೊಡುವೊಡೆನಗೀಗ॥ ೧೨೦

ತಾತನಂಗವ ನಿಮ್ಮ ತೊಡೆಯಿಂ
ಭೂತಳಕೆ ಬೀಳಿಕಿಬುಹುದೆನಗಿವ
ನೋತು ಕೊಡುವುದು ವರವನಿಂತಿದು ನಿತ್ಯವಾಗಿರಲು।
ಕಾತರಿಸದಿರು ಕೊಟ್ಟೆನಿದನೆಂ
ದಾತತುಕ್ಷಣ ವರನೃಕೇಸರಿ
ಯೋತು ನುಡಿದನು ವರವ ಪುನರಪಿ ಬೇಡು ನೀನೆಂದು॥ ೧೨೧

ಎಂದೊಡಾಪ್ರಹ್ಲಾದದೇವನು
ಮಂದಹಾಸದಿ ದೇವಗೆಂದಪ
ನಿಂದಿರಾಪತಿ ಕೃಪೆಯ ಮಾಡಿದೆ ಸತ್ಸುಸಂಗವನು।

ಎಂದು ಪ್ರಹ್ಲಾದಂಗೆ ವರವ ಮು
ಕುಂದ ಕೊಟ್ಟನು ಬೇಡಿದಂದವ
ಕಂದ ಕೇಳ್ಳೈ ರಾಯ ಜನಮೇಜಯ ಮಹೀಪಾಲ ॥ ೧-೨

ಕೊಟ್ಟನ್ಯೆ ಪ್ರಹ್ಲಾದದೇವನ
ಭೀಷ್ಟವನು ಹದಿನಾಲ್ಕುಲೋಕದ
ದುಷ್ಟನನು ನೆಱೆ ಕೊಂದು ಕಾಯ್ದನು ಶಿಷ್ಟಸೇವಕರ ।
ಕೆಟ್ಟು ಹೋಯಿತು ತಾನು ದುಷ್ಕೃತ
ನಷ್ಟವಾಯಿತು ಮಿಥ್ಯಬೋಧೆಯು
ಸೃಷ್ಟಿಗಾಪ್ರಹ್ಲಾದದೇವನ ಭಕ್ತಿ ದೃಢದಿಂದ ॥ ೧-೩

ಸುರರು ತಮತಮಗಮಲಹರುಷದಿ
ಹರಿಯ ಹೊಗಳುತ ಹೋದರಿತ್ತಲು
ಸರಸಿಜಾಕ್ಷನು ಮತ್ತೆ ನುಡಿದನು ಹಿರಣ್ಯಕಾತ್ಮಜಗೆ ।
ಧರಣಿಯಲಿ ನಿನಗಬ್ದಲಕ್ಷವು
ಪರಮರಾಜ್ಯೈಶ್ವರ್ಯ ಕಡೆಯಲಿ
ನಿರುತವೆನ್ನಯ ಪುರವು ನಿನಗದು[1] ನಿತ್ಯಶಾಶ್ವತವು ॥ ೧-೪

ಅನ್ನಬರ ನೀನಿಹುದು ಬ್ರಹ್ಮನ
ಭಿನ್ನವಿಲ್ಲದ ತಪದ ಲೋಕವ
ದುನ್ನತೋನ್ನತಭೋಗದಿಂದಿಹುದೆಂದು ಕರುಣಿಸಿದ ।
ಇನ್ನು ನಿನ್ನನು ಬಿಡೆನು ಲೋಕಕೆ
ನಿನ್ನ ಭಕ್ತಿಯನಱಿದ ಮನುಜರ
ನಿನ್ನ ಕಾಂಬಂತ್ಯೆದೆ ಕಾಣುವುದೆನಲು ಮೆಚ್ಚಿದೆನು ॥೧-೫

ಮೆಚ್ಚಿ ಸಿಕ್ಕಿದನಲ್ಲಿ ಯಾತಗೆ
ಹಚ್ಚಿ ಕೊಟ್ಟನು ಮೂರ್ತಿಮೂಲವ
ಸಚ್ಚಿದಾನಂದೈಕದ್ವಾದಶನಾಮಮೂರ್ತಿಯನು ।

1 ಸರಸಿಜಾಸನ ಹೊರೆಯ ಸಂಗಡ ನಿನಗೆ, ಕ, ಖ.

ಅಚ್ಚರಿಯುಲಾ ಪರಪಿದಾರಣ
ಸಚ್ಚಿದಾನಂದೈಕರೂಪನು
ಮೆಚ್ಚಿದನು ಪ್ರಹ್ಲಾವದೇವಗೆ ರತ್ನಪುರಿಯೊಳಗೆ ॥ ೧೬

ಮೊದಲ ಮೂರ್ತಿಯು ಪರಪಿದಾರಣ
ವಿದಿತದಲಿ ವರಬ್ರಹ್ಮ ನರಹರಿ
ಸದನದಲಿ ಶ್ರೀರೌದ್ರನರಹರಿ ನಾಲ್ಕು ತಾಪಿನಲಿ ।
ತ್ರಿದಶನರಹರಿ ಯಾಖುಹಸ್ತದ
ಪದುಮನರಹರಿ ಪಂಚನರಹರಿ
ಯದಟ ಯೇಟಿಅಜ್ವಾಲೆ ನರಹರಿ ವರಮಹಾನ್ಯಹರಿ ॥ ೧೭

ಯೋಗನರಹರಿ ಲಕ್ಷ್ಮಿನರಹರಿ
ರಾಗದಲಿ ವರಪೀವಹೋಬಲ
ಕಾಗಿ ನೆಲಸಿದ ವೀರನರಹರಿ ವರಕೃಪಾಂಬುಧಿಯು ।
ಆಗಳಲ್ಲಿಂ ಮಗುಳೆ ನೆಲಸಿದ
ಬೇಗದಲು ಸಿರಿವೊಳಲ ನರಹರಿ
ಬೇಗ ಮನುಜರ ಪ್ರಾರ್ಥಸಂಗಳ ಕೊಂಬ ನರಸಿಂಹ ॥ ೧೮

ಈಮಹಾಮೂರ್ತಿಗಳು ದ್ವಾದಶ
ನಾಮದೊಳು ಮಿಗಲಾವುದಾಗಲಿ
ಭೂಮಿಯಲಿ ತಾ ಸತ್ಯಲೋಕಕೆ ಸರಿಯು ಸ್ವರ್ಗದಲಿ ।
ಸೋಮಶೇಖರನಾಣೆ ಭೂಪತಿ
ಭೂಮಿಯೊಳಹೋಬಲಕೆ ಸರಿಯುಹ
ಸೀಮೆ ಯಿಲ್ಲವು ದೇಪಿ ನೆಲಸಿಹಳಲ್ಲಿ ಹರಿಪದದಿ ॥ ೧೯

ಹರಿದಿಹಳು ಭವನಾಶಿ ಗಂಗೆಯು
ಬರುತ ಕೃಷ್ಣೆಯ ಕೂಡಿ ಧರೆಯೊಳು
ಬೆರೆಸಿತು ನಹಿ ಪ್ರತಿಯದಕೆನಿಸಿತು ಸುರರು ಮೆಚ್ಚಲಿಕೆ ।

ವರಮುನೀಶ್ವರ ಶೈಲಮಹಿಮೆಯು
ನಿರುತವೆನು ಭೂಪತಿಗೆ ಹೇೞಿಯೆ
ಯರಿಹಿರಣ್ಯಾಕಸುತನ ಭಕ್ತಿಯು ವರಕಥಾಮೃತವ ॥ ೧೩೦

ವರನರರಸನ ನಾರಸಿಂಹನ
ನಿರುತದಲಿ ಹನ್ನೆರಡುತಾಣದ
ಪರಿವಿಡಿಯು ವಿಸ್ತರಿಸಿ ಹೇೞಿದ ನಾರಸಿಂಹನನು ।
ವರಕಥಾಮೃತ ಕೇಳಿ ಭೂಪತಿ
ಕರವ ಮುಗಿದಿಂತೆದ್ದು ಮುನಿಪಗೆ
ನಿರುತ ಮೋಕ್ಷಕೆ ಸಂಗನೇ ಸುರರಿಪುಹಿರಣ್ಯಾಕನು[1] ॥ ೧೩೧

ಎಂಬುದನು ಕರುಣಿಪುದು ನೀವೆನೆ
ಹಂಬಲಿಸದಿರು ದೈತ್ಯರೆಂಬರಿ
ಗಿಂಬುಗೊಡದೀ ಮೋಕ್ಷ ಲಕ್ಷ್ಮೀಕಾಂತದೂರರಿಗೆ ।

ಹರಿದ್ವೇಷಿಗಳಿಗ ಮೋಕ್ಷಾಭಾವಕಥನ

ತುಂಬದೈ ಕೈವಲ್ಯವಾಸವ
ದಂಬುಜಾಕ್ಷದ್ವೇಷಿ ಹಿರಣಕ
ನೆಂಬವಗೆ ತಾ ನಿತ್ಯನರಕವು ಭೂಪಕೇಳಂದ ॥ ೧೩೨

ಅಂಬುಜಾಕ್ಷನ ನೆನೆದೊಡಾತನು
ಕೊಂಬ ಮೋಕ್ಷವನೆಂಬ ಶ್ರುತಿಗಳ
ವೆಂಬುದೇನಿದು ದಿಟವೊ ಹುಸಿಯೋ ಕರಣಿಸುವುದೆನಲು ।
ಎಂಬ ಶ್ರುತಿಗಳು ಸತ್ಯ ಮೋಕ್ಷವ
ಕೊಂಬನೈ ಸಜ್ಜೀವಿ ನೆನೆದರ
ತುಂಬನೈ ಬ್ರಹ್ಮಣ್ಯದೇವನ ಬಗೆಯುದವನೆಂದು ॥ ೧೩೩

---

[1] ನಿರುತ ಮೋಕ್ಷಕೆ ಸಂದನೆಂತಾ ಹಿರಣಕಾಸುರನು, ಖ

ಶ್ವೇತಪಟ ಮೊಸಿದರೆ ತಾನದು
ಸೋತು ತೊಳದರೆ ಮತ್ತೆ ಪುನರಪಿ
ಶ್ವೇತವಹುದೈ ಕೃಷ್ಣವಾಗದು ರಾಯ ಕೇಳಂದ ।
ಓತು ಕೇಳ್ಳೈ ಶುದ್ಧನೀಲಿಯು
ಧಾತು ತೊಳದರೆ ಹೋಹುದೇ ದಿತಿ
ಜಾತರೆಂಬರಿಗಿಲ್ಲ ಮೋಕ್ಷವು ಸರ್ವಋಷಿಮತವು [1] ॥ ೧೩೪

ಎಂದೊಡಾ ಭೂಪತಿಯು ಮುನಿಪತಿ
ಗೆಂದ ಪರುಸವು ಮುಟ್ಟೆ ಲೋಹವು
ಸಂದು ಹೇಮವದಾಗದೇ ಹರಿ ಮುಟ್ಟೆ ಮೋಕ್ಷಗಳು ।
ಇಂದು ನೀವಿಲ್ಲೆಂಬ ಮಾತಿನ
ಛಂದವನು ಕೃಪೆ ಮಾಡಿ ನೀವೆನ
ಲಂದು ಮುನಿಪತಿ ರಾಯಜನಮೇಜಯಗೆ ಹರುಷದಲಿ ॥ ೧೩೫

ತಿಳಿಯಲಿಕೆ ಲೋಹಂಗಳಾಗಲು
ವೆಳಿವವೈ ಪರುಸಕ್ಕೆ ಸೋಂಕಲು
ತಿಳಿನು ನೋಡೈ ರಾಯ ನಿಜವಿನು ಸತ್ಯಮತವನುವ ।
ಅಳಿವುದೇ ಪಂಚಾಗಪರಸುವು
ಬಳಸಿದರೆ ತಾನಬ್ದಲಕ್ಷಗ
ಳೊಳಗೆ ತಾನಿರೆ ಹುಜ್ಜು ತನಬಿಡದೆಂದನಾಮುನಿಪ ॥ ೧೩೬

ದೇವಗಣದೆಲ್ಲರಿಗೆ ದೈತ್ಯಗೆ
ಭಾವದಧಿಕಗೆ ಮನುಜವರ್ಗಾದಿ
ಭಾವದಧಿಕರಿಗಹುದು ಮೋಕ್ಷವು ಜೀವರಧಿಕರನು ।
ಕಾವನೈ ಶರಣದನು ಭಕ್ತಿಯು
ಭಾವಕಲ್ಲದೆ ಮೋಕ್ಷಮಾರ್ಗವು
ಭಾವಿಸದು ಕೈವಲ್ಯವಾಗಳು ನಿಷ್ಠೆಯೊಂದಖಿಲಿ ॥ ೧೩೭

---

[1] ಸುಲಭವಲ್ಲೆಂದ, ಕ. ಖ.

ಸುರನರೋರಗನಿಕರಮಧ್ಯದ
ಲರಸ ಪರಮಜ್ಞಾನಿಕಾಂಡಕೆ
ನಿರುತ ಮುಕುತಿಯು ಕರ್ಮಕಾಂಡಕೆ ಪಾಪಮೋಕ್ಷಣವು।
ಧರಣಿಯಲಿ ದೃಷ್ಟಾಂತವೀಗಲು
ಪರಸ ಸೇವಿಪಗುಂಟು ಸುಖವದು
ನಿರುತದಲಿ ತಾ ಸ್ವಾಮಿದ್ರೋಹಿಗ ದುಂಟೆ ಯಮುಕುತಿಯಲು॥ ೧೩೮

ಅಂತು ಕಾರಣ ದೈತ್ಯರಧಮರು
ಕಂತುಪಿತಗತ್ಯಧಿಕದ್ರೋಹಿಗ
ಳೆಂತು ಮೋಕ್ಷವು ಸುಲಭ ಪೇಳ್ವೈ ರಾಯ ನೀನೆಂದ।
ಸಂತಿದೂರರು ಹರಿಯಭಕ್ತರ
ಪಂಥವರಿಯದೆ ಹರಿಯ ದ್ವೇಷದ
ಲಿಂತು ಮಾಡಿದಗಿಲ್ಲ ಸುಗತಿಯದೀಶನೊಲ್ಲದಗೆ॥ ೧೩೯

ಬ್ರಹ್ಮವೈರವ ಮಾಳ್ಪ ಜೀವರು
ಬ್ರಹ್ಮಸಿರಿಕರಮುಟ್ಟಿ ಸಾಯಲಿ
ಹೆಮ್ಮೆಯಲಿ ಶ್ರೀಕಾಶಿಯಾತ್ರೆಯ ಮಾಡೆ ಫಲವಾಗಿ।
ಒಮ್ಮೆ ಪಂಚಕ್ರೋಶದಲಿ ತಾ
ಘಮ್ಮನೆಯು ದೇಹಾಂತವಾದರೆ
ಯೊಮ್ಮೆ ತಾ ಶ್ರೀಶೈಲ ಗಂಡರೆ ಯಿಲ್ಲ ಮೋಕ್ಷಗಳು॥ ೧೪೦

ಎಲ್ಲರಿಗೆ ಯಧಿದೈವನೀಶ್ವರ
ನಲ್ಲಿ ದರುಶನ ಮಾಡಿ ಹೋದರೆ
ಯಲ್ಲಿ ತಾ ಫಲವಿಲ್ಲ ಯೀಶ್ವರಭಕ್ತಗೊಂದಿಸದೆ।
ಎಲ್ಲಿ ತಾ ಕೈಗೂಡಿ ಕೊಂಬವು
ಫುಲ್ಲನಾಭನ ಭಕ್ತನೊಬ್ಬನ
ನೊಲ್ಲದಂಗಿಹಪರಗಳುಂಟೇ ಕೋಟಿಜನ್ಮದಲಿ॥ ೧೪೧

ಎಂದು ತಾ ಶ್ರೀನಾರಸಿಂಹನು
ಬಂದು ರಿಪುವನು ಸೀಳಿ ಸುತನನು
ವಂದಗೆಡಿಸದೆ ಕಾಯ್ದು ಕಥೆಯನು ಹೇಳಿ ಕರುಣಿಸಿದ ।
ಇಂದು ನರಹರಿವರಕಥಾಮೃತ
ದಂದವನು ಕೇಳಿದಗೆ ಮೋಕ್ಷದ
ಮಂದಿರವು ದೊರೆಕೊಳ್ಗು ವೇದಪ್ರವರಮತದಿಂದ ॥ ೧೪೦

ಬೆಂದು ಹೋಹುದು ದುರಿತಕೋಟಿಯು
ಕುಂದಿ ಹೋಹುದು ರೋಗವಿಗ್ರಹ
ಹಿಂದೆ ನೋಡದೆ ಯೋಡಿ ಹೋಪವು ಪಾತಕವ್ರಜವು ।
ಕಂದಿ ಕುಂದುವರ್ರೈದೆ ವೈರಿಗ
ಳೊಂದು ಬಾಯಲಿ ಪರಮಪುರುಷನ
ಕುಂದದಾವಗ ನೆನವ ಜೀವರಿಗೆಂದನಾಮುನಿಪ ॥ ೧೪೩

ಉಣುತಲೀ ಪ್ರಹ್ಲಾದದೇವನ
ನೆನೆವುತುಂಡರೆಯನ್ನವಕ್ಷಯ
ವಿನುತಧನಗೋಧಾನ್ಯಸಂಕುಳವದು ಹುಸಿಯಲ್ಲ ।
ಅಣುಮಹಾಪರ್ವತದ ಮಧ್ಯದೊ
ಳಣೆ ಯಿರದೆ ಶ್ರೀನಾರಸಿಂಹನು
ಹುಣುಗಿರದೆ ಸರ್ವಜ್ಞನೊಳಗಿಪ ಭೂಪ ಕೇಳೆಂದ ॥ ೧೪೪

ಈಯುಗಕೆ ನೀನೊಬ್ಬ ಕೇಳದೆ
ಜೀಯವಾದಿಯುಗದಲಿ ತಾ ಶಿಬಿ
ರಾಯ ಕೇಳಿದ ಮೊದಲೆ ತ್ರೇತೆಗೆ ದಕ್ಷ ಕೇಳಿದನು ।
ನ್ಯಾಯವಿಲ್ಲದ ಕಲಿಯ ರಾಜ್ಯದ
ದಾಯದಲಿ ಯೀಕಥೆಯ ಕೇಳಲಿ
ಕಾಯ ನಿರ್ಮಳವಾಗಿ ಸ್ವರ್ಗದ ಲೋಕವಹುದೆಂದ ॥ ೧೪೫

ಇಂದು ಕೇಳಿದ ಜೀವರಾಶಿಯು
ಸಂದ ಪಾತಕನಿಕರ ಕೆಡುವುದು
ತಂದೆಮಕ್ಕಳ ಕೊಂದರೆಂಬೀಕಥೆಯ ಕೇಳುವನ ।
ಕಂದು ಕನಲಿಕೆ ಕೆಡುಗು ಗೋಪೀ
ನಂದನನ ಕಡು ಸೊಗಸು ಪುಟ್ಟುಗ
ದಿಂದು ಗದುಗಿನ ವೀರನಾರಾಯಣನ ಕರುಣದಲಿ ॥ ೧೪೬

ಎಂಟನೆಯ ಸಂಧಿ ಮುಗಿದುದು.

## ಒಂಬತ್ತನೆಯ ಸಂಧಿ.

ಸೂಚನೆ.

ದುಷ್ಟದಾನವಚಕ್ರವರ್ತಿಯು
ನಟ್ಟಿದನು ಯಮನಗರಿಗಿತ್ತಲು
ಕಟ್ಟಿದನು ತತ್ಸುತಗೆ ಪಟ್ಟವನಖಿಳಧಾರುಣಿಯು ॥

ಕೇಳು ಜನಮೇಜಯ ಧರಿತ್ರೀ
ಪಾಲ ರಿಪುವನು ಸೀಳೆ ರಕ್ತದ
ಜಾಲ ಕಾಣುತ ಯಕ್ಷರಾಕ್ಷಸದೇವನಿಕರಗಳು ।
ಬೀಟುತಲವರು ಕಂಡು ಲಕ್ಷ್ಮೀ
ಲೋಲನನು ಹೊಗಟಲಿಕೆ ದಿತಿಜನು
ಕೇಳಿ ಕಂತಪ್ರಾಣನಾಗಿರುತೆಂದ ವಿಬುಧರಿಗೆ ॥

ಹೊಗಟುವಿರಿ ನೀವೀತನನು ತಾ
ನೊಗಿದು ದ್ವಿಭುಜನ ಕೊಂದತಾವಿಗೆ
ಜಗವೆಱಿಯೆ ಯಿಪ್ಪತ್ತುಭುಜದಲಿ ದೇವಗರಿದೆನಿಸಿ

ಬಗೆಯ ಯಿಾಯಸುರಾಂತಕನೆನಲಿ
ಕಗಧರನು ಕೇಳ್ದಾಗ ನುಡಿದನು
ಬಗುಳದಿರೆಲವೊ ಯಿನ್ನು ಕೇಳುವ ಮುಂದಣಾಂತರದ ॥ ೨

ತ್ರೇತೆಯಂತ್ಯದೊಳೊಂದು ಸೀನತಿ
ಪ್ರೀತಿಯಲಿ ಯಿಪ್ಪತ್ತುತೋಳಿನ
ದಾತನಾಗಿರು ನಾನು ಜನಿಸುವೆನೆರಡುತೋಳಿನಲಿ ।
ಭೂತಳೇಶ್ವರಜಾತಿಯಲಿ ಯೆಂ
ದಾತನನು ಬೀಷ್ಕೊಟ್ಟು ಬೈತ್ಯನ
ಜಾತನನು ಕೊಂಡಾಡಿ ಪಟ್ಟವ ಗಟ್ಟಲನುಗೆಯ್ದ್ಯೆ ॥ ೩

ಭೂತಳದಲೇಕಾಧಿಪತ್ಯವ
ನಾತಗಿತ್ತುಜ ಬ್ರಹ್ಮದೇವ
ವ್ರಾತದಲಿ ಕೈವಲ್ಯಸಾಧನು ಸ್ತುತಿಸಿ ಕೊಳುತಿರಲು ।

ಶಂಭುವು ಶರಭಾಕಾರನಾಗಿ ಯುದ್ಧಕ್ಕೆ ಬರುವಿಕೆ.

ಆತತುಕ್ಷಣ ಕೇಳಿ ಕಂಸಾ
ರಾತಿಗೆಂದನು ಶಂಭುವರ್ಗದ
ಖ್ಯಾತಿಯಲಿ ಕೈಯಿಕ್ಕಬಂದನು ಶರಭರೂಪಿನಲಿ ॥ ೪

ಆ ಹಿರಣ್ಯಕನುರವ ಬಗಿದಾ
ಜೋಹವೆಚಯುದ ಮುನ್ನ ವುಗುರಿನ
ಕೌಹುರದ ಕಡುಹಾರದಗ್ಗದ ಮಂತ್ರರಾಜನನು ।
ಆಹವಾಂಗಣಕ್ಕೈದಿ ಬರೆ ಕಡು
ಕೌಹುರದಿ ಕೈಲಾಸವಾಸಿಯು
ದೂಹಿಸದೆ ಕೋಪದಲಿ ಮದನನ ದಹಿಸಿದಂದದಲಿ ॥ ೫

ಶರಭನ ಪರಾಜಯು.

ಬಡನೆ ಕಂಡಾಪ್ತದಲಿ ಕಮಲಜ
ನುಡಿದ ಶಾಪದಿ ಬಂದ ನಾಕಜ

ರೊಡೆಯುನನು ಕೇಣಿಕಲ್ಕ ದಾಯಿತದಟಿ ನಿರ್ವಾಹ ।
ಹಿಡಿದು ಕಂಠವ ತೊರೆದು ಶರಭನ
ಮೆಡುಹಿದನು ತಾನುಗುರ ಕೊನೆಯುಲಿ
ತಡವಿರದೆ ಶರಭಾಂಗ ವೆಟಿಯಿತು ನಿಮಿಷಮಾತ್ರದಲಿ ॥ ೬

ರುದ್ರಕೃತಸ್ತುತಿ.

ಬಟಿಕ ಶಂಕರಮೂಲಮೂರ್ತಿಯು
ಕಳವಿಡಿದು ಕೈವಲ್ಯನಾಥನ
ನೊಲಿದು ಸ್ತೋತ್ರಂಗೆಯ್ದು ಹೊಗಳಿದ ದಿವ್ಯನಾಮದಲಿ ।
ತಿಳಿಯಲದು ಶ್ರೀ ರುದ್ರನೀತಿಯು
ಬಳಗದಲ್ಲಿ ಸಹಸ್ರನಾಮವ
ನಳಿನನಾಭನ ಹೊಗಟಿಲಾಯ್ತು ಚತುರ್ದಶದಲೆಂದ ॥ ೭

ಜಗದ ಜೀವರ ಪಾಪಕರ್ಮವ
ಜಗುಳಿಸಿದ ಶ್ರೀಕಂಠನುಸುರಿದ
ಸೊಗಸಿ ಸಾವಿರನಾಮವಾಯಿತು ಪೂರ್ವನಾಮದಲಿ ।
ನಿಗಮಗೋಚರದೇವನಾತನ
ಸೊಗಸಿ ಕೊಂಡಾಡಿದರೆ ನಿನ್ನಯ
ಬಗೆಯುನೀವೆನೆನಲಿಕೆ ಬೇಡಿದನಾತ್ರಿಯಂಬಕನು ॥ ೮

ದೇವ ನೀನೆನಗಿತ್ತೊಡೊಂದೇ
ಭಾವದಲಿ ಭಜಿಸುವುದ ಕರುಣಿಸು
ಈ ವಸುಧೆ ಮೊದಲಾಗಿ ಚರಿಸುವ ದಿವ್ಯದೇಹದಲಿ ।
ಈ ವಿರಿಂಚಾದಿಗಳಗಗ್ಗದ
ದೇವ ನೆನಿಸಿಯೆ ನಿನ್ನ ಚರಣವ [1]
ನೋವಿ [2] ಧ್ಯಾನಿಸುವಂತೆ ಕೃಪೆಮಾಡೆಂದ ಶಶಿಮೌಳಿ ॥ ೯

---

[1] ಭಾವದಲಿ ನಿನ್ನಂಘ್ರಿ ಕಮಲಕ, ಕ. [2] ತಾವು, ಕ.

ಎನಲಿಕಸುರಾಂತಕನು ಪೂರ್ವದ
ಮನುವಿನಲಿ ಮುನ್ನೊಬ್ಬ ಮಾನಿನಿ
ಘನತರದ ತಪವಿಡಿದು ಹುಟ್ಟಿದಳತ್ರಿವಧುವಾಗಿ ।
ವನಿತೆ ಯಿರುತಿರೆ ಬ್ರಹ್ಮರುದ್ರರು
ವನಜನಾಭನು ಸಹಿತ ವಿಪ್ರರ
ತನುಗಳಾಗಿಯೆ ಬಂದು ಪಿಸ್ರಸತಿಯುನು ಗ್ರಾಸಬೇಡಿದರು ॥ ೧೦

ಬೇಡಲಿಕೆ ವಧುವಿತ್ತಳವರಿಗೆ
ರೂಢಿಗಗ್ಗದ ಗ್ರಾಸವಾಕ್ಷಣ
ಮಾಡಲಿಕೆ ಕುಳ್ಳಿರುತ ನುಡಿದರು ಭೂಸುರೋತ್ತಮರು ।
ಪ್ರೌಢೆ ನೀನೆಮಗನ್ನವೀವೊಡೆ
ರೂಢಿಯಲಿ ವಸ್ತ್ರವನು ವರ್ಜಿಸಿ
ನೀಡೆನಲು ಮಿಗೆ ನೋಡಿ ತವರೆನೆ ನುಡಿದಳವಳಂದು ॥ ೧೧

ಲೇಸು ಲೇಸೆನುತಾಕೆ ಮೂವರ
ಯಾಸೆಯನು ನಂಡಂತೆ ತನ್ನ ವಿ
ಳಾಸದಲ್ಲವರುತ್ತಮಾಂಗದ ಮೇಲೆ ಕರಪಿಡಲು ।
ಭೂಸುರೋತ್ತಮರಾಗ ಮೂವರು
ಗ್ರಾಸಕೋಸ್ಕರ ಬಂದು ವರಲ
ಕ್ಷ್ಮೀಶಸಹಿತವೆ ಶಿಶುಗಳಾವರು ಮೂಱುವತ್ಸರದ ॥ ೧೨

ಉಂಡವರ ಬಟಿಕವರ ಕೈಗಳ
ತಂಡವನು ತೊಳದೊರಸಿ ಭೂಸುರ
ಗಂಡುಗಲಿಗಳ ನಿಲಿಸಿ ಸೀಱೆಯನುಟ್ಟು ಹರುಷದಲಿ ।
ಮಂಡೆಯಲು ಕೈಯಿಡಲು ಮೂವರು
ಕೊಂಡರಾಕ್ಷಣ ತಮ್ಮ ರೂಪನು
ಕಂಡರಾಹರಿಹರಹಿರಣ್ಯಗರ್ಭವಾದಲಾಗಿ ॥ ೧೩

ನುಡಿದರಾಕೆಗೆ ನೀನು ಬೇಡಿದ
ನುಡಿಯು ಸಲಿಸುವೆವೆನಲಿಕತ್ರಿಯು
ಮುದದಿ ನುಡಿದಳು ನೀವು ಮೂವರು ತನ್ನ ಸುತರಾಗಿ ।
ಪೃಥವಿಯಲಿ ಚಂದ್ರಾರ್ಕರುಡುಗಣ
ಕೆಡದಡೆಯು ನೀವ್ ಮಡಿಯಲಾಗದು
ಬಿಡದೆ ತನ್ನಯ ತನುಜರೆನಿಸಿಯೆ ಕೊಳುತಲಿಹುದೆನಲು ॥ ೧೪

ದತ್ತಾತ್ರೇಯಾವತಾರ.

ಆನೃಸಿಂಹಕನತ್ರಿಪುತ್ರನು
ತಾನೆನಿಸಿ ದತ್ತಾಖ್ಯನಾದನ
ದಾನಿರೂಪಿಯು ಶಂಭು ಜನಿಸಿದನತ್ರಿಯಂಗದಲಿ ।
ಮಾನಸಿಧಿ ಕೇಳ್ ಕಮಲಸಂಭವ
ತಾನು ಜನಿಸಿದನತ್ರಿನೇತ್ರದ
ಲಾನಿಶೀಥಿನಿಪತಿಯು ತಾನಾಗಿರಲು ಶಶಿಮೌಳಿ ॥ ೧೫

ವರಚತುರ್ಥಾಶ್ರಮದಲಿರವನು
ಹರನು ತಾ ಕೈಕೊಂಡು ಬದರೀ
ವರವ ತಾನೆಡೆಗೊಂಡ ದೂರ್ವಾಸಾಭಿಧಾನದಲಿ ।
ಇರಲು ನೆನೆದರು ಬಹುಕಲಾತನ
ವರಯತೀಶರು ಹತ್ತುಸಾವಿರ
ಪರಿಣತರು ಸಹಿತೆಲ್ಲ ಗಂಗಾಜನಕಪೂಜೆಯನು ॥ ೧೬

ಮಾಡಿ ಸುಖದಿಂದಿರಲಿಕಿತ್ತಲು
ರೂಪಿಯನು ಪ್ರಹ್ಲಾದಗಿತ್ತನು
ಗಾಢವಲಿ ಶ್ರೀಯುವುಬಳೇಶನು ರತ್ನಪುರಿಯೊಳಗೆ ।
ಬೇಡಿದರ ಬೇಡಿಕೆಯನೀವುತ
ಕಾಡಿದರ ಕಾಡಿಕೆಯ ಕೊಡುತಲು
ನೀತಿ ಗತದರ ಮನದ ಬಯಕೆಯ ನೀವುತಿರುತಿರಲು ॥ ೧೭

ಜನಿಸಿದನು ಪ್ರಹ್ಲಾದದೇವಗೆ
ತನುಜವೈರೋಚನನು ರೂಢಿಯು
ಘನತರದ ಸದ್ಧರ್ಮಸಾರವ ಬಿಸುಟು ಪರಿಪದವ ।
ನೆನೆಯೆ ಕವಿರ್ಗೋತ್ತರದ ಜಾಡ್ಯದ
ಮನೆಯಲಿರುತಿರೆ ನಾಲ್ಕುಸಾವಿರ
ಯನಿಮಿಷರ ವರುಷಂಗಳಾದವು ಲೋಕವಾಕರಿಸೆ ॥ ೧೮

ಬಲಿಚಕ್ರವರ್ತಿಯ ಜನನ.

ಜನಪನನು ಕೈಕೊಳ್ಳದೆಲ್ಲರು
ದನುಜಪರಣೋಪಾಸ್ತಿಗೆಯ್ಯಲು
ಮನವೊಲಿದು ವೈರೋಚನರಸಿಗೆ ಬಳಿಕ ಬಲಿ ಜನಿಸೆ ।
ಜನಕಜನನಿಯರಿಂಗೆ ಬಳಿಕಾ
ಮನವೊಲಿದು ತನುತಮ್ಮ ಠಾವನು
ತನತನಗೆ ಯೈದಲಿಕೆ ಜನಿಸಿದ ವೈಷ್ಣವೋತ್ತಮನು ॥ ೧೯

ಅರಸಿಯಾದಳದಾತಗೊಬ್ಬಳು
ವರಪತಿವ್ರತೆಯೆನಿಪ ಸತಿಯುಳು
ಸುರತಸಂಧ್ಯಾದೇವಿಯೆಂಬಳು ಜನಪ ಕೇಳಂವ ।
ವರಸತಿಯು ಜಠರದಲು ತಾನಾ
ಗಿರುತ ಕಾಲಾಂತರದಲಂಧಾ
ಸುರನು ಜನಿಸಿದ ಬಾಣನೆನಿಸಿಯೆ ಸಹಸ್ರಭುಜಯುತನು ॥ ೨೦

ಬಲಿಚಕ್ರವರ್ತಿಯ ದಿಗ್ವಿಜಯ.

ಅರಸ ಕೇಳೈ ಮತ್ತೆ ಬಲಿಗಂ
ದಿರುತ ಸುತ ಹುಟ್ಟಲಿಕೆ ಹರುಷದಿ
ಪರಮರಾಜ್ಯವನಾಳುತಲ್ಲಿಯು ದೇಶಭೂಮಿಪರ ।
ಬರಸಿ ನಾನಾಭೂಮಿಪಾಲರ
ನಿರುತನಗರವ ಗೆಲಿದು ದಣಿಯದೆ
ಹಿರಿದು ಖತಿಯಲಿ ಸೂಱೆಗೊಂಡನು ಸ್ವರ್ಗಲೋಕವನು ॥ ೨೧

ಮಂದಿ ಕಾಣಲಿಕ್ಕೈದೆ ನಾಕಜ
ವೃಂದವನ್ನಿದಿರಾಗಿ ಗೆಲಿದುಜಿ
ಮಂದಿಯುಲ್ಲೊತ್ತೊತ್ತಿ ನೂಂಕಲು ಸಕಲಸೈನಿಕರ ।
ಬಂದು ಹುಡಿಹುಡಿಗುಟ್ಟಿ ದಿವಿಜರ
ವೃಂದವನು ಹೆರೆದೆಗೆಯೆ ಕೊಡೆದನು
ಮಂದಿಯತಿರಭಸದಲಿ ಗರ್ಜಿಸಿ ನಡೆಯೆ ಕಾಳಗಕೆ ॥ ೨೨

ಬಂದ ತ್ರಿಭುವನಭೂಮಿಪಾಲಕ
ವೃಂದಪತಿ ತಾನಪ್ಪ ಬಲಿ ತಾ
ಬಂದನೆಂಪಾಗೊದಖಿವರು ಗಂಧರ್ವನಾಯಕರು ।
ಬಂದು ಶತಮುಖಿಗಜುಹಲಾಯುತ
ದಿಂದ ತಾ ಘೊಖಮುಡಲು ಮುಂದಣ
ಮಂದಿಯುನು ಕೆಡೆ ನೂಂಕಿ ಗಂಧರ್ವಾದಿನಾಯಕರು ॥ ೨೩

ಅಂದುದಂಬರಪಿಡಿದು ಬಲಿಯುನು
ಬಂಧಿಸುವೆನೆಂದೆನುತ ಸುರಪನ
ಮುಂದೆ ವೀಳಯುಗೊಂಡು ದಾನವಬಲವ ಕೆಣಕಿದರು ।
ವೆಂದಿಯೊಳಗಣ ಚಿತ್ರಸೇನನು
ನಿಂದು ಸರಳನು ಕಱೆದು ರಾಕ್ಷಸ
ವೃಂದವನು ನೆಱೆ ಗೆಲಿದು ನಿಂದನು ನಿಮಿಷಮಾತ್ರದಲಿ ॥ ೨೪

ಬವಿದಾಯುತದಿಂದ ಬಲಿಯುನು
ಪವನಮಾರ್ಗದಲಿರದೆ ಬಾಣದ
ನಿವಹದಲಿ ತಾ ಕೆಣಕಿ ಕಾದಲಿಕಾತನದ ಕಂಡು ।
ಅವನ ನೆಱೆ ಜವಗೆಡಿಸಿ ಶೋಣಿತ
ನಿವಹದಲಿ ಕೈಯ್ಯಾರೆ ಮುಳುಗಿಸಿ
ಪವನಮಾರ್ಗದ ರಥಿಯು ತಾ ಮನವೇಗದಲಿ ಗೆಲಿದ ॥ ೨೫

ಅಹಹ ಗೆಲಿದನು ಚಿತ್ರಸೇನನ
ಸಹಸಿ ದಾನವರಾಯನೆನುತಲಿ
ಬಹಳ ಸುರರಲಿ ಬಲವ್ರೊದಱುತಿರೆ ದಿವಿಜರಗ್ಗಳನು |
ಮಹಿಷದಾನವನಿದಿರಿಗೆಯ್ದಿಯು
ಯಹಿತ ನೆಱೆ ಕಂಪಿಸಲು ಪ್ರಜ್ಞಾ
ಸಹಸಿ ದಿವ್ಯಾಸ್ತ್ರದಲಿ ಶತಮುಖ ಪೊಳ್ದಿದನು ರಥವ ‖　೭೬

ಬಲ್ಲೆ ನಿನ್ನಯ ಬಿಲ್ಲ ಮಹಿಮೆಯ
ಬಲ್ಲಿದನು ನೀನೆಂದು ಪಲಕೆಲ
ರಲ್ಲಿ ಯಾಡುತ್ತಿಪರದನು ತಾನವನು ಕೇಳುತಲು |
ನಿಲ್ಲದಿದಿರಿಸಿ ಕೊಂಡು ಚಾಪಟ
ಮಲ್ಲತಿರುಗಿದ ಸೊಕ್ಕಿದೆನೆನು
ತ್ತಲ್ಲಿ ಕೀಲಿಸಿಶಸ್ತ್ರಶರದಲಿ ಬಲಿಯುನಮರೇಂದ್ರ ‖　೭೭

ಸರಳ ಘಾಯದಿ ಬಳಲಿದಾತನ
ಸರಳಿನಲಿ ಬಲುಮೆಟೆಯನೀತನ
ಹೊರೆಚಯಲಿ ಬೇಱಿರಿಸಿ ನಾರಾಯಣಪರಾಯಣನು |
ಹಿರಿದು ಸಂಹರಿಸಿದನು ಮನದೊಳು
ಹರಿಯು ನೆನೆಯುತ ನಿಮಿಷಮಾತ್ರಕೆ
ನೆಱೆ ವಿಭಾಡಿಸಿ ಒಲಿಯು ಕೆಣಕಿದ ದಿವಿಜರಗ್ಗಳನು ‖　೭೮

ಹಿಂದೆ ನಾನಾದೇಶಪಾಲರ
ಬಂಧಿಸಿದಯುಗ್ಗಳಕೆ ಯೆಂಬೀ
ದಂದುಗವು ಕಿಱಿದುಂಟು ನೀನೀಗೆನ್ನನೊಬ್ಬನನು |
ಸಂದ ಬವರದಲೀಗ ಸರಿಗಾ
ಬಂದವನು ತಾ ಮೊದಲೆ ಹುಸಿಯೆಂ
ದಿಂದ್ರನನು ಮೂದಲಿಸಿ ಹಿಡಿದನು ಹಲಗೆಖಂಡೆಯುವ ‖　೭೯

ಬಲಿಚಕ್ರವರ್ತಿಯು ಇಂದ್ರನನ್ನು ಹಿಡಿಯುವಿಕೆ.

ಅರಸ ಕೇಳ್ಳೈ ಹರಿಪರಾಯಣ
ನಿರುತರಾಗಿಹ ಭೂಮಿಪಾಲರಿ
ಗರಿದದಾವುದು ಬಲಿಯು ಬಗೆವನೆ ದಿವಿಜಗಣಗಿಣವ ।
ಹರಿಯ ನಾಮಸ್ಮರಣಬಲದಲಿ
ಹಲಿಗೆಯು ತಿರುಹಿ ಸುರರ ರಾಜನ
ವರರಥವ ನೆಱೆ ಗೆಲಿದು ಗಂಧರ್ವಾದಿನಾಯಕರ ‖ ೩೦

ವರರಥವ ಹುಡಿಮಾಡಿ ವೈಯಲಿ
ವರಮಹಾಘಾಯವನು ಕಾಣಿಸಿ
ಸುರಕುಲವ ಜೆಂಕೊಂಡು ಗೆಲಿದನು ಸಕಲಸೈನಿಕರ ।
ಪರುಷದಲಿ ದೇವೇಂದ್ರಮೊದಲಾ
ದರನು ಗೆದ್ದನು ಮೇಲೆ ಸ್ವರ್ಗವ
ನುರುಹಿ ಯೈರಾವತವ ಕೊಂಡನು ವಜ್ರಸುರತರುವ ‖ ೩೧

ಕೊಂಡು ಶೋಣಿತಪುರವ ಹೊಕ್ಕಾ
ಖಂಡಲನ ಲೆಕ್ಕಿಸದೆ ತಾನು
ದ್ದಂಡನಾದನು ದೇವದಾನವರೊಳಗೆ ಬಲುಘುಳ್ಳ ।
ಗಂಡುಗಲಿ ಯಿಾಜೀಲುಲೋಕದ
ತಂಡವನು ನೆಱೆಯಾಳಿ ದಾನವ
ದಿಂಡೆಯರು ತಡೆಗಡಿದು ರಾಜ್ಯಂಗೈವುತಿರುತಿರಲು ‖ ೩೨

ಒಂಬತ್ತನೆಯ ಸಂಧಿ ಮುಗಿದುದು

## ಹತ್ತನೆಯ ಸಂಧಿ.

### ಸೂಚನೆ

ಶ್ರೀಯುಪೇಂದ್ರನ ಚರಣಕಮಲಕ
ದಾಯದಲಿ ಮೊಬಡಿಗೆ ನೆರೆಯದೆ
ರಾಯ ಕೇಳ್ಳ ಯೀಮಹಾಬ್ರಹ್ಮಾಂಡವರಡಟಿಯು ॥

ಕೇಳು ಜನಮೇಜಯ ಧರಿತ್ರೀ
ಪಾಲ ಲಕ್ಷ್ಮೀಪತಿಯ ಕರುಣದ
ಲೀಲೆಯಲಿ ಪ್ರಹ್ಲಾದದೇವನು ಸುಖದಿ ರಾಜ್ಯವನು ।
ಆಳುತಿರ್ದನು ತನ್ನ ಬಂಧುಗ
ಳೋಳಿಯನು ತಾ ಕೂಡಿಕೊಂಡಮ್ಮ
ಶ್ರೀಲತಾಂಗಿಯ ಪತಿಯ ಚರಣವ ನೆನೆವ ಬಲದಿಂದ ॥ ೧

ಬಳಿಕ ಶೋಣಿತನಗರಕಧಿಪತಿ
ಕೆಲವು ಕಾಲಾಂತರಕೆ ಬಲಿ ತಾ
ನೊಡೆಯನಾದನು ಮುನ್ನ ಮಾಡಿದ ಪುಣ್ಯಫಲದಿಂದ ।
ಇಳೆ ಸಹಿತ ಹದಿನಾಲ್ಕು ಲೋಕಗ
ಳೊಳಗದಾತನಯಾಣೆ ಘೋಷಣೆ
ಬೆಳಯಿತ್ತೈ ಶ್ರೀಲೋಲಲೋಚನವರಕಟಾಕ್ಷದಲಿ ॥ ೨

ಹುಲ್ಲುಗಳು ರಾಜಾನ್ನವಲ್ಲಿಯು
ಕಲ್ಲುಗಳು ಕನಕಂಗಳೆಂದರೆ
ಯಿಲ್ಲ ಸರಿ ದೂರೆ ಹಿಂದೆ ಮುಂದೀವರ್ತಮಾನದಲಿ ।

ಇಲ್ಲ ವೈರೋಚನಿಯು ಹೋಲುವ
ರಿಲ್ಲ ಭೂಪರು ಕೆಲವು ಕಾಲಕೆ
ಬಲ್ಲಿದನು ಗೋವಿಂದ ಜನಿಸಿದನದಿತಿಕಶ್ಯಪಗೆ ॥ ೩

ಅದಿತಿ ಕಶ್ಯಪರ ತಪಸ್ಸು.

ಅವರು ತಾವ್ ಮುನ್ನಾದಿಯುಲಿ ತಪ
ನಿವಹವಲಿ ಶ್ರೀಹರಿಯು ಪೂಜಿಸಿ
ದವರು ಕೇಳ್ಯ ಸುತಪಪೃಶ್ನಿಗಳವರು ಕೃತಯುಗದ ।
ಅವರಿಗಸುರಾಂತಕನು ನುಡಿದಪ
ನರ್ಧರಿಸಿ ನೀವೇನು ಬೇಡುವ
ಹರ್ಷ ವಿವರಿಸಿರೆಂದು ಸ್ವಾಯಂಭುವನ ಕಾಲದಲಿ ॥ ೪

ಎನಲು ಬೇಡುವುದೇನು ವರವನು
ವನಜಲೋಚನ ನಿಮ್ಮ ಹೋಲುವ
ತನುಜನನು ಕರುಣಿಪುದು ನಮ್ಮಯ ಮೂಱುಜನ್ಮದಲಿ ।
ಜನಿಸಲಿಕೆ ತಾವೆಂದು ಧನ್ಯರು
ದನುಜಹರ ನಮಗಿದನು ಕರುಣಿಪು
ದೆನಲು ಶ್ರೀವೈಕುಂಠನಾಥನು ಮತ್ತೆ ಬೇಡೆಂದ ॥ ೫

ನಾವು ಬೇಡುವುದೇನು ಮತ್ತೆಯು
ನೀವು ನಮ್ಮಯ ಮೂಱುಜನ್ಮಕೆ
ಕಾವುದೈ ಸುತನಾಗಿ ಯೆಂದರೆ ದೇವಸಿಂತೆಂದ ।
ನಾವು ನೀವೆಂದುದನು ಕೈಕೊಂ
ಡಾವು ಜನಿಸುವೆವೆನಲು ದೇವರ
ದೇವರಾಯನ ಬೀಳುಕೊಂಡರು ತಮ್ಮ ಮಂದಿರಕೆ ॥

ವಾಮನಾವತಾರ.

ಇರುತಿರಲು ತಾವ್ ಮಂದೆ ಬೇಡಿದ
ವರವ ಸಲಿಸಲಿಕಾಗಳವರನು

ಸುರನರೋರಗಗಗಳೊಳಗಧಿಕರ ಮಾಡಿ ಜನಿಸಿದನು ।
ನಿರುತದಲ್ಲಾಗಪತಿ ಕಶ್ಯಪ
ವರಸುನಾಮದಲವರು ಪುಟ್ಟಲು
ಹರುಷದಲಿ ತಾನವರ್ಗೆ ಜನಿಸಿದ ವಾಮನಾಹ್ವಯದಿ ॥ ೭

ಕೆಲವುಕಾಲಾಂತರಕೆ ರಾಜ್ಯವು
ಬಲಿಯಿತ್ಯೆ ತ್ರೈಭುವನಮಧ್ಯಮ
ದೊಳಗೆ ಮಲೆವವರಿಲ್ಲ ಯಮರಾಧೀಶಮೊದಲಾಗಿ ।
ಬಲಿಯು ಖರಘಟಿಕಾರದಿಂದ್ರನು
ತಲೆ ಬಿರಿದು ತಾ ನೋಡಿ ಹೋಗಲು
ಬಳಿಕ ತಾ ತ್ರೈಭುವನವಾಳಿದನಬ್ದಲಕ್ಷದಲಿ ॥ ೮

ಆಗತರ ಸುಖ ಸ್ವರ್ಗಭೋಗವ
ನಾಗ ಮಱಸಿತು ದೇಹಿಯೆಂಬರ
ನಾಗತರ ತಾ ಕಾಣದೊಂದಿನವಾಗ ಭಿಕ್ಷುಕರ ।
ಜಾಗರಸ್ವಪ್ನದಲಿ ಯಾಚಕ
ಭೂಗತರದಾವಲ್ಲಿ ಕಾಣದೆ
ಯಾಗ ಬಲಿ ಮಾಡುವನು ಬ್ರಾಂಹ್ಮರ ಕಾಣದನವರತ ॥ ೯

ಖೇದ ಕಂಪದೊಳದು ತಾ ಮಧು
ಸೂದನನನಡಿಗಡಿಗೆ ನೆನೆನೆನೆ
ದಾವರಿಸಿ ಯೆಲೆ ದೇವ ಬೇಡುವ ದ್ವಿಜರ ತೋಱೆನುತ ।
* ಮೇದಿನೀಸುರರಿಲ್ಲದಿರ್ದೊಡೆ
ಮೇದಿನೀಶ್ವರರೇಕೆ ಧೇನುಗ
ಳಾದರೆಯು ತಾ ಪೂಜಿಸದ ಮಾನವರು ಜನಿಸಿದರೆ ॥ ೧೦

* ಮೇದಿನೀಸುರವರ್ಗಕಿಕ್ಕದ
ಮೇದಿನೀಶರ ಧನಗಳೇತಕೆ
ವೇದವಿಪ್ರರ ಓದುವಾದ್ವಿಜನಿಕರವಿಲ್ಲದಿರೆ, ಗ. ಘ.

ಧೇನುವೇತಕೆ ದಾನಗೊಂಬ ಮ
ಹಾನುಭಾವರು ದೊರಕದಿದ್ದರೆ
ಮಾನವೇಂದ್ರನ ರಾಜ್ಯವೇತಕೆ ವ್ಯರ್ಥವೆನುತಿರಲು ।
ದಾನವಾಂತಕನಖಿದು ತತ್ಕ್ಷಣ
ತಾನು ಜನಿಸಿದನದಿತಿಕಶ್ಯಪ
ಸೂನುವಾಗಿಯೆ ಶ್ರವಣಋಕ್ಷದೊಳರಸ ಕೇಳೆಂದ ॥ ೧೧

ಜನಿಸಿದನು ವೈರೋಚನಿಯು ಘನ
ಮನದ ಬಯಕೆಯು ಕೊಡಲು ಹರ ತಾ
ನನಿಮಿಷರ ಹರಿಬವನು ತೆಗೆಯಲ್ಕುದಿಸಿ ಭವನದಲಿ [1] ।
ಜನಕಜನನಿಯು ಗುಡಿಯ ಕಟ್ಟಿಸಿ
ವಿನಯದಲಿ ತಾ ಜಾತಕರ್ಮವ
ನನುಕರಿಸುತುತ್ಸವದಿ ನೋಡುತ್ತಿರಲು ಬಳಿಕಾತ ॥ ೧೨

ವಾಮನಗೆ ಚೌಲೋಪನಯನವ
ತಾವು ಮಾಡಿದ ಕ್ರಮದಿ ಕರ್ಮವ
ಸಾಮವೇದಾದ್ಯಮಳನಿಗಮವ ಸುತಗೆ ಕಶ್ಯಪನು ।
ಪ್ರೇಮದಲಿ ಪರಿಕ್ರಮಿಸಿ ದಾನ
ಸ್ತೋಮಯೋಗ್ಯನ ಮಾಡಿ ನುಡಿದನು
ಭೂಪುಕನ್ಯಾದಾನವಿದ್ಯೆಯ ಕೊಳಲು ಕೊಡಬಹುದು ॥ ೧೩

ಕೊಟ್ಟ ತಾನತ್ಯಧಿಕಪುಣ್ಯವ
ನಿಟ್ಟನವ ಕೊಂಡಾತನುತ್ತಮ
ಸೃಷ್ಟಿಯಲ್ಲೀ ಮೂಱುಬಗೆಗಳ ಕಾಣೆನಜಗೆಂದ ।

ಬಲಿಚಕ್ರವರ್ತಿಯ ನಗರಿಗೆ ವಾಮನದೇವರ ಆಗಮನ.

ನೆಟ್ಟನಲ್ಲಿಂದಿಳಿದು ಬಂದನು
ಪಟ್ಟಣಕೆ ಬಲಿಚಕ್ರವರ್ತಿಯ
ಭೀಷ್ಟವೆನು ತಾ ಕೊಡುವೆನೆಂಬೀ ಹರುಷಪುಳಕದಲಿ ॥ ೧೪

---

[1] ದಿಸಿದನುಮುನ್ನ, ಖ.

ಕೌಪು ಕೃಷ್ಣಾಜಿನವು ವರಯು
ಜೊಞ್ಞೋಪವೀತದ ದಂಡಮುಂಜಿಯು
ನಾಪವಿತ್ರೋತ್ತಮನು ಕೊಡೆ ವಿಡಿದಲ್ಲಿಗೈತಂದ ।
ಮೂಪತಿಯು ವರಕರಕಮಂಡಲ
ದಾಪುರುಷ ಬರುತಿರಲು ಕಡೆವ್ರೊಲ
ಗೋಪರಾಗಲು ಬಂದು ವೈರೋಚನಿಗೆ ಹೇಳಿದರು ॥ ೧೪

ದೇವ ಬಿನ್ನಹ ವಿಂದು ತಾ ಭೂ
ದೇವನಾತ್ಮಜನೊಬ್ಬ ವಟು ಬರೆ
ತಾವು ಕೇಳಲಿಕಾತನೆಂದನು ಭೂಪ ಕೇಳನುತ ।
ನಾವು ದಾನಾರ್ಥಿಗಳಹೆವೆನಲು
ದೇವ ಯಿದು ಹೊಸತೆನುತ ನಿಮ್ಮೆಡೆ
ಗಾವು ಹೇಳಲು ಬಂದೆವೆಂದರೆ ಬಲಿಯು ಹರುಷಿಸಿದ [1] ॥ ೧೬

ಕಟ್ಟು ಗುಡಿತೋರಣವನೆಂದಾ
ಪಟ್ಟಣಕೆ ನಿರವಿಸಿಯೆ ತಾನತಿ
ಹೃಷ್ಟರೋಮಂಗಳಲಿ ಬಂದನು ದೇವನಿದಿರಾಗಿ ।
ಹುಟ್ಟಿ ಬಂದನು ಯಾಚಕನು ತಾ
ಹುಟ್ಟಿದನೆ ಹರಿಯೆನುತಲಿರಲಿಕೆ
ಪಟ್ಟಣವ ಬಂದಾತನೈದಲಿಕೀತ ಕಣ್ಣಾರೆ ॥ ೧೭

ಕಂಡು ವೈಯ್ಯಾಕ್ಕಿಸಿದನತಿಥಿಗೆ
ದಿಂಡು ಗೆಡೆದನು ನಮ್ಮ ಪಿತೃಗಳ
ಹಿಂಡಿಗಾಯಿತು ಸತ್ಯಲೋಕವು ನಿಮ್ಮ ದರುಶನದಿ ।
ಕಂಡುದಿಲ್ಲಾ ನೀಸುದಿನಗಳ
ತಂಪದಲ್ಲತಿಥಿಗಳನೆನುತಲಿ
ಕೊಂಡು ಬಂದನು ತನ್ನ ಭದ್ರಾಸನಕೆ ವಾಮನನ ॥ ೧೮

1 ವೆಂದರುಚರರು ಕೈಮುಗಿದು, ಖ.

ತಂದು ತಾನರ್ಘ್ಯಾಸನಂಗಳ
ಛಂದದಲಿ ವಿಸ್ತರಿಸಿ ಬಿನ್ನಹ
ವಿಂದು ನಿಮ್ಮಯ ಬರವದಾವುದು ಬಯಸಿ ಬಂದುದನು ।
ಇಂದೆನಗೆ ಕರುಣಿಸುವುದೆಂದರೆ
ಮಂದರೋದ್ಧರನೆಂದನೆನಗಿದ
ನಿಂದು ಕೊಡುವುದು ಮೂಱುಪಾದದಲಿಳೆಯ ನೀನಿಂತು ॥ ೧೯

ಮೂರಡಿ ಭೂಮಿಯ ಕೇಳಿದುದಕೆ ಪಶ್ಚಾತ್ತಾಪ.

ಎನಲು ಬಲಿ ಬೆಂಡಾಗಿ ಯೀಬಡ
ಮನದ ವಿಪ್ರನದೇನ ಬೇಡಿದ
ನೆನುತ ಸುಯ್ದನು ತನ್ನ ಪುಣ್ಯದ ಫಲವು ಕಿಱಿದೆನುತ ।
ನಿನಗೆ ಬುದ್ಧಿಯನಾರು ಕಲಿಸಿದ
ಜನರು ತನ್ನನು ಕೆಡಿಸ ಬಗೆದರು
ಕನಕದಗಣಿತವಸ್ತುಚಯವನು ಬೇಡನೀದ್ವಿಜನು ॥ ೨೦

ಮನಮಱುಗಿ ದೈನ್ಯದಲಿ ದಾನವ
ಘನತೆಗೈದಿದ ವ್ರತಿಯ ಬಯಸಲು
ತನಗೆ ಹರಿ ಕರುಣಿಸಿದನಲ್ಪವನೀತ ಬಂದೀಗ ।
ಧನವ ಬೇಡದೆ ಬರಿಕಿಱುಕುಳದ
ವನಿಯ ಬೇಡಿದನೀಗ ಕೊಡುವೆನು
ಮನವೊಲಿದು ಬೇಡಿದರೆ ರಾಜ್ಯವನೆನ್ನ ಸಹಿತೆನುತ ॥ ೨೧

ಎಲೆ ಮರುಳ ಭೂಸುರರೆ ಯೆನ್ನಯ
ಹೊಳಲಿಗೈತಂದಿಲ್ಲಿ ನೀವಿಂ
ದೊಳನ ಭೂಮಿಯ ಬೇಡಿದಿರಿ ನೀವಿದನಱಿಯರಿನ್ನು ।
ಇಳೆಯ ಮೇಲಿದಕೆನ್ನ ಕೀರ್ತಿಯ
ಬೆಳಕವಾಗದೆ ಹೋಯಿತೆನುತಲಿ
ಕಳವಳಿಸಿ ತನ್ನರ್ಥ ಜಾಣಿಸದೆಂದು ದುಗುಡದಲಿ ॥ ೨೨

ತರಿಸಿದನು ಪುಂಗಳಸವಾರಿಯು
ಪರುತವಿಸಿ ತನ್ನಾತ್ಮಸತಿಯುಳ
ಪರಮಹರುಷದಿ ಹರಿಯು ಚರಣವ ತೊಳದು ಸತ್ಕರಿಸಿ |
ಧರಣಿಯುಲಿ ಮೂಱಡಿಯು ನಿನಗಾ
ದರಿಸಿದೆನು ಶ್ರೀಹರಿಗೆ ತಾನಿದು
ವರಸಮಾರಾಧನೆಯುದೆನುತಲಿ ಪೂರ್ಣಕಲಶದಲಿ ‖ ೨೩

ಧಾರೆಯೆಱೆಯುಲಿಕಲ್ಲಿಗಾತನ
ಧಾರೆಯನು ಗುರು ಬೇಡಬೇಡೆನೆ
ವಾರಿಜಾಕ್ಷನು ಶುಕ್ರದೇವರ ಕಣ್ಣ ದರ್ಭೆಯುಲಿ |
ತೂರಿಸಲು ಕಣ್ಣೊಡೆದು ಹೋಯಿತು
ಧಾರುಣೀಸುರರಡ್ಡಬೀಳಲು
ವಾರಿಯಾಯಿತು ಶುಕ್ರದೇವರ ಕಣ್ಣಿಗಂದಾಗ ‖ ೨೪

ಶುಕ್ರದೇವರ ಕಣ್ಣು ಹೋಗಲಿ
ಕೆಕ್ಕರದಲು ಕಡೆಗೆ ಸಾಱಿದ
ರಕ್ಕಸರ ಬಲೀಂದ್ರನಾಕ್ಷಣ ದೇವಗಯಂಗೆ |
ಇಕ್ಕಿದನು ಮೂಱಡಿಯು ಭೂಮಿಯು
ನಿಕ್ಕಲಿಕೆ ವಾಮನನು ತತ್ಕ್ಷಣ
ಕಕ್ಕಜದ ಶ್ರೀಮೂರ್ತಿಯಾದನು ತಾ ಚತುರ್ದಶದ ‖ ೨೫

ಲೋಕ ವಿಕ್ರಮನಾತ್ರಿವಿಕ್ರಮ
ನಾಕೆವಾಳನಿದೆಂತುಟೋ ಹರಿ
ಯಾಕಶಕೆ ನಿಂದಿರ್ದ ತಪ್ಪದೆ ಯಿಕ್ಕೆಯರಡಾಯ್ತು |
ಲೋಕ ಮೂಱಲಿ ಸತ್ಯಲೋಕವ
ನೂಕಿ ಮೇಲಣ ಕಮಲಜಾಂಡದ
ಜೋಕೆಯನು ನಖಸೋಕೆ ಬಿರಿಯಿತಾ ಕಟಾಹವದು ‖ ೨೬

ಆಮಹಾಕೌತುಕವ ಕಂಡನು
ತಾ ಮಹೋತ್ಸಾಹದಲಿ ಕಮಲಜ
ನಾ ಮಹಾಚರಣವನು ತೊಳೆದನು ಶ್ರೀ ತ್ರಿವಿಕ್ರಮನ ।
ಆಮಹಾಪಾದದಲಿ ಪುಟ್ಟಿದ
ಳಾಮಹಾಗಂಗಾಭಿಧಾನದಿ
ಭೂಮಿಯನ್ನಾಕುಳಿಸಿ ಬಾರದೆ ಯಾಮಹೀತಳಕೆ ॥ ೭೭

ಬಲಿಚಕ್ರವರ್ತಿಯು ವಿತಳ ಪ್ರವೇಶ.

ಬರಬರಲು ಹದಿನಾಲ್ಕು ಲೋಕವ
ಸುರನರೋರಗನಿಕರ ಬಾಯ್ಬಿಡೆ
ಹರಿಯು ಖರ್ಪರದಿಂದ ಸಾಕ್ಷಾದನ್ಧ್ಯ ತಾನೆನುತ ॥
ಸರಸಿಜಾಂಡವನೈದೆ ನುಂಗುವ
ವರಜನಕ ತಾನಾತ ಮಂಗಳ
ಪರಮಕರುಣಾಸಿಂಧು ಪಾರ್ವತಿಯುರಸ ಜಡೆಗಳಲಿ ॥ ೭೮

ಧರಿಸಿದನು ಗೀರ್ವಾಣಗಂಗೆಯು
ಪರಮಹರುಷದಿ ಶಂಭುಗಾದಿನ
ಸುರರು ಸೇಸೆಯನಿಕ್ಕಿ ಶಿವ ಶಿವ ಯೆಂದು ತಾವ್ಯೈದೆ ।
ಧರೆಗಳವು ಹದಿನಾಲ್ಕು ನಿರುತದಿ
ಪರಮಕರುಣಾಸಿಂಧುನಾಮದಿ
ಹರುಷದಿಂದಪೆ ಹರ ಹರೆನುತಲಿ ಸುರರು ತುತಿಸಲಿಕೆ ॥ ೭೯

ಹರುಷದಲಿ ಶಿವನಾತ್ರಿವಿಕ್ರಮ
ನಿರವ ಕಂಡು ಮಹಾನುಭಾವದಿ
ಶಿರವ ತೂಗಲು ಜಡೆಯೊಳಿದ್ದಾ ಗಂಗೆ ತಾ ತುಳುಕಿ ।
ಭರದಿನಾಗಳು ಮೂಱುಮುಖವಲಿ
ಹರಿದಳ್ಯೆ ತ್ರಿಭುವನಕೆ ಕಂಡಾ
ಸುರರು ಹೊಗಟಿದರಲ್ಲಿ ಗಂಗೆಯು ಹಲವು ತುತಿಯಿಂದ ॥ ೮೦

ಬಳಿಕ ತ್ರಿವಿಕ್ರಮನದೆಂದನು
ಬಲಿಯನೀ ಕುಱಿತಾಗ ನಮ್ಮಯ
ನೆಲನ ಕೊಡು ಮತ್ತೊಂ[1]ದು ಪಾದಪನೆನುತ ಕಡೆಗಟ್ಟಿ ।
ಬಲಿಯು ಘಾಡಿಸಿ ಯಾತನಂಗನೆ
ಬಲಿಗೆ ಬುದ್ಧಿಯ ಹೇಳಿ ಯಿಾಜಗ
ಬಳಗವೆರಡಕೆ ಸಂದುಪಾದೊಡೆ ನಿನ್ನ ತನುವಿದನು ॥ ೩೧

ಉಳಿದ ಪಾದಕ್ಕಿಕ್ಕು ನೀನೆನೆ [2]
ನಳಿನಲೋಚನಗಾಗ ಬಿನ್ನಹ
ಬಲಿಯು ಮಾಡಿದ ಕೇಳು ಜನಮೇಜಯಮಹೀಪಾಲ ।
ಎಲೆ ತ್ರಿವಿಕ್ರಮ ನಿನ್ನ ಕೊರತೆಯ
ನೆಲಕೆ ಯಿದೆ ಯೆನ್ನುತ್ತಮಾಂಗದ
ತಳವೆನಲು ನಸುನಗುತ ಗಂಗಾಜನಕನಿಂತೆಂದ ॥ ೩೨

ನಿನ್ನ ಸತಿಮತಿಗಾನು ತುಷ್ಟಿಯ
ಮನ್ನಿಸಿದೆ ಕೇಳೆಂದು ಬಲಿಯನು
ತನ್ನ ಸಂಗಡ ವೊಯ್ದು ನಾತನ ಸುತಳಮಂದಿರಕೆ ।
ಇನ್ನು ವಾಗಲಿ ಪರಮಸುಖದಲಿ
ತನ್ನ ಪುತ್ರಕಳತ್ರದಿಂದವೆ
ಪನ್ನಗಾಶನದೆಡೆಯೊಳಿರ್ದನೆ ಕಲ್ಪಪರಿಯಂತ ॥ ೩೩

ಇದನಱಿದು ಭೂಸುರರ ದಾನದ
ಪದನ ಕೊಳ್ಳದಿರೆಂದು ನಾನಾ
ವಿದಿತಲೋಕವನೈದಲಾಪತಿ ದ್ವಿಜರ ಭಜಿಸೆಂದ ।
ಇದು ಕಣಾ ಯದಿತಿಸುತನು ಮನ್ನಿಸಿ
ಮುದದಿ ಬೇಡಿದ ವಸ್ತುವೀಯಲಿ
ಕದಕೆ ತಾ ಕೈವಲ್ಯವಾಯಿತು ಬಲಿಗೆ ಕೇಳೆಂದ ॥ ೩೪

1 ಯಿಂನೊಂ, ಕ. ಖ.　　ವೆಂದರೆ, ಕ. ಖ.

ಇದು ಪರಮವೇದಂಗಳಮಹೋದಯ
ವಿದುವೆ ಸಕಲವ್ಯಾಧಿಹರ ವಿಂ
ತಿದುವೆ ಶತ್ರುಕ್ಷಯ ಸಮಾಹಿತಿಪರಿಭಕುತಿಮತಿಯ ।
ಒದವಿಪನು ಸಂತೋಷಸುಖಸಂ
ಪದವ ಕೇಳ್ದವರಿಂಗೆ ಒಟ್ಟಿಕಾ
ಯಗುಶಿರೋಮಣಿ ವೀರನಾರಾಯಣನು ಕರುಣದಲಿ ॥ ೩೪

ಹತ್ತನೆಯ ಸಂಧಿ ಮುಗಿದುದು.

---

## ಹನ್ನೊಂದನೆಯ ಸಂಧಿ.

### ಸೂಚನೆ.

ಹೇಳಿದನು ಕೌತುಕವ ಲಕ್ಷ್ಮೀ
ಲೋಲನಡಿಗಳಗಾಯ್ತುದೆರಡಕೆ
ಮೇಲುಜಗವ್ಯೆನೂರುಕೋಟಿಯುಮತಳಸಹಿತೆಯ್ದ ॥

ಕೇಳು ಜನಮೇಜಯ ಧರಿತ್ರೀ
ಪಾಲ ಬರೆ ಬಲಿಚಕ್ರವರ್ತಿಯು
ಪಾಲಿಸಿದ ಪರಿವಿಡಿಯ ನಾ ಹರಿ ತ್ರಿವಿಕ್ರಮಾಕೃತಿಯ ।

ಲೋಕವಿಸ್ತಾರ ಪ್ರಶ್ನೆ ಮತ್ತು ಉತ್ತರ

ಕೇಳನಲು ಮುನಿಪತಿಯನಾನೃಪ
ಕೇಳಿದನು ಬ್ರಹ್ಮಾಂಡದಗಲವ
ಹೇಳು ವಿಸ್ತರವಾಗಿ ನೀ ಹದಿನಾಲ್ಕುಲೋಕಗಳ ॥

ಕೂಡೆ ಸಪ್ತದ್ವೀಪಸಾಗರ
ಗೂಡಿ ನವಖಂಡಂಗಳನಗೆ
ನಿರೂಢಿಗಣಿತವನಿನ್ನು ಹೇಳೆನೆ ಮುನಿಪನಿಂತೆಂದ ।

ರೂಢಿಯುಗಲವ ಕೇಳು ನೀನೀ
ರೂಢಿಪತಿ ಮುಂದಹೊಡೆ ನೀಸಿದ
ನೋಡಿ ಕೇಳ್ಳ ಸಾಂಗದಿಂದವೆ ನಾನು ಹೇಳುವೆನು ॥　　೨

ಎಸೆವ ತಾನ್ನೆನೂಱುಕೋಟಿಯು
ಮಿಸುಪ ಯೋಜನವಲಯುವೆನು ತಾ
ನುಸುರುವೆನು ತಾ ಕೆಳಗಿದಹುದಾಹರಿಯು ನಿಜಗೃಹಕೆ[1] ।
ಎಸೆದಿಹುದದೊಂಬತ್ತುಲಕ್ಷದ
ಪಸರದಲಿ ಪರಿಪೂರ್ಣನಾಗಿಹ
ಬಿಸರುಹಾಕ್ಷನನಂತಶಯುನನು ಭೂಪ ಕೇಳೆಂದ ॥　　೩

ಅದಱ ಮೇಲಿಂತತಳ ಲಕ್ಷದ
ತುದಿಗೆ ತಾನಾಕಾಶವೆರಡಂ
ತದಱ ಮೇಲುಂ ವಿತಳನಾಲ್ಕೇ ಲಕ್ಷ ಕೇಳೆಂದ ।
ಅದಱಲಾಯಾಕಾಶವಿಪ್ಪುದು
ಯುದಱ ಯಿಮ್ಮಡಿ ಸುತಳ ಬಱಿಕಾ
ವಿದಿತ ಹದಿನಾಱರದು ಮೂವತ್ತೆರಡಱಾಕಾಶ ॥　　೪

ಅದಱ ಮೇಲಿಮ್ಮಡಿ ಮಹಾತಳ
ವದಱ ಯಿಮ್ಮಡಿ ಶೂನ್ಯ ಮೇಲಣ
ವಿದರದಲಿ ಪರಿಪೂರ್ಣವಾಗಿಹುದಾತಳಾತಳವು ।
ಅದಱ ಯಿಮ್ಮಡಿ ಮೇಲೆ ಶೂನ್ಯವು
ಯುವಕೆ ತಾನೀಗೆರಡು ಮಡಿಯ್ಕೆ
ವಿದಿತಕಿಪ್ಪುದು ವರರಸಾತಳ ಶೂನ್ಯ ತದ್ದ್ವಿಗುಣ ॥　　೫

ಮೇಲೆ ತಾ ಪಾತಾಳವಿಪ್ಪುದು
ಕೇಳು ನಾಲ್ವತ್ತೆಂಟು ಕೋಟಿಯು
ಮೇಲೆ ತೊಂಬತ್ತಾಱುಲಕ್ಷದಲಿಹುದು ಕೇಳೆಂದ[2] ।

---

1 ಹದಿನಾಲ್ಕು ಲೋಕದ ಕೆಳಗ ಹಬ್ಬುವನ, ಗ, ಘ.　2 ತದ್ದ್ವಿಗುಣ, ಖ.

ಹೇಳಲೇನಿನ್ನಾನು ಕೆಳಗಣ
ದೇಖುಪಾತಾಳಂಗಳಳತೆಯು
ಕೇಳದೆಂಭತ್ತೆರಡುಕೋಟಿಯು ವೆಳಯುಕಾಯ್ತೆಂದ ॥ ೬

ಮೇಲೆ ಮೇದಿನಿ ಪುಟ್ಟಿಯಂತಿಹು
ದೇಖುಪಾತಾಳಷ್ಟರಗಲಕೆ
ಚಾಲಿಸಿಹುದೆಂಬತ್ತುಯೆರಡೇ ಕೋಟಿ ಪರಿಯಂತ ।
ಕೇಳು ತಾ ಭೂವಳಯ ತಾ ವರ
ಲೋಲಜಂಬೂದ್ವೀಪ ಲಕ್ಷವು
ಚಾಲಿಸಿಹುದದಕರಸ ಯೆರಡೇಲಕ್ಷ ಲವಣಾಂಬು ॥ ೭

ಅದನು ತಾ ಸುತ್ತಿಹುದು ದ್ವೀಪವು
ಯದಱ ಯಿಮ್ಮಡಿ ಪ್ಲಕ್ಷದ್ವೀಪವು
ಯದಱ ಹೊಱವ್ಯ ಸ್ವಾದುಜಲವೆಂದದಱನಾಚೆಯಲಿ ।
ವಿದಿತವಾಕುಶದ್ವೀಪವದಱಿಂ
ತುದಿಗೆ ತಿರುಗಿಹುದಿಕ್ಷು ವಿಕ್ಷುವೆ
ಹೊದಿಸಿಹುದು ತಾ ಕ್ರೌಂಚದ್ವೀಪವದನು ಮಧುಸುರಭಿ ॥ ೮

ಅದಕೆ ಬಳಸಾಗಿಹುದು ಕೇಳಾ
ಯದಕೆ ಶಾಲ್ಮಲಿದ್ವೀಪದ್ವೀಪವೆ
ನದನು ಸುತ್ತಿಹುದಾಜ್ಯನಿಧಿ ತಾನರಸ ಕೇಳೆಂದ ।
ಅದಕೆ ಚಕ್ರಾಕಾರದಲಿ ತಾ
ವಿದಿತ ಪುಷ್ಕಳ ದ್ವೀಪ ದ್ವೀಪಕೆ
ದಧಿಸಮುದ್ರವು ಸುತ್ತಿ ತಾಸಿಹುದರಸ ಕೇಳೆಂದ ॥[1] ೯

ಅದಕೆ ಸ್ವರ್ಣದ್ವೀಪದುಡುಗೆಯು
ವದಕೆ ತಾ ಪಯರಾಶಿ ರಾಶಿಗೆ
ವಿದಿತವೃತ್ತಾಕಾರದಲಿ ಸುತ್ತಿರ್ಪ ಪರ್ವತವು ।

---

1 ಶ್ರೀತವಾಯುವಾಗಿ, ಗ.ಘ.

ಅದಱಗಲ ಹದಿನೇೞುಲಕ್ಷವು
ಯುದಱುದಯು ತಾನೊಂದುಲಕ್ಷವೆ
ದಿದನು ಲೋಕಾಲೋಕಪರ್ವತವೆಂಬರೈ ಭೂಪ ॥ ೧೦

ಇಂತು ತಾ ಭೂಗೋಳದಗಲವೆ
ದಂತದಿಂದೊಂದೊಂದಱಿಮ್ಮಡಿ
ಕಂತುಪಿತ ಪ್ರತ್ಯಕ್ಷವಾಗಿಹ ಕಡಲ ಪರಿಯಂತ ।
ಅಂತು ಸಪ್ತದ್ವೀಪದ್ವೀಪದ
ಪಂತಿಯಲಿ ಹರಿದಿಹ ಸಮುದ್ರದ
ಯಂತದಗಲವ ಕೇಳು ನೂಱಱುವತ್ತುನಾಲ್ಕವ ॥ ೧೧

ಕೋಟಿಯೋಜನವೆಲಯು ಭೂಮಿಯು
ಮಾಟ ಕೆಳಗಣ ಕೂಟ ಕೂಟದ
ಕೋಟಿ ಮುನ್ನೂಱೈವತ್ತೆಂಟುಕೋಟಿಯೋಜನವು ।
ಕೋಟಿಯೊಂದೇ ಭೂಮಿ ಭೂರ್ಭುವ
ದಾಟಿ ಯೆಡೆಯಾ ಭುವನದಿಮ್ಮಡಿ
ಕೋಟಿ ಯೆಂಟೇ ಸ್ವರ್ಗ ತಾನವು ಕೋಟಿ ಪದಿನಾಲ್ಕು ॥ ೧೨

ಮೇಲೆ ತಾ ಮಹರ್ಲೋಕವಿಮ್ಮಡಿ
ಕೇಳುವದಱಿಂ ಮೇಲೆ ತಾಳ್ದಿಹು
ದಾಲಯದ ಜನಲೋಕ ಲೋಕದ ಮೇಲೆ ತಪಲೋಕ ।
ಆಲಯದ ಮೇಲಿಹುದು [1] ಕಮಲಜ
ನಾಲಯವು ಶ್ರೀಸತ್ಯಲೋಕವು
ಮೇಲೆ ಮುಸುಕಿಹುದಾಕಟಾಹವು ಬ್ರಹ್ಮಗೋಳಕದ ॥ ೧೩

ಇಂತು ಮೇಲಣಲೋಕವಾಱಱ
ಪಂತಿಯೋಜನ ದ್ವಿಗುಣ ದ್ವಿಗುಣದ
ಲಿಂತು ಕೇಳರು ಕೆಳಗೆ ಮೂಱೇಕೋಟಿಯೋಜನವು ।

---

[1] ಮೇಲೆಯಿಮ್ಮಡಿಸಿಹುದು, ಗ, ಘ.

ಅಂತರಂತರದೆಡೆಯ ಲೋಕಗ
ಳಂತರದ ಬಯಲೆಂತುಟೈ ತಾ
ನಂತು ಯೋಜನವಾಯ್ತುದಿಪ್ಪತ್ತಾಱುಕೋಟಿಗಳು ॥ ೧೪

ಆಮಹಾಕಮಲಜನ ಲೋಕದ
ಲಾಮಹಾಬ್ರಹ್ಮಾಂಡಭಾಂಡದ
ಸೀಮೆಯೇ ಜನಕೋಟಿ ನಾಲ್ವತ್ತೆರಡ ಕೇಳೆಂದ ।
ಆಮಹಾಬ್ರಹ್ಮಾಂಡಖರ್ಪರ
ಭೂಮಿಯಗಲದ ಮದವು ತಾನುವಿ
ರಾಮಿಸಿದನವಧಾರು ಕೋಟಿಯ ವಳಯ ಕೇಳೆಂದ ॥ ೧೫

ಅಂತರಿತಮಹರಾದಿಲೋಕದ
ಲಂತರವು ನೆಱೆಯಾಯ್ತು ಯೋಜನ
ವಂತು ನೂಱು ಮೇಲದಿಪ್ಪತ್ತೆರಡುಕೋಟಿಗಳು ।
ಅಂತು ತಾ ಬ್ರಹ್ಮಾಂಡಭಾಂಡದ
ಅಂತರವು ಐನೂಱುಕೋಟಿಯು
ಪಂತಿಯೋಜನ ಮೂಱುಲೋಕವದೆನಿಸಿಕೊಂಡಿಹುದು ॥ ೧೬

ಈಮಹಾಬ್ರಹ್ಮಾಂಡ ಯಿಮ್ಮಡಿ
ತಾ ಮಹಾಜಲಮುಸುಕಿಕೊಂಡಿಹು
ದಾಮಹಾಜಲವದನು ಮುಚ್ಚಿಯೆ ಶಿಖಿಯು ತಾನಿಹನು ।
ಆಮಹಾತೇಜವನು ಮಾರುತ
ತಾ ಮಹಾದ್ವಿಗುಣದಲಿ ಬಳಸಿಹ
ನಾಮಹಾಮಾರುತನ ಸುತ್ತಲು ತೀವಿತಾಕಾಶ ॥ ೧೭

ಬಂದಱಿಮ್ಮಡಿ ಯೊಂದು ತಾನಿಂ
ತೆಂದು ಸುಮಹಾಭೂತಪಂಚಕ
ದಿಂದ ಹೊಱಗಿಹುದಾಮಹಾವೈಕುಂಠವೆಂತೆಂದು ।

ತಂದೆ ಕೇಳ್ಳ ಯಿವೆನದೆಲ್ಲವ
ನೊಂದು ಗೂಡಿಯು ಮೂಱುಲೋಕಗ
ಳಂದದೆಂಬರು ಸ್ವರ್ಗನರಪಾತಾಳವೇಳಾಪ ॥ ೧೮

ಸುರಗಿರಿಯು ಬಳಸುತ್ತಲಿಹುದಾ
ಸುರವರರಿಳಾವೃತವು ಕೇಳಾ
ಗರಿದು ಸಾವಿರನವಸಹಸ್ರವು ನೀಲಪರ್ವತವು ।
ಎರಡುಸಾವಿರದಗಲವಾಚೆಯು
ವರವರುಷವಾರಮ್ಯವೆಂಬುದು
ಯೆರಡುಸಾವಿರಯೋಜನಂಗಳ ಶ್ವೇತಗಿರಿಯಿಹುದು ॥ ೧೯

ಮತ್ತೆ ತಾನೊಂಬತ್ತುಸಾವಿರ
ಬಿತ್ತರದಲಾ ಹಿರಣ್ಮವರುಷವ
ದತ್ತಲಿಹುದಾನಿಷಧಗಿರಿಯುದಱೀಚೆಯಲಿ ಹರಿವರ್ಷ ।
ಬತ್ತಿಹುದು ತಾ ನೀಲಪರ್ವತ
ವತ್ತಲಿಹುದಾ ವರುಷಕಿಂಪುರು
ಷೋತ್ತಮವು ಮದಱಿಂದ ತೆಂಕಲು ವರಹಿಮಾಚಲವು ॥ ೨೦

ಅರಸ ಕೇಳ್ಳ ಮೇರುಗಿರಿಯಾ
ಸರಸಿಜದ ಕರ್ಣಿಕೆಯ ವೋಲಿರೆ
ಪರಿಧಿಯೆಸಳಂದದಲಿ ಭಾಸ್ಕರಕೇತುಮಾಲಾಖ್ಯ ।
ಕುರುವರ್ಷ ಭದ್ರಾಶ್ವ ವೆಂಬಿವು
ಶರಧಿಯೊತ್ತಿನಲಿಹವು ನಾಲಕು
ವರುಷಗಳು ಗಿರಿಗಂಧಮಾದನಮಾಲ್ಯವಂತಗಳು ॥ ೨೧

ಇಂತವೆಂಬತ್ತೊಂದುಸಾವಿರ
ಪಂತಿಯಲಿ ನವಖಂಡ ವೊಂದಿಹು
ದಿಂತು ಪರ್ವತವವಕೆ ಯಷ್ಟಾದಶಸಹಸ್ರಗಳು ।

ಇಂತು ತೊಂಬತ್ತಾಱುಸಾವಿರ
ವೆಂತು ವೊಂಬತು ಸಹಸ್ರಸುರಗಿರಿ
ಯಂತರಕೆ ನೆಲೆಯಾಯ್ತು ಜಂಬೂದ್ವೀಪ ತಾ ಲಕ್ಷ ॥ ೭೭

ಎಂಬುದಿದು ನೆಱೆ ಕಾಣಬಂದುದು
ವೆಂಬುದಕೆ ತಾ ಭರತವರುಷವ
ದಂಬುರುಹಜಾಂಡಕ್ಕೆ ತಾ ಕಾರಣವದಕೆ ಕಾರಣವು ।
ಶಂಬರಾರಿವಿರೋಧಿ ತಾನಿಹ
ಜಂಬುವಿನ ವರಜಾಂಡವೆನಿಸಿದ
ಯಿಂಬು ಪಡೆದಲ್ಲಿರ್ದ ನಾಗಿರಿಮಧ್ಯದಲಿ ಶಿವನು ॥ ೭೩

ನಂಬಿದರನುದ ರಿಪೆನೆಂದು ವಿ
ಡಂಬವಿಲ್ಲದೆ ಮಲ್ಲಿಕಾರ್ಜುನ
ನೆಂಬುವಭಿಧಾನದಲಿ ವರಶ್ರೀಶೈಲವೆಂದೆನಿಸಿ ।
ಎಂಬುದೈ ತ್ರೈಜಗದ ಲೋಕಗ
ಳಂಬಿನೊಳು ನೆಱೆ ಶುಭಗಳೀವುತ
ಲಂಬುಜಾಕ್ಷಿ ಮೃಡಾನಿಯರಸನು ಶಿವನು ನೆಲಸಿರ್ದ ॥ ೭೪

ಸಕಲತೀರ್ಥಕ್ಷೇತ್ರವೆಲ್ಲವ
ದಖಿಳಬಲ ವಾಮನನ ಚರಣದಿ
ಪ್ರಕಟದಲಿ ಬ್ರಹ್ಮಾಂಡಲಕ್ಷವದಡಗಿದಪವೆಂದ ।
ಸಕಲಜನರಕ್ಷಕನನಱಿಯದ
ಕುಟಿಲನು ಬಲಿ ತಾನು ಮೂಱಡಿ
ಚಕಿತ ಭೂಮಿಯು ಕೊಡೆ ತ್ರಿವಿಕ್ರಮಪಾದಕೀ ಜಗವು ॥ ೭೫

ನೆರೆಯದೆಂದರದಿನ್ನು ಶ್ರೀಸತಿ
ವರನ ಮಹಿಮೆಯು ಹೊಗಱಲಾಪೆನೆ
ಹರಿಯು ವೊಂದವತಾರ ವೊಂದಕದೊಂದು ಮಿಗಿಲೆಂದ ।

ಧರಣಿಪತಿ ಕೇಳ್ಮತ್ಸ್ಯ ಕೂರುಮ
ವರವರಹ ನರಸಿಂಹ ವಾಮನ
ಪರಶುಧರ ಶ್ರೀರಾಮ ಕೃಷ್ಣನು ಬೌದ್ಧ ಕಲ್ಕಿಗಳ ॥ ೭೬

ವರಮಹಾಮಹಿಮೆಯನು ಹೊಗಳುವೊ
ಡರಿಯದೈ ಶ್ರುತ್ಯರ್ಥವೆಂದರೆ
ನರರ ಪಾಡೇ ಹರಿಯ ಹೊಗಳುವೊಡರಸ ಕೇಳೆಂದ ।
ಸರಸಿರುಹಬ್ರಹ್ಮಾಂಡವಾಮನ
ಚರಣದಳತೆಗೆ ನೆರೆಯದೆಂದರೆ
ಹಿರಿದು ಹರಿಗಿಂದಿಲ್ಲ ನೋಡಲಿಕಧಿಕಸಮರೆಂದ ॥ ೭೭

ಆಹರಿಯೆ ನಿನ್ನವರ ಸಾರಥಿ
ಯಾಹರಿಯೆ ನಿನ್ನವರ ಭಾವನ
ದಾಹರಿಯೆ ನಿಮ್ಮವರಿಗಿಹ ಪರವರದ ಕೊಡುವಾತ ।
ಆಹರಿಯೆ ತಾನಾದಿನಿಗಮ
ವ್ಯೂಹದೂರನು ಪಾಂಡುಪುತ್ರರ
ಗೇಹದಲಿ ಸಿಲುಕಿದನು ಗದುಗಿನ ವೀರನಾರಯಣ ॥ ೭೮

ಹನ್ನೊಂದನೆಯ ಸಂಧಿ ಮುಗಿದುದು.

## ಹನ್ನೆರಡನೆಯ ಸಂಧಿ

**ಸೂಚನೆ.**

ಸೋಮಕುಲಸಂಭವರು ಗಂಗೆಗೆ
ಕಾಮಿಸಿಯೆ ಪರಿಪೂರ್ಣರಾಗದೆ
ಭೂಮಿಯಲಿ ಶಂತನುಗೆ ಮಕ್ಕಳು ಜನಿಸಿ ಮರಳಿದರು ||

ಜನಮೇಜಯನ ಪೌರ್ವಿಕರ ವೃತ್ತಾಂತ

ಕೇಳು ಜನಮೇಜಯ ಮನೋಹರ
ದೇಟಿಗೆಯಲೇ ನಿಮ್ಮ ಪೂರ್ವನೃ
ಪಾಲಕಥನವನೆಂದು ವೈಶಂಪಾಯ ಹೇಳಿದನು |
ಶ್ರೀಲತಾಂಗೀ ಪ್ರಾಣನಾಥನ
ಲೋಲಭಾರತಭಾಷ್ಯಕಾರರ
ಲಾಲಿಸುತ ಜೈಮಿನಿಸುಮಂತುವ ನೆನೆದು ಕೈಕೊಂಡ || ೧

ಮೇಲೆ ಹೇಳಿದ ಭಾರತಾಖ್ಯಾದಿ
ಕಾಲರೂಪಮುಕುಂದ ಮುಟಕು ವ
ನೇಟುಜನ್ಮವ ಬಯಸಿದಲ್ಲದೆ ಯೀಮಹಾಕಥೆಯ |
ಹೇಳಬಾರದು ಕೇಳಬಾರದು
ಮೇಲೆ ಕೈವಲ್ಯಾದಿಗತಿಗಿದು
ಬಾಳಿಕೆಗೆ ಕಾರಣವು ಕೇಳ್ಳೈ ರಾಯ ನೀನೆಂದ || ೨

ಆದಿಸೃಷ್ಟಿಯೊಳುದಿಸಿದರು ದ
ಕ್ಷಾದಿವಿಮಳನವಪ್ರಜೇಶ್ವರ
ರಾದರಂಬುಜಭವನ ಲೀಲಾಮಾತ್ರಸೂತ್ರದಲಿ

ಆದನವರೊಳಗತ್ರಿಮುನಿಯಂ
ವಾದನವನಿಂದೊಬ್ಬ ಸುತ ಚೆಲು
ವಾದನೈ ಹಿಮಕಿರಣನಾತನ ಕಣ್ಣದೆಸೆಯಿಂದ ॥ ೩

ಆತನಿಂದವೆ ಬಳಿಕ ತಾ ಶಶಿ
ಜಾತರಾದರು ಲೋಕದೊಳು ವಿ
ಖ್ಯಾತರೇ ಜನಿಸಿದರು ನಾನಾವರನೃಪೋತ್ತಮರು ।
ಜಾತನಾದನು ಬುಧನು ಚಂದ್ರಮ
ಸೋತು ತಾ ಗುರುಸತಿಯ ಜಠರದ
ಲೀತಗಾಯಿತು ಶಾಪ ಗುರುಗಳಿನಂದು ಚಂದ್ರಮಗೆ ॥ ೪

ಎಲವೊ ಯತ್ರಿಯ ಸುತನೆ ನಿನ್ನಯ
ಕಳೆಯು ನೊಂದುಗುವೆಂದು ಸುರಗುರು
ನಳಿನವೈರಿಗೆ ಶಾಪವಿತ್ತನು ಭೂಪ ಕೇಳೆಂದ ।
ಬಳಿಕ ಸುರತತಿತ್ರೀಸರೆಲ್ಲರು
ನಳಿನಸಂಭವಗಜುಹೆ ಪುನರಪಿ
ತಿಳಿದು ತಾ ಸಂಪೂರ್ಣಕಳನಾಗೆಂದು ವರವಿತ್ತ ॥ ೫

ಎಂದು ಪಂಕಜಸುತನು ಚಂದ್ರಗೆ
ಬಂದ ಶಾಪವ ನಿಲಿಸಿ ಕಳುಹಿದ
ನಿಂದು ಕುಲ ತಾನಾತನಿಂದವೆ ಯಾಯ್ತು ಶಶಿವಂಶ ।
ಒಂದುದಿನ ಬುಧನಿಳೆಯನುಜಿ ತಾ
ಬಂದು ರಮಿಸಲ್ಕಲ್ಲಿ ಪುಟ್ಟಿದ
ನಂದು ಪೌರೂರವನುಮವನಿಂದಾಯ್ತು ಕೇಳೆಂದ ॥ ೬

ಆಮಹೀಶಗೆ ನಹುಷ ನಹುಷಂ
ಗಾಮಹಾತ್ಮ ಯಯಾತಿ ಬಳಿಕೀ
ಸೋಮಕುಲವೆರಡಾಯ್ತು ಯದುಪೂರುಗಳ ದೆಸೆಯಿಂದ ।

ಆಮಹಾಯದುವಿಂದ ಯಾದವ
ಭೂಮಿಪರು ಜನಿಸಿದರು ಮತ್ತಾ
ಸೋಮಕುಲವರತಿಲಕರಾದರು ಪುರುಮಹೀಶನಲಿ ॥ ೭

ಯದುಪರಂಪರೆಯಿಂದ ಯಾದವ
ರುದಿಸಿದರು ಪೂರುವಿನ ದೆಸೆಯಿಂ
ದದುವೆ ಪೌರವವಂಶವೆನಿಸಿದುದಾದಿಪಙ್ಕ್ತಿಯಲಿ ।
ವಿದಿತಪೂರ್ವಾನ್ವಯದ ಜಾತದೊ
ಳುದಿತವರ ನೃಪಕಥೆಯ ವಿಸ್ತರ
ವದನು ತಾ ಹೇಳಿದನು ರಾಯಂಗೇಕದೇಶವಲಿ ॥ ೮

ಪೂರುವಿಂಗಾ ಭರತ ಭರತಗು
ಪಾರಪಾರ್ಥಿ ಸುಹೋತ್ರ ನಾತಗೆ
ಧೀರನಾತನು ಸೋಮವಂಶಲಲಾಮ ನೃಪತಿಲಕ ।
ಧಾರುಣೀಪತಿ ಕೇಳು ನಿಮ್ಮಯ
ಪೂರುವಿನ ಸಂತಾನದತಿಶಯ
ವಾರು ಹೊಗಳಲಿಕಳವಡೆಂದನು ಭೂಪತಿಗೆ ಮುನಿಪ ॥ ೯

ಭರತನಾದುಶ್ಯಂತನಿಂದವ
ತರಿಸಿದನು ತತ್ಪೂರ್ವನೃಪರಿಂ
ಹಿರಿದು ಸಂದುದು ಬಳಿಕ ಭಾರತವೆರುಷವಾಯ್ತಲ್ಲಿ ।
ಭರತಸೂನು ಸುಹೋತ್ರನಾತನ
ವರಕುಮಾರಕ ಹಸ್ತಿ ತಾನಿಭ
ಪುರಿಯ ರಚಿಸಿದ ಹಸ್ತಿನಾಪುರವೆಂದು ಹೆಸರಿನಲಿ ॥ ೧೦

ಆಕುಮಾರಕನಿಂದ ಜನಿಸಿದ
ಲೋಕದೊಳು ವಿಖ್ಯಾತಕೀರ್ತಿಯು
ನಾಕಿಯೋಗ್ಯನು ಸೂರ್ಯಪುತ್ರಿಗೆ ಮರುಳುಗೊಂಡಿರಲು ॥

ಆಕೆಯನು ಸೇರಿಸಿದನಾತಗೆ
ನಾಕಿಯೋಗ್ಯವಸಿಷ್ಠಶಿಷ್ಟನು
ಲೋಕಲೋಚನನ ತಂದು ಕೊಟ್ಟನು ತನ್ನ ನಂದನೆಯು ॥ ೧೧

ಅರಸ ಕೇಳ್ಳೈ ಸೂರ್ಯಪುತ್ರಿಕೆ
ಗರಸನಾದನು ಬಳಿಕ ತಾ ಸಂ
ವರಣನವನಿಂ ಕುರುಕುಲವು ತಾನಾಯ್ತು ಕುರುವಂಶ ।
ವರಪರಂಪರೆಯಾ ಪ್ರತೀಪನು
ಧರಣಿಪತಿಯಾತನಲಿ ಶಂತನು
ಧರೆಗಧೀಶ್ವರನಾಗಿ ಜನಿಸಿದನರಸ ಕೇಳೆಂದ ॥ ೧೨

ಸರಸಿಜಾಸನ ಕೊಟ್ಟಶಾಪದ
ಲರಸಿಯಾದಳು ಗಂಗೆ ಬಳಿಕಿ
ಬ್ಬರಲಿ ಮಕ್ಕಳು ವಸುಗಳೆಂಟು ವಸಿಷ್ಠಶಾಪದಲಿ ।
ನಿರಪರಾಧಿಗಳೇಳುಜನ್ಮಂ
ತರಕೆ ಮರಣವ ಕಂಡರೊಬ್ಬಂ
ಗಿರಲು ಭೂಲೋಕದಲಿ ದೇವವ್ರತನು ತಾನೊಬ್ಬ ॥ ೧೩

ನಾಮದಲಿ ಜನಿಯಿಸಿದನೆನಲಿಕೆ
ಭೂಮಿಪತಿ ಕೇಳವನು ಶಾಪವ
ದೇನದಾರಿಂದಾಯ್ತುದೆಂದರೆ ಮುನಿಪನಿಂತೆಂದ ।

ಅಷ್ಟವಸುಗಳಿಗೆ ಶಾಪ ಕಾರಣ.

ಭೂಮಿಪತಿ ಕೇಳ್ಮನ್ನ ವಸುಗಳ
ಸ್ತೋಮದಲಿ ಕಿಗ್ಗಿಯಯನಂಗನೆ
ಭೂಮಿಯೊಳು ತಾನೊಬ್ಬ ನೃಪತಿಯ ವಧುವನೊಡಗೂಡಿ ॥ ೧೪

ಆಡುತಿರಲೊಂದಿನದೊಳೆಂದಳು
ನೋಡು ನಿನಗಾನಮೃತವೆಟಿವೆನು
ರೂಢಿಯುಲಿ ನಾನಿನ್ನನಮರೆಯು ಮಾಡಿ ಬದುಕಿಸುವೆ ।

ನೋಡೆನುತ ತನ್ನರಸನಲ್ಲಿಗೆ
ಬೇಡ ಬಂದಳು ಸುಧೆಯನಾಗಲು
ಬೇಡಿದರೆ ತಾನರಸಿಯಾಜ್ಞೆಯನಾಗ ಕೈಕೊಂಡ ॥ ೧೫

ಎಲೆ ವರಾಂಗಿಯೆ ಯಮೃತವೇಕೆಂ
ದೆಳಸಿ ಕೇಳದೆ ಯಮೃತವೆಱೆವೆನು
ಬಳಿಕ ಲಲನೆಯು ಮಾತ ಗೇಳಿಯೆ ತನ್ನ ಪಿತೃಸಮರು ।
ನಿಳಯಕೈತಂದೆಂದ [1] ಜ್ಯೇಷ್ಠರ
ಬಳಗಕಾಗಲೆ ಯೆನಗದಮೃತದ
ಕಳಸ ಬೇಕನೆ ವಸುಗಳಾಗಲು ತಮ್ಮನಾಜ್ಞೆಯನು ॥ ೧೬

ಪತಿಕರಿಸಿಯೆ ವಸಿಷ್ಠನಾಶ್ರಮ
ಕ್ಷಿತಿಗೆ ಬಂದಿಹ ಕಾಮಧೇನುವ
ಮತಿಮಱೆದು [2] ತಾವೆಂಟುಜನಗಳು ಬಿಟ್ಟು ತಸ್ಕರದಿ ।
ಗತಿಯು ಮಾಡಲಿಕಾಕೆ ಮುನಿಪನ
ಕ್ಷಿತಿಯು ಬಿಡದಿರೆ ಯರಲಮುಳ್ಳಿನ
ತತಿಗಳಲಿ ಸದೆಬಡಿಯೆ ನೋಯಲಿಕಱಿತನಾಮುನಿಪ ॥ ೧೭

ಬಂದು ವಸುಗಳ ಸ್ತೋಮಕಾಗಲ
ದೊಂದು ಶಾಪವ ಕೊಟ್ಟನೊಬ್ಬನಿ
ಗಿಂದುವದನೆಯು ಕೂಟ ರೂಢಿಗೆ ಘಟಿಸಬೇಡೆಂದು ।
ಇಂದುವದನೆಯು ಕೈಯ್ಯ ಮರಣವ
ದಿಂದುವದನೆಯು ಮಾತ ಕೇಳಿದ
ತಂದೆಗಾಗಲಿ ಯೆಂಟುನೂಱು ವತ್ಸರಾಂತ್ಯದಲಿ ॥ ೧೮

ಕೋಲುಮಂಚದ ಮೇಲೆಯಲಗಿನ
ಸಾಲಲೇ ಪವಡಿಸಲಿ ಬಳಿಕವೆ
ನೇಱುಮಾಸಂಗಳಲಿ ದೇಹವ ಬಿಡುವನೈ ಯೆಂದ [3] ।

---
1 ಬಳಿಗೆ ಬಂದಿಂತೆಂದ, ಗ, ಘ. 2 ನಟ್ಟಮದದಿ, ಗ ಘ. 3 ಕಳದೊಳಗೆ, ಖ

ಚೇಳುಗಳು ತಾವೆಂಟುಸಾವಿರ
ಮೇಳವಿಸಿ ಬಂದೂಱಿದಂದದಿ
ಮೇಲು ನೋವಹುದೆಂದು ಶಾಪವ ಕೊಟ್ಟನೊಬ್ಬಂಗೆ ॥ ೧೯

ಉೞಿದವರಿಗಿಂತೆಂದ ನೀವೀ
ಯಿಳೆಯೊಳಗೆ ಜನಿಸೆಂದು ನೇಮಿಸಿ
ಬೞಿಕ ಸಪ್ತಕ ನೀವು ಮರಣವ ಗಾಂಬುದಾಕ್ಷಣಕೆ ।
ಲಲನೆಗೆಂದನು ನಿನ್ನ ಭೂಮಿಯ
ವೊಳಗೆ ಪತಿ ತಾ ನಲ್ಲನೀನೀ
ಯಿಳಪತಿಯು ರಿಪುವಾಗಿ ಜನಿಯಿಸು ಷಂಢರೂಪಿಂದ ॥ ೨೦

ಎಂದು ಶಾಪವ ಕೊಟ್ಟು ತನ್ನಯ
ಮಂದಿರಕೆ ತಿರುಗಿದನು ಧೇನುವ
ನಂದು ಮರಳಿಚಿ ಮನೆಗೆ ಬಂದಪನಾವಸಿಷ್ಠಮುನಿ ।
ಅಂದು ವಸುಗಳಿಗಾಯ್ತು ಶಾಪವ
ದಿಂದುವದನೆಯ ಮಾತ ಕೇಳಲು
ತಂದೆ ಕೇಳೈ ರಾಯ ಜನಮೇಜಯ ಮಹೀಪಾಲ ॥ ೨೧

ನಿರುತ ತನ್ನಯ ಬುದ್ಧಿಕರ ಸುಖ
ಮಂಸ ಗುರುಗಳ ಬುದ್ಧಿಯಿಹಪರ
ತರಕೆ ಸಾಧನ ಪರರ ಬುದ್ಧಿ ವಿನಾಶಕಾರಣವು ।
ನಿರುತವದು ತಾ ಪ್ರಳಯಕಾರಣ
ಸರಸಿರುಹಮುಖಿಯರುಗಳಂಗೀ
ಕರಿಸಿದುದು ಕಡು ಕಷ್ಟ ವಸುಗಳ ಯುವತಿಮತವೆಂದ[1] ॥ ೨೨

ವಸುಗಳಿಗೆ ನಾರದರು ಗಂಗೆಯಲ್ಲಿ ಜನಿಯಿಸಿರೆಂದು ಹೇಳುವಿಕೆ.

ಅತ್ತ ಕೇಳೈ ರಾಯ ವಸುಗಳ
ಚಿತ್ತ ಕದಡಿತು ಕಾವುದಾರಪ

---

1 ಧರೆಯೊಳಂಗೈದಿಸಿರೆ ತಪ್ಪದು ಕೇಡು ತವೆ.ಗೆಂದ, ಗ. ಘ.

ಮೃತ್ಯುಗಾಣಿಸಿ ಯೆನುತ ಚಿಂತಿಸುತಿರಲು ನಾರದನು ।
ಅತ್ತಲೈತಂದವರಿಗೆಂದನು
ಪುತ್ರರಹುದಾವರುಣನರಸಿಗೆ
ಪುತ್ರರಹುದಾವರುಣದೇವರಿಗೆಂದು ನೇಮಿಸಿದ ॥ ೬೩

ಗಂಗಾವರುಣರಿಗೆ ಮಾನುಷಜನ್ಮಕಾರಣಪ್ರಶ್ನೆ.

ಅವರು ಮಾನುಷಯೋನಿಗೈದುವ
ಹವಣದಾವುದು ಕರ್ಮವೆಂತಹು
ದವರಿಗಾವುದಱಿಂದ ಮಾನುಷಯೋನಿ ಸಮನಿಸಿತು ।
ಅವರಿಗದ ಹೇಳಿದನು ನಾರದ
ನವರ ಪೂರ್ವದ ಶಾಂತಗಂಗೆಯ
ಭವಗಳನು ಕೇಳೆಂದು ವಸುಗಳಿಗೆಂದನಾಮುನಿಪ ॥ ೬೪

ಬ್ರಹ್ಮಸಭೆಗೆ ಭಾಗೀರಥಿಯು ಆಗಮನ.

ಒಂದುದಿನ ಸರಸಿರುಹಪುತ್ರನ
ಮಂದಿರಕೆ ಶಶಿಮೌಳಿಮುಖ್ಯರ
ವೃಂದ ವೋಲಗಗೊಟ್ಟು ಕುಳ್ಳಿರೆ ಗಂಗೆ ಬರುತಿರಲು ।
ಅಂದದೋಲಗಮಧ್ಯದೊಳಗಾ
ಯಿಂದುವದನೆಯು ವಸ್ತ್ರ ಸಡಿಲಲಿ
ಕಂದು ಸರಸಿಜಸುತನು ಮೊದಲಾಗಖಿಳನಾಕಜರು ॥ ೬೫

ಗಂಗೆಯು ವಸ್ತ್ರವು ಜಾರಲು ವರುಣನು ನೋಡುವಿಕೆ.

ಕಂಡು ಕಣ್ಣನು ಮುಚ್ಚೆ ವರುಣನು
ಕಂಡು ನೋಡಲಿಕಾಗ ವಾಣಿಯು
ಗಂಡ ನೋಡಿಯೆ ದೃಷ್ಟಿಭೇದವನಱಿದನಾಕ್ಷಣಕೆ ।
ಹೆಂಡಿರೊಳಗತ್ಯಧಿಕೆ ಯಾಕ್ಷಣ
ಗಂಡನಕ್ಷಿಗಳಱಿತು ಬೇಗದಿ
ಕೊಂಡಳೈ ತಾ ಜಾಱಿದುಡಿಗೆಯ ಮರಳಿ [1] ಸಂವರಿಸಿ ॥ ೬೬

---

[1] ಜರಿದವಸ್ತ್ರವನಾಗ, ಗ, ಘ

ಬಂದು ಗಂಗೆಯು ವರುಣದೇವರ
ಮುಂದ ತೊಡೆಯಲು ಮೆಚ್ಚಿಯೆ ಸರಸಿಜ
ನಂದನನು ತಾ ವರುಣಗೆಂದನು ನೀನು ಮಾನಿನಿಯ ।

ಆ ವರುಣನಿಗೆ ಮನುಷ್ಯನಾಗೆಂದು ಬ್ರಹ್ಮಶಾಪ.

ಸಂದ ವಸ್ತ್ರವು ಸಡಿಲೆ ನೋಡಿದೆ
ಯೆಂದೊಡೆಂದನು ನನ್ನ ಸ್ವಸ್ತ್ರೀ
ಯೆಂದು ನೋಡಿದೆ ದೇವ ತಾನಿದಕೇನು ಹೇಳೆಂದ ॥ ೨೭

ತನ್ನ ಯುವತಿಯು ಮಾನಹಾನಿಯು
ಮನ್ನಿಸುವುದೇ ತಾನೆ ಯೆಂದರೆ
ಭಿನ್ನಗಾಣಲಿಕಾಗದೆಂದನು ಮುಳಿದು ಕಮಲಜನು ।
ಇನ್ನು ನೀ ಜನಿಸಿಳೆಯು ನೃಪರಲಿ
ಜನ್ಮವಾಗಿಯೆ ಶಾಂತನಾಮದಿ
ಮುನ್ನ ನೀನಂದೆನ್ನ ಮಾತನು ಮೀಱಿ ನಡೆದಲ್ಲಿ ॥ ೨೮

ನಾವು ಪಕ್ಷಿಮಕಡಲ ತಡಿಯಲಿ
ತಾವು ಕೃತಯುಗದಾದಿಯೊಳು ತಾ
ನೋವಿ ಮಾಯುತ್ತಿರಲು ನಿನ್ನಯ ತೀವ್ರತೆರೆಗಳಲಿ ।
ಓವೆನುತ ಹೊಯ್ಯಲಿಕೆ ನಿನಗೆಯು
ನಾವು ನುಡಿದೆವು ಶಾಂತನಾಗ್ಯೆ
ಭಾವ ವೆಲ್ಲನೆ ಮೀಱಿ ಹಾಯ್ದಾನಮ್ಮ ತಾಣವನು ॥ ೨೯

ನೀನು ಕೆಡಿಸಿದೆ ಯಿದಕೆ ಶಾಂತನು
ನೀನದಹುದೈ ಯೆನಲು ಗಂಗಾ
ಮಾನಿನಿಯು ಬಿನ್ನೈಸಿ ಯನಗೇನೆಂಬುದಭಿಧಾನ ।
ನೀನು ಪಂಕಜನಾಭನ ಮಹಾ
ಮಾನಪದಗಳ ಜನಿತೆ ನಿನ್ನ
ಲ್ಲೇನು ತಾನಪರಾಧವಿಲ್ಲವು ದೇವಿ ಕೇಳೆಂದ ॥ ೩೦

ನಿನ್ನ ವಸ್ತ್ರವು ತಾನೆ ಸಡಲಿತು
ಚೆನ್ನಲೀ ಸಂವರಿಸಿ ಕೊಂಡಿರಿ
ನಿನ್ನಲೀನಪರಾಧ ಶಾಪಕೆ ತಾಯೆ ಹೇಚೆಂವ ।
ನಿನ್ನ ಪತಿಯುನು ನೀನು ನಿನ್ನಯು
ಮುನ್ನಿನಂಗದಲ್ಟೆಯುದ್ಧವೆಂದನು
ಮನ್ನಣೆಯುಲವರಿರ್ವರಿಗೆ ತಾ ಕಮಲಸಂಭವನು ॥ ೩೧

ವರುಣನು ಶಂತನುವಾಗಿ ಜನಿಸುವಿಕೆ.

ಎನಲು ಶಂತನುವಾಪ್ರತೀಪನ
ತನಯುನಾದನು ಜನಪ ಕೇಳಿಂ
ದನಿತುವನು ವಸುಗಳಿಗೆ ನಾರದ ಹೇಳಿ ಕಳುಹಿದನು ।
ಜನಪ ಕೇಳ್ಕೆ ಬಳಿಕ ವಸುಗಳು
ಮನದಿ ಹರುಷಿಸಿ ಯಿಳಿದು ಗಂಗೆಗೆ
ಮನದ ದುಗುಡವ ಹೇಳಿ ಬಿನ್ನಹ ಮಾಡಿದರು ಬಳಿಕ ॥ ೩೦

ನಿನ್ನಲ್ಲಿ ಹುಟ್ಟಿದೊಡನೆಯೇ ಕೊಲ್ಲೆಂದು ಗಂಗೆಯುನ್ನು ಬೇಡುವಿಕೆ.

ತಾವು ಜನಿಸುವೆವೆಮ ನಿಮ್ಮಲಿ
ನೀವು ನಮ್ಮನು ಕೊಲುವುದಾಕ್ಷಣ
ದೇವಿ ಯೆಂದರೆ ಹರ ಹರಾಯಿದನಾರು ಮಾಡುವರು ।
ನೀವು ಹೇಳಿದೊಡಾವು ಮಾಡಲಿ
ಕಾವಪಾತಕ ಶಿಶುವಿನಾಶವು
ನೋವುದೆಮ್ಮಷ್ಟಕದೊಳೊಬ್ಬನ ಕೊಲ್ಲದುಳುಹುವುದು ॥ ೩೩

ಮಾತೆ ಭೂಮಿಯೊಳಂಟುಶತಕವ
ನಾತ ಬದುಕುವ ತೀವ್ರಪೌರುಷ
ದಾತ ತಾ ಕೈವಲ್ಯನಾಥನ ಮನಕೆ ಬಹನಾತ ।
ಆತ ನಿಮಗಿಹನೆನಲು ಹರಿಪದ
ಜಾತೆಯಂಗೀಕರಿಸಿ ಯಿರಲಿ
ಕ್ವಾತ ಬಂದನು ಬೇಂಟೆಯಾಡುತ ಶಾಂತಭೂಪಾಲ ॥ ೩೪

ಶಂತನುವಿಗೆ ಗಂಗಾದರ್ಶನ

ಬಂದು ಗಂಗಾತೀರದಲು ತಾ
ನಿಂದಿರಲು ಸುರನದಿಯು ಮೆಲ್ಲನೆ
ಬಂದಳಲ್ಲಿಗೆ ಬರಲು ಕಂಡನು ಶಾಂತ ಹರುಷದಲಿ |
ಬಂದಯುವತಿಯು ಸೆಱಗ ಹಿಡಿದನು
ಮಂದಿರಕೆ ನಡೆ ಯೆನಲು ಸುರನದಿ
ಯೆಂದಳನಗೊಂದಿಹುದು ಭಾಷೆಯು ಸಲಿಸುವೊಡೆ ಬಹೆನು ‖ ೩೪

ಎಂದು ಸಲಿಸುವೊಡರಿದು ನಿಮಗಹು
ದೇದೊಡೇನೇನೆಂದು ಕೇಳಲಿ
ಕೆಂದಳೀ ಸತಿ ಶಾಂತರಾಜಗೆ ಭೂಪ ಕೇಳೆಂದ |
ಇಂದು ನನ್ನನದಾರು ನೀ ಹೇ
ಳೆಂದು ಕೇಳಲು ಬೇಡ ನಮ್ಮಯ
ಚಂದವನು ನೀ ನೆನಿಸಲಾಗದಿದನುಱೆ ಮಾಡದಿರಿ [1] ‖ ೩೬

ಎಂದು ತನಗಾಜ್ಞೆಯನು ಕೊಡುವಿರಿ
ಯೆಂದು ನೀವಿದ ಮರೆವಿರಾಗಲೆ
ಯಂದು ನಿಮ್ಮನು ಬಿಟ್ಟು ಹೋಹೆನಬೆನಲು ಕೈಕೊಂಡ |

ಅದನ್ನೊಪ್ಪಿ ವಿವಾಹವಾಗುವಿಕೆ.

ತಂದನಾಕೆಯು ತನ್ನ ಮಂದಿರ
ಕಂದು ವೇದೋಕ್ತದಲಿ ಗಂಗೆಯು
ನಂದು ಶಂತನು ಮದುವೆಯಾದನು ಭೂಪ ಕೇಳೆಂದ ‖ ೩೭

ಆದಿನಂಮೊದಲಾಗಿ ಮಕ್ಕಳ
ಬಾಧಿಸುವಳಾಗಿಂತು ಹುಟ್ಟಿದ
ಯಾದಿಕಾಲದ ವಸುಗಳೇೞನು ಕೊಲುತ ಬರುತಿರಲು |

1 ನೋಡಿ ಮನಮುಱಿ, ಗ. ಘ.

ಮೇದಿನಿಗೆ ಕೌತುಕವ ಬೀರುತ
ಸಾಧಿಸಿದಳ್ಳ ತನ್ನ ಭಾಷೆಯ
ನಾದಯಾಂಬುಧಿ ಶಾಂತ ಕಂಡನು ಶಿಶುವನೆಂಟನದ ॥ ೩೮

ಅದನು ಕೊಲ್ಲಿಸಬಾರದಾನೀ
ಸುದತಿಯಿಂದಾಕೊಲದೆ ಹೇಳುವೆ
ಹದನ ಕಂಡನು ಶಾಂತಭೂಪನು ಬಂದು ಗಂಗೆಯನು ।

ಈ ಶಿಶುವನ್ನು ಕೊಲ್ಲಬೇಡವೆಂದು ಶಂತನುವಚನ.

ಸುದತಿ ನೀನಾರೀಸುವುಕ್ಕಳ
ನೊದೆದು ನೂಕಿದೆ ಜಲಧಿಮಧ್ಯದಿ
ಹದನು ತಾನೇನಿನಲ ಯಿನ್ನೀ ಮಗನ ಕೊಲ್ಲದಿರು ॥ ೩೯

ಎಂದು ಜಱಿಯಲು ನೃಪನು ನಾರಿಯ
ಕಂದನನು ತಾ ಸೆಳದುಕೊಂಡನ
ದಂದು ಹುಟ್ಟಿದರಾಮುಹೂರ್ತದ ಸಮಯಮಧ್ಯದಲಿ ।
ಇಂದುಕುಲಗುರು ವೃಬ್ಬ ಮತ್ತಾ
ಗಂದು ದೌಪದಿಜನಕ ಗೌತಮ
ರಿಂದ ಹುಟ್ಟಿದರವರು ಕೃಪ ಕೃಪಿ ಭೀಷ್ಮಸಂಗಡಲು ॥ ೪೦

ಈಶರದ್ವಾನುವಿನ ವೀರ್ಯವ
ನಾಶರಸ್ತಂಬದಲದಿಬ್ಬರ
ನಾಶರತ್ಕಾಲದಲು ಕಂಡನು ಕೃಪನ ಕೃಪಿಸಹಿತ ।
ಆಶಿಶುಗಳಿಬ್ಬರನು ತಂದಪ
ನೀಶಿಶುಗಳಹುದೆನುತ ಶಾಂತನು
ಹೀಶ ಸಲೆ ಕೃಪೆಯಿಟ್ಟನವರಿಗೆ ಹೆಸರ ಕೃಪಕೃಪಿಯು ॥ ೪೧

ಎಂದು ಹೆಸರಿಟ್ಟಾಗ ಗಂಗೆಯ
ನಂದನನ ಕೊಲಲೀಸದಿರಲಿ
ಕ್ಕಂದು ಕೋಪಿಸಿ ಗಂಗೆ ಹೋದಳು ಮಗನನೊಡಗೊಂಡು ।

ಅಂದು ಸುರಗುರುವಿಂದಲೋದಿಸಿ
ಕಂದನನು ಜಮದಗ್ನಿರಾಮನ
ಮಂದಿರಕೆ ಪರುಠವಿಸಿ ಶಸ್ತ್ರಾಭ್ಯಾಸ ಕಲಿಸಿದಳು ॥ ೪೨

ಬಳಿಕ ಯಿನ್ನೂ ಱಬುದಕಾತನ
ನೊಲಿದು ಗಂಗಾನದಿಗೆ ತಂದಳು
ಕೆಲವುದಿನಕಾಶಾಂತ ಬಂದನು ಬೇಂಟೆಸೆವದಿಂದ ।

ಗಂಗೆಯು ಭೀಷ್ಮನನ್ನು ಶಂತನುವಿಗೆ ಒಪ್ಪಿಸುವಿಕೆ

ಬಳಲಿ ಗಂಗಾಜಲವನಱಸುತ
ಜಲವ ಕಾಣದೆ ಶಾಂತಭೂಭುಜ
ಬಳಿಕ ಕಂಡನು ಭೀಷ್ಮದೇವನ ಬಾಹುವಿಕ್ರಮವ ॥ ೪೩

ಸುರನದಿಯ ಶಸ್ತ್ರದಲಿ ಕಟ್ಟಿಯೆ
ಮರಳಿ ಹಿಂದಕೆ ನಡೆಸುತಿರ್ದನು
ತರಳನಿವನಾರೆನುತಲಿರಲಿಕೆ ಗಂಗೆ ನಡೆತಂದು ।
ಅರಸ ನಿನ್ನಯ ಪುತ್ರನೀತನು
ಪರಶುರಾಮನ ಶಿಷ್ಯ ನಿಮ್ಮಯ
ಪುರಕದೀತನನೊಯ್ಯುವೆಂದಳು ಗಂಗೆ ವಿನಯದಲಿ ॥ ೪೪

ಮಗನ ಕೊಟ್ಟಳು ಬಳಿಕ ಶಾಂತಂ
ಗಘಹರನ ನೆನೆಯುತ್ತ ಶಾಂತನು
ಜಗದ ಭೂಸುರತತಿಗೆ ದಾನವ ಬಿತ್ತಿ ಪೂಜಿಸುತ ।
ಮಗನ ಕೈಯ್ಯಲಿ ಕೊಂಡು ಗಂಗೆಯು
ನಗುತಲೇ ಬೀಳ್ಕೊಂಡು ಮಂಗಳ
ನಿಗಮಘೋಷದಿ ಬಂದು ಹೊಕ್ಕನು ಹಸ್ತಿನಾಪುರವ ॥ ೪೫

ಬಂದು ಭೀಷ್ಮನು ಕೃಪನು ಕೃಪಿಗಳ
ನೊಂದು ಮಂದಿರದಲ್ಲಿ ನಿಲಿಸಿಯೆ
ತಂದೆ ಸಾಕಿದ ಶಾಂತ ಮೂವರನರಸ ಕೇಳೆಂದ ।

1 ಸತ್ಕರಿಸಿ ಕ.ಖ

ಹಿಂದೆ ನೂಱಬ್ದದಲಿ ಶಂತನು
ಮಂದಿರದಿ ತಾ ಗಂಗೆ ಯಿದ್ದಳು
ಕಂದ ಭೀಷ್ಮನ ಹೆತ್ತು ಹೋದಳು ತನ್ನ ಮಂದಿರಕೆ ‖ ೪೬

ಬಳಿಕ ಯಿನ್ನೂಱಬುದಕಾತನ
ಕಳುಹಿದಳು ಶಾಂತಂಗದೆಂಬೀ
ಪ್ರೊಳಕಥೆಯು ತಾ ಹೇಳ್ವಿ ಕೇಳ್ವರ ದೇವನನವರತ ।
ಒಲಿದು ರಕ್ಷಿಪನವರಿಗಿಹಪರ
ನೆಲೆಗಳಲಿ ವರಶುಭವನೀಯುಲಿ
ಬಳಿಕ ಗದುಗಿನ ವೀರನಾರಾಯಣನು ಮನಮುಟ್ಟಿ ‖ ೪೭

ಕರುಣಿಸಿದ ಶಶಿವಂಶಕಿಹಪರ
ವೆರಡದ್ವಾಪರದೊಳಗೆ ತನ್ನನು
ನಿರುತ ನೆನೆವರ ಕಾವನಾಮುರಮಥನ ದೆಸೆಯಿಂದ ।
ದುರಿತಗಳು ಪರಿಪೂರ್ಣನೆಂದೀ
ಪರಿಯನಜಿತಗೆ ಹೊದ್ದವಾಗಳು
ಮರಸ ಗದುಗಿನ ವೀರನಾರಾಯಣನ ಕರುಣದಲಿ ‖ ೪೮

ಹನ್ನೆರಡನೆಯ ಸಂಧಿ ಮುಗಿದುದು.

## ಪದಿಮೂರನೆಯ ಸಂಧಿ.

### ಸೂಚನೆ.

ಸತ್ಯವತಿ ಜನಿಸಿದಳು ಶಾಂತಗೆ
ಚಿತ್ರವಲ್ಲಭೆಯಾಗಿ ಮೊದಲಲಿ
ಹೆತ್ತಳ್ಯ ಶ್ರೀವರನ ವೇದವ್ಯಾಸರೂಪಿನಲಿ ‖

ಕೇಳು ಜನಮೇಜಯ ಧರಿತ್ರೀ
ಪಾಲ ಸೊರ್ಬಿನ ಮೇಗಳಾತ್ಮನ
ಮೇಲುನೋಟದಲಿನ್ನು ಹುಟ್ಟುವ ನೃಪರ ಸಡಗರವ ।
ಕಾಲಕಾಲಕೆ ಜನಿಸಿ ಮಂಗಳ
ಲೀಲೆಯಲಿ ಹರಿಯೊಡನೆ ಯಾಡುವ
ಖೇಳಮೇಳದ ಪರಿಯ ಚಿತ್ತೈಸೆಂದನಾಮುನಿಪ ॥ ೧

ಚಂದ್ರವಂಶದವರ ಮಹಿಮೆ.

ಕಾಲವವರಲಿ ಕೈಯ್ಯನಿಕ್ಕದು
ಮೇಲೆ ಕಯ್ಯಿಕ್ಕುವರ ಕಾಣೆನು
ಕೇಳು ನಿಮ್ಮಯ ಪೂರ್ವಪುರುಷರ ಜನನವುನ್ನತಿಯ ।
ಬೀಳುಕೊಂಡಳು ಗಂಗೆ ಶಾಂತನ
ಮೇಲೆ ತಾಸಿನ್ನೂಱುವತ್ಸರ
ಕಾಲ ಸವೆಯಲು ಬಳಿಕ ಸುತನನು ಕೊಟ್ಟು ಪೊಲವಲಿ ॥ ೨

ಶಾಪ ಹಿಂಗಿತು ಸುರನದಿಗೆ ಬಳಿ
ಕಾಪರಾಕ್ರಮಿ ಭೀಷ್ಮ ಶಂತನು
ಭೂಪತಿಗೆ ಮಗನಾಗಿ ಬೆಳಗಿದನಖಿಳದಿಕ್ತಟವ ।

ಉಪರಿಚರವಸುವಿಗೆ ಪುತ್ರ ಮತ್ತು ಪುತ್ರಿಯ ಜನನ.

ಭೂಪ ಕೇಳ್ಳೆ ಯುಪರಿಚರವಸು
ಟೋಪದಲಿ ವಾರಿಧಿಯಲಾಡುತ
ಲಾ ಪುರಂದರಲೋಕವನಿತೆಯ ಕಂಡು ಮನಸಿಜನ ॥ ೩

ಬಾಣದಲಿ ಬಸವಳಿಯೆ ಬಿದ್ದುದು
ಕ್ಷೋಣಿಯಲಿ ರೇತಸ್ಸು ಬಳಿಕದ
ಕಾಣುತಲಿ ತನ್ನಾತ್ಮಪತ್ನಿಗದೈಯ್ದಬೇಕೆನುತ ।
ಮಾಣದಾ ಪಾಂಚಾಲನೊಂದಱ

ಗೋಣಿನಲಿ ತಾ ಕವಲದೆಲೆಯೊಳು
ಕ್ಷೋಣಿಪತಿ ಯದ ಕೊಟ್ಟು ಕಳುಹಿದೊಡವನು ಬಿರುಗಾಳಿ ‖ ೪

ದಾಶರಾಜನು ಮೀನನ್ನು ತಂದು ಕಡಿಯಲು ಮಕ್ಕಳು ಸಿಕ್ಕುವಿಕೆ.

ಹೊಡೆಯಲಾಗದು ಕೆಡೆದು ಯಮುನೆಯ
ತಡಿಯ ಬಳಿಯಲಿ ಮೀನು ನುಂಗಿತ
ದೆಡೆಯಲೆದು ತಾನೊಬ್ಬ ಬಂದನು ಬೇಂಟೆಯಾಡುತಲು [1] ।
ಹಿಡಿದು ತನ್ನಾಲಯಕೆ ತಂದಾ
ಮಡದಿಗೀಯಲು ಬೆಚ್ಚಿಕ ತಾನದ
ಕಡಿಯಲಿಕೆ ಸ್ತ್ರೀಪುರುಷರಿಬ್ಬರ ಕಂಡು ಬೆಱಗಾಗಿ ‖ ೫

ಗಂಡು ಮಗುವನ್ನು ಅರಸಗೆ ಕೊಟ್ಟು ಹೆಂಗೂಸನ್ನು ಮನೆಯಲ್ಲಿ ಸಂರಕ್ಷಿಸುವಿಕೆ.

ಮಡದಿ ತನ್ನಯ ಪತಿಗೆ ತೋಱಲು
ನಡುನಡುಗಿ ಯಾವರಕುಮಾರನ
ನೃಪತಿಗವನೀಯೆ ಯವನು ವಿರಾಟಪತಿಯಾಗೆ ।
ಮಡದಿ ಯಾತನ ಮನೆಯಲಿರಲಿಕೆ
ನೃಪತಿ ಕೇಳಾಗಲಾಯಿತ
ದಡಿಗಡಿಗೆ ಧನಧಾನ್ಯದಾಗಮ ಭೂಪ ಕೇಳಂದ ‖ ೬

ಮುನ್ನ ತಾ ದೇವಾಂಗನಾವಧು
ಭಿನ್ನವಿಲ್ಲದೆ ಹರಿಯ ಭಜಿಸಿದ
ಚಿನ್ನೆಗಾಯಿತು ಶಾಪ ನಾರದದೇವಋಷಿಯಿಂದ ।
ತನ್ನ ತಾ ಪೊಗಳಲಿಕೆ ಹೀನರ
ಕನ್ನೆತನದಲಿ ಸತ್ಯವತಿ ಯೆಂ
ದೆನ್ನ ಶಾಪದಲಿರಲು ಸಾಕ್ಷಾತ್ಪರಮಪುರುಷನಲಿ ‖ ೭

---

1 ಹಿಡಿದನು ಭೂಪ ಕೇಳೆಂದ, ಕ. ಖ.

ಸನ್ನಿಧಾನಕ್ಕೈದು ಯೆಂದಾ
ಕನ್ನೆಯನು ಪರುತವಿಸೆ ಸೂತನ
ಕನ್ನಿಕೆಯಳು ತಾನಾಗಿ ಜನಿಸಿದಳರಸ ಕೇಳೆಂದ |
ಕನ್ನಿಕೆಯು ಹೆಸರಾಯ್ತು ಲೋಕಕೆ
ಭಿನ್ನವಿಲ್ಲದೆ ಮತ್ಸ್ಯಗಂಧಿನಿ
ಯಿನ್ನು ಕೇಳ್ಳ ರಾಯ ವೃತ್ತರಕಥೆಯ ನೀನೆಂದ ॥ ೮

ಆಕನ್ಯೆಯಲ್ಲಿ ಪರಾಶರರಿಂದ ವ್ಯಾಸೋತ್ಪತ್ತಿ.

ಆಕೆ ಕೃಷ್ಣಾತೀರದಲು ಪಿತೃ
ವಾಕುಮಾತ್ರದಿ ನಾವೆಯಿಕ್ಕಿದ
ಳಾಕುಮಾರಿಯು ನಾವೆಯೇಱಿದನಾಪರಾಶರನು |
ನೂಕು ನಾವೆಯನಾತಟಾಕಕೆ
ನೂಕೆನಲು ನೂಕಲಿಕೆ ಮುನಿಪತಿ
ಯಾಕುಮಾರಿಯು ಕಂಡು ಸೋತನು ಮತ್ಸ್ಯಗಂಧಿನಿಯ ॥ ೯

ಸೋತು ಹಿಡಿಯಲಿಕೆಂದಳಾವಧು
ವಾತಪೋನಿಷ್ಠಂಗೆ ನಮ್ಮನು
ವಾ ತಟದೊಳಿಹ ಜನರು ಕಾಣುವರೆಂದಳಾವನಿತೆ |
ಈತ್ವರಿತವೇಕೆನಲು ಮುನಿಪತಿ
ಯಾತತುಕ್ಷಣ ಮಂಜ ಸೃಜಿಸಿಯೆ
ಕಾಂತೆಯನು ರಮಿಸಲ್ಕೆ ಸಾಕ್ಷಾದ್ಬ್ರಹ್ಮವಂದಿತನು ॥ ೧೦

ಇಱಿದನಂತರ್ಧಾನದಿಂದವೆ
ನಳಿನಲೋಚನ ವ್ಯಾಸರೂಪಿಂ
ದಿಳೆಗೆ ವೇದಾರ್ಥವನು ತೋಱಲಿಕೆಂದು ನಡೆತಂದ |
ಒಲಿದು ಮಿಂದನು ಸತ್ಯವತಿಯೊಳ
ಹಲವು ತಪಸಿನ ಫಲವದಾಕೆಗೆ
ಜಲರುಹೋದರನೆಂದುಮುಱಿಯದೆ ಸತ್ಯವತಿಸುತನ ॥ ೧೧

ನೆಲೆಯನಱಿಯದೆ ವ್ಯಾಸನೆಂಬರ
ದಿಳೆಯ ಮನುಜರ ಪಾಪರಾಶಿಯ
ಬಳಗಕಿದ ಕೋ ತಾನು [1] ಸಾಧನ ಭೂಪ ಕೇಳೆಂದ ।
ಭಟ್ಟಿಕ ಕೃಪೆಯಲಿ ಮತ್ಸ್ಯಗಂಧವ
ಕಳೆದು ಯೋಜನಗಂಧಿ ಮಾಡಿದ
ಜಲರುಹಾಕ್ಷನು ನಳಿನವದನೆಗದೆಂದನೊಂದುವನು ॥ ೧೦

ನೀವು ಜನನಿಗಳನಗದೆಂಬುದು
ದೇವಿ ಕೇಳೌ ಸತ್ಯವತಿಯೆಂ
ದಾವಿಭುವು ಬೇಡಿದನು ತಾ ಸಲೆ ವಿನಯಪರನಾಗಿ ।
ಭೂಮಿಪತಿ ಚಿತ್ರೈಸು ನಿಮ್ಮಯ
ಭೂಮಿಪರ ಸಂಘಕ್ಕೆ ಲಕ್ಷ್ಮೀ
ಕಾಮಿನೀಶನು ಮೂಲವಾದನು ರಾಯ ಕೇಳೆಂದ ॥ ೧೩

ವ್ಯಾಪಿಸಿದ ಸತ್ಕೀರ್ತಿ ನಿಮ್ಮಯ
ಟೋಪವೆನು ತಾನೇನನುಸುರುವೆ
ನಾ ಪುರಂದರಮುಖ್ಯನಾಕಜಜಾಲವೆಣಿಸಿಯಲ್ಲ ।
ಭೂಪ ಕೇಳು ಪರೀಕ್ಷಿಸಲು ಮಸು
ರೂಪುಗರ್ಭವು ಮೀನ ಬಸುಱಲಿ
ವ್ಯಾಪಿಸಲು ಜನಿಸಿದರು ಸ್ತ್ರೀಪುರುಷರಾಕ್ಷಣಕೆ [2] ॥ ೧೪

ಬಟ್ಟಿಕ ಮತ್ಸ್ಯದ ಬಸುಱಲುದಿಸಿದ
ನಳಿನಲೋಚನ ಮತ್ಸ್ಯಗಂಧಿನಿ
ಬಳವುತಿರಲಿಕೆ ಸಂಗವಾಯ್ತು ಪರಾಶರವ್ರತಿಗೆ ।
ನಳಿನನಾಭನು ಜನಿಸಿ ಯಾಕೆಯ
ಹಳೆಯ ಶಾಪವ ತಿಳಿದು ಶಾಪವ
ನಿಳಿಯಬಡಿದನು ನಿಮಿಷಮಾತ್ರಕೆ ಭೂಪ ಕೇಳೆಂದ ॥ ೧೫

---

[1] ನರಕ, ಖ. [2] ವ್ಯಾಪಿಸಿತು ಜನಿಸಿದುದು ಮಿಥುನವು ಮತ್ಸ್ಯಜಠರದಲಿ, ಚ.

ನಳಿನನಾಭನ ಕೃಪೆಯನಾಕ್ಷಣ
ತಳೆಯಲಾಯಿತು ಮತ್ಸ್ಯಗಂಧಿಗೆ
ಬಳಿಕಲಾಕೆಯ ವರಸುಗಂಧಿಯ ಮಾಡಿದನು ಮುನಿಪ ।
ಇಳೆಯೊಳಾಕೆಯ ದೇಹ ಯೋಜನ
ವಳಯಪರಿಯಂತರ ಸುಗಂಧದ
ಬಳಗವಾಯಿತು ವ್ಯಾಸನಾಜ್ಞೆಯ ಕೃಪೆಯ ಭಾರವಲಿ ॥ ೧೬

ಬಳಿಕ ಯೋಜನಗಂಧಿಯಲ್ಲಿಂ
ದಿಳಿದನಭ್ರಶ್ಯಾಮನುರುಪಿಂ
ಗಳಜಟಾಪರಿಬದ್ಧ ವೇದವ್ಯಾಸಮುನಿರಾಯ ।
ಬಲಿದ ಕಮಲದಳಾಯತಾಕ್ಷಕ
ನಿಳಿದು ಸತ್ಯವತೀಸುತನು ಮುನಿ
ತಿಲಕನಾದನದಾಕೆ ಮಾಡಿದ ಸುಕೃತಫಲದಿಂದ ॥ ೧೭

ಆಗ ಶಾಂತನುವಿಗೆ ಸತ್ಯವತಿಯ ದರ್ಶನ

ನೆನೆ ವಿಪತ್ತಿನೊಳೆಂದು ತಾಯನು
ತನುಜ ಬೀಳ್ಕೊಂಡನು ಪರಾಶರ
ಮುನಿಪ ಕನ್ಯಾತ್ವವನು ಪುನರಪಿ ಕೊಟ್ಟನಾಸತಿಗೆ [1]
ವಿನುತಕೃಷ್ಣಾ [2] ತೀರದಲು ಮಾ
ನಿನಿಯ ಕಂಡನು ಬೇಟೆಯಾಡುತ
ಜನಪ ಶಂತನು ಮರುಳುಗೊಂಡನು ಮದನನೆಸುಗೆಯಲಿ [3] ॥ ೧೮

ಆಕುಮಾರಿಯ ರೂಪಿನೇಳ್ಗೆಗೆ
ಲೋಕದಲ್ಲೆಣೆಯಿಲ್ಲ ಮಿಕ್ಕಿನ
ಕಾಕುಯುವತಿಯರೇಕೆ ಭಾಮಿನಿ ಸತ್ಯವತಿಯಿರಲು ।

---

1 ಮುನಿಪುನಃ ಕನ್ಯಾತ್ವವನು ಕರುಣಿಸಿದನಾಸತಿಗೆ, ಚ.
2 ಯಮುನಾ, ಚ.　　3 ಶರಹತಿಗೆ, ಕ. ಖ. ಗ.

ಆಕುರುಕ್ಷಿತಿಗಧಿಪ ತಾ ಕಂ
ಡಾಕೆಯನು ಕೈವಿಡಿದು ಕರೆಯುತಿರ
ಲಾ ಕುವರಿಯಾದರಿಸದಿವಳು ನಾವೆಯೊಳಗಂದು ॥ ೧೯

ಎನ್ನ ತಾ ಬಂದೊಬ್ಬ ಮುನಿಪತಿ
ಕನ್ನೆತನವನು ಕೆಡಿಸಿ ಯೆನ್ನನು
ಭಿನ್ನಮಾಡವನೆಂದು ತನ್ನಯ ಮನದೊಳಗೆ ನೆನೆದು ।
ಇನ್ನು ತಾನೀಜನಪಸಂಗವ
ಮನ್ನಿಸಿವರೇನಮದೊ ಯೆನುತಲಿ
ಕನ್ನೆ ತಾ ಬೆರಗಾಗಿ ಧರ್ಮವ ನೆನೆವಳ್ಕ ಮನದೆ ॥ ೨೦

ಜನಕ ಜನನಿಯು ಕೂರ್ತು ಕೊಟ್ಟರೆ
ಯೆನಗೆ ವಲ್ಲಭನಾಗುವೆನ್ನಯ
ಮನಕೆ ಬಂದುದನ್ಯದಲ್ಲಾಗದದೆನುತಲಾತರಳೆ ।
ವಿನುತಗಂಗಾತೀರದೆಡೆಯಲಿ
ವನದ ಮಧ್ಯದಲಿರಲು ಮಾನಿನಿ
ಮನವ ಸಂವರಿಸಿರಲು ಬಂದನು ಶಾಂತಭೂಭುಜನು ॥ ೨೧

ನಾಲ್ಕುಕೋಟಿಘಟಾಕದಂಬವು
ನೂಕಿ ನುಗ್ಗುವ ಪಾಯಿಮದಿ ಪದಿ
ನಾಕುಕೋಟಿಗಳಧಿಕ ಕುದುರೆಗಳೆಂಟುಕೋಟಿಗಳು ।
ಜೋಕೆಯಲಿ ರಥವಾಜಿಕೋಟಿಯು
ಲಾಕೆಯಲ್ಲಿಗೆ ಬಂದು ಭೂಪತಿ
ವ್ಯಾಕುಲಾಂತಃಕರಣನಾದನು ಭೂಪ ಕೇಳೆಂದ ॥ ೨೨

ಪರಿಮಳದ ಪಥವಿಡಿದು ಬಂದೀ
ತರಳೆಯನು ಕಂಡಾರು ನೀನೆಂ
ದರಸ ಬೆಸಗೊಳುತೆಸುವ ಕಾಮನ ಶರಕೆ ಮೈಯೊಡ್ಡಿ ।

ಅರಮನೆಗೆ ನಡೆಯೆನಲು ತಂದೆಯ
ಪರಮವಚನವಲಂಘ್ಯವೆನೆ ಕಾ
ತರಿಸಿ ಭಗ್ನಮನೋರಥನು ಮರಳಿದನು ಮಂದಿರಕೆ ‖ ೭೩

ಸತ್ಯವತಿಯು ಒಪ್ಪದಿರಲು ಚಿಂತೆಯಿಂದಿರುವಿಕೆ.

ವಿರಹತಾಪದ ಬೇಗೆ ಭೂಪಾ
ಲ್ವರನ ಮುಸುಕಿತು ಒಱಿಯ ದೃಷ್ಟಿಯಿ
ನರಸ ಬಣ್ಣಿ ಸಲಱಿಯೆನೆಂಟೊಂಬತ್ತಱಲಿ ಪರಿಯ |
ಮರಣವಿನ್ನೇನೆಂಬ ಜನದ
ಬ್ಬರದ ಗುಜಗುಜನಱಿದು ಯಮುನಾ
ವರನದೀತೀರಕ್ಕೆ ಬಂದನು ಭೀಷ್ಮ ವಹಿಲದಲಿ ‖ ೭೪

ಕರೆಯಿಸಿದ ಧೀವರನ ನಯ್ಯಂ
ಗರಸಿ ಯಾಗಲು ಬೇಕು ಕೊಡಿ ಯೆನೆ
ಯರಸಿಯಾದೊಡೆ ಮಗಳ ಮಕ್ಕಳು ರಾಜ್ಯವಾಳುವೊಡೆ |
ಅಱಿದು ಸಲಿಸುವೊಡಿದನು ತನ್ನಯ
ವರಕುಮಾರಿಗೆ ರಾಜ್ಯವಿತ್ತದ
ನಿರುತ ಮಾತುವುದಾದರಾಕೆಯು ನಿನಗೆ ತಾಯಹಳು ‖ ೭೫

ಆದೊಡಿಲ್ಲಿಂ ಮೇಲೆ ನಾರಿಯ
ರಾದವರು ಭಾಗೀರಥಿಯ ಸರಿ
ಮೇದಿನಿಯು ಸಲಿಸುವೆನು ನಿನ್ನಯ ಮಗಳ ಮಕ್ಕಳಿಗೆ |
ಈದಿವಿಜರೀ *ಮುಖ್ಯಮುನಿಜನ
ರಾದಿಯಾಗದಕಿನ್ನು ಸಾಕ್ಷಿಯು *
ಮೇದಿನಿಯು ಸಾಮ್ರಾಜ್ಯಲಕ್ಷ್ಮಿಗದೆನಲು ಕೈಕೊಂಡ ‖ ೭೬

* ಹರಿಹರಬ್ರಹ್ಮಾದಿದೇವರು ಸಾಕ್ಷಿಕಳೀ, * ಖ ಘ

ಬಳಿಕ ದಾಶನು ಸತ್ಯವತಿಯಳ
ನೊಲಿದಲಂಕೃತಿ ಮಾಡಿ ಗಂಗಾ
ಜಲತಟಾಕದಿ ತಂದು ಶಂತನುರಾಜಮಂದಿರಕೆ ।
ಲಲನೆಯನು ಮಾಂಗಲ್ಯವಿಭವದ
ಬಳಗದಲಿ ಶುಭರಭಸದಿಂದವೆ
ಯಿಳೆಸುರರ ವರಮಂತ್ರಘೋಷದಿ ತಂದನಾಭೀಷ್ಮ ॥ ೬೭

ಸತ್ಯವತಿಯನ್ನು ತಂದೆಗೆ ಭೀಷ್ಮನು ವಿವಾಹ ಮಾಡುವಿಕೆ

ಕರಿಸಿದನು ದಂಡಿಗೆಯಲಾಕೆಯ
ಪರಮವಿಭವದಲಂದು ದಾಶನ [1]
ವರಸುತೆಯ ಶಂತನುಗೆ ಮದುವೆಯ ಮಾಡಿದನು ಭೀಷ್ಮ ।
ಉರವಣಿಪ ಮಗನುಡಿವ ಭಾಷೆಯ
ನರಸ ಕೇಳಿಯೆ ಭೀಷ್ಮದೇವಗೆ
ವರವಸಿತ್ತನು ಮರಣವದು ನಿಸ್ನಿಚ್ಛೆ ಹೋಗೆಂದ ॥ ೬೮

ಎಂದು ಯೋಜನಗಂಧಿಸಹಿತಾ
ಯಿಂದುಕುಲಸಂಭವನು ಶಂತನು
ವೆಂದು ಗಮಿಸಿದನರಸ ಹಸ್ತಿನಪುರಿಗೆ ಮಹಿಳದಲಿ ।
ಬಂದು ಭೂಸುರತತಿಯು ದಕ್ಷಿಣೆ
ಯಿಂದ ದಣಿಸಿಯೆ ಭೀಷ್ಮದೇವನ
ತಂದೆ ಹೊಕ್ಕನು ರಾಜಭವನವ ವರಮುಹೂರ್ತದಲಿ ॥ ೬೯

ಹೊಕ್ಕು ಸುಮುಹೂರ್ತದಲಿ ಪ್ರಜೆಗಳ
ರಕ್ಷಿಸುತ ನೃಪನೀತಿಯಿಂದವೆ
ತಕ್ಕರಸು ಪಾಲಿಸುತ ಶಂತನು ಕೆಲವುದಿನ ಸವೆಯೆ ।
ಮಕ್ಕಳಿಗೆ ಮನಮಾಯ್ತು ವರಸತಿ
ಯೊಕ್ಕತನದಲು ಶಾಂತಪತ್ನಿಗೆ
ನಿಷ್ಕಳಂಕದ ಗರ್ಭವಾಯಿತು ದಕ್ಷಿಣೋತ್ತರದ ॥ ೭೦

[1] ಧೀವರ, ಗ, ಘ.

ಶಂತನುವಿಗೆ ಚಿತ್ರಾಂಗದವಿಚಿತ್ರವೀರ್ಯಜನನ.

ಅಯುನದೇವರು ಜನಿಸಿದರು ತಾ
ವಯುನದಲಿ ಯುವಳಾಗಿ ಯಿಬ್ಬರು
ನಯುದಲವತರಿಸಿದರು ದಕ್ಷಿಣದುತ್ತರಾಯಣದ ।
ನಿರುತಕಾಲಂಗಳಲಿ ಹುಟ್ಟಲು
ನಿರುತವಾಯಿತು ಧರ್ಮವಾಗ ಜ
ಯುರಮಣಿಯುಗುತ್ಸಾಹವಾಯಿತು ಭೂಪ ಕೇಳೆಂದ ॥ ೩೧

ಬಳಿಕ ಯೋಜನಗಂಧಿಪುತ್ರರು
ಬಳೆವುತಿರ್ದರು ಸೂರ್ಯತೇಜದ
ವೊಲು ಕುಮಾರರು ಭೀಷ್ಮನನುಜರು ಹಿಮಕುಲಾನ್ವಯರು ।
ಲಲಿತಮಂಗಳಜಾತಕರ್ಮವ
ಬಳೆದು ಚಿತ್ರಾಂಗದನುಕುರುಕುಲ
ತಿಲಕನಾದ ವಿಚಿತ್ರವೀರ್ಯನು ನಾಮಕರಣದಲಿ ॥ ೩೦

ಇರಲಿರಲು ಶಾಂತಾವನೀಪತಿ
ಸುರರೊಳಗೆ ಬೆಱಸಿದನು ಬಳಿಕೀ
ಧರಣಿಯೊಡೆತನವಾಯ್ತು ಚಿತ್ರಾಂಗದಕುಮಾರಂಗೆ ।

ಚಿತ್ರಾಂಗದನು ಮೃತನಾಗಲು ವಿಚಿತ್ರವೀರ್ಯನ ರಾಜ್ಯಪರಿಪಾಲನ

ಅರಸ ಕೇಳ್ಳ ಕೆಲವು ಕಾಲಾಂ
ತರದೊಳಾತನು ಕಾದಿ ಗಂಧ
ರ್ವರೊಳು ಮಡಿದನು ಪಟ್ಟವಾಯ್ತು ವಿಚಿತ್ರವೀರ್ಯಂಗೆ ॥ ೩೩

ರಾಯ ಕೇಳ್ಳ ಸಕಳರಾಜ್ಯ
ಶ್ರೀಯನಾತಂಗಿತ್ತು ಭೀಷ್ಮನು
ತಾಯ ಚಿತ್ತವ ಪಡೆದು ಮೆಚ್ಚಿಸಿದನು ಜಗತ್ತ್ರಯವ ।

ರಾಯಕುವರರ ಮದುವೆಗಬುಜದ
ಳಾಯತಾಕ್ಷಿಯರನು ವಿಚಾರಿಸಿ
ಹಾಯ್ದನಾ ದಬಿದುಬಿವನೊಂದು ವಿವಾಹಮಂಟಪಕೆ ॥ ೩೪

ವಿಚಿತ್ರವೀರ್ಯನ ವಿವಾಹ.

ಅಲ್ಲಿ ನೆರೆದಾಕ್ಷತ್ರವರ್ಗವ
ಚಲ್ಲಬಡಿದು ವಿವಾಹಶಾಲೆಯ
ಚೆಲ್ಲೆಗಂಗಳ ಕಮಲಮುಖಿಯರ ಮೂವರನು ಹಿಡಿದ ।
ಘಲ್ಲಣೆಯ ಪಟುಭಟರ ಘಲ್ಲಿಸಿ
ಮಲ್ಲಭೀಷ್ಮನು ಪುರಕೆ ತಂದವ
ರೆಲ್ಲರನು ತಮ್ಮಂಗೆ ಮದುವೆಯ ಮಾಡಲನುಗೈಸ ॥ ೩೫

ಆಕಮಲಲೋಚನೆಯರೊಳು ಮೊದ
ಲಾಕೆ ಭೀಷ್ಮನೆ ಗಂಡನೆಂದೇ
ನೂಕಿ ಭಾಷೆಯ ಮಾಡಿ ನಿಂದಳು ಛಲದ ಬಲುಹಿನಲಿ।
ಆಕೆ ಮೊಣಲಿ ಮಿಕ್ಕವೆರು ಬರ
ಲೀಕುಮಾರಂಗೆಂದು ವೈದಿಕ
ಲೌಕಿಕೋತ್ಸವದಿಂದ ಮದುವೆಯ ಮಾಡಿದನು ಭೀಷ್ಮ ॥ ೩೬

ಅಂಬಾಭೀಷ್ಮರ ಕಲಹ.

ಅರಸ ಚಿತ್ರ್ಯಸಂಜೆಯೆಂಬಳು
ದುರುಳೆ ಭೀಷ್ಮನ ಕೂಟವಲ್ಲದೆ
ಮರಣದೊಡನೆಯೆ ಕೂಟದೆಡೆಯಲಿ ಪಂಥ ವಿಲ್ಲೆಂದು ।
ಕರೆಸಿದಳು ಭೀಷ್ಮನನು ಮುನ್ನಿನ
ಗರಸ ಸಾಲ್ವನದೆಂದು ನಮ್ಮಯ
ವರಜನಕ ಸಂಪ್ರತಿಯು ಮಾಡಿರೆ ನೀನು ಹಿಡಿತಂದೆ ॥ ೩೭

ತಂದು ಬಿಟ್ಟೊಡೆ ಮರಳಿ ಸಾಲ್ವನ
ದಿಂದು ತಾ ಪತಿಕರಿಸನೆನ್ನನು
ತಂದು ತಾ ಮರಳೊಬ್ಬಗೀವೊಡೆ ಯುವರು ಕೈಕೊಳರು ।
ಇಂದು ನೀ ಹಿಡಿದಾಗ ಕೆಡಿಸಿದೆ
ತಂದುದಕೆ ತಾ ನರಸನಾದೊಡ
ದಿಂದುಮುಖಿಯರೊಳಾನೆ ಧನ್ಯಳೆಗೆಂದೊಡಿಂತೆಂದ ॥ ೩೮

ಎನ್ನ ವ್ರತವೊಂದಿರುದು ವನಿತೆಯು
ರೆನ್ನ ಮಾತೆಯು ರೂಪರೆಂಬುದ
ನಿನ್ನನಾ ಪತಿಕರಿಸಬಾರದು ಯುವತಿ ಕೇಳೆಂದ ।
ಮುನ್ನ ಕೇಳಾನಿನ್ನನೀಗಳು
ಮನ್ನಣೆಗೆ ಮನವಿಕ್ಕಿದೊಡೆ ಸಂ
ಪನ್ನನಚ್ಯುತನಾಣೆ ಕೇಳ್ದ ಕೋಪ ಕಿಡಿಯಿಡಲು ॥ ೩೯

ಮರಳಿದಳು ಲಲಿತಾಂಗಿ ಗಂಗಾ
ವರನದಿಯ ತಡಿಗಾಗ ಭೀಷ್ಮನ
ಶಿರವನರಿವೆನೆನುತ ತಪವಲ್ಲಿರಲು ನಾರದನು ।
ಸರಸಿರುಹಸಂಭವನ ಸಭೆಯಿಂ
ಧರಣಿಗಿಳಿದನಸನಂಬೆಯುಲ್ಲಿಗೆ
ವರಮುಖಿಯೆ ತಪವೇತಕೆಂದರೆ । ನುಡಿದಳಾವನಿತೆ ॥ ೪೦

ಪರಶುರಾಮರನ್ನು ಪ್ರಾರ್ಥಿಸಿದ. ಅಂಬೆಗೆ ನಾರದೋಪದೇಶ.

ಸುರನದಿಯ ಸುತನೆನ್ನ ಹಿಡಿತಂ
ದರಸನಾಗದೆ ಬಿಟ್ಟನದಕೀ
ವರತಪವ ನಾ ಮಾಡಿ ಭೀಷ್ಮನ ಕೊಲುವೆನೆಂದೆನಲು ।
ಸರಸಿರುಹಮುಖಿ ಕೇಳು ಬಿಟಿಗೇ

---

ಸರಸಿಜಾನನೆ ತಪವಿದೇಕೆನೆ, ಬ

ಹರಿಸಲಾಗದು ಪುರುಷರಾವರ
ನಿರುತವಾದೊಡೆ ಪರಶುರಾಮಂಗಱುಹು ಹೋಗೆಂದ ॥ ೪೧

ಆತನೀತನ ಪರಮಗುರು ತಾ
ನಾತನಾಜ್ಞೆಯ ಮೀಱಿ ನಿರುತವಿ
ದಾತನನು ನೀ ಕೊಂಡು ಬಾ ಯೆಂದಾತ ಹೇೞಿದನು ।
ಆತನನು ಬೀಳ್ಕೊಂಡು ಮುನಿವಿ
ಖ್ಯಾತರೊಡೆಯನ ಬನಕೆ ಬಂದಪ
ಳೋತು ಭಯಭಕ್ತಿಯಲಿ ಮೊಯ್ಕಿಕ್ಕಿದಳು ವರತರಳೆ[1] ॥ ೪೨

ಬಿರಿಲು ದೇವರ ದೇವನಾಕೆಯ[2]
ಪರಿಯ ಕೇಳಿದೊಡಾಕೆ ಹಿಂದಣ
ನಿರುತವನು ಬಿನ್ನೈಸೆ ಕರುಣಾಕರನು ಮೊಱವೆಂಟ ।
ವರಶರಾಸನ ಪರಶುಸಹಿತಾ
ಪರಶುರಾಮನು ತೀರನೇಱಿಯೆ
ವರಋಷಿಸ್ತೋಮದಲಿ ಬಂದನು ವರಕುರುಕ್ಷಿತಿಗೆ ॥ ೪೩

ಪರಶುರಾಮನ ಭಜಿಸಿ ಹಸ್ತಿನ
ಪುರಕೆ ತಂದಳು ಬೞಿಕ ಗಂಗಾ
ವರಕುಮಾರನು ಕೂಡಿ ಮಾಡಿದ ಪರಿಯ ಕೇಳೆಂದ ।

ಅಂಬೆಯನ್ನು ಅಂಗೀಕರಿಸು ಇಲ್ಲದಿದ್ದರೆ ಯುದ್ಧಕ್ಕೆ ಬಾ
ಎಂದು ಪರಶುರಾಮರ ಅಪ್ಪಣೆ

ಕರೆಸಿದನು ಭೀಷ್ಮನನು ನೀನೀ
ವರಸತಿಯ ಪತಿಕರಿಸು ನೀ ಪತಿ
ಕರಿಸದಿರ್ದೊಡೆ ಕಾಳಗವೆ ಪತಿಕರಿಸು ನೀನೆಂದ ॥ ೪೪

---

1 ಲಲಿತಾಂಗಿ, ಗ.ಘ. ಭೃಗುಸುತಗೆ, ಖ. 2 ಖರವಿದೇನೆಂದಾಗಲಾಕೆಯ, ಖ.

ಸತಿಯನೊಲ್ಲೆನು ಬ್ರಹ್ಮಚರ್ಯ
ವ್ರತಕೆ ತಪ್ಪುವನಲ್ಲ ನೀನೆನು
ಚಿತವ ನೆನೆದೊಡೆ ನಡೆಯಿ ಕೊಟ್ಟೆನು ಕಾಳಗವ ನಿಮಗೆ |
ವ್ರತನಿಧಿ ಕುರುಕ್ಷೇತ್ರದಲಿ ಸಂ
ತತವದಿಪ್ಪತ್ತೊಂದುದಿನ ಭೃಗು
ಸುತನೊಡನೆ ಕಾದಲಿಕೆ ಕೇಳಯೆ ಬಂದರೊಲವಿನಲಿ [1] || ೪೫

ಗಂಗೆಮೊದಲಾದಮಳನದಿಗಳು
ಜಂಗಮಶ್ರೀಯಷ್ಟವಸುಗಳು
ಹಿಂಗದಲ್ಲಿಗೆ ಬಂದು ಭೀಷ್ಮಂಗೆಂದರೊಂದುವನು |
ಮಂಗಳಾಹ್ವಯನೀತನೇ ನರ
ಸಿಂಗನೀತನ ಕೂಡೆ ಮಲೆದರೆ
ಯಂಗವುಚಿವುದೆ ಬೇಡ ಮಗನೇ ಯೆಂಗೊಡಿಂತೆಂದ || ೪೬

ಅಂಗವಳಿದೊಡದಳಿದು ಹೋಗಲಿ
ಹೆಂಗಸನು ಕೈಕೊಳನು ನಾನೆನ
ಲಂಗಜಾಸ್ತ್ರಕೆ ಬೆಚ್ಚ ದಾತಗೆ ಮೋಹನಾಸ್ತ್ರವನು |
ಗಂಗೆಮೊದಲಾಗಖಿಳವಸುಗಳು
ಹಿಂಗಿದರು ಸರ್ವಮೋಹನಾಸ್ತ್ರದ
ಲಂಗವುಳುಹಿಸೆ ಮರಳ ಭೀಷ್ಮನ ಪರಿಯು ಕೇಳೆಂದ || ೪೭

ಆಮಹಾಸರ್ವಮೋಹನಾಸ್ತ್ರವ
ನೇಮಿಸಿಯೆ ಕಲಿ ಭೀಷ್ಮ ಭಾರ್ಗವ
ರಾಮಚಂದ್ರಂಗಾಗ ಭಾಗ- ವನದಕೆ ನಾಭಿಯನು |

ಆಗ ಯುದ್ಧವಾಗಲು ಪರಶುರಾಮರ ಪರಾಜಯ.

ಹೋಮಿಸಿದನದರೊಳಗಣಸುರನ

---

1 ಕಾದಿದನು ವಿರಥನ ಮಾಡಿದನು ಭೀಷ್ಮ ಖ.

ಭೂಮಿಯೊಳು ಸೋತಂತೆ ಮಾಡಿದ
ರಾಮ ಭೀಷ್ಮಗೆ ವಿರಥನಾದುದ ನೇನ ಹೇಳುವೆನು ॥ ೪೮

ಮುನ್ನ ಸುರತತಿತ್ರೀಸವ್ಯೆಂದವ್ರು
ಹುಣ್ಣಿವೆಯು ಪ್ರತಿ ಮಾಸಪೂಜೆಗೆ
ಭಿನ್ನವಿಲ್ಲದೆ ಲೋಕ ಹೋಗಲು ದೈತ್ಯನೊಬ್ಬವನು ।
ಚೆನ್ನಬಂದಪನವನು ಶೂಲಿಯು
ಚೆನ್ನೆಯನು ಕಂಡವನು ಮೋಹಿಸಿ
ಯಿನ್ನು ನಾ ಶಿವನಹೆನು ಪಾರ್ವತಿಯುಮತಿಪತಿಯುಹೆನು ॥ ೪೯

ಎಂದು ಭಾರ್ಗವರಾಮಚಂದ್ರಮ
ನಂದನನು ತಾನಱಿದು ನಾಥಿಯು
ಗೊಂದಿಯುಲಿ ಹುದುಗಿರ್ದ ಚೌಕಡಿಯೆಂಟುಪರಿಯಂತ ।
ಎಂದಿಗಾವರು ರಾಯ ಕೇಳ್ಳ
ಯಿಂದುಧರ ನಾನೆಂಬ ಜೀವರು
ನಂದಿಹೋಗುವರ್ಸೈಸೆ ಯುವದಿರಗಹುದೆ ಶಿವವಪದವ್ರು ॥ ೫೦

ಬಟಿಕ ಭೀಷ್ಮನ ಬಾಣಕಸುರನ
ನೊಲಿದು ತಾ ಗುರಿಮಾಡಿ ಭಾರ್ಗವ
ಕುಲಶಿರೋಮಣಿ ಬೀಟುಕೊಂಡನು ಭೀಷ್ಮನುಪಟಳವ ।

ನೀನೇ ಭೀಷ್ಮನ ಪ್ರೀತಿಯು ಪಡೆಯೆಂದು ಹೇಳಿ ನಡೆಯುವಿಕೆ.

ಎಲೆ ಮಹಾಸತಿ ನಮ್ಮಮಾತನು
ಬಲುವಿಡಿದು ಕೈಕೊಳ್ಳ ನೀನಿಂ
ನೊಲಿಸಿಕೋ ವೊಲಿದಂತೆ ಯೆಂದನು ನಗುತ ಪರಶುಧರ ॥ ೫೧
ನುಡಿಯ ಕೆಡಿಸುವೆನೆಂದು [1] ಗುರುವವ
ಗಡಿಸಿ ಹೊಕ್ಕರೆ ಸರಳವೊನೆ [2] ಯುಲಿ
ಕೊಡಹಿ ಬಿಸುಟನು ಬಿಟ್ಟುದಿಲ್ಲ ಮಹಾವ್ರತಸ್ಥಿತಿಯ ।

1 ಭಂಗಿಸಲೆಂದು, ಚ. 2 ಮಳೆ, ಙ.

ಪೊಡವಿಯಲಿ ಶುಚಿ ಸತ್ಯವಾಕ್ಯದ
ದೃಢತೆಯಲಿ ಕಲಿಭೀಷ್ಮದೇವಗೆ
ಬಿಡದೆ ನಿಲುವರ ಕಾಣೆ ಜನಮೇಜಯಮಹೀಪಾಲ ‖ ೫೨

ನುಡಿಯ ಮಾಱಿದ ನಮ್ಮ ಶಿಷ್ಯನ
ನೊಡಬಡಿಸಿಕೊಳ್ಳೆಂದು ನಾರಿಗೆ
ನುಡಿದು ತನ್ನಾಶ್ರಮಕೆ ತಿರುಗಿದ ಪರಶುರಾಮಮುನಿ ।
ಮಡದಿ ತಾ ಬಳಿಕಲ್ಲಿ ಭೀಷ್ಮನ
ಕೆಡೆನುಡಿದು ಬೀಳ್ಕೊಂಡು ಗಹ್ವರ
ದೆಡೆಯ ಹೊಕ್ಕಳು ತಪಕೆ ಮುಂದಣಕಥೆಯ ಕೇಳೆಂದ ‖ ೫೩

ಅಂಬೆಯು ಭೀಷ್ಮನನ್ನು ಶಪಿಸಿ ಹೋಗುವಿಕೆ.

ಅಂಬೆ ಭೀಷ್ಮನ ಬೈದು ಕಂಬನಿ
ದುಂಬಿ ಹೋದಳು ತಪಕೆ ಬಳಿಕೀ
ಯಂಬಿಕೆಯನಂಬಾಲಿಕೆಯ ರಮಿಸಿದನು ನೃಪಸೂನು ।
ಬೆಂಬಲಕೆ ಕಲಿ ಭೀಷ್ಮನಿರೆ ಚತು
ರಂಬುಧಿಯ ಮಧ್ಯದ ನೃಪಾಲಕ
ದಂಬವೀತಂಗಿದಿರೆ ಸಲಹಿದನಖಿಳಭೂತಳವ ‖ ೫೪

ತಪಸ್ಸಿನಿಂದ ಅಂಬೆಗೆ ಶಂಕರದರ್ಶನ ಮತ್ತು ಆಲಾಪ.

ಬಳಿಕ ಯಂಬೆಯ ತಪಕೆ ಶಂಕರ
ನಿಳಿದು ಬಂದನು ತತ್ಸಮೀಪಕೆ
ನಳಿನಲೋಚನೆ ತಪವಿದೇಕೆನೆ ತಾನು ಭೀಷ್ಮನನು ।

ಅಂಬೆಯ ದೇಹತ್ಯಾಗ.

ಕೊಲುವೆನೀ ದೇಹದಲದೆಂಬೀ
ಬಲುಹ ಕರುಣಿಪುದೆಂದೊಡೆಂದನು
ಲಲನೆ ನೀನಿನ್ನೊಂದು ದೇಹವ ಧರಿಸಿ ಕೊಲ್ಲೆಂದ ‖ ೫೫

ಎಂದು ತಿರುಗಿದ ಶೂಲಿ ಬಳಿಕರ
ವಿಂವಲೋಚನೆ ತನ್ನ ದೇಹವ
ನಿಂದುಧರಗರ್ಪಿಸಲು ಹರಿದವಳಂಬೆ ನದಿಯಾಗಿ ।

ಮೊದಲು ಮಗಳಾಗಿ ಬಳಿಕ ಪುತ್ರನಾಗುವನೆಂದು ದ್ರುಪದಗೆ ಶಂಕರನ ವರ.

ಅಂದು ದ್ರುಪದನು ಶಿವನ ಪೂಜಿಸಿ
ಯೆಂದನೆನಗೊಬ್ಬ ಮಳಪುತ್ರನ
ನಿಂದು ಕರುಣಿಪುದೆನಲು ಕೊಟ್ಟನು ಶಿವನು ಹರುಷದಲಿ[1] ॥ ೫೬

ನಿನಗೆ ಮೊದಲಲಿ ಮಗಳು ಜನಿಸುವ
ಳನಿತು ಷೋಡಶವರುಷವಾಗಲು
ತನುಜೆ ತಾನೇ ಪುತ್ರನಹಳ್ಳ ಯೆಂದು ವರವಿತ್ತ ।
ತನುಜನಾದರೆ ಸಾಕದೆಂದಾ
ಜನಪ ತಿರುಗಿದ ತನ್ನ ನಗರಕೆ
ವನಿತೆ ತಾ ಶ್ರೀಭೀಷ್ಮವಧೆಯನು ಮಾಡೆ ಜನಿಸಿದಳು ॥ ೫೭

ಮುಂದೆ ನಿನ್ನಭಿಧಾನ ದ್ರುಪದನ
ನಂದನನು ನೀ ವರಶಿಖಂಡಿಯು
ದೆಂದು ಜನಿಸುವುದೆಂದ ದೇವನು ಶ್ರೀಯುಮಾಪತಿಯು ।

ಅಂಬೆಯು ಸ್ತ್ರೀಯಾಗಿರಲು ವಿವಾಹವನ್ನು ನಡೆಸುವಿಕೆ.

ಎಂದು ತಿರುಗಿದ ತನ್ನ ಮೋಹರ
ಕಂದು ಶಂಕರ ಬಳಿಕ ದ್ರುಪದನ
ಯಿಂದುವದನೆಗೆ ಜನಿಸಿದಳು ತಾನಂಬೆ ಕೇಳೆಂದ ॥ ೫೮

ಜನಿಸಿದಳು ಹೆಣ್ಣಾಗಿ ಹೆಣ್ಣನು
ಜನಪನಾರಿಗೆ ತೋಱದಾಕೆಗೆ
ವಿನುತಮುಂಜಿಯ ಕಟ್ಟಿ ಮದುವೆಯ ಮಾಡಿದನು ದ್ರುಪದ ।

1 ಮನವುಟ್ಟಿ, ಜ.

ವನಿತೆಯೊಂದಿನವಾ ಶಿಖಂಡಿಯು
ತನುವ ಕಂಡಳು ಕಂಡು ಹೆಣ್ಣಿಂ
ದೆನುತ ಗಂಡನ ಪರಿಯ ಹೇಳಿಯೆ ಕಳಹಿದಳು ಪಿತಗೆ ॥ ೪೯

ತನ್ನ ಸ್ತ್ರೀತ್ವವು ಪ್ರಸಿದ್ಧವಾಗಲು ಶಿಖಂಡಿಯು ವನಪ್ರವೇಶ.

ಕೇಳಿಯಾಕೆಯ ಜನಕ ದ್ರುಪದನ
ಮೇಲೆ ಬರಲಿಕೆ ಮಿಗೆ ಶಿಖಂಡಿಯು
ಕೇಳ ನವಿಸ್ಮಯಮಾನ ಹೋಗುವುದೆನುತ ರಾತ್ರಿಯಲಿ ।
ಅಲಯುವ ಬೀಡೊಕ್ಕೊಂಡು ಗಹ್ವರ
ದೊಳು ವನಕ್ಕೈತರಲು ತುಂಬುರು
ಬಾಳಿಕೆಯ ಕಂಡಂದು ದುಗುಡವಿದೇನು ಹೇಳೆಂದ ॥ ೫೦

ಹೇಳಬಾರದು ಕೇಳಬಾರದು
ಬಾಲೆಯನು ನನಗರಸಿಮಾಡಿದ
ಶೂಲಿವಾಕ್ಯವ ಕೇಳ ನಂಬಿದನೆಮ್ಮ ಪಿತನೆಂದು ।

ತುಂಬುರುವಿನ ಅನುಗ್ರಹದಿಂದ ಪುಂಸ್ತ್ವ ಪ್ರಾಪ್ತಿ.

ಹೇಳಿದಳು ತನ್ನಾತ್ಮಚಿಂತೆಯ
ಕೇಳ ತುಂಬುರು ಬಳಿಕ ತನ್ನಯ
ಲೋಲಪುರುಷತ್ವವನು ನೀಡಿದನರವನೆಂಟುದಿನ ॥ ೫೧

ಮರಳಿದನು ತನ್ನಾತ್ಮವಾಸಕೆ
ನೆರೆದನೈ ತಾನಾತ್ಮಪತ್ನಿಯ
ನಿರುಳು ತೋಱಲು ಕಂಡಳಂಗನೆ ತನ್ನ ವಲ್ಲಭನ ।
ಮಱಿದೆನೋ ತಾನೆಂದು ಪುನರಪಿ
ಜಱಿದು ಕಳದನು ಕನಸ ತಾನೆ
ಚ್ಚರಿಸಬೇಕೆಂದಾಗ ಹೇಳಿಯೆ ಕಳುಹೆ ಜನಕಂಗೆ ॥ ೫೨

ಎನ್ನ ಪತಿ ತಾ ಪುರುಷನನೆ ನಿ
ರ್ಭಿನ್ನಮಾನದಿನರಸ ತಿರುಗಿದ
ನಿನ್ನ ಮಕ್ಕಳ ಮಾತ ಕೇಳುವುದುಚಿತವಲ್ಲೆನುತ

ತನ್ನ ಪಟ್ಟಣಕ್ಕೈದೆ ದ್ರುಪದಜ
ತನ್ನ ಯುವತಿಯು ರಮಿಸಿ ಭಾಷೆಯ
ನಿನ್ನ ಸಲಿಸುವೆನೆಂದು ಬಂದಪನೆಂಟುದಿನದೊಳಗೆ ॥ ೬೩

ಬರಲು ಹಿಂದೊಂದಾಯ್ತು ಶಂಕರ
ವರವರಾಶ್ರಮದೊಳಗೆ ಯಕ್ಷೇ
ಶ್ವರನು ಕಂಡನು ತುಂಬುರನು ಸತಿರೂಪುಗೊಂಡಿರಲು ।
ವರಸತಿಯು ಕಂಡಾತ ಸೋತನು
ಸರಸಿಜಾಕ್ಷಿಯನೈದೆ ಹೋದನು
ನಿರುತ ಗರ್ಭಿಣಿಯಾದಳಾಕೆಯಮೋಘವೀರ್ಯದಲಿ ॥ ೬೪

ಬಳಿಕ ಬಂದು ಶಿಖಂಡಿ ತುಂಬುರ
ಗೆಲೆ ಮಹಾತ್ಮಕ ನಿನ್ನ ಕೃಪೆಯಲಿ
ಕುಲವೃಟಿಯಿತಭಿಮಾನ ಹೆಮ್ಮೆಯಲಿನ್ನು ಕೊಳ್ಳೆಂದ ।
ಕೊಳಲು ಬಾರದದೆನಗೆ ಕೇಳನ
ಲೆಲವೊ ಹೇಳ್ಬೈ ತಂದೆ ನೀನೆನೆ
ಲಲನೆಯಾಗಿರೆ ನಾನು ಕಂಡಾಗೊಬ್ಬ ಗಂಧರ್ವ ॥ ೬೫

ಬಳಿಕ ಯಕ್ಷೇಶ್ವರನು ಕಂಡನು
ನಿಳಯಕ್ಕೈತಂದೆನ್ನ ರಮಿಸಿದ
ಬಳಿಕಲಾಯಿತು ಗರ್ಭವಾಕ್ಷಣ ಶಿವನು ನಡೆತಂದ ।
ನಿಳಯಕ್ಕೈತರೆ ನಾನು ನಾಚಿಯೆ
ಯೊಳಗೆ ಯಿರುತಿರೆ ಬಂದು ಕಂಡನ
ದೆಲವೊ ನೀ ನಮ್ಮಾಜ್ಞೆ ಯಿಲ್ಲದೆ ಮಾಡಿದುದಕಿನ್ನು ॥ ೬೬

ನಿನಗೆ ಮಾನಿನಿತನವು ಹಿಂಗದೆ
ಜನಿಸಿರಲಿ ತಾನೊಂದು ಜನ್ಮಕೆ
ಪುನರಪಿಯು ನೀ ಪುರುಷನಾಗೆಂತೆಂದು ತೆರಳಿದನು ।

ಬಂದ ಪುಂಸ್ತ್ವವು ಸ್ಥಿರವಾಗುವಿಕೆ.

ಎನಗೆ ಗರ್ಭಿಣಿತನವು ಸಮನಿಸಿ
ತೆನಗೆ ತಾನಿದು ನೈಜವಾಯಿತು
ನಿನಗೆ ನಿನ್ನಯ ಬಯಕೆ ಸಂದಿತು ಹೋಗು ನೀನೆಂದ ॥ ೬೭

ಎನೆ ಶಿಖರ ಲೇಸೆಂದು ವಂದಿಸಿ
ಮನವಲುತ್ಸಾಹಿಸುತ ಬಂದನು
ಜನಕಜನನಿಗೆ ಪೇಳ್ದ ತನ್ನಯ ಪುರುಷಸಂಗತಿಯ ।
ಜನಪ ಕೇಳ್ದು ದ್ರುಪದನಾಗಲು
ವನಿತೆಗೆಂದನು ನಮ್ಮ ಶೂಲಿಯ
ನಿರುತವಾಕ್ಯವು ಸತ್ಯವಹುದೈ ಯೆಂದು ಹರುಷಿಸಿದ ॥ ೬೮

ಎಂದು ದ್ರುಪದನು ವರಶಿಖಂಡಿಯ
ಛಂದದಲಿ ಪಾಲಿಸುತಲಿರ್ದಪ
ನಿಂದುಕುಲಸಂಭವರ ಪರಿಯನೆ ಕೇಳು ನೀನೆಂದ ।
ಮುಂದು ದೊರೆ ವಿಚಿತ್ರವೀರ್ಯಗೆ
ಮಂದಮತಿಯಲಿ ತಾನು ಯೋಜನ
ಗಂಧಿಯಲಿ ಭೀಷ್ಮರಲಿ ಸಂಶಯ ಪುಟ್ಟೆ ಮನದೊಳಗೆ ॥ ೬೯

ವರವಿಚಿತ್ರ ವಿಚಿತ್ರವೀರ್ಯನು
ನಿರುತವಱಿಯದೆ ಸಿಮ್ಮ ಭೀಷ್ಮನ
ಪರಿಯು ಯೋಜನಗಂಧಿ ಯಿಬ್ಬರ ಪರಿಯು ಹೊಸತೆನುತ ।
ಧರಣಿಪತಿಗಱುಹಲಿಕೆ ತಾನಿದ [1]
ನಱಿಸಿ [2] ನೋಡುವೆನೆಂದು ನೃಪಸಿರೆ
ಸುರನದೀಸುತ ತಾಯಿಗಾಗಲು ಹರಿಕಥಾಮೃತವ ॥ ೭೦

ಹೇಳುತಿರೆ ನೃಪನಾಗ [3] ನಡುಗಿಯೆ
ಕಾಲಿಗಿಕ್ಕಿದನುತ್ತಮಾಂಗವ

---

1 ತಾನಾ, ಜ.　　2 ದರಿಸಿ, ಜ.　　3 ಕಂಡಾಗ, ಕ.

ಮೇಲೆ ಬಿನ್ನಹ ಮಾಡಿದನು ನೃಪ ಭೀಷ್ಮದೇವಂಗೆ ।
ಹೇಳಿರೈ ತನಗೊಂದು ಧರ್ಮವ
ಕೇಳುವೆನು ಹಿಸುಣಿವೆನು ಪೇಳುವ
ಕೇಳುವರಿಗಿನ್ನಾವುದೈ ಪ್ರಾಯಶ್ಚಿತ್ತ ವಿಧಿಯೆಂದ [1] ‖ ೭೧

ಎಂದೊಡಾತಗೆ ಹೇಳೆ ಮರಗಳ
ಮಂದಿರದಿ ಕುಳ್ಳಿರ್ದು ಗೊಬ್ಬರ
ದಿಂದ ಬೇವುದು ಹಿಸುಣನಾತುವಕೇಳ್ವಗಿದುವಿಧಿಯು [2] ।
ಎಂದೊಡಾಕ್ಷಣ ನಮಿಸಿ ಗಂಗಾ
ನಂದನನ ಬೀಳ್ಕೊಂಡು ಹುಳುತಿಪ
ಗೊಂಡುಮರದಾ ಪೊಟ್ಟೆಯಲಿ ಕುಳ್ಳಿರ್ದು ಗೊಬ್ಬರದಿ ‖ ೭೦

ಅಂದು ತಾನೊಬ್ಬನನು ಕೇಳಸ
ದಂದು ಬೆಂದ ವಿಚಿತ್ರವೀರ್ಯನು
ಯಿಂದುಕುಲ ಕಡೆಸರಿಯಿತಂದಿಗೆ ಭೂಪ ಕೇಳೆಂದ ।
ಮುಂದೆ ಬಂದುದನಿನ್ನು ಗೋಪೀ
ವೃಂದವಲ್ಲಭ ಮರಳೆ ಪರಿದುದ
ಸಂಧಿಸಿದನೈ ವೀರನಾರಾಯಣನು ಕರುಣವಲಿ ‖ ೭೨

ಪದಿಮೂರನೆಯ ಸಂಧಿ ಮುಗಿದುದು.

---

[1] ಹಿಸುಣತೆಯೊಳಣ್ಣನಮೇಲಕಾಳಗವಿಕ್ಕ ಪ್ರಾಯಶ್ಚಿತ್ತವೇನೆಂದ, ಘ.
[2] ವಿದಿತಪ್ರಾಯಶ್ಚಿತ್ತವದಕೆನಲು, ಖ.

## ಹದಿನಾಲ್ಕನೆಯ ಸಂಧಿ.

ಸೂಚನೆ.

* ಚಂಡಮುನಿ ದೂರ್ವಾಸ ಕುಂತಿ
ಚಂಡಮಂತ್ರವನೀಯೆ ಯಾಹವ *
ಚಂಡವಿಕ್ರಮನವನಿಯಲಿ ಜನಿಸಿದನು ಕಲಿ ಕರ್ಣ ||

ವಿಚಿತ್ರವೀರ್ಯನ ಮರಣ.

ಅರಸ ಕೇಳೈ ಕೆಲವು ಕಾಲಾಂ
ತರಕೆ ನಿಮ್ಮ ವಿಚಿತ್ರವೀರ್ಯನು
ಸರಿದನಮರಸ್ತ್ರೀಯರಲಿ ಬಳಿಕೀ ನದೀಸುತನ |

ಭೀಷ್ಮನು ರಾಜ್ಯವನೊಪ್ಪದಿರಲು ವೇದವ್ಯಾಸರನ್ನು ಕರೆಯುವಿಕೆ.

ಕರೆದು ನುಡಿದಳು ಮಗನೆ ರಾಜ್ಯವ
ಧರಿಸು ನೀನಿನ್ನುತ್ತರದ [1] ಹಿಮ
ಕರಕುಲವ ಬೆಳಗೆಂದು ಯೋಜನಗಂಧಿ ಬೆಸಸಿದಳು || ೧

ತಾಯೆ ನಿಮ್ಮೋಪಾದಿ ರಾಜ
ಸ್ತ್ರೀಯರೆಂಬಾನುಡಿಯೊಳಗೆ ಗಾಂ
ಗೇಯ ಮುಱುಗನು ಭೀಷ್ಮವಚನಕೆ ಬೇಱೆ ಮೊಳೆಯುಂಟೇ [2] |
ಕಾಮದಲ್ಪಸುಖಕ್ಕೆ ಘನನಿ
ಶ್ರೇಯಸವ ಕೆಡಿಸುವನೆ ಯೆಲವದ
ಕಾಯಿಕೋಸುಗ ಕಲ್ಪವೃಕ್ಷವ ಕಡಿವನಲ್ಲೆಂದ || ೨

* ಚಂಡಮುನಿ ಮಂತ್ರಾಪ್ತ್ಯಯುದಿಬರೆ ಚಂಡಕರಸತ್ತೇಜಸಾಹವ, ಚ.
* ..............................ಕರದಂಡಗಭನಸತೇಜನಾಹವ, ಖ. ಛ.
[1] ನೀನಿನ್ನುತ್ತರಾಯಿ, ಖ. ಝ. [2] ಮತಿಮತವ, ಕ.

ನಾನು ರೂಢಿಯ ಸತಿಯರೆಲ್ಲರ
ಸೂನುವಾಗಿಯೆ ಮತ್ತೆ ಪತಿಯುಹ
ಹೀನಬುದ್ಧಿಯ ಮಾಡಿ ನುಡಿದುದ ಬಿಡೆನು ಜನ್ಮದಲಿ ।
ತಾನು ನುಡಿದುದ ತಾನು ನಡಿಸದೆ
ಮಾನಿನೀಮೋಹದಲಿ ಪುನರಪಿ
ತಾನು ಬಿದ್ದೊಡೆ ನರಕಕದು ಘನ ತಾಯೆ ಕೇಳೆಂದ ॥ ೭

ಮಱುಗಿ ಯೋಜನಗಂಧಿ ಚಿಂತೆಯ
ಸೆಱೆಗೆ ಸಿಲುಕಿದಳೊಂದು [1] ರಾತ್ರಿಯೊ
ಳಱಿದು ನೆನೆದಳು ಪೂರ್ವಸೂಚಿತಪುತ್ರಭಾಷಿತವ ।
ಮುಱಿದ ಭರತಾನ್ವಯದ ಬೆಸುಗೆಯ
ತೆರನ ತೋಱತೆ ಪುಣ್ಯವೆನುತೆ
ಚ್ಚರಿತು [2] ನೆನೆದಳು ಮಗನೆ ವೇದವ್ಯಾಸ ಬಹುದೆಂದು ॥ ೮

ವೇದವ್ಯಾಸಾಗಮನ.

ಕೆಂಜೆಡೆಯ ಕೃಷ್ಣಾಜಿನದ ಮೌನೆ
ಮುಂಜೆಱಗಿನುಡುಗೆಯ ಬಲಾಹಕ
ಪುಂಜಕಾಂತಿಯ ಪಿಂಗತರಮುಖಕೇಶದುನ್ನತಿಯ ।
ಕಂಜನಾಭನ ಮೂರ್ತಿಶೋಭಾ
ರಂಜಿತನು ಭವದುರಿತಶತಮದ
ಭಂಜಕನು ತಾಯ್ಗೆಱಗಿ ನಿಂದನು ವ್ಯಾಸಮುನಿರಾಯ ॥ ೯

ನೆನೆದೆ ಯೇನೌ ತಾಯೆ ಕೃತ್ಯವ
ನೆನಗೆ ಬೆಸಸೆನೆ ಮಗನೆ ಭಾರತ
ವಿನುತಕುಲಜಲರಾಶಿ ಯೆಡೆವರಿಯಿತು ವಿಚಿತ್ರನಲಿ [3] ।
ತನುಜ ನೀನೇ ಬಲ್ಲೆ ಯೆನೆ ಕೇ

1 ತೋಱಯೊಳಾಱ್ದಳದೊಂದು, ಖ. 2 ದೈವಗತಿಯಿಂದಿರುತ, ಖ.
3 ಯಾಯಿತಿಂದಿನಲಿ, ಕ. ಖ.

ಳ್ಜನನಿ ನಿಮ್ಮಡಿಯಾಜ್ಞೆಯಲಿ ಸಂ
ಜನಿಯಿಸುವೆ ವೈಚಿತ್ರ್ಯವೀರ್ಯಕ್ಷೇತ್ರದಲಿ ಸುತರ ‖ ೬

ಎಂದು ಬೞಿಕೇಕಾಂತಭವನದೊ
ಳೆಂದು ಮುನಿ ಯಿರಲಂಬಿಕೆಯುನರ
ವಿಂದಮುಖಿಯಟ್ಟಿದಳು ಸೊಸೆಯನು ಮುನಿಯ ಪ್ರೊರೆಗಾಗಿ ।
ಬಂದು ಮುನಿಪನ ದಿವ್ಯಮೂರ್ತಿಯ
ನೆಂದು ಭಾವಿಸುತಕ್ಷಿಗಳ ಭಯ
ದಿಂದ ಮುಚ್ಚಿದಳಾಕೆ ಗರ್ಭಿಣಿಯಾಗಿ ತಿರುಗಿದಳು ‖ ೭

ಬೞಿಕಲಂಬಾಲಿಕೆಯನಲ್ಲಿಗೆ
ಕಳುಹಲಾವಧು ಭಯದಿ ಮುಖದಲಿ
ಬಿಳುಪು ತೋಱಿತು ಮುನಿಯ ರೌದ್ರಾಕಾರದರುಶನದಿ ।
ಲಲನೆ ಮರಳಿದಳೊಬ್ಬ ಸತಿಯನು
ಕಳುಹಲಾವಧು ಚಪಲ ದೃಷ್ಟಿಯ
ಳಳುಕದೀಕ್ಷಿಸಲಾಯ್ತು ಗರ್ಭಾಧಾನವನಿಬರಿಗೆ [1] ‖ ೮

ಬಂದು ಮುನಿಪತಿ ತಾಯ್ಗೆ ಕೈಮುಗಿ
ದೆಂದನಂಬಿಕೆಯಲ್ಲಿ ಜನಿಸುವ
ನಂದನನು ಜಾತ್ಯಂಧನಂಬಾಲಿಕೆಗೆ ಪಾಂಡುಮಯ ।
ಬಂದು ಬೞಿಕಿನ ಚಪಳೆಗರೆಬಲ
ನೆಂದು ಹೇೞಿಯೆ ತನಗೆ ನೇಮವೆ
ಯೆಂದು ತನ್ನಾಶ್ರಮಕೆ ಸರಿದನು ಬಾದರಾಯಣನು ‖ ೯

ಧೃತರಾಷ್ಟ್ರಾದಿಜನನ.

ತುಂಬಿದುದು ನವಮಾಸ ಜನಿಸಿದ
ನಂಬಿಕೆಯ ಬಸುಱಿನಲಿ ಸೂನು ಗ

[1] ಕಳುಹಲಾಗಲು ಭಯದ ದೃಷ್ಟಿಯ ಕಳೆಯಲಾಯಿತು ಗರ್ಭಶುದ್ಧಿಗೆ ಮುನಿಯ ದಷ್ಟಿಯಲ್ಲಿ, ಕ.

ತಾಂಬಕನು ಮಗನಾದನಂಬಾಲಿಕೆಗೆ ಪಾಂಡುಮಯು ।
ಚುಂಬಿಸಿತು ಪರಿತೋಷನವಪುಳ
ಕಾಂಬುಗಳು ಜನಜನಿತವೆದನೇ
ನೆಂಬೆನುತ್ಸಾಹವ ಕುಮಾರೋದ್ಭವದ ವಿಭವದಲಿ ॥ ೧೦

ಜಾತಕರ್ಮಾದಿಯನು ಪಾರ್ಥಿವ
ಜಾತಿವಿಧಿವಿಹಿತದಲಿಗಂಗಾ
ಜಾತ ಮಾಡಿಸಿ ತುಷ್ಟಿಪಡಿಸಿದನಖಿಳಯಾಚಕರ ।
ಈತನೇ ಧೃತರಾಷ್ಟ್ರನೆರಡನೆ
ಯಾತ ಪಾಂಡು ವಿಲಾಸಿನೀಸಂ
ಜಾತನೀತನು ವಿದುರನೆಂದಾಯ್ತವರಿಗಭಿಧಾನ ॥ ೧೧

ಅರಸ ಕೇಳಿಂತಿವರು ಪೂರ್ವದ
ಸುರಪತಿಯು ಸದನದೊಳಗೊಮ್ಮೆಯು
ನೆರೆದು ಹಾಹಾ ಹೂಹು ಯೆಂಬವರಿವರು ಗಂಧರ್ವ ।
ನಿರುತರಾಗದ್ವೇಷದಲಿ ತಾ
ಧರೆಗೆ ಜನಿಸಿದರಿಂದುಕುಲದಲಿ
ಸುರಪತಿಯು ಶಾಪದಲಿ ಪಾಂಡುಕ್ಷಿತಿಪಧೃತರಾಷ್ಟ್ರ ॥ ೧೨

ಯಮನಿಗೆ ಮಾಂಡವ್ಯ ಶಾಪ.

ಪೂರ್ವದಲಿ ಮಾಂಡವ್ಯಮುನಿಪತಿ
ಯುರ್ವಿಯಲಿ ಶ್ರೀಬ್ರಹ್ಮಪದವಿಗೆ
ಸರ್ವತಪವನು ಮಾಡೆ ಬಟಿಕೆಂದಾಯ್ತು ಕೇಳೆಂದ ।
ಸಾರ್ವಭೌಮನ ಮನೆಯ ತುರಗವ
ನೋರ್ವ ತಸ್ಕರ ಕೊಂಡು ಬರಲಿಕೆ
ನೀರ್ವಹದಿ ಹುಯ್ಲಾಯ್ತು ಬೇಗದಿ ಭೂಪ ಕೇಳೆಂದ ॥ ೧೩

ಬಟಿಕ ತಸ್ಕರ ಹಯವನೊಯ್ವುತ
ಕಳವಳಿಸಿ ಮಾಂಡವ್ಯಮುನಿಪನ

ತೊಳಯೊಳಗೆ ತಾ ಕಟ್ಟಿ ಹೋದನು ಬೇಗ ಗತವಾಗಿ ।
ಹಳುವುದಗಲಕೆ ತುಂಬಿ ಹುಯ್ಯಲು
ವುಲಿವುತಲಿ ಬರಲಾಗ ಹಯವನು
ಕಳುವದಲಿ ತಾಪ್ಪೈದೆ ಕಂಡರು ವುುನಿಯು ಹಿಂದಿರಲು ॥ ೧೪

ಬಿಗಿದು ಹೊಡೆಗೈಗಟ್ಟಿ ವುುನಿಯನು
ನಗರದೊಳಯಿಕೆ ತಂದು ಭೂಪನ
ಮಗನ ಮುಂದಕೆ ಮುನಿಯು ನಿಲಿಸಲಿಕಾತ ಶೂಲದಲಿ ।
ತೆಗೆಸಿದನು ಮಾಂಡವ್ಯಮುನಿಯನು
ನಗುತಲಾಯುಪುರಾಜನಾಕ್ಷಣ
ದುಗುಡದಲಿ ಮುನಿವರನು ಯಮನನು ತಾನು ಧ್ಯಾನಿಸಿದ ॥ ೧೫

ಬಿಚಿಕ ಯಮನೈತಂದು ಮುನಿಪನ
ತಿಳುಹಲಾತನು ತನಗೆ ಶೂಲದ
ಕೊಲೆ ಯಿದೇತಕೆ ಪೂರ್ವಜನ್ಮದ ಪಾಪವೇನೆನಲು ।
ನೆಲೆಯು ಹೇಳೆನೆ ನೀನು ತೊನಸೆಯ
ಕೊಲೆಯು ಮಾಡಿದೆ ಮುಳ್ಳುಮೊನೆಯಲಿ
ತಿಳಿದು ನೋಡೆನೆ ತಾನು ನೋಡಿದ ತನ್ನ ಕರ್ಮವನು ॥ ೧೬

ಅಲ್ಲಿ ನೋಡಲಿಕಾಗ ತೊನಸೆಯು
ಮುಳ್ಳುಮೊನೆಯಲಿ ಕೊಂದಪಾಪವ
ದಿಲ್ಲಿ ನಾಸ್ತಿ ಬ್ರಹ್ಮಪದವಿಗೆ ತಪವ ಮಾಡಿದುದ ।
ಹೊಲ್ಲೆಯಾಯಿತು ತನಗೆ ಕಮಲಜ
ನಲ್ಲಿ ಯೆನುತಲಿ ಬ್ರಹ್ಮಲೋಕವ [1]
ಬಲ್ಲರೇ ಶಿವಗರುಡಶೇಷರು ಯಿನ್ನು ಮೊದಲಾಗಿ ॥ ೧೭

ತಾನಯೋಗ್ಯವ ಬಯಸಿದೆನು ಹರಿ
ತಾನೆ ಬಲ್ಲನೆನಲಿಕೆ ಶೂಲದ

---

[1] ಪಾದವ, ಕ.

ಹಾನಿ ಯಾಯಿತು ಮುನಿಯು ಯಮನನು ಕುಱಿತು ಶಾಪಿಸಿದ ।
ನೀನಸತ್ಯವ ನುಡಿದೆ ಮಾನುಷ
ಯೋನಿಯಲಿ ಶೂದ್ರಿತಿಗೆ ಜನಿಸೆನೆ
ಲೇನದೆನ್ನದೆ ಕೊಂಡ ಶಾಪವ ಯಮನು ದುಗುಡದಲಿ ॥ ೧೮

ಬಳಿಕ ಯಮನಾವಿದುರನಾಗಿಯೆ
ಯಿಳಗೆ ಜನಿಸಿದ ಪರಮವೈಷ್ಣವ
ತಿಲಕನಾಗಿಯೆ ಶೂದ್ರತನುಜೆಗೆ ವ್ಯಾಸಸುತನೆನಿಸಿ ।
ಬಳೆವುತಿದ್ದರು ಹಸ್ತಿನಾಪುರ
ದೊಳಗೆ ಮೂವರು ಚಿತ್ರವೀರ್ಯನ
ಲಲನೆಯರ ಸುತರಾಗಿ ಪಾಂಡುಸವಿದುರ ಧೃತರಾಷ್ಟ್ರ ॥ ೧೯

ಬಳೆವುತಿರ್ದರು ಶುಕ್ಲ[1] ಪಕ್ಷದ
ನಳಿನರಿಪುವಿನವೋಲ್ಕುಮಾರರು
ಕುಲವಿಹಿತಚೌಲೋಪನಯನವ ನವರಿಗಳವಡಿಸಿ[2] ।
ಬಳಿಕ ವೇದವನಱುಹಿ ತಾಯು[3]
ಮ್ಮಳಿಸದಂತಿರೆ ಸೋಮವಂಶದ
ಬಳವಿಗೆಯನೇ ಮಾಡಿ ಕೊಂಡಾಡಿದನು ಕಲಿಭೀಷ್ಮ ॥ ೨೦

ಧಾರುಣೀಪತಿ ಚಿತ್ತವಿಸು ಗಾಂ
ಧಾರದೇಶದ ಸುಬಲರಾಜಗೆ ವರಕು
ಮಾರಿಯು ಜನಿಯಿಸಿದಳು ಸಲೆ ಗಾಂಧಾರಿನಾಮದಲಿ ।
ಧಾರುಣೀಪತಿ ಕೇಳ್ದನಾಕೆಯು
ದಾರದುಷ್ಟಮುಹೂರ್ತಜನಿವಿ
ಸ್ತಾರವೆನು ಬಳಿಕಾಕೆಗಹುದಾರಂಡೆತನವೆಂದು ॥ ೨೧

ಎನಲು ವಿಬುಧರು ಕೆಲವು ದಿವಸಕೆ
ತನುಜೆಯನು ಮೃಗಪತಿತಗೀಯಲು

---

[1] ಹರಿಣ, ಚ. [2] ಕಾಲಕಾಲದಲಿ, ಕ. ಬಳಿಕವೇದವನೋದಿಶಾವು, ಕ.

ಜನಪ ಕೇಳೈ ಗರ್ದಭನು ತಾ ಸತ್ತನಾಕ್ಷಣಕೆ ।
ವನಿತೆಯುನು ಬೞಿಕರಸ ಬೆಳಸಲು
ವಿನುತದೇವವ್ರತನು ಕೇಳಿಯು
ಜನಪತಿಯು ಕರೆತರಿಸಿ ಬೇಡಿದ ಸುಬಲನಂದನೆಯ ॥ ೨೦

### ಧೃತರಾಷ್ಟ್ರವಿವಾಹ.

ಧಾರುಣೀಪತಿ ಚಿತ್ತವಿಸು ಗಾಂ
ಧಾರದೇಶದ ಸುಬಲರಾಜಕು
ಮಾರಿ ಕುಲವಧುವಾದಳಾಧೃತರಾಷ್ಟ್ರಭೂಪತಿಗೆ ।
ನಾರಿಯರೊಳುತ್ತಮೆಯೆಲಾಗಾಂ
ಧಾರಿಯೆನಿಸಿ ಪತಿವ್ರತಾವಿ
ಸ್ತಾರಗುಣದಲಿ ಮೆಱೆದಳಬಲೆ ಸಮಸ್ತಜನ ಹೊಗಳೆ ॥ ೨೧

ಬೞಿಕ ತಾ ಗಾಂಧಾರಿವಲ್ಲಭ
ನಿಳೆಯೊಳಾರುವ ಕಾಣನೆಂಬುದ
ನಳುಕಿ ಕಂಡಳು ತನ್ನ ಕಣ್ಣಿಗೆ ಪಾವುಡವ ಕಟ್ಟಿ ।
ನಳಿನಮುಖಿ ತನ್ನಾತ್ಮಧರ್ಮದ
ಕಳೆಯ ಕೆಡಿಸದೆ ನಡೆವುತಿಪ್ಪಳ
ದಿಳೆಯ ಯುವತೀಜನದ ಮಾತೆಯು ರೂಪು ಗಾಂಧಾರಿ ॥ ೨೨

### ಕುಂತಿಯ ಪೂರ್ವವೃತ್ತಾಂತ.

ಇತ್ತ ಕುಂತೀಭೋಜನೆಂಬನೃ
ಪೋತ್ತಮನ ಭವನದಲಿ ಮುರಹರ
ನತ್ತೆ ಬಳೆವುತಿರ್ದಳಾವಸುದೇವನೃಪನನುಜೆ ।
ಹೆತ್ತವರಿಗೋಲೈಸುವವಗೆ ಮ
ಹೋತ್ತಮರಿಗುಳಿದಾದ ಲೋಕದ
ಚಿತ್ತಕಹುದೆನೆ ನಡೆವಗುಣದಲಿ ಮೆಱೆದಳಾಕುಂತಿ ॥ ೨೩

ದೂರ್ವಾಸರ ಆಗಮನ.

ಬಂದುದಿನ ದೂರ್ವಾಸಮುನಿ ನೃಪ
ಮಂದಿರಕೆ ಬರಲಾಮಹೀಪತಿ
ಬಂದ ಬರವಿನುವರ ಮಱೆದನು ರಾಜಕಾರ್ಯದಲಿ ।
ಇಂದು ಕುಂತೀಭೋಜನೊಡೆತನ
ಬೆಂದು ಹೋಗಲಿ ಯೆಂಬಶಾಪವ
ನಿಂದುಮುಖಿ ನಿಲಿಸಿದಳು ಹೊಱಳಿದಳವರ ಚರಣದಲಿ ॥ ೨೬

ಕುಂತಿಯ ಉಪಚಾರ.

ತರುಣಿಯೊಡಗೊಂಡಯ್ದೆ ಮುನಿಯನು
ಪರಮವಚನದೊಳರಿಸಿ ತಾನುಪ
ಚರಿಸಿದಳು ವಿವಿಧಾನ್ನಪಾನರಸಾಯನಂಗಳಲಿ ।
ಹರ ಹರಾ ನೋಡೀಮಗುವಿನಾ
ಚರಣೆಗೀವಿನಯೋಪಚಾರಕೆ
ಹಿರಿದು ಮೆಚ್ಚಿದೆನೆಂದು ತಲೆದೂಗಿದನು ದೂರ್ವಾಸ ॥ ೨೭

ಕುಂತಿಗೆ ದೂರ್ವಾಸರ ಮಂತ್ರೋಪದೇಶ.

ಮಗಳೆ ಬಾ ಕೊಳ್ಳೈದುಮಂತ್ರಾ
ಳಿಗಳು ಸಿದ್ಧಿಸಲಿಕದಮೋಘವು [1]
ಸೊಗಸು ದಿವಿಜರೊಳಾರ ಸೆನಸುಂ [2] ಟವರ ನೆನೆ ಸಾಕು ।
ಮಗನು ಜನಿಸುವನೆಂದು ಮುನಿ ಕುಂ
ತಿಗೆ ರಹಸ್ಯದೊಳಱುಹಿ ಮುನಿಮಾ
ಳಿಗಳ ಮಣಿ ಪರಿತೋಷದಲಿ ತಿರುಗಿದ ತಪೋವನಕೆ ॥ ೨೮

ಕುಂತಿಯು ಮಂತ್ರವನ್ನು ಜಪಿಸಲು ಸೂರ್ಯಾಗಮನ.

ಮಗುವುತನದಲಿ ಬೊಂಬೆಯಾಟಕೆ
ಮಗನನೀ ತಹೆನೆಂದು ಬಂದಳು
ಗಗನನದಿಯಲಿ ಮಿಂದಳುಟ್ಟಳು ಲೋಹಿತಾಂಬರವ ।

1 ಳಿಗಳನಿವುಸಿದ್ಧಪ್ರಯೋಗವು, ಚ. 2 ಮೋಲುಂ ಕ, ಚ.

ವಿಗಡಮುನಿಪನ ಮಂತ್ರವನು ನಾ
ಲಿಗೆಗೆ ತಂದಳು ರಾಗರಸದಲಿ
ಗಗನಮಣಿಯನು ನೋಡಿ ಕಣ್ಗಳ ಮುಚ್ಚಿ ನಿಮಿಷದಲಿ [1] ‖ ೨೯

ಅರಸ ಕೇಳ್ಳೈ ಮುನಿಯ ಮಂತ್ರಾ
ಕ್ಷರದ ಕರ್ಷಣಕೆ ತಳುವಿದರೆ ದಿನ
ಕರನ ತೇಜವ ಕೊಂಬನೇ ದೂರ್ವಾಸ ವಿಗಡನಲ ।
ಸರಸಿಜದ ಸಖ ಬಂದನಲ್ಲಿಗೆ
ಕಿರಣಲಹರಿಯ ರಾಶಿಯಲಿ ತಾ
ಸರಸಿರುಹಮುಖಿ ಕಂಡು ಬೆದಚಿಯ ಬಾರದಿರಿ ಯೆನಲು ‖ ೩೦

ಇನ್ನು ಹಿಂದಕೆ ಹೋಗಬಾರದು
ಕನ್ನೆ ಋಷಿಪನ ಮಂತ್ರ ಕಳುಹದ
ದಿನ್ನು ನೀನಂಜದಿರು ಸುತ ನಿನಗೊಬ್ಬ ಜನಿಸುವನು ।
ಕನ್ನಿಕೆಯ ಪ್ರೌಢಿಯಲಿ ನೋಡಿಯೆ
ಮನ್ನಿಸಿಯೆ ಮತ್ತಾಗಳಾಕೆಯ
ಕನ್ನೆತನದಲಿ ನಿಲಿಸಿ ತಿರುಗಿದ ದಿನಪನಾಕ್ಷಣಕೆ ‖ ೩೧

ಇನ್ನು ನಿಲ್ಲದು ಋಷಿಪತಿಯ ಸಂ
ಪನ್ನಮಂತ್ರವಮೋಘವಿದು ನಿನ
ಗೆನ್ನ ತೂಕದ ಮಗನಹನು ನೀನಂಜಬೇಡೆಂದ ।
ಕನ್ನೆಯನು ಕೂಡಿದನು ಮುನ್ನಿನ
ಕನ್ನೆತನ ಕೆಡದಿರಲಿ ಯೆನುತಲಿ
ತನ್ನ ರಥವಿದ್ದೆಡೆಗೆ ರವಿ ತಿರುಗಿದನು ವಹಿಲದಲಿ ‖ ೩೨

ಕುಂತಿಗೆ ಪುತ್ರಜನನ.

ಅರಸ ಕೇಳಾಶ್ಚರ್ಯವನು ತಾ
ವರೆಯ ಮಿತ್ರನ ಕರುವಿನೆರಕದ

[1] ಯೋಗದಲಿ, ಚ.

ಲೆರಸಿವಂತಿರೆ ತೊಳತೊಳಗಿ ಬೆಳಗುವ ತನುಚ್ಛವಿಯ ।
ಕುರುಳದಲಿ ನಿಟ್ಟಸಿಳುಗಂಗಳ
ಚರಣಕರಪಲ್ಲವದ ಕೆಂಪಿನ
ವರಕುಮಾರನ ಕಂಡು ಬೆಱಗಿನೊಳಿರ್ದಳಾಕುಂತಿ ॥ ೩೨

ಅಳುವ ಶಿಶುವನು ತೆಗೆದು ತಕ್ಕೈಸಿ
ಪುಳಕಜಲದಲಿ ನಾದಿ ಹರುಷದ
ಬಳಿಯ ಲಜ್ಜೆಯು ಭವದ ಹೋರಟೆಗಳಲಿ ಬೆಂಡಾಗಿ ।

ಹುಟ್ಟಿದ ಮಗುವನ್ನು ಗಂಗೆಯಲ್ಲಿ ಬಿಡುವಿಕೆ

ಕುಲದ ಸಿರಿ ತಪ್ಪುವುದಲಾ ಸಾ
ಕಿಳುಹಬೇಕೆಂದೆನುತ ಗಂಗಾ [1]
ಜಲದೊಳಗೆ ಹಾಯ್ಕಿದಳು ಜನದಪವಾದಭೀತಿಯಲಿ ॥ ೩೩

ತಾಯೆ ಬಲ್ಲಂದದಲಿ ಕಂದನ
ಕಾಯಿ ಮೇಣ್ಕೊಲ್ಲೆ [2] ನುತ ಕಮಲದ
ಳಾಯತಾಕ್ಷಿ ಕುಮಾರನನು ಹಾಯ್ಕಿದಳು ಮಡುವಿನಲಿ ।
ರಾಯ ಕೇಳೈ ಸಕಲಲೋಕದ
ತಾಯಲಾ ಜಾಹ್ನವಿ ತರಂಗದಿ
ನೋಯಲೀಯದೆ ಮುಱುಗಲೀಯದೆ ಬಾಚಿದಳು ತಡಿಗೆ ॥ ೩೪

ಕೆದಱಿ ಕಾಲಲಿ ಮಳಲರಾಶಿಯ
ನೊದೆದು ಕೈಗಳ ಕೊಡಹಿ ಘೋಷೆಂ
ದೊದಱುತಿರ್ದನು ಶಿಶುಗಳರಸನು ರವಿಯನೀಕ್ಷಿಸುತ ।

ಆ ಮಗುವನ್ನು ಸೂತನು ಮನೆಗೊಯ್ದು
ಹೆಂಡತಿಗೆ ಕೊಡುವಿಕೆ.

ಇವನು ಕಂಡನು ಸೂತನೊಬ್ಬನು

---

1 ಯಮುನೆಯ, ಕ. ಖ. 2 ಕೊಳ್ಳೆಂದೆ, ಖ.

ಮದದ ಮುಖದಲಿ ತನ್ನ ಮನದಮು
ದದಲಿದೆತ್ತೃಣದೊ ದನಿಯೆನುತಡಿಗಡಿಗೆ ಹರುಷಿಸಿದ [1] ॥ ೭೬

ತರಣಿಬಿಂಬದ ಮಣಿಯೊ ಕೌಸ್ತುಭ
ವರಮಣಿಯ ಖಂಡದ ಕಣಿಯೊ ಮ
ರ್ತ್ಯರಿಗೆ ಸುತನಿವನಲ್ಲ ಮಾಯಾಬಾಲಕನೊ ಪೇಳು ।
ಇರಿಸಿ ಹೋದವಳಾವಳೋ ಶಿಶು
ವರನ ತಾಯ್ನಿರ್ಮೋಹಿಯ್ಕೆ ಹರ
ಹರ ಮಹಾದೇವೆನುತ ತೆಗೆದಪ್ಪಿದನು ಹರುಷದಲಿ [2] ॥ ೭೭

ತೃಣವಲಾ ತ್ರೈಲೋಕ್ಯರಾಜ್ಯವ
ಗಣಿಸುವೆನೆ ತಾನಿನ್ನು ತನ್ನಲಿ
ಋಣವಿಶೇಷವಿದೇನೊ ಪೇಳೀಬಾಲಕಂಗೆನುತ ।
ಕ್ಷಣದೊಳೊದಗುವ ಬಾಷ್ಪಲುಳಿತೇ
ಕ್ಷಣನು ಬಂದನು ಮನೆಗೆ ಹರುಷದ
ಕಣಿಯು ತಂದನು ರಮಣಿ ನೋಡೆಂದಿತ್ತನರ್ಭಕನ ॥ ೭೮

ತನಗೆ ಪುತ್ರಲಾಭವಾಯಿತೆಂದು ನಾನಾದಾನ.

ಆದರಿಸಿದನು ರಾಧೆಯಲಿ ಮಗ
ನಾದನೆಂದುತ್ಸವವ ಮಾಡಿ ಮ
ಹೀದಿವಿಜರನು ದಾನಮಾನಂಗಳಲಿ ಸತ್ಕರಿಸಿ ।
ಆದಿನಂಮೊದಲಾಗಿಯುದ್ಭವ
ವಾದುದವನೈಶ್ವರ್ಯವುನ್ನತ
ವಾದನೀರವಿನಂದನನು ರಾಧೇಯನಾಮದಲಿ ॥ ೭೯

ಹೊಳಹೊಳದು ಹೊಡೆಮರಳಿ ನಡುಹೊ
ಸ್ತಿಲನು ಮೆಲ್ಲನೆ ದಾಂಟಿ ಬೀದಿಗ

---

[1] ಮದದ ಮುದದಲಿ ತನ್ನ ಮಖಿದುಬ್ಬಿದನಿದೆತ್ತಣನಿಧಿಯೊಶಿವ ಶಿವ ಯೆನುತ ನಡೆತಂದ, ಜ.	[2] ಬಾಲಕನ, ಚ.

ಳೊಳಗೆ ಸುಚಿವೆರ ಸನ್ನೆಯುಲಿ ಕರೆಕರೆದು ನಸುನಗುತ ।
ಲಲಿತರತ್ನದ ಬಾಲದೊಡಿಗೆಯು
ಕಳಚಿ ಕೊಡುವನು ಹೆಸರು ಮಿಗೆ ತಾ
ಬಳವೃತಿರ್ದಪನವನ ಕೌತುಕಜನದ ಕರ್ಣದಲಿ ॥ ೪೦

ಅರಸ ಕೇಳ್ಯ ಕರ್ಣಪಾರಂ
ಗರೆಯೊಳೀತನ ಹೆಸರು ಜಗದಲಿ
ಹರಿವುಪಲ್ಲಿಂ ಬೞಕಲೀತನ ನಾಮಕರಣವಲಿ ।
ಸುರನರೋರಗನಿಕರವೇ ವಿ
ಸ್ತರಿಸಿದುದು ಕರ್ಣಾಭಿಧಾನವ
ಗುರುಪರಾಕ್ರಮ ಬಳವೃತಿರ್ದನು ಸೂತಭವನದಲಿ ॥ ೪೧

ಆತ ತಾ ಮುನ್ನಾದಿಯುಲಿ ಶ್ರೀ
ಗೌತಮಾಖ್ಯನ ಶಾಪದಿಂದವೆ
ಸೂತಭವನದಿ ಬಳಯುಬೇಕೆಂದೆಂದು ಕಲ್ಪಿತವು ।
ಆತನಾಗಿರೆ ಮೊದಲು ಜನಿಸಿದ
ಭೂತಳಕೆ ಸುಗ್ರೀವನಾಗಿಯೆ
ಸೂತಸುತನೆಂದೆನಿಸಿ ಕೊಂಡನು ದ್ವಾಪರಾಂತ್ಯದಲಿ ॥ ೪೨

ಹದಿನಾಲ್ಕನೆಯ ಸಂಧಿ ಮುಗಿದುದು.

---

## ಹದಿನೈದನೆಯ ಸಂಧಿ.

---

### ಸೂಚನೆ.

ಭರತವಂಶದೊಳ್ಯದು ಮಿಗೆ ನೂ
ರ್ವರು ಕುಮಾರರು ಪಾಂಡುಧೃತರಾ
ಷ್ಟ್ರರಿಗೆ ಜನಿಸಿದರಮಳಮುನಿಮಂತ್ರೋಪದೇಶದಲಿ ॥

### ಪಾಂಡುವಿಗೆ ಕುಂತೀಮಾದ್ರಿಯರ ವಿವಾಹ.

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತೀಭೋಜಭೂಪತಿ
ಯಾಲಯದೊಳಗೆ ಬಳವುತಿರ್ದಳು ಕುಂತಿ ವಿಭವದಲಿ ।
ಕೇಳಿದನು ಗಾಂಗೇಯನಾವರ [1]
ಬಾಲಿಕೆಯ [2] ಕುಲರೂಪಲಕ್ಷಣ
ಶೀಲವನು ಪಾಂಡುವಿಗೆ ಪಾಸಟಿಯೆಂದು ರಾಗದಲಿ ॥ ೧

ಕರೆಸಿ ಕುಂತೀಭೋಜನನು ಸ
ತ್ಕರಿಸಿ ಕುಂತಿಯ ಪಾಂಡುವಿಗೆ ಭೂ
ಸುರರ ಮತದಿಂದಗ್ನಿಸಾಕ್ಷಿಕವರವಿಧಾನದಲಿ ।
ಹರುಷದಲಿ ತಾನೆಸಗಿ ಮದ್ರೇ
ಶ್ವರನ ತಂಗಿಯ ಕರೆಸಿ [3] ಪಾಂಡುವಿ
ಗರಸಿಯನು ಮಾಡಿದನು ಪುನರಪಿ ವೈದಿಕೋಕ್ತಿಯಲಿ ॥ ೨

ವರವಿವಾಹಮುಹೂರ್ತಸಮನಂ
ತರದ ಲಗ್ನದಲಖಿಳರಾಜ್ಯದ
ಭರದ ನಿರ್ವಾಹಕಮಹಾಪಟ್ಟಾಭಿಷೇಚನವ ।
ಸುರನದೀಸುತ ಪಾಂಡುವಿಗೆ ವಿ
ಸ್ತರಿಸಿದನು ಧೃತರಾಷ್ಟ್ರವಿದುರರ
ಪರಮಪರಿತೋಷಾನುಮತದಲಿ ಮೆಱೆದುದಾವಿಭವ ॥ ೩

### ಪಾಂಡುವಿನ ರಾಜ್ಯಪರಿಪಾಲನ.

ಸೋಮಕುಲದಲಿ ಜನಿಸಿದವದಿರ
ಗೀಮಹೀಪಾಲಕನು ಶತಸಂ
ಗ್ರಾಮದಲಿ ಸಾಹಿತ್ಯದಲಿ ಸತ್ಯದಲಿ ವಿನಯದಲಿ ।

---

1 ನಾಸ್ತಿ, ಖ    2 ಬಾಲಿಕೆ, ಖ.    3 ಸನುಜೆಮಾದ್ರಿಯನು, ಖ.

ಸಾಮದಲಿ ಶೌರ್ಯದಲಿ ಸುಜನ
ಪ್ರೇಮದಲಿ ನೀತಿಯಲಿ ವೃಥವನು
ಭೂಮಿಯೊಳು ನಾನರಿಯೆ ನರರೊಳು ಸತ್ಯಕೀಳಂದ ॥ ೪

ಪಸರಿಸಿದ ಪರಿಕೀರ್ತಿ ತಾನಿ
ಪ್ಪಸರದಲಿ ಬಿಳುಪಾಯ್ತು ದೀಜಗ
ವಿಸರದಲಿ ಝಳಪಿಸುವಖಂಡೆಯುಸಿರಿಯು ಸೊಂಪಿನಲಿ ।
ಮಸಗಿತಗ್ಗದಕೆಂಪು ಪರಬಲ
ವಿಸರದಳನಕ್ರೋಧಮಯುತಾ
ಮಸದಿನಸಿತಾಭಾಸವಾದುದು ಭುವನವಿಸ್ತಾರ ॥ ೫

ಓಲಗಿಸುವುದು ಮಿತ್ರರಾಯರ
ಮೌಳಿಮಣಿ ಪಾಂಡುವಿನ ಚರಣನ
ಖಾಳಿಯನು ಸೆಣಸುವಮಹೀಶರ ಮೌಳಿಮಣಿಕಿರಣ ।
ಓಲಗಿಸಿದುದು ಪ್ರಣಯದಮರೀ
ಬಾಲೆಯರ ಪದನಖವನೇನೆಲೆ
ಹೇಳುವೆನು ಪಾಂಡುವಿನಖಂಡೆಯುಸಿರಿಯು ಸಗಡರವ ॥ ೬

ಓಲಗಿಸಿಕೊಂಬಾತನಂಧನೃ
ಪಾಲನುಳವಂತಖಿಳಧರಣೀ
ಪಾಲಕತ್ವವು ಪಾಂಡುಭೂಪತಿವರಕುಮಾರಂಗೆ ।
ಲಾಲಿಸುವ ಕುಲವಿಹಿತಧರ್ಮವ
ಪಾಲಿಸುವ ಕಲಿಭೀಷ್ಮನದು ಸಂ
ಭಾಳಿಸಿತು ನಳನಹುಷಚರಿತವನವರ ಪರಿಪಾಟಿ [1] ॥ ೭

## ಧೃತರಾಷ್ಟ್ರನಿಗೆ ಮಕ್ಕಳಿಲ್ಲದ ಚಿಂತೆ

ನೃಪಪರಂಪರೆಯಿಂದ ಬಂದೀ
ವಿಪುಳವಂಶಸ್ಥಿತಿನಿಸರ್ಗವ

1 ಘವರಪರಂಪರೆಯು, ಜ.

ನಸಹರಿಸಿದನು ಹಿಂದೆ ವೇದವ್ಯಾಸಮುನಿ ಬಂದು ।
ಕೃಪೆಯ ಮಾಡನೆ ತನ್ನ ಸಂತತಿ
ಕೃಪಣವಾಯ್ತೆಂದನವರತ ಕುರು
ನೃಪತಿ ಚಿಂತಾಭರದಿ ಬಳಲುವನೆಂದು ಧೃತರಾಷ್ಟ್ರ ॥ ೮

ವೇದವ್ಯಾಸರ ಆಗಮನ

ಅರಸ ಚಿತ್ತೈಸೊಂದುದಿನ ಮುನಿ
ವರನು ಬಿಜಯಂಗೈದು ಹಸ್ತಿನ
ಪುರವ ಹೊಕ್ಕನು ರಾಜಭವನಕೆ ಬಂದು ಹರುಷದಲಿ ।
ಸುರನದೀತನುಜಾದಿಗಳ ಸ
ತ್ಕರಣವನು ಕೈಕೊಂಡು ಮಕ್ಕಳ
ಪರಮವಿಭವಕೆ ಮುಯ್ಯನಾಂತು ಮುನೀಂದ್ರನಿಂತೆಂದ ॥ ೯

ಭರತಕುಲದಲಿ ಮಕ್ಕಳಿಲ್ಲದ
ಕೊರತೆ ಕೋಮಲಸೌಖ್ಯಲತೆಗಿದು
ಗರಗಸವಲಾ ತಂದೆ ಬಾ ಧೃತರಾಷ್ಟ್ರ ಬಾ ಯೆನುತ ।

ಗಾಂಧಾರಿಗೆ ವ್ಯಾಸರ ಮಂತ್ರೋಪದೇಶ

ಕರೆದು ಕಟ್ಟೇಕಾಂತದಲಿ ನೃಪ
ಗರಸಿಗನುಪಮ ಪುತ್ರಶತವವೆ
ತರಿಸುವುದು ನಿನಗೆಂದು ಕೊಟ್ಟನು ಮಂತ್ರಪಿಂಡವನು ॥ ೧೦

ಧರಿಸಿದಳು ಗಾಂಧಾರಿ ಗರ್ಭೋ
ತ್ಕರವನಿತ್ತು ನಿಜಾಶ್ರಮಕೆ ಮುನಿ
ತಿರುಗಿದನು ದಿನದಿನದೊಳುಬ್ಬಿತು ರಾಯನಭ್ಯುದಯ ।
ಅರಸ ಕೇಳ್ಬೇಂಟೆಕಾಱರು
ನೆರೆದು ಬಂದರು ಮೃಗನಿಕಾಯದ
ನೆರಹಿಗಳ ನೆಲೆಗೊಳಿಸಿ ಪಾಂಡುನೃಪಾಲನೋಲಗಕೆ ॥ ೧೧

ಕೇಳದನು ಮೃಗದಿಕ್ಕ ಹಕ್ಕಿಯು
ಗಾಳಿಯನು ಬಳಿವಿಡದದೆಲ್ಲರ
ಬೀಳುಕೊಟ್ಟನು ರಾಜಸಭೆಯನು ರಾಯನುಚಿತದಲಿ ।
ಬೋಳ ಗವಲಂಬುಗಳ ಹೆದೆ ವಿಲು
ಕಾಳಕೆಯ ಕುಪ್ಪಸದ ಬೇಂಟೆಯ
ಮೇಳದಲಿ ಭೂಪಾಲ ಹೊಱವಂಟನು ನಿಜಾಲಯುವ ॥ ೧೦

ಪಾಂಡುವು ಮೃಗರೂಪರಾದ ಋಷಿದಂಪತಿಯನ್ನು ಹೊಡೆದುಬಿಟ್ಟ.

ಏನನೆಂಬೆನು ನಿಮ್ಮ ಪೂರ್ವಜ
ಹಾನಿ ಬಂದೀತೆಂದು ನೋಡದೆ
ಮಾನನಿಧಿ ವ್ಯಸನಾನುಬಂಧದೆ ಹೊಱಟು ನಡೆತಂದ ।
ಕಾನನದೊಳಾಯತದ ಶರಸಂ
ಧಾನಕಳಿತಶರಾಸನನು ಮೃಗ
ಹಾನಿಗಳ ಹೆಕ್ಕಳದಲೋಲಾಡಿದನು ಬೇಂಟೆಯಲಿ ॥ ೧೩

ಬಂದುದಾಪಾಂಡುವಿಗೆ ನಿಮ್ಮಯ
ತಂದೆಗಾದ ವಿಪತ್ತಿನಂದದ
ಲೊಂದು ಠಾವಿನಲೊಬ್ಬ ಮಿಥುನಮುನಿ ಮೃಗರೂಪಾಗಿ ।
ನಿಂದು ರಮಿಸುತ್ತಿರೆ ಮೃಗದ್ವಯ
ವೆಂದು ಹೊಡಿದನಂಬನಿಬ್ಬರಿ
ಗೊಂದು ಸರಳಲಿ ಕೀಲಿಸಿದೊಡೊಱಲಿದರು ನರರಾಗಿ ॥ ೧೪

ಆಮುನಿದಂಪತಿಗಳ ಶೋಕ, ಪಾಂಡುವಿನ ಪಶ್ಚಾತ್ತಾಪ

ಹಾ ಮಹಾದೇವ ಯೆನುತಲಿ ಮುನಿ
ಕಾಮಿನೀಸಹಿತೊಡಲನಟ್ಟುತ
ತೋಮರದ ಮೞುಮೊನೆಯ ಕಿಬ್ಬಸುಱಿನ ನಿಜಾಂಗನೆಯು ।
ಕಾಮಿನಿಯೆ ಕಡುನೊಂದೆ ನೀ ಮುಖ
ತಾಮರಸವನು ತೋಱು ತೋಱೆನು
ತಾ ಮುನೀಶ್ವರ ಮುಳಿದು ಮುಂಡಾಡಿದನು ನಿಜಸತಿಯ ॥ ೧೫

ಪಾಂಡುವಿಗೆ ಮುನಿಶಾಪ

ಕಾತರಿಪ ಮುನಿಮಿಥುನವನು ನಿ
ರ್ವ್ಯಾತ ಕಂಡನು ಬಿಲ್ಲಕೊಪ್ಪಿನ
ಲಾತಕದಪಿನ ಮಕುಟದೊಲಹಿನ ಬೆರಳ ಮೂಗಿನಲಿ।
ಭೀತಿಗಂಪಿನ ತಳಿತಬೆಱಗಿನ
ಪಾತಕದ ಪರಿಭವದ [1] ಮುಖದ ಮ
ಹೀತಳಾಧಿಪ ಸುಯ್ದನೊಂದನು ಶಿವ ಶಿವಾ ಯೆನುತ॥ ೧೬

ಅಱಿಯೆ ನಾನಿವರೆಂದು ಮೃಗವಂ
ದಱಿದೊಡಿದು ಮತ್ತೊಂದು ಪರಿಯಾ
ಯ್ತುಱುವ ಮಾಣಿಕವೆಂದು ಕೊಂಡೊಡೆ ಕೆಂಡವಾದುದಲ।
ಸರವಿ ತಾ ಹಾವಾದುದಿದ ಕಂ
ಡಱಿಯೆನೀಕೌತುಕವನುಱೆ ಮೃ
ಮಱಿದು ಕೊಂದೆನೆ ಯೆನುತ ಹರಿದೈತಂದನಾಕ್ಷಣಕೆ॥ ೧೭

ಉಗಿದು ಬಿಸುಟನು ಸರಳವಮಗ್ರ್ಗ್ಲ
ಮಗುಚಿ ನೆತ್ತರ ಹೊನಲಿನಿಂದವೆ
ತೆಗೆದು ತೊಳದೊಱಸಿದನು ಸಗ್ರಳಿಯ ನೀರಿನಲಿ।
ಮೃಗವಹರೆ ಮಾನುಷರಕಟ ಪಾ
ಪಿಗಳದೆತ್ತಣ ತಪವಿದೆತ್ತಣ
ಮೃಗವಿನೋದಕ್ರೀಡೆ ಕೊಂದುದೆನುತ್ತ ಬಿಸುಸುಯ್ದ॥ ೧೮

ಮತ್ತೆ ನಾವೇ ಪಾಪಿಗಳು ನೀ
ವುತ್ತಮರಲಾ ಸಾಕಿದೇತಕೆ
ನುತ್ತಮರಳುವ ಕಂಗಳಡಿಗಡಿಗೊಗುವ ವೋಲುಸುರ।
ಎತ್ತಿ ಹಾಯ್ಕುವ ಕೊರಳ ಬಿಕ್ಕುಳ

[1] ಪರಿಭವದ, ಖ. ಜ.

ಕಿತ್ತುವೆಧರದ ರೋಷದಲಿ ಹೊಗೆ
ಸುತ್ತಿದುರಿವಾತುಗಳ ಸೂಸಿದರವನಿಪನ ಮೇಲೆ ॥ ೧೯

ಎಲವೊ ರಾಜಬ್ರುವನೆ ತನ್ನಯ
ಲಲನೆಯೊಡನಿರೆ ಕೊಂದೆ ನಿನ್ನಯ
ಲಲನೆಯಲಿ ನೀ ಕೂಡಿದಾಗಳೆ ಮರಣ ನಿನಗೆನಲು ।
ಹಲವು ಮಾತೇಕೆನುತ ಹರಣವ
ಕಳೆದುದಾ ಮುನಿಮಿಥುನವವನಿಪ
ತಿಲಕ ದುರ್ಮಾನವಲಿ ಹೊಕ್ಕನು ಹಸ್ತಿನಾಪುರವ ॥ ೨೦

ಆದ ಹದನನು ಭೀಷ್ಮಧೃತರಾ
ಷ್ಟ್ರಾದಿಗಳಿಗರುಹಿದನು ಹಯಮೇ
ಧಾದಿಯಲಿ ಮುನಿವಧೆಯ ಪಾತಕದಾ ವಿಘಾತಿಗಳ ।
ವೈದಿಕೋಕ್ತಿಯ ತಂತ್ರದಲಿ ಸಂ
ಪಾದಿಸುವೆವೆನೆ ಶಿರವ ಬಿದುರಿ ಮ
ಹಾದುರಾಗ್ರಹಬುದ್ಧಿಯಲಿ ಬಂದನು ನಿಜಾಲಯಕೆ[1] ॥ ೨೧

ಪಾಪಪರಿಹಾರಕ್ಕಾಗಿ ನಾನಾದಾನ ತಪೋವನಗಮನ

ಸಕಲಭಂಡಾರವನು ಭೂಸುರ
ನಿಕರದಲಿ ಚೆಲ್ಲಿದನು ಸುಜನ
ಪ್ರಕರವನು ಗಾಂಗೇಯಧೃತರಾಷ್ಟ್ರರಿಗೆ ಕೈಗೊಳಿಸಿ ।
ಚಕಿತಚಿತ್ತನು ಮುನಿಹತಿಯ ಪಾ
ತಕವನೊತ್ತುವ ಶೈಲ[2] ವಾವುದೊ
ಸಕಲದೋಷವಿನಾಶಕೆನುತಲಿ ಹೊಕ್ಕನೈ ವನವ ॥ ೨೨

ಅರಸ ಕೇಳ್ ಶತಶೃಂಗಶೈಲದ
ವರತಪೋಧನರಾಶ್ರಮಕೆ ನಿ

1 ಹೊಱವಂಟನರಮನೆಗೆ, ಜ.   2 ನೆತ್ತಿಯಸಖಳ, ಖ.

ಮ್ಮರಸ ಬಂದನು ವಂದಿಸಿದನಾಪರಮಮುನಿಜನಕೆ ।
ಹರುಷದಲಿ ಜಾಬಾಲಿಗಾರ್ಗ್ಯಾಂ
ಗಿರಸಶೌನಕಗೌತಮಾದ್ಯರು
ಧರಣಿಪನ ಸಂಭಾವಿಸಿದರರ್ಘ್ಯಾಸನಂಗಳಲಿ ॥ ೨೩

ಈತನಮಳಾಷ್ಟಾಂಗಯೋಗವಿ
ಧೂತಕಿಲ್ಬಿಷನಾಗದಱ ಬಟಿ
ಕಾತಪಸ್ವಿಗಳೊಳಗೆ ಸಂದನು ದಿನಪತೇಜದಲಿ ।
ಆತಪೋನಿಷ್ಠಂಗೆ ತಾವತಿ
ಭೀತಿಭಕ್ತಿಯುಲಧಿಕಶಿಶ್ರೂ
ಷಾತಿಶಯದಲಿ ಮನವ ಹಿಡಿದರು ಕುಂತಿಮಾದ್ರಿಯರು ॥ ೨೪

ಪರಮವೈರಾಗ್ಯದವರಂತಃ
ಕರಣನಿರುಪಮಭಾವಶುದ್ಧಿಯ
ಮುರಹರಧ್ಯಾನೈಕಪೀಯೂಷಾಭಿಷೇಕದಲಿ ।
ಹಿರಿದು ಹೊಂಗಿದ ನಿಷ್ಪ್ರಪಂಚೋ
ತ್ಕರದ ಸುಖದುನ್ನತಿಯೊಳೆಸೆದನು
ಧರಣಿಪತಿ ತಾನಾಮಹಾಪಾತಕವ ಕೆಡೆಯೊದೆದು ॥ ೨೫

ಆ ವನದಲ್ಲಿ ಪಾಂಡುರಾಯನನ್ನು ಕುರಿತು ಕುಂತಿಯ ವಚನ

ನಾರಿಯರು ಮಱುಗಿದರಕಟ ಮೊದಿ
ಹಾರುವನ ತನು ಬೇಟವೆಮ್ಮಯ
ಬೇಱುಗೊಲೆ ಯಾಗಿದ್ದುದೇ ಹಾಯೆನುತ ಬಿಸುಸುಯ್ದು ।
ವಾರಿಜಾನನೆ ಕುಂತಿ ಮೆಲ್ಲನೆ
ಸಾಱಿದಳು ನಯದಲಿ ರಹಸ್ಯದ
ಭಾರುವಱಿಯದವೋಲು ಬಿನ್ನಹ ಮಾಡಿದಳು ಪತಿಗೆ ॥ ೨೬

ಭರತವಂಶಕೆ ಪುತ್ರಶತವವ
ತರಿಸುವುದು ಗಾಂಧಾರಿದೇವಿಗೆ
ವರಮುನೀಶ್ವರನಿತ್ತ ಹದನಿದು ನಿಮ್ಮಡಿಗಳರಿಯೆ ।
ದುರುಳಮುನಿಪನ ಶಾಪವೇ ಸ್ತ್ರೀ
ಪುರುಷಸಂಗವಿರೋಧಿ ನಮಗಿ
ನ್ನರಸ ನಾಪುತ್ರಸ್ಯ ಗತಿಯೆಂದಿರದೆ ಶ್ರುತಿವಚನ ॥ ೨೭

ಧರೆಯ ರಾಜ್ಯಸ್ಥಿತಿಗೆ ಸುತರವ
ತರಿಸುವರು ಗಾಂಧಾರಿಗಾಪು
ತ್ರರಿಗೆ ಸುತರಾಸುತರ್ಗೆ ಸುತರಾಸುತರು ಜನಿಸುವರು ॥
ಧರೆ ಪರಂಪರೆಯಿಂದಲತ್ತಲೆ
ಸರಿವುದೀನಿಮ್ಮಡಿಗೆ ದರ್ಭಾ
ಸ್ತರಣಸಮಿದಾನಯನವೇ ಕಡೆಗಂ[1] ದಳಾಕುಂತಿ ॥ ೨೮

ಕುಂತೀ ಪಾಂಡುಗಳ ಸಂವಾದ

ವನಜಮುಖಿ ಕೇಳ್ ಪುತ್ರಮುಖದರು
ಶನವು ಸುಲಭವೆ ಪುಣ್ಯಹೀನರಿ
ಗೆನಿತು ಹಲುಬಿದೊಡೇನು ಹಂಗಿಗರಾವು[2] ದುಷ್ಕೃತಿಗೆ ।
ಮುನಿಯು ಬೇಟದ ಬೇಳುವೆಯ ಮಾ
ತಿನ ಹವಣ ನೀ ಬಲ್ಲೆ ನೀ ಹೇ
ಟನಗೆ ಕರ್ತವ್ಯವನು ಮಾನಿನಿ ಭೀತಿ ಬೇಡೆಂದ ॥ ೨೯

ನಾರಿಯರು ಮತ್ತಲ್ಲಿ ರಾಜಕು
ಮಾರಿಯರು ಚಲವಾದಿಗಳು ಗಾಂ
ಧಾರಿಗಾದುದು ಪುತ್ರಸಂತತಿಯೆಂಬ ಖೇದದಲಿ ।
ವೀರ ಬಿನ್ನೈಸಿದೆನು ಕಾರ್ಯವು
ಬಾರಿಯಾದುದು ಬಲ್ಲೆಯಿವಳುವಿ
ಕಾರಿ ಯೆನ್ನದಿರೆಂದು ರಾಯನ ಚರಣಕೆಱಗಿದಳು ॥ ೩೦

1 ನಯವೆ ಕಡೆಗಂತೆಂ, ಕ. ಖ. 2 ನಾವೆಹಂಗಿಗರು, ಕ. ಖ. ಘ.

ಲೋಲಲೋಚನೆ ದೃಢಪತಿವ್ರತೆ
ಯೇಳು ದುಃಖಿಸಬೇಡ ಭೃಗುಜಾ
ಬಾಲಿಜಮದಗ್ನ್ಯಾದಿದಿವ್ಯಮುನೀಂದ್ರಜನವೆಲ್ಲ ।
ಓಲಗಿಸುವುದು ದುಷ್ಕೃತಿಗೆ ನಿ
ಷ್ಪಾಳಯವು ಬಟಿಕಹುದು ಮಂತ್ರವಿ
ಶಾಲಬೀಜದಲಹುದು ಸಂತತಿ ಕಾಂತೆ ಕೇಳೆಂದ ॥ ೩೧

ಭವದನುಗ್ರಹದಿಂದ ಸುತರು
ದ್ಭವಿಸಿದರೆ ಲೇಸನ್ಯಥಾ ಸಂ
ಭವಿಸದೇ ದುಷ್ಕೀರ್ತಿವಧುವೆಂಜಲಿಸಳೇ ಕುಲವ ।
ಅವನಿಪತಿ ಕೇಳ್ ನಳನಹುಷಪೌ
ರವಸುಹೋತ್ರಾದ್ಯರ ನಿಜಾತ್ಮೋ
ದ್ಭವರ ಪಾರಂಪರೆಗೆ ಗತಿಯೇನೆಂದಳಾಕುಂತಿ ॥ ೩೨

ಅರಸಿ ಕೇಳ್ ಸದ್ಬೀಜಪಾರಂ
ಪರೆಯಲದು ಸತ್ಪಾತ್ರದಲಿ ಮುನಿ
ವರರ ಕಾರುಣ್ಯದಲಿ ಪುತ್ರೋದಯವು ಸದ್ವಿಹಿತ ।
ಪರಮವೈದಿಕಸಿದ್ಧವಿದು ಸರ
ಸಿರುಹಮುಖಿ ನಿಶ್ಶಂಕೆಯಲಿ ನೀ
ಧರಿಸು ಮುನಿಮಂತ್ರೋಪದೇಶವನಿದುವೆ ನಿರ್ದೋಷ ॥ ೩೩

ಕುಂತಿಯು ದೂರ್ವಾಸರಿಂದ ಬಂದ ಮಂತ್ರದ
ಸಂಗತಿಯನ್ನು ಪತಿಗೆ ಹೇಳುವಿಕೆ

ಆದೊಡವನಿಪ ಬಿನ್ನಹವು ತನ
ಗಾದಿಯಲಿ ದೂರ್ವಾಸಮುನಿ ಕರು
ಣೋದಯದಲಿತ್ತೈದುಮಂತ್ರಾಕ್ಷರದ ವರವುಂಟು ।
ನೀ ದಯಾಂಬುಧಿ ನಿನ್ನನುಗ್ರಹ

ವಾದುದಾದೊಡೆ ತದ್ವಿಧಾನದ
ಲಾದರಿಸುವೆನು ಪುತ್ರಕಾಮ್ಯವೆನೆಂದಳಾಕುಂತಿ ॥ ೩೪

ಲೇಸನಾಡಿದೆ ಕುಂತಿ ಮುನಿಯುಪ
ದೇಶಿಸಿದನೇ ನಮ್ಮ ಭಾಗ್ಯವಿ
ದೈ ಸಲೇ ನೀ ದೃಢಪತಿವ್ರತೆಯೆನ್ನನುಜ್ಞೆ ಯಿದು ।
ಭಾಸುರರ ನೀ ಭರತವಂಶವಿ
ಳಾಸರನು ಕೃತಶತ್ರುಪಕ್ಷವಿ
ನಾಶರನು ಬೆಸಲಾಗು ಹೋಗೆನ್ನಾಣೆ ಹೋಗೆಂದ ॥ ೩೫

ಪತಿಯ ಅಪ್ಪಣೆಯಂತೆ ಕುಂತಿಯು ಪುತ್ರರನ್ನು ಪಡೆಯುವಿಕೆ

ತರುಣಿ ಪಾಂಡುವಿನಾಜ್ಞೆಯನು ನಿಜ
ಶಿರದಲಾಂತು ಸಮಸ್ತ ಮುನಿಮು
ಖ್ಯರಿಗೆ ವಂದಿಸಿ ಹರಿಹರಬ್ರಹ್ಮಾದಿಗಳಿಗೆಱಗಿ ।
ಸರಸಿಯಲಿ ಮಿಂದುಟ್ಟು ಕೆಂಪಿನ
ವರದುಕೂಲವ ಸ್ಮರಿಸಿದಳು ತಾ
ಪರಮಮುನಿಮಂತ್ರೋಪದೇಶವ ನೆನೆದು ಚಿಂತಿಸುತ ॥ ೩೬

ಮೂಱುಗುಣದೊಳು ನೋಡಿ ಸತಿಯರ
ಸೀಱಿ ನರರನು ದೈತ್ಯವರ್ಗವ
ಬೇಱಿರಿಸಿ ನಾಕಜಸಮೂಹವ ತಾರತಮ್ಯದಲಿ ।
ನಾರಿ ಧ್ಯಾನಿಸಿ ಕಂಡಳಾಕ್ಷಣ
ವೀರಪಾಂಡುವು ನಿಜಪರಾವಹ [1]
ಮಾರುತನು ತಾನೀಗ ಭಾರತಿರಮಣನಾವೇಶಿ [2] ॥ ೩೭

ಎಂಬುದನು ತಾನಱಿದು ತನ್ನೊಳ
ಗಂಬುಜನಿಸಖಸುತನ ಮೇಲಕೆ

---

1 ನಿಜಪ್ರಹೂಹೂ, ಕ. ಖ. ಗ. 2 ಮಾಱಣನುನಾನೆಂಬ ಭಾರತನಿಪ್ರಣಗಂಧರ್ವ, ಕ. ಖ. ಗ.

ಹಂಬಲಿಸಿ ಧರ್ಮಜ್ಞ ಪುತ್ರನ ಬಯಸಿ ಸತಿ ಯಮನ ।
ಇಂಬುಗೆಟ್ಟದಳೊಂದುಮಂತ್ರವ
ನಂಬುಜನಿಸಖಸುತನ ತಂದಿತು
ಶಂಬರಾರಿವಿರೋಧಿಯ ಪ್ರತಿಬಿಂಬವೆಂಬಂತೆ ॥ ೩೮

ಸತಿಯ ಸಮ್ಮುಖವಾಗಿ ವೈವ
ಸ್ವತನು ಬಂದನಿದೇಕೆ ನಮ್ಮನು
ಕ್ಷಿತಿಗೆ ಬರಿಸಿದೆ ಯೆನಲು ಲಜ್ಜಾವಿನತಮುಖಿಯಾಗಿ ।
ಸುತನ ಕರುಣಿಪುದೆನಲು ಭಯಪರಿ
ತತೆಯ ವಿಮಳಸ್ವೇದಜಲಲ
ಜ್ಜಿತಯನಂಗೀಕರಿಸಿ ಕೊಟ್ಟನು ಸುತನ ಯಮನಂದು ॥ ೩೯

ಬಳಿಕ ಕುಂತಿಗೆ ನುಡಿದ ಸಿನ್ನಯ
ಲಲಿತಕಂದನ ಸತ್ಯಸ್ಥೈರಣೆ
ಗಲಿಸೆ ಕಾಣೆನೆಯಿಲ್ಲ ಸುರನರನಾಗಲೋಕದಲಿ ।
ನಳಿನನಾಭಂಗಧಿಕಪ್ರೀತನು
ವಿಳೆಯೊಳೇಕಚ್ಛತ್ರನಾಗಿಹ
ಲಲನೆ ನೀ ಕೇಳೆಂದು ತಿರುಗಿ ಕೃತಾಂತ ಬೀಳ್ಕೊಂಡ ॥ ೪೦

* ಧರಣಿಪತಿ ಕೇಳ್ಕುಂತಿಗಾದುದು
ವುರಗತಾರಾಶುಭಮುಹೂರ್ತದ
ನಿರುತದಲಿ ವರಗರ್ಭಿಣಿಗೆ ನವಮತೀವ ಮಾಸಗಳು ।
ಅರಸಿಗಾಯಿತು ತನ್ನ ಮಂದಿರ

---

* ಧಾರಣೀಪತಿ ಕೇಳು ಕುಂತೀ
ನಾರಿಗಾದುದು ಗರ್ಭವಿಮಳಸು
ತಾರೆಶುಭಲಗ್ನದಲಿ ತೀರಿದುದಂದು ನವಮಾಸ ।
ನೀಱೆಗಾಯಿತು ಸಂಭ್ರಮವು ಬಲ
ವೈರಿಮುಖ್ಯಾಮರರ ನಗರದಿ
ಘೋರನಬ್ಬರಿಸಿಧುವು ದುಂದುಭಿಯಖಿಳವಾದ್ಯಗಳು ॥ ೪೧

ಧರಣಿಯಲಿ ಪಾಂಡುವಿನ ಮಾದ್ರೀ
ವರಸತಿಯು ಸಂಗಡದೊಳಾದವು ಮಾಸವೊಂಭತ್ತು ॥ ೪೧

ಧರ್ಮ ಜನನ

ಪರಿಹರಿಸಲಾ ಜ್ಯೇಷ್ಠ ತಾರೆಯು
ಚರಣವೆರಡಲು ಪುಣ್ಯಗ್ರಹಗಳ
ವರುಶನದಿ ತಾ ಚೈತ್ರಮಾಸದ ಕೃಷ್ಣ ಪಕ್ಷದಲಿ ।
ಪರಮಗುರುವಾರದಲಿ ತದಿಗೆಯೊ
ಳರಸ ಹುಟ್ಟಿದನಿಂದುಕುಲದಲಿ
ಪುರುಷನವತರಿಸಿದನು ಸುಕುಮಾರಕನು ಧರಣಿಯಲಿ । ೪೨

ನಿರ್ಮಳಿತವಾಯ್ತಖಿಳಜಗದಲಿ [1]
ಕರ್ಮವೇ ಬೆಳೆದುದು ಸಾಕ್ಷಾ
ದ ಧರ್ಮವೇ ಧರಣಿಯಲಿ ನರರೂಪಾಗಿ ಜನಿಸಿತೆಲ್ಯೆ ।
ಧರ್ಮದೀಶ್ವರಹೆಚ್ಚಿ ಭಾರತ [2]
ಧರ್ಮವೇ ತಾ ಧರಣಿಗಿಳಿದನು [3]
ಧರ್ಮವಿನ್ನೆಮಗಹುದೆನುತ ಹರುಷಿಸಿತು ಮುನಿನಿಕರ ॥ ೪೩

ಧರಣಿಪತಿ ಧರ್ಮಜನ ಮುಖಸಂ
ದರುಶನವ ಮಾಡಿದನು ಹರುಷದ
ಹೊಳೆಯು ಭಾರಣೆಯಿಂದ ಪುಳಕಾಂಬುಗಳ ಪೂರದಲಿ ।
ಹರಿದು ಪುತ್ರೋತ್ಸವದ ನುಡಿ ಗಜ
ಪುರದೊಳಬ್ಬರವಾಯ್ತು ಪಾಂಡುವಿ
ನರಸಿಯಲಿ ಸಂತಾನ ಜನಿಸಿದುದೆಂದು ಜನಜನಿತ ॥ ೪೪

1 ಖಿಳಜಗದೆದುಷ್ ಚ.

2 ಧರ್ಮಹೀಶರ ಹೊತ್ತ ಭಾರದ, ಚ.

3 ಕರ್ಮವೇದನೆ ಧಾತ್ರಿಗಿಳಿದುದು, ಚ.

ಕುಂತಿಗೆ ಮಕ್ಕಳಾದ ಸಂಗತಿಯಂ ಕೇಳಿದ ಗಾಂಧಾರಿಗೆ ಗರ್ಭಪಾತ.

ಕೇಳಿದಳು ಗಾಂಧಾರಿ ಕುಂತಿಗೆ
ಬಾಲಕೇಳಿವಿನೋದವೆಂಬುದು
ಮೇಳವಿಸಿತಾಮುನ್ನ ಮಾಡಿದ ತಪದ ಫಲವೆನುತ [1] |
ಕಾಳುನುಡಿಗಳ ನುಡಿದು ಮುನಿಪತಿ
ಠೌಳುಕಾಱನಲಾ ಸುಡೀಗ
ರ್ಭಾಳಿಗಳನೆಂದಬಲೆ ಹೊಸೆದಳು ಬಸುಱನೊಡೆಮುಱಿದು ‖ ೪೫

ಉದಿರಿದುವು ಧರಣಿಯಲಿ ಬಲುಮಾಂ
ಸದ ಸುರಕ್ತದ ಗಟ್ಟಿಗಳು ಖಂ
ಡದ ಸುಡಾಳದ ಜಿಗಿಯ ಹೇಸಿಕೆ ನಿಕರ ನೂಱೊಂದು |
ಕೆದಱಿದಳು ಪಾಪಾಂಘ್ರಿಯಲಿ ನೂ
ಕಿದಳು ಹಾಕಿವೆ ಹೊಱಗೆನುತ ನೋ
ಡಿದಳು ಕರೆ ಕನ್ನೆಯರನೆನುತ ಕಠೋರಕೋಪದಲಿ ‖ ೪೬

ತನತನಗೆ ತನು ನಡುಗಿ ಕಾಂತಾ
ಜನವು ಬಂದುದು ತಾಯೆ ಬೆಸಸೇ
ನೆನಲು ಬಿಸುಡಿವೆ ನೂಱ ಹೊಱಗೆಂಬಾಮುಹೂರ್ತದಲಿ |
ಮುನಿಪ ವೇದವ್ಯಾಸನಾಕೆಯ
ಮನೆಗೆ ಬಂದನು ಕಂಡನೀಕಾ
ಮಿನಿಯ ಕೋಳಾಹಳವಿದೇನೇನೆಂದು ಬೆಸಗೊಂಡ ‖ ೪೭

ಭರತಸಂತಾನಕೆ ಕುಮಾರರ
ಹೆಱುವೆನಾ ಮುನ್ನೆಂದು ಗರ್ಭವ
ಧರಿಸಿದೆನು ನಿಮ್ಮಡಿಯ ಕೃಪೆಗಳ ಮಂತ್ರಪಿಂಡದಲಿ |
ವರುಷವೆರಡಾಯ್ತಿದಱ ಭಾರವ
ಧರಿಸಿದೆನು ದಾಯಾದ್ಯರೊಳಗವ
ತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ ‖ ೪೮

1 ಮೇಳವಿಸಿತೇ ಮುನ್ನ ಹಾ ತಪ್ಪೇನುತಪ್ಪೇನು, ಕ. ಖ.

ವ್ಯಾಸರ ಅಪ್ಪಣೆಯಂತೆ ಗರ್ಭಸಂರಕ್ಷಣೆ.

ಮರುಳುಹೆಂಗಸೆಲ್ಶೆ ಮಹಾತ್ಮರ
ಪರಿಯು ನೀನೆಂತಱಿವೆ ಗರ್ಭೋ
ತ್ಕರವ ಕೆಡಿಸಿದೆ ಪಾಪಿ ನೀ ಸಾಱೆನುತ ಮುನಿ ಮುನಿದು ।
ತರಿಸಿದನು ಘೃತಪೂರಿತದ ಕೊ
ಪ್ಪರಿಗೆಗಳನೊಂದೊಂದಱೊಳಗವ
ನಿರಿಸಿ ಮಂತ್ರಿಸಿ ನೀರ ತಳಿದನು ರಕ್ಷೆಗಳ ರಚಿಸಿ ॥ ೪೯

ಚಿಂತೆ ಯಿಲ್ಲದೆ ವರುಷದಿನಪರಿ
ಯಂತ ರಕ್ಷಿಸು ಬಟಿಕ ನಿನ್ನಯ
ಸಂತತಿಯ ಸಾಮರ್ಥ್ಯವೆನು ಗಾಂಧಾರಿ ನೋಡೆನುತ ।
ಕಂತುಪಿತ ಬಟಿಕಾಗ [1] ಸತಿಯನು
ಸಂತವಿಸಿ ತಿರುಗಿದನು ಧರಣೀ
ಕಾಂತ ಕೇಳ್ಶೆ ವನದೊಳತ್ತಲು ಭೀಮನುದ್ಭವವ ॥ ೫೦

ಬಟಿಕ ತುಂಬಿತು ವರುಷ ಧರ್ಮಗೆ
ನಳಿನಮುಖಿ ಪಾಂಡುವಿಗೆ ನುಡಿದಳೆ
ಳಲೆ ಮಹೀಪತಿ ನಿನ್ನ ಪುತ್ರನು ಜಾತಿಧರ್ಮದಲಿ ।
ಬಲುಹನುಳ್ಳವನಹುದುವೀತನೆ
ಯಿಳೆಯನುಱೆ ಪಾಲಿಸುವ ಭುವನಾ
ವಳಿಯ ಜೀವರ ಬಲುಹ ಬಗೆಯದ ಸುತನು ಜನಿಸುವೊಡೆ ॥ ೫೧

ಧರಣಿಯಲಿ ನಿಮ್ಮಿಂದ ಸುಕೃತದ
ಚರಿತರುಂಟೇ ಯೆನಲು ಮಹಿಪತಿ
ಕರುಣಿಸಿದನಿನ್ನೊಬ್ಬ ಪುತ್ರನ ಪಡೆಯೆ ಹೋಗೆಂದ ।
ಸುರನಿಕರತೆತ್ತೀಸಕೋಟಿಯ
ನಿರಿಸಿ ಮೇಗಣದೇವಗಣದೊಳು
ಧರಿಸುವುದು ನೀ ಪುತ್ರಗರ್ಭವನೆಂದು ನೇಮಿಸಲು ॥ ೫೨

1 ಕಂತು ಪಿತಸನ್ನಿಭನು, ಖ, ಚ. ಜ.

ನಿಯಮದಲಿ ಕಾಮಿನಿ ಸರೋವಾ
ರಿಯಲಿ ಮಿಂದಳು ಬೀಜಮಂತ್ರ
ವ್ಯಯವ ಮಾಡಿದಳಮರನಿಕರವ ನೋಡಿ ಕೈಮುಗಿದು ।
* ಬಯಸಿದಳು ವಾಯುವನು ನಿಜಮೂ
ರ್ತಿಯಲಿ ಬಂದು ಸಮೀರಸೀಕುಂ
ತಿಯನು ನುಡಿಸಿದನೆಮ್ಮ ಬರಿಸಿದ ಹದನ ಹೇಳೆಂದ ॥ ೫೩

ಬರಿಸಿದುದು ಬೇರೇನು ಸುತನನು
ಕರುಣಿಪುದು ನೀವೆನಲು ತಾ ವರ
ಹರುಷದಲಿ ಮನವುಟ್ಟಿ ಕೊಟ್ಟನು ಧೀರಪುತ್ರನನು ।
ಮರಳಿದನು ಪವಮಾನನೀಪಂ
ಕರುಹಮುಖಿಯು ಪ್ರಸೂತೆಯಾದಳು
ವರುಷವೊಂದಕೆ ಧರಿಸಿ ಪರಬಲಕಾಲಭೈರವನ ॥ ೫೪

---

* ಜಯಸಿರಿಯುಳೆನ್ನತ್ತೆ ಹರಿ ತಾ
ನಯದಿ ಮಾವನು ಬ್ರಹ್ಮ ಜನಿಸನು
ಬಯಲು ಭ್ರಮೆ ಬೇಡಿಬ್ಬರಲಿ ತನಗಲ್ಲ ಗರ್ಭವದ ॥ ೫೩
ಎಂದು ಬಟಿಕರವಿಂದಲೋಚನೆ
ಯಂದು ಸಾಕ್ಷಾದ್ದೇವವಧ್ವರ
ತಂದೆಯನು ರಜಗುಣದ ಮುಖ್ಯಪ್ರಾಣದೇವನನು ।
ಇಂದುಮುಖಿ ವರಮಂತ್ರದಿಂದವೆ
ಕಂದೆಱೆದು ಕಳುಹಿದಳು ತಾ ಕಡು
ಮಿಂದು ಬಾಹ್ಯಾಂತರದಿ ವರಶುಚಿಯಾಗಿ ಕೈಮುಗಿದು ॥ ೫೪
ಬಯಸಲು ಜಗದ ಜೀವನನು ತಾ
ಜಯಿಸುವ ಖತ್ರಿಯು ಬಂದು ಕೌಂತೆಯ
ನಯವಿದನು ನೀನಿಂದು ಬಯಸಿದ ಹದನ ಹೇಚೆಂದ ।
ನಯನದಲಿ ಹರುಷಾಶ್ರು ತುಱುಮಿತು
ನಯದೆ ರೋಮಾಂಚನದಿ ಕುಂತಿಯು
ಜಯಜಯೆನುತಲು ಮೆಲ್ಲನೆಂದಳು ದೇವ ಕೇಳೆನುತ ॥ ಘ. ಜ. ೫೫

## ಭೀಮಜನನ.

ಪವನಜನು ತಾ ಮಾಘಮಾಸದ
ನವಮಿಯಲಿ ತಾ ಶುಕ್ಲಪಕ್ಷದ
ರವಿಯು ಮಧ್ಯಾಹ್ನದಲಿ ಬಂದಿರೆ ಯಗ್ನಿದೇವತೆಯು |
ಯುವತಿಕೃತ್ತಿಕೆಯಾದ ತಾರೆಯೊ
ಳವತರಿಸಿದನು ಪಾದಮೂರಕೆ
ರವಿರವಿಜಕುಜರಾಯಲಗ್ನಕೆ ತಾರೆ ಕೇಳೆಂದ || ೫೫

ಪವನಸುತನವತರಿಸೆ ಪಾರ್ಥಿವ
ನಿವಹ ನಡುಗಿತು ದೈತ್ಯಗಣವ್ರಜ
ಜವವಳಿಯೆ ನಿಂದುದು ರಿಪುವಿನಾಶನಕಾಲಭೈರವಗೆ [1] |
ಭುವನದಲಿ ತಮತಮಗೆ ನಾಕಜ
ನಿವಹ ಹೂಮಳೆಗರೆದು ಹರುಷಿಸಿ
ಪವನಜನ ತಾಯ್ ಭೀಮಸೇನನು ಯೆಂದು ಹೆಸರಿಡಲು || ೫೬

ಭೀಮನುದಿಸಿದ ಯಿರುಳು ಕೌರವ
ಭೂಮಿಪತಿ ಜನಿಸಿದನು ಮಿಗೆ ನಿ
ವ್ಮಾಮಹಾತ್ಮನ ಜನನ ಬೆದರಿಸಿತಖಿಳಜನಮನವ |
ಭೂಮಿ ನಡುಗಿತು ದೆಸೆಗೆ ಹರಿದುವು
ಧೂಮಕೇತುಗಳುದಿರಿ ಬಿದ್ದವು
ತಾಮಸನು ಜನಿಸಲಿಕೆ ದೇವಾಲಯದ ಪ್ರತಿಮೆಗಳು || ೫೭

ಕರೆಸಿದನು ಧೃತರಾಷ್ಟ್ರನವನೀ
ಸುರರ ಬೆಸಗೊಂಡನು ಕುಮಾರರ
ದರುಶನದ ಸಮನಂತರದಲುತ್ಪಾತಫಲಗತಿಯ |
ಭರತವಂಶದಲುದಿಸಿದ ಭೂಮೀ
ಶ್ವರರನಂತವನೀತನೇ ಸಂ
ಹರಿಸುವನು ಸಂದೇಹವಿದಕೇನೆಂದರವರೆಂದು || ೫೮

---

1 ಜವವಟಿ ಸುದಾಕಲಿ ಪಿನಾಶನ ಕಾಲನುದ್ಭವಿಸೆ, ಜ.

ಕುಲಕೆ ಕಂಟಕನಾದನೊಬ್ಬನ
ಕಳವುದೂರಲಿ ನಾಶ ತಾ ಕುಲ
ವೆತ್ತಿಯೆ ದೇಶವ ಗಾಸಿ ಮಾಡುವುದೂರ ಕೆಡಿಸುವುದು ।
ಇಳೆಯುನಖಿಳವ ಬಿಸುಡುವುದು ತ
ನ್ನಾಳಿವ ಮಾಡುವುದೆಂಬ ವಚನವ
ತಿಳುಹುದೀತನ ಬಿಸುಟು ಕಳ ನೀನೆಂದನಾವಿದುರ ॥ ೫೯

ಸುತನ ಮೇಲಣ ಮೋಹವಾಗ
ಸ್ಥಿತಿಯನೀಕ್ಷಿಸಲೀವುದೇ ದು
ರ್ಮತಿಯುಲೀತನ ಬಿಸುಡಲಸದಳವಲ್ಲ ಗಾಂಧಾರಿ ।
ಸುತನಿರೀಕ್ಷಣಜಾತಕರ್ಮೋ
ಚಿತದ ದಾನಂಗಳಲಿ ಭೂಸುರ
ತತಿಯು ದಣಿಸಿದನನಿಬರಿಗೆ ಗುಣನಾಮಕರಣವನು ॥ ೬೦

ಜನಪನಿಟ್ಟನು ಹಿರಿಯು ದುರ್ಯೋ
ಧನನು ದುಶ್ಶಾಸನ ವಿಕರ್ಣನು
ಕನಕವರ್ಣಸುಷೇಣದೀರ್ಘೋದರಮಹೋದರರು ।
ಜನವಿಜಯು ಜಲಸಂಧ ವೃಢವಾ
ಹನ ವಿವಿಂಶತಿ ಕುಂಡಧಾರಕ
ರೆನಲು ಬಾಹುಕ ದೀರ್ಘಬಾಹುಕನೆನಿಸಿ ಹೆಸರಾಯ್ತು ॥ ೬೧

ವಿಕಟಜಂಘನು ತಾಳಜಂಘನು
ಪ್ರಕಟದುರ್ಮತಿ ಪಾಪಕರ್ಮನು
ವಿಕಳಮತಿ ತಾ ಸ್ವರ್ಣಕರ್ಣನು ದೀರ್ಘಕನು ಶಲನು ।
ಪ್ರಕಟಕುಂಭೀಪಾಕ ಪ್ರಾಪ್ತನು [1]
ಸಕಲಕಂಟಕಧರ್ಮಕಂಟಕ
ವಿಕಳಮತಿ ದುಸ್ಸೇವ್ಯದುರ್ಜಯು ಪಾಪಕರ್ಮಯುತ ॥ ೬೨

1 ಪಾತ್ರನು, ಖ.

ವೀರನಿಂದ್ಯನು ಚಿತ್ರಕರ್ಮನು
ಘೋರಕರ್ಣನು ದುಷ್ಟಕರ್ಮನು
ಕಾರುಕನು ಬಹುಬುದ್ಧಿ ಕಾಮುಕಸೇವ್ಯಬಾಹಿರನು ।
ಶೂರಸೇನನು ಘೋರಸೇನನು [1]
ವೀರಸೇನನು ಮಿಥ್ಯಸೇನನು [2]
ಧೀರಕರ್ಮನುದಾರಕರ್ಮನು ಭೂಪ ಕೇಳೆಂದ ॥ ೬೩

ಚಿತ್ತವಿಸು ದುಸ್ಸಹನು ದುರ್ಜಯ
ಮತ್ತೆ ದುರ್ಮತಿ ಚಿತ್ರರಥ ತಾ
ಚಿತ್ರಕರ್ಮನು ಚಿತ್ರಭುಜಬಲನೇಕಲೋಚನನು ।
ಸತ್ಯದೂರನು ಚಾರಕರ್ಮನು
ಮಿಥ್ಯವಾದಿ ಹಿರಣ್ಯವರ್ಮನು
ಚಿತ್ತವಿಸು ಧೃತರಾಷ್ಟ್ರಪುತ್ರರ ನಾಮಕರಣಗಳ ॥ ೬೪

ಭಾರವರ್ಮನು ಚೋರವರ್ಮನು
ನಾರಿಲಂಪಟನಾತ್ಮಘಾತಕ
ಕ್ರೂರಕರ್ಮನು ಧರ್ಮಘಾತಕ ದೇವನಿಂದಕನು ।
ವಾರಿಜಾಕ್ಷವಿರೋಧಿ ಹರಿಣೀ
ಮಾರಿಯೆಂಬವನೊಬ್ಬ ಖರತರ
ಘೋರಕರ್ಮನಶೀಲಕರ್ಮನು ಶೂನ್ಯವಾದಿಕನು ॥ ೬೫

ಸತ್ಯದೂರನಸತ್ಯಸೇವ್ಯನು
ಮಿಥ್ಯದೇಹಿಕ ಕರ್ಮಬಂಧನು
ನಿತ್ಯಹಿಂಸಾಪರನು ನಿಗಮವಿದೂರನೆಂಬವನು ।
ಹತ್ಯದೋಷಿಕ ಮತ್ತೆ ಸುಜನರ
ವೊತ್ತವರ್ಜಿತನಾತ್ಮಸುತ್ತ್ಯನು
ವುತ್ತಮರ ತಾನಾಗಸಿಂದಿಪನೊಬ್ಬನನವರತ ॥ ೬೬

[1] ಘೋಷಸೇನನು, ಖ. [2] ಧೀರಕರ್ಮನು, ಖ.

ಒಬ್ಬನವರಲಿ ದೀರ್ಘಜಂಘನು
ಒಬ್ಬನವರಲಿ ಕುಬುಜನೆಂಬವ
ನೊಬ್ಬನವರಲಿ ಶೂನ್ಯಹೃದಯನು ವೇಕಬಾಹುಕನು |
ಒಬ್ಬನೇ ತಾನೇಕನಯನನ
ದೊಬ್ಬನೇ ತಾನೇಕನಾಸಿಕ
ನೊಬ್ಬನೇ ತಾ ತ್ರಿತಯಹಸ್ತನು ಚತುರ್ಥಕರ್ಣದಲಿ || ೬೭

ಒಬ್ಬನೇ ತಾ ಬರ್ಬರನು ತಾ
ನಿರ್ಬುದ್ಧಿ ಲೋಕದಲಿ ಕುರುಕುಲ
ಗರ್ಭಕನು ತಾನೊಬ್ಬನೆಂಬವ ಕರ್ಮನಾಶಕನು |
ಸರ್ಬನಾಶಕನೆಂಬನೊಬ್ಬನು
ದುಬ್ಬಿಯಲಿ ಜನಿಸಿದನು ಕೌರವ
ನುರ್ಬಿಪತಿ ಧೃತರಾಷ್ಟ್ರರಾಯಗೆ ಸುತರು ತಾವಾಗಿ || ೬೮

* ಇಂತು ಜನಿಸಿದ ನೂರುಜನಗಳ
ಸಂತವಿಸಿ ಧೃತರಾಷ್ಟ್ರಭೂಪತಿ
ಸಂತತಿಯ ಗುಣವರಿದು ಮಾಡಿದ ನಾಮಕರಣವನು |
ಅಂತು ಮಾಡಿದ ನೂರುಮಾನುಷ
ಜಂತುಗಳು ಪಾಂಡವರ ವೈರಿಗ
ಳಂತು ಕೇಳ್ವ ತಾವು ರಾವಣಸುತರು ಕೇಳೆಂದ || ೬೯

ಜನಪತಿಗೆ ತಾನೊಬ್ಬ ವೈಶ್ಯಾಂ
ಗನೆಗೆ ಸುತನು ಯುಯುತ್ಸು ನೂರೊಂ
ದೆನಿಸಿದರು ಸುಕುಮಾರಕರು ಧೃತರಾಷ್ಟ್ರನಂದನರು |

ಗಾಂಧಾರಿಗೆ ದುಶ್ಶಳಾ ಜನನ.

ಜನಿಸಿದೀ ನೂರೊಂದು ದೈತ್ಯಾರಿ
ಗನುಜೆ ದುಶ್ಶಳೆಯಾದಳವನಿಪ
ತನುಜೆ ಸೈಂಧವಗರಸಿ ಯಾದಳು ಭೂಪ ಕೇಳೆಂದ || ೭೦

---

* ನೂರು ಹೆಸರುಗಳು ಪೂರ್ಣವಾಗಿರುವುದಿಲ್ಲ, ಮತ್ತು ಅನೇಕವಾದ ಹೆಸರುಗಳು ಸಂಸ್ಕೃತ ಭಾರತಾನುಸಾರಿಯಲ್ಲ.

ಅವಳು ತ್ರೇತೆಯೊಳಂದು ಮಂಥರೆ
ಯುವತಿಯಾಗಿರೆ ರಾಮಚಂದ್ರನ
ಭುವನಪಟ್ಟವ ಕೆಡಿಸಿದಪಳಿವಳರಸ ಕೇಳಂದ ।
ಅವಳು ಕೃತಯುಗದಂದು ಜ್ಯೇಷ್ಠೆಯು
ಭವಗಳೀಪರಿ ಮುಂದೆ ಕಲಿಯುಗ
ವಿವರಿಸಲು ಗೋವ್ಯಂದನಾಶಕಳಿವಳು ಕೇಳಂದ ॥ ೭೧

ಅತ್ತಲಾ ಹದನಾಯ್ತು ಬಟಕಿನೊ
ಳಿತ್ತ ಧರ್ಮಜ ಭೀಮಸೇನರ
ಹೆತ್ತು ಹರುಷದಲಿರಲು ಪಾಂಡುನೃಪಾಲಕುಂತಿಗಳು [1] ।
ಮತ್ತೆ ಕೇಳದುಭುತವ ನೆಱೆ ವೋಱೆ
ಯುತ್ತು ಹೆಬ್ಬುಲಿ [2] ವರತಪೋವನ
ದತ್ತಲೈತರೆ ಪಾಂಡು ಕೆಡಹಿದನಾಮೃಗಾಧಿಪನ ॥ ೭೨

ಆಮಹಾರಭಸಕ್ಕೆ ಯಲ್ಲಿಯ
ಸ್ತೋಮಮುನಿಜನವಂಜಿ ಪರ್ವತ
ದಾ ಮಹಾಡಿಂಬಿನಲಿ ಪಾಂಡುವಿನರಸಿ ನಡುಗಿದಳು ।

ಭೀಮಾಂಗಸ್ಪರ್ಶದಿಂದ ಪರ್ವತ ಭೇದನ.

ಭೀಮ ಬಿದ್ದನು ತೊಡೆಯ ಮೇಲಿಂ
* ದೀಮಹಿಗೆ ತರುಶೈಲಶಿಲೆ ನಿ
ರ್ನಾಮವಾದುದು ಹಸುಳೆ ಹೊಱಳಿಯೆ ಬಿದ್ದ * ರಭಸದಲಿ ॥ ೭೩

ಶಿಶುವ ತೂಪಿಡಿದಳು ನಿವಾಳಿಸಿ
ಬಿಸುಟು ರಜವನು ಮಂತ್ರರಕ್ಷಾ
ಪ್ರಸರವನು ಮುನಿಗಳಲಿ ಮಾಡಿಸಿ ಮೆಱೆದಳಾಕುಂತಿ ।

[1] ಹೆತ್ತು ಹರ್ಷದೊಳಿವರು ಮೆಱೆದರು ಪಾಂಡುಕುಂತಿಯರು, ಖ.

[2] ಕೇಸರಿ, ಜ.

* ದಾಮಹಾತ್ಮನ ಹತಿಗೆ ಪರ್ವತ ಭೂಮಿಯಲಿ ಶತಶೃಂಗವಾಯಿತು ಸೋಂಕೆ, ಜ.

[1]ಬೆಸಲಹೆನು ತಾನೆಂದು ತಿಂಗಳು
ನುಸುಳೆ ಪಾಂಡುವಿಗೆಂದಳಾಗಲೆ
ಯುಸಮಬಲ ಕೇಳೆನಗೆ ಪುತ್ರದ್ವಯದ ವಿವರವನು ‖ ೭೪

ಒಬ್ಬನೇ ಧರ್ಮಜ್ಞನಾದಪ
ನೊಬ್ಬನೇ ತಾನಧಿಕಶೂರನ[2]
ದಿಬ್ಬರಾದಪರಿನ್ನು ವರಸೌಂದರ್ಯವುಳ್ಳವನ ।
ಒಬ್ಬ ಕಂದನ ಹೆತ್ತೆವಾದೊಡೆ
ಸರ್ವಭುವನದೊಳಾವ ಮಾನ್ಯರು
ಸರ್ವಥಾ ನೀನಿದಕೆ ಚಿತ್ತೈಸೆಂದಳಾಕುಂತಿ ‖ ೭೫

ಎನಲು ಮೆಚ್ಚಿದ ಪಾಂಡುನೃಪ ತಾ
ವನಿತೆಗಾಗಲು ನುಡಿದ ನಾಕಜ
ಜನಗಳರಸನ ಪುತ್ರಭಿಕ್ಷವ ಬೇಡು ಹೋಗೆಂದ ।
ಎನಲು ಕುಂತೀದೇವಿಯಾಗಲು
ಮನದೊಳುತ್ಸಾಹಿಸಿಯೆ ಹರಹರ
ಯೆನುತ ಧಿವ್ಮನೆ ಯೆದ್ದು ಪತಿಯಂಘ್ರಿಯಲಿ ತಾ ಬಿದ್ದು ‖ ೭೬

ವಸುಧೆಗತಿಬಲನೊಬ್ಬ ಕಂದನ
ಬೆಸಲಹೆನು ತಾನೆನುತ ಕಮಳಾ
ಳಿಸರಕೈತಂದಾಗ ಹರುಷಿಸಿ ಮಿಂದಳಾಕುಂತಿ ।
ವಿಸರುಹಾನನೆ ನೆನೆದು ಮಳಲಲಿ
ವಸುಧೆಪೂಜೆಯ ಮಾಡಿ ಪದ್ಮವ
ಪಸರಿಸಿಯೆ ಪರಿಪೂರ್ಣೆಯಾದಳು ಕುಂತಿ ವಿನಯದಲಿ ‖ ೭೭

ಅಂದು ಕಡು ಶುಚಿಯಾಗಿ ಸುಮನೋ
ವೃಂದದೊಳಗಾರೈದು ನೋಡಿ ಪು

[1] ವಸುಧೆಗಧಿಕನನೊಬ್ಬಕಂದನ ಬೆಸನಹೆನು ತಾನೀಗ ಕೇಳೀ ಶಿಸುಗಳಿಬ್ಬರ ನಿಜವ ಪುತ್ರದ್ವಯದ ವರಗಳನು, ಖ. [2] ಭುಜಬಲ, ಕ. ಖ.

ರಂದರನ ನೆನೆದಳು ಮುನೀಂದ್ರನ ಮಂತ್ರಸಿದ್ಧಿಯಲಿ ।
ಬಂದನಲ್ಲಿಗದೇನು ಬೇಕರ
ವಿಂದಲೋಚನೆ ಹೇಳು ಕೊಡುವೆನು
ಕಂದ ಬಲುಗೈಯಪ್ಪಾಗಬೇಕೆಂದಾಗ ಲಜ್ಜೆಯಲಿ ॥ ೭೮

ಎನಲಿಕಿಂದ್ರನು ಪೃಥೆಯ ಮಾತಿಗೆ
ನೆನೆದು ಹೊಂಪುಳಿಯಾಗಿ ದೇವಾಂ
ಗನೆಯ ವಲ್ಲಭನಾಗ ಪಾಂಡುವಿನರಸಿಯಂಗವನು ।
ಮನದಲಾಲಾಗಿಸಿಯೆ ನಾಕಜ
ಜನಗಳರಸನು ಪರಮಸುಖದಲಿ
ವನಿತೆಗೆಂದನು ಕೇಳು ಜನಮೇಜಯ ಮಹೀಪಾಲ ॥ ೭೯

ಸುತನನಿತ್ತೆನು ನಿನಗೆ ತ್ರಿಭುವನ
ತತಿಯೊಳಗೆ ಬಲುಗೈಯ್ಯ ಕೊಟ್ಟೆನು
ಸತಿಶಿರೋಮಣಿ ನಿನ್ನ ಕಂದಗೆ ಶಿವನು ಶಂಕಿಸುವ ।
ಶತಭವಾಂತರ ಪುಣ್ಯತರುಕಾ
ಮಿತದ ಫಲವಿದೆನುತ್ತಲಾಸುರ
ಪತಿ ಲತಾಂಗಿಗೆ ವರವನಿತ್ತೊಡರಿದನು ನಿಜಪಥವ [1] ॥ ೮೦

ಅರ್ಜುನನ ಜನನ.

ತೀವಿದುದು ನವಮಾಸವಿಂದ್ರನ
ಭಾವಗರ್ಭವು ಕುಂತಿದೇವಿಗೆ
ದೇವನಾಜ್ಞೆಯ ಮೇಲೆ ಫಾಲ್ಗುಣಮಾಸದುತ್ತರೆಯ ।
ಜೀವಕೇಂದ್ರಸ್ಥಾನ ಶುಭದಿನ[2]
ಜಾವಪಂಚದಶಿಯ ದಿವಸದ
ಲ್ಲಾ ವಿಜಯ ಮೂಡಿನೆಯ ಚರಣಕೆ ಜನನವಾಯ್ತೆಂದ ॥ ೮೧

---

1 ವರಸತಿಗೆ ಫಲವಾಯ್ತೆನುತಲಿ ಶತಮುಖನು ವರವಿತ್ತು ಗಗನ ಕ್ಕಡರಿದನು ಬಚ್ಚಿಕ, ಕ. 2 ಗುರುದಿನ, ಜ.

ಭಾವೆ ಶುಭಗ್ರಹದೃಷ್ಟಿರಾಶಿಯು
ತೀವಿ ಜನಿಸಿದನಾಗ ವರಗಾಂ
ಡೀವಿ ಜನಿಸಲಿಕೊಡನೆ ಜನಿಸಿತು ಜನದ ಸುಮ್ಮಾನ ।
ರಾವಣಾಂತಕನಲ್ಲಿ ಯಂಗದ
ದೇವಜನಕನು ವಾಲಿ ಜನಿಸಿದ
ದೇವನೇ ತಾನಾಗಿ ಪಾರ್ಥನು ದ್ವಾಪರಾಂತ್ಯದಲಿ ॥ ೮೨

ದೇವದುಂದುಭಿ ಮೊಳಗಿದುದು ಕುಸು
ಮಾವಳಿಯ ಮಳೆ ಸುರಿದುದಾಡುವ
ದೇವಸತಿಯರ ಹೊಳೆವ ಕಂಗಳ ಧಾರೆ ಮಿಂಚಿದುದು ।
ತೀವಿದುತ್ಸಹ ವುಬ್ಬರಿಸೆ ಭುವ
ನಾವಳಿಯುಲಿಂದ್ರಾದಿ ನಿಖಿಳಸು
ರಾವಳಿಗಳಾದರಿಸಿ ಕೊಂಡಾಡಿತು ಧನಂಜಯನ ॥ ೮೩

ರಣಭಯಂಕರನರ್ಜುನನು ಧಾ
ರುಣಿಯುಲುದಿಸಿದೊಡಾಱುತಿಂಗಳ
ಗಣನೆಯುಲಿ ಮುನ್ನಂದು ಮಧುರೆಯು ರಾಜಭವನದಲಿ ।
ಗುಣರಹಿತನಚ್ಯುತನು ವರಶ್ರಾ
ವಣ ಬಹುಳದಷ್ಟಮಿ ಯಿರುಳು ರೋ
ಹಿಣಿಯುಲವತರಿಸಿದನಲ್ಲೆ ದೇವಕಿಯು ಜಠರದಲಿ ॥ ೮೪

ಓತು ತಾನವತರಿಸಿ ವರವಿ
ಖ್ಯಾತ ನಾರಾಯಣನಲ್ಲೆ ಬಳಿ
ಕಾತನುರ್ವೀಭಾರ ಸಂಹಾರದ ವಿನೋದದಲಿ ।
ಭೂತಪತಿ ಮೊದಲಾದ ದಿವಿಜ
ವ್ರಾತ ನರರೂಪಿನಲಿ ಮಿಗೆ[1] ಸಂ
ಭೂತವಾಯಿತು ಕೇಳು ನೃಪ ಕೃಷ್ಣಾವತಾರದಲಿ ॥ ೮೫

---

1 ನಾನಾರೂಪಿನಲಿ, ಖ.

ಮಾದ್ರಿಗೆ ಬಂದು ಮಂತ್ರವನ್ನುಪದೇಶಿಸುಯೆಂದು ಪಾಂಡುವಿನಪ್ಪಣೆ.

ಬಳಿಕ ಪಾಂಡುನೃಪಾಲ ಕುಂತಿಗೆ
ತಿಳಿದು ನಿನಗೆನ್ನೇಸು ಮಂತ್ರದ
ಬಳಗವಿಹುದೆಂದೆನಲಿಕೆಂದಳು ಮಂತ್ರವಿನ್ನೊಂದು ।
ಉಳಿದಿಹುದು ತಾನೆನಲು ನೃಪಕುಲ
ತಿಲಕನೆಂದಪನದನು ಮಾದ್ರೀ
ಲಲನೆಗೀವುದು ಮಂತ್ರವೊಂದನು ನೀನು ಮನಮುಟ್ಟಿ ॥ ೮೬

ನಿನಗೆ ಮೂವರು ಪುತ್ರರಾದರು
ತನುಜನೊಬ್ಬನು ಮಾದ್ರಿಗಾಗಲಿ
ವನಜಮುಖಿ ಪತಿಯಾಜ್ಞೆಯಿಂದಲೆ ಹರುಷವಾಂತಿವಳು ।
ಮನದೊಳಗೆ ಮಧುಸೂದನನ ತಾ
ನೆನೆದು ಪಾರ್ಥನನೆತ್ತಿ ಮೊಲೆಗುಡು
ತನುನಯದಿ ಬಾ ತಂಗಿ ನೀನೆನುತರಸಿ ಮೋಹದಲಿ ॥ ೮೭

ಸಾಕು ಮೂವರು ಸುತರು ತನಗೆಂ
ದಾಕೆ ಮಾದ್ರೀದೇವಿಗಗ್ಗದ
ನಾಕುಮಂತ್ರದೊಳೊಂದ ಸವತಿಗೆ ದಯವ ಮಾಡಿದಳು ।
ನಾಕಜರ ನೀ ನೋಡಿ ವರಿಸೆನ
ಲಾಕೆ ತನ್ನಯ ಮನದಿ ಹರುಷಿಸಿ
ಬೇಕು ತನಗೊಂದವಳಿ ಯೆಂದಳು ನೋಡಿ ಸುರಗಣವ ॥ ೮೮

ಶೋಧಿಸುತ ನೋಡಿದಳು ಜ್ಞಾನದಿ
ಭೇದವಿಲ್ಲದ ಯಶ್ವಿನೀಸುತ
ರಾದಿಯಲಿ ತಾ ಮನಕೆ ತಂದಳು ಸುತರಸಿವರಲ್ಲಿ ।
ಸಾಧಿಸುವೆ ನಾನೆನುತ ನೆನೆದಳು

ವೇದದರ್ಥವ ಮಂತ್ರವನು ಮನ
ಕಾದರಿಸಿ ಸರಸಿಯಲಿ ಮಿಂದಳು ಕರೆದಳಮರುಗಳ ॥ ೪೯

ಬೇಗದಲಿ ವರಮಂತ್ರವಿಬ್ಬರ
ನಾಗಳೇ ಕರೆತಂದು ಮಾದ್ರೀ
ಯೋಗದೆಡೆಯಲ್ಲಿರಿಸಿದುದು ತಾನಶ್ವಿನೀಸುತರ ।
ರಾಗದಲಿ ನಾಕಜರೊಳಬ್ಬರು
ಬೇಗದಿಳಿದರು ಸ್ವರ್ಗಲೋಕದಿ
ನಾಗ ಮಾದ್ರೀದೇವಿ ಯಿದ್ದೆಡೆಗಾಗಿ ನಿಮಿಷದಲಿ ॥ ೫೦

ಕುಂತಿಯ ಮಂತ್ರೋಪದೇಶದಿಂದ ಮಾದ್ರಿಗೆ ನಕುಲಸಹದೇವರ ಜನನ.

ಬಂದರವರಿಬ್ಬರು ಮಹೀತಳ
ಕಿಂದುವದನೆಗೆ ಸುತರನಿತ್ತರು
ಮಂದಗಮನೆಯು ಕಳುಹಿ ಹಾಯ್ದರು ಗಗನಮಂಡಲಕೆ ।
ಬಂದು ವರುಷಕೆ ಕಿರಿಯನರ್ಜುನ
ನಿಂದ ಬಳಿಕವರಲ್ಲಿ ಯುದಯಿಸ
ಲಂದು ವರಮುನಿನಿವಹ ಕೊಂಡಾಡಿತು ಕುಮಾರಕರ ॥ ೫೧

ಹರುಷಿಸಿಯು ತಾ ಪಾಂಡು ಕುಂತಿಯು
ವರಕುಮಾರಕರೈವರಾಗಲು
ಸರಸಿರುಹಮುಖಿ ಮಾದ್ರಿಯಾ ವೈಶಾಖಬಹುಳದಲಿ ।
ವರಚತುರ್ದಶಿಶುಕ್ರಸಾರದ
ಲುರುಮೃಗಾನಕ್ಷತ್ರ ಪ್ರಥಮದ
ಚರಣ ತಾ ಶುಭಯೋಗದಲ್ಲುದಯಿಸೆ ಕುಮಾರಕರು ॥ ೫೨

ಪರಮಹರುಷದಿ ಕುಂತಿ ಯೆಂದಳು
ಧರಣಿಪತಿ ಯೆನಗೊಂದು ಸಲುಗೆಯ
ನಿರುತವೀವುದೆನಲ್ಕೆ ಪಾಂಡುವದೇನು ಹೇಳೆನಲು ।
ವರಕುಮಾರರು ನಮಗೆ ಜನಿಸಿದ

ಹರುಷವಾರ್ತೆಯು ನಮ್ಮ ತವುರಿ[1] ಗೆ
ನಿರುತದಲಿ ಹೇಳೆನಲು ಕೇಳಿನೆ ಯಟ್ಟಿದನು ನೃಪತಿ ॥ ೯೩

### ಪಾಂಡುವು ತನಗೆ ಮಕ್ಕಳಾದುದನ್ನು ವಸುದೇವನಿಗೆ ತಿಳಿಸುವಿಕೆ.

ಬಂದು ಮಧುರಾಪುರಿಗೆ ದೂತರು
ವಂದಿಸಿಯು ವಸುದೇವಗೆಂದರು
ತಂದೆ ಕೇಳೈ ನಿಮ್ಮ ಸೋದರಿಯೆನಿಪ ಕುಂತಿಯಲಿ ।
ನಂದನರು ಜನಿಸಿದರೈವರು
ವಂದ್ಯಜನಪ್ರತಿಪಾಲಕರು ವಾ
ನಂದಹೃದಯರುರುಮುನ್ನತರು ಕುಲಕೀರ್ತಿಪಾಲಕರು ॥ ೯೪

ಕುಂತಿ ಸುತರನು ಹೆತ್ತಳೆಂದ
ತ್ಯಂತವಾರ್ತೆಯು ಕೇಳಿದನು ತಾ
ಕಂತುವಿನ ಪಿತನಯ್ಯ ಮಧುರಾಪುರದ ಮಧ್ಯದಲಿ ।
ಚಿಂತೆ ಮಱೆದುದು ತಂಗಿಮಕ್ಕಳ
ಸಂತತಿಯು ಸಂತೋಷವಾರ್ತೆಗೆ
ಕಂತುಪಿತನಯ್ಯ ಮುಳುಗಿದ ತೋಷಪ್ರವಾಹದಲಿ ॥ ೯೫

### ವಸುದೇವನು ಭೂಷಣಾದಿಗಳನ್ನು ಕಳುಹಿಸುವಿಕೆ.

ಕರಿತುರಗನಿಕರವನು ಸತಿಯರ
ವರರಥವ ರತ್ನಾಭರಣವನು
ಪರಿಪರಿಯು ವಸ್ತ್ರಾವಳಿಯು ಬೇಕಾದ ವಸ್ತುಗಳ ।
ತರಿಸಿದನು ತಾ ತನ್ನ ಪುರದಲಿ
ವರಸುವಸ್ತುವ ಕೊಟ್ಟು ಕಶ್ಯಪ
ವರಮುನಿಪಸಹಿತವರ ಕಳುಹಿದ ಪಾಂಡುನೃಪನೆಡೆಗೆ ॥ ೯೬

ಬಂದನಾಕಶ್ಯಪನು ಕುಂತೀ
ನಂದನರ ಕಂಡಖಿಳವಸ್ತುವ

---

1 ಶೌರಿ. ಖ.

ತಂದು ಕಾಣಿಕೆಗೊಟ್ಟು ಕಂಡನು ಪಾಂಡುಭೂಪತಿಯು ।
ಅಂದು ವಸುದೇವಾದಿಯಾದವ
ವೃಂದ ರೋಹಿಣಿದೇವಕಿಯರಾ
ನಂದನರ ಸುಕ್ಷೇಮಕುಶಲವನರಸ ಬೆಸಗೊಂಡ ॥ ೯೭

ಯಾದವರ ಸುಕ್ಷೇಮಕುಶಲವ
ನಾದರಿಸಿ ಬಳಿಕಾದ ಕಾರ್ಯವ
ಮೇದಿನೀಪತಿ [1]ಹೇಳಿ ಕಳುಹಿದ ಕೆಲವು ದಿನದಿಂದ ।
ವೈದಿಕದ ಚೌಲೋಪನಯನಗ
ಳಾದಿಷೋಡಶಕ್ರಿಯೆಗಳನು ಗಾ
ರ್ಗ್ಯಾದಿಋಷಿಗಳ ಕೈಯ್ಯ ಮಾಡಿಸಿ ಮೆಱೆದ[2]ನೃವರಿಗೆ ॥ ೯೮

ಈತರೊಳು ಧರ್ಮಸುತಗೆರಡನೆ
ಯಾತ ಭೀಮನು ಬಳಿಕ ಮೂಱನೆ
ಯಾತ ಪಾರ್ಥನು ನಾಲ್ಕನೆಯರಾ ನಕುಲಸಹದೇವ ।
ಈತಗಳು ಕೌಂತೇಯಮಾದ್ರೀ
ಜಾತರತಿಶಯದಿವರು ಭುವನ
ಖ್ಯಾತರೆಂದರು ಸಕಲಮುನಿಗಳು ಪಾಂಡುನಂದನರ ॥ ೯೯

ಬಳಿಕ ಮಾದ್ರೀಸುತರದೊಂದಿನ
ದುಲಿವುತಲಿ ತೊಟ್ಟಿಲಲಿ ಮಲಗಿರ
ಲಿಳೆಗೆ ತಾನತಿ[3]ಚೋದ್ಯವಾಯಿತು ಭೂಪ ಕೇಳೆಂದ ।

ಪಾಂಡವರಿಗೆ ಕೃಷ್ಣನು ಬಂದು ಅಭಯವಂ ಕೊಡುವಿಕೆ.

ಒಲಿದು ಯಾದವರಾಯನಾವನ
ದೊಳಗೆ ಬಂದನು ನಕುಲನಲ್ಲಿಗೆ
ಮಲಗಿರಲು ತಾ ನುರಗನಾಗಿಯೆ ಯಾವನಾಶ್ರಮಕೆ ॥ ೧೦೦

---

1 ನಾದಯಾಂಬುಧಿ ಕೇಳಿದನು ಬಳಿಕಾದ ಕಾರ್ಯವ, ಖ.

2 ಗಳನುಜ್ಞೆಯಲಿ ಮಾಡಿಸಿದ, ಖ. 3 ಳೆಯೊಂದತಿ, ಖ.

ಉರಗನಾಕಾರವನೆ ಧರಿಸಿಯೆ
ತರಳರಿಹ ತೊಟ್ಟಿಲಿನ ಮೇಲಿಂ
ದುರವಣಿಸಿ ಸಹದೇವನಾಕ್ಷಣ ಬಭ್ರುವಾಗಿರಲು ।
ಹರಿಯದಕೆ ನಸುನಕ್ಕು ಯಮಳರ
ಪರಿಯನಱಿದನು ನೀವು ಧರಣಿಯು
ನರರು ಬೆಸಗೊಂಡಲ್ಲದೇನುವನುಸಿರಬೇಡೆಂದ ॥ ೧೦೧

ನೀವು ಪರಮಜ್ಞಾನಸಿದ್ಧರು
ನೀವು ತ್ರಿಜಗಜ್ಜೀವರಾಶಿಯು
ತಾವು ಕೇಳುವ ಶ್ರವಣದಧಿದೇವತೆಗಳೆಂದೆನುತ ।
ನಾವು ನಿಮ್ಮಯ ಜೀವಸಖರ್ಕೈ
ನಾವು ನಿಮ್ಮಯ ಪಾರ್ಥದೇವಗೆ
ನಾವು ಸಾರಥಿ ನಿಮ್ಮಭೀಷ್ಟವ ಬಯಸುತಿಹೆವೆಂದ ॥ ೧೦೨

ಎಂದು ಬೞಿಕಲ್ಲಿಂದ ತಿರುಗಿದ
ನಂದನರ ಬೀಳ್ಕೊಂಡನಾದಿನ
ದಂದಿಗಾಯಿತು ಮಾಸ ಮೂಱು ದಿನದ ಗಣನೆಗಳು ।
ಅಂದುಮೊದಲಾಗವರು ಜ್ಞಾನಕೆ
ಸಂದುಗಾಣರು ಕುಂತಿಪುತ್ರರು
ತಂದೆ ಕೇಳ್ಕೈ ಮಾದ್ರಿಯಾ ವೆರಸುತರಿಗಸುರಾರಿ ॥ ೧೦೩

ಬಂದು ಕರುಣಿಸಿ ಹೋದಬೞಿಕರ
ವಿಂದಲೋಚನೆ ಮೊಲೆಗುಡಲಿಕಾ
ನಂದನರ ಹೊರೆಗಾಗಿ ಬರಲಿಕೆ ಮುನ್ನಿನಂದದಲಿ ।
ಅಂದು ಮಲಗಿರೆ ಯಾದವೇಂದ್ರನು
ಬಂದ ಪದನನು ತಿಳಿದು ಮದ್ರಜೆ
ಯಿಂದುಮುಖಿ ಸಂತೋಷಬಟ್ಟಳು ಹರುಷದೇಳ್ಗೆಯಲಿ ॥ ೧೦೪

ಅಂದು ಮೊದಲಾಗೈವರಾಗೋ
ವಿಂದನಂಘ್ರಿಯ ಬಲದಿ ಬದುಕುವ
ಕಂದರೈ ಶ್ರೀ ಪಾಂಡು ಪುತ್ರರು ಭೂಪ ಕೇಳೆಂದ ।
ಅಂದು ಸುಜನಸ್ತೋಮ ಪಾಂಡುವ
ನಂದನರ ನೆಱೆ ಹಾಡಿ ಹರಸುತ
ಲಂದು ತಪವನದೊಳಗದಷ್ಟಾಶೀತಿಮುನಿಗಣವು ॥ ೧೦೫

ವರಯುಧಿಷ್ಠಿರನೃಪನು ಹುಟ್ಟಿದ
ನಿರುತ ಚೈತ್ರದ ಮಾಸದಲಿ ತಾ
ವರವೃಕೋದರ ಜನಿಸಿದನು ಶ್ರೀ ಮಾಘಮಾಸದಲಿ ।
ನರನು ಫಾಲ್ಗುನಮಾಸದಲಿ ನೆಱೆ
ಸಿರುತ ಮಾದ್ರಿಯೊಳಾಗ ಯಮಳರು
ಧರಣಿಗವತರಿಸಿದರು ವೈಶಾಖದ ಚತುರ್ದಶಿಗೆ ॥ ೧೦೬

ಕೃಷ್ಣಪಕ್ಷದೊಳಶ್ವಿನಿಯುಲಾ
ವೃಷ್ಣಕರನಿಂದಾರ್ಯವಾರಕೆ
ಜಿಷ್ಣುವಿನ ತಮ್ಮಂದಿರೆಸೆದರು ಭೂತಳಾಗ್ರದಲಿ ।
ವೈಷ್ಣವೋತ್ತಮರೈವರನು ತಾ
ತೃಷ್ಣೆಯಲಿ ಶ್ರೀಕುಂತಿಯಧಿಪತಿ
ಕೃಷ್ಣವೇಣೀತೀರದಲಿ ಸಲಹಿದನು ಹರುಷದಲಿ ॥ ೧೦೭

ಸುತರನಾಲೋಕಿಸುವನೈವರ
ಸತತ ಸಾವಿರಭಾರಿ ಪಾಂಡವ
ಪಿತನ ಹರುಷವನೇನ ಹೇಳುವೆನಾವನಾಂತರದಿ ।
ಕ್ರತುಸಹಸ್ರವನಂತಜಾಪ್ಯವು
ಯತಿಪದಾಂಬುಜಸೇವೆ ಸಂತತ
ಸುತವಿನೋದದ ಸುಖವ ಕೊಟ್ಟಿತೆನುತ್ತ ಪಾಂಡುನೃಪ ॥ ೧೦೮

ಹರಿಪರಾಯಣನಾಗಿ ಮಕ್ಕಳ
ಪರಮವಿಭವದಿ ರಾಯ ಮನದಲಿ

ವರಸತಿಯರೊಡಗೂಡಿ ರಾಜ್ಯವ ಮಱೆದು ವನಗಳಲಿ ।
ಇರುತಿರಲು ಪಾಂಡವರಿಗೈವರಿ
ಗಱುಪಿದನು ನಾನಾಂಗವಿದ್ಯೆಯ
ಬರಿಸಿದನು ಶ್ರೀವೀರನಾರಾಯಣನ ಕರುಣದಲಿ ॥ ೧೦೯

ಹದಿನೈದನೆಯ ಸಂಧಿ ಮುಗಿದುದು.

---

## ಹದಿನಾಱನೆಯ ಸಂಧಿ.

### ಸೂಚನೆ.

ವರಮುನಿಯ ಶಾಪದಲಿ ಸುರಿದನು
ಸುರರ ನಗರಿಗೆ ಪಾಂಡು ಹಸ್ತಿನ
ಪುರಕೆ ತಂದರು ಸಕಲಮುನಿಗಳು ಪಾಂಡುನಂದನರ ॥

ಶತಶೃಂಗಪರ್ವತದಲ್ಲಿ ಮುನಿವೃತ್ತಿಯಿಂದ ಪಾಂಡುವಿನ ವಾಸ

ಕೇಳು ಜನಮೇಜಯ ಧರಿತ್ರೀ
ಪಾಲ ಶತಶೃಂಗಾದ್ರಿಯಲಿ ಭೂ
ಪಾಲಸಿದ್ಧನು ತನ್ನ ವೀರಕುಮಾರಕರು ಸಹಿತ ।
ವ್ಯಾಳಮೃಗಶಾರ್ದೂಲವನಗಜ
ದಾಳಿಭಯವನು ಪರಿಹರಿಸಿ ಮುನಿ
ಜಾಲಕಾಶ್ರಮದೊಳಗೆ ಸುಖಮಯನಾಗಿ ನೃಪನೆಸೆದ [1] ॥

ಆಸಮಸ್ತಮುನೀಂದ್ರರೊಡನ
ಭ್ಯಾಸವಾದಿವ್ಯಾಶ್ರಮದ ವನ

---

1 ಪಾಳಿಕಾಶ್ರಮವೆನಿಸಿದನು ಪಾವನತಪೋವನವ, ಟ.

ವಾಸವಾತಪವಾಕುಮಾರಪರಾಕ್ರಮಾಲೋಕ ।
ಆಸಮಂಜಸಸತಿಯರಿಬ್ಬರು
ಪಾಸನಿಗಳಾವಿಭವಕಿಭಪುರಿ
ಯಾಸಮಸ್ತೈಶ್ವರ್ಯವದು ತೃಣವಾಯ್ತು ಭೂಪತಿಗೆ ॥ ೨

ಸುತವಿನೋದದ ಸಿರಿಗೆ ದಿವಿಜರ
ಪತಿಯ ಸಿರಿ ತೊತ್ತೆಂದು ವಿಮಳ
ವ್ರತತಪೋಲಕ್ಷ್ಮಿಗೆ ವಿಲಾಸಿಸಿ ಮುಕ್ತಿವೆಧುವೆಂದು ।
ಯತಿಪದಾಂಬುಜನಿತ್ಯಸೇವಾ
ಸತಿಗೆ ದಾಸಿ ಜಗತ್ತ್ರಯಾಧಿ
ಷ್ಠಿತಪದವಿಯೆಂದುಬ್ಬಿದನು ಕಲಿ ಪಾಂಡು ವಿಪಿನದಲಿ ॥ ೩

ವರುಷ ಹದಿನಾಱಾಯ್ತು ಧರಣೀ
ಶ್ವರನ ಹಿರಿಯ ಮಗಂಗೆ ಭೀಮಗೆ
ವರುಷ ಹದಿನೈದರ್ಜುನಗೆ ಹದಿನಾಲ್ಕು ಹದಿಮೂಱು ।
ಕಿಱಿಯರಿಬ್ಬರಿಗನಿಬರಾಮುನಿ
ವರರಿನಧ್ಯಯನಾದಿವಿದ್ಯಾ
ನಿರತರಾದರು ಬಂದುದಂದು ವಸಂತಮಯದಿವಸ ॥ ೪

## ವಸಂತಋತುವರ್ಣನೆ.

ತೆಗೆದುದಗ್ಗದ ತಂಪು ನದಿಸರ
ಸಿಗಳ ತಡಿಯಲಿ ಹೆಜ್ಜೆಯಾದುವು
ಹಗಲು ಹಂಸೆಯ ನೆಳಲು ಗೊಂಡುದು ಒಯಸಿ ಹಿಮಜಲವ ।
ಸೊಗಸಿದುವು ನೆಳಲುಗಳು ದೂರಕೆ
ಸೆಗಳಕೆಗಳಗ್ಗಳಿಸೆ ತಂ [1] ಗಾ
ಳಗೆ ವಿಹಾರಿಸಿ ಮೆಯ್ಯ್ ತೆತ್ತುದು ಕೂಡೆ ಜನನಿಕರ [2] ॥ ೫

1 ಗಳೇಱಿದವುತಂ, ಘ. 2 ಸಕಲಭುವನಜನ, ಖ.

ಯೋಗಿಗೆತ್ತಿದ ಖಡ್ಗಧಾರೆ ವಿ
ಯೋಗಿಗೊಡ್ಡಿಹ ಸಬಳ ಸಕಳವಿ
ರಾಗಿಗಳ ಹೆಡತಲೆಯು ದಡಿ ನೃಪಿ್ಠ ಕರಿಗಲಗಣಸು ।
ಆಗಮಿಕರೆದೆಶೂಲ ಗರ್ವಿತ
ರಾಗಿಗಳ ಗಳನಾಳ ವ[1] ಗ್ಗದ
ಭೋಗಿಗಳ ಕುಲದೈವವೆನಿಸಿತು ಕುಸುಮಮಯಸಮಯ ॥ ೬

ಮೊಱೆವ ತುಂಬಿಯು ಗಾಯಕರ್ರ್ನಯ
ಸರದ ಕೋಕಿಲಪಾಠಕರ್ರ್ಬಂ
ಧುರದ ಗಿಳಿಗಳ ಪಂಡಿತರ್ರ್ವಾಮರದ ಕರಿಘಟೆಯು ।
ಅರಳಿದಬುಜದ ಸತ್ತಿಗೆಯು ವಿುಂ
ಚರಿತಕುಸುಮದ ಚಾಮರದ ಭಾ
ಸುರವಸಂತನೃಪಾಲ ನಡೆದನು ಪಾಂಡುವಿನ ಮೇಲೆ ॥ ೭

ಫಲಿತಚೂತಕದಿಂಪುಗಳ ನೆಱೆ
ತಳಿತಶೋಕೆಯ ಕೆಂಪುಗಳ ಪರಿ
ದಳಿತಕಮಲದ ಕಂಪುಗಳ ವನವನದ ತಂಪುಗಳ ।
ಎಳೆಲತೆಯ ನುಂಪುಗಳ ನವಪರಿ
ಮಳದ ಪವನನ ಸೊಂಪುಗಳ ವೆ
ಗ್ಗಳಿಕೆ ಝಳಪಿಸೆ ಹೊಯ್ದು ಸೆಳೆದುದು ಜನದ ಕಣ್ಮನವ ॥ ೮

ಪಸರಿಸಿತು ಮಧುಮಾಸತಾವರೆ
ಯೆಸಳ ದೋಣಿಯ ಮೇಲೆ ಹಾಯ್ದವು
ಕುಸುಮಶರನುಬ್ಬರದ ತೊಱೆಯನು ಕೂಡಿ ತುಂಬಿಗಳು ।
ಬಸರ್ವ ಕರದಂಡದ ಪರಾಗದ
ಕೆಸರಲದ್ದವು ಕೊಂಚೆಗಳು ಹಗ
ಲೆಸೆದ ದಂಪತಿವಕ್ಕಿ ಸಾರಸರಾಜಹಂಸೆಗಳು ॥ ೯

---

1 ಗೂಗೆಗಳನಖಸ್ಖಾಳನ, ಟ.

ಜಗವ ಹೊರೆದುದು ಬಹಳಪರಿಮಳ
ದೊಗುಮಿಗೆಯ ತಂಗಾಳಿ ವನವೀ
ಧಿಗಳ ವಳಯುವ ಹೊರೆದು ಮರಳುವರಿಲ್ಲ ವಿರಹಿಗಳು ।
ಹೊಗುವ ಕಾಮನ ದಳದ ಚೂಣಿಯ
ಸೊಗಡು ಹೊಯ್ದೊಡೆ ಕೈದುವಿಕ್ಕಿತು
ವಿಗಡಮುನಿಜನಕೇನನೆಂಬೆನು ನೃಪತಿ ಕೇಳೆಂದ ॥ ೧೦

ಆಗ ಪಾಂಡುವಿಗೆ ವನದಲ್ಲಿ ಮಾದ್ರಿಯ ದರ್ಶನ.

ಆವಸಂತದೊಳೊಮ್ಮೆ ಮಾದ್ರೀ
ದೇವಿ ವನದೊಳಗಾಡುತಿರ್ದಳು
ಪೂವಿನಲಿ ಸರ್ವಾಂಗಶೃಂಗಾರದ ವಿಳಾಸದಲಿ ।
ಆವಳವಳೂರ್ವಶಿಯೊ ರಂಭೆಯೊ
ದೇವವಧುಗಳ ಸುಚಿವ್ರೊ ತಾನಿಂ
ನಾವಚಲುವಿಕೆ ಶಿವ ಶಿವಾ ಯೆಂದರಸ ಬೆಱಗಾದ ॥ ೧೧

ತಾಗಿದುದು ಕಾಮನ ಶರನಿಕರ
ಲಾಗುವೇಗದಲೆಂತುಟೋ ತೆಗೆ
ಪೂಗಣೆಗಳೃದಲ್ಲಿ ರೋಮಗಳಲ್ಲ ಬಾಣಮಯ ।
ವಾಗೆ ನಟ್ಟವು ಕಣೆಗಳೆಂಬವ್ರೊ
ಲಾಗಱಿವನಟಿಪಿದನು ಪ್ರಜ್ಞಾ
ಸಾಗರಂಗಳುಮಧ್ಯಕಟಿಜಾನ್ವಂಘ್ರಿ ಮಿತವಾಯ್ತು ॥ ೧೨

ಮಱೆದು ಹಿಂದೆಲ್ಲವನು ಕುಂತಿಯ
ನಱಿಯಲೀಯದೆ ಮೆಲ್ಲಮೆಲ್ಲನೆ
ತುಱುಗಿದೆಳಲತೆವನದಲಾಡುವ ಸತಿಯ ಸಾಱಿದನು ।

ಮಾದ್ರಿಯ ಸಂಗದಿಂದ ಪಾಂಡುವಿನ ಮರಣ.

ಸೆಱಗ ಹಿಡಿದರೆ ಬೇಡಬೇಡೆಂ
ದೆಱಗಿದಳು ಚರಣದಲಿ ತರುಣಿಯ
ತುಱುಬ ಹಿಡಿದೆತ್ತಿದನು ಹೆಣಗಿದನೊಡನೆ ರೊಂಬಿಸಿದ ॥ ೧೩

ಕೊಂದೆಲೈ ಕಡು ಪಾಪಿ ಮಱದಾ
ಹಿಂದೆ ಮಾಡಿದ ಮೃತ್ಯುವೆನು ಮುನಿ
ಯೆಂದ ನುಡಿ ಹೊಳ್ಳಹುದೆ ಸುಡು ದುರ್ವಿಷಯಕೆಳಸಿದೆಲೈ |
ಬೆಂದುದೇ ನಿನ್ನಱವು ಧೈರ್ಯವ
ನಿಂದು ನೀಗಿದೆ ಯಕಟ ನಿನ್ನಯ
ನಂದನರಿಗಾರುಂಟೆನುತ ಹೊಗಿದಳು ಲಲಿತಾಂಗಿ || ೧೪

ಕೊಂಬುದೇ ಬಯಲಱತಗಿಱತವ
ಡೊಂಬಿನಾಗಮನೀತಿಗೀತಿಯು
ಶಂಬರಾರಿಯ ಸಬಳವಲ್ಲಾ ಜೀಗೆ ಮೋಹಿದುದು |
ತುಂಬಿದೊಡೆ ಮುಗುಚಿದೊಡೆ ಮೞುಮೊನೆ
ಗೊಂಬುದೆಂಬವ್ರೊಲವನಿಪತಿ ಯೊ
ತ್ತಂಬರದಿ ಹಿಡಿದಬಲೆಯನು ಕೂಡಿದನು ಕಳವಳಿಸಿ || ೧೫

ಅಂಬು ಮೞುಮೊನೆ ಗೊಂಡುದೆಂಬುದ
ನಿಂಬಿನಲಿ ತಾ ಕಾಣಬಂದುದು
ಬೆಂಬಿಡದೆ ತಾ ಹಿಡಿದನಾಗಲು ಪಾಂಡು ತತ್ಸತಿಯ |
ಅಂಬುಜಾಕ್ಷಿಯನವಚಿ ವಿಮಳಾ
ಡಂಬು ಬೇಡೆಲೆ ಯುವನಿಪತಿ ಯೆನೆ
ಯಂಬರವ ಸೆಳೆದಪ್ಪಿ ರಮಿಸಿದ ನೃಪತಿಯುರವಣಿಸಿ || ೧೬

ಆಸುಖದ ಝೊಂಪಿನಲಿ ಮಱದವ್ರೊ
ಲೋಸರಿಸಿದುದು ಮದನಕಂಗಳು
ಪೈಸರಿಸಿದವು ತೆಕ್ಕೆ ಸಡಲಿತು ದೇಹ ಬಾರಿಸಿತು |
ಸೂಸಿದುದು ನಿಟ್ಟುಸುರು ರಾಣೀ
ವಾಸದುರದಲಿ ಕದಪನಿಟ್ಟು ಮ
ಹೀಶನೊಱಗಿದ ಹದನ ಕಂಡಳು ಮಾದ್ರಿ ಭೀತಿಯಲಿ || ೧೭

ಅಕಟ ಪಾಂಡುಮಹೀಶ ವಿಷಕ
ನ್ನಿಕೆಯನೆನ್ನನು ಮುಟ್ಟದೈ ಬೇ

ಡಕಟ ಕೆಡಿಸದಿರೆಂದೆನೇ ತಾನಱಿಯನೇ ಪದನ ||
ಪ್ರಕಟ ಕುರುಕುಲತಿಲಕರನು ಬಾ
ಲಕರನಾರಿಗೆ ಕೊಟ್ಟೆ ತನ್ನೊಡ
ನಕಟ ಮುನಿದ್ಯೆ ಮಾತನಾಡೆಂದೊದಱಿದಳು ಮಾದ್ರಿ || ೧೮

ಏನಿದೆತ್ತಣ ರಭಸ ಮಾದ್ರೀ
ಮಾನಿನಿಯು ಹಾ ರಾಯನಾವೆಡೆ
ಹಾನಿ ಹಿರಿದುಂಟಱಿವೆನಂಗಸ್ಪಂದಶಕುನದಲಿ |
ಏನು ಮಾರಿಯೊ ಶಿವ ಶಿವಾ ಯೆನು
ತಾನಿತಂಬಿನಿ ಗಾಢಗತಿಯಲಿ
ಕಾನನದೊಳ್ಯೆತಂದಳಾಕೆಯು ಸರದ ಬೞಿವಿಡಿದು || ೧೯

ಕಂಡಳವಳಬ್ಬರನು ಧೊಪ್ಪನೆ
ದಿಂಡುಗೆಡೆದಳು ಮೂರ್ಛೆಯಲಿ ಮೆಱೆ
ಗೊಂಡುದೆಚ್ಚರು ಮಾದ್ರಿಯೊಳು ಹಲುಬಿವಳು ಗೋೞಿಡುತ |

ಮಕ್ಕಳ ಪ್ರಳಾಪ.

ಚಂಡಿಕೆಗಳಲ್ಲಾಡೆ ಹರಿದರು
ಪಾಂಡುನಂದನರ್ಯೆವರೀತನ
ಕಂಡು ಹಾ ಯೆಂದೊಱಲಿ ಹೊರಳಿದರವನಿಪನ ಮೇಲೆ [1] || ೨೦

ಬೊಪ್ಪ ದೇಶಿಗರಾದೆವೇ ವಿಧಿ
ತಪ್ಪಿಸಿತಲಾ ನಮ್ಮ ಭಾಗ್ಯವ
ನೊಪ್ಪಿಸಿದೆ ಮುನ್ನಾರಿಗೆಮ್ಮನು ಪೂರ್ವಕಾಲದಲಿ |
ಮುಪ್ಪಿನಲಿ ನಿಮಿಗೀಯವಸ್ಥೆಯು
ದೊಪ್ಪುವುದೆ ಹೇರಡವಿಯಲಿ ಮಲ
ಗಿಪ್ಪುದೇನೆಂದೊಱಲಿ ಮಱುಗಿದರಾಕುಮಾರಕರು || ೨೧

---

[1] ದೊಱಲಿ ಮೊಱಗಿದರಾಕುಮಾರಕರು, ಙ,

ಕೇಳಿ ಹರಿತಂದುದು ಮುನಿವ್ರಜ
ದೇಳಿಗೆಯು ಬಲು ಶೋಕರಸದ ಛ
ಡಾಳತನವನು ನಿಲಿಸಿ ಬೋಧಿಸಿದರು ಕುಮಾರಕರ ।
ಆಲಿಸಿದಳಾಕುಂತಿ ಮೂರ್ಛಾ
ವ್ಯಾಳವಿಷವಪಹರಿಸಿ ಧರಣೀ
ಪಾಲಕನ ನೋಡಿದಳು ಬಿಸುಟ್ಟೈ ತನ್ನನಿಂದೆನುತ ॥ ೨೨

ಅರಸ ನಮಗಱುಹದೆ ಸುರಸ್ತ್ರೀ
ಯರಲಿ ನೆರೆದೈ ನಿನ್ನ ವಧುಗಳ
ತುಱುಬ ಕೊಯ್ವನವರ ತೊತ್ತಿರ ಮಾಡುವೆನು ತನಗೆ ।

ಕುಂತೀಮಾದ್ರಿಯರ ಸಹಗಮನ ವಿಚಾರ.

ಅರಸಿ ನೀನೀಮಕ್ಕಳನು ಸಂ
ತರಿಸಿ ಕೊಂಡಿಹುದೆಂದು ಮಾದ್ರಿಯು
ಕರವ ಹಿಡಿದೊಡೆ ಕುಂತಿಗೆಂದಳು ಕಾಂತೆ ವಿನಯದಲಿ ॥ ೨೩

ಮರುಳೆಲೌ ನೀನಕ್ಕ ನಿಮ್ಮೈ
ವರು ಕುಮಾರರು ನಿಮ್ಮ ಕೈಲಡೆ
ಧರಣಿಪತಿ ನಿಡುನಿದ್ರೆಗೈದನು ತನ್ನ ತೋಳಿನಲಿ ।
ಸುರವಧುಗಳೊಡನಿರಲಿ ನಿಮ್ಮಯ
ಹರಿಬವೆನ್ನದು ನೋಡು ತನ್ನಯ
ಪರಿಯನೀತನ ನಿನಗೆ ಕೊಡೆನೆಂ [1] ದಂಪ್ರಿಗೆಱಗಿದಳು ॥ ೨೪

ಮುನಿಗಳೀಕೆಯ ತಿಳುಹಿ ಮಾದ್ರಿಗೆ
ಜನಪತಿಯು ಸಹಗಮನವೇ ಮತ
ವೆನಿಸಿ ಶವಸಂಸ್ಕಾರವನು ವೈದಿಕವಿಧಾನದಲಿ ।
ಎನಲು ಮನ್ನಿಸಿ ಕುಂತಿ ಮಾದ್ರಿಗೆ
ಜನಪತಿಯು ತಾನಿತ್ತು ಮಕ್ಕಳ
ತನುವಿಗಾನತೆಯಾಗಿ ನುಡಿದಳು ಮಾದ್ರಿ ಧರ್ಮಜಗೆ ॥ ೨೫

---

1 ತನಗೆ ಕೊಡಿಯೆಂ, ಕ, ಖ.

ಮಾದ್ರಿಯ ಸಹಗಮನ.

ಸುತರ ಪಾಲನೆ ನಿನಗೆ ಮುಖ್ಯವು
ಗತಿಯ ಮಾಡೆಮಗೆಂದು ಹೊಕ್ಕಳು
ಸತಿಶಿರೋಮಣಿ ಹರುಷದಿಂದವೆ ಪತಿಯ ವಾಮದಲಿ ।
ಪತಿಯ ಸಹಗಮನದಲಿ ಮಾದ್ರೀ
ಸತಿಗೆ ಶಿಖಿಯನು ಕೊಟ್ಟರೈವರು [1]
ಸುತರು ಸಹಿತೀಕುಂತಿ ಮಿಂದಳು ಬಳಿಕ ಕೃತ್ಯವನು [2] ॥ ೬೬

ಶ್ರುತಿವಿಧಾನದಲಖಿಳಮುನಿಸಂ
ತತಿಗಳನು ಮುಂದಿಟ್ಟು ಮಾಡಿಸಿ
ಸುತರ ಪಾಲಿಸುತಿರ್ದಳಾಶತಶೃಂಗಶೈಲದಲಿ ।
ಸುತರುಸಹಿತೀಕುಂತಿ ಋಷಿಗಳ
ಸತಿಯರಾನುಡಿಗಳಲಿ ತನ್ನಯ
ಪತಿಯ ಮರಣವ ಮಱೆದು ಸುತರನು ನೋಡಿ ಚಿಂತಿಸಲು ॥ ೬೭

ಅರಸನಪಗತನಾದನಾನೃಪ
ನರಸಿ ಬಾಲಕಿ ಶಿಶುಗಳೈವರು
ಭರತಕುಲಜರು ನಾವು ತಪಸಿಗಳೆರ್ದುದಾರಣ್ಯ ।
ಅರಿಗಳಾರಾಕ್ಷಸರು ನಾವಿ
ಲ್ಲಿರಿಸುವುದು ಮತವಲ್ಲ ಹಸ್ತಿನ
ಪುರದಲೊಪ್ಪಿಸಿ ಬಹುದು ನಯವೆಂದುದು ಮುನಿವ್ರಾತ ॥ ೬೮

ಮುನಿಗಳು ಧರ್ಮಾದಿಗಳನ್ನು ಹಸ್ತಿನಪುರಕ್ಕೆ ತಂದು ಬಿಡುವಿಕೆ.

ಎಂದು ಕುಂತೀದೇವಿಸಹಿತಾ
ನಂದನರನೈವರನು ಮುನಿಗಳು
ತಂದರಿಭಪುರಿಗಾಗಿ ಭೀಷ್ಮಾದಿಗಳಿಗೀ ಹದನ ।

[1] ಸತಿಶರೀರ ಬಿಟ್ಟಳೈವರು, ಘ. [2] ಮಿಂದುಪರೇತಕೃತ್ಯವನು, ಛ.

ಮುಂದೆ ಸೂಚಿಸಲುತ್ಸವದೊಳದಿ
ರ್ವಂದರನಿಬರು ಶುಭಮುಹೂರ್ತದ
ಲಂದು ನಗರಿಯ ಹೊಗಿಸಿದನು ಸಂತೋಷದಲಿ ಭೀಷ್ಮ ॥ ೨೯

ಇವರ ಜನನಕ್ರಮವನಾಪಾಂ
ಡುವಿನ ವಿಕ್ರಮ ವರತಪೋಧನ
ನಿವಹ ಕೊಂಡಾಡಿದುದು ಬಳಿಕೀಮರಣಸಂಗತಿಯ ।
ಅವನಿಪನ ಸಂಸ್ಕಾರ ಮಾದ್ರೀ
ಯುವತಿಸಹಗಮನೌರ್ಧ್ವದೇಹಿಕ
ವಿವಿಧಕೃತ್ಯವನೀಪ್ರಪಂಚವ [1] ನವರಿಗರುಹಿದರು ॥ ೩೦

ಮುನಿಗಳಾಕ್ಷಣ ತಿರುಗಿದರು ತ
ಜ್ಜನಪವೃತ್ತಾಂತವನು ವಿವರಿಸಿ
ಜನಜನಿತ ಬಳಿಕುಬ್ಬಿ ಹರಿದುದು ಶೋಕಮಯಜಲಧಿ ।
ವಿನುತಧೃತರಾಷ್ಟ್ರಾದಿಬಾಂಧವ
ಜನ ಪುನಸ್ಸಂಸ್ಕಾರದಲಿ ಭೂ
ಪನನು ದಹಿಸಿದರೌರ್ಧ್ವದೇಹಿಕವಾಯ್ತು ಮುಗುಬಿಲ್ಲಿ ॥ ೩೧

ಅರಸ ಕೇಳ್ಕ ಭೀಷ್ಮಧೃತರಾ
ಷ್ಟ್ರರನು ಬೋಧಿಸಿ ಬಹಳಶೋಕ
ಜ್ವರದ ಬಿಡುಗಡೆಮಾಡಿದವರ ಪರಾಶರಾತ್ಮಜನು ।
ವ್ಯಾಸರು ಸತ್ಯವತಿಯನ್ನು ಇಲ್ಲಿರಬೇಡೆಂದು ಹೇಳುವಿಕೆ.
ಕರೆದು ಯೋಜನಗಂಧಿಯನು ನೀ
ನಿರಲು ಬೇಡೆಲೆ ತಾಯೆ ನಿಮ್ಮಾ
ಭರತವಂಶದೊಳಾಗೆದ ಕಿಚ್ಚುರುಹುವುದು ನೃಪಕುಲವ ॥ ೩೨
ಹೇಳಬಾರದು ಮುಂದಣದು ದು
ಷ್ಕಾಲವಿಂದಿಗೆ ನಾಳೆ ನಾಳಗೆ

[1] ಕೃತ್ಯಾನೀಕ ಪಥಕವ, ಜ.

ಕಾಲ ಬೆಟ್ಟಿತು ವರ್ಣಧರ್ಮಾಶ್ರಮದ ನೆಲೆ ಹೋಯ್ತು ।
ಕಾಲ ವಿಷಮವು ಕೌರವಕ್ಷಿತಿ
ಪಾಲಪಾಂಡುಕುಮಾರರಲಿ ಕೈ
ಮೇಳವಿಸುವುದು ಕದನ ಬಿಜಯಂಗೈಯ್ಯಿ ನೀನೆಂದ ॥ ೩೩

ಎನಲು ಯೋಜನಗಂಧಿ ನಿಜನಂ
ದನನ ನುಡಿಯೋ ವೇದಸಿದ್ಧವಿ
ದೆನುತ ಸೊಸೆಯರು ಸಹಿತ ಸರಿದಳು ವರತಪೋವನಕೆ ॥
ಮುನಿಪನಿತ್ತಲು ಬದರಿಕಾನಂ
ದನಕೆ ತಿರುಗಿದ [1] ನಿತ್ತ ಗಂಗಾ
ತನುಜ ಸಲಹಿದನಖಿಳಪಾಂಡವಕೌರವವ್ರಜವ ॥ ೩೪

ಅತ್ತಲಾವರಸತ್ಯವತಿ ವನ
ದತ್ತಹೋದಪಳಲ್ಲಿ ಮುನಿಗಳ
ವೊತ್ತದಲಿ ಹರಿಕಥೆಯ ಕೇಳುತ ಪರಮಹರುಷದಲಿ ॥
ಉತ್ತಮರ ಪಥವಿಡಿದು ಸೊಸೆಯರ
ನತ್ತೆ ಪಾಲಿಸುತಲ್ಲಿ ವತ್ಸರ
ಹತ್ತು ನೂಕಿದಳಾತಪೋವನದೊಳಗೆ ಹರಿಪದವ ॥ ೩೫

ಸತ್ಯವತಿ ಮತ್ತು ಸೊಸೆಯರ ಲೋಕಾಂತರಗಮನ.

ಸೇವಿಸಿದ ಬಳಿಕಮರಲೋಕದ
ದೇವವಧುಗಳ ಕೂಡೆ ಸಂದಳು
ದೇವವೇದವ್ಯಾಸಮುನಿಪನ ಕೃಪೆಯ ಭಾರದಲಿ ।
ಆವಧುಗಳಂಬಾಲೆಯಂಬಿಕೆ
ಯಾವಿದುರವರಜನನಿಸಹಿತವೆ
ಯಾವಿಬುಧಪತಿಯಿಪ್ಪ ಠಾವಿಗೆ ಸಾರಿದರು ಬಳಿಕ ॥ ೩೬

---

[1] ಮರಳಿದ, ಟ.

ರಾಯ ಕೇಳ್ಳೈ ಲೋಕದಲಿ ಸತಿ
ದಾಯದಲಿ ಸತಿ ಪುತ್ರರನು ಹೆ
ತ್ತಾಯುವತಿಜನಕಹುದು ಗತಿ ತಾ ಸತ್ಯಲೋಕವದು ।
ನ್ಯಾಯ ತಾನಹುದಿನ್ನು ಮುಂದಣ
ದಾಯ ಕುಂತೀದೇವಿಗೊಬ್ಬಳೆ
ಗಾಯಿತ್ತೈ ಕೈವಲ್ಯ ಪುತ್ರರ ಹೆತ್ತ ಫಲದಿಂವ ॥ ೩೭

ಹದಿನಾಱನೆಯ ಸಂಧಿ ಮುಗಿದುದು.

---

## ಹದಿನೇಳನೆಯ ಸಂಧಿ.

ಸೂಚನೆ.

ಭೀಮದುರ್ಯೋಧನರ ಸೆಣಸಿನ
ತಾಮಸಿಕೆ ಹೆಚ್ಚಿದುದು ಬೞಿಕು [1]
ದ್ದಾಮಶಸ್ತ್ರಾ [2] ಭ್ಯಾಸವನು ಮಾಡಿದರು ದ್ರೋಣನಲಿ ॥

ಪಾಂಡವಧಾರ್ತರಾಷ್ಟ್ರರ ಆಟಗಳು.

ಕೇಳು ಜನಮೇಜಯ ಮಹೀಶ್ವರ
ಬಾಲಕರು ನೂಱಾಱು ಮೆಱೆದರು
ಬಾಲಕೇಳೀವ್ಯಸನಿಗಳು ಹೊಱವಳಯವಲಿ ಪುರದ ।
ಆಳಿನೇಱಿಕೆ ಹಿಡಿಗವಡೆ ಗುಱಿ
ಯಾಳು ಚಂಡಿನ ಹೊಣಕೆ ಚೆಣಿಕೋ
ಲಾಳು ಚೆನಿಮೆಂಡಿನಲಿ ದಂಡೆಯ ಹಾಱುಗುಪ್ಪೆಗಳ [3] ॥ ೧

---

1 ಕದನೋ, ಟ. 2 ರಸ್ತ್ರಾ, ಟ.
3 ಗೊತ್ತಿನ ದಂಡೆಯೆನೆ ನಾನಾವಿನೋದದಲಿ, ಚ. ಟ.

ಗುಡುಗು ಗುತ್ತಿನ ಚೆಂಡು ಗುಮ್ಮನೆ
ಬಡಿವ ಕತ್ತಲೆಗುದ್ದು ಗಂಭದ
ಗಡಣೆ ಕಣ್ಣುಮುಚ್ಚಾಟ ಸವೆಗಲಿ ಹಲ್ಲೆಯಾಟಗಳ [1] ।
ಕೆಡೆಹು ಕುಟ್ಟು ವಿವಾದಿಯಾದವೆ
ಗಡವಿನೋದದಲಾಡಿದರು ಪಂ
ಗಡದಲೈವರು ನೂರ್ವರವರಿತ್ತಂಡವೊಂದಾಗಿ ॥ ೧

ಭೀಮನ ಪರಾಕ್ರಮ.

ಇದರೊಳೊಬ್ಬನೆ ಭೀಮನನಿಬರ
ಸದೆವ ತಾ ಸೋತೊಡೆ ವಿಭಾಡಿಸಿ
ಕೆದಱುವನು ಗೆದ್ದೋ [2] ಡಿದರೆ ಬೆಂಬತ್ತಿ ಹಿಡಿದೆಳೆವು ।
ಸದೆದು ಬಿಡುವನು ಮುನ್ನ ಭೀಷ್ಮಂ
ಗೊದಱಿ ದೂಱುವನಿವನು ಮಗುಟೊಂ
ದೊದಗಿ ಸಂಗಡವಿಹರು ತಾ ವೊಂದಾಗಿ ಮಱುಕೊಳಿಸಿ ॥ ೭

ಕೆಣಕಿ ದುರ್ಯೋಧನನನೆತ್ತಿಯು
ನಣೆದು ಹಾಯ್ವನು [3] ಸಿಮ್ಮನೂರ್ವರ
ಬಣಗುಗಳಿಗೆಡಗಾಲ ತೊಡರಿದೆ ಬನ್ನಿ ಸೀವೆನುತ ।
ಗುಣವೆ ನುಡಿದೊಂದಾಗಿ ಕೆಳಗೊಂ
ಡಣಕಿಸುತ ಮೈಮಱೆಸಿ ಮಱೆಯುಲಿ
ಕಣಿಮ ಪರಿವನು ಭೀಮನಾದುರ್ಯೋಧನಾದಿಗಳ [4] ॥ ೪

ಹೇೞುವರು ಯುಮುಜಂಗೆ ನಿನ್ನವ
ನೋಱಗವೆ ನಿಲಿಸೆಂದು ಪಾರ್ಥಗೆ
ಹೇೞುವರು ಬೞಿಕವರು ಭೀಮನ ಕರೆದು ಬೇಡೆನಲು [5] ।

---

1 ಕಣ್ಣುಕ್ಟೆ ಸಗೆವರಿಹರಿಹಲಗೆನಿಡುಗವಣೆ, ಚ. ಟ.
2 ಬಿಟ್ಟೋ, ಕ. ಖ. 3 ಹೊಯ್ವನು, ಚ.
4 ಬಿಡುವರು ಭೀಮನನಾದುರ್ಯೋಧನಾದಿಗಳು, ಖ. ಟ.
5 ಗಾರಡಿಸೆ, ಖ. ಟ.

ಕೇಳುವೆನು ಹಾ ಯೆಂದು [1] ತನ್ನಯ
ಸೋಲದಲಿ ಬೆನ್ನೊಡ್ಡಿ ತಾ ಮೇ [2]
ಲಾಳನೇಱಸಿ ಹರಿದು ಕೆಡಹುವ ಕಲ್ಲುಗುಂಡಿನಲಿ [3] ॥ ೫

ಭೀಮಸೇನನ ಮೇಲೆ ಬಾಲರ ದೂರುಗಳು.

ಅಳುತ ಧೃತರಾಷ್ಟ್ರಂಗೆ ಭೀಮನು
ಕಳೆವ ಹಲುಗಳ ತೋಱ ಮೊಳಕಾಲ್ [4]
ಗಳಲಿ ಘಾಯವ ನೋಡಿರೈ ನೀವೆಂದು ದೂಱುವರು [5] ।
ಕೆಳೆಯನವನೆಮಗಲ್ಲ ಕಾಲನೇ
ಯಿಳೆಯುಲುಚಿವಿಲ್ಲೆನುತ ಕೌರವ
ಹೊಳಲ ಹೊಱಯಿಕೆ ಬಾರೆನೆಂದೊಡೆ ನಮ್ಮ ಕರೆದೊಯ್ದು ॥ ೬

ಒಂದುದಿನ ವರಭೀಮಸೇನನು
ಮಂದಮತಿಗಳ ಭವನದಲ್ಲಿಗೆ
ಬಂದು ಕರೆವನು ಕೌರವೇಂದ್ರನ ಸಹಿತಶತಕವನು ।
ಇಂದು ನಿಮ್ಮನು ಗುದ್ದಿದೊಡೆ ಗೋ
ವಿಂದನಂಘ್ರಿಗಳಾಣೆ ಯೆನಲಿಕೆ
ಬಂದರೈ ನೂಱೊಂದುಮಾನಿಸರರಸಕೇಳಂದ ॥ ೭

ಮುದದಲೊಬ್ಬನೆ ಭೀಮನನಿಬರ
ಸದೆವ ತಾ ಸೊಪ್ಪಾಗಿ ಶತಕರ
ತಿದಿಯು ಸುಲಿವನು ಕಾಲಲೊರಸುವನೊವಱ ಮೆಟ್ಟುವನು ।
ಬದಿಯು ತಿವಿವನು ಬೀಱಲೊದೆವನು
ಮೊದಲೆ ತಾನೈತಂದು ಭೀಷ್ಮಂ
ಗೊದಱ ದೂಱುವ ಕೌರವೇಂದ್ರನ ಧುರಕೆ ಸೆಣಸುವನು ॥ ೮

---

1 ಲೇಸಿಂದ, ಖ
2 ಬೆನ್ನೊಡ್ಡುವನುಮೇ, ಖ.
3 ಸದೆವನು ಗುತ್ತಿನಲಿಕೆಡಹಿ, ಚ. ಟ.
4 ಗಳನೊಡೆದಮೊಳಕಾಲ್, ಚ. ಟ.
5 ಗಳನುತೋಱಸಿ ದೂಱುವ, ಚ.

ಮುಳ್ಳುಮೊನೆಯಲಿ ಚಿಗುರಿ ನೆತ್ತರ
ಚೆಲ್ಲಿ ಹುಡಿಯಲಿ ಹೊರಳಿ ತಾ ಬಂ
ದಲ್ಲಿ ಧೃತರಾಷ್ಟ್ರಂಗೆ ಭೀಷ್ಮಂಗಳುತ ದೂಱುವೆನು ।

ರು ದುರ್ಯೋಧನಾದಿಗಳು, ಚ. ಟ.

ಒಲ್ಲೆನೆಂದೊಡೆ ನಮ್ಮ ಕರೆವರು
ಖುಲ್ಲರೆಲ್ಲರು ನಿಮ್ಮ ಮಕ್ಕಳ
ದೆಲ್ಲರಿಗೆ ನಾನೊಬ್ಬನಾಪೆನೆ ಯೆಂದನನಿಲಜನು ॥ ೯

ಮಕ್ಕಳಿಗೆ ಧೃತರಾಷ್ಟ್ರನ ಬುದ್ಧಿವಾದ.

ಎನಲು ತಾ ಧೃತರಾಷ್ಟ್ರ ಮಕ್ಕಳ
ಮನವಱಿದು ತಾ ಬುದ್ಧಿಗಲಿಸಿದ
ತನುಜರಿರ ನಿಮಗಾರು ಹಿತವರುಮಿಲ್ಲ ಲೋಕದೊಳು ।
ಎನುತ ಮಕ್ಕಳಿಗಂಧನೆಂದನು
ವಿನಯ ಮಿಗೆ ಕೌಂತೇಯವರ್ಗಕೆ
ತನತನಗೆ ಮನಮುಟ್ಟಿ ಹಿತವರು ಭೀಷ್ಮನಾವಿದುರ ॥ ೧೦

ಆಕೆವಾಳರು ಭೀಷ್ಮವಿದುರರು
ಸಾಕು ನಿಮ್ಮೊಳು ನೂಱುನಾಲ್ವರು
ಬೇಕೆ ಬೇಱಿಹುದೊಬ್ಬ ತಾ ಬೇಱಿಹುದು ಖೇಳದಲಿ ।
ನೂಕಿ ಸೂಱುಳು ಮಾಡಿ ಬಿಟ್ಟೊಡೆ
ನಾಕುಜಾವದೊಳಿಹರು ಮಱುದಿನ
ವಾಕುಮೂರರು ತಮ್ಮೊಳೊಂದಹರೊಂದು ನಿಮಿಷದಲಿ [1] ॥ ೧೧

ಬಂದುದಿನ ನೂಱೂಱುಮೆಂದಿಯು
ಬಂದು ಮೆಳೆಯಲಿ ಪುರದ ಹೊಱಗಿಹ
ದೊಂದು ಠಾವು ಪ್ರಮಾಣವೃಕ್ಷವ ಕಂಡು ನಡೆತರಲು ।

---

1 ಳೊಂದಾಗಿಹರು ಗೆಳೆಯಾಗಿ, ಚ. ಟ.

ಬಂದು ತಾವೆಡರಿದುದು ಕೌರವ
ವೃಂದ ಮರನನು ಬಳಿಕ ನಾಲ್ವರು
ವೊಂದುವೃಕ್ಷದಲಿರಲು ತಾ ಹರಿದಾಡಿದನು ಭೀಮ ॥ ೧೦

ಬಳಿಕ ಬಳಲಿದನಕಟ ಯಿಾಜಗ
ಬಳಗವಿಪ್ಪತ್ತೊಂದು ಜೀವರು
ಸುಳಿವೆ ಸತ್ವದ ಸರಿಸಕೊಬ್ಬನು ನಿಲುವನನಿಲಜನು ।
ಇಳೆಯುಲಡಮುಸುಕಿನಲಿ ಜೀವರ
ಹೊಳಹಿನಂತಿರೆ ಬಳಲಿ ಬೆವರುತ
ಬಳಿಕ ಬಂದಾಮರದ ಬುಡವನು ಹಿಡಿದು ಕುಳ್ಳಿದನು ॥ ೧೭

ಮರನ ಹಿಡಿದಲುಗಿದೊಡೆ ಬಿದ್ದರು
ಭರತಕುಲಪಾಲಕರು ನೂರ್ವರು
ವರಮಹಾವಾತದಲಿ ತರುಫಲನಿಕರ ಬೀಳ್ವಂತೆ ।
ಶಿರವೊಡೆದು ಯೆದೆನೊಂದು ಮೊಳಕಾ
ಲ್ಮುಱಿದು ಕೈಗಳು ಮುಱಿದು ನೆತ್ತರು
ಸುಱಿಯೆ ಧೃತರಾಷ್ಟ್ರಂಗೆ ತೋಱಿದರಳುತ ಘಾಯವನು ॥ ೧೮

ದುರುಳರೆಲವೋ ನೀವು ಭೀಮನ
ಪರಿಯ ಬಲ್ಲಿರೆ ಯಕಟ ಬೇಡೆಂ
ದರಸ ಬೈದನು ತನ್ನ ಮಕ್ಕಳ ನೋಡಿ ಖಾತಿಯಲಿ ।
ಹಿರಿದು ಹೆಚ್ಚಿತು ವೈರ ಭೀಮಗೆ
ಕುರುಕುಲಾಧಿಪರೊಳಗೆ ಬಾಲ್ಯದ
ಭರದ ಮೊದಲಲಿ ಕೇಳು ಜನಮೇಜಯಮಹೀಪಾಲ ॥ ೧೯

ಭೀಮದುರ್ಯೋಧನರಿಗೆ ವೈರಾಭಿವೃದ್ಧಿ.

ದುರುಳನವನೊಡನಾಡಬೇಡೆಂ
ದರಸ ಸುತರನು ಸಂತವಿಟ್ಟನು
ಹಿರಿದು ಹೆಚ್ಚಿತು ಭೀಮದುರ್ಯೋಧನರಿಗತಿವೈರ ।

ಮರಳ ತಾ ವೊಂದಾಗುತೀತನ
ಕರೆದು ವಿವಿಧಕ್ರೀಡೆಯುಲಿ ವ್ಯೈ
ವೆಯಿಸಿ ಭೀಮನ ಕಟ್ಟಿ ಹಾಯ್ಕಿದರೊಂದುಮಡುವಿನಲಿ ॥ ೧೬

ಬಳಿಕ ಕೌರವನಾಕಳಿಂಗನ
ಹುಳುಕು ಮತವನು ಮನವಲಿಕ್ಕಿಯು
ಯಿಳೆಯು ಸುರ ಹೇಳನ್ನು ಪಾಂಡವರೊಳಗೆ ಭೀಮನನು ।

ಭೀಮನನ್ನು ಕೊಲ್ಲುವ ಉಪಾಯಗಳು.

ಕೊಲುವ ಪರಿ ತಾನೆಂತು ನಮಗೀ
ಬಲುಹು ಸಾಲದದೆನಲು ಭೂಪತಿ
ಕೊಲುವೊಡಿನ್ನೊಂದರಿದೆ ವಿಷವಲ್ಲುದಕವಲ್ಲೆನಲು ॥ ೧೭

ಅರಸ ತಾನೊಂದಿನದಲಾತನ
ಕರೆಸಿ ವಿವಿಧಕ್ರೀಡೆಯುಲಿ ಹಸಿ
ದಿರಿಸಿ ಗಣಪಂಗೆನುತ ಭೀಮನ ಕಟ್ಟಿ ಮಡುವಿನಲಿ ।
ಪರಿಹರಿಸಬೇಕೆಂದು ಯೋಚಿಸಿ
ಕುರುಕುಲೇಂದ್ರನು ಹೇಳೆ ಭೀಮನು
ಪರಿಹರಿಸವೌತಣವ ಕೊಂಡನು ಬಂದನವರೊಡನೆ ॥ ೧೮

ಬರಲು ಕೌರವವೃಂದ ಭೀಮನ
ಸುರನದಿಯ ಹೊರೆಗವರು ಕರೆದರು
ನಿರುತ ಬಳಿಕವರೆಲ್ಲ ಗಣಪನ ಪೂಜೆ ಮಾಡಿದರು ।
ಭರವಸದಿ ಭೀಮಂಗೆ ತಾ ವಾ
ವರಪ್ರಸಾದವನೀಯೆ ಭಕ್ಷಿಸಿ
ಹಿರಿದು ಪವಡಿಸೆ ಕಟ್ಟಿ ಕೆಡಹಿದರೊಂದುಮಡುವಿನಲಿ ॥ ೧೯

ಹಾ ಸರಿಯೆ ಗುಂಡಿಯುಲಿ ನೂಕಯು
ರೋಷವನು ಬಿಟ್ಟೈದೆ ಮರಳಿಯು

ಭಾಷೆಗಳ ಕೈಕೊಂಡು ಬಂದರು ಪಾಂಡುಸುತರೆಡೆಗೆ ।
ವೈಸಿಕದ ಕಣಿಗಳುಪೆ ಕುಂತಿಗ
ವಿಾಸು ತಡೆದೆವು ಭೀಮಸೇನಗೆ
ಪೈಸರಿಸಿ ಬರಬೇಕದೆನುತವೆ ಹೋದರರಮನೆಗೆ ॥ ೨೦

ಹಾಸಿ ಬಿದ್ದನ ಕಚ್ಚಿ ಫಣಿಗಳು
ಘಾಸಿ ಮಾಡಲು ಬಚ್ಚಿಕ ವಿಷದಾ
ವೇಷ ತಿಳಿಯಲು ಭೀಮ ಕೊಂದನು ಸರ್ಪಮೋಹರವ ।

ಭೀಮವಾಸುಕಿಸಂವಾದ.

ನಾಶ ಮಾಡುತ್ತಿರಲು ಕೈಯಲು
ವಾಸುಗಿಯು ಬರುತಂದು ಭೀಮಂ
ಗೋಸುಗಸದಿಂತೆಂದಪೇಕ್ಷಾರಯ್ಯ ಹೇಳೆನಗೆ ॥ ೨೧

ನಾನು ಕುಂತೀಸುತನು ಕೌರವ
ಮಾನಸಿಧಿ ವಿಷವಿಕ್ಕಿ ನನ್ನನು
ವಿಾನವಿಯ ಬಳವಾಯ್ಕಿ ಕೆಡಹಿದೊಡೀಗ ಸರ್ಪಗಳು ।
ಹೀನಮನದೊಳಗೆನ್ನ ಕಚ್ಚಿದೊ
ಡಾನು ಕೊಂದೆನು ಸರ್ಪಕುಲವನು
ನೀನು ಕಚ್ಚಲಿಕೀಗ ಬಂದೆಯೊ ಏನು ಪೇಳೆಂದ ॥ ೨೨

ಭೀಮನ ಪಾತಾಳಲೋಕಗಮನ.

ನಕ್ಕು ವಾಸುಗಿ ಭೀಮಸೇನನ
ತಕ್ಕಯಿಸಿ ಕೈದಣಿಯೆ ಕುಂತಿಯು
ಮಕ್ಕಳಮಗಳಿಯುಂದಿರಪ್ಪರಿ ಮನೆಗೆ ನಡೆಯೆಂದು ॥
ಎಕ್ಕತುಳದಲಿ ಬಂದು ವಾಸುಗಿ
ಯಿಕ್ಕಿದನು ತಾನಮೃತಭೋಜನ
ಶರ್ಕರೆಯು ತಾ ಪುಲ್ಲಶರಂತದ ಸವಿಯ ನೋಡಿಸುತ ॥ ೨೩

ಮಾಡಿದನು ತಾನಮೃತಪಾನವ
ಗಾಢಬಲ ಪತ್ತನ್ನು ತಕಲಶದಿ
ರೂಢಿಗಚ್ಚರಿಯಾಗಿ ಯಂಗೀಕರಿಸಿದನು ಭೀಮ ।
ತೀಡಿಯಾಯಿತು ತ್ರಾಣ ಕರಿಗಳ
ಪಾಡುಗೊಳ್ಳದ ಬಳಿದಿನಾಗಲು
ನೋಡಿ ತಕ್ಷಕ ತನ್ನ ಮಗಳನು ಭೀಮಸೇನಂಗೆ ॥ ೨೪

ಪಾತಾಳಲೋಕದಲ್ಲಿ ಭೀಮನ ವಿವಾಹ.

ವರವಿವಾಹವ ಮಾಡಿ ನುಡಿದನು
ವರವೃಕೋದರ ನಾವು ನಿಮ್ಮಯ
ಹಿರಿಯ ಮಾತಾಮಹರ ಕಡೆ ಕೇಳನುತಲಾಫಣಿಪ ॥
ವರಸುತೆಯು ಭೀಮಂಗೆ ವೇದಿಸಿ
ಯುರಗತಕ್ಷಕ ತನ್ನ ಮನೆಯಲಿ
ಮರುತಜನ ನಿಲಿಸಿದನು ಪುನರಪಿಯೊಂದು ಮಾಸವನು ॥ ೨೫

ನಾಗಕನ್ನಿಕೆಯಿಂದ ಭೀಮನು ಅಮೃತಸ್ಥಳವನ್ನು ತಿಳಿಯುವಿಕೆ.

ಇರುತಿರಲು ವರಭೀಮ ಕಾಕೋ
ದರನ ಸುತೆಯನು ತಾನು ಕೇಳದ
ಸುರರು ಪಾತಾಳದಲಿ ಬೈಚಿಟ್ಟಮೃತವೆಲ್ಲಿಹುದು ।
ಅರಸ ಕೇಳ್ಳಯಮೃತವದು ತಾ
ನಿರುತ ಭೋಗಾವತಿಯ ಸನಿಹದ
ವರಭವನದಲ್ಲಿಹುದು ಯಕ್ಷರು ಸುರರು ಕಾದಿಹರು ॥ ೨೬

ಅಲ್ಲಿದ್ದ ಕಾವಲುಗಾರರನ್ನು ಹೊಡೆದು ಅಮೃತಪಾನಮಾಡಿದುದು.

ಎನಲು ಮಾರುತತನಯನಾಕ್ಷಣ
ವನಿತೆ ಹೇಳಲು ಕೇಳಿ ಧಾತ್ರಿಯ
ನನಿಮಿಷರ ಸುಧೆಯಲ್ಲಿಗೈದಿದ ಯಕ್ಷರಾಕ್ಷಸರ ।

ತನುಗಡಿದು ನೂಱೆಂಟುಲಕ್ಷವ
ನನಿಲಸುತನಪ್ಪಳಿಸುತ್ತೈದಿದ
ನನಿಮಿಷಾರ್ಣವ ಮೊಗೆದು ಕುಡಿಯಲಿಕಿಂದ್ರ ಕೇಳಿದನು ॥ ೨೭

ದೂಱನಾಕ್ಷಣ ಕೇಳುತಿಂದ್ರನು
ಸಾಱಿಸಿದನನಿಮಿಷರಿಗಮೃತವು
ಸೂಱೆಹೋಯಿತು ಬೇಗ ಪಲ್ಲಣಿಸುವುದು ಸುರನಿಕರ [1] ।
ಪಱುವುದು ಕರಿತುರಗರಥಗಳ
ನೇಱಿ ನಡೆವುದು ಭೋಗಪತಿಗಳ
ಗಾಱುಮಾನವನವನ [2] ಹಿಡಿತಹುದೆಂದು ನೇಮಿಸಿದ ॥ ೨೮

ನೇಮಿಸಲು ಬಳಿಕಮರನಿಕರವು
ಭೂಮಿಗಿಳಿಯಿತು ಬಳಿಕಲಲ್ಲಿಯೆ
ಕಾಮಿಸಿತು ಪಾತಾಳವಂಧ್ಯಕ್ಕರಸ ಕೇಳೆಂದ ।
ಆಮಹಾಸುರಸೇನೆ ಬಂದಾ
ಭೀಮಸೇನನ ಮುತ್ತೆ ನಾಕಜ
ಸ್ತೋಮವನು ಹುಡಿಗುಟ್ಟಿಲೊಡಿದುದಿಂದ್ರಮೊದಲಾಗಿ ॥ ೨೯

ಇಂದ್ರಾದಿಗಳು ಸೋತು ಶಿವನನ್ನು ಮರೆಹೊಗುವಿಕೆ.

ಓಡಿ ನಾಕಜಪತಿಯು ಶೂಲಿಯ
ಬೇಡಿಕೊಂಡನು ಜೀಯ ನಮ್ಮನು
ನೋಡಿ ಕೃಪೆಯಿಂದುಳುಹಬೇಹುದೆನಲಿಕೆ ಶಿವನೆಂದ ॥
ಖೋಡತನ ಬಲುಹಾಯ್ತು ನಿಮ್ಮನು
ಕಾಡುವವರಾರೆಂದೊಡಾಗಳೆ
ರೂಢಿಯಿಂದಿಳಿದೊಬ್ಬ ಮಾನವ ಬಂದನಮೃತವನು ॥ ೩೦

ತೋಡಿ ತಿನಲಿಕೆ ನಾವದಿಲ್ಲಿಗೆ
ಜೋಡು ಮಾಡಿದೆವಲ್ಲಿ ಮನುಜನು
ಕಾಡಿದನು ಹಿರಿದಾಗಿ ನಮ್ಮನು ದೇವ ಕೇಳೆಂದ ।

---

[1] ಸುರಕರಿಯು, ಖ. [2] ಪೊಱೆದಾನವಮಾನವನ, ಖ.

ಮೂಡುವುದು ನೀವ್ ಬಿಜಯುವಲ್ಲಿಗೆ
ರೂಢಿಗವೆನುಪಟಳವ ಮೋಹಿಸಿ
ನೋಡಿ ಕಾವುದು ಸುಧೆಯುನೆನಲಿಕೆ ಶಂಭು ಪತಿಕರಿಸಿ ॥ ೩೧

ತನ್ನ ಪರಿವಾರವನು ನಿಲ್ಲಿಸಿ
ಬೆನ್ನಲಾರುವ ಬರಲು ಬೇಡೆನೆ
ತನ್ನ ಸಂಗಡ ಬಂದಳಾಯುಮೆ ಶಿವನು ಕರೆಯಲಿಕೆ ।
ಪನ್ನಗನಭೂಷಣನಿಚಿವಪನು
ಮನ್ನಿಸಿಯೆ ಪಾತಾಳಕಾಗಲು
ಮುನ್ನ ಕಂಡನು ಭೀಮಸೇನನ ರೌದ್ರದಾಕೃತಿಯ ॥ ೩೨

ರುದ್ರ ಭೀಮರ ದ್ವಂದ್ವಯುದ್ಧ.

ಕಂಡು ಕೋಪಾಗ್ನಿಯುಲಿ ಕುರುಕುಲ
ದಿಂಡೆಯುನು ಮೇಲ್ವಾಯ್ದು ವಕ್ಷವ
ಕೊಂಡು ಕುಲಿಶವು ಶೈಲಕಾಗಲೆ ಯೆಱಗುವೆಂದದಲಿ ।
ಖಂಡಪರಶುವಿನುತ್ತಮಾಂಗವ
ದಂಡಿಯುಲಿ ತಿವಿಯುಲ್ಕದಾಹವ
ಚಂಡವಿಕ್ರಮ ತಾನು ತಿವಿದನು ಭೀಮನಂಗವನು ॥ ೩೩

ತಿವಿದೊಡಲನನಿಲಜನು ತತ್ಕ್ಷಣ
ಶಿವನ ವಕ್ಷವನೆಱಗಿ ಮುಷ್ಟಿಯು
ಹವಣ ಕಂಡಾಶಿವನು ವ್ಯಾಘ್ರಾಕಾರ ತಾನಾದ ।
ಪವನಜನ ಕಿಬ್ಬದಿಯುಲೆಱಗಿದ
ಶಿವನು ಪೂರಾಯುವಲು ಪವನಜ
ನವಯುವಕ್ಕಡಱ ಕಲೆಯಾಯ್ತಾ ಭೀಮಸೇನನಿಗೆ ॥ ೩೪

ವರವೃಕೋದರನೆಂಬ ನಾಮವು
ನಿರುತವಾಯ್ತುವೆಗಂದು ಬೞಿಕಾ
ವರವೃಕೋದರ ವ್ಯಾಘ್ರದೇವರ ಮೇಲೆ ಕೋಪಿಸಿಯೆ ।

ಕರದಲಾಘಾಯುವನೆ ಯೊರಸುತ
ಹರಿದು ಬಂದಾಹುಲಿಯು ಕಾಲನು
ಮರುತಜನು ಕಯ್ಯಿಕ್ಕಿ ಹಿಡಿದನು ನಿಮಿಷಮಾತ್ರದಲಿ ॥ ೩೫

ಪಾರ್ವತಿಯು ಪ್ರಾರ್ಥಿಸಿದಂತೆ ಶಿವನನ್ನು ಬಿಡುವಿಕೆ.

ಹಿಡಿದು ತಿರ್ರನೆ ತಿರುಹಿ ನೆಲದೊಳು
ಹೊಡೆವ ಸಮಯಕೆ ಕಂಡು ಪಾರ್ವತಿ
ಬಿಡುಬಿಡೆಲೆ ಪವಮಾನನಂದನ ಈತ ಶಿವನು ಕಣಾ ।
ಹೊಡೆಯದಿರು ಹೊಡೆಯದಿರು ನಾಕಜ
ರೊಡೆಯನೀತನು ವೃಷ ಕಣಾ ಸಿ
ಹೊಡೆಯಲಿಕೆ ಪೊಳ್ಳಹುದು ದೇವಾಸುರಮಹೀತಳವು ॥ ೩೬

ಸುರರ ಕಾರ್ಯಕ್ಕಾಗಿ ಬಂದನು
ವರಸುಧೆಯ ಕಾಯಲಿಕೆ ನೀನೀ
ಹರನನಂಗೀಕರಿಸಿ ಕೊಂಬುದು ಲೋಕ ಮೆಚ್ಚಲಿಕೆ ।
ಹರನ ಯುವತಿಯ ಮಾತ ಮನ್ನಿಸಿ
ಮರುತಜನು ಕಡು ನೊಂದು ಶಿವ ಶಿವ
ದುರುಳದಾನವಹರನೆ ಕರುಣಾಕರನೆ ಶರಣೆನುತ ॥ ೩೭

ಧರೆಯಲಪ್ಪಳಿಸುವುದನಾಗಳ್
ಪರಿಹರಿಸಿ ತಾ ಭೀಮಸೇನನು
ಪರಸನಿಳುಹಿದ ಬಚ್ಚಿಕ ಭೋಗಾವತಿಯ ಮಾರ್ಗದಲಿ ।
ಹರ ಮಹಾದೇವೆನುತ ಭಕ್ತಿಯ
ಲರಸ ಹರನನು ಹೊಗಳಿ ಮತ್ತಾ
ವರಸತಿಯ ಶಿವಸಹಿತ ಚರಣಕ್ಕೆರಗಿ ಪೂಜಿಸುತ ॥ ೩೮

ವ್ಯಾಘ್ರೇಶ್ವರ ಪ್ರತಿಷ್ಠೆ.

ಸ್ಥಾಪಿಸಿದ ತಾ ವ್ಯಾಘ್ರದೇವರ
ರೂಪುಗೊಂಡಿಹುದೆಂದು ರುದ್ರನ
ಕೋಪವನು ನೀರೊಳಗೆ ಕೆಡಹಿದನರಸ ಕೇಳೆಂದ ।

ಆಪುರಂದರಮುಖ್ಯನಾಕಜ
ತಾಪವನು ಮೋಹಿಸಿ ಯದಾಗಲೆ
ಯಾಪುರಂದರತನುಜನಣ್ಣನು ಬಂದನಹಿಕುಲದ ॥ ೩೯

ರಾಜಭವನಕೆ ಬಂದು ತಾ ಸುರ
ರಾಜನನು ಬೀಳ್ಕೊಂಡು ಪಾಂಡವ
ರಾಜಕುವರನು ಬಂದ ಭೋಗಾವತಿಯ ಮಾರ್ಗದಲಿ ।
ರಾಜಭೋಜನ ಮಾಡಿ ಯಮೃತಪ
ತೇಜದಲಿ ಕುರುರಾಯ ಹಾಕಿದ
ವ್ಯಾಜದಲಿ ತಾ ಬಂದನಾಗ ಪ್ರಮಾಣಕೋಟಿಯಲಿ ॥ ೪೦

ಆಪ್ರಮಾಣದ ಕೋಟಿಯಿಂದವೆ
ಸುಪ್ರಮಾಣನು ಬಂದನಾಗಳು
ತಾ ಪ್ರಮಾಣದ ಮಾಸಪರಿಯಕೆ ಕುಂತಿಯಾಲಯಕೆ ।
ಆಪ್ರಭಂಜನಪುತ್ರ ತಡೆದಿರೆ
ಸುಪ್ರಭಂಜನ ಮಾತೆ ಚಿಂತಿಸೆ
ಸುಪ್ರತೀಕಾಂತಕನು ನಮಿಸುತಲಾಗಲಿಂತೆಂದ ॥ ೪೧

ಕುಂತಿ ಯೇನೌ ತಾಯೆ ನಿನಗೀ
ಚಿಂತೆ ಯೇಕನೆ ನಿನ್ನ ಕಾಣದ
ಚಿಂತೆಯೇನೆ ಕೌರವನು ನಮ್ಮ ವಿಷಪ್ರಯೋಗದಲಿ ।
ಭ್ರಾಂತಿಗೊಳಿಸಿಯೆ ಗಂಗೆಯುತ್ತರ
ಗೊಂತಿನಲಿ ಕೆಡಹಿದನು ಕೆಡಹಲು
ಕಂತುಪಿತ ರಕ್ಷಿಸಿದನಲ್ಲಿಯು ನಮ್ಮ ಕೇಳೆಂದ ॥ ೪೨

ಕುಂತಿಗೆ ಭೀಮ ಬರುವನೆಂದು ವ್ಯಾಸರ ವಚನ.

ಭೀಮ ಬಾರದ ಮುನ್ನ ಕುಂತಿಯು
ಭೀಮ ತಡೆದನದೇಕೆ ಬಾರನು
ಕಾಮುಕರು ಕೌರವರು ಬಂದರದೆಂದು ಮರುಗುತಿರೆ ।

ಭೂಮಿಪತಿ ಕೇಳ್ ಕುಂತಿದೇವಿಯು
ಭೀಮಚಿಂತೆಯನಱದು ಮುನಿಗಣ
ಸ್ತೋಮವಂದಿತವ್ಯಾಸ ಬಂದನು ಹಸ್ತಿನಾಪುರಕೆ ॥ ೪೩

ಬಂದ ವೇದವ್ಯಾಸದೇವನ
ವಂದು ಕುಂತಿಗೆ ಹೇಳಿ ಚಿಂತೆಯ
ದಂದುಗವ ಬಿಡಿಸಿದನು ಭೀಮನ ವಿಷಯ ಕತೆಗಳನು ।
ಇಂದು ಮೂಡಿದುದಾತನಾ ಗೋ
ವಿಂದಕರುಣದಿ ವಿಜಯ ನಾಗರ
ಮಂದಿರದೊಳಾಭೀಮ ಮಾಡಿದ ಹದನ ಹೇಳಿದನು ॥ ೪೪

ಇಂಮಧರನನು ಗೆದ್ದು ನಾಗರ
ನಂದನೆಯ ವೈವಾಹವಾದುದ
ನಂದು ನಾಕಜರನ್ನ ವುಂಡುದನ್ನೈದೆ ಹೇಳಿದನು ।
ಇಂದು ಭೀಮಂಗಿದಿರದಾವನೊ
ಇಂದಿರಾಪತಿಯಂಘ್ರಿಬಲದಲಿ
ಕಂದನಾತನ ಚಿಂತೆ ಬೇಡಾ ತಾಯೆ ನಿನಗೆಂದ ॥ ೪೫

ನಾಳೆ ಯುಮದಯಕೆ ಭೀಮನೇ ಸಿ
ನ್ನಾಲಯಕೆ ಬಹನೆಂದು ಹೇಳಿಯೆ
ಬೀಳುಕೊಂಡನು ಸತ್ಯವತಿಸುತ ಕುಂತಿದೇವಿಯನು ।
ಕೇಳಿದನು ಸೌಬಲನು ಭೀಮನ
ಯೇಳಿಗೆಯನಿನಿತೆಲ್ಲ [1] ಮಱುಗಿದ
ಕೋಲುಮಱುವೊನೆಗೊಂಡ ಸರ್ಪನ ವೋಲು ಚಿಂತಿಸಿದ ॥ ೪೬

ದುರ್ಯೋಧನನ ಚಿಂತೆ.

ಹೇಳಿದನು ಕೌರವರಿಗೆಕ್ಕಟ
ಕೇಳಿ ಕೌರವನದಕೆ ತನ್ನಯ
ಕಾಲ ಬಂದನೆ ಯೆನುತ ದುಗಡವ ಹಿಡಿದು ಚಿಂತಿಸಿದ ।

---

1 ಸರಕೇಳಿ, ಕ. ಜ.

ಕಾಲ ಸುಂಗನು ಮೇಲೆ ಸರ್ಪ
ವ್ಯಾಳ ಸುಂಗದು ಭೀಮಸೇನನ
ಕಾಲಕಿನ್ನೇನೆನುತ ಕೌರವರಾಯ ಖತಿಗೊಂಡು ॥ ೪೭

ವನಿತೆಯನು ಬೆಸಗೊಳಲು ಕುಂತೀ [1]
ವನಿತೆ ನುಡಿದಳು ನಿನ್ನೆ ಭೀಮನು
ಮನೆಗೆ ಬಂದನದಾರು ನೀರೊಳು ಕಟ್ಟಿಕೆಡಹಿದರು ।
ಎನಲು ಕೌರವರಾಯ ಶಪಥವ
ಮನಕೆ ಬಂದುದ ನುಡಿದ ಸಾಕ್ಷಣ
ಜನನಿ ಭೀಮನ ಕಾರ್ಯವೇನುವನರಿಯೆ ತಾನೆಂದ ॥ ೪೮

ತನ್ನ ಸಾಕ್ಷಾಜ್ಞನನಿಸುತೆಯುಳ
ಮನ್ನಿಸದೆ ಕೂಡಿದನ ಗತಿಯುಹು
ದಿನ್ನ ನಗೊಸೆದು ವರವಿವಾಹಕೆ ಬಾಲೆಗೊಟ್ಟವನ ।
ಕನ್ಯೆಯನು ಕೂಡಿದನ ಗತಿ ತಾ
ತನ್ನನೈದಲಿ ತಾಯಿ ಗುರ್ವಿಣಿ
ಚನ್ನೆಯನು ಕೊಂದವನ ಗತಿಗಳು ತನಗೆ ಸಮನಿಸಲಿ ॥ ೪೯

ತಾಯೆ ಭೀಮನ ನಾವು ಕಾಣದೆ
ನೋಯುತಲಿ ಬೆದೆಬೆದೆನೆ ಬೇವುತ
ನಾವು ಬಂದೆವು ಮನೆಗೆ ತತ್‌ಕ್ಷಣ ನಿಮಗೆ ಹೇಳುತಲಿ ।
ಬಾಯ ಬಿಡುವೆವು ಭೀಮಸೇನನ
ಕಾಯುವನು ನೆಜಿ ಕಾಣದೀಗಳ
ಬಾಯದಲ್ಲಿರುತಿರಲಿಕೀಶ್ವರ ನಮಗೆ ಕರುಣಿಸಿದ ॥ ೫೦

ಇಂದು ಬಂದನು ಭೀಮಸೇನನ
ದೆಂದು ಕೇಳಿಯೆ ಬಂದೆವಿಲ್ಲಿಗೆ
ಯಿಂದು ನಿಮ್ಮಯ ಭೀಮಸೇನನು ಕಾಣಬಾರನೆನೆ ।

1 ಮನೆಗೆ ಬಂದುದು ಕೇಳಿ ಕುಂತೀ, ಖ.

ಬಂದನೀಕ್ಷಣ ವೀಗ ಗಂಗಾ
ನಂದನನ ವಿದುರಾದಿಭವನಕೆ
ಕಂದ ಗವಿಸಿದನವರ ವಂದಿಸಿ ಹರಕೆಗೊಳಲೆಂದು ॥ ೫೧

ಎನಲು ಕೌರವರಾಯನಾಕ್ಷಣ
ಕನಲಿಕೆಯ ದುಗುಡದಲಿ ಕುಂತೀ
ವನಿತೆಯನೆ ಬೀಳ್ಕೊಂಡು ಬಂದನು ತನ್ನ ಮಂದಿರಕೆ ।
ಅನಿಲಜನ ಘಾತಕ್ಕೆ ಪಾಯುವ
ನೆನೆನೆನೆದು ಮನಗುಂದಿ ಕೌರವ
ಜನಪ ಕಂಡನು ಮತ್ತೆ ವಿಷಗಳಸಿಕ್ಕಬೇಕೆನುತ ॥ ೫೨

ಪಾಶವನು ಹರಿದೆದ್ದು ಬಂದತಿ
ರೋಷಿಸಿದವನನು ಮತ್ತೆ ತವ್ಮೊಳು
ಭಾಷೆಗಳಲೊಂ [1] ದಾಗಿ ಕೂಡಿದರೊಂದು ದಿವಸದಲಿ ।
ಆಸಿಗನು [2] ವೈಮಱಿದು ಹೊತ್ತು ಮ
ಹಾಸುರದ ಫಣಿಗಳಲಿ ಕಚ್ಚಿಸಿ
ಘಾಸಿಮಾಡಲು ಬದುಕಿ ಬೇಸರನಡಿಗಡಿಗೆ ಭೀಮ ॥ ೫೩

ಅರಸ ಕೇಳಾಯುಷ್ಯಮುಳ್ಳೊಡೆ
ಹರಿಹರಬ್ರಹ್ಮಾದಿಗಳು ಸಂ
ಹರಿಸಲಱಿಯರು ಬಱಿದೆ ದೈನ್ಯಂಬಡುವುದೀಲೋಕ ।
ಭರತವಂಶದ ಬಾಹಿರರು ನಿ
ಮ್ಮರಸುಗಳು ಭೀಮಂಗೆ ಮಾಡಿದ
ಹುರಿಯನಾಹರಿ ಹರಿದ ಪರಿಯನು ಮತ್ತೆ ಕೇಳೆಂದ ॥ ೫೪

ಅರಸ ಕೇಳಾಪೂರ್ವದತ್ತವು
ಹರಿವಿರಿಂಚಿಗಳಳವೆ ಲೋಕದ
ಜರಡರೇತಕೆ ದುಃಖ ಬಡುವರು ದೇಹಧರ್ಮದಲಿ ।

1 ವಾಸಮಱಿದೊ, ಕ. ಖ. 2 ಆಸಿತಗ, ಚ. ಟ.

ನಿರುತ ತಾನದು ತಪ್ಪದೈ ಬಾ
ಹಿರರು ನಿವಿಷ್ಟಾಪೂರ್ವಪಿತರೊಳು
ಬರಲು ವಿಷಗೊಡೆ ವಿಧಿಯುಗೆದ್ದುದನಾರು ಬಲ್ಲವರು ॥ ೫೫

ಭೀಮನನ್ನು ಕೊಲ್ಲುವ ಉಪಾಯಚಿಂತನೆ.

ಭೀಮ ಬಂದುದ ಕೇಳಿ ಕೌರವ
ಭೂಮಿಪತಿ ಬೆಂಡಾದನಕಟಾ
ಸೋಮಶೇಖರ ದೇವ ಭೀಮನನೇಕೆ ಕಳುಹಿದನೋ ।
ಭೀಮನನು ನಿರ್ನಾಮ ಮಾಡದೆ
ಭೂಮಿಗಟ್ಟಿದ ಮತ್ತೆ ನಾವೀ
ಭೀಮನಾಶನಕೇನ ಮಾಡುವೆವೆಂದ ಸೌಬಲನು ॥ ೫೬

ಕೇಳ ತಾ ಕೆಕ್ಕರಿಸಿ ನೋಡಿಯೆ
ಹೇಳಿದನು ಮತ್ತೊಂದನಾಗಳು
ಯೋಜಿಗೆಯು ವಿಷದನುವನಾಗಳ ಭೂಪ ಕೇಳೆಂದ ।
ಕೇಳರೈ ವಿಷ ಭೀಮಸೇನಗೆ
ಕಾಲವೆಹುದಲ್ಲೆಂಬ ಮಾತನು
ಖೂಳರವದಿರು ಮೇಲುಗಾಣದ ಪರಿಯು ಕೇಳೆಂದ ॥ ೫೭

ಕಾಳಕೂಟ ಹಲಾಹಲವು ಕಾ
ರ್ಕೋಟಕ ದಾರದ ವತ್ಸನಾಭಿ ಕ
ರಾಳಸೌರಾಷ್ಟ್ರ ಕವಿಶಲ್ಕಲ[1] ಸುಪ್ರದೀಪನವೆ ।
ಹೇಳಲರಿದೆನಿಪೆಂಟು ವಿಷವನು
ಮೇಳವಿಸಿ ಬಚಿಕುಚಿದ ಮಧುರವಿ
ಶಾಲವಸ್ತುಗಳಿಂದ ಕಜ್ಜಾಯಗಳ ಮಾಡಿಸಿದ ॥ ೫೮

ದಿಟ್ಟಿಸಿದರೆವೆ ಸೀವುದಂಗೈ
ಮುಟ್ಟಿದರೆ ಯುರಿದಪುದು[2] ಬಚಿಕವೆ
ನಟ್ಟ ಕೈಚಳಕದ ಸುವಾರದ ವಿದ್ಯೆಯೇನರಿದೋ ।

---

1 ಕರಶೌಕ್ಲಿಕ, ಕ. ಟ. 2 ಹುಗಳಹುದು, ಚ. ಟ.

ವಿಷಾನ್ನವನ್ನು ತಿಂದು ಮತ್ತು ಕೌರವರನ್ನು ಸೋಲಿಸುವಿಕೆ.

ಕೊಟ್ಟರೀತಂಗೆಲ್ಲವೆನು ಜಗ
ಜಟ್ಟಿ ಹಾಯ್ಕೊಂಡು ನುಣ್ಣನೆ
ಚಿಟ್ಟುಮುಱಿಯಾಟದಲಿ ಸದೆದನು ಮತ್ತೆ ಕೌರವನ ‖ ೫೯

ಮಡುವಿನಲಿ ಹಾಯ್ಕಿದಿರಿ ಹಾವಿನ
ಯೆಡೆಯತಂದೂಱಿದಿರಿ [1] ಬಲ್ವಿಷ
ಪಡಿಗೆಗಳ ಮೆಲಿಸಿದಿರಿ ಬಲ್ಲಂದದ ವಿಕಾರದಲಿ ।
ಕೆಡಲನುವ ಮಾಡಿದಿರಿ ನೂರ್ವರ
ಕೆಡಹಿ ಶಾಕಿನಿಯರಿಗೆ ರಕ್ತವ
ಕುಡಿಸಿದಲ್ಲದೆ ಬಱಿದೆ ಬಿಡುವೆನೆ ಯೆಂದನಾಭೀಮ ‖ ೬೦

ಬಳಗೆ ಬಳೆದುದು ವೈರಶಿಖಿ ಕಡೆ
ಗೆಳಸಿ ಹಾಯ್ದುದು ಜನನಿಜನಕರ
ಬಲುನುಡಿಗಳಲಿ ನೂರ್ವರಿರ್ದರು ಶಕುನಿಮತವಿಡಿದು ।
ಖಳಕಳಿಂಗನ ನೀತಿಮತದಲಿ
ಬಲುಹುಗುಂದದೆ ಪಾಂಡುಪುತ್ರರ
ನೆಳಲ ಸೈರಿಸದೆನುತ ತಮ್ಮೊಳು ಸುಯ್ದು ದುಗುಡದಲಿ ‖ ೬೧

ಇರುತ ಕುಂತೀಸುತರ ನೆಕ್ಕಟಿ
ನಿರುತ ಬುದ್ಧಿಯನಱುಹಿ ಧರ್ಮದ
ಹೊಱಿಗೆ ತಪ್ಪದೆ ನಡೆಸುತಿರ್ದರು ಲೋಕ ಮೆಚ್ಚಲಿಕೆ ।
ದುರುಳರುಪಟಳಕಂಜಲಾಗದು
ಹಿರಿದು ಸೈರಿಸನಂಬುಜಾಕ್ಷನು
ಪರಿಹರಿಸಿ ತಾ ಕೊಡುವನಗಣಿತಸುಖಸಮೂಹವನು ‖ ೬೨

ಅಂದು ಮೊದಲಾಗವರು ವಿದುರನ
ದೊಂದಮಾತನು ಮೀಱಿ ನಡೆಯರು
ಮಂದಮತಿಗಳು ಶಕುನಿಮತದಲಿ ದುಷ್ಟಮಂತ್ರವನು ।

---

1 ಹೆಡೆಯತಂದೋದಿರಿ, ಕ. ಛ, ಟ.

ಎಂದು ಬಿಡದವರೈದೆ ಮಾಡುವ
ರಂದು ಮೊದಲಾಗರಸ ಪಾಂಡುವ
ನಂದನರಿಗಾಕೌರವಾದಿಗಳಂದನಾಮುನಿಪ ॥ ೬೩

ಹುಳುಕು ನೀತಿಗಳಾಕಳಂಗನ
ನೊಲಿದು ಕೇಳುವ ಕೌರವೇಂದ್ರನು
ಹುಳುಕುಹೊದ್ದದ ವಿದುರನೀತಿಯುಲಿಹರು ಪಾಂಡವರು ।
ಬಲುಹು ಗುಂದದೆ ಭೀಷ್ಮವಿದುರರ
ಬಳಕೆಯುಲಿ ತಾವೆಡಗಿ ಗುಣದಲಿ
ಕೆಲರು ಮೆಚ್ಚಿ ವಿಭಾಡಿಸುವನಾಭೀಮ ಕೌರವರ ॥ ೬೪

### ಧರ್ಮಾದಿಗಳಿಗೆ ಕೃಪಾಚಾರ್ಯರಿಂದ ಶಸ್ತ್ರಾದ್ಯಭ್ಯಾಸ.

ಆಟದಲಿ ತೊಡಗಿದರು ಮೊದಲಲಿ
ತೋಟಿಯೊನೆ ಸಾಕಾತಗಳ ಕಾ
ಲಾಟವನು ನಿಲಿಸುವೆನು ಶಸ್ತ್ರಾಸ್ತ್ರಗಳ ಸಂಗದಲಿ ।
ಆಟವಿಕರೊಡನಾಡಿ ಬಲಿದೊಳ
ತೋಟಿ ಬಱಿದೇ ಬಿಡದು ಮೃತ್ಯುವಿ
ನೂಟ ಮುಂದಿಹುದೆನುತ ಮನದಲಿ ಭೀಷ್ಮ ಚಿಂತಿಸಿದ [1] ॥ ೬೫

ಧರಣಿಪತಿ ಚಿತ್ರ್ಯಸು ಗೌತಮ
ವರಋಷಿಗೆ ಜನಿಸಿದ ಶರದ್ವನು
ಪರಮಋಷಿಯಾಋಷಿ ತಪೋವನದೊಳಗೆ ಧನುಸಹಿತ ।
ಇರುತ ಕಂಡನು ದೈವಗತಿಯಲಿ
ಸುರವಧುವನಾಕ್ಷಣಕೆ ಕಾಮ
ಜ್ವರಿತನಾದನು ಚಲಿಸಿತಾತನ ವೀರ್ಯವವನಿಯಲಿ ॥ ೬೬

ಅದು ಶರಸ್ತಂಬದಲಿ ನೆಲೆಯಾ
ದುದು ಮುನಿಚ್ಯುತವೀರ್ಯ ಮುನಿಸುತ

---

1 ಕಳಕಾಗುಂದಿದನು ಭೀಷ್ಮ, ಚ. ಛ.

ರುದಿಸಿದರು ಶಂತನುಮಹೀಪತಿ ಕಂಡು ಕೃಪೆಯಿಂದ ।
ಸದನದಲಿ ವಧುವಿಂದ ಸಾಕಿದ
ಮುದದಿ ಕೃಪನೆಂದಿಟ್ಟು ಹೆಸರನು
ಕದನಬಲುಹಿನ ಕೃಪನ ಕರೆಸಿದ ಭೀಷ್ಮ ಹರುಷದಲಿ ॥ ೬೭

ಆ ಕೃಪಾಚಾರಿಯನ ದೆಸೆಯಿಂ
ದೀ ಕುಮಾರರು ನಿಖಿಳತರ್ಕ
ವ್ಯಾಕರಣಮೊದಲಾದ ಚೌದಶವಿದ್ಯೆಗಳನಱಿದು ।
ನಾಲ್ಕು ವೇದದ ಸಕಲಶಾಸ್ತ್ರಾ
ಳಾಕಳಿಯುಳಿ ಪ್ರವೀಣರಾದರು
ಲೋಕದಲಿ ಧನುನಿಪುಣರಾರೆಂದರಸಿದನು ಭೀಷ್ಮ ॥ ೬೮

ದ್ರೋಣಾಚಾರ್ಯರ ಜನನ

ಮುನಿಭರದ್ವಾಜಾಖ್ಯನಿದ್ದನು
ಘನತಪೋನಿಷ್ಠೆಯಲಿ ದಿವಿಜಾಂ
ಗನೆಯ ಕಂಡನು ಘಾಯವಡೆದನು ಮದನನೆಸುಗೆಯಲಿ ।
ತನುಪರಿಚ್ಯುತವೀರ್ಯ ಬೀಳಲು [1]
ಕನಕಕಳಸದೊಳಿರಿಸಲಲ್ಲಿಯೆ
ಜನಿಸಿದನು ದ್ರೋಣಾಭಿಧಾನದಿ ಮುನಿಯ ದೆಸೆಯಿಂದ ॥ ೬೯

ದ್ರೋಣಕಲಶದೊಳಾದ ದೆಸೆಯಿಂ
ದ್ರೋಣನಾದನು ಬಳಿಕ ಮುನಿಯೂ
ದ್ರೋಣಗುಪನಯನಾದಿವಿಪ್ರಕ್ರಿಯೆಗಳನು ಮಾಡಿ ।
ದ್ರೋಣನೊಡನೋದಿದ [2] ನೃಪಾಲ
ಶ್ರೇಣಿಯನು ಶಸ್ತ್ರಾಸ್ತ್ರಕಳಯಲಿ
ಜಾಣರನು ಮಾಡಿದನು ಭಾರದ್ವಾಜಮುನಿಯೊಲಿದು ॥ ೭೦

1 ವನುಗಸ್ಕಜ ಟ, 2 ಬಿಸಿ, ಜು ಟ,

ದ್ರುಪದಜನನ

ದ್ರೋಣನುದಿಸಿದಾದಿನ ಸುಪ
ರ್ವಾಣಿಯುಲಿ ಜನಿಸಿದ ನೃಪಾಲ
ಶ್ರೇಣಿನಾಶಕ ದ್ರುಪದ ಹುಟ್ಟಿದ ಪಾದತಳದಿಂದ ।
ಕ್ಷೀಣಮತಿ ತಾ ಹುಟ್ಟಿದಾಗಳೆ
ಕ್ಷೋಣಿಯುಲಿ ತನಗನುವ ಕಾಣದೆ
ದ್ರೋಣಪಿತನನು ಸಾಋ ಬದುಕಿದ ಹಲವು ಕಾಲದಲಿ ॥ ೭೧

ದ್ರೋಣದ್ರುಪದರದೊಂದು ತಾವಿನ
ಬಾಣವಿದ್ಯೆಯು ಕಲಿತು ಜಗದಲಿ
ಜಾಣರಾದರು ಸಕಲವಿದ್ಯಾಬ್ರಹ್ಮವಿದ್ಯೆಯುಲಿ ।
ಕೇಣವಿಲ್ಲದೆ ಸಕಲಶಾಸ್ತ್ರಪ್ರ
ವೀಣರಾದರು ನಾಲ್ಕುವರ್ಣಕೆ
ದ್ರೋಣಕೃಪರಿಂಗೊಬ್ಬ ಗುರು ಭೂಪಾಲ ಕೇಳೆಂದ ॥ ೭೨

ಕೃಪನನುಜೆಯುನು ತಂದು * ದ್ರೋಣಗೆ
ವಿಪುಳವೈವಾಹವನು ಮಾಡಿದ
ನೃಪತಿ * ಬಂದೀದ್ರೋಣನೊಡನಋದನು ಧನುಶ್ಶ್ರುತಿಯು ।

ಅಶ್ವತ್ಥಾಮ ಜನನ

ಕೃಪೆಯುಲಿ ದ್ರೋಣಂಗೆ ಜನಿಸಿದ
ನಪರಶಂಕರರೂಪನಾಹವ
ನಿಪುಣನಶ್ವತ್ಥಾಮ ಭಾರದ್ವಾಜಗೋತ್ರದಲಿ ॥ ೭೩

ಹುಟ್ಟಿದಾಗಳೆ ದ್ರೋಣಪುತ್ರನು
ನೆಟ್ಟನಶ್ವತ್ಥಾಮದಲಿ ತಾ
ಬಿಟ್ಟು ಹರಿದನು ಶೀಘ್ರಗತಿಯುಲಿ ಕೃಪೆಯ ಮನೆಯಿಂದ ।

---

* ದ್ರೋಣಂಗುಪಯಮವ ಮಾಡಿದನು ಪಾರ್ಷತ ನೃಪತಿ

ನೆಟ್ಟನಾಮಗ ಹರಿಯಲಿಕೆ ಜಗ
ಜಟ್ಟಿಯನು ಹಿಡಿತಂದು ಮನೆಯು
ಳ್ಲಿಟ್ಟನಾಮವನೀತನಶ್ವತ್ಥಾಮ ತಾನೆಂದು ॥ ೭೪

ತಂದೆಯಲಿ ಶ್ರಮಮಾಡಿದೀನೃಪ
ವೃಂದಸಹಿತೀದ್ರೋಣದ್ರುಪದರ
ದಿಂದುಧರನವತಾರಕಿತ್ತರು ಸಕಲಹರಿಕೆಯನು ।
ಅಂದು ಶರಕವಚವನು ದ್ರೋಣಗೆ
ತಂದು ಭಾರದ್ವಾಜನಿತ್ತನು
ನಂದನಗೆ ಬಳಿಕಿನ್ನು ಮುಂದಣ ಕಥೆಯ ಕೇಳೆಂದ ॥ ೭೫

ದ್ರೋಣರಿಂದ ರಾಜ್ಯಲಾಭ ಸೂಚನೆ.

ದ್ರೋಣನಾಶ್ರಮದೊಳಗೆ ದ್ರುಪದನು
ಕ್ಷೀಣಕಳೆಗಳಲಿರಲು ಕಂಡಾ
ದ್ರೋಣನೆಂದನು ನೀನು ಚಿಂತಿಸಬೇಡ ನಿನಗಿನ್ನು ।
ಮಾಣದಿಪ್ಪತ್ತೊಂದು ದಿನದಲಿ
ಕಾಣಬಹುದೈ ನಿನಗೊಡೆಯತನ
ಕೇಣವಿಲ್ಲದೆ ಯಿಲ್ಲಿ ತಾ ಪಾಂಚಾಲದೇಶದಲಿ ॥ ೭೬

ದ್ರೋಣರಿಗೆ ಅರ್ಧರಾಜ್ಯದಾನಪ್ರತಿಜ್ಞೆ

ಎನಲು ಸಂತೋಷದಲಿ ದ್ರುಪದನು
ಮುನಿಗೆ ನುಡಿದನು ನಿಮಗೆ ರಾಜ್ಯವ
ವಿನಯದಲಿ ಸರಿಭಾಗವೀವೆನು ದ್ರೋಣ ಕೇಳೆನಲು ।

ದ್ರುಪದಗೆ ರಾಜ್ಯಲಾಭ

ಜನಪ ಕೇಳಾಚೆಯಲಿ ಪಾರ್ಷತ
ಜನಪನಿರಲಿಕ್ಕನುಜರಾತನ
ತನತನಗೆ ಸ್ವಪತನಕೆ ಹೋರಲಿಕಾಗ ಮಂತ್ರಿಗಳು ॥ ೭೭

ವಿನಯದಲಿ ಗಜಬಜವ ಮಾಣಿಸಿ
ಜನಪತಿಯ ಮದಕರಿಯನರ್ಚಿಸಿ
ಜನಪತಿತ್ವಕೆ ನಾವು ಬಿಡಲಿಕದಾರ ಕೈಕೊಂಡು ।
ಮನೆಗೆ ತರುವುದೊ ಆತನೇ ನೃಪ
ನೆನಲು ಖತಿಯನು ಮಾಣ್ದು ಹಸ್ತಿಯ
ಜನಪನನುಜರು ಬಿಡಲಿಕಾಗಜ ಬಂದು ದ್ರುಪದನನು ॥ ೩೮

ಅಂದು ಕಂಡುದು ಪುರದ ಬಾಹ್ಯದ
ಲೊಂದು ದೇವಾಲಯದ ಮಧ್ಯದ
ಗೊಂದಿಯಲಿ ತಾ ದ್ರುಪದನೊಱಗಿರೆ ಭದ್ರಗಜ ಬಂದು ।
ಚಂದದಲಿ ಪಾರ್ಷತನನೆಬ್ಬಿಸಿ
ತಂದು ರಾಜಾಲಯವ ಹೊಗಿಸಲಿ
ಕಂದು ವರರಾಜ್ಯಾಭಿಷೇಕವ ಧರಿಸಿದನು ದ್ರುಪದ ॥ ೩೯

ದ್ರೋಣಾಚಾರ್ಯರು ಪರಶುರಾಮರ ಬಳಿ ಬರುವಿಕೆ.

ಇತ್ತ ದ್ರೋಣನ ಪಿತನು ತಾ ಸುರ
ರತ್ನ ಸರಿದನು ಬಟಿಕ ಕಳಸಜ
ತತ್ತಪೋವನದಲ್ಲಿ ಜನಕಕ್ರಿಯೆ[1]ಗಳನು ಮಾಡಿ ।
ಹೊತ್ತ ದಾರಿದ್ರ್ಯದಲಿ ಮನಮಱು
ಗುತ್ತ ದೇಶಾಂತರದೊಳಗೆ ತೊಳಿ
ಲುತ್ತ ಬಂದನು ಮಗ ಸಹಿತ ಹೇರಡವಿಯಲಿ ದ್ರೋಣ ॥ ೪೦

ಪರಶುರಾಮಾಶ್ರಮಕೆ ಮುನಿಯೈ
ತರಲು ಭಾರದ್ವಾಜನನು ಸ
ತ್ಕರಿಸಿ ನುಡಿದನು ಜಾಮದಗ್ನ್ಯನು ಮಧುರವಚನದಲಿ ।
ಧರೆಯನಿತ್ತೆನು ನಾನು ದ್ವಿಜರಿಗೆ

---

1 ಯೂರ್ಧ್ವಕ್ರಿಯೆ, ಖ. ಚ, ಟ,

ಶರಧಿಯೊಳಗಿರ್ದಪೆನು ನಿಮ್ಮಯ
ಪರಮಮುನಿಯಾತಿಥ್ಯಪೂಜೆಗಭಾಗ್ಯ ತಾನೆಂದ ‖ ೪೧

ದ್ರೋಣಪರಶುರಾಮರ ಸಂಭಾಷಣ.

ವಿನಯದಲಿ ನೀ ಬಂದ ಬರವೇ
ನೆನಲು ದ್ರೋಣನು ಜೀಯ ಬಿನ್ನಹ
ಯೆನಗೆ ತಾನೀಸುತನು ಜನಿಸಿದೊಡಿವಗೆ ಹಯನಿಲ್ಲ |
ತನುಜನೀತನು ಹಾಲ ಬೇಡುತ
ಮನೆಯೊಳಗೆ ಕಡು ಕಾಡುತಿರಲಿಕೆ
ವನಿತೆ ಯೆಮ್ಮಯ ಭಿಕ್ಷದನ್ನವ ಕದಡಿ ಕುಡಿಸುವಳು ‖ ೪೨

ಕುಡಿದು ಸುಖದಲ್ಲಿರಲಿಕೊಂದಿನ
ದೊಡನೆ ಯಾಡುತ ನೃಪನು ಕಂಡನು
ಕುಡಿಸಿದನು ತಾ ತನ್ನ ಮನೆಯಲಿ ಹಾಲುತುಪ್ಪವನು |
ಕುಡಿದು ಮಱುದಿನ ಯಾವನಾಳದ
ಪುಡಿಯ ಕದಡನು ಕುಡಿಯಲೊಲ್ಲದೆ
ಕೆಡಹಿ ಕಳದನು ಯಾಳಿಯಾಡುತವಳುತ ಹೋರುತಿರೆ ‖ ೪೩

ಇರಲಿಕಾಗಲು ನಾನು ಬಂದೆನು
ಪರಿವಿಡಿಯಲಾತನುಜನಳುತಿರೆ
ನಿರುತದಲ್ಲಿಂತೆಂದು ಕೃಪಿ ತಾ ನುಡಿದಳೆನ್ನೊಡನೆ |
ತರುಣನಿಗೆ ನೀವೊಂದುಧೇನುವ
ತರಲಿಕೊಲ್ಲಿರಿ ಯೆಂದು ಬುದ್ಧಿಯು
ಮೆಱೆಯಲಿಕೆ ನಾ ಬಂದೆನಿಲ್ಲಿಗೆ ನಿಮ್ಮ ಬೇಡಲಿಕೆ ‖ ೪೪

ಎನಗೆ ವ್ರತವೊಂದಿಹುದು ಮಾನವ [1]
ಜನದೊಡನೆ ದಾನವನು ಕೊಳ್ಳನು

1 ರಾಕ್ಷಸ, ಖ.

ವನಜಲೋಚನ ನಿಮ್ಮ ಧೇನುವ ಬೇಡ ಬಂದೆನೆನೆ ।
ಎನಲು ಭಾರ್ಗವರಾಮನೆಂದನು
ನಿನಗೆ ಕೊಡುವೊಡೆ ಧೇನು ನಮ್ಮ
ಲ್ಲೆನಿತದಿದ್ದೈಸುವನು ಧರಣಿಯನಮರರಿಗರ್ಪಿಸಿದೆ ॥ ೮೫

ಧನರಹಿತ ನಾ ಹೊತ್ತ ಭಾರಿಯು
ಧನುವಿದೊಂದಿದೆ ದಿವ್ಯಶರವಿದೆ
ಮನಕೆ ಬಂದೊಡೆ ವರಿಸಿ ನೀವೆನೆ[1] ದ್ರೋಣ ನಸುನಗುತ ।

ಶಸ್ತ್ರಾಭ್ಯಾಸವನ್ನು ವರಿಸುವಿಕೆ.

ಎನಗೆ ನಿಮ್ಮಡಿಗಳ ಕೃಪಾಲೋ
ಕನದಲುತ್ಸವವಾಯ್ತು[2] ಲೋಕದ
ಜನಮನೋರಂಜನವೆ ಬೇಹುದು ಶರವೆ ಕೊಡಿ ಯೆಂದ॥ ೮೬

ಆಮಹಾನಿಸ್ಸೀಮಋಷಿಗಾ
ಸೋಮಶೇಖರಗಿರಿಗಾಳಿನು
ಭೂಮಿಯಲಿ ಸರಿಯಿಲ್ಲ ಖರಸಂಗ್ರಾಮಭೂಮಿಯಲಿ ।
ಆಮಹಾಭಾರತದ ಯುದ್ಧದ
ಹೋಮದಲಿ ನೀ ವರಸದಸ್ಯನ
ದೀಮಹಾವರವೈಷ್ಣವಾಸ್ತ್ರವ ಕೊಳ್ಳು ನೀನೆಂದ ॥ ೮೭

ಬಳಿಕ ಭಾರದ್ವಾಜಸುತ ತಾ
ನೊಲಿದು ಕೊಂಡನು ದಿವ್ಯಬಾಣವ
ನಿಳೆಯ ಭಾರವನಿಂಬುಹಲಾಯಿತಿದೆನುತ ಕೈಕೊಂಡ ।
ಜಲಧಿಯಲಿ ಮಿಂದಗ್ನಿಕಾರ್ಯವ
ನೊಲಿದು ಮಾಡಿಯೆ ಬಂದು ಗುರುವಿನ
ಬಳಿಯನಾಂತುಜಿ ಬಾಣವಿದ್ಯೆಯ ಕಂಡು ಹರ್ಷಿಸಿದ ॥ ೮೮

ಇವು ಮಹಾನಿಸ್ಸೀಮತರವೈ
ಷ್ಣವವೆಲೇ ದಿವ್ಯಾಸ್ತ್ರಚಯಗಳ

---

[1] ಬಂದುವರಿಸುನೀನೆನೆ. ಚ. ಟ.  [2] ವಲೇಪರಿಯಾಯ್ತು, ಚ. ಟ.

ನವೆರು ಕೊಟ್ಟರು ಕೊಂಡನುಚಿತವಿಧಾವದಲಿ ದ್ರೋಣ |
ಇವು ಮಹಾರಣರಂಗದಲಿ ಶಾ
ತ್ರವನಿವಾರಣವೈಸಲೆವಿಮ್ಮ
ವ್ಯವಹೃತಿಗೆ ತಾನೇನುಪಾಯವೆನುತ್ತ ಚಿಂತಿಸಿದ ॥ ೪೯

ದ್ರೋಣನು ದ್ರುಪದರಾಯನ ಬಳಿ ಬರುವಿಕೆ.

ಮಗನೆ ಬಲ್ಲೈ ದ್ರುಪದಭೂಪತಿ
ಮಗುವುತನದಿಂದೆಮ್ಮ ಸಖವೋ
ಲಗಿಸುವಾತನದೊಲಿದು ಸಲಹುವ[1] ಮಿತ್ರಭಾವದಲಿ |
ಪುಗುವ ನಡೆ ಪಾಂಚಾಲರಾಯನ
ನಗರಿಯನು ನಾವೆಂದು ಮುನಿಪಮೌ
ಳಿಗಳ ಮಣಿಯನು ಬೀಳುಕೊಂಡನು ರೇಣುಕಾಸುತನ ॥ ೫೦

ಬಂದನೀತನು ದ್ರುಪದರಾಯನ
ಮಂದಿರಕ್ಕಾ ಬಾಗಿಲಾಳ್ಗಳೊ
ಳೆಂದನೆಲವೋ ನಾವು ನಿಮ್ಮರಸಂಗೆ ಪೂರ್ವದಲಿ |
ಸಂದ ಮಿತ್ರರು ದ್ರೋಣಮುನಿಪತಿ
ಯೆಂದು ನಮ್ಮಭಿಧಾನವನು ಹೇ
ಳೆಂದು ಕಳುಹಲು ಬಂದು ಬಿನ್ನಹಮಾಡಿದರು ಪದನ ॥ ೫೧

ಐಶ್ವರ್ಯಮದದಿಂದ ದ್ರುಪದರಾಯನ ಉಪೇಕ್ಷೆ.

ಸಿರಿಯ ಮದವಧಿಕಪ್ರತಾಪ
ಜ್ವರದ ಮದವೊದಲಾದ ಮದಸಂ
ಕರದ ರಜದಲಿ ಮಾಸಿತೀತನ ಮನದ ಮಡಿವರ್ಗ |
ತಿರಿವ ಹಾರುವರೊಡನೆ ಭೂಮೀ
ಶ್ವರರಿಗೆತ್ತಣ ಮೈತ್ರಿ ಹೋಗಲಿ
ಕರೆಯಬೇಡೆನೆ ಬಂದು ಬಾಗಿಲವ ನಿವಾರಿಸಿದ ॥ ೫೨

---

1 ಮೆವು ನಾವಲ್ಲಿ ಸಲಹನೆ, ಟ.

ಮಱೆದನೇ ತಪ್ಪೇನು ನಾವ್ ಕಂ
ಗಱುಹಿ ಮರಳುವೆವೈ ಸಲೇ ಯೆಂ
ದುಱುಬಿದೊಡೆ ತಱುಬಿದರು ಕಂಬಿಯುನಿಕ್ಕಿ ಬಾಗಿಲಲಿ ।
ಬಱಿಯುನುಗುಳಚಿ ಖಡುಗದಲಿ ಬಿಡೆ
ತರಿದನಿಕ್ಕೆಲದವರನೋಲಗ
ಕುರವಣಿಸಿದನು ಮುಂದೆ ನಿಂದನು ದ್ರುಪದಭೂಪತಿಯ ॥ ೯೩

ಏನೆಲವೊ ಪಾಂಚಾಲ ಚಿಕ್ಕಂ
ದಾನು ನೀನೊಂದಾಗಿ ತಂದೆಯೊ
ಳೇನ ಕಲಿತವು ಮಱೆದು ಕಳದ್ಯೆ ಹಾ ಮಹಾದೇವ ।
ಏನು ಬಂದಿರಿ ಯೆಂಬ ಗುಣವೆಚ
ನಾನುರಾಗವೆ ಸಾಲದೇ ಧನ
ವೇನು ಫಲ ಕಕ್ಕುಲಿತೆ ನಮಗಿಲ್ಲೆಂದನಾದ್ರೋಣ ॥ ೯೪

ಸೂರಿಗಳಗತಿಮೂರ್ಖರಿಗೆ ಗಂ
ಭೀರರಿಗೆ ಭಂಡರಿಗೆ ವೇದಾ
ಚಾರಸಂಯುಕ್ತರಿಗನಾಚಾರಪ್ರಸಕ್ತರಿಗೆ [1]
ಧೀರರಿಗೆ ಹಂದೆಗಳಗೆತ್ತಣ
ಸೇಱುವೆಗಳ್ಳ ಭೂಪತಿಗೆ ಬಡ
ಹಾರುವರಿಗೆತ್ತಣದು ಸಖತನವೆಂದನಾದ್ರುಪದ ॥ ೯೫

ಆಗ ದ್ರೋಣಾಚಾರ್ಯರ ಪ್ರತಿಜ್ಞೆ.

ಎಲವೊ ನಿನ್ನಾಸ್ಥಾನಸಹಿತೀ
ಹೊಟಿಲ ಸುಡುವೆನು ನಿನ್ನ ಸೀಟಿಯೆ
ಬಲಿಯು ಕೊಡುವೆನು ಭೂತಗಣಕಿದಿರಲ್ಲ ನೀನೆನಗೆ ।
ಕಲಿತವಿದ್ಯೆಯು ಕೋಲ ಮಕ್ಕಳ

1 ಪ್ರಶಸ್ತರಿಗೆ, ಕ. ಖ.

ಕಳುಹಿ ಕಟ್ಟಿಸಿ ಪಾಪಪಾದದಿ
ತಲೆಯನೊದೆವೆನು ಮಱಿಯದಿರು ನೀನೆಂದನಾದ್ರೋಣ ॥ ೯೬

ಎಂದು ಗರ್ಜಿಸಿ ಮಗ ಸಹಿತ ಮನ[1]
ನೊಂದು ಮುನಿ ಮರಳಿದನು ಜನಪದ
ವೃಂದ ಹಲವನು ಕಳೆದು ಬಂದನು ಹಸ್ತಿನಾಪುರಕೆ ।
ಅಂದು ಸಕಲಕುಮಾರಕರು ನಲ
ವಿಂದ ನಗರಿಯ ಹೊಱಗೆ ಗುಳಿಗಳ
ಮುಂದುವರಿದೆಸುಗಲೆಸದಿರೆ ಕಂಡನಾದ್ರೋಣ ॥ ೯೭

ಬೆರಸಿದನು ನೆರವಿಯಲಿ ನೋಡು
ತ್ತಿರೆ ಯುಧಿಷ್ಠಿರನೃಪನ ಹರಳುಂ
ಗುರವಿಘಾತಿಯಲುಗಿದುಬಿದ್ದುದಗಾಧಕೂಪದಲಿ ।
ನೆರೆದು ತಡಿಯಲಿ ನಿಂದು ನೋಱ್ಱ
ವರು ನಿರೀಕ್ಷಿಸಿ ಸಾಧ್ಯವಲ್ಲೆನು
ತಿರೆ ಮಗಂಗೆ ಮುನೀಂದ್ರನೆಂದನು ಬೇಗ ತೇಗೆಯೆಂದು[1] ॥ ೯೮

ಸರಳ ತೊಡಚಿ ತದೀಯಮೋಣಿಬಂ
ಧುರದ ಮುದ್ರಿಕೆಗೆಚ್ಚ ನಾಗಳು[2]
ಶರಶಳವೆಹಿಳುಕಿನಲಿಕಣೆ ಕಣೆಯನು[3] ನಿಬಂಧದಲಿ ।
ಸರಳ ಸಂದರ್ಭದಲಿ ನಿಮಿಷಾಂ
ತರಕೆ ಫಣಿಪನ ಹೆಡೆವೆಣಿಯನು
ದ್ಧರಿಸುವಂತಿರೆ ತೆಗೆದು ಬಿಸುಟನು ರತ್ನಮುದ್ರಿಕೆಯ ॥ ೯೯

ಕಂಡು ಬೆಱಗಾದುದು ಕುಮಾರರ
ತಂಡ ತನತನಗೈದಿ ಭೀಷ್ಮನ
ನಂಡಲೆದುದೀ ಮುನಿಯ ನಿಂದೇ[4] ಸಂತವಿಡಿಯೆಂದು ।

---

1 ಭಾಷೆಯುಮಾಡಿತನ್ನಯ್ಯ, ಚ. ಟ
2 ಹಿಳುಕಿನ, ಟ.
3 ಶಿರಕೆ ಶರವಾಹಿಳುಕಿನಲಿ ಕನಿರೆಯುಚ್ಚು. ಟ.
4 ನೀಗೆಲೆ, ಖ.

ಚಂಡಭುಜಬಲನವರ ಕಾಣಿಸಿ
ಕೊಂಡು ಕೊಟ್ಟನು ಭೀಷ್ಮನವರಿಗ
ಖಂಡವಿಭವವೆನತುಳಧನಪತಿಯಾದನಾ ದ್ರೋಣ ॥ ೧೦೦

ವರಮುಹೂರ್ತದೊಳವರ ಸೂಚ್ಯ
ವರನು ಕೊಟ್ಟನು ಶಸ್ತ್ರವಿದ್ಯಾ
ಪರಿಣತರ ಮಾಡೆಂದು ದ್ರೋಣನ ಕೈಯ್ಯಲಾ ಭೀಷ್ಮ ।
ಗರುಡಿಕಟ್ಟಿತು ಮೂಱುಯೋಜನ
ವರೆಯು ವಿಸ್ತಾರದಲಿ ಸಾವಿರ
ಕುಱುಯು ಹೊಯ್ದರು ಪೂಜಸಿದರಾ ಚತುರಚಂಡಿಕೆಯ ॥೧೦೧

ಗರುಡಿ ಪೂಜಾವಿಧಿಯು ಸಮನಂ
ತರದಲನಿಬರು ಚಾಪವಿದ್ಯೆಗೆ
ನಿರತರಾಗಲು[1] ಕೇಳದರ ಸಾನಾದಿಗಂತದಲಿ ।
ಬರುತಲಿರ್ದರು ಕೂಡೆ ಹಸ್ತಿನ
ಪುರಕೆ ವಿದ್ಯಾರ್ಥಿಗಳು ಪಾರ್ಥಿವ
ವರಕುಮಾರರು ಬಂದು ಕಂಡರು ಶಸ್ತ್ರ ಪಂಡಿತನ ॥ ೧೦೨

ರಾಯಬಲ್ಲೈ ಹಿಂದೆ [2] ಶಿಶುವನು
ತಾಯಿ ಬಿಸುಟಳು ಗಂಗೆಯಲಿ ರಾ
ಧೇಯನಾದನು ರಾಧೆಯೆಂಬವಳೊಲಿದು ಸಲುಹಿದೊಡೆ ।
ಆಯುಗತಿಗಳ ಪರಿಯನಾತನ
ರಾಯ ಕೇಳ್ಕೆ ಕರ್ಣ ಗಾದಿನ
ದಾಯುಗಂಡವು ಹಿಂದೆ ಮೂವತ್ತಾಱು ವತ್ಸರವು ॥ ೧೦೩

ಅಂದಿಗ್ಗೆತಂದಿಭಪುರಿಯ ನೃಪ
ಮಂದಿರಕೆ ಬಂದಲ್ಲಿ ದ್ರೋಣನ
ದ್ವಂದ್ವಚರಣಕೆ ಕಯ್ಯ ಮುಗಿದನು ಗುರುವೆ ಕೇಳೆಂದ ।

---

1 ಸಮವತೊಡಗಿದರರ ಸುಮುಕ್ಷಳು, ಚ. ಟ. 2 ಮುನ್ನ, ಟ.

ಇಂದು ನಮಗೀ ಶಸ್ತ್ರ ವಿದ್ಯೆಯ
ತಂದೆ ಕಲಿಸುವುದೆನಲು ದ್ರೋಣನ
ದೆಂದನೆಲವೋ ನೀನು ಸೂತನು ಕಲಿಯುತರವಲ್ಲ ॥ ೧೦೪

ಎನಲು ತಿರುಗಿದ ಕರ್ಣನಾಕ್ಷಣ
ತನುವನಂಗೀಕರಿಸಿ ಕೊಂಡನು
ವಿನುತಭೂಸುರರೂಪಿನಂದದಿ ಬಂದು ಭಾರ್ಗವನ ।
ವನದ ಮಧ್ಯಕೆ ಬಂದು ರೇಣುಕ
ತನುಜಗೆಱಗಿದೊಡಾತ ಕೇಳಿದ
ಮನುಜರಾರ್ಕೆ ನೀವದೆಂದೊಡೆ ನಾನು ಭೂಸುರನು ॥ ೧೦೫

ಎನಗೆ ನಿಮ್ಮಯ ಚಾಪವಿದ್ಯೆಯ
ನನುಕರಿಸಬೇಕೆನಲು ಭಾರ್ಗವ
ಮನವೊಲಿದು ತಾ ನಿತ್ತ ನಾನಾಶಸ್ತ್ರಕೌಶಲವ ।
ಮನಕೆ ಹತ್ತಯವಾದ ಶಿಷ್ಯನ
ವನದೊಳೊಂದಿನ ಕರೆದು ಜಾನುವ
ತನಗೆ ತಲೆದಿಂಬಾಗಿ ಮಲಗಿದ ತ್ರಿಗುಣವರ್ಜಿತನು ॥ ೧೦೬

ಇರಲಿಕಿಂದ್ರನು ಕರ್ಣಶಸ್ತ್ರದ
ಪರಿಯನಱಿದಂತಾಗ ಶಾಪವ
ಧರಿಸಿ ಕೀಟಕನಾಗಿ ಕರ್ಣನ ತೊಡೆಯ ಛಿದ್ರಿಸಿದ ।
ಗುರುಗಳಿಗೆ ತಾ ನಿದ್ರೆ ಭಂಗವು
ದೊರಕುವುದು ತಾ ನಲುಗಿದೊಡೆ ತಾ
ನಿರುತವೆಂದಾಗಳುಕದಿರ್ದನು ಕರ್ಣನೊಂದುದಿನ ॥ ೧೦೭

ತೀಡಿ ತೊಡೆಯನು ಕೊಱೆದು ರಾಮನ
ನೀಡಿಱಿದು ತೊಡೆಯೆರಡ ಮುಟ್ಟಲು
ನೋಡಿದನು ರಾಧೇಯನಿರವನು ತೊಡೆಯ ಘಾಯವನು ।

ಮೂಡಿತರುಣಾಂಬುವಿನ ನದಿಯಿದು
ಕೂಡಿ ಕೊಳಚಿದುದದೇಕೆ ತಾಳ್ದನೊ
ಶೋಧಿಯುಲಿ ದ್ವಿಜಜಾತಿಯುಚ್ಚರಿ ನೀನದಾರೆಂದ ॥ ೧೦೯

ಎನಲು ಕರ್ಣನು ನಾನು ಸೂತನ
ತನುಜ ನಿಮ್ಮಲಿ ಧನುವಿನಭ್ಯಾ
ಸನವ ಕಲಿತೆನು ಮನಕೆ ಬಂದುದ ಕೊಡುವುದೆನಗೆಂದ ।
ಎನಲು ರಾಮನು ಕೊಟ್ಟ ಶಾಪವ
ನಿನಗದವಸರಕೊದವಿದಂದಿಗೆ
ವಿನುತ ನಮ್ಮಯ ಮಂತ್ರ ಮಱೆಯುಲಿ ಹೋಗು ನೀನೆಂದ ॥ ೧೧೦

ಆಯುಗತಿಯಿಂ ಪರಶುರಾಮನ
ಲಾಯುಧಶ್ರಮಗಲಿತು ಬಟಕದು
ವಾಯುವಾಯಿತು ಬಂದ ನೀಗಜಪುರಿಗೆ ಕಲಿಕರ್ಣ ।
ರಾಯುಗುರುವಿನ ಹೊರೆಗೆ ಹೋಗದೆ
ರಾಯನಱಿಯದೆ ಕರ್ಣಕೌರವ
ರಾಯನಗರಿಯ ಬಂದು ಹೊಕ್ಕನು ವರುಷವೆರಡಱಲಿ ॥ ೧೧೧

ಬಂದು ಹಸ್ತಿನಪುರಕೆ ರಾಧಾ
ನಂದನನು ದುರ್ಯೋಧನನನ್ನೈ
ತಂದು ಕಂಡನು ಕೌರವೇಶ್ವರ ಹಿರಿದು ಮನ್ನಿಸಿದ ।
ಅಂದು ಮೊದಲಾಗವರ ಸಖ್ಯಕೆ
ಸಂದ ಕಾಣೆನು ಕರ್ಣಕುರುಪತಿ
ಗೊಂದೆ ಜೀವನವೊಂದೆ ಮತಮನವೊಂದೆ [1] ಕೇಳೆಂದ ॥ ೧೧೨

ಬೇಟೆ ಕರ್ಣನಕೂಡೆ ಹಗಲಿರು
ಳಾಟ ಕರ್ಣನ ಕೂಡೆ ಷಡುರಸ
ದೂಟ ಕರ್ಣನ ಕೂಡೆ ಶಸ್ತ್ರಾಭ್ಯಾಸ ವಿವನೊಡನೆ ।

---

1 ಮತವದುಭೂಪ, ಕ.

ಬೇಟ ಮನದಲಿ ನಗೆಯು ಮಧುರದ
ನೋಟ ಕಣ್ಣಲಿ ಬಲಿದವರೆಕೂ
ಡಾಟಗಳಲಿವರಿಬ್ಬರೊಂದೆನಿಸಿದರು ಜಗವೆಱಿಯೆ ॥ ೧೧೨

ಸುರಗಿ ಸಬಳ ಕಠಾರಿಯುಬ್ಬಣ
ಹರಿಗೆಹಿರಿಗದೆ ಬಹುದ್ವಿಧಾಯುಧ
ಪರಿಘ ಚಕ್ರ ಮುಸುಂಡಿ ತೋಮರಭಿಂಡಿವಾಳಚಯ ।
ಪರಶು ಕಕ್ಕಡೆ ಮುಸಲ ಮುದ್ಗರ
ಪರಧನುರ್ದಂಡಾದಿಶಸ್ತ್ರಾ
ತ್ಕರದಲನಿಬರು ಕುಶಲರಾದರು ಮುನಿಯ ಗರುಡಿಯಲಿ ॥ ೧೧೪

ಜನಪ ಕೇಳ್ಕೈ ಭೀಮದುರ್ಯೋ
ಧನರು ಗದೆಯಲಿ ಮಿಗಿಲು ಕರ್ಣಾ
ರ್ಜುನರು ಧನುವಿನಲಧಿಕರಾದರು ನೃಪಕುಮಾರರಲಿ ।
ತನತನಗೆ ಸರ್ವಾಯುಧಂಗಳ
ಲನಿಬರಱಿತರು ಕೂಡೆ ಗುರುವಿನ
ಮನಕೆ ಹತ್ತೆಯುವಾದನರ್ಜುನ ಶಸ್ತ್ರಶಿಕ್ಷೆಯಲಿ ॥ ೧೧೫

ಒಂದುದಿನ ಫಲುಗುಣನ ಭೋಜನ
ದಂದವನು ತಾ ವೆಱಿಯಲಿಕೆಯುರ
ವಿಂದವದನೆಯು ಕೈಯ್ಯ ದೀಪವನಿರುಳು ಬೀಸಿಸಿದ ।
ಸಂದಕತ್ತಲೆಯೆಂದು ಮೂಣದೆ
ಯುಂದು ಪೂಣಲಿಕೆ ಕಂಪ ಬಾರ್ಕೆ
ಸಂದ ನಿಶೆಯೊಳಗೂಟವೇನೆನಲಿದಕೆ ಬೆಳಕೇಕೆ ॥ ೧೧೬

ಎನಲು ದ್ರೋಣನು ಮೆಚ್ಚಿ ಪಾರ್ಥಗೆ
ಮನವೊಲಿದು ತಾನೆಂದನೆಲವೋ
ವಿನುತಗುಣಗಳ ತಱಿವಶಾವಿಗೆ ನಯನ ಬೇಡೆಂದು ।

ಎನುತ ತಿರುಗಿದ ದ್ರೋಣ ಮನೆಗೆಯು
ನೆನೆಯುತದನಾಪಾರ್ಥ ಹಿಡಿದನು
ಮನದೊಳುತ್ಸಾಹಿಸುತ ಮಾಡಿದ ಲಕ್ಷ್ಯವಿದ್ಯೆಯಲಿ ‖ ೧೧೭

ಮಾಡಿದನು ಗರುಡಿಯಲಿ ಶ್ರಮವನು
ನೋಡಿದರೆ ಗುಣಿಯೆಸೆವ ವಿದ್ಯೆಯು
ರೂಢಿಯೊಳಗದು ಚೋದ್ಯವೆನಿಸಿತು ಪಾರ್ಥ ಮಾಡಿದುದು ।
ಮಾಡುತಿರಲೊಂದಿನದೊಳೊಬ್ಬನು
ಬೇಡ ಬಂದನು ವ್ಯಾಧ ಧನುವನು
ರೂಢಿನೃಪರಾಚಾರ್ಯರೆಂದಪರೇಕಲವ್ಯಂಗೆ ‖ ೧೧೮

ನೀನು ಬೇಡನು ನಿನಗೆ ವಿದ್ಯೆಯು
ನಾನು ಕಲಿಸಲು ಬಾರದೆಂದೊಡೆ
ಹೀನಮನದಲಿ ಮರಳಿದನು ತಾ ಕಾನನಂಗಳಿಗೆ ।
ಏನ ಮಾಡುವೆನೆನುತ ಮೃಣ್ಮಯ
ಮಾನವಾಕೃತಿ ಮಾಡಿ ದ್ರೋಣನ
ತಾನು ಪೂಜಿಸಿ ಶ್ರಮವ ಮಾಡಿದೊಡಾಯ್ತು ಧನುರ್ವಿದ್ಯೆ ‖ ೧೧೯

ನಾಗಪುರದರಸುಗಳ ಮಕ್ಕಳ
ಬಾಗಿಸಿತು ಬಿಲುವಿದ್ಯೆ ಲೋಕದ
ಭೋಗಿನೃಪರತ್ನಜರ ವಿದ್ಯೆಯದೇಕಲವ್ಯನಲಿ ।
ಬಾಗಿ ಹೋಯಿತು ಹೋದರೊಂದಿನ
ನಾಗಪುರದರಸುಗಳ ಮಕ್ಕಳು
ಹೋಗಿ ಬೇಟೆಯನಾಡುತಿರಲಾ ರಾಯಧರ್ಮಜನ ‖ ೧೨೦

ನಾಯಿ ಹೊಕ್ಕಿತದೇಕಲವ್ಯನ
ಯಾಯುಧಂಗಳ ದಿವ್ಯಶಾಲೆಯ
ಧ್ಯಾಯುವಮಾಡಲು ನಾಯಿ ದನಿಯನು ಕೇಳಿ ಗುಣಿಮಾಡಿ ।

ನಾಯ ಬಾಯನು ತುಂಬೆ ಬಾಣವ
ರಾಯ ಕಟಕಾಚಾರ್ಯನೆನುತಾ
ಧ್ಯಾಯವಮಾಡಿದನೇಕಚಿತ್ತದಲಾಗ ಗುರುಪದವ ॥ ೧೨೧

ಬಟಿಕ ಬಾಯಲಿ ತುಂಬೆ ಬಾಣವ
ದಳುಕಿ ತಿರುಗಿತು ನಾಯಿ ಪಾಂಡವ
ತಿಲಕರಲ್ಲಿಗೆ ಬರಲು ಪಾರ್ಥನು ಕಂಡು ಬೆಱಗಾಗಿ ।
ಎಲೆ ಗುರುವೆ ತಾ ಶಬ್ದವೇಧೆಯ
ಬಲುಹು ನಮಗೀವಿದ್ಯೆ ಶೂನ್ಯವ
ದಿಳೆಯೊಳೆಚ್ಚವನಾತು ಹೇಳಿದನೆಂದೊಡಿಂತೆಂದ ॥ ೧೨೨

ಏಕಲವ್ಯನು ನಮ್ಮ ಶಿಷ್ಯನು
ಮೇಕಚಿತ್ತದೊಳೆಮ್ಮ ಪೂಜಿಸೆ
ಲೋಕಪತಿ ಹರಿ ಮೆಚ್ಚಿ ಕೊಟ್ಟನು ವಿದ್ಯೆಯಿದನೆಂದ ।
ಆಕುಮಾರರ ನಿಲಿಸಿ ಬಲದೊಳ
ಗೇಕಲವ್ಯನ ಹೊರೆಗೆ ದ್ರೋಣನ
ದೇಕಚಿತ್ತದಿ ಬರಲು ಕಂಡನು ಗುರುವಿಗಿದಿರಾಗಿ ॥ ೧೨೩

ಕಂಡು ಪೂಜಿಸಿ ಯೆನ್ನಳೊಂದುವ
ಕೊಂಡು ಬದುಕಿಸಬೇಕು ಶಿಷ್ಯರ
ತಂಡದಲಿ ತಾನಧಮನೆಂದರೆ ದ್ರೋಣನಿಂತೆಂದ ।
ಕಂಡಱಿಯೆವಿದನಿನ್ನ ಭಾವವ
ಹಿಂಡು ಶಿಷ್ಯರೊಳಧಿಕ ನೀನೇ
ಗಂಡುಗಲಿ ನಮಗೀಗ ಕೊಡು ಕೊಡು ನಿನ್ನ ಹೆಬ್ಬೆರಳ ॥ ೧೨೪

ಎಂದೊಡಾಗಲೆ ಕಡಿದು ಗುರುಗಳಿ
ಗಂದು ವೇಧಿಸೆ ತನ್ನ ಹೆಬ್ಬೆರ
ಳೊಂದುವನು ಬಟಿಕಧಱಿನಾತಗೆ ಸತ್ವಗತವಾಗೆ ।

ಮುಂದೆ ಮರ್ತ್ಯರಿಗೈದೆ ಹಿಂದಣ
ಛಂದ ಕಂಗಳೆಸೆಯಲಾಯಿತ
ದಂದು ದ್ರೋಣನುಮೇಕಲವ್ಯನ ಶಬ್ದವೇಧೆಯನು ॥ ೧೫೯

ಬಂದು ಕೆಡಿಸಿಯೆ ಮರಳಿ ಶಿಷ್ಯರ
ವೃಂದಸಹಿತೈದಿದಪನಿಭಪುರಿ
ಗಂದು ಮಱುದಿನ ತನ್ನ ಮುನ್ನಿನ ಗರುಡಿಯೊಳಗಿರ್ದ ।
ಬಂದು ಭೀಮಾದಿಗಳು ಕೌರವ
ವೃಂದ ನಾನಾಭೂಪನಂದನ
ರಂದು ಗುರುವಿಂಗೆಱಗಿ ಕಲಿತರು ಸಕಲವಿದ್ಯೆಗಳ [1] ॥ ೧೬೦

ಹದಿನೇಳನೆಯ ಸಂಧಿ ಮುಗಿದುದು.

---

## ಹದಿನೆಂಟನೆಯ ಸಂಧಿ.

---

ಸೂಚನೆ.

ರಾಮುಕಟಕಾಚಾರ್ಯನಿಂದ ವಿ
ಘಾಮುದಲಿ ನೊಂವಗ್ನಿ ಮುಖದಲಿ
ರಾಯದ್ರುಪದನು ಪಡೆದ ಧೃಷ್ಟದ್ಯುಮ್ನ ದ್ರೌಪದಿಯ ॥

ಭವರ್ಮಾದಿಗಳ ವಿದ್ಯಾಭ್ಯಾಸಕ್ರಮ.

ಕೇಳು ಜನಮೇಜಯಧರಿತ್ರೀ
ಪಾಲ ಕಲಿತರು ನಿಮ್ಮ ಪೂರ್ವನೃ
ಪಾಲಕರು ಶಸ್ತ್ರಾಸ್ತ್ರ ಸಾಂಗೋಪಾಂಗವಿಧಿಸಹಿತ [2] ।

---

1 ತಮತಮವಿದ್ಯೆಯಳವಟ್ಟು, ಖ.

2 ಸರಹಸ್ಯಸಾಂಗೋಪಾಂಗವಿದ್ಯೆಗಳ, ಚ,

ಸ್ಥೂಲದಲಿ ಸೂಕ್ಷ್ಮದಲಿ ಬಹಳವಿ
ಶಾಲದಲಿ ಸಂಕೋಚದಲಿ
ಲಘುಪಾಳಿಯ ವಿಸಾರದಲಿ [1] ವಿವಿಧಾಸ್ತ್ರಪ್ರಯೋಗದಲಿ ‖ ೧

ಎಡಬಲದ ಪರುಣದ ಮಹಾಬಲ [2]
ದೊಡನೆ ತೋಱುವ ಕುಶಲವಿದ್ಯೆಯು [3]
ದೆಡೆಯು [4] ದುವ್ವಾಳಿಗಳ ಸೂಟಿಯು ಸರಳ ಸೋಹೆಗಳ ।
ಕಡುಗಲಿಗಳೞಬುಟದಲಿ ಮಿಗೆ
ಜಡಪವಾದರ್ಥ ಖಡ್ಗಹಸ್ತದಿ [5]
ಬಿಡುವೆವೆರ ರೇವಂತರಗ್ಗಳರಾವರ್ಶೈಯುವೆರು ‖ ೨

ನಗವನೊಡ್ಡಿದರೊಂದು ಶರದಲಿ
ಹುಗಿಲುಗಳವ ವಿದೂರಪಾತದಿ
ಗಗನವಂತವ ನೆಸೆವ ಜೋದರ ವಿದ್ಯೆಗಳ ಮಿಗುವ ।
ಉಗಿವ ಬಿಡುವೆಡಬಲನ ಬವರಿಯ
ಲಗಿವ ಲವಣಿಯ ದಂತಿಶಿಕ್ಷೆಗೆ
ಮಿಗಿಲು ಭಗದತ್ತಾದಿಗಳಗೆಂದುದು ಕುಮಾರಕರ ‖ ೩

ರಥವ ರಕ್ಷಿಸಿಕೊಂಡು ನಿಜಸಾ
ರಥಿಯ ಕಾಯಿದು ಮುಂದೆ ಹೂಡಿದ
ರಥಹಯಂಗಳ ತನುಗಳಲಿ ಮೆಸೆಗಾಣದಂದದಲಿ ।
ಪ್ರತಿಭಟನ ಶಸ್ತ್ರಾಸ್ತ್ರವನು ರಿಪು
ರಥಿಕರನು ಸಮರದಲಿ ಜಯಿಸುವ
ರಥಿಕವಿದ್ಯೆಯೊಳವರ ಸರಿ ಸುರನರರೊಳಿಲ್ಲೆಂದ ‖ ೪

---

1 ಸಂಹಾರದಲಿ, ಖ. ಜ.
2 ನಾಡುಹೊಳೆಹಿನ, ಚ.
3 ಕುಶಲತರವೆುಯುದಲಿ ಬರಿವರು, ಚ.
4 ಬಿಡೆಯು, ಚ.
5 ಝಡಿಪವಾದ ದೃಢಾಯುತಿಕೆಗಿದು, ಚ.

ಧನುರ್ಧರಾಗ್ರಗಳಲ್ಲಿ ಉತ್ತಮರನ್ನು ತಿಳಿಯಲು ದ್ರೋಣಾಚಾರ್ಯ ಕೃತಪರೀಕ್ಷೆ.

ಇನಿಬರೊಳು ಬಿಲುಗಾರನಾರ
ರ್ಜುನನೊ ಕರ್ಣನೊ ಭೀಮ ದುರ್ಯೋ
ಧನರೊ ಮೇಣ್ ಮಾದ್ರೇಯರೊ [1] ದುಶ್ಯಾಸನಾದಿಗಳೊ |
ಮನದ ಬಯಕೆಯ ಕಾಂಬುದೀ ಲೋ
ಚನದಲೆನುತಲಿ ದ್ರೋಣನಾಗಲು
ವಿನುತಗುರು ರಚಿಸಿದನು ಲಕ್ಷ್ಯವನೊಂದುವೃಕ್ಷದಲಿ || ೫

ಕಾಣಬಾರದು ಲಕ್ಷ್ಯಭೇದವ
ಜಾಣಭಟರಿಗೆ ಕಟ್ಟು ದೊರೆಯಿದು
ಕಾಣಿಸಿದರೈ ಹೂಣಿಸಿದರೈ ಹೂಡಿದಂಬಿನಲಿ |
ಕಾಣಿರೇ ಕರ್ಣಾದಿಸುಭಟ
ಶ್ರೇಣಿ ನೀವೆನೆ ಗುರುವಿನಣಕವ
ನಾಣೆಯಿಟ್ಟವ್ರೊಲೆಚ್ಚು ಲಕ್ಷ್ಯವ ಕೆಡಿಪಿದನು ಪಾರ್ಥ || ೬

ದ್ರೋಣ ತನ್ನಯ ಶಿಷ್ಯವರ್ಗ
ಶ್ರೇಣಿಯನು ಮೇಳವಿಸಿ ಸುರನದಿ
ತಾಣದಲಿ ಬರಲೊಂದು ವೃಕ್ಷದ ಕೆಳಗೆ ಕುಳ್ಳಿರಲು |
ಜಾಣಮಯರೋಧನನು ಸೌಬಲ
ದ್ರೋಣ ನದಿಸುತ ವಿದುರ ನಾನಾ [2]
ಕ್ಷೋಣಿಪರ ವರಕುವರ ಪಾರ್ಥನದೊಬ್ಬ ಹಿಂದಿರಲು || ೭

ರಾಯಕಟಕಾಚಾರ್ಯ ಪಾರ್ಥಗೆ
ಪ್ರಿಯದಲಿ ವಚನಿಸಿದನನಿಬರ
ನಾಯತದಿ ನಮಗಟ್ಟಕಳಯನು ಕೊಂಡು ಬಾಯೆಂದ |

---

[1] ಧನನೊಪಾದ್ರೀಸುತರೊ ಮೇಣ್, ಕ. [2] ನಾಗಾರ್ಜಿಯವಿಜರ, ಖ. ಜ.

ಆಯುತದಿ ಸಮೆಗಟ್ಟಿಕಳೆಯುನು
ಪಾಯದಲಿ ಕ್ಷಿತಿಗಿಳುಹದಿಲ್ಲಿಗೆ
ತಾ ಯೆನುತ ಸುರನದಿಯ ತೀರಕ್ಕೊಂದು ಬೆಸನಿತ್ತ ॥ ೮

ಬರಬರಲು ತಾನೊಂದು ವೃಕ್ಷದ
ಹೊರೆಯ ಸಾಲಿಲು ಪರಮಸುಖದೊಳ
ಗಿರುತ ದ್ರೋಣನು ರಾಯಕುವರರ ಕುಱಿತು ಪೇಳನಿಸಿದ ।
ಮರದ ತುದಿಗೊಂಬಿನಲಿ ತೋಱುವ
ಪೆರತಳಿರ ನೆಳೆ ನಿಕರವೊಂದೊಂ
ದಱಲಿ ಛಿದ್ರವ ಮಾಡಲೆಸುವುದು ನೋಡಿದಪೆ ನಾನು ॥ ೯

ಎಂದೊಡಾಕ್ಷಣ ರಾಜಪುತ್ರರ
ದಂದು ದ್ರೋಣನು ನೋಡಲೆಸೆದಪ
ರಂಧಕನ ಸುತಮುಖ್ಯಸೂರ್ಯನ ಸೂನುಮೊದಲಾಗಿ ।
ಬಂದೆಲೆಯುಲೊಂದೊಂದುಛಿದ್ರವ
ನಂದ ಯೆಸೆಯಲು ಬಳಿಕ ದ್ರೋಣನು
ಬಂದು ನಿರ್ವಾಣಾಪಗಹನವ ಮಾಡಲನುವಾದ ॥ ೧೦

ಹಿಂದೆ ಪಾರ್ಥನು ಗುರುಗಳಾಜ್ಞೆಯ
ನಂದು ಕೇಳಿಯೆ ಯಟ್ಟಿಕಳೆಯನ
ದೊಂದುಬಟ್ಟಲ ತುಂಬಿ ತನ್ನಯ ಬಿಲ್ಲುಕೋಲಗಳ ।
ಅಂದು ತರುತಿರೆ ಮುಂದೆ ಬರಬರ
ಲೊಂದು ತರುವಿನ ಕೆಳಗೆ ರಾಜರ
ವೃಂದಕುಳ್ಳರ್ದ ಛಂದವನು ತಾನಱಿದು ಮರಗೊನೆಯ ॥ ೧೧

ನರನು ಕಂಡನದೆಲೆಯುಳೊಂದೊಂ
ದಱಲಿ ಛಿದ್ರವನೆಸುಗೆಯನು ತಾ
ಸುರಪನಂದನನೊಂದು ಕೈಯಲಿ ಬಿಲ್ಲನೇಱಿಸುತ ।

ಗುರುವಿನಾಜ್ಞೆಯೊಳಿಱುಹೆ ಬಟ್ಟಲ
ಧರೆಯೊಳಾಕ್ಷಣಕೊಂದುಕೈಯ್ಯಲಿ
ಸರಳಸಾರವೆ ಹೂಡಿ ಯೆಚ್ಚನು ದಳಗಳೈಸುವೆನು ॥ ೧೨

ಎಲೆಯೆಲೆಯು ಪ್ರತ್ಯೇಕ ಛಿದ್ರವು
ನೆಲೆಯಲಾಯಿತು ಬೞಿಕ ಫಲುಗುಣ
ಘೞಿಲನೈತಂದಿತ್ತ ಗುರುವಿಗೆ ತೈಲನಾಶಿಸಿಯು ।
ಬಲಿದು ಗುರುವಭ್ಯಂಗ ಮಾಡಿಯು
ಬೞಿಕ ಶಿಷ್ಯರ ತಂಡದಿಂದವೆ
ಹೊೞಲಿಗೈತರುತಲ್ಲಿ ಕಂಡನು ಮೊದಲಮಾರ್ಗದಲಿ ॥ ೧೩

ಮರನ ಯೆಲೆಗಳಿಗೆರಡು ಛಿದ್ರವ
ಗುರು ನದೀಸುತ ಕಂಡು ಪಾರ್ಥನ
ಕರೆದು ಕೇಳಿದನಂದು ಫಲುಗುಣ ನಿರುತವಚನವನು ।
ಪರಿಕ್ರಮಿಸುವೆರಡೆರಡುಛಿದ್ರವ
ನೊಱೆದಪೆನು ತಾನಾದ ಮೊದಲಲಿ
ಗುರುವಿನಾಜ್ಞೆಯೊಳಚ್ಚರೀ ನೃಪತನಯರೊಂದೆಲೆಯ ॥ ೧೪

ಎಚ್ಚೊಡೊಂದೊಂದಾಯ್ತು ಛಿದ್ರವು
ನಿಶ್ಚಯದೊಳೊಂದೊಂದು ಬೞಿಕಿವೆ
ನೆಚ್ಚನಿದೆ ಯೆರಡೆರಡು ಛಿದ್ರವನಾರು ಮಾಡಿದರು ।
ಮುಚ್ಚದಿರು ನೀನೆಚ್ಚೆಯಾದೊಡೆ
ಸಚ್ಚಿದಾನಂದೈಕನಾಣೆಯು
ನಿಶ್ಚಯವ ಹೇಳೆಂದು ಪಾರ್ಥನ ಕೇಳಿದನು ಭೀಷ್ಮ ॥ ೧೫

ಎಂದೊಡರ್ಜುನ ಹೇೞ್ದನಾ ಬರು
ತೊಂದುಛಿದ್ರವ ಕಂಡೆನೆಲೆಗಳ
ವೃಂದದಲಿ ನಮ್ಮವರ್ಗಳಸದಸರೆನುತಲಾನೆಚ್ಚೆ ।

ಎಂದೊಡಾಗುರು ಪಾರ್ಥಗೆಂದನು
ಕಂದನಾವೆಂದುದನು ಮಱೆದೈ
ಯೆಂದೊಡೆಂದನು ನಾನು ಬಟ್ಟಲನಿಱುಹದಿವನೆಚ್ಚೆ ॥ ೧೬

ಇಱುಹುದಿದ ನೀನೆಚ್ಚ ಪರಿಯನು
ದೊಲಿದು ತೋಱೈಯಿಾಗ ನಮಗೆನೆ
ಫಲಿಲನಾ ಕಲಿಪಾರ್ಥ ತೋಱಿದ ಶಸ್ತ್ರಕೌಶಲವ ।

ಅರ್ಜುನನ ಶಸ್ತ್ರಕೌಶಲವನ್ನು ದ್ರೋಣನು ಸ್ತುತಿಸುವಿಕೆ.

ಅಲುಗಿಸದೆ ಬಟ್ಟಲನು ಮೊಳಕೈ
ಯೊಳಗೆ ಯಿರಿಕಿದ್ದ ರಡುಹಸ್ತಂ
ಗಳಲಿ ಚಾಪದ ತಿರುವನೇಱಿಸಿ ಶರವ ತೊಡಚಿದನು ॥ ೧೭

ಎಸೆಯಲಾಗುರು ಭೀಷ್ಮಮೊದಲಾ
ಶಶಿಕುಲರು ಕೊಂಡಾಡೆ ಕಳಪಜ
ನೊಸೆದು ಪರುಷಿಸಿ ಪಾರ್ಥದೇವಗದಾರು ಸರಿಯೆಂದ ।
ಎಸೆವ ಕೈಚಳಕವನು ಕೌರವ
ಪ್ರಸರವೆಱಿದುದು ಕರ್ಣಮೊದಲಾ
ಗಸಮಬಲ ಕಲಿಪಾರ್ಥ [1] ಮೆಚ್ಚಿಸಿದನು ನದೀಸುತನ ॥ ೧೮

ಕಂದಪಾರ್ಥಗೆ ಸುಭಟಶ್ರೇಣೀ
ವೃಂದ ಸರಿಯೇ ತ್ರಿಪುರಭಂಜನ
ನಿಂದು ಶಿಷ್ಯನು ಯಹನು ಫಲುಗುಣನೆಂದು ಕೊಂಡಾಡಿ ।

ಅರ್ಜುನನಿಗೆ ದ್ರೋಣರು ಸಕಲವಿದ್ಯಾದಾನ ಮಾಡಿದ್ದುದು.

ಅಂದು ಗುರು ಮನವೊಲಿದು ಪಾರ್ಥನ
ನಂದವಿಟ್ಟನು ತನ್ನ ವಿದ್ಯಾ
ವೃಂದವನು ತಾನೀವೆನೆನುತಲಿ ದ್ರೋಣ ಹರುಷಿಸಿದ ॥ ೧೯

---

1 ಗಸಮಬಲರುಘೆಯೆನಲು, ಖ.

ಹಿರಿದು ಮೆಚ್ಚಿ ಧನಂಜಯನನಾ
ದರಿಸಿ ಕೊಟ್ಟನು ಸಕಲವಿದ್ಯೆಯ
ನುರುತರಪ್ರೇಮದಲಿ ಮತ್ತೊಂದೆರವನಿಂತೆಂದ ।
ಧುರದೊಳಗೆ ನಿನ್ನಲ್ಲಿ ಸೆಣಸಿದ
ಸುರನರೋರಗನಿಕರ ಸೋಲಲಿ
ನಿರುತ ನಿನ್ನೊಳಸತ್ಯಮಾಡಿದ ಜನರು ಕೆಡಲೆಂದ ॥ ೬೦

ಇರಲಿರಲು ಫಲುಗುಣನನೆಕ್ಕಟಿ
ಗರೆದು ಶಸ್ತ್ರಾಸ್ತ್ರಪ್ರಸಂಚವ
ಪರಮಸಿದ್ಧಾಂತವನು ಕಲಿಸಿದನಖಿಳಸಂಗತಿಯ ।
ಕರುಣಿಸಿದನಾಗ್ನೇಯವಾರಂ
ದರಮಹಾವಾಯವ್ಯವಾರುಣ
ಹರಸಖಬ್ರಹ್ಮಾಸ್ತ್ರಸೌರೋರಗನಗಾದಿಗಳ ॥ ೬೧

ಅಂದು ಭೀಷ್ಮಾದಿಗಳ ಕಳುಹಿದ
ನಂದು ಕುರುಕುಲವೃಂದಸಹಿತವೆ [1]
ಬಂದರಿವರಾ ಕುಂತಿಪುತ್ರರು ವಿನಯಪರರಾಗಿ । [2]
ಬಂದನಾಗುರು ಮತ್ತೆ ಗಂಗೆಯ
ಮಿಂದು ಬಟ್ಟೆಕಲೊಬ್ಬ ಸೂತಜ
ಗೆಂದನೆಲವೋ ನೀನು ಹಸ್ತಿನಪುರಕೆ ದಯಮಾಡುವುದು ॥ ೬೨

ಇಂದು ಭಾರದ್ವಾಜನನು ತಾ
ನೊಂದು ನೆಗಟ್ಟೆತಂದು ನುಂಗಿತ
ದೆಂದು ಹೇಳಿಕಾಗ ಹರಿತಂದವನು ಬೊಬ್ಬಿಡುದ ।
ಇಂದುಕುಲನೃಪಗುರುವನೀಗಲ

1 ಮಂದಿರಕ್ಕಾಗೊಮ್ಮೆ ಕುರುನೃಪ, ಖ.
2 ವೃಂದಸಹಿತವೆ ಬಂದರಾಕುಂತೀ ಕುಮಾರಕರು,

ದೊಂದು ನೆಗಪ್ಪೆತಂದು ನುಂಗುವೆ
ಯೆಂದವನು ತಾ ಕಂಡೆನೆನಲಿಕೆ ಕೌರವಾದಿಗಳು ॥ ೨೩

ಬಿಟ್ಟು ಕೈ ಮಂಡೆಯಲಿ ಬೇಗದಿ
ಕೆಟ್ಟೆ ಬಂದೆವೆನುತ್ತ ಬಂದರು
ನೆಟ್ಟನಾಗುರುವಿದ್ದ ಠಾವಿಗೆ ಕರ್ಣ ಕೌರವರು ।

ಅರ್ಜುನನು ಆಗ ಸಿದ್ಧನಾಗಿ ಬರುವಿಕೆ.

ಇಟ್ಟಣಿಸಿ ನರ ಮನೆಗೆ ಬಂದನು
ಕಟ್ಟಿಕೊಂಡನು ಬಾಣ ನೂಱನು
ತೊಟ್ಟನಾಕ್ಷಣ ಜೋಡತೀರನು ಹೂಡಿ ಪೊಱಮಂಟ ॥ ೨೪

ವೇಗದಲಿ ಸನ್ನದ್ಧ ಚಾಪದ
ಲಾಗ ಪಾರ್ಥನು ಬರುತ ಮನದಲಿ
ಲಾಗಿಸುತ ತಾನೊಂದ ನೆನೆದನು ಕೇಳು ಭೂಪತಿಯೆ ।
ರಾಗದಲಿ ಗುರುಗಳನು ನುಂಗುವ
ಲೋಗನೆಗಱನು ಸೀಳಿ ಬಿಸುಡುವೆ
ಬೇಗದಲಿ ಸುರಪತಿಯು ಬ್ರಹ್ಮನ ಕಾಲಯಮರುಗಳ ॥ ೨೫

ಮಱಿಯು ಹೊಕ್ಕರೆ ಬಿಡುವೆನೇ ನಾ
ಗುರುವ ನುಂಗಿದ ನೆಗಱನೆನುತಲಿ
ವೆರಸುಭಟಶ್ರೇಣಿಗಳ ತಾತನು ಪಾರ್ಥ ತಾ ಬಂದ ।
ಬರಲು ಕಟಕಾಚಾರ್ಯನಾತನ
ಪರಿಯ ಕಂಡನು ಪಾರ್ಥ ಹೇಡ್ಯೆ
ಶರಶರಾಸನಕವಚವಿಂದೇಕೆಂದೊಡಿಂತೆಂದ ॥ ೨೬

ನಿಮ್ಮ ನುಂಗುವ ನೆಗಱು ಬಡವನೆ
ಸುಮ್ಮನದು ತಾ ಬಂದು ಮಾಡುವ
ಕರ್ಮವಾವುದದೆನಲು ಕಳಶಜ ಹಿರಿದು ಮನ್ನಿಸಿದ ।

ದ್ರೋಣರು ಅರ್ಜುನನಲ್ಲಿ ವಿದ್ಯೆಯನ್ನು ತುಂಬಿದುದು.

ತಮ್ಮನಿವನಹುದೆಮ್ಮ ಕಾಯಕೆ
ಸುಮ್ಮನಿವನಲಿ ನಮ್ಮ ವಿದ್ಯೆಯು
ಸೊಮ್ಮತುಂಬಿಡಬೇಕು ಕೌರವನಿಕರವೇಕೆಂದ ॥ ೧೭

ವೀರಫಲುಗುಣಸಹಿತ ಕೌರವ
ಧಾರುಣೀಶರ ಗೂಡಿ ಕಟಕಾ
ಚಾರ್ಯ ಬಂದನು ಹಸ್ತಿನಾಪುರಕರಸ ಕೇಳೆಂದ ।
ಧಾರುಣೀಶರ ಸುತರ ಕಳುಹಿದ
ಧೀರಭಾರದ್ವಾಜ ತನ್ನಯ
ವೀರಪುತ್ರನು ಗೂಡಿ ಬಂದನು ತನ್ನ ಮಂದಿರಕೆ ॥ ೧೮

ಎನ್ನ ಮನಸಿನೊಳಿದ್ದ ಭೀಷ್ಟವ
ದಿನ್ನು ದೊರಕುವುದೆನುತ ಕಳಶಜ
ನುನ್ನತೋನ್ನತನಹನು ಫಲುಗುಣ ಶಿಷ್ಯರೊಳಗೆನುತ ।
ಮನ್ನಿಸುತ ಮನವೊಲಿಯಲಿತ್ತನು
ತನ್ನೊಳುಳ್ಳ ಸಕಲವಿದ್ಯೆಯ
ನುನ್ನತೋನ್ನತವಾಯ್ತು ಗೌತಮಮಿಮರಭೀಷ್ಟರಿಗೆ ॥ ೧೯

ವಿದ್ಯಾಭ್ಯಾಸಕ್ರಮವನ್ನು ಪರೀಕ್ಷಿಸುವುದೆಂದು ದ್ರೋಣರ ಹೇಳುವಿಕೆ

ಬಂದುದಿನ ವೊಡ್ಡೋಲಗಕೆ ಗುರು
ಬಂದು ಮನ್ನಿಸಿಕೊಂಡು ನಸುನಗು
ತೆಂದನಾಧೃತರಾಷ್ಟ್ರ ಗಂಗಾಸೂನು ವಿದುರರಿಗೆ ।
ಇಂದು ಪರಿಯಂತರವು ನಿಮ್ಮಯ
ನಂದನರನಭ್ಯಾಸಿಸಿದೆನಭಿ
ನಂದನೀಯರೊ ನಿಂದ್ಯರೋ ನೀವ್ ನೋಡಬೇಕೆಂದ ॥ ೨೦

ಸಕಲಶಸ್ತ್ರಂಗಳಲಿ ಹಯಗಜ
ನಿಕರದೇಱಾಟದಲಿ ಲೋಕ

ಪ್ರಕರವಮಾರ್ಗಣದಲಿ [1] ಚತುರ್ದಶವಿಮಳವಿದ್ಯೆಯಲಿ ।
ಸಕಲಲಕ್ಷಣಗಣಿತಗಾರುಡ
ನಿಕರ [2] ಭರತಾದ್ಯಖಿಳಕಳೆಯಲಿ
ವಿಕಳರೋ ಸಂಪೂರ್ಣರೋ ನೀವ್ ನೋಡಬೇಕೆಂದ ॥ ೨೧

ಲೇಸನೆಂದಿರಿ ಸುತರ ವಿದ್ಯಾ
ಭ್ಯಾಸರಚಿತಶ್ರಮವನಾವೆಱ
ದ್ಯೆಸು ನಿಮಗುತ್ಸವವಲೇ ತಪ್ಪಾವುದುಚಿತವಲ್ಲೈ ।
ಈಸುದಿನವೀಮಕ್ಕಳೊಡನಾ
ಯಾಸಪಿದು ಸಾಮಾನ್ಯವೇ ನಾ
ವೇಸು ಧನ್ಯರೊ ನಿಮ್ಮದೆಸೆಯಿಂದೆಂದನಾಭೀಷ್ಮ ॥ ೨೨

ಆದಿಯಲಿ ಪುರವೈರಿ ಬಳಿಕಿನೊ
ಳಾದನಗ್ಗದ ಪರಶುಧರನೀ
ಮೇದಿನಿಯೊಳೀಯುಗದಲನುಪಮಶಸ್ತ್ರವಿದ್ಯೆಯಲಿ ।
ವೈದಿಕದಲುಱೆ ನಿಮ್ಮವೊಲು ದೊರೆ
ಯಾದವರು ಕುಮಾರಕರ ಪು
ಣ್ಯೋದಯದ ಕಂದೆರವೆಯೈಸಲೆ ಯೆಂದನಾಭೀಷ್ಮ ॥ ೨೩

ಜೋಯಿಸರ ಕರೆದಖಿಳದಿವಸದೊ
ಳಾಯಿದರು ಶುಭದಿನವನವರ್ಗೆಪ
ಸಾಯುಮುಡುಗೊಱೆಗಳಲಿ [3] ಮನ್ನಿಸಿ ಮನೆಗೆ ಕಳುಹಿದರು ।

### ವಿದ್ಯಾಪ್ರದರ್ಶನಕ್ಕಾಗಿ ಸ್ಥಳ ನಿರ್ಮಾಣ.

ರಾಯನಾಜ್ಞೆ ಯಲಿಭಪುರಿಯ ಹೊಱ
ಗಾಯತದ ಭೂಮಿಯಲಿ ವಾಸ್ತುವಿ
ಧೇಯದೊಳಗಳವಡಿಸಿದರು ಹನ್ನೆರಡುಯೋಜನವ ॥ ೨೪

---

[1] ಪ್ರಕಟಮಾರ್ಗೀಕೃತ, ಚ. ಟ. [2] ವಿಕಟ,ಚ. ಟ. [3] ಸಹಿತ, ಚ. ಟ.

ತರವಿಡಿದು ರಚಿಸಿದರು ನೆಲೆಯು
ಪ್ಪರಿಗೆಗಳ ಹಂತಿಯುಲೆಯಂತಃ
ಪುರದ ತತ್ಪಾರ್ಶ್ವದಲಿ ಭೂರಿಯು ಭದ್ರಭವನಿಕೆಯ |
ಪುರಜನದ ಪರಿಜನದ ನೆಲೆಯು
ಪ್ಪರಿಗೆಗಳು ಹೂಡಿದವು ಹಸ್ತಿನ
ಪುರದ ಸಿರಿ ಸಾಮಾನ್ಯವೇ ಜನನಾಥ ಕೇಳೆಂದ ‖ ೭೫

ನೆರೆದುದಗಣಿತಕರಿತುರಂಗವು
ವರವರೂಥಪದಾತಿ ಭೂಮಿಾ
ಶ್ವರರು ಬಂದರು ನೋಡಲೆಂದು ದಿಗಂತರಾಳದಲಿ |
ವರಮುಹೂರ್ತದೊಳಂದು ಘನಸಾ
ಗರದ ತೆರೆ [1] ಬಿಟ್ಟಂತೆ ಕರದಲಿ
ನೆರೆದು ಸಿಂದುರ ಜನಸಿಕರವೇನೆಂಬೆನದ್ಭುತವ ‖ ೭೬

ಸಂದಣಿಸಿ ನೃಪರಾಣಿವಾಸದ
ಗೊಂದಣದ ದಂಡಿಗೆಗಳಿಳಿದವು
ಮುಂದೆ ಹೊಂಗಂಬಿಗಳ ಜೋದರು ಜನಪಲಾಯನದ |

ಅಲ್ಲಿಗೆ ಕುಂತೀ ಮೊದಲಾದವರ ಆಗಮನ.

ಬಂದರಾಗಾಂಧಾರಿಕುಂತಿಯ
ರಿಂದುಮುಖಿಯರ ಮೇಳದಲಿ ನಡೆ
ತಂದುದಗಣಿತವರವಧೂನಿಕುರಂಬ ನಲವಿನಲಿ ‖ ೭೭

ವಿದುರಧೃತರಾಷ್ಟ್ರರು ಸಹಿತ ಸುರ
ನದಿಯ ಮಗನೈತಂದು ನವಭ
ದ್ರದಲಿ ಕುಳ್ಳಿರ್ದನು ಪಸಾಯಿತಸಚಿವಜನಸಹಿತ |
ಬದಱುವೆಗ್ಗದ ವಂದಿಗಳ ದನಿ

---

1 ನೆಲೆ, ಜ.

ಮಧುರವಾದ್ಯದ ರವವು ಮಿಗೆ ಮಿ
ಕ್ಕೊದೆದು ಹಾಯ್ದುದು ಲೋಕ ಮೂಱಱ ಕರ್ಣಕೋಟರವ ॥ [೩೮

ಪರಿಪರಿಯ ಶೃಂಗಾರದಲಿ ನೂ
ರ್ವರು ಸಹಿತ ದುರ್ಯೋಧನನು ನಾ
ಲ್ವರುಸಹಿತ ಯಮನಂದನನು ತಾವೆರಡುಪಾರ್ಶ್ವದಲಿ ।
ಗುರುತನುಜಕೃಪಕರ್ಣಸುಬಲಾ
ದ್ಯರು ಪುರೋಭಾಗದಲಿ ಭೂಮೀ
ಶ್ವರರಸಂಖ್ಯರು ಹಿಂದೆ ಬರಲೈತಂದನಾದ್ರೋಣ ॥ ೩೯

ಹೊಯ್ದು ಕೋಣನ ಕುಱಿಯ ಹಿಂಡನು
ತೊಯ್ದು ರಕ್ತದ ನೆರೆದ [1] ರಾಶಿಯು
ನೈದೆ ಬಲಿಯನು ದೆಸೆದೆಸೆಗೆ ಚೆಲ್ಲಿದರು ತುಷ್ಟಿಯಲಿ ।
ಕೈದುಗಳ ತನಿವೆಳಗು ನೈದಿಲ
ಮೈದುನನ ಮೂರಂಕವೆನೆ ಬಂ
ದೈದಿ ರಂಗಸ್ಥಳವ ಹೊಕ್ಕುದು ರಾಜಸುತನಿಕರ ॥ ೪೦

ಬಾಗಿಲಲಿ ಕಟ್ಟೆಗೆಯ ಕೈಗಳ
ಲಾಗುರೂದ್ಧ್ವವಕ್ತ್ರಪರು ನಿಂದರು
ಸೀಗುರಿಯ ವಿನುತಾಂ [2] ತರಂಗದ ಸಾಲಸತ್ತಿಗೆಯ ।
ಸಾಗರದ ಗಳಗರ್ಜನಾರ್ಭಟಿ
ಹೋಗಲೇನದು ಪಾಡೆಯೆನೆ ಬಾ
ಪಾಗವೂಚಾರ್ಯನ ಘಡಾವಣೆ ಘಲ್ಲಿಸಿತು ಜಗವ ॥ ೪೧

ಆಮಹಾಕಣದೆಂಟು ದಿಕ್ಕಿನ
ಹೋಮ ತೀರಿತು ಫಳಿಗೆವಟ್ಟಲ
ಸೌಮುಹೂರ್ತಿಕರಾಯತಧ್ವನಿ ಸಾರಸಮಯದಲಿ [3] ।
ಸೋಮವಂಶೋದ್ಭವನೃಪಾಲಲ

---

[1] ರಕ್ತೋದಕದ, ಚ. ಟ. [2] ಸುತಿವಿನ, ಚ. [3] ಸಾಧುವಾದದಲಿ, ಚ.

ಲಾಮೆನಗ್ಗದ ಧರ್ಮಸುತನು
ದ್ಧಾಮಗುರುವಿಂಗೆಱಗಿ ನಿಂದನು ನುಡಿಸಿದನು ಧನುವ || ೪೨

ರಾಜಕುಮಾರರ ವಿದ್ಯಾಪ್ರದರ್ಶನ.

ಅರಸ ಕೇಳು ಯುಧಿಷ್ಠಿರನ ಪರಿ
ಪರಿಯೊಳೆಸುಗೆಯ ಚಾಪವಿದ್ಯಾ
ನಿರತಿಶಯಕೋಯೆಂದು ಗರ್ಜಿಸಿದುದು ಸಭಾಜಲಧಿ |
ಸುರಗಿಹಿರಿಯುಬ್ಬಣಗದಾಯುಧ [1]
ಪರಿಘಚಕ್ರಮುಸುಂಡಿಮುದ್ಗರ
ಪರಿಗೆಮೊದಲಾದಖಿಳಶಸ್ತ್ರಶ್ರಮವ ತೋಱಿಸಿದ || ೪೩

ಕರಿತುರಗದೇಱಾಟಮೊದಲಾ
ಗಿರೆ ಸಮಸ್ತನೃಪಾಲವಿದ್ಯಾ
ಪರಿಣತಿಗೆ ಹಿಗ್ಗಿದರು ಭೀಷ್ಮಾದಿಗಳು ಪರುಷದಲಿ [2] |
ಪರಿವಿಡಿಗಳಲಿ ನಕುಲಸಹದೇ
ವರು ವಿವಿಂಶತಿಚಿತ್ರಬಲದು
ರ್ಮರುಷಣಾದಿಕುಮಾರರು ಸರ್ವರು ತೋಱಿದರು ಶ್ರಮವ || ೪೪

ಈತ ಧರ್ಮಜನಿವರು ಮಾದ್ರೀ
ಜಾತರೀತ ಸುಲೋಚನನು ಬಳಿ
ಕೀತನಿವ ದುಸ್ಸಹ ವಿಕರ್ಣವಿಚಿತ್ರ [3] ನಿವನೆಂದು |
ಈತ ಧನುವಿನೊಳೀತ ಖಡ್ಗದೊ
ಳೀತ ಪರಿಘದೊಳೀತ ಕುಂತದೊ
ಳೀತ ಬಲುಹಿನಲೆಂದು [4] ಭೂಪತಿಗಱುಹಿದನು ವಿದುರ || ೪೫

---

1 ವಡಾಯುಧ, ಚ.
2 ನಲವಿನಲ್ಲಿ, ಜ.
3 ದೀರ್ಘಕವಿಂದನಿವನಿಂತೀತ, ಚ.
4 ಬಲುಹೆಂದಂಥ, ಚ.

ಬಳಿಕ ನಾನಾದೇಶದರಸುಗ
ಳಿಳಿದು ತಮಗಳವಟ್ಟ ಶಸ್ತ್ರ
ವೆಳಗಳನು ತೋಱಿದರು ಮೆಚ್ಚಿಸಿದರು ಮಹಾಸಭೆಯ ।
ನೆಲನನಬ್ಬರಿಸುವ ಮಹಾಕಳ
ಕಳದೊಳಗೆ ಪಯಪಾಡುಗಳವೆ [1]
ಗ್ಗಳದ ಪಾಯವಧಾರು ಮಸಗಿದುದೊಂದುತಾವಿನಲಿ [2] ॥ ೪೬

ದುರ್ಯೋಧನನ ವಿದ್ಯಾಪ್ರದರ್ಶನ.

ಹಗಲು ಕೈದೀವಿಗೆಯ ಬಿರುದಿನ [3]
ವಿಗಡನಿವನಾರೆನಲು ಭೂಪಾ
ಳಿಗಳ ರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಿಲು ।
ಝುಗಝುಗಿಪತನುರುಚಿಯ ಮಿಂಚನು
ಮಿಗುವಖಡ್ಗಚ್ಛವಿಯ ತಲೆಯೊ
ತ್ತುಗಳ ಚಾವಡಿಯೊಳಗೆ ಕೌರವರಾಯನೈತಂದ ॥ ೪೭

ಹೊೀ ಸಿರಂತರ ಗಜಬಜಂಗಳಿ
ವೇನು ಜೀಯವಧಾರು ಚಿತ್ತವ
ಧಾನಯೆಂದಾನಕದ [4] ಕಂಚುಕಿನಿಕರ ಕೈನೆಗಹಿ ।
ಭಾನುವಿನ ಭಾರಣೆಯ ವೋಲ್ ಚತು
ರಾನನನ ನೆಱೆ ಸೃಷ್ಟಿಪಾಲನ [5]
ಸೂನು ಹೊಕ್ಕನು ರಂಗವನು ಭೀಷ್ಮಾದ್ಯರಿಗೆ ನಮಿಸಿ ॥ ೪೮

ಬವರಿಯಲಿ ಪಯಪಾಡಿನಲಿ ವ್ಯಾ
ಲವಣಿಯಲಿ ಬಿನ್ನಾಣದಲಿ ಭಾ
ರವಣೆಯಲಿ ದೆಖ್ಖಾಳದಲಿ ವೇಗಾಯ್ಲರೇಖೆಯಲಿ ।

1 ಕಳದವೊಱೆಯನು ತಿವಿವವರಿವೆ, ಚ
2 ಘಟ್ಟನಲಿ, ಚ.
3 ಬೆಳಗಿನ, ಕ, ಚ.
4 ವೆಂದುದುಸಾಲ, ಚ.
5 ಉತ್ಥಾನವಮುಖ ಚತುರಾಂಧಭೂಪನ, ಚ.

ತಿವಿವ ಹೊನೆಯೊಂದಬಿಲಿ ಮೂಬಿಂ
ದವನು ತೋರ್ದ ವಿಭೇದದಲಿ ಕೌ
ರವಮಹೀಪತಿ ತೋಱಿದನು ಶ್ರಮವನು ಕಠಾರಿಯಲಿ ॥ ೪೯

ಸುರಗಿಯಲಿ ಚಕ್ರದಲಿ ಹಲದಲಿ
ಹರಿಗೆಯಲಿ ಕಕ್ಕಡೆಯಲಸಿಯಲಿ
ಪರಿಘದಲಿ ಕುಂತದಲಿ ಗದೆಯಲಿ ಬಿಂಡಿವಾಳದಲಿ ।
ಪರಿಪರಿಯ ಚಿತ್ರದ ಚಮತ್ಕೃತಿ
ತರವ ತೋಱಿಸಿದನು ಶರಾಸನ
ಶರವಿಸರಸಂಧಾನದೊಳಗಹುದೆನಿಸಿದನು ಸಭೆಯ ॥ ೫೦

ಧೀರ ರೇ ಜಗಜಟ್ಟಿ ರಾಜಕು
ಮಾರ ಚೌಪಟಮಲ್ಲ ಕುರುಕುಲ
ಕೈರವಾಮೃತಕಿರಣ ಧೀರುರೆ ಭಲರೆ ಭಲರೆನುತ ।
ಭೂರಿಸಭೆಯಲಿ ಬಿಱಿದು [1] ಬಿಸುಡುವ
ಸೀರೆಗಳ ತೂಪಿಱಿದು ಸುಳಿವು
ಪ್ಪಾರತಿಯ ತಸಿಹರಕೆ ತಳಿತುದು ತಾಯ ನೇಮದಲಿ ॥ ೫೧

ಏಱಿ ತೋಱಿದನಶ್ವಗಜರಥ
ವಾಜನೇಱಿನು ಸಭೆಯೊಳೊಂದನು
ನೂಱುಪರಿಯಲಿ ತೋಱಿದನು ಶಸ್ತ್ರಾಸ್ತ್ರಕೌಶಲವ ।
ಮಿಱಿ ಹೆಚ್ಚಿದ ಹರುಷದಿಂದು
ಬ್ಬೇಱಿದನು ಧೃತರಾಷ್ಟ್ರ ಹಿಗ್ಗಿದ
ಳಾಱುಮಡಿಯಲಿ ಜನನಿ ದುರ್ಯೋಧನನ ಪರಿಣತಿಗೆ ॥ ೫೨

ಭೀಮಸೇನನ ವಿದ್ಯಾಪ್ರದರ್ಶನ.

ಮಸಗಿದಾನೆಯ ಗಂಧದಲಿ ರೂ
ಡಿಸುವ ಕೇಸರಿಯಂತೆ ಜಂಭನ

1 ಸುಲಿದು, ಜ.

ಉಸದ ಝೂಡಿಗೆ ಬೆದಱಿದಿದಿರಹ ವಜ್ರಧರನಂತೆ ।
ಪಸರಿಸುವ ಪರಿವಾರಮಧ್ಯದೊ
ಳಸಮಬಳ ಹೊಳಕಿದನು ಮೇಘದ
ಮುಸುಕನುಗಿದಿನನಂತೆ ಮೈದೋಱಿದನು ಕಲಿಭೀಮ ॥ ೫೩

ಗುರುನದೀಸುತವಿದುರ ಧೃತರಾ
ಷ್ಟ್ರರಿಗೆ ವಂದಿಸಿ ಯಾಯುಧಂಗಳ
ಪರಿಯ ಚಿತ್ರಶ್ರಮವ ಸಾಂಗೋಪಾಂಗಕೌಶಲವ ।
ಕರಿತುರಗದೇಱಾಟವೊದಲಾ
ಗಿರೆ ಸುಯೋಧನರಚಿತವಿದ್ಯಾ
ಪರಿಣತಿಗೆ ವೆಗ್ಗಳವಿದೆನೆ ತೋಱಿದನು ಕಲಿಭೀಮ ॥ ೫೪

ಭೀಮದುರ್ಯೋಧನರ ಕಲಹ ಮತ್ತು ಕಲಹ ಶಾಂತಿ.

ಕೋಲಗುರು ಚಿತ್ರೈಸು ಕುರುಭೂ
ಪಾಲ ಸಮ್ಮುಖನಾಗು ಹಿಡಿ ಮಾ
ರ್ಗೋಲನೆನ್ನೊಡನೆನುತ ತಿವಿದನು ಭೀಮ ಕೌರವನ ।
ಮೇಳವಿಸಿತೆರಡಂಕ ಬಂದುಗೆ
ಗೋಲಹೊಯ್ದಾಟದಲಿ ಬೞಿಕಾ
ಭೀಳಗದೆಗಳ ತುಡುಕಿ ತಱುಬಿದರಧಿಕರೋಷದಲಿ ॥ ೫೫

ಹೊಯ್ದರೊಡ್ಡಿದರಣೆದು ಮೊನೆಯಲಿ
ಹೊಯ್ದರೊಳಸೞಿಯಿಂದ [1] ಕಳದರು
ಕಾಯ್ದು ಹೆಣಗಿದರುಪ್ಪರಕೆ ಜಾಱಿದರು ಪಡಿತಳಕೆ ।
ಮೆಯ್ದೆಗೆದರಡ ಹೊಯ್ಲಿನಲಿ ಬಲು
ಗಯ್ದು ಕಾಱಿರು ಮನದ ಖತಿಗಿದಿ
ರೆಯ್ದದೆನೆ ಹೊಯ್ದಾಡಿದರು ಕಲಿಭೀಮಕೌರವರು ॥ ೫೬

---

[1] ಹಾಯ್ದರೊಳಸುಳಿಯಿಂದ, ಚ.

ಎಳೆಲೆ ಹಿಡಿ ಹಿಡಿ ಭೀಮನನು ತೆಗೆ
ಕೆಲಕೆ ದುರ್ಯೋಧನನ ಯಿದು ಮಂ
ಗಳದ ಬೆಳದಿಂಗಳಿನ ಮಟೆ ಸುಖಿದುದೆ ಮಹಾದೇವ ।
ಕಳವಳಸಿ ಭೀಷ್ಮಾದಿಗಳು ನೃಪ
ತಿಲಕರಿಬ್ಬರ ನಡುವೆ ಹೊಕ್ಕರು
ಕುಲಗಿರಿಗಳಂದದಲಿ ಕೃಪಗುರುಸುತರು ವೆಹಿಲದಲಿ ॥ ೫೭

ತೆಗೆದರೀತನನಿತ್ತಲಾತನ
ನುಗಿದರತ್ತಲು ಜನದ ಗಳದಿಂ
ದೊಗೆದ ಗಾಢದ ಗಜಬಜವ ಮೊಣೆಸಿದರಲ್ಲಲ್ಲಿ ।
ಬೆಗಡು ಮೊಳೆತುದು ಭೀಷ್ಮ ವಿದುರಾ
ದಿಗಳ ಮನದಲಿ ಮೇಲೆ ಹಬ್ಬುವ
ಹಗೆಗಿದುಪಲಕ್ಷಣವಲಾ ಯೆಂದುದು ಜನಸ್ತೋಮ [1] ॥ ೫೮

ಎಂದು ಭೀಮನ ತನ್ನ ಹೊಱಯಿಕೆ
ತಂದು ಭೀಷ್ಮಾದಿಗಳು ಮೃದುದಲಿ
ಮಂದಮತಿಯೊಳಗೇಕೆ ನಿನಗಿದು ಶೀಘ್ರವೆಂದೆನುತ ।
ಮುಂದೆ ತಾನೊಲಿದಂತುಟಾಗಲಿ
ಯೆಂದು ಭೀಮಗೆ ಹೇಳಿ ಯಂಧನ
ನಂದನನ ನಿಲಿಸಿದರು ಜನಮೇಜಯಮಹೀಪಾಲ ॥ ೫೯

ಅಳಮಸಗಿದಂಬುಜದವೊಲು ಜನ
ಜಲಧಿಜಾತಕ್ಷೋಭದಲಿ ಪೆ
ಗ್ಗಳಸಿತಗ್ಗದ ಸಾಧುವಾದವಿವಾದ ರಭಸದಲಿ ।
ಮೊಳಗಿದವು ಕಲ್ಪಾಂತಮೇಘಾ
ವಳಿಯು ಗುರುವೆನೆ ವಾದ್ಯತತಿಗಳು
ಕಳದೊಳರ್ಜುನದೇವನೆದ್ದನು ಮುನಿಯ ಸನ್ನೆಯಲಿ ॥ ೬೦

1 ಬುಧವ್ರಾತ, ಚ.

### ಅರ್ಜುನನ ವಿದ್ಯಾಪ್ರದರ್ಶನ.

ಈತನಾರರ್ಜುನನೆ ಹೋ ಹೋ
ಮಾತು ಮೊಣಲಿ ಮೊಣಲೆಂಬೀ
ಮಾತು ಹಿಂಚಿತು ಮುನ್ನ ಮೌನದೊಳಿರ್ದುದಾಸ್ಥಾನ ।
ಭೀತಕಳಕಳರಂಗದಲಿ ಪುರು
ಹೂತಸುತ ಮೈದೋಱಿದನು ಜನ
ವೀತನನು ಕೊಂಡಾಡುತಿರ್ದುದು ನೃಪತಿ ಕೇಳೆಂದ ॥ ೬೧

ದ್ರೋಣಕೃಪಮೊದಲಾದ ಮಾನ್ಯ
ಶ್ರೇಣಿಗೆಱಗಿದನಮರಸಿಕರಕೆ
ಗೋಣನೆತ್ತಿದನಿಟ್ಟು ಕರಪುಟವನು ಲಲಾಟದಲಿ ।
ಪ್ರಾಣಪಣ [1] ವಿದು ನಿಖಿಳವಿದ್ಯೆಯ
ಜಾಣತನವಿದು ವಿನಯವೆಂದಿದು
ಕೇಣವಿಲ್ಲದೆ ನೆರವಿ ನೆಱೆ ಹೊಗಳಿತು ಧನಂಜಯನ ॥ ೬೨

ನಿಲುವಿನಲಿ ಸ್ವಸ್ಥಾನದಲಿ [2] ಕೈ
ಚಳಕದಲಿ ಭಂಗಿಯಲಿ ಭಾರದ
ಲುಳಿಯಲೊಯ್ಯಾರದಲಿ ಮೋಡಾಮೋಡಿಯಂದದಲಿ ।
ಅಳವಿಯಲಿ ಪರಿವಿಡಿಯಲುಪ್ಪರ
ವಳಯದವಧಾನದಲಿ ಶಸ್ತ್ರಾ
ವಳಿಯ ಸಾಂಗೋಪಾಂಗಶ್ರಮವನು ತೋಱಿದನು ಪಾರ್ಥ ॥ ೬೩

ತುರಗಜಯುರೇವಂತ ಮದಕುಂ
ಜರಮಹಾದೇವೇಂದ್ರ ರಥಪಂ
ಚರಣನವಮಾರ್ತಾಂಡನೆಂದಬ್ಬರಿಸೆ ಜನನಿಕರ ।
ಧುರದ ವಿಜಯಶ್ರೀಯ [3] ಶಿಕ್ಷಾ

---

1 ಪಥ, ಜ, ಪದ, ಚ.
2 ಸಂಸ್ಥಾನದಲಿ, ಚ.
3 ತುರಗಗಜ ರಥವಿವಿಧ, ಚ.

ಪರಿಣತಿಯ ತೋಱಿದನು ಗುರುಕೃಪ
ಸುರನದೀಜರು ಮುಱುಗಿದರು ಪುಳಕಾಂಬುಪೂರದಲಿ ॥ ೬೪

ಮತ್ತೆ ಕೊಂಡನು ಧನುವ ನೆರವಿಯ
ನತ್ತ ಹೊಯ್ ಹೊಯ್ ಹೋಗಹೇೞು
ವೃತ್ತರೆದೆ ಜರ್ಝರಿತವಾಗಲು ತೋಱಬೇಕೆನುತ ।
ಬತ್ತಳಿಕೆಯಿಂದುಗಿದು ಹೂಡಿ ವಿ
ಯತ್ತಳಕೆ ಹಾಯ್ಸಿದನು ಕಬ್ಬೊಗೆ
ಸುತ್ತಿ ದಳ್ಳುರಿ ಸುಱಿದುದಾಗ್ನೇಯಾಸ್ತ್ರಧಾರೆಯಲಿ ॥ ೬೫

ತೆಗೆಸಿದನು ಶಿಖಿಶರವ ಧನುವಿಂ
ದುಗುೞಿಸಿದ ವಾರಣವನಭ್ರವ
ಮೊಗೆದುದದ್ಭುತವಾರಿಯುಪಸಂಹರಿಸಿದನು ಮಗುೞೆ ।
ಹಗಲನೊಂದೇ ತುತ್ತುಮಾಡುವ
ವಿಗಡತಿಮಿರಾಸ್ತ್ರದ ತಿಮಿರವನು
ತೆಗೆಸಿದನು ಸೂರ್ಯಾಸ್ತ್ರದಲಿ ಬೆಱಗಾಗೆ ಸುರನಿಕರ ॥ ೬೬

ಗಿರಿಸರಳ ವಜ್ರದಲಿ [1] ಮೇಘದ
ಸರಳನನಿಲದಿನುರಗಬಾಣವ
ನಿರುತಗರುಡಾಸ್ತ್ರದಲಿ ವಹ್ನಿಯ ಜೀವನಾಸ್ತ್ರದಲಿ ।
ಪರಿವಿಡಿಯ ತೋಱಿದನು ಜನವ
ಬ್ಬರಿಸಲಡಿಗಡಿಗಂಧಭೂಪನ
ಕೊರಳು ಕುಸಿದುದು ನುಡಿಯ ನಾಟಕಪರುಷಭಾರದಲಿ ॥ ೬೭

ಇವರ ಮುಖವರಳಿದುದು ಗಂಗಾ
ಭವಕೃಪದ್ರೋಣಾದಿಗಳ ಬೞಿ
ಕವರ ತಲೆ ಬಾಗಿದುದು ಧೃತರಾಷ್ಟ್ರಾದಿಕೌರವರ ।
ಇವರ ಜನನಿಯ ಮುಖದ ಸುಮ್ಮಾ

1 ಗಿರಿಶರದಲದ್ರಿಗಳ, ಚ.

ನವೆನು ದುರ್ಯೋಧನನ ಜನನಿಯು
ಜವಳದುವ್ಮೊನವೆನು ಬಣ್ಣಿಸಲರಿಯೆ ನಾನೆಂದ ‖ ೬೮

ಬಾಯ ಹೊಯ್ ಫಲುಗುಣನ ಹೊಗಳುವ
ನಾಯಿಗಳಲೇನಾಯ್ತು ಕೌತುಕ
ಪಾಯಕಿವದಿರ ಪಕ್ಷಪಾತವ ನೋಡು ನೋಡೆನುತ ।
ಸಾಯಕವ ತಿರುಹುತ್ತ[1] ಲಾಕ
ರ್ಣಾಯತಾಂಬಕನೆಡಬಲದ ಕುರು
ರಾಯನನುಜರ ಗಡಣದಲಿ ನಡೆತಂದನಾಕರ್ಣ ‖ ೬೯

ಕರ್ಣನ ವಿದ್ಯಾ ಪ್ರಕಾಶ.

ಗುರುಗಳಿಗೆ ಕೈಮುಗಿದು ಶಿರದಲಿ
ತರಣಿಮಂಡಲಕೆರಗಿ ನೋಡುವ
ನೆರೆವಿಗಿವನಾರೀತನಾರೆಂಬಖಿಳರಿಯ ವಿಸ್ಮಯ[2] ।
ಅರಸ ಕೇಳ್ಪ ವಿವಿಧಶಸ್ತ್ರೌ
ತ್ಕರದ ಶ್ರಮವನು ತೋರಿದನು ಕರಿ
ತುರಗರಥವಾಹನದ ಶಿಕ್ಷಾವಿದ್ಯೆಗಳ ಸಹಿತ ‖ ೭೦

ಆವವಿಧದಲಿ ಪಾರ್ಥ ತೋರಿದ
ನಾವ ದಿವ್ಯಾಸ್ತ್ರಪ್ರಪಂಚವ
ಪಾವಕಾನಿಲವಾರುಣಾದಿಯನೈದೆ ವಿರಚಿಸಿದ ।
ಆವಿಧಾನದಲಾವಿಹಾರದ
ಲಾವಿಬಂಧದಲರ್ಜುನನ ಬಾ
ಣಾವಳಿಯ ಬಿನ್ನಾಣವನು ತೋರಿದನು ಕಲಿಕರ್ಣ ‖ ೭೧

ಸೆಣಸುವೊಡೆಬಾ ಯೆನುತ ಪಾರ್ಥನ
ಕೆಣಕಿದನು ಘನರೋಷಶಿಖಿಯುಲಿ
ಕುಣಿದವಿಬ್ಬರ ವಿಸ್ಮಯ ಕಂಗಳೊಳೊಗುವಕೆಂಪುಗಳ ।

---

1 ತೂಗುತ್ತ, ಚ.   2 ದುಖುತವಬೀರಿ, ಚ.

ಕಣೆಕಣೆಯ ಕೌಶಲದ ಶರಖಂ
ಡಣೆಯ ಕೋಲಾಟದಲಿ ಖಣಿಖಣಿ
ಖಣಿಲು ಖಣಿಲೆನೆ ಮಸಗಲೆಚ್ಚಾಡಿದರು ಖಾತಿಯಲಿ [1] ‖ ೭೦

ರಾಯಸಭೆ ಕಳವಳಿಸೆ ಹೋ ಹೋ
ಹೋ ಯೆನುತ ಮುಂಕೊಂಡು ಹಿಡಿದರು
ವಾಯುಸುತಕೃಪಗುರುಸುತರು ದ್ರೋಣನು ಧನಂಜಯನ ।
ಆಯಿತೆಲವೋ ಕರ್ಣ ನೀನು ಪ [2]
ಸಾಯಿತನೊ [3] ನೃಪಹಾರದಲಿ ಮೇಣ್
ನಾಯಕನೊ ನೀನಾವನೆಂದನು ಕೃಪನು ಖಾತಿಯಲಿ ‖ ೭೧

ಈತನಾರ್ಯ ಕರ್ಣನೆಂಬವ
ನೀತನೀಯರ್ಜುನನೊಡನೆ ಮಾ
ರಾತು ಕೈಮಾಡಿದನು ಕೈಕೊಳ್ಳನು ಧನಂಜಯನ ।
ಈತ ತಪ್ಪಲ್ಲೆನುತ ಮಿಗೆ ವೈ
ಯ್ಯಾತನಾಧೃತರಾಷ್ಟ್ರನೀತನ
ಮಾತ ಕಂಡಳು ಕುಂತಿ ನೆನೆವಳು ಪೂರ್ವಸಂಗತಿಯ ‖ ೭೪

ಎನ್ನ ಮನವೇ ಬಲ್ಲದಲ್ಲಿದು
ತನ್ನ ವಶವೇ ವಿಷ್ಣುಮಾಯೆಯು
ಬಿನ್ನಣವಲೇ ಮಾತ ಬಿಗಿದುದು ಮನವನೊಳಸಿಕ್ಕಿ ।
ತನ್ನ ತಾನೇ ಮಱೆದು ಮೂರ್ಛಾ
ಪನ್ನೆಯಾದಳು ಕುಂತಿ ಯಿತ್ತಲು
ಖಿನ್ನನಾದನು ಕೃಪನ ನುಡಿಯಲಿ ಮನದೊಳಗೆ ಕರ್ಣ ‖ ೭೫

ಈತನರಸಲ್ಲೆಂದು ಕೃಪ ಹಟ
ವಾತನೇ ತಪ್ಪೇನು ರಾಜ್ಯದೊ
ಳೀತನನರಸನೆನಿಸುವೆನು ನಮ್ಮಯ ಪುರೋಹಿತರ ।

---

[1] ಚಳಕದಲಿ, ಚ.　[2] ನಿನ್ನಯ, ಜ.　[3] ಪಾಯಕದ, ಜ.

ಕರ್ಣನನ್ನು ಅಂಗದೇಶದ ರಾಜನನ್ನಾಗಿ ಮಾಡುವಿಕೆ

ಶಾತಕುಂಭಾಸನವ ಮಂಗಳ
ಜಾತವಸ್ತುವ ತರಿಸು ತರಿಸೆಂ
ದಾತತುಕ್ಷಣದಲಿ ಸುಯೋಧನನೆದ್ದು ರಭಸದಲಿ ॥ ೭೬

ಇರಿಸಿ [1] ಭದ್ರಾಸನದೊಳೀತಂ
ಗರಸುಪದವಿಯನಂಗದೇಶದ
ಸಿರಿಯನಿತ್ತನು ರಚಿಸಿದನು ಮೂರ್ಧಾಭಿಷೇಚನವ ।
ದರುಶನವನಿತ್ತಿತ್ತು ಧರಣೀ
ಶ್ವರರು ಕಂಡರು ಪೂರ್ವಶೈಲದ
ತರಣಿಯಂತಿರೆ ಕರ್ಣನೆಸೆದನು ರಾಜತೇಜದಲಿ ॥ ೭೭

ಈತನುತ್ಸವ ತನ್ನದೆಂದೇ
ಪ್ರೀತಿಯಿಂದಾಸೂತನತ್ಯತರ
ಲೀತನಿಳಿದೆಱಗಿದನು ಪದದಲಿ ಬಳಿಕ ಜನಜಸಿತ ।
ಸೂತಸುತನಿವನೆಂದು ಭುವನ
ಖ್ಯಾತವಾದುದು ಬಳಿಕ ನಸುನಗು
ತೀತನನು ಕುಲವೆತ್ತಿ ಭಂಗಿಸಿ ನುಡಿದನಾಭೀಮ ॥ ೭೮

ಇವನ ತಂದೆಯುದಾರು ಪಾಂಡುವೊ
ಯುವನಿಪತಿ ಧೃತರಾಷ್ಟ್ರನೋ ಕೌ
ರವನ ಸಿಂಹಾಸನಕೆ ಯೋಗ್ಯನದಾವಕುಲದವನು ।
ಅವಗಡಯುತನಕಂಜುವೆನು ಸೀ
ವಿವನ ಪತಿಕರಿಸುವೊಡೆ ನಿಮ್ಮಾ
ಯುವನಿಪತಿಗಳೊಳಾರು ಹೇಳೆನೆ ಭೀಮ ಕುರುಪತಿಗೆ ॥ ೭೯

ಇವನ ತಂದೆಯುದಾರು ಪಾಂಡುವೊ
ಪವನನೋ ಮಿಗೆ ನಿಮ್ಮ ಜನನವ
ನೆವಗೆ ಹೇಳಿರಿ ಹಿರಿಯ ಗುರುಗಳ ತಾಯದಾವವಳೊ ।

1 ತರಿಸಿ, ಚ.

ಅವೆಗಡಿಸುವೊಡೆ ಹಿರಿಯ ತನಕಂ
ಜುವೆನು ನಿಮಗೆನುತಡಿಗಡಿಗೆ ಕೌ
ರವಮಹೀಪತಿ ತಾನು ಜಱಿದನು ಭೀಮಗುರುಕೃಪರ ॥ ೮೦

ಒಳಗೆ ಗಜಬಜವಾಯ್ತು ಕೈದುವ
ಸೆಳೆದುದಲ್ಲಿಯದಲ್ಲಿ ಗುರುಕೃಪ
ರುಲುಹ ಕೇಳುವರಿಲ್ಲ ಕೈದೊಳಸಾಯ್ತು ಕಳನೊಳಗೆ ।
ಇಱಿದು ಭೀಷ್ಮಾದಿಗಳು ತಮ್ಮಯ
ನಿಳಯಕೈದಿದರೆರಡು ಬಲ ತ
ವ್ಮೊಳಗೆ ತಾವೇ ಹೞಿದು ಹರಿದುದು ಭೂಪ ಕೇಳೆಂದ ॥ ೮೧

ಕೆಲರು ಭೀಮನನರ್ಜುನನ ಕೆಲರು
ಕೆಲರು ಕರ್ಣನ ಕೌರವೇಂದ್ರನ
ಕೆಲರು ಹೊಗೞುತ ಬಂದು ಹೊಕ್ಕರು ಹಸ್ತಿನಾಪುರವ ।
ಎಲೆ ಮಹೀಸುರ ಭೀಮಪಾರ್ಥರ
ಬಲುಹ ಹೊಗೞಿದರಾರು [1] ಕೌರವ
ತಿಲಕನನು ತಾವಾರು ಹೊಗೞಿದರೆಂದು ಬೆಸಗೊಂಡ ॥ ೮೨

ಎಲೆ ಪರೀಕ್ಷಿತತನಯ ಕೇಳಂ
ದೊಲಿದು ಭೀಮಾರ್ಜುನರ ಹೊಗೞುವ
ಬಳಗವದು ತಾ ಸಾಧುಶಾಂತರು ಕರ್ಣ ಕುರಪತಿಯು ।
ಗೆಳೆಯರಾದವರವರ ಜೀವರು
ಬೞಿಕ ಹೊಗೞುತ ಹೊೞಲ ಹೊಕ್ಕರು
ತಿಳಿದುಕೊ ನೀನಿದಱ ಪರಿಯನು ಭೂಪ ಕೇಳೆಂದ ॥ ೮೩

ಹೊೞಲ ಹೊಕ್ಕರು ಹಸ್ತಿನಾಪುರ
ದೊಳಗೆ ಕೌರವಪಾಂಡುಪುತ್ರರು
ಬಲಿಯಿತ್ತೈ ಮನವೈರವಾದಿನದಲ್ಲಿ ಯುಭಯರಲಿ ।

[1] ಹೊಗೞಿದರಿಂದು, ಕ. ಖ.

ಬಟಿಕಲಾವಮಬುದೆವಸದಲಿ ಮ
ಕ್ಕಳುಗಳೆಲ್ಲರ ಕರೆಸಿ ಗರುಡಿಯು
ನಿಳಯದಲಿ ಕುಳ್ಳಿರ್ದು ಗುರು ನುಡಿದನು ಕುಮಾರರಿಗೆ ॥ ೮೪

ದ್ರೋಣನು ಶಿಷ್ಯರನ್ನು ಗುರುದಕ್ಷಿಣೆಯನ್ನು ಬೇಡುವಿಕೆ.

ಏನಿರೈ ಕುರುವಂಶನಳಿನೀ
ಭಾನುಗಳಿರ ವಿದಗ್ಧಜನಸುರ
ಧೇನುಗಳಿರಾ ನಾವು[1] ನಿಮ್ಮಲಿ ದಕ್ಷಿಣಾರ್ಥಿಗಳು ।
ಏನನೀವಿರಿ ನಮಗೆ ನೀವತಿ
ದಾನಿಗಳು ಕೊಡಲಾಪ ಸತ್ವನಿ
ಧಾನವುಂಟೇ ಹೇಳಿ ಯೆಂದನು ದ್ರೋಣನನಿಬರಿಗೆ ॥ ೮೫

ಆವುದನು ಬಯಸಿದಿರಿ ನಿಮ್ಮಡಿ
ನೀವು ಬೇಡಿದ ತಂದು ಕೊಡುವೆವು
ನಾವಿದಕೆ ಸಂದೇಹ ಬೇಡೆಂದರು ಕುಮಾರಕರು ।
ತೀವಿದಗ್ಗದ ಹರುಷದಲಿ ಸಂ
ಭಾವನೆಯಲಾ ಮುನಿವರನು ಶಿ
ಷ್ಯಾವಳಿಗೆ ನುಡಿದನು ನಿಜಾಭಿಪ್ರಾಯಸಂಗತಿಯ ॥ ೮೬

ಕೇಳಿ ಬಲ್ಲಿರೆ ಗಂಗೆಯುತ್ತರ
ಕೂಲದಲಿ ಪಾಂಚಾಲದೇಶನೃ
ಪಾಲನಲ್ಲಿಗೆ ದ್ರುಪದನೆಂಬವನತುಳಭುಜಬಲನು ।
ಆಳುತನದಂಗದಲಿ ಪರರಿಗೆ
ಸೋಲದವನೊಟ್ಟೈಸೆ ದ್ರುಪದನೃ
ಪಾಲಕನ ಹಿಡಿದೊಪ್ಪಿಸಿದರೆಮಗಹುದು ಪರಿತೋಷ ॥ ೮೭

ಐಸಲೇ ಗುರುದಕ್ಷಿಣಾರ್ಥವಿ
ದೇಸು ಘನ ತಂದೀವೆವೆಂದುಪ

---

1 ಯೆಂದು, ಕ. ಖ.

ಹಾಸದಲಿ ಕೈಹೊಯ್ದು ತಮ್ಮೊಳು ನಗುತ ಕೌರವರು ।
ಆಸುಯೋಧನ ಕರ್ಣಸಹಿತ ಮ
ಹೀಶತನುಜರು ಬೀಱುಕೊಂಡರು
ಪಾಸಬಿದ್ದುದು ಪಾಂಡುಸುತಕೌರವಕುಮಾರರಿಗೆ ॥ ೮೮

ಧಾಟಿ ಯಿಟ್ಟುದು ರಾಯದಳ ಪಾಂ
ಚಾಲನಗರಿಗೆ ಮುಂದೆ ಹೊಕ್ಕುದು
ಚೋಳಕೆಯಲಿ ಸುಯೋಧನಾದಿಗಳೂರನುರವಣಿಸೆ ।

ಕೌರವರ ಪರಾಜಯ.

ಧೂಳಿಗೋಂಟೆಯ ಕೊಂಡಱಿದು ಪಾ
ಂಚಾಲಯಕೆ ಬರೆ ದ್ರುಪದನನುಜರು
ಸೋಲಿಸಿದರೈ ಕುರುರಾಯನನುಜರ ದಳವೆ ಬಱಿಕ್ಕೈದು [1] ॥ ೮೯

ಹಿಡಿದು ಕೌರವಶತವ ರವಿಜನ
ನೊಡೆಬಿಗಿದು ಸೌಬಲನ ಸಹಿತವೆ
ಬಿಡದೆ ಬೀದಿಯೊಳೂರಸಲೋಡಿತು ಚಾತುರಂಗಬಲ ।
ಬಡವಮನದ ಮನ್ನೆಯರ ಗಡಣದೊ
ಳಡಸಿ ಬಂದೈ ಕೌರವೇಶ್ವರ
ಒಡೆಯ ದ್ರುಪದನು ನಿನ್ನ ಕಂಡರೆ ಬಿಡನದೆನುತಾಗ ॥ ೯೦

ಈತನೇ ಕೌರವನದೆಂಬವ
ನೀತನೇ ರಾಧೇಯ ಸೌಬಲ
ನೀತನೇ ದುಶ್ಶಾಸ ದುರ್ಜಯನೀತನೇ ಯೆನುತ ।
ಈತಗಳು ನಮ್ಮರಸ ದ್ರುಪದನು
ಮಾತನಱಿಯರು ನೀತಿಬಾಹಿರ
ರೇತಕಿವದಿರರೆಂದು ಜನವಬ್ಬರಿಸಿ ನುಡಿಯಲಿಕೆ ॥ ೯೧

---

1 ಕೌರವೇಂದ್ರನ ಸೈನ್ಯಸಾಗರವ, ಖ.

ಪಾಂಡವರು ಸನ್ನದ್ಧರಾಗಿ ಪಟ್ಟಣವನ್ನು ಪ್ರವೇಶಿಸುವಿಕೆ.

ಪುರದ ಹೊಱಬಾಹೆಯಲಿ ತಾವೈ
ವರು ಮಹಾಸನ್ನಾಹಚಾಪ
ಸ್ಫುರಿತಚರ್ಮಣೀಬದ್ಧಕಂಪಿತಖಡ್ಗಪಾಣಿಗಳು ।
ಗುರುಸಹಿತಲಿವರಿದ್ದರಿತ್ತಲು
ಪುರಜನದ ಮುಸಲಾಪಹತಿಯಲಿ
ಮುಱಿದು ಬಂದುದು ಕೌರವೇಂದ್ರನ ದಳ ವಿಘಾತಿಯಲಿ ॥ ೯೦

ಆತುಕೊಂಡರು ಪಾಂಡುಸುತರಛಿ
ಜಾತಸಮರವೆನಿವರ ಕೈಯ್ಯಲಿ
ಮಾತು ಹಲವರಲೇನು ಹೊಕ್ಕರು ಮುಱಿದು [1] ಪರಬಲವೆ ।
ಘಾತಿಗಾನುವರಿಲ್ಲ ಧುರದೊಳ
ಗಾತನನು ಮುತ್ತಿದರು [2] ದಕ್ಷಿಣೆ
ಯಿಾತ ಗುರುಗಳಿಗೆನುತ ಹೊಕ್ಕರು ದ್ರುಪದನರಮನೆಯ ॥ ೯೩

ಪಾರ್ಥ ಭೀಮನ ಬೇಡಿಕೊಂಡನು
ಪ್ರಾರ್ಥಿಸುತ ನಾನೊಬ್ಬ ದ್ರುಪದನ
ನರ್ಥಿಯಲಿ ಹಿಡಿತಹೆನು ತನಗಿದ ಕೃಪೆಯ ಮಾಡೆನುತ ।
ಪಾರ್ಥನೊಬ್ಬನೆ ಸಕಲಸೈನ್ಯ
ವ್ಯರ್ಥಮಾಡಿ ದ್ರುಪದರಾಯನ
ಸ್ವಾರ್ಥಗೃಹದೊಳಗೊಬ್ಬ ಹೊಕ್ಕನು ನೃಪತಿ ಕೇಳೆಂದ ॥ ೯೪

ಬಟಿಕ ಧರ್ಮಜಭೀಮಯಮಳರು
ಹೊಱಲ ಬೀದಿಯಲಿರಲು ಫಲುಗುಣ
ನುಲಿದು ಹೊಕ್ಕನು ದ್ರುಪದನಂತಃಪುರದ ಮಧ್ಯದಲಿ ।

---

[1] ಹುರುಳಿಲ್ಲೆನುತ ಹೊಕ್ಕರು ಕೊಂದು, ಚ.

[2] ಗುರುಗಳಿಗೀತನೇ ದಕ್ಷಿಣೆಯೆನುತ ಹಿಡಿದರು ಮಹೀಪತಿಯ, ಚ.

ಲಲನೆಯರು ಕಂಡಂಜೆ ಪಾರ್ಥನು
ನಿಲಿಸಿದನು ನೀವಂಜದಿರಿ ಗುರು
ಲಲನೆಯರು ನೀವು ನವಗೆನುತಲಿ ನೃಪನನೆಬ್ಬಿಸಿದ ‖ ೯೧

ಎಬ್ಬಿಸಲಿಕಾದ್ರುಪದ ಫಲ್ಗುನ
ನಬ್ಬರವ ತಾ ಕಂಡು ಬೆದಱಿಯೆ
ವ್ರೊಬ್ಬನಿವನಾರೆನಲು ಫಲುಗುಣನೆಂದನೊಂದುವನು ।
ಒಬ್ಬನೇ ನೀನೆನ್ನ ಸಮರದ
ಹಬ್ಬವನು ನೋಡೆನಲು ನುಡಿಗಳ
ನಿಬ್ಬರವ ತಾ ಕಂಡು ದ್ರುಪದನು ಪಾರ್ಥಗಿಂತೆಂದ ‖ ೯೬

ನೀನದಾರೈ ಯೆನ್ನ ಸಮರಕೆ
ಮಾನಿಸನು ತಾನಿಲ್ಲವ್ರೊಬ್ಬನ
ಲೇನು ಫಲವೆಂದೆನಲು ಫಲುಗುಣನೆಂದ ನಸುನಗುತ ।
ನಾನು ಕುಂತೀಪುತ್ರ ಮಧ್ಯಮ
ನೀನು ನಡೆ ಸಂಗ್ರಾಮ ಮಾಡುವ
ವೇನೆನಲು ಪಾಂಚಾಲ ಕೋಪಿಸಿ ಬಂದ ಕಾಳಗಕೆ ‖ ೯೭

ಸರ್ವಸೈನಿಕವೆಱಸಿ ನಿಂದಿರ
ಲೊರ್ವನೇ ದೞವುಱಿಸಿ ದ್ರುಪದನ
ನಿರ್ವಹಿಸಿ ತಾ ಹಿಡಿದು ಕಟ್ಟಿದ ನಿಮಿಷಮಾತ್ರದಲಿ ।

ದ್ರುಪದನನ್ನು ಹಿಡಿದು ಗುರುಗಳ ಬಳಿಗೆ ತರುವಿಕೆ.

ಸರ್ವಕೌರವಸೇನೆ ಸೋತುದ
ದೊರ್ವನೇ ಜಯಿಸಿದನು ಕೌರವ
ನುರ್ವಿಪತಿ ನೋಡಲಿಕೆ ಹಿಡಿದನು ದ್ರುಪದಭೂಪತಿಯು ‖ ೯೮

ಕೊಂಡು ಬಂದನು ದ್ರೋಣನಿದ್ದೆಡೆ
ಗಂಡಲೆದು ಬರೆ ಕುಂಭಸಂಭವ

ಕಂಡು ತನ್ನಾಲಯದ ಮಂಚದೊಳಂದು ಪವಡಿಸಿದ ।
ಗಂಡುಗಲಿ ನರಗುರುವನೆಬ್ಬಿಸಿ
ದಿಂಡುಗೆಡೆ ಪಾಂಚಾಲಭೂಪನ
ತುಂಡಿಸಿದನಾದ್ರೋಣಮಂಚದ ಕಾಲೊಳೂಡೆಪೆಟ್ಟು ॥ ೯೯

ಇದು ಮಹಾಪೌರುಷವೆ ಗುರುಗಳ
ನಿದಕೆ ನಿದ್ರೆಯು ಕೆಡಿಸಲೇತಕೆ
ಹದನ ತಾವೇ ಯೆದ್ದು ಕಾಂಬರೆನುತ್ತ ಮರಳಿದನು ।
ಒದೆಯುತಲಿ ದ್ರುಪದಾಖ್ಯನಾ [1] ಗುರು
ಮುದದಿ ವಾಮಪದಾಬ್ಜದಿಂದವೆ
ಕದಹ ತೆಗೆದನು ಮುಖದ ನಿದ್ರೆಯು ದ್ರುಪದಭೂಪತಿಯು ॥ ೧೦೦

ಕಂಡು ನೋಡಿ ದ್ರೋಣ ನೃಪದಗೆ
ಭಂಡನೆಲವ್ರೋ ನೀನು ಒಲ್ಲೇ
ಕಂಡು ನಮ್ಮಯ ಪೂರ್ವದಪರವನೆಂದನಾದ್ರೋಣ ।
ಕೊಂಡು ಬಂದನು ಪಾರ್ಥದೇವನು
ಗಂಡುಗಲಿ ಹೆಡೆಗಯ್ಯಕಟ್ಟಯೆ
ಗಂಡನವನಹನವನ ಕರೆಯಿಂದಿವನ ಬಿಡಲೆಂದ ॥ ೧೦೧

ಎಂದೊಡಾಗಲೆ ಪಾರ್ಥದೇವನ
ಬಂದು ಕಂಡರು ದ್ರೋಣದೂತರು
ನಿಂದಿರದೆ ನರ ಬಂದನಾಕ್ಷಣ ಗುರುವಿನರಮನೆಗೆ ।
ಬಂದು ಚರಣದ್ವಂದ್ವ ನಿರುತಕೆ
ವಂದಿಸುತ್ತಿರಲೆತ್ತಿ ಪಾರ್ಥನ
ತಂದೆಲೈ ಪಾಂಚಾಲಭೂಪನನೆನುತ ಬಿಗಿದಪ್ಪಿ ॥ ೧೦೨

ಬಳಿಕ ಪಾರ್ಥನ ಕೈಯ್ಯ ದ್ರುಪದನ
ಗಳದ ಪಾಶವ ಬಿಡಿಸಿ ಪಾರ್ಥಂ

---

[1] ದ್ರುಪದಾಂಕನಾ, ಕ, ಖ.

ಗೊಲಿದು ದ್ರೋಣಾಚಾರ್ಯರೆಂದರು ಭೂಪ ಕೇಳೆಂದ |
ತಿಳುಹಿ ಬಾರೈ ದ್ರುಪದನೀತನ
ಲಲನೆಯರ ಕೈಲೊಪ್ಪಿಸೆಂದರೆ
ಬಳಿಕ ಫಲುಗಣ ದ್ರುಪದರಾಜನ ಬಿಟ್ಟು ಹರುಷದಲಿ ‖ ೧೦೩

ದ್ರುಪದನಿಗೆ ದ್ರೋಣರ ಭರ್ತ್ಸನೆ.

ಕೊಂಡು ಬಂದರು ದ್ರೋಣನಿದಿರಲಿ
ದಿಂಡುಗೆಡಹಿದರೀತನನು ಕೈ
ಕೊಂಡನೆಲವೋ ದ್ರೋಣಸಖಪೂರ್ವಾಂತರವನೆನುತ [1] |
ಭಂಡನಿವನೆನು * ಕಳುಹಿ ಕಳಯಿಪ
ಚಂಡಿತನದಲ್ಲೀ ಸುದಿನ ಕ
ದ್ದಂಡವೊಳನನೇನ * ವೊಡುವೆ ವೆಂದನಾದ್ರೋಣ ‖ ೧೦೪

ಎಲವೊ ಕೊಟ್ಟೆನು ಪ್ರಾಣದಾನವ
ನಳವು ನಿನಗೆಂತಹುದು ಸಾಹಸ
ದಳವಿಯನು ನೀನೆರಹು ಹಗೆಯಲಿ ಭಂಡ ಹೋಗೆನುತ |
ಕಳಚಿ ಕಟ್ಟದೆ [2] ನಿನ್ನ ರಾಜ್ಯದ
ನೆಲದೊಳರ್ಧವ ಕೊಟ್ಟು ನೀ ನಡೆ
ಬಳಿಕಲೆಂದೊಡಬಡಿಸಿ ದ್ರುಪದನ ಬಿಟ್ಟನಾದ್ರೋಣ ‖ ೧೦೫

ಬಳಿಕ ಪಾರ್ಥನು ದ್ರುಪದರಾಜನ
ಲಲನೆಯನು ಕರೆತರಿಸಿ ನಿಮ್ಮಾ
ಯಿಳೆಯೊಳರ್ಧವ ಕೊಂಡು ಗುರುಗಳು ಪ್ರಾಣದಾನವನು |
ಉಳುಹಿ ಬಿಟ್ಟರು ನಿಮ್ಮ ಪತಿಯನು
ತಿಳುಹಿಕೋ ನೀನೆಂದು ಪಾರ್ಥನು
ಬಳಿಕ ದುರ್ಯೋಧನನ ಕರ್ಣನ ಶಕುನಿಯನು ಕಂಡ ‖ ೧೦೬

---

1 ದ್ರುಪದಸಖಪೂರ್ವವನು ನೆನೆಯೆನುತ, ಚ.

* ಸಾಕುಬಿಡಿಸಲೆಚಂಡಿಯಾದನ್ನದರ್ಪವಿಷವುಂ ಕೊಂಡ ಮೂರ್ಖತೆಗೇನ *

2 ಕಳೆದುಕೊಟ್ಟನು, ಚ.

### ದ್ರುಪದನ ಪುತ್ರಕಾಮೇಷ್ಟಿ.

ಅರಸ ಕೇಳ್ಳೆ ದ್ರುಪದನೀಪರಿ
ಪರಿಭವಕೆ ಗುಱಿಯಾಗಿ ತನ್ನಯ
ಪುರವ ಹೊಗದೈತಂದು ಗಂಗಾತೀರದೇಶದಲಿ ।
ಧರಣಿಸುರರಲಿ ಪುತ್ರಕಾಮಾ
ಧ್ವರವ ವಿರಚಿಸಲಾಗ ಸತ್ವೋ
ತ್ಕರಸಮಗ್ರರ[1] ನರಸಿದನು ನಾನಾಗ್ರಹಾರದಲಿ ॥ ೧೦೭

ದ್ರೋಣಭಯದಲಿ ಸಕಲವಿಪ್ರ
ಶ್ರೇಣಿಯಿರೆ ಯಾಜೋಪಯಾಜರು
ಪ್ರಾಣನಿಸ್ಪೃಹರಾಗಿ ಮಾಡಿಸಿದರು ಮಹಾಕ್ರತುವ ।
ಕೇಣವಿಡಿದಾಹುತಿಯನಮರರ
ಬಾಣಸಿಗನುಣಬಡಿಸೆ ದೇವ
ಶ್ರೇಣಿ ದಣಿದುದು ಸಲಿಸಿದುದು ಪಾಂಚಾಲನಭಿಮತವ ॥ ೧೦೮

ಅರಸ ಕೇಳ್ಳೆ ಕೊಂಡಮಧ್ಯದೊ
ಳುರಿಯು ಕಱುವಿಟ್ಟೆಱಿದರೋ ಭೂ
ಸುರಮಹಾನಲನಪರರೂಪೋ ತಾನಿದೇನೆನಲು ।
ಶರವು ಖಡ್ಗವು ಚಾಪಚಕವರ್ಮೋ
ತ್ಕರ ಸಹಿತರೌದ್ರಾಂಗನಾಗವೆ
ತರಿಸಿದನು ಪಾಂಚಾಲಭೂಪತಿ ಭುಜವ ಸೂಪೈಸೆ ॥ ೧೦೯

ವೇದಿಮಧ್ಯದೊಳೊಡೆದು ಮೂಡಿದ
ಳಾದರಿಸೆ ಜನವಮಮ ಕಾಮನ
ಕೈದುವೋ ತ್ರೈಲೋಕ್ಯಮೋಹನಮಂತ್ರದೇವತೆಯೊ ।
ಆದಿಯುಲಿ ತಾ ಪಂಚದೇವರು

---

1 ಲಾಗಿಸತ್ವೋತ್ಕರ್ಷವಂತರ,

ಮೇದಿನಿಯೊಳೊಂದಂಗವಾಗಿಯೆ
ಯಾದವೇಂದ್ರನ ವೈರಿವರ್ಗಕೆ ಮೂಲಭೇದನವೊ ‖ ೧೧೦

ಕಾದುವೊಡೆ ಕರೆ ಹರಿಹರಬ್ರ
ಹ್ಮಾದಿಗಳಗೊರೆ ಯೆಂಬಹಂಕೃತಿ
ಯಾದುದಾರಾಯಂಗೆ ದ್ರುಪದಾತ್ಮಜೆಯ ಜನನದಲಿ ।
ಮೇದಿನಿಯ ಭೂಪರುಗಳನಿಸುವ
ಸೋದರರು ಶತವೆನಿಪ ಕೌರವ
ಗಾವಳ್ಯ ತಾ ಮೃತ್ಯುದೇವತೆ ಪರಿಯ ಕರುಣದಲಿ ‖ ೧೧೧

ದ್ರುಪದ ರಚಿಸಿದ ಮಖವ ದ್ರೋಣನ
ನಪಹರಿಸೆ ಬೇಕೊಂದು ಪುತ್ರನು
ವಿಪುಳಭುಜಬಲಪಾರ್ಥನರಸಿಯುವಾಗಬೇಕೆಂದು ।
ಜಪಿಸಲಿಕೆ ಮನದಂತಭೀಷ್ಟವು
ಸಫಲವಾಯಿತು ಪುತ್ರಿಪುತ್ರರು
ವಿಪುಳದ್ರೌಪದಿವಿದಿತಧೃಷ್ಟದ್ಯುಮ್ನರಾಗಲಿಕೆ ‖ ೧೧೨

ದ್ರೋಣವಧೆಗೀಮಗನು ಪಾರ್ಥಗೆ
ರಾಣಿಯೀಮಗಳೆಂದು ದ್ರುಪದ
ಕ್ಷೋಣಿಪತಿ ಸಲಹಿದನು ಸುತನನು ಸುತೆಯನೊಲವಿನಲಿ[1] ।
ದ್ರೋಣನಾಜ್ಞೆಗೆ ಪಾರ್ಥ ಕುರುಕುಲ
ಶ್ರೇಣಿಪತಿಮೊದಲಾದ ವೀರರ
ಗೋಣುಗಳ ಬಗೆವಡೆದನೇಣನು ಕೊಯ್ದು ಬಿಡಿಸಿದನು ‖ ೧೧೩

ತ್ರಾಣವಿಲ್ಲದ ಕುರುಕುಲೇಂದ್ರ
ಶ್ರೇಣಿ ಸರಿದುದು ಮರಳಿ ಪಾಂಡವ
ದ್ರೋಣರೆಲ್ಲರು ಬಂದು ಹೊಕ್ಕರು ಹಸ್ತಿನಾಪುರವ ।

---

1 ಸುತರನುಸಾನುರಾಗದಲಿ, ಚ.

ದ್ರೋಣ ಕಲಿಸಿದ ಸಕಲವಿದ್ಯೆಯು
ಜಾಣಿಕೆಯುನೆಲ್ಲವನು ಕುವರಗೆ
ಕಾಣೆನಾವಿಗಡಂಗೆ ಸರಿಯನು ಭೂಪ ಕೇಳೆಂದ ‖ ೧೧೪

ಮಗನು ದೃಷ್ಟದ್ಯುಮ್ನ ದ್ರೌಪದಿ
ಮಗಳು ಭಾರದ್ವಾಜಗೆತ್ತಿದ
ಹಗೆಗೆ ಹರಿವಹುದೆಂದು ಹಿಗ್ಗಿದ ದ್ರುಪದಭೂಪಾಲ ।
ದುಗುಡದಲಿ ಕುರುರಾಯ ದಾಯಾ
ದಿಗಳ ಬಿರುದಿನ ಬಿಂಕದಂಕೆಯ
ಬಿಗಿದಪರಿಯನು ನೆನೆದು ಮಱುಗಿದನರಸ ಕೇಳೆಂದ ‖ ೧೧೫

ಏನು ಮಱುಗಿದೊಡೇನು ಪಾಂಡವ
ಮಾನಸಿಧಿಗಳ ಪುಣ್ಯದನುಸಂ
ಧಾನ ಜೇಪುರದಲ್ಲಿ ಬೈಚಿಡು ದೇವಲೋಕದಲಿ ।
ಮಾನವರು ಮುನಿದೇಗುವರು ಪು
ಣ್ಯಾನುರಾಗದೊಳೊಬ್ಬರೊಬ್ಬರ
ತಾನು ರಕ್ಷಿಪ ಪಾಂಡುಪುತ್ರರ ವೀರನಾರಯಣ ‖ ೧೧೬

ಹದಿನೆಂಟನೆಯ ಸಂಧಿ ಮುಗಿದುದು.

---

## ಹತ್ತೊಂಬತ್ತನೆಯ ಸಂಧಿ.

ಸೂಚನೆ.

ಚಂಡಭುಜಬಲ ರವಿತನಯ ಮುಂ
ಕೊಂಡು ಬಿಲ್ಲನು ವರಿಸಿ ಪೃಥ್ವೀ
ಮಂಡಲವ ಗೆಲಿದೈದಿ ಕೌರವಸಹಿತ ನಡೆತಂದ ‖

ವೈಶಂಪಾಯನರ ಭಾಷಣ.

ನಿಯುತಮತಿ ಚಿತ್ತವಿಸು ಜನಮೇ
ಜಯ ಮಹೀಪತಿ ನಿಮ್ಮ ಪೂರ್ವಾ
ನ್ವಯದ ಪಾರ್ಥಿವರಱಿದರುನ್ನತಶಸ್ತ್ರವಿದ್ಯೆಗಳ ।
ಭಯವಿಹೀನರು ಕರ್ಣಪಾರ್ಥರು
ಪಯಗತಿಗೆ ಸಮನೆನಿಸುತಿರಲನು
ನಯದಿ ಕುರುಪತಿಯೊಡನೆ ಸಖ್ಯದಿ ದಿನಪಸುತನೆಸೆದ ॥ ೧

ಅನಿತರೊಳು ಕೇಳಿದನು ಭೂಪಾ
ಲನು ಮುನಿಪತಿಯು ಜೀಯ ಕರುಣಿಸು
ದಿನಪಜನು ತಾನೆಂತು ಬೆರಸಿದ ಕೌರವೇಂದ್ರನಲಿ ।
ಜನಪತಿಗೆ ರವಿಸೂನು ಮಾಡಿದ
ನೆನಹಿನಭಿಮತಕಾರ್ಯವೇನದ
ನೆನಗೆ ವಿಸ್ತರವಾಗಿ ಕರುಣಿಪುದೆಂದು ಕೈಮುಗಿದ ॥ ೨

ಕರ್ಣನ ಆಶ್ರಮಕ್ಕೆ ವಿಭಾಂಡಕತನುಜರ ಆಗಮನ.

ಅರಸ ಕೇಳಾದೊಡೆ ದಿವಾಕರ
ವರಸುತನು ಜಮದಗ್ನಿಸುತನೊಳ
ಗಱಿದು ವಿದ್ಯೆಯನಿಷ್ಟಲತ್ವವನೈದಲಲ್ಲಿಂದ ।
ಮಱುಕ ಪಿಂಗಲ್ಕೆತಂದು ಗಂಗಾ
ವರನದೀತೀರದಲಿ ತಪದಿರೆ
ವರವಿಭಾಂಡಕತನುಜನೈತಂದನು ತದಾಶ್ರಮಕೆ ॥ ೩

ವಿನಯದಿಂದಿದಿರೆದ್ದು ಮುನಿಪನ
ದಿನಪಸುತ ಸತ್ಕರಿಸಿ ಬಟ್ಟಿಕಾ
ವಿನುತಮಧುರಫಲಾದಿಗಳನಿತ್ತುಪಚರಿಸಲಂದು ।
ಮನದೊಳತಿಹರುಷದಲಿ ಹರಸಿದ
ವನಜಸಖನಂದನನನಂದಾ
ತನಗೆ ಬಂದ ವಿಪತ್ತನಱುಹಿದನೀಮಹಾಮುನಿಪ ॥ ೪

ರಾಯ ಕೇಳಾಮುನಿಪನಾಶ್ರಮ
ದಾಯತದ ಮಂದಿರಕೆ ದೈತ್ಯನಿ
ಕಾಯಸಹಿತಾಗೊಬ್ಬನು ಜರಾಮೃತ್ಯುವೆಂಬವನು ।
ಮಾಯೆಯಲಿ ಮುನಿ ಮಾಳ್ಪ ಯಜ್ಞನಿ
ಕಾಯಸತ್ಕ್ರಿಯೆಗಳನು ಕೆಡಿಸುವ
ನೀಯವಸ್ಥೆಯ ಪೇಳಿದನು ರಾಧೇಯಗಾಮುನಿಪ ॥ ೫

ಕರ್ಣ ದೈತ್ಯರ ಯುದ್ಧ.

ಕೇಳುತಾಗಳೆ ರವಿಜನಾಮುನಿ
ಪಾಲಕನ ಸಂತೈಸಿ ನಾ ಬಹೆ
ನೇಳಿ ಮಿಗೆ ಪರಿಹರಿಪೆ ದೈತ್ಯನನೆನುತ ನಡೆತಂದು ।
ಧಾಳಿಯಿಟ್ಟನು ವರಜರಾಮ
ನ್ನಾಲಯವ ಪಟ್ಟಣಕೆ ಖಳನನ
ಕೇಳಿ ಕಾಲನ ಪೋಲು ಖತಿಯಿಂದಾಗಲೈತಂದ ॥ ೬

ಎಲವೆಲವೊ ಕವಿ ಕೊಲ್ಲೆನುತ್ತಾ
ಖಳನು ಮಾಯಾಜಾಲದಲಿ ರಿಪು
ಜಲಧಿಬಡಬನೊಳಾಂತು ನಿಂದನು ದೈತ್ಯಬಲಸಹಿತ ।
ಕಲಕಿದನು ಬಲಜಲಧಿಯನು ಬಲು
ಚಳಕದಲಿ ತೆಗೆದೆಸುತ ಸಲೆ ಮು
ಕ್ಕುಳಿಸಿದನು ವಿಜ್ಞಾನಸಂಜ್ಞಾನಾಸ್ತ್ರದಲಿ ಬಲವ ॥ ೭

ಹೊಕ್ಕನಾಬಲಜಲಧಿಯನು ಸದೆ
ದಿಕ್ಕು ದೈತ್ಯನ ಮಾಯೆಯೆಲ್ಲವ
ಸುಕ್ಕಿಸಿದನದಟಿಂದ ಮಾಯಾಸಂಜ್ಞೆಕಾಸ್ತ್ರದಲಿ ।
ಮಿಕ್ಕು ಖಳನೈತಂದ ಗದೆಗೊಂ
ಡೆಕ್ಕತುಳದಲಿ ಕೋಪದಲಿ ಕಿಡಿ
ಯುಕ್ಕಲೆಱಗಿದನಿವನನೈದಿ ನಭೋಂಗಣದೊಳಸುರ ॥ ೮

ಎಱಗಿದಸುರನ ಗದೆಯ ಘಾಯಕೆ
ತರಹರಿಸಿ ಶಕ್ತಿಯನು ತೆಗೆದಾ
ಗರಿಭಟನನಿಡಲೆದೆಯನೊಳಕೊಂಡೈದೆ ಧರಣಿಯಲಿ ।
ಎಱಗಿತವನಸುವ್ರೋಗರ್ುಡಿಸಲಂ
ದಿರದೆ ಹಾಯ್ದುದು ದೈತ್ಯಜನವಾ
ಗುಱುವಶೋಣಿತಪುರಕೆ ಬಟಿಕಾಪುರದ ಜನನಿಕರ ॥ ೯

ಕಂಡಕಡೆಗೋಡಿತ್ತು ದೈತ್ಯರ
ತಂಡವವರಿಂಗಭಯವನು ಮಾ
ರ್ತಾಂಡಸುತ ಕರುಣಿಸುತ ಕರದನು ನಾಡುಬೀಡುಗಳ ।
ಹೆಂಡಿರನು ಬಟಿಕವನ ಮಗನನು
ಕಂಡು ಪಟ್ಟವ ಕಟ್ಟಿ ಧರಣೀ
ಮಂಡಲಕ್ಕರಸೆನಿಸಲಾಗ ಪ್ರಲಂಬರಾಕ್ಷಸನ ॥ ೧೦

ಮುನಿಯು ತುಷ್ಟನಾಗಿ ವರವನ್ನು ಕೊಡುವಿಕೆ.

ಇತ್ತ ಋಶ್ಯದ ಶೃಂಗಮುನಿಪತಿ
ಯತ್ಯಧಿಕಹರ್ಷದಲಿ ಮುನಿಜನ
ವೊತ್ತಸಹಿತಿದಿರ್ವಂದು ಮತ್ತಾರವಿಯ ನಂದನನ ।
ಉತ್ತಮದ ಶೌರ್ಯಾನುಗುಣಗಳಿ
ಗತಿಯಿಂದುಱೆ ಮೆಚ್ಚಿ ಬೇಡುವು
ದತ್ಯಧಿಕಮನದಿಚ್ಛೆಯನು ಕೇಳೆಂದು ನೇಮಿಸಿದ ॥ ೧೧

ಬೇಡುವೆನು ದೃಢತರದ ಧೈರ್ಯವ
ಬೇಡುವೆನು ರಣದೊಳಗೆ ಖಾಡಾ
ಖಾಡಿಯಿಲ್ಲದೆ ಕಾಯುವ ಸಮರ್ಪಿಸುವ ಬುದ್ಧಿಯನು ।
ಬೇಡುವೆನು ಹರಿದರುಶನವ ಕಡೆ
ವೀಡಿನೊಳಗೆನ್ನಂತ್ಯಕಾಲಕೆ
ಬೇಡುವೆನು ಪಂಚಾಶತರ ಸುಕುಮಾರಕರನೆಂದ ॥ ೧೨

ಎಂದೊಡದು ಲೇಸೆನುತ ತರಣಿಜ
ಗಂದು ಮಂತ್ರಿಸಿ ಕೊಟ್ಟನನುಪಮ
ಬಂಧುರದ ಜಂಬೂಫಲವ ನಿನಗಧಿಕಮಮತೆಯುಲಿ ।
ಸುಂದಸತಿಯರಿಗೀವುದೈ ನೀ
ನೆಂದು ನೇಮಿಸಿ ಕಳುಹಿದನು ಮುನಿ
ಯಂದು ಬಂದನು ಮಿಗೆ ವಿಚಾರಿಸುತಧಿಕಜನಪದವ ॥ ೧೩

ಕರ್ಣನು ಸಿಂಧುದೇಶಕ್ಕೆ ಹೋಗುವಿಕೆ.

ಧಾರುಣೀಪತಿ ಕೇಳು ಬಳಿಕಲು
ದಾರವಿಕ್ರಮ ಸಿಂಧುದೇಶವ
ಭೂರಮಣನೆಡೆಗೈದಿ ವೃದ್ಧಕ್ಷತ್ರಭೂಪತಿಯು ।
ಸಾಜಿದನು ಬಳಿಕೀತನನು ಕಂ
ಡಾರಯಿದು ಮನ್ನಿಸಿದನವನಿಪ
ಸೂರ್ಯನಂದನನ ಬೆಸಗೊಳ್ಳುತ್ತಾಗಲಿಂತೆಂದ ॥ ೧೪

ಏನಿದಾರೈ ನೀನು ತೇಜೋ
ಭಾನು ಹೇಳೈ ದಿವಿಜನೋ ಮನ
ಕೇನು ಚಿಂತೆಯಿದೇಕೆ ನಿನ್ನಭಿಧಾನವೇನೆನಲು ।
ಏನನೆಂಬೆನು ತನ್ನ ಮನದ ಮ
ಲೀನವನು ಹೇಳಿದೊಡೆ ಧರೆಯೊಳು
ಮಾನವರೊಳತಿಹೀನ ತಾನೇ ಸೂತಸುತನೆಂದ ॥ ೧೫

ಜನನದಧಿಕದ ನೆಲೆಯುನಱಿಯೆನು
ಜನಪ ಕೇಳೆನ್ನುವನು ರಾಧಾ
ತನಯುನೆಂಬರು ಕಬ್ಬಿಲನು ಮಿಗೆ ಸಾಕಿದೆನ್ನುವನು ।
ಮುನಿಪನಾಜಮದಗ್ನಿರಾಮರ
ಸನಿಹದಲಿ ಸಕಲಾಸ್ತ್ರಶಸ್ತ್ರವ
ನನಿತ ಕಲಿತೆನು ಭೂಸುರೋತ್ತಮನೆನಿಸಿ ತಾನೆಂದು ॥ ೧೬

ಆಮುನಿಪತಿಗೆ ಶಿಷ್ಯನಾಗಿಯೆ
ಪ್ರೇಮದಲಿ ವರಬಿಲ್ಲುವಿದ್ಯೆಯ
ನೇಮಗೊಂಡೇ ಸಾಧಿಸಿದೆ ನಾ ಕೆಲವುಕಾಲದಲಿ ।
ಕ್ಷೇಮರಹಿತನ ಮಾಡಿದನು ಸು
ತ್ರಾಮನೆನ್ನನು ನಿಜವನಱಿದಂ
ದಾಮುನಿಪನಟ್ಟಿದನು ಶಾಪವನಿತ್ತು ನಿಷ್ಠುರದಿ ॥ ೧೭

ಅದಱಿನೆನಗೀಗುತ್ತಮದ ಕೋ
ವಿದಧನುರ್ವಿದ್ಯಾಪ್ರವೀಣರು
ಸದಮಳರದಾರುಂಟು ವಿಪ್ರರೊಳಧಿಕಶಿಕ್ಷಕರು ।
ಮುದದಲೆಂದೆನೆ ತೆಗೆದು ಬಿಗಿದ
ಪ್ಪಿದನು ಚಿಂತೆಯ ಬಿಡು ವಿವೇಕದಿ
ನೊದಗಿಸುವೆ ಕೇಳೆಂದು ಮಿತ್ರಂತೆಂದನಾಭೂಪ ॥ ೧೮

ಅಲ್ಲಿಂದ ರಾಜನ ಅಪ್ಪಣೆಯಂತೆ ಹಸ್ತಿನಾವತೀಗಮನ.

ಕಳುಹುವೆನು ನನ್ನೀಕುಮಾರನ
ನಿಳೆಯೊಳಧಿಕವೆನಿಪ್ಪ ಗಜಪುರಿ
ಯೊಳಗೆ ಭಾರದ್ವಾಜಸುತನಾದ್ರೋಣನಾಮದಲಿ ।
ಚಲಿಸದನುಗತಬಾಣವಿದ್ಯೆಯ
ಕಲಿಸುವನನೇಕರಿಗೆ ನೀ ಸಹಿ
ತಳವಡಿಕೆಯಿಂದೈದು ಸೈಂಧವಸಹಿತ ಬೇಗೆಂದ ॥ ೧೯

ಎನಲು ಕರ ಲೇಸೆನುತ ದಿನಪನ
ತನುಜ ಕಳುಹಿಸಿ ಕೊಂಡು ಬಂದನು
ಜನಪ ಕೇಳು ಜಯದ್ರಥನು ಸಹಿತಂದು ಗಜಪುರಿಗೆ ।
ಜನಪ ಕೌರವನೃಪನ ಕಂಡನು
ಸನಿಹದಿಂದಿದಿರೆದ್ದು ದುರ್ಯೋ
ಧನನು ತೆಗೆದಪ್ಪಿದನು ಬೆಸಗೊಳುತಿವನ ಸಂಗತಿಯ ॥ ೨೦

ಧರಣಿಪತಿ ಕೇಳಿದನು ಮತ್ತಾ
ತರಣಿಸುತನತಿಪೂರ್ವವೃತ್ತಾಂ
ತರವನಾಗಳ ಮತ್ತೆ ತೆಗೆದಪ್ಪಿದನು ಕುಳ್ಳಿರಿಸಿ ।
ಅರಸನೆಂದನು ತನ್ನ ಸೋದರ
ವರರನಿಬರಲಿ ನೀ ಹಿರಿಯನೆಂ
ದಱಿದು ನಮ್ಮಿ ಸನಿಹದಲಿ ನೀನಿರುವುದೈ ಯೆಂದ ॥ ೨೧

ಆಗ ಸ್ವಯಂವರವಾರ್ತಾಶ್ರವಣ.

ಇಂತು ಕರ್ಣನ ಸಖ್ಯದಲಿ ಭೂ
ಕಾಂತನಾಕೆಲಕಾಲವಿದ್ದಾ
ವಮುಂತೆ ಕಲಿತರು ದ್ರೋಣನಲಿ ಬಟಿಕಖಿಳವಿದ್ಯೆಗಳ ।
ಸಂತಸದೊಳಿರಲೊಮ್ಮೆ ಬಂದುದು
ತಿಂತಿಣಿಯೊಳತಿಶಯದ ವೈವಾ
ಹಾಂತರಾಳದಲಧಿಕಲಿಖಿತವವಂತಿದೇಶದಲಿ ॥ ೨೨

ಅರಸ ಕೇಳ್ತದ್ದೇಶದಧಿಪತಿ
ವರಮಹಾನೃಪ ಭಾನುದತ್ತನು
ಧರೆಗಧೀಶ್ವರನವನ ಸೋದರ ಸೋಮದತ್ತನೃಪ ।
ಉರುಭುಜಾಬಲದಿ ಭಗದತ್ತನು
ಸುರವರೇಣ್ಯನ ವಿಭವಕತಿಬಂ
ಧುರವೆನಲು ವಿಸ್ತರಿಸಿದರು ವೈವಾಹಸಾಧನವ ॥ ೨೩

ಆನೃಪಾಲಕರಿಂಗೆ ಮೂವರು
ಮಾನನೀಯರು ಕನ್ನಿಕೆಯರಭಿ
ಮಾನನಿಷ್ಠರು ಭಾನುಮತಿ ವರಚಂದ್ರಮತಿ ಸುರಸೆ ।
ಏನ ಹೇಳುವೆನವರ ವೈವಾ
ಹೋನ್ನತಿಕೆಗನುಮಾನಿಸದೆ ನೃಪ
ಸೂನುಗಳು ಬಂದರು ಸ್ವಯಂವರಕೆಂದು ಧರಣಿಪರು ॥ ೨೪

ಬಂದರಾವುಗಧಾವನೀಶರು
ಬಂದರಾಮತ್ಸ್ಯಾದಿಕೈಕಯು
ಸಿಂಧುವ ಶಕಕಳಿಂಗಬರ್ಬರರಾದಿಯಾದವರು |
ಬಂದರಾಪಾಂಚಾಲಕೋಸಲ
ವೃಂದಜನಶಿಶುಪಾಲಸೌಬಲ
ರಂದು ಸಾಲ್ವಪ್ರಮುಖ ಕಾಶೀರಾಜರೊಡಗೂಡಿ || ೬೫

ಈಕುರುಕ್ಷಿತಿಪಾಲಸಹಿತವ
ನೇಕಕುರುಪತಿಯನುಜರೆಲ್ಲರು
ಚೇಕಿತಾನ ಕಳಿಂಗಸಹಿತೀಭಾನುಸುತಸಹಿತ |
ನೂಕಿ ನಡೆದರು ಬಟಕ ವಿವಿಧಾ
ನೇಕಬಲವೋಳಾಪದಲಿ ಕುಂ
ತೀಕುಮಾರಕರುಟಿಯೆ ಹಸ್ತಿನಪುರದಿ ಬಹಳಜನ || ೬೬

ಬಂದ ಸಕಲಾವನಿಪಭೂಸರ
ವೃಂದವನು ಮನ್ನಿಸಿದರವರಾ
ನಂದದಲಿ ವೈವಾಹಿಕೋತ್ಸವದಧಿಕವಿಭವದಲಿ |
ಮುಂದೆ ಮೆಱೆವ ಮಹಾಸುಧಾವಿರ್ಗಕ
ಛಂದದಾಮಂಟಪದೊಳೊಡ್ಡಿದ
ರಂದು ಧನುವನು ನಿಶಿತವಹ ಬಲುಬಾಣಗಳನಿರಿಸಿ || ೬೭

ತರಿಸಿ ಧನುವನು ಯಂತ್ರಮತ್ಸ್ಯವ
ನಿರಿಸಿ ಸಾಱಿಸಿದರು ಕುತೂಹಲ
ಧರಣಿಪಾಲಸಮೂಹವೆದ್ದು ದು ಕಾರ್ಮುಕವ ತುಡುಕಿ |
ತರತರದಲೈತಂದು ಬಿಲ್ಲಿನ
ತಿರುವ ತೊಡಿಸಲು ನೆರೆಯದಾದರು
ಧರಣಿಪತಿಗಳು ಪರಜರಾಸಂಧಾದಿನಾಯಕರು || ೬೮

ಏನ ಹೇಳುವೆನರಸ ಮುಳಿದು ಮ
ಹಾನರೇಂದ್ರರು ಭೀತರಾದರು
ಮಾನಹಾನಿಗಳಾದುವೆಂದೈದಿದರು ತಮತಮಗೆ ।
ಭಾನುಸುತನನುಮಾನವಿಲ್ಲದೆ
ಮಾನನಿಧಿಕುರುಪತಿಯು ಬೀಳ್ಕೊಂ
ಡಾನು ವರಿಸುವೆನಂಗನೆಯನೆನುತೈದಿ ನಿಂದಿರ್ದ ॥ ೨೯

ಇವನ ಕಂಡುದು ಸಕಲನಾರೀ
ನಿವಹ ಭ್ರಮಿಸಿದುದೀತನಂಗೋ
ತ್ಸವಕೆ ಸೋತುದು ಸೂತಸುತನೆಂದೊಡನೆ ಶಂಕಿಸುತ ।
ಅವನಿಪತಿ ಕೇಳೈದಿ ಬಳಿಕಾ
ರವಿಸುತನು ಬಲವಂದು ಬಿಲ್ಲಿನ
ಲವಳಿಗೆಯು ನೇವರಿಸಿ ರವಿಮಂಡಲಕೆ ಕೈಮುಗಿದ ॥ ೩೦

ಕರ್ಣನು ಯಂತ್ರಮತ್ಸ್ಯವನ್ನು ಖಂಡನ ಮಾಡಿದುದು.

ಚಂಡಿಸಿದ ಸಕಲಾವನೀಶರ
ಮಂಡೆಯನು ಹೊಡೆದಂತೆ ಬಿಲ್ಲನು
ಕೊಂಡು ತಿರುವನು ತೊಡಿಸಿ ತಳೆದನು [1] ಬಲಿದು ಮಂಡಿಯಲಿ ।
ಕೊಂಡನಾಕೂರಂಬನಾಕ್ಷಣ
ದಿಂಡುರುಳಲಾಯಂತ್ರಮತ್ಸ್ಯವೆ
ಖಂಡಿಸಿದನಾಧನುವ ಗೆಲಿದನು ಮಿಗೆ ಸ್ವಯಂವರವ ॥ ೩೧

ಸಂದಣಿಸಿದಾಸಕಲರಾಯರ
ವೃಂದ ಕಂಡುದು ತಮತಮಗೆ ಮನ
ಗುಂದಿ ಹೋದರು ಕೆಲರು ನಿಂದರು ಕೆಲರು ಖಾತಿಯಲಿ ।
ಮಂದಮತಿಗಳು ನಿಪ್ಪಸರದಲಿ
ಸಂದಣಿಸಿದರು ರವಿಸುತನ ಮೇ
ಲಂದು ಮಾಗಧಕೀಚಕಾದಿಗಳವನಿಪಾಲಕರು ॥ ೩೨

1 ಸೆಳೆದು, ಖ.

ಮಗಧಾದಿಗಳೊಡನೆ ಕರ್ಣನ ಯುದ್ಧ.

ಅಕಟ ನವಿಸ್ಮಾಸಕಲರಾಜರ
ನಿಕರವೆಲ್ಲವನುಳಿದು ಕಡು ತು
ಚ್ಛಕದಿ ಸೂತನ ಕುವರಗಾಯ್ತೇ ವಿಜಯ ಬಿಲ್ಲಿನಲಿ ।
ವಿಕಳರಾದೆವು ನಾವೆನುತ [1] ನಿ
ಶ್ಚಕಿತಮಾಗಧಸಾಲ್ವರಾಕೀ
ಚಕರು ನಿಂದರು ರಣದೊಳದನೇ ವರ್ಣಿಸುವೆನೆಂದ ॥ ೩೩

ಇತ್ತ ನೆರೆದುದು ಭೂಮಿಪಾಲರ
ಮೊತ್ತ ಕರ್ಣನ ದೆಸೆಯುಲೂಕುರು
ಪೃಥ್ವಿಪತಿಗಳು ಕೌರವಾದಿಜಯದ್ರಥಾದಿಗಳು ।
ಮೊತ್ತದಾಬಲವೊಂದೆಸೆಗೆ ವಿಬು
ಧೋತ್ತಮರು ಕಂಪಿಸಲು ಸಂಗರ
ವತ್ಯಧಿಕದಲಿ ಮಸೆದುದವನೀಪಾಲ ಕೇಳೆಂದ ॥ ೩೪

ಮಸಗಿತದ್ಭುತಯುದ್ಧವಾದಿ
ಕ್ಪ್ರಸರ ಮುಸುಕಿತು ಕವಿವ ಬಾಣದ
ನಿಶಿತತೋಮರಬಿಂಡಿವಾಳದ ಖಡ್ಗತೋಮರದ ।
ವಿಷಮಧಾರಾಸಾರದಲಿ ಧರೆ
ಮುಸುಕಿತಿವರವರೊಡ್ಡಿನಲಿ ನಿ
ಪ್ಪಸರದಲಿ ಬಿದ್ದುದು ವರೂಥತುರಂಗಕರಿನಿವಹ ॥ ೩೫

ಮುಂಬಿಗರು ಮಿಗೆ ಘಾಸಿಯಾದರು
ಡೊಂಬಿಯಾಹವದೊಳಗೆ ಕರ್ಣನ
ಬೆಂಬಲದಿ ನೆಲೆ ಕುರುನೃಪಾಲಕರಾರ್ದು ಬೊಬ್ಬಿರಿದು ।
ಎಂಬೆನೇನನು ಹೊಕ್ಕನಾಬಹ

1 ರಾದೆವಲಾಯೆನುತ. ಖ.

ಳಾಂಬುಧಿಯು ಬಡಬಾಗ್ನಿ ಕವಿವಂ
ತಂಬುಜದ ಸಖಸೂನು ಹಿಡಿದನು ಸವರಿ ಪರಬಲವ ॥ ೩೭

ಕಾಲಯಮನೋ ಕರ್ಣನೋ ತೆಗೆ
ಕಾಳಗವನೆನೆ ಬಿಸುಗುನ್ನೃಪತಿಗ
ಳೋಳಿ ಸಾಲಿಡೆ ಶಿರಗಳಡ್ಡೆಗಳಲಿ ಪಸರಿಸಲು ।
ಕಾಲಗಂಡರು ಕೆಲಬರಂದಾ
ಬಾಲಕರ್ಣನ ಶಸ್ತ್ರಹತಿಯಲಿ
ಸೋಲದವರಿಲ್ಲೆನಲು ಕವಿದವು ಹೊಕ್ಕು ಪರಬಲವ ॥ ೩೭

ಅಳವಿಯಲಿ ಕೈಮಾಡಿ ಸಾಲುವ
ನಳವೆಱದನಾಕ್ಷಣದಿ ಕೀಚಕ
ನಳವಿಗೊಟ್ಟನು ಸೂಸಿದನು ಸರಳುಗಳ ಸಮ್ಮುಖದಿ ।
ಕಲಿತನವನೇನೆಂಬೆ ನಾಬಲುಸ
ರಳು ಕವಿದವು ಸೂತನಂದನನಳ
ವೞಿಯೆ ರಥಸಾರಥಿಗಳೞಿವಾಯ್ತು ಕದನವಲಿ ॥ ೩೮

ಮತ್ತೆ ಹೊಸರಥ ಸೂತನಸ್ತ್ರತ
ನುತ್ರಸಹಿತಿದಿರಾಗಿ ಸುಭಟನ
ತೆತ್ತಿಸಿದನಾಕರ್ಣ ಕವಿಸಿದನಧಿಕಮಾರ್ಗಣವ ।
ಕತ್ತರಿಸಿದನು ಕೀಚಕನು ನಭ
ವೆತ್ತಲಡ್ಡೆಸಗೆನಲು ಸನಿಹದಿ
ಮತ್ತೆ ಕವಿದುವು ಬಾಣವೀತನನರಸ ಕೇಳೆಂದ ॥ ೩೯

ಕೊಂಬನೇ ಕರ್ಣನಿಯ ಮುನಿದೊಡೆ
ಯಂಬುಜದ ಸಖಸೂನು ನೋಡೆ ತ್ರಿ
ಯಂಬಕನ ಸಮ ಜೋಡಿಯಲ್ಲಾ ಬಾಹುವಿಕ್ರಮದಿ ।
ಹಂಬಲಿಸಲವನುಱವನೆಚ್ಚನು
ಬೆಂಬಿಡದೆ ಕೀಚಕನ ರಥದೊಳು
ತುಂಬಿಸಿದ ಬಲುಗೋಲ ಮಳೆಯಲಿ ನಾದಿದನು ಹಯವ ॥ ೪೦

ಆತನನು ಹಿಂದಿಕ್ಕಿ ಬಳಿಕೀ
ಸೂತಸುತನೊಳು ಮಗಧ ನಿಂದನು
ಭೂತಳಾಧಿಪ ಕೇಳು ಮುಸುಕಿದನಿನಸುತನ ರಥವ ।
ಆತನೇ ನಮ್ಮೊಡನೆ ರಣವನು
ಭೀತನಾಗದೆ ನಿಲ್ಲೆನುತ ರಿಪು
ಸೂತನನು ತಡೆಗಡಿದು ಮಗಧನ ಧನುವ ಖಂಡಿಸಿದ ॥ ೪೧

ಮೊಳಿದು ಪುನರಪಿ ಹಿಡಿದ [1] ನಾಹೊಸ
ತಿರುವನೇಱಿಸಿ ಮಹಿಪನೆಚ್ಚ ನು
ತರಣಿನಂದನನೆಚ್ಚ ನಾತನ ವಹ್ನಿ ಬಾಣದಲಿ ।
ತಱಿವನವ ವರುಣಾಸ್ತ್ರದಲಿ ಬೊ
ಬ್ಬಿಱಿದು ಮೋಹಿನಿಯುಮಳ ಮಾರ್ಗಣ
ದಿರವಿನಲಿ ಮುದ್ರಿಸಿದನಾತನನೀತ ಪರಿಭವಿಸಿ ॥ ೪೨

ಧರಣಿಪತಿ ಕೇಳಾಗಳಾನೃಪ
ವರನು ಮೂರ್ಛೆಗೆ ಸಂದನವರಲಿ
ಪಿರಿದು ಬಲುಮಂಡಳಿಕರಾಂತರು ಸೂತನಂದನನ ।
ಪಿರಿದು ಪೃಥ್ವೀಪತಿಗಳನು ಸಂ
ಹರಿಸಿದನು ಕೆಲಬರನು ಕೆಲಬರ
ಸೆಱೆಯ ಹಿಡಿದನು ಕೇಳು ಜನಮೇಜಯಮಹೀಪಾಲ ॥ ೪೩

ಸಮರಜಯ ಕಾಳಾಯ್ತು ಭೂಪ್ರೋ
ತ್ತಮರು ಬಿದ್ದರು ರಣದಿ ಸಮರ
ಶ್ರಮದ ಭಾರಣೆಯಡಗಿ ಕಣ್ದೆಱೆದೆದ್ದು ಮಾಗಧನು ।
ಕುಮತಿಯಱಿದನು ರವಿಸುತನ ಸಂ
ಕ್ರಮಿತಶೌರ್ಯವನಿನ್ನು ಗರ್ವೋ
ದ್ಗಮವು ಸಾಕೆಂದೆನುತಲೀತನ ನುಡಿಸಿದನು ನೃಪತಿ ॥ ೪೪

1 ಸೆಳೆದ, ಕ.

ಮಗಧನು ಕರ್ಣನೊಡನೆ ಸ್ನೇಹಮಾಡುವಿಕೆ.

ವಾಸಿ ಬೀತುದು ನನಗೆ ನಿನ್ನಲಿ
ಲೇಸು ಲೇಸೈ ಕರ್ಣ ಸಮರಾ
ಭ್ಯಾಸಿಯಹೆ ಮೆಚ್ಚಿದೆನು ನಿನಗೆನಗೇಕೆ ಕಾಳಗವು ।
ಆಸರಡಗಿದುದೆನಗೆ ನಿನಗಿಂ
ದೀಸಿ ಕೊಡುವೆನು ಕನ್ನಿಕೆಯನಿ
ನ್ನೋಸರಿಸದೆಸಗುವೆನು ಮದುವೆಯನೆಂದನಾಮಗಧ ॥ ೪೫

ಇಂದಿನಿಂದವೆ ಪರಮಬಾಂಧವ
ಕುಂದದೆನಗೆಯು ನೀನು ನಡೆಯೈ
ಮಂದಿರಕೆ ಮತ್ತೇನು ಭೃಗುಜನ ಕೋಲ ಮಗನಲ್ಲ ।
ಮುಂದೆ ಕಾಳಗ ಬೇಡವೆಂದೈ
ತಂದು ರಥವಿಳಿದೊಡನೆ ಕರ್ಣಗೆ
ವಂದಿಸಿದೊಡಿದಿರಪ್ಪಿದನು ಬಳಿಕೆಂದನವನೊಡನೆ ॥ ೪೬

ಆದೊಡೆಲೆ ಮಗಧಾವನೀಪತಿ
ಸಾಧಿಸಿದೆ ನಿಂದೀಸ್ವಯಂವರ
ದಾದಿಯಲಿ ನಿಮ್ಮಾಕುರುಕ್ಷಿತಿಪಾಲಕಂಗೊಲಿದು ।
ಮೇದಿನಿಯೊಳಂದಧಿಕತರವೆನ
ಲಾದರಿಸು ವೈವಾಹಿಕವನೆನೆ
ಸಾದರದೊಳಂದಾ ಜರಾಸಂಧಾಖ್ಯನಿಂತೆಂದ ॥ ೪೭

ಕರ್ಣಾದಿಗಳ ವಿವಾಹ.

ಕುರುಪತಿಯು ವರಭಾನುಮತಿಯನು
ತರಳೆ ಸೋಮಪ್ರಭೆಯ ನೀ ಸ್ವೀ
ಕರಿಸುವುದು ಸುರಸೆಯನು ದುಶ್ಶಾಸನನು ಮಮತೆಯಲಿ ।
ನಿರುತ ಕೇಳೆಂದೆನುತ ಕರ್ಣನ
ಕರವಿಡಿದು ಕುರುನೃಪತಿ ಸಹಿತಾ
ಧರಣಿಪತಿಗಳು ಬಂದರಾಪುರವರಕೆ ಹರುಷದಲಿ ॥ ೪೮

ಮತ್ತೆ ಬಳಿದುದು ವಿಭವ ವಿದಿತವೊ
ಹೂರ್ತವನು ನೋಡಿಸಿದರಂದಾ
ಪೃಥ್ವಿಪತಿ ವರಭಾನುದತ್ತ ಮಹೀಶಕುರುಪತಿಗೆ ।
ಪುತ್ರಿಯನು ಕೊಟ್ಟನು ಸುನಿರ್ವಾಳ
ಚಿತ್ತದಲಿ ಚಂದ್ರಪ್ರಭೆಯನೊಲಿ
ದಿತ್ತು ದುಶ್ಶಾಸನಗೆ ಸುರಸೆಯೊಳಾಯ್ತು ವೈವಾಹ ॥ ೪೯

ನೆರೆದಸಕಲಾವನಿಪರೆಲ್ಲರ
ಪಿರಿದು ಮನ್ನಿಸಿ ಕಳುಹಿದನು ಭೂ
ವರರು ತಮತಮಗೈದಿದರು ತಮ್ಮಧಿಕಪಟ್ಟಣವ ।
ಅರಸ ಕೇಳಾಕ್ಷಣದಿ ಧರಣೀ
ಶ್ವರನರಸಿ ವರಭಾನುಮತಿಗಾ
ತರಣಿಸುತನೊಲಿದಿತ್ತ ಶತಕವ ಮಂತ್ರಫಲವದನು ॥ ೫೦

ತನ್ನರಸಿ ವರಚಂದ್ರಮತಿಗೆ ವಿ
ಭಿನ್ನನಾಲಕುಜಂಬುಫಲವನು
ನನ್ನಿಯಿಂದಿತ್ತಾಗ ಸುರಸೆಗೆ ಕೊಟ್ಟನೊಂದುವನು ।
ಸನ್ನುತನು ಕುರುಪತಿಸಹಿತಲಾ
ಕನ್ನಿಕೆಯರನು ವಿವಿಧವಿಭವದೊ
ಳನ್ಯನಿಸದೆ ವರಿಸಿದನು ಸುಮಹೂರ್ತದಿಂದೊಲಿದು ॥ ೫೧

ಬಟುವಟಿಯ ರಥತುರಗಕೋಶಾ
ವಳಿಯುನಗಣಿತಧೇನುಗಳ ಸಂ
ಕುಲವ ಬಲುಮದಗಜವ ರಾಣೀವಾಸನಿಕರವನು ।
ಒಲಿದು ಬಟಿಕಳಿಯುಂದಿರನು ಸಂ
ಮಿಳಿತದಿಂದುಪಚರಿಸಿ ಕೊಟ್ಟನು
ಕಳುಹಿದನು ಕನ್ನಿಕೆಯುರನುವರರೊಡನೆಯಾನೃಪತಿ ॥ ೫೨

ಆಲಿಸಿದೆಲೈ ಭೂಪ ನೀನಿದ
ಲೋಲಮತಿಯಾಕರ್ಣಿ ಕುರುಕುಲ
ಮೌಳಿಗಳಿಗೆಸ್ನೇಹವಾಯ್ತೊಂದೊಂದುಕಾರಣದಿ ।
ಮೇಲೆಮೇಲಧಿಕಾಸ್ಪದದ ಸಂ
ಮೇಳಮಮತೆಗಳಾಕ್ರಮಿಸಿತಾ
ಬಾಲಿಕೆಯರ ವಿವಾಹವಾದಾಸಮಯ ಮೊದಲಾಗಿ ॥ ೫೩

ಹತ್ತೊಂಬತ್ತನೆಯ ಸಂಧಿ ಮುಗಿದುದು.

## ಇಪ್ಪತ್ತನೆಯ ಸಂಧಿ.

### ಸೂಚನೆ.

ಇಂದ್ರನೈರಾವತವ ಧರಣಿಗೆ
ತಂದು ನಿಜಮಾತೆಯನು ನೋನಿಸ
ಲೆಂದು ಫಲುಗುಣ ಕೀರ್ತಿವಡೆದನು ಮೂಱುಲೋಕದಲಿ ॥

### ವೇದವ್ಯಾಸರ ಆಗಮನ.

ಕೇಳು ಜನಮೇಜಯ ಧರಿತ್ರೀ
ಪಾಲ ಹಸ್ತಿನಪುರಕೆ ಮುನಿಗಳ
ಮೌಳಿ ವೇದವ್ಯಾಸ ಬಿಜಯಂಗೈದನೊಂದುದಿನ ।
ಕೇಳಿದನು ಧೃತರಾಷ್ಟ್ರ ಭೀಷ್ಮಗೆ
ಹೇಳಿದನು ಋಷಿಬರವ ಹರುಷದ
ಲೀಲೆಯಿಂದಿದಿರ್ಗೊಂ[1]ಡು ತಂದರು ರಾಜಮಂದಿರಕೆ ॥ ೧

[1] ಲೇಟಿಗೆಯ.ಲಿದಿರ್ಗೊಂಡು, ಖ.

ಅರಮನೆಗೆ ನಡೆತಂದನಾಋಷಿ
ಧರಣಿಪತಿ ಯಿದಿರಾಗಿ ಬಂದನು
ದರುಶನವ ಮಾಡಿದನು ಪಾವಕ್ಕೆಱಗಿ ಭಕ್ತಿಯಲಿ ।
ಅರಸಿ ಕಾಣಿಕೆಗೊಟ್ಟು ಚರಣಾಂ
ಬುರುಹಕೆಱಗಿದೊಡಾಮುನೀಶ್ವರ
ಹರಸಿ ಹಿಡಿದೆತ್ತಿದನು ಗಾಂಧಾರಿಯು ಮಹೀಪತಿಯು ॥ ೨

ಬಂದ ವೇದವ್ಯಾಸಗಾಸಭೆ
ನಿಂದು ಕರಗಳ ಮುಗಿದು ಪರುಷದೊ
ಳಂದು ಬಿಜಯಂಗೈಸಿ ತಂದರು ಸಿಂಹವಿಷ್ಟರಕೆ [1] ।
ಸಂದಮಧುಪರ್ಕಾದಿಗಳಸಾ
ನಂದದಲಿ ಮಾಡಿದರು ಮುನಿಪತಿ
ಯುಂದು [2] ನೃಪಗಾಂಧಾರಿಯರ ಕ್ಷೇಮವನು ಬೆಸಗೊಂಡ ॥ ೩

ದೇವಮುನಿ ನಿಮ್ಮಡಿಯು ಕೃಪೆಯಿರ
ಲಾವು ಸುಕ್ಷೇಮಿಗಳ ಯಿಲ್ಲಿಗೆ
ನೀವು ಬಿಜಯಂಗೈದು ನಿಮ್ಮ ಜಡಾತ್ಮದೇಹಿಗಳ ।
ಪಾವನವ ಮಾಡಿದಿರಿ ಧನ್ಯರು
ನಾವು ವೇದವ್ಯಾಸಮುನಿ ಯಿಾ [3]
ಜೀವ ನಿಮ್ಮಗಧೀನ ಚಿತ್ತವಿಸೆಂದನಂಧನೃಪ ॥ ೪

ಧರಣಿಪಾಲನ ನುಡಿಗೆ ಮಿಗೆ ಮುನಿ
ವರನು ಮೆಚ್ಚಿದೆನೆಲೆ ನೃಪತಿ ನಿ
ನ್ನರಸಿಗಱುಹಲು ಬಂದೆನೈರಾವತದ ನೋಂಪಿಯನು ।
ಹರನ ಮೋಹದರಾಣಿ ಪಾರ್ವತಿ
ಯುರಸಿಗುತ್ಸವದಾನದಲಿ ಭೂ
ಸುರರ ದಣಿಸುವುದೆಂದು ವೇದವ್ಯಾಸಮುನಿ ನುಡಿದ ॥ ೫

---

1 ಸಿಂಹಪೀಠಕ್ಕೆ, ಶ.  2 ಯುಂಧ, ಶ.  3 ಚೇಱಿನ್ನೇನಱುಚಿಕೀ, ಶ.

ಧರೆಯೊಳೈರಾವತದ ನೋಂಪಿಯು
ಹರುಷದಿಂದಿದನಾರು ನೋಂತರೆ
ಸಿರಿಯುಹುದು ಸತಿಗೈದೆತನ ಸೌಭಾಗ್ಯ ಹಿರಿದಹುದು ।
ಹರನರೆಸಿ ಗೌರಿಗೆ ಸಮರ್ಪಿಸಿ
ಹರುಷದಿಂ ಬಾಗಿನವನೀಯೆಂ
ದುಱುವೇದವ್ಯಾಸಮುನಿ ಗಾಂಧಾರಿಗಱುಹಿದನು ॥ ೬

ಗಾಂಧಾರಿಗೆ ಐರಾವತವ್ರತನಿರೂಪಣ.

ಕೇಳು ಜನಮೇಜಯ ಧರಿತ್ರೀ
ಪಾಲನೈರಾವತದ ನೋಂಪಿಯು
ಹೇಳಿಪನು ಧೃತರಾಷ್ಟ್ರನರಸಿಗೆ ವ್ಯಾಸಮುನಿರಾಯ ।
ಕೇಳಿದಳು ಹರುಷದಲಿ ಪುತ್ರಕ
ರೇಳಿಗೆಯ ಮುತ್ತೈದೆತನದಲಿ
ಬಾಳುವೆಯ ಕೈಕೊಂಡೆನೆಂದಳು ನಗುತ ಗಾಂಧಾರಿ [1] ॥ ೭

ತರುಣಿ ನಿನ್ನಯ ಸುತರ ಕೈಯ್ಯಲಿ
ತರಿಸಿದಾಮೃತ್ತಿಕೆಯುಲೇ ಸುರ
ಕರಿಯ ರಚಿಸಿಯೆ ನೋಂತು ಭೂಸುರದೇವಸಂತತಿಯ ।
ಪರಿಪರಿಯ ದಾನಂಗಳಲಿ ಸ
ತ್ಕರಿಸಿ ಸುಖಿಯಾಗೆನುತಲಾಮುನಿ
ವರನು ತನ್ನಾಶ್ರಮಕೆ ಸರಿದನು ಬಾದರಾಯಣನು ॥ ೮

ಗಾಂಧಾರಿಯ ವ್ರತೋದ್ಯೋಗ.

ಅರಸ ಕೇಳೈ ಸುಬಲನಂದನೆ
ಕರೆಸಿದರೆ ನಿಜಸುತರು ಬಂದರು
ಕರವ ಮುಗಿದರು ತಾಯೆ ಬೆಸನೇನೆನಲು ನಸುನಗುತ ।

---

1 ಕಮಲ ಮುಖಿನಗುತ ಠ.

ಕರಿಯು ನೋಂಪಿಗೆ ತನುಜರಿರ ನೀವ್
ತರಲು ಬೇಕೈ ಮಣ್ಣನೆಂದರೆ
ಹಿರಿದು ತಂದೊಟ್ಟಿದರು ಮಿಗೆ ಮೃತ್ತಿಕೆಯ ಗಿರಿಯಂತೆ ॥ ೯

ಬಂದರಾಚಿತ್ರಿಕರು ಕರಿಯವ್ರೊ
ಲಂದವಿಟ್ಟರು ಬಣ್ಣಬರಹಗ
ಳಿಂದ ರಚಿಸಿದರಾನೆಯನು ಚೌದಂತಿಗಳ ನಿಲಿಸಿ [1] ।
ತಂದು ಹೊಂಬಟ್ಟೆಗಳ ಹೊಂಪ್ರಣಿ
ಯಿಂದ ಮೆಱೆದಿಹಪಂಚಘಂಟೆಗ
ಳಿಂದ್ರನೈರಾವತಕೆ ಸರಿ ಮಿಗಿಲೆಂದುದಖಿಳಜನ ॥ ೧೦

ಮುತ್ತುಮಾಣಿಕದಿಂದ ಜಿಂಚೆಯು
ಮತ್ತಗಜದಲಿ ಬಿಗಿಸಿ ಪಲ್ಲವ
ಸತ್ತಿಗೆಗಳತ್ತಿದಪರಿತ್ತಾಸಿರಗಳೇಱ್ವಾಱು ।
ಹತ್ತುಸಾಸಿರಸರಕದಾನೆಯು
ಸುತ್ತ ಬಿಟ್ಟವು ಹೊನ್ನನೇಣಿನ
ಜೊತ್ತಿಗೆಯ ಪಿಡಿದಂದದಿಂವಡರಿದರು ಮಾವುತರು ॥ ೧೧

ಚಂದವಾದುದು ಸುರಪನಾಗಜ
ದಿಂದವೆಗ್ಗಳ ಸುಬಲರಾಯನ
ನಂದನೆಯು ಬರಹೇಱ್ವುದೈರಾವತವ ನೋನುವ್ರೊಡೆ ।
ಎಂದು ಸಚಿವರ ಕಳುಹೆ ದೂತರು
ಬಂದರಾ ಗಾಂಧಾರಿದೇವಿಗೆ
ನಿಂದು ಮೆಯ್ಯಿಕ್ಕಿದರು ಕರಗಳ ಮುಗಿದು ಬಿನ್ನೈಸಿ ॥ ೧೨

ದೇವಿ ಚಿತ್ತೈಸುವುದು ರಚಿಸಿದ
ದೇವಗಜ ಚಲುವಿಕೆಯನದನಿ
ನ್ನಾವ ಹೊಸಪರಮೇಷ್ಠಿ ಸೃಷ್ಟಿಯೊ ಹೊಗಱಲೆನ್ನಳವೇ ।

1 ರಚಿಸಿದರಾಗಳಾಚೌದಂತದಾನೆಯನು, ಠ.

ದೇವತತಿ ಗಗನದಲಿ ಧರೆಯ ಜ
ನಾವಳಿಗಳಂಬಿನಲಿ ನೆರೆದಿವೆ
ನೀವು ಬಿಜಯಂಗೈವುದೆನೆ ನಗುತೆದ್ದಳಬುಜಾಕ್ಷಿ ॥ ೧೩

ಮಿಂದು ದೇವಾಂಗವನು ತೊಟ್ಟಳು
ಗಂಧಗಳನನುಲೇಪನಾದಿಯ
ಚಂದ್ರಮುಖಿ ಸರ್ವಾಂಗಭರಣದ ತೊಡಿಗೆಗಳ ತೊಟ್ಟು ।
ಹಿಂದೆ ಮುಂದಿಕ್ಕೆಲದ ನಾರೀ
ವೃಂದವೆಯ್ತರೆ ನಡುವೆ ತಾ ಹೊ
ನ್ನಂದಣವನೇಱಿದಳು ಸುರಕರಿಯೆಡೆಗೆ ಗಾಂಧಾರಿ ॥ ೧೪

ಹಿಡಿವಮುತ್ತಿನ ಛತ್ರಚಾಮರ
ಯೆಡಬಲದಲೊಯ್ಯಾರ ಸತಿಯರ
ಗಡಣಪಾಠಕರಂದು ಕೈವಾರಿಗಳ ಕಳಕಳಗ ।
ಹೊಡೆವ ನಾನಾವಾದ್ಯರಭಸವ
ಬಿಡದೆ ಚೀಱುವ ಕಹಳೆ ರಾಯನ
ಮಡದಿ ಸುರಕರಿಯೆಡೆಗೆ ಬಂದಳು ದೇವಿ ಗಾಂಧಾರಿ ॥ ೧೫

. ಗಾಂಧಾರಿಯ ಪರಿವಾರಸ್ತ್ರೀಯರ ವರ್ಣನೆ

ಅರರೆ ಮನಸಿಜ ಭೂಭುಜನ ಮದ
ಕರಿಯ ಹಿಂಡೋ ಮೋಹ ಮದನನ
ಹೊರಳಿಯೋ ಮೋಹಾಮನೋಜನ ಕ್ರೀಡೆಗಳ ಸರವೊ ।
ಪರಮಸೌಭಾಗ್ಯದ ಜಯಾಂಬುಧಿ
ತೆಱೆಗಳೋ ಧೃತರಾಷ್ಟ್ರಭೂಮೀ
ಶ್ವರನ ರಾಣಿಯ ಕೆಳದಿಯರು ನಾವಱಿಯೆವಿದನೆಂದ ॥ ೧೬

ಹಾವುಗೆಯ ಹೆಜ್ಜೆಗಳು ಕದಳಿಯ
ಭಾವದಂತಿರೆ ನಗೆಮುಖವು ಕೆಂ
ದಾವರೆಗಳಂತಿರಲು ನೈದಿಲೆಯಂತೆ ನಯನಗಳು ।

ಭಾವದಲ್ಲೊಪ್ಪಿರಲು ಬಳಿಕಾ
ದೇವಿ ಗಾಂಧಾರಿಯನು ಬಳಿಸಿದ
ಭಾವೆಯರ ಚಲುವಿಕೆಯ ಬಣ್ಣಿಸಬಲ್ಲರಾರೆಂದ ॥ ೧೭

ನುಡಿಗೆ ಗಿಳಿ ಹೊದ್ದಿದುದು ಸತಿಯರ
ನಡೆಗೆ ನವಿಲಾಡಿದುವು ಮೇಲಡಿ
ಯಿಡಲು ನೇವುರದಸಿಗೆ ಕುಣಿದುವು ರಾಜಹಂಸೆಗಳು ।
ಕಡುಚಲುವೆನಯನಗಳ ಕಾಣುತ
ಕಡುಗಿದುವು ಬಳಿಕಾಚಕೋರಿಯ
ಗಡಣ ತುಂಬಿಗಳಿಂಬುಗೊಂಡುವು ದೇಹಪರಿಮಳಕೆ ॥ ೧೮

ಕಳಸಕುಚಗಳ ಹೊಳೆವವಕ್ಷ
ಸ್ಥಳದ ಬಾಹುದ್ವಯದ ವಿರಚಿತ
ನಳಿನಲೋಚನಯುಗದ ಪೀಯೂಷಾಂಶುವಾನನದ ।
ಚಲುವಕದಪಿನ ಪವಳದಧರದ
ಲಲನೆಯರು ಗಾಂಧಾರಿದೇವಿಯ
ಬಳಿಸಿನಲಿ ನಡೆತಂದರ್ಸೈ ಭೂಪಾಲ ಕೇಳೆಂದ । ೧೯

ವೃತಾವಂತರ ನಾನಾದಾನ.

ಸುರಕರಿಯ ಕಾಣುತ್ತಲಾಪಂ
ಕರುಷಮುಖಿ ದಂಡಿಗೆಯನಿಳಿದಳು
ಪರುಷದಿಂ ಮೈಯ್ಯಿಕ್ಕಿ ಕಾಣಿಕೆಗೊಟ್ಟು ಪ್ರೊಡವಟ್ಟು ।
ತರಿಸಿ ಗಂಧಾಕ್ಷತೆಯ ಪುಷ್ಪವ
ಚರಣಕರ್ಪಿಸಿ ಧೂಪದೀಪದಿ
ಪರಮನೈವೇದ್ಯಂಗಳಿಂ ಪೂಜಿಸಿದಳರ್ತಿಯಲಿ ॥ ೨೦

ಪರಿಪರಿಯ ಫಲವಸ್ತು ತರಿಸುತ
ಸುರಿದು ನನೆಗಡಲೆಗಳ ರಾಶಿಯ

ಮೆಱನ ಬೆಚಿಕ್ಕೋಲೆಗಳ ಬಣ್ಣದ ಹೊನ್ನನೂಲುಗಳ ।
ಗಿರಿಗಳೆಫಲವಾದುವಾಸುರ
ಕರಿಯ ನೋಂಪಿಯ ದಾನಕೆಂದೊಡೆ
ನೆರೆದುದವನೀಸುರರ ಸಂದಣಿಯುರಸ ಕೇಳೆಂದ ॥ ೨೧

ಕರೆಕರೆದು ಸುವ್ವಾಸಿನಿಯರಿಗೆ
ಹರುಷದಿಂ ಬಾಗಿನವನಿತ್ತಳು
ಧರಣಿಯಮರರ ದಣಿಯಿಸಿದಳು ಹಿರಣ್ಯದಾನದಲಿ ।

ಗಾಂಧಾರಿಯು ಕುಂತಿಯನ್ನು ಉಪೇಕ್ಷಿಸಿದುದು.

ಸಿರಿಯ ಮದದಲಿ ಕುಂತಿದೇವಿಯ
ಕರೆಸಮಱೆದಳು ಸುಬಲಸುತೆ
ಸುರಕರಿಯ ನೋಂತಳು ತಿರುಗಿ ಹೊಕ್ಕಳು ತನ್ನ ಮಂದಿರವ ॥

ಸುರಪನೈರಾವತದ ನೋಂಪಿಗೆ
ಕರೆಸುವಳು ಗಾಂಧಾರಿಯೆನುತಾ
ಹರುಷದಿಂದವೆ ಹೊಱಗೆ ನೋಡುತ್ತಿರ್ದಳಾಕುಂತಿ ।
ಹರದುಬಹ ನೋಟಕಜನಂಗಳ
ಕರೆದು ಬೆಸಗೊಳಲೆಂದರಾಗಳೆ
ಯುರಸಿ ನೋಂತಳು ತಿರುಗಿ ಹೊಕ್ಕಳು ತನ್ನ ಮಂದಿರವ ॥ ೨೩

ಎಂದ ಮಾತನು ಕೇಳಿ ಮನದಲಿ
ನೊಂದು ಕಡು ಬಿಸುಸುಯ್ದು ಸರಿಯ
ಲ್ಲೆಂದು ತನ್ನನು ಕರೆಸಮಱೆದಳೆ ದೇವಿಗಾಂಧಾರಿ ।
ಬೆಂದುದೀ ಬಡತನವು ರಾಯನ
ಹಿಂದೆ ಹತ್ತದೆ ಪೃಚಿದೆನಕಟಕ
ಟೆಂದು ದುಗುಡವ ಹಿಡಿದು ಮನೆಯಲಿ [1] ಮಲಗಿದಳು ಕುಂತಿ ॥ ೨೪

1 ಖತಿಯಲಿ, ಶ.

ಅನುಜರೆಲ್ಲರ ಕೂಡಿ ಶಮನನ
ತನುಜ ಬಂದನು ಮನೆಗೆ ಮಾತೆಗೆ
ವಿನಯದಿಂದೆಱಗಿದನು ದುಗುಡವೆ ಶಿವ ಮಹಾದೇವ ।
ಅನಿಲಸುತ ನಾವ್ ಹಸಿದೆವೇಳೇ
ಳೆನಲು ಮಾದ್ರೀಸುತರು ತಮ್ಮಯ
ಜನನಿಯಿರವೆನು ಕಂಡು ಮೆಱುಗಿದರರಸ ಕೇಳೆಂದ ॥ ೨೫

ಬಿಲ್ಲುಮೊದಲಾದಖಿಳ ಕೈದುಗ
ಳಲ್ಲಿ ಶ್ರಮವೆನು ಮಾಡಿ ಗುರುವಿಂ
ಗಲ್ಲಿಚರಣದಲೆಱಗಿ ಮಿಗೆ ಬೀಳ್ಕೊಂಡು ಹರುಷದಲಿ ।
ಬಲ್ಲಿದನು ನಡೆತರಲು ರಿಪುಗಳು
ತಲ್ಲಣಿಸಿದರು ಧರೆಯೊಳಪ್ರತಿ
ಮಲ್ಲ ಫಲುಗುಣನೈದಿ ಹೊಕ್ಕನು ತಾಯ ಮಂದಿರವ ॥ ೨೬

ಆಗ ಅರ್ಜುನನು ತಾಯಿಯನ್ನು ಪ್ರಾರ್ಥನೆ ಮಾಡಿದುದು.

ಬಂದು ಫಲುಗುಣ ತಾಯ ಚರಣ
ದ್ವಂದ್ವದಲಿ ತಾನೆಱಗಿ ದುಗುಡವು
ಬಂದ ಪರಿಯನು ಹೇಳಿ ನಿಮ್ಮಯ ಮನದ ಬಯಕೆಯನು ।
ತಂದಪೆನು ಶಿವನೊಡನೆ ಕಾದಿಯೆ
ಹಿಂದುಗಳೆವರೆ ನಿಮ್ಮ ಬಸುಱಲಿ
ಬಂದವನು ತಾನಲ್ಲ ನಿಮ್ಮಡಿಯಾಣೆ ಹೇಳೆಂದ ॥ ೨೭

ಜನನಿ ನಿಮ್ಮಯ ಮನದ ಬಯಕೆಯ
ಮನಸಿಜಾರಿಯ ಗೃಹದೊಳಿರ್ದೊಡೆ
ದನುಜರಿಪು ವೈಕುಂಠನಲ್ಲಿರೆ ಬ್ರಹ್ಮನಲ್ಲಿರಲು ।
ಅನಿಮಿಷಾಧಿಪನಿಂದ್ರನಲ್ಲಿರೆ
ನಿಮಗೆ ತಂದಾನೀಯದಿರ್ದೊಡೆ
ಜನಪ ಧರ್ಮಜನಾಣೆ ನಿಮ್ಮಾಣೆಂದನಾಪಾರ್ಥ ॥ ೨೮

ಮುಸುಡ ದುಗುಡವ ತೆಗೆವ ಚಿಂತೆಯ
ನುಸುಱೆನುತ ನಿಜಮಾತೆಯಂಘ್ರಿಗೆ
ನೊಸಲ ಚಾಚಿಯೆ ಹೇಳು ಹೇಳೆನ್ನಾಣೆ ಹೇಳೆನಲು ।
ಹೆಸರಿಡುವರಾರಾಕೆಯುಱಿಲನು
ಪ್ಪೊಸುರುತಿಹಕಂಬನಿಗಱಿಂದವೆ
ಶಶಿವದನೆ ತಾ ಕುಂತಿ ನುಡಿದಳು ನಿಜಕುಮಾರಂಗೆ ॥ ೨೯

ಹೇಳಿ ಮಾಡುವುದೇನು ಫಲುಗುಣ
ಬಾಲಕರು ನೀವೆನ್ನ ಪುಣ್ಯಾವು
ಗಾಳಿಗೊಡ್ಡಿದಸೊಡರೊಲಾದುದು ನೃಪನ ಮರಣದಲಿ ।
ಹೇಳಲೇನದ ಧರೆಯ ಕೌರವ
ರಾಳುತಿಹರೆಂದವರ ಹಂಗಿನ
ಕೂಳಿನಲಿ ಬೆಂದೊಡಲ ಹೊಱೆವವರೆಂದಳೆಂದುಮುಖಿ ॥ ೩೦

ಬಡತನಗಳಡಸಿದರೆ ಬಂಧುಗ
ಳಡಿಹಿ ಕಾಣರು ಮಗನೆ ಹೊಲೆಯಂ
ಗೊಡವೆ ಯಿರಲಿ ಮನ್ನಿಸುವರ್ಕೈ ಮನುಜನೀತಿಯಿದು ।
ಬಡವರಾಗಿಲ್ಲಿವರ ಹಂಗಿನ
ಲೊಡಲ ಹೊರೆವುದಕಿಂದ ಪ್ರಾಣವ
ಬಿಡುವುದೇ ಲೇಸೆಂದು ಕಂಬನಿ ದುಂಬಿದಳು ಕುಂತಿ ॥ ೩೧

ಏತಕೀಬಹುಚಿಂತೆ ನಿಮಗೀ
ಮಾತೆ ನಿಮ್ಮಯ ಮನದ ಬಯಕೆಯ
ಭೂತನಾಥನ ಮನೆಯೊಳಿರ್ದರು ತಂದು ನಿಮಗೀವೆ ।
ಭೀತಿಯೇಕೌ ನಿಮ್ಮ ಚಿತ್ತದೊ
ಳಾತುರನು ಪೇಳೆಂದು ನುಡಿಯಲು
ಪ್ರೀತಿಯಲಿ ತೆಗೆದಪ್ಪಿ ಪಾರ್ಥಗೆ ನುಡಿದಳಾಕುಂತಿ ॥ ೩೨

ಪುತ್ರರುಗಳುಂಟೆಂದು ಭರದಲಿ
ಮೃತ್ತಿಕೆಯ ಬೆಟ್ಟಗಳನೊಟ್ಟಲು
ಚಿತ್ರಕರು ರಚಿಯಿಸಿದರೈರಾವತದ ಹೋಲಿಕೆಗೆ ।
ಪೃಥ್ವಿ ನೆಱೆ ನೋಡಿತ್ತು ರಾಯನ
ಪತ್ನಿ ನೋಂತಳು ಕರೆಸದೆನ್ನನು
ಪಾರ್ಥ ನಮ್ಮದು ಬದುಕೆ ಹೇಳೆಂದಳಳಲಿದಳು ಕುಂತಿ [1] ॥ ೩೩

ಪುರುಷರಲಿ ಪುತ್ರರಲಿ ಬಹಳೈ
ಶ್ವರಿಯ ತನಗುಂಟೆಂದು ತಾ ಸುರ
ಕರಿಯ ನೋಂತಳು ಸುಬಲನಂದನೆ ಕರೆಸದೆನ್ನುವೆನು ।
ಕರ ಬಡವರಾವೆಂದು ನಮ್ಮನು
ಸರಕು ಮಾಡರು ಬೆಂದೊಡಲಸಿದ
ಹೊಱೆಯಬೇಕೇ ಪಾರ್ಥ ಹೇಳೆಂದಱಲಿದಳು ಕುಂತಿ [1] ॥ ೩೪

ಸರಿಯೆನಿಸಿ ನೋನುವೊಡೆ ಮಕ್ಕಳು
ತರಳರೈವರು ನೀವು ಸುರಪನ
ಪುರಿಗೆ ಸರಿದನು ಭೂಪ ಭೂವಧುವವರ ಸೇಱಿದಳು ।
ಸಿರಿಯು ಮದದಲಿ ಮುಂದುಗಾಣದೆ
ಪಿರಿದೆನಿಸಿ ಬದುಕುವೊಡೆ ದೈನ್ಯದ
ಲಿರಲು ಬೇಕೇ ಪಾರ್ಥ ಹೇಳೆಂದಱಲಿದಳು ಕುಂತಿ ॥ ೩೫

ಕಡುಗಲಿಯು ಕಾನನದೊಳವನಿಪ
ಮಡಿದನಾತನ ಬೞಿಯಲೇಯೆ
ನ್ನೊಡಲ ನೀಗದೆ ಪುಱದೆ ನಿಮಗಾರೊಡೆಯರಿಲ್ಲೆಂದು ।
ಪೊಡವಿಯುವರದು ಮಗನೆ ನಾವೇ
ಬಡವರಾಗಿಲ್ಲಿಹುದಱಿಂದವೆ
ಯೊಡವಿಯೋ ಲೇಸೆಂದು ಕಂಬನಿ ದುಂಬಿದಳು ಕುಂತಿ ॥ ೩೬

1 ಯೆಂದಳು ಕುಂತಿಬಿಸುಸುಯ್ದು, ಶ.

ಅರ್ಜುನನು ತಾಯಿಗೆ ಐರಾವತವ ಮಾಡಿಸುವೆನೆಂದು ಹೇಳುವಿಕೆ.

ಎನಲು ಕುಂತಿಯು ಮಾತ ಕೇಳುತ
ಮನದೊಳಗೆ ಘುಡುಘುಡಿಸುತರ್ಜುನ
ನೆನೆದು ಚರಣದೊಳಱಗಿ ಕಂಬನಿದೊಡೆದು ಶಱಗಿನಲಿ ।
ಅನಿಮಿಷರು ದಾನವರು ಮೆಚ್ಚಲು
ಜನನಿ ನೋಂನಿಸದಿರ್ದೆನಾದೊಡೆ
ಧನುವ ಹಿಡಿಯೆನು ಧರ್ಮರಾಯನ ಪಾದದಾಣೆಂದ ॥ ೩೭

ಸಿರಿಯು ಮದದಲಿ ಕರಿಯು ನೋಂಪಿಗೆ
ಕರೆಸಮೆಱವಳ ನಿಮ್ಮ ತನ್ನಯ
ನೂರಜಾಮಕ್ಕಳು ನೂರ್ವರುಂಟೆಂದವರ ಬಲುಹಿನಲಿ ।
ಬರಸುವೆನು ಕೌರವರ ಸಾಕಂ
ತಿರಲಿ ಸುರಪುರದಿಂದ ಸಕಲಾ
ಮರರ ವಸ್ತುವ ತರಿಸಿ ಕೊಡುವೆನು ತಾಯೆ ನೋಡೆಂದ ॥ ೩೮

ಹಿಂದೆ ರಾವಣ ತನ್ನ ಜನನಿಗೆ
ಯಿಂದುಮೌಳಿಯ ಪುರವ ಲಂಕೆಗೆ
ತಂದು ಕೊಡೆ ಕೈಕಸೆಯು ನೋಂತಳು ತ್ರೈಭುವನವೆಱಯೆ ।
ಇಂದು ನಿಮ್ಮಯ ನೋಂಪಿಗೋಸುಗ
ಮಿಂದ್ರನೈರಾವತವನಿಲ್ಲಿಗೆ
ತಂದು ಕೊಡುವೆನು ತಾಯೆ ನೀನೋಡೆಂದನಾಪಾರ್ಥ ॥ ೩೯

ಸುರಪತಿಯ ಗಜವನ್ನು ತರಿಸಲು ಅರ್ಜುನನ ಪ್ರಯತ್ನ.

ಸುರಕರಿಯ ಹೋಲಿಕೆಗೆ ಕೌರವ
ರೆಱಯು ಮಣ್ಣಿಲಿ ಮಾಡಿ ನೋಂತರೆ
ಧರೆಯಜನವೈತಂದು ನೋಡಿತಿದಾವಘನವೆಂದು ।
ಸುರಪನೈರಾವತವನಾಸುರ
ತರುಣಿಯರ ಸುರಧೇನುವನು ನಿ
ಮ್ಮರಮನೆಗೆ ತಹೆನೆನುತ ಧನುವನು ಕೊಂಡನಾಪಾರ್ಥ ॥ ೪೦

ಬಿಲ್ಲ ತೆಗೆದನು ಸಮರಸಾಹಸ
ಮಲ್ಲ ಗವಸಣಿಗೆಯನುಗಿದು ಕರ
ಪಲ್ಲವದಿ ನೇವರಿಸುತುಭಯದ ಕೊರಳಸಾರ್ದೈದು ।
ಬಲ್ಲಿದನು ಫಲುಗುಣನು ತಿರುವನು
ಪಲ್ಲವಿಸಿದನು ಮೂಱುಲೋಕಕೆ
ತಲ್ಲಣವು ತಲೆದೋಱೆ ತೆಗೆದನು ಸರಳ ಪರುಷದಲಿ ॥ ೪೧

ಬರೆಸಿದನು ಲಿಖಿತವನು ದಿವಿಜೇ
ಶ್ವರಗೆ ಫಲುಗುಣ ರಿಪುಕುಲಾಂತಕ
ಶರಧನುವನರ್ಚಿಸಿದ ಕೊಪ್ಪಿಗೆ ತೊಡಿಸಿದನು ತಿರುವ ।
ಬರಸೆಳೆದನಾಕರ್ಣಪೂರಕೆ
ಭರದಿ ಝೇಂಕಿವಡೆಗೈಯೆ ಶಬ್ದಕೆ
ಜಱಿದುದಡಕಿಲು ಜಗದ ಜೋಡಿಗಳರಸ ಕೇಳೆಂದ ॥ ೪೨

ನೋಡಿದಳು ಕಂದನನು ನಿಂಮುಱಿ
ಬೇಡಿಕೊಂಡಳು ಮಗನೆ ದಿವಿಜರ
ಬೇಡಲಾಗದು ಸರಳು ಸುರಪನ ಸಭೆಯನೈದುವುದೆ ।
ಆಡಿ ಹುಸಿಯುಲ್ಕೆಚ್ಚು ತಪ್ಪಲು
ಖೋಡಿಗಾಂಬುದು ಲೋಕ ಸಾಕ್ಕೈ
ಬೇಡಿಕೊಂಬೆನೆನಲ್ಕೆ ಕುಂತಿಗೆ ಪಾರ್ಥನಿಂತೆಂದ ॥ ೪೩

ತಪ್ಪ ನುಡಿವೆನೆ ತಾಯೆ ರವಿಶಶಿ
ತಪ್ಪಿದರೆ ಮಾರುತನ ಗತಿ ತಾ
ತಪ್ಪಿದರೆ ವಿಧಿ ಬರೆವ ಬರಹವೆ ತಾನೆ ತಪ್ಪಿದರೆ ।
ತಪ್ಪಲಱಿಯದು ನನ್ನ ಬಾಣದ
ದರ್ಪವನು ಸುರರೆಲ್ಲ ಬಲ್ಲರು
ತಪ್ಪಿದರೆ ನಿಮ್ಮಾಣೆ ಶರಸನ್ಯಾಸವೆನಗೆಂದ ॥ ೪೪

ಗೋತ್ರಭೇದಿಯು ಕರಿಯು [1] ನೀಕ್ಷಣ
ಮೊತ್ರದಲಿ ತರಿಸುವೆನು [2] ತಾಘನ
ಧೂರ್ತನೆಂದೆನ್ನದಿರು ಭಾಷೆಯು ಮಾಡಲಂಜುವೆನು |
ಖ್ಯಾತಿಯಿಂದವೆ ದೇವಕರಿಯನು
ಧಾತ್ರಿಯಲಿ ನಿಲಿಸುವೆನು ಬಿಚಿಕೀ
ಮಾತು ತಪ್ಪಿದರಾನು ನಿಮ್ಮಯ ತನುಜನಲ್ಲೆಂದ ‖ ೪೫

ಜನನಿ ಚಿತ್ತವಿಸೆಚ ಬಾಣವ
ದನಿಮಿಷರ ಸಭೆಗೈದದಿರ್ದೊಡೆ
ಘನಪರಾಕ್ರಮತನಯನಾಡಿದ ನುಡಿಗೆ ಕವಲಾಗೆ |
ಧನುವ ಹಿಡಿಯೆನು ತಾಯೆ ನಿಮ್ಮಯ
ಮನದ ಬಯಕೆಯ ಸಲಿಸದಿರ್ದೊಡೆ
ಜನಪಪಾಂಡುವಿನಾಣೆ ನಿಮ್ಮಾಣೆಂದನಾಪಾರ್ಥ ‖ ೪೬

ಕಳುಹಿದೋಲೆಗೆ ಸುರಪ ಬೇಡಿದ
ಕಳುಹದಿರ್ದೊಡೆ ಹರಿದು ದಿವಿಜಾ
ವಳಿಯ ಸದೆವೆನು ಸುಡುವೆನಮರಾವತಿಯನಿಂದ್ರನನು |
ನೆಲೆಗೆಡಿಸಿ ಯೈರಾವತವ ಧರೆ
ಗಿಳುಹಿ ನೋನಿಸದಿರ್ದನಾದೊಡೆ
ಯಿಳೆಯ ವಲ್ಲಭ ಧರ್ಮರಾಯನ ಪಾದದಾಣೆಂದ [3] ‖ ೪೭

ಭರದಿ ನುಡಿದಿನಿತುವನು ಗರುಡಿಯ
ಗುರುವ ನೆನೆದನು ಧರ್ಮರಾಯನ
ಚರಣಕೆಱಗಿದನಾಗ ಜನನಿಯು ಹರಕೆಗಳ ಕೊಳುತ |

1 ಪುರಿಯ, ಗ. 2 ಕಲುಕುದೆನು, ಗ

3 ಖಲುವಿಡಿದು ಕಾವರ್ುಕವ ತೊಡುವುದುಬಿಡುವೆನಾನೆಂದ, ಗ.

ಅರ್ಜುನನು ಇಂದ್ರನ ಸಭೆಗೆ ಬಾಣವನ್ನು ಹಾಕಿದುದು.

ಮರುತಸುತಗಭಿನಮಿಸಿ ಬಾಣವ
ಬರೆಸೆಪೆದನಾಕರ್ಣಪೂರಕೆ
ಪರಬಲಾಂತಕ ಪಾರ್ಥನೆಚ್ಚನು ಸುರಪತಿಯ ಸಭೆಗೆ ॥ ೪೮

ಕಡುಗಲಿಯು ನರನೆಚ್ಚ ಬಾಣವು
ತಡೆಯದೈದಿದುದಿಂದ್ರಸಭೆಯಲಿ
ನಡುವೆ ರತ್ನದ ಕಂಬವನು ತಾನೊಡೆದು ಕೀಲಿಸಲು ।
ಸಿಡಿಲು ಹೊಡೆದಂತಾಯ್ತು ದಿವಿಜರು
ಕಡೆಗೆ ಝಲ್ಲನೆ ಚೆಲ್ಲಿ ವೋಡಲು
ನಡುಗಿ ಮೃತ್ಯುಂಜಯ ಶಿವಾ ಯೆನುತಿರ್ದನಮರೇಂದ್ರ ॥ ೪೯

ಕೆಟ್ಟು ಸುರರೋಡಿದರು ಕಂಬದಿ
ನೆಟ್ಟ ಬಾಣವ ಕಂಡು ಬೆರಗಿನ
ದೃಷ್ಟಿಯಲಿ ಶರದೆಸುಗೆ ಲಿಖಿತವಿದಾವನೆಸಗಗಳು ।
ಕೆಟ್ಟೆನೋ ಶಿವ ಯೆನುತಲೋಲೆಯ
ಬಿಟ್ಟು ತಂದರು ಬಹಳತವಕದಿ
ಕೊಟ್ಟನಾಗಳ ಕರೆದು ಕರಣಿಕಪತಿಗೆ ಪತಮನ್ನು ॥ ೫೦

ಸಿಲ್ಲಿ ಕಳಕಳವೇಕೆ ಪೋಯೆಂ
ದಲ್ಲಿ ಕಂಚುಕಿನಿಕರ ಜಱಿಯಲ
ದೆಲ್ಲರಾಸ್ಥಾನದಲಿ ಮೌನದೊಳಿರಲು ಕರಣಿಕನು ।
ಸಿಲ್ಲದಾಗರ್ಜುನನ ವೋಲೆಯ
ಸೊಲ್ಲುಗಳನವಧರಿಸು ರಂಭಾ
ವಲ್ಲಭನೆ ಚಿತ್ತೈಸು ಕುಂತೀಸುತನ ಬಿನ್ನಪವ ॥ ೫೧

ಗಂಡುಗಲಿ ನರರಿಪುಕುಮುದಮಾ
ರ್ತಾಂಡ ಫಲುಗುಣ ವೈರಿಮದಗಜ
ಗಂಡಕೇಸರಿ ಚಾಪವಿದ್ಯಾಭಾಳಲೋಚನನು ।

ಚಂಡಭುಜಬಲ ಮೂಱುಲೋಕದ
ಗಂಡನೋಲೆಯು ಹದನ ರಂಭೆಯು
ಗಂಡ ಚಿತ್ತವಿಸುವುದು ಕುಂತೀಸುತನ ಬಿನ್ನಪವ ॥ ೫೧

ಇಂದ್ರನಿಗೆ ಅರ್ಜುನನ ಪತ್ರ.

ಸ್ವಸ್ತಿ ಶ್ರೀಮತು ದಿವಿಜರಾಯಸ
ಮಸ್ತಗುಣಸಂಪನ್ನ ಸುರಪತಿ
ಹಸ್ತಿವಾಹನ ವಾಸವನ ಸುತ ಪಾರ್ಥನೆಂದೆನಿಪ ।
ಹಸ್ತಿನಾಪುರದರಸತನುಜನು
ಪ್ರಸ್ತದಿಂದಲಿ ಕಳುಹಿದೋಲೆಯು
ವಿಸ್ತರದಿ ಕೇಳುವುದು ಕುಂತೀಸುತನ ಬಿನ್ನಪವ ॥ ೫೨

ಧರಣಿಪತಿಪಾಂಡುವಿನ ಪಟ್ಟದ
ಸರಸಿಜಾನನೆ ಕುಂತಿದೇವಿಗೆ
ಹಿರಿದು ನೋಂಪಿಗಳುಂಟು ನಿಮ್ಮಮರಾವತೀಪುರದಿ ।
ಉಱುವ ನಾನಾವಸ್ತುಗಳ ನೀವ್
ಧರೆಗೆ ಕಳುಪಲು ನೋಂತ ಬೞಿಕವ
ನಿರದೆ ದಿನಮೂಱಕ್ಕೆ ಕಳುಹುವೆ ಕಳುಪು ಸುರನಾಥ ॥ ೫೪

ಐರಾವತ ಮೊದಲಾದುದನ್ನು ಕಳುಹಿಸೆಂದು ಕೇಳುವಿಕೆ.

ಕಳುಹಿಸುವುದೈರಾವತವ ಬಲು
ಕುಲಿಶವನು ಸುರಧೇನು ಸುರತರು
ಸುಲಲಿತಾಶ್ವವ ರಂಭೆ ತುಂಬುರುನಾರದಾದಿಗಳ ।
ಕೆಲಸ ಮಾಡಲು ನಿಮ್ಮ ಭವನದ
ನಳಿನಮುಖಿಯರ ಕಳುಪು ಸುರಪತಿ
ಬಲುಹ ನುಡಿದರೆ ನಿನ್ನ ಕತನದಿ ಕೆಡುವುದಾಲೋಕ ॥ ೫೫

ಎತ್ತಣದು ಸಾಹಸವು ನರರಿಂ
ಗಿತ್ತಪೆನೆ ವಸ್ತುಗಳನೆಂದೊಡೆ

ಮುತ್ತಿ ಧಾಟಿಯನಿಟ್ಟು ನಿನ್ನಯ ದಿವಿಜಲೋಕವನು ।
ಹತ್ತಿ ದಿವಿಜರ ಸದೆಬಡಿವೆಸಿದಿ
ರೆತ್ತಿ ಕಾದಲು ನಿನ್ನ ಲೋಕವ
ಮೆತ್ತೆ ಗೂಳಯ ತೆಗೆಸುವೆನು ಕೈಲಾಸಪುರಿಗಾಗಿ ॥ ೫೬

ತೋಱದಿರು ಸುರನಾಥ ಬಲುಹನು
ಹಾಱಲೂದುವೆ ನಿನ್ನ ದಿವಿಜರ
ಮೂಱುಲೋಕದ ಗಂಡ ಫಲುಗುಣ ಬಂದು ಕೊಲುತಿರಲು ।
ಮಾಱುಬರುವರದಾರು [1] ನಿನ್ನಯ
ದೂಱ ಕೇಳುವರಾರು ಸುರಪತಿ
ಬೇಱೆ ಮಾತೇಕಿನ್ನು ಬೇಡಿದನಿತ್ತು ಕಳುಹುವುದು ॥ ೫೭

ದಿಟ್ಟ ನರನೆನ್ನದಿರು ಕೇಳದ
ಕೊಟ್ಟು ನೀ ಸುಖಿಯಾಗಿ ಬಾಳ್ವು
ನೆಟ್ಟನೇ ಕೊಡದಿರಲು ನಿನ್ನಯ ದೇವಲೋಕವನು ।
ಸುಟ್ಟು ಕಳವೆನು ದಿವಿಜರನು ಬೆ
ನ್ನಟ್ಟಿ ಸದೆಯದೆ ಬಿಟ್ಟನಾದೊಡೆ
ಸೃಷ್ಟಿಗೀಶ್ವರ ಧರ್ಮರಾಯನ ಪಾದದಾಣೆಂದ ॥ ೫೮

ಗರುಡಿಯಧಿಪತಿಯಾಣೆ ಕೃಷ್ಣನ
ಚರಣಸರಸಿಜದಾಣೆ ತ್ರಿಪುರವ
ನುರುಹಿದ ಭವನ ಪಾದಪಂಕಜದಾಣೆ ಮರೆಯೇಕೆ ।
ಸುರಪ ನೀನೇ ಕಳುಹದಿರ್ದೊಡೆ
ಪರಮಮುನಿ ದೂರ್ವಾಸರಲಿ ನೀ
ನೆರಹಿದಂದವ ಮಾಡುವೆನು ಹರಿಕರುಣವುಂಟೆಂದ ॥ ೫೯

ಹರನ ದುರ್ಗವೆ ಹೊಕ್ಕು ನೀನಿರು
ಮುರಹರನ ವೈಕುಂಠದಲ್ಲಿರು

1 ಬೇಱೆಮಗುಳಾರುಂಟು, ಖ.

ಸುರಪ ಕೇಳೈ ಬ್ರಹ್ಮಲೋಕದಲೊಲಿದು ನೀನಿರಲು ।
ಧುರದೊಳಗೆ ತ್ರೈದೇವರೆಂಬರ
ಶಿರವ ತೂಗಿಸಿ ನಿನ್ನ ಜೀವವ
ಹರಪುರವನೈದಿಸುವೆ ಕುಂತಿಯ ಪಾದದಾಣೆಂದ ॥ ೬೦

ಪರಮಪುರುಷೋತ್ತಮ ಮುಕುಂದನ
ಕರುಣ ವುಂಟೆಮಗಱಿಯೆ ಪುರಹರ
ನುಱುವಕರುಣೋದಯವು ನಮ್ಮೊಳಗುಂಟು ಧರೆಯೊಳಗೆ ।
ಸರಳ ಮೊನೆಯಲಿ ಸಾಗರವನೀ
ಧರಣಿಯಿಂದವೆ ಶೋಷಿಸುವೆನೀ
ಗಿರವ ನಿನ್ನೈಶ್ವರ್ಯಸಿದ್ಧಿಗೆ ಒಡವನೆನಿಸುವೆನೆ ॥ ೬೧

ಅರ್ಜುನನ ಮೇಲೆ ಇಂದ್ರನ ಕೋಪ.

ಕೇಳಿದನು ಜಂಭಾರಿ ಫಲುಗುಣ
ನೋಲೆಯಿಂದಾಹದನನೆಲ್ಲವ
ಕಾಲರುದ್ರನ ಖತಿಗೆ ವೆಗ್ಗಳವೆನಲು ಕೋಪಿಸುತ ।
ಕಾಳಗೆಡೆವನು ಪಾರ್ಥನೆಂಬುವ
ಮೇಲಣಱಿಯದೆ ನುಡಿದನಲ್ಲದೆ
ಕಾಳಗಕೆ ನರರಿದಿರೆ ಸುರರಿಂಗೆಂದನಮರೇಂದ್ರ ॥ ೬೨

ಕಾಲಗತಿಯೋ ಹರಸಿರೂಪವೊ
ಹೆ ೞ ವ್ರಮ ಸುರನಿಕರವೆಪಜಯ
ದೇಟಿಗೆಯ ಸೂಚಕನೆಯೊ ಮರ್ತ್ಯರು ದೇವಲೋಕಕ್ಕೆ
ಕೋಲನೆಸೆವುದು ಬೇಡುವುದು ಸುರ
ಬಾಲೆಯರು ಮೊದಲಾದವೆಸ್ತುವ
ಶೂಲಧರನೇ ಬಲ್ಲನೈ ಸಲೆ ಯೆಂದನಮರೇಂದ್ರ ॥ ೬೩

ದಶಶಿರನು ಬಲಿ ಕಾಲನೇಮಿಯು
ನಸಮಬಲ ಶುಂಭನು ನಿಶುಂಭನು

ವಿಷಮಭಸ್ಮಾಸುರ ಹಿರಣ್ಯಾಕ ಕೈಟಭಾದಿಗಳು ।
ವಸುಧೆಗುಬ್ಬಸ ಮಾಡಲವದಿರ
ಹೆಸರ ತೊಡೆದ ಮುರಾರಿ ಫಲುಗುಣ
ನುಸುರಿದೇಕೀ ಬಲುಹೆನುತ್ತಮರೇಂದ್ರ ಗರ್ಜಿಸಿದ ॥ ೬೪

ಕರೆಯೊ ಜಲನಕ್ಷತ್ರಗಳ ಗಜ
ಪುರದೊಳಗೆ ಹಗಲಿರುಳು ಮಳೆಯನು
ಸುರಿಯ ಹೇಳಿರೆ ಯೇಳುದಿನ ಕರಿಕರದ ತೋರದಲಿ ।
ನರನ ಪಟ್ಟಣವೆಲ್ಲ ನೀರಲಿ
ನೆರೆದು ಹೋಗಲಿ ಪಾರ್ಥನೆಂಬನ
ಪರಿಯ ನೋಡುವೆನೆನುತಲಾಗಮರೇಂದ್ರಗರ್ಜಿಸಿದ ॥ ೬೫

ನಾರದರ ವಚನದಿಂ ಕೋಪಶಮನ.

ನೆರೆದ ದಿವಿಜರ ನಡುವೆ ನಾರದ
ವರಮುನೀಶ್ವರ ನಗುತ ನುಡಿದನು
ನರನು ಕಂಭವನೆಚ್ಚನುಳುಹಿದ ನಿನ್ನ ಜೀವವನು ।
ಸುರಪತಿಯ ನೆಡಲೆಂದದೆಚ್ಚೊಡೆ
ಸರಳು ನಿನಗಂಜುವುದೆ ಸಾಕಿಂ
ತಿರಲಿ ಫಲಗುಣನೇನ ಬೇಡಿದನಿತ್ತು ಕಳುಹೆಂದ ॥ ೬೬

ನರರ ಭಯದೊಳಗಂಜಿ ಕಪ್ಪವ
ಸುರರು ತೆತ್ತುದ ನೀವು [1] ಬಲ್ಲಿರೆ
ವರಮುನೀಶ್ವರ ನಮಗೆ ಬೆಸಸುವುದೆನಲು ನಾರದನು ।
ಸುರದನುಜನರರೊಳಗೆ ಪಾರ್ಥನ
ಸರಿಯ ಸುಭಟರ ಕಾಣೆನಾತನ
ಸರಳ ಬಲುಹನು ತೋರಿಸುವೆ ದಿವಿಜೇಂದ್ರ ಕೇಳೆಂದ ॥ ೬೭

ಕಳುಹಿಸುವುದೋಲೆಯನು ಪಾರ್ಥನ
ಬಲುಹಿನೋಲೆಯನರಿವುದಾತನ

1 ಹಿಂದೆ ಖ.

ಪ್ರಜಂಘನೆಂಬ ಖಚರನನ್ನು ಕರೆಸುವಿಕೆ.

ನೆಲೆಯನಱಿದಟ್ಟುವುದು ನಾಕದೊಳುಳ್ಳವೆಸ್ತುಗಳ ।
ಹಲವು ಮಾತೇನೆಂದು ನಾರದ
ತಿಳುಹಿದೊಡೆ ಸುರನಾಥ ದೂತರ
ಕಳುಹಿ ಕರೆಸಲು ಬಂದ ಖಚರಪ್ರಜಂಘನೆಂಬವನು ॥ ೬೮

ಬಂದು ಖಚರನು ದಿವಿಜರಾಯಂ
ಗಂದು ಮೆಯ್ಯಿಕ್ಕಿದನು ಭಯದಲಿ
ನಿಂದು ಕರಗಳ ಮುಗಿದು ಬೆಸನೇನೆನಲು ನಸುನಗುತ ।
ಅಂಧಕಾಸುರ ಮಡಿಯೆ ದಿವಿಜರಿ
ಗಂದಿನಿಂ ಭಯವಿಲ್ಲ ಕುಂತೀ
ನಂದನನ ಭಯವಾಯ್ತು ಕರೆಸಿದೆನೆಂದನಮರೇಂದ್ರ ॥ ೬೯

ಅರ್ಜುನನಿಗೆ ಪ್ರಜಂಘನಿಂದ ಪತ್ರವನ್ನು ಕಳುಹಿಸುವಿಕೆ.

ಬರೆಸಿ ಕೊಟ್ಟನದೋಲೆಯನು ಸುರ
ರೆಱೆಯು ಖಚರನ ಕೈಯ್ಯ ನೀ ಹೋ
ಗಿರದೆ ಹಸ್ತಿನಪುರದೊಳೀವುದು ಪಾರ್ಥಗೆಂದೆನಲು ।
ಧರೆಗಿೞಿದನಾಖಚರ ಲಿಖಿತವ
ನರಗೆ ಕೊಟ್ಟನು ಪಾನುಭಾಗರು
ಸುರಪನೋಲೆಯನೋದಿದರು ಭೂಪಾಲ ಕೇಳೆಂದ ॥ ೭೦

ಶ್ರೀಮದಮರಾಧೀಶವರನಿ
ಸ್ಸೀಮ ರಿಪುಗಜಸಿಂಹ ದನುಜರ
ಧೂಮಕೇತು ಸುರೇಂದ್ರ ನಮ್ಮ ಕುಮಾರಪಾರ್ಥಂಗೆ ।
ಪ್ರೇಮದಿಂ ಪ್ರತಿಲಿಖಿತವಿತ್ತುವು
ಕಾಮಿಸಿದ ವಸ್ತುಗಳನೀವೆವು
ಭೂಮಿಗೆಯು ಸ್ವರ್ಗಕ್ಕೆ ಬಟ್ಟೆಯು ಬೆಸಗು ಬೇಗೆಂದ [1] ॥ ೭೧

---

[1] ಮಾಡಬೇಕೆಂದ, ಖ.

**ಇಂದ್ರನ ಪತ್ರ ಪ್ರಕಾರ ಮಾರ್ಗಮಾಡಲು ಹೇಳಿ ಕಳುಹಿಸುವಿಕೆ.**

ಸುರಪನೋಲೆಯ ನೋದಿದುದನಾ
ಪರಬಲಾಂತಕ ಪಾರ್ಥ ಕೇಳಿಯೆ
ಹರುಷದಿಂ ಗಹಗಹಿಸಿ ನಕ್ಕನಿದಾವ ಘನವೆಂದು |
ಧರೆಗೆ ಸುರಲೋಕಕ್ಕೆ ಬಟ್ಟೆಯ
ನಿರದೆ ಮಾಡುವೆನಿನ್ನು ನೋಡಲು
ಹರವಿರಿಂಚಿಯ ಬಾಣಸೃಷ್ಟಿಯ ತೋಱುಸುವೆನೆಂದ || ೭೦

ಧರೆಗಮಮರಾವತಿಗೆ ಮಾರ್ಗವ
ನಿರದೆ ಮಾಡುವೆ ನಿಂದ್ರನೇಱುವ
ಕರಿಯು ಸುರತರು ಕಾಮಧೇನುವ ಸಕಲವಸ್ತುಗಳ |
ಸುರಪ ಕಳುಹಲಿ ಕಳುಹದಿರ್ದೊಡೆ
ಹರಿದು ಧಾಳಿಯನಿಟ್ಟು ನಿರ್ಜರ
ಪುರವ ಸುಡುವೆನು ಖಚರ ನೀ ಪೋಗೆಂದನಾಪಾರ್ಥ || ೭೩

ಚರಣಕೆಱಗಿದೆನೆಂಬುದಿಂದ್ರಂ
ಗರಸಿ ಯೂರ್ವಶಿ ರಂಭೆಮೊತೆಗೆ
ಕರವ ಮುಗಿವ ಕಿರೀಟಿಯೆಂಬುದು ಸಕಲದಿವಿಜರಿಗೆ |
ಹರುಷದಿಂ ಪೊಡವಟ್ಟನೆಂಬುದು
ನಿರುತದಿಂ ನೋಡುವೊಡೆ ನೀನೇ
ಪರಮಬಾಂಧವನೆನಗೆನುತ ಬೀಳ್ಕೊಟ್ಟನಾಪಾರ್ಥ || ೭೪

**ಖಚರನು ಇಂದ್ರನಿಗೆ ಅರ್ಜುನಾಭಿಪ್ರಾಯವನ್ನು ತಿಳಿಸುವಿಕೆ.**

ಬಂದನಾಗಳ್ ಖಚರನಿಂದ್ರಂ
ಗೆಂದನೋಲಗದೊಳಗೆ ಕುಂತೀ
ನಂದನನು ಬೆಸಗೊಂಡು ಕಳುಹಿದನುಚಿತವಚನದಲಿ |
ಎಂದನೆಲೆ ಸುರನಾಥ ಪಾರ್ಥ ಮು
ಕುಂದನಲ್ಲದೆ ಬೇಱೆ ನರನೇ
ಸಂದೆಗವ ಬಿಡು ಬೇಗ ಜೋಡಿದುದಿತ್ತು ಕಳುಹೆಂದ || ೭೫

ಕೇಳು ಜನಮೇಜಯಧರಿತ್ರೀ
ಪಾಲ ಪುಣ್ಯದ ಭರವನರ್ಜುನ
ನೇಳಿಗೆಯ ನಾಕುಂತಿದೇವಿಯ ನೋಂಪಿಯುತ್ಸವವ ।
ಮೇಲು ಲೋಕದಲರಸನಿಂದ್ರನು
ಬಾಲನಹ ಪಾರ್ಥಂಗೆ ವಸ್ತುವ
ಮೇಳವಿಸಿ ಕಳುಹಿಸುವ ನೀ ಹೋಗೆಂದ ಖಚರಂಗೆ ॥ ೭೬

ಈ ಉತ್ಸವಪ್ರಸಿದ್ಧಿಯಿಂದ ಜನ ಬರುವಿಕೆ.

ಅರಸ ಕೇಳೀ ಸುದ್ದಿ ಹರಿದುದು
ಶರಧಿ ಮೇರೆಗಳಾಗೆ ದಿಕ್ಕಿನ
ಲರಸುಗಳು ಕೇಳಿದರು ಫಲುಗುಣ ತಾಯ ನೋಂಪಿಯದ ।
ಸುರಕರಿಯ ಸುರಧೇನುವನು ತರ
ಲರಿದು ನೋಡುವೆವೆನುತ ತೆರಳಿತು
ಧರಣಿ ಗೂಳೆಯದೆಗೆವುದೆನೆ ನೆಱೆ ಬಂದುದಿಭಪುರಿಗೆ ॥ ೭೭

ದೆಸೆದೆಸೆಯ ನೋಟಕಜನಂಗಳು
ಮುಸುಕಿದುವು ತಾನಱಿಯೆ ಲೆಖ್ಖವ
ವಸುಮತೀಶರ ಬಲವ ಬಣ್ಣಿಸ ಬಲ್ಲ ಕವಿಯಾರು ।
ಮುಸುಳಿದನು ರವಿಧೂಳಿಯಲಿ ಮಿಗೆ
ಕುಸಿದವಾದಿಗುದಂತಿ ಭಾರಕೆ
ವುಸುರಿನುಗಿಬುಗೆಯಾಯ್ತು ಶೇಷಂಗರಸ ಕೇಳೆಂದ ॥ ೭೮

ಪೊಡವಿಯೊಳಗಣ ಸಕಲಜನವೊಂ
ದೆಡೆಗೆ ಬಂದುದು ಬಿಡುವ ಪಾಳ್ಯದ
ಕಡೆ ಮೊದಲ ನಿನ್ನಾರು ಬಲ್ಲರು ಶಿವ ಮಹಾದೇವ ।
ಜಡಿದುದಿಳೆ ಫಣಿರಾಜನೆಂಬನ
ಹೆಡಕು ಮುಱಿದುದು ಜನದ ಲೆಖ್ಖವ
ಮೃಡನು ತಾನೇ ಬಲ್ಲ ಹೇೞುವ ಕವಿಯ [1] ದಾರೆಂದ ॥ ೭೯

---

[1] ಗಣಕನಾ, ಖ,

ಭರದಿ ಬಂದುದು ಸಕಲಮುನಿಜನ
ಪರಶುರಾಮ ವಸಿಷ್ಠ ಗೌತಮ
ವರಭರದ್ವಾಜಾತ್ರಿ ವಿಶ್ವಾಮಿತ್ರ ಮೊದಲಾದ ।
ಪರಮಮುನಿಜನರೈದೆ ಬಂದರು
ಹರುಷದಿಂದಿದಿರಾಗಿ ಬಂದರು
ಸುರನದೀಸುತವಿದುರಕೃಪದ್ರೋಣಾದಿಗಳುಸಹಿತ ‖ ೮೦

ಬಂದ ಮುನಿಜನಕೆಲ್ಲ ಪೀಠವ
ನಂದದಿಂ ತಂದಿರಿಸಿ ಭಕ್ತಿಯು
ಲಂದು ಪಾದವ ತೊಳದು ಕೊಂಡರು ಚರಣತೀರ್ಥಗಳು ।
ಗಂಧದಕ್ಷತೆಷಡುರಸಾಯನ
ದಿಂದ ತುಷ್ಟಿಯ ಮಾಡಿ ಮಿಗ ಮುನಿ
ವೃಂದವನು ಮನ್ನಿಸಿದ ಭೀಷ್ಮನು ರಾಯ ಕೇಳಂದ ‖ ೮೧

ಬಾಣಮಯಮಾರ್ಗನಿರ್ಮಾಣ.

ನೆರೆದು ಬಂದುದು ಸಕಲಜನವಿಂ
ನಿರಲು ಬಾರದೆನುತ್ತ ಫಲುಗುಣ
ಶರಧನುವ ನರ್ಚಿಸಿದ ನಾನಾಪ್ರತಿವಿಧಾನಧಲಿ ।
ಕರವ ನೊಸಲಿಗೆ ಚಾಚಿ ದಿಗುಪಾ
ಲರಿಗೆ ಮಣಿದನು ದಿವ್ಯಶರವನು
ತಿರುವಿನಲಿ ಹೂಡಿದನು ಬರಸೆಳದೆಚ್ಚನಕ್ಷಯವ ‖ ೮೨

ಹಿಡಿದನವನೊಂದಂಬ ತಿರುವಿಗೆ
ತೊಡಿಸಿದರೆ ಹತ್ತಾಯ್ತು ಧನುವಿಂ
ಬಿಡಲು ನೂರುಸಹಸ್ರ ಲಕ್ಷವು ಕೋಟಿಸಂಖ್ಯೆಯಲಿ ।
ಕಡೆಗೆ ಹೆಚ್ಚಿದ ಬಾಣದಳತೆಯ
ಮೃಡನು ತಾನೇ ಬಲ್ಲ ಶರದಿಂ
ಜಡಿವುದಂಬರವೇನನಾಸುಶುವೆ ಭೂಪ ಕೇಳಂದ ‖ ೮೩

ನರನು ಮಂತ್ರಾಸ್ತ್ರಗಳನೆಚ್ಚೊಡೆ
ಸರಳು ಕವಿಯಲು ಸೂರ್ಯ ನಡುಗಿದ
ಧರೆಗೆ ಕತ್ತಲೆ ಯಾಯಿತೇನೆಂಬೆನು ಮಹಾದ್ಭುತವ ।
ಗಱಿಯು ಗಾಳಿಯು ರಭಸದಿಂ ಧರೆ
ಗುರುಳಿದವು ತಾರೆಗಳು ಶರಪಂ
ಜರವ ಬಿಗಿದನು ಧರೆಗೆ ಸುರಲೋಕಕ್ಕೆ ಕಲಿ ಪಾರ್ಥ ॥ ೮೪

ಶರವರುಷ ಸುಱಿವಲ್ಲಿ ಹುಟ್ಟಿದ
ಮರುತನುರುವಣೆಯಿಂದ ಬೀಸಲು
ತರುನಿಕರ ತರಗೆಲೆಯು ವೋಲ್ ಹಾಱಿದುವು ಗಗನದಲಿ ।
ಗಿರಿಗಳಡಿ ವೇಲಾಗಿ ಕೆಡೆದುವು
ನರನು ಶರಪಂಜರವ ಬಿಗಿದನು
ಧರೆಗೆ ಸುರಲೋಕಕ್ಕೆ ಪಥವಾಯ್ತರಸ ಕೇಳಂದ ॥ ೮೫

ಸರಳನೊಂದನೆ ತೊಡಚುತಚ್ಚೊಡೆ
ತೆರಳತಗಣಿತಬಾಣವೆಂಬಿನ
ಶರಧಿಮೇರೆಯನೊಡೆದು ಬರುತಿರ ದಿವಿಜಪುರಿಗೆನುತ ।
ಸುರರು ಬೆದಱಿದರಿಂದ್ರ ನಡುಗಿದ
ಹರನು ತಲೆದೂಗಿದನು ಶರಪಂ
ಜರವ ಬಿಗಿದನು ಧರೆಗೆ ಸುರಲೋಕಕ್ಕೆ ಕಲಿ ಪಾರ್ಥ [1] ॥ ೮೬

ಬೆಟ್ಟಗಳ ಕಪಿನಿಕರ ತಂದೊಡೆ
ಕಟ್ಟಿದನು ನಳ ರಾವಶರಧಿಯು
ಕಟ್ಟಿದುದು ಪಿರಿದಲ್ಲ ಫಲುಗುಣ ಬಯಲ ಬಾಣದಲಿ ।
ಕಟ್ಟಿದನು ಶರಪಂಜರಂಗಳ
ಬಟ್ಟೆಯಾಯಿತು ಧರೆಗೆ ಗಗನಕೆ
ಸೃಷ್ಟಿಮೂಱಱೊಳೀತಗೆಣೆ ಯಿಲ್ಲೆಂದುದಖಿಳಜನ ॥ ೮೭

---

1 ಪಾರ್ಥನುಱಿಬೆಕಗಾಗೆಸುರಕಟಕ, ಖ.

ಕಂಡರವರರು ಚಾಪವಿದ್ಯಾ
ಖಂಡಪರಶುವಿನದಟುತನವನು
ಹಿಂಡು ದಿವಿಜರ ನಡುವೆ ನಾರದ ನುಡಿದನಿಂತೆಂದು ।
ಚಂಡಭುಜಬಲ ಬಟ್ಟೆಯನು ಭೂ
ಮಂಡಲಕೆ ಸುರಪುರಕೆ ಹೂಡಿದ
ಗಂಡುಗಲಿ ಫಲುಗುಣನು ಬೇಡಿದನಿತ್ತು ಕಳುಹುವುದು ॥ ೪೪

ದೇವರಲಿ ಪಾರ್ಥನಪರಾಕ್ರಮ
ಕಾವ ನಿಲುವನು ನರಭುಜಂಗಮ
ದೇವದನುಜಾದಿಗಳ ನಿಕರದಿ ಪಾರ್ಥ ಬಲ್ಲಿದನು ।
ನೀವು ಹೇಳೆನಲಾವ ಮಾತನು
ಭಾವಿಸದೆ ವೇಗದಲಿ ಫಲುಗುಣ
ದೇವಗಾಸುರಗಜವ ಕಳುಹಿಸು ಸಕಲಸಿರಿಸಹಿತ ॥ ೪೯

ಕೊಟ್ಟನಾಕ್ಷಣ ಮುನಿಯ ಮಾತಿಗೆ
ನೆಟ್ಟನೇ ತರಿಸಿದನು ಗಜವನು
ಮೆಟ್ಟಿದೊಡೆ ಬ್ರಹ್ಮಾಂಡ ನಡುಗಿದುದೇನ ಹೇಳುವೆನು ।

ಅರ್ಜುನ ನಿರ್ಮಿತಮಾರ್ಗದಿಂದ ಐರಾವತಾದಿಗಳ ಬರುವಿಕೆ.

ಘಟ್ಟುಗೊಂಡರೆ ಬಾರದಿರಲದ
ಮುಟ್ಟುತಂಕುಶದಿಂದ ಮುಂದಣ
ಬಟ್ಟೆಯನು ತೋಱಿಸುತ ತಂದರು ದಿವಿಜಸಭೆಗಾಗಿ ॥ ೫೦

ಬರೆಯಿಸಿದರೈರಾವತವ ಮುಂ
ದಿರಿಸಿದರು ಬಹುರತ್ನ ನಿಕರದ
ಹಿರಿಯಗುಳಿವನು ಬೀಸಿ ಬಿಗಿದರು ಕಳಿಯ ಪಟ್ಟೆಯವ ।
ಕೊರಳ ಜೊತ್ತಿಗೆ ಹಾರಕಟ್ಟಿಗೆ
ಸುರಳತದ ಮೊಗರಂಬ ಸಾವಿರ
ಕರಿಗಳಡಬಲಕೊಲವುತ್ತೈದಿದುವಧಿಕಠೀವಿಯಲಿ ॥ ೫೧

ಸುತ್ತ ಬೀಸುವ ಚೌರಿಗಳನಂ
ಬತ್ತುಸಾವಿರ ಮೇಲೆ ಪಲ್ಲವ
ಸತ್ತಿಗೆಗಳಪ್ಪತ್ತುಸಾವಿರ ಹೊನ್ನವಿಳಸಹಿತ ।
ತೆತ್ತಿಸಿದವಿಕ್ಕೆಲದಲಂದಱು
ವತ್ತುಸಾವಿರ ಪಂಚಘಂಟೆಯು
ಮತ್ತಗಜ ಶೃಂಗರಿಸಿತವನೀಪಾಲ ಕೇಳೆಂದ ॥ ೯೧

ಕರಿಯು ಶೃಂಗಾರವನು ಬಣ್ಣಿಸ
ಲರಿದು ಫಣಿಪಗೆ ಜೋದರಾನೆಯ
ತಿರುಹಿ ತೋಱಲು ಹಿರಿದು ಮೆಚ್ಚಿ ಸುರೇಂದ್ರ ನಸುನಗುತ ।
ಧರೆಗಿೞಿದು ಗಜಪುರದಿ ನೋಸಿಸಿ
ಮರುಳನಲು ಬೞಿಕೆಂಟುಸಾವಿರ
ಮೊಱೆವ ದೌಢೆಯ ರಭಸದಿಂದಿೞಿತಂದುದಮರಗಜ ॥ ೯೨

ಸುರಪನಾನೆಯು ಮೇಲೆ ಯೂರ್ವಶಿ
ಯರಮನೆಯ ವೋಲಗದ ಸತಿಯರು
ಹಿರಿದು ಶೃಂಗಾರವನು ಮಾಡಿದರೇನ ಹೇಱುವೆನು ।
ಕೊರಳ ಹಾರದ [1] ಕರ್ಣಪೂರದ
ಕರಚರಣದಾಭರಣ ಮೆಱೆಯಲು
ಸುರಸತಿಯರನುವಾದರವನೀಪಾಲ ಕೇಳೆಂದ ॥ ೯೩

ಹತ್ತುಸಾವಿರದಮರಸತಿಯರು
ಮತ್ತೆ ಶೃಂಗಾರವನು ಮಾಡಿದ
ರುತ್ತಮದ ದೇವಾಂಗವಾಭರಣಾದಿಗಳ ತೊಟ್ಟು ।
ಚಿತ್ತಜನ ಪರಿವಾರವಿಂದ್ರನ
ಹತ್ತಿರಕೆ ಬರೆ ನಗುತ ನುಡಿದನು
ಪಾರ್ಥಶರಪಂಜರದಿ ನಡೆಯಿನ್ನೆಂದನಮರೇಂದ್ರ [2] ॥ ೯೪

---

[1] ಕೊರಳಜೊತ್ತಿಗೆ, ಖ. [2] ಯಿನ್ನಂಜಬೇಡೆಂದ, ಖ.

ಬಳಿಕ ತುಂಬರುನಾರದಾದ್ಯರ
ಕುಲಿಶವನು ಸುರಧೇನು ಸುರತರು
ಲಲನೆಯರು ಮೊದಲಾದ ನಾನಾವಸ್ತು ಸಂಕುಲವ।
ಬಲವಿರೋಧಿಯ ಗಜದ ಬೆಂಬಳಿ
ಯೊಳಗೆ ಕಳುಹಲು ಸರಳ ಪಂಜರ
ಕಿಳ ಜಡಿಯೆ ನಡೆಯಿತ್ತು ಗಜಪುರಿಗರಸ ಕೇಳೆಂದ॥ ೯೬

ಈ ಉತ್ಸವವಾರ್ತೆಯನ್ನು ಧೃತರಾಷ್ಟ್ರನು ಭೀಷ್ಮರಿಗೆ ತಿಳಿಸಲು ಅವರ ಸಂತೋಷ.

ಅರಸ ಕೇಳ್ ಧೃತರಾಷ್ಟ್ರಭೂಮಿ
ಶ್ವರಗೆ ಬಂದುದು ವಾರ್ತೆ ದುಗುಡದಿ
ಕರೆದು ಗಂಗಾಸುತಗೆ ಹೇಳಿದ ಸುರಗಜದ ಬರವ।
ನರನು ಜನಿಸಿಯೆ ಕುರುಕುಲವನು
ದ್ಧರಿಸಿದಪನಿದು ನಮ್ಮ ಪುಣ್ಯವು
ಹರುಷದಿಂದಿದಿಗೊಂಬೆವೆಂದನು ಭೀಷ್ಮ ನಸುನಗುತ॥ ೯೭

ಸುರಗಜವು ಧರೆಗಿಳಿದು ಹಸ್ತಿನ
ಪುರದ ಹೊರಬಾಹೆಯಲಿ ನಿಂದಿರ
ಲಿರುಳು ನೂಂಕಿತು ಮತ್ತೆ ರವಿಯುದಯಾಚಲಕೆ ಬಂದ।
ಗುರುನದೀಸುತವಿದುರರಂದಾ
ಪುರವ ನೆಱೆ ರಚಿಸಿದರು ಕೌರವ
ಧರಣಿಪಾಲಗೆ ದುಗುಡ ಬಲಿದುದು ಭೂಪ ಕೇಳೆಂದ॥ ೯೮

ಓರಣದ ಬೀದಿಯಲಿ ತಳಿತುವು
ತೋರಣಂಗಳು ಹಲವು ಪರಿಯಲಿ
ಸಾಱಿಸಿತು ಮುಗಿಲುಗಳು ಸಾದುಜವಾಜಿಕೆಸಱಿನಲಿ।
ಕಾರಣೆಯು ನವಕುಂಕುಮದ ನೃಪ
ನ್ನೀರಚಿಕಳಯುಂಗಳಲಿ ಮೆರಭಾ
ಗೀರಥೀನಂದನನು ಹಸ್ತಿನಪುರವ ವಿರಚಿಸಿದ॥ ೯೯

ಹೊಱಲ ಗುಡಿತೋರಣವ ಕಟ್ಟಿಸಿ
ಲಲನೆಯರ ಶೃಂಗಾರ ಮಾಡಿಸಿ
ಕಲಶಕನ್ನಡಿಸಹಿತ ಬಂದನು ಭೂಮಿಲಂಬದಲಿ।
ಮೊಱಗಿದುದು ಬಲುವಾದ್ಯ ರಭಸಕೆ
ತಳವೆಳಲನುಚ್ಚಳಿಸೆ ಜಲನಿಧಿ
ತುಳುಕಿದಪುದೈರಾವತವನಿದಿಗೊಂಬಸಂಭ್ರಮಕೆ॥ ೧೦೦

ಅರಸ ಕೇಳರ್ಜುನನು ತನ್ನಯ
ಯರಮನೆಗೆ ನಡೆತಂದು ಕುಂತಿಯ
ಚರಣಪಲ್ಲವಕೆಱಗಿ ಕೈಗಳ ಮುಗಿದು ವಿನಯದಲಿ।
ಸುರಪನೈರಾವತವ ನಾನಾ
ಸಿರಿಸಹಿತ ಧರೆಗಿೞುಹಿ ತಂದೆನು
ಹರುಷದಿಂದಲಿ ನೋನಿಯೆನೆ ತೆಗೆದಪ್ಪಿದಳು ಮಗನ॥ ೧೦೧

ತನುಜ ತನ್ನಯ ಜಠರದಲಿ ನೀ
ಜನಿಸಿದುದಱಿಂ ಮೂಱುಲೋಕದೊ
ಳೆನಗೆ ಕೀರ್ತಿಯು ಸುಗತಿಗಳ ಮಾಡಿದೆ ಯೆಲಾ ಯೆನುತ।
ತನುಪುಳಕದಿಂದುಬ್ಬಿ ತನ್ನಯ
ಮನದ ಹರ್ಷದ ಹರಹಿನಲಿ ಮ
ಜ್ಜನವ ಮಾಡಿದಳಾಗ ವಸ್ತ್ರವನುಟ್ಟಳಾಕುಂತಿ॥ ೧೦೨

ಕುಂತಿಯು ಗಾಂಧಾರಿಯನ್ನು ವ್ರತಕ್ಕೆ ಕರೆಯಲು ಆಕೆಯ ಅಸಂಮತಿ.

ಇಂದುಮುಖಿ ಹರ್ಷದಲಿ ತಾ ಹೊ
ನ್ನಂದಣವನೇಱಿದಳು ಸತಿಯರ
ಸಂದಣಿಗಳಲಿ ಬಂದಳಾಗಾಂಧಾರಿಯರಮನೆಗೆ।
ಅಂಧನೃಪನರಸಿಯನು ಕಾಣುತ
ಬಂದು ಚರಣದೊಳೆಱಗೆ ಹರುಷದಿ
ನಿಂದು ತೆಗೆದಪ್ಪಿದಳು ಕುಂತಿಯ ಸುಬಲಸುತೆ ನಗುತ॥ ೧೦೩

ತಂದು ಮಂಟಪದೊಳೊಲಿದು ಶುಭಕರ
ದಿಂದ ಕುಳ್ಳಿರಿಸಿದರೆ ಬಳಿಕಾ
ಗೆಂದಳಾಗಾಂಧಾರಿದೇವಿಗೆ ಕುಂತಿ ಕೈಮುಗಿದು ।
ತಂದನೈರಾವತವನರ್ಜುನ
ನಿಂದು ನೀವೈತಂದು ಮನದೊಲ
ವಿಂದ ನೋಂಪಿಯನೋನ ಬರಬೇಕೆಂದಳಾಕುಂತಿ ॥ ೧೦೪

ಭಾನುಮತಿ ಮೊದಲಾದ ಸೊಸೆಯರು
ಸೂನು ದುಶ್ಶಳ ಸಹಿತಲಾವರ
ಮಾನಿನಿಯರೆಲ್ಲರನು ನೀವೊಡಗೊಂಡು ಲೀಲೆಯಲಿ ।
ಸಾನುರಾಗದಿ ಬಂದು ನೋಂಪಿಯ
ನ್ಯೂನವಿಲ್ಲದೆ ನೋನ ಬೇಹುದು
ಮಾನನಿಧಿ ನೀವ್ ತೆರಳಿ ಬೇಗದೊಳೆಂದಳಾಕುಂತಿ ॥ ೧೦೫

ಮೌನದಲಿ ಗಾಂಧಾರಿ ಕುಂತೀ
ಮಾನಿನಿಯ ನುಡಿಗೇಳಿ ಕಡುದು
ಮ್ಮಾನದಲಿ ಮಾತಾಡದಿರೆ ಕಂಡೀಕೆ ವಿನಯದಲಿ ।
ಏನು ತಡವಿನ್ನಕ್ಕ ಸುರಪತಿ
ಯಾನೆ ಪುರದುದ್ಯಾನವನದಿ ಸು
ಮಾನದಿಂದೈತಂದುದೆಂದಳು ನಗುತ ನಳಿನಾಕ್ಷಿ ॥ ೧೦೬

ಎಂದು ನಾನಾಪ್ರೇಮನುಡಿಗಳ
ಲಿಂದುಮುಖಿ ಕರೆಯಲ್ಕೆ ಸುಬಲನ
ನಂದನೆಯು ಮನದೊಳಗೆ ಕಡುದುಮ್ಮಾನವಡೆಗೊಂಡು ।
ಹಿಂದೆ ನಾ ಸುರಕರಿಯ ನೋಂಪಿಯ
ಲಂದು ನಿನ್ನನು ಕರೆಸವುಜಿದುದ
ಕಿಂದು ನಾಚಿಸಬಂದೆ ಯೆಂದಳು ನೋಡಿ ಗಾಂಧಾರಿ ॥ ೧೦೭

ಮಱಿಸುವಮಾತೇಕಿನ್ನು ಕರೆವುದ
ನಱಿಯು ಬಾರದೆ ಕುಂತಿ ನಿನ್ನನು
ಮಱೆದು ಕಳದೆನು ಹಿಂದಣೈರಾವತದ ನೋಂಪಿಯಲಿ ।
ಇರದೆ ನೀನರ್ಜುನಗೆ ದೂಱಲು
ಮೆಱೆದನವನು ಪರಾಕ್ರಮವನಾ
ನಱಿಯೆನೇ ಸಾಕಿನ್ನು ಬಾರೇನೆಂದಳಾದೇವಿ ॥ ೧೦೮

ಬಡವರೆಂದೇ ನೀನು ಬಾರದೆ
ಕೆಡಿಸದಿರು ಗಾಂಧಾರಿ ನೋಂಪಿಯ
ತಡೆಯದೈತಂದಿಂದ್ರನೇಱುವ ಗಜವ ನೀನೇಱಿ ।
ಕೊಡುವುದುಚಿತವು ಬಾಗಿನವನುಱೆ
ಮಡದಿ ನೀನಿಲ್ಲದಿರೆ ನೋಂಪಿಯು
ಗೊಡವೆ ತನಗೇಕೆಂದು ಕರೆದಳು ಕುಂತಿ ವಿನಯದಲಿ ॥ ೧೦೯

ಎಱೆಯ ಮಣ್ಣಲಿ ಮಾಡಿ ನೋಂತರೆ
ಸುರಪನೈರಾವತವ ತರಿಸಿದೆ
ಸರಸಿಜಾನನೆ ಕಾಣಬಂದುದು ನಿನ್ನ ಬಡತನವು ।
ಮರುಳೆ ನಿನ್ನಯ ಸುತರ ಹಂಗಿನ
ಕರಿಯ ನಾ ನೋನುವೆನೆ ಸಾಕಂ
ತಿರಲಿ ನೀ ಹೋಗೆಂದು ಜಱೆದಳು ಮುನಿದು ಗಾಂಧಾರಿ ॥ ೧೧೦

ಅಕ್ಕ ಕೇಳೌ ಚಿಕ್ಕನುಡಿಗಳು
ತಕ್ಕುವೇ ಹಿರಿಯರ್ಗೆ ಛಲವಿದು
ಮಕ್ಕಳಾಟಿಕೆ ಬೇಡ ವೈರಾವತವ ನೀನೇಱಿ ।
ವಿಕ್ಕ ಮಾತೇಕಿನ್ನು ಬಾಗಿನ
ವಿಕ್ಕಿ ನೋನುವುದುಚಿತವೈವರು
ಮಕ್ಕಳಲ್ಲವೆ ನಿಮಗೆ ಯೆಂದಳು ಕುಂತಿ ವಿನಯದಲಿ ॥ ೧೧೧

ತನ್ನ ಬಸುಱಲಿ ಬರಲು ತನುಜರು
ಬೆನ್ನ ಬರಲವರನುಜರಲ್ಲದೆ
ಯನ್ಯರೇ ತನ್ನವರೆ ಹಗೆಯಲಿ ಕುಂತಿ ಮರುಳಾದೆ।
ನಿನ್ನ ಮಕ್ಕಳ ಸಿರಿಯು ಸಡಗರ
ಕಿನ್ನು ಬಾರೆನು ಹೋಗು ನೀನೇ
ಯುನ್ನತದಿ ನೋನೆಂದು ಗಜಱಿಬು ನುಡಿದಳಾಕುಂತಿ॥ ೧೧೨

ಧರಣಿಯೊಡೆತನ ವೊಂದೆ ಬಹಳೈ
ಶ್ವರಿಯುವೊಂದೇ ಪಾಂಡುಧೃತರಾ
ಷ್ಟ್ರರ ಕುಮಾರಕರೊಂದೆ ಭೇದವು ಬೇಡ ನೀ ಬಂದು।
ನರನ ವಿಜಯಶ್ರೀಯ ನೋಡಿಯೆ
ಪರಿಣಮಿಸುವುದುಚಿತವು ಜಱೆವುದು
ಹಿರಿಯರಿಗೆ ಗುಣವೆಲ್ಲ ಬರಬೇಕೆಂದಳಾಕುಂತಿ॥ ೧೧೩

ಕೇಳದಳು ಗಾಂಧಾರಿ ಕುಂತೀ
ಲೋಲಲೋಚನೆ ನುಡಿದ ನುಡಿಗಳ
ಗೇಳದವೆ ಮಾಡಿದಪೆನ್ನೈರಾವತದ ನೋಂಪಿಯಲಿ।
ಬಾಲೆ ನಿನ್ನನು ಕರೆಸವುಱಿದುದು
ಖೂಳತನವಾಯ್ತೆನುತ ದುಗುಡವ
ತಾಳ ಬಾರೆನು ತಂಗಿ ನೀ ಹೋಗೆಂದಳಿಂದುಮುಖಿ॥ ೧೧೪

ಅರಸಿ ನಿಮ್ಮಯ ನೋಂಪಿಗೋಸುಗ
ನೆರೆದುದಗಣಿತಮಂದಿ ಯುದಱಿಂ
ಮಱಿದರರಸು ತಪ್ಪೇನು ನನ್ನಯ ನೋಂಪಿಗರ್ಜುನನು।
ಸರಳನಮರರ ಸಭೆಯೊಳಚ್ಚೊಡೆ
ಹಿರಿದು ನಡುಗಿ ಸುರೇಂದ್ರನಾನೆಯು
ಧರೆಗೆ ಕಳುಹಿದ ತಾಯೆ ನೀ ನೋನೆಂದಳಾಕುಂತಿ॥ ೧೧೫

ಮಡದಿ ಬಲುಪತಿಗಳಲಿ ಚಾಣ್ಮೆಯ
ನುಡಿಯ ಕಲಿತವಳಾಗಿ ಯುತ್ತರ
ಗೊಡುವೆ ಹಿರಿದೆಂದಱಿಯೆ ಯೌವನದುಬ್ಬುಗೊಬ್ಬಿನಲಿ ।
ನುಡಿಯಲಾಗದು ನಿನ್ನ ನೋಂಪಿಯ
ಕಡೆಗೆ ಬಾರೆನು ಕುಂತಿ ನೀ ಕೇಳ್
ಕಡುಚಪಳೆ ಹೋಗೆಂದು ಜಱಿದಳು ಮುಸಿದು ಗಾಂಧಾರಿ ॥೧೧೬

ಬಂದು ನೋನುವ್ರದುಚಿತ ಬಾರದೆ
ಯಿಂದು ನೀ ಮುನಿದೇನು ಮಾಡುವೆ
ಚಂದ್ರಶೇಖರ ಬರೆದ ಲಿಪಿಯನು [1] ಮಿಾಱಲಾರ್ಗಳವು ।

ಬಳಿಕ ಭೀಷ್ಮಾದಿಗಳ ಸಹಾಯದಿಂದ ಕುಂತಿಯು ವ್ರತಾಚರಣೆ.

ಇಂದ್ರನೈರಾವತವನೋನದ
ಮಂದಭಾಗ್ಯಳೆ ಹೋಗೆನುತಲರ
ವಿಂದಮುಖಿ ತಿರುಗಿದಳು ಮಹಿಲದಿ ಭೀಷ್ಮನಿದ್ದೆಡೆಗೆ ॥ ೧೧೭

ಮರಳಿ ಬಂದಳು ಕುಂತಿ ಭೀಷ್ಮನ
ಚರಣಕಮಲದೊಳೆಱಗಿ ವಿದುರಗೆ
ಕರವ ಮುಗಿದೊಲವಿಂದ ಬಿನ್ನೈಸಿದಳು ವಿನಯದಲಿ ।
ಕರೆದನಾ ಗಾಂಧಾರಿದೇವಿಯ
ತರುಣಿ ಬಾರದೆ ಜಱಿದಳೆಂದೆನೆ
ಮರುಳೆ ಮಾಣಲಿ ತಾಯೆ ನೀ ನೋನೆಂದನಾಭೀಷ್ಮ ॥ ೧೧೮

ತರುಣಿ ನಿನಗಂಜಿಕೆಯೆ ಹೋಗೌ
ಸುರಗಜವ ನೀನೇಱು ದಾನಕೆ
ಹಿರಿದು ಭಂಡಾರವನು ತೆಗೆಸುವೆ ವಣಿಸು ಭೂಸುರರ ।

---

1 ಬರಹವ, ಖ.

ಧರಣಿಪತಿ ನಿನ್ನರಸನಾತನ
ಹಿರಿಯುಮಗನು ಯುಧಿಷ್ಠಿರಂಗೆಯು
ಗರುವರಾರುಂಟೆಂದು ಮಿಗೆ ಗರ್ಜಿಸಿದನಾಭೀಷ್ಮ ॥ ೧೯

ತರಿಸಿದರು ಬಂಡಿಗಳ ಶತಸಾ
ಸಿರವನಾಕ್ಷಣ ಭೀಷ್ಮವಿದುರರು
ಹಿರಿದು ಭಂಡಾರಗಳನೊಡೆಯಿಸಿ ಹೇಱಿದರು ಧನವ ।
ಪುರದ ಹೊಱವಳಯದಲಿ ನಾನಾ
ಪರಿಯ ವಸ್ತುವ ಸಹಿತ ಸುಱಿದರು
ಧರಣಿಪತಿ ಕೇಳ್ ಕುಂತಿದೇವಿಯ ನೋಂಪಿಯುತ್ಸವವ ॥ ೨೦

ಕಡುಗಲಿಯು ವರಭೀಷ್ಮವಿದುರರು
ನಡೆದರೈರಾವತವನಿದಿರ್ಗೊಳ
ಮಡದಿಯರ ಕರಕಲಶಕನ್ನಡಿ ಬಹಳವಿಭವದಲಿ ।
ಒಡನೆ ಬಂದರು ರಾಯರೆಲ್ಲರು
ಗಡಬಡಿಪ ಬಹುವಾದ್ಯರವದಿಂ
ದೊಡೆದುದಬುಜಭವಾಂಡವೆನೆ ನರನಾಥ ಕೇಳೆಂದ ॥ ೨೧

ಜನಪ ಕೇಳ್ ಯಮನಂದನನು ತ
ನ್ನನುಜರೆಲ್ಲರು ಸಹಿತಲಾಮ
ಜ್ಜನವ ಮಾಡಿ ದುಕೂಲದಿವ್ಯಾಭರಣಗಳನಿಟ್ಟು ।
ಜನನಿಯಂಘ್ರಿಯೊಳೆಱಗಿ ಮಿಗೆ ಕಾಂ
ಚನವರೂಥವನಡರಿ ಕುಂತೀ
ತನಯ ಬಂದನು ಧರ್ಮಸುತ ಸುರಗಜದ ಹೊರೆಗಾಗಿ ॥ ೨೨

ಬಂದು ಭೀಷ್ಮನು ಸಕಲಮುನಿಗಳಿ
ಗಂದು ಕರಗಳ ಮುಗಿದು ಬಿನ್ನಹ
ವಿಂದು ಕುಂತೀದೇವಿ ನೋನುವುದೆಂಬ ವಿವರವನು ।

ಅಂದದಲಿ ವಿರಚಿಪುದು ಲೋಕವು
ಕುಂದು ಗಾಣದ ತೆರದಲೆನೆ ನಗು
ತೆಂದನಾರದ ನುಡಿದನೆಲೆ ಗಾಂಗೇಯ ಕೇಳೆಂದ ॥ ೧೭೩

ಪತಿ ಮುನಿಯು ಶಾಪದಲಿರಲು ತ
ತ್ಪತಿಯ ಸನ್ಮತದಿಂದ ದೇವ
ಪ್ರತತಿಯಿಂ ಸುತರಾಯ್ತು ಕುಂತಿಗದಿಲ್ಲ ವೈಧವ್ಯ ।
ಗತಿಗೆ ಬಾರದು ಪಾರ್ಥನತಿರಥ
ಸುತರೊಳಗ್ಗಳ ಭೀಷ್ಮ ಕುಂತೀ
ಸತಿಗೆ ಸಲುವುದು ನೋಂಪಿ ನೋನಲಿ ಯೆಂದು ಮುನಿ ನುಡಿದ ॥

ದೇವಮುನಿ ನಾರದನ ವಾಕ್ಯವು
ದೇವಕೀಸುತ ಕೃಷ್ಣನೆಂದುದ
ನಾವನೀಗಲ್ಲೆಂದೆನಲಿ ಬ್ರಹ್ಮಾದಿದೇವಂಲಿ ।
ಆವ ಸಂಶಯವಿಲ್ಲ ಕುಂತೀ
ದೇವಿ ನೋನಲಿ ಯೆಂದು ಮುನಿತಿ
ಕಾವಳಿಯು ತಮತಮಗೆ ನುಡಿಯಲು ಭೀಷ್ಮ ಕೈಗೊಂಡ [1] ॥೧೭೫

ಧರೆಯ ಭಾರವ ನಿಳುಹಲೋಸುಗ
ನರನು ನಾರಾಯಣನು ಭೂಮಿಯೊ
ಳುರುವಣಿಸಿ ಜನಿಸಿದರು ನಿಮ್ಮಾ ಭರತಸಂಶದಲಿ ।
ಸುರಗಜವ ನೋನಿಸಲು ಮಾತೆಗೆ
ಹಿರಿದು ಭಾಷೆಯನಿತ್ತನರ್ಜುನ
ಹಿರಿಯನುಡಿ ಹೊಳ್ಳಹುದೆ ನೋನಲಿ ಯೆಂದು ಭೃಗು ನುಡಿದ ॥

ಸುರನದೀನಂದನನು ಋಷಿಗಳ
ಪರಮವಾಕ್ಯವ ಕೇಳಿ ಹರುಷದಿ
ಕರೆಯ ಕಳುಹಿದನಾಗ ಕುಂತಿಯನಾಪ್ತಮಂತ್ರಿಯಲಿ ।

---

1 ರಾಯಕೇಳೆಂದ, ಶ.

ಭರದಿ ಬಂದರು ತಾಯೆ ಭೀಷ್ಮರು
ಕರಿಯ ನೋಂಪಿಗೆ ಕರೆದರೆನೆ ಕಡು
ಹರುಷಜಲದೊಳಗದ್ದು ಹೊಂಪುಳಿ ಪೋದಳಾ ಕುಂತಿ [1] ॥ ೧೨೭

ಆಯುದೊಳಗುತ್ತಮದ ತೇಜಿಯ
ನಾಯ್ದು ಹೂಡಿದ ರಥದ ಬಂಡಿಯೊ
ಳಾಯ್ದು ದಿವ್ಯಾಸ್ತ್ರಗಳನಿರಿಸಿದನಧಿಕಹರುಷದಲಿ ।
ರಾಯ ಪರಬಲಮಥನ ಮಲೆದರಿ
ರಾಯಸುಭಟರ ಗಂಡ ನಿರ್ಜರ
ರಾಯನಂದನ ಧನುವ ಕೊಂಡೇಱಿದನು ನಿಜರಥವ ॥ ೧೨೮

ಹಿಡಿದ ಬೆಳುಗೊಡೆ ಯೆರಡುಕಡೆಯಲಿ
ಬಿಡದೆ ಚಿಮ್ಮುವ ಚಾಮರಂಗಳ
ಲೊಡನೆ ಗಗನವನಲೆವ ಬಿರುದಿನ ಬಲುಪತಾಕೆಯಲಿ ।
ಹೊಡೆವ ನಾನಾವಾದ್ಯಮುಂದು
ಘಡಿಪ ಕೈವಾರಿಗಳ ರಭಸದಿ
ಕಡುಗಲಿಯು ಫಲುಗುಣನು ಸುರಗಜದೆಡೆಗೆ ನಡೆತಂದ ॥ ೧೨೯

ಮಿಂದು ನಾನಾವಸ್ತುಸಹಿತಾ
ಗಂದಣವನೇಱಿದಳು ಕೆಲಬಲ
ದಿಂದುವದನೆಯರೈದಿದರು ಶತಕೋಟಿಸಂಖ್ಯೆಯಲಿ ।
ಸಂದಣಿಯ ಪಾಠಕರ ಗಡಬಡ
ಮುಂದೆ ಕೈವಾರಿಗಳ ರಭಸವ
ಲಿಂದ್ರನೈರಾವತದೆಡೆಗೆ ನಡೆತಂದಳಾಕುಂತಿ ॥ ೧೩೦

**ಕುಂತಿಯ ಐರಾವತಾರೋಹಣ.**

ಇಂದುಮುಖಿ ಹರುಷದಲಿ ತಾ ಹೊ
ನ್ನಂದಣದ ಬಟ್ಟಿಕಿಟ್ಟಿದು ನಲವಿನೊ

[1] ಬಹುಹರುಷದಿಂದೋಲಾಡುತಿರ್ದಳು ಕುಂತಿ ಬಟಿಕಿನಲ್ಲಿ, ಶ.

ಳಂದು ಮೆಯ್ಯಿಕ್ಕಿದಳು ಕಾಣಿಕೆ ಯಿಕ್ಕಿ ಚರಣದಲಿ ।
ಚಂದನಸುಗಂಧಾಕ್ಷತೆಗಳರ
ವಿಂದಪುಷ್ಪದಿ ಧೂಪದೀಪಗ
ಳಿಂದ ನೈವೇದ್ಯಂಗಳಿಂ ಪೂಜಿಸಿದಳಾಕುಂತಿ ॥ ೧೩೧

ನಡೆದು ಬಂದಳು ಧೇನುವನು ಕಂ
ಡೆಡೆಗೆಡಹಿ ತನ್ನೊಡಲ ಚರಣದ
ನಡುಹಿ ಪದ್ಮವ ಬರೆದು ಕಾಣಿಕೆಗೊಟ್ಟು ಪೊಡವಟ್ಟು ।
ಮಡದಿ ಗಂಧಾಕ್ಷತೆಯು ಪುಷ್ಪವ
ಹಿಡಿದು ಧೂಪನಿವಾಳಿಯಿಂದವೆ
ಕಡುಗರುವೆ ಸುರಧೇನುವನು ಪೂಜಿಸಿದಳಾಕುಂತಿ ॥ ೧೩೨

ಕಲ್ಪವೃಕ್ಷವ ಕಂಡು ಕುಂತೀ
ಲಲನೆ ಮೆಯ್ಯಿಕ್ಕಿದಳು ನೇತ್ರಾ
ವಳಿಗಳನು ಸುತ್ತಿದಳು ಕಾಣಿಕೆಗೊಟ್ಟು ಮೆಯ್ಯಿಕ್ಕಿ ।
ಬಳಿಕ ಗಂಧಾಕ್ಷತೆಯು ಪುಷ್ಪಂ
ಗಳಲಿ ಧೂಪನಿವಾಳಿಯಿಂದವೆ
ನಳಿನಮುಖಿ ಸುರತರುವ ನೊಲಿದರ್ಚಿಸಿದಳಾಕುಂತಿ ॥ ೧೩೩

ಬಳಿಕ ತುಂಬರುನಾರದಾದ್ಯರ
ಲಲನೆಯರ ಸುರಜನಕೆ ನಮಿಸುತ
ಹೊಳವ ವೆಜ್ರಾಯುಧಕೆ ಕಾಣಿಕೆಗೊಟ್ಟು ಮೆಯ್ಯಿಕ್ಕಿ ।
ಮೊಳಗಿದುವು ನಿಸ್ಸಾಳಕೋಟಿಗ
ಳುಲಿದು ಗೀತವ ಪಾಡೆ ಹರುಷದ
ಜಲಧಿಯೊಳಗೋಲಾಡುತಿರ್ದುದು ಭೂಪ ಕೇಳೆಂದ ॥ ೧೩೪

ಸುರಭಿ ಕಱೆದರೆ ಧರಣಿ ದಣಿದುದು
ನೆರೆದಜನ ನೆಱೆ ಪುಂಡು ದಣಿದುದು
ಸುರತರುವಿನಶನದಲಿ ಲೋಕದ ಬಾಯ ಕಡೆಬಿಟ್ಟು ।

ಸುರರ ಸತಿಯರ ಕಂಡು ಕಂಗಳು
ಹಿರಿದು ದಣಿದುವು ಹೇೞಲೇನದ
ನರಸ ಕೇಳ್ಳೈ ಕುಂತಿದೇವಿಯ ನೋಂಪಿಯುತ್ಸಹವ ॥ ೧೩೫

ತಿರುಗಿದಳು ಬಲದಿಂದಲಾನೆಗೆ
ಕರವ ನೊಸಲೊಳು ಚಾಚಿ ದಿಗುಪಾ
ಲರಿಗೆ ಮಣಿವಳು ಮುನಿಜನಕೆ ಕೈಮುಗಿದು ಪರುಷದಲಿ ।
ವರರತುನಮಯತೊಟ್ಟಿಲಲಿ ಕು
ಳ್ಳಿರಲು ತೆಗೆದರು ಗಜದ ಮೇಲಕೆ
ಸರಸಿಜಾನನೆ ಕುಂತಿಯೈರಾವತವನೇಱಿದಳು ॥ ೧೩೬

ಇಂದುಮುಖಿ ಸುರಗಜದ ಮೇಲಣ
ಯಿಂದ್ರನೇಱುವ ಗದ್ದುಗೆಗೆ ನಡೆ
ತಂದು ಕುಳ್ಳಿರೆ ಚಿಮ್ಮಿದರು ಚಾಮರವನವರಿಯರು ।
ತಂದು ಸುರಪನ ಛತ್ರವನು ನಲ
ವಿಂದ ಪಲ್ಲವಿಸಿದರು ಕುಂತಿಯ
ದಿಂದುಧರನರಸಿಯನು ನೋಂತಳು ರಾಯ ಕೇಳೆಂದ ॥ ೧೩೭

ಸುರಪನೈರಾವತವನೇಱಿಯೆ
ಪುರದ ಬೀದಿಗಳೊಳಗೆ ಬಂದಳು
ಕರಿನಗರಕೇರಿಯಲಿ ನಡೆದುದು ಸಕಲಜನನಿಕರ ।
ಅರಸಿ ಸುರಸತಿಯರಿಗೆ ಕೊಟ್ಟಳು
ಹರುಷದಿಂ ಬಾಗಿನವ ನಿಜಮಂ
ದಿರಕೆ ತಂದಳು ಸುರಭಿ ಸಹ ಸುರಸತಿಯರೊಡಗೂಡಿ ॥ ೧೩೮

ನಳಿನಮುಖಿ ಸುರಗಜದ ಮೇಲಿಂ
ದಿೞಿದು ಬಂದಳು ಸುರರ ಸಂ
ಕುಲಕಿರದೆ ಕೈಗಳ ಮುಗಿದು ಗಂಗಾತನುಜಗಭಿನಮಿಸಿ ।

ಬಟಿಕ ಭೀಷ್ಮನ ನೇಮದಲಿ ನಿಜ
ನಿಳಯಕೈದಿದಳರ್ತಿಯಲಿ ಕಡು
ಗಲಿಯು ಪಾರ್ಥಗೆ ಕೀರ್ತಿಯಾಯಿತು ಮೂಱುಲೋಕದಲಿ ॥ ೧೩೯

ದೇವದುಂದುಭಿ ಮೊಳಗಿದುದು ದೇ
ವಾವಳಿಗಳಾಕಾಶದಿಂದವೆ
ಹೂವಿನಲಿ ಮಳೆಗಱೆದರಾಕುಂತೀಕುಮಾರರಿಗೆ ।
ಆವಬಲುಬಿಲುವಿದ್ಯೆ ತಾಸಿಂ
ನಾವಗರುಡಿಯ ಸಾಧನೆಯೊ ಭಟ
ದೇವ ಫಲುಗುಣ ಭಾಪುರೆಂದುದು ಸಕಲಭುವನಜನ ॥ ೧೪೦

ಹರಿದುದು ಫಲುಗುಣನ ಪರಾಕ್ರಮ
ಶರಧಿ ಮೇರೆಗಳಾಗೆ ಸೂರ್ಯನ
ಕಿರಣ ಹರಿವಂದದಲಿ ಹರಿದುದು ಕೂಡೆ ದೆಸೆದೆಸೆಗೆ ।
ಧರೆಯ ಸುಜನರು ಭೀಷ್ಮವಿದುರರು
ಪರಿಣಮಿಸಿ ಕೌರವರ ಯೆದೆ ಝು
ರ್ಝುರಿತವಾಗಲು ಕೇಳು ಜನಮೇಜಯ ಮಹೀಪಾಲ ॥ ೧೪೧

ಧರ್ಮರಾಜನ ಅಪ್ಪಣೆಯಂತೆ ಐರಾವತಾದಿಗಳನ್ನು ಸ್ವರ್ಗಕ್ಕೆ ಕಳುಹಿ ಮಾರ್ಗವನ್ನು ತೆಗೆದುದು.

ಭೂತಳಾಧಿಪ ಧರ್ಮಸುತನನು
ಜಾತಗೆಂದನ ಮೂಱುಜಗದಲಿ
ಖ್ಯಾತಿಯಾಯಿತದಿಂದ್ರನೈರಾವತವ ಕಳುಹಿನ್ನು ।
ಭೂತಳದ ಸುರಗಜದ [1] ದಾರಿಯ
ನೀತತುಕ್ಷಣ ಕಡಿದು ಬಿಸುಡೆನ
ಲಾತ ವಂದಿಸಿ ಕಳುಹಿದನು ಸುರಗಜವ ಜನಸಹಿತ ॥ ೧೪೨

---

1 ನೂತನದ ಸುರಶಾಗದ, ಥ.

ಬಿಲ್ಲನೇಱಿಸಿ ಕವಲ ಬಾಣದ
ಲೆಲ್ಲ ತಾ ಹರುಷದಲಿ ಸಾಹಸ
ಮಲ್ಲ ಬರಸೆಳೆದೆಚ್ಚ ನಾಶರಪಂಜರಂಗಳನು |
ನಿಲ್ಲದವೆ ತಱಿದೊಟ್ಟೆ ನಿಮಿಷದೊ
ಳಲ್ಲವವು ಬಯಲಾಗೆ ಗೌರೀ
ವಲ್ಲಭನು ಮೆಚ್ಚಿದನು ಫಲುಗುಣ ಭಾಪು ರೇ ಯೆನುತ ॥ ೧೪೩

ರಾಯ ಭೀಷ್ಮನು ಸಕಲದೇಶದ
ರಾಯರನು ಕಳುಹಿದನು ಪಾಂಡವ
ರಾಯತನುಜರ ಹೊಗಳುತವರೈದಿದರು ತಮತಮಗೆ |
ರಾಯ ಧರ್ಮಜ ತಮ್ಮದಿರು ಸಹ
ರಾಯನಾರಾಯಣನ ಕರುಣದ
ರಾಯಗರುಡಿಯನಿಳಯವನು ಸಾಱಿದರು ಹರ್ಷದಲಿ ॥ ೧೪೪

ಇಪ್ಪತ್ತನೆಯ ಸಂಧಿ ಮುಗಿದುದು.

ಇತಿ ಶ್ರೀಮದಚಿಂತ್ಯಮಹಿಮ ಗದಗು ವೀರನಾರಾಯಣ ಚರಣಾರವಿಂದ
ಮಕರಂದ ಮಧುಪಾನ ಪುಷ್ಟವಚಷಟ್ಪದೀಸಿಕಾಯ ಶ್ರೀಮತ್ಕು
ಮಾರ ವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ
ಭಾರತಕಥಾಮಂಜರಿಯ ಆದಿಪರ್ವದೊಳ್
ಸಂಭವಪರ್ವಂ ಮುಗಿದುದು.

# ಶೋಧನಪತ್ರಿಕೆ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 15 | 19 | ಕಾಣಸಿ | ಕಾಣಿಸಿ |
| 28 | ,, | ಹೊಱ | ಹೊರೆ |
| 28 | 16 | ಸುೞಿವ | ಸುಳಿವ |
| 31 | 7 | ಬಾಯಿಯಲಿ | ಬಾಯಲಿ |
| ,, | 10 | ಹೊಱಗೆ | ಹೊರೆಗೆ |
| 33 | 12 | ಘೋಳೆನುತ | ಘೋಷೆನುತ |
| ,, | 18 | ಹೊಗಱ್ದವು | ಹೊಗೞ್ದವು |
| 43 | 19 | ಕಾಯುತ್ತು | ಕಾಯಿತು |
| 49 | 18 | ಧಾಳಿ | ಧಾೞಿ |
| 63 | 19 | ಹುಟ್ಟಿದವು | ಹುಟ್ಟಿದುವು |
| 72 | 13 | ಹರ್ಬ್ರಹ್ಮ | ಹರಬ್ರಹ್ಮ |
| 81 | 12 | ೀತರಲ | ಸೀತರಲಿ |
| 88 | 6 | ಮುರಿದು | ಮುಱಿದು |
| 92 | 9 | ಯಾದವು | ಯಾದುದು |
| 94 | 8 | ತಱಿಯು | ತಱಿಯು |
| 98 | 18 | ನಳಿಯು | ನೞಿಯು |
| 108 | 6 | ರೋಗ | ರೋರಗ |
| 109 | 10 | ಬಳಲಿಯು | ಬೞಲಿಯು |
| ,, | 18 | ಗದು | ಗದುಗಡ |
| ,, | ,, | ತನೆ | ತನೇ |
| ,, | ,, | ರಿ ಕ್ತಾ | ರಿಕ್ತಾ |
| 115 | 12 | ಕೃತ್ಯೆ | ಕೃತ್ಯೈ |
| 118 | 9 | ತ್ಮಾನಿ | ತ್ಮನಿ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | 17 | ದೇಟಿ | ದೇೞಿ |
| 128 | 13 | ಬೀರಿ | ಬೀಱಿ |
| 132 | 2 | ಸೆಳೆವ | ಸೆಳೆಯು |
| 133 | 4 | ತಲ | ತಲಿ |
| 141 | 9 | ಹೋಹವು | ಹೋಹುವು |
| 156 | 21 | ಹೊಳಲ | ಹೊೞಲ |
| 161 | 15 | ಐರವ | ೞೞವು |
| 165 | 20 | ಲಿಹವು | ಲಿಹುವು |
| 166 | 10 | ನುದ | ನುದ್ಧ |
| 173 | 21 | ವಸ | ವಸು |
| 176 | 15 | ವಮು | ವಮುವು |
| 177 | 14 | ವುರಿ | ವುಱಿ |
| 189 | 23 | ವುಚ್ಚಿ | ವುಚ್ಚಿ |
| 194 | 16 | ಗುರಿ | ಗುಱಿ |
| 201 | 3 | ಕುಂತಿ | ಕುಂತಿಗೆ |
| 203 | 1 | ಯಾಜೆ | ಯಾಜ್ಞೆ |
| ,, | 11 | ತ್ರೋಱಿತು | ತೋೞಲು |
| 207 | 21 | ವೃತಿ | ವೃತ್ತಿ |
| 254 | 11 | ಹೊಳಲ | ಹೊೞಲ |
| 278 | 14 | ತೇಗ | ತೆಗ |
| 289 | 14 | ನೊಱಿ | ನೊರೆ |
| 309 | 7 | ನುರ | ನುೞ |
| 326 | 13 | ದವು | ದುವು |
| 339 | 12 | ಹೊಱಿ | ಹೊರೆ |
| 351 | 9 | ಗಳು | ಗಳ |
| 362 | 18 | ಳುರು | ಳುೞು |

Government Oriental Library Series

EDITED BY PANDITS UNDER THE SUPERVISION OF THE CURATOR, GOVERNMENT ORIENTAL LIBRARY, MYSORE.

Kannada Section No. V.

ಕುಮಾರವ್ಯಾಸಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

೨ನೆಯ ಸಂಪುಟ

ಆದಿಪರ್ವದೊಳ್ ಜತುಗೃಹಾದಿಪರ್ವಗಳು

THE

# KARNATAKA MAHABHARATA

BY

KUMARAVYASA MAHAKAVI

VOLUME II

## JATUGRUHAPARVA, Etc.

EDITED BY

V. SYAMACHARYA,
*Pandit, Govt. Oriental Library, Mysore*

PUBLISHED UNDER THE AUTHORITY OF THE GOVERNMENT OF HIS HIGHNESS THE MAHARAJA OF MYSORE

MYSORE:
PRINTED AT THE GOVERNMENT BRANCH PRESS
1913

# ಅ ವ ತ ರ ಣಿ ಕೆ .

ಈ ಪುಸ್ತಕವು ಕರ್ಣಾಟಕಮಹಾಭಾರತದ ಎರಡನೆಯ ಸಂಚಿಕೆಯಾಗಿರುವುದು. ಈ ಗ್ರಂಥಕರ್ತನ ವಿಷಯದಲ್ಲಿಯೂ ಈ ಕವಿಯ ಭಾಷೆ ಮೊದಲಾದ ವಿಷಯಗಳಲ್ಲಿಯೂ ಹೇಳಬೇಕಾದ ವಿಷಯಗಳೆಲ್ಲಾ (ಕನ್ನಡ ಸೆಕ್ಷನ್ ನಂಬರು ಮೂರು ನಾಲ್ಕನೆಯದಾದ) ಉಪೋದ್ಘಾತಸಂಚಿಕೆ ಮತ್ತು ಸಂಭವಪರ್ವ ಇವುಗಳ ಅವತರಣಿಕೆಯಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಪ್ರಕೃತ ಈ ಪುಸ್ತಕದಲ್ಲಿರುವ ಗ್ರಂಥದ ವಿಚಾರಮಾತ್ರ ಆವಶ್ಯಕವಾಗಿರುವುದು.

(1) ಜತುಗೃಹಪರ್ವ, (2) ಹಿಡಿಂಬವಧಪರ್ವ, (3) ಬಕವಧಪರ್ವ, (4) ಚೈತ್ರರಥಪರ್ವ, (5) ಸ್ವಯಂವರಪರ್ವ, (6) ವೈವಾಹಿಕಪರ್ವ (7) ವಿದುರಾಗಮಪರ್ವ. (8) ರಾಜ್ಯಲಾಭಪರ್ವ (9) ತೀರ್ಥಯಾತ್ರಾಪರ್ವ, (10) ಸುಭದ್ರಾಹರಣಪರ್ವ, (11) ಖಾಂಡವವನದಹನಪರ್ವ, ೧ನೆಯ ಪರಿಶಿಷ್ಟ, ೨ನೆಯ ಪರಿಶಿಷ್ಟ, ಇವೆಲ್ಲವೂ ಈ ಪುಸ್ತಕದಲ್ಲಿ ಅಡಗಿವೆ.

ಈ ಪುಸ್ತಕದಲ್ಲಿ ಪ್ರಕಟಿಸಿರುವ ಪಾಠವು ಪ್ರಾಯಿಕವಾಗಿ ಬೆಂಗಳೂರು ಮೊದಲಾದ ಸ್ಥಳಗಳಲ್ಲಿ ಮುದ್ರಿತವಾದ ಪುಸ್ತಕಗಳಂತೆಯೂ ಚ, ಛ, ಟ. ಗುರ್ತುಗಳುಳ್ಳ ಪುಸ್ತಕಗಳಂತೆಯೂ ಇರುತ್ತದೆ. ಆದರೆ 24ನೆಯ ಸಂಧಿಯ ಕೊನೆಯಲ್ಲಿ ಅರ್ಜುನನಿಗೂ ಅಂಗಾರವರ್ಮನಿಗೂ ಸ್ನೇಹವಾದ ಬಳಿಕ ಅಂಗಾರವರ್ಮನು ಪಾಂಡವರಿಗೆ ಅನರ್ಘ್ಯವಾದ ರತ್ನಾಭರಣಾದಿಗಳನ್ನು ಕೊಡುವಾಗ, ಅವರು "ಬೇಕಾದ ಸಮಯದಲ್ಲಿ ತರಿಸಿಕೊಳ್ಳುವೆವು ನಿಮ್ಮಲ್ಲೇ ಇರಲಿ" ಎಂದು ಹೇಳಿ ಹೊರಟರು. ಆಗ ಅಂಗಾರವರ್ಮನು ಕೆಲವು ಧರ್ಮಮಾರ್ಗಗಳನ್ನೂ ಪೂರ್ವದ ಕಥೆಗ

ಳನ್ನೂ ಹೇಳಿದನೆಂದು ಗ್ರಂಥಕಾರನು ಹೇಳುತ್ತಾ, ಆ ಪ್ರಕರಣದಲ್ಲಿ ಪರಶುರಾಮರ ಕಥೆಯನ್ನು ವಿಸ್ತಾರವಾಗಿ ಹೇಳಿರುವೆನು. ಮತ್ತು ಈ ಪುಸ್ತಕದಲ್ಲಿ ಪ್ರಾಯಿಕವಾಗಿ ಪ್ರತಿಸಂಧಿಯಲ್ಲಿಯೂ ಮೇಲೆ ಕಂಡ ಪುಸ್ತಕಗಳಿಕಿಂತಲೂ ಕೆಲವು ಕಥಾಸಂದರ್ಭಗಳೊಳಗೆ ಅಧಿಕವಿಚಾರವುಳ್ಳ ಪದ್ಯಗಳು ಕೆಲವು ಹೆಚ್ಚಾಗಿ ದೊರೆಯುತ್ತವೆ.

ಮೊದಲನೆಯ ಸಂಚಿಕೆಯ ಮುದ್ರಣಸಮಯದಲ್ಲಿ ಶೋಧನಕ್ಕಾಗಿ ಉಪಯೋಗಿಸಲ್ಪಟ್ಟ ಬಹುಪುಸ್ತಕಗಳಲ್ಲಿ ಈ ವರೆಗೆ ಗ್ರಂಥವು ಇರಲಿಲ್ಲವಾಗಿ ಕೆಲವು ಪುಸ್ತಕಗಳ ಆಧಾರದ ಮೇಲೆ ಮುದ್ರಣಕಾರ್ಯವು ನಡೆದಿರುವುದು. ಫಿಯಲಾಜಿಕಲ್ ಕಾಲೇಜಿನಿಂದ ಆರ್ಕಿಲಾಜಿಕಲ್ ಆಫೀಸರ ದ್ವಾರಾ ಈ ಆಫೀಸಿಗೆ ಬಹುಮಾನವಾಗಿ ಬಂದ 'ಡ' ಗುರ್ತುಳ್ಳ ಲೈಬ್ರರಿ 227 ನೆಯ ನಂಬರಿನ ಪುಸ್ತಕವು ಶೋಧನಕ್ಕೆ ಸಹಾಯವಾದುದಕ್ಕಾಗಿ ಅತ್ಯಂತ ಕೃತಜ್ಞರಾಗಬೇಕಾಗಿದೆ. ಇದರ ಶೋಧನಕ್ಕಾಗಿ ಉಪಯೋಗಿಸಿರುವ ಪುಸ್ತಕಗಳ ವಿವರಣೆ—

| ಗುರ್ತುಗ|| ಓ|| | ಲೈಬ್ರರಿ ನಂಬರು |
|---|---|
| ಕ. | 70 |
| ಖ. | ಕಾರ್ಲ್ ಪ್ರೆಸ್ ಪ್ರೊಪ್ರೈಟರಿಂದ [ಬಂದುದು. |
| ಚ. | 251 |
| ಜ. | 2 |
| ಟ. | 205 |
| ಡ. | 227 |

ಈ ಪುಸ್ತಕದ ಕೊನೆಯಲ್ಲಿ ೧ ನೆಯ ಪರಿಶಿಷ್ಟದಲ್ಲಿಯೂ ೨ ನೆಯ ಪರಿಶಿಷ್ಟದಲ್ಲಿಯೂ ಪ್ರಕಟಿಸಿರುವ ಹರಿಶ್ಚಂದ್ರರಾಯನ ಕಥೆ ಮತ್ತು ಯಯಾತಿರಾಯನ ಕಥೆಯು ಅನೇಕ ಪುಸ್ತಕಗಳಲ್ಲಿ ಇಲ್ಲ. ಮತ್ತು ಅದರ ಶೈಲಿಯು, ಶಬ್ದಸಾಮ್ಯವು, ಇವೇ ಮೊದಲಾದ ಸಂದರ್ಭಗಳನ್ನು ನೋಡಿದರೆ ಲಕ್ಷಣಜ್ಞರಾದ ಕವಿಗಳಿಗೆ ಹೃದ್ಯವಾಗಿ ತೋರುವದಿಲ್ಲ. ಆದರೂ

ಗ. ಘ. ಜ. ಠ. ಅಂದರೆ 218, 210, 2, 273 ಲೈಬ್ರರಿ ನಂಬರಿನ ಪುಸ್ತಕಗಳಲ್ಲಿ ಕಂಡು ಬಂದುದರಿಂದ ಮುದ್ರಣಮಾಡಿದುದಾಯಿತು.

ಮೇಲೆ ಹೇಳಿದಂತೆ ಬಹುಪುಸ್ತಕಗಳನ್ನನುಸರಿಸಿ ಈ ಗ್ರಂಥವು ಶೋಧಿಸಲ್ಪಟ್ಟು ಮುದ್ರಿತವಾಗಿರುವುದರಿಂದ, ಒಂದು ವೇಳೆ ಪ್ರಾಮಾದಿಕದೋಷಗಳೇನಾದರೂ ಇದ್ದರೆ ಅದನ್ನು ಲಕ್ಷ್ಯಕ್ಕೆ ತಾರದೆ, ಅಭಿಜ್ಞರೂ ಗುಣಗ್ರಾಹಿಗಳೂ ಆದವರೆಲ್ಲರೂ ಗುಣವನ್ನು ಮಾತ್ರ ಮನಸ್ಸಿಗೆ ತಂದು ಆನಂದಿಸುವರೆಂದು ನಂಬಿದೆ.

# ವಿಷಯಸೂಚಿಕೆ.

ವಿಷಯ ...

೨೧ನೆಯ ಸಂಧಿ—

—೬೬ನೆಯ ಸಂಧಿ—

ವಿಷಯ — ಪುಟ

ವಿಷಯ



೩೭ನೆಯ ಸಂಧಿ—

**೩೭ನೆಯ ಸಂಧಿ—**

ಶ್ರೀ

ಕುಮಾರವ್ಯಾಸ ಮಹಾಕವಿ ವಿರಚಿತಂ

# ಕರ್ಣಾಟಕ ಮಹಾಭಾರತಂ

# ಆದಿಪರ್ವ.

ದ್ವಿತೀಯ ಸಂಪುಟ



## ಇಪ್ಪತ್ತೊಂದನೆಯ ಸಂಧಿ

ಸೂಚನೆ

ವಾಯುಸುತನರಮನೆಯ ಕೌರವ
ರಾಯ ಕೃತಕವ ಕಳೆದು ಹೊಕ್ಕನು
ತಾಯಿಯೊಡಹುಟ್ಟಿದರು ಸಹಿತ ಮಹಾವನಾಂತರವ ॥

ಕುರುಪಾಂಡವರ ವೈರಾಭಿವೃದ್ಧಿ.

ಕೇಳು ಜನಮೇಜಯ ಧರಿತ್ರೀ
ಪಾಲ ಗಜನಗರಿಯಲಿ ಪಾಂಡವ
ರಾಳ ಕೌರವರಾಳ ಸೆಣಸಿನ ಕಾಲುಮುಟ್ಟುಗಳ ।
ಸೂಟಿ ಮತ್ಸರ ಬಿರಿದುಪಾಡಿನ
ಜೋಳಿ ಕಲಹದ ಕದಡು ಜೂಜಿನ
ಕೋಟಿ ಚಲದೊಳ[1] ತೋಟಿ ಮಸಗಿತು ದಿವಸ ದಿವಸದಲಿ[2] ॥ ೧

1 ವಲರೊಳ, ಕ. ಚ.  2 ನಾಡುಬೀಡಿನಲಿ, ಜ.

ಬೀದಿಗಲಹದ ಕದಡು ಬೀಡಿನೊ
ಳ್ಳೈದೆ ಹಬ್ಬಿತು ಕೂಡೆ ನಗರದಿ [1]
ಕ್ಕೈದೊಳಸಕೊಂಡೆಸಗಿ ಮಸಗಿತು ನಾಡುನಾಡಿನಲಿ [2] ।
ಆದುದೆರಡರಸಿಭಪುರಿಗೆ ಕಾ
ಳಾದುದಿನ್ನೇನೆನುತ ಪುರಜನ
ವ್ಯೈದೆ ಮಱುಗಿತು ಭೀಮದುರ್ಯೋಧನರ ಹೋರಟೆಗೆ ॥ ೧

ಬೇಱೆ ಪಾಂಡವರಿರಲಿ ರಾಯನ
ನೂಱುಮಕ್ಕಳು ಪುರವನಾಳಲಿ
ಬೇಱೆ ಕೌರವರಿರಲಿ ಪಾಂಡವರಿರಲಿ ನಗರಿಯಲಿ [3] ।
ನೂಱಱೊಡನೈವರನು ಧರಿಯಿಸ
ಲಾರದಿಭಪುರಿ ಯೆನುತ ದುಗುಡವ
ಹೇಱಿ ಹೊದಕುಳಿಗೊಳುತಲಿರ್ದುದು ಹಸ್ತಿನಾನಗರ ॥ ೨

ಕರ್ಣಶಕುನಿಗಳೊಡನೆ ದುರ್ಯೋಧನನ ರಹಸ್ಯಾಲೋಚನೆ.

ಒಂದುದಿನ ದುರ್ಯೋಧನನು ನಿಜ
ಮಂದಿರದೊಳೇಕಾಂತದಲಿ ಮನ
ನೊಂದು ನುಡಿದನು ಕರ್ಣಶಕುನಿಜಯದ್ರಥಾದ್ಯರಿಗೆ ।
ಇಂದು ಭೀಮಾರ್ಜುನರು ದ್ರುಪದನ
ತಂದು ದಕ್ಷಿಣೆ ಯಿತ್ತು ಗುರುವಿಗೆ
ಸಂದರ್ಭ ಸಮರದಲಿ ಪರಿಭವವಾಯ್ತು ನಮಗೆಂದ ॥ ೪

ವನಜವನದಲಿ ತುಱುಚಿ ಕಬ್ಬಿನ
ಬನದಿ ಕಡಸಿಗೆ ಚೂತಮಯಕಾ
ನನದೆ ಬಬ್ಬುಲಿ ಭೀಮಸೇನನ ಯಿರವು ನಮ್ಮೊಡನೆ ।

---

[1] ಕ್ಕೈದುಗದನದ, ಖ. ಬೀಡುಗಲಹದ, ಚ.
[2] ರಾಜರಾಜರಲಿ, ಜ.
[3] ರಾಳಲಿಭಪುರಿಯು, ಚ.

ಇನಿತು ಪಾರ್ಥನೊಳಿಲ್ಲ ಯಮಳರ
ಜೆನುಗಿನಲಿ ಜಾಜಿನು ಯುಧಿಷ್ಠಿರ
ಜನಪನಾಗಲಿ ಮೇಣು ಮಾಣಲಿ ಖಾತಿ [1] ಯಿಲ್ಲೆಂದ ॥ ೫

ಹುದು ನಡೆಯದಿವರೊಡನೆ ನಮ್ಮೊಳು
ಕದನವೇ ಕೈಗಟ್ಟುವುದು ಕಾ
ದಿದರೆ ಹೆಬ್ಬಲವಹುದು [2] ದುರ್ಬಲ ದೈವಗತಿ ಬೇಜಿ ।
ನದಿಗಳರಳಿಯು ಹಾಸು ನವವಿಷ
ವುದರದೀಪನಚೂರ್ಣವಾದಂ
ದವಲಿ ದಾಯಾದ್ಯರ [3] ಲಿ ಸದರವ ಕಾಣೆ ನಾನೆಂದ ॥ ೬

ಎನೆ ಕಳಿಂಗಾದಿಗಳು ತಂತ
ಮ್ಮನುಮತವ ಹೇಳಿದರು ಕೌರವ
ಜನಪನಿರವಿಗೆ ಕೇಡ ನಿಶ್ಚಯಿಸಿದರು ಮನದೊಳಗೆ ।
ಜನಪನಲ್ಲಿಗೆ ನಡುವಿರುಳು ಬಂ
ದನುನಯದಿ ಮಾತಾಡುತೆಂದರು
ಜನಪ ಕೇಳ್ಭೈ ಭೀಮನರ್ಜುನರುಗಳ ಸಾಹಸವ ॥ ೭

ದುರ್ಯೋಧನನಿಗೆ ಕರ್ಣನ ಸಮಾಧಾನ.

ದುಗುಡವೇತಕೆ ಜೀಯ ಡೊಂಬಿಯ
ಜಗಳವೆನು ತೆಗೆದರಿನ್ನಪರ ಸುಂ
ಟಗೆಯನಾಯುವೆನವರ ತನುವನು ಯುದ್ಧರಂಗದಲಿ ।
ದಿಗುಬಲಿಯ ಕೊಡಿಸುವೆನು ಸಾಕಿಂ
ನೊಗುವಿಗೆಯ ಚಿಂತಾಂಗನೆಯನೋ
ಲಗಿಸದಿರು ಕುರುರಾಯ ಚಿತ್ತೈಸೆಂದನಾಕರ್ಣ ॥ ೮

ಪೊಡೆದು ಹೊಡೆಚಂಡಾಡಿ ರಿಪುಗಳ
ಗಡಣವನು ಯಮರಾಜಧಾನಿಗೆ

1 ಭೀತಿ, ಖ. ಚ.　2 ಪದುವೆ, ಚ.　3 ಗದಲಿ ಸಾಪತ್ನರಲಿ, ಚ.

ನಡಿಸುವೆನು ನೀ ನೋಡುತಿರು ಸಾಕೆಂದು ನಿಮಿಷದಲಿ ।
ಕೊಡು ನನಗೆ ನೇಮವನು ಭೀತಿಯ [1]
ಬಿಡು ಮನಸಿನಲಿ ಕಂದುಕುಂದನು
ಹಿಡಿಯದಿರು ಕುರುರಾಯ ಚಿತ್ತೈಸೆಂದನಾಕರ್ಣ ॥ ೯

ವಿದುರಭೀಷ್ಮಾದಿಗಳು ನಿನ್ನಯ
ಸದನದೊಳಗುಂಡುಟ್ಟು ಪರರ
ಭ್ಯುದಯವನೆ ಹರಸುವರು ದೂಱುವರೆಮ್ಮನವರುಗಳ ।
ಹದನ ನೀನೇ ಬಲ್ಲೆ ಸಾಕಿ
ನ್ನದಱ ಮಾತೇಕರಸ ನಮ್ಮಯ
ಕದನವನು ಚಿತ್ತೈಸು ಸಾಕಿನ್ನೆಂದನಾಕರ್ಣ ॥ ೧೦

ಹಬ್ಬುಗೆಯ ಹದಿನಾಲ್ಕು ಲೋಕದ
ಮಬ್ಬುಗಳ ನೀಡಾಡಿ ಜಗದೊಳ [2]
ಗೊಬ್ಬನೇ ರವಿ ತೊಳಗಿ ಬೆಳಗುವ ವೋಲು ಪಾಂಡವರ ।
ಕೊಬ್ಬುಗಳ ನಿಲಿಸುವೆನು ಧರೆಯೊಳ
ಗೊಬ್ಬನೇ ದುರ್ಯೋಧನನು ಮ
ತ್ತೊಬ್ಬರಿಲ್ಲೆಂದೆನಿಸಿ ತೋಱುವೆನೆಂದನಾಕರ್ಣ ॥ ೧೧

ಕರ್ಣನಾಡಿದುದನೊಪ್ಪಿ ಶಕುನಿಯು ಸ್ವಾಭಿಪ್ರಾಯವನ್ನು ಹೇಳುವಿಕೆ.

ಸಹಜವೀನುಡಿ ಕರ್ಣನಾಡಿದು
ದಹುದು ಪಾಂಡವರೆಂಬವರು ಕಡು
ಸಹಸಿಗರು ಗೆಲಲರಿದು ಕುಹಕೋಪಾಯಮಾರ್ಗದಲಿ ।
ಅಹಿತರನು ಗೆಲಲಹುದು ಪರಿಕರ
ಸಹಿತವರುಗಳ ನಿಮ್ಮ ಚಿತ್ತಕೆ
ಬಹೊಡೆ ನಮ್ಮಭಿಮತವ ಚಿತ್ತೈಸೆಂದನಾಶಕುನಿ ॥ ೧೨

---

[1] ಖತಿಯನು, ಖ.  [2] ನಭದೊಳ, ಚ.

ಐನುಮುಖ ವೀರೈದುಭುಜ ಹದಿ
ನೈದು ಕಣ್ಣಿನ ವಿಗಡರುದ್ರನು
ಮೇದಿನಿಯ ಮೇಲೊಂದು ಶಿರಭುಜಯೆರಡನಳವಡಿಸಿ ।
ಆದಿಪುರುಷನು ಭೀಮವೇಷದಿ
ನೈದೆ ಜನಿಸಿದನಾತನಿದಿರೊಳು
ಕೈದುಕಾರನದಾವನೈ ಹೇಳೆಂದನಾಶಕುನಿ ॥　　　೧೩

ಅರಸ ಕೇಳ್ಬಿಲುವಿದ್ಯೆಯಲಿ ಮೂ
ವರು ಕಣಾ ಸಾಮರ್ಥ್ಯ ಪುರುಷರು
ಧರೆಯೊಳೊಬ್ಬರಿಗೊಂದು ಗುಣ ಪಾರ್ಥಂಗೆ ಮೂಱುಗುಣ ।
ಭರಿತವಾಗಿಹುದಧಿಕವಾತನ
ಸರಿಸದಲಿ ಮೂಱಂತು ಜೀವಿಸಿ
ಮರಳಬಲ್ಲವನಾವನೈ ಹೇಳೆಂದನಾಶಕುನಿ ॥　　　೧೪

ರಾಮಚಂದ್ರನ ಚರಣಯುಗನಿ
ಸ್ಸೀಮಭೀಷ್ಮಾಚಾರಿಯನ ಶಿರ
ವಾಮಹಾರಥದ್ರೋಣನೆದೆ ನಡುಗುವುದು ಕದನದಲಿ ।
ಸಾಮನಸ್ಯನು ನಿಷ್ಪ್ರಕಂಪನ
ನಾಮನರ್ಜುನದೇವನಿದಿರಲಿ
ಭೂಮಿಯೊಳು ಬಿಲುಗಾಱ [1] ದಾವವನೆಂದನಾಶಕುನಿ ॥　　　೧೫

ಶತ್ರುಗಳ ಸಂಹರಿಸಿ ರಾಜ್ಯವ
ನೊತ್ತೆಯಾಳುವೆನೆಂಬ ಸಾಹಸ
ಸತ್ವಗುಣ ನಿಮಗಿಲ್ಲ ಪಾಂಡವರತುಳಭುಜಬಲರು ।
ಕೃತ್ರಿಮದ ಮುಖದಿಂದ ರಿಪುಗಳ
ಕಿತ್ತು ಹಾಯ್ಕೀ ನೆಲನನೇಕ
ಚ್ಛತ್ರದಲಿ ಸಲಹುವುದು ಮತವೆಂದೆಂದನಾಶಕುನಿ ॥　　　೧೬

---

1 ಬಿಲ್ಲಾಳ್, ಖ. ಚ.

ಸೋದರರುಗಳು ನೀವು ನಿಮ್ಮೊಳು
ಭೇದಮಂತ್ರವ ಮಾಡುವುದು ಮರಿ
ಯಾದೆಯೇ ನಾವ್ ನಿಮ್ಮಡಿಯ ಅರಮನೆಯ ಸೇವಕರು |
ವಾದಿಸುವರಿತ್ತಂಡ ಸರಿ ಸಮ
ಗಾದರೆಯು ಕಂಡುದ ನುಡಿಯಬೇ
ಕಾದರಿಸು ಮೇಣ್ಣಾಣು ನಿಜ ಯಮೆಂದನಾಶಕುನಿ || ೧೭

ಪಕ್ಷವೆರಡೀ ಲೋಕದಲಿ ಪಿತೃ
ಪಕ್ಷ ಮೇಣಾಮಾತೃಪಕ್ಷ ವಿ
ಪಕ್ಷ ತಂದೆಯ ದೆಸೆ ಸಪಕ್ಷವು ತಾಯಿ ದೆಸೆಯವರು |
ತಕ್ಷಕನ ತೆಱನಂತೆ ನಿಮ್ಮನು
ಭಕ್ಷಿಸುವರಾಮಂದದಲಿ ನೀ
ಶಿಕ್ಷಿಸುವುದೈ ಪಾಂಡುಪುತ್ರರನೆಂದನಾಶಕುನಿ || ೧೮

ಮೊಳೆಯಲೇ ಮುಱುಟಿಸಲು ಬೇಮದು
ಬೆಳೆದ [1] ಬೞಿಕದು ನಿನ್ನ ಹವಣೇ
ಯಿಳೆಯೊಳರ್ಧವನಿತ್ತು ಹಗೆಗಳ ಹೆಚ್ಚಿಸಿದ ಬೞಿಕ |
ಗೆಲುವನಾವನು ದೇವದಾನವ
ರೊಳಗೆ ಭೀಮಾರ್ಜುನರ ಕೈಮನ
ದಱವ [2] ನಱಿಯಾ ಕಂಡು ಕಾಣದೆ ಮರುಳಹರೆ ಯೆಂದ [3] ||೧೯

ಧಾರುಣಿಯೊಳು ಪಿಪೀಲಿಕೆಯು ವಿ
ಸ್ತಾರದಲಿ ಮಾಡಿದ ಮನೆಯ ಕಾ
ಳೋರಗನು ಹೊಗುವಂತೆ ರಿಪುಕುಂತೀಕುಮಾರಕರು |
ವೈರದಲಿ ಸಪ್ತಾಂಗವನು ಕೈ
ಸೂಱೆಗೊಂಬರು ತಪ್ಪದಿದಕೆ ಪ್ರ
ಚಾರವನು ಮಾಡುವುದು ಕಾಲದೊಳೆಂದನಾಶಕುನಿ || ೨೦

---

1 ಬಲಿದ, ಖ ಜ. 2 ಕುಂತೀಸ ತರ ಕೈಮ್ಯಾಯಳವ, ಖ.
3 ಭಾರ ವ್ಯೆಮೇಲೆಂದನಾಶಕುನಿ, ಜ.

ಹಿಂದೆ ನೀನವರುಗಳ ನಾನಾ
ಚಂದದಲಿ ನೋಯಿಸಿದೆ ಮನದಲಿ
ಕಂದುಹಿಂಗದು ಕಷ್ಟವೃತ್ತಿಯನಾಚರಿಸುತಿಹರು |
ಇಂದಿನಲಿ ನೀ ಪಾಂಡುಪುತ್ರರ
ನಂದಗೆಡಿಸದೆ ಬಿಟ್ಟೆಯಾದೊಡೆ
ಮುಂದೆ ಕೆಟ್ಟಿತು ರಾಜಕಾರಿಯ ವೆಂದನಾಶಕುನಿ || ೭೧

ಇಱುಬಿನಲಿ ಸಿಕ್ಕಿರ್ದ ಹುಲಿಯನು
ಮುಱಿಯಲೊಲ್ಲದೆ [1] ತೆಳಪಟಿಕೆ ಬಿ
ಟ್ಟಱಿಯ ಬಹುದೇ ಕೊಂದು ಕೂಗದೆ ಬಿಡುವುದೇ ಬೞಿಕ |
ಕಱುಬರಹ ಪಾಂಡವರಿಗೀಗಲೆ
ಹರುವ ನೆನೆ ಹೊಱಬಿದ್ದರಾದರೆ
ತಱಿದು ಬಿಸುಡದೆ ಬಿಡುವರೇ ಹೇೞೆಂದನಾಶಕುನಿ || ೭೨

ಹರಿಹಯನು ವೃತ್ರಾಸುರನ ಸಂ
ಹರಿಸಲಱಿಯದೆ ಗರುವದಿಂದಿರು
ತಿರಲವನು ದಿನದಿನದೊಳಂಗುಲಮಾತ್ರವನು ಬಳೆದು |
ಧರೆಯ ತುಂಬಲು ತನ್ನ ಸತ್ವದ
ನೆಱವಣಿಗೆಗೈದಿಸದೆ ನಾನಾ
ತೆಱದೊಳಾಯಸಗೊಳ್ಳನೇ ಹೇೞೆಂದನಾಶಕುನಿ ೭೩

ಅಡವಿಯಲಿ ಜನಿಸಿದರು ಬಳವಿಗೆ
ಯಡವಿಯೊಳಗಿನ್ನವರ ಬಾೞಿಕೆ
ಯಡವಿಯೇ ನೆಲೆಮನೆಯದಲ್ಲದೆ ಪಾಂಡುತನಯರಿಗೆ |
ಪೊಡವಿಯೊಡೆತನ ಸಲ್ಲದವರನು
ಸುಡುವುದಲ್ಲದೆ ಬೇಱೆ ರಾಜ್ಯವ
ಕೊಡುವುದಾವೆಂದದಲಿ ಮತವಲ್ಲೆಂದನಾಶಕುನಿ || ೭೪

1 ಲೀಯದೆ, ಖ. ಮುಱಿದು ಕಳೆಯದೆ, ಚ.

ತಿಮಿರವಡಗಿದ ಲೋಕ ಶಿಕ್ಷಾ
ಕ್ರಮಣವಡಗಿದ ದಂತಿ ಕರ್ಮ
ಭ್ರಮೆಗಳಡಗಿದ ಯೋಗಿ ರುಜೆಯುಡಗಿದ ನರೋತ್ತಮರು ।
ಹಿಮವಡಗಿದ ಸರೋಜದಂತಿಹ
ದಮಳಮತಿ ಕೇಳ್ ಹಗೆಗಳಡಗಿದೊ
ಡಮರಪದವೆನಿಸುವುದಲ್ಲೈ ಕೇಳೆಂದನಾಶಕುನಿ ॥ ೧೫

ಬಿಡದೆ ಸುಖದುಃಖದೊಳಗೊಂದನು
ಹಿಡಿದು ಸದ್ವ್ಯವಹಾರಮುಖದಲಿ
ನಡೆಯಲೊಂದಱ ನಷ್ಟವೊಂದಱ ತುಷ್ಟಿ ತನಗಹುದು ।
ಹಿಡಿದುದಿಹಪರವೆರಡಱೊಳಗಳ
ವಡಿಕೆ ತನಗಹುದಾವದೊಂದನು
ಬಿಡುವುದಲ್ಲದೆ ಬೇಱೆ ಮತವಲ್ಲೆಂದನಾಶಕುನಿ ॥ ೧೬

ಭಾವ ಮೈದುನನಣ್ಣ ತಮ್ಮನು
ಮಾವನಳಿಯನು ಪುತ್ರಮಿತ್ರರು
ಸೇವಕರು ಸಜ್ಜನರು ಸತ್ಪುರುಷರುಗಳಿವರೆಂದು ।
ಭಾವಿಸದಿರಾರುವನು ನಿನ್ನಯ
ಜೀವವುಳ್ಳನ್ನಬರ ನಿನ್ನಯ
ದೈವವೇ ಗತಿಯೆಂದು ನಂಬಿಹುದೆಂದನಾಶಕುನಿ ॥ ೧೭

ಶತ್ರುಶೇಷವದಲ್ಪವೆಂದುಱು
ಹುತ್ತ ಬರಲಾಗದು ಕಣಾ ಭೂ
ಪೋತ್ತಮರುಗಳು ವೈರಿರಾಯರ ವಂಶಬೀಜವನು ।
ಬಿತ್ತುವರೆ ನೇತ್ರಾವಳಿಯು ಮೀ [1]
ಟೆತ್ತಿ ಕಾರಾಗಾರದೊಳಗೆ ಕ
ಳತ್ರಸಹಿತನಶನದಲಧಿಕವ್ರತರ ಮಾಡೆಂದ ॥ ೧೮

1 ಕಿತ್ತುಬಿಸುಡುವುದಕ್ಷಿಗಳ ಮೀ, ಖ.

ವಿಷವೆನಣುವೆಂದಳುಕದುಪಭೋ
ಗಿಸಲು ಕೊಲ್ಲದೆ ಬಿಡುವುದೇ ಕರ
ಗಸದ ನಡು ಬಡವಾದರೆಯು ಕೊಚದಿಕ್ಕದೇ ತರುವ ।
ಶಿಶುವಿವನು ಸಾಮಾನ್ಯಪುರುಷನು
ಹುಸಿ ಕಣಾ ಯೆನುತೇಕ್ಷಿಸಲು ರ
ಕ್ಕಸನಹನು ಮುಂದಕ್ಕೆ ತನಗವನೆಂದನಾಶಕುನಿ ॥　　೧೯

ಕಾಳವೆನು ಗೂಗೆಗಳು ನಿರ್ಜರ
ರೂಟಿಗವನು ದೈತ್ಯನಿಕರ ತ
ಮಾಳಿ ರವಿರಶ್ಮಿಗಳನಾಬಲುನಿದ್ರೆಯನು ಚಕೋರ ।
ಕಾಳಭುಜಗನು ಗರುಡನಟವೆನು
ತಾಳದಂದದಿ ಪಾಂಡವರು ನಿ
ನ್ನೇಟಗೆಯ ಸೈರಿಸರು ಚಿತ್ತೈಸೆಂದನಾಶಕುನಿ ॥　　೨೦

ಹಿಡಿವ ಫಣಿಯನು ಸುಡುವ ಸಿಡಿಲನು
ಹೊಡೆವ ಮಾರಿಯನಲೆವ ರುಜೆಯನು
ಮಡಿವ ದಿನವನು ಹಾನಿವೃದ್ಧಿಯ ಹೆಚ್ಚು ಕುಂದುಗಳ ।
ಜಡಿವ ಹಗೆಯನು ಕಾಲಕರ್ಮದ
ಗಡಣೆಯನು ಸುಖದುಃಖದುದಯದ
ಕಡೆಮೊದಲ ಕಾಣಿಸುವನಾವವನೆಂದನಾಶಕುನಿ ॥　　೨೧

ದೇವದಾನವರಂತೆ ಹದ್ದಿನ
ಹಾವಿನವೊಲತಿವೈರ ಬಂಧದ
ತಾವು ಶವಣೆಯ ನೀರು ಭೇದಿಸುವಂತೆ ಭೇದಿಸುತ ।
ಕಾವವರ ಕಾವುತ್ತ ಕಂಟಕ
ಜೀವಿಗಳನಪಹರಿಸುವಂತ
ರ್ಭಾವಶುದ್ಧಿಯಲಿಳೆಯನಾಳುವುದೆಂದನಾಶಕುನಿ ॥　　೨೨

ಇನಿತು ಚಿಂತಿಸಲೇಕೆ ಕೌರವ
ಜನಪ ನಿಮ್ಮಡಿಗಳಿಗೆ ನಾನೊಂ
ದನುವ ಬಿನ್ನಹ ಮಾಡುವೆನು ಪಾಂಡವರ ನೆಳಲಿರಲು |
ನಿನಗೆ ರಾಜ್ಯವನಾಳ್ದ ಫಲಸಂ
ಜನಿಸಲರಿಯದು ಕಾಲದಲಿ ನೀ
ನೆನೆವುದಿದಕೊಂದನುವನೆಂದು [1] ಕಳಿಂಗ ಕೈಮುಗಿದ || ೨೩

ಮೃತ್ಯುವಿನ ತಾಳಿಗೆಯೊಳಗ್ಗದ
ಶತ್ರುಗಳ ಸಾಮೀಪ್ಯದಲಿ ದು
ರ್ವೃತ್ತರೋಲಗದೊಳಗೆ ಸಿಂಹದ ಗುಹೆಯೊಳಹಿಪತಿಯು |
ಹುತ್ತಿನೊಳಗಿಹವೋಲು ಸಲೆ ಬಾ
ಳುತ್ತಲಂತಃಪುರದೊಳರಸಿಹ [2]
ದತ್ಯ [3] ಧಿಕವೆಚ್ಚರಿಕೆ ಯಿರಬೇಕೆಂದನಾಶಕುನಿ || ೨೪

ಹಗೆಯ ಹೆಂಗಳ [4] ನರಮನೆಗಳೊಳು
ಹೊಗಿಸಲಾಗದು ತನಗವರು ಹೇ
ಳಿಗೆಯು ಹಾವಿನ ವೋಲು ಸುಖತರವಲ್ಲ ರಿಪುನೃಪರ |
ಹಗೆಯ ಮಕ್ಕಳ ದೆಸೆಯ ನೀನೋ
ಲಗಿಸುವರೆ ಬಾಹತ್ತರ ನಿಯೋ
ಗಿಗಳ ನಂಬುವುದುಚಿತವೇ ಹೇಳೆಂದನಾಶಕುನಿ || ೨೫

ದೈವ ಹೊಡೆವಂದದಲಿ ಬೆಱತು ಸ
ಭಾವಳಯದಲಿ ಗರ್ವವಿಭ್ರಮ
ಭಾವಭಾಷಿತರಾಗಿ ವೈಹಾಯಸವನೀಕ್ಷಿಸುತ |
ಹಾಪಿನಂದದಲಿರದೆ ಹಾಸ್ಯರ

---

1 ನೆನೆಯುಪಾಯವನೊಂದನೆಂದು, ಖ.
2 ರಸಿಹ, ಖ.
3 ಲತ್ಯ, ಖ.
4 ಹೆಂಡಿರ, ಖ.

ಸಾವೆಲಂಬನ ವೊಪ್ಪುದಲ್ಲದ
ದಾವಪರಿಯಿಂದವರ ಜನ್ಮ ನಿರರ್ಥಕರವೆಂದ ॥ ೩೬

ಹೀನಮುಖ ಬಹುಮುಖ ಪರಾಙ್ಮುಖ
ದೀನಮುಖ ವಾಚಾಲಮುಖ ವ
ಜ್ಞಾನಮುಖವೆಂತರ್ಮುಖರು ಕಲಹದಲಿ ಕಾರ್ಯದಲಿ ।
ಆನರೇಂದ್ರನ ವರ್ತನಕೆ ದು
ಸ್ಥಾನವಾಗದೆ ಬಿಡದು ಸಂಶಯ
ವೇನಿದಕೆ ಕುರುರಾಯ ಚಿತ್ತೈಸೆಂದನಾಶಕುನಿ ॥ ೩೭

ಶಯನದಲಿ ವಹ್ನಿಯಲಿ ವೈಹಾ
ಳಿಯಲಿ ಬೇಂಟೆಯಲೂಟದಲಿ ಕೇ
ಳಿಯಲಿ ಸುರತಕ್ರೀಡೆ [1] ಯಲಿ ನಾನಾವಿನೋದದಲಿ [2] ।
ಜಯದ ಜೋಗೆಯಲೂರುಗಳ [3] ಮರ
ವೆಯಲಿ ಕುಹಕಸ್ತ್ರೀಯರುಗಳಲಿ
ಲಯವನೈದಿಸಬಹುದು ಚಿತ್ತೈಸೆಂದನಾಶಕುನಿ ॥ ೩೮

ರುಜೆಯನಲುಗುವ ರದನವ ದ್ರುಗು
ರಜವನನುಚಿತಜಾತಧೂಮ
ಧ್ವಜವನಾರುಣವಿದ್ಯೆಯನು ಗೃಹವಾಸಕುಂಡಲಿಯ ।
ವೃಜಿನವನು ಕಂಪಿತವ ವೈರಿ
ವ್ರಜವನುಳುಹುವನೆಗ್ಗನೆಂಬಿದು
ಸುಜನರಭಿಮತ ನಿನ್ನ ಮತವೇನೆಂದನಾಶಕುನಿ ॥ ೩೯

ಮಣಿದು ಕೂಪದ ಜೀವನವ ಕಡೆ
ಗಣಿಸದೇ ಘಟಿಯಂತ್ರವ್ಯೈಗರಿವು
ಹಣಿಗಿದರೆ ಹರಿಣಂಗೆ ಗೆಲವೇ ಕಾರ್ಯಗತಿಯಿದು ।

---

[1] ಸಲಿಲಕ್ರೀಡೆ, ಖ.　　[2] ವಿವಿಧಾಯುಧಂಗಳಲಿ, ಖ.
[3] ಲೋಲಗದ, ಖ. ಚ.

ಮಣಿವುದಳುಕುವುದಾವಪರಿಯಿಂ
ದೆಣಿಸಿ ಮನದಲಿ ವೈರಿರಾಯರ
ಹಣಿದವಾಡುವುಪಾಯವಿದು ಕೇಳೆಂದನಾಶಕುನಿ ॥ ೪೦

ಅಹಿಯ ಬಾಧೆಯ ಬಲೆಗೆ ಸಿಲುಕಿದ
ಮಿಹಿರಬಿಂಬದ ಪೋಲು ಮಾಯಾ
ವಿಹರಣದ ವೀಧಿಯಲಿ ಸಿಕ್ಕದ ಜೀವರುಗಳಂತೆ ।
ಅಹಿತರುಪಟಲದೊಳು ಸಿಲುಕದೇ
ಕುಹಕರವದಿರ ಹರಿವೆ ನೆನೆ ಲೇ
ಸಹುದು ಕಾಲಕ್ಷೇಪವಿದಕೇನೆಂದನಾಶಕುನಿ ॥ ೪೧

ನಂಬುವರ ನೆಱೆ ನಂಬು ನಂಬದ
ಡಂಬಕರ ನಂಬದಿರು ಸಂಗರ
ವೆಂಬ ಮಾತಿಗೆ ಪಂಬಲಿಸಿ ಬೆಂಬೀಳ್ವ ಬಾಹಿರರ ।
ನಂಬಿರದೆ ಅರಿರಾಯಹನನವಿ
ಳಂಬನವ ಮಾಡದಿರು ರೋಷಾ
ಡಂಬರವ ರಚಿಸದಿರು ಬಹಿರಂಗದಲಿ ನೀನೆಂದ ॥ ೪೨

ಖೂಳನಹ ದಾತಾರನನು ದು
ರ್ಮೇಳನಹ ಮಿತ್ರನನು ತನಗನು
ಕೂಲೆಯಲ್ಲದ ಸತಿಯನಂತರ್ದಾಹಿಯಹ ನರನ ।
ವ್ಯಾಳಯುತವಹ ನಿಳಯವಿನಿತುವ
ಕಾಲದಲಿ ವರ್ಜಿಸುವುದಲ್ಲದೊ
ಡೂಟಿಗವು ಹಿರಿದಹುದು ಚಿತ್ತೈಸೆಂದನಾಶಕುನಿ ॥ ೪೩

ಎಲ್ಲರಿಂ ಬಹುಧನವ ಕೊಳು ನಿ
ನ್ನಲ್ಲಿ ಕಾಣಿಯ ಬಱಿದೆ ಸೋಲದಿ
ರಿಲ್ಲವೆನ್ನದೆ ನಡೆದು ಕಾಲಕ್ಷೇಪವನು ಮಾಡು ।

ಬಳ್ಳಿದನು ನಮಗೆಂಬ ನಯನುಡಿ
ಯೆಲ್ಲರಲಿ ಬೆಚ್ಚಂತೆ ರಿಪುಗಳ
ಗೆಲ್ಲಗೆಡಹುವ ಮಂತ್ರವಿದು ಕೇಳೆಂದನಾಶಕುನಿ ॥ ೪೪

ಧನವನಿತ್ತಾದೊಡೆಯು ಸಹಭೋ
ಜನವನುಂಡಾದೊಡೆಯು ಮೇಣೀ ನಿಜ
ತನುಜೆಯರನಿತ್ತಾದೊಡೆಯು ಬಿಟ್ಟಿ ಸಂದು ಬೇಸರದೆ ।
ತನುವ ಬೆಳಸಿದಾದೊಡೆಯು ನೂ
ತನಗುಣವ ನುಡಿದಾದೊಡೆಯು ರಿಪು
ಜನಪತಿಯು ವಶ ಮಾಳ್ಪುದುಚಿತವಿದೆಂದನಾಶಕುನಿ ॥ ೪೫

ಕೋಶಪಾನಾದಿಗಳ ಮಾಡಿ ಮ
ಹೀಸುರರ ಮೇಲಾಯುಧಂಗಳ
ಸೂಸಿದೈವವ ಮುಟ್ಟಿ ದಿವ್ಯಾಜ್ಞೆಗಳೊಡಬಡಿಸಿ ।
ಹೇಸದರಿಭೂಪಾಲರನು ನಿ
ಶ್ಶೇಷವೆನಿಸುವದಿಲ್ಲದಿರ್ದೊಡೆ
ಪೈಸರಿಸುವುದು ರಾಜಕಾರ್ಯವಿದೆಂದನಾಶಕುನಿ ॥ ೪೬

ನರಕವಿಲ್ಲದ ನರರು ನಾರಿಯ
ರರುಬೆಯಿಲ್ಲದ ಯತಿಗಳಸುರರ
ವಿಸರವಿಲ್ಲದ ಸುರರು ಮಾಯಾಪಾಶವನು ಹರಿದ ।
ಪರಮತತ್ತ್ವಜ್ಞಾನಿಯಂತಿಹ
ಧರಯೊಳಗೆ ಹಾಗರಸುಗಳು ಹಗೆ
ಹರಿದು ಹೋಗಲಸಾಧ್ಯವೆಹುದೇನುಂಟು ಹೇಳೆಂದ ॥ ೪೭

ಮನಗೆ ಮೂಡಿದ ಹೊಲನು ದುಷ್ಟ
ಪ್ರಸರದೇಳಿಗೆ ಪಾಪಿಯೋಲಗ
ಹುಸಿಯು ಬಾಳುವೆ ಹುದುವಿನಾರಂಭದ ಫಲೋದಯವು ।

ನಸಿದು ಹೋಗದೆ ಲೋಕದೊಳಗವು
ಹೆಸರುವಡೆವವೆ ಹಗೆಯು ಹೆಚ್ಚುಗೆ
ಹಸನ ಕೊಡುವುದೆ ರಾಯ ಚಿತ್ತೈಸೆಂದನಾಶಕುನಿ ॥ ೪೮

ಜಾತಿಬಾವನ್ನದಲಿ ಸರ್ಪದ
ಭೀತಿ ಸತ್ಪುರುಷರಿಗೆ ದುರ್ಜನ
ಭೀತಿ ದೇವಾದ್ಯರಿಗೆ ದನುಜಾರಿಗಳ ಬಲುಭೀತಿ ।
ಜಾತಮಾತ್ರಕೆ ಮರಣಜನನದ
ಭೀತಿ ಬೆಂಬಿಡದಂತೆ ಗೋತ್ರಜ
ಭೀತಿ ಭೂಪಾಲರಿಗೆ ಹಿರಿದಹುದೆಂದನಾಶಕುನಿ ॥ ೪೯

ಕರಣಿಕರು ಕರಣಿಕರೊಡನೆ ಸಹ
ಚರರು ಸಹಚರರೊಡನೆ ಸಾಮಂ
ತರಲಿ ಸಾಮಂತರುಗಳಾ ಮಂತ್ರಿಯಲಿ ಮಂತ್ರಿಗಳು ।
ತರುಣಿಯರು ತರುಣಿಯರೊಡನೆ
ಪರಿಕರರು ಪರಿಕರರೊಡನೆ ಯಿರಲೊರ
ಸೊರಸು ಮಿಗೆ ಮಸೆವುದು ಕಣಾ ಭೂಭುಜನೆ ಕೇಳೆಂದ ॥ ೫೦

ವ್ಯಾಕುಲಿತ ವಿಪ್ರರ ವಿಪತಿಯು ದಿ
ವಾಕರನ ಲೋಕಾಯತರ ರ
ತ್ನಾಕರನ ಲಾವಕರ ಹಿಸುಣರ ದಾಯಭಾಗಿಗಳ ।
ಶೋಕಿಗಳ ಮಾಯಾವಿಗಳ ದ
ರ್ವೀಕರನ ವಿನಿಯೋಗಿಗಳ ಸ
ರ್ಪೈಕಮತ್ಸರದೊಳಗೆ ಬದುಕುವನಾವ ಕೇಳೆಂದ ॥ ೫೧

ಮಂಜು ಮಹಿಯನು ಮುಸುಕುವಂತೆ ಧ
ನಂಜಯನು ಕಾನನವ ಸುಡುವಂ
ತಂಜಿಕೆಗಳುಮ್ಮಾಹವನು ಹೋ ಯೊರಸುವಂದದಲಿ ।

ರಂಜಕರು ಪಾಂಡವರು ನಿನ್ನನು
ಭಂಜಿಸುವರಾವಂಗದಲಿ ನವ
ಕುಂಜರನ ಕಾಲಾಟ ಸಿಂಹಕೆ ಸೇಱುವುದೆ ಯೆಂದ ॥ ೫೨

ದನಿಗೆ ನಡೆದೊಳಪೊಕ್ಕು ಮರಗೂ
ಡಿನಲಿ ಸಿಲುಕಿದ ಹುಲಿಯು ವೋಲಾ
ನನದಿ ಬೀಸಿದ ಬಲೆಯೊಳಗೆ ಗಾನಕ್ಕೆ ಮನಸೋಲ್ದು ।
ಹನನವಱಿಯದ ಮೃಗದ ವೋಲಿರು
ಬಿನಲಿ ಕೆಡಹಿದ ಕರಿಯ ವೋಲ್ ರಿಪು
ಜನಪರಭ್ಯುದಯದ ವಿನಾಶವನೆಸಗಬೇಕೆಂದ ॥ ೫೩

ಶಕುನಿಯು ಉಪದೇಶಿಸಿ ಕಾರ್ಯವನ್ನು ಮಾಡೆಂದು
ಹೇಳುವಿಕೆ.

ಎಂದು ದುರ್ಯೋಧನಗೆ ನಾನಾ
ಚಂದದಲಿ ಬೋಧಿಸಿ ಸುನೀತಿಯ
ನಂದಗೆಡಿಸಿ ತದೀಯವಂಶಚ್ಛೇದದೇಱಿಗೆಯ [1] ।
ಒಂದು ಗೂಡಿ ಸುಯೋಧನಗೆ ತಾ
ನೊಂದನೆಣಿಸಿ ಕಳಿಂಗ ಲೋಕವ
ಕೊಂದನ್ನೆ ಜನಮೇಜಯಕ್ಷಿತಿಪಾಲ ಕೇಳೆಂದ ॥ ೫೪

ಇನ್ನು ಸಂಶಯಮಂತ್ರವೇನೆನ
ಸನ್ನೆಯಲಿ ಕುರುಭೂಪನೆಂದನು
ಯನ್ನ ನಿವಿಡ್ಡಾ ಮಂತ್ರಕೊಳ್ಳದು ಪಿತನು ನೇಮಿಸದೆ ।
ಬಿನ್ನಣವನಿದ ನುಡಿದು ಫಲವೇ
ನಿನ್ನೆನುತ ಕುಲಮೂಲಭೇದನು
ತನ್ನೊಳಗೆ ಧೃತಿಗುಂದುತಿರ್ದನು ಭೂಪ ಕೇಳೆಂದ ॥ ೫೫

---

1 ಮಾರ್ಗವನು, ಖ. ಚ.

ಈ ವರ್ತಮಾನವನ್ನು ಧೃತರಾಷ್ಟ್ರನಿಗೆ ಹೇಳಬೇಕೆಂದು ಕರ್ಣಾದಿಗಳು ಸೂಚಿಸುವಿಕೆ

ಬಳಿಕ ಕರ್ಣಾದಿಗಳು ತಮ್ಮಯ
ಯೊಳಗೆ ಯಾಳೋಚಿಸಿದರಾಗಲು
ವುಳಿಹಿ ತೋಱುವೆಕುರುನೃಪನನಾಪಿತನ ವಂಚಿಸಿಯು ।
ನೆಲೆಯನಾತಂಗಱುಹ ಬೇಕೆಂ
ದೊಳಗೆ ಯಾಳೋಚಿಸಲು ಕೌರವ
ಬಳಿಕ ನುಡಿದನು ನಿಮ್ಮ ಯುಕ್ತಿಗೆ ನಾನು ಹೊಱಗೆಂದ ॥ ೫೬

ಎನಲು ನೀನಿಮ್ಮಯ್ಯನಾಜ್ಞೆಯೊ
ಳನಿತುವನು ನೀ ಮಾಡಿದಿರ್ದೊಡೆ
ಜನಪ ಕೆಡುವುದು ಕಾರ್ಯವೆಂಮಯ ಮಾತ ಕೆಡಿಸಿದೊಡೆ ।
ವಿನಯದಿಂದವೆ ನಾವು ಮಾಡಿದ
ಯನುಮತವ ನಾವೊಪ್ಪೆನೆಮ್ಮಯ
ಜನಕನನು ನಾ ಬಲ್ಲಪರಿಯಲಿ ತಿಳುಹಿ ನೋಡುವೆನು ॥ ೫೭

ಎನಲು ಹರುಷದಿ ಶಕುನಿ ತನ್ನಯ [1]
ಯನುಮತವ ಹೇಳಿದನು [2] ಕೌರವ
ಜನಪನಿರವಿಗೆ ಕೇಡ ನಿಶ್ಚೈಸಿದನು ದೃಢವಾಗಿ ।
ಜನಕನಲ್ಲಿಗೆ ನಡುವಿರುಳು ಬಂ
ದನುನಯದೊಳೀಮಾತ ತೆಗೆದೆಂ
ದನು ವೃಕೋದರನೂಟಿಗವನರ್ಜುನನ ಸಾಹಸವ ॥ ೫೮

ಪಾಂಡವರ ಮೇಲೆ ದುರ್ಯೋಧನನ ದೂರು.

ಅರಿಗಳುದುಭವವಿನ್ನು ಗಂಟಲ
ನರೆವುದೆಮ್ಮನು ನೂಱುಮಕ್ಕಳ
ನರಸ ಬಱಿದೇ ಹಡೆದು ಕೆಡಿಸಿದೆ ತಾಯ ಯೌವನವ ।

1 ಎನಲು ಕರ್ಣನು ಶಕುನಿ ತಮ್ಮ, ಖ. 2 ಹೇಳಿದರು, ಖ.

ಇರಲು ಭೀಮಾರ್ಜುನರು ಗಜಪುರ
ದರಸ ನಿಮ್ಮನಿಬರನು ದೇಶಾಂ
ತರಕೆ ಸೇವಿಸು ಜೀಯ ನೂಕದು ಭೀಮನೊಡನೆಮಗೆ ॥ ೫೯

ಮಗನ ಮಾತಿಗೆ ಧೃತರಾಷ್ಟ್ರನ ಅಸಮ್ಮತಿ.

ಅಕಟ ಮಗನೇ ಧರ್ಮಸುತ ಬಾ
ಧಕನೆ ಭೀಮಾರ್ಜುನರು ಮತಿಕಂ
ಟಕದೊಳಱಗರು ಮೀಱ ನಡೆಯರು ಧರ್ಮನಂದನನ ।
ಸಕಲರಾಜ್ಯಕೆ ಪಾಂಡುಪೃಥಿಪಾ
ಲಕನು ನಮ್ಮಲಿ ತಪ್ಪಿದನೆ ಬಿಡು
ವಿಕಳಮತಿಗಳ ಮಾತನೆಂದನು ಮಗಗೆ ಧೃತರಾಷ್ಟ್ರ ॥ ೬೦

ಆಗ ದುರ್ಯೋಧನನು ಕೋಪದಿಂದ ಮಾತನಾಡುವಿಕೆ.

ಚೊಪ್ಪ ಬಿನ್ನಹವೆವರ ಜನಕನು
ತಪ್ಪಿ ನಡೆಯನು ನಿಮಗೆ ನೀವಿ
ನ್ನೊಪ್ಪಿಸುವುದಾಪಾಂಡುಸುತರಿಗೆ ರಾಜ್ಯವೈಭವವ ।
ಅಪ್ಪದಿಳೆ ಧರ್ಮಜಗೆ ತರುವಾ
ಯುಪ್ಪದಾವಿಧಿ [1] ಯಲ್ಲಿ ಸಂತತಿ
ಯುಪ್ಪದವರಿಗೆ ಸಲಲಿ ನೆಲನಿದು ಹೊಲ್ಲೆ ಯೇನೆಂದ ॥ ೬೧

ಜನಕ ಸುಖದಲಿ ನಿಮ್ಮ ತಮ್ಮನ
ತನುಜರಲಿ ನೀವ್ ರಾಜ್ಯಮಾಡುವು
ವನುಗುಣವಲೇ ಬೀಱುಕೊಡುವುದು ನಮ್ಮ ನೂರ್ವರನು ।
ಜನಪರುಂಟೋಲೈಸಿ ಕೊಂಬವ
ರೆನಗಿದೇ ಖಂಡೆಯದ ಸಿರಿ ಕರೆ
ಜನನಿಯನು ಬೀಳ್ಕೊಂಬೆವಿನ್ನೇನೆನುತ ನಿಂದಿರ್ದ ॥ ೬೨

---

1 ಯುತ್ತಪ್ಪದದು ವಿಧಿ, ಖ ಜ.

ಧೃತರಾಷ್ಟ್ರನು ಮಗನ ಮಾತನ್ನು ಲಾಲಿಸುವಿಕೆ.

ಎಲೆ ಮಗನೆ ಯೆನ್ನಾಣೆ ಬಾ ಕುರು
ಕುಲತಿಲಕ ನೀ ಹೋಗಲೆನ್ನೊಡ
ಲುಟಿವುದೇ ಮಱಿಯಾನೆ ಬಾರೈ ಕಂದ ಬಾರೆನುತ ।
ಸೆಱೆದು ಬಿಗಿದಪ್ಪಿದನು ಕಂಬನಿ
ದುಳುಕಿದನು ಹೇಱಿನ್ನು ಮೇಲಣ
ಬಱಿಕೆಯನು ರಿಪುರಾಜಕಾರ್ಯಕೆ ಬುದ್ಧಿ ಯೇನೆಂದ ॥ ೬೩

ಆಗ ಉಪಾಯವನ್ನು ದುರ್ಯೋಧನನು ಹೇಳುವಿಕೆ.

ಆವ ಪರಿಯಲಿ ವೈರಿಘಟಕುಲ
ಕಾವುಗೆಯನಿಡಿಸುವಿರಿ ನಿಮ್ಮೊಳ
ಗಾವು ಹೊಱಗೇ ಮಗನೆ ಸೊಗಸನೆ ನಿಮ್ಮ ವೈಭವಕೆ ।
ಸಾವರಾವಂದದಲಿ ಮಿಗೆ ಸಂ
ಭಾವಿಸುವುದಾತೆಱನ ನೀ ಹೇ
ಱಾವು ಕೇಳುವೆವೆಂದು ನುಡಿದನು ಮಗಗೆ ಧೃತರಾಷ್ಟ್ರ ॥ ೬೪

ನೀರ ವಿಷವಿಕ್ಕಿದೆವು ಕಿಚ್ಚಿನ
ಭಾರವಣೆ ಯೇನಹುದೊ ಪಥ್ಯದ
ಸಾರತರ ವೊದಗಿದರೆ ಹೋಗಲಿ ನಮ್ಮ ಹಗೆ ಹರಿದು ।
ಧಾರುಣಿಯ ಸಿರಿಯುವರಿಗತಿವಿ
ಸ್ತಾರ ನೆರೆಯಲಿ ಜೀಯ ಜೂಜಿನ
ಬಾರುಗುತ್ತಿದು ನಿಮ್ಮ ಚಿತ್ತಕೆ ಬಹೊಡೆ ಮಾಡೆಂದ [1] ॥ ೬೫

ಕರೆಸಿ ಪಾಂಡುಕುಮಾರಕರ ನೀ
ಧರೆಯ ಪಸುಗೆಯ ಮಾಡಿ ಕೊಡು ಕರಿ
ತುರಗಭಂಡಾರವನು ಸಹ ದಾಯಾದವಿಷಯದಲಿ [2] ।

[1] ಮಾಡುವೆವು, ಚ.  [2] ರಾದಿಗಳ ದಾಯಾದ್ಯಭಾಗೆಯಲಿ, ಕ.

ಇರವನವರಿಗೆ ವಾರಣಾವತ
ಪುರದೊಳಗೆ ಪರುಠವಿಸಿ ಕೊಡು ನಾ
ನುರುಹಿ ತೋಱುವೆ [1] ಬಳಿಕ ಲಾಕ್ಷಾಭವನದಹನದಲಿ [2] ‖ ೬೬

ಮಗನ ಆಲೋಚನೆಗೆ ತಂದೆಯ ಸಮ್ಮತಿ.

ಅಹುದು ಮಗನೇ ಮಂತ್ರವಿದು ಮತ
ವಹುದು ನಮಗೀಭೀಷ್ಮ ವಿದುರರು
ಕುಹಕಿಗಳು ಕೃತಭಿನ್ನವಾದರೆ ಭಾರವೇನು ಮೇಲೆ ।
ಗಹನಗತಿಯಲಿ ಗೂಢಚರಸ
ನ್ನಿಹಿತಕರ್ಮಕಳಾಪದಲಿ ರಿಪು
ದಹನಸಿದ್ಧಿಯ ನೆನೆವುದೆಂದನು ಮಗಗೆ ಧೃತರಾಷ್ಟ್ರ ‖ ೬೭

ಪುರೋಚನನನ್ನು ವಾರಣಾವತಕ್ಕೆ ಕಳುಹಿಸುವಿಕೆ.

ಜನಕನನು ಬೀಳ್ಕೊಂಡು ಕೌರವ
ಜನಪ ತನ್ನರಮನೆಯ ಸಚಿವರೊ
ಳನುಪಮಿತವಿಶ್ವಾಸಸೂಚಕನನು ಪುರೋಚನನ ।
ನೆನೆದ ಕೌರವರಾಜಕಾರ್ಯದ
ಘನವನಱುಹಿದನವರೊಡನೆ ಸಾ [3]
ಧನವ ಸೂಚಿಸಿ ಜಡಿತೆಯಲಿ [4] ಕಳುಹಿದನು ಗುಪ್ತದಲಿ ‖ ೬೮

ಆಪುರೋಚನನೆಂಬನಿಮ್ಮಡಿ
ಪಾಪಕರ್ಮನು ಕುರುಪತಿಗೆ ಬಳಿ
ಕಾಪುರಾಂತರದಿಂದ ಬಂದನು ಹಲವುಪಯಣದಲಿ [5] ।

---

1 ಸುಡುವೆನು, ಚ. 2 ರಚನೆಯಲಿ, ಚ.

3 ಸಮಗ್ರಧನಸಾ, ಚ. 4 ಜೋಡಿಸಿಕೆನಟ್ಟು, ಡ.

5 ವಾರಣಾವತಿಗೆ, ಛ.

ಪುರೋಚನನ ವಿಚಿತ್ರ ಭವನ ನಿರ್ಮಾಣ.

ಆಪುರದ ಜನವೆಱಿಯದಂತಿರೆ
ಕಾಪುರುಷನಳವಡಿಸಿದನು ನಸು
ದೀಪ ತಾಕಿದೊಡೇಕರೂಪಹ ರಾಜಮಂದಿರವ ॥ ೧೯

ನಿಗಮಸಂಸ್ಥಿತವಾಸ್ತುರಚನಾ
ದಿಗಳನಾಯುವ್ಯಯದ ತಾರಾ
ಳಿಗಳ ರಾಶಿ ಗ್ರಹದ ಬಲವಿಪರೀತಯೋಗದಲಿ ।
ಹಗಲು ತೀರಲು ತಳಿತ ಕೈದೀ
ವಿಗೆಯ ಹಂತಿಯ ಹೊಳಹಿನಲಿ ಕೀ
ಡಿಗರು ಕೃತ್ರಿಮರಚನೆಯಲಿ ರೂಹಿಸಿದರರಮನೆಯ ॥ ೨೦

ಮನೆಯ ಮಾಡುವ ಮೊದಲಲೇ ತಾ
ವಿನುತಪಂಚಕದಗ್ನಿಯಲಿ ಬಟಿ
ಕನುಕರಿಸಿದನು ಖಳಪುರೋಚನನೊಡೆಯನಾಜ್ಞೆಯಲಿ ।
ದಿನ ಸವೆಯಲಿನ್ನೊಱಕಾಯಿತು
ಜನಪ ಕೇಳ್ಕೈ ಪತಿತಯೋಗದ
ಲನಲನಾಹುತಿಯಾಗಿ ಮಾಡಿದನಾಪುರೋಚನನು । ೨೧

ಅರಗಿನಲಿ ಭಿತ್ತಿಗಳ ನವಸ
ಜ್ಜರಸ ಗುಡಮಿಶ್ರಿತದ ನೆಲೆಯು
ಪ್ಪರಿಗೆಗಳನವರಲಿ ಕವಾಟಸ್ತಂಭವೇದಿಗಳ ।
ವಿರಚಿತದ ವರಸೌಧಭದ್ರಾ
ಸ್ತರಣಸಂದ್ಯಾವರ್ತದಲಿ ಪರಿ
ಪರಿಯ ಬಿನ್ನಾಣದಲಿ ಮಿಗೆ ಮಾಡಿಸಿದನರಮನೆಯ ॥ ೨೨

ಹಿರಿಯಭವನದ ಸುತ್ತುವಳಯದ
ಮುಱುವಿನಲಿ ಮನೆಮನೆಗಳೊಳವಂ
ದಿರನಿಕಾಯದ ಬಾಗಿಲೊಂದೇ ದ್ವಾರವೆಸೆದಿಹುದು ।

ಇರುವು ತನ್ನದು ಬಾಗಿಲೆಲ್ಲವ
ಹೊಱಗೆ ಮುದ್ರಿಸಿ ಕಿಱು ಱುಱು ವ
ಪರುಠವಣೆಯಲಿ ಬಳಪುರೋಚನನೆಂದು ನಿರ್ಮಿಸಿದ || ೭೩

ಕುಂತೀಪುತ್ರರನ್ನು ಕರೆಕಳುಹಿಸುವಿಕೆ.

ಧರಣಿಪತಿಗಱುಹಿಸಲು ಹಸ್ತಿನ
ಪುರಕೆ ದೂತರ ಕಳುಹೆ ಕೌರವ
ಧರಣಿಪತಿ ಧೃತರಾಷ್ಟ್ರನಲ್ಲಿಗೆ ಬಂದು ಬಿನ್ನವಿಸೆ ।
ವರುಷವಾಯಿತು ನೀವು ಕಳುಹಿದ
ಹಿರಿಯ ಕೆಲಸದಲಾಪುರೋಚನ
ಪರುಠವಿಸಿ ಬರಹೇೞ ಕಳುಹಿದ ಕುಂತಿಪುತ್ರರನು || ೭೪

ವಿದುರನು ರಹಸ್ಯಮಾರ್ಗವನ್ನು ಮಾಡಿಸುವಿಕೆ.

ಜನಪ ಕೇಳ್ಗೆ ವಿದುರನೊಬ್ಬಗೆ
ಕನಕರತ್ನವನೀಯಲೊಬ್ಬನ
ದನುಕರಿಸಿ ಮಾಡಿದನು ಯೋಜನವೆರಡಱಳತೆಯಲಿ ।
* ಘನತರದ ಬಿಲವೊಂದ ಕೊಱೆದನು
ಕನಕವರ್ಮನು ಕನಕರತ್ನಾ
ದ್ಯನುಪಮಸ್ಥಾಪನೆಯ ಭೂಮಿಯಿದೆನಲು ನೋಡುವೊಡೆ || ೭೫

ಧರ್ಮಾದಿಗಳಿಗೆ ಧೃತರಾಷ್ಟ್ರಕೃತೋಪದೇಶ.

ಧರಣಿಪತಿ ಕೇಳತ್ತ ಹಸ್ತಿನ
ಪುರದೊಳಗೆ ಕುಂತೀಕುಮಾರರ
ಕರೆಸಿ ಕಟ್ಟೇಕಾಂತದಲಿ ಧೃತರಾಷ್ಟ್ರ ಭೂಪಾಲ ।

---

* ಘನತರದ ಶೈಲಗಳ ಕೊಱೆವುತ ಕನಕವರ್ಮನ ಕನ್ನಬಱು
ತಿದೆ ಮಹಿಯ ಮಧ್ಯಕೆ ನೆಲನ ಕೊಱೆದನು ಪಥವ ಗುಪಿತ
ದೊಳು, * ಕ. ಜ.

ಬೆಱಗು ಬಿನ್ನಾಣದಲಿ ಮಕ್ಕಳ
ಮೆರುಳು ಮಾಡಿದನೇನ ಹೇೞುವೆ
ನುರಿವನೆಯು ಬೀಡಾರದಲಿ ಬಿಡಸಲಿಕೆ ಪಾಂಡವರ ॥ ೭೬

ದುರುಳ ದುರ್ಯೋಧನನು [1] ನೀತಿ
ಗರುವೆರವದಿರು ಪಾಪಕರ್ಮರು
ಪರಮಧಾರ್ಮಿಕ ನೀನು ತನ್ನವದಿರು ಕುಮಂತ್ರಿಗಳು ।
ಎರಳೆ ತೋಳನ ಸಾದು ಪುಣ್ಯರ
ನೆರವಿಗದುವಾಬಗೆಯು [2] ಸೇರುವೆ
ಯರಸ ನಿನ್ನೊಡನೆನ್ನ ಕುನ್ನಿಗಳೆಂದು ಬಿಸುಸುಯ್ದು ॥ ೭೭

ತಂದೆ ಯಿಲ್ಲದೆ ಹಿತವರೆಮಗಾ [3]
ರೆಂದು ನೀವಿಹಿರೆನ್ನ [4] ಮಕ್ಕಳು
ಕೊಂದು ಹಿಂಡೆಯು ಕೂಳನುಂಬರು ಹೇಸುವವರಲ್ಲ ।
ಇಂದು ನಿಮಗವರಿಂದಲುಪಹತಿ
ಬಂದುದಾದೊಡೆ ತನ್ನ ತಲೆಯಲಿ
ನಿಂದೆ ಹೊೞುವುದು ಮುನ್ನಬಲ್ಲೆನು ಕಂದ ಕೇಳೆಂದ ॥ ೭೮

ತಾತ ಕೆಡುವಿರಿ ನೀವು ನಿಮಗ
ಖ್ಯಾತಿ ಕೌರವರೆಂಬವರು ದು
ರ್ನೀತಿಕಾರರು ಭೀಷ್ಮವಿದುರರು ಭೀತರವದಿರಿಗೆ ।
ನೀತಿಸಮ್ಮತವಾಗಿ ಚಿತ್ತದೊ
ಳಾತುದೇನದನೆನ್ನ ಚಿತ್ತದ
ಭೀತಿ ಬೇಡೆಂದರಸ ಹಿಡಿದನು ಧರ್ಮಜನ ಕರವ ॥ ೭೯

---

1 ದುರುಳರೀಕೌರವರು, ಚ. ಟ. 2 ಸುಣ್ಣದನೆರವಿಗದು ಪಾವಗೆಯು, ಚ.
3 ತಂದೆಯಿಲ್ಲದ ನಿಮಗೆ ಹಿತರಾ, ಖ. 4 ರೆಂದು ಮಱುಗುವೆನೆನ್ನ, ಖ.

ಧೃತರಾಷ್ಟ್ರನ ಮಾತಿಗೆ ಧರ್ಮರಾಯನ ಒಪ್ಪಿತ.

ಬೇಱೆ ಮತವೇನೆಮಗೆ ಲೋಕದ
ದೂಱು ನಿಮ್ಮದು ನೀವು ಬೊಪ್ಪನ
ನೂಱುಮಡಿಗೊಳ್ಳದರು ಬೇಱೆಮಗಿನ್ನು ಹಿತರುಂಟೆ ।
ಬೇಱಿರಿಸಿ ಕೂಡಿರಿಸಿ ನೀವೇ
ತೋಱಿದುದೆ ಪಥ ನಿಮ್ಮ ನೇಮವ
ಮೀಱಬಲ್ಲನೆ ಯೆಂದು ಧರ್ಮಜ ನುಡಿದನರಸಂಗೆ ॥ ೮೦

ಎಱೆಯ ಯೆಕ್ಕೆಯೊ ತಳಿತವೆಕ್ಕೆಯೊ
ಹುಱಿಯ ಬಲೆಯೋ ರಾಗಸನ್ನೆಯೊ
ಸರಿಯ ಗೋರೆಯೊ ಠಕ್ಕಿನುಂಡೆಯೊ ಸವಿಯ ಚಿತ್ರಕವೋ ।
ಅರಸನಂಕೆಯ ಮನದ ಬೆಂಕಿಯ
ಹೊಱವೆ ಬಯಕೆಯನೀಸಮಂಜಸ
ತರದ ಸಾತ್ವಿಕರೆತ್ತ ಬಲ್ಲರು ಭೂಪ ಕೇಳೆಂದ ॥ ೮೧

ಕಂದ ಮನ ಮುನಿಸಿಲ್ಲವೇ ನಾ
ವೆಂದ ನುಡಿಗೊಡಬಡುವಿರಾದೊಡೆ
ಮುಂದೆ ಪುರವಿದೆ ವಾರಣಾವತವಿಲ್ಲಿಗೈವತ್ತು ।
ಸಂದನಾಡು ಸಮಸ್ತವಸ್ತುಗ
ಳಿಂದ ಪೂರಿತಹಸ್ತಿನಾಪುರ
ದಿಂದ ಘನವದು ರಾಜಧಾನಿಸ್ಥಾನ ನಿಮಗೆಂದ ॥ ೮೨

ಐ ಹಸಾದ ಭವತ್ಕೃಪಾಸ
ನ್ನಾಹವೇ ಸಾಮ್ರಾಜ್ಯಪದವಿಯ
ನೂಹಿಸಿದಿರಾಸ್ಥಿತಿಯೊಳಡಗಿಹೆವೆಂದು ವಿನಯದಲಿ ।
ಗಾಹುಗತಕವನಱಿಯದವರು
ತ್ಸಾಹದಲಿ ಕೈಕೊಂಡು ಭೀಷ್ಮಗೆ
ಬೇಹ ವಿದುರದ್ರೋಣಮುಖ್ಯರಿಗಱುಹಿದರು ಹದನ ॥ ೮೩

ಧಾರುಣೀಪತಿ ರತ್ನಮಯುಭಂ
ಡಾರಸಹಿತರಥಾಶ್ವಗಜಪರಿ
ವಾರವನು ಮಾಡಿದನು ಹಸುಗೆಯನೆರಡುಭಾಗದಲಿ |
ಕೌರವರಿಗೊಂದಿವರಿಗೊಂದೆನೆ
ಲೋರಣದಲಳವಡಿಸಿ ಬಹುವಿ
ಸ್ತಾರದಲಿ ಭೀಷ್ಮಾದ್ಯರಹುದೆನಲಿವರ ಮನ್ನಿಸಿದ || ೮೪

ಇವರು ಶುಭದಿನ ಶುಭಮುಹೂರ್ತ
ಪ್ರವರದಲಿ ಹೊಱವಂಟರಾಜನ
ನಿವಹ ಮಱುಗಿತರಣ್ಯವಾಯಿತು ನಗರವಿಂದಿನ್ನು |
ಇವರ ಕಳುಹುತ ಬಂದರಾಕೌ
ರವರು ನಿಂದರು ಭೀಷ್ಮಕಳಶೋ
ದ್ಭವರು ಸುತರಿಗೆ ಬುದ್ಧಿ ಹೇಳಿಯೆ ಮರಳಿದರು ಪುರಕೆ || ೮೫

ವಿದುರನೊಡನೈತರುತ ಸಂಕೇ
ತದಲಿ ಸೂಚಿಸಿ ಮರಳಿದನು ನೃಪ
ಸುದತಿಯುರು ಗಾಂಧಾರಿಮೊದಲಾದಖಿಳನಾರಿಯರು |
ಮುದದ ಮುಱುವಿನೊಳಿವರ ತೆಗೆದ
ಪ್ಪಿದರು ಭೂಪತಿಸಹಿತ ಕಡು ಶೋ
ಕದಲಿ ಕಳುಹಿಸಿ ಕೊಂಡು ಬಂದರು ಹಸ್ತಿನಾಪುರಕೆ || ೮೬

ಅರಸ ಕೇಳ್ಳೈ ಹಸ್ತಿನಾಪುರ
ವರವ ಹೊಱವಡುವಾ ಮುಹೂರ್ತಕೆ [1]
ವರುಷವಿಪ್ಪತ್ತೊಂಭತಾಯಿತು [2] ಧರ್ಮಪುತ್ರಂಗೆ |
ವರುಷ ಹದಿಮೂಱಱಲಿ ಹಸ್ತಿನ
ಪುರದೊಳಿರ್ದರು ಹಿಂದೆ ಷೋಡಶ
ವರುಷ ವನದೊಳಗಿಂತು ಲೆಕ್ಕವ ನೋಡಿಕೊಳ್ಳೆಂದ || ೮೭

1 ವಡುವೆಂದಿಗಾದುವು. ಖ. 2 ವರುಷವಂದೇಕೋನತ್ರಿಂಶತ್ತಿ, ಖ.

ಪಾಂಡವರಿಗೆ ವಾರಣಾವತಪ್ರವೇಶ.

ಬಂದರೈವರು ಕುಂತಿಸಹಿತಾ
ನಂದದಲಿ ವರವಾರಣಾವತ
ಕಂದು ಪುರಜನ ಕೂಡಿ ಕನ್ನಡಿಕಳಸವಿಭವದಲಿ ।
ಬಂದು ತಾವಿದಿರಾಗಿ ಕುಂತೀ
ನಂದನರ ಹೊಗಿಸಿದರು ಪಟ್ಟಣ
ವೆಂದು ಪೆಂಚಿದುದು ಕೂಡೆ ಗುಡಿತೋರಣದ ರಚನೆಯಲಿ ॥ ೮೮

ಬೀಡುಗಾಣಿಕೆ ಯಿಕ್ಕಿ[1] ಕಂಡನು
ನಾಡೆ ಕಾಣಿಸಿಕೊಂಡನೀತನು
ಕೂಡೆ ಸಂದನು ಹಾಸುಹೊಕ್ಕಾಗಿವರ ಮನವಱಿದು ।
ನೋಡಿದನು ಯಮನಂದನನು ಮನೆ
ಮಾಡಿದಂದವನರಗಿನರಮನೆ
ಗೂಡಿನಲಿ ಬೇಳುವೆಯ ನೆನೆದರೆ ಬೊಪ್ಪನವರೆಂದ ॥ ೮೯

ಸಮಿಧೆಗಳು ನಾವ್ ನಾಲ್ವರೈಯ್ಯನ
ರಮಣಿ ಯಾಹುತಿ ಭೀಮನೇ ಪಶು
ಕುಮತಿ ಕಟ್ಟಿಸಿದರಗಿನರಮನೆ ಯಜ್ಞ[2] ಕುಂಡವಿದು ।
ಎಮಗೆ ಸಂಶಯವಿಲ್ಲ ರಾಜೋ
ತ್ತಮನೊ ದುರ್ಯೋಧನನೊ ದೀಕ್ಷಾ
ಕ್ರಮವ ಧರಿಸಿದನಾವನೆಂದನು ನಗುತ ಯಮಸೂನು ॥ ೯೦

ಪಾಂಡವರು ಗುಪ್ತಮಾರ್ಗವನ್ನು ಕನಕವರ್ಮನಿಂದ ತಿಳಿದುದು.

ಜನಪ ಕೇಳೈ ವಿದುರನಟ್ಟಿದ
ಕನಕ ಬಂದನು ತಮ್ಮ ಸೆಜ್ಜೆಯ
ಮನೆಯೊಳತಿಗುಪ್ತದಲಿ ನೆಲದೊಳು ಸವೆಸಿದನು ಪಥವ ।

---

1 ಯಿತ್ತು, ಚ.  2 ಯಗ್ನಿ, ಚ.

ಅನುದಿವಸ ವೀಬಾಹಿರನು ಶಿ
ಚ್ಚಿನಲಿ ಚುಚ್ಚುವ ಸಂದುಕಟ್ಟನು
ನೆನೆಯುತಿರ್ದನು ಖಳಪುರೋಚನನೊಡೆಯನಾಜ್ಞೆಯಲಿ ॥ ೯೧

ಒಂದುದಿನ ಹಬ್ಬದಲಿ ಭೂಸುರ
ವೃಂದ ವುಂಡುದು[1] ಪಂಚಪುತ್ರಿಕೆ
ಯೆಂದು ಬೇಡಿತಿಯೊಬ್ಬಳಿರ್ದಳು ಸುತರು ಸಹಿತಲ್ಲಿ ।
ಅಂದಿನಿರುಳು ಪುರೋಚನನು ತಾ
ನೊಂದ ನೆನೆದರೆ ದೈವಗತಿ ಬೇ
ರೊಂದು ನೆನೆದುದು ಕೇಳು ಜನಮೇಜಯಮಹೀಪಾಲ ॥ ೯೨

ಅರಗಿನ ಮನೆಗೆ ಬೆಂಕಿಯನ್ನು ಹಚ್ಚಿ ಬಿಲಮಾರ್ಗದಿಂದ ಪ್ರಯಾಣ ಮಾಡಿದುದು.

ಅವನು ನಿದ್ರೆಯೊಳಱಿಯದಿರಲಾ
ಭವನಮುಖದಲಿ ಕಿಚ್ಚನೊಟ್ಟಿಸಿ
ಪವನಸುತ ಸಹಿತಿವರು ಹಾಯ್ದರು ಬಿಲದ ಮಾರ್ಗದಲಿ ।
ಅವನು ಬೆಂದನು ಮುನ್ನ ಬಳಿಕಾ
ಭವನಪಂಜರಗಳುರಿದು ಕರಗಿದ
ವವನಿಯಲಿ ಹೊನಲಾಯ್ತು ಪುರಜನವೈದೆ ಬೆಱಗಾಗೆ ॥ ೯೩

ಕಂಡರಾವರಪುರಜನಂಗಳು
ತಂಡತಂಡದಿ ನಿಂದು ನೋಡಲಿ
ಕಂಡಲೆದು ಪುರಿ ಹೊಯ್ಯಲರಗಿನ ಮಾಡ ಬೆಂದುದಲೆ ।
ಕಂಡು ಪುರಜನ ಬೆಱತಾಗೋ
ಱುಂಡೆಕೊಳುತಲಿ ಪಾಂಡುಪುತ್ರರ
ತಂಡ ಹೋಯ್ತೇ ವಾರಣಾವತಪುರದೊಳಕಟೆನುತ ॥ ೯೪

---

1 ದಣಿದುದು, ಖ.

ಅಕಟ ಪಾಂಡವರೆತ್ತಿದರೇ ಕೌ
ಳಿಕದಿ ಕೌರವರಿಱಿವರೇ ಮತಿ
ವಿಕಳರಿವರಿರು ಬೆಂದು ಹೋದರು ಧರ್ಮದಲಿ ನಡೆದು ।
ಪ್ರಕಟಪಾಪರಿಗಾಯ್ತು ಸಾಂಬ್ರಾ
ಜ್ಯಕವು ಧರ್ಮಾತ್ಮರಿಗದೆಂತೋ [1]
ವಿಕಳ ಕೇಸುರಿ ರಾಜ್ಯವೆಂದುದು ಮಱುಗಿ ಪೌರಜನ [2] ॥ ೯೫

ಮುನ್ನ ಬೆಂದನಲಾ ಪುರೋಚನ
ಕುನ್ನಿಯದು ಲೇಸಾಯ್ತು ದಹನವಿ
ಪನ್ನರಾದರೆ ಕುಂತಿಸಹಿತಾಪಾಂಡುನಂದನರು ।
ಇನ್ನು ಸುಡು ಸುಡು ಧರ್ಮಸಂಪ್ರತಿ
ಪನ್ನಗುಣದಾಚರಣೆಯು ಪರಿ ಸಂ
ಪನ್ನತೆಯನೆಂದೊಱಲಿ ಮಱುಗಿತು ನಿಖಿಳಜನನಿಕರ ॥ ೯೬

ಬಗೆದುದೇ ಬೇಳಂಬ ಹಸ್ತಿನ
ನಗರದತ್ತಲು ಪೌರಜನವೆಂನ
ಪುಗಿದುದು ಗಡಾ [3] ಶೋಕವೆಂಯಸಾಗರದ ಮಧ್ಯದಲಿ ।
ಹೊಗೆದುದಾನನ ಭೀಷ್ಮವಿದುರಾ
ದಿಗಳಿಗಾಧೃತರಾಷ್ಟ್ರಸುತನಿಗೆ
ದುಗುಡದಡ್ಡಿಯ ಹರ್ಷಸಸಿ ಹೊಕ್ಕುದು [4] ಮುಖಾಂಬುಜವ ॥ ೯೭

ಬೆಂದುಹೋದರೆಂದು ಪಾಂಡವರಿಗೆ ಉತ್ತರಕ್ರಿಯೆ.

ಬಂದುದಾ ಸುರನದಿಗೆ ಕೌರವ
ವೃಂದ ಪುರಜನ ಸಹಿತ ಶೋಕಿಸಿ
ಮಿಂದು ಗಂಗಾತೀರದಲಿ ಬಳಿಕೂರ್ಧ್ವಕ್ರಿಯೆಗಳನು ।

---

1 ಗೀಪರಿ, ಚ. 2 ವಿಕಟತೆಯ ಸುರರಾಜ್ಯವೆಂದುದು ಪಾರಜನ ಮಱುಗಿ, ಚ.
3 ಉಗಿದು ಬಿದ್ದುದು, ಚ. 4 ಸಿರಿಹೊಕ್ಕಳು, ಚ.

ಸಂಪ ವಿಧಿಯಲಿ ಮಾಡಿ ಪರಮಾ
ನಂದ ಮಿಗಿಲಿವರಿತ್ತಲಿದ್ದರ
ದಿಂದುಕುಲಸಂಭವರ ವಿಧಿಗಳನಿನ್ನು ಕೇಳೆಂದ ॥ ೯೮

ಬಿಲಮುಖದೊಳುತ್ತರಿಸಿ ಬಲುಗ
ತ್ತಲೆಯೊಳಟವೀಮಾರ್ಗದಲಿ
ಕಲುಮುಳುಗಳಿಗೆ ಕಾಪಥಕೆ ಕೋಮಲಪದವ ನೆಱೆ ಕೊಡುತ ।
ತೊಳಲಿದರು ಬೆಳಗಾಗೆ ಸಾಱಿಯೆ
ಹಳುವವೆನು ಬೆಳಗಡಗೆ ಹಳ್ಳಿಯ
ಬಟ್ಟೆಯ ಹೋಗುತ ಹಾಯ್ದು ಬಂದರು ತ್ರಿಪಥಗಾಮಿನಿಗೆ ॥ ೯೯

ಭಾಗೀರಥೀತರಣ

ಇರುಳು ಗಂಗೆಯೊಳೊಬ್ಬ ನಾವೆಯ
ನಿರಿಸಿ ಕೊಂಡಿರೆ ವಿದುರನಾಜ್ಞೆಯ
ಧರಿಸಿ ಪಾಂಡವರಿವರ ಕರೆದನು ಬನ್ನಿ ನೀವೆನುತ ।
ಕರೆಯುಲಂದಾ ಯಮಜನೆಂದನು
ಮರುತಸುತ ನೀ ಕೇಳು ಕೌರವ
ಧರಣಿಪನ ಕಾರಣಿಕವಲ್ಲವೆ ಯೆಂದೊಡಿಂತೆಂದ ॥ ೧೦೦

ಅರಗಿನುರಿಯೊಳಗಲ್ಲಿ ರಕ್ಷಿಸಿ
ಹರಿವ ನದಿಯೊಳಗಿಲ್ಲಿ ಕೊಲ್ವನೆ
ಪರಮಕರುಣಾಸಿಂಧು ರಕ್ಷಿಪನೆನುತ ದಾಂಟುವುದು ।
ಅರಸವೊದಲಾದಾರು ಮಾನಿಸ
ರಿರದೆ ನಾವೆಯನೇಱಿ ದಾಟಿಯೆ
ಸರಸಿರುಹಸಖನುದಯಕಾಲಕೆ ಮಿಂದು ಸುರನದಿಯ ॥ ೧೦೧

ದಾಟಿದರು ಗಂಗೆಯನು ರಾಯನ
ನೋಟದಲಿ ಮನಮಱಿದೆವೆಮ್ಮಯ
ನೋಟಕಿದು ಹಿರಿದಲ್ಲ ಹಾ ಯೆನುತೈವರಡಿಗಡಿಗೆ ।

ಕೋಟಲೆಯು ಕೊಲ್ಲಣಿಗೆಯಲಿ ಮೈ
ನೋಟಕಲಸದೆ ಬಿಸಿಲಲಿದ್ದರು ಮ
ಹಾಟವಿಯು ಮಧ್ಯದಲಿ ಬಂದರು ನೃಪತಿ ಕೇಳೆಂದ ॥ ೧೦೨

ಬರುತಲಾಗದು ಕೃಷ್ಣನಾಮ
ಸ್ಮರಣೆ ಮಾಡುತ ಮರುತಸುತನಾ
ಕರ ವಿಡಿದು ಬಱಿಗಾಲು ಬಱಿಮೈಯಿಂದ ಬರುತಿರಲು ।
ಹರಿಯು ನಾಮಸ್ಮರಣಬಲದಲಿ
ಪರಮಹರ್ಷದೊಳವರು ನಡೆದರು
ನಿರುತ ದಕ್ಷಿಣದೆಸೆಗೆ ನಾರಾಯಣನ ಕರುಣದಲಿ ॥ ೧೦೩

ಇಪ್ಪತ್ತೊಂದನೆಯ ಸಂಧಿ ಮುಗಿದುದು.

ಜತುಗೃಹಪರ್ವ ಮುಗಿದುದು.

## ಇಪ್ಪತ್ತೆರಡನೆಯ ಸಂಧಿ.

ಸೂಚನೆ.

ಬೆಂಬಿಡದೆ ಕಲಿ ಭೀಮ ಹಿಡಿದು ಹಿ
ಡಿಂಬಕನ ಮುಱಿದವನ ತಂಗಿ ಹಿ
ಡಿಂಬಿಯನು ಕೂಡೊಲಿದು ಪಡೆದನು ಕಲಿಘಟೋತ್ಕಚನ ||

ಅರಣ್ಯದಲ್ಲಿ ಪಾಂಡವರ ಸಂಚಾರ.

ಕೇಳು ಜನಮೇಜಯಧರಿತ್ರೀ
ಪಾಲ ಯಮನಂದನನ ಪಾರ್ಥನ
ಕಾಲೊಡೆದು ಸುಱಿವರುಣಜಲದಲಿ ಬಟ್ಟೆ ಕೆಸರಾಯ್ತು |
ಮೇಲೆ ಯಮಳರ ಕುಂತಿಯರನೇ
ವೇಱುವೆನು ಬೇಗದಲಿ ಕುರುಭೂ
ಪಾಲ ಹಿಡಿಯಲಿ ಕೊಲಲೆನುತ ಕುಳ್ಳಿರ್ದರಡವಿಯಲಿ || ೧

ಉರಿಯ ಮನೆಯಲಿ ಸಾಯಲೀಸದೆ
ಸೆಱಗ [1] ಹಿಡಿದೆಳತಂದು ಕೊಯ್ದನು
ಕೊರಳನಕಟಾ ಭೀಮನೇ ಹಗೆಯೆಂದಳಾಕುಂತಿ |
ಅರಸ ಹಿಡಿಯಲಿ ದಾನವರು ನಿಂ
ದಿರಿಕೆಯಲಿ ನುಂಗಲಿ ಕೃತಾರ್ಥರು
ಧರೆಯೊಳಾವೆಂದೊದಱಿದರು ಮಾದ್ರೀಕುಮಾರಕರು || ೨

ಹಿರಿದು ಖತಿಗೊಳುತಲ್ಲಿ ನಡೆಯದೆ
ಬಿರಿದಳುತ್ತಡವಿಯಲಿ ಮಾದ್ರಿಜ
ರಿರಲು ಕುಂತೀದೇವಿ ಸಹಿತವೆ ಮುಂದುಗೆಡುತಿರಲು |

---

1 ಕರವ, ಖ.

ನರಯುಧಿಷ್ಠಿರರವೆರು ಖರಖರ
ಹಿರಿದು ಬೞಲಿದರೆಲ್ಲ ಬೞಲಿಕೆ
ವೆರವೃಕೋದರ ನಿಲ್ಲದಿದನಾರ್ೖದು ಕೇಳಿದನು ॥ ೩

ಸಾಕು ಸಾಕಾನಿಹೆನು ಕಳಕಳ [1]
ವೇಕೆ ಹೋ ಹೋ ಯೆನುತ ಹೊತ್ತನು
ನೂಕಿ ಹೆಗಲೆರಡಱಲಿ ಕುಂತಿಯು ಧರ್ಮನಂದನನ ।
ಆಕಿರೀಟಿಯುನೆಡದಲಾ ಮಾ
ದ್ರೀಕುಮಾರರ ಬಲದ ಬದಿಯೊಳ
ಗೌಕಿ ನಡೆದನು ಭೀಮ ನಡಹಾಯ್ದೊದೆದು ಕಲುಮರನ ॥ ೪

ಬಂದನೀಪರಿ ಹಲವು ಯೋಜನ
ದಿಂದ ಹೇರಡವಿಯುಲಿ ಬೞಲಿದೆ
ನೆಂದನೇ ನೀರಡಿಸಿದನೆ ಬಲುನಿದ್ರೆಗೆಳಸಿದನೆ ।
ತಂದೆ ಯಿಲ್ಲದ ಸುತರಿಗಾತನೆ
ತಂದೆಯಾದನು ಕುಂತಿ ಮಾದ್ರೀ
ನಂದನರ ಪವಮಾನನಂದನನೆತ್ತಿ ತರುತಿರ್ದ ॥ ೫

ಬಂದು ಕಾನನಮಧ್ಯದಲಿ ತರು
ವೃಂದದೆಡೆಯುಲಿ ನಿಲಿಸಿ ಬೞಕರ
ವಿಂದದೆಲೆಯುಲಿ ನೀರ ತಂದೆಱೆದನು ನೃಪಾಲರಿಗೆ ।
ಅಂದವರಿಗಿಲ್ಲರಸ ಹಾಸಲಿ
ಕೊಂದು ವಸ್ತ್ರಗಳಿಲ್ಲ ಹೊದೆಯುಲಿ
ಕೆಂದು ಬೞಕಾವಾಯುಸುತ ಹಾಸಿದನು ತಳಿರುಗಳ ॥ ೬

ತಳಿರ ತಱಿದೊಟ್ಟಿದನು ತರುವಿನ
ನೆಳಲೊಳಗೆ ವಿಶ್ರಮಿಸಿದರು ತನು
ಬೞಲಿಕೆಯು ಬಾರಣೆಯು ಕಡುಜೋಡಿಸಿದ ಝೋಂಪಿನಲಿ ।

1 ರಲು ಹೆಕ್ಕಳು, ಚ.

ಇವನ ರಮಣನ ಮಾಡಿ ಕೊಂಡೋ
ಡುವೆನು ವಿಪಿನಾಂತರದೊಳು ಮುನಿದೊ
ಡಿವದಿರ್ಭೈವರ ತಿನಲಿ ಮರದಡಿಯಲ್ಲಿ ಮಲಗಿದರ |
ಇವನು ತನ್ನಯ ತೀವ್ರತರ [1] ರೂ
ಪವನು ಕಂಡೊಡೆ ಹೆದಱುವನಲಾ
ಯುವತಿಯಹೆನೆಂದಸುರೆ ಸುಳಿದಳು ದಿವ್ಯರೂಪಿನಲಿ || ೧೫

ಹೊಳೆವ ಕಂಗಳ ಕಾಂತಿ ಮೆರುಗ
ತ್ತಲೆಯ ಮೊತ್ತವ ಬಿಗಿಯೆ ತನುಪರಿ
ಮಳಕೆ ತಗುಳುವ ತುಂಬಿಗಳ ತನುಲತೆಯ ಚಲುವಿನಲಿ |
ಲಲನೆ ಸುಳಿದಳು ಕುಚದ ಭರದಲಿ
ಬಳುಕುತಡಿಗಡಿಗೊಲೆದೊಲೆದು ವೈ
ವಳಿಯ ಮೌಳಿಯ ಮುಱುಕದೋಱುತ ಭೀಮನಿದಿರಿನಲಿ || ೧೬

ಭೀಮ ನೋಡನು ನುಡಿಸನೊಯ್ಯನೆ
ತಾಮರಸಮುಖಿ ಹೊದ್ದಿದಳು ನಿ
ಸ್ಸೀಮನೇ ನೀನಾರು ಮಲಗಿದಮರ್ತ್ಯರಿವರಾರು |
ಈ ಮಹಾರಣ್ಯದಲಿ ಬರವಿದು
ಕಾಮಿತವು ಕೋಮಲರಿಗೆನೆ ನಿ
ಷ್ಕಾಮಮನದಲಿ ಸತಿಯ ನುಡಿಸಿದನಾರು ನೀನೆಂದ || ೧೭

ಹಿಡಿಂಬಿಯು ತನ್ನ ವೃತ್ತಾಂತವನ್ನು ಹೇಳುವಿಕೆ.

ವನ ಹಿಡಿಂಬನದಾ ಹಿಡಿಂಬಕ
ನನುಜೆ ನಾನು ಹಿಡಿಂಬೆ ಯೀ ಕಾ
ನನಪಿದೆಮ್ಮಾಶ್ರಮವಗವ್ಯವು ದಿವಿಜಮನುಜರಿಗೆ |
ನಿನಗೆ ಕಾಮಿಸಿ ಬಂದೆನಣ್ಣನು
ಮುನಿದೊಡಿವದಿರ ತಿನಲಿ ನೀನೇ
ಎನಗೆ ವಲ್ಲಭನಾಗು ಕೊಂಡೊಯ್ವೆನು ಹಿಮಾಚಲಕೆ || ೧೮

---

[1] ರೌದ್ರಮಯ, ಚ.

ನಿನ್ನ ನೊಲ್ಲೆನು ಮುನಿದೆಯಾದೊಡೆ
ನಿನ್ನ ದೈತ್ಯನ ಕೊಂಡು ಬಾ ಹೋ
ಗೆನ್ನ ಬಲುಹನು ನೋಡು ನೀನೆನಲಸುರೆ ವಿನಯದಲಿ ।
ಮುನ್ನಲೇ ಮನುಮಥನ ಶರದಲಿ
ಖಿನ್ನೆಯಾಗಿಯೆ ಮೆಱೆಯ ಹೊಕ್ಕೆನು
ಎನ್ನ ನೀಪರಿ ಮುನಿದು ನುಡಿವರೆ ಯೆಂದಳಿಂದುಮುಖಿ ॥ ೧೯

### ಹಿಡಿಂಬನ ಆಗಮನ.

ಅನುಜೆ ತಳುವಿದಳೆಂದು ರೋಷ
ಸ್ತನಿತಗದುಗದಕಂಠನೊದೆದೆ
ದ್ದನು ಮಹೀಮಂಡಲವನುಗ್ರಾಂಬಕನ ಡೊಂಬಿನಲಿ ।
ಅನಿಲಸುತನಿದಿರೆದ್ದನಿವನೇ
ದನುಜನೆಂಬವನಹುದು ತಪ್ಪೇ
ನೆನುತಲಿರಲಾದನುಜೆ [1] ಹೋದಳು ಮರನ ಹೊರೆಗಾಗಿ ॥ ೨೦

ದನುಜನೊದಱುತ ಬಂದು ವಟಕುಜ
ವನುಱೆ ಕೀೞುತ ಬರಲು ದೈತ್ಯಗೆ
ವನದೊಳಗೆ ದುಶ್ಶಕುನವಾದುದು [2] ಮರಣಸೂಚಕದ ।
ದನುಜನದ ತಾ ಬಗೆಯದಲ್ಲಿಗೆ
ಮನುಜರಿಗೆ ದುಶ್ಶಕುನವೆನುತವೆ
ಕನಲಿ ಖಳ ಮದದಿಂದಲೈದಿದ ಭರದಿ ಬೊಬ್ಬಿಡುತ ॥ ೨೧

ಬಱಲಬೇಡವೊ ಕುನ್ನಿ ಮೆಲ್ಲನೆ
ತಱುಬಿ ಕಾದುವುದೆನುತ ಮೈಮಱೆ
ದೊಱಗಿದವರೇೞುವರು ಮೆಲ್ಲನೆ ಯೆನಲು ರೋಷದಲಿ ।

---

[1] ನೆನುತಸಿಂದಿರಲಾಕೆ, ಖ. [2] ವನದೊಳೊಂದುತ್ಪಾತವಾದುದು, ಖ.

ಭೀಮ ಹಿಡಿಂಬರ ದ್ವಂದ್ವಯುದ್ಧ.

ತುಱುಬ ಹಿಡಿದನು ಭೀಮ ಬೆನ್ನಿನೊ
ಳಱಗಿದರೆ ಹೆಮ್ಮರನ ಹಾಯಿದು
ಮುಱಿಯಲದನವೆ ಕಂಡು ಕೆಡಹಿದನನಿಲನಂದನನ ॥ ೧೦

ಎದ್ದು ತಿವಿದನು ಖಳನ ಬದಿಯೊಳ್
ಗದ್ದಿ ತೀತನ ಮುಷ್ಟಿ ಮುಱಿದೊಡ
ಬಿದ್ದು ನಿಮಿಷಕೆ ಸಂತವಿಸಿ ಹೆಮ್ಮರನ ಕೊಂಬಿನಲಿ ।

ಹಿಡಿಂಬ ವಧೆ.

ಬಿದ್ದೆ [1] ಯಿದ ಕೊಳ್ಳೆನುತ ಖಳನು
ಬ್ಬಿದ್ದು ಹೊಯ್ದರೆ ಮರಸಹಿತ ಹಿಡಿ
ದುದ್ದಿ ನೆಲದೊಳಗೊಱಸಿ ಕೊಂದನು ಕಲಿಹಿಡಿಂಬಕನ ॥ ೧೩

ಕಳಕಳದೊಳವರೆದ್ದು ನೋಡಿದ
ರೆಲೆ ಮಹಾಕಲಿ ತಮ್ಮನೆಬ್ಬಿಸಿ
ಬಟ್ಟಿಕ ಕಾದದೆ ಕೆಡಿಸಿದೇ ಯುಕಟೆನುತ ತವಕದಲಿ ।
ಬೞಲಿದೆಮ್ಮನು ಹೊತ್ತು ತೊೞಲಿದೆ
ಬೞಲಿಕೆಯ ಲೀಯುದ್ಧ ಲೇಸಾ
ಯ್ತುೞಿದೆ ಪುಣ್ಯವಿದೆಂದರಾಯುಮನಂದನಾದಿಗಳು ॥ ೧೪

ಹಿಡಿಂಬಿಯು ಕುಂತಿಯ ಬಳಿಗೆ ಹೋಗಿ ತನ್ನ ವೃತ್ತಾಂತ
ವನ್ನು ಹೇಳುವಿಕೆ.

ಖಳ ಮಡಿಯಲವನನುಜೆ ಭೀಮನ
ನೊಲಿಸಲಾರದೆ ಕುಂತಿಗೆಲ್ಲವ
ತಿಳುಹಿ ನುಡಿವಳು ತನ್ನ ಪೂರ್ವಾಪರದ ಸಂಗತಿಯ ।
ಪಲವುಪರಿಯಲಿ ಸತಿ ಯಿವರನಂ
ಡಲೆದು ಭೀಮಗೆ ಹೇೞಿಸಿದಳಾ
ಫಲುಗಣನ ಕಯ್ಯಿಂದ ಧರ್ಮಜನಿಂದ ತಿಳುಹಿದಳು [2] ॥ ೧೫

---

[1] ಗದ್ದೆ, ಖ. [2] ನುಡಿಸಿದಳು, ಚ.

ಆರು ನುಡಿಯಲಿ ಸರ್ವಥಾ ಖಳ
ನಾರಿಯನು ಕೈಕೊಳ್ಳನೆಂದಾ
ಧೀರ ಬಲಿದೊಡೆ ಬಳಿಕ ವೇದವ್ಯಾಸಮುನಿ ಬಂದ ।
ವೀರಪಾಂಡವರಿವರ ಕಂಡ ವಿ
ಚಾರವಿದಕೇನೆನುತಲೀಶ್ವರ
ನಾರಿಗಾವುದ ಕಲ್ಪಿಸಿದನದ ವಿವಾಹಬಹುದೆನುತ ॥　　೨೬

ಚರಣಕೆಱಗಲು ಪಾಂಡುಪುತ್ರರ
ಹರುಷ ಮಿಗೆ ಬಿಗಿದಪ್ಪಿ ಕುಂತಿಯು
ಪರಮವಾಕ್ಯದಿ ಸಂತವಿಟ್ಟನು ಮುನಿಪನಿಂತೆನುತ ।
ಹಿರಿದು ಬೞಲಿದೆ ಯಿವರ ಸಂಗಡ
ತಿರುಗಿ ಯಿನ್ನೀಸತಿಯು ನೀ ಸ್ವೀ
ಕರಿಪುದೆಂದರೆ ವ್ಯಾಸದೇವರಿಗೆಂದ ನಾಭೀಮ ॥　　೨೭

ವಾರಿತವು ತನಗಣ್ಣ ನಿರೆನಾ
ಧಾರುಣಿಯೊಳದ ಮಾಡಬಹುದೆನೆ
ಮಾರುತಾತ್ಮಜ ಕೇಳು ನೀನೇ ಹಿರಿಯನೆಲ್ಲರಿಗೆ ।
ನಾರಿಯಾದರೆ ದೇವವಧು ದೈ
ತ್ಯಾರಿಗಗ್ಗದ ಭಕ್ತೆ ದನುಜನ
ವೀರಕಾಣಿಕೆ ಬಂದಳಲ್ಲಿಗೆ ನಿನಗೆ ವಧುವೆನಿಸಿ ॥　　೨೮

ಹಿರಿಯನೀಧರ್ಮಜಗೆ ನೀನಲೆ
ನಿರುತಕಾರಣ ಪ್ರಕೃತಿಪುರುಷರ
ನೆಱವಣಿಗೆ ಹರಿ ಸಿರಿಯನಿಬ್ಬರನುೞದು ಭೂಗಣಕೆ ।
ಮರುತನಾತ್ಮಜ ನಿನಗೆ ಸರಿಯಿಾ
ಧರೆಯ ಜೀವರೊಳಾರು ಯೆಂದೊಡೆ
ಸರಸಿಜಾಸನಪಿತಗೆ ಬಿನ್ನಹ ಮಾಡಿದನು ಭೀಮ ॥　　೨೯

ಜನನ ಮೊದಲೆನಗಾಗದೇತ
ಕ್ಕೆನಲು ಮುನಿಯಿಂತೆಂದ ಮೊದಲಲಿ
ಜನನವಾದರೆ ರಾಜಕಾರಿಯು ನಡೆವುದಿಲ್ಲೆಂದ ।
ಜನಪ ತನ್ನ ಜ್ಞಾನ ಹರಿಯಲಿ
ಕನಿಲಸುತ ನಿನಗಿಲ್ಲ ಸಂಶಯ
ವನಜಲೋಚನನಲ್ಲಿ ಯಾಗಳು ಮುಖ್ಯಧರ್ಮಗಳು ॥ ೩೦

ಸಾಖಿಲಖಿಯುವೆದಕ್ಕೆ ಜೀವರ
ಮಾರಿಯುಹ ಯನ್ಯಾಯ ಕಂಡರೆ
ಧಾರುಣಿಯ ಸುರಕಾರ್ಯಕೋಸುಗ ಹಿರಿಯ ಧರ್ಮಜನು ।
ಸಾಖಿ ನಯದಲಿ ತಿಳಿಯ ಹೇಳಿ ಕು
ಮಾರಸಂಭವ ಮಾಡಿಯೆಂದೇ
ನಾರಿಯನು ಗಂಟಿಕ್ಕಿ ತಿರುಗಿದ ಭೀಮಸೇನಂಗೆ ॥ ೩೧

ಮುನಿ ಮರಳೆ ತಾ ವೇಖುಜನ ರಿಪು
ವನವನಾಗಳೆ ಬಿಟ್ಟು ನಡೆದರು
ಮನದ ಬಳಲಿಕೆಗಳೆದು ರಾಜ್ಯದ ಸುಖವ ನೆಱೆ ಮಱೆದು ।
ವನಜಲೋಚನಪಾದಪದ್ಮವ
ನೆನೆದು ಕಾನನದೊಳಗೆ ಕೌರವ
ಜನಪರವನಿಯ ರಾಯರಖಿಯದೆ ನಡೆದು ಬರುತಿರಲು ॥ ೩೨

ಎಲ್ಲಿ ಯುಪವನ ವರಸರೋವರ
ವೆಲ್ಲಿ ಕೇಳೀಶೈಲಸಂತತಿ [1]
ಯೆಲ್ಲಿ ರಮ್ಯೋದ್ಯಾನವೆಲ್ಲಿ ವಿಹಾರವನಭೂಮಿ ।
ಅಲ್ಲಿಗಲ್ಲಿಗೆ ಗಮಿಸಿ ಮಾರುತಿ
ವಲ್ಲಭೆಯ ರಮಿಸಿದನು ಚಾಪಲ
ಮಲ್ಲ ಜನಿಸಿದನಾಘಟೋತ್ಕಚನಾ ಹಿಡಿಂಬಿಯಲಿ ॥ ೩೩

1 ಹಿಮಗೃಹ, ಚ.

ಜನಿಸಲಿಚ್ಛೈಸಿದನು ಘನತರ
ಮನುಜವಾಹನ ಭೀಮಸೇನನ
ತನುಜನಾಗಿಯು ಪರಮನೈರುತಿ ಹರಿಯ ಸೇವೆಯಲಿ |

ಘಟೋತ್ಕಚನ ಜನನ.

ಜನಿಯಿಸಿದನಾಷಾಢವಾಸದ
ವಿನುತ ಬಿದಿಗೆಯು ರುದ್ರತಾರಾ
ದಿನದೊಳಪರಾಹ್ಣದಲಿ ರಾಕ್ಷಸವತ್ಸರಾಂತದಲಿ ॥ ೨೪

ಕಲಿಘಟೋತ್ಕಚ ಜನಿಸಿದಾಕ್ಷಣ
ಕಿಳೆಯ ರಾಕ್ಷಸಜನವದಳುಕಿತು
ಬಲುಹ ಬಿಟ್ಟರು ತಮತಮಗೆ ತಾವೆಯ್ದ ಬೆಂಬಳಿಗೆ |
ಬಳಿಕ ಭೀಮನು ತನ್ನ ಸುತನನು
ನಳಿನಮುಖಿಯನು ನೀವು ಸಂಗಡ
ತೊಳಲ ಬೇಡಿ ಹಿಡಿಂಬನಗರಿಗೆ ನಡೆಯಿ ನೀವೆಂದ ॥ ೨೫

ನುಡಿದ ಸಮಯಕೆ * ನೀವು ಬಹುದೆಂ
ದೊಡಬಡಿಸಿ ಸುತಸಹಿತ ಕಳುಹಿಯೆ
ಮಡದಿಯನು ಹೈಡಿಂಬರಾಜ್ಯಕ್ಕೊಡೆಯತನವಿತ್ತು * |
ನಡೆದು ಬರುತಿರೆ ಶಾಲಿಹೋತ್ರನ
ನಡುವೆ ಕಂಡುಪಚರಿಸಿ ವಿದ್ಯೆಯ
ಪಡೆದು ಸಂಮುಖರಾಗಿ ಬಂದರು ವಿಪ್ರವೇಷದಲಿ ॥ ೨೬

ಇಪ್ಪತ್ತೆರಡನೆಯ ಸಂಧಿ ಮುಗಿದುದು

ಹಿಡಿಂಬವಧಪರ್ವ ಮುಗಿದುದು.

---

* ತನ್ನ ರಮಣಿಯ ನೊಡಬಡಿಸಿ ಹೈಡಿಂಬರಾಜ್ಯದ ಒಡೆತನವ ನೇಮಿ ಮಾಡಿ ನಿಲಿಸಿದನಾಘಟೋತ್ಕಚನ, ಚ.

## ಇಪ್ಪತ್ತುಮೂರನೆಯ ಸಂಧಿ

**ಸೂಚನೆ**

ವಿಕಟಭುಜಬಲರೇಕಚಕ್ರದೊ
ಳಕುಟಿಲರು ಭೂಸುರರ ರಕ್ಷಿಸಿ
ಒಕನ ಮುಱಿದರು ಮೆಱೆದರಮಳಗುಣಾಗ್ರಹಾರದಲಿ ||

ಏಕಚಕ್ರನಗರವನ್ನು ಕುರಿತು ಹೋಗಿರೆಂದು ವ್ಯಾಸೋಪದೇಶ.

ಕೇಳು ಜನಮೇಜಯಮಹೀಪತಿ
ಶಾಲಿಹೋತ್ರಾಶ್ರಮವನನಿಬರು
ಬೀೞುಕೊಂಡರು ಮತ್ತೆ ಕಂಡರು ಬಾದರಾಯಣನ |
ಹೇೞಿದನು ನಿಮಗೇಕಚಕ್ರವಿ
ಶಾಲಪುರದೊಳಗಾಱುತಿಂಗಳು
ಕಾಲ ಸವೆಯಲಿ ಬಳಿಕ ಬಳಿಸುವಿರುತ್ತರೋತ್ತರವ ||

ಎಂದು ಮುನಿ ತಿರುಗಿದನು ಕುಂತೀ
ನಂದನರು ಸುಕ್ಷೇತ್ರತೀರ್ಥೋ
ವೃಂದವನು ಮುಸುಕಿದರು ವಿಮಳಬ್ರಹ್ಮರಶ್ಮಿಯಲಿ |
ಅಂದವೇಱಿದ ಗಡ್ಡದರ್ಭೆಗ
ಳಿಂದ ನಿರಿಯುಡಿಗೆಯಲಿ ನಾಟಕ
ದಿಂದ ಮೆಟ್ಟಿಯ ತೊಟ್ಟನೊಸಲಲಿ ದೇಶಿ ಪರಿಮೆಱೆಯೆ ||

ಮನೆಯು ಉರಿಯಲು ಭೀಮನು ಆರಿಸುವಿಕೆ.

ಬರುತ ಭವನಕ್ಕಯ್ದಿ ಚಕ್ರಿಯ
ಚರಣಸೇವೆಯೊಳಿರಲು ಮಲಗಿರೆ

ಪುರದೊಳಗ್ನಿಯು ಬಾಧೆ ಯೇಳಲು ಭೀಮ ಬೇಗದಲಿ |
ಕರಗಳನು ತಳುವಿಕ್ಕಿ ಭವನವ
ಜರಿಯಲೀಯದೆ ಕೆಲಕೆ ತೆಗೆದಪ
ನುರಿಯಲಾಪುರಿ ಮಾಣೆ ಮನೆಯನು ನೆಲದೊಳಿರಿಸಿದನು || ೩

ತರಣಿಯುದಯದ ಮೇಲೆ ಭಾಂಡಾ
ಕರಣಿ ಯೆದ್ದನು ಕಂಡನಿವರನು
ಮರುತನಾತ್ಮಜಗೆಂದ ಬೋಧನವೆದ್ದು ಪುರಿಯುತಲೆ |
ಹಿರಿದು ಪುರಿಯೊಳಗೆನ್ನ ಗೃಹವಿದು
ಕರಗದುಳಿಯಿತು ನಿಮ್ಮ ದೆಸೆಯಲಿ
ನಿರುತವೆಂದರೆ ಭೀಮನೆಂದನು ದೇವರುಳುಹಿದರು || ೪

ಎನಲು ಸಂತೋಷದಲಿ ಭೀಮನ
ವಿನಯವೃತ್ತಿಗೆ ಬಳಿಕ ಹರುಷಿಸಿ
ಮನವೊಲಿದು ನೀವೇನ ಬೇಡಿದೊಡದನ ನಾನೀವೆ |
ಎನಲು ಪವನಜನೆಂದ ನಮಗೀ
ವಿನುತಪುರದೊಳು ಭಿಕ್ಷೆ ತರಲಿಕೆ
ಮನವೊಲಿದು ನಾಲ್ಕೈದುಭಾಂಡವ ಕೊಡುವುದೈ ನೀನು || ೫

ಹಿರಿದು ಹರುಷಿಸಿ ತಂದನಾಕ್ಷಣ
ಪರಿಪರಿಯ ವರಭಾಂಡವೈದನು
ಹರಸಿ ಕೊಟ್ಟನು ನೀವು ಪೃಥ್ವೀಪಾಲರಾಗೆನುತ |
ಮರುತಜಾದ್ಯರಿಗಿತ್ತು ಕಳುಹಿದೆ ೞ
ಡಿರದೆ ಕುಂತೀಸುತರು ಹರುಷದಿ
ತರಣಿಗರ್ಘ್ಯವ ಕೊಡಲು ಬಂದರು ಕೆಱೆಯನಱಸುತಲಿ || ೬

ಬಂದು ಪ್ರಾತಸ್ಸ್ನಾನಸಂಧ್ಯಾ
ವಂದನೆಯ ಮಾಡಿದರು ಬಳಿಕರ
ವಿಂದನಾಭಂಗಲ್ಲಿ ಕರ್ಮದಿನ್ನೈದೆ ಸತ್ಕರಿಸಿ |

ಅಂದು ಮಾತೆಯು ಪಾದಕೆಱಗಿಯೆ
ಬಂದರೈವರು ಬಚಿಕ ಬೋಧನ [1]
ಕಂದು ನಡೆತರುತಿರಲು ಭಿಕ್ಷಾವೃತ್ತಿಯನೆ ಪಡೆದು ॥ ೭

ಬಡತನವನನುಕರಿಸಿ ಬೋಧನ [2]
ದೆಡೆಯ ಹೊಕ್ಕರು ಭೀಮಸೇನನು
ಗಡಣದಿಂಪವೆ ಕೇರಿಕೇರಿಯ ನಡುವೆ ಬರಬರುತ [3] ।
ಪೊಡವಿಪತಿ ನೀ ದೇಹಿ ಯೆಂಬುದು
ಕಡು ವಿರೋಧ [4] ವಿದಕ್ಕೆ ನಾನೀ
ಪೊಡಲಭರಿತಕೆ ದೇಹಿ ಯೆಂಬೆನು ಬಿಡೆನು ಧರ್ಮವನು ॥ ೮

ಕಾಲ ತಾ ವಿಪರೀತವಾದೊಡೆ
ಮೇಲೆ ತಾ ವರ್ಣಾಶ್ರಮಂಗಳ
ನೇಳಿದವ ಗೊಂಡವರು ಬೀಳುವ ನರಕವೆನಗಹುದು ।
ಜಾಳಿಸೆನು ವರ್ಣಾಶ್ರಮಂಗಳ
ಲೋಲಧರ್ಮವನೆನಲು ಭೀಮನು
ಪಾಲಿಸಿದ ಕುಲಚಲವ ಭಿಕ್ಷಾವೃತ್ತಿಯಂದದಲಿ ॥ ೯

ಪೊಱಲೊಳಗೆ ಹುಂಕಾರಘೋಷದಿ
ಮೆಱೆತು ಬೇಡುವ ತಾನು ಭಿಕ್ಷೆಯ
ಬಚಿಕ ನನಗಲ್ಲಾದುದಾಗಲಿ ಯೆನುತ ಬರುತಿರ್ದ ।
ಜಲರುಹಾಕ್ಷನ ನಾಮಕೀರ್ತನ
ಗಳನು ಪಾಡುತ ಭೀಮಸಹಿತೀ
ಯಿಳೆಯರಾಯರಿಗಾಯ್ತು ಬೇಡಿಕೆ ವಿಪ್ರರಂದದಲಿ ॥ ೧೦

ಬಚಿಕ ವಿಪ್ರನ ಮನೆಯೊಳಾಯಿತು
ಪೊಱಲೊಳಗೆ ತಾವಲ್ಲಿ ಕುಳ್ಳಿರ್ದು

---

1 ಭೋಜನ, ಕ. ಖ. 2 ಭೋಜನ, ಕ. ಖ.
3 ಬರುತಿರಲು; ಖ. ಜ. 4 ನಿರೋಧ, ಜ.

ಬಟಲಿಕೆಯನಪಹರಿಸಿ ಕೊಂಡರು ವಿಪ್ರನಿಳಯದಲಿ ।
ಜಲವನಂಗೀಕರಿಸಿ ಪಾಂಡವ
ತಿಲಕರಿಗೆ ಬಂದಾವಿಪತ್ತನು
ವೊಲಿದು ಕೇಳ್ಗೆ ರಾಯ ಜನಮೇಜಯ ಮಹೀಪಾಲ ॥ ೧೧

ಇಳೆಯರಾಯರಿಗೊಬ್ಬ ಭೂಸುರ
ಬಡಗ ತಿರಿಕನ ಮನೆಯ ಗುಡಿಸಿಲ
ಹೊಬಿಲ ಬೀಡಿಕೆಯಾಯ್ತು ಯಿನ್ನೀ ಮನುಜರಳವೇನು ।
ಬಟಲಿಕೆಯನಪಹರಿಸಿ ಭಿಕ್ಷೆಯ ತ
ರಲು ಯತ್ನವ ಮಾಡಿ ಭಾಂಡವ
ತೊಳೆದು ಹೊಱಪೊಡೆ ಯಾಗಳೈವರು ಬ್ರಹ್ಮಪುರಿಯೊಳಗೆ ॥ ೧೨

ಅವರಯಾಚಕವಿಪ್ರವೇಷವ
ನವರು ಕೈಕೊಂಡಲ್ಲಿ ಹಲಕೆಲ
ಧಿವಸಗಳ ನೂಕಿದರು ಭಿಕ್ಷಾವಿಹಿತವೃತ್ತಿಯಲಿ ।
ಪವನಸುತ ಹುಂಕಾರದಿಂದವೆ
ಸವನಿಸುತ ಬಹುಭಿಕ್ಷಭಕ್ಷ್ಯವ
ನವರ ನಾಲ್ವರ ಸರಿಯ ಭಿಕ್ಷವನೊಬ್ಬ ತಿರಿತಪನು ॥ ೧೩

ತಂದಭಿಕ್ಷವನಾಗಳೈವರು
ಬಂದು ಹರಿಯೆಂದೆನುತ ವಂದಿಸಿ
ಯಂದು ಭಿಕ್ಷವ ಮಾತೆಗೀಯಲು ಯೆರಡು ಭಾಗೆಯನು ।
ಒಂದು ಭಾಗ ವೃಕೋದರಂಗುಱಿ
ದೊಂದು ಭಾಗವ ತಾಯಿ ನಾಲ್ವರು
ನಂದನರು ವಿನಿಯೋಗಿಸುವರವನೀಶ ಕೇಳೆಂದ ॥ ೧೪

ಸಿರಿಯ ಹೇಳ್ವೊಡೆ ಹಸ್ತಿನಾಪುರ
ದರಸುಗಳ ಸಂತಾನ ಶೌರ್ಯದ
ಪರಿಯ ಹೊಗಳ್ವೊಡೆ ಶಕ್ರಸೂರ್ಯಾದಿಗಳಗಿಂ [1] ಮಿಗಿಲು ।

---

[1] ನೋಳ್ಪರೆ ಶಕ್ರಸೂರ್ಯರ ತೇಜಕುಱಿ, ಜ.

ತಿರಿದ ಕೂಳನು ತಾಯಿ ಹಸುಗೆಯು
ಲೆರಡುಭಾಗವ ಮಾಡಿ ಮಕ್ಕಳ
ಪೊರೆದಳಿನ್ನುಳಿದವರ ಪಾಡೇನರಸ ಕೇಳೆಂದ ‖ ೧೫

ವಿಪ್ರವೇಷದಿಂದ ಪಾಂಡವರ ಇರುವಿಕೆ.

ಉದಯದಿಂದವೆ ಮುನ್ನ ಸುಬ್ರಾ
ಹ್ಮದ ಮುಹೂರ್ತದೊಳೆದ್ದು ಜನನಿಯ
ಪದಯುಗಕ್ಕಭಿನಮಿಸಿ ಮಧುಮರ್ದನನ ನೆನೆಯುತಲಿ ।
ನದಿಯ ತಟದಲಿ ಕುಳ್ಳಿತ್ತೈವರು
ಸದನಕಲ್ಲಿಂದೈದಿ ಶೌರಿಯ
ಮುದದಿ ನೆನೆಯುತಲವರು ಸಂಧ್ಯಾಮಠಕೆ ನಡೆತಂದು ‖ ೧೬

ವಿದಿತಸಂಧ್ಯೋಪಾಸ್ತಿಜಪನಿಯ
ಮದ ಪುರಾಣಶ್ರವಣ ಮಧ್ಯಾ
ಹ್ನದಲಿ ಭಿಕ್ಷಾಟನಗಳವರಿಗೆ ನಿತ್ಯವಾಯ್ತೆಂದು ।
ಸದನಕೈತಂದಲ್ಲಿ ಭೀಮನು
ಮುದದಿ ದೇವಾರ್ಚನೆಯ ಮಾಡಿಯೆ
ಪದುಮನಾಭಾರ್ಪಿತದೊಳನ್ನವನಾಗ ಭುಂಜಿಸುವ ‖ ೧೭

ಎನಲು ಜನಮೇಜಯನು ಕೇಳಿದ
ಮುನಿವರೋತ್ತಮ ಭೀಮಸೇನನು
ಮನುಜರನು ತಾ ಕೂಡಿ ಭಿಕ್ಷವ ತಾರನೇಕೆನಲು ।
ಅನಿಲಜನ ಭಿಕ್ಷಾಟನಕೆ ಯಮ
ತನುಜ ತಾನಂಜಿದನು ಭೀಮನ
ವಿನಯ ಮಿಗೆ ಬೋಳೈಸಿ ನುಡಿದನು ನೀನು ಭಿಕ್ಷವನು ‖ ೧೮

ತರಲು ಬೇಡೈ ತಮ್ಮ ನಮ್ಮಯ
ಯಿರವನಱಿದಪರೆಂದು ಧರ್ಮಜ [1]

[1] ಕುರುಕುಲಾಧಿಪನಱಿವನೆಂದನು, ಜ.

ನುರುಹಿ ಸುಟ್ಟೆವು ನಾವು ಕೌರವಖಳಪುರೋಚನನ ।
ಉರುಹಿದೆವು ಅವನಕ್ಕ ಸಹಿತಾ
ವುರುಹಿದೆವು ಅವಳಾತ್ಮಜರನ್ನೈ
ವರನು ನಾವಪರಾಧಗಂಡೆವು ನಾವು ಗುಪ್ತದಲಿ ॥ ೧೯

ಇರಲಿ ಬೇಕೈ ತಮ್ಮ ನಿನ್ನಯ
ತಿರಿಕೆಗಾವಂಜುವೆವು ಯೆಂದರೆ
ಮರುತಸುತ ತಾನುಂಬಪರಿಯೆಂತೆಂದು ಬೆಸಗೊಂಡ ।
ನಿರುತ ದೇವರ ನೆನೆಯುತಲಿ ನೀ
ನಿರುಳುಹಗಲಿಹುದಿಲ್ಲಿ ಮನೆಯಲಿ
ತಿರಿದು ಭಿಕ್ಷವ ತಂದು ಯಿಕ್ಕುವೆ ತಾನು ನಿನಗೆಂದ ॥ ೨೦

ಎನಲು ವಾಯುಜನೆಂದನಣ್ಣಗೆ
ಮುನಿಮತವು ಶ್ರುತಿಸಾರವಾದುದು
ಧನವನೇ ಕೊಳಬಾರದಣ್ಣನೆ ತಮ್ಮ ತಾನೊಮ್ಮೆ ।
ಅನುಜವಿಷಯವ ನಣ್ಣಮುದದಿಂ
ದನುಭವಿಸೆ ತಾ ಯೋಗ್ಯವೈ ಸಲೆ
ಯೆನಗೆ ನಿಮ್ಮಯ ಭಿಕ್ಷದನ್ನವು ನರಕಸಾಧನವು ॥ ೨೧

ನೀನು ಗುರುವಹೆ ಯೆನಗೆ ಸಾಕ್ಷಾ
ನ್ಮಾನನಿಧಿ ಪಾಂಡುವಿಗೆ ಸರಿಯೈ
ನಾನು ಕುಳಿತುಜಿ ನಿಮ್ಮ ಭಿಕ್ಷದಲನ್ನವುಂಬುದಕೆ ।
ತಾನಱಿದು ಗುರುವಿಷಯವುಂಬೆನೆ
ಯೇನೆನಲು ಯಮಸುತನಯನೆಂದನು
ನಾನು ತಂದನ್ನವನು ಜನನಿಯು ಹಂಚೆ ಭೋಜನವ ॥ ೨೨

ನಾನು ಮಾಡುವೆ ನೀನು ನಿನ್ನಯ
ಸೂನುವಿನ ಸರಿ ಮೂವರನುಜರು
ಹಾನಿ ಯಿಲ್ಲೈ ಯಿವರ ಭಿಕ್ಷದ ಯನ್ನವುಡಿಂದಲು ।

ಮಾನನಿಧಿ ವರಮುಖ್ಯಧರ್ಮ
ಜ್ಞಾನಸಿದ್ಧನೆ ಯೆಂದು ತಮ್ಮನ
ತಾನೆ ಹೊಗಟಿದ ಕೇಳು ಜನಮೇಜಯ ಮಹೀಪಾಲ ‖ ೨೩

ಸ್ವಾರ್ಜನದ ಧನಜೀವಿ ಯುತ್ತಮ
ನಾಜನಕಧನಜೀವಿ ಮಧ್ಯಮ
ನಾಜನನಿಧನವಧಮವೆಂಬುದು ಸಕಲಸ್ಮೃತಿನಿಕರ ।
ಈಜಗಜ್ಜೀವರಲಿ ತಾನವ
ಭಾಜನನು ನರಕಕ್ಕೆ ಯಿಹದಲಿ
ಯಿಾಜಗದ ನರರೊಳಗೆ ಯಧಮಾಧಮನು ಕೇಳೆಂದ ‖ ೨೪

ಎಂದು ಮನೆಯಲಿ ತಾಯ ಸಂಗಡ
ಲಂದು ಮೂವರು ಸಹಜರಶನವ
ತಂದು ಕೊಡಲಿಕ್ಕೆಂಡು ಬಡವಾಗಿಹನು ಕಲಿ ಭೀಮ ।
ತಂದು ತಾಯಿಗೆ ಗೊಡುವನಾಯುವ
ನಂದನನು ತಾ ತಂದ ಭಿಕ್ಷವ
ನಂದು ಭೋಜನಮಾಡಲೀಪರಿ ಮಾಸವೈದಾಗೆ ‖ ೨೫

ಭೋಜನೋತ್ತರವೇಳೆಯಲಿ ನೃಪ
ರಾಜವಾರ್ತಾಕಥನದಿಂದ ಮ
ಹಾಜನಂಗಳೊಳೊಪ್ಪುತಿರ್ದರು ನಿಜವಿನೋದದಲಿ ।
ರಾಜತನವನು ಮಱೆದರಾದ್ವಿಜ
ರಾಜತನವನು ಮೆಱೆವರುನ್ನತ
ರಾಜರಾಜರ ನೀತಿಯಿದು ಭೂಪಾಲ ಕೇಳೆಂದ ‖ ೨೬

ಆಗ ಆರ್ತಧ್ವನಿ ಶ್ರವಣ.

ಇರುತಿರಲು ಮಾಸಾಂತವಾಱಕೆ [1]
ನೆರಮನೆಯ ಶೋಕಾರ್ತರವದು

1 ಇರಲಿರಲು. ಷಣ್ಮಾಸದೊಳಗಾ, ಖ.

ಬ್ಬರವು ಹಿರಿದಾಗಲಿಕೆ ನಾವಿದ ತಿಳಿಯಬೇಕೆನುತ ।
ಮರುತಸುತನಾಕುಂತಿಗೆಂದನು
ಧರಣಿಯಮರರುಪದ್ರಗೇಳಿಯೆ
ಪರಿಹರಿಸದೆಮಗಿರಲು ಬಾರದು ಯೆನಲು ಬೇಗದಲಿ ॥ ೨೩

ಮರಜನನಿ ನಂದನನ ಮಾತಿಗೆ
ಪರಮಹರುಷಿತೆಯಾಗಿ ಬೇಗದಿ
ಧರಣಿಯಮರರಿಗೇನುಪದ್ರವೆನುತ್ತ ಹರಿಯೆನುತ ।

ಬ್ರಾಹ್ಮಣನನ್ನು ಕುರಿತು ಕುಂತಿಯ ಪ್ರಶ್ನೆ.

ಭರದಲೈತಂದಕಟ ಭೂಸುರ
ವರವಿರೋಧವಿದೇನು ದುಃಖೋ
ತ್ಕರುಷವಾಕಸ್ಮಿಕವಿದೆಂದಳು ಕುಂತಿ ಖೇದದಲಿ ॥ ೨೪

ನಾಳಿದೇನ್ಯೆ ಯಾಮಹೋತ್ಸವ
ದೇಳಿಗೆಯ ಭರವೆಸವು ಖರ ನಿ
ಮ್ಮಾಲಯದೊಳು ವ್ಯಾಕುಲತೆ ಹೊಸತೆಂದಳಾಕುಂತಿ [1] ।
ಹೇಳಿರೈ ನಿಮಗಾದವಸ್ಥೆಯ
ಕೇಳಲಾಗದೆ ಯೆನಲು ದ್ವಿಜನದ
ಹೇಳಿ ಫಲವೇನವ್ವ ಯೆಂದನು ಸುಯ್ದು ದುಗುಡದಲಿ ॥ ೨೫

ಆಲತಾಂಗಿಯ ಕರೆದು ಬಳಿಯಿಕೆ
ಕಾಲುದೊಳಸಿಯು [2] ಬೞಿಕ ಕುಂತಿಗೆ
ಹೇಳಿದನು ತನಗಾದ ಖೇದವ ಪೂರ್ವದಪರವನು ।

---

1 ನಾಳೆ ವೈವಾಹೋತ್ಸವದ ದೆ
ಕಾಳಪಿದು ಮೊದಲೀವಸಂತದ
ಬಾಲಕಿಯರೋಳಿಯ ಮಡೆಯಲಿ ಸಿಡಿಲು ಸುಳಿದುದೆನೆ, ಖ.
2 ಕಾಲಿಗೆಱಗಿಯು, ಗ.

ಬಲುಹಿನಲಿ ಭೂಸುರನ ಚಿತ್ತವ
ತಿಳುಹಿ ಬಂದಳು ಮನೆಗೆ ಭೀಮನ
ಕೆಲಕೆ ಕರೆದಳು ಹೇಳಿದಳು ಹೇರಾಳದೌತಣವ |
ಉಲಿದು ಮನದಲಿ ಭೀಮ ಭುಜವ
ಪ್ಪಳಿಸಿದನು ಯಮನಂದನಾದಿಗ
ಳುಳಿದ ನಾಲ್ವರು ಭಿಕ್ಷವೃತ್ತಿಗದೈಯ್ದಿ ಪುರದೊಳಗೆ || ೪೫

ಆಗ ಬರುತಲು ಬ್ರಹ್ಮಪುರಿಯೊಳು
ರಾಗದಲಿ ಶ್ರೀಹರಿಯ ನೆನೆವುತ
ಜೋಗದಲವರು ಕೇರಿಕೇರಿಯ ನಡುವೆ ಬರುತಿರಲು |
ರಾಗದಲಿ ಬೀಡಾರಕೈದಿಯೆ
ಯೋಗ ಮಗಗದ ಹೇಟೆ ಹಿಗ್ಗಿದ
ನಾಗ ನಾಲ್ವರು ಬಂದು ತಾಯಿಗೆ ತಂದ ಭಿಕ್ಷವನು || ೪೬

ಕೊಟ್ಟು ಕೇಳಿದರಾಗ ಜನನಿಯು
ಜೊಟ್ಟದೇನೌ ಭೀಮ ಭಾಳದ
ಬೊಟ್ಟೆನಲು ತಾ ಕೊಟ್ಟೆ ಭೂಸುರವಿಷಯಕೀತನನು |
ಕೊಟ್ಟೆ ತಾನೆನೆ ಹಾಯ್ದು ನಾಲ್ವರ
ಹೊಟ್ಟೆಯೊಳಗುರಿ ಬಟಿಕ ನೀವಿದ
ಕೊಟ್ಟರೇಕೌ ತಾಯೆ ಭೀಮನನೇನ ಮಾಡಿದಿರಿ || ೪೭

ನಮ್ಮೊಳೊಬ್ಬನ ಕೊಡದೆ ಕಾದಿರಿ
ಸುಮ್ಮನೇತಕೆ ತಾಯೆ ಭೀಮನ
ಸೊಮ್ಮ ಕೊಡುವರೆ ನಮ್ಮ ಭಾಗ್ಯವನೆನುತ ಹಲುಬಿದರು |
ಬೊಮ್ಮರಕ್ಕಸಗೀವರೇ ಯೀ
ಹೆಮ್ಮಗನ ನೀ ಕೊಟ್ಟೆಯಾದರೆ
ನಮ್ಮ ಕಾವ ಮುಕುಂದ ಬಲ್ಲನು ನಿಮ್ಮ ಮಾತುಗಳ || ೪೮

ತಾಯೆ ಮಾಜಲು ಬಹುದೆ ಯೆಂದರೆ
ವಾಯುಜನು ತಾನೆಂದು ಸಂಕಟ
ದಾಯ ನಿಮಗೇಕೆಂದನೀಗಳ ಸಾಕು ಬಿಡಿ ಯೆಂದ ।
ತಾಯೆ ಕೊಟ್ಟುದು ತಮಗೆ ತಾನದ
ಕಾಯುಗತಿಗನುಸಾರಿ ಯಾದವ
ರಾಯ ಹೊಣೆಯಾಗಿರಲು ಲಕ್ಷ್ಯವೆ ದೈತ್ಯಕೋಟಿಗಳು ॥ ೪೯

ನಿರುತವನು ತಾವ್ ನುಡಿದು ಪವಡಿಸಿ
ಭರದಿ ನಿದ್ರೆಯೊಳಿರಲಿಕಾಗಲೆ [1]
ಯಿರಳು ತೊಡಗಿತು ವಿಪ್ರಭವನದ ಪಾಕಮಯರಭಸ ।
ಹೊರೆದಳಮ್ಮನು ತಾಯಿ ಕುಂತಿಯು
ಹರುಷದಲಿ ಪಾರಣೆಯ ಹೊತ್ತಿನೊ
ಳರಸು ನಾಳಿನೊಳಾನೆನುತ ಹಿಗ್ಗಿದನು ಕಲಿಭೀಮ ॥ ೫೦

ಪರಿಪರಿಯ ಬಹುಭಕ್ಷ್ಯಪಾಕದ
ಪರಿಮಳದ ಶಾಕಾದಿಗಳ ವೆ
ಗ್ಗರಣೆಗಳ ಸೌರಭಕೆ ತಿಳಿದುದು ನಿದ್ರೆ ಪವನಜನ ।
ತರಣಿ ಸುಳಿದನು ಪೂರ್ವಶೈಲದ
ಶಿರದ ಕೊನೆಯಲಿ ಭೀಮ ಕುಂತಿಯು
ಕರೆದು ಕಳುಹಿದನಾಮಹೀಸುರಗೃಹಕೆ ವಹಿಲದಲಿ ॥ ೫೧

ಕುಂತಿಯು ಅಪ್ಪಣೆಯಂತೆ ಆಹಾರಪದಾರ್ಥವನ್ನು ಸಿದ್ಧಪಡಿಸುವಿಕೆ.

ಏನು ಬಂದಿರಿ ತಾಯೆ ಕಾರಿಯ
ವೇನೆನಲು ನೀ ಹೂಡು ಭಂಡಿಯ
ದೇನು ಜಂಜಡ ಭಕ್ಷ್ಯಭೋಜನ ಹಿಡಿಸು ಬೇಗದಲಿ ।
ಭಾನುವುದಯಂಗೈದನೆನೆ ಸು

1 ಮರಳಗಳು ನೀವೆಂದವರ ಚಪ್ಪರಿಸಿದನು ಕಲಿಭೀಮನಾನಡು, ಚ.

ಮ್ಮಾನದಲಿ ಸಾಧನಸಮಗ್ರವ
ಸೂನು ಸಹಿತಡಕಿದಳು ಭಾರಿಯಭಂಡಿ ಜಡಿಯಲಿಕೆ ‖ ೫೦

ಜೋಡಿಸಲು ತಾ ಕುಂತಿ ಯೆಂದಳು
ಮಾಡಿಸುವುದೆನ್ನಾತ್ಮಜಗೆ ನೀ
ನೋಡಿ ಭೋಜನವನುವ ಬಿಗೆ ಮನದಣಿವ ಹಾಗೆಂದು ।
ಮಾಡುವುದು ಬೆಟ್ಟಿಕೆಲ್ಲ ಭಂಡಿಯು
ಹೂಡುವುದು ನೀನೆನಲು ಭೂಸುರ
ಮಾಡುವೆವು ನಿಮ್ಮಾತ್ಮಜಗೆ ಮೊದಲೆನಲು ಬೇಗದಲಿ ‖ ೫೩

ನಳನಳಿಪ ಬಹುವಿಧದ ಭಕ್ಷ್ಯಾ
ವಳಿಯು ಹೆಡಗೆಗಳೋರಣಿಸಿ ಮಂ
ಡಳಿಸಿ ಹೂಡಿದ ಹಾಲು ತುಪ್ಪದ ಹರವಿಯೋಜೆಯಲಿ ।
ಬಟಿಕ ಮುಚ್ಚಿದ ವಿವಿಧಶಾಖಾ
ವಳಿಯು ಜೋನದ ಬಿಗಿದ ಕುಣಿಕಿಲ
ಕಳವೆಯಕ್ಕಿಯು ಕೂಚರಾಸಿಯು ಭಂಡಿ ಜೋಡಿಸಿತು ‖ ೫೪

ದೈತ್ಯನನ್ನು ಸಂಹರಿಸೆಂದು ಕುಂತಿಯು ಆಶೀರ್ವಾದ.

ಮರಳಿ ಬಂದಳು ಕುಂತಿ ಭೀಮನ
ಕರೆದಳೀತ್ವೈ ಪಾರಣೆಗೆ ಕಾ
ತರಿಸದಿರು ಬಕನೊಡನೆ ಮೆಚ್ಚುವುದು ಸತ್ವದನುವರಿಯು ।
ಭರವನಜಿಯದೆ ಭೀಮ ಮಾಡದಿ [1]
ರುಬವಣೆಯುನಜಿದಾನುವುದು ಸಂ
ಹರಿಸು ದೈತ್ಯನನೆಂದು ತಾಯ್ ಹರಸಿದಳು ನಂದನನ ‖ ೫೫

ನೆನೆವುದೈ ನಮ್ಮೊಡೆಯ ಮಧುಸೂ
ದನನ ಚರಣವನೆಂದು ಕಳುಹಿದೊ
ಡನಿಲಜನು ಹರುಷದಲಿ ಜನನಿಯ ಪದಕೆ ನಮಿಸಿದನು ।

1 ಭರವ ಬಜಿದೇ ಬೀಯುವಾಡದಿ, ಖ.

ಮನದಿ ಹರಿಯನು ನೆನೆದು ದರ್ಭೆಯ
ನನುಕರಿಸಿ ಶ್ರೀಗೋಪಿಚಂದನ
ವಿನುತತಿಲಕವ ಧರಿಸಿ ಕುಂತಿಯ ಚರಣಕೇರಗುವನು ॥　೫೬

ಶಿರವ ತುಂಬಿಯೆ ಧರ್ಮಪುತ್ರನ
ಚರಣಕೆಱಗಿಯು ಭೀಮ ಜನನಿಯ
ನಿರುತವಾಕ್ಯಾಶ್ರಯದಿ ಬಂದನು ಭೂಪ ಕೇಳೆಂದ ।
ಹರುಷ ಮಿಗೆ ಹರಿತಂದು ವಿಪ್ರನ
ವರಗ್ರಹದ ಪಾಕವನು ಮುದದಲಿ
ಹರಿಯೊಳರ್ಪಿಸಿ ಭೀಮ ಪಾರಣೆಯನ್ನು ಮಾಡಿದನು ॥　೫೭

ಮರುತಸುತನಾಪೋಶಗೊಳುತಲಿ
ನಿರುತ ಪ್ರಾಣಾಹುತಿಯ ನಡೆಸಲು
ಸರಿಯಿತ್ತೈ ಸರ್ವಾನ್ನಷಡುರಸಘೃತವು ಮೊದಲಾಗಿ ।
ಪರಿಹರಿಸಿ ಕೊಂಡಿರಲು ಭೂಸುರ
ವರಯುವತಿ ಯಿನ್ನೇನ ಬಡಿಸುವ್ರೊ
ಡರಿದು ತಾನೆನುತಿರಲು ಕುಂತೀದೇವಿ ನಡೆತಂದು ॥　೫೮

ಮರುತಜನ ರೂಪನಱಿದೊರಳಿನ
ಹೊಱೆಯ ತವುಡನು ತಂದು ಕೈಯ್ಯಲಿ
ನಿರುತವೀಯಲು ಮೆಲಿದು ತೇಗುತ ದಣಿದು ಕೈತೊಳೆದ ।
ಧರಣಿಪತಿ ಕೇಳ್ ತಾಯಿ ಯಿಕ್ಕಿದ
ನಿರುತ ತವುಡೇ ಪಥ್ಯ ಧರೆಯಲಿ
ಪರರು ನೀಡಿದ್ದಮೃತ ವಿಷ ಮಕ್ಕಳಿಗೆ ಕೇಳೆಂದ ॥　೫೯

ಹರಸಿ ಸುತನನು ಕಳುಹೆ ಬಂಡಿಯ
ಹರಿದು ಸೆಳೆದೇಱಿದನು ತಾ ಬಲು
ಹುರಿಯ ಹಗ್ಗವ ಹಿಡಿದು ಜಡಿದನು ಹೋರಿಕೋಣಗಳ ।

ಮರುತಜನು ಹೊಡೆಯಲಿಕೆ ಶಕಟವು
ಪುರದ ಹೊಱಿಯಿಕೆ ಜನಸಮೂಹವು
ನೆರೆದು ನೋಡುತಲೊಬ್ಬರೊಬ್ಬರಿಗಂದು ತಮ್ಮೊಳಗೆ ॥ ೬೦

ಪುರದೊಳಗೆ ಭಿಕ್ಷಾನ್ನ ತಿಂದ್ಯೈ
ವರು ಮಹಾಪಂಡಿತರು ನಿರ್ಧರ
ಪುರುಷರವರೊಳಗೊಬ್ಬನನು ನಮ್ಮೂರ ದಾನವಗೆ ।
ಪರಿವಿಡಿಯ ಭೋಜನಕೆ ತಾಯಾ
ದರಿಸಿ ಭೂಸುರಗೀಗ ಕೊಟ್ಟಳು
ಹಿರಿದು ಕೌತುಕವೆನುತ ಮುತ್ತಿತು ಪವನನಂದನನ ॥ ೬೧

ಪೌರಜನವೈತರಲು ಭಂಡಿಯ
ನೂರ ಹೊಱವೆಂಟಿಸಿದರೆಲ್ಲರು
ದೂರದಲ್ಲಿರಿ ಸಾವೆ ತಾನೆನೆ ಸಾಕು ದೈತ್ಯನಲಿ ।

ಭೀಮನು ಬಕನಿದ್ದೆಡೆಗೆ ಹೋಗುವಿಕೆ.

ಸಾಱಿ ನೀವೆಂದೆನುತ ಹೂಡಿದ
ಹೋರಿಗೋಣನನಬ್ಬರಿಸಿ ರಣ
ಧೀರ ಮಾರುತಿ ಮಿಕ್ಕು ನಡೆಸಿದನಸುರನಿದ್ದೆಡೆಗೆ ॥ ೬೨

ಹರಿಸಿ ಹಳ್ಳವ ದಾಂಟಿ ಭೀಮನು
ಪರುಠವಿಸಿ ಯೊಂದನುವ ಕಂಡನು
ಸುರವಿರೋಧಿಯನುಂಡು ಕೊಲುವೆನೊ ಕೊಂದು ಭೋಜನವ ।
ಸಿರುತ ನಾ ಮಾಡುವೆನೊ ಯೆನುತಲಿ
ಸುಱಿದನೆಡೆಯಲಿ ಶಕಟದನ್ನವ
ಸುರವಿರೋಧಿಯು ಕಂಡನಾಕವ್ರ ಬಾರದುಣಲೆನುತ ॥ ೬೩

ಸಮಸ್ತ ಪದಾರ್ಥವನ್ನು ತಿಂದು ದೈತ್ಯನನ್ನು ಕರೆಯುವಿಕೆ.

ಕೆಡೆಹಿ ಭಂಡಿಯ ಪಾಕವೆಲ್ಲವ
ನೊಡೆಯಗರ್ಪಿಸಿ ಭೀಮ ಬಳಿಕದ

ಹೊಡೆದ ಮೌನದಲೈದಿ ಹಳ್ಳದ ತಡಿಯಲವನಾಗ ।
ಅಡಿಗಡಿಗೆ ತೇಗುತಲಿ ಪಾರಣೆ
ಯೆಡೆದೆಱಹುಗುಂದಿರ್ದ ತನ್ನನು
ಪಡೆದು ತಾ ಸಂಪೂರ್ಣವಾಡಿದನರಸ ಕೇಳೆಂದ ॥ ೬೪

ಎಡೆಯಲೇ ಭಕ್ಷ್ಯಾದಿಗಳ ಬಱ
ಹೆಡಗೆ ಯುೞಿದುವು ಸುಱಿದವೊಸರನು
ಕುಡಿದು ತುಪ್ಪವ ಹಾಲ ಹರವಿಯ ಪಾಯಸಂಗಳನು ।
ಬಿಡದೆ ಮುದ್ದೆಯ ಕೊಳುತಲುಂಡನು
ಕುಡಿದನಾಗಱವೆಟಿಕೆ ಯುದಕವ
ಹೊಡೆದನೈ ಹನ್ನೆರಡುಖಂಡುಗದಕ್ಕಿಯೋಗರವ ॥ ೬೫

ತಡೆಯದೆಲ್ಲವನುಂಡು ಹಳ್ಳದ
ಕಡೆಯಲೇ ಕೈದೊಳೆದು ಕಂಡನು
ನುಡಿದನೆಲವೋ ಕುನ್ನಿ ಕೂೞಿದೆ ತಿನ್ನು ಬಾಯೆನುತ ।
ತೊಡಕೆಯಲಿ ಕಲುವೊಳ್ಳು ತುಂಬಿಯೆ
ಬಿಡದೆ ಬುತ್ತಿಯನೊಂದು ಕೈಯ್ಯಲಿ
ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ ॥ ೬೬

ಕಂಡು ಖಳ ಬೆಱಗಾದನಿವನು
ದ್ದಂಡತನವೆಚ್ಚರಿಯಲಾ ಹರಿ
ಖಂಡಪರಶುಗಳಳುಕುವರು ತನ್ನೊಡನೆ ಹಳಚುವೊಡೆ ।
ಭಂಡಿ ತುಂಬಿದ ಕೂೞನೆಲ್ಲವ [1]
ನುಂಡು ಕಾಱಲಿ [2] ಯೂರ ವಿಪ್ರರ
ಹಿಂಡುವೆನು ಯಿವಸಹಿತೆನುತ ಮುರಿದೆದ್ದನಮರಾರಿ ॥ ೬೭

ಮತ್ತೆ ಶೇಷಾನ್ನದಲಿ ತೋಱಿಹ
ತುತ್ತುಗಳ ತೂಗುತ್ತ ಮಾರುತಿ

[1] ನಿವನಿಂ, ಖ.　　[2] ದುಂಡ ಹೋಗಲಿ, ಖ

ಮಾತುಗಳಲೇನೆನುತ ಪವನಜ ತಿವಿಯಲನುವಾದ |
ಕಾತರಿಸಿ ಗುದ್ದಲಿಕೆ ನೆತ್ತಿಯು
ನಾತ ತಿವಿದನು ಭೀಮನಸುರವನು
ಭೀತಿಯಲಿ ಜಗ ನಡುಗೆ ಮೇಲಣ ಸುರರು ಬೆದಱಿದರು || ೨೬

ಬಳಿಕ ಭೀಮನ ಬಾಹುಸತ್ತ್ವವ
ನಳವಿಯಲಿ ತಾನಱಿದು ಹಾಯ್ದನು
ಬಳಲಿ ಕಿಕ್ಕಿಱಿಗಿಱಿದು ವನದೊಳಗಾಗಲೋಡಿದನು |
ಹಱುವದಲಿ ತಾ ನೋಡಿ ಬೇಗದಿ
ಜಲದಲಡಗಿದೊಡವನನಱಸಿದ
ನಿರುತ ಮಾರುತತನಯ ಕಾಣದೆ ಹಳ್ಳವನು ತೊಱಲಿ || ೨೭

ಬಳಿಕ ಕಂಡನು ಮುಂದೆ ಗಣಪನ
ನೆಲೆಯುಮಾಸುತ ಬಕನ ಬಟ್ಟೆಯು
ನೆಲೆಯು ತೋಱ್ಕೆ ಪರಶಿವನ ಮೇಲಾಣೆ ತೋಱದಿರೆ [1] |
ನೆಲದೊಳಡಸುವೆನೆನಲು ಪಾರ್ವತಿ
ಮಲಸಮುದ್ಭವನಂಜಿ ಮೆಲ್ಲನೆ
ನೆಲೆಯು ತೋಱಿದ ದನುಜ ಹೊಕ್ಕಹ ಠಾವ ಬೆರಳನಲು || ೨೮

ತೋಱಲಿಕೆ ವಾಯುಜನದಾಕ್ಷಣ
ಮಾರುತ್ತೈದಿದ ಕೆಱೆಯ ನೀರನು
ಹಾಱಿದನೊಕ್ಕುಡುತೆಯಾಗಲಿಕವನು ಕೆಡೆದಿರಲು |
ಚೀಱಿದನು ಬ್ರಹ್ಮಾಂಡ ಮೊಡೆಯು
ಲ್ಕಾರುಬಟೆಯಲಿ ಹಿಡಿಯಲವನನು
ಮಾರುತಾತ್ಮಜ ಕುಡುತೆಯುದಕವ ಮತ್ತೆ ಕೆಱೆಯೊಳಗೆ || ೨೯

ಸೇರಿಸಿಯೆ ಬಳಿಕವನ ಹಿಡಿತಂ
ದೋರಣಿಸಿ ಬಳಿಕವಗೆ ನುಡಿದನು

---

1 ತೋರಾ ತೋಱದಿದ್ದರೆ ನಿನ್ನನೀನಿಂತು, ಕ. ಜ.

ಧಾರುಣಿಯು ಮೇಲಿನ್ನು ನಿನ್ನುಯು ಸರಿಗದಾರೆನುತ ।
ಧೀರಭೀಮನು ಬಿಟ್ಟೊಡಾಗಲು
ಸಾಖು ಸಾಖೆನುತಮನು ಬಂದಾ
ಮಾರುತಾತ್ಮಜಗೆಂದ ನಮ್ಮಯ ಯುದ್ಧರಂಗವನು ‖ ೮೦

ಎಱಗಲಿಕೆ ಬೞಿಕೊಬ್ಬರೊಬ್ಬರು
ಯುಱಮಣಿಸಿ ಮಿಗೆ ಮಲ್ಲವಿದ್ಯದ
ಪರಿಯ ತೋಱುತ ಬಕವೃಕೋದರಯುದ್ಧದದ್ಭುತನ ।
ಸುರರು ವಿದ್ಯಾಧರರು ಮೆಚ್ಚಲಿಸ
ವರು ಕಾದಿದರಂದು ಕೋಪದಿ
ನುಱಿಕುಲಾದ್ರಿಗಳ್ಗದೆ ಹುಡಿಹುಡಿಯಾಗಲುಱಮಣಿಸಿ ‖ ೮೧

ಕಿಡಿದರೊಬ್ಬರನೊಬ್ಬರುರದಲಿ
ಹೊಡೆದು ಹಿಂಗಿದರವರು ಹೆಮ್ಮರ
ನೊಡೆದು ಹೊಯ್ದಾಡಿದರು ತಿವಿದರು ತೋಳ ಬಲುಹಿನಲಿ ।
ಕೊಡೆಹಿದನು ಕಲಿ ಭೀಮನವನು
ಗ್ಗಡದಲೆಱಗಿದನುಂಡ ಕೂಟನ
ಕಡುಹ ತೋಱಿಂದೊದಱಿ ತುಡುಕಿದನನಿಲನಂದನನ ‖ ೮೨

ಸಿಕ್ಕಿದನು ಕಲಿಭೀಮನೆನೆ ಕ
ಯ್ಯಿಕ್ಕಿ ಕೊಟ್ಟನು ಮೈಯ್ಯನಸುರನ
ಹೊಕ್ಕು ತಿವಿದನು ತಿರಿಸಿ ಬದಿಯನು ನುಗ್ಗುನುಸಿಯಾಗೆ ।

ಬಕನ ಸಂಹಾರ.

ಬಿಕ್ಕುಳಿನ ತಾಳಗೆಯ ಮುಱಗಿನೊ
ಳೊಕ್ಕವುಸರಿನ ಖಳನ ಬಿಗಿದುಱಿ
ಡೊಕ್ಕರಿಸಿ ಹಿಡಿದಿಳಯೊಳಪ್ಪಳಿಸಿದನು ಕಲಿ ಭೀಮ ‖ ೮೩

ಕೊಂದು ದನುಜನ ಹೆಣನ ಛಂಡಿಯ
ಹಿಂದೆ ಬಂಧಿಸಿ ಪುರದ ಬಾಹೆಗೆ

ತಂದು ಬಿಸುಟನು ತನತನಗೆ ಜನಜಾಲ ಜೋಡಿಯಲಿ ।
ಬಂದು ಕಂಡುದು ನಮ್ಮ ಭೂಸುರ
ವೃಂದ ಧನ್ಯರು ವಿಪ್ರಜಾತಿಗೆ
ಸಂದುದಿಂದಗ್ಗಳಿಕೆ ಯೆಂದುದು ನೆರೆದ ಪೌರಜನ ॥ ೮೬

ಬಕನ ಸಂಹಾರವಾದ ಬಳಿಕ ವಿಪ್ರರು ಭೀಮನನ್ನು ಸ್ತುತಿಸುವಿಕೆ.

ಇದಿರುಗೊಂಡರು ಧೀರಭೀಮನ
ಸದನವನು ಹೊಗಿಸಿದರು ಹರುಷದಿ
ವಿದಿತಭೂಸುರರೈದೆ ನುಡಿದರು ಭೀಮಸೇನಂಗೆ ।
ವಧಿಸಿ ಬಕನನು ನಮ್ಮ ರಕ್ಷಿಸಿ
ವಿದಿತದಿವಸದ ಪರಮಪಾಕವ
ಮುದದಿ ನೀವೇ ಕೊಂಬುದೆಂದರೆ ಭೀಮನಿಂತೆಂದ ॥ ೮೫

ವೀರನಾರಾಯಣಗದರ್ಪಿಸಿ
ಭೂರಿಭೋಜನ ಮಾಡಿ ನೀವಿದ
ನಾರು ನಿಲಿಸದೆ ಸಕಲಜಂಗಮರೂಪಗಿಕ್ಕುವುದು ।
ಧಾರುಣೀಪತಿ ಧರ್ಮಸುತ ತಾ
ಹಾರಯಿಸಿ ಯಿಹುದೆಂದು ಕುಂತೀ
ನಾರಿ ತಾ ಪತಿಕರಿಸೆ ಪಾರ್ಥನು ಚಲುವಮತವೆಂದ ॥ ೮೬

ಧೀರರೈವರು ಮುದದಿ ಮನ್ನಿಸಿ
ಧಾರುಣಿವ್ರಾತವನು ವರಕಲಿ
ಮಾರುತಾತ್ಮಜ ಕರವ ಜೋಡಿಸಿ ಯೆಂದ ವಿಪ್ರರಿಗೆ ।
ಊರು ನಿಮಗಿದು ಸರ್ವಮಾನ್ಯವು
ಧಾರುಣೀಸುರರಂಜದಿರಿ ನಿಮ
ಗಾರು ಸಿವಿಗ್ಮಾಯಗ್ರಹಾರಕೆ ಮುಸಿವರಿಲ್ಲೆಂದ ॥ ೮೭

ಎಂದು ಭೂಸುರಜನಕೆ ಧಾರೆಯ
ನಂದೆ ಯೆರೆದನು ಬಳಿಕ ವಿಪ್ರರ

ವೃಂದವೆನು ಕಳುಹಿದನು ಮಾರುತನಂದನೊಲವಿನಲಿ ।
ಅಂದಿಗಾಯಿತವರ್ಧವತ್ಸರ
ಬಂದು ಪಾಂಡವರೇಕಚಕ್ರಕೆ
ಮುಂದಣುತ್ತರಕಥೆಯ ಕೇಳ್ವು ರಾಯ ನೀನೆಂದ ॥ ೮೮

ರಾಯಯೋಗ್ಯವು ನಮ್ಮ ಪುರವರ
ಕಾಯಿತೈ ಪರಿತೋಷ ನಿಮ್ಮಿಂ
ದಾಯಿತೈ ಸುಕ್ಷೇಮ ವಿಪ್ರಸ್ತೋಮ ವಿಂತೆಂದು ।
ಆಯು ಸಿರಿ ನಿಮಗಕ್ಕೆ ವರಬ
ಕಾಯುಧನ ಕೃಪೆಯಿಂದಲೀಗಳ
ರಾಯ ಗದುಗಿನ ವೀರನಾರಾಯಣನ ಕರುಣದಲಿ ॥ ೮೯

ಎನುತಲಾ ಬಹುಧಾನ್ಯ ನಗರಿಯ
ಜನವು ಸಂತೋಷದಲಿ ಕುಂತೀ
ತನುಜರಿಗೆ ಬಹುಹರಕೆಗೊಡುತಲಿ ದ್ವಿಜರು ಬೀಳ್ಕೊಂಡು ।
ಮನುಜವೈರಿಗೆ ನಮ್ಮ ಬಂಧನ
ದನುವ ತೊಲಗಿಸಿದಧಿಕಸಹಸಿಗಳ
ಳನುವಿನಲಿ ಪಾಲಿಸುಗೆ ನಾರಾಯಣನು ಯಿವರುಗಳ ॥ ೯೦

ಈ ಯಮಾನುಷಶಕ್ತಿ ಯಿದು ಸುರ
ರಾಯಯೋಗ್ಯವು ನಮ್ಮ ವಿಪ್ರನಿ
ಕಾಯಕಿದು ಸಾಮಾನ್ಯವೇ ನಮ್ಮಗ್ರಹಾರವನು ।
ಕಾಯಿದವರೀಗೆಂದು ವಿಪುಳ
ಶ್ರೀಯ ಪದ್ಮಜಸೋಮಧರನಾ
ರಾಯಣರು ಕೊಡಲೆಂದು ಹರಸಿದುವಾ ಜನಸ್ತೋಮ ॥ ೯೧

ಇಪ್ಪತ್ತಮೂರನೆಯ ಸಂಧಿ ಮುಗಿದುದು.

# ಇಪ್ಪತ್ತನಾಲ್ಕನೆಯ ಸಂಧಿ.

---

ಸೂಚನೆ.

ವೀರಕುಂತೀತನುಜರಿರುಳಂ
ಗಾರವರ್ಮನ ಗೆಲಿದು ಹೊಕ್ಕರು
ಧಾರುಣೀಸುರವೇಷದಲಿ ಪಾಂಚಾಲಪುರವರವ ||

ಅರಸ ಕೇಳ್ಕಲಿ ಬಕಾಸುರ
ಹರಣಸಮನಂತರದೊಳಾ
ಪುರವರದೊಳಿದ್ದರು ವಿಮಳವಿಪ್ರಸ್ತೋಮದೊಡಗೂಡಿ |

ಪ್ರವಾಸಿಯಾದ ಬ್ರಾಹ್ಮಣನ ದರ್ಶನ ಮತ್ತು ಭಾಷಣ.

ವರುಷ ತುಂಬಿತು ನಮ್ಮ ಹಸ್ತಿನ
ಪುರವ ಹೊರವಂಟಂದಿನಲಿ ಯೆಂ
ದರಸ ಕುಂತೀದೇವಿಗೆಂದನು ಭೂಪ ಕೇಳೆಂದ ||

ಆಸಮಯದಲಿ ಬಂದನೊಬ್ಬನು
ಭೂಸುರನು ಸುಕೃತೂಹಳನು ಬಹು
ದೇಶಪರ್ಯಟನಪ್ರವಾಸಾಭ್ಯಾಸಶಿಕ್ಷೆಯಲಿ |
ಗ್ರಾಸಯಾಚಕನಾಗಿ ತನ್ನ ನಿ
ವಾಸದಲಿ ಪರಿತುಷ್ಟನಾದ ಮ
ಹೀಸುರನ ಮಾತಾಡಿಸಿದನಂದರಸ ವಿನಯದಲಿ ||

ಎತ್ತಣಿಂದಲಿ ಬರವು ಬಟ್ಟಿಕಿ
ನ್ನೆತ್ತ ಗಮನವು ಪೂರ್ವಸುಕೃತದ

ಹೊತ್ತಿದಿಂದಿನದಿವಸವಿದೆಲಾ ಸುಜನಸಂಸರ್ಗ ।
ಉತ್ತರೋತ್ತರಸಿದ್ಧಿಯಿಲ್ಲಿಂ
ದೆತ್ತ ನಿಮಗೆನೆ ಹಸ್ತಿನಾಪುರ
ದತ್ತಣಿಂದವೆ ಬಂದೆವಾವುದು ದೇಶ ನಿಮಗೆಂದ ॥ ೩

ನಾವು ನಿಮ್ಮೋಪಾದಿಯಲಿ ತೀ
ರ್ಥಾವಲೋಕನಪರರು ಭಿಕ್ಷಾ
ಜೀವಿಗಳು ನೀವೇಸು ದಿನ ಗಜಪುರಿಯ ಹೊಱವೆಂಟು ।
ಆವನಲ್ಲಿಗೆ ಪತಿ ಯುಧಿಷ್ಠಿರ
ದೇವನೋ ದುರ್ಯೋಧನನೊ ಮೇ
ಣಾವುದತಿಶಯ ವುಂಟು ಕೌರವಪಾಂಡುತನಯರಲಿ ॥ ೪

ಮರುಳುಗಳೆಲಾ ನಮ್ಮ ನಾಡಿಸಿ
ಮರುಳು ಮಾಡುವ ಪರಿಯೊ ಪಾಂಡವ
ರರಗಿನರಮನೆಯಲ್ಲಿ ಬೆಂದರು ಲೋಕ ವೆಱಿಯಲಿಕೆ ।
ಅರಸ ಕೌರವರಾಯನಾತನ
ಸಿರಿಯನಾತನ ಬಲುಹನಾತನ
ಯಿರವನಭಿವರ್ಣಿಸುವೊಡಾವೆನು ವಿಪ್ರ ಕೇಳೆಂದ ॥ ೫

ದುರ್ಯೋಧನನ ಐಶ್ವರ್ಯವರ್ಣನೆ.

ಓಲಗಕೆ ಬರುತಿಪ್ಪ ಕರಿಗಳ
ಕೀಳುದಾನದಿನೆಸೆವ ತುಂಬೆಯು
ಲೋಲಭೂಪರ ರತ್ನಭೂಷಣವ್ಯಸ ರಜದಿಂದ ।
ಮೇಲೆ ಹುಡಿ ಯಿಡೆ ಹೊಡೆವ ನಾನಾ
ಕಾಳೆ ಶಂಖವು ಭೇರಿತಂಬಟೆ
ಮೇಲುದನಿ ಮುಚ್ಚುವುದು ಲೋಕದ ಕರ್ಣಕೋಟರವ ॥ ೬

ಅವನಿಪಗೆ ಮಂತ್ರಾಕ್ಷತೆ ಮಹಿಸು
ರವರರು ತರಲು ಬೀಯ್ಯವಹುದು ಗ

ಸಾಱಲಿದ ನೃಪಕನ್ಯಕೆಗೆ ವರ
ನಾರು ಲಗ್ನವಿದೆಂದು ಬಱಿಕಾ
ರಾರು ಬಂದರು ಭೂಪತಿಗಳೆಂದರಸ ವಿನಯದಲಿ ।
ಭೂರಿಯಲಿ ನಮಗುಂಟೆ ಮೃಷ್ಟಾ
ಹಾರದಕ್ಷಿಣೆ ನಮ್ಮಭೀಷ್ಟ ವಿ
ಹಾರವಾರ್ತೆ ಯಿದೆಂದು ಧರ್ಮಜ ನುಡಿದನಾದ್ವಿಜಗೆ ॥ ೧೧

ಇವರು ಕಪಟೋಪಾಧ್ಯರೆಂಬುದ
ನವರು ಬಲ್ಲರೆ ಭೂಮಿದೇವ
ಪ್ರವರರೈ ಸಲೆ ಯೆಂದು ಬಗೆದನು ಪಾಂಡುನಂದನರ ।
ಅವನಿಯಲಿ ಪಾತಾಳದಲಿ ಸುರ
ಭವನದಲಿ ಪಾಂಚಾಲತನುಜೆಗೆ
ಯುವತಿಯರು ಸರಿಯಿಲ್ಲ ವೆಂಬುದ ಕೇಳ್ದ ನಾನೆಂದ ॥ ೧೨

ಪಾಂಡುಪುತ್ರರು ಹೋದರೆಂದು ಸ್ವಯಂವರಕ್ಕಾಗಿ ದ್ರುಪದನ ಪ್ರಯತ್ನ.

ಆಕೆಗೆಣೆಯಹ ವರನನೀನರ
ಲೋಕದಲಿ ನಾ ಕಾಣೆನರ್ಜುನ
ನೀಕುಮಾರಿಗೆ ರಮಣನೆಂದೇ ಮನದ ಸಂಕಲ್ಪ ।
ಈಕೆಯುಪದೆಶೆಯುದಯದಲಿ ಕುಂ
ತೀಕುಮಾರಕರನಲಮುಖದಲಿ
ನಾಕದಲಿ ನೆಲೆಗೊಂಡರೆಂದುಮ್ಮಳಿಸುವನು ದ್ರುಪದ ॥ ೧೩

ಉಮ್ಮಳಿಸಿ ದ್ರುಪದಾಂಕ ಮುನ್ನಿನ
ಕರ್ಮವನು ಪರುಠವಿಸಿ ಶಂಕರ
ನೆಮ್ಮ ಮಗಳಿಗೆ ವರವ ಕೊಟ್ಟನು ಪಾರ್ಥ ಪತಿಯೆಂದು ।
ಇಮ್ಮೊ ನುಡಿ ಶಿವಗಿಲ್ಲ ವೆನುತಲಿ
ಪೊಮ್ಮ ದ್ರುಪದನು ಶಿವನ ಧ್ಯಾನಿಸಿ
ಹೆಮ್ಮೆಗಳ್ಕಿಯಿನ್ನಾರಿಗೀವೆನೆನಲ್ಕೆ ಶಶಿಮೌಳಿ ॥ ೧೪

ಬಂದು ದ್ರುಪದಗೆ ನಿನ್ನ ಮಗಳಿಗೆ
ಯಿಂದು ಪತಿಯಿಲ್ಲೆಂದು ಒಱದೇ
ಮೆಂದಮತಿ ನೀನಾಗದಿರು ಕೊಳ್ಳೆಂದು ಕರುಣಿಸಿದ ।
ಬಂದು ಧನುವನು ಬಾಣಪಂಚಕ
ದಿಂದ ಮತ್ಸ್ಯದ ಯಂತ್ರವನು ತಾ
ನೊಂದು ಭಾರಿಯೆ ಯೆಚ್ಚೊಡಾತನೆ ರಮಣನಹನೆಂದ ॥ ೧೫

ಎಂದು ಶಿವ ಕರುಣಿಸಿದ ಚಾಪವೆ
ನೆಂದು ತಾನದು ಮಂದರಾಚಲ
ದಿಂದ ತೂಕಿಯೆ ವರಪಿನಾಕವ ಕೊಟ್ಟನಾಶಿವನು ।
ಎಂದು ಹರ ಕೊಟ್ಟುದನು ದ್ರುಪದನು
ತಂದು ಮಂದಿರಕಿರಿಸಿ ಬಱಿಕರ
ವಿಂದನಾಭನ ನೆನೆದ ಪಾಂಡವನೃಪರ ರಕ್ಷಿಪುದು ॥ ೧೬

ದ್ರುಪದನ ಚಿಂತೆ.

ಎಂದು ಮನದುಗುಡದಲಿ ತಾ ಗೋ
ವಿಂದನಂಘ್ರಿಯ ದೂಱುತಿಪ್ಪನ
ಯಿಂದುಧರ ನುಡಿದುದನು ಸಲಿಸುವುದೆಂದು ಚಿಂತಿಸಿದ ।
ಬಂದೆರಡು ಬೋಳವನು ಕಾಯದೆ
ಕೊಂದೆಲೈ ಗೋವಿಂದ ಕುಂತೀ
ನಂದನರನಕಟೆನುತ ದ್ರುಪದನು ಮತ್ತೆ ಮನದೊಳಗೆ ॥ ೧೭

ಬಂದ ನೆನೆವನು ಸರ್ವಥಾ ಗೋ
ವಿಂದ ಕುಂತೀನಂದನರಿಗಾ
ವೊಂದು ಬಾಧೆಯನವರಿಗಿಕ್ಕನು ಪಾಂಡುಪುತ್ರರಿಗೆ ।
ಎಂದು ಮನದಲಿ ಹಿಡಿವ ಸಂಶಯ
ವೊಂದನಾಗಳು ಪಾಂಡುಪುತ್ರರ
ಛಂದವನು ತಾನಱಿಯುದಾಗಳು ದ್ರುಪದಭೂಪಾಲ ॥ ೧೮

ಜ್ವಲನನುಜೆ [1] ನುಂಗಿದನೊ ಮೇಣಂ
ಜಲಿಸಿ ಬಿಟ್ಟನೊ ಬಲ್ಲನಾವನು
ಕಲುಷಹೃದಯನು ಕಮಲನಾಭನು ಪಾಂಡುನಂದನರ ।
ಸುಳಿವಗೋಚರವಕಟ ಹೂಹೆಗ
ಳಳಿವ ಹರಯವೆ ಶಿವ ಶಿವಾಯೆಂ
ದಳಲು ದೊರೆಯಲಿ ಮುಳುಗಿ ಮೂಡುವನಂದು ಪಾಂಚಾಲ ॥

ಅರಸ ಕೇಳ್ವನು ಶಕುನ ದೈವ
ಜ್ಞರೊಳಗುಪಶ್ರುತಿಗಳಲಿ ಋಷಿಗಳ
ಪರಮಸಿದ್ಧಾಂತದಲಿ ಮಂತ್ರಾವೇಶರಚನೆಯಲಿ ।
ಧರೆಯೊಳೀಗಲು ಪಾಂಡುಸುತಸಂ
ಚರಣವುಂಟೆನು ಸತ್ಯವೆಂದುಪ
ಚರಿಸಿ ನುಡಿದು ಪುರೋಹಿತನು ಸಂತೈಸುವನು ನೃಪನ ॥ ೨೦

ಅನೇಕ ರಾಜರುಗಳಿಗೆ ಪತ್ರಿಕಾಪ್ರೇಷಣ.

ಸರಸಿಜಾನನೆ ನೋಡಿ ನೃಪರಲಿ
ವರಿಸುವಳು ವಲ್ಲಭರನೆಂದುಪ
ಚರಿಸುವುದು ಸವಿಮಾತುಗಳ ಸಾರಾಯಸೋನೆಯಲಿ ।
ಬರಿಸುವುದು ಬಹುಕುಲದ ಭೂಮಿಾ
ಶ್ವರರನವರೊಳು ಪುಣ್ಯದಲಿ ಗೋ
ಚರಿಸಲೀಗರುವೆಯರ ದೇವಿಗೆ ಪಾಂಡುನಂದನರು ॥ ೨೧

ಆದೊಡೀಮಗುವಿನ ಮಹಾಪು
ಣ್ಯೋದಯದ ಫಲವೈಸಲೆ ಬರೆ
ಮೇದಿನೀಶ್ವರರೆಲ್ಲರಿಗೆ ಲೇಖಾರ್ಥ ಸಂಗತಿಯ ।
ಸೋದರರು ಸಹಿತಾಸುಯೋಧನ
ನಾದಿಯಾದ ಸಮಸ್ತನೃಪರು ವಿ
ವಾದವಿಲ್ಲದೆ ಬರಲಿ ಕಟ್ಟಿಸು ಪಾವುಡಪನೆಂದ ॥ ೨೨

1 ಜ್ವಲನಸಖ, ಖ.

ಬರೆದನೋಲೆಗಳಖಿಳಭೂಮಿಪ
ಶ್ವರರಿಗುಡುಗೊರೆಸಹಿತ ದೂತರು
ಹರಿದರುತ್ತರಪೂರ್ವದಕ್ಷಿಣಪಶ್ಚಿಮಂಗಳಿಗೆ ।
ಧರೆಯ ಕನ್ಯಾಜನಶಿರೋಮಣಿ
ದ್ರುಪದತನುಜೆಯ ಸ್ವಯಂ
ವರಕರಸುಗಳು ಬಹುದೆಂದು ವಾಚಿಸಿತಖಿಳಲೇಖಾರ್ಥ ॥ ೨೩

ಮಾಡಿದರೆ ಶತರಾಜಸೂಯವ
ಗೂಡುವಳು ಪಚಿ ಮುಖಸಹಸ್ರವ
ಮಾಡಿ ಮೋಕ್ಷ ಜನಿಸಿದರೆ ಬಹಳೇ ದ್ರೌಪದೀದೇವಿ ।
ನೋಡುವೆವು ನಡೆ ಜನ್ಮಶತದಲಿ
ಕೂಡೆ ಬೆಳೆಸಿದ ಪುಣ್ಯಫಲ ಕೈ
ಗೂಡುವೊಡೆ ತಪ್ಪೇನೆನುತ ನೆರೆದುದು ನೃಪಸ್ತೋಮ ॥ ೨೪

ಆಪುರೋಹಿತವಚನದಲಿ ನಿ
ರ್ವಾಪಿತಾಂತರ್ವ್ಯಥೆಯುಳವನಿಪ
ನಾಪುರೋಪಾಂತರದ ಸುತ್ತಲು ಮೂರುಯೋಜನದ ।
ತೋಪಿನಲಿ ಕಟ್ಟಿಸಿದನಗ್ಗದ
ಭೂಪರಿಗೆ ಭವನವನು ಕೇಳ್ವ
ದ್ರೌಪದಿಯ ವೈವಾಹರಚನೆಯ ರಾಮಣೀಯಕವ ॥ ೨೫

ಬ್ರಾಹ್ಮಣರೆಲ್ಲರೂ ಪ್ರಯಾಣ ನಿಶ್ಚಯಿಸುವಿಕೆ.

ನೆರೆದಿಹರು ನಾನಾದಿಗಂತದ
ಧರಣಿಪರು ಕನ್ಯಾರ್ಥಿಗಳು ಭೂ
ಸುರಸಮೂಹದ ಸಾಲು ಮೊಳೆದುದು ದಕ್ಷಿಣಾರ್ಥಿಗಳ ।
ಪರದಣಿಗಳು ನಿಮಗೇನು ಕನ್ಯಾ
ವರಣವೊ ವರದಕ್ಷಿಣಾರ್ಥವೊ
ಬರವು ನಿಮಗುಂಟೇನೆನುತ ದ್ವಿಜನಿವರ ಬೆಸಗೊಂಡ ॥ ೨೬

ಈಸು ಪರಿಯಲಿ ನಮ್ಮ ನೀವುಪ
* ಹಾಸವಾಡವಿರಿಂದು ನಮಗೆ ಮ
ಹೀಶಕನ್ಯಾರ್ಥಿತ್ವದಲಿ ನಾವೇಕೆ * ನೃಪರೇಕೆ ।
ಲೇಸು ನಿಮ್ಮೊಡನಾವು ಬಹೆವ್ಯೆ
ಭೂಸುರರ ನೆರವುಂಟಲೇ ಶುಭ
ವಾಸವನು ಬೆಸಗೊಂಬೆವೆಂದನು ಧರ್ಮನಂದನನು ॥　　೧೭

ಅವರು ಬಟಕ ನಿಜಪ್ರಯೋಜನ
ಭವನಕೈದಿದರಖಿಳವಾರ್ತಾ
ವಿವರಣವ್ಯಾಖ್ಯಾನಸಮನಂತರದ ಸಮಯದಲಿ ।
ಇವರು ತಮ್ಮೊಳಗೆಂದರೆಮಗೀ
ಯವನಿಸುರಪುರದಲ್ಲಿ ವೇದ
ಶ್ರವಣದಲ್ಲಿ ನಿರೀಕ್ಷಿಸುವುದಾದ್ರುಪದಪಟ್ಟಣವ ॥　　೧೮

ಆಲತಾಂಗಿಯ ಮದುವೆಗವನೀ
ಪಾಲವರ್ಗದ ಬರವು ಗಡ ಹರ
ನೂಗದ ಹೆಚಾಳು ಮಕರಧ್ವಜನ ಮೌಳಿ ಗಡ ।
ಮೇಳವೇ ಕಿವಿಗಳಿಗೆ ಹಂಗಹ
ವಾಲಿಗಳ ಪರಿವಿಡಿಯಲೆವೆಗಳು
ಸಾಲುವವೆ ಯೆಂದೈವರಾಳೋಚಿಸಿದರಡಿಗಡಿಗೆ ॥　　೧೯

ಆಗ ಪಾಂಡುಪುತ್ರರಿಗೆ ನಾನಾವಿಧಶಕುನ.

ಅರಸ ಚಿತ್ತೈಸಮಳಲಗ್ನಾಂ
ತರದೊಳವರುದಯದಲಿಹೊಱವಂ
ಟರು ಸುವಿದ್ಯಾಪರಿಣತರು ಪಂಡಿತರ ಗಡಣದಲಿ ।
ಬರುತ ಕಂಡರು ಕಳಸಕನ್ನೆಂ
ವರಯುವತಿಖಗಮೃಗದ ಬಲಸು
ಸ್ವರಸುಗಂಧಾನಿಳಸುಸಂಪದಸಾರಶಕುನಗಳ ॥　　೨೦

* ಹಾಸ್ಯವಾಡದಿರಾವು ಭಿಕ್ಷುಕರೈಸಲೇ ಕನ್ಯಾರ್ಥಿಗಳು ನಾವೇಕೆ *

ಚಾರುಶಕುನವಿದುತ್ತರೋತ್ತರ
ವಾರಿಗಿದು ಫಲಿಸುವುದೊ ನಮ್ಮೊಳು
ಹಾರುವರ ಹುಲುವೊತ್ತ ಕನ್ಯಾಲಾಭಫಲವಿದಕೆ ।
ಭೂರಿಭಾಗ್ಯರು ನಮ್ಮ ವಿಪ್ರರೊ
ಳಾರೆನುತ ತಚ್ಛಕುನಫಲವಿ
ಸ್ತಾರವನು ವಿವರಿಸುತ ನಡೆದುದು ಭೂಸುರವ್ರಾತ ॥ ೩೧

ಧರಣಿಯಮರರ ಗಡಣದಲಿ ನಾ
ಲ್ಕೆರಡು ಪಯಣವ ಬರುತ ಪಥದಲಿ
ವರಮುನಿಗಳಾಶ್ರಮದೊಳಗೆ ಪರಾಶರಾತ್ಮಜನ ।
ದರುಶನವ ಮಾಡಿದರು ಶಕುನದ
ನಿರುತವನು ವಿಸ್ತರಿಸಿ ಕೇಳಲು
ಕರುಣಿಸಿದ ನಿಮಗಹುದು ಬಾಸಿಗವೆಂದು ಬೀಳ್ಕೊಟ್ಟ ॥ ೩೨

ಗಮನಭರದಲಿ ಭಾರಿಯಧ್ವ
ಶ್ರಮವ ನೋಡದೆ ಭೂಮಿಪರು ಬರ [1]
ಲಮಳಬುಧಜನ ಮಿಕ್ಕು ನಡೆದುದು ಮುಂದೆ ಸಂದಣಿಸಿ [2] ।
ದ್ಯುಮಣಿ ಕೈಸೆಱೆಯಾದನತ್ತಲು
ಭ್ರಮಣದಲಿ ಬೆಱಗಾಗೆ ಭೂಪ್ರೋ
ತ್ತಮರು ಬಂದರು ಬಹಳಗಹನದೊಳರ್ಧರಾತ್ರದಲಿ ॥ ೩೩

ಮುಂದೆ ಪಾರ್ಥನ ಬೀಸುಗೊಳ್ಳಿಗ
ಳಿಂದ ತಮದೊಡ್ಡೋಡೆ ಬೆಳಗಿನ
ಹಿಂದೆ ಕುಂತೀದೇವಿ ಧರ್ಮಜನಕುಲಸಹದೇವ ।
ಹಿಂದೆ ಭೀಮನ ಕಯ್ಯ ಕೊಳ್ಳಿಯು
ಬಿಂದು ಬೆಳಗಿನಲಸಿಬರಟವೀ
ವೃಂದವಲಿ ಬರುತಿರ್ದರಿರುಳವನೀಶ ಕೇಳೆಂದ ॥ ೩೪

1 ಪಥದಲಿ, ಚ. 2 ತವ:ದಬಾವಡಿಯಿಕ್ಕಿದರೆ ಗತಿಬಾವಳವ ಬಿಡದೆ, ಚ.

ಅಂದು ಪಾಂಡವರೈವರಾಗಿರಿ
ಕಂದರದ ಮೇಲಿಳಿದು ಬರೆಬರೆ
ಮುಂದೆ ತಾವ್ ಗೀರ್ವಾಣಗಂಗೆಯ ಕಂಡರೈ ಬಳಿಕ ।
ವಿಂಧ್ಯಪರ್ವತದಲ್ಲಿ ಕುಂತೀ
ನಂದನರು ಬರಬರಲು ರಾತ್ರಿಯೊ
ಳಂದು ಮೂಡಿದ ಪೂರ್ವಭಾಗದೊಳರ್ಧರಾತ್ರದಲಿ ॥ ೩೫

ಬರುತ ಕಂಡನು ಮುಂದೆ ಗಂಧ
ರ್ವರ ವಧೂನಿಕುರುಂಬವನು ನೇ
ವು‍ರದ ಝಣಂವದ ಕಂಕಣರಭಸಝೇಂಕೃತಿಯ ।
ವರದ ಕಂಗಳ ಬೆಳಗಿನಲಿ ತಮ
ದಿರುಳು ಬೀತುದು ಬೆಸೆವೃದಾಗಳ
ಕುರುಳಕಾಳಗೆಯಿಂದ ಕಾಂತಾವರಕದಂಬದಲಿ ॥ ೩೬

ಅಲ್ಲಿ ಬಂದ ಸುಂದರಿಯರ ವರ್ಣನೆ

ಲಲಿತತನುಕಾಂತಿಗಳ ವೊಗೆದರು
ತಿಳಿಗೊಳನಜಲವೆಂದು ಕಂಗಳ
ಹೊಳೆಯ ಮೀನೆಂದು ಹಕ್ಕಳಿಸಿದರು ಹಿಡಿಹಿನಲಿ ।
ಅಲರಿದಂಬುಜವೆಂದು ವದನಕೆ
ನಿಲುಕಿ ತುಂಬೆಗಳೆಂದು ಕುರುಳಿಂ
ಗಳುಕಿ ಕೈಗಳ ತೆಗೆದರಲ್ಲಿಯ ಮುಗುದಖಚರಿಯರು ॥ ೩೭

ಅವರ ಮುಖಕಾಂತಿಗಳಲಂಗ
ಛವಿಗಳಲಿ ಕಂಕಣದ ಹಾರದ
ವಿವಿಧ ರತ್ನಾಭರಣಕಿರಣದ ಲಲಿತಲಹರಿಯಲಿ ।
ಸವೆದುದಗ್ಗದ ತಿಮಿರವನಿಬರ
ನಿವರ ಕಂಡರು ಜಲವಿಹಾರವ
ದಿವಿಜಸತಿಯರಲಾಯೆನುತ ಬರುತಿರ್ದರಡವಿಯಲಿ ॥ ೩೮

ನಾರಿಯರು ಕಂಡರು ಸುಲಜ್ಜಾ
ಭಾರದಲಿ ತಡಿಗಳಿಗೆ ಹಾಯ್ದರು
ನೀರೆಗಳ ತೆರೆವಿಡಿದರಂಗೋಪಾಂಗಲತೆಗಳಿಗೆ |
ಅರಿವರು ನಡುವಿರುಳು ದರ್ಪವಿ
ಕಾರದಲಿ ಕೈಕೊಳ್ಳರೆನುತಂ
ಗಾರವರ್ಮನು ಧನುವ ಕೊಂಡನು ದಿಟ್ಟಿಸಿದನಿವರ [1] || ೩೯

### ಗಂಧರ್ವ ಮತ್ತು ಅರ್ಜುನರ ಸಂವಾದ.

ಈಸು ಭರದಲಿ ಗಮನವೆಲ್ಲಿಗೆ
ದೇಶಕಾಲವ ನೋಡದೀಸ
ರ್ವಾಸುರದ ಸಂರಂಭವೇನೆನೆ ಪಾರ್ಥನಸುನಗುತ |
ದೇಶವಿದು ವನ ಕಾಲ ನಡುವಿರು
ಳ್ಳ ಸಲೆ ನಿಜಕಾರ್ಯಸಂಗತಿ
ಗೋಸುಗವೆ ಬರವೆಂದನರ್ಜುನ ಖಚರರಾಜಂಗೆ || ೪೦

ಎನಲು ಪಾರ್ಥನ ಮಾತ ಕೇಳಿಯೆ
ಕನಲಿ ಸುರನಾಯಕನು ತನ್ನಯ
ವಿನುತವನಿತಾಸ್ತೋಮಲಜ್ಜೆಯ ಕಂಡು ಕೋಪದಲಿ |
ತನುವ ಸಂಪರಿಸುತ್ತ ಫಲ್ಗುನ
ನನುವ ಕಂಡಳುಕುತ್ತ ಮನದಲಿ
ಮನುಜರಿವರಾರೆನುತ ನುಡಿದನು ವಿಜಯನಿದಿರಿನಲಿ || ೪೧

### ಪಾಂಡವರ ಮೇಲೆ ಗಂಧರ್ವನ ಬಾಣಪ್ರಯೋಗ.

ನರರು ಸುಳಿವುದು ಪೂರ್ವಭಾಗದೊ
ಳಿರುಳಿನುತ್ತರಭಾಗವಿದು ಖೇ
ಚರರು ಸುಳಿವುದು ನೀವು ಚತುರಾನನನ ಸೃಷ್ಟಿಯಲಿ |
ಇರುಳಿನುತ್ತರಭಾಗದಲಿ ನೀವ್

---

1 ನುಡಿಸಿದನು ನರನ, ಚ.

ನರರು ಸುಟಿವುದ್ದಂಡದರ್ಪ
ಜ್ವರಿತರಿದಕೌಷಧಿಯು ನೆರೆವೆನೆನುತ್ತ ತೆಗೆದೆಚ್ಚ ॥ ೪೨

ಅರ್ಜುನನ ಆಗ್ನೇಯಾಸ್ತ್ರದಿಂದ ರಥವು ಹೋಗಲು ಹೆಂಡತಿಯ ಪ್ರಾರ್ಥನೆ.

ಕನಲಿ ಫಲುಗುಣನಾದೊಡಿದ ಕೊ
ಳ್ಳೆನುತ ಕೊಳ್ಳಿಯೊಳಟ್ಟನಗ್ನಿಯು
ನೆನೆದು ಮಂತ್ರಿಸಲುರಿಮುಖದ ಕರ್ಜೊಗೆಯು ಮಬ್ಬಿನಲಿ ।
ಹೊನಲುಗಿಡಿಗಳ ತಗಡುರಿಯು ಕೊಂ
ಡಿನಲಿ ಮುತ್ತಿತು ರಥವನಾತನ
ತನುವನಾತನ ಧನುವನಾತನ ಸರಳಸಾಯಕವ ॥ ೪೩

ಉರಿದುದಾರಥವವನ ಮೈಯ್ಯಲಿ
ಕರಿಕುವರಿ ದುಡುಹಾಯ್ದು [1] ಪೊಕ್ಕನು
ಸರಸಿಯನು ಶಿಖಿಯೊಡನೆ ಹೊಕ್ಕುದು ನೀರ ನೆಱೆ ಸುಱಿದು ।
ತರುಣಿ ಹೋ ಹೋ ಕೆಟ್ಟೆನೆಂದ
ಬ್ಬರಿಸಲಾಗಂಧರ್ವನಂಗನೆ
ಹರಿದಳಡಗ್ಗೈಯಿಂದ ಸಂಹರಿಸುತ್ತ ಬಿಡುಮುಡಿಯು ॥ ೪೪

ಬಂದು ಯಮನಂದನನ ಚರಣ
ದ್ವಂದ್ವದಲಿ ಚಾಚಿದಳು ನೊಸಲನು
ತಂದೆ ಕರುಣಿಸು ಕಾಂತಭಿಕ್ಷವ ಕರುಣಿಸೆಂದೆನುತ ।
ಮುಂದು ವರಿಯದಿರೆಲೆ ಧನಂಜಯ
ಕೊಂದರೆನ್ನಾಣೀಕೆಯಾಳ್ದನ
ತಂದು ಕೊಡುವುದು ಬೇಗದುಪಸಂಹರಿಸು ಶಿಖಿಶರವ ॥ ೪೫

ಧರ್ಮರಾಯನ ಅಪ್ಪಣೆಯಂತೆ ಆಗ್ನೇಯಾಸ್ತ್ರವನ್ನು ತೆಗೆದುದು.

ಎನೆ ಹಸಾದ ವೆನುತ್ತ ನಿಮಿಷದೊ
ಳನಲಬಾಣವ ತೆಗೆದ [2] ನಿತ್ತಲು

1 ತರಲೋಡಿ, ಖ ಚ.　　2 ನೆನು ನಂದಿಸಿದ, ಚ.

ಮನದ ಸುಮ್ಮಾನದಲಿ ಲಜ್ಜಾವನತಮುಖನಾಗಿ ।
ಮನುಜರಿವರಲ್ಲಾರು ನೋಡುವೆ
ನೆನುತ ಹತ್ತಿರೆ ಬಂದು ನೀವಾ
ರಿನಿತುಸಾಹಸಮಲ್ಲರೆನುತರ್ಜುನನ ಬೆಸಗೊಂಡ ॥ ೪೬

ನರರು ವೈದೇಶಿಗರು ಕಾರ್ಯಾ
ತುರರು ನಾವೆನಲರ್ಜುನನುಪ
ಚರಿಸಿ ವಿನಯಗುಣಾಭಿಮುಖದಲಿ ನಗುತ ಬೆಸಗೊಳಲು [1] ।

ಗಂಧರ್ವಾರ್ಜುನರ ಸ್ನೇಹ ಮತ್ತು ಭಾಷಣ.

ಧರೆಯೊಳುಂಟೇ ಪಾಂಡುಸುತರೆಂ
ಬರಸುಗಳ ನೀ ಕೇಳಿ ಬಲ್ಲೈ
ನಿರುತನಾವವರೆಂದು ನುಡಿದನು ನಗುತ ಕಲಿಪಾರ್ಥ ॥ ೪೭

ಶಿವಶಿವಾದೊಡೆ ಯಮಪುರಂದರ
ಪವನನಶ್ವಿನಿದೇವರಿಗೆ ಸಂ
ಭವಿಸದವರೈ ನೀವೆಮಗೆ ಸಂಭಾವನೀಯರಲ ।
ಇವೆ ಸಹಸ್ರತುರಂಗದಿವ್ಯಾ
ಸ್ತ್ರವವೆನಘ್ರ್ಯಾಭರಣರತ್ನ
ಪ್ರವರವಿವೆ ಕಾರುಣ್ಯದಲಿ ಕೈಕೊಂಬುದಿವನೆಂದ ॥ ೪೮

ಬಂದವೆಮಗಿವು ನಿಮ್ಮ ನಾವ್ ಬೇ
ರೊಂದು ಕಾಣೆವು ಪರಮಬಾಂಧವ
ರಿಂದು ವೊದಲಾಗೆಮಗೆ ನೀನೇ ಮೌಲ್ಯಧನವೆನುತ ।
ಅಂದು ಬಳಿಕರ್ಜುನಗೆ ನಿಮಗೇ
ಕಿಂದು ಭೂಸುರವೇಷವೆನಲಾ
ಗೆಂದು ಪಾರ್ಥನು ತಮ್ಮ ಪೂರ್ವಾಪರದ ಸಂಗತಿಯ ॥ ೪೯

---

1 ಸ್ಲೆವರೆನಂಪಲೆಯೆ;. ಚ.

ಎಂದು ನಿಜವೆನು ಹೇಳಿ ರಾಯರ
ವೃಂದವನು ನೋಡುವೆವು ದ್ರುಪದ
ನಂದನೆಯ ವೈವಾಹರಚನೆಯೊಳಾಸ್ವಯಂವರವ ।
ಇಂದು ನೋಡುವೆವೆಂದು ಭೂಸುರ
ರಂದದಲಿ ನಾವ್ ನಟಿಸಿದೆವು ಕೇ
ಳೆಂದು ಗಂಧರ್ವಂಗೆ ಹೇಳಿದ ಪಾರ್ಥ ಪರುಷದಲಿ ॥ ೫೦

ಇವು ಮದೀಯಸುವಸ್ತು ನಿನ್ನಯ
ಭವನದೊಳಗಿರಲೊಂದುಸಮಯದೊ
ಳಿವನು ತರಿಸುವೆವೆಂದು ಬಳಿಕಂಗಾರವರ್ಮನಲಿ ।
ಇವರು ವಿನಯವ ಮಾಡಿ ಗಮನೋ
ತ್ಸವದೊಳಿರೆ ಗಂಧರ್ವ ನಸುನಗು
ತವರಿಗೆಂದನು ಧರ್ಮಶಾಸ್ತ್ರದ ಸಾರಸಂಗತಿಯ ॥ ೫೧

ಇವರು ಸೇವೆಯ ಮಾಡಿ ಗಮನೋ
ತ್ಸವದೊಳಿರೆ ನಾನಿವರಿಗಱುಪುವೆ
ಭವಮನೋಹರಧರ್ಮಶಾಸ್ತ್ರದ ಸಾರವೇಳ್ದಪೆನು ।
ಅವನಿಪತಿ ಚಿತ್ರ್ಯಸು ಗಂಧ
ರ್ವನಿಳೆಯಲಿ ಮನವೊಲಿದ ಬಳಿಕಂ
ತವರಿಗಱುಹಿದ ಧರ್ಮಶಾಸ್ತ್ರದ ಸಾರಸಂಗತಿಯ ॥ ೫೨

ಮುನಿಯಲಾಗದು ಪಾರ್ಥ ನಿಮ್ಮಯ
ಘನತರದ ವಿಕ್ರಮಕೆ ದಿವಿಜರು
ದನುಜರುರಗರು ನೆರೆಯರುಳಿದೀಮನುಜರೇನಹರು [1] ।
ಅನುಪಮಾನಕ್ಷತ್ರತೇಜಕೆ
ವಿನುತವಿಮಲಬ್ರಹ್ಮತೇಜೋ
ಘನಸಮಾರಸಹಾಯವಾಗಲಸಾಧ್ಯವೇನೆಂದ ॥ ೫೩

1 ನೆರೆಯರಿನ್ನೀನರರ ಪಾಡೇನು, ಖ.

ಬದಗಲೂರದೆ ತನ್ನ ಸುಕ್ಷೇ
ತ್ರದ ಮಹತ್ತ್ವವ ಬಿಟ್ಟು ಬ್ರಾಹ್ಮ
ಣ್ಯದಲಿ ಹೊಕ್ಕನು ಬಳಿಕ ವಿಶ್ವಾಮಿತ್ರಮುನಿ ಯೆಂದು ।
ಅವಳಿ ನಿಂಮ್ಮಾಕ್ಷತ್ರತೇಜದೊ
ಳುದಿತವಿಮಲಕ್ಷತ್ರದೊಳು ತಾ
ವಿದಿತವಿಮಲಬ್ರಹ್ಮತೇಜವಿದೆಂದನರ್ಜುನಗೆ ॥ ೩೮

ವಸಿಷ್ಠಾಶ್ರಮಕ್ಕೆ ವಿಶ್ವಾಮಿತ್ರನ ಆಗಮನ

ವರವಸಿಷ್ಠಾಶ್ರಮಕೆ ಗಾಧಿಯ
ವರಸುತನು ತಾ ಬಂದನಲ್ಲಿಗೆ
ತುರಗವಿಪ್ಪತ್ತೈದುಲಕ್ಷದ ಮೃಗದ ಕೇಳಿಯಲಿ ।
ಬರಲು ವಿಶ್ವಾಮಿತ್ರ ಮುನಿಯನು
ಕರೆದು ನಮ್ಮಾಶ್ರಮದೊಳನ್ನವ
ಧರಿಸಬೇಹುದದೆಂದೊಡೆಲ್ಲರಿಗಹುದೆ ಹೇಳೆಂದ ॥ ೩೯

ವಸಿಷ್ಠರು ಸರ್ವರಿಗೂ ಆದರಪೂರ್ವಕಭೋಜನವಮಾಡಿಸಿದುದು

ಏಕುಜನವಿರಲೆನ್ನ ಪಙ್ಕ್ತಿಯ
ಲೈಸಿರಲಿ ಭೋಜನವ ಮಾಡುವೆ
ನೀಸಕಿಕ್ಕದೆ ಮೊಬ್ಬನುಣಲಿಕೆ ಬಹುದೆ ಹೇಳೆಂದ ।
ಐಸೆ ನಿನ್ನಯ ಪಂತಿಕಾಳಿಲಿ
ಸುಜನಸಹಿತೆಮಗೆ ಕರುಣಿಕು
ವಾಸುದೇವಾರ್ಪಿತವನಿಕ್ಕುವೆನೆಂದು ಕೈಕೊಳಿಸಿ ॥ ೪೦

ಜಾವವರೆ ಯಾಗಲಿಕೆ ಮುನಿಪತಿ
ಭಾವಿಸಿದನಾಕಾಮಧೇನುವ
ತಾ ವಸಿಷ್ಠಾಶ್ರಮಕೆ ಬಂದುದು ಧೇನು ಬೆಸಸೆನುತ ।
ನಾವು ವಿಶ್ವಾಮಿತ್ರರಾಜರಿ
ಗೀವೆವನ್ನವನೀಗಲೆಂದರೆ
ಜಾವಕ್ಕಾಯಿತು ರತ್ನಖಚಿತದ ದಿವ್ಯಮಂಟಪವು ॥ ೪೧

ಮೇಲೆ ಯಿಪ್ಪತ್ತೈದುಲಕ್ಷದ
ಸಾಲ ಹರಿವಾಣದಲಿ ಲಕ್ಷ್ಮೀ
ಲೋಲಗರ್ಪಿಸಿದನ್ನ ಬಡಿಸಿತು ಸುರರ ನೊರೆಬಾಯ |
ಏಳಿಸುವದಿವ್ಯಾನ್ನದೆಡೆಗಳಿ
ಗಾಳಿಸಹಿತೈತಂದು ನೃಪಜನ
ದೋಳಿಯಲಿ ಭೋಜನವ ಮಾಡಿದನರಸ ಕೇಳೆಂದ ॥ ೬೦

ಮಾಡಿದಾಕ್ಷಣ ಮಂಟಪಂಗಳ
ರೂಡಿಯಲಿ ಕೈಗಟ್ಟಿ ಕೊಂತರು
ನೀಡಿದರು ವೀಳೆಯವ ಪುಷ್ಪಸುರತ್ನಭೂಷಣವ |
ನೀಡಿದನು ದೇವಾಂಗವಸ್ತ್ರವ
ನಾಡುಗಾವಳಿಗೈದೆ ಕೊಡಲಿಕೆ
ನೋಡಿದನು ಮುನಿವರವಸಿಷ್ಠನ ಸಿರಿಯ ಸಡಗರವ ॥ ೬೧

ಕೂಡೆ ತಾವೆಡೆಯಾಡಿ ಹೇಳಿದ
ಮಾಡುವವರಾದೇವವಧುಗಳ
ನೋಡಿ ಮೂಗಿನ ಮೇಲೆ ಬೆರಳನ್ನಿಟ್ಟು ಬೆಱಗಾದ |
ನೋಡಿರೈ ಭಿಕ್ಷುಕನ ಸಿರಿಯನು
ನೋಡಿರೈ ಮಂತ್ರಿಗಳದೆಂದರೆ
ನೋಡಿದೆವು ಜೀಯೆಂದು ನುಡಿದುದು ಮಂತ್ರಿಸಂದೋಹ ॥ ೬೨

ನೋಡಿರೈ ಹುಲುಗುಡಿಸಿಲಾತನ
ರೂಡಿವಿಭವಗಳಿದಕೆ ಕಾರಣವು
ನಾಡೆ ಪನೆನಲೊಳಗಣಾಕಳ ಯಿದಕೆ ಕಾರಣವು |
ಬೇಡುವುದು ಸೀವದನೆ ಯೆಂದನು
ನಾಡಿಗೊಡೆಯನದೊಬ್ಬ ಮುನಿಪಗೆ
ಬೇಡಿದನು ಸುರಧೇನು ಪಾಡುದನರಸ ಕೇಳೆಂದ ॥ ೬೩

ಎಲೆ ವಸಿಷ್ಠರೆ ಯೆಮಗೆ ನಿಮ್ಮಯ
ಬಱಿಯ ಧೇನುವ ಕೊಡುವುದೆಂದರೆ

ತಲೆಯ ತೂಗುತಲೆಂದನಿದು ಕರ ಲೇಸುಲೇಸೆನುತ ।
ಎಲೆಲೆ ವಿಶ್ವಾಮಿತ್ರ ಕೇಳ್ಳೈ
ಬಟಿಯ ಧೇನುವನಿಂದ್ರನೀಗಳು
ಕಳುಹಿಸಿದನೆಮಗಿಲ್ಲವೆಂದಿದನೆರವನಾಗೆಂದು ॥ ೬೬

ಎನಲು ಸುಮ್ಮನೆ ವನಜನಾಭನ
ನೆನೆಯುತಿರಿ ಸಾಕಿನ್ನು ಕುಳ್ಳಿರಿ
ಯೆನಲಿಕಾಗಳೆ ಯಾತ ಕರೆಸಿದ ಕಾಮಧೇನುವನು ।
ಜನಪ ಕೇಳದ್ಭುತವನಾಗಳು
ಮುನಿಪ ವಿಶ್ವಾಮಿತ್ರನಾಕ್ಷಣ
ಮನೆಯೊಳಾಕಳ ಕರೆಸಿದನು ತಾ ಹೊಱಿಯಿಕೊಯ್ಯಲಿಕೆ ॥ ೬೭

ಮರಳಿ ಬಹಲೆಳೆಯಲಿಕೆ ಪುನರಪಿ
ಕೊರಳಗೋಣುವನಿಕ್ಕಿ ಹೊಡೆಸಿದ
ಮರಳಿ ವಿಶ್ವಾಮಿತ್ರನಾಕಳ ಹಸಿಯ ಬಡಿಗೆಯಲಿ ।
ಧರಣಿಯಲಿ ಬೆಂಡಾಗಿ ಕೆಡೆದುದು
ಸುರಿವ ರುಧಿರದ ಬಾಸುಟಿಂದವೆ
ಹಿರಿದು ಚಿಂತಿಸಿ ತನ್ನ ಮಂತ್ರಿಯು ಕರದು ಬೆಸಗೊಂಡ ॥ ೬೮

ನಡೆಯುದಾಕಳು ಬುದ್ಧಿಯುನಿದಕೆ
ಕೊಡಿ ಯೆನಲು ಬಟಿಕವನು ಹೇಳಿದ
ನೊಡೆಯರೇ ಬಳಗಿಪುದದೀಕೆಯ ವತ್ಸವೆಂದೆನಲು ।
ತಡೆಯದಾವತ್ಸವನು ಕರೆಸಲಿ
ಕಡಿಯನಿಡದಿರಲಿನ್ನು ಮುಂದಕೆ
ಬಿಡಿಸಿದನು ವತ್ಸಕವನಾಕಳ ಮುಂದೆ ಕೋಪದಲಿ ॥ ೬೯

ಮಗನ ಬಡಿಯಲಿಕೀಕೆ ನೊಂದಳು
ಬಗೆದುದಿಲ್ಲೈ ತನ್ನ ಹೊಡೆಗಳ
ಮೊಗವ ನೋಡಿದಳಾವಸಿಷ್ಠನನೇನು ಗತಿಯೆನುತ ।

ಮಗನ ಬಡಿಯುತಲಾದುರಾತ್ಮರು
ನಗುತಲಿಪ್ಪರು ತನಗನುಜ್ಞೆಯ
ಸೊಗಸಿದುದ ಕೊಡಿ ಯೆನಲು ನೀನೇ ಬಲ್ಲ ಪರಿ ಮಾಡು ॥ ೭೦

ಕಾಮಧೇನುವಿನಿಂದ ಜನಿಸಿದ ರಾಕ್ಷಸರು ವಿಶ್ವಾಮಿತ್ರನ ಸೈನ್ಯ
ವನ್ನು ಸಂಹರಿಸುವಿಕೆ

ಎನಲು ಗರ್ಜಿಸುತೆದ್ದು ಸಗಣವ
ನನುಕರಿಸಿ ಗಾತ್ರವನು ಹೊಯ್ಯಲು
ಜನಪ ಕೇಳ್ಳೈ ವ್ಲೇಚ್ಛರಾಕ್ಷಸಕೋಟಿಯೈವತ್ತು ।
ಜನಿಸಿದುದು ತಾವ್ ಬ್ರಹ್ಮದಂಡವ
ನನುಕರಿಸಿ ಹಿಡಿದೈದೆ ಗಾಧಿಯ
ತನುಜಸೈನ್ಯವ ನುಗ್ಗು ಮಾಡಿದರವರು ಕ್ಷಣದೊಳಗೆ ॥ ೭೧

ಮುನಿಪ ವಿಶ್ವಾಮಿತ್ರನಸ್ತ್ರವ
ಧನುವ ಹುಡಿಗುಟ್ಟಿದರು ಬಳಿಕಾ
ಮುನಿಯ ಸೈನ್ಯವು ತಾಯ್ಗೆ ಮಕ್ಕಳದಾಗಲೋಡಿದುದು ।
ವನವ ಹೊಕ್ಕುದು ಬಳಿಕ ತಮ್ಮಯ
ಜನಪನನು ಕೊಂಡೊಯ್ದರಿಬ್ಬರು
ಜನಪ ನಡೆಯ್ಕೆ ನಗರಕ್ಕೈದುವುದೆಂದೊಡಿಂತೆಂದ ॥ ೭೨

ಜನಪಜಾತವನೈದೆ ದಹಿಸುವೆ
ನನಲಗಾಹುತಿಯಿಕ್ಕಿ ಯಿಾಗಳೆ
ಜನಿಸುವೆನು ಬ್ರಾಹ್ಮಣ್ಯದೊಳಯಿಕೆ ಯಿರದೆ ನಮ್ಮವನು ।

ವಿಶ್ವಾಮಿತ್ರನ ತಪಸ್ಸು

ವನವ ಹೊಗಿಸಿತು ದ್ವಿಜನ ಗೋವಮಯ
ವೆನುತ ವಿಶ್ವಾಮಿತ್ರನಾದಿನ
ವನದೊಳಗೆ ತಾ ತೀವ್ರತಪವನು ಮಾಡಲನುವಾದ ॥ ೭೩

ಬಿದಗಲಾರದೆ ತನ್ನ ಸತ್ಕಾ
ತ್ರದ ಮಹತ್ತ್ವವ ಬಿಟ್ಟು ಬ್ರಾಹ್ಮಣ
ಪದವ ಹೊಕ್ಕನು ಬಳಿಕ ಗಾಧಿಯ ತನುಜ ತಾನೆಂದು ।
ಅದಱಿನಿಂದೀಕ್ಷತ್ರತೇಜದೊ
ಳುದಿತ ವಿದಿತಬ್ರಹ್ಮವಾದೊಡೆ
ಸದರ ಬಳಿಕದು ಚೋದ್ಯ ಕೌತುಕವೆಂದನರ್ಜುನಗೆ ॥ ೭೪

ಬಳಿಕ ವಿಶ್ವಾಮಿತ್ರ ತಪವ
ನ್ನಿಳೆಗೆ ಕೌತುಕವಾಗೆ ಮಾಡಿದ
ನೊಲಿದು ವತ್ಸರವಾದುವೆಂದಿಗೆ ಸಹಸ್ರ ಹದಿನಾಲ್ಕು ।

ಬ್ರಹ್ಮಾದಿಗಳು ಬಂದು ವರವನ್ನು ಕೊಟ್ಟುದು

ನಳಿನಸಂಭವಮುಖ್ಯನಾಕಜ
ರೊಲಿದು ಬಂದರು ಮುನಿಯ ಬಳಿಗಾ
ಗೆಲೆಲೆ ಮುನಿಪತಿ ಬೇಡು ನೀ ವರವೆಂದೊಡಿಂತೆಂದ ॥ ೭೫

ಎನಗೆ ವರ ಬೇಱೀಕೆ ಯೆನ್ನನು
ಮನವೊಲಿದು ವರಬ್ರಹ್ಮಋಷಿ ಯೆಂ
ದೆನಿಪುದೆಂದರೆ ತನತನಗೆ ವರಬ್ರಹ್ಮಋಷಿ ಯೆನಲು ।
ಎನಲು ನೀವೆನಲೊಪ್ಪೆನೀಗಳು
ಮುನಿವಸಿಷ್ಠನೆ ಯೆಂದೊಡಹುದೆನೆ
ವನಜಸಂಭವ ಕರೆದು ನುಡಿಯೆ ವಸಿಷ್ಠನಿಂತೆಂದ ॥ ೭೬

ಮನೆಮನೆಗೆ ವರಬ್ರಹ್ಮಋಷಿಗಳು
ಜನಿಸುವರೆ ಹೇಟೆನಲು ನಾಕಜ
ಜನಸಹಿತ ಚತುರಾನನನು ತಾ ತಿರುಗಿ ಹೋಗುತಲು ।
ಮುನಿಗಳಿವರತ್ಯಧಿಕರಿಬ್ಬರೆ
ಯೆನುತ ತಿರುಗಿದ ಬಳಿಕ ವಿತ್ತಲು
ಜನಪ ಕೇಳ್ಳೆ ಮುನಿಪ ವಿಶ್ವಾಮಿತ್ರನುಬ್ಬಟೆಯ ॥ ೭೭

ಎನಲು ಫಲುಗುಣ ನುಡಿದನಂದಾ
ವಿನಯನಿಧಿ ಯಂಗಾರವರ್ಮಗೆ
ಮುನಿಪವಿಶ್ವಾಮಿತ್ರನೆಂತ್ಯೈ ಬ್ರಹ್ಮಋಷಿ ಯೆನಿಸಿ ।
ಮುನಿವರರೊಳತ್ಯಧಿಕನೆನಿಸಿದ
ನನಿತುವನು ನೀ ಪೇಳ್ವುದೆನಗೆನೆ
ವನಜನಾಭನ ನೆನೆಯುತೆಂದನು ವೀರನರಯಣನ ॥ ೩೮

ಇಪ್ಪತ್ತನಾಲ್ಕನೆಯ ಸಂಧಿ ಮುಗಿದುದು

---

## ಇಪ್ಪತ್ತೈದನೆಯ ಸಂಧಿ

---

### ಸೂಚನೆ

ಮುನಿಗಳನುಪಮಕಥೆಯನಂದಾ
ಗನಿಮಿಷರ ಪರಿಭವವ ಕುಂತೀ
ತನುಜರಿಂಗಂಗಾರವರ್ಮನು ಪೇಳ್ದನುಚಿತದಲಿ ॥

ಒಬ್ಬ ರಾಜನು ಬಂದು ತನ್ನ ದೇಶದಲ್ಲಿ ಅನಾವೃಷ್ಟಿಯನ್ನು
ಸೂಚಿಸುವಿಕೆ

ಕೇಳು ಜನಮೇಜಯಧರಿತ್ರೀ
ಪಾಲ ವೊಂದಿನ ವರವಸಿಷ್ಠವ
ರಾಲಯಕ್ಕಳವಡಿಸಿ ಭೂಪತಿ ಬಂದು ಮೆಯ್ಯಿಕ್ಕಿ ।
ಮೇಲೆ ಪಂಪಾಶ್ರಮದಲಾಗುರು
ಲೋಲನಿರೆ ಬಿನ್ನಹವ ಮಾಡಿದ
ಕಾಲ ಪೋದುದು ತನ್ನ ದೇಶದ ಮೇಲೆ ಮಳೆ ಯಿಲ್ಲ ॥ ೧

ಇಂದು ನೀವಿದಕೊಂದು ಯಜ್ಞವ
ಬಂದು ಕರುಣಿಸಿ ವೃಷ್ಟಿಯರ್ಘ್ಯವ
ಸಂಧಿಸುವುದೆಂದೆನುತ ಭಿನ್ನಹಕಾಗಿ ಬೀಷ್ಕೊಟ್ಟು ।
ಅಂದು ಕಳುಹಿಸಿ ಕೊಂಡು ಬರುತಿರೆ
ಸಂದನಪರಾಂಬುಧಿಗೆ ಸೂರ್ಯನು
ಬಂದರಾಗ ವಸಿಷ್ಠಗೋತ್ರದ ಸುತರು ನೂಱೆಂಟು ॥ ೧

ಮತ್ತೆ ಬಹುಗೋತ್ರಂಗಳಖಿಳರು
ಚಿತ್ತವಿಸಿ ಸಂಧ್ಯಾದಿಕರ್ಮವ
ವಿಸ್ತರಿಸಿ ಭರದಿಂದ ಮಾಡಿದ ಭೂಸುರೋತ್ತಮರ ।
ಮೊತ್ತ ವಿರುಪಾಕ್ಷಂಗೆ ವಂದಿಸಿ
ವೊತ್ತಿ ಬರುತಿರಲಾಸುದಾಸನ
ಪುತ್ರಕನು ಕಾನನದಿ ಕಾಣದೆ ನುಡಿದನವರೊಡನೆ ॥ ೨

ಕೂಡಿ ಮುದದಿಂ ಬರುತ ದಾರಿಯೊ
ಳೀಡಿರಿವ ಪರ್ಬಿದಿರ ಮೊಳಯುಲಿ
ರೂಢಿಗುರುವಿನ ಸುತರನಱಿಯದೆ ಮಾರ್ಗ ಬಿಡಿ ಯೆನುತ ।
ರೂಢಿಪತಿ ಕೆರಳಲಿಕೆ ವಿಪ್ರರು
ನೋಡಿ ನುಡಿದರು ವೇದಶಾಸ್ತ್ರದ
ಪಾಡನಱಿದೀ ಮಾರ್ಗ ತಮ್ಮದು ಬೇಡ ನಿಲ್ಲೆಂದು ॥ ೪

ಮಾರ್ಗ ತನ್ನದು ತನ್ನ ದೇಶದ
ಮಾರ್ಗವಾಗಿಯೆ ಬಿಡಲು ಪೇಳಿದೆ
ನಾರ್ಗಳವ ತಾ ಕಾಣೆ ನೆನುತಿರಲಿಕ್ಕೆ ರೂಢಿಯುಲಿ ।
ಮಾರ್ಗವಱಿಯದ ನೃಪಗೆ ವಿಶ್ವದ
ಮಾರ್ಗದೋಱಿಯು ಮುನಿಯ ಮಕ್ಕಳು
ಮಾರ್ಗವಱುಹಿದರರಸ ವಿಶ್ವದ ದೇವರಹುದೆನಲು ॥ ೫

ವೇದಶಾಸ್ತ್ರಪುರಾಣ ಪೇಳುತ
ಲಾದಿಯಲಿ ಸಕಲವೆಹಮಾರ್ಗಕೆ
ಮೇದಿನೀಸುರರೊಡೆಯರೆಂದೇ ಸಾಧಿಸಿಹುವೆಂದು ।
ಆದರದಿ ಜಪತಪಪುರಾಣದ
ಹಾದಿಯಳಿಯದೆ ತೀರ್ಥಯಾತ್ರೆಯ
ನಾದರಿಸಿದಾಶೂದ್ರ ಬೀಳುವನಘಮಹಾಬ್ಧಿಯೊಳು ॥ ೬

ಬೀಳುವನು ಸನ್ಯಾಸಮಾಡಲು
ಕಾಲಪುರವರಕರಸ ದೀಕ್ಷೆಯ
ಲಾಲಿಸಿಯೆ ಗುರುವಾಗಿ ಯಾಚಿಸಿ ಘಳಿಸಿ ಭಿಕ್ಷವನು ।
ಮೇಲೆ ಕಂಡಾದ್ವಿಜರು ಹೇಳಿದ
ವೇಳೆಯನು ಕೆಡೆ ನುಡಿದು ವಾದಿಪ
ಖೂಳ ನೃಪನಹ ಬಿಟ್ಟು ಮತ್ತದ ತನ್ನ ಜಾಣಿನಲಿ ॥ ೭

ಎನಲು ಹಯದಿಂದಿಳಿದು ವಂದಿಸೆ
ವಿನುತಗುರುಪುತ್ರಕರನಾಗಾ
ಮನವ ಕೌಶಿಕ ಕಂಡನಂತರ್ಧಾನನೇಮದಲಿ ।
ಮನವ ಕೆಡಿಸಿದ ನೃಪನನಾಕ್ಷಣ
ಕನಲಿಸಿಯೆ ತಾ ಮನವ ಕೆಡಿಸಿಯೆ
ಮುನಿಯೆ ಮನವಾವರಿಸಲಾತನು ಗುರುಸುತಾದಿಗಳ ॥ ೮

ನೋಯಿಸುತ ತುರಗವನು ಹಾಯಿಸಿ
ರಾಯ ಹೋಗಲಿಕವರು ಶಪಿಸಲು
ನ್ಯಾಯ ಮಾರ್ಗವ ಮರೆದು ನಡೆದನು ಹಲವುಕಾಲದಲಿ ।
ರಾಯ ಪಂಪಾಧಿಪನನರಿಯದೆ
ನೋಯುತಿರು ಯಕ್ಷೇಶನಾಗದೆ
ಕಾಯಕಲ್ಮಷದಿಂದ ರಾಕ್ಷಸನಾಗಿ ತಿರುಗುತಿರು ॥ ೯

ದನುಜನಾಗಿರೆಲೆಲವೊ ಯೆನುತಲಿ
ಮುನಿಸುತರು ತೆರಳಿದರದೊಂದಿನ
ಮನೆಯುಲ್ಲೈದಲಿಕಲ್ಲೆಯಾಯಿತು ಬೊಬ್ಬೆಯುಬ್ಬರದ ।
ಧನವ ದಸ್ಯುಗಳೊಯ್ದರೆನಲಿಕೆ
ಕನಲಿ ಪುನರಪಿ ತಿರುಗಿ ದಸ್ಯುಗ
ಳನಿತುವನು ಸಂಹರಿಸಿ ಯಾತನು ಮನೆಗೆ ಬರುತಿರಲು ॥ ೧೦

ಬರಲು ದಾರಿಯೊಳೊಬ್ಬ ಬ್ರಾಹ್ಮಣ
ಪುರವರೇಶನ ಕಂಡು ಬೇಡಿದ
ವರಸುಭೋಜನವಾಮುನೀಶ್ವರನವನ ಕೆಡಿಸಲಿಕೆ ।
ಧರಣಿಪತಿ ಕೇಳವರ ಕೆಡಿಸಲು
ವರವಸಿಷ್ಠಾತ್ಮಜರನೆಲ್ಲರ
ಪರಿಹರಿಸಬೇಕೆಂದು ಹರುಷದಿ ಮುನಿಪ ಕೌಶಿಕನು ॥ ೧೧

ಆತಗಘ್ರ್ಯಾಸನವ ಕೊಟ್ಟು ಸು
ಖಾತಿ ಮಿಗೆ ಯುಂಡರಸ ಪವಡಿಸಿ
ಯಾತನಿರೆ ಭೂದೇವ ಹಸಿದಿರಲೆರಡು ಯಾಮಗಳು ।
ಭೂತಳೇಶನ ಮನೆಯೊಳಗಿರುಳ
ತೀತವಾಗಲಿಕಾಗಳಾತನ
ಪ್ರೀತಿಕರ ಪಡಿಸಣೆಯು ಕಂಡನು ಮುನಿಪ ಹಸಿದಿರುತ ॥ ೧೨

ಎಲವೊ ನಮ್ಮ ಸುದಾಸಪುತ್ರನು
ಬಲುಹಿನಲಿ ಹಸಿದಿರಿಸಿ ಕೊಂದನು
ಹುಳುಕನನು ನೀ ಕೇಳಿ ಬಿಡಿಸಾ ಬಾಯಬಂಧನವ ।
ಅಳುಕಿ ಭೂಪನನವನೆ ಯೆಬ್ಬಿಸಿ
ಯೆಲೆ ಮಹೀಪತಿ ನೀವು ವಿಪ್ರಂ
ಗೊಲಿದು ನುಡಿದಿರೆ ಗ್ರಾಸನಾತಗೆ ಕೊಟ್ಟಿರೇ ಯೆಂದ ॥ ೧೩

ಹಾರುವೆಂಗಾಣಾತಿಯ ಕರುಣಿಪು
ದೋರಣಿಸಿ ಯೆನೆ ಭೂಪನೆಂದನು
ಹಾರುವೆಂಗುಣಲಿಕ್ಕು ಶೂಲದ ಮೇಧ್ಯಮಾಂಸವನು ।
ಸಾಱು ನೀನೆನುತರಸ ಪವಡಿಸಿ
ಮಾಜು ತಾಮಸದಿಂದ ತನ್ನಯ
ಕಾರಣವ ತಾ ಮಱೆದ ಕೃತ್ಯಾಕೃತ್ಯವೆಂಬುದನು ॥ ೧೪

ಪವಡಿಸಲು ಪಡಿಸಣಿಯು ನಡುಗುತ
ಲವನಿಸುರನೆಡೆಗೈದಿ ಯಾತನ
ನವನಿಪಾಲನ ಮನೆಯ ಹುಗಿಸಿಯೆ ಯಿರುಳು ದಸ್ಯುಗಳ ।
ಸವಡಿ ಸೂಲಕ್ಕೈದಲೊಬ್ಬನೆ
ಶಿವನ ನೆನೆವುತ ಬಂದು ಕಳ್ಳರ
ನಿವಹದಲಿ ಕಂಡವನ ತೊಡೆಯನು ಕೊಯ್ದು ಕತ್ತಿಯಲಿ ॥ ೧೫

ಕಕ್ಕುಗಡಿಗಡಿದಟ್ಟುಘೃತದಿಂ
ದಿಕ್ಕಲಾ ಭೂಸುರನು ಕೋಪಿಸಿ
ನಕ್ಕು ನುಡಿದಪನೆಲವೊ ಬ್ರಾಹ್ಮಣನೆಳುಕಿ ಶೂದ್ರನನು ।
ಕಕ್ಕುಲಿತೆ ಗೊಂಡಣಲಿ ಬೇಡಿದೊ
ಡಿಕ್ಕದಿರಿ ನರಮಾಂಸವಿಂದೆಲೆ
ಸಿಕ್ಕಿದೆನು ಮರುಳಾಗಿ ಶೂದ್ರನ ಕಷ್ಟಭೋಜನಕೆ ॥ ೧೬

ಸದ್ಯಘೃತದಲಿ ಕ್ಷೀರವಾದೊಡೆ
ಹೊದ್ದುವುದು ಶೂದ್ರಾನ್ನವಾದುದ
ಕರ್ಧರಾತ್ರದ ಮೇಲೆ ಶೂದ್ರರ ಮನೆಯ ಮಧ್ಯದಲಿ ।
ಶುದ್ಧರಾಕ್ಷಸರನ್ನವಿದ ತಾ
ಶುದ್ಧ ಭೂಸುರರುಂಬರೇ ಶಿವ
ಸಿದ್ಧಗೆಯ್ಯುವ ನೃಪನು ರಾಕ್ಷಸನಾಗಿ ಹಱುವದಲಿ ॥ ೧೭

ತಾನು ರಾತ್ರಿಯದೋಷದನ್ನವ
ನೀನರೇಶ್ವರನಿಂದ ಬೇಡಲು
ತಾನಯೋಗ್ಯದ ಮಾಂಸವಿಕ್ಕಿದ ಮನುಜಖಂಡವನು ।
ದಾನವರಿಗೀಪರಿಯಲನ್ನವ
ತಾನು ಕೊಡಲಿಕ್ಕವರು ಭುಜಿಪರು
ಮಾನವರಿಗೌಷಧಿಯನಿಕ್ಕಲು ತುಷ್ಟಿಯಿದಱಿಂದ ॥ ೧೮

ಮಾನನಿಧಿ ಕೇಳಮರನಿಕರ
ಕ್ಕೀನನಿಕ್ಕಲು ವಹ್ನಿಮುಖದ
ಲ್ಲಾ ಸುರೇಶ್ವರರಹರು ತುಷ್ಟರು ವರಗುಣತ್ರಯರು ।
ಏನುವಿಲ್ಲದೆ ತನಗೆ ಮಾನವ
ಜಾನುವನ್ನುಣಲಿಕ್ಕೆ ಹೇೞಿದ
ಮಾನವನು ಶತಜನ್ಮ ಜನಿಸಲಿ ರಾಕ್ಷಸಾಂಗದಲಿ ॥ ೧೯

ತಾನು ಜನಿಸಲಿ ತನ್ನ ಗುರುವಿನ
ಸೂನುಗಳ ನೆಱೆ ನುಂಗಲೀಕ್ಷಣ
ಕಾನನದ ಕಡು ಹೊಲೆಯನಾಗಿರಲೆಂದನಾಮುನಿಪ ।
ಈನರೇಶ್ವರ ಮರ್ತ್ಯಜಾತಿಯ
ಮಾನವರ ನೆಱೆ ನುಂಗಲೆನುತಿರೆ
ಮೌನದಲಿ ಕೌಶಿಕನು ತಿರುಗಿದ ಮೋಕ್ಷಮಾರ್ಗದಲಿ ॥ ೨೦

ಎಂದು ಭೂಸುರ ತೆರಳಲಾನೃಪ
ನಂದು ರಾಕ್ಷಸನಾಗಿ ನರರನು
ತಿಂದು ತೇಗುತ ಹೋದನಡವಿಗೆ ನಿಮಿಷಮಾತ್ರದಲಿ ।
ಬಂದು ಪ್ರಾತಸ್ಸ್ನಾನಕಾಲಕೆ
ಸಂದನಾತಿರಿಕುಳಿಗಳಾಡುವ
ಯಿಂದುಶೇಖರನಿದಿರೊಳೊಪ್ಪುವ ಹ್ರಾದಿನಿಯ ತಡಿಗೆ ॥ ೨೧

ಅಂದು ತುಂಗೆಯ ತಡಿಯಲಾಗುರು
ನಂದನರ ನೆಱೆ ನುಂಗಿ ರಾಕ್ಷಸ
ವೃಂದ ಗೂಡಿದ ಸಾಸುದಾಸನ ಸುತನು ಕೇಳೆಂದ |
ನಂದಿಮುಖದಲಿ ದ್ವಿಜವಸಿಷ್ಠನು
ಮಿಂದು ಪರ್ಜನ್ಯಾಂಗ ಹೋಮವ
ಸಂದ ಕರಕಟ್ಟುಗಳ ನೋಳವಿಸಿರುತ ಕೇಳಿದನು ‖ ೨೨

ಮುನಿಪ ವಿಶ್ವಾಮಿತ್ರನುಂಡುದ
ಕಿನಿತು ಫಲ ಮಾಡಿದನು ಮುನ್ನಿನ
ಮನಕತಕೆ ಕಡೆಯಾಯ್ತು ವಿಶ್ವಾಮಿತ್ರ ತಪವದಕೆ |
ತನುಜರಟಿಯಲಿಕಾಱುತಿಂಗಳ
ದಿನವ ಕಳೆದಾಬಲಿಯ ಮಾಡಿಯೆ
ಘನತರದ ಖತಿಗೊಂಡು ಪುತ್ರರಿಗೇನು ಗತಿಯೆನುತ ‖ ೨೩

ಆಗ ದುಃಖದಿಂದ ವಸಿಷ್ಠರ ದೇಹತ್ಯಾಗಪ್ರಯತ್ನ.

ಇರದೆ ಶ್ರುತಿಸದ್ವಾಕ್ಯ ಧರೆಯಲಿ
ಪರಮಋಷಿಮತವೆಂದು ತನುವನು
ಪರಿಹರಿಪ ಧೃತಿಯ್ಕೆದಿ ಹೊಕ್ಕನು ಘೋರಕಾನನವ |
ಬರುತ ಮೇರುವನೇಱ[1] ಬೀೞಲು
ಧರಣಿ ಹತ್ತಿಯ ಶಯನದಂದದಿ
ವರಮುನಿಗೆ ತಾನಾಗಿ ತನ್ನನು ರಕ್ಷಿಸುವರಾರು ‖ ೨೪

ತನ್ನ ಸಿರಿ ನಿಮ್ಮಿಬ್ಬರಿಂದವೆ
ನ್ನಿಸುವೆನಾನಿಮ್ಮ ಭೂಸುರ
ಮೇಲಸು ಬಿಟ್ಟರಾದರೆ ತಾನಫಲಳೆಂದು[2] |
ಕೈಮುಗಿದಿಳುಹಿ ಕಳುಹಲು

1 ವೇಱಿ, ಕ ಖ. ಜ.   2 ತಾನುನಿಷ್ಫಲಳು, ಕ ಖ.

ಖಿನ್ನತೆಯೆ [1] ಗಂಗಾಂಬುವಿಗಿಳಿಯೆ
ಚನ್ನೆ ನೆಲೆಯಾಗಿರ್ದಳಾಕ್ಷಣ ಮುನಿಪನಿದಿರಾಗಿ ॥ ೧೫

ಕರವ ಜೋಡಿಸಿ ನುಡಿದಳಾತಗೆ
ಧರೆಯುಲತಿಪಾವನೆಯು ನಿಮ್ಮಿಂ
ನಿರುತದಲಿ ಗೋಬ್ರಾಹ್ಮರಿಂದವೆ ತನ್ನ ಸಿರಿ ಮಾನ ।
ವರುಣನರಸಿಯು ಮಾತ ಕೇಳಿಯೆ
ವರಹುತಾಶನಗಿಕ್ಕಿ ಕಳೆವೆನು
ಮರಕುಮಾರಕರಿಲ್ಲದಂಗವನೆನುತ ಬರುತಿರ್ದ ॥ ೧೬

ಆವನೊಬ್ಬನು ಪೂರ್ವಜನ್ಮದ
ಜೀವಜಾತಿಗೆ ಮನುಜನಾಗಿರು
ತೋವಿ ಯಿಷ್ಟಾನ್ನವನು ನೀಡದೆ ಪಙ್ಕ್ತಿಭೇದದಲಿ ।
ಆವನುಂಬುವನವನು ಪುತ್ರರ
ನೋವಿ ಕಾಣನು ಕಂಡಸುತರನು
ಸಾವಕಾಂಬುವನವನು ವಿಪ್ರರ ಸದನಗೊಂಡವನು ॥ ೧೭

ತನ್ನ ಮನೆಗೆ ಬಂದು ಸೊಸೆಯು ಗರ್ಭಿಣಿಯೆಂದು ತಿಳಿಯುವಿಕೆ.

ಎನುತ ತನ್ನಾಲಯಕೆ ತಿಂಗಳ
ದಿನ ಸವೆಯೆ ಪೊಗಲಲ್ಲಿ ತನುಜನ
ವನಿತೆ ಗರ್ಭಿಣಿಯಾಗಿ ಮೆಱೆದಳು ಪೂರ್ಣಗರ್ಭದಲಿ ।
ಮುನಿಪನಾಕೆಯ ಗರ್ಭಲಕ್ಷಣ [2]
ದನುವ ಯೋಚಿಸಿ ನೋಡಿ ಕಂಡನು
ಘನಕೃಪಾಂಬುಧಿ ಕೃಷ್ಣರಾಯನ ಚರಣವಾರ್ತೆಯನು ॥ ೧೮

ಹುಟ್ಟಿದಮಗನಿಗೆ ಪರಾಶರನೆಂದು ಹೆಸರಿಡುವಿಕೆ.

ತನುಜ ಜನಿಸುವನೆನುತ ತನ್ನಯ
ತನುವಿನಾಸೆಯ ಹಿಡಿದು ಮುನಿಪತಿ

---

1 ಮನ್ನಿಸುವ, ಕ. ಖ.    2 ದಙಳನ, ಗ. ಙ.

ವಿನಯ ಮಿಗೆ ಸಂತೋಷವೈದಿದ ಪುತ್ರಗಾತ್ಮಜನು ।
ಜನಿಸಲಿಕೆ ಕಂಡಾವಸಿಷ್ಠನ
ಘನತೆ ಮಿಗೆ [1] ಶೋಕಾಗ್ನಿ ನಂದಿತು
ವಿನುತ ಕೃತಯುಗ ಮೊದಲ ಮನುವಿನ ನಾಲ್ಕು ಚೌಕಡಿಯು ॥

ದಿನದಲುದವಿಸಿದಾತಗೋವಿನೆ
ಲನುನಯದಿ ವರನಾಮವೆನು ಸುತ [2]
ತನುಜಗಿಡಿಸಿದನಿವ ಪರಾಶರಮುನಿಪನೆಂದೆಂಬ ।
ವಿನುತ ಘನಶೋಕಾಂಬುರಾಶಿಯು
ತನುಜಸುತ ಪರಿಹರಿಸೆ ಜನಿಸಿದ
ತನಗೆ ತನ್ನಯ ಕುಲಸಹಿತ ಋಹಪರಕೆ ಹರುಷಿಸಿದ ॥ ೩೦

ಆ ಪರಾಶರನು ತನ್ನ ತಂದೆಯ ನಾಶವನ್ನು ಕೇಳಿ ಕೋಪಿಸುವಿಕೆ.

ಎನುತಲಾಮುನಿ ಋರಲು ಕತಿಪಯ
ದಿನದೊಳಾಗ ಪರಾಶರನು ತ
ಜ್ಜನನಿಗುಸುರಿದ ತಮ್ಮ ತಂದೆಯ ಸುಳಿವ ತಾ ಕಾಣೆ ।
ಎನಲಿಕಾಸತಿ ನಿಮ್ಮ ತಂದೆಯ
ನನುಜರೆಲ್ಲರಿನೊಮ್ಮೆ [3] ಸಹಿತವೆ
ದನುಜ ನುಂಗಿದನೀವಸಿಷ್ಠನು ನಿಮ್ಮ ಮುತ್ತಯನು ॥ ೩೧

ಕೇಳಿ ಕೋಪಾಟೋಪದಿಂದವೆ
ಕಾಲಯಮನಂದದಲಿ ಋಾಸುರ
ಜಾಲವೆಲ್ಲವ ಧರಣಿನದಿನಕ್ಷತ್ರವೊದಲಾಗಿ ।
ಏಪೆರಡುಲೋಕಗಳ ನೀಗಳೆ
ಬೇಳುವೆನು ಹದಿನಾಲ್ಕುಸವಿುಧೆಯ
ಜಾಲದುರಿಯಲಿ [4] ತನ್ನ ತಂದೆಯ ದನುಜ ನುಂಗಲಿಕೆ ॥ ೩೨

---

[1] ಘನತಿಮಿರ, ಗ. ಘ.

[2] ಕರಣವ, ಕ. ಖ.

[3] ರೈವತ್ತೆರಡು, ಕ. ಖ.

[4] ಮಾಡಿತ, ಕ. ಖ.

ನಿರಪರಾಧಿಗಳಾದ ಭೂಸುರ
ವರರಿಗಹಿತವ ಮಾಡೆ ನೋಟ್ವೀ
ಸುರವರೇಶ್ವರ ಮುಖ್ಯನಾಕಜರಡ್ಡ ಬೀಳುವರೆ ।
ಸರಸಿಜಾಸನನಾಜ್ಞೆ ಮಿಾಱಿದ
ದುರುಳರನು ನೆಱೆ ಸುಡುವೆನೆಂದಾ
ವರಪರಾಶರನಿರವನಱಿದು ವಸಿಷ್ಠನೈತಂದ ॥ ೩೩

ಪೌತ್ರನ ಕೋಪವನ್ನು ಶಮನಮಾಡುವಿಕೆ.

ಹೋಮಿಸದಿರಕಟಕಟ ದೇವ
ಸ್ತೋಮದಲಿ ಕೈವಲ್ಯಸಾಧನ
ಪ್ರೇಮ ಕರವೆಂದೆನುತ ಕೈವಿಡಿದೆಳೆದನಾಹುತಿಯು ।
ಆಮಹಾಪ್ರಳಯಾಗ್ನಿ ಕೋಪದ
ಸೋಮಶೇಖರ ಹೊಸೆವುತನುಪಮ
ಪ್ರೇಮದಲಿ ಬೊಬ್ಬಿಟ್ಟನಂಗೈತಳದ ನೊಸಲಿನಲಿ ॥ ೩೪

ಇಟ್ಟು ತೆರಳಲಿಕಗ್ನಿ ಮೊಱೆಯಿಡೆ
ಕೊಟ್ಟನಾಗ ವಸಿಷ್ಠನನಲಗೆ
ಸುಟ್ಟು ಕಳೆ ಮುಂದೇಱು ಚೌಕಡಿಯಾಗೆ ಪುರಮೂಱ ।
ಕೊಟ್ಟನಾತಂಗಭಯುವನ್ನು
ತ್ರಕ್ರಲ್ಪಷ್ಟ ಮೊಮ್ಮಂಗೆಂದ ಲೋಕವ
ನಟ್ಟಿ ಸರಿಯುವುದೆಂದು ಹೇಳಿದನೊಂದು ಸತ್ಕಥೆಯ ॥ ೩೫

ತಾಳಜಂಘನ ಕಥೆ.

ಮುನ್ನ ಕೇಳೈ ತಾಳಜಂಘನು
ತನ್ನ ಕೋಶದ್ರವಿಣವೆಲ್ಲವ
ಮನ್ನಿಸದೆ ಬ್ರಾಹ್ಮಣರಿಗಿತ್ತನು ನಿತ್ಯವಿಧಿಯಿಂದ ।
ಹೊನ ನೊಂದನು ಭೂಮಿದೇವಿಗ

ಕನ್ನೆಯಲಿ ತಾನಿಡದೆ [1] ಭೂಸುರ
ರುನ್ನತಿಯನೇ ಬಯಸುತಿಪ್ಪನು ಹಲವುಕಾಲದಲಿ ॥ ೩೬

ಮರಣವಾಯಿತು ನೃಪತಿಗಾಗಳು
ಸುರವಧೂವ್ರಾತದಲಿ ಸ್ವರ್ಗದ
ಸಿರಿಗೆ ಸಂದನು ಮುನ್ನ ಮಾಡಿದ ಪುಣ್ಯಫಲದಿಂದ ।
ಸರಿಯಲಾತನ ಸುತರು ವಿಪ್ರರ
ಪರಿಹರಿಸಿ ತಮ್ಮಾಪ್ತಮಂತ್ರಿಯು
ಕರೆದು ಕೇಳ್ದರು ತಮ್ಮ ಜನಕನ ಕೋಶಶ್ಕೇನಾಯ್ತು ॥ ೩೭

ವರುಷವಿಪ್ಪತ್ತೇೞುಸಾವಿರ
ಧರಣಿಯಾಳಿದನೇೞುಖಂಡವ
ಪರಿವಿಡಿಯಲಾಳಿದನು ಹೇಮವ್ರಾತವೇನಾಯ್ತು ।
ಧರಣಿಪತಿ ಯೆನಿತಪ್ರದೇಶದ
ಧರಣಿಸುರರಿಂಗಿತ್ತು ಸಂತತ
ವಿರಿಸುವನು ಬೞಿಗೈಯ್ಯಲಾಭಂಡಾರಸದನವನು ॥ ೩೮

ವಿಪ್ರರಿಗೆ ದ್ರವ್ಯ ಸೇರಿರುವುದೆಂದು ಕೇಳಿ ಬ್ರಾಹ್ಮಣರನ್ನು ಹಿಂಸಿಸುವಿಕೆ.

ಮಿತಿಗಳಿಲ್ಲದ ವಸ್ತು ಸಂತತಿ
ಕ್ಷಿತಿಯೊಳದೆ ಭೂದೇವರಾಶ್ರಮ
ತತಿಯೊಳನಲಾನೃಪತಿ ಬ್ರಾಹ್ಮರ ಸುಲಿಯಲನುವಾದ ।
ಪಿತನ ಪುಣ್ಯಸಮುದ್ರಸೇತುವ
ಸುತನೊಡೆಯಲನುವಾಗಲಾಕ್ಷಣ
ಕ್ಷಿತಿಸುರರು ನೆೞೆ ಕೇಳಿ ನಡುಗುತಲಂದು ಗಜಬಜಿಸಿ ॥ ೩೯

ಕೆಲಬರೋಡಿದರಂದು ತಮ್ಮಯ
ಕುಲಸಹಿತ ಹಿಮವಂತಕಾಗಿಯೆ

1 ಕನ್ನೆಯಲಿ ಭಯಬೇಡ, ಕ. ಖ.

ಕೆಲಬರಡಗಿರೆ ಹಿಡಿದು ಕೊಂಡರು ಕೋಟಿಸಂಖ್ಯೆಯಲಿ ।
ಕೊಲಿಸಿದವರರಸಿಯರನೆಲ್ಲರ
ನೆಳತರಿಸಿ ಸೆಜೆ ಯಿಕ್ಕಿ ಗರ್ಭಿಣಿ
ಬಳಗವನು ಬೇಱಿರಿಸಿ ಗರ್ಭಗಳಿಲ್ಲದಬಲೆಯರ ॥ ೪೦

ಕಳುಹಿದನು ಬಲ್ಲತ್ತಲವರ
ನ್ನುೞಿದ ಯುವತಿಯ ಜನರನೆಲ್ಲರ
ತಿಳಿದು ನವಮಾಸಂಗಳಿರಿಸಿಯೆ ಪುತ್ರಮಾತೆಯನು ।
ಕಳುಹುವನು ಪುತ್ರಕರನಾಕ್ಷಣ
ಕೊಲಿಸುವನು ಪೆಣ್ಣಾಗಿ ಪೆತ್ತಳ
ಕಳುಹಿಸುವನದನಱಿತು ಗಾಧಿಯ ತನುಜೆ ಗರ್ಭವನು ॥ ೪೧

ಯೋಗದಲಿ ತನ್ನಾತ್ಮಗರ್ಭವ
ಬೇಗದಲಿ ಕೊಪದಿರಿಸಿ ಬೆಳಸಲಿ
ಕಾಗ ನಿಲ್ಲದೆ ಸತಿಗೆ ಜಠರದ ಗರ್ಭ ಬಯಲಾಗೆ ।
ಈಗಳೀಕೆಯ ಗರ್ಭವೇೞಯಿತು
ಹೋಗ ಹೇಱೆನಲಬಲೆ ಹರುಷದಿ
ಬೇಗದಲಿ ಭಾರ್ಗವನ ತಂದೆಯವರ ವರಾಶ್ರಮಕೆ ॥ ೪೨

ಬರಲಿಕಾಕೆಯ ಮುನಿಪ ಕಂಡನು
ಹರುಷದಲಿ ಯೂವನಭಾರ್ಗವ
ನರಸಿಯನು ಕೊಂಡೊಯ್ದು ಕೇಳಿದ ಗರ್ಭನಿರ್ಣಯವ ।
ವರತನೂಜನನೇನ ಮಾಡಿದೆ
ಧರಿಸಿದೆನು ಜಾನುವಿಗೆ ನಿಮ್ಮಯ
ವರಸುತನನೆಂದಾಪ್ರಪಂಚವ ತಿಳುಹಲತಿಮುದದಿ ॥ ೪೩

ಇರವ ವೈಶಂಪಾಯನಗ್ಗದ
ಧರಣಿಪತಿ ಕೇಳಿದನು ಗಾಧಿಯ
ವರಸುತೆಯೊಳಾಗರ್ಭನಿರ್ಣಯವಾದಸಂಗ್ರಹದ ।

ಪರಿವಿಡಿಯು ತನಗಱುಪಬೇಕೆನೆ
ಯರಸಗುಸುರಿದ ನಾಪ್ರಪಂಚವ
ಹರುಷದಲ್ಲೀಸತ್ಯವತಿಯು ತನುಜನ ಕೃಪೆಯಿಂದ ‖ ೪೪

ವರವಿವಾಹವ ಮೌನಭಾರ್ಗವ
ನೆರೆದು ಗಾಧಿಯ ಸುತೆಯು ನಿರಿಸಿಯೆ
ವರತಪೋವನಕೈದಲಾಸತಿ ತನ್ನ ತವರಿನಲಿ ।
ಇರಲು ಬಹುದಿನ ಸವೆಯೆ ಗಾಧಿಯು
ಯರಸಿ ಸುತೆಯುಳ ಕಂಡು ದುಗುಡದ
ಭರದಲಿರುತಲಿ ಮೌನಭಾರ್ಗವ ದೇವಯೋಗದಲಿ ‖ ೪೫

ಬರಲು ಕಂಡಳು ಹರುಷಪುಳಕದಿ
ವರಸುತೆಯನಾಪತಿಯು ಹೊರೆಯು
ಕ್ಕಿರುಳು ಕಳುಹಲು ಕಂಡು ಪತಿಯಾ ಚರಣಕೆಱಗಿದಳು ।
ವರಮುನಿಯೆ ತನಗೊಬ್ಬ ಪುತ್ರನು
ನಿರುತ ಜನಿಸುವ ತನ್ನ ಮಾತೆಗೆ
ವರತಪೋನಿಧಿ ತನುಜ ಸಮನಿಪ ಕೃಪೆಯ ಕರುಣಿಪುದು ‖ ೪೬

ತಾಯಿ ಕಲಿಸಿದ ಬುದ್ಧಿಯೊದವಿನ
ದಾಯದಲಿ ಬಿನ್ನವಿಸೆ ರಾತ್ರಿಯು
ಬೀಯವಾಗಲಿಯೆಂದು ಪತಿ ಸತಿಗಱುಪಲು ನೇಸರಿನ ।
ಕಾಯದಳ ವುದಯಿಸಲು ಮುನಿಪತಿ
ಯಾಯುವತಿ ಸಹ ತರಣಿಪುತ್ರಿಯು
ತೋಯದಲಿ ಕಡು ಮಿಂದು ಶುಚಿಯಾಗಿರಲು ಹರುಷದಲಿ ‖ ೪೭

ಆಕೆ ಮುನ್ನತಿಭಕ್ತಿಭಾವದಿ
ಲೋಕನಾಥನ ಭಜಿಸಿಯಲ್ಲದ
[illegible] ।

ನಾಕಜರು ನಲಿಯಲ್ಕೆ ಕೊಟ್ಟನ
ದಾಕೆಗಗ್ಗದ ಪಿಂಡವೆರಡ
ನ್ನೇಕವೆಳಗಭ್ರಾಂಡಮಧ್ಯದೊಳಧಿಕತೇಜಸಿನ ॥ ೪೮

ಪುತ್ರಪಿಂಡವ ಕೊಟ್ಟು ಸತಿಯಳ
ಚಿತ್ತವನು ಹರುಷಿಸಿಯೆ ತಿರುಗಿದ
ನತ್ತ ಮುನ್ನಿನ ವರತಪೋವನಕೆ ಮುನಿಕುಲತಿಲಕ ।
ಇತ್ತ ಬಂದಳು ತನ್ನ ಜನನಿಯು
ಹಸ್ತದಲ್ಲಾ ಪಿಂಡವೆರಡ
ನ್ನಿತ್ತಿರಲು ಮಋದಿವಸ ಕೊಂಡರು ತಾಯಿ ತನುಜೆಯರು ॥ ೪೯

ತಾಯಿ ಬಡಮನದಿಂದ ತನ್ನಯ
ದಾಯದಲಿ ಬಂದಿರ್ದ ಪಿಂಡದೊ
ಳಾಯತಾಕ್ಷಿಯು ಮಗಳಿಗಿತ್ತಳು ತನ್ನ ಪಿಂಡವನು ।
ಆಯೆರಡು ಪಿಂಡಗಳ ಪಲ್ಲಟ
ದಾಯದಲಿ ಜನಿಯಿಸಿದರಿಬ್ಬರು
ತಾಯಿ ಮಕ್ಕಳಿಗರಸ ಕೇಳ್ಳೈ ಮುನ್ನ ಕೌಶಿಕನು ॥ ೫೦

ತಾಯೊಳಗೆ ಪುತ್ರಿಕೆಯ ತೊಡೆಯೊಳು
ರಾಯನಾಜಮದಗ್ನಿ ಜನಿಸಿದ
ನಾಯುಗತಿಯಿಂ ವಿಂಧ್ಯಪರ್ವತಭೂಮಿಯೊಳಗೆಂದ ।
ರಾಯನಾಕ್ಷತವೀರ್ಯನಿಂದವೆ
ಸಾಯದಿರಲಿವನಂಶವೆಲ್ಲವ
ನಾಯುವಾಂಗಣಕಿರಿಸಲೆಂದಾದೇವನಾಜ್ಞೆಯಲಿ ॥ ೫೧

ಜಮದಗ್ನಿ ಋಷಿಗಳ ಉತ್ಪತ್ತಿ ಮತ್ತು ಅವರಿಗೆ ಕಾಮ
ಧೇನುವಿನ ಲಾಭ.

ಜನಿಸಿದನು ಪಾರ್ಥಿವದ ವತ್ಸರ
ಜನಪ ದಶಮಿಯ ದಿನದಲಾದಿಯೊ

ಜಾಣಿನಲಿ ಭೃಗುಮುಖ್ಯಋಷಿಗಳಿಗೆಂದನಾಮುನಿಪ |
ಕ್ಷೋಣಿಯಲಿ ಬಹುಗೋತ್ರವೆಲ್ಲವು
ಕ್ಷೀಣವಾದುವದೇಕೆ ವಿಪ್ರರ
ಕಾಣಬಾರದೆನುತ್ತ ಕಣ್ವಾಂಗಿರಸರುಸುರಿದರು ॥ ೫೬

ತಾಳಜಂಘನ ಪುತ್ರನೊಬ್ಬನು
ಕಾಳನಾದನು ವಿಪ್ರಜಾತಿಗೆ
ಕೇಳಿ ನೆಱೆ ಕಾಲಾಗ್ನಿರುದ್ರನ ಯಿರವ ಕೈಕೊಂಡ |
ಯೇೞನಿವ್ಮಡಿಸಿರ್ದ ಲೋಕಕೆ
ಬಾಳುವಕ್ಷತ್ರಿಯರ ಪೊತ್ತಕೆ
ಹೇೞುವೆನು ಹೇರಾಳಹಬ್ಬವನೆಂದು ನಿಂದಿರಲು ॥ ೫೭

ಹಿರಿಯರಾತನ ನೀತಿಯಿಂದವೆ
ನಿರುತ ನಿಲಿಸಿಯೆ ವ್ರೊಬ್ಬ ಹಲಬರ
ಧರಣಿಯಲಿ ಕೊಲಲಿಲ್ಲ ಕೊಂದರೆ ಪೌರುಷ ಬಾರದ್ದು |
ಹಿರಿದು ಮಹಿ ದುರ್ಭಿಕ್ಷ ಕಾಂಬುದು
ಪರಮಮತವಿದು ಶಂಭುಶಾಸನ
ಬರೆದಿಹುದು ಬ್ರಾಹ್ಮಣರಿಗಹಿತವ ಮಾಡಿದಾನೃಪನ ॥ ೫೮

ಇನಿತು ಸಂತಾನವನು ಧರಣಿಯು
ಳನಿತುವನು ಸಂಹರಿಸಿ ಕೊಡುವನು
ವನಜಲೋಚನನ ಮುಂದೆ ಯಿಪ್ಪತ್ತೊಂದು ಖೇಪೆಯಲಿ |
ಎನಲು ಮಧುರೋಕ್ತಿಯಲಿ ಮನ್ನಿಸಿ
ಮುನಿಪನಾಕ್ಷಣ ತನ್ನ ಕೋಪವ
ಘನಮಹಾರಣ್ಯದಲಿ ಬಿಸುಟನು ಬಿಸುಡೆ ದಾವಾಗ್ನಿ ॥ ೫೯

ಇನಿತು ಜನಿಯಿಸಿತೆಂದರುಂಧತಿ
ತನುಜನಾತ್ಮಜಗಾವೆಸಿಷ್ಟನು
ಘನಪಸಂಚವ ತಿಳುಹಿ ಬಿಡಿಸಿದ ವಿಶ್ವದುಪಟಳವ |

ಇನಿತನಿತಿಹಾಸೋಕ್ತಿಯಲ್ಲವೆ
ನನುನಯದೊಳಂಗಾರವರ್ಮನು
ವಿನಯದಲಿ ಪಾಂಡವರಿಗಱುಹಿದನೆಂದನಾಮುನಿಪ ॥ ೬೦

ತಮ್ಮ ಪುತ್ರರ ಕರ್ಮಫಲವಿದು
ನಿಮ್ಮ ಜನಕಾದ್ಯರನು ನುಂಗಿತು
ಕರ್ಮವಶವನು ಲೋಕ ಮೀಱಲಿ [1] ಲಿಕಳವೆ ಯಿಹಪರಕೆ ।
ಧರ್ಮವಲ್ಲೆನೆ ಯಿಾ ಪರಾಶರ
ಕರ್ಮಸಾಕ್ಷಿಯ ಮಾಡಿ ಕೋಪದಿ
ಶರ್ಮವರ್ಮರನುರುಹಿ ತಿರುಗಿದನಾಮಹಾತಪಕೆ ॥ ೬೧

ತೀವ್ರತೇಜವ ಹಾಯ್ಕಿ ಜನಿಯಿಸಿ
ತಾವಿಧಾತ್ರವಿಹಿತವ ತಾಳ್ದುಱೆ
ಯಿಾವಸುಂಧರೆಯೊಳಗೆ ಬಡಬಾನಳವು ದುಹಸ್ಸವು [2] ।
ದೇವದಾನವರದನು ಮೀಱುವ
ಜೀವರಲ್ಲೆನೆ ಪಾರ್ಥ ಭೂಮಿಯು
ದೇವರಿಗದಾರಿದಿರು ಕೌಶಲಮೆಲ್ಲನೊಲುಮೆಯಲಿ ॥ ೬೨

ಬೞಿಕ ಮುನಿಪವಸಿಷ್ಠವೊಮ್ಮನ
ನೊಲಿದು ಹರಸಿದ ಧರ್ಮಶೀಲನ
ನಿಲಿಸಿದನು ಮನೆಯೊಳಗೆ ಮಂಗಳವಿಭವಶೋಭೆಯಲಿ ।
ಒಲಿದು ಜ್ಯೋತಿಷ್ಟೋಮಯಾಗವ
ನಿಳಯದಲಿ ವಿರಚಿಸಿಯೆ ಮುನಿಕುಲ
ತಿಲಕನಿದ್ದನು ಬಹುದಿವಸ ವಿರುಪಾಕ್ಷಸೇವೆಯಲಿ ॥ ೬೩

ಅರಸ ಕೇಳ್ಕೆ ಧರಣಿಸುರರಿಗೆ
ಹಿರಿದು ಗೋಚರವೇನದೆನುತಲಿ
ನರಗೆ ನೆಱೆ ಗಂಧರ್ವ ತಿಳುಹಿದ ದ್ವಿಜಮಹೋನ್ನತಿಯ ।

---

1 ಕಾಯ್ದು, ಕ. ಖ. 2 ನಧೆಂಧೆಂಖ, ಕ. ಖ.

ಸುರನದೀತೀರದಲು ರಾತ್ರಿಯು
ನೆರವಿಯಲು ವಿಸ್ತರಿಸಿ ಪಾಂಡವ
ರರಸಗಱುಹಿದನೆಂದು ಕಥೆಯು ಸಹಸ್ರಬಾಹುವಿನ ‖ ೨೪

ವರಕಥೆಯನಾದ್ಯಂತದಿಂದವ
ವಿರಚಿಸಿದ ಮಧುರೋಕ್ತಿ ಸಾರದೊ
ಳುರುಮಹಾಮುನಿ ಪರಶುರಾಮನು ಕಾರ್ತವೀರ್ಯನಲಿ ।
ಧರೆಯಲಿಪ್ಪತ್ತೊಂದುಬೇಷಿಯು
ಧರಣಿಪರ ನಿಃಕ್ಷತ್ರ ಮಾಡಿದ
ಪರಿಯನಭಿವರ್ಣಿಸಿದನಾಬ್ರಹ್ಮಾಂಡತೀ [1] ರ್ಥದಲಿ ‖ ೬೫

ಕೇಳಿದುದ ನೆಱೆ ತಿಳುಹಿ ಸ್ವರ್ಗದೊ
ಳಾಲಯಕೆ ತಿರುಗಿದನು ಲಕ್ಷ್ಮೀ
ಲೋಲ ಮೆಚ್ಚಲು ನಿಮ್ಮ ಪಾಂಡವರಾಯರೈವರನು ।
ಏಳಿಗೆಯಲಿರಿಸುವೆನು ಪುಣ್ಯದ
ಮಾಳಗೆಗೆ ನೂಕುವೆನು ಕೌರವ
ಕಾಲ ಗದುಗಿನ ವೀರನಾರಾಯಣನು ಕರುಣದಲಿ ‖ ೬೬

ಇಪ್ಪತ್ತೈದನೆಯ ಸಂಧಿ ಮುಗಿದುದು.

## ಇಪ್ಪತ್ತಾರನೆಯ ಸಂಧಿ.

ಸೂಚನೆ.

ವರಮಹಾಸಂವರ್ತಗೋತ್ರದ
ನಿರುತವಿಪ್ಪತ್ತೊಂದು ಭೂಪರ
ಪರಶುರಾಮನು ಕೊಂದ ಹೈಹಯಭೂಪಮೊದಲಾಗೆ ‖

---

1 ಬ್ರಾಹ್ಮಣ್ಯತೀರ್ಥ, ಖ.

ಕಾರ್ತವೀರ್ಯನ ಉತ್ಪತ್ತಿಕ್ರಮ.

ಕೇಳು ಜನಮೇಜಯ ಧರಿತ್ರೀ
ಪಾಲ ಪೊಂದಿನದಲ್ಲಿ ತಕ್ಷಕ
ಲೋಲಲೋಚನೆ ಸುದತಿ [1] ಋತುಮತಿಯಾಗಿ ಬರುತಿರಲು ।
ಏಱನೆಯು ಪಾತಾಳದಿಂದವೆ
ಕಾಲವಶದಿಂದುರಗ ನಿಂದಿರ
ನಾಲಯದೊಳಿರುತಿರಲದೊಂದಾನೊಂದು ಕಾರಣದಿ ॥ [2] ೧

ಉರಗನರಸಿಯು ಪತಿಯ ಕಾಣದೆ
ಪರವಶದಿ ಪತಿವಿರಹದಿಂದವೆ
ಸರಸಿರುಹಮುಖಿ ಬಂದಳೊಂದಿನ ಹರುಷದುಬ್ಬಿನಲಿ ।
ತರಣಿಬಿಂಬವ ತೆಗುಳ್ದು ಬೆರಳ್ಗಳ
ನೆರವಿಯಲಿ ನೇಸರಿನ ತೇಜವ
ವರಮುಖಿಯು ಬೇಱಿರಿಸಿ ಯಿರಲಿಕೆ ಸೂರ್ಯ ಹಯವೊಂದು॥

ಉರಗನರಸಿಯು ಕಂಡು ತನ್ನಯ
ತಿರುಪ ಮಾಣದೆ ಸೋತು ವೀರ್ಯವ
ಸುರಿಸಲಾಕೆಯು ನೋಂತು ಧರಿಸಿದಳೊಬ್ಬ ಪುತ್ರನನು ।
ಧರಿಸಲಿಕೆ [3] ವರಕಾರ್ತವೀರ್ಯನು
ಧರೆಯೊಳಗೆ [4] ಜನಿಸಿದನು ಸಾವಿರ
ವರದಳಾಂಶುಗಳೆಯ ಸಾವಿರಭುಜದ ತೋಳಿನಲಿ ॥ ೨

ಭುಜವು ಸಾವಿರ ಪಿತನ ಪಕ್ಷವ
ದಜಗರನ ನೆಱ ಜಾತಿಗಾಗಳು
ತ್ರಿಜಗವಱಿಯಲು ಪಾದ ಸಾವಿರ ತಾಯಿತಂದೆಗಳ ।
ಸುಜನಮತವಿದು ತಂದೆಯಂಗದೆ

---

1 ಪರಮ, ಕ. ಖ. 2 ಳಡಗಿರಲು ಸರ್ಪಾಧ್ವರದಕಾಲದಲ್ಲಿ, ಕ. ಖ.
3 ಭರವಸದಿ, ಖ. 4 ಉರಗಿಯಗಿ ಜ

ವಿಜಿತನಾದೊಡೆ ಪುತ್ರನುತ್ತಮ
ನಿಜವ ಕೇಳ್ಕೈ ತಾಯ ಹೋತನ ಮಧ್ಯಮಾನುಷನು ‖ ೪

ಅವಧರಿಸು ಪಿತೃಮಾತೃದೇಹವ
ವಿವರಿಸಲು ಹೋಲದವನೆಲ್ಲಾ
ಯವನಿಯಲಿ ಹೊಱಗೆಂದು ನುಡಿವರು ರಾಯ ಕೇಳಿಂತು |
ಅವನಿಪತಿ ಕೇಳಾಕೆ ವಿಪ್ರರ
ನವನವಮಿಯಿಸುತ ನೋಡಿ ನೋಡಿಯೆ
ಮಮತೆಯಲಿ ತಾ ಪೆತ್ತು ಕಳುಹಿದಳಾಮಹೀಪತಿಗೆ ‖ ೫

ಆಮಹೀಪತಿಯರಸ ವಿಪ್ರ
ಸ್ತೋಮವನು ಕಡಿಖಂಡಮಾಡಿದ
ನಾಮಹಾಪಾತಕವದಾತನ ಕುಲವ ಕ್ಷಯಮಾಡೆ |
ಭೂಮಿಪತಿ ತನ್ನಂತ್ಯಕಾಲದ
ಸೀಮೆಯಲಿ ನಿಲಿಸಿದನು ಕಂಡತಿ
ಪ್ರೇಮದಲಿ ಸಾರಥಿಯ ಮಾಡುತ ತಾಳಜಂಘನನು ‖ ೬

ಆತನನು ತನ್ನಖಿಳರಾಜ್ಯಕೆ
ನೀತಿಯಲಿ ನಿಲಿಸಿದನು ಬಱಿಕತಿ
ಪ್ರೀತಿಯಲಿ ಕಡೆಗಾಣದಿದ್ದನು ಹಲವು ಕಾಲದಲಿ |
ಪಾತಕಿಗೆ ಪರವಾಯುವೆಂಬುದು
ನೀತಿಯಾಯಿತು ನೃಪತಿ ರೌರವ
ವ್ರಾತದಲಿ ಬಹುದಿನಕೆ ಬಿದ್ದನು ಕೃತಮಹಾವೀರ್ಯ ‖ ೭

ಕಾರ್ತವೀರ್ಯನ ಆಳ್ವಿಕೆಯಲ್ಲಿ ಪರಶುರಾಮನ ಜನನ.

ಖ್ಯಾತಿಯಲ್ಲಾ ಕಾರ್ತವೀರ್ಯನು
ಭೂತಳವನಾಳುತಲಿ ಬಹುದಿನ
ವ್ರಾತ ಸವೆಯಲಿಕತ್ತಲಾಜಮದಗ್ನಿ ರೇಣುಕೆಯ |

ನೀತಿಯಲಿ ಹಿಂದಖಿಳಜನ್ಮದ
ಭೂತಳದ ಮೇಲಾವಿರಿಂಚಿಯು
ತಾತ ಹುಟ್ಟಿದ ಮಾಡಿ ನೆರಹಿದ ಪುಣ್ಯಫಲದಿಂದ ‖ ೮

ಮಾರ್ಗಶೀರುಷ ಮಾಸದಪರದ
ಭಾಗ ಷಷ್ಠಿಯು ಭಾನುವಾರದ
ಲಾರ್ಗಳದಲಾಭಗಣಪಿತೃಗಣಚರಣಮೂಜಿನೆಯು ।
ಕೂರ್ಗಣೆಯು ಕೂರಸಿಯು ಬಲುಹನು
ಕಾರ್ಗೊಳಿಪ ಪರಶುವನು ಧರಿಸಿದ
ಭಾರ್ಗವಶ್ರೀರಾಮ ಜನಿಸಿದನವರ ಪುಣ್ಯದಲಿ ‖ ೯

ಪುಟ್ಟಿದನು ರೇಣುಕೆಯು ಗರ್ಭದಿ
ಘಟ್ಟಿಪ್ರಕಟಿತವಾಯ್ತು ಲೋಕದ
ದುಷ್ಟಮಾರಿಯೊಳಾಯ್ತುವಿಕ್ರಮ ವಿಪ್ರಜಾತಿಗೆಲ ।
ಶಿಷ್ಟಕರ್ಮದ್ವಾರವದು ನೆಜಿ
ಸೃಷ್ಟಿಯಲಿ ಮೆಜಿಯಲಿಕೆ ದೈತ್ಯಘ
ರಟ್ಟ ಬಂದನು ದಿವ್ಯರೂಪದಿ ಸೂತಿಕಾಗೃಹಕೆ ‖ ೧೦

ಬರಲಿಕಾಜಮದಗ್ನಿದೇವನು
ನಿರುತಗುಣನಾಮದಲಿ ನಾಮವ
ಕರೆದು ಕತಿಪಯದಿನಕೆ ಮೌಂಜಿಯು ಕಟ್ಟಿ ಪರಿವಿಡಿಯೆ ।
ಕರಣವೃತ್ತಿಯು ಕರ್ಮಸಾರವ
ನೊರೆದು ತಾ ತ್ರಿವಿಧದಲಿ ನಿಲಿಸಿದ
ಪರಮಪುರುಷದಲಿರಲಿಕೊಂದಿನಕಾಮಹೀಪತಿಯು ‖ ೧೧

ಜಮದಗ್ನಿ ಋಷಿಗಳ ಆಶ್ರಮಕ್ಕೆ ಕಾರ್ತವೀರ್ಯನ ಆಗಮನ.

ವರಪುರೇಶ್ವರ ತನ್ನ ಸೇನೆಯು
ನೆರಹಿ ಪಾರಡಿಯಾಡುತಲ್ಲಿಗೆ
ಸರಿದು ಬಂದನು ಜಾಮದಗ್ನಿಯು ವರತಪೋವನಕೆ ।

ಅರಸನನು ಕಂಡರ್ಘ್ಯಪಾದ್ಯೋ
ತ್ಕರದಿ ಮನ್ನಿಸಿ ಯಜ್ಞಶೇಷದ
ವರಹವಿಸ್ಸಿನಲಿಂದು ತವ್ಮಾಶ್ರಮದ ಮಧ್ಯದಲಿ ॥ ೧೨

ವಸಿಷ್ಠರ ಇಷ್ಟದಂತೆ ಕಾರ್ತವೀರ್ಯನು ಭೋಜನಕ್ಕೆ ನಿಲ್ಲುವಿಕೆ.

ನಿರುತದಾರೋಗಣೆಯು ಮಾಡಿಯು
ಮರಳಿ ಬಿಜಮಾಡೆನಲು ಭೂಪತಿ
ವರಮುನಿಪಗಿಂತೆಂದ ತನ್ನಯ ಸೈನ್ಯವಿದನುೞಿದು ।
ಧರಣಿಯಲಿ ನೃಪನೊಬ್ಬನುಂಬನೆ
ಪುರಕೆ ನೇಮವ ಕೊಡಲಿ ಪೇಹುದು
ತರಹರಿಸ ಬೇಡೆಂದು ಬಿನ್ನಹ ಮಾಡಿದನು ಮುನಿಗೆ ॥ ೧೩

ಪಸು ನಿಮ್ಮಯ ಗುಣದ ಗಣನೆಯು
ನೈಸರಲಿ ತನ್ನಾಶ್ರಮದ ನಿ
ರ್ದೋಷದನ್ನವನುಂಡು ಮರಳುವುದೆಂದನಾಮುನಿಪ ।
ಈಸು ಸಂಗ್ರಹವೇಕೆ ನಿಮ್ಮಯ
ದಾಸವರ್ಗವು ನಮ್ಮ ಕುಲಪಿ
ನ್ಯಾಸ ವೆಂದೆನುತಂಘ್ರಿಗೆಱಗಿದ ಮುನಿಗೆ ವಿನಯದಲಿ ॥ ೧೪

ಅಡಿಗೆಱಗಿದಾನೃಪತಿಯುಂಗವೆ
ತಡವರಿಸಲಾನೃಪನ ಕಾಯವು
ಝುಡಿತೆಯಲಿ ವಜ್ರಾಂಗವಾದುದು ಮುನಿಯ ಕರ ಸೋಂಕೆ ।
ಒಡಬಡಿಸಿದಾಕ್ಷಣವೆ ಮನೆಯು
ಲ್ಲಿಡೆಯ ಮಾಡಿದ ನೃಪನ ಪಾಡಿಯು
ಪಡಿತಳಿಸಿ ತತ್ಸೈನ್ಯಸಾಗರಕೊಂದು ನಿಮಿಷದಲಿ ॥ ೧೫

ನೋಡಿ ಕರೆತಂದಮೃತಭೋಜನ
ಮಾಡಿಸಿದ ಸುರವಧುಗಳಿಂದವೆ
ಕೂಡೆ ಯೆಡೆಯಾಡುತಲೆ ಬಡಿಸಲಿಕವರು ಸಿಂಗರಿಸಿ ।

ಋಷಿಪತಿ ಸತ್ಕರಿಸಿ ವಂಶದ
ಪಾಡಱಿದು ನೃಪಾಲಿಕ್ಕೆ ಕಳುಹಿದ
ಬೀಡ ಪೊಕ್ಕಲ್ಲಿರುತ ಮಕುಟವ ತೂಗಿ ಬೆಱಗಾದ ॥ ೧೬

ಬಳಿಕ ಋಷಿಯು ಕಾಮಧೇನುವನ್ನು ಅಪೇಕ್ಷಿಸುವಿಕೆ.

ನೋಡಿರೇ ಬಡದ್ವಿಜನ ಸಡಗರ
ರೂಢಿಪರ ನೇಳಿಸಿತದೀತನ
ಗಾಢಸಿರಿ ಯಿದಕೇನು ಕಾರಣವೆಂದನಾನೃಪತಿ ।
ರೂಢಿಯಲಿ ಬ್ರಹ್ಮಸ್ವಕಾವನು
ನೋಡಿ ಮಱುಗುವನವನು ತನ್ನಯ
ಕೇಡ ತರವನು ನಿಮಿಷಮಾತ್ರದೊಳೆಂದ ಗಂಧರ್ವ ॥ ೧೭

ಅರಸ ನೆಱೆ ಬಿಸುಸುಯಿಲ ಸುಯಿವೃತ
ಪುರಕೆ ತೆರಳದೆ ಯಿರಲಿಕಾತನ
ವರಪುರೋಹಿತನೆಂದನಾತನ ಸಿರಿಯು ಸಾಧನವ ।
ನಿರುತವೇಸಿದಕೊಳಗಣಾಕಳು
ಸಿರಿಗೆ ಸದರವು ಜೀಯ ಯೆನಲಿಕೆ
ಪರಮಹರುಷವ ತಾಳ್ದು ಭೂಪತಿ ಯುಹುದೆಲೇ ಯೆಂದ ॥ ೧೮

ಎನುತ ಧೇನುವ ಬೇಡಕಳುಹಿದ
ಜನಪನಾಕ್ಷಣ ವೃಂದ ಕಯ್ಯನು
ಮುನಿಗೆ ತೋಱಿದೊಡಾತನಾಗಳು ವರಸಮಾಧಿಯಲಿ ।
ದನುಜಹರನಲಿ ಮುನಿಪ ಧ್ಯಾನವ
ನನುಕರಿಸಿ ಯಿಹನೆನಲು ಕೋಪಿಸಿ
ಮುನಿಯು ಕೊಂಡೆಮಗೇನು ಕಾರಣ ಗೋವ ತಹುದೆಂದ ॥ ೧೯

ತನ್ನ ಸೈನಿಕರಿಂದ ಧೇನುವನ್ನು ಅಪಹರಿಸುವಿಕೆ.

ಧೇನುವನು ತೆಗೆಯಲಿಕೆ ತನ್ನಯ
ಸೇನೆಯಧಿಪನ ಕಳುಹಿ ಮುನಿಪನ

ಧೇನುವನು ಕೆಡೆ ಕಟ್ಟಿ ತೆಗೆಯಲು ಮುನಿಪ ಕಣ್ದೆಱೆದು |
ಆನರೇಂದ್ರಂಗೀಯದಗ್ಗದ
ಧೇನುಗೊರಳನ ಬಿಡದೆ ಧರ್ಮದ
ಸೂನುವಾಗಿಹ ತಾಯ ಕೊಡದಿರೆ ನೃಪನು ಕೋಪದಲಿ || ೨೦

ಎದ್ದು ತಾನೈತಂದು ಸೇನೆಯು
ದೊದ್ದೆಗವಿಸಿದ ಮುನಿವರಾಶ್ರಮ
ಕಿದ್ದು ಗೃಹಮಂಡಲವ ಕೊಂಡರು ಸೂಱೆಗರು ನೃಪನ |
ತಿದ್ದಿ ತಾತನ ಮನೆಯಲುಂಡುದ
ಕದ್ದಿದರು ತಮ್ಮನ್ವಯಂಗಳ
ನೆದ್ದು ಪೋದರು ನೃಪತಿ ಮುನಿಯನು ಖಡ್ಗಹಸ್ತದಲಿ || ೨೧

ಶಿರವರಿದರಾರೇಣುಕಾತ್ಮಜೆ
ಯುರವನಿಪ್ಪತ್ತೊಂದು ಸೂೞಲಿ
ಕರದಿ ಬಡಿಯಲು ಬಂದು ಕಂಡನು ದೈತ್ಯಭಂಜಕನು |
ವರಮುನಿಪನೌಪಾಸನಾಂಗಕೆ
ನೆರಹಿ ತಂದನು ಯಜ್ಞಬರ್ಹಿಯ
ಪರಶುರಾಮನು ಕಂಡನೀರೌರವದ ಕೌತುಕವ || ೨೨

ಶಿರವರಿದು ತಜ್ಜನಕ ಜನನಿಯು
ವುರದ ತಾಪೋತ್ಕರವನಗ್ಗದ
ಪರಮಧೇನುವ ಕಟ್ಟಿ ತೆರಳುವ ನೃಪನ ಸಡಗರವ |
ನಿರುತವನು ನೆಱೆ ಕಂಡು ಜನನಿಯು
ಕರವಿಡಿದು ನೆಱೆ ನುಡಿದ ನಿಮ್ಮಯ
ವುರವ ಕಟ್ಟಿದ ಕರದ ಯಿಪತ್ತೊಂದು ಸೂೞಿಂಗೆ || ೨೩

ಧರಣಿಯಲ್ಲೀನೃಪನ ವಂಶವ
ತಱಿವೆನಿಪ್ಪತ್ತೊಂದು ಭಾರಿಯು
ಪರಶುಗೊಂಡೈದಿದನು ನೃಪತಿಯ ಸೈನ್ಯಸಾಗರಕೆ |

ಆಪುರಂದರಮುಖ್ಯನಾಕಜ
ಪಾಪರಹಿತನ ಯೆಡೆಗೆ ಮುನಿಪನ
ತಾಪಶಕ್ತಿಯೆ ಯೆದ್ದು ಹೊಕ್ಕಳು ರಣವನುಖವಣಿಸಿ ॥ ೨೮

ಅರೆರೆ ಮಾರಿಗೆ ಮಾರಿ ಜವನಂ
ಬೆರಸಿ ನುಂಗುವ ಮೃತ್ಯುನಿಕರವ
ನೊರಸಿ ಮುಕ್ಕುವ ಮೃತ್ಯುದೇವಿಯೊ ರೇಣುಕಾತ್ಮಜೆಯೊ ।
ವರಶರಾಸನದಿಂದ ಭೂಪನ
ಪರಿಕರವ ಸಂಹರಿಸಿ ಬಾಣದ
ವರುಷವನು ಕರೆಯುಲಿಕೆ ನೋಡುನು ನೃಪನು ಮಱೆದೊಮ್ಮೆ ॥

ಆಸತಿಯ ಪತಿಮುಷ್ಟಿಕರಪಲಿ
ಶಾಶ್ವತವ ಮಾಡಿದನು ಕಾಯುವ
ನಾಸುರದಿ ವಜ್ರಾಂಗವಾಯಿತು ಲೋಪ ಕಳುಕಿಪರೆ ।
ಏಸು ಬಾಣವಲೆಚ್ಚೊಡೆಯು ನೆಱೆ
ಸೂಸಿದುವು ರೇಣುಕೆಯ ಮಾರ್ಗಣ
ದೈಸುವನು ಜಮದಗ್ನಿರಾಮನು ಕಂಡು ಮನದೊಳಗೆ ॥ ೩೦

ಕಾರ್ತವೀರ್ಯನ ಸಂಹಾರ.

ತಾಯ ನಿಲಿಸಿಯೆ ಪರಶುಗೊಡಲಿಯ
ಬಾಯ ಮಸಪುತ ಬಂದು ಭೂಪನ
ದಾಯಿಗರ ಹರೆಗಡಿದು ಹಿಡಿದನು ಕಾರ್ತವೀರ್ಯಕನ ।
ಬಾಯ ಬಿಡೆ ಪಶುಗಳಲಿ ಯಜ್ಞವ
ದಾಯನಿಕರಕೆ ಕಟ್ಟುವಡೆದನು
ರಾಯ ನೊಂದನು ತಾ ಚತುರ್ಬಲ ವ್ರೋಡಿತಲ್ಲಲ್ಲಿ ॥ ೩೧

ಏಟಿಗೆಯೆ ವಜ್ರಾಂಗವಾದೊಡೆ
ಬಾಳಲೀಸದು ಪಾಪಕರ್ಮವು
ಕಾಲದಲಿ ಫಲವಿಕ್ಕಿ ಲಕ್ಷ್ಮೀಲೋಲ ಮುನಿಯುಲಿಕೆ ।

ತೋಳಡವಿಯೊಳು ಪೊಕ್ಕು ಕೊಡಲಿಯು
ಜಾಳಿಸಿಯೆ ತಱಿದೊಟ್ಟೆ ಸಮಿಧೆಯು
ಮೊಳಗೆಯು ಮಾಡಿದನು ಸಾಸಿರಬಾಹುನೃಪತಿಯನು ॥ ೩೦

ಮತ್ತೆ ಕಡಿದನು ಶಿರವನಹಿತನ
ಹೊಟ್ಟೆಯನು ಚಪ್ರಕಡಿಯ ಮಾಡಿಯೆ
ಕಟ್ಟಿ ಕೊಂಡಾಡಿದನು ಕೌಶಲಮಲ್ಲ ನಿಮಿಷದಲಿ ।
ಅಟ್ಟಿದನು ಜವಪುರಕೆ ನೃಪತಿಯು
ಕುಟ್ಟಿ ತಂದೆಯು ಹೊರೆಗೆ ಬಂದುತು
ಕೃಷ್ಣದೇವೋತ್ತಮನದತ್ತಿದ ಮುನಿಯು ನಿಮಿಷದಲಿ ॥ ೩೩

ಅಬ್ದವೆರಡೆನಲಲ್ಲಿ [1] ಪುಟ್ಟಿದ
ಶಬ್ದಬ್ರಹ್ಮಾತೀತನಂದಿಗೆ
ಲಬ್ಧವಾಯಿತ್ತಾಮಹೀಪತಿ ಪುರವರೇಶ್ವರಗೆ ।
ಅಬ್ದವದು ರಕ್ತಾಕ್ಷಿಯುಪರದ
ಹುಬ್ಬೆಯುಲಿ ರವಿ ಯಿರಲಿಕಾತನ
ಸರ್ಬಸೈನ್ಯದ ರಕ್ತದಿಂದವೆ ಹುಟ್ಟಿತಾನದಿಯು ॥ ೩೪

ಪರಶುರಾಮನು ಭೂಮಿಯನ್ನು ವಿಪ್ರರಿಗೆ ದಾನಮಾಡುವಿಕೆ.

ರೇಣುಕಾಸುತನಲ್ಲಿ ತಂದೆಯು
ಕಾಣಿಸಿದನಾಪರಶುರಾಮನು
ಗೋಣ ಕಡಿದಾನೃಪನ ಭೂಮಿಯು ಕೊಂಡು ಹರುಷದಲಿ ।
ಕ್ಷೋಣಿಸುರರಿಂಗಿದು ಭೂಪನ
ರಾಣಿ ಕೋಪದಿ ತನ್ನಗಂಡನ
ಪ್ರಾಣಗೊಂಡನ ಕೊಲುವ ಮುಂಡೆಯು ಮಾಣಿ ಮಗನೆನುತ॥೩೫

ಆಪಂಶದಲ್ಲಿ ಹುಟ್ಟಿದ ಸೌವೀರ ರಾಜನ ಸಂಹಾರ.

ಧ್ಯಾನವಿಡಿದಿರೆ ಸೂರ್ಯದೇವರಿ
ಗಾನದೀತೀರದಲಿ ತಿಂಗಳು

---

1 ವೆರಡೇಱಱರಲಿ, ಕ. ಖ.

ಮಾನಿನಿ ಯಿರಲು ರವಿಯು ರಮಿಸಲಿಕೊಬ್ಬ ಸೌವೀರ |
ಮಾನಿನಿಗೆ ನವಮಾಸ ತೀರಲು
ದಾನವನ ಯಾವೇಶದಿಂದವ
ಮಾನವೇಂದ್ರತೆ ಯೆಯ್ದಿ ತಂದೆಯು ರಾಜ್ಯಗೆಯ್ಯುತಿರೆ ‖ ೩೬

ಧರಣಿಸುರರುಂಬಗ್ರಹಾರವ
ಪರಿಹರಿಸಿ ಭೂಸುರರನೆಲ್ಲರ
ಹಿರಿದು ಕಾಡಿಯೆ ಪರಶುರಾಮನ ಮೇಲೆ ದಂಡಾಯ್ತು |
ನೆರಹಿದನು ಹದಿನೆಂಟುಕೋಟಿಯು
ಕರಿಘಟಾವಳಿ ಸೈನ್ಯಸಾಗರ
ವೆರಸಿ ಹೇಮಾಚಲಕೆ ಬಂದನು ಬಂದು 1 ಮುತ್ತಿದನು ‖ ೩೭

ಮುತ್ತಲಿಕೆ ತೆತ್ತೀಸಕೋಟಿಗ
ಳತ್ತ ನಡುಗಲು ಪರಶುರಾಮನು
ಹೊತ್ತು ಕೊಡಲಿಯ ಕೊಂಡು ನಡೆದನು ಕರಿಯ ಕಾನನಕೆ |
ಚಿತ್ತವಿಸು ನಿಮಿಷಾರ್ಧದಲಿ ನೆಱೆ
ಮುತ್ತಿದಿಭಗಳ ಕಡಿದು ಜೋದರ
ಮೃತ್ಯು ಲೋಕವ ಹೊಗಿಸಿ ಕೊಂದನು ಸೌರವೀರ್ಯನನು‖೩೮

ಅವನ ದೇಶವ ಮರಳಿ ಭೂಸುರ
ನಿವಹಕಿತ್ತರೆ ಕೆಲವು ದಿವಸಕೆ
ಯುವತಿ ಸೌವೀರಕಗೆ ತನಯನ ಮಾಳ್ಪ ಭರವಸದಿ |
ಭವಣಿಗೆಯುಲ್ಲೈತಂದು ಸೋಮೋ
ದ್ಭವೆಯ ತೀರದಲೆಸಗಿ ತಪವನು
ಯುವನದಲಿ ಶಶಿಗೆಸಗೆ ರಮಿಸಿದನಾಸುರೂಪಿಯನು ‖ ೩೯

ಶಶಿವೀರ್ಯಜನನ ಮತ್ತು ಅವನ ಸಂಹಾರ.

ರಮಿಸಲಿಕೆ ಶಶಿವೀರ್ಯ ಜನಿಸಿದ
ಪ್ರಮದೆಯಲಿ ನವಮಾಸ ತೀರಲು

---

1 ಬಂದಾಗೊಡನೆ, ಖ.

ಕುಮತಿಯನು ಕೊಂಡೊಯ್ದು ಸಲಹಲಿಕೇಳುವತ್ಸರವು |
ಗಮಿಸಿ ತಂದೆಯ ಪುರವನಾಳ್ದನು
ನಿಮಿಷದೊಳಗಾಕ್ರಮಿಸಿ ಸೇನೆಯ
ನಮಿತವಿಲ್ಲದೆ ಸರಹಿ ಬ್ರಾಹ್ಮರ ದೇಶವೀವುತಲಿ || ೪೦

ಬಂದು ರೇಣುಕೆಯ ಸುತನಾಶ್ರಮ
ಕಂದು ಧಾತ್ರಿಯನಿಡಲು ಕೊಡಲಿಯ
ಕಂಧರಿಗನೈತಂದು ನೃಪತಿಯ ದಳವ ಬಳಿಕೆಯ್ದು |
ಮಂಪಮತಿಯನು ಕಡಿದು ಭೂಸುರ
ವೃಂದಕಿಳೆಯನು ಕೊಟ್ಟು ವಿಪ್ರರ
ಹಿಂದೆ ಕಾಯಲು ವಿಪ್ರಮನ್ನೆಯನಧಿಕಪೌರುಷವ || ೪೧

ಮರ್ತ್ಯನನು ನೆಲ ಸೃಜಿಸಿ ಕೊಟ್ಟರೆ
ವೃತ್ತಿಯಲಿ ಭೂಸುರರ ಸಲಹಲು
ಮತ್ತೆಯಾತನ ಸತಿಯು ಪುತ್ರನ ಪಡೆಯಬೇಕೆನುತ |
ಪೃಥ್ವಿಯನು ತಿರುಗುತಲಿ ನರ್ಮದೆ
ಯತ್ತ ಬಂದಾಕುಜನ ಧ್ಯಾನದಿ
ವೃತ್ತಗುರುಕುಚಕೆ ಯಿರಲು ಕಂಡನು ಸತಿಯ ಭೂಮಿಜನು || ೪೨

ರಮಿಸಲಿಕೆ ನೆಲಕೆ ಭೌಮವೀರ್ಯನು
ಕುಮತಿಯಲಿ ಬಂದೈಯ್ಯನಾಳಿದ
ಚಮಿಮದಾಮಂಡಲವ ಕೊಂಡನು ಕಂಡು ಮನ್ನೆಯರ |
ನಿಮಿಷದಲಿ ಭೂಸುರರನೆಲ್ಲರ
ಪ್ರಮದಯರ ಸೆಳೆ ವಿಡಿದು ಹಿಂದಣ
ಕ್ರಮದಲೆ ಬ್ರಾಹ್ಮಣರ ಭಂಗಿಸಿ ಪರಶುರಾಮನನು || ೪೩

ಅರಸುತೈತಂದಲ್ಲಿ ಪರ್ವತ
ದಿರುಬಿನಲಿ ಕಾಳಗವ ಕೊಟ್ಟನು
ತಱಿದು ಬಿಸುಟನು ಯವನಸೇನೆಯನವನ ಸಿರಿ ಸಹಿತ |

ತಿರುಗಿ ಬ್ರಾಹ್ಮರ ನೆರಹಿ ಧಾರೆಯು
ನೆಱೆದು ಭೂಮಿಯ ಮರಳೆ ಕೊಟ್ಟನು
ಸೆಱೆಯ ಬಿಡಿಸಿಯೆ ಕೋಟಿಕಾಸ್ಯನದೆಂಬ ಮನ್ನೆಯನ ‖ ೪೪

ಸೃಜಿಸಿ ವಿಪ್ರರ ಯಜನಯಾಜನ
ತ್ರಿಜಗದಲಿ ಮೆಱೆಯಲಿಕೆ ಬಹುಗಜ
ಬಜೆಕೆ ಯಿಲ್ಲದೆ ಯಿರಲಿಕಾತನ ಸತಿಯು ಸೌಮ್ಯನನು ।

ಬುಧವೀರ್ಯನ ಜನನ ಮತ್ತು ಸಂಹಾರ.

ಭಜಿಸಲಿಕೆ ಬಂದೈದೆ ರಮಿಸಿದ
ಕುಜಜ ಸತಿಯಳಿಗಾಗ ಜನಿಸಿದ
ಭುಜಬಲಾನ್ವಿತನಪ್ಪ ಪುತ್ರನು ನಿರುತಬುಧವೀರ್ಯ ‖ ೪೫

ಜನಿಸಿ ತಂದೆಯ ಪುರವ ಹೊಕ್ಕಂ
ತನಿತು ಬ್ರಾಹ್ಮರ ವೃತ್ತಿ ಭೂಮಿಯ
ಜನಪನಪಹರಿಸೈದೆ ಕಾಹಿನ ಮನ್ನೆಯಾದಿಗಳ ।
ತನುಗಡಿದು ಹೇಮಾದ್ರಿಯಲ್ಲಿಗೆ
ಘನಚತುರ್ಬಲದಿಂದ ಬಂದನು
ಮುನಿಶಿರೋಮಣಿಪರಶುರಾಮನ ವಾಸವನಕಾಗಿ ‖ ೪೬

ಬಂದು ಕೋಳಾಹಳದ ಕದನವ
ನಂದು ಮಾಡಲು ಕೇಳಿ ಕೊಡಲಿಯಿ
ನಂದದಲಿ ಮೋಹಿಸಿಯೆ ಭೂಪನ ಸೈನ್ಯಸಾಗರವ ।
ನಂದಿಸಿಯೆ ನಿಮಿಷಾರ್ಧದಲಿ ಯಮ
ಮಂದಿರಕೆ ನಡೆಗೊಳಿಸಿ ಮುನಿಜರ
ಮಂದಿಗಿತ್ತನು ಸಕಲಭೂಮಿಯ ಜಾಮದಗ್ನಿಕನು ‖ ೪೭

ಅರಸನಂತಕಪುರಕೆ ಸಲಲಿ
ಕ್ಕರಸಿ ಪುತ್ರನ ಪಡೆವೆನೆಂದಾ
ದರಿಸಿ ಮಂದಾಕಿನಿಯ ಹೊರೆಯಲಿ ಜೀವನನು ಭಜಿಸಿ ।

ಜೀವವೀರ್ಯನ ಜನನ ಮತ್ತು ಅವರ ಸಂಹಾರ

ಇರಲಿಕಾಸುರಗುರುವು ಸತಿಯಳ
ಹೊರೆಗೆ ಬಂದುಜೆ ನೆರೆಯಲಾಗಳು
ಪರಿಪಿಡಿಯೆ ನವಮಾಸ ತೀರಲು ಜೀವವೀರ್ಯಕನು ‖ ೪೮

ಜನಿಸಿ ಕಾಲಾಂತರಕೆ ತಂದೆಯು
ವಿನುತರಾಜ್ಯವ ಕೊಂಡು ಬ್ರಾಹ್ಮರ
ಜನವ ಸುಲಿವುತ ದೇಶಗಾಹಿನ ಮನ್ನೆಯಾದಿಗಳ ।
ಅನಿತುವನು ಸಂಹರಿಸಿ ರೇಣುಕೆ
ತನಯನಲ್ಲಿಗೆ ಧಾಳಿಮಾಡಿಯೆ
ಘನ ಮಹಾಸೈನ್ಯದಲಿ ಮುತ್ತಿದನಾಮಹಾಶ್ರಮವ ‖ ೪೯

ಮುತ್ತಲಿಕೆ ಜಮದಗ್ನಿ ರಾಮನು
ಮತ್ತೆ ಕೊಡಲಿಯ ಮಸೆದು ಪೊಕ್ಕನು
ಚಿತ್ತವಿಸು ನೆಱೆ ಕಡಿದನಾತನ ಸೈನ್ಯಕಾನನವ ।
ಅತ್ತ ನೂಕಿದ ಯಮನ ನಗರಿಗೆ
ಮುತ್ತಿ ಕಾದುವ ನೃಪನ ಶಿರವನು
ಕಿತ್ತು ಬಿಸುಟನು ನಿಮಿಷಮಾತ್ರದೊಳರಸ ಕೇಳೆಂದ ‖ ೫೦

ಬಳಿಕ ಬ್ರಾಹ್ಮಣರೆಲ್ಲರನು ಕರೆಸಿ
ನಿಳಯವನು ನೆಱೆ ಕೊಟ್ಟು ಬ್ರಾಹ್ಮರ
ಬಳಗವನು ಕೈಕೊಳಿಸಿ ಕಾಯಲಿಕೊಬ್ಬ ಮನ್ನೆಯನ ।
ಬಲುಹನುಳ್ಳನನಿತ್ತು ಬ್ರಾಹ್ಮರ
ಸಲಹಿದನು ಹಲಕಾಲಕಾತನ
ಲಲನೆ ಹೋದಳು ತಪಕೆ ಗಂಗಾತೀರಕೊಲವಿನಲಿ ‖ ೫೧

ಭಾರ್ಗವವೀರ್ಯನ ಜನನ ಅವನ ಸಂಹಾರ.

ತಪವನಾಚರಿಸಲ್ಕೆಯುಶನನು
ಜಪಸಮಾಧಿಯೊಳಿದ್ದು ಕಂಡನು

ಕವಿಯು ತತ್‌ಕ್ಷಣ ರಮಿಸೆ ಜನಿಸಿದನುಶನವೀರ್ಯಕನು ।
ಉಪನಿಷತ್ಕರ್ಮದಲಿ ಕೋವಿದ
ಗುಪನಯನಮೊದಲಾಗಲುದ್ವಾ
ಹಪರಕರ್ಮವ ಮಾಡಲೈದಿದ ಪಿತನ ಪುರವರವ ॥ ೫೦

ಬಂದು ಮನ್ನಿಯಗುಲವ ನುಱುಹದೆ
ಕೊಂದು ವಿಪ್ರರ ಮಹಿಯನಳುಕದೆ
ಯಂದು ಕೊಂಡನು ಶುಕ್ರವೀರ್ಯನು ನಿಮಿಷಮಾತ್ರದಲಿ ।
ಸಂಧಿಸಿಯೆ ಸೇನೆಯನು ರೇಣುಕೆ
ನಂದನನನರಸುತಲಿ ಯುಶನನ
ಕಂದ ಹೊಕ್ಕನು ಪರಶುರಾಮನ ವರತಪೋವನವ ॥ ೫೩

ಹೊಗಲು ಕ್ಷತ್ರಿಯಕಟಕಭಂಜನ
ಬಿಗಿದು ಶಂಖಧ್ವಾನ ಮಾಡಿಯೆ
ಜಗ ನಡುಗೆ ಬಂದೈದೆ ಹೊಕ್ಕನು ನೃಪನ ವಾಹಿನಿಯು ।
ಬಗೆಯದರಿಮೋಹರವ ಕಡಿವುತ
ಜಗದ ವಲ್ಲಭ ಪರಶುರಾಮನು
ನಗುತ ವಿಪ್ರಕ್ಷಯನ ಕಡಿದನು ನಿಮಿಷಮಾತ್ರದಲಿ ॥ ೫೪

ಕಡಿದು ವೇದೋದ್ಧಾರ ಮಾಡಿಯೆ
ಪೊಡವಿಯನು ಭೂಸುರರಿಗಿತ್ತುಱಿ
ಯೊಡೆಯನನು ತಿರಿ ಬೇಡೆ ಕೊಟ್ಟನದೊಬ್ಬ ಮನ್ನಿಯನ ।
ನಡೆವುತಿದ್ದುದು ಹಲವುಕಾಲವು
ಬಿಡದೆ ಕೃತಯುಗದಪರಭಾಗಕೆ
ಮಡದಿ ಬಂದಳು ಗರುಡಗಂಗೆಯ ತೀರಕರಸುತಲಿ ॥ ೫೫

ಮಂದವೀರ್ಯನ ಜನನ ಮತ್ತು ಸಂಹಾರ.

ಬರಲಿಕಾಕೆಯ ರೂಪುವಿಭ್ರಮ
ಕುರ್ಥವಣಿಸಿ ನೆಱೆ ಶೌರಿ ರಮಿಸಿದೊ

ಧರೆಸಿ ಪೆತ್ತ್ರಳು ಮಂದವೀರ್ಯಾಸನೂರ್ಜಿತೋರ್ಜಿತನ ।
ಧರಣಿಯುಲಿ ದಿನ ಸವೆಯಲಾತನು
ವುರುವಣಿಸಿ ತನ್ನಾತ್ಮಜನಕನ
ಪುರವ ಹೊಕ್ಕನು ಹೊಕ್ಕು ಕೊಂದನು ಮನ್ನೆಯಾದಿಗಳ ॥ ೫೬

ಕೊಂದು ಭೂಸುರಜನರನನಿಬರ
ಚಂದಗೆಡಿಸಿಯೆ ವಿಪ್ರರಿಳೆಯನು
ಮಂದಮತಿ ಕೈಕೊಂಡು ಕವರಿದನವರ ಹಿರಿದಾಗಿ ।
ಮುಂದುಗೆಡಿಸಿಯೆ ಯಿರಲಿಕಾಗೋ
ವಿಂದನೊಲಿಯುಲಿಕವನು ಸೇನೆಯ
ಮಂದಿಯುಲಿ ಭಾರ್ಗವನನರಸುತ ತೀವ್ರಕೋಪದಲಿ ॥ ೫೭

ಬಂದು ಭಾರ್ಗವರಾಮಚಂದ್ರನ
ಸಂದ ಭುಜಬಲವಱಿಯದಾತನು
ಮುಂದೆ ಮೋಹರಿಸಿರಲಿಕೆದ್ದನು ದೈತ್ಯದಾವಾಗ್ನಿ ।
ಮಂದವೀರ್ಯನ ಮೇಲೆ ಹಾಯಿದು
ಸಂದುಸಂದಿಗೆ ಕಡಿದು ವಿಪ್ರರ
ಮಂದಿಗಿತ್ತನು ಮಹಿಯ ಪುನರಪಿ ಯವರ ಕಾಹಿಂಗೆ ॥ ೫೮

ಕಳುಹಿದನು ಮನ್ನೆಯನನಾಕ್ಷಣ
ನಳಿನನಾಭನ ಬಲುಹನುಳ್ಳನ
ಕೆಲವುಕಾಲಾಂತರಕೆ ಸೌರಿಯ ಸುತನ ಸತಿ ಮುಟ್ಟದು ।
ಇಳೆಯಲುಱೆಯುಗ್ರದಲಿ ತಪವನು
ಲಲನೆ ಮಾಡಲಿಕಾಗ ಕೋಮಲ
ಕಳೆಯ ಕಂಡಾರಾಹು ರಮಿಸಲಿಕೊಬ್ಬನತಿಬಳನು ॥ ೫೯

ಧಾಹುವೀರ್ಯನ ಜನನ ಅವನ ಸಂಹಾರ

ಜನಿಸಿದನು ನವಮಾಸ ತೀರಲು
ಜನನಿ ಸಾಕಿದಳಹಿಯನನ್ವಿತ

ಜನಪಕುಲಕಧಿಪತಿಯು ಮಾಡಲು ರಾಮವೀರ್ಯಾರ್ಜುನ ।
ವಿನುತಕ್ಷತ್ರಿಯಕುಲದ ದೀಕ್ಷೆಯು
ಜನಪ ಕೊಂಡೈದಿದನು ತಂದೆಯು
ಯನಿತು ರಾಜ್ಯವನಾಳ್ವ ವಿಪ್ರರ ಮಹಿಯು ಕೈಕೊಳುತ ॥ ೬೦

ಕೊಲುತ ಮನ್ನೆಯ ಜಾತಿಯಾದುದ
ಸುಲಿದು ವಿಪ್ರನಿಕಾಯವಾದುದ
ತುಳಿದು ದೇಶಾಂತರವ ಮಾಡಿಯೆ ಪರಶುರಾಮನನು ।
ತಿಳಿಯಲೞಿಯದೆ ವಿಪ್ರಜಾತಿಯ
ಬಳಗದಿರಿಕೆಯನಂದು ಕೊಲ್ಲುತ
ಬಲುಹಮಾಡದೆ ಬಂದು ಕಂಡನು ಜಗದ ವಲ್ಲಭನ ॥ ೬೧

ಕಂಡು ಕೈಮಾಡಲಿಕೆ ಕೊಡಲಿಯ
ಕೊಂಡು ಕೈಯೊಡನೆದ್ದು ಕಾದಿದ
ಗಂಡುಗಲಿ ಹದಿಮೂಱುದಿವಸವು ಭೂತಳಾಗ್ರದಲಿ ।
ತುಂಡಿಸಿದ ಕಡುಗೋಪದಿಂದವೆ
ದಿಂಡುದಱಿದನು ವಿಪ್ರತಂಡವ
ಹಿಂಡಿದನೆ ಯಿವನೆಂದು ಕೊಂದನು ರಾಮವೀರ್ಯಾರ್ಜುನ ॥ ೬೨

ಕೊಂದು ಪುನರಪಿ ದ್ವಿಜರಿಗವನಿಯ
ನಂದು ಧಾರೆಯನೆಱೆದು ವಿಪ್ರರ
ಮಂದಿಯನು ಸಂತೈಸಿ ಕಳುಹಿದ ಪರಶುರಾಮಮುನಿ ।
ಕಂದಿದುಜ್ಜ್ವಲಮುಖದ ಭೂಸುರ
ವೃಂದವನು ಕಾಯಲಿಕೆ ತತ್ಕ್ಷಣ
ಸಂಧಿಸಿಯೆ ನೆಱೆ ಸೃಜಿಸಿ ಕೊಟ್ಟನು ವಿಪ್ರವಿಧುವೆಂಬ ॥ ೬೩

ಕಡುಗಲಿಯ ಕಳುಹಿಸಲಿಕಾತನು
ಪೊಡವಿಸುರರಾಜ್ಞೆಯಲಿ ದೇಶವ
ಬಿಡದೆ ಕಾಯುತ್ತಿರಲಿಕಾತನ ಮಡದಿ ಕೋಪದಲಿ ।

ಕ್ಷೇತ್ರವೀರ್ಯಾರ್ಜನನ ಆವನ ಸಂಹಾರ.

ಪಡೆವೆನೊಬ್ಬ ಸುಪುತ್ರಘನವನು
ಬಿಡದೆ ಬ್ರಾಹ್ಮರಿಗಹಿತವಮಾಡುವ
ಪೊಡವಿಪರನುದ್ಧರಿಸನಾಗಲಿ ಯೆನುತ ಶಶಿವದನೆ ॥ ೬೪

ಕ್ಷೇತ್ರುವನು ಧ್ಯಾನಿಸಲಿಕಾತನು
ಸೋಲತು ರಮಿಸಲಿಕಾಕೆಗಾಯಿತು
ಪ್ರೀತಿಯಲಿ ಕಾಲಂಗೆ ಸೆಣಸುವ ಸುತನ ಗರ್ಭವದು ।
ಭೂತಳಕೆ ನವಮಾಸ ತೀರಲಿ
ಕಾತ ಹುಟ್ಟಿದ ಕ್ಷೇತ್ರುವೀರ್ಯನು
ಪಾತಕದ ಕಡುಹೊಲೆಯು [1] ಗರ್ಭದ ಫಲದ ಬಳವಿಗೆಯು ॥ ೬೫

ಉದಯಿಸಿತು ಕಾಲಾಂತರಾಳ
ಕ್ಕದಟುತನದಲಿ ಬಂದು ಬ್ರಾಹ್ಮರ
ಸದೆಬಡಿದು ಮನ್ನೆಯರ ತಂಡವ ಕಡಿದು ಮಹಿಯಾಳ ।
ಮುದದಿ ಚೋಳನ ಮಗಳ ಮದುವೆಯು
ಸದನದಲ್ಲೆಳತಂದು ಪರಿಣಯ
ವಿಧಿಯೊಳಾದನು ನಿಮಿಷಮಾತ್ರದೊಳರಸ ಕೇಳೆಂದ ॥ ೬೬

ಬಳಿಕ ಕತಿಪಯದಿನಕೆ ಕಾಲನ
ಹೊಳಿಲನರಸುತಪರಶುರಾಮನ
ನಿಳಯಕ್ಕೈದಿದ ಚಾತುರಂಗದ ಸೈನ್ಯಸಾಗರದಿ ।
ಅಳುಕಿಸಿದ ಋಷ್ಯಾಶ್ರಮಂಗಳ
ನಳುಕಕೇಳಿಯೊ ಜಾಮದಗ್ನಿಯು
ಕುಲಶಿರೋಮಣಿ ಬಂದು ತಾಗಿದನವನ ಮೋಹರವ ॥ ೬೭

ತಾಗಿ ಕಡಿದೊಟ್ಟಿದನು ಕೊಡಲಿಯ
ಬಾಗಿನಲಿ ಬಹುಚಾತುರಂಗವ

---

1 ನಡುಹೊಟ್ಟೆಯು, ಕ. ಖ.

ನೀಗಿಸಿತು ನೆಱೆ ಕೇತುವೀರ್ಯನ ಕೊಂದ ನಿಮಿಷದಲಿ ।
ಮೇಗೆ ನಾಕಜರೈದೆ ಪುಷ್ಪವ
ನಾಗ ಸುರಿದರು ಕೊಡಲಿಯೊಡೆಯಗೆ
ರಾಗದಲಿ ಶರಣೆಂದು ಹರದರು ಗಗನರಂಗದಲಿ ॥ ೬೮

ಬೞಿಕ ವಿಪ್ರನಿಕಾಯವೆಲ್ಲವ
ನಿಳಯದಲಿ ಮೇಳೈಸಿ ಧಾರೆಯ
ನಳಿನಸಂಭವ ಮೆಚ್ಚಲೆಱೆದನು ಸಕಲವಿಪ್ರರಿಗೆ ।
ಕಳುಹಿದನು ಮುನ್ನಾಳ್ದ ಭೂಮಿಗೆ
ಕಳುಹಿ ಕಾಯಲಿಕೊಬ್ಬ ಮನ್ನೆಯ
ಬಲುಹನುಳ್ಳನ ಕೊಟ್ಟು ಬ್ರಾಹ್ಮರ ಸಲಹುತಿರೆ ಬೞಿಕ ॥ ೬೯

ಕೇತು ವೀರ್ಯನ ಸತಿ ಪತೀಹಿತ
ಭೂತಳಕೆ ಬಲುಹುಳ್ಳ ಪುತ್ರನು
ಜಾತನಾಗನೆ ಯೆಂದು ಪೂರ್ವದಿಶಾಧಿನಾಯಕನ ।

ಇಂದ್ರ ವೀರ್ಯಜನನ ಅವನ ಸಂಹಾರ.

ಓತು ರಾಜಮಹೀಂದ್ರದೇಶದಿ
ಖ್ಯಾತಗಂಗಾಬ್ಧಿಯಲಿ ಧ್ಯಾನವ
ನಾತಗೀಯಲಿಕಿಂದ್ರ ಬಂದನು ರಮಿಸಿದನು ಸತಿಯ ॥ ೭೦

ರಮಿಸಿ ಯಮರಾವತಿಗೆ ಗಮಿಸಲು
ಕುಮತಿಗಾದುದು ಗರ್ಭ ಶಕ್ರನ
ನಮರನಿಕರವು ಕಂಡು ಜಱಿದುದು ವಿಪ್ರಕಂಟಕನ ।
ಸುಮನಸೇಶ್ವರಸಿತ್ತತನಯನ
ಕ್ರಮದಿ ನೆಱೆ ನವಮಾಸ ತೀರಲು
ನಿಮಿಷದಲಿ ಜನಿಯಿಸಿದನಿಂದ್ರನ ವೀರ್ಯ ಮಹಿತಳಕೆ ॥ ೭೧

ಜನಿಸಿ ತಂದೆಯ ಛಲವ ಮರಳಿಪೆ
ನೆನುತ ದ್ರಾವಿಡಪತಿಯ ತನುಜೆಯ

ಜನಪನುದ್ವ್ಯಾಹಿಸಿಯೆ ಬ್ರಾಹ್ಮರ ಶಾಸನಂಗಳನು ।
ಎನಿತು ಯಿದ್ದವನೆಲ್ಲ ಗಳಿಸಿದ
ಧನವ ವಿಪ್ರಸ್ವಾಪಹಾರವ
ತನಗೆ ಮಾಡಿದನಪರಭಾಗವನಾಯುಮಾಂಗಣಕೆ ॥ ೭೦

ಮಾಡಿಕೊಂಡಲ್ಲಿಂದ ಸೇನೆಯು
ಗಾಢದಲಿ ಯಮುನಲ್ಲಿಗೈದಿದ
ನೋಡಿರೇ ಯಿಾದುಷ್ಟಮತಿಗಳ ಬಯಕೆಯುನ್ನತಿಯು ।
ರೂಢಿ ವಿಶ್ವಂಭರನ ವೈರವ
ಮಾಡಿ ಬದುಕುವೆನೆಂಬ ಕಷ್ಟರ
ಕೇಡು ಸೂಚೆಯುನೇನನೆಂಬೆನು ಭೂಪ ಕೇಳೆಂದ ॥ ೭೩

ಬಳಿಕ ಕಾಲಾಂತರಕೆ ಮುನಿಕುಲ
ತಿಲಕ ವಿಪ್ರನಿಕಾಯುಕಾಸ್ಪದ
ಬಲಿಮಥನಗಿದಿರಾಂತು ನಿಂದನು ರೇಣುಕಾಸುತಗೆ ।
ಕಲಿಮುಖಾವಿರ್ಭೂತಚೇತನ
ಬಳಗವೆಂಶೋಧಾರನಾಗಲಿ
ಕಳುಕದವೆ ಕೈಮಾಡಲಾಕ್ಷಣ ಪರಶುಧರ ಕಂಡು ॥ ೭೪

ಕೊಡಲಿಯುನ್ನಡಗಯ್ಯಲೊರಸುತ
ಕಡಿದನಾಸೈನ್ಯವನು ಭೂಪನ
ನಡುವನಿಕ್ಕಡಿಮಾಡಿ ಬಿಸುಟನು ನಿಮಿಷಮಾತ್ರದಲಿ ।
ಕಡಿವಡೆದುದಕ್ಷೋಹಿಣಿಬಲವೆದು
ವೊಡೆಯುಗಂದೊಡಲೊಕ್ಕಲಾಯಿತು
ಪೊಡವಿಯುನು ಭೂಸುರರಿಗಿತ್ತನು ಮತ್ತೆ ಮೇಳೈಸಿ ॥ ೭೫

ಅಟಿಲನಾರಿಸಿ ಮತ್ತೆ ಮನ್ನೆಯು
ಗುಲವ ಸೃಜಿಸಿಯೆ ವಿಪ್ರವರ್ಗವ
ಕಳುಹಿದನು ಕರುಣಾಳು ಮನ್ನಿಸಿ ಭೂಮಿಯಾಳಲಿಕೆ ।

ಹಲವುಕಾಲವನಾಳುತಿರಲಿಕೆ
ಲಲನೆ ಕೋಪದಲಿಂದ್ರವೀರ್ಯನ
ಕುಲಕೆ ಪುತ್ರನ ಪಡೆವೆನೆಂದಳು ತಾಂಮ್ರಪರ್ಣಿಯಲಿ ॥ ೩೬

ಅಗ್ನಿವೀರ್ಯನ ಜನನ ಅವನ ಸಂಹಾರ.

ತಪವನಾಚರಿಸಲಿಕೆ ಶೂಲಿಯು
ಕೃಪೆಯಿ ಸ್ವಾಹಾವತಿಯು ವಲ್ಲಭ
ತಪವ ಕಂಡತ್ಯಂತ ಪ್ರೀತಿಯೊಳಾಕೆಯೊಡನಿರ್ದ ।
ಸಫಲವಾಯ್ತೆನಗೆಂದು ಮಾನಿನಿ
ಜಪಿಸುತಿರೆ ನವಮಾಸ ತೀರಲು
ವಿಪುಳಭುಜಬಲ ಜನಿಸೆ ಹಾಯ್ದನು ವಹ್ನಿ ನಿಮಿಷದಲಿ ॥ ೩೭

ಪೆತ್ತಳಾಕೆಯು ವಹ್ನಿವೀರ್ಯನ
ಮತ್ತೆ ಕಾಲಾಂತರಕೆ ತಂದಳು
ಚಿತ್ತವಿಸು ತನ್ನರಸನಾಳುವದೇಶದರಮನೆಗೆ ।
ಮತ್ತೆ ಕೊಂಡನು ಸುತನು ಭೂಸುರ
ಸತ್ತ್ವರವರ ಮಂಡಳೋರ್ವಿಯ
ನರ್ಥವನು ನೆಱೆ ಸುಲಿದುಕೊಂಡನು ಮನ್ನೆಯಾದಿಗಳ ॥ ೩೮

ಕೊಂದು ಬಹುದಿನ ರಾಜ್ಯಮಾಡುತ
ಲಂದು ಪರಿಣಯವಾದ ಪಾಂಡ್ಯನ
ನಂದನೆಯಲಿರುತೊಡನೆ ಬಂದನು ನೃಪಕುಲಾಂತಕನ ।
ಮಂದಿರವನರಸುತ್ತ ಸೇನೆಯು
ಮಂದಿಯೊಡನಾಶ್ರಮವ ಕಡಿವುತ
ಬಂದು ಕೋಳಾಹಳವ ಮಾಡುವ ನೃಪನ ಸಡಗರವ ॥ ೩೯

ಕಾಲಯಮ ಗೋಳಕರ ಕುಲಗಿಳ
ಕೇಳಿ ಪರಶುವ ಮಸೆದು ಹೊಕ್ಕನು
ತೋಳರಡ ನೆಱೆ ತಱಿದು ಕಿತ್ತಿದನವನ ನೆತ್ತಿಯನು ।

ಕಾಲಪುರಕಿತ್ತವನ ಸೇನೆಯು
ಜಾಳಿಸಿಯೆ ಮರಳ್ದವನಿಸುರರನು
ಪಾಲಿಸಿದ ಸರ್ವಸ್ವವಿತ್ತನು ಪೂರ್ವರೂಢಿಯಲಿ ॥ ೮೦

ಕಳುಹಿದನು ಭೂಸುರರನೆಲ್ಲರ
ತಲಹಿನಲಿ ಮನ್ನಯನನೊಬ್ಬನ
ಬಲುಹನುಳ್ಳನ ಕೊಟ್ಟುದೇಶವ ಕಾಯಲೆಂದಂದು ।
ಕಳುಹಲಿಕೆ ಹತ್ತೆಂಟುಸಾವಿರ
ಗಳಿತವಾಯ್ತುಬ್ದಗಳ ಕಡೆಯಲಿ
ಕಳವಳಿಸಿ ಯಾಯಗ್ನಿವೀರ್ಯನ ಲಲನೆ ಕೋಪದಲಿ ॥ ೮೧

ಯಮವೀರ್ಯ ಜನನ ಮತ್ತು ಅವನ ಸಂಹಾರ.

ಗಂಡನಂತಕಪುರಕೆ ಹೋಗಲು
ರಂಡೆ ಪುತ್ರನ ಪಡೆವೆನೆಂದಾ
ದಂಡಿಯಲಿ ಕಾಳಿಂದಿತೀರದಲಧಿಕತಪಸುಗಳ ।
ಕೊಂಡೆಸಗೆ ವೈವಸ್ವತೇಶ್ವರ
ಕಂಡು ರಮಿಸಿದನಲ್ಲಿಯಾಕೆಯು
ಗಂಡನ ಪರೋಕ್ಷದಲಿ ಜನಿಸಿದ ಮತ್ತೆಗೋಳಕನು ॥ ೮೨

ತೀವಿದುದು ದಶಮಾಸವಾಕೆಗೆ
ಭೂವನಿತೆಗೆಸಕಾದ ನಾತನು
ಮಾವಿ ತನ್ನಯ ಪೂರ್ವಕರ್ಮದ ಘೋರಬಂಧನಕೆ ।
ಓವಿ ತರೆ ಸಮವರ್ತಿವೀರ್ಯನ
ನಾವಿಧಾತ್ರನು ನೋಡಿ ತಂದೆಯು
ತಾವನರಸುತ ಬಂದು ಹೊಕ್ಕನು ತನ್ನ ಪಟ್ಟಣವ ॥ ೮೩

ಬಂದು ಕತಿಪಯದಿನಕೆ ಹೈಹಯ
ಮಂದಿರೇಶನ ಮಗಳ ತರಿಸಿಯೆ
ಮಿಂದನೈ ವೈವಾಹಗೇಹದೊಳಧಿಕ ಹರುಷದಲಿ ।

ಬಂದು ಬ್ರಾಹ್ಮರ ಭೂಮಿಯೆಲ್ಲವ
ನಂದು ಕೊಂಡುಱೆ ವಿಪ್ರನಿಕರದ
ಮಂದಿಯನೆ ನೆಱೆ ಸುಲಿದು ಮನ್ನೆಯ ಜಾತಿಯಾದುದನು ॥ ೮೪

ಕೊಂದು ಕಾಲಾಂತರಕೆ ಭೂಸುರ
ವೃಂದವೈರಿಯು ಪರಶುರಾಮನ
ಚಂದವಱಿಯದೆ ಬಂದು ಹಳಚಿದನಾಪತಂಗಗಳ ।
ಗೊಂದಣವೆದುರಿಯೊಳಗೆ ಮೊಗ್ಗುವ
ಚಂದದಲಿ ಮುಗುಧಭಟ ಜೀವವು
ಕುಂದಿಸಿದುದಾಭ್ರಮರಪರಿಮಳಚಂಪಕೋರ್ವಿಯಲಿ ॥ ೮೫

ಗಂಡು ಮಱಿ [1] ಗುಹ್ಯದಲಿ ಸಂಗವ
ಕೊಂಡು ಸಾವಂದದಲಿ ಜಿಹ್ವೆಯು
ತಂಡದಲಿ ನೆಱೆ ನೋವ ಮತ್ಸ್ಯಗಳಂತೆ ನಿಮಿಷದಲಿ ।
ಗಂಡುಗಲಿ ಕೋದಂಡರುದ್ರನ
ಖಂಡಪರಶುವಿನಿಕ್ಕೆ ತನ್ನಯ
ಪೆಂಡತಿಯ ಕಡೆಗಿರಿಸಿ ಹಾಯ್ದಪನಾಯಮಾಂಗಣಕೆ ॥ ೮೬

ಬಟ್ಟಿಕ ಮುನಿಮೌಳಿಗಳ ಚರಣವ
ನೊಲಿದು ಮಹಿಮಾನಿನಿಯು ಬ್ರಾಹ್ಮರ
ಬಳಗಕಿತ್ತುಱೆ ಕೊಟ್ಟನವರಿಂಗೊಬ್ಬ ಮನ್ನೆಯನ ।
ಕಳುಹಿದನು ಕಾಯಲಿಕೆ ದೇಶವ
ಕೆಲವು ಕಾಲಾಂತರದಲಾತನ
ಲಲನೆ ಬಂದಳು ತಪಕೆ ಪುತ್ರನ ಪಡೆವೆನೆಂದೆನುತ ॥ ೮೭

ನಿರುತಿವೀರ್ಯನ ಜನನ ಮತ್ತು ಅವನ ಸಂಹಾರ.

ಬರುತ ನಿರುತಿಯು ಕಂಡು ಮಾನಿನಿ
ಹರುಷದಲಿ ಮಿಂದಿರಲಿಕಾವಧು

1 ಗಂಡುಬಱಿ, ಜ. ಗಂಡುಪೆರಿ, ಖ. ಗಂಡುಪರಿ, ಗ.

ಪುರುಷನಿಲ್ಲದೆ ಯಿರಲಿಕಾತ ವ್ಯೋವೊದಿಂದಿಳಿದು ।
ಬೆರಸಿದನು ಕೃಷ್ಣಾವತೀಶ್ವರ
ವರಿಸಲಾಯತಿಗೆಂಟುತಿಂಗಳು
ಸರಿಯಲುದಿಯಿಸಿದೊಬ್ಬ ಪುತ್ರನು ನಿರುತಿವೀರ್ಯಕನು ॥ ೪೪

ಆತ ಕತಿಪಯದಿನಕೆ ತಂದೆಯು
ಭೂತಳಕೆ ಬಂದಿಳಿದು ಮನ್ನೆಯು
ಜಾತವನು ಕಡಿದಖಿಳಭೂಸರದೇಶವಾದುದನು ।
ಪ್ರೀತಿಯಲಿ ಕೊಂಡವರ ಕವರಿ ಯು
ನೀತಿಯಲಿ ನೆಟಿ ರಾಜ್ಯವಾಳುತ
ತಾತನನು ಜನ ಪೊಗಟೆ ಚೌರಾದೇಶದೀಶ್ವರನ ॥ ೪೯

ಮಗಳನೇ ಕೈಕೊಂಡು ತಂದೆಯು
ಹಗೆಯ ಸಾಧಿಸಲೆಂದು ಮುನಿಪನ
ಮಗಗೆ ಧಾಟಿಯ ನಿಟ್ಟ ಸೈನ್ಯಾಂಬುಧಿಯ ರಭಸದಲಿ ।
ಜಗವು ಕಂಪಿಸೆ ಪರಶುರಾಮನ
ವಿಗಡವನು ನೆಟಿಯುಟಿಯುದಲ್ಲಿಗೆ
ಸೊಗಸಿ ಮುತ್ತಲು ಮೋಘವನಿಲನ ಕಾದಿದಂತಾಯ್ತು ॥ ೯೦

ನಿಮಿಷದಲಿ ತತ್ಸೈನ್ಯರಾಶಿಯು
ಯಮಪುರಾಂತರಕಟ್ಟಿ ಭೂಪನ
ಸಮರದೊಳು ವಿಗೆ ಕಡಿದು ಕೊಡಲಿಯಲವನ ಕೈಕಾಲ ।
ಅಮಿತಕರುಣಾಸಿಂಧು ಬ್ರಾಹ್ಮರ
ಸಮೆತಳಿಸಿ ಮಗುಬವನಿಯೆಲ್ಲವ
ಕ್ರಮಕೆ ಸಾಧನಮಾಡಿ ನೀಡಿದನವರಿಗತಿಮುದವ ॥ ೯೧

ಧರಿಸಿ ದೇಶವ ಕಾಯಲಟ್ಟಿದ
ಪರಶುರಾಮನದೊಬ್ಬ ಮನ್ನೆಯ
ತರದ ಕಡುಹಿನ ವೀರನುನ್ನತಿಯಾತ್ರಿಗರ್ತನನು ।

ಧರಣಿಸುರರವರಗ್ರಹಾರವ
ಭರದಿ ಕಾವುತ್ತಿರಲಿಕಾತನ
ಯುರಸಿ ಪುತ್ರನ ಪಡೆದು ಬ್ರಾಹ್ಮರಪೂರನೆಲ್ಲವನು ॥ ೯೧

ಪರಿಹರಿಸಿ ಪರಿವಾರಕೀವೆನು
ಧರೆಯ ದೇವರು ದೇಶವಾಳಲಿ
ಕರಸಿ ಯುಬ್ಬಸಗೊಂಡು ಗಂಗಾತೀರದೇಶದಲಿ ।

ವರುಣವೀರ್ಯನ ಜನನ ಮತ್ತು ಸಂಹಾರ.

ಬರುತಿರಲು ಜಲರಾಶಿಯಧಿಪನು
ಸರಸಿರುಹಮುಖಿಯುನ್ನ ರಮಿಸಿಯೆ
ವರುಣ ಹಾಯ್ದನು ತನ್ನ ಗಂಗಾವತಿಯ ಗೃಹದೆಡೆಗೆ ॥ ೯೨

ಚನ್ನೆಯಲಿ ಗೋಳಕನು ಪುಟ್ಟಲಿ
ಕನ್ನೆನಾಡುಗಳಾಳುತಾತನು
ತನ್ನ ತಂದೆಯ ಪುರವ ಹೊಕ್ಕನು ಕಾಲ ಕೈಗೂಡೆ ।
ಜನ್ನವಿಕ್ಕುವ ದ್ವಿಜರ ತಾಮಸ
ಗುನ್ನಿ ಸುಲಿವುತ ದೇಶವೆಲ್ಲವ
ಮನ್ನಿಸದೆ ಕರಕಡಿದು ಕೊಂದನು ಮನ್ನೆಯಾದಿಗಳ ॥ ೯೩

ಕೊಂದು ನೆರಹಿದ ವರುಣವೀರ್ಯಕ
ನಂದು ಸೇನಾಂಬುಧಿಯೊಳಾಕ್ಷಣ
ಸಂದಣಿಸಿ ಸೌರಾಷ್ಟ್ರದೇಶದ ನೃಪನ ನಂದನೆಯ ।
ತಂದು ಮಧುರೋಕ್ತಿಯಲಿ ಗೋಳಕ
ಬಂದು ಕನ್ನೆಯ ನೆರೆದು ಬೇಗದಿ
ಬಂದನಾ ನೃಪಕಾಲಯಮನನೆ ಯುರಸುತೊಲವಿನಲಿ ॥ ೯೪

ಬಂದು ಭಾರ್ಗವರಾಮನಿದಿರಲಿ
ನಿಂದು ಕಾದಲಿಕಾತನಾಯುಷ
ಬೆಂದು ಹೋಯಿತದರಗು ವಹ್ನಿಯ ಸೋಕಿದಂದದಲಿ ।

ಸಂದನೈ ಯಮಪುರಕೆ ವರುಣನ
ನಂದನನು ಕಲಿಬಲಿಯು ಸಂಗದ
ಲಂದು ಪುನರಪಿ ಮಹಿಯು ಬ್ರಾಹ್ಮರಿಗಿತ್ತು ಸಲಹಿದನು ॥ ೯೬

ಹಿಂದೆ ಸೃಜಿಸಿಯೆ ಮತ್ತೆ ಮನ್ನೆಯ
ವೃಂದವನು ಭೂಸುರರ ಕಾಯುಲಿ
ಕಂದು ಕಳುಹಲಿಕವನ ವಲ್ಲಭೆ ಕಾಲ ಹಲವಾಗೆ ।
ಹಿಂದೆ ಮಱೆಯದೆ ಬ್ರಾಹ್ಮರೆಲ್ಲರ
ಚಂದಗೆಡಿಸುವೆನೆನುತ ಛಲತಪ
ಕೆಂದು ಗಮಿಸಿಯೆ ಬರುತ ಬಟ್ಟೆಯೊಳಾಗಲಘವತಿಯು ॥ ೯೭

ಶ್ವಾಸ ವೀರ್ಯನ ಜನನ ವೃತ್ತು ಅವನ ಸಂಹಾರ.

ತೀರವಲಿ ತಪದಿರಲು ಕಂಡಾ
ನಾರಿಯನ್ನು ಪವಾಯು [1] ರಮಿಸಿದ
ಧಾರುಣಿಗೆ ಜನಿಸಿದನು ಪುತ್ರನು ಮಾಸ ನವ ತೀರೆ ।
ಭಾರದಲ್ಲಾ ವಾಯು ತನ್ನಯ
ಪೂರಿಗೈದಲಿಕಾಕೆ ಪಡೆದಾ
ವೀರನನು ನವಮಾಸ ತೀರಲು ಶ್ವಾಸವೀರ್ಯನನು ॥ ೯೮

ಸಲಹಲಿಕೆ ಹಲಕಾಲವಾಗಲು
ಬಲುಹಿನಲಿ ಬಂದೈದಿ ತನ್ನಯ
ಹೊಟಿಲ ಹೊಕ್ಕನು ತನ್ಮಹೀಪತಿ ನಿಮಿಷಮಾತ್ರದಲಿ ।
ಸುಲಿದು ಬ್ರಾಹ್ಮರ ಬಳಗವೆಲ್ಲವ
ಕೊಲೆಯ ಮಾಡಿದ ಮನ್ನೆಯರ್ಕಳ
ನಿಳಯದಲಿ ಚತುರಂಗದೇಶದ ನೃಪನ ನಂದನೆಯು ॥ ೯೯

ಮದುವೆಯಲಿ ಕೈಕೊಂಡು ಮಕ್ಕಳ
ಹದನ ಕಾಣೆನೆನುತ್ತ ಬ್ರಾಹ್ಮರ

---

[1] ನಾರಿಯನು ಪವಮಾನ, ಖ, ಜ.

ಸದನ ಗೊಂಡವರೆಡೆಯ ಧಾತ್ರಿಯ ಮಾಡುತಡಿಗಡಿಗೆ ।
ತಿದಿಯನುಚ್ಚುತ ಭೂಸುರಾದಿಯ
ಸದೆಬಡಿದು ನಿರ್ವಿಪ್ರಮಾಡಿದ
ನದಟುತನದಲಿ ವಿಪ್ರನಿಕರವನೈದೆ ಗತಮಾಡಿ ॥ ೧೦೦

ಕೂಡೆ ನೆಱೆ ಚತುರಂಗಬಲದಲಿ
ಬೀಡಿಕೆಯ ಕೈಕೊಳ್ಳದಲ್ಲಿಗೆ
ಮೂಢ ಬಂದನು ಕೇಡಕರೆಯಲು ತನಗೆ ಬೇಗದಲಿ ।
ನೋಡಿರೇ ಸಂಗ್ರಾಮಭಾರ್ಗವ
ಮೂಢನನು ಕಾದಲಿಕೆ ಬಂದಪ
ನಾಡಿತಾತನ ಮೇಲೆ ಕೊಡಲಿಯು ರೇಣುಕಾತ್ಮಜನ ॥ ೧೦೧

ಗಾಢದಲಿ ನುಗ್ಗಾಗಿ ಸೇನೆಯು
ಕಾಡಕೂಡಿತು ತಾನು ಕಾಲನ
ರೂಢಿಗೈದಿದ ನಿಮಿಷಮಾತ್ರದೊಳಂದನಾಮುನಿಪ ।
ಕೂಡಲಿಕೆ ಕೈವಲ್ಯನಾಥನು
ರೂಢಿಸುರರನು ನೆರಹಿಕೊಟ್ಟನು
ರೂಢಿಯನು ಮರಳವರಿಗಗ್ಗದ ಮನ್ನಯಾದಿಗಳ ॥ ೧೦೨

ಕೊಟ್ಟು ಸಲಹುತ್ತಿರಲು ಪುತ್ರನ
ಪುಟ್ಟಿಸುವೆ ತಾನೆನುತ ಬಂದಳು
ದುಷ್ಟಮತದಿಂ ದ್ವಿಜರ ಹಾನಿಗೆ ನರ್ಮದಾಂಗಣಕೆ ।
ನಟ್ಟ ಮಿಾಯುತ್ತಿರಲಿಕಳಕಾ
ಧಿಪ ಕಂಡನು ಸತಿಯ ರೂಪು
ತ್ಕೃಷ್ಟವನು ತಾ ರಮಿಸಿ ಹಾಯ್ದನು ಮೇಘಮಾರ್ಗದಲಿ ॥೧೦೩

ಧನದವೀರ್ಯನ ಜನನ ಮತ್ತು ಅವನ ಸಂಹಾರ.

ಹಾಯಲಳಕಾಪುರಿಯ ಪೋಗಲಿ
ಕಾಯುವತಿಗಾಗರ್ಭವಾಯಿತು

ಬೀಯುದಲಿ ನವಮಾಸತೀರಲು ದೇವನಾಜ್ಞೆಯಲಿ ।
ಆಯುಗದ ಕಡೆಯಲ್ಲಿ ಸುತನತಿ
ಬೀಯುವಾಗದ ಮುನ್ನ ಜನಿಸಿದ
ಸಾಯಲು ಧನದವೀರ್ಯನಗ್ಗದ ಬಾಹುಬಲದಿಂದ । ೧೦೪

ಜನಿಸಿ ತಂದೆಯ ರಾಜಧಾನಿಯ
ನನಿತುವನು ನೆಱೆ ಕೊಂಡು ಬ್ರಾಹ್ಮರ
ಜನವ ನೆಱೆಯಪಹರಿಸಿ ಭೂಮಿಯಲವರ ಬಾಧಿಸುತ ।
* ದಿನ ಸವೆಯೆ ಬಹು ಮನ್ನೆಯರ್ಕಳ
ನನಿತರಿದ್ದರ ಕೊಂದು ವಾಯಿಯ
ಜನಪತಿಯ ಮರಸುತೆಯ ನೆರೆದನು ಪರಮಹರುಷದಲಿ * ॥೧೦೫

ಅರಸ ಬಹುದಿನ ರಾಜ್ಯಮಾಡುತ
ಧರಣಿಯನು ನಿರ್ದ್ವಿಜವ ಮಾಡುತ
ತೆರಳಿ ಬಂದನು ಪರಶುರಾಮನ ವರತಪೋವನಕೆ ।
ಬರಲು ಭಾರ್ಗವರಾಮನವರನು
ಪರಶು ಹತಿಯಿಂ ಕಡಿದು ಸೇನೆಯ
ಹರಹಿದನು ಕಾಲಂಗೆ ಹೊಸತಿನ ಬೋನವೆಸೆವಂತೆ ॥ ೧೦೬

ಹರೆಗಡಿದು ಭೂಸುರರಿಗವನಿಯ
ಮರಳಿ ಧಾರೆಯ ನೆಱೆದು ಮನ್ನೆಯ
ಪರಮಸಾಹಸಿಯೆನಲಿಕವನನು ಸೃಜಿಸಿ ಕಳುಹಿದನು ।
ಧರಣಿಸುರರಿಗೆ ಸೇವೆಗೈವುದು
ನಿರುತ ನೀನೆಂದವನ ಕಳುಹಲು
ವರುಷ ನೆಱೆ ನಾಲ್ಕೈದುಸಾವಿರ ಧರೆಗೆ ಗತವಾಗೆ ॥ ೧೦೭

---

* ಅನುಕರಿಸಿ ರಥಪತ್ತಿವಾಹನ
ಜನಿತಬಲವನು ಬಹಳಸಂಭಿಸ
ಲನುವಶವ ಮಾಡಿದನು ಪೂರ್ವಾರ್ಣವನಿಯ ಸಂಪದವ, ಖ. * ॥

ಆಗಲಿಕೆ ಧನಪತಿಜನಂಗನೆ [1]
ರಾಗದಲಿ ದ್ವಿಜಹತಿಯು ಮೊಪ್ಪಿತಿ
ವೇಗದಲಿ ಋತುದಿನದಿ ಬಂದಳು ಗಂಗೆಯುತ್ತರಕೆ ।
ಆಗಮೋಕ್ತಗಳಿಂದ [2] ಶೂಲಿಯ
ಭೋಗ ತನಗಳವಡಲು ಬೇಕೆಂ
ದಾಗ ಶಂಭುವ [3] ಧ್ಯಾನಮಾಡಲು ರುದ್ರನದನಱಿದು ॥ ೧೦೮

ಆವಧುವಿನಾಭಾವ ಶಂಕರ
ದೇವನಲಿ ನೆರೆ ಯೂರ್ಧ್ವರೇತನ
ಹಾವನಱಿಯದ ತ್ರಿದಶವಧುಜನರದಕೆ ನಸುನಗಲು ।
ದೇವನಾಗಲದೊಬ್ಬ ರಾಕ್ಷಸ
ಜೀವನನು ಕಳುಹಿದನು ಕಳುಹಲಿ
ಕಾವಧುವ ರಮಿಸಿದನು ಮೃತ್ಯುಂಜಯನ ರೂಪದಲಿ ॥ ೧೦೯

ದನುಜವೀರ್ಯನ ಜನನ ಮತ್ತು ಅವನ ಸಂಹಾರ.

ರಮಿಸೆ ಜನಿಸಿದ ದನುಜವೀರ್ಯನು
ಕುಮತಿಯಲಿ ನವಮಾಸ ತೀರಲಿ
ಕಮಿತಪೌರುಷದಿಂದ ಸೇನೆಯ ಬಲುಹ ಮೇಳೈಸಿ ।
ಕ್ರಮವ ಬಿಟ್ಟಕ್ರಮದಿ ಬ್ರಾಹ್ಮರ
ನಮಿಸದೆಲ್ಲರ ಸುಲಿದು ಸತಿಯರ
ಸಮುದಯವ ನೆಱೆ ಪಿಡಿದು ಕೊಂದನು ಮುಸ್ಲೆಯಾದಿಗಳ ॥೧೧೦

ಕೊಂದು ಕೊಡಲಿಯ ಮುನಿಗೆ ಧಾಟಿಯ
ನಂದು ಮಾಡಿದ ಕೃತಯುಗಾಬ್ದವು
ಸಂದುದಾಹದಿನಾಱುಲಕ್ಷದ ಕಡೆಯ ವತ್ಸರವು ।

---

[1] ಆಗಲಿಕೆ ಧನವೀರ್ಯನಂಗನೆ, ಕ. ಖ. ಜ.

[2] ಆಗಮಾನ್ವಯದಿಂದ, ಕ. ಖ. [3] ಜಾರೆಯು, ಕ. ಖ.

ತಂದೆ ಕೇಳಾ ಘೋರವೀರ್ಯಾನು
ಬಂದು ಹಳಚಲಿಕಾಬ್ರಹದ್ಬಲ
ನಂದನೆಯು ಪತಿ ಬರಲು ಕೊಂದನು ನಿಮಿಷಮಾತ್ರದಲಿ ॥ ೧೧೧

ಪರಶುರಾಮನು ಕೊಂದು ಬ್ರಾಹ್ಮರ
ನೆರವಿ ಘೋರಾತ್ಮಜನ ರಾಜ್ಯದ
ಹರಹಗಿತ್ತು ದ್ವಿಜರ ಸೂಱೆಯುನ್ನೆದೆ ಮರಳಿಸಿದ ।
ಧರಣಿಯುಮರರ ಸೇವೆಗಗ್ಗದ
ಪರಿವಿಡಿಯ ಮನ್ನೆಯರ ಸೃಜಿಸಿಯೆ
ಮರಳಿ ಕಳುಹಿದನಾ ಮಹಿಷ್ಮತಿಯ [1] ಪುರಕನಿಬರನು ॥ ೧೧೨

ಗುಹವೀರ್ಯಾಜನನ ಅವನ ಸಂಹಾರ.

ಕಳುಹಲಿಕೆ ಬಹುದಿವಸ ಬ್ರಾಹ್ಮಣ
ರಿಳೆಯನಾಳುತ್ತಿರಲಿಕಾತನ
ಲಲನೆ ಕೋಪದಿ ಬಂದು ಮಿಂದಳು ತುಂಗಭದ್ರೆಯಲಿ ।
ಜಲದೊಳಾಡುತ್ತಿರಲು ಕಂಡನು
ನಳಿನವದನೆಯನಾಗುಹಾಸುರ
ಬಲುಮೆಯಲಿ ರಮಿಸಿದನು ರಮಿಸಲಿಕೊಬ್ಬ ಜನಿಸಿದನು ॥ ೧೧೩

ಗೋಳಕನು ನವಮಾಸ ತೀರಲು
ಬಾಲೆಯಲಿ ಗುಹದನುಜವೀರ್ಯಾನು
ತೋಳ ಬಲುಹಿಂದಬ್ದಸಾವಿರ ತೀರೆ ಕೇರಳದ ।
ಕಾಳಕೇತುವ ಗೆಲಿಯಲಾತನ
ಬಾಲೆಯನು ನೆರೆದಖಿಳಸೇನೆಯ
ತೋಳ ಬಲದಿಂ ಬಂದು ಹೊಕ್ಕನು ತಂದೆಯಾಲಯವ ॥ ೧೧೪

ಹೊಕ್ಕು ಮನ್ನೆಯನಿಕರವೆನಿತುವ
ನೊಕ್ಕಲಿಕ್ಕಿಯೆ ಕೊಂದು ಬ್ರಾಹ್ಮರ

---

[1] ಮಹೀಪತಿಯ, ಕ. ಖ.

ಮಕ್ಕಳನು ತಱಿದಿವರ ತೆವರಿಯೆ ರಾಜ್ಯಮಾಡುತಲಿ ।
ಹೊಕ್ಕು ಬಹುದಿನದಿಂದ ರಾಜ್ಯದ
ಸೊಕ್ಕಿನಲಿ ನೆಱೆ ಬಂದು ಬ್ರಾಹ್ಮರ
ಮಕ್ಕಳಾಟಿಕೆ ಯಾಡಿ ಭಾರ್ಗವರಾಮಚಂದ್ರನಲಿ ॥ ೧೧೫

ತಱಿಸಿಕೊಂಡವನಾಗ ಜವಪುರ
ಕುರಳಿದನು ಬೞಿಕವನ ಭೂಮಿಯು
ನೆಱೆ ದಿಗಂತವ ದ್ವಿಜರಿಗಿತ್ತನು ವಿನಯಪರನಾಗಿ ।
ಪರಿವಿಡಿಯಿ ಮನ್ನೆಯರ ಸೃಜಿಸಿಯೆ
ಧರಣಿಯುಮರರಿಗಿತ್ತು ಕಳುಹಿದ
ಹಿರಿದು ಕಾಲದಲಿರಲಿಕಾತನ ಯುವತಿ ಕೋಪದಲಿ ॥ ೧೧೬

ಆಮಹಾವಿಮಲಪ್ರಹಾರಿಯು
ಸೀಮೆಯುಲ್ಲಿರೆ ಕಾಕದಾನವ [1]
ಕಾಮಿನಿಯು ಕಡು ಕೋಮಲಾಂಗವ ಕಂಡು ರಮಿಸಿದನು ।

ಕಾಕವೀರ್ಯನ ಜನನ ಅವನ ಸಂಹಾರ.

ಭೂಮಿಯಲಿ ನವಮಾಸ ತೀರಲಿ
ಕಾಮಹಾಕಾಕಾಸುರಾತ್ಮಜ
ಸೋಮಶೇಖರದೇವಗಂಜದ ಬಾಹುಬಲದಿಂದ ॥ ೧೧೭

ಜನಿಸಿ ಕಾಲಾಂತರಕೆ ಹೈಹಯ [2]
ಜನಪತಿಯ ಸುತೆಯಲ್ಲಿ ನೆರೆದನು
ವಿನುತಬಲದಿಂ ಬಂದು ಹೊಕ್ಕನು ವರಮಹಿಷ್ಮತಿಯ ।
ಜನಪದವನಾಳುತಲಿ ಮನ್ನೆಯ
ಜನವ ಕೊಲಿಸಿಯೆ ವಿಪ್ರನಿಕರವ
ನನಿತುವನು ಸಂಹರಿಸಿ ಕೊಂಡನು ಮತ್ತೆ ಭೂಮಿಯನು ॥೧೧೮

1 ಕಾಕಕಾಸುರ, ಜ. ಕಂದಕಾಸುರ, ಕ. ಖ.　　2 ವೈವೆಯ, ಕ. ಖ.

ಕೊಂಡು ಕಾಲಾಂತರಕೆ ಭಾರ್ಗವ
ಖಂಡಪರಶುವನೈದಿ ಯಾಹವ
ಚಂಡವಿಕ್ರಮನೊಡನೆ ಕಾದಲು ನಿಮಿಷಮಾತ್ರದಲಿ ।
ದಿಂಡುದಱಿದಱಿದವನ ಸೇನೆಯ
ಹಿಂಡ ಬಱಿಕೈದವನ ಕೊಂದನು
ಕಂಡ ಮುಖದಲಿ ಸೇನೆ ಹಾಯಿತು ವಿಪ್ರಘಾತಕನ ॥ ೧೧೯

ಕೊಂದು ಬ್ರಾಹ್ಮರ ಜನಕೆ ಭೂಮಿಯ
ನಂದು ಧಾರೆಯನೆಱೆದು ಕೊಟ್ಟನು
ಹಿಂದು ಗಳೆಯದೆ ಸೃಜಿಸಿ ಮನ್ನ ಯಗಲಿಯನಸುರಾರಿ ।
ಬಂದು ಬಹುದಿನ ರಾಜ್ಯವಾಡಲಿ
ಕಂದು ಹಿಂದಣಭೂಪನಂಗನೆ
ನೊಂದು ಮಂದಾಕಿನಿಯ ತೀರದೊಳಱಿಸಿ ಬಹುದಿನವು ॥ ೧೨೦

### ಕೋಟಿಕಾಸ್ಯನ ಜನನ ಅವನ ಸಂಹಾರ.

ತಪವನೆಸಗಲು ಕಂಡು ರಾಕ್ಷಸ
ತಪಸಿ ರಮಿಸಲು ಕೋಟಿಕಾಸ್ಯನು
ತಪದ ಗತಿಯಲಿ ಜನಿಸೆ ಕಾಲಾಂತರದಲಾಸುರದ ।
ವಿಪ್ರಚಿತ್ತಿಯ ಸುತೆಯ ನರೆವತಿ
ವರ್ಪದಲಿ ಬಂದಯ್ಯನಾಳುವ
ವಿಪುಳಮಹಿಯನು ಕೊಂಡು ವಿಪ್ರರ ನೈದೆ ಹರೆಗಡಿದ ॥ ೧೨೧

ಮನ್ನೆಯರ ಕಡಿಖಂಡ ಮಾಡಿಯೆ
ಮುನ್ನ ನೆರಹಿದನಖಿಳಸೇನೆಯ
ಮನ್ನಿಸದೆ ನೆಱೆ ಕೋಟಿಕಾಸ್ಯನು ಬಂದು ಭಾರ್ಗವನ ।
ಇನ್ನು ಬಾ ಯೆಂದೆನುತಲಾಖಿಳ
ನುನ್ನತಾಸ್ತ್ರವನೆಸೆಯಲಾಮುನಿ
ಸನ್ನೆಯಲಿ ಹರಿದೈಯ್ದಿ ಹೊಕ್ಕನು ಸೈನ್ಯಶರಧಿಯನು ॥ ೧೨೨

ಕಡಿದು ಕೊಡಲಿಯ ಮೊನೆಯೊಳನಿತುವ
ಬಿಡದೆ ತಱಿದನು ಕೋಟಿಕಾಸ್ಯನ
ಕೆಡಹಿ ಯಿಪ್ಪತ್ತೊಂದು ಖೇಪೆಯಿ [1] ನೃಪರ ತೀರಿಸಿದ ।
ಮೃಡಪಿತಾಮಹ ತಾಯಿಗೆಂದುದ
ಕಡೆಗೆ ಸಲಿಸಿದ ವಿಪ್ರನಿಕರಕೆ
ಪೊಡವಿಯೆಲ್ಲವ ಕೊಟ್ಟು ಕಳುಹಿದನಧಿಕಹರುಷದಲಿ ॥ ೧೨೩

ಅವರ ಸೇವೆಯ ಮಾಡಲತಿಬಳ
ರವನಿಕೇತುಗಳೆಂಬ ಮನ್ನೆಯ
ನಿವಹವನು ಸೃಜಿಸಿದನು ದೇಶವ ಕಾಯೆ ಪರಶುಧರ ।
ರವಿಶಶಿಗಳಂಬರಕೆ ತಿರುಗುವ
ಭುವನಕಾಸ್ಪದ ಮೇರು ಪರ್ವತ
ವವನಿಗೆಸದಿಹ ಕಾಲಪರಿಯಂತರವು ಧಾರೆಯನು ॥ ೧೨೪

ಎಱೆದು ಭೂಸುರತತಿಯ ರಕ್ಷಿಸಿ
ಮೆಱೆಯೆ ನೃಪಕುಲಕಾಲಭೈರವ
ಕಱೆವ ಕರುಣವ ವಿಪ್ರನಿಕರದ ಮೇಲೆ ಮನವೊಟ್ಟ ।
ತಱಿದನಾಗೋಳಕರ ವಂಶವ
ನೆಱೆ ದಿಗಂತದ ಧರಣಿಯುವರಾ
ಳ್ವೈರಿಗಳನು ಸಂಹರಿಸಿ ನಿಷ್ಕಂಟಕದಿ ಪಾಲಿಸಿದ ॥ ೧೨೫

ಕೋಟಿಕಾಸ್ಯಜನ ಜನನ ಅವನ ಸಂಹಾರ.

ಪಾಲಿಸಲಿಕಾಕೋಟಿಕಾಸ್ಯನ
ಬಾಲೆಯಲಿ ಬಹುದಿವಸಕೊಬ್ಬನು
ಕಾಳರಕ್ಕಸನೆನಿಸಿ ಹುಟ್ಟಿದನತುಳಭುಜಬಲನು ।
ಕೇಳಿದನು ನಿಃಕ್ಷತ್ರವಾದುದ

---

1 ಸೂಟೆಯೊಳು, ಜ.

ಮೇಲೆ ಭೂಸುರರೊಸಗೆಯಾದುದ
ಕಾಳು ಮಾಡುವೆನೆಂದು ಮಾಡಿದ ತಪವ ಶಿವಪದಕೆ ॥ ೧೭೬

ಏನೆಲವೊ ತಪಕೇನ ಬೇಡುವೆ
ನೀನೆನಲು ತಾ ದನುಜನುಸುರಿದ
ತಾನು ಬೇಡುವೆ ಪರಶುರಾಮನ ಗೆಲಲುವೆ ಸತ್ವವನು ।
ಆನದೀಧರನೆಂದನಗ್ಗದ
ದಾನವನೆ ಹರಿಗಾಯುಧಂಗಳ
ನೇನು ಮಾಡಲಿ ಕವಿಯುವಾತನ ದಿವ್ಯರೂಪಗಳ ॥ ೧೭೭

ಬಂದಲಿ ಗೆಲಲಱಿಯನೊಬ್ಬನೆ
ಬಂದು [1] ಕಾದಲು ನೆರೆಯದೆನಲಿಕೆ [2]
ತಂದೆಯುದು ಸಾಕೆನುತ ಮರಳಿದ ಪರಶುಧರನೆಡೆಗೆ ।
ಬಂದನೇಕಾಂಗದಲಿ ಕಾದುವೆ
ನೆಂದು ತುಂಗಾನದಿಯ ತೀರದ
ಮಂದಿರದೊಳಸೆದಿರ್ದನಿದಿರಲಿ ಹರಿಹರಾಕೃತಿಯು ॥ ೧೭೮

ಕಂಡು ಕಾದಲಿಕಾ ಗುಹಾಸುರ
ದಿಂಡೆಯನ ಕೆಡೆಯಿಱಿದು ಶೂಲಿಯು
ಮಂಡನವ ಕೈಕೊಂಡು ಕೊಂದನು ಕೋಟಿಕಾಸ್ಯಜನ ।
ಕೊಂಡು ಹರಿಹರರೂಪಿನಾಕ್ಷಣ
ಚಂಡನೃಪಕುಲಕಾಲಭೈರವ
ಪುಂಡರೀಕಾಂಬಕನು ನಾರಾಯಣನು ತೋಱಿಸಿದ ॥ ೧೭೯

ಇಪ್ಪತ್ತಾರನೆಯ ಸಂಧಿ ಮುಗಿದುದು.

---

1 ಬಂದು, ಜ. 2 ನೆನಲಿಕೆ, ಜ.

# ಇಪ್ಪತ್ತೇಳನೆಯ ಸಂಧಿ.

---

ಸೂಚನೆ.

ಕಳುಹಿದನು ಧೌಮ್ಯಾಶ್ರಮಕ್ಕಾ
ಗೊಲಿದು ಮೋಹನಬಾಣತಂತ್ರವ
ತಿಳುಹಿ ತೆರಳಿದ ಸುರರ ಗಾಯಕ ಪಾಂಡುತನಯರಿಗೆ ||

ಅಂಗಾರವರ್ಮನು ಪಾಂಡವರಿಗೆ ಮಾಡಿದ ಹಿತೋಪದೇಶ

ಕೇಳು ಜನಮೇಜಯಧರಿತ್ರೀ
ಪಾಲ ಬಳಿಕಂಗಾರವರ್ಮನು
ಹೇಳಿದನು ಹಿರಿದಾದ ಕಥನವನಿರುಳು ಗಂಗೆಯುಲಿ |
ಆಲಿಸೈ ಮುಂದತಿಶಯೋಕ್ತಿಯು
ಲೋಲವಿಪ್ರೋತ್ತಮರನೊಬ್ಬರ
ಪಾಲಿಸದೆ ಸಂಗಡವು ತಿರಗಲು ಸಲ್ಲ ನೃಪಕುಲಕೆ || ೧

ಅರಸ ಕೇಳೈ ಧರಣಿಸುರರಿಗೆ
ಹಿರಿದು ಗೋಚರವೇನು ವಿಶ್ವಂ
ಭರನೆ ಒಲಿದರೆ ನೀವು ಬೆನ್ನಿನಲೊಬ್ಬ ಭೂಸುರನ |
ವರಪುರೋಹಿತರೆಂದು ನೀವಾ
ದರಿಸಿ ಚರಿಸುವುದೆತ್ತಲಾದರೆ
ಪರಮಮತವಿದೆ ಯೆನಲು ಕೇಳಿದರಂದು ತಾವಾಗ || ೨

ಧೌಮ್ಯರ ಬಳಿ ಹೋಗುವುದೆಂದು ಪಾಂಡವರಿಗೆ ಹೇಳುವಿಕೆ.

ಹಿತಪುರೋಹಿತನಪ್ಪ ಭೂಸುರ
ತತಿಯೊಳಾರೆನೆ ಕೇಳಿ ತಿಳುಹಿದ
ನತಿಶಯಮಲಾ ಧೌಮ್ಯನಾದರೆ ಯೆನಲಿಕವರೆಡೆಯು |

ಗತಿಯುನಱಿಯುವೆ ಯೆನಲಿಕಾಗಲೆ
ಯತಿಶಯದಲಾವೆರವಸಿಷ್ಠನ
ಸುತೆ ಸುಮಿತ್ರೆಯು ಸುತನು ಸೌಭರಿಯುಣುಗ ಬಹುನಿಗಮಿ ॥ ೩

ಆತ ಧರ್ಮಾಚಾರಮಂತ್ರವ
ನಾತ ಬಲ್ಲನು ದೈವಸಾರವ
ನಾತನನು ನೀವಾವೆ ಪರಿಯುಲಿ ನಿಮ್ಮ ಕುಲಗುರುವ ।
ನೀತಿಯುಲಿ ನೆರೆಮಾಡಿಕೊಂಬುವು
ದಾತನಾಶ್ರಮವಿಲ್ಲಿಗದು ಹರಿ
ಜಾತೆಯಾಚೆಯುಲಿಹುದು ತಾ ಹತ್ತೆಂಟುಯೋಜನದಿ ॥ ೪

ಆವಿರಿಂಚಾದಿಗಳು ಸೇವಿಪ
ದೇವಗಂಗಾನದಿಯು ತೀರದ
ತಾವಿನಲಿ ಸಂಸಾರಪಾರವ ಮಾಳ್ಪತೀರ್ಥದಲಿ ।
ಭಾವದಲಿ ಭಜಿಸುವನ ನೀವಿಂ
ದಾವೆಪರಿಯುಲೋಲಿಸಿ ಕೊಂಡೊಡೆ
ಭೂವಧೂವಲ್ಲಭರು ತೃಣಸಮವಾಗಿ ವರ್ತಿಪರು ॥ ೫

ಈಧರಾಧೀಶ್ವರರ ಶಸ್ತ್ರದ
ಬಾಧೆ ತಪ್ಪುವುದಾವಿಧಾತ್ರನ
ಹಾದಿಯುಲಿ ನಿಂಗೆ ಧೌಮ್ಯಮುನಿಯೊಳದಾರು ಸರಿ ಯೆಂದ ।
ಆಧುರಾಂಗಣದಲ್ಲಿ ಬಲ್ಲಿದ
ರಾಧೆಯುನ ಬಿಲುವಿದ್ಯ ಧೌಮ್ಯನ
ನಾದರಿಸಿದವಗಳುಕಿ ನಿಲುವುದು ಪಾರ್ಥ ಕೇಳೆಂದ ॥ ೬

ಬೇಡಿಕೊಂಡಾಶ್ರೇಷ್ಠವಾದುದ
ರೂಢಿಯೊಳಗತ್ಯಧಿಕವಾದುದ
ಪಾಡು ಪಡಿ ನಜೆಯಿಲ್ಲದಸ್ತ್ರವ ನೊಂದ ತಾನಿತ್ತ ।

ರೂಡಿಸಿದ ಸಮ್ಮೋಹನಾಸ್ತ್ರದ
ಪಾಡಱಿದು ಕಲಿಪಾರ್ಥಗಿತ್ತನು
ಬೇಡದಾತಗೆ ಪರಮಹರುಷದಿ ಪಾತ್ರವಹುದೆಂದು ‖ ೭

ಕೊಡಲು ಕೈಯೊಡನಾತನೊಲ್ಲದೆ
ಕಡೆಗೆ ಸಾಱಲಿಕಾತನಾಗಳೆ
ಯುಡಿಗೆಱಗಿ ಕೈಗೊಳಿಸಿ ಕೊಟ್ಟನು ಮೋಹನಾಸ್ತ್ರವನು ।
ಪಡೆದು ಪಾರ್ಥನ ವಹ್ನಿಯಸ್ತ್ರವ
ಪೊಡವಿಗಿಳುಹಿಯೆ ಹತ್ತುಸಾವಿರ
ತಡೆಯುದವ ಕೈಗೊಳಿಸಿ ಕೊಟ್ಟನು ಶಾಮಕರ್ಣಗಳ ‖ ೮

ಬಂದು ತಾಳೋತ್ಸೇಧರಾಶಿಯು
ತಂದು ಸುರಿದನು ರತ್ನಕೋಶವ
ನಂದವೆರು ಕೈಕೊಂಡು ಕೊಟ್ಟರು ಹಿಂದಕವನಾಗ ।
ಇಂದು ಮೊದಲಾಗಿನ್ನು ತಮ್ಮಯ
ಬಂಧು ಪರಮಪ್ರಿಯನು ನೀ ನಡೆ
ಯೆಂದು ಕಳುಹಿದೊಡಾತನರಸಿಯು ಸಹಿತ ಮನ್ನಿಸಿದ ‖ ೯

ಇಳೆಯೊಳೊಂದಿನ ವರಪುರೋಹಿತ
ಕುಲಗಳಿಲ್ಲದೆ ಕ್ಷತ್ರಿಯಾತ್ಮಜ
ನಿಳಯುವನು ಪೊಱಮಂಟಲಾಗದದೊಂದು ಕ್ಷಣವೆಂದು ।
ಲಲನೆಯರ ನೆಱೆ ಕೊಂಡು ಗಂಗಾ
ಜಲದೊಳಂತರ್ಧಾನವೈದಲು
ನಳಿನಬಾಂಧವನುದಯವಾದನು ಪೂರ್ವಶೈಲದಲಿ ‖ ೧೦

ಪಾಂಡವರು ಧೌಮ್ಯರ ಆಶ್ರಮಕ್ಕೆ ಹೋಗುವಿಕೆ.

ಬೞಿಕ ಪಾಂಡವರೈವರವ್ವೆಯು
ಬೞಲಿಸದೆ ಧೌಮ್ಯಾಶ್ರಮಕ್ಕೆಯು

ತಿಳಿದು ಬಂದರು ಶೈಶಿರಾಂತ್ಯದ ಮಾಸದಂತದಲಿ ।
ನಳಿನನಾಭನ ನೆನೆಯುತಿರಲೊಂ
ದೊಲವಿನಲಿ ಬಟಕಾಮುನೀಶ್ವರ
ನಿಳೆಯುಕಿವರನು ಕರೆಸಿ ಕೇಳಿದ ನೀವದಾರೆನುತ ॥ ೧೧

ಕೇಳಲಿಕೆ ಸಾಷ್ಟಾಂಗವೆಱಗಿಯು
ಲಾಲಿಸೈ ತಾಂ ಪಾಂಡುಪುತ್ರರು
ಬಾಲಕರು ನೀವೆಮ್ಮ ಕುಲಗುರುವಾಗಿ ರಕ್ಷಿಪುದು ।
ಮೇಲು ಹರುಷದಲರ್ಘ್ಯಪಾದ್ಯವ
ಲೋಲರಿಗೆ ನೆಱೆ ಯಿತ್ತು ಕುಂತಿಯು
ಕಾಲಿಗೆಱಗಿಸಿ ನುಡಿದನವರಿಗೆ ತನ್ನ ಮನದನುವ ॥ ೧೨

ಧರಣಿಯುಲಿ ಪಾಂಡವರು ತಮ್ಮಯು
ವರಪುರೋಹಿತಕೆಮ್ಮ ಕೊಳ್ಳರೆ
ಪರಿಪರಿಯುಲಿದೆ ಹಾರುತಿದ್ದೆನು ನಿಮ್ಮನೈವರನು ।
ನಿರುತ ಬಯಸಿದ ಬಯಕೆ ಸಾರಿತು
ಹರುಷದಲಿ ಪಾಂಡವರಿಗಗ್ಗದ
ವರಪುರೋಹಿತೆಗೊಂಡೆ ನಾ ಮಧುಸೂದನಾಜ್ಞೆಯುಲಿ ॥ ೧೩

ಕಾಲ ಕೈಗೂಡಿದರೆ ಬ್ರಾಹ್ಮರು
ಲೋಲರೇ ದೊರಕುವರು ಪುಣ್ಯದ
ಲೇಖಿಗೆಯು ಪರಿ ಮೇಲು ನೋಟವ ನೋಡಿಸುವನೆಂದ ।

ಧೌಮ್ಯರು ಪಾಂಡವರೆಂದು ತಿಳಿದು ಪೌರೋಹಿತ್ಯವನ್ನೊಪ್ಪುವಿಕೆ.

ಆಲಿಸೈ ನಿಮ್ಮವರ ಭಾಗ್ಯದ
ಕಾಲದೇಟ್ಗೆಯು ಧೌಮ್ಯನಾಕ್ಷಣ
ಕೇಳಿ ಸಂಕ್ರಮಿಸಿದನು ಪಾಂಡವವರಪುರೋಹಿತವ ॥ ೧೪

ಬಟ್ಟಿಕ ಮೆಱುದಿನ ತೆರಳಿ ಗಂಗೆಯು
* ಬಟ್ಟೆಗೆ ಬಂದರು ಪರಮಸುಖದಲಿ
ಬಟ್ಟಿಕಲಾ ಪಾಂಚಾಲದೇಶದ ಪೊಱಲಿಗೈದಿದರು * ।
ನಳಿನನಾಭನ ಕರುಣದಳತೆಯು
ತಿಳಿದು ಪೊಂಪುಳಿಯಾಗಿ ಧೌಮ್ಯನ
ಬಟ್ಟೆಗೆ ಬಂದರು ಪರಮಸುಖದಲಿ ಕುಂತಿಯಾತ್ಮಜರು ॥ ೧೫

ಪಾಂಡವರು ಧೌಮ್ಯರಿಂದ ಕೂಡಿ ಬರುವಾಗ ಆದ ಸುಶಕುನಗಳು.

ಬರುತ ಬಟ್ಟೆಯೊಳೆಡಕೆ ಹಂಗನು
ಹರಿಣ ಬಲದಲಿ ತೋಱಿ ಹಾಯಿತು
ಹರಿಣಿ ಭಾರದ್ವಾಜ ನುಡಿಸಿತು ನಕುಲಶಿಖಿಸಹಿತ ।
ಕರಿಯು ಹಕ್ಕಿಯು ಕಾಮಮಿಥುನದ
ಹರುಷದಲಿ ಪಿಂಗಲಿಗಳಿರ್ದುವು
ಪರಮಸುಖದಲಿ ಜಕ್ಕವಕ್ಕಿಯು ಯುಗ್ಮ ನಲಿಯುತಿರೆ ॥ ೧೬

ಅರಸ ಕೇಳ್ಳೈ ಮುಂದೆ ಮಾರ್ಗಂ
ತರಕೆ ಶಕುನದ ಸೊಗಸು ನೆಱೆ ಗೋ
ಚರಿಸಲಾವಿಂಧ್ಯಗಿರಿಯು ಘನಾಟವಿಯು ಮಧ್ಯದಲಿ ।
ಅರಸರೈವರಿಗಿಂದು ದ್ರೌಪದಿ
ಯರಸಿಯಹಳೆಂದೊಡನೆ ಮನದಲಿ
ಹರುಷಿಸಿದನಾಧೌಮ್ಯನಾಗಳು ಶಕುನಸಂತತಿಗೆ ॥ ೧೭

ಸುಳಿಯಿತಗ್ಗದ ಗಂಧಪರಿಮಳ
ಹಱುವಿನಲಿ ಕಿನ್ನರರ ಗಾನದ
ಲಲಿತಕೌಶಿಕೆ ನವವಸಂತದ ದೇಶಿ ಮಧ್ಯಮದ ।
ಕಳಸವಿಡಿದಬಲೆಯರ ಹೋಲುವ

---

* ಬಳಿಯಲಾ ಪಾಂಚಾಲದೇಶದ ಪೊಱಲಿಗೈದಿದರು ಪಾಂಡ
ವರೈವರೊಂದಾಗಿ,* ಜ.

ತಳಿರ ಪುಷ್ಕರದಿಂದ ಬಳುಳದ
ನೆಳಲ ಸತ್ತಿಗೆ ಮೊಡಿಯಾಡುವ ಲತೆಯ ಬಳ್ಳಿಗಳ ॥ ೧೮

ಕಿತ್ತು ಬೇಱೊಂದೆರಡುಕರಿಗಳು
ಹೊತ್ತು ತೋರಣದಂತೆ ಯಿದ್ದುದು
ಹತ್ತಿರೈತರೆ ಪಾಂಡುಪುತ್ರರು ಬರುತ ಬಟ್ಟೆಯಲಿ ।
ಭಿತ್ತಿ ಚಿತ್ರಿಸಿದಂತೆ ಪೂಷಿನ
ಮೊತ್ತವಿಕ್ಕೆಲವಲ್ಲಿ ಬಟ್ಟೆಯ
ಚಿತ್ತ ಬಿದರುಗಳವು ವಿವಾಹದ ಗೇಹದಂದದಲಿ ॥ ೧೯

ಪಾಂಡವರಿಗೆ ಶಾಲಿಹೋತ್ರನ ಪರಿಚಯ ಮತ್ತು ಅಶ್ವವಿದ್ಯಾಲಾಭ.

ಬರಲಿಕಿದಿರೊಳು ಶಾಲಿಹೋತ್ರನ
ವರಮುನಿಪನಾಶ್ರಮವ ಕಂಡರು
ಕರೆದು ಕೇಳಲು ಧೌಮ್ಯನಾಮುನಿಗವರನಱುಹಿಸಿದ ।
ಹರಿಯ ಸೋದರಭಾವ ಧರ್ಮಜ
ನುರುವೃಕೋದರ ಪಾರ್ಥಮೊದಲಾ
ದರಸಗಳು ಮೃದುನರು ಮೂವರು ಕುಂತಿಮಾದ್ರಿಜರು ॥ ೨೦

ಅಱುಹಲತಿಮನ್ನಿಸಿಯೆ ಪಾಂಡವ
ರರಸಗತಿಹರುಷದಲಿ ತತ್ಕ್ಷಣ
ಪರಮಸಿದ್ಧಾಂತವನು ತಿಳಿಹಿದ ದ್ಯೂತಕೌಶಲವ ।
ಪರರ ಜಯಿಸುವ ಸಾರ ನೆರದಿಹ
ವರಗೃಹದ ದಶಚೌಕವೆರಡಱ
ಪರಿಯ ಥಾಳವು ತನಗೆ ಬೀಱುವ ಲಕ್ಷಭೇದನವ ॥ ೨೧

ಧ್ಯಾಸಿಸುವ ಮಂತ್ರಾಕ್ಷರಂಗಳ
ತಾನು ಮೂವತ್ತೆರಡುಮಾತ್ರ
ಜ್ಞಾನವನು ತೋಱಿದನು ಕಾಂಚೀಪುರವರೇಶ್ವರಿಯ (?) ।

ಆನಿರೂಢಿಯನಱುಹಿ ಪಾರ್ಥ[1]ಗೆ
ತಾನೊಲಿದು ನೆಱೆ ಯುಶ್ವಹೃದಯ
ಜ್ಞಾನವನು ಕರುಣಿಸಿದನುಚೈತ್ರರಥವೆನು ಮೊದಲಾಗೆ ॥ ೨೦

ಈಧರಿತ್ರಿಯುಲಶ್ವಹೃದಯುವ
ನೋದಿಸಿದ ಹದಿನಾಱುವೂತ್ರಿಯು
ನಾದಯಾಂಬುಧಿ ಬಾದರಾಯಣ ತನಗೆ ಸೂಚಿಸಿದ ।
ಹಾದಿಯಲಿ ಪಾಂಡವರಿಗಱುಹಿದ
ವೇದನಿಧಿ ತಾ ಶಾಲಿಹೋತ್ರಕ
ನಾದಧೀಚಿಯುಲಱಿದ ಗೌತರಣಿಕದ ವಿದ್ಯೆಗಳ (?) ॥ ೨೭

ಹೇೞ ಬೞಕಾಸೂಪಶಾಸ್ತ್ರವ
ನಾಲಯುವನಱುಹಿದನು ವಾಯುಜ
ಗೇೞಗೆಯುಲಾಗವರ ಕಳುಹಿದ ಸ್ವಸ್ತಿವಚನದಲಿ ।
ಬೀಳುಕೊಂಡರು ಪಾಂಡವರ್ ಸಿರಿ
ಲೋಲನಂಘ್ರಿಯು ನೆನೆದು ದ್ರುಪದನ
ಬಾಲೆಗೋಸುಗ ವ್ಯಾಸನಾಜ್ಞೆಯು ಧರಿಸಿದರು ಬರುತ ॥ ೨೪

ಇಪ್ಪತ್ತೇಳನೆಯ ಸಂಧಿ ಮುಗಿದುದು

ಚೈತ್ರರಥಪರ್ವ ಮುಗಿದುದು

---

1 ನಕುಲ, ಖ.

# ಇಪ್ಪತ್ತೆಂಟನೆಯ ಸಂಧಿ

---

**ಸೂಚನೆ**

ಧರಣಿಪತಿ ನಿಜಸುತೆಯ ರೂಪ್ಯೋ
ತ್ಕರದ ಸೌಭಾಗ್ಯದ ನಿರಂತರ
ಪರಮಶೋಭಾನುಗುಣದಲಿ [1] ರಚಿಸಿದನು ಪಟ್ಟಣವ ||

**ಪಾಂಚಾಲಪುರವರ್ಣನೆ**

ಭೂಮಿಪತಿ ಕೇಳ್ ನಿಮ್ಮ ಪಿತನ ಪಿ
ತಾಮಹರು ಧೌಮ್ಯಾಶ್ರಮಕೆ ಬಂ
ದಾಮುನೀಂದ್ರನ ಕರೆದುಕೊಂಡರು [2] ಖಚರ [3] ವಚನದಲಿ |
ರಾಮಣೀಯಕವಪ್ಪ ಶಕುನ
ಸ್ತೋಮವನು ವಿವರಿಸುತ ಹೊಕ್ಕರು
ಭೂಮಿಲಂಬದ ನೃಪರ ನೆರವಿಯ ದ್ರುಪದಪಟ್ಟಣವ || ೧

ಭರದಿನೈತಂದಖಿಳಭೂಮಿಾ
ಶ್ವರರ ಘನಚತುರಂಗಪದಹತ
ಧರಣಿನಿರ್ಗತರೇಣುಪಟಲದ ರಾಗಸಂಗದಲಿ |
ಅರುಣಮಯವಾಯ್ತಖಿಳಜಗವೀ
ಸರಸಿಜಾಕ್ಷಿಯ ನೆನೆದು ಸಚರಾ
ಚರದ ಮುಖದಲಿ ರಾಗರಸ ವುಬ್ಬರಿಸಿದಂದದಲಿ || ೨

ತರಣಿಗುಂಟೇ ಸಮಯವನಿಲಗೆ
ತೆರಹುಗೊಡುವವರಾರು ಗಗನೇ
ಚರರ ಗಮನಸ್ತಂಭವೆತ್ತಣ ಮಾತು ಖಗಕುಲಕೆ |

---

[1] ರುಚಿರವೆನೆ, ಟ. ರಚನೆಯುಲಿ, ಚ. ಜ.   [2] ಮಧುರ, ಜ.
[3] ಕೊಡಿಕೊಂಡರು ಚ, ಟ

ನೆರೆದ ಪಲ್ಲವಸತ್ತಿಗೆಯು ಝು
ಲ್ಲರಿಯು ಸಿಂಧದ ಸೆಳೆಯು ಘನಸೀ
ಗುರಿಯು ಸಬಳದಸಾಲಚಮರಂಗಳ ವಿಡಾಯಿಯಲಿ ॥ ೩

* ಚತುರುದಧಿಪರಿವಲಯದವನೀ
ಪತಿಗಳೇಕಾಮಿಷ [1] ವಿರೋಧ
ಸ್ಥಿತಿಯ ನೋಡದೆ ನೂಕಿ ನಡೆದರು ದ್ರುಪದಪುರಿಗಾಗಿ ।
ಅತಿಬಲರು ಬಹುರಾಜಬಲಪ
ದ್ಧತಿಗಳನು ನೋಡುತ್ತ ಬಂದರು
ಕೃತಕವಿಪ್ರೋತ್ತಮರು ಭಿಕ್ಷಾವಿಹಿತವೃತ್ತಿಯಲಿ ॥ ೪

ತುಱುಗಿದುದು ಪಾಂಚಾಲನಗರಿಯು
ಹೊಱವಳಯದಲಿ ಜಲಧಿಮಧ್ಯದ
ಕುಱುವವೋ ಪಟ್ಟಣವೊ ಮೇಣೆನೆ ದೈವಗತಿಗಳಲಿ ।
ಉಱುಬಿದೊಡೆ ಪಾಂಚಾಲಭೂಪತಿ
ತಱುಬಲಾಪನೆ ಮೂವತನವಿದು
ಬಱಿದೆ ಹೋಗದೆನುತ್ತ ಬಂದನು ಧರ್ಮಸುತ ನಗುತ ॥ ೫

ಪುರದೊಳಗೆ ಹೇರಾಳಹಬ್ಬದ [2]
ಹರಹಿನಲಿ ಬೀಡಾರ ಭಿಕ್ಷಾ
ಚರಿತರಿಗೆ ಯೆಲ್ಲಿಯದು [3] ಗುಡಿಗೂಡಾರಸಂತತಿಗೆ ।
ಅರಸುಗಳು ನಾವೆಲ್ಲ ಭವನಾಂ
ತರವದೇಕೆಮಗೆಂದು ಘಟಬಂ
ಧುರದ ಶಾಲೆಯ ಹೊಕ್ಕರವೆರು ಕುಲಾಲಮಂದಿರದಿ ॥ ೬

---

* ಈ ಸ್ಥಳದಲ್ಲಿ ಪದ್ಯಗಳನ್ನು ಬೇರೇ ವೃತ್ತದಲ್ಲಿರುವದರಿಂದು ಬಹು ಪುಸ್ತಕದಲ್ಲಿಲ್ಲದ್ದರಿಂದೂ ಬಿಟ್ಟಿದೆ.

1 ಕಾಮಿಸ್ಸಿ, ಚ. ಖ. 2 ಹೆಚ್ಚಿದ, ಖ. 3 ದೊರಕುವುದೆ, ಚ.

ನೋಡಿ ಹೊಸಭಾಂಡವ ಕುಲಾಲನ
ಬೇಡಿಕೊಂಡರು ತಾವು ನಾಲ್ವರು
ಕೂಡಿ ಭೀಮನ ತಾಯ ಸಂಗಡ ಹಿಂದೆ ಯಿರಿಸಿದರು ।
ಬೇಡಿ ತಹೆವಿನ್ನಿಂತು ಭಿಕ್ಷವ
ನೋಡಿ ಯೆನುತಲಿ ಧರ್ಮಫಲುಗಣ
ರೂಢಿಯುಮಳರು ಬರುತಲಿರಲುತ್ತಿದವರ ಪಾಡೇನು ॥ ೭

ಕೂಡೆ ಹೊಸಭಾಂಡದಲಿ ಭಿಕ್ಷವ
ಬೇಡಿ ತೊಟಲಿದರಿವರು ರಾಯರ
ಬೀಡು ಬಿಡುತಿರ್ದುದು ಬಹಳನಿಸ್ಸಾಳರಭಸದಲಿ ।
ಬೀಡಿವರಿಗಿದು ನೆಲನಿವರಿಗಿದು
ಮಾಡಿದರಮನೆ ಯಿವರಿಗಿದು ಕರು
ಮಾಡವಿವರಿಗಿದೆಂದು ಪರುತವಿಸಿದನು ಪಾಂಚಾಲ ॥ ೮

ಕೇರಿಕೇರಿಯ ಬೀದಿಗಳ ಪ
ನ್ನೀರಚಳೆಯದ ಕಳಸಕನ್ನಡಿ
ಯೋರಣದ ಸೂಸಕವ ಮುತ್ತಿನ ಮಕರತೋರಣದ [1] ।
ಓರಣದ ಹೊಂಗಳಸದಖಿಳಾ
ಗಾರಪಜ್ಕ್ತಿಯ ಸೋಮವೀಧಿಯ
ಸೂರವೀಧಿಯ ಶೋಭೆಯಲಿ ರಚಿಸಿದರು ಪಟ್ಟಣವ ॥ ೯

ತೀವಿದುವು ಹೊಂಗೆಲಸಗತಿಯಲಿ
ಲೋವೆಗಳು ಚಿತ್ರತನ್ಯಮಯಚಿ
ತ್ರಾವಳಿಯ ಬೆಸುಗೆಗಳಲೆಸೆದುವು ಭವನಭಿತ್ತಿಗಳು ।
ಹೂವಿನರಳಿನ ಹರಹಿನಲಿ ರ
ತ್ನಾವಳಿಗಳೊಪ್ಪಿದುವಗರುಧೂ
ಮಾವಳಿಯ ಧಾಟಿಯಲಿ ಮಘಮಘಿಸಿದುದು ಮೇಘಚಯ ॥ ೧೦

1 ರಂಗವೋಲೆಗಳ, ಕ.

ಕಾರಣೆಯು ಕುಂಕುಮದ ಸಾದಿನ
ಸಾರಣೆಯು ನೆಲಗಟ್ಟುಗಳ ಕ
ರ್ಪೂರಧೂಳಿಯ ಹೊರೆವುಗಳ ಪನ್ನೀರ ಪಕ್ಕಲೆಯು |
ಚಾರುಚಳೆಯದ ಕೆಸರಿಡುವ ಕ
ಸ್ತೂರಿಗಳ ಪೂರಾಯಪರಿಮಳ
ಭಾರದಲಿ ಬಿಡುಗಾಳಿ ಕುಸಿದುದು ಹೇಳಲೇನೆಂದ || ೧೧

ಮೇಲುಕಟ್ಟಿನ ದಿವ್ಯಚಿತ್ರದು
ಕೂಲನಿಚಯದ ಲೋವೆಗಳ ಬ
ಲ್ಲಾಳದಡ್ಡಿಯೊಳೆಡೆಗೆಡೆಗೆ ರಂಜಿಸುವ ಪಟ್ಟೆಗಳ |
ಮೇಲು ಹೊದಿಗೆಯು ಕಪ್ಪುರದ ಹೊಸ[1]
ಬಾಳೆಗಳ ಮೆಳೆಯುಜದ ಕಂಭದ
ಸಾಲುಗಳೊಳೊಪ್ಪಿದುದು ಚಪ್ಪರವೆರಡುಯೋಜನದ || ೧೨

ಬಿಗಿದ ಮಣಿಮುತ್ತುಗಳ ಬಿಂಗಾ
ರಿಗಳ ಬಿಡಯುದ ಚಮರ ಹೊಂಗೆ
ಜ್ಜೆಗಳ ಮುಕುರದ ಘಂಟೆಗಳ ಬಂಧುರದ ಬಾಸಿಗದ |
ಸುಗಮ[2] ಬಂಧದ ಬಣ್ಣಸರದೋ
ಳಿಗಳ ಕಂಭದ ವಜ್ರಮಯಧಾ
ರೆಗಳಲೆಸೆದುದು ಭದ್ರಮಂಟಪದಮಳಮಣಿಭವನ || ೧೩

ಕೀಲಿಸಿದ ಪಟ್ಟೆಗಳ ದಿವ್ಯದು
ಕೂಲದಲಿ ಹೊಂಬಾಳೆ ತೆಱೆಗಳ
ಚೂಳಿಕೆಯ ಕನ್ನಡಿಯ ತೋರಣರದೆರಡುಪಕ್ಕದಲಿ |
ಮೇಲು ಮುತ್ತಿನ ಸೂಸಕದ ನೇ
ಪಾಳಚವುರಿಯುಡಾಳಿಗಳ ಸಂ
ಪಾಳಿಯಲಿ ಪರುಠವಿಸಿದರು[3] ವೈವಾಹಮಂಟಪವ || ೧೪

1 ಹೊಂ ಕ.ಖ. 2 ಸುಗುಣ, ಚ. 3 ಮೇಳದಲಿ ಸಮತಳಿಸಿದರು, ಚ.

ವರಜವಾದಿಯ ಶೃಂಗವನು ಕ
ರ್ಪುರದ ತೈಲಾದಿಗಳ ಸಾದಿನ
ಭರಣಿಗಳ ಮೃಗನಾಭಿಗಳನಡಕಿದರು ಭಂಡಿಯಲಿ ।
ಸುರಿಸುರಿದು ಹಂತಿಗಳ ಹೊಂಗೊ
ಪ್ಪರಿಗೆ ತುಂಬಿದುವೆಂದು ಗಂಧದ
ಹಿರಿಯ ರಂಜಣಿಗೆಗಳು ಹಿಡಿದುವು ಸುತ್ತುವಳಯದಲಿ ॥ ೧೫

ಹೊಳೆವ ಭಿತ್ತಿಯ ಸಾಲಭಂಜಿಕೆ
ಗಳಲಿ ಮೌಕ್ತಿಕವಜ್ರಮಣಿ ಮಂ
ಗಳಮಹಾಲಕ್ಷ್ಮಿಯಲಿ ರಚನೆಯ ಚಿತ್ರಸತ್ರದಲಿ ।
ಇಳೆಗಿಳಿದ ಮಣಿಪುಷ್ಪಕವೊ ತಾ
ನಳಿನಮಿತ್ರನ ರಥವೊ ಮೋಹಿದು
ಜಲಧಿಶಯನನ ಸೆಜ್ಜೆಯೋ ತಾನರಿಯೆನಿದನೆಂದ ॥ ೧೬

ಝಳವ ಝೋಂಪಿಸಿ ಬೀಸಿದುವು ತಂ
ಬೆಲರ,ಬೀಸಣಿಗೆಗಳು ಪರಿಮಳ
ಕಲಿತಮಕರಂದದಲಿ ಸಾದಿನ ತುಹಿನರೇಣುಗಳ ।
ಸುಳಿವ ಸುತ್ತಣ ಸಾಲಭಂಜಿಕೆ
ಗಳಲಿ ಸೂತ್ರಿಸಿ ರಚಿಸಿದರು ಮಂ
ಗಳದ ರಿಂಗಣ ಝಾಡಿಸಿತು ವೈವಾಹರಚನೆಯಲಿ ॥ ೧೭

ಬಟ್ಟಿದ ಸುಧೆಗಳ ಬಾವಿಗಳ ಪ
ಕ್ಕಲೆಯ ಪನ್ನೀರುಗಳ ಹಿಡಿದುವು
ಹೊಳೆವ ಕೈರಾಟಣವ ಕಾಂಚನಮಯದ ದೋಣಿಗಳ ।
ತಳುಕು ಬಿಗಿದುವು ಕೊಪ್ಪರಿಗೆಗಳ
ವಳಯದಲಿ ನವಯಂತ್ರಗಳ ಪು
ತ್ಥಳಿಗಳೇ ನೀಡುವುವು ಬೇಡಿದವರಿಗೆ ವಸ್ತುಗಳ ॥ ೧೮

1 ರುಂಟಣವ, ಚ

ಏಕವಿಧದ ನವಾಯಿಯುಲಿ ಮೊ
ಲೋಕವತಿಶಯುವೆಸ್ತುರಚನಾ
ಸೌಕುಮಾರಿಯು ವರುಶನಕೆ ಸಾಕಾರವೆಂಬಂತೆ ।
ಏಕಮಯುವೆತವಿಶ್ವಕರ್ಮರ
ವ್ಯಾಕರಣಪಾಂಡಿತ್ಯಸುಗುಣಾ[1]
ನೀಕವಿದರೊಂದೊರೆಗೆ ಬಹುದೇ ಭದ್ರವೆಂಟಪದ ॥ ೧೯

ವಿವಿಧವೀಣಾವಾದ್ಯಕೋಮಲ
ರವದ ಮಧುರಪ್ರುದಂಗತತಿಗಳ
ರವಣೆಗಳ ನಟ್ಟುವಿಗರುಗ್ಗಡಣೆಯು ಗಡಾವಣೆಯು ।
ನವವಿಧದ ವೈತಾಳಿಕರ ವರ
ಯುವತಿಯರ ಘಾರಣೆಯು ಭೂಷಣ
ರವದ ಮೇಳವು ಮುತ್ತಿ ಮುಸುಕಿತು ಚಾರುಮಂಟಪವ ॥ ೨೦

ಅವನಿಪತಿಗಳ ಬಿರುದ ಪಾಡಿನ
ನಿವಹನಿರ್ಘೋಷಣೆಯು ಕಹಳಾ
ರವವು ಮೊಳಗಿತು ಕೂಡೆ ಮೇಳವಿಸಿತ್ತು ಮಂಟಪದಿ ।
ಭುವನದೊಳು ತನಗಧಿಕಬಳದಲಿ
ಹವಣಿಸಲಿಕೆಣೆಯಿಲ್ಲ ವೆಂಬೀ
ರವದ ಕಹಳೆಯು ನಾದವೆಸೆಯಿತು ನೃಪವರರ ಮುಂದೆ ॥ ೨೧

ತಾಳಗತಿ[2] ಸನ್ಮೋ[3] ಹನದ ಮೆಹೆ
ಗಾಲವೊ ಬದಗಿದ ರಸಾಳಿಯು
ಕಾಲುವೆಯೊ ನವರಸದ ಬಂಧದ[4] ಸಾರಸಂಗತಿಯೊ ।
ಆಲಿಗಳಿಗಾಯುಷ್ಯಫಲ ಜೇ[4]
ತಾಳಿಗಳ[5] ನರ್ತನವೊ ಸೊಗಸಿನ
ಮೇಳವಣೆ ಗಳ ಬೇಂಟೆಯಾಯಿತು ದ್ರುಪದಪುರಿಯೊಳಗೆ[6]॥ ೨೨

---

1 ವ್ಯಾಕರಣಲಕ್ಷಣದ ಲಕ್ಷ್ಯಾ, ಚ.　2 ಸಾಳಗದ, ಚ.　3 ಗೀತವೊ, ಚ.
4 ಕಾವ್ಯಬಂಧದ, ಚ.　5 ಜೀ, ಚ.　6 ವಾಳವೋ, ಚ.
7 ಮೇಳವಣೆಗಳ ಪಾಟಿಯಾದುದುಜನದಕಣ್ಣಿನಕೆ, ಜ.

ತೀವಿದುದು ಹೊಱವೞಯದಲಿ ನಾ
ನಾವಿಧದ ಕಥನವು ಕಥಾರ್ಥವು
ಭಾವಕರು ದ್ರಾವಕಸುವಾಕರು ಮಲ್ಲಚಿತ್ರಕರು |

ವಿವಾಹಕ್ಕಾಗಿ ಜನಮೇಳನ

ಕೋವಿದರು ಕರುಷಕರು ಪಣ್ಯಾ
ಜೀವಿವಾಮನಮೂಕಬಧಿರಾಂ
ಧಾವಗಳಿಗಳೊದಗಿದರು ಸಕಲದಿಶಾಸಮಾಗತರು || ೧೩

ಕವಿಗಮಕಿವಾದಿಗಳು ವಾಗ್ಮಿ
ಪ್ರವರಯಾಜ್ಞಿಕಮಾಂತ್ರಿಕರು ವೈ
ಷ್ಣವಮಹೇಶ್ವರಜೈನಭೈರವಬುದ್ಧಲಿಂಗಿಗಳು |
ವಿವಿಧವರ್ಣಾಶ್ರಮ [2] ಸುಧರ್ಮ
ವ್ಯವಹರಣನಿಷ್ಠರು ವಿವಾಹೋ
ತ್ಸವವಿಲೋಕನಕೌತುಕಿಗಳೊದಗಿದರಸಂಖ್ಯಾತ || ೧೪

ಗಣಿತವಂತರ ನೆರವಿ ಸುಬ್ರಾ
ಹ್ಮಣರ ಸಭೆ ಶ್ರೋತ್ರಿಯರ ವೈದಿಕಕ
ರಣಶೋಭಾನ್ವಿತರ ವಿಮಳಬ್ರಹ್ಮಚಾರಿಗಳ | [3]
ಪ್ರಣುತಋುಷಿಗಳ ಮುನಿವರರ ಸಂ
ದಣಿಸಿತಖಿಳದಿಗಂತರದ ಧಾ
ರಣಿಯ ಸುಜನವ್ರಾತ ನೆರೆದುದು ದ್ರುಪದನಗರಿಯಲಿ || ೧೫

ಅರಸ ಕೇಳೈ ಮೇಲೆ ವಿದ್ಯಾ
ಧರಮಹೋರಗಯಕ್ಷರಾಕ್ಷಸ
ಗರುಡಕಿನ್ನರಸಿದ್ಧವಸುಗಂಧರ್ವಭೂತಗಣ |

---

[1] ವೈಷ್ಣವರು ಶೈವರು ಬೌದ್ಧಜಿನ ಭೈರವಸುಶಕ್ತಿಗಳು, ಕ.ಖ.
[2] ವಿವಿಧ ಸತ್ಯವ್ರತ, ಖ. [3] ವಿಮಲಬ್ರಹ್ಮಋಷಿಸಮರು, ಚ.

ವರಮರುದ್ಗಣ ರುದ್ರಮನುಭಾ
ಸ್ಕರಸುಧಾಕರತಾರಕಾಗ್ರಹ
ಸುರಪಮುಖದಿಕ್ಪಾಲತತಿ ನೆರೆದುದು ವಿಮಾನದಲಿ ॥ ೧೬

ಚಾರಣರ ಕೈವಾರ ತುಂಬರು
ನಾರದರ ಸಂಗೀತ ರಂಭೆಯು
ಚಾರುನರ್ತನ ಚಿತ್ರರಥನ ಮೃದಂಗಮೃದುಶಬುದ ।
ಆರುಭಟೆ ಮಿಗಲಳ್ಳಿರಿಯೆ ಜಂ
ಭಾರಿಯೋಲಗದಲಿ ತದೀಯುಮ
ಹಾರಭಸ ತಾನೆಸೆಯೆ ಸಿರಿ ಪ್ರತಿಬಿಂಬವಾಯ್ತೆಂದ ॥ ೧೭

ದೇವಸಭೆ ತಾ ಬ್ರಹ್ಮಸಭೆ ಸುಮ
ಹಾವಿಳಾಸದ ರಾಜಸಭೆಗಳು
ತಾವು ಮೆಱೆದುವು ದ್ರುಪದರಾಜನ ರಾಜಭವನದಲಿ ।
ಆವಿಳಾಸಕದಾರು ಸರಿ ದೊರೆ
ದೇವದಾನವದನುಜಭುಜಗರೊ
ಳಾವಿಲಾಸವು ಸರಿಗೆ ಬಾರದು ದ್ರೌಪದೀಪಿತನ ॥ ೧೮

ಭಾಗಕೆಣೆಯಾರುಂಟು ಪಾಂಡವ
ರಾಗ ತಾವ್ ಭಿಕ್ಷಾನ್ನಮಾಡುವ
ರಾಗದಲಿ ಪುರವರವ ನೋಡುತ ಮೂಱುಸಭೆಗಳನು ।
ಬಾಗಿ ಧನುವನು ನೋಡಿ ಧರ್ಮದ
ವೇಗದಲು ಬರುತಿರ್ದರಾಗಳು
ಯೋಗಚರಿತರು ಪಾಂಡುಪುತ್ರರು ದ್ರುಪದಪುರಿಯೊಳಗೆ ॥ ೧೯

ರಚಿಸಿದರು ಮಂಟಪವನವರವ
ರುಚಿತವೃತ್ತಿಯಿನವನಿಪಾಲರ
ನಿಚಯುವನು ಮನ್ನಿಸಿದನಿವರನು ವಿಪ್ರಸಭೆಯೊಳಗೆ ।

ಆಗ ಪಾಂಡವರ ವಿಷಯದಲ್ಲಿ ದ್ರುಪದನ ಚಿಂತೆ

ಪ್ರಚುರಮಣಿ ಯಿದೆ ಪದ್ಮರಾಗದ
ರುಚಿರರತ್ನವು ಜಾತರೂಪದಿ
ಖಚಿತವಾದೊಡೆ ಪುಣ್ಯವೆನುತಾ ದ್ರುಪದ ಚಿಂತಿಸಿದ ‖ ೩೦

ದೇವರೆನಗಾಪಾಂಡುಪುತ್ರರ
ನೋವಿ ಕೊಟ್ಟೊಡೆ ಹರುಷವೆನುತಾ
ಭಾವದಲಿ ದ್ರುಪದನೃಪದೇವರ ನೆನೆಯುತಿಂತೆಂದ ।
ಈವಧುವಿಗಿಂನವರ ಕಾಣೆನು
ದೇವರೆಂದಾಪಾಂಡುಪುತ್ರರ
ಕಾವನಾದೊಡೆ ಯೆನ್ನ ಪುಣ್ಯಕದಾರು ಸರಿಯೆಂದ ‖ ೩೧

ಬಟ್ಟಕವರು ಕೌಂತೇಯರಾಗಳು
ಹೊಟಬಲೊಳಗೆ ಭಿಕ್ಷಾನ್ನವೆತ್ತಿಯೆ
ಘಟ್ಟಲನ್ನೈತಂದವರು ಹೊಕ್ಕು ಕುಲಾಲಮಂದಿರವ ।
ಒಳಗೆ ದೇವಾರ್ಚನೆಯ ಮಾಡಿಯೆ
ನಳನನಾಭಾರ್ಪಿತವನುಂಡರು
ನಲಿಯುತಲಿ ತಾವೆಂದು ಪಾಂಡವರರಸ ಕೇಳೆಂದ ‖ ೩೮

ಇರುಳು ನೂಕಿದರಲ್ಲಿ ಮಱುದಿನ
ತರಣಿಗರ್ಘ್ಯವನಿತ್ತು ವಿಹಿತದಿ
ಭರದನುಷ್ಠಾನವನು ಮಾಡಿಯೆ ಬಟ್ಟಕ ಪುರದೊಳಗೆ ।
ಧರಣಿಸುರಗೃಹದೊಳಗೆ ಭಿಕ್ಷವ
ತಿರಿದು ತಂದರು ಮತ್ತೆ ಮಾತೆಯು
ಕರದಲರ್ಪಿಸಿ ಬಟ್ಟಕ ಭೋಜನಮಾಡಿ ಹರುಷದಲಿ ‖ ೩೩

ಉಂಡು ದ್ರುಪದಾಲಯದ ಭೂಸುರ
ಹಿಂಡಿನಲಿ ಭಾವದಲಿ ಕುಳಿತಿರೆ
ಗಂಡುಗಲಿಗಳು ಮೆಱೆದರಾದ್ವಿಜರಾಜಸಭೆಯೊಳಗೆ ।

ಹೆಂಡಿರೊಳಗತ್ಯುತ್ತಮೋತ್ತಮೆ
ಗಂಡರಿಗೆ ಅತ್ಯಧಮೆ ಪಾಂಡವ
ಗಂಡರನು ಬಯಸುವಳ ಪರಿಯನು ಮತ್ತೆ ಕೇಳೆಂದ ॥ ೩೪

ಇಪ್ಪತ್ತೆಂಟನೆಯ ಸಂಧಿ ಮುಗಿದುದು.

---

## ಇಪ್ಪತ್ತೊಂಬತ್ತನೆಯ ಸಂಧಿ.

### ಸೂಚನೆ

ಕಮಲಮುಖಿ ನಡೆತಂದಳಂದಿನ
ಕಮಲೆ ಯೆನೆ ಪಾಂಚಾಲಸುತೆ ನಿಜ
ರಮಣರನು ನೋಡಿದಳು ಪೃಥ್ವೀಪಾಲಸಭೆಯೊಳಗೆ ॥

ವಿವಾಹಪ್ರಾರಂಭ ಮತ್ತು ರಾಜರ ಸಮಾಗಮ.

ಅರಸ ಕೇಳ್ ನಾಂದೀ ಮುಖದ ವಿ
ಸ್ತರಣವಾದುದು ಪೂರ್ವವೇದಿಯು
ವರನಿಗಮನಿರ್ಘೋಷ ಪಸರಿಸಿತಖಿಳದಿಕುತಟವ ।
ಮಱುದಿವಸ ಮಹಿಳಾಶಿರೋಮಣಿ
ಪರಮಸೌಭಾಗ್ಯದ ಸಮುದ್ರದ
ಸಿರಿಯು ಪರಿಣಯವೆಂದು ಸಾಱಿತು ಪಾಳೆಯಂಗಳಲಿ ॥ ೧

ತಿಗುರ ಗೆಲುವುದು ವೆಶ್ಯತಿಲಕಾ
ಳಿಗಳನಿಡುವುದು ಮೋಹನದ ಮ
ದ್ದುಗಳ ಮಾಯೆಯ ಬೀಸುವುದು ಸೂಸುವುದು ಸೊಗಸುಗಳ ।

ಹಗಲು ಕಾಹಿನ ರೂಹುಗಳ ಗಾ
ಹುಗಳ ಮೆಱೆವುದು ಮನ್ಮಥನ ಕಾ
ಳಗದ ಖಾಡಾಖಾಡಿಯೆಂದರು ಹೊಯ್ದು ಡಂಗುರವ ॥ ೧

ಹರಸಿಕೊಂಡರು ಸಕಲಪೃಥ್ವೀ
ಶ್ವರರು ಮಾಯಾಪುರದ ಕಾಂಚೀ
ಪುರದ ಜಾಲಂಧರದ ವಿವಿಧಸ್ಥಾನದೇವತೆಗೆ ।
ಕರಿಮುಖನ ಕಜ್ಜಾಯದಲಿ ಸ
ತ್ಕರಿಸಿ ಸಂಶಯಭೇದಿ ಗರ್ವದ
ಹರುಷದಲಿ ಹೊಱವಂಟರೊಬ್ಬರನೊಬ್ಬರುರುವಣಿಸಿ ॥ ೭

ಉಬ್ಬು ಮುಱಿದುದು ರಾಯರೊಬ್ಬರ
ನೊಬ್ಬರೀಕ್ಷಿಸಿ ಚಲುವಿನಲಿ ಸಿರಿ
ಗೊಬ್ಬಿನಲಿ ಸಾಹಸಿಕೆಯಲಿ ಸೇನಾಸಮುದ್ರದಲಿ ।
ಬಬ್ಬರೊಬ್ಬರ ಶೌರ್ಯವೊಬ್ಬರ
ನೊಬ್ಬರೀಕ್ಷಿಸುವದಟುಕಂಗಳ
ಹಬ್ಬದಲಿ ಮನಸಂಚ ತಪ್ಪಿತಸಾಧ್ಯಚಿಂತೆಯಲಿ ॥ ೪

ಹೋರೆಗಳ ಹೊಳ್ಳಿರಿತ ಜೋಯಿಸ
ರಾರುಭಟಿಗಳ ಬಿಂಕ ಕೋವಿದ
ರೋರೆನುಡಿ ತಾ ಜಾಳುಜಪವೀನೃಪರ ಬೋಳವಿಸೆ ।
ಹಾರೈಸಿ ಪುಳಕಾಂಬುಗಳ ಶೃಂ
ಗಾರ ಮಿಗೆ ನೇವರಿಸುತ್ತೈತಂ
ದೋರಣಿಸಿದರು ಸಾಲಶೋಭಿತಸಿಂಹಪೀಠದಲಿ ॥ ೫

ಕೌರವರು ಯಾದವರು ಸಹಿತೀ
ಧಾರುಣಿಯ ಕ್ಷತ್ರೇಶವಂಶದ
ವೀರಪಾರ್ಥಿವವಿತತಿ ಕುಳ್ಳಿರ್ದುದು ಸುಗಾಢದಲಿ ।

ಸಾರಿ ಸೋದರಸಚಿವಮಂತ್ರಿಕು
ಮಾರಚಾಮರಹಡಪದೊಳಪರಿ
ವಾರ ಬಳಸಿಮದೊಬ್ಬರೊಬ್ಬರ ಸುತ್ತುವಳಯದಲಿ ॥ ೬

ಅಂಕೆ ಯಿದು ಪಾರ್ಥಿವರ ವಿಭವಾ
ಲಂಕೃತಿಯನದನೇನ ಹೇಳುವೆ
ನಂಕವಿದು ಕಳನೇಳಿತಾಹವವೆನಗೆ ತನಗೆನುತ ।
ಶಂಕರಾರಿಯು ಮಸೆದಲಗು ಮೊ
ಐಂಕಮುಬ್ಬಿನ ಝುಂಕೆಯಂಕೆಯ
ಬಿಂಕವೇನು ವಿಸ್ತರಿಸುವೆನು ನರನಾಥ ಕೇಳೆಂದ ॥ ೭

ಬಳಿಕ ಧನುವನ್ನು ತರಿಸೆಂದು ಮಗನಿಗೆ ದ್ರುಪದನ ಅಪ್ಪಣೆ

ತರಿಸು ಧನುವನು ಯಂತ್ರಮತ್ಸ್ಯನ
ನಿರಿಸು ತಳುವದೆ ತಂಗಿಯು[1] ನಲಂ
ಕರಿಸು ದಂಡಿಗೆಯಿಂದ ತಾ ತೋಳಿಸು ಮಹೀಶ್ವರರ ।
ವರನ ವರಿಸಲು ಲಗ್ನವಿದೆ ಹ
ತ್ತಿರೆ ಯೆನುತ ಪಾಂಚಾಲಭೂಪತಿ
ಕರೆದು ಧೃಷ್ಟದ್ಯುಮ್ನನನು ಬೆಸಸಿದನು ಬೇಗದಲಿ ॥ ೮

ದ್ರೌಪದಿಯ ವರ್ಣನೆ

ಅರಸನಾಜ್ಞೆಯ ಮೇಲೆ ಶತಸಾ
ವಿರಸಿತಂಬಿನಿಯರು ಕುಮಾರಿಯು
ಹೊರೆಗೆ ಬಂದರು ತಿಗುರಿದರು ಕುಂಕುಮದಲವಯವವ ।
ಅರಸಿ ಮಜ್ಜನಮಾಡಿ ನೂತನ
ವರದುಕೂಲವನುಟ್ಟು ಸಖಿಯರ
ತರದ ನೆಲೆಯುಗ್ಗಡಣೆಯಲಿ ಬಂದಳು ನಿಜಾಲಯಕೆ ॥ ೯

1 ಸುತೆಯು ಜ.

ಹೊರೆಯ ಸಖಿಯರ ನೋಟ ವ್ಯೈಯಲಿ
ಹರಿದು ಬೞಲದು ಚಿತ್ತವೀಕೆಯ
ಧರಿಸಿ ಕುಸಿಯದು ಕಿವಿಗಳಿಗೆ ಮೆಲ್ನುಡಿಯ ಸವಿಸವಿದು |
ಅರುಚಿಯಾಗದು ನಾಸಿಕವು ವ್ಯೈ
ಪರಿಮಳದ ಪೂರದಲಿ ಗಂಧಾಂ
ತರವನಱಿಯನು ರೂಪನೇನೆಂಬೆನು ನಿತಂಬಿನಿಯ || ೧೦

ಮೊಗಗಳಲಿ ಸಿಲುಕಿದೊಡೆ ನೋಟಕೆ
ಬಿಡುಕವುನರಾವೃತ್ತಿಯೇ ಕಂ
ಗಳಿಗೆ ಕಾವಿಸಿದೊಡೆ ನಿಮೇಷಕೆ ಸಮಯವಿಲ್ಲಯದು |
ಲಲಿತತನುಕಾಂತಿಗಳೊಳದ್ದರೆ
ಮುೞುಗಿ ತೆಗೆವವರಾರು ಜಘನ
ಸ್ಥಳಕೆ ಮುಱಿದೊಡೆ ಮರಳದೆಲೆ ಕಂಗಳಿಗೆ ಹುಸಿ ಯೆಂದ || ೧೧

ಹೊಲಬುಗೆಡವೇ ಹೊಳೆವ ವಕ್ಷ
ಸ್ಥಳದೊಳಗೆ ಜನದೃಷ್ಟಿ ನಳಿತೋ
ಳ್ಗಳಲಿ ಸೆಳ್ಳುಗುರ್ವೆಳಗಿನಲಿ ಕಂದಳದ ಶೋಭೆಯಲಿ |
ಸುಳಿದೊಡಲ್ಲಿಯೆ ನಿಲವು ದಶನಾ
ವಳಿಯ ಬಿಂಬಾಧರದ ಕದಪಿನ
ಚಲುವಿಕೆಗೆ ನರರಾಲಿ ನೆರೆಯುವು ಭೂಪ ಕೇಳೆಂದ || ೧೨

ಅಸಿಯ ನಡುವಿನ ವೃತ್ತನಾಭಿಯ
ಮಿಸುಪ ಬಾಸೆಯ ತೋರಮೊಲೆಗಳ
ಎಸೆವ ತೊಡೆಗಳ ಚಾರುಜಂಘೆಯ ಚರಣಪಲ್ಲವದ |
ಎಸಳುಗಂಗಳ ತೊಳಗಿ ಬೆಳಗುವ
ಮುಸುಪ ಕಾಂತಿಯ ಪುಗದ ಕುರುಳಿನ
ಬಿಸಜಗಂಧಿಯ ರೂಪನಹಿವರ್ಣಿಸುವೊಡರಿದೆಂದ || ೧೩

ಪೂಸುವೊಡೆ ಕಸ್ತೂರಿಜವಾಜಿಗ
ಳ್ಯಸಲೇ ಪರಿಮಳವು ಸುತ್ತಲು

ಸೂಸಿ ತನುಕಂಪಿನಲಿ ಮಘಮಘಿಸುವಳು ಯೋಜನವ ।
ಈಸಮಸ್ತಮನುಷ್ಯಧರ್ಮದ
ದೋಷಗರ್ಭಿತಧಾತುಗಳ ವಿ
ನ್ಯಾಸವೇ ದ್ರೌಪದಿಯ ಭಾವದ ಭಂಗಿ ಬೇಱೆಂಪ ॥ ೧೪

ಬೆರಳ ಚಲುವಿಕೆಯಿಂದ ಮುದ್ರಿಕೆ
ಮೆಱೆಯೆ ಸೂಡಗನೇವುರಂಗಳು
ಕರಚರಣಸೌಂದರ್ಯದಲಿ ಬಲ್ಸೊಮ್ಮೆಲೆಯ ಥಾಳಿನಲಿ ।
ಕೊರಳ ಮುತ್ತಿನ ಹಾರ ಸುಮನೋ
ಹರದ ಕದಪುಗಳಿಂದ ಕರ್ಣಾ
ಭರಣ ವೊಪ್ಪಿದುವೇನನೆಂಬೆನು ರೂಪನಂಗನೆಯ ॥ ೧೫

ಎಸೆವಧರರಾಗದಲಿ ಮಿಗೆ ರಂ
ಜಿಸುವವ್ಪೋಲ್ ಮಾಣಿಕ್ಯ ಮೆಱೆದುದು
ದಶನ ದೀಧಿತಿಗಳಲಿ ಥಳಥಳಿಸಿದುವು ಮುತ್ತುಗಳು ।
ಮಿಸುಪ ದೇಹಚ್ಛವಿಗಳಲಿ ಡಾ
ಳಿಸುವ ವ್ಪೋಲ್ ಭೂಷಣದ ಹೇಮ
ಪ್ರಸರ ಹೊಳೆದುದು ಹೊಗಳ್ವ ಕವಿಯಾರಬುಜಲೋಚನೆಯ ॥ ೧೬

ಪರಿಮಳದ ಪರಮಾಣುಗಳ ಸಂ
ವರಿಸಿ ಮುಕ್ತಾಫಲದ ಕೆಂದಾವರೆಯ
ಮುಱಿದುಂಬಿಗಳ ವರ್ಣಾಂತರವನಳವಡಿಸಿ ।
ಸರಸವೀಣಾಧ್ವನಿಯ ಹಂಸೆಯ
ಗರುವಗತಿಗಳನಾಯ್ದು ಮನ್ಮಥ
ವರವಿರಿಂಚನು ಸೃಜಿಸಿದನು ಪಾಂಚಾಲನಂದನೆಯ ॥ ೧೭

ಸರಸಲಾವಣ್ಯಾಂಬುಮಯುತನು
ಸರಸಿಯಲಿ ಮುಳುಗಿರ್ದ ಯೌವನ
ಕರಿಯ ಕುಂಭಸ್ಥಳವೊ ವಿಪುಳಪಯೋಧರದ್ವಯವೊ ।

ತರಳನಯನವೊ ಶಫರಿಗಳೊ ತಾ
ವರೆಯೊ ಮುಖವೋ ತುಂಬಿಗಳೊ ನಿಖಿ
ಗುರುಳುಗಳೊ ಮಣಿಗಣವೊ ರದನವೊ ಚಿತ್ರವಾಯ್ತೆಂದ ॥ ೧೮

ರಾಜಸೂಯದ ಕ್ರತುವು ಪೊಲು ಜಿತ
ರಾಜಮಂಡಲವಾಯ್ತು ಮುಖವಿದು
ರಾಜರಾಜನ ಪೊಳಲು ದಳಕಾಧಿ[1] ಷ್ಠಿತತ್ವದಲಿ ।
ರಾಜನುದ್ಯಾನದ ಪೊಲಾಸ್ಯಸ
ರೋಜವಾಯ್ತು ತಮೋಲಪತ್ರವಿ
ರಾಜಿತವು ಜನಮೇಜಯ ಕ್ಷಿತಿಪಾಲ ಕೇಳೆಂದ ॥ ೧೯

ಜನಪ ಕೇಳುಪಲಾಲಿತಾಂಜನ
ವನೆ ಜಿತಾಕ್ಷವಿಪಕ್ಷವಾದುವು
ವಿನುತಕರ್ಣಪ್ರಣಯವಲಿ[2] ವೃಷಸೇನವೈರದಲಿ ।
ಜನವಿಡಂಬನ ತಾರಕಾ ಮಂಡನ
ಕದರ್ಥಿತ ಕುಮುದವೆನೆ ಲೋ
ಚನಯುಗಳವೊಪ್ಪಿದುವು ವರಪಾಂಚಾಲನಂದನೆಯ ॥ ೨೦

ಏನನೆಂಬೆನು ಮನಸಿಜನ ಮದ
ದಾನೆಯನು ಮನ್ಮಥನ ರತ್ನನಿ
ಧಾನವನು ದರ್ಪಣವನಂಗಜಯಂತ್ರಸೂತ್ರಕದ ।
ಮಾನಿನಿಯರಧಿದೈವವನು ವಿ
ಜ್ಞಾನಕನ್ಯಾಮಾತೃಭವನ
ಸ್ಥಾನವನು ತ್ರೈಲೋಕ್ಯಲೋಚನವಶ್ಯಮಂತ್ರಕವ ॥ ೨೧

ನಾರಿಯನು ಸಂಸಾರಸುಖಸಾ
ಕಾರಿಯನು ಜನನಯನಕಾರಾ
ಗಾರಿಯನು ಮುನಿಧೈರ್ಯಸರ್ವಸ್ವಾಪಹಾರಿಯನು ।

---

[1] ವೇ, ಚ. [2] ಗಳು, ಖ. ಚ.

ಧೀರರಿಗೆ ಮಾಱಂಕವನು ವರ
ಪಾರಿಕಾಂಕ್ಷಿಯ ಚಿತ್ತಚೌ[1] ರ್ಯದ
ಹಾರಿ[2] ಯನು ದ್ರೌಪದಿಯನಭಿವರ್ಣಿಸುವೊಡರಿದೆಂದ ॥ ೨೨

ನಳಿನಮುಖಿಯರ ಸಕಲಸೃಷ್ಟಿಗೆ[3]
ಕಳಸವಿದು ಸೌಂದರ್ಯವಸನದ
ವಿಳಸವಿದು ಸೌಭಾಗ್ಯವೈಭವರತ್ನಕೋಶವಿದು ।
ಲಲನೆಯರ ಸೀಮಂತಮಣಿ ಜಗ
ದೊಳಗೆ ಸೊಬಗಿನ ಕಣಿ ತಪೋಧನ
ಕಲಭರಿಗೆ ಸೃಣಿ ರೂಪು ಮೆಱೆದುದು ದ್ರುಪದನಂದನೆಯ ॥ ೨೩

ಹೊಳೆಹೊಳೆದುದಾಭರಣರತ್ನಾ
ವಳಿಯ ರುಚಿ ಮಣಿರುಚಿಗಳನು ಮು
ಕ್ಕುಳಿಸಿತಂಗಚ್ಛವಿ ತದಂಗಪ್ರಭೆಯನಡೆಹಾಯ್ದು ।
ಥಳಥಳಿಸಿದುದು ವದನ ಮುಖವಂ
ಡಲದ ಕಾಂತಿಯನೊದೆದು ಕಂಗಳ
ಬೆಳಗು ವಿಸಟಂಬರಿದುದೇನೆಂಬೆನು ನಿತಂಬಿನಿಯ ॥ ೨೪

ಕಂಗಳಲಿ ಕುಡಿಹೊಳಹು[4] ಹುಬ್ಬಿನ
ಹೊಂಗಿನಲಿ ಭಂಜವಣೆ ಭಾವದ[5]
ಭಂಗಿಯಲಿ ಪತಿಕರಣೆ ವಿವಿಧಸಖೀಕದಂಬದಲಿ ।
ಇಂಗಿತದ ಬಿರಿಮುಗುಳ ಪರಿಮಳ
ವಂಗಹಾರವಿಲಾಸವಿಭ್ರಮ
ಭಂಗಿಗಳು ಬಿಬ್ಬೋಕಲಲಿತಾದಿಗಳು ದ್ರೌಪದಿಯ ॥ ೨೫

ವರವಸಂತನ ಬರವು ಜಾಜಿಯ
ಬಿರಿಮುಗುಳು ಮೆಱೆದುಂಬಿಗಳ ನಯ

---

1 ಶೌರ್ಯ, ಙ.  2 ಕಾರಿ, ಙ.  3 ದೃಷ್ಟಿಗೆ, ಚ. ಙ.
4 ಮೇಳ, ಚ.  5 ಭಾರಿಯ, ಚ.

ಸರದ ಪನಿ ಕರಿಕಳಭಲೀಲೆ ನವೇಕ್ಷುರಸಧಾರೆ |
ಮೆಱೆವವೊಲ್ ಹೊಸಹೊಗರಜವ್ವನ
ಸಿರಿಯು ಜೋಡಣೆ ಜನಮನವನಾ
ವರಿಸಿದುದು ನಿಪ್ಪಸರದಲಿ ಪಾಂಚಾಲನಂದನೆಯ ॥ ೨೬

ಆರತಿಯನೆತ್ತಿದರು ಬಟ್ಟಿಕು
ಪ್ಪಾರತಿಯ ಹಾಯ್ಕಿದರು ಮುತ್ತಿನ
ತೋರಸೇಸೆಯ ಸೂಸಿ ಹರಸಿ ಸುವಾಸಿನೀನಿಕರ |
ಚಾರುಮುಕುರವ ನೋಡಿ ನಿಂದಳು
ಭಾರಣೆಯ ಗರುವಾಯಿಯಲಿ ಜಂ
ಬೀರಫಲವನು ಕೊಂಡಳಂಗನೆ ವಿಪ್ರಮಂತ್ರದಲಿ ॥ ೨೭

ಮುಂದೆ ಪಾಯವಧಾರು ಸಖಿಯರ
ಸಂದಣಿಯ ಸಾಲಿನಲಿ ದಂಡಿಗೆ
ಗಿಂದುಮುಖಿ ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ |
ಹಿಂದು ಮುಂದಿಕ್ಕೆಲದ ನಾರೀ
ವೃಂದ ನೆರೆದುದು ವೀರಪಟಹದ
ದುಂದುಭಿಯ ತಂಬಟದ ರವವಳ್ಳಿಱಿದುದಂಬರವ ॥ ೨೮

ಸಾಲಝಲ್ಲರಿ ಮುಸುಕಿದುವು ಸಮ
ಪಾಳಿಯಲಿ ಸೀಗುರಿಗಳಾಡಿದು
ವಾಲಿಯುವಗಾಹಿಸದು ನೆಲನೆನಿತನಿತುವಳಯದಲಿ [1] |
ಬಾಲೆಯರ ಮುಗುಧೆಯರ ನತಿಘಾ
ತಾಳಿಯರ ಕಡೆಗಣ್ಣ ನೋಟದ [2]
ಚಾಳೆಯರ ಚಮರಿಯರನಲ್ಲದೆ ಕಾಣೆ ನಾಸಂದ ॥ ೨೯

ನಿಱಿದಲೆಯ ಚೊಲ್ಲೆಹದ ತುಂಬಿಯ
ನಿಱಿಗುರುಳ ಬೈತಲೆಯ ಮುತ್ತಿನ

1 ಪಾಳೆದ, ಕ. ಖ. 2 ವಾಲಿಗಳು ನೋಟಕದಲನಿತನಿತರಳವಿಯಲಿ, ಕ. ಖ.

ಹೆಱೆನೊಸಲ ನಿಡಪುರ್ಬುಗಳ ಥಳಿಸುವ ಕದಪುಗಳ ।
ತುಱುಗೆವೆಯು ತನಿಹೊಳೆವ [1] ಕಂಗಳ
ಮೆಱೆವ ಸುಲಿಪಲ್ಲುಗಳಸೆವ ನು
ಣ್ಗೊರಳ ನಳಿತೋಳುಗಳ ನೀಱೆಯರೈದಿತೊಗ್ಗಿನಲಿ ॥ ೨೦

ತೋರವೊಲೆಗಳ ನಳಿವ ನಡುಪೊಱ
ವಾಱುಗಳ ನುಣ್ದೊಡೆಯು ಕಿಱುದೊಡೆ
ಯೋರಣದ ಹಾವುಗೆಯು ಹೆಜ್ಜೆಯು ಹಂಸೆಗಳ ಗತಿಯು ।
ನೀಱೆಯರ ಪ್ರೈಗಂಪುಗಳ ತನಿ
ಸೊಱೆಗೆಳಸುವ ತುಂಬಿಗಳ ಕೈ
ವಾರಗಳ ಕಡುಗರವೆಯರ ನೆರೆದುದು ಸಖೀನಿವಹ ॥ ೨೧

ಕೀಲಕಡಗದ ವಜ್ರಲಹರಿಯು
ಜೋಳೆಯದ ಕಂಕಣದ ರವೆಗಳ
ತೋಳ ಬಂದಿಯು ಕೊರಳ ತ್ರಿಸರದ ಬೆರಳ ಮುದ್ರಿಕೆಯು ।
ನೀಲರತುನದ ಪದಕಮಾಣಿಕ
ದೋಲೆಗಳ ಮೂಗತಿಯು ಮುತ್ತಿನ
ಮೇಲುಸಿಂಗಾರದ ಸಖೀಜನವೈದಿತೊಗ್ಗಿನಲಿ ॥ ೨೨

ವಿಲಸದೇಕಾವಳಿಯು ಮುತ್ತಿನ
ತಿಲಕ ಸೂಡಗ ಪಾಯುವಟ್ಟದ
ಲಲಿತಬಂಧದ ವಜ್ರಬಿಂಬದ ತಾರಕಾವಳಿಯು ।
ಹೊಳೆವ ಕಾಂಚಿಯು ಕಿಂಕಿಣೀಸಂ
ಕುಳದ ನೇವುರ ವೀರಮುದ್ರಾ
ವಳಿಯು ಚರಣಾಭರಣದಬಲೆಯರೈದಿತೊಗ್ಗಿನಲಿ ॥ ೨೩

ಭ್ರೂಲತೆಯು ಬಿಲ್ಲಿನ ಕಟಾಕ್ಷದ
ಕೋಲಹೊದೆಗಳ ಬಾಸೆಗಳ ಕರ

1 ನಿಟ್ಟೆಸಳ, ಕ.

ವಾಳಗಳ ಕತ್ತುರಿಯ ತಿಲಕದ ಹರಿಗೆಹಲಗೆಗಳ ।
ತೋಳುಗಳ ಲೌಡಿಗಳ ಸೆಳ್ಳಗು
ರೋಳಿಗಳ ಸುರಗಿಗಳ ಮನ್ಮಥ
ನಾಳು ನಡೆದುದು ದ್ರೌಪದಿಯ ದಂಡಿಗೆಯ ಬಳಿಸಿನಲಿ [1] ॥ ೨೪

ವ್ರತಿಗಳಿಗೆ ಮೊನೆದೋಱುತಣ ಸು
ವ್ರತಿಗಳಿಗೆ ಬೀಱುತ ಸಮಾಧಿ
ಸ್ಥಿತರ ಮೂಗಿನ ಮೇಲಣಾಯುಧಧಾರೆಗಳನೆಳೆದು ।
ಶ್ರುತಿವಿಹಿತಸತ್ಕರ್ಮಿಗಳ ದೀ
ಕ್ಷಿತರ ಮತಿಯಲಿ ತಮ್ಮ ಮುದ್ರಾಂ
ಕಿತವ ಮಾಡುತ ಮೀಱಿ ನಡೆದುದು ಯುವತಿಜನಕಟಕ ॥ ೨೫

ಆರು ನಿಲುವರು ಸಂಮುಖಕೆ ಮದ
ನಾರಿಯರ್ಧದ ನಾರಿಯಾ ಹರಿಯು
ಹೇರುರದ ಹೆಂಗೂಸು ಬೊಮ್ಮನು ಮಗಳ ನೆಱಿಗೇಡಿ ।
ಘೋರವದು ಸುರಪತಿಯ ಕಥೆ ವ್ಯ
ಯಾರೆ ಹೊತ್ತನು ಮದನಮುದ್ರಾ
ಧಾರೆಯೆಂಬಂತೊದಱಿದುವು ಮುಂಗುಡಿಯ ಕಹಳೆಗಳು ॥ ೨೬

ತೋರಮೊಲೆಗಳ ದಂತಿಘಟೆಗಳ
ಚಾರುಜಘನದ ಜೋಡಿಸಿದ ಹೊಂ
ದೇರುಗಳ ಸುಳಿಗುರುಳುಗಳ ಝಲ್ಲರಿಯ ಜೋಡುಗಳ ।
ಚಾರುನಯನದ ಚಪಳಗತಿಗಳ
ವಾರುವಂಗಳ ಮೇಲುವಸನದ
ಸಾರಸಿಂಧದ ಸೇನೆ ನಡೆದುದು ಸತಿಯ ಬಳಿಸಿನಲಿ ॥ ೨೭

ಪಸರಿಸಿತು ತಂಬೆಲರು ಬೀಸಿತು
ಬಿಸಿಲ ಬಿಂಕ ಸರೋಜಸಂತತಿ
ಮಸುಳಿದುವು ಮದವೇಱಿ ಮುಱಿದುದು ತಾರಕಾನಿವಹ ।

---

1 ಚೂಣಿಯಲಿ, ಕ. ಖ.

ಒಸರಿದುದು ಶಶಿಕಾಂತ ನೈದಿಲ
ಹಸರ ಹರಿದುದು ಚಕ್ರವಾಕದ
ಬೆಸುಗೆ ಸಡಲಿತು ಚಾರುಚಂದ್ರಾನನೆಯ ಬರವಿನಲಿ ‖ ೩೮

ಹೊಳೆವ ಕಂಗಳ ಬೆಳಗಿನಲಿ ಕ
ತ್ತಲಿಸಿದುದು ಕಾಮುಕರ ಮನ ತನು
ವೆಳಯಕಾಂತಿಯ ತಂಪಿನಲಿ ಬಾಡಿದುವು ಬುದ್ಧಿಗಳು ।
ಲಲಿತವಿಭ್ರಮದಿಂದಹಂಕೃತಿ
ಶಿಲೆಗಳೊಡೆದುವು ಮೋಹನದ ಹೊನ
ಲೊಳಗೆ ಹೊಳ್ದಡಗಿದುದು ಚಿತ್ತ ಮಹಾಮಹೀಶ್ವರರ ‖ ೩೯

ತರುಣಿಯುರ ನವನೀಲಮಣಿಗಳ
ಕುರುಳ ಕಬರಿಯ ಭರದ ಮರಕ
ಸ್ತುರಿಯ ತಿಲಕದ ಕಾಳಿಕೆಯ ಘನಕಾಂತಿಲಹರಿಗಳ ।
ಕೊರಳ ಹಾರದ ಕರ್ಣಪೂರದ
ಸರದ ಮೌಕ್ತಿಕರುಚಿಯ ಯಮುನಾ
ಸುರನದಿಯ ಸಂಗಮದೊಳಗೆ ಮುಳುಗಿತು ಜನಸ್ತೋಮ ‖ ೪೦

ಪರಿಮಳಕೆ ಮಿಗೆ ಕವಿವ ತುಂಬಿಗೆ
ಕರಳುವರು ಹುಬ್ಬಿನಲಿ ಪದನೇ
ವುರದ ಮೆಲ್ದನಿಗಳಿಗೆ ಮುತ್ತುವ ರಾಜಹಂಸೆಗಳ ।
ಹೊರೆಯ ಕೆಳದಿಗೆ ದೂಋುವರು ಕೈ
ಯುರೆಗಿಳಿಗೆ ತಮ್ಮಧರಬಿಂಬಕೆ
ಮುಋಿಮುಋಿದು ಮುಖದಿರುಹುವರು ಮುಗ್ಧಾಂಗನಾನಿಕರ ‖

ಕಂಗಳೋರೆಯ ಥಾಳಿಸುವ ಹಾ
ಸಂಗಿಗಳ ಬಿಗುಹಿನದುಹಾರದ
ಭಂಗಿಗಳ ಬಲುವಿಟರ ಕರಣದ ಸಾರೆಗಳ ಸೆಋೆಯ ।

ಮುಂಗುಡಿಯ ನಿಜನಾರಿಯರ ಕವಿ
ವಂಗವಣೆಗಳ ಜಾಜಗಾತಿಯ
ರಂಗನೆಯ ದಂಡಿಗೆಯ ಬಟ್ಟವಿಡಿದರು ವಿದಗ್ಧೆಯರು ॥ ೪೦

ಹಾವುಗೆಯ ಸೀಗುರಿಯ ಚಮರದ
ರಾವಳಿಯ ಕರ್ಪುರದ ಗಂಧದ
ಹೂವುಗಳ ಕಸ್ತೂರಿಯ ಸಾದುಜವಾದಿ ಕುಂಕುಮದ ।
ತೀವಿದನುಪಮಭಾಜನವ್ರಜ
ನಾವಳಿಯ ಕನ್ನಡಿಯ ವಿವಿಧಸ
ಖೀವಿಳಾಸಿನಿಯರ ಕದಂಬಕವೈದಿತೊಗ್ಗಿನಲಿ ॥ ೪೩

ಧರಣಿಪತಿ ಕೇಳ್ಸಕಲಪೃಥ್ವೀ
ಶ್ವರರ ಬಹಳಾಸ್ಥಾನದಲಿ ಮೋ
ಹರಿಸಿದರು ಮೋಹರದ ಮೋಡಾಮೋಡಿಯಬಲೆಯರು ।
ಅರಸುಗಳ ನಿಡುನೋಟವಲ್ಲಿಯ
ಗರುವೆಯರ ಕುಡಿನೋಟ ತಮ್ಮೊಳು
ಬೆರಸಿ ಹೊಯ್ದಾಡಿದುವು ಖಾಡಾಖಾಡಿಯುದ್ಧದಲಿ ॥ ೪೪

ದಾಯ ತಪ್ಪಿತು ಗರುವೆರಾಟ ವಿ
ಡಾಯಿಗೆಟ್ಟಿತು ವಿಟರ ನೋಟ ನ
ವಾಯಿಕಾಱರ ಕೂಟ[1] ಹುಸಿದುದು[2] ಮದನಶರಹತಿಗೆ ।
ಘಾಯವಡೆದುದು ಧೃತಿಯ ಘಾಟ ಛ
ಡಾಯ ಹೆಚ್ಚಿತು ಮತ್ತೆ ಬೇಟ ವ
ರಾಯತಾಕ್ಷಿಯ ಕೂಟಕೆಳಸುವ ಸಕಲಭೂಭುಜರ ॥ ೪೫

ಕೆಲಕಡೆಯ ಕೆಳದಿಯರ ಕಂಗಳ
ಹೊಳಹು ದುರ್ವಾಳಿಯಲಿ ಸುಮತಿ
ಸ್ಖಲಿತಕೆಂಧೂಳಿಯಲಿ ಮಾಸಿತು ಮನದ ಮಡಿವರ್ಗ ।

[1] ವಾಳ, ಟ. [2] ಕುಸಿದುದು, ಚ.

ಬಳಗೆ ಹೊತ್ತುವ ದಗೆಯು ಹೊರಳಿಯು
ತಳಿತ ಬಿಮ್ಮಿನ ಬಗೆಯು [1] ನೃಪಮಂ
ಡಳಿಯು ನೆನಹ [2] ನದೇನನೆಂಬೆನು ಭೂಪ ಕೇಳೆಂದ ॥ ೪೬

ಚಲುವಿಕೆಯು ಚೈತನ್ಯವೋ ಪರಿ
ಮಳದ ಪುತ್ಥಳಿಯೋ ಲತಾಂಗಿಯು
ಸುಳಿವೊ ಲಾವಣ್ಯಾಂಬುರಸಸಾಕಾರವಿಭ್ರಮವೊ ।
ಲಲಿತಶೃಂಗಾರಾಬ್ಧಿ ಮಥನೋ
ಚ್ಛಳಿತಸುಧೆಯೋ ಸಾಧಕರಿಗಿದು
ಫಲಿಸಿದರೆ ಕೃತಪುಣ್ಯರವರೆಂದುದು ಜನಸ್ತೋಮ ॥ ೪೭

ಈಕೆಯಂದುದಿಸಿರಲು ಮದನಂ
ಗೇಕೆ ದೇಹದ ಬೇಗೆಯಹುದು [3] ಪಿ
ನಾಕಿ ನೆಱೆ ವೈರಾಗ್ಯದಲಿ ಹೊಗುವನೆ ತಪೋವನವ ।
ಸಾಕು ಗೌತಮಮುನಿಯು ಮುಳಿಸಿನ
ಕಾಕುನುಡಿ ಫಲಿಸುವುದೆ ಯೆನುತಾ
ನಾಕಪತಿ ರಂಭಾದಿಸತಿಯರ ನೋಡುವನೆ ನಗುತ ॥ ೪೮

ತಂದರಾಪಾಂಚಾಲಿಯನು ಹೊ
ನ್ನಂದಣದಲಾಸ್ಥಾನಸೀಮೆಗೆ
ಮುಂದೆ ಸಿಂಹಾಸನದ ಸಾಲ ಮಹಾಮಹೀಶ್ವರರ ।
ಸಂದಣಿಯುಲವರವರನಿವರಿವ
ರೆಂದು ತೋಱಿಸಬೇಕೆನುತ ನೃಪ
ನಂದನನು ಹೊದ್ದಿದನು ಕಮಲಾನನೆಯ ದಂಡಿಗೆಯ ॥ ೪೯

ಪಾಂಚಾಲಿಗೆ ರಾಜರನ್ನು ತೋರಿಸುವಿಕೆ.

ಇರಲು ಧೃಷ್ಟದ್ಯುಮ್ನನಾಗಲು
ಹರುಷ ಮಿಗೆ ದ್ರೌಪದಿಗೆ ನುಡಿದನು

[1] ನಗೆಯು ಚ. [2] ಮೌಳಿಯು, ಚ. [3] ತ್ಯಾಗವಹುದು, ಚ.

ಧರಣಿಪರ ನೀ ನೋಡು ತೋಱುವೆ ವರನೃಪೋತ್ತಮರ ।
ಪರಿವಿಡಿಯಲಂದಾಗ ಮುಖಜೆಯು
ವರಸ್ವಯಂವರದೊಳಗೆ ಭೂಪರ
ನಱುಹಿಸಿದನಾತತ್ಸಹೋದರಿಗಂದು ವಿನಯದಲಿ ॥ ೫೦

ತಂಗಿ ನೋಡೌ ತಾಯೆ ನಿನ್ನಯ
ಕಂಗಳೊಲಿವೊಡೆ ಚಿತ್ತ ವಾರ್ಧಿಗಾತ
ರಂಗದಲಿ ತೂಗುವೊಡೆ ತೋಱುವೆನವನಿಪಾಲಕರ ।
ಇಂಗಿತದಲವರಂತರಂಗವ
ನಂಗವಟ್ಟದ ಬಳಕೆಯನು ಬಹಿ
ರಂಗದಲಿ ನೀನಱಿಯೆನುತ ನುಡಿದನು ನಿಜಾನುಜೆಗೆ ॥ ೫೧

ಈತ ದುರ್ಯೋಧನಮಹೀಪತಿ
ಯೀತ ದುಶ್ಶಾಸನನು ದುಸ್ಸಹ
ನೀತ ದುಶ್ಶಳನೀತ ದುರ್ಜಯನೀತ ಚಿತ್ರರಥ ।
ಈತ ದುರ್ಮದ ನೀತ ಚಿತ್ರಕ
ನೀತಗಳು ಕುರುವಂಶದಲಿ ವಿ
ಖ್ಯಾತರಬಲೆ ನಿರೀಕ್ಷಿಸೌ ಧೃತರಾಷ್ಟ್ರನಂದನರ ॥ ೫೨

ನೋಡಳವರನು ನುಡಿಸಳೀತನ
ಕೂಡೆ ಭಾವದಲಿವರ ಕೊಡಹೀ
ಹಾಡಿವಳಲಾ ಯೆನುತ ಧೃಷ್ಟದ್ಯುಮ್ನ ನಸುನಗುತ ।
ನೋಡು ತಂಗಿ ವಿರಾಟನುತ್ತರ
ಗೂಡಿ ಕೀಚಕರನು ಶ್ರುತಾಯುಧ
ಮೊಡಣರಸುಗಳನು ರವಿಧ್ವಜರೋಚಮಾನಕರ ॥ ೫೩

ನೀಲ ಚಿತ್ರಾಯುಧನು ದಕ್ಷಿಣ
ಚೋಳಕೇರಳಪಾಂಡ್ಯಧರಣೀ
ಪಾಲಕರೊಳೀಚಂದ್ರಸೇನಸಮುದ್ರಸೇನಕರು ।

ಲೋಲವಂಗ [1] ಕಳಿಂಗಪೃಥ್ವೀ
ಪಾಲನೀತನು ಚೇಕಿತಾನನೃ
ಪಾಲನೀತನು ಭಾನುದತ್ತಮಹೀಶ ನೋಡೆಂದ ॥ ೫೪

ಇತ್ತಲೀಕ್ಷಿಸು ಪೌಂಡ್ರಕನ ಭಗ
ದತ್ತನನು ಕಾಂಭೋಜನನು ಹರ
ದತ್ತನನು ವರಹಂಸಡಿಬಿಕರ ಮದ್ರಭೂಪತಿಯ
ಇತ್ತ ನೋಡೌ ಮಗಧನೃಪತಾ
ಪಿತ್ತಮಗ ಸಹದೇವ ಬೃಹದ್ರಥ
ನಿತ್ತಲೀತನು ದಂಡಧಾರನೃಪಾಲ ನೋಡೆಂದ [2] ॥ ೫೫

ಭೂರಿ ಭೂರಿಶ್ರವನು ದಕ್ಷಿಣ
ವೀರಬಾಹ್ಲಿಕ ವಿಂದ ಚಿತ್ರಭ
ಗೀರಥನು ಚಿತ್ರಾಯು ನಿಯುತಾಯುಧ ಮಹೋದರರು [3] ।
ವೀರವೃದ್ಧಕ್ಷತ್ರಸೃಂಜಯ
ಚಾರುಭುಜಬಲಸೋಮದತ್ತಮ
ಹೀರಮಣರಿವರಿತ್ತಲಿದೆ ತರಳಾಕ್ಷಿ ನೋಡೆಂದ ॥ ೫೬

ಈತ ರುಕುಮಾಂಗದ ಜಯದ್ಬಲ
ನೀತ ಶ್ರುತಸೇನಾಚ್ಯುತಾಯುಧ
ರೀತ ದಂಡಾಯುಧನು ಮಾಳವನೀತ ಗೌಳಕನು ।
ಈತ ತಾ ನಿಯುತಾಯು ವೆಂಬವ
ನೀತನೇ ದೀರ್ಘಾಯುವೆಂಬವ
ನೀತನೇ ತಾ ದನುಜಲಂಬುಸನನುಜೆ ನೋಡಿವರ ॥ ೫೭

---

1 ಲೋಲನಯನೆ, ಚ.

2 ಇತ್ತಲು ಜರಾಸಂಧಮಣಿಮಾನಿತ್ತ ಸಹದೇವನು ಬೃಹದ್ರಥನಿತ್ತಲೀತನು ದಂಡಧಾರಕನೃಪನು ನೋಡೆಂದ, ಚ.

3 ನೃಪವರಜಯದ್ರಥವಿಶ್ರುತಾಯುಧರು, ಚ.

ಇತ್ತ ನೋಡಾ ಘೋಷತೇಜನ
ನಿತ್ತ ನೋಡಾ ಚೈದ್ಯರಾಜನ
ನಿತ್ತ ನೋಡಾ ದ್ರೋಣಪುತ್ರನ ಸೌಬಲಾತ್ಮಜನ ।
ಇತ್ತ ನೋಡಾ ಸಾಲ್ವಭೂಪನ
ನಿತ್ತ ನೋಡಾ ಧೀರಕಾಶ್ಮಿರ
ಪೃಥ್ವಿಪತಿಯಾ ಶೈಬ್ಯಭೂಪನ ನೀ ನೃಪಸುತನ ॥ ೫೮

ಭೂತಳದ ರವಿಯಂತೆ ಹೊಳೆಹೊಳೆ
ವಾತ ಕರ್ಣನು ತನುಜರೀತಂ
ಗೀತಗಳು ವೃಷಸೇನನಗ್ಗದ ಚಿತ್ರಸೇನಕರು ।
ಈತನಹನೇ ನೋಡೆನಲು ಭಾ
ವಾತಿಶಯುಸಂಬಂಧಿಭಾವದ
ಲೀತನನು ನೋಡಿವಳು ತಿರುಹಿದಳಬಲೆ ಲೋಚನವ ॥ ೫೯

ಉಕ್ಕಿದಾ ಕಿವಿವೇಟ ಕಂಬೇ
ಟಕ್ಕೆ ತಂದುದು ಕಂಗಳೀಕೆಯು
ಮುಕ್ಕುಳಿಸಿ ವ್ಯಸೋಂಕಿನಲಿ ಲಟಕಟಿಸಿದುದು ಹೃದಯು ।
ಸಿಕ್ಕಿತಚಲಿಗೆ ಸೋತು ಸೊಕ್ಕಿನ
ಚುಕ್ಕಿಯೋ ಚಾಲನೆಯೊ ಸೃಷ್ಟಿಗ
ದಕ್ಕಜವೊ ತಾನೆನುತ ಚಿಂತಿಸಿತಾ ನೃಪವ್ರಾತ ॥ ೬೦

ಇತ್ತ ನೋಡೌ ತಂಗಿ ಯದುಭೂ
ಪೋತ್ತಮನನಮರಾರಿಕದಳೀ
ಮತ್ತಗಜವನ ನಿಖಿಳನಿಗಮಾವಳಿಶಿರೋಮಣಿಯು ।
ಉತ್ತರೋತ್ತರರಮ್ಯಮೂರ್ತಿಯು
ನುತ್ತಮಾಮಲಕೀರ್ತಿಯುನು ಮನ
ಹತ್ತುವೊಡೆ ತಳುವಿಲ್ಲ ಕೃಷ್ಣನ ವರಿಸು ನೀನೆಂದ ॥ ೬೧

ಮದನನೈಯ್ಯನು ಮೂಜಗವ ಮೊ
ಡಿದನ ತಾತನು ರೂಪು ವಿಭವವ
ನಿದಱೊಳಗೆ ನೀ ನೋಡಿಕೋ ಯಾದವಶಿರೋಮಣಿಯು |
ಸುದತಿಯರ ಸೇರುವೆಗಳನು ನೋ
ಡಿದರೆ ಧಾರುಣಿ ಲಕ್ಷ್ಮಿ ಕೃಷ್ಣನ
ಪದಜನಿತೆ ಭಾಗೀರಥಿಯು ಕಮಳಾಕ್ಷಿ ನೋಡೆಂದ [1] || ೬೮

ಎನಲು ಬಕುತಿಯು ಭಾವರಸದಲಿ
ನೆನೆದು ಹೊಂಪುಳಿಯಾಗಿ ರೋಮಾಂ
ಚನದ ವ್ಯೈಯ್ಯುಬ್ಧಿನಲಿ ತನುಪುಳಕಾಂಬುಪೂರದಲಿ |
ಮನದೊಳಗೆ ವಂದಿಸಿದಳನಗೀ
ತನಲಿ ಗುರುಭಾವನೆಯು ಮತಿ ಸಂ
ಜನಿಸಿತೇನೆಂದಱಿಯೆನೆಂದಳು ಕಮಲಮುಖಿ ನಗುತ || ೬೯

ಹಿರಿಯನೀಕೃಷ್ಣಂಗೆ ನೀಲಾಂ
ಬರನ ನೋಡಾದೊಡೆ ಮುರಾರಿಯ
ಹಿರಿಯಮಗನನಂ ಲೋಕಮೊಱಱ ಬಂದಿಕಾಱಕನ |
ಹರನ ಕಡ್ಡಿಗೆ ಬಗೆಯನೆಂಬೀ
ಬಿರುದ ಮನ್ಮಥನೀತನೀತನ
ವರತನುಜನನಿರುದ್ಧನಿದು ಯದುರಾಜಕುಲವೆಂದ || ೭೦

ಸಾರಣನು ಕಲಿಸಾಂಬನೀತನು
ಚಾರುದೀಪಕನೀತನಮಳಾ
ಕ್ರೂರಸತ್ಯಕನೀತ ಸಾತ್ಯಕಿ ಯಿಾತ ಕೃತವರ್ಮ |
ಸಾರಥೋಜಯನೀತ ನೀತ ವಿ
ಡೂರಥಾದಿಸಮಸ್ತಯಾದವ
ವೀರರಿದಸಂಖ್ಯಾತ ಕೃಷ್ಣಕುಮಾರರಿವರೆಂದ || ೭೧

1 ಯುಗವ ನೋಲೈಸುತಿಹರಬುಜಾಕ್ಷಿಕೇಳೆಂದ, ಖ ಚ.

ಜಗವನಿಂದ್ರಿಯಕರಣವಿಷಯಾ
ದಿಗಳನೆಲ್ಲವ ನೊತ್ತಿ ಮುಖದಲಿ
ತೆಗೆದು ಶ್ರುತಿಶಿರದಮಲ ತತ್ವವನರಸುವಂದದಲಿ |
ಬಗೆಯ ಬಯಕೆಯ ಸೊಗಸುಗಳ ದಾ
ಯಿಗನನರಸುತ ಕುಡಿತೆಗಣ್ಣಲಿ
ನೊಗೆದು ನೂಸಿದಳಂಬುಜಾನನೆ ಸಕಲನೃಪಕುಲವ || ೬೬

ಕೆಲರು ಮದಿರಾಪಾಂಗದಲಿ ಕಂ
ಗಳ ಮರೀಚಿಯ ಬೆಳಗಿನಲಿ ಕೆಲ
ರೆಳನಗೆಯ ಸೊಂಪಿನಲಿ ಸಖಿಯರ ಮೇಳವಾತಿನಲಿ |
ಲಲನೆ ನೋಡಿದಳಮ್ಮ ಸೊಗಸಿನ
ಲೊಲಿವ ಸಖಿಯರಿಗೆಂದಳೆಂದೊಳ
ಗೊಳಗೆ ಬೆಟತರು ಬಯಲ ಮದುವೆಯ ಬಾಯಸವಿಗಳಲಿ || ೬೭

ಗರುವೆ ಯಿಂಗಿತವಱಿದು ದಂಡಿಗೆ
ಮುಱಿಯಲೊಡನೈದಿತ್ತು ರಾಯರ
ನೆರವಿ ಕಳುಹುತ ಕಂಗಳಲಿ ಕರಣೇಂದ್ರಿಯಂಗಳಲಿ |
ಬಱಿಯ ಡಿಂಬದ ಡೊಂಬಿಯಲಿ ಕೇ
ಸರಿಯ ಪೀಠಾವಳಿಯಲಿರ್ದರು
ಧರಣಿಪರು ಮುರವೈರಿ ಗಂಗಾಸೂನು ಹೊಱತಾಗಿ || ೬೮

ಮತ್ತೆ ಯತ್ಯುತ್ತಮರು ಕಳಶಜ
ನಿತ್ಯಶುಚಿ ತಾನುದ್ಧವಾಂಕನು
ಸತ್ಯಕೃಪಗುರುಸೂನು ಸತ್ಯಕಸೂನುಹೊಱಗಾಗಿ |
ಚಿತ್ತವಿಸುವ್ರುದು ದೇವ ಸತ್ಯದ
ಲುತ್ತಮರ ಮನಹೋಗದಾಗಳ
ಸತ್ಯದಲಿ ದ್ರೌಪದಿಯ ರೂಪಿಂಗುಱಿದ ಭೂಭುಜರ || ೬೯

ಮಡಿಸಿದೆಲೆ ಬೆರಳೊಳಗೆ ಬಾಯೊಳ
ಗಡಸಿದೆಲೆ ಬಾಯೊಳಗೆ ಸಚಿವರ
ನುಡಿಯ ಕೇಳರು ಸುಳಿವ ಕಾಣರು ಲೋಚನಾಗ್ರದಲಿ |
ಕಡುಮುಳಿದು ಕಂದರ್ಪಶರವವೆ
ಗಡಿಸೆ ಮೈಗಳನೊಡ್ಡಿ [1] ನೃಪರೆವೆ
ಮಿಡುಕದಿರ್ದರು ಹೊತ್ತು ದುಗುಡದ ಹಾಯ್ದ ಬೆಱಗಿನಲಿ [2] ||೨೦

ರಾಯನೆಂದನು ಸಕಲಧರಣೀ
ರಾಯರನು ಮನ್ನಿಸದೆ ಮರಳಿದ
ಳಾಯತಾಕ್ಷಿ ಮಹಾಸ್ವಯಂವರದಲಿ ಮಹಾದೇವ |
ಜೋಯಿಸರ ಹೋರೆಗಳ ಹೇಟಿಕೆ
ಹೋಯಿತೇ ಹೊಳ್ಳಾಗಿ ಪಾಂಡವ
ರಾಯರನು ತೋಱಿಸನೆ ಗದುಗಿನ ವೀರನಾರಯಣ || ೨೧

ಎಂದು ದ್ರುಪದನು ಪಾಂಡುಪುತ್ರರ
ನಂದು ಕಾಣದೆ ನೃಪರ ನಾನೇ
ನೆಂದು ನೆರಹಿದೆನೆನುತ ಕೃಷ್ಣನ ನೋಡಿ ತಿರುಗಿದನು |
ಮಂದರೋದ್ಧರ ವರಯಶೋದಾ
ನಂದಕಂದ ಮುಕುಂದ ಗೋಪೀ
ವೃಂದವಲ್ಲಭ ಪಾಂಡುಪುತ್ರರ ಕರುಣಿಸೈ ಯೆಂದ || ೨೨

ಇಪ್ಪತ್ತೊಂಬತ್ತನೆಯ ಸಂಧಿ ಮುಗಿದುದು.

---

1 ಕೈಗಳನೋಡಿ, ಚ. ತ.   2 ಬೆರಳಮೂಗಿನಹೊತ್ತುದುಗುಡದಲಿ, ಚ. ತ.

# ಮೂವತ್ತನೆಯ ಸಂಧಿ.

ಸೂಚನೆ

ತಮತಮಗೆ ತವಕದಲಿ ಭೂಪ್ರೋ
ತ್ತಮರು ಹೋಟೆಯಿ ಬಟಲಿ ಜಾತ
ಶ್ರಮರು ಹಿಮ್ಮೆಟ್ಟಿದರು ಗೆಲಿದುದು ಧನು ಮಹಾರಥರ ||

ಭದ್ರಮಂಟಪದಲ್ಲಿ ಪಾಂಚಾಲಿಯ ಪ್ರವೇಶ.

ಕೇಳು ಜನಮೇಜಯನೃಪತಿ ಪಾಂ
ಚಾಲಿ ಹೊಕ್ಕಳು ಭದ್ರಮಂಟಪ
ಶಾಲೆಯನು ಮರಳಿದುದು ಮನ್ಮಥನೊಡ್ಡು ಸತಿಯೊಡನೆ |
ಬಾಲೆಯನು ನಿಜರೂಪದರ್ಪದೊ
ಳಾಳಲಟಿಯಿರೆ ಬಾಹುಬಲದಲಿ
ಸೋಲಿಸುವೊಡನುವಾಗಿ ಯೆಂದರು ಹೊಯ್ದು ಡಂಗುರವ || ೧

* ಇದೆ ಮಹಾಧನುಬಾಣಪಂಚಕ
ವಿದೆ ನಭೋಗ್ರದ ಯಂತ್ರಹೊಳೆಯು
ತ್ತಿದೆ ವಿಭಾಡಿಸಿ ಮೆಱೆವನಾವನು ಬಾಹುವಿಕ್ರಮವ |
ಇದುವೆ ಕಬ್ಬಿನ ಬಿಲು ಶರಾವಳಿ
ಇದು ಕುಸುಮಮಯಯಂತ್ರವೆಬಲೆಯು
ಹೃದಯವಾತನೆ ರಮಣನಾತಗೆ ಕುಸುಮಶರನೆಂದ || * ೨

---

* ಇದುವೆ ಕಬ್ಬಿನ ಬಿಲು ಶರಾವಳಿ
ಮದನಪಂಚಕಬಾಣ ಕುಸುಮವು
ಇದೆ ನಭೋಗ್ರದ ಯಂತ್ರಭೇದವ ನೋಡಿ ಮತ್ಸ್ಯನನು |
ಇದು ಮಹಾಧನು ಮದನಮಾರಿಯು
ಯದು ಬಟಿಕ ಮಾಯಾಸಕರ್ಷಣ
ಯಿದನು ಸತ್ವವಲಾರು ತೆಗೆದರೆ ಯವರೆ ವರರೆಂದ, || ಕ. ಖ.

ಇದಕೆ ಸೈರಿಸದೇೞ ಬೇಗದ
ಲಿದಕೆ ಬಯಸುವರೇೞ ಬೇಗದ
ಲಿದಕೆ ಯರ್ಥಿಪರೇೞ ಶೀಘ್ರದಲೆಂದು ನೃಪಸುತೆಯು ।
ವಿದಿತದಲ್ಲೀಧನುವನಾರ್ಸ
ತ್ವದಲಿ ತೆಗೆವರೊ ತಂಗಿಗಾತನೆ
ಮುದದೊಳೀ ತಾ ರಮಣನೆನಿಸುವ ಕುಸುಮಶರನೆಂದ ॥　　೩

ಎಂದು ಸಾಱಿಸಿ ಭಾರಿಧನುವನು
ತಂದು ಧರೆಗಿೞುಹಿದರು ಯಂತ್ರವ
ನಂದವಿಟ್ಟರು ಗಗನದಲಿ ಗವಸಣಿಗೆಗಳನುಗಿದು ।
ಮುಂದೆ ಕೂರಂಬುಗಳ ಥರಥರ
ದಿಂದ ನಿಲಿಸಿ ಸುಗಂಧದಕ್ಷತೆ
ಯಿಂದ ಪೂಜೆಯ ರಚಿಸಿದರು ವೈದಿಕವಿಧಾನದಲಿ ॥　　೪

ಮಸಗಿದುದು ಬಹುವಾದ್ಯಚಯ ನಿ
ಪ್ಪಸರದಲಿ ನಿಸ್ಸಾಳತತಿ ಗ
ರ್ಜಿಸಿದುವಾವರ್ಜಿಸುವವೊಲು ಘನಯಂತ್ರವೇದಿಗಳ ।
ಬಸಗೆಯಾಟವೊ ಬಿಲ್ಲಹೊಯ್ಲಿನ
ಘಸಣಿ [1] ಯಾಟವೊ ಗರುವರಿಗೆ ಗಂ
ಗಸೆಯ ಮಾಡಿತು ಚಾಪವವನೀಪಾಲ ಕೇಳೆಂದ ॥　　೫

ನೆರಪಿಯಲಿ ನಾನಾದಿಗಂತದ
ಧರಣಿಪತಿಗಳಹಮ್ಮಿಕೆಯಲು
ಬ್ಬರಿಸಿ ಹೊಕ್ಕರು ಬೇಱೆಬೇಱೊಬ್ಬೊಬ್ಬರುರುವಣಿಸಿ ।
ಹರಗಿರಿಗೆ ಹುಲುರಕ್ಕಸರು ಮ
ತ್ಸರಿಸಿದಂತಾಯ್ತೀನನೆಂಬೆನು
ಧರೆಗೆ ಮಿಡುಕದ ಧನು ವಿಭಾಡಿಸಿ ಹೊಯ್ದುದತಿರಥರ [2] ॥　　೬

---

[1] ಹಸುವೆ, ಚ. ಠ.　[2] ಧರೆಯಬಿಡದೀಧನುವಿಭಾಡಿಸಿಕೆಡಹಿತವನಿಪರ, ಚ. ಟ.

ಹಾರ ಹರಿದುದು ಕರ್ಣಪೂರದ
ಚಾರುಮಣಿಗಳು ಸಡಲಿದುವು
ವೀರನೂಪುರ ನೆಗ್ಗಿದುವು ತಗ್ಗಿದುವು ನೆನೆಹುಗಳು ।
ನಾರಿಯರ ಕೈಹೊಯ್ಲ ನಗೆಯಲಿ
ಹಾರ ಜಡಿದುದು ಮುಸುಕುದಲೆಯು ಮ
ಹೀರಮಣರೊಳಸರಿದು ಸಿಂಹಾಸನವ ಸಾರಿದರು ॥ ೭

ಮಿಡುಕದೀಧನು ನಮ್ಮಝಾಡಿಸಿ
ಕೆಡಹಿತಿದನಿನ್ನಾರು ಕೊರಳಲಿ
ತೊಡಿಸಿ ತಿರುವನು ಸೆಳೆದು ಬಿಗಿವರೊ ಯಂತ್ರದಲಿ ಶರವ ।
ಕಡುಹಿನಣ್ಣನ ಕಾಂಬೆವೈ ಸಲೆ
ನುಡಿದು ಮಾಡುವುದೇನೆನುತ ಸಿರಿ
ಮುಡಿಯ ಮುಸುಕಿನ ರಾಯರಿದ್ದರು ಬಯಲ ಡೊಂಬಿನಲಿ ॥ ೮

ಐಸಲೇ ಸೌಭಾಗ್ಯ ವೆಮಗೆ ಶ
ರಾಸನಾಕರುಷಣದೊಳತಿಡೊ
ಳ್ಳಾಸದಲಿ ಡಾವರಿಸಿ ಗೆಲಿದಳು ದ್ರುಪದಸುತೆ ನೃಪರ ।
ಲೇಸು ತಪ್ಪೇನಿದಕೆನುತ ಭ
ವ್ರಾಸನವ ನಿಟಿದುಲಿವ ತೊಡರಿನ
ಘೋಷಣೆಯ ಘಟಿಲುಗಳ ಮಗಧನೃಪಾಲನೈತಂದ ॥ ೯

ಬಿಲ್ಲ ಹೊರೆಗೈದಿದನು ಚೌಪಟ
ಮಲ್ಲ ನೋಡಿದನಹುದೆಲೇ ತ
ಪ್ಪಲ್ಲೆನುತ ಮೇಲ್ದಿರುಹಿದನು ಮುಂಗಯ್ಯಸರಪಳಿಯ ।
ಬಿಲ್ಲನೆತ್ತಿದೊಡಿವನನಂಗನೆ
ಯೊಲ್ಲಳೋ ಮೇಣೊಲಿವಳೋ ಕಡು
ಬಲ್ಲಿದನು ತಾನೀತನೆನುತಿದ್ದುದು ಸಖೀನಿವಹ ॥ ೧೦

ಈತ ಕುಸಿದೆತ್ತಿದೊಡೆ ಧನು ಮೂ
ರಾತುದಿವನೌಕಿದೊಡೆ ಕಾರ್ಮುಕ
ವೀತನಾರೆಂದಱಿಯದಿವನೌಡೊತ್ತಿ ಮೈಬಲಿದು ।
ಘಾತಿಯಲಿ ಘಲ್ಲಿಸಿದೊಡಾಧನು
ಸೋತುದೆವೆಯಂತರಕೆ ತೆರಳಿಯೆ
ಧಾತುಗುಂದಿನಲಳ್ಳಿಱಿದುವಳ್ಳೆಗಳು ಮಾಗಧನ ॥ ೧೧

ಬೆಮರನಾಱಿಸಿಕೊಂಡು ವಿಗತ
ಶ್ರಮನು ಮೊಳಕಾಲಿಂದ ದಂಡೆಯೊ
ಳಮರಿ ದೇಹವ ಬಲಿದು ವಕ್ಷದೊಳೌಂಕಿ ಗಾಢದಲಿ ।
ಕುಮತಿಯುಲ್ಲಾಡದಿರೆ ಬಿಟ್ಟುದು
ಜವೆಯು ಮಾತ್ರದೊಳಿವನ ಭುಜವಿ
ಕ್ರಮವನೊರೆದುದು ಸದೆದುದೀತನಗರ್ವವಿಭ್ರಮವ ॥ ೧೨

ಕೇಳಿದನು ಕಾಂತಾಕದಂಬದ
ಘೋಳು ಘೋಳೆಂದೆಂಬ ನಗೆಗಳ
ಕಾಳುಮಾಡಿದೆನೇಕೆ ಧನು ತಾನೇಕೆ ಸುಡಲೆನುತ ।
ಬೇಳುವೆಯುಲುಚಿದಂಕದವೊಲು
ಬ್ಬಾಳುತನ ವುಬ್ಬರಿಸೆ ಮುಸುಕಿನ
ಮೌಳಿ ಹಿಮ್ಮೆಟ್ಟಿದನು ಕಡೆಯವ ತಿರುಹಿ ಕಿಱುಗೊಡೆಗೆ ॥ ೧೩

ಕೆರಳಿದನು ದಮಘೋಷನಂದನ
ನರರೆ ದಿಟ್ಟನ ಧನು ವಿಭಾಡಿಸಿ
ತೆರಳಿಚಿತಲಾ ವಿಗಡಚಕ್ರಾಯುಧನ ಮಾಗಧನ ।
ಪರಿಬವೆನ್ನದು ಹೊಳ್ಳು ಗಳವೆನು
ದುರುಳಧನುವೆನು ನಗುವಕ್ಕೈನೆಯು
ತುರುಬ [1] ಕೊಯ್ಸುವೆನೆನುತ ಕಲಿ ಶಿಶುಪಾಲನೈತಂದ ॥ ೧೪

---

1 ರುರವ, ಕ. ಖ.

ಇವನಲೇ ರಾವಣನು ಮುನ್ನಿನ
ಭವದೊಳಗೆ ತಪ್ಪಲ್ಲೆನುತ ಜನ
ನಿವಹ ನಡುಗಿತು ಕೋಮಲಾಂಗಿಯ ಪುಣ್ಯವೆಂತೆನುತ ।
ಅವನಿಪತಿ ಕೇವಣದಲೀ ಚಾ
ಪವನು ಬಾರೈಸಿದೊಡೆ ಬಲುಹೇ
ಶಿವ ಯೆನುತ ಶಿಶುಪಾಲ ಸಂವರಿಸಿದನು ಮುಂಜೆರಗ ॥ ೧೫

ಏನನೆಂಬೆನು ಧನು ಸುಗಾಢದ
ಮಾನಭಂಗದ ಮೊದಲ ಮನೆ ಯೀ
ಮಾನಿನಿಯುರಪಹಾಸ್ಯವೀಜನವೀನೃಪಾಲಕರು * ।
ಆನಲಾರರದುಬ್ಬಿಯನು ಸಹ
ಮಾನ ಸಾಹಸಿ ಹೀನಬಲನಿವ
ನೇನ ಮಾಡಲಿ ಹೊಯ್ದು ದಿವಸನು ನಿಮಿಷಮಾತ್ರದಲಿ * ॥ ೧೬

ಮೀಱಿತೀ ಧನುವೇನ ಮಾಡಿದೊ
ಡೋರಣಿಸಿ ಶಿಶುಪಾಲಭೂಮಿಪ
ನಾರುಭಟೆಯುಲ್ಲಿಱಿದು ಹೋಯಿತು ಧನುವಿನುಬ್ಬಟೆಗೆ ।
ಚೀಱಿ ಚಾಪವನೊತ್ತುತೆತ್ತಲು
ಕಾಱಿಸಿತು ರಕ್ತವನು ಕೆಡಹಿತು
ನಾರಿಯರು ಘೋಳೆನಲು ಬಿಟ್ಟನು ಮನದ ಸತ್ವವನು ॥ ೧೭

ಕಂಡು ಮಾಗಧನೆಂದನೀಧನು
ಚಂಡಿ ಯಿದು ನವಗಲ್ಲ ನಾವ್ ಮುಂ
ಕೊಂಡು ತಪ್ಪಿತು ನೊಪ್ಪಿತಾದುದು ಭಾರಿಯುಗ್ಗಳಕೆ ।
ಭಂಡರೀಭೂಮಿಪರು ದ್ರುಪದನ
ದಿಂಡದೊತ್ತಿರು ನಗೆಯನಾನಲಿ
ಮಂಡೆಗಳಲೆನುತಿವರು ಹಾಯ್ದರು ತಮ್ಮ ಪಟ್ಟಣಕೆ ॥ ೧೮

* ನೃಪಾಲಕರ । ಹೀನನುಡಿಗಳಕಂಡುದೈತ್ಯಸ ॥ ಮಾನವುನದಲಿನೊಂದು ತಿರುಗಿದ । ನೇನನೆಂಬೆನುಸದೆದುದಾತನಗರ್ವವಿಭ್ರಮವ ॥ ಚ.

ಗರುವರೆಲ್ಲಾ ಚೈದ್ಯಮಾಗಧ
ರಿರದೆ ತಮ್ಮಯ ಪುರಕೆ ಗಮಿಸಿದ
ರರಸುಗಳ ಮಿಕ್ಕವರ ವಿಧಿಯನು ಕೇಳ್ ಮಹೀಪತಿಯೆ ।
ಧರಧುರದೊಳಭಿಮಾನಹಾನಿಯ
ಹುರುಳಹುದು ಬಿಲುಹೋರಟೆಗೆ ನಿಲ
ಲರಿದೆನುತ್ತಂಘವಣೆಗುಂದಿತು ಸಕಲನೃಪನಿಕರ ॥ ೧೯

ದುರುಳ ಪಾಂಚಾಲನ ಕುಮಾರಿಯ
ವರಕಟಾಕ್ಷದ ಬೀಸುವಲೆಯಲಿ
ಶರಮಹಾಧನುವೆಂಬ ಬಲುಬಡಿವಲೆಯನಳವಡಿಸಿ ।
ಧರಣಿಪಾಲಮೃಗಂಗಳನು ಸಲೆ
ಬರಿಸಿ ಸದೆದನು ಹೊಲ್ಲೆಯೇನಂ
ತಿರಲಿ ನೋಡುವೆನೆನುತ ಶಲ್ಯನೃಪಾಲ ನಡೆತಂದ ॥ ೨೦

ಅಗ್ಗಳೆಯ ನಾಮಗಧ ಮಾತಿನ
ಲಗ್ಗಿಗನು ಶಿಶುಪಾಲ ಸೋಲಿದ
ಸುಗ್ಗಿಯಿಬ್ಬರಿಗಾಯ್ತು ಹಲಬರಿಗಾಯ್ತು ರಣಧೂಳಿ ।
ತಗ್ಗುವುದೊ ಧನು ಧನುವಿಘಾತಿಗೆ
ಮುಗ್ಗುವನೊ ಮದ್ರೇಶನಿದಱೊಳ
ಗಗ್ಗಳೆಯನಹನೆನುತ ನೋಡಿದರಂದು ನಾರಿಯರು ॥ ೨೧

ಬಂದನೀತನು ಧನುವ ಸಾರಿಯೆ
ನಿಂದು ಸಂವರಿಸಿದನು ಕಾಂತಾ
ವೃಂದವನು ನೋಡಿದನು ಮನದಲಿ ಧಿಕ್ಕುಧಿಗಿಲೆನುತ ।
ಸಂದಣಿಯ ಕೆಲಕೊತ್ತಿ ಫಣಿಯಲಿ
ಮಂದರವ ಬಿಗಿವಂತೆ ಭುಜದಲಿ
ಮುಂದು ಪರಿದೌಕಿದನು ವಕ್ಷದೊಳವಚಿ ಗಾಢದಲಿ ॥ ೨೨

1 ಪೈಸರಿಸೆ ಮುಸುಕಿನ, ಚ.　2 ಕುರುಬ, ಚ.　3 ನಭಕೊತ್ತಿ, ಚ.

ಕೊಳ್ಳದೀಧನುವೀತನುಬ್ಬಿನೊ
ಳಳ್ಳಿ ಗೊಬ್ಬಿನೊಳಳುಕಿ ತೊಡರಿನ
ಘಲ್ಲಣೆಯು ಘರಿಕೆಂದು ದಂಡಿಸಿ ನಿಮಿಷಮಾತ್ರದಲಿ ।
ಬಿಲ್ಲ ಬಿಡದವನಿಯಲಿ ಬಿದ್ದನು
ಡೊಳ್ಳು ಮೇಲಾಗಿತ್ತು ಸಖಿಯರು
ಘೊಳೆನಲು ಸುಡು ಘೋರಧನುವೆನುತೀತ ಹಿಂದೆಗೆದ ॥ ೨೩

ಮೆಲ್ಲ ಮೆಲ್ಲನೆ ಯೆದ್ದು ಹಿಂದಕೆ
ತಳ್ಳಿದನು ತಲೆವಡೆದು ಶಲ್ಯನು
ಬಿಲ್ಲುಮಾಡಿದ ಪರಿಯ ನೋಡಿರೆ ಯೆನುತ ಬೆರಗಾಗಿ ॥
ಎಳ್ಳನಿತು ನೆಱಿ ಮಿಡುಕದೀತಗೆ
ಬಲ್ಲಿದನು ಮದ್ರೇಶನೊಬ್ಬನೆ
ಬಿಲ್ಲು ತಾನದು ಕೇಳು ಜನಮೇಜಯಮಹೀಪಾಲ ॥ ೨೪

ಹಿಂಗಿದನು ಮದ್ರೇಶನೀಧನು
ಭಂಗಪಡಿಸಿತು ಮಾನ್ಯರನು ಜಡ
ಜಂಗಮಾತ್ಮರಲೇನಹುದು ಝೊಂಪಿಸಿದುದೀಜಗವೆ ।

ಕರ್ಣನು ಧನುಸ್ಸನ್ನು ಪೂರ್ಣಮಾಡಲು ಆಗದೇ ಸುಮ್ಮನಿರುವಿಕೆ.

ಅಂಗನಾಪಾಣಿಗ್ರಹಣ ರಾ
ಯಂಗೆ ತಾನೀ ದೃಷ್ಟ ಧನುವನು
ಭಂಗಪಡಿಸಿಯೆ ಬಿಡುವೆನೆನುತೈತಂದನಾಕರ್ಣ ॥ ೨೫

ಈತನರ್ಜುನನಲ್ಲವೇ ರೂ
ಪಾತಿಶಯವುಳ್ಳಾತ ಯಂತ್ರವ
ನೀತ ಗೆಲಿದೊಡೆ ಪುಣ್ಯವೈ ಸಲೆ ತಂಗಿಗನುಸಾರಿ ।
ಈತ ವರನಹುದೆನುತ ಲಲನಾ
ಜಾತ ಮೀತನನೀಕ್ಷಿಸುತ ಸಂ
ಪ್ರೀತಿಯಲಿ ನೋಡುತ್ತಲಿರ್ದುದು ಭೂಪ ಕೇಳೆಂದ ॥ ೨೬

ತುಡುಕಿದನು ಚಾಪವನು ಮಹಿಯಿಂ
ಮಿಡುಕದಿರೆ ಮಂಡಳಿಸಿ ಝಾಡಿಸಿ
ಜಡಿದು ಜಱಿದೆತ್ತಿದನು ದಂಡೆಯನಿಕ್ಕಿ ಕೊಪ್ಪಿನಲಿ [1] ।
ಹೊಡಕರಿಸಿ ಸತ್ವಾತಿಶಯವಿಂ
ಮಡಿಸಿ ಸರ್ಷಪಮಾತ್ರ ತಿರುವನು
ತೊಡಿಸಲಾರದೆ ಹಿಂಗಿ ಮೌನದೊಳಿರ್ದನಾ ಕರ್ಣ ॥ ೨೭

ದುರ್ಯೋಧನನು ಧನುಸ್ಸನ್ನು ನೋಡಿ ಹಿಂತಿರುಗುವಿಕೆ.

ಬಳಿಕ ದುರ್ಯೋಧನನು ತನ್ನಯ
ಬಲುಹಿಗೂಣೆಯವೆನುತ ಗರ್ಜಿಸಿ
ಯುಲಿದು ನಡೆದನು ಬಹಳಕೋಪದಿ ಧನುವದಿದ್ದೆಡೆಗೆ ।
ಘಳಿಲನೇ ತಾನೈದಿ ನೋಡಿದ
ನಳವಹುದೆ ನಮಗೆನುತ ಮೆಲ್ಲನೆ
ತಿಳಿದು ತನ್ನೊಳು ತಾನೆ ತಿರುಗಿದ ಸಿಂಹವಿಷ್ಟರಕೆ ॥ ೨೮

ಇವರು ನಾಲ್ವರಿಗೊಂದೆ ಪಥ ಹಲ
ರವೆಗಡಿಸಿ ಮುನ್ನಳುಕಿದರು ಭೂ
ಭುವನಪತಿಗಳು ಭಾರಿ ಧನುವಿದೆ ಮಾಸಿನಿಯ ಮುಂದೆ ।
ಎವಗೆ ತಮಗಿದು ವಶವೆ ಬಾವ
ನ್ನವನು ವೇಷ್ಟಿಸಿ ಭುಜಗವಿದೆ ಯೆಂ
ದವನಿಪರು ಹೊರೆಗುಂದಿದರು ಪಡಿಮುಖದ ದುಗುಡದಲಿ ॥ ೨೯

ಬಲರಾಮನ ಪ್ರಯತ್ನ.

ಕ್ಷಿತಿಪ ಕೇಳ್ಳೈ ವಿಗಡಚಾಪ
ವ್ಯತಿಕರಕೆ ದುರ್ಯೋಧನಾದಿ
ಕ್ಷಿತಿಪತಿಗಳಂಜಿದುದ ಕಂಡನು ನಗುತ ಬಲರಾಮ ।

---

1 ಕೋಪದಲಿ, ಜ.

ಕೃತಕಕಥನುವೆನು ಮೊಱೆದು ದ್ರುಪದನ
ಸುತೆಯು ಮುಂದಲೆವಿಡಿದು ತಹೆನು
ದ್ಧತನಲಾ ಪಾಂಚಾಲನೇನು ತಿಳಿದ ಶರಾಸನವ ॥ ೩೦

ಹಲಧರನ ಮಸ್ತಕವ ಕಂಡನು
ನಳಿನನಾಭನಿದೇನು ಪೀತವ
ನಿಱಿದಿರೆಲ್ಲಿಗೆ ಗಮನವಾವುದು ಕಾರ್ಯಗತಿ ನಿಮಗೆ ।
ತಿಳುಹಿ ಯೆನೆ ಬೇಱೇನು ಯಂತ್ರವ
ಕಳಚಿ ಬಿಸುಟು ಲತಾಂಗಿಯನು ಹಿಡಿ
ದೆಳೆದು ತಹೆನೆನಲ್ಕೆಸಲೇ ಕೇಳೆಂದನಸುರಾರಿ ॥ ೩೧

ಬಲರಾಮನಿಗೆ ನೀನು ಸುಮ್ಮನಿರೆಂದು ಕೃಷ್ಣನ ವಚನ.

ಏನಹರು ನಿಮಗಿಂದು ಕುಂತೀ
ಮಾನಿನಿಯರತ್ತೆಯರಲೇ ತ
ತ್ಸೂನುಗಳು ಮೈದುನರು ತತ್ಪತ್ನಿಯರು ತಂಗಿಯರು ।
ಸಾನುರಾಗವೆ ಮತ್ತೆ ಸಂಶಯ
ವೇನಿದಕೆ ತಪ್ಪಲ್ಲ ಕುಂತೀ
ಸೂನುಗಳು ದ್ರೌಪದಿಗೆ ರಮಣರು ನೋಡಿ ನೀವೆಂದ ॥ ೩೨

ಮೂಗಿನಲಿ ಬೆರಳಿಟ್ಟು ಮಕುಟವ
ತೂಗಿದನು ಬಲರಾಮನವನಿಯು
ನೀಗಿ ಹೋದರ ಮಾತು ಪಾಂಡವರೆತ್ತಲಿವಳೆತ್ತ ।
ಬೇಗುದಿಯಲುರಿಯರಗಿನೊಳಗೊಂ
ದಾಗಿ ಬೆಂದರು ಲೋಕವಱಿಯೆ ವಿ
ರಾಗವಿಕ ನಿಮಗಂಜುವೆವು ನಾವೆಂದನಾರಾಮ ॥ ೩೩

ಕ್ಷಿತಿಯೊಳವರಿಲ್ಲೆಂದು ದ್ರುಪದನ
ಸುತೆಗೆ ಪತಿ ಪರರೆಂದು ಯಂತ್ರ
ಚ್ಯುತಿಗೆ ಬೇಱುಂಟೆಂದು ತೋಱಿತೆ ನಿಮ್ಮ ಚಿತ್ತದಲಿ ।

ಕ್ಷಿತಿಗೆ ಪಾಂಡವರುಂಟು ದ್ರುಪದನ
ಸುತೆಗೆ ಪತಿ ಪರರಲ್ಲ ಕುಂತೀ
ಸುತರನೀಗಳ ತೋಱುವೆನು ವಸುದೇವನಾಣೆಂದ ॥ ೩೪

ಈ ವರ್ತಮಾನದಿಂದ ಬಲರಾಮನ ಸಂತೋಷ.

ಇದು ವಿಚಿತ್ರವಲಾ ಗತಾಸುಗ
ಳುದಿಸಿದೊಡೆ ಲೇಸೈಸಲೇ ದ್ರೌ
ಪದಿಯುನವರನುರಾಗಿಸಲಿ ಭೋಗಿಸಲಿ ಭೂತಳವ ।
ಇದುವೆ ನಿಶ್ಚಯವಾದೊಡವರ
ಭ್ಯುದಯವೆಮ್ಮಭ್ಯುದಯ ವೇನೆಂ[1]
ಬುದು ಮಹಾದೇವೆಂದು ತಲೆದೂಗಿದನು ಬಲರಾಮ[2] ॥ ೩೫

ಈಕೆಯನು ಮೆಚ್ಚಿಸದು ರಾಜಾ
ನೀಕ ಸೌಂದರ್ಯದಲಿ ಚಾಪ
ವ್ಯಾಕರಣಪಾಂಡಿತ್ಯರೆಂಬರ ಕಾಣೆ ನಾನಿನ್ನು ।
ಈಕೆಗಿನ್ನಾರೊಡೆಯರೋ ಕುಂ
ತೀಕುಮಾರಕರಿಲ್ಲಲಾ ಸುಡ
ಲೇಕೆ ನೆರಹಿದೆ ನಿವರನೆನುತಾ ದ್ರುಪದ ಚಿಂತಿಸಿದ ॥ ೩೬

ತಾತ ಚಿಂತಿಸ ಬೇಡ ನಿಮಿತ್ತಾ
ತಾತ ಶಂಕರ ಕೊಟ್ಟನಿರುತದ
ಮಾತು ಬಱಿದೊರೆಯಾಗದೆನುತಲೆ ತಂದೆಗಿದಿರಾಗಿ ।

ಧೃಷ್ಟದ್ಯುಮ್ನನ ಚಿಂತೆ.

ಸೋತರೀನೃಪರೆಲ್ಲ ತಂಗಿಗೆ
ಭೂತಳೇಶ್ವರರೊಬ್ಬರೂ ವರ
ಜಾತವಾಗರು ನೋಡಿ ನಮ್ಮಯ ಮುಖಜೆಗಕಟೆಂದ ॥ ೩೭

---

1 ವೆಂದಾ, ಚ. ರ.

2 ಪದುಮನಾಭನ ಹೊಗಟಿಕ್ಕುಳ್ಳಿದ್ದನು ಸರಾಗವಲ್ಲಿ, ಚ. ಟ.

ಹರಹರಾ ಇನ್ನಾರು ತಂಗಿಗೆ
ವರರು ವಾರಿಧಿವಳಯದವನೀ
ಶ್ವರರು ನೆರೆದರು ರೂಪುವಿಕ್ರಮವೆರಡುಹೊಱತಾಗಿ ।
ನರಪತಿಗಳುೞಿಯಲ್ಕೆ ಲೇಸಿ
ಸ್ವರಸಲಾವುದು ಹದನೆನುತ ವಿ
ಸ್ತರದ ಗುಜುಗುಜು ಮಸಗಿದುದು ಕಾಂತಾಕದಂಬದಲಿ ॥ ೩೮

ಧನುಸ್ಸನ್ನು ಪೂರ್ಣಮಾಡಲು ಬ್ರಾಹ್ಮಣರನ್ನು ಕರೆಯುವಿಕೆ.

ಅವನಿಪತಿಗಳು ಹೊಳ್ಳುವಾಱಿದ
ರಿವರೊಳಿಲ್ಲವೆ ದಕ್ಷಿಣೆಯು ಹಾ
ರುವ ಮಹಾಜನವಿದೆ ಸಮುದ್ರಕೆ ಪಡಿ ಸಮುದ್ರವೆನೆ ।
ಇವರೊಳಗೆ ಮುಂಗಯ್ಯ ಬಲುಹು
ಳ್ಳವರು ನೆಗಹಲಿ ಧನುವನೀಯುಂ
ತ್ರವನು ಸಾಧಿಪುದೆಂದು ಧೃಷ್ಟದ್ಯುಮ್ನ ಸಾಱಿಸಿದ ॥ ೩೯

ಸಾಱಿಸುವ ಡಂಗುರವನಾಗಳು
ವೀರಧೃಷ್ಟದ್ಯುಮ್ನ ತಂಗಿಯು
ನಾರು ಸೋಲಿಸುವವರು ತಾವಾರಿಲ್ಲ ನೃಪರೊಳಗೆ ।
ಭೂರಿವಿಪ್ರರ ಮಧ್ಯದಲ್ಲಿ
ನ್ನಾರದುಂಟೆಂದೆನುತ ಮನದಲಿ
ಹಾರವಿಸಿ ಶ್ರೀಕಂಠವರವಿದು ಸಿದ್ಧಿಸುವುದೆಂದ ॥ ೪೦

ಮೂವತ್ತನೆಯ ಸಂಧಿ ಮುಗಿದುದು.

# ಮೂವತ್ತ ಒಂದನೆಯ ಸಂಧಿ.

## ಸೂಚನೆ.

ರಾಯಸಭೆ ನಗಲ್ಕೈದೆ ಯಂತ್ರವ
ಡಾಯುವೆನು ನೆಱೆ ಗೆಲಿದು ನಿರ್ಜರ
ರಾಯನಂದನ ಕಾದಿ ಗೆಲಿದನು ಸಕಲಭೂಮಿಪರ ||

## ಬ್ರಾಹ್ಮಣರ ಆಲೋಚನೆ.

ಕೇಳು ಜನಮೇಜಯಧರಿತ್ರೀ
ಪಾಲ ಪಾಂಚಾಲೆಯ ಮನೋರಥ
ಶಾಲೆಯಲಿ ಸಾಱಿದರಲ್ಲೆ ಸಭೆಯಲಿ ಮಹೀಸುರರು |
ಏಱ ಭುಜಬಲವುಳ್ಳವರು ವಿ
ಪ್ರಾಳಿಯಲಿ ಬಿಲುವಿಡಿದು ಯಂತ್ರದ
ಕೋಲುಗಳ ಕೇವಣಿಪುದೆಂದರು ಹೊಯ್ದು ಡಂಗುರವ || ೧

ಬೆರಸುವರು ಪಾರ್ಥಿವರು ಪಾರ್ಥಿವ
ವರರೊಡನೆ ತದಲಾಭಪಕ್ಷಾಂ
ತರಕೆ ಪಾರ್ಥಿವಸುತೆಯನೀವುದು ವಿಪ್ರಜಾತಿಯಲಿ |
ಪುರುಷರನುಲೋಮದಲಿ ಕನ್ಯಾ
ವರಣವಹುದು ವಿಲೋಮದಲಿ ವಿ
ಸ್ತರಿಸಲೇಕಿದ ನೀವು ಬಲ್ಲಿರಿ ಧರ್ಮ[1] ನಿರ್ಣಯವ || ೨

ಎಂದು ಸಾಱಿದ ನುಡಿಯ ನಾದ್ವಿಜ
ವೃಂದವಾಲಿಸಿ ನಮಗಿದೇಕರ
ವಿಂದನಯನೆಯ ತೊಡಕು ತೆಗೆ ನಾವಾರು ಧನುವಾರು |

---

1 ಶಾಸ , ೧

ಬಂದ ದಕ್ಷಿಣೆ ಮೃಷ್ಟಭೋಜನ
ದಿಂದ ತೃಪ್ತರು ನಾವು ನಮಗಿದ
ಱಿಂದ ಬಹುದಪಕೀರ್ತಿ ಕರವೆಂದುದು ಬುಧಸ್ತೋಮ ॥ ೩

ಬ್ರಾಹ್ಮಣರು ತಮ್ಮ ಸಾಮರ್ಥ್ಯವನ್ನು ಹೊಗಳಿಕೊಳ್ಳುವಿಕೆ.

ವಚನಶೂರರು ನಾವು ಪಾರ್ಥಿವ
ನಿಚಯವೇ ಭುಜಶೂರರನಿಬರ
ನಚಲಧನು ಭಂಗಿಸಿತು ನಮಗೀವಿದ್ಯೆ ವೈದಿಕವೆ ।
ಉಚಿತವಲ್ಲಿದು ನಮ್ಮ ಸಾಹಸ
ರಚನೆಯನು ನೋಡುವೊಡೆ ಪಂಡಿತ
ನಿಚಯವಿದಿರಲಿ ನಿಲಲಿ ನೋಡುವೆವಲ್ಲಿ ವಿಸ್ಮಯವ ॥ ೪

ಸಾಂಗವೇದಪದಕ್ರಮದಿ ಸ
ರ್ವಾಂಗಸಿಚಯದಿ ನಿಖಿಳಪಾರಾ
ಣಂಗಳಲಿ ಮೀಮಾಂಸೆಯಲಿ ಸ್ಮೃತಿತರ್ಕಶಾಸ್ತ್ರದಲಿ ।
ಭಂಗಿಸುವ ವಿಜಯಿಸುವ ಬಹುವಾ
ದಂಗಳಲಿ ವಾತ್ಸ್ಯಾಯನಾದಿಯ
ಪಾಂಗವಿದ್ಯೆಯಲೆಮ್ಮ ನೋಡೆಂದುದು ಬುಧಸ್ತೋಮ ॥ ೫

ಭರತದಲಿ ವೈದ್ಯದಲಿ ಕಾವ್ಯಸು
ವಿರಚಿತಾಲಂಕಾರದಲಿ ಕರಿ
ತುರಗಲಕ್ಷಣದಲಿ ಸಮಾಹಿತಮಂತ್ರಶಾಸ್ತ್ರ[1]ದಲಿ ।
ಸರಸಕವಿತಾರಚನೆಯಲಿ ವಿ
ಸ್ತರದುಪನ್ಯಾಸದಲಿ ಭೂಪತಿ
ಕರೆಸಿ ನೋಡಲಿ ನಮ್ಮನೆಂದುದು ಭೂಸುರವ್ರಾತ[2] ॥ ೬

ಅಲ್ಲದಿದ್ದೊಡೆ ಶೋಧಿಸಿದ ತನಿ
ಬೆಲ್ಲವಿಕ್ಕಿದ ಹೂರಿಗೆಯ ಬೆದೆ

1 ತಂತ್ರ, ಚ. ಠ. 2 ದ್ವಿಜರು ತಮತಮಗೆ, ಚ. ಠ.

ಯಲ್ಲಿ ಪರಡಿಯು ಸೇವಿಗೆಯು ಪರಿಪರಿಯು ಪಾಯಸದ |
ಪುಲ್ಲಿಗೆಯು ತತ್ಸರಿಯು ಮಂಡಿಗೆ
ಯಲ್ಲಿ ನವಘೃತಸೂಪದಂಶಕ
ದಲ್ಲಿ ನೋಡಲಿ ನಮ್ಮನೆಂದುದು ಭೂಸುರವ್ರಾತ ॥ ೭

ಹೂರಿಗೆಯು ಗಾರಿಗೆಯುಲಾಯಂ
ಣೂರಿಗೆಯು ಲಡ್ಡುಗೆಯು ತುಪ್ಪದ
ತೋರಹಾಲುಂಡೆಗಳ ಯೆಳ್ಳುಂಡಿಗೆಯು ಕೆನೆಮೊಸರ |
ಚಾರುಶಾಕಾವಳಿಯುಲಾವಿ
ಸ್ತಾರ ಭಕ್ಷ್ಯಾವಳಿಯು ಪಾಕದೊ
ಳೋರೆ ಹುಸಿಯುಂಟೆಂಬ ಯಂತ್ರವ ಕಳಚಬಲುಹುಂಟು ॥ ೮

ಆಗ ಅರ್ಜುನನು ಸಭೆಯಲ್ಲಿ ನಿಲ್ಲುವಿಕೆ.

ರಸದ ಹೊಉಲೇಪದಲಿ ಹುದುಗಿದ
ಮಿಸುನಿಯಂತಿರೆ ಜೀವಭಾವ
ಪ್ರಸರದೊಳಗವಲಂಬಿಸಿದ ಪರಮಾತ್ಮನಂದದಲಿ |
ಎಸೆವ ವಿಪ್ರಾಕಾರದಲಿ ರಂ
ಜಿಸುವ ಭೂಪತಿ ತತ್ಸಭಾಸದ
ವಿಸರಮಧ್ಯದಲಿದ್ದು ಕೇಳಿದ ನೀಮಹಾಧ್ವನಿಯು ॥ ೯

ನೋಡಿದನು ತಮ್ಮನನು ಸನ್ನೆಯು
ಮಾಡಿದೊಡೆ ಕೈಕೊಂಡನವನಿಜ
ಕೂಡಿ ಕುಂತಿಗೆ ಭೀಮಸೇನಂಗೆಱಗಿ ವಿನಯದಲಿ |
ಕೂಡೆ ಕುಳ್ಳಿರ್ದಖಿಳವಿಪ್ರರ
ನೋಡಿ ಮೆಲ್ಲನೆ ಧೋತ್ರದರ್ಭೆಯ
ಗೂಡಸಂವರಿಸುತ್ತ ಸಭೆಯಲಿ ನಿಂದನಾಪಾರ್ಥ ॥ ೧೦

ಆಗ ಬ್ರಾಹ್ಮಣರ ಬುದ್ಧಿವಾದ.

41 ಏನು ಸುದ್ದಿಯುಪಾಧ್ಯರಿದ್ದಿರಿ
ದೇನು ಧನುವಿಂಗಲ್ಲಲೇ ತಾ
ನೇನು ಮನದಂಘವಣೆ ಬಯಸಿದಿರೇ ನಿತಂಬಿನಿಯ |
ವೈನತೇಯನವಗಡಿಸಿದ ವಿಷ
ವೇನು ಸದರವೊ ಹಾವಡಿಗರಿಗಿ
ದೇನು ನಿಮ್ಮುತ್ಸಾಹವೆಂದುದು ವಿಪ್ರಜನ ನಗುತ [1] ‖ ೧೧

ಮದುವೆ ಬೇಕೇ ಶ್ರೋತ್ರಿಯಸ್ತೋ
ಮದಲಿ ಕನ್ಯಾರ್ಥಿಗಳು ನಾವೆಂ
ಬುದು ನಿಜಾನ್ವಯವಿದ್ಯೆಯಲಿ ಕೊಡುವುದು ಪರೀಕ್ಷೆಗಳ |
ಮದುವೆಯಹುದಿದು ಸಾಖ್ಯಪುಣ್ಯ
ಪ್ರದವು ಭೂದೇವರಿಗೆ ನೀವು ನೆ
ನೆದುದು ಭಗೀರಥಯತ್ನವೆಂದುದು ವಿಪ್ರಜನ ನಗುತ ‖ ೧೨

ನೀವು ಸ್ವೈರಿಸಿ ನಿಮ್ಮ ಕಾರು
ಣ್ಯಾವಲೋಕನವುಂಟಲೇ ಸ
ಧ್ಭಾವದಲಿ ನೀವ್ ರಚಿಸಿದಾಶೀರ್ವಾದಶಕ್ತಿಯಲಿ |
ನಾವು ವಿಜಯರು ಚಾಪಯಂತ್ರವಿ
ದಾವ ಘನವೆಂಬರ್ಜುನನ ಸಂ
ಭಾವನೋಕ್ತಿಗೆ ನಿಲ್ಲದವರೊದಱಿದರು ತಮತಮಗೆ ‖ ೧೩

ವಿಪ್ರರ ಆಕ್ಷೇಪ ವಚನಗಳು.

ಕ್ರಮಿತರವಧರಿಸಿದಿರೆ ಶುದ್ಧ
ಭ್ರಮಿತಮೂಲನ ಹಿರಿಯ ವಿಷ್ಣು
ಕ್ರಮಿತರೇ ದೀಕ್ಷಿತರೆ ಧನುವಿಗೆ ಯತ್ನಮಾಡಿದಿರೆ |

---

[1] ಧೂರ್ತವಟುನಿಕರ, ಚ, ಠ.

ಹ್ಷಮವೆ ತಾನೀಕ್ಷತ್ರಿಯರ ನಾ
ಕ್ರಮಿಸುವುದು ತದ್ಧರ್ಮವೀಸು
ಭ್ರಮಿ ಯಿವನು ನೆಱೆ ಹಱವೆ ತಹನೀಶ್ರೋತ್ರಿಯರ ಕುಲಕೆ ॥೧೪

ಕೆಲರು ಹೋಗದಿರೆಂದು ಜಱಿದರು
ಕೆಲರು ತಾನೇ ಬಲ್ಲನೆಂದರು
ಕೆಲರು ನುಡಿದರು ವಿಪ್ರಸಭೆಗಪಹಾಸ್ಯವಾಯ್ತೆನುತ ।

ಆಗ ಕೆಲವರ ಅನುಮತಿ.

ಕೆಲರು ತಪ್ಪೇನೆಂದು ಕಳೆದರು
ಕೆಲರು ಭದ್ರಾಕಾರಗೀತಂ
ಗಳುಕುವುದು ಧನು ಭಾಗ್ಯವೆಂಬೆಗೆಂದುದು ಬುಧಸ್ತೋಮ॥ ೧೫

ತೊಟ್ಟ ಹೊಸವುಪವೀತ ಧಟ್ಟಿಯು
ಮಟ್ಟ ನೊಸಲಲಿ ಕುಶೆಯು ಕರಡಿಗೆ
ಕಟ್ಟಿಯಿರಿಕಿದ ಕಕ್ಷೆ ಬೆರಳಲಿ ಮುಱಿದ ದರ್ಭೆಗಳ ।
ಉಟ್ಟ ಭೂಸುರ ಬಿಱಲಗಚ್ಚೆಯು
ಲಟ್ಟ ಹಾಸದ ಜನರ ನಗೆಗಳ
ನಟ್ಟವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ ॥ ೧೬

ತಿರುಗಿ ಕಂಡರು ಸಕಲಭೂಮೀ
ಶ್ವರರು ಗಹಗಹಿಸಿದರಿದೇನರೆ
ಮರಳೊ ಜಡನೋ ವಿಪ್ರವೇಷಚ್ಛನ್ನ ಸುರಪತಿಯೊ ।
ಮರುಳುಗಳು ತಾವೆಕಟ ಮದನನ
ಸರಳ ಮೊನೆಗಾವನಂತಃ
ಕರಣ ನೆಱೆ ಕಳವಳಿಸದೆಂದರು ನೃಪರು ತಮತಮಗೆ ॥ ೧೭

ಧನು ತನಗೆ ನೆಗಹಲ್ಕೆ ಕೃಷ್ಣಾ
ಜಿನವೊ ಸಾಲಿಗ್ರಾಮದೇವರೊ
ವಿನುತತುಲಸಿಯೊ ಕುಶೆಯೊ ದರ್ಭೆಯೊ ಸಮಿಧೆಗಳ ಹೊಱೆಯೊ।

ನೆನೆದ ತಿಲವೋ ಮೋಹಿದಾವಿಪಾ
ಸನದ ಕೊಳವಿಯೊ ಬಣಗುವಿಪ್ರನ
ನೆನಹ ನೋಡಿರೆ ಘನವಲಾ ದ್ರೌಪದಿಯ ಸೌಭಾಗ್ಯ ॥ ೧೮

ಅಂಗವಿದು ಗಜತುರಗಶಸ್ತ್ರಾ
ಸ್ತ್ರಂಗಳಚಿತವು ನಮಗೆ ವಿಪ್ರರಿ
ಗಂಗವೇದಪುರಾಣತರ್ಕಸ್ಮೃತಿಸುವಿದ್ಯೆಗಳು ।
ಅಂಗವೆಂಗಿಗಸಾಧ್ಯವಾದುದ
ನಂಗಿಗೊಡಬಡುವುದೇ ದ್ವಿಜಾತರ
ಸಂಗತಾನುಷ್ಠಾನಪರರೆಂದುದು ನೃಪವ್ರಾತ ॥ ೧೯

ಲಹರಿ ಮಸಗಿದುದಿತ್ತ ಕಾಂತಾ
ಬಹಳಪಾರಾವಾರಹುಬ್ಬಿನ
ವಿಹತಿಗಳ ತೆರೆ ಮೊಲೆಗಳ ಬೆಳುನೊರೆಯ ಬುದಬುದದ ।
ಗಹಗಹಿಸಿ ನಗುವಟ್ಟಹಾಸದ
ರಹಣಿಗಳ ರಭಸದ ವಿಡಂಬದ
ವಿಹರಣದ ಚಲದೃಷ್ಟಿಗಳ ಮಚಿವಿನಾನ ಹೊಳಹುಗಳ ॥ ೨೦

ವಿಪ್ರರ ಗುಂಪಿನಿಂದ ಅರ್ಜುನನು ಏಳಲು ಜನಗಳ ಅಪಹಾಸ.

ಇತ್ತ ನೋಡಾ ತಾಯೆ ಹಾರುವ
ರತ್ತ ಗಡ್ಡದುಪಾಧ್ಯರನು ತಾ
ವೆತ್ತುವರು ಗಡ ಧನುವನೆಸೆವರು ಗಡ ತಿಮಿಂಗಿಳನ ।
ಹೊತ್ತುಗಳವರೆ ಲೇಸು ಬಟಿಕಿ
ನ್ನುತ್ತಮವಲಾ ವಿಪ್ರರನೆ ತಲೆ
ಗುತ್ತಿ ನಾಚಿದಳುಂಗುಟದಲೌಂಕುತ ಮಹೀತಳವ ॥ ೨೧

ಎಲವೊ ಮಟ್ಟಿಯ ಮದನ ದರ್ಪಿಯ
ತಿಲದ ಮನ್ಮಥ ವಿಮಳಧೋತ್ರದ
ತಳಿರುಗಾಸೆಯ ಕಾಮ ಕೃಷ್ಣಾಜಿನದ ಕಂದರ್ಪ ।

ನಳಿನಮುಖಿಯನು ವರಿಸು ಬಾ ನಿನ
ಗಳವಡುವಳೇ ಯಕ್ಕ ಮರಳಿಯೆ [1]
ತಲೆವಿಡಿವೆವಾವ್ ನೋಡಿ ಯೆಂದರು ನಗುತ ಚಪಳೆಯರು ॥ ೨೨

ಅದರೊಳಗೆ ಕೆಲರೆಂದರಾಗಳು
ವಿದಿತಹಾಸ್ಯವಿದೇಕೆ ಆರಂ
ಗದಲಿದಾರುವೆ ಬಲ್ಲಿದರೊ ಘನಗುಪ್ತವೇಷಿಗಳು ।
ಬುಧರೊಳಗೆ ಬಂದಿಹರೊ ವೇಷದೊ
ಳಿದಱನುವ ಮುರವೈರಿ ಬಲ್ಲನು
ಇದು ನಿದಾನವೆನಲ್ಕೆ ಯಾದವಪಡೆಯೊಳಗೆ ಹರಿಯು ॥ ೨೩

ಕೃಷ್ಣನು ಬಲರಾಮನಿಗೆ ಅರ್ಜುನನನ್ನು ತೋರಿಸುವಿಕೆ.

ಅದೆ ಹಲಾಯುಧ ನೋಡು ವಿಪ್ರ
ಘದಲಿ ಪಾರ್ಥನ ಬರವು ಮೇಘದ
ಹೊದಿಕೆಗಳ ಹರಿದಶ್ವನಂತಿರೆ ವಿಪ್ರವೇಷದಲಿ ।
ವಿದಿತವೇ ವಸುದೇವನಾಣೆಂ
ಮುದಕೆ ತಪ್ಪದಲೈ ಸಭಾಮ
ಧ್ಯದಲಿ ಬರುತಿರುವಾತನರ್ಜುನನೆಂದನಸುರಾರಿ ॥ ೨೪

* ಫಲುಗುಣನ ಶ್ರೀಯಂಗವಟ್ಟವ
ಹೊಳಹನೀಕ್ಷಿಸಿ ಯಂಗಲಕ್ಷಣ
ತಿಳಿದು ನೋಡಿದ ರೇವತೀಪತಿ ಬಹಳಹರುಷದಲಿ * ।
ನಳಿನನಾಭನು ಸರ್ವಗತನಹ

---

1 ಅಳವಡುವನೆಲೆ ಯಕ್ಕ ಕೇಳ್ವು, ಚ. ಟ.

* ಸುಳಿವುತೊಯ್ಯಾರದಲಿ ಬರುತಿಹ
ನಿಳೆಯುಮರರಿಂಗೊಂದಿಸುತ್ತಿಹ
ಫಲುಗುಣಂಗಿದೆ ಬೆನ್ನೊಳಗೆ ತಾ ಮಚ್ಚೆ ನೋಡೆನಲು, ಖ. *

ತಿಳಿಯಲಿಕೆ ಸರ್ವಜ್ಞನಾತನು
ತಿಳಿದೆ ಲೇಸಾಯ್ತೆನುತ ಕೃಷ್ಣಗೆ ರಾಮನಿಂತೆಂದ ॥ ೨೫

ಜನಪನೋ ಭೀಮಾದಿಗಳೊ ತ
ಜ್ಜನನಿಯೋ ತಾವೆಲ್ಲ ಭೂಸುರ
ಜನದ ಸಾರೂಪ್ಯದಲಿ ಸಭೆಯೊಳಗಿಪ್ಪರೆನೆ ಕೇಳ್ದು ।
ನಿನಗದೆಂತವರಱಿತವೆನಲನ
ಮನೆಗೆ ತಪ್ಪಿದರೆಂತು ಶಿವ ನೀ
ನೆನಿತು ಮಾಯಾಸಿದ್ಧನೆಂದನು ನಗುತ ಬಲರಾಮ ॥ ೨೬

ಭುವನರಕ್ಷಾಮಣಿಯೆ ಯಾದವ
ನಿವಹಚಿಂತಾಮಣಿಯೆ ನೀಪಾಂ
ಡವರ ಜೀವನಮಣಿಯೆ ಯೆಂದನು ನಗುತ ಬಲರಾಮ ।
ದಿವಿಜಪಾಲನೆಗೆಂದು ದಾನವ
ನಿವಹವನು ತಡೆಗಡಿದು ಭೂಭಾ
ರವನೆ ಯಿೞುಹಲು ಬಂದ ದೇವನೆ ಯೆಂದು ಹರುಷಿಸಿದ ॥ ೨೭

ಅವನಿಪತಿ ಕೇಳುತ್ತಲೀಪಾ
ರ್ಥಿವರ ಪರಿಹಾಸವನು ಕಾಂತಾ
ನಿವಹದಲಿ ನಿಬ್ಬರದ ನುಡಿಗಳನಾ ಮಹೀಸುರರ ।
ವಿವಿಧಕಟುಮಧುರೋಕ್ತಿವಿನ್ಯಾ
ಸವನು ಕೇಳುತ ಮುಗುಳುನಗೆಯಲಿ
ನವಮದದ್ವಿಪದಂತೆ ಗರುವಾಯಿಯಲಿ ನಡೆತಂದ ॥ ೨೮

ಬರುವ ಅರ್ಜುನನನ್ನು ಕೆಲವರು ಶ್ಲಾಘಿಸುವಿಕೆ.

ಇವನ ಗತಿ ಮುಖಚೇಷ್ಟೆ ಭಾವೋ
ತ್ಸವವಿಳಾಸವುಪೇಕ್ಷೆ ಭರದಂ
ಘವಣೆ ಗರುವಿಕೆ ಗಮನಭಾವದ ಭೀತಿ ಬಲ್ಲವಣೆ ।

ಇವನ ವಿಮಳಕ್ಷಾತ್ರವಿಕ್ರಮ
ವಿವರ ಕೊಂಡೆಯತನವಿವೇ ಸಾ
ಕಿವೆನು ಘಾಟಿಥ ವೀರನೆಂದರು ಧೀರನರ್ಜುನನ ॥ ೨೯

ಬರುತ ಭೀಷ್ಮದ್ರೋಣಕೃಪರಿಂ
ಗೆಱಗಿದನು ಮನದೊಳಗೆ ಯಾದವ
ರರಸಹಂತಿಯ ಹರಿಯನಭಿವಂದಿಸಿದನಕ್ಷಿಯಲಿ ।
ಸುರಪತಿಗೆ ಗುಹಗಣಪದಿಕ್ಪಾ
ಲರಿಗೆ ರುದ್ರಾದಿತ್ಯವಸುಮು
ಖ್ಯರಿಗೆ ಮಣಿದನು ಬಂದನಗ್ಗದ ಚಾಪವಿದ್ದೆಡೆಗೆ ॥ ೩೦

ಮೊದಲಲಂಬುಜಭವನನಾಮ
ಧ್ಯದಲಿ ಮಧುಸೂದನನ ನಾಬಿಲು
ತುದಿಯಲಾವೆಹಿಸಿದ್ದನಗ್ಗದ ನೀಲಲೋಹಿತನ ।
ಇದು ಮಹಾಭೂಮಿಪರ ಬಿಂಕವ
ನೊದೆದ ಧನುವೇ ಪ್ರೊತುರೆನುತೆ
ತ್ತಿದನು ಬಾಗೊತ್ತಿದನು ಕೊರಳಲಿ ತೊಡಿಸಿದನು ತಿರುವ ॥ ೩೧

ಹೊಯ್ದು ತಿರುವನು ಸೆಳದು ಕಿವಿವರೆ
ಗೊಯ್ದು ನಿದು ಹದವಿಲ್ಲಲಾ ಬಿಲು
ಹೊಯ್ದು ದಕಟಾ ಬಱಿದೆ ಹೆದಱಿತು ಮಾಗಧಾದಿಗಳು ।
ಮೆಯ್ದೆಗೆದರಿದಱೊಳಗೆ ಹೆಸರೆನ
ಗೆಯ್ದು ಬೇಕಿಂನ್ನೆಸಲೇಯೆಂ
ದಯ್ದು ಬಾಣವ ಕೊಂಡು ಯಂತ್ರದ ಹೊಳಹನೀಕ್ಷಿಸಿದ ॥ ೩೨

ಧನುಸ್ಸನ್ನು ಪೂರ್ಣವಾಡಿದುದು.

ಬಾಗಿ ನೋಡಿದ ತೈಲಕುಂಭವ
ನಾಗ ಹೊಳದುದು ಮತ್ಸ್ಯಲೋಚನ
ಲಾಗಿನನುವನು ಕಂಡು ಹರುಷಿಸಿ ತಿರುವ ತೊಡರಿಸಿದ ।

ತೂಗಿ ಶಿವಿವರೆಗೊಯ್ದು ಯಂತ್ರವ
ತಾಗಿಸಿದನಂಬಿನಲಿ ಪಾರ್ಥನ
ಲಾಗುವೇಗವನಾರು ಬಲ್ಲರು ಚಾಪತಂತ್ರದಲಿ ॥ ೩೩

ಆಗ ಸೂತ್ರದ ಧಾರೆಯಂತ್ರದ
ಜಾಗಕೆಡೆಹಿದರಾಗ ಭೂಪರು
ಜಾಗು ತ್ರಿಪುರದವೂರಿ ಯೆಂದರು ತಮ್ಮ ಮನದೊಳಗೆ ।
ಜಾಗು ಧಣಿ ಧಣಿ ಪೂತು ಕಾರ್ಮುಕ
ಯೋಗಸಿದ್ಧ ಮುರಾರಿ ಕೋದಂ
ಡಾಗಮತ್ರಿಪುರಾರಿ ಯೆಂದುದು ಸಕಲಜನನಿಕರ ॥ ೩೪

ಆಗ ವಿಪ್ರಸಂಘದ ಸಂತೋಷ.

ಹಾಯೆನುತ ಬೊಬ್ಬಿಱಿದು ವಿಪ್ರನಿ
ಕಾಯ ಕುಣಿದುದು ಕಮಲಮುಖಿ ನಿ
ರ್ದಾಯದಲಿ ಸೇರಿದಳು ಹಾರುವಗೆನುತ ಹರುಷದಲಿ ।
ಆಯುವತಿಜನಜಲಧಿ ಮುಸುಕಿತು
ಬಾಯ ಮೌನದ ಬೆರಳಮೂಗಿನ
ರಾಯರಿರ್ದುದು ಹೊತ್ತದುಗುಡದ ಭಂಗಜಲಧಿಯಲಿ ॥ ೩೫

ತೂಗಿ ಶಿರವನು ರಾಮಕೃಷ್ಣರು
ಜಾಗು ಯೆಂದರು ಭೀಷ್ಮದ್ರೋಣರು
ಲಾಗು ಮಿಕ್ಕರಿಗುಂಟೆ ಯಂತ್ರದ ಹೊಳಹನೀಕ್ಷಿಸಲು ।
ಬೇಗದಲಿ ದುರ್ಯೋಧನಾದಿಗ
ಳಾಗ ಹೆದಱಿತು ಕರ್ಣಸೈಂಧವ
ರೀಗಳಿವನಾರೆನುತ ತಮ್ಮೊಳಗಾಗ ಗುಜುಗುಜಿಸೆ ॥ ೩೬

ಮೊಱಗಿದುವು ನಿಸ್ಸಾಳತತಿ ಹೆ
ಕ್ಕಳದ ಹೆಚ್ಚಿಗೆಯಲ್ಲಿ ದಿವಿಜಾ
ವಳಿಯ ದುಂದುಭಿರವದಲುಬ್ಬಿದ ಸಾಧುವಾದಗಳ ।

ಕಳಕಳದ ಕೊಲ್ಲಣಿಗೆಗಳ ಹೊ
ಮೆಟೆಯು ಹುರದ ಹೊನಲಿನಲಿ ಜನ
ಮೊಳುಗಿತಷ್ಟುತರಸದಲಳ್ಳಿದುದು ಜಗತ್ತ್ರಯವೆ ॥ ೩೭

ಕಿತ್ತಸುರಗಿಯು ಸುಭಟರಂದಱು
ವೆತ್ತುಸಾವಿರವೀರ ಪಾರ್ಥನ
ಸುತ್ತ ಮುತ್ತಿದರಂಗರಕ್ಷಣೆಗರಸನಾಜ್ಞೆಯಲಿ ।
ಇತ್ತ ಮಹಿಳಾಜನದ ಮೌಳಿಯು
ಮುತ್ತು ಕುಸುಮಾಯುಧನ ಥಟ್ಟನ
ಮತ್ತಗಜವೈತಂದಳಲ್ಲಿಗೆ ದ್ರೌಪದೀದೇವಿ ॥ ೩೮

ತೊಲತೊಲಗು ಮನ್ಮಥನ ಹೊಗರಿ
ಟ್ಟಲಗು ಬರುತಿದೆ ಸಾರು ಸಾರೆಂ
ದುಲಿವವ್ರೊಲು ಚರರುಲಿದು ಹೊಯ್ದರು ಮುಂದೆ ಕಂಬಿಯಲಿ ।
ನಳಿನಮುಖಿ ದಂಡಿಗೆಯಲೈತಂ
ದಿಳಿದಳೀತನ ಹೊರೆಯಲಾಗಳ ಕಳ
ಕಳದಲೊಳತೋಟಿ ಮಸಗಿತು ಹರುಷಲಜ್ಜೆಯಲಿ ॥ ೩೯

ಲಲಿತಮದಿರಾಪಾಂಗದಲಿ ಮು
ಕ್ಕುಳಿಸಿ ದಣಿಯವು ಕಂಗಳುಬ್ಬುವ
ಪುಳಕಜಲದಲಿ ಮೂಡಿ ಮುಳುಗದು ಮೈ ನಿತಂಬಿನಿಯ ।
ತಳಿತಲಜ್ಜೆಯ ಭರಕೆ ಕುಸಿದುದು
ಚಳಿಸಿತಂತಃಕರಣವಾಂಗಿಕ
ಬಳಿತಸಾತ್ವಿಕಭಾವವೇಡೈಸಿದುದು ಮಾನಿನಿಯ ॥ ೪೦

ದ್ರೌಪದಿಯು ಅರ್ಜುನನ ಕೊರಳಲ್ಲಿ ಹಾರವನ್ನು ಹಾಕಿದುದು

ಧರಣಿಪತಿ ಕೇಳ್ ಬಹಳಲಜ್ಜಾ
ಭರದ ಭಯದಲಿ ಬೆಮರಿಡುತ ಕುಚ

ಭರಧಿ ಮೇಲುದ ಜಾಱೆ ಜೋಡಿಸಿ ನಿಮಿರ್ದು ನಡುನಡುಗಿ ।
ತರುಣಿ ನಿಜತನುಪರಿಮಳದಿ ಮಿಗೆ
ಹೊರೆದ ಹೂವಿನ ದಂಡೆಯನು ನೃಪ
ವರನ ಕೊರಳಲಿ ಹಾಯ್ಕಿದಳು ಜಯ ಯೆನೆ ಸುರಸ್ತೋಮ ॥ ೪೧

ಕೊರಳ ಹೂವಿನ ದಂಡೆಯಲಿ ನಿಜ
ಕರದ ಭಾರಿಯ ಧನುವಿನಲಿ ವ್ಯಾ
ಪರಿಮಳದ ನಿಟ್ಟುಸಿರುಗಳ ಕೆಲದ ಯುವತಿಯಲಿ ।
ವರನ ಪರಿ ಹೊಸತಾಯ್ತು ಹೊತ್ತನು
ಹರನ ಹಗೆ ಹಾರುವರಯನು ನ
ಮ್ಮರಸಿ ತಾ ಹಾರುವಿತಿಯೆಂದರು ನಗುತ ಚಪಳೆಯರು ॥ ೪೨

ಜನಪ ಕೇಳ್ಕೆ ಯುವತಿಯೊಡನ
ರ್ಜುನನ ತಂದರು ರಾಜಮಂದಿರ
ಕನಿಮಿಷಾವಳಿ ಹರಿದುದಭ್ರದೊಳಮರಪತಿ ಸಹಿತ ।

ಜನಗಳಿಗೆ ಯುದ್ಧಕ್ಕಾಗಿ ದುರ್ಯೋಧನನ ಪ್ರೇರಣೆ.

ಮನದಸೂಯದ ಮುಖದ ದುಗುಡದ
ವಿನತಮುಕುಟದ ಕಯ್ಯ ಗಲ್ಲದ
ಕನಲಿಕೆಯ ಕೊನರುಗಳ ಕೌರವರಾಯ ಖತಿಗೊಂಡ ॥ ೪೩

ಏನು ಹದ [1] ಪಾಂಚಾಲ ಮಾಡಿದ
ಮಾನಭಂಗವ ಕಂಡಿರೇ ವರ
ಭಾನುನಂದನಶಕುನಿಶಲ್ಯಜಯದ್ರಥಾದಿಗಳು ।
ಮಾನಸಿಧಿಗಳು ಕಂಡಿರೇ ಮದ
ದಾನೆಗಳು ನೀವ್ ಕಂಡಿರೇ ಹದ
ನೇನೆನುತ ಮೊದಲಿಸಿದನು ತಂನವರನವನೀಶ ॥ ೪೪

1 ಹರ, ಕ.

ಹಳೆಯ ಹುಲು ಧನುವಿದನು ಹಾರುವ
ಸೆಳೆದ ಗಡ ಕೌಳಿಕದ ಯಂತ್ರವ
ಗೆಲಿದ ಗಡ ಗರುವಾಯಿ ಗೆಡಿಸಿದ ಗಡ ಮಹೀಶ್ವರರ ।
ನಳಿನಮುಖಿ ಹಾಯ್ಕಿದಳು ಗಡ ತಿರು
ಕುಳಿಯ ಕೊರಳಲಿ ದಂಡೆಯನು ನೀ
ವೊಲಿದು ಮದುವೆಯ ಮಾಡಿ ಯೆಂದನು ದೈದು ತನ್ನವರ [1] ॥೪೫

ಭಂಡರೋ ನೀವ್ ನೆರೆದ ಭೂಮಿಯ
ಮಂಡಲೇಶ್ವರರಕಟ ನಿಮ್ಮಯ
ಹೆಂಡಿರನು ಬಟುವೆಟಿಯ ಕೊಡಿ ಹಾರುವನ ಹೆಂಡತಿಗೆ ।
ಗಂಡುಗಲಿಗಳು ನಿಮ್ಮನನಿಬರ
ಕಂಡುಪೇಕ್ಷಿಸಿ ಯಾಚಕನ ಕೈ
ಕೊಂಡಳಿದಕಿನ್ನೇನು ಮನದಲಿ ನಾಸಿ ನಿಮಗೆಂದ ॥　　೪೬

ವಾಸಿಗಳನಱಸುವೊಡೆ ದ್ರುಪದನ
ಮೀಸಲಡಗನು ಹದ್ದು ಕಾಗೆಗೆ
ಸೂಸಿ ವಿಪ್ರನ ಹಿಡಿದು [2] ಬಿಡುವುದು ಮತ್ತೆ ತಿರಿದುಣಲಿ ।
ಆಸರೋಜಾನನೆಯ ನಮ್ಮ ವಿ
ಳಾಸಿನೀವೀಧಿಯಲಿ ಕೂಡುವು
ದೈಸಲೇ ಯೆಂದೊಡನೊಡನೆ ಕುರುರಾಯ ಗರ್ಜಿಸಿದ ॥　　೪೭

ಪಾಂಚಾಲ ಪಟ್ಟಣವನ್ನು ಸರ್ವರು ಮುತ್ತಿದುದು.

ಏಱಿ ಹತ್ತಲಿ ಲಗ್ಗೆ ಪದಹತಿ
ಧೂಳಿಯಲಿ ಹಿರಿಯಗಳನಗಲಕೆ
ಹೂಱಿ ಕಳೆಯಲಿ ಹರಿದು ಹತ್ತಲಿ ತೆನೆಯ ಸರಿಸದಲಿ ।
ಕೋಲುಗಂಡಿನ ಹತಿಗೆ ಹುರಿಯೊಡ

---

1 ಭೂಮಿಪರ, ಚ. ಠ.　　2 ಬಿಡಿದು, ಠ.

ಬಾಳಿ [1] ಹೊಯ್ ಹೊಯ್ಯೆನುತ ಸಕಲನೃ
ಪಾಳಿ ಗರ್ಜಿಸಿ ಮುತ್ತಿದುದು ಪಾಂಚಾಲಪಟ್ಟಣವ ॥ ೪೮

ಕೂಡೆ ಗಜಬಜಿಸಿತ್ತು ಹರಿದುದು
ನಾಡಿಗಾವಳಿ ವಿಪ್ರಸಭೆ ತೆಗೆ
ದೋಡಿದುದು ಪಾಂಡವರು ಬಂದು ಕುಲಾಲಭವನದಲಿ ।
ನೋಡುತಿರ್ದರು ಲಗ್ಗೆಯುಬ್ಬರ
ವೀಡಿಱಿದುದು ದಿಗಂತವೆನು ಕೈ
ಮಾಡಿ ಕೊಂಡುದು ಹೊಯ್ಲು ಬೆರಸಿದರಾಳುವೇರಿಯಲಿ ॥ ೪೯

ಹಲ್ಲಣಿಸಿತಿದು ಹುಗುವ ಚಕ್ಷೂಣಿಯು
ಚಲ್ಲ ಬಡಿದರು ಸರಿಸಕಡಱುವ
ಬಿಲ್ಲ ಬಿರುದರ ಮುಟ್ಟಿತಿವಿದರು ಸಾಲಸಬಳಿಗರು ।
ಝಲ್ಲರಿಯ ಝಾಡಿಗಳ ವಾದ್ಯದ
ಘಲ್ಲಣೆಯ ದಳ ನೆರೆದುದಲ್ಲಿಯು
ದಲ್ಲಿ ಮುತ್ತಿಗೆ ತೆಗಿಸಿದರು ಪಾಂಚಾಲನಾಯಕರು ॥ ೫೦

ಚಕ್ಷೂಣಿ ಮುಱಿದೈತರಲು ಬಹಳ
ಕ್ಷೋಣಿಬಲ ಕುರುರಾಯ ಥಟ್ಟಿನ
ಹೂಣಿಗರು ಹುರಿಗೊಂಡು ಕವಿದರು ಕರ್ಣಮೊದಲಾಗಿ ।
ಸಾಣೆಯಲಗಿನ ಸರಿಗೆ ಪರಬಲ
ದಾಣಿಯಿಟ್ಟವೊಲಡಿಮಿಡುಕದ
ಕ್ಷೀಣಬಲವೋಸರಿಸಿ ತೆಗೆದುದು ದ್ರುಪದಪರಿವಾರ ॥ ೫೧

ಯುದ್ಧಕ್ಕೆ ಬಂದವರನ್ನು ಧೃಷ್ಟದ್ಯುಮ್ನನು ಓಡಿಸುವಿಕೆ.

ಬಳಿಕ ಧೃಷ್ಟದ್ಯುಮ್ನ ಕೋಪದಿ [2]
ದಳವ ಮುಱಿದನು [3] ಶಕುನಿ ಸೈಂಧವ
ರಳುಕೆ ಹೆಬ್ಬಲ ಕವಿದುದಾಕುರುರಾಯನಾಜ್ಞೆಯಲಿ ।

---

[1] ನಾಳ, ತ. ದಾಳ. ಚ. [2] ಸರಳನ, ಖ [3] ಮುಳಿಯುಕರೆದನು, ಖ.

ನಳಿನಮಿತ್ರನ ಪುತ್ರ ಗೌತಮ
ಕಳಶಜರು ಕಾಳಿಂಗಶಲ್ಯರ
ಬಳಿಗ ಕವಿದುದು ದ್ರುಪದಪುತ್ರನ ಮೇಲೆ ಯವಗಡಿಸಿ ॥ ೫೦

ಅವಗಡಿಸಿ ಬರೆ ದ್ರುಪದನಂದನ
ನವರ ತಱುಬಿದನೊಂದು ಕ್ಷಣಕಾ
ಗವರ ಸೇನೆಯ ಕಡಲಿಗಾಂತನು ಬಡಬನೆಂ[1] ಬಂತೆ ।
ರವಿಸುತನು ಗುರುಶಲ್ಯಗುರುಸಂ
ಭವರು ಕವಿಯಲು ಬೞಿಕ ಸೈರಿಸ
ದವನು ಹಿಮ್ಮೆಟ್ಟಿದನು ಕಡಲಿಗೆ ಕಟ್ಟೆ ಮುಱಿವಂತೆ ॥ ೫೩

ಮೊದಲ ಲಗ್ಗೆಯ ಧೂಳಿಯೋ ದ್ರೌ
ಪದಿಯ ಬೈತಲೆಗವಲಸಿಂದೂ
ರದ ಸವಿಸ್ತರವಾಗದಿದ್ದೊಡೆ ರಾಯನಾಣೆನುತ ।
ಮದಮುಖರು ಮುಂಕೊಂಡು ದುರ್ಗವ
ಬೆದಱಿಸಿತು ಬೇಱೇನು ದ್ರುಪದನ
ಸದನಸೀಮೆಯ ಬೆರಸಿ ಹಾಯ್ದರು ರಾಜಬೀದಿಯಲಿ ॥ ೫೪

ಅರ್ಜುನನು ಜನಗಳನ್ನು ಓಡಿಸುವಿಕೆ.

ಏಱು ಮನ್ನೆಯ ಗಂಡನಾಗು ನೃ
ಪಾಲ ಮದುವೆಯ ಮನೆಗೆ ರಾಯರ
ಧಾಱಿ ಬಿದ್ದಿನವಾಯ್ತು ನಡೆ ಸಂತೈಸು ಬೀಯಗರ ।
ಏಱೆನಲು ಕಳಕಳವನರ್ಜುನ
ಕೇಳಿದನು ಹೊದೆಯಂಬುಗಳ ತರ
ಹೇಱೆನುತ ಕವಿದೆಚ್ಚು ಮುಱಿದನು ಭಟರ ಮುಂಗುಡಿಯ ॥ ೫೫

1 ಸೇತುವೆಂ, ಜ.

ಅದು ಬೞಿಕ ಕಲ್ಪಾಂತಮೇಘದ
ಮೊದಲ ಮೞೆಯೆನೆ ಸುರಿದುದಂಬಿನ
ಹೊದರು ಹುದುಗಿತು ರಾಯದೞ ರೌಕುಳದ ರಕ್ತದಲಿ ।
ಕೆದಱಿದರು ಕರ್ಣಾದಿಗಳು ನೞಿ
ಬೆದಱಿದರು ಮತ್ತೊಂದು ಕಡೆಯಲಿ
ಸದೆದು ಹೊಕ್ಕನು ಭೀಮ ಭಾರಿಯ ಮರದ ಕೊಂಬಿನಲಿ ॥ ೫೬

ತಱುಬಿದನು ಮದ್ರೇಶ ಪವನಜ
ನುಱುಬೆಯನು ಫಲುಗುಣನ ಬಾಣವೆ
ಮುಱಿಯಿಸುತ ರಾಧೇಯ ನಿಂದನು ಸಿಂಹನಾದದಲಿ ।
ಕಱುಬರೋ ಘನಯಂತ್ರಭೇದಿಯ
ನೞಿದು ಕಾಡುವ ಕುರುಡರೋ ನೀ
ವಿಱಿತಕಂಪ್ಯೆಸಿದಿರೆನುತ ಕೈಕೊಂಡನಾಭೀಮ ॥ ೫೭

ತುರಗರಥಸಾರಥಿಗಳನು ಹೊ
ಯ್ದೊರಸಿದನು ಪವಮಾನಸುತನು
ಬ್ಬರದ ಖಾತಿಗೆ ಶಲ್ಯ ಹಿಮ್ಮೆಟ್ಟಿದನು ಹಿನ್ನೆಲೆಗೆ ।
ನರನ ಶರಹತಿಗಳುಕಿ ಮೋರೆಯ
ತಿರುಹಿದನು ಕಲಿಕರ್ಣನಿವದಿರು
ಸರಿಯೆ ವಿಪ್ರರು ನಮ್ಮ ವಿಗ್ರಹಕೆನುತ ಖಾತಿಯಲಿ ॥ ೫೮

ಆಗ ಪರಾಜಿತರಾಗಿ ತಮ್ಮ ತಮ್ಮ ಸ್ಥಳಕ್ಕೆ ಹೋಗುವಿಕೆ.

ಅರಸ ನಡೆ ದ್ರುಪದನ ಕಪಾಲದ
ಲಿರಲಿ ಮಾನಚ್ಯುತಿ ಮಹೀಸುರ
ವರರೊಡನೆ ದಂಡೇಕೆ [1] ನಡೆವುದು ಹಸ್ತಿನಾಪುರಕೆ ।
ನೆರಹುವುದು ನೃಪವರ್ಗವನು ಬಂ

[1] ಖತಿಯೇಕೆ, ಖ. ಚ.

ದೊರಸುವ್ರದು ಪಾಂಚಾಲಭೂಪನ
ಶಿರದ ಬರಹವೆನೆಂದು ನುಡಿದನು ಕುರುಪತಿಗೆ ಕರ್ಣ ॥ ೫೯

ಅಹುದು ಕರ್ಣನ ಮಾತು ತೆಗೆಯಲಿ
ಬಹಳಬಲವೀಹೊತ್ತಿನಲಿ ರಣ
ವಿಹಿತವಲ್ಲೌಕಿದೊಡೆ ತಪ್ಪದು ವಿಪ್ರವಧೆ ನಮಗೆ ।
ಮಹಿಮೆ ಮಿಾಸಲು ಹೋಗದೀಸರ
ಲಹಿತದರ್ಪವ ಮುಂದೆ ನೋಡಲು
ಬಹುದೆನುತ ತಿರುಗಿದನು ಕುರುಪತಿ ಹಸ್ತಿನಾಪುರಕೆ ॥ ೬೦

ಬಾಹ್ಲಿಕ ಭೂಮಿಾಶ್ವರರು ತಮ್ಮಯ
ಹೊಬಲಿಗೈದಿದರಿತ್ತ ಸಾಬಲ
ಕಲಿ ಸುಶರ್ಮಕಳಿಂಗಸೈಂಧವರಿವರು ಮೊದಲಾಗಿ ।
ಇಳೆಯ ಭೂಪರ ಕೂಡೆ ಕೌರವ
ತಿಲಕ ದುಮ್ಮಾನದಲಿ ಹೋಗಲು
ನಲಿದು ಕುಂತೀಸುತರ ಸಲಹಿದ ವೀರನಾರಯಣ ॥ ೬೧

ಮೂವತ್ತು ಒಂದನೆಯ ಸಂಧಿ ಮುಗಿದುದು

## ಮೂವತ್ತೆರಡನೆಯ ಸಂಧಿ

**ಸೂಚನೆ**

ವಿಮಳಮುನಿ ಪಾಂಚಾಲಚಿತ್ತ
ಭ್ರಮೆಯುನಪಹರಿಸಿದನು ದ್ರೌಪದಿ
ರಮಣಿ ಯಾದಳು ಹರನ ವರದಲಿ ಪಾಂಡುತನಯರಿಗೆ ॥

ತಾಯಿಯು ಬಳಿ ಈ ವರ್ತಮಾನವನ್ನು ಹೇಳುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವನೃಪತಿ ಪಯಣದ
ಮೇಲೆ ಪಯಣದಲೈದಿ ಹೊಕ್ಕನು ಹಸ್ತಿನಾಪುರಿಯ ।
ಹೇಳಲೇನದನಖಿಳಧರಣೀ
ಪಾಲಕರು ದುಮ್ಮಾನದಲಿ ಪಾಂ
ಚಾಲದೇಶವ ಕಳೆದು ಹೊಕ್ಕರು ತಮ್ಮ ನಗರಿಗಳ ॥ ೧

ಭೀತಿ ಹರೆದುದು ರಾಯದಚಿಸಂ
ಘಾತ ಸರಿದುದು ಮತ್ತೆ ಸುಜನ
ವ್ರಾತ ನೆರೆದುದು ಮೆಱೆದುದವನೀದೇವರಗ್ಗಳಿಕೆ ।
ವಾತಜನು ಮರಗೊಂಬಿನಲಿ ಮಾ
ಱಾಂತರನು ಮನ್ನಿಸಿ ಕುಲಾಲನಿ
ಕೇತನಕೆ ಬಂದೆಱಗಿದನು ಧರ್ಮಜನ ಚರಣದಲಿ ॥ ೨

ಇತ್ತಲರ್ಜುನನಿನಸುತನ ಬೆಂ
ಬತ್ತಿ ಮರಳಿದನವನಿಪಾಲರ
ಮುತ್ತಿಗೆಯ ಝಾಡಿಸಿದ ಜಯಲಕ್ಷ್ಮಿಯ ಕಟಾಕ್ಷದಲಿ ।
ಮತ್ತರಾಯರ ಬೆನ್ನ ಕಪ್ಪವ
ನೆತ್ತಿದುತ್ಸಾಹದಲಿ ಹೊಸಹೊಗ
ರೆತ್ತಿದಕ್ಷಿಯ ಹೊಳಹಿನಲಿ ಹೊಕ್ಕನು ನೃಪಾಲಯವ ॥ ೩

ಈತನುದಯದಲಿಂದು ಭೂಸುರ
ಜಾತಿಗಾಯ್ತಗ್ಗಳಿಕೆ ಪಾರ್ಥಿವ
ಜಾತರನು ಭಂಗಿಸಿದ ಧನುವಿಂದಿವನ ವಶವಾಯ್ತು ।
ಸೋತು ತೆಗೆದ ಮಹೀಶ್ವರರ ಮಾ
ತೇತಕಿದು ಮಝುಪ್ರೂತೆನುತ ಜನ
ವೀತನನು ಕೊಂಡಾಡುತಿರ್ದುದು ನೆರವಿನೆರವಿಯಲಿ ॥ ೪

ಬಂದನೀತ ಸುಗತಿಯ ಗರುವಿಕೆ
ಯಿಂದ ರಮಣಿಯ ಹೊರೆಗೆ ಬಾ ನೀ
ನೆಂದು ಕರೆದನು ಸತಿಸಹಿತ ತಿರುಗಿದನು ನಲವಿನಲಿ ।
ಇಂದುಮುಖಿಯನು ಕುಂಭಕಾರರ
ಮಂದಿರದ ಹೊಱಗಿರಿಸಿ ಫಲುಗುಣ
ಬಂದು ಮೆಯ್ಯಿಕ್ಕಿದನು ಕುಂತಿಯ ಚರಣಕಮಲದಲಿ ॥ ೫

ತಾಯೆ ಬಿನ್ನಹವಿಂದು ಧರಣೀ
ರಾಯರೆಲ್ಲರ ಗೆಲಿದು ತಂದೆನು
ನಾಯಕವನನುಪಮಸುಮೌಲ್ಯವೆನಮಲಮೌಕ್ತಿಕವ ।
ಅದನ್ನು ಸರ್ವರೂ ಅನುಭವಿಸಿರೆಂದು ಕುಂತಿಯು ಹೇಳಲು ವಿಚಾರ.
ತಾಯೆ ಚಿತ್ತೈಸಿದಿರೆ ಯೆನೆ ತಡ
ವಾಯಿದಳು ತನಿಹರುಷದಲಿ ಲೇ
ಸಾಯಿತೈವರು ಕೂಡಿ ಭೋಗಿಪುದೆಂದಳಾಕುಂತಿ ॥ ೬

ಎನೆ ಹಸಾದವೆನುತ್ತ ಕಮಲಾ
ನನೆಯ ಪ್ರೌಢವಂಡಿಸಿದನವ್ವೆಗೆ
ತನುಜ ನೀ ತಂದಮಲಮೌಕ್ತಿಕವಿದೆ ಮಹಾದೇವ ।
ತನಗೆ ನುಡಿ ತೊದಳಿಸಿತಲಾ ನೀ
ವಿಸಿಬರುಪಭೋಗಿಸುವುದೆಂದೆನು
ವನಿತೆಯೈವರಿಗರಸಿಯೇ ಹಾ ಯೆಂದಳಾಕುಂತಿ ॥ ೭

ಜನನಿ ತಪ್ಪದು ನಿಮ್ಮ ನುಡಿಯಿ
ವನಜಮುಖಿ ಯೆಮ್ಮೈವರಿಗೆ ಸತಿ
ವಿನುತಗುರುವಚನಾಂಬುನಿಧಿ ಮಕ್ಕಳಿಗಲಂಘ್ಯವಲೆ ।
ಎನೆ ಯುಧಿಷ್ಠಿರನ್ನಪತಿ ಪಾರ್ಥನ
ಕನಲಿದನು ಕಲಿಭೀಮನಲ್ಲೆಂದ
ನು ನಕುಲಸಹದೇವರನುಚಿತವೆಂದರರ್ಜುನನ ॥ ೮

ಎಲ್ಲ ಧರ್ಮದ ಸಾರವನು ನೀವ್
ಬಲ್ಲಿರಖಿಯಿರಿ ಹೇಳ್ವುದಾವುದು
ನಿಲ್ಲಿ ನೀವ್ ಸಹದೇವನಕುಲರು ಹಲವುಮಾತೇನು ।
ಬಲ್ಲಿರಖಿಳಾಮ್ನಾಯಭಾಷಿತ
ದಲ್ಲಿ ನೋಡಲು ಧರ್ಮಶಾಸ್ತ್ರದೊ
ಳಿಲ್ಲ ತಾಯಿಂದಧಿಕಗುರು ಜಗಕೆಂದನಾಪಾರ್ಥ ॥ ೯

ಮಾತೃವಚನವಲಂಘ್ಯವದು ವಿ
ಖ್ಯಾತಪದ್ಧತಿ ಲೋಕಯಾತ್ರಾ
ಭೀತಿಯಲಿ ಭಯವೇನು ಧರ್ಮರಹಸ್ಯನಿಷ್ಠರಿಗೆ ।
ಏತಕೀಲೋಕಾನುಸರಣೆ ವಿ
ಧೂತಕಿಲ್ಬಿಷವಾವುದಿದು * ಧ
ರ್ಮಾತಿಶಯದಲಿ ವಿಹಿತ ಯಿಹಪರಕೆಂದ * ನಾಪಾರ್ಥ ॥ ೧೦

ರಾಗಲೋಭವ್ಯಾಪ್ತಿಯಲಿ ನೀ
ವೀಗರುವೆಗಳುಕುವರೆ ಸಲೆ ಧ
ರ್ಮಾಗಮವನಾಚರಿಸುವುದಲೇ ನಮ್ಮನುಷ್ಠಾನ ।
ಈಗಳೀಗುರುವಚನಧರ್ಮ
ತ್ಯಾಗವೇನದು ಧರ್ಮವೇಯುಪ
ಭೋಗವೈವರಿಗೆಂದು ತಿಳುಹಿದನವರನಾಪಾರ್ಥ ॥ ೧೧

ಮಾಡದಿರಿ ಸಂದೇಹವನು ಖಯು
ಕಿರೋಡಿ ಯಿದಖೊಳಗಲ್ಲ ಧರ್ಮದ
ಮೂಡಿಗೆಯೊಳಂಬಿರಲಿ ಬಹಿರಂಗದಲಿ ಬಚುಸದಿರಿ ।
ಗೂಡು ಹಲವಿಹ ಪಕ್ಷಿಯೊಂದಿದ
ನಾಡಬಾರದು ಸಾಕು ಚಿಂತಿಸ
ಬೇಡಿ ನೀವೆಂದನಿಬರನು ತಿಳುಹಿದನು ಕಲಿಪಾರ್ಥ ॥ ೧೨

* ಸಂಪ್ರೀತಿಯಿಂ ಬಳಸವುದು ಮತವಹುದೆಂದ, ಖ.

ಮುಖ್ಯವಾದುದ ಬಿಟ್ಟು ಮೆಱೆಯುದೆ
ಮುಖ್ಯವಾದುದ ಹಿಡಿವರಲ್ಲದೆ
ಮುಖ್ಯಮತವಿದನಾರುವಱಿಯರೆ ದೇವರಾಶಿಯಲಿ |
ಮುಖ್ಯಜೀವರ ಜೀವ ಬಲ್ಲನು
ಮುಖ್ಯ ಕರ್ಮವನೆಂದು ಪಾರ್ಥನು
ಮುಖ್ಯಧರ್ಮವ ಹೇೞಿ ತಿಳುಹಿದ ಧರ್ಮಪುತ್ರನನು || ೧೩

ಬಳಿಕ ನಿರ್ವಿಚಾರವಾಗಿ ಐವರೂ ಅಂಗೀಕರಿಸುವಿಕೆ.

ಆದುದನುಮತ ತಮ್ಮೊಳಗೆ ತ
ತ್ಸೋದರರು ನಿವಾದದಿಂದ [1] ತ
ಳೋದರಿಯನೊಲಿದೈವರಂಗೀಕರಿಸಿದರು ಬೞಿಕ |
ಆದರಣೆಯಲಿ ಕುಂತಿ ಸೊಸೆಗೆ ವೃ
ಕೋದರನ ಭಿಕ್ಷಾನ್ನಭಾಗದ
ಭೇದವನು ತಿಳುಹಿದಳು ತೊಡೆಯಲಿ ಕೆಗೆದು ಕುಳ್ಳಿರಿಸಿ || ೧೪

ಇೞಿದನಸ್ತಾಚಲಕೆ ರವಿ ನೃಪ
ತಿಲಕರೈವರು ವಿಹಿತಸಂಧ್ಯಾ
ವಳಿಗಳನು ವಿಸ್ತರಿಸಿ ಕುಂತಿಯ ಚರಣಕಭಿನಮಿಸಿ |
ಜಲರುಹಾಕ್ಷನ ನಾಮಕೀರ್ತನ
ಕಲಿತಪರಮಾನಂದರಸದಲಿ
ಮುೞುಗಿ ಮುದದಿಂದಿದ್ದರವರು ಕುಲಾಲಭವನದಲಿ || ೧೫

ಸಿಲುಕಿದುದು ಜನದೃಷ್ಟಿ ಬಲುಕ
ತ್ತಲೆಯ ಬಂದಿಯೊಳಂಧಕಾರದ
ಜಲಧಿಯಲಿ ಜಗವದ್ದುದೇನೆಂಬೆನು ಮಹಾದ್ಭುತವೆ |

---

1 ತ್ಸೌಹಾರ್ದದಿಂದ, ಖ. ಚ.

ನಳಿನಮಿತ್ರನ ಬೇಹುಕಾಱಿ
ಸುಳಿವೊ ತಿಮಿರದ ಪ್ರಳಯವೋ ಯೆನೆ
ನಿಳಯನಿಳಯದ ಸೊಡರು ತಳಿತುದು ಕೂಡೆ ನಗರಿಯಲಿ ॥ ೧೬

ಇವರಿಗುಂಟೇ ತೈಲದೀಪ್ತಿಗೆ
ರವಣಿವಲ್ಲಿ ಕುಲಾಲನಿಳಯಕೆ
ಕವಿವ ಕಗ್ಗತ್ತಲೆಯ ನುಗ್ಗೊತ್ತಿದುದು ಬೇಱೊಂದು ।
ನವೆಯುವತಿಯಾಭರಣಮಣಿರುಚಿ
ನಿವಹವೀಕೆಯ ನಯನಕಾಂತಿಯು
ಮವನಿಪತಿ ಕೇಳ್ ನಿಮ್ಮ ಪಿತನ ಪಿತಾಮಹರ ಪರಿಯ ॥ ೧೭

ಬಟಿಕಲಾರೋಗಣೆಯ ಮಾಡಿದ
ರೊಲಿದು ಭಿಕ್ಷಾನ್ನಾದಿಭುಕ್ತದ
ಬಟಿಕ ದ್ರೌಪದಿ ವುಂಡಳೈವರ ಶೇಷದನ್ನವನು ।
ನಳಿನಮುಖಿ ಕೈದೊಳೆದು ಬಂದಾ
ನಿಳಯದಲಿ ಕುಳಿತಿರಲು ಕುಂತಿಯು
ಬಟಿಯ ಕುಳಿತುಱೆ ಕಾಲನೊತ್ತಿದಳಾಗ ಸೊಸೆತನದಿ ॥ ೧೮

ಜನಪನಂದನಗೊಂದು ಕೃಷ್ಣಾ
ಜಿನವನಿತ್ತರು ಶಯನಭಾಗಕೆ
ಜನನಿಯಂಘ್ರಿಯ ಬಟಿಯಲೊಱಗಿದರೈವರೊಂದಾಗಿ ।
ವನಿತೆಯವರಂಘ್ರಿಗಳ ತಲೆದಿಂ
ಬಿನಲಿ ಮಲಗಿದಳಂದಿನಾಹವ
ಜನಿತಕೃತ್ಯವ ನುಡಿವುತಿರ್ದನು ಪಾರ್ಥನರಸಂಗೆ ॥ ೧೯

ಆಗ ಯುದ್ಧ ಕೌಶಲ ನಿರೂಪಣ.

ಗೆಲಿದ ಪರಿಯನು ಕೌರವೇಂದ್ರನ
ದಱವ ಮುಱಿದಂದವನು ಕರ್ಣನಿ
ಗಳುಕದೆಚ್ಚ ಶರಪ್ರಯೋಗವ ಚಾಪಕೌಶಲವ ।

ಬಲಜಲಧಿ ಮುಕ್ಕುಳಿಸಿದರೆ ಮಂ
ಡಳಿಸಿ ಮೊಗೆದಂದವನು ಶಸ್ತ್ರ
ವಳಿಯ ಸಂಹರಣವನು ವಿವರಿಸಿದನು ಮಹೀಪಾಲ ॥ ೨೦

ಕುದುರೆಯೇಱಾಟವನು ಮಾತಂ
ಗದ ಸುಶಿಕ್ಷಾಭೇದವನು ರಥ
ವಿದಿತಕೌಶಲವನು ಶರಾಸನವೇದಸಂಗತಿಯ ।
ಮದವದರಿಭಂಜನದ ದಿವ್ಯಾ
ಸ್ತ್ರದಲಿ ಮುಕ್ತಾಮುಕ್ತಸಮರಂ
ಗದ ಸುಸಂಗತಿಯಿಂದ ನೂಕಿದರಿವರು ಯಾಮಿನಿಯ ॥ ೨೧

ಆಯುಧದ ಲಕ್ಷಣವನಾದಿ
ವ್ಯಾಯುಧದ ಮಂತ್ರಪ್ರಭಾವವ
ನಾಯುಧದ ವಿವಿಧಪ್ರಯೋಗವನದಱ ಕೌಶಲವ ।
ರಾಯರಂಗದ ಶಕ್ತಿವರ್ಗದ
ಪಾಯಗುಣವಿಕ್ರಮಪರಾಕ್ರಮ
ನಾಯಕರ ಗುಣಕಥನದಲಿ ನೂಕಿದರು ಯಾಮಿನಿಯ ॥ ೨೨

ಸಾಕು ನಮ್ಮಯ ಮಾತು ರಾತ್ರಿಯ
ನಾಕುಜಾವದೊಳೆರಡು ಸಂದವು
ಬೇಕು ನಿದ್ರೆಯೊಳಿರವದೆನುತಲಿ ರಾಯನರ್ಜುನಗೆ ।
ಆಕುಲಾಲನ ಭವನದೊಳು ಲೋ
ಕೈಕವೀರರು ಸರ್ವಗುಣಗಣ
ದಾಕುಮಾರಕರರಸ ಫಲುಗುಣನೆಂದ ವಿನಯದಲಿ ॥ ೨೩

ಆಗ ಧೃಷ್ಟದ್ಯುಮ್ನನು ಕಶ್ಯಪನೆಂಬ ಬ್ರಾಹ್ಮಣಸಹಿತನಾಗಿ
ಇದನ್ನು ಕೇಳುವಿಕೆ.

ಮುನಿವಳೀವಧುವೆಂದು ನಿದ್ರಾಂ
ಗನೆಯನೊಳಕಿದರವನಿಪರು ಕಾ

ಮುನಿಸಹಿತ ಬಚ್ಚಿಕಿತ್ತಲೀಪಾಂಚಾಲಭೂಪತಿಯು ।
ತನುಜನಿವರ ಪರೀಕ್ಷೆಗೋಸುಗ
ಮುನಿಪ ಕಶ್ಯಪ ಕೂಡಿ ಕೇಳಿದ
ನಿನಿತು ಮಾತೆಲ್ಲವನು ಮಱೆಯಲಿ ನಿಂದು ರಜನಿಯಲಿ ॥ ೨೪

ಬಂದು ಧೃಷ್ಟದ್ಯುಮ್ನನೈಯ್ಯಂ
ಗೆಂದನಿನನಸ್ತಮಯಸಂಧ್ಯಾ
ವಂದನಾನಂತರದಿ ಶಸ್ತ್ರಾಸ್ತ್ರ ಪ್ರಸಂಗದಲಿ ।
ಸಂದಗಜಹಯಕಥನಭೂಮಿಪ
ರಂದದಲಿ ನೃಪನೀತಿಸಂಗತಿ
ಯಿಂದ ರಾತ್ರಿಯು ಕಳೆದರಾರೆಂದಱಿಯೆ ನಾನೆಂದ ॥ ೨೫

ಧರಣಿಪತಿ ಕೇಳ್ ವಿಪ್ರರಾದೊಡೆ
ಸರಸನವಭೋಜನದ ಕಥೆ ಮೇಣ್
ವಿರಚಿತದ ವೇದಾಂಗವೈದಿಕತರ್ಕ ಶಾಸ್ತ್ರದಲಿ ।
ಅರಸಗಳಿಗಾಯುಧದ ಗಜರಥ
ತುರಗದೇಱಾಟದ ಮಹಾಸ್ತ್ರದ
ವಿರಚನೆಗಳವು ಜಾತಿವಿದ್ಯೆಗಳೆಂದನಾಮುನಿಪ ॥ ೨೬

ಭೂರಿಭೂಧನವರ್ಧನವ್ಯಾಪ
ಹಾರಲಾಭಾಲಾಭಚಿಂತೆಗ
ಳೂರುಜನಿತರಿಗಿಂತು ಶೂದ್ರಗೆ ಕೃಷಿಯು ಮಾತುಗಳು ।
ಆರಿಗಾದೊಡೆ ಜಾತಿಧರ್ಮದ
ಸೇರುವೆಗಳೇ ತಿಳುಹುವುವು ನ
ಮ್ಮಾರಯಿಕೆಗಿವರಿಂದು ಕ್ಷತ್ರಿಯರೆಂದನಾಮುನಿಪ ॥ ೨೭

ಇವರು ಪಾರ್ಥಿವರೊಳಗೆ ಕೇಳ್ಪಾಂ
ಡವರು ನಿಸ್ಸಂದೇಹವೆಂದೇ
ನಿವಗೆ ನಾವಸ್ನವೆ ವಿವಾಹದ ಪೂರ್ವಕಾಲದಲಿ ।

ಅವರನುಪಚರಿಸೇಟು ರಚಿಸು
ತ್ತವವನೀಗಳು ಪೂರ್ವಗಿರಿಯಲಿ
ರವಿಯುದಯವೆಂದಾಪುರೋಹಿತ ತಿಳುಹಿದನು ನೃಪನ ॥ ೧೮

ಪಾಂಡವರು ಕ್ಷತ್ರಿಯರೆಂದು ದ್ರುಪದನ ನಿಶ್ಚಯ.

ಬಸಗೆಯಾಯಿತು ಮತ್ತೆ ಗುಡಿಯು
ತ್ತಿಸಿತು ನಗರಿಯೊಳಧಿಕಹರ್ಷ
ಪ್ರಸರದಲಿ ರೋಮಾಳಿ ಪಲ್ಲವಿಸಿದುದು ಭೂಪತಿಯ ।
ಬಿಸಜಬಂಧುವಿನುದಯದಲಿ ನೃಪ
ವಿಸರಸಹಿತ ಕುಲಾಲಭವನದಿ
ವಸುಮತೀವಲ್ಲಭರ ಕಂಡನು ಬಂದು ಪಾಂಚಾಲ ॥ ೧೯

ಏಟ ಬಿಜಯಂಗೈವುದೆಂದು ನೃ
ಪಾಲಕರನುಚಿತದಲಿ ನಿಜರಾ
ಜಾಲಯಕೆ ಕೊಂಡೊಯ್ದು ನೀಕ್ಷಿಸುತಸಿಬರಿಂಗಿತವ ।
ಮೇಲುವೊಗವ ಗಭೀರಗತಿಯು ಛ
ಡಾಳನನು ಕಂಡಿವರು ರಾಯರ
ಪೀಟಿಗೆಗಳಹುದೆನುತ ನಿಶ್ಚಯಿಸಿದನು ಮನದೊಳಗೆ ॥ ೨೦

ಪರೀಕ್ಷೆಗಾಗಿ ಕಟ್ಟಿಸಿದ ಮನೆಗಳಲ್ಲಿ ಇವರು ಕ್ಷತ್ರಿಯ
ಗೃಹಕ್ಕೆ ಹೋಗುವಿಕೆ.

ಬರಲು ದ್ರುಪದನು ನಾಲ್ಕು ಮನೆಯನು
ಪರಿಪರಿಯೊಳಳವಡಿಸಿ ಯಿರಿಸಿದ
ನಿರುತ ವರ್ಣಾಶ್ರಮವನಱಿಯಲು ರಚಿಸಿದನು ವಿಧಿಯ ।
ಅರಸ ಕೇಳಾಪಾಂಡುಪುತ್ರರು
ಬರಲು ಬೀಡಾರವನು ತೋಱಿದ
ನೊರೆದೊರೆದು ದ್ರೌಪದಿಯ ಪಿತನುಱೆ ನಾಲ್ಕು ಭವನಗಳ ॥ ೨೧

ಮೊದಲಮನೆಯಲಿ ದರ್ಭೆ ತುಲಸಿಯು
ಮುದದಿನಾವರಗೋಪಿಚಂದನ

ಸದನದಲಿ ಶ್ರೀಸಾಲಗ್ರಾಮದ ಪೂಜೆ ಮಾಡಿರಲು |
ಅದಱಿನಾತಱುವಾಯ ಮನೆಯೊಳು
ಗಧೆ ಶರಾಸನ ಖಡ್ಗ ಮುದ್ಗರ
ಪಧಟುಚಕ್ರ ತ್ರಿಶೂಲ ತುಂಬಿರೆ ಬೞಿಕ ಮೂಱಱಲಿ ‖ ೩೦

ಸೊಗಸು ಮಿಗಲಾ ತ್ರಾಸು ಕಟ್ಟಳೆ
ಯೊಗುಮಿಗೆಯ ಮಾಷಗಳ ಪದ್ಧತಿ
ಯುಗಲದಲಿಹರಹಿದನು ಬಗೆಬಗೆಯಲ್ಲಿ ನಾಲ್ಕಱಲಿ |
ನೊಗವು ನೇಗಿಲು ಕುಂಟೆ ಕೂರಿಗೆ
ಶಕಟ ಜೊತ್ತಿಗೆ ಘಂಟೆ ಬಾಸಿಗ
ನಗವ ತೋಱಲಿಕಿವರು ಹೊಕ್ಕರು ಶಸ್ತ್ರಭವನವನು ‖ ೩೩

ಕಳೆಗಳಿವರಲು ಕ್ಷತ್ರಜಾತಿಯ
ಹೊಳಹಿನಂತಿದೆ ಯೆನುತ ದ್ರುಪದನು
ಬೞಿಕ ಮಜ್ಜನಶಾಲೆಗಾಯತ ಮಾಡ ಹೇೞಿದನು |
ಕೆಲರು ವಾಸಿತತೈಲ ಪೂಸಲಿ
ಕೆಲರು ತೈಲಾದಿಗಳನಿಕ್ಕಲಿ
ಕೆಲರದುಷ್ಣೋದಕವ ನೆಱೆಯಲಿ ಮಜ್ಜನಿಯರಸರಿಗೆ ‖ ೩೪

ಅವರಿಗೆ ಮಂಗಳಸ್ನಾನಾದಿ ಉಪಚಾರ.

ಮುದದಿ ಮಂಗಳಮಜ್ಜನವ ಮಾ
ಡಿದರು ದಿವ್ಯಾಂಬರವನುಟ್ಟರು
ಸುದತಿಯರು ಪರಿವಾಣದಾರತಿಗಳನು ಕೈಕೊಳುತ |
ಪದಕ ಕರ್ಣಾಭರಣ ಹಾರದಿ
ಮುದದಿನೊಪ್ಪಂಬಡೆದವರ ಪೂ
ಸಿದರು ಮಲಯಜಯಕ್ಷಕರ್ದಮವೊಲ್ಲೆಮಲ್ಲಿಗೆಯ ‖ ೩೫

ಬಾಸಿಗದ ಸೊಸಲುಗಳಲೆಸೆವ ಮ
ಹೀಶರೈವರು ಮಂಟಪದ ನೆಲೆ

ವಾಸಿಯಲಿ ಕುಳ್ಳಿರ್ದರದುಭುತರಾಜತೇಜದಲಿ |
ಆಸೊಸೆಯು ಸಂಗಾತ ಕುಂತಿ ವಿ
ಳಾಸದಲಿ ಕುಳ್ಳಿರ್ದಘನವಿ
ನ್ಯಾಸವನು ಜನ ನೋಡುತಿರ್ದುದು ಬಿಗಿದ ಬೆಱಗಿನಲಿ || ೧೬

ಬಳಿಕ ದ್ರುಪದನು ತನ್ನ ವಧುವಿಂ
ಕಳಶಜಲವನು ತರಿಸಿ ಹರುಷದಿ
ಪುಳಕಿಸುತ ಮಧುಪರ್ಕವನು ಮಾಡಲಿಕೆ ಕುಳ್ಳಿರ್ದ |
ಲಲಿತಮಂಡಲಮಾಡಿ ಅರ್ಚಿಸಿ
ನಳಿನನಾಭನ ನೆನೆದು ಪಾಂಡವ
ತಿಲಕರೈವರ ನೋಡಿ ಕರೆದನು ಮನಸಿನೊಲವಿನಲಿ || ೧೭

ಜಲವನಂಜಲಿಯಿಂದ ದ್ರುಪದನು
ಸೆಳೆದು ಮೊಱೆದವೆ[1] ಬರಲಿ ಯಂತ್ರವ
ಗೆಲಿದ ಗರುವನು ನಿಮ್ಮ ಪಂಚಕದೊಳಗೆ ಯೆನೆ ನಗುತ |
ಇಳಿದನರಸನು ಭೀಮನೊಯ್ಯನೆ
ಸುಳಿವನರ್ಜುನ ಹಿಂದೆ ಯಮಳರು
ನಳಿನವದನೆಯು ಹೊರೆಗೆ ಬಂದರು ಭೂಪ ಕೇಳೆಂದ || ೧೮

ಬಿಸುಟನಂಜಲಿಯುದಕವನು ನಿ
ಪ್ಪಸರದಲಿ ಬೆಱಗಾಗಿ ಭೂಪನ
ಮುಸುಡನವೆಯಿಕ್ಕದೆ ನಿರೀಕ್ಷಿಸುತೆಂದನಾದ್ರುಪದ |
ಅಸುರರೋ ಸುರರೋ ಭುಜಂಗರೊ
ವಸುಮತೀಶರು ನಿಮ್ಮೊಳೀಮಾ
ನುಷರ ಪರುಟವವಿಲ್ಲ ನೀವಾರೆಂದು ಬೆಸಗೊಂಡ || ೧೯

ನಾವು ಪಾಂಡವರೆಂದು ಹೇಳುವಿಕೆ.

ಈತನಗ್ಗದ ಭೀಮನರ್ಜುನ
ನೀತನಿವರೇ ಯಮಳರೆಂಬವೆ

1 ಕೊಂಡನು, ಚ.

ರೀತಗಳು ನಮ್ಮಿಂದ ಕಿಱಿಯರು ನಾವು ಪಾಂಡವರು ।
ಮಾತೆ ಯೆಮ್ಮೈವರಿಗೆ ಜಗತೀ
ಖ್ಯಾತೆ ಕುಂತೀದೇವಿ ನೇಮಿಸ
ಲೀತಳೋದರಿಯಾದಳೆಮ್ಮೈವರಿಗೆ ವಧುವೆಂದ ‖ ೪೦

ದ್ರೌಪದಿಗೆ ಪಂಚಪತ್ನೀತ್ವವಿಚಾರ.

ಕೊಂಡು ಹರಿದುದು ಹರುಷವಾಬ್ರ
ಹ್ಮಾಂಡದಗ್ರಕೆ ಮನವನೈವರು
ಗಂಡರೆಂದೆನೆ ಯಿೞಿದುದಾಗಳೆ ಮನ ರಸಾತಳಕೆ ।
* ಕಂಡು ಬಲ್ಲಿರೆ ಕಂಗಳಲಿ ಕಿವಿ
ಗೊಂಡು ಕೇಳ್ದಿರೆ ಮುನ್ನ ನಮಗೀ
ಭಂಡತನವನು ಮಾಡಿದುದು ವಿಧಿಯೆಂದನಾ ದ್ರುಪದ ‖ ೪೧

ಲೋಕಸಮ್ಮತವಲ್ಲ ಶಾಸ್ತ್ರಾ
ನೀಕದಭಿಮತವಲ್ಲ ಕಾಪಥ
ವೇಕೆ ನಿಮಗಿದು ಪಾಂಡುತನುಜರು ನೀವ್ ಮಹಾತ್ಮರಲೆ ।
ಪ್ರಾಕೃತರೆ ನೀವಕಟ ನಿಮ್ಮ ವಿ
ವೇಕ ಲೇಸಾಯ್ತಿಹಪರಕೆ ಮಿಗೆ
ಲೋಕಕಿದು ಸಾಧನವೆ ಯೆಂದನು ದ್ರುಪದಭೂಪಾಲ ‖ ೪೨

ಕಾಮಮೋಹಿತರಲ್ಲ ವಿಷಯ
ಸ್ತೋಮಭಂಗಿತರಲ್ಲ ಧರ್ಮದ
ಸೀಮೆಯೊಳಗಣುಮಾತ್ರವಳುಪುವರಲ್ಲ ಜಗವಱಿಯೆ [1] ।

---

ಕಂಡು ಬಲ್ಲವೆ ಕಂಗಳಿದವುಂ
ಕೊಂಡು ಬಲ್ಲದೆ ಕಾಲ ನಮಗೀ
* ಭಂಡತನವನು ಮಾಡುವರೆ ನೀವೆಂದನಾ ದ್ರುಪದ, ಠ. * ‖

1 ನೀವುಧಾರ್ಮಿಕರು, ಚ. ಥ.

ಈಮಹಾಸತಿ ಯೆಮಗೆ ಜನನಿಯು
ನೇಮದಲಿ ವಧುವಾದಳದುವೆ ವಿ
ರಾಮವೇಕೆ ವಿವೇಕವೆಂದನು ಧರ್ಮಸುತ ನಗುತ ॥　　೪೩

ಏಕಪತಿ ಬಹುಸತಿಯರೆಂಬುದು
ಲೋಕಪದ್ಧತಿ ಕಂಡೆವಾವಿಂ
ದೇಕಪತ್ನಿಗೆ ಪುರುಷಪಂಚಕವೆನು ಮಹಾದೇವ ।
ಲೋಕಶಾಸ್ತ್ರವಿರುದ್ಧವೆನು ಕಿವಿ
ಯೊಳಕರಿಸುತಿದೆ ಕಂಗಳಿಗೆ ಸು
ವ್ಯಾಕುಲಿತ ಹಿರಿದಾದುದೆಂದನು ದ್ರುಪದಭೂಪಾಲ ॥　　೪೪

ಆಗ ವ್ಯಾಸರ ಆಗಮನ.

ಆಸಮಯದಲಿ ನೆಗಳ್ದ ವಾರ್ತಾ
ಘೋಷವನು ನೆಱೆ ತಿಳಿದು ಮನದಲಿ
ಲೇಸನಿದನಾನಱಿಪೆನೆಂದುದ್ಯೋಗವನು ಮಾಡಿ ।
ಕೇಶವನ ನಿಜಮೂರ್ತಿಯೆನಿಪಾ
ವ್ಯಾಸಮುನಿ ಯೈತರಲು ಕಂಡು ಮ
ಹೀಶರಿದಿರೆದ್ದೆಱಗಿದರು ಪದಯುಗಕೆ ವಿನಯದಲಿ ॥　　೪೫

ಆಸಭೆಯ ವಂದನೆಯ ಕೊಳುತಲು
ವ್ಯಾಸಮುನಿ ನಡೆತಂದನಲ್ಲಿ ಮ
ಹೀಸುರರು ಕುಂತಿಜರು ಕಂಡರು ಕಾಣಿಕೆಯನಿಕ್ಕಿ ।
ದೋಷವರ್ಜಿತಧರ್ಮವನು ನಿ
ರ್ದೈಸಲಱಿಯದ ಮಂದಮತಿಗೆ ಮ
ಹೇಶ ಕೃಪೆಮಾಡಿದನೆನುತ ಮೆಯ್ಯಿಕ್ಕಿದನು ದ್ರುಪದ ॥　　೪೬

ನೆಗಹಿದನು ದ್ರುಪದನನು ಯಮಜಾ
ದಿಗಳನೆತ್ತಿದನೊಬ್ಬರೊಬ್ಬರ

ತೆಗೆದು ತಕ್ಕೈಸಿದನು ಮುದದಲಿ ಪಾಂಡುನಂದನರ |
ದುಗುಡವೇಕೈ ದ್ರುಪದ ನಿನ್ನಯ
ಮಗಳ ಸೌಭಾಗ್ಯವನು ರಂಭಾ
ದಿಗಳು ರಂಜಿಸಲರಿಯರೆಂದನು ಕೃಷ್ಣಮುನಿ ನಗುತ ‖ ೪೭

ಅಹುದಲೇ ಬಟೆಕೇನು ತಂಗಿಯು
ಬಹಳಸುಕೃತೋದಯದಲರಗಿನ
ಗೃಹದ ಗಂಟಲನೊದೆದು ಸುಳಿದರು ಪಾಂಡುನಂದನರು |
ಬಹಳ ಯಂತ್ರವನೆಚ್ಚ ಪಾರ್ಥನು
ಮಹಿಳೆಗೆನ್ನ ಕುಮಾರಿಗೀಗಳು
ಬಹುಪತಿಗಳಾಯ್ತಿದನು ನೀವ್ ನಿರ್ಣಯಿಸಿ ಕೊಡಿಯೆಂದ ‖ ೪೮

ದ್ರುಪದಧೃಷ್ಟದ್ಯುಮ್ನ ಪಾಂಡವ
ನೃಪರು ಕಶ್ಯಪಸಹಿತ ಹೊಕ್ಕರು
ವಿಪುಳತರಲಾವಣ್ಯದಿಂದೇಕಾಂತಭವನವನು |
ನೃಪತಿ ಸಂಶಯವೇನು ನಾವದ
ನಪಹರಿಸುವೆವು ಪಾಂಡುಪುತ್ರರ
ನುಪಚರಿಸು ವೈವಾಹವನು ವಿಸ್ತರಿಸು ಸಾಕೆಂದ ‖ ೪೯

ವಿಧಿವಿಹಿತಲೋಕಪ್ರಧಾನವ
ನಧಿಕರಿಸಿ ವರ್ಣಾಶ್ರಮಕೆ ಸು
ವ್ಯಧಿಕರಣ ಹೊಗದಂತೆ ಸದ್ವ್ಯವಹಾರಮಾರ್ಗದಲಿ |
ವಿಧಿಸಿದೊಡೆ ನಿಮ್ಮಂಘ್ರಿಗಳ ಸ
ನ್ನಿಧಿಯೆ ಪಾಣಿಗ್ರಹಣಸಾಧನ
ವಿದುವೆ ಯಿದೆ ಪಾರ್ಥಂಗೆ ಮದುವೆಯು ಮಾಡಿ ನೀವೆಂದ ‖ ೫೦

ಧರಣಿಪತಿ ಕೇಳವರ ತಾಯ್ನು
ನ್ನರಿಯದಾಡಿದಳಾ ನುಡಿಯನು

ತ್ತರಿಸ ಬಾರದು ಧರ್ಮವಿದು ವರಮಾತ್ರ ಭಕ್ತರಿಗೆ ।
ಗುರುವಚನವೇ ಮಿಥ್ಯವೆಂದುಪ
ಚರಿಸಿತೇನಿದು ಪೂರ್ವಜನ್ಮದ
ಸರಸಿಜಾಕ್ಷಿಯ ಕಥೆಯನರುಪುವೆನೆಂದನಾಮುನಿಪ ॥ ೫೧

ಮೂವತ್ತು ಎರಡನೆಯ ಸಂಧಿ ಮುಗಿದುದು.

---

## ಮೂವತ್ತು ಮೂರನೆಯ ಸಂಧಿ.

### ಸೂಚನೆ

ಅನಿಲವಧು ತಾ ಮುಖ್ಯದೇವಾಂ
ಗನೆಯರೈವರು ಕೂಡಿ ಧರಣಿಗೆ
ಜನಿಸಿದರು ಪದುಮಜನ ಶಾಪದೊಳವರು ಮುಖುಮುಖುದಿ ॥

### ದ್ರೌಪದಿಯ ಪೂರ್ವಜನ್ಮದ ವೃತ್ತಾಂತ.

ಕೇಳು ಜನಮೇಜಯ ಧರಿತ್ರೀ
ಪಾಲ ತಾ ಶ್ರೀವ್ಯಾಸದೇವರು
ಹೇಳಿದರು ದ್ರೌಪದಿಯ ಪೂರ್ವಾಪರದ ಸಂಗತಿಯ ।
ಮೇಲೆ ತಾನಿಂದ್ರಾಣಿಯಲ್ಲಿಗೆ
ಕಾಲನಂಗನೆಯಶ್ವಿನೀಸುರ
ರಾಲತಾಂಗಿಯು ಗೂಡಿ ಬಂದಳು ಬಳಿಕ ಶಚಿದೇವಿ ॥ ೧

### ಶಚ್ಯಾದಿಗಳು ಬ್ರಹ್ಮನನ್ನು ಪರೀಕ್ಷಿಸುವಿಕೆ.

ಕೂಡಿ ತಾವ್ ಮಾತಾಡಲೊಂದುವ
ನಾಡಿದಳು ಕಮಲಜನು ಜೀವವ
ನೋಡಿ ಬಲ್ಲನೊ ಯುಖಿಯನೆನುತವೆ ಮೂವರೊಂದಾಗಿ ।

ರೂಢಿಗಚ್ಚರಿಯಾಗಿ ಯೊಂದೇ
ಗೂಡಿನಲಿ ಬಂದಂಬುಜಾತನ
ನೋಡಿ ನಿಂದರು ಸುರಮನೋಹರದಿವ್ಯರೂಪದಲಿ ॥ ೨

ಕಮಲಜನು ಕಂಡವರ ನಕ್ಕನು
ಕುಮತಿಯಲಿ ನೀವೆಮ್ಮನೀಕ್ಷಿಪ
ಕ್ರಮಗಳಲಿ ನೀವ್ ಬಂದಿರಲ್ಲದೆ ಬರವು ಮತವಲ್ಲ ।
ಅಮಿತಜೀವರ ಕರ್ಮವೃತ್ತಿಯು
ಕ್ರಮವ ತಾನೇ ಬಲ್ಲನಾಗಳು
ಭ್ರಮಿಸನ್ನೆ ಸರ್ವಜ್ಞಕಮಲಜನಿವರಿಗಿಂತೆಂದ ॥ ೩

ಶಚ್ಯಾದಿಗಳಿಗೆ ಬ್ರಹ್ಮಶಾಪ.

ನೀವು ಮಾಡಿದ ಪಾಪ ನಿಮ್ಮನು
ನೋವಿಸುವುದೈ ಮೂಱುಜನ್ಮಕೆ
ದೇವಿಯರೆ ನಿಮಗೊಂದುಜನ್ಮಕೆ ಯಿರಲಿ ಕೇಳೆಂದ ।
ಭಾವದಲಿ ಸರ್ವಜ್ಞರಾದೊಡೆ
ನೋವಿಸದೆ ಕಾಯೆಂದು ವಾಣೀ
ದೇವಿಯರು ಕಳುಹಿದರು ಕಮಲಜನಾಜ್ಞೆಗೊಂಡವರ ॥ ೪

ಆದರೆಯು ಜನ್ಮಾಂತ್ಯದಲಿ ನಿಮ
ಗಾದಯಾಂಬುಧಿ ವಾಸುದೇವನು
ಮೇದಿನಿಗೆ ಜನಿಸುವನು ಮುಂದಕೆ ನಿಮಗೆ ಕರುಣಿಸುವ ।
ಯಾದವೇಂದ್ರನು ದ್ವಾಪರಾಂತ್ಯದ
ಮೇದಿನೀಶರ ಕೆಡಹಿ ಭೂಮಿಯೊ
ಳಾದ ಭಾರವನಿಳುಹಿ ಬರಲಿಕ್ಕೆಂದು ಕಂಡವರ ॥ ೫

ಮೂಱುಜನ್ಮದ ನಿಮ್ಮ ಗೂಡಿಗೆ
ಪಾರುಖಾಣೆಗಳೆಂದು ನೇಮಿಸಿ
ನಾರಿಯರ ಕಳುಹಲಿಕೆ ಬಂದರು ಜನ್ಮವೊಂದಱಲಿ ।

ಮುಖಲೋಕಾಧೀಶನರಸಿಯು
ಮೂಖಿತ್ತೈವರ ಬ್ರಹ್ಮಶಾಪವು
ಮಿಾಖಲಾರಳವಲ್ಲ ಕಮಲಜನಾಜ್ಞೆಯೆಂಬುದನು ॥ ೬

ಇನ್ನು ಕೇಳ್ಳೈ ದ್ರುಪದ ಮುಂದಕೆ
ಮನ್ನಿಸಿಯೆ ಪಾರ್ವತಿಯು ಮೋಳದೆ
ತನ್ನ ಪತಿಯೊಡನಾಡುತಿರಲಿಕೆ ಕಂಡಳಿಂದ್ರಾಣಿ ।
ಪನ್ನಗನ ಸಿರಿ ಚರಣದಾಂಕನು
ತನ್ನ ಲೋಕದೊಳಿರಲು ಶಚಿಯುಷೆ
ತನ್ನ ದೇಹದೊಳಿರಲು ಶ್ಯಾಮಳದೇವಿ ಸಹಿತಾಗ ॥ ೭

ಹರನ ಸತಿಗೆ ಬ್ರಹ್ಮಶಾಪ.

ಇರುತಿರಲು ಗಿರಿಸುತೆಯು ನಕ್ಕಳು
ಸರಸಿರುಹಸಂಭವನ ಶಾಪವ
ನರಸ ಕೇಳ್ಳೈ ಶಾಪವಾಯಿತು ಹರನ ಸತಿಗಂದು ।
ವರಸುರಾಂಗನೆಯರಿರ ನಾಲ್ವರ
ಶರಿರವೊಂದಾಗಿರಲು ಧರೆಯಲಿ
ಧರಿಸುವುದು ನೀವ್ ನಾಲ್ಕು ಜನ್ಮದೊಳನ್ಯದೇಹವಲಿ ॥ ೮

ಆದರೆಯು ನೀವ್ ನಿಮ್ಮ ಪುರುಷರು
ಮೇದಿನಿಯಲೈದುವುದದೆಂದಾ
ಗಾದಯಾಂಬುಧಿ ಕಮಲಪುತ್ರನು ವರವ ದಯಮಾಡೆ ।

ಭಾರತಿಯನ್ನು ಕುರಿತು ತಪವಂ ಮಾಡಿರೆಂದು ಬ್ರಹ್ಮನ ಅಪ್ಪಣೆ.

ಆದಿವಿಜಯುವತಿಯರಿಗೆಂದನು
ವಾದವಿಲ್ಲದೆ ನೀವು ನಾಲ್ವರು
ವೇದಿಸುವುದೌ ತಪವ ಮುಖ್ಯಪ್ರಾಣನಂಗನೆಗೆ ॥ ೯

ಎಂದು ಕಳುಹಿದ ಬಟ್ಟಿಕ ಸತಿಯರು
ಬಂದರೈ ಧರಣಿಯಲಿ ತಪಿಸಲಿ
ಕಂದು ಮಾಡಿದರೊಂದು ಸಾವಿರವರುಷ ತಪಸುಗಳ ।
ಅಂದದಕೆ ತಾ ಮೆಚ್ಚಿ ನೀವೇ
ನೆಂದುದನು ಸಲಿಸುವೆನದೆಂದರೆ
ಯಿಂದುಮುಖಿ ನಿಮ್ಮಂಗಸಂಗವ ಮಾಡಿ ನಮ್ಮವನು ॥ ೧೦

ಶಚ್ಯಾದಿಗಳ ಪ್ರಾರ್ಥನೆಯಂತೆ ಭಾರತಿಯು ಭೂತಳದಲ್ಲಿ ಜನಿಸುವೆ
ನೆಂದು ಹೇಳುವಿಕೆ.

ನಮ್ಮ ಪತಿಸಂಗವನೆ ಕರುಣಿಸು
ನಮ್ಮ ಪತಿಗಿಂದಧಿಕದೇವರ
ನಮ್ಮ ಕಾಣಿಸು ತಾಯೆ ಮುಖ್ಯಪ್ರಾಣನಂಗನೆಯೆ [1] ।
ನಿಮ್ಮ ಕೃಪೆಯಿಂದೆಮಗೆ ಹಬ್ಬಿದ
ಕರ್ಮವನು ಕಡೆಗಾಂಬೆವೆಂದರು
ಸುಮ್ಮನಿರದ [2] ರಸಿಯರು ಭಾರತಿದೇವಿಗೊಲವಿನಲಿ ॥ ೧೮

ಎನಲು ನಿಮ್ಮಯ ಕೂಡೆ ನಾನೇ
ಜನಿಸುವೆನು ಧರಣಿಯೊಳಗೆಂದುಚಿ
ಜನಿಸಿದಳು ತಾನಾಗ ವಾರುಣಿಯೆಂಬ ನಾಮದಲಿ ।
ಜನಿಸಿದಳು ನಳನಂದಿನೀಯೆಂ
ದೆನಿಪ ನಾಮದಿ ಬಟ್ಟಿಕ ಭೂಸುರ
ತನುಜೆ ಯಾದವಪಳಿಂದ್ರಸೇನಾ ಯೆಂಬ ನಾಮದಲಿ ॥ ೧೯

ಅನಿಮಷಾಬ್ದ ಸಮಾಪ್ತವಾದುವು
ವನಿತೆಯಾಯಾಶ್ರಮದಲೊಂದಿನ
ಮನೆಯುಲಾಡುತ್ತಿರಲು ಶಂಕರ ಬಂದ ವಟುವಾಗಿ ।
ವನಿತೆ ತಮ್ಮಾಶ್ರಮದಲೆಡೆಯುಲಿ

---

1 ನಂಗವನು, ಘ ಙ.  2 ಬೊಮ್ಮವಿಧಿಯ, ಘ. ಙ.

ವಿನುತ ಹೊಸವಟುವೆಂದು ನಗುತಲು
ತನುಜೆ ಸೆಳೆದಳು ಶಿವನ ಕೌಪವ ದ್ರುಪದ ಕೇಳೆಂದ ॥ ೧೩

ಬಳಿಕ ಶಿವ ಕರ ಕೊಂಡುಕೌಪನು
ಯಿಳೆಯು ಮಾನವನಂತೆ ಲಜ್ಜೆಯು
ಬಳೆಯು ತೊಡಗಲ್ಕಿಂದ್ರಸೇನೆಯು ಕಂಡಳಿದನಾಗ ।
ಇಳೆಗಪೂರ್ವವದೀತ ಹೊಸವಟು
ಬಳಿಕೆನುತಲಾ ಯುವತಿ ತನ್ನಯ
ಗೆಳೆಯರಿಂಗಱುಹಿಸದೆ ಕಿಱುಗಣೆ ಸೀಱಿ ಶಿವಗೀಯೆ ॥ ೧೪

ವರಕುಮಾರಿಯು ತನ್ನ ಮನದಲಿ
ನಿರುತ ಬ್ರಹ್ಮಾರ್ಪಣವ ಮಾಡಲು
ಹರನು ಮನ್ನಿಸಿ ಕೌಪುಗೊಂಡನು ಕೇಳ್ಮಹೀಪತಿಯೆ ।
ಸರಸಿಜಾಕ್ಷಿಗೆ ಶಿವನು ತತ್‌ಕ್ಷಣ
ಹರಕೆ ಯಿತ್ತನು ನಿನ್ನ ಮಾನವ
ಗರುಡಸಿಂಧವ ದೇವ ಕಾಯಲಿ ಯೆನುತ ತಿರುಗಿದನು ॥ ೧೫

ಆಫಲವು ಕೌರವನ ಕೃತ್ಯವ
* ಲೋಪಿಸುವುದೈ ಲೇಸು ಬಹುವ
ಸ್ತ್ರಾಪಹಾರದಿನವರಿಗಿತ್ತುದು ತನಗೆ ಸಂದಪುದು * ।
ಓಪತುಷ್ಠಿಯು ಮಾಡಲಱುವಳು
ತಾಪಿಸುವ ಜನನಿಕರಕಾಗಳು
ಕೋಪಿಸದೆ ತಾನಿಂದ್ರಸೇನೆಯುನಂದು ಮಾಡಿದನು ॥ ೧೬

ಬಳಿಕ ಭೂಸುರತತಿಗೆ ಭೂಸುರ
ಬಳಿಗದಲಿ ಮೌದ್ಗಲ್ಯನೆಂಬಾ
ಯಿಳೆಯು ಸುರ ಜನಿಸಿದ್ದೊಡಾತನ ಕಥೆಯು ಕೇಳೆಂದ ।

---

* ಲೋಪಿಸಿತು ಬಹುವಸ್ತ್ರಾದಿಂದವೆ ಭೂಪ ಕೇಳೈ ಪರರಿಗಿತ್ತುದು ತನಗೆ ಸಂದಪುದು, ಘ.

ಜಲಜಸಂಭವನಾಜ್ಞೆಗಳ ತಾ
ನಿಳಿಕೆಗೊಂಡನದಕ್ಕೆ ಶಾಪವ
ಜಲಜಸಂಭವನಿತ್ತನಾತಂಗುತ್ತಮರ ಸತಿಯು ॥ ೧೭

ಪತಿತನವು ನಿನಗಾಗಲೆಂದರೆ
ಕ್ಷಿತಿಸುರನು ನಡುನಡುಗಿ ಯಾಕ್ಷಣ
ಕ್ಷಿತಿಯೊಳಗೆ ತಾ ದಿವ್ಯಸಾವಿರವರುಷ ತಪಮಾಡಿ ।
ಪತಿತಪಾವನನಾಮಧೇಯನ
ಸುತನ ಮೆಚ್ಚಿಸೆ ಕಮಲಸಂಭವ
ಕ್ಷಿತಿಸುರಗೆ ತಾನೆಂದ ಸತಿಯರ ಭೋಗ ನಿನಗಿಲ್ಲ ॥ ೧೮

ಭೋಗದಾಯಕ ಜೀವನಾಯಕ
ನಾಗಿಹುದು ನೀನಲ್ಲಿ ಪರವಶ
ನಾಗಿಹುದು ಹೋಗೆಂದು ಬೆಸಸಿದ ದ್ವಿಜಗೆ ಕಮಲಜನು ।
ರಾಗದಲಿ ಮೌದ್ಗಲ್ಯ ಮರಳಿದ
ಬೇಗದಲಿ ಕನ್ಯಾರ್ಥಿಯಾಗಿಯೆ
ಯಾಗರುವೆಯೆಂಬಿಂದ್ರಸೇನೆಗೆ ಪತಿಯು ತಾನಾದ ॥ ೧೯

ಮುನ್ನ ವಾರುಣಿಯೆಂಬ ಭೂಸುರ
ಕನ್ನಿಕೆಯು ಹೆಸರಿಂದ್ರಸೇನೆಯು
ತನ್ನ ಪತಿಯೇ ದೈವವೆಂದೇ ಯಿದ್ದಳನವರತ ।
ಉನ್ನತೋನ್ನತಭಕ್ತಿಭರದಲಿ
ಭಿನ್ನವಿರದೆ ವರಪತಿವ್ರತೆ
ಚನ್ನೆಯರ ಗರುವೆನಿಸಿ ನಡೆದಳು ದ್ರುಪದ ಕೇಳೆಂದ ॥ ೨೦

ಆತಪೋನಿಧಿ ಕುಷ್ಠರೋಗಪ
ರೀತಜಿಗುಪ್ಸೆಯಲಿ ಹುದುಗಿದೊ
ಡೀತಳೋದರಿ ಭಜಿಸುತಿರ್ದಳು ಭಾವಶುದ್ಧಿಯಲಿ ।
ಆತನೀಕೆಯ ಕೃತ್ಯದಲಿ ಭಾ

ವಾತಿಶಯದಲಿ ಖೋಡಿಯನು ಹಿಡಿ
ವಾತನಾಗಿರಲೊಂದುದಿನವಿಂತಾಯ್ತು ಕೇಳೆಂದ ॥ ೨೧

ಮುದ್ಗಲನ ಕಥೆಯಲ್ಲಿ —ಆತನು ತನ್ನ ಪತ್ನಿಯ ಭಕ್ತಿಗೆ ಮೆಚ್ಚಿ
ಆಕೆಯನ್ನು ಸಂತೋಷಪಡಿಸುವಿಕೆ.

ಕೊಳತಬೆರಳನು ಭುಕ್ತಶೇಷದೊ
ಳುಬುಹಿದೊಡೆ ಕಂಡೀಕೆ ಚಿತ್ತದೊ
ಳಳುಕದುಪಭೋಗಿಸೆ ಮುನೀಶ್ವರ ಕಂಡು ಕೃಪೆಯಿಂದ [1] ।
ಲಲನೆ ಮೆಚ್ಚಿದೆನಿಂದು ನೀವುನ
ವೊಲಿದುದನು ಬೇಡೆನಲು ಬಚಿಕಾ
ಲಲನೆ ನುಡಿದಳು ದಿವ್ಯರೂಪದೊಳೆನ್ನನೆರೆಯೆಂದು ॥ ೨೨

ದ್ರುಪದ ಕೇಳಾಕುಷ್ಠರೋಗವ
ನಪಹರಿಸಿ ಕಂದರ್ಪರೂಪಿನೊ
ಳುಪಚರಿಸಿದನು ಕಾಮಿನಿಯನತಿಕಾಮಕೇಳಿಯಲಿ ।
ತಪಸಿ ದಣಿದನು ತನ್ನ ಮುನ್ನಿನ
ತಪವ ನೆನೆದನು ದಣಿದುದಿಲ್ಲೀ
ಚಪಲಲೋಚನೆ ಸೆಱಗ ಹಿಡಿದಳು ಹೋಗದಿರಿ ಯೆನುತ ॥ ೨೩

ಪತ್ನಿಗೆ ಶಾಪವ ಕೊಟ್ಟು ತೀರ್ಥಯಾತ್ರೆಗೆ ಹೋಗುವಿಕೆ.

ದಿಟ್ಟಹೆಂಗಸೆ ನೃಪರ ಬಸುಱಲಿ
ಹುಟ್ಟು ನೀ ಹೋಗೆಂದು ಶಾಪವ
ಕೊಟ್ಟನೀಕೆಗೆ ಹಾಯ್ದನಾಮುನಿವರ ತಪೋವನಕೆ [2] ।

ಆಗ ಶಿವನನ್ನು ಕುರಿತು ತಪಸ್ಸನ್ನು ಮಾಡಲು ಶಿವನು ಬರುವಿಕೆ.

ನಟ್ಟಡವಿಯಲಿ ನಳಿನಮುಖಿ ಕಂ
ಗೆಟ್ಟು ಭಜಿಸಿದಳಖಿಳದುರಿತಘ
ರಟ್ಟನನು ದಿವಿಜೇಂದ್ರವಂದ್ಯನನಿಂದುಶೇಖರನ [3] ॥ ೨೪

---

[1] ನಧಿಕಹರುಷದಲಿ, ಕ.
[2] ತೀರ್ಥಯಾತ್ರೆಯಲಿ, ಕ.
[3] ಬಲುದೈವನನು ಬಾಲೇಂದುಶೇಖರನ, ಕ.

ಹಲವುಕಾಲದೊಳಕಟ ತಪದಲಿ
ಬಳಲಿದಳಲಾ ಮುನಿಯ ವಧುವೆಂ
ದಿಳಿದನೀಶ್ವರನಾತಪೋವನಕೀಕೆ ಯಿದಿರಿನಲಿ ।
ಸುಳಿಯೆ ಕಂದೆಱೆದಬಲೆ ಕಂಡಳು
ಸುಲಭನನು ಭಕ್ತರಿಗೆ ತರ್ಕಾ
ವಳಿಗೆ ದುರ್ಲಭನನು ದುರಾಸದ ಮಹಿಮಧೂರ್ಜಟಿಯ ॥ ೨೫

ತರುಣಿ ಮೆಯ್ಯಿಕ್ಕಿದೊಡೆ ಕರದಲಿ
ಶಿರವನೆಗಹಿದನಬುಜಲೋಚನನೆ
ವರವ ಕೊಟ್ಟೆನು ಬೇಡಿಕೊಳ್ಳನೆ ಕಾಂತೆ ಹರುಷದಲಿ ।

ಪತಿಯನ್ನು ಕೊಡು ಎಂದು ಐದುಬಾರಿ ಕೇಳಲು ಐದುಜನ ಗಂಡಂದಿರೆಂದು ಹೇಳುವಿಕೆ.

ಹರ ಪತಿಂ ದೇಹಿ ಪ್ರಭೋ ಶಂ
ಕರ ಪತಿಂ ದೇಹಿ ಪ್ರಭೋ ಯೆಂ
ದರಸಿ ಬೇಡಿದಳೈದು ಭಾರಿ ಮಹೇಶನಲಿ ವರವ ॥ ೨೬

ಬೇಡಿದಳು ತಾ ತನ್ನ ಪತಿಯನು
ಕೂಡೆ ವಾರ್ತೆದೊಳಱಿಯದಾಗಳ್
ಬೇಡಿದಳು ತಾನಿಂದ್ರಸೇನೆಯು ಪಂಚವಾಕ್ಯದಲಿ ।
ಬೇಡಿದರೆ ಗಿರಿಜೇಶನೈವರ
ಕೂಡಿ ನೀಡಿದನಿಂದ್ರಸೇನೆಗೆ
ರೂಢಿಪರು ನಿನಗೊಡೆಯರಹರಾ ಕೇಳು ನೀನೆನುತ ॥ ೨೭

ಆಗ ಭಯಪಡಲು ಅಭಯದಾನ.

ಆದೊಡೈವರು ಪತಿಗಳಹರು ತ
ಳೋದರಿಯೆ ನಿನಗೆನಲು ಬೆಚ್ಚಿ ದ
ಳೀದುರಿತ ತನಗೇಕೆನುತ ಸತಿ ಮುಚ್ಚಿ ದಳು ಕಿವಿಯ ।

ಆದೊಡಂಜದಿರಂಜದಿರು ವರ
ವೇದಬಾಹಿರವಲ್ಲ ಸತಿಯರೊ
ಳಾದಿಗುರು ಪತಿಪ್ರತೆಯು ನೀನೆಂದನು ಮಖಧ್ವಂಸಿ ॥　೨೮

ಶ್ರುತಿಗಳೆಂಬುದೆ ಯೆನ್ನ ನುಡಿಗಳು
ಕ್ರತುಗಳೆನ್ನಯ ಚೇಷ್ಟೆ ಧರ್ಮದ
ಗತಿ ವಿಚಾರಿಸಲೆನ್ನ ನೇಮದ ವಿಹಿತವಿಧಿ ಯೆಂದ ।
ಶ್ರುತಿಗಳೇ ಮನ್ವಾದಿಗಳು ತರ್ಕ
ಸ್ಮೃತಿಗಳಬುಜಭವಾದಿ ದೇವ
ಪ್ರತತಿ ಯೆನ್ನಾಜ್ಞೆಯೊಳಗೆಂದಾಸತಿಗೆ ಶಿವ ನುಡಿದ ॥　೨೯

ನಿನ್ನ ಕಥನವೆ ಪುಣ್ಯಕಥನವು
ನಿನ್ನ ಚರಿತವೆ ಪುಣ್ಯಚರಿತವು
ನಿನ್ನ ನೆನೆವಂಗನೆಗೆ ಬಹುದು ಪತಿವ್ರತಾವಿಭವ ।
ಎನ್ನನುಜ್ಞೆಯು ಧರ್ಮಚಿಂತಾ
ಪನ್ನೆಯಾಗದಿರೆಂದು ಕೃಪೆಯುಲಿ
ತನ್ನ ಸಿರಿಕರತಳವಸಿರಿಸಿದನುತ್ತಮಾಂಗದಲಿ ॥　೩೦

ಹರನ ನುಡಿಯೇ ವೇದ ಹರನಾ
ಚರಣೆಯೇ ಸನ್ಮಾರ್ಗ ಹರ ಪತಿ
ಕರಿಸಿ ನುಡಿದುದು ಪರಮಪಾವನಧರ್ಮತತ್ತ್ವವಿದು ।
ಬರಹಸಹಿತಾವಿಧಿಯನೊರಸಲು
ಹರ ಸಮರ್ಥನು ಹರನ ಬರಹವ
ನೊರಸಲಾಪರೆ ತೋಱಿಸಾ ಬ್ರಹ್ಮಾದಿದೇವರಲಿ ॥　೩೧

ಪಂಚಪತಿಗಳು ಎಂದುದಕೆ ರೋದಿಸಲು ಇಂದ್ರನು ಬರುವಿಕೆ

ಬೞಿಕ ಪುರುಷಪಂಚಕರಾದುದ
ಕಳುಕಿ ರೋದನ ಮಾಡೆ ವಾಸವ

---

1 ಕ್ರತುಗಳೇ, ಚ,

ಲಲನೆಯಲ್ಲಿಗೆ ಬಂದು ಕೇಳಿದ ಶೋಕವೇಕೆಂದು ।
ಎಲೆ ಸುರೇಶ್ವರ ಕೇಳು ನನ್ನನೆ
ಯುಳುಕಿಸಿದ ಶಾಪದೊಳಗೀವಟು
ವಿಳೆಯೊಳೈವರು ಪತಿಗಳೆನಗಹರೆಂದು ವೆರವಿತ್ತ ॥ ೩೦

ಇಂದ್ರನು ಇದನ್ನು ಕೇಳಿ ಶಂಕರನನ್ನು ಜರಿಯುವಿಕೆ.

ಎನಲು ಕೋಪಿಸಿ ಶಕ್ರ ಶಂಕರ
ನಿನಿತು ದುಃಖವ ಲಲನೆಗೀವರೆ
ಮನುಜಲೋಕದಲೆನುತ ವಟುವೇಷವನು ತಾ ಜಱಿದ ।
ನಿನಗಿನಿತು ಬಲವಾರದೆಂದರೆ
ಯೆನಗೆ ಬಲ ಬೆಱೇನು ಲೋಕದ
ಜನವೆ ತಾ ನೀನೆನ್ನ ಪರಿಯನೆ ಯಱೆಯೆ ನೀನೆಂದ ॥ ೩೩

ನಿನ್ನ ಕೊಂಡೆಮಗೇನು ಕಾರಣ
ವೆನ್ನ ರಾಜ್ಯದಲ್ಲೈದೆ ಸುಖಸಂ
ಪನ್ನರಲ್ಲದೆ ದುಃಖವಾರಿಗೆ ಬರುವುದೆಂದೆನಲು ।
ಎನ್ನನಾರೆಂದಱಿಯಲಾ ನೀ
ನಿನ್ನು ನೋಡಾ ತನ್ನನುಜ್ಞೆಯ
ಖಿನ್ನರೈದರೆ ಶೈಲದಡಿಯಲಿ ಸುರನ ನರೋತ್ತಮರು ॥ ೩೪

ಎನಲು ಶಕ್ರನು ಗಿರಿಯನಾಕ್ಷಣ
ಕನಲಿ ಕಿತ್ತಿದನಲ್ಲಿ ನಾಲುವ
ರನಿಮಿಷರ ಪರಿಮಿತದೊಳಿರ್ದರು ಸುಖದಿ ಕುಳ್ಳಿರ್ದು ।
ವಿನುತ ಮಂತ್ರಾಳೋಚನೆಯಲಾ
ಗನಿಲನಂತಕಯಶ್ವಿನೀಸುರ
ರಿನಿತು ಬ್ರಹ್ಮಾಜ್ಞೆಯಲಿ ಯಿರುತಿರೆ ಶಿವನು ತನ್ನಿಂದ ॥ ೩೫

ಶಿವನಿಗೆ ಬ್ರಹ್ಮನ ಶಾಪ

ಬಿದ್ದರೆಂದತ್ಯಧಿಕದೇವರ
ನದ್ದಿಸಿದೆನಾನೆಂದಕಾರಣ
ರುದ್ರನನು ಶಾಪಿಸಿದ ವಾಣೀಪತಿಯು ವಿನಯದಲಿ ।
ಹೊದ್ದುವುದು ಭೂಮಿಯಲಿ ನೀ ಜನಿ
ಸಿದ್ದು ವಿದ್ಯಾನಿಧಿಯು ದ್ರೋಣನ
ಬುದ್ಧಿಗಾಸ್ಪದನಾಗಿ ಭಾರದ್ವಾಜಗೋತ್ರದಲಿ ॥ ೩೬

ಜನಿಸುವುದು ನೀ ನಿನ್ನವನಿತೆಯು
ತನುವನೈದದೆ ಬ್ರಹ್ಮಚರ್ಯಾದಿ
ಘನತೆಯಲಿ ಕಲ್ಪಾಯುವಾಗಿಹುದೆಂದು ನೇಮಿಸಿದ ।
ಅನಿಮಿಷೇಶ್ವರನಿತ್ತ ಶಾಪವು
ನನಗೆ ನಿನ್ನಿಂದಾಯ್ತು ಭೂಮಿಯ
ಜನನ ನೀ ನಮ್ಮಂತೆ ಜನಿಯಿಸು ಮನುಜರೂಪಿನಲಿ ॥ ೩೭

ಎಂದೆ ಯಿಂದ್ರಗೆ ಶಾಪವಿತ್ತೊಡೆ
ಯಿಂದುಧರ ತಾ ಮತ್ತೆ ಭೂಸುರ
ನಂದನೆಯ ಹೊರೆಗೈದಿ ಬಂದನು ಹೇಳಿದನು ಬಳಿಕ ।
ಬಂದ ಶಾಪವೆ ತನಗೆ ಬ್ರಾಹ್ಮಣ
ಮುಂದಣಾಯಾಸವನು ತಿಳುಹಿಯೆ
ಯಿಂದುವದನೆಯ ಸಂತವಿಸಿ ಬಳಿಕೆಂದನಾಶಿವನು ॥ ೩೮

ಆಕೆಗೆ ವರವಂ ಕೊಟ್ಟು ಶಿವನು ತನ್ನಾವಾಸಸ್ಥಾನಕ್ಕೆ
ಹೋಗುವಿಕೆ.

ಉರುಗಣೌಘದನಿಳಯನಾವನ
ಚರಣಜಲವೇ ತ್ರಿಪಥಗಾಮಿನಿ
ಸರಸಿರುಹಸಂಭವನ ಜನಕನು ನಿನ್ನ ರಕ್ಷಿಸುವ ।

ಹರುಷದಲಿ ಕೇಳೆಂದು ಶಂಕರ
ವರವನಿತ್ತಾಸತಿಗೆ ತಿರುಗಿದ
ಮರಳಿ ತಾ ರಜತಾದ್ರಿಗೈದಿದೊಡಾಕೆ ನಿನಗಿಂದು ॥ ೩೯

ಜನಿಸಿದಳು ಪತಿವ್ರತೆಯೊಳುತ್ತಮೆ
ನಿನಗೆ ನಂದನೆಯಾಗಿ ನಿನ್ನಯ
ಘನತರದ ಪುಣ್ಯಾಂಬುರಾಶಿಯ ಸಿರಿಗದಾರೆಂದು ।

ಪಾಂಡವರ ಪೂರ್ವಜನ್ಮದ ವೃತ್ತಾಂತ

ಜನಪ ನಿನ್ನಯ ತನುಜೆ ದ್ರೌಪದಿ
ವನಿತೆಯಾದಳು ಪಾಂಡುಪುತ್ರರ
ಘನವನಱಿಯಲು ಮುನ್ನ ಕಮಲಜನಾಜ್ಞೆಯಾದುದನು ॥ ೪೦

ಬಳಿಕಲಿಂದ್ರನು ಮೞವೆಯಲಿ ಕಳ
ವಳಸಲಾತಂಗಾಗಳಂತಿರೆ
ಹಲವುದಿನ ಸೆಱೆಯಾಯ್ತು ರಜತಾಚಲದ ಕುಹರದಲಿ ।

ಶಿವಶಾಪದಿಂದ ಐದುಜನರಿಂದ ಕೂಡಿ ಬಿಲದೊಳಿರುವಿಕೆ.

ಬಿಲದೊಳೀಪರಿ ಯಿಂದ್ರರೈವರು
ಸಿಲುಕಿದರು ಶಂಕರನ ಖತಿಯಲಿ
ಬಳಿಕ ಬಿಡುಗಡೆಯಾಯ್ತು ಕಾತ್ಯಾಯನಿಯ ದೆಸೆಯಿಂದ ॥ ೪೧

ಅದಱಿನೈವರಿಗೀಕೆ ವಧುವೆಂ
ಬುದು ಮಹೇಶ್ವರವಾಕ್ಯ [1] ನೀನಿಂ
ತಿದಕೆ ಚಿಂತಿಸಬೇಡ ಬಳಿಕೀಪಾಂಡುನಂದನರ ।
ಹದನನಱಿವೊಡೆ ಕೇಳು ನೃಪ ಪೂ

1 ನಾಜ್ಞೆ, ಜ.

ರ್ವದಲಿ ಸುರಪತಿ * ತಾನು ಬಳಿಕಾ
ತ್ರಿದಶನಾಯಕನೆಂಬ ಗರ್ವದಲಾಯ್ತು ಶಿವಶಾಪ * ‖ ೪೧

ಬ್ರಹ್ಮಶಾಪದಿಂದ ಯಮನು ಅಶ್ವಿನೀದೇವತೆಗಳು ಸಹ ಜನಿಸುವಿಕೆ.

ಸರಸಿರುಹಸಂಭವನ ಶಾಪದಿ
ಧರೆಗೆ ಜನಿದರಶ್ವಿನೀಸುರ
ವರರು ಯಮ ತಾ ಸಹಿತ ನಾಲ್ವರು ನೆರೆದು ಬಿನ್ನವಿಸೆ ।
ಸುರಶಿರೋಮಣಿ ಸರ್ವಜೀವರೊ
ಳಿರುವ ಮಾರುತಿಗಖಿಳ ಕೇಳಿದ
ಧರೆಯೊಳಗೆ ತಾವೆಲ್ಲಿ ಜನಿಸುವೆವಲ್ಲಿ ಜನಿಸೆಂದ ‖ ೪೩

ಅಲ್ಲಿ ಪಂಕಜನಾಭ ಕಾರ್ಯ
ಕ್ಕಲ್ಲಿ ಜನಿಸಿಯೆ ಯಾದವೇಂದ್ರನ
ನಲ್ಲಿ ಭಜಿಸಲು ಶಾಪ ಹಿಂಗುವುದೆಂದು ನೇಮಿಸಲು ।
ನಿಲ್ಲದೈವರು ನಿನ್ನ ಮಗಳಿಗೆ
ವಲ್ಲಭರು ನೆರೆಯಾದರೆಂದೆನ
ಲೆಲ್ಲವಿದು ಕಮಲಜನ ರಾಣೀವಾಸದಾಜ್ಞೆ ಯಲಿ ‖ ೪೪

ಒಲಿದು ಮಾರುತಿ ಯಿಂದ್ರಮುಖ್ಯರ
ಹಳೆಯ ಶಾಪಕೆ ಹರಿವ ಕಂಡನು
ತಿಲಕನಯನಾಂಗನೆಯು ಸಹಿತಾಶಾಪ ನಾಲ್ವರದ ।
ಕಳೆದಳ್ಳ ಶ್ರೀವಾಯುವಧು ತಾ
ನೊಲಿದು ಪಂಚಕಸತಿಯರೆಲ್ಲರು
ಬಳಿಕ ನಿನ್ನಯ ಸುತೆಯೊಳಾಗಲು ಜನಿಸಲೊಂದಾಗಿ ‖ ೪೫

ಜನಿಸಿದರು ತಾವೀಕೆಗಾಗಿಯೆ
ಯನಿಮಿಷರು ತಾವಲ್ಲಿ ಬರುತಿರ
ಲನಿಲನಂತಕಗಾವು ಜನಿಸುವ ಕುಂತಿಸುತರಾಗಿ ।

---

* ಶಂಕರನ ಶಾಪದಲಿ ನವೆದನು ಹಲುವುದಿನ ಕೈಲಾಸಕುಹರದಲಿ, ಖ. *

ಎನಲು ನಡುಗಿದರವರು ಮೊದಲಲಿ
ಮನುಜಜನ್ಮವೆ ಕಷ್ಟವೆದಱಲಿ
ವನಿತೆ ಯೊಡಹುಟ್ಟಿದರಿಗೊಬ್ಬಳೆ ಶಿವಶಿವಾಯೆನುತ ‖ ೪೬

ಮಱುಗಿದರು ಸುರವರರು ನಾಲ್ವರು
ಹರ ಹರಾ ಯೆನಲವರ ಕಳುಹಿದ
ಹರನ ಹೊರೆಯಕೆ ಬಂದು ಬಿನ್ನಹ ಮಾಡಿದರು ಶಿವಗೆ ।
ಧರಿಸಲಾರೆವು ಮನುಜಯೋನಿಯು
ಧರಿಸಿದರೆ ಸತಿಯೊಬ್ಬಳೈವರಿ
ಗರಸಿಯುಹಳಿದಕಾರೆವೆಂದೆನೆ ಶೂಲಿ ಯಿಂತೆಂದ ‖ ೪೭

ಅದು ನಿಮಗೆ ಬಿಡದಿನ್ನು ಬಟಿಕಾ
ವಿಧಿಯು ಶಾಪದಿ ನಾನು ಭೂಮಿಯೊ
ಳುದಿಸುವೆನು ತಾ ದ್ರೌಣಿನಾಮದಲೆಂದೊಡಾಶಿವಗೆ ।
ವಿಧಿಸಲಾಪರಿ ನೀವು ಶಾಪವ
ಮುದದೊಳೀಜಗಜೀವಜನನಿಯು
ಸದನದಲಿ ಜನಿಸಲ್ಕೆ ಸಿಕ್ಷತಿಯುಹುದು ಕೇಳೆಂದ ‖ ೪೮

ಜನಿಸುವುದು ನೀವೈವರಿಂದ್ರರು
ಮನುಜಲೋಕದಲರಸಕುಲದಲಿ
ವನಿತೆ ನಿಮ್ಮೈವರಿಗದೊಬ್ಬಳು ತಾ ನಿಧಾನಿಸಲು ।
ಜನನವಿದು ಕಡು ಕಷ್ಟ ನಮ್ಮಯು
ಮುನಿತನವು ತಾನಲ್ಲವೆನುತಲಿ
ವನಿತೆಯುನು ಸ್ವೀಕರಿಪ ಹದನನು ಬಲ್ಲ ಶಿವನೆನುತ ‖ ೪೯

ಇಂದ್ರರು ಪ್ರಾರ್ಥಿಸಲು ಅದರಿಂದ ನಿಮಗೆ ಬಾಧಕವಿಲ್ಲೆಂದು
ಶಿವನು ಹೇಳುವಿಕೆ.

ಹರ ಹರ ತ್ರಾಹೀಶ ಕರುಣಾ
ಕರ ಮಹಾದೇವನೆ ದುರಂತದ

ನರಕಸಾಧನವುಚಿತವೇ ನಿಮ್ಮಂಘ್ರಿಭಜಕರಿಗೆ [1] ।
ಕರುಣಿಸೈ ಮತ್ತೊಂದು ಪರಿಯಲಿ
ವರವನೆನೆ ನಸುನಗುತ ಗಂಗಾ
ಧರನು ತಿಳುಹಿದನೈವರಿಗೆ ಬಚ್ಚಿಕರಸ ಕೇಳೆಂದ ॥ ೫೦

ಖೇಡತನವೇಕಿದಕೆ ನಿಮ್ಮೊಳು
ಖೋಡಿ ಇದರೊಳಗಿಲ್ಲ [2] ಮುನಿವಧು
ಬೇಡಿದಳು ಪೂರ್ವದಲಿ ವರವನು ಪಂಚವಾಕ್ಯದಲಿ ।
ಖೋಡಿಯಾಗದು ಧರ್ಮಮಾರ್ಗಕೆ [3]
ಕೇಡುಬಾರದು ನಿಮ್ಮ ನೆಚ್ಚಿ ಕೆ
ಟ್ಟಾಡಿದರೆ ಬಾಯ್ ಹುಳುವುದೆಂದನು ಬಾಲಶಶಿಮೌಳಿ ॥ ೫೧

ನಿಮ್ಮ ಚರಿತವೆ ಪುಣ್ಯಚರಿತವು
ನಿಮ್ಮ ಕಥನವೆ ಪುಣ್ಯ ಕಥನವು
ನಿಮ್ಮ ಯುದ್ಧವೆ ಧರ್ಮಯುದ್ಧವದೆಂದನಾಶಿವನು ।
ನಿಮ್ಮ ಸತಿಯಳ ನಿಮ್ಮನೈವರ
ನಿಮ್ಮ ನೆನೆವರ ಯಾದವೇಂದ್ರನು
ನಿಮ್ಮ ತಾನೊಲವಿನಲಿ ಕಾದಪನಿಹಪರಂಗಳಲಿ ॥ ೫೨

ವ್ಯಾಸರು ಸರ್ವವನ್ನು ಹೇಳಿದ್ದಲ್ಲದೆ ದ್ರುಪದನಿಗೆ ದಿವ್ಯದೃಷ್ಟಿಯಂ
ಕೊಟ್ಟು ಸರ್ವವನ್ನು ತೋರಿಸುವಿಕೆ.

ಎನೆ ಹಸಾದವೆನುತ್ತ ನಿಟಿಲೇ
ಕ್ಷಣನನೈವರು ಬೀಳುಕೊಂಡರು
ಜನಿಸಿದರು ಮಹಿಯೊಳಗೆ ಕುಂತೀದೇವಿಸುತರಾಗಿ ।

---

1 ದರ್ಶನಕೆ, ಚ    2 ರೂಢಿತಪದೊಳಗೊಬ್ಬ, ಕ. ಖ
3 ಜೋಡೆನಿಸಿದಳುನಾರಿಧರ್ಮಕೆ, ಚ

ನಿನಗೆ ಮಗಳೀವನಿತೆ ಕುಂತೀ
ತನುಜರಿವೆರಳಿಯುಂದಿರ್ಕೈ * ನೀ
ವಿನಿತು ಘನವೆಲ್ಲವನು ಪ್ರೀರದಿರಿ ತೋಱಬೇಕೆಂದ * ॥ ೫೩

ಎಲೆ ಮರುಳೆ ಪೂರ್ವದಲಿ ತಾವ್ ತ
ಮ್ಮೊಳಗೆ ಯೈವರು ಜನಿಸೆ ನಿನ್ನೀ
ನಳಿನಮುಖಿಗಿವರೆಲ್ಲ ವರಗಳು ಪಾಂಡುನಂದನರು ।
ಇಳೆಗೆ ಜನಿಸಿದರೆಂದು ಕೃಷ್ಣನ
ನಳಿನಚರಣದ ಸೇವೆಗೋಸುಗ
ಸುಲಭನಿವರಿಗೆ ಯಾದವೇಂದ್ರನು ಯೆಂದನಾಮುನಿಪ ॥ ೫೪

ತಿಳಿಯದಿರೆ ನೋಡಾದೊಡೆನುತ
ಗ್ಗಳಯ ಮುನಿಪತಿ ದಿವ್ಯದೃಷ್ಟಿಯ
ಸಲಿಸಿದೊಡೆ ನೋಡಿದನು ನೃಪನೀಪಾಂಡುನಂದನರ ।
ಹೊಳೆಹೊಳೆವ ಕಳೆರಾಸಿಯಿಂದವೆ
ಒಱಕ ನಯನಕಪೂರ್ವರೂಪಿನ
ಬಱಗವಾಗಿರೆ ಪಾಂಡುಪುತ್ರರ ಕಂಡನಾದ್ರುಪದ ॥ ೫೫

ಮೆಱೆವ ದೇಹಪ್ರಭೆಗಳಲಿ ಮಿಱು
ಮಿಱುಪದಿವ್ಯಾಭರಣಕಿರಣದ
ತುಱುಗಿನಲಿ ತನಿಹೊಳೆವ ದಿವ್ಯಾಂಬರದ ಕಾಂತಿಯಲಿ ।
ಅಱಿತವಹವನಿತೆಲ್ಲವನು ಕಂ
ದೆಱೆವ ತೇಜಃಪುಂಜಮಯರಸ
ದೆಱಕವೆನಲವರ್ಕೈವರೊಪ್ಪಿದರಿಂದ್ರತೇಜದಲಿ ॥ ೫೬

ಮನದ ಘೂರ್ಮ್ಮಿನ ಜಡಿವ ರೋಮಾಂ
ಚನದ ಹುದುಗುವ [1] ಹೊದಱುಕಂಗಳ

* ನಿನಗೆನಿತು ಘನವೋ ಶಿವ ಯೆನುತ ತಲೆದೂಗಿದನು ಮುನಿಪ *

[1] ಹೆಱಱಿದ, ಕ.

ಜೆನುಗುವಾತಿನ ಹೂತ ಹರುಷದ ಹೊಂಗಿದುತ್ಸವದ ।
ಕೊನರ್ವ ಬೆಳಗಿನ ತಳಿತ ಚಿಂತೆಯು
ನೆನೆದ ಭಾವದ ರಾಗರಸದು
ಬ್ಬಿನಲಿ ಹೊಂಪುಳಿಯೋದನಿವರನು ಕಂಡು ಪಾಂಚಾಲ ॥ ೫೭

ಆಗ ದ್ರುಪದನು ವ್ಯಾಸರನ್ನು ಸ್ತುತಿಸುವಿಕೆ.

ಅರಸ ಕಂಡೈ ನರಪತಿಗಳೋ
ಸುರಪತಿಗಳೋ ಮನದ ಸಂಶಯ
ಹರಿದುದೇ ಹೊರೆಯಿಲ್ಲಲೇ ಲೇಸಾಗಿ ನೋಡೆನಲು ।
ಪರಮಋಷಿಯರೆ ನಿಮ್ಮ ಕೃಪೆಯಲಿ
ನಿರುತವನು ಗೋಚರಿಸಿ ಕಂಡೆನು
ಪರಮಹರುಷದಲೆನುತ ಚರಣವ ಹಿಡಿದು ಮುಂಡಾಡಿ ॥ ೫೮

ನಂಬಿದೈ ಲೇಸಾಗಿ ಲಗ್ನವಿ
ಳಂಬವಾಗದೆ ಧಾರೆ ಯೆರೆ ಕಳ
ಶಾಂಬುವಿದೆ ನೀ ಹೋಗು ಕಶ್ಯಪ ಹೋಮಸಾಧನವ ।

ಬಳಿಕ ಸಾಂಗವಾಗಿ ವಿವಾಹವನ್ನು ನಡಸುವಿಕೆ.

ತುಂಬು ವಹಿಲದಲವನಿಯಮರಕ
ದಂಬ ನೆರೆಯಲಿ ಯೆನಲು ದ್ರುಪದನ
ಹೆಂಬೆಳಯು ತನಿಹರುಷ ಹೊರೆಯೇರಿತ್ತು ನಿಮಿಷದಲಿ ॥ ೫೯

ಸಾರಿದರು ಮಟ್ಟಕ್ಕಿಯನು ಗುಡ
ಜೀರಿಗೆಗಳೊದಗಿದುವು ಲಗ್ನವಿ
ಹಾರದಾಶೀರ್ವಾದದಾಯತರವದ ರಭಸದಲಿ ।
ಧಾರೆಯೆರೆದನು ದ್ರುಪದ ಪಾಂಡುಕು
ಮಾರರಿಗೆ ನಿಜಸುತೆಯನತಿವಿ
ಸ್ತಾರಿಸಿತು ವೈವಾಹರಚನೆ ವಿಶಾಲವಿಭವದಲಿ ॥ ೬೦

ಹೋಮಸಮನಂತರದಲಖಿಳಧ
ರಾಮರರ ಪೂಜೆಯಲಿ ಸುಜನ [1]
ಸ್ತೋಮ ತುಷ್ಟಿಯ ಮಾಡಿದನು ಸನ್ಮಾನದಾನದಲಿ ।
ಆಮುನೀಂದ್ರಂಗೆಱಗಿದರು ನೃಪ
ರಾಮಹಾಸತಿಸಹಿತಪರಮ
ಪ್ರೇಮದಲಿ ಹರಸಿದನು ತೆಗೆದಪ್ಪಿದನು ಪಾಂಡವರ ॥ ೬೧

ಪರಮವೈಭವದಲಿ ಚತುರ್ಥಿಯ
ಮೆಱದಿವಸದೋಕುಳಿಯ ಪರಿಜನ
ಪುರಜನದ ಸುಮ್ಮಾನಶರಧಿಯ ಸಾರಸಂಪದವ ।

ಸರ್ವರಿಗೂ ಬುದ್ಧಿವಾದಗಳನ್ನು ಹೇಳಿ ವ್ಯಾಸರು ತಮ್ಮಾಶ್ರಮಕ್ಕೆ ಹೋಗುವಿಕೆ.

ವರಮುನಿಪನೀಕ್ಷಿಸಿದನನಿಬರ
ಕರೆಸಿ ನಯನೀತಿಗಳ ಹೇೞಿಯೆ
ಮರಳಿ ಬಿಜಯಂಗೈದಿ ಹೊಕ್ಕನು ಬದರಿಕಾಶ್ರಮವ ॥ ೬೨

ಬೞಿಕ ಪಾಂಡವರಾಯರೈವರು
ನಳಿನನಾಭನ ಚರಣಕಮಲವ
ನಲಿದು ನೆನೆವುತ್ತಿದ್ದರಾಪಾಂಚಾಲನಗರಿಯಲಿ ।
ಎಲೆ ಮುಕುಂದ ಮುರಾರಿ ಯಾದವ
ತಿಲಕ ಕಾವುದು ತಮ್ಮನೆನುತಲಿ
ನಳಿನಮುಖಿ ಸಹಿತಲ್ಲಿ ವತ್ಸರವೊಂದ ನೂಕಿದರು ॥ ೬೩

ಅಂದಿಗಾದುವು ವರುಷ ಕಾಲನ
ನಂದನಗೆ ಮೂವತ್ತುವರೆ ಬೞಿ

---

[1] ಭೂತ್ಯ ಚ.

ಕಂದಿನೋಪಾದಿಯಲಿ ನಾಲ್ವರಿಗೊಂದು ಕೊಟಿತೆಯಲಿ |
ಸಂದುದೈ ವತ್ಸರವು ಪಾಂಡವ
ನಂದನರಿಗಾದಿನಕೆ ಕೇಳ್ಕೈ
ತಂದೆ ಪರಿಕ್ಷಿತತನಯ ಯಾದವರಾಯನೊಲುವೆಯಲಿ ‖ ೪೭

ಆಗ ಯಾದವರು ಪಾಂಡವರನ್ನು ನೋಡಲು ಬರುವಿಕೆ

ದ್ವಾರಕಿಯ ಮಧ್ಯದಲಿ ಪಾಂಡವ
ವೀರರೈವರು ಮದುವೆಯಾಡುದ
ಧೀರಯಾದವರ್ಕೈದೆ ಕೇಳಿಯೆ ವಿವಿಧಪರುಷದಲಿ |
ನಾರಿಯರು ವಸುದೇವಸಹಿತ ಮು
ರಾರಿಯಲ್ಲಿಗೆ ಬಂದು ಕುಂತೀ
ನಾರಿತನುಜರ ನೋಡಿ ಬಹೆ ನಡೆ ಯೆನುತ ಬಿನ್ನವಿಸೆ ‖ ೭೫

ಬಳಿಕ ಮುರರಿಪು ತಾತನಾಜ್ಞೆಗೆ
ನಲಿದು ಯಾದವಸೇನೆಯಾಗಳೆ
ಯೊಲವಿನಲಿ ಗಮಿಸಿದುದು ಪಾಂಡವರಾಯದರುಶನಕೆ |
ಜಲಜನಾಭನು ಸಕಲಯಾದವ
ಬಳಿಗ ಸಹಿತ್ಯೆತಂದ ಯದುಕುಲ
ತಿಲಕ ಗದುಗಿನ ವೀರನಾರಾಯಣನು ಮನಮುಟ್ಟಿ ‖ ೭೭

ಮೂವತ್ತ ಮೂರನೆಯ ಸಂಧಿ ಮುಗಿದುದು

ವೈವಾಹಿಕಪರ್ವ ಮುಗಿದುದು.

# ಮೂವತ್ತ ನಾಲ್ಕನೆಯ ಸಂಧಿ

---

**ಸೂಚನೆ**

ಧಾಟಿಯಲಿ ಬಂದರಿಬಲದ ಹೆ
ಚ್ಚಾಳುತನವನು ಮುರಿದು ಸಂಧಿಯು
ಮೇಲೆ ಧರ್ಮರಾಜ ಬಂದು ಹೊಕ್ಕನು ಹಸ್ತಿನಾಪುರವ ||

ಪಾಂಡವರ ವಿವಾಹವಾರ್ತೆಯನ್ನು ಕೇಳಿ ಕೌರವರ ಸಂತಾಪ.

ಕೇಳು ಜನಮೇಜಯ ನೃಪತಿ ಪಾಂ
ಚಾಲಸುತೆಯ ವಿವಾಹವಾರ್ತೆಯ
ಕೇಳಿದರಲ್ಲೈ ಕೌರವರು ಮುಳುಗಿದರು ಮುಳುಕೊಳಿಸಿ |
ಆಳ ನೆರಹಿದರಖಿಳದಳದಿ
ಖ್ಯಾಳವನು ಮಾಡಿದರು ಭೂಮಿಾ
ಪಾಲಸಂಕುಲ ಸಹಿತ ಬಂದರು ದ್ರುಪದಪುರಿಗಾಗಿ || ೧

ಏನ ಹೇಳುವೆನಿನ್ನವರ ಜಯ
ಮಾನವನು ಮತ್ತೊಂದು ಪೈಕದ
ಮಾನಭಂಗಸ್ಥಿತಿಯನೆಲೆ ಜನಮೇಜಯ ಕ್ಷಿತಿಪ |
ಭಾನುವಿನ ಮುಂಚಿನ ಶಿಲೋಚ್ಚಯ
ಸಾನುವಿನ ತಗರಿನ ತರಕ್ಷುವ
ಧೇನುವಿನ ಹೋರಟೆಯ ಹವಣನು ಹೇಳಲೇನೆಂದ || ೨

ಭೀಮಪಾರ್ಥರಿಂದ ಪರಾಜಿತರಾಗಿ ಸರ್ವರೂ ತಮ್ಮತಮ್ಮ
ಸ್ಥಳಕ್ಕೆ ಹೋಗುವಿಕೆ.

ಮುರಿದುದಾಹೆಬ್ಬಲ ವಿಘಾತಿಯ
ಳೊಱಗಿದರು ಭಟುಭಟರು ಗಜಹಯ

ದೊಱೆತೆ ಬತ್ತಿತು ಭೀಮಪಾರ್ಥರ ಶರನಿಪಾತದಲಿ ।
ಉಱುಕುಗೊಂಡರು ನಿಚ್ಚಟರು ಕೈ
ಮಱೆದುಪಾಱೆಯ ಧೊರೆಗಳವದಿರು
ನೆಱೆ ವಿಭಾಡಿಸಿತೆಗೆದುಹಾಯ್ದರು [1] ಹಸ್ತಿನಾಪುರಕೆ ॥ ೩

ಬೞಿಕ ಪಾಂಚಾಲಕನ ಭೀತಿಯು
ಮೊಳಕೆ ಯುರಿದುದು ಮೆಱೆದುದುತ್ಸವ
ಜಲಧಿವಲಯದ ಭೂತಳಾಗ್ರದ ಭೂತಳೇಂದ್ರರಲಿ ।
ಹೊಳೆಹೊಳವ ರವಿರಶ್ಮಿಗಳ್ವ್
ಜ್ವಲಿಸುವಂತಿರೆ ಪಾಂಡುನಂದನ
ರಳವಿನುಬ್ಬಟೆ ಬಿಸಿಲು ಪಸರಿಸಿತು ದೆಸೆದೆಸೆಗೆ ॥ ೪

ಕೃಷ್ಣನ ಆಗಮನ.

ಬಂದನಲ್ಲಿಗೆ ಸಕಲಯಾದವ
ವೃಂದಸಹಿತ ಮುರಾರಿ ಕುಂತೀ
ನಂದನರು ಬರಲಿದಿರುಗಾಣಿಸಿಕೊಂಡರುಚಿತದಲಿ ।
ತಂದ ಬಹುವಿಧವಸ್ತುಭಾರವ
ನಂದು ಕೊಟ್ಟನು ಗಜರಥಾಶ್ವವ
ಸಿಂಧುವದನೆಯರಿಗೆ ವಿಚಿತ್ರಾಂಬರವಿಭೂಷಣವ ॥ ೫

ಕೃಷ್ಣನ ಮುಂದೆ ತನ್ನ ಸುಖದುಃಖಗಳನ್ನು
ಕುಂತಿಯು ಹೇಳಿಕೊಳ್ಳುವಿಕೆ.

ಮಗನೆ ಧರ್ಮಜ ಕೇಳು ಭೀಮಾ
ದಿಗಳ ಹರಿ ಯೆಂಮ್ಮ ಕೃಷ್ಣದೇವನ
ಮಗನು ಸೋದರವಾವನೀತನು ನಿಮಗೆ ವಸುದೇವ ।
ವಿಗಡರೀಯಾದವನೃಪರು ಬಂ

---

[1] ಸೆಱೆಯು ಸೂಱೆಯು ಹಿಡಿಸಿ ಹೋದರು, ಕ. ಖ.

ಧುಗಳು ನಿಮಗೆಂದೈವರನು ಕೈ
ದೆಗೆದು ಕಮಲೋದರನ ಕೈಯ್ಯಲಿ ಕೊಟ್ಟಳಾಕುಂತಿ ‖ ೬

ಬನದೊಳಪಗತನಾದ ನಿವರ
ಯ್ಯನು ಕುಮಾರರ ಬಾಲ್ಯಕಾಲದೊ
ಳೆನಗೆ ರಕ್ಷಾಭಾರ ಬಿದ್ದುದು ಪತಿಪರೋಕ್ಷದಲಿ ।
ಇನಿಬರನು ಗಜಪುರಿಗೆ ಕೊಂಡೊ
ಯ್ದೆನು ಸುಯೋಧನನಿಂದ ವೈರವು
ಜನಿತವಾದುದು ಬಳಿಕ ಲಾಕ್ಷಾಭವನದಹನದಲಿ ‖ ೭

ಉರಿಯೊಳುಳಿದೆವು ನಿಮ್ಮ ಚರಣ
ಸ್ಮರಣಬಲದಲಿ ಬಹಳ ವಿಪಿನಾಂ
ತರದೊಳಗೆ ತೊಳಲಿದೆವು ತಿರಿದೆವು ಹೊರೆದೆವೊಡಲುಗಳ ।
ಬರಬರಲು ತತ್ಸಕಲದುಃಖೋ
ತ್ಕರನಿವಾರಣ ದ್ರುಪದಕನ್ಯಾ
ವರಣ ನಿಮ್ಮಾಯಂಘ್ರಿದರುಶನವೆಂದಳಾ ಕುಂತಿ ‖ ೮

ದೇವಿ ಚಿತ್ತವಿಸಾಪಚಾರಿಕ
ಭಾವವೇ ಧರ್ಮಜನು ಭೀಮನು
ಭಾವನವರು ಧನಂಜಯಾದಿಗಳಮಗೆ ಮೈದುನರು ।
ಈವುಪಾಧಿಸ್ಥಳದೊಳಂತ
ರ್ಜೀವನವು ಪ್ರಾಣಾದಿವಾಯುಗ
ಳಾವು ನಿಮ್ಮೈವರಿಗೆ ಕಾರಣವೆಂದನ [1] ಸುರಾರಿ ‖ ೯

ದ್ರುಪದ ಗುಡಿಗಟ್ಟಿದನು ಕುಂತಿಯು
ವಿಪುಳಹರುಷವನೇನನೆಂಬೆನು
ದ್ರುಪದ ಯದುಪರಿವಾರ ವುಲಿದುದು ಜಲಧಿಘೋಷದಲಿ ।

---

1 ಯೆಂದನು ಕುಂತಿಗ, ಕ. ಖ.

ಅಪದೆಸೆಯ ಮುಗಿಲೊಡೆದು ಹೊಳಹೊಳ
ದುಪರಿಚರ ರವಿಯಂತೆ ತತ್‌ಕ್ಷಣ
ವಿಪುಳತೇಜಃಪುಂಜರೆಸೆದರು ಪಾಂಡುನಂದನರು ॥ ೧೦

ಇದಿರಲವನಿಪಭೀಮನೆಡವಂ
ಕದಲಿ ಮಾದ್ರೀಸುತರು ಬಲವಂ
ಕದಲಿ ದೇವಕಿ ಕುಂತಿವಸುದೇವಾದಿಯದುನಿಕರ ।
ಮುದದಿನೈವರ ರಮಣಿ ಬಲವಂ
ಕದಲಿ ಕರುಣಾಳುವಿನ ವಾಮಾಂ
ಕದಲಿ ಫಲುಗುಣನೊಪ್ಪಿ ಮೆಱೆದನು ದಾನವಧ್ವಂಸಿ ॥ ೧೧

ಆವುದೋ ಧರ್ಮಜನ ಭೀಮನ
ಭಾವಶುದ್ಧಿ ಧನಂಜಯನ ಸುಕೃ
ತಾವಲಂಬನ ಸಾರವೆಂತುಟೊ ಶಿವ ಮಹಾದೇವ ।
ತಾವು ಗಾಣವು ವೇದವುಪನಿಷ
ದಾವಳಿಗಳೋಲೈಸಿ ಕೃಷ್ಣ ಕೃ
ಪಾವಿಲಾಸವ ನೋಡಿ ಯೆಂದುದು ಸಕಲಸುರನಿಕರ ॥ ೧೨

ಅರಸ ಚಿತ್ತೈಸಂದಿನೋಲಗ
ಹರಿದುದಾ ಹರಿಸೇನೆ ಬಿಟ್ಟುದು
ಪುರದ ಬಹಿರುದ್ಯಾನವೀಧಿಗಳೊಳಗೆ ಹರಹಿನಲಿ ।

ಚಾರರಿಂದ ಧೃತರಾಷ್ಟ್ರನು ಈ ವಾರ್ತೆಯನ್ನು ಕೇಳಿ ಚಿಂತಿಸುವಿಕೆ.

ಕುರುನೃಪಾಲನ ಗುಪ್ತಚಾರರು
ಅಱಿದರೀವಾರ್ತೆಯನು ಪುರದಲಿ
ನೆರಹಿದರು ನೆಱೆ ಕೇಳಿದನು ಧೃತರಾಷ್ಟ್ರನೀಹದನ ॥ ೧೩

ಕರೆಸಿದನು ಗಾಂಗೇಯ ಗೌತಮ
ಗುರುಸುಯೋಧನಶಕುನಿಸೈಂಧವ

ಗುರುತನುಜ ರಾಧೇಯ ವಿದುರವಿಕರ್ಣಸಾಬಲರ |
ಚರಮುಖಪ್ರತಿಪನ್ನಬಂಧುರ
ತರವಚೋವಿನ್ಯಾಸಕರ್ಣ
ಜ್ವರವೊ ಕರ್ಣಾಮೃತವೊ ಕೇಳಿರೆ ಯೆಂದನಂಧನೃಪ ॥ ೧೪

ಕೇಳಿರೈ ಹೇಳುವೆನು ಯಾದವ
ರಾಳು ಬಂದು ದುಗುಡಜನಾರ್ದನ
ಕೊಳುವೋದನು ಗಡ ಯುಧಿಷ್ಠಿರಭೀಮಪಾರ್ಥರಿಗೆ |
ಗಾಳಿ ಬೆಂಬಲವಾಗಲುರಿಯು ಭ
ಡಾಳವನು ಜಾಳ್ಕಿಸಬಹುದೆ ವಿ
ಟಾಳಿಸಿತಲೈ ನಿಮ್ಮಗಾರುಡವೆಂದನಂಧನೃಪ ॥ ೧೫

ಆಗ ಸೈಂಧವಾದಿಗಳು ತಮ್ಮನ್ನು ಹೊಗಳಿಕೊಳ್ಳುವಿಕೆ.

ಎನಲು ಗರ್ಜಿಸುತರಸ ಮುರರಿಪು
ಜೆನುಗಿದೊಡೆ ಗಿರಿ ಜಱಿವುದೇ ಯಮ
ತನುಜಭೀಮಾರ್ಜುನರ ಹಿಡಿಯೊಳಡಗವುದೆ ಗಗನ [1] |
ದನುಜರಿಪುವಿನೊಳೇನಹುದು ಬರ
ಲನಿಮಿಷರು ನೆರವಾಗಿ ನಮ್ಮನು
ಜನಪ ನೋಡೆಂದರು ಜಯದ್ರಥಕರ್ಣಸಾಬಲರು ॥ ೧೬

ಕೊಱತೆಯಲ್ಲಿದು ನಿಮ್ಮ ನಾವ್ ಕಂ
ಡಱಿದೆವಿವರತಿಬಳರು ಕೃಷ್ಣನ
ಬಱಿಯ ಸಾಹಸವೇನು ಭೀಮಾರ್ಜುನರ ಬಲುಹೇನು |

ಆಗ ಅವರನ್ನು ಕರೆಸಿ ಸಮಾಧಾನವಂ ಮಾಡೆಂದು ಭೀಷ್ಮರ ವಚನ

ನೆರವಣಿಗೆಯುಳ್ಳವರು ನೀವ್ ಹೊ
ಕ್ಕಱಿದ ರಣ ಹಸಿಯಾಱಿತೇ ನೀ
ವಱಿಯಿರೇ ಭೂಪಾಲ ಯೆಂದನು ನಗುತ ಗಾಂಗೇಯ ॥ ೧೭

1 ಭೀಮಾರ್ಜುನರು ಹಿಡಿದರೆ ಗಗನವಡಗುವುದೆ, ಚ. ಠ.

ಇವರ ಬಲುಹಂತಿರಲಿ ಸಾಕಿ
ನ್ನವರ ಕರೆಸು ವಿರೋಧಬಂಧ
ವ್ಯವಹೃತಿಗೆ ಫಲವಿಲ್ಲ ಮೂಲಚ್ಛೇದಕರ್ಮ [1] ವಿದು ।
ಅವರು ಮುನ್ನತಿಬಳರು ಕೃಷ್ಣನ
ಹವಣ ನೀನೇ ಬಲ್ಲೆಯಿನ್ನೀ
ಸವಡಿ ಮಾಡಿಯು ತೊಡಕು ಲೇಸಲ್ಲೆಂದನಾಭೀಷ್ಮ ॥ ೧೮

ಕರೆಸು ವಿದುರನ ಕಳುಹಿ ವಾರಣ
ಪುರದ ರಾಜ್ಯವಿಭಾಗವನು ವಿ
ಸ್ತರಿಸಿ ಕೊಡುವುದು ಪಾಂಡುಸುತರಿಗೆ ಮುನ್ನಿನಂದದಲಿ [2] ।
ನರಯುಧಿಷ್ಠಿರಪವನಜರನುಪ
ಚರಿಸಿ ನಿನ್ನವಗುಣವ ನೋಡದೆ
ಬೆರಸಿ ಕೊಡುವೆನು ಕೂಡೆ ಬದುಕುವುದೆಂದನಾಭೀಷ್ಮ ॥ ೧೯

ಕರೆಸಿ ಕೊಡಿರೈ ನಿಮ್ಮ ಚಿತ್ತಕೆ
ಬರಿಸಿ ನಡೆಸುವೆ ನನ್ನ ಮಕ್ಕಳ
ದುರುಳತನದಿಂದಾದ ಹಿಂದಣಮಕ್ಕಳಾಟಿಕೆಯು ।
ಮಱೆದು ಕಳೆಯಲಿ ಪಾಂಡುನಂದನ
ರೆರವಿಗರೆ ಬಾ ವಿದುರ ಭೀಷ್ಮನ
ಪರಮಮತವೇ ನನ್ನ ಮತ ಹೋಗೆಂದನಂಧನೃಪ ॥ ೨೦

ವಿದುರನು ಪಾಂಚಾಲಪುರಕ್ಕೆ ಬಂದು ಸರ್ವರನ್ನು ಒಡಂಬಡಿಸಿ
ಕರೆದು ಕೊಂಡು ಹೋಗುವಿಕೆ.

ಕಳುಹಿದರು ವಿದುರಂಗೆ ಬುದ್ಧಿಯು
ಕಲಿಸಿ ಭೀಷ್ಮಾದಿಗಳು ಪಯಣದ
ಲಲಿತಸನ್ನಾಹದಲಿ ಪರುಠವಿಸಿದನು ಪಾವುಡವ ।

---

1 ಮಾರ್ಗ, ಕ. ಖ.

2 ಕೊಡು ಭಂಡಾರವನು ದಾಯಾದಮಾರ್ಗದಲಿ, ಚ. ಠ.

ಬಳಿಕ ಸುಮುಹೂರ್ತದಲಿ ವಿಪ್ರಾ
ವಳಿಗಳಾಶೀರ್ವಾದದಲಿ ಮಂ
ಗಳತೆ ಮಿಗಿಲೊಲವಿಂದ ಹಸ್ತಿನಪುರವ ಹೊಱವಂಟ ॥ ೨೧

ಕೇಳು ಭೂಪತಿ ಹಲವು ಪಯಣದ
ಮೇಲೆ ಪಯಣದಲೈದಿದನು ಪಾಂ
ಚಾಲಪುರವನು ಬಂದನರಮನೆಗಧಿಕಹರುಷದಲಿ ।
ಕೇಳಿದರು ಕೌಂತೇಯರೀತನ
ಯಾಲಿಸಿದರಿದಿರ್ಗೊಂಡು ತನುಪುಳ
ಕಾಳಿಯಲಿ ವೈಮುಱಗೆ ತೆಗೆದಪ್ಪಿದರು ತವೆತವೆಗೆ ॥ ೨೨

ಕ್ಷೇಮವನು ಕುಶಲವನು ಬಂಧು
ಸ್ತೋಮವನು ಕೇಳಿದರು ತವ್ಮ
ಕ್ಷೇಮಕುಶಲವ ಹೇಳಿದರು ಪೂರ್ವಾಪರಸ್ಥಿತಿಯ ।
ಭೂಮಿಪತಿ ಚಿತ್ತವಿಸು ಬಳಿಕಿನ
ರಾಮಣೀಯಕಯಾದವೇಂದ್ರಶಿ
ರೋಮಣಿಯು ಸಮ್ಮೇಳವನು ಹೇಳಿದರು ವಿದುರಂಗೆ ॥ ೨೩

ತಂದ ಪಾವುಡವನಿತುವನು ಯಮ
ನಂದನಂಗೊಪ್ಪಿಸಿದ ದ್ರುಪದ ಮು
ಕುಂದ ಧೃಷ್ಟದ್ಯುಮ್ನಕಂದರ್ಪಾನಿರುದ್ಧರಿಗೆ ।
ತಂದ ಬಹುವಿಧವಸ್ತುವನು ಸಾ
ನಂದದಲಿ ನೀಡಿದನು ಬಳಿಕರ
ವಿಂದನಾಭನ ಪದಕೆ ಮೆಯ್ಯಿಕ್ಕಿದನು ಭಕ್ತಿಯಲಿ ॥ ೨೪

ತೆಗೆದು ತಕ್ಕೈಸಿದನು ಭೀಷ್ಮಾ
ದಿಗಳ ಕುಶಲವ ಕೇಳಿದನು ನಸು
ನಗುತ ವೈದಡವಿದನು ವಿದುರನನಾ ಕೃಪಾಜಲಧಿ ।

ವಿಗಡನಾಧೃತರಾಷ್ಟ್ರನೀ ಬಂ
ಧುಗಳ ನೆನೆವನೆ ಪಾಂಡುಸುತರಿಗೆ
ಸೊಗಸುವನೆ ನೀ ಬಂದೆ ಲೇಸಾಯ್ತೆಂದನಸುರಾರಿ ‖　　　೨೫

ಕಳುಹಿದನು ಬೀಡಾರಕಾತನ
* ಬಳಿಯು ಪರಿವಾರವನು ಮನ್ನಿಸಿ
ಬಳಿಕ ಮರುದಿನ ನೆರಹಿಸಿದರು ಮಂತ್ರಶಾಲೆಯಲಿ ।
ತಿಳುಹಿದನು ಧೃತರಾಷ್ಟ್ರಭೀಷ್ಮರ
ಲಲಿತಮತವನು ಬಂಧುವರ್ಗ
ಸ್ಖಲಿತವನು ಸೈರಿಸುವುದೆಂದನು ವಿನಯದಲಿ ವಿದುರ * ‖　　　೨೬

ಕರೆಸಿದನು ಧೃತರಾಷ್ಟ್ರನಾತನ
ಚರಣವನು ಕಾಂಬುದು ನದೀಸುತ
ಗುರುಕೃಪರು ನಿಮಗೊಳ್ಳಿದರು ನೀವಖಿಳರಾಜ್ಯದಲಿ ।
ಸರಿಯ ಕೊಂಬುದು ಸೇರುವೊಡೆ ಗಜ
ಪುರದೊಳಹುದಲ್ಲದೊಡೆ ನಿಮ್ಮಯ
ಧರೆಯಲಿರಿ ನೀವಾತ್ಮನಿರ್ಮಿತರಾಜಧಾನಿಯಲಿ [1] ‖　　　೨೭

ಮುರಹರನನಹುದೆನಿಸಿ ಭೂಮಿಾ
ಶ್ವರರ ಮೆಚ್ಚಿಸಿ ಭೀಮನನು ಮನ
ಒರಿಸಿ ಪಾರ್ಥನನೊಲಿಸಿ ಮಾದ್ರೀಸುತರ ನೊಡಬಡಿಸಿ ।
ಅರಸಿಗಭಿಮತವೆನಿಸಿ ಪಾಂಚಾ

---

* ನೊಲಿದು ಮನ್ನಿಸಿ ಮಾನ್ಯಮನ್ನಣೆ
ಗಳಲಿ ಮರುದಿನ ಸಕಲಜನಸಹಿತೊಂದುನಿಳಯದಲಿ ।
ನಳಿನನಾಭನು ಕುಂತಿಪುತ್ರರು
ನಲಿದುಕುಳ್ಳಿರಲಂದು ಪರಿಮಿತ
ದೆಲೆವನೆಯಲಾ ವಿದುರ ತಾ ಬಂದಿರವನರುಹಿದನು, ಕ. ಖ. ‖

1 ಪುರದೊಳಿರಿ, ಚ.

ಲರಿಗೆ ಕಾರ್ಯವಿದೆನಿಸಿ ಕುಂತಿಗೆ
ಪರಮಹರುಷವ ರಚಿಸಿ ನುಡಿದನು ಸಂಧಿಯನು ವಿದುರ ॥ ೨೮

ಕದಹು ತಿಳಿದುದು ಕಾರ್ಯಗತಿಗಾ
ಸ್ಪದವ ಕೊಟ್ಟರು ಬಳಿಕ ಸುಮುಹೂ
ರ್ತದಲಿ ಪಯಣವ ಮಾಡಿದರು ಪಾಂಚಾಲಬಲಸಹಿತ ।
ಯದುಶಿರೋಮಣಿ ವೆರಸಿ ಬಹುಪಯ
ಣದಲಿ ಬಂದರು ಬಳಿಕ ಕೌರವ
ರಿದಿರುಗೊಂಡರು ಕೂಡೆ ಹೊಕ್ಕರು ಹಸ್ತಿನಾಪುರವ ॥ ೨೯

ಬಳಿಕ ಪ್ರೀತಿಯಿಂದ ಬಹುಕಾಲ ಯಿರುವಿಕೆ.

ಬಂದು ಕಾಣಿಕೆ ಗೊಟ್ಟು ಗಂಗಾ
ನಂದನನ ಧೃತರಾಷ್ಟ್ರನನು ಸಾ
ನಂದದಲಿ ಗಾಂಧಾರಿಯನು ಗುರುಗೌತಮಾದಿಗಳ ।
ವಂದಿಸಿದರಿವರ್ಕೈವರವರಾ
ನಂದಜಲಪರಿಲುಳಿತನಯನಾ
ಸ್ಪಂದಪರಿತೋಷದಲಿ ತೆಗೆದಪ್ಪಿದರು ಪಾಂಡವರ ॥ ೩೦

ಕರೆಸಿ ತನ್ನ ಕುಮಾರಕರ ನೂ
ರ್ವರನು ಕಾಣಿಸಿದನು ಪರಸ್ಪರ
ಪರಮಸಂಪ್ರೀತಿಗಳ ಗಾಢಾಲಿಂಗನೋತ್ಸವದ ।
ದರುಶನೋಚಿತಮಾನ್ಯಮಾನ
ಸ್ಫುರಣದಲಿ ವಿಸ್ತರಿಸಿ ಸೈಂಧವ
ಗುರುತನುಜರಾಧೇಯಸಾಬಲರಪ್ಪಿದರು ನೃಪರ ॥ ೩೧

ಯಾದವರು ಪಾಂಚಾಲರಲಿ ಸಂ
ಪಾದಿಸಿದರನ್ಯೋನ್ಯಘನ
ಸಂವಾದಸುಖಸಂಪ್ರೀತಿಯಲಿ ಮೊಱೆಯುಲ್ಲಿಷ್ಟಸತ್ಕಾರ ।

ಆದುದುತ್ಸವ ಜನಜನಿತಹರು
ಷೋದಧಿಯ ಹೊನಲಿನಲಿ ಹಿಂದಣ
ಭೇದಕರ್ದಮವಡಗಿ ಪೋಯ್ತವನೀಶ ಕೇಳೆಂದ ॥ ೩೦

ವೀತಭಯರನ್ಯೋನ್ಯಪರಮ
ಪ್ರೀತಿಗಳ ಬಳವಿಗೆಯಲಿರ್ದರು
ಭೂತಳಾಧಿಪರೈದುವಸಂವತ್ಸರಗಳೊಂದಾಗಿ ।
ಖ್ಯಾತವಿದು ಪಾಂಚಾಲಪುರದೊ
ಳತೀತವಾಯ್ತೊಂದೊಂದುವರುಷವ
ಭೀತ ಧರ್ಮಸುತಂಗೆ ಮೂವತ್ತಾಱುಸವುವೆಂದ ॥ ೩೧

ಮೂವತ್ತನಾಲ್ಕನೆಯ ಸಂಧಿ ಮುಗಿದುದು.

## ಮೂವತ್ತೈದನೆಯ ಸಂಧಿ.

ಸೂಚನೆ.

ದಾಯಭಾಗದೊಳಖಿಳರಾಜ್ಯ
ಶ್ರೀಯೊಳರ್ಧವ ಕೊಂಡು ಪಾಂಡವ
ರಾಯರೊಪ್ಪಿದರಿಂದ್ರನಿರ್ಮಿತರಾಜಧಾನಿಯಲಿ ॥

ಪಾಂಡವರಿಗೆ ಕೌರವರಿಗೆ ಭೂಭಾಗವನ್ನು ಮಾಡಿ ಕೊಡಲು
ಧೃತರಾಷ್ಟ್ರನ ಅನುಮತಿ

ಕೇಳು ಜನಮೇಜಯ ಧರಿತ್ರೀ
ಪಾಲ ನಿಮ್ಮಯ ಪೂರ್ವಜರು ಸವು
ಪಾಳಗಳ ಸೇರುವೆಯ ಸಂಧಿಸಿ ಸಾಮನಸ್ಯದಲಿ [1] ।

1 ಯೊಳಿದ್ದರು ಸುಸುರಾಗದಲಿ, ಚ.

ಖೇಳಮೇಳದ ಬೇಟೆಗಳ ವೈ
ಹಾಳಿಗಳ ಜೂಜಿನ ಸಮಂಜಸ
ಲೀಲೆಗಳ ಕೇಳಿಯಲಿ ಕಳೆದರು ಪಂಚವರ್ಷಗಳ ‖ ೧

ಕರೆಸಿದನು ಧೃತರಾಷ್ಟ್ರಭೂಪತಿ
ಮುರಹರನ ದ್ರುಪದನ ಯುಧಿಷ್ಠಿರ
ನರವೃಕೋದರಭೀಷ್ಮಗುರುಕೃಪಕರ್ಣಸಾಬಲರ[1] |
ಎರಡುಭಾಗವ ಮಾಡಿ ವಿಶ್ವಂ
ಭರೆಯ ರಾಜ್ಯವನುಭಯರಾಯರ
ಹೊರೆಹೊಗದೆ ಪಾಲಿಸಲಿ ಪಂಥದೊಳೆಂದನಂಧನೃಪ ‖ ೨

ಅಹುದು ಹೊಲ್ಲೆಯವಲ್ಲ ಖುಲ್ಲರ
ಕುಹಕಕೊಳ್ಳದು ಬೇಱೆ ರಾಜ್ಯದೊ
ಳಿಹರೆ ಸೇರುವೆ ದೃಢವಹುದು ದಾಯಾದವಿಷಯದಲಿ[2] |
ಗಹನವೇಕಾಮಿಷಸಮುದ್ಭವ
ದಹಿತತನದುತ್ತರಣವತಿದು
ಸ್ಸಹವೆಲೇ ನೀ ನೆನೆದ ಹದ ಲೇಸೆಂದನಾಭೀಷ್ಮ ‖ ೩

ಅರಸ ಕೇಳ್ಳೈ ಸಕಲರಾಜ್ಯವ
ನೆರಡು ಭಾಗೆಯ ಮಾಡಿ ಪೂರ್ವೋ
ತ್ತರದ ದಕ್ಷಿಣಪಶ್ಚಿಮಂಗಳ ಹೆಚ್ಚು ಕುಂದುಗಳ |
ಪುರನಗರಖರ್ವಡಮಡಂಬ
ಸ್ಫುರಿತಖೇಟಗ್ರಾಮವೆಂಬವ
ನೆರಡುಭಾಗವ ಮಾಡಿದರು ಕೂಡಿದರು ಸಮವಾಗಿ ‖ ೪

ಪುರಸುರೇಂದ್ರಪ್ರಸ್ಥವರಸಂ
ಗಿರವು ಧರ್ಮಸುತಂಗೆ ಹಸ್ತಿನ

1 ಶಕುನಿಗಳ, ಚ.    2 ಮಾರ್ಗದಲಿ, ಚ. ಠ

ಪುರ ಸುಯೋಧನಗುಭಯರಾಯರ ರಾಜಧಾನಿಗಳು ।
ಚರಮದಕ್ಷಿಣವಾಗಿ ಪೂರ್ವೋ
ತ್ತರವಿಲಂಬಿತವಾಗಿ ಹಿಮಸಾ
ಗರಪರೀತ ಮಹೀತಳವ [1] ಸೇರಿಸಿದರೆರಡಾಗಿ ॥ ೫

ವಾರಣದ ಘಟೆಗಳ ಸಘಾಟದ
ವಾರುವಂಗಳ ಮಣಿಮಯದ ಹೊಂ
ದೇರುಗಳನಾಭರಣಗಳ ತೆಗಿಸಿದರು ಸಮವಾಗಿ ।
ಕೌರವರ ಪಾಂಡವರ ಮನದೊಳ
ಗೋರೆಪೋರೆಯು ತಿಳುಹಿ ವೈರವಿ
ಕಾರವನು ಬಿಡಿಸಿದರು ಭೀಷ್ಮಾದಿಗಳು ಹರುಷದಲಿ [2] ॥ ೬

ಬಳಿಕ ಸುಮುಹೂರ್ತದಲಿ ಹೊಱಗುಡಿ
ಬಳಸಿ ಹೊಯ್ದುವು ರಾಣಿವಾಸದ
ನಿಳಯನಿಳಯದ ತಳಗೆ ತಂಬುಲಮಂಗಳಾರ್ತಿಗಳ ।
ಫಲಸಮೂಹದ ಕಾಣಿಕೆಯ ಕೈ
ಗೊಳುತ ಗಾಂಧಾರಿಗೆ ಮಹೀಶನ
ಲಲನೆಯರಿಗಭಿನಮಿಸಿ ಕಳುಹಿಸಿ ಕೊಂಡರುಚಿತದಲಿ [3] ॥ ೭

ಕಳುಹಲೈತಂದಂಧನೃಪತಿಯ
ನಿಲಿಸಿದರು ನಿಳಯದಲಿ ಕೌರವ
ಕುಲದ ನೂರ್ವರ ಕರ್ಣಶಕುನಿಜಯದ್ರಥಾದಿಗಳ ।
ನಿಲಿಸಿದರು ಗಜಪುರದ ಯೋಜನ
ವಳಯದಲಿ ಗುರುಭೀಷ್ಮವಿದುರರು
ಕೆಲವು ಪಯಣವೆ ಬಂದು ಕಳುಹಿಸಿಕೊಂಡರುಚಿತದಲಿ ॥ ೮

---

1 ಮಧ್ಯದ ಭೂಮಿಯನು, ಚ. 2 ವಿನಯದಲಿ, ಕ. ಖ.
3 ದನುಕೈಕೊಳುತ ಹರಕೆಗಳ, ಕ. ಖ.

ಇಂದ್ರಪ್ರಸ್ಥಪುರನಿರ್ಮಾಣ.

ಭೂಮಿಲಂಬದ ನೃಪರ ಬಲದು
ದ್ದಾಮವಿಭವದಲಸುರರಿಪು ಸಹಿ
ತೀಮಹೀಪಾಲಕರು ಬಂದರು ಹಲವು ಪಯಣದಲಿ ।
ರಾಮಣೀಯಕರಚನೆಯಲಿ ಸು
ತ್ರಾಮನಗರಿಯ ಸೂತ್ರದಲಿ ಸುಮ
ನೋಮನೋಹರ ವಿಶ್ವಕರ್ಮನು ರಚಿಸಿದನು ಪುರವ ॥ ೯

ಧರಣಿಪತಿ ಚಿತ್ತೈಸಿ ಳಾವೃತ
ವರುಷಮಧ್ಯದ ಹೇಮಗಿರಿಯ ಪ್ರೊ
ಲರಮನೆಯ ಸಿರಿ ಸೋಲಿಸಿತು ಸುರರಾಜವೈಭವವ ।
ಹರಿಯ ವೀಥಿಯ ಸೋಮವೀಥಿಯ
ಮುರಿವುಗಳ ಕೇರಿಗಳ ನೆಲೆಯು
ಪ್ಪರಿಗೆಗಳ ಹೊಂಗೆಲಸದಲಿ ಹೊಳೆದುದಾನಗರ ॥ ೧೦

ಹೇಮನಿರ್ಮಿತದೇವಸದನ
ಸ್ತೋಮದಲಿ ಮಣಿಮಯದ ಫಣಿಪನ
ಹೇಮವೇದಿಯ ವಿವಿಧರತ್ನಾವಳಿಯ ಹಸರದಲಿ ।
ಕಾಮರಿಪುವಿಂಗೊರೆಯ ಕಟ್ಟುವ
ವಾಮಲೋಚನೆಯರ ವಿಳಾಸದ
ಲಾಮಹಾಪುರವೆಸೆದುದಿಂದ್ರಪ್ರಸ್ಥನಾಮದಲಿ ॥ ೧೧

ಅಲ್ಲಿಗೆ ಧರ್ಮರಾಯನ ಪ್ರವೇಶ.

ವಿತತವಿಭವದಲಿಂದ್ರನಮರಾ
ವತಿಯ ಹೊಗುವಂದದಲಿ ದ್ರುಪದಾ
ಚ್ಯುತರು ಸಹಿತವನೀಶ ಹೊಕ್ಕನು ರಾಜಮಂದಿರವ ।
ಕೃತಯುಗದೊಳಾತ್ರೇತೆಯಲಿ ಭೂ
ಪತಿಗಳಾದರನಂತಕುಂತೀ
ಸುತರ ಸಿರಿಗೆಣೆ ಯಾಮದಿಲ್ಲ ಮಹೀಶ ಕೇಳೆಂದ ॥ ೧೨

ಬಂದು ಕಂಡುದು ಸಕಲಪುರಜನ
ವೃಂದ ಕಾಣಿಕೆಗೊಟ್ಟು ಸುಭಟರ
ಸಂದಣಿಯು ಗಜರಥಹಯದ ಪದಧೂತಧೂಳಿಗಳ ।
ಮಂದಿರದ ಬಾಗಿಲ ಗತಾಗತ
ವೃಂದದೊತ್ತೊತ್ತೆಯಲಿ ಪುರಜನ
ನಿಂದುದಲ್ಲಿಯದಲ್ಲಿ ಪಡೆಯದೆ ರಾಜದರುಶನವ ॥ ೧೩

ಅತಿಶಯವನೇನೆಂಬೆನಮರಾ
ವತಿಯ ಭೋಗಾವತಿಯ ಮಧ್ಯ
ಸ್ಥಿತಿಯ ನಾಯಕರತುನದಂತಿರೆ ಮೆಱೆದುದಾನಗರ ।
ಸತತವೀಪರಿವಿಭವವೀಜನ
ವಿತತಿಗಳ ಸನ್ಮಾರ್ಗವೀಸಂ
ತತಿಗಳೀವಿಸ್ತಾರವೀಪರಿ ಭೂಪ ಕೇಳೆಂದ ॥ ೧೪

ಬಂದ ರಾಜರು ತಮ್ಮತಮ್ಮ ಪುರಕ್ಕೆ ಹೋಗುವಿಕೆ

ದ್ರುಪದಧೃಷ್ಟದ್ಯುಮ್ನಮೊದಲಾ
ದಪರಿಮಿತಬಾಂಧವನಿಕಾಯವ
ನುಪಚರಿಸಿ ಕಳುಹಿದನು ಭೂಪತಿ ಪಂಚಕೈಕಯರ ।
ವಿಪುಳಕಾರುಣ್ಯದಲಿ ಪಾಂಡವ
ನೃಪಜನವ ಸಂತೈಸಿ ದಾನವೆ
ರಿಪು ನಿಜನಿವಾಸಕ್ಕೆ ಬಿಜಯಂಗೈಯ್ಯಲನುವಾದ ॥ ೧೫

ಕೃಷ್ಣನು ದ್ವಾರಾವತಿಗೆ ಹೋಗುವಿಕೆ.

ಕರೆಸಿ ಕುಂತೀದ್ರೌಪದಿಯರನು
ಕರುಣವಚನಾಮೃತದ ರಸದಲಿ
ಹೊರೆದು ಕೃತದಾಯಾದವಿಷಮವಿರೋಧವರ್ತನವ ।

ಅಱುಹಿ ಸುಯಧ್ಯಾನದ ಸಮೋಹಿತ
ಕರದ ಬುಧ್ಧಿಯು ಹೇೞ ಯಾದವ
ರರಸ ಬಿಜಯಂಗೈದನಾದ್ವಾರಾವತೀಪುರಿಗೆ ॥ ೧೬

ಧರ್ಮರಾಯನ ರಾಜ್ಯಭಾರಕ್ರಮವರ್ಣನ.

ಕಳುಹಿದನು ಪಾಂಚಾಲರನು ಯದು
ತಿಲಕಮೊದಲಾದಖಿಳಬಾಂಧವ
ಕುಲವನುತ್ಸಾಹದಲಿ ಹೊರೆದನು ನಾಡುಬೀಡುಗಳ ।
ಬೆಳುಗವತೆ ಯನ್ಯಾಯದಾರಡಿ
ಕಳವು ದೞದುೞ ಬಂದಿಡಾವರ
ಕೊಲೆಹುಸಿಗಳಿಲ್ಲಿವರ ರಾಜ್ಯದೊಳರಸ ಕೇಳೆಂದ ॥ ೧೭

ಯಾಗವಹ್ನಿಯ ಧೂಮವಲಿ ದಿಗು
ಭಾಗವಿವರಣವಡಗಿತು ಹವಿ
ರ್ಭಾಗದಲಿ ಭೋಜನವದಾದುದಜೀರ್ಣವಮರರಿಗೆ ।
ಯಾಗದಕ್ಷಿಣೆಗಳಲಿ ಬಹಳ
ತ್ಯಾಗದಾನಕೆ ಲಟಕಟಿಸಿ ತಾ
ವಾಗಿ ಕೈಯ್ಯಾನರು ಯುಧಿಷ್ಠಿರನೃಪನ ರಾಜ್ಯದಲಿ ॥ ೧೮

ಬಲಿಯ ನಹುಷನ ದುಂದುಮಾರನ
ನಳನ ಸಗರನ ನೃಗನ ಶಾಕುಂ
ತಳನ ಪುರುಕುತ್ಸನ ಹರಿಶ್ಚಂದ್ರನ ಪುರೂರವನ ।
ಇಳೆಯ ವಲ್ಲಭರೆನಿಪ ರಾಜಾ
ವಳಿಯ ಮನಮೆಚ್ಚುಗಳನುರ್ವೀ
ಲಲನೆ ಮಱೆದಳು ಮೇಳದಿಂ ಧರ್ಮಜನ ರಾಜ್ಯದಲಿ ॥ ೧೯

ಆದಿಯುಗದಲಿ ಧರ್ಮವಿದ್ದುದು
ಪಾದ ನಾಲ್ಕಱ ಗಾಢಗತಿಯಲಿ
ಪಾದದೂಣೆಯುವಾದುದಾತ್ರೇತಾಪ್ರಭಾವದಲಿ ।

ಪಾದವೆರಡಡಗಿದುವು ದ್ವಾಪರ
ದಾದಿಯಲಿ ಯುಧಿಷ್ಠಿರನ ರಾ
ಜ್ಯೋದಯದಲಂಕುರಿಸಿ ಸುಳಿದುದು ನಾಲ್ಕುಚರಣದಲಿ ‖ ೨೦

ಅರಸ ಚಿತ್ತೈಸಾ ಯುಧಿಷ್ಠಿರ
ನರಪತಿಯ ರಾಜ್ಯಪ್ರಭಾವೋ
ತ್ಕರುಷವಿಸ್ತರವೆನ್ನ ಪಾಡೇಸಾಕ [1] ದಂತಿರಲಿ ।

ಆಗ ನಾರದರ ಆಗಮನ.

ಪರಮವಿಭವದೊಳೊಂದು ದಿನವೈ
ವರು ನಿಜಾಸ್ಥಾನದಲಿ ಹರಿವಿ
ಷ್ಟರದೊಳಿರ್ದರು ಕಂಡರತಿದೂರದಲಿ ನಾರದನ ‖ ೨೧

ಬಂದನಿವರೋಲಗಕೆ ಗಗನದಿ
ನಿಂದುಮಂಡಲವಿಳಿವವೊಲು ನೃಪ
ವೃಂದವೆದ್ದಭಿನಮಿಸಿದರು ಪದಯುಗಕೆ ಮುನಿಪತಿಯ ।
ಇಂದು ಧನ್ಯರು ನಾವಲಾ ಮುನಿ
ವೆಂದ್ಯದರುಶನವಾಯ್ತುಪೂರ್ವವಿ
ದೆಂದು ಕುಂತೀತನುಜರಿದಿರೆದ್ದಂಘ್ರಿಗೆರಗಿದರು ‖ ೨೨

ಹರಸಿದನು ಮುನಿಯರ್ಘ್ಯಪಾದ್ಯೋ
ತ್ತರವ ಮಧುಪರ್ಕಾಸನಾದಿಯ
ನರಸ ಮಾಡಿದನಮರಮುನಿ ಕೈಕೊಂಡು ಹರುಷದಲಿ ।
ಪರಿಮಿತದ ಸಮಯದ ವಚೋವಿ
ಸ್ತರಣವುಂಟೆನೆ ರಾಯನೋಲಗ
ಹರದುದವನೀಪಾಲ ಬಿನ್ನಹ ಮಾಡಿದನು ಮುನಿಗೆ ೨೩

ಏನಿ ಬಿಜಯಂಗೈದ ಹದನೆನ
ಗೇನನುಗ್ರಹವೆಚನ ನಿಮ್ಮಡಿ
ಗೇನ ನಾ ಬೆಸಕೈವುದೆನಗಾಜ್ಞಾಪಿಸುವುದೆನಲು ।

---

1 ವೇನನೆಂಬೆನು ನಾನು, ಚ,

ನೀನಘಾಟದ ರಾಜಋಷಿ ನೀ
ಮಾನುಷನೆ ಧರ್ಮಸ್ವರೂಪನು
ನೀನು ಭವದಾಲೋಕನಾರ್ಘವು ನಮ್ಮ ಬರವೆಂದ ॥ ೭೪

ಅನುಜರನು ಪೇಳುವೊಡೆ ಭೀಮಾ
ರ್ಜುನರು ವಧುವಾರೆಂಬೊಡಮರಾಂ
ಗನೆಯರಿಗೆ ನೋಟಕಿಂಟುಮಡಿ ಯೀದ್ರೌಪದೀದೇವಿ ।
ಘನಸಹಾಯನು ಹವಣಿನೆಂಬೆನೆ
ಘನಚತುರ್ದಶಭುವನಪತಿ ನೃಪ
ನಿನಗೆ ಪಾಡೇ ಪನ್ನಗೇಂದ್ರಸುರೇಂದ್ರರಿಂದಿನಲಿ ॥ ೭೫

ನಾರದರು ಸುಂದೋಪಸುಂದರ ಕಥೆಯಂ ಹೇಳುವಿಕೆ.

ಆದಡೊಂದಿಹದ್ಯೈವರಿಗೆ ವಧು
ವಾದಳೀ ದ್ರೌಪದಿ ಮಹೇಶ್ವರ
ನಾದಿಯಲಿ ಕರುಣಿಸಿದ ವರವಿದು ಪುಣ್ಯಾಕಥನವಿದು ।
ಮೇದಿನಿಯೊಳೀಕಾಮಿಷತ್ವದಿ
ಯಾದಿಯಿದು ವಿಗ್ರಹಕೆ ತಮ್ಮೊಳು
ಕಾದಿದರು ಸುಂದೋಪಸುಂದರು ಭೂಪ ಕೇಳೆಂದ ॥ ೭೬

ಸುಂದೋಪಸುಂದರ ಸಂಹಾರಾಲೋಚನೆ.

ಅರಸುಗಳು ತಾವಿಬ್ಬರೇಕೋ
ದರರು ಬಲುಗೈಗಳು ಸುರಾಸುರ
ನರರೊಳಗೆ ಪಾಯಿಯಲಿ ವೆಂಠಣಿಸಿದರು ಭೂತಳವ ।
ನೆರೆದು ಸುರರು ಸರೋಜಪೀಠಂ
ಗಱುಹಿದರು ಬಳಿಕಾತನವದಿರ
ಪರಿಹರಿಸುವುದಕೇನುಪಾಯವೆನುತ್ತ ಚಿಂತಿಸಿದ ॥ ೭೭

ಬಳಿಕಸಂಖ್ಯಾತದ ಸುರೋರಗ
ಲಲನೆಯರಲಿ ತಿಲಾಂಶಮಾತ್ರದ

ಚಲುವಿಕೆಯನೇ ತೆಗೆದು ನಿರ್ಮಿಸಿದನು ವರಾಂಗನೆಯ |
ಬೆಳಗಿತಾಕೆಯ ಹೆಸರು ದಿವಿಜಾ
ವಳಿಯೊಳ್ಳದೆ ತಿಲೋತ್ತಮೆಯಾಹ್ವಯ
ದಳಿಕುಳಾಳಕಿಗಬುಜಭವ ನೇಮಿಸಿದನೀಹದನ ॥ ೨೮

ತಿಲೋತ್ತಮಾಗಮನ.

ಅವರ ಕೆಡಿಸುವ ಹದನ ಕೈಕೊಂ
ಡವನಿಗೀತಂದಳು ವಿನೋದದ
ಳವದಿರಿದ್ದರು ಬನದೊಳಗೆ ಮದಿರಾಮದೋದ್ಧತರು |
ಯುವತಿಯನು ಕಂಡರು ಕಟಾಕ್ಷದ
ಸವಡಿಗೋಲಿಂದೊಡೆದುದೆದೆ ಹರಿ
ದವರು ಹಿಡಿದರು ವಾಮದಕ್ಷಿಣಕರಗಳಂಗನೆಯ ॥ ೨೯

ಸುಂದೋಪಸುಂದರ ಮರಣ.

ಎನಗೆ ವಧು ತಾ ಮುನ್ನ ಕಂಡೆನು
ತನಗೆ ವಧು ತಾ ಮುನ್ನ ಹಿಡಿದೆನು
ತನಗೆನಗೆ ನೀ ನಿಲ್ಲು ತಾ ನಿಲ್ಲೆನುತ ಹೊಯ್ದಾಡಿ |
ಜನಪರಿಬ್ಬರು ಮಡಿಯಲಮರಾಂ
ಗನೆ ಮುಗುಳ್ನಗೆ ನಗುತಲಬುಜಾ
ಸನನ ಹೊರೆಗೈದಿದಳು ಕುಂತೀತನುಜ ಕೇಳೆಂದ ॥ ೩೦

ಕಾಲಭೇದದಿಂದ ದ್ರೌಪದಿಯ ಬಳಿ ಪಾಂಡವರು ಇರತಕ್ಕದ್ದೆಂದು
ನಾರದರ ವ್ಯವಸ್ಥೆ.

ಅದಱನೀಜೀವರಿಗೆ ದುಃಸ್ಥಿತಿ
ಸುದತಿಯರ ದೆಸೆಯಿಂದ ರಾಜ್ಯದ
ಹುದುವಿನಲಿ ವೋಣಾರ್ಧಗತಿಯಲನರ್ಥ ತಪ್ಪದಲೆ |
ಸುದತಿ ನಿಮ್ಮೈವರಿಗೆ ಯಿಾದ್ರೌ

ಪದಿ ಮಹಾಸತಿ ರಾಗಲೋಭದ
ಕದನದಲಿ ಕಾಳಾಗದಿದ್ದರೆ ನಿಮಗೆ ಲೇಸೆಂದ || ೩೧

ಅರಸ ಕೇಳೊಂದೊಂದು ವರುಷದೊ
ಳಿರಲಿ ನಿಮ್ಮೊಬ್ಬರಲಿ ಸತಿ ಮಱು
ವರುಷ ಮತ್ತೊಬ್ಬರಲಿ ಪಂಚಕಕ್ಕೈದುವರುಷದಲಿ |
ಅರಸಿಯರು ಪತಿಸಹಿತ ಮಂಚದೊ
ಳಿರಲು ಕಾಂಬುದು ಸಲ್ಲದಿದು ಗೋ
ಚರಿಸಿದೊಡೆ ಬಳಿಕದಕೆ ಪ್ರಾಯಶ್ಚಿತ್ತವುಂಟೆಂದ || ೩೨

ಆರು ಕಂಡರೆ ಯಾತನೊಬ್ಬನೆ
ಧಾರುಣಿಯೊಳು ಸುತೀರ್ಥಯಾತ್ರಾ
ಭಾರದಲಿ ಚರಿಸುವುದು ಸುತ್ತಲಿ ವರುಷವೊಂದಱಲಿ |
ಚಾರುನಿಷ್ಕೃತಿ ಯೆನಲು ಮುದದಲಿ
ನಾರದನ ದಿವ್ಯೋಪದೇಶಕೆ
ಸಾರಹೃದಯ ಹಸಾದವೆಂದನು ತಮ್ಮದಿರು ಸಹಿತ || ೩೩

ಮಂಗಳವು ನಿಮಗೆಂದು ಹಂಸೆಯು
ಬೆಂಗೆ ಹಾಯ್ದನು ಬಳಿಕ ನಭದೊಳ್
ಭಂಗಮುನಿಯಡಗಿದನು ತಮ್ಮೊಳಗೆಂದರೀನೃಪರು |
ಅಂಗನಾವಿಷಯದಲಿ ಸೀಮಾ
ಸಂಗತಿಯ ಸೇರಿಸಿದನೈ ಮುನಿ
ಪುಂಗವನ ಕರುಣದಲಿ ಗದುಗಿನ ವೀರನಾರಯಣ || ೩೪

ಮೂವತ್ತೈದನೆಯ ಸಂಧಿ ಮುಗಿದುದು

## ಮೂವತ್ತಾರನೆಯ ಸಂಧಿ

---

ಸೂಚನೆ

ಅಸುರಾರಿವಿರೋಧಿಪುರದಲಿ
ವಾಸವಾತ್ಮಜ ಮದುವೆಯಾಗಿ ವಿ
ಳಾಸದಲಿ ಹೊಕ್ಕನು ಸುಭದ್ರಾಸಹಿತ ನಿಜಪುರವ ॥

ನಾರದಗಮನ.

ಕೇಳು ಜನಮೇಜಯ ಧರಿತ್ರೀ
ಪಾಲ ನಾರದಮುನಿ ನರೇಂದ್ರನ
ಬೀಳುಕೊಂಡನು ಚಪಳಗತಿಯಲಿ ಚಿಗಿದನಂಬರಕೆ ।
ಮೇಲೆ ಮತ್ತೊಂದತಿಶಯೋಕ್ತಿಯ
ಹೇಳುವೆನು ಪಾರ್ಥಂಗೆ ಬಂದುದು
ಕಾಲಗತಿಯಿಂ ಸಲೆ ವಿದೇಶಭ್ರಮಣವಾಯ್ತೆಂದ ॥ ೧

ಚೋರರ ಬಾಧೆಯಿಂದ ವಿಪ್ರರು ಮೊರೆಹೊಗುವಿಕೆ

ನರನ ವೆಳತದೊಳೊಂದು ಸಮಯದೊ
ಳರುಳು ತಸ್ಕರಬಾಧೆಯಲಿ ಭೂ
ಸುರರು ಬಾಯ್ಬಿಡುತೈದೆಯಿಂದ್ರಪ್ರಸ್ಥಪುರವರವ ।
ಮೊಱೆಯಬಾಯ್ಗಳ ಹಲ್ಲುಕೈಗಳ
ಹರಿದವ್ಯಯ್ಗಳಸೆಕೆಯ ಸುಯ್ಗಳ
ತರದಬ್ಬೆಯ್ಗಳ ಕಳಕಳವ ಕೇಳಿದನು ಕಲಿಪಾರ್ಥ ॥ ೨

ಕರೆಸಿ ವಿಪ್ರರ ಬಾಧೆಗಳನಾ
ದರಿಸಿ ಕೇಳಿಯೆ ಸಂತವಿಸಿ ಪರಿ
ಹರಿಸಿ ಕೊಡುವೆನು ದುಷ್ಟಪಾಟಚ್ಚರಪರಿಪ್ಲವವ ।

ಮರಳಿ ನೀವೆಂದವರ ಕಳುಹಿದ
ನರಿವಿದಾರಣ ಬಂದನಗ್ಗದ
ಶರಧನುವ ಕೊಳಲೆಂದು ರಾಯನ ಸೆಜ್ಜೆಯರಮನೆಗೆ ‖ ೩

ಆಗ ಧರ್ಮರಾಯನು ಸತಿಯೊಡನೆ ಇರುವಿಕೆ.

ಸಮಯವೇನೆನೆ ಜೀಯ ರಾಯನೆ
ರಮಣಿಯೊಡನೇಕಾಂತವರಸನ
ಸಮನಿಸಿಹುದೆಂದೆನಲು ಸೂಚಿಸಲಾಗಲರ್ಜುನನು ।
ಸಮಯ ವಿಷಮವಿದೇಸದೀಗಳ
ಸಮನಿಸಿತು ತನಗೆನುತ ಚಿಂತಿಸಿ
ಸ್ತಿಮಿತಹರುಷನು ಬಟ್ಟಿಕ ತಿಳಿದನು ತನ್ನ ಮನದೊಳಗೆ ‖ ೪

ತಮಗೆ ತಾನಹುದೆಂದು ಘಟಿಸಿತು
ವಿಮಳಮುನಿಯಾಕ್ರಮವು ನೆಱೆ ಸಂ
ಭವಿಸಿತೇ ತನಗೆಂದು ಚಿಂತಿಸಿ ಸುಯ್ದನಡಿಗಡಿಗೆ ।
ಅಮರಮುನಿಮತ ವೊಂದು ಮೆಂಚಿದ
ರಮಣಿರಮಣರ ದರುಶನವು ಯು
ಕ್ರಮವೆನಿಸುವೀನುಡಿಯು ಸಂಭವಿಸಿತ್ತೆ ತನಗೆಂದ ‖ ೫

* ಕಂಗಳಿವು ವಿಪ್ರರಲಿ ಖಳರಭಿ
ಷಂಗವಾರ್ತಾಶ್ರವಣ ಬಹುದುರಿ
ತಂಗಳಲಿ ಕರ್ತವ್ಯವಾವುದೊ ಮೊದಲು ತನಗೆಂದ ।

---

* ಈಗಲೀವಿಪ್ರರಲಿ ಖಳರಭಿ
ಯೋಗವಾರ್ತಾಶ್ರವಣ ಬಹುದುರಿ
ತಾಗಮವು ತನಗಾವುದೋ ಕರ್ತವ್ಯವೆಂಬೆನುತ ।
ಈಗಲೀಸಂದಿಗ್ಧ ಸಮಯ
ತ್ಯಾಗಧರ್ಮವಿರೋಧಕೃತ್ಯನಿ
ಭಾಗವಾವುದೊ ಶಾಸ್ತ್ರದೃಷ್ಟಿಯೊಳೆಂದು ಚಿಂತಿಸಿದ ‖ *

ಕಂಗಳಿವು ನೆಱೆ ಕಾಣವೆಗ್ರಜ
ನಂಗನರಸಿಯರಿಹುದು ಭೂಸುರ
ಭಂಗಬಾಧೆಯಿದೆನುತ ಪಾರ್ಥನು ವಿವಿಧಚಿಂತೆಗುಳಿ ॥　　　೬

ಕೇಳಲಿಕೆ ಸರಿಯೆರಡಕಾದರೆ
ಮೇಲೆ ತಾನಿದಱಧಿಕವಾವುದೊ
ಕೇಳದೆವು ಕಿವಿಗಳಲಿ ಕಂಡೆವು ಭೂಸುರವ್ಯಥೆಯು ।
ಕೇಳಿದನು ನೃಪನಂಗಜಾಲದ
ಬಾಲೆಯೊಳಗಿಹ ವಿಷಯವಾವುದು
ಕೀಳು ಮೇಲುಗಳಾವುದೆನುತವೆ ಪಾರ್ಥ ಚಿಂತಿಸಿದ ॥　　　೭

* ಎರಡುಪಾತಕ ವಿವರೊಳಾವುದು
ಕರ ಬಲುಹು ಸಾಮಾನ್ಯಪಕ್ಷಾಂ
ತರವಿಶೇಷವದಾವುದೊ ಯೆಂದಳುಕಿ ಚಿತ್ತದಲಿ ।
ಬರೆದೊರೆದು ತೂಕದಲಿ ತೂಕವ
ನ್ರೊಱಿಸಿ ಕಾಹಿನ ಕಂದುಕುಂದನು
ಪರಿಹರಿಸಿ ನಿಶ್ಚಯಿಸಿ ನುಡಿದನು ತನ್ನ ಮನದೊಳಗೆ * ॥　　　೮

ಅರಸನರಸಿಯರೊಂದು ಮಂಚದೊ
ಳಿರಲು ಕಂಡೊಡೆ ಭೂಪ್ರದಕ್ಷಿಣೆ
ವರುಷವೊಂದಱೊಳದಕೆ ಪ್ರಾಯಶ್ಚಿತ್ತವಿಧಿಯುಂಟು ।

---

* ಎರಡುಪಾತಕವಿವೆ ಬಲಾಬಲ
ವೆರಡಱೊಳು ಸಾಮಾನ್ಯಪಕ್ಷಾಂ
ತರವಿಶೇಷವದಾವುದದಱೊಳಗೆಂದು ಚಿತ್ತದಲಿ ।
ಬರೆದೊರೆದು ನೋಡಿದನು ತೂಕವ
ಬರಿಸಿ ಕಾಹಿನ ಕಂದುಕುಂದನು
ಪಂಕಿಸುತ ನಿಶ್ಚೈಸಿ ತಿಳಿದನು ತನ್ನ ಮನದೊಳಗೆ ॥* ಚ.

ಧರಣಿಯುಮರರುಪಪ್ಲವವ ಪರಿ
ಹರಿಸದಿರಲಾಪಾತಕಕೆ ಸಂ [1]
ಹರಣವುಂಟೇ ಶಾಸ್ತ್ರದೃಷ್ಟಿಯೊಳೆಂದನಾಪಾರ್ಥ ॥ ೯

ಆಗ ಅರ್ಜುನನು ಚಿಂತಿಸಿ ವಿಪ್ರರನ್ನು ರಕ್ಷಿಸುವಿಕೆ.

ಭೂಸುರರ ದುಃಖೋಪಹಾರವ
ನಾಶಮಾಡದ ನೃಪರ ಜಾತಿಗೆ
ದೋಷ ದೊಡ್ಡಿತು ಯೆಂದು ನಾರದ ತನಗೆ ತಿಳುಹಿದನು ।
ಭೂಸುರಾಂಗನೆಯರುಗಳತ್ಯಾ
ಯಾಸವನು ನಿಃಕ್ಷತ್ರಮಾಡದೆ
ಗೋಸಮೂಹವು ಕೋಳುವೋಗಲಿಕಡ್ಡಹೊಗದಿರಲು ॥ ೧೦

ದೋಷವದು ಹನ್ನೆರಡು ವರುಷಕೆ
ನಾಶ ನಗರಿಯುಲಿರಿಸಲಾವುದು
ಪಾಶದಲಿ ಕೆಡೆಕಟ್ಟಿ ಹೊಯ್ವರು ಸೆಱೆಯು ಯುವತಿಯುರ ।
ಹೇಸದೊಯ್ದರು ದ್ವಿಜರ ಸದನದ
ಗೋಸಮೂಹವದಷ್ಟು ಮಾರ್ಗವ
ನೀಶನಾವವ ಕೇಳಿ ನೀಗುರ್ಜಿವಾತನಾರೆಂದ ॥ ೧೧

ಎನುತ ನರನೊಳಹೊಕ್ಕು ತನ್ನಯ
ಧನುಶರಂಗಳ ಕೊಂಡು ನುಡಿದನು
ಮುನಿವಚನ ಸಂಘಟಿತನೃಪದಂಪತಿವಿಲೋಕನದ ।
ಘನದುರಿತನಿಷ್ಕೃತಿಗೆ ವರುಷದೊ
ಳನಗೆ ದೇಶಭ್ರಮಣವಾಯ್ತೆಲೆ
ಜನಪ ಚಿಂತಿಸಬೇಡೆನುತ ಹೊಱವಂಟನಾಪಾರ್ಥ ॥ ೧೨

---

1 ಲಿರದಿಹಪರಕೆಸಂ, ಕ. ಖ.

ಇಱಿದು ತಸ್ಕರವ್ರಾತವನು ಕುಱಿ
ದಱಿದು ಭೂಸುರರೂರುಗಳ ಸೆಱೆ
ತುಱುಗಳನು ತಂದಿತ್ತನರ್ಜುನನಾವುಹೀಸುರರ ।
ತುಱುಗಿದಾಶೀರ್ವಾದವುಟೆಗಳು
ಕಱೆಯೆ ಹೆಚ್ಚಿದ ವೀರಕೀರ್ತಿಯು
ತೊಱೆಗಳಲಿ ತೇಂಕಾಡುತಿರ್ದನು ಪಾರ್ಥ ಹರುಷದಲಿ [1] ॥ ೧೩

ಅರ್ಜುನನ ತೀರ್ಥಯಾತ್ರೆ.

ಧಾರುಣೀಪತಿ ಕೇಳು ಗಂಗಾ
ತೀರಕೈದಿದನರ್ಜುನನು ಭಾ
ಗೀರಥೀ ಸ್ನಾನಾವಗಾಹವಿಶುದ್ಧವಿಗ್ರಹನ ।
ದೂರದಲಿ ಕಂಡುರಗರಾಜಕು
ಮಾರಿ ಕರೆದಳ್‌ಉಲವಿನಲಿ ಜಂ
ಭಾರಿತನುಜನನಿೞುಹಿದಳು ಪಾತಾಳಮಂದಿರಕೆ ॥ ೧೪

ಆಗ ಉಲೂಪಿಯು ವಿವಾಹ.

ವಿಭವದಲಿ ವಾಸುಗಿಯ ತಂಗಿಯು
ನುಭಯವಂಶವಿಶುದ್ಧೆಯನು ಹರಿ
ನಿಭನು ಪಾಣಿಗ್ರಹಣವನು ಮಾಡಿದನು ಸೊಲವಿನಲಿ ।
ಅಭಿಮತಕ್ರೀಡಾವಿನೋದದ
ರಭಸದಲಿ ದಿನ ಸವೆಯೆ ಗರ್ಭ
ಪ್ರಭವವಾಯ್ತು ಕುಮಾರ ಜನಿಸಿದನುರಗನಾರಿಯಲಿ ॥ ೧೫

ಆಕೆ ಮುನ್ನೂರ್ವಶಿಯು ಯತ್ರಿಯು
ನೂಕಲಾತನ ವಧುವ ಪುರುಷನ
ವಾಕ್ಯವನು ಪತಿಕರಿಸಿ ಮಾಡಿದಳರ್ಧವತ್ಸರವ ।

---

1 ತ್ರಿರ್ಧದು ಸಕಲಜನಸಿಕರ, ಚ.

ಆಕೆಯೆಸೆದಿಹ ಸದನಸೀಮೆಯ
ನಾಕುಮೊರಿಯು ಮಾಡಿ ಗಂಡನ
ನಾಕೆಯಲಿ ರಮಿಸಲಿಕೆ ಶಪಿಸಿದನುರಗಜಾತಿಯಲಿ ॥ ೧೬

ಜನಿಸಿ ಪಾರ್ಥಂಗರಸಿ ಯೆನಿಸಿಯೆ
ವನಿತೆಯರು ನಿಮ್ಮಾಳ್ವಸದನದ
ವಿನುತಬಾಗಿಲಗಾಹಿ ಜನಿಸಲಿ ನಿನ್ನ ಸುತನಾಗಿ ।
ಎನಲಿಕೊಬ್ಬನು ಜನಿಸಿ ಹರುಷದೊ
ಳನಿತು ಯಿರಲಿಕೆ ಮುಂದಣುತ್ತರ
ದನುವನಾಲಿಸು ಕಥೆಯ ಪಾರ್ಥನ ತೀರ್ಥಯಾತ್ರೆಯಲಿ ॥ ೧೭

ಸುತವಿನೋದದ ರಚನೆಯಲಿ ಸಾ
ರಥಿಗೆ ಯಾವಾಸುಗಿಯ ಕೊಟ್ಟನು
ಕ್ಷಿತಿಗೆ ನಾಗರವಾಲಿಯಾದುದು ನೃಪತಿ ಕೇಳಂದ ।
ಸತಿಯು ಗರ್ಭದಲಿರಲು ಪಾರ್ಥನು
ಕ್ಷಿತಿಗೆ ಕಳುಹಿಸಿ ಕೊಡುವುದುಚಿತದ
ಮತಿಯ ಮಱೆಯದೆ ಪಾರ್ಥ ಹೊಱವಂಟನು ಸರಾಗದಲಿ ॥

ಕ್ಷಿತಿಗೆ ಬಂದನು ಜಾಹ್ನವೀಸಂ
ಗತಸಮುದ್ರದ ತೀರದಲಿ ಸೇ
ವಿತದ ತೀರ್ಥೋನ್ನತದಿನೈದಿದನಿಂದ್ರದಿಙ್ಮುಖವ ।
ವಿತಳದಲಿ ತಂದೆಲೆಯ ಬಳ್ಳಿಯ
ಕ್ಷಿತಿಯ ಸುತ್ತಲು ಬಿತ್ತ ಹೇಳಿಯೆ
ಯತಿಮನೋಹರದಿಂದ ಬಂದನುವಗಸ್ತ್ಯಮುಖವಾಗಿ ॥ ೧೯

ಅರಸ ಕೇಳುತ್ತರದ ಪೂರ್ವದ
ಪರಮತೀರ್ಥವ್ರಾತ ನೆಱೆ ಸ
ತ್ಕರಿಸಿ ಸಾಗರತೀರದಲಿ ದಕ್ಷಿಣದಿಶಾವರಕೆ ।

ತಿರುಗಿದನು ನರಸಪ್ತಗೋದಾ
ವರಿಯ ದಾಂಟಿಯೆ ಕೂರ್ಮಗಿರಿಯನು
ಪರಿಹರಿಸಿ ನೆಱೆ ಬಂದ ಕೃಷ್ಣಾನದಿಯ ಸಂಗಮಕೆ ॥ ೨೦

ಶ್ರೀಗಿರಿಯ ಕಂಡಾನಿವೃತ್ತಿಯ
ಕಾಗಿ ಕಾಂಚೀನಗರಿಗೈದಿದ
ಬೇಗದಲಿ ಹಿಂದುಱಿದ ತೀರ್ಥವ ಮಿಂದು ಹರುಷದಲಿ ।
ಆಗಳತಿಶಯಭಕ್ತಿಭಾವದ
ರಾಗದಲಿ ಬಲ್ಲಾಳನಾಥನ
ಮೇಗೆ ಪೂಜೆಯ ಮಾಡಿ ಮೆಱೆದನು ನರನು ತ್ರಿಭುವನದಿ ॥ ೨೧

ಆನಗರದತಿಶಯಕೆ ದೇವ
ಸ್ಥಾನನಿಕರವು ನೆರೆಯದುತ್ತಮ
ದಾನರೇಶ್ವರ ಬಂದನಗ್ರದ ರಂಗನಾಥಂಗೆ ।
ಮಾನನಿಧಿ ಪೂಜಿಸಿಯೆ ತೆರಳಿಯೆ
ಮೌನದಲಿ ಶ್ರೀರಂಗದಿಂದವೆ
ಮಾನಿನಿಯ ಕಂಡದಕೆ ಹೊಕ್ಕನನಂತಶಯನವನು ॥ ೨೨

ಏನ ಹೇಳುವೆನರಸ ನಿಗಮ
ಸ್ಥಾನವಿಭವಕೆ ದೇವನಿಕರ
ಸ್ಥಾನವಲ್ಲಿಗೆ ನೇಮಿಸಿ ಬಂದನಬುಧಿಯ ತೀರದೇಶದಲಿ ।
ವಾನರರ ಭುಜಬಲದ ಸತ್ವದ
ನೂನಶಾಸನವಪ್ಪ ಲಂಕೆಯ
ದಾನವೇಶ್ವರ ಮಾರ್ಗ ಕಂಡನು ಸೇತುಬಂಧನವ ॥ ೨೩

ವರಧನುಷ್ಕೋಟಿಯಲಿ ಮಿಂದೀ
ಶ್ವರಪದಾಂಬುಜಕೆಱಗಿ ಬಱಿಕಾ
ನರನು ಬಂದನು ಮಕರವಾಘಕೆ ಜಲಧಿತೀರದಲಿ ।

ಸುರವಧುಗಳೈನೂಱುನಾರದ
ವರಮುನಿಯ ಶಾಪದಲಿ ಕಲ್ಲಾ
ಗಿರಲು ಪೂರ್ವದೊಳಾತನಿದಿರಿನಲವರು ಜಲದೊಳಗೆ ॥ ೨೪

ನೆರೆದು ನಗ್ನೆಯರಾಗಿ ಮಾನಸ
ಸರಸಿಯಲಿ ಹೊಕ್ಕಿರಲು ಶಾಪವ
ನೊರೆದನವರಿಗೆ ಹತ್ತುಸಾವಿರವರುಷ ಕಲ್ಲಾಗಿ ।
ಇರುತಿಹುದು ನೀವೆನಲು ನಾಕಜ
ರರಸಿಯರು ಬಿನ್ನವಿಸೆ ತವೆಗಿದು
ಪರಿಹರಿಪುದೆಂದೆನಲು ಕೇಳಲು ಮಕರಮಾಘದಲಿ ॥ ೨೫

ಆವನೊಬ್ಬನು ಬಂದು ನಿಮ್ಮಯ
ತಾವಿನಲಿ ಮಿಂದವನ ಮಂಡೆಯ
ಸೇವಿಸಿದ ಬಿಂದುದುರೆ ಯಾದಿನಕಂದು ಕಡೆಹಾರ ।
ದೇವವಧುತೆಯು ಒರಲಿ ಕಲ್ಲಿನ
ಭಾವ ಬಿಟ್ಟಡಗಿರಲಿ ಯೆಂದಾ
ದೇವವಧು ನಿಕರಕ್ಕೆಯುಭಯವನಿತ್ತು ಕಳುಹಿದನು ॥ ೨೬

ಇರಲು ಕನ್ಯೆಕುಮಾರಿಯಲಿ ನೆರೆ
ನೆರೆದು ಬಿಟ್ಟರು ದೇವವಧುಗಳು
ಯಿರಲಿ ಯಿಾಱೈದಬ್ದಸಾವಿರವರುಷಪರಿಯಂತ ।
ಶರಧಿಯಲಿ ಶಿಲೆಯಾಗಿ ಬಿಟ್ಟೊಡೆ
ವರುಣನೈದಿದ ಮಕರರಾಶಿಯ
ಲಿರಲಿ ಮಾಘಸ್ನಾನಕಾಗಿಯು ಪಾರ್ಥ ನಡೆತಂದ ॥ ೨೭

ಜಲಧಿಯಲಿ ನೆಱೆ ಮಾಘ ಮಾಡಿಯೆ
ಜಲವನಂಗೀಕರಿಸಿ ಕೂದಲ
ಬೞಗವನು ಬಿಚ್ಚಲಿಕೆ ಶಿಲೆಗಳ ಮೇಲೆ ಬಿಂದುದುರೆ ।

ತಿಳಿದು ಮಾಘಸ್ನಾನಮಹಿಮೆಯು
ನೊಲಿದು ಕೇಳ್ಳ ಸೂರ್ಯಮಂಡಲ
ವಿಳಗೆ ಮೂಡುವಸಮಯಕಾಗಳ ವುದಕವೊಂಬುಲುವುದು ॥ ೨೪

ಬರಲಿ ಮದ್ಯಪ ಬ್ರಹ್ಮಘಾತಕ
ಬರಲಿ ಸ್ವರ್ಣಸ್ತೇನ ಗೋವಧೆ
ಧರಿಸಿ ಬಂದವ ಬರಲಿ ಗುರುವಧೆ ಮಾಡಿದವ ಬರಲಿ ।
ಬರಲಿಕವರಘರಾಶಿಯಾದುದ
ಪರಿಹರಿಸಿ ನೆಱೆ ಸತ್ಪವಿತ್ರರ
ನೆರವಿ ಯೋಗ್ಯವ ಮಾಡಿ ಕೊಡುವೆನು ನಿಮಿಷಮಾತ್ರದಲಿ ॥ ೨೯

ಎಂಬ ಜಲಗಳ ಮಿಂದು ಮಂಡೆಯು
ಲಂಬುಬಿಂದುಗಳುದುರೆ ಸ್ತ್ರೀನಿಕು
ರುಂಬವಾದರು ವಾದಶಿಲೆಗಳು ಮಾಘವಾಸದಲಿ ।
ಅಂಬರಕ್ಕೈನೂಱುಪ್ರಜೆಗಳು
ಇಂಬುಗೊಂಡೈದಿದರು ಪಾರ್ಥನ
ಅಂಬು ಕಾದುದದೆನುತ ಹೊಗೞಿದರಂದು ಹರುಷದಲಿ ॥ ೩೦

ಹರಸುತಲಿ ಕಲಿಪಾರ್ಥದೇವನ
ಸುರವಧುಗಳಂದೈದಿ ಹೊಕ್ಕರು
ಸುರರ ಭವನವನರಸುತಿತ್ತಲು ಕೇಳು ಕೌತುಕವ ।
ವರಧನುಷ್ಕೋಟಿಯಲಿ ಮಿಂದೀ
ಶ್ವರಪದಾಂಬುಜಕೆಱಗಿ ನೆಱೆ ವರ
ಸರಸಿ ಪಂಚತಟಾಕದಲ್ಲಾ ಮಕರಮಾಘದಲಿ ॥ ೩೧

ವರಸಮರ್ಪಣಮಾಡಿ ಫಲುಗುಣ
ತೆರಳಿದನು ಕನ್ಯಾಕುಮಾರಿಯು
ನರನು ಬೀಷ್ಕೊಂಡಲ್ಲಿ ಹೋಗಲಿಕರಸ ಕೇಳೆಂದ ।

ಸುರವಧುಗಳಿರಲವರ ಶಾಪವ
ಪರಿಹರಿಸಿ ಸಲೆ ತೀರ್ಥಸೇವಾ
ಪರಮಪಾವನಕರಣನಾತನ ನೆನೆದನಾಪಾರ್ಥ ॥ ೩೦

ಆತನಳಬಳವೆಱಿದು ಪಾಂಡ್ಯಮ
ಹೀತಳಾಧಿಪ ನಿಜಕುಮಾರಿಯ
ನಾತಗಿತ್ತನು ಕುಸುಮಲತೆಯನು ಕೊಡುತಲಿಂತೆಂದ ।
ಓತುಕೊಳ್ವುದು ನರನೆ ಯಿಾಕೆಯ
ಪ್ರೀತಿಯಲಿ ನೀನೆನುತ ಕೊಟ್ಟನು
ಧಾತುವತ್ಸರ ತೃತಯಭಾಗದೊಳರಸ ಕೇಳೆಂದ ॥ ೩೩

ಆಕೆ ಮೇನಕೆ ಶಕ್ರನರಸಿಯು
ವಾಕು ಸತಿಯುಳದೆನಿಸಿ ಮರ್ತ್ಯ
ಸೀಕದಲಿ ಜನಿಸೆನಲು ಜನಿಸಿದಳಲ್ಲಿ ಪಾಂಡ್ಯನಲಿ ।
ಪ್ರಾಕೃತನದಲಿ ಪಾರ್ಥನರಸಿಯು
ಲೋಕದೊಳು ತಾನಾಗಿ ಯಿರಲಿಕೆ
ಯಾಕೆ ಗರ್ಭಿಣಿಯಾದಳಗ್ಗದ ವೀರಭದ್ರನನು ॥ ೩೪

ಆತ ನಾಕಲಿಬಭ್ರುವಾಹನ
ನೀತಿಯಲಿ ಜನಿಸಿದನು ಬಲುಗೈ
ಭೂತನಾಥನ ಶಾಪಭಯದಲಿ ರುದ್ರಗಣದಾತ ।
ಆತ ಸಹಿತಂಗನೆಯ ನಿಲಿಸಿಯೆ
ಪ್ರೀತಿಯಲಿ ನಡೆತಂದು ಪಶ್ಚಿಮ
ಕೋತು ತೀರ್ಥಕ್ಷೇತ್ರನಿಕರವ ಪಾರ್ಥನಾದರಿಸಿ ॥ ೩೫

ನದನದಿಗಳುತ್ತರಿಸಿ ಪಂಪಾ
ಸುದತಿಯಾಶ್ರಮಕೈದಿ ಕಂಡನು
ಮುದದಿ ವಿರುಪಾಕ್ಷನನು ಪೂಜಿಸಿ ಬಂದ ಹರಿಹರಕೆ ।

ಅದಟುತನದಿಂ ಬಂದ ಚೈತ್ರದ
ತದಿಗೆಗಲ್ಲಿಂ ತೆರಳಿ ಗೋಕ
ರ್ಣದ ಮಹಾಬಲಕಾಗಿ ಬಂದನು ಮಿಂದು ತೆರಳಿದನು ॥ ೩೬

ಮುದದಿ ಮದಿಸಿದಹಂಸೆಗಳನವ
ನದಟ ನೋಡುತ ಬಂದ ತಾರಾ
ವಿದಿತಕಳೆಗಳು ಮೆಱೆದವಂಬರಕಾಗ ರಾಗದಲಿ ।
ಅದಱದಱ ಕಾಲದಲಿ ಕಾಲವ
ಮುದದಿ ಮನ್ನಿಸಿ ಗ್ರೀಷ್ಮ ರುತುವಿನ
ಮೊದಲಮಾಸಕೆ ಹೊಕ್ಕ ತುಳುವಿನದೇಶದ ಕ್ಷಿತಿಯ ॥ ೩೭

ಇಱದಿರಲಿಕಾಸಪ್ತನಾಥನ
ನೊಲಿದು ಸೇವಿಸುತಿರಲಿಕಲ್ಲಿಯು
ತುಳುವಭೂಪನು ಪಾರ್ಥಗಿತ್ತನು ತನ್ನ ನಂದನೆಯ ।
ನಳಿನಮುಖಿ ತಾ ಮೆರತಿಲೋತ್ತಮೆ
ತುಳುವನಲಿ ಜನಿಸಿದಳು ಚಂದ್ರನ
ಕಳೆಯನಾಲಿಂಗಿಸಲು ಶಕ್ರನು ಕಂಡು ಶಪಿಸಲಿಕೆ ॥ ೩೮

ಧರೆಯುಲಿರು ನರನರಸಿಯಾಗಿಯು
ವರಷವೈವತ್ತೈದು ಪರಿಯಂ
ತಿರುವುದೆನೆ ನರನರಸಿಯಾದಳು ಪತಿಯ ಮಾತಿನಲಿ ।
ಪರಪುರುಷರತಿಯಾಗಲಮರರ
ವರಮುಖವಾತ್ರತಂಗಳೀಪರಿ
ನರರ ಹೆಂಡಿರ ಗತಿಗಳಾವುದೊ ತಿಳಿವೊಡರ್ಜುನಗೆ ॥ ೩೯

ವರಸುತೆಯ ಕೈಕೊಳಿಸಿ ವಿಜಯಗೆ
ನಿರವಿಸಲಿಕಾಹರಿಯ ಮೈದುನ
ತಿರುಗಿ ಕಳುಹಿಸಿ ಕೊಂಡು ಬಂದನು ವೆರುಷಋತು ಬರಲು ।

ಸಂತುಪತಿ ತಡಿವಿಡಿದು ಗೋವೆಯು
ಪರಿಹರಿಸಿ ಬರಲಾಯ್ತು ಮೇಘದ
ವರಸಮೂಹದ ಮೇಳವನು ನೋಡುತ್ತ ನಡೆತಂದ ॥ ೪೦

ಒಡ್ಡು ಮುಱಿದುದು ಮೇಘಘಟೆ ಬಿಸಿ
ಲೊಡ್ಡು ಮುಱಿದುದು ಚಂದ್ರಸೂರ್ಯರ
ನಡ್ಡವಿಸಿ ಹಿಡಿಯಾಳ ಹಿಡಿದುವು ಮುಗಿಲಚೂಣಿಗಳು ।
* ಅಡ್ಡಬೀೞುವರಾರು ಮೇಘದ
ಗೊಡ್ಡಹಯನಾದಂತೆ ಬೆನಕನ
ಲಡ್ಡುಗೆಯು ಪರಿಯಾಯ್ತು ನವಗ್ರಹ ವರುಷಕಾಲದಲಿ ॥ * ೪೧

ಆಳ ಕರೆ ಕಟಕವನು ಸೂರ್ಯನ
ಮೇಲೆ ಬರಹೇಳೆಂಬ ಮೇಘನೃ
ಪಾಲಕನ ಡಂಗುರವೊ ಮೊಱಗುಗಳೋ ದಿಗಂತರದ [1] ।
ಆಲಿಕಲ್ಲಗಳೊ ಮುಗಿಲ ಮುಂಗುಡಿ
ಯಾಳ ಹೊಯ್ಲಲಿ ಬೀೞ್ವ ತಾರಾ
ಮಾಲೆಗಳೊ ಜೀಮೂತಲತೆ ಲಂಬಿಸಿದುದಂಬರವ ॥ ೪೨

ಮಿಂಚಿದುವು ದೆಸೆಗಳಲಿ ಗಗನಕೆ
ಮುಂಚಿದುವು ಹಂಸೆಗಳು ನಭದಲಿ
ಹಿಂಚಿದುವು ಜೀವನಕೆ ಜೀವನ ವಿರಹಿನಿಕುರುಂಬ ।
ಪಂಚಪತಿಯರೊ ಮೋಹಿವರು ಪತಿ
ವಂಚಕೆಯರೊ ಗ್ರೀಷ್ಮಕಾಲದ
ಪಂಚತೆಯೊಳಾಲಂಗಿಸಿತು ದಿಗ್ವಧುಗಳಂಬುದವ ॥ ೪೩

---

* ಖಡ್ಗತಡದೆವು ಕಡಲನುಡುಗಣ ।
ದೊಡ್ಡಕಾಣೆನು ಮುಗಿಲಬೆನಕಗೆ ।
ಲಡ್ಡುಗೆಗಳಾದುವು ಸಮಸ್ತಗ್ರಹಸುತಾರೆಗಳು ॥ ಚ. ಠ.

1 ಮೊಱಗುವ ಸಿಡಿಲನುಬ್ಬರವೊ, ಚ. ಠ.

ಜನಪ ಕೇಳ್ಳೈ ಕಾರ್ಮುಗಿಲ ಮುಂ
ಬನಿಗಳೋಡುವ ಬೇಗದಲಿ ಜೀ
ವನವನಾಳುವ ಹೊನಲು ಕೊಂಕಣದೆಸೆಯ ವೀಧಿಯಲಿ ।
ಜಿನುಗಿನಲಿ ಬಲುಮಳೆಗಳಲಿ
ನನೆನನೆದು ಸಾಗರತೀರದಲಿ ಬಂ
ದನು ಕಿರೀಟಿ ವಿಚಾರಿಸುತ ಮುರಹರನ ಪಟ್ಟಣಕೆ ॥ ೪೪

ಪುರವ ಹೊಱವೆಂಟೆಂಟುತಿಂಗಳು
ಪರಿಹರಿಸಿತೀಕೃಷ್ಣ ರಾಯನ
ಪುರದೊಳಗೆ ನೂಕುವೆನು ವರುಷಾಕಾಲವಿಭ್ರಮವ ।
ವರುಷವೊಂದು ಸಮಾಪ್ತಿ ಯಾಗಲಿ
ಕರಸನಂಘ್ರಿವಿಲೋಕನಾವಿ
ಸ್ತರಣವಹುದೆಂದಾತ ನಿಶ್ಚಯಿಸಿದನು ಮನದೊಳಗೆ ॥ ೪೫

ಅರಸ ಕೇಳ್ ಸಂನ್ಯಾಸಿವೇಷದ
ಪರಿಕರವನಳವಡಿಸಿ ಯಾದವ
ಪುರದ ಹೊಱಬಾಹೆಯಲಿ ಹೆಚ್ಚಿದ ಬನದ ಮಧ್ಯದಲಿ ।
ಇರುಳು ಕಗ್ಗತ್ತಲೆಯೊಳೌಕುವ [1]
ಸರಿಮಳೆಗೆ ಮಿಗೆ ನೆಡುಗೊಳುತು
ಬ್ಬರಿಸಿ ಕೃಷ್ಣನ ನೆನೆಯುತಿದ್ದನು ಮರನ ಹೊಳ್ಳಿನಲಿ ॥ ೪೬

ದೇವನತ್ತಲು ಸತ್ಯಭಾಮಾ
ದೇವಿಯರ ಪಾಳಯದೊಳಿರುತಿ
ದ್ದಿ ್ೕವಿಲಾಸವ ನೋಡಿ ನಕ್ಕನು ಶಕ್ರನಂದನನ ।
ಆವಳೋ ನೆನಹಿನಲಿ ಸುಳಿದಳು
ಭಾವದಲಿ ಸುಮ್ಮಾನವೇನೆನೆ
ದೇವಿ ಬೇಱೊಂದಿಲ್ಲ ಕೇಳ್ ನಿನ್ನಾಣೆ ಹುಸಿಯಲ್ಲ ॥ ೪೭

---

1 ಕತ್ತಲೆಯೊಳಗೆ ಸುರಿವಾ, ಕ. ಖ.

ಅರಸಿ ನೀ ಮೋಹಿಸುಯಲಾ ಸೋ
ದರದ ಮೈದುನನೆನಗೆ ಕುಂತೀ
ವರಕುಮಾರಕನಾತನೀ ದ್ವಾರಾವತಿಯ ಹೊಱಗೆ ।
ಮರನ ಹೊಳ್ಳೊಳು ಹೊಕ್ಕು ಸಿಕ್ಕಿದ
ನರಿಯವೋಲ್ಯೈಧಾನೆ ಹೋಗುವ
ಚರಿಸಿ ಬಹೆನೆನುತೆದ್ದನಸುರಾರಾತಿ ಮಂಚದಲಿ [1] ॥ ೪೮

ಅರಸಿ ಕೇಳೀಬಂದ ಪಾರ್ಥನ
ಕರೆದುಪಾಯಾಂತರದೊಳೀವೆನು
ಸರಸಿಜಾನನೆಯನು ಸುಭದ್ರೆಯನಿಂದು ತಪ್ಪಿದರೆ ।
ಕರೆಸಿ ದುರ್ಯೋಧನಗೆ ಕೊಡಿಸುವ
ಭರವು ಬಲಭದ್ರಂಗೆ ಪಾರ್ಥನ
ಬರವು ಲೇಸಾಯ್ತೆನುತ ನೆನೆದನು ವೈನತೇಯನನು [2] ॥ ೪೯

ನೆನೆಯಲಾಕ್ಷಣ ಕ್ಷೀರಸಾಗರ
ವನಧಿಯಲ್ಲಿಂ ಬಂದು ಯಾದವ
ಜನಪನಂಘ್ರಿಯೊಳೆಱಗಿ ಬಾಗಿದನಹಿಕುಲಾಂತಕನು ।
ದನುಜಹರನಾಪಕ್ಷಿರಾಜನ
ವಿನಯವೃತ್ತಿಯುಲೇಱ ತನ್ನಯ
ವನಿತೆಯಾಲಯದಿಂದ ಹೊಱವಂಟಾಗ ನಡೆತಂದ ॥ ೫೦

ಬಂದನಲ್ಲಿಗೆ ಫಲುಗುಣನ ಕಂ
ಡೆಂದ ನಿನ್ನಯ ಠಾವನಱದೆವ
ದೆಂದೆನಲು ವೈಯ್ಯಿಕ್ಕಿ ಬಿನ್ನಹ ಮಾಡಿದನು ಹರಿಗೆ ।

1 ನೆನ-ತ ಮಂಚವನಿಳಿದನಸುರಾರಿ, ಕ.ಖ.

2 ಹೊಱವಂಟನು ನಿಜಾಲಯವ,ಚ. ಘ.

ನಂದಗೋಪಯಶೋದೆವನಿತೆಯ
ಕಂದ ನೀನಿದನಱಿತೆನೆಂಬುದ
ಮಂದಮತಿಗಳಿಗಸುರ ಜೇಡಿದು ನೀನು ಸರ್ವಜ್ಞ ॥ ೫೧

ಎಂದುದಕೆ ಮುದವಡೆದು ಪಾರ್ಥಂ
ಗೆಂದ ರೈವತಶೈಲದಲ್ಲರ
ವಿಂದಸಖನುದಯದಲಿ ಬಂದಿರು ಮುಸಲಿಯೈತಂದು ।
ಮಂದಿರಕೆ ಬರಹೇೞಿದೊಡೆ ಬಾ
ಮುಂದೆ ನಿನ್ನಯ ಸ್ವಾರ್ಥ ಸಿದ್ಧಿಪು
ದೆಂದು ಪಾರ್ಥನ ಸಂತವಿಸಿ ಮರಳಿದನು ಮುರವೈರಿ ॥ ೫೨

ನಿಲಿಸಿ ಮರಳಿದ ಸತ್ಯಭಾಮಾ
ನಿಳಯಕಾಗಲು ಬಿಜಯಮಾ
ಡಲು ತರಣಿ ಬಂದನು ಪೂರ್ವಶೈಲಕ್ಕಿತ್ತ ಮುರವೈರಿ ।
ನಲಿದು ಪ್ರಾತಃಕಾಲಕರ್ಮವ
ಜಲದಲರ್ಘ್ಯವನೆತ್ತಿ ಸೂರ್ಯಂ
ಗೊಲಿದು ಯಾದವದೇವನಿತ್ತಲು ಬಂದನೋಲಗಕೆ ॥ ೫೩

ಪರಮಹಂಸನ ಸುಳಿವು ಸಾಕ್ಷಾ
ತ್ಪರಮಪುರುಷನ ಸಂಗದಲಿ ಯತಿ
ವರನ ದರುಶನ ಲೇಸು ನಮ್ಮಯ ನಗರಿಗೈತರಲು ।
ಹರಹಿದನು ಹರಿ ವಾರ್ತೆಯನು ತಾ
ನಱಿಯದಂತಿರೆ ಕೇಳಿ ನೀಲಾಂ
ಬರನು ಬಹಳೋತ್ಸವದಲೈದಿದ ನರನ ಹೊರೆಗಂದು ॥ ೫೪

ಬರಲಿಕಾತನು ತನ್ನ ಕಾಲದ
ನಿರುತಸದನುಷ್ಠಾನ ಮಾಡಿಯೆ
ಗಿರಿಯ ತಪ್ಪಲ ಮರದ ನೆಳಲಲಿ ನೀತಿಷ್ಠಾವನನು ।

ನರನು ನೆಱೆ ಸಂನ್ಯಾಸಿವೇಷವ
ಧರಿಸಿ ತಾ ಹರಿಯಾಜ್ಞೆಯಿಂದವೆ
ಸರಸಿಜಾಕ್ಷನ ನೆನೆಯುತಿದ್ದನು ಕಾಶಪಟನಾಗಿ ॥ ೫೫

ವಂದಿಸಿದನಾಮುನಿಗೆ ರಾಮನು
ವಂದಿಸಲಿಕಾಶ್ರಮದ ಹರಕೆಯು
ನಂದು ಕರುಣಿಸಿ ನುಡಿದ ಚಾತುರ್ವೇದ ವಿದ್ಯೆಗಳ ।
ಎಂದದನು ವ್ಯಾಖ್ಯಾನದಿಂದಲಿ
ಯಿಂದಿರಾಪತಿ ಸರ್ವಜೀವರಿ
ಗೆಂದು ನೆಱಿ ಸರ್ವೇಶ್ವರೇಶ್ವರ ಸರ್ವಗುಣನಿಳಯು ॥ ೫೬

ಎಂದು ಚಾತುರ್ವೇದವಿದ್ಯೆಯು
ಸಂದುಗೊಡದಾಹರಿಯು ಹೊಗೞುವು
ವೆಂದನ್ಯೆ ಪ್ರತ್ಯಕ್ಷಶ್ರುತದಿಂದಾನುಮಾನದಲಿ ।
ನಿಂದು ಬೆರಳಿನ ಮೂಗಿನಲಿ ಸಾ
ನಂದ ಮಿಗೆ ಬೆಱಗಾಗಿ ತಮ್ಮಯ
ಮಂದಿರಕೆ ನೀವ್ ಬಿಜಯುಮಾಡುವುದೆಂದು ಕೈಮುಗಿದ ॥ ೫೭

ನಾವು ಭಿಕ್ಷುಕರೆಮಗೆ ನಿಂದಿತ
ಭೂವಧೂವಲ್ಲಭರ ಸದನವು
ನಾವು ಸಾರ್ದಿರಬೇಕು ನದಿಗಳ ತೀರವನಗಳಲಿ ।
ಭಾವಿತಪ್ರಾರಬ್ಧಕವು ಫ
ಲಾವಳಿಯನುಪಭೋಗಿಸುತ ದೇ
ಹಾವಸಾನವನೀಕ್ಷಿಸುತ್ತಿಹೆವೆಂದನಾಪಾರ್ಥ ॥ ೫೮

ಎನಲು ಲಾಂಗಲಿ ಯತಿಯ ಮಾತಿಗೆ
ನೆನೆದು ಹೊಂಪುಳಿಯಾಗಿ ನುಡಿದನು
ದಿನವ ನೂಕುವುದೊಂದು ಗ್ರಾಮಕೆ ಮೂಱುನಗರದಲಿ ।

ದಿನವ ನೂಕುವುದೈದು ಪುರದಲಿ
ದಿನವ ಕಳವುದದೇಳುಪಟ್ಟಣ
ಜನಪದಗಳುಳ್ಳಲ್ಲಿ ನವದಿನ ದೇವಸದನದಲಿ ॥ ೫೯

ದಿನವ ನೂಕುವುದರ್ಧಮಾಸವು
ವಿನಯದಲಿ ಸುರನದಿಯು ತೀರದಿ
ದಿನವ ಚರಿಸುವುದಾಪ್ರಯಾಗದಿ ಪಕ್ಷವೆರಡುಗಳ ।
ವನದಿ ವೆಸಿಸಿಹುದಮಳಮುನಿಗಳ
ಮನೆಯುಲೈವತ್ತಾಱುದಿನಗಳ
ವಿನಯದಲಿ ನೂಕುವುದು ಶ್ರೀಗಿರಿಯುಲ್ಲಿ ಮಾಸವನು ॥ ೬೦

ಈ ಮಹಾದ್ವಾರಕಿಯು ಕಾಶಿಯು
ಭೂಮಿಗಿವ್ಮಡಿಯಾ ತ್ರಿಯಂಬಕ
ನೇಮಿಸಿಹ ಶೈಲಕ್ಕೆ ಸಾವಿರ ಮಲ್ಲಿಕಾರ್ಜುನನ ।
ಆಮಹೀಧರಕೊಂದುಸಾವಿರ
ಭೂಮಿಯುಲಿ ತ್ರ್ಯಯುಗಕೆ ಲಕ್ಷವು
ಕಾಮಹರ ವಿರುಪಾಕ್ಷನಲ್ಲಿಗೆ ಲಕ್ಷ ಹನ್ನೊಂದು ॥ ೬೧

ಪರಮಪುರುಷೋತ್ತಮಕೆ ಪಂಢರಿ
ಪುರಕೆ ಶ್ರೀರಂಗಕ್ಕೆ ಉರಗನ
ವರಮಹಾಶಯನಕ್ಕೆ ಮತ್ತಾಪಂಚಕೃಷ್ಣರಿಗೆ ।
ಧರಣಿಯುಲಿ ಸರಿ ತೂಕ ಮಿಕ್ಕನ
ಧರಣಿಯುಲಿ ನೆರೆದಿರ್ದ ಕ್ಷೇತ್ರದ
ಪರಿಗಣಿತಹನ್ನೆರಡುಲಕ್ಷದ ಸರಿಯು ತೂಕವದು ॥ ೬೨

ಈ ಮಹಾದ್ವಾರಕೆಯ ಮಹಿಮೆಯು
ಸೋಮಶೇಖರನಱಿಯ ತಾಸಿದ
ನೇಮಿಸಲಿಕಳವಲ್ಲ ಚಕ್ಷುಶ್ರವಣಪತಿಗೆಂದ ।
ನೀ ಮಹಾಸಂನ್ಯಾಸಿ ದ್ವಾರಕಿ

ಭೂಮಿಯನು ಬಿಟ್ಟನ್ಯಭೂಮಿಗೆ
ಕಾಮಿಸುವೊಡಲ್ಲೆಂದು ಯತಿಯನು ಮುಸಲಿ ನಿಲಿಸಿದನು ॥ ೬೩

ಬಲರಾಮನು ಸಂನ್ಯಾಸಿವೇಷದಲ್ಲಿದ್ದ ಅರ್ಜುನನನ್ನು
ಪಟ್ಟಣಕ್ಕೆ ಕರೆತರುವಿಕೆ.

ಇಹುದು ನೀವೇಕಾಂತಭವನದೊ
ಳಿಹುದು ಚಾತುರ್ಮಾಸವಿಧಿ ಸ
ನ್ನಿಹಿತವಾಯ್ತಿದ ನೂಕಿ ಬಿಜಯಂಗೈವುದಿಚ್ಛೆಯಲಿ ।
ವಿಹಿತಚರಿತರು ನೀವು ನಿರ್ವಹಿ
ಸಿಹೆವು ಶಿಶ್ರೂಷೆಯನು ನೀವ್ ನೆಱೆ
ಗಹನವೂಡದಿರೆಂದು ತಂದನು ಯತಿಯ ಮಂದಿರಕೆ ॥ ೬೪

ಗುಡಿಯ ತೋರಣವಾದ್ಯರವದು
ಗ್ಗಡಣೆಯಿಂದೈತರಲಿಕಾಯತಿ
ನುಡಿದನಗ್ಗದ ಕೃತಕಕೃಷ್ಣನು ಹೇೞಿದಂದದಲಿ ।
ಮಡದಿಯರ ಜಾತಿಯಲಿ ಕನ್ಯಕೆ
ಬಿಡದೆ ಮಾಡಿದ ಪಾಕಭಿಕ್ಷೆಯ
ಹಿಡಿಯಬಹುದೆನೆ ರೇವತಿಯ ಪತಿಯದನು ಕೈಕೊಂಡ ॥ ೬೫

ಅಂದು ರಾಮನು ತದ್ಯತೀಶನ
ತಂದನುತ್ಸಾಹದಲಿ ಪುರಜನ
ನಿಂದು ನೋಡಲು ದ್ವಾರಕಾಪುರದೊಳಗೆ ಬರುತಿರ್ದ ।
ಅಂದು ಮೊದಲಾಷಾಢದಶಮಿಯ
ಮಿಂದು ಸ್ವಾತಿಗೆ ಪಾರ್ಥ ಹೊಕ್ಕನ
ದಿಂದಿರಾಪತಿನಗರಿಗಾದಿನಕೆಂಟುಮಾಸವನು ॥ ೬೬

ಆ ಯತಿಸೇವೆಗಾಗಿ ಸುಭದ್ರೆಯನ್ನು ನಿಯಮಿಸುವಿಕೆ.

ಇವರನರಮನೆಯೊಳಗೆ ಕನ್ಯಾ
ಭವನಮಧ್ಯದೊಳಿರಿಸಿ ಬೞಿಕಿನೊ

ಳವರ ಪರಿಚರ್ಯಕ್ಕೆ ನಿರವಿಸಿದಾಸುಭದ್ರೆಯನು ।
ಇವರು ಪೂರ್ವಮಹಾತ್ಮಕರು ನೀ
ನಿವರದೇವಾರ್ಚನೆ ಸಮಾಧಿ
ಪ್ರವರದಲಿ ಬೆಸಸಿದುದ ಮಾಡುವುದೆಂದು ನೇಮಿಸಿದ ॥ ೬೭

ಈ ವಿಷಯದಲ್ಲಿ ಕೃಷ್ಣನ ಆಕ್ಷೇಪ ಮತ್ತು ಬಲರಾಮನ ಸಮಾಧಾನ.

ಮುರಮಥನ ಬಂದಾಗ ರಾಮನ
ಹಿರಿದು ಮರುಳಾಡಿದನು ತಂಗಿಯು
ತಿರುಕಗಿತ್ತಿರೆ ಮಱೆದು ನೀವಿಂದೆಂದನೊಲವಿನಲಿ ।
ಅರಸುಮಗಳನು ತೊತ್ತುಗೆಲಸಕೆ
ಪರುಠವಿಸಿದಿರಿ ಶಿವ ಶಿವಾ ತಾ
ವೆಱಿಯವಿಲ್ಲಿಯ ಲೇಸು ಹೊಲ್ಲಹವೆಮ್ಮದಲ್ಲೆಂದ ॥ ೬೮

ಮರುಳ ನೀ ಹೋಗೆನುತ ನೀನಿವ
ನಱಿಯೆ ಯತಿ ಸರ್ವಜ್ಞನೀತನು
ತಿರುಕನೇ ಸಾಕ್ಷಾತು ಲಕ್ಷ್ಮೀಕಾಂತಸನ್ನಿಭನು ।
ಬರಲಿ ಮಾಣಲಿ ಹಾನಿ ವೃದ್ಧಿಯು
ಹರಿಬವೆನ್ನದು ಯತಿ ಮಹಾತ್ಮಕ
ನಱಿಯದವರೇ ನಾವೆನುತ ಗಜಱಿದನು ಬಲರಾಮ ॥ ೬೯

ಯತಿಗಳಾವನ ಮನೆಯಲನ್ನವ
ಪತಿಕರಿಸಲಾಪತಿತಪಾವನ
ಪತಿಕರಿಸಿದಂತಹುದದೆಂದರೆ ಕೃಷ್ಣನಿಂತೆಂದ ।
ಪತಿತಪಾವನನಾಮಧೇಯನು
ಪತಿಕರಿಸಲೇನಹುದದೆಂದರೆ
ಕ್ಷಿತಿಮೊದಲು ಚೌರಾಸಿಲಕ್ಷದ ಜೀವಕನ್ನವನು ॥ ೭೦

ಇಕ್ಕಿದಂತಹುದೊಬ್ಬ ಯತಿಗಳ
ಕುಕ್ಷಿಗನ್ನವನಿಕ್ಕೆ ಯೆನಲಿಕೆ

ನಕ್ಕ ಕೌಶಲವೆಲ್ಲ ಯತಿಗಳಿಗಿಕ್ಕಬೇಕೆಂದ |
ಚಿಕ್ಕತನ ತಮಗಿದನು ಕಾಣಲು
ಮಕ್ಕಳಿಗೆ ತಾನೇಕೆ ಯತಿಯನು
ಸಿಕ್ಕಿಸಿಯೆ ನೂಱೊಂದುಕುಲವನು ಗತಿಯಲಿರಿಸಿದಿರಿ ‖ ೩೧

ಆದೊಡೊಳ್ಳಿತು ತಂಗಿ ಬೆಸಕೈ
ದಾದರಿಸಲೀ * ತಪಸಿಯನು ತವ
ಗೀದುರಾಗ್ರಹವಾದೊಡಿದರೊಳಸೂಯೆ ನಮಗೇಕೆ * |
ಹೋದೆವಿದೆ ಮೌನದೊಳನುತಲಬು
ಜೋದರನು ಹಿಂಗಿದನು ಹರಿಯು ವಿ
ನೋದರಚನೆಯನೇನನೆಂಬೆನು ಭೂಪ ಕೇಳೆಂದ ‖ ೩೨

ದನುಜಹರ ಭೀಷ್ಮಕನ ತನುಜೆಯ
ಮನೆಗೆ ಬರೆ ಬಲಭದ್ರರಾಮನ
ಯನುಜೆ ಯತಿಯನು ಮುದದಿ ಸೇವೆಯ ಮಾಡಲುಱುವೆತ್ತು |

ಸುಭದ್ರೆಯು ಅರ್ಜುನನ ವೃತ್ತಾಂತವನ್ನು ಕೇಳುವಿಕೆ.

ದಿನ ಸವೆಯಲೊಂದಿನದೊಳಬಲೆಯು
ಮನವೊಲಿದು ಸಂನ್ಯಾಸಿವೇಷದ
ಮುನಿಯ ಕೇಳಿದಳೆಂದು ನಿಮ್ಮಯ ತೀರ್ಥಯಾತ್ರೆಯಲಿ ‖ ೩೩

ನರನ ಕಂಡಿರೆ ಯೆನಲಿಕೇತಕೆ
ನರವಿಚಾರವು ನಿನಗೆ ಯೆನಲಿಕೆ
ನರಗೆ ವಲ್ಲಭೆ ಯಾಗಬೇಕೆಂದೆನ್ನ ತನುಮನವು |
ಅರಸಿ ನಿನಗರ್ಜುನನು ವಲ್ಲಭ
ನಿರುತ ತಮಗಱುಹಿದನು ಕೌರವ
ರರಸ ಬಂದರೆ ಕಾದಿ ನಿನ್ನನು ಗೆದ್ದು ಪತಿಯಹನು ‖ ೩೪

---

* ಯತಿಪತಿಯು ನವು |
ಗೀದುರಾಗ್ರವೇಕೆ ಕಾಂಬಿರಿ ಫಲವನಗ್ರದಲಿ ‖ ಖ.

ಭರವಸವು ನರನಿಂದು ನಾಳಿನೊ
ಳರಸನಹನೆನೆ ಕೇಳಿ ನೀವಾ
ನರನ ಚಿತ್ತವನೇನ ಬಲ್ಲಿರಿ ಯೆನಲು ತಾ ನರನು |
ಅರಸಿ ಕೇಳ್ಳೈ ನೀನು ಸಾಕ್ಷಾತ್
ನಿರುತನರನೆಂದಾದೊಡಾತನ
ವರಗುಣಾನ್ವಿತನಾಮಪದಿಮೂಱವನು ಹೇಟೆನಲು ‖ ೩೫

ಆದೊಡರ್ಜುನ ಪಾರ್ಥ ಫಲುಗುಣ
ನಾದರಿಸು ವಿಜಯನು ಕಿರೀಟಿಯು
ಭೇದವಿಲ್ಲ ಧನಂಜಯಾಚ್ಯುತ ಕೃಷ್ಣ ಭೀಭತ್ಸು |
ಆದಿಯಲಿ ನರ ಸವ್ಯಸಾಚಿಯು
ಸಾಧಿಸಲಿಕಾಶ್ವೇತವಾಹನ
ಮೇದಿನಿಗೆ ಗಾಂಡೀವಿಯೆಂಬುದು ತನ್ನ ಗುಣನಾಮ ‖ ೩೬

ಈಸು ಕೇಳಲೆ ವನಿತೆಯೆನೆ ವಿ
ಶ್ವಾಸವಿಲ್ಲದೆ [1] ಮತ್ತೆ ನುಡಿದಳು
ನೀಶದಲಿ ನಿಮಗುದರ ದೊಡ್ಡಿತು ವಕ್ಷ ಕಿಱಿದೆಂದು |
ಭೂಸುರರು ನೆಱಯಾಡುತಿಪ್ಪರು
ಕೇಶವನ ಮುಂದೆನಲಿಕಾಯತಿ
ವೇಷ ತೋಱದ ತನ್ನ ವಕ್ಷವನಾಕುಮಾರಿಯಲಿ ‖ ೩೭

ಯತಿಯನ್ನು ಅರ್ಜುನನೆಂದು ತಿಳಿಯುವಿಕೆ.

ತೋಱಲಿಕೆ ನಡುನಡುಗಿ ನಾಚಿಯೆ
ಸಾಱ ಭಿಕ್ಷವನಿಕ್ಕಿ ತಿರುಗಿಯೆ
ವಾರಿಜಾಕ್ಷನ ನೆನೆಯುತಿರಲಿಕೆ ಪಾರ್ಥ ಕೈದೊಳದು |
ವೀರನಿರಲಾರಾಮನನುಜೆಗೆ

---

1 ವಾಗುತ. ಖ.

ಬಾರಿಸಿದುವಾಹತ್ತವಸ್ಥೆಯು
ಯಾರಯಿದು ನೀ ಕೇಳು ಮನದೊಳಗೆಣಿಸಿ ನೋಡಿದಳು ॥ ೭೮

ಎರಡುಚಿಂತಿಸಲಾಯ್ತು ಸುಲಲಿತ
ನಿರುತಮೂಱು ಜ್ವರವು ತೋಱಲು
ವಿರಸ ನಾಲುಕು ವೈಯ್ಯನಿಱುಹಲ್ಕೈದು ಲಜ್ಜೆಯನು ।
ಇರಿಸಲಾಱೇಳ್ವೆಕಳವೆಡೆಗೊಳ
ಸಿರಿಯ ಮಾನವ ತಳೆಯಲೆಂಟಱ
ಪರಿವಿಡಿಯಲಾ ಮುಸುಕೆ ಮೊದಲಿ ನಾರಿಗೊಂಬತ್ತು ॥ ೭೯

ತನುವೆಱಿಯಲಾಹತ್ತು ತೋಱುವ
ದಿನದೊಳಾಕೈವಲ್ಯನಾಥನು
ಘನಕೃಪಾಂಬುಧಿ ಕೃಷ್ಣರಾಯನು ಯಾದವಾದಿಗಳ ।
ವಿನಯದಿಂದ ಪ್ರಭಾಸಕ್ಷೇತ್ರಕೆ
ದನುಜಹರ ತೆರಳಿಸಲು ತೆರಳುತ
ಮನೆಯ ಕಾಹಿಂಗೆ ಯಿರಿಸುತೇಕಾಂತದಲಿ ಹರಿ ನುಡಿದ ॥ ೮೦

ನರ ಸುಭದ್ರೆಯನೊಯ್ದೊಡಾಕ್ಷಣ
ಹರಿದು ರಾಮಂಗಱುಹಬೇಡೆಂ
ದರೆಘಳಿಗೆ ಕಾಲಾಂತ. ನಿಲುವುದು ಗುರುವಿನುತ್ಸವಕೆ ।
ಹರುಷದಲಿ ಕೈಕೊಂಡ ಬೞಿಕಾ
ದರಿಸಿ ಮುಸಲಿಯ ಕೊಂಡು ತೆರಳಿದ
ನಿರುತವರಕಾರ್ತಿಕದಶುದ್ಧದ ಪಂಚಮಿಯ ದಿನಕೆ ॥ ೮೧

ಹರಿಯು ತೆರಳಿದ ಹಿಂದೆ ಪುರದಲಿ
ಚರಿಸುವವರಿಲ್ಲೆಂದು ದ್ವಾರಕಿ
ಯರಸ ತೆರಳಿದ ರಾಸಕೇಳಿಯ ರಭಸದುನ್ನತಿಗೆ ।

ನರನು ಮೌನದೊಳೊಂದು ಕಡೆಯಲಿ
ವರಸುಭದ್ರೆಯದೊಂದುಕಡೆಯು
ಳ್ಳಿರಲಿಕಾಬಳಿಗಾಗೆ ಮಱುದಿನ ದೇವಪೂಜೆಯಲಿ ॥ ೮೦

ಸುಭದ್ರಾರ್ಜುನರ ಅನ್ಯೋನ್ಯಾನುರಾಗ.

ಬಾಲಕಿಗೆ ಸಂನ್ಯಾಸಿದೇವರ
ಮೇಲೆ ಮನವಾಯ್ತಿವರಿಗಾಕೆಯು
ಮೇಲೆ ನೆಲಸಿತು ಚಿತ್ತ ಕಾಣೆನು ಜಪಸಮಾಧಿಗಳ ।
ಮೇಳವಿಸಿತನ್ಯೋನ್ಯರಾಗ ಭ
ಡಾಳಿಸಿದುದಭಿಲಾಷೆ ಕಾಮನ
ಬೇಳುವೆಗೆ ಬೆಂಡಾದುದಿಬ್ಬರಧೈರ್ಯವಡಿಗಡಿಗೆ ॥ ೮೩

ಮಿಡುಕುವುದು ಬಾಯ್ ಚಿತ್ತವವಳಲಿ
ತೊಡಕಿಹುದು ಜಪಮಾಲೆ ಬೆರಳಲಿ
ನಡೆವುತಿಹುದಕ್ಷಿಗಳು ಮುಕ್ಕುಳಿಸಿಹುವು ಮಾನಿನಿಯು ।
ಮೃಡಪಿತಾಮಹಪೂಜೆಗಾಸತಿ [1]
ಹಿಡಿಹಿನಲಿ ಮನವರಳ ಮುದ್ರೆಯು
ತೊಡಹು ಹೊಱಗೊಳಗಿಂದುಮುಖಿಯುರ ನ್ಯಾಸಮುದ್ರೆಯಲಿ [2] ॥

ಜಾಱಿದುದು ಮಳೆಗಾಲವತಿಬಿಳು
ಪೇಱಿದುವು ಮುಗಿಲುಗಳು ಕತ್ತಲೆ
ಸೂಱೆ ಹೋಯಿತು ಹಗಲಿರಳು ರವಿಶಶಿಗಳುಪಟಳಕೆ ।
ತಾಱಿದುವು ನದನದಿಗಳಭ್ರಕೆ
ಹಾಱಿದುವು ಹಂಸೆಗಳು ತಲೆ
ದೋಱಿದುವು ತಾವರೆಗಳನೆ ಬಂದುದು ಶರತ್ಸಮಯ ॥ ೮೫

---

1 ಮೃಡನ ಪೂಜೆಗೆ ಕೈ ಸುಭದ್ರೆಯು, ಚ.
2 ನರನಾಥ ಕೇಳೆಂದ ಚ, ಶ,

### ಅರ್ಜುನನು ದ್ವಾರಕೆಗೆ ಬಂದದ್ದನ್ನು ಕೃಷ್ಣನು ತಿಳಿಯುವಿಕೆ.

ಇರಲಿಕೊಂದಿನ ರಾತ್ರಿಯೊಳಗಾ
ನರನ ವೃತ್ತಾಂತವನು ತಿಳಿದಾ
ಕರುಣಿ ನೆಱೆ ವಸುದೇವರೋಹಿಣಿ ಸತ್ಯಭಾಮೆಯನು ।
ಕರೆದು ಗಾರ್ಗ್ಯಾಂಗಿರಸಗೌತಮ
ವೆರಸಿ ಬಂದನು ದ್ವಾರಕಾಪುರ
ವರಕೆ ಪಾರ್ಥ ಸುಭದ್ರೆಯಿಬ್ಬರ ನೆರಹಬೇಕೆಂದು ॥ ೮೬

ಸುರಗುರುವ ನೆನೆಯಲಿಕೆ ಬಂದಾ
ನರನ ವೈವಾಹಕ್ಕೆ ದೇವರ
ನೆರವಿ ಬಂದುದು ಕೃಷ್ಣರಾಯನ ಕರುಣದಳತೆಯಲಿ ।
ಉರಗಮಥನನನೇಱಿ ನಾಕದ
ಸುರಪತಿಯನೊಡಗೊಂಡು ಯಾದವ
ರರಸ ಹೊಕ್ಕನು ನಿಮಿಷಮಾತ್ರದೊಳರಸ ಕೇಳೆಂದ ॥ ೮೭

### ಅರ್ಜುನನಿಗೆ ಸುಭದ್ರೆಯನ್ನು ಕೊಟ್ಟು ವಿವಾಹಮಾಡಲು ಕೃಷ್ಣನ ಪ್ರಯತ್ನ.

ನಳಿನನಾಭನು ದೇವವೃಂದದ
ಬಳಗದಲಿ ಭೂದೇವಧರ್ಮದ
ತಲಹಿನುದ್ವಾಹಿಕವ ಪಾರ್ಥಗೆ ಮಾಡಲನುವಾದ ।
ವಿಲಸಿತದ ಮನ್ವಾದಿಮಾರ್ಗವ
ಬೆಳಸಿ ಬೇಗದಿ ಬಂದನಾವರ
ನಿಳಯಕೈದಿದ ಪಾರ್ಥನಿಹ ಪರಿಣಾಮಗೃಹದೆಡೆಗೆ ॥ ೮೮

ಬಂದು ಕಂಡಾನರನ ವೇಷವ
ನಂದು ತೆಗೆದಾವರಿಸಿ ಮಜ್ಜನ
ಕಂದವಡಿಸಿಯೆ ದಿವ್ಯವಸ್ತ್ರಾದಿ ವರನ ಸಿಂಗರಿಸಿ ।

ನಿಂದಿರಲು ಮುನಿಸಿಕರ ತಂದಂದು
ಚಂದದಲಿ ವರಹೋಮಕೆಲ್ಲವ
ನಂದು ರಚಿಸಲು ಕುಂದು ಬಾರದತೆಱದಿ ವಹ್ನಿಯಲಿ ॥ ೨೯

ಸುದತಿಯನು ಶುಭದಿನಸುಲಗ್ನಗ
ಳೊದವೆ ವೈವಾಹವನು ವಿಸ್ತರಿ
ಸಿದರು ಹರಿವಸುದೇವ ದೇವಕಿಯುಗ್ರಸೇನನೃಪ ।
ಮದುವೆಯಾಯಿತು ಬಲನಱಿಯದಂ
ದದಲಿ ಹೂಡಿದ ರಥವನೇಱಿಸಿ
ಮದವಳಿಗೆಸಹಿತರ್ಜುನನ ಕಳುಹಿದನು ಮುರವೈರಿ ॥ ೩೦

ಅರ್ಜುನನು ಸುಭದ್ರೆಯನ್ನು ಕರೆದುಕೊಂಡು ಹೋಗುವಿಕೆ.

ಮುದದೊಳಾವೈಕುಂಠ ಪಾರ್ಥನ
ಸುದತಿಗೊಂದಿನ ತೇರ ನಡೆಸುವ
ಹದನ ಕಲಿಸಿದನಾಕೆ ಸಾರಥಿಯಾಗೆ ತೆರಳಿದನು ।
ತ್ರಿದಶಗಣಸಹಿತಮರಮುನಿಗಳ
ಸದನಕೆಲ್ಲರ ಕಳುಹಿ ಯಾಕ್ಷಣ
ಸುದತಿಯುರು ಸಹಿತೈದಿ ಹೊಕ್ಕನು ತನ್ನ ಮಂದಿರವ ॥ ೩೧

ಪುರವ ಹೊಱವಂಟವರು ಬರಲು
ಬ್ಬರಣೆ ಯಾಗಲು ಬಚಿಕ ಸಾತ್ಯಕಿ
ಹರಿಯ ನೇಮವನಱಿದು ಕಳುಹಿದ ರಾಮಗೂಟಿಗವ ।

ಬಲರಾಮನು ಚಾರರಿಂದ ಈ ವಾರ್ತೆಯನ್ನು ಕೇಳಿ ಯುದ್ಧ
ಪ್ರಯತ್ನ ಮಾಡುವಿಕೆ.

ತರಣಿಯುದಯದ ಮೇಲೆ ಮುಸಲಿಯು
ಹೊರೆಯಲೊಱಲಿದರಾಚರರು ಯುತಿ
ವರ ಸುಭದ್ರೆಯನೊಯ್ದನಾಮುನಿ ಯೆನುತ ಬಾಯ್ಬಿಡಲು ॥ ೩೨

ತುರಗಗಜರಥಸಹಿತವರು ತಾವ್
ಧುರಕೆ ತೆರಳಲು ಹರಿಯು ನಗುತಲೆ
ಕರೆದು ಬೊಬ್ಬೆಯನಾಲಿಸಿದ ತಾ ರಾಮ ದುಗುಡದಲಿ ।
ಬಱಿದೆ ಬೊಬ್ಬಿಡುವಾಗ ರಾಮಗೆ
ಪರಿಯ ಹೇೞಿದರಿಂದು ನಿಮ್ಮಯ
ಮರಯತೀಶನ ಜಪಸಮಾಧಿಗೆ ಸಮಿಧೆ ದೊರಕಿತೆಲ ॥ ೯೩

ಇರುಳು ಕೋಟೆಯನೊಡೆದು ರಥದಲಿ
ಮರಕುಮಾರಿಯನೊಯ್ದ ನಾತನು
ನಿರುತ ತಮಗಳವಲ್ಲ ಯೆಂದರೆ ಮುಸಲಿ ಬೆಱಗಾದ ।
ಅರಸುಮಗಳನು ಕೊಂಡು ಹಾಯ್ದನು
ತಿರುಕಮುನಿ ಮಝ ಭಾಪು ಸುಭಟರ
ಕರೆ ಮುರಾರಿಯ ಮಾತು ತಾಗಿತೆ ಯೆನುತ ಗರ್ಜಿಸಿದ ॥ ೯೪

ಹೇೞಬೇಡವೆ ಮುನ್ನವೇ ನೀ
ಳಾಳಿಕಿಯ ಕೆಡಿಸಿದಿರಲಾ ನೀ
ವಾಳ ನೆರಹಿದೊಡಿನ್ನು ಮಾಡುವುದೇನು ಕಡು ಮುೞಿದು ।
ಜಾಳಿಸಿದುದಪಕೀರ್ತಿಯಕಟ ವಿ
ಟಾಳಿಸಿತು ಯದುವಂಶಕೆನೆ ಕರ
ವಾಳ ಜಡಿದ್ಯೈದಿದನು ಹಲಧರನರ್ಜುನನ ರಥಕೆ ॥ ೯೫

ಮುಸುಕಿದನು ನಾರಾಚದಲಿ ನಿ
ಪ್ಪಸರದಲಿ ಹಲಧರನ ಸೇನೆಯ
ಕುಸುರಿದಱಿದನು ಕೊಱಿದನಗಣಿತಬಲವನಾಪಾರ್ಥ ।
ಎಸೆವನೇ ಸಂನ್ಯಾಸಿ ಮಾಡಿದ
* ಹುಸಿಯುಪನ್ಯಾಸಕ್ಕೆ ಕೊಯ್ವೆನು
ರಸನೆಯನು ರೇವತಿಯ ಮೇಲಾಣೆನುತ ಹರಿತಂದ ॥ * ೯೬

---

* ಹುಸಿಯ ನೋಡಿರೆ ನರನಿವನು ತಾ ।
ವಸುಧೆಯಲಿ ಕಡಿದಿಕ್ಕಿ ತೋಱುವೆನೆಂದನಾರಾಮು ಕ. ॥ *

ಸುಭದ್ರೆಯನ್ನೊಯ್ದವನು ಅರ್ಜುನನೆಂದು ಕೃಷ್ಣನು ಹೇಳುವಿಕೆ.

ಬಳಿಕ ಹರಿದನು ಕೃಷ್ಣ ಸೀತನ
ಕೆಲಕೆ ತೆಗೆದನು ಬಹಳರೋಷವ
ತಿಳುಹಿರೇ ಸಾಕಿನ್ನು ವಸುದೇವಂಗೆ ದೇವಕಿಗೆ ।
* ಉಳಿಯದೀತನ ದೋಷವಲ್ಲಿವ
ತಿಳಿದೆವಾವರ್ಜುನನು ನೀವಿದ
ಕಳುಕಲೇತಕೆ ಮರಳಿ ಸಾಕಿನ್ನೆಂದನಸುರಾರಿ * ॥ ೯೭

ಗೆಲುವುದರಿದೀಸರಸ ಪುಸರಪಿ
ಯಿಳೆಯೊಳೊಂದುಗೆ ಗೆದ್ದೆವಾದೊಡೆ
ನಳಿನಮುಖಿಯನು ಕೊಂಬರಾರೆಸೆ ವ್ರೊಬ್ಬ ಕರವಿಡಿದ ।
ಲಲನೆಯನು ವೈವಾಹಕನುತಲಿ
ನಳಿನನಾಭನು ಧರ್ಮಶಾಸ್ತ್ರವ
ತಿಳುಹಿ ರಾಮನನಂದು ಬೋಧಿಸಿ ಮರಳಿ ತಿರುಗಿದನು ॥ ೯೮

ಅಕಟ ದುರ್ಯೋಧನಗೆ ತಪ್ಪಿತು
ಸಕಲಯಾದವರೊಂದೆ ಯಾದಿರು
ವಿಕಳಮತಿ ತಾನೊಬ್ಬ ಕೃಷ್ಣನ ಕಪಟನಾಟಕಿದು ।
ಅಕುಟಿಲರು ನೀವೆಲ್ಲ ತಾ ಬಾ
ಧಕನು ಗರುವರು ನೀವೆನುತ್ತಲಿ
ಭ್ರುಕುಟಿಬದ್ಧದಿ ಮುಳಿದ ನಗರಿಗೆ ರಾಮ ರೋಷದಲಿ ॥ ೯೯

ಹಸ್ತಿನಾಪುರಕ್ಕೆ ಅರ್ಜುನಾಗಮನ.

ಹರಿಸಹಿತ ಬಲರಾಮನಿತ್ತಲು
ತಿರುಗಿದನು ಪವಮಾನವೇಗದಿ
ಪುರಕೆ ಬಂದನು ಪಾರ್ಥನಾಗ ಸುಭದ್ರೆಯೊಡಗೂಡಿ ।

---

* ಮುಳಿವುದೀತನ ದೋಷವಲ್ಲಿದ
ತಿಳಿವೆನಾನರ್ಜುನನು ಗಡ ನಾ
ವಳುವುದಿನ್ನೇಕೆನುತ ಬೋಧಿಸಿದನು ಹಲಾಯುಧನ, ಘ. ಠ ॥

ಪುರದ ಬಹಿರುದ್ಯಾನದಲಿ ಸಂ
ವರಿಸಿ ರಥವನು ನಿಲಿಸಿ ನಲಿವುತ
ಪರಿಗತಶ್ರಮನಾಗಿ ನಗುತ ಸುಭದ್ರೆಗಿಂತೆಂದ ॥ ೧೦೦
ಅರಮನೆಗೆ ನಡೆ ಮುಂದೆ ದ್ರೌಪದಿ
ಕರೆಸಿದೊಡೆ ನೀ ಹೋಗು ನಿರುತವ
ನಱುಹದಿರು ತುಱುಗಾಹಿಗಳ ಮಗಳೆಂದು ನುಡಿ ಸಾಕು ।
ಅರಸಿ ಮಿಗೆ ಮನ್ನಿಸಿದೊಡಲ್ಲಿರು
ಕರೆಸಿಕೊಂಬೆನು ಬೇಱೆ ಸದನಕೆ
ವರಸುಭದ್ರೆಯ ಕಳುಹಿದನು ನಿಜರಾಜಮಂದಿರಕೆ ॥ ೧೦೧
ಬಂದಳಾಕೆ ಸಮಸ್ತಪುರಜನ
ವೆಂದು ಹೊಗೞಲಿಕಿಂದುಮುಖಿಯನು
ಮಂದಿ ನುಡಿದುದು ಮನುಜೆಯೋ ಸುರಲೋಕಮಾನಿನಿಯೊ ।
ಮುಂದೆ ಬರೆ ಬರೆ ಬಾಗಿಲವದಿರು
ನಿಂದರಲ್ಲಿಯದಲ್ಲಿ ಬೞಿಕರ
ವಿಂದಮುಖಿಯನು ಕಂಡು ದ್ರೌಪದಿಗಱುಹಿದರು ಹದನ ॥ ೧೦೨
ಕರೆಸಿ ಕಾಣಿಸಿಕೊಂಡು ಪಾಂಡವ
ರರಸಿ ಬೆಸಗೊಳಲಾಕೆ ಪಾರ್ಥನ
ಪರುಠವದ ಮಾತುಗಳನೋಱಿದಳು ನಗೆಯ ಮೊಳೆ ಮಿನುಗೆ ।
ಸುರಭುಜಂಗಮವಧುವೊ ನೀ ಮೋ
ಣರಸು [1] ಗಳ ಸುತೆಯಂತೆ ಕೋಮಲೆ
ತರಳೆ ನೀ ಗೌಳಿಗರ ಮಗಳನಬೇಡ ಹುಸಿ ಯೆನಲು ॥ ೧೦೩
ಮಸಗಿದುದು ನಿಸ್ಸಾಳತತಿ ಗ
ರ್ಜಿಸಿದುವರ್ಜುನ ಬಂದನೆಂದಂ
ಬೊಸಗೆವಾತಿನಲೂರ ಸುಳಿವರು ದೂತರಲ್ಲಲ್ಲಿ ।

1 ಮಗಳೋ ತಂಗಿ ನೀ ಗೊ
ಲ್ಲರ ಮಗಳೆ ಹುಸಿಯೆನುತ ತಲೆದೂಗಿದಳು ಪಾಂಚಾಲಿ, ಚ. ಪ.

ಶಶಿಮುಖಿಯರುಪ್ಪಾರತಿಯ ಪಿಗಿ
ಲೆಸೆವ ರತುನಾರತಿಯ ಕಾಂತಾ
ವಿಸರ ನೂಕಿತು ಪಾರ್ಥ ಹೊಕ್ಕನು ರಾಜಮಂದಿರವ ॥ ೧೦೪

ಅರಸ ಭೀಮಂಗೆಱಗಿ ನಕುಲಾ
ದ್ಯರನು ಕಾಣಿಸಿಕೊಂಡು ದೇಶಾಂ
ತರದ ತೀರ್ಥೋನ್ನತಿಯನಾವೃತ್ತಾಂತಸಂಗತಿಯ ।
ಮುರಹರನ ಸಾಪ್ತದವನಾತನ
ಕರುಣಕನ್ಯಾಲಾಭವನು ಬಿ
ತ್ತರಿಸಿ ಹರುಷಾಂಬುಧಿಯೊಳದ್ದಿದನಗ್ರಜಾನುಜರ ॥ ೧೦೫

ಬಳಿಕ ಕೃಷ್ಣನ ಸೋದರಿಯ ಯೆಂ
ದೊಳಗೆ ಕರ ಸಂಭ್ರಮಿಸೆ ದ್ರೌಪದಿ
ನಳಿನಮುಖಿ ಮನ್ನಿಸಿದಳಾಗಲು ಪಾರ್ಥನರಸಿಯನು ।
ಫಲುಗುಣಗೆ ವರುಷಾದಿಕಾಲವು
ಯಿಳೆಯಕ್ಕೈದಿದ ದಿನಕೆ ತುಂಬಿತು
ತಿಳಿಯಲಾವರವರುಷ ಭೀಮನ ಸದನಕಬುಜಾಕ್ಷಿ ॥ ೧೦೬

ಇರಲಿಕೊಂದಿನ ಪಾರ್ಥ ನಿಲಯಕೆ
ಬರಲು ಕೃಷ್ಣನ ಯನುಜೆ ಬಂದಳು
ಸಿರುತಸವತಿಯ ಭಾವವೆಱಿಯದೆ ನಡೆದಳವರೊಡನೆ ।
ಅರಸ ಕೇಳಾವರಸುಭದ್ರೆಯ
ಪರಿಯ ತಿಳುಹುವೆ ಮುನ್ನ ಲಂಕಾ
ಪುರಿಯಲಾಜನಕಜೆಯ ಸೇವೆಯ ಮಾಡಿದಾಫಲದಿ ॥ ೧೦೭

ವರತ್ರಿಜಟೆ ಜನಿಸಿದಳು ಕೃಷ್ಣನ
ಕರುಣದಲಿ ರೋಹಿಣಿಯ ಜಠರದೊ
ಳರಸಿಯಾದಳು ವರಸುಭದ್ರೆಯು ಪಾರ್ಥಗೊಲವಿನಲಿ ।

ಇರಲಿರಲು ಮಿಗೆ ಪಾರ್ಥನರಸಿಯು
ರಿರದೆ ತಾವೇ ಬಂದು ಹೊಕ್ಕರು
ಪುರವ ಮೂವರದಿಬ್ಬರನಿಲಜಗೊಬ್ಬಳಾ ನೃಪನ ॥ ೧೦೮

ಧರ್ಮಾದಿಗಳ ವಿವಾಹ

ಮದುವೆಯಾಯಿತು ಧರ್ಮಪುತ್ರಗೆ
ಸುದತಿಶ್ಯಾಮಳೆ ಯೆಂಬಳೊಬ್ಬಳು
ವಿಧಿವಿಹಿತಗೃಹ್ಯೋಕ್ತಿಯಲಿ ನಿಮಿವರಕುಲಾನ್ವಯಕೆ ।
ಅದಟಕೌರವನತ್ತಲಿಭಪುರ
ಸದನದಲಿ ವೈವಾಹಕೋಸುಗ
ಮುದದಿ ತೆರಳಿದನಾಸುಭದ್ರೆಯ ನೆರೆವ ಸಡಗರಕೆ ॥ ೧೦೯

ತೆರಳಲಾನಾರದನು ಹಸ್ತಿನ
ಪುರಕೆ ಬಂದಾ ಕೌರವೇಂದ್ರನ
ಭರವಸವ ಕೇಳಿದನು ಕೇಳಲಿಕಂದು ಹರುಷದಲಿ ।
ಪರಮಪರಿತೋಷದಲಿ ಮುಸಲಿಯು
ವರಜೆಯನು ತಾ ನೆರೆಯಲೋಸುಗ
ತೆರಳಿದನು ತಾನೆಂದು ಪೇಳಿದರಾಗ ಪುರವರದಿ ॥ ೧೧೦

ಎನಲಿಕಾಮುನಿ ನಕ್ಕು ಮುನ್ನಿನ
ದಿನದಲಾಕೆಯು ಪಾರ್ಥನೊಯ್ದನು
ದನುಜಹರನಾನರಗೆ ಧಾರೆಯನೆಱೆದು ಕಳುಹಿದನು ।
ನೆನೆಯಲಾಗದು ನೀ ಸುಭದ್ರೆಯು
ತನುವ ನಿನ್ನಯ ತೆರವಿಗೆಂದಾ
ವಿನಯದಲಿ ಕೊಂಡಮಳಹಣವನು ಕೃಷ್ಣ ಕಳುಹಿದನು ॥ ೧೧೧

ರಾಮಸೀವೃತ್ತಾಂತವಱಿಯೆ ನಿ
ರಾಮೆಯನುಸಲೆ ಕೇಳಿ ಪಾರ್ಥನ
ಕಾಮಿನಿಗೆ ಸಂಗ್ರಾಮ ಮಾಡಲು ಮುಳಿದು ತಿರುಗಿದನು ।

ಆಮಹಾನರಗಿದಿರದಾವನು
ಸೋಮಶೇಖರ ಪೊಡಲಿಗಂಜುವ
ಭೂಮಿಪತಿ ನೀ ತಿರುಗು ಹಸ್ತಿನಪುರಕೆ ಹರುಷದಲಿ ॥ ೧೧೨

ಎನಲಿಕಗ್ಗದ ದುಗುಡಭರದಲಿ
ನೆನೆದಳಲುವೆನು ಮರಳಿ ಬಂದಾ
ವನಿತೆಗಿತ್ತಾಹಣವು ಖಂಡುಗವಾಗ ಪಸ್ಸೆರಡು ।
ಜನಪ ಸುಯ್ಯುತ ಕೊಂಡು ದೇವಕಿ
ತನಯು ಮಾಡಿದ ಪರಿಯು ನೆನೆಯುತ
ಕನಲಿ ಇರಲಿಕೆ ಮುನಿಪ ಹೋದನು ಮೋಕ್ಷಮಾರ್ಗದಲಿ ॥ ೧೧೩

ಮದುವೆಯಾಯಿತು ಧರ್ಮಪುತ್ರಗೆ
ಸುದತಿ ಶ್ಯಾಮಳೆಯೆಂಬ ನಾರಿಯು
ಮದನಭೂಪನ ಮಗಳು ಸ್ವರ್ಣಗ್ರಾಮದಧಿಪತಿಯು ।
ಮುದದಿ ಭೀಮಗೆ ಸರ್ಪರಾಜನ
ಸುದತಿ ಸಾವಿತ್ರಿಯಲಿ ಜನಿಸಿದ
ಮದನಮೋಹಿನಿ ಯೆಂಬ ಕಾಳೀದೇವಿ ಸತಿಯಾಗೆ ॥ ೧೧೪

ಧರಣಿಜನ ಸುತೆ ನಕುಳದೇವಂ
ಗರಸಿಯಾದಳು ಕೇಳು ನರಪತಿ
ಸಿರುತದಲಿ ಸಹದೇವಗಾದಳು ಮದ್ರಭೂಪತಿಯು ।
ವರತನುಜೆ ವೃಷೆಯೆಂಬ ನಾಮದಿ
ಪರಮಸುಖದಿಂದಿರಲು ಬಂದಳು
ವರಹಿಡಿಂಬಾದೇವಿ ತನ್ನಯ ಸುತನನೊಡಗೊಂಡು ॥ ೧೧೫

ಬಂದು ಭೀಮನ ಮಂದಿರಕೆ ಸತಿ
ವೃಂದ ಮೊತ್ತಕ್ಕಾದಿಯಾದಳು
ನಂದಗೋಪನ ಕಂದನನುಜೆಯು ಶಕ್ರಪುತ್ರನಿಗೆ ।

ಸಂದ ಸತಿ ತಾನಾಗಿ ಬಳಿಕರ
ವಿಂದನಯನನ ಕೂರ್ಮೆಯಲಿ ಮುದ
ದಿಂದ ನಯದಲಿ ರಾಜ್ಯವಾಡಿದರಿಂದ್ರಪ್ರಸ್ಥದಲಿ ॥ ೧೧೬

ಅತ್ತಲಾಕೌರವಗೆ ಸತಿಯರೊ
ಳುತ್ತಮೆಯು ವರಭಾನುಮತಿ ತಾ
ಚಿತ್ತವಲ್ಲಭೆ ಯಾದಳಂದಾ ಗೌಳದಧಿಪತಿಯು ।
ಹೆತ್ತಸುತೆ ತಾ ಸೋಮದತ್ತನ
ದತ್ತಕಾತ್ಮಜೆ ಚಂದ್ರಮತಿಯೆಂ
ಬತ್ಯಧಿಕದಿಂ ಕರ್ಣಗಾದಳು ರಮಣಿಯೆಂದೆನಿಸಿ ॥ ೧೧೭

ದಿನಕರಾತ್ಮಜನಿಂದ ಕೌರವ
ಜನಪನಗ್ಗದ ಭೂಪರೆಲ್ಲರ
ನನುವರದೊಳುಜಿ ಜಯಿಸಿ ತಂದನು ಮೂವರರಸಿಯರ ।
ಇನತನೂಜಗೆ ಸೇರಿದಳು ಮಿಗೆ
ವನಿತೆ ಚಂದ್ರಮತಿ ಪ್ರಭಾನ್ವಿತೆ
ದನುಜಸುತೆಯಾಸುರಸೆ ದುಶ್ಯಾಸನಗೆ ವಧುವೆನಲು ॥ ೧೧೮

ಅತ್ತಲಾಕೌರವಗೆ ತಂಗಿಯು
ನೊತ್ತೆ ಯಿಟ್ಟುದ ಬಿಡಿಸಿ ಯನುಜೆಯು
ನತ್ತೆಯಳ ಬಳಿಗಿತ್ತು ಕಾಯ್ದನು ಸೋಮವಂಶವನು ।
ಉತ್ತರೋಕ್ತಿಯನಿನ್ನು ಕೇಳಾ
ವಿಸ್ತರದಿ ಕರುಣಾಳು ಕುಂತಿಯು
ಹೆತ್ತ ಮಕ್ಕಳ ಕಾಯ್ದ ಗದುಗಿನ ವೀರನಾರಯಣ ॥ ೧೧೯

ಮೂವತ್ತಾರನೆಯ ಸಂಧಿ ಮುಗಿದುದು.

# ಮೂವತ್ತೆ ಏಳನೆಯ ಸಂಧಿ

**ಸೂಚನೆ**

ಖಾಂಡವಾಹ್ವಯವನದಹನದ
ಚಂಡಗಂಡರ ಗಂಡ ದಿವಿಜರ
ಹಿಂಡು ಗೋಳಿಡೆ ಧಾಳಿಯಿಟ್ಟನು ಚಂಡಗಾಂಡೀವಿ ||

ಅಭಿಮನ್ಯುಮೊದಲಾದವರ ಜನನ.

ಕೇಳು ಜನಮೇಜಯ ಧರಿತ್ರೀ
ಪಾಲ ಪಾರ್ಥಸುಭದ್ರೆಯಲಿ ಭೂ
ಪಾಲತಿಲಕನು ಜನಿಸಿದನಲ್ಲೈ ಜಾತಮಾತ್ರದಲಿ |
ಮೇಲೆ ಮೊಳಗುವ ದುಂದುಭಿಯ ದಿವಿ
ಜಾಳಿಯ ಹಸುಳೆಯ ಹರುಷಾವಳಿ [1]
ಮೇಳವದ ವೈಸಿರಿಯನೇನೆಂಬೆನು ಧನಂಜಯನ || ೧

ಕಲಿತನಕೆ ನೆಲೆಯಾಯ್ತು ಭುಜದ
ಗ್ಗಳಿಕೆಗಾಸ್ಪದವಾಯ್ತು ನಿಜಚಾ
ಪಳವ ಬಿಸುಟಳು ವೀರಸಿರಿ ವಿಕ್ರಮದ ಸಿರಿಸಹಿತ |
ಹಳಿವು ಕಳವಳ ಭೀತಿ ಭಂಗ
ಸ್ಖಲನಕಂಪನವೆಂಬಿವಾತನ
ನೆಲನ ಸೀಮೆಯ ಸೋಂಕಲಮ್ಮವು ನೃಪತಿ ಕೇಳೆಂದ || ೨

ಜಾತಕರ್ಮಾನಂತರದಿ ವಿ
ಖ್ಯಾತನಾಮವಿಧಾನವನು ಸಂ
ಪ್ರೀತಿಯಲಿ ಮಾಡಿದನು ಮುನಿ ಭೂಪತಿಯನುಜ್ಞೆಯಲಿ |

---

[1] ಗಳ ಹೂವಳೆಯ ಪೂರದ, ಡ.

ವೀತಭಯನಭಿಮನ್ಯುವೆನೆ ರಿಪು
ಜಾತ ನಡುಗಿತು ಲೋಕ ಮೂಱಱೊ
ಳೀತನುದಯದ ಕೀರ್ತಿ ಪಸರಿಸಿತರಸ ಕೇಳೆಂದ ॥ ೭

ಯಮಸುತಗೆ ಭೀಮಗೆ ಕಿರೀಟಿಗೆ
ಯಮಳರಿಗೆ ಸುಕುಮಾರಕರು ನಿಜ
ರಮಣಿಯಲಿ ಜನಿಸಿದರು ಸುತಸೋಮಕನು ಪ್ರತಿವಿಂಧ್ಯ ।
ವಿಮಲಶ್ರುತಕರ್ಮ [1] ಪ್ರತಾಪೋ
ತ್ತಮನು ಶ್ರುತಸೇನಾಖ್ಯನುರುವಿ
ಕ್ರಮಶತಾನೀಕಾಭಿಧಾನರು ದ್ರುಪದತನುಜೆಯಲಿ ॥ ೮

ಕೃಷ್ಣನು ಈವಾರ್ತೆಯನ್ನು ಕೇಳಿ ಸಪರಿವಾರನಾಗಿ
ಹಸ್ತಿನಾವತಿಗೆ ಬರುವಿಕೆ.

ಇವರು ಕಳುಹಿದ ಹರುಷವಾರ್ತಾ
ಶ್ರವಣರಸದಲಿ ಮನ ಮುಳುಗಿ ಯಾ
ದವಶಿರೋಮಣಿ ರಾಮವಸುದೇವಾದಿಗಳು ಸಹಿತ ।
ಇವರ ಪುರಿಗೈತಂದರಿವರು
ತ್ಸವದಲಿದಿರ್ಗೊಂಡೊಸಗೆಯಲಿ ಬಾಂ
ಧವರ ಸಂಭಾವಿಸಿದರ್ಕೈ ಯಮನಂದನಾದಿಗಳು ॥ ೫

ಅಱಿಸಿ ಕಾಣವು ವೇದತತಿ ತಾ
ನಱಿಸಿ ಬಂದನು ಭಕ್ತರನು ತನ
ಗೆಱಗಿ ಮೆಚ್ಚಿ ಸಲಹಿಯರಜರುದ್ರಾಮರೇಶ್ವರರು ।
ಎಱಗುವನು ಧರ್ಮಜಗೆ ತನ್ನನು
ಕುಱುಹುಗಾಣವು ವೇದತತಿಗಿದು
ಮಱವೆಯೋ ಹರಿ ಬಂದು ಕಂಡನು ಧರ್ಮನಂದನನ ॥ ೬

ಲೀಲೆಯೋ ಯಿದು ಕೃಷ್ಣರಾಯನ
ಬಾಲಕೇಳಿಯೊ ನೆನವೊ ಜೊವ್ವನ

---

1 ಕೀರ್ತಿ, ಕ. ಖ. ಚ.

ಕೌಳಿಕದ ಕಣ್ಣುಮಾಯೆಯೋ ಯಿದು ಶಿವ ಶಿವೆಂದೀಗ ।
ಕಾಲಿಗೆಱಗಿದ ಕೃಷ್ಣನನು ಭೂ
ಪಾಲ ತೆಗೆದಪ್ಪಿದನು ನಿಗಮದ
ಮೌಳಿ ತಲೆವಾಗಿದುದು ಲಜ್ಜಾಭೂರಿಭಾರದಲಿ ॥ ೭

ಆಗ ಬಾಲರಿಗೆ ಕೃಷ್ಣನು ಆಭರಣಗಳನ್ನು ಕೊಡುವಿಕೆ.

ಅರಸ ಸಹಿತಸಮಸ್ತಪುರಜನ
ಪರಿಜನದ ಮೇಳದಲಿ ಯಾದವ
ರರಸ ಬಿಜಯಂಗೈದು ಕುಂತೀಸುತರ ಭವನದಲಿ ।
ಅರಸಿಯರ ಸುಕುಮಾರವರ್ಗವ
ಕರೆಸಿ ಕಾಣಿಕೆಗೊಂಡು ದಿವ್ಯಾ
ಭರಣವಸನಾದಿಯಲಿ ಮನ್ನಿಸಿದನಂದಾಮಹೀಶ್ವರನ ॥ ೮

ಜಲಧಿಮಧ್ಯದಲಿರವೊ ಗಗನ
ಸ್ಥಲವೊ ವೇಣಾಯಂಧಕಾರದ
ಕಟಿವುಗಳೊ ವೈಕುಂಠವೋ ಮುನಿಜನದ ಹೃದ್ಗುಹೆಯೊ ।
ತಿಳಿಯೆ ಸಚರಾಚರದ ಚೇತನ
ದೊಳಗೆಯೋ ನೆಲೆ ಯಾವುದೆಂಬ
ಗ್ಗಳದ ದೈವದ ನೆಲೆಯ ಕಂಡನು ಪಾರ್ಥ ಭವನದಲಿ ॥ ೯

ಈತನರ್ಜುನನರಮನೆಯಲಭಿ
ಜಾತನೆನಿಪಭಿಮನ್ಯುವನು ಸಂ
ಪ್ರೀತಿಯಿಂದಪ್ಪಿದನು ಕೊಟ್ಟನು ಬಾಲದೊಡಿಗೆಗಳ ।
ಖ್ಯಾತಪಂಚದ್ರೌಪದಿಯ ಸಂ
ಜಾತರನು ಮನ್ನಿಸಿ ಮಹಾವಿಭ
ವಾತಿಶಯದಲಿ ಪತಿಕರಿಸಿದನು ಪಾಂಡುನಂದನರ ॥ ೧೦

ಬಲರಾಮಾದಿಗಳನ್ನು ಕಳುಹಿಸಿ ಕೃಷ್ಣನು ಅರ್ಜುನನ ಬಳಿಯಿರುವಿಕೆ.

ಅರಸ ಕೇಳ್ಕೆ ಕೆಲವುದಿನ ಸಂ
ಚರಿಸಿ ಸಾಖ್ಯದಲಿದ್ದು ತಮ್ಮಯ

ಪುರಕೆ ಬಲಭದ್ರನನು ಯಾದವರಾಯ ದಳಸಹಿತ ।
ಹರಿ ಸಮಾಧಾನದಲಿ ಕಳುಹಿಸಿ
ನರನೊಡನೆ ವೈಹಾಳಿಮೃಗಯಾ
ವರವಿಹಾರದೊಳಿದ್ದನಿಂದ್ರಪ್ರಸ್ಥನಗರಿಯಲಿ ॥ ೧೧

ಆಗ ಅಗ್ನಿಯು ವಿಪ್ರರೂಪನಾಗಿ ಅರ್ಜುನನನ್ನು ಅನ್ನವಂ ಬೇಡುವಿಕೆ.

ಹರಿಧನಂಜಯರೊಂದುದಿನ ಮೃಗ
ಹರಣಕೇಳಿಕಳಾಪದಲಿ ಸಂ
ಚರಿಸಿ ಬನದಲಿ ಬಹುಳಮಾರ್ಗಶ್ರಮದ ಭಾರದಲಿ ।
* ಬರುತ ನೀರಡಿಸಿದರು ಕಂಡುಱಿ
ಸರಸಿಯಲಿ ನಿಜಚರಣವ ತೊಳೆದು
ಪರಿಹೃತಶ್ರಮರಾಗಿ ನಿಂದರು ಕೊಳನ ತೀರದಲಿ * ॥ ೧೨

ಆಸಮಯದಲಿ ಬಂದನೊಬ್ಬನು
ಭೂಸುರನು ಕಿಡಿಗಳ ತುಷಾರದ
ಮೀಸೆಗಡ್ಡದ ಸುಳಿದಲೆಯ ಕರ್ಬೊಗೆಯ ಜುಂಜುರಿನ ।
ಭಾಸುರದ ಬಳಲುಡಿಗೆ ಮೆಟ್ಟಿಯ
ಧೂಸರದ ಮೈದೊಡಿಗೆ ಮೆಱೆಯೆ ವಿ
ಳಾಸದಲಿ ನಡೆತಂದನರ್ಜುನದೇವನಿದ್ದೆಡೆಗೆ ॥ ೧೩

ಹರಸಿದನು ವೇದಾರ್ಥದಲಿ ವಿ
ಸ್ತರಿಸಿ ಕೊಂಡಾಡಿದನು ವಿಪ್ರನ
ಪರಮಯೋಗ್ಯತೆಗಾರು ಸರಿ ಪರಮೇಷ್ಠಿ ಹೊಱತಾಗಿ ।
ಬರವಿದೇನೆನಗೇನನುಗ್ರಹ

---

* ಬರುತ ನೀರಡಿಸಿದರು ಕಂಡರು
ಸರಸಿಯನು ರಥವಿಳಿದು ನೆಳಲಲಿ
ಪರಿಹೃತಶ್ರಮರಾಗೆ ಹರಿ ಹೊಕ್ಕನು ಸರೋವರವ, ಛ. ಠ.

ವರಸಿದರೆ ನಿಮ್ಮಿಷ್ಟವನು ಗೋ
ಚರಿಸುವೆನು ನಿಮಗೆಂದು ನುಡಿದನು ಪಾರ್ಥ ವಿನಯದಲಿ ॥ ೧೪

ಪಾರ್ಥ ಕೇಳತಿಗಹನವೇನ್ ಗ್ರಾ
ಸಾರ್ಥಿಗಳು ನಾವಾದೆವೆಮ್ಮ
ಷ್ಟಾರ್ಥಸಿದ್ಧಿಯು ಘಟಿಸು ಸಾಕು ಸಮಗ್ರಫಲವಹುದು ।
ತೀರ್ಥ ವಿಸ್ನೇಕತಿಥಿ ಯಿರಲು ಪ
ರಾರ್ಥಸಾಧಕವೆಮಗೆ ಪರಮ
ಸ್ವಾರ್ಥವೆಂಬರು ಸುಜನರೆಂದನು ಕಪಟದ್ವಿಜ ನಗುತ ॥ ೧೫

ಕೃಷ್ಣನು ಭಯವನ್ನು ಸೂಚಿಸುವಿಕೆ.

ಕೊಟ್ಟೆನೆಂದನು ಪಾರ್ಥನಿವರೊಡ
ಬಟ್ಟರೀ ನುಡಿಗೇಳಿ ದನುಜಘ
ರಟ್ಟ ಬಂದನು ಹದನನರಿದನು ಹವ್ಯವಾಹನನ ।
ಕೊಟ್ಟುದೇನು ಕಿರೀಟಿಯಿವರೇ
ಮುಟ್ಟದರೆ ಮುನಿವವರಲೇ ನೀ
ಕೊಟ್ಟುದುಣಬಡಿಸುವುದು ಭಾರವಿದೆಂದನಸುರಾರಿ ॥ ೧೬

ಮುಖರನಾದೈ ಪಾರ್ಥಬರ್ಹಿ
ರ್ಮುಖರ ಬಾಣಸದಾತನೀತನು
ಸುಖವ ಹೇಳೈ ತಂದೆ ಖಾಂಡವವನದ ನಿರ್ದಹನ ।
ನಿಖಿಳನಿರ್ಜರಬಲದೊಡನೆ ಶತ
ಮಖನೊಡನೆ ವಿಗ್ರಹವಲಾ ಸ
ಮ್ಮುಖಕೆ ಬಂದುದು ಭಂಗವೆಂದನು ನಗುತ ಮುರವೈರಿ ॥ ೧೭

ಅರ್ಜುನನು ನಿಮ್ಮ ದಯೆಯಿದ್ದರೆ ಭಯವೇನೆಂದು ಹೇಳುವಿಕೆ.

ಭಂಗವೇಕೈ ಕೃಷ್ಣ ನಿರ್ಜರ
ಪುಂಗವನ, ಗೆಲಿದವನ ಬಾಣಸಿ
ಗಂಗೆ ಬಾಣಸ ಮಾಡುವೆನು ಖಾಂಡವಮಹಾವನವ

ಅಂಗವಣೆಯನು ನೋಡು ನೀನೇ
ಕಾಂಗದಲಿ ನಿರ್ವಹಿಸುವೆನು ಭಯ
ಭಂಗವುಂಟೇ ನಿನ್ನ ಕೃಪೆಯಿರಲೆಂದನಾಪಾರ್ಥ ॥ ೧೮

ಮೆಚ್ಚಿದನು ಘೃತಯೋನಿ ಪ್ರೀತಿಯೊ
ಳಿಚ್ಛಿಸಿದನು ನೀನೆನುತ ಶಿಖೆಗಳ
ಬಿಚ್ಚಲುದುರಿತು ಚಾಪವಾರ್ಗಣರಥತುರಂಗಚಯ ।
ಅಚ್ಚರಿಯನೇನೆಂಬೆನೈ ಸ
ಪ್ತಾರ್ಚಿಯಿತ್ತನು ವರವನಿಂದ್ರನ
ಮುಚ್ಚುಮರೆಯಾತಿನ್ನು ನಮಗುಣಬಡಿಸು ಸಾಕೆಂದ ॥ ೧೯

ಪಾರ್ಥಕೃಷ್ಣರಿಗೆ ಅಗ್ನಿಯು ರಥಾದಿಗಳನ್ನೊದಗಿಸಿ ಕೊಡುವಿಕೆ.

ಧರಣಿಪತಿ ಕೇಳಗ್ನಿಯಿತ್ತನು
ಹರಿಧನಂಜಯರಿಗೆ ರಥಂಗಳ
ನುರುಶರಾವಳಿ ದಿವ್ಯಧನುಕೌಮೋದಕೀಗದೆಯ ।
ವರತನುತ್ರಸಿತಾಶ್ವವಕ್ಷಯ
ಶರನಿಷಂಗಾದಿಗಳನಿವರು
ಬ್ಬರಿಸಿದರು ಹರುಷದಲಿ ನನೆದರು ಪುಳಕವಾರಿಯಲಿ ॥ ೨೦

ಹೂಡಿದರು ರಥವೆರಡನಿವರು ಸ
ಗಾಢದಲಿ ಕಪಿಗರುಡಸಿಂಧವ
ಜೋಡಿಸಿದರೇರಿದರು ನಗುತ ಧನಂಜಯಾಚ್ಯುತರು ।
ಮೂಡಿಗೆಯ ಮೊನೆಗಣೆಗಳಿಗೆ ಕೈ
ನೀಡಿ ಬೊಬ್ಬಿರಿದರು ದಿಗಂತವ
ನೀಡಿರಿದುದಬ್ಬರಣೆ ಬಿರಿದುದು ಧರಣಿ ಧಾತ್ರಿಯಲಿ ॥ ೨೧

ಪಾರ್ಥ ಕೃಷ್ಣರು ಸನ್ನದ್ಧರಾಗಿ ಖಾಂಡವವನವನ್ನು ಪ್ರವೇಶಿಸುವಿಕೆ.

ಬೊಬ್ಬಿರಿದು ಹರಿ ಪಾಂಚಜನ್ಯವ
ನುಬ್ಬಿ ದನಿಮಾಡಿದನು ಪಾರ್ಥನ

ಬೊಬ್ಬೆಯಬ್ಬರ ತೀವಿ ತಾ ಬ್ರಹ್ಮಾಂಡಮಂಡಲವ ।
ಗಬ್ಬರಿಸಿದುದು ಗಗನವೆನು ಶರ
ದುಬ್ಬರದ ಬಲುಗಿಡಿಯು ಗಡಣವು
ಹಬ್ಬಿ ಹರಿದುದು ದೆಸೆಗಳಿಗೆ ಭೂಪಾಲ ಕೇಳೆಂದ ॥ ೨೨

ಧಾಳಿಯಿಟ್ಟರು ಸುರವನಕೆ ಸುರ
ಜಾಲ ಜಱಿದುದು ಬೊಬ್ಬೆಯಲಿ ದೆ
ಖ್ಖಾಳಿಸಿದುದುತ್ಪಾತಶತ ಖಾಂಡವವನದ ಮಧ್ಯದಲಿ ।
ಕೂಟೆಗಳ ಕುಡಿಮೀನವೋಲ್ವಿಹ
ಗಾಳಿ ಹುದುಗಿತು ನಡುಗಿದರು ವನ
ಪಾಲಕರು ನಿಂದೊಣಗಿದುವು ಪರಿಚಂದನಾದಿಗಳು ॥ ೨೩

ವನದಲ್ಲಿದ್ದ ಸರ್ಪವನ್ನು ನನಗೆ ಕೊಡಬೇಕೆಂದು ಅಗ್ನಿಯ ಪ್ರಾರ್ಥನೆ

ತೂಗಿ ಬಾಣವ ಹೂಡಿ ಕಿವಿವರೆ
ಗಾಗಿ ಬರಸೆಳೆದಾರಿ ಬೊಬ್ಬಿಱಿ
ದಾಗಲಿಂತೆಂದನು ಧನಂಜಯನಾಧನಂಜಯಗೆ ।
ಈಗಲೀವನದೊಳಗೆ ಖಗಮೃಗ
ನಾಗಸುರದನುಜಾದಿಜೀವರ
ಹೋಗಲೀಯದೆ ತಱುಬಿ ಶರದಲಿ ಕಾಯಬೇಕೆಂದ ॥ ೨೪

ಅದರಂತೆ ಅರ್ಜುನನ ವಾಗ್ದಾನ.

ಹೈ ಸಮಗ್ರಾತಿಥ್ಯದಲಿ ನಿಮ
ಗೀಸಮಸ್ತಪ್ರಾಣಿಸಹಿತಸು
ರೇಶನುದ್ಯಾನವನು ಕೊಟ್ಟೆನು ಬಾಣಧಾರೆಯಲಿ ।
ನೀ ಸಮಾಧಾನದಲಿ ಸುಪುರೋ
ಡಾಶವಿದೆ ಸಮಿದಾಜ್ಯಸಹಿತಮ
ಹಾಸುವಿಸ್ತಾರದಲಿ ಕೊಂಬುದು ಭೀತಿ ಬೇಡೆಂದ ॥ ೨೫

ಎನುತ ಬಿಡೆ ತಿರುವಾಯನೊದೆದು
ಬ್ಬಿನಲಿ ಬೊಬ್ಬಿಱಿದಂಬು ಸುರಪನ
ವನವ ಮುತ್ತಿತು ಕೂಡೆ ಹೆಚ್ಚಿತು ಹೊಗೆಯ ಹೊರಳಿಯಲಿ |
ತನಿಗಿಡಿಯ ದಳ್ಳುರಿಯ ನಾಲಿಗೆ
ಗೊನೆಗಳಲ್ಲಾಡಿದುವು ಕಡು ಲಾ
ಗಿನಲಿ ಲಂಬಿಸೆ ಚುಂಬಿಸಿದುದುಱೆ ಲಲಿತನಂದನವ || ೨೬

ಹೊದಱಿನಲಿ ಭುಗಿಭುಗಿಲು ಭುಗಿಲೆಂ
ದೊದೆದುದುರಿ ಯಂಬರವನೊಣಗಿದ
ಬಿದಿರಮೆಳೆಯಲಿ ಧಗಧಗಿಸಿ ಛಟ ಛಟನೆ ಛಟಛಟಿಸಿ |
ಕದಳಿಖರ್ಜೂರಾದಿತರುಜಾ
ಲದಲಿ ಸಿಮಿ ಸಿಮಿ ಸಿಮಿ ಸಿಮೊಯತ
ವೊದಗೆ ಗಹನೋದರದೊಳಗೆ ಗಾಢಿಸಿತು ಘನವಹ್ನಿ || ೨೭

ಏನನೆಂಬೆನು ದಿವಿಜರಾಜೋ
ದ್ಯಾನಹಾನಿಯನಾತನಾಳು ಕೃ
ಶಾನುವಿನ ತನಿಗೊಬ್ಬನೀ ಕೃಷ್ಣಾರ್ಜುನರ ಬಲುಹ |
ಆ ನಿಖಿಳನಿರ್ಜರರು ತಾಗೆ ವಿ
ಮಾನಗತಿಯಲಿ ಹಾಯ್ದು ರಂದವ
ಮಾನಗತಿಯಲಿ ಗಗನದಲಿ ಗೀರ್ವಾಣಪುರವರಕೆ || ೨೮

ಹೊಗೆಯ ಬಟ್ಟೆಯಲಿ ತಳಿತ ಹುಯ್ಯಲ
ಬೆಗಡಿದೇನೋ ಕೇಳನುತ ಸಿರಿ
ಮೊಗದ ಬೆಳಗಿನ ಸಾವಿರಾಲಿಯೊಳೊಗುವ ಕಿಡಿಗಳಲಿ |
ಹಗೆಗಳಾರು ನಿವಾತಕವಚಾ
ದಿಗಳು ತಾನಾರೆಂಬ ಶಕ್ರನ
ದುಗುಡವನು ದಿವಿಜಾಳಿ ಕಂಡುದು ದೂಱಿದರು ನರನ || ೨೯

ಇಂದ್ರನಿಗೆ ಯುದ್ಧಕ್ಕಾಗಿ ದೇವತೆಗಳ ಪ್ರೇರಣೆ.

ನಿನಗೆ ಮಗನೇ ಪಾರ್ಥ ನಿನ್ನರ
ಮನೆಯು ಗೋಟಿನ ನಾಯಕನೆ [1] ಶಿಖಿ
ಯನುಜನೇ ಮುರವೈರಿ ನಿನಗನುಕೂಲರಾದರೆಲೈ ।
ಬನದ ಬೇಗೆಯೊ ಪರಿಭವಾಲಂ
ಬನದ ಹೊಸಗೆಯೊ ಬಂದುದಿದೆ ಬಿಡು
ಮನೆಯು ಮನ್ನೆಯ ಗಂಡನಾಗೆಂದುದು ಸುರಸ್ತೋಮ ॥ ೩೦

ಇಂದ್ರನು ಸಿಟ್ಟಿನಿಂದ ಮಳೆಯನ್ನು ಕರೆಸುವಿಕೆ.

ಐಸಲೇ ನಮ್ಮವರಲಾ ಹೋ
ಹೋ ಸುರರು ಕಳವಳಿಸದಿರಿ ನೀ
ವೈಸನಾಹುತಿಗೊಳಲಿ ಪಾವಕನಮ್ಮ ಖಾಂಡವವ ।
ಈಸುರರಿಗಾನರರಿಗಂತರ
ವೇಸು ಪ್ರೊತುಜಕೆ ಕಾಲಗತಿಯೆನು
ತಾಸುರೇಶ್ವರ ಖಾತಿಗೊಂಡನು ಕೃಷ್ಣಫಲುಗುಣರ ॥ ೩೧

ಕಾಹು ತೆಗೆಯಲಿಕಲ್ಪಮೇಘ
ವ್ಯೂಹಗಳ ಬರಹೇಳು ಕಾಂಬನು
ಸಾಹಸವನಿದಱೊಳಗೆ ಕೃಷ್ಣಧನಂಜಯದ್ವಯದ ।
ಈಹದಕೆ ಪಡಿಪಕ್ಷವಿಲ್ಲವೆ
ಗಾಹಿಸಲಿ ಖಾಂಡವವ ಹುಲ್ಲೆಯ
ಹೂಹೆಗಳು ಹೆಬ್ಬುಲಿಯ ಹೊಯ್ದುವೆನುತ್ತ ಗರ್ಜಿಸಿದ ॥ ೩೨

ಅರಸ ಕೇಳ್ಕಲ್ಪಾಂತಮೇಘೋ
ತ್ಕರದ ಪಾಳೆಯವೆತ್ತಿ ಬಿಟ್ಟುದು
ಧರಣಿಯುಗಲಕೆ ಧಾಳಿ ಮಿಟ್ಟುದು ಸಿಡಿಲುಮಿಂಚುಗಳು ।
ಕರಿಯ ಬಱಿಕೈಗೆಣೆಯೆನಿಪ ನಿ

1 ಬಾಣಾಸದಾತನೇ, ಚ. ಛ

ಷ್ಟುರದ ಧಾರಾಸಾರ ನೆರಳಿಚಿ
ಸುರಿದುದಾಖಾಂಡವದ ಸೀಮಾಸನ್ನಿವೇಶದಲಿ ॥ ೩೩

ಆಸಕಲ ಸಾಗರವನೊಂದೇ
ಶ್ವಾಸದಲಿ ತೆಗೆದೆತ್ತಿ ಮೊಗುಚಿದು
ವಾಸಮಸ್ತಬಳಾಹಕಾವಳಿ ವನದ ಮಧ್ಯದಲಿ ।
ಏಸು ಸಾಹಸ ಸತ್ವ ತನಗುಂ
ಟೈಸರಲಿ ತಲೆಯೆತ್ತಿ ಜಲದಲಿ
ಘೋಸಿಯಾದನು ವಹ್ನಿ ನುಡಿದನು ಕೃಷ್ಣಪಾರ್ಥರಿಗೆ ॥ ೩೪

ಆಗ ಮಳೆಯ ಬಾಧೆಯನ್ನು ತಪ್ಪಿಸೆಂದು ಅರ್ಜುನನಿಗೆ
ಅಗ್ನಿಯು ಹೇಳುವಿಕೆ.

ಕಲಹವಿಂದ್ರನ ಕೂಡೆ ಕಲ್ಪದ
ಮಟೆಗಳಿವು ಮಾಣಿಸಿದಿರೂಟವ
ನೆಳದವೆಣಲಿನ ತುತ್ತನರ್ಜುನ ಕಾಯ್ದುಕೊಳ್ಳನಲು ।
ಮಟೆಗಳಿಗೆ ಶರಪಂಜರವ ವಿರಚಿಸಿ
ಬಚ್ಚಿಕ ವಾಯುವ್ಯಾಸ್ತ್ರದಲಿ ನಿ
ಸ್ಖಲಿತಮೇಘವ್ರಜವನೆಚ್ಚನು ಪಾರ್ಥ ಮಹಿಲದಲಿ ॥ ೩೫

ಏನ ಹೇಳುವೆನರಸ ಪಾರ್ಥನ
ನೂನಶಕ್ತಿಯನುಬ್ಬಿದನು ಪವ
ಮಾನಶರದಲಿ [1] ಪುಷ್ಕಳಾವರ್ತಾದಿಘನಘಟೆಯು ।
ಭಾನುತಿಮಿರಂಗಳಿಗೆ ಮೇಘಮ
ಹಾನಿಲಂಗಳಿಗಾವುದಂತರ
ಸೋನೆ ತೆಗೆದುದು ಹೊಗೆದುದಾಖಾಂಡವಮಹೋದ್ಯಾನ ॥ ೩೬

ಹಾಱಿಲೂದಿತು ಮೇಘವನು ಕಿಡಿ
ತೂಱಿಲುಬ್ಬರಿಸಿತು ಮಹಾಗ್ನಿಯು

---

1 ನೊಡ್ಡಿದ, ಕ. ಖ.

ನೇಱುಸಿತು ಖಾಂಡವದೊಳಗೆ ಬಿರುಗಾಳಿ ಸುತ್ತಸುತ್ತಿದು |
ಮೋಱೆಯೊಣಗಿದುವಮರರಿಗೆ ವೈ
ಮಾರಿಗಳ ಸುಡು ಮೂಲೆಯುಪದಿರು
ಮಿಾಱುವರಲಾ ಯೆನುತ ಸುರಪತಿ ತರಿಸಿದನು ಗಜವ || ೩೭

ಇಂದ್ರನ ಯುದ್ಧಸನ್ನಾಹ.

ನೆರೆದರಮರರು ಸಿದ್ಧವಿದ್ಯಾ
ಧರಭುಜಂಗಮ ಯಕ್ಷಕಿನ್ನರ
ಗರುಡರಾಕ್ಷಸಸಾಧ್ಯಗುಹ್ಯಕಭೂತಗಂಧರ್ವ |
ತರಣಿಶಶಿರುದ್ರಾದಿಗಳು ಮೋ
ಹರಿಸಿದರು ಮುಂಗುಡಿಯಲಿಂದ್ರನ
ಸಿರಿಯ ರಚನೆಯನೇನನೆಂಬೆನು ಭೂಪ ಕೇಳೆಂದ || ೩೮

ಯುದ್ಧದಲ್ಲಿ ದೇವತೆಗಳು ಕಂಗೆಡುವಿಕೆ.

ಮುಸಗಿತಮರವ್ರಾತವಭ್ರವ
ಮುಸುಕಿದುವು ಝಲ್ಲರಿಗಳಿಂದ್ರನ
ವಿಶಸನಕೆ ಮೆಚ್ಚಿಸುವೆ ವಸುಗಳನೆನುತ ತಮತಮಗೆ |
ಮುಸುಕಿದುವು ಮೃಗರಾಜಸಿಂಹದ
ಮುಸುಕನುಗಿದಂದದಲಿ ಬಾಣದ
ಹಸರವನು ಹರಹಿದನು ಮುಂದೆ ಧನಂಜಯಾಚ್ಯುತರ || ೩೯

ಹೂಣೆಹೊಕ್ಕೆಚ್ಚರು ಮಹಾದ್ಭುತ
ಬಾಣವನು ದೃಢಬಾಣರೋ ಗೀ
ರ್ವಾಣರೋ ನೀವಾರು ನುಡಿಯರಲೈ ಮಹಾದೇವ |
ಸಾಣೆಯಲಗಿಗೆ ಸಾಱುವಿರಿ ತನಿ
ಶೋಣಿತವ ನೀವ್ ಕೊಂಡದೆ ಸುರಪ
ನಾಣೆ ಹಿಮ್ಮೆಟ್ಟಿದಿರೆನುತ ತೆಗೆದೆಚ್ಚನಾಪಾರ್ಥ || ೪೦

ತುಱುಗಿ ಕೂರಂಬುಗಳು ಮ್ಯೆಯ್ಯಲಿ
ಮುಱಿದುವರ್ಜುನನೆಸುಗೆಯಲಿ ಮ್ಯೆ
ಮಱೆದುದಮರನಿಕಾಯ ಕೆದಱಿತು ಥೊರೆಯ ಮನ್ನಿಸದೆ ।
ಮುಱಿದುದೀ ಕೃಷ್ಣಾರ್ಜುನರ ಬೊ
ಬ್ಬಿಱಿತಕವರೆದೆ ಯೊಡೆಯಲಿಂದ್ರನ
ಮಱೆಯ ಹೊಕ್ಕುದು ದೇವಸಂತತಿ ಭೂಪ ಕೇಳೆಂದ ॥ ೪೧

ನರನು ಹರಹಿದ ಹವ್ಯಕವ್ಯೋ
ತ್ತರಹವಿರ್ಭಾಗವನು ತಿಂದು
ಬ್ಬರಿಸಿ ದೇವಸ್ತ್ರೀಕದಂಬದ ಖೇಳಮೇಳದಲಿ ।
ಇರವು ನಿಮಗೀ ರೌದ್ರಬಾಣ
ಸ್ಫುರಿತಕರ್ಕಶವಿಸ್ಫುಲಿಂಗೋ
ತ್ಕರದೊಳಗೆ ನೀವೇತಕೆಂದನು ನಗುತ ಕಲಿಪಾರ್ಥ ॥ ೪೨

ಮುಱಿದ ನಿರ್ಜರಸೇನೆಗಭಯದ
ಕರವ ನೆಗಹಿ ಕರೀಂದ್ರನನು ಶಿರ
ಬಿರಿಯಲಂಕುಶಮುಖದೊಳೊತ್ತಿ ಮಹೋಗ್ರಕೋಪದಲಿ ।
ನರಮುರಾಂತಕರಿದಿರಿನಲಿ ಮದ
ಕರಿಯ ಬಿಟ್ಟನು ಶಕ್ರನಾತನ
ಬಿರುದು ಸಂಭಾಳಿಸಿತು ಪಾಠಕಕೋಟಿ ಗಡಬಡಿಸಿ [1] ॥ ೪೩

ನಮುಚಿಮಸ್ತಕಶೂಕ ಬಲಸಂ
ಕ್ರಮಣಭಾಸ್ಕರ ಜಂಭಭುಜವಿ
ಕ್ರಮಮಹಾಂಬುಧಿಕುಂಭಸಂಭವ ವೃತ್ರಗಿರಿವಜ್ರ ।
ಕಮಲಭವಹರವಿಷ್ಣು ಹೊಱಗಾ
ದಮಿತಭುಜಬಲಮೌಳಿಮಣಿಸಂ
ಕ್ರಮಿತಚತುರಪದಾಬ್ಜರೆಂದುದು ಮಾಗಧಸ್ತೋಮ ॥ ೪೪

[1] ಸಂಭಾವಿಸಿದರಬ್ಬರದ ಸೂತಮಾಗಧರು, ಚ.

ನೂಕಿದನು ಸುರಪತಿ ಗಜವನ
ವ್ಯಾಕುಳರಲೇ ಕೃಷ್ಣ ಪಾರ್ಥರಿ
ದೇಕೆ ನಮಗೀವಾಸಿ ವಾಸವ ಲೇಸು ಮರಳುವುದು ।
ನಾಕನಿಳಯರು ತಂದ ಜಯವೇ
ಸಾಕು ಸೋಲುವೆರಲ್ಲ ನೀವಿದ
ಕೇಕೆ ನೆಱೆ ಮುಂಕೊಂಡಿರೆಂದನು ನಗುತ ಕಲಿಪಾರ್ಥ ॥ ೪೫

ಆಗ ಬ್ರಹ್ಮವಾಕ್ಯ.

ಜನಪ ಕೇಳಾ ಸಮಯದಲಿ ವಾ
ಗ್ವನಿತೆಯರಸನು ಗಗನಮಾರ್ಗದೊ
ಳನಿಮಿಷಾಧಿಪನಲ್ಲಿಗೈತರೆ ಕಂಡು ಸುರನಿಕರ ।
ತನತನಗೆ ಬಾಳದಲಿ ನಿಜಕರ
ವನೊರುಹಲು ಮುಗಿಯಿಸಿವರಿಂದ್ರಂ
ಗನುವರವ ಮಾಣಿಸಲು ಬೇಕೆಂದಬುಜಭವ ನುಡಿದ ॥ ೪೬

ಮರುಳನೈ ನೀನಿವರ ನಾರೆಂ
ದಱಿಯಲಾ ನಾರಾಯಣನು ಮುರ
ಹರನು ನರನಲ್ಲಾ ಧನಂಜಯನಿವರು ಕಿಱುಕುಳರೆ ।
ಗರುವರಿವರೆಂದಿಂದ್ರನಾನೆಯ
ತಿರುಹಿದನು ಪರಮೇಷ್ಠಿ ಯತ್ತಲು
ಮುಳಿದರಲ್ಲಿಂದಿತ್ತ ಕೇಳಿಯನಾವನಾಂತರದಿ ॥ ೪೭

ವಹ್ನಿಯ ಸ್ವೇಚ್ಛಾವಿಹಾರ.

ಜಂಬುಚೂತಪಲಾಶವಟದಾ
ಳಂಬಬಿಲ್ವತಮಾಲಚಂಪಕ
ನಿಂಬುಬಕುಳಕಪಿತ್ಥಕುಟಜವಶೋಕಪುನ್ನಾಗ ।
ತುಂಬುರರಳಿಲವಂಗಬಕುಳಕ

ದಂಬುಗುಗ್ಗುಳಸಾಲತಿಲಕವು
ದುಂಬರಾದಿದ್ರುಮಕುಲವನಾಲಿಂಗಿಸಿತು ವಹ್ನಿ ॥ ೪೮

ಸುಟ್ಟಿಸುಟ್ಟಿದು ಶಶಿಕಾಂತಮಯದ
ಗದ್ದುಗೆಯ ವೇದಿಕೆಗಳಲಿ ನೀಲದ
ನೆಲೆಯ ಚೌಕಿಗೆಗಳಲಿ ಮಂಟಪದಲಿ ಲತಾವಳಿಯ ।
ಲಲಿತಸಾಧದ ಚಾರುಚಿತ್ರಾ
ವಳಿಯ ಮೇಲ್ಕಟ್ಟುಗಳ ಭವನಂ
ಗಳಲಿ ಬಿಟ್ಟುದು ಕೂಡೆ ಪಾಳಯ ವಹ್ನಿಭೂಪತಿಯ ॥ ೪೯

ಅಗ್ನಿಯಿಂದ ವನದಲ್ಲಿದ್ದವುಗಳೆಲ್ಲವೂ ಸುಡಲ್ಪಡುವಿಕೆ.

ಕುರಳ ತುಂಬಿಯ ತನಿಗೆದಱಿ ಮುಖ
ಸರಸಿಜವ ಚುಂಬಿಸಿ ತಮಾಲದ
ತುಱುಬ ಹಿಡಿದಧರಪ್ರವಾಳದ ರಸವನುಱೆ ಹೀರ್ದು ।
ಉರುಪಯೋಧರಬಿಲ್ವವನು ಹೊ
ಯ್ದೊರಸಿ ಕದಳಿಯನುಣ್ದೊಡೆಯ ನಿ
ಟ್ಟೊರಸಿ ರಮಿಸಿತು ವನಸಿರಿಯಪಿಪ್ಪಲದಳಾಂಗದಲಿ [1] ॥ ೫೦

ಧರಣಿಪತಿ ಕೇಳ್ ಶರಭಮೃಗಪತಿ
ಕರಿಕಳಭಶಾರ್ದೂಲಸೂಕರ
ಕರಡಿಕಾಸರ ಶಲಮೃಗಾದನಖಡ್ಗಗೋಮಾಯು ।
ಎರಳೆ ಮೊಲ ಸಾರಂಗವಾನರ
ನುರುಕುರಂಗಪ್ರಮುಖಮೃಗಕುಲ
ವುರಿಗೆ ಸಿಲುಕಿತು ದಳ್ಳುರಿಯ ಬೆಳ್ಳಾರವಲೆಗಳಲಿ ॥ ೫೧

ಶುಕಮಯೂರಮರಾಳಟಿಟ್ಟಿಭ
ಪಿಕಚಕೋರಕಪೋತವಾಯಸ

---

1 ದಗ್ನಿನೃಪನುತ್ಪಲದಶಾಂಗದಲಿ, ಕ.

ಬಕಪದಾಯುಧಚಕ್ರವಾಕಕಳಿಂಗಕಲಪಿಂಕ ।
ಕುಕಿಲಸಾರಸಕಾಕರಿಪುಚಾ
ತಕಭರದ್ವಾಜಾದಿಪಕ್ಷಿ
ಪ್ರಕರ ಬಿದ್ದುದು ಬಿಗಿದಕೇಸುರಿಕಣ್ಣಿವಲೆಗಳಲಿ ॥ ೫೨

ಹರಡೆ ಗೀಜಗ ಮರಗೋಳಲೆ ಕಾ
ರ್ಬುರಲೆ ಲಾವುಗೆ ಗೌಜು ಪಾರಿವ
ಸರಟ ಸಾಳುವ ಚಿಲಿಮಿಲಿಗಚಂಬೋತ ಪಿಂಚ್ಚುಲಿಗ ।
ಮರಕುಟಿಗ ಕಬ್ಬಕ್ಕಿ ಕೊಟ್ಟುಗ
ವೂರಲಿ ಕೊಂಚೆಗ ಪಿಂಜುಗಿಂಚಲು
ಗರಿಗವೊದಲಾದಖಿಳಖಗಕುಲ ಬಿದ್ದುದುರಿಯೊಳಗೆ ॥ ೫೩

ಝುಳಕೆ ತಿಳಿಗೊಳದುದಕ ಕಾಯ್ದು
ಚ್ಚಳಿಸಿದುವು ತನಿಗುದಿದು ಮತ್ಸ್ಯ
ವಳಿಗಳಂಬುಜದೆಸಳು ಸೀದುವು ತುಂಬಿಗಳು ಸಹಿತ ।
ಹಿಳಿದು ಸಿಡಿದುವು ಚಾರುಚಂದ್ರೋ
ತ್ಪಲರಚಿತಸೋಪಾನರತುನಾ
ವಳಿಯು ರಾಶಿಗಳದ್ದಲಾದುವು ಭೂಪ ಕೇಳೆಂದ[1] ॥ ೫೪

ಇಟ್ಟಣಿಸಿ ಛಳಿಛಳಿಸಿ ಕಿಡಿ ಪುಟ
ವಿಟ್ಟುದೊಣಗಿಲು ಹೊದಱಿನಲಿ ಮಿಗೆ
ಸುಟ್ಟು ಕಬ್ಬೊಗೆ ಝುಗೆಯು ಹೊರಳಿಯು ಕಿಡಿಯು ಗಡಣದಲಿ ।
ಹುಟ್ಟಿದುರಿ ಹೆಮ್ಮರನ ಸುತ್ತಲು
ಕಟ್ಟುತಲ್ಲಿಯು ತೊಡಕಿನಲಿ ಭುಗಿ
ಲಿಟ್ಟು ಕವಿದುದು ಕಡುಗಿ ಬಹುಶಾಖೋಪಶಾಖೆಗಳ ॥ ೫೫

ಹೊಗೆಯು ಹಬ್ಬುಗೆ ಸತ್ಯಲೋಕವ
ನುಗಿದುದುರಿನಾಲಗೆಯು ಗರವೊ

1 ಬಿದ್ದ ಕಿಡಿಗಳಲಿ, ಚ

ಟ್ಟಿಗೆಯು ತೊಂಬಿಲಿಕೆ ತೆರಳಿಚಿತು ತಿತ್ತಿೀಸುಕೋಟಿಗಳ |
ಹಗಲಗಡಿತಕೆಹೊಕ್ಕುದೋ ಕಡೆ
ಮುಗಿಲು ಕಾಣೆನು ದಿವವನೆತ್ತಣ
ಗಗನಮಣಿನಕ್ಷತ್ರಚಂದ್ರಮರಸ ಕೇಳಂದ || ೫೭

ಛಿಳಿಛಿಳಿಲುಛಿಳಿರವದ ಘುಳುಘುಳು
ಘುಳುಘುಳುಧ್ವನಿಮಯದ ಕಪಿಗಳ
ಕಿಳಕಿಳಾಯುತರವದಿ ಮೃಗಸಂಕುಳದ ಕಳಕಳದಿ |
ಹಿಳಿದುರಿವಹೆಬ್ಬಿದಿರ ಗಂಟಿನ
ಠಳಠಳತ್ಕಾರದಲಿ ದಿಶಾಮಂ
ಡಲದ ಮೂಲೆಗಳೊಡೆದುದದ್ಭುತವಾಯ್ತು ವನದಹನ || ೫೭

ಆಗ ತಕ್ಷಕನ ಸಂತತಿಯು ಅಶ್ವಸೇನನು ಗಗನಕ್ಕೆ ಹಾರಿ ಹೋಗುವಿಕೆ.

ಅರಸ ಕೇಳ್ಯ ಮುನ್ನ ವಿತಳಕೆ
ಗರುಡಭಯವಾಯ್ತೆಂದು ತಕ್ಷಕ
ನಿರಿಸಿದನು ನಿಜಸುತನನಮರೇಶ್ವರನನುಜ್ಞೆಯಲಿ |
ಇರಲಿರಲು ಸುತರಾದರಾತಂ
ಗುರಗವಂಶದೊಳಶ್ವಸೇನಗೆ
ಹಿರಿದ: ಹೆಚ್ಚಿತು ತಕ್ಷಕನ ಸಂತತಿ ವನಾಂತದಲಿ || ೫೮

ಈಮಹಾವನವಹ್ನಿ ಭೂತ
ಸ್ತೋಮಸಂಹೃತಿಕರ್ಮಶೌರ್ಯೋ
ದ್ದಾಮವವಗಾಹಿಸುತ ಬಂದುದು ಮುಂದೆ ಚೋಣಿಯಲಿ |
ಧೂಮವಿಡಿದುದು ಹುತ್ತಿನಲಿ ಸಿ
ಸ್ಲೀಮಜನಿತಜ್ವಾಲೆಗಳ ಝಳ
ವಾಮಹೋರಗಚಯವ ಚುಂಬಿಸಿತರಸ ಕೇಳಂದ || ೫೯

ಹೊಸಿ ಹುತ್ತಿನ ಮಣ್ಣರಂಧ್ರಸಿ
ಕಾಸಿದರೊ ಫಣಿಕುಲವನೆನೆ ಡೊ

ಳ್ಳಾಸದಲಿ ಡಾವರಿಸಿದುದು ಕಿಡಿ ಧೂತಧೂಮದಲಿ ।
ಅಸುರದ ಕರ್ಬೊಗೆಯ ಕವಚದ
ಕೇಸುರಿಗಳೊಳಬಿದ್ದುದುರಿ ಹೊರ
ಸೂಸಿ ಹಿಡಿವುದು ಹಾವುಗಳ ಬಲುಹೊದರ ಹೊರಳಿಗಳ ॥ ೬೦

ಹೆಡೆಯ ಮಣಿಗಳ ಕೊಡಹಿ ಸೂಸಿದ
ಕಿಡಿಗಳಲಿ ಹಾ ಯೆನುತ ತಲೆಗಳ
ಕೊಡಹಿ ಸೀದುರಗಿಯರು ಮಕ್ಕಳ ಮೇಲೆ ಮೈಚಾಚಿ ।
ಕಡುಹೊಗೆಯ ಕೇಸುರಿಯ ಕಿಡಿಗಳ
ಗಡಣದಲಿ ಕಾರೆದ್ದು ಮೈಗಳ
ಕೊಡಹಿ ಬಿಸುಸುಯ್ವುತ್ತ ಮಗ್ಗಿದುದುರಿಯೊಳಹಿನಿಕರ ॥೬೧

ಕುದಿದುರಿವ ಹುತ್ತಿನಲಿ ಕೂಟ್ಯದಿ
ಗುದಿವ ಸರ್ಪಸ್ತೋಮಮಧ್ಯದೊ
ಳೊದೆದು ಹಾಯಿದನಶ್ವಸೇನನು ಗಗನಮಂಡಲಕೆ ।
ಕೆದರಿಬಿದುವು ಕೆಂಗಿಡಿಗಳುರಿಯು
ಬ್ಬಿದುದು ಘುಳುಘುಳುರಭಸ ಮಿಗೆ ಹೆ
ಚ್ಚಿದುದು ತಬ್ಬಿದುದೀತನನು ತಡವರಿಸಿ ಗಗನದಲಿ ॥ ೬೨

ಆಗ ಅಶ್ವಸೇನನನ್ನು ತರಿಸಿಕೊಂಡು ಅಗ್ನಿಯ ಪ್ರಾರ್ಥನೆ.

ಉರಿಯಗಂಟಲನೊದೆದು ಫಣಿ ಮಿ
ಕ್ಕುರುವಣಿಸೆ ಹಾ ಹಾ ಧನಂಜಯ
ಹರಿವುತಿದೆ ಹಾ ವೊಂದು ತಪ್ಪಿತು ಬಾಯ ತುತ್ತೆನಗೆ ।
ತರಿಸಿಕೊಡು ಶರವೇಧೆಯನು ವಿ
ಸ್ತರಿಸು ಮಹಿಲದೊಳನಲು ವೈಶ್ವಾ
ನರನ ಮಾತಿಗೆ ನಗುತ ಕೊಂಡನು ವಿಜಯ ಗಾಂಡಿವವ ॥ ೬೩

ಆಗ ಅರ್ಜುನನನ್ನು ಕುರಿತು ಸರ್ಪವಾಕ್ಯ.

ಆವ ಶರಸಂಧಾನವೋ ಗಗ
ನಾವಲಂಬಿಯು ಕೊರಳನೆಚ್ಚನು
ಪಾವಕನ ಮಧ್ಯದಲಿ ಬಿದ್ದುದು ಮುಂಡವಹಿಪತಿಯು ।
ಜೀವ ವುಳಿದುದು ಶಿರದೊಳಾತಂ
ಗಾವಿಗಡ ಫಣಿ ನುಡಿದುದೆಲೆ ಗಾಂ
ಡೀವಿ ಮೆಱೆಯದಿರೆನ್ನ ಹಗೆಯಲಿ ಮರಣ ನಿನಗೆನುತ ॥ ೬೪

ಎಂದು ಗಗನದೊಳೊದಱಿ ಫಣಿಶಿರ
ವೆಂದು ಹಾಯ್ದುದು ಧರೆಗೆ ರಾಧಾ
ನಂದನನ ಬತ್ತಳಿಕೆಯಲಿ ಶರವಾಯ್ತು ಜಗವಱಿಯೆ ।
ಸಂದುದದು ಬೞಿಕಿತ್ತಲಿಂದ್ರನ
ನಂದನದ ಬೇಗೆಯಲಿ ಬದುಕಿತು
ಮಂದಪಾಲನ ಸುತಚತುಷ್ಟಯವರಸ ಕೇಳೆಂದ ॥ ೬೫

ಆಗ ಕೆಲವು ಪಕ್ಷಿಗಳು ಅಗ್ನಿಸೂಕ್ತಜಪದಿಂದ ಬದುಕಿದುವು.

ಮೆಚ್ಚಿಸಿದುವಿವು ವಹ್ನಿಸೂಕ್ತವ
ನುಚ್ಚರಿಸಿ ತಜ್ಜ್ವಲನಮುಖವೆನು
ಬಿಚ್ಚಿ ಬದುಕಿದುವಾ ಋಷಿಯ ಸಂತಾನಪಕ್ಷಿಗಳು ।
ಹೆಚ್ಚಿದುರಿಹಬ್ಬುಗೆಯ ಹೊಯಿಲಲಿ
ಬಿಚ್ಚಿ ಮಯನರ್ಜುನನ ಹೊಗೞಿಯ
ಕಿಚ್ಚಿನಲಿ ಬದುಕಿದನು ಧರಣೀಪಾಲ ಕೇಳೆಂದ ॥ ೬೬

ಖಗಚತುಷ್ಟಯ ಮಯಸಹಿತವುರಿ
ಯುಗುಳತುೞಿದ ಸಮಸ್ತ ಭೂತಾ
ಳಿಗಳನಾಹುತಿಗೊಂಡುದಗ್ನಿ ಧನಂಜಯಾಜ್ಞೆಯಲಿ ।
ಗಗನದಿಂದಿೞಿತಂದು ಸುರಪತಿ
ಮಗನ ಮನ್ನಿಸಿ ಕೊಟ್ಟನಗ್ಗದ
ಗಗನಮಣಿಗೆಣೆ ಯೆನಿಪ ಮಕುಟವನೊಲಿದು ಪಾರ್ಥಂಗೆ ॥ ೬೭

ಇಂದ್ರನ ಗಮನ ಮತ್ತು ಕೃಷ್ಣಾರ್ಜುನರು ಬಂದು ಭೀಮಾದಿಗಳಿಗೆ ಇದನ್ನು ಹೇಳುವಿಕೆ.

ಹರಿಗೆ ವಂದಿಸಿ ಮಗನನೊಲಿದಾ
ದರಿಸಿ ತಿರುಗಿದನಿಂದ್ರನಿತ್ತಲು
ಭರದಿನಿವರೈತಂದರಿಂದ್ರಪ್ರಸ್ಥಪುರವರಕೆ ।
ಧರಣಿಪತಿಗಾಖಾಂಡವದ ವ
ಹ್ನಿಯರಿಯ ಹೋಮದ ಹೊಸಕಥೆಯ ವಿ
ಸ್ತರಿಸಿ ಹೇಳಿದನಸುರರಿಪು ಭೀಮಾದಿಗಳು ನಲಿಯೆ ॥ ೬೮

ಧಾರುಣೀಶ್ವರರೈವರನು ಸುಕು
ಮಾರವರ್ಗವನಾಸುಭದ್ರಾ
ನಾರಿಯನು ಪಾಂಚಾಲಿಯನು ತತ್ಸಕಲಬಾಂಧವರ ।
ಸೂರಿಗಳ ಸಚಿವಾದಿನೃಪಪರಿ
ವಾರವನು ಸತ್ಕರಿಸಿ ಬಂದನು
ದ್ವಾರಕೆಗೆ ಹರುಷದಲಿ ಗದುಗಿನ ವೀರನಾರಯಣ ॥ ೬

ಮೂವತ್ತೇಳನೆಯ ಸಂಧಿ ಮುಗಿದುದು.

ಇತಿ ಶ್ರೀಮದಚಿಂತ್ಯಮಹಿಮ ಗದುಗುವೀರನಾರಾಯಣಚರಣಾರ
ವಿಂದ ಮಕರಂದ ಮಧುಪಾನ ಪುಷ್ಟವಚಷಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ
ಕರ್ಣಾಟಭಾರತ ಕಥಾಮಂಜರಿಯೊಳ್
ಆದಿಪರ್ವಂ ಮುಗಿದುದು.

# ಪರಿಶಿಷ್ಟ ೧

* ಸೂಚನೆ.

ಪುತ್ರಕಾಮೇಷ್ಟಿಯನು ಮಾಡಿದ
ಕ್ಷತ್ರಿಯೋತ್ತಮ ಕಮಲಮಿತ್ರನ
ಗೋತ್ರದ ಹರಿಶ್ಚಂದ್ರಭೂಭುಜನುರ್ವಿಮಧ್ಯದಲಿ ॥

ಹರಿಶ್ಚಂದ್ರನ ಕಥೆ.

ಕೇಳು ಜನಮೇಜಯ ಧರಿತ್ರೀ
ಪಾಲ ಪುತ್ರನ ನೀನು ಪಡೆವೊಡೆ
ಕೇಳುವುದು ಹರಿಶ್ಚಂದ್ರಭೂಪನ ಯಾಗನಿರ್ಣಯವ ।
ಹೇಳುವೆನು ದಿನಕರನ ವಂಶದ
ಲೋಲಮತಿ ಧರಣೀಶ ವರುಣಗೆ
ಬೇಳದೀನರಮೇಧಯಾಗದ ಕಥೆಯ ಕೌತುಕವ ॥ ೧

ಪರಮಪುರುಷೋತ್ತಮನ ದೆಸೆಯಿಂ
ಸರಸಿರುಹಸಂಭೂತನಾತನ
ಹೊರೆಯಲುದುಭವಿಸಿದನು ಕಶ್ಯಪ ಕಶ್ಯಪಾಂಗದಲಿ ।
ತರಣಿ ಜನಿಸಿದ ಜನಿಸಲಾತನ
ವರಕುಮಾರಕನಾಗಿ ಜನಿಸಿದ
ನಿರುತವೈವಸ್ವತನು ವೈವಸ್ವತನಿಗಿಕ್ಷ್ವಾಕು ॥ ೨

---

* ಗ. ಘ. ಜ. ಶ. ಗುರ್ತಿನ ಕರ್ಣಾಟಕ ಮಹಾಭಾರತ ಪುಸ್ತಕ ಪ್ರಕಾರ ಆದಿಪರ್ವದಲ್ಲಿ—೪ ನೇ ಸಂಧಿಗಳ ಮಧ್ಯದಲ್ಲಿ ಈ ಸಂಧಿಯು ದೊರೆಯುತ್ತದೆ.

ಈ ಕಥೆಯಲ್ಲಿ—ಹರಿಶ್ಚಂದ್ರರಾಯನ ರಾಜ್ಯಭಾರ ಮತ್ತು ಮಕ್ಕಳಿಲ್ಲದ ಚಿಂತೆ.

ಅರಸ ಕೇಳಿಕ್ಷ್ವಾಕುನೃಪಗಾ
ಪರಮಚಕ್ಷುಸ ಚಕ್ಷುವಿಂದವೆ
ಧರಣಿಪತಿಯು ತ್ರಿಶಂಕು ಶಂಕುಗೆ ವರಹರಿಶ್ಚಂದ್ರ ।
ವರಹರಿಶ್ಚಂದ್ರಮನು ರಾಜ್ಯವ
ಹಿರಿದು ಕಾಲಂ ಮಾಡಿ ಮಕ್ಕಳ
ಹರುಷಗಾಣದೆ ಚಿಂತೆವಿಡಿದಿರೆ ಹಲವುವರ್ಷಗಳು ॥ ೩

ಧರಣಿಪತಿ ಬಲ್ಲಿದನು ಸತ್ಯದ
ಪರಮಜೀವನನಾಗಿ ಭೂಮಿಯೊ
ಳರಿಭಯಂಕರನಾಗಿ ರಾಜ್ಯವನಾಳಿದನು ನೃಪತಿ ।
ಪರಿಹರಿಸಲಱುವತ್ತು ಸಾವಿರ
ವಿರಲು ಭೂಪತಿ ಹಿರಿದು ಚಿಂತಿಸಿ
ನಿರುತದಲಿ ನೆಱೆ ಪಶ್ಚಿಮಾಂಬುಧಿಯೆಡೆಗೆ ಬರುತಿರಲು ॥ ೪

ಆಗ ವರುಣನಿಂದ ಪುತ್ರವರವನ್ನು ಪಡೆದು ಆಶಿಶುವನ್ನು ಅಗ್ನಿಮುಖದಲ್ಲಿ ನಿನಗಾಗಿ ಕೊಡುವೆನೆಂದು ರಾಜನ ಪ್ರತಿಜ್ಞೆ.

ಬರಬರಲು ತದ್ದಿಕ್ಕಿನಧಿಪನ
ಹಿರಿದು ಭಜಿಸಿಯೆ ಬೇಡಿಕೊಂಡನು
ವರುಣದೇವರೆ ತನಗೆ ನೀನೊಬ್ಬ ಮಳಪುತ್ರನನು ।
ಕರುಣಿಸುವುದೈ ಪುತ್ರವರಮುಖ
ದರುಶನವ ನೆಱೆ ಮಾಡಿ ಯಾತನ
ಶಿರವ ಕಡಿದಾಹುತಿಯನೀವೆನು ನಿಮಗೆ ಹವನದಲಿ ॥ ೫

ಎನಲು ಮೆಚ್ಚಿಯೆ ವರುಣನಾತಂ
ಗನಿತುವರವನು ಕೊಟ್ಟು ಕಳುಹಲು
ಜನಪ ಮರಳಿಯೆ ಬಂದು ಹೊಕ್ಕನು ತನ್ನ ಪಟ್ಟಣವ ।

ವನಿತೆಯನು ಕರೆತರಿಸಿ ತಂನಯು
ಜನಕನಾತದ್ದಿನದ ಪಿಂಡವ
ಜನಪನೀಯಲು ಗರ್ಭವಾಯಿತು ಚಂದ್ರಮತಿಗಾಗ ॥ ೬

ಮೂಲದಲಿ ಮೂಱನೆಯ ಚರಣದ
ಕಾಲದಲಿ ಪತಿಯೊಡನೆ ಪವಡಿಸೆ
ಲೋಲಲೋಚನೆಗಾಯ್ತು ಹರುಷದ ಪೂರ್ಣಗರ್ಭವದು ।
ಜಾಳಿಸಲಿಕೀರ್‍ರೈದುವೊಸಕೆ
ಬಾಲನುಱೆ ನಕ್ಷತ್ರವೊಸದ
ಕಾಲದಲಿ ವೈಶಾಖಬಹುಳದ್ವಾದಶಾಶ್ವಿನಿಗೆ ॥ ೭

ಪುತ್ರ ಜನನವಾಗಲು ವರುಣದೇವರು ಪುತ್ರನನ್ನು ಕೇಳಿದಾಗ ನಾನಾ
ವಿಧೋಪಾಯಗಳಿಂದ ಕೊಡದೆ ಇರುವಿಕೆ.

ಜನಿಸಿದನು ತಾ ಲೋಹಿತಾಶ್ವನು
ಜನಿಸಲಲ್ಲಿಗೆ ವರುಣದೇವರು
ನನೆದು ಬಂದರು ಭೂಪನಿದ್ದೆಡೆಗಾಗಿ ಮಹಿಲದಲಿ ।
ವಿನಯದಿಂ ಕೈಮುಗಿದು ವರುಣಗೆ
ಮುನಿಮತವನುಸುರಿದನು ಪುತ್ರನ
ತನುವಯೊಗ್ಯವು ಶುಕ್ಲ ಶೋಣಿತದಿಂದ ಸೂತಕದ ॥ ೮

ದಿನ ಪವೆಯಲೀಸುತನನೀಯುವೆ
ನೆನಲು ಗಂಗಾರಮಣ ತಿರುಗಿದ
ನನಿತು ತಾನೀರಾಱುದಿವಸಕೆ ಮಕರವಾಹನನು ।
ಅನುವಿನಿಂ ನಡೆತಂದು ಭೂಪನ
ತನುಜನನು ಬೇಡಿದನು ಬೇಡಲು
ಜನಪನುಸುರಿದನೀತ ನೆಱೆ ಸಂಸ್ಕಾರಿ ಯಲ್ಲೆಂದ ॥ ೯

ಕೃತಗುಪನಯಕರ್ಮವಾದುದ
ಪ್ರೀತಿಯಲಿ ವಿಸ್ತರಿಸಿ ಸುತನನು

ವೀತಿಹೋತ್ರನ ಮುಖದಲೀವೆನು ನಿಮಗೆ ಸತ್ಕರಿಸಿ ।
ಆತಗುಪನಯುವಾಯ್ತು ಕ್ಷತ್ರಿಯ
ರೀತಿಯಲ್ಲೀರಾಱುವತ್ಸರ
ಕಾತ ಬಂದನು ಜಲಧಿಯಧಿಪತಿ ನೃಪನ ಹೊರೆಗಾಗಿ ॥ ೧೦

ಬರಲಿಕರಸನು ನುಡಿದನಾತಗೆ
ತರಳನಿವನತಿಮೂರ್ಖನಾಗಿಹ
ನಿರುತದಲಿ ಮಂಗಳವನೋದಿಸಿ ಯೋಗ್ಯನೆಂದೆನಿಸಿ ।
ವರಕುಮಾರನನೀವೆನೆನಲಿಕೆ
ಮರಳಿದನು ಮಕರೇಶನತ್ತಲು
ವರುಷನಾಲ್ಕಕೆ ಲೋಹಿತಾಶ್ವನು ವೇದವೆಲ್ಲವನು ॥ ೧೧

ಓದಿ ನಡುಗಿದನಿನ್ನು ವರುಣನ
ಬಾಧೆಗರಸನು ನೆನಹ ಕಾಣನು
ವೇದಿಸುವೆನೆಂದಂಜಿ ತಂದೆಗೆ ಮಗನು ಹೇಱದಲೆ ।
ಹೋದನಡವಿಗೆ ಲೋಹಿತಾಶ್ವನು
ವೇಧೆಯಲಿ ಜಡರಾಶಿಗಧಿಪನು
ಮೇದಿನೀಶ್ವರನತ್ತ ಬಂದನು ಮಗನ ಬೇಡಲಿಕೆ ॥ ೧೨

ಬರಲಿಕೆ ಹರಿಶ್ಚಂದ್ರಭೂಪನು
ಹಿರಿದು ಸತ್ಕರಿಸಿದನು ವರುಣನ
ಪರಮಹರುಷದೊಳಿರಲು ಬೇಡಿದನಾನೃಪೋತ್ತಮನ ।
ಅರಸ ಕೊಡು ನಂಮಾಗತವನೀ
ಮರಳಿ ಮಾತಂ ನುಡಿಯದೀಗಳು
ಹಿರಿದು ಹುಸಿಯದಿರೆನಲು ಬಿಂನಹಮಾಡಿದನು ಮಗುಳೆ[1] ॥ ೧೩

---

[1] ನಡುಗಿ, ಗ. ಘ.

ಅತಿಥಿಯ ಅಸಂತೋಷದಿಂದ ರಾಜನಿಗೆ ಮಹೋದರರೋಗಪ್ರಾಪ್ತಿ.

ದೇವ ನಿಮ್ಮಯ ಭಯದಿ ಮಗನಿ
ನ್ನಾವತಾವಿಗೆ ಹೋದನೆಂಬುದ
ತಾವಱಿಯೆವೆಂದೆನಲಿಕತ್ತಲು ಲೋಹಿತಾಶ್ವಂಗೆ ।
ಆವಿಚಿತ್ರವನೇನ ಹೇೞುವೆ
ದೇವರಾಜನು ತಡವ ಮಾಡಿದ
ಭೂವರಜಲೋದರವನಾತಿಥ್ಯಯುಱಿದು ಬರುತಿರಲು ॥ ೧೪

* ಇರಲಿಕಿತ್ತಲು ವರಮಹೀಪತಿ
ವರುಣಗೆಂದನು ತನ್ನ ಪುಣ್ಯದ
ನೆರವಿ ಯಾಪರಿ ಯಾಯ್ತುದೆನಲಿಕೆ ಜಲಧಿಪತಿ ನುಡಿದ ।
ಮರುಳೆ ತಾನಿನ್ನರಸ ಕೇಳ್ಳ
ತಿರುಗಿ ನಿನ್ನಯ ಪುತ್ರ ಹೋದರೆ
ಧರಣಿಯುಮರನ ಪುತ್ರನೊಬ್ಬನ ನೀ ಕ್ರಯುಂಗೊಂಡು ॥ ೧೫.

ಆಗ ವರುಣನ ಇಷ್ಟದಂತೆ ವಿಪ್ರಪುತ್ರನನ್ನು ಕ್ರಯುಕ್ಕೆ ತೆಗೆದು ಕೊಳ್ಳಲು ಹೋಗುವಿಕೆ.

ಏನಸಿತ್ತಾದೊಡೆಯು ತಂದಾ
ಸೂನುವನು ತನಗೀವುದೆನಲಿಕೆ
ಮಾನನಿಧಿ ತನುಧನವನೊಪ್ಪಿಸಿ ತಹೆನು ಭೂಸುರನ ।
ಸೂನುವನ್ನೆಂದವನೆ ವಿಪ್ರ
ಸ್ಥಾನಕ್ಕೈದಿದನಖಿಳ ತೀರ್ಥ
ಸ್ನಾನವನು ನೆಱೆ ಮಾಡುತಲ್ಲಿಯೆ ವರತಪೋವನದಿ ॥ ೧೬

ಅರಸನನು ಕಂಡೊಬ್ಬ ನುಡಿದನು
ಧರಣಿಯುಮರನು ನಿನಗೆ ಹಿರಿದಹ
ಪರಿಯ ವಿಧಿಯನ್ನೇಕೆ ಮಾಡುವೆ ಯೆನಲಿಕುಸುರಿದನು ।

*ಈ ಕಥೆಯು ಭಾಗವತಾದಿಗಳಲ್ಲಿರುವದಕ್ಕಿಂತ ಬೇರೇ ರೀತಿಯಾಗಿದೆ.

ವರುಣದೇವರಿಗೊಬ್ಬ ಪುತ್ರನ
ವರಿಸಿ ಬೇಡಿದೆ ಪುತ್ರವರಮುಖ
ದರುಶನವ ಮಾಡುವೆನೆನುತಲಾ ಮಗನು ಮೋಚಿಯನು ‖ ೧೭

ತೋಚಿ ಮೆಱುದಿನವಗಲಿ ಹೋದನು
ನೀಱನತಿವೇದಾಂತವೇದ್ಯನ
ಮಾಱುಗೊಂಡೆನು ಸಕಲವೇದಪುರಾಣಶಾಸ್ತ್ರದಲಿ ।
ತೋಚಿ ನುಡಿದೆನು ಹರಿಯ ಗುಣಗಳ
ನೂಱುಪರಿಯಲಿ ಮಗನ ಹೊಂದಲಿ
ಕಾಚಿನೆಂದು ತ್ರಿಶಂಕುನಂದನನಾಜಿಗರ್ತನಿಗೆ ‖ ೧೮

ಪುತ್ರಮುಖದರುಶನವು ಜನನದ
ಮಾತ್ರದಲಿ ತಾನಲ್ಲಿ ನೀತಿಯೆ
ಪುತ್ರ ಹದಿನಾಱಬ್ದವಾಗಲು ಮಗನ ಶುಭಗುಣನ ।
ಮಿತ್ರಗೋತ್ರಸುಪುತ್ರನೆಂದಾ
ಪುತ್ರನನು ತಾ ನೋೞ್ಪುದಾಗ ಪ
ವಿತ್ರಗುಣಯುತ ತಂದೆಯಾದಗೆ ಶಿಷ್ಟಮತವೆಂದು ‖ ೧೯

ನೋಡಿದೆನು ಸುತಮುಖವನಾಗಲೆ
ನೋಡಿದೆನು ತಾನೊಮ್ಮೆ ಮೆಱುದಿನ
ನೀಡುವೆನು ನದಿಪತಿಗೆ ಯೆನಲಿಕೆ ಮಗನು ಭೀತಿಯಲಿ ।
ಓಡಿ ಹೋದನು ತನಗೆ ಮಾತಿನ
ಪಾಡು ಬಿದ್ದುದು ವಿತಥವಾಣಿಯು
ನಾಡಲಾಱೆನು ನಿಮಗೆ ಮೂವರು ಸುತರು ಯಿಹರೆಂದು ‖ ೨೦

ಅಜಿಗರ್ತರ ಬಳಿ ಹೋಗಿ ಕೇಳಿದ ಬೆಲೆಯನ್ನು ಕೊಡುವೆನು
ಮಗನನ್ನು ಕೊಡಿ ಎಂದು ಕೇಳುವಿಕೆ.

ಬಂದೆನಿಲ್ಲಿಗೆ ನಿಮ್ಮ ಮಕ್ಕಳ
ಗೆಂದ ಬೆಲೆಯನು ಕೊಡುವೆನೆನಲಿಕೆ

ತಂದೆ ಮಕ್ಕಳ ಮಾಱತೊಡಗಿತು ತ್ರೇತೆಯುಪರದಲಿ |
ಬಂದುದೈ ನೆಱೆ ಪೊಂದುಪಾದದ
ನಿಂದಿತದ ಕಡುಪಾಪವಾಗಳು
ಸಂಧಿಸಲ್ಕಜಿಗರ್ತನಂದನು ತನ್ನ ಸತಿಯೊಡನೆ ॥ ೨೧

ಮೂವರೊಳಗೊಬ್ಬನನು ಕೊಡುವೊಡೆ
ಯಾವನನು ಕೊಡಬಹುದು ಯೆಂದೆನ
ಲಾವಧುವು ನಿರ್ಣಯವ ಮಾಡಿದಳರಸನಿದಿರಿನಲಿ |
ಈವೊಡೆನ್ನಯ ಕಡೆಯ ಕಂದನ
ನೀವುದಿಲ್ಲನೆ ವಿಪ್ರ ತನ್ನಯ
ಜೀವಸಖನಹ ಜ್ಯೇಷ್ಠಪುತ್ರನ ತಾನು ಕೊಡೆನೆಂದ ॥ ೨೨

ಆಗ ಮಧ್ಯಮ ಪುತ್ರನನ್ನು ವಿಕ್ರಯಿಸುವಿಕೆ.

ಈವೊಡೆಯು ಮಧ್ಯಮನನೀಗಳು
ಭೂವಧೂವಲ್ಲಭನ ಯಾಗ
ಕ್ಕೀವೆವೆಂದಾಮಿಥುನ ನೈರ್ಘೃಣ್ಯದಲಿ ಮಧ್ಯಮನ |
ತಾವು ಬೆಲೆ ಮಾಡಿದರು ತತ್ಕ್ಷಣ
ಸಾವಿರದ ಮುನ್ನೂಱುಸಾಂಗದ
ದೇವಯೋಗ್ಯದ ಕಪಿಲೆಯಾವನು ದಕ್ಷಿಣೆಯುಸಹಿತ ॥ ೨೩

ಮೂಱು ಗೋದಾನಕ್ಕೆ ದಕ್ಷಿಣೆ
ಮೂಱಹುದು ಕೇಳೆಂದು ರುಷಿಮತ
ಮೀಱದೀವುದು ನೀನಲಂಕರಿಸೀಗ ಬೇಗದಲಿ |
ಮಾಱಿದೆನು ತನ್ನ ಮಳಪುತ್ರಗೆ
ಭೂರಮಣ ಕೊಡು ಸಾವಿರದ ಏ
ಳ್ನೂಱ ಮೂವತ್ತಾಱನೆನೆ ಪೊಲಿದಿತ್ತನಾದ್ವಿಜಗೆ ॥ ೨೪

ಆತನನ್ನು ತಂದು ಯೂಪಸ್ತಂಭಕ್ಕೆ ಕಟ್ಟುವಿಕೆ.

ಕೊಂಡು ಬಂದನಯೋಧ್ಯಪುರಕೆ ಪ್ರ
ಚಂಡಸೂನುವನಾಗ ಭೂಪತಿ
ಕೊಂಡದಿದಿರಿನ ಯೂಪಕಂಭಕೆ ಕಟ್ಟಿದನು ಭೂಸುರನ ।
ಚಂಡಿಕೆಯನೊಂದವಳಪಾಶದಿ
ದಂಡಿಸಿದ ಕೊರಳಿಂಗೆ ಪಾಶದಿ
ಮಂಡಿಸಿಯೆ ನಾಭಿಯನು ಬಿಗಿದನು ಮೂಱುಪಾಶದಲಿ ॥ ೨೫

ಬಿಗಿದ ಬೞಿಕಂ ಸಕಲ ಯಾಜ್ಞಿಕ
ನಿಗಮದಧಿಕರ ಕರೆಸಿ ಹೋಮವ
ಜಗದ ವಲ್ಲಭನಾಹರಿಶ್ಚಂದ್ರಮನು ಹುಱಿಕೊಳಿಸಿ ।
ಮಿಗಿಲೆನಿಪ ವರಸಪ್ತಋಷಿಗಳ
ಸೊಗಿಸಿ ಕರೆತರಿಸಿದನು ಚತುರ್ದಶ
ಜಗದ ದೇವರ ಸಕಲರುಷಿಯುರನುರ್ವಿಯುಮರರನು ॥ ೨೬

ನೆರಹಿದನು ನಾನಾದಿಗಂತದ
ಧರಣಿಪರ ಹರಿಶ್ಚಂದ್ರಭೂಪತಿ
ನಿರವಿಸಿದ ತಂನ್ನ ಮಲಗುರುವಿಗೆ ಯಾಗದುಪಕ್ರಮವ ।
ನಿರವಿಸಲು ರವಿಕುಲದುಪಾಧ್ಯರು
ವರಿಸಿದರು ದ್ವಿಜನಿಕರಕಗ್ಗದ
ಪರಮನರಮೇಧದಲಿ ಮಾಱಿಸಲಾಗ ಕೌಶಿಕನ ॥ ೨೭

ವರಸದಶ್ಯತ್ವದಲಿ ರುಷಿಯುರು
ನೆರೆದರುದ್ಗಾತೃತ್ವಹೋತ್ರದಿ
ನಿರುತ ಪರುತವಿಸಿದನು ವಿಶ್ವಾಮಿತ್ರನೊದಲಾಗಿ ।
ಇರಿಸಿ ದಿಗುಪಾಲಕರನಾಗಳು
ಕರೆಸಿ ಮಂದಿಯು ನವಗ್ರಹಂಗಳ
ಸ್ಮರಿಸಿ ತ್ರೇತಾಗ್ನಿಯನು ಧ್ಯಾನಿಸಿದಾವಶಿಷ್ಠಮುನಿ ॥ ೨೮

ಹುಱಿಕೊಳಿಸಿ ನರಮೇಧಕಾರ್ಯ್ಯಕೆ
ಪಿರಿದೆನಿಸಿ ವೇದೋಕ್ತಮಂತ್ರದಿ
ನೆರಹಿ ತಾ ಗೀರ್ವಾಣನಾಯಕಮುಖ್ಯನಾಕಜರು ।
ವರಹರಿಶ್ಚಂದ್ರಮನ ಯಾಗದ
ಪರಿವಿಡಿಯು ಕಂಡೆಲ್ಲ ಹರುಷವ
ಧರಿಸಿ ನಿಲಲಿಕೆ ಯಾಗದೀಕ್ಷಿತನಾದನಾಭೂಪ ॥ ೨೯

ಪಠಿಸಿ ಚಾತುರ್ವೇದಮಂತ್ರವ
ನಿರುತಪಶುವಧೆಗಾಗ ವಿಬುಧರು
ಧರಣಿಸುರನಜಿಗರ್ತನಾತ್ಮಜಗಾಗಿ ಬರುತಿರಲು ।
ಬರಲಿಕಾತನ ಕಟ್ಟಿ ಬಿಟ್ಟಿದು
ನಿರುತ ಯೂಪಸ್ತಂಭದೆಡೆಯಲಿ
ಹರುಷಿಸಿಯೆ ಭೂಸುರನು ನುಡಿದನು ಸಕಲವಿಬುಧರಿಗೆ ॥ ೩೦

ಆಗ ಅಜಿಗರ್ತನ ಮಗನು ನನ್ನನ್ನು ವಧಿಸಿದರೆ ದೋಷವು ಬರುವು
ದೆಂದು ಹೇಳುವಿಕೆ.

ಕೊಂದು ಮಿಗೆ ನರಮೇಧಯಾಗವ
ನಿಂದುಮಾಡಲು ನಿಮಗೆ ಹತ್ಯವು
ಬಂದಪುದು ಮಧುಕೈಟಭಾಂತಕನಾಣೆಯೆಂದೆನುತ ।
ಅಂದು ಶೌಚಾಚಮನ ಮಾಡಿಯೆ
ನಿಂದಿದನು ವೇದಾಂಗವೇದ್ಯನ
ವಂದಿಸುತ ಹೊಗಱಿದನು ನಾನಾಶ್ರುತಿಯ ರುಕ್ಕಿನಲಿ ॥ ೩೧

ದೇವದೇವನ ನಿಖಿಳಜೀವರ
ತಾವಱಿದು ಕೈವಲ್ಯವಾಸವ
ನೀವನನು ನೆಱೆ ಸ್ತುತಿಸಿ ತನ್ನಯ ಮತಿಗೆ ಗೋಚರಿಸಿ ।
ದೇವನನು ನೆನೆನೆನೆದು ಕೊಂಡಾಡಲ

ಲ್ಲಾ ವಿರಿಂಚಾದಿಗಳು ತುತಿಸುತ
ಭಾವದಲಿ ಭಜಿಸಿದನು ವಿಬುಧರನನಲವೊದಲಾಗಿ ॥ ೩೦

ಅವರವರನಂದಮಳಸೂಕ್ತದ
ವಿವರದಲಿ ಹೊಗಟಲಿಕೆ ನೆರೆದಿಹ
ವಿವಿಧಗೀರ್ವಾಣೋತ್ತಮಾದಿಗಳಖಿಳಮುನಿವರರು ।
ಅವನಿಪನ ಯಾಗದಲಿ ಬೇಳುವ
ಹವಿಸು ಬಂದುದು ಪಶುವಿನಂಗದ
ಹವನದಲಿ ತಮಗಿಂದು ಹೋಯಿತು ಹಸಿವು ನಾಕಜರ ॥ ೩೩

ಆಗ ಸಮಸ್ತದೇವತೆಗಳು ನಾವು ತೃಪ್ತರಾದೆವು ಅವನನ್ನು
ಬಿಟ್ಟುಬಿಡೆಂದು ಹೇಳುವಿಕೆ.

ಅರಸ ಕೇಳ್ಳೈ ನಿನ್ನ ಯಾಗದ
ನಿರುತ ನರಮೇಧದಲಿ ಯಾದ್ವಿಜ
ಪರಮಹರುಷವ ತಂದ ಯಜ್ಞೇಶ್ವರನ ಸತ್ಕರಿಸಿ ॥
ಹರುಷಿಸಿದನಂದಾಪ್ರಚೇತನು
ಧರಣಿಪನ ಕೊಂಡಾಡಿ ನಿನ್ನಯ
ವರಕುಮಾರನ ಯಾಗ ಬಂದುದು ಸಕಲಸುರಗಣಕೆ ॥ ೩೪

ಆಗ ಸರ್ವರೂ ಈತನನ್ನು ಸ್ತುತಿಸುವಿಕೆ.

ಎನಲಿಕಜಿಗರ್ತ್ತಮುನಿತನುಜನ
ವಿನಯದಲಿ ಪ್ರೈದಡವಿ ಭೂಪತಿ
ಯನಿಮಿಷಾದ್ಯರು ಮುಖ್ಯರುಷಿಗಣವೈದೆ ಕೊಂಡಾಡಿ ।
ತನತನಗೆ ಹೊಗಟಲಿಕೆ ಕೌಶಿಕ
ಮುನಿಪ ಹರುಷಿಸಿ ನುಡಿದನಾಗಳು
ತನುಜ ಜನಿಸುವೊಡಿಂತು ಜನಿಸುಗುಮೀಧರಿತ್ರಿಯಲಿ ॥ ೩೫

ತಾಯಿತಂದೆಗಳಾನುಪಥ್ಯವ
ನೋಯಿಸದೆ ಯಜಮಾನಯಜ್ಞವ

ನಾಯುತದಿ ಪೂರೈಸಿ ಕೊಟ್ಟನು ತನ್ನ ನೆಱೆ ತಿಳುಹಿ ।
ಸಾಯುಲೊಲ್ಲದೆ ಸಕಲನಾಕಜ
ದಾಯುವನು ನೆಱೆ ತುಷ್ಟಿ ಪಡಿಸುವ
ನೀಯುಪೂರ್ವದ ಪುತ್ರ ದೊರಕಿದೊಡವ ಕೃತಾರ್ಥನಲ್ಲೆ ॥ ೩೬

ಬಂದುದಾಗಳು ಋಷಿಕದಂಬವು
ಚಂದದಲಿ ಕೊಂಡಾಡೆ ಭೂಸುರ
ನಂದನನ ಕಳುಹಿದಪನಾತನ ಪಿತನ ಹೊರೆಗಾಗಿ ॥
ಕಂದ ನಡೆ ನಡೆ ಯೆನಲಿಕಾತನು
ಯೆಂದನಗ್ಗದದೇವೆರುಷಿಯರಿ
ಗಂದು ವಿನಯುದಲೆಱಗಿ ಬಿನ್ನಹಮಾಡಿದನು ಮುದದಿ ॥ ೩೭

ಆಗ ಋಷಿಪುತ್ರನು ಮಧ್ಯಮನಾಗಿ ನಾನು ಬದುಕಲಾರೆನನ್ನಲು ನನಗೆ ಮಗನಾಗಿರೆಂದು ವಿಶ್ವಾಮಿತ್ರನು ಹೇಳುವಿಕೆ.

ಮಾಱಿದರು ನೆಱೆ ತಾಯಿತಂದೆಗ
ಳೇಱುವಡೆಯುದೆ ತನ್ನಯುಜ್ಞಕೆ
ಮಾಱಿದರು ಯೆನಗೇಕೆ ಹೋಗಲಿ ಯಿಾಜಗತ್ತಿನಲಿ ।
ಸಾಱಿದೆನು ನಿಮಗಿನ್ನು ಪುಟ್ಟುವೆ
ನೀಱರಿಗೆ ನಡುಪುತ್ರನಾಗಿಯೆ
ತೋಱಿ ಜನಿಸಲ್ಕಲ್ಲ ಜನಿಸಲಿಕೆನ್ನ ತೆಱನಹುದು ॥ ೩೮

ಹಿರಿಯುನಲಿ ಜನಕಂಗೆ ಮೋಹವು
ಕಿಱಿಯುನಲಿ ಕಡುಮೋಹ ಜನನಿಗೆ
ನಿರುತ ಮರುಚಲು ಮಗನು ದೇಸಿಗನಾಗಿ ಚರಿಸುವನು ।
ಪರಿಹರಿಪೆನಾತಾವೆನೀಗಳು
ಹಿರಿದು ಕಿಱಿದಾಗಿಹೆನು ಅಲ್ಲದೆ
ನಿರುತ ಮಧ್ಯಮನಾಗಿ ಬದುಕೆನು ಯೆನಲು ಕೌಶಿಕನು ॥ ೩೯

ಮೆಚ್ಚಿ ತನ್ನಯ ಪುತ್ರನಾಗೆನೆ
ಚುಚ್ಚಿಲವ ತಾನಹೆನು ಮಾತೆಗೆ
ನಚ್ಚಿನಿಂ ಕಡೆ ಹುಟ್ಟಿಹೆನು ಅಲ್ಲದೆ ಮತ್ತೆ ಮಧ್ಯಮದ ।
ಕೊಚ್ಚಿ ಬಿಸುಡುವ ಠಾವಿಗೆಱಗೆನು
ಕಿಚ್ಚಿನಲಿ ಸುಡಬೇಕು ಮಧ್ಯನ
ನಚ್ಚಲಾಗದದೆನಲಿಕೆ ಮುನಿಪತಿ ಯಧಿಕಹರುಷದಲಿ ॥ ೪೦

ವಿಶ್ವಾಮಿತ್ರನು ತನ್ನ ಮಕ್ಕಳನ್ನು ಕರೆದು ಈತನನ್ನು ಜ್ಯೇಷ್ಠಭ್ರಾತನನ್ನಾಗಿ ಭಾವಿಸಿರಿ ಎಂದು ಹೇಳಲು ಅವರ ಅನನುಮತಿ.

ತನ್ನ ಸುತರನು ಕರೆದು ಕೇಳಿದ
ಚೆಣ್ಣ ಜ್ಯೇಷ್ಟಭ್ರಾತನಾಗಿಯೆ
ಮನ್ನಿಸುವಿರ್ಕೆ ಕಿಱಿಯರಾಗಿಯೆ ನಿಚ್ಚ ನೀವೆನಲು ।
ಮನ್ನಿಸೆವು ಯಿಾದ್ವಿಜನ ಸರ್ವಥ
ಮನ್ನಿಸೆವು ನಿವಿಶ್ವಾಪ್ರಳಾಪವ
ಮನ್ನಿಸೆವು ಜನಜನಿತವೆನಲಿಕೆ ಮುನಿಪ ಕೋಪಿಸಿದ ॥ ೪೧

ಕೋಪಿಸಿಯೆ ತತ್ಸುತರ ನೆಱೆ
ಶಾಪಿಸಲು ನೆಱೆ ನೂಱುಜನಗಳು
ಭೂಪ ಕೇಳ್ಳ ಡೊಂಬರಾಗಿಯೆ ಚರಿಸಿ ಜಗದೊಳಗೆ ।
ವ್ಯಾಪಿಸುವುದಗಲದಲಿ ನೀವು ಬಹು
ರೂಪಿನಲಿ ಕಡು ವರ್ಣಸಂಕರದ
ಕೋಪದಲಿ ವರ್ತಿಸುವುದೆಂದಾಸುತನ ಪತಿಕರಿಸಿ ॥ ೪೨

ನೀತಿಯಲಿ ಮುನಿ ಯಿರಲು ಭೂಪತಿ
ಯಾತತುಕ್ಷಣ ಸಕಲವಿಪ್ರರ
ನೋಡು ಕಳುಹಿದ ಸಕಲದಕ್ಷಿಣೆಯಿಂದ ನೆರೆದವರ ।

ವ್ರಾತವನು ಮನ್ನಿಸುತ ವರುಣನ
ಭೂತಳೇಶನು ಕಳುಹತಿರಲಿ
ಕ್ಕಾತ ಬಂದನು ಲೋಹಿತಾಶ್ವನು ರಾಜಮಂದಿರಕೆ ॥ ೪೩

ಆಗ ವಿಶ್ವಾಮಿತ್ರರ ಶಾಪ.

ಮೋಸವಾಯಿತಕ್ಕಾತನಂಗದ
ದೋಷ ಹರಿಸಲು ಬಳಿಕ ರಾಜ್ಯವ
ಹೇಶ ಮಾಡಿದನಖಿಳಭಾರತವಂಶಮಧ್ಯದಲಿ ।
ನಾಶಗಂಡರು ಸಕಲಯಾಚಕ
ಭೂಸುರರು ತಮ್ಮಾನುಪಥ್ಯವ
ಹೇಶ ಗದುಗಿನ ವೀರನಾರಾಯಣನ ಕರುಣದಲಿ ॥ ೪೪

ಸಂಧಿ ಸಂಪೂರ್ಣ.

# ಪರಿಶಿಷ್ಟ ೨.

* ಸೂಚನೆ.

ದಂಡಕನ ಕೈಕೊಂಡು ಸಲೆ ಭೂ
ಮಂಡಲವ ಸುಡೆ ದೇವಯಾನಿಯು
ಅಂಡಲೆದು ಮಗುಳಾ [1] ಯಯಾತಿಯೊಳೊಕ್ಕತನವಿರಲು ॥

* ಗ. ಘ. ಜ ಠ ಗುರ್ತಿನ ಕರ್ಣಾಟಕ ಮಹಾಭಾರತ ಪುಸ್ತಕ ಪ್ರಕಾರ ಆದಿಪರ್ವದ 13-14ನೇ ಸಂಧಿಗಳ ಮಧ್ಯದಲ್ಲಿ ಈ ಸಂಧಿಗಳು ದೊರೆಯುತ್ತವೆ.

1 ಹೆಂಡತಿಯು ಮರುಳಾ, ಗ, ಜ.

### ವೃಷಪರ್ವನ ವೃತ್ತಾಂತ

ಕೇಳು ಜನಮೇಜಯ ಧರಿತ್ರೀ
ಪಾಲ ಕ್ಷೀರಾಂಬುಧಿಯೊಳಗ್ಗದ
ಲೋಲರೂಪ ಮುಕುಂದ ಮುರಹರಗಾದನಾಳಾಗಿ ।
ಹೇಳಲೇನ್ನೈ ಗರುಡದೇವರ
ಆಳುತನವಾಚಂದ್ರತಾರೆಗ
ಳೋಳಿಯಿಂ ಮಿಗಿಲಾಗೆ ಸೇವಿಪನಂತನಾತನನು ॥ ೧

ಭೀತಿರಹಿತ ಜಿತೇಂದ್ರ ಕರ್ಮ
ವ್ರಾತದಲಿ ನೆಱೆ ಕಾಲನೇಮಿಯು
ಆತಗತಿಬಳವಿಪ್ರಚಿತ್ತಿಯು ಅಂಧಕಾಸುರನು ।
ನೀತಿಗೆಡೆ ಬಳಿಕವರ ರಾಜ್ಯದ
ಭೂತಳದ ಸಪ್ತಾಂಗವೆಲ್ಲವ
ನಾತನಾಳಿದ ಬಹಳದಿನ ವೃಷಪರ್ವನೆಂಬಸುರ ॥ ೨

### ಶುಕ್ರಾಚಾರ್ಯರ ಮಗಳಿಗೆ ದಂಡಕರಾಯನ ದರ್ಶನ.

ಆತಗಗ್ಗದ ವರಪುರೋಹಿತ
ನೀತಿವಿದ ಕವಿ ಯಿದ್ದನಾತಗೆ
ಪ್ರೀತಿಯಲಿ ಮಗಳೊಬ್ಬಳಿದ್ದಳು ಶುಭಗುಣಾನ್ವಿತೆಯು ।
ಓತು ತಂದೆಯ ಭಾವಭಕ್ತಿಯ
ನಾತುರದಿ ನೆಱೆ ಮಾಡುತಿರ್ದಳು
ಸೋತು ದಂಡಕನೆಂಬ ನೃಪತಿಯು ತರಳೆ ಕಂಡೊಮ್ಮೆ ॥ ೩

### ದೇವಯಾನಿಯು ದಂಡಕನನ್ನು ಗಂಡನಾಗೆಂದು ಪ್ರಾರ್ಥಿಸುವಿಕೆ.

ಮೈಯ್ಯ ಯೌವ್ವನಭರದಿ ಕಾಮನ
ಕೈಯ್ಯ ಬಾಧಿಸೆ ಸಹಿಸಲಾಱದೆ [1]
ಅಯ್ಯಗವ್ವೆಗೆ ಹೇಳದಾದಂಡಕನ್ನೃಪೋತ್ತಮನ ।

---

1 ಕೊಳಲಿಕಾ, ಗ. ಘ.

ಒಯ್ಯನಿದ್ದೆಯುಱಿತು ಮೃಗಗಳ
ಹುಯ್ಯಲಲಿ ಬೆಳ್ಕುರವಬ್ಬುಗೆ
ಗೈದು ಯಿರಲಾದೇವಮಾಸಿಯು ಬಂದು ವಿನಯದಲಿ ॥ ೪

ಗಂಡನಾಗೆನೆ ನಿನ್ನ ತಾ ಕೈ
ಕೊಂಡೆನಾದೊಡೆ ನಿಮ್ಮ ತಂದೆ ಪ್ರ
ಚಂಡಬಲ ಶಾಪಿಸುವ ತನ್ನನು ನಿನ್ನ ಸಂಗವನು ।
ಕೊಂಡು ಬಳಸಲದೇನು ಶಾಪವ
ಕಂಡು ಕೊಡಲಿಕ್ಕಬಲೆಯಾಗಳ
ಕೊಂಡು ಬಳಸಲಧಿಕಗುಣನುದ್ವಾಹಿಕಕೆ ತನಗೆಂದು ॥ ೫

ತನಗೆ ಸಂದುವು ವರುಷ ಸಹಜದಿ
ವಿನುತ ಹದಿನಾಱಾಗಲಿಂದಿಗೆ
ಜನಕ ಪರಿಣಯವೆಸಗಲೊಲ್ಲನು ತನಗೆ ಮಗುಳೊಬ್ಬ ।
ತನುಜೆ ತನುಜಗಳಿಲ್ಲ ವೆಂದಾ
ಜನನಿಯಾಡುವ ಮಾತಗೇಳಿಯೆ
ಜನಕ ಮದುವೆಯ ಮಾಡ ಮನೆಯಲಿ ಮಕ್ಕಳಿಲ್ಲೆಂದು ॥ ೬

ಆವಮಂಗಳಗೇಹ ಸಂಪದ
ವಾವ ಪುಣ್ಯಸ್ತ್ರೀಯ ಸ್ಮರಣೆ
ಆವುವುತ್ತಮಭಕ್ತಿಯಿಂದ ಪುರಾಣಪಠನಗಳ ।
ದೇವತತಿಯನ್ನಿಳಯಲಾವನು
ನೋವದಿಪ್ಪನು ಮಕ್ಕಳಿಲ್ಲದೆ
ದೇವನೇತಕೆ ಯೆನಲು ಶಂಕರ ತನ್ನ ಸದನದಲಿ ॥ ೭

ಅರಸಿಗಾಗದ ಬಸುಱನಱಿದಾ
ಹರನು ಮಾಡನೆ ಮಗನು ಕರಿಮುಖ
ಪರಮಸುತನೆಂದಾಗ ಗೌರಿಯು ವರನ ಸಂಗಮವ ।

ಆಗ ಗುರುಸುತನಾದ ಕಚನು ಮೃತಸಂಜೀವಿನೀವಿದ್ಯೆಯನ್ನು ಕಲಿಯಲು ಬರುವಿಕೆ.

ವಿನುತಸಂಜೀವಿನಿಯು ವಿದ್ಯದ
ಘನತೆಯಲಿ ಜೀವಿಸುವ್ರದದಖಿಂ
ದಿನವು ಹಲವಾಗಲಿಕೆ ಸುರಗುರುತನುಜ ಭೃಗುಸುತೆಯ ॥ ೧೧

ಮನೆಗೆ ಬಂದರೆ ಹರುಷಪುಳಕದಿ
ವನಿತೆಯಲಿ ಕಚ ಕಲಿತ ಸಂಜೀ
ವಿನಿಯ ವಿದ್ಯೆಯ ಕಲಿಯಲಾಯಕೆ ಕಚನಿಗುಸರಿದಳು ।

ಬಳಿಕ ದೇವಯಾನಿಯು ಕಚನನ್ನು ವರಿಸಲು ನೀನೆನಗೆ ಗುರುವಾದುದರಿಂದ ಒಲ್ಲೆನೆಂದು ಹೇಳುವಿಕೆ.

ವನಿತೆ ತಾ ನಿನಗಪ್ಪೆನೆನಲಿಕೆ
ಅನಿಮಿಷರ ಗುರುಸುತನು ನುಡಿದನು
ತನಗೆ ನೀ ಗುರುವಾದೆ ವೊಲ್ಲೆನು ನಿನ್ನ ಕೂಡೆನಗೆ ॥ ೧೨

ಒಕ್ಕತನವಿರಬಾರದೆನುತಲಿ
ಒಕ್ಕನೊಡಲನು ಬಟಿಕ ಸತಿಯೊಳು
ನಕ್ಕು ಮಾನಸವೋಹದಿಂದಿರಲೊಂದುದಿವಸದಲಿ ।
ರಕ್ಕಸರ ಗುರು ಬಂದು ಶಿಷ್ಯನ
ನೆಕ್ಕಸರದಲಿ ಪಡೆದು ಹೋಮವ
ನಿಕ್ಕಲಿಕೆ ತರೆ ಸಮಿಧೆಗೆಂದಾಕಚನ ಕಳುಹಲಿಕೆ ॥ ೧೩

ಕಚನನ್ನು ಸಂಹರಿಸುವ ಪ್ರಯತ್ನ.

ಅಡವಿಗೈದಲು ದುಷ್ಟದೈತ್ಯರ
ಗಡಣ ನೆರೆದಾಕಚನ ಕೊಂದರು
ಬಿಡದೆ ದಹಿಸಿಯೆ ಆತನಂಗವ ಭಸಿತಮಾಡಿದರು ।

ಕಡುವಿರೋಧವ ಹಿಡಿದು ದೈತ್ಯರ
ಪಡೆಯುಪಾಧ್ಯರ ಪುತ್ರನೀತನು
ಮಡಿದವಳ ಶಾನೆತ್ತುವತಿಶಯವಿದ್ಯಗಲಿತಿಹನು ॥ ೧೪

ಎಂದು ಕೊಂದರು ಕೊಲೆಯು ವಾರ್ತೆಯ
ನಂದು ಕೇಳಿಯೆ ಶುಕ್ರ ಬೇಗದಿ
ಬಂದು ಬೂದಿಯನುಡಿಗಿ ಯೆತ್ತಿದನೆಂದ ಗುರುಸುತನ ।
ಅಂದು ಮೃತಸಂಜೀವಿಯೌಷಧಿ
ಯಿಂದ ಬದುಕಿಸಿ ಮನೆಗೆ ತಂದನು
ಹಿಂದುಗಳೆಯದೆ ಯಿರಲಿಕೊಂದಿನ ಕಚನು ದರ್ಭೆಯನು ॥ ೧೫

ತರಲು ಹೋಗಲು ಮತ್ತೆ ದೈತ್ಯರು
ನೆರೆದು ಕಚನನು ಕೊಂದು ದಹಿಸಿಯೆ
ನಿರುತ ಬೂದಿಯ ಕದಡಿ ನೀರೊಳು ಕುಡಿದರೊಂದಾಗಿ ।
ಇರಲು ಭೃಗು ಕಚ ಬಾರದಿರನೆಂ
ದಱಿದು ದೈತ್ಯರ ವೇದಮಂತ್ರದಿ
ತರಿಸಿ ನಿಗ್ರಹಿಸಿರಲಿಕೆಂದರು ದನುಜರಾಹದನ ॥ ೧೬

ಹೇಐಲಿಕೆ ಯಾಕರುಷಣಂಗಳ
ಕೇಳಿ ಮಾಡಿದ ದೈತ್ಯರಂಗವೆ
ಜಾಳಿಸಿದನಾಕಚನ ನಿಮಿಷಕೆ ಮುನ್ನಿನಂದದಲಿ ।
ಬಾಲಕನ ನೆಱೆ ಯಿರಿಸಿ ಸಂತಸ
ದೇಟಗೆಯು ನೆಱೆ ಕೊಡುತ ಶಿಷ್ಯನ
ಪಾಲಿಸಿದ ತನ್ನುದರಮಧ್ಯದೊಳರಸ ಕೇಳೆಂದ ॥ ೧೭

ಎನಲು ವೈಶಂಪಾಯಮುನಿಪಗೆ
ಜನಪ ಬಿನ್ನಹ ಮಾಡಿದಂದವ
ನೆನಗೆ ಕರುಣಿಸು ಕಚನನೇತಕೆ ದೈತ್ಯದಾನವರು ।

ತನುವ ಕೆಡಹಿದರೇನು ಕಾರಣ
ವೆನಗೆ ವಿಸ್ಮಯವೀಗ ತೋಱಿತು
ವಿಸ್ಮೃತಗುರುಸುತವಧೆಯನೇತಕ್ಕವರು ಮಾಡಿದರು ॥ ೧೮

ತನಗೆ ತಿಳಿದುದ ಮುನಿಪನಾಕ್ಷಣ
ಜನಪತಿಗೆ ಸಂತಸದಿ ನುಡಿದನು
ಜನಪ ಕೇಳಾ ನಿನಗೆ ಪೇೞುವೆ ಪೂರ್ವಸಂಗತಿಯ ।
ದನುಜಮರ್ದನ ಪೂರ್ವಕಾಲದಿ
ವಿನುತಕಪಟದಿ ಸುರೆಯನೆಱೆಯಲು
ದನುಜರತಿಭೀತಿಯಲಿ ಸೈನ್ಯವ ಕೂಡಿ ಧಾೞಿಯನು ॥ ೧೯

ನಿರುತ ಹಾಯುತೆ ಯಿಂದ್ರಲೋಕವ
ಸುರುಹಿ ಗಂಧರ್ವಾದಿನಿಕರವ
ತರತರದಿ ನೆಱೆ ಗೆಲಿದು ತಿರುಗಲು ಸುರಪಸಿದಿರಾಗಿ ।
ಹಿರಿದು ಬಾಣದಿ ಕೆಣಕಿ ಕಾದಲು
ನಿರುತ ನುಡಿದನು ದಾನವೇಂದ್ರನು
ಮರಳಿ ಕಪಟದಿ ಹಿಂದೆ ಸುರೆಯನ್ನೆಱೆದು ದಾನವರ ॥ ೨೦

ವರನೃಪರು ತಾವೆನಿಸುವಂಥಾ
ಸುರನ ಅಗ್ಗಳಕಾಲನೇಮಿಯು
ವರಮಹಾಬಲವಿಪ್ರಚಿತ್ತಿಯು ಸೈನ್ಯಸಹಿತವರ ।
ಹುರುಳುಗೆಡಿಸಿಯೆ ಬಾಣದಿಂದವೆ
ಹರಿಯು ಮಾಯೆಯ ಮಾಡಿ ಕೆಡಹಿದ
ಪರಿಯು ನಡೆಯುದು ಯೆನುತ ದಾನವರಾಯ ಖಡ್ಗದಲಿ ॥ ೨೧

ಹೊಡೆದು ರಥವನು ಛತ್ರವೆಲ್ಲವ
ಕೆಡಹಿ ಪುನರಪಿ ತಿರುಗಿ ಖತಿಯನು
ಹಿಡಿದು ವಜ್ರವ ಕೊಂಡು ಸುರಪತಿ ಕೆಣಕುತಿಂತೆಂದ ।

ನುಡಿದೊಡೇನಹುದಿನ್ನು ತನ್ನೊಳು
ಕಡೆಗೆ ಸಾಧಿಸಿ ಕಾದಿ ಗೆಲಿದರೆ
ಕಡು ಸಮರ್ಥನು ಬಿಡದೆ ಗಜಿಹದಿರೆನುತ ತಾ ಹೊಯ್ದ ॥ ೨೨

ಘಾಯುವಾಗಲು ಮಂತ್ರದಿಂದವೆ
ಘಾಯುವನು ಸಂತೈಸಿ ತಾ ಪ್ರೂ
ರಾಯುಘಾಯುವ ಮಾಡಿ ಸುರಪನ ಗೆಲಿದು ಯುಮಪುರವ ।
ಮಾಯೆಯುಲಿ ತಾನೈದಿ ಪೂರ್ವದ
ದಾಯುವೈರವಿದೆಂದು ದಾನವ
ರಾಯನಱಹಿಯೆ ತಿರುಗಿ ಬಂದನು ತನ್ನ ಪಟ್ಟಣಕೆ ॥ ೨೩

ಹಿಂದೆ ದಿವಿಜರು ಸಕಲಸೈನ್ಯದ
ವೃಂದವನು ಸಂಹರಿಸಿ ಕೊಂಡೈ
ತಂದರಾಕ್ಷಣ ದಾನವೇಂದ್ರನ ದೇಶದೆಡೆಗಾಗಿ ।
ಬಂದ ಹದನನು ಕೇಳಿ ರಾಕ್ಷಸ
ನಂದು ಮಂದಿಯು ನೆರಹಿ ಕೊಂಡೈ
ತಂದು ಕಾದಿದ ಹಲವುದಿನ ಭೂಪಾಲ ಕೇಳೆಂದ ॥ ೨೪

ಕಾದುತಿರಲೊಂದಿವಸ ಸುರಪತಿ
ವಾದದಲಿ ಗಜವೇಱಿ ತತ್‌ಕ್ಷಣ
ಮೇದಿನಿಗೆ ಹೊಸತೆನಿಸಿ ವಜ್ರವ ಕೊಂಡು ಕಾದಿದನು ।
ಹೋದೆ ಹೋಗಿನ್ನೇನುತ ರಾಕ್ಷಸ
ರಾದಿಯುನು ನೆಱೆ ಸದೆದು ಪುನರಪಿ
ಭೇದಕೋಪದಿ ದಾನವೇಂದ್ರನ ಉರವ ನೆಱೆ ಹೊಯ್ದ ॥ ೨೫

ಯುಕ್ಷನಾಯುಕ ಸಕಲರಾಕ್ಷಸ
ಪಕ್ಷರನು ನೆಱೆ ಹೊಯ್ದ್ಯೊ ತಾ ದು
ರ್ಭಿಕ್ಷದಲಿ ನೆಱೆ ಭೋಜ್ಯ ಮಾಡುವ ತೆಱದಿ ಮುಗುಳೆ ಸುತ ।

ಯಕ್ಷನನು ಸಂಹರಿಸಿ ಸಾಸಿರ
ಚಕ್ಷುಸನು ನೆಱೆ ಯೆಸೆಯೆ ಸಾಸಿರ
ಚಕ್ಷು ಮುಱಿಯುತ ಹೊಯ್ದನಾಗಳ ಸಕಲಸೈನಿಕರ ॥ ೭೬

ಶುಕ್ರನನ್ನು ಕುರಿತು ವೃಷಪರ್ವನ ಪ್ರಾರ್ಥನೆ.

ಅಂದು ತತ್ತಱಿದಱಿವು ದಾನವ
ವೃಂದವನು ದಿವಿಜೇಂದ್ರನೆಸೆಯಲು
ಬಂದನಾಕ್ಷಣ ಪಶ್ಚಿಮಾದ್ರಿಗೆ ಭಾನು ಪರುಷದಲಿ ।
ಸಂದರಾತ್ರಿಯೊಳಲ್ಲಿ ಗುರುಗಳ
ಚಂದನಿಳಯಕ್ಕೈದಿ ಚರಣ
ಕ್ಕಂದು ನಮಿಸುತ್ತಾಗ ಬಿನ್ನವಿಸಿದನು ವೃಷಪರ್ವ ॥ ೭೭

ಗುರುವೆ ಬಿನ್ನಹ ಸೈನ್ಯವೆಲ್ಲವ
ನಿರುತದಲಿ ಸಂಹರಿಸಿ ಸುರಪತಿ
ತಿರುಗಿದನು ಬಯಲಾಯ್ತು ನಮ್ಮಯ ಸೇನೆ ನೀವಿರಲು ।
ಪರಮಗುರು ನೀವಿಂದು ಸೇನೆಯ
ಕರುಣದಲಿ ನೆಱೆ ಕಾಯಬೇಕೆನ
ಲರಸನನು ಸಂತೈಸಿ ಭಾರ್ಗವ ನಿಮಿಷಮಾತ್ರದಲಿ ॥ ೭೮

ನಿಳಯಕತ್ತಲು ಕಳುಹಿ ಭೂಪನ
ಲಲಿತಸೇನೆಯನೆತ್ತಲೋಸುಗ
ತಳಕೆ ಗುರುವೈತರಲಿಕಿನನುದಯಾದ್ರಿಗೈತಂದ ।
ಬಳಿಕ ಮೃತಸಂಜೀವಿವಿದ್ಯೆಯ
ಬಲಿಕೆಯಿಂದಲಿ ಯೆತ್ತಿ ಗುರುವಿರೆ
ವೊಲಿದು ಸಾಹಸಿ ಬಂದು ಕೆಣಕಿದ ಮತ್ತೆ ಸುರಕುಲವ ॥ ೭೯

ಬಂದು ಕೆಣಕಲು ಸುರರು ಪುನರಪಿ
ಅಂದು ದಾನವಬಲವ ಕೆಡಹ
ಲ್ಕಂದದಲಿ ಗುರುವೀಕ್ಷೆ ಸುರಗುರುಸುತನು ಕಂಡದಕೆ ।

ಇಂದು ಯೀವಿದ್ಯೆಯನು ನೆಱೆ ಕಲಿ
ತಿಂದು ಬಹೆನೆಂದಿತ್ತಲೈತರ
ಬಂದು ದಿವಿಜರ ಸತ್ತರೆಲ್ಲರನೀತನೆಬ್ಬಿಸುವ ॥ ೩೦

ಇಂದು ಭಾರ್ಗವಶಿಷ್ಯನೀಕಚ
ನೆಂದು ರಾಕ್ಷಸವೃಂದ ಕೆಡಹಲು
ಬಂದು ಯಿವನೆತ್ತುವನದೀತನ ಕೆಡಹಬೇಕೆನುತ ।
ಕೊಂದು ತಿರುಗಲಿಕತ್ತಲಾಯುಷ
ವೊಂದು ಯೆರಡೆತ್ತಿದನು ತತ್‌ಕ್ಷಣ
ಮುಂದೆ ಕೆಲಸಕೆ ಕಳುಹೆ ಕಚನನು ಕಂಡು ರಾಕ್ಷಸರು ॥ ೩೧

ಭಂಡನಿವ ತಿರುಗಿದನು ಸುರಗುರು
ಚಂಡರೊಳು ಕೂಡುವೆನು ಗುರುವಿನ
ಗಂಡು ವಿದ್ಯವನಿಲ್ಲಿ ಕಲಿಸುವ ದಿವಿಜರಗ್ಗಳಗೆ ।
ಭಂಡತನವನೆ ವಿದ್ಯದ ಬಲದಿ
ದಂಡಿಯಿಂದೈತಂದು ಕಾದಲು
ಕಂಡು ತಾವಿದಿರಾಗೆ ಕಚನನು ಹಿಡಿದು ನಿಮಿಷದಲಿ ॥ ೩೨

ಕಚನ ಸಂಹಾರ ಮತ್ತು ಉಜ್ಜೀವನ.

ಕೊಲಲಿಕಾಕ್ಷಣ ಶುಕ್ರನಱಿಯದೆ
ಬಟಿಕ ದರ್ಭೆಯು ತಾರನೆನುತಲಿ
ತಿಳಿದು ನೋಡಿದ ಮಂತ್ರದಿಂದವೆ ತರಿಸಿ ಘಾತುಕರ ।
ತಿಳಿಯ ಹೇೞಿದರಲ್ಲಿ ಮಾಡಿದ
ನೆಲೆಯುನಱೆ ತಾ ಕೇಳಿ ಶಿಷ್ಯನ
ಕೆಲಕೆ ತೆಗೆದನು ನಮ್ಮ ಸಂಜೀವಿನಿಯು ಬಲದಿಂದ ॥ ೩೩

ಇಂತು ತಾ ಕೊಲೆಯಾಯ್ತು ದೈತ್ಯರ
ಸಂತತಿಯು ನೆಱೆ ಕಚನ ಕೊಂದರು
ಪಜ್ತೆಯಲಿ ರಾಕ್ಷಸರು ಪುನರಪಿ ವಧೆಯ ಮಾಡಿದರು ।

ಮುಂದೆ ಕೇಳ್ಳ ಕಥೆಯು ಕಚನನು
ಸಂತತವು ವೃಷ ಕೊಲಲು ಜಠರದ
ಪಚ್ಚಿಗೇಹದೊಳಿರಿಸಿ ಸಲಹಿದನರಸ ಕೇಳೆಂದ ॥ ೩೪

ಇರಿಸಲಾತಗೆ ನುಡಿದ ನಿನ್ನನು
ಮರಳಿ ತೆಗೆವೆನು ತನಗೆ ಹೇಳುವು
ದರಿಗಳಱಿಯದೊಲೆನಲಿಕೆಂದನು ವರುಷ ಹಲವಾಗೆ ।
ಗುರುವೆ ತನ್ನನ್ನಿರಿಸಿಕೊಂಡಿರೆ
ಹಿರಿದು ಬಳಲಿದೆನೆನಲು ಶುಕ್ರನು
ಮರಳಿ ನುಡಿದನು ತನ್ನ ಜಠರವನೊಡೆಯುಬಹುದೆಂದು ॥ ೩೫

ದೇವಯಾನಿಯು ಕಚನನ್ನು ವರಿಸಲು ಆತನು ಅಂಗೀಕರಿಸದೆ ಇರುವಿಕೆ.

ಸತ್ತ ತನ್ನನ್ನೆತ್ತುವಂತಾ
ಮೃತ್ಯುಹರದೌಷಧಿಯನಿತ್ತಾ
ಸತ್ತ ಶಿಷ್ಯನ ತೆಗೆದು ಮೃತಸಂಜೀವಮಂತ್ರವನು ।
ಇತ್ತು ಲಾಲಿಸುತಿರಲು ಕವಿಸುತೆ
ಮತ್ತೆ ನುಡಿದಳು ಕಚಗೆ ತನ್ನಯ
ಚಿತ್ತವಲ್ಲಭನಾಗು ಎನಲಿಕೆ ನುಡಿದನನುಮತವ ॥ ೩೬

ನೀನು ತನ್ನೊಡಹುಟ್ಟಿದಾಕೆಯು
ತಾನು ನಿನ್ನನುಜಾತನೆನಲಿಕೆ
ಮಾನಿನಿಯು ಕಡು ಕೋಪದಿಂದವೆ ಶಪಿಸಿ ಗುರುಸುತನ ।
ನೀನು ನಮ್ಮಲಿ ಕಲಿತ ವಿದ್ಯಕೆ
ಹಾನಿಯಾಗುವುದೆನಲು ಭಾರ್ಗವೆ
ಮಾನಿನಿಗೆ ಮರಳೆಂದ ನೀನುಱೆ ನೃಪರ ಕೂಡುವುದು ॥ ೩೭

ದೇವಯಾನಿಯು ಶಾಪ.

ಇವನ ವಿದ್ಯೆವದಿವಗೆ ಫಲಿಸದೆ
ಭುವನದೊಳಗಿರಲಿವನ ಕೈಯುಲಿ

ವಿವರಿಸಿಯು ಕಲಿತವರಿಗಾಗುವುದೆಂದು ಗುರುಸುತನ ।
ಅವರು ಕಳುಹಲು ಬಂದು ತನ್ನಯ
ಭವನದಲಿ ಸುರಗುರುವ ಕಂಡುಚಿ
ಹವಣ ಹೇಳಿದ ತನ್ನ ಪೂರ್ವಾಪರದ ಸಂಗತಿಯ ‖ ೩೮

ಹೇಳಿ ಮೃತಸಂಜೀವಮಂತ್ರವ
ಲಾಲಿಸಿಯೆ ತನ್ಮೃತ್ಯುಗಳಹಿದ
ಮೇಲೆ ಯಿರಲಾದೇವಯಾನಿಯು ಬಯಕೆ ಬಟಡಾಯ್ತು ।
ಕಾಳಗವು ಹಿರಿದಾಗೆ ದೈತ್ಯರು
ಜಾಳಿಸಲಿಕೊಂದಿವಸ ದೈತ್ಯರ
ಬಾಲೆ ಕರ ಕಳವಳಿಸುತೊಂದಿನ ಶುಕ್ರಸುತೆಯನ್ನು ‖ ೩೯

ದೇವಯಾನಿಯು ಸಂಗಡ ಶರ್ಮಿಷ್ಠೆಯ ಜಲಕೇಳಿ.

ಇರಲಿ ಕಾವೃಷಪರ್ವನಾತ್ಮಜೆ
ಸುರನದಿಯು ಜಲಕೇಳಿಗೋಸುಗ
ಕರೆಸಿದಳು ತಾ ದೇವಯಾನಿಯನಂದು ಶರ್ಮಿಷ್ಠೆ ।
ಉರುವಣಿಸಿ ಗಂಗಾಪ್ರವಾಹದೊ
ಳಿರುತ ಸತಿಯರು ಕೂಡಿಯಾಡಲು
ಹಿರಿದು ಬಚ್ಚಲಿಯೆ ದೇವಯಾನಿಯು ತಡಿಗೆ ಸಾಱದಳು ‖ ೪೦

ಆಗ ದೇವಯಾನಿಯು ಶರ್ಮಿಷ್ಠೆಯು ಸೀರೆಯನ್ನುಡುವಿಕೆ

ನೀಱೆ ತಾನಂದುತ್ತಮೋತ್ತಮ
ಸೀಱೆಯೆರಡನು ತೆಗೆದು ಬೇಗದಿ
ನಾರಿಯುಟ್ಟಳು ವಸ್ತ್ರಯುಗವನು ಪರಮಹರುಷದಲಿ ।
ನೀರ ತಡಿಯಲ್ಲಿರಲಿಕಾಕೆಯು
ಸೀಱೆಯನು ಶರ್ಮಿಷ್ಠೆ ಮಱಸಿಯೆ
ನಾರಿಯುಟ್ಟರೆ ಯಮಳವಸ್ತ್ರವ ಕಂಡು ತಾ ಸುಳಿದು ‖ ೪೧

ಆಗ ಆಕೆಯು ನೀರಲ್ಲಿ ದೊಬ್ಬಿ ಹೋಗುವಿಕೆ

ಕೊಂಡು ಶುಕ್ರನ ಮಗಳ ಬೇಗದಿ
ಕೊಂಡದಲಿ ಕೆಡೆ ನೂಕಿ ಕೋಪದಿ
ಕೊಂಡು ಹೋದಳು ಮನೆಗೆ ವೃಷಭನ ಮಗಳು ಸೀರೆಯನು ।

ಆಗ ದೇವಯಾನಿಗೆ ಯಯಾತಿಯು ದರ್ಶನ.

ಮಿಂಡಿ ನೀರೊಳಗಿರಲು ಮರುದಿನ
ಕಂಡನಗ್ಗದನೃಪ ಯಯಾತಿಯು
ಕಂಡು ನೀನಾರೆನಲು ದೈತ್ಯರ ಗುರುವಿನಾತ್ಮಜೆಯು ॥ ४०

ಎಂದಳಾನಿನ್ನ ಮಳವಧುವಹೆ
ನಿಂದೆನಗೆ ನೀನುಟ್ಟ ಸೀರೆಯ
ನೊಂದನೀಯೆನಲಾಯಯಾತಿಯು ವನಿತೆಗಿಂತೆಂದ ।
ಹಿಂದೆ ದಂಡಕನರಸಿಯಾಗಲಿ
ಕಂದು ದಹಿಸಿದನಾತನಂಗವ
ತಂದೆ ನಿಮ್ಮಯ ಶುಕ್ರನಾಜ್ಞೆಯೊಳಹೆನು ಪತಿಯೆಂದ ॥ ४४

ದೇವಯಾನಿಯು ಕೋಪದಿಂದಿರಲು ನಿನ್ನಿಷ್ಟವನ್ನು
ಮಾಡುವೆನೆಂದು ಶುಕ್ರನ ಪ್ರತಿಜ್ಞೆ.

ತೊಟ್ಟನಾಗೊಂದಮಳವಸ್ತ್ರವ
ನುಟ್ಟಳಾಕೆಯು ಹೋಗಿ ಮನೆಯಲಿ
ಬಿಟ್ಟು ಹಳೆಯಂಬರವನುಟ್ಟಳು ದುಗುಡಭಾರದಲಿ ।
ಉಟ್ಟಿರಲಿಕಾಜನಕ ಬಂದನು
ನಿಷ್ಠೆಯಲಿ ದೇವಾರ್ಚನಾದಿಯ
ಮುಟ್ಟ ಮಾಡಿಯೆ ಮಗಳ ಕರೆಸಿದನಾಗ ಭೋಜನಕೆ ॥ ४४

ಕರೆಸಲಿಕೆ ವರದೇವಯಾನಿಯು
ಹಿರಿದು ಕೋಪದಿ ತಂದೆ ಯತ್ತಲು
ತಿರುಗದಿರೆ ಭೃಗು ಬಂದನಬ್ಬಿಸಿ ಮಗಳ ಕೇಳಲಿಕೆ ।

ಸರಸಿಜಾಕ್ಷಿಯು ಕೆರಳಿ ಕೋಪದಿ
ಹಿರಿದು ನುಡಿದಪಳೆಂದು ತನ್ನನು
ವರಯಯಾತಿಗೆ ಕೊಟ್ಟು ನಿನ್ನಯ ದೈತ್ಯನಾಯಕನ ॥ ೪೫

ಮಗಳ ತನಗಾತೊತ್ತುಗೆಲಸಕೆ
ಹುಗಿಸಿ ಬಱುವೆಱಿ ಯಿತ್ತುದಾದರೆ
ಮಗಳು ನಿನಗಹೆ ನಿನ್ನ ಸಂಗಡ ಭೋಜನಂಗಳನು ।
ಸೊಗಿಸಿ ಮಾಡುವೆನಲ್ಲದಿದ್ದರೆ
ಮಗುಳ ಮರಣವನೈದಿ ಹೋಹೆನು
ವಿಗಡ ನನ್ನೀ ಮಾತ ಮಾಡದೆ ಯಿರಲು ತನಗದಱ ॥ ೪೬

ಗೊಡವೆ ಯಿಲ್ಲೆನೆ ತಂದೆ ಶುಕ್ರನು
ನಡುಗಿ ಮಗಳಿಗೆ ಮಾತ ಪಾಲಿಸಿ
ಹಿಡಿದನಾಕೆಯ ನುಣಿಯ ಕೈಕೊಳುತಾತನಿಂತೆಂದ ।
ಪೊಡವಿಯೊಳು ನಿನ್ನನು ಯಯಾತಿಗೆ
ಕೊಡುವೆ ದೈತ್ಯನ ಮಗಳ ತೊತ್ತನು
ಬಿಡದೆ ಮಾಡುವೆನೆಂದು ತಿಳುಹಿದನಾತ್ಮಪುತ್ರಿಯನು ॥ ೪೭

ತಾಯೆ ಬಾರೌ ತಂಗಿ ಯೆನ್ನುತ
ಲಾಯತಾಕ್ಷಿಯ ತಂದು ಭೋಜನ
ದಾಯತವ ನೆಱೆ ಮಾಡಿ ದೈತ್ಯನ ಗೇಹಕ್ಕೈದಿದನು ।
ರಾಯ ಕೇಳ್ದ ದೈತ್ಯರಾಯನ
ನಾಯಕರು ಕಡಿಖಂಡವಾದರು
ಘಾಯದಲ್ಲಮರೇಶನಿಂದವೆ ಮರಳಿ ನೊಂದಿರಲು ॥ ೪೮

ಶುಕ್ರನು ವೃಷಪರ್ವನ ಮುಂದೆ ಸ್ವಾಭಿಪ್ರಾಯವನ್ನು ಹೇಳಿದುದು.

ದನುಜರಗಣಿತರಾಗ ಸುಮ್ಮನೆ
ಮನದಿ ನೊಂದರು ಶುಕ್ರದೇವರು
ಮನೆಗೆ ಬರಲಿಕೆ ದೈತ್ಯವರ್ಗದಿ ಸಹಿತ ವೃಷಪರ್ವ ।

ತನುವ ಚರಣಕೆ ಚಾಚಿ ತನ್ನಯ
ಅನುವರದ ಪರಿವಾರ ವೇಡಯಿತು
ಅನಿಮಿಷರ ಕೈಯಿಂದ ನೀವಿದನೆತ್ತಬೇಕೆಂದ ॥ ೪೯

ನವೆಗೆ ನೂಕದು ನಿನ್ನ ಗೇಹದ
ವಿಮಳಪೌರೋಹಿತ್ಯ ನಿನ್ನಯ
ಕುಮತಿ ಕನ್ಯಕೆ ದೇವಯಾನಿಯು ಸುರಿದು ಸೀರೆಗಳ ಗೆ।
ಮಮತೆ ಯಿಲ್ಲದೆ ನೂಕಿ ಹೋದಳು
ಶ್ರಮವನಱಿಯದೆ ಯೆನಲು ಕವಿಗುಱಿ
ಸಮತೆಯಲಿ ಕೈಮುಗಿದು ಬಿನ್ನಹಮಾಡಿದನು ನಗುತ ॥ ೫೦

ಏನುಮಾಡುವೆನಿದಕೆ ತನ್ನಯ
ಮಾನಿನಿಯು ಮಗಳಿಂಗೆ ಯೆನಲಿ
ಕ್ಕಾನಿಶಾಚರಗೆಂದ ನಿನ್ನಯ ಮಗಳು ತೊತ್ತಾಗಿ।
ನೀನು ಯಿತ್ತೊಡೆ ದೇವಯಾನಿಗೆ
ಆನಿರೂಢಿಯ ಯುದ್ಧರಂಗದ
ದಾನವರನೆತ್ತುವೆನು ಸತ್ತರ ನಿಮಿಷಮಾತ್ರದಲಿ ॥ ೫೧

ಅದಕ್ಕೆ ವೃಷಪರ್ವನ ಅನುಮತಿ.

ಎನಲು ಖರಲೇಸೆಂದು ಮಗಳನು
ದನುಜನಿತ್ತನು ಹತ್ತುಸಾವಿರ
ವನಿತೆಯರನೊಡಗೂಡಿ ತನುಜೆಯ ಕಲಿಯನೊಪಬಡಿಸಿ।
ಕನಲಿಕೆಯ ನೆಱೆ ಬಿಟ್ಟು ಶುಕ್ರನ
ತನುಜೆ ತಂದೆಯ ಕೈಯ್ಯಲಾಗಳು
ತನಗೆ ಪರಿಣಯ ಮಾಡಿಕೊಂಡಳು ವರಯಯಾತಿಯನು ॥ ೫೨

ಹರುಷದಲಿ ಶರ್ಮಿಷ್ಠೆ ಸಹಿತವೆ
ಕರಿಪುರಕೆ ಬಂದಷ್ಟ ಶೋಭೆಯ
ಪರಿಣಯವನಳವಡಿಸಿ ಹೊಕ್ಕಳು ರಾಜಮಂದಿರವ।

ಪುರದ ಬಾಹೆಯಲಂದು ಬಿಟ್ಟಳು
ಹಿರಿದು ಬೀಡನು ರಾಕ್ಷಸೇಂದ್ರನ
ವರಸುತೆಯು ಪುರದೊಳಗೆ ಹೊಕ್ಕಳು ಶುಕ್ರನಂದನೆಯು ॥೫೩

ಇರಲು ಪೂರ್ವದ ಕಚನ ಶಾಪದ
ನಿರುತದಲಿ ವರದೇವಯಾನಿಯು
ನರರ ಹೆಂಡತಿಯಾದಳದು ಪೌರಾಣಸಿದ್ಧವಲ ।
ಇರಲಿಕೊಂದಿನ ವರಯಯಾತಿಯು
ಹಿರಿದು ಪಾರುಧಿಗೆಂದು ಕಾನನ
ಕುರುವಣಿಸಿ ಪೊರಮಡಲು ಹೊಡೆದುವು ಕೋಟಿನಿಸ್ಸಾಳ ॥ ೫೪

ವರಮಹಾನಿಸ್ಸಾಳತಂಬಟ
ಪಿರಿದು ಕಹಳೆಯ ನಾದ ಭೇರಿಯ
ಪರಮಡಿಂಡಿಮನಾದ ಡೌಡೆಮೃದಂಗಮೊದ್ದಳೆಯ ।
ಹಿರಿದು ಭೂ ಕಂಪಿಸಲು ನಾದದ
ವರರವದಲಾರ್ಭಟೆಯು ಲೋಕದ
ವರಜನದ ಕಿವಿ ಘೀಳಿಡಲು ನೃಪ ಹೊಱವಂಟನಾಲಯವ ॥ ೫೫

ಬಳಿಕಲೈದಿತು ತುರಗಕೋಟಿಯು
ನೆಲೆಯು ತೊಂಬತ್ತಾಱು ಬಳಿಕವೆ
ನೆಲೆಯ ತಿಳಿಯಲು ಗಜಘಟಾವಳಿ ಕೋಟಿಮೂವತ್ತು ।
ತಿಳಿದು ಕೇಳ್ಳೈ ವರರಥಾವಳಿ
ನೆಲೆಯು ತಾ ಪದಿನಾಱುಕೋಟಿಯು
ನೆಲೆಯ ತಿಳಿಯೆ ಪದಾತಿ ತಾನುಱಿ ಕೋಟಿ ಯಿಾಱೆಂಟು ॥ ೫೬

ಸಕಲಸೇನಾನಿವಹದಿಂದವೆ
ಚಕಿತನೃಪ ಹೊಱವಂಟು ನಾನಾ
ವಿಕಟಕಾನನದೊಳಗೆ ಸೂಕರವ್ಯಾಘ್ರಮೊದಲಾಗಿ ।

ಸಕಲಮೃಗಗಳತಾನು ಬಿಲ್ಲಿನ
ಮುಕುತಿಯಲಿ ಸಂಹರಿಸಿ ಭೂಪತಿ
ಸುಖಸಮೂಹದೊಳಿದ್ದು ಪಾಳೆಯಕೈದಿದಾಕ್ಷಣದಿ ॥ ೫೭

ಕೂಳುಕಾಣಿಕೆ ಯಿತ್ತು ತತ್ಕ್ಷಣ
ವಾಳುಗಳ ಪರುಠವಿಸಿ ಕಳುಹಲು
ಪಾಳೆಯವು ತಾ ತಿರುಗಿ ಬಿಟ್ಟುದು ವರಯಯಾತಿಯದು ।
ಮೇಲೆ ಗಜತುರಗಾದಿಸರ್ವವ
ಲೋಲತಾಣದಿ ಕಟ್ಟಿ ಭೂಪತಿ
ಲೀಲೆಯಿಂ ಪ್ರಿಯರೊಡನೆ ಭೋಜನ ಮಾಡುತಿರುತಿರಲು ॥ ೫೮

ಮಱುದಿವಸ ಪಾರುಧಿಯನಾಡಿಯೆ
ವರಮಹಾಪಾಳೆಯವ ಹೊಕ್ಕರು
ಹರುಷದಲಿ ವರಭೋಜನಂಗಳ ಮಾಡಿ ಸುಖದಿಂದ ।
ಇರುತ ಕಳೆದರು ವರವಿನೋದದ
ಚರಿತ ಪಾರುಧಿಯಿಂದ ಬಹುದಿನ
ವಿರುತಿರಲು ಬಹುದಿನದ ಮೇಲೊಂದಿನದ ರಾತ್ರಿಯೊಳು ॥ ೫೯

ನೆಱೆಯ ಕಾಲದ ವೃಷ್ಟಿ ಸುಱಿಯಲು
ಪರಿಹರಿಸಿ ಪಾರುಧಿಯ ಭೂಪತಿ
ಮರಳುತಲೆ ಮಱೆಗಂಜಿ ಹೊಕ್ಕನು ದೈತ್ಯನಂದನೆಯ ।
ನಿರುತ ಮಂದಿರದೊಳಗೆ ಬರಲಿ
ಕ್ಕರಸನನು ಸತ್ಕರಿಸಿ ದನುಜೆಯು
ನೆರೆದಳಾತನ ಕೂಡಿ ರತಿಕೇಳಿಯಲಿ ಮನವೊಲಿದು ॥ ೬೦

ನೆರೆಯುಲಿಕೆ ದಿನದಿನದಿ ಗರ್ಭವು
ನಿರುತವಾಗಲಿಕತ್ತ ಶುಕ್ರನ
ವರಕುಮಾರಿಗೆ ಗರ್ಭವಾಯಿತು ವರಯಯಾತಿಯಲಿ ।

ವರುಷಯೆರಡಕೆ ದೇವಯಾನಿಗೆ
ನಿರುತದಲಿ ಜನಿಯಿಸಿದರಿಬ್ಬರು
ವರಕುವಾರರು ಯದುಪುರೂರವರಾಗ ಭೂಮಿಪರು ॥ ೬೧

ಜನಿಸಿದನು ಶರ್ಮಿಷ್ಠೆಗಾಗಳು
ವಿನಯದಲಿ ಬಲುಹುಳ್ಳಮತ್ತಾ
ಜನಪಪುರುಮಹಿಮಂಡಲೇಶ್ವರನೆನಿಪಸುತನೊಬ್ಬ ।
ಜನಿಸಿ ದಿನದಿಂ ಬಳೆವುತಿದ್ದರು
ಜನಪಪುತ್ರರು ತಮ್ಮ ಜನನಿಯು
ಮನೆಮನೆಗಳಲಿ ಯಿರಲಿಕೊಂದಿನ ನೃಪನ ಚಾವಡಿಗೆ ॥ ೬೨

ಬರಲು ತತ್ಕ್ಷಣ ವರಕುವಾರನು
ನಿರುತದಲಿ ಶರ್ಮಿಷ್ಠೆಯಾತ್ಮಜ
ಹಿರಿದು ನೃಪತಿಯ ತೊಡೆಯನೇಱಲು ಕಂಡು ಕವಿಸುತೆಯು ।
ಕೆರಳಿ ನೋಡಿಯೆ ಹೊರೆಯಲಿದ್ದರ
ಕರೆದು ಕೇಳಿದಳಿವನದಾರ್ರೈ
ವರಕುವಾರಕನಾರಸುತನಿವನೆಂದು ಕೋಪದಲಿ ॥ ೬೩

ದೇವಿ ವರಶರ್ಮಿಷ್ಠೆ ಬಸುಱೊಳು
ಭೂವಧೂವಲ್ಲಭಗೆ ಜನಿಸಿದ
ನೀವು ಆತಗೆ ಪಿರಿಯ ತಾಯಿಗಳೆನಲು ಜಠರದಲಿ ।
ನೋವುತಲಿ ಉರಿ ನೆಗೆಯೆ ಭೂಪನ
ದೇವಯಾನಿಯು ಬೈಯ್ಯುತಾಗಳು
ಪಾವಕನ ತೆಱದಿಂದ ನಡೆದಳು ತಂದೆಯೆಡೆಗಾಗಿ ॥ ೬೪

ದಾನವರ ಗುರುವಿಂಗೆ ಕಡು ದು
ಮ್ಮಾನದಲಿ ಗೋಟಿಟ್ಟು ತನಗೆಯು
ಹಾನಿಯಾಯಿತು ತೊತ್ತುಯಿದ್ದೆಡೆಯಲ್ಲಿ ನೃಪ ಸುತರ ।

ಮಾನನಿಧಿ ಪುಟ್ಟಿಸಿದ ತನ್ನಯ
ಸೂನುಗಳಿಗತಿಚಲುವೆಪುತ್ರನ
ಆನಿಶಾಚರವಂಗಳ ಸಂಗವ ಮಾಡಿದಾನೃಪನ ॥ ೬೫

ನೀನು ವೃದ್ಧನ ಮಾಡಿ ಶಾಪವ
ನಾನರೇಂದ್ರಂಗೀವುದೆನಲಿಕೆ
ಮಾನನಿಧಿ ಬೇಡೆಂದು ನುಡಿದನು ತನ್ನ ನಂದನೆಗೆ ।
ಹಾನಿಯಹುದತಿಮಥನವೆನಲಿಕೆ
ಆನಿರೂಢಿಯ ಸುದತಿ ಜನಕಗೆ
ಏನುವಱಿಯದೆ ಮೇಲುಗಾಣದೆ ಖತಿಯ ಭಾರದಲಿ ॥ ೬೬

ಯಯಾತಿಗೆ ಶುಕ್ರನ ಶಾಪದಿಂದ ವೃದ್ಧತ್ವಪ್ರಾಪ್ತಿ.

ತನ್ನಹಾನಿಯ ತಾನು ನೋಡದೆ
ಚೆನ್ನೆ ದೇಹವ ಬಿಡುವೆನೆನಲಿಕೆ
ಮನ್ನಿಸಿಯೆ ಪಿತ ಶಾಪವಿತ್ತನು ಕೋಪಭರದಿಂದ ।
ಭಿನ್ನವಾಗಿಯೆ ಮಾಡುತಾಕ್ಷಣ
ನನ್ನಿಯಿಲ್ಲದೆ ವೃದ್ಧನಾಗಿರು
ನಿನ್ನತನುವಿನ ಇಂದ್ರಿಯಂಗಳು ನಿನ್ನ ಬಿಟ್ಟಿರಲಿ ॥ ೬೭

ಎಂದು ಶಪಿಸಿಯೆ ಮಗಳ ಸಱಿಗಿನ
ಲಂದು ಕಟ್ಟಿದ ಕವಿಯು ಪುನರಪಿ
ಬಂದು ಹೊಕ್ಕಳು ದೇವಯಾನಿಯು ತನ್ನ ಮಂದಿರವ ।
ಮುಂದು ಗಾಣದೆ ಪತಿಯ ಶಪಿಸಲು
ಬಂದುದಾಕ್ಷಣ ವೃದ್ಧವಯಸಿನ
ದಂದುಗವು ನೆಱೆ ಯಯಾತಿ ಭೂಪತಿಗೆ ನಿಮಿಷಮಾತ್ರದಲಿ ॥ ೬೮

ಯಯಾತಿಯ ತಾರುಣ್ಯಕ್ಕಾಗಿ ದೇವಯಾನಿಯು ತಂದೆಯನ್ನು
ಪ್ರಾರ್ಥಿಸುವಿಕೆ.

ಇಂತುವಿರೆ ಮುನ್ನೂಱುವತ್ಸರ
ವಂತರಿಸೆಲಾಸತಿಯರಿಬ್ಬರು
ಕಂತುವಿನ ಸರಳಿಂದ ನೋವುತ ಶುಕ್ರನಂದನೆಯು ।

ಚಿಂತಿಸುತ ಮನದೊಳಗೆ ವಿಗತ
ಭ್ರಾಂತಿಯಲಿ ನಡೆತಂದು ತನ್ನಯ
ಕಂತುಶರದಾಕಡುರಹಸ್ಯವ ತಾತಗುಸುರಿದಳು ॥ ೬೯

ಎಂತು ಸೈರಿಸಬಹುದು ತನ್ನಯ
ಕಾಂತನಿಲ್ಲದೆ ವೃದ್ಧತನವನು
ಅಂತರಿಸಿ ತವಮಗೀವುದಾತಂಗಧಿಕಯೌವ್ವನವ ।
ಕಂತುವಿನ ಪ್ರತಿರೂಪ ಹೋಲುವ
ಜಂತ್ರ ಶುದ್ಧವ ಮಾಡಿ ಕೊಡುವುದ
ದೆಂತು ಸೈರಿಸಬಹುದು ಸತಿಯರು ಪುರುಷನಿಲ್ಲದೊಡೆ ॥ ೭೦

ತರುಣಿಯರಿಗತಿವಿಷವು ವೃದ್ಧನು
ನಿರುತದಲಿ ದಾರಿದ್ರಗತಿವಿಷ
ಪರಿಕಿಸಲು ಮಿಗೆ ಕದನ ವಿಷವಾಗೋಷ್ಠಿ ಮೂರ್ಖರಿಗೆ ।
ಹರಿಕಥಾಮೃತ ವಿಷಸಮಾನವು
ಸುರಸಭೋಜನವಾಅಜೀರ್ಣಕೆ
ನಿರುತವಿಷವಾಗಿಹುದು ತಥ್ಯವು ಜನಪ ಕೇಳೆಂದ ॥ ೭೧

ಕಱೆಯದಿಹ ಹಸುವಿದ್ದು ಕಷ್ಟವು
ಹರುಬಿಗೊದಗದ ಪತಿಯು ಯೌವ್ವನ
ಕಿಱುಮಳೆಯು ತಾ ಪೋದಗೋವಿನ ಪರಿಯು ತಾನಾಗಿ ।
ಇರವಿನಂತಿಹುದೆನಲು ಭೃಗುಕುಲ
ವರಲಲಾಮನು ಮಗುಳೆ ಮಾತನು
ನೆಱೆ ಪರೀಕ್ಷಿಸಿ ದೇವಮಾನಿಗೆ ಮಗುಳೆ ಯಿಂತೆಂದ ॥ ೭೨

ನಿನ್ನ ಪುರುಷಂಗಿನ್ನು ಪುನರಪಿ
ತನ್ನ ಪೂರ್ವೋನ್ನತಿಯು ವಯಸುಗ
ಳಿನ್ನು ಬಾರವು ಮೇಲೆ ನೃಪತಿಯು ಪುತ್ರರಾದವರು ।
ನನ್ನಿ ಯಿಲ್ಲದೆ ತಮ್ಮ ವಯಸನು

ನಿನ್ನ ಪುರುಷಂಗಿತ್ತೊಡಹುದೆನೆ
ಮನ್ನಿಸುತಲಾವೃದ್ಧವಯಸನು ಕೊಂಡೊಡಾತ್ಮಜರು ॥ ೩೩

ನಿಮ್ಮ ಯೌವ್ವನವನ್ನು ತಂದೆಗೆ ಕೊಡಿರೆಂದು
ತಾಯಿಯು ಮಕ್ಕಳಿಗೆ ಹೇಳುವಿಕೆ.

ನೆರೆವೆನೆಂಗಜರೂಪನೆನೆನಲಿಕೆ
ತರಳ ತನ್ನಾಲಯಕೆ ಮರಳಿಯೆ
ಕರೆದು ಯದುಪೂರವರಿಗೆಂದಳು ಜನನಿ ದುಗುಡದಲಿ ।
ತರಳರಿರ ವಾರ್ಧಿಕ್ಯಗೊಂಬುದು
ಮರಳಿ ನಿಮ್ಮಯ ಪ್ರಾಯದಂಗವ
ನರಸಗೀವುದದೆನಲಿಕವದಿರು ಯಿಬ್ಬರಾಕೆಯನು ॥ ೩೪

ಉಸುರಿದರು ತಮ್ಮನುವ ಜನನಿಗೆ
ವಸುಧೆಯಲ್ಲೀ ಮರ್ತ್ಯಜಾತಿಗೆ
ಹಸನು ಯೌವ್ವನಕಾಲ ತಮಗಿದು ನೀವು ನುಡಿದಿರಲ ।
ವಿಸುಕಲಾರೆವು ವೃದ್ಧತನವ
ನ್ನೆಸಗಿಹುದು ಮುಂದದಕೆ ತಮಗಿದು
ನಸಿವ ಮುಪ್ಪಿನ ದೇಹ ತಾನದು ನಿಮಗೆ ಕೃಪೆಯಿಲ್ಲ ॥ ೩೫

ತಾಯಿ ಮಕ್ಕಳ ವಯಸಕೆಡಿಸುವ್ರೊ
ಡಾಯಲುಂಟೇ ಲೋಕವೊಬಿಹೊ
ಳಾಯುವತಿ ಕೋಪಿಸಿಯೆ ನೃಪತಿಯ ಕೂಡೊಡಂಬಡಿಸಿ ।

ಆಗ ಮಕ್ಕಳಿಗೆ ತಾಯಿಯ ಶಾಪ.

ಆಯತಾಕ್ಷಿಯು ರಾಯನಾಜ್ಞಾ
ದಾಯದಲು ಶಪಿಸಿದಳು ಯದುಗಳ
ರಾಯಪದವನು ನಿಮ್ಮ ಸಂತಾನಂಗಳತಿಬಳಿಡು ॥ ೩೬

ಪಟ್ಟಯೋಗ್ಯರು ಆಗಬೇಡೆಂ
ದಿಟ್ಟಳವರಿಗೆ ತಾಯಿ ಶಾಪವ
ನೆಟ್ಟನಾಪೂರುವನ ವಂಶವು ಮ್ಲೇಚ್ಛ ಜಾತಿಯಲಿ ।

ಪುಟ್ಟಲೆಂದಾದನುಜಪುತ್ರಿಗೆ
ಪುಟ್ಟದನ ಕರೆತರಿಸಿ ನುಡಿದಳು
ನೆಟ್ಟನಾತಂದೆಯೊಳಗೀ ವಾರ್ಧಿಕ್ಯವಾದುದನು ॥ ೭೭

ಇಂದು ನೀ ಕೈಕೊಂಡು ಯೌವ್ವನ
ದಂದವನು ನೆಱೆ ಯಿತ್ತು ಯಿರಲಾ
ಮುಂದೆ ಕೊಡುವೆನು ನಿನಗೆ ದೇಹಾಂತರದ ವೇಳೆಯಲಿ ।
ಕಂದ ಕೇಳ್ಳೈ ನೀನು ನೃಪತಿ ಪು
ರಂದರನ ಪುರಕ್ಕೈದುವಾಗಳು
ನಿಂದಿರಿಸಿ ನಿನಗೀವೆ ಯೌವ್ವನಸಿರಿಯು ಸಹಗರವ ॥ ೭೮

ಎನಲು ಪುರುವು ಮಹೀಶಗಾಗಳು
ವಿನಯದಲಿ ಬಿನ್ನವಿಸಿ ನುಡಿದನು
ತನುವಿನೊಡೆಯರು ನೀವು ನಿಮ್ಮೊಳು ತಾನು ವಂಚಿಸೆನು ।
ಜನನಿವಾಕ್ಯವ ಮಿೞಲಾಱೆನು
ಮನವೊಲಿದು ನೀವಿತ್ತುದೇ ಸುಖ
ತನುವಿನಾವಾರ್ಧಿಕ್ಯವಾದುದ ಕೊಟ್ಟು ಯೆನ್ನ ಸುವ ॥ ೭೯

ಉೞುಹುವುದು ಯೆನೆ ಕೇಳಿ ಹರುಷದಿ
ನಲಿವುತಿತ್ತಪರಾಗ ವರವನು
ಎಲೆ ಪುರುವೆ ನಿನ್ನಯ ವಂಶಕಾಗಲಿ ರಾಜ್ಯದುದ್ಭವವು ।
ಇಳೆಯ ಮೇಲತ್ಯಧಿಕದಿಂದವೆ
ಬಲುಹಿನಲಿ ಭೂತಳವನಾಳಿಯೆ
ಗೆಲುವುದಹಿತರನೆಂದು ವರವನು ಕೊಟ್ಟರಾಕ್ಷಣಕೆ [1] ॥ ೮೦

ಕರೆಸಿದನು ತಾ ದೇವಯಾನಿಯು
ನಿರುತಮತದಲಿ ದನಜಸುತೆಯನು
ಕರೆಸಲಿಕ್ಕೈತರಲು ಪೇೞ್ದಳು ಶುಕ್ರನಂದನೆಯು ।

1 ಯದುವನು ಬೈದರಾಕ್ಷಣಕೆ, ಠ.

ನಿರುತ ತನ್ನೀತನುಜರಧಮರು
ವೆರಯಯಾತಿಯು ವೃದ್ಧವಯಸನು
ನಿರುತ ಪತಿಕರಿಸದಿರೆ ಕರೆದೆನು ನಿನ್ನ ನಂದನನ ॥ ೮೧

ಕರೆದು ತಾನೀ ಮಾತ ಹೇಳಲು
ಹಿರಿದು ಹೊಂಪುಳಿಯೋಗಿ ತನುಜನು
ನಿರುತ ಪತಿಕರಿಸಿರಲು ಭೂಪತಿ ಮುದದಿ ವರವಿತ್ತು ।
ಹರಸಿ ಕೊಟ್ಟನು ಮುಂದೆ ರಾಜ್ಯವ
ಹಿರಿದು ಕೋಪಿಸಿ ವಧುವಿಗಾಕ್ಷಣ
ನಿರುತ ಶಾಪವನಿತ್ತೆನೆಂದಳು ಶುಕ್ರನಂದನೆಯು ॥ ೮೨

ಎನಲಿಕಾಶರ್ಮಿಷ್ಠೆ ಕೇಳಿಯೆ
ವಿನಯದಲಿ ಭೂಪತಿಗೆ ನುಡಿದಳು
ತನುಜರಱಿಯದೆ ಮಾತನೆಂದರದೇಕೆ ಶಪಿಸಿದಿರಿ ।
ತನುಜರಿವೆರವರೊಳಗೆ ಭೇದವೆ
ಜನಪ ಬೇಕೈಸೆನಲು ಕೇಳಿಯೆ
ಕನಲಿ ನುಡಿದಪನಧಮತನುಜರ ಮಾತದೇಕೆಂದ ॥ ೮೩

ಎಂದ ಮಾತನು ಕೇಳಿ ಶುಕ್ರನ
ನಂದನೆಯು ಶರ್ಮಿಷ್ಠೆಗೆಂದಪ
ಳಿಂದವರ ಮಾತೇಕದೆಂದಳು ಸುಭಗಸುತೆ ನೀನು ।
ಅಂದದಕೆ ಶರ್ಮಿಷ್ಠೆ ಹರುಷದ
ವೃಂದದಲ್ಲೋಲಾಡಿ ಭೂಪತಿ
ಯಂದು ಪುರುವನು ಹೊಗಳಿ ಯದುವನು ಬೈದು ಕೈಕೊಂಡ ॥

ಯಯಾತಿಯ ತಾರುಣ್ಯ.

ಪುರುವಿನಂಗದ ಪೂರ್ವವಯಸಿನ
ಇರವ ನೆಱೆ ಕೈಕೊಂಡು ಪುರುವಿಗೆ
ಯಿರಿಸಿದನು ತನ್ನಪರವಯಸಿನ ಜರೆಯ ದೇಹವನು ।

ಪರುಠವಿಸೆಲಾಕ್ಷಣವು ತಮ್ಮಯ
ಪುರುಷ ಪ್ರಾಯತನಾಗೆ ಯಿಬ್ಬರ
ಪರಮಹರುಷವನೇನನೆಂಬೆನು ದೇವದಾನವರ ‖ ೮೫

ಪುರುವಿಗೆ ತಾರುಣ್ಯಲಾಭ.

ಅರಸನನು ಬಹುಕಾಲ ಭೋಗಿಸೆ
ಹರುಷದಬ್ಧಿಯೊಳಾಯಯಾತಿಯು
ನಿರುತ ತನ್ನಯ ಜರೆಯು ದೇಹವ ಕೊಂಡು ವೃತನಾದ ।
ಧರಿಸಿದನು ಪುರು ತನ್ನ ಮುನ್ನಿನ
ಪರಮಯೌವ್ವನಸಿರಿಯನಾಕ್ಷಣ
ಹರಿಯಲೀ ಭೃಗುಶಾಪಕಾರಣವೀಧರಿತ್ರಿಯಲಿ ‖ ೮೬

ಹಿರಿಯರಾಶೀರ್ವಾದ ಸಂತತ
ದೊರಕಲಿಕೆ ಪುರುಗಾದಪರಿಯೀ
ನರರ ಶಾಪವು ಯದುವಿಗಿಂದೆಂತಹುದು ಧರಣಿಯಲಿ ।
ನಿರುತ ಯದುಸಂತತಿಗೆ ರಾಜ್ಯೋ
ತ್ಕರುಷವಿಲ್ಲ ನಿಮ್ಮ ಪುರುವಿನ
ವರನೃಪಾನ್ವಯಕಾಯ್ತು ರಾಜ್ಯೈಶ್ವರ್ಯವಿಹಪರದ ‖ ೮೭

ಯದುಗಳನ್ವಯದಲ್ಲಿ ಜನಿಸಿದ
ಪದುಮನಾಭನು ನೃಪರ ಪದವನು
ಮುದದಿ ಕೊಟ್ಟನು ನಿಮಗೆ ಸಂತತರಾಜ್ಯವಿಭವವನು ।
ಮುದದೊಳರ್ಜುನದೇವನೊಳು ನೆಱೆ
ತ್ರಿದಶವಂದಿತಸೇವೆಗೈದಿದ
ವಿದಿತಗದುಗಿನ ವೀರನಾರಾಯಣನ ಮನಮುಟ್ಟ ‖ ೮೮

ಸಂಧಿ ಸಂಪೂರ್ಣಂ.

ಯಯಾತಿಯು ಇಂದ್ರಲೋಕಗಮನ.

ಕೇಳು ಜನಮೇಜಯ ಧರಿತ್ರೀ
ಪಾಲ ನಿಮ್ಮ ಯಯಾತಿ ತನ್ನಯ
ಬಾಲಕನ ಕರೆದಿತ್ತು ತತ್‌ಕ್ಷಣ ವೃದ್ಧವಯಸುವನು ।
ಜಾಳಿಸಿದ ಮಗಗಂದು ಯೌವ್ವನ
ದೇಣಿಗೆಯ ನೆಱೆ ಯಿತ್ತು ತನ್ನಯ
ಕಾಲಕಂದಾ ಅಪರವಯಸುವ ಕೊಂಡು ಬೇಗದಲಿ ॥ ೧

ಪರಮಗಂಗಾದ್ವಾರಕ್ಕೈದಿದ
ಹಿರಿದುಕಾಲಕೆ ಹರಿಪದಾಂಬುಜ
ನಿರುತನಾಗಿಯೆ ವರವಿಮಾನದಲಿಂದ್ರನೋಲಗಕೆ ।

ಯಯಾತಿಯು ತನ್ನ ತಪಃಫಲವನ್ನು ಇಂದ್ರನನ್ನು ಕೇಳುವಿಕೆ.

ತೆರಳಿ ತನ್ನಯ ತಪದ ಸಿರಿಯನು
ಮರಳಿ ಮಗುಳುಸುರಿದನು ಪುನರಪಿ
ಸುರಪತಿಯು ಕೇಳಿದನು ತದನುಷ್ಠಾನಸಂಗತಿಯ ॥ ೨

ಫಲವ ಪಠಿಸುತ್ತಿರಲು ಕೋಪಿಸಿ
ಕುಲಿಶಧರನುಸುರಿದನು ನಿನ್ನಯ
ಬಲುತಪವ ನಾನುಸುರಲರಿಯೆನು ಫಲವ ಕೇಳುವೊಡೆ ।

ಇಂದ್ರನ ಅಪ್ಪಣೆಯಂತೆ ಶಿವನನ್ನು ಕೇಳುವಿಕೆ.

ಅಲಸದೆಯ ಭ್ರದಲಿ ತಮ್ಮಯ
ಹೊಬಲ ಮೇಲಂತಪ್ಪಶೂಲಿಯ
ಪೊಱಲಿಗೈದುವುದಕ್ಕೆ ಕೇಳುವುದಾತ್ರಿಲೋಚನನ ॥ ೩

ನಿನ್ನ ತಪಫಲ ವೆನಲಿಕಾಕ್ಷಣ
ಮನ್ನಿಸಿಯೆ ತಪಲೋಕಕ್ಕೈದಿಯೆ
ಪನ್ನಗಶ್ರೀ ಭೂಷಣಾಂಗನ ಕಂಡು ಬಿನ್ನವಿಸೆ ।

ತನ್ನ ತಪಸಿನ ಫಲದ ಸಿರಿಸಂ
ಪನ್ನತೆಯನುಸುರಲಿಕೆ ಆತನ
ಮನ್ನಿಸಿಯೆ ನೀನೆಂದವೊತನು ಪೇಳಲಾನೆಱಿಯೆ ‖ ೪

ಶಿವನ ಅಪ್ಪಣೆಯಂತೆ ಬ್ರಹ್ಮನನ್ನು ಕೇಳುವಿಕೆ.

ನೃಪ ನಿದಾನವೆ ಕೇಳುವೊಡೆ ನೀ
ತಪದ ಫಲವನ್ನಾ ವಿರಂಚಿಯು
ನುಪಚರಿಸಿ ಕೇಳೆಂದು ಕಳುಹಿದನಾಯಯಾತಿಯನು ।
ತಪದ ಲೋಕದಿ ಸತ್ಯಲೋಕಕೆ
ಅಪಸರಿಯರಾನೃಪನ ರಥದಿಂ
ನಿಪುಣೆಯರು ಕೊಂಡೊಯ್ದು ನಿಂದರು ಬ್ರಹ್ಮನಿದಿರಿನಲಿ ‖ ೫

ಇರಿಸಲಿಕೆ ಬಂದಾಯಯಾತಿಯು
ಸರಸಿರುಹಸಂಭವನ ಕಾಣುತ
ಚರಣಕೆಱಗಿಯೆ ನಿಂದು ಬಿನ್ನಹಮಾಡಿದನು ವಿಧಿಗೆ ।
ಧರಣಿಯಲಿ ತನ್ನಂತೆ ಯಜ್ಞವ
ನೆಱೆಯೆ ಮಾಡಿದನಲ್ಲಿದಾರೆನೆ
ಕೆರಳಿ ನೋಡಿದನಾವಿರಿಂಚಿಯು ನೃಪಯಯಾತಿಯನು ‖ ೬

ಆಗ ಬ್ರಹ್ಮನಕೋಪ.

ನಿನ್ನ ಯಜ್ಞದ ಹದನದೇನೆನೆ
ಮುನ್ನ ಮಾಡಿದ ಸೂರ್ಯವಂಶದ
ಚೆನ್ನರಿದೆ ಪದಿನೆಂಟು ಸಾಸಿರ ಸಗರಮೊದಲಾದ ।
ನಿನ್ನ ಪರಿಯಲಿ ಧರ್ಮ ಕೆಡುಗರ
ನಿನ್ನ ಪರಿಯಂತಱಿಯೆನೀಗಳು
ನಿನ್ನ ಧರ್ಮವ ನೀನು ಕೆಡಿಸಿದೆ ಹೊಗಳಿಯನವರತ ‖ ೭

ಮನುಜಪತಿ ನೀ ಹೋಗು ಧರಣಿಗ
ದೆನಲಿಕಾಕ್ಷಣ ನೃಪವಿಮಾನವ

ಕನಲಿ ಕೆಡಹಲಿಕಾಯಯಾತಿಯು ನಡುಗಿ ಬೇಡಿದನು ।
ವನಜಸಂಭವೆ ತನ್ನಗಾವಿಲ
ತನವ ನೋಡದೆ ನೀವು ನಿಮ್ಮಯ
ಘನತೆಯನು ಮೆಱೆದೀಗ ಕೊಡುವುದು ತನಗೆ ಉತ್ತಮರ ॥ ೮

ಸಂಗವಾಗಲಿ ದೇವ ತನಗೀ
ಭಂಗವಾಗದ ಗರ್ವ ದೊರಕಿದ
ಕಿಂಗಿತವೆ ಕರುಣಿಪುದು ಪೂರ್ವದ ಪಾಪಸಂಗತಿಯ ।

ಆಗ ಪ್ರಾರ್ಥಿಸಲು ವರದಾನ.

ಕಂಗಳಱಿಯುವೆದೆನಲಿಕಾಗಳು
ಅಂಗಜನ ಹಿರಿಯಣ್ಣ ನುಸುರಿದ
ಮಂಗಳಾತ್ಮಕನಾಗಿ ಕಮಲಜನಾಯಯಾತಿಯೊಳು ॥ ೯

ನೀನು ಪೂರ್ವದಿ ರಾಜವೆಂದದಲಿ
ಕಾನನಕ್ಕೆಯು ಮೃಗದ ಕೇಳಿಯ
ತಾನಕ್ಕೆದಲು ಮೋಘವೆದ್ದುದು ಭೂಮಿಲಂಬದಲಿ ।
ಆನಿರೂಢಿಯು ಮಡೆಯು ಕೈಕೊಳ್
ನೀನು ತಿರುಗಿದಿ ಬೇಗಲಂದಾ
ಸೇನೆ ನೆಱೆ ಕಂಗೆಡಲು ಮುಂದಣ ತೊತ್ತಿನಾಲಯವ ॥ ೧೦

ಕಂಡು ಪೋಗೆ ಶರ್ಮಿಷ್ಟೆ ನಿನ್ನನು
ಕೊಂಡು ಬಳಸಲು ನೀನು ಸತಿಯಳ
ಹೆಂಡತಿಯ ನೆಱೆ ಮಾಡಿ ಮಕ್ಕಳ ಪಡೆದ ಕಾರಣದಿ ।
ಭಂಡವಾಯಿತು ಗರ್ವಗಿರಿ ಭೂ
ಮಂಡಲಕೆ ಕಡು ವಾಸಿ ಗರ್ವವ
ಕೊಂಡು ಬಳಸಲು ಕೆಡೆವನುತ್ತಮಲೋಕಕ್ಕೈದುತಲು ॥ ೧೧

ಇದಕೆ ಶೇಷವು ನಿನ್ನ ಪುರುವಿನ
ಸುದತಿ ಯೆಂಬಳ ಕಡೆಯ ತವ್ರುರಲಿ
ಕದನಗರಿಗಳು ಪುಟ್ಟಿ ಪಡೆವರು ಸ್ವರ್ಗಪದವಿಯನು ।
ಅದಕೆ ನೀನಂಜದಿರು ಮರಳಾ
ತ್ರಿದಶಲೋಕವು ನಿನಗೆ ಶಾಶ್ವತ
ಪದುಮನಾಭನ ಚರಣ ನಿನಗಹುದರಸ ಕೇಳೆಂದ ॥ ೧೦

ಧರಣಿಗೈದಿಯೆ ಕೇತುಮಾಲದ
ಪರಮಖಂಡದ ಮಧ್ಯದುಪವನ
ವಿರಲು ಬಂದಪನೆಂದು ಕಂಡನದೊಬ್ಬ ಭೂಸುರನ ।
ಧರಣಿಪತಿ ವೈಯ್ಯಿಕ್ಕಿ ಕೇಳಿದ
ಪರಮಹಂಸರು ಚರಿಸುತಿಪ್ಪಾ
ವರವರಾಶ್ರಮವಾವುದೆನಲಿಕೆ ವಿಪ್ರನಿಂತೆಂದ ॥ ೧೩

ಪರಮಭಾರತಖಂಡಮಧ್ಯದಿ
ನಿರುತ ಭಾರತಕ್ಷೇತ್ರಭೂಮಿಯು
ನರನರಾಯಣರಿಪ್ಪ ವನದಲ್ಲೊಂದುದೇಶದಲಿ ।
ಹರಿಕಥಾಮೃತ ಕೇಳುತಿಪ್ಪರು
ಹರುಷದಲಿ ಮಾಂಧಾತಸಿಬಿನೃಗ
ನರಪರಜಸಾಪರ್ಣಿಸಗರರು ದುಂದುಮಾರುಗಳು ॥ ೧೪

ಕೇಳುವರು ವರ್ಣಾಶ್ರಮಂಗಳ
ಲೋಲಚರಿತವ ನಕುಲಯುತಿವರ
ಭಾಳಲೋಚನನೆಂಬ ಶ್ರೀದೂರ್ವಾಸಮುನಿಯಿಂದ ।
ಕೇಳು ನಡೆ ನೀನವರ ಸಂಗಡ
ಹಾಳಹುದು ನಿನ್ನಧಿಕಗರ್ವವ
ನಾಲಿಸೆಂದೆನೆ ಬಂದನಲ್ಲಿಗೆ ವರನೃಪೋತ್ತಮನು ॥ ೧೫

ನಾನಾಧರ್ಮಸ್ವರೂಪಕಥನ.

ಬರಲು ಮುನ್ನಿ ಸಲಾತನಾತಗೆ
ಹಿರಿದು ಪ್ರತ್ಯುತ್ಥಾನ ಮಾಡಿಯೆ
ಪರಮಭಕ್ತಿಯೊಳಿರಲು ಹೇಳದರಾತಗೊಲವಿನಲಿ ।
ನಿರುತ ನಾನಾಪುಣ್ಯರಾಸಿಯು
ನೆರವಣಿಗೆ ತಂದಿರಿಸಿ ಬ್ರಾಹ್ಮಣ
ವರಸತಿಯು ಬಸುಱಿಂಗೆ ಹಾಕಿದುದು ಹತ್ತುತಿಂಗಳಿಗೆ ॥ ೧೬

ಜನಿಸಿ ಜಾತದ ಕರ್ಮವಾಗಲಿ
ಕನಿತುಹನ್ನೆರಡಾದ ದಿನದಲಿ
ಜನಕಜನನಿಗಳಿಂದ ಹೆಸರಂ ಪಡೆದು ಜೀವಿಸಲು ।
ದಿನವೆಱಿತು ಉಪನಯನವಾಗಲು
ತನುಜನಿಗೆ ಪದಿನಾಱುವತ್ಸರ
ದಿನ ಸವೆಯಲಿನ್ನು ಬರ ಶಾಖೆಯಲಿರುತ ಪರಿಣಯವೆ ॥ ೧೭

ಎಸಗಿ ಷಟ್ಕರ್ಮದಲಿ ನೆಱೆ ಜೀ
ವಿಸುವ ವತ್ಸರವಾಱು ದಶಕವೆ
ನುಸುಳಿ ವಾನಪ್ರಸ್ಥದಿಂದವೆ ತನ್ನ ಮಾನಿನಿಯು ।
ಎಸಗಿ ಕೈವಿಡಿದಿದ್ದ ವಿಷಯವೆ
ವಸುಧೆ ಮೆಚ್ಚಲು ಪುತ್ರನಿಕರಕೆ
ಹಸುಗೆ ಮಾಡಿಯೆ ಹತ್ತುವರುಷವು ತನ್ನ ಮಾನಿನಿಯು ॥ ೧೮

ಬೆನ್ನಲಾಕೆಯು ಕೊಂಡು ನಿಚ್ಚತ
ನನ್ನಿಯಿಲ್ಲದೆ ಯಾಯುವಾರದಿ
ಮನ್ನಿಸುತದೊಬ್ಬ ತಿಥಿಗಿಕ್ಕುತಲೇಕಭುಕ್ತದಲಿ ।
ತನ್ನ ಪರಮೌಪಾಸನಾಗ್ನಿಯ
ಭಿನ್ನವಿಲ್ಲದೆ ಬೇಳ ರಾತ್ರಿಯು
ಕನ್ನೆಯಲಿ ವಿಜಿತೇಂದ್ರಿಯಂಗಿದು ಬದುಕು ಲೋಕದಲಿ ॥ ೧೯

ತಂದು ಪುತ್ರನ ಕೈಯ್ಯಲಿತ್ತಾ
ಚಂದ್ರವದನೆಯನುಳಿದು ಬಳಿಕಾ
ಬಂದು ಸದ್ಗುರುರಾಜನಂಘ್ರಿಯ ಭಜಿಸಿ ಪರಗತಿಯ ।
ಮಂದಿರವ ಸಾಲಿಲಿಕೆ ದೇವಕಿ
ನಂದನನ ನೆಱಿ ಸರ್ವಜಗತಿನ
ತಂದೆಯೆಂಬನ ಸಾಱಿ ಸನ್ಯಾಸಾಶ್ರಮಂಗಳನು ॥ ೨೦

ಆವನೊಬ್ಬನು ತನ್ನ ವೃತ್ತಿಯ
ಠಾವಿನಲಿ ನೆಱಿ ರಾಹುಪರ್ವದಿ
ಭಾವದಲಿ ಭೂಸುರಗೆ ವೊಂದೇ ಧೇನುದಾನವನು ।
ಆವ ಮಾಡುವನವನು ಕೃಷಿಯುಹ
ನಾವಿದಗ್ಧಗೆ ಜನಿಸಿ ಬೆಳದತಿ
ಜೀವಿಸುತ ಭೂಸುರರಿಗಿಳೆಯನು ಬಿತ್ತಿ ಕೊಡುತಿರಲು ॥ ೨೧

ಆತಗಹುದೈ ಬಳಿಕ ಮುಂದಕೆ
ನೀತಿಯಲಿ ತಾ ವೈಶ್ಯಜಾತಿ
ವ್ರಾತದಲಿ ಜನಿಸುವನು ನಾನಾಗಣದ ರಾಸಿಯಲಿ ।
ಭೂತಳದೊಳಿರುತಲ್ಲಿ ಧನಗಳ
ವ್ರಾತದಲಿ ಬದುಕುವನು ಬದುಕುತ
ಪ್ರೀತಿಯಲಿ ಭೂಸುರರ ತನುಜಗೆ ಪೂರ್ವಕರ್ಮವನು ॥ ೨೨

ಮಾಡಿಸಿದ ವರ ವೈಶ್ಯನೈದುವ
ರೂಢಿಯಲಿ ಜನ್ಮವನು ರೂಢಿಪ
ನೋಡೆ ನೊಡೀವಿಪ್ರನೊಬ್ಬಗೆ ವರವಿವಾಹವನು ।
ಮಾಡಲಿಕೆ ಭೂಸುರರು ಜನ್ಮಕೆ
ನೀಡುವನು ತನ್ನುತ್ತಮಾಂಗವ
ರೂಢಿಯಲಿ ಹದಿನೆಂಟು ಜಾತಿಯ ಜೀವಪರಿವಿಡಿಯ ॥ ೨೩

ಮಾಡಲಿಕೆ ತವು ತಮ್ಮ ಜಾತಿಯು
ಕೇಡಗಾಂಬರು ಹೊಲೆಯನೊಮ್ಮೆಯು
ಪಾಡಲಿಕೆಯರವಿಂದನಾಭನ ನಾಮಮಾತ್ರದಲಿ ।
ರೂಢಿಸಿ ಯೆನುತ ಚರ್ಮಕಾಟಿಟಿ
ಗೂಡಿನಲಿ ಜನಿಸುವೆನು ಬ್ರಾಹ್ಮರ
ನೋಡಿ ಪಾದತ್ರಾಣವೀಯ್ಯಲು ರಜಕಜಾತಿಯಲಿ ॥ ೨೪

ಕೂಡುವೆನು ಬಟಿಕವೆನು ವಿಪ್ರರ
ನೋಡಿ ವಸ್ತ್ರವನೊಗೆಯೆ ಭಿಲ್ವರ
ಜಾತಿಯಲಿ ಜನಿಸುವೆನು ಜನಿಸಲಿಕವನು ಮಗಳೊಮ್ಮೆ ।
ಕಾಡಿನಲಿ ಭೂಸುರರ ಭಯುವೆನು
ನೋಡಿ ಮಾಣಿಸೆ ಕುಱುಬಜಾತಿಯು
ಲಾಡುವೆನು ಆಕುಱುಬನೊಬ್ಬಗೆ ವೊಂದುಕಂಬಳಿಯು ॥ ೨೫

ಭೂಸುರಂಗದನೀಯ್ಯೆ ಬಟಿಕವೆ
ನೀಸವೆನು ನರಕಂಬಿಯಾದುದು
ಬೀಸಣಿಗೆ ವೊಂದುವೆನು ಗ್ರೀಷ್ಮದ ರುತುವಿನೆಡೆಗಳಿಗೆ ।
ಭೂಸುರಂಗವೆನೀಯೆ ಆಟಿವುದು
ಈಶನಾಗೆ ಯೊಳವನು ಜನಿಸುವ
ದೇಶದೇಶವ ತೊಳಲಿ ಕೊಂಬನು ದೇಹದೊಳವನು ಭೂಸುರನ॥

ಕಾಣುತವೆ ಕೈಮುಗಿಯೆ ತನ್ನಯು
ಪ್ರಾಣವೆಟಿದಾ ಬಟಿಕ ಜನಿಸುವೆ
ಮಾಣದಾದ್ವಿಜನ ಕುಲದಿಂ ದೊಬ್ಬಭೂಸುರಗೆ ।
ಜಾಣಿನಲಿ ವೊಬ್ಬಮಳವಿಪ್ರಗೆ
ಕ್ಷೋಣಿಯಲಿ ವೈವಾಹಮಾಡಲು
ಪ್ರಾಣವೆಟಿದಾ ಚಕ್ರಜಾತಿಯೊಳ್ಪದೆ ತಾ ಜನಿಸಿ ॥ ೨೭

ಮಾಡಿ ಭಾಂಡವದಾತನಾಗಳು
ನೋಡೆ ವಿಪ್ರವಿವಾಹಕಾಲದಿ
ಬೇಡಿದೈಸುವ ತಾನು ನಡೆಸುತ್ತಿರಲು ಭಾಂಡಗಳ ।
ನಡೆಸಿ ಬಿಡುವನು ತನ್ನ ಜನ್ಮವ
ದೃಢದಿ ಜನಿಸುವನವನು ವಿಶ್ವಕ
ನೊಡಲಿನಲಿ ಬಟಕಲ್ಲಿ ಬೆಳೆಯಲು ವಿಪ್ರಜಾತಿಯೊಳು ॥ ೨೮

ಆವನೊಬ್ಬನದೊಂದು ಗೃಹವನು
ಹೋವಿ ಮಾಡಲು ಅವನು ಮುಚ್ಚಿಗ
ರಾವಿನಲಿ ಜನಿಸುವನು ಸಾತ್ವಿಕಭಾವದೇಟ್ಗೆಯಲಿ ।
ಓದಿ ವಿಪ್ರನ ಸುತನ ಮುಂಜಿಗೆ
ತೀವಿದೈಸನು ಯಿತ್ತು ಮಾಡಿಸ
ಲಾವಿಗಡ ಜನಿಸುವನು ಚಿಪ್ಪಿಗನಾಗಿ ಧರಣಿಯಲಿ ॥ ೨೯

ಬಂದುಕುಪ್ಪಸವಾತ ವಿಪ್ರಗೆ
ತಂದು ಕೊಡಲಿಕ್ಯಾತಗಾಗಳು
ಮುಂದೆ ಜನ್ಮಾಂತರಕೆ ಜನಿಸುವ ಮನ್ನೆಯಂಗದೊಳು ।
ಅಂದು ಮನ್ನೆಯ-ನಾದ ಮನುಜನು
ಬಂದು ಬ್ರಾಹ್ಮರ ಊರ ಕಾಯಲು
ಮುಂದೆ ಜನಿಸುವನವನು ಪಂಚಮನಾಗಿ ಧರಣಿಯಲಿ ॥ ೩೦

ಎಂಬ ವರ್ಣಾಶ್ರಮದ ಧರ್ಮವ
ನಿಂಬಿನಲಿ ನೆಟಿ ಕೇಳಿ ಬಟಕ ತ್ರಿ
ಯಂಬಕನು ನೆಟಿ ಹೇಟಿದಂದವ ಕೇಳಿ ನೃಪರೆಲ್ಲ ।
ತುಂಬಿದಗ್ಗದ ಧರ್ಮಸಾರವ
ನಂಬುಜಾಕ್ಷನು ಮೆಚ್ಚಿ ತನ್ನೊಳ
ಗಿಂಬಿನಲಿ ಹುದುಗಿದ್ದ ಹಮ್ಮನು ಕಳದು ನಿಮಿಷದಲಿ ॥ ೩೧

ಬಂದುದಲ್ಲಿಗೆ ನಾಲ್ಕುಘಂಟಾ
ಬಂಧುರದ ಪುಷ್ಪಕವು ನಿಮಿಷಕೆ
ತಂದರಮರಾಂಗನೆಯರಾಗಳು ಭೂಪರೆಲ್ಲರಿಗೆ ।
ಅಂದು ಹರಿಪದಧ್ಯಾನದಿಂದವೆ
ಬಂದರಾಕ್ಷಣ ದೇವಲೋಕದೆ
ಸಂದನೈ ನಿಮ್ಮಾಯಯಾತಿಯು ನಿತ್ಯಸುಖಗಳನು ॥ ೩೦

ಇದು ಕಥಾ ಸತ್ಸಂಗಕಾರಣ
ಇದನು ಮಾಡಿದ ಮನುಜಜಾತಿಗೆ
ತ್ರಿದಶಗೇಹಗಳಲ್ಲ ನಿಜವಾಗರಸ ಕೇಳೆಂದ ।
ಮುದದಿ ನಿಮ್ಮಯ ಪೂರ್ವಪುರುಷರ
ಅದಟುತನವನು ಕೇಳು ಜನಿಸುಗು
ತ್ರಿದಶಲೋಕವು ವೀರನಾರಾಯಣನ ಕರುಣದಲಿ ॥ ೩೩

ಸಂಧಿ ಸಂಪೂರ್ಣ.

# ಶೋಧನ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 4 | 17 | ಯಾನ್ನು | ಯುವನ್ನು |
| 9 | 8 | ರೂಟಿಗವನು | ರೇಟಿಗೆಯುನಾ |
| 11 | 15 | ದ್ರುಗು | ದೃಗು |
| ,, | 18 | ಕಂಪಿತವ | ಕಂಪಿತದ |
| 13 | 5 | ಮೇಣೀ | ಮೇಣೊ |
| ,, | 20 | ಧರ | ಧರ |
| 14 | 13 | ರೊಡನೆ | ರೊಡನೆಪರಿ |
| ,, | 14 | ಪರಿಕರರು | ಕರರು |
| 15 | 16 | ಮಂತ್ರವೇ | ಮಂತ್ರಕೆ |
| 16 | 2 | ತಮ್ಮಯು | ತಂತ |
| ,, | 3 | ಯೊಳಗೆ | ವ್ರೊಳಗ |
| 28 | 5 | ದಲಿ | ದಲಿಕಲು |
| ,, | 6 | ಕಲುಮುಳು | ಮುಳು |
| 37 | 13 | ವಾರಿತವು | ವಾರಿತವ |
| 42 | 6 | ಖರ | ಖರು |
| 43 | 8 | ಭಿಕ್ಷೆಯುತ | ಭಿಕ್ಷೆಯು |
| ,, | 9 | ರಲು | ತಳೆವ |
| 45 | 25 | ವುಡಿಂ | ವೊಂಡಿ |
| 54 | 20 | ರುಱ | ರುರು |
| 55 | 15 | ಹೊಱೆಯು | ಹೊರೆಯು |
| 58 | 22 | ದುಱ | ದುರು |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 59 | 5 | ಊಱು | ಊರು |
| 61 | 6 | ಯುಱು | ಯುರು |
| 61 | 8 | ಮೊಕ್ಬಲಿಕ | ಮೊಕ್ಬಲು |
| ,, | 9 | ವರು | ಖರರು |
| ,, | 10 | ಲುಱು | ಲುರು |
| ,, | 11 | ಹಿದಿದ | ಹಿಡಿದ |
| ,, | 17 | ಕ | ಕೈ |
| 63 | 15 | ಗಳೆ | ಗ |
| 65 | 1 | ಬಕವಧ | ಚೈತ್ರರಥ |
| 66 | 17 | ವೃತಾಂ | ವೃತ್ತಾಂ |
| 67 | 1 | ಬಕವಧ | ಚೈತ್ರರಥ |
| 69 | 1 | ಬಕವಧ | ಚೈತ್ರರಥ |
| ,, | 22 | ಸಲೆ | ಸಲೇ |
| 70 | 5 | ಸ್ವಯುಂ | ಸ್ವಯುಂವರ |
| ,, | 6 | ವರಕರ | ಕರೆ |
| ,, | 24 | ವರಣವೊ | ವರಣವೋ |
| 71 | 1 | ಬಕವಧ | ಚೈತ್ರರಥ |
| ,, | 2 | ವಾಡ | ವಾಡು |
| 73 | 9 | ಝುಣ | ಝುಣಝುಣ |
| 77 | 2 | ದ್ರುಪದ | ದ್ರುಪದನ |
| 79 | 1 | ಸುಕ್ಷೇ | ಸುಕ್ಷಾ |
| ,, | 19 | ಸುಜನ | ನಾಸುಜನ |
| 80 | 20 | ಕಾರಣವು | ಕಾರಣ |
| 83 | 19 | ವಶಿಷ | ವಶಿಷ್ಠ |
| 88 | 16 | ಡಣಲಿ | ಡುಣಲಿ |
| 100 | 12 | ಹಸ್ನ | ಸ್ನಹ |
| 105 | 4 | ವಸಿಷ್ಠರ | ಜಮದಗ್ನಿಯು |
| 133 | 12 | ಗೆಸ | ಗೆಸೆ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 134 | 5 | ಗೆಲಲುವ | ಗೆಲುವ |
| 140 | 19 | ಸೆರದಿಹ | ನೆರೆದಿಹ |
| 141 | 13 | ವರ್ | ವರು |
| 144 | 23 | ತ್ಸ್ಯಾವ | ಥ್ಯಾವ |
| 147 | 6 | ವಿದರೊಂ | ವಿದಱೊಂ |
| 173 | 14 | ಘೊರೊಳೆು | ಘೋರೋಳು |
| 174 | 3 | ಕೋವಾ | ಕೋವು |
| 219 | 23 | ಪುರುಷ | ಪುರುಷರು |
| ,, | ,, | ಪಂಚಕರಾ | ಪಂಚಕವಾ |
| 220 | 17 | ಸುರನ | ಸುರ |
| 226 | 3 | ಪೋರ | ಪೊರ |
| 231 | 10 | ಬಿಸಿಲು | ಬಿಸಿಲುನೆರೆ |
| 238 | 23 | ಘನ | ಘನಸಂ |
| ,, | 24 | ಸಂವಾದ | ವಾದ |
| 239 | 4 | ನ್ಯೊನ್ಯ | ನ್ಯೋನ್ಯ |
| ,, | 6 | ರೈದುವ | ರೈದು |
| ,, | 7 | ಪುರದೊ | ಪುರದೊಳ |
| ,, | 8 | ಳತೀತ | ತೀತ |
| 249 | 19 | ಕೇಟಿ | ಕೇಳಿ |
| 254 | 21 | ಬಂದನುವ | ಬಂದನು |
| 260 | 20 | ಯುರೊ | ಯುರೋ |
| 263 | 11 | ಮಾ | ಮಾಡಲಿ |
| ,, | 12 | ಡಲುತರಣಿ | ಕಿನನು |
| ,, | ,, | ಶೈಲಕ್ಕೆ | ಶೈಲದೊಳಿ |
| 264 | 19 | ಕವು | ಕರ್ವು |
| 268 | 25 | ರಾಗ್ರ | ರಾಗ್ರಹ |
| 286 | 25 | ನುಬಿ | ನುಬ್ಬಿ |
| 310 | 12 | ದಲಿಯಿಾ | ದೊಳಗೀ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 312 | 18 | ನೀವು | ನೀವ್ |
| ,, | 23 | ನೋಡು | ನೋತು |
| 318 | 14 | ದೈತ್ಯರ | ದೈತ್ಯರ |
| 328 | 15 | ಹೊಱವಂಟ | ಹೊಱಟ |

337 ನೆಯ ಪುಟದ ಪ್ರಾರಂಭದಲ್ಲಿ

ಸೂಚಕನೆ.

ಸುರಪುರಕೆ ಹೋಗುವ ಯಯಾತಿಯು
ಮರಳಿ ತಿರುಗಿದ ನೀಧರಿತ್ರಿಗೆ
ಹಿರಿದಹಂಕಾರಿಸಲು ಬಿದ್ದನು ವರತಪೋವನಕೆ ॥

**Government Oriental Library Series**

EDITED BY PANDITS UNDER THE SUPERVISION OF THE CURATOR, GOVERNMENT ORIENTAL LIBRARY, MYSORE.

Kannada Section No. VI

ಕುಮಾರವ್ಯಾಸಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

೩ನೆಯ ಸಂಪುಟ

## ಸಭಾಪರ್ವ

THE

# KARNATAKA MAHABHARATA

BY

KUMARAVYASA MAHAKAVI

**Volume III**

## SABHAPARVA

EDITED BY

V. SYAMACHARYA

*Pandit, Govt. Oriental Library, Mysore*

PUBLISHED UNDER THE AUTHORITY OF THE GOVERNMENT OF HIS HIGHNESS THE MAHARAJA OF MYSORE

MYSORE:
PRINTED AT THE GOVERNMENT BRA[illegible] PRESS
1915.

# ಅವತರಣಿಕೆ

ಈ ಪುಸ್ತಕವು ಕರ್ಣಾಟಕಮಹಾಭಾರತದ ಮೂರನೆಯ ಸಂಚಿಕೆಯಾಗಿ ಇರುವುದು. ಈ ಗ್ರಂಥಕಾರನಾದ ಕುಮಾರವ್ಯಾಸನ ವಿಷಯದಲ್ಲಿಯೂ ಆತನ ಭಾಷಾವಿಷಯದಲ್ಲಿಯೂ ಆವಶ್ಯಕವಾಗಿ ತಿಳಿಸಬೇಕಾದ ವಿಷಯಗಳೆಲ್ಲಾ (ಕನ್ನಡ ಸೆಕ್ಷನ್ ನಂಬರು 3—4ನೆಯವುಗಳಾದ) ಉಪೋದ್ಘಾತಸಂಚಿಕೆ ಮತ್ತು ಸಂಭವಪರ್ವ ಇವುಗಳ ಅವತರಣಿಕೆಯಲ್ಲಿ ಹೇಳಲ್ಪಟ್ಟಿವೆ. ಆದುದರಿಂದ ಈ ಪುಸ್ತಕದಲ್ಲಿ ಅಡಗಿರುವ ಗ್ರಂಥಕ್ಕೆ ಸಂಬಂಧಿಸಿದ ವಿಶೇಷಾಂಶಗಳನ್ನು ಮಾತ್ರ ಹೇಳುವುದು ಈಗ ಆವಶ್ಯಕವಾಗಿದೆ.

ಈ ಪುಸ್ತಕದಲ್ಲಿ ಸಭಾಕ್ರಿಯಾಪರ್ವ 1 ಸಭಾಖ್ಯಾನಪರ್ವ 2 ರಾಜಸೂಯಾರಂಭಪರ್ವ 3 ಜರಾಸಂಧವಧಪರ್ವ 4 ದಿಗ್ವಿಜಯಪರ್ವ 5 ರಾಜಸೂಯಿಕಪರ್ವ 6 ಅರ್ಘಾಹರಣಪರ್ವ 7 ಶಿಶುಪಾಲವಧಪರ್ವ 8 ದ್ಯೂತಪರ್ವ 9 ಅನುದ್ಯೂತಪರ್ವ 10 ಎಂದು ಹತ್ತು ಪರ್ವಗಳು ಅಡಗಿವೆ.

ದಿಗ್ವಿಜಯಪರ್ವದಲ್ಲಿ ರಾಜಸೂಯಯಾಗದ ಕ್ರಮಗಳನ್ನು ವರ್ಣಿಸುವಾಗ, ಯಾಗದಲ್ಲಿ ಕೆಲವು ಕಾರ್ಯಗಳನ್ನು ನಿರ್ವಹಿಸುವುದಕ್ಕೋಸ್ಕರಪುರುಷಮೃಗವೆಂಬ ಪ್ರಾಣಿಯನ್ನು ಕರೆತರುವುದಕ್ಕಾಗಿ ಭೀಮಸೇನನನ್ನು ಕಳುಹಿಸಿದ ಹಾಗೂ, ಭೀಮಸೇನನು ಅದನ್ನು ಕರೆತಂದು ಕಾರ್ಯನಿರ್ವಾಹವನ್ನು ಮಾಡಿದ ಹಾಗೂ ವರ್ಣಿಸಲ್ಪಟ್ಟಿದೆ. ಈ ಕಥೆಯು ಸಂಸ್ಕೃತಮಹಾಭಾರತದಲ್ಲಿ ಕಾಣುವುದಿಲ್ಲ. ಆದರೆ ಈ ಕಥೆಯು ಜೈಮಿನಿಭಾರತದಲ್ಲಿ ಇರುವುದಾಗಿ ಕೂರೇಶವಿಜಯದ ಮೂರನೆಯ ಶ್ಲೋಕದಲ್ಲಿರುವ "ಹನುಮತಃ ಪುಚ್ಛರೋಮೋಶ್ಚರತ್ವಾತ್" ಎಂಬ ಪದಗಳ ವ್ಯಾಖ್ಯಾವಸರದಲ್ಲಿ ನಿರೂಪಿಸಲ್ಪಟ್ಟಿದೆ. ಆದರೆ ಆ

ಗ್ರಂಥದಲ್ಲಿ ಮಾತ್ರ ಪುರುಷಮೃಗವೆಂದು ದೀರ್ಘರಹಿತವಾಗಿ ಪ್ರಯೋಗಿಸಲ್ಪಟ್ಟಿರುವುದು. ಷಡಕ್ಷರಿದೇವಕೃತ ರಾಜಶೇಖರಗ್ರಂಥದ ಪ್ರಥಮಾಶ್ವಾಸದ 135 ನೆಯ ಗದ್ಯದಲ್ಲಿ "ಪರಿವ ಪುರುಷಾಮೃಗಗಳಿಂ" ಎಂದು ಪರ್ವತವರ್ಣನಪ್ರಸ್ತಾವದಲ್ಲಿ, ಮಹಾಭಾರತದಲ್ಲಿಯೂ ಇತರ ಕನ್ನಡ ಗ್ರಂಥಗಳಲ್ಲಿಯೂ "ಪುರುಷಾಮೃಗ" ವೆಂತ ದೀರ್ಘಸಹಿತವಾಗಿಯೂ ಪ್ರಯುಕ್ತವಾಗಿದೆ. ಪುರುಷಮೃಗವೆಂದರೂ ಪುರುಷಾಮೃಗವೆಂದರೂ ಅರ್ಥಭೇದವಿರುವುದಿಲ್ಲ. ಪುರುಷಮೃಗವೆಂದರೆ ಪುರುಷಾಕಾರವೂ ಮೃಗಾಕಾರವೂ ಉಳ್ಳದ್ದೆಂತ ಅರ್ಥ. ಪುರುಷಾಮೃಗವೆಂಬುದರಲ್ಲಿ ಪುರುಷಪದವೂ ಆಮೃಗಪದವೂ ಸೇರಿ ಇದೆ. ಆಮೃಗ ಎಂಬುದಕ್ಕೆ ಸ್ವಲ್ಪ ಮೃಗಾಕಾರವುಳ್ಳದ್ದೆಂತ ಅರ್ಥ. ಆದುದರಿಂದ ವಿರೋಧವಿರುವುದಿಲ್ಲ.

ಈ ಪುಸ್ತಕದಲ್ಲಿ ಪ್ರಚುರಿಸಿರುವ ಪಾಠಗಳು ಪ್ರಾಯಿಕವಾಗಿ ಇದುವರೆಗೂ ಮುದ್ರಿತವಾಗಿರುವ ಪುಸ್ತಕಗಳಿಗೆ ಅನುಸಾರವಾಗಿಯೇ ಇರುತ್ತವೆ.

ಈ ಸಂಚಿಕೆಯ ಶೋಧನಕ್ಕಾಗಿ ಉಪಯೋಗಿಸಿರುವ ಪುಸ್ತಕಗಳು ಕನ್ನಡ ಸೆಕ್ಷನ್ ನಂಬರು V ನೆಯದಾದ ಎರಡನೆಯ ಸಂಪುಟಕ್ಕೆ ಉಪಯೋಗಿಸಿದುವುಗಳಾಗಿಯೇ ಇರುತ್ತವೆ.

ನಮ್ಮಿಂದ ಸಾಧ್ಯವಾದವರೆಗೂ ಬಹುಪುಸ್ತಕಗಳ ಸಹಾಯದಿಂದ ಶೋಧನಕಾರ್ಯವು ನಡೆಸಲ್ಪಟ್ಟಿದೆ. ಪ್ರಾಮಾದಿಕದೋಷಗಳೇನಾದರೂ ಇದ್ದರೆ ಸಜ್ಜನರು ಗುಣೈಕದೃಷ್ಟಿಗಳಾಗಿ ಅವುಗಳನ್ನು ಲಕ್ಷ್ಯಕ್ಕೆ ತಾರದೆ, ಸಂತೋಷಪಡುವರೆಂದು ನಂಬಲ್ಪಟ್ಟಿದೆ.

# ವಿ ಷ ಯ ಸೂ ಚಿ ಕೆ .

೩ ನೆಯ ಸಂಧಿ—

ವಿಷಯು ಪುಟ

೫ ನೆಯು ಸಂಧಿ—



೬ ನೆಯು ಸಂಧಿ—

೯ ನೆಯ ಸಂಧಿ—



೧೦ ನೆಯ ಸಂಧಿ—

| ವಿಷಯ | ಪುಟ |
|---|---|

ಶ್ರೀ

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ
# ಸಭಾಪರ್ವ.

## ತೃತೀಯ ಸಂಪುಟ

## ಒಂದನೆಯ ಸಂಧಿ

ಸೂಚನೆ

ಸಭೆಯೊಳೋಲಗದೊಳು ವಿರಿಂಚಿ
ಪ್ರಭವನನುಮತದಿಂದ ಧರಣೀ
ವಿಭು ಮಹಾಕ್ರತುರಾಜಸೂಯವನೊಲಿದು ಕೈಕೊಂಡ ||

ಖಾಂಡವವನದಹನಾನಂತರ ಪುರಪ್ರವೇಶ.

ಕೇಳು ಜನಮೇಜಯ ಧರಿತ್ರೀ
ಪಾಲ ಖಾಂಡವವನದ ವಹ್ನಿ
ಜ್ವಾಲೆ ತೆಗೆದುದು ಕೂಡೆ ಹೊಗೆದುವು ಹೊದಱ ಹೊಸಮೆಳೆಯ
ಮೇಲುಕಾಳಗದುಬ್ಬಿನಲಿ ಸಿರಿ
ಲೋಲ ಸಹಿತರ್ಜುನನು ವಿಕ್ರಮ
ದೇಳಿಗೆಯ ಪರಿತೋಷದಲಿ ಮರಳಿದನು [1] ಪಟ್ಟಣಕೆ ||

1 ತಿರುಗಿದನು, ಚ.

ದೂತರೈದಿದರಿವರ ಸೂಚಿಯ
ಕೈತವಕಿಗರು ಕೃತಕವಾರ್ತಾ
ಭೀತಪುರಜನಮುಖದ ದುಗುಡದ ದಡ್ಡಿಗಳನುಗಿದು ।
ಚೀತುದಿಂದ್ರನ ಬಲುಹು ವಿಗಡನ
ವೀತಿಹೋತ್ರನ ವೀಗ ತಿದ್ದಿ ವಿ
ಧೂತರಿಪುಬಲ ಬಂದನಿದೆ ಯೆಂದರು ಮಹೀಪತಿಗೆ ॥ ೧

ಪೂತುವರಸನ ಪುರುಷಲತೆ ಪುರು
ಹೂತವಿಜಯದ ವಿಜಯವಾರ್ತಾ
ಶ್ರೋತ್ರಸುಖಸಂಪ್ರೀತಿ ನಯನಜಲಾಭಿಷೇಕದಲಿ ।
ಮಾತು ಹಿಂಚಿತು ಮುಂಚಿದುದು ನಯ
ನಾತಿಥಿವ್ರಜ ಮುಸುಕಿತಸುರಾ [1]
ರಾತಿಪಾರ್ಥರ ಧರ್ಮಸುತಭೀಮಾದಿ [2] ಬಾಂಧವರ ॥ ೨

ತಳಿತಗುಡಿಗಳ ಸಾಲಕಳಸದ
ಸಿಳಮಿಸಿಳಯುವ ಬೀದಿಬೀದಿಯ
ತಳಿರ ತೋರಣದೋರಣದ ನವಮಕರತೋರಣದ ।
ತಳಿಗೆದಂಬುಲದಾರತಿಯ ಮಾಂ
ಗಳಿಕರಭಸದ ಲಲಿತಲಾಜಾ
ವಳಿಗಳೊಸಗೆಯ ಮಲಿದೆರು ಹೊಕ್ಕರು ರಾಜಮಂದಿರವ ॥ ೪

ಹಿರಿಯರಂಘ್ರಿದ್ವಯಕೆ ಮಣಿದರು
ಕಿರಿಯರುಚಿತಕ್ಷೇಮಕುಶಲದಿ
ಪರಿರಚಿತಪರಿರಂಭಮಧುರವಚೋವಿಲಾಸದಲಿ ।

---

[1] ಮಸುಕಿತಸುರರಿಪು, ಖ. ಡ. ಚ.

[2] ರಾತಿಪಾರ್ಥರನನಿಲಸುತನಕುಲಾದಿ, ಖ. ಡ. ಚ.

ಅರಸನಿವರನು ಮನ್ನಿಸಿದನಾ
ದರಿಸಿತನ್ಯೋನ್ಯಾನುರಾಗ
ಸ್ಫುರಿತತೇಜೋಭಾವವಿಭ್ರಮಭೂಪತಿವ್ರಾತ ॥ ೫

ಶ್ರೀಕೃಷ್ಣನು ದ್ವಾರಕೆಗೆ ಹೊರಡುವಿಕೆ.

ಅರಸ ಕೇಳ್ಬಳಿಕ ಹರಿ ನಿಜ
ಪುರಕೆ ಬಿಜಯಂಗೈವವಾರ್ತೆಯ
ನೊರೆದನವನೀಪತಿಗೆ ಭೀಮಧನಂಜಯಾದ್ಯರಿಗೆ ।
ಅರಸಿಯರಿಗಭಿಮನ್ಯುಧರ್ಮಜ
ನರವೃಕೋದರಸೂನುವೊವಲಾ
ಗಿರೆ ಸಮಸ್ತಜನಂಗಳನು ಮನ್ನಿಸಿದನುಚಿತದಲಿ ॥ ೬

ವರಮುಹೂರ್ತದೊಳಮೃತಯೋಗೋ
ತ್ಕರಶುಭಗ್ರಹದೃಷ್ಟಿಯಲಿ ಹಿಮ
ಕರಸುಖಾ [1] ವಸ್ಥೆಯಲಿ ಕೇಂದ್ರಸ್ಥಾನಗುರುವಿನಲಿ ।
ಧರಣಿಸುರರಾಶೀರ್ವಚನವಿ
ಸ್ತರಣದಧಿದೂರ್ವಾಕ್ಷತೆಗಳು
ಬ್ಬರದ ವಾದ್ಯಘಡಾವಣೆಯಲಸುರಾರಿ ಹೊರವಂಟ ॥ ೭

ಕರಯುಗದ ಚಮ್ಮಟಿಕೆ ವಾಘೆಯ
ಲರಸ ರಥವೇರಿದನು ಮುಕ್ತಾ
ಭರದ ಛಾರಿಯ ಸತ್ತಿಗೆಯ ಪಲ್ಲವಿಸಿದನು ಭೀಮ ।
ಹರಿಯುಭಯಪಾರ್ಶ್ವದಲಿ ಸಿತಚಾ
ಮರವ ಚಿಮ್ಮಿದನರ್ಜುನನು ಬಂ
ಧುರದ ಹಡಪದ ಹೆಗಲಲಿದ್ದರು ನರ್ಜುನಾನುಜರು ॥ ೮

ಪೌರಜನಪುರಜನನೃಪಾಲಕು
ಮಾರಸಚಿವಪಸಾಯ್ತಭಟಪರಿ
ವಾರಧೌಮ್ಯಪ್ರಮುಖಸೂರಿಸಮಾಜವೊಗ್ಗಿನಲಿ ।

---

[1] ಶುಭಾ, ಚ. ಛ

ತೇರಬಿಟ್ಟವಿಡಿದೈದಿವರು ಮುರ
ವೈರಿವಿರಹವಿದೂನವದನಾಂ
ಭೋರುಹರ ಸಂತೈಸಿ ನುಡಿದನು ನಗುತ ಮುರವೈರಿ [1] ‖ ೯

ಅರಿನೃಪರು ಕುಹಕಿಗಳು ನೀವೇ
ಸರಸಹೃದಯರು ಧರ್ಮದೂರರು
ಪರರು ನೀವೇ ಧರ್ಮನಿಷ್ಠರು ಹಾನಿಯುಂಟವಕೆ ।
ಅರಸನಾರೋಗಣೆ ವಿಹಾರದೊ
ಳಿರುಳು ಹಗಲು ಮೃಗವ್ಯಸನದೆ
ಚರರಿನೊಳಿಹುದೆಂದಸುರರಿಪು ಬೀಳ್ಕೊಟ್ಟನಿನಿಬರನು ‖ ೧೦

ನಾಲಿಗೆಗಳಸುರಾರಿಗುಣನಾ
ಮಾಳಿಗಳ ಪೊಗಳುದುವು [2] ಕಂಗಳು
ನೀಲಮೇಘಶ್ಯಾಮನಲಿ ಬೆಚ್ಚವು ವಿಹಾರದಲಿ ।
ಬಾಲಕೇಳೀಕಥನಸುಧೆಯೊಳ
ಗಾಲಿ ಮುಳುಗಲು ಕಿವಿಗಳನಿಬರು
ಸಾಲಭಂಜಿಕೆಯಂದವಾದರು ಕೃಷ್ಣವಿರಹದಲಿ [3] ‖ ೧೧

ಕಳುಹಿ ಕಂಗಳು ಮರಳಿದುವು ಮನ
ಕಳುಹದಾದ್ವಾರಾವತಿಗೆ ಮಂ
ಗಳಮಹೋತ್ಸವದೊಸಗೆನುಡಿಯಲಿ ಹೊಕ್ಕನಸುರಾರಿ ।
ಬಳಿಕಿವರು ನಿಜರಾಜಭವನ
ಸ್ಥಳಕೆ ಬಂದರು ಸೌಮನಸ್ಯದ
ಲಿಳೆಯ ಪಾಲಿಸುತಿರ್ದರವನೀಪಾಲ ಕೇಳೆಂದ ‖ ೧೨

ಕೃಷ್ಣನ ಅಪ್ಪಣೆಯಂತೆ ಮಯನು ಸಭೆಯನ್ನು ನಿರ್ಮಾಣ ಮಾಡುವಿಕೆ.

ಮುರಹರನ ನೇಮದಲಿ ಮಯ ವಿ
ಸ್ತರಿಸಿದನು ಹದಿನಾಲ್ಕು ತಿಂಗಳು

---

1 ಬೀಳ್ಕೊಟ್ಟನು ಕೃಪಾಜಲಧಿ, ಖ. ಡ. ಚ

2 ಪಾಳಿಯಲಿ ತುಳುಗಿದುವು, ಖ, ಡ, ಚ.

3 ಹೃದಯದಲಿ, ಖ,

ವರಸಭಾಮಂಟಪವನನಿಬರಿಗವ ವಿಚಿತ್ರದಲಿ [1] |
ಕಿರಣಲಹರಿಯ ವಿವಿಧರತ್ನೋ
ತ್ಕರದ ರಚನಾಶಿಲ್ಪವಿದು ದೇ
ವರಿಗಸಾಧ್ಯವು ಶಿವಶಿವಾಯೆನೆ ಮೆಱೆದುದಾಸ್ಥಾನ ||　　೧೩

ಹತ್ತುಸಾವಿರಕೈಪ್ರಮಾಣದ
ಸುತ್ತುವಳಯದ ಮಣಿಯ ಶಿಲೆಗಳ
ತತ್ತವಣೆಗಳ ತೆಕ್ಕೆವೆಳಗಿನ ಲಹರಿಗಳಲಳಿಯ [2] |
ಸುತ್ತುವಳಯದ ಪದ್ಮರಾಗದ
ಭಿತ್ತಿಗಳ ವೈಡೂರ್ಯಶಿಲೆಗಳ
ಮೆತ್ತವಾರಣವರವಿಧಾನದಲೆಸೆದುದಾಸ್ಥಾನ ||　　೧೪

ಕರೆಸಿದನು ಮಯನೆಂಟುಸಾವಿರ
ಸರಿಗರಕ್ಕಸಕಿಂಕರರ ನಿಜ
ಶಿರದೊಳಾಂತರು ತಂದರಿಂದ್ರಪ್ರಸ್ಥಪುರವರಕೆ |

ಭೀಮಸೇನನಿಗೆ ಮಯನಿಂದ ಗದಾಪ್ರಾಪ್ತಿ.

ಅರಸ ಕಾಣಿಸಿಕೊಂಡವನನಾ
ದರಿಸಿದನು * ಭೀಮಂಗೆ ಭಾರಿಯ
ವರಗದಾದಂಡವನು ಕಾಣಿಕೆ ಯಿತ್ತು * ಪೊಡವಟ್ಟ ||　　೧೫

† ಇದು ಸಗರಮಾಂಧಾತರಾಯನ
ಗದೆಯು ಲವಣಾಸುರನ ಸೀೞಿಯೆ
ಕದನದಲಿ ಶತ್ರುಘ್ನ ಕೊಂಡನು ಮೇನಕಾಚಲದಿ |

---

1 ಕೃತಜ್ಞನಲೇ, ಖ, ಚ.　　2 ವೊಳಗಿನ ಬೞಿಯ:ಲಹರಿಗಳ, ಡ

* ಭೀಮಾರ್ಜುನರಿಗಾ | ದರಗದಾಶಂಖವನು ಕಾಣಿಕೆ ಕೊಟ್ಟು, *

† ಇದು ಪುರಾತನಸಗರವಂಶಾ
ಭ್ಯುದಯದುರ್ಜಯಯೌವನಾಶ್ವನ
ಗದೆ ಕೃತಾಂತನ ಕರದ ದಂಡವನಂಡಲೆವ ಖಲದ |

ಇದನಿರಿಸಿ ಕೊಂಡಿಂದ್ರನಿತ್ತನು
ಮುದದಿ ಗದೆಯನು ದೇವದತ್ತಾ
† ಖ್ಯದ ಮಹಾಶಂಖವನು ಪಾರ್ಥನ ಮೇಲಿನೊಲವಿನಲಿ ॥ ೧೬

ಒಸಗೆ ಮಿಙಿದುದು ಮಯನ ಮಿಗೆ ಮ
ನ್ನಿಸಿದನವನಿಪನಂಗಚಿತ್ತದೊ
ಳಸುರಕಿಂಕರರನಿಬರನ, ಸನ್ಮಾನದಾನದಲಿ ।
ಒಸೆದು ಕಳುಹಿದನಾತನನು ದೆಸೆ
ದೆಸೆಯ ಯಾಚಕನಿಕರ ನೂಕಿತು
ಮುಸುಕಿತ್ತೈ ಧರ್ಮಜನ ಕೀರ್ತಿಯು ರೂಢಿ ಮೂಜಗವ ॥ ೧೭

ಸುಮುಹೂರ್ತದಲ್ಲಿ ಮಹಾಸಭೆಯು ಪ್ರವೇಶ

ದಿವಸದಿವಸದೊಳುಂಡುವವನೀ
ದ್ವಿಜಸಂತತಿ ಹತ್ತುಸಾವಿರ
ವವರನೇನೆಂದೆಣಿಸುವೆನು ಯಾಚಕರ ಮಹೋದಧಿಯ ।
ವಿವಿಧರತ್ನಾಭರಣಕಾಂಚನ
ನವದುಕೂಲದ ದಿಂಡಿನಲಿ ಬುಧ
ನಿವಹ ತಣಿದುದನಂತಕೃಪಣಾನಾಥಜನಸಹಿತ ॥ ೧೮

ಆಮಹೋತ್ಸವವೇಳುದಿನವಖಿ
ರಾಮರಂಜಿತವಾಯ್ತು ಶುಭದಿನ
ರಾಮಣೀಯಕಲಗ್ನದಲಿ ಹೊಕ್ಕನು ಮಹಾಸಭೆಯ ।
ಭೂಮಿಪಾಲರನಂತಸುಕವಿ
ಸ್ತೋಮವಸುಜನಮಿತ್ರಾರಿನಿಪಸ
ನಾಮರಿರ್ದರುರಾಯನೆಡಬಲದಂಕವೀಧಿಯಲಿ ॥ ೧೯

† ಮುಂದದಲೊಪ್ಪುವುದೆನುತ ಮಯನತಿ
ಮುದದಿ ಬೆಟಿಕಾದೇವದತ್ತಾ
ಖ್ಯದ ಮಹಾಶಂಖವನು ಪಾರ್ಥಗೆ ಕೊಟ್ಟು ಕೈಮುಗಿದ, ॥ ಚ.
1 ಭೂಸುರ, ಖ. ಮಾರ್ಗಣ, ಚ,

ಹೊಳಹೊಳೆದುದಾಸ್ಥಾನ ಕಾಂತಾ
ವಳಿಯ ಕಂಗಳ ಬೆಳಗಿನಲಿ ತನಿ
ಮುಱುಗಿತೋಲಗ ಲಲಿತರಸಲಾವಣ್ಯಲಹರಿಯಲಿ |
ವಿಲಸದಖಿಳಾಭರಣರತ್ನಾ
ವಳಿಯ ರಶ್ಮಿಯಲಡಿಗಡಿಗೆ ಪ್ರ
ಜ್ವಲಿಸಿತಾಸಭೆ ದೀಪ್ತಿಮಯವಿವಿಧಾನುಭಾವದಲಿ ‖ ೨೦

ಮೇಳದಲಿ ಗಂಧರ್ವರಿಪ್ಪ
ತ್ತೇಱು ತುಂಬುರುಸಹಿತ ಶುದ್ಧದ
ಸಾಳಗದ ಸಂಕೀರ್ಣದೇಸಿಯ ವಿವಿಧರಚನೆಯಲಿ |
ಬಾಲೆಯರ ಸುರಗಣಿಕೆಯರ ಮುಖ
ಚಾಳೆಯರ ಸಂಗೀತತಾಳದ
ತೂಳುವರೆ ತುಂಬಿದುದು ಕುಸುಮಾಯುಧನ ಕಳಕಳವ ‖ ೨೧

ನಾರದರ ಆಗಮನ.

ಆಮಹಾಸಭೆಯಲಿ ಯುಧಿಷ್ಠಿರ
ಭೂಮಿಪತಿ ದೂರದಲಿ ಕಂಡನು
ತಾಮರಸದಳನಯನಸಂನಿಭಭಾವಭಾವಿತನ |
ಹಾಮಹಾದೇವೆತ್ತಣದ್ಭುತ
ಧಾಮವಿದು ದಿನಮಣಿಯ ತೇಜ
ಸ್ತೋಮವೆರಡಱ ಸಾದೃಂದೆನುತೀಕ್ಷಿಸಿದ ನಾಲ್ದೆಸೆಯ [1] ‖ ೨೨

ಲಲಿತತೇಜಃಪುಂಜ ಮಿಗೆ ಥಳ
ಥಳಿಸಿತತಿದೂರದಲಿ ಬೆಳಗಿನ
ಗೊಳಳಿ ಸುತ್ತಿದಂತಾದುದಾಗಲೆ ತೋಱಿತಾಕಾರ |
ತಳಿತುದವಯವಶುದ್ಧವರ್ಣ
ಸ್ಥಳವು ನಿಮಿಷಕೆ ಮುನಿವರಾಕೃತಿ
ಹೊಳೆದುದಾಕ್ಷಣವೀತನಾರದನೆಂದುದಖಿಳಜನ ‖ ೨೩

1 ರಾದೆಸೆಯ, ಚ. ಠ.

ನಾರದರ ಗುಣವರ್ಣನೆ.

ದಣಿಯದಾತನ ಬೆರಳು ನಾರಾ
ಯಣರವದ ವೀಣೆಯಲಿ ಹೃದಯಾಂ
ಗಣದ ಬೀದಿಗೆ ಬಿಡಯವಾಗದು ಕೃಷ್ಣಪದ ಕೇಳಿ ।
ಪ್ರಣವರೂಪದ ಭಾವಶುದ್ಧಿಯ
ಕಣಿ ಮುರಾರಿಯ ತನ್ಮಯದ ಸ
ದ್ಗುಣಮುನಿಶ್ವರನಿಳಿದನಿಂದ್ರಪ್ರಸ್ಥಪುರವರಕೆ ॥ ೨೪

ಬಂದನರಮನೆಗಾಮುನಿಯನಭಿ
ವಂದಿಸಿದುದಾಸ್ಥಾನವಿದಿರಲಿ
ನಿಂದು ಬಿಜಯಂಗೈಸಿ ತಂದರು ಸಿಂಹವಿಷ್ಟರಕೆ ।
ಸಂದಮಧುಪರ್ಕಾದಿಸತ್ಕೃತಿ
ಯಿಂದ ಪೂಜಿಸಿ ವಿನಯದಲಿ ನಗು
ತೆಂದನವನೀಪಾಲನುಚಿತೋಕ್ತಿಯಲಿ ನಾರದನ ॥ ೨೫

ನಾರದರ ಆಗಮನವನ್ನು ಅಭಿನಂದಿಸುವಿಕೆ.

ಕುಶಲವೇ ನಿಮ್ಮಂಘ್ರಿಗಳಗಿಂ
ದೊಸಗೆಯಾದುದು ನಿಮ್ಮ ದರ್ಶನ
ವಸಮಸಂಸ್ಕೃತಿವಹ್ನಿದಗ್ಧರಿಗಮೃತವರ್ಷವಲೆ ।
ಪಶುಪತಿಯ ಪರಮೇಷ್ಠಿಯ ಮುರ
ದ್ವಿಷನ ಸಾಮರ್ಥ್ಯದ ಸಗಾಢದ
ಎಸಕ ನಿಮಗುಂಟೆಂದು ಕೊಂಡಾಡಿದನು ನಾರದನ ॥ ೨೬

ರಾಜನನ್ನು ಕುರಿತು ನಾರದರ ಕುಶಲ ಪ್ರಶ್ನೆ ಮತ್ತು ಧರ್ಮೋಪದೇಶ.

ಕುಶಲವೆಮಗಿಂದೈದೆ ನೀನೀ
ವಸುಮತೀವಧುಗೊಳ್ಳಿದನೆ ಶೋ
ಭಿಸುವುದೇ ಭವದಾಜ್ಞೆಯಲಿ ವರ್ಣಾಶ್ರಮಾಚಾರ ।

ದೆಸೆದೆಸೆಗಳಮಳಾಗ್ನಿ ಹೋತ್ರ
ಪ್ರಸರಧೂಮಧ್ವಜಗಳೇ ನಿಂ
ದಿಸರಲೇ ದುರ್ಜನರು ಸುಜನರನೆಂದನಾಮುನಿಪ ॥ ೧೭

ಅರ್ಥದಿಂ ಧರ್ಮವನು ಧರ್ಮದಿ
ನರ್ಥವನು ಧರ್ಮಾರ್ಥವೆರಡನು
ವ್ಯರ್ಥಕಾಮದಲಟ್ಟಿಯೆಲೇ ರಾಜ್ಯಾಭಿಲಾಷೆಯಲಿ ।
ಅರ್ಥಸಾಧನ ಧರ್ಮಸಾಧನ
ವರ್ಥಧರ್ಮದೊಳುಭಯಲೋಕಕ
ನರ್ಥಸಾಧನ ಕಾಮವೆಂದನು ಮುನಿ ನೃಪಾಲಂಗೆ ॥ ೧೮

ಮಾನ್ಯರನು ಧಿಕ್ಕರಿಸಿ ಯೆಲೆ ಯುವ
ಮಾನ್ಯರನು ಮನ್ನಿಸಿ ಯೆಲೇ ಸ
ನ್ಮಾನ್ಯರನು ಸತ್ಕರಿಸುವಾ ಪಟುವಾವಿಕಾರಿಗಳ ।
ಅನ್ಯರನು ನಿನ್ನವರ ಮಾಡಿಯು
ನನ್ಯರನು ಬಾಹಿರರ ಮಾಡ ವ
ದಾನ್ಯರನು ನಿಗ್ರಹಿಸಿ ಯೆಲೆ ಭೂಪಾಲ ಕೇಳೆಂದ ॥ ೧೯

ಖಳರ ಖಂಡಿಸುವಾ ಮದವ್ಯಾ
ಕುಲರ ದಂಡಿಸುವಾ ದರಿದ್ರರ
ನೊಲಿದು ರಕ್ಷಿಸುವಾ ಸುಮಾಯಾವಿಗಳ ಶಿಕ್ಷಿಸುವ ।
ಕುಲಯುತರ ಕೊಂಡಾಡುವಾ ರಿಪು
ಬಲದ ತಲೆಚಂಡಾಡುವಾ ದು
ರ್ಬಲರನತಿಬಾಧಿಸಿ ಯೆಲೇ ಭೂಪಾಲ ಕೇಳೆಂದ ॥ ೨೦

ಜಾತಿಸಂಕರವಿಲ್ಲಲೇ ಜನ
ಜಾತದಲಿ ಹೀನೋತ್ತಮರು ನಿ
ರ್ಣೀತರೇ ನಿಜಮಾರ್ಗದಲಿ ಕುಲವಿಹಿತಕರ್ಮ[1]ದಲಿ ।

---

1 ಧರ್ಮ, ಚ. ಠ.

ಖ್ಯಾತರೇ ಸತ್ಪುರುಷರಧಿಕ
ದ್ಯೂತಕೇಳಿಗಳಲ್ಲವೇ ಮೃಗ
ಯಾತಿರೇಕವ್ಯಸನ ಕಿಱಿದೇ ರಾಯ ನಿನಗೆಂದ ॥ ೩೧

ಪರರು ಮಾಡಿದ ಸದ್ಗುಣಂಗಳ
ಮಱೆಸುಲೇ ಪರರವಗುಣಂಗಳ
ಮಱೆವು ಕಳವಾಮನ್ಯರಿಗೆ ನೀ ಮಾಡಿದವಗುಣವೆ ।
ಮಱೆಯದಿರು ನೀ ಮಾಡಿದುಚಿತವ
ಮಱೆದು ಕಳವಾಚಾರವಿದು [1] ಸ
ತ್ಪುರುಷರಭಿಮತ ನಿನ್ನ ಮತವೇನೆಂದನಾಮುನಿಪ ॥ ೩೨

ಆಱುಗುಣದೊಳುಪಾಯನಾಲ್ಕಱೊ
ಳೇಱಿಹುದೆ ಮನ ರಾಜಧರ್ಮದ
ಮೂಱುವರ್ಗದೊಳೆಚ್ಚರುಂಟೇ ನಯವಿಧಾನದಲಿ ।
ಮೂಱುಶಕ್ತಿಗಳೊಳಗೆ ಮನ ಬೇ
ಱೂರಿಹುದೆ ಸಪ್ತಾಂಗದಲಿ ವ್ಯೈ
ದೋಱಿಹೈ ಭೂಪಾಲ ಚಿತ್ತೈಸೆಂದನಾಮುನಿಪ [2] ॥ ೩೩

ಗಸಣಿಯಿಲ್ಲಲೆ ನಿನಗೆ ಸಪ್ತ
ವ್ಯಸನದಲಿ ನಿನ್ನನುಜತನುಜರ
ಮುಸುಡಧರ್ಮದಲಿರವಲೇ ವೈದಿಕವಿಧಾನದಲಿ ।
ಸಸಿನವೇ ನಿನ್ನ ಹಿತಪಿಳರಿಗೆ
ಹಿಸುಣರಿಗೆ ವಂಚಕರ [3] ಗಜ್ಜರಿ
ಗುಸುರಿ ಯೆಲೆ ನಿನ್ನಂತರಂಗವನೆಂದನಾಮುನಿಪ ॥ ೩೪

ಪುರುಡಿಗರನೇಕಾಂತದೊಳಗಾ
ದರಿಸುವರು ಭೇದಕರ ಬುದ್ಧಿಗೆ
ತೆರಹುಗೊಡುವರು ಕುಟಿಲರಿಗೆ ವಿಶ್ವಾಸಹೀನರಿಗೆ ।

---

[1] ಕಳವಿಯುಸಾರವಿದು, ಕ. ಜ.  [2] ಬೇಸರೆಯೆಲೇ ಭೂಪಾಲ ನೀನೆಂದ, ಚ. ಠ.
[3] ಹುಸಿಕರಿಗೆ ಡುಬುಕ, ಚ.

ಮರುಳುಗೊಂಬರು ಖೂಳರಿಗೆ ಭಂ
ಡರಿಗೆ ತೆರುವರು ಧನವನೀಧರೆ
ಯರಸುಗಳಿಗಿದು ಸಹಜ ನಿನ್ನಂತಸ್ಥವೇನೆಂದ ॥ ೧೫

ಒಳಗೆ ಕುಜನರು ಹೊಱಗೆ ಧರಣೀ
ವಳಯವಮಾನ್ಯರು ಛತ್ರಚಮರದ
ನೆಳಲು ಖೂಳಗಾತಪದ ಬಲು ಬೇಗೆ ಬುಧಜನಕೆ ।
ಒಳಗೆ ರಾಜದ್ರೋಹಿಗಳು ಹೊಱ
ವಳಯದಲಿ ಪತಿಕಾರ್ಯನಿಷ್ಠರು
ಬಳಸಿಹುದು ನೃಪಚರಿತ ನಿನ್ನಂತಸ್ಥವೇನೆಂದ ॥ ೧೬

ಪ್ರಜೆಗಳನುರಾಗಿಗಳೆ ಸುಭಟ
ವ್ರಜಕೆ ಜೀವಿತ ಸಂದಿಹುದೆ ಪರ
ಸುಜನರಿಗೆ ಸಂತೋಷವೇ ಮಧುರೋಕ್ತಿರಚನೆಯಲಿ ।
ವಿಜಯಭೀಮರು ಯಮಳರಿವರ
ಗ್ರಜರೊಳನುಜರಭಿನ್ನರೇ ಗಜ
ಬಜಿಕೆಯಂತಃಪುರದೊಳಿಲ್ಲವೆ ರಾಯ ಹೇಳೆಂದ ॥ ೧೭

ಖೂಳರೊಡನೆ ವಿನೋದ ಭಂಡರೊ
ಳಾಳಿ ಸ್ವಾಮಿದ್ರೋಹಿಯೊಡನೆ ಸ
ಮೇಳ ನಂಬುಗೆ ಡಂಭರೊಡನೆ ವಿಕಾರಿಯೊಡನಾಟ ।
ಸೂಳೆಯರು ಸಮಜೀವಿಗಳು ಕುಲ
ಬಾಲಕಿಯರೋಗಡಿಗೆಯವರು ನೃ
ಪಾಲಜನಕಿದು ಸಹಜ ನಿನ್ನಂತಸ್ಥವೇನೆಂದ ॥ ೧೮

ವಿಹಿತಕಾಲದ ಮೇಲೆ ಸಂಧಿಯ
ನಹಿತರೊಳು ವಿರಚಿಸುವ ಮೇಲ್ವಿ
ಗ್ರಹದ ಕಾಲಕೆ ವಿಗಡಿಸುವುದೆಂಬರ ಸುನೀತಿಯಲಿ ।

ವಿಹಿತವೇ ಮತಿ ವೈರಿರಾಯರ
ವಿಹರಣವೆನವರಾಳು ಕುದುರೆಯ
ಬಹಳತೆಯನಲ್ಪತೆಯನಱಿವೈ ರಾಯ ನೀನೆಂದ ॥ ೩೯

ನೆನೆದ ಮಂತ್ರವ ನಿನ್ನೊಳಾಳೋ
ಚನೆಯ ನಿಶ್ಚಯವಿಲ್ಲದಿರಲೊ
ಬ್ಬನಲಿ ಮೋಹಿಸೆ ಹಲಬರಲಿ ಜಡರಲಿ ಮತಿವಿಹೀನರಲಿ ।
ಮನಬರಡರಲಿ ಸಲೆ ವಿಧಾವಂ
ತನಲಿ ಮಂತ್ರಾಳೋಚನೆಯ ಸಂ
ಜನಿಸಿ ಹರಹಿನೊಳಱಿಯಲೇ ಭೂಪಾಲ ಕೇಳೆಂದ ॥ ೪೦

ಒಂದರಾಯಕೆ ಬೀಯ ಸರಿ ಮ
ತ್ತೊಂದು ಕಡೆಯಲಿ ಹೀನಫಲವಿ
ನ್ನೊಂದು ಕಾರ್ಯದುಪೇಕ್ಷೆತೆಗೆ ಕಡೆಯಿಲ್ಲ ಮೊದಲಿಲ್ಲ ।
ಒಂದು ಮರ್ಘಟ ದೈವಸಾಧಿತ
ವೊಂದು ಶಂಕಿತಫಲವೆನಿಪ್ಪವ
ಹಿಂದುಗಳವೈ ಮಂತ್ರದಲಿ ಭೂಪಾಲ ಕೇಳೆಂದ ॥ ೪೧

ಕಿಱಿದುಪೇಕ್ಷೆಯ ಬಹಳ ಫಲವನು
ಹೊಱೆವುದಿದು ಮೋಹಪ್ರಭೇದಕೆ
ಮುಱಿವುದಿದು ವಿಕ್ರಮಕೆ ವಶವಿದು ನೀತಿಸಾಧ್ಯವಿದು ।
ಹರಿವುದಿದು ನಯಶಕ್ತಿಗೆಂಬುದ
ನಱಿದು ನಡೆವೈ ರಾಜಧರ್ಮದ
ಹೊರಿಗೆಯನು ಮಱೆದಿರೆಯೆಲೀ ಭೂಪಾಲ ಕೇಳೆಂದ ॥ ೪೨

ನುಡಿದೆರಡನಾಡದಿರು ಕಾರ್ಯವ
ಬಿಡದಿರಾವನೊಳಾದರೆಯು ನಗೆ
ನುಡಿಯ ಕುಂದದಿರೊಡೆಯದಿರು ಹೃದಯವನು ಕಪಟಿಯಲಿ ।

ಬಡವಮನವ ಮಾಡದಿರು ಮಾರ್ಗದೊ
ಳಡಿಯಿಡದಿರನುಜರೊಳೊ
ಗ್ಗೊಡೆಯದಿರು ನೃಪನೀತಿ ಯಿದು ಭೂಪಾಲ ಕೇಳೆಂದ ॥　೪೩

ಆಯುವಿಲ್ಲದ ಬೀಯವೆನು ಪೂ
ರಾಯುವಿಲ್ಲದ ಘಾಯುವೆನು ನಿ
ರ್ದಾಯುವಿಲ್ಲದ ಮಂತ್ರವನು ಲೇಸಾಗಿ ನಿಂಗೆ ರಚಿಸಿ ।
ನ್ಯಾಯುವಿಲ್ಲದ ನಡವಳಿಯುಲ
ನ್ಯಾಯು ಹೊದ್ದುವ ಪಾಪವನು ನಿಜ
ಕಾಯುದಲಿ ನೀ ಧರಿಸೆ ಯೆಲೆ ಭೂಪಾಲ ಕೇಳೆಂದ ॥　೪೪

ಆವ ಕಾಲದೊಳಾವ ಕಾರ್ಯವ
ದಾವನಿಂದಹುದವನ ಮನ್ನಿಪ
ಠಾವಿದೆಂಬುದನಱಿದಿಹ್ಯೆ ವ್ಯಗಜೇವಿಯುಂದದಲಿ ।
ಲಾವಕರ ನುಡಿಗೇಳಿ ನಡೆದರೆ
ಭೂವಳಯುದೇಕಾಧಿಪತ್ಯದ
ಠಾವು ಕೆಡುವುದನಱಿದಿಹ್ಯೆ ಭೂಪಾಲ ಕೇಳೆಂದ ॥　೪೫

ಅರಸು ರಾಕ್ಷಸ ಮಂತ್ರಿಯೆಂಬುವ
ಮೊಱೆವ ಹುಲಿ ಪರಿವಾರ ಹದ್ದಿನ
ನೆರವಿ ಬಡವರ ಬಿನ್ನಪವ ನಿನ್ನಾರು ಕೇಳುವರು ।
ಉರಿವುರಿವುತಿದೆ ದೇಶನಾವಿ
ನ್ನಿರಲು ಬಾರೆವೆನುತ್ತ ಜನ ಬೇ
ಸರಿನ ಬೇಗೆಯುಲಿರದಲೇ ಭೂಪಾಲ ಕೇಳೆಂದ ॥　೪೬

ಸರಳಲೆಚ್ಚರೆ ಹಗೆಯು ತಾಗವು
ದಚ್ಚಿವುದೊಲೆವುದು ದೈವಗತಿಯುಲಿ
ನಿರುತಬುದ್ಧಿಯು ಬಾಣವನು ಕೊಟ್ಟೆಚ್ಚ ನರಿನೃಪರ ।

ಸಿರಿಯುನಾ ರಾಜ್ಯವನು ತತ್ಪರಿ
ಕರವೆ ಸಂಹರಿಸುವುದೆನಿಪ ಬಂ
ಧುರಧನುರ್ವಿದ್ಯಾಂಗ ವುಂಟೇ ರಾಯ ನಿನಗೆಂದ ॥ ೪೭

ಮಂತ್ರವುಳ್ಳವನವನೆ ಹಿರಿಯನು
ಮಂತ್ರವುಳ್ಳವನವನೆ ರಾಯನು
ಮಂತ್ರವುಳ್ಳವನವನೆ ಸಚಿವನಿಯೋಗಿ ಯೆನಿಸುವನು ।
ಮಂತ್ರವಿಲ್ಲದ ಬುದ್ಧಿಯ ಬಲು ತಳ
ತಂತ್ರದಲಿ ಫಲವಿಲ್ಲವೈ ಸ್ವಾ
ತಂತ್ರ್ಯವೆನಿಸಲ್ಕರಿವುದೇ ಭೂಪಾಲ ಕೇಳೆಂದ ॥ ೪೮

ಸೋತು ನುಡಿವಾಹಿರಿಯರಲಿ ಸಂ
ಪ್ರೀತಿಯನು ಸುಜನರಲಿ ನಿರ್ಮಲ
ನೀತಿಯನು ಪರಿವಾರಪುರಜನನಾಡುಬೀಡಿನಲಿ ।
ಖ್ಯಾತಿಯನು ಧರ್ಮದಲಿ ವೈರಿ
ವ್ರಾತದಲಿ ಪೌರುಷವನಧಿಕ
ಜ್ಞಾನಿಗಳಲೆಚ್ಚರಿಕೆ ಯುಂಟೇ ರಾಯ ನಿನಗೆಂದ ॥ ೪೯

ಮೋಹದವಳಲಿ ವೈದ್ಯರಲಿ ವ್ಯಾ
ಗಾಹಿನವರಲಿ ಬಾಣಸಿಗರಲಿ
ಬೇಹಮಂತ್ರಿಗಳಲಿ ವಿಧಾವಂತರಲಿ ಹಿರಿಯರಲಿ ।
ಗೇಹ [1] ರಕ್ಷಕರಲಿ ಸಹೋದಕ
ವಾಹಿಯಲಿ ಹಡಪಾಳಿಯಲಿ ಪ್ರ
ತ್ಯೂಹವನು ವಿರಚಿಸೆ ಯೆಲೇ ಭೂಪಾಲ ಕೇಳೆಂದ ॥ ೫೦

ರಣಮುಖದೊಳಂಗನೆಯಲಾರೋ
ಗಣೆಯಲರಿಗಳ ಕೂಟದಲಿ ವಾ
ರಣತುರಗದೇಖಾಟದಲಿ ವಿವಿಧಾಯುಧಂಗಳಲಿ ।

1 ದೇಹ, ಚ.

ಎಣಿನ್ನೃಪರ ಸೋಂಕಿನಲಿ ಸಜ್ಜೆಯು
ಲಣಿಯು ಮಜ್ಜನದಲ್ಲಿ ಬಲುಮೃಗ
ಗಣನೆಯೊಳಗೆಚ್ಚರಿಕೆ ಯುಂಟೇ ರಾಯ ನಿನಗೆಂದ ॥ ೫೧

ತರುಣಿಯಲಿ ಹಗೆಗಳಲಿ ಬಹಳೈ
ಶ್ವರಿಯದಲಿ ಶಸ್ತ್ರಾಂಗಿಯಲಿ ಸಂ
ಸ್ತರಣದಲಿ ಮದ್ಯಪನಲಿ ಬಲಾರ್ಥಿಯಲಿ ಶೃಂಗಿಯಲಿ ।
ಉರಗನಲಿ ನದಿಯಲಿ ಸಖಿಯರಾ
ತುರಿಯದಲಿ ದುರ್ಮಂತ್ರಿಯಲಿ ದು
ಶ್ಚರಿತನಲಿ ವಿಶ್ವಾಸಿಸದೆ ಯೆಲೆ ಭೂಪ ಕೇಳೆಂದ ॥ ೫೨

ಪರಿಜನಕೆ ದಯೆಯನು ವರಸ್ತ್ರೀ
ಯರಲಿ ಭೀತಿಯು ಹಗೆಗಳಲಿ ನಿ
ಷ್ಕರುಣತೆಯು ಬಡವರಲಿ ದಾನವದೈವಗುರುದ್ವಿಜರ ।
ಚರಣಸೇವೆಯಲಾರ್ತತೆಯು ಪಿಸು
ಣರ ನುಡಿಗಳಲಿ ಮೂರ್ಖತೆಯು ನೀ
ವಿರಚಿಸುವೆಯೋ ಬೇಸರುವೆಯೋ ಭೂಪ ಕೇಳೆಂದ ॥ ೫೩

ಭಜಿಸುವಾ ಭಕ್ತಿಯಲಿ ದೈವ
ದ್ವಿಜಗುರುಸ್ಥಾನವನು ದೇಶ
ಪ್ರಜೆಯನರ್ಥಾಗಮದ ಗಡಣೆಗೆ ಘಾಸಿ ಮಾಡಿಯಲೆ ।
ಕುಜನರಭಿಮತದುಗ್ರದಂಡ
ವ್ಯಜನದಲಿ ಜನಜಠರವಹ್ನಿಯು
ಸೃಜಿಸೆಯೆಲೆ ಭವದೀಯರಾಜ್ಯಸ್ಥಿತಿಯು ಹೇಳೆಂದ ॥ ೫೪

ಫಲವೆಹುದ ಕೆಡಲೀಯದಳಿ ಪರಿ
ಮಳವ ಕೊಂಬಂದದಲಿ ನೀನಾ
ಳ್ವಿಳೆಯ ಕರದರ್ಥವನು ತೆಗೆವೈ ಪ್ರಜೆಯ ನೋಯಿಸದೆ ।

ಹಲವು ಸಂಧಾನದಲಿ ಗುಣದಲಿ [1]
ಚಲಿಸದಿಪ್ಪಂದದಲಿ ರಾಜ್ಯವ
ನಿಲಿಸುವೆನುಪಮಮಂತ್ರಿಯುಂಟೇ ರಾಯ ನಿನಗೆಂದ ‖ ೫೫

ಸೂಕರನ ತುಂಬಿಯ ಮರಾಳನ
ಭೇಕವೈರಿಯ ಕಾರುರಗ ಕಪಿ
ಕೋಕಿಲನ ಬರುಹಿಯ ಸುಧಾಕಿರಣನ ದಿನಾಧಿಪನ ।
ಆಕಸದ ದರ್ಪಣದ ಬಕರ
ತ್ನಾಕರನಲೊಂದೊಂದು ಗುಣವಿರ
ಬೇಕು ನೃಪರಿಗೆ ನಿನ್ನೊಳುಂಟೇ ರಾಯ ಹೇಳೆಂದ ‖ ೫೬

ಮೇಲನಱಿಯದ ನೃಪನ ಬಾಳಿಕೆ
ಗಾಳಿಗೊಡ್ಡಿದ ಸೊಡರು ನೀರದ
ಜಾಲದೊಡ್ಡಣೆ ಸುರಧನುವಿನಾಕಾರ ಶವದುಡಿಗೆ ।
ಬಾಳಗೌತಿದ ಕೊರಲು ಭುಜಗನ
ಹೇಳಿಗೆಯಲಿಕ್ಕಿದ ಕರವು ಬೆ
ಳ್ಳಾರಹಬ್ಬುಗೆಯುವನ ಸಿರಿ ಭೂಪಾಲ ಕೇಳೆಂದ ‖ ೫೭

ನೆಚ್ಚದಿರು ಸಿರಿಯನು ವೃಥಾ ಮದ
ಗಿಚ್ಚನುರಿಯಲಿ ಬೇಯದಿರು ಮಿಗೆ
ಬೆಚ್ಚಿ ಬೆದಱದಿರೆಡರಿನಲಿ ಸತ್ಯವನು ಚಲಿಸದಿರು ।
ಮುಚ್ಚದಿರು ಸತ್ವವನು ಹೃದಯವ
ಬಿಚ್ಚದಿರು [2] ಯುಪಕೀರ್ತಿನಾರಿಯ
ಮೆಚ್ಚದಿರು ಮರುಳಾಗದಿರು ಭೂಪಾಲ ಕೇಳೆಂದ ‖ ೫೮

ನೀತಿವಿಡಿದರಸಿಂಗೆ ಬಹಳ
ಖ್ಯಾತಿಯಿಂ ಜನರಾಗ ರಾಗ
ವ್ರಾತದಿಂ ಧನ ಧನದಿ ಪರಿಕರ ಪರಿಕರದಿ ಜಯವು ।

---

[1] ಸನ್ಮಾನದಲಿ ನಯದಲಿ, ಚ.

[2] ಮೆಚ್ಚದಿರಸತ್ಯವನು ಗುಣವನು ಮುಚ್ಚದಿರು, ಚ. ತ.

ಆತಜಯದಿಂ ಧರ್ಮ ಧರ್ಮಸ
ಮೇತದಿಂ ಸುರತುಷ್ಟಿ ತುಷ್ಟಿಯ
ನೀತಿಯಿಂದಿಹಪರವ ಗೆಲುವೈ ರಾಯ ನೀನೆಂದ ॥ ೫೯

ಆವನಾಗಲಿ ಬೇಡಿದಂಗೊಲಿ
ದೀವುದೈ ನೃಪಧರ್ಮ ಹಗೆ ಕಲಿ
ಯಾವನಾಗಲಿ ಸೆಣಸಿದರೆ ಕಾದುವುದೆ ನೃಪನೀತಿ ।
ಆವನಾಗಲಿ ಶರಣುಹೊಕ್ಕನ
ಕಾವುದೇ ಕ್ಷತ್ರಿಯರ ಮತ ನೀ
ನಾವುದುಚಿತವನರಿದಿಹೈ ಭೂಪಾಲ ಕೇಳೆಂದ ॥ ೬೦

ಮನ್ನಣೆಯುನಲ್ಪತೆಯು ನುಡಿಯೊಳ
ಗುನ್ನತೆಯುನೆಸಗುವುದು [1] ಪರರಿಗೆ
ತನ್ನವರಿಗುಗ್ಗಡದ ಪತಿಕಾರ್ಯವನು [2] ಮಾತಿನಲಿ ।
ಭಿನ್ನವನು ತೋರುವುದು ರಾಯರ
ಗನ್ನಗತಕ ಕಣಾ ನಿಪುಣಸಂ
ಪನ್ನಮತಿ ನಿನಗುಂಟೆ ಭೂಮಿಪಾಲ ಹೇಳೆಂದ ॥ ೬೧

ಸತ್ಯವುಳ್ಳರೆ ಧರಣಿ ಸಾರುಗು
ಸತ್ಯವುಳ್ಳರೆ ಪದವಿ ಸಾರುಗು
ಸತ್ಯವುಳ್ಳರೆ ಸಕಲದೇಶದ ವೀರಸಿರಿ ಸಾರ್ಗು ।
ಸತ್ಯ ಬೇಹುದು ನೃಪರಿಗಾ
ಸತ್ಯ ಭುಜಬಲಗೂಡಿ ಮಂತ್ರದ
ಸತ್ಯವೇ ಸತ್ವಾಧಿಕವು ಭೂಪಾಲ ಕೇಳೆಂದ ॥ ೬೨

ಗುರುವಿರೋಧ ಮಹೀಸುರರ ಮಾ
ತ್ಸರಿಯ ಬಂಧುದ್ವೇಷ ಗುಣಸಂ
ಹರಣ ದೈವದ್ರೋಹ ಮತ್ಯಾಲೀಢದೀನತನ ।

1 ನೆನಸುವುದು, ಚ, ಠ.　　2 ಪರಿಕರಣವನು, ಚ. ಠ

ಶರಣಜನದಂಡಿತ್ವವೆಂಬಿವ
ನರವರಿಸದಂಗೈಪ ಭೂಪನ
ಸಿರಿಗೆ ಮೊಡುಗು ಕೇಡು ನಿಮಿಷಕೆ ಭೂಪ ಕೇಳೆಂದ ॥ ೬೩

ಪರಮಸಖನಾದೊಡೆಯು ಬಡವಾ
ದುರಿಯು ತಾನೇ ಕೆಡಿಸಿ ಕಳೆವುದು
ಮರುತನೆಂದರೆ ತನ್ನ ಸಾಹಸದಂತರವನಱಿದು ।
ಅರಿಗಳೇ ಕಿಂಕರರು ಕಿಂಕರ
ರರಿಗಳು ಹದನನಱಿದು ಸತ್ಪ್ರೋ
ತ್ಕರದಲವನಿಯುನಾಳುವೈ ಭೂಪಾಲ ಕೇಳೆಂದ ॥ ೬೪

ಧನದಲುರುಧಾನ್ಯದಲಿ ಸೆರೆದಿಂ
ಧನದಲುದಕದ ಹೆಚ್ಚುಗೆಯಲಂ
ಬಿನಲಿ ಯಂತ್ರ[1] ಘಟದಲಿ ಶಿಲ್ಪಿಗರಲಿ ಶಿಲಾ[1] ಳಿಯಲಿ ।
ವನವಳಯ ಕೋಟಾವಳಯುಜೀ
ವನವಳಯ ಗಿರಿವಳಯ ದುರ್ಗವೆ
ವೆನಿಪ ದುರ್ಗಾವಳಿ ಸಮಗ್ರವೆ ಭೂಪ ನಿನಗೆಂದ ॥ ೬೫

ಧನದಿ ಪಂಡಿತರಶ್ವತತಿಯೂ
ಧನದಿ ಧಾರುಣಿಮಾನ ಮೋಹಾ
ಧನದಿ ಕಾಂತೆಯುರಖಿಳವಸ್ತುಗಳ್ಳದೆ ಸೇಱುವುದು ।
ನೆನಹು ತೃಪ್ತಿ ಯೊಳ್ಳದದಱಿಂ
ಧನವೆ ಸಾಧನ ವರಸಿಗಾಧನ
ವನಿತು ದೊರಕೊಳಲಿದಿರದಾರ್ಥೈ ಧಾತ್ರಿಪತಿಗಳಲಿ ॥ ೬೬

ಖಡ್ಗಧಾರೆಯು ಮಘು ಮಹಾಹಿಯು
ಹೆಡೆಯು ಮಾಣಿಕ ವಜ್ರದಿಂ ಬಿಗಿ
ದೊಡಲಿಗೊಡ್ಡಿದ ಸುರಗಿ ಕಡು ಕೆರಳದ ಮೃಗಾಧಿಪನ ।

---

[1] ಶಸ್ತ್ರ, ಚ. ಠ.

ನಡುಗುಹೆಯೊಳಿಹ ಸುಧೆಯು ಘಟ ವೀ
ಪೊಡವಿಯೊಡೆತನ ಸದರವೇ ಕಡು
ಬಡವರಿಗೆ ದೊರೆಕೊಂಬುದೇ ಭೂಪಾಲ ಕೇಳೆಂದ ॥　　೬೭

ಮಗಗೆ ಮುನಿವನು ತಂದೆ ತಂದೆಗೆ
ಮಗ ಮುನಿವನೊಡಹುಟ್ಟಿದರು ಬಲು
ಹಗೆ ಕಣಾ ತಮ್ಮೊಳಗೆ ಭೂಪರ ಕುಲದ ವಿದ್ಯೆಯಿದು [1] ।
ಬಗೆಯೆ ನಿನ್ನೊಡಹುಟ್ಟಿದರು ಮಂ
ತ್ರಿಗಳೊಳಾಪ್ತರು ಭಿನ್ನರೇ ದಾ
ಯಿಗರೊಳಂತರ್ಭೇದವೇ ಭೂಪಾಲ ಕೇಳೆಂದ [2] ॥　　೬೮

ಕೇಳು ನೀ ರಾಜೇಂದ್ರ ಭಾವದೊ
ಳಾಲಿಸುವೊಡಾವೇಷ್ಟೆ ನಾರಿಯು
ರಾಳುಗೊಂಬರು ತಮ್ಮ ಚಿತ್ತದ ಬಯಕೆ ಯನು ಬೇಱೆ ।
ಸೋಲುವರು ತಾವಲ್ಲ ಪರರನು
ಸೋಲಿಸಿಯೆ ಹಿಮ್ಮೆಟ್ಟುವರು ಮನ
ವೇಱುಕವಲಾಗಿಹುದು ಸತಿಯರ ನಂಬಬೇಡೆಂದ ॥　　೬೯

ಬೆರಸಿದಂದದಲಿಹರು ಚಿತ್ತವ
ಕರಿಸುವರು ಮತ್ತೊಬ್ಬನಲಿ ನಿಜ
ದೆರಕವೆಂಬವ್ರೊಲಿಹರು ಬೇಱೊಂದೆಡೆಯಲೊಲವಿಹುದು ।
ಎರಡುಮನ ಪೆರಡೊಲವು ಚಿತ್ತದ
ಪರಿಯೆರಡು ಪ್ರೆಯೆರಡು ನಾರಿ
ಯರೆರಡನಲ್ಲದೆ ಬಗೆಯರವನೀಪಾಲ ಕೇಳೆಂದ ॥　　೭೦

ಮಡದಿಯರು ಲತೆಗಳು ಧರಾಧಿಪ
ರೆಡಬಲದಲಿದ್ದವರುಗಳನೊಡ
ಬಡುವರಲ್ಲದೆ ಕಾರ್ಯಗತಿಗಳ ಹೆಚ್ಚು ಕುಂದುಗಳ ।



1 ಭಾಲ್ಲ ವಿದ್ಯಗಳ, ಕ. ಖ.　　2 ಭೇದ್ಧವುಟೇ ರಾಯ ನಿನಗೆಂದ, ಚ.

ಹಿಡಿವರಲ್ಲಿದು ಜಾತಿಧರ್ಮದ
ಗಡಣೆ ಯಿದನಱಿದೊಳಗೆ ಪರರಿಂ
ಗೊಡೆತನವ ನೀನೀಯೆ ಯೆಲೆ ಭೂಪಾಲ ಕೇಳೆಂದ ॥ ೩೧

ಎಲ್ಲಿ ಸುಲಲಿತವಿದ್ಯೆ ಬಹುಧನ
ವೆಲ್ಲಿ ಗಣಿಕಾನೀಕ ಮಣಿಗಣ
ವೆಲ್ಲಿ ಗಜಜಾತಾಶ್ವ ವೆಲ್ಲಿ ವರೂಥಸಂದೋಹ ।
ಎಲ್ಲಿ ಸುಭಟನಿಕಾಯ ನೆರೆದಿಹು
ದಲ್ಲಿ ತನ್ನಾಧೀನ ಮಾಡಲು
ಬಲ್ಲವನೆ ನರನಾಥನವನೀಪಾಲ ಕೇಳೆಂದ ॥ ೩೦

ಶೂರ ಧೀರನುದಾರ ಧರ್ಮೋ
ದ್ಧಾರ ವಿವಿಧವಿಚಾರ ಸುಜನಾ
ಧಾರ ರಿಪುಸಂಹಾರ ಚತುರೋಪಾಯಸಾಕಾರ ।
ಸಾರಮಂತ್ರವಿಚಾರ ಭುವನಾ
ಧಾರ ಸುಜನಸ್ವಾಮಿಕಾರ್ಯೋ
ದ್ಧಾರ [1] ನೆನಿಸುವ ಮಂತ್ರಿಯುಂಟೇ ರಾಯ ನಿನಗೆಂದ ॥ ೩೩

ಲಲಿತಶ್ರುತದೃಷ್ಟಾನುಮಾನಂ
ಗಳಲಿ ನಿಪುಣನ ನಿಶ್ಚಲನ ನಿ
ರ್ಮಲನ ರಾಗದ್ವೇಷರಹಿತನ ಬಹುಲಿಪಿಜ್ಞಕನ ।
ಹಲವುಬುದ್ಧಿಯನುಳ್ಳವನ ಕೃ
ಚಳಕಲಿಖಿತನ ವಾಚಕನ ಬಗೆ
ಗೊಳಿಸಿ ಕರಣಿಕಪತಿಯ ಮಾಡುವುದರಸ ಕೇಳೆಂದ ॥ ೩೪

ತುರಗಗಜಭಟರಳವಱಿವ ಸಂ
ಗರಮಹೋತ್ಸಾಹನ ಜಿತಶ್ರಮ
ನರನನಧಿಕನ ಭೇದಕನ ನಾನಾಯುಧಜ್ಞಕನ ।

1 ಯರ್ಥಗಾರ, ಚ. ತ.

ಭರಿತಧೈರ್ಯನ ನೀತಿವಿದ ಕಾ
ಹುರನುದಾರನನೂರ್ಧ್ವರೋಮನ
ನಿರದೆ ಸೇನಾಪತಿಯು ಮಾಡುವುದರಸ ಕೇಳೆಂದ ॥ ೭೫

ಮನವಚನಕಾಯದಲಿ ದಾತಾ
ರನ ಹಿತವನುಳ್ಳವನ ವಿನತನ
ವಿನುತವನಿತಾನತಮುಖನ ನಿಶ್ಚಲನ ತೋಷಕನ ।
ಮುನಿವರರ ಬುದ್ಧಿಗೆ ಸಿಲುಕದಾ
ಪ್ತನ ಸುಧರ್ಮಕಲಾಪ್ರವೀಣನ
ಜನಪ ಚಿತ್ತೈಸುವುದಲೈ ತಾಂಬೂಲಧಾರಕನ ॥ ೭೬

ಎಡಬಲವನಾರೈವುತೊಡೆಯನ
ಬಿಡದೆ ನೋಡುತ ಮಕ್ಷಿಕಂಗಳ
ಗಡಣವನು ಝಾಡಿಸುತ ಕೆಗ್ಗಣ್ಣಿಕ್ಕಿ ಕೆಲಬಲನ ।
ಬಿಡದೆ ನೋಡುತ ಸ್ವಾಮಿಕಾರ್ಯಕೆ
ಕಡೆಯೆನಿಸದಾಹವದ ಸೇವೆಗೆ
ನಡೆಯುದವನೇ ಚಮರಧಾರಕನರಸ ಕೇಳೆಂದ ॥ ೭೭

ನಿಶಿತಪರಿಮಳದಿಂದಲಾವೋ
ದಿಸಿ ಸುಗಂಧದ್ರವ್ಯದಲಿ ಬಂ
ಧಿಸಿದ ಮುದ್ರೆಯು ಜೀವ ತನ್ನಯ ಜೀವನವದೆಂದು ।
ವಸುಮತೀಶ್ವರಗಿತ್ತು ತಾ ಭೋ
ಗಿಸದೆ ಬಳಸದೆ ಮುನಿವರರ ತೊಲ
ಗಿಸುವವನೆ ಪಾನೀಯಧಾರಕನರಸ ಕೇಳೆಂದ ॥ ೭೮

ವಿಸುಪ ಮಣಿಗಣ ಲೋಹಕಾಂಚನ
ವಿಸರ ಭೇದವನಱಿವ ಕೊಟ್ಟುದ
ನೆಸಿಯುಲೀಯದೆ ತಾನು ಭಕ್ಷಿಸದಹಿನಿಧಾನವನು ।

ಒಸೆದು ಕಾದಿಪ್ಪಂತೆ ಕಾದಿಹ
ಪುಸಿಯದಾಪ್ತನ ಬಹುಕುಟುಂಬಿ
ವ್ಯಸನವರ್ಜಿತನ ಮಾಡುವುದೈ ಭಂಡಾರರಕ್ಷಕನ ‖ ೭೯

ಪಲಿತಕಾಯಕುರೂಪಿಯನು ನಿ
ರ್ಮಲಿನ ಲೋಭಿಯ ಸಾವಧಾನಿಯ
ಸಲೆ ಜಿತೇಂದ್ರಿಯನಿಂಗಿತಾಕಾರಪ್ರಭೇದಕನ ।
ಮಲಿನಸನು ಕಡುಕುಜಿವನಬಲಾ
ಪಳಿಯು ಸುಧಾನಕ್ಕೆ ನಿಲಿಸುವು
ದಿಳೆಯೊಳಗ್ಗದ ಜಾಣನವಸ್ಸೆ ಭೂಪ ಕೇಳೆಂದ ‖ ೮೦

ಧರೆಯ ವ್ಯೈಸಿರಿಯಲ್ಲಿ [1] ಕುಲವೃ
ದ್ಧರನು ಹೀನಾಂಗರನಹಿಂಸಾ
ಚರಿತರನು ಜಾತ್ಯಂಧರನು [2] ಧನದಾಶೆಯುಳಿದವರ ।
ಅರಮನೆಯ ಸಂರಕ್ಷಣಾರ್ಥದೊ
ಳಿರಿಸಿದರೆ ಮಾನೋನ್ನತಿಗೆ ವಿ
ಸ್ತರಣವಹುದಿದನರಿದಿಹೈ ಭೂಪಾಲ ಕೇಳೆಂದ ‖ ೮೧

ಅರಸ ಕೇಳಂತಃಪುರವ ಕಾ
ತರಿಸುವುದದಾವಂಗವನ ಹಿಂ
ದಿರಿಸಲಾಗದು ಮುಂದೆ ಮಾನಸ್ಥಿತಿಗೆ ಭಯವಹುದು ।
ಹಿರಿದು ಭೀಭತ್ಸೆಯಲಿ ಹುದುಗಿ
ರ್ದರನ ರಾಜದ್ವಾರವಂಗೀ
ಕರಿಸುವುದು ನೃಪನೀತಿ ಯಿದು ಭೂಪಾಲ ಕೇಳೆಂದ ‖ ೮೨

ಸತಿಯರೊಲುಮೆಯಲಿ ವಿಟರುಗಳನು
ಸತಿಯರ ಸ್ಥಿತಿಗತಿಗೆ ನೀನಂ
ದತಿಶಯೋಕ್ತಿಯ ನುಡಿವವರನರಮನೆಯ ಕಾಹಿಂಗೆ ।

---

1 ಜರೆನರೆಯುವ್ಯೈಸಿರಿಯ, ಚ.    2 ವಿಜ್ಞಾಪ್ತರ, ಕ. ಖ.

ಪತಿಕರಿಸಿದರೆ ಜಗವೆಱಿಯಲಾ
ಕ್ಷಿತಿಪನಭಿಮಾನವು ನಿರರ್ಥಕ
ಗತವಹುದು ನೀನಱಿದಿಹೈ ಭೂಪಾಲ ಕೇಳೆಂದ ॥ ೮೩

ಪಿತೃಪಿತಾಮಹ ಸೂಪಶಾಸ್ತ್ರ
ಪ್ರತತಿಕೈಕರಣೆಗಳೊಳಧಿಕನ
ನತಿಶುಚಿಯನಸದೃಶನನಕ್ರೋಧಿಯನನಾಲಪನ ।
ಪತಿಹಿತನ ಷಡುರಸವಿಶೇಷಾ
ನ್ವಿತನ ನಿತರಾಲಯವಿದೂರನ
ಪತಿಕರಿಸುವುದು ಸೂಪಕಾಱತೆಗರಸ ಕೇಳೆಂದ ॥ ೮೪

ತಿಳಿದವನ ಮತಿಯುತನ [1] ಭಾಷಾ
ವಳಿಲಿಪಿಜ್ಞನ ಸಾಕ್ಷರಿಕಮಾಂ
ಡಳಿಕಸಾಮಂತರನಶೇಷರನಿಂಗಿತವನಱಿದು ।
ಸಲೆ ಕರವ ಕಳುಹಿಸುವ ನಿಲಿಸುವ [2]
ಬಲುಹನುಳ್ಳನ ಸುಕೃತದುಷ್ಕೃತ
ಫಲಿತಕಾರ್ಯನನಧಿಕಮಂತ್ರಿಯ ಮಾಳ್ಪುದೊಲವಿಂದ ॥ ೮೫

ಚಂಡನೀತಿಸ್ಥಾನ ಶೌಚೋ
ದ್ದಂಡಗರ್ಗಾಂಗಿರಸನಿಪುಣನ
ಪಂಡಿತಪ್ರಿಯಶಾಂತಿಪೌಷ್ಟಿಕಕರ್ಮಕೋವಿದನ ।
ಚಂಡದೈವಜ್ಞನನು ಪೂತಗುಣ
ಮಂಡಿತನ ಬಹುಶಾಸ್ತ್ರವಿದನನು
ಖಂಡಿತನ ಪೌರೋಹಿತನ ಮಾಡುವುದು ಕೇಳೆಂದ ॥ ೮೬

ಘಾಯದಲಿ ಸಲೆ ಚೊಕ್ಕಯದಲು
ಪಾಯಕರದಂಡೆಯಲಿ ಲಗುಡೆಯ
ಲಾಯಿಯೊಳಗೆ ನವಾಯಿಬಿನ್ನಾಣದಲಿ ಬೇಸರದೆ ।

---

[1] ವಿದನ, ಚ. ಠ. [2] ಕಟ್ಟಿಸುವಕಳಚುವ, ಚ. ಠ.

ಸ್ಥಾಯಿಯಲಿ ಸಂಚರಿಯಲೀಯದ
ಳ್ಳಾಯಿಯಲಿ ಬಂಧದ ವಿನೋದದ
ಲಾಯುತವನಱಿದಿಹನೆ ಮಲ್ಲನು ರಾಯ ಕೇಳೆಂದ ॥ ೮೭

ಗುಳಿತವರ[1] ನೀಕ್ಷಿಸುತ ಬಟ್ಟೆಯ
ಮೆಳೆಮರಂಗಳ ಹೊಯ್ಲ ತಪ್ಪಿಸಿ
ನೆಳಲನಱಸುತ ವೇಗಗತಿ ಸಾಮಾನ್ಯಗತಿಗಳಲಿ ।
ಬಳವಿಡಿದು ಭೂಭುಜರ ಯಾನ
ಗಳೊಳಳುಕದೆ ದಗೆಯ ಸೈರಿಸಿ
ಬಳಸುವವನೇ ಛತ್ರಧಾರಕ ನರಸ ಕೇಳೆಂದ ॥ ೮೮

ಹರುಷದಲಿ ನಿಜಜನನಿ ಗರ್ಭವ
ಧರಿಸಿ ಕೊಂಡಾಡುವ ವೊಲುತ್ತಮ
ಪುರುಷನಂತರ್ಯಾಮಿಯನು ತಾಳ್ವಂತೆ ಭೂಭುಜರ ।
ಧರಿಸಿ ಸುಖಸಂಗತಿಗಳಲಿ ಸಂ
ಚರಿಸುತಾಳ್ದನ ಹಾನಿ ವೃದ್ಧಿಯ
ಲಿರಲು ವಾಹನಧಾರಿಗಳು ಭೂಪಾಲ ಕೇಳೆಂದ ॥ ೮೯

ಹಿಂದೆ ಮಾಡಿದ ಸುಕೃತಫಲವೈ
ತಂದು ಬೆರಸುವವೋಲು ನಾನಾ
ಬಂಧದಾಪತ್ತಿನಲಿ ಹರಿ ನಿಜಭಕ್ತಸಂಗತಿಯ ।
ಮುಂದೆ ನಿಲುವವೊಲವನಿಪಾಲನ
ದಂದುಗದ ಹೊತ್ತಿನಲಿ ಗಜಹುಲಿ
ವೃಂದವನು ಬಾಚುವನೆ ವಾಹಕನರಸ ಕೇಳೆಂದ ॥ ೯೦

ಬೇಸರದೆ ಕಾಳೋರಗನನ
ಡ್ಡೈಸಿ ಕಟ್ಟಿರುಹೆಗಳು ಮಿಗೆ ವೇ
ಡೈಸಿ ಕಡಿದಱಿಯಟ್ಟುವಂಪದಲಹಿತಬಲದೊಳಗೆ ।

1 ಕುಳಿತವರ, ಖ.

ಓಸರಿಸದೊಳಹೊಕ್ಕು ಸಮರವಿ
ಲಾಸವನು ನೆಱೆ ಮೆಱೆದು ಕೇಶಾ
ಕೇಶಿಯುಲಿ ಹಿಡಿದಿಱಿವ [1] ವನೆ ಕಾಲಾಳು ಕೇಳೆಂದ ‖ ೯೧

ಬಿಟ್ಟ ಸೂಟಿಯುಲರಿನೃಪರ ನೆಱೆ
ಯಟ್ಟ ಮೊದಲಿಸುತ್ತ ಮುಂದಣ
ಥಟ್ಟನೊಡೆಹಾಯ್ದು ಹಿತಬಲದೊಳಗಾನೆ ವರಿವರಿಸು ।
ಹೊಟ್ಟು [2] ಗುಟ್ಟುತ ಹೆಣವೆ ಸಾಲುಗ
ಳೊಟ್ಟ ಮೆಱೆಯುಲು ಕಳನ ಬಹೌಕದ
ಲಟ್ಟ ಯಾಡಿಸಬಲ್ಲವನೆ ರಾವುತನು ಕೇಳೆಂದ ‖ ೯೨

ಹೆಬ್ಬಲವ ನೊಡೆತುಱಿದು ಧರಣಿಯು
ನಿಬ್ಬಗೆಯು ಮಾಡಿಸುತ ಗಜಹಯು
ದೊಬ್ಬುಳಿಯು ಹರೆಗಡಿದು ಕಾದಿಸುತಾನೆಗಳ ಮೇಲೆ ।
ಬೊಬ್ಬಿಱಿದು ಶರವಳಯು ಕಱಿವುತ
ಲಿಬ್ಬರದ [3] ಬವರದಲಿ ರಿಪುಗಳ
ಗುಬ್ಬಸವನೆಸಗುವನೆ ಜೋದನು ರಾಯ ಕೇಳೆಂದ ‖ ೯೩

ಕುದುರೆಗಳನಾರ್ಬೈದು ರಥವನು
ಹದುಳಿಸುತ ಸಾರಥಿಯು ನೋಡುತ
ಲಿದಿರ ಮುಱಿವುತ ತನ್ನ ಕಾಯಿದುಕೊಳುತ ಕೆಲಬಲನ ।
ಸದೆದು ಮರಳುವ ಲಾಗುವೇಗದ
ಕದನಕಾಲಾನಳನವನು ತಾ
ಮೊದಲಿಗನಲ್ಲೆ ರಥಿಕರಿಗೆ ಭೂಪಾಲ ಕೇಳೆಂದ ‖ ೯೪

ಧೊರೆಯು ಕಾಣುತ ವಂದಿಸುತಲಂ
ಕರಿಸುತಂತರಿಸುತ್ತ ಮಿಗೆ ಹ
ತ್ತಿರನೆನಿಸದತಿದೂರನೆನಿಸದೆ ಮಧ್ಯಗತನೆನಿಸಿ ।

---

[1] ಲಹಿತನೃಪರನು, ಚ.　　[2] ಹಿಟ್ಟು, ಚ.　　[3] ಲಬ್ಬರಿಸಿ,

ಪರಿಪಿತಿಯಲೋಲಗಿಸುತರಸನ
ಸಿರಿಮೊಗವನೀಕ್ಷಿಸುತ ಬೆಸಸಲು
ಕರಯುಗವನಾನುವನೆ ಸೇವಕನರಸ ಕೇಳೆಂದ ॥ ೯೫

* ಗ್ರಾಮಮೂಱಱ ಸಂಚರಣೆಗಳ
ಸೀಮೆಯುಲಿ ಸ ರಿ ಗ ಮ ಪ ದ ನಿ ಗಳ
ಸೀಮೆ ತಪ್ಪದೆ ಪರಣಭರಣದ ಹೊಂಪು ತಿರುಪುಗಳ |
ಕೋಮಲಿತಶಾರೀರಹೃದಯದ
ರಾಮಣೀಯಕರಚನೆಗಳಲಿ ಸ
ನಾಮನೆನಿಸುವನವನೆ ಗಾಯಕನರಸ ಕೇಳೆಂದ ॥ ೯೬

ತಾಳಲಯಬೊಂಬಾಳಮಿಶ್ರದ
ಮೇಳವದು ತಾ ರಾಗ ಶುದ್ಧದ
ಸಾಳಗದ ಸಂಕೀರ್ಣದೇಸಿಯ ವಿವಿಧರಚನೆಗಳ |
ಮೇಳವರಿ ಷಾಡವದ ಸಾಧನ
ದೇಚಿಗೆಯ ಸಂಪೂರ್ಣಮಾರ್ಗದ
ಸೂಚಿಗಳ ಲಯಮಾನವಱಿವವನವನೆ ಗಾಯಕನು ॥ ೯೭

ಗಳಿಸಿದರ್ಥವನೆರಡು ಭಾಗವ
ಸಲಿಸುವೈ ಕರಿತುರಗರಥಪಾ
ಯ್ದಳಕೆ ಧರ್ಮತ್ಯಾಗ ಭೋಗವ ಮಾಡಿ ಸುರತತಿಗೆ |
ಕಳೆವ ಭಾಗದಲೊಂದು ಭಾಗವ
ನುಳುಹುವೈ ಭಂಡಾರದಲಿ ನೃಪ [1]
ತಿಲಕರಿಗೆ ಕರ್ತವ್ಯ [2] ವಿದು ಭೂಪಾಲ ಕೇಳೆಂದ ॥ ೯೮

---

* ಉನ್ನತನ ನಿರುಪಾಧಿಕನ ಸಂ | ಪೂರ್ಣದಕ್ಷನ ತನ್ನನನ್ಯರು | ಮನ್ನದನ ಪತಿಕಾರ್ಯನಿಷ್ಠನನಾಪ್ತಗುಪ್ತಕನ ॥ ಮನ್ನಣೆಗೆ ಬೆರೆಯುವನನತಿಶಯ | ನಿನ್ನ ಕಾರ್ಯವಿಶಾರದನನು | ಪನ್ನಪ್ರತಿಹಾರಕರು ಪುಟೇ ರಾಯ ಸಿನಗೆಂದ ॥ ಡ.

1 ಕೋಶನೀನೃಪ, ಡ. 2 ತಿಲಕರಂತಬುದ್ಧಿ, ಡ.

ಮಲೆವ ರಾಯರ ಬೆನ್ನ ಕಪ್ಪವ
ನಲಗಿನಲಿ ಕೊಂಡಾಂತ ಮನ್ನೆಯ
ಕುಲದ ತಲೆಚೆಂಡಾಡಿ ರಿಪುಗಳ ದುರ್ಗದಲಿ ತನ್ನ ।
ಬಲುಸಚಿವರನು ನಿಲಿಸಿ ತಾ ಪುರ
ದಲಿ ವಿನೋದದಲಿರುತ ಹರುಷದ
ಲಿಳೆಯ ಪಾಲಿಸುವವನೆ ರಾಯನು ಭೂಪ ಕೇಳೆಂದ ॥ ೯೯

ಒಂದು ಕಡೆಯಲಿ ದಳ ಮುಱಿದು ಮ
ತ್ತೊಂದು ದೆಸೆಯಲಿ ಮನ್ನೆಯರು ಕವಿ
ದೊಂದು ಕಡೆ ಸಮೆವಳ್ಳಿ ಮತ್ತೊಂದ [1] ಧಿಕಬಲವೆನಿಸಿ ।
ಬಂದು ಸಂತಾಪದಲಿ ಕಾಳಗ
ದಿಂದ ಪುರದಲಿ ನಿಂದು ಕರಿಕರಿ
ಗೊಂದುವ ಕ್ಷಿತಿಪಾಲನೇ ಭೂಪಾಲ ಕೇಳೆಂದ ॥ ೧೦೦

ಬೆಳಸು ಘನತೃಣವಧಿಕಜಲನಿ
ರ್ಮಲವೆನಿಪ ಕಾಲದಲಿ ಪರಮಂ
ಡಲಕೆ ನಡೆವುದು ದುಷ್ಟಕಾಲದೆ ಹೀನನೆಂದೆನಿಸೆ ।
ಬಲವಹುದು ನಿಜದಳಕೆ ಬರಲಾ
ನೆಲಕೆ ಮೆಟ್ಟಲು ವೈರಿಸೇನಾ
ವಳಿಯ ಘಾತಕೆ ದೊರಕುವುದು ಭೂಪಾಲ ಕೇಳೆಂದ ॥ ೧೦೧

ಆಣೆಗಪಜಯವಿಲ್ಲಲೇ ಕೀ
ಳಾಣಿ ಟಂಕದೊಳಿಲ್ಲಲೇ ನಿ
ತ್ರಾಣದಲಿ ಸಂಗರವ ಹೊಗೆಯಲೆ ಶೌರ್ಯಗರ್ವದಲಿ ।
ವಾಣಿಯನು ಚಿತ್ತದಲಿ ಧರ್ಮವ
ಲೂಣೆಯವನಹಿತರಲುಪೇಕ್ಷೆಯ
ಕೇಣವನು ದಾನದಲಿ ಮಾಡೆಲೆ ರಾಯ ಕೇಳೆಂದ ॥ ೧೦೨

---

1 ದೆಸೆಯಲಿ ಬಲದೊಳೊಂದನೆಯ, ಚ.

ಕಳವು ಹುಸಿ ಹಾದರ ವಿರೋಧ
ಸ್ಖಲಿತ ವಾರಡಿ ಬಂದಿ ವಱಿದುಱಿ
ಬೆಳುಗವತೆ ಪರಿಭವಣಿ ಡಾವರ [1] ತಕ್ಕು ಡೊಳ್ಳಾಸ ।
ಪೞವು ವಂಚನೆ ಜಾತಿಸಂಕರ
ಕೊಲೆ ನಿರೋಧವು ವಿಕೃತವೆಮಾಯಾ
ವೆಳಗಳಂಬಿವು ನಿನ್ನೊಳಿಲ್ಲವೆ ರಾಯ ಹೇಳೆಂದ ॥ ೧೦೩

ಬಡವರನು ಬಲ್ಲಿದರು ಮದದಲಿ
ಕೆಡಿಸುವರು ರಾಜ್ಯದೊಳಗವದಿರ
ಮಡದಿಮಕ್ಕಳ ಕಣ್ಣನೀರಿನ್ನಾರ ತಾಗುವುದು ।
ಪೊಡವಿಗಧಿಪತಿ ನೀನು ಧೂರ್ತರ
ಬಡಿದು ಶಿಕ್ಷಿಸದಿದ್ದೆಯಾದೊಡೆ
ನಡವಳಗೆ ಕೇಡಹುದು ಕುಲದಲಿ ಕರಣಿಕರ ನಡುವೆ ॥ ೧೦೪

ವಿದ್ಯೆ ಸತ್ಕುಲ ಬಹುವಿವೇಕವು
ಬುದ್ಧಿ ಜಾಣುಮೆ ನುಡಿಯು ಸಡಗರ
ಶುದ್ಧಚಿತ್ತ ಸುಶೀಲ ಭುಜಬಲಭದ್ರನೆಂದೆನಿಪ ।
ಉದ್ದೆಗವು ಮೊದಲಾಗುಣಂಗಳ
ಲಿದ್ದು ಫಲವೇನರಸ ಭಾಗ್ಯದ
ಬುದ್ಧಿಹೊದ್ದದವ ನರನು ದರಿದ್ರಾಂಗನವನೆಂದ ॥ ೧೦೫

ಸಿರಿಗೆ ಕಂಟಕವಾದ ದೋಷವ
ನೊರೆವೆನಾಲಸ್ಯವನು ಭಯವನು
ಮಱವೆಯನು ಕೋಪವನು ನಿದ್ರೆಯ ದೀರ್ಘಸೂತ್ರತೆಯ ।
ಪರಿಹರಿಸಬಲ್ಲವನಿಪಾಲಂ
ಗೆರವಿಸಿಸದೈಶ್ವರ್ಯವಹುದು
ವರೆಯೊಳವ ರಾಜೋತ್ತಮನು ಭೂಪಾಲ ಕೇಳೆಂದ ॥ ೧೦೬

---

1 ಅ-ನ್ಯಾಯಪರಿಭವ, ಚ.

ಕೃಷಿ ಮೊದಲು ಸರ್ವಕ್ಕೆ ಕೃಷಿಯಿಂ
ಪಸರಿಸುವುದಾಕೃಷಿಯನುದ್ಯೋ
ಗಿಸುವ ಜನವನು ಪಾಲಿಸುವುದಾಜನಪದದ ಜನದಿ ।
ವೆಸು ತೆರಳುವುದು ವೆಸುವಿನಿಂ ಸಾ
ಧಿಸುವುದೆಲ್ಲವೆ ಭೂಪರದಱಿಂ
ಕೃಷಿವಿಹೀನನ ದೇಶವದು ದುರ್ದೇಶ ಕೇಳೆಂದ ॥ ೧೦೭

ತಲೆಯ ಮೇಲಿಱಿದವೆನನೊಗ್ಗಿಸಿ
ಸಲಹುವರು ಪುರುಷಾರ್ಥಜೀವರ
ನೀಚಕೆಗಾಂಬರು ಸ್ವಾಮಿದ್ರೋಹರನೊಲಿದು ನಂಬುವರು ।
ತಿಳಿಯಲಿದು ಕ್ಷತ್ರಿಯರ ಸಹಜದ
ಬಳಕೆ ನೀನರಸಾಗಿ ನಿನ್ನೊಳು
ಮುಳಿವರಿಗೆ ನೀನೊಲಿಯೆ ಯೆಲೆ ಭೂಪಾಲ ಕೇಳೆಂದ ॥ ೧೦೮

ಹಲವು ವಿನಿಯೋಗದಲಿ ಸುದತಿಯ
ರೊಲುಮೆಯಲಿ ಸಕಲಾಂಗದಲಿ ನಿ
ಸ್ಖಲಿತನಿಜವನೆ ಧರಿಸುವಾಶ್ರಮವರ್ಣಭೇದದಲಿ ।
ಹಱವು ನಿನಗಾವಂಗದಲಿ ಬಳ
ಸಲಿಸದಲೆ ಪರತತ್ವದಲಿ ವೆ
ಗ್ಗಳಿಸದಲೆ ವೈರಾಗ್ಯ ಮತ ಭೂಪಾಲ ನಿನಗೆಂದ ॥ ೧೦೯

ಢಾಳರನು ಧವಳರನು [1] ಠಕ್ಕಿನ
ಠೌಳಿಕಾಱಱ ಕೃತಕಮಾಯಾ
ಜಾಲರನು ಕಾಹುರರನಂತರ್ದಾಹಕರ ಶಠರ ।
ಖೂಳರನು ಖಳರನು ವಿಕಾರಿಯ
ಜಾಳುನುಡಿಗಳ ಜಡಮತಿಯ ನೀ
ನಾಳಿಗೊಂಬೆಯೊ ಲಾಲಿಸುವೆಯೋ ರಾಯ ಹೇಟೆಂದ ॥ ೧೧೦

1 ಡಾಳರನು, ಚ.

ನರಕಕರ್ಮವ ಮಾಡಿ ಇಹದೊಳು
ದುರಿತಭಾಜನರಾಗಿ ಕಡೆಯಲಿ
ಪರಕೆ ಬಾಹಿರರಾಗಿ ನಾನಾಯೋನಿಯೊಳು ಸುಳಿದು ।
ಹೊರಳುವರು ಕೆಲಕೆಲರು ಭೂಪರು
ಧರಿಸುವರಲ್ಲೈ ರಾಜಧರ್ಮದ
ಪೋಟಗೆಯನು ಮೆಚ್ಚಿದಿರೆ ಯೆಲೇ ಭೂಪಾಲ ಕೇಳೆಂದ ॥ ೧೧೧

ನೃಗನ ಭರತನ ಮಂಧಾತರನ
ಸಗರನ ಪುರೂರವಯಯಾತಿಯು
ಮಗನ ನಹುಷನ ಕಾರ್ತವೀರ್ಯನ ನಳನ ದಶರಥನ ।
ಪಗಲಿರುಳುವಲ್ಲಭರ ವಂಶದ
ವಿಗಡರಲಿ ಯಮಸೂನು ಸರಿಯೋ
ವಿಗಿಲೊ ಯೆನಿಸುವ ನೀತಿ [1] ಯುಂಟೇ ರಾಯ ನಿನಗೆಂದ ॥

ಆಮುನೀಂದ್ರನ ವಚನರಚನಾ
ತಾಮರಸಮಕರಂದಕೇಳಿಯು
ಲೀಮಹೀಶಮನೋಮಧುವ್ರತ ವುಬ್ಬಿತೊಲವಿನಲಿ ।
ರೋಮಪುಳಕದ ರುಚಿರಭಾವ
ಪ್ರೇಮಪೂರಿತಹರುಷರಸದು
ದ್ದಾಮನದಿಯೊಳು ಮುಳುಗಿ ಮೂಡಿದನರಸ ಕೇಳೆಂದ ॥ ೧೧೩

ನಾರದರಿಂದ ಮಾಡಲ್ಪಟ್ಟ ಧರ್ಮೋಪದೇಶದಿಂದ ತುಷ್ಟನಾಗಿ
ನಾರದರನ್ನು ಸ್ತುತಿಸುವಿಕೆ.

ಎಲೆ ಮುನಿಯೆ ನೀವ್ ರಚಿಸಿದೀನಿ [2]
ರ್ಮಲನೃಪಾಲಾನ್ವಯ [3] ಪ್ರಪಂಚವ
ಬಳಸುವೆನು ಕೆಲಕೆಲವನಿನ್ನುಳಿ ಬಳಸುವೆನು ಕೆಲವ ।

[1] ಕೀರ್ತಿ, ಹ. [2] ನೀ ಬೆಸಸಿದೀನಿ, ಹ. [3] ರ್ಮಲದನೃಪನೀತಿ,

ಇಱದು ಧರಣಿಗೆ ಸುಱದು ನೀತಿ
ಸ್ಖಲಿತಜಡರನು ತಿದ್ದಿ ತಿಳುಹುವ
ಸುಲಭತನದಲಿ ದೇವರುಷಿ ನಿನಗಾರು ಸರಿ ಯೆಂದ । ೧೧೪

ಮುನಿಯೆ ಬಿನ್ನಹವಿಂದು ನೀವಿಂ
ದ್ರನ ವಿರಿಂಚಿಯ ಯಮನ ವರು
ಣನ ಧನಪತಿಯ ಶೇಷನ ಸಭಾಮಧ್ಯದಲಿ ಸುಱವಿರಲೇ ।
ಇನಿತು ರಚನೆಗೆ ಸರಿಯೊ ಮಿಗಿಲೋ
ಮನುಜಯೋಗ್ಯಸ್ಥಾನವೋ ಮೇ
ಣೆನಲು ನಗುತೆಂದನು ಮುನೀಶ್ವರನಾಯುಧಿಷ್ಠಿರಗೆ [1] ॥ ೧೧೫

ಜನಪ ಕೇಳುತ್ಸೇಧ [2] ಶತಯೋ
ಜನ ತದರ್ಧದೊಳಗಲದಳತೆಯಿ
ದೆನಿಪುದಿಂದ್ರಸ್ಥಾನ ವಲ್ಲಿಹುದಖಿಳಸುರನಿಕರ ।
ಜನಪರಲ್ಲಿ ಯಯಾತಿಯಾತನ
ಜನಕ ನಳನೃಗಭರತ [3] ಪೌರವ
ರೆನಿಪರಖಿಳಕ್ರತುಗಳಲಿ ಸಾಧಿಸಿದರಾಸಭೆಯ ॥ ೧೧೬

ವೈದಿಕೋಕ್ತಿಗಳಲಿ ಹರಿಶ್ಚಂ
ದ್ರಾದಿರಾಯರು ರಾಜಸೂಯದ
ಲಾದಿವಿಜಸಭೆಗಗ್ಗಳೆಯರಿಂದ್ರಂಗೆ ಸರಿ ಮಿಗಿಲು ।
ಆದುದಾ ಪುರುಹೂತಸಭೆಯೋ
ಪಾದಿ ಯಮುನಾಸ್ಥಾನದಲ್ಲಿ ವಿ
ಷಾದದಲಿ ನಿಮ್ಮಯ್ಯನಿಹನಾತನ ಸಮೀಪದಲಿ ॥ ೧೧೭

ವರುಣಸಭೆಯೊಳಗಿಹುವು ಭುಜಗೇ
ಶ್ವರಸಮುದ್ರ ನದೀನದಾವಳಿ
ಗಿರಿತರುವ್ರಜವೆನಿಪ ಸಂಖ್ಯಾರಹಿತವಸ್ತುಗಳು ।

1 ರಾಯನ ನುಡಿಗೆ ನಗುತಿಂತೆಂದನಾಮುನಿಪ, ಡ. 2 ಳ ವಿಸ್ತೀರ್ಣ, ಕ. ಖ. 3 ನಹುಷ, ಡ.

ಅರಸ ಕೇಳು ಕುಬೇರಸಭೆಯಿದು
ಪರಿಯುಗಲ ವೆಪ್ಪತ್ತು ಯೋಜನ
ಹರಸಖನ ಸಿರಿ ಸದರವೇ ಬಣ್ಣಿಸುವೊಡರಿದೆಂದ ‖ ೧೧೮

ಬಗೆಯೊಳಗೆ ಮೊಳವುದು ಚತುರ್ದಶ
ಜಗವೆನಲು ಜಾವಳವೆ ತನ್ನೋ
ಲಗದ ಸಿರಿ ಪರಮೇಷ್ಠಿಗೇನರಿದೈ ಮಹೀಪತಿಯೆ ।
ಸುಗಮಗಾನಿಯುರುಪನಿಷದವಿ
ದ್ಯೆಗಳು ವೇದಸ್ಮೃತಿಪುರಾಣಾ
ದಿಗಳು ಬಿರುದಾವಳಿಯ ಪಾಠಕರಾತನಿದಿರಿನಲಿ ‖ ೧೧೯

ಮುನಿಗಳೇ ಮೋಣಿಯುರು ಮಂತ್ರಾಂ
ಗನೆಯರೋಲೆಯುಕಾತಿಯರು ಸುರ
ಜನವೆ ಕಿಂಕರ [1] ಜನರು ಸೂರ್ಯಾದಿಗಳ್ ಸಹಚರರು ।
ಘನಚತುರ್ದಶವಿದ್ಯೆ ಪಾಠಕ
ಜನವಲೈ ಪಾಡೇನು ಪದ್ಮಾ
ಸನನ ಪರುತವಮಾ ಸಭೆಗೆ ಸರಿಯಾವುದೈ ನೃಪತಿ ‖ ೧೨೦

ಇನಿಬರಾಸ್ಥಾನದಲಿ ಸುಕೃತದ
ಲಿನಕುಲನು ತೇಜಸ್ವಿ ಗಡ ಸುರ
ಮುನಿ ಹರಿಶ್ಚಂದ್ರಂಗೆ ಸಾಱಿದ ಸುಕೃತಫಲವೇನೊ ।
ಜನಕನಪದೆಸೆಗೇನು ಸಿಷ್ಕೃತ
ವೆನಲು ನಕ್ಕನು ರಾಜಸೂಯದ
ಘನವನಱಿಯಾ ಧರ್ಮನಂದನ ಯೆಂದನಾಮುನಿಪ ‖ ೧೨೧

ಆಮಹಾಕ್ರತುವರವಸಿ: ಪ...
ಡಾ ಮಹೀಶ್ವರಪಜ್ಕ್ತಿ...ವು ಲಿ ಸಿ
ಸ್ಸೀಮದಲಿ ನಿಮ್ಮಯ್ಯಸಿಪ...ವ ಸುತೇಜದಲಿ ಬಿಟಿಕ ।

---

1 ಕಿನ್ನರ, ಕ. ಖ.

ಸೋಮವಂಶದ ರಾಯರೊಳಗು
ದ್ದಾಮರಹ [1] ಬಲುಗೈಕುಮಾರ
ಸ್ತೋಮನೀವಿರಲಯ್ಯಗರಿದೇನೆಂದನಾಮುನಿಪ ‖ ೧೨೨

ಮುನಿಯು ಮಾತಿನ ಬಲೆಗೆ ಸಿಲುಕಿತು
ಜನಪತಿಯ ಚೈತನ್ಯಮೃಗವೀ
ತನ ವಿಚೋವರುಷದಲಿ ನೆನೆದುವು ಕರಣವೃತ್ತಿಗಳು ।
ಮನದಲಂಕುರ [2] ವಾಯ್ತು ನಾಲಗೆ
ಗೊನೆಯಲೆರಡೆಲೆಯಾಯ್ತು ಯಜ್ಞದ
ನೆನಹು ಭಾರವಣಿಯಲಿ ಬಿಗಿದುದು ಧರ್ಮನಂದನನ ‖ ೧೨೩

ಕಳುಹಿದನು ಸುರಮುನಿಯನುದರದೊ
ಳಿಟೆದುದಂತಸ್ತಾಪ ಯಜ್ಞದ
ಬಲುಹ ನೆನೆದಡಿಗಡಿಗೆ ಕಂಪಿಸಿ ಕೈಯ್ಯ ಗಲ್ಲದಲಿ ।
ಒಲಿದೊಲಿದು ಮಿಗೆ ಭಾವದಲಿ ಕಳ
ವಳಿಸಿ ಯೋಚಿಸಿ ಮತ್ತೆ ಭೂಪತಿ
ತಿಲಕ ಚಿಂತಿಸಿ ನೆನೆಯುತಿರ್ದನು ವೀರ ನಾರಣನ ‖ ೧೨೪

ಒಂದನೆಯ ಸಂಧಿ ಮುಗಿದುದು.

## ಎರಡನೆಯ ಸಂಧಿ.

ಸೂಚನೆ

ಬಲಿಮಥನಫಲುಗುಣರು ಸಹಿತ
ಗಳೆಯನೇಕಾಂಗದಲಿ ರಣದಲಿ
ಕಲಿಜರಾಸಂಧನನು ಸೀಳಿಯೆ ಬಿಸುಟನಾಭೀಮ ‖

1 ತೆಯ, ಡ   2 ಮನದೊಳಿದು ನೆಲೆ, ಡ.

ಧರ್ಮರಾಯನು ಭೀಮಾದಿಗಳನ್ನು ಕರೆಸಿ ಆಲೋಚನೆ ಮಾಡಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಮಂತ್ರಾಳೋಚನೆಗೆ ಭೂ
ಪಾಲ ಕರೆಸಿದನನುಜರನು ಧೌಮ್ಯಾದಿಮಂತ್ರಿಗಳ ।
ಮೇಳವದ ತನಿ [1] ಬೆಳಗುಗಳ ಮಣಿ
ಮೌಳಿಮಂಡಿತದುಪ್ಪರದ ಪಡಿ
ಸೂಳುಪಾಯುವಧಾರೆನಲು ಹೊಕ್ಕರು ಸಭಾಂತರವ ॥

ದ್ರುಪದಧೃಷ್ಟದ್ಯುಮ್ನಮತ್ಸ್ಯಾ
ಧಿಪರು ಕೈಕಯಪಾಂಡವಾತ್ಮಜ
ರು ಪತಿಕಾರ್ಯವಿಚಾರನಿಷ್ಠರು ಬಂದರೋಲಗಕೆ ।
ನೃಪತಿ ಹದನೇನಮರಮುನಿವರ
ನುಪಚರಿತಮಂತ್ರಾರ್ಥಸಿದ್ಧಿಗೆ
ರಪಣ ಪೆಮಗುಂಟೇಗ ಬೆಸಸೆಂದರು ಯುಧಿಷ್ಠಿರಗೆ ॥

ಧರೆ ನಮಗೆ ವಶವರ್ತಿ ಖಂಡೆಯ
ಸಿರಿ ಯೆಮಗೆ ವೈವಳಿ ಯುಧಿಷ್ಠಿರ
ನರಸುತನ ನಳನಹುಷನೃಗಭರತಾದಿಭೂಮಿಪರ ।
ಮೆಱಸಿತೆಂಬುದು ಲೋಕವೀನಿ
ಬ್ಬರದ ಹೆಸರೆಮಗಿಂದು ಬೊಪ್ಪನ
ಸಿರಿಯನೇವಣ್ಣಿಸುವೆನೆಂದನು ಸುಯ್ದು ಯಮಸೂನು ॥ ೩

ಅಲ್ಲಿ ಸುರರಲಿ ಸುಪ್ರತಿಷ್ಠಿತ
ನಲ್ಲ ಗಡ ಪಾಂಡುಕ್ಷಿತೀಶ್ವರ
ನಿಲ್ಲಿ ವೈಭವಕೇನು ಫಲ ನಾವವರ ಸದ್ಗತಿಗೆ ।
ಇಲ್ಲಿ ರಚಿಸಿದ ರಾಜಸೂಯದಿ
ನೆಲ್ಲಪಹುದಯ್ಯಂಗೆ ಮಖವಿದು [2]
ದುರ್ಲಭವು ಕೈಕೊಂಡೆವಾವುದು ಮಂತ್ರವಿದಕೆಂದ ॥ ೪

---

1 ಮುಱಿ, ಕ. ಖ. 2 ಮಖದಲಿ, ಝ.

ಆಗ ಅವರುಗಳೊಪ್ಪಿ ಕೃಷ್ಣನನ್ನು ಕರೆಕಳುಹಿಸುವಿಕೆ.

ಆಗಲದಕೇನರಸ ದೀಕ್ಷಿತ
ನಾಗು ನಿರುಪಮರಾಜಸೂಯಕೆ
ಭಾಗಧನವನು ಭೂಮಿಪರ ಸದೆದೆಳದು [1] ತಹೆವೆಂದು |
ಆಗರುವವರಬ್ಬೇಟೆ ತಪ್ಪೇ
ನಾಗಲಿದು ಗೋವಿಂದಮತದಲಿ
ತೂಗಿ ನೋಡುವೆವಿದಱ ತೂಕವನೆಂದನಾಭೂಪ ‖ ೫೧

ಕಳುಹಿದನು ಸಾರಥಿಯು ರಥವನು [2]
ಕೆಲವು ಪಯಣಕೆ ಕೃಷ್ಣಭವನ
ಸ್ಥಲದ ಹೊಱಬಾಹೆಯಲಿ ಬಾಗಿತು ಚಪಳಗಮನದಲಿ |
ಒಳಗೆ ಬಂದನು ಪಾವುಡವ ಮುಂ
ದಿಱಿಹಿದನು ಕೃಷ್ಣಂಗೆ ಪಾಂಡವ
ತಿಲಕನಟ್ಟಿದ ಹದನ ಬಿನ್ನಹ ಮಾಡಿದನು ಬಱಿಕ ‖ ೬

ತಿಳಿದನಲ್ಲಿಯು ರಾಜಕಾರ್ಯದ
ನೆಲೆಯನಕ್ರೂರಾದಿಸಚಿವರ
ತಿಳುಹಿದನು ಶಿಶುಪಾಲ ಕಂಸನ ಮಾವನಿಂತವರ |
ಕೊಲುವೊಡಿದು ಹದ ನಮ್ಮ ಭಾವನ
ನಿಳಯದುತ್ಸವ ಸಾಮನಸ್ಯವ
ಬೆಳಸಿದರೆ ಹರಿವುದು ಮನೋರಥಸಿದ್ಧಿ ನಮಗೆಂದ ‖ ೭

ಕೃಷ್ಣನ ಆಗಮನ.

ಎಂದು ವಸುದೇವಾದಿಯಾದವ
ವೃಂದವನು ಬಲಭದ್ರರಾಮನ
ಹಿಂದಿರಿಸಿ ಬಱಿಕಿಂದ್ರಸೇನನ ಕೂಡೆ ನಲವಿನಲಿ |

1 ನಿರದ್ಧ, ಕ. ಚ.  2 ನಾತನು, ಚ. ಕ. ಖ.

ಬಂದನಿಂದ್ರಪ್ರಸ್ಥಕಿವೆರಿದಿ
ರ್ವಂದರೊಸಗೆಯ ಗುಡಿಯ ತೋರಣ
ದಿಂದ ಕನ್ನಡಿಕಳಶದಲಿ ಕೊಂಡೊಯ್ದರಾ [1] ಹರಿಯ ॥ ೮

ಪುರಕೆ ಬಿಜಯಂಗೈಸಿ ತಂದರು
ಹರಿಯನರಮನೆಗನಿಬರಂತಃ
ಪುರದ ಕಾಣಿಕಗೊಂಡು ಬಾಂಧವಜನವನುಚಿತದಲಿ ।

ಕೃಷ್ಣಧರ್ಮಜರ ಸಂವಾದ.

ಹರಸಿ ಮಧುರಪ್ರೀತಿಯಿಂದಾ
ದರಿಸಿ ಮಂತ್ರಾಳೋಚನೆಯ ಮಂ
ದಿರದಲೇಕಾಂತದಲಿ ನೃಪತಿಗೆ ನುಡಿದನಸುರಾರಿ ॥ ೯

ಏನು ಕರೆಸಿದಿರೈ ಪ್ರಯೋಜನ
ವೇನು ನಿನ್ನುತ್ಸಾಹಶಕ್ತಿಯ
ದೇನು ದುರ್ಘಟವೇನು ಶಂಕಿತವೇನು ಸಂಕಲ್ಪ ।
ದಾನವರ ಕೌರವರ ವೈರದೊ
ಳೇನು ವಿಗ್ರಹ ವಿಲ್ಲಲೇ ಹದ
ನೇನೆನಲು ಕೃಷ್ಣಂಗೆ ಬಿನ್ನಹ ಮಾಡಿದನು ಭೂಪ ॥ ೧೦

ದನುಜರಲಿ ಕುರುಸೇನೆಯಲಿ ಭಯ
ವೆನಗೆ ಭಾರವೆ ನಿಮ್ಮಡಿಯ ಪದ
ವನಜವಿದು ಸೀಸಕವಲೇ ತನ್ನುತ್ತಮಾಂಗದಲಿ ।
ಮುನಿಯ ಹೇಳಿಕೆ ಬೊಪ್ಪಗಮರೇಂ
ದ್ರನಲಿ ಸಮರಸವಿಲ್ಲ ಗಡ ನ
ಮ್ಮನಿಬರಲಿ ಸಾಮರ್ಥ್ಯವಿದ್ದದಕೇನು ಫಲವೆಂದ ॥ ೧೧

1 ಕೊಂಡಾಡಿದರು, ಚ, ಡ

ಪಿತನ ಪರಮಪ್ರೀತಿಗುನ್ನತ
ಗತಿಗೆ ನಿರುಪಮರಾಜಸೂಯ
ಕ್ರತುವೆ ಸಾಧನವೆಂದು ಮುನಿಯುಪದೇಶಿಸಿದನೆನಗೆ ।
ಕ್ರತು ಮಹಾಕ್ರತು ಸಕಲಧರಣೀ
ಪತಿಗಳರ್ಥವೆ ಗುಣದಲೀಯರು
ವ್ರತವೆನಗೆ ಸಂಕಲ್ಪವಾಯ್ತಿದಕೇನು ಮತಿಯೆಂದ ॥ ೧೨

ತಿರುಗಿದೊಡೆ ಸಂಕಲ್ಪಹಾನಿಯು
ಪರಮಪಾತಕವಿದು ಮಹಾನಿ
ಷ್ಠುರದ ಮಖವಿನ್ನಮರಮುನಿಪತಿ ದೇವಲೋಕದಲಿ ।
ಹರಹುವೆನು ಪರಿಹಾಸಮಯಸಾ
ಗರವ ದಾಂಟಿಸು ಜೀಯ ಭವಸಾ
ಗರಕೆ ಯಿದು ಮಿಗಿಲೇ ಮುರಾಂತಕ ಯೆಂದನಾಭೂಪ ॥ ೧೩

ಧರ್ಮರಾಜನ ಮಾತನ್ನು ಕೇಳಿ ರಾಜಸೂಯದ ದೌರ್ಘಟ್ಯ
ವನ್ನು ಹೇಳುವಿಕೆ.

ನಕ್ಕನಸುರವಿರೋಧಿ ಮುನಿ ಹಾ
ಯಿಕ್ಕಿದನಲಾ ಬಲೆಯನಕಟಾ
ಸಿಕ್ಕಿದರಲಾ ಪಾಪಿಗಳು ಸದರರೆ ಮಹಾನೃಪರು ।
ಅಕ್ಕಜದ ಮಖವಿದಱ ಚರ್ಚೆಗೆ
ಚುಕ್ಕಿಯಾಯ್ತು ಮಹಾಮಹೇಂದ್ರರು [1]
ಮಕ್ಕಳಾಟಿಕೆಯಾಯ್ತೆನುತ ತೂಗಿದನು ಸಿರಿಮುಡಿಯ ॥ ೧೪

ಕೆದಱಿ ಸಪ್ತದ್ವೀಪಪತಿಗಳ
ಸದೆದು ರಚಿಸುವ ರಾಜಸೂಯದ
ಹದನನಂ [2] ಫೈಸುವರದಾರೀವರ್ತಮಾನದಲಿ ।

---

[1] ಘನಮಹೀಶನ, ಚ.  [2] ಬೆದರದಂ, ಕ.ಖ.

ಸುದತಿಯರ ಸೂರಿಗಳ ಮುಂದು
ಬ್ಬಿದೆ ಯೆಲಾ ನಾರದನ ಘಲ್ಲಣೆ
ಗಿದು ಸುದುರ್ಘಟವಿಂದು ಬಿದ್ದವಿಘಾತಿ ಪಿರಿದೆಂದ ॥ ೧೫

ಮೊದಲಲೇ ನಿಮ್ಮವರು ನಿಮ್ಮ
ಭ್ಯುದಯವನು ಸೇರುವರೆ [1] ಕೌರವ
ರದಱೊಳಗ್ಗದ ಕರ್ಣಶಕುನಿಜಯದ್ರಥಾದಿಗಳು ।
ಕುದುಕುಳಿಗಳೀಚೆಯಲಿ ಕಂಸನ
ಮದಮುಖನ ಪರಿವಾರವದೆ ತೂ
ಕದಲಿ ಮಗಧನ ಹೊರೆಯಲದನೇವಣ್ಣಿಸುವೆನೆಂದ ॥ ೧೬

ಕಾಲಯವನನು ದಂತವಕ್ರನ
ಪಾಲರೊಳು ದುರುದುಂಬಿಯೈ ಶಿಶು
ಪಾಲಪೌಂಡ್ರಕರೆಂಬರಿಗೆ ಸಮದಂಡಿ ಯೆಮ್ಮೊಡನೆ ।
ಖೂಳರಿಬ್ಬರು ಹಂಸಡಿಬಿಕರು
ಸಾಳುವನ ಮುರನರಕರಾಳನ
ಮೇಳವವನೇನೆಂಬೆನೈ ಭೂಪಾಲ ಕೇಳೆಂದ ॥ ೧೭

ಕೆಲಬರವರೊಳು ನಮ್ಮ ಕೈಯಲಿ
ಕೊಲೆಯ ಭಂಗಕೆ ಬಂದು ಬಿದ್ದರು
ಕೆಲಕೆ ಸರಿವವನಲ್ಲ [2] ಮಲೆವರ ಮಾರಿ ಮಾಗಧನು ।
ಬಲಿಕೆಮಗೆ ಬಲವದ್ವಿರೋಧದ
ತೊಳಸು ಬಿದ್ದುದು ತೋಟಿಗಾಱದೆ
ಜಲಧಿಮಧ್ಯದೊಳೂರ ಕಟ್ಟಿದೆವರಸ ಕೇಳೆಂದ ॥ ೧೮

ಮಾವದೇವನ ಮುಱಿದೊಡಾತನ
ದೇವಿಯರು ಬಲಿಕೆಮ್ಮ ದೂಱಿದೊ
ಡಾವಿಗಡ ಮಗಧಂಗೆ ಮಥುರೆಯ ಮೇಲೆ ದಂಡಾಯ್ತು ।

---

1 ದಲಿ ಸೊಗಸುವರ, ಡ, 2 ನೆಲನನೇಱಿದನಲ್ಲಿ, ಕ. ಖ.

ನಾವು ನಾನಾದುರ್ಗದಲಿ ಸಂ
ಭಾವಿಸಿದೆವಾತನನು ನಿಮ್ಮೊಡ
ನಾವು ಕೂಡಿದೊಡಾತ ಮುನಿಯನೆ ಭೂಪ ಕೇಳೆಂದ ॥ ೧೯

ಅರಸ ಕೇಳೈಱೊಂದು ವಂಶದ [1]
ಧರಣಿಪರು ಮಾಗಧನ ಮನೆಯಲಿ
ಸೆಱೆಯಲಿಪ್ಪರು ಬಿಡಿಸಬೇಕು ನಿರಂತರಾಯದಲಿ ।
ದುರಳನವ ಭಗದತ್ತಬಾಹ್ಲಿಕ
ನರಕವೃದ್ಧಕ್ಷತ್ರಮೊದಲಾ
ದರಸುಗಳು ಬಲುಗರ್ವಿತರಸಂಖ್ಯಾತರಿಹರೆಂದ ॥ ೨೦

ಅವರಿರಲಿ ಮತ್ತಿತ್ತಲುತ್ತರ
ದವನಿಪರು ಧಕ್ಕಡರು ಧರಣೀ
ಧವರೊಳಧಿಕಕುಠಾರರಗ್ಗದ ಚೀನಲಾಟಕರು ।
ರವಿಯುದಯಗಿರಿಶಿಖರದಲಿ ಪಾ
ರ್ಥಿವರು ದಕ್ಷಿಣಚೋಳಪಾಂಡ್ಯ
ಪ್ರವರರದೆ ವಿಕ್ರಮಹಿರಣ್ಯಮದಾಂಧರವರೆಂದ ॥ ೨೧

ಔಕಿ ಚತುರಂಗದ ನರೇಂದ್ರಾ [2]
ನೀಕವೆಳುಕಿದರೇನು ಯಾಗ
ವ್ಯಾಕರಣಕಿವರಿಬ್ಬರೇ ದೂಷಕರು ಧರಣಿಯಲಿ ।
ಈಕುಠಾರರು ಕದನಮುಖದ ವಿ
ವೇಕಿಗಳು ಶಿಶುಪಾಲಮಾಗಧ
ರಾಕೆವಾಳರು ವೈರಿರಾಯರೊಳರಸ ಕೇಳೆಂದ ॥ ೨೨

ಅಧಿಕರಿವರಿಬ್ಬರೊಳಗಾಮಾ
ಗಧನೆ ಬಲುಗೈ ರಾಜಸೂಯಕೆ
ಸದರವನು ನಾ ಕಾಣೆನಾತನ ಖಂಡೆಯದ ಮೊನೆಗೆ ।

1 ದುರ್ಗದ, ಡ. 2 ನೃಪಾಲರ ನೂಕಿ, ಚ.

ನಿಧನವಲ್ಲದೆ ಧನವ ನೆಱಹುವ
ಹವನ ನೀನೇ ಬಲ್ಲೆ [1] ಯಾತನ
ವಧೆಗೆ ಪರಿಯದು ತಮ್ಮ ಕೈಯ್ಯಲಿ ಭೂಪ ಕೇಳೆಂದ ॥ ೨೩

ಕಂಸನನು ಕೆಡಹಿದೆವು ಮುಱಿದೆವು
ಹಂಸಡಿಬಿಕರ ಪೌಂಡ್ರಕನ ನಿ
ರ್ವಂಶವೆನೆ ಸದೆದೆವು ಮುರನರಕಾದಿದಾನವರ ।
ಹಿಂಸೆಯಿವನಲಿ ಮುಱಿಯದಿವ ನಿ
ಸ್ಸಂಶಯದಲಿ ಜಯದಲಿ ಯಾಗ
ಧ್ವಂಸಕನ ನೆಱೆ ಮುಱಿವುಪಾಯವ ಕಾಣೆ ತಾನೆಂದ ॥ ೨೪

ಕೃಷ್ಣವಾಕ್ಯದಿಂದ ಯಾಗದಲ್ಲಿ ಧರ್ಮರಾಯನ ಉಪೇಕ್ಷೆ.

ಈಸು ಗಹನವೆ ಕೃಷ್ಣ ಯಾಗ
ದ್ವೇಷಿಗಳು ಘನವಾದೊಡೆಮಗಿ
ನ್ನೈಸಲೇ ವರರಾಜಸೂಯಾಧ್ವರಕೆ ಸಂನ್ಯಾಸ ।
ಈಸು ದೈತ್ಯರು ನಿಮ್ಮ ಕೈಯ್ಯಲಿ
ಘಾಸಿಯಾದರು ಮಗಧನೊಬ್ಬನು
ಮೀಸಲಳಿಯನು ಗಡ ಮಹಾದೇವೆಂದನಾಭೂಪ ॥ ೨೫

ಯಾಗ ಮಾಡುವುದರಲ್ಲಿ ಭೀಮನು ಧೈರ್ಯವನ್ನು ಕೊಡುವಿಕೆ.

ಅಹಹ ಯಾಗವ್ರತಕೆ ಭಂಗವ
ತಪನೆ ಜೀಯ ಮುಕುಂದಕೃಪೆ ಸ
ನ್ನಿಹಿತವಾಗಲಿ ಸಾಕು ನೋಡಾ ತನ್ನ ಸಾಹಸವ ।
ಬಹಳಬಲನೇ ಮಾಗಧನು ನಿನ
ಗಹಿತನೇ ತಾ ಪೀಳಯವ ಸುರ
ಮಹಿಳೆಯರ ತೋಳಿನಲಿ ತೋಱುವೆನೆಂದನಾ ಭೀಮ ॥ ೨೬

ಮುಱುಕಿಸುವ ಮನ್ನೆಯರ ನಾಳವ
ಮುಱಿವೆನಖಿಳದ್ವೀಪಪತಿಗಳ
ತಱಿಸುವೆನು ವಸ್ತುವನು ತಾನವರ ನೆತ್ತಿಯಲಿ ।

---

1 ಕಾಂಬೆ, ಡ.

ಕಱುಬನೇ ಮಾಗಧನು ರಣದಲಿ
ತಱಿವೆನಾತನ ಯಾಗದಲಿ ನೆಱೆ
ಹೊಱಗೆ ನನ್ನದು ಕರೆಸು ಋಷಿಗಳನೆಂದನಾಭೀಮ ‖ ೧೭

ಅಹುದಲೇ ಬೞಿಕೇನು ಯಾಗ
ಪ್ರಹರಣಕೆ ಸಂನ್ಯಾಸ ಗಡ ವಿ
ಗ್ರಹದೊಳಧಿಕರು ಗಡ ಜರಾಸಂಧಾದಿನಾಯಕರು ।
ಮಹಿಯ ಮನ್ನೆಯರಧ್ವರವ ನಿ
ರ್ವಹಿಸಲೀಯರು ಶಿವ ಶಿವಾ ಕಡು [1]
ರಹವ ಮಾಡಿದನರಸನೆಂದನು [2] ನಗುತ ಕಲಿಪಾರ್ಥ ‖ ೧೮

ಯಾಗಕ್ಕಾಗಿ ಪ್ರಯತ್ನಿಸುವುದು ಯುಕ್ತವೆಂದು
ಭೀಮಾರ್ಜುನರ ವಾಕ್ಯ.

ಏಕೆ ಗಾಂಡಿವವಿದು ಶರಾವಳಿ
ಯೇಕೆ ಯಿಂದ್ರಾಗ್ನೇಯ ವಾರುಣ
ವೇಕೆ ರಥವೀರಾವುಭೃತ್ಯಧ್ವಜವಿಳಾಸವಿದು ।
ಲೋಕಶಿಕ್ಷಾರಕ್ಷೆಗಿಂತಿವು
ಸಾಕು ಹುಲುಮಂಡಳಿಕರಿವೆದಿರ
ನೂಕಲರಿದೇ ಜೀಯ ಜಂಜಡವೇಕೆ ಬೆಸಸೆಂದ ‖ ೧೯

ನೆರಹು ನೀ ಪೂರ್ವರ ದಿಗಂತಕೆ
ಹರಹು ನಮ್ಮನು ಬಂಧುವರ್ಗವ
ಕರೆಸು ರಚಿಸಲಿ ಕಾಣಬಹುದಾ [3] ಕದನಕಾಮುಕರ ।
ಸೆರೆಹಲಱಿಯೆನು ಸಾಧುಗಳನಾ
ದರಿಸುವೆನು ಮಾಱಾಂತರನು [4] ಚಿ
ಮ್ಮುರಿಯ ಬಿಗಿಸುವೆನವರಿಯರ ಕಡೆಗಣ್ಣ ಕಣ್ಣಯಲಿ ‖ ೨೦

[1] ಗಡ ಯುಧಿಷ್ಠಿರ, ಡ. [2] ಶಿವ ಶಿವೆಂದನು, ಡ.
[3] ಬೇಹುದು, ಚ. [4] ಚೌಪಟಿಯರನು, ಡ.

ಅದರಂತೆ ಶ್ರೀಕೃಷ್ಣನು ಸಮ್ಮತಿಸಿದುದು.

ಅಪುದು ಭೀಮಾರ್ಜುನರ ನುಡಿ ನಿ
ರ್ವಹಿಸದೇ ತಪ್ಪೇನು [1] ನಿಜಕುಲ
ವಿಹಿತವಲ್ಲಾ ವಿನಯ ವಿಕ್ರಮ ವಿದ್ಯೆ ನೃಪನೀತಿ ।
ಗಹನವೇ ಗಂಡುಗಲಿಗಿದಿರಾ
ರಹಿತಬಲವಿನ್ನರಸ ಚಿಂತಾ
ಮಹಿಳಗವಸರವಲ್ಲ ಮನ ಮಾಡೆಂದನಸುರಾರಿ ॥ ೨೧

ಅಲ್ಲದೆ ಭೀಮಾರ್ಜುನರನ್ನು ಕಳುಹಿಸು ನಾನು ಅನುಕೂಲ
ವಾಗಿರುವೆನೆಂದು ಕೃಷ್ಣವಾಕ್ಯ.

ಎಮಗೆ ಭೀಮಾರ್ಜುನರ ಕೂಡು ರಿಪು
ರಮಣಿಯರ ಸೀಮಂತಮಣಿಗಳ
ನಿಮಿಷದಲಿ ತರಿಸುವೆನು ಬರಿಸುವೆನಖಿಳ [2] ಭೂಮಿಪರ ।
ಸಮರಜಯವಿನ್ನಾಯ್ತು ಯಜ್ಞ
ಕ್ರಮಕೆ ನಿಷ್ಪ್ರತ್ಯೂಹವಿನ್ನು
ಭ್ರಮೆಯ ಮಾಡದಿರೆಂದು ನೃಪತಿಗೆ ನುಡಿದನಸುರಾರಿ ॥ ೨೦

ಆಗ ಸಂತುಷ್ಟನಾಗಿ ಧರ್ಮರಾಯನು ಶ್ರೀಕೃಷ್ಣನನ್ನು ಸ್ತುತಿಸುವಿಕೆ.

ಕಂಗಳನುಜರು ಚಿತ್ತ ನೀವೆಮ
ಗಂಘವಣೆಗಿನ್ನೇನು ಭಯುವಾ
ಮಂಗವಲಿ ನಂಬಿಹೆವಲೈ ನಿಮ್ಮಂಘ್ರಿಪಂಕಜವ ।
ಸಂಗರದ ಜಯ ನಿಮ್ಮ ವಲ್ಲಿಯ
ಭಂಗ ನಿಮ್ಮದು ಭಕ್ತನಿಕರದ
ಸಂಗಿ ನೀವಿರಲಿನ್ನ್ಯಾನರದೇನು [3] ದನಾಭೂಪ ॥ ೨೨

1 ದರೆಬಿಟಿಕೇನು, ಡ. 2 ನಹಿತ, ಚ. 3 ನೀನಿರಲೇನು ನಮಗಿನ್ನೆಂ, ಡ.

ಮಾಗಧನನ್ನು ಜಯಿಸುವುದು ಮುಖ್ಯವೆಂದು
ಕೃಷ್ಣವಾಕ್ಯ.

ವಿಗತಯಾಗಕೆ ನಿಖಿಲರಾಯರು
ನೃಗ ಮರುತ್ತನು ಕಾರ್ತವೀರ್ಯಾ
ದಿಗಳು ಕೇಳರಭಿಷಿಕ್ತರಾದರು ರಾಜಸೂಯದಲಿ ।
ಬಗೆಯಲಿದು ದುಷ್ಕಾಲ ವಿದಟರೊಳ
ಗಗಡು ಮಾಗಧನವನ ಮುರಿದೊಡೆ
ಸುಗಮ ನಿಮ್ಮುದ್ಯೋಗ ಸುರಪದವೆಂದನಸುರಾರಿ ॥ ೩೪

ಆರವನು ಹಿರಿದಾಗಿ ನೀ ಕೈ
ವಾರಿಸುವೆ ಕಮಲಾಕ್ಷ ಮಾಗಧ
ನಾರುಭಟೆ ತಾನೇನು ವರವೊ ಸಹಜವಿಕ್ರಮವೊ ।
ವೀರರೆದೆ ಸಿಡಿಲಂತೆ ಸಕಲವು
ಹೀರವಣರಿದಿರೊಳಗಿವನು ವ-ಖ
ವೈರಿ ಗಡ ಬೆಸಸೆಂದೊಡೆಂದನು ನಗುತ ಮುರವೈರಿ ॥ ೩೫

ಮಾಗಧನ ಕಥೆಯಲ್ಲಿ—ಬೃಹದ್ರಥನೆಂಬ ರಾಜನು ಪುತ್ರರಿಲ್ಲದ
ದುಃಖದಿಂದ ವನಕ್ಕೆ ಹೋಗುವಿಕೆ.

ಧರಣಿಪತಿ ಕೇಳ್ಳೈ ಬೃಹದ್ರಥ
ನರಸು ಮಾಗಧಮಂಡಲಕೆ ತ
ತ್ಪುರಗಿರಿವ್ರಜವೆಂಬುದಲ್ಲಿ ಸಮಸ್ತವಿಭವದಲಿ ।
ಧರೆಯ ಪಾಲಿಸುತಿರ್ದನಾತಂ
ಗರಸಿಯರು ಸೋಬಿದರು ಕಾಶೀ
ಶ್ವರನ ತನುಜೆಯರಿಬ್ಬರದುಭುತರೂಪು ಸುಗುಣೆಯರು ॥ ೩೬

ಅವರೊಡನೆ ಸುಖಸತ್ಕಥಾಸಂ
ಭವವಿನೋದದಲಿರುತಲೀ ವೈ
ಭವವು ನಿಷ್ಫಲ ಪುತ್ರರಿಲ್ಲದೆ ಲೋಕ [1] ವಿಲ್ಲೆಂದು ।

---

[1] ನಾಕ, ಡ.

ಅವನಿಪತಿ ವೈರಾಗ್ಯದಲಿ ರಾ
ಜ್ಯವನು ಬಿಸುಟು ತಪಃಪ್ರಭಾವ
ವ್ಯವಹರಣದಲಿ ತನುವ ನೂಕುವೆನೆಂದು ಹೊರಟನಂತೆ ‖ ೩೭

ಮಾರ್ಗದಲ್ಲಿ ಚಂಡಕೌಶಿಕ ದರ್ಶನ.

ಊರ ಹೊರವಡುತತ್ತ ಕಂಡನು
ಪಾರಿಕಾಂಕ್ಷಿಪ್ರವರನನು ಮುನಿ
ವೀರಕೌಕ್ಷೇಯಕನನಗ್ಗದ [1] ಚಂಡಕೌಶಿಕನ ।
ನಾರಿಯರು ಸಹಿತವನ ಚರಣಾಂ
ಭೋರುಹಕ್ಕಭಿನಮಿಸಲತಿ ವಿ
ಸ್ತಾರಿಸಿದನಾಶೀರ್ವಚನವನು ಮುನಿ ನೃಪಾಲಂಗೆ ‖ ೩೮

ರಾಜನು ಅವರ ಮುಂದೆ ತನ್ನ ಸಂಕಟವನ್ನು ಹೇಳಲು
ಅನುಗ್ರಹಿಸುವಿಕೆ.

ಪಸಿದರಸನೆ ವದನದಲಿ ದು
ಮ್ಮಾನವೆನಲನಪತ್ಯತಾಪಂ
ತಾನುರೂಪದ ದುಗುಡವಿದು ನಿಮ್ಮಂಘ್ರಿಸೇವೆಯಲಿ ।
ಹಾನಿ ದುಷ್ಕೃತಕಹುದಲೇ ಸುತ
ಹೀನರಾಜ್ಯವ ಬಿಸುಟೆನೆನಗೀ
ಕಾನನದ ಸಿರಿ ಸಾಕೆನುತ ಬಿಸುಸುಯ್ದನಾಭೂಪ ‖ ೩೯

ರಾಜನ ತೊಡೆಯ ಮೇಲೆ ಬಿದ್ದ ಹಣ್ಣನ್ನು ಸತಿಗೆ ಕೊಡೆಂದು
ಋಷಿಗಳ ಅಪ್ಪಣೆ.

ಐಸಲೇ ಸುತಹೀನರಾಜ್ಯವಿ
ಳಾಸ ನಿಷ್ಫಲವಹದಲೇ ಸಂ
ತೋಷವೇ ಸುತಲಾಭವಾದೊಡೆ ಹೊಲ್ಲಯೇನಿದಕೆ [2] ।

[1] ಕಾಂಕ್ಷೆಯುನಾಂಗಿರಾತ್ಮಜ, ಚ.   [2] ಹೊಲ್ಲವೇನೆನುತ, ಕ, ಖ, ಡ.

ಆಸಮಸ್ತಮುನೀಂದ್ರನಂತ
ಭ್ರಾಸಿತಾತ್ಮಧ್ಯಾನಸುಖವಿ
ನ್ಯಾಸದಿರಲಂಗ್ಯ[1] ಗೆ ಬಿದ್ದುದು ಮಧುರಚೂತಫಲ ॥ ೪೦

ಕಂದೆಱೆದು ಮುನಿ ಬೞಿಕ ಭೂಪತಿ
ಗೆಂದನಿದಕೋ ಪುತ್ರಸಂತತಿ
ಗಿಂದು ಸಾಧನವಿದನು ಕೊಡು ನಿನ್ನರಸಿಯರಿಗೆನಲು[2] ।
ಕಂದಿದಾನನವುಜ್ಜ್ವಲಪ್ರಭೆ
ಯಿಂದ ಬೆಳಗಿತು ರಾಣಿಯರು ಸಹಿ
ತಂದು ಮುನಿಪತಿಗೆಱಗಿ ಪರಿತೋಷದಲಿ ಬೀಳ್ಕೊಂಡ ॥ ೪೧

ವರವನೆಂಟನು ಹೆಸರು ಕೊಂಡಾ
ಧರಣಿಪನ ತನಯಂಗೆ ಕೊಟ್ಟನು
ಪುರಕೆ ಮರಳಿದನರಸನಾಮುನಿ ತೀರ್ಥಯಾತ್ರೆಯಲಿ ।

ಮನೆಗೆ ಹೋಗಿ ಹಣ್ಣನ್ನು ಭಾಗಮಾಡಿ ತನ್ನ ಸತಿಗೆ ಕೊಟ್ಟುದು.

ಸರಿದನತ್ತಲು ಚೂತಫಲವದ
ನೆರಡುಮಾಡಿ ಬೃಹದ್ರಥನು ತ
ನ್ನರಸಿಯರಿಗಿತ್ತನು ಯುಧಿಷ್ಠಿರ ಕೇಳು ಕೌತುಕವ ॥ ೪೨

ಬಳಿಕ ಗರ್ಭಿಣಿಯರಾಗಿ ಪ್ರಸವಕಾಲದಲ್ಲಿ ಹುಟ್ಟಿದ ಎರಡು
ಸೀಳುಗಳನ್ನು ಬಿಸುಡುವಿಕೆ.

ಬಲಿದುದವರಿಗೆ ಗರ್ಭ ಜನನದ
ನೆಲೆಯ ಕಾಲಕೆ ಸತಿಯರುದರದಿ
ನಿೞಿದುದೊಂದೊಂದವಯವದ ಸೀಳೆರಡುಸರಿಯಾಗಿ ।
ಬೞಿಕ ಕಂಡವರಕಟ ದುಷ್ಕೃತ
ಫಲವೆ ಸುಡಲಿವನೆನುತ ಬಿಸುಟರು
ಹೊಱಲ ಹೊಱವಳಯದಲಿ ಧರಣೀಪಾಲ ಕೇಳೆಂದ ॥ ೪೩

---

1 ಲಂಕದಲಿ, ಖ. 2 ನಿನಗೊಲಿದ ವಧುಗೆನಲು, ಹ.

ನಡುವಿರುಳು ಜರೆ ಯೆಂಬ ರಕ್ಕಸಿ
ಯಡಗನಱಸುತ ಬಂದು ಕಂಡಳು
ಮಿಡುಕುತಿಹ ಸೀಳೆರಡುವನು ಹೊಱಹೊಱಲ ಬಾಹೆಯಲಿ |
ತುಡುಕಿದಳು ಸೀಳ್ದೇಕೆ ತಿನ್ನದೆ
ಮಡಗಿವರೊ ಕೌತುಕವಿದೇನೀ
ಯಡವಿಯೊಳಗೆಂದಸುರೆ ದಿಟ್ಟಿಸಿ ನೋಡಿದಳು ಬಳಿಕ || ೪೪

ಜರೆಯೆಂಬುವಳು ಸೀಳುಗಳನ್ನು ಜೋಡಿಸಲು ಜರಾಸಂಧನ ಜನನ.

ಶಿಶುವನಾರೋ ಸೀಳ್ದು ತಿನ್ನದೆ
ಬಿಸುಟು ಹೋದರೆನುತ್ತ ಜರೆ ಸಂ
ಧಿಸಿದಳಾಕಸ್ಮಿಕದ ಸೀಳೆರಡನು ವಿನೋದದಲಿ |
ಪಸರಿಸಿದುದಸು ಮೇಘರವ ಝೋಂ [1]
ಬಿಸುವ [2] ವೊಲು ಚೀಱಿದನು ಗಿರಿಗಳ
ಬೆಸುಗೆ ಬಿಡೆ ನಡುವಿರುಳು ಕೋಲಾಹಲಿಸಿತಾರಭಸ || ೪೫

ಊರ ಹೊಱವಳಯದಲಿದೇನೊ ಮ
ಹಾರಭಸ ವಿರುಳೆನುತ ಕವಿದುದು
ಪೌರಜನ ಝಳಪಿಸುವ ಕೈದೀವಿಗೆಗಳೊಗ್ಗಿನಲಿ |
ಆರಿವಳು ತಾನೆನುತ ಕಂಡರು
ದೂರದಲಿ ದಾನವಿಯನವಳ ಘ
ನೋರುಗಳ ಸೋಗಿನಲಿ ಕೈದೊಟ್ಟಿಲ ಕುಮಾರಕನ || ೪೬

ನಿಂದುದಲ್ಲಿಯದಲ್ಲಿ ರಕ್ಕಸಿ
ಯೆಂದು ಭಯದಲಿ ಬಳಿಕ ಕರುಣಾದ
ಲೆಂದಳವಳಂಜದಿರಿ ಹೋ ಹೋ ಯೆನುತ ಕೈನೆಗಹಿ |
ಇಂದಿವನು ಮಗನೆನಗೆ ಭೂಪತಿ
ಬಂದನಾದೊಡೆ ಕೊಡುವೆನೀತನ
ನೆಂದೊಡಾಕ್ಷಣಕವರು ಹೇೞಲು ಬಂದನಾಭೂಪ || ೪೭

---

1 ಮಿಗೆ ಗ, ಡ. 2 ಜೇಸುವ, ಡ.

ಅರಸ ಕೇಳ್ ನಿನ್ನ ವನನೀತನು
ವರಕುಮಾರಕನೆನ್ನ ಹೆಸರಲಿ
ಕರೆವುದೀತನ ನೀಟ ಬೆಳೆಕೆವಳಾನು ಬೆದಱಿದಿರು ।
ಜರೆಯೆನಿಪುದಭಿಧಾನವೆನ್ನದು
ವರಜರಾಸಂಧಕನಿವನು ಸುರ
ನರರೊಳಗೆ ಬಲುಗೈಯನಹನೆಂದಿತ್ತಳರ್ಭಕನ ॥ ೪೮

ಆಕೆಯು ಆಮಗುವನ್ನು ರಾಜನಿಗೆ ಕೊಡಲು
ಅದನ್ನು ಸಂರಕ್ಷಿಸುವಿಕೆ.

ಅಸುರೆಯನು ಮನ್ನಿಸಿದನಾಕೆಯ
ಹೆಸರ ಮಗನಿವನೆಂದು ಲೋಕ
ಪ್ರಸರವಱಿಯಲು ನಲವಿನಲಿ ಸಲಹಿದನು ಮಾಗಧನ [1] ।
ಅಸುರರಲಿ ಮರ್ತ್ಯರಲಿ ಸುರರಲಿ
ಜಸಕವುಳ್ಳವನೆನಿಸಿದನು ಸಾ
ಹಸದ ಜೋಡಣೆ ಮಱಿದುದವನಲಿ ಭೂಪ ಕೇಳೆಂದ ॥ ೪೯

ಅಂಥವನ ವಿಜಯ ಯಾತ್ರೆಗೆ ತಮ್ಮಂದಿರನ್ನು ಕಳುಹೆಂದು
ಕೃಷ್ಣನ ಅಪ್ಪಣೆ.

ಅದಱಿನೀಮಾಗಧನ ಮುಱಿದ
ಲ್ಲದೆ ನೃಪಾಲಕರಂಜೆ ಕಪ್ಪದೊ
ಳೊದಗಲಱಿಯರು ಮೆಱೆಯಲೀಯರು ಯಜ್ಞಮಂಟಪವ ।
ಇದು ನಿಧಾನವು ಭೀಮಪಾರ್ಥರಿ
ಗಿದು ಮುಹೂರ್ತವು ವೀಳೆಯವ ತಾ
ಕದನವಿಜಯದ ವೀರಸೇಸೆಯನಿಟ್ಟು ಕಳುಹೆಂದ ॥ ೫೦

ಮಱಿಯದೇತಕೆ ರಾಜಸೂಯದ
ಹೊಱೆಗೆ ನಿಮ್ಮದು ರಾಣಿ [2] ಕವನಾ
ನಱಿಯೆ ನೀನರ್ಥಾಭಿಮಾನಪ್ರಾಣದೊಡೆಯನಲೆ ।

1 ನಂದನನ, ಡ. 2 ಕೌಶಿಕ, ಖ.

ಕಿಱಿಯರಿವರಿದಿರು ರಾಜಸೂಯದ
ಕಱುಬರತಿಬಲ್ಲಿದರು ಕೃಪೆಯನು
ಮೆಱೆವುದೆನುತಸುರಾರಿಯಂಘ್ರಿಗೆ ಚಾಚಿದನು ಹಣೆಯ ॥ ೫೧

ಎತ್ತಿದನು ನಸುನಗುತ ರಾಯನ
ನೆತ್ತಿಯನು ಮುರವೈರಿ ಕರೆಸು ಮು
ಹೂರ್ತಿಕರನಕ್ಷೋಹಿಣಿಯು ಬರಹೇೞು ದಳಪತಿಯ ।
ಸುತ್ರಾಣರಸರಿಗೋಲೆಯುಡುಗೊಱೆ
ಯಿತ್ತು ದೂತರ ಕಳುಹು ಬೞಿಕಿನೊ
ಳುತ್ತರೋತ್ತರಸಿದ್ಧಿ ನಿನಗಹುದೆಂದನಸುರಾರಿ ॥ ೫೨

### ಮಾಗಧನ ಪತ್ತನಕ್ಕೆ ತೆರಳುವಿಕೆ.

ರೂಢಿಸಿದ ಸುಮುಹೂರ್ತದಲಿ ಹೊಱ
ಬೀಡ ಬಿಟ್ಟರು ದಧಿಯ ದೂರ್ವೆಯ
ಕೂಡಿದಕ್ಷತೆಗಳ ಸುಲಾಜಾವಳಿಯ ಮಂಗಳದ ।
ಗಾಡಿಸಿದ ಜಯರವದ ದೈತ್ಯಾವಿ
ಭಾಡಸೂಕ್ತದ ವಿಗಡ ಬಿರುದಿನ [1]
ಗಾಢ ಪಾಠಕ ಗಡಬಡೆಯು ರೂಢಿಸಿತು ಗಗನವನು [2] ॥ ೫೩

ಆಳು ನಡೆಯಲಿ ಮಗಧರಾಯನ
ಮೇಲೆ ದಂಡು ಮುಕುಂದದಳಪತಿ
ಹೇೞಿಕೆಗೆ ಭೀಮಾರ್ಜುನರ ಬರಹೇೞು ಹೇೞೆನುತ ।
ಆಳು ಸಾಱಿದುದವನಿಪಾಲರು
ಮೇಳವಿಸಿ ಹೊಱಮಂಟು ಬರೆ ದೆ
ಖ್ಖಾಳವನು ನೋಡಿದರು ನಡೆದರು ಪಯಣಗತಿಗಳಲಿ ॥ ೫೪

1 ಬಿರುದುಪ, ಕ. ಚ.

2 ಪಾಡಗಳ ಪಾಠಕರ ಗಡಬಡೆ ಗಾಢಿಸಿತು ನಭವ, ಕ. ಚ.

ಕೃಷ್ಣಭೀಮಾರ್ಜುನರು ವಿಪ್ರವೇಷವನ್ನು ಧರಿಸುವಿಕೆ.

ಜನಪ ಕೇಳ್ಕೃ ಕೃಷ್ಣಭೀಮಾ
ರ್ಜುನರು ವಿಮಳಸ್ನಾತಕವ್ರತ
ಮುನಿಗಳಾದರು ನಡೆದು ಪಯಣದ ಮೇಲೆ ಪಯಣದಲಿ ।
ಜನದ ಕಾಣಿಕೆಗೊಳುತ ನಾನಾ
ಜನಪದಂಗಳ ಕಳೆದು ಗಂಗಾ
ವಿನುತನದಿಯನು ಹಾಯ್ದು ಬಂದರು ಪೂರ್ವಮುಖವಾಗಿ ॥ ೫೫

ಮಗಧದೇಶದ ವರ್ಣನೆ.

ಬರುತ ಕಂಡರು ಮುಂದೆ ಕೊಬ್ಬಿದ
ಸಿರಿಯನೂರೂರುಗಳ ಸೊಂಪಿನ
ಭರಿತಗೋಧನಕುಲವನಮಳಸುಧಾನ್ಯರಾಶಿಗಳ ।
ವರನದಿಯ ಕಾಲುವೆಯ ತೋಟದ
ತೆರಳಿಕೆಯ ಪನಸಾಮ್ರಪೂಗೋ
ತ್ಕರದ ರಮ್ಯಾರಾಮಮಂಡಿತ ಮಗಧಮಂಡಲವ ॥ ೫೬

ಮೆಳೆಗಳೇ ದ್ರಾಕ್ಷಿಗಳು ವೃಕ್ಷಾ
ವಳಿಗಳೇ ಸಹಕಾರದಾಡಿಮ
ಫಲಿತನಿಬಿಡಕ್ರಮುಕಜಂಬೂಮಾತುಳಂಗಮಯ ।
ಕಳವೆ ಶಾಲೀಮಯವು ಹೊಲನ
ಗ್ಗಳಿಕೆ ಲಕ್ಷ್ಮೀಮಯವು ನಗರಾ
ವಳಿಗಳನೆ ಶೋಭಿಸಿತು ಜನಪದವಿವರ ಕರ್ಣ್ಮನಕೆ [1] ೫೭

ದೇಶ ಹಗೆವನದೆಂದು ಕಡ್ಡಿಯ
ಗಾಸಿಮಾಡದೆ ಮಿಗೆ ವಿನೋದದ
ಲೈಸುಪಡೆ ನಡೆತಂದು ಬಿಟ್ಟುದು ಗಿರಿಯ ತಪ್ಪಲಲಿ ।

---

1 ಸೋಲಿಸಿತು ಜನಪದವಿವರ ಕರ್ಣ್ಮನವ, ಖ.

ಅಸರೋರುಹಬಂಧು ಚರಮದಿ
ಶಾಸತಿಯು ಚುಂಬಿಸೆ ಗಿರಿವ್ರಜ
ವಾಸಿಬರವನು ಹತ್ತಿದರು ಹರಿಭೀಮಫಲುಗುಣರು ॥ ೫೮

ಅಲ್ಲಿರುವ ಬೆಟ್ಟದ ಮೇಲೆ ಭೇರಿಯನ್ನು ಒಡೆಯುವಿಕೆ.

ವೃಷಭಚರ್ಮನಿಬದ್ಧಭೇರಿಗ
ಳೆಸೆವುವಕ್ಷತೆಗಂಧಮಾಲ್ಯ
ಪ್ರಸರದಲಿ ಶೈಲಾಗ್ರದಲಿ ಸಂಪನ್ನಪೂಜೆಯಲಿ ।
ಅಸುರರಿಪುಭೀಮಾರ್ಜುನರು ತ
ದ್ವಿಷಮಭೇರೀತ್ರಯವ ಹೊಯ್ದೊ
ಬ್ಬಿಸಿದರದ್ಭುತರವ ಮಸಗೆ ಕೆಡಹಿದರು ಖಾತಿಯಲಿ ॥ ೫೯

ಭೇರಿಯ ವೃತ್ತಾಂತ.

ಭೇರಿಗಳ ಮಗಧಂಗೆ ಕೊಟ್ಟವ
ರಾರು ತಾಸಿದು ವರವೊ ಸಹಜವೊ
ಕಾರಣವ ಹೇಳೆಂದು ಜನಮೇಜಯನು ಬೆಸಗೊಳಲು ।
ಧಾರುಣೀಪತಿಗೆಂದು ಮುನಿ ವಿ
ಸ್ತಾರದಿಂದರುಹಿದನು ಹಿಂದೆ ಸು
ರಾರಿಭಸ್ಮಾಸುರನು ಶಿವನ ವಿರೋಧಿಸಿದ ಹದನ ॥ ೬೦

ಹರಿಯ ನೆನೆಯಲು ಶಂಭು ಕರುಣಾ
ಕರನು ಬಿಜಯಂಗೈದು ದೈತ್ಯನ
ಶಿರದೊಳಸುರನ ಕರವನಿಡಿಸಲು ಮರಣಗಂಡಲ್ಲಿ ।
ಮರಳಿ ಜನಿಸಿದನವನು ಧರೆಯಲಿ
ಸುರನರರ ಪರಿಭವಿಸೆ ರಣದಲಿ
ನೆರೆದು ದಿವಿಜಸಮೂಹ ಬಿನ್ನೈಸಿದುದು ಪಶುಪತಿಗೆ ॥ ೬೧

ಅದರಲ್ಲಿ—ಮಾಷಾಸುರನ ಸಂಹಾರ.

ಕೇಳಿ ಶಿವನ್ನೈತಂದನಲ್ಲಿಗೆ
ಕಾಳದನುಜನ ಬಲುಹನುರುಹಲು
ಧಾಱಿಬಂದಡ್ಡವನು ಗಟ್ಟಿದ ಮಾಷನೆಂಬವನ ।
ಶೂಲದಿಂದಿಡಲ್ಕೈದೆ ಕಂಠದ
ನಾಳವನು ಕತ್ತರಿಸೆ ತಲೆಗಳು
ಬೀೞಲವನಿಗೆ ಮೂಱುಮಂಡದ ತಲೆಯು ಮಧ್ಯದಲಿ ॥　　೬೦

ವೃಷಭಾಸುರ ಸಂಹಾರ ಮತ್ತು ಅವನ ಚರ್ಮದಿಂದ ಭೇರೀರಚನೆ

ದುಷ್ಟದಾನವ ಮಡಿದೊಡವನೊಡ
ಹುಟ್ಟಿದಾತನು ವೃಷಭನೆಂಬವ
ದಿಟ್ಟನವ ಕಲಿಯಾಗಿ ಕಾದಿದೊಡವನ [1] ನಿಮಿಷದಲಿ ।
ಮೆಟ್ಟಿ ಚರ್ಮವ ಸೀಱಿ ನಾಳಕೆ
ಕಟ್ಟಿದನು ಕಲಿ ಶಂಭು ಭೇರಿಯು
ಧಟ್ಟಿಸಿದೊಡಾಧ್ವನಿ ಭಯಂಕರವಾದುದಮರರಿಗೆ ॥　　೬೩

ಬೇಗದಲಿ ಮಾಗಧನು ಪೌಂಡ್ರಕ
ಯಾಗವನು ಮಾಡಿದನು ಬಹಳೋ
ದ್ಯೋಗದಿಂದವೆ ಬಂಧುವರ್ಗವ ನೆರಹಿ ಮುನಿಜನವ ।
ನಾಗಪುರದರಸುಗಳ ಕೂಡಿ ಸ
ರಾಗದಿಂದವೆ ಸಕಲಯಜ್ಞದ
ಭಾಗಧೇಯವನುೞಿದು ಮಾಡಿಸಿದನು ಮಹಾಕ್ರತುವ ॥　　೬೪

ಅರಸ ಕೇಳ್ ಹರಿಭಕ್ತಿದೂರರು
ನೆರೆದು ಮಾಡುವ ಸಕಲಯಾಗವು
ಶರಧಿಯೊಳಗುಬ್ಬಿದ ಬೊಬ್ಬುಳಿಕೆಗಳ ತೆಱನಂತೆ ।

1 ಕಟ್ಟಡವಿಯಲಿ ಕಾಧಿದರೆ ಬಳಿಕವನ, ಖ.

ಮಾಗಧನ ತಪಸ್ಸು.

ಪರದು ಹೋಪುದು ಸುಕೃತರಾಶಿಗ
ಳರದೆ ನಿಮಿಷಕೆ ವೇದಸಿದ್ಧವಿ
ಪಱಿಯು ಜಯಿಸುವೆನೆಂದು ಮಾಗಧ ಮಾಡಿದನು ತಪವ ॥ ೬೫

ಹಿರಿದು ಮೆಚ್ಚಿ ದನವಗೆ ಗೌರೀ
ವರನು ತಲೆದೋಱಿದನು ಬೇಡ್ಕೆ
ವರವ ಕೊಡುವೆನೆನಲ್ಕ ಕಣ್ದೆಱೆದೆದ್ದು ಕೈಮುಗಿದ ।
ಕರುಣಿಸ್ಕೆ ಭೇರೀತ್ರಯವ ಸಂ
ಗರದೊಳಾಧ್ವನಿಗೇಳದರಿಗಳು
ಹಿರಿದು ಭಯಗೊಂಡೋಡುವಂತಿರೆ ಕೃಪೆಯ ಮಾಡೆಂದ ॥ ೬೬

ಕಾಳಗದೊಳನ್ನಯ ಶರೀರದ
ನೀಪೆರಡು ಬೆಸುವಂತೆ ಕರುಣಿಸು
ಭಾಳಲೋಚನ ನೀನೆ ಬೆಂಬಲವಾಗಿ ರಣಜಯವ ।

ಮಾಗಧಗೆ ಭೇರಿಯ ಪ್ರಾಪ್ತಿ, ಮತ್ತು ಈಶ್ವರನ ವರಗಳು.

ಪಾಲಿಸೆಂದೆನೆ ಮೂಱುವರವ ಕೃ
ಪಾಳು ಕರುಣಿಸಿ ಮಾಗಧೇಂದ್ರಗೆ
ಶೂಳಗಳನಿತ್ತು ಭವ ಬಿಜಯಂಗೈದನೊಲವಿನಲಿ ॥ ೬೭

ಇಂದುಧರನನು ಬೀಳುಕೊಂಡವ
ನಂದು ಮೊದಲಾಗಖಿಳರಾಯರ
ವೃಂದವನು ಬಂಧಿಸಿದ ನಾನಾ ದ್ವೀಪಪಾಲಕರ ।

ಅಕಾಲದಲ್ಲಿ ನಡೆವ ಭೇರೀನಾದಕ್ಕಾಗಿ ಮಾಗಧನು ಶಾಂತಿಯನ್ನು
ಮಾಡುವಿಕೆ.

ಕಂದ ಕೇಳ್ಕೈ ಬಳಿಕಲಾಗೋ
ವಿಂದಭೀಮಾರ್ಜುನರು ಭೇರಿಯ
ನಂದು ಹೊಡೆಯಲು ಕದಡಿದುವು ಕಲ್ಪಾಂತಶರಧಿಗಳು ॥ ೬೮

ಮಾಗಧನ ಮನೆಗೆ ಕೃಷ್ಣಾದಿಗಳ ಆಗಮನ.

ಏನಿದದ್ಭುತವೆನುತ ನಡುವಿರು
ಳಾನರೇಶ್ವರನಮಳವೇದವಿ
ಧಾನದಲಿ ತಚ್ಛಾಂತಿಗೋಸುಗ ಕರೆಸಿ ಭೂಸುರರ |
ದಾನದಲಿ ವಿವಿಧಾಗ್ನಿಕಾರ್ಯವಿ
ಧಾನದಲಿ ವಿಪ್ರಾಘವೇಚನಸ [1]
ಥಾನದಲಿ [2] ಮಗಧೇಶನಿದ್ದನು ಭೂಪ ಕೇಳೆಂದ [3]|| ೬೯

ಇವರು ಗಿರಿಯಿಂದಿಳಿದು ರಾತ್ರಿಯೊ
ಳವನ ನಗರಿಯ ರಾಜಬೀದಿಯ
ವಿವಿಧವಸ್ತುವ ಸೂಱೆಗೊಂಡರು ಹಾಯ್ದು ದಱದುಱವ |
ತಿವಿದರಡ್ಡೈಸಿದರನುಬ್ಬಿದ
ತವಕಿಗರು ಮದದಿಂದ ರಾಯನ
ಭವನವನು ಹೊಕ್ಕರು ವಿಡಂಬದ ವಿಪ್ರವೇಷದಲಿ || ೭೦

ಉರುವಣಿಸಿದರು ಮೂಱುಕೋಟೆಯ
ಮುಱಿದರದ್ವಾರದಲಿ ರಾಯನ
ಹೊರೆಗೆ ಬಂದರು ಕಂಡರಿದಿರೆದ್ದನು ಜರಾಸಂಧ |

ಬಂದವರಿಗೆ ಮಾಗಧನ ಆದರ.

ಧರಣಿಯಮರರಪೂರ್ವಿಗರು ಭಾ
ಸುರದ ಭದ್ರಾಕಾರರೆಂದಾ
ದರಿಸಿ ಮಧುಪರ್ಕಾದಿಗಳ ಮಾಡಿದನು ಭಕ್ತಿಯಲಿ || ೭೧

ಕೇಳಿದನು ಕುಶಲವನು ಕುಶಲವ
ಹೇೞಿದರು ಕುಳ್ಳಿರಿ ಯೆನಲು ಭೂ
ಪಾಲಕರು ಕುಳ್ಳಿರ್ದರೆವೆ ಯಿಕ್ಕದೆ ನಿರೀಕ್ಷಿಸುತ |

---

[1] ವಿಪ್ರಾಘನಿಬಿಡ, ಖ. [2] ಸ್ಥಾನದಲ್ಲಿ, ಖ. [3] ಹೊತ್ತದುಗುಡದಲಿ, ಖ.

ಇವರನ್ನು ನೋಡಿ ನಾನಾವಿಧವಾಗಿ ತರ್ಕಿಸುವಿಕೆ.

ಹೇಟಿದ್ಕೆ ನಿಮಗಾವದೇಶ ವಿ
ಶಾಲಗೋತ್ರವಾವ್ರದೆನುತ ಸು
ಲೋಲಮತಿ ಚಿಂತಿಸಿದನಿವದಿರು ವಿಪ್ರರಲ್ಲೆಂದು ॥ ೩೦

ಸ್ನಾತಕವ್ರತವೇಷದಲಿ ಬಂ
ದಾತಗಳು ಬಟ್ಟಿಕವರು ಶಸ್ತ್ರ
ವ್ರಾತದಲಿ ಶಿಕ್ಷಿತರು ಕರ್ಕಶಬಾಹುಪಾಣಿಗಳು ।
ಕೈತವದಿನ್ಯೆತಂದರರ್ಥವ
ನೀತಗಳು ಬಯಸರು ವಿರೋಧ
ಪ್ರೀತಿಮುಖರಿವರಾರೊ ಶಿವ ಶಿವ ಯೆನುತ ಚಿಂತಿಸಿದ ॥ ೩೩

ಆರಿವರು ದೇವತ್ರಯುವ್ರೊ ಜಂ
ಭಾರಿ ಯಮ ಮಾರುತರೊ ರವಿ ರಜ
ನೀರಮಣ ಪಾವಕರೊ ಕಪಟಸ್ನಾತಕವ್ರತರು ।
ಧಾರುಣೀಶ್ವರರೊಳಗೆ ದಿಟ್ಟರ
ದಾರೊ ತವ್ಮೊಳು ತೊಡುಕಿ ನಿಲುವ ವಿ
ಕಾರಿಗಳ ನಾ ಕಾಣೆನೆಂದನು ತನ್ನ ಮನದೊಳಗೆ ॥ ೩೪

ಈಗ ಮಿಡುಕುಳ್ಳವರು ಮಹಿಯಲಿ
ನಾಗಪುರದರಸುಗಳು ನಮ್ಮವ
ರಾಗಿಹರು ಪಾಂಡುವಿನ ಮಕ್ಕಳು ಮಿಾಱಿ ಖಳರಲ್ಲ ।
ಸಾಗರೋಪಾಂತ್ಯದ ನರೇಂದ್ರರು
ಭೋಗಿಸಿದ ಮುತ್ತುಗಳು ಭಾವಿಸ
ಲೀಗಯಾಳರ ಗರ್ವವೇನು ವಿಚಿತ್ರವಾಯ್ತೆಂದ ॥ ೩೫

ಯಾದವರು ಹಿಂದೆಮ್ಮಡನೆ ಹಗೆ
ಯಾದವರು ಬಟಿಕವರೊಳಗೆ ಕಱು
ಗಾದವನ ತುಱುಗಾದವನ ಮಾಧವನ ಮಾತೇನು ।

ಮೇದಿನಿಯು ಮಂಡಳಿಕ ಮನ್ನೆಯ
ರಾದವರು ನಷ್ಟಾಡನೆ ಸೆಣಸುವ
ರಾದೊಡಿದು ದುಷ್ಕಾಲವಶವಿದು [1] ಯೆಂದನಾಮಗಧ ॥ ೨೬

ಕೃಷ್ಣಾದಿಗಳನ್ನು ಕುರಿತು ಮಾಗಧನ ಪ್ರಶ್ನೆ

ಬವರಿಗರು ನೀವ್ ವಿಪ್ರವೇಷದ
ಜವನಿಕೆಯ ಜಾಣಾಯ್ಲ ತನದಿಂ
ದವಗಡಿಸಿ ಯೊಳಹೊಕ್ಕರದ್ವಾರದಲಿ ನೃಪಸಭೆಯ ।
ನಿವಗಿದೇನೀವ್ಯಸನ ಕಪಟ
ವ್ಯವಹರಣೆ ಕೃತ್ರಿಮವೊ ಸಹಜವೊ
ರವಣ ಮತ್ತೇನುಂಟು ಹೇಳೆನ್ನಂಜಬೇಡೆಂದ ॥ ೨೭

ಸ್ನಾತಕವ್ರತವೇನು ಪಾರ್ಥಿವ
ಜಾತಿಗಿಲ್ಲವೆ ವೈಶ್ಯಕುಲಕಿದು
ಪಾತಕವೆ ನಾವೀಗ ಪಾರ್ಥಿವಜಾತಿಸಂಭವರು ।
ಸ್ನಾತಕರು ನಾವ್ ವೈರಿಕುಲದಲ
ಭೀತರದ್ವಾರಪ್ರವೇಶವ
ನೀತಿ ಯಲ್ಲ ಪುರಾಣಸಿದ್ಧವಿದೆಂದನಸುರಾರಿ ॥ ೨೮

ಕೃಷ್ಣಾದಿಗಳಿಗೂ ಮಾಗಧಗೂ ನಡೆದ ಸಂವಾದ.

ವೈರಿಭವನವೆ ನಮ್ಮದಿದು ನಾವ್
ವೈರಿಗಳ ನಿಮಗೆಮಗೆ ಜನಿಸಿದ
ವೈರಬಂಧನಿಮಿತ್ತವಾವುದು ನಿಮ್ಮ ಪಕ್ಷದಲಿ ।
ಆರು ನೀವೀಬ್ರಾಹ್ಮಣಬ್ರುವ
ರಾರುಪಾಧ್ಯರು ನಿಮಗೆ ನಿಮ್ಮವಿ
ಕಾರ ಬಳಿದೇ ಹೋಗದೆಂದನು ಮಗಧಪತಿ ನಗುತ ॥ ೨೯

1 ಗತಿ ಶಿವ, ಕ, ಖ.

ಮುಱಿದು ಹಲಬರಿಳಾಧಿನಾಥರ
ಸೆಱೆಯಲಿಕ್ಕಿದೆ ರಾಜ್ಯಮದದಲಿ
ಮೆಱೆದು ಮಾನ್ಯರಸಿಱಿದು ಮೆಚ್ಚಿಸಿಕೊಂಡೆ ರೌರವವ [1] |
ಅಱಿಯದಳುಪಿದ ಪಾತಕಕೆ ಬಿಡು
ಸೆಱೆಯ ಪ್ರಾಯಶ್ಚಿತ್ತವಿದು ಕೇ
ಳುಱುವುಪಾದ್ಯರು ನಾವೆ ಯೆಂದನು ನಗುತ ಮುರವೈರಿ ‖ ೮೦

ಆನೃಪಾಲರ ಮಗನೊ ಮೊಮ್ಮನೊ
ನೀನವರ ಬಾಂಧವನೊ ಭೃತ್ಯನೊ
ಸೂನುಪ [2] ಕ್ಷನೊ ಬೆರಳ ಬಗದನೊ ಕುರಳಕೋವುಳನೊ |
ಏನು ನಿನ್ನಂಘವಣೆ ನೀನಾ
ರಾನರೇಂದ್ರರ ಸೆಱೆಯ ಬಿಡುಗಡೆ
ಗೇನನೆಂಬೆನು ರಹವನೆಂದನು ತೂಗಿ ನಿಜಶಿರವ ‖ ೮೧

ಎಲವೊ ಧರೆಯೊಳಧರ್ಮಶೀಲರ
ತಲೆಯ ಚೆಂಡಾಡುವೆವು ಧರ್ಮವ
ನೊಲಿದು ಕೊಂಡಾಡುವೆವು ಶಿಕ್ಷಾರಕ್ಷಣವ್ಯಸನ |
ನೆಲೆ ನಮಗೆ ನೀನಱಿಯೆ ರಾಜಾ
ವಳಿಯ ಬಿಡು ಘಡ ಭಂಡವಿದ್ಯೆಯ
ಬಳಸುವರೆ ನಮ್ಮೊಡನೆ ಯೆಂದನು ದಾನವಧ್ವಂಸಿ ‖ ೮೨

ಇವರು ಗಡ ಜಗದೊಳಗೆ ಶಿಕ್ಷಾ
ಸವನದಲಿ ದೀಕ್ಷಿತರು ಬಲುಕೈ
ತವದ ಭಂಡರು ನೀವೊ ನಾವೋ ಸಾಕದಂತಿರಲಿ |
ಧವಡರ್ಯೆ ನೀವ್ ದಿಟ್ಟರಹಿರಂ
ಗವಣೆಯೊಳ್ಳಿತು ನಿಮ್ಮ ನಿಜವನು
ವಿವರಿಸಾ ನೀವಾರು ಹೇಳೆಂದನು ಜರಾಸಂಧ ‖ ೮೩

---

[1] ಹೆಚ್ಚಿಸಿಕೊಂಡ ಭುಜಬಲವ, ಚ. [2] ಲೂನಪ, ಕ. ಖ.

ತಮ್ಮ ವೃತ್ತಾಂತವನ್ನು ಕೃಷ್ಣನು ಹೇಳುವಿಕೆ.

ಕೇಳಿ ಮಾಡುವುದೇನು ತಾನಸು
ರಾಳಿಧೂಳೀಪಟಲರೌದ್ರಸ್ರ
ಪಾಲಚಾಪಟವೆಲ್ಲನೀತನು ಭೀಮಸೇನ ಕಣಾ ।
ಭಾಳನೇತ್ರನ ಭುಜಬಲದ ಸಮ
ಪಾಳಿಯರ್ಜುನನೀತನೇಟಾ
ಕಾಳಗವ ಕೊಡು ನಮ್ಮೊಳೊಬ್ಬರಿಗೆಂದನಸುರಾರಿ ‖ ೧೪

ಕೇಳಿ ಕೆದಱಿದ ಬಿಱುನಗೆಯುಲಡ
ಬೀಱುತೇಱುತ ಬಿಱುವನಿಯು ಕ
ಣ್ಣಾಲಿಗಳ ರ್ಘೂರ್ಮ್ಮಿದ್ದ ರೋಮದ ಜಡಿವ ಬಿಡುದಲೆಯು ।
ಸೂಳುನಗೆ ಬೆಳುನಗೆಯುಲಡಿಗಡಿ
ಗಾಳುಮುಱುಗುಬ್ಬಸದಲಿದ್ದು ಕ
ರಾಳಮತಿ ಸಂತೈಸಿದನು ತನ್ನವರಿಗಿಂತೆಂದ ‖ ೧೫

ಕೃಷ್ಣ ಮಾಗಧರ ಪರಸ್ಪರಾಪಹಾಸ.

ಈತನಾರೆಂದಱಿವಿರೈ ನ
ಮ್ಮಾತನೀತನು ನಮ್ಮ ಕಂಸಂ
ಗೀತನಳಿಯನು ನಮಗೆ ಮೊಮ್ಮನು ಮಗನು ದೇವಕಿಗೆ ।
ಈತ ಕಾಣಿರೆ ಹಿಂದೆ ಚೌರಾ
ಸೀತಿದುರ್ಗದಲೋಡಿ ಬದುಕಿದ
ನೀತ ಬಲುಗೈಬಂಟನೆಂದನು ಮಗಧಪತಿ ನಗುತ ‖ ೧೬

ಕೊಳಲ ರಾಗದ ರಹಿಯೊ ಕಲ್ಲಿಯು
ಕಲಸುಗೂಳೋ ಹಳ್ಳಿಕಾತಿಯು
ರೊಳಗುಡಿಯು ಹಾದರವೊ ತುಱುಗಾಹಿಗಳ ಗಾಹುಗಳೊ [1] ।

---

1 ತೋಹುಗಳೊ, ಚ.

ಬಲುಸರಳ ಸುರಿವಳೆಯ ಮಿದುಳೊಡೆ
ಗಲಸುಗಳದಾಯುಧದ ತಳುಕಿನ
ಕೊಳಗುಳದ ಜಯಸಿರಿಯ ಕಾಹಿನೊಳಾರು ನೀನೆಂದ ॥ ೮

ಹೋಯಿ ಹೆಂಗಸು ಬಂಡಿ ಪಕ್ಷಿ ಸ
ಮೀರಣಾಶ್ವಾಜಗರ ಗರ್ದಭ
ವೀರರೀತನ ಘಾತಿಗಳುಕಿತು ಕಂಸಪರಿವಾರ ।
ಆರುಭಟೆಯುಳ್ಳವನು ಕಂಸನ
ತೋಳಹತ್ತನ ತೊಡಕಿದನು ಗಡ
ಭಾರಿಯಾಳಹನುಂಟು ಶಿವ ಶಿವ ಯೆಂದನಾಮಗಧ ॥ ೮೮

ಎಲವೊ ಗೋವಳ ನಿನ್ನ ಕಂಸನ
ನಿಳಯವೋ ಪೌಂಡ್ರಕನ ಕದನದ
ಕಳನೊ ಹಂಸನ ಹೋಟೆಯೊ ಮೇಣ್ ಡಿಬಿಕಸಂಗರವೊ [1] ।
ಹುಲಿಗೆ ಮೊಲನಭ್ಯಾಗತನೆ ಕರಿ
ಕಳಭ ಸಿಂಹಕೆ ಸರಿಯೆ ನೀ ನಿ
ನ್ನಳವನರಿಯದೆ ಹೊಕ್ಕು ಕೆಣಕಿದೆ ಕೆಟ್ಟೆ ಹೋಗೆಂದ ॥ ೮೯

ಇದುವೆ ಪಿತ್ತದ ವಿಕಳತೆಯೊ ಮ
ದ್ಯದ ವಿಕಾರವೊ ಭಂಗಿ ತಲೆಗೇ
ರಿದುದೊ ಭಟನಾದೊಡೆ ವಿಘಾತಿಯಲೇಯಿ ಕಾಳಗಕೆ ।
ಸದನ ನಿನ್ನದು ಸೂಳಯರ ಮುಂ
ದೊದರಿ ಫಲವೇನೆದ್ದು ಬಾ ಭಾ
ಳದಲಿ ಬರೆದುದ ತೊಡೆವೆನೆಂದನು ದಾನವಧ್ವಂಸಿ ॥ ೯೦

ಎಲವೊ ಗೋಪಕುಮಾರ ಕಂಸನ
ಲಲನೆಯರ ವೈಧವ್ಯದುಃಖಾ
ನಲನ ನಂದಿಸಲಾಯ್ತು ನಿನ್ನಯ ರುಧಿರಜಲಧಾರೆ ।

---

1 ನಹುಷಾಯೊ, ಚ.

ಅಳಿದ ಕಂಸನ ಕಾಲಯವನನ
ಕಳನ ಹರಿಬವೆ ಗೆಲಿದು ದೈತ್ಯಾ
ವಳಿಯ ಬಂಧುತ್ವವನು ಬಳಸುವೆನಿನ್ನು ನೋಡೆಂದ [1] ॥ ೯೧

ಭೀಮಾದಿಗಳನ್ನು ಕುರಿತು ಮಗಧನ ವಚನ.

ಗೋವಳರು ನಿರ್ಲಜ್ಜರದಱೊಳು
ನೀವು ಗರುವರು ರಾಜಪುತ್ರರು
ಸಾವ ಬಯಸುವೆನೊಡನೆ ಬಂದಿರಿ ತಪ್ಪು ಮಾಡಿದಿರಿ ।
ನೀವು ಮಕ್ಕಳು ನಿಮ್ಮ ಹಿರಿಯರ
ಠಾವಿನಲಿ ಬುಧರಿಲ್ಲಲಾ ನಿಮ
ಗಾವ ವಿಧಿಯಹುದೆಂದು ನುಡಿದನು ಭೀಮಫಲುಗುಣರ ॥ ೯೨

ಯುದ್ಧಕ್ಕೆ ಬಾ ಎಂದು ಭೀಮನ ವಾಕ್ಯ.

ಸಾಕಿದೇತಕೆ ಹೊಳ್ಳುನುಡಿಗೆ ವಿ
ವೇಕಿಗಳು ಮೆಚ್ಚುವರೆ ಯುದ್ಧ
ವ್ಯಾಕರಣಪಾಂಡಿತ್ಯವುಳ್ಳರೆ ತೋಱಿಸುವುದೆಮಗೆ ।
ಈ ಕಮಲನೇತ್ರಂಗೆ ಘಡ ನೀ
ನಾಕೆವಾಳನೆ ಶಿವ ಶಿವಾ ಜಗ
ದೇಕದೈವದ ಕೂಡೆ ದಂಡಿಯೆ ಯೆಂದನಾ ಭೀಮ ॥ ೯೩

ಭೀಮಾರ್ಜುನರನ್ನು ಹೆದರಿಸುವಿಕೆ.

ದಿಟ್ಟರಹಿರೋ ಸಾವನಱಿಯದೆ
ಕೆಟ್ಟರಕಟಾ ಕಾಳುಗೋಪನ
ಗೊಟ್ಟಿಯಾಟಕೆ ಗುಱಿಗಳಾದಿರಿ ನಿಮ್ಮ ಗುರುಸಹಿತ ।
ಚಟ್ಟಳೆಯ ಚತುರಾಸ್ಯ ಭಾಳದ [2]
ಲಿಟ್ಟನವರಿಗೆ ಜೋಳಿ [3] ಗಡ ಜಗ
ಜಟ್ಟಿಗಳು ತಾವಿವರೆನುತ ತಲೆದೂಗಿದನು ಮಗಧ ॥ ೯೪

---

[1] ಬಳಸುವೆನೆಂದನಾಮಗಧ, ಚ. [2] ನಿವರೊಡ, ಚ.

[3] ಹುಟ್ಟಿದರ ಸಮಜೋಳಿ, ಚ.

ಕೃಷ್ಣ ಜರಾಸಂಧರ ಸಂವಾದ.

ಬೈದು ಫಲವೇನೆಮಗೆ ಮೇಳದ
ವೈದುನರು ನೀವಲ್ಲಲೇ ದಱ
ವೈದೆ ನೂಕಲಿ ನಿಮ್ಮ ಮೂವರು ಸಹಿತ ನವ್ಮೊಡನೆ |
ಕೈದು ಬೇಕೈ ತರಿಸಿ ಕೊಡಿಸುವೆ
ನೈದೆ ನೀವನುವಾಗಿ [1] ನಿಮ್ಮೊಡ
ನೈದುವೆನು ತಾನೊಬ್ಬನೆಂದನು ಮಗಧಪತಿ ನಗುತ [2] || ೯೫

ಎಲವೊ ಬಾಹಿರ ಮಗಧ ಹಲಧರ
ನುಱಿಯೆ ಪಾಂಡವನೃಪರು ಪರಿಯಂ
ತಳವು ನಿನಗೊಬ್ಬಂಗೆ ಸೇಱುವುದೇ ಮಹಾದೇವ |
ಅಱವು ತಪ್ಪದು ನುಡಿಯೊಳಲ್ಪವ
ಬಳಸಲೇತಕೆ ವೀರನಹೆ [3] ನ
ಮ್ಮೊಳಗೆ ಮೂವರೊಳೊಬ್ಬನನು ವರಿಸೆಂದನಸುರಾರಿ || ೯೬

ಆಕಟ ನಮಗೀಸಮರವಾವ
ಶ್ಯಕವೆ ನಮಗಖ್ಯಾತಿ ಯಲ್ಲಿದು
ಸಕಲಜನವೆಱದಿರೆ ಯೆನುತ ನೋಡಿದನು ತನ್ನವರ |
ಪ್ರಕಟವೈ ನಿಮ್ಮೊಳುತನ ಯದು
ನಿಕರಕಾವೆಂಜುವೆವು ರಣನಾ
ಟಕಪಲಾಯನಪಂಡಿತರು ನೀವೆಂದನಾಮಗಧ || ೯೭

ಪಾರ್ಥ ನೀ ಮಗುವೆಮ್ಮೊಡನೆ ರಣ
ದರ್ಥಿಯಾದೊಡೆ ಭೀಮಸೇನ ಸ
ಮರ್ಥನಹನೀತಂಗೆ ಕೊಟ್ಟೆನು ಕಳನ ಕಾಳಗವ |

---

[1] ವಾಳಾಗಿ, ಚ. [2] ಬಲರಾಮನುಱಿದಾನೆಂದನಾಮಗಧ, ಚ.
[3] ವಿವೇಕಿಯೈ, ಕ. ಖ.

ಯುದ್ಧೋದ್ಯೋಗ.

ವ್ಯರ್ಥವಾಗಿಯೆ ಹೋಗದಿಂದು ಪ
ರಾರ್ಥಕಂಟಕವಾಗಲೇತಕೆ [1]
ತೀರ್ಥವೈ ಸಲೆ ಯೆಂದು ನಿಂದಿರ್ದನು ಜರಾಸಂಧ [2] ‖ ೯೮

ತರಿಸಿದನು ಚಂದನದ ಸಾದಿನ
ಭರಣಿಗಳ ಕರ್ಪೂರವರಕ
ಸ್ತೂರಿಜವಾದಿಪ್ರಮುಖಬಹುವಿಧಯಕ್ಷಕರ್ದಮವ ।
ಹರಿವೃಕೋದರಪಾರ್ಥರಿದಿರಲಿ
ಭರಣಿಗಳ ನೂಕಿದನು ಮಾಲ್ಯಾಂ
ಬರವಿಲೇಪನದಿಂದಲಂಕರಿಸಿದರು ನಿಜತನುವ ‖ ೯೯

ಅಂಕಕಿಬ್ಬರು ಭಟರು ತಿಲಕಾ
ಲಂಕರಣಶೋಭೆಯಲಿ ರಣನಿ
ಶ್ಯಂಕರನುವಾದರು ಸುಕರ್ಪೂರವೀಳಯವ ಕೊಳುತ ।
ಬಿಂಕದುಬ್ಬಿನ ರೋಮಪುಳಕದ
ಮುಂಕುಡಿಯ ಸುಮ್ಮಾನದಂಕೆಯ
ಝುಂಕೆಗಳ ಭರ ಭುಲ್ಲವಿಸಿದುದು ಭೀಮಮಾಗಧರ ‖ ೧೦೦

ರಣದೊಳಾವುದು ನಿನಗೆ [3] ಹಿರಿಯು
ಬ್ಬಣವೊ ಪರಿಘವೊ ಸುರಿಗೆಯೋ ಡೊಂ
ಕಣಿಯೊ ಮುಸಲವೊ ಗದೆ ಕಠಾರಿಯೊ ಪರಶುತೋಮರವೊ ।
ಕಣಿಧನುವೊ ಕಕ್ಕಡೆಯೊ ಮುಷ್ಟಿಯೊ
ಹಣಿದಕಾವುದು ಸದರವೆದಟಲಿ
ಕೆಣಕಿ ನೋಡಾ ತನ್ನನೆಂದನು ಭೀಮ ಮಾಗಧನ ‖ ೧೦೧

ಆಯುಧಂಗಳಲೇನು ನೀ ನಾ
ಗಾಯುತದ ಬಲನೆಂಬರಾನುಡಿ

---

1 ರಾರ್ಥವಾದೊಡೆ ಸಾಕು ನಮಗಿದು, ಕ ಖ.
2 ಶಸ್ತ್ರಧಾರೆ ಯಿದೆಂದನಾಮಗಧ, ಚ. 3 ಕೈದು, ಚ. ಠ.

ವಾಯುವ್ರೋ ಬಿನ್ನಣವ್ರೊ ದಿಟವ್ರೊ ನೋಡಬೇಹುದಲೆ ।
ಆಯಿತೇ ಸಮೆಜೋಡಿ ನೀ ನಡು
ಪಾಯುವ್ರೋ ಜೋಕೆಯುವ್ರೊ ನುಡಿ ಮನ
ದಾಯುತವನಿನ್ನೆನುತ ಹತ್ತಾಹತ್ತಿಗನುವಾದ ॥ ೧೦೨

ಯುದ್ಧಾರಂಭ.

ಧರಣಿಪತಿ ಕೇಳ್ ಮಗಧನೃಪವಂ
ದಿರದ ರಾಜಾಂಗಣದೊಳವನೀ
ಸುರರು ನೋಟಕರಾದರಿಲ್ಲಿ ಮುರಾರಿಫಲುಗುಣರು ।
ಎರಡುಬಲ ಮೋಹರಿಸಿ ನಿಂದುದು
ಪುರದ ಹೊಱಬಾಹೆಯಲಿ ಕೃತಸಂ
ಚರಣಕಾರ್ತಿಕಶುದ್ಧಪಾಡ್ಯದೊಳಾಹವಾರಂಭ ॥ ೧೦೩

ಸಿಡಿಲು ಜೊಬ್ಬಿಡುವಂತೆ ಹೊಯ್ದರು
ಮುಡುಹುಗಳ ಝೂ ಹೋ ತು ಮಲ್ಲನು
ತಡಿಗಡಿಗೆ ನೂಕಿವರು ಲವಣಿಯ ತಿರುಗಿ ಸಾರದಲಿ ।
ತುಡುಕಲೀಯದೆ ಬವರಿಯಲಿ ಗಡ [2]
ಬಡಸಿ ದಂಡೆಯೊಳೌಕಿದರು ಸಂ
ಗಡಿಸಿ ನಿಂದರು ನೀಲ ನಿಷಧಾಚಲಕೆ ಮಲೆವಂತೆ ॥ ೧೦೪

ಯುದ್ಧನಡೆದಕ್ರಮ.

ಸಿಕ್ಕರೊಬ್ಬರಿಗೊಬ್ಬರುಱೆ ಕೈ
ಮಿಕ್ಕು ಹರಿಯುರು ಕೊಂಡಹೆಜ್ಜೆಯ
ಠಕ್ಕಿನಲಿ ಮೈಗೊಡರು ತಿಱಿಮುಱಿವುಮಂಡಿಗಳ ।
ಇಕ್ಕಿದರು ಗೆಳಹತ್ತದಲಿ ಸಲೆ
ಮಿಕ್ಕು ಸತ್ರಾಣದಲಿ ಮಿಗೆ ಸರಿ
ಹೊಕ್ಕು ಹಿಡಿದರು ಬಿನ್ನಣದ ಜೊಕ್ಕೆಯದ ಜಾಳಿಯಲಿ [3] ॥ ೧೦೫

1 ಮರ್ಘುಪೂತು, ಚ. 2 ತಿರುಗಿದರು, ಚ.
3 ಚೊಕ್ಕೆಯಧ ಚಾಳಿಯಲಿ, ಕ. ಖ.

ಬಿಡಿಸಿ ಗಳಹತ್ತವೆನು ಡೊಕ್ಕರ
ಕೊಡೆ ಮುಱಿವ ಸಕ್ರೋಧ ಡೊಕ್ಕರ
ಕಡಸಿ ಕತ್ತರಿಯಾಡಿಸುವ ಗಳಹತ್ತ ಡೊಕ್ಕರವ ।
ತಡೆವ ಚವ್ವಂಗುಲ ದುವಂಗುಲ
ಕೊಡೆ ಮುಱಿವ ಪಟ್ಟಸಕೆ ಚಾಚುವ
ಚಡಿಕೆಗೊದಗುವ ಭಟರು ಹೆಣಗಿದರರಸ ಕೇಳೆಂದ ॥ ೧೦೬

ಎಳೆದುದಣುವ್ರೊಟ್ಟೆಯಲಿ ಬೊಪ್ಪರ
ದೊಳಗೆ ಜಾಳಿಸಿ ಚಿಮ್ಮಿ ಜಡಿತೆಯು
ಸೆಟೆದು ಮುಡುಹಿನಲೌಕಿ ಬಿಗಿದರು ಪಟ್ಟಮುಡುಹಿನಲಿ ।
ಸುಟಿದು ಮರ್ಕಟಬಂಧದಲಿ ಕರ
ವಳಯದಲಿ ಕೈದುಡಕಿ ಶಿರವ
ಟ್ಟಳೆಯ ಚಲ್ಲಣಪಟ್ಟೆಯುವರೊದಗಿದರು ಪಟುಭಟರು ॥ ೧೦೭

ಅಗಡಿಯಲಿ ಲೋಟಿಸಿ ನಿರಂತರ
ಲಗಡಿಯಲಿ ಲಾಗಿಸಿ ನಿಬಂಧದ
ಬಿಗುಹುಗಳ ಕುಮ್ಮೆಱಿಯ ಕುಹರದ ನಾಗಬಂಧಗಳ ।
ತೆಗಹುಗಳ ತೊಡಕುಗಳ ತುಳುಕಿನ
ಜಗಳಗಳ ಜೋಡಣೆಯ ನಿಡು ಸೂ
ಯುಗಳ ಸಂರಂಭದ ಸಗಾಡರು ಹೊಕ್ಕು ಹೆಣಗಿದರು ॥ ೧೦೮

ಧೂಳಿ ಕುಡಿದುದು ಬೆಮರನಾಕೆಂ
ಧೂಳಿ ನೆನೆದುದು ಬೆಮರಿನಲಿ ತಳ
ಮೇಲು ನಿಮಿಷಕೆ ಮೇಲು ತಳಮಿಗೆ ಬಿಡುಹು ಬಿಗುಹುಗಳ ।
ಸೂಟಿ ನಾಸಾಪುಟದ ಪವನನ
ತಾಳಿಗೆಯ ಕರ್ಪುರದ ಕವಳದ
ತೋಳತಿಕ್ಕೆಯ ತವಕಿಗರು ಹೆಣಗಿದರು ಪಟುಭಟರು ॥ ೧೦೯

ತೀರದಿಬ್ಬರ ಸತ್ವವವನಿಯು
ಸಾರವಿಬ್ಬರ ಬಲುಹ ಗಾಣದು
ಪಾರಕಾಣದುವಧಟರಿಬ್ಬರ ಭುಜಬಲಾಟೋಪ ।
ಸಾರವೇಱಿಯುದು ಮುಳಿಸು ದರ್ಪದ
ಧಾರೆ ಮುಱಿಯದು ಜಯದ ತೃಷ್ಣೆಯು
ತೋಱಿಹತ್ತರು ಹೆಣಗಿದರು ಮಾಗಧವೃಕೋದರರು ॥ ೧೧೦

ಪೂತು ಮಝು ಜಗಜಟ್ಟಿ ಧಣು ಧಣು
ವಾತಸುತ ಪರಬಲಭಯಂಕರ
ಸೋತನೈ ಪ್ರತಿಮಲ್ಲನೆಂದರು ಕೃಷ್ಣಫಲುಗುಣರು ।
ಭೀತನಾದನು ಭೀಮನಹಿತವಿ
ಘಾತಮಾಗಧರಾಯಮಲ್ಲ
ವ್ರಾತಕುಲಗಿರಿವಜ್ರನೆಂದುದು ಮಗಧಪರಿವಾರ ॥ ೧೧೧

ಅಲಸಿದರು ಬಿನ್ನಣಕೆ ಬಿಗುಹಿನ
ಕಲಿವುಗಳ ಬೇಸರಿಕೆಯಲಿ ಕಡು
ಲುಳಿ ಮಸಗಿ ಡಾವರಿಸಿ ಮನವನುಪಾಯಡಾವರಕೆ ।
ತೊಲಗಿ ನಿಂದರು ಕರ್ಪುರದ ತನಿ
ಹಳುಕನಣಲೊಳಗಡಸಿ ದಂಡೆಯು
ಬಲಿದು ಬಱಸಿಡಿಲೆಱಕವೆನೆ ತಾಗಿದರು ತವಕದಲಿ ॥ ೧೧೨

ಬಾಚಿ ಹೊಯ್ಲೊ ಸಿಡಿಲ ತೊಡಱಿನ
ಸೂಚಿಗಳೊ ಸಿಡಿಸಲೆಯು ಗಱಿಗಳ
ಬೀಚುಗಳೊ ಬಿಱುಹೊಯ್ಲ ಧಾರೆಯು ಕಿಡಿಯ ತುಂಡುಗಳೊ ।
ತೋಳ ನೆಗಹಿನ ಮುಷ್ಟಿಘಾತದ
ಮೇಲುಗಾಯದ ಉಳಿಯ ಘೋಟಾ
ಘೋಟಿಗಳನಾರೆಣಿಸುವರು ಮಾಗಧನ ಪವನಜನ [1] ॥ ೧೧೩

1 ಕಲಿಭೀಮ ಮಾಗಧರ, ಚ.

ಕುಸಿದು ಘಾಯವ ಕಳದು ವಕ್ಷದ
ಬೆಸುಗೆ ಬಿಡೆ ಸಿಡಿದೆದ್ದ ಹೊಯ್ಲಿಗೆ
ಮುಸುಡ ತಿರುಹುವ ಮೈಯ್ಯನೊಡ್ಡಿದಡೌಕಿ ಘಟ್ಟಿಸುವ ।
ಅಸವಸೆಗೆ ಮೈಯುಳುಕದೆಱಗುವ
ಹುಸಿವ ಜಾಱುವ ಹೊಳುವ ಹೆಣಗುವ
ಬೆಸುಗೆ ಬಿಡಿಸುವ ದಿಟ್ಟವಾಳರು ತಿವಿದರಡಬಡಿಸಿ [1] ॥ ೧೧೪

ಪವನಜನ ರಾವಣನ ಝೂಡಿಯು
ಕಿವಿಗಳೊ ಚಾಣೂರಕೃಷ್ಣರ
ಜವಳಿವೊಯ್ಲಿವರೊರೆಗೆ ಜೋಡಿಸಲೇನ ಹೇಱುವೆನು ।
ಶಿವನ ಹಣೆಗಣ್ಣೋಟವೋ ಭೈ
ರವನ ಡಮರುಗದಾಟವೋ ಬಿರು
ದಿವಿಗುಳಿನ ದೆಕ್ಕಾಳ ಮಸಗಿತು ಭೀಮಮಾಗಧರ ॥ ೧೧೫

ಕುಣಿದುವಿಬ್ಬರ ಮುಷ್ಟಿಯಿಬ್ಬರ
ಹಣೆಯಲೆದೆಯಲಿ ಮೋಱೆಯಲಿ ಭುಜ
ದಣಸಿನಲಿ ಕಂದದಲಿ ಶಿರದಲಿ ಬದಿಯಲುದರದಲಿ ।
ಝಣು ವಿರೋಧಿವಿಭಾಡ ಝಣು ಝಣು
ಝಣು ಜಗತ್ರಯಜಟ್ಟಿ ಝಣು ಝಣು
ಝಣು ಝಣೆಂಬಬ್ಬರಣೆ ಮಸಗಿದುದೆರಡುಬಾಹೆಯಲಿ ॥ ೧೧೬

ಹೊಯ್ಲ ಹೊದಱಿದ್ದುವು ವಿಘಾತದ
ಕಯ್ಯುಳಿಯ ಕಡುಘಾಯ ಘಾಯಕೆ
ಮೈಯ್ಯ ವಣೆ ಲಂಬಿಸಿತು ಕದುಹಿನ ಖತಿಯ ಕೈಮಸಕ [2] ।
ಹೊಯ್ಲ ಹೊಗೆಗಳ ಹೋಱಟೆಯ ನೇ
ಗಾಯ್ಲ ಮುಷ್ಟಾಮುಷ್ಟಿ ಹಂತಿಯ ದೃ
ಢಾಯ್ಲ ರಪ್ಪಳಿಸಿದರು ಪದಘಟ್ಟಣೆಗೆ ನೆಲ ಕುಸಿಯೆ ॥ ೧೧೭

---

1 ಹೊಕ್ಕು ಹೆಣಗಿದರು, ಚ.

2 ಸೋಹೆಯ ಸರಿಸ ಸೂಟಿಯಲಿ, ಡ. ಸೂಟಿನ ಲುಳಿಯ ಲಹರಿಯಲಿ, ಖ.

ಆವಸಾಧನೆಯೋ ವಿಘಾತಿಯು
ಲಾವಣಿಗೆಗದ್ರಿಗಳು ಬಿರಿದುವು
ವೈವಳಿಯುಲುಕ್ಕಿದುದು ಕಡುಹಿನ ಖತಿಯ ಕೈಮಸಕ ।
ತಾವರೆಯ ತೆತ್ತಿಗನ ಕುಮುದದ
ಜೀವಿಗನ ಮಿಗೆ ಮೇಲುನೋಟದ
ಲಾವಿಗೆಡಭಟರಡಸಿ ತಿವಿದಾಡಿದರು ಬೇಸಱದೆ ॥ ೧೧೮

ತೆಗೆಪುರರ್ಜುನಕೃಷ್ಣರೀತನ
ನಗಿಯುರವನವರವನನಿರುಳಿನ
ಹಗಲ ವಿವರಣೆಯಿಲ್ಲ ಮಜ್ಜನಭೋಜನಾದಿಗಳ ।
ಬಗೆಗೆ ತಾರರು ಬಾಹುಸತ್ವದ
ಹೊಗರು ಹಿಂಗದು [1] ಮನದ ಖಾತಿಯು
ತೆಗಹು ತಗ್ಗದು ಹೊಕ್ಕು ತಿವಿದಾಡಿದರು ಪಟುಭಟರು [2] ॥ ೧೧೯

ಸತ್ವ ಸವೆಯದು ಮನದ ಮುಳಿಸಿನ
ಚಿತ್ತ ಬೀಯದು ಜಯದ ಬಯಕೆಯ
ಸುತ್ತು ಸಡಿಲದು ಬಿಂಕ ಬೀಱಿಯದು ಸೋಯುದಾಟೋಪ ।
ತೆತ್ತ ಕೈ ಕಂಪಿಸದು ಮುಷ್ಟಿಯು
ಹತ್ತುಗೆಗೆ ಮನ ಝೋಂಪಿಸದು ಮದ
ವೆತ್ತಿ ಮುಟ್ಟಿದರೊಬ್ಬರೊಬ್ಬರ ಮರ್ಮಘಾತದಲಿ ॥ ೧೨೦

ಅರಸ ಕೇಳ್ಯದನೆಂಟುದಿವಸದೊ
ಳುರುಭಯಂಕರವಾಯ್ತು ಕದನದ
ಭರದೊಳಡೆದೆಱಹಿಲ್ಲ ವಿಶ್ರಮವಿಲ್ಲ ನಿಮಿಷದಲಿ ।
ಎರಡುದೆಸೆಯಲಿ ವೀಳೆಯದ ಕ
ರ್ಪುರದ ಕವಳದ ಕೈಚಳಕದಾ
ತೆಱನನಲ್ಲದೆ ಮರಳಿ ಕಾಣೆನು ಯುದ್ಧರಂಗದಲಿ ॥ ೧೨೧

1 ಹೋಗದು, ಚ. 2 ಬೇಸಱದೆ, ಪ.

ಭರದ ಭಾರಣೆಯಲಿ ಚತುರ್ದಶಿ
ಯಿರುಳು ಮಗಧನ ಬಾಹುಸತ್ವದ
ಮುಖಿವು ಮೊಳತುದು ಶೌರ್ಯ ಸಡೆದುದು ಭಯದ ಬಿಗುಹಿನಲಿ।
ಉರುಪರಾಕ್ರಮತೇಜ ಪಡುವಣ
ತರಣಿಯಾದುದು ಧಟ್ಟಣೆಯು
ಧರಧುರಕೆ ನಿದ್ರಾವಜಿಹ್ವೆಯಾದುದು ನಿಮಿಷನಿಮಿಷದಲಿ ॥ ೧೨

ಆಗ ಜರಾಸಂಧನಿಗೆ ಯುದ್ಧದಲ್ಲಿ ಅಧೈರ್ಯ ಹುಟ್ಟುವಿಕೆ.

ಬೇಸಱಕೆ ಬೇಱೊಱದುದು ಜಯ
ದಾಸೆ ಜಾಱಿತು ದಿಟ್ಟತನದ ವಿ
ಲಾಸ ಹಾಱಿತು ಸುಪ್ರತಾಪದ ಕೆಂಪು ಕಱದಾಯ್ತು।
ವಿಾಸಲೞದುದು ಮುಳಿಸು ಶೌರ್ಯದ
ವಾಸಿ ಪೈಸರವಾಯ್ತು ರಣದಾ
ವೇಶ ವಿೞದುದು ಮಗಧಪತಿಗಿದನಱದನಸುರಾರಿ ॥ ೧೩

ಹೊಱಗೆ ಬಲಿದೊಳಡಿಳ್ಳವನು ಪರ
ರಱಯದಂತಿರೆ ತಿವಿವ ಮಗಧನ
ಪರಿಯನಱದನು ದನುಜವೈರಿ ಪರೇಂಗಿತಜ್ಞನಲೆ।
ಅಱವುದರಿದೇ ಚರಾಚರಂಗಳ
ಹೊಱಗೊಳಗು ತಾನಲ್ಲದಿಲ್ಲದ
ನಱಯನೇ ಶಿವ ಯೆಂದನಾ ಜನಮೇಜಯಗೆ ನಗುತ ॥ ೧೪

ಭೀಮನನ್ನು ಕುರಿತು ಕೃಷ್ಣನ ಉಪದೇಶ.

ಎಲೆಲೆ ಪವನಜ ಮಾಗಧೇಶ್ವರ
ನಳವನಱದಾ ನಿನ್ನ ತಂದೆಯು
ಬಲುಹ ಕೊಂಡೀರಿಪ್ಪವೆ ಮುಖಿ ನೀನೆನೆ ಸಮಿಾರಣನ।
ಬಲುಮುಗಿಲು ಬಿಱುಗಾಳಿಯೊಡ್ಡಿನ
ಲಳುಕದೇ ಫಡ ಬೇಗ ಮಾಡೆನೆ
ಕಲಿವೃಕೋದರನನಿಲರೂಪಧ್ಯಾನಪರನಾದ ॥ ೧೫

ಧ್ಯಾನದಲಿ ತನ್ಮನತೆಯಾಗಲ
ನೂನಸಾಹಸಿಯಾಗೆ ಮಗಧಮ
ಹಾನರೇಂದ್ರನ ತುಡುಕಿ ಹಿಡಿದನು ಮೆಲ್ಲಗಂಟಿನಲಿ ।
ಆನಗೆಯನೇವೇಣಿ ಸುವೆನನು
ಮೂನಿಸದೆ ಬೀಸಿದನು ಭವೇಣಿಯು
ಭಾನುಮಂಡಲದಂತೆ ತಿರುಗಿದನಾಜರಾಸಂಧ ॥ ೧೦

ಭೀಮಸೇನನು ಜರಾಸಂಧನನ್ನು ಸೀಳುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಪವನಜನಧಿಕರೋಷ
ಜ್ವಾಲೆಯಲಿ ಕುಡಿಮೀಸೆ ಕೋಱಡೆ ಬೞಿಕ ರಿಪುಭಟನ ।
ಕಾಲ ಹಿಡಿದುಱೆ ಮೆಟ್ಟಿ ಸಱ್ರನೆ
ಸೀೞದನದೆರಡಾಗಿ ತನುವನು
ಘೋೞಡಲು ಮಾಗಧನ ಪರಿಜನವಧಿಕಶೋಕದಲಿ ॥ ೧೭

ಬಿಸುಟನಾಸೀಳೆರಡನತ್ತ
ತ್ರಸಮಸಾಹಸಿ ಭೀಮಸೇನನು
ನಸುನಗುತ ಬಂದೆಱಗಿದನು ಶ್ರೀ ಕೃಷ್ಣನಂಘ್ರಿಯಲಿ ।

ಜರಾಸಂಧನು ದೇಹದ ಸೀಳೆರಡು ಸೇರಲು ಯುದ್ಧಕ್ಕೆ
ಸಿದ್ಧನಾಗುವಿಕೆ.

ಉಸೆದು ಹಿಡಿದೆತ್ತಿದನು ಮುರಹರ
ನಸುರನಾಸೀಳೆರಡು ಬೆಱೆ ಱೆ
ಮಸಗಿದಾಮದದಾನೆಯಂತಿರೆ ಮಲೆತು ಬೊಬ್ಬಿಱಿದ ॥ ೧೮

ಇನ್ನು ಱಿಯಬಹುದೋ ವೃಕೋದರ
ಬೆನ್ನಲುಗಿವೆನು ಕರುಳನಕಟಾ
ನಿನ್ನ ಕಯ್ಯಲಿ ಮಡಿವೊಡಾ ಬಕನೋ ಹಿಡಿಂಬಕನೊ ।

ಎನ್ನ ಳವ ನೋಡೆನುತ ಹಿಡಿದನು
ತನ್ನ ದಂಡೆಯನೊಡ್ಡಿ ನಿಮಿಷಕೆ
ಮನ್ನಿಸದೆ ಕಲಿಭೀಮ ಸೀಳ್ದನು ಮತ್ತೆ ಮಾಗಧನ ॥ ೧೨೯

ಮತ್ತೆ ಹರಿತಂದೆರಡು ಹೋಳ್ಗಳು
ಹತ್ತಿದುವು ಮೈಮುಖದ ನಿಂದಿ
ದೊತ್ತರಿಸಿ ದಂಡೆಯಲಿ ಮಂಡಿಸಿ ತಿವಿದನನಿಲಜನ ।
ಎತ್ತಿದದುಭುತಕೋಪದಲಿ ಹಿಡಿ
ದೊತ್ತಿ ಸೀಳಲು ಹೋಳು ನಿಮಿಷಕೆ
ಹತ್ತಿ ಮೂದಲಿಸುತ್ತ ಬರುತಿರೆ ಭೀಮ ಬೆಱಗಾದ ॥ ೧೩೦

ಹೇಳುವರು ರಘುಜನ ದಶಾಸ್ಯನ
ಕಾಳಗದ ಸಿರವರಿದ ಕೊರಳಿನ
ಲಾಳದಲಿ ತಲೆ ಮೂಡಿದುದು ತಾನೆಂಬುದೇನರಿದೆ ।
ಸೀಳಿ ಬಿಸುಡಲಿಕವಯವದ ಸವೆ
ಹೋಳು ಸಂಧಿಸಿತಮಮ ಕದನಕ
ರಾಳಭೈರವನಿವನೆನುತ ಕಲಿಭೀಮ ಮಾಱಾಂತ ॥ ೧೩೧

ಎದ್ದು ಕಡುಗೋಪದಲಿ ಮಾಗಧ
ನುದ್ದರುಟುತನದಿಂದನನಿಲಜ
ಗೆದ್ದು ಹೋಗದಿರೆನುತ ಮೇಲ್ವಾಯ್ದನು ವೃಕೋದರನ ।
ಹದ್ದಿಗಿದಿರಾದಹಿಂಗೆ ಜಯವದು
ಹೊದ್ದುವುದೆ ರಣಮುಖದಿ ಭೀಮನ
ಗೆದ್ದು ಬದುಕಿದರುಂಟೆ ಧರಣೀಪಾಲ ಕೇಳೆಂದ ॥ ೧೩೨

ತಿವಿದನುರವಣೆಯಿಂದ ಭೀಮನ
ಪವನಜನು ಮಾಗಧನನೆಱಗಿದ

ಸವಡಿಸಿಡಿಲುಗಳಂತೆ ಯಿಬ್ಬರ ಮುಷ್ಟಿಯುಬ್ಬರಕೆ |
ಅವನಿ ನಡುಗಿತು ಮೇಲೆ ನೋಡುವ
ದಿವಿಜರುಱೆ ಹೆದಱಿದರು ರೂಢಿಯು
ಬವರವನು ನಾ ಕಾಣೆನಮರಾಸುರರ ಯುದ್ಧದಲಿ ॥ ೧೩೩

ಕಾದಿದರು ಬಿಡದೊಬ್ಬರೊಬ್ಬರೊ
ಳೀದುರಾಗ್ರಹದಿಂದ ಸುಭಟರು
ಮೇದಿನಿಯೊಳದಿರಿಲ್ಲ ಪಡಿಗಟ್ಟುವರೆ ಪಟುಭಟರು |
ಆದಿಯುಗದ ಹಿರಣ್ಯಕಾಕ್ಷನ
ನಾದಿಸೂಕರ ಸೀಳಿ ಬಿಸುಟವೊ
ಲೀದುರಾತ್ಮನ ಮುಟ್ಟಿ ಸೆಳ್ದನೆ ಸೀಳ್ದನಾಭೀಮ ॥ ೧೩೪

ಕಾಲ ಹಿಡಿದಪ್ಪಳಿಸೆ ದಿಕ್ಕರಿ
ಘೋಳಿಡಲು ದೆಸೆದೆಸೆಗೆ ಬಿಸುಟನು
ಮೇಳವಿಸಿ ಸೀಳೆರಡು ಬಂದಿದಿರಾಗಿ ಬೊಬ್ಬಿಡಲು |
ಬಾಳು ಧರ್ಮಜ ಯೆನುತಲಾನೆಯು
ಮೇಲುವಾಯ್ದ ಮೃಗೇಂದ್ರನಂತಿರೆ
ಮೇಲಣಮರರು ನಲಿಯುಲಪ್ಪಳಿಸಿದನು ಕಲಿಭೀಮ ॥ ೧೩೫

ಫಡ ಫಡೆಲವೋ ಭೀಮಸೇನನೆ
ಮೃಡನ ವರ ಹಿಂಗುವುದೆ ಮಿಗೆ ತ
ನ್ನೊಡೆಯು ಮುನಿಪನ ಕರುಣ ಹಿರಿದುಂಟೆನುತಲಸುರಪತಿ |
ಅಡಿಗಡಿಗೆ ತಲೆಯೊತ್ತಿ ಕಾದಿದ
ನೊಡನೊಡನೆ ಕಲಿಭೀಮ ಸೀಳಲು
ಬಿಡದೆ ಸಂಧಿಸೆ ಕಾದಿದನು ಹದಿನೆಂಟು ಸೂಳಿನಲಿ ॥ ೧೩೬

ಕಾದಿದರೆ ಮುರವೈರಿ ಮೃಡ ಕೊಂ
ಡಾಡಿದನು ವರವವಗೆ ಘಟಿಸಿತು

ರೂಢಿಗಚ್ಚರಿ ಯೆನುತ ನಸುನಗುತನಿಲನಂದನನ |
ನೋಡಿ ಮಿಗೆ ಕಣ್ಸನ್ನೆಯಲಿ ಕಂಸ
ಕೋಡಿಯಿಲ್ಲದೆ ದನುಜನುರವನು
ಕೂಡೆ ಪಿಡಿದೊತ್ತಿದನು ಬದಿಯಲು ನುಗ್ಗುನುಸಿಯಾಗೆ ॥ ೧೩೭

ಬರಸೆಳೆದು ಕರದಿಂದ ಮಾಗಧ
ನೆರಡು ಕಾಲನು ಹಿಡಿದು ಸೀಳಿಯೆ
ಧರೆಗೆ ಬಿಸುಟನು ಸಂಧಿಸುವುವಾಸೀಳು ತತ್‌ಕ್ಷಣಕೆ |
ಮರಳಿ ಪವನಜ ಹಿಡಿದು ಸೀಳುಗ
ಳಿರದೆ ಮಗುಳವು ಸಂಧಿಸಿದುವೀ
ಪರಿ ಹಲವುಸೂಳಿನಲಿ ಭೀಮನೊಳೊದಗಿದನು ಮಗಧ ॥ ೧೩೮

ಕೃಷ್ಣನ ಅಪ್ಪಣೆಪ್ರಕಾರ ಜರಾಸಂಧನನ್ನು ಸೀಳುವಿಕೆ.

ಮುರಮಥನನದನರಿದು ನಿಜ
ಕರವೆರಡಪಲ್ಲಟವಾಗಿ ಸಂಧಿಸ
ಲರಿವಿದಾರಣಭೀಮ ನೋಡುತ ಮರಳಿ ಮಾಗಧನ |
ಎರಡುಸೀಳನು ಮಾಡಿ ಹೊಯ್ದು
ಬರಿಸಿ ಪಲ್ಲಟವಾಗಿ ಸಂಧಿಸಿ
ತಿರುಗಿಸಿದನೇನೆಂಬೆನುನ್ನತಬಾಹುವಿಕ್ರಮವ [1] ॥ ೧೩೯

ತಿರುಹಿದನು ನೂಱೆಂಟುಸೂಳಿನು
ಧರೆಯೊಳಪ್ಪಳಿಸಿದನು ಸೀಳಿದ
ನರಿಭಟನ ಸೀಳೆರಡು ಕರದಲಿ ಹಿಡಿದು ಕಲಿಭೀಮ |
ಹರಿಯ ಮೊಗವನು ನೋಡೆ ಭಾಪುರೆ
ಮರುತನಂದನ ಯೆನುತ ಹೊಗಳಿಯೆ
ಮುರಮಥನ ಬೆರಳೆರಡ ತಲೆಕೆಳಗಾಗಿ ಸಂಧಿಸಿದ ॥ ೧೪೦

---

1 ಸತ್ವದಲಿ, ಚ.

ಹಿರಿಸಿದನು ಧರಣಿಯಲಿ ಕಾಲಿನ
ಲೊರಸಿದನು ನೋಟಕರ ಧರಣೀ
ಸುರಜನದ ಪರಿಜನದ ಹಾ ಹಾ ರವದ ರಹಿ ಮಸಗೆ ।
ತೆರಳತಲ್ಲಿಯದಲ್ಲಿ ಮಾಗಧ
ನರಸಿಯರು ಬಿಡುಮುಡಿಯ ಜ
ಠರದ ಕರದ ಬಿಱುಹೊಯ್ಲಿನಲಿ ಹೊಱವಂಟರು ನಿಜಾಲಯವ ॥

ಆಗ ಸರ್ವರೂ ಭಯದಿಂದೋಡುತ್ತಿರಲು ಅಂಜದಿರಿ ಯೆಂದು
ಶ್ರೀಕೃಷ್ಣನು ಹೇಳುವಿಕೆ.

ಮನೆಮನೆಯ ಕದವಿಕ್ಕಿದುವು ನೃಪ
ವನಿತೆಯರು ಹೊಱವಂಟರಲ್ಲಿಯ
ದನುಜರಡಗಿದರದ್ರಿಗುಹೆಯಲಿ ಬೇಹಬೇಹವರು ।
ಜನದ ಕೋಲಾಹಲವನಾತನ
ತನುಜರೋಟವನವನ ಸತಿಯರ
ನಿನದವನು ಕಂಡಸುರರಿಪು ಸಾಱಿದನು ಕೈನೆಗಹಿ ॥ ೧೪೦

ಅಂಜದಿರಿ ಪುರಜನವು ವನಿತೆಯ
ರಂಜದಿರಿ ಮಾಗಧನ ಪರಿಜನ
ವಂಜದಿರಿ ಸಕಲಪ್ರಧಾನಪಸಾಯ್ತ ಸಂದೋಹ ।
ಅಂಜದಿರಿ ಜರೆ ಯುವನ ಮಗನನು
ಭಂಜಿಸುವುದಿಲ್ಲಕಟ ಭೀಮಧ
ನಂಜಯರು ಕೊಟ್ಟಭಯವೆಂದನು ಜನಕೆ [1] ಮುರವೈರಿ ॥ ೧೪೧

ಮುಱಿದು ಕೆಡಹಿದರರಿಯನಲ್ಲಿಯ
ಸೆಱೆಯ ಮನೆಗಳ ಹೊಕ್ಕು ರಾಯರ
ಸೆಱೆಗಳನು ಬಿಡಿಸಿದರು ನಾನಾದ್ವೀಪಪಾಲಕರ ।

---

1 ನಗುತ,

ಬಂಧನದಲ್ಲಿದ್ದ ರಾಜರನ್ನು ಬಿಡಿಸುವಿಕೆ.

ಮೆಱೆವ ಮಣಿಗಣರಶ್ಮಿವಳಯದ
ಮಿಱುಪರಥವನು ಕೊಂಡು ನಗರದ
ಹೊಱಗೆ ಬಿಜಯಂಗೈದು [1] ಹೊಕ್ಕರು ತಮ್ಮ ಪಾಳೆಯವ [2] ॥ ೧೪೪

ಆನೃಪರು ಅಪ್ಪಣೆಯನ್ನು ನಿರೀಕ್ಷಿಸುವಿಕೆ.

ಪೌರಜನ ಕಾಣಿಕೆಗಳಲಿ ಕಂ
ಸಾರಿಭೀಮಾರ್ಜುನರ ಕಂಡುದು
ಧಾರುಣೀಪಾಲಕರು ಬಂದರು ಬೆನ್ನಲಿವರುಗಳ ।
ಘೋರವಡಗಿದುದೆಂದು [3] ಕಾರಾ
ಗಾರಬಂಧವಿಮುಕ್ತವಾಯ್ತುಪ
ಕಾರವೆಮ್ಮಿಂದಾವುದೆಂದರು ನೃಪರು ಕೈಮುಗಿದು ॥ ೧೪೫

ನೀವು ರಾಜಸೂಯಸಮಯದಲ್ಲಿ ಬನ್ನಿರೆಂದು ಕೃಷ್ಣನ ಆಪ್ಪಣೆ.

ನವೆದಿರತಿದುಃಖದಲಿ ಬಿಡುಗಡೆ
ಪವನಸುತನಿಂದಾಯ್ತು ನಿಜದೇ
ಶವನು ಹೊಗುವುದು ಪೌರಜನಪರಿಜನವ ಸಲಹುವುದು ।
ಎವಗೆ ಮಾಱುಪಕಾರ ಬೇಱೆ
ಲ್ಲವನಿಪಾಲನ ರಾಜಸೂಯಕೆ
ನಿವನಿವಗೆ ಮುಂಕೊಂಡು ಬಹುದೆಂದಸುರರಿಪು ನುಡಿದ [4] ॥ ೧೪೬

ಸಪರಿವಾರನಾಗಿ ಸಹದೇವನು ಭೀಮಾರ್ಜುನರನ್ನು ವಂದಿಸುವಿಕೆ.

ನಗರಜನಮಂತ್ರಿಪ್ರಧಾನಾ
ದಿಗಳು ಸಹಿತಕುಮಾರನೃತಂ
ದಗಧರನ ಪದಕೆಱಗಿದನು ಭೀಮಾರ್ಜುನಾಂಘ್ರಿಯಲಿ ।

---

1 ಹೊಱವಳಯದಲಿ ಬಂದು, ಚ. 2 ಮೋಹರವ, ಡ.

3 ದೆಮ್ಮ, ಚ 4 ನುಮುರಾಂತಕನು, ಚ.

ಮಗನೆ ತಂದೆಯು ಮಾರ್ಗದಲಿ ನಂ
ಬುಗೆಯೊ ಕರುಣಾವೀಕ್ಷಣದ ನಂ
ಬುಗೆಯೊ ಚಿತ್ತೈಸೆಂದರಾಮಂತ್ರಿಗಳು ಕೈಮುಗಿದು ॥ ೧೪೭

ಜರಾಸಂಧನ ಸಂಸ್ಕಾರ.

ಶವವ ಸಂಸ್ಕರಿಸುವುದು ಮಾಗಧ
ನವನಿಯಲಿ ಸಹದೇವಗಭಿಷೇ
ಕವನು ಮಾಡಿಸಿದಲ್ಲದೆತ್ತಲು ಮುಖವುದಿಲ್ಲೆಂದು ।
ಅವರಿಗಭಯವನಿತ್ತು ಪರಿವಾ
ರವನು ಕಳುಹಿದನಿತ್ತಲಾತನ
ಯುವತಿಯರು ಬೇಡವರು ವಹ್ನಿಯ ಪಡೆದು ಹೊರಳಿದರು ॥ ೧೪೮

ಆವನ ಸಂಸ್ಕಾರದಲಿ ನಾರೀ
ನಿವಹ ಸಹಗತವಾಯ್ತು ವೈದಿಕ
ವಿವಿಧವಿಧಿಯಲಿ ಮಾಡಿದರು ಶಾವಕ್ರಿಯಾದಿಗಳ ।
ಅವನ ಮಗ ಸಹದೇವನಾತಂ
ಗವನಿಯಲಿ ಪಟ್ಟಾಭಿಷೇಕೋ
ತ್ಸವವ ಮಾಡಿಸಿ ಕೊಟ್ಟನಭಯವನಾಪರಿಗ್ರಹಕೆ ॥ ೧೪೯

ಸಹದೇವನಿಗೆ ರಾಜ್ಯವನ್ನು ಕೊಡುವಿಕೆ.

ತೇರುಗಳ ತೇಜಿಗಳ ನಾಭಂ
ಡಾರವನು ಗಜಘಟೆಸಹಿತ ವಿ
ಸ್ತಾರವಿಭವವನೊಪ್ಪುಗೊಂಡರು ಮಗಧನಂದನನ ।
ಧಾರುಣಿಯನವಗಿತ್ತು ಸಕಲಮ
ಹೀರಮಣರನು ಕಳುಹಿ ಬಂದನು
ವೀರನಾರಾಯಣನು ಶಕ್ರಪ್ರಸ್ಥಪುರವರಕೆ ॥ ೧೫೦

ಎರಡನೆಯ ಸಂಧಿ ಮುಗಿದುದು.

## ಮೂರನೆಯ ಸಂಧಿ.

ಸೂಚನೆ

ಭೂಪತಿಯು ನೇಮದಲಿ ಜಂಬೂ
ದ್ವೀಪನವಖಂಡದಲಿ ಸಕಲವು
ಹೀಪತಿಗಳನು ಗೆಲಿದು ಕಪ್ಪವ ತಂದನಾಪಾರ್ಥ ||

ಅರ್ಜುನನ ದಿಗ್ವಿಜಯ.

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡವಪುರಿಗೆ ಲಕ್ಷ್ಮೀ
ಲೋಲ ಬಿಜಯಂಗೈದು ಭೀಮಾರ್ಜುನರ ಮೇಳವದಲಿ |
ಬಾಲೆಯರ ಕಡೆಗಣ್ಣ ಮಿಂಚಿನ
ಮಾಲೆಗಳ ಲಾಜಾಭಿವರ್ಷದ
ಲಾಲನೆಯ ರಚನೆಯಲಿ ಹೊಕ್ಕನು ರಾಜಮಂದಿರವ || ೧

ಕಂಡು ಕೃಷ್ಣನನಿವರ ಕಾಣಿಸಿ
* ಕೊಂಡು ಸುಕ್ಷೇಮಂಗಳನು ಬೆಸ
ಗೊಂಡು ಕುಳ್ಳಿರಲಾಪ್ರಯಾಸಂಗಳಲಿ ಫಲವೇನು * |
ಕಂಡೆವೈ ನಿನ್ನಮಳ ಕರುಣಾ
ಖಂಡಜಲಧಿಯ ಭಕ್ತಜನಕಾ
ಖಂಡಲದ್ರುಮವೆಂದು ತಕ್ಕೈಸಿದನು ಹರಿಪದವ || ೨

ಕೃಷ್ಣನು ಯುಧಿಷ್ಠಿರನಿಗೆ ಮಾಗಧಪುರಪ್ರವೇಶಾದಿಗಳನ್ನು ಹೇಳುವಿಕೆ.

ನಡೆದ ಪರಿಯನು ರಿಪುಪುರವನವ
ಗಡಿಸಿ ಹೊಕ್ಕಂದವನು ಕೋಟೆಯ [1]
ನಡೆದು ಮಗಧನ ತೊಡಚಿ [2] ಭೀಮನ ಕಾದಿಸಿದ ಪರಿಯಾ |

---

* ಕೊಂಡನರಸು ಕ್ಷೇಮಕುಶಲವ
ಕಂಡು ಬೆಸಗೊಳಲೇಕೆ ಬಹುಮಾತಿನಲಿ ಫಲವೇನು, ಚ. *

1 ಮಗಧನ, ಚ.      2 ತುಡುಕಿ ತೋಟಿಯ ಮಾಡಿ, ಚ.

ಬಿಡದೆ ಹಗಲಿರುಳೊದಗಿ ವೈರಿಯ
ಕಡೆಯ ಕಾಣಿಸಿ ನೃಪರ ಸೆಱೆಗಳ
ಬಿಡಿಸಿ ಬಂದಂದವನು ಹರಿ ವಿಸ್ತರಿಸಿದನು ನೃಪಗೆ ॥ ೩

ಎಲೆ ಮಹೀಪತಿ ನಿನ್ನ ಯಾಗ
ಸ್ಥಳಕೆ ಬಾಧಕರಿಲ್ಲ ಬನದಲಿ
ಹುಲಿ ಯಿರಲು ಗೋಧನಕುಲಕೆ ಯವಸಾಂಬು ಗೋಚರವೆ ।
ನೆಲನ ಗರುವರ ಗೊಂದಣವನಂ
ದಲೆವನಖಿಳದ್ವೀಪಪತಿಗಳ
ನೆಳಲ ಸೈರಿಸನಳಿದನಿನ್ನೇನರಿದು ನಿನಗೆಂದ ॥ ೪

ಯಾಗಾರಂಭಕ್ಕೋಸುಗ ಕೃಷ್ಣನ ಅಪ್ಪಣೆ.

ರಚಿಸು ಯಜ್ಞಾರಂಭವನು ನೃಪ
ನಿಚಯವನು ಧೌಮ್ಯಾದ್ಯರನು ಬರಿ
ಸುಚಿತವಚನದಲೆಮ್ಮ ಕರೆಸಿದೊಡಾಕ್ಷಣಕೆ ಬಹೆವು ।
ಸಚಿವರಾವೆಡೆ ಕಳುಹು ಬದರಿಯ
ರುಚಿರಮುನಿಪನ ಕರೆಸು ನಿನ್ನೀ
ರಚನೆ ನಿಷ್ಪ್ರತ್ಯೂಹವೆಂದನು ದಾನವಧ್ವಂಸಿ ॥ ೫

ಶ್ರೀಕೃಷ್ಣನ ದ್ವಾರಕಾಗಮನ.

ಎಂದು ಕಳುಹಿಸಿಕೊಂಡು ದ್ವಾರಕೆ
ಗಿಂದಿರಾಪತಿ ಮಾಗಧನ ರಥ
ದಿಂದ ಬಿಜಯಂಗೈದನನಿಬರು ಕಳುಹಿ ಮರಳಿದರು ।

ಯುಧಿಷ್ಠಿರನು ವೇದವ್ಯಾಸರೊಡನೆ ಮಾಡಿದ ಯೋಚನೆ.

ಬಂದ ವೇದವ್ಯಾಸಧೌಮ್ಯರ
ನಂದು ಕರೆಸಿ ಯುಧಿಷ್ಠಿರನು ನಿಜ
ಮಂದಿರದೊಳೊಪ್ಪಿದನು ಪರಿಮಿತಜನಸಮೂಹದಲಿ ॥ ೬

ಧರ್ಮರಾಯನ ಚಿಂತೆ.

ಅಕಟ ನಾರದನೇಕೆ ಯಾಗ
ಪ್ರಕಟವೆನು ಮಾಡಿದನೊ ನಮಗೀ
ಸಕಲಧರಣೀಕ್ಷತ್ರವರ್ಗದ ವಿಜಯ ಕಿಱುಕುಳವೇ ।
ವಿಕಟಜಂಬೂದ್ವೀಪಪರಿಪಾ
ಲಕರು ನಮ್ಮನಿಬರಿಗೆ ಸದರವೆ
ಸುಕರವೇ ವರರಾಜಸೂಯವೆನುತ್ತ ಬಿಸುಸುಯ್ದ[1] ॥ ೭

ಮಣಿವರಲ್ಲರಸುಗಳು ಮಾಡದೆ
ಮಣಿದೆವಾದೊಡ ಕೀರ್ತಿಕಾಮಿನಿ
ಕುಣಿವಳೈ ತ್ರೈಜಗದ ಜಿಹ್ವಾರಂಗಮಧ್ಯದಲಿ ।
ಬಣಗುಗಳು ನಾವೆಂದು ನಾಕದ
ಗಣಿಕೆಯರು ನಗುವರು ಸುಯೋಧನ
ನಣಕವಾಡುವೊಡಾಯ್ತು ತೆಱನೆಂದರಸ ಬಿಸುಸುಯ್ದ ॥ ೮

ಅರ್ಜುನನು ಧೈರ್ಯವನ್ನು ಹುಟ್ಟಿಸುವಿಕೆ.

ಎನಲು ಧಿಮ್ಮನೆ ನಿಂದು ಭುಗಿಲೆಂ
ದನು ಕಿರೀಟಿ ವೃಥಾಭಿಯೋಗದ
ಮನಕೆನಗೆ ಮಾರಾಂಕವಾಯ್ತೇ ಶಿವ ಮಹಾದೇವ ।
ನಿನಗಕೀರ್ತಿವಧೂಟಿ ಕುಣಿವಳ
ಜನದ ಜಿಹ್ವಾರಂಗದಲಿ ಹಾ
ಯೆನುತ ತಲೆದೂಗಿದನು ಘನಶೌರ್ಯಾನುಭಾವದಲಿ ॥ ೯

ಮಣಿಯರೇ ಮನ್ನೆಯರು ನಾಕದ
ಗಣಿಕೆಯರು ನಗುವರೆ ಸುಯೋಧನ
ನಣಕವಾಡುವನೇ ಶಿವಾ ತಪ್ಪೇನು ತಪ್ಪೇನು ।

1 ಚಿಂತಿಸಿದ,

ಕಣೆಗಳವು ನಾಳನಲಿ ಕಬ್ಬಿನ
ಗಣಿಕೆಗಳು ಗಾಂಡೀವವಿದು ನಿ
ಗ್ರ್ಗುಣವೊ ತಾನರ್ಜುನವಹೀರುಹವೆಂದನಾಪಾರ್ಥ ॥ ೧೦

ಸಕಲಜಂಬೂದ್ವೀಪಪರಿಪಾ
ಲಕರ ಭಂಡಾರಾರ್ಥಕಿದೆ ಸು
ಪ್ರಕಟವೆಂದುಂಗುರುವ ಕೊಟ್ಟನು ನೃಪನ ಹಸ್ತದಲಿ ।
ಸುಕರದುಷ್ಕರವೆಂಬ ಚಿಂತಾ
ವಿಕಳತೆಗೆ ನೀ ಪಾತ್ರನೇ ಸಾ
ಧಕರನೇ ಸಂತವಿಸು [1] ತಾ ವೀಳೆಯವನೆನಗೆಂದ ॥ ೧೧

ವಿಜಯಯಾತ್ರೆಗೋಸುಗ ಭೀಮಾದಿಗಳನ್ನು ವ್ಯಾಸರು ಕಳುಹಿಸಿದುದು.

ಪೂತು ಫಲುಗುಣ ನಿನ್ನ ಕುಲಕಭಿ
ಜಾತಶೌರ್ಯಕೆ ಗರುವಿಕೆಗೆ ಸರಿ
ಮಾತನಾಡಿದೆ ಸಲುವುದಿದು ನಿನಗೆಂದು ಕೊಂಡಾಡಿ ।
ಈತನುತ್ತರದೆಸೆಗೆ ಭೀಮನು
ಶಾತಮನ್ಯುವ ದೆಸೆಗೆ ಯಮಳರ
ಭೀತರಿದ್ದೆಸೆಗೆಂದು ವೇದವ್ಯಾಸ ನೇಮಿಸಿದ ॥ ೧೨

ನೆರಹಿ ಬಲವನು ನಾಲ್ಕು ದಿಕ್ಕಿಗೆ
ಪರುಠವಿಸಿದರು ಫಲುಗುಣನನು
ತ್ತರಕೆ ಮೂಡಲು ಪವನಸುತ ದಕ್ಷಿಣಕೆ ಸಹದೇವ ।
ವರುಣದಿಕ್ಕಿಗೆ ನಕುಲನೀನಾ
ಲ್ವರಿಗೆ ಕೊಟ್ಟನು ವೀಳೆಯವ
ಹಿರಿಯರರಸಿ ತಂದಳು ತಳಿಗೆದಂಬುಲಮಂಗಳಾರತಿಯ ॥ ೧೩

---

[1] ಸಂಹರಿಪೆ, ಚ.

ಪರಮಲಗ್ನದೊಳಂದು ಕೇಂದ್ರದೊ
ಳಿರಲು ಗುರುಭಾರ್ಗವರು ಲಗ್ನದೊ
ಳಿರೆ ಶುಭಗ್ರಹದೃಷ್ಟಿ ಸಕಳೈಕಾದಶಸ್ಥಿತಿಯ ।
ಕರಣತಿಥಿನಕ್ಷತ್ರವಾರೋ
ತ್ಕರದಲಭಿಮತಸಿದ್ಧಿಯೋಗದೊ
ಳರಸನನುಜರು ದಿಗ್ವಿಜಯಕನುವಾದರೊಗ್ಗಿನಲಿ ॥ ೧೪

ಅರ್ಜುನನ ವಿಜಯಯಾತ್ರೆ.

ಅರಸ ವೇದವ್ಯಾಸಧೌಮ್ಯಾ
ದ್ಯರಿಗೆ ಬಲವಂದೆಱಗಿ ಕುಂತಿಯ
ಚರಣಧೂಳಿಯ ಕೊಂಡು ವಿಪ್ರವ್ರಜಕೆ ಕೈಮುಗಿದು ।
ಅರಸಿಯರು ದೂರ್ವಾಕ್ಷತೆಯ ದಧಿ
ವಿರಚಿತದ ಮಾಂಗಲ್ಯವೆನು ಮಿಗೆ
ಧರಿಸಿ ಬಹುವಿಧವಾದ್ಯದಲಿ ಹೊಱವಂಟರರಮನೆಯ ॥ ೧೫

ಸಾಲ್ವದೇಶದ ವಿಜಯ.

ಅರಸ ಕೇಳ್ಮೊದಲಲರ್ಜುನ
ಚರಿತವನು ವಿಸ್ತರದೊಳುಸುರುವೆ
ನುರುಪರಾಕ್ರಮಿ ಸದೆದು ಬಿಟ್ಟನು ಸಾಲ್ವದೇಶದಲಿ ।
ಪುರಕೆ ದೂತರ ಕಳುಹಲವನಿಪ
ನುರವಣೆಗೆ ಮನವಳುಕಿ ಕೊಟ್ಟನು
ತುರಗಗಜರಥಧನವಿಳಾಸಿನೀಜನವನುಚಿತದಲಿ ॥ ೧೬

ಕಟದೇವನ ಪರಾಜಯ.

ಅವನ ಕಾಣಿಸಿ ಕೊಂಡು ರಾಜ್ಯದೊ
ಳವನ ನಿಲಿಸಿ ತದೀಯಸೇನಾ
ನಿವಹಸಹಿತಲ್ಲಿಂದ ನಡೆದನು ಮುಂದೆ ಪಥದಲಿ ।

ಅವನಿಪತಿ ಕಟದೇವನೆಂಬನ
ನವಗಡಿಸಿ ಸರ್ವಸ್ವವನು ಕೊಂ
ಡವನ ಬಲಸಹಿತಾ ದ್ಯುಮಂತನ ರಣದೊಳೋಡಿಸಿದ [1] ॥ ೧೭

ಪ್ರತಿವಿಂಧ್ಯಾದಿಗಳನ್ನು ಗೆಲ್ಲುವಿಕೆ.

ಆತನನು ಗೆಲಿದನು ಸುನಾಭನ
ನೀತಿಗೆಡಿಸಿ ತದೀಯಸೇನಾ
ವ್ರಾತಸಹಿತಲ್ಲಿಂದ ಪ್ರತಿವಿಂಧ್ಯಕನನಪ್ಪಳಿಸಿ ।
ಆತನರ್ಥವ ಕೊಂಡು ತತ್ಪ್ರಾ
ಗ್ಜ್ಯೋತಿಷಕೆ ಥಾಟಿಟ್ಟನಲ್ಲಿ ಮ
ಹಾತಿಬಲನವನೊಡನೆ ಬಲುಹಾಯ್ತರ್ಜುನನ ಸಮರ ॥ ೧೮

ಅರ್ಜುನ ಭಗದತ್ತರ ಯುದ್ಧ.

ಚೀನಕರ ಬೋಟಕಿ [2] ಕಿರಾತರ
ನೂನಬಲಸಹಿತೀಮಹೀಸುತ
ಸೇನನೆಂಬನು ಕಾದಿದನು ಭಗದತ್ತನತಿಬಲನು ।
ಈನರನ ಶರಜಾಲವಿದು ಕ
ಲ್ಪಾನಲನ ಕಾಲಾಟವಿದಱೊಡ
ನಾನಲಿಂದ್ರಾದ್ಯರಿಗೆ ಸುಲಭವೆ ರಾಯ ಕೇಳೆಂದ ॥ ೧೯

ಮುಱಿಯದಾಬಲವಾತನುಱುಬಿಗೆ
ಹರಿಯದೀಬಲವುಭಯಬಲದಲಿ
ಕುಱಿದಱಿಯ ಕುಮ್ಮಱಿಯ ಕಡಿತಕೆ ಕಾಣೆನವಧಿಗಳ ।
ಅಱಿಯದೀತನ ಮರ್ಗವೀಬಲ
ದಿಱಿವುಗಳ ಬೇಳಂಬವೆನು ಬೇ
ಸರದೆ ಕಾದಿದನೆಂಟುದಿನ ಭಗದತ್ತನೀತನಲಿ ॥ ೨೦

---

[1] ದ್ಯುಮತ್ಸೇನಕನ ಝೋಂಪಿಸಿದ, ಚ. [2] ಭೋಟಕ, ಕ. ಖ.

ಭಗದತ್ತನು ಅರ್ಜುನನೆಂದು ತಿಳಿದು ಸನ್ಮಾನಿಸುವಿಕೆ.

ಆವನೈ ನೀನಧಿಕನತಿಸಂ
ಭಾವಿತನು ಹೇಳೆನೆ ಯುಧಿಷ್ಠಿರ
ದೇವನನುಜ ಕಣಾ ಧನಂಜಯನೆನಲು ಮಿಗೆ ಪುಳಕಿ ।
ನಾವು ನಿಮ್ಮಯ್ಯಂಗೆ ಸಖರಿಂ
ದಾವು ನಿನ್ನವರೇನು ಬೇಹುದು
ನೀವೆಮಗೆ ಕಡುವನ್ಯರೆನುತಲೆ ಕಂಡನರ್ಜುನನ ॥ ೨೧

ಆದರಿನ್ನೇನಮರ [1] ಪತಿಯೋ
ಪಾದಿ ನೀವೆಮ್ಮಣ್ಣದೇವನ
ಮೇದಿನಿಯ ಸಾಮ್ರಾಜ್ಯಪದವಿಯ ರಾಜಸೂಯವನು ।
ಆದರಿಸಿ ಸಾಕೆನಲು ಗಜಹಯ
ವಾದಿಯಾದ ಸಮಸ್ತವಸ್ತುವ
ನೈದೆ ಕೊಟ್ಟನು ಫಲುಗುಣಂಗೆ ಸುಮಿತ್ರಭಾವದಲಿ ॥ ೨೨

ಭಗದತ್ತನಿಂದ ಅರ್ಜುನನಿಗೆ ಆದ ಮರ್ಯಾದೆ.

ಬಂದುತಿಂಗಳು ಹಲವು ಮನ್ನಣೆ
ಯಿಂದ ಮನ್ನಿಸಿ ತನ್ನ ಸೇನಾ
ವೃಂದವನು ಕಳುಹಿದನು ಬಳಿಯಲಿ ನರನ ಸತ್ಕರಿಸಿ [2] ।
ಮುಂದೆ ನಡೆದನು ರಾಮಗಿರಿಯಲಿ
ನಿಂದು ಕಪ್ಪವ ಕೊಂಡು ತೆರಳಿಯೆ
ಮುಂದಣೀಶಾನ್ಯದಲಿ ಹೊಕ್ಕನು ಭವನ ಪರ್ವತವ ॥ ೨೩

ಪರ್ವತವಾಸಿಗಳನ್ನು ಜಯಿಸುವಿಕೆ.

ಆಗಿರೀಂದ್ರನಿವಾಸಿಗಳ ಸರಿ
ಭಾಗಧನವನು ಕೊಂಡು ಬಿಳಿಕ ಮ
ಹಾಗಜಾಶ್ವವನೆಯ್ದೆ ಕೊಂಡನು ಮುಂದೆ ದಂಡೆತ್ತಿ ।

---

1 ರಮಗೆಯು ದಿವಿಜ, ಚ.

2 ಹೇಳಿದನು ಬಳಿಯಲಿ ಕಳುಹಿದನು ನರನ, ಚ.

ಆಗಲಯಾಳರ ಗಾವಿಲರ ನಿ
ರ್ಭಾಗಧೇಯರ ಮಾಡಿ ಯುತ್ತರ
ಭಾಗದಲಿ ತಿರುಗಿತ್ತು ಪಾಳೆಯವೆರಸ ಕೇಳೆಂದ ‖ ೨೪

ವನಚರರನ್ನು ಮತ್ತು ದೈತ್ಯರನ್ನು ಜಯಿಸುವಿಕೆ.

ಗಿರಿಯ ತಪ್ಪಲ ವನಚರರ ಸಂ
ಹರಿಸಿ ಮುಂದೆ ಬೃಹಂತಕನ ಕಾ
ತರಿಸಿ ಕಾಣಿಸಿಕೊಂಡು ಸೇನಾಬಿಂದುನಗರಿಯಲಿ ।
ಇರವ ಮಾಡಿ ಸುದಾಮದೈತ್ಯರ
ನುಱೆ ವಿಭಾಡಿಸಿ ಪಾರ್ವತೇಯರ
ಸಿರಿಯ ಗೊಂಡು ಕುಲಾಲಕರ ಕೌರವರ [1] ಭಂಗಿಸಿದ ‖ ೨೫

ಕಾಶ್ಮೀರಾದಿಗಳನ್ನು ಜಯಿಸುವಿಕೆ.

ಮುಂದೆ ದಸ್ಯುಗಳೇಱುವೆನು ಕ್ಷಣ
ದಿಂದ ಕಾಶ್ಮೀರಕನ ಸಾಧಿಸಿ
ಮುಂದೆ ದಶಮಂಡಲದ ಲೋಹಿತನನು ವಿಭಾಡಿಸಿದ ।
ತಂದ ಕಪ್ಪದಲಾತ್ರಿಗರ್ತರ
ನಂದು ಹದುಳಿಸಿ ಗರುವಿಕರನಾ
ಟಂದು ಕೊಂಕಣಕಾಭಿಚಾರಕರೂಪಕರ ಗೆಲಿದ ‖ ೨೬

ಸಿಂಹನಗರಿಯ ಗಮನ.

ಧಾಟಿಯಿಟ್ಟನು ರೋಚಮಾನನ
ಮೇಲೆ ಕಪ್ಪವ ಕೊಂಡು ಬಿಟ್ಟುದು
ಪಾಳಯವು ಚಿತ್ರಾಯುಧನ ವರಸಿಂಹನಗರಿಯಲಿ ।
ಮೇಲೆ ವಂಗರ ಮುಱಿದು ಭರದಿವ [2]
ರಾಳ [3] ಕರ್ಪರಹೂಣಯವನವಿ
ಶಾಲಕಾಂಭೋಜಾದಿಗಳನಪ್ಪಳಿಸಿದನು ತಿರುಗಿ ‖ ೨೭

---

[1] ಕುಲೂತರನುಪಾರವರ, ಡ. [2] ವರನ್ನೇ, ಚ. [3] ಪಾಳ, ಚ.

ಕಿರಾತಾದಿಗಳನ್ನು ಜಯಿಸುವಿಕೆ.

ಪಾರಸೀಕಕಿರಾತ [1] ಬರ್ಬರ
ಪಾರಿಯಾತ್ರರ ಮುಱಿದು ಸರ್ವವಿ
ಹಾರವನು ಮಾಡಿದನು ಮ್ಲೇಚ್ಛಸಹಸ್ರಕೋಟಿಗಳ ।
ಕ್ಷಾರಕರ ಹೂಣಕರ [2] ಡೊಕ್ಕರ
ಪಾರಕರ ಖುರಸಾಣಭೂಪರೊ
ಳಾರುಭಟೆಯಲಿ ಕಾದಿ ಕೊಂಡನು ಸಕಲವಸ್ತುಗಳ ॥ ೨೮

ಹಿಮಾಲಯದಲ್ಲಿದ್ದ ಜನರನ್ನು ಜಯಿಸುವಿಕೆ.

ಬೆದಱಿಸಿದನಾಹಿಮಗಿರಿಯ ಪಾ
ರ್ಶ್ವದ ಕಿರಾತರ ಮುಂದೆ ವಾಯು
ವ್ಯದಲಿ ಶೋಧಿಸಿ ತಿರುಗಿದನು ಹಿಮಗಿರಿಯ ಕಕ್ಷದಲಿ ।
ಹುದಿದ ನಾನಾದ್ರೋಣಿಗಳ ಮ
ಧ್ಯದ ಕಿರಾತಪುಳಿಂದನಿಚಯವ
ಸದೆದು ಹತ್ತಿದರಗ್ರಶಿಖರಕೆ ಪಾರ್ವತೀಪತನ ॥ ೨೯

ಎರಡುಸಾವಿರಯೋಜನವು ಹಿಮ
ಗಿರಿಯ ಬಹಳೋತ್ಸೇಧ ಶಿಖರಕೆ
ಸರಿಸದಲಿ ಹತ್ತಿದುದು ಪಾಳೆಯವೇನನುಸುರುವೆನು ॥
ಕರಿತುರಗವರರಥಪದಾತಿಗೆ
ಪರಿಗಣನೆ ಬೆಲ್ಲಿಯದು ಹಿಮಗಿರಿ
ಯೆರಡುಸಾವಿರದಗಲ ತೀವಿತು ಭೂಪ ಕೇಳಂದ ॥ ೩೦

ಗಿರಿಯ ಕೋಣೆಯ ಕುಹರಗುಹೆಗಳ
ಗರುವರುಂಟೆಂದಾಪುಳಿಂದರ
ನೊರಸಿ ಕಾಣಿಸಿಕೊಂಡನಲ್ಲಿಯ ಸಕಲವಸ್ತುಗಳ ।
ಗಿರಿಯನಿಳಿದುದು ನಡೆದು ಬಲ ಕಿಂ

1 ಪಠಾಳಕಬರ್ಬರ, ಜ. 2 ಹವಣಕರ, ಕ.

ಪುರುಷಖಂಡದ ಬಹಳನದಿಗಳ
ಲೆರಡು ತಡಿಯಲಿ ತಳಿತು ಬಿಟ್ಟುದು ವನವನಂಗಳಲಿ ॥ ೩

ಅದು ಗಣನೆಗೊಂಬತ್ತುಸಾವಿರ
ವದಱೊಳಿದ್ದರು ಯಕ್ಷಕಿನ್ನರ
ಸುದತಿಯರು ಕಿಂಪುರುಷರತಿರಾಗಿಗಳು ಸುಖಮಯರು ।
ಇವಱ ಘಲ್ಲಣೆಗಾನಲಾಪರೆ [1]
ಬೆದಱಿತೀಜನವೆಳಕಿ ಕಿತ್ತಿತು [2]
ಸುದತಿಯರನಾಮಂಡಲಕೆ ಯಯಿಂಟಾದವೆಸ್ತುಗಳ ॥ ೩೬

ಅಲ್ಲಿ ಕೆಲಕಡೆಗಳಲಿ ಗಿರಿಗುಹೆ
ಯಲ್ಲಿ ನೆರೆದ ಕಿರಾತವರ್ಗವ
ಚೆಲ್ಲಬಡಿದಪಹರಿಸಿದನು ಬಹುವಿಧ ಮಹಾಧನವ ।
ಮೆಲ್ಲಮೆಲ್ಲನೆ ಹೇಮಕೂಟದ
ಕಲ್ಲನಡರಿದನಾಮಹಾದ್ರಿಗ
ಳಲ್ಲಿ [3] ಹಿಮಶೈಲದ ಮಹೋನ್ನತಿ ಬಹಳವಿಸ್ತಾರ ॥ ೩೩

ಅಡರಿತೀಬಲಪಿದಱ ಬೊಬ್ಬೆಯ
ಗಡಬಡೆಗೆ ಪದಘಟ್ಟಣೆಗೆ ಹುಡಿ
ಹುಡಿಯಲಾಗಲು ಕೋಟೆ ಕೋಲಾಹಳದ ಬೊಬ್ಬೆಯಲಿ ।
ನಡೆದು ಬಿಟ್ಟುದು ಗಿರಿಯ ತುದಿಯಲಿ
ತುಡುಕಿದುದು ನಾನಾದಿಗಂತದ
ತಡಿಯನಪ್ಪಳಿತವಾದ್ಯಗಜಹಯರಥದ ನಿರ್ಘೋಷ ॥ ೩೪

ಹೇಮಕೂಟದ ಗಂಧರ್ವಾದಿಗಳನ್ನು ಜಯಿಸುವಿಕೆ.

ಹೇಮಕೂಟದ ಗಿರಿಯ ಗಂಧ
ರ್ವಾಮರರ ಝೋಂಪಿಸಿದನವರು
ದ್ದಾಮವಸ್ತುವ ಕೊಂಡನಿೞಿದನು ಬೞಿಕ ಪರ್ವತವ ।

1 ಲೇನಾ, 2 ಫುದು ತದೀಯಜನಂಗಳಿತ್ತುದು, ಕ. 3 ಳೆಲ್ಲ, ಙ.

ಆಮಹಾಹರಿವರ್ಷದಲ್ಲಿಯು
ಸೀಮೆ ಯೋಜನನವಸಹಸ್ರ ವಿ
ರಾಮವದಱೊಳಗಿಲ್ಲ ವಿವರಿಸಲಱಿಯೆ ನಾನೆಂದ ‖ ೩೫

ಉತ್ತರೋತ್ತರದೇವಭೂಮಿಗ
ಳತ್ತಣವರೀದಳನಿಚಯ ತಾ
ನೆತ್ತ ಭೂರಿಧ್ವನಿಯ ನೀಗಜಬಜವನೀಜನವ ।
ಎತ್ತಲೆಂದಱಿಯರು ವಿನೋದಕೆ
ತೆತ್ತರಲ್ಲಿಯು ಪಕ್ಷಿಮೃಗಲಸ
ದುತ್ತಮಾಂಗನೆಯರನು ಮನ್ನಿಸಿ ಕೊಂಡು ಫಲುಗುಣಗೆ ‖ ೩೬

ಎರಡುಕಡೆಯಂಬುಧಿಯ ಪಾರ್ಶ್ವದ
ದುರುಳರನು ಧಟ್ಟಿಸಿ ತದೀಯರ
ನೆರಸಿ ಬಡಗಲು ನಡೆದನಲ್ಲಿಯು ನಿಷಧಪರ್ವತಕೆ ।
ಎರಡುಸಾವಿರಯೋಜನದ ತುದಿ
ವರೆಗೆ ಹತ್ತಿತು ಬಿಟ್ಟುದಾಗಿರಿ
ಬಿರಿಯೆ ಸೂಱಯ್ಸಿದುವು ನಿಸ್ಸಾಳಕೋಟಿಗಳು ‖ ೩೭

ನಿಷಧಾಚಲವಾಸಿಗಳಾದ ದೈತ್ಯರನ್ನು ಜಯಿಸುವಿಕೆ.

ಮೇಲೆ ನಿಷಧಾಚಲದ ಸುತ್ತಲು
ಧಾಟಿ ಹರಿದುದು ದೆಸೆದೆಸೆಗೆ ದೈ
ತ್ಯಾಳಿ ಹೆಚ್ಚಿದ ದುಷ್ಟದಾನವಮಂಡಲೇಶ್ವರರ ।
ಶೈಲಶಿಖರದೊಳುಳ್ಳ ಧೊರೆಗಳ
ಕಾಳಗೊಳ್ ಬಟಿಕುತ್ತರದಿ ಕಾ
ಲಾಳು ಹೊಕ್ಕುದು ಹೊಯ್ಯು ಕಟ್ಟಿತು ಕೂಡೆ ಸೂಱಗಳ ‖ ೩೮

ಗಿರಿಯ ಶಿಖರದ ಮೇಲ್ಕಡೆಯ ನಾ
ಚರಿಸಿ ನಿಷಧಾಚಲವನಿೞಿದುದು
ನರನ ಪಾಳೆಯ ಬಿಟ್ಟುದಾಗಲಿಳಾವೃತದ ಮೇಲೆ ।

ಅರಸ ಕೇಳೊಂಬತ್ತುಸಾವಿರ
ಪರಿಗಣಿತಯೋಜನದ ನೆಲೆ ಸುರ
ಗಿರಿಯ ಸುತ್ತಣದೇಶವತಿರಮಣೀಯತರವೆಂದ ॥ ೩೯

ಜಾಣಿಗಾನುವರಿಲ್ಲ ಪಾರ್ಥನ
ಬಾಣಕಿದಿರಾರುಂಟು ವಾದ್ಯ
ಶ್ರೇಣಿ ಚಾತುರ್ಬಲದ ಘಲ್ಲಣೆಗಿಲ್ಲ ಗರ್ವಿತರು ।
ಹೂಣೆ ಹೊಕ್ಕುದು ಕನಕಶೈಲ
ದ್ರೋಣಿಗಳ ದುರ್ಬಲಸುರೌಘವ
ನಾಣೆಗಂಜಿಸಿ ಕಳದು ಕೊಂಡನು ಸಾರವಸ್ತುಗಳ ॥ ೪೦

ಗಂಧಮಾದನದ ಯಕ್ಷವಿದ್ಯಾಧರರನ್ನು ಗೆಲ್ಲುವಿಕೆ.

ಹರಿದು ಹತ್ತಿತು ಗಂಧಮಾದನ
ಗಿರಿಯ ಸುತ್ತಣ ಯಕ್ಷವಿದ್ಯಾ
ಧರರನಂಜಿಸಿ ಕೊಂಡನಲ್ಲಿಯ ಸಾರವಸ್ತುಗಳ ।

ಜಂಬೂವೃಕ್ಷದರ್ಶನ.

ಗಿರಿಯನಿಳಿದನು ಜಂಬುನೇರಿಲ
ಮರನ ಕಂಡನು ಗಗನಚುಂಬಿತ
ಮೆರಡುಸಾವಿರಯೋಜನಾಂತರದೊಳತಿವಿಳಾಸದಲಿ ॥ ೪೧

ಅದಱ ಫಲ ಹೇರಾನೆಗಳ ತೋ
ಱದಲಿಹುವು ಗಿರಿಸಾನುಶಿಲೆಗಳ
ಹೊದಱಿನಲಿ ಬಿದ್ದೊಡೆದು ಹೊಳೆಯಾದುದು ಮಹಾರಸದ ।
ಅದು ಸುಧಾಮಯವಾಯ್ತು ಜಂಬೂ
ನದಿಜಲಸ್ಪರ್ಶದಲಿ ಜಾಂಬೂ
ನದಸುವರ್ಣವೆಯಾದುದಾನದಿಯೆರಡು ತಡಿವಿಡಿದು ॥ ೪೨

ಅರಸೋದಕಪಾನವೇ ಸಂ
ಸಾರಸಾಖ್ಯದ ಸಿದ್ಧಿ ಯಿತರಾ

ಹಾರವಿಂಧನತಂಡುಲಾಗ್ನಿ ಕ್ರಮವಿಧಾನವದು ।
ನಾರಿಯರು ಸಹಿತಲ್ಲಿ ಸಿದ್ಧರು
ಚಾರಣರು ರಮಣೀಯತೀರವಿ
ಹಾರಿಗಳು ಬಹುರತ್ನದಲಿ ಮನ್ನಿಸಿದರರ್ಜುನನ ॥ ೪೩

ಜಾಂಬೂನದನದಿಯ ತೀರದಲ್ಲಿರುವಿಕೆ.

ಕೇಳಿ ಸೊಗಸಿದ ವಸ್ತುವಿಗೆ ಕ
ಣ್ಣಾಲಿ ಬಿದ್ದಿನವಾಯ್ತಲಾ ಸುರ
ಪಾಲಪದವಿದಱೊರೆಗೆ ಬಹುದೇ ತೀರವಾಸಿಗಳ ।
ಥಾಟಿದಟ್ಟಣೆಗಳನು ಮಾಣಿಸಿ
ಪಾಳಯವನುಪವನಸರೋವರ
ವೇಲೆಯಲಿ ಬಿಡಿಸಿದನು ಜಾಂಬೂನದಿಯ ತೀರದಲಿ ॥ ೪೪

ಇಳಾವೃತವರ್ಷಪ್ರವೇಶ.

ಲಲಿತದಿವ್ಯಾಭರಣರತ್ನಾ
ವಳಿಯನನುಕರಿಸಿದನು ಪಾಳೆಯ
ಸುಟಿದುದಮರಾಚಲದ ಕೇಸರಶಿಖರಗಳ ಕಳೆದು ।
ಹೊಳಹೊಳದು ಮೇರುವಿನ ಸುತ್ತಣ
ವಳಯದರ್ಧವನಾಕರಿಸಿ ಕೈ
ವಳಸಿ ಬಿಟ್ಟನು ಹೊಕ್ಕಿಳಾವೃತವರ್ಷಸೀಮೆಯಲಿ ॥ ೪೫

ಸೇನೆ ಪಡುವಲು ತಿರುಗಿ ಮರ್ಯಾ
ದಾನುಪೂರ್ವಿಯ ಗಂಧಮಾದನ
ಸಾನುವನು ಪೆಂಠಣಿಸಿ ಯಡರಿತು ಚಕೋಣಿ ಬಿಂಕದಲಿ ।
ಆನಗೇಂದ್ರವನಿೞಿದು ಪಡುವಣ
ಕಾನನಂಗಳ ಕೇತುಮಾಲದ ನ
ದಿನದಂಗಳ ಬಳಸಿ ಹೊಯ್ದುವು ಗುಡಿಗಳರ್ಜುನನ [1] ೪೬

---

1 ಕಾನನಂಗಳ ಕಳಿದು ಬಿಟ್ಟುದು ಸೇನೆ ಬಳಸಿನಲಿ, ಚ.

ಅಲ್ಲಿ ಮಹಾಧನಸಂಗ್ರಹ.

ಅಲ್ಲಿ ಸಾಗರತೀರಪರ್ಯಂ
ತಲ್ಲಿ ಮಣಿಮಯವೆಲ್ಲಿ ಗಜಹಯ
ವೆಲ್ಲಿ ಸುದತಿಯರೆಲ್ಲಿ ಬಹುಧನವೆಲ್ಲಿ ರವಣೀಯ |
ಅಲ್ಲಿಗಲ್ಲಿಗೆ ನಡೆದು ಸಾಧಿಸಿ
ಕೆಲ್ಲ ಕುಹರದ ಕೋಣೆಬಾಗಿಲ
ಳೆಲ್ಲವನು ಹೊಕ್ಕರಿಸಿ ತೆಗೆಸಿದನು ಮಹಾಧನವ || ೪೭

ಮಂದರಾದ್ರಿಯ ದರ್ಶನ.

ಎಡಗಡೆಯೊಳೊಂಬತ್ತು ಸಾವಿರ
ನಡುನೆಲನನಾಕರಿಸಿ ಮೂಡಣ
ಕಡೆಗೆ ತಿರುಗಿತು ಗಂಧಮಾದನಗಿರಿಯ ನೇಟೀಸಿದು |
ನಡೆದಿಳಾವೃತದೊಳಗೆ ಬಿಟ್ಟುದು
ಪಡೆ ಸುರಾಬ್ಧಿಯನುಳುಹಿ ಬಲದಲಿ
ನಡೆನಡೆಯೆ ದೂರದಲಿ ಕಂಡರು ಮಂದರಾಚಲವ || ೪೮

ಅಲ್ಲಿದ್ದ ರಾಜರನ್ನು ಜಯಿಸುವಿಕೆ.

ಇದುವೆ ಕಡೆಗೋಲಾಯ್ತು ಕಡೆವಂ
ದುದಧಿಯನು ತಾನಿದು ಮಹಾಗಿರಿ
ಯಿದರ ಬಿಂಕವ ನೋಡಬೇಕೆಂದರ್ಜುನನ ಸೇನೆ |
ಒದಗಿ ಹತ್ತಿತು ನಡುವಣರೆಬೆ
ಟ್ಟದಲಿ ದುರ್ಗಂಗಳಲಿ ನೃಪರಿ
ದ್ದುದು ಮಹಾಹವವಾಯ್ತು ಪಾರ್ಥನ ಜೋಡಿಯವರೊಡನೆ || ೪೯

ಇದಿರಿಹಿದರು ಜೋಡಿಯನು ಮುಂದರೆ
ನೆಲೆಯ ಭಟರವುಕಿದರು ಬಾರಿಯ
ತಲೆವರಿಗೆಗಳಲೊತ್ತಿದರು ಹೊಗಿಸಿದರು ದುರ್ಗವನು |

ಕಲುವುಟೆಯು ಕೋಳಾಹಳಕ್ಕವ
ರಳುಕದಿಱಿದರು ಸುರಗಿಯಲಿ ತೆನೆ
ವಳಯ ಹಿಡಿದರು ಹೊಯ್ದು ಕೇಶಾಕೇಶಿಯುದ್ಧದಲಿ ॥ ೫೦

ಶಕರು ಖದ್ಯೋತಪ್ರತಾಪರು
ವಿಕಳಜಂಘರು ದೀರ್ಘಮಯುವೇ
ಣಿಕರು ಪಶುಪಾಲಕಪುಳಿಂದರು ಟಂಕಣಾಹ್ವಯರು ।
ಸಕಲದಸ್ಯುಗಳ್ಳಸೆ ಸೋತುದು
ವಿಕಳಬಲವೊಪ್ಪಿಸಿತು ಸರ್ವ
ಸ್ವಕವ ಸಂಧಾನದಲಿ ನಿಂದರು ತಮ್ಮ ನಿಳಯದಲಿ ॥ ೫೧

ಶೋಧಿಸಿದನಾಗಿರಿಯನಾಚೆಯ
ಹಾದಿಯಲಿ ಹೊಱವಂಟು ಬರೆ ಮರಿ
ಯಾದೆಗಿಕ್ಕಿದ ಬೆಟ್ಟವಿದ್ದುದು ಮಾಲ್ಯವಂತಗಿರಿ ।
ಭೇದಿಸಿದನದಱೊಳಗುಹೊಱಗಿನೊ
ಳಾದ ವಸ್ತುವ ಕೊಂಡು ತಚ್ಛೈಲ
ಲೋದರವನೇಱಿಳಿದು ಭದ್ರಾಶ್ವಕ್ಕೆ ನಡೆತಂದ ॥ ೫೨

ಅದು ಮಹಾರಮಣೀಯತರವಂ
ತದಱೊಳಿದ್ದುದು ಶುದ್ಧಭೋಗಾ
ಸ್ಪದರು ರಕ್ಷೋಯಕ್ಷಗಂಧರ್ವಾಪ್ಸರೋನಿಕರ ।
ಕುದುರೆಗಜರಥಪತ್ತಿನಿರ್ಘೋ
ಷದಲಿ ಬೆಬ್ಬೆಳೆಯಾಯ್ತು ಬೇಳಂ
ಬದ ವಿಘಾತಿಗೆ ತೆತ್ತುದಗಣಿತವಾದ ವಸ್ತುಗಳ ॥ ೫೩

ದೊರಕಿತಲ್ಲಿಯಪೂರ್ವವಸ್ತು
ತ್ಕರ ಸಮುದ್ರಾನೂಪ [1] ಪರಿಯಂ
ತರ ನಡೆವನೊಂಬತ್ತುಸಾವಿರಯೋಜನಾಂತರವ ।

---

[1] ದ್ರುದ್ವೀಪ, ಚ.

ತಿರುಗಿದನು ಭದ್ರಾಶ್ವಕವನಾ
ಕರಿಸಿ ಬಡಗಲು ನಡೆವರಲ್ಲಿಯು
ಗಿರಿಯು ಕಂಡರು ಹತ್ತಿದರು ಸರಿಸದಲಿ ಬೊಬ್ಬಿಡುತ ॥ ೫೬

ನೀಲಗಿರಿಯುಗ್ರದಲಿ ಬಿಟ್ಟುದು
ಪಾಳೆಯವು ಬೊಬ್ಬೆಯಲಿ ದಿಕ್ಕಿನ
ಮೂಲೆ ಬಿರಿದುದು ಜಱಿದುವದ್ರಿಗಳೇನನುಸುಱುವೆನು ।
ಮೇಲುಮಾರ್ಗದ ಸಂದಿಗೊಂದಿಯು
ಲಾಳು ಹರಿದುದು ಸೂಱಿಗೊಂಡು ವಿ
ಶಾಲವಸ್ತುವ ತಂದರಲ್ಲಿದ್ದರಸುಗಳ ಗೆಲಿದು ॥ ೫೫

ಎರಡುಸಾವಿರವುದ್ದವದು ಮ
ತ್ತೆರಡು ಸಾವಿರದಗಲವದನಾ
ಕರಿಸಿ ರಮ್ಯಕಭೂಮಿಗಿಳಿದರು ಹೊಕ್ಕರಾನೆಲನ ।
ಅರಸ ಕೇಳಲ್ಲಲ್ಲಿ ಸುಮನೋ
ಹರದ ವಸ್ತುವ ಕೊಂಡು ನವಸಾ
ವಿರವನಗಲಕೆ ಸುತ್ತಿ ಬಂದರು ಗೆಲಿದು ಗರ್ವಿತರ ॥ ೫೬

ಅರಸ ಕೇಳಲ್ಲಿಂದ ಬಡಗಲು
ಹರಿದು ಬಿಟ್ಟರು ಹತ್ತಿದರು ಬೇ
ಸರದೆ ಕಲುವರಿಗಳಲಿ ಬಹಳಶ್ವೇತಪರ್ವತವ ।
ಗಿರಿಯ ತುದಿಗಳ ತೋಟವಲಿ ಗ
ಹ್ವರದ ಕೊಳ್ಳದ ಕೋಹಿನಲಿ ಹೊ
ಕ್ಕಿಱದು ಶೋಧಿಸಿ ಕೊಂಡರಲ್ಲಿಯು ಸಕಲವಸ್ತುಗಳ ॥ ೫೭

ಇಳಿದರಾಗಿರಿಯನು ಹಿರಣ್ಮಯ
ದೊಳಗೆ ಬಿಟ್ಟರು ಪಾಳೆಯವ ತ
ದ್ವಲಯ ಮಿಗಿಲೊಂಬತ್ತುಸಾವಿರ ಯೋಜನಾಂತರವ ।

ಬಳಸಿ ಬಂದರು ವಿಮಳಸಾಧಾ
ವಳಿಯು ನೆಲೆಯುಪ್ಪರಿಗೆಗಳ ವರ
ಲಲನೆಯರು ಕಂಡೀತನನು ಹೊಗಳಿದರು ತನುತವಗೆ ॥ ೫೮

ಈತ ಭಾರತವರುಷಪತಿಯನು
ಜಾತ ಗಡ ತತ್ಕರ್ಮಭೂಮಿಯೊ
ಳೀತನಧಿಪತಿ ಗೆಲಿದನಿತ್ತಲು ದೇವಭೂಮಿಪರ ।
ಈತ ಗೌರೀಸುತನ ಪೋಲ್ ಪುರು
ಹೂತತನುಜನ ಪೋಲು ಭುವನ
ಖ್ಯಾತನೆಂದಾಸ್ತ್ರೀಕಟಕ ಕೊಂಡಾಡಿತರ್ಜುನನ ॥ ೫೯

ತನತನಗೆ ತರುಣಿಯರು ಹೂವಿನ
ತನಿವಳೆಯ ಕರೆದರು ಕನತ್ಕಾಂ
ಚನವಿಭೂಷಣರತ್ನಚಯಪೂರಿತದ ಪೆಟ್ಟಗೆಯ ।
ವನಿತೆಯರನಾದೇಶದಲಿ ಮಾ
ಟನಿಪುದನು ಮೃಗಪಕ್ಷಿಕೃಷ್ಣಾ
ಜಿನವನಂತವನಿತ್ತು ಸತ್ಕರಿಸಿದರು ಫಲುಗುಣನ ॥ ೬೦

ಧಾರುಣೀಪತಿ ಕೇಳು ದಳ ನಡೆ
ದಾರಿ ಬಡಗಣ ಶೃಂಗಪರ್ವತ
ದೋರೆಯಲಿ ಧೊರೆಗಳನು ದಟ್ಟಿಸಿ ಸೆಳೆದು ಬಹುಧನವ ।
ಭಾರಣೆಯ ಮುಂಗುಡಿಯ ಕೊಳ್ಳಗ
ಳೋರಣಿಸಿ ತುದಿಗೇರಿ ಸಿದ್ಧರ
ಚಾರಣರ ವಿದ್ಯಾಧರರ ಮುತ್ತಿದರು ಮನ್ನಿಸದೆ ॥ ೬೧

ಅರಸು ಮೋಹರ ಹತ್ತಿತಾಗಿರಿ
ಯೆರಡುಸಾವಿರದಗಲವದರಲಿ
ತುರುಗಿ ಬಿಟ್ಟುದು ಸೇನೆ ಸೂಳೈಸಿದುವು ನಿಸ್ಸಾಳ ।

ಬಿರಿದುದಾಗಿರಿ ಕೇಳಗಣುತ್ತರ
ಕುರುಗಳೆದೆ ಜರ್ಝರಿತವಾಯ್ತು
ಬ್ಬರಕೆ ಬಡಗಣಕಡಲು ಕದಡಿತು ತಳದ ತಾಯ್ಮಳಲ ॥ ೬೨

ನೆರೆದರಲ್ಲಿಯು ನೃಪರು ದೂತರ
ಹರಿಯಬಿಟ್ಟರು ಪಾರ್ಥನಿದ್ದೆಡೆ
ಗರಸ ಚಿತ್ತೈಸವೆರು ಬಂದರು ಕಂಡರರ್ಜುನನ ।
ಗಿರಿಯನಿಂತಿಯುದಿರಿತ್ತಲುತ್ತರ
ಕುರುಗಳಿಹ ಸಂಸ್ಥಾನವಿದು ಗೋ
ಚರಿಸಲರಿಯದು ನರರ ಕಾಲ್ಗುಳಿಗೆಂದರವರಂದು ॥ ೬೩

ಅಲ್ಲದಾಕ್ರಮಿಸಿದೊಡೆ ನಿನಗವ
ರಲ್ಲಿ ಕಾಣಿಕೆ ದೊರಕಲರಿಯದು
ಬಲ್ಲಿದವರುತ್ತರದ ಕುರುಗಳು ನಿಮ್ಮ ಬಾಂಧವರು ।
ಗೆಲ್ಲದಲಿ ಫಲವಿಲ್ಲ ಸಾಹಸ
ವೆಲ್ಲಿ ಮೆಚ್ಚಿಯದು ಮರಳಿ ಮರ್ತ್ಯರಿ [1]
ಗಲ್ಲಿ ಸುಳಿವುದಸಾಧ್ಯವೆಂದರು [2] ಚರರು ಫಲುಗುಣಗೆ ॥ ೬೪

ಮೊಣಲದು ನಮಗವರು ಬಂಧು
ಶ್ರೇಣಿಗಳು ಗಡ ಹೋಗಲದು ಕ
ಟ್ಟಾಣೆಯಾವುದು ನಿಮ್ಮ ದೇಶದೊಳುಳ್ಳವಸ್ತುಗಳ ।
ವಾಣಿಯವ ಮಾಡದೆ ಸುಯುಜ ದ
ಕಾಣಿಕೆಯನೀವುದು ಯುಧಿಷ್ಠಿರ
ನಾಣೆ ನಿಮಗೆನೆ ತಂದು ಕೊಟ್ಟರು ಸಕಲವಸ್ತುಗಳ ॥ ೬೫

---

[1] ವೆ-ಚಿಯದು ಮರ್ತ್ಯದೇಶದೊ, ಚ.

[2] ಇಲ್ಲಿ ಸುಳಿವುದು ಭಾರವೆಂದರು, ಚ.

ತಿರುಗಿತಲ್ಲಿಂದಿತ್ತ ಪಾಳೆಯ
ಮುರಿದು ಬಿಟ್ಟು ಹಿರಣ್ಮಯವೆನಾ
ದರಿಸಿ ರಮ್ಯಕದಿಂದಿಳಾವೃತದಿಂದ ದಕ್ಷಿಣಕೆ ।
ಭರದಿನೆಯ್ದಿತು ಹರಿವರುಷಕಿಂ
ಪುರುಷವನು ದಾಟಿತು ಹಿಮಾನ್ವಿತ
ಗಿರಿಯನೇಱಿದುಡಿಳಿದು ಬಂದುದು ತೆಂಕಮುಖವಾಗಿ ॥ ೬೬

ಕಳುಹಿ ಕಳೆದನು ಹಿಂದೆ ಕೂಡಿದ
ಬಲವನವನಿಪರೆಲ್ಲ ಯಾಗ
ಸ್ಥಳಕೆ ಬಹುನೇಮದಲಿ ಹರಿದರು ನಿಜಪುರಂಗಳಿಗೆ ।
ನೆಲದ ವಲಯದ ವಸ್ತುವಿದನೆಂ
ತಳವಡಿಸಿದನೊ ಶಿವ ಯೆನುತ ಸುರ
ರುಲಿಯೆ ಹೊಕ್ಕನು ಪಾರ್ಥನಿಂದ್ರಪ್ರಸ್ಥಪುರವರವ ॥ ೬೭

ಮೂರನೆಯ ಸಂಧಿ ಮುಗಿದುದು.

---

## ನಾಲ್ಕನೆಯ ಸಂಧಿ.

ಸೂಚನೆ

ಯಾಗಸಿದ್ಧಿಗೆ ನಡೆದು ಪೂರ್ವಾವಿ
ಭಾಗದಲಿ ಭೂಮಿಪರ ಕೈಯ್ಯಲಿ
ಸಾಗರೋಪಮಧನವನಳವಡಿಸಿದನು [1] ಕಲಿಭೀಮ ॥

---

[1] ಮೇಳಯಿಸಿದನು, ಚ. ಡ.

ಭೀಮಸೇನನ ದಿಗ್ವಿಜಯ.

ಕೇಳು ಜನಮೇಜಯ ಧರಿತ್ರೀ
ಪಾಲ ಯಮನಂದನನ ಭಾಗ್ಯದ
ಹೋಲಿಕೆಗೆ ಬಹರುಂಟೆ ನಳನಹುಷಾದಿರಾಯರಲಿ ।
ಆಳು ನಡೆದುದು ಭೀಮಸೇನನ
ಧಾಟಿ ಯಿದೆಯೆನೆ ತೆತ್ತುದವನೀ
ಪಾಲಕರು ತಂತಮ್ಮ ನಿಜವಿತ್ತಾನುರೂಪದಲಿ ॥ ೧

ನಡೆದು ಸಾಧಿಸಿ ರೋಚಕಮಾನನ
ಹಿಡಿದು ಬಿಟ್ಟನು ಸರ್ವವಿತ್ತವ
ನಡಕಿತಸಿಬಜನಾಳು ಮುಂದಣಚೇದಿದೇಶದಲಿ ।
ಘುಡುಘುಡಿಸೆ ನಿಸ್ಸಾಳವೀಗಡ
ಬಡೆ ಯಿದೇನೆನೆ ಭೀಮಸೇನನ
ಪಡೆ ಯೆನಲು ಶಿಶುಪಾಲ ಬಂದನು ಕಂಡನುಚಿತದಲಿ ॥ ೨

ಏನು ಬಂದೆಯಪೂರ್ವವೆನೆ ಯಾ
ಗಾನುರಾಗವನಱುಪಲತಿ ಸು
ಮ್ಮಾನದಲಿ ಶಿಶುಪಾಲ ಹೇಱಿಸಿದನು ಮಹಾಧನವ ।
ಮಾನಿಸರ ಕಳುಹಿದೊಡೆ ಸಾಲದೆ
ನೀನದೇಕೆಂದುಚಿತವಲಿ ಸ
ನ್ಮಾನಿಸುತ ನಿಲಿಸಿದನು ತಿಂಗಳು ಪವನನಂದನನ ॥ ೩

ನಡೆದು ಮುಂದೆ ಕಳಿಂಗದೇಶದ
ಲಡಸಿ ಬಿಟ್ಟನು ಶ್ರೇಣಿಮಂತನ
ಹಿಡಿದು ಕಪ್ಪವ ಕೊಂಡು ಸದೆದನು ಕೋಸಲೇಶ್ವರನ ।
ಅಡಕಿತಲ್ಲಿಯ ಧನವಯೋಧ್ಯೆಯು
ಕಡೆಯ ಕೋಟೆಯ ಮುಱಿಯಲವಸದೆ
ಯೊಡೆದು ದೀರ್ಘಪ್ರವರನಿತ್ತನು ಬೇಹವಸ್ತುಗಳ ॥ ೪

ಆಳು ನಡೆದುದು ಚರೂಣಿಯಲಿ ಗೋ
ಪಾಲನೆಂಬನ ಮುಱಿಯೆ ತೆತ್ತುದು
ಹೇಱಲಱಿಯೆನು ಸಂಖ್ಯೆಯನು ಮುಂದಂತಪಾಲಕನ ।
ಜಾಳಿಸಿದನಾಕಾಶಿರಾಜನ [1]
ಧಾಟಿಯಲಿ ಕೊಂದನು ಸುಪಾರ್ಶ್ವನ
ಮೇಲೆ ನಡೆದನು ಗಯನ ಮತ್ಸ್ಯನ ಗೆಲಿದನಾಭೀಮ ॥ ೫

ನಡೆದು ಮುಂದೆ ವಿದೇಹನನು ಸದೆ
ಬಡಿದು ಮತ್ತೆ ಕಿರಾತಭಟರವ
ಗಡಿಸಿ ಕಾದಿತನಂತಬಲವದ ಕೇಳು ಮಾನಿಸರು ।
ಒಡೆಯರವದಿರ ಪಂಗಡವ ಹುಡಿ
ಹುಡಿಯ ಮಾಡಿ ನಿಷಾದವರ್ಗವ
ಕೆಡಹಿ ನಿಷಧನ ಹೊಯ್ದು ಸೆಳೆದನು ಸಕಲವಸ್ತುಗಳ ॥ ೬

ಮಲೆತು ಕಾದಿದ ದಂಡಧಾರನ
ಗೆಲಿದು ಮಗಧೇಶನ ಗಿರಿವ್ರಜ
ದೊಳಗೆ ಪಾಳೆಯ ಬಿಟ್ಟುದವನಿದಿರಾಗಿ ನಡೆತಂದು ।
ದಱವ ಹೇಱಿದನಾತನಲ್ಲಿಂ
ದಿಱಿದು ಕರ್ಣನ ಮುಱಿದು ಕಪ್ಪವ
ಸೆಱೆದು ಕೊಂಡದ್ರಿಯಲಿ ಸದೆದನು ಬಹಳವನಚರರ ॥ ೭

ಸೂಱೆಗೊಂಡಲ್ಲಿಂದ ನಡೆದನು
ಮೀಱಿ ಗಂಗಾಸಾಗರಕೆ ಕೈ
ಮಾಱಲಱಿಯದೆ ಸಂಧಿಗವನೀಶ್ವರರು ವಶವಾದ್ರು ।
ಹೇಱಿಸಿದನನುಪಮದ ವಸ್ತುವ
ನಾಱುಸಾವಿರಬಂಡಿಯಲಿ ನಡೆ
ದೇಱಿ ಹೊಯ್ದನು ವಾಸುದೇವನ ಪೌಂಡ್ರಕಾಹ್ವಯನ ॥ ೮

1 ಸೋಲಿಸಿದ ಕಾಶೀನೃಪಾಲನ, ಕ ಖ.

ಪುರವರವನಲ್ಲಿಂದ ಮೌಲ್ಯದ
ತೆರಳಿಕೆಯ ಮಾಡಿದನು ಮೊದಲು
ಹರಿದು ಮುಱಿದು ಸಮುದ್ರಸೇನನ ಗರ್ವವನು ಬಲದಿ ।
ತೆರಳಿಯಲ್ಲಿಂದಿಂದ್ರಸೇನನ
ನೊರಸಿ ಭಂಡಾರವನು ಹೇಱಿಸಿ
ಮರಳಿ ಮಂಗನನಪ್ಪಳಿಸಿದನು ಲುಬ್ಧಕರು ಸಹಿತ ॥ ೯

ಸಾರಲೋಹಿತನೆಂಬ ಸಾಗರ
ತೀರವಾಸಿಗಳೊಳಗೆ ಕುರುಪದವಿ
ಕಾರಿಜೋನೆಗಚೀನಬೋಟಕಬರ್ಬರಾದಿಗಳು [1] ।
ಓರೆಬಾಗಿಲ ಕುಱುವಕೊಳ್ಳದ
ಗೈರಿಕರನಪ್ಪಳಿಸಿ ಮಲೆಯ ವಿ
ಹಾರಿಗಳ ಸಂಹರಿಸಿ ಕೊಂಡನು ಸಕಲವಸ್ತುಗಳ ॥ ೧೦

ಧಾಟಿ ಹರಿದುದು ಪಂಚಗೌಳವ
ರಾಳವೊಡ್ಡಿಯನಾಂಧ್ರಜಾಳಾಂ
ದ್ರಾಳಿಗಳನಾಕರಿಸಿ ಹೊರಡಿಸಿದನು ಮಹಾಧನವ ।
ಮೇಲುದುರ್ಗದ ಪಾರ್ವತೀಯರಿ
ಗಾಳು ಹರಿದುದು ಸಂದಿಗೊಂದಿಯ
ಶೈಲಗುಹೆಗಳೊಳಱಸಿ ಹಿಡಿದನು ಬಹಳಧನಯುತರ ॥ ೧೧

ಆಱಿಸಿದನು ನಾವೆಗಳಲಬ್ಧಿಯ
ಕುಱುವವಲಿ ಕೊಬ್ಬಿದ ಧನಾಢ್ಯರ
ಮುಱಿದು ಮರಳಿಯೆ ಕೆಲಬಲದಲಾದ್ವೀಪಪಾಲಕರ ।
ಸೆಱೆಹಿಡಿದು ತನಿಸೂಱೆಯಲಿ ಪಡೆ
ನೆಱೆ ದಣಿಯಲಾ ಮ್ಲೇಚ್ಛವರ್ಗವ
ನಿಱಿದು ಸಾಧಿಸಿ ತೆಗೆದನಗ್ಗದ ವಸ್ತುಸಂತತಿಯ ॥ ೧೨

1 ಬೋಟರನೂಪವಾಸಿಗಳ, ಡ. ರನುನಿವಾಸಿಗಳ, ಚ.

ಆಮಹಾಬೋಟಕಮಹಾಹ್ವಯ
ಧಾಮದಲಿ ವಸ್ತುಗಳನತಿನಿ
ಸ್ಸೀಮಯವನಕರೂಷರನು ತಾಗಿದನು ಹಿಲದಲಿ ।
ಹೇಮಮುಕ್ತಾರಜತ ಚಂದನ
ರಾಮಣೀಯಕವಸ್ತುನಿಚಯದ
ಸೀಮೆಗಳ ನಾವೆಯೊಳವಡಿಸಿದನು ಕಲಿಭೀಮ ॥ ೧೩

ಮರಳ್ದನನಿಲಜನೀಮಹಾದ್ಭುತ
ತರದ ವಸ್ತುವನಾನಲಾಪುದೆ
ಧರಣಿ ಯೆನೆ ಸಂದಣಿಸಿದುವಸಂಖ್ಯಾತರಥನಿಚಯ ।
ಅರಸುಗಳು ಸಹಿತಾಮಹಾದಟ
ರೆಸಿ ಬಂದನು ಭೀಮನಣ್ಣನ
ಚರಣಕೆಱಗಿದನರ್ಜುನನ ತೆಕ್ಕೈಸಿದನು ನಗುತ ॥ ೧೪

ನಾಲ್ಕನೆಯ ಸಂಧಿ ಮುಗಿದುದು.

---

## ಐದನೆಯ ಸಂಧಿ.

ಸೂಚನೆ.

ನಡೆದು ವಿವಿಧದ್ವೀಪಪತಿಗಳ
ಜಡಿದು ಕಪ್ಪವ ಕೊಂಡು ತೆಂಕಣ
ಕಡಲ ವಳಯದ ನೃಪರ ಗೆಲಿದನು ವೀರಸಹದೇವ ॥

ಸಹದೇವನ ದಿಗ್ವಿಜಯ.

ಕೇಳು ಜನಮೇಜಯ ಧರಿತ್ರೀ
ಪಾಲ ಸಹದೇವನ ಸಗಾಡಿಕೆ
ಯಾಳುತನ ವಿವರಾರ ಹವಣಲ್ಲೆಂಬ ತೆಱನಾಯ್ತು ।

ಅನೇಕರಾಜರ ಜಯ ಮತ್ತು ಧನಸಂಗ್ರಹ.

ಆಳು ನಡೆದುದು ತೆಂಕಣಾವನೀ
ಪಾಲರೀತನ ಬಿಱುಸಿಗೀತನ
ಧಾಟಿಗೀತನ ದೆಸೆಗೆ ದೆಸೆಗೆಟ್ಟುದು ದಿಗಂತದಲಿ ‖ ೧

ಶೂರಸೇನನ ಸದೆದು ನೆಱೆ ಭಂ
ಡಾರವೆಲ್ಲವ ಕೊಂಡು ತೆಂಕಣ
ವೀರಮತ್ಸ್ಯರ ಗೆಲಿದು ಸರ್ವಸ್ವಾಪಹಾರದಲಿ ।
ಭೂರಿಬಲನಹ ದಂತವಕ್ತ್ರನ
ವಾರಣಾಶ್ವರಥಂಗಳನು ಕೊಂ
ಡಾರುಭಟೆಯಲಿ ಮುಂದೆ ನಡೆದನು ತೆಂಕಮುಖವಾಗಿ ‖ ೨

ಖಳನಿಶಾಚರ [1] ಕೋಟಿಗಳನರೆ
ಘಳಿಗೆಯೊಳಗಾಕ್ರಮಿಸಿದನು ಮಂ
ಡಳಿಕರೂರುಗಳ ಬಿಟ್ಟೋಡಿದರು ಕೊಳ್ಳಗರ ಕಾಲ್ದುಳಿಗೆ [2] ।
ಹೊಳತಡಿಯು ಗಿರಿದುರ್ಗವಿಪಿನ
ಸ್ಥಳದ ಧರಣಿಪರಿದಿರುವೆಂದ
ಗ್ಗಳಿಯು ಗಜರಥಹಯಸಹಿತ ತೆತ್ತರು ಸುವಸ್ತುಗಳ ‖ ೩

ಬಂದು ಕುಂತೀಭೋಜ ಮೊಮ್ಮನ
ಮಂದಿರದ ಸುಕ್ಷೇಮವಿಭವವ
ನಂದು ಕೇಳಿಯೆ ಕೊಟ್ಟನನುಪಮಸಾರವಸ್ತುಗಳ ।
ಮುಂದೆ ಚರ್ಮಣ್ವತಿಯ ಜಂಭಕ
ನಂದನನನಪ್ಪಳಿಸಿ ಗಜಹಯ
ವೃಂದವನು ಕೊಂಡೊಲಿದು ಬಿಟ್ಟನವಂತಿದೇಶದಲಿ ‖ ೪

---

[1] ಸಿಷಾದರ, ಡ. [2] ಬಳಿಕ ಮನ್ನೆಯರಾಂಪರೇ ಚತುರಂಗಪದಹತಿಗೆ, ಚ.

ತಱುಬಿದರ ವಿಂದಾನುವಿಂದರ
ಮುಱಿದು ಕಪ್ಪವ ಕೊಂಡು ಭೀಷ್ಮಕ
ನರಪತಿಯ ಗೆಲಿದಲ್ಲಿ ಮನ್ನಿಸಿಕೊಂಡನುಚಿತದಲಿ ।
ಬರಬರಲು ಕುಂತಳನೃಪನನಾ
ಕರಿಸಿ ಕಪ್ಪವ ಕೊಂಡು ಕಳತಿ
ತ್ತರಿಗಳಂಧ್ರಕರೆಂಬ ಬೇಡರ ರಣದೊಳೋಡಿಸಿದ ॥ ೫

ಉರವಣಿಸಿ ದಟಿ ತುಂಗಭದ್ರಾ
ವರನದಿಯನುತ್ತರಿಸಿ ಪಂಪಾ
ಸರದ ತಡಿಯಲಿ ಬಿಟ್ಟುದಾ ವಿರುಪಾಕ್ಷಸೀಮೆಯಲಿ ।
ಗಿರಿಚರರ ವನಚರರ ಬಿಂಕವ
ನೊರಸಿ ಕಿಷ್ಕಿಂಧಾದ್ರಿಯಲಿ ಸಂ
ಚರಿಸಿ ಬಿಟ್ಟುದು ಕಟಕಬಹುವಿಧವಾದ್ಯರಭಸದಲಿ ॥ ೬

ಕೇಳಿದನು ಕಿಷ್ಕಿಂಧಗಿರಿಯ ವಿ
ಶಾಲಶೃಂಗವನೇಱಿ ಘನನಿ
ಸ್ಸಾಳ ವೊದಗಿದರೊಡನೆ ವೊಱಗಿತು ಗಿರಿಗುಹಾನಿಕರ ।
ಆಳದೆತ್ತಣದೆನುತ ಕಪಿವರ
ಜಾಲ ನೆರೆದುದು ಮುಱಿದು ತರುಶಾ
ಖಾಳಿಗಳ ಕೈದುಗಳ ಕೈಯ್ಯಲಿ ತಱುಬಿದರು ಬಲವ ॥ ೭

ಕವಿದುದೀಚತುರಂಗಬಲ ಸಂ
ತವಿಸಿ ಲಗ್ಗೆಯ ಮಾಡಿ ವಾನರ
ನಿವಹದಲಿ ಕಱಿದುದು ಶರಾಳಿಯ ಸುಭಟಮೇಘಚಯ ।
ತಿವಿದುವಂಬಿನ ಸೋನೆಗಳುಕದೆ
ಸವಡಿ ಮರದಲಿ ಸದೆದು ಹೊಕ್ಕುದು
ರವಿಸುತನ ಸಂತತಿಸುಷೇಣನು ವೀರವೃಷಸೇನ ॥ ೮

ಧೊರೆಗೆ ಧೊರೆಯಿದಿರಾಗಿ ಕಾದಿತು
ತೆರಳದಿವು ದಿನವೇಳುಪರಿಯಂ
ತರ ವಿಘಾತಿಯೊಳ್ಪದಗೆ ಮೆಚ್ಚಿ ದರುಭಯುವಾನೆರರು ।
ಅರಸ ನೀನಾರೆನೆ ಯುಧಿಷ್ಠಿರ
ನರಪತಿಯು ಕಥೆವೇಳೆ ಕೊಟ್ಟರು
ಪರವ ವಸ್ತು ಪ್ರಚಯುವೆನು ಮಾದ್ರೀಕುಮಾರಂಗೆ ॥ ೯

ಕಾವೇರಿಯು ಬಳಿ ಇರುವ ಮಾಹಿಷ್ಮತೀ ನಗರಪ್ರವೇಶ.

ತೆರಳಿತಲ್ಲಿಂ ಬಳಿಕ ತೆಂಕಣ
ನರಪತಿಗಳಾನುವರೆ ಸೇನೆಯು
ಖುರಪುಟಕೆ ನುಗ್ಗಾಯ್ತು ತೆತ್ತುದು [1] ಸಕಲವಸ್ತುಗಳ ।
ಉರುವಣಿಸಿ ಬಲ ನಡೆದು ನದಿಗಳ
ನಱಸಿ ಕಾವೇರಿಯಲಿ ಬಿಟ್ಟುದು
ಹರಿದುದಲ್ಲಿಂ ಧಾಟಿ ಘನಮಾಹಿಷ್ಮತೀಪುರಕೆ ॥ ೧೦

ಧಾಟಿಯೆನಲಿದಿರಾಗಿ ಪೊಱವಂ
ಟಾಳು ಕಾದಿದುದಲ್ಲಿಗಧಿಪತಿ
ನೀಲನೆಂಬಾತನು ಮಹಾಹವವಾಯ್ತು ಚಾಣಿಯಲಿ ।

ಅಲ್ಲಿ ಸಹದೇವನ ಸೈನ್ಯದಹನ.

ಹೇಳಲದ್ಭುತ ವುರಿದುದಗ್ನಿ
ಜ್ವಾಲೆಯಲಿ ಚತುರಂಗಬಲ ಹರ
ಭಾಳನಯನಕವಾಟ ತೆಗೆದಂತಾಯ್ತು ನಿಮಿಷದಲಿ ॥ ೧೧

ಉರಿಸಮುದ್ರದೊಳದ್ದದೋ ಮೋ
ಹರವು ತೆಗೆ ತೆಗೆ ಕುನ್ನಿಗಳ ಕಾ
ತರಸಲೀಯದಿರಾನೆ ಮುಱಿಯಲಿ ಹೊಕ್ಕು ಕುದುರೆಗಳು ।

[1] ನುಗ್ಗಾಗಿ ತೆತ್ತರು, ಚ.

ಮೆರಳಿಚಲಿ ತೇರುಗಳ ಸೂತರ
ಕರದ ವಾಘೆಯು ಸೆಳೆ ಪದಾತಿಯು
ತಿರುಗ ಹೊಯ್ ಹೊಯ್ಯೆನುತ ಮಿಗೆ ಗಜಬಿದನು ಸಹದೇವ ॥

ಸುಟ್ಟದ್ದಕ್ಕೆ ಕಾರಣವನ್ನು ವೈಶಂಪಾಯನರು ಹೇಳಿದುದು.

ರಾಯದೇಬಿವೇಕುರಿದುದೇನಿದ
ಋಾಯುತವ್ರು ಹೊಸತಾಯ್ತು ವೈಶಂ
ಪಾಯನನೆ ಹೇಆನಲು ನಗುತಿಂತೆಂದನಾವುನಿಪ ।
ರಾಯ ಕೇಳ್ಳೈ ಪೂರ್ವದಲಿ ಕಮ
ಲಾಯತಾಕ್ಷಿಯರುಂಟು ಹಲಬರು
ವಾಯುಸಖ ಪರದಾರಗವುನವ ಮೆಚ್ಚಿದನು ಬೞಿಕ ॥ ೧೩

ಪಾವಕ ದ್ವಿಜವೇಷದಲಿ ಬಂ
ದಾವಧುಗಳೊಡನಿರಲು ನಗರವ
ಕಾವವರು ಹಾದರವ ಹಿಡಿದರು ಹವ್ಯವಾಹನನ ।
ಕೋವಿದರ ಮುಂದಿಕ್ಕಿದರು ಧ
ರ್ಮಾವಲಂಬನಶಾಸ್ತ್ರಗಳನು
ಧ್ಯಾವಿಸಲು ಭುಗಿಲೆಂದು ತೋಱದನಗ್ನಿ ನಿಜತನುವ ॥ ೧೪

ಧರಣಿಸುರರಲಿ ಸುಪ್ರಧಾನರು
ವೆರಸಿ ಬಂದಗ್ನಿಯು ಪದತ್ರಯು
ಕೆಱಗಿ ಕೋಪಸ್ತಂಭವನು ಮಾಡಿದರು ದೈನ್ಯದಲಿ ।
ಪುರದೊಳದುಮೊದಲಾಗಿ ಕಾಮಿನಿ
ಯರಿಗೆ ಹಾದರ ಸಲುವುದಿದು ವಿ
ಸ್ತರಣವೆಂದು ಕೃಶಾನು ನಂಬುಗೆಗೊಂಡನಾನೃಪನ ॥ ೧೫

ಅದುವೆ ಮೊದಲಾಗೀಗಳಲ್ಲಿಯು
ಸುದತಿಯರು ಸ್ವೇಚ್ಛಂದಚಾರಿಗ
ಳದಱಿನಾನೃಪತಿಗೆ ಸಹಾಯುವನಗ್ನಿ ಮಾಡುವನು ।

ಆಗ ಸಹದೇವನು ಅಗ್ನಿಯನ್ನು ಸ್ತುತಿಸುವಿಕೆ.

ಅದನರಿತು ಸಹದೇವನುಪವಾ
ಸದಲಿ ಮಿಂದು ಕುಶಾಗ್ರಸಂಸ್ತರ
ಣದಲಿ ಪವಡಿಸಿ ಬೇಡಿಕೊಂಡನು ವಹ್ನಿಸೂಕ್ತದಲಿ ॥ ೧೬

ಯಾಗವಿದು ನಿನಗೋಸುಗವೆ ನೃಪ
ಯಾಗಸಿದ್ಧಿಗೆ ಬಂದೆವಲ್ಲದೆ
ಮೇಗೆ ತಾನಱಿಯದೆ ಧನಾಶೆಯಲಿವನ ಮುಱಿಯವಲ್ಲೈ ।
ಈಗ ನೀನಡ್ಡವಿಸಲೆಮ್ಮಯ
ಯಾಗ ವೃಚಿಯಲಿ ನಿನಗೆ ಮಾಣಲಿ
ಯಾಗಪಾರೋಹಿತ್ಯವೆಂದನು ನಗುತ ಸಹದೇವ ॥ ೧೭

ಅಗ್ನಿಯು ಸಹದೇವನಿಗೆ ವರವನ್ನು ಕೊಡುವಿಕೆ.

ಎಂದು ನಾನಾವಿಧವರಸ್ತುತಿ
ಯಿಂದ ಹೊಗಳಿದೊಡಗ್ನಿ ಮೆಚ್ಚಿದ
ನಂದು ಕೊಟ್ಟನು ವರ [1] ವನೀತನ ಮಾರಿದೆನು ನಿನಗೆ ।
ಎಂದು ಶಿಖಿ ಹಿಮ್ಮೆಟ್ಟಲಾಪಡೆ
ಮುಂದೆ ನಡೆದುದು ನೀಲಪುರದಲಿ
ಸಂದಣಿಸಿ ಬಳಿಕಾತನೀತನಕಂಡು ಪೊಡವಟ್ಟ ॥ ೧೮

ತೆತ್ತನವ ಸರ್ವಸ್ವವನು ತಾ
ನೆತ್ತಿ ಬಂದನು ಕೂಡೆ ಬಳಿಕಿನೊ
ಳುತ್ತರೋತ್ತರವಾಯ್ತು ಸಹದೇವಂಗೆ ದಿಗ್ವಿಜಯ ।
ಮತ್ತೆ ಸಹ್ಯಾಚಲದ ಕೊಳ್ವದ
ಕುತ್ತಿರಿನ ಭೂಪರ ವಿಭಾಡಿಸಿ
ಸುತ್ತಿ ಬಂಡಾಕರಿಸಿದನು ತದ್ಗಿರಿನಿವಾಸಿಗಳ ॥ ೧೯

---

[1] ಪಥವ, ಕ. ಖ.

ಬಳಿಕ ಅನೇಕರಾಜರನ್ನು ಗೆಲ್ಲುವಿಕೆ.

ಇಱಿದು ಕೊಂಕಣಗೌಳರನು ಕೇ
ರಳರ ಸದೆದು ಮಹಾರ್ಘರತ್ನಾ
ವಳಿಯ ಹೇಱಿಸಿದನು ವಿಚಿತ್ರಾಂಬರವಿಭೂಷಣವ ।
ಜಲಧಿಯಂತರ್ದ್ವೀಪಪತಿಗಳ
ಕುಲವ ಶೋಧಿಸಿ ಚೋಳಪಾಂಡ್ಯರ
ದಱವ ಧಟ್ಟಿಸಿ ಕೊಂಡನನುಪಮವಸ್ತುವಾಹನವ ॥ ೨೦

ಘಟೋತ್ಕಚನಿಗೆ ಸಹದೇವನ ಪತ್ರಪ್ರೇಷಣ.

ಕಳುಹಿದನು ಮಿಗೆಯಾಪ್ತಪತ್ರಾ
ವಳಿಯತನುಜನ ಬಱಿಯು ತತ್‌ಕ್ಷಣ
ದೊಳಗೆ ಹೇೞಿಕೆಯಾಯ್ತು ಪರಿವಾರಕೆ ಘಟೋತ್ಕಚನ ।
ತಿಳಿದ ಕಾರಿರುಳೞಿಕವ್ರೋ ಮೇಣ್
ಖಳಜನರ ಹೃದಯಾಂಧಕಾರದ
ಹೊಳಕೆಯೋ ತಾನೆನಲು ಮಿಗೆ ನಡೆತಂದನಾದನುಜ ॥ ೨೧

ಸಹದೇವನ ಅಪ್ಪಣೆಯಂತೆ ಘಟೋತ್ಕಚನ ಲಂಕಾಪ್ರಯಾಣ
ಮತ್ತು ಅಲ್ಲಿನವರ ಜಯ.

ಪಾಳೆಯವ ಹೊಕ್ಕನು ಘಟೋತ್ಕಚ
ನಾಳುಸಹಿತಯ್ಯಂಗೆ ನಮಿಸಿದ
ನೂೞಿಗವ ಬೆಸಸೆನಗೆ ಹೇೞಾ ರಾಜಕಾರಿಯವ ।
ವೀಳೆಯವ ತಾ ಯೆನಲು ನಗುತ ವಿ
ಶಾಲವಿನಯಕೆ ಮೆಚ್ಚಿದನು ಬಲು
ದೋಳಿನಲಿ ಸೆಳೆದಪ್ಪಿ[28] ಮುಂಡಾಡಿದನು ನಂದನನ ॥ ೨೨

ಮಗನೆ ಲಂಕೆಗೆ ಪೋಗು ಮಾನವ
ರಿಗೆ ಮಹೋದಧಿಗವ್ವೆವಲ್ಲತಿ
ವಿಗಡತನ ಬೇಡಲ್ಲಿ ವಿನಯದೊಳನ್ನು ಕಾರಿಯವ ।

ಸೊಗಸಿತೇ ಸಾಮದಲಿ ಕಪ್ಪವ
ತೆಗೆವುದವಗಡಿಸಿದರೆ ಬಚ್ಚಿಕ
ಲ್ಲಿಗೆ ಶರಾಳಿಗಳವೆ ವಿಘಾತಿಗೆ ದೋಷವಿಲ್ಲೆಂದ ॥ ೬೩

ಎನೆ ಹಸಾದವೆ ಹಾಯ್ಕಿ ಭೀಮನ
ತನಯ ಕಳುಹಿಸಿ ಕೊಂಡು ತೆಂಕಲು
ವನುಜ ಬಂದನು ಕಂಡು ರಾಮೇಶ್ವರದ ಶಿವಗೃಹವ [1] ।
ವಿನಯ ಮಿಗೆ ಸತ್ಕರಿಸಿ ರಘುನಂ
ದನನ ಕೀರ್ತಿಸ್ತಂಭಡಂಬರ
ವೆನಿಪ ಸೇತುವ ಕಂಡು ನಡೆದನು ತೆಂಕಮುಖವಾಗಿ ॥ ೬೪

ತೋಱಿತತಿದೂರದಲಿ ಲಂಕೆಯ
ಮೂಱುಶಿಖರದ ದುರ್ಗವುದಧಿಗೆ
ವೋಱದಧಿಯೆನೆ ಹೊಳೆಹೊಳೆದುದಾ ಮಣಿಪ್ರಭಾಲಹರಿ [2] ।
ನೂಱುಯೋಜನ ಸೇತುಮೂಲದ
ಮಿಾಱಿ ನಡೆದನು ಬಡಗವಾಗಿಲ
ಕೀಱಿದಗಳಿನ ಪಡಿಮುಖವ ದಾಂಟಿದನು ವಹಿಲದಲಿ ॥ ೬೫

ಕೇರಿಕೇರಿಗಳೊಳಗೆ ನಿಜಪರಿ
ವಾರಸಹಿತ ವೃಕೋದರಾತ್ಮಜ
ನಾರಿವನು ತಾನೆನಲು ಮಿಗೆ [3] ನಡೆತಂದರೊಲವಿನಲಿ ।
ವೀರದಾನವವರ್ಗದಲಿ ಬಹ
ತೋಳಹತ್ತನ ಕಂಡಪೂರ್ವವಿ
ಕಾರಿಮಾನಿಸನಲ್ಲೆನುತ ಮುತ್ತಿದುದು ಪಾರಜನ ॥ ೬೬

ಬಂದನರಮನೆಗಾಗಿ ಬಾಗಿಲ
ಮುಂದಣೆಡಬಲಹೇಮವೇದಿಯ

---

[1] ಮನದಿ ಮುನ್ನವೆ ಬಂದ ರಾಮೇಶ್ವರದ ಶಿವಗೃಹಕೆ, ಚ.
[2] ಮೆಱೆದುದಂದು ಮಣಿಪ್ರಭಾವದಲಿ, ಚ. [3] ತಾರನಲು, ಚ.

ಸಂದಣಿಯ ಜನ ನೋಡಲೆಂದನು ದ್ವಾರಪಾಲರಿಗೆ ।
ಇಂದು ನಾವುತ್ತರದ ಭೂಮಿಪ
ರಿಂದ ಬಂದೆವು ಹೇಳು ನಿಜಪತಿ
ಗೆಂದೊಡವೆ ಬಂದನು ವಿಭೀಷಣದೇವನೋಲಗಕೆ ॥ ೨೭

ಜೀಯ ಬಿನ್ನಹ ಬಂದನುತ್ತರ
ರಾಯನಟ್ಟಿದ ದೂತನೆನೆ ತ
ಪ್ಪಾಯಿತೇ ಹೊಗಿಸೆನಲು ಕರೆದನು ಕಲಿಘಟೋತ್ಕಚನ ।
ವಾಯುತನುಜನ ಸುತನು ತನ್ನ ಪ
ಸಾಯಿತರು ಸಹಿತೊಳಗೆ ಹೊಕ್ಕನ
ವಾಯಿಯಲಿ ನಡೆತಂದು ಕಾಣಿಕೆಗೊಟ್ಟು ಪೊಡವಟ್ಟ ॥ ೨೮

ಬಿಗಿದ ಮರಕತಮಣಿಯ ನೆಲಗ
ಟ್ಟುಗಳ ಹವಳದ ಹಲಿಗೆಗಳ ಮೊ
ಳಗೆಯ ವೈಡೂರ್ಯದ ಕವಾಟದ ವಜ್ರಭಿತ್ತಿಗಳ ।
ಹೊಗರಿಡುವ ಹರಿನೀಲಮಣಿವೇ
ದಿಗಳ ಮುತ್ತಿನ ಲಂಬಳದ ಲೋ
ವೆಗಳ ಕಾಂತಿಯ ಲಳಿಯ ಲಹರಿಯೊಳಿರ್ದನಮರಾರಿ ॥ ೨೯

ವಿಭೀಷಣಘಟೋತ್ಕಚರ ಸಂವಾದ.

ಇತ್ತ ಬಾರೈ ಕುಳ್ಳಿರೆತ್ತಣಿ
ನಿತ್ತ ಬರವಾರಟ್ಟಿದರು ನೀ
ವೆತ್ತಣವರೇನೆಂದು ನಿಮ್ಮಭಿಧಾನವೇನು ಹದ ।
ಬಿತ್ತರಿಸಿ ಹೇಳೆನಲು ಕೈಮುಗಿ
ಯುತ್ತ ನುಡಿದನು ರಾವಣಾನುಜ
ಚಿತ್ತವಿಸು ನಮ್ಮಖಿಳಪೂರ್ವಾಪರದ ಸಂಗತಿಯ ॥ ೩೦

ಅಲ್ಲಿ—ಘಟೋತ್ಕಚನು ಭೀಮನ ತನಯನೆಂದು ಹೇಳುವಿಕೆ.

ಸೋಮವಂಶದೊಳರಸುಗಳು ನಿ
ಸ್ಸೀಮರಿದ್ದರು ಪಲಬರವರೊಳು
ಭೂಮಿಗಧಿಪತಿ ಪಾಂಡುವಾತಂಗೈವರಾತ್ಮಜರು ।
ಆಮಹೀಪತಿ ಧರ್ಮನಂದನ
ಭೀಮಫಲುಗುಣನಕುಲನಲ್ಲಿ ಸ
ನಾಮಸಹದೇವಾಖ್ಯರೀಪರಿ [1] ಚಿತ್ತವಿಸಿ ಯೆಂದ ॥ ೩೧

ಅರಸನೆಂಪರೆ ಸಕಲಧರ್ಮಕೆ
ಕರಚರಣವಾಪಂತೆ ಯಾತನ
ಕಿರಿಯರಿಹರು ಚತುರ್ವಿಧೋಪಾಯಸ್ವರೂಪದಲಿ ।
ಸುರಮುನಿಯ ಮತದಿಂದ ಯಾಗೋ
ತ್ಕರುಷೆಗಾವುದು ಬುದ್ಧಿ ನೃಪಗ
ಧ್ವರದ ದಿಗ್ವಿಜಯಾಭಿಸಂಧಿಗೆ ಮಾಡಿದನು ಮನವ ॥ ೩೨

ಬಡಗಲರ್ಜುನನುತ್ತರಾಬ್ಧಿಯ
ತಡಿಯ ನೇಪರ್ಯಂತವಸ್ತುವ
ಜಡಿದು ತಂದನು ಮೂಡಲಾಕ್ರಮಿಸಿದನು ಕಲಿಭೀಮ ।
ಪಡುವಲರ್ಜುನನನುಜನಿತ್ತಣ
ಕಡೆಗೆ ಸಹದೇವಾಖ್ಯನೀಪರಿ
ನಡೆವ್ರತಿಪ್ರ್ಯಾಮ ತಾ ಘಟೋತ್ಕಚ ಭೀಮಸುತನೆಂದ ॥ ೩೩

ಎನಲು ನಸುನಗುತೆಂದ ಪಾಂಡವ
ಜನಪರು ಕ್ಷತ್ರಿಯರು ನೀನೇ
ದನುಜನವರಿಗೆ ತನಯನೆಂದೊಡದಾರು ಮೆಚ್ಚುವರು ।
ಮನುಜರಿಗೆ ದಾನವರು ಮಕ್ಕಳೆ
ವನಜನಾಭನೆ ಬಲ್ಲನೈ ಸಖಿ
ಯೆನಲು ಬಿಸ್ಮಪ ಮಾಡಿನು ತಜ್ಜನನಸಂಗತಿಯ ॥ ೩೪

1 ಲನಿಖರು, ಚ.

ಅರಸನೊಂದು ನಿಮಿತ್ತ ದೇಶಾಂ
ತರಪರಿಭ್ರಮಣೆಯಲಿ ವಿಪಿನಾಂ
ತರದೊಳರೆ ಬಂದನು ಹಿಡಿಂಬಕನೆಂಬನಸುರಪತಿ ।
ಕೆರಳಿಚಿದೊಡಾಭೀಮನಾತನ
ನೊರಸಿದನು ಖಳನನುಜೆ ಯಾತಂ
ಗರಸಿ ಯಾದಳು ಸತಿ ಹಿಡಿಂಬಿಕೆ ಮಾತೆ ಯೆನಗೆಂಪ ॥ ೩೫

ಇನಿಬರಿಗೆ ಪತಿ ದೇವಕೀನಂ
ದನನಘಾಸುರಮಥನ ಮಧುಸೂ
ದನ ಜನಾರ್ದನ ದೈತ್ಯಮರ್ದನ ಭಕ್ತಸುರಧೇನು ।
ಮುನಿಹೃದಯಪರ್ಯಂಕ ಕರುಣಾ
ವನಧಿ ರಾವಣಕಂಠಕಾನನ
ಘನಪರಶು ಶ್ರೀಕೃಷ್ಣನೈವರ ಜೀವಸಖನೆಂದ [1] ॥ ೩೬

ರಾಜಸೂಯನಿಮಿತ್ತಧನವನು
ವ್ಯಾಜದಿಂದಾರ್ಜಿಸಲು ಬಂದಿರಿ
ತೇಜವಿದೆ ನಿಮಗೀಗ ನಿಮಗೆನಿತುಂಟು ಪರಿವಾರ ।
ಮೂಜಗದೆಯು ಹೇಳೆನಲು ಗಜಪುರ
ರಾಜಧರ್ಮಜನಾತನನುಜರು
ತ್ರೈಜಗಕೆ ಬಲ್ಲಿದರು ಬಲವಷ್ಟಾದಶಾಕ್ಷೋಣಿ ॥ ೩೭

ಎನಲು ನಕ್ಕನು ದಾನವೇಂದ್ರನು
ಮನೆಯ ಹೊಱಗಣ ಹಂತ ಬಿಡದಿಹ
ಜನದನಿತು ತಾನೈಸೆ ನಿಮ್ಮಯ ಸೇನೆಯಿಂದಿನಲಿ ।
ಮನಕೆ ಬಾರದು ಕಪ್ಪವೀವುದು
ಕನಲಿ ಕವಿತರೆ ಮುಂದೆ ನೋಡುವೆ
ನೆನಲು ನುಡಿದಪನೀಘಟೋತ್ಕಚನಾವಿಭೀಷಣಗೆ ॥ ೩೮

[1] ನೈವರಿಗೆ ತಾನೇ ಜೀವಸಖನೆಂದ, ಕ, ಖ

ಬಲವನೇಳಿಪೊಡಿನ್ನು ದಾನವ
ಕುಲದಿಶಾಪಟಿ ಕೃಷ್ಣ ಸಾರಥಿ
ಫಲುಗುಣನ ಧ್ವಜದಂಡದಗ್ರದಲಿಹನು ಹನುಮಂತ ।
ಕಲಹವೆನು ಬಯಸುವರೆ ತನ್ನನು
ಸಿಲಿಸದೀಗಳೆ ಕಳುಹು ಬೇಗದ
ಲೆನೆ ವಿಭೀಷಣ ನೆನೆದು ನೋಡಿದ ಪೂರ್ವಸಂಗತಿಯ ॥ ೩೯

ವಿಭೀಷಣನು ಪೂರ್ವವೃತ್ತವನ್ನು ನೆನೆದು ಘಟೋತ್ಕಚನನ್ನಾದರಿಸುವಿಕೆ.

ರಾವಣನ ಬಿಸುಟಂದು ರಾಘವ
ದೇವನನು ಮಱೆಯೊಗಲು ಬ್ರಹ್ಮನ
ಜೀವವುಳ್ಳನ್ನ ಬರ ಕೊಟ್ಟನು ತನಗೆ ಸಂಪದವ ।
ದೇವನಿವರನು ಕಾವ ಭರದಲಿ
ನಾವು ಬಱಲಿದೊಡಾವಪರಿಯಲಿ
ಹೇವೆ ತಪ್ಪುವುದೆನುತ ಚಿಂತಿಸುತಿರ್ದ ಮನದೊಳಗೆ ॥ ೪೦

ಕ್ರತುವಿದಸುರಾರಾತಿ ಯಾಕ್ರತು
ಪತಿ ಯುಧಿಷ್ಠಿರ ದೂತನಾನಿದ
ಱತಿಶಯುವ ನೀವ್ ಬಲ್ಲಿರೆನೆ ನೋಡಿದನು ತನ್ನವರ ।
ಹಿತರುವಿದಱಿಂದಧಿಕಪುಣ್ಯಾ
ಪ್ರತತಿಯುಂಟೇ ರಾಮಚಂದ್ರಾ
ಕೃತಿ ತದೀಯತ್ರೇತೆ ಯಾದ್ವಾಪರದಲಾಯ್ತೆಂದ ॥ ೪೧

ತಾವು ಮರ್ತ್ಯರು ಪೂರ್ವಯುಗದವ
ರಾವು ತಮ್ಮಂತರವ ನೋಡದೆ
ದೇವರೆದೆದಲ್ಲಳದಲುಕ್ಕಿಯು ತಾವನೀಕ್ಷಿಸದೆ ।
ಆವುದುಚಿತಾನುಚಿತವೆಂಬುದ
ಭಾವಿಸದೆ ಗರ್ವಿತರು ನೋಡಿಂ
ನಾವ ಸದರವೊ ನಾವೆನುತ ಗರ್ಜಿಸಿತು ಭಟನಿಕರ । ೪೨

ಆಗ ರಾಕ್ಷಸಭಟರು ಘಟೋತ್ಕಚನನ್ನು ಹಿಯ್ಯಾಳಿಸಿ ಗರ್ಜಿಸುವಿಕೆ.

ನೊಸಲಿನಲಿ ಕಣ್ಣುಳ್ಳದೇವನು
ಬಸೆವ ಲಂಕಾದ್ವೀಪಸೀಮೆಗೆ
ಮಿಸುಗಲಮ್ಮನು ಬಂದು ಕಂಡವರಿಲ್ಲ ಪಟ್ಟಣವ ।
ಬಿಸಜಸಂಭವನಾದಿದಿವಿಜ
ಪ್ರಸರ ಮಿಗೆ ನಡಗುತ್ತಲಿಪ್ಪುದು
ನುಸಿಗಳಹ ಮಾನವರ ಪಾಡೇನೆನುತ ಗರ್ಜಿಸಿತು ॥ ೪೩

ಕಾಳಗದೊಳಂದೆಮಗೆ ದಿವಿಜೇಂ
ದ್ರಾಳಿಯಲಿ ಸಮಭಟರ ಕಾಣೆವು
ಮೇಳವೇ ಮಝುಪೂತು ಮರ್ತ್ಯರ ಸಹಸವೆಮ್ಮೊಡನೆ ।
ತೋಳನಳವಿಗೆ ಮಲೆತ ಕುಱಿಗಳ
ಜಾಲದಂತಿಹುದೆಂದು ಮಂಗಕ
ರಾಳಮತಿಗಳು ನಗಲು ಬೞಿಕೆಂದನು [1] ಘಟೋತ್ಕಚನು ॥ ೪೪

ನಾಲಿಗೆಯ ನೆಣಗೊಬ್ಬಿನಲಿ ಛ
ಡಾಳಿಸಿದೊಡೇನಹುದು ಸಭೆಯಲಿ
ಕಾಳಗದೊಳಿದಿರಾರು ಭೀಮಾರ್ಜುನರ ಭಾರಣೆಗೆ ।
ಆಳುತನವಂತಿರಲಿ ವೈಷ್ಣವ
ಮೌಳಿ ನುಡಿಯಲಿ ಕೇಳ್ವೆನೆನೆ ಕ
ಟ್ಟಾಳುಗಳ ದೇವನು ವಿಭೀಷಣ ನಗುತಲಿಂತೆಂದ ॥ ೪೫

ಆ ಭಟರನ್ನು ವಿಭೀಷಣನು ಸಮಾಧಾನಪಡಿಸುವಿಕೆ.

ಕಾಲವಾವುದು ತನ್ನ ಶಕ್ತಿಯ
ಕೀಱುಮೇಲಾವುದು ಸಹಾಯದ
ಮೇಲು ಸೆಱಗೇನೆಂದು ಬಗೆಯದೆ ಬಯಲಗರ್ವದಲಿ ।

---

1 ಕಂಡನು ಕಲಿ, ಚ.

ಸೋಲುವುದು ಜಗವಿಹಪರದ ಗತಿ
ಕಾಳಪುದು ಖಳರಱಿಯರಿದನು
ಬ್ಬೇಱುವರು ಬಱಿದೆಂದು ಜಱಿದನು ತನ್ನ ಮಂತ್ರಿಗಳ ‖ ೪೬

ಅದಱಿನೀದ್ವಾಪರದ ಫಲಾಹರಿ
ಯುದಯಿಸಿದನಾಕಾಲದಲಿ ಸಲ
ಹಿದನು ನಮ್ಮನು ಹಿಡಿದನಿವರನು ವರ್ತಮಾನದಲಿ |
ಪದದ ದರ್ಪದಲಂಬುಜಾಕ್ಷನ
ಪದವ ಮಱೆದೊಡೆ ಘಾತಕದ ದು
ರ್ಗದಲಿ ಕೆಡಹನೆ ನಮ್ಮನೆಂದು ವಿಭೀಷಣನು ನುಡಿದ ‖ ೪೭

ದೇವನೊಲಿದವರುಗಳು ವಿಂಗೆ ಸಂ
ಭಾವಿತರು ಲೋಕದಲಿ ಕಮಲಾ
ದೇವವಿರಹಿತವಾದ ದಿವಿಜರ ಮಾತದಂತಿರಲಿ |
ದೇವಕೀನಂದನನ ಚರಣದ
ಸೇವೆಗಿಂತಿದು ಯೋಗ್ಯವಾದೊಡೆ
ನಾವು ಧನ್ಯರೆನುತ್ತ ನಗುತ ವಿಭೀಷಣನು ನುಡಿದ ‖ ೪೮

ನಾನಾವಿಧಪದಾರ್ಥಗಳನ್ನು ತರಿಸಿ ಕೊಡುವಿಕೆ.

ತರಿಸಿದನು ಭಂಡಾರದಲಿ ಪರಿ
ಪರಿಯ ಪೆಟ್ಟಿಗೆಗಳನು ಕಂಠಾ
ಭರಣಕಂಕಣವಜ್ರಮಾಣಿಕಮರಕತಾವಳಿಯ |
ಚರಣನೂಪುರಝಳವಟಿಗೆಯುಂ
ಗುರಕಿರೀಟಾಂಗದಸುಕರ್ಣಾ
ಭರಣವೆನು ತೆಗಿಸಿದನು ಭೀಮಕುಮಾರ ನೋಡೆನುತ ‖ ೪೯

ನೀಲಮಣಿಕಾಂತಿಗಳ ಹೊಯ್ಲಲಿ
ಕಾಳರಜನಿಯೊಲಾಯ್ತು ಮುತ್ತಿನ
ಥಾಳ ಧವಳಿಸಲಾಯ್ತು ಚಂದ್ರಿಕೆ ತಮವ ಡೊಕ್ಕರಿಸಿ |

ಮೇಲೆ ಹೊಂಬಿಸಲಾಯ್ತು ಮಾಣಿಕ
ದೇಟಿಗೆಯ ಲಹರಿಯಲಿ ವರರ
ತ್ನಾಳಿರುಚಿಯಲಿ ಚಂಡಿಯಾಯಿತು ದಿವಸವೆಂದಿನಲಿ ‖ ೫೦

ತೆಗಿಸಿದನು ಗಜದಂತಮಯಪೆಟ್ಟಿ
ಗೆಗಳನು ಕರ್ಪೂರದ ಕವಲಾ
ಯಿಗಳ ಹವಳದ ಮಂಚವನು ಮಣಿಖಚಿತರಚನೆಗಳ |
ಬಿಗಿದ ವಜ್ರಪ್ರಭೆಯ ಹೊನ್ನಾ
ಯುಗದ ಖಡ್ಗಕಠಾರಿಗಳ ಝಗ
ಝಗಿಪ ಹೊಂಗೆಲಸದಲಿ ಚಿತ್ರದ ಜೋಡುಸೀಸಕವ ‖ ೫೧

ಗುಳವ ರೆಂಚೆಯ ಪಕ್ಕರಿಕೆಪ
ಲ್ಲಳವ ಮಣಿಕಾಂಚನಮಯಂ
ಗಳ ಕೆಲಸಗತಿಗಳ ಹೇಮರೇಖೆಯ ರಜತಭಾಜನವ [1] |
ಬಿಳಿಯಚಾರಿಯ ಹೊಳೆಗಳುರುಹ
ತ್ತಳದ ಕಟ್ಟಿಗೆಬೀಂಟೆಗಳ ಪದ
ವಿಲು ತದೀಯಶರಂಗಳನು ತಂದಿಳುಹಿದರು ಚರರು ‖ ೫೨

ಬಲಮುಖಿಯ ಶಂಖಗಳ ಗಂಧದ
ಬಲುಹೊರೆಯ ಕೃಷ್ಣಾಗರುಗಳೊ
ಟ್ಟಿಲ ಸುರಂಗದ ಪಟ್ಟೆ ಪಟ್ಟಾವಳಿಯ ದಿಂಡುಗಳ |
ಪುಲಿದೊಗಲ ಕೃಷ್ಣಾಜಿನಂಗಳ
ಹೊಳೆವ ಹೊಂಗೊಪ್ಪರಿಗೆ ಚಿತ್ರಾ
ವಳಿಯ ಸತ್ತಿಗೆ ಹೇಮಘಟಸಂಕುಲವನೊಟ್ಟಿದರು ‖ ೫೩

ಕೀಚಿಸಿದನರಮನೆಯ ಹೇಮದ
ತಾಳಮರಹದಿನಾಲ್ಕನಧ್ವರ
ಶಾಲೆಯಿದಿರಲಿ ತೋರಣಸ್ತಂಭಂಗಳಹುವೆಂದು |

---

1 ವಿವಿಧಚಿತ್ರಗಳ, ಚ.

ಮೇಲೆ ರಾಕ್ಷಸಟಂಕವಚಿಕೆ ನ
ಜಾಳಿಗೆಗಳನು ತರಿಸಿ ಕಟ್ಟಿಸಿ
ಮೇಲುಮುದ್ರೆಗಳಿಕ್ಕಿದುವು ತರಿಸಿದನು ಹೊಱೆಯುವರ ॥ ೫೪

ಆಪದಾರ್ಥಗಳನ್ನು ವಿಭೀಷಣಭಟರೇ ಹೊತ್ತುಕೊಂಡು ಬರುವಿಕೆ

ಕುಲಗಿರಿಯನೊಡೆಮೀಟ ತಮ್ಮಯ
ತಲೆಯೊಳಾನುವ ಕರ್ಕಶಾಂಗದ
ಕಲುದಲೆಯ ಹೇರೊಡಲ ಮಿಡುಕಿನ ಕಾಳರಕ್ಕಸರು ।
ಸೆಳೆದು ಹೊತ್ತರು ಹೊಱೆಯನವರಿ
ಟ್ಟೆಳಸಿ ಹೊಱವಂಟರು ವಿಭೀಷಣ
ಕಳುಹಿದನು ಪವಮಾನಸುತನಂದನನ ಸತ್ಕರಿಸಿ ॥ ೫೫

ಆಗ ಭಟರನ್ನು ನೋಡಿ ಸಹದೇವನ ಭಟರು ಹೆದರುವಿಕೆ.

ದನುಜನಬಿಯು ದಾಟಿ ಸಹದೇ
ವನ ಸಮೀಪಕೆ ಬಂದು ರಾವಣ
ನನುಜ ಮಾಡಿದ ಬಹಳಸತ್ಕಾರವನು ಬಿನ್ನವಿಸಿ ।
ಅನಿಬರನು ಕಾಣಿಸಿದನಾಕಾಂ
ಚನಮಯದ ಹೊಱೆ ಯೆಂಟುಸಾವಿರ
ವೆನುಪಮಿತರಕ್ಕಸರ ಕಂಡಂಜಿದುದು ನೃಪಕಟಕ ॥ ೫೬

ಲಾಲಿಸಿದನಾಖಳರನೆತ್ತಿತು
ಪಾಳೆಯವು ನಡೆತಂದು ಪಯಣದ
ಮೇಲೆ ಪಯಣದಲೈದಿ ಬಂದನು ತಮ್ಮ ಪಟ್ಟಣಕೆ ।
ಮೇಲೊಗುವ ಸುಮ್ಮಾನ ಸಿರಿಯು ಛ
ಡಾಳದಲಿ ತಂದಖಿಳವಸ್ತುವ
ನಾಲಯದೊಳೊಪ್ಪಿಸಿದನವನೀಪತಿಗೆ ಸಹದೇವ ॥ ೫೭

ಐದನೆಯ ಸಂಧಿ ಮುಗಿದುದು.

## ಆ ರ ನೆ ಯ ಸಂ ಧಿ .

ಸೂಚನೆ

ನಕುಲ ಪಶ್ಚಿಮದೆಸೆಯ ಭೂಪಾ
ಲಕರ ಗೆಲಿದನು ಸಕಲವಸ್ತು
ಪ್ರಕರದಿಂದಳಕಾಪುರಿಗೆ ಮಿಗಿಲಾಯ್ತು ನೃಪನಗರ ||

ಯುವನನೇಪಾಳಾದಿದೇಶಗಳ ಅರಸರನ್ನು ಗೆಲ್ಲುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಪಶ್ಚಿಮದೆಸೆಯ ಭೂಮಿಪಾ
ಪಾಲಕರ ಮೇಲೆತ್ತಿ ನಡೆದನು ನಕುಲನೊಲವಿನಲಿ |
ಧಾಟಿ ಹರಿದುದು ಮರುಯುವನನೇ
ಪಾಳರೋಹಿತನೆಂದೆನಿಪ [1]ಭೂ
ಪಾಲಕರ ಮುಱಿದವರ ಸಪ್ತಾಂಗವ [2]ವಿಭಾಡಿಸಿದ || ೧

ಹೇಮಕರ ಸ್ವೈರಿಭಕರೆಂಬ ಸ
ನಾಮರನು ಮುಱಿದನು ಕಳಿಂಗದ
ಭೂಮಿಪರ ಸದೆದನು ತ್ರಿಗರ್ತರ ಶಿಬಿಯ ಸಂತತಿಯ |
ಹೇಮಮಾತ್ರವನುಱುಹದವದಿರ
ಭೂಮಿಗಳವರ್ಗಿತ್ತು ವಸ್ತು
ಸ್ತೋಮವನು ನೆರಹಿದನು ನಡೆದನು ಮುಂದೆ ಪಶ್ಚಿಮಕೆ || ೨

ಮುಱಿದನಗ್ರದ ದಂಡಧಾರನ [3]
ನೆಱಗಿದನು ಬರ್ಬರ ತುರುಷ್ಕರ

---

1 ರಲಿ ರೋಹಿತಕನೆಂಬ ನೃ, ಕ. ಖ. 2 ಪಾಲಕನ ಮುಱಿದವನ, ಸಾ. ಕ. ಖ.
3 ಚೇಕಿ ತಾನರ, ಚ.

ನೊಱಗಿಸಿದನಾಹವದೊಳಗೆ ಭೀಕರದ [1] ಬಾಹ್ಲಿಕರ ।
ಸೆಱೆಯ ಹಿಡಿದನು ಪಾರ್ವತೇಯರ
ನುಱುಕುಗೊಳಿಸಿದಚೀನರಂಬ
ಷ್ಠ ಱನು ಸಿಂಧುಸರಸ್ವತೀತೀರದ ಮಹೀಶ್ವರರ ॥ ೭

ರಣದ ಸಂಕೇತಕದೊಳುತ್ಸವ
ರಣಸಮರ್ಥರ ಹಿಂಡಿದನು ಚಾ
ರಣರ ಪುರಸಾಹಣರ ಪುಷ್ಕರವನನಿವಾಸಿಗಳ ।
ಹಣಿದನಲ್ಲಿಂದತ್ತಲಾಪಡು
ವಣದಿಗಂತದವಲದಟೆಗರ ಪ
ಟ್ಟಣದ ವರಕಾಂಚನವ ಸೆಳದನು ಭೂಮಿಪರ ಗೆಲಿದು ॥ ೪

ಖ್ಯಾತಿಕರವಣ್ಣ ಕಟಕರ ಕ್ಷತ
ಯಾತಿಕರ ಯೌಧೇಯಸಂವೀ
ರಾತಿಶಯಪಡಿಹಾರರಮಳದ್ವಾರಪಾಲಕರ ।
ಘಾತಿಸಿದನವರುಗಳ ವಿತ್ತ
ವ್ರಾತವನು ಹೇಱಿಸಿದನೆಡಬಲ
ದಾತಗಳನಪ್ಪಳಿಸಿ ತೆಗೆದನು ಸಾರವಸ್ತುಗಳ ॥ ೫

ನಕುಲನಿಗೆ ಶಲ್ಯನಿಂದ ಆದಮರ್ಯಾದೆ.

ಮಾವನಲ್ಲಿಗೆ ಬಂದೊಡಾಮ
ದ್ರಾವನೀಪತಿ ಶಲ್ಯ ಮಿಗೆ ಸಂ
ಭಾವಿಸಿದನೊಲಿದಿತ್ತನೀತಂಗಖಿಳವಸ್ತುಗಳ ।
ತೀವಿದರು ಭಂಡಿಯಲಿ ಮುಂದಣ
ಚಾವಟೆಯ ಚಪಳರಿಗೆ ಹರಿಯೆ ನೃ
ಪಾವಳಿಗಳಲ್ಲಲ್ಲಿ ತೆತ್ತುದು ಬಂದು ತಮತಮಗೆ [2] ॥ ೬

---

[1] ಗಂಭೀರಕರ, ಟಕ.  [2] ತೆತ್ತರು ಕಂಡು ವಸ್ತುಗಳ, ಚಕ.

ಮ್ಲೇಚ್ಛರಾಜರನ್ನು ಗೆದ್ದುದು.

ತಳತು ಬಿಟ್ಟುದು ಸೇನೆ ಪಡುವಣ
ಜಲಸಿಧಿಯ ಕೈವೆಳಗಳಲಿ ಕೇ
ವಳಿಸಿದರು ಕೊಲ್ಲಣಿಗೆಯಲಿ ಕೊಂಡರು ಸುವಸ್ತುಗಳ ।
ಕಳವಳಿದು ಹಿಮಗಿರಿಯ ಮೂಲೆಯ
ನಿಲುಕಿ ಸಕಲಮ್ಲೇಚ್ಛ ಭೂಪಾ
ವಳಿಯ ಭಂಗಿಸಿ ಹೇಱಿಸಿದನೊಂಟೆಗಳಲಾಧನವ ॥ ೭

ಹೇಱಿದುವು ಬಹುಧನವನೊಂಟೆಗ
ಳಾಱುಸಾವಿರ ಮಿಕ್ಕವಸ್ತುವ
ಹೇಱಿದುವು ಎತ್ತುಗಳ ಹೂಡಿದಭಂಡಿಸಾವಿರವು ।
ಆಱುಲಕ್ಷತುರಂಗವರರಥ
ಮೂಱುಕೋಟಿಯ ರಚನೆ ಗಣನೆಯ
ಮೀಱಿದುವು ಮೃಗಪಕ್ಷಿಕೋಣನ ಕುಱಿಯ ಹಿಂಡುಗಳು ॥ ೮

ಮರಳತಾತನ ಸೇನೆ ಬಂದುದು
ಪುರಿಗೆ ಕಂಡನು ಧರ್ಮಪುತ್ರನ
ಚರಣಕೆಱಗಿದನಖಿಳವಸ್ತುವ ಬೇಱೆ ತೋಱಿಸಿದ ।
ಅರಸನುತ್ಸವವನು ವೃಕೋದರ
ನರನಕುಲಸಹದೇವನಂತಃ
ಪುರದ ಹರುಷದ ಶಿರಿಯನದನೇವರ್ಣಿಸುವೆನೆಂದ ॥ ೯

ಧರ್ಮರಾಯನ ರಾಜ್ಯಭಾರ

ಕಳವು ಹುಸಿ ಹಾದರ ವಿರೋಧ
ಸ್ಖಲಿತವಾಱಿಡಿ ಬಂದಿ ದಱಿದುಱಿ
ಬೆಳಗವತೆ ಪರಿಭವಣೆ ಡಾವರ ಠಕ್ಕು ಡೊಳ್ಳಾಸ ।
ಹಱಿವು ವಂಚನೆ ಜಾತಿಸಂಕರ
ಕೊಲೆ ವಿರೋಧನ ವಿಕೃತಿ ಮಾಯಾ
ವಳಗಳಡಗಿದುವಾಯುಧಿಷ್ಠಿರನೃಪನ ರಾಜ್ಯದಲಿ ॥ ೧೦

ನೃಗನ ಭರತನ ದುಂದುಮಾರನ
ಸಗರನಾಪುರುವಿನ ಪುರೂರನ
ಮಗನ ನಹುಷನ ಕಾರ್ತವೀರ್ಯನ ನಳನ ದಶರಥನ |
ಹಗಲಿರುಳುವಲ್ಲಭರ ವಂಶದ
ವಿಗಡರೊಳು ಯಮಸೂನು [1] ಸರಿಯೋ
ಮಿಗಿಲೊ ಬಲ್ಲವರಾರೆನಲು ಸಲಹಿದನು ಭೂತಳವ || ೧೧

ದ್ವಾಪರದ ಮಜಂಜವನಿಕೆಯಲ್ಲಿ
ದ್ವಾಪರವೊ ಕೃತಯುಗವೊ ಧರ್ಮದ
ರೂಪು ನಾನಾಮುಖದಲವತರಿಸಿತೊ ದಿಗಂತದಲಿ |
ಸ್ಥಾಪಿಸಿತು ವರ್ಣಾಶ್ರಮದ ಧ
ರ್ಮೋಪಚಯವೆರಡಂಫ್ರಿ ಮುಱಿದು ವಿ
ರೂಪವಾದುದುದಧರ್ಮವೀಧರ್ಮಜನ ರಾಜ್ಯದಲಿ || ೧೨

ಬಡಗಲುತ್ತರಕುರುಗಳತ್ತಲು
ಪಡುವಲುದಧಿ ವಿಭೀಷಣನ ಪುರ
ಗಡಿ ಕೃತಾಂತನ ದೆಸೆಗೆ ಮೂಡಲು ದಿನಪನುದಯಾದ್ರಿ |
ಪೊಡವಿಯುವಜೊಳು ಯಮಜನಾಜ್ಞೆಗೆ
ನಡುಗುವುದು ರಾಯಂಗೆ ತೆತ್ತುದು
ಗಡ ಸುವಸ್ತುವನೇನಸಾಧ್ಯವು ಕೃಷ್ಣನೊಲಿದರಿಗೆ || ೧೩

ಖಳನ ಸವೆದರು ಮಜಯೋಜನ
ವಳಯದಲಿ ಪಡಿಮಗಳು ಕೋಟಾ
ವಳಯ ಸುಮ್ಮಾನದಲಿ ಹೊಯ್ದರು ರತ್ನಕಾಂಚನವ |
ಕೆಲದೊಳೈಗಾವುದದಲಿಕ್ಕಿದ
ತಳಯ ಮಧ್ಯದಲಖಿಳವಸ್ತು
ವಳಿಯನೊಟ್ಟಿದರದಱ ಕೆಲದಲಿ ಭೂಪ ಕೇಳೆಂದ || ೧೪

---

[1] ರಲ್ಲಿಯ ಸೂಱು, ಚ.

ಹತ್ತು ಯೋಜನವಳಯದಲಿ ವಿಗೆ
ಸುತ್ತು ವೇಲೆಯು ಮಧ್ಯದಲಿ ಹಯ
ಮೆತ್ತು ಗಜರಥಗೋವಮಹಿಷವರಸ್ಥೈರಿಭದ ಚಯಕೆ ।
ಉತ್ತಮಾಂಗನೆಯರಿಗೆ ಭವನಗ
ಳತ್ತ ಬೇಱಿರವಾಯ್ತು ನೃಪಯಾ
ಗೋತ್ತಮಕೆ ಪರುಠವಿಸಿದರು ಭೂಪಾಲ ಕೇಳೆಂದ ॥ ೧೫

ಬಳಿದ ಸೊದೆಗಳ ಭಾವಿನೂಱಱ
ವಳಯ ತುಂಬಿತು ತೈಲಘೃತಮಧು
ಗಳಲಿವರ ಗುಡಶರ್ಕರಾದಿಯ ಕಣಜಕೋಟಿಗಳು ।
ಕಳವೆಯಕ್ಕಿಯ ಕಪಲೆ ಗೋಧಿಯ
ತಿಲದ ರಾಸಿಯದೇಸು ಯೋಜನ
ದಳತೆಯೆಂದಾರಱಿವರೆಂದನು ಮುನಿ ನೃಪಾಲಂಗೆ ॥ ೧೬

ಶ್ರೀಕೃಷ್ಣನನ್ನು ಕರೆಕಳುಹಿಸೆಂದು ವ್ಯಾಸರ ಉಪದೇಶ.

ನೆರೆದುದರ್ಥವನಂತವವನೀ
ಶ್ವರರು ವಶವಾದರು ಚತುಸ್ಸಾ
ಗರದ ಮಧ್ಯದಲಾಣೆ ಸಂದುದು ಧರ್ಮನಂದನನ ।
ಕರೆಸಿ ಬೇಹವರನು ಮಹೀಶಾ
ಧ್ವರಕೆ ಸಮಯವಿದೆಂದು ಪಾರಾ
ಶರಿಯಧಾಳಿವ್ಯರು ಮಂತ್ರಶಾಲೆಯೊಳೆಂದರರಸಂಗೆ ॥ ೧೭

ಅರ್ಜುನನು ಕೃಷ್ಣನ ಬಳಿಗೆ ಬಂದು ಕರೆಯುವಿಕೆ.

ಹೋಗು ಫಲುಗುಣ ಕಂಸಮಥನನ
ಬೇಗ ಬಿಜಯಂಗೈಸಿ ತಾ ನೃಪ
ಯಾಗವಾತನ ಕೊಱ ಮದೀಯಜಯಾಭಿವೃದ್ಧಿಗಳು ।
ಆಗು ಹೋಗಾತನದು ತಟ್ಟೆಯ
ವಾಗದೀಕ್ಷಣವೆನಲು ಮನದನು
ರಾಗದಲಿ ಕಲಿಪಾರ್ಥ ಬಂದನು ಕಂಡನಚ್ಯುತನ ॥ ೧೮

ಬಿನ್ನವಿಸಿದನು ದಿಗ್ವಿಜಯುಸಂ
ಪನ್ನವಸ್ತುವಿಧಾನವನು ಮೇ
ಲಿನ್ನು ದೇವರು ಬಲ್ಲಿರುತ್ತರಕಾರ್ಯಸಂಗತಿಯು ।
ನಿನ್ನ ಕೃಪೆಯಲಿ ರಾಜಮುಖವನಿ
ಷ್ಪನ್ನವಾದೊಡೆ ಬೊಪ್ಪನಿಂದ್ರನ
ಮನ್ನಣೆಯು ಮೈಸೋಂಕಿನೋಲಗಸುಲಭವೆ [1] ಹುದೆಂದ ॥ ೧೯

ಶ್ರೀಕೃಷ್ಣನ ಬರುವಿಕೆ.

ಕರೆಸಿ ಯಾದವನಾಯಕರ ಸಂ
ವರಣವನು ನಿಜಪುರದ ಕಾಹಿಂ
ಗಿರಿಸಿ ವಸು [2] ದೇವಂಗೆ ನೇಮಿಸಿ ಸಕಲರಕ್ಷಣವ ।
ತರಿಸಿ ಭಂಡಾರದಲಿ ವಿವಿಧಾ
ಭರಣರತ್ನಾವಳಿಯು ಹೇಱಿಸಿ
ಹರಿ ಧನಂಜಯನೊಡನೆ ಬಂದನು ಬಂಧುಜನಸಹಿತ ॥ ೨೦

ಕೃಷ್ಣ ಮತ್ತು ಧರ್ಮರಾಯನ ಸಂಭಾಷಣೆ.

ಇದಿರುವಂದನು ಧರ್ಮಸುತ, ಹರಿ
ಪದಪಯೋಜವಲೆಱಗಿದನು ನಿನ
ಗಿದು ವಿನೋದವಲೇ ವಿಮುಕ್ತಗೆ ಭಕ್ತಸಂತರಣ ।
ಕುದಿದು ಮುಱುಗಿದುವೆಱಿಸಿ ನಿನ್ನಯ
ಪದವ ಕಾಣದೆ ಶ್ರುತಿಗಳಮ್ಮಯ
ಸದನವಖಿಳಾಮ್ನಾಯನಿಕರವನೇಡಿಸುವುದೆಂದ ॥ ೨೧

ನಗುತ ಸಾಕೇಪೆನುತ ರಾಯನ
ನೆಗಹಿ ತಕ್ಕಸಿ ಕೈಯ್ಯ ತಳುಕಿನೊ
ಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ ।

1 ಸುಭಗನ, ಚ. 2 ಖಲ ಚ.

ಮುಗಿದ ಕರದಲಿ ವ್ಯಾಸಧೌಮ್ಯಾ
ದಿಗಳು ವೈಯಿಕ್ಕಿದರಖಿಳಮಂ
ತ್ರಿಗಳು ಸಚಿವರು ನೆರೆದರಾಳೋಚನೆಯ ಭವನದಲಿ ॥ ೨೦

ಕಳುಹಿದರು ನಾನಾನೃಪರ ಮಂ
ಡಲಕೆ ದೂತರ ನಿಖಿಲಋಷಿಸಂ
ಕುಳಕೆ ಶಿಷ್ಯರ ಪರುಠವಿಸಿದರು ಹಸ್ತಿನಾಪುರಕೆ ।
ಕಳುಹಿದರು ನಕುಲನನು ಬಳಿಕಿ
ತ್ತಲು ನೃಪಾಧ್ವರಶಾಲೆಗಲ್ಲಿಯ
ನೆಲನ ಶೋಧಿಸಿ ಕರೆಸಿದರು ಬಹುವಿಧದ ಶಿಲ್ಪಿಗಳ ॥ ೨೩

ಯಾಗಶಾಲಾನಿರ್ಮಾಣ.

ಮಯನ ಮತದಲಿ ವಿಶ್ವಕರ್ಮನ
ನಯವಿವೇಕದಲಮಳಮಖಶಾ
ಲೆಯನು ನಿರ್ಮಿಸಿದರು ಸುಲಕ್ಷಣಶಾಸ್ತ್ರ[1]ಸೂತ್ರದಲಿ ।
ನಿಯತಪತ್ನೀಶಾಲೆ ಜನವೇ
ದಿಯವರಾಂತರ್ವೇದಿ ಮುಖವೇ
ದಿಯ ಬಹಿರ್ವೇದಿಗಳನಳವಡಿಸಿದರು ಪಹಿಲದಲಿ ॥ ೨೪

ಬಿಗಿದ ಬಿಂಗಾರಿಗಳ ಮೇಲ್ಕ
ಟ್ಟುಗಳ ಮಣಿಮಯಸೂಸಕದ ಲೋ
ವೆಗಳ ಮಖಮಂಟಪದ ಚೌರಿಯ ನವಫಲಾವಳಿಯ ।
ಹೊಗರ ನೀಲದ ಪರಿಯ ನೆಲಗ
ಟ್ಟುಗಳ ಚಪ್ಪರದೆಡೆಯ ಯೆಡೆ ಚೌ
ಕಿಗೆಯ ಚತುರಂಗದ ವಿಚಿತ್ರದ ರಚನೆ ಚಲುವಾಯ್ತು ॥ ೨೫

ಪುರದ ಹೊರವಳಯದಲಿ ಯಮುನಾ
ವರನದಿಯ ತೀರದಲಿ ಧರಣೀ
ಶ್ವರರಿಗರಮನೆ ಮಾಡಿದುವು ನವರತುನಮಯವಾಗಿ ।

---

[1] ವಾಸ್ತು, ಕ.

ಸುರಪುರದ ಮೊರಾಂಕ ಭುಜಗೇ
ಶ್ವರನ ಭೋಗಾವತಿಯು ಶಿಲ್ಪದ
ಗುರುವೆನಿಸಿತೀನಗರ ನಾರಾಯಣನ ಕರುಣದಲಿ ॥ ೨೬

ಆರನೆಯ ಸಂಧಿ ಮುಗಿದುದು.

---

## ಏ ಳ ನೆ ಯ ಸ ಂ ಧಿ .

ಸೂಚನೆ.

ಸುರರ ದುಂದುಭಿ ಮೊಱಗೆ ಧರಣೀ
ಶ್ವರನ ಚಿಂತೆಗಳಡಗೆ ಯಮಸುತ
ಪುರಕೆ ಪುರುಷಾಮೃಗಸಹಿತ ನಡೆತಂದನಾಭೀಮ ।

ಧರ್ಮರಾಯನ ಚಿಂತೆ.

ಕೇಳು ಜನಮೇಜಯ ಧರಿತ್ರೀ
ಪಾಲ ಮಾಡುವ ರಾಜಸೂಯಕೆ
ಲೀಲೆಯಲಿ ಬುಧಜನವ ನಾವ್ ಸಂತವಿಪ ತೆಱನೆಂತು ।
ಜಾಲವನು ಕರೆದುದಕೆ ತಕ್ಕುದು
ಪೇಱಲಿಸಲು ಭೋಜನೋತ್ತರ
ಮೇಲಣಱಯುರದೇನು ಹವನೆಂದರಸ ಚಿಂತಿಸಿದ ॥ ೧

ತಿಳಿಯಲಱಯದೆ ಬಳಿಕಲವನಿಪ
ತಿಲಕ ಧೌಮ್ಯನ ಕರೆಸಿ ಬೆಸಗೊಳೆ
ಬಳಿಯಲಾಯಮನಂದನನಂಗಿಂತೆಂದನೊಲವಿನಲಿ ।

ಧೌಮ್ಯರ ಅಪ್ಪಣೆಯಂತೆ ಶ್ರೀಕೃಷ್ಣನ ಬಳಿ ಬರುವಿಕೆ.

ತಿಳಿಯದೆಮಗಿದು ಕೃಷ್ಣರಾಯನ
ಬಳಿಗೆ ಪೋಗೆಂದಧಿಕಬುದ್ಧಿಯು
ಕಲಿವುದೆನಲವನೀಶನಾಮುನಿ ಯೆನುತ ಹೊಱವಂಟ ॥ ೨

ಕಾಲುನಡೆಯಲಿ ಬರುತಿರಲು ಕರು
ಣಾಳು ಪರಿತೋಷದಲಿ ಕಂಡು ನಿ
ಜಾಲಯಕೆ ಕೊಂಡೊಯ್ದು ನತಿಹರುಷದಲಿ ಧರ್ಮಜನ ।
ಲೀಲೆಯಲಿ ವಿವಿಧೋಪಚಾರದಿ
ಲಾಲಿಸಿದನಾಬಳಿಕಲಕ್ಷ್ಮೀ
ಲೋಲ ನುಡಿದಪನವನಿಪಾಲಕನುಚಿತವಚನದಲಿ ॥ ೩

ಧರ್ಮರಾಯನನ್ನು ಕುರಿತು ಕೃಷ್ಣನ ಪ್ರಶ್ನೆ.

ಏನು ಬಂದಿರಿ ಕಾರಿಯದ ಹದ
ನೇನು ನಿಮ್ಮಯ ರಾಜಸೂಯವಿ
ಧಾನ [1] ವಾವುದು ಹೇಳಿರೆನುತಸುರಾರಿ ಬೆಸಗೊಂಡ ।
ಮೌನವೇಕೆಲೆ ಧೌಮ್ಯಮುನಿ ಯಮ
ಸೂನುವಿನ ಮೊಗ ನೋಡೆ ನಸುನಗು
ತಾ ನರಾಧಿಪನಾಗಲಸುರಾರಾತಿಗಿಂತೆಂದ ॥ ೪

ದೇವ ಚಿತ್ತವಿಸುವುದು ನಿಮ್ಮ ಕೃ
ಪಾವಲೋಕನದಿಂದ ಸಕಲವು
ಹಾವಿಭವದಲಿ ನಡೆಯಬಹುದೊಂದುಳಿಯೆ ಬಳಿಕದನು ।
ನೀವು ಮಿಗೆ ಪೂರೈಸಿದೊಡೆ ಮೇ
ಲಾವಪರಿಯಲಿ ಕೊರತೆ ಯಿಲ್ಲೆಂ
ದಾವಿಮಲಮತಿ ನುಡಿದ ಬಳಿಕಿಂತೆಂದನಸುರಾರಿ ॥ ೫

ರಾಜಸೂಯದಲ್ಲಿ ಎಂಜಲಿನ ಶುದ್ಧಿಗೆ ಪುರುಷಾಮೃಗವನ್ನು ತರಬೇಂದು
ಕೃಷ್ಣನ ಅಪ್ಪಣೆ.

ಹೇಳಿ ನೀವಿದಕಂಜಲೇಕೆ ನೃ
ಪಾಲ ಯೆನೆ ಕೈಮುಗಿದು ಲಕ್ಷ್ಮೀ
ಲೋಲನಂಘ್ರಿಗೆ ನಮಿಸಿ ನಗುತೆಂಜಲಿನ ಶುದ್ಧತೆಗೆ ।

[1] ಕನೂನ, ಡ.

ಹೇಳಿದಕೆ ಬುದ್ಧಿಯೆನೆ ತದ್ವನ
ಮೌಲಿ ಪುರುಷಾಮೃಗವನಿಲ್ಲಿಗೆ
ನಾಳೆ ಭೀಮನ ಕಳುಹಿ ತರಿಸೆನಲರಸನಿಂತೆಂದ ‖ ೬

ಜಗದುವರ ಚಿತ್ತವಿಸು ಪುರುಷಾ
ಮೃಗವದೆಲ್ಲಿಹುದೆನೆ ಕೃತಾಂತನ
ಮಗನೆ ಕೇಳುತ್ತರದ ಹೇಮಾಚಲದ ದಕ್ಷಿಣದ ।
ದಿಗುತಟದ ಮಾನಸಸರೋವರ
ನಿಗಮವೇದಿಕವದಟ ತೀರದ
ಲಘಹರನನರ್ಚಿಸುತಲಿಹುದೆನಲರಸ ಬೀಟ್ಕೊಂಡ ‖ ೭

ಅದನ್ನು ಕರೆತರುವುದಕ್ಕಾಗಿ ಭೀಮನನ್ನು ಕರೆಸುವಿಕೆ.

ಬಂದನರಮನೆಗವನಿಪತಿ ಹರಿ
ನಂದನನ ಕರೆ ಯೆನಲು ದೂತರು
ಬಂದು ಬಾಗಿಲಗಾಹಿಗಳಿಗರುಹಿದರು ನಿಮಿಷದಲಿ ।
* ಬಂದನಣ್ಣನ ಚರಣಕಮಲ
ದ್ವಂದ್ವದಲಿ ಮೈಯಿಕ್ಕಿ ಬೆಸಸುವು
ದೆಂದು ಕೈಮುಗಿದಾತ ನಿಂದಿರಲೆಂದನಾನೃಪತಿ * ‖ ೮

ಅಣ್ಣನ ಅಪ್ಪಣೆಯಂತೆ ಭೀಮಸೇನನ ಪ್ರಯಾಣ.

ಭೀಮ ಬಾರೈ ಹೋಗು ಕರೆದಾ
ವ್ಯೋಮಕೇಶನನಗಣಿತಾಮಳ
ನಾಮನಗಜಾವರನ ನಿರ್ಮಳನಪ್ರಮೇಯನನು ।
ಪ್ರೇಮದಿಂದಾದರಿಪ ವರಸಿ
ಸ್ಸೀಮಪುರುಷಾಮೃಗವ ತಾ ಯೆನೆ
ಭೀಮ ಭೂಪತಿಗೆರಗಿ ಬೀಟ್ಕೊಂಡಡರಿದನು ರಥವ ‖ ೯

* ನಿಂದು ಕೈಗಳ ಮುಗಿದು ನೂಟಿಸ
ಲಂದು ನಗುತುತ್ಸಾಹದೊಡನೈ
ತಂದು ಯಮನಂದನನ ಪಾದಕ್ಕೆರಗಿ ನಿಂದಿರ್ದ, * ಡ. ‖

ಪದದ ಬಲುಘಟ್ಟಣೆಗೆ ಭೂತಳ
ವೆದುರಿ ಹಸ್ತಾಂಗುಲಿಯ ತಾಕಿದೊ
ಡದುರಿ ಬಿದ್ದುವೊ ಭುಜಗರಾಜಿಗಳಂಘ್ರಿಮೇಲಾಗಿ ।
ಗದೆಯ ತಿರುಹುತ ಸಿಂಹನಾದದೊ
ಳೊದಱೆ ಮೃಗನಿವಹಂಗಳದೆಗಳು
ಅದುರೆ ಭರದಿಂ ಭೀಮ ಬಂದನು ವನದ ಮಧ್ಯದಲಿ ॥ ೧೦

ಬಂದನೀಪರಿ ಹಲವುಯೋಜನ
ದಿಂದ ಹೇರಡವಿಯಲಿ ಬರುತಿರ
ಲಂದು ಕಂಡನು ನಿರ್ಜಿತೇಂದ್ರಿಯನಾಜಿತೇಂದ್ರಿಯನ ।
ಅಂದು ಕಮಲಾಂಬಕನ ಚರಣ
ದ್ವಂದ್ವಸರಸಿರುಹಭ್ರಮರ ಹರಿ
ವೃಂದವಂದ್ಯಕಪೀಂದ್ರ ಕೇಳಿದನೀಮಹಾಧ್ವನಿಯ ॥ ೧೧

ಮಾರ್ಗಮಧ್ಯದಲ್ಲಿ ಹನುಮಂತನ ದರ್ಶನ ಮತ್ತು ಸಂಭಾಷಣ.

ಏನಿದದ್ಭುತ ರಭಸವಿದು ಪವ
ಮಾನಜನ ನಿಷ್ಠುರದ ಸಿಂಹ
ಧ್ವಾನವಹುದೆನುತಂಜನಾಸುತ ಕೇಳಿ ಕಣ್ದೆಱೆದು ।
ಧ್ಯಾನಿಸುತ್ತಿರೆ ಬಂದು ಪವನನ
ಸೂನು ಕಂಡಡಿಗೆಱಗಲಂದಾ
ವಾನರನು ತೆಗೆದಪ್ಪಿ ಮುಂಡಾಡಿದನು ವಿನಯದಲಿ ॥ ೧೨

ಕ್ಷೇಮವೇ ಕಲಿಭೀಮ ನಿಮ್ಮಯ
ಭೂಮಿಪತಿಯಮಳರಿಗೆ ಮಿಗೆ ಸು
ತ್ರಾಮಸುತ ದ್ರೌಪದಿಸುಭದ್ರಾದೇವಿಮೊದಲಾದ ।
ಕಾಮಿನೀಜನವಿದುರಧೃತರಾ
ಷ್ಟ್ರಾದಿಮಹಿಪತಿಯರಸಿ ಕುಂತಿ ಸ
ನಾಮರನಿಬರು ಕುಶಲರೇ ಹೇಳೆಂದನಾಹನುಮ ॥ ೧೩

ಕುಶಲರನಿಬರು ಜೀಯ ದಾನವ
ಪಶುವಿದಾರಣನನುಪಮಾಜ್ಞೆಯ [1]
ಲೆಸೆವ ಯಜ್ಞದ ಪರಮವಿಭವದ ಲಲಿತಮಂಟಪಕೆ [2] ।
ಪಶುಪತಿಯ ನಾಮಾಮೃತವ ಸೇ
ವಿಸುವ ಪುರುಷಾಮೃಗವ ತರಲೆಂ
ದೊಸೆದು ಬಂದೆನು ತಂದೆ ಚಿತ್ತೈಸೆಂದನಾಭೀಮ ॥ ೧೪

ಅಹುದು ಬೞಿಕೇನಲ್ಲದಿಲ್ಲಿಗೆ
ಬಹೊಡಿದುವೆ ಕಾರಣವೆ ಯೆನೆ ಸಂ
ಗ್ರಹಿಸಿತೆನ್ನಯ ಪುಣ್ಯಫಲದಿಂದದನೆ ಪಡಿವಿಡಿದು ।
ಮಹಿತ ನಿನ್ನಯ ಚರಣದರ್ಶನ
ವಹುದಿದೆನ್ನಯ ಸುಕೃತಫಲದಿಂ
ದುದಿಸಿದರೆ ಘನವೇನು ತನಗೆನಲೆಂದನಾಹನುಮ ॥ ೧೫

ಆಮೃಗದ ಶಕ್ತಿಯನ್ನು ಹೇಳಿ ತರುವ ಉಪಾಯವನ್ನು ಹೇಳುವಿಕೆ.

ಬಗೆಯಲೞಿಯದು ನಿನಗೆ ಪುರುಷಾ
ಮೃಗ ಮನೋವೇಗದಲಿ ನಡೆವುದು
ನಗೆಗೆಡೆಯ ಮಾಡಿದೆ ಯೆಲಾ ಕಲಿಭೀಮ ನೀನಿಂದು ।
ಜಗದೊಳದಱೊಡನೃದಿ ಬರುವಾ
ವಿಗಡರಾರುಂಟೆನಲು ಕೈಗಳ
ಮುಗಿದು ನಿಂದನು ತಮ್ಮ ಕೃಪೆಯಿರಲಾವುದರಿದೆಂದ ॥ ೧೬

ಆದೊಡಂಜದಿರಿನ್ನು ಭಾಷೆಯ
ಕಾದು ತೋಱುವೆನೆನ್ನ ಬಾಲದ
ಕೂದಲೊಳಗೇಜೆಂಟುರೋಮವ ಕಿತ್ತುನೀಡೆನಲು ।
ಕೈದುಡುಕಿ ತನಗುಳ್ಳ ಸತ್ವದೊ
ಳೃದೆ ಸೆಳದೊಡೆ ಮಿಡುಕದಿರಲು ವೃ
ಕೋದರನು ತಿರುಗಿದನು ಸಂಮುಖಕಾಕಪೀಶ್ವರನ ॥ ೧೭

---

[1] ರಾಜ್ಞೆಯಿಂದಾ, ಡ. [2] ವಸುಮತೀಶನ ರಾಜಸೂಯಾಧ್ವರದ ವೈಭವಕೆ, ಡ.

ನಗುತಲಾವಾಯುವಿನ ಪುತ್ರನ
ಮೊಗವ ನೋಡುತ ವಜ್ರರೋಮವ
ನೊಗೆದು ಕಿತ್ತನು ಕರೆದು ಕೊಟ್ಟನು ಪವನನಂದನಗೆ ।
ಅಗಜೆಯರಸನ ಭಕ್ತನನು ಕರೆ
ವಿಗಡ ನುಡಿಯನು ಬೇಗ ಬಹನೈ
ಮಗನೆ ನಿನ್ನೊಡನೆಂದರಂಜದಿರೊಂದುರೋಮವನು ॥ ೧೮

ಅವನಿಯೊಳಗೀಡಾಡಿದಾಕ್ಷಣ
ಶಿವಭವನಪುಷ್ಪಾಪಟಯುಸಂ
ಭವಿಸುವುದು ಕಂಡಾತನರ್ಚಿಸಲೊಂದು ರೋಮವನು ।
ಪವನವೇಗದೊಳೈದುವುದು ಮಗು
ಳವನು ಬರೆ ಮತ್ತೊಂದು ರೋಮವ
ನವನಿಯಲಿ ಬಿಸುಡುವುದು ಕ್ರಮ ನಿನಗೆಂದು ಬೀಳ್ಕೊಟ್ಟ ॥ ೧೯

ಧರಣಿಪತಿ ಚಿತ್ತೈಸು ಕಪಿಕುಲ
ವರನ ನೇಮವ ಕೊಂಡು ಬೀಳ್ಕೊಂ
ಡರಿವಿದಾರಣ ನಡೆದು ಗಿರಿಗುಹೆಗಳಲಿ ಮೃಗಪತಿಯ ।
ಅಱಸುತೈ ತರಲಮಳಕಾಂಚನ
ಗಿರಿಯ ದಕ್ಷಿಣಭಾಗದಲಿ ಬರ
ಬರಲು ತೀಡಿತ್ತಮಳಸೌಗಂಧದಲಿ ಪವಮಾನ ॥ ೨೦

ಪುರುಷಾಮೃಗದರ್ಶನ.

ಹಿತವನೈಯ್ಯನೆನುತ್ತ ಪವನನ
ಸುತನು ಗಂಧದ ವಾಸನೆಗೆ ಹಿ
ಗ್ಗುತ ಹುತಾಶನಸಖನ ಬಟ್ಟೆವಿಡಿದೈದಿ ಬರಲಮೃತ ।
ಮಥನದಲಿ ಸಂಭವಿಸಿದ ಮಹಾ
ಸತಿಯುಳನ್ನೆಡಿಸುವಳೆಂಬಳ [1]
ನತಿಶಯದಿ ಮೆಱೆದಿಹ ಮೃಗೇಂದ್ರನ ಕಂಡನಾಭೀಮ [2] ॥ ೨೧

---

1 ರೂಪಿಂದತಿಶಯದಲಾ, ಖ. 2 ವೆಱೆವಮಳಸರಸಿಯು ಕಂಡನಾಭೀಮ, ಖ.

ಆಸರೋವರದೊತ್ತಿನಲಿ ವಿ
ನ್ಯಾಸದಖಿಳಾಂಗದಲಿ ಭೂತಿಯ
ಪೂಸಿ ಶಿವಮೊದಲಾದರುದ್ರಾಕ್ಷಿಗಳ ನಯುಪದದ |
ಆಶ್ರಯಿಸಿ ಹೃದಯಾಂಬುಜದಲಿ
ದಾಸಸದಾಶಿವ ಕಣೆಯ ಚಿಂತೆಯ
ಲೋಸರಿಸಿ ಮೆಱೆದಿಹ ಮೃಗೇಂದ್ರನ ಕಂಡನಾಭೀಮ || ೧೨

ಆಸಮಯದಲ್ಲರಸ ಕೇಳ್ ನರ
ವಾಸನೆಯದೆಲ್ಲಿಯದೆನುತ ಹೃ
ದ್ವಾಸಮಾನಸರೋಜಮಧ್ಯದಿ ಮೆಱೆವ ಪರಶಿವನ |
ವಾಸನೆಯ ಬಿಸುಟನ್ಯಚಿಂತೆಯ
ಲಾಸುಷುಪ್ತಿಯ ತಿಳಿದು ಕಣ್ಣ ವಿ
ಲಾಸದಿಂದೀಕ್ಷಿಸಿದನಾಗವೆಸೆದ್ದು ನಾಲ್ದೆಸೆಯ || ೧೩

ಇದುವೆ ಸಮಯ ಮಹಾನುಭಾವನ
ಪದಯುಗವ ಕಾಣುವೊಡೆನುತ ನಿಜ
ಗದೆಯನೆಡಗೈಯಿಂದ ಹಿಡಿದೀಕ್ಷಿಸಿದನಾಮೃಗನ |
ವದನವಿಕಸಿತವರಸರೋರುಹ
ವೊದಗೆ ಮೈಯೊಳು ಹರುಷಪುಳಕದ
ಹೊದಕಿನಲಿ ಹೊಱೆಯೇಱೆ ನಡೆತರುತಿರ್ದನಾಭೀಮ || ೧೪

### ಭೀಮ ಪುರುಷಾಮೃಗರ ಸಂಭಾಷಣೆ.

ಬಂದನೀಶ್ವರಭಕ್ತನಡಿಗಳಿ
ಗಂದು ಮುಕುಟವ ಚಾಚಿ ಪೇಳ್ದ
ಕಂದ ನೀ ಹೇಱಾರ ಮಗನಭಿಧಾನವೇನು ಹದ |

---

ಹದುಳಪುಳಕದೊಳದುರಿ ಕೊಡಱಿದ
ಪದದಿ ಮಿಗೆ ನಡೆತಂದು ಸದಮಳ
ಹೃದಯನನು ಮಿಗೆ ನೋಡಿ ಬೇಗದಲೆಂದನಾಭೀಮ |

ಬಂದ ಕಾರ್ಯವದೇನು ಹೇಳೆನ
ಲಿಂದುವಂಶದಲುದಿಸಿದರು ಯಮ
ನಂದನಾದಿಗಳವರೊಳನಿಲಜ ಭೀಮ ತಾನೆಂದ ॥ ೬೫

ಆವಮಹೀಪತಿ ರಾಜಸೂಯದ
ನೇಮವನು ಕೈಕೊಂಡು ಪರಮ
ಪ್ರೇಮದಲಿ ನಿಮ್ಮವನು ಬಿಜಯಂಗೈಸಿ ತಪುದೆಂದು ।
ನೇಮಿಸದೊಡಾಂ ಬಂದೆ ನೀ ನಿ
ಸ್ಸೀಮ ಕೃಪೆ ಮಾಡೆನಲು ನಸುನಗು
ತಾ ಮೃಗಾಧಿಪ ನುಡಿದನಾಪವಮಾನತನಯಂಗೆ ॥ ೬೬

ಆ ಮೃಗವು ತೊಂದರೆಮಾಡಲು ಹನುಮಂತನು ಕೊಟ್ಟಿದ್ದ
ರೋಮವನ್ನು ಹಾಕುವಿಕೆ.

ಕೇಳು ಪವನಜ ನಿನ್ನೊಡನೆ ಬಹೆ
ನೇಱು ನಡೆ ಹಿಂದುಱಿದೊಡಾಕ್ಷಣ
ಕಾಲ ಹಿಡಿದಪ್ಪಳಿಸುವೆನು ಕೇಳೆನ್ನ ಭಾಷಿತವ ।
ಪಾಲಿಸೆನು ತಾನೆಂದು ನರಮೃಗ
ಕಾಲವಿಡಿಯಲ್ಕೈದಿ ಬರುತಿರೆ
ಬಾಲದಲಿ ಕಿತ್ತಿದ್ದ ರೋಮವನೊಂದ ಹಾಯ್ಕಿದನು ॥ ೬೭

ಆ ರೋಮವು ಈಶ್ವರಮೂರ್ತಿಯಾದದ್ದು.

ಅವನಿಪತಿ ಕೇಳಾಕೆಪೀಂದ್ರನ [1]
ಹವಣ ನಿಂತಿಂತೆಂದು ವರ್ಣಿಸ
ಲೆವಗೆ ತೀರದು ರೋಮವೀಶ್ವರಮೂರ್ತಿ ತಾನಾಗಿ ।
ಭುವನದಲಿ ಸ್ವಾಯಂಭು ತಾನು
ದ್ಭವಿಸೆ ಪುರುಷಾಮೃಗವು ಕಂಡಾ
ಭವನನರ್ಚಿಸುತಿರಲು ಗಮಿಸಿದನೊಂದು ಯೋಜನವ ॥ ೬೮

---

1 ಮೃಗೇಂದ್ರನ, ಡ.

ಆಗ ಆ ಮೃಗವು ಈಶ್ವರನನ್ನು ಪೂಜಿಸುವಿಕೆ.

ಇತ್ತ ಕೇಳೀಶ್ವರನನರ್ಚಿಸಿ
ಭಕ್ತಿಯಿಂದ ಸಮೀರಜನ ಅಱ
ಸುತ್ತಲೀಕ್ಷಿಸಿ ಭರದಿ ಹೋದೊಡಿದಾತನಿರ್ದೆಡೆಗೆ ।
ಚಿತ್ತವನು ಬೀಡ್ಕೊಂಡೊಡಾಗಲೆ
ಹತ್ತಿ ಬರೆ ಮತ್ತೊಂದು ರೋಮವ
ನೆತ್ತಿ ಬಿಸುಡಲು ಶಂಭು ನೆಲಸಿದನಾತನಿದಿರಿನಲಿ ॥ ೬೯

ಕಂಡು ಪುರುಷಾಮೃಗಶರೀರವ
ದಿಂಡುಗೆಡಹಿತು ಜಯ ತ್ರಿಪುರಹರ
ರುಂಡಮಾಲಾಧರನೆ ಜಯ ತ್ರೈಲೋಕ್ಯಮುನಿವಂದ್ಯ ।
ಖಂಡಶಶಿಮೌಳಿ ಪ್ರಭಾಕರ
ರುಂಡತೇಜೋಭಾನುತಿಮಿರದ
ಗಂಡ ಜಯ ಜಯ ಜಯತು ಜಯ ಯೆಂದೆನುತ ಬೀಡ್ಕೊಂಡ ॥

ಮತ್ತೆ ಕಾಣದೆ ಮರುತನೈದಿದ
ಮರ್ತ್ಯನಲ್ಲೆಂದೆನುತ ಮೃಗಕುಲ
ಪಾರ್ಥವಿಜಯನು ಹರನ ಬೀಡ್ಕೊಂಡಾಗ ಮಾರುತನ ।

ಮತ್ತೆ ತೊಂದರೆಮಾಡಲು ರೋಮವನ್ನು ಹಾಕುವಿಕೆ.

ಪುತ್ರನನು ಬೆಂಬತ್ತಲೀಕ್ಷಿಸಿ
ಮತ್ತೆ ತೆರಹಿಲ್ಲೆನುತ ಬರಬರ
ಬತ್ತಿ ಬಿಸುಟನು ಭೀಮ ಧರಣಿಯುಲೊಂದುರೋಮವನು ॥ ೭೧

ತಿರುಗಿ ಈಶ್ವರಾಕಾರವನ್ನು ಧರಿಸಲು ಅದನ್ನಾರಾಧಿಸುವಿಕೆ.

ಅರಸ ಕೇಳಾರೋಮವವಸಿಯೊ
ಳೊಱಸಿಕೊಱಗದ ಮುನ್ನ ಕೇಳಾ[1]
ಯುರವನೊಡೆದುದ್ಭವಿಸಿ ಶಿವ ಸಂಪೂರ್ಣಕಲೆಗಳಲಿ ।

---

1 ಧರೆಯು, ಜ.

ಇರಲು ಕಾಣುತ ಕಂಡು ಕುಸುಮವ
ತೆಱಿದು ತಂದು ಶಿವಾಗಮದಿ ವಿ
ಸ್ತರಿಸಿ ಸಿತಿಕಂಠನ ಪದಾಂಬುಜಕೆಱಗಿ ಬೀಳ್ಕೊಂಡ ॥ ೩೦

ನೋಡಿ ಕಾಣದೆ ಪವನಜನಿವನು
ರೂಢಿಗತಿಶಯನೆಂದು ಪರಮಾ
ರೂಢನೈದಲು ಕಾಣುತವನಿಯಲೊಂದುರೋಮವನು ।
ನೀಡೆ ಧರೆಯೊಳಗುದ್ಭವಿಸೆ ಮಿಗೆ
ನೋಡಿ ಪರಮೇಶ್ವರನನಾಗಳೆ
ಬೇಡಿಕೊಳುತಿರೆ ಮೃಗದ ಪತಿ ಬಟಿಕಂಧಕಾಂತಕನ ॥ ೩೩

ಧರಣಿಪತಿ ಕೇಳೀಶ್ವರನ ವರ
ಚರಣಕಮಲಾರ್ಚನೆಯೊಳಾಮೃಗ
ವಿರಲು ಪವನಜ ಸಱಿದನನಿಲನ ಭರವ ಕೈಕೊಂಡು ।
ಪರಿವಿಡಿಯಲಿವನೈದಿ ಬರೆ ಮುರ
ಹರನ ನೆನೆಯುತ ಬರಲು ಮೃಗಪತಿ
ಯುರವಣಿಸಲುಟಿದೊಂದು ರೋಮವನವನಿಯಲಿ ಬಿಸುಟ ೩೪

ಭೀಮಸೇನನ ಚಿಂತೆ.

ಬಟಿಕ ಕರದಲಿ ರೋಮವಿಲ್ಲದೆ
ಕಳವಳಿಸುತತಿವೇಗದಲಿ ವೆ
ಗ್ಗಳಿಸಿ ಬರುತಿರಲವನಿಪನ ರಾಜ್ಯವ ನಿರೀಕ್ಷಿಸುತ ।
ಅಳುಕದವನಿಯ ಪೊಕ್ಕು ನಗರಾ
ವಳಿಯ ಗ್ರಾಮಂಗಳ ನಿರೀಕ್ಷಿಸಿ
ಬಟಿಕ ದೇವನ ಚರಣಯುಗಳವ ನೆನೆಯುತೈತಂದ ॥ ೩೫

ಬಂದುಯೋಜನವಾರಣಾವತ
ವೆಂದು ಕಂಡುತ್ಸವದಿ ಭಯಗೊಳು
ತಂದು ಹೊಕ್ಕನು ಬಟಿಕ ತಾನಧ್ವರದ ಬಾಗಿಲಲಿ ।

ಭೀಮಸೇನನು ಬೀಳಲು ಅರ್ಜುನನು ಎತ್ತುವಿಕೆ.

ಬಂದು ಪವನಜನೆಡಹಿ ಬೀಬೆ ಪು
ರಂದರನ ನಂದನನು ಕರವಿಡಿ
ದಂದು ಮೃಗ ಕಾಲ್ವಿಡಿಯಲುಭಯರಿಗಾಯ್ತು ಸಂವಾದ ॥ ೩೬

ಅರ್ಜುನ ಪುರುಷಾಮೃಗರ ಸಂವಾದ.

ಇತ್ತ ತೆಗೆಯೆ ಧನಂಜಯನು ಮಗು
ಚಿತ್ತ ತೆಗೆವ ಮೃಗೇಂದ್ರನತ್ತಲು
ಮತ್ತೆ ತೂಗುವಸೀಶ್ವರಾರ್ಚಕನಿತ್ತ ಬರಸೆಳವ ।
ಅತ್ತಲಿತ್ತಲು ತೆಗೆಯಲಿಬ್ಬರ
ಸತ್ವ ಸವೆಯದು ನಡುವೆ ಪವನಜ
ನತ್ಯಧಿಕಬೆಂಡಾದನೈ ಭೂಪಾಲ ಕೇಳೆಂದ ॥ ೩೭

ಆಸಮಯದಲಿ ಕೃಷ್ಣ ಸಹಿತವ
ನೀಶ ಬಂದನು ಭೀಮ ಮಾಡಿದ
ಭಾಷೆಯನು ಕೇಳಿದನು ಪುರುಷಾಮೃಗವನೀಕ್ಷಿಸುತ ।
ಲೇಸ ಮಾಡಿದೆ ಧರ್ಮಸೂತ್ರವಿ
ಲಾಸವನು ನೀನಱಿದಿಹೆ ಎನಲು ಮೃ
ಗೇಶ ಕೇಳ್ಕಾಯಕ್ಕೆ ಮುಖ್ಯ ಶಿರವಲಾಯೆಂದ ॥ ೩೮

ಎನುತ ಪುರುಷಾಮೃಗಕೆ ಧರ್ಮಜ
ಜನಪನೆಂದನು ಜಘನಕಾಲ್ಗಳು
ನಿನಗೆ ಸಿಕ್ಕಿತಿರಸ್ಸು ದೇಹವು ತನ್ನದಾಯಿತೆನೆ ।
ತನತನಗೆ ಕೊಂಡಾಡಿ ಪಾರ್ಥಿವ
ಜನವ್ರೊಡಂಬಡೆ ಯಿಾಶಭಕ್ತನ
ಮನಕಿದಪುದೆನೆ ಧರ್ಮಸೂಕ್ಷ್ಮಾಧರ್ಮವನು ನುಡಿದ ॥ ೩೯

ಸರ್ವಗಾತ್ರಂಗಳಿಗೆ ಶಿರ ತಾ
ಸರ್ವಇಂದ್ರಿಯಗಳಿಗೆ ನೇತ್ರವು
ಸರ್ವಶೃಂಗಾರಕ್ಕೆ ವಸ್ತ್ರವು ಬೀಜಮಾತ್ರವಲೈ ।

ಸರ್ವಸಂಭಾರಂಕ್ಕೆ ಲವಣವು
ಸರ್ವಶಾಸ್ತ್ರಕೆ ಪ್ರಕರಣವು ಮಿಗೆ
ಸರ್ವಜನಕಭಿಮತವು ಚಿತ್ರೈಸೆಂದನಾಭೂಪ ॥ ೪೦

ಎಂದು ಧರ್ಮಕಥಾಪ್ರಸಂಗ
ಕ್ಕಿಂದು ಪುರುಷಾಮೃಗವ ತಿಳುಹಲಿ
ಕಂದು ನಗುತನಿಲಜನ ಕಾಲ್ಗಳ ಬಿಟ್ಟು ಹೊರೆಹಿಂಗಿ ।
ನಿಂದಿರಲು ಕಲಿಭೀಮನೆದ್ದು ಮು
ಕುಂದನಂಘ್ರಿಗೆ ನಮಿಸಿ ಕಾಲನ
ನಂದನಂಗೆಱಗಿದನು ಮುನಿಸಂಕುಲಕೆ ಕೈಮುಗಿದು ॥ ೪೧

ಕೃಷ್ಣನ ಪ್ರಶ್ನೆ.

ವಂದಿಸಿದ ಪುರುಷಾಮೃಗಕೆ ಬೞಿ
ಕೆಂದನೆನ್ನಯ ಭಾಷೆ ಸಂದುದೆ
ತಂದೆ ಯೆನೆ ತಲೆದೂಗಲಸುರಾರಾತಿ ಬೞಿಕದನು ।
ತಂದು ಭೋಜನಶಾಲೆಯುಲಿ ಬೞಿ
ಕೊಂದು ಸ್ವರ್ಣಸ್ತಂಭವಲಿ ಬಂಧಿಸಿ
ಸಂದುದೇ ನಿಮ್ಮಿಷ್ಟವೆಂದನು ಭೂಪ ಕೇಳೆಂದ ॥ ೪೨

ಧರ್ಮರಾಯನ ಉತ್ತರ.

ದೇವ ನಿಮ್ಮಂಘ್ರಿಗಳ ಕೃಪೆಯಿಂ
ಲಾವುದರಿದ್ಯೆ ವರಶರೀರದ
ಜೀವನವು ನೀವಲ್ಲದುೞಿದರಿಗುಂಟೆ ಜಗವೞಿಯೆ ।
ಭಾವಮೈದುನನಣ್ಣ ನಿಂತೆನೆ
ಭಾವನಿಗೆ ಸೀನಂಜಬೇಡಂ
ದೋವಿ ಕರುಣಾಸಿಂಧು ಸಂತೈಸಿದನು ಧರ್ಮಜನ [1] ॥ ೪೩

[1] ಪವನಜನ, ಡ.

ಅರಸ ಕೇಳಾವೇಳೆಯಲಿ ಶಚಿ
ಯರಸ ಸಕಲದಿವೌಕಸರುಗಳು
ವೆರಸಿ ಪುಷ್ಪಕಮಾರ್ಗದಿಂದೈತಂದು ರುಕ್ಮಿಣಿಯ ।
ಅರಸನನು ಕೀರ್ತಿಸುತಲಾಪುರ
ವರವರಿಸಿ ಮಾಲಿಕೆಯ ಪುಷ್ಪದ
ಸರಿವಳೆಯ ಹೊನಲಿನಲಿ ಬಂದರು ಮರಳಿದರು ಪುರಕೆ ॥ ೪೪

ಏನನೆಂಬೆನು ಭೂಪ ಕಾಲನ
ಸೂನುವಿನ ಸುಮ್ಮಾನವನು ಪವ
ಮಾನಸಂವನನುತ್ಸವವನರ್ಜುನನ ಹರುಷವನು ।
ಮಾನನಿಧಿಮಾದ್ರೀಕುಮಾರರ
ಸಾನುಭಾವವನಾ ಮಹೀಶನ
ಮಾನಿನಿಯ ಮನದೊಲವನಭಿವರ್ಣಿಸುವೊಡರಿದೆಂದ ॥ ೪೫

ಅರಸ ಕೇಳ್ ಕೃಷ್ಣಗೆ ಕೃಪಾಳುಗ
ಳರಸಗೆಲ್ಲರು ಮೃಗವರನ ಶಂ
ಕರಸಮಾರಾಧನೆಗೆ ಪವನೇನೆಂದು ಕೈಮುಗಿಯೆ ।
ಅಱುಹಿದನು ಕಟ್ಟಿರ್ದ ಕಂಭದಿ
ಪರನ ಹರಿ ನಿರ್ಮಿಸಲು ಪರಿನತಿ
ಭರದಿ ಪಾವನಮೂರ್ತಿ ಬಿಜಯಂಗೈದನೊಲವಿನಲಿ ॥ ೪೬

ಆಮುಕುಂದನ ಕೆಲಬಲದಲಾ
ಭೂಮಿಪತಿ ವಿದುರಾದಿಗಳು ಹಿಂ
ದಾ ಮುನೀಶ್ವರನಿಕರವೆನಿಬರ ಹಿಂದೆ ಭೂವರನು ।
ಹೋಮಶಾಲೆಗೆ ನಡೆದು ಕೃಷ್ಣನ
ನೇಮದಲಿ ತಂತಮ್ಮ ತಾಣದ
ಸೀಮೆ ತಪ್ಪದೆ ತನತನಗೆ ಕುಳ್ಳಿರ್ದರೊಲವಿನಲಿ ॥ ೪೭

ಮತ್ತೆ ಚಿತ್ರೈಸಾ ಮೃಗೇಂದ್ರನ
ಸುತ್ತ ಮುತ್ತಿ ಮಹೋತ್ಸವದಿ ನೋ
ಡುತ್ತ ಭೂಮೀಪಾಲಕರು ತಲೆದೂಗಿ ಪವನಜನ ।
ಸತ್ವವನು ತಮತಮಗೆ ಕೊಂಡಾ
ಡುತ್ತ ಮಗುಟವರಿಗೆ ಸರೋರುಹ
ನೇತ್ರನಿರಲರಿದಾವುದೆಂದುದು ಮುನಿಜನಸ್ತೋಮ ॥ ೪೮

ಆಮೃಗಾಧಿಪನಾಗ ಯಾಗದ
ಲಾಮಹಾವಿಭವವ ನಿರೀಕ್ಷಿಸು
ತಾ ಮಹೇಶನ ಕಂಡು ಕರಗಳನೆತ್ತಿ ಕೈಮುಗಿದು ।
ಪ್ರೇಮದಿಂದಲೆ ಹೃದಯಸರಸಿಜ
ಸೀಮೆಯಲಿ ತಂದಿರಿಸಿ ತಾನಿ
ಷ್ಕಾಮತೆಯಲಭವನನು ಭಜಿಸುತ್ತಿದ್ದನೊಲವಿನಲಿ ॥ ೪೯

ಅವನಿಪತಿ ಕೇಳಂದು ಭೂಮಿಪ
ನಿವಹವಾಪುರುಷಾಮೃಗದ ಕಾ
ಯವ ನಿರೀಕ್ಷಿಸಿ ಹೋಹುದೀಪರಿವಿಡಿಯಲನುದಿನವು ।
ದಿವಸವೇಳ್ಪರಿಯಂತ ಹಗಲಿರು
ಳವಧಿಯಿಲ್ಲದೆ ನಡೆದುದಾಯಾ
ದವಶಿರೋಮಣಿವೀರನಾರಾಯಣನ ಕರುಣದಲಿ ॥ ೫೦

ಏಳನೆಯ ಸಂಧಿ ಮುಗಿದುದು.

## ಎಂಟನೆಯ ಸಂಧಿ.

### ಸೂಚನೆ.

ಸಕಲಋಷಿಮುಖ್ಯರು ಮಹೀಪಾ
ಲಕರು ನೆರೆದರು ವಿಶ್ವಭೂತ
ಪ್ರಕರ ದಣಿದುದು ಧರ್ಮಪುತ್ರನ ರಾಜಸೂಯದಲಿ ||

### ನಾನಾದೇಶದಿಂದ ರಾಜಾದಿಗಳು ಬರುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ದೂತರು ಹರಿದರವನೀ
ಪಾಲರಿಗೆ ಋಷಿಗಳಿಗೆ ಭೂಸುರವೈಶ್ಯಶೂದ್ರರಿಗೆ |
ಹೇಳಲೇನದ್ಭುತವನಂಬುಧಿ
ವೇಳೆ ಗಡಿ ಮಧ್ಯದ ಸಮಸ್ತಜ
ನಾಳಿ ನೆರೆದುದು ವಿಳಸದಿಂದ್ರಪ್ರಸ್ಥನಗರಿಯಲಿ || ೧

ಚೋಳಸಿಂಹಳಪಾಂಡ್ಯಕೇರಳ
ಮಾಳವಾಂಧ್ರಕರೂಷಬರ್ಬರ
ಗೌಳಕೋಸಲಮಗಧಕೈಕಯಹೂಣಕಾಶ್ಮೀರ |
ಲಾಳಜೋನೆಗಬೋಟವರನೇ
ಪಾಳಶಿಬಿಕಾಶ್ಮೀರಭೋಟವ
ರಾಳಬಹುದೇಶಾಧಿಪತಿಗಳು ಬಂದರೋಲವಿನಲಿ || ೨

ಭೂರಿಭೂರಿಶ್ರವನು ಬಾಹ್ಲಿಕ
ಶೂರಸೇನಕಳಿಂಗಶಲಗಾಂ
ಧಾರಸೌಬಲಸೋಮದತ್ತಸುಷೇಣಭಗದತ್ತ |

ವೀರಪೌಂಡ್ರಕನೇಕಲವ್ಯಸು
ರಾರಿಗಳು ಶಿಶುಪಾಲನವನ ಕು
ಮಾರಗೇಳವದಂತವಕ್ರರು ಬಂದರೊಗ್ಗಿನಲಿ ॥ ೩

ಸಕಲದಳ ಮೇಳಾಪದಲಿ ಭೀ
ಷ್ಮಕರುಕ್ಮಕರು ಚಿತ್ರರಥಸಾ
ಲ್ವಕರು ರೋಚಮಾನಸಮುದ್ರಸೇನಕರು ।
ಪ್ರಕಟಬಲರುತ್ತರದಿಶಾಪಾ
ಲಕರು ಕುರುಪರಿಯಂತರಾಜ
ಪ್ರಕರ ಬಂದುದು ನೆರೆದುದಿಂದ್ರಪ್ರಸ್ಥನಗರಿಯಲಿ ॥ ೪

ದ್ರುಪದಧೃಷ್ಟದ್ಯುಮ್ನರಣಲೋ
ಲುಪಯುಧಾಮನ್ಯುತ್ತಮೌಜಸ
ರುಪಚಿತರು ಬಂದರು ಸಗಾಡದಲಿವರಬಾಂಧವರು ।
ಕೃಪಜಯದ್ರಥಭೀಷ್ಮಮದ್ರಾ
ಧಿಪತಿಕರ್ಣದ್ರೋಣಮೊದಲಾ
ದಪರಿಮಿತಬಲಸಹಿತಕೌರವರಾಯನೈತಂದ ॥ ೫

ಗುರುತನೂಜಸುಶರ್ಮವಂಗೇ
ಶ್ವರಬೃಹದ್ರಥಭೀಮರಥದು
ರ್ಮರುಷಣನು ವರಭಾನುದತ್ತವಿಕರ್ಣದುಸ್ಸಹರು ।
ವರವಿವಿಂಶತಿದೀರ್ಘಭುಜದು
ರ್ದರುಶದುರ್ಜಯಶಂಕುಕ
ರ್ಣರು ಸಹಿತದುಶ್ಶಾಸನನು ನಡೆತಂದನೊಲವಿನಲಿ ॥ ೬

ಬಂಧುದೈ ಚತುರಂಗದವನಿಪ
ವೃಂದವವರವರುಚಿತ ಮಿಗಿಲಿದಿ
ರ್ವಂದು ಭೀಷ್ಮದ್ರೋಣಕೃಪಧೃತರಾಷ್ಟ್ರರಿಗೆ ನಮಿಸಿ ।

ವೆಂದನೀಯರಿಗೆಱಗಿ ಸಮರಿಗೆ
ನಿಂದು ಸಕಲ [1] ಕ್ಷೇಮಸಂಗತಿ
ಯಿಂದ ಸತ್ಕರಿಸಿದನು ನೃಪ ವಿದುರಾದಿಬಾಂಧವರ ‖ ೭

ಜನಪ ಕೇಳೀಚೆಯಲಿ ಬಂದರು
ಮುನಿಗಳಂಗಿರಕಣ್ವಭೃಗುಜೈ
ಮಿನಿಸುಮಂತರು ಕಂಕಶೌನಕಾಗಸ್ತ್ಯಬೃಹದಶ್ವ ।
ಸನಕಶುಕಜಾಬಾಲಿತಿತ್ತಿರಿ
ವಿನುತಮಾರ್ಕಂಡೇಯಮುದ್ಗಲ
ತನಯರೋಮಶರೈಭ್ಯಮೊದಲಾದಖಿಳಮುನಿವರರು ‖ ೮

ಚ್ಯವನಗೌತಮವೇಣುಜಂಘ
ಪ್ರವರಕೌಶಿಕಸತ್ಯತಪಭಾ
ರ್ಗವಸುಮಾಲಿಸುಮಂತ್ರಕಶ್ಯಪಯಾಜ್ಞವಲ್ಕ್ಯಮುನಿ ।
ಪವನಭಕ್ಷಣದೀರ್ಘತಪಗಾ
ಲವನು ಶಿತಶಾಂಡಿಲ್ಯಮಾಂಡ
ವ್ಯವರರೆಂಬ ಮಹಾಮುನೀಂದ್ರರು ಬಂದರೊಗ್ಗಿನಲಿ ‖ ೯

ದೇಶದೇಶಾಂತರದ ವಿದ್ವ
ದ್ಭೂಸುರರು ಮೊದಲಾಗಿ ವರ್ಣಾನಿ
ವಾಸಿಗಳು ಫಲಮೂಲದಧಿಘೃತದುಗ್ಧಭಾರದಲಿ ।
ಆಸಮಸ್ತಮಹೀತಳದ ಧನ
ರಾಶಿ ಜನಸಂತತಿಯುವೇಕನಿ
ವಾಸದಲಿ ನೆಱೆ ಕಾಣಲಾಯ್ತು ಮಹೀಶ ಕೇಳೆಂದ ‖ ೧೦

ವಿಕಳವಾಮನಮೂಕಬಧಿರಾಂ
ಧಕರು ಮಾಗಧಸೂತವಂದಿ
ಪ್ರಕರಮಲ್ಲಮಹೇಂದ್ರಜಾಲಮಹಾಹಿತುಂಡಿಕರು ।

---

1 ಕುಶಲ, ಕ. ಖ.

ಸುಕವಿತಾರ್ಕಿಕವಾಗ್ಮಿವೈತಾ
ಳಿಕಸುಗಾಯಕಕಥಕಕಾತರ್ಕಾಂ [1]
ತಿಕರು [2] ನೆರೆದುದು ನಿಖಿಳಯಾಚಕವೃಂದ ಸಂದಣಿಸಿ ‖ ೧೧

ಧರ್ಮರಾಯನು ಭೀಷ್ಮರನ್ನು ಕುರಿತು ಪ್ರಾರ್ಥಿಸುವಿಕೆ.

ಕರೆಸಿ ಭೀಷ್ಮಂಗೆಱಗಿ ನುಡಿದನು
ಧರಣಿಪತಿ ಬಾಲಕರು ನಾವ
ಧ್ವರವಿದಗ್ಗದರಾಜಸೂಯ ಮಹಾಮಹೀಶ್ವರರು ।
ನೆರೆದುದವನೀಪಾಲ [3] ಜನವಾ
ದರಿಸಲಱಿಯೆನು ಹೆಚ್ಚು ಕುಂದಿನ
ಹುರುಳ ನೀವೇ ಬಲ್ಲಿರೆಂದನು [4] ಮುಗಿದು ಕರಯುಗವ । ೧೨

ಚಿಂತೆ ಯೇಕೈ ಕೃಷ್ಣನಾರೆಂ
ದೆಂತು ಕಂಡೆ ಚತುರ್ದಶಾರ್ಧದ
ತಂತುರೂಪನು ತಾನೆ ಯೆನ್ನದೆ ನಿನಗೆ ಶ್ರುತಿವಚನ ।
ತಂತುವಿನ ಪಟ ಮೃತ್ತಿಗೆಯ ಘಟ
ದಂತೆ ಜಗವೀತನಲಿ ತೋರ್ಕುವು
ದಂತಕನ ಸುಯ್ಧಾನ ನಿನಗಿರಲಂಜಲೇಕೆಂದ ‖ ೧೩

ಕರೆಸು ಧೌಮ್ಯಾದಿಗಳನಿಲ್ಲಿಯು
ಪರುಠವವ ಮಾಡೆಂದು ಭೀಷ್ಮನು
ಗುರುಸಹಿತ ಕೈಕೊಂಡನಲ್ಲಿಯ ಮೇಲೆ ನೋಟವನು ।

ರಾಜಸೂಯದಲ್ಲಿ ನೆರೆದ ಜನಗಳು ಕಾರ್ಯನಿರ್ವಹಿಸಿದ ಕ್ರಮ.

ಅರಸ ಕೇಳ್ ಧೃತರಾಷ್ಟ್ರ ಬಾಹ್ಲಿಕ
ವರಬೃಹದ್ರಥ ಸೋಮದತ್ತರು
ಪರಮಪೂಜ್ಯರು ಮಾನನೀಯರು ಯಜ್ಞವಾಟದಲಿ ‖ ೧೪

---

1 ಮಾರ್ದಂ, ಚ. 2 ಗಿಕರು, ಚ.
3 ಖಿಲದ್ವೀಪ, ಚ. 4 ಕುರುಡ ಸೀಕ್ಷಿಸಲಾಗದೆಂದವನು, ಚ.

ಸವನಸಾಧನಸರ್ವಸಂಭಾ
ರವನು ಧೌಮ್ಯರು ತರಿಸಿ ಕೊಡಿಸುವ
ರವನಿಪತಿಗಳ ಪಾರಪತ್ಯವ ನೋಟ ಸಂಜಯಗೆ ।
ವಿವಿಧಋಷಿಯಾಜ್ಞಿಕರು ಮಾಂತ್ರಿಕ
ನಿವಹ ಸಹದೇವಂಗೆ ಭೋಜ್ಯ
ಪ್ರವರವಧಿಕಾರದ ನಿಯೋಗ ಯುಯುತ್ಸುವಿನ ಮೇಲೆ ॥ ೧೫

ನೆರೆವ ಭೂಸುರತತಿಯ ನೋಟಕೆ
ಕರೆದು ಕುಳ್ಳಿರಿಸುವುದು ಸಾತ್ಯಕಿ
ಭರದಿನಂಜಲ ತೆಗಿಸಿ ಸಾರಿಸುವುದು ವಿಕರ್ಣಂಗೆ ।
ಅರಸ ಕೇಳ್ ಭೋಜನದ ಸಮನಂ
ತರದ ವೀಳಯ ಗಂಧಮಾಲ್ಯಾಂ
ಬರವನೀವಧಿಕಾರ ದುಶ್ಶಾಸನನ ವಶವಾಯ್ತು ॥ ೧೬

ವಿತತಭೂಸುರದಕ್ಷಿಣೆಗೆ ಗುರು
ಸುತ ನಿಯೋಗಿ ಸಮಸ್ತವಸ್ತು[1]
ಪ್ರತತಿಗಳನಾರೈದು ತರಿಸುವನಾಕೃಪಾಚಾರ್ಯ ।
ಘೃತಮರಿಚಮಧುತೈಲಪರಿಮಳ
ಸಿತಲವಣಸಂಭಾರಶಾಕೋ
ಚಿತಸುವಸ್ತುವ ಕೊಡುವ ಕೊಂಬಾರೈಕೆ ವಿದುರಂಗೆ ॥ ೧೭

ಅರಸ ಕೇಳೈ ಪಾಕಶಾಲೆಯ
ಹಿರಿಯಹಂತಿಗಳೊಳು ಚತುರ್ದಶ
ಕರಿಗಳಡೆಯಾಡುವುವು ತತ್ಸಂಭಾರಗಳ ಹೇಱಿ ।
ಪರಿವ ರಜತದ್ರೋಣಿಯಲಿ ಸುರಿ
ಸುರಿದು ಸೇದುವ ರಾಟಳಂಗಳ
ಲೆಱೆವ ಮಧುಘೃತತೈಲಧಾರಾರಚನೆ ಚಲುವಾಯ್ತು ॥ ೧೮

1 ರತ್ನ, ಚ.

ಧರಣಿಪತಿ ಕೇಳ್ದ್ರವ್ಯವಿದಲಾ
ಗಿರೆ ಸಮಸ್ತಪ್ರಜೆವಿಧಾವಂ
ತರಿಗೆ ಭೋಜನಗಂಧಮಾಲ್ಯಾಂಬರವಿಲೇಪನವ |
ಉರುನಿಯೋಗಿಗಳಿಂದ್ರಸೇನನು
ವರವಿಶೋಕನು ರುಕ್ಮನತಿಬಂ
ಧುರಸಮೀರಪತಾಕಸೇನನು ಸೂತರ್ಕೈವರಿಗೆ ‖ ೧೯

ಅರಸ ಕೇಳ್ಬ ಬಟಿಕ ಪೃಥ್ವೀ
ಶ್ವರರಿಗಭಿನವಗಜರಥಾವಳಿ
ತುರಗಶಸ್ತ್ರಾಸ್ತ್ರಗಳನೀವ ನಿಯೋಗ ಕರ್ಣನದು |
ಕರೆಕರೆದು ಯೋಗ್ಯಾತಿಶಯುವಖಿ
ದಿರದೆ ಯೋಷಿಜ್ಜನವ ಮದ್ರೇ
ಶ್ವರನು ಕೊಡುವವನಾದನಧಿಕೋತ್ಸವದ ಸಿರಿ ಮಿಗಿಲು ‖ ೨೦

ಸಕಲಮಣಿಕಾಂಚನದುಕೂಲ
ಪ್ರಕರ ದುರ್ಯೋಧನನ ವಶವಾ
ನಕುಲನವರವರುಚಿತವೃತ್ತಿಯು ಮಧುರವಚನದಲಿ |
ಪ್ರಕಟಿಸುವನವನಿಪರ ಸೇನಾ
ನಿಕರದಾರೈಕೆಗಳು ಪಾಂಚಾ
ಲಕಪತಿಗೆ ರಂಜಿಸಿತು ಮಖ ಪರಿಪಾಟಿ ಪರುಠವದ [1] ‖ ೨೧

ಯಾಗಸಾಧನವು ಸಿದ್ಧವಾಗುವಿಕೆ.

ಆಮುದನುಪಮಕುಂಡಮಂತ
ರ್ವೇದಿಯು ಸಮೀಪದಲಿ ಹೊಱಿಗಳ
ಶೋಧಿಸಿದ ಯಿಧ್ಮದ ಕುಶಸ್ಥಂಡಿಲದ ಸೀಮೆಯಲಿ |
ಆದರಿಸಿ ಪರಿಚಾರಕರು ಸಂ
ಪಾದಿಸಿದ ಘೃತಚರುಪುರೋಡಾ
ಶಾದಿಸಂಭಾರಂಗಳಾಗನುವಾಯ್ತು ನಿಮಿಷದಲಿ ‖ ೨೨

---

1 ಲಕನಿಗಾದುದು ರಂಜಿಸಿತು ಪರಿಪಾಟಿಯೊಡ್ಡವಣೆ, ಚ.

ಅಧ್ವರ್ಯೂದ್ಗಾತೃಹೋತೃಗಳ ವ್ಯವಸ್ಥೆ.

ಕರೆಸಿದರು ಋತ್ವಿಕ್ಕುಗಳನ
ಧ್ವರ್ಯುವಾದನು ಯಾಜ್ಞವಲ್ಕ್ಯನು
ವರಸುಮಿತ್ರಾಂಗಿರಸರುಗಳುದ್ಗಾತೃ ಹೋತೃಗಳು |
ಪರಮಜೈಮಿನಿಕಣ್ವಕರತಿ
ತ್ರಿರಿಗಳಗ್ನೀಧ್ರಾದಿಜನಪಾ
ಧ್ವರಸಿಯೋಗಿಗಳಾದರು ವೇದವ್ಯಾಸನಾಜ್ಞೆಯಲಿ || ೭೩

ಆಸದಸ್ಯತ್ವವನು ವೇದ
ವ್ಯಾಸ ಕೈಕೊಂಡನು ಮುನೀಂದ್ರನು
ಪಾಸಮಾಜರು ರೈಭ್ಯಜೈಮಿನಿಸಪ್ತನಾರದರು |
ಭೂಸುರರು ಸಾಮಾಜಿಕರು ಧರೆ [1]
ಗೀಶಯಜ್ಞೋಪಕ್ರಮದ ವಿ
ನ್ಯಾಸದಲಿ ಬಂದನು ಯುಧಿಷ್ಠಿರನಚ್ಯುತನ ಹೊರೆಗೆ || ೭೪

ಧರ್ಮರಾಯನು ಕೃಷ್ಣನನ್ನು ಪ್ರಾರ್ಥಿಸುವಿಕೆ.

ದೇವ ನಿಮ್ಮಡಿಕರುಣದಲಿ ಸಕ
ಲಾವನೀಪತಿವಿಜಯ ಬಹಳಾ
ರ್ಥಾವಲಂಬನವೀಮಖಪ್ರಾರಂಭವಿಸ್ತಾರ |
ಈವಿಮಳವೈಭವವೆನಗೆ ಸಂ
ಭಾವಿತವೆ ಪರರಾಜಸೂಯಕೆ
ದೇವ ದೀಕ್ಷಿತನಾಗಬೇಕೆಂದೆರಗಿದನು ಪದಕೆ || ೭೫

ಯಾಗದೀಕ್ಷಿತನಾಗೆಂದು ಕೃಷ್ಣನ ಆಜ್ಞೆ.

ಮೊಗೆದು ಹಿಡಿದೆತ್ತಿದನು ರಾಯನ
ಪಣೆಯನಸುಸಮಕರುಣಾನಿಧಿ ಕಡು
ಗಣಿಯೊ ಬಾ ಯೆನ್ನಾಣೆ ಬಾರೆಂದಪ್ಪಿ ವ್ಯೈದವಿ |

1 ಸಮಾಜಿಕರು ಬಹು, ಕ. ಖ.

ಗುಣವೆಹುದು ನಿನಗಿಂದುಕುಲದಿನ
ಮಣಿಯೆ ದೀಕ್ಷಿತನಾಗು ಮದವಾ
ರಣನೆ ದೀಕ್ಷಿತನಾಗೆನುತ ಪರಸಿಪನು ಬೋಳವಿಸಿ ॥ ೨೬

ಎನೆ ಹಸಾದವೆನುತ್ತ ಯಮನಂ
ದನನು ವೈಶಾಖದ ಚತುರ್ದಶಿ
ದಿನವಲುತ್ತರಪೂರ್ವವೇದಿವರಾಷ್ಟ್ರವಯಿಕದಲಿ ।
ವಿನುತಪುಣ್ಯಾಹದ ಮಹಾವಾ
ಚನೆಯ ನಿಗಮಪವಿತ್ರಜಲಪಾ
ವನನು ಮಱುದಿನ ಯಜ್ಞದೀಕ್ಷಿತನಾದನೊಲವಿನಲಿ ॥ ೨೭

ಹುದಿದನವನೀತಾನುಲೇಪದ
ಹೊದೆದ ಕೃಷ್ಣಾಜಿನದ ಹಸ್ತಾ
ಗ್ರದಲೆಸೆವ ಸಾರಂಗಶೃಂಗದ ಪರಾಜವಾಸ್ಯದಲಿ ।
ಉದಧಿಗೊಱೆಗಟ್ಟುವ ಚತುರ್ವೇ
ದದ ಮಹಾಘೋಷದಲಿ ಮೆಱೆಕುಂ
ಡದ ತದಂತರ್ವೇದಿಗೈತಂದನು ಮಹೀಪಾಲ ॥ ೨೮

ನೆರೆದುದವನೀಪಾಲಜನ ಸಾ
ಗರಬಹಿರ್ವೇದಿಯ ಮಹಾಚ
ಪ್ಪರದೊಳಗೆ ತಂತಮ್ಮ ಸಿಂಹಾಸನಸಗಾಢದಲಿ ।
ಪರಮಋಷಿಗಳ ವೇದಘೋಷೋ
ತ್ಕರದ ಸ್ಪರ್ಧ್ವರವಿಷಯತರ್ಕ
ಸ್ಫುರಣ ಪುರಾಣಾದಿಕಳಕಳ ತುಂಬಿತಂಬರವ ॥ ೨೯

ಚರುತಿಲದ ರಾಶಿಗಳ ಸುಕ್ಸ್ರುವ
ಬರುಹಿಗಳ ಬಲುಹೊಱೆಗಳಾಜ್ಯೋ
ತ್ಕರದ ಪಾತ್ರಾವಳಿಯ ನಿರ್ಮಳಸಾರಸಮಿಧೆಗಳ ।

ಪರಿವೇಳೆಯುದಾಮಿಕ್ಷೆಗಳ ಪರಿ
ಕರದ ವಿವಿಧದ್ರವ್ಯಮಯಬಂ
ಧುರದಲೆಸೆದುದು ಯಜ್ಞವಾಟಿಕೆ ರಾಜಸೂಯದಲಿ ॥ ೩೦

ಬಳಸಿದರು ಪರಿಮಥ್ಯಮಾನಾ
ನಳನನಗ್ಗದ ಸುಪ್ರಣೀತಾ
ನಳನನಾಹವನೀಯಗಾರುಹಪತ್ಯದಕ್ಷಿಣದ ।
ಜ್ವಲಿತವೆನೆ ಮೃಗಚರ್ಮವೀಜನ
ವೆಳೆಯುದಲಿ ಪ್ರಾಗ್ವಂಶದಲಿ ಪರಿ
ಮಿಳಿತವಾಯ್ತು ಸದಸ್ಯಋತ್ವಿಗ್ಜನ ವಿಧಾನದಲಿ ॥ ೩೧

ಆಗ ಪಂಡಿತರ ವಿಚಾರ.

[1] ಏವಮೆತ್ರಾನ್ವಿತಮಿತಿ ಚ ಸಂ
[2] ಭಾವನೀಯಮಿದಂ ಚ ನೈತ
ದ್ಭಾವಮಿದಮೇವಂ ಚ ಶ್ರುತಿಸಂಸಿದ್ಧಮಿದವೆಂಬ ।
ಕೋವಿದರ ಕಳಕಳಿಕೆ ಯನ್ಯೋ
ನ್ಯಾವಮರ್ದದ ರಭಸಮಿದು ಭೂ
ಪಾವಳಿಗಳುಪಹಾಸಘೋಷಕೆ ಕವಚವಾಯ್ತೆಂದ ॥ ೩೨

ವ್ಯಾಹೃತಿಯ ಶಿಕ್ಷಾಕ್ಷರದ ವಿಮ
ಲಾಹುತಿಯ ಸ್ವಾಹಾವಷಟ್ಕೃತಿ
ಸೋಹು [3] ತಂದುದು ಸುರರ ಸುಹವಿಭಾಗಭೋಜಿಗಳ ।
ಲೋಹಿತಾಶ್ವನ ರಚನೆಯೊಳು ಹರಿ
ಪಾಹರಿಯೊಳುಬ್ಬಿದ್ದುವರ್ಚಿಗ
ಳಾಹ ಸಪ್ತಕವೇ ಸಹಸ್ರಕವೆನಲು ಹೊಸತಾಗುತ್ತು ॥ ೩೩

1 ಏವಮೇತನ್ನೈವಮಿತಿ ಸಂ, ಡ. ಏವಮೇವಸ್ಯಾತ್ತದಿತಿ ಸಂ, ಚ.
2 ನ್ನೈವಮಿದ, ಚ. 3 ಸೋಹಿ, ಚ.

ಕಳೆತು ತಿವಿದಾಡಿದುವು ಮುಖಿದೊಡೆ
ಗಲಿಸಿದುವು ಹೊಗೆ ಸುತ್ತಿ ಸಿಮಿಸಿಮಿ
ಮೊಟಗಿ ಮುಖಿದೆದ್ದುವು ಸಗಾಢದಲುಬ್ಬಿ ಭುಗಿಭುಗಿಸಿ ।
ಸುಟಿಸುಟಿದು ಭೋರೆಂದು ಬಗ್ಗದ
ವ್ವಳಿಸಿದುವು ಘೃತಧಾರೆಗಳು
ಚಕ್ಕಳಿಸಿದುವು ಹರಹಿನಲಿ ನಾಲಿಗೆ ಹವ್ಯವಾಹನನ ॥ ೩೪

ತ್ರಿದಿವವನು ತುಡುಕಿತು ಹವಿರ್ಗಂ
ಧದ ಗಡಾವಣೆ ಧೂತಧೂಮದ
ತುದಿ ತಪೋಲೋಕದಲಿ ತಳಿತುದು ಸತ್ಯಲೋಕದಲಿ ।
ತ್ರಿದಶರುಚಿ ಬಾಯೊಡಿಸಿದರ
ಗ್ಗದ ಧ್ರುವಾದಿಗಳನು ಸುತೃಪ್ತಿಯು
ಹೊದಱಿದೇಗಿನ ಹೊಟ್ಟೆ ನೂಕಿತು ಹರಿಹಯಾದ್ಯರಿಗೆ ॥ ೩೫

ಯಾಗದಲ್ಲಿ ವಿಪ್ರರು ತೃಪ್ತರಾಗುವಿಕೆ.

ದಣಿದುದಲ್ಲಿ ಸುರೌಘವೀಧ
ಕ್ಷಿಣೆಯುಲೂಟದಲಾದರಣೆ ಮ
ನ್ನಣೆಯುಲವನೀಸುರರು ಹಿಗ್ಗಿದರಿಲ್ಲಿ ಹಿರಿದಾಗಿ ।
ಎಣಿಸಬಹುದೇ ಭೋಜನದ ಸಂ
ದಣಿಯುನೀಸ್ಪೈಸೆಂದು ಭಾರಾಂ
ಗಣದ ಭೂರಿಯು ವಿವರವನು ಬಣ್ಣಿಸುವವಾರೆಂದ ॥ ೩೬

ವೇದವೇದಾಂಗದ ರಹಸ್ಯವಿ
ವಾದತರ್ಕಸ್ಮೃತಿಗಳಂತ
ರ್ವೇದಿಯುಲಿ ಘನಲಹರಿ ಮಸಗಿತು ತಂತ್ರಸಂಗತಿಯು ।
ಆದುದತ್ತಲು ಗದ್ಯಪದ್ಯವಿ
ನೋದನರ್ತನವಾದ್ಯಸಂಗೀ
ತಾದಿಸಕಲಕಲಾನುರಂಜನೆ ರಾಜವರ್ಗದಲಿ ॥ ೩೭

ಆಋಷಿಗಳಾಕ್ಷತ್ರಜನವಾ
ಭೂರಿಸಿಕರದ ವೇದಶಾಸ್ತ್ರಪಿ
ಚಾರಣರ ಚಾರಣರ ಸಂಗೀತಾದಿಕಳಕಳದ ।
ಆರಭಟೆ ಮಥಿತಾಂಬುನಿಧಿಯೊಡ
ನಾರುವವ್ರೊಲುಬೆದ್ದ ಬಲುಜ
ಝೇರವೆನೆ ಜಡಿದುದು ಯುಧಿಷ್ಠಿರರಾಜಸೂಯದಲಿ ॥ ೩೮

ಪಱುದಿನಪರಿಯಂತ ಘಳಿಗೆಗೆ
ಮೇಲೆ ಮೇಲಧ್ವರದಲಗ್ನಿ [1] ಛ
ಡಾಳಿಸಿತು ಜ್ವಾಳಿಸೆ ಚತುರ್ದಶಲೋಕಚೇತನವ ।
ಕೇಳಿದೈ ಜನಮೇಜಯ ಕ್ಷಿತಿ
ಪಾಲ ಸುರಲೋಕದಲಿ ಪಾಂಡುಪಿ
ನೋಲಗಕೆ ಬಹ ಬಣಗುಸುರರಿಗೆ ಸಮಯವಿಲ್ಲೆಂದ ॥ ೩೯

ಎವಗೆ ತವಗೆಂದಾಹವಿರ್ಭಾ
ಗವನು ಮುತ್ತಿತು ದೇವತತಿ ಸುರ
ಯುವತಿಯೂರ್ವಶಿಯರು ತಿಲೋತ್ತಮ ರಂಭೆ ಮೇನಕೆಯು ।
ದಿವಿಜರೊಳಹಸುಗೆಗಳ ಲೆಕ್ಕದ
ಸವರಣೆಯ ಸವಿಸಾಯ ತುತ್ತಿನ
ತವಕಿಗರು ತಿವಿದಾಡಿದರು ಸಭೆಯಲಿ ಸುರೇಶ್ವರನ ॥ ೪೦

ಘಾತನಾರೈ ಪಾಂಡುವಿನ ಮಗ
ನೀತ ಕಾಣಿರೆ ಪಾಂಡುವಿನ ಸುತ
ನೀತನೇ ಯಮಜಾತನೀತನೆ ಪಾಂಡುನಂದನನು ।
ಪೂತು ಧರ್ಮಜ ಪೂತು ಧರ್ಮಜ
ಪೂತು ಧರ್ಮಜ ಯೆಂಬ ಭೂಪ
ವ್ರಾತ ಪೊಗಳಿತು ಭರತನೃಗನಳದಶರಥಾದಿಗಳು ॥ ೪೧

1 ಲಕ್ಷ್ಮಿ, ಚ.

ಏನ ಹೇಳುವೆನರಸ ಯಜ್ಞವಿ
ಧಾನದಭಿಷೇಕಾದಿಸಮಯಸ[1]
ಘಾನವಾಯ್ತು[2] ರಸಂಗೆ ಸುರದುಂದುಭಿಯ ರಭಸದಲಿ ।
ಆನಿರಂತರತುಷ್ಟಿಗಳ ವೈ
ಮಾನಿಕರ ಸಂದಣಿ ನವೀನವಿ
ತಾನವಾದುದು ಭೂಮಿ ಭಾರತವರುಷದಗಲದಲಿ ॥ ೪೦

ವರಸದಸ್ಯಾದಿಗಳ ದಕ್ಷಿಣೆ
ಬರಹಕಿಂಮಡಿ ನೂಱುಮಡಿ ಸಾ
ವಿರಮಡಿಯು ವರಹೇಮವಸ್ತ್ರಾಭರಣಗೋವ್ರಜವ ।
ಅರಸನಿತ್ತನು ಮಖನಿಯೋಗಿ
ಕ್ತರರಿಗನುಪಮಭೂರಿಜನಕಾ
ದರಿಸಿ ಕೊಟ್ಟನು ಹೊತ್ತು ನಡೆದುದು ಸಕಲಜನ ಧನವ ॥ ೪೩

ತಲೆಹೊಱೆಯಲಡಕಿದರು ಹೆಗಲಲಿ
ಕೆಲರು ಶಿಷ್ಯರ ನೆತ್ತಿಯಲಿ ಕೆಲ
ಕೆಲರು ಹೊಱಿಸಿತು ದೇಶದೇಶದ ಬಹಳಭೂಸುರರು ।
ಲಲಿತರತ್ನಾಭರಣಗೋಸಂ
ಕುಲದ ಸೂಱೆಯನೇನನೆಂಬೆನು
ಸಲೆ ದಣಿದುದಾಸಕಲಜಾತಿ ಜನೇಶಯಾಗದಲಿ ॥ ೪೪

ಕಳಿದುವಗಣಿತಕಲ್ಪವಿದಱೊಳ
ಗಳಿವನಱಿಯದರಿಬ್ಬರೇ ಮುನಿ
ತಿಲಕಮಾರ್ಕಂಡೇಯರೋಮಶರೀಮಹಾಧ್ವರದ ।
ಸುಳಿವನಾರಲಿ ಕಂಡರವನಿಪ
ರೊಳಗೆನುತ ಮನವುಕ್ಕಿ ನಾರದ
ನಲಿದು ನುಡಿದನು ತನ್ನ ಹೇಳಿಕೆ ಸಫಲವಾಯ್ತೆಂದು ॥ ೪೫

1 ಸಮಯೋ, ಚ. 2 ದ್ಧಾನವಾಯ್ತು, ಚ.

ಸುರರಿಗಾದುದು ತುಷ್ಟಿ ಧರಣೀ
ಸುರಮುನೀಂದ್ರರಿಗಾಯ್ತು ಶೂದ್ರೋ
ತ್ಕರರಿಗಾಚಂಡಾಲಪರಿಯಂತಾಯ್ತು ಸತ್ಕಾರ ।
ಧರಣಿಪಾಲಕರಿದೆ ಚತುಸ್ಸಾ
ಗರದ ತಡಿಪರಿಯಂತ ವಿಶ್ವಂ
ಭರೆಯ ಮಾನ್ಯರ ಮನ್ನಿಸೆಂದನು ಭೂಪತಿಗೆ ಭೀಷ್ಮ ॥ ೪೬

ಸ್ನಾತಕಪ್ರಿಯಋತ್ವಿಗಾಚಾ
ರ್ಯಾತಿಶಯಗುರುನೃಪತಿಸಹಿತೀ
ಭೂತಳದೊಳಿಂತಾರು ಮಾನಿಸರರ್ಘ್ಯಯೋಗ್ಯರಲೆ ।
ಪ್ರೀತಿಯಲಿ ನೀನರ್ಘ್ಯವನು ವಿ
ಖ್ಯಾತರಿಗೆ ಮಾಡೆನಲು ಮನ್ನಣೆ
ಯಾತನಾರೆನೆ ವೀರನಾರಾಯಣನ ತೋಱಿಸಿದ ॥ ೪೭

ಎಂಟನೆಯ ಸಂಧಿ ಮುಗಿದುದು.

---

## ಒಂಬತ್ತನೆಯ ಸಂಧಿ.

### ಸೂಚನೆ.

ರಾಜಸೂಯದಲಗ್ರಪೂಜಾ
ರಾಜಿತನ ಶ್ರುತಿಮೌಳಿಮಣಿಯ ವಿ
ರಾಜಿತನ ಶಿಶುಪಾಲ ಜಱಿದನು ಪೂರ್ವವೈರದಲಿ ॥

ಧರ್ಮರಾಯನು ಅಗ್ರಪೂಜಾರ್ಹರಾರೆಂದು ಭೀಷ್ಮರನ್ನು ಕೇಳುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಮುನಿಮಧ್ಯದಲಿ ನಿಂದು ನೃ
ಪಾಲ ಭೀಷ್ಮಂಗೆಂದನತಿಗಂಭೀರನಾದದಲಿ ।

ಭಾಳನೇತ್ರನ ಪಡಿಯೆನಿಪ ಭೂ
ಪಾಲರಿವರೊಳಗಗ್ರಪೂಜ್ಯರ
ಹೇಳೆನಲು ಗಾಂಗೇಯ ನುಡಿದನು ವೇದಸಮ್ಮತವ ॥ ೧

ಭೀಷ್ಮರು ಕೃಷ್ಣನು ಅಗ್ರಪೂಜಾರ್ಹನೆಂದು
ಹೇಳುವಿಕೆ.

ಆರು ತಾರಾಗ್ರಹಗಳೊಳಗ
ರ್ಘ್ಯಾರುಹರು ದಿನಕರನುಳಿಯೆ ಮ
ತ್ತಾರು ಸುರಮುನಿನಿಕರಸೇವ್ಯರು ಶೂಲಧರನುಳಿಯೆ ।
ಆರು ನಿರ್ಜರನಿವಹದಲಿ ಜಂ
ಭಾರಿಯಲ್ಲದೆ ಮಾನನೀಯರ
ದಾರು ಜಗದಲಿ ಕೃಷ್ಣನಲ್ಲದೆ ಪೂಜ್ಯತಮರೆಂದ ॥ ೨

ಗಿರಿಗಳೊಳು ಹೇಮಾದ್ರಿ ಘನ ಸಾ
ಗರಗಳೊಳು ದುಗ್ಧಾಬ್ಧಿ ದೇವಾ
ಸುರನರೋರಗನಿಕರದಲಿ ನಾರಾಯಣನೆ ಮಿಗಿಲು ।
ಅರಸ ಸಂಶಯವೇಕೆ ಕೃಷ್ಣನ
ಚರಣವನು ತೊಳೆ ರಾಜಸೂಯಾ
ಧ್ವರಕೆ ಪೂಜಾಪಾತ್ರನೀ ಹರಿಯೆಂದನಾಭೀಷ್ಮ. ॥ ೩

ಈ ಮಾತನ್ನು ವ್ಯಾಸಾದಿಗಳು ಒಪ್ಪುವಿಕೆ.

ವ್ಯಾಸನಾರದರೋಮಶಾದಿಗ
ಳೀಸಮಸ್ತಮುನೀಂದ್ರರಿದೆ ಯಿ
ಕೇಶವನು ಪೂಜಾರ್ಹನೇ ಯೆಂದಿವರ ಕೇಳನಲು ।
ಲೇಸನಾಡಿದೆ ಭೀಷ್ಮ ಬಳಿಕೀ
ನೀಸಮಸ್ತಚರಾಚರದೊಳೀ
ವಾಸುದೇವನೆ ವಂದ್ಯನೆಂದುದು ಸಕಲಮುನಿನಿಕರ ॥ ೪

ತರಿಸಿದನು ನವಹೇಮಮಣಿಭಾ
ಸುರದ ಮಂಚದ ಮೇಲೆ ಲಲಿತಾ
ಸ್ತರಣದಡಿಕಿಲು ವಾಸಗಳ ನಿರ್ಮಳವಿಹಾರಗಳ ।
ಮೆಱೆದುದಿಳೆ ಬೆಳುದಿಂಗಳಿನ ಪೋ
ಹರದ ಮಾಱೊಡ್ಡಿನಿಸಿ ಭೂವಿೂ
ಶ್ವರಸಭಾಮಧ್ಯದಲಿ ಧರಣೀಪಾಲ ಕೇಳೆಂದ ॥ ೫

ಆಗ ಸಹದೇವನು ಕೃಷ್ಣನನ್ನು ಪೂಜೆಯಿಂದ ಆದರಿಸುಕೆ.

ವಿನಯದಲಿ ಸಹದೇವ ಕೈಗೊ
ಟ್ಟನುಪಮನ ತಂದನು ಪಿತಾಮಹ
ಜನಕ ಗಂಗಾಜನಕನವಧಾರು ಪಾಯವಧಾರು ।
ದನುಜರಿಪು ವವಧಾನವವಧಾ
ನೆನುತ ವಿಮಲಮಹಾರ್ಘ್ಯಸಿಂಹಾ
ಸನಕೆ ಬಿಜಯಂಗೈಸಿದರು ಕುಳ್ಳಿರ್ದನಸುರಾರಿ ॥ ೬

ತಂದು ಮಣಿಮಯಪಡಿಗದಲಿ ಗೋ
ವಿಂದನಂಘ್ರಿಯ ತೊಳೆದು ಗಂಗೆಯು
ತಂದೆವೀಗಳೆ ತಾವೆನುತ ತಮ್ಮುತ್ತಮಾಂಗದಲಿ ।
ವಂದಿಸುತ ವೈದಿಕದ ಪರಿವಿಡಿ
ಯಿಂದ ಮಧುಪರ್ಕಾದಿಪೂಜೆಗ
ಳಿಂದ ಸತ್ಕರಿಸಿದರು ಸಚರಾಚರಜಗತ್ಪತಿಯ ॥ ೭

ಕೃಷ್ಣಪೂಜೆಯನ್ನು ಸಭಿಕರೆಲ್ಲರೂ ಸಂತೋಷದಿಂದ ಅಭಿನಂದಿಸುವಿಕೆ.

ಆಯೆನುತ ಮನವುಕ್ಕಿ ಮುನಿಗಳು
ಘೋಯೆನಲು ನಿರ್ಜರರ ಭೇರಿ ಸ
ನಾಯಿಯಲಿ ಮೊಱಗಿದುವು ಸುರಿದರು ಮುಗಳ ತನಿಮಳೆಯ ।

ರಾಯನಧ್ವರಕರ್ಮ ಸತ್ಫಲ
ವಾಯಿತೈ ಭೂಪತಿ ಕೃತಾರ್ಥನ
ಲಾಯೆನುತ ಸಭೆ ಹೊಗಳಿತಂದು ಸಮುದ್ರಘೋಷದಲಿ ॥ ೮

ಈಮಹಾಧ್ವರಕರ್ಮವೇ ಸು
ತ್ರಾಮನವರಿಗೆ ಹವ್ಯಸಿದ್ಧಿ ಮ
ಹೀಸುರಮುನಿನಿಕರವೇಕತ್ರ ಸಂಮಿಳಿತ ।
ಈಮಹೀಶರ ಬರವಿದೆಲ್ಲರೊ
ಳೀಮುಕುಂದನ ಪೂಜೆ ಯಿದುವೆ ಸ
ಭಾಮನೋಹರವೆಂದು ಮಾರ್ಕಂಡೇಯ ಮುನಿ ನುಡಿದ ॥ ೯

ಅವನಿಯಮರರ ಕಳಕಳವ ಪಾಂ
ಡವರ ಸುಮ್ಮಾನವನು ರಿಪುಕೌ
ರವರ ಮಾತ್ಸರ್ಯೋಪಲಾಲಿತಹರುಷವಿಭ್ರಮವ ।
ಅವನಿಪಾಲರು ಕಂಡರೀ ಯು
ತ್ಸವವ ಕಂಡಿರೆ ನೀವೆನುತ ತ
ಮ್ಮವರೊಳೊಬ್ಬರನೊಬ್ಬರುಜಿಕೆ ನೋಡಿದರು ಬೆಱಗಾಗಿ ॥ ೧೦

ಕೆಲರು ಪಾಂಡವಮೈತ್ರಿಯಲಿ
ಕೆಲಕೆಲರು ಕೃಷ್ಣನ ಬಲುಹಿನಲಿ
ಕೆಲಕೆಲರು ಧೀರತ್ವದಲಿ ಕೆಲರನುಚಿತದ ಭೀತಿಯಲಿ ।
ಕೆಲರಿದೇಕೆಮಗೆಂದು ಧರಣೀ
ವಳಯುದವನಿಪರಿರ್ದರವರೊಳು
ಖಳಶಿರೋಮಣಿ ಮಸಗಿದನು ಶಿಶುಪಾಲ ಕೇಳೆಂದ ॥ ೧೧

ಆಗ ಶಿಶುಪಾಲನ ಆಕ್ಷೇಪಣೆ.

ಹೊತ್ತಿತೆದೆ ಹೇರಾಳತಮದಲಿ
ಕೆತ್ತಿದುವು ಮೀಸೆಗಳು ಕಂಗಳು
ಹೊತ್ತವೆರಅಣಿಕ್ಕಿಯನುಬ್ಬರಿಸಿದುವು ರೋಮಗಳು ।

ಕೆತ್ತುದಱಿವಿನ ಕದ ಕಟಾಕ್ಷದಿ
ಮೃತ್ಯುವೊಲಿದಳು ರೋಷ ಮಿಗೆ ಹೊಗ
ರೆತ್ತಿದುದು ಶಿಶುಪಾಲವೀರನ ವಚನವಮಯುಖಡುಗ ॥ ೧೨

ಸಹದೇವನನ್ನು ಕುರಿತು ಶಿಶುಪಾಲನ ಬಿರುನುಡಿಗಳು.

ಏನೆಲವೊ ಸಹದೇವ ವಸುಧೆಯ
ಮಾನನಿಧಿಗಳ ಮುಂದೆ ನಂದನ
ಸೂನುವಿಗೆ ಸಿಂಹಾಸನದ ಮೇಲರ್ಘ್ಯಸತ್ಕ್ರಿಯೆ ।
ನೀನಱಿಯದವ ನಿಮ್ಮ ಯಾಗಕೆ
ಹಾನಿಯಲ್ಲಾ ನಿಮ್ಮ ಹಿರಿಯರಿ
ದೇನಮಾಡಿದರಕಟ ಖೂಳರು ಪಾಂಡುಸುತರೆಂದ ॥ ೧೩

ಯದುಗಳವದಿರು ಮುನ್ನ ರಾಜ್ಯಾ
ಸ್ಪದರೆ ಸಿಂಹಾಸನಕೆ ಬಾಹಿರ
ರದಱೊಳೀತನ ಖೋಡಿಯನು ಜಗವೆಲ್ಲ ಬಲ್ಲುದಲೆ ।
ಇದು ಮಹಾಧ್ವರವಿಲ್ಲಿ ನೆರೆದಿ
ರ್ದುದು ಮಹಾಕ್ಷತ್ರಿಯರು ಗೋವರ
ಸದೆಗನಿಲ್ಲಿಗೆ ಶಿಷ್ಟನೇ [1] ಸಹದೇವ ಹೇಳೆಂದ ॥ ೧೪

ತ್ರಿದಶರಿಗೆ ಸರಿತೂಕ ಸಾಮ
ರ್ಥ್ಯದಲಿ ಶುದ್ಧಶ್ರೌತಸನ್ಮಾ
ರ್ಗದಲಿ ಶಿವ ಶಿವ ರಾಜಋಷಿಗಳಲಾ ಮಹೀತಳಕೆ ।
ಉದಯದಿನನಂದದಲಿ ನೃಪರಿ
ರ್ದುದು ಸತೇಜೋವ್ರಜರು ಗೊಲ್ಲರ
ಸದೆಗನಿಲ್ಲಿಗೆ ಗರುವನೇ [2] ಸಹದೇವ ಹೇಳೆಂದ ॥ ೧೫

[1] ಶ್ರೇಷ್ಟನೇ, ಚ. [2] ಶಿಷ್ಟನೇ, ಚ.

ಬಾಲಕನು ಸಹದೇವನೀತನು
ಹೇಳಿನಿಲ್ಲಿಯು ಹೆಚ್ಚು ಕುಂದ ನೃ
ಪಾಲ ನಿನ್ನದು ಧರ್ಮತತ್ವರಹಸ್ಯಸಂಗತಿಯು ।
ಕೇಳುವೆಗಳವು ಬೇಡಿ ಚರಿತದ
ಪಾಳಿ ತಾನದು ಬೇಡಿಲಾ ಪಶು
ಪಾಲರೀಯಧ್ವರಕೆ ಪೂಜ್ಯರೆ ಶಿವ ಶಿವಾ ಯೆಂದ ॥ ೧೬

ಭೀಷ್ಮರನ್ನು ಕುರಿತು ಶಿಶುಪಾಲನ ಬಿರುನುಡಿಗಳು.

ತರಳರಿವೆದಿರು ಪಾಂಡುಸುತರಂ
ತಿರಲಿ ನೀ ಸುಪ್ರೌಢನೆಂದಾ
ದರಿಸಿದೈ ವಸುದೇವಸುತನಲಿ ಶಿಷ್ಟಯೋಗ್ಯತೆಯು ।
ಧರಣಿಪಾಲರ ಮಧ್ಯದಲಿ ಭಾ
ಸ್ಕರನು ಗಡ ತುಡುಹಳ್ಳಿ ಕಾಡಿಡಿ
ಪುರದ ಭಾಸ್ಕರನೀತನಲ್ಲಾ ಭೀಷ್ಮ ಹೇಳೆಂದ ॥ ೧೭

ಶಿವನ ಸರಿ ಮಂಚದಲಿ ಸರಸಿಜ
ಭವನ ಸಮ ಗದ್ದಿಗೆಗಳಲಿ ವಾ
ಸವನ ತೊಡೆ ಸೋಂಕಿನಲಿ ಕುಳ್ಳಿಹರೀಮಹೇಶ್ವರರು ।
ಇವರ ಸರಿಸಕೆ ಸಲ್ಲದೀಯಾ
ದವನನುದ್ದಲಿರಿಸಿ ಬಹುಮಾ
ನವನು ಮಾಡಿದೆ ಭೀಷ್ಮ ಯಜ್ಞವನಳಿದೆ ನೀನೆಂದ ॥ ೧೮

ಸಕಲಶಾಸ್ತ್ರಶ್ರವಣ ವೇದ
ಪ್ರಕರದರ್ಥವಿಚಾರ ಪೌರಾ
ಣಿಕಕಥಾಪ್ರಾಗಲ್ಭ್ಯವಿನಿತರ ಸಾರಸಂಗತಿಯು ।
ಅಕಟ ನೀರಲಿ ನೆರಹಿ ಗೋಪಾ
ಲಕನ ಪೂಜಾಸಾಧನಾರ್ಥ
ಪ್ರಕಟನಾದೈ ಭೀಷ್ಮ ಮೂರ್ಖಾಧಮನು ನೀನೆಂದ ॥ ೧೯

ನಾನಾಕಾರಣಗಳಿಂದ ಕೃಷ್ಣನು ಪೂಜಾಯೋಗ್ಯನಲ್ಲವೆಂದು ಹೇಳುವಿಕೆ.

ಹಿರಿಯನೆಂದೀತನಲಿ ಪೂಜಾ
ವರಣವೇ ವಸುದೇವನೀವುುರ
ಹರನ ಪಿತನಿದ್ದಂತೆ ಮೋಹೀದ್ರುಪದಭೂಪತಿಯು ।
ವರಿಸಿ ನೀವಾಚಾರ್ಯನೆಂದಾ
ದರಿಸುವೊಡೆ ರಾಯರಿಗೆ ಶಸ್ತ್ರದ
ಗುರುವಲಾ ದ್ರೋಣಂಗೆ ಪೂಜೆಯ ಮಾಡಿರಿಂತೆಂದ ೨೦

ಈತನಿಲ್ಲಿ ಸದಸ್ಯನೇ ವಿ
ಖ್ಯಾತವೇದವ್ಯಾಸಮುತ್ತಿ
ಗ್ಖ್ಯಾತನಾಥಂಗಗ್ರಪೂಜೆಯನೇಕೆ ಮಾಡಿಸರಿ ।
ಈತ ನಿಮಗೆ ಪಿತಾಮಹನೆ ಗಂ
ಗಾತನುಜನೈದನೆ ವಿಶೇಷಕೆ
ಗೌತಮನಲಾ ಕೃಪನ ಮನ್ನಿಸರೇಕೆ ನೀವೆಂದ ॥ ೨೧

ವೀರರಿಗೆ ಕೊಡಬೇಹುದೇ ರಣ
ಧೀರನಶ್ವತ್ಥಾಮನೈದನೆ
ಸಾರನಲ್ಲಾ ಚಾಪಧರರೊಳಗೇಕಲವ್ಯನೃಪ ।
ಪೌರವೇಯರೊಳಿಂದುಬಾಹ್ಲಿಕ
ಗಾರು ಸರಿ ಕೊಡಿರೇಕೆ ಕೃಷ್ಣನಿ
ದಾರೊಳಾರೆಂದಗ್ರಪೂಜೆಯನಿತ್ತಿರಕಟೆಂದ ॥ ೨೨

ನರನ ಸಖನೀಕೃಷ್ಣನೆಂದಾ
ದರಿಸುವೊಡೆ ಗಂಧರ್ವ ನಿಮ್ಮಾ
ನರನ ಸಖನಲ್ಲೇ ವಿರೋಧಿಯೆ ಚಿತ್ರರಥ ನಿಮಗೆ ।
ಅರಸನಲ್ಲಾ ನೃಪನು ವರಕಿಂ
ಪುರುಷವಾನ್ಯರು ನಿಮ್ಮ ಯಾಗದೊ
ಳುರುಳುಕರಿಗಲ್ಲದೆ ವಿಶಿಷ್ಟರಿಗಿಲ್ಲ ಗತಿಯೆಂದ ॥ ೨೩

ಮಾನ್ಯರಿಗೆ ಮನ್ನಣೆಯುಹರೆ ಸಾ
ಮಾನ್ಯನೇ ಭಗದತ್ತ ನಿಮಗೇ
ನನ್ಯನೇ ಸೈಂಧವನು ನೀವಿಂದೇಕೆ [1] ಮನ್ನಿಸರಿ |
ಶೂನ್ಯವಿಭವನೆ ಮಗಧಸೂನು ಸು
ಮಾನ್ಯನಲ್ಲಾ ದಂತವಕ್ರನು
ಮಾನ್ಯಭಟ್ಟನು ಕೃಷ್ಣನಿಲ್ಲಿಗೆ ಯೋಗ್ಯನಹನೆಂದ || ೨೪

ಉಱುವನೃಪನಲ್ಲಾ ಸುದಕ್ಷಿಣ
ನಱಿಯಿರೇ ಮಾಳವನನೀತನ
ಮಱಚಿರೇ ಸಾಲ್ವನನು ಭೀಷ್ಮಕರುಕ್ಮಭೂಪತಿಯ |
ಮೊಱೆಯ ಮಱಚಿರೆ ಶಲ್ಯಭೂಪತಿ
ಹೊಱಗಲಾವರರಾಜಸೂಯಕೆ
ಕಱುವ ಕಾವವರಲ್ಲದುಳಿದರು ಯೋಗ್ಯರಲ್ಲೆಂದ || ೨೫

ಭೂರಿಭೂರಿಶ್ರವನು ನಿಮ್ಮೊಳ
ಗಾರ ಹೊಯ್ದರು [2] ಸೋಮದತ್ತಮ
ಹೀರಮಣನತಿಮಾನ್ಯನಲ್ಲಾ ಯಜ್ಞಪೂಜೆಯಲಿ |
ಸಾರಧರ್ಮವಿದೆಂದು ಬಂದವ
ರಾರು ಬಲ್ಲರು ಹಳ್ಳಿಕಾಱರ
ನಾರಿಯರ ನೆಱೆ ಮಿಂಡನಲ್ಲದೆ ಯೋಗ್ಯರಿಲ್ಲೆಂದು || ೨೬

ವಿಂದನನುವಿಂದಾವನೀಶರೆ
ಬಂದಿರೈ ಕಾಂಭೋಜನೃಪನೈ
ತಂದೆಲಾ ಗಾಂಧಾರಶಕುನಿಬೃಹದ್ರಥಾದಿಗಳ |
ಬಂದಿರಿಲ್ಲಿಗೆ ಧರ್ಮಸಾಧನ
ವೆಂದು ಬಯಸಿದಿರಿ ವರಯಜ್ಞಕೆ
ನಂದಗೋಪನ ಮಕ್ಕಳಲ್ಲದೆ ಯೋಗ್ಯರಲ್ಲೆಂದ || ೨೭

1 ಸಾಖಲಜಯದ್ರಥರೇಕೆ, ಚ.   2 ಗಾರುವೃದ್ಧರು, ಚ.

ಸ್ನಾತಕವ್ರತಿಯಲ್ಲ ಋತ್ವಿಜ
ನೀತನಲ್ಲಾಚಾರ್ಯನಲ್ಲಾ ಮ
ಹೀತಳಾಧಿಪನಲ್ಲ ಗುರುವಲ್ಲಸುರರಿಪು ನಿಮಗೆ ।
ಈತನೇ ಪ್ರಿಯನೆಂದು ಕೃಷ್ಣಂ
ಗೋತು ಕೊಡುವೊಡೆ ಬೇಱೆ ಕೊಡುವುದು
ಭೂತಳೇಶರ ಮುಂದೆ ಮನ್ನಿಪುದುಚಿತವಲ್ಲೆಂದ ॥ ೭೮

ಈಋಷಿಗಳೀಮಂತ್ರವೀಸಂ
ಭಾರವೀಪೌರಾಣಕಥೆ ಯಿ
ಭೂರಿಭೋಜನ ವೀಮಹೀಗೋರತ್ನ ಧನಧಾನ್ಯ ।
ಸಾರತರವೇದೋಕ್ತಮಾರ್ಗವಿ
ಚಾರವಿದ್ದುದು ಹೊಱಗೆ ಗೊಪೀ
ಜಾರಸತ್ಕೃತಿಯೊಳಗೆ ವಿಷವಿದನಱಿದುದಿಲ್ಲೆಂದ ॥ ೭೯

ರಾಯ ನಿನಗಾವಿಂದು ದಿಟ ಸಿ
ದ್ಧಾಯವೆನು ನಾವ್ ಶೆತ್ತಿವಲ್ಲದೆ
ವಾಯುಜನ ಫಲುಗುಣನ ಬಿಲ್ಲಿನ ಬಲುಮೆಗಂಜಿದೆವೆ ।
ರಾಯ ಠಕ್ಕಿನ ನುಡಿಯ ತೌಳಿಯ
ಮಾಯಕಾಱನ ತಂದು ಮನ್ನಿಸಿ
ರಾಯರಭಿಮಾನವ ವಿಭಾಡಿಸಿ ಕೊಂದೆ ನೀನೆಂದ ॥ ೮೦

ಧರ್ಮಮಯವೀಯಜ್ಞ ನೀನೇ
ಧರ್ಮಸುತನೆಂದಿದ್ದೆವಿಲ್ಲಿ ವಿ
ಕರ್ಮವಾಯಿತಸೂಯವೇ ಶಿವನಾಣೆ ಜಗವಱಿಯೆ ।
ಧರ್ಮವೇ ಯುಪ್ರಾಪ್ತಕಾರ್ಯದ
ಕರ್ಮವೀನೃಪನಿಕರ ಮೊಚ್ಚಲ
ಧರ್ಮಸುತನೆಂದಾಯ್ತು ನಿನ್ನಭಿಧಾನವಿಂದಿನಲಿ ॥ ೮೧

ಕೃಷ್ಣನನ್ನು ಸಂಬೋಧಿಸಿ ಶಿಶುಪಾಲನಾಡಿದ ದುರುಕ್ತಿಗಳು.

ಆಯಿತಿದು ಜಡ ಧರ್ಮಜನು ಗಾಂ
ಗೇಯ ಜಡನೀತಾರುಭಟ್ಟನ
ದಾಯವೆಱಿಯದೆ ನಿನ್ನ ಕರೆದರೆ ಕೃಷ್ಣ ಬೆಱತೆಯುಲ |
ರಾಯರತುನದ ನಡುವೆ ನೀನನು
ನಾಯಕವೊ ನೃಪಹಾರದಲಿ ಯನು
ನಾಯಕವೊ ನೀನಾವನೆಂದನು ಜಱಿದು ಮುರಹರನ ‖ ೩೦

ಈಋಷಿಗಳೀ ಬಣಗುಗಳು ಬತ
ಹಾರುವರು ದಕ್ಷಿಣೆಸುಭೋಜನ
ಭೂರಿದಾನವೆ ಸಾಕು [1] ಮಾನ್ಯದ ವಾಸಿ ಪಟ್ಟದಲಿ |
ಹೋಱುವವರಿವರಲ್ಲ ನೆರೆದೀ
ವೀರನೃಪರಭಿಮಾನಿಗಳು ನೆಱೆ
ಸೈರಿಸಿದೊಡದು ನಿನಗೆ ಸವರವೇ ಕೃಷ್ಣ ಹೇಳೆಂದ ‖ ೩೩

ಅಱಿಯದವರಾದರಿಸಿದೊಡೆ ನೀ
ನಱಿಯಬೇಡವೆ ನಿನ್ನ ಕುಂದಿನ
ಕೊಱತೆಗಳನಾರಱಿಯರೀಭೂಪಾಲಮಧ್ಯದಲಿ |
ಕುಱುಬರೂರಲಿ ಗಾಜುಮಾಣಿಕ
ವಱಿಯದವರೊಳು ಕೃಷ್ಣ ಕಡು
ಬೆಱತೆಲಾ ನೆಱೆ ಮೆಱೆದೆಲಾ ನಿನ್ನಂತರವನೆಂದ ‖ ೩೪

ಕುಲದಲಧಿಕರು ರಾಜ್ಯದಲಿ ಪೆ
ಗ್ಗಳರು ಭುಜಸತ್ವದಲಿ ಸೇನಾ
ಬಲದಲುತ್ತಮರಿವರ ಭಂಗಿಸಿ ನಿನಗೆ ಮನ್ನಣೆಯೆ |
ಕುಲವು ಯದುಕುಲ ರಾಜ್ಯವೇ ಕಡ

[1] ಊರವಾದರೆ, ಚ.

ಟೊಳಕುಱುವ ನಿನ್ನೋಟಿಗುಳಿತನ
ದಳವ ಮಾಗಧಕಾಲಯವನರು ಬಲ್ಲರವರೆಂದ ॥ ೩೫

ಜೀವನಾರವದೊಳಗೆ ಕಳಹಂ
ಸಾವಳಿಗೆ ರವ್ಯವೆ ಜಪಾಕುಸು
ಮಾವಳಿಗಳಲಿ ಮಧುಕರನ ಮೋಹರಕೆ ಮನ್ನಣೆಯೆ ।
ಈ ವಿಕಾರದ ಯಜ್ಞದಲಿ ರಾ
ಜಾವಳಿಗೆ ಮನ್ನಣೆಯೆ ಶಿವ ಶಿವ
ನೀವು ಗೋಪೀಜಾರರಿಲ್ಲಿಗೆ ಶಿಷ್ಟರಹಿರೆಂದ ॥ ೩೬

ಜರಡುಮುಖ ವೀಮುಖಕೆ ಹೋಲುವೆ
ಧರಣಿಪತಿ ಯೊಮುಖಕೆ ಧರಣೀ
ಶ್ವರಗೆ ಪಾಸಟಿ ಭೀಷ್ಮನೀಮುಖ ನೃಪತಿ ಭೀಷ್ಮರಿಗೆ ।
ಸರಿಸವಾದನು ಕೃಷ್ಣನೀಮುಖ
ಧರಣಿಪತಿ ಭೀಷ್ಮಂಗೆ ಕೃಷ್ಣಗೆ
ಸರಿಯು ಕಾಣೆನು ನಿಮ್ಮೊಳೊಬ್ಬರಿಗೊಬ್ಬರೆಣೆಯೆಂದ ॥ ೩೭

ಶಿಶುಪಾಲನ ದುರುಕ್ತಿಗಳನ್ನು ಕೇಳಿ ಕೃತವರ್ಮಾದಿಗಳು ರೇಗುವಿಕೆ.

ಸೀಱುವನ ಹೆಡತಲೆಯೊಳಗೆ ತೆಗೆ
ನಾಲಿಗೆಯು ನೆಲೆ ಕುನ್ನಿಗಳಿರಿದ
ಕೇಳುವರೆ ಪತಿನಿಂದೆ ಯಿದು ಪಾತಕಕೆ ಗುರುವಲ್ಲೆ ।
ಏಟೆನುತ ಕೃತವರ್ಮಸಾಂಬನೃ
ಪಾಲಮೊದಲಾದಖಿಳಯಾದವ
ಜಾಲವೆದ್ದುದು ಬಿಗಿದ ಬಿಲುಗಳ ಸೆಳೆದೊಡಾಯುಧದಿ ॥ ೩೮

ಕದಡಿತಾಬ್ರಾಸ್ಥಾನ ಕೋ ಯೆಂ
ದೊದಱೆ ಋಷಿಗಳ ನಾಲಿಗೆಗಳೊಣ
ಗಿದುವು ಹಲ್ಲಣಿಸಿದುವು ರಥಮಾತಂಗವಾಜಿಗಳು ।
ಕೆದಱೆತೀಚೆಯುನೆನುತನೀತನ

ಸದೆದು ತೆಗೆ ಸುಂಟಿಗೆಯನೆನುತಲಿ
ಯುಧುನೃಪರು ಗಜಬಜಿಸೆ ಬಂದೆಡೆಹೊಕ್ಕನಾಭೀಷ್ಮ ॥　　೩೯

ಕೃಷ್ಣದೂಷಕರನ್ನು ಸಹದೇವನು ತಿರಸ್ಕರಿಸುವಿಕೆ.

ನಿಲಿಸಿದನು ಕಳಕಳವ ನೀಯುದು
ಬಲವ ತೆಗೆದನು ಮತ್ತೆ ಮೌನದ
ಜಲಧಿಯಾಯ್ತಾಸ್ಥಾನವಿದಿರಲಿ ನಿಂದು ಸಹದೇವ ।
ಎಲೆ ಸುನೀಥ ವೃಥಾವಿರೋಧ
ಸ್ಖಲಿತನಾದೆ ಮುರಾರಿ ಮಾನ್ಯರ
ತಿಲಕನೀತನ ಪೂಜೆ ಯಾಗಕೆ ಕಳಶವಾಯ್ತೆಂದ ॥　　೪೦

ಧರಣಿಪತಿಯೇ ಸಕಲಧರ್ಮದ
ಪರಮಸೀಮೆ ಮುಕುಂದನೇ ಮಾ
ನ್ಯರಿಗೆ ಗುರು ವಂದ್ಯರಿಗೆ ವಂದ್ಯನು ದೈವಕಧಿದೈವ ।
ಸುರನದೀನಂದನನು ಸಾಕ್ಷಾ
ತ್ಪರಮಶಿವನೀಯಜ್ಞ ಲೋಕೋ
ತ್ತರದ ಮಖವಿದು ನಿನ್ನ ಕುಮತಿಗೆ ಸಾಧ್ಯವಲ್ಲೆಂದ ॥　　೪೧

ನಿನ್ನನೆನ್ನನು ಚೈದ್ಯ ಕೃಷ್ಣನ
ಮನ್ನಣೆಗೆ ಸೆಣಸುವರಿಗಿದೆ ತೊಡ
ರೆನ್ನ ಕಾಲಲೆನುತ್ತ ಧರಣಿಯನೊದೆದನಂಘ್ರಿಯಲಿ ।
ಇನ್ನು ನೀನು ಸುಲೋಚನಾಂಧಕ
ನಿನ್ನೊಡನೆ ಫಲವೇನು ಕಲಹಕೆ
ಬನ್ನಿ ಮಿಡುಕುಳ್ಳವರೆನುತ ಗಜಬಿದನು ಸಹದೇವ ॥　　೪೨

ನುಡಿಯದದು ಮೌನಗ್ರಹದ ಹಿಡ
ಗುಡಿಯುಲಿದುದು ರಾಜಕುಲವವ
ಗಡೆಯಿ [1] ನೆದ್ದನು ಸಿಂಹಪೀಠದಿ ನೋಡಿ ಕೆಲಬಲನ ।

1 ಗಡೆಯು, ಚ.

ಕಡೆಯು ಝುಣಝುಣರವ ಮಸಗಲವ
ನೊಡನೆ ಹೊಱವಂಟರು ನೃಪಾಲಕ
ನೊಡನೆ ಮುಱಿಚಿದರು ಹಿಡಿವಸಚಿವಪಸಾಯ್ತಮಂತ್ರಿಗಳ ॥ ೪೩

ಶಿವಶಿವಾ ತಪ್ಪಾಯ್ತು ನಮ್ಮ
ತ್ಸವಕೆ ಬಂದವನಿಪನ ಗುಣದೋ
ಷವನು ನಾವೀಕ್ಷಿಸುವುದನುಚಿತವೆಂದು ವಿನಯದಲಿ ।
ಅವನಿಪತಿ ಬೆಂಬತ್ತಿ ಕದನಕೆ
ತವಕಿಸುವ ಶಿಶುಪಾಲನನು ಹಿಡಿ
ದವಚಿದನು ಮಧುರೋಕ್ತಿಯಲಿ ಮನ್ನಿಸಿದನುಚಿತದಲಿ ॥ ೪೪

ಅಱಿಯರೇ ಮುನಿಮುಖ್ಯರೀತನ
ನುಱುವದೈವವಿದೆಂದು ನೀಕ
ಟ್ಟೈಱಿತಗಾಱನೆ ರಾಯರಿದೆಲಾ ಸಕಲಗುಣಯುತರು ।
ಕಱುಬ [1] ತನದಲಿ ನೀನಕಟ ತೆಱ
ನಱಿಯದೆಂಬರೆ ಬಾರೆನುತ ಮುಂ
ಜೆಱಗ ಹಿಡಿದೆಳದವನ ತಂದನು ಭೂಪ ಜನಸಹಿತ ॥ ೪೫

ಭೀಷ್ಮರು ಶಿಶುಪಾಲನನ್ನು ದೂಷಿಸಿ ಕೃಷ್ಣನನ್ನು ಸ್ತುತಿಸುವಿಕೆ.

ಎಲೆ ಮರುಳೆ ಭೂಪಾಲ ನೊರಜಿನ
ಕಳಕಳಕೆ ಕರಿ ಬೆಚ್ಚುವುದೆ ಮಿಂ
ಚಲಿಯ ಮಱಿ ಮಿಡುಕಿದರೆ ಕಳಕಳಿಸುವುದೆ ಕಲಿಸಿಂಹ ।
ಗಿಳಿಯ ಮೊರಕಕೆ ಗಿಡುಗನಗಿದ
ವ್ವಳಿಸುವುದೆ ಹರಿಗಿವನು ಗಣ್ಯನೇ
ಗಳಹನಿವನೊಡನಾವುದನುನಯವೆಂದನಾಭೀಷ್ಮ ॥ ೪೬

1 ಕುರುಡ, ಚ.

ಗುರುವೆ ಗುರುವೆನುವಖಿಳವಿದ್ಯಾ
ಪರಿಣತರ ಪರಿಣತನು ವೀರನು
ಧುರದ ವೀರನನಱವೆನಿಂತಿದು ಲೋಕವಿಖ್ಯಾತ ।
ಗರುವನಲ್ಲ ಸುನೀತ ವಿದ್ಯಾ
ಪರಿಣತನು ತಾನಲ್ಲ ಘನಸಂ
ಗರದೊಳವನಾಳಲ್ಲ ಕೃಷ್ಣನನಱವೆನಿಂತೆಂದ ॥ ೪೭

ಅರಸನರಸನು ಕಾದಿ ಹಿಡಿದಾ
ದರಿಸಿ ಬಿಟ್ಟು ತದೀಯರಾಜ್ಯದೊ
ಳಿರಿಸಿದೊಡೆ ಗುರುವಾತನಾತಂಗಿದುವೆ ಶ್ರುತಿಸಿದ್ಧ ।
ಅರಸುಗಳನನಿಬರನು ಸೋಲಿಸಿ
ಮರಳಿ ರಾಜ್ಯದೊಳಿರಿಸನೇ ಮುರ
ಹರನು ಗುರುವಲ್ಲಾ ಮಹೀಶರಿಗೆಂದನಾಭೀಷ್ಮ ॥ ೪೮

ಮಗಧಸುತನೀಸಾಲ್ವಹಂಸನ
ಮಗನಿಶುಂಭನ ಸೂನು ನರಕನ
ಮಗನು ಪೌಂಡ್ರಕದಂತವಕ್ತ್ರನ ತನುಜರಿವರೆಲ್ಲ ।
ಹಗೆಯ ಮಾಡಿ ಮುರಾಂತಕನ ಕಾ
ಳಗದೊಳೆಲ್ಲರನಿಕ್ಕಿ ಪಟ್ಟವ
ಬಿಗಿಸಿ ಕೊಂಡವರಲ್ಲವೇ ಹೇಳೆಂದನಾ ಭೀಷ್ಮ ॥ ೪೯

ಜ್ಞಾನವೃದ್ಧರು ವಿಪ್ರರಲಿ ಸ
ನ್ಮಾನನೀಯರು ಶೌರ್ಯವೃದ್ಧರು
ಮಾನವೇಂದ್ರರೊಳಧಿಕವಿದು ಪೌರಾಣಸಿದ್ಧವಲೆ ।
ಜ್ಞಾನವೃದ್ಧನು ಕೃಷ್ಣನಾಹವ
ದೀನನೇ ಘನಶೌರ್ಯನೆಂಬುದ
ತಾನಱಯನೇ ಚೇದಿಪಾಲಕನೆಂದನಾಭೀಷ್ಮ ॥ ೫೦

ಏನನೆಂಬೆನು ಧರ್ಮತತ್ವವಿ
ಧಾನದಲಿ ಮುನಿಮುಖ್ಯರಿವರ

ಜ್ಞಾನಿಗಳ ಶಿಶುಪಾಲ ತತ್ತ್ವಜ್ಞಾನಪಂಡಿತನೆ ।
ಆನಿಶಾಟನು ಮೆಚ್ಚ ದಗ್ಗದ
ಭಾನುರಶ್ಮಿಯನಂಧಕಾರ
ಜ್ಞಾನನಿಷ್ಠರು ನಿಪುಣರೈ ಸಲೆ ಯೆಂದನಾಭೀಷ್ಮ ‖ ೫೧

ಈತ ಸಚರಾಚರದ ಗುರು ವಿ
ಖ್ಯಾತಋತ್ವಿಜನೀತನಾಚಾ
ರ್ಯಾತಿಶಯನೀತನು ಮಹಾಪ್ರಿಯನೀತ ನೃಪನೀತ ।
ಸ್ನಾತಕವ್ರತಿಯೀತ ಯೀತನ
ಮಾತು ನಿನಗೆತ್ತಣದು ಸಲೆ ಖ
ದ್ಯೋತಕೆತ್ತಣ ಸೂರ್ಯಮಂಡಲವೆಂದನಾಭೀಷ್ಮ ‖ ೫೨

ಕರುಣಿಸೈ ಗಾಂಗೇಯ ಕೃಷ್ಣನ
ಚರಿತವನು ಶಿಶುಪಾಲಭೂಪನ
ಕರಣವೃತ್ತಿಯ ಕದಡು ಹಣಿಯಲಿ [1] ದೈವದೂರನಲೆ ।
ದುರುಳನಿವನ ದುರುಕ್ತಿಗಳ ಕೇ
ಳ್ದರಿಗೆ ಪ್ರಾಯಶ್ಚಿತ್ತವಿದು ವಿ
ಸ್ತರಿಸಬೇಹುದು ಸಕಲಜನವೆುತವೆಂದನಾಭೂಪ ‖ ೫೩

ಕೇಳು ಧರ್ಮಜ ಸಕಲಮುನಿಗಳು
ಕೇಳಿರೈ ನೆರೆದವನಿಪಾಲರು
ಕೇಳಿರೈ ನೆಱಿ ಕೇಳಿರೈ ಚಿತ್ತಾವಧಾನದಲಿ ।
ಶ್ರೀಲತಾಂಗಿಯ ವಲ್ಲಭನ ಶ್ರುತಿ
ಮೌಳಿಮಂಡಿತಪಾದಪೀಠನ
ಲೀಲೆಯನು ಚಿತ್ತೈಸಿ ಗದುಗಿನ ವೀರನಾರಣನ ೫೪

ಒಂಭತ್ತನೆಯ ಸಂಧಿ ಮುಗಿದುದು.

---

1 ತಿಳಿಯಲಿ, ಚ.

## ಹತ್ತನೆಯ ಸಂಧಿ.

ಸೂಚನೆ.

ದೇವ ದೇವನನುಪನಿಷತ್ಕಾಂ
ತಾವಳೀಕಮನೀಯನನು ರಾ
ಜೀವಪೀಠನ ಪಿತನನಭಿವರ್ಣಿಸಿದನಾಭೀಷ್ಮ ||

ಭೀಷ್ಮರು ಕೃಷ್ಣಮಾಹಾತ್ಮ್ಯವನ್ನು ಹೇಳಲಾರಂಭಿಸುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ವಿರಚಿತಪದಯುಗಪ್ರ
ಕ್ಷಾಲನಾಚಮನೀಯನಾಗಿ ವಿಶುದ್ಧಭಾವದಲಿ |
ಶ್ರೀಲಲಿತತಲ್ಪದ ಯಶೋದಾ
ಬಾಲಕಂಗಭಿನಮಿಸಿ ನಿಮಿಷನಿ
ಮೀಲಿತಾಕ್ಷನು ಕಣ್ದೆಱೆದು ಮುನಿಜನಕೆ ಕೈಮುಗಿದು || ೧

ವರಋಷಿಗಳಾಜ್ಞೆಯಲಿ ವಿಶ್ವಂ
ಭರನ ವಿಷಯೀಕರಿಸಿ ರಾಜಾ
ಧ್ವರಸಮರ್ಥನ ಭವವಿನಾಶನ ಸುಪ್ರಯೋಜಕನ |
ಅಱಿವ ತೆಱದಿಂದೆನ್ನ ಮತಿ ಗೋ
ಚರಿಸುದುದ ಪೇೞುವೆನು ಕೃಷ್ಣನ
ಪರಮಲೀಲಾಲಲಿತಚರಿತವನೆಂದನಾಭೀಷ್ಮ || ೨

ಘನರಜೋಗುಣದಲ್ಲಿ ಚತುರಾ
ನನ ತಮೋಗುಣದಲ್ಲಿ ಶಂಕರ
ನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ |

ಘನಜಗನ್ಮಯನಾಗಿ ಸರ್ವಾ
ತ್ಮನು ಮಹೇಶ್ವರನೆನಿಪನೀತನ
ನೆನಹನೀತನ ನಿಜವನರಿವ ಮಹಾತ್ಮನಾರೆಂದ ॥ ೩

ಈತನವ್ಯಕ್ತನು ವಿಚಾರಿಸ
ಲೀತನಮಲವ್ಯಕ್ತಲಿಂಗನ
ಜಾತನವ್ಯಯನಪ್ರಮೇಯನಗಮ್ಯನದ್ವಯನು ।
ಈತ ಚೈತನ್ಯಾತ್ಮ ನಿರ್ಗುಣ
ನೀತ ಗುಣಸಂಯೋಗಿ ಸರ್ವಗ
ನೀತ ಚಿನ್ಮಯನೀತನಾ ಹರಿಯೆಂದನಾಭೀಷ್ಮ ॥ ೪

ಜಲನಿಧಿಯ ಬುದ್ಬುದ ತರಂಗಾ
ವಳಿಗಳಾಜಲಧಿಯಲಿ ತೋರುವು
ವಡಿವುವೀವೈಕುಂಠವಿಮಲಜ್ಞಾನ ಜಲಧಿಯಲಿ ।
ಹೊಳವುದಡಿವುದು ವಿಶ್ವವೀತನ
ನುಡಿಹಿ ತೋರುವುದಿಲ್ಲ ಮಾಯಾ
ಲಲನೆ ಯಿಕ್ಕಿದ ಮದ್ದು ಜೀವರಿಗೆಂದನಾಭೀಷ್ಮ ॥ ೫

ಭ್ರಾಮಕದೊಳೀ ವಿಷಯಸೌಖ್ಯದ
ರಾಮಣೀಯಕದೊಳಗೆ ಮುಳುಗಿ ನಿ
ರಾಮಯನು ಪರತತ್ವಮಯನಚ್ಯುತನು ತಾನಾದ ।
ಈಮುಕುಂದನ ಮರೆದು ಕರ್ಮವಿ
ರಾಮದಲಿ ಕುದಿವವರು ಮಾಯಾ
ಕಾಮಿನಿಯ ಕೈಮುಸಕದಲಿ ಮರುಳಾಗದಿರರೆಂದ ॥ ೬

ಭೂತಜನನಸ್ಥಿತಿಗೆ ಕಾರಣ
ನೀತನೀತಂಗಿಲ್ಲ ಕಾರಣ
ನೀತ ಜಾಗ್ರತ್ಸ್ವಪ್ನಸುಪ್ತಿಗಳೆಂಬವಸ್ಥೆಗಳ ।

ಆತುರಿಯದಾತುರಿಯ ತುರ್ಯಾ
ತೀತಲಕ್ಷಣನಿತ್ಯನಿರ್ಮಲ
ನೀತನಮಲಜ್ಞಪ್ತಿ [1] ಚಿನ್ಮಯನೆಂದನಾಭೀಷ್ಮ ॥ ೭

ಇರದೆ ತಿಲದಲಿ ತೈಲ ಕಾಷ್ಠದೊ
ಳಿಱಿವ ತಂದರೆ ಹುತವಹನನೇ
ನಱಿಯಬಾರದೆ ವಿಷ್ಣುಚೈತನ್ಯಾತ್ಮನೆಂಬುದನು ।
ಹೊಱಗೊಳಗೆ ಸಂಸ್ಥೂಲಸೂಕ್ಷ್ಮಾ
ತ್ಮರದೊಳಗೆ ಹರಿಯುತ್ತಿಯೆ ವಿಶ್ವವ
ಹೊಱಿವ ಹೊಂದಿಪರುಂಟೆ ಹೊರಬಿಗರೆಂದನಾಭೀಷ್ಮ ॥ ೮

ಹೂಹೆಗಳು ಹೊಯ್ದಾಡವೇ ನಿ
ರ್ವಾಹಸೂತ್ರದ ಕುಣಿಕೆಗಾಱಿನ
ಗಾಹಿನಲಿ ತಜ್ಜಗದ ಜೀವರ ಸುಕೃತದುಷ್ಕೃತವ ।
ಹೋಹರಿಕೆಯಲಿ ತಂದು ಭವದಲಿ
ಸೋಹಿ ಸುತ್ತಿಸುವನೀಚರಾಚರ
ಜೋಹವಿದು ನಿಜಲೀಲೆಯೀ ಹರಿಗೆಂದನಾಭೀಷ್ಮ ॥ ೯

ಈತನಚ್ಯುತನಲ್ಲೆನಿಸಿ ವಿಪ
ರೀತಮಿಥ್ಯಾಜ್ಞಾನ ತೋಱಿದೊ
ಡೀತನಲಿ ತಪ್ಪೇನು ನಿಜಪರಮಾತ್ಮಭಾವನೆಗೆ [2] ।
ಭೀತನೊಬ್ಬನು ಕನಸಿನಲಿ ತ
ನ್ನಾತಲೆಯ ತಾನರಿದು ಪಿಡಿದುದ
ನೇತಱಿಂದಲಿ ಕಂಡನೈ ಶಿಶುಪಾಲ ಕೇಳೆಂದ ॥ ೧೦

ಭ್ರಮೆಯ ಭುಜಗನೊ ರಜ್ಜುವೋ ಜಂ
ಗಮವು ಕಲ್ಪಿತಪುರುಷನಾತ್ಮನೊ
ವಿಮಲಸಂವಿದ್ರೂಪನಾತ್ಮನೊ ಜೀವ ಪರಮನಲಿ ।

---

[1] ವ್ಯಕ್ತಿ, ಚ. [2] ನೆನಿಸಿದೊಡೆ, ಕ. ಖ.

ಕಮಲನಾಭನೆ ನಿಜವೊ ವಿಶ್ವ
ಕ್ರಮವೆ ನಿಜವೊ ಚೈದ್ಯಭೂಪತಿ
ಕುಮತಿ ಕಪಿಗೇಕಮಲಮಾಣಿಕವೆಂದನಾಭೀಷ್ಮ ॥ ೧೧

ತೋಱುವೀಮಹದಾದಿಭೂತದೊ
ಳೋಱುಗುಡಿಸದೆ ನಿಂದ ಮೂಲವ
ತ್ತಾಱು ತತ್ವದೊಳೀತನೇ ಮಣಿಗಣದ ಗುಣದಂತೆ ।
ತೋಱುವೀತೋಱಿಕೆಯು ತುಷವನು
ತೂಱುವರೆ ಮೇಣ್ ವಿಶ್ವಮುಖದಲಿ[1]
ತೋಱಿ ತೋಱದೆ ಮೆಱೆವನೀಹರಿ ಯೆಂದನಾಭೀಷ್ಮ ॥ ೧೨

ಸ್ವೇದಜಾಂಡೋದ್ಭಿಜ್ಜರಾಯುಜ
ಭೇದವಾದ ಚತುರ್ವಿಧದ ಭೂ
ತೋದರನ ತದ್ಭೂತಮಯ ತದ್ಭೂತಭಾವನನ ।
ವಾದಕೊಳ್ಳದ ಬಹುಳವಸ್ತುವ
ನೀದುರಾತ್ಮಕನೆತ್ತ ಬಲ್ಲನು
ಬೀದಿಯಲಿ ಬಿದ್ದಿದೆಯೆ ಬೊಮ್ಮವಿದೆಂದನಾಭೀಷ್ಮ ॥ ೧೩

ನೆಳಲು ಜಲದಲಿ ನಡುಗಲಿನಮಂ
ಡಲಕೆ ಕಂಪವೆ ಧೂಮಶಿಖಿಯು
ಪ್ಪಳಿಸಿದೊಡೆ ಕಂದುವುದೆ ನಭ ಕೆಂಧೂಳಿಯೊಡೆಮುಱಿದು ।
ಸುೞಿದೊಡನಿಲನ ತೊಳವರೇ ನರ
ರೊಳಗೆ ನರರೂಪದಲಿ ಜನಿಸಿದೊ
ಡೊಳಗು ಡಿಳ್ಳವೆ ಪರಮಸುಖಸಿಧಿಗೆಂದನಾಭೀಷ್ಮ ॥ ೧೪

ಗುಣಮಯದ ಗರುವಾಯಿಯಲಿ ಜೀ
ವಣಿಗೆಗೊಂಬನು ಭೂತದಿಂದ್ರಿಯ
ಗಣದೊಡನೆ ನಿಜಪೌರುಷದಲೊದಗಿದ ಪವಾಡಿಗಳ ।

1 ತದುಪಹಿತದಲಿ, ಕ, ಖ.

ಗುಣವ ಝಾಡಿಸಿದೊಡೆ ಸಮಷ್ಟಿಯ
ಹಣಿದದಲಿ ಮುಱಿದಿದಿರನಗಲಕೆ
ಕುಣಿವ ಚಾಪಲಬೊಮ್ಮ ಗಜವಿದನಱಿವನಾರೆಂದ ॥ ೧೫

ಕೊಲೆಯು ಕವಿತೆಯು ಕನಸಿನಲಿ
ಕಳವಳಿಸಿದರೆ ದಿಟವೇ ಮನೋರಥ
ಫಲವನನುಭವಿಸಿದರೆ ಯನುಭವಸಿದ್ಧವೇ ತನಗೆ ।
ಹೊಳೆವ ಜಗದಲಿ ಹೊಳೆದು ತ
ನ್ನೊಳಗಱಿದು ತಾನಾಗುತಿದ ಬೊಮ್ಮಕೆ
ಹಱಿವು ಹೊರುವುದೆ ನಿತ್ಯಶುದ್ಧನೊಳೆಂದನಾಭೀಷ್ಮ ॥ ೧೬

ನೋಟ ಸುತ್ತಲು ಬೇಹುದೇ ಹರಿ
ದಾಟವಗಲಕೆ ಬಳಕೆಯಲಿ ಮಾ
ತಾಟ ಸುತ್ತಿವಿನೊಳಗಗ್ಗಳದ ಹಿಡಿಬಂದಿ ಹರಹಿನಲಿ ।
ಬೇಟದಲಿ ಮೊವಣ್ಣ ದಾಕೆಯು
ಕೂಟದಲಿ ಕುಱುಹಾಗಿ ಮಿಗೆ ನಿ
ಲೋರ್ಟಿಸುವರೆನೆ ನಿಜದಿಟ್ಟಬೊಮ್ಮವಿದೆಂದನಾಭೀಷ್ಮ ॥ ೧೭

ಭೂತಭವ್ಯಭವತ್ಪ್ರಧಾನ
ಖ್ಯಾತತತ್ವಪ್ರಕೃತಿಪೂರುಷ
ನೀತ ಸಚ್ಚಿನ್ಮಾತ್ರಲಿಂಗನು ಪರಶಿವಾತ್ಮಕನು ।
ಸೋತು ನುಡಿ ಮನದೊಡನೆ ಮರಳಿದೊ
ಡಾತ ಸತ್ಯಜ್ಞಾನಮಯ ನಿ
ರ್ಧೂತಮಾಯಾತಿಮಿರನೀಹರಿ ಯೆಂದನಾಭೀಷ್ಮ ॥ ೧೮

ದೆಸೆ ಪರಿಚ್ಛೇದಿಸದ ನುಡಿ ಹವ
ಣಿಸದ ಕಲ್ಪಸಹಸ್ರಕೋಟಿಯೊ
ಳಸಮಸೆಯು ಮಾಡದ ಮಹತ್ವದೊಳುರುಮಹತ್ವದಲಿ ।

ಎಸೆವನಣುವಿಂಗಣುವೆನಿಸಿ ನಿ
ರ್ವಿಗಸಿ ವಿಭಾಡಿಸಿ ಬರೆಸೆಟೆದು ಹೆ
ಚ್ಚಿಸಿ ಮುಱಿದನೀಜಗವನೀಹರಿ ಯೆಂದನಾಭೀಷ್ಮ ॥ ೧೯

ಯಜ್ಞ ದಧಿಪತಿ ಯೀತನೀತನು
ಯಜ್ಞ ಪುರುಷನು ಸ್ರುಕ್ಸ್ರುವಾದಿಯು
ಯಜ್ಞ ಸಾಧನವೀತನೀತನು ಮಂತ್ರಕಾಲಾತ್ಮ ।
ಯಜ್ಞ ವೀತನು ಕರ್ಮವೀತನು
ಯಜ್ಞ ಪಲಿ ಯಜಮಾನನೀತನು
ಯಜ್ಞ ಫಲವೀದೇವಕೀಸುತನೆಂದನಾಭೀಷ್ಮ ॥ ೨೦

ಬಂದೆನಿಸಿ ತೋಱುಸುವನೆರಡಱೊ
ಳೊಂದಿ ಮೆಱೆವನು ಮೂಱುನೆಲೆಯಲಿ
ನಿಂದು ನಾಲ್ಕನು ಬಳಸಿ ವಿಭುವಾಗೈದು ತಾಣದಲಿ ।
ಹಿಂದು ಮುಂದಿಂದೆಂದು ಬಹುವಿಧ
ದಿಂದ ಮಾಯಾಗುಪ್ತನಾಗಿ ಮು
ಕುಂದ ತೋಱುವನೀತನಂಕವನಱಿವರಾರೆಂದ ॥ ೨೧

ದ್ವಿಜರು ಮುಖದಲಿ ಭೂಪರೀತನ
ಭುಜದಲಾದರು ಸಿಖಿಳವೈಶ್ಯ
ಪ್ರಜೆ ಘನೋರುಗಳಿಂದ ಶೂದ್ರರು ಪಾದಪದ್ಮದಲಿ ।
ದ್ವಿಜಪತಿ ಸ್ವಾಂತದಲಿ ವರವಾ
ರಿಜಸಖನು ಕಂಣ್ಣಿನಲಿ ವದನಾಂ
ಬುಜದಲಿಂದ್ರಾದಿಗಳು ಜನಿಸಿದರೆಂದನಾಭೀಷ್ಮ ॥ ೨೨

ಗಗನ ವೀತನ ನಾಭಿ ದಶದಿ
ಕ್ಕುಗಳು ಕಿವಿ ಫಣಿಲೋಕ ವಿಮಳಾಂ
ಘ್ರಿಗಳು ಧ್ರುವನಿಂ ಮೇಲು ಭಾಗ ಮುರಾಂತಕನ ಮಕುಟ ।

ಗಗನಮಣಿ ಶಂಕರವಿರಿಂಚಾ
ದಿಗಳು ದೇವನ ರೋಮಕೂಪದೊ
ಳಗಣಿತಾಮರನಿಕರವಿಹುದಿದನಱಿವರಾರೆಂದ ॥ ೬೩

ಪ್ರಳಯದಲಿ ಧರೆ ಕಱಗುವುದು ಜಲ
ದೊಳಗೆ ತಜ್ಜಲ ವಡಗುವದು ಶಿಖಿ
ಯೊಳಗೆ ತತ್ಪಾವಕನು ಪವನದೊಳಾತನಭ್ರದಲಿ ।
ಬಳಿಕಹಂತತ್ವದಲಿ ಗಗನವೆ
ನಿಲುಗು ಹಂಮು ಮಹತ್ತಿನಲಿ ಮಹ
ದಱಿವು ಮಾಯೆಯೊಳಾಕೆಯಡಗುವಳೀತನಂಘ್ರಿಯಲಿ ॥ ೬೪

ಧರಣಿ ತಾನೈವತ್ತು ಕೋಟಿಯ
ಹರಹು ಭೂಮಿಗೆ ಹತ್ತುಮಡಿ ಖ
ರ್ಪರ ಕಟಾಹವದಕ್ಕೆ ದಶಗುಣ ದಶಗುಣೋತ್ತರದ ।
ಪರಿವಿಡಿಯಲುದಕಾಗ್ನಿ ಹರಿಪು
ಷ್ಕರವಹಂಮಹದಾದಿಸಪ್ತಾ
ವರಣವೀಬ್ರಹ್ಮಾಂಡವೀತನ ರೋಮರೋಮದಲಿ ॥ ೬೫

ದೇವನಂಗೋಪಾಂಗದಲಿ ವೇ
ದಾವಳಿಗಳುಚ್ಛ್ವಾಸದಲಿ ತೀ
ರ್ಥಾವಳಿಗಳಂಘ್ರಿದ್ವಯಾಂಬುಜದ ಮಕರಂದದಲಿ ।
ಪಾವನಕೆ ಪಾವನನು ಜೀವರ
ಜೀವನನು ಮೃತ್ಯುವಿಗೆ ಮೃತ್ಯುವ
ದಾವ ಲೆಕ್ಕದೊಳೀತನಿಹನೆಂದಱಿವರಾರೆಂದ ॥ ೬೬

ವಿಶ್ವಶಿಲ್ಪದ ಕುಶಲಹಸ್ತನು
ವಿಶ್ವರಕ್ಷೆಯ ಮಂತ್ರವಾದಿಯು
ವಿಶ್ವಸಮಿಧೆಯೊಳಗ್ನಿಕಾರ್ಯದ ಬ್ರಹ್ಮಚಾರಿವಟು ।

ವಿಶ್ವನಾಟಕಸೂತ್ರಧಾರನು
ವಿಶ್ವವಿಷಯದಲೈಂದ್ರಜಾಲಿಕ
ವಿಶ್ವದಂತಸ್ಸ್ವ್ಯತಚೇತನನೀತ ನೋಡೆಂದ ॥ ೨೬

ಇರಲಿರಲು ಕಲ್ಪಾವಸಾನಕೆ
ಬಿರಿವುದೀಬ್ರಹ್ಮಾಂಡ ಬಹಿರಾ
ವರಣಜಲವೀಜಲದೊಳೊಂದಾಯ್ತೇಕರೂಪದಲಿ ।
ಹರಿ ವಿನೋದದಲೊಬ್ಬನೇ ಸಂ
ಚರಿಸುತಿರ್ದನು ಬಳಿಕ ಕಾಲಾಂ
ತರದೊಳಗೆ ಮಧುಕೈಟಭರು ಜನಿಸಿದರು ಕರ್ಣದಲಿ ॥ ೨೭

ಲೀಲೆಯಲಿ ಬಳಿಕವದಿರೊಡನೆ ವಿ
ಟಾಳಿಸಿತು ಮನ ಕಾದಿದರು ಬಲು
ಕಾಳಗವನವರಿತ್ತ ವರದಲಿ ಹಿಡಿದು ದಾನವರ ।
ಸೀಳಿ ಬಿಸುಟನು ಖಳರ ಮೇದ
ಸ್ಸಾಳಿ ಮುಳುಗಿತು ಜಲದೊಳದಱಿಂ
ಮೇಲು ಪೆಸರಾಯ್ತಿಳೆಗೆ ಮೇದಿನಿಯೆಂಬ ನಾಮದಲಿ ॥ ೨೮

ಆಮಧುವನಾಕೈಟಭನ ಮುಱಿ
ದೀಮಹಾತ್ಮಕನೊಡನೆ ವಾದಿಸು
ವೀಮರುಳನೇನೆಂಬೆನೈ ಶಿಶುಪಾಲಬಾಲಕನ ।
ಕಾಮರಿಪು ಕಲ್ಪಾಂತವಹ್ನಿ
ವ್ಯೋಮರೂಪನುದಾರಸುಗುಣಸ
ನಾಮ ಚಿನ್ಮಯನೀತನೀತನನಱಿವರಾರೆಂದ ॥ ೨೯

ಶ್ರುತಿಪುರಾಣಸಮಸ್ತಶಾಸ್ತ್ರ
ಸ್ಮೃತಿವಿಭಾಗಾರ್ಥಕೆ ವಸಿಷ್ಠನ
ಸುತನ ಸುತನಲಿ ವಿಮಲವೇದವ್ಯಾಸನಾಮದಲಿ ।

ಪ್ರತಿಜನೋತ್ತಮ ಜನಿಸಿದನು ಯದು
ಪತಿ ಕಣಾ ತಾನೀತನೀದು
ರ್ಮಾತಿಗೆ ಗಮ್ಯವೆ ಗರುವದೈವದ ಗಾಢಗತಿಯೆಂದ ॥ ೨೧

ಮನುವಳಿವನಜ ಬಲ್ಲನೀಶ್ವರ
ನೆನೆವ ನಾರದಮುನಿಪ ವರ್ಣಿಪ
ಮನದಿ ಸನಕಸನತ್ಸುಜಾತಾದ್ಯರಿಗಿದೇ ಬೆಸನ ।
ಮುನಿಗಳಿಗೆ ಮೊಕ್ಷರಿಗೆ ಕರ್ಮದ
ಕಣಿಗಳಿಗೆ ಕೋವಿದರಿಗಿದೆ ಜೀ
ವನವಿದೇ ಗತಿ ಪರಮಕೃಷ್ಣವತತ್ವವಿದೆ ಯೆಂದ ॥ ೨೨

ವೇದಕೀಸುಬ್ಬುಸ ವಿರಿಂಚಹ
ರಾದಿಗಳು ಕಿಗ್ಗಡಲಲಿರೆ ಸನ
ಕಾದಿಮುನಿಗಳು ತಡಿಯಲಿದ್ದರು ತೆರೆಯ ಹೊಯ್ಲಿನಲಿ ।
ವಾದಿಗಳ ದುಸ್ತರ್ಕ ನಶಿದುದು
ವಾದದಲಿ ದುಸ್ತರಮುರಾರಿಮ
ಹೋದಧಿಯನೀಬಣಗುದಾನವ ಭಂಗಿಸುವನೆಂದ ॥ ೨೩

ಅಕಟ ನಿರ್ಗುಣತತ್ವವಿದೆ ನಾ
ಟಕದ ಬಹುರೂಪಿನಲಿ ಪರಮಾ
ತ್ಮಕ ಪರಾನಂದೈಕರಸವಿದೆ ಮನೆಯ ಕೇಲಿನಲಿ ।
ಪ್ರಕಟಮಾಯಾಗುಪ್ತಪರಮಾ
ತ್ಮಕಮಹಾನಿಧಿ ಸಭೆಯೊಳಿರುತಿರೆ
ವಿಕಳಮತಿಗಳು ತರುಬಕು [1] ಗೆಡುವರು ಶಿವ ಶಿವಾ ಯೆಂದ ॥ ೨೪

ನಿರವಯವತತ್ತ್ವೈಕರಸವಿದೆ
ನರಮನೋಹರರೂಪಿನಲಿ ವ್ಯವ
ಹರಣಸಂಜ್ಞಾರಹಿತವಿದೆ ಕೃಷ್ಣಾಭಿಧಾನದಲಿ ।

---

[1] ವೀಚು, ಚ.

ಭರಿತಬಹಳಬ್ರಹ್ಮವಿಲ್ಲಿಯೆ
ಧರಣಿಯಲಿ ಸಂಚರಿಸುತಿದೆ ಮುರ
ಹರನ ತತ್ವರಹಸ್ಯಮುದ್ರೆಯನರಿವರಾರೆಂದ ॥ ೨೫

ಏಕೆ ಕನ್ನಡಿ ಕುರುಡರಿಗೆ ತಾ
ನೇಕೆ ಸೂಳಗ ಶಬ್ದ ಬಧಿರರಿ
ಗೇಕೆ ಮೂರ್ಖಸಮಾಜದಲಿ ಸಾಹಿತ್ಯಸನ್ನಾಹ ।
ಏಕೆ ಖಳರಿಗೆ ನಯವಿಧಾನ
ವ್ಯಾಕರಣ ತಾನೇಕೆ [1] ಘಢ ಲೋ
ಕೈಕಪಾತಕಗೆಂದು ನುಡಿದನು ಜಱಿದು ದಾನವನ ॥ ೨೬

ಹೊಗಳಿ ದಣಿಯವು ವೇದತತಿ ಕೈ
ಮುಗಿದು ತಣಿಯರು ಕಮಲಭವಭವ
ರೊಗುಮಿಂಗೆಯು ಮಾನಸಸಮಾಧಿಯು ಸಾರತತ್ವದಲಿ ।
ಬಗೆದು ತಣಿಯರು ಯೋಗಿಗಳು ಕೈ
ಮಗುಳೆ ತಣಿಯರು ಕವಿರ್ಗಗಳು ಮೂ
ಜಗದ ದೈವದ ದೈವ ಕೃಷ್ಣನ ಬೈವನಿವನೆಂದ ॥ ೨೭

ಈತ ಕಾಣಿರೆ ಘನಚರಾಚರ
ಚೇತನತ್ವದ ಬಹಳ [2] ಜೀವ
ವ್ರಾತವನು ತುಂಬಿದನು ಪಡಗಿನೊಳೌಕಿ ಬಾಲ್ಯದಲಿ ।
ಆತತಮನೆಂಬಸುರನನು ಕಿಱು
ಘಾತಿಯಿಂದವೆ ಮಡುಹಿ ವೇದವ
ನೀತ ತಂದನು ಮತ್ಸ್ಯರೂಪಿನೊಳೆಂದನಾಭೀಷ್ಮ ॥ ೨೮

ಖೂಳನಾಯ್ಗಳು ಬಲ್ಲರೇ ಶಿಶು
ಪಾಲಕಾದಿಕುಠಾರನೀಗೋ
ಪಾಲ ಕಾಣಿರೆ ಕೂರ್ಮರೂಪವ ಧರಿಸಿ ಮೇದಿನಿಯ ।

---

1 ಪಾಂಡಿತ್ಯ, ಚ. 2 ವಿಹಿತ, ಚ.

ಸೂಲ ಹಿಡಿಯಲಿ ಪ್ರೊತ್ತ ಪನ್ನಗ
ಪಾಲಕನನಾಮಂದರದ ಕಡೆ
ಗೋಲನಾಂತ ಮಹಾತ್ಮನೀತನನಱಿವರಾರೆಂದ ॥ ೩೯

ಇವನ ಹವಣಿಯು ಮುನ್ನ ಕೃತಯುಗ
ದವರೊಳದಟ ಹಿರಣ್ಯಲೋಚನ
ನವನಿಯನು ಕದ್ದೊಡಿದನು ಹೊಕ್ಕನು ರಸಾತಳವ ।
ಅವನ ಬೆಂಬತ್ತಿದನು ಯಜ್ಞ
ಪ್ರವರದೇಹನು ವೇದಮಯ ನೀ
ಭವವಿಮೋಹನು ಘನವರಾಹನು ಕೃಷ್ಣ ನೋಡೆಂದ ॥ ೪೦

ತೂಳಿದನು ದಂಡೆಯಲಿ ದೈತ್ಯನ
ಸೀಳಿದನು ದಿಕ್ಕರಿಫಣೀಂದ್ರರ
ಮೇಲೆ ಜಗವನು ಹರಹಿದನು [1] ಸಂತೈಸಿದನು ಜಗವ ।
ಹೇಳಲಜರುದ್ರಾದಿದೇವರ [2]
ತಾಳಿಗೆಗಳೊಣಗಿದುವು ಭಂಗಿ ಚ
ಡಾಳಿಸಿತಲಾ ಚೈದ್ಯಭೂಪತಿಗೆಂದನಾಭೀಷ್ಮ ॥ ೪೧

ಆಹಿರಣ್ಯಾಕ್ಷನ ಸಹೋದರ
ನೀಹರಿಯನವಗಡಿಸಿ ದೈವ
ದ್ರೋಹಿ ಬಹುವಿಧವ್ಯಥೆಗಳಲಿ ಬೇಸಱಿಸಿದನು ಮಗನ ।
ಆಹವದೊಳಚ್ಯುತ ಮುಕುಂದ ಮ
ಹಾಹಿತಲ್ಪ ಮಹೇಂದ್ರವಂದ್ಯ
ತ್ರಾಹಿ ಯೆಂದನವರತ ಮೊದಱಿದನಂದು ಪ್ರಹ್ಲಾದ ॥ ೪೨

ಕಾದುದೀತನ ನಾಮವಾ ಪ್ರ
ಹ್ಲಾದನಾಸಱು ಬೇಸಱನು ಬಳಿ
ಕೀದಯಾಬ್ಧಿಗೆ ದನುಜಪತಿ ದಿಟ್ಟಿಸಿದ ಕಂಭದಲಿ ।

---

[1] ಧರಣಿಯ ನಿಲಿಸಿದನು, ಚ. [2] ಮರೇಂದ್ರರ, ಚ.

ಅದುದಾವಿರ್ಭಾವ ಸಿಡಿಲಿನ
ಸೋದರದ ಕಣ್ಣುಗಳ ಭಾಳದ
ಬೀದಿಗಿಚ್ಚಿನ ರೌದ್ರದಲಿ ನರಸಿಂಹಮಯವಾದ ॥ ೪೩

ಉಗುರಲಸುರನ ಕರುಳ ದಿಂಡೆಯು
ನುಗಿದು ಕೊರಳಲಿ ಹಾಯ್ಕಿ ದೈತ್ಯನ
ಮಗನ ಪತಿಕರಿಸಿದನು ತತ್ಕ್ರೋಧಾಗ್ನಿ ಪಲ್ಲವಿಸೆ ।
ಭುಗಿಭುಗಿಲು ಭುಗಿಲೆಂದು ಕರ್ಬೊಗೆ
ನೆಗೆಯಲುರಿ ಹೊರೆದಬುಜಜಾಂಡವ
ಬಗರೊಗೆಯೆ ಭೇದಿಸಿದುದೀತನ ಕೆಣಕಬೇಡೆಂದ ॥ ೪೪

ತ್ರೇತೆಯಲಿ ಬಲಿರಾಜ್ಯ ಭುವನ
ಖ್ಯಾತವಾಯ್ತು ತದಶ್ವಮೇಧದೊ
ಳೀತ ವಾಮನನಾಗಿ ಯಾಚಿಸಿದನು ಪದತ್ರಯದ ।
ಭೂತಳವನಲ್ಲಿಂದ ಬಳಿಕ
ಪ್ರೀತಿಯಲಿ ಬಲಿಸ್ವಪತಿಹಸ್ತ[1]
ಧೌತಚರಣದೊಳಳೆಯಲಾದುದು ಧರಣಿ ಪದಯುಗಕೆ ॥ ೪೫

ನೆರೆಯದಿರೆ ನೆಲ ನೆಗಹಿದಂಘ್ರಿಗೆ
ಮುಱಿಮುವಬುಜಭವಾಂಡ ಖರ್ಪರ
ದೆಱತೆ ಬಹಿರಾವರಣಜಲ ಗಂಗಾಭಿಧಾನದಲಿ ।
ಎಱಗಿತೀಗೋವಿಂದನಾರೆಂ
ದಱಿದಿಹೈ ಹರಿಯೊಡನೆ ಜಂಬುಕ
ನಱಿಚಿದೊಡೆ ನಾನೇನ ಹೇಳುವೆನೆಂದನಾಭೀಷ್ಮ ॥ ೪೬

ರಾಯ ಕೇಳೈ ವಿಮಲದತ್ತಾ
ತ್ರೇಯವೆಸರಲಿ ಧರ್ಮವನು ಪೂ
ರಾಯದಲಿ ಪಲ್ಲವಿಸಿದನು ಹೈಹಯನ ರಾಜ್ಯದಲಿ ।

---

1 ಕಮಲಜಕಟಾಹೋದ್ಭೂತ. ಕ. ಖ. ಚ.

ಬಾಯ್ಬಡಕರು ಬಗುಳ್ದೊಡೆ ಹರಿ
ಯಾಯಿತಕೆ ಪಾಸಟಿಯೆ ಸಿಗಮದ
ಬಾಯ ಬೀಯಗನೀವೆಯುಕುಂಪನನಱಿಪರಾರೆಂದ ॥ ೪೭

ಮಿಡುಕಿದರೆ ರಾವಣನ ಸೆಱೆಯುಳಿ
ಕೆಡಹಿದನಲಾ ಕಾರ್ತವೀರ್ಯನು
ಕಡುಹನಾನುವ ದಿಟ್ಟರುಂಟೇ ದೇವದೈತ್ಯರಲಿ ।
ತೊಡಕಿದರೆ ಬಲಿಕಾನೃಪನ ತೋ
ಳಡವಿದಱಿದು ಮಹೀಶವಂಶವ
ತಡೆಗಡಿದನೀಕೊಡಲಿಕಾಱನ ತೋಟಿ ಬೇಡೆಂದ ॥ ೪೮

ಖರನ ತಿಸಿರನ ದೂಷಣಾದ್ಯರ
ಶಿರವ ಚೆಂಡಾಡಿದನು ಘನಸಾ
ಗರಕೆ ಕಟ್ಟಿದ ಕಟ್ಟೆಯಿದಲಾ ಕಾಣದೇ ಲೋಕ ।
ಹರಿಬವೋ ಮೋಕ್ಷ ಪೌರುಷವೊ ಮ
ತ್ಸರವೊ ಮೋಣ್ಮಾರಾಂಕವೊ ಹುಲು
ಮೊಱಡಿ ಸೆಣಸುವುದೆ ಸುರಾದ್ರಿಯೊಳೆಂದನಾಭೀಷ್ಮ ॥ ೪೯

ಆವುದಂತರ ಸಿಮೆಗೆ ಹಿಂದಣ
ರಾವಣನೊಳವೆಗಡಿಸಲಾತನ
ಘಾವನನು ಮುಱಿದವನ ತಂಗಿಯ ಮುಖವ ಭಂಗಿಸಿದ ।
ದೇವದಲ್ಲಣನಿಂದ್ರವಿಜಯ ಸು
ರಾವಳಿಯ ದೆಸೆಪಟರೆಸಿಪ ದೈ
ತ್ಯಾವಳಿಯ ಕಡಿಖಂಡದೊಟ್ಟಲಿನಾತ[1] ನೋಡೆಂದ ॥ ೫೦

ಹರಗಿರಿಯ ಮಾಟಿತ್ತಿ ದುಬ್ಬಟೆ
ಯರಸಲಾದಶವದನನಾತನ
ಶಿರದುವಾರ[2] ವನಿಡಿದು ದಣಿಸನೇ ದೆಸೆಯ ದೇವಿಯರ ।

---

[1] ರಾವ, ಚ. [2] ಶರದಪಾರ, ಚ.

ಬರಡನಿವನೀದ್ಯೈವದೊಡನು
ಬ್ಬರಿಸಿದರೆ ತಪ್ಪಿತ್ತು ಬ್ಬರಚ್ಛ್ಯಂ
ತರವನಿವರಖಿಯರೆ ಮುನೀಂದ್ರರು ಶಿವಶಿವಾ ಯೆಂದ ‖ ೫೧

ಹಿಂದೆ ಕೃತಯುಗಸಮಯದಲಿ ಸುರ
ವೃಂದದೊಡನಸುರರಿಗೆ ಕೊಂಡೆಯ
ದಿಂದ ಮಸೆಮಸೆದಂಕವಾದುದು ಕಳನ ಕಾಳಗಕೆ ।
ಬಂದುದಾ ತೆತ್ತೀಸಕೋಟಿಗ
ಳೊಂದು ದೆಸೆ ಜಂಭಾದಿದಾನವ
ರೊಂದು ದೆಸೆ ಹೊಯ್ದಾಡಿತೇನೆಂಬೆನು ಮಹಾದ್ಭುತವ ‖ ೫೨

ಅವರೊಳಗ್ಗದ ಕಾಲನೇಮಿ
ಪ್ರವರನಮರವಿಭಾಡ ವರದಾ
ನವಶಿರೋಮಣಿ ದಿವಿಜನಾಯಕಶರಭಭೇರುಂಡ ।
ಬವರದಲಿ ಶಕ್ರಾಗ್ನಿಯಮಶಶಿ
ರವಿಕುಬೇರಸಮೀರಣಾದ್ಯರ
ಸವಖಿ ಸಪ್ತಾಂಗವನು ಕೊಂಡನು ಮೇಘವಾಹನನ ‖ ೫೩

ರಣದೊಳೋಡಿದ ಸುರನಿಕರ ಘ
ಲ್ಲಣೆಯನಿಕ್ಕಿತು ಹರಿಗೆ ಕರೆ ಹ
ಲ್ಲಣಿಸು ಗರುಡನನೆನುತ ಹೊಱವಂಟನು ಮುರಧ್ವಂಸಿ ।
ಕೆಣಕಿದನು ದಾನವನನಾಗಳ
ಹಣಿದವನ ಹೊಯ್ದು ಮಳಚಕ್ರದ
ಗೊಣೆಯದಲಿ ಮೆಱಸಿದನು ತಲೆಯನು ದಿವಿಜನಗರಿಯಲಿ ‖ ೫೪

ಆಮಹಾಸುರಕಾಲನೇಮಿಸ
ನಾಮನೀಕಾಲದಲಿ ಯಾದವ
ಭೂಮಿಯಲಿ ಜನಿಸಿದನಲಾ ಕಂಸಾಭಿಧಾನದಲಿ ।

ಈಮರುಳು ಹವಣೇ ತದೀಯ
ಸ್ತೋಮ ಧೇನುಕಕೇಶಿವತ್ಸತೃ
ಣಾಮಯುರುರು ಹಲರಿಪರು ದುಷ್ಪರಿವಾರ ಕಂಸನಲಿ ॥ ೫೫

ಸೇದಿದನು ಪೂತನೆಯಸುವನವ
ಳಾದರಿಸಿ ಮೊಲೆವಾಲನೂಡಿಸೆ
ಪಾದತಳ ಸೋಂಕಿನಲಿ ತೊಟ್ಟಿಲ ಭಂಡಿ ನುಗ್ಗಾಯ್ತು ।
ಸೇದಿ ಕಟ್ಟಿದೊರಳನೆಳದರೆ
ಬೀದಿಯಲಿ ಮರ ಮುಱಿದುದೀಕಱು
ಗಾದವನ ಕಯ್ಯಿಂದಲೞಿದುದು ಕಂಸಪರಿವಾರ ॥ ೫೬

* ಆದುರುಳಸರ್ಪನ ವಿಭಾಡಿಸಿ
ಕಾದನಾಗೋವ್ರಗಳನಿಂದ್ರನ
ಬಾಧೆಯನು ಪರಿಹರಿಸಿ ಮಿಗೆ ತಾ ಕಾಯ್ದ ಗೋಕುಲವ ।
ಭೂಧರವ ನೆಱೆ ಕೊಡೆಯ ತೆಱದವೊ
ಲಾದರಿಸಿದನು ಬೆರಳ ಕೊನೆಯ
ಲ್ಲಾದವೆತ್ತಿದನೇೞುದಿನಪರಿಯಂತ ಕೇಳಂದ ॥ ೫೬

ಬೀದಿಯಲಿ ಜನ ನೋಡೆ ರಜಕನ
ಮೋದಿ ವಸ್ತ್ರವ ಕಳೆದು ಕೊಂಡನು
ಮೋದದಿಂದ ಸುಗಂಧವನು ತಂದಿತ್ತಕುಬುಜೆಯನು ।
ಆದರಿಸಿ ಮನ್ನಿಸಿ ಸುಧಾಮನ
ಕಾದು ಕುಸುಮವ ಕೊಂಡನೀಕವ
ಲೋದರನ ಸಾಹಸವ ಸತ್ವವನಱಿವರಾರೆಂದ * ॥ ೫೮

ಕೇಶಿ ಧೇನುಕ ವತ್ಸ ಲಂಬ ಬ
ಕಾಸುರ ತೃಣಾವರ್ತನಘನೆಂ
ಬಾಸಮರ್ಥರ ಸೀೞಿ ಬಿಸುಟನು ಬಾಲಕೇಳಿಯಲಿ ।

---

* ಈ ಯೆರಡು ಪದ್ಯಗಳು ಕೆಲವು ಪುಸ್ತಕಗಳಲ್ಲಿಲ್ಲ.

ಘಾಸಿಯಾದುದು ದಂತಿ ಮಲ್ಲರ
ದೇಸುಘನ ಮಾವನನು ಮರ್ದಿಸಿ
ಮಿಾಸಲಳಿಯುವ ದಿವಿಜಕನ್ಯೆಯರೊಡನೆ ಜೋಡಿಸಿದ ॥ ೫೯

ಮುರನ ನರಕನ ಹಂಸಡಿಬಿಕರ
ವರಸೃಗಾಲನ ದಂತವಕ್ರನ
ಮುರುಳಪೌಂಡ್ರಕಪಂಚಜನಶುಂಭನ ನಿಶುಂಭನನು ।
ಹರಿ ಹಯಗ್ರೀವಕನ ಸಾಲ್ವನ
ನೊಱಸಿದನಲಾ ನಿನ್ನ ಪಾಡಿನ
ಮುರುಳರೇ ದೈತ್ಯೇಂದ್ರರೀತನ ಕೆಣಕಿದವರೆಂದ ॥ ೬೦

ಇವನ ಹವಣೇ ತ್ರಿಪುರಹತದಾ
ನವರು ಕುಂಭನಿಕುಂಭಪೆಸರಿನ
ಲವನಿಯುಲಿ ಜನಿಸಿದರು ನಭದಲಿ ರಚಿಸಿದರು ಪುರವ ।
ಅವದಿರುಱಿಯಾಳಿದರು ನಿರ್ಜರ
ನಿವಹವನು ಬಳಿಕವರನೊಂದೇ
ಬವರದಲಿ ಕೆಡಹಿದನು ಕೃಷ್ಣನನಱಿವರಾರೆಂದ ॥ ೬೧

ತೋಳಸಾವಿರವಮರಪತಿ ತೆರೆ
ವಾಳನೊಕ್ಕಲು ಕಂತುಕದ ವೈ
ಹಾಳಿ ಪಾತಾಳದಲಿ ಸಪ್ತದ್ವೀಪ ಮನೆ ತನಗೆ ।
ಶೂಲಿ ಬಾಗಿಲ ಕಾಯ್ವನೀಸು ಚ
ಡಾಳಿಸಿದ ಸಿರಿಯಾರಿಗಾತನ
ತೋಳಪವಿಯನು ನಿಸ್ನ ತಱದನು ಕೃಷ್ಣನೋಡೆಂದ ॥ ೬೨

ಆಯುಗದಲಾಯುಗದಲನಿಬರು
ಬೀಯವಾದರು ದೈತ್ಯದಾನವ
ರೀಯುಗದಲೆಸಿತಸುರರನಿಬರು ದುಷ್ಟದಾನವರು ।

ರಾಯುರನಿಬರು ದಿವಿಜರಾಯನ
ಲಾಯದಲಿ ಲಂಬಿಸಿದರಾತಙು [1]
ವಾಯು [2] ನಿನಗೀಗಳೆ ವಿಪತ್ತಿಯುಹುದೆಂದನಾಭೀಷ್ಮ ॥ ೬೩

ಇಂಗಿತದಲಱಿವುದು ಮಹಾತ್ಮರಿ
ಗಂಗವಿದು ಮಧ್ಯಮರು ಕರ್ಣಾಪ
ಥಂಗಳಲಿ ಗೋಚರಿಸಲಱಿವುದು ಲೋಕವೃತ್ತಿ ಯಿದು ।
ಕಂಗಳಲಿ ಕಂಡರಿವರಧಮರು
ಕಂಗಳಲಿ ಕಿವಿಗಳಲಿ ಮೋಹಿಸ ಹರಿ
ಯಿಂಗಿತವನಱಿಯದ ಜಡಾತ್ಮನು ಚೈದ್ಯನಿವನೆಂದ ॥ ೬೪

ಭೀಷ್ಮರು ಹೇಳಿದ ಕೃಷ್ಣ ಮಾಹಾತ್ಮ್ಯವನ್ನು ಸಹದೇವನು
ಅಭಿನಂದಿಸುವಿಕೆ.

ಎಲೆ ಪಿತಾಮಹ ನೀವು ನಿಗಮ
ಸ್ಥಳರಹಸ್ಯವನುಪನಿಷತ್ಸಂ
ಕುಳವಚೋಭಿಪ್ರಾಯಪೀಯೂಷವನು ಬೀಱಿದರೆ ।
ಖಳರಿಗತಿದರ್ಪಜ್ವರಪ್ರ
ಸ್ಖಲಿತರಿಗೆ ಸೊಗಸುವುದೆ ಬೆಳಂದಿಂ
ಗಳು ವಿಯೋಗಿಗೆ ವಿಷವುವೆಂದನು ನಗುತ ಸಹದೇವ ॥ ೬೫

ಸಹದೇವನು ಕೃಷ್ಣನೇ ಗುರುದೈವವೆಂದು ಖಂಡಿತವಾಗಿ ಹೇಳುವಿಕೆ.

ಕೇಳಿರೈ ನೆರೆದಖಿಳಪೃಥ್ವೀ
ಪಾಲರಿಗೆ ಕೈಮುಗಿದೆನೀಗೋ
ಪಾಲನೆಮಗಾಚಾರ್ಯನೆಮ್ಮಯ ತಂದೆ ಗುರುದೈವ ।
ಲಾಲಿಸಿದೆವರ್ಚಿಸಿದೆವೀತನ
ಮೇಲೆ ಮುಳಿಸುಂಟಾದೊಡೆನ್ನೊಡ
ನೇಱಲಾತನ ಗಂಡನೆಂದೊದೆದನು ಮಹೀತಳವ ॥ ೬೬

---

[1] ಕಱು, ಕ. ಖ.　　[2] ಪಾಯಿ, ಕ. ಖ.

ಚೆಲ್ಲಿದುವು ಸಹದೇವಶಿರದಲಿ
ಮಲ್ಲಿಗೆಯ ಮಗ್ಗೆಗಳ ಮಳೆ ನಭ
ದಲ್ಲಿ ಧ್ವನಿಯಾಯ್ತುಹುದಲೈ ಸಹದೇವ ಲೇಸೆನುತ ।
ಭುಲ್ಲವಿಸಿದರು ಋಷಿಗಳ ಪ್ರತಿ
ಮಲ್ಲದೈವದ ನೆಲೆಯನರಿಯದ
ಖುಲ್ಲಭೂಪರು ಮಸಗಿದರು ಗುಜುಗುಜಿನ ಗಾಢದಲಿ ॥ ೬೨

ಹತ್ತನೆಯ ಸಂಧಿ ಮುಗಿದುದು.

## ಹನ್ನೊಂದನೆಯ ಸಂಧಿ.

ಸೂಚನೆ

ಅಗ್ರಪೂಜಾವ್ಯಾಜಮುಖದಲಿ
ವಿಗ್ರಹದ ಶಿಶುಪಾಲಶಿರ ಗಗ
ನಾಗ್ರದಲಿ ಕುಣಿದಾಡಲೆಚ್ಚನು ದಾನವಧ್ವಂಸಿ [1] ॥

ಸಹದೇವನ ವಚನವನ್ನು ಕೇಳಿ ರಾಜರ ಅಭಿಪ್ರಾಯ ವಿಶೇಷ.

ಕೇಳು ಜನಮೇಜಯಧರಿತ್ರೀ
ಪಾಲ ಸಹದೇವನ ವಚೋಗ್ರ
ವ್ಯಾಳ ವಿಷವೆಡೆಯಲ್ಲಿ ಸಿಲುಕಿತು ಮನ ಮಹೀಶ್ವರರ ।
ಸೂಟಿ ನೆನಹಿನ ಸುಚಿ ಮನದ ಸಮ
ಪಾಳಿಕೋಪದಲಟ್ಟಿದಮೌನದ
ಮೇಲುಬುದ್ಧಿಯ ಜೋಡಿ ಬೇಱೊಂದಾಯ್ತು ಭಾವದಲಿ ॥ ೧

1 ಲೆಸೆದನು ವೀರನಾರಯಣ, ಛ.

ಕಿವಿವೆಳಯ ಮೋಹಿಗಳ ಮುಷ್ಟಿಯು
ಬವರಿಗಳ ಕಡೆಗಣ್ಣ ಸನ್ನೆಯು
ಸವಡಿಗೈಗಳ ನಂಬುಗೆಯು ಮನ ಮನದ ಬೆಸುಗೆಗಳ ।
ಅವಸರದ ಮೈತ್ರಿಗಳ ಮಂತ್ರಿ
ಪ್ರವರವಚನೋಪೇಕ್ಷೆಗಳ ರಣ
ತವಕದಲಿ ಕಳವಳಿಸುತಿರ್ದುದು ಕೂಡೆ ನೃಪಕಟಕ ॥ ೩

ಪರಿಣತರ ನುಡಿನುಡಿಗೆ ಕಿವಿಯೊ
ಕರಿಸಿದುವು ದುಃಖದುಂಬಿಗಳ ಬಾ
ಹಿರದ ನುಡಿಗಳನಡಿಗಡಿಗೆ ಕುಡಿಕುಡಿದು ತೇಗಿದುವು ।
ಕರೆಸಿದರು ಖೂಳರನು ನೀತಿಜ್ಞು
ಗರುವರನು ನೂಕಿದರು ರಾಯನ
ಪರಮಯಾಗವನಳಿಯಲನುವಾದತ್ತು ನೃಪನಿಕರ ॥ ೩

ಕುಪಿತರಾದ ಅರಸರನ್ನು ಕುರಿತು ಶಿಶುಪಾಲನ ವಚನ.

ನೀವು ಪರಿಯಂತೇಕೆ ನಿಮ್ಮವ
ರಾವೆಲೇ ನಿಮ್ಮಾಳು ಕುದುರೆಗೆ
ನಾವೆಲೇ ದಳಪತಿಗಳಿವದಿರ ಯಜ್ಞಮಂಟಪವ ।
ಆವಬೇಗದಲುರುಹುವೆನೊ ಚಿ
ತ್ತಾವಧಾನವ ಮಾಡಿ ಯೆಂದು ನೃ
ಪಾವಳಿಯ ಸಂತೈಸಿದನು ಶಿಶುಪಾಲ ವಿನಯದಲಿ [1] ॥ ೪

ಧರಣಿಪರ ಸಂಜ್ಞೆಯಲಿ ಬಲ ಸಂ
ವರಿಸಿತಾಚೆಯಲಿತ್ತ ಸಾತ್ಯಕಿ
ನರವೃಕೋದರನಕುಲಧೃಷ್ಟದ್ಯುಮ್ನ ಮೊದಲಾದ ।

---

1 ಶಿಶುಪಾಲ ಸಂತೈಸಿದನು ಸಾಮದಲಿ, ಚ

ಧರ್ಮರಾಯನು ಭೀಷ್ಮರಿಂದೊಡಗೂಡಿ ಆಲೋಚಿಸುವಿಕೆ.

ಕರಿತುರಗರಥಪತ್ತಿಗಳ ಸಂ
ವರಣೆ ತಳಿತುದ ಕಂಡು ಮೂಗಿನ
ಬೆರಳಬೆಱಗಿನೊಳೂಲಿದು ಭೀಷ್ಮಂಗರಸನಿಂತೆಂದ ॥ ೫

ಈಸು ಪೌರುಷ ದೈವಘಟನೆಯೊ
ಳೀಸು ಪರಿಯಂತಾಯ್ತು ಯಜ್ಞವ
ಮೀಸಲಳಿಯದೆ ನಡೆದುದಿನ್ನಿಗ ನಿಮ್ಮ ಕರುಣದಲಿ ।
ಈಸಮಸ್ತನೃಪಾಲಬಲವಾ
ರಾಶಿ ಮೇರೆಯನೊದೆವುತಿದೆ ನಿಮ
ಗೇಸುಭಾರವಿದೆಂದು ಬಿನ್ನೈಸಿದನು ಭೀಷ್ಮಂಗೆ [1] ॥ ೬

ಕಾದುವರೆ ನಮ್ಮುತ್ಸವಕೆ ನೆರ
ವಾದವರು ಸ್ಥೈರಿಸುವುದಗ್ಗದ
ಯಾದವೇಂದ್ರನ ನಿಂದೆ ಮೇಲಧ್ವರವಿಸಂಘಟನ ।
ಈಮುರಂತದ ಚಿಂತೆಯಲಿ ಬೇ
ಳಾದುದೆನ್ನಯ ಚಿತ್ತವದ್ದನು
ಖೇದಪಂಕದೊಳೆನ್ನನುದ್ಧರಿಸೆಂದನಾಭೂಪ ॥ ೭

ಧರ್ಮರಾಯನಿಗೆ ಭೀಷ್ಮರ ಅಭಯದಾನ.

ಅಂಜದಿರು ಭಯಬೇಡ ನರರಿಗೆ
ನಂಜು ಪಥ್ಯವೆ ಗಿಳಿಯು ಮುಱಿಗಳು
ಮಂಜರನ ಮೇಲ್ವಾಯ್ದು ಬದುಕುವುವೇ ಮಹೀಪತಿಯೆ ।
ಮಂಜು ಮಧ್ಯಾಹ್ನದಲಿ ದಿನಪನ
ನಂಜಿಸುವುದೇ ಕುಪಿತಸಿಂಹವ
ನಂಜಿಸುವುವೇ ನಾಯ್ಗಳೆಂದನು ಭೂಪತಿಗೆ ಭೀಷ್ಮ ॥ ೮

---

[1] ನುಡಿದನು ಧರ್ಮನಂದನನು, ಖ.

ಬೊಗಳುವಿನಿಬರು ಹರಿಯ ಬಡಿಹೋ
ರ್ೞಗಳಲಾ ಜಗವೆಱಿಯದೇ ಜ
ಙ್ಗಿಗರ ಜೋಡಿಯ ಜಂಜಡಕೆ ನೀ ಜಱುಗಿದ್ದೈ ಜನಪ ।
ಉಗಿವನಿನಿಬರ ಜೀವವನು ಜೊ
ತ್ತಗೆಯನೀಶಿಶುಪಾಲನಾಯುವ
ತೆಗೆದು ಕಟ್ಟುವನಸುರಮರ್ದನನೆಂದನಾಭೀಷ್ಮ ॥ ೯

ಜಗವ ಹೂಡುವ ಹೊರೆವ ಬಲುಗೈ
ಯುಗಧರಂಗೀನೃಪರ ಕುಱಿವಿಂ
ಡುಗಳ ಕುಂಮುಱಿಗಡಿತಕಾವುದು ಬೇಕು ಭುಜಸತ್ವ ।
ಬಗೆವುದೇ ಬಲುಗಡಲು ಮಂಜಿನ
ಮುಗಿಲ ಮಱೆಯನು ಚೈದ್ಯಭೂಪನ
ಜಗದ ಭಂಡನನೀಜನಾರ್ದನ ಗಣಿಸುವನೆ ಯೆಂದ ॥ ೧೦

ಭೀಷ್ಮನನ್ನು ಕುರಿತು ಶಿಶುಪಾಲನ ನಿಂದೆ.

ಎಲೆ ನಪುಂಸಕ ಭೀಷ್ಮ ಸುಡು ಬೈ
ಗಳಿನ ಭಂಡನು ನೀನಲಾ ಗೋ
ಕುಲದ ಗರುವನ ಗುಣವ ನಾರಿಸಿ [1] ಕೊಂಡೆ ಬೇಸಱದೆ ।
ಹೞುವಿನಲಿ ಹೆಮ್ಮೆಯನು ಕುಂದಿನ
ಕುಲದಲಗ್ಗಳಿಕೆಯನು ತಮದಲಿ
ಬೆಳಗ ಬಣ್ಣಿಸುತಿಹೆ ನಿರಂತರವೆಂದನಾಚೈದ್ಯ ॥ ೧೧

ಅವಗುಣದೊಳುಧ್ಘಾವಿಸುವೆ ಗುಣ
ನಿವಹವನು ರಾಜಾಧಮರು ಯಾ
ದವರು ಪೂಜಾರ್ಹರಲೆ ಸುಡು ಸುಡು ನಿನ್ನ ನಾಲಿಗೆಯ ।
ಸವಿನುಡಿಯ ದುರ್ವ್ಯಸನಿ ತೊಂಡಿನ
ತವುರುಮನೆ ಬಾಹಿರರಿಗಾಶ್ರಯ
ಭವನ ಖಳರಧಿದೈವ ಭೀಷ್ಮನ ಕೊಲುವರಿಲ್ಲೆಂದ ॥ ೧೨

1 ಕಂಡಿದ್ದು, ಚ.

ಶಿಶುಪಾಲನು ಮಾಡಿದ ಕೃಷ್ಣನಿಂದೆ.

ಇವನು ಗಡ ಚಿಕ್ಕಂದು ಮೊಲೆಗೊ
ಟ್ಟವಳ ಹಿಂಡಿದ ಗಂಡು ಭಂಡಿಯು
ಜವಳಿಗಾಲಲಿ ಮುಱಿದನೇ ಮಾಮಾಸಮರ್ಥನಲ ||
ಸವಡಿಮರ ನೆಗ್ಗಿದುವು ಗಡ ವ್ಯೈ
ಯುವೆಚಿದೊಡೆ ಬಲುಗತ್ತೆ ಗೂಳಿಯು
ನಿವ ವಿಭಾಡಿಸಿದನೆ ಮಹಾದ್ಭುತವೆಂದನಾಚೈದ್ಯ || ೧೩

ಹಕ್ಕಿ ಹರಿಣನ ತಱಿದ ಗಡ ಕೈ
ಯಿಕ್ಕಿದೊಡೆ ಕಡುಗುದುರೆಯನು ನೆಲ
ಕಿಕ್ಕಿದನೆ ನೆಱಿ ಹೇಱು ಹೇಱಾ ಕೃಷ್ಣನಾಳ್ತನವೆ |
ಪೊಕ್ಕು ಹೆಬ್ಬಾವಿನ ಬಸುಱ ಸೀ
ಱಿಕ್ಕಿದನೆ ಯಾದವನ ಪೌರುಷ
ವಕ್ಕಜವಲಾ ಭೀಷ್ಮ ತೂಪಿಱ ಯೆಂದನಾ ಚೈದ್ಯ || ೧೪

ಗಾಳಿಯನು ಘಲ್ಲಿಸಿದ ಕಱುವಿನ
ಕಾಲ ಹಿಡಿದೊಗೆದನು ಗಡುರಗನ
ಮೇಲೆ ಕುಣಿದಾಡಿದನು ಗಡ ಹಾವಡಿಗವಿದ್ಯೆಯುಲಿ |
ಖೂಳ ಗೊಲ್ಲರ ಪಳ್ಳಿಯುಲಿ ಕ
ಟ್ಟಾಳಲಾ ಬಟಿಕೇನು ಪೃಥ್ವೀ
ಪಾಲರೀತಗೆ ಸರಿಯೆ ದಿಟ ದಿಟವೆಂದನಾಚೈದ್ಯ || ೧೫

ಏಱುದಿನಪರಿಯಂತ ಮೊಱಡಿಯು
ಮೇಲುಗೊಡೆಯನು ಹಿಡಿದು ಬಲುಮಳೆ
ಗಾಲವನು ಮಾಣಿಸಿದ ಗಡ ಹರ ಹರ ವಿಶೇಷವಲ |
ಹೇಱುಹೇಱಿಂದ್ರಂಗೆ ಬಡಿಸಿದ [1]

---

[1] ಮಾಡಿದ, ಚ.

ಕೂಚಿರಾಶಿಯನೊಬ್ಬನೇ ಕೈ
ಮೇಳವಿಸಿದನೆ ಕಂದನಾಣೆ ವಿಚಿತ್ರವಾಯ್ತೆಂದ ॥ ೧೬

ಅಗಸನನು ಕೆಡೆತಿವಿದು ಕಂಸನ
ವಸನವೆಲ್ಲವನುಗಿದ [1] ಗಡ ಮಾ
ಣಿಸಿದನೇ ದಿಟ ಮಾಲೆಗಾತಿಯ ವೈಯ್ಯಾ ಮೊಹೊರಡ ।
ಮಸಗಿ ಬೀಸುವ ಕಂಸನಾನೆಯ
ನಸುಬಡಿದ ಗಡ ಮಲ್ಲರನು ಮ
ರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ ॥ ೧೭

ಆದೊಡಿವನನು ತುತಿಸುವೊಡೆ ಮೇ
ಲಾದಕಷ್ಟವನೇನ ಹೇಳುವೆ
ನೀದುರಾತ್ಮನು ಸಾಕಿದೊಡೆಯನ ಸೀಳಿದಸಬಳವಲೆ ।
ಸೋದರಿಯಲಾ ಕೃಷ್ಣನವ್ವೆ ವಿ
ವಾದವೇ ಸಾಕಿದನಲಾ ಕೈ
ಗಾದನೇ ಕಂಸಂಗೆ ಮುಳಿವುದಿದಾವ ಗುಣವೆಂದ ॥ ೧೮

ಆದರಿಸಿ ಬಣ್ಣಿಸಿದೆ ನಾಚದೆ
ಯಾದವನ ಪೌರುಷಪರಾಕ್ರಮ
ವಾದಿಯಾದವಿಶೇಷಗುಣವಿಸ್ತಾರವೈಭವವ ।
ಆದೊಡಾಗೋವಳರ ಹೆಂಡಿರ
ಹಾದರದ ಹೆಕ್ಕಳವ ಬಣ್ಣಿಸ
ಲಾದುದೇ ನಿನಗಕಟ ನಾಚಿಕೆ ಯೆಂದನಾಚೈದ್ಯ ॥ ೧೯

ಓಡಿ ಕೊಲಿಸಿದ ಕಾಲಯುವನನು
ಮೂಡಿದವೆ ಹುಲುಕಲುಗಳ ಕಟಾ
ಯೋಡುಕುಳಿ ಹೋದಲ್ಲಿ ಮಗಧನ ರಾಜಕಾರ್ಯದಲಿ ।

---

[1] ಸೆಳೆದ, ಚ.

ಆಡಲರಿಯೆ ವಿಜಾತಿರತ್ನದ
ಖೋಡಿಗಳ ಹಟವಾತನೇ ಹರಿ
ತೋಡಿ ಬಡಿಸುವೆ ಕಿವಿಗರೋಚಕವೆಂದನಾಚೈದ್ಯ [1] ॥ ೨೦

ಕಪಟದಲಿ ಭೀಮಾರ್ಜುನರು ಸಹಿ
ತುಪಚಿತದ್ವಿಜವೇಷದಲಿ ನಿ
ಷ್ಕಪಟವಗಧನ ಮನೆಯನದ್ವಾರದಲಿ ಹೊಕ್ಕರು ।
ಕೃಪಣರಿವದಿರು ವಿಪ್ರವೇಷದ
ಉಪಶದರು ಕಾದಿದರು ಭೀಷ್ಮಗೆ
ಜಪವಲಾ ಕಂಸಾರಿ ಮಾಡಿದ ಕಷ್ಟಕೃತಿಯೆಂದ ॥ ೨೧

ಬೆಟತನಗ್ಗದ ಮಾಗಧೇಂದ್ರನ
ಮುಱದ ಮುಱಕಕೆ ಭೀಮನಾತನ
ಸೆಱೆಯ ಮನೆಯಲಿ ಸಿಕ್ಕಿದವನೀಪಾಲಪಙ್ತಿಗಳ ।
ಸೆಱೆಯನಿವ ಬಿಡಿಸಿದನು ಗಡ ಬೊ
ಬ್ಬಿಱಿವ ಪಾರುಷವೇಕೆ ಕಡೆಯಲಿ
ಕಱುಬುವವರಾವೈ ಸಲೇ ನಿಮಗೆಂದನಾಚೈದ್ಯ ॥ ೨೨

ಭೀಮನ ಕೋಪ.

ಕೇಳಿ ಕಿಡಿಗೆದಱದನು ತನುರೋ
ಮಾಳಿ ತಳಿತುವು ರೋಷವಹ್ನಿ
ಜ್ವಾಲೆ ಝಳಪಿಸೆ ಜಡಿದುವರುಣಾಚಕ್ಷುವಿಯಲಕ್ಷ್ಮಿಗಳು ।
ಸೂಱುರಿಯ ನಿಡುಸುಯ್ಲು ಕರ್ಬೊಗೆ
* ಯಾಲಿಯಲಿ ಮುಕ್ತಾಳಿ ಕಂದಿತು
ಮೇಲೆ ಬಲುಹತಿಯ ಮೊನೆಯಲಿ ಮಸಗಿದನು ಭೀಮ * ॥ ೨೩

---

1 ವಾಯ್ವುತ್ತೆಗೆಯೆಂದ, ಚ.

* ಜಾಳಿಗೆಯಲೇಕಾವಳಿಯ ಮು
ಕ್ತಾಳಿ ಕಂದಿತು ಖತಿಯ ಮೊನೆಯಲಿ ಮಸಗಿದನು ಭೀಮ * ।

ಸೆಱಗ ಸಂವರಿಸಿದನು ಮಕುಟವ
ನುರಗದಂತಿರೆ ಮುಱುಹಿ ಸಚಿವಂ
ಗೆಱುಹಿದನು ಸನ್ನೆಯಲಿ ಸಮರಕೆ ಚಾಪಮಾರ್ಗಣವ |
ಹೊಱಗೆ ಸಂವರಿಸಿರಲಿ [1] ದಳ ಕೈ
ಮೆಱೆಯು ಬೇಡ ಸುನೀತನನು ನಾವ್
ತಱುಬಿ ನಿಂದಾಕ್ಷಣದೊಳೊದಗುವುದೆಂದು ಸೂಚಿಸಿದ || ೨೪

ಶಿಶುಪಾಲನ ನಿಂದೆಯಿಂದ ಯಾದವರ ಯುದ್ಧಸನ್ನಾಹ.

ಪವನತನಯನ ಖತಿಯು ಜೋಡಿಯು [2]
ಹವಣ ಕಂಡರು ಮಸಗಿತೀಯಾ
ದವರ ಪಡೆಯಲಿ ಸಾಂಬ ಸಾತ್ಯಕಿ ರಾಮ ಕೃತವರ್ಮ |
ತವತವಗೆ ಪಾಂಚಾಲಕೈಕಯ
ನಿವಹ ಪಾಂಡವಸುತರು ಮೊದಲಾ
ದವಗಡೆಯರನುವಾಗೆ ಗಜಬಜವಾಯ್ತು ನಿಮಿಷದಲಿ || ೨೫

ಭೀಷ್ಮರಿಂದ ಯಾದವರ ಉಪಶಮನ.

ಸೆಳದೊಡಾಯುಧವುತ್ತರೀಯವ
ನೆಱುಹಿ ಮುಂಗೈಯಲಿ ವೃಕೋದರ
ಮೊಳಗುವನಿವನ ಕಂಡು ಧಿಮ್ಮನೆ ಭೀಷ್ಮ ನಡಹಾಯ್ದ |
ಸೆಳದುಕೊಂಡನು ಖಡುಗವನು ಭುಜ
ವಳಯದಿಂದವಚಿದನು ತೋಟಿಯ
ತೊಳಸುಗಟ ಹೊಯ್ಹೊಯ್ಯೆನುತ ಗರ್ಜಿಸಿದನಾಭೀಷ್ಮ || ೨೬

ನೆರಹದಿರಿ ಚತುರಬ್ಧಿವಳಯದ
ಧರಣಿಪಾಲಸಮುದ್ರವನು ಕಾ
ಹುರವ ಮಾಡಿದರಕಟ ಕೆಡದೇ ರಾಜಸೂಯಮುಖ |

---

1 ಹಲ್ಲಿಳಿಸಿರಲಿ, ಙ.  2 ಮನವ ಖಾತಿಯು, ಙ.

ಧರಧುರದ ದುರ್ವ್ಯಸನಿಗಳ ನಿ
ಟ್ಟೊರಸಿ ತೆಗೆ ನಿನ್ನವರನೆನುತು
ಬ್ಬರವ ಮಾಣಿಸಿ ಹೂಣಿಗರ ಹೊಯ್ಸಿದನು ಕಲಿಭೀಷ್ಮ ॥ ೨೭

ಶಿಶುಪಾಲನ ಕ್ರೋಧೋಕ್ತಿ.

ಬಿಡುಬಿಡೆಲೆ ಗಾಂಗೇಯ ಭೀಮನ
ಕೆಡಹಿ ಪೂರ್ಣಾಹುತಿಯನಗ್ನಿಗೆ
ಬಡಿಸಿ ಕೊಡುವೆನು ಸ್ವಾಮಿದ್ರೋಹನ ಕರುಳುದಂಡೆಗಳ ।
ಮುಡಿಸುವೆನು ಜಯಸಿರಿಗೆ ನೋಡೆ
ನ್ನೊಡನೆ ಮೇಳವೆ ದಕ್ಷಯಜ್ಞದ
ಮೃಡನ ಮೆಱೆಸುವೆನೆನುತಲವೆ ಬೊಬ್ಬಿಱಿದು ಗರ್ಜಿಸಿದ ॥ ೨೮

ಶಿಶುಪಾಲನ ಸಂಹಾರಕ್ಕಾಗಿ ಭೀಮನ ಪ್ರಯತ್ನ.

ಬಿಡು ಬಿಡಕಟಾ ಭೀಷ್ಮ ದರ್ಪದ
ಕಡು ಜರಿದ ಕಳಕಳದ ಕುನ್ನಿಗೆ
ಕುಡಿಸುವೆನು ದಿವ್ಯಾಸ್ತ್ರವಿಶಿಖವಿಶೇಷದೌಷಧಿಯ ।
ತಡೆದು ತನ್ನನು ರಾಜಕಾರ್ಯವ
ಕೆಡಿಸಿದೆ ಯೆಲಾ ದಕ್ಷಯಜ್ಞದ
ಮೃಡನ ಮುಱುಕವ ಕಾಂಬೆನೆನುತೊಡೆಮುಱುಚಿದನು ಭೀಮ ॥

ಮತ್ತೆ ಹಿಡಿದನು ಪವನಜನ ಬಾ
ಗೊತ್ತಿದನು ಮರಳೇ ಸುರೌಘದ
ತುತ್ತುಗಂಟಲಲಿಚಿವುದೇ ಗಜಬಜವ ಮಾಡಿದರೆ ।
ತೆತ್ತಿಗನು ಹರಿ ಯಜ್ಞರಿಪುಗಳ
ಮೃತ್ಯುವೆಱಿಯೊ ನೀನು ಮಿಱುವು
ದುತ್ತಮಿಕೆಯಲ್ಲೆನುತ ಮಿಗೆ ಗಜಱಿದನು ಕಲಿಭೀಷ್ಮ[1] ॥ ೩೦

1 ತಿಳುಹಿದನು ಪವನಜನ, ಡ.

ಭೀಷ್ಮರು ಶಿಶುಪಾಲನ ಪೂರ್ವವೃತ್ತವನ್ನು ಹೇಳಿ ಭೀಮನನ್ನು ತಡೆದುದು.

ಇವನ ಕೊಲುವೆನು ಮಿಕ್ಕಭೂಪತಿ
ನಿವಹವನು ಮನ್ನಿಸುವೆನೆನೆ ನೀ
ನವನ ಕೊಲುವುದಸಾಧ್ಯವೀತನ ನಿಜವನಱಿಯೆ ಯಲ ।
ಇವ ಹಿರಣ್ಯಾಕ್ಷನು ಕಣಾ ಮುಱು
ಭವದೊಳಗೆ ದಶವದನನಿವ ಸಂ
ಭವಿಸಿದನು ಶಿಶುಪಾಲವೆಸರಲಿ ಭೀಮ ಕೇಳೆಂದ ॥　　೩೧

ಜನಿಸಿದಾಗಳೆ ಭಾಳದಲಿ ಲೋ
ಚನ ಚತುರ್ಭುಜನಾದನದ್ಭುತ
ನಿನದದಲಿ ನೆಲ ಬಿರಿಯಲೊದಱಿದನಂದು ಬಾಲ್ಯದಲಿ ।
ತನತನಗೆ ಜನ ಬೆದಱಿತೀತನ
ಮನೆಗೆ ನಾರದ ಬಂದೊಡೀತನ
ಜನನಿ ಬಿನ್ನಹಮಾಡಿದಳು ಶಿಶುಪಾಲಸಂಗತಿಯ ॥　　೩೨

ಆತನೆಂದನು ತಾಯೆ ಶಿಶು ವಿ
ಖ್ಯಾತನಹ ನೀನಾರ ಹಸ್ತದೊ
ಳೀತನನು ಕೊಟ್ಟಾಗ ಭುಜಯುಗವಕ್ಷಿಯಡಗಿದರೆ ।
ಆತನೀತಗೆ ಮೃತ್ಯುವಿದು ಸಂ
ಭೂತನಿಶ್ಚಯವೆಂದು ಶಿಶುವಿನ
ಮಾತೆಯನು ಸಂತೈಸಿ ನಾರದನಡಱಿದನು ನಭವ ॥　　೩೩

ಇವನ ಕಾಣಲು ಬಂದರವನಿಪ
ರವರವರ ಕೈಗಳಲಿ ತಾಯ್ತಂ
ದಿವನನಿತ್ತಳು ಮಾಣವಿವನಧಿಕಾಕ್ಷಿಬಾಹುಗಳು ।
ಇವನ ತಾಯ್ತಮ್ಮತ್ತೆ ಯೆಂದು
ತ್ಸವದಲೀ ಮುರವೈರಿ ಬರಲಂ
ದಿವನ ತಂದಿವನವ್ವೆ ಕೊಟ್ಟಳು ಹರಿಯ ಹಸ್ತದಲಿ ॥　　೩೪

ಆಗಳಿವನಧಿಕಾಕ್ಷಿಬಾಹುವು
ನೀಗಿತೊಡನಿವನವ್ವೆ ಕಂಡು
ಬ್ಬೇಗದಲಿ ಕಮಲಾಕ್ಷನಂಘ್ರಿಯಲೆಱಗಿ ಕೈಮುಗಿದು ||
ಮೇಗರೇನು ಮಾತಲ್ಲ ಬಾಲಕ
ನಾಗು ಹೋಗಿನ ಕೊಱತೆ ನಿನ್ನನು [1]
ತಾಗುವುದು ನೀ ಸೈರಿಸೆಂದಭಯವನು ಬೇಡಿದಳು || ೩೫

ಸೈರಿಸುವೆನಪರಾಧಶತವ ಕು
ಮಾರಕನ ತಾ ಕೊಲ್ಲೆನೆಂದೀ
ಶೌರಿ ಭಾಷೆಯ ಮಾಡಿ ಹಿಂಗಿದನಿವನ ತಾಯೊಡನೆ |
ಆರಿವನ ಮರಣಕ್ಕೆ ಮೊದಲು ಮು
ರಾರಿಯೋ ನೀನೋ ವಿಚಾರಿಸು
ವೀರ ಮಾರುತಿ ಯೆನಲು ಕೇಳಿದನಂದು ಶಿಶುಪಾಲ || ೩೬

ಭೀಷ್ಮರು ಹೇಳಿದ ಚರಿತ್ರೆಯಿಂದ ಕುಪಿತನಾಗಿ ಶಿಶುಪಾಲನು
ಭೀಷ್ಮರನ್ನು ನಿಂದಿಸುವಿಕೆ.

ಎಲವೊ ಗೋಪಕುಮಾರನೆನ್ನನು
ಕೊಲುವನೇ ತಾನಿವನ ಕೈಯ್ಯಲಿ
ಯುಳಿವವನೆ ಶಿವ ಶಿವ ವಿಕಾರಿಯನೇನ ಮಾಡುವೆನು |
ಗಳಹ ಭೀಷ್ಮವೃಕೋದರನು ವೈ
ಕಳಿಯ ಭಟ್ಟನೊ ನೀನು ಮೋಣೋ
ವಳರ ಹಳ್ಳಿಯ ಭಟನೊ ಹೇಟೆಂದನಾಚೈದ್ಯ || ೩೭

ಈ ಕುರುಕ್ಷಿತಿಪಾಲರಲಿ ನೀ
ನಾಕೆವಾಳನು ಗಡ ವಯಃಪರಿ
ಪಾಕವುಳ್ಳವನೀಸುಕಾಲದಲೋದಿದಱತವಿದೆ |

---

1 ನಾಗಹೋಗದು ನಿನ್ನ ಕೈಯಲ್ಲಿ, ಕ. ಖ.

ಕಾಕನುಱೆ ಕೊಂಡಾಡಿ ಗೊಲ್ಲರ
ಗೋಕುಲದ ಗೋಪಪ್ರಸಂಗ
ವ್ಯಾಕರಣಪಾಂಡಿತ್ಯ ಮೆಱೆದುದು ಭೀಷ್ಮ ನಿನಗೆಂದ ॥ ೩೮

ಇದು ಮಹಾಮುಖವಿಲ್ಲಿ ಪೂಜ್ಯನು
ಯದುಗಳರಸನು ಭಟ್ಟನಿಲ್ಲಿಗೆ
ನದಿಯು ಮಗನಿಲ್ಲಿಗೆ ಸದಸ್ಯರು ನಾರದಾದಿಗಳು ।
ಹುದಿದ ಮರುಭೂಮಿಯಲಿ ಮಾನ್ಯನು
ಬಧಿರನಿಲ್ಲಿಗೆ ಗೂಬೆ ಕೋಗಿಲೆ
ಮುದಿನರಿಗಳಿಲ್ಲಿಗೆ ಸಭಾಸದರೆಂದನಾಚೈದ್ಯ ॥ ೩೯

ನೀನಲಾ ಧರ್ಮಜ್ಞನಂದಾ
ಮಾನಿನಿಯರ ವಿವಾಹದಲಿ ನೀ
ನೇನ ಮಾಡಿದೆ ಬೇಸಱಿಸಿ ಬಱಲಿಸಿದೆ ಬಾಲಿಕೆಯ ।
ಏನ ಹೇಱುವೆನೊಂದು ಹಂಸನು
ಮಾನಸದ ತೀರದಲಿ ಪಕ್ಷಿವಿ
ತಾನದಲಿ ಧರ್ಮಜ್ಞನಾಯ್ತಾ ಹಂಸ ನೀನೆಂದ ॥ ೪೦

ನುಡಿಗಳಲಿ ಸದ್ಧರ್ಮಸಂಗತಿ
ನಡವಳಿಯಲನ್ಯಾಯವೆಂದೇ
ಕೆಡಿಹಿದುವು ಹಂಸೆಯನು ನಾನಾವಿಹಗಸಂದೋಹ ।
ನುಡಿವುದಲ್ಲದೆ ಮೇಣು ನಯದಲಿ
ನಡೆದುದಿಲ್ಲೆಲೆ ಭೀಷ್ಮ ನಿನ್ನನು
ಕಡಿದು ಭೂತಕೆ ಬಡಿಸಿದರೆ ಕೃತಕೃತ್ಯನಹೆನೆಂದ ॥ ೪೧

ಕಳೆದಕಾಲದ ವೃದ್ಧ[1] ಮೇಲ
ಗ್ಗಳದ ನಿಯತವ್ರತಿ ಶ್ರುತಿಸ್ಮೃ
ತಿಗಳಲಿ ಪರಿಣತನೆಂಬೆ ಕಡೆಯಲಿ ಗೋಪನಂದನನ ।

---

1 ಎಲವೊ ವೃದ್ಧನು ನೀನು, ಕ, ಖ.

ಬಳವಿಗೆಯ ಮಾಡಿದೆ ಮಹೀಮಂ
ಡಲದ ರಾಯರನಕಟ ಲಜ್ಜಾ
ಕುಳರ ಮಾಡಿದೆ ಭಂಡ ಫಡ ಹೋಗೆಂದನಾಚೈದ್ಯ ॥ ೪೦

ಪರಗುಣಸ್ತುತಿನಿಂದೆಗಳು ಹಿರಿ
ಯರಿಗೆ ಸಾಮ್ಯವೆ ನಿನ್ನ ಜಿಹ್ವೆಗೆ
ಪರಗುಣಸ್ತವದಿಂದ ಮೋಕ್ಷ ಕಂಡೂತಿ ಹರುವಹುದೇ ।
ಹಿರಿಯರಿದೆಲಾ ಕಣ್ವ ಕಪಿಲಾಂ
ಗಿರಸಜೈಮಿನಿಯಾಜ್ಞವಲ್ಕ್ಯರು
ವೆಱಸೆ ಲೋಕದೊಳಧಿಕರೆಲಾ ಭೀಷ್ಮ ಕೇಳೆಂದ ॥ ೪೨

ನಾವು ಮೊದಲಲಿ ನಿಮ್ಮೊಳಗೆ ಕುಂ
ದಾವುದೇತಕೆ ಹೊಗಟೆ ಯಿವರಲ
ದಾವ ಕೊಱತೆ ಯುಧಿಷ್ಠಿರನ ನೀನೇಕುಪೇಕ್ಷಿಸಿದೆ ।
ಈವೃಕೋದರಪಾರ್ಥರನು ಸಹ
ದೇವನಕುಲರನೇಕೆ ಹೊಗಟೆ ಯ
ದಾವಗುಣನಿಧಿಯೆಂದು ಕೃಷ್ಣನ ಬಣ್ಣಿಸಿದೆ ಯೆಂದ ॥ ೪೪

ಗರುವನಲ್ಲಾ ಕೌರವೇಶ್ವರ
ನರಸಲಾ ಬಾಹ್ಲಿಕನು ರಾಯರ
ಗುರುವಲಾ ಕೊಂಡಾಡಲಾಗದೇ ಚಾಪಧೂರ್ಜಟಿಯು ।
ಗುರುಸುತನು ಸಾಮಾನ್ಯನೇ ಸಂ
ಗರಭಯಂಕರನಲ್ಲವೇ ವಿ
ಸ್ತರಿಸಲಾಗದೆ ನಿನ್ನ ಕೃಷ್ಣನ ಹವಣಿ ಯುವರೆಂದ ॥ ೪೫

ಕವಚಕುಂಡಲಸಹಿತ ತಾನುದು
ಭವಿಸನೇ ಶೌರ್ಯಾದಿಗುಣದಲಿ
ಭುವನದಲಿ ಭಾರಾಂಕವೀರರು ಸರಿಯೆ ಕರ್ಣಂಗೆ ।

ಇವನನೇಕಗ್ಗಳಿಸೆ ಭೂರಿ
ಶ್ರವನ ಹೊಗಳೆ ಜಯದ್ರಥನು ನಿ
ನ್ನವನ ಹವಣೇ ಶಲ್ಯ ಮುನಿಯುನೆ ನಿನಗೆ ಹೇಳೆಂದ ॥ ೪೬

ಕುಲದಲಧಿಕರು ಶೌರ್ಯದಲಿ ವೆ
ಗ್ಗಳರು ಶೀಲದಲುನ್ನತರು ನಿ
ರ್ಮ್ಮಲಿನರಾಚಾರದಲಿ ಕೋವಿದರಖಿಲಕಳೆಗಳಲಿ ।
ಇಳೆಯುವೆಲ್ಲಭರಿನಿಬರನು ನೀ
* ಕಳೆದು ಕಿಲ್ಬಿಷಿಯೆನಿಪ ಹರಿಗೇ
ಕೊಲಿದೆ ಗಡ ಗರುವಾಯ್ತು ಗುಣ ನಿನಗೆಂದನಾಚೈದ್ಯ * ॥ ೪೭

ಘನನಲಾ ಭಗದತ್ತಕಾಂಭೋ
ಜನು ಪದಸ್ಥನಲಾ ವಿರಾಟನ
ತನುಜನೀಪಾಂಚಾಲಕೈಕಯರೀಮಹೀಭುಜರು ।
ವಿನುತರಲ್ಲಾ ದಂತವಕ್ರನು
ನಿನಗೆ ಕಿಱುಕುಳನೇ ಜರಾಸಂ
ಧನ ಸುತನ ನೀನೇಕೆ ಬಣ್ಣಿಸೆ ಭೀಷ್ಮ ಹೇಳೆಂದ ॥ ೪೮

ದ್ರುಮನ ಕಿಂಪುರುಷಾಧಿಪನ ವಿ
ಕ್ರಮವ ಬಣ್ಣಿಸಲಾಗದೇ ಭೂ
ರಮಣರಿದೆಲಾ ಮಾಳವಾಂಗಕಳಿಂಗಕೋಸಲರು ।
ವಿಮಳರಿನಿಬರನುೞಿದು ಕೃಷ್ಣ
ಭ್ರಮೆ ಹಿಡಿದುದೈ ನಿನಗೆ ನಿನ್ನ
ಕ್ರಮದ ಭಣಿತಿಯು ಕರ್ಮಬೀಜವನಱಿಯೆ ನಾನೆಂದ ॥ ೪೯

---

* ಕಳೆದು ಕಡು ನೆಱೆ ಹೂತವನವನು
ಹೞಿದು ಹಾವಿಂಗೆಱಗುವವೊಲಾಯ್ತೆಂದನಾಚೈದ್ಯ । ಚ. ಡ. *

### ಭೀಷ್ಮರ ಮೇಲೆ ಸರ್ವರಾಜರ ಕೋಪ.

ಕುಮತಿ ಕೇಳ್ ಹೆಬ್ಬುಲಿಯು ವನದಲಿ
ರಮಿಸುವುದೆ ಕಳಹಂಸೆ ಮಾಯಾ
ಭ್ರಮಿತರಲಿ ಯೋಚಿಸುವನೇ ಪರಯೋಗಿ ನಿಜಪದವ ।
ಸಮರಪಟು ಭುಜದರ್ಪಪಿತ್ತ
ಭ್ರಮ ವಿಸಂಸ್ಥುಳಚಪಳಚಿತ್ತ
ಸ್ಥಿಮಿತಭೂಪರ ಬಗೆವನೇ ತಾನೆಂದನಾಭೀಷ್ಮ ॥ ೫೦

ಖತಿಯು ಹಿಡಿದುದು ಸಕಲರಾಜ
ಪ್ರತತಿಗಳು ದುರ್ಮಾರ್ಗ ಮಾನ
ವ್ಯತಿಕರದೊಳುಬ್ಬೆದ್ದ ರನಿಬರು ಜಲಧಿಘೋಷದಲಿ ।
ಕ್ರತುವ ಜಲದಲಿ ಕದಡಿ ಗಂಗಾ
ಸುತನ ಹೊಯ್ ಕಟವಾಯ ಕೊಯ್ ನಿ
ಶ್ಚಿತಘಟಾಗ್ನಿಯೊಳವನ ಸುಡಿ ಯೆಂದುದು ನೃಪಸ್ತೋಮ ॥ ೫೧

### ಕೃಷ್ಣೋತ್ಕರ್ಷವನ್ನು ನಿರ್ಭಯವಾಗಿ ಭೀಷ್ಮರು ಸ್ಥಾಪಿಸುವಿಕೆ.

ಬಱಿಯ ಮಾತನೆ ಮೆಱೆದು ಕಾರ್ಯದಿ
ಕೊಱತೆ ಯಾದರೆ ನಾಯಿಗಳೊರಲಿದ
ತೆಱನಹುದಲೇ ತೋಱಿರೈ ನೆಱೆ ನಿಮ್ಮ ಕೈಗುಣವ [1] !
ಇಱಿದು ನೀವ್ ಕೊಲಲಾರದಿದ್ದೊಡೆ
ನೆಱೆ ಘಟಾಗ್ನಿಯೊಳುರುಹದಿದ್ದೊಡೆ
ಕೆಱಹು ನಿಮ್ಮಯ ಬಾಯುಲೆಂದನು ಭೂಪರಿಗೆ ಭೀಷ್ಮ ॥ ೫೨

ನೆರೆದ ನರಿಗಳ ಮಧ್ಯವಲಿ ಕೇ
ಸರಿಯ ಮನ್ನಿಸುವಂತೆ ಕೃಷ್ಣನ
ಚರಣವನು ಪೂಜಿಸಿದೆವರ್ಘ್ಯಾರುಹನು ಮುರವೈರಿ ।

---

1 ನೀವ್ ನಿಮ್ಮ ಪೌರುಷವ, ಚ.

ಬಱಡುಗಳು ನೀವೀಜನಾರ್ದನ
ನೊರೆಗೆ ಬಹಿರೇ ಪ್ರತಿಯೆನಿಸಿ ನರ
ಹರಿಗೆ ಸರಿಯೇ ಹೋಗಿ ಯೆಂದನು ಭೂಪರಿಗೆ ಭೀಷ್ಮ ॥ ೫೩

ಅಣಕಿಸುವರೆನ್ನೊಡನೆ ಹಿರಿಯು
ಬ್ಬಣವೆ ತೆಗೆಯಲಿ ಯೀಮುರಾರಿಯು
ಕೆಣಕಲಾಪರೆ ಕರೆದು ತೋಱಿ ವ್ಯಥಾಭಿಮಾನವಲಿ ।
ಹಣುಗಿ ಬಾಯ್ಬಿಡಿದೇನಹುದು ಕೈ
ಗುಣವ ತೋಱರಿ ಸಾವಿರೊಳ್ಳಗೆ
ಮಣಿವನೇ ವಿಹಗೇಂದ್ರನೆಂದನು ಭೂಪರಿಗೆ ಭೀಷ್ಮ ॥ ೫೪

ಶಿಶುಪಾಲನ ದುರುಕ್ತಿಗಳು.

ಶಿವ ಶಿವಾ ಮುದಿಗೂಗೆ ಮೆಚ್ಚದು
ರವಿಯು ನೆಲವೋ ಭೀಷ್ಮ ನಿಲು ಮಾ
ಧವನ ಮರ್ದಿಸಿ ನಿನಗೆ ಜೋಡಿಸುವೆನು ಮಹಾನಲನ ।
ಯುವತಿಯರು ಹಾರುವರು ಹುಲುಪಾಂ
ಡವರು ಪತಿಕರಿಸಿದರೆ ನೀನಿಂ
ದಿವಗೆ ಮಾನ್ಯನೆ ಕೃಷ್ಣ ಸಿಂಹಾಸನವನಿಱಿಯೆಂದ ॥ ೫೫

ನಿನಗೆ ಮೊದಲೊಳು ದಿವ್ಯವಿಶಿಖದ [1]
ಮೊನೆಯೊಳರ್ಚಿಸಿ ಬೞಿಕ ಭೀಷ್ಮನ
ಘನಘಟಾನಲಕುಂಡದೊಳ್ ಸ್ವಾಹಾಸ್ವಧಾಹುತಿಯ ।
ಅನುಕರಿಸಿ ಬೞಿಕಿನಲಿ ಕುಂತೀ
ತನಯರೈವರ ರಕುತಘೃತವಲಿ
ವಿನುತರೋಷಾಧ್ವರವ [2] ರಚಿಸುವೆನೆಂದನಾಚೈದ್ಯ ॥ ೫೬

ಎಂದು ಚಾಪವ ತರಿಸಿ ಚಪ್ಪರ
ದಿಂದ ಹೊಱವಂಟವನಿಪಾಲಕ

---

1 ಹೊರವಂಟ, ಚ. 2 ನಿಶಿತ, ಚ.

ವೃಂದವನು ಕೈವೀಸಿದನು ಕರೆ ಗೋಕುಲೇಶ್ವರನ |
ಇಂದಲೇ ರಿಪುರುಧಿರಪಾನಾ
ನಂದಕೃತಮದಶಾಕಿನೀಸ್ವ
ಚ್ಛಂದಲೀಲಾನೃತ್ಯದರ್ಶನ [1] ವೆಂದನಾಚೈದ್ಯ ‖ ೫೭

ಡಾವರಿಸಿದುದು ವಿವಿಧವಾದ್ಯಾವಿ
ರಾವವಬುಜೋದ್ಭವನ ಭವನವ
ನಾವಿಗಡಭಟಕಟಕವಿದ್ದುದು ಬಲಿದರೋಷದಲಿ |
ಗೋವಳನ ಬರಹೇಳು ಧರೆಯಲಿ
ದೇವ ಗಡ ಬರಹೇಳು ತೋಳು
ಕಾವವರ ತಾ ಕೊಲುವೆನೆಂದೊದಱಿದನು ಕಲಿಚೈದ್ಯ ‖ ೫೮

ಆಗ ಯಾದವರ ಯುದ್ಧಸನ್ನಾಹ.

ಹಲ್ಲಣಿಸಿದುದು ಯಾದವರ ಪಡೆ
ಘಲ್ಲಣೆಯ ಗರ್ಜನೆಯ ಘೋಷದ
ಝಲ್ಲವಣೆ ಗಂಭೀರಭೇರಿಯ ಬಹಳರಭಸದಲಿ |
ನಿಲ್ಲದಿಳೆ ಪದಹತಿಗೆನಲು ಬಲ
ವೆಲ್ಲ ಭೀಮನ ಸನ್ನೆಯಲಿ ರಣ
ಮಲ್ಲರೊದಗಿತು ಹೊಱಗೆ ನೃಪನೋಹರದ ಬಾಹೆಯಲಿ ‖ ೫೯

ಮಿನುಗುದುಟಿಗಳ ವಿಕಲಮಂತ್ರದ
ಬಿನುಗುಗಳ ಕೈಯ್ಯಾಹುತಿಗೆ ಕರ
ದನಿಮಿಷರ ಪಲ್ಲಟದ ವಿಚಲಿತಸೂಕ್ತಿಮಯನಿನದ [2] |
ತನಿಭಯದ ತರಳಾಕ್ಷಿಗಳ ದು
ರ್ಮನದ ಮೋಡಿಯ ಮೊಗದ ಬೆರಳಿನ
ಮುನಿಗಳಿದ್ದುದು ಹೊತ್ತಬೆಱಗಿನ ಬಿಗಿದ ದುಗುಡದಲಿ ‖ ೬೦

---

[1] ವಸರ, ಚ.

[2] ದನಿಮಿಷರ ಪಲ್ಲಟದ ವಿಚಲಿತಸೂಕ್ತಿಮಯನಿನದ, ಚ.

ಕೃಷ್ಣನು ಅಭಯವನ್ನು ಹೇಳುತ್ತಾ ಯುದ್ಧಕ್ಕೆ ಬಂದುದು.

ಮುನಿಗಳಂಜದಿರಂಜದಿರಿ ಪರಿ
ಜನಕೆ ಗಜಬಜ ಬೇಡ ಯಾದವ
ಜನಪರುರುವಣೆ ನಿಲಲಿ ಸೈರಿಸಿ ಪಾಂಡುಸುತರೆನುತ ।
ಮೊನೆನಗೆಯು ಸಿರಿಮೊಗದ ಸೆಗಹಿದ
ಜನದಭಯಹಸ್ತಾಂಬುಜದ ಹರಿ
ವಿನುತಸಿಂಹಾಸನವನಿಳಿದಾ ಧುರಕೆ ನಡೆತಂದ॥ ೬೧

ನಾರದಾದಿಗಳನ್ನು ಕುರಿತು ಕೃಷ್ಣನ ವಾಕ್ಯ.

ಹಿಂದೆ ಯೀಶಿಶುಪಾಲಕನ ತಾಯ್
ಬಂದು ಮಗನಪರಾಧಶತದಲಿ
ಕೊಂದಲಾಗದು ಚಿತ್ತವೆಂದಳು ನಮ್ಮನನುಸರಿಸಿ ।
ಇಂದು ಖತಿಯಿಲ್ಲ ಮಗೆ ಸೈರಿಸ
ಬಂದುದಿಲ್ಲ ಮಗೆರಡುತಪ್ಪಿಸೊ
ಳೆಂದು ಮುರಹರ ನಗುತ ನುಡಿದನು ನಾರದಾದ್ಯರಿಗೆ ॥ ೬೨

ಈಮಹಾಯಜ್ಞವನು ಕೆಡಿಸುವ
ನೀಮಹೀಶನ ಮುಱಿವೆನೆಂದನು
ವೈಮನಸ್ಯವ ಬಗೆದು ಮೊನೆಮಾಡಿದನು ನುಡಿಯೆರಡ ।
ತಾಮಸನ ತಱಿದಖಿಳಭೂತ
ಸ್ತೋಮತುಷ್ಟಿಯು ಕೀರ್ತಿ ಫಲಿಸಲಿ
ಯೀಮಹಾಶರಕೆನುತ ಕೊಂಡನು ದಿವ್ಯಮಾರ್ಗಣವ ॥ ೬೩

ಶಿಶುಪಾಲನನ್ನು ಕುರಿತು ಕೃಷ್ಣನ ವಾಕ್ಯ.

ಖಳ ದುರಾತ್ಮಕ ಯಗ್ರಪೂಜೆಗೆ
ಬಱಲಿಸಿದೆ ನಮ್ಮನು ಮಹಾದೇ
ವಿಳೆಯು ವಲ್ಲಭರೆಲ್ಲ ಕೇಳಲು ಬೈದೆ ನೂಱೊಂದ ।
ಅಱಲಿ ನುಡಿದೆನು ನಿಮ್ಮ ತಾಯ ಕೊಲ
ಲೆಳಸಬೇಡೆನೆ ಸೈರಿಸಿದೆವಿ
ನ್ನುಳಿಹಿಕೊಂಬರ ಕರೆ ನೃಪಾಲರೊಳಾವಿಕಾರಿಗಳ ॥ ೬೪

ಝುಂಕೆ ಮಿಗೆ ಹೊಕ್ಕವಂಟುದೆಡಬಲ
ವಂಕದಲಿ ಯದುಸೇನೆ ಪಾಂಡವ
ರಂಕೆಯಲಿ ದಳ ಜೋಡಿಸಿತು ಝುಳಪಿಸುವ ಕೈದುಗಳ ।
ಮುಂಕುಡಿಯು ಮೋಹರದ ದಳ ನಿ
ಶ್ಶಂಕೆಯಲಿ ಜೋಡಿಸಿತು ಭೂಪರ
ಬಿಂಕ ಮುಱಿದುದು ಭೀತಿ ಬಲಿದುದು ಹುದುಗಿತಾಟೋಪ ॥ ೬೫

ದುರ್ಯೋಧನಾದಿಗಳ ಉಪೇಕ್ಷೆ.

ತೊಲಗಿದನು ಕುರುರಾಯ ಪಾಂಡವ
ರೊಳಗೆ ತಪ್ಪಿಲ್ಲೆನುತ ಕುರುಕುಲ
ತಿಲಕನಾವೆಡೆ ಯೆನುತ ಬೞಿವಿಡಿದರು ನೃಪಾಲಕರು ।
ಕಲಿಜಯದ್ರಥಮಾದ್ರಪತಿಸೌ
ಬಲಕಳಿಂಗಕರೂಷ ನೃಪಕೋ
ಸಲರು ತಿರುಗಿತು ಬೇಱೆ ಭಗದತ್ತಾದಿಗಳು ಸಹಿತ ॥ ೬೬

ರಾಜರ ಮೇಲೆ ಶಿಶುಪಾಲನ ಕೋಪ.

ಚೆಲ್ಲಿತೀ ನೃಪಯೂಥ ಜಾಱಿಲಿ
ವೊಳ್ಳೆಗಳು [1] ಜಲಜಾಕ್ಷನಪ್ರತಿ
ಮಲ್ಲ ತಾನೇ ಸಾಕೆನುತ ಹೋಱುವೆನು ಕೆಲಬಲನ ।
* ಖುಲ್ಲರಾಯರು ನಿಲಲಿ ಗೋಪರ
ಹಳ್ಳಿಕಾಱನ ಕೂಡೆ ಬಿರಿದಿನ
ಕಲ್ಲಿಗಳ ತಮ್ಮದೆಯೊಳೊತ್ತಲಿ ಯೆಂದನಾಚೈದ್ಯ * ॥ ೬೭

---

[1] ಜಳ್ಳುಗಳು, ಚ.

* ಹಳ್ಳಿಗರ ಹಂಗೇಕೆ ಹೋಗಲಿ
ಗೊಲ್ಲರಧಿದೇವತೆಯ ಕಂಡಱಿ
ಬಿಲ್ಲಿಗಳು ತಮ್ಮೆದೆಯನೊತ್ತಲಿ ಯೆಂದನಾ ಚೈದ್ಯ ॥ ಚ. *

ಕೃಷ್ಣ ಶಿಶುಪಾಲರ ಯುದ್ಧ.

ಎನುತ ಖಳನಿದಿರಾಗಿ ಮಧುಸೂ
ದನನ ಹಳಚಿದನಸುರರಿಪುವಿನ
ಮೊನೆಗಣೆಯುಲವೆ ಮುಳುಗಿದನು ಬಳಿಕಾಮುಹೂರ್ತದಲಿ |
ದನುಜವೈರಿಯು ಮುಸುಕಿದನು ತನ
ತನಗೆ ನೋಟಕವಾಯ್ತು ಭೂಪತಿ
ಜನ ಸುನೀಥಮುರಾರಿಗಳ ಕೌತೂಹಲಾಹವಕೆ || ೬೮

ಬಿಡುವ ತೊಡಚುವ ಸಂಧಿಸುವ ಜೋ
ಡೆದು ಹೂಡುವ ತಾಗಿಸುವ ಹಿಡಿ
ಕಿಡುವ ಹರಿಸುವ ಬೆಸುವ ಭೇದಿಸುವಸಮಕೌಶಲವ [1] |
ನುಡಿವ ಕವಿಯಾರೈ ಬಳಿಯು ಬಾಯ್
ಬಡಿಕನೇ ಶಿಶುಪಾಲನೀಪರಿ
ನಡಸುತಿರ್ದನು ಹರಿಯೊಡನೆ ಸಮಬೆಸನಬಿಂಕದಲಿ || ೬೯

ಸೋತನೈ ಹರಿ ಯೆಂದು ಚೈದ್ಯನ
ಮಾತುಗಳು ಬಣ್ಣಿಸಿದರೀಸಿ
ರ್ಭೀತದಲಿ ಯದುನಿಕರವಿದ್ದುದು ಹರುಷಕೇಳಿಯಲಿ |
ಈತ ರಾವಣ ಮುನ್ನ ಭುವನ
ಖ್ಯಾತನೆಂದಮರರು ವಿಮಾನ
ವ್ರಾತದಲಿ ನೆಱೆ ನೋಡುತಿರ್ದರು ಸಮರ ವೈಭವವ [2] || ೭೦

ಆಗ ನಾನಾವಿಧ ಉತ್ಪಾತಗಳು.

ಧರಣಿಪತಿ ಕೇಳ್ ಕೃಷ್ಣ ಶಿಶುಪಾ
ಲರ ಮಹಾಸಂಗ್ರಾಮಮಧ್ಯದೊ
ಳುರಿದುದಿಳೆ ಹೊಗೆದುದು ದಿಶಾವಳಿ ಧೂಮಕೇತುಗಳು |
ತರಣಿಮಂಡಲಮಾಲೆಗಳು ವಿ

1 ಚಾಪಳವ, ಕ. ಖ. 2 ಸಂಭ್ರಮವ, ಚ.

ಸ್ತರಿಸಿತಾಕಾಶದಲಪರ್ವದ
ಲುರುವಣಿಸಿದನು ರಾಹು ಚಂದ್ರಾದಿತ್ಯಮಂಡಲವ ‖ ೭೧

ನಡುಗಿತವನಿಯಕಾಲವಲಿ ಬರ
ಸಿಡಿಲು ಸುಟಿದುದು ಹಗಲು ತಾರೆಗ
ಳಿಡಿದುವಭ್ರದಲಿಳಗೆ ಸುಟಿದುದು ರುಧಿರಮಯಧಾರೆ ।
ಮಿಡುಕಿದುವು ಪ್ರತಿಮೆಗಳು ಶಿಖರದ
ಲುಡಿದು ಬಿದ್ದುವು ಕಲಶಹೆಮ್ಮರ
ನಡಿಗಡಿಗೆ ಕಾರಿದುವು ರುಧಿರವನೆರಸ ಕೇಳಂದ ‖ ೭೨

ನೆಳಲು ಸುತ್ತಲು ಸುಟಿದು ದಿನಮಂ
ಡಲಕೆ ಕಾಳಿಕೆಯಾಯ್ತು ಫಲದಲಿ
ಫಲದ ಬೆಳವಿಗೆ ಹೂವಿನಲಿ ಹೂವಾಯ್ತು ತರುಗಳಲಿ ।
ತಳಿತಮರನೊಣಗಿದುವು ಕಾಷ್ಟ
ವೆಳಗಳುಜಿ ತಳಿತುವು ತಟಾಕದ
ಸಲಿಲ ವುಕ್ಕಿತು ಪಾಂಡುಪುತ್ರರ ಪುರದ ವೆಳಯದಲಿ ‖ ೭೩

ಆಗ ಧರ್ಮರಾಯನು ಉತ್ಪಾತ ಶಾಂತಿಯನ್ನು ಕೇಳುವಿಕೆ.

ಬೆದಱಿದನು ಯಮಸೂನು ಮಿಗೆ ನಡು
ಗಿದನು ಭಯದಲಿ ನಾರದನ ಕೇ
ಳಿದನಿದೇನ್ನ ಪ್ರಕೃತಿವಿಕೃತಿಯ ಸಕಲಚೇಷ್ಟೆಗಳು ।
ಇದು ಕಣಾ ಚೈದ್ಯಾದಿಗಳ ವಧೆ
ಗುದುಭವಿಸಿದುದಲೇ ಮುರಾರಿಯೊ
ಳುದಯಿಸುವುವುತ್ಪಾತ ಚೇಷ್ಟೆಗಳೆಂದನಾಮುನಿಪ ‖ ೭೪

ಈನೆಗಟಿದುತ್ಪಾತಶಾಂತಿವಿ
ಧಾನವೇನೆನೆ ಕೃಷ್ಣ ಚೇಷ್ಟೆಯೆ
ಹಾನಿ ವೃದ್ಧಿ ವಿನಾಶವಭ್ಯುದಯ ಪ್ರಪಂಚದಲಿ !

ಮೌನನಿಧಿಯೋ ವೇದಸೂಕ್ತವಿ
ಧಾನದಲಿ ಪರಿಹಾರ ವಿಷ್ವ
ಕ್ಸೇನಮಯವೀಲೋಕಯಾತ್ರೆಗಳೆಂದನಾಮುನಿಪ ॥ ೭೫

ಆಹರಿಯೆ ನಿಮಗಿಂದು ಜೀವ
ಸ್ನೇಹಿತನು ನಿಮಗಾವ ಚಿಂತೆ ವಿ
ಮೋಹಚೇಷ್ಟೆಗಳವನ ವಧೆಗೋ ಬಲ್ಲರಾರಿದನು ।
ಊಹಿಸಲು ಬೇಕೆಂದು ಮುನಿಪತಿ
ಗಾಹಿನಲಿ ತಿಳುಹಿದನು ಘನಸ
ನ್ನಾಹರೆಚ್ಚಾಡಿದರು ಶಿಶುಪಾಲಕಮುರಾಂತಕರು ॥ ೭೬

ಕಾದಿದರು ವಿವಿಧಾಸ್ತ್ರವಿದ್ಯಾ
ಭೇದದಲಿ ರಥಭಂಗಚಾಪವಿ
ಭೇದಶಸ್ತ್ರೌಘಸಂಹರಣ ಪ್ರಪಂಚದಲಿ ।
ಆದುರಾತ್ಮನ ನಿಲಿಸಿ ನಿಮಿಷದೊ
ಳಾದಯಾಂಬುಧಿ ತುಡುಕಿದನು ತ್ರೈ
ವೇದಮಯಮೂರ್ತಿತ್ರಯಾತ್ಮ ಮಹಾಸುದರ್ಶನವ ॥ ೭೭

ಶಿಶುಪಾಲ ಸಂಹಾರ.

ಬೆಸಸಿದನು ಚಕ್ರವನು ಧಾರಾ
ವಿಸರಧೂತಪರಿಸ್ಫುಲಿಂಗ
ಪ್ರಸರತೇಜಃಕಣಪರಿಷ್ಕೃತನವ್ಯಶತಭಾನು ।
ದೆಸೆದೆಸೆಯ ದುವ್ವಾಳಿಸುವ ಬಳ
ಗೆಸೆಯೆ ಬಂದು ಸುನೀಥಕಂಠದ
ಬೆಸುಗೆ ಬಿಡಲೆರಗಿದುದು ಹಾಯ್ದುದು ತಲೆ ನಭಸ್ಥಳಕೆ ॥ ೭೮

ಹರಿಗೊರಳ ಚೌಧಾರೆಯಲಿ ಧುರು
ಧುರಿಸಿ ನೊಕ್ಕಿತು ರಕ್ತವದರೊಳು

ಮಿಱುಪತೇಜಃಪುಂಜ ಪುಕ್ಕಿತು ಹೊದಱ ಹೊಳಹಿನಲಿ ।
ತುಱುಗುವೆಳಗಿನ ಜೋಕೆಯಲಿ ಜಗ
ವೆಱಿಯೆ ಬಂದು ಮುರಾರಿಯಂಘ್ರಿಯೊ
ಳೆಱಗಿ ನಿಂದುದು ನಿಜನೆಲೆಗೆ ವಿಜಯಾಭಿಧಾನದಲಿ ॥ ೭೯

ಆಗ ಜನಗಳ ಮಾತುಗಳು.

ತಗ್ಗಿದುದು ಕಳಕಳ ವಿಷಾದದ
ಸುಗ್ಗಿ ಬೀತುದು ರಾಯರೀಕೆಯು
ಮಗ್ಗಲಲಿ ಮೇಳೈಸಿ ಮೆಱೆದರು ಮಿತ್ತ ಬಾಂಧವರು [1] ।
ನೆಗ್ಗಿದುವು ನೆನಹವನ ಸಖಿಗಳು
ಮುಗ್ಗಿದರು ಹುರಡಿನ ವಿಘಾತಿಯು
ಲಗ್ಗಿಗರು ಹಣುಗಿದರು ಶಿಶುಪಾಲಾವಸಾನದಲಿ ॥ ೮೦

ಈಸು ಹಿರಿದಲ್ಲೆಂದು ಕೆಲಬರು
ಲೇಸುಮಾಡಿದನಸುರರಿಪುವಿದ
ನೀಸುಬಾಹಿರನೆಂದಱಿಯೆವಾವೆಂದು ಕೆಲಕೆಲರು ।
ಐಸಲೇ ಕೃಷ್ಣಂಗೆ ಮುನಿದವ
ರೇಸು ದಿನ ಬದುಕುವರು ಲೇಸಾ
ಯ್ತೀ ಸುನೀಥಂಗೆಂದು ನಗುತಿರ್ದುದು ನೃಪಸ್ತೋಮ ॥ ೮೧

ಆಱುಕೋಟಿರಥೌಘ ಮೂವ
ತ್ತಾಱುಕೋಟಿ ಗಜಂಗಳೆಪ್ಪ
ತ್ತಾಱುಕೋಟಿತುರಂಗವೈದಕ್ಷೋಹಿಣೀ ಸೇನೆ ।
ಕೋಱಿದಾಡೆಯ ನಿರ್ದಯದೇಹದ
ವೀರದಾನವರಸುವ ನಿಮಿಷಕೆ
ಕಾಱಿದರು ಕರುಣಾಳು ದೇವನಚಕ್ರದೂಷ್ಮೆಯಲಿ ॥ ೮೨

1 ಮೈತ್ರಿಯಲಿ, ಕ, ಖ.

ಬಿದ್ದ ರೈಸಾವಿರಮಹಾರಥ
ರದ್ದಿ ತರುಣಜಲೌಘ ಸೇನೆಯ
ಕದ್ದನಂತಕನಸುರವೈರಿಯು ಕರುಣದೂರರನು ।
ಹದ್ದು ನರಿ ವಾಯಸಸಮೂಹಕೆ
ಬಿದ್ದಿನೂಟಗಳಾಯ್ತು ಯಜ್ಞವೆ
ಹೊದ್ದಿ ಹೊಱಬಾಹೆಯಲಿ ಕಾದಿಹ ಭೂತಸಂತತಿಗೆ ॥　　೮೩

ಕೃಷ್ಣನು ಶಿಶುಪಾಲಪುತ್ರರನ್ನು ಅನುಗ್ರಹಿಸಿದುದು.

ಗೋಳಿಡುತ ಬಂದೆಱಗಿದರು ಶಿಶು
ಪಾಲತನುಜರು ಕೃಷ್ಣನಂಘ್ರಿಗೆ
ಲಾಲಿಸಿದನನಿಬರನು ಸಂತೈಸಿದನು ಕರುಣದಲಿ ।
ಮೇಲುಪೋಗಿನ ವಿಧಿವಿಹಿತಕ
ರ್ಮಾಳಿಗಳ ಮಾಡ್ದವನ ಮಗಗೆ ಕೃ
ಪಾಳುಪಟ್ಟದ ಸೇಸೆದಳೆದನು ವೀರನಾರಯಣ ॥　　೮೪

ಹನ್ನೊಂದನೆಯ ಸಂಧಿ ಮುಗಿದುದು.

---

## ಹನ್ನೆರಡನೆಯ ಸಂಧಿ.

ಸೂಚನೆ.

ರಾಜಸೂಯಕ್ರತುಸಮಾಪ್ತಿಯೊ
ಳಾಜನಾರ್ದನಮುಖ್ಯರನು ಯಮ
ರಾಜಸುತ ಕಳುಹಿದನು ಪೊಕ್ಕರು ತಮ್ಮ ನಗರಿಗಳ ॥

ಯಾಗನಡೆದ ಕ್ರಮ.

ಕೇಳು ಜನಮೇಜಯ ಧರಿತ್ರೀ
ಪಾಲ ರಣಗಜಬಜದ ಸ್ತೋಮ

ಘೋಳಿ ತಗ್ಗಿತು ಪಙ್ಕ್ತಿ ಗಟ್ಟಿತು ಮತ್ತೆ ನೃಪನಿಕರ ।
ಮೇಲಣಂತರ್ವೇದಿಗಳ ಮುನಿ
ಪಾಳಿಮಂತ್ರಾಹುತಿಗೆ ಕವಿವುರಿ
ನಾಲಿಗೆಯ ಲಾವಣಿಗೆ ತಳಿತುವು [1] ಹವ್ಯವಾಹನನ ॥ ೯

ತಳಿತು ತಿವಿದಾಡಿದುವು ಮುಱಿದೊಡೆ
ಗಲಸಿದುವು ಹೊಗೆ ಸುತ್ತಿ ಸಿಮಿಸಿಮಿ
ಮೊಳಗಿ ಹೊದಱಿ [2] ದ್ದುವು ಸಗಾಡದೊಳುಬ್ಬಿ ಭುಗಿಭುಗಿಸಿ ।
ಸುಳಿಸುಳಿದು ಭೋರೆಂದು ಚಿಗಿದ
ಪ್ಪಳಿಸಿದುವು ಘೃತಧಾರೆಗಳಿಗಂ
ಜ್ಜಳಿಸಿದುವು ಹರಹಿನಲಿ ನಾಲಿಗೆ ಹವ್ಯವಾಹನನ ॥ ೧೦

ಅವಭೃಥಾದಿಗಳು.

ಶ್ರುತಿವಿಧಾನದಲಮಳಪೂರ್ಣಾ
ಹುತಿಯು ಪಾರಾಯಣದ ನಿಗಮ
ಪ್ರತತಿಗಳ ಪರಿಪೂರ್ಣಪರಿಮಳಮಯದಿಶಾವಳಿಯ ।
ಕ್ರತುಸಮಾಪ್ತಿಯೊಳವಭೃಥದ ಭೂ
ಪತಿಯ ವಿಮಳಸ್ನಾನಪುಣ್ಯೋ
ಚಿತದಲೋಕುಳಿಯಾಡಿ ದಣಿದುದು ಲೋಕ ಸುರನರರ ॥ ೩

ಅಲ್ಲಿ ನಡೆದ ಬ್ರಾಹ್ಮಣಭೋಜನಕ್ರಮ.

ಅರಸ ಚಿತ್ತೈಸೊಂದುಲಕ್ಷದ
ಧರಣಿಯಮರರ ಭೋಜನಾಂತಕೆ
ಮೊಱೆವುದೊಂದೇ ಭಾರಿ ಶಂಖಧ್ವನಿ ಭಡಾಳವಲಿ ।
ಪರುಠವಣೆ ಯಿದು ರಾಜಸೂಯಾ
ಧ್ವರದ ಪರ್ಯವಸಾನಪರಿಯಂ
ತರದೊಳೋರಂದದಲಿ ಹಗಲಿರುಳೂದಿತನವರತ ॥ ೪

1 ದಣಿದುದು, ಡ. 2 ಸಿಗುಱಿ, ಡ.

ಏಸುಲಕ್ಷವದೇಸು ಕೋಟಿಯು
ದೇಸು ನಿರ್ಬುದವೇಸು ಖರ್ವವ
ದೇಸು ಪದ್ಮವೊ ದ್ವಿಜರ ಗಣನೆಯನರಿವರಾರವನು ।
ಏಸು ಭಕ್ಷ್ಯೋದನದ ಪರ್ವತ
ರಾಶಿ ದಧಿಘೃತದುಗ್ಧಮಧುವಾ
ರಾಸಿಯೊಡ್ಡಣೆ ಮೆರೆದುದಿಂದ್ರಪ್ರಸ್ಥನಗರಿಯಲಿ ॥ ೫೯

ಓಗರದ ರಾಸಿಗಳ ಗಿರಿ ಕಂ
ಡಾಗಳಂತಿರೆ ಮರಳಿ ಕಾಣರು
ಸಾಗರದವೊಲು ದಧಿಘೃತಾದಿಮಹಾಪ್ರವಾಹಚಯ ।
ಆಗಳಂತಿರೆ ಬತ್ತುವುವು ನಿಮಿ
ಷಾಗಮಕೆ ತುಂಬುವುವು ಯಮಜನ
ಯಾಗಲಕ್ಷ್ಮಿಯನಲ್ಪಮತಿ ಬಣ್ಣಿಸುವೊಡರಿದೆಂದ ॥ ೬೦

ಧರ್ಮರಾಯನು ಋಷಿಗಳನ್ನು ಅಭಿನಂದಿಸುವಿಕೆ.

ಅರಸ ಮೆಯ್ಯಿಕ್ಕಿದನು ಮುನಿಗಳ
ವರಸಮಾಜಕೆ ನಿಮ್ಮ ಕೃಪೆಯಲಿ
ಧರಣಿಪಾಧ್ವರಸಿದ್ಧಿಯಾಯ್ತು ನಿರಂತರಾಯದಲಿ ।
ಕರುಣ ನಿಮ್ಮದು ನಿಮ್ಮ ಮಿಗೆ ಸ
ತ್ಕರಿಸಲರಿಯೆನು ಹೆಚ್ಚುಕುಂದಿನ
ಹುರುಳನೀಕ್ಷಿಸಲಾಗದೆಂದನು ಮತ್ತೆ ಕೈಮುಗಿದು ॥ ೬೧

ಋಷಿಗಳು ಬಹುಮಾನಿತರಾಗಿ ತಂತಮ್ಮಾಶ್ರಮಕ್ಕೆ ತೆರಳಿದುದು.

ಮನ್ನಿಸಿದನವರುಗಳನುಡುಗೊರೆ
ಹೊನ್ನು ವಿವಿಧಾಭರಣಪಶುಗಳ
ಲುನ್ನತಾಶೀರ್ವಾದರಚನೆಯಲವನಿಪನ ಹರಸಿ ।
ಸನ್ನುತರು ತಮ್ಮಾಶ್ರಮಕೆ ಸಂ

ಪನ್ನ ಸತ್ವರು ಮರಳಿದರು ಪ್ರತಿ
ಪನ್ನ ಸತ್ಯ [1] ವಿಳಾಸನೊಪ್ಪಿದನಿಂದ್ರವಿಭವದಲಿ ॥ ೮

ರಾಜವರ್ಗವು ಬಹುಮಾನಿತವಾಗಿ ಪ್ರಯಾಣ ಮಾಡಿದುದು.

ರಾಜವರ್ಗವನವರವರ ನಿಜ
ತೇಜವಮಾನ್ಯೋಚಿತದಿ ಗಜರಥ
ವಾಜಿವಿವಿಧಾಭರಣವಸನವಧೂಕದಂಬದಲಿ ।
ಆಜಗತ್ಪತಿ ವೃತಿಯ ಪಾರ್ಥಿವ
ರಾಜಿಯನು ಮನ್ನಿಸಿ ಯುಧಿಷ್ಠಿರ
ರಾಜನನುಜರ ಕೂಡಿ ಕಳುಹಿಸಿದನು ಮಹೀಶ್ವರರ ॥ ೯

ಫಲುಗುಣನು ಧೃತರಾಷ್ಟ್ರಭೀಷ್ಮರ
ಕಳುಹಿದನು ಗುರು ಗುರುತನೂಜರ
ಬಳಿಯೊಳನಿಲಜ ಬಂದನಾಕೃಪನೊಡನೆ ಸಹದೇವ ।
ಬಳಿಯುಲೈದಿದ ನಕುಲನಾಸಾ
ಬಲನ ಸೈಂಧವಶಲ್ಯರನು ಕೋ
ಸಲವಿರಾಟದ್ರುಪದಭಗದತ್ತಾದಿಭೂಪತಿಯ ॥ ೧೦

ಅರಸ ಕೇಳ್ಪ ಪಾಂಡ್ಯಭೂಮೀ
ಶ್ವರಕಳಿಂಗಪ್ರಮುಖತೆಂಕಣ
ಧರಣಿಪರ ಬಳಿಯಲಿ ಘಟೋತ್ಕಚಯೋಜನಾಂತರವ ।
ವರಕುಮಾರರು ನಿಖಿಳಪೃಥ್ವೀ
ಶ್ವರರನವರವರುಚಿತದಲಿ ಸ
ತ್ಕರಿಸಿ ಮರಳಿಯೆ ಬಂದರಿಂದ್ರಪ್ರಸ್ಥಪುರವರಕೆ ॥ ೧೧

ಪಾಂಡವರನ್ನು ಕುರಿತು ಯಾಗಸಿದ್ಧಿಯಾಯಿತೆ ಎಂದು ಶ್ರೀಕೃಷ್ಣನ ಪ್ರಶ್ನೆ.

ಕರೆಸಿದನು ಹರಿ ಪಾಂಡುಪುತ್ರರ
ನರಸಿಸಹಿತೇಕಾಂತಭವನದೊ

---

1 ಯಜ್ಞ, ಡ.

ಳುರುತರಪ್ರೇಮೈಕರಸಸಂಸಿಕ್ತವೆಚನವಲಿ ।
ಭರಿತವಾಯಿತೆ ರಾಜಸೂಯಾ
ಧ್ವರಸದಾಹುತಿತೃಪ್ತಮಾಣಾ
ಮರಮಹೀಶ್ವರವಿಭವವಿಲಸಿತಪಾಂಡುಪದವೆಂದ ॥ ೧೦

ದೇವನಂಘ್ರಿಯ ಮುಸುಕಿದುವು ಮಕು
ಟಾವಳಿಗಳ್ಳವರ ಸತಿಯು ಸಂ
ಭಾವನೆಯು ಮಧುರೋಕ್ತಿರಸದಲಿ ನಗುತ ಮನ್ನಿಸಿದ ।
* ಓವಿದನು ಮುರವೈರಿ ಕಾರು
ಣ್ಯಾವಲೋಕನದಿಂದ ನಿನ್ನವ
ರಾವಭವದಲಿ ಭಜಿಸಿದರೊ ಬೇಸಱದೆ ಹರಿಪದವ * ॥ ೧೩

ಧರ್ಮರಾಯನು ಶ್ರೀಕೃಷ್ಣನ ಪದದ ಮೇಲೆ ಬಿದ್ದು ಸ್ತುತಿಸು ಓಕೆ.

ದೇವ ನಿಮ್ಮಡಿಯಂಘ್ರಿಕಮಲವ
ನಾವ ನೆನೆವನವಂಗೆ ತುಸವೆ
ಲ್ಲಾ ವಿರಿಂಚಾದ್ಯಮರಪದವಿದು ನಿಗಮಸಿದ್ಧವಲೈ ।
ನಾವು ಸಾಕ್ಷಾದ್ಯಜ್ಞಪೂರ್ತಿ [1] ಸು
ಧಾವಸೇಚನಧೂತಕಿಲ್ಬಿಷ
ಭಾವರರಿದೇ [2] ಬೊಪ್ಪನವರಿಗೆ ಶಕ್ರಪದವೆಂದ ॥ ೧೪

ಮಸಗಿದರೆ ಮಾಗಧನು ಯಜ್ಞಾವ
ನುಸುರಲೀವನೆ ಚೈದ್ಯ ಮುನಿದು
ಬ್ಬಸವ ಮಾಡಿದೊಡೆಮ್ಮ ಕೈಯ್ಯಲಿ ಹರಿವ ಹೆಕ್ಕಳವೆ ।

---

1 ದಮಳಮೂರ್ತಿ, ಕ. ಖ. ಚ. 2 ರಾವುದರಿದ್ಯೆ, ಕ. ಖ. ಚ,

* ಕೋನಿದನ ನಿಜಭಕ್ತಿಪೀಯೂ
ಷಾವಸೇಚನದಿಂದಲವರಿ
ನ್ನಾವ ಭಾವದಿ ಭಜಿಸಿದರೊ ಬೇಸಱದೆ ಹರಿಪದವ, ಡ.

ಶಿಶು ವ್ರೊಱಲಿದರೆ ಕಂಬದಲಿ ತೋ
ಱಿಸಿದ ಕರುಣಾಜಲಧಿಯೀ ಪಾ
ಲಿಸಿದೆಲಾ ಪಾಂಡವರನೆಂದನು ಹೊರಳಿ ಚರಣದಲಿ ॥ ೧೫

ಶ್ರೀಕೃಷ್ಣನು ಸಂತೋಷದಿಂದ ಧರ್ಮರಾಯನನ್ನು ನೋಡಿ ಆಲಿಂಗಿಸುವಿಕೆ.

ಏಳೆನುತ ತೆಗೆದಪ್ಪಿದನು ಕರು
ಣಾಳು ಪರಿತೋಷಾಶ್ರುಪೂರ್ಣಾವಿ
ಶಾಲಲೋಚನ ನೋಡಿದನು ತನ್ನವರನೊಲವಿನಲಿ ।

ದ್ರೌಪದಿಗೆ ಶ್ರೀಕೃಷ್ಣನ ಉಪದೇಶ.

ಬಾಲಕಿಯೆ ಬಾ ತಂಗಿ ಬಾ ನೀ
ಲಾಳಕಿಯೆ ಬಾರೆನುತ ಮಿಗೆ ಪಾಂ
ಚಾಲಿಯನು ಕರೆದಸುರರಿಪು ಮನ್ನಿಸಿದನುಚಿತದಲಿ ॥ ೧೬

ನಂಬದಿರು ಸಿರಿಯನು ಪತಿವ್ರತೆ
ಯೆಂಬರಿಗೆ ನೀ ಗುರು ವಿಷಾದವಿ
ಡಂಬಹರುಷಂಗಳಲಿ ನೀನಿಹುದೇಕಚಿತ್ತದಲಿ ।
ತುಂಬುವುದು ಒತ್ತುವುದು ರಾಜ್ಯದ
ಡೊಂಬುದಧಿ[1] ಮೇಖಲೆಯು ಹರುಷಾ
ಡಂಬರವಿದೆಂದಸುರರಿಪು ಸೂಚಿಸಿದನಂಗನೆಗೆ ॥ ೧೭

ವಿಷವ ಗೆಲಿದಿರಿ ಹಿಂದೆ ಕಿಚ್ಚಿನ
ದೆಸೆಯಲುಳಿದಿರಿ ದಾಯಿಗಳು ದು
ರ್ವ್ಯಸನಿಗಳು ದುಸ್ಪೃಹವು ನಿಮ್ಮಭ್ಯುದಯವಹಿತರಿಗೆ ।
ವಿಷಮವಿದುವೇ ದ್ಯೂತಮೃಗಯಾ
ವ್ಯಸನ ಪಾರ್ಥಿವಜಾತಿಗಿದು ದು
ರ್ವ್ಯಸನವಿದಱಲಿ ನೆಗ್ಗಿದರು ನಳದಶರಥಾದಿಗಳು ॥ ೧೮

---

1 ಡೊಂಬು ಹರ್‍ವ ಕ. ಕ. ಚ.

ಸೋತು ನಡೆವುದು ಹಿರಿಯರಲಿ ಸಂ
ಪ್ರೀತಿಯನು ಸುಜನರಲಿ ನಿರ್ಮಳ
ನೀತಿಯನು ಪರಿವಾರಪುರಜನ ನಾಡುಬೀಡಿನಲಿ |
ಖ್ಯಾತಿಯನು ಧರ್ಮದಲಿ ವೈರಿ
ವ್ರಾತದಲಿ ಪೌರುಷವ ನಿಖಿಳ
ಜ್ಞಾತಿಯೊಳಗೆಚ್ಚರಿಸೊಳಿಹುದೆಂದಸುರರಿಪು ನುಡಿದ || ೧೯

ಎಂದು ಬುದ್ಧಿಯ ಹೇಳಿ ಪಾರ್ಥನ
ನಂದನನ ಕರೆಸಿದನು ತಾಯ್ಸಹಿ
ತಂದನವರಿಗೆ ನಯದಲುಚಿತಪ್ರೀತಿವಚನದಲಿ |
ಎಂದು ಕುಂತಿಗೆ ಸಾಱಿ ನಯನುಡಿ
ಯಿಂದ ವಿನಯವ ಮಾಡಿ ಪಾಂಡುವ
ನಂದನರ ಮನ್ನಿಸಿದನತಿಕಾರುಣ್ಯಭಾವದಲಿ || ೨೦

ಯಾದವರು ಪಾಂಡವರು ತನ್ನವ
ರಾದರಿದುವೇ ಕುಟುಂಬವೀಮಹ
ದಾದಿಸೃಷ್ಟಿಗದಾವ [1] ರಕ್ಷೆ ಕುಟುಂಬವಾರಿದಕೆ |
ಆದರಿಸಿದನು ಕೆಲಬರನು ಹೊಱ
ಗಾದವರು ಕೆಲರಾಯ್ತು ಪರಿವಾ
ಯಾದುರಾಗ್ರಹವೃತ್ತಿ ಯಾಹವಣೆಂದನಾಮುನಿಪ || ೨೧

ದ್ವಾರಕೆಗೆ ಶ್ರೀಕೃಷ್ಣನ ಪ್ರಯಾಣ.

ಆಶುಭಗ್ರಹದುದಯದಲಿ ತಿಥಿ
ರಾಶಿನಕ್ಷತ್ರಾದಿಪುಣ್ಯೋ
ದ್ಭಾಸಮಾನಮುಹೂರ್ತದಲಿ ಸುಸ್ವರವಿಳಾಸದಲಿ |

1 ವಿಧಾನ, ಕ. ಖ.

ಭೂಸುರಾಶೀರ್ವಾದದಲಿ ಲ
ಕ್ಷ್ಮೀಶ ಪಯಣವ ಮಾಡಿದನು ಕ
ಟ್ಟಾಸುರದಲೊದಱಿದುವು ಘನಗಂಭೀರಭೇರಿಗಳು ‖ ೨೨

ದೇಶದಲಿ ಕಾಲದಲಿ ದೆಸೆಯಲಿ
ರಾಶಿಯಲಿ ತಾರಾಗ್ರಹಾದಿಗ
ಳ್ಯಸರಲಿ ತಾ ತನ್ನ ಚೇಷ್ಟೆಗಳವರ ವರ್ತನಕೆ ।
ಈಸು ಮಹಿಮೆಯ ಮೆಱೆಸಿ ಲೋಕವಿ
ಳಾಸಚೇಷ್ಟೆಯನನುಕರಿಸಿ ನರ
ವೇಷವನು ನಟಿಸಿದನು ಹರಿ ಹೊಱದ ನಿಜೋನ್ನತಿಯ ‖ ೨೩

ಬಲ ವಿಡೂರಥ ಸಾಂಬ ಸಾತ್ಯಕಿ
ದಳಪತಿಪ್ರದ್ಯುಮ್ನ ಯಾದವ
ಕುಲಸಚಿವನಕ್ರೂರನುದ್ಧವಚಾರುಕೃತವರ್ಮ ।
ಚಲಪತಾಕೆಯ ರಥನಿಕರದ[1]
ಗ್ಗಳೆಯ ಗಜವಾಜಿಗಳ ಸಂದಣಿ
ಯೊಳಗೆ ನಡೆದರು ಕೃಷ್ಣರಾಯನ ರಥದ ಬೞಿಸಿನಲಿ ‖ ೨೪

### ಕೃಷ್ಣವಿರಹದಿಂದ ಧರ್ಮರಾಯನ ದುಃಖ.

ಅನುಜತನುಜರು ಸಹಿತ ಕುಂತೀ
ತನಯ ದೂರಕೆ ಕಳುಹಿ ಮರಳಿಯೆ
ಮನೆಗೆ ಬಂದನು ಕೃಷ್ಣ ವಿರಹವಿಷಾದಖೇದದಲಿ ।
ಮುನಿಪವೇದವ್ಯಾಸಧೌಮ್ಯರ
ನನುಕರಿಸಿ ದಾಹಿಸುವ ದುಗಡವ
ನನಿತುವನು ಬಿನ್ನವಿಸಿದನು ಮಿಡಿಮಿಡಿದು ಕಂಬನಿಯ ‖ ೨೫

ಅಸುರರಿಪು ಕೃಪೆಯಿಂದ ನಿರ್ವಾ
ಹಿಸಿದನೀಯಜ್ಞವನು ಪೂರ್ವದ

[1] ನಿಖಿಳರಥದ, ಡ.

ವಸುಮತೀಶರ ಪಾಡಿಗೆಣೆಯೆನಲೆನ್ನ ಪತಿಕರಿಸಿ ।
ಬಿಸುಟು ಬಿಜಯಂಗೈದನೀವು
ಬ್ಬಸವನಾರಿಗೆ ಹೇಳುವೆನು ಹಿಂ
ದೆಸೆವ ಗೋಕುಲವಾಯ್ತು ಪುರವಿದು ಕೃಷ್ಣವಿರಹದಲಿ ॥ ೨೬

ಅರಸ ಕೇಳ್ಕೆ ದೈತ್ಯದಾನವ
ರುರುವಣೆಯು ಯದುನಾಯಕರು ನಿ
ಸ್ತರಿಸಲಱಿಯರು ಕೃಷ್ಣನಿಲ್ಲದೆ ಭೀತಿ ದ್ವಾರಕೆಗೆ ।
ಕರುಣ ನಿಮ್ಮಲಿ ಕಿಱಿದೆ ನಿಮ್ಮೊಳ
ಗೇಕವಿಲ್ಲವೆ ಚಿಂತೆ ಸಾಕಂ
ತಿರಲಿ ಯೆಂದವನೀಶನನು ಸಂತೈಸಿದನು ಮುನಿಪ ॥ ೨೭

ಆಮುಕುಂದನ ನೆನಹು ನಮಗೆ ನಿ
ರಾಮಯವು ನೀವಿರಲು ಚಿಂತಾ
ವೈಮನಸ್ಯದ ವೇಡೆ ಮುಱಿವುದು ಸಾಕದಂತಿರಲಿ ।
ಈಮಹೋತ್ಪಾತಪ್ರಬಂಧವಿ
ರಾಮಕರ್ಮವ ಬೆಸಸಿ ಯೆನೆ ನಗು
ತಾಮುನೀಶ್ವರ ನುಡಿದನವನೀಪತಿಶಿರೋಮಣಿಗೆ ॥ ೨೮

ಧರ್ಮರಾಯನಿಗೆ ವ್ಯಾಸರ ಉಪದೇಶ.

ಇದು ಕಣಾ ಕುರುರಾಜವಂಶಾ
ಭ್ಯುದಯವಿಗ್ರಹಪೂರ್ವಸೂಚಕನೆ [1]
ಯಿದು ಸುಯೋಧನನೃಪನ ಕತಿಸಯಕಾಲಸುಖಬೀಜ ।
ಇದು ಸಮಸ್ತಕ್ಷತ್ರಕುಲವಾ
ರಿದಘಟೋತ್ಪಾತದ [2] ಸವಿಾರಣ
ವಿದಱ ಫಲ ನಿಮಗಹ [3] ಜಯಾವಹವೆಂದನಾಮುನಿಪ ॥ ೨೯

[1] ಸೂಚಕ, ಚ. [2] ಚ್ಛಾಟನ, ಚ. [3] ಗಪ, ಚ

ಅಱಿದಿಹುದು ವೇದೋಕ್ತಮಾರ್ಗವ
ಮಱೆಯದಿರು ನೀನಾಪ್ತವಚನವ
ಹೊಱಗೆ ನಿನ್ನದು ನಿನ್ನ ಹೊದ್ದದು ಕಲುಷಕಲಿಮಲವು ।
ಕಱುಬರೀಕೌರವರು ಮಖವಿದು
ಮೆಱೆದುದದ್ಭುತವಾಗಿ ನಿಮ್ಮನು
ಮುಱಿದೊಡಲ್ಲದೆ ನಿಮ್ಮವರು [1] ಸೈರಿಸುವರಲ್ಲೆಂದ ॥ ೩೦

ನುಡಿಯದಿರಸತ್ಯವನು ರಾಜ್ಯವ
ಬಿಡು ವಿಭಾಡಿಸಿ ನಿನ್ನ ವಧುವಿನ
ಮುಡಿಗೆ ಹಾಯ್ದರೆ ನೀನಧರ್ಮದ ತಡಿಯ ತುಡುಕದಿರು [2] ।
ಒಡಲುಗೂಡಿ ಸಮಸ್ತವಸ್ತುವ [3]
ಬಿಡುವು [4] ದಗ್ಗದ ಮೋಕ್ಷಲಕ್ಷ್ಮಿಯ
ಮುಡಿಗೆ ಹಾಯ್ವೊಡೆ ಸತ್ಯವೊಂದನೆ ನಂಬು ನೀನೆಂದ ॥ ೩೧

ಇದುವೆ ರೇಖಾಮಾತ್ರ ಸರ್ವಾಂ
ಗವಲಿ ನಿನ್ನನು ಮಱೆಯದಿರು ಕೊಂ
ಕಿದರೆ ಕರುಣಾಜಲಧಿ ಜಯಿಸಲಿಕುಂಟು ಹರಿ ನಿಮಗೆ ।
ಬೆದಱದಿರು ವಿಗಡಿಸುವ ವಿಷಯಾ
ಸ್ಪದದೊಳೆಂದು ಮುನೀಂದ್ರನೈವರು
ಸುದತಿಸಹಿತನಿಬರಿಗೆ ಬುದ್ಧಿಯ ಹೇಳಿದನು ಬಳಿಕ [5] ॥ ೩೨

ಅಜ್ಞರವದಿರು ನೀವು ನೆಱೆ ಸ
ರ್ವಜ್ಞರವದಿರಧರ್ಮನಿಪುಣರು
ಯಜ್ಞದೀಕ್ಷಿತರಿಂದು ನೀವು ಸಮಸ್ತಜಗವೆಱಿಯೆ ।

---

1 ಕಂಡುನೆಱೆ. ಡ. 2 ನಡೆದಿರು, ಚ. 3 ಧನವಿದು, ಚ.
4 ಕೆಡವು, ಟ. 5 ಹೋಱವಂಟ, ಚ. ಚ.

ಅಜ್ಞರರಿಗಳು ನಿಪುಣರಿಗೆ ವರ
ಯಾಜ್ಞಿಕರಿಗಾಚಾರಹೀನರ
ಭಿಜ್ಞಮತವಿದು ತಪ್ಪದೆಂದನು ಮುನಿ ನೃಪಾಲಂಗೆ ॥ ೩೩

ವ್ಯಾಸರು ಬದರಿಗೆ ಹೊರಟ ಬಳಿಕ ಉಳಿದ ಜನಗಳನ್ನು ಕಳುಹಿಸಿದುದು.

ಮುನಿಪ ಕಳುಹಿಸಿಕೊಂಡು ಬದರೀ
ವನಕೆ ತಿರುಗಿದನತ್ತಲಿತ್ತಲು
ಜನಪ ಬಂದನು ಬಳಿಕ ಮಯನಿರ್ಮಿತಮಹಾಸಭೆಗೆ ।
ಮುನಿಗಳುಚಿದವರನು ಮಹೀಸುರ
ಜನಸಹಿತ ಭೂಪಾಲಶೇಷವ
ನನಿತುವನು ಬೀಳ್ಕೊಟ್ಟನಂದುಚಿತದಲಿ ಭೂಪಾಲ [1] ॥ ೩೪

ಅರಸ ಕೇಳ್ಕೌರವೇಂದ್ರನ
ಕರೆಸಿದನು ದುಶ್ಶಾಸನಾದಿಕ
ದುರುಳದುಸ್ಸಹಶತಕಸಹಿತಾಸಭೆಗೆ ನಡೆತಂದು ।
ಪರಿಭವಕೆ ಗುಱಿಯಾಗಿ ಹಾಸ್ಯದ
ಹರಹಿನಲಿ ಹಟವಾಗಿ ಪಾಂಡವ
ರರಸನನು ಬೀಳ್ಕೊಂಡು ಹಸ್ತಿನಪುರಕೆ ನಡೆತಂದ ॥ ೩೫

ಭೂಮಿಲಂಬದ ನಿಖಿಳಭೂಪ
ಸ್ತೋಮಸಹಿತ ಸುಯೋಧನನು ಹೃ
ತ್ತಾಮಸದ ಚಾವಡಿಯ ರೂಢಿಯ ರೋಷಪಾವಕದ ।
ಧೂಮಮುಖನೈತಂದು ಗಜಪುರ
ಸೀಮೆಯಲಿ ಪಾಳೆಯವ ಬಿಡಿಸಿದ
ವೈಮನಸ್ಯದಲಿರುಳು ಹೊಕ್ಕನು ಹಸ್ತಿನಾಪುರವ ॥ ೩೬

ಹನ್ನೆರಡನೆಯ ಸಂಧಿ ಮುಗಿದುದು.

---

1 ನನುನಯುದಿ ಮಿಗೆ ಸತ್ಕರಿಸಿ ಬೀಳ್ಕೊಟ್ಟನುಚಿತದಲಿ, ಚ.

## ಹದಿಮೂರನೆಯ ಸಂಧಿ.

ಸೂಚನೆ.

ಕಾಲಪಾಶಾಕರ್ಷದಲಿ ಭೂ
ಪಾಲನಿಂದ್ರಪ್ರಸ್ಥನಗರಿಯ
ಬೀಳುಕೊಂಡನು ಬಂದು ಹೊಕ್ಕನು ಹಸ್ತಿನಾಪುರವ ||

ದುರ್ಯೋಧನನು ಅಸೂಯೆಯಿಂದ ದುಃಖದಿಂದಿರುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವರಾಯನಿತ್ತಲು
ಮೇಲುಮುಸುಕಿನ ಹೊತ್ತ ದುಗುಡದ ಹೊಗರ ಹೊಗೆಮುಖದ |
ತಾಳಿಗೆಯ ನಿರ್ದ್ರವದ ಮತ್ಸರ
ದೇಳಿಗೆಯಲಿಕ್ಕಡಿಯ ಮನದ ನೃ
ಪಾಲ ಹೊಕ್ಕನು ನಡುವಿರುಳು ನಿಜರಾಜಮಂದಿರವ || ೧

* ಆರತಿಯ ಗಣಿಕೆಯರ ಪಾಯವ
ಧಾರು ಸೂಪಾಯತರ ಸುಚಿವ್ರ
ಪ್ಪಾರತಿಯ ದಾದಿಯರ ಮಂಗಳವಚನದೈದೆಯರ |
ದೂರದಲಿ ನಿಲಿಸಿದನು ಭಂಗದ
ಭಾರಣೆಯ ಬಿಸುಸುಯ್ಲ ಸೂಜಿಯ
ಸ್ಫೈರಣೆಯ ಸೀವಟದ ಸಿರಿಮಂಚದಲಿ ಪವಡಿಸಿದ || ೨

---

* ಆರತಿಯ ಗಣಿಕೆಯರ ಸುಚಿವ್ರ
ಪ್ಪಾರತಿಯ ದಾದಿಯರ ಪಾಯವ
ಧಾರು ಸೂಪಾಯತರ ಮಂಗಳವಚನದೈದೆಯರ, ಚ. ಟ. ||

ಆಗ ಸರ್ವವಿಷಯದಲ್ಲಿಯೂ ದುರ್ಯೋಧನನ ಚಿಹಾಸ.

ಭಾನುಮತಿ ಬರೆ ಮುಱಿದ ಮುಸುಕಿನ
ಮೌನಿ ನೂಕಿದನಿರುಳನುದಯಾ
ನೂನಮಂಗಳಪಟಹ [1] ಶಂಖಧ್ವನಿಯು ಮೊಳಗಿಸಿದ ।
ಭಾನುವಿಂಗರ್ಘ್ಯಾದಿಕೃತ್ಯವ
ನೇನುವನು ಮನ್ನಿಸದೆ ಚಿತ್ತದೊ
ಳೇನ ನೆನೆದನೊ ಭೂಪನಿದ್ದನು ಖತಿಯ ಭಾರದಲಿ ॥ ೩

ಬೇಟೆ ನಿಂದುದು ಗಜತುರಗದೇ
ಱಾಟ ಮೊಳಗಿತು ಕೇಳವೇಳದ
ತೋಟಿಯಲ್ಲಿಯದಲ್ಲಿ ಕವಡಿಕೆ ನೆತ್ತವೊದಲಾದ ।
ನಾಟಕದ ವೊಗರಂಬವೆನಿಪ ಕ
ವಾಟ ತೆಗೆಯದು ಹೊತ್ತುಸೂಯದ
ಕೋಟಲೆಯ ಕಡುಹೂಟ ಕವರಿತು ನೃಪನ ತನುಮನವ ॥ ೪

ದ್ರೋಣಭೀಷ್ಮಾದಿಗಳು ಸಮಯವ
ಕಾಣರುಚಿದಪಸಾಯಿತಸಚಿವ
ಶ್ರೇಣಿ ಬಾಗಿಲ ಹೊಱಗೆ ನಿಂದುದು ಮತ್ತೆ ಮನೆಗಳಲಿ ।
ಕಾಣದೊ [2] ಳಪ್ಪೈಕದ ಸುವೇಣಿಯ
ರಾಣಿಯರ ದುರ್ಮನದ ಬೆಳಸಿನ
ಕೇಣಿಯನು ಕೈಕೊಂಡನೊಬ್ಬನೆ ಕೌರವರ ರಾಯ ॥ ೫

ಆಗ ಜನಗಳ ಸ್ವಚ್ಛಂದಾಚರಣೆ.

ಸಮಯುವಿಲ್ಲೊರಂತೆ ಮೌನ
ಭ್ರಮದ ಬಿಗುಹಿನ ಕೇರಿಕೇರಿಯ
ಕುಮತಿಗಳ ಗುಜುಗುಜಿನ ಗುಪ್ತದ [3] ಮುಸುಕುಕೈದುಗಳ ।

1 ರಭಸ, ಕ, ಖ. 2 ಕಾಣೆನೊ, ಚ. ಟ. 3 ವಾರ್ತೆಯ, ಕ, ಖ.

ತಮತಮಗೆ ಬಿರುದುಗಳ ಗಣಿಕಾ
ರಮಣವೈರದ ಹೆಚ್ಚು ಕುಂದಿನ
ಸಮರಭಟರಿಱಿದಾಡಿದರು ನಿರ್ನಾಮಭಾವದಲಿ ॥ ೬

ದುರ್ಯೋಧನನ ವಿಷಯದಲ್ಲಿ ಜನರ ನಾನಾವಿಧ ಊಹೆ.

ಪ್ರಾಣಶೋಷಿತನೆಂದು ಕೆಲಬರು
ಕಾಣಿವೆರಸನನೆಂದು ಕೆಲರ
ಕ್ಷೀಣರೋಗಿತನೆಂದು ಕೆಲರು ವಿಷಪ್ರಯೋಗದಲಿ ।
ಸ್ತ್ರೀಪ್ರಣಚೇಷ್ಟಿತನೆಂದು ಕೆಲಬರು
ಜಾಣರೂಹೆಯ ಜನದ ನೆನೆಹಿನ
ಸಾಣೆಯಲಿ ಸವೆಯಿತ್ತು ಕೌರವನೃಪನ ನಿರ್ದೇಶ ॥ ೭

ದೇಶ ಅರಾಜಕವಾಯಿತೆಂದು ಭೀಷ್ಮಾದಿಗಳಿರಲು
ಶಕುನಿಯ ಆಗಮನ.

ಅಕಟ ಕೌರವರಾಯ ರಾಜ
ನ್ಯಕಶಿರೋಮಣಿ ಯಿರಲು ಧರೆ ರಾ
ಜಕವಿಹೀನ ವಿಡಂಬವಾಯ್ತೇ ಶಿವ ಶಿವಾ ಯೆನುತ ।
ಸಕಲಜನ ಭೀಷ್ಮಾದಿ [1] ಮಂತ್ರಿ
ಪ್ರಕರ ಚಿಂತಾಂಬುಧಿಯೊಳದ್ದಿರೆ
ಶಕುನಿ ಬಂದನು ಕೌರವೇಂದ್ರನ ರಾಜಮಂದಿರಕೆ ॥ ೮

ಕರೆದು ಬಾಗಿಲವರ್ಗೆ ತನ್ನಯ
ಬರವನಱುಹಿದೊಡವರು ರಾಯನ
ಹೊರೆಗೆ ಬಂದರು ನುಡಿದರಂಗೈತಳದ ಬಾಯ್ಗಳಲಿ ।
ಅರಸ ಬಿನ್ನಹ ಮಾವದೇವರು
ದರುಶನಾರ್ಥಿಗಳೆನಲು ಮನದಲಿ
ಕುರುನೃಪತಿ ಚಿಂತಿಸುತ ಬರಹೇಳೆಂದು ನೇಮಿಸಿದ ॥ ೯

1 ದಳನಾಯಕರು, ಚ ಟ.

ಶಕುನಿಯು ಈ ಅವಸ್ಥೆಗೆ ಕಾರಣವೇನೆಂದು ದುರ್ಯೋಧನ
ನನ್ನು ಕೇಳುವಿಕೆ.

ಹೊಕ್ಕನೀತನು ಕೌರವೇಂದ್ರನ
ನೆಕ್ಕಟಿಯಲಿರೆ ಕಂಡು ನುಡಿಸಿದ
ನಕ್ಕಜದ ರುಜೆ ಯೇನು ಮಾನಸವೋ ಶರೀರಜವೊ ।
ಮುಕ್ಕುಳಿಸಿ ಕೊಂಡಿರದಿರಾರಿಗೆ
ಸಿಕ್ಕಿದೆಯೊ ಸೀಮಂತಿನಿಯರಿಗೆ
ಮಕ್ಕಳಾಟಿಕೆ ಬೇಡ ನುಡಿ ಧೃತರಾಷ್ಟ್ರನಾಣೆಂದ ॥ ೧೦

ಮಾವ ನೀವ್ ಮರುಳಾದಿರೇ ಯೆನ
ಗಾವ ರುಜೆ ಯಿಲ್ಲಂಗನೆಯರುಪ
ಜೀವಿಯೇ ತಾನಱಿಯಿರೇ ನೀವೀಸುಕಾಲದಲಿ ।
ನೋವು ಬೇಱಿಲ್ಲೆನಗೆ ನಿಳಯುಕೆ
ನೀವು ಬಿಜಯಂಗೈವುದಂತ
ರ್ಭಾವವಹ್ನಿಯನೇಕೆ ಬೆದಕುವಿರೆಂದನಾಭೂಪ ॥ ೧೧

ಏನು ನಿನ್ನಂತಸ್ಥಹೃದಯುಕೃ
ಶಾನುಸಂಭವವೇಕೆ ನುಡಿ ದು
ರ್ಮ್ಮಾನ ಬೇಡೆನ್ನಾಣೆನುತ ಸಂತೈಸಿದನು ನೃಪನ ।

ಶಕುನಿ ದುರ್ಯೋಧನರ ಸಂವಾದ.

ಏನು ಭಯಬೇಡಿನ್ನೆನಲು ಯಮ
ಸೂನುವೈಭವವಹ್ನಿದಗ್ಧಮ
ನೋನುಭಾವವನೇಕೆ ನುಡಿಸುವಿರೆಂದನಾಭೂಪ ॥ ೧೨

ಹೇೞು ಹೇಚೇನೇನು ಪಾಂಡುನೃ
ಪಾಲಪುತ್ರರ ವಿಭವವಹ್ನಿ
ಜ್ವಾಲೆಯಲಿ ಮನ ಬೆಂದುದೇ ಶಿವ ಶಿವ ವಿಚಿತ್ರವಲ ।

ಪಾಲಕನು ಧರ್ಮಜನು ಮಿಗೆ ಕ
ಟ್ಟಾಳುಗಳ ಭೀಮಾರ್ಜುನರು ಬೆ
ಳ್ಳಾಳಹಬ್ಬುಗೆಯವರ ಸಿರಿ ಕೇಳೆಂದನಾಶಕುನಿ [1] ‖ ೧೩

ಪುರದ ಸಿರಿಯನು ಯಾಗದೊದವನು
ಹರಿಯ ಕರುಣೋದಯವನಾಸೋ
ದರರ ದರ್ಪದೊಳೆಸೆವ ಯಮಸುತನಖಿಳವೈಭವವ ।
ವರಸಭಾಮಂಟಪದಿ ನೆರೆದಿ
ದ್ದರಸುಮಕ್ಕಳ ವಾರವಧುಗಳ
ಪರಮಹರ್ಷವ ಕಂಡು ನೊಂದೆನು ಮಾವ ಕೇಳೆಂದ ‖ ೧೪

ನಿನ್ನ ನಡತೆ ಯುಕ್ತವಲ್ಲೆಂದು ಶಕುನಿಯು ಹೇಳಲಾಗಿ
ದುರ್ಯೋಧನನ ಪತನ.

ಅವರು ಪಿತ್ರಾರ್ಜಿತದ ರಾಜ್ಯ
ಪ್ರವರಪಾತ್ರರು ನಿನ್ನ ಸೂಯೆಯ
ಕವಲುಮನದ ಕುಠಾರಬುದ್ಧಿಯ ಕಲುಷಭಾವನೆಯ ।
ವಿವರಣವನವರೆತ್ತ ಬಲ್ಲರು
ಶಿವ ಶಿವಾ ಭುವನೈಕಮಾನ್ಯರ
ನವಗಡಿಸಲಂಗೈಸಿದೈ ಮಾಣೆಂದನಾಶಕುನಿ ‖ ೧೫

ಲೇಸು ಬಿಜಯಂಗೈಯಿ ನೀವೆ
ನ್ನಾಶಯಾಗ್ನಿ [2] ಯನೇಕೆ ಕೆಣಕುವಿ
ರಾಸುರವಿದೇಕೆನ್ನೊಡನೆ ಸೈರಿಸುವುದುಪಹತಿಯ ।
ಈಸು ನುಡಿವರೆ ಮಾವ ಯೆನುತ ಮ
ಹೀಶ ಕಂಬನಿದುಂಬಿ ನೆನಹಿನ
ಬೇಸಱಿಕೆ ಬಿಸುಸುಯ್ಲ ಧೊಪ್ಪನೆ ಕೆಡೆದನವನಿಯಲಿ ‖ ೧೬

---

1 ವೈಸಲೇ ಪಾಂಡವರ ಸಿರಿಯೆಂದ, ಚ.   2 ಸಖಾ, ಕ. ಖ ಜ.

ಆಗ ಅವನನ್ನು ಎತ್ತಿ ಸಮಾಧಾನ ಪಡಿಸುವಿಕೆ.

ಎತ್ತಿದನು ಕಣ್ಣೊರೆಸಿಯು ಕಿಱು[1] ಮನಿ
ಮುತ್ತುಗಳ ಕೇವಣಿಯು ಶಕುನಿ ನೃ
ಪೋತ್ತಮನೆ ಬಾ ಕಂದ ಬಾ ಯೆನುತಪ್ಪಿ ಕುಳ್ಳಿರಿಸಿ[2] ।
ಕಿತ್ತು ಬಿಸುಡುವೆನಹಿತರನು ನಿನ
ಗಿತ್ತನಿಂದ್ರಪ್ರಸ್ಥಪುರವನು
ಹೆತ್ತ ತಾಯ್ ಗಾಂಧಾರಿ ಸಂತಸಬಡಲಿ ಬಿಡಕೆಂದ ॥ ೧೭

ಮಾವ ಕೇಳತಿಬಲರು ಫಲುಗುಣ
ಪಾವಮಾನಿಗಳೈವರವದಿರ
ಜೀವಸಖ ಗೋವಿಂದನನಿಬರ ಗೆಲವು ಗೋಚರವೆ ।
ಸಾವುದಲ್ಲದೆ ಬೇಱೆ ತನಗಿ
ನ್ನಾವಪರಿಯಲಿ ಸಮತೆ ಸೇರದು
ಜೀವಿತವ್ಯವನಮರನಿಕರದೊಳರಸಿ ಕೊಳ್ಳೆಂದ ॥ ೧೮

ಅವರನ್ನು ಜೂಜಿನಲ್ಲಿ ಗೆದ್ದು ಸರ್ವಸಂಪತ್ತನ್ನು ನಿನಗೆ ಕೊಡಿಸುವ
ನೆಂದು ಶಕುನಿಯು ಪ್ರತಿಜ್ಞೆ.

ಗೆಲುವೆ ತಾನಂಜದಿರು ಪಾಂಡವ
ರಳವಳವ ತಾನಱಿವೆ ನೃಪನ
ಗ್ಗಳದ ಧರ್ಮಜನು ವಿಶೇಷದ್ಯೂತಲೋಲುಪನು ।
ಗೆಲುವ ಮೋಡಿಯನಱಿಯನಾತನ
ನಲೆಯು ಬಲ್ಲೆನು ಜೂಜುಗಾಱಿಕೆ
ಕುಲಶಿರೋಮಣಿ ತಾನೆ ಯೆಂದನು ಶಕುನಿ ಕೌರವಗೆ[3] ॥ ೧೯

ಕಪಟವನು ನೆಱೆ ಮಾಡಿ ಜೂಜಿನೊ
ಳುಪರಿಕಾರ್ಯವ ಜಯಿಸಿ ಕೊಡುವೆನು
ನಿಪುಣರೆನ್ನಂದದಲಿ ಭುವನದೊಳಿಲ್ಲ ಕೈತವದ ।

---

1 ತಿರು, ಚ.  2 ಕೌರವನ, ಚ. ಟ.
3 ಕುರುಪತಿಗೆ, ಕ. ಖ. ಡ.

ಆಪದೆಸೆಗೆ [1] ಭಯಗೊಳ್ಳದಿರು ನಿ
ಷ್ಕೃಪೆಯಲಿರು ಗುರುಭೀಷ್ಮವಿದುರಾ [2]
ದ್ಯುಪಶದರ ಕೈಕೊಳ್ಳದಿರು ನೀನೆಂದನಾಶಕುನಿ ॥ ೨೦

ಎನ್ನ ಬಹುಮಾನಾವಮಾನವು
ನಿನ್ನದೈ ಸಲೆ ಮಾವ ನೀ ಸಂ
ಪನ್ನಕೃತ್ರಿಮವಿದ್ಯನಾದರೆ ರಚಿಸು [3] ಸಾಕಿದನು ।

ಇದನ್ನು ಧೃತರಾಷ್ಟ್ರನಿಗೆ ಹೇಳೆಂದು ಶಕುನಿಯು ಹೇಳಿಕೆ.

ಅನ್ನಿಗರಿಗುಸುರದಿರು ನಮ್ಮವ
ರೆನ್ನದಿರು ವಿದುರಾದಿಗಳನುಪ
ಪನ್ನಮಂತ್ರವನರುಹು ಭೂಪಂಗೆಂದನಾಭೂಪ ॥ ೨೧

ನೀನರುಹು ನಿಮ್ಮಯ್ಯ ಮತಿಗೊ
ಟ್ಟಾನರೇಂದ್ರನ ಕರೆಸಿ ಕೊಟ್ಟರೆ
ಮಾನನಿಧಿಯೇ ಸಕಲ ಧರೆಯನು ಸೇರಿಸುವೆ ನಿನಗೆ ।

ನೀನೇ ಹೇಳೆಂದು ದುರ್ಯೋಧನನ ಉತ್ತರ.

ನೀನೆ ಹೋಗೀ ಯೆನ್ನ ಕಡು ದು
ಮ್ಮಾನವನು ಭೂಪಂಗೆ ನುಡಿದರೆ
ತಾನೆ ಕರೆಸುವನರುಹುವೆನು ಜನಕಂಗೆ ನಿಜಮತವ [4] ॥ ೨೭

ಶಕುನಿಯು ಬಂದು ದುರ್ಯೋಧನನ ವಿಷಯವನ್ನು ಹೇಳುವಿಕೆ.

ಅಹುದು ಬಳಿಕೇನೆನುತ ಬಂದನು
ಕುಹಕಮತಿ ಧೃತರಾಷ್ಟ್ರನರಮನೆ
ಗಿಹಸಮಯದಲಿ ಹೊಕ್ಕನಂದೇಕಾಂತ ಭವನದಲಿ ।

1 ಜಗುಕ, ಕ. ಖ. ಪ
2 ಮೊದಲಾದ, ಕ. ಖ.
3 ತೊಡಚು, ಚಕ, ಪ.
4 ಬಳಿಕೆಂದನಾನೃಪತಿ, ಕ. ಖ.

ಬಹಳಖೇದವ್ಯಸನದಲಿ ದು
ಸ್ಸಹಮನೋವ್ಯಥೆಯಲಿ ಕುಮಾರಕ
ನಿಹುದನಱಿಯಿರೆ ಭಾವ ಯೆಂದನು ಬತ್ತಿಕ ಖಳ [1] ಶಕುನಿ ||೨೩

ಏನು ಶಕುನಿ ಮಗಂಗೆ ದುಗುಡವ
ದೇನು ಕಾರಣವಾರ ದೆಸೆಯಿಂ
ದೇನಸಾಧ್ಯವದೇನು ಭಯ ಮೇಣಾವುದಭಿಲಷಿತ |
ಏನುವನು ವಂಚಿಸದೆ ಹೇಳೆಂ
ನಾನೆಗೇಕೈ ಮಱುಕವೆನೆ ನಿಜ
ಸೂನುವನು ನೀ ಕರೆಸಿ ಬೆಸಗೊಳ್ಳೆಂದನಾಶಕುನಿ || ೨೪

ಶಕುನಿಯ ಹೇಳಿಕೆಯಂತೆ ದುರ್ಯೋಧನನನ್ನು ಕರೆಸುವಿಕೆ.

ಕರೆಸಿದನು ದುರ್ಯೋಧನನನಾ
ದರಿಸಿ ಕಟ್ಟೇಕಾಂತದಲಿ ಮೂ
ವರು ವಿಚಾರಿಸಿದರು ನಿಜಾನ್ವಯಮೂಲನಾಶನವ |
ಭರತಕುಲನಿರ್ವಾಹಕನೆ ಬಾ
ಕುರುನೃಪಾನ್ವಯದಿನಪ ಬಾ ಯೆ
ನ್ನರಸ ಬಾ ಯೆನ್ನಾನೆ ಬಾ ಯೆಂದಪ್ಪಿದನು ಮಗನ || ೨೫

ದುಃಖಕ್ಕೆ ಕಾರಣವೇನೆಂದು ತಂದೆಯ ಪ್ರಶ್ನೆ.

ದುಗುಡವೇಕೈ ಮಗನೆ ಹಿರಿಯೋ
ಲಗವನೀಯೆ ಗಡೇಕೆ ವೈಹಾ
ಳಿಗಳ ಬೇಟೆಗಳವನಿಪಾಲವಿನೋದಕೇಳಿಗಳ |
ಬಗೆಯೆ ಗಡ ಬಾಂಧವರ ಸಚಿವರ
ಹೊಗಿಸೆ ಗಡ ನಿನ್ನರಮನೆಯನೀ
ಹಗಲು ನಿನಗೇಕಾಯ್ತು ಕತ್ತಲೆ ಯೆಂದನಂಧನೃಪ [2] || ೨೬

---

1 ನೀವೆನುತ ಬಿಸುಸುಯ್ದನಾ, ಚ. 2 ದು ಬೆಸಗೊಂಡ, ಕ. ಖ.

ಹೇಳಲಮ್ಮೆನು ನೀವು ಧರ್ಮದ
ಕೋಟಿಯಲಿ ಸಿಲುಕಿದವರೆನ್ನನು
ಖೂಳನೆಂಬಿರಿ ಕಷ್ಟನೆಂಬಿರಸೂಯನೆಂಬಿರಲೆ ।
ಸೂಳಭಂಜಿಕೆಯಾಯ್ತು ತನ್ನಯ [1]
ಬಾಳಿಕೆಯು ಬೇಳಂಬವೇತಕೆ
ಕೇಳುವಿರಿ ನೀವೆನುತ ಸುಯ್ದನು ತುಂಬಿ ಕಂಬನಿಯ ॥ ೧೭

ಮುನಿಚರಿತ್ರರು ನೀವು ರಾಜಸ
ತನದ ಮದದಲಿ ಲೋಕಯಾತ್ರೆಯ
ನನುಸರಿಸುವುವರಾವು ನೀವೇ ಭೋಗನಿಸ್ಪೃಹರು ।
ಅನುದಿವಸ ರಾಗಿಗಳು ನಾವೆ
ಮ್ಮನುಮತವ ಪಾಲಿಸುವರಾರೆಂ
ದೆನುತ ಸುಯ್ದನು ಮಱುಗಿ ಬೈದನು ತನ್ನ ದುಷ್ಕೃತವ ॥ ೧೮

ಈಸು ಕಳವಳವೇನು ಚಿತ್ತದ
ಬೈಸಿಕೆಗೆ ಡೊಳ್ಳಾಸವೇಕೆ ವಿ
ಳಾಸಕೂಣೆಯುವೇನು ಹೇಳಾ ನಿನಗಿನಭಿರುಚಿಯ ।
ವಾಸಿಗಳ ಪರಿವಿಡಿಯ [2] ನೆನ್ನಲಿ
ಸೂಸಬಾರದೆ ನಿನ್ನ ಹರುಷಕೆ
ಪೈಸರವದೇನೆಂದು ಬೆಸಗೊಂಡನು ಸುಯೋಧನನ ॥ ೧೯

ಪಾಂಡವರ ವೈಭವವೆ ಕಾರಣವೆಂದು ಹೇಳಿ ವೈಭವವನ್ನು ಹೇಳಿದುದು.

ಏನನೆಂಬೆನು ಬೊಪ್ಪ ಕುಂತೀ
ಸೂನುಗಳ ಸಾಮರ್ಥ್ಯವಣವನು
ದಾನವಾರಿಯ ಹಾಸುಹೊಕ್ಕಿನ ಸೌಖ್ಯಸಂಗತಿಯ ।

---

1 ನಮ್ಮಯ, ಖ. 2 ಪೈಸರವ, ಕ.

ತಾ ನಪುಂಸಕನಾದ ಪರಿಭುನ
ದೇನ ವಿಸ್ತರಿಸುವೆನು ಲಜ್ಜಾ
ಮಾನಿನಿಗೆ ತನ್ನೊಕ್ಕತನವಿಂಪಡಿದು ಹೋಯ್ತೆಂದ ॥ ೩೦

ನೆಗೆದ ಬುಗುಟಿದೆ ಹಣೆಯುಲವರೋ
ಲಗದ ಸಭೆಯಲಿ ನೆನದ ಸೀಱೆಯು
ತೆಗೆಸಿ ಕೊಟ್ಟರು ತಂದು [1] ಮಡಿವರ್ಗದ ನವಾಂಬರವ ।
ಬೆಗಡುಗೊಳಿಸಿದರೆನ್ನನವರೋ
ಲಗದ ಗಣಿಕೆಯುರವರ ಸೂಟಿಸ
ನಗೆಯು ನೆನೆನೆನೆದೆನ್ನ ಮನ ಜರ್ಝರಿತವಾಯ್ತೆಂದ ॥ ೩೧

ಇದಕೆ ಕಾರಣವೇನು ಹಣೆ ನೊಂ
ದುದಕದೇನು ನಿಮಿತ್ತವೆನಲಾ
ಸದನದಲಿ ಮಯನಿತ್ತ ಸಭೆಯನು ದೇವರಱೆಯಿರಲಿ ।
ಮುದದಿನಾಧರ್ಮಜನು ಘನಸಂ
ಪದದಲೋಲಗವಿತ್ತನಾದಾ
ಪದಿ ನಿಜಾನುಜಮಂತ್ರಿಸಚಿವಪಸಾಯಿತರು ಸಹಿತ ॥ ೩೨

ಆಮಹಾಸಭೆ ದೇವನಿರ್ಮಿತ
ರಾಮಣೀಯಕವಿವಿಧರತ್ನ
ಸ್ತೋಮತೇಜಃಪುಂಜರಂಜಿತ ನಯನವೀಧಿ [2] ಯಲಿ ।
ಸಾಮದಲಿ ನಮ್ಮನು ಯುಧಿಷ್ಠಿರ
ಭೂಮಿಪತಿ ಕರೆಸಿದನು ತನ್ನ
ದ್ದಾಮವಿಭವವನೆನಗೆ ತೋಱಲು ತತ್ಸಭಾಸ್ಥಳಕೆ ॥ ೩೩

ಹರಹಿನಲಿ ಹಿರಿದಾಯ್ತು ಕೆಂದಾ
ವರೆಯು ಬನ ಬೇಱೊಂದುತಾವಿನ
ಉರುವಣೆಯು ಬೆಳುದಿಂಗಳೌಕಿದುದೊಂದುತಾಣದಲಿ ।

1 ತಮ್ಮ, ಕ, ಖ. 2 ರಶ್ಮಿ, ಕ. ಖ.

ಹರಿವ ಯಮುನಾನದಿಯನಲ್ಲಿಗೆ
ಕರೆಸಿದವರಾರೆನಲು ಮಣಿಬಂ
ಧುರದ ಬೆಳಗಿನ ಲಹರಿ ಮುಱದುದು ತನ್ನ ಜಾಣುಮೆಯ ॥ ೩೪

ಹೊಕ್ಕ ಸಾಲಲಿ ಹೊಳೆವ ಮಣಿರುಚಿ
ಮುಕ್ಕುಳಿಸಿದುವು ಕಂಗಳನು ನಡೆ
ದಿಕ್ಕೆಲನ ನೋಡಿದರೆ ಮುಱದೊಳಸರಿದುವಾಲಿಗಳು ।
ಉಕ್ಕುವಮಲಚ್ಛವಿಗಳಲಿ ಮನ
ಸಿಕ್ಕಿ ಹೊಳಬೞದುದು ವಿವೇಕವ
ಡೊಕ್ಕರಿಸಿ ಕೆಡಹಿದುವು ಬಹುವಿಧರತ್ನಕಾಂತಿಗಳು ॥ ೩೫

ಹಿಡಿದುವೆನ್ನೊಹೆಯನು ಮಣಿರುಚಿ
ಯೆಡತರದೊಳಿಕ್ಕಿದುವು ಭಿತ್ತಿಯ
ಬಿಡೆಯದಲಿ ಝುಳಪಿಸುವ ನೀಲದ ಮಣಿಯ ಲಹರಿಯಲಿ ।
ತಡಿಯ [1] ಕಾಣೆನು ತಳಿತಕಾಂತಿಯ
ಕಡಲ ವಿಮಲಸ್ಫಟಿಕಜಲದಲಿ
ಮಿಡುಕಲಂಜಿದುವಂಘ್ರಿಗಳು ನರನಾಥ [2] ಕೇಳೆಂದ ॥ ೩೬

ಸ್ಥಳವೆ ಜಲರೂಪದಲಿ ಜಲವೇ
ಸ್ಥಳದ ಪಾಡಿನಲಿದ್ದುದದು ಕೆಲ
ಬಲದ ಭಿತ್ತಿಯ ಕಂಭ ಕಂಭದ ನಡುವೆ ಭಿತ್ತಿಗಳ [3] ।
ಹೊಳವನೇ [4] ಕಂಡೆನು ವಿವೇಕದ
ಕಳಿವು ಚಿತ್ತದ ಸೆಱೆ ದುಹಾರದೊ
ಳುಱದುವಕ್ಷಿಗಳಿಂತು ಸೋತೆನು ತಾತ ಕೇಳೆಂದ ॥ ೩೭

---

1 ಕಡೆಯ, ಡ.
2 ತಳವೆಂದರಸ, ಡ.
3 ಳು, ಕ, ಚ.
4 ಹೊಳೆವುದನೆ, ಡ.

ಪಾಂಡವರ ಮನೆಯಲ್ಲಿ ತನಗಾದ ಅಪಮಾನವನ್ನು ದುರ್ಯೋಧನನು ಹೇಳುವಿಕೆ.

ಮುಂದೆ ವಿಮಲಸ್ಫಟಿಕಭೂಮಿಯ
ನೊಂದು ಠಾವಿನಲೀಕ್ಷಿಸುತ ಕೊಳ
ನೆಂದು ಬಗೆದೆನು ನಿಂದು ಸಂವರಿಸಿದೆನು ಮುಂಜೆರಗ |
ಅಂದು ದ್ರೌಪದಿಸಹಿತ ನಾರೀ
ವೃಂದ ಕೈಗಳ ಹೊಯ್ದು ಮಿಗೆ ಘೋ
ಷೆಂದು ನಕ್ಕುದು ನೊಂದು ತಲೆವಾಗಿದೆನು ಲಜ್ಜೆಯಲಿ || ೩೮

ಊಹೆಯಲಿ ತಡವರಿಸಿ ಹೆಜ್ಜೆಯ
ಗಾಹುಗತಕದೊಳಡುತ ಕಾಂತಿಯ
ಸೋಹನಱಿಯದೆ ಬೀದಿಯಲಿ ಕಂಡೆನು ಸರೋವರವ |
ಆಹರಿಬವನು ಮುಱಿವೆನೆಂದದ
ನೂಹಿಸಿದೆನಾಸ್ಫಟಿಕವೆಂದು
ತ್ಸಾಹಿಸಲು ನೀರಾಯ್ತು ನನೆದೆನು ನಾಭಿದಘ್ನದಲಿ [1] || ೩೯

ಮತ್ತೆ ಘೋಷೆಂದರು ನೃಪಾಲನ
ಮತ್ತಕಾಶಿನಿಯರು ಯುಧಿಷ್ಠಿರ
ನಿತ್ತ ದಿವ್ಯದುಕೂಲವನು ತಡಿಗಡಱಿ ತೊಡಚಿದೆನು |
ಬತ್ತಿತೆನ್ನಭಿಮಾನಜಲನಿಧಿ
ಮತ್ತೆ ಮಾರಿಯ ಮಸಕವನು ನೀವ್
ಚಿತ್ತವಿಸಿರೇ ಬೊಪ್ಪ ಯೆಂದನು ಕೌರವರ ರಾಯ || ೪೦

ನಂಬಿ [2] ಸಿದುದೊಂದೆಡೆಯ ಬಾಗಿಲು
ಬಿಂಬಿಸಿತು ಭಿತ್ತಿಯಲಿ ತತ್ಪ್ರತಿ
ಬಿಂಬವೆಂದಾನಱಿಯೆನದ ಹಾಯ್ದೆನು ಚೌಕದಲಿ |
ಎಂಬೆನೇನನು ಹೊರಟೆ ನಗುವ ನಿ

---

[1] ಪರಿಯಂತ, ಡ.    [2] ಲಂಬಿ, ಖ. ಚ,

ತಂಬಿನಿಯರನು ಭೀಮಪಾರ್ಥರ
ಡಂಬರವ ಕಂಡಸುವ ಹಿಡಿದೆನು ನೋಡಿಕೊಳ್ಳೆಂದ ‖ ೪೧

ನೊಂದುದೀಹಣೆ ಮನದೊಳಗೆ ಮಿಗೆ
ನೊಂದೆನವದಿರ ನಗೆಗೆ ನಡೆದೆನು
ಮುಂದಣೋವರಿಬಾಗಿಲನು ಕಂಡೆನ್ನ ಚಿತ್ತದಲಿ ।
ಹಿಂದೆ ಹೆದಱಿದ [1] ಭಂಗವೇ ಸಾ
ಕೆಂದು ಸುಪಾರ್ಶ್ವದಿಯಲಿ ಬಾಗಿಲ
ನೊಂದು ಠಾವಿನೊಳಱಿಸಿ ತಡವರಿಸಿದೆನು ಭಿತ್ತಿಗಳ ‖ ೪೨

ನಗೆಗೆ ನಗೆ ಕುಂಟಣಿ ವಿವೇಕದ
ಹೊಗೆಗೆ ಹೊಗೆ ಸಖಿಯಾದುದಲ್ಲಿಯು
ಹಗರಣಿಗ ನಾನಾದೆನದು ನೋಟಕದ ಜನವಾಯ್ತು ।
ನಗುವವರ ಜರದನೆ ಯುಧಿಷ್ಠಿರ
ನಗೆಯು ಮಱಿದೆನೆ ಬೊಪ್ಪ ನಿಮ್ಮಯ
ಮಗನವಸ್ಥಾರೂಪವಿದು ಚಿತ್ತೈಸಿ ನೀವೆಂದ ‖ ೪೩

ಒಡ್ಡವಿಸಿತೆನ್ನಾಟ ನಗೆಯೊಳ
ಗಡ್ಡಬಿದ್ದಳು ಪಾಂಡುಪುತ್ರರ
ಬಡ್ಡಿ ಬಿಂಕದಲವರು ಬಿರಿದರು ಭೀಮಫಲುಗುಣರು ।
ಖಡ್ಡಿಗರುವೆನ್ನಿಂದ ರೋಷದ
ಗೊಡ್ಡು ತಾನಾದೆನು ವಿಘಾತಿಯು
ಬಡ್ಡಿ ನಿನ್ನದು ಬದುಕಿದೆನು ಧೃತರಾಷ್ಟ್ರ ಕೇಳೆಂದ ‖ ೪೪

ಇದರಿಂದ ಅವರಲ್ಲಿ ನನಗೆ ಕ್ರೋಧವೆಂದು ಹೇಳುವಿಕೆ.

ಸಿಂಗಿಯನು ಬಿತ್ತಿದೆನು ಪಾಂಡವ
ರಂಗದಲಿ ತತ್ಫಲದ ಬೆಳಸಿನ
ಸಿಂಗಿಯಲಿ ನಾ ಸಾವೆನಲ್ಲದೊಡಗ್ನಿ ಕುಂಡದಲಿ ‖

---

1 ಹೆದಱಿದ, ಕ ಖ

ಭಂಗಿಸುವೆನೀಕ್ಷಣದೊಳನ್ನನು
ನುಂಗಬೇಹುದು ವಹ್ನಿ ವೊಣೀ
ಗಂಗೆಯಲಿ ಬಿದ್ದೊಡಲ ನೀಗುವೆನೆಂದು ಬಿಸುಸುಯ್ದ ॥ ೪೫

ಆಯುಧಿಷ್ಠಿರಸಹಿತ ನೀನೇ
ರಾಯನಾಗಿರು ವೋಣು ನವಿಮ್ಮಾ
ತಾಯಿ ಸಂತಸಬಡಲಿ ದುಶ್ಶ್ಯಾಸನನ ಪಟ್ಟದಲಿ ।
ರಾಯತನವೆಮಗಿಂದ್ರಲೋಕದ
ಲಾಯುದಲಿ ದಿಟವೆಂದು ನುಡಿವರು
ಜೋಯಿಸರು ಸಾಕವರ ವಚನ ನಿರರ್ಥವೆಲ್ಲೆಂದ ॥ ೪೬

ಪುರದೊಳೆಂಬತ್ತೆಂಟುಸಾವಿರ
ಧರಣಿಯಮರರು ನಿತ್ಯಪಡಿಯುವ
ರರಸ ಕೇಳ್ಕೈ ಹತ್ತುಸಾವಿರಹೊನ್ನತಳಿಗೆಯಲಿ ।
ವರಯತೀಶರು ಹತ್ತುಸಾವಿರ
ವರಮನೆಯಲುಂಬುದು ನೃಪಾಲಾ
ಧ್ವರದ ಸಿರಿಯನು ನೀವೆ ಕಂಡಿರೆ ಯೆಂದನಾ ಭೂಪ ॥ ೪೭

ದುರ್ಯೋಧನನ ದುರ್ಬುದ್ಧಿಗಾಗಿ ತಂದೆಯ ಚಿಂತೆ.

ಕೇಳಿದನು ಬಿಸುಸುಯ್ದನಕಟ ವಿ
ಟಾಳಿಸಿತೆ ಕೌರವನ ಬುದ್ಧಿ ವಿ
ಟಾಳಸಂಗತಿಯಾಯ್ತಲಾ ಪಿಸುಣಾರ ಕೆರಳಿಚದು [1] ।
ಕೇಳು ಮಗನೇ ಧರ್ಮಪುತ್ರನ
ಮೇಲೆ ಮುನಿವರೆ ರಾಜಋಷಿ ನರ
ಪಾಲಮಾತ್ರನೆ ಶಿವ ಮಹಾದೇವೆಂದನಾಭೂಪ ॥ ೪೮

ಸತಿಯರಲಿ [2] ನಿಮ್ಮವ್ವೆ ಸುಪತಿ
ವ್ರತೆ ಮಹಾಖಳ ನೀನು ಬೀಜ

[1] ಕೊಂಡೆಯರ ಮೇಳದಲಿ ಡ.　　[2] ಸತಿಯಲಾ, ಡ.

ಸ್ಥಿತಿಯಲೂಣೆಯವಿಲ್ಲ ನಿನ್ನಯ ಬುದ್ಧಿದೋಷವಿದು ।
ಕೃತಕವೋ ಸಹಜವೊ ನವೀನ
ಸ್ಥಿತಿಯ ಕಂಡೆನು ಶಿವ ಶಿವಾ ದು
ರ್ಮತಿಗಳೇನನು ನೆನೆಯರೆಂದನು ಸುಯ್ದು ಧೃತರಾಷ್ಟ್ರ ॥ ೪೯

ಇದು ಅಯುಕ್ತವೆಂದು ಮಗನಿಗೆ ತಂದೆಯ ಉಪದೇಶ.

ಪಾಂಡುವಿನ ಮಕ್ಕಳುಗಳಾರಾ
ಪಾಂಡುವಿನೊಳೆನ್ನಲ್ಲಿ ಭೇದವ
ಕಂಡೆಲಾ ನೀನವರಿಗೇನಪ್ರಾಪ್ತವೇ ಧರಣಿ ।
ಉಂಡು ಬದುಕುವ ಬಹಳ ಭಾಗ್ಯರ
ಕಂಡಸೂಯವ ಬಡುವ ಖಲರನು
ಭಂಡರೆನ್ನದೆ ಲೋಕ ನಿನಗಿದು ಸಾವ್ಯವಲ್ಲೆಂದ ॥ ೫೦

ಧೃತರಾಷ್ಟ್ರನನ್ನು ಕುರಿತು ದುರ್ಯೋಧನನ ನಿಷ್ಠುರವಾಕ್ಯಗಳು.

ಅಹುದು ಬೊಪ್ಪ ವೃಥಾಭಿಮಾನದ
ಕುಹಕಿ ಹೋಗಲಿ ನಿಮ್ಮ ಚಿತ್ತಕೆ
ಬಹ ಕುಮಾರರ ಕೂಡಿ ನಡೆವುದು ಪಾಂಡುನಂದನರ ।
ಮಹಿಯ ಹಂಗಿಂಗೋಸುಗವೆ ಬಿ
ನ್ನಹವ ಮಾಡಿದೆ ತನಗೆ ಭಂಡಿನ
ರಹಣಿ ಬಂದುದು ಸಾಕಲೇ ಸೊಗಸಾಯ್ತು ಲೇಸೆಂದ ॥ ೫೧

ತಾಯೆ ನೇಮವ ಗೊಂಡೆನಯ್ಯಾ
ಗಾಯುಧಿಷ್ಠಿರನಾತ್ಮಜನಲೇ
ವಾಯುಸುತನರನಕುಲಸಹದೇವರು ಕುಮಾರರಲೆ ।
ಈ ಯುಗದಲಿನ್ನವರ ಸಂತತಿ
ದಾಯಭಾಗಿಗಳಾಗಿ ಬದುಕಲಿ
ರಾಯರಿಲ್ಲಾ ಮತ್ತೆ ನಮ್ಮನು ರಕ್ಷಿಸುವರೆಂದ ॥ ೫೨

ಅರಸ ಧರ್ಮಜ್ಞನು ಯುಧಿಷ್ಠಿರ
ಹಿರಿಯಮಗನುತ್ತಮನು ಪವನಜ
ನರರು ವಿನಯಾನ್ವಿತರು ನೀವೇ ಪುತ್ರವತ್ಸಲರು ।
ಧರಿಣಿಗಿನ್ನಾವೈಸಲೇ ನೂ
ರ್ವರು ಕುಮಾರರು ಹೊಱಗೆ ನಿಮ್ಮಯ
ಕರುಣವೇ ಸಾಮ್ರಾಜ್ಯವೆಮ್ಮನು ಬೀೞುಕೊಡಿ ಯೆಂದ ॥ ೫೩

ಆಯುಚಲವಭಿಮಾನ ಹೋಗಲಿ
ಸಾಯು [1] ಬೇಕೆಂಬರೆ ನೃಪಾಲರ
ಬಾಯ ತಂಬುಲ ತಿಂದು [2] ಹೊಱುವೆವು ಬೆಂದ ಬಸುಱುಗಳ ।
ಆಯುಚಲವಾಚಂದ್ರತಾರಕ
ಕಾಯುವಧ್ರುವವೆಂಬೊಡಿದಕೆ ಸ
ಹಾಯವಿದಲಾ ಕಾಳಕೂಟಕತೋರನದಿಯೆಂದ ॥ ೫೪

ಅರಸನಭ್ಯುದಯವನು ಭೀಮನ
ಧರಧುರವನರ್ಜುನನ ಬಿಂಕವ
ನರಸಿಯಾಟೋಪವನು ಮಾದ್ರೀಸುತರ ಸಂಭ್ರಮವ ।
ಹೊರೆಯ ಧೃಷ್ಟದ್ಯುಮ್ನ ದ್ರುಪದಾ
ದ್ಯರ ವಿಡಂಬವ ಕಂಡು ಕಂಡೆದೆ
ಬಿರಿದುದಳುಕಿದೆವಾವು ನೀವ್ [3] ಸಂತೈಸಲರಿದೆಂದ ॥ ೫೫

ಧೃತರಾಷ್ಟ್ರನು ಅದನ್ನು ಕೇಳಿ ಸುಮ್ಮನೆ ಯಿರುವಿಕೆ.

ಕಱಗಿದಳು ಗಾಂಧಾರಿ ಕಂಬನಿ
ದುಱುಗಲಲಿ ಧೃತರಾಷ್ಟ್ರನದೆ ಜ
ರ್ಝರಿತವಾದುದು ಮಗನ ಮಾತಿನ ಮುಸಲಹತಿಗಳಲಿ ।
ಸುಚಿವ ನಯನಾಂಬುಗಳ ಮೂಗಿನ
ಬೆರಳ ತೂಗುವ ಮಕುಟದವನೀ
ಶ್ವರನು ಮೌನದೊಳಿರ್ದನೊಂದುವಿಘಳಿಗೆಮಾತ್ರದಲಿ ॥ ೫೬

---

[1] ಕಾಯು, ಚ. [2] ದಿಂದ, ಚ. ಟ. [3] ಬಿರಿದುದಳುಕಿದೆನಳುಕಿದೆನು, ಚ.

ಆಗ ದುರ್ಯೋಧನನು ಕೋಪದಿಂದ ಹೊರಟು ಹೋಗುವಿಕೆ.

ಮಾತು ಸೊಗಸದಲಾ ವೃಥಾ ನೀ
ವೇತಕೆನ್ನನು ಕರೆಸಿದಿರಿ ನಿ
ಮ್ಮಾತಗಳು ಭೀಮಾರ್ಜುನರು ಸಹಿತೀಮಹೀತಳವ ।
ತಾತ ನೀವಾಳುವುದು ತಾಯಿ ಸು
ನೀತನಾಧರ್ಮಜನು ಧರ್ಮ ವಿ
ಘಾತಕರು ನಾವೆಮ್ಮ ಕಳುಹುವುದೆನುತ ಹೊಱವಂಟ ॥ ೫೭

ಧೃತರಾಷ್ಟ್ರನು ಮಗನನ್ನು ಕರೆಸುವಿಕೆ.

ಎಲೆಗೆ ಕರೆಯಾ ಪಾಪಿಕೌರವ
ಕುಲಕುಠಾರನ ನಿನ್ನ ಮಗನೊಡ
ಲೞಿವುದೈ ಸಲೆ ಪಾಂಡುಪುತ್ರರ ವೈರಬಂಧದಲಿ ।
ತಿಳುಹಿ ತಾ ಯೆನಲಾಕೆ ಶಕುನಿಯು
ಕಳುಹಿ ಕರಸಿದೊಡಾತ ಮರಳಿದ
ನಳಲುದೊಱೆಯಲಿ ಮೂಡಿ ಮುೞುಗಿದನಂದು ಧೃತರಾಷ್ಟ್ರ ॥ ೫೮

ಅಸಾಧ್ಯರಾದ ಪಾಂಡವರನ್ನು ಯಾವರೀತಿಯಿಂದ ಜಯಿಸು
ವುದು ಯೆಂದು ಧೃತರಾಷ್ಟ್ರನ ಪ್ರಶ್ನೆ.

ಏನ ನೆನೆದೈ ಮಗನೆ ಕುಂತೀ
ಸೂನುಗಳ ರಾಜ್ಯಾಪಹಾರದೊ
ಳೇನು ಬುದ್ಧಿವಿಲಾಸವಾವುದು ಕಾರ್ಯಗತಿ ನಿನಗೆ ।
ದಾನದಲಿ ಮೇಣ್ಸಾಮದಲಿ ಭೇ
ದಾನುಮತದಲಿ ದಂಡದಲಿ ನೀ
ನೇನ ನಿಶ್ಚೈಸಿರುವೆ ಹೇೞೆನ್ನಂಜಬೇಡೆಂದ ॥ ೫೯

ಹಿಂದೆ ವಿಷವಿಕ್ಕಿದೆವು ಮಡುವಿನೊ
ಳಂದು ಬಿಸುಟರೆ ಮುೞುಗಿ ಸುಖದಲಿ
ಮುಂದು ಹೊಱವಂಟರು ಮಹಾಗ್ನಿಯ ಭವನಭಂಗದಲಿ ।

ಒಂದು ಕೂಡಲು ಸೀಯದನಿಬರು
ಬಂದರಿವು ಮೊದಲಾದಕೃತ್ರಿಮ
ದಿಂದ ಪಾಂಡವರಟ್ಟಿದುದಿಲ್ಲದಕೇನು ಹದನೆಂದ ‖ ೬೦

ಭೇದಿಸುವೊಡಿನ್ನಾವುಪಾಯವು
ಕಾದಿ ಗೆಲಲೆಮಗರಿದು ಮಿಾಱಿದ
ರಾದುರುಳಪಾಂಡವರು ಸೈರಿಸೆ ನೀನವರ ಸಿರಿಯು ।
ಸಾಧಿಸುವುದಿನ್ನಾವೆಪರಿಯಲಿ
ಹೋದ ಹಗೆ ಮಿಗೆ ಬಲಿವುದೆಂದು ವಿ
ಷಾದದಲಿ ಮನ ನೊಂದು ಮತವೇನೆಂದನವನೀಶ ‖ ೬೧

ದ್ಯೂತದಲ್ಲಿ ಜಯಿಸಬಹುದೆಂದು ಶಕುನಿಯ ಉತ್ತರ.

ನೀವು ಚಿತ್ತೈಸಿದರೆ ನೆತ್ತದೊ
ಳಾವು ಸೋಲಿಸಿ ಕೊಡುವೆವವರನು
ನೀವು ಕರೆಸುವುದಿಲ್ಲಿಗುಚಿತಪ್ರೀತಿವಚನದಲಿ ।
ನಾವು ಜಾಣರು ಜೀಯ ನೆತ್ತದ
ಜೀವಕಲೆಯಲಿ ಧರ್ಮಸುತನಿದ
ನಾವ ಹವಣೆಂದಱಿಯನಾತನ ಜಯಿಸಬಹುದೆಂದ ‖ ೬೨

ಅದನ್ನು ಒಪ್ಪಿ ವಿದುರನಿಗೆ ಹೇಳಿ ಮಾಡುವೆನೆಂದು
ತಂದೆಯು ಹೇಳುವಿಕೆ.

ಅಹುದು ತಪ್ಪೇನಿದುವೆ ಸಾಧನ
ವಹುದು ವಿದುರನ ಬುದ್ಧಿಗಭಿಮತ
ವಹೊಡೆ ಕರೆಸುವೆವೈ ಸಲೇ ಬೆಸಸುವೆನು ವಿದುರಂಗೆ ।
ಕುಹಕವಾತನೊಳಿಲ್ಲ ನೋಡುವೊ
ಡಿಹಪರತ್ರದ ಹಿತವನಿದನಿ
ರ್ವಹಿಸಿ ಕೊಡುವೊಡೆ ಮಂತ್ರವೆಂದನು ಮಗಗೆ ಧೃತರಾಷ್ಟ್ರ ‖ ೬೩

ಈಕಾರ್ಯಕ್ಕೆ ವಿದುರನು ಬೇಡವೆಂದು ಮಗನು ಹೇಳಿದುದು.

ಖೂಳರಲಿ ಸತ್ಕಲೆಗಳನು ಕಿವಿ
ಗೇಳದವನಲಿ ಮಂತ್ರಬೀಜವ
ನಾಲಿಯಿಲ್ಲದವಂಗೆ ರೂಪುವಿಲಾಸವಿಭ್ರಮವ ।
ಹೇಱುವಂತಿರೆ ನಿಮ್ಮ ವಿದುರನ
ಕೇಳಿಸಿದರಾಕಾರ್ಯಗತಿಗೆ ವಿ
ಶಾಳವಾಗದೆ ಬೊಪ್ಪ ಯೆಂದನು ನಗುತ ಕುರುರಾಯ ॥ ೬೪

ಅಱುಹಿದರೆ ವಿದುರಂಗೆ ಕಾರ್ಯವ
ಮುಱಿವನಾತನು ಬೞಿಕ ನಿಮ್ಮಯ
ಕಿಱಿಯತಮ್ಮನ ಮಕ್ಕಳಿಗೆ ಕೂಡಿ ಹಸ್ತಿನಾಪುರವ ।
ಕಱುಬುಗಳು ನಾವ್ ನೂಱುಮಕ್ಕಳು
ಹೊಱಗೆ ಬದುಕುವೆವೈಸಲೇ ಬೞಿ
ಕುಱುವಮಕ್ಕಳ ಕೂಡಿ ಸುಖದಲಿ ರಾಜ್ಯವಾಳೆಂದ ॥ ೬೫

ವಿದುರನನ್ನು ಬಿಟ್ಟರೆ ನಿನ್ನಭಿಮತ ಸಿದ್ಧಿಸುವುದಿಲ್ಲವೆಂದು
ತಂದೆಯು ಹೇಳಿಕೆ.

ಪಾರಲೌಕಿಕದುಃಖವೈಹಿಕ
ದೋರೆಪೋರೆಯನಿಂದು ಬಲ್ಲವ
ರಾರು ಹೇಱಾ ವಿದುರನಲ್ಲದೆ ನಮ್ಮ ಪೈಕದಲಿ ।
ಸಾರವಾತನ ಮಾತು ನಯವಿ
ಸ್ತಾರಸಹಿತಿಹುದಲ್ಲಿ ನಂಬುಗೆ
ದೂರವಲ್ಲೆನಗಱಿಯೆ ನೀನಿಲ್ಲೆಂದನಂಧನೃಪ ॥ ೬೬

ತಿಳುಹಿ ವಿದುರನನವರ ಕರೆಯಲು
ಕಳುಹುವೆನು ಯಮಸೂನು ನಮ್ಮಯ
ಬಲುಹಿನಲಿ ತಾ ಬಪನೆ ಭೀಮಾರ್ಜುನರ ನೀನಱಿಯ [1] ।

---

[1] ಭೀಮಾರ್ಜುನರು ಕಿಱುಕುಳರೇ, ಚ.

ತಿಳಿವರವರೀತನ ನುಡಿಯ ನಿ
ರ್ಮಲಿನವೆಂದು ನಿಧಾನವಿದು ನೀ
ಕಳವಳಿಸದಿದ್ದರೆ ಮನೋರಥವಹುವು ನಿನಗೆಂದ ‖ ೬೩

ಹೇಗಾದರೂ ಕರೆಸಿ ಕೊಟ್ಟರೆ ಸಾಕೆಂದು ಮಗನ ಹೇಳಿಕೆ.

ಸಾಕು ಕರುಣದೊಳೆಮ್ಮ ಸಲಹುವೊ
ಡಾಕುಮಾರರ ಕರೆಸಿ ಕೊಟ್ಟರೆ
ಸಾಕು ಮತ್ತೊಂದಿಹುದಲೇ ಪಾಂಚಾಲನಂದನೆಯ ।
ನೂಕಿ ಮುಂದಲೆವಿಡಿದು ತೊತ್ತಿರೊ
ಳಾಕೆಯನು ಕುಳ್ಳಿರಿಸಿದಂದು ವಿ
ಶೋಕನಹೆನಾದಿವಸದಲಿ ಕೃತಕೃತ್ಯ ತಾನೆಂದ ‖ ೬೪

ಆಗ ಗಾಂಧಾರಿಧೃತರಾಷ್ಟ್ರರ ಯೋಚನೆ.

* ಹೋಗು ನೀನೆಂದವನ ಕಳುಹಿ ತ
ದಾಗಮನೆಯುತ್ಕೈಕಚಿಂತಾ
ಸಾಗರದೊಳೂರಂತೆ ಮುಳುಗಿದನಂದು ಧೃತರಾಷ್ಟ್ರ ।
ಈಗಳಿನ ಸುಖಕಳುಪಿ ಮೇಗಣ
ತಾಗನರಿಯನು ಕಂದನಿದಕಿ
ನ್ನೇಗುವೆನು ಗಾಂಧಾರಿ ಹೇಳಿದಕೆಂದು ಬಿಸುಸುಯ್ದ * ‖ ೬೫

ಅವರು ಕಪಟವನರಿಯರೀತನ
ಹವಣ ನೀನೇ ಕಂಡೆ ಕರೆಸಿದೊ
ಡವರು ನಿಲ್ಲರು ತೋಹೆಯಲಿ ಬಚಿಸಂದಮೃಗದಂತೆ ।

---

* ಆಗಲದಕೇನಾಯ್ತು ವಿದುರನ
ನೀಗ ಕಳುಹುವೆ ಪಾಂಡುಪುತ್ರರ
ವೇಗದಲಿ ಕರೆಸುವೆನು ನಿನ್ನಭಿಮತವ ಸಲಿಸುವೆನು ।
ಹೋಗಿ ನೀವೆಂದವರ ಕಳುಹಿದೊ
ಡಾಗ ಮನೆಗೈತಂದು ಚಿಂತಾ
ಸಾಗರದೊಳದ್ದಂತೆ ಮುಳುಗಿದನಂದು ಧೃತರಾಷ್ಟ್ರ ‖ ಖ.

ಎಮಗೆ ಬಹುದಪಕೀರ್ತಿಯಿನಾಗಿ
ನ್ನವರ ಕುಹಕವ ಲೋಕವರಿಯದು
ಶಿವ ಶಿವಾ ಯೆಂದಱಲಿ ಮಱುಗಿದನಂದು ಧೃತರಾಷ್ಟ್ರ || ೩೦

ಮುಱಿವೆನೇ ಮುನಿದಿವರು ನೂರ್ವರು
ಕೊಱವೆರೆನ್ನನು ತೊಡಕಿಸುವೆನೇ
ತಱಿದು ಬಿಸುಡುವರವರು ಕೌರವಶತವನಲುಕಿದೊಡೆ [1] |
ಹೊಱಗೊಳಗೆ ಹದನಿದು ನಿಧಾನಿಸ
ಲಱಿಯೆನೆನ್ನ ಸುವಿನಲಿ ಹೃದಯದ
ಸೆಱೆ ಬಿಡದು ಶಿವ ಯೆನುತ ಕಱಗಿದನಂದು ಧೃತರಾಷ್ಟ್ರ || ೩೧

ಕೌರವರನ್ನಾದರೂ ಹಿಡಿ ಪಾಂಡವರನ್ನಾದರೂ ಹಿಡಿ ಎಂದು
ಗಾಂಧಾರಿಯು ಹೇಳಿಕೆ.

ಏಕೆ ನಿಮಗೀಚಿಂತೆ ಯಿಂದೆರ
ಡೌಕಿದುವು ದುಷ್ಕಾರ್ಯಸಂಧಿ ವಿ
ವೇಕಶಕ್ತಿಯಲೊಂದ ಮೋಹರಿಸೊಂದು ಬಾಹೆಯಲಿ |
ಈಕುರುವ್ರಜನೂಱ ಹಿಡಿ ಕುಂ
ತೀಕುಮಾರರ ಬಿಸುಡು ತನುಜರ
ನೂಕಿ ಹಿಡಿ ಪಾಂಡವರನೆಂದಳು ಪತಿಗೆ ಗಾಂಧಾರಿ || ೩೨

ಆಗ ಸಭಾನಿರ್ಮಾಣೋದ್ಯೋಗ.

ಐಸಲೇ ತಾನಾದುದಾಗಲಿ
ಲೇಸ ಕಾಣೆನು ನಿನ್ನ ಮಕ್ಕಳ
ವಾಸಿಗಳ ವಿಸ್ತಾರ ಮೊಱೆಯಲಿ ಹಲವು ಮಾತೇನು |
ಆಸಭೆಯ ಸರಿಸದ ಸಭಾವಿ
ನ್ಯಾಸಶಿಲ್ಪಿಗರಾರೆನುತ ಧರ
ಣೀಶ ಕರೆಸಿದನುರುಸಭಾನಿರ್ಮಾಣಕೋವಿದರ || ೩೩

---

1 ಶತಕವನು ಬಱಿಕ್ಕ, ಚ.

ತೆಗಿಸಿ ಭಂಡಾರದಲಿ ಬಹುವ
ಸ್ತುಗಳನಿತ್ತನು ತರುಶಿಲಾಕೋ
ಟಿಗಳ ತರಿಸಿದನುರುಸಹಸ್ರಸ್ತಂಭಡಂಬರವ |
ಝುಗಝುಗಿಪ ಬಹುವಮೌಲ್ಯಮುಕ್ತಾ
ಳಿಗಳನುರುತರರತ್ನಲಹರೀ
ಸ್ಥಗಿತದಿಗ್ಭಿತ್ತಿಗಳನನುಪಮರತ್ನರಾಜಿಗಳ ‖　　೭೪

ಮಾಡಿತಗ್ಗದ ಸಭೆ ಸುಧರ್ಮೆಯ
ನೇಡಿಸುವ ಚೆಲುವಿನಲಿ ಪುರದಲಿ
ರೂಢಿಸಿತು ಬಳಿಕಂಧನೃಪನೇಕಾಂತಭವನದಲಿ |

ವಿದುರನಿಗೆ ದ್ಯೂತಸಂಗತಿಯನ್ನು ಹೇಳುವಿಕೆ.

ಕೂಡಿಕೊಂಡು ಕುಲೋಪಘಾತದ
ಕೇಡುಗರ ಕಲ್ಪನೆಯ ಕಲುಷದ
ಜೋಡಿಯುನ ನಿಶ್ಚೈಸಿ ವಿದುರಂಗುಸುರಿದನು ಕರೆಸಿ ‖　　೭೫

ವಿದುರ ಹೇಳ್ವೈ [1] ಪಾಂಡವರ ಸಂ
ಪದಕೆ ಸರಿಯೋ ಮಿಗಿಲೊ ಸಭೆ ತಾ
ನಿದು ವಿಶೇಷವಲಾ ಸಮಸ್ತಕ್ಷತ್ರವಿಭವದಲಿ |
ಇದಱೊಳೋಲಗವಿತ್ತು ಹರುಷಾ
ಸ್ಪದರು ಕುರುನೃಪರಲಿ ಸುಖದ್ಯೂ
ತದಲಿ ರಮಿಸಲಿ ಸೇರಿ ಬದುಕಲಿ ಪಾಂಡುಸುತರೆಂದ ‖　　೭೬

ಅವರ ವಿಭವವನವರ ಯಾಗೋ
ತ್ಸವವನಿಂದ್ರಪ್ರಸ್ಥದಲಿ ಕಂ
ಡೆವು ಮನೋರಥಸಾಯ್ತು ಬಳವಿಗೆ ಪಾಂಡುಸಂತತಿಯ [2] |
ಅವರು ಹಸ್ತಿನಪುರಿಗೆ ಬಂದು

---

[1] ಕೇಳ್ವೈ, ಚ.　　[2] ನಂದನರ, ಚ.

ತ್ಸವದೊಳೀಸಭೆಯಲಿ ಸುಖದ್ಯೂ
ತವನು ಸುಖಿಸಲಿ ಕರೆದು ತಾ ಕುಂತೀಕುಮಾರಕರ [1] ॥ ೭೮

ವಿದುರನು ಅದನ್ನು ಕೇಳಿ ಯುಕ್ತವಲ್ಲವೆಂದು ಹೇಳುವಿಕೆ.

ಮಾತು ಹೊಲಸಿನ ಗಂಧವಾಗಿದೆ
ಭೀತಿರಸದಲಿ ಮನ ಮುಳುಗಿತೀ
ಪ್ರೀತಿ ಮಾರಿಯು ಮುಸುಕನುಗಿವುದನಾರು ಕಲಿಸಿದರು ।
ಕೈತವದ ಕಣಿ ನಿನ್ನ ಮಗನಿಗೆ
ಸೋತೆಲಾ ಶಿವ ಶಿವ ಸುಖಾಂಗ
ದ್ಯೂತವೇ ಹಾ ಹಾ ಯೆನುತ ತಲೆದೂಗಿದನು ವಿದುರ ॥ ೭೮

ಹಾ ಮರುಳೆ ಕೆಣಕುವರೆ ಫಲುಗುಣ
ಭೀಮರನು ಮಿಗೆ ಹೆಚ್ಚಿ ಬಳೆದು
ದ್ದಾಮಸಿರಿಯಿದು ಹಸ್ತಿನಾಪುರವಕಟ ಕೆಡಿಸಿದೆಲ ।
ಕ್ಷೇಮಗುಣದೇ ವಿಭವವಿದು ನಿ
ರ್ನಾಮರಾರೋ ಬಿತ್ತಿದರು ಕುರು
ಭೂಮಿಯಲಿ ವಿಷಬೀಜವನು ಹಾ ಯೆನುತ ಚಿಂತಿಸಿದ ॥ ೭೯

ವಿದುರನಿಗೆ ಧೃತರಾಷ್ಟ್ರನ ಸಮಾಧಾನೋಕ್ತಿ.

* ವಿದುರ ಬೆಂಬೀಳದಿರು ಭೀಮಾ
ರ್ಜುನರ ಬಿಂಕದ ಹದನ ಬಲ್ಲೆನು
ಮೊದಲಿ ತಾನೇ ಮುನಿಯಲಾಪೆನೆ ಹೇಳು ತನಯರಿಗೆ * ।
ಇದು ಮಹಾಸಭೆಯಿಲ್ಲಿ ಮೇಳಾ
ಪದಲಿ ಕುರುಪಾಂಡವರು ಸುದ್ಯೂ
ತದಲಿ ರಮಿಸುವೊಡೇನು ಹೊಲ್ಲಹವೆಂದನಂಧನೃಪ ॥ ೮೦

---

1 ರಮಿಸಲಿ ಸೇರಿ ಖದುಕಲಿ ಪಾಂಡುಸುತರೆಂದ, ಚ.

* ವಿದುರ ಬೆಂಬೀಳದಿರು ಬಿಂಕದ
ಹದನ ಬಲ್ಲೆನು ಭೀಮಪಾರ್ಥರ
ಮೊದಲ ಖಯಸುವೆ ಮುನಿಯಲಾಪೆನೆ ಹೇಳು ತನಯರಿಗೆ, ಚ

ದ್ಯೂತವು ಕುಲನಾಶಕರವೆಂದು ವಿದುರನ ವಚನ.

ಮೊದಲಲಿದು ಸುದ್ಯೂತವವಸಾ
ನದಲಿ ವಿಷಮದ್ಯೂತದಲಿ ನಿಲು
ವುದು ನಿವಾರಣವುಂಟೆ ಮರ್ಮವನಿಱಿದ ಸಬಳದಲಿ ।
ತುದಿಗೆ ತಾಸಿದಪಥ್ಯ ಕುರುವ
ರ್ಗದಲಿ ನಾಶನಬೀಜವಿದು ನಿಮ
ಗಿದಱೊಳಗೆ ಸೊಗಸಾದುದೇ ಕೈಕೊಂಡೆ ನಾನೆಂದ ॥ ೮೧

ಆಗ ಪಾಂಡವರನ್ನು ಕರೆತರಲು ವಿದುರನನ್ನು
ಕಳುಹಿಸುವಿಕೆ.

ಕರೆದು ತಾನೀನವರ ನಾವ್ರುಪ
ಚರಿಸುವೆಂದವ ನೋಡು ನಿನ್ನಯ
ಕರಣವೃತ್ತಿಗೆ ಕಠಿನವಹುವೇ ನಮ್ಮ ಮಾತುಗಳು ।
ದುರುಳರವರಿವರೆಂಬರನಾದ
ದರಿಸದಿರು ನೀ ಹೋಗು ಪಾಂಡವ
ಧರಣಿಪರನೊಡಗೊಂಡು ಬಾ ಯೆಂದಟ್ಟಿದನು ನೃಪತಿ ॥ ೮೨

ಅಱುಹಿದನು ಭೀಷ್ಮಂಗೆ ಗುರುಕೃಪ
ರಱಿದರಿಂನಪಮೃತ್ಯುವೇನೆಂ
ದಱಿಯದಿನ್ನುತ್ಸಾಹಶಕ್ತಿಗೆ ಮನವ ಮಾಡಿತಲ ।
ಹರಿದುದೇ ಕುರುವಂಶಲತೆ ಹೊ
ಕ್ಕಱಿದನೇ ಧೃತರಾಷ್ಟ್ರನೀ ಬೇ
ಸಱದಿರವರನು ಕರೆದು ತಾ ಹೋಗೆಂದರವರಂದು । ೮೩

ವಿದುರನು ಪಾಂಡವರ ಬಳಿಗೆ ಬರುವಿಕೆ

ಶುಭಮುಹೂರ್ತವಿಶೇಷಲಗ್ನದೊ
ಳಿಭಪುರಿಯ ಹೊಱವಂಟು ಶರಸ
ನ್ನಿಭನು ಬಂದನು ಹಲವುಪಯಣದಲಿವರ ಪಟ್ಟಣಕೆ ॥

ಆಗ ವಿದುರನನ್ನು ಮಾನಿಸಿ ಸರ್ವರ ಕ್ಷೇಮವನ್ನು ಕೇಳಿದುದು.

ರಭಸ ಮಿಗಲಿದಿರ್ಗೊಂಡು ತಂದರು
ಸಭೆಗೆ ಮಾನ್ಯಯಥೋಪಚಾರ
ಪ್ರಭವಸತ್ಕಾರದಲಿ ಕೇಳ್ದರು ಕುಶಲಸಂಗತಿಯ ॥ ೮೪

ಧರಣಿಪತಿ ಗಾಂಗೇಯ ಗೌತಮ
ಗುರುತನುಜಗುರುಕರ್ಣಸೌಬಲ
ಕುರುನೃಪತಿಯನುಜಾತ್ಮಜರು ಗಾಂಧಾರಿ ಭಾನುಮತಿ ।
ಮೆರೆಸಚಿವಸಾಮಂತಪುರಜನ
ಪರಿಜನಂಗಳ ಕುಶಲವನು ವಿ
ಸ್ತರಿಸಿದನು ವಿದುರನು ಮಹೀಪತಿಗಾಪ್ತಬಾಂಧವರ ॥ ೮೫

ಪಾವುಡಂಗಳನಿತ್ತು ಭೂಪನ
ನೋಡಿದನು ನಾನಾಕಥಾಸಂ
ಭಾವನಾನಂತರದೆ ಮಜ್ಜನಭೋಜನಾದಿಗಳ ।
ಆವಿವಿಧಸತ್ಕಾರದಲಿ ದಿವ
ಸಾವಸಾನವ ಕಳೆದು ಬಳಿಕ ಸ
ಭಾವಳಯದಲಿ ಪಾಂಡುಸುತರಿಗೆ ನುಡಿದನಾವಿದುರ ॥ ೮೬

ಪಾಂಡವರನ್ನು ಕುರಿತು ನೀವು ಬರಲು ಧೃತರಾಷ್ಟ್ರನ
ಅಪ್ಪಣೆಯಾಗಿದೆ ಯೆಂದು ಹೇಳುವಿಕೆ.

ಧರಣಿಪತಿ ಬೆಸಸಿದನು ನೀವೈ
ವರು ಕುಮಾರರು ರಾಜಸೂಯಾ
ಧ್ವರಮಹಾವ್ರತದೇಕಭುಕ್ತಾದಿಯಲಿ ಬಳಲಿದಿರಿ ।
ವರಸಭೆಯ ರಚಿಸಿದಿರಿ ಹಸ್ತಿನ
ಪುರಕೆ ಬಿಜಯಂಗೈದು ವಿಭವೋ
ತ್ಕರದ ವಿಮಳದ್ಯೂತದಲಿ ರಮಿಸುವುದು ನೀವೆಂದ ॥ ೮೭

ನೋಡುವುದು ಬಾಂಧವರ ನಿಮ್ಮಡಿ
ಮಾಡುವುದು ಸೌಖ್ಯವನು ಭಯದಲಿ
ಬಾಡುವುದಲೇ ರಿಪುನೃಪಾಲರ ಸಮರಜಯಬೀಜ |
ಜೋಡಿಸುವುದುಚಿತದಲಿ ಕೀರ್ತಿಯ
ರ್ಖೂಡಿಯನು ನಿಮ್ಮಭ್ಯುದಯ ಬಳಿ
ಕೇಡಿಸುವುದೈ ದುಂದುಮಾರದಿಲೀಪದಶರಥರ || ೮೮

ನಂಬಿಸುವ ನಿಮ್ಮಯ್ಯನಿದ ಬೇ
ಡೆಂಬುವರು ಗುರುಭೀಷ್ಮರುಚಿತದವ
ರಂಬಿನೋಪಾದಿಯಲಿ ನಿಲುವರು ಹಲವು ಮಾತೇನು |
ಡಂಬಕರು[1] ನೃಪಕರ್ಣಶಕುನಿಗ
ಳೆಂಬಿವರು ನಿಮ್ಮೊಡನೆ ವಚನಾ
ಡಂಬರವೆ ಬಹುದುಂಟೆ ಬಿಜಯಂಗೈಯ್ಯಿ ಸೀಪೆಂದ || ೮೯

ಆಗ ಬರುವುವೆಂದು ಧರ್ಮಸುತನ ಉತ್ತರ.

ಕರೆಸುವೆನು ಧೃತರಾಷ್ಟ್ರ ಗಡ ನ
ಮ್ಮರಸನಲಿ ಧೃತರಾಷ್ಟ್ರನಲಿ ನಮ
ಗೆರಡು ಮನವೇ ಭಾವಭೇದವೆ ಪಾಂಡುಬೊಪ್ಪನಲಿ |
ವರವೆ ದೊರಕಲಿ ಮೇಣು ಶಾಪವೆ
ಬರಲಿ ಭಯವಿಲ್ಲೆಮಗೆ ಬೊಪ್ಪನ
ಕರಣಕೃತಿಗೆ ಹಸಾದವೆಂದನು ಧರ್ಮಸುತ ನಗುತ || ೯೦

ದ್ಯೂತದ ವಿಷಯವನ್ನು ಹೇಳಿ ಆಲೋಚನೆಯಿಂದ ಕಾರ್ಯದಲ್ಲಿ
ಪ್ರವರ್ತಿಸು ಎಂದು ವಿದುರನ ವಾಕ್ಯ.

ದ್ಯೂತ ಮೃಗಯಾವ್ಯಸನ ಪಾರು
ಷ್ಯಾತಿಶಯ ಮಧುಪಾನ ಕಾಂತಾ
ಪ್ರೀತಿ ದಂಡವಿಘಾತಿ ದೂಷಣವರ್ಥಸಂಗತಿಯು |

---
1 ಡಂಭವರು, ಚ.

ಜಾತಸಪ್ತವ್ಯಸನವಿವು ಸಂ
ಪ್ರೀತಿಕರ ಮೊದಲಲಿ ವಿಪಾಕದೊ
ಳಾತು ಕೆಡಿಸುವ ಹದನನರಿದಿಹುದೆಂದನಾವಿದುರ ॥ ೯೮

ಖಳರು ಕೌರವರಕ್ಷಧೂರ್ತರ
ತಿಲಕ ಶಕುನಿ ವಿಕಾರಿ ಗುರು ದು
ಶ್ಶಳೆಯ ಪತಿ ದೌರ್ಜನ್ಯಮುಖದೀಕ್ಷಿತನು ಕಲಿ ಕರ್ಣ ।
ಉಚಿತ ಭೀಷ್ಮದ್ರೋಣರೇ ನಿ
ಷ್ಫಲವಿಧಾನರು ನಿಮ್ಮ ಬೊಪ್ಪನ
ಬಳಕೆ ಕನ್ನಡಿ ನೋಡಿಕೊಳ ನೀವೆಂದನಾವಿದುರ ॥ ೯೦

ಪ್ರಕಟವೈ ಸಲೆ ಕರ್ಣಕೌರವ
ಶಕುನಿಗಳ ದುಶ್ಚೇಷ್ಟೆ ಭೀಷ್ಮಾ
ದ್ಯಕುಟಿಲರು ಸಲ್ಲರು ಸುಯೋಧನಮಂತ್ರಸಂಗತಿಗೆ ।
ಮುಕುರಪದನೆಮ್ಮಯ್ಯನೆಂಬುದು
ವಿಕಳವಲ್ಲೆಲೆ ವಿದುರ ಪರಿಪಾ
ಲಕನಲೇ ಧೃತರಾಷ್ಟ್ರನಾತನ ನಂಬಿ ಬಹೆವೆಂದ ॥ ೯೩

ಕರೆಸಿ ನಿಮ್ಮಯ ಮಂತ್ರಿಜನಮು
ಖ್ಯರ ಪಸಾಯಿತರ ಕೇಳುವುದು ಮನ
ದೊರೆಗೆ ತೂಕಕೆ ಬಹರೆ ಭೀಮಾರ್ಜುನರ ಮತವಿಡಿದು ।
ಅರಸ ನಿಶ್ಚೈಸುವುದೆನಲು ನೀ
ಮರುಳೆ ವಿದುರ ಭವದ್ವಚೋವಿ
ಸ್ತರಕೆ ಪಡಿಸಣವುಂಟೆ ಶಿವ ಶಿವ ಯೆಂದನಾಭೂಪ ॥ ೯೪

ಹೋಹುದೇನಭಿಮತವೆ ಧೂರ್ತ
ವ್ಯೂಹವದು ಭೀಷ್ಮಾದಿಹಿರಿಯರು
ಸಾಹಸಿಕರೈಸಲೆ ರಹಸ್ಯಕೆ ಸಲ್ಲರವರುಗಳು ।

ಕಾಹುರನು ಕೌರವನು ಸಮರೋ
ತ್ಸಾಹಶಕ್ತಿಗೆ ತಾವದಲ್ಲ
ವ್ಯಾಹತವೆ ಮತವೆಂದು ಭೀಮಾದಿಗಳ ಬೆಸಗೊಂಡ ॥ ೯೫

ಜೀಯ ಬಿನ್ನಹವೆಂದು ದೇಹ
ಚ್ಛಾಯೆಗುಂಟೇ ಬೇಱೆ ಚೇಷ್ಟೆನ
ಪಾಯಿಯೇ ನಿಮ್ಮನಿಬರಿಗೆ ರಾಜಾಭಿಮಾನದಲಿ ।
ನೋಯೆ ನೋವುದು ನಿಮ್ಮ ದೇಹದ
ಬೀಯದಲಿ ತಾ ಬೀಯುವಹುದೆ
ಮ್ಮಾಯತವು ಸ್ವಾತಂತ್ರ್ಯವೆಮಗಿಲ್ಲೆಂದನಾಭೀಮ ॥ ೯೬

ಆರ್ಯನಾದ ಧೃತರಾಷ್ಟ್ರನ ಮಾತನ್ನು ನಂಬಿ ಬರುವೆವೆಂದು
ಧರ್ಮರಾಯನ ಉತ್ತರ.

ಕರೆಸುವನು ಧೃತರಾಷ್ಟ್ರನೆಮ್ಮನು
ಕರವೆ ಮಣಿಹ ಸುಯೋಧನಾದಿಯು
ಮರುಳುಗಳ ಮಾತೇನು ಹಿರಿಯರು ನೀವಲಾ ನಮಗೆ ।
ಧರಣಿ ಯಿದು ಶಾಶ್ವತವೆ ತಂದೆಗೆ
ಹಿರಿಯನಾಧೃತರಾಷ್ಟ್ರನಾಜ್ಞೆಯ
ಶಿರದೊಳಾಂತೆನು ಬಹೆನೆನುತ ನಿಶ್ಚೈಸಿದನು ನೃಪತಿ ॥ ೯೭

ಇರುಳು ನೂಕಿದರುದಯದಲಿ ಭೂ
ಸುರರ ಕರೆಸಿದರವೆಳಸಂವೆ
ತ್ಸರದ ಸುಮುಹೂರ್ತದಲಿ ಹೊಯ್ಸಿದರಂದು ಹೊಱಗುಡಿಯ ।
ಪುರದ ಕಾಹನು ಸಚಿವಸಾವಂ
ವಂತರಿಗೆ ನೇಮಿಸಿ ಸಕಲದಳವೋ
ಹರದ ದೆಕ್ಕಾಳವನು ನೋಡುತ್ತ ಪುರವ ಹೊಱವಂಟ ॥ ೯೮

ಬಿಗಿದರೆಂಚೆಯ ಹೊಮ್ಮಿಣಿಯ ಹೊರ
ಜಿಗಳ ಝಾಡಿಯ ಪಕ್ಕಘಂಟೆಯ
ಝಗೆಯ ಮೊಗರಂಬದ ವಿಳಾಸದ ಮಣಿಯ ಝಳಪಟೆಯ ।
ಬಿಗಿದ ಕೂರಂಕುಶದ ಮಾವಂ
ತಿಗನ ಸನ್ನೆಗೆ ಕುಸಿದ ದಂತಿಯ
ಹೆಗಲ ಹೊಂಗದ್ದುಗೆಗೆ ಬಿಜಯಂಗೈದನವನೀಶ । ೯೯

ತಳಿತುವಿನನುದಯದಲಿ ತಾರಾ
ವಳಿಗಳದುಭುತವೆನಲು ಮುಕ್ತಾ
ವಳಿಯ ಧವಳಚ್ಛತ್ರವೆಡಬಲಕೊಲೆವ ಚಾಮರಿಗಳ ।
ಕೆಲಬಲದ ಭೀಮಾರ್ಜುನರ ಗಜ
ದಳದ ಮುಂದೆ ಕುಮಾರವರ್ಗದ
ಸುಚಿವರುಗಳ ಸಂರಂಭದಲಿ ಹೊಱವಂಟನಾಭೂಪ ॥ ೧೦೦

ಮುಂದೆ ಮೋಹರದೆಗೆದು ನಡೆದುದು
ಸಂದಣಿಸಿ ನಕುಲಾದಿಭೂಪರ
ಹಿಂದೆ ಮಣಿಕೇವಣದ ದಡ್ಡಿಯೆ ಬಿಗಿದ ಬೀಯಗದ ।
ಗೊಂದಣದ ಹೆಮ್ಮಕ್ಕಳದ್ದೆ ಸೆ
ಯಂದಣದ ಸಂದಣಿಗಳಲಿ ನಡೆ
ತಂದುದನಿಬರ ರಾಣಿವಾಸದ ದಂಡಿಗೆಗಳಂದು ॥ ೧೦೧

ಉಡಿಗೆಗಳ ದೇಸಿಯ ವಿಳಾಸದ
ತೊಡಿಗೆಗಳ ಮೋಳಿಯ ನವಾಯಿಯ
ಮುಡಿಗಳಡಬಲದೋರೆನೋಟದ ಬಳ್ಳಿ ಬೆಳಗುಗಳ ।
ಕಡು ಬೆಮರ ತನುಪರಿಮಳದೊಳಡೆ
ವಿಡದ ಗಗನೋದರದ ಗರುವೆಯ
ರಡಸಿದರು ದ್ರುಪದಾತ್ಮಜೆಯ ದಂಡಿಗೆಯ ಬಱಸಿನಲಿ ॥ ೧೦೨

ಭೂರಿಭೇರಿಯ ವಾದ್ಯರವ ಕೈ
ವಾರಿಗಳ ಕಳಕಳದೊಳಡಗಿತು
ನಾರಿಯರ ನೇವುರದ ಮೊಳಗಿನೊಳಡಗಿದುದು ರಭಸ ।
ಆರು ಹೊಗಳುವರಾವಿಭವವಿ
ಸ್ತಾರಪರ್ವಣನು ಪಯಣಗತಿಯಲಿ
ಭೂರಮಣನೈತಂದು ಹೊಕ್ಕನು ಹಸ್ತಿನಾಪುರವ ॥ ೧೦೩

ಹದಿಮೂರನೆಯ ಸಂಧಿ ಮುಗಿದುದು.

---

## ಹ ದಿ ನಾ ಲ್ಕ ನೆ ಯ ಸ ಂ ಧಿ .

ಸೂಚನೆ.

ವೀತರಾಗದ್ವೇಷಭಯನನ
ಜಾತಶತ್ರುವನಕಟ ಕಪಟ
ದ್ಯೂತದಲಿ ಕುರುರಾಯ ಗೆಲಿದನು ಧರ್ಮನಂದನನ ॥

ಪಾಂಡವರು ಹಸ್ತಿನಾವತಿಗೆ ಬಂದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡವನೃಪರನರಮನೆ
ಬೀಳುಕೊಂಡುದು ವಿಳಸದಿಂದ್ರಪ್ರಸ್ಥಪುರಸಹಿತ ।
ಮೇಲೆ ಮೊಳಗುವ ದುರ್ನಿಮಿತ್ತವ
ನಾಲಿಸದೆ ಸೋದರರು ಸಹಿತ [1] ನಿ
ವಿಾಲಿತಾಂತಃಕರಣಹತರೈತಂದರಿಭಪುರಿಗೆ ॥ ೧

ಆಗ ಅಪಶಕುನಗಳು.

ಹರಡಿ ಕೆದರಿತು ಬಲದಲುದಯದ
ಲುರಿಯಲೊದರಿತು ಹಸುಬನೆಡದಲಿ

[1] ನಾಲಿಸಿದರೇ ದೈವದೋಷನಿ, ಚ.

ಕರಿಯ ಹಕ್ಕಿಯ ತಾರುಹಂಗನ ವಾಮದುಡಿಗೆಗಳ |
ನರಿಗಳೊದಱಿದುವಿದಿರಿನಲಿ ಮೋ
ಹರವ ಮೊಲನಡಹಾಯ್ದು ವಾನೆಗ
ಳರಿಚಿ ಕೆಡೆದುವು ಮುಗ್ಗಿದುವು ತೇರುಗಳ ವಾಜಿಗಳು || ೨

ಈಗ ಪ್ರಯಾಣವನ್ನು ನಿಲ್ಲಿಸೆಂದು ವಿಪ್ರರ ನುಡಿಗಳು.

ಶಕುನಗತಿ ಸಾಮಾನ್ಯವಿದು ಕಂ
ಟಕದ ನೆಲೆ ಜನ್ಮದಲಿ ಸಪ್ತಾ
ಧಿಕದೊಳಿದ್ದರು ಸೌರಿಗುರುಭೌಮಾಬ್ಜಬಾಂಧವರು |
ವಿಕಳ ದೆಸೆ ನಿಮ್ಮಡಿಗೆ ವೈರಿ
ಪ್ರಕರಕುನ್ನತದೆಸೆ ಮಹೀಪಾ
ಲಕಶಿರೋಮಣಿ ಪುರಕೆ ಮರಳೆಂದರು ಮಹೀಸುರರು || ೩

ಧರ್ಮರಾಯನು ಅದನ್ನುಪೇಕ್ಷಿಸುವಿಕೆ.

ಮರಳಬಹುದೇ ದೈವವಿಕ್ಕಿದ
ಕೊರಳ ಕಣ್ಣಿಯ ಕುಣಿಕೆ ಯಾರಲಿ
ಹರಿವುದೈ ಮನ್ನಿಸುವುದಿಲ್ಲ ಮೌಹೂರ್ತಿಕರ ನುಡಿಯ |
ಕರೆಸುವನು ಧೃತರಾಷ್ಟ್ರ ನಮಗೀ
ನರಿಮೊಲಂಗಳ ಹಕ್ಕಿ ಹರಿಣಿಯ
ಕರಹವೇಗುವುವೆಂದು ಜಱಿದನು ಶಕುನಕೋವಿದರ || ೪

ಹಸ್ತಿನಾವತಿಯ ಪ್ರವೇಶ.

ಹರಿದರರಸಾಳುಗಳು ರಾಯನ
ಬರವನಱುಹಿದರಂದು ಭೂಪತಿ
ಪುರದೊಳಗೆ ಗುಡಿಗಟ್ಟಿಸಿದನಂದತುಳಹರುಷದಲಿ |
ಸುರನದೀಜದ್ರೋಣಗೌತಮ
ಗುರುಜಕರ್ಣಜಯದ್ರಥಾದಿಗ
ಳುರುವಿಭವದಿಂದಿದಿರುಗೊಂಡರು ಹೊಗಿಸಿದರು ಪುರವ || ೫

ಸೇನೆ ಬಿಟ್ಟುದು ಪುರದ ಬಹಿರು
ದ್ಯಾನಬೀದಿಗಳೊಳಗೆ ಕುಂತೀ
ಸೂನುಗಳು ಸುಮ್ಮಾನ ಮಿಗೆ ನಡೆತಂದರೊಲವಿನಲಿ [1] |
ಆನಗರದೊತ್ತೊತ್ತಿಗಳ ನಾ
ಮಾನಿನಿಯರುಪ್ಪಾರತಿಯು ವಿಮು [2]
ಖಾನನದ ಬೆಳದಿಂಗಳೊಕ್ಕಿತು [3] ಬಿಸಿಲ ಬೇಗೆಗಳ || ೬

ಪೌರನಾರೀಜನದ ಸೇಸೆಗ
ಳಾರತಿಯು ತಳಿಗೆಗಳ ಲಾಜೆಯು
ತೋರಮುತ್ತಿನ ಮಟೆಯು ಮಂಗಳರವದ ಕಳಕಳದ |
ಓರಣದ ತೋರಣದ ಗುಡಿಗಳ
ಚಾರುವೀಧಿಗಳೊಳಗೆ ಬಂದರು
ಭೂರಮಣರುತ್ಸಾಹದಲಿ ಧೃತರಾಷ್ಟ್ರನರಮನೆಗೆ || ೭

ಇಳಿದರಾನೆಯುನಮಳರತ್ನಾ
ವಳಿಯ ಕಾಣಿಕೆಗಳನು ಸುಟಿದರು
ಖಳಶಿರೋಮಣಿಗೆಱಗಿದರು ಧೃತರಾಷ್ಟ್ರಭೂಪತಿಗೆ |
ಕುಲತಿಲಕ ಬಾ ಕಂದ ಭರತಾ
ವಳಿಲಲಿತಮೂಕಂದ ಧರ್ಮ
ಸ್ಥಳಲತಾವಳಿಕಂದ ಬಾ ಯೆಂದಪ್ಪಿದನು ನೃಪತಿ || ೮

ಪಾಂಡವರಲ್ಲಿ ಧೃತರಾಷ್ಟ್ರನ ಆದರ.

ಬಾ ಮಗನೆ ರಿಪುರಾಯುಮನ್ಮಥ
ಭೀಮ ಬಾರೈ ಭೀಮ ರಣನಿ
ಸ್ಸೀಮ ಫಲುಗುಣ ಬಾ ನಕುಲ ಸಹದೇವ ಬಾರೆನುತ |
ಪ್ರೇಮರಸದಲಿ ಬೇಟಿ ಬೇಱು

---

1 ಸೂನುಗಳುನಡೆತಂದಧೃತರಾಷ್ಟ್ರನರಮನೆಗೆ, ಖ.
2 ನವು, 3 ರಾನನೇಂದುಪ್ರಭೆ ವಿಭಾಡಿಸೆ, ಚ

ದ್ದಾಮಭುಜನಪ್ಪಿದನು ಚಿತ್ತದ
ತಾಮಸದ ತನಿಬೀಜ ಮುಸಕಿತು ಬಾಹ್ಯರಚನೆಯಲಿ ॥ ೯

ಹರಸಿದನು ಕಾಣಿಕೆಯ ಕೊಂಡೈ
ಯ್ವರ ಮಹಾಸತಿಯನು ಕುಮಾರರ
ನರಸಿಯರನನಿಬರ ವಚೋರಚನೆಯಲಿ ಮನ್ನಿಸಿದ ।
ಅರಸ ಗಾಂಧಾರಿಯನು ವಂದಿಸುತ
ದರುಶನವ ಕೊಡು ಹೋಗೆನಲು ಕಡು
ಹರುಷವಿಗಿಲ್ದೈತಂದರಾಗಾಂಧಾರಿಯರಮನೆಗೆ ॥ ೧೦

ಬಂದು ಕಾಣಿಕೆಗೊಟ್ಟು ವಂದಿಸಿ
ನಿಂದರನಿಬರು ತನ್ನ ಕೆಳದಿಯ
ರಿಂದ ತರಿಸಿದಳಾರತಿಯನುಪ್ಪಾರತಿಯನೊಲಿದು ।
ಚಂದದೈಸಾವಿರದ ಸಂಖ್ಯೆಯ
ರಿಂದುಮುಖಿಯರು ತಳಿಗೆಯಾರತಿ
ಸಂದಣಿಸಿದರು ಜಯಸಬುದ ಝೋಂಪಿಸಿದುದಂಬರವ ॥ ೧೧

ಅರಸಿ ಕಾಣಿಸಿಕೊಂಡಳೀನೃಪ
ರರಸಿಯನು ಸುಕುಮಾರಕರನವ
ರರಸಿಯರ ಸಖಿಯರ ವಿಳಾಸಿನಿಯರ ಪಸಾಯ್ತಿಯರ ।
ತರಿಸಿ ಕೊಟ್ಟಳು ಬೇಱೆಬೇಱನಿ
ಬರಿಗೆ ಯುಡುಗೊಱೆ ಗಂಧಮಾಲ್ಯಾ
ಭರಣವನು ರಾಜೋಪಚಾರವಿಳಾಸದೇಸಿಯಲಿ ॥ ೧೨

ಬೀಡುಕೊಟ್ಟಳು ಬಳಿಕ ಕುರುನೃಪ
ನಾಲಯಕೆ ನಡೆತಂದು ಕುಂತಿಯ
ಕಾಲಿಗೆಱಗಿದನವರನುಚಿತೋಕ್ತಿಯಲಿ ಮನ್ನಿಸಿದ ।

### ಆಗ ದುರ್ಯೋಧನಾದಿಗಳ ಸಂತೋಷ.

ಬಾಲಮೃಗ ವ್ರೊಳಗಾಯ್ತುಲಾ ಕೊಡು
ಕೋಲನೆಂದರು ನಗುತ ಮನದಲಿ
ಕೌಳಿಕದ ಕುಹಕಿಗಳು ಕೌರವಕರ್ಣಶಕುನಿಗಳು ॥ ೧೩

ಖಳರ ಹೃದಯದ ಕಾಳಕೂಟದ
ಹುಳುಕ ಬಲ್ಲರೆ ಮಾನ್ಯರವದಿರು
ಲಲಿತಮಧುರವಚೋವಿಳಾಸಕೆ ಮರುಳುಗೊಂಡರಲೆ ।
ಅಳುಪಿದರೆ ಮಧುಕರನ ಮಱಿ ಬೊ
ಬ್ಬುಲಿಯ ಬನದೊಳಗೇನಹುದು ನೃಪ
ತಿಲಕರಿದ್ದರು ಬೇಱೆ ರಚಿಸಿದ ರಾಜಭವನದಲಿ ॥ ೧೪

ಬಂದು ಕಂಡುದು ನಿಖಿಳಪುರಜನ
ವೆಂದು ಕಾಣಿಕೆಗೊಟ್ಟು ಕೌರವ
ನಂದನರು ಸಚಿವರು ಪಸಾಯ್ತನಿಯೋಗಿ ಮಂತ್ರಿಗಳು ।
ಸಂದಣಿಸಿದುದು ಕವಿಗಮಕಿನಟ
ವೃಂದಮಾಗಧಮಲ್ಲಗಾಯಕ
ವೃಂದದೀನಾನಾಥರೋಲೈಸಿದರು ಧರ್ಮಜನ ॥ ೧೫

ಆದಿವಸವನು ಮಧುರಗೇಯ ವಿ
ನೋದದಲಿ ಕವಿವಾದಿವಾಗ್ಮಿ ವಿ
ನೋದದಲಿ ನೂಕಿದರು ಮಜ್ಜನಭೋಜನಾದಿಯಲಿ ।

### ದುಃಸ್ವಪ್ನದರ್ಶನ.

ಆದುದುತ್ಸವವೆಂದಿನಿರುಳುದಿ
ನಾದಿಯಲಿ ಕಂಡನು ಕನಸ ಪ್ರಾ
ಸಾದಶಿಖರವನುರುಳಿಬಿದ್ದುದನಟವಿಮಧ್ಯದಲಿ ॥ ೧೬

ಆಗ ಧೌಮ್ಯರ ಅಭಯೋಕ್ತಿ.

ಅರಸನುಪ್ಪವಡಿಸಿದನವನೀ
ಶ್ವರವಿಹಿತಸತ್ಕ್ರಿಯೆಗಳನು ವಿ
ಸ್ತರಿಸಿದನು ದುಃಸ್ವಪ್ನಕುಂತವಿಭಿನ್ನಚೇತನನು ।
ಕರೆಸಿ ಧೌಮ್ಯಂಗಖಿಳಹಲತಿದು
ಸ್ತರದ ಕನಸಿದು ಶಾಂತಿಕರ್ಮವ
ಪುರದೊಳಗೆ ರಚಿಸುವೆನಂಜದಿರೆಂದನಾಧೌಮ್ಯ ॥ ೧೭

ಪುರದೊಳಲ್ಲಿಯು ಶಾಂತಿ ನಾರದ
ನೊರೆದನುತ್ಪಾತಪ್ರಬಂಧದ
ಹೊರಿಗೆಯನು ನಿಮ್ಮೈಶ್ವರ್ಯವಿಧ್ವಂಸಕರವೆಂದು ।
ಇರುಳು ನಾನಾಸ್ವಪ್ನಕಾನನ
ಗಿರಿಪರಿಭ್ರಮಣೈಕಚಿಂತಾ
ಭರಿತನಾದೆನು ದೈವಕೃತವುಪಭೋಗ್ಯವೆಮಗೆಂದ ॥ ೧೮

ಕೃಷ್ಣ ಸಹಾಯನಾಗಿರಲು ಚಿಂತೆಬೇಡೆಂದು ಧೌಮ್ಯರ ವಾಕ್ಯ.

ಅರಸ ಚಿಂತೆಯಿದೇಕೆ ಯಾದವ
ರರಸನನುನಯವಿರಲು ಭಾಗ್ಯಕೆ
ವರಸಮಾಗಮಸುಧರ್ಮಸತ್ಯಕೆ ಕೊಱತೆ ಯಿಲ್ಲೆಂದು ।
ವರವಸಿಷ್ಠ ಕುಮಾರನಾಭೂ
ವರನ ತಿಳಿಹಿದನತ್ತ ಕರೆಯಾ
ಧರಣಿಪನನೆಂದಂಧನೃಪ ದೂತರಿಗೆ ನೇಮಿಸಿದ ॥ ೧೯

ಧೃತರಾಷ್ಟ್ರನ ಅಪ್ಪಣೆಯಂತೆ ಧರ್ಮಾದಿಗಳು ಬರುವಿಕೆ.

ಜನಪ ಕಳುಹಿದ ದೂತರಿವರರ
ಮನೆಗೆ ಬಂದರು ಜೀಯ ಧೃತರಾ
ಷ್ಟ್ರನ ಸಮಯವಾಯಿತ್ತು ನಿಮ್ಮಡಿ ಬಿಜಯಮಾಡುವುದು ।
ಎನಲು ತನ್ನಕುಮಾರರನು ತ

ನ್ನನುಜರನು ಸಚಿವಪ್ರಧಾನರ
ನನಿಬರನು ಕರೆಸಿದನು ನೃಪ ಹೊಱವಂಟನರಮನೆಯ ॥　　೨೦

ಆಗ ಧೃತರಾಷ್ಟ್ರನ ಆದರ.

ಬಂದು ಧೃತರಾಷ್ಟ್ರನ ಪದಾಬ್ಜವ
ವಂದಿಸಿದೊಡೆನ್ನಾನೆ ಬಾರೈ
ತಂದೆ ಬಾರೆಂದೆಳೆದು ಕುಳ್ಳಿರಿಸಿದನು ಮಂಚದಲಿ ।
ನಂದನರು ಭೀಮಾರ್ಜುನಾದಿಗ
ಳಂದು ಪರಿವೇಷ್ಟಿಸಿದರಿತ್ತಲು
ಕಂದುಹೃದಯದ ಕೌರವೇಂದ್ರನ ಹದನ ಕೇಳೆಂದ ॥　　೨೧

ಶಕುನಿ ಮೊದಲಾದವರು ದ್ಯೂತಪ್ರಯತ್ನ ಮಾಡಿದುದು.

ಕರೆಸಿದನು ಶಕುನಿಯನು ಕರ್ಣಂ
ಗಱುಹಿದನು ಸೈಂಧವನನೆಕ್ಕಟಿ
ಕರೆದು ಹೇೞಿದ ಕೃತ್ರಿಮದ ಹಾಸಂಗಿಗಳ ರಚಿಸಿ ।
ಹರಸಿಕೊಂಡರು ಗಣಪಯಕ್ಷೇ
ಶ್ವರಿಕಳಾವತಿದುರ್ಗಿಭುವನೇ
ಶ್ವರಿಗಳಿಗೆ ವಿವಿಧೋಪಚಾರದ ಬಲಿವಿಧಾನದಲಿ ॥　　೨೨

ದ್ಯೂತಸಿದ್ಧಿಯ ಮಂತ್ರಪರವಿ
ದ್ಯಾತಿಶಯವಿಚ್ಛೇದರಕ್ಷೆ ವಿ
ಧೂತರಿಪುಮಂತ್ರಿಯಂತ್ರಪರಸಂಮೋಹನೌಷಧಿಯ ।
ಈತಗಳು ಮೇಳೈಸಿದರು ನಿ
ರ್ಭೀತರಿವರಿದನೆತ್ತ ಬಲ್ಲರು
ಕೈತವದ ಕಣಿ ಕೌರವೇಶ್ವರ ಬಂದನರಮನೆಗೆ ॥　　೨೩

ಆಗ ದುರ್ಯೋಧನನು ಪಾಂಡವರ ಸಭೆಯನ್ನು ಸ್ತುತಿಸಿದುದು.

ಚಿತ್ತವಿಸಿದಿರೆ ಬೊಪ್ಪ ಮಯನಿವ
ಗಿತ್ತ ಸಭೆಯದು ದೇವನಿರ್ಮಿತ

ವೆತ್ತ ಮಾನುಷಕರ್ಮವೆತ್ತಲು ಸರಿಸವಲ್ಲದಕೆ ।
ಇತ್ತ ನಿಮ್ಮಡಿ ಮಾಡಿಸಿದ ಸಭೆ
ಯತ್ತ ಬಿಜಯಂಗೈದು ನೋಡುವು
ದುತ್ತಮವಲೇ ಯೆಂದನಾ ದುರ್ಯೋಧನನು ನಗುತ ॥ ೨೪

ಐಸಲೇ ನೋಡುವೆವು ಶಿಲ್ಪದ
ದೇಶಿಕಾಖಿಲ ಕೈಮೆಗಳು ಲೇ
ಸೈಸಲೇ ಬೇಜೀನು ಮಾನುಷದೈವಕೃತಿಯೆಂದು ।
ಈಸು ಸಂಪ್ರಿಯಯೆಮ್ಮೊಳುಂಟೇ
ಲೇಸೆನುತ ನೃಪನೆದ್ದು ಕೈಗೊಡ
ಲಾಸಭೆಗೆ ಧೃತರಾಷ್ಟ್ರ ಬಂದನು ಧರ್ಮಸುತಸಹಿತ ॥ ೨೫

ಕೌರವಸಭೆಯ ವರ್ಣನೆ.

ಬಿಗಿದ ನೀಲದ ಸರಿಯ ನೆಲಗ
ಟ್ಟುಗಳ ಗೋಮೇಧಿಕದ ವಜ್ರದ
ಜಗಲಿಗಳ ನವವೇದಿಕೆಯ ವಿದ್ರುಮದ ಲೋವೆಗಳ ।
ಝಗೆಯ ಲಹರಿಯ ಜಾಳಿಗೆಯ
ಪಚ್ಚೆಗಳ ಸಾರದ ಸಕಲರತ್ನಾವ
ಳಿಗಳೆಸೆದುದು ರಾಜಸಭೆ ತತ್ಕ್ರೋಶಮಾತ್ರದಲಿ ॥ ೨೬

ಕವಿದುವರುಣಾಂಶುಗಳ ಲಹರಿಯ
ಲವಣಿ ಲಾವಣಿಗೆಯಲಿ ನೀಲ
ಚ್ಛವಿಯ ದೀಧಿತಿ ಝಗಝಗಿಸಿದುದು ಪ್ರಭೆಯ ಲಹರಿಯಲಿ ।
ತಿವಿದುವೆಳೆಮುತ್ತುಗಳ ಚಂದ್ರಿಕೆ
ಜವಳಿಸಿದದೊಂದೊಂದನೌಕಿದ
ವಿವರಣೆಯ ಮಣಿಕಿರಣವೇಣಿಯ ಬಂಧಬಂಧುರದಿ ॥ ೨೭

ಅಲ್ಲಿ ವಿಪುಳೋದ್ಯಾನವೀಧಿಗ
ಳಲ್ಲಿ ತಾವರೆಗೊಳದ ರಚನೆಗ
ಳಲ್ಲಿ ಹಂಸಮಯೂರಮಧುಕರಶುಕಪಿಕಾದಿಗಳು ।

ಅಲ್ಲಿ ಕೇಳೀಶೈಲಹಿಮಗೃಹ
ವಲ್ಲಿ ವಿವಿಧವಿಲಾಸರಚನೆಗ
ಳಲ್ಲಿ ಹೊಯ್‌ಕೈಯೆನಿಸಿ ಮೆಱೆದುದು ಪಾಂಡವರ ಸಭೆಯು ‖ ೨೮

ಧರ್ಮರಾಯನು ಸಭೆಯನ್ನು ಪ್ರವೇಶಿಸಿದುದು.

ಸ್ಥಳವನೇ ಜಲವೆಂದು ನಿರ್ಮಳ
ಜಲವನೇ ಸ್ಥಳವೆಂದು ಬಾಗಿಲ
ನೆಳಲ ಭಿತ್ತಿಯು ಹಾಯ್ದು ಬಾಗಿಲ ಭಿತ್ತಿಯೆಂದಿಱಿದು ।
ಕಳವಳಿಸುವನೆ ಧರ್ಮಸುತನಾ
ಕೊಳವನೇ ಕೊಳನೆಂದು ಬಾಗಿಲ
ನೆಳಲ ಹೊಗಱುತ ಬಂದು ಹೊಕ್ಕನು ಬಹಳಚೌಕಿಗೆಯ ‖ ೨೯

ಕೆಲಸಿಗರು ಶಿಲ್ಪಿಗಳು ರತುನಾ
ವಳಿಯ ಘಾಟಿನಲಾದುದೀಸಭೆ
ಯಿಳೆಗಪೂರ್ವವಲಾ ಮಹಾದೇವೆಂತು ರಚಿಸಿದರೊ ।
ವಿಳಸದಾಯವ್ಯಯದ ವಿಶ್ರುತ
ವಳಯದುನ್ನತ ವಾಸ್ತುಲಕ್ಷಣ
ದೊಳಗೆ ಸೇರಿದುವೆಂದು ಕೊಂಡಾಡಿದನು ನೃಪ ಸಭೆಯ ‖ ೩೦

ಸೂಸಕದ ಮುತ್ತುಗಳು ತಾರಾ
ರಾಶಿಗಳ ಹಬ್ಬುಗೆಯು ನೀಲದ
ಹಾಸಱೆಗಳೇ ಹೋಲುತಿರ್ದುವು ಗಗನಮಂಡಲವ ।
ಸೂಸಕಂಗಳ ಮುಱಿದ ಮುಸುಕಿನ
ದೇಶಿಕಾತಿಯರಾನನೇಂದುಗ
ಳಾಸುಧಾಕರನೆನಲು ಗೆಲಿದುದು ಸಭೆ ನಭಸ್ಥಳವ ‖ ೩೧

ಗುರುನದೀಸುತಕರ್ಣಸೈಂಧವ
ಗುರುತನುಜಭಗದತ್ತಬಾಹ್ಲಿಕ
ನುರುಯವನಸೌವೀರಕೋಸಲಚೈದ್ಯಮಾಗಧರು ।

ಅರಸುಗಳು ನಾನಾದಿಗಂತದ
ಧರಣಿಪರು ಸಚಿವರು ಪಸಾಯ್ತರು
ನೆರೆದುದಂದಿನ ದಿವಸದೋಲಗದೊಡ್ಡು ಚಲುವಾಯ್ತು ॥ ೩೦

ಆಗ ಆಸಭೆಯಲ್ಲಿದ್ದವರ ವರ್ಣನೆ.

ಧರಣಿಪತಿ ಕೇಳೊಂದು ಹರಿಯಂ
ತರವಿಶಾಲ ಮಹಾಸಭಾವಿ
ಸ್ತರಣವದರಲಿ ತೆರಹ ಕಾಣೆನು ತೀವಿತವನಿಪರು ।
ಹೊರಗೆ ರಥಿಕರು ರಾಹುತರು ಜೋ
ಧರು ಪದಾತಿಗಳಿದ್ದುದಂದಿನ
ಸಿರಿ ಸುರೇಂದ್ರನ ಪೌಳಿಗೈವಡಿ ಹತ್ತುಮಡಿ ಯೆಂದ ॥ ೩೩

ಒಂದು ಕಡೆಯಲಿ ಕವಿಗಳಿಕೆಯು ಜೂ
ಜೊಂದು ಕಡೆಯಲಿ ಗದ್ಯಪದ್ಯವೆ
ದೊಂದು ಕಡೆಯಲಿ ವಾರವಧುಗಳ ಸಾರಸಂಗೀತ ।
ಒಂದುಮೆಯ್ಯಲಿ ತರ್ಕಗೋಷ್ಠಿಯು
ದೊಂದು ದೆಸೆಯಲಿ ಕೌರವೇಂದ್ರನ
ಮುಂದೆ ಜಡಿದುದು ರಭಸ ಹಾಸಂಗಿಗಳ ಸಾರಿಗಳ ॥ ೩೪

ದ್ಯೂತಕ್ಕೆ ಧರ್ಮರಾಯನನ್ನು ಕರೆಯುವಿಕೆ.

ಆಡಲರಿವೆನು ಗಡ ಯುಧಿಷ್ಠಿರ
ನಾಡುವೊಡೆ ಬರ ಹೇಳು ಮೇಣಾ
ನೋಡುತಿರಲಾವಾಡುವೆವು ಸಭೆಯಲಿ ವಿನೋದವಲೆ ।
ಖೋಡಿಯಿಲ್ಲದೆ ಬರಲಿ ನೆತ್ತವ
ನಾಡಲರಿಯದ ನೃಪತಿ ಮೃಗವೆಂ
ದಾಡುತಿಹರರಿವವರು ತಾವಲ್ಲೆಂದನಾಶಕುನಿ ॥ ೩೫

ಕುಟಿಲರೊಡನೆ ಜೂಜು ಕೂಡದೆಂದು ಧರ್ಮರಾಯನ ಉತ್ತರ.

ಅಹುದು ಹೊಲ್ಲೆಹವಾವುದಾಡಲು
ಬಹುದು ಸುಜನರ ಕೂಡೆ ನೀವೇ

ಕುಹಕವಿದ್ಯಾಸಾರ್ವಭೌಮರು ಶಕುನಿಕೌರವರು ।
ಸುಹೃದಯರಿಗತಿಕುಟಿಲರಲಿ ನಿ
ಸ್ಪೃಹರಿಗತಿರಾಗಿಗಳೊಡನೆ ದು
ಸ್ಸಹ ಕಣಾ ಸಮ್ಮೇಳವೆಂದನು ಧರ್ಮಸುತ ನಗುತ ॥ ೩೬

ನೀವು ಸುಹೃದಯರಿಂದು ದುರ್ಜನ
ರಾವು ನೀವ್ ರಾಗಿಗಳು ಮೋಕ್ಷ ರಾ
ಗಾವಲಂಬರು ನಾವಲೇ ನೀವಱಿಯಿರೇ ನಿಜವ ।

ಬಂಧುಗಳಲ್ಲಿ ಭೇದಚಿಂತೆ ಏಕೆಂದು ದುರ್ಯೋಧನನ ಭಾಷಣ.

ನೀವು ನಾವೆಂಬೀಪೃಥಗ್ಭಾ
ವಾವಲಂಬನವೇನು ನಿಮ್ಮೊಳು
ನಾವು ನೀವೇ ನಮ್ಮೊಳೆಂದನು ನಗುತ ಕುರುರಾಯ ॥ ೩೭

ದ್ಯೂತವು ಯೋಗ್ಯವಲ್ಲೆಂದು ಧರ್ಮರಾಯನ ವಾಕ್ಯ.

ಇರಲಿ ಬಾಂಧವರಿದಱೊಳರಡಿ
ಟ್ಟಿರದೆ ನಿಲಬದು ಲೇಸಲಾ ವಿ
ಸ್ತರಿಸಲೇಕೆ ದ್ಯೂತ ದುರ್ವ್ಯಸನಪ್ರಪಂಚವಿದು ।
ತರುಣವಿಟಚಾರಣಕುಶೀಲವ
ಭರತಗಣಿಕಾಯೋಗ್ಯವಿಷಯಕೆ
ಗರುವರೊಲಿವರೆ ಯೆಂದನಾಕುರುಪತಿಗೆ ಯಮಸೂನು ॥ ೩೮

ಇದು ರಾಜರಿಗಾಗಿ ಹುಟ್ಟಿದ್ದು ಇದನ್ನೊಲ್ಲದವನು
ಮೃಗವೆಂದು ದುರ್ಯೋಧನನ ನುಡಿ

ದ್ಯೂತವಿದು ದುರ್ವ್ಯಸನವೆಂಬವ
ನೀತಿವಿದನೇ ಶ್ರೋತ್ರಿಯರಿಗ
ಖ್ಯಾತಿ ಯಿದು ಯತಿಗಳಿಗೆ ಮೋಕ್ಷ ರಣಭೀತಭೂಪರಿಗೆ ।
ದ್ಯೂತವ್ಯೃಗಯಾಸ್ತ್ರೀವ್ಯಸನ ನೃಪ
ಜಾತಿಗೋಸುಗವಾದುವಿದಱ ರ
ಸಾತಿಶಯವಱಿಯದವ ನರಮೃಗವೆಂದನಾಶಕುನಿ ॥ ೩೯

ಶಕುನಿಯು ದ್ಯೂತಕ್ಕೋಸ್ಕರ ಧರ್ಮರಾಯನನ್ನು ಕರೆಯುವಿಕೆ.

ಅರಸ ಕೇಳ್ಕೌಳಗಕೆ ಜೂಜಿಗೆ
ಕರೆದೊಡೋಸರಿಸಿದರೆ ಬಟಿಕವ
ಗರುವನೇ ಕ್ಷತ್ರಿಯರೊಳಗೆ ನೃಪಧರ್ಮ ನೀನಱಿಯು ।
ಕರೆದೆವಾವ್ ಜೂಜಿಂಗೆ ಬೇಕೇ
ಧರಣಿಪತಿ ಬಾ ರಾಜಧರ್ಮವ
ನೊರಸುವೊಡೆ ನಿಲ್ಲೆಂದುಪೇಕ್ಷಿಸಿ ನುಡಿದನಾಶಕುನಿ ॥ ೪೦

ರಾಜಧರ್ಮವಿದಹುದು ಕಳವಿನ
ಜೂಜು ಧರ್ಮದ ಮಗನೊ ಮೊಮ್ಮನೊ
ಬೀಜವಾವುದು ನಿಮ್ಮ ಕಪಟದ್ಯೂತನಿರ್ಣಯಕೆ ।
ರಾಜಪರಿಪಾಟಿಗಳ ಪಂಥದ
ಜೂಜ ಬಲ್ಲರೆ ಕರೆಯಬಾರದೊ
ಡಾಜನಾರ್ದನನಾಣೆ ಯೆಂದನು ಧರ್ಮಸುತ ನಗುತ ॥ ೪೧

ಆಗ ಧರ್ಮರಾಯನು ದ್ಯೂತದಲ್ಲಿ ಮನಮಾಡುವಿಕೆ.

ಭೂರಮಣ ಕೇಳಖಿಳನೃಪಸಂ
ಹಾರಬೀಜದ ಕರ್ಮಫಲಸಂ
ಸ್ಕಾರವಳ್ಳಿಯು ಸಱಿದು ನೂಕಿತು ಧರ್ಮನಂದನನ ।
ಧೀರನಲ್ಲಾ ಧರ್ಮಶಾಸ್ತ್ರವಿ
ಚಾರಸಾರಜ್ಞಾನನಿಷ್ಠೆಯೊ
ಳೋರೆಯುಂಟೇ ದ್ಯೂತಕೇಳಿಗೆ ಮಾಡಿದನು ಮನವ ॥ ೪೨

ಆಗ ನಾನಾವಿಧದ ಅಪಶಕುನಗಳು

ಇಂದುವದನೆಗೆ ದಕ್ಷಿಣಾಕ್ಷಿ
ಸ್ಪಂದವಾಯಿತು ಭೀಮಪಾರ್ಥರಿ
ಗಂದು ಕೆತ್ತಿತು ಹೃದಯ ವಾಮಭುಜಾಕ್ಷಿಗಳು ಸಹಿತ ।

ಕಂದಿದುವು ಮೋರೆಗಳು ಗಂಗಾ
ನಂದನದ್ರೋಣಾದಿಸುಜನರಿ
ಗಂದವೇಱಿತು ಮುಸುಡು ಶಕುನಿಸುಯೋಧನಾದಿಗಳ ‖ ೪೩

ಕುರುಪತಿಯ ಕೃತಪುಣ್ಯಬೀಜಾಂ
ಕುರದಕಾಲದಿಗಂತದವನೀ
ಶ್ವರಸಮೂಹಚಕಮೂನಿಬರ್ಹಣಸೂಚನಾಸಮಯ ।
ಅರಸ ಕೇಳ್ ಕುಂತೀಕುಮಾರರ
ಸಿರಿಯು ದುಗುಡದ ಹೊತ್ತು ಮಿಗೆಗ
ಬ್ಬರಿಸಿತ್ತೈ ಧರ್ಮಜನ ಗಾಢದ ಬುದ್ಧಿ ಪರ್ವತವ ‖ ೪೪

ವ್ಯಸನತೃಷ್ಣೆಯು ಕೀಳುಚಿತ್ತದ
ಮಿಸುನಿಯೊಳು ಬೆಱಸಿತು ಸುಬುದ್ಧಿಯ
ರಸವು ಹಾಱಿತು ಹುದಿದ ರಾಗದ್ವೇಷವಹ್ನಿ ಝುಲಿ ।
ಮುಸುಡ ತಿರುಹಿಂತು ತಿಳಿವು ಲಜ್ಜೆಯ
ದೆಸೆಗೆ ದುರ್ಘಟವಾಯ್ತು ಪರಿಭವ
ದೊಸಗೆಯನು ಸೂಚಿಸಿತು ಲಕ್ಷ್ಮಿಗೆ ಧರ್ಮಜನ ಹೃದಯ ‖ ೪೫

ಹಲವುಮಾತಿನಲೇನು ಭೂಪತಿ
ತಿಲಕ ಸಿಕ್ಕಿದನವದಿರೊಡ್ಡಿದ
ಬಲೆಗೆ ಬಂದನು ನೆತ್ತ ಸಾರಿಯ ಗುಱಿಯ ಗದ್ದುಗೆಗೆ ।
ಕೆಲದಲನುಜರು ವಾಮದಲಿ ಮಣಿ
ವಳಯುಮಂಚದಲಂಧನೃಪನಿದಿ
ರಲಿ ಸುಯೋಧನಕರ್ಣಶಕುನಿಜಯದ್ರಥಾದಿಗಳು । ೪೬

### ದ್ಯೂತಾರಂಭ.

ಹಲಿಗೆ ಯಿಕ್ಕಿತು ಹೊನ್ನ ಸಾರಿಗ
ಳಿಱುಹಿದುವು ಹೇಚೊಡ್ಡವನು ಕಳ

ಕಳವೆ ನಿಲಹೇಟೆನುತ ಮಿಗೆ ಗರ್ಜಿಸಿದನಾಶಕುನಿ [1] |
ನೆಲಕೆ ಹಾಕಿದನಡಿಗಡಿಗೆ ಮಂ
ಡಳಿಸಿ ಸಾರಿಯು ಹೂಡಿ ಕುರುಪತಿ
ಗೆಲಿದ ಹೋಗೆಂದೊದಱುತಿರ್ದನು ಶಕುನಿ ಬೊಬ್ಬಿಱಿದು [2] || ೪೭

ಶಕುನಿಯ ಸಂತೋಷ.

ಸಿಕ್ಕಿದನು ಧರ್ಮಜನು ಜೂಜಿನೊ
ಳೊಕ್ಕಲಿಕ್ಕಿದ ಖತಿಯ ಹೆಚ್ಚಿಸಿ
ನೊಕ್ಕದೀ ಭೀಮಾರ್ಜುನರ ಕೌರವರ ಕೈಯ್ಯಿಂದ |
ಹಿಕ್ಕಿ ಕೊಲಿಸುವೆನೆಂಬಭೀಷ್ಟಕೆ
ತಕ್ಕುದಾಯಿತೆನುತ್ತ ಮನದೊಂ
ದಕ್ಕಱೊಳು ಗುಡಿಗಟ್ಟಿ ಕುಣಿದನು ಶಕುನಿ ಮನದೊಳಗೆ || ೪೮

ಶಕುನಿಯು ಜೂಜಿನಲ್ಲಿ ಧರ್ಮರಾಯನು ಒಡ್ಡಿದ
ಪಣವನ್ನೊಂದೊಂದಾಗಿ ಗೆಲ್ಲುವಿಕೆ.

ಆಟವಾರಂಭಿಸಿತು ಬೞಿಬೊ
ಬ್ಬಾಟವೇನಿದು ವಿಜಯಸಿರಿ ವಾ
ಚಾಟರಿಗೆ ಮೆಚ್ಚುವಳ ತೋಱಾ ದ್ಯೂತಕೌಶಲವ |
ತೋಟಿ ಬೇಕೇ ಕೈಯ್ಯ ಹೊಯ್ಬೊ
ತಾಟವೇತಕೆ ಧರ್ಮನಂದನ
ನಾಟವೊಳ್ಳಿತು ಬಲ್ಲೆನೆಂದನು ಶಕುನಿ ನಸುನಗುತ || ೪೯

ಎನ್ನೊಳಾಟಕೆ [3] ಶಕುನಿ ಭೂಪತಿ
ನಿನ್ನೊಡನೆ ಕೈಪೊಯ್ದು ನೊಡ್ಡವ
ನೆನ್ನೊಡನೆ ಹೇಟೆಂದು ನುಡಿದನು ಕೌರವರ ರಾಯ |
ನಿನ್ನೊಳಾಗಲಿ ನಿನ್ನ ಮಾವನೆ

---

1 ಹಾಸಂಗಿಗಳ ಹೊಸೆದೊಸೆದು, ಕ. ಖ.

2 ತೊಡೆಯನಪ್ಪಳಿಸಿ, ಚ. 3 ಎನ್ನಲೆಕ್ಕಕೆ, ಚ.

ಮುನ್ನ ಬರಲಿದಕೇನೆನುತ ಸಂ
ಪನ್ನ ಶಠರೊಡನಳವಿಗೊಟ್ಟನು ಭೂಪ ಕೇಳೆಂದ ॥ ೩೦

ಹೇಮಭಾರದ ವಿಮಳರತ್ನ
ಸ್ತೋಮವಿದೆ ಪಣವೆನಲು ಕೌರವ
ಭೂಮಿಪತಿಯೊಡ್ಡಿದನು ಧರ್ಮಜ ಹೆಸರಿಸಿದ ಧನವ ।
ಆಮಹೀಪತಿ ಶಕುನಿ ಸಾರಿಯ
ಸೀಮೆಯನು ಕೆದಱಿದರು ತಿವಿದರು
ತಾಮಸದಲುಬ್ಬೆದ್ದು ವಿಬ್ಬರ ಕರಣವೃತ್ತಿಗಳು ॥ ೩೧

ದುಗನ ಹಾಯಿಕು ತನಗೆ ಹಾಯಿಕು
ತಿಗನನೆಂಬಬ್ಬರದ ಹಾಸಂ
ಗಿಗಳ ಬೊಬ್ಬೆಯ ಸಾರಿಗಳ ಕಟಕಟಿತನಿಸ್ವನವ ।
ಉಗಿವ ಸೆರೆಗಳ ಬಳಿ ದುಹಾರದ
ಬಿಗುಹುಗಳ ಬೀದಿಗಳ ಕಲಿಸಾ
ರಿಗಳ ಧಾಳಾಧೂಳಿ ಮಸಗಿತು ಭೂಪ ಕೇಳೆಂದ ॥ ೩೮

ರಾಯ ಸೋತನು ಶಕುನಿ ಬೇಡಿದ
ದಾಯ ತಹ ಹಮ್ಮುಗೆಯಲೊದಗಿದ
ವಾಯತದ ಕೃತ್ರಿಮವಲೇ ಕೌರವರ ಸಂಕೇತ ।
ಆಯಿತೀಹಲಿಗೆಯಸು ಕೌರವ
ರಾಯ ಗೆಲಿದನು ಮೇಲೆ ಪಣವೇ
ನಾಯಿತೆಂದನು ಶಕುನಿ ಯಮನಂದನನನೀಕ್ಷಿಸುತ ॥ ೩೩

ಕನಕಮಯರಥವುಂಟು ಸಾವಿರ
ವೆನಗೆ ಹೂಡಿದುವೆಂಟುಸಾವಿರ
ವಿನುತವಾಜಿಗಳೊಡ್ಡವೆಂದನು ಧರ್ಮನಂದನನು ।
ಜನಪತಿಗೆ ತಾನ್ನೆಸಲೇ ಹಾ

ಯೆನುತ ಸಾರಿಯ ಕೆದಱಿದನು ದು
ರ್ಜನರಿಗೊಲಿದುದು ದೈವಗತಿ ಬೊಬ್ಬಿರಿದನಾಶಕುನಿ ॥ ೫೪

ಸೋತೆಯರಸಾ ನಿಮಗೆ ಜೂಜಿನ
ಭೀತಿಯುಂಟೇ ಮಾಣು ಮೇಣ್ನಿ
ರ್ಭೀತನೇ ಮೇಲೊಡ್ಡವೆನು ನುಡಿ ಹಲವು ಮಾತೇನು ।
ಕಾತರಿಸಬೇಡಿನ್ನು ಘಡ ಧನ
ಭೀತನೇ ತಾನಕಟೆನುತ ಕುಂ
ತೀತನುಜನೊಡ್ಡಿದನು ಸಾವಿರಮತ್ತಗಜಘಟೆಯ ॥ ೫೫

ಆದವೆಮಗಿವು ಗಜಘಟೆಗಳಂ
ದಾದುರಾತ್ಮಕರಾಡಿದರು ದು
ರ್ಭೇದವವದಿಱ ಕಪಟತಂತ್ರವನಾವನಱಿವವನು ।
ಆದುದರಸಗೆ ಸೋಲವಿನ್ನೇ
ನಾದುದೈ ಭೂಪತಿಯ ಗಜಘಟೆ
ತೀದವೈ ತೋಱೇನು ಪಣ ವುಂಟೆಂದನಾಶಕುನಿ ॥ ೫೬

ಘಡ ದರಿದ್ರನೆ ತಾನು ತನ್ನಯ
ಮಡದಿಯರ ಕೆಳದಿಯರು ಸಾವಿರ
ಮಡಿ ಸುಯೋಧನರಾಜಭವನದ ವಾರನಾರಿಯರ ।
ನುಡಿಯ ಬೇಕೇ ಧರ್ಮಸುತ ನಿ
ಮ್ಮಡಿಗಳೊಡ್ಡಿದ ಬಳಿಕ ಗೆಲಿದವ
ರೊಡೆಯರೈ ಸಲೆ ಹಾಯ್ಕು ಹಾಯ್ಕೆಂದೊದಱಿದನು ಶಕುನಿ ॥ ೫೭

ಏನನಾಡಿದೊಡೇನು ಫಲ ದೈ
ವಾನುರಾಗದಿ ಬಯಕೆ ಬೇಱಿಹು
ದಾನರೇಂದ್ರನ ಸಾರಿ ಸೋತುವು ನಿಮಿಷಮಾತ್ರದಲಿ ।
ಆನಿರೂಢಿಯ ಹತ್ತುಸಾವಿರ
ಮಾನಿನಿಯರನು ಮತ್ತೆ ಸೋತನು
ಮಾನನಿಧಿಯೇ ಮತ್ತೆ ಪಣವೇನೆಂದನಾಶಕುನಿ ॥ ೫೮

ಅರಸಿಯರ ಮೃಗಾಹುಗಳ ಕಿಂ
ಕರರು ಸಾವಿರವಿದಱ ಪಣ ನಿ
ಮ್ಮರಸನಲಿ ಹೇಳೆನಲು ನೀವೆಮಗೇನನೊಡ್ಡಿದಿರಿ ।
ಮರಳಿ ಬೆಸಗೊಳಬೇಡ ನಮ್ಮಲಿ
ಬರಹವೆದು ಹಾಯ್ಕೆನಲು ಹರುಷದ
ಹರಹಿನಲಿ ಬಱಕರಸ ಸಾರಿಯ ಸಾಲ ಜೋಡಿಸಿದ ॥ ೫೯

ಅರಸ ಸೋತೆಯಲಾ ಜಯೋದಯ
ಮರಳಿತಿತ್ತಲು ಮನಕೆ ಭೀತಿಯ
ಬೆಱಕೆಯುಳ್ಳೊಡೆ ಬಿಟ್ಟು ಕಳೆ ಪೈಸರಕೆ ಸಮಯವಿದು ।
ಅರಸು ಪಂಥದ ವಾಸಿ ಮನಕು
ಬ್ಬರಿಸುವೊಡೆ ಪಣವೇನು ಹೇಳೆ
ಧರಣಿಪಾಲ ಯೆನುತ್ತ ರಿಂಗಣಗುಣಿದನಾಶಕುನಿ ॥ ೬೦

ಎಲವೊ ಸೌಬಲ ಪಾಂಡುವಿನ ಮ
ಕ್ಕಳು ಕಣಾ ಚತುರಂಬುನಿಧಿಪರಿ
ಲುಳಿತವಿಸ್ತರ ಕುರುನರೇಂದ್ರರ ಸೀಮೆ ಪರಿಯಂತ ।
ನೆಲವಿದೆಮ್ಮದು ನೃಪರೊಳಗೆ ನಾ
ವುಱಿಯೆ ಧರಣಿಪರಾರು ರಥಸಂ
ಕುಳವನೊಡ್ಡಿದೆ ಹತ್ತುಸಾವಿರವೆಂದನಾಭೂಪ ॥ [1] ೬೧

ಈರಥದೊಳೆಂಬತ್ತು ಸಾವಿರ [2]
ವಾರುವಂಗಳ ಕೂಟವಾಪರಿ
ವಾರವಿದೆಲಾ ರಪಣ ವೆಂದನು ಸುಬಲನಂದನಗೆ ।
ವೀರನಹೆಯ್ಕ ಧರಣಿಪತಿ ನೀ
ಸಾರಿಗಳ ಬಿಡು ಸೆಱೆಯ ಬಿಗಿದು ಮ
ಹಾರದಲಿ ನೀ ಸೋತೆ ಹೋಗೆಂದೊದಱಿದನು ಶಕುನಿ ॥ ೬೨

1 ನೊಡ್ಡುವೆನೊಂದು ಭಾರಿಗೆ ಹತ್ತುಸಾವಿರವ, ಚ. 2 ನಾಲ್ವತ್ತು ಸಾವಿರ, ಚ.

ಆವ ಕೌಳಿಕ ಮಂತ್ರಯಂತ್ರದ
ಡಾವರದ ಡೊಳ್ಳಾಸವಿಕ್ಕಿದ
ದೀವಸದ ಬೇಳುವೆಯನೇನೆಂಬೆನು ಮಹೀಪತಿಯೆ ।
ಆವ ವಸ್ತುವನರಸನೊಡ್ಡಿದೊ
ಡಾವ ವಹಿಬದಲನಿತ ಸೋಲಿಸಿ
ಕೈವಳಸಿದನೊ ಬಲ್ಲನಾವವನೆಂದನಾಭೂಪ ॥ ೬೩

ಅರಸ ನೀಗಿದೆ ಹತ್ತುಸಾವಿರ [1]
ವರರಥವನಿನ್ನೇನು ಸಾಕೀ [2]
ಸರಲಿ ನಿಲುವುದೊ ವಿತ್ತವುಂಟೇ ಮತ್ತೆ ಹೇಳೆನಲು ।
ಮರುಳೆ ಸೌಬಲ ಚಿತ್ರರಥನೀ
ನರಗೆ ಕೊಟ್ಟನು ತೇಜಿಗಳ ಕ
ತ್ತುರಿಯ ಬಣ್ಣದ ಹತ್ತುಸಾವಿರ ತುರಗವಿದೆ ಯೆಂದ ॥ ೬೪

ಆಡಿದನು ನೃಪನಾಕ್ಷಣಕೆ ಹೋ
ಗಾಡಿದನು ಖೇಚರರ ಖಾಡಾ
ಖಾಡಿಯಲಿ ಜೋಡಿಸಿದ ಹಯವನು ಹತ್ತುಸಾವಿರವ ।
ಹೂಡಿದನು ಸಾರಿಗಳ ಮರಳಿ
ನ್ನಾಡುವೊಡೆ ಪಣವಾವುದೈ ಮಾ
ತಾಡು ಧರ್ಮಜ ಯೆನೆ ಮಹೀಪತಿ ಧನವ ಚಿಂತಿಸಿದ ॥ ೬೫

ಅಗಣಿತದ ಧನವುಂಟು ಹಾಸಂ
ಗಿಗಳ ಹಾಯಿಕು ಸೋತ ವಸ್ತುವ
ತೆಗೆವೆನೀಗಳೆ ಶಕುನಿ ನೋಡಾ ತನ್ನ ಕೌಶಲವ ।

---

1 ಅರಸ ಕೇಳೆಂಬತ್ತುಸಾವಿರ ಖ.

2 ವರತುರಗರಥಸಿಕ್ಕಿದುವುಕೇಳ್, ಖ.

ದುಗುಣ ಹಲಗೆಗೆ ಹತ್ತು ಮಡಿ ರೇ
ಖೆಗೆ ಗಜಾಶ್ವರಥನಿಕಾಯುವಾ
ಜೆಗಳು ಸಹಿತಿದೆ ಸಕಲಸೈನಿಕರೆಂದನಾಭೂಪ ‖ ೬೬

ಆಯಿತಿದು ಪಣವೆಹುದಲೇ ನೃಪ
ಹಾಯಿಕಾ ಹಾಸಂಗಿಗಳ ಸಾ
ಹಾಯು ಕುರುಪತಿಗಿಲ್ಲ ಕೃಷ್ಣಾದಿಗಳು ಸಿಮ್ಮವರು ‖
ವಾಯು ಕಂದೆಱೆದರೆ ಸುಯೋಧನ
ರಾಯನುಪಚಿತಪುಣ್ಯವೆಕಟಾ
ದಾಯುವೇ ಬಾರೆನುತ ಜಱೆದಬ್ಬರಿಸಿದನು ಶಕುನಿ ‖ ೬೭

ಮತ್ತೆ ಹೇಳುವುದೇನು ಸೌಬಲ
ಬಿತ್ತಿ ಬಳದನು ಭೂಪನವರಿಗೆ
ತೆತ್ತನೈ ಸರ್ವಸ್ವಧನವನು ಸಕಲಸೈನಿಕರ ।
ಮತ್ತೆ ಪಣವೇನೆನಲು ಬಚ್ಚಿಕಱು
ವತ್ತು ಸಾವಿರ ಕರಿಕಳಭವೆಂ
ಬತ್ತು ಸಾವಿರತುರಗಶಿಶುಗಳನೊಡ್ಡಿದನು ಭೂಪ ‖ ೬೮

ಅರಸ ಕೇಳ್ಳೆ ತುರಗಶಿಶುವಾ
ಕರಿಕಳಭರಥಸೈನ್ಯ ಹಸ್ತಿನ
ಪುರಿಗೆ ಬಂದುದು ತಮ್ಮ ಕೂಡೆ ವಿನೋದವಿಭವದಲಿ ।
ಕುರುಪತಿಯು ವಶವಾಯ್ತು ಬಚ್ಚಿಕಿನ
ಮುಱಿಗುಮುರೆ ಮುಱಿಯಾನೆಗಳನು
ಬ್ಬರಿಸಿ ಸಾರಿಯು ಹೊಡಿದಾಗಳ ಸೋತನಾಭೂಪ ‖ ೬೯

ಅಕಟ ಸಾಲದೆ ಜೂಜು ನಿರ್ಬಾ
ಧಕವದೇತಕೆ ಶಿವ ಶಿವೆತ್ತಣ
ಶಕುನಿ ಯೆತ್ತಣ ಭರತಕುಲದ ಮಹಾಮಹೀಶ್ವರರು ।

ವಿಕಳಚೇಷ್ಟೆಯಿದೇನು ವೃದ್ಧ
ಪ್ರಕರಕಿದು ವಿಳಸವೆ ವಿಘಾತಿಗೆ
ಸಕಲಜನಸಮ್ಮತವೆ ಯೆಂದನು ಖಾತಿಯಲಿ ವಿದುರ ॥ ೬೦

* ವರಪುರೂರವನಹುಷಶಂತನು
ಧರಣಿಪತಿದುಷ್ಯಂತನಳಸಂ
ವರಣಕುರುವೀರಪ್ರತೀಪಪರಂಪರಾಗತರು । *
ಭರತಕುಲವಿದಱೊಳಗೆ ವಂಶೋ
ದ್ಧರಣರೇ ಬೆಳಗಿದರು ನೀನವ
ತರಿಸಿ ತಂದ್ಯೆ ತೊಡಕನೆಂದನು ಖಾತಿಯಲಿ ವಿದುರ ॥ ೬೧

ಸೋಲ ಮೆಚ್ಚಿದುದವರನೊಡ್ಡಿದ
ಮೇಲೆ ಹೇಱಿದುದೊಡ್ಡವೀಗಳು
ಮೇಲುಗೈ ನೀನಾದೆ ಕುಸಿದರು ಪಾಂಡುನಂದನರು ।
ಸೋಲವಿದು ಕಾಲಾಂತಕನ ಮೈ
ಸಾಲ ಸಾಱಿದೆನಕಟ ಸಾಕಿ
ನ್ನೇಱು ಕೌರವನೃಪತಿ ಯೆಂದನು ಖಾತಿಯಲಿ ವಿದುರ ॥ ೬೨

ಗೆಲಿದ ಧನ ದಕ್ಕುವುದೆ ಸೋತವ
ರಳುಕಿದವರೇ ಭೀಮಪಾರ್ಥರ
ಬಲುಹ ಬೆಸಗೊಳ್ಳಾ ತದೀಯಶ್ರವಣದೃಷ್ಟಿಗಳ ।
ಎಲೆ ಸುಯೋಧನ ವಿಷದ ಮಧುರವು
ಕೊಲುವುದೋ ಮನ್ನಿಸುವುದೋ ಕ
ಕ್ಕುಲಿತೆಗಿದು ಕಡೆ ಹಾರವಾಗಲಿ ಸಾಕು ತೆಗೆಯೆಂದ ॥ ೬೩

---

* ವರಪುರೂರವನಹುಷನವನೀ
ಶ್ವರತಿಲಕದುಷ್ಯಂತಕುರುಸಂ
ವರಣನಮಳಯಯಾತಿಯಾದಿಪರಂಪರಾಗತದ, ಚ.

ಗೆಲಿದ ದರ್ಪದ ದಡ್ಡಿತೆಗೆ ಸೌ
ಬಲನ ಬೀಷ್ಮೊಡು ತನ್ನ ಶಯ್ಯಾ
ವಳಿಯೊಳಾಡಲಿ ಮಧುರವಚನದಲಿವರ ಸಂತವಿಸು ।
ನೆಲನನೇಕಚ್ಛತ್ರದಲಿ ನೆಲೆ
ಗೊಳಿಸಿ ಬದುಕುವರಿದು ನಿಜಾನ್ವಯ
ದುಚಿವು ಬೆಸಗೊಳು ಬೇಗ ಹಿರಿಯರನೆಂದನಾವಿದುರ ॥ ೬೪

ಖೂಳನೆಂಬೆನೆ ಸಕಲಕಲೆಗಳ
ಬಾಳುಮನೆ ಗಡ ನಿನ್ನ ಬುದ್ಧಿ ವಿ
ಶಾಲಮತಿ ನೀನೆಂಬೆನೇ ಜಗದಜ್ಞರಧಿದೈವ ।
ಕೇಳಿದೊಡೆ ಮೋಣಹಿತಹಿತವನು
ಹೇಳುವುದು ಪಾಂಡಿತ್ಯ ನಿನ್ನನು
ಕೇಳದವರಾರೆನುತ ಜಱಿದನು ಕೌರವರ ರಾಯ ॥ ೬೫

ಹಿತವ ನೀನವರಿಗೆ ಕುಟುಂಬ
ಸ್ಥಿತಿ ವಿಳಂಬಕೆ ನಾವು ಕುಂತೀ
ಸುತರೊಡನೆ ಸಂಮೇಳವೆಮ್ಮಲಿ ವೈಮನಸ್ಯ ಗತಿ ।
ಕೃತಕಮಾರ್ಗದ ಮೋಡಿಯಲಿ ಪರಿ
ಚಿತನು ನೀನಲ್ಲಕ್ಷವಿಮಳ
ಕ್ರತುವಿಧಾನವನಕ್ಷದೀಕ್ಷಿತರಱಿವರಿದನೆಂದ ॥ ೬೬

ನೀ ಹಿತವನೇ ಶಕುನಿ ರಾಜ
ದ್ರೋಹಿಯೈ ಹುಸಿ ಯಲ್ಲ ನೀನೇ
ಹೋಹುದೈ ನಿಮಗಾವುದಭಿರುಚಿಯಾ [1] ದಿಗಂತರಕೆ ।
ಐಹಿಕಾಮುಷ್ಮಿಕದ ವಿಭವರೋ
ತ್ಸಾಹನಿಸ್ಪೃಹರಾವಲೇ ಸಂ
ದೇಹವೇ ನೀವಱಿಯಿರೆಂದನು ತೂಗಿ ತುದಿವೆರಳ ॥ ೬೭

---

1 ದಭಿಮತವಾ, ಚ.

ವಿಹಿತವೆಹುದೇ ಶಕುನಿ ವಿದುರನ
ಕುಹಕನುಡಿಗಳ ಕೇಳದಿರೆ ಗೆಲ
ವೆಹುದು ನಮ್ಮದು ಸಕಲಜನದಿದಿರಲಿ ದಿಗಂತರಕೆ ।
ಸಹಜವ್ರೋ ರಹವ್ರೋ ನೃಪಾಲರ
ಮಹಿಮೆಯೋ ಯೊದ್ಯೂತದನುಭವ
ಲಹರಿಯನು ನೀವೆಱಿದಿರೆಂದನು ಕೌರವರ ರಾಯ ॥ ೭೮

ಗುರುಗಳಸುರರು ಭೀಷ್ಮರೆಮ್ಮನು
ತೆರಳಿಚರು ಕೃಪ ನುಡಿಯನಯ್ಯನ
ಕೊರಳು ಕೊಂಕದು ಬಾಹ್ಲಿಕನ ಮನ ನೋಯದಿನ್ನಬರ ।
ಹಿರಿಯರವರೇನಜ್ಞರೇ ನೀ
ಪರಿಣತನೆ ನಿಷ್ಪ್ರಜ್ಞ ಶಠನೆಂ
ದಱಿಯನೇ ತಾನೆಂದು ಜಱಿದನು ಕೌರವರ ರಾಯ ॥ ೭೯

ಇವರ ಜನಪಾಧ್ವರವ ನಡಹಾ
ಯ್ದವೆನನಾಗಳ ದೇವಕೀಸುತ
ಸವಱಿದನು ನಮ್ಮಿವಿನೋದದ್ಯೂತಸಂಪದದ ।
ಸವನವಿಘ್ನವಿಕಾರಿಯನು ಪರಿ
ಭವಿಸುವವರಿಲ್ಲಾ ಶಿವಾ ಯೆಂ
ದವನಿಪತಿ ನಿಜಹುಬ್ಬಿನಲಿ ಹೂಚಿದನು ಪರಿಚರರ ॥ ೮೦

ಮಣಿವ ತಾನಲ್ಲೀಯನರ್ಘವ
ಕುಣಿಕೆಗೊಳಿಸಿದ ನೀಸಹಿತನಿ
ನ್ನಣೆಗಳೀ ಸೈಂಧವನನೀ ರಾಧೇಯಶಕುನಿಗಳ ।
ರಣದೊಳಗೆ ಭೀಮಾರ್ಜುನರ ಮಾ
ರ್ಗಣದ ಧಾರೆಗೆ ವೀರನಾರಾ
ಯಣನ ಸೇರಿಸಿ ಕೊಡುವನೆಂದನು ಖಾತಿಯಲಿ ವಿದುರ ॥ ೮೧

ಹದಿನಾಲ್ಕನೆಯ ಸಂಧಿ ಮುಗಿದುದು.

## ಹದಿನೈದನೆಯ ಸಂಧಿ.

### ಸೂಚನೆ

ರಾಯಪಾಂಡವರರಸಿ ಕಮಲದ
ಳಾಯತಾಕ್ಷಿಯ ಪರಿಭವವ ನೆಱೆ
ಕಾಯ್ದು ಸಲಹಿತು ವೀರನಾರಾಯಣನ ಸಿರಿನಾಮ ।

ಕೇಳು ಜನಮೇಜಯ ಧರಿತ್ರೀ
ಪಾಲ ವಿದುರನ ಮಾತು ಮುಱಿದು ನೃ
ಪಾಲನೆಚ್ಚರಿಸಿದನು ಕರ್ಣಸನ್ನೆಯಲಿ ಸೌಬಲನ ।
ಹೇೞು ಧರ್ಮಜ ಸೋತೆಲಾ ನಿ
ನ್ನಾಳುಕುದುರೆಯನಿನ್ನು ಸಾಕು ದ
ಯಾಳಲಾ ದುರ್ಯೋಧನನು ಧನವಿಲ್ಲ ನಿನಗೆಂದ ॥ ೧

ತೆಗೆವೆನೇ ಸಾರಿಗಳ ನಿನ್ನಯ
ನಗೆಮೊಗದ ಸಿರಿ ಸೀದು ಕರಿಯಾ
ಯ್ತುಗುಳುತಿದೆ ನಿನ್ನನುಜರಿಂಗಿತರೋಷಪಾವಕನ ।
ಸೊಗಸು ಬೀಯದು ರಪಣವಿಲ್ಲದ
ಬೆಗಡು ನೋಯದು ಕ್ಷಾತ್ರಧರ್ಮದ
ತೆಗಹು ಸಾಯದು ನಿನಗೆನುತ ಗಹಗಹಿಸಿದನು ಶಕುನಿ ॥ ೨

ಎಲವೊ ಸೌಬಲ ವಿತ್ತವಿಸರ
ಲಱಿವುದೇ ನೀ ನಗುವವೊಲು ನಂ
ಮೊಳಗು ಡಿಳ್ಳವೆ ರಪಣವಿದೆಲಾ ಬಹಳ ಭಂಡಾರ ।

ಸುಳಿಸು ಹಾಸಂಗಿಗಳ ಮೋಹರ
ಗೊಳಿಸು ಸಾರಿಯನೊಂದು ರೇಖೆಯ
ಬಟ್ಟೆಯಲೊಂದೇ ಕೋಟಿ ಹಾಯ್ಕೆಂದೊದಱಿದನು ಭೂಪ ॥ ೩

ದುಗುಣಕಿಕ್ಕಿದನರಸನಾಟಿಕೆಗೆ
ತೆಗೆದನವೆ ಮೂಱೆಂದು ನಾಲ್ಕ
ಕ್ಕುಗಿದನವನಿಪನೈದ ಕಳೆದನು ಬಹಳವನು ಶಕುನಿ ।
ತೆಗೆದ ನಿಮ್ಮಡಿಗರಸನವನಾ
ತ್ರಿಗುಣ ಪಂಚಕಸಪ್ತನವಕ
ಪ್ರಗುಣವೆಂದನು ಶಕುನಿ ಸೋಲಿಸಿದನು ಮಹೀಪತಿಯ ॥ ೪

ಎಣಿಸಿದನು ರೇಖೆಗಳನಿಮ್ಮಡಿ
ಗಣಿತಸಂಖ್ಯಾಸಿದ್ಧವಸ್ತುವ
ನೆಣಿಸಲರ್ಬುದಸಂಖ್ಯೆಯಾದುದು ಹಲಗೆ ಯೊಂದಱಲಿ ।
ಗುಣನಿಧಿಯೆ ಮಗುಳೊಡ್ಡಲಾಪರೆ
ಪಣವ ವಚನಿಸು ಕೇಳ್ವೆನೆನೆ ನೃಪ
ಗುಣಶಿರೋಮಣಿ ಧರ್ಮಸುತ ನಸುನಗುತಲಿಂತೆಂದ ॥ ೫

ಹೂಡು ಸಾರಿಯ ರೇಖೆರೇಖೆಗೆ
ಮೂಡಿತರ್ಬುದ ಧನ ಸುಯೋಧನ
ನಾಡಿ ನೋಡಲಿ ಹಾಯ್ಕು ಹಾಸಂಗಿಗಳ ಹಾಯ್ಕೆನುತ ।
ಆಡಿದನು ಧರ್ಮಜನು ಖಾಡಾ
ಖಾಡಿಯಲಿ ಸಾರಿಗಳೊಡನೆ ಹೋ
ಗಾಡಿದನು ಭಂಡಾರವನು ಜನನಾಥ ಕೇಳೆಂದ ॥ ೬

ಸಾರಿ ಸೋತುವು ಸೋಲ ನಿಮಗನು
ಸಾರಿ ನಿಮ್ಮೈವರು ವನಾಂತಕೆ
ಸಾರಿ ಸಾಕಿನ್ನೊಡ್ಡಲಾಪರೆ ಮತ್ತೆ ನುಡಿ ಧನವ ।

ಭೂರಮಣ ಹೇಳೆನಲು ರೇಖೆಯು
ಬಾರಿಯೊಡ್ಡಕೆ ಪದ್ಮಸಂಖ್ಯೆಯು
ಭೂರಿಧನವಿದೆ ದಾಯಕೆಂದನು ಧರ್ಮನಂದನನು ‖ ೭

ಬರಹಕಿಮ್ಮಡಿ ನೂಱುಮಡಿ ಸಾ
ವಿರದ ಮಡಿ ಪರಿಯಂತವಿಕ್ಕಿತು
ಹರುಷ ನಗೆ ಕೊನೆಯಾಯ್ತು ಹೆಚ್ಚಿತು ಕಲಿಮಲಾವೇಶ ।
ಸ್ಥಿರವೆ ಹಿಂಗಿತು ವಾಸಿ ಪಾಡಿನ
ದುರುಳತನವುಬ್ಬಿದ್ದಡಿಗಡಿ
ಗರಸನೊಡ್ಡಿದ ಮೇಲೆ ಮೇಲೊಡ್ಡುವನು ಜೋಡಿಸಿದ ‖ ೮

ತೀರಿತಿಂದ್ರಪ್ರಸ್ಥಮುರುಭಂ
ಡಾರ ತನ್ನರಮನೆಯ ಪೈಕದ
ವಾರಕದ ಭಂಗಾರವೊಡ್ಡಿತು ಕೋಟಿಸಂಖ್ಯೆಯಲಿ ।
ಸೇರಿತದು ಕುರುಪತಿಗೆ ರಾಯನ
ನಾರಿಯರ ರತ್ನಾಭರಣಶೃಂ
ಗಾರವೊಡ್ಡಿತು ಕೊಂಡು ಮುಱುಗಿತು ಖಡ್ಡತನ ನೃಪನ ‖ ೯

ನಕುಲಸಹದೇವಾರ್ಜುನರ ಮಣಿ
ಮಕುಟಕರ್ಣಾಭರಣಪದಕಾ
ದಿಕಸಮಸ್ತಾಭರಣವೊಡ್ಡಿತು ಹಲಗೆ ಯೊಂದಱಲಿ [1] ।
ವಿಕಟವಾಯಾವಿಷಮಕರ್ಮವ [2]
ನಕಟ ಬಲ್ಲನೆ ಸಾಧುಜನಸೇ
ವಕನು ಸೋತನಸಾಧ್ಯವಾವುದು ವಿಧಿಯ ಮಹಿಮೆಯಲಿ ‖ ೧೦

ಧರ್ಮರಾಯನನ್ನು ಕುರಿತು ಶಕುನಿಯ ಬಿರುನುಡಿಗಳು

ಸೋತೆಲಾ ಕೌಂತೇಯ ನಿಮಿಷಕೆ
ಬೀತುದೇ ನಿನ್ನಧಿಕಸಿರಿ ವಿ

1 ರೋಷತಿಮಿರದಲಿ, ಖ.　　　　2 ರೋಷತಿಮಿರವ, ಖ.

ಖ್ಯಾತಿ ಬಱತುದೆ ವೇಡೆಗೆದಱತೆ ಮನದ ವಾಸಿಗಳ ।
ಪ್ರೀತಿಯುಂಟೇ ನಿಮಗೆ ಮತ್ತೀ
ದ್ಯೂತದಲಿ ಧನವಿಲ್ಲಲಾ ಗ
ರ್ವಾತಿರೇಕವ ಬೀಱುಗೊಂಡಿರೆ ಯೆಂದನಾಶಕುನಿ ॥ ೧೧

ಆಗ ಧರ್ಮರಾಯನ ಚಿಂತೆ.

ಖಿನ್ನನಾದನು ರಾಜ್ಯಲಕ್ಷ್ಮಿಯು
ಬೆನ್ನ ಕಂಡನು ಕಳಚಿ ಹೋದ ನಿ
ಜೋನ್ನತಿಯುಲವನೀಶನಿದ್ದನು ಮುಱಿದ ಮಹಿಮೆಯಲಿ ।
ಇನ್ನು ಪಣವೇನೋ ವಿರೋಧಿಗ
ಳನ್ನು ಭಂಗಿಸಿ ನಗುವರಿನ್ನೇ [1]
ಕೆನ್ನನಿಕ್ಕಿಯೆ [2] ದ್ಯೂತವಿಜಯವ ಸಾಧಿಸುವೆನೆಂದ ॥ ೧೨

ಬಳಿಕ ನಕುಲಾದಿಗಳನ್ನು ಪಣವಾಗಿಡುವಿಕೆ.

ಎಲವೊ ಫಡ ಫಡ ಶಕುನಿ ಗರ್ವದ
ತಳ ಮುಱಿವುದೇ ನಿಮ್ಮ ದುರ್ಮತಿ
ಗಳಿಗೆ ಹೂಡಿದ ದುರ್ಗವಿದೆ ನಮ್ಮಂತರಂಗದಲಿ ।
ಉೞಿದ ಧನವೇಗುವುದು ಜೀವ
ಸ್ಥಳವಿದೇ ಮೇಲೊಡ್ಡುವೊಂದೇ
ಹಲಿಗೆಗೊಡ್ಡಿದೆನೆನ್ನ ನಕುಲನನೆಂದನಾಭೂಪ ॥ ೧೩

ವಾಸಿಗನುಜನನೊಡ್ಡಿದರೆ ನಮ
ಗೀಸರಲಿ ಭಯವೇನು ನೋಡುವೆ
ವೈಸಲೇ ಹಾಸಂಗಿಗಳ ನೃಪ ಹಾಯ್ಕು ಹಾಯ್ಕೆನುತ ।
ಆಶಕುನಿ ಪೂರ್ವಾರ್ಜಿತದ ಡೊ
ಳ್ಳಾಸದಲಿ ಡಾವರಿಸೆ ಧರ್ಮವಿ
ನಾಶಿ ನಕುಲನ ಗೆಲಿದು ಬೊಬ್ಬಿಱಿದವನಿಪಗೆ ನುಡಿದ ॥ ೧೪

---

1 ನುಡಿದರಿಂದಕ್ಕಿ, ಚ. 2 ನ್ನೆನ್ನನಿದಕ್ಕೀ, ಚ.

ಅರಸ ಸೋತೆಯೆ ನಕುಲನನು ಹೇ
ವರಿಸದಿರು ಹೇಱೊಡ್ಡವನು ನಿ
ಸ್ತರಣವೊಂದೇ ಹಲಗೆ ಸೋಲ್ವುದು ಹೇೞು ಪೇೞೆನಲು ।
ವರಿಸಿದೆನು ಸಹದೇವನನು ನೆಱೆ
ಮರಳಿಚುವೆನೆನ್ನಖಿಳವಸ್ತು
ತ್ಕರವನೆಂದನು ಧರ್ಮನಂದನನರಸ ಕೇಳೆಂದ ॥ ೧೫

ಹರಿಬದಲಿ ತನ್ನಖಿಳವಸ್ತೂ
ತ್ಕರವ ಮರಳಿಚುವನು ಮಹೀಪತಿ
ಕಿಱಿಯ ತಮ್ಮನ ವೊಡ್ಡಿದನು ಮಾದ್ರೀಕುಮಾರಕನ ।
ಅರಸುದಾಯವೆ ಬಾ ಜಯಾಂಗದ
ಸಿರಿಯೆ ಬಾ ಕುರುರಾಯರಾಜ್ಯೋ
ತ್ಕರದ ಸಿದ್ಧಿಯೆ ಬಾ ಯೆನುತ ಗರ್ಜಿಸಿದನಾಶಕುನಿ ॥ ೧೬

ಏನ ಬಣ್ಣಿಸುವೆನು ವಿಕಾರಿಗ
ಳೇನ ನೆನೆಯರು ಕಪಟವಿಧದಲಿ
ಮಾನನಿಧಿ ಸೋತನನುಜದ್ವಯಮಹಾಧನವ ।
ಗ್ಲಾನಿ ಚಿತ್ತದೊಳಿಲ್ಲ ಲೇಸು ಮ
ನೋನುರಾಗದೆ ಭೀಮಪಾರ್ಥರು
ತಾನಿದೊಪ್ಪಿಗೆ ಬದುಕಿದರು ಬೞಿಕೆಂದನಾಶಕುನಿ ॥ ೧೭

ಭೇದಮಂತ್ರವ ಮಾಡಿ ನಮ್ಮನು
ಭೇದಿಸುವ ಗಡ ಸುಬಲಸುತನಕ
ಟೀದುರಾತ್ಮನ ನೋಡಿರೈ ಸಭ್ಯರು ಶಿವಾ ಯೆನುತ ।
ಆದುರಾಗ್ರಹಿಲೋಕಜನಪರಿ
ವಾದಪದನಿರ್ಭೀತನಕ್ಷವಿ
ನೋದಕರ್ದಮಮಗ್ನನೊಡ್ಡಿದನಾಧನಂಜಯನ ॥ ೧೮

ಎಲೆ ಧನಂಜಯ ನಿನ್ನನೊಡ್ಡಿದ
ಛಲಿ ಯುಧಿಷ್ಠಿರನಲ್ಲಿ ಸೋತರೆ

ಬಲಿಕ ನಿನ್ನನೆ ಮಾರಿದನಲಾ ಕೌರವೇಂದ್ರನಿಗೆ ।
ತಿಳಿದು ಭೀಮಾರ್ಜುನರು ನೀವ್ ನಿ
ಮ್ಮೊಳಗೆ ಬಲಿದಿಹುದೆನಲು ಖತಿಯಲಿ
ಮುಳಿದು ಬೈದರು ಭೀಮಪಾರ್ಥರು ಜಱಿದು ಸೌಬಲನ ॥ ೧೯

ದೇಹಿಗೆರವೇ ದೇಹವೆಲವೋ
ದೇಹಿ ಭೂಪತಿ ಧರ್ಮಪುತ್ರನ
ದೇಹವಾವಿದಱೊಳಗೆ ನಿನ್ನ ಕುಮಂತ್ರಭಾಷಿತದ ।
ಊಹೆಕೊಂಬುದೆ ಕಪಟದಿಂದವ
ಗಾಹಿಸುವೆ ಸಾಕಿನ್ನು ಮೇಲಣ
ಗಾಹುಗತಕಗಳವ್ಮೊಳೆಂದರು ಜಱಿದು ಸೌಬಲನ ॥ ೨೦

ಮೇಲೆ ಹೇಱುವುದೇನು ಸಾರಿಯು
ಸಾಲು ಮುಱಿದುದು ಸೆಱೆಯು ಕಳವಿನ
ಕಾಲು ಕೀಲ್ಗಳನೆತ್ತ ಬಲ್ಲರು ಕುಟಿಲಕೋವಿದರ ।
ಹೇಱುವೆದಱಿಂ ಮುನ್ನ ಶಕುನಿಗೆ
ಬೀಱುವುವು ಬೇಕಾದ ದಾಯವು
ಕಾಳಕದ ವಿಧಿಪಾಶ ತೊಡಕಿತು ಕೆಡಹಿತರ್ಜುನನ ॥ ೨೧

ಸೋತಿರರಸರೆ ಮತ್ತೆ ಹೇಱೀ
ದ್ಯೂತಶಿಖಿಗಾಹುತಿಯನೆನೆ ಕುಂ
ತೀತನುಜನೊಡ್ಡಿದನು ವಿಗಡಬಕಾಸುರಾಂತಕನ ।
ಆತುದೊಂದರಘಳಿಗೆ ಸೌಬಲ
ಸೋತ ಧರ್ಮಜ ಗೆಲಿದನವನಿಪ
ಸೋತ ಸೌಬಲ ಗೆಲಿದನೆಂಬವೊಲಾಯ್ತು ಘನರಭಸ ॥ ೨೨

ಆಹಲಗೆ ಸೋತುದು ಯುಧಿಷ್ಠಿರ
ನೂಹೆ ಮುಱಿವುದು ಮುಂದುಗೆಟ್ಟನು

ರಾಹು ಹಾಯ್ದು ಹಿಮಾಂಶುಮಂಡಲದುೞಿದ ಕಳೆಯಂತೆ ।
ತೋಹಿನಲಿ ತುಟ್ಟಿಸಿದ ಮೃಗದವೊ
ಲೂಹೆಯುಡಿದುದು ಯಂತ್ರಸೂತ್ರದ
ಹೂಹೆ ಯಂತಿರೆ ಹಗೆಗೆ ತೆತ್ತನು ನೃಪತಿ ತನುಧನವ ॥ ೨೩

ಜನಪ ಮಾರಿದೆ ಭೀಮಸೇನಾ
ರ್ಜುನರ ಸಹಿತೊಡಹುಟ್ಟಿದರ ನಿ
ರ್ಧನಿಕನಾದೈ ಮತ್ತೆ ಬಿಡದೇ ದ್ಯೂತದುರ್ವ್ಯಸನ ।
ಎನಲು ಶಕುನಿಯ ಜಱಿದು ತಾನೇ
ಧನವಲಾ ಸಾಕೊಂದುಹಲಗೆಯ
ಲೆನಗೆ ಜಯವಿದೆ ದಾಯವೆಂದೊಡಱಿದನು ನರನಾಥ ॥ ೨೪

ಹೇಱಿಲೇನದನವರು ರಚಿಸಿದ
ಬೇಳುವೆಯನಾಶಕುನಿಯೊಡ್ಡಿದ
ಕಾಲುಕಣಿ ಯೊಳಾರು ಬೀಱಿರು ನೃಪತಿ ನಿಮಿಷದಲಿ ।
ಬೀಱುಕೊಟ್ಟನು ತನ್ನನಾಜನ
ಜಾಲ ವಿದ್ದುದು ಬಿಗಿದ ಬೆಱಗಿನೊ
ಳಾಲಿಸುತ್ತಿರೆ ಜೀಯ ಧನವೇನೆಂದನಾಶಕುನಿ ॥ ೨೫

ದ್ರೌಪದಿಯನ್ನು ಪಣವಾಗಿಡುವಿಕೆ.

ಎಲವೊ ಸಾಬಲ ಸಾಕಿದೊಂದೇ
ಹಲಗೆಯಲಿ ಸರ್ವಸ್ವವನು ತಾ
ನಿಳುಹುವೆನು ನೀಲಾಲಕಿಯನೊಡ್ಡುವೆನು ದ್ರೌಪದಿಯ ।
ಉೞಿದ ಧನವೆಮ್ಮೈವರಿಗೆ ನಿ
ಶ್ಚಲಿತವಿದು ಹೂಡೆನಲು ಹರುಷದ
ಳಿಯ ಚೌಪಟಮಲ್ಲ ಸಾರಿಯ ಸಾಲ ಜೋಡಿಸಿದ ॥ ೨೬

ಆಡಿದನು ಯಮಸೂನು ಮಿಗೆ ಹೋ
ಗಾಡಿದನು ಮನುಮಥನ ಖಾಡಾ

ಖಾಡಿಖಾತಿಯನಕಟ ಮದನನ ಮಂತ್ರದೇವತೆಯ |
ಕೂಡೆ ತಿವಿದನು ಕಟ್ಟಿದನು ಕಳಿ
ದೋಡಿಸಿದ ಸಾರಿಗಳ ಸೋಲದ
ಝಾಡಿಯಲಿ ಚಿತ್ರಿಸಿದನರಸನ ಚಿತ್ತಭಿತ್ತಿಯಲಿ || ೭೭

ಬಳಿಕ ಧರ್ಮರಾಯನ ಚಿಂತೆ.

ಬೆಳಗು ಬಲಿದುದು [1] ಮನದ ಮಿಡುಕಿನ
ಮುಗುಳ ಮುಂದಲೆಗೊಟ್ಟುದಱಿವಿನ
ಸೆಱಗು ಹಾಱಿತು ಲಜ್ಜೆ ಬೆಳಗಿತು ಬಿಟ್ಟ ಬೀದಿಯಲಿ |
ಉಱುಬಿತಪದೆಸೆ ರಾಜ್ಯಲಕ್ಷ್ಮಿಯ
ತುಱುಬು ಕೈದೊಳಸಾಯ್ತು ಹಗೆಗಾ
ನಱಿಯೆನರಸನ ಚಿತ್ತವೃತ್ತಿಯ ಭಾವಭಂಗಿಯಲಿ || ೭೮

ದುರ್ಯೋಧನಾದಿಗಳ ಸಂತೋಷ.

ಎಳೆನಗೆಯ ಕಟಕಿಗಳ ಹದುರಿನ
ಹಳಿವುಗಳ ಸನ್ನೆಗಳ ಸವಿ ಬ
ಯ್ಗುಳಿನ ಜಾಣಿನ ಸೋಹೆಗಳ ಜೊತ್ತಿನ ನವಾಯಿಗಳ |
ಬಳೆದೆಗಹಿನುಬ್ಬುಗಳ ಮೀಸೆಯೊ
ಳೞಿವ ಬೆರಳ್ಗಳ ಕರ್ಣಸೈಂಧವ
ಖಳತಿಲಕದುಶ್ಶಾಸನಾದಿಗಳಿದ್ದುದಾಚೆಯಲಿ || ೭೯

ಕಳವಳದ ಕಂದೆಱೆವೆಗಳ ಕುರು
ಕುಲದ ನಿರ್ಮೂಲನದ ನಿಶ್ಚಯ
ದೊಳಗುವೆಱೆವಾಳೋಚನೆಯ ನಿದ್ರಾವದ ತಾಳಿಗೆಯ |
ತಳಿತಮೌನದ ಬೀತಹರುಷದ
ಜಲದ ನಯನದಲಿರ್ದನಾ ನೃಪ
ಕುಲತಿಲಕಬಾಹ್ಲಿಕಭೀಷ್ಮದ್ರೋಣಗೌತಮರು || ೮೦

---

1 ಬಳಿದುದು, ಚ.

ಇಟ್ಟ ಮೂಗಿನ ಬೆರಳ ನೆಲದಲಿ
ನೆಟ್ಟ ಕಂಗಳ ಕಳವು ಜೂಜಿನ
ದಿಟ್ಟರಾಟಿಕೆ ಬಲದ ಬೆಱಗಿನ ಬಿಗಿದ ಖಾತಿಗಳ |
ತುಟ್ಟಿಸುವ ರಿಪುಗರ್ವಶಿಖಿಯಲಿ
ಸುಟ್ಟಕರಣಚತುಷ್ಟಯದಜಗ
ಜಟ್ಟಿಗಳು ಭೀಮಾರ್ಜುನಾದಿಗಳಿರ್ದರೀಚೆಯಲಿ ‖ ೨೧

ಹಾಸಗರ್ವದ ಮೌನದಲಿ ಸಂ
ತೋಷಗರ್ವದ ದುಗುಡದಲಿ ಸುವಿ
ಲಾಸಗರ್ವದ ಭೇದದಲಿ ಮದಗರ್ವ ಚಿಂತೆಯಲಿ |
ವೈಸಿಕದ ಕಣಿ ಕುಟಿಲಮಂತ್ರದ
ಮೀಸಲಱಿಯದ ಕುಹಕವಿದ್ಯಾ
ವಾಸಗೃಹಧೃತರಾಷ್ಟ್ರನಿದ್ದನು ವಿಕೃತಭಾವದಲಿ ‖ ೨೨

ಜನಪತಿಯ ಜಾಡ್ಯವನು ಭೀಮಾ
ರ್ಜುನರ ಸ್ವೈರಣೆಗಳನು ದುರ್ಯೋ
ಧನನ ದುಶ್ಚೇಷ್ಟೆಯನು ಶಕುನಿಯಪಾರಕೃತ್ರಿಮವ |
ತನತನಗೆ ಕಂಡರು ಮಹೀಸುರ
ಜನಪವೈಶ್ಯಚತುರ್ಥರುಕ್ಕಿದ
ಮನದೊಳಱಲಿತು ಬೈದರಚ್ಯುತಹರಚತುರ್ಮುಖರ ‖ ೨೩

ಶಕುನಿಯು ತನ್ನನ್ನು ಹೊಗಳಿಕೊಂಡುದು.

ಗೆಲಿದು ಕೊಟ್ಟೆನು ಸಕಲಚಾತು
ರ್ಬಲವನಖಿಳಭಂಡಾರಸಹಿತ
ಗ್ಗಳೆಯರೈವರ ಜಯಿಸಿ ಕೊಟ್ಟೆನು ಕಮಲಮುಖಿಸಹಿತ |
ಕಳಸವಿಟ್ಟೆನು ಕೊಟ್ಟಭಾಷೆಗೆ
ಯೆಲೆ ಸುಯೋಧನ ಯೊಂದುನಯನಾಂ
ಗುಲಿಯ ಸಂಕೇತದಲಿ ಸನ್ನೆಯ ಮಾಡಿದನು ಶಕುನಿ ‖ ೨೪

ನ್ಯಾಯವೆಮ್ಮದು ಮುನ್ನ ಸೋತಿರಿ
ಜೇಯ ನಿಮ್ಮೊಡಹುಟ್ಟಿದರು ಸಹಿ
ತಾಯತಾಕ್ಷಿಯ ಬಳಿಕ ಸೋತಿರಿ ಬಲುಹ ಮಾಡಿವೆಲೆ ।
ರಾಯನೊಲಿದುದ ಮಾಡಲಾವ
ನ್ಯಾಯವರ್ತಿಗಳಲ್ಲಲೇ ಬೆಸ
ಸಾ ಯುಧಿಷ್ಠಿರ ಯೆಂದು ಕೈಗಳ ಮುಗಿದನಾಶಕುನಿ ॥ ೩೫

ಆಗ ವಿದುರನನ್ನು ಕುರಿತು ದುರ್ಯೋಧನನ ವಕ್ರ ವಚನಗಳು.

ವಿದುರ ಬಾರೈ ನಮ್ಮ ವಶ ದ್ರೌ
ಪದಿಯ ಕರೆ ಬೆಸಗೊಂಬ ತೊತ್ತಿರ
ಸದನದಿಕ್ಕಿಯೊ ರಾಣಿವಾಸದ ಮನೆಯುಪೇಕ್ಷಿತವೊ ।
ಬೆದಱಬೇಡಿನ್ನುಬುಜಮುಖಿಗಾ
ವುದು ಮನೋರಥವೇನು ಹದನೆಂ
ಬುದ ಲತಾಂಗಿಯ ಕರೆಸಿ ಯೆಂದನು ಕೌರವರ ರಾಯ ॥ ೩೬

ಆಗ ವಿದುರನು ದುರ್ಯೋಧನನ್ನು ಧಿಕ್ಕರಿಸಿ ಮಾತನಾಡಿದುದು.

ಸಿಡಿಲ ಪಟ್ಟಣಗಟ್ಟಿ ಶಾಖವ
ಗೊಡುವರೇ ಹರನೇತ್ರವಹ್ನಿಯೊ
ಳಡಬಳವ ಸುಡಬಗೆವರೆ ಮರುಳೇ ಮಹೀಪತಿಯೆ ।
ಹೆಡತಲೆಯ ತುಱಿಸುವರೆ ಹಾವಿನ
ಹೆಡೆಯೊಳಕಟಾ ಪಾಂಡುಪುತ್ರರ
ಮಡದಿ ತೊತ್ತಹಳೇ ಶಿವಾ ಯೆಂದಱಿಲಿದನು ವಿದುರ ॥ ೩೭

ಕಾಳಕೂಟದ ತೊಱೆಗಳಲಿ ಜಲ
ಕೇಳಿಯೇ ಕಾಲಾಂತಕನ ದಂ
ಷ್ಟ್ರಾಳಿಯಲಿ ನವಿಲುಯ್ಯಲೆಯ ನೀವಾಡಲಾಪಿರಲ ।
ಕಾಲರುದ್ರನ ವಿಲಯನಾಟ್ಯದ
ಕೇಳಿಕೆಗೆ ನೀವರ್ತಿಕಾಱಱೆ
ಹೋಲದೈ ಶಿವ ಯೆನುತ ಕಂಬನಿದುಂಬಿದನು ವಿದುರ ॥ ೩೮

ವಿದುರನ ಸುವಾಕ್ಯಗಳು.

ಬಡಗಲುತ್ತರಕುರುನರೇಂದ್ರರ
ನಡುಗಿಸಿದರುದಯಾದ್ರಿತನಕವೆ
ನಡೆದು ಮುಱಿದರು ಮೂಡಣರಸುಗಳತುಲಭುಜಬಲರ [1] |
ಪಡುವಲಗಣಿತಯವನರಿತ್ತಲು
ಗಡಿ ವಿಭೀಷಣರೀಮಹೀಶರ
ಬಡಿದ ಪಾಂಡವರರಸಿ ತೊತ್ತಹಳೇ ಶಿವಾ ಯೆಂದ ‖ ೩೯

ಸುರಕರಿಯು ನೆಲಕಿೞಿಹಿ ಮಾತೆಯು
ಧರೆಯುೞಿಯೆ ನೋಸಿಸಿದನಿಂದ್ರನ
ಹಿರಿಯುವುದ್ಯಾನವನು ವಹ್ನಿಗೆ ಕೊಟ್ಟು ಭುಂಜಿಸಲು |
ಅರಸ ಕೌರವ ಮರುಳೆ ಮೃತ್ಯುವ
ಬರಿಸಿ ಕೊಂಬರೆ ಮಂದಿರಕೆ ಸೀ
ನೞಿಯೆ ಫಲುಗುಣನೊಡನೆ ಕಪಸವ ಮಸವರೇ ಯೆಂದ ‖ ೪೦

ತಿರುವ ಕೊರಳಲಿ ತೊಡಿಸಲಾರದೆ
ತೆರಳಿದರು ಚತುರಂಗಪವನೀ
ಶ್ವರರು ಮಾಗಧಚೈದ್ಯಮೊದಲಾದತುಳಭುಜಬಲರು |
ತಿರುವನೇಱಿಸಿ ಧನುವನುಗಿದ
ಬ್ಬರಿಸಿ ಗಗನದ ಯಂತ್ರಮತ್ಸ್ಯವ
ಮುಱಿದ ಪಾಂಡವರರಸಿ ತೊತ್ತಹಳೇ ಶಿವಾ ಯೆಂದ ‖ ೪೧

ಬಕನ ಮುಱಿದರು ವನದಲು ಹಿಡಿಂ
ಬಕನ ಹಣಿದರು ಮಾಗಧನ ಸು
ಪ್ರಕಟಬಲವೆಂಬುಜದ ನಾಳವನಾನೆ ಕೀೞ್ವಂತೆ |
ಸಕಲನೃಪಜನವೆೞಿಯೆ ಸೀೞಿದ
ನಕಟ ಮಾರಿಯು ಜೇಟವೇ ಪಾ
ತಕವಲಾ ಪಾಂಚಾಲಿ ತೊತ್ತಹಳೇ ಶಿವಾ ಯೆಂದ ‖ ೪೨

1 ಮುಡದಿ ತೊತ್ತಹಳೇ ಶಿವಾಯೆಂದೞಿಲಿದನು ವಿದುರ, ಡ.

ಸೋಲಿಸಿದೆನೀನೀಗಳೀನರ
ಪಾಲಕರ ಜೂಜಿನಲಿ ಮೇಲಣ
ಕಾಳಗದ ಕಣನೊಳಗೆ ಕವಿತಹ ಕೋಲ ತೋಹಿನಲಿ ।
ಸೋಲ ವೊಂದಕೆ ನೂಱ ನೂಱಱ
ಮೇಲೆ ಸಾಸಿರಸಾವಿರದ ವೈ
ಸಾಲ ಲಕ್ಷವನಂತವಾಗಿಯೆ ತೆಗೆವೆರಿವೆರೆಂದ ॥ ೪೩

ಎಳೆದು ಕರೆಸಾ ದ್ರೌಪದಿಯ ನೀ
ಕಳಕಳಕೆ ವೈಗೊಟ್ಟವೋಲ್ ನಿ
ಶ್ಚಲಿತರಿಹರತಿಸಮತೆಯಲಿ ತತ್ವಮಯಪರಿಯಂತ ।
ಬೞಿಕ ನೂವ ರ ಸತಿಯರಕ್ಕೈಯ
ಕಳಕಳದ ಬಿಡುಮುಡಿಯ ಬಸುಱಿನ
ಕಳದ ಬಿಱುವೊಯಿಲುಗಳ ಭಂಗಿಯ ಕಾಂಬಿರೆಲೆ ಯೆಂದ [1] ॥ ೪೪

ದ್ರೌಪದಿಯ ಕರೆತರಲು ದುರ್ಯೋಧನನು ಪ್ರಾತಿಕಾಮಿ
ಕನನ್ನು ಕಳುಹಿಸುವಿಕೆ.

ಇವನವರ ಬಹಿರಂಗಜೀವ [2]
ವ್ಯವಹರಣೆಯಾತನು ವೃಥಾ ನಾ
ನಿವನ ಕೆಣಕಿದೆನಕಟ ಬೋಧಭ್ರಾಂತಬಾಹಿರನ ।
ಇವನಿರಲಿ ಬಾ ಪ್ರಾತಿಕಾಮಿಕ
ಯುವತಿಯನು ಕರೆ ಹೋಗು ನೀನೆನ
ಲವ ಹಸಾದವ ಹಾಯ್ಕಿ ಬಂದನು ದೇವಿಯರಮನೆಗೆ ॥ ೪೫

ಬಂದು ಬಾಗಿಲ ಗಾಹಿಗಳ ಕರೆ
ದೆಂದವರಸಿಗೆ ಬಿನ್ನವಿಸಿ ತಾ
ಬಂದ ಹದನನು ಕಾರ್ಯವುಂಟೆನೆ ಹಲವು ಬಾಗಿಲಲಿ ।

---

1 ಭೇದ, ಡ. 2 ಕಾಂಬರವರೆಂದ, ಕ. ಖ.

ಬಂದರಲ್ಲಿಯದಲ್ಲಿಗಱುಹಿಸ
ಲಿಂದುಮುಖಿ ಕೇಳಿದಳು ಬರಪೇ
ಚೆಂದೊಡಾತನ ಹೊಗಿಸಿದರು ಹೊಕ್ಕನು ಸತೀಸಭೆಯ ॥ ೪೬

ಹೊಳೆವ ಕಂಗಳ ಕಾಂತಿಗಳ
ಥಳಥಳಿಪ ವದನ [1] ಪ್ರಭೆಯು ರತ್ನಾ
ವಳಿಯು ಬಹುವಿಧರಶ್ಮಿಗಳ ಲಾವಣ್ಯಲಹರಿಗಳ ।
ಎಳನಗೆಯು ಸುಳಿವಲ್ಲ ಮುಕ್ತಾ
ವಳಿಯು ನಖಕಾಂತಿಗಳ ಬೆಳಗಿನ
ಬಳಗವೆನೆ ಬಾಲಿಕೆಯರಿರ್ದರು ಸತಿಯು ಬಳಸಿನಲಿ ॥ ೪೭

ಗಿಳಿಯ ಮೆಲ್ನುಡಿಗಳ ವಿನೋದದಿ
ಕೆಲರು ವೀಣಾರವದ ರಹಿಯಲಿ
ಕೆಲರು ಸರಸಸುಸಂಗಸಂಗೀತದ ಸಮೋಧಿಯಲಿ ।
ಕೆಲರು ನೆತ್ತದಲಮೆಳವುಕ್ತಾ
ವಳಿಯ ಚೆನ್ನೆಯ ಚದುರೆಯರು ಕಂ
ಗೊಳಿಸಿದರಬಲೆಯ ಮಣಿಮಂಚದ ಸುತ್ತುವಳಯದಲಿ ॥ ೪೮

ಸಕಲಶಕ್ತಿಸ್ಫುರಿತವಿಮಳಾಂ
ಬಿಕೆಯವೊಲ್ ವರಮಂತ್ರದೇವೀ
ಪ್ರಕರಮಧ್ಯದಿ ಶೋಭಿಸುವ ಸಾವಿತ್ರಿಯಂದದಲಿ ।
ವಿಕಟರಶ್ಮಿನಿಬದ್ಧರತ್ನ
ಪ್ರಕರಮಧ್ಯದ ಕೌಸ್ತುಭದ ವೋಲ್
ಚಕಿತಬಾಲಮೃಗಾಕ್ಷಿ ಮೆಱೆದಳು ಯುವತಿಮಧ್ಯದೊಳು ॥ ೪೯

ಸುತ್ತಲೆಸೆಯೆ ವಿಲಾಸಿನೀಜನ
ಹತ್ತುಸಾವಿರ ನಡುವೆ ಕಂಡನು
ಮತ್ತಕಾಶಿನಿಯನು ಪತಿವ್ರತೆಯರ ಶಿರೋಮಣಿಯ ।

[1] ರದನ, ಡ.

ಹತ್ತಿರೈತರಲಂಜಿದನು ತ
ನ್ನುತ್ತಮಾಂಗಕೆ ಕರಯುಗವ ಚಾ
ಚುತ್ತ ಬಿನ್ನಹ ಮಾಡಿದನು ಪಾಂಚಾಲನಂದನೆಗೆ ॥ ೫೦

ಅವನು ದ್ರೌಪದಿಯ ಬಳಿ ಬಂದು ವಿಜ್ಞಾಪಿಸಿದುದು.

ತಾಯೆ ಬಿನ್ನಹವಿಂದು ನಿಮ್ಮಯ
ರಾಯ ಸೋತನು ಜೂಜಿನಲಿ ಕುರು
ರಾಯ ಗೆಲಿದನು ಕೋಶವನು ಕರಿತುರಗರಥಸಹಿತ ।
ನೋಯಲಾಗದು ಹಲವುಮಾತೇ
ನಾಯುಧಿಷ್ಠಿರನೃಪತಿ ಸೋತನು
ತಾಯೆ ಭೀಮಾ[1] ರ್ಜುನನಕುಲಸಹದೇವ[2] ನೀವ್‌ಸಹಿತ ॥ ೫೧

ಅರಳಿದಂಬುಜವನಕೆ ಮಂಜಿನ
ಸರಿಯು ಸುರಿವಂದದಲಿ ಸುಗ್ಗಿಯ
ಸಿರಿಯ ಹೊಸಬೆಳುದಿಂಗಳನು ಬಲುಮುಗಿಲು ಕವಿದಂತೆ ।
ಚರನ ಬಿನ್ನಹಕರಸಿ ಮೊದಲಾ
ಗಿರೆ ಸಮಸ್ತಸಖೀಜನದ ಮುಖ
ಸರಸಿರುಹ ಬಾಡಿದುದು ಮುಸುಕಿತು ಮೌನಮಯಜಲದ । ೫೨

ದೂತ ಹೇಳ್ಳೈ ತಂದೆ ಜೂಜನ
ಜಾತರಿಪು ವಾಡಿದನೆ ಸೋತನೆ
ಕೈತವದ ಬಲೆಗಾಱರವದಿರು ಶಕುನಿಕೌರವರು ।
ದ್ಯೂತದಲಿ ಮುನ್ನೇನನೊಡ್ಡಿಯೆ
ಸೋತನೆನ್ನನು ಶಿವ ಶಿವಾ ನಿ
ರ್ಧೂತಕಿಲ್ಬಿಷನರಸನೆಂದಳು ದ್ರೌಪದೀದೇವಿ ॥ ೫೩

ಸೋತಕ್ರಮವನ್ನು ವಿಚಾರಿಸಿದುದು.

ತಾಗಿದುದಲಾ ನಾರದಾದ್ಯರ
ನಾಗತವನಱುಹಿದರು ಹಿಂದೆ ವಿ

---

1 ವಾಯುಜಾ, ಡ. 2 ದೇವಾದಿ, ಡ.

ಯೋಗವಾಯ್ತೇ ಲಕ್ಷ್ಮಿಗಿಂದ್ರಪ್ರಸ್ಥಪುರವರದ ।
ಹೋಗಲಿದು ಮುನ್ನೇನನೊಡ್ಡಿಯೆ.
ನೀಗಿದನು ಗಡ ತನ್ನನಿಂತಿದ
ರಾಗುಹೋಗೆಂತೆಂದು ನುಡಿದಳು ಪ್ರಾತಿಕಾಮಿಕಗೆ ॥ ೫೪

ಮೊದಲಲರ್ಥವ ಹೆಸರುಗೊಂಡೊ
ಡ್ಡಿದನು ಸೋತನು ಮಗುಟೆ ಮಗುಟೊ
ಡ್ಡಿದನು ಹೇರಾಳದಲಿ ಧನವನು ಕರಿಘಟಾವಳಿಯ ।
ಕುದುರೆ ರಥ ನಿಮ್ಮಡಿಯ ಮೇಳದ
ಸುದತಿಯರನೊಡ್ಡಿದನು ಸೋತನು
ತುದಿಯಲನುಜರನೊಡ್ಡಿ ಸೋತನು ದೇವಿ ಕೇಳೆಂದ ॥ ೫೫

ಬಳಿಕ ತನ್ನನು ಸೋತನಲ್ಲಿಂ
ಬಳಿಕ ನಿಮ್ಮಡಿಗಳಿಗೆ ಬಂದುದು
ಖಳರು ಶಕುನಿಸುಯೋಧನರು ನೀವಾಗಳೆಂದಿರಲೆ ।
ಅಳುಕಬೇಡಿನ್ನೇನು ಭೂಪತಿ
ತಿಲಕ ತನ್ನನು ಮುನ್ನ ಸೋತನು
ಬಳಿಕಲೆನ್ನನು ಸೋತನೇ ಹೇಳೆಂದವಳಂಬುಮುಖಿ ॥ ೫೬

ಅಹುದು ತನ್ನನೆ ಮುನ್ನ ಸೋತನು
ಮಹಿಳಗೊಡ್ಡಿದೆನೆಂದು ನಿಮ್ಮನು
ಮಹಿಪ ಸೋತನು ತಾಯೆ ಬಿಜಯಂಗೈಯ್ಯ ಬೇಹುದೆನೆ ।
ವಿಹಿತವಿದು ಮಾನುಷವೆ ದೈವದ
ಕುಹಕವೈ ಸಲೆ ಮಗನೆ ತಾನೇ
ಬಹೆನು ನೀ ಹೋಗೊಮ್ಮೆ ಹೇಳೀಮಾತನಾಸಭೆಗೆ ॥ ೫೭

ಆಗ ದ್ರೌಪದಿಯು ಬರಲು ಒಪ್ಪದೇ ಹೋಗುಪಿಕೆ.

ಮುನ್ನ ತನ್ನನು ಸೋತ ಬಳಿಕಿನೊ
ಳೆನ್ನ ಸೋತರೆ ಸಲುವುದೇ ಸಂ
ಪನ್ನವಿಮಳಜ್ಞಾನರಖಿದೀಪ್ರಶ್ನೆಗುತ್ತರವ ।

ಎನ್ನ ಮೆಚ್ಚಿಸಿ ಕೊಡಲಿ ತಾ ಬಹೆ
ನಿನ್ನ ಹೋಗೆನಲವನು ಭಯದಲಿ
ತನ್ನೊಳಗೆ ಬೆದರುತ್ತ ಬಂದನು ಕೌರವನ ಹೊರೆಗೆ ॥ ೫೮

ಆವನು ಸಭೆಗೆ ಬಂದು ಆವರ್ತಮಾನವನ್ನು ಹೇಳುವಿಕೆ

ಜೀಯ ದೇವಿಯರೆಂದಮಾತಿದು
ರಾಯ ಮುನ್ನವೆ ತನ್ನ ಸೋತಬು
ಜಾಯತಾಕ್ಷಿಯ ಬಳಿಕ ಸೋತೊಡೆ ಧರ್ಮಸೂಕ್ಷ್ಮದಲಿ ।
ರಾಯಸಭೆಯಲಿ ಹಿರಿಯರರಿದಿದ
ಜಾಯತವ ಹೇಳಿದರೆ ಬಹೆನೆಂ
ದಾಯುವತಿ ಬಿನ್ನಹವ ಮಾಡಿದಳೆಂದು ಕೈಮುಗಿದ ॥ ೫೯

ರಾಯ ಸೋತನು ತನ್ನನಾವೆ
ನ್ಯಾಯದಲಿ ತಹುದಿಲ್ಲ ತೊತ್ತಿರ
ಲಾಯದಲಿ ಕೂಡುವೆವು ಕರೆ ಯೆನಲಿವನ ಗರಹೊಡೆದು ।
ವಾಯುಸುತನಂಜಿಸುವನೆಂದೀ
ನಾಯಿ ಬೆದರಿದನಕಟ ದೂತನ
ಬಾಯ ನೋಡಾ ಯೆಂದು ಬೈದನು ಕೌರವರ ರಾಯ ॥ ೬೦

ದುಶ್ಶಾಸನನನ್ನು ಕಳುಹಿಸುವಿಕೆ.

ತಮ್ಮ ಬಾರೈ ಹೋಗು ನೀ ದಿಟ
ನಮ್ಮವರೆ ಹಿಡಿದೆಳದು ತಾ ನೃಪ
ರೆಮ್ಮ ಕಿಂಕರರೈವರಿವರಿದ್ದೇನ ಮಾಡುವರು ।
ತಮ್ಮ ಕರ್ಮವಿಪಾಕಗತಿ ತಮ
ತಮ್ಮನೇ ಕಾಡುವುದು ಧರ್ಮದೊ
ಳೆಮ್ಮ ಕಾರಣವಲ್ಲ ನೀ ಹೋಗೆಂದು ನೇಮಿಸಿದ ॥ ೬೧

ಗಾಳಿಯುಳ್ಳಯ ನಿಬಿಡಿಯಲಗ್ನಿ
ಜ್ವಾಲೆಯಲಿ ತಡೆಯುವೆ ಕಡುಹಿನ
ಕಾಳಕೂಟದ ನದಿಗೆ ನಂಜಿನ ಹೊನಲು ಬೆರಸಿತಲೆ ।

ವಾಳೆಯವೆ ದುಶ್ಶಾಸನನು ಜಗ
ದೂಱಗದ ದುಱುದುಂಬಿ ಕುರುಪತಿ
ಮೇಳೆ ನೇಮಿಸಲುಚಿತಗೈವನೆ ಭೂಪ ಕೇಳೆಂದ ॥ ೬೦

ಹರಿದನವ ಬೀದಿಯಲಿ ಬಿಡುವಲೆ
ವೆರಸಿ ಸತಿಯರಮನೆಗೆ ಬಾಗಿಲ
ಚರರು ತಡೆದರೆ ಮೆಟ್ಟಿವನು ತಿವಿದನು ಕಠಾರಿಯಲಿ ।
ತರುಣಿಯರು ಕಂಡಂಜಿ ವೊಕ್ಕರು
ಸರಸಿಜಾಕ್ಷಿಯ ಮಱೆಯನಾಖಳ
ನುರುವಣಿಸಿದನು ರಾಹು ತಾರಾಧಿಪನ ತಗುಳ್ವಂತೆ ॥ ೬೭

ದ್ರೌಪದಿಯನ್ನು ಕುರಿತು ದುಶ್ಶಾಸನನ ಕ್ರೂರವಚನಗಳು.

ಬಂದನವನಬುಜಾಕ್ಷಿ ಯಿದಿರಲಿ
ನಿಂದನಲೆಗೇ ಗರುವತನವಿದು
ಹಿಂದೆ ಸಲುವುದು ಸಲ್ಲದಿದು ಕುರುರಾಜಭವನದಲಿ ।
ಇಂದು ಮೆಱೆವರೆ ನಮ್ಮ ತೊತ್ತಿರ
ಮುಂದೆ ಮೆಱೆ ನಡೆ ಮಂಚದಿಂದಿೞಿ
ಯೆಂದು ಜಱಿದನು ಕೌರವಾನುಜನಾಮಹಾಸತಿಯ ॥ ೬೪

ಜನಪನನುಜನು ನೀನೆನಗೆ ಮೈ
ದುನನಲಾ ತಪ್ಪೇನು ಯಮನಂ
ದನನು ಸೋಲಲಿ ತನ್ನ ಪ್ರಶ್ನೆಗೆ ಕೊಡಲಿ ಮಱುಮಾತ ।
ಅನುಜ ಕೇಳ್ಕೈ ಪುಷ್ಪವತಿಯಾ
ನೆನಗೆ ರಾಜಸಭಾಪ್ರವೇಶನ
ವನುಚಿತವಲೇ ಹೇಳೆನಲು ಖಳರಾಯ ಖತಿಗೊಂಡ ॥ ೬೫

ಎಲ್ಲಿಯದು ದುಷ್ಪ್ರಶ್ನೆ ಮಱುಮಾ
ತೆಲ್ಲಿಯದು ನೀ ಪುಷ್ಪವತಿಯಾ
ಗಲ್ಲಿ ಫಲವತಿಯಾಗು ನಡೆ ಕುರುರಾಜಭವನದಲಿ ।

ಖುಲ್ಲರೈವರು ತಮ್ಮ ಸೋತರು
ಬಲ್ಲವಿಕೆಯುಚಿತವನು ಮೌಳಿಯ
ನಲ್ಲಿ ತೋಱೂ ಯೆನುತ ತಪ್ಪಿದನಹಹ ಸಿರಿಮುಡಿಗೆ ‖ ೬೬

ಆಮಹೀಶಕ್ರತುವರದೊಳು
ದ್ದಾಮಮುನಿಜನರಚಿತಮಂತ್ರ
ಸ್ತೋಮಪುಷ್ಕರಪೂತಪುಣ್ಯಜಲಾಭಿಷೇಚನದ ।
ಶ್ರೀಮುಡಿಗೆ ಕೈಯಿಕ್ಕಿದನು ಮರ
ಕಾಮಿನೀನಿಕುರುಂಬ ಮಕಟಕ
ಟಾ ಮಹಾಸತಿ ಶಿವ ಶಿವಾ ಯೆಂದಂದೊದಱಿತಲ್ಲಲ್ಲಿ ‖ ೬೭

ಕೆದಱಿದುವು ಸೂಸಕದ ಮುತ್ತಗ
ಳುದುರಿದುದು ಸೀಮಂತಮಣಿಗಳ
ಹೊದಱು ಮುಱಿದುದು ಕರ್ಣಪೂರದ ಮೌಕ್ತಿಕಾವಳಿಯು[1] ।
ಸುದತಿಯರು ಗೋಳಿಡುತ ಬರೆ ಮೆ
ಟ್ಟಿದನು ಪಾತಕಿ ಕಾಲೊಳಡ್ಡಬಿ
ದ್ದುದು ಸಖೀಜನವೆಳೆದು ಝಾಡಿಸಿ ಜಱೆದು ಜೋಂಪಿಸಿದ ‖ ೬೮

ಮಣಿದ ತನುವಿನ ವೇಗಗತಿಯಲಿ
ಝಣಝಣಿತನೂಪುರದ ರವಕಂ
ಕಣದ ಧ್ವನಿ ಕೇವಣದ ಹೊಂಗಿಱುಗೆಜ್ಜೆಗಳ ರಭಸ ।
ಗಣಿಕೆಯರ ಕೆಳದಿಯರ ಹಾ ಹಾ
ರಣಿತಕಿವು ನೆರವಾದುವಾಪ
ಟ್ಟಣವ ತುಂಬಿತು ಶೋಕರಸವೇನೆಂಬೆನದ್ಭುತವ ‖ ೬೯

ಹಡಪದವರಾಸೀಗುರಿಯ ಕ
ನ್ನಡಿಯವರು ಮೇಳದ ವಿನೋದದ
ನುಡಿ ನಗೆಯ ಸಖಿಯರು ಪಸಾಯಿತೆಯರಾಪ್ತದಾಸಿಯರು ।

1 ರತ್ನದೋಲೆಗಳು, ಚ.

ದ್ರೌಪದಿಯನ್ನು ಸಭೆಗೆ ಕರೆತಂದುದು.

ಒಡನೆ ಬಂದರು ಕಂಬನಿಯ ಬಿಸು
ಮುಡಿಯ ಹಾಹಾರವದ ರಭಸದ
ನಡೆಯಲಖಿಳವಿಳಾಸಿನಿಯರು ಸಹಸ್ರಸಂಖ್ಯೆಯಲಿ ‖ ೭೦

ನಗೆಮೊಗವನೊಮ್ಮೆಯು ಪಯೋಧರ
ಯುಗವ ನೋಡುವ ಸಖ್ಯದಲಿ ದೃ
ಗ್ಯುಗಳಜಲಬಿಂದುಗಳಿ ಗಾಜಳಬಿಂದು ಸುರಿವಂತೆ ।
ಒಗುವ ಖಂಡಿತಹಾರಮುಕ್ತಾ
ಳಿಗಳು ಮೊಱೆದುವು ಮಾನಿನಿಯರು
ಬ್ಬೆಗದ ರೋದನರೌರವದೊಳ್ಳೃತಂಪಳಿಂದುಮೊಱೆ ‖ ೭೧

ಬೆದಱುಗಂಗಳ ಬಿಟ್ಟಮಂಡೆಯ[1]
ಹುದಿದ ಹಾಹಾರವದ ತೊಡಕಿದ
ಪದಯುಗದ ಮೇಲುದಿನ ಬೀದಿಯ ಧೂಳಿಧೂಸರದ ।
ವದನಕಮಲದ ಖಳನ ಪಾಮಾಂ
ಗದಲಿ ಬಾಗಿದ ತನುಲತೆಯ ವರ
ಸುವತಿ ಬಂದಳು ರಾಜಸಭೆಗೆ ನೃಪಾಲ ಕೇಳಂದ ‖ ೭೨

ಆಗ ದ್ರೌಪದಿಯ ಅವಸ್ಥೆಯನ್ನು ನೋಡಿ ಸಭೆಗೆ ಶೋಕ.

ಅಹಹ ಪಾಂಡವರಾಯಪಟ್ಟದ
ಮಹಿಳೆಗಿದು ವಿಧಿಯೇ ಮಹಾಕ್ರತು
ವಿಹಿತಮಂತ್ರಜಲಾಭಿಷಿಕ್ತಕಚಾಗ್ರಗಿದು ವಿಧಿಯೆ ।
ಮಿಹಿರಬಿಂಬವ ಕಾಣದಾನೃಪ
ಮಹಿಳೆಗಿದು ವಿಧಿಯೇ ವಿಧಾತ್ರನ
ಕುಹಕವೈ ಸಲೆ ಶಿವ ಶಿವಾ ಯೆಂದರು ಸಭಾಸದರು ‖ ೭೩

---

1 ವಂಕೆಯ,

ತುಳುಕಿದುವು ಕಂಬನಿಗಳಾಸಭೆ
ಯೊಳಗೆ ದುಶ್ಶಾಸನಸುಯೋಧನ
ಖಳಶಿರೋಮಣಿಶಕುನಿಕರ್ಣಜಯದ್ರಥಾದ್ಯರಿಗೆ ।
ತಳಿತುದದ್ಭುತಹರ್ಷ ಮುಖಮಂ
ಡಲಕೆ ಸೀರೆಯನಿಕ್ಕಿ ನಯನೋ
ಚ್ಛಲಿತಜಲಧಾರೆಯಲಿ ನೆನೆದುದು ಸಭೆ ವಿಷಾದದಲಿ ॥ ೨೪

ವ್ಯಾಕುಲವೆನಿತ ಕಾಂಬ ಕಣ್ಣುಗ
ಳೇಕೆ ರಾಜಕುಮಾರಿಯಾಕೆಯ
ಶೋಕರಸವನು ಕುಡಿವ ಕರ್ಣದ್ವಯವಿದೇಕೆಮಗೆ ।
ಏಕೆ ವಿಧಿ ನಿರ್ಮಿಸಿದನೋ ನಾ
ವೇಕೆ ಸಪ್ರಾಣರೊ ಶಿವಾ ಯೆಂ
ದಾಕರೋರರ ಬೈದುದಾಸಭೆಯೊಳು ಬುಧಸ್ತೋಮ ॥ ೨೫

ವನಜಮುಖಿಯಕ್ಕೆಯನು ದುಶ್ಶಾ
ಸನನ ದುರ್ನೀತಿಯನು ದುರ್ಯೋ
ಧನನ ದುಶ್ಚೇಷ್ಟೆಯನು ಕಂಡೀಭೀಮಫಲುಗುಣರು ।
ಮನದೊಳಗೆ ಕೋಪವನ ಕರುಳನು
ತಸಿರಕುತದಲಿ ಕುದಿಸಿದರು ನಿಜ
ಜನಿತಕರ್ಮಕ್ರಮವ ನೆನೆವುದನಱಿದನಾಭೂಪ ॥ ೨೬

ಹುಬ್ಬಿನಲಿ ನಿಲಿಸಿದನು ಪವನಜ
ನುಬ್ಬಟೆಯನರ್ಜುನನ ವಿಕೃತಿಯ
ನಿಬ್ಬರಾಳಾಪವನು ಧರ್ಮರಹಸ್ಯನಿಷ್ಠೆಯಲಿ ।
ಹಬ್ಬಿದುದು ಭೀಷ್ಮಂಗೆ ಶೋಕದ
ಮಬ್ಬು ಗುರುಗೌತಮರು ವಿದುರನ
ಖರ್ಬಖೇದಾಂಬುಧಿಯೊಳದ್ದರು ಭೂಪ ಕೇಳೆಂದ ॥ ೨೭

ಪಾಂಡವರ ಸೋಲನ್ನು ಅವರ ಮಕ್ಕಳು ಕೇಳಿದುದು.

ಅರಸ ಕೇಳ್ಳೈ ಕೂಡೆ ಹಸ್ತಿನ
ಪುರದೊಳಾಯ್ತು ವಾರ್ತೆ ಬಳಿಕಾ
ಪುರದ ಬಹಿರುದ್ಯಾನವೀಧಿಗಳೊಳಗೆ ಹರಹಿನಲಿ ।
ಅರಸಿಯರು ಸಾಭದ್ರನವರೈ
ವರು ಕುಮಾರರರು ಮಂತ್ರಿಗಳು ಮು
ಖ್ಯರು ಪಸಾಯ್ತರು ಕೇಳಿದರು ಪಾಂಡವರ ರಾಜಯುವ ॥ ೩೮

ಆಗ ಅವರು ಯುದ್ಧಕ್ಕಾಗಿ ಸಿದ್ಧರಾಗುವಿಕೆ.

ಬಂದರಿದಿರೊಳು ಕೌರವರ ಕಡೆ
ನಂದನರ ಕಡೆಯಾವುದೆನೆ ಸಾ
ವಂದದಲಿ ಹೊಯ್ದಾಡಿ ಹಿಡಿವವು ಸುರರ ಸೂಳೆಯರ !
ಇಂದು ನೋಡುವೆವೆಂದು [1] ಸೇನಾ
ವೃಂದಸಜ್ಜೋಡಿನಲಿ ಕಾಳಗ
ಕೆಂದು ಮೋಹರವಾಗಿ ನಿಂದುದು ಪುರದ ಬಾಹೆಯಲಿ ॥ ೬೯

ಆಗ ಧರ್ಮರಾಯನ ಸಮಾಧಾನ.

ಕೇಳಿದನು ಧರ್ಮಜನು ತನ್ನಯ
ಪಾಳೆಯದ ಗಜಬಜವ ಸಿಲ್ಲಿಸ
ಹೇಳಿ ಕಳುಹಿದನಾಗ ಧೌಮ್ಯನನಾತಸಿದಿರ್ದ್ದದಿ ।
ಕಾಲತನಯನ ಸತ್ಯವನು ನೀವ್
ಪಾಲಿಸುವೊಡೀಚಾತುರಂಗದ
ಮೇಳನವು ಬೇಡೆಂದು ಮಾಣಿಸಿ ಮರಳಿದನು ಮುನಿಪ ॥ ೮೦

ದುರ್ಯೋಧನನ ಕ್ರೂರವಚನ

ಇತ್ತಲಬಲೆಯ ವಿಧಿಯ ಕೇಳಂತಿ
ಮತ್ತನೈ ಧೃತರಾಷ್ಟ್ರಸುತನಾ
ಮತ್ತಗಜಗಾಮಿನಿಯ ಬಿಡಿಸಿದನವನ ಕೈಯಿಂದ ।

---

1 ಎಂದು ತವೆಯ್ಕಳು ನೆರೆದು, ಚ.

ನೆತ್ತ ಸೋತುದು ನಿನ್ನನೂಡಿ ನೃ
ಪ್ರೋತ್ತಮನು ಸಲೆ ಮಾರಮೊರಿದ
ನತ್ತೊಡೇನಹುದೆಲೆಗೆ ನಡೆ ತೊತ್ತಿರ ಹಿಂಡ ಹೊಗುಯೆಂದ ||೮೧

ದ್ರೌಪದಿಯು ಯುಕ್ತವನ್ನು ಹೇಳುವಿಕೆ.

ಲಲಿತಬುದ್ಧಿಗಳೀಗ ನೋಡಿರಿ [1]
ಲಲನೆಯನು [2] ಸತಿ ದಿಟ್ಟೆಯನ್ನದಿ
ರೆಲೆ ಸುಯೋಧನ ಕೇಳು ಸಭೆ ಯಿದು ದೋಷರಹಿತವೆಲೆ |
ಗೆಲುವುದೆಂತುಟೊ ತನ್ನ ಸೋಲಿನ
ಬಳಿಕ ಸೋತರೆ ಧರ್ಮಗತಿಯೆನು
ತಿಳಿದು ಹೇಳಲಿ ಸತ್ಯಭಾಷದರೆಂದಳಿಂದುಮುಖಿ || ೮೨

ಹಿರಿಯರಿಲ್ಲದ ಸಭೆ ಮನುಷ್ಯರ
ನೆರವಿಯದು ಸಭೆಯಲ್ಲ ಮೂರ್ಖರು
ಹಿರಿಯರಲ್ಲ ಯಥಾರ್ಥಭಾಷಣಭೀತಚೇತನರು |
ಹಿರಿಯರಿದೆ ಸಾಮಾಜಿಕರು ಸ
ಚ್ಚರಿತರಿದೆಲಾ ಸ್ತ್ರೀಮತವನು
ತ್ತರಿಸಬಾರದೆ ಧರ್ಮಮಾರ್ಗದೊಳೆಂದಳಿಂದುಮುಖಿ || ೮೩

ದ್ರೌಪದಿಯನ್ನು ಕುರಿತು ಕರ್ಣನ ಕ್ರೂರವಚನ.

ಚಪಳೆ ಘಡ ಹೋಗಿವಳು ಪಲಬರ
ನುಪಚರಿಸಿದುದನರಿಯಲಾದುದು
ದ್ರುಪದನಂದನೆ ನಡೆ ವಿಳಾಸಿನಿಯರ ನಿವಾಸದಲಿ |
ಕೃಪಣನೇ ಕುರುರಾಯ ನಿನಗಿ
ನ್ನುಪದೆಸೆಯ ಹೊಲೆ ಹೋಯ್ತು ರಾಯನ
ವಿಪುಳವಿಭವವನನುಭವಿಸು ಹೋಗೆಂದನಾಕರ್ಣ || ೮೪

---

1 ಗಳೇಕೆ ನಾವೇ, ಕ. ಚ.  ಗಳೆಮಗೆ ನಾವೇ, ಜ, ಝ.
2 ಲಲನೆಯುದು, ಕ. ಚ. ಝ.

ಶಕುನಿಯು ಬಿರುನುಡಿ.

ಅಹುದಲೇ ಬಱಿಕೇನು ದಾಸ್ಯಕೆ
ವಿಹಿತವಾದುದು ನಿನ್ನ ತನುವಿನ
ಲಹ ಮನೋವ್ಯಥೆ ಯೇಕೆ ರಾಣೀವಾಸಪದವಿಯಲಿ ।
ಮಹಿಳೆಯರ ಸಖ್ಯದಲಿ ಸೌಖ್ಯದ
ರಹಣಿಗೊಡಬಡು ಮಾರಕದಲತಿ
ಬಹಳಭೂಷಣಭಾರದಲಿ ಮೆಱೆಯೆಂದನಾಶಕುನಿ ॥ ೮೫

ಭೀಷ್ಮರ ವಾಕ್ಯ.

ಮಾರಕದ ವಿವಿಧಾಭರಣಶ್ರೃಂ
ಗಾರವೆಂತಿರಲೀಕೆ ಯಾಡಿದ
ಸಾರಭಾಷೆಗೆ ನೆನೆಯಿರೈ ನಿರ್ವಾಹಸಂಗತಿಯ ।
ಓರೆಪೋರೆಯಲಾಡಿ ಧರ್ಮದ
ಧಾರಣೆಯ ದಟ್ಟಿಸುವುದಿದು ಗಂ
ಭೀರರಿಗೆ ಗರುವಾಯಿಯೇ ಸುಡಲೆಂದನಾಭೀಷ್ಮ ॥ ೮೬

ತುಷ್ಟಿಸಲಿ ಧನಮಾನ ಗರ್ವದ
ಬೆಟ್ಟ ಬಿಱಿಯಲಿ ಜೀವನೊಡಲನು
ಬಿಟ್ಟು ಹೋಗಲಿ ಬಿಡೆನು ಧರ್ಮವನೆಂದು ಯಮಸೂನು ।
ನೆಟ್ಟನೇ ನಿಶ್ಚೈಸಿದನು * ಜಗ
ಜಟ್ಟಿ ಭೀಮಾರ್ಜುನರಿದೆಲ್ಲವೆ
ಬಿಟ್ಟು ಭೂಪನ ಮನವ ಹಿಡಿದಿಹರೆಂದನಾಭೀಷ್ಮ ॥ ೮೭

ಅಱಿಯದಿಹುದೇ ಧರ್ಮ ಸತ್ಯದ
ನೆಳಲು ಪೋಗದೆ ಕೀರ್ತಿವಧುವಿನ
ಸುಳಿವು ನೋಯದೆ ತಳರು ಬಾಡದೆ ಧೈರ್ಯ ಸುರಕುಜವ ।

* ನೊಡ ಹುಟ್ಟಿದರು ಮನ್ನಿಸಿಪರಲ್ಲದೆ ಹುಟ್ಟಿಕೊಂದಲು ಗತಿಯುಹುದೆ ನಿಮ
ಗೆಂದನಾಭೀಷ್ಮ * ಖ.

ಹಱಿವಿಗಳುಕದೆ ವೈರಿವರ್ಗದ
ಕಳಕಳಕೆ ಕೈಗೊಡದೆ ನೃಪನಿ
ರ್ಮಳದೊಳಿರ್ದೊಡೆ ನಿಮಗೆ ಸದರವೆ ಯೆಂದನಾಭೀಷ್ಮ ॥ ೮೮

ಆಗ ದುರ್ಯೋಧನನು ಭೀಷ್ಮಾದಿಗಳನ್ನು ಜರಿದುದು.

ಸೋತ ಬಱಿಕಿವಳಮ್ಮ ವಶವ
ಖ್ಯಾತಿಯುಲಿ ನಾವ್ ನಡೆವರಲ್ಲ ವ್ಯ
ಥಾತಿರೇಕವ ನುಡಿವಿರೇ ತಾವೆಂಜುವುವೆ ನಿಮಗೆ ।
ಈತಳೋದರಿ ತೊತ್ತಿರಲಿ ಸಂ
ಘಾತವಾಗಲಿ ಸಾಕು ನಿಮ್ಮಯ
ಮಾತೆನುತ ಕುರುರಾಯ ಜಱಿದನು ಭೀಷ್ಮಗುರುಕೃಪರ ॥ ೮೯

ಭೀಮನ ಕೋಪ.

ನೊಂದನಾಮಾತಿನಲಿ ಮಾರುತ
ನಂದನನು ಸಹದೇವನನು ಕರೆ
ದೆಂದನಗ್ನಿಯ ತಾ ಯುಧಿಷ್ಠಿರನೃಪನ ತೋಳುಗಳ ।
ಮಂದಿ ನೋಡಲು ಸುಡುವೆನೇಕೆ
ಱೆಂದು ಜಱಿದೊಡೆ ಹಿಡಿದು ಮಾದ್ರೀ
ನಂದನನ ನಿಲಿಸಿದನು ಫಲುಗುಣ ನುಡಿದನನಿಲಜನ ॥ ೯೦

ಅರ್ಜುನನ ಸಮಾಧಾನ.

ಏನಿದೇನೈ ಭೀಮ ನಿಲು ಯಮ
ಸೂನು ಶಿವ ಶಿವ ಗುರುವಲಾ ನಮ
ಗೀನಿತಂಬಿನಿಯಾದಿಯಾದ ಸಮಸ್ತವಸ್ತುಗಳು ।
ಈನರೇಂದ್ರಗೆ ಸರಿಯೆ ಕುಂತೀ
ಸೂನುವೇ ಪ್ರಾಣಾರ್ಥದಿಂದ ಸ
ಮಾನನೈ ನಮಗೀತನೇ ಗತಿಯೆಂದನಾಪಾರ್ಥ ॥ ೯೧

ಭೀಮ ವಾಕ್ಯ.

ಹಿಂಗಿ ಹೋಗಲಿ ತನುವನಸು ಸ
ಪ್ತಾಂಗ ಬೇಯಲಿ ಖೋಡಿ ಮನದಲಿ
ಹಿಂಗುವುದೆ ಹರ ಹರ ಧನಂಜಯ ಕಾಕನಾಡಿದೆಲೆ ।
ಅಂಗನೆಯ ಮೇಲೊಡ್ಡವೇ ಲಲಿ
ತಾಂಗಿಗೀವಿಧಿಯೇಕೆ ನಮಗೀ
ಭಂಗ ಸಾಲದೆ ಸುಡುವೆನಾದೊಡೆ ತನ್ನ ತೋಳುಗಳ ॥ ೯೨

ಈಯುವಸ್ಥೆಗೆ ತಂದ ಕೌರವ
ನಾಯಿಗಳ ನಿಟ್ಟೆಲುವ ಮುರಿದು ನ
ವಾಯಿಯಲಿ ಘಟ್ಟಿಸದೆ ಕೊಬ್ಬಿದ ತನ್ನ ತೋಳುಗಳ ।
ವಾಯುಸಖನಲಿ ಸುಡುವೆನೀಗಳ
ಬೀಯವಾಗಲಿ ದೇಹವಾಚಂ
ದ್ರಾಯತವೆ ಯೆಂದೊಡನೊಡನೆ ಮಿಡುಕಿದನು ಕಲಿಭೀಮ ॥ ೯೩

ಕೋಪ ಕಿಡಿಯಿಡಲಾಗ ರೌದ್ರಾ
ಟೋಪದಲಿ ರಂಜಿಸುವ ಭೀಮನ
ರೂಪ ಕಂಡನು ನುಡಿದನಾಗಳ ಬೆರಳ ಸನ್ನೆಯಲಿ ।
ಪಾಪರಹಿತನೆ ಸಕಲಧರ್ಮಕ
ಳಾಪ ನೀನರಿಯದುದೆ ಯಿಾಕುರು
ಭೂಪನು ಭ್ರಮಿತನವ ಸೈರಿಸು ಯೆಂದನಾಭೂಪ ॥ ೯೪

ದ್ರೌಪದಿಯು ಭೀಷ್ಮಾದಿಗಳನ್ನು ಕುರಿತು ಹೇಳುವಿಕೆ.

ಅಕಟ ಧರ್ಮಜ ಭೀಮಫಲುಗುಣ
ನಕುಲಸಹದೇವಾದ್ಯರಿರ ಬಾ
ಲಿಕೆಯನೊಪ್ಪಿಸಿ ಕೊಟ್ಟಿರೇ ಮೃತ್ಯುವಿನ ತಾಳಿಗೆಗೆ ।
ವಿಕಳರಾದಿರೆ ನಿಲ್ಲಿ ನೀವಿಂ
ದಕುಟಿಲರಲಾ ಭೀಷ್ಮಗುರುಬಾ
ಹ್ಲಿಕಕೃಪಾದಿಗಳುತ್ತರವ ಕೊಡಿ ಯೆಂದಳಿಂದುಮುಖಿ ॥ ೯೫

ಕಂಗಳಿಂದನುಯೋಗ ನಿಜಹ
ಸ್ತಾಂಗುಳಿಯುಲುತ್ತರ ಲಸದ್ಭ್ರೂ
ಭಂಗವಲಿ ಸಂದೇಹ ಮುಖವಿಕೃತಿಯುಲಿ ದುರ್ನೀತಿ ।
ಇಂಗಿತದಲಾಂಗಿಕದ ಭಾವದ
ಭಂಗವಿಧಿಯನು ಯೋಗಯುಕ್ತನ
ಯಂಗಳನು ತಿಳಿದುಸುರದಿರ್ದುದು ಸಭೆ ಸುಭೀತಿಯುಲಿ ॥ ೯೬

ವಿಕರ್ಣನ ನೀತಿವಚನಗಳು

ಅಱಿದು ಮೌನವ್ರೊ ಮೇಣು ಮಾನಿನಿ
ಯೊಱಲುತಿರಲೆಂದೆಂಬುಪೇಕ್ಷೆಯೊ
ಮುಱಿದು ನುಡಿವುದಸಾಧ್ಯವ್ರೋ ಮೇಣಾವುದಿದ ಱೊಳಗೆ ।
ಅಱಿ ಯಿರೇಸಮವರ್ತಿ ದೂತರ
ಮುಖುಕವನು ನೀವೇಕೆ ನಿಮ್ಮನು
ಮಱಿದಿರೆಂದು ವಿಕರ್ಣ ನುಡಿದನು ತತ್ಸಭಾಸದರ ॥ ೯೭

ಹುಸಿ ವಚನಪಾರುಷ್ಯ ಲಲನಾ
ವಿಷಯ ಮೃಗತೃಷ್ಣಾ ಪಿಪಾಸಾ
ವ್ಯಸನಿ ಬಲ್ಲನೆ ಧರ್ಮ ತತ್ತ್ವರಹಸ್ಯನಿಶ್ಚಯವ ।
ವುಸುರಲಮ್ಮಿರೆ ವೈದಿಕದ ತನಿ
ರಸದ ಸವಿ ನಿಮಗಲ್ಲದಾರಿಗೆ
ಬಸಿದು ಬೀಳ್ವುದು ಭೀಷ್ಮ ಯೆಂದು ವಿಕರ್ಣ ಗರ್ಜಿಸಿದ ॥ ೯೮

ತನ್ನ ಸೋತಾಗಳ ಮಹೀಪತಿ
ಯನ್ಯನಾದನು ಸತಿಗೆ ತನ್ನಿಂ
ಮುನ್ನ ಸೋತೊಡೆ ತನ್ನ ಧನವೇ ಸಲೆ ವಿಚಾರಿಸಲು ।
ಅನ್ಯನನ್ಯಳ ಸೋತ ಗಡ ತಾ
ತನ್ನ ಧನವೆಂದರಸ ಶಕುನಿಯು
ಬಿನ್ನಣಕೆ ಬೆಂಡಾದನೆಂದಾ ವಿಕರ್ಣ ಗರ್ಜಿಸಿದ ॥ ೯೯

### ಕರ್ಣನ ಅಧಿಕ್ಷೇಪವಾಕ್ಯ.

* ಘಡ ವಿಕಾರವೆ ನಮ್ಮೊಡನೆ ಬಾ
ಯ್ಬಡಿಕತನವೇ ಕುರುಮಹೀಪತಿ
ಯೊಡನೆ ಹುಟ್ಟಿದೆ ಯಾದ ಕಾರಣ ಬಿಟ್ಟೆನೀಸರಲಿ ।
ನುಡಿವೊಡೆಯು ಭೀಷ್ಮಾದಿಗಳು ನಿ
ನ್ನೊಡಬಡಿಸಲೆಂತಱಿವ ಧರ್ಮದ
ಕಡೆವೊದಲ ಕೈವಾರ ನಿನಗೇಕೆಂದನಾಕರ್ಣ ॥ ೧೦೦

ಏಕಪತಿ ಬಹುಸತಿಯರೆಂಬುದು
ಲೋಕಪದ್ಧತಿ ಯಾದುದದು ತಾ
ನೇಕಸತಿ ಬಹುಪತಿಗಳಿದು ವೈದಿಕವಿರುದ್ಧವಲೆ ।
ಲೌಕಿಕವ್ಯವಹಿತದ ಧರ್ಮವ
ನೀಕುಮಾರ್ಗಿಗಳಲ್ಲಿ ಕಂಡೆವು
ನೀ ಕುರುವ್ರಜದೊಳಗೆ ಜನಿಸೆ ವಿಕರ್ಣ ಪೋಗೆಂದ ॥ ೧೦೧

### ಅದಕ್ಕೆ ದುರ್ಯೋಧನನ ಅನುಮತಿ.

ಅಹುದು ಕರ್ಣನ ನುಡಿ ವಿಕರ್ಣನು
ಬಹುವಚನಪಂಡಿತನು ಬಾಹಿರ
ನಹುದಲೇ ಕುರುರಾಯವಂಶದೊಳುದಿಸಿ ಫಲವೇನು ।
ಅಹಿತಹಿತವಿಜ್ಞಾನವಿಲ್ಲದ
ಸಹಜಬುದ್ಧಿವಿಚಾರಶೂನ್ಯ[1]ನು
ಗಹನನೇಕೆ ವಿಕರ್ಣಯೆಂದನು ನಗುತ ಕುರುರಾಯ ॥ ೧೦೨

* ಈ ಗುರ್ತಿನ ಪದ್ಯಕ್ಕೆ ಪೂರ್ವಪದ್ಯವಾಗಿ, ಕ. ಪುಸ್ತಕದಲ್ಲಿ ಮಾತ್ರ ದೊರೆಯುವ ಒಂದು ಪದ್ಯ ಅಶುದ್ಧವಾದುದರಿಂದು ಬಹು ಪ್ರತಿಗಳಲ್ಲಿಲ್ಲದರಿಂದು ಬಿಡಲ್ಪಟ್ಟಿದೆ.

1 ಬೃಹದುದರಕಿಂಕರರ ನುಡಿಯೆ, ಕ. ಚ.

ದುರ್ಯೋಧನನು ದುಶ್ಶಾಸನನನ್ನು ನಿಯಮಿಸುವಿಕೆ.

ಹಾರಪದಕಕಿರೀಟಮಣಿಕೇ
ಯೂರಕರ್ಣಾಭರಣವೆಂಬಿವು
ಭಾರವೆಲ್ಲಾ ತೆಗೆಯ ಹೇಟ್ ದಾಕ್ಷಿಣ್ಯವೇನಿದಕೆ ।
ನಾರಿಗೀವಸ್ತ್ರಾಭರಣಶೃಂ
ಗಾರವೇಕಿನ್ನಿವನು ತೆಗೆ ಕೈ
ವಾರವಿನ್ನೇಕೆಂದು ದುಶ್ಶಾಸನಗೆ ನೃಪ ನುಡಿದ ॥ ೧೦೩

ಧರ್ಮಾದಿಗಳು ತಮ್ಮ ಹಾರಾದಿಗಳನ್ನು ತೆಗೆಯುವಾಗ ದುಶ್ಶಾಸನನು ದ್ರೌಪದಿಯ ಸೆರಗನ್ನು ಹಿಡಿದುದು.

ತೆಗೆದು ಬಿಸುಟರು ಹಾರಪದಕಾ
ದಿಗಳನಿವರೈವರು ದುಕೂಲವ
ನುಗಿದು ಹಾಯ್ಕಿದರಿದ್ದರಾಗೊಂದೊಂದು ವಸ್ತ್ರದಲಿ ।
ಹೊಗೆವೊಗದ ಕಿಡಿಗಣ್ಣ ಕೆಮ್ಮ
ಸೆಗಳ ಗುಜುರಿನ ಜುಂಜುಕೇಶದ
ವಿಗಡನೆದ್ದನು ಬಂದು ಹಿಡಿದನು ದ್ರೌಪದಿಯ ಸೆರಗ ॥ ೧೦೪

ಆಗ ಭೀಷ್ಮಾದಿಗಳ ಕೋಪ.

ಮುಳಿಹಿದರು ಮಸುಡುಗಳ ಮಿಗೆ ನೀ
ರೊಳಿವ ಕಂಗಳಲಕಟಕಟ ನಿ
ಷ್ಠುರವಿದೇಕನುಚಿತವಿದೇಕಪಕೀರ್ತಿ ಯೇಕೆನುತ ।
ಕಳಿಗಿದರು ಕಂದಿದರು ಮೊಮ್ಮಲ
ಮೊಳಗಿದರು ಭೀಷ್ಮಾದಿಗಳು ಝು
ರ್ಝುರಿತರಾದರು ತಡೆಯಲಾರದೆ ಖಳನ ದುಷ್ಕೃತಿಯ ॥ ೧೦೫

ಆಗ ದ್ರೌಪದಿಯು ಪತಿಗಳ ಕಡೆ ನೋಡಿದುದು.

ಅಳುಕಿದನೆ ಸುಡಲವನ ಮೇಲುದ
ಸೆಳದೊಡುನ್ನತಕುಚವ ನಳಿತೋ
ಳ್ಗಳಲಿ ಮುಚ್ಚಿದಳಬಲೆ ಬೆಚ್ಚಿದಳವನ ನಿಷ್ಠುರಕೆ ।

ಕಳವಳಿಸಿದಳು ಬೆರಳಿನಲಿ ದೃಗ್
ಜಲವ ಮಿಡಿಯುತ ನೋಡಿದಳು ನೃಪ
ತಿಲಕನನು ಭೀಮಾರ್ಜುನರ ಮಾದ್ರೀಕುಮಾರಕರ ॥ ೧೦೬

ಆಗ ಸಭೆಯಲ್ಲಿದ್ದವರನ್ನು ಬಿಡಿಸಿರೆಂದು ದ್ರೌಪದಿಯು ಕೇಳಿದಳು.

ಮುಳಿದುದನಿಬರ ಮೋಹಿ ಮಹಿಪನ
ಕೊರಳ ಕೊಂಕಿನಲಿರ್ದರಾಸೋ
ದರರು ಸಾರವನಲ್ಲಿ ಕಾಣದೆ ಭೀಷ್ಮಗುರುಕೃಪರ ।
ತರಳ ನೋಡಿದಳಕಟ ಗಂಗಾ
ವರಕುಮಾರದ್ರೋಣಕೃಪರಿರ
ಸೆರಗ ಬಿಡಿಸಿರೆ ತಂದೆಗಳಿರೆಂದೊರಲಿದಳು ತರಳೆ ॥ ೧೦೭

ಕ್ರೂರನೀದುಶ್ಶಾಸನನು ಗಾಂ
ಧಾರಿ ಬಿಡಿಸಾ ತಾಯೆ ಸೊಸೆಯ
ಲ್ಲಾರು ಹೇಟೌ ತಂಗಿ ಯಲ್ಲವೆ ಭಾನುಮತಿ ನಿನಗೆ ।
ಧೀರ ಸೈಂಧವನರಸಿ ರಾಜಕು
ಮಾರಿ ನೀನಾದಿನಿಯಲಾ ಖಳ
ರೌರವದೊಳದ್ದುವುದ ತೆಗೆಸೆಂದೊಱಲಿದಳು ತರಳೆ ॥ ೧೦೮

ಎಲೆ ವಿಳಾಸಿನಿಯರಿರ ಭೂಪನ
ತಿಳುಹಿರೌ ತಾಯ್ಗಳಿರ ನೀವೆಂ
ದೆಲೆ ಪಸಾಯಿತೆಯರಿರ ಸೋದರಿಯೆಂದು ಕೌರವನ ।
ತಿಳುಹಿ ತಾ ಶರಣಾಗತರ ತಾ
ನೊಲಿದು ಕಾವುದು ಧರ್ಮಕಕಟಾ
ಕಲುಷಹೃದಯರ್ಗೆ ನೀವೆನುತ ಹಲುಬಿದಳು ತರಳಾಕ್ಷಿ ॥ ೧೦೯

ಧಾರುಣೀಪತಿಗಳಿರ ರಾಜಕು
ಮಾರರಿರ ಮಂತ್ರಿಗಳಿರಾ ಪರಿ
ವಾರಕಿದು ಪಂಥವೆ ವಿಚಾರಿಸಿ ನಿರಘರಾಧಿಯನು ।

ನಾರಿಯೊಬ್ಬಳನೆಕಟ ಸಭೆಯಲಿ
ಸೀರೆ ಯುಡಿಯುಚರ್ಸುವರೆ ಕೆಟ್ಟೆನು
ಕಾರುಣಿಕರಿಲ್ಲಾ ಶಿವಾ ಯೆಂದೊಱಲಿದಳು ತರಳೆ ॥ ೧೧೦

ಪತಿಗಳೆನ್ನನು ಮಾರಿ ಧರ್ಮ್ಮ
ಸ್ಥಿತಿಯ ಕೊಂಡರು ಭೀಷ್ಮ ಮೊದಲಾ
ದತಿರಥರು ಪರಹಿತವ ಬಿಸುಟಹರರ್ಥಭೀತಿಯಲಿ ।
ಸುತನ ಕೆಡು ಸಿರಿ ಸೊಗಸಲಾ ಭೂ
ಪತಿಗೆ ಗಾಂಧಾರಿಗೆ ಯನಾಥೆಗೆ
ಗತಿಯ ಕಾಣೆನು ಶಿವ ಶಿವಾ ಯೆಂದೊಱಲಿದಳು ತರಳೆ ॥ ೧೧೧

ಆಗ ಶ್ರೀಕೃಷ್ಣನನ್ನು ಮೊರೆ ಹೊಕ್ಕದು.

ಮೈದೆಗೆದುವೀಪ್ರಾಣವಾಯುಗ
ಳೈದು ಬಱಿಕಿದಕಾರು ಮೊಱುಗುವ
ರೈದೆ ತನುವೊಂದುಱಿಯಲುಱಿವುವು ಮಿಕ್ಕ ಮಹಿಮೆಗಳು ।
ಬೈದು ಫಲವೇನಿನ್ನು ನಿನ್ನಯ
ಮೈದುನರ ಮರುಳಾಟಕೆನ್ನನು
ಕಾಯ್ದು ಕೊಳ್ಳೈ ಕೃಷ್ಣ ಯೆಂದೊಱಲಿದಳು ತರಳಾಕ್ಷಿ ॥೧೧೨

ಕೃಷ್ಣಸ್ತುತಿ.

ಸುಲಿವರೂರೊಳಗುಟ್ಟ ಸೀರೆಯ
ನೆಲೆ ಮುರಾಂತಕ ರಕ್ಷಿಸೈ ಶಶಿ
ಕಳೆಗೆ ಸದರವೆ ರಾಹು ರಚಿಸಿದ ತುಟಿಯ ತೋಟಿಯದು [1] ।
ಸೆಳವರಸುವೆನು ಖಳರು ಸೀರೆಯ
ಸೆಳೆಯಲುಱಿವೆನೆ ಕೃಷ್ಣ ಕರುಣಾ
ಜಲಧಿಯೇ ಕೈಗಾಯಬೇಕೆಂದೊಱಲಿದಳು ತರಳೆ ॥ ೧೧೩

[1] ರಚಿಸಿದರವಿಯ ತೆರನಂತೆ, ಖ.

ಗತಿವಿಹೀನರಿಗಕಟ ನೀನೇ
ಗತಿಯಲ್ಲೈ ಗೋವಿಂದ ರಿಪುಬಾ
ಧಿತರನಾಥರಿಗಬಲರಿಗೆ ನೀ ಪರಮಬಂಧುವಲ |
ಸತಿಪಶುದ್ವಿಜಬಾಧೆಯಲಿ ಜೀ
ವಿತವ ತೊಱೆವರು ಗರುವೆತನ ಹಿಂ
ಗಿತು ಸುಯೋಧನಸಭೆಯೊಳಂದೊಱಲಿದಳು ನಳಿನಾಕ್ಷಿ ‖ ೧೧೪

ಕಾಯ್ದೆಯ್ಯೆ ಕರುಣದಲಿ ದಿವಿಜರ
ತಾಯ ಪರಿಭವವೆನು ಪಯೋಧಿಯು
ಹಾಯಿದಮರಾರಿಗಳ ಖಂಡಿಸಿ ತಲೆಯ ಚೆಂಡಾಡಿ |
ಕಾಯಿದೈ ಜಾನಕಿಯುನೆನ್ನನು
ಕಾಯ ಬೇಹುದು ಹೆಣ್ಣ ಹರಿಬಕೆ
ನೋಯಬಲ್ಲರೆ ಕೆಲಬರೆಂದೊಱಲಿದಳು ಪಾಂಚಾಲಿ ‖ ೧೧೫

ವೇದವಧುಗಳ ಕಾಯ್ದೆಲಾ ತಮ
ಬಾಧೆಯಲಿ ಖಳನಿಂದ ಧರಣಿಮ
ಹೋದ ಯಲಕ್ಕಾಡಿದವೆ ದಾಡೆಯಲಿ ದಾನವನ |
ಕೋದು ಹಾಕೀಭೂತಧಾತ್ರಿಯ
ಕಾದೆಲಾ ಕಾರುಣ್ಯಸಿಂಧುವೆ
ಕಾದು ಕೊಳ್ಳೈ ಕಷ್ಣ ಯೆಂದೊಱಲಿದಳು ತರಳಾಕ್ಷಿ ‖ ೧೧೬

ರಕ್ಷಿಸಿದೆಯೋ ಗೀಣಿಗೆ ಬೆದಱುವ
ದಕ್ಷಸುತೆಯನು ಕೋಪಶಿಖಿ ತಿಮಿ
ರಾಕ್ಷನನು ಜಮದಗ್ನಿಮುನಿಪನ ನುಡಿಯುನನುಕರಿಸಿ |
ರಕ್ಷಿಸಿದೆ ರೇಣುಕೆಯುನೆನ್ನನು
ಪೇಕ್ಷಿಸದಿರೈ ಕರುಣದಲಿ ಕಮ
ಲಾಕ್ಷ ಬಿಡಿಸೈ ಸೆಱಗನೆಂದೊಱಲಿದಳು ಕಮಲಾಕ್ಷಿ ‖ ೧೧೭

ದೇವಕೀದೇವಿಯರ ಸೆಱೆಯನು
ದೇವ ಕೃಪೆಯಲಿ ಬಿಡಿಸಿದೈ ಕರು
ಣಾವಲಂಬದಿ ಕಳಚಿದೈ ಹದಿನಾಱುಸಾವಿರದ ।
ದೇವಕನ್ಯಾಬಂಧನವನಭಿ
ಭಾವಕರ ಕೌರವರ ಭಂಗಿಸಿ
ದೇವ ಬಿಡಿಸೈ ಸೆಱೆಗನೆಂದೊಱಲಿದಳು ದ್ರುಪದಸುತೆ ॥ ೧೧೮

ಶಿಶುವಧೆಗೆ ಸೀವರಿಸಿದಸುರನ
ಬಸುಱ ಹೂಮಾಲೆಯನು ನೀ ತಱು
ಬಿಸಿದೆಲಾ ನಖರಾಜಿಗಬಲನ ಕಾಯ್ದು ಕರುಣದಲಿ ।
ಶಿಶುವನಯ್ಯಂಗಿತ್ತು ಜಲಧಿಯ
ಮುಸುಕನುಗಿವತಿ ಕರುಣಿಯೋ ಹೆಂ
ಗಸಿನ ಹರಿಬಕೆ ಕೃಪೆಯ ಮಾಡೆಂದೊಱಲಿದಳು ತರಳೆ ॥ ೧೧೯

ತುಱುವ ನುಂಗಿದ ಫಣಿಯ ಗಂಟಲ
ಮುಱಿದು ಕಾಯ್ದೆ ಗೋವ್ರಗಳ ಗಿರಿ
ಮಱೆಯಲಿಂದ್ರನ ಖಾತಿಗಳುಕದೆ ಕಾಯ್ದೆ ಗೋಕುಲವ ।
ಮೆಱೆದೆಲಾ ಕೃಪೆಯಲಿ ಗಜೇಂದ್ರನ
ಮುಱಿಯಲೀಯದೆ ಖಳನ ಸೋಂಕಿದ
ಸೆಱೆಗ ಬಿಡಿಸೈ ಕೃಷ್ಣಯೆಂದೊಱಲಿದಳು ತರಳಾಕ್ಷಿ ॥ ೧೨೦

ಒದೆದೊಡೊಲಿದವರುಂಟೆ ಬೈದೊಡೆ
ಪದವನಿತ್ತವರುಂಟೆ ಕರುಣಾ
ಸ್ಪದರ ತಾ ಕೇಳ್ದು ಋಷಿಯೆನಾಕಮಲಾಸನಾದ್ಯರಲಿ ।
ಪದವ ಸೋಂಕಿದ ಮೊಱಡಿಯನು ತಿ
ದ್ದಿದೆ ಯೆಲಾ ಹೆಂಗಸಿನ ಹೇರಾ
ಳದ ಕೃಪಾಳುವೆ ರಕ್ಷಿಸೆಂದೊಱಲಿದಳು ಮೃಗನಯನೆ ॥ ೧೨೧

ಸೊಕ್ಕಿದಂತಕದೂತರನು ಸದೆ
ದೊಕ್ಕಲಿಕ್ಕಿಯಜಾಮಿಳನ ಹಿಂ
ದಿಕ್ಕಿ ಕೊಂಡೆಯಲ್ಲೈ ದುರಾತ್ಮಕ್ಷತ್ರಬಂಧುಗಳು ।
ಸೊಕ್ಕಿದರು ಕೌರವರು ಖಳರಿಗೆ
ಸಿಕ್ಕಿದೆನು ನಿನಗಲ್ಲದಾರಿಗೆ
ಕಕ್ಕುಲತೆ ಬಡುವೆನು ಮುಕುಂದ ಯೆನುತ್ತ ಹಲುಬಿದಳು ॥೧೦೦

ಚರಣಭಜಕರ ಮಾನಹಾನಿಯು
ಹರಿಬವಾರದು ಕೃಷ್ಣ ನಾವು
ಸ್ಮರಣೆ ಧನಿಕರಿಗುಂಟೆ ಘಲ್ಲಣೆ ಘೋರಪಾತಕದ ।
ಪರಮಭಕ್ತಕುಟುಂಬಕನು ನೀ
ಕರುಣಿಯಲ್ಲದೊಡೀ ಕುಟುಂಬವ
ಪೊರೆವರಾರ್ಕೈ ಕೃಷ್ಣ ಯೆಂದೊರಲಿದಳು ತರಳಾಕ್ಷಿ ॥ ೧೦೩

ನಾಥರಿಲ್ಲದ ಶಿಶುಗಳಿಗೆ ನೀ
ನಾಥನೈ ಗೋವಿಂದ ಕೇಳೈ
ಯೂಥಪತಿಗಳು ಬಿಸುಟ ಕರಿಣಿಗೆ ಕೃಪೆಯ ನೀ ಮಾಡ್ಡೈ ।
ನಾಥರಿಲ್ಲೆನಗಿಂದು ದೀನಾ
ನಾಥಬಾಂಧವನೀ ನಲಾ ವರ
ಮೈಥಿಲೀಪತಿ ಮನ್ನಿಸೆಂದೊರಲಿದಳು ಮೃಗನಯನೆ ॥ ೧೦೪

ಹೊಲಬುದಪ್ಪಿದ ಹುಲ್ಲೆ ಬೇಡನ
ಬಲೆಗೆ ಬಿದ್ದಂತಾದೆನೈ ಬಲು
ಹಬುವದಲಿ ತಾಯ ಬಿಸುಟ ಶಿಶು ತಾನಾದೆನೈ ಹರಿಯೆ ।
ಕೊಲುವುವೈ ಕಾಗೆಗಳಕಟ ಕೋ
ಗಿಲೆಯ ಮರಿಯನು ಕೃಷ್ಣ ಕರುಣಾ
ಜಲಧಿಯೇ ಕೈಗಾಯಬೇಕೆಂದೊರಲಿದಳು ತರಳೆ ॥ ೧೦೫

ಅಕಟ ಹಂಸೆಯ ಮಱಿಯ ಮೋದುವ
ಬಕನ ತೆಗಿಸೈ ಗಿಡುಗನೌಕುವ
ಶುಕನ ಶೋಕವ ಮಾಣಿಸೈ ವಾಣಿಯವೆ ಭಕ್ತರಲಿ ।
ಪ್ರಕಟಭೂತಗ್ರಹದ ಬಾಧೆಗೆ
ವಿಕಳೆ ನಿನ್ನಯ ಬಿರುದ ತಡೆದೆನು
ಭಕ್ತವತ್ಸಲನೆಹೊಡೆ ಸಲಹೆಂದೊಱಲಿದಳು ತರಳೆ ॥ ೧೦೬

ಆರಿಗೊಱಲುವೆನೈ ಖಳಾಪ
ಸ್ಮಾರವಿದೆ ಸೆಱಗಿನಲಿ ನಿನ್ನಯ
ಸ್ಮರಣೆಗೆ ಮಾನವಾದುದೆ ತನ್ನೀವಿಪತ್ತಿನಲಿ ।
ಘೋರತರಭವದುರಿತತರುವಿನ
ಬೇಱ ಸುಡುವೀನಿನ್ನ ನಾಮಕೆ
ನಾರಿಯಕ್ಕೆಯ ನಿಲಿಸಲರಿದೇನೆಂದಳಿಂದುಮುಖಿ ॥ ೧೦೭

ಕರುಣಿ ನೀ ಕಾರುಣ್ಯಪಾತ್ರದ
ತರಳೆ ತಾ ದೀನಾರ್ತದುಃಖೋ
ತ್ತರಣ ನೀ ದೀನಾರ್ತದುಃಖಿತೆಯಾನು ಜಗವಱಿಯೆ ।
ಪರಮಪಾಲಕ ನೀನಗತ್ಯಂ
ತರದ ವಿಹ್ವಳೆ ತಾನಲಾ ನಿ
ಷ್ಠುರವಿದೇಕೈ ಕೃಷ್ಣ ಯೆಂದೊಱಲಿದಳು ಲಲಿತಾಂಗಿ ॥ ೧೦೮

ಮಱೆದೆನಭ್ಯುದಯದಲಿ ನೀನೆಂ
ದಱಿವೆನಾಪತ್ತಿನಲಿ ಮದದಲಿ
ಮುಱುಕಿಸುವೆನುಬ್ಬಿನಲಿ ಕಳವಳಿಸುವೆನು ಖೋಡಿಯಲಿ ।
ಅಱಿಯದಜ್ಞರ ಗುಣವ ದೋಷವ
ನಱಸುವರೆ ನಿಮ್ಮಡಿಯ ಗುಣವನು
ಮೆಱೆಯಲಾಗದೆ ಕೃಷ್ಣ ಯೆಂದೊಱಲಿದಳು ನಳಿನಾಕ್ಷಿ ॥ ೧೦೯

ಋಷಿಗಳತಿತಾರ್ಕಿಕರು ಕರ್ಮ
ವ್ಯಸನಿಗಳು ಬಾಹಿರರು [1] ಮಿಕ್ಕಿನ
ವಿಷಯದೆಳಮಾನುಗಳು ಮೂಢಮನುಷ್ಯರೆಂಬವರು ।
ಬಸೆದು ನಿನ್ನವನೆಂದು ನೆನೆವೆಗೆ
ಬಸಿದು ಬೀಱುವ ಕೃಪೆಯು ನೀ ತೋ
ಱಸೆ ಯಿದೇಕೈ ಕೃಷ್ಣ ಯೆನಗೆಂದೊಱಲಿದಳು ತರಳೆ ॥ ೧೩೦

ತುಸವೊದಲು ಚತುರಾಸ್ಯಪರ್ಯಂ
ತೆಸೆವುದೈ ಭುವನದಲಿ ಜೀವ
ಪ್ರಸರವಿದ್ದುದು ದುಃಖಸೌಖ್ಯದ ತಾರತಮ್ಯದಲಿ ।
ಉಸುರಪಸರಣವಿಲ್ಲಿದೆನ್ನ
ಬ್ಬಸದ ಭೀತಿಯು ಬೇಗೆ ಮಿಗೆ ದಾ
ಹಿಸುವುದೈ ಕಾರುಣ್ಯನಿಧಿಯೆಂದೊಱಲಿದಳು ತರಳೆ ॥ ೧೩೧

ಏಕಹಸ್ತದಲಂಬರವ ಹಿಡಿ
ದೇಕಹಸ್ತವ ನೆಗಹಿ ಮೊಱೆಯಿಡೆ
ಲೋಕನಾಥ ಮುಕುಂದ ತಾನದ ಕೇಳದಂತಿರಲು ।
ಆಕೆ ಮನದೊಳಗಱಿದು ತನಗಿ
ನ್ನೇಕೆ ಮನದಭಿಮಾನವೆನುತಲೆ
ಲೋಕಸುಂದರಿ ಕರವೆರಡ ಮುಗಿದೆತ್ತಿಯೊಱಲಿದಳು ॥ ೧೩೨

ನಂದಗೋಪಕುಮಾರ ಗೋಪೀ
ವೃಂದವಲ್ಲಭ ದೈತ್ಯಮಥನ ಮು
ಕುಂದ ಮುರಹರ ಭಕ್ತವತ್ಸಲ ಘನಕೃಪಾಜಲಧಿ ।
ನೊಂದೆನೈ ನುಗ್ಗಾದೆನೈ ಗೋ
ವಿಂದ ಕೃಪೆಮಾಡಕಟೆನುತ ಪೂ
ರ್ಣೇಂದುಮುಖಿ ಹಲುಬಿದಳು ಬಲುತೆರದಿಂದಲಚ್ಯುತನ ॥ ೧೩೩

[1] ಕೋವಿದರು, ಚ.

ಶ್ರೀಕೃಷ್ಣನು ದ್ರೌಪದಿಯ ಅವಸ್ಥೆಯನ್ನು ತಿಳಿದು
ಚಿಂತೆಯಿಂದಿರುವಿಕೆ.

* ಇತ್ತಲಾದ್ವಾರಿಕೆಯೊಳಗೆ ವರ
ಸತ್ಯಭಾಮಾಭವನದೊಳು ನರ
ವೃತ್ತಿಯಿಂದಿರುತ ಕೇಳದ ಸತಿಯು ಹೊಲ್ಲೆಯನು ।
ಕೆತ್ತದುಮ್ಮಾನದಲಿ ದ್ರೌಪದಿ
ಯುತ್ತಮೆಯಲಾ ದೃಢಪತಿವ್ರತೆ
ಗೆತ್ತಣದು ಪರಿಭವವಿದೆಂದಸುರಾರಿ ಚಿಂತಿಸಿದ ॥ * ೧೩೪

ಆಗ ಸತ್ಯಭಾಮೆಯೊಡನೆ ಆಟದಲ್ಲಿ ಅಕ್ಷಯವೆಂದು
ಹಾಸಂಗಿಯನ್ನು ಹಾಕಿದುದು.

ಹರಿಯು ಚಿತ್ತದ ದುಗುಡವನು ತಾ
ನರಿದು ಸತ್ರಾಜಿತನ ಸುತೆಯಂ
ದುರುತರಾಲಸ್ಯವನು ಪರಿಹರಿಪನುವ ನೆನೆದಾಗ ।
ವಿರಚಿಸಿದಳೊಲವಿನಲಿ ನೆತ್ತವ
ನಿರದೆ ಹಾಸಂಗಿಗಳ ಢಾಳಿಸಿ
ಸರಿಬೆಸನೊ ಹೇಪೆಂದುದಕ್ಷಯವೆಂದನಾಸತಿಗೆ ॥ ೧೩೫

ಚಿತ್ತವಿಸು ಜನಮೇಜಯ ಕ್ಷಿತಿ
ಪೋತ್ತಮನೆ ಹರಿ ಲೀಲೆಯಿಂದಾ
ಸತ್ಯಭಾಮಾದೇವಿಯೊಳು ನಾನಾವಿನೋದದಲಿ ।

---

* ಇತ್ತದ್ವಾರಾವತಿಯೊಳಗೆ ದೇ
ವೋತ್ತಮನು ಭಕತರಿಗೆ ತನ್ನನು
ತೆತ್ತು ಬದುಕುವೆನೆಂಬ ಪರಮವ್ರತದ ನಿಷ್ಠೆಯನು ।
ಚಿತ್ತದಲಿ ನೆಲೆಗೊಳಿಸಿ ರುಕ್ಮಿಣಿ
ಸತ್ಯಭಾಮೆಯರೊಳು ಸಮೇಳದ
ನೆತ್ತಸಾರಿಯ ಹರಹಿ ಹಾಸಂಗಿಯನು ದಾಳಿಸುತ ॥ *

ನೆತ್ತವಾಡುತ ನುಡಿದನುತ್ತರ
ವಿತ್ತಗವ ಹಾಯ್ಕಕ್ಷಯುವೆ ಯೆ
ನ್ನುತ್ತ ನುಡಿದನು ಮೂಱುಬಾರಿಯು ಹಾಯ್ಕಿ ಸಾರಿಗಳ ‖ ೧೩೬

ಶ್ರೀಕೃಷ್ಣನನ್ನು ಕುರಿತು ಸತ್ಯಭಾಮೆಯ ಪ್ರಶ್ನೆ.

ಸತಿ ನೆಗಹಿದಳು ಸಾರಿಯನು ಗಣಿ
ಸುತ್ತ ನೋಡಿದಳಣಿಕೆಯೊಳಗಿ
ಲ್ಲತಿಶಯದ ನುಡಿಯಕ್ಷಯವೆದೆಂದೆಂಬ ವಾಕ್ಯವಿದು ।
ಮತಿಗೆ ಗೋಚರವಲ್ಲ ಯಿಾಸಂ
ಗತಿಗೆ ಬಾರದು ದೇವ ವಾಕ್ಯ
ಸ್ಥಿತಿಯ ಪಲ್ಲಟವೆನುತ ಮಿಗೆ ಬೆಸಗೊಂಡಳಾಪರಿಯ ‖ ೧೩೭

ದ್ಯೂತದಲಿ ಪಲ್ಲಟಿಸಿ ಬಂದುದು
ಮಾತು ನಿಮ್ಮಯ ಚಿತ್ತ ತಾ ಸಿಂ
ದೇತಟದಿ ಸಿಲುಕಿದುದೊ ಸತಿಯರ ಸೆಱುವೆಯ ನೆನಹು ।
ಏತಕೀಪುರುಷರಲಿ ನಂಬುಗೆ
ಬೀತುದಂಗನೆಗೆನಲು ನಸುನಗು
ತಾತಳೋದರಿಗೆಂದನಸುರಾರಾತಿ ವಿನಯದಲಿ ‖ ೧೩೮

ಆಗ ಶ್ರೀಕೃಷ್ಣನು ದ್ರೌಪದಿಯ ಅವಸ್ಥೆಯನ್ನು ತಿಳಿಸಿದುದು.

ಕೌರವರು ಜೂಜಿನಲಿ ನಾರಿಯ
ಸೀರೆಯನು ಸುಲಿಯಲ್ಕೆ ಮೊಱೆಯಿಡೆ
ನಾರಿಗಕ್ಷಯವಸ್ತ್ರವಾಗಲಿ ಯೆನ್ನ ನೆನೆದುದಕೆ
ಆರದೆನ್ನನು ನೆನೆವರವರಿಗೆ
ಧಾರಕನು ತಾನಹೆನು ಕೇಳಲೆ
ನಾರಿ ಬೇಱೊಂದಿಲ್ಲವೆಂದನು ಶೌರಿ ನಸುನಗುತ ‖ ೧೩೯

ಎನಲು ವಿಸ್ತರವಾಗಿ ನೀವಿದ
ನೆನಗೆ ಹೇಳಲು ಬೇಕು ದ್ರೌಪದಿ
ಗಿನಿತು ಪೂರ್ವಾರ್ಜಿತದ ಪರಿಭವ ತಪ್ಪಿದಂದವನು ।
ವಿನಯದಿಂ ಹೇಳೆಂದು ಮಾನಿನಿ
ಯನುನಯದಿ ಬೆಸಗೊಳಲು ತಾನಿದ
ನಿನಗೆ ಹೇಳುವೆ ಸತಿಯ ಪೂರ್ವದ ಕಥೆಯ ಕೇಳೆಂದ ॥ ೧೪೦

ಭೂಸುರರು ಚೋರರುಗಳಿಂದವೆ
ಗಾಸಿಯಾಗಿ ದಿಗಂಬರದಿ ಬರೆ
ಯಾಸುದತಿ ತಾನುಟ್ಟವಸ್ತ್ರದೊಳರ್ಧವನು ಸೀಳಿ ।
ವಾಸುದೇವಾರ್ಪಣವು ತಾನೆಂ
ದೋಸರಿಸದಂತಾಗ ಕೊಡಲಿಂ
ದೀಸಮಯಕಿಂತೊದಗಿ ಬಂದುದು ಪೂರ್ವದತ್ತಫಲ ॥ ೧೪೧

ಪಾಂಡವರಿಗೆ ಆದ ತೊಂದರೆಯನ್ನು ಶ್ರೀಕೃಷ್ಣನು ಹೇಳಿದುದು.

ಅತ್ತಲಾಹಸ್ತಿನಪುರಕೆ ಭೂ
ಪೋತ್ತಮನನತ್ಯಧಿಕಗುಣಯುತ
ವೃತ್ತನನು ಧರ್ಮಜನನಾಕೌರವರು ಕರೆದೊಯ್ದು ।
ಚಿತ್ತದಲಿ ಸೈರಿಸದೆ ಕಪಟದ
ನೆತ್ತದಲಿ ಸೋಲಿಸಿದನಖಿಳಸು
ವಸ್ತುವಾಹನವನುಜತಾವೊದಲಾಗಿ ಸತಿಸಹಿತ ॥ ೧೪೨

ಅತಿದುರಾತ್ಮರು ಕೌರವರು ದ್ರೌ
ಪದಿಯ ತಂದಾಸಭೆಯ ಮಧ್ಯದಿ
ಸತಿಯ ವಸ್ತ್ರಾಕರುಷಣಂಗೈಯಲಿಕೆ ಕರವೆತ್ತಿ ।
ಮತಿ ಮಱೆಯದೊಱಲಿದಳು ನೀನೇ
ಗತಿ ಮುಕುಂದ ಮುರಾರಿ ಲಜ್ಜಾ
ಸ್ಥಿತಿಯನುಳುಹೆನೆ ಕೇಳಿ ನುಡಿದಿಹೆನಕ್ಷಯವದೆನುತ ॥ ೧೪೩

ಎಂದು ಮುರರಿಪು ಸಂತಪಿಟ್ಟಾ
ನಂದದಿಂದಲಿ ಸತ್ಯಭಾಮೆಯು
ನಂದು ನಿಲಿಸಿದ ಸೀರೆಗಳನಾನೇನು ಹೇಳುವೆನು ।
ಇಂದುಮುಖಿ ಬಾಯ್ಬಿಡುತ ಕರುಣಾ
ಸಿಂಧು ನೀನೆನಗಲ್ಲದಾರಿಗೆ
ತಂದೆಯೆಂದೊಱಲುತ್ತ ಮೊಱೆಯಿಡುತಿರ್ದಳಾಕಾಂತೆ ॥ ೧೪೪

ಆಸತಿಯು ನಾನಾಪ್ರಕಾರದಿ
ಬೇಸಱದೆ ಮೊಱೆಯಿಟ್ಟು ಮತ್ತೆಯು
ವಾಸುದೇವನ ನಂಬಿದಳು ನೆಱೆ ಕೇಳ್ಳೈ ಭೂಪ ।
ಆಸಮಯದಲಿ ಕೃಷ್ಣ ಕರುಣದ
ಲಾಸತಿಯು ಪರಿಭವಕೆ ವಸ್ತ್ರವ
ಬೇಸಱದೆ ಹುಟ್ಟಿಸಿದ ಲಜ್ಜೆಯ ಕಾಯ್ದನಾಸತಿಯ ॥ ೧೪೫

ಕೇಳಿದನು ಮುರವೈರಿ ತನ್ನಯ
ಮೇಳದೈವರ ಸತಿಯ ಹುಯ್ಯಲ
ನಾಳಿನಪಮಾನಂಗಳಾಳ್ದನಿಗೆಂಬ ನುಡಿಯಿಂದ ।
ಕೋಳುವೋದುವೆ ಪಾಂಡುತನುಜರ
ಬಾಳುವೆಗಳಕಟೆನುತ ಲಕ್ಷ್ಮೀ
ಲೋಲ ಚಿಂತಿಸಿ ನುಡಿದ ರುಕ್ಮಿಣಿದೇವಿಗೀಹದನ ॥ ೧೪೬

ಕ್ರೂರದುರ್ಯೋಧನನು ದ್ರುಪದ ಕು
ಮಾರಿಪಾಂಚಾಲಿಯನು ಸಭೆಯೊಳು
ಸೀರೆಯನು ಸುಲಿಯಲ್ಕೆ ಕಾಯ್ಕೈ ಕೃಷ್ಣ ಯೆಂದೆನುತ ।
ನಾರಿಯೊಱಲಿದಳಾಕೆಯುಟ್ಟಿಹ
ಸೀರೆ ಸೆಳೆಯಲು ಬೞಿಕಲಕ್ಷಯ
ಸೀರೆಯಾಗಲಿ ಯೆಂದ ಗದುಗಿನ ವೀರನಾರಯಣ ॥ ೧೪೭

ಹದಿನೈದನೆಯ ಸಂಧಿ ಮುಗಿದುದು.

# ಹದಿನಾರನೆಯ ಸಂಧಿ.

ಸೂಚನೆ.

ಸೋಲದಲಿ ಮನ ನೊಂದ ಧರಣೀ
ಪಾಲರನು ಸಂತೈಸಿ ಯಂಧನೃ
ಪಾಲ ಕಳುಹಿದನಿವರು ಹೊಱವಂಟರು ಪುರಾಂತರವ ॥

ದುಶ್ಶಾಸನನು ದ್ರೌಪದಿಯ ಸೀರೆಯನ್ನು ಸೆಳೆಯುತ್ತಿರಲು
ಅದು ಅಕ್ಷಯವಾದುದು.

ನಿಯತಮತಿ ಚಿತ್ತವಿಸು ಜನಮೇ
ಜಯ ಮಹೀಪತಿ ದೇವತಾಶ
ಕ್ತಿಯಲಿದೇನಾಶ್ಚರ್ಯವೈ ಶಿವ ಶಿವ ಮಹಾದೇವ ।
ಜಯ ಜಯೆಂದುದು ನಿಖಿಳಜನ ಝೂ
ಡಿಯಲಿ ಝೋಂಪಿಸಿ ಸೆಳೆವ ಸೀರೆಗೆ
ಲಯವ ಕಾಣೆನು ಲೀಲೆಯೆಂತುಟೊ ದೇವಕೀಸುತನ ॥ ೧

ಉಗಿದು ಹಾಯ್ಕುವ ಖಳನ ನಿಡಿದೋ
ಳುಗಳು ಬೞಲಿದುವೆಳ್ಳುಹೊಷ್ಯುದ್ವ
ಡಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯೆ ।
ತೆಗೆದು ನಿಂದನು ಸೀರೆಯೊಟ್ಟಲು
ಗಗನವನು ಗಾಹಿಸಿತು ಗರುವೆಯ
ಬಗೆಗೆ ಬೇಸಱವಿಲ್ಲ ಬೆಱಗಾಯಿತು ಮಹಾಸ್ಥಾನ ॥ ೨

ಹಾ ಮಹಾಸತಿ ಶಿವ ಶಿವಾ ಲ
ಜ್ಜಾಮಹೋದಧಿ ಬತ್ತುವುದೆ ನಿ
ರ್ನಾಮರೇ ಕುಂತೀಸುತರುಚಿತರೇ [1] ಪರಾಭವಕೆ ।

[1] ಪಥ್ಯರೇ, ಚ. ಪಥರೇ, ಚ.

ಶ್ರೀಮುಕುಂದನ ದಿವ್ಯನಾಮ
ಪ್ರೇಮರಸಕಿದು ಸಿದ್ಧಿ ಯೆನಲಾ
ಯ್ತಾಮಹಾಸ್ಥಾನದಲಿ ಬಳೆದುದು ಬೇಱಗು ಬಿಂಕದಲಿ ॥ ೩

ಅಹಹ ದೈವಪ್ರೇಮವಿದಲಾ
ಮಹಿಳೆಯಲಿ ಮಾನವರ ಕೃತಿ ಗೆಲ
ಲಹುದೆ ಗರುವೆಯ ಗಾಹಿಸಿತು ಗೋವಿಂದನಭಿಧಾನ ।
ವಿಹಿತವಿದು ಕುರುರಾಜಕುಲವನ [1]
ದಹನ [2] ಭೀಮಧನಂಜಯಾದ್ಯರ
ವಿಹರಣದ ವಿನ್ಯಾಸವಾಯ್ತೆಂದುದು ಬುಧವ್ರಾತ ॥ ೪

ಬೆಗಡಿನಲಿ ಮುಖಭೇದ ನಯನಾಂ
ಬುಗಳಲಾನಂದಾಶ್ರು ಶೋಕದ
ಡಗೆಯಲುಬ್ಬುವ ನಗೆಯ ಭಯಸ್ವೇದದಲಿ ರೋಮಾಂಚ ।
ದುಗುಡದಲಿ ಪರಿತೋಷ ಕಂದಿದ
ಮೊಗದೊಳುಜ್ಜ್ವಲವೃತ್ತಿ ಭೀಷ್ಮಾ
ದಿಗಳೊಳಗೆ ಪಲ್ಲಟಿಸುತಿರ್ದುದು ಪ್ರತಿಮುಹೂರ್ತದಲಿ ॥ ೫

ಆಗ ವಿದುರನು ದುರ್ಯೋಧನನಿಗೆ ಬುದ್ಧಿ
ಯನ್ನು ಹೇಳಿದುದು.

ನೆನೆದೆ ನೀನನುಚಿತವ ನೀ ಹೊ
ತ್ತಿನಲಿ ದ್ರುಪದಾತ್ಮಜೆಯ ದೈವದ
ವಿನಯದಲಿ ದೂಸಱಡಗಿತೆಲೆ ಬೆಳಸಾದುದಪಕೀರ್ತಿ ।
ವನಿತೆಯನು ಬಿಡು ಪಾಂಡುನೃಪನಂ
ದನರ ನೀನೊಲಿದಂತೆ ಮಾಡುವು
ದನುನಯವು ನಿನಗೆಂದು ನುಡಿದನು ವಿದುರ ಕುರುಪತಿಗೆ ॥ ೬

1 ಅಹಿತವರು ಕುರುರಾಜಕುಲಘನ, ಚ. 2 ಗಹನ, ಚ.

ಆಗ ವಿದುರವಾಕ್ಯದಲ್ಲಿ ದುರ್ಯೋಧನನ ಉಪೇಕ್ಷೆ.

ದೈವವೀದ್ರೌಪದಿಗೆ ಸೀರೆಯು
ನೀವ್ರುದಲ್ಲದೆ ಬಿಡಿಸಲಾಪುದೆ
ದೈವ ತೊತ್ತಿರ ಹುರುಡುಗೆಲಸದ ಹಿಂಡುಕೂಟದಲಿ |
ದೈವವಿವಳಿಗೆ ತಾನಲೇ ತ
ನ್ನೈವರಿಕ್ಕಿದ ಮಾತು ರಿಪುಗಳ
ವೈವಳಿಯು ನುಡಿಗಾಳಿ ನೀ ಸಾಕೆಂದು ನೃಪ ಜಱದ ॥ ೭

ನೀತಿಮರುಳನು ವಿದುರನೀತನ
ಮಾತಿನಲಿ ಫಲವಿಲ್ಲ ತೊತ್ತಿರೊ
ಳೀತಳೋದರಿ ಬೆರಸಿ ಬದುಕಲಿ ಕರ್ಣ ಕಳುಹಿವಳ |
ಈತತುಕ್ಷಣ ದೃಷ್ಟಿಬಂಧವ
ನೇತಱಲಿ ಮಾಡಿದಳೊ ಲಜ್ಜೆಯು
ಜಾತಿಯುಱದುದು ಬಳದಸೀರೆಯ ಕಟ್ಟಿ ಹೊಱಸೆಂದ ॥ ೮

ಎನಲು ನೋಡಿದಳಬಲೆ ಮುನಿಯುತ
ಮನದ ಕೋಪಾಗ್ನಿಯಲಿ ಭುಗಿಭುಗಿ
ಲೆನುತ ಬೆಂದುವು ಬಹಳಪರ್ವತರೂಪಿನಂಬರವು |
ಅನಿಮಿಷರು ತಲ್ಲಣಿಸೆ ಸಭೆಯಲಿ
ಜನನಿಕರ ನಡುನಡುಗೆ ಕೌರವ
ಜನಪನೆದೆ ಜರ್ಝರಿತವಾದುದು ಧೂಮಮಯವಾಗೆ ॥ ೯

ಇವಳಲೇ ನಮ್ಮನಿಬರಭಿಮಾ
ನವನು ಕೊಂಡಳಲಾ ಸ್ವಯಂವರ
ಭವನದಲಿ ಭಂಗಿಸಿದಳೆಮ್ಮನು ಸಭೆಯೊಳಡಹಿದೊಡೆ |
ಇವಳು ಬಹುವಿಧಪುಣ್ಯಶಕ್ತಿಯೊ
ಳವಗೆ ಸಿಲುಕಿದಳಿನ್ನು ತೊತ್ತಿರ
ಸವತಿ ಬೇಟದ ಸವಿಯ ಸುರಿಯಲಿ ಭಂಡಮಿಂಡರಿಗೆ ॥ ೧೦

ಸೋತನರಸನು ತನ್ನ ನನ್ನನು
ಸೋತುದನುಚಿತವೆಂಬ ಜಗಿನ
ಮಾತನಱಿಯದ ಮೂರ್ಖರನು ಸುಡಲೆಂದಳಂದುಮುಖಿ || ೧೧

ದುರ್ಯೋಧನನ ವಚನ.

ಸೋತುದಿಲ್ಲಾ ನಿನ್ನ ಸೋತುದ
ನೀತಿಯೆಂಬುದು ವಿದಿತವೇ ತಾ
ನೀತ ನುಡಿಯಲಿ ಧರ್ಮಪುತ್ರನು ಸತ್ಯಸಂಧನಲೆ |
ಈತಳೋದರಿ ತರಿಚುಗೆಡೆದೀ
ಮಾತಿನಲಿ ತಾ ಬಿಡುವೆನೇ ನಿ
ನ್ನಾತನನು ನುಡಿಸೆಂದು ಬಳ ಧಟ್ಟಿಸಿದನಂಗನೆಯ || ೧೨

ಪಾಂಚಾಲಿಯ ವಿಷಯದಲ್ಲಿ ಕರ್ಣನ ಬಿರುನುಡಿಗಳು.

ಚೇಯ ಮಾತೇಕಿವಳೊಡನೆ ರಿಪು
ರಾಯರಿಗೆ ದಾಸತ್ವವಾಗಲು
ಬಾಯಿಬಡುಕಿಯದಾರೊಡವೆ ತದ್ದಾಸಧನವಲ್ಲೆ |
ಆಯತಾಕ್ಷಿಯನಿಂದು ನಿನ್ನಪ
ಸಾಯಿತೆಯರಲಿ ಕೂಡು ತೊತ್ತಿರ
ಲಾಯ ಬೇಡುಪಕಾರವೆನಗೆಂದೆಬಗಿದನು ಕರ್ಣ || ೧೩

ಎಲೆಗೆ ಭಜಿಸಾ ಕೌರವಾನ್ವಯ
ತಿಲಕನನು ನಿನ್ನವರ ಮೆಱೆ ನಿ
ನ್ನುಚಿವ ನೆನೆ ಯಾಸವುಯದಲಿ ಕಾಲೋಚಿತಕ್ರಮವ |

ಆಗ ಪಾಂಚಾಲಿಯು ಕರ್ಣನನ್ನು ಧಿಕ್ಕರಿಸಿದುದು.

ಬಳಸು ನೀನೆನೆ ಗಜಱಿದಳು ಕುರು
ತಿಲಕನನು ತಱಿದೊಟ್ಟ ರಣದಲಿ
ತಿಳಿರಕುತದಲಿ ದಣಿವೆನನಿಲಜನೆಂದಳಬುಜಾಕ್ಷಿ || ೧೪

ದುರ್ಯೋಧನನ ಸೊಕ್ಕಿನ ನುಡಿ.

ಏಕೆ ಕೆಣಕಿದೆ ಕರ್ಣ ಬೂತಿನ
ಬೀಕಲಿನ ಬದಗಿಯನು ಸಮರದೊ
ಳೀಕೆಯನಿಲಜ ಮುರಿವನೆನುತವೆ ತನ್ನ ಮುಂಜೆರಿಗ |
ನೂಕಿ ತೊಡೆಗಳ ತೋರಿಸುತ ಲೋ
ಕೈಕವೀರನ ನೇಹಿಸಿದೊಡ
ವ್ಯಾಕುಲನ ಮನ ಖಂಡಿಯೋದುದು ಖತಿಯ ಹೊಯ್ಲಿನಲಿ ||

ಆಗ ಭೀಮನ ಕೋಪ.

ನೋಡಿದನು ಪರಿಘವನು ಕಡೆಗ
ಣ್ಣಾಡಿತಿವದಿರ ಮೇಲೆ ಮೈಯ್ಯಾಲಿ
ಜಾಡಿ ಗೆದರಿತು ರೋಮ ಝಳಪಿಸಿತರುಣಮಯನಯನ |

ಭೀಮನನ್ನು ಕುರಿತು ಧರ್ಮರಾಯನ ಸಮಾಧಾನ.

ಮೂಡಿತುರಿ ಸುಯ್ಲಿನಲಿ ರೋಷದ
ಬೀಡು ಭೀಮನ ಕಂಡು ಧರ್ಮಜ
ಬೇಡಿಕೊಂಡನು ತನ್ನ ಕೊರಳಿನ ಬೆರಳ ಸನ್ನೆಯಲಿ || ೧೬

ಸೈರಿಸಕಟಾ ಭೀಮ ರೋಷವಿ
ಹಾರಕಿದು ಹೊತ್ತಲ್ಲ ಗರ್ವವಿ
ಕಾರದಲಿ ಕೌರವರು ಮೆರೆಯಲಿ ಕಾಲವವರದಲೆ |

ಅದಕ್ಕೆ ಅರ್ಜುನನ ಅನುಮತಿ.

ಧಾರಿಣೀಶನ ಧರ್ಮತತ್ವದ
ಸಾರವುಳಿದರೆ ಸಾಕು ಮಿಕ್ಕಿನ
ನಾರಿಧನವಭಿಮಾನ ಬೇಯಲಿ ಯೆಂದನಾಪಾರ್ಥ || ೧೭

ಕ್ಷಮೆಯೆ ಧನವೆಂದಿದ್ದ ವಿವೇಳಲಿ
ಮಮತೆಯನು ಮಾಡಿದೆವೆ ನಾವು
ಶ್ರಮಿ [1] ಸುವೊಡೆ ದೇವೇಂದ್ರ ತೃಣವಿವರಾವ ಪಾಡೆಮಗೆ |

---

[1] ಭ್ರಮಿ, ಚ.

ರಮಣಿಯಾಡಿದ ಧರ್ಮಪಥವೀ
ಕುಮತಿಗಳ ಮತವಲ್ಲದಿರ್ದೊಡೆ
ತಮಗೆ ದಾಸಿಯೆ ದ್ರುಪದನಂದನೆ ಯೆಂದನಾಪಾರ್ಥ ॥ ೧೮

ದುರ್ಯೋಧನನ ಸ್ವಚ್ಛಂದಭಾಷಣ.

ಶ್ರುತಿತದರ್ಥಸ್ಮೃತಿಗಳಲಿ ಪಂ
ಡಿತರು ಪರಿಣತರುಂಟು ಪಾರ್ಥ
ಸ್ಮೃತಿಯ ಬಟಿಕಾದರಿಸುವೆವು ನಿಮಗಾದದಾಸ್ಯದಲಿ ।
ಕೃತಕವಿಲ್ಲದೆ ನಡೆದು ತೋಱು
ಸತಿಯ ಸೆಱೆಯನು ಬಿಡಿಸಲೆವ್ಮಾ
ಕ್ಷಿತಿಯೊಳಾರುಂಟೆಂದು ಕೌರವರಾಯ ಗರ್ಜಿಸಿದ ॥ ೧೯

ಆಗ ಕರ್ಣನ ಮಾತುಗಳು.

ಭಾಷೆ ಯೇಕಿವನೊಡನೆ ದ್ರೌಪದಿ
ದಾಸಿಯಲ್ಲೆಂಬವೆನ ದಿವಸವ
ದೇಸು ಬಲುಹೋ ಪೂತು ಮಝು ತಾಸಿಂಪ್ರಸುತನೆಂಬ ।
ಐಸರಲಿ ದೇವೇಂದ್ರ ತೃಣ ಗಡ
ವೈಸಲೇ ನೀ ಮುಸಿದೊಡೀನುಡಿ
ದಾಸಭಾವದ ಬಣಗುಗಳಿಗೇಕೆಂದನಾಕರ್ಣ ॥ ೨೦

ನೂಕಿಸಾ ತೊತ್ತಿರ ಮನೆಗೆ ತಡ
ವೇಕೆ ತರುಣಿಯನಿನ್ನು ನೀನು ವಿ
ವೇಕದಲಿ ನಿನ್ನಂತೆ ತೆಗೆ ಸಾಕಿವರ ಮಾತೇನು ।
ಈಕುಠಾರರ ಕಳುಹಿ ಕಳೆ ತಾ
ವೇಕೆ ನೃಪಸಭೆಯುಲಿ ವರಾಸನ
ವೇಕೆನುತ ಕುರುಪತಿಗೆ ನುಡಿದನು ಖಾತಿಯಲಿ ಕರ್ಣ ॥ ೨೧

ಆಗ ಕರ್ಣನನ್ನು ಸಮಾಧಾನಪಡಿಸಿ ದುಶ್ಶಾಸನನಿಗೆ
ದುರ್ಯೋಧನನ ಅಪ್ಪಣೆ.

ಅಹುದಲೇ ಬಳಿಕೇನು ನೀನತಿ
ಬಹಳಮತಿಯೈ ಕರ್ಣ ನೀನೀ
ಕುಹಕಕೋಟಿಯನೆತ್ತಬಲ್ಲರೆ ವ್ಯಥಾಭಿಮಾನಿಗಳ ।
ರಹಣಿ ಸಾಕಂತಿರಲಿ ತೊತ್ತಿರ
ಸಹಚರರ ಸೂಳಾಯುತರ ಕರೆ
ಮಹಿಳೆಯನು ನೂಕೆಂದು ದುಶ್ಶಾಸನಗೆ ನೃಪ ನುಡಿದ [1] ॥ ೭೦

ಸುಳಿಮೃಹುಲ್ಲೆಯು ಸೋಹಿನಲಿ ಕು
ಕ್ಕುಳಿಸಿದರೆ ಕುಕ್ಕುರನ ಕೈಯ್ಯಲಿ
ಕಳುವಹುದೆ ಜನಮೇಜಯಕ್ಷಿತಿಪಾಲ ನಿನ್ನವರ ।
ಬಳಿಲಿಕೆಯನೇನೆಂಬೆನೈ ಹಿಡಿ
ದೆಳೆಯೆ ಹೆಣಗಿದಳಕಟ ರಾಯನ
ಲಲನೆಗೀವಿಧಿಯೇ ಯೆನುತ ಸ್ತೋತ್ರಿಟ್ಟುದಖಿಳಜನ ॥ ೭೩

ಆಗ ದ್ರೌಪದಿಯು ಭೀಷ್ಮಾದಿಗಳನ್ನು ಕೇಳಿಕೊಳ್ಳುವಿಕೆ.

ಮಾಣಿಸೈ ಗಾಂಗೇಯ ಗುರು ಸಿ
ನ್ನಾಣೆಯಿಡು ಕೃಪ ಕೃಪೆಯ ಮಾಡೈ
ರಾಣಿವಾಸಂಗಳಿರ ನಿಲಿಸಿರೆ ನಿಮ್ಮ ಮೈದುನನ ।
ಪ್ರಾಣವಿದ ಕೊಳಹೇಳಿರೌ ಸಾ
ಕೂಣೆಯುವ ಹೊಲಲಾರೆನೆನುತಾ
ರಾಣಿ ಹಲುಬಿದಳೊಡೆಮುಳುಚಿ ಹೆಣಗಿದಳು ಖಳನೊಡನೆ ॥ ೭೪

ಮಾವ ನಿಮ್ಮಯ ನೇತ್ರವೆಂತ
ಭಾವದಲಿ ಬೆರಸಿದೊಡೆ ವಿಜ್ಞಾ
ನಾವಲಂಬನದೃಷ್ಟಿ ಬೆಂದುದೆ ನಿಮ್ಮ ಹೃದಯದಲಿ ।

1 ನೇಮಿಸಿದ, ಚ.

ದೇವಿಯರಿಗಿದು ಸೊಗಸಲಾ ಸ
ಖ್ಯಾವಳಿಗೆ ಸೇರುವುದಲಾ ನಿ
ರ್ಜೀವರಾದಿರೆ ನೀವೆನುತ ಹಲುಬಿದಳು ಲಲಿತಾಂಗಿ ॥ ೬೪

ಕ್ಷಿತಿಯೆ ಬಿಡಿಸಾ ಸೆಱಗನೆಲೆ ಪಾ
ರ್ವತಿಯೆ ತನ್ನದು ಧರ್ಮವಾದೊಡೆ
ಗತಿ ತನಗೆ ನೀವಾಗಿರೌ ಕಮಲಾದಿಶಕ್ತಿಗಳ ।
ಸತಿಯಹಲ್ಯಾದಿತಿಯರುಂಧತಿ
ಯತಿಮಹಾಮಾಯಾದಿದೇವಪ್ರ
ತತಿ ಬಿಡಿಸಿರೆ ಸೆಱಗನೆಂದೊಱಲಿದಳು ಪಾಂಚಾಲಿ ॥ ೭೬

ಶರಧಿವಧುಗಳು ಬಂದು ಬೇಡಲು
ಪುರುಷಭಿಕ್ಷವನಿಕ್ಕಿದೇ ದಶ
ಶಿರನನುಜ ಶರಣೆಂದು ಬಂದೊಡೆಯಚಲಪದವಿತ್ತೆ ।
ಚರಣ ಸೋಕಲು ಸತಿಯಹಲ್ಯೆಯ
ನಿರದೆ ಕಾಯ್ದೈ ಭಕ್ತವತ್ಸಲ
ಕರುಣಿ ಕೃಷ್ಣಾ ಕಾಯ್ದುಕೊಳ್ಳೆಂದೊಱಲಿದಳು ತರಳೆ ॥ ೭೭

ಅಂಧನೊಬ್ಬನೆ ಮಾವ ನೀವೇ
ನಂಧನಾದಿರೆ ಪಾಂಡು ಕರುಣಾ
ಸಿಂಧು ನೀ ಸೈರಿಸುವುದೇ ತನ್ನೀವಿಪತ್ತಿನಲಿ ।
ಅಂಧಕಾಸುರಮಥನ ನೀನೇ
ಬಂಧಿಸಿದೆಲಾ ಪೂರ್ವವರಸಂ
ಬಂಧವನು ನೀ ಸೆಱಗ ಬಿಡಿಸೆಂದೊಱಲಿದಳು ತರಳೆ ॥ ೭೮

ಸೊಸೆಯಲಾ ದೇವೇಂದ್ರ ತನ್ನೀ
ಘಸಣಿಯಾರದು ಹಿರಿಯಮಾವನ
ವಶವಲಾ ತ್ರೈಜಗದ ಜೀವರ ಜೀವವೇ ಬ್ರಹ್ಮಣ ।

ಉಸುರು ನಿಮ್ಮಗಧೀನವೀ ದು
ರ್ವ್ಯಸನಿಗಳ ಕೊಂಡಾಡುವರೆ ಕರು
ಣಿಸು ಸವಿಾರಣ ಯೆಂದು ಹಲುಬಿದಳಶ್ವಿನೀಯುರಿಗೆ ॥ ೨೯

ಮಾವದಿರು ಮೊದಲಾದ ದಿಕ್ಪಾ
ಲಾವಳಿಗೆ ನಮಿಸಿದೆನು ನೈದಿಲ
ತಾವರೆಯ ಮಿತ್ರರಿಗೆ ಮಂಡೆಯುಲಿಟ್ಟೆನಂಜಲಿಯ ।
ಕಾವುದೆನ್ನನು ಹೆಂಗಸಲ್ಲಾ
ಹಾವು ಹಲಬರ ನಡುವೆ ಸಾಯುದು
ದೇವರಿಗೆ ದೂರ್ರೈದಲೆಂದೊಱಲಿದಳು ನಳಿನಾಕ್ಷಿ ॥ ೩೦

ಅಗ ವಿದುರನ ಮಾತುಗಳು.

ಬಾಯ ಬಿಡಲೇಕಕಟ ಬೞಲಿದೆ
ತಾಯೆ ಕೈದೋಱಸರು ನಿನ್ನಯ
ರಾಯುರೈವರು ಕೆಲದಲಿದ್ದವರೇನ ಮಾಡುವರು ।
ನ್ಯಾಯ ನಿಮ್ಮದು ದೈವದೊಲುಮೆಯ
ದಾಯ ತಪ್ಪಿತು ಬೞಿದೆ ಧೈರ್ಯವ
ಬೀಯ ಮಾಡದಿರೆಂದು ನುಡಿದನು ವಿದುರನಂಗನೆಯ ॥ ೩೧

ಎಲೆಗೆ ನಿನ್ನವರೇನ ಮಾಡುವ
ರೊಲೆಯೊಳಡಗಿದ ಕೆಂಡವಿವರ
ಗ್ಗಳಿಕೆ ನಂದಿದುದೆನುತ ಮುಂಜೆಱಗೆತ್ತಿ ಮಾನಿನಿಗೆ ।
ಖಳನು ತೊಡೆಯನು ತೋಱಸಿದೊಡತಿ
ಮುಳಿದು ಕೊಟ್ಟಳು ಶಾಪವನು ನಿ
ನ್ನಱವು ತೊಡೆಯಲಿ ಘಟಿಸಲೆಂದಳು ಮುಗುದೆ ಖಾತಿಯಲಿ ॥

ಕೋಪದಿಂದ ಭೀಮನು ಎದ್ದುದು.

ಕಡಲ ತೆಱೆಗಳ ತಱುಬಿ ತುಱುಕುವ
ವಡಬನಂತಿರೆ ಮೇಘಪಟಲವ

ನೊಡೆದು ಸೂಸುವ ಸಿಡಿಲಿನಂತಿರೆ ಸಭೆಯೊಳಡಹಾಯ್ದು ।
ಕುಡಿ ಕುಠಾರನ ರಕುತವನಾ ತಡೆ
ಗಡಿ ಸುಯೋಧನನೂರುಗಳ ನಿ
ಮ್ಮಡಿಸಿ ಮುನಿಯುಲಿ ಧರ್ಮಸುತನೆಂದೆದ್ದನಾಭೀಮ ॥　　೭೩

ಹೆದಱು ಹೊಕ್ಕುದು ಸಭೆಗೆ ಕೌರವ
ನೆದೆ ಬಿರಿದುದಾಸ್ಥಾನಜಲಸಿಧಿ
ಕದಡಿತುಕ್ಕಿದ ಬೆಱಗಿನಲಿ ಬೆಳ್ಳಾದನವನೀಶ ।
ಹದನಹುದು ಹಾ ಯೆನುತಲಿರ್ದುದು
ವಿದುರಭೀಷ್ಮದ್ರೋಣಕೃಪರೀ
ಕೆದರುಗೇಶದ ಕಾಂತೆ ಹುದಿದಳು ಹರುಷಭಾರದಲಿ ॥　　೭೪

ಆಗ ದುಶ್ಶಾಸನನು ದೂರ ಹೋದುದು.

ಒಡೆಯನ್ನೆತರಲಿಕ್ಷುತೋಟದ
ಬಡನರಿಗಳೋಡುವವೊಲೀಕೆಯ
ಹಿಡಿದೆಳೆವ ಖಳ ಹಾಯ್ದನೈ ಕೌರವನ ಹೊರೆಗಾಗಿ ।
ನುಡಿ ತರುಣಿ ತನ್ನಾಣೆ ಭೀತಿಯ
ಬಿಡಿಸಿದೆನಲಾ ರಾಯನಾಜ್ಞೆಯ
ತಡಿಕೆವಲೆ ನುಗ್ಗಾಯ್ತು ಹೋಗಿನ್ನೆಂದನಾಭೀಮ ॥　　೭೫

ಭೀಮನು ಕೋಪದಿಂದ ಬಿರುನುಡಿಗಳನಾಡಿ ಪಾಂಚಾಲಿಯನ್ನು
ಸಮಾಧಾನ ಪಡಿಸಿದುದು.

ಉರಿವ ಕೋಪಾಗ್ನಿಯಲಿ ಕರ್ಣನ
ಶಿರದ ಭಾಂಡದಲಿವನ ನೊಱೆನೆ
ತ್ತರಿನಲಿವನಗ್ರಜನ ಕೊಬ್ಬಿದ ನೆಣನ ಕೊಯ್ಕೊಯ್ದು ।
ದುರುಳಶಕುನಿಯ ಕಾಳಿಜದಳೊಡೆ
ವೆರಸಿ ಕುದಿಸಿ ಮಹೋಗ್ರಭೂತದ
ನೆರವಿಗುಣಲಿಕ್ಕುವೆನು ಸತಿ ಕೇಳೆಂದನಾಭೀಮ ॥　　೭೬

ಕೊಂಬೆನೇ ಧರ್ಮಜನ ಧರ್ಮದ
ಡೊಂಬಿಯನು ಮುದಿಗುರುಡನಿಕ್ಕಿದ
ನಂಬುಗೆಯ ವಿಷವ್ಯೆ ಸಲೇ ತಲೆಗೇಱಿತಗ್ರಜನ ।
ಡೊಂಬಿಗರ ಡಾವರಿಗರಿವದಿರ
ತಿಂಬೆನೀಗಳ ತರಳ ಕೇಳನು
ತಂಬುಜಾಕ್ಷಿಯ ಸಂತವಿಟ್ಟನು ಕುರಳ ನೇವರಿಸಿ ॥ ೩೭

ಮುಡಿಯ ನೀಕಟ್ಟಲೆಗೆ ಸತಿಯೆನೆ
ನುಡಿದಳಾಕಾಂತಂಗೆ ವಚನವ
ಮುಡಿಯ ಕಟ್ಟುವೆ ಕಾಲವೀದುಶ್ಶಾಸನನ ಶಿರವ ।
ಕೆಡಹಿ ಶಾಕಿನಿಯರಿಗೆ ರಕುತವ
ಕುಡಿಸಿ ತಣಿಯಲು ಕರುಳದಂಡೆಯ
ಮುಡಿವ ವ್ರತವೆನಗಿಹುದು ನೀ ಹೇಱಿದಕೆ ನಿರ್ವಾಹ ॥ ೩೮

ಐಸಲೇ ಯೀವ್ರತದ ನಿನ್ನಯ
ಭಾಷೆ ನಮ್ಮದು ಸತಿಯೆ ಯೀದು
ಶ್ಶಾಸನನ ತೊಡೆಗಡಿದು ಶಾಕಿನಿಯರಿಗೆ ರಕುತವನು ।
ಸೂಸುತೆಱೆವೆನು ತರುಣಿ ಸೊಕ್ಕಿದ
ದೂಷಕನ ನೆಱೆ ಸೀಳಿ ನಿನ್ನಯ
ಕೇಶವನು ಕಟ್ಟಿಸಿಯೆ ಮುಡಿಸುವೆ ಕರುಳದಂಡೆಗಳ ॥ ೩೯

ಆಗ ಭೀಮನನ್ನು ಕುರಿತು ಅರ್ಜುನನ ಸಮಾಧಾನೋಕ್ತಿಗಳು.

ಇಱಿದನರ್ಜುನನಾಸಭಾಮಂ
ಡಲದ ವೇದಿಯನಹಹ ಧರ್ಮಜ
ನುಱಿವನೇ ನುಡಿಯೆಡಹಿದೊಡೆ ಸಿಗುರೇಱು ಸದ್ಗುಣಕೆ ।
ಕಳವಳದ ಕಾಲುವೆಯ ಕಾಹುರ
ಕೊಳಗುಗೊಡದಿರು ಭೀಮ ಹಗೆ
ಗಳ ಹಿಳಿವೆಱಿದು ಹೊತ್ತಲ್ಲೆನುತ ಹಿಡಿದನು ವೃಕೋದರನ ॥೪೦

ಭೀಮವಚನ.

ಮೂಣಲವು ಕೌರವರ ಸೂರ್ವರ
ಗೋಣು ಬನಕಾಳಗದೊಳನ್ನವು
ಕೇಣಿ ತನ್ನಯ ಗದೆಗೆ ದುರ್ಯೋಧನನ ತೊಡೆಗಳಿಗೆ ।
ವಾಣಿಯುವು ದುಶ್ಶಾಸನನ ತನಿ
ಶೋಣಿತವ ತಾ ಕುಡಿಯದಿರೆ ನಿ
ನ್ನಾಣೆ ಸ್ವೈರಣೆಗಿದುವೆ ಫಲ ಕೇಳೆಂದನಾ [1] ಭೀಮ ॥　　೪೧

ಧರಣಿಜಲಪಾವಕಸವಿರಾರಾ
ದ್ಯರುಗಳಱಿದಿರಿ ಶಕ್ರನೈಋತ
ವರುಣರುದ್ರಕುಬೇರಯಮರಂಬಿಳಿ ದಿಗಧಿಪರು ।
ಬರೆದು ಕೊಂಡಿರಿ ಭಾಷೆಯನುಸುರ
ನರಫಣಿವ್ರಜವೆಂದು ಭೀಮನ
ಧರಧುರದ ಧಟ್ಟಣೆಗೆ ಧೃತಿಗೆಟ್ಟುದು ಕುರುಸ್ತೋಮ ॥　　೪೨

ಆಗ ಬಹು ವಿಧವಾಗಿ ಪಾಂಡವರು ಪ್ರತಿಜ್ಞೆ
ಯನ್ನು ಮಾಡುವುದು.

ಬರೆಸಿರೈ ಭಾಷೆಯನು ದೇವಾ
ಸುರರ ಸಾಕ್ಷಿಯೊಳಾಯ್ತು ಕರ್ಣನ
ಕೊರಳಿಗೆನ್ನಯ ಬಾಣಮುಂಗುರಕುಡಿಕೆ ಯಿಂದಿನಲಿ ।
ಸುರನರೋರಗರಱಿದಿರೆಂದ
ಬರಿಸಿವನು ಕಲಿಪಾರ್ಥ ಶಕುನಿಯ
ಶಿರಕೆ ಕೊಟ್ಟೆನು ಸಂಚಕಾರವನೆಂದ ಸಹದೇವ ॥　　೪೩

ತಾಕುತಾರಶಕುನಿತನುಜನ
ಲೋಕನನು ಸಮರದಲಿ ತನ್ನ ಪ
ರಾಕರುಷಣೆಗೆ ಬಲಿಯ ಕೊಡುವೆನು ಬರೆಸಿ ಭಾಷೆಯನು ।

---

[1] ವೆಂದೊದಱಿದನು, ಚ.

ಲೋಕಪಾಲರಿಗಂದು ವೀರೋ
ದ್ರೇಕದಲಿ ಮಿಗೆ ನುಡಿದ ನಕುಲನು
ಮೂಕವುಲಮುಖಿಯೆಂದಳಾಗಳ ಸಭೆಯು ಮಧ್ಯದಲಿ ‖ ೪೪

ಮುಂದಲೆಯು ಹಿಡಿದೆಳೆದು ಸಭೆಯಲಿ
ತಂದು ತನ್ನನು ಭಂಗಬಡಿಸಿದ
ಕಂದುಹೃದಯನ ಕರುಳದಂಡೆಯುನೈದೆ ಸಿರಿಮುಡಿಗೆ ।
ಅಂದದಿಂದಲೆ ಮುಡಿದು ಚರ್ಮದ
ಚಂದದುಡುಗೆಯನುಟ್ಟು ಬಚ್ಚಿಕಿನೊ
ಳಂದು ಕಬರಿಯ ಕಟ್ಟುವೆನು ತಾನೆಂದಳಂದುಮುಖಿ ‖ ೪೫

ಮುಡಿಯ ಕಟ್ಟಿಲೆ ನಾರಿ ಭಾಷೆಯ
ನುಡಿಯು ತನ್ನದು ಬೇಡವೆಂದೆನೆ
ನುಡಿದ ನುಡಿಗಳುಪ್ಪುವೆನೆ ಯಿಾದುಶ್ಶಾಸನನ ಶಿರವ ।
ಕೆಡೆಯೊದೆದು ತಾ ಕರುಳದಂಡೆಯು
ಮುಡಿವುದೇ ವ್ರತವೆನಗೆ ನಿಮ್ಮಡಿ
ನುಡಿಯಲಂಜುವೆನೆನಲು ಬಚ್ಚಿಕಿಂತೆಂದನಾಭೀಮ ‖ ೪೬

ಐಸಲೇ ಯಿಾವ್ರತವು ನಿನ್ನಯ
ಭಾಷೆ ಯೆನ್ನದು ಸತಿಯೆ ಕೇಳ್ ದು
ಶ್ಶಾಸನನ ಕಡೆಗಡಿದು ಶಾಕಿನಿಯರಿಗೆ ರಕುತವನು ।
ಸೂಸುವೆನು ಮಿಗೆ ಸೊಕ್ಕಿ ಕುಣಿದೀ
ದೋಷಿಯನು ನೆಜಿ ಸೀಳಿ ನಿನ್ನಯ
ಕೇಶವನು ಕಟ್ಟಿಸುವೆ ಮುಡಿಸುವೆ ಕರುಳದಂಡೆಗಳ ‖ ೪೭

ತರುಣಿ ದುಶ್ಶಾಸನನ ನೊಜೆನೆ
ತ್ವರಲಿ ನಾದುವೆ ನಿನ್ನ ಮುಂಡೆಯ
ಕುರುಳ ಬಾಚುವೆನಿವನ ದಂತದ ಫಣಿಗೆಯಲಿ ಖಳನ ।

ಕರುಳದಂಡೆಯ ಮುಡಿಸಿ ಶಾಕಿನಿ
ಯರನು ಕರೆಯಿಸಿ ನಿನ್ನ ಕಯ್ಯಲಿ
ಧುರದೊಳಗೆ ಬಾಯಿನವ ಕೊಡಿಸುವನಬಲೆ ಕೇಳೆಂದ ॥ ೪೮

ಜನಗಳ ಅನುತಾಪ.

ಸಿಂಗ ಮಿಗೆ ಹಣುಗಿದರೆ ಮದಮೊ
ತಂಗಕದು ಭೀತಿಜವೆ ರೋಷದಿ
ಹಿಂಗಲಾಮಿಷಕೆಂದು ಭಾವಿಪ್ಪೊಡದು ಪಲಾಯನವೆ ।
ಸಂಗರದೊಳಾಂತದಟರನುಜರ
ನುಂಗುವೀಪಾಂಡವರ ಸೈರಣೆ
ಭಂಗಿಸದೆ ಕುರುಕುಲವನಂತ್ಯದೊಳೆಂದುದಖಿಳಜನ ॥ ೪೯

ಸುರರ ಅಭಿಪ್ರಾಯ.

ಕಲಿಗಳತುಳಪರಾಕ್ರಮರು ನಿ
ಶ್ಚಲರು ಸಾಹಸಿಕರು ಸದೈವರು
ಕುಲಭರಿತಪಾಲಕರು ಮಹಿಮೋದಾರಪಾಂಡವರು ।
ಲಲನೆಯನು ದುಶ್ಶಾಸನನು ಮುಂ
ದಲೆವಿಡಿದು ಪರಿಭವಿಸೆ ಸೈರಿಸಿ
ದರಕಟಕಟರಿದು ಯೆನುತಿರ್ದುದು ಸುರಸ್ತೋಮ ॥ ೫೦

ಆಗ ನಾನಾವಿಧ ಉತ್ಪಾತಗಳು.

ಅರಸ ಕೇಳಾಶ್ಚರ್ಯವನು ಗಜ
ಪುರದೊಳಗೆ ನೆಲ ಬಾಯ ಬಿಟ್ಟುದು
ಸುರಿದುದರುಣಾಂಬುವಿನ ಮಳೆ ತತ್ಪುರದ ವೆಳಯದಲಿ ।
ನರಿಗಳವನಿಪನಗ್ನಿಹೋತ್ರದೊ
ಳೂಳಿಡಿದುವು ಸುಸ್ವೇದದಲಿ ಹೂಂ
ಕರಿಸುತಿರ್ದುವು ದೇವತಾಪ್ರತಿಮೆಗಳು ನಗರಿಯಲಿ ॥ ೫೧

ಉಗುಳಿದುವು ಕುಳುಗಿಡಗಳನು ಕೈ
ದುಗಳು ಹಾರುವೆಪಟ್ಟದಾನೆಗ

ಳೊಗುಮಿಗೆಯು ಕಂಬನಿಗಳಭ್ರದಿ ಧೂಮಕೇತುಗಳು ।
ನೆಗೆಚಿದುವು ಬಿಱುಗಾಳಿ ಗಿರಿಗಳ
ಮಗುಚಿ ಮುಱಿದುವು ದೇವತಾಭವನ
ನಗಳ ಶಿಖರವನಂತವದ್ಭುತವಾಯ್ತು ನಿಮಿಷದಲಿ ॥ ೫೦

ಬಾರಿಸಿತು ದೆಸೆದೆಸೆಗಳಲಿ ಹಾ
ಹಾರವಾವಿರ್ಭಾವ ತೋಳಗಿತು
ತಾರಕೆಗಳಿನಮಂಡಲವ ಝೋಂಪಿಸಿದುದಾರಾಹು ।
ತೋರಣದಲುರಿ ತಳಿತು ರಾಜ
ದ್ವಾರ ಹೊಗೆದುದು ದಿವದಲಂಬರ
ಧಾರಿಣಿಯಲುತ್ಪಾತ ಬಿಗಿದುದು ಮೊಗೆದುದುತ್ಸವವ [1] ॥ ೫೧

ನಡುಗಿತಿಳೆ ನಡುಹಗಲು ಕತ್ತಲೆ
ಯಡಸಿತಾಕಾಶದಲಿ ಹೆಮ್ಮರ
ನುಡಿದು ಬಿದ್ದುವು ಸಲಿಲ ವೃಕ್ಕಿತು ಕೂಡೆ ತೊಱೆತೊಱೆಯ ।
ಉಡಿದುವನಿಬರ ಕೈಯ ಕೈದುಗ
ಳೊಡನೊಡನೆ ಸಿಡಿಲೆಱಗಿತಾಸಭೆ
ನಡುಗಿತಲ್ಲಿಯವಲ್ಲಿ ಹುದುಗಿತು ಭೀತಿ ಗರಹೊಡೆದು ॥ ೫೪

ಧೃತರಾಷ್ಟ್ರನನ್ನು ಕುರಿತು ಭೀಷ್ಮವಾಕ್ಯ.

ಅಹಹ ಭೂತಕ್ಷೋಭವಿದು ನಿ
ರ್ದಹಿಸದೇ ಕುರುಕುಲವನಕಟಾ
ಮಹಿಳೆಯೊಱಲಿದಳಮರನಿಕರಕೆ ದೈವಕೃತವಿದಲೆ ।
ಕುಹಕಿಮಕ್ಕಳ ಕಂಡು ಮೌನದ
ಲಿಹರೆ ನೀ ಧೃತರಾಷ್ಟ್ರ ಪಾಂಡವ
ಮಹಿಳೆಯನು ಸಂತೈಸು ನಡೆ ನಡೆ ಯೆಂದನಾಭೀಷ್ಮ ॥ ೫೫

---

[1] ದದ್ಭುತವ, ಚ

ವಿದುರನ ಮಾತು.

ಇದಕೆ ನಿಸ್ಸಂದೇಹವೈ ವರ
ಸುದತಿಯನು ನೀ ಬೇಡಿಕೊಳು ಯು
ಜ್ಞದಲಿ ಪಾವಕಗುದಿಸಿದೀಪಾಂಚಾಲಿ ಮಾನವಿಯು ।
ಇದು ಭವತ್ಸಂತಾನವಿಲಯಾ
ಸ್ಪದ ಕಣಾ ನಡೆ ಪಾಪಿಯೆಂದಾ
ವಿದುರ ಗೌತಮರೌಕಿದರು ಧೃತರಾಷ್ಟ್ರಭೂಪತಿಯ ॥ ೫೬

ಅತಿಮಥನದಲಿ ಮುನ್ನ ದಿವಿಜರ
ಪತಿಗೆ ವಿಷವದು ದೊರೆತವೊಲು ನಿಜ
ಸುತನ ಸರಸದ್ಯೂತ ಕಡೆಯಲಿ ವಿರಸವಾದುದಲೆ ।
ಹಿತರ ಕುಲಪಾಲಕರ ಸುದತಿಯ
ನತಿಗಳೆದ ಫಲವಾಯ್ತು ದ್ರುಪದನ
ಸುತೆಯ ನೀ ಸಂತೈಸು ನಡೆ ನಡೆ ಯೆಂದನಾವಿದುರ ॥ ೫೭

ದ್ರೌಪದಿಯನ್ನು ಕುರಿತು ಧೃತರಾಷ್ಟ್ರನ ಸಮಾಧಾನ.

ಖೇದ ಮಿಗೆ ಹರಿತಂದು ನೃಪತಿ ತ
ಳೋದರಿಯ ನುಡಿಸಿದನು ಮಗಳೆ ವಿ
ಷಾದವನು ಬಿಡು ಮಾತ ಮನ್ನಿಸು ಮಾವ ನಾ ನಿನಗೆ ।
ಈದುರಾತ್ಮನ ಮಾತ ಬೇಡ ವಿ
ಭೇದವೇ ದುಶ್ಶಳೆಗೆ ನಿನಗೆಂ
ದಾದರಿಸಿ ನುಡಿದನು ವಿಪತ್ತಿನಲಾಮಹಾಸತಿಯ ॥ ೫೮

ದ್ರೌಪದಿಯ ಉತ್ತರ.

ಮಗಳಹೆನು ಸೊಸೆಯಹೆನು ನಿಮ್ಮಯ
ಮಗನ ಕಣ್ಣಿಗೆ ಕಾಳಕೂಟದ
ಮಗಳೊ ಸೊಸೆಯೋ ನಾದಿನಿಯೊ ಜನಗಳ್ಳಿ ನಿಮ್ಮವರ ।

ಅಗಡುಮಾಡಿದ ನಿನ್ನ ಮಕ್ಕಳ
ವಿಗಡತನಕಂಜಿದರೊ ದುರಿತದ [1]
ಸೊಗಡಿಗಂಜಿದರೊಪೃಥಾಸುತರೆಂದಳಬುಜಾಕ್ಷಿ [2] ॥ ೫೯

ಧೃತರಾಷ್ಟ್ರನು ಬಹುವಿಧದಿಂದ ದ್ರೌಪದಿಯನ್ನು
ಸಮಾಧಾನ ಪಡಿಸಿದ್ದುದು.

ಧರ್ಮ ನಿಮ್ಮದು ತಾಯೆ ಕಿಲ್ಬಿಷ
ಕರ್ಮವೆಮ್ಮದು ಲೋಕನೆಱಿಯಲು
ನಿರ್ಮಲರು ನೀವ್ ಪಾಪಕಾಶ್ರಯಹೃದಯರಾವ್ ಜಗಕೆ ।
ದುರ್ಮತಿಗಳೆವದಿರ ಕುಚೇಷ್ಟೆಯು
ನಮ್ಮನೀಕ್ಷಿಸಿ ಮಱೆದು ಕಳೆ ಸ
ದ್ಧರ್ಮಗತಿಗಳು ನೀವೆನುತ ತಿಳುಹಿದನು ದ್ರೌಪದಿಯ ॥ ೬೦

ದುರಳರೆನ್ನವದಿರು ದುರಂತಃ
ಕರಣರಾವ್ ದುಶ್ಚೇಷ್ಟೆಯೆಮ್ಮದು
ದುರುಬಿಗರು ದುಷ್ಪುತ್ರರೆಮ್ಮ ಕುಮಾರರಭಿಧಾನ ।
ಕರುಣಿಗಳು ಕಮನೀಯಗುಣಬಂ
ಧುರರು ಶೌರ್ಯಬಲಪ್ರಭಾವೋ
ತ್ಕರರು ನಿನ್ನವರೆಂದು ಗುಣವಲಿ ತಿಳುಹಿದನು ಸತಿಯ ॥ ೬೧

ವರಗಳ ಬೇಡೆಂದು ಧೃತರಾಷ್ಟ್ರನ ಅಪ್ಪಣೆ.

ತಾಯೆ ಬೇಡೌ ವರವ ನಾವ
ನ್ಯಾಯದಲಿ ನಿಮ್ಮನು ನಿರರ್ಥಕೆ
ನೋಯಿಸಿದೆವದ ನೆನೆಯದಿರಿ ಸರ್ವಾಪರಾಧವನು ।
ದಾಯಗೆಡೆ ನಿನ್ನವರು ಕೊಲುವರೆ
ಕಾಯಲಾಪವರುಂಟೆ ವರಸ
ತ್ಯಾಯುಧರಲೇ ನೀವೆನುತ ತಿಳುಹಿದನು ಧೃತರಾಷ್ಟ್ರ ॥ ೬೨

1 ಧರ್ಮದ, ಚ. 2 ಬೆಗಡಿಗಂಜಿದರೊ ಪೃಥಾಸುತರೆಂದಳಿಂದವರು ಖ, ಚ.

ವರಗಳನ್ನು ಪಡೆದುದು.

ವರವನೀವೊಡೆ ಮಾನ ಭೂಮಿಾ
ಶ್ವರರ ದಾಸ್ಯವ ಬಿಟ್ಟು ಕಳೆ ಮ
ತ್ತೆರಡನೆಯ ವರವೇನು ವಚಿಸಿಸು ಕೊಟ್ಟೆನೌ ನಿನಗೆ ।
ನರವೃಕೋದರನಕುಲಸಹದೇ
ವರಿಗೆ ಕೊಡಿ ಶಸ್ತ್ರಾಸ್ತ್ರಗಜರಥ
ತುರಗನಿಕರವನೆಂದೊಡೆಂದನು ಮತ್ತೆ ಧೃತರಾಷ್ಟ್ರ ॥ ೬೩

ವರವೆರಡು ಸಂದುವು ಮನೋರಥ
ಭರಿತವಾಗಲಿ ಮತ್ತೆ ಬೇಡೆನೆ
ತರುಣಿ ನುಡಿದಳು ಧರ್ಮಶಾಸ್ತ್ರಪ್ರಕಟಪದ್ಧತಿಯ ।
ವರವು ವೈಶ್ಯಂಗೊಂದು ನರಪತಿ
ಗೆರಡು ನೃಪರಿಗೆ ಮೂಱು ಭೂದೇ
ವರಿಗೆ ನಾಲ್ಕಧಿಕಾರವೆಂದಳು ನಗುತ ಪಾಂಚಾಲಿ ॥ ೬೪

ಹಾರಲತಿಶಯತೃಷ್ಣೆ ನಾಶಕೆ
ಕಾರಣವಲೇ ಮಾವ ವರವಿದು
ಭಾರಿಯಾದೊಡೆ ಬೇಡ ಲಘುವನು ಕರುಣಿಸುವುದೆನಲು ।
ಭಾರವಾವುದು ಮಗಳೆ ಕೊಟ್ಟೆನು
ಧಾರಿಣೀಪತಿ ಬಿಜಯುಮಾಡಲಿ
ವೈರಬಂಧದ ಕಂದುಕುಂದನು ಮಱೆದು ಕಳೆಯೆಂದ ॥ ೬೫

ವೈರವಾರೊಳು ಪೂರ್ವತರಸಂ
ಸ್ಕಾರವದು ಸೂಚಿಸಿದೊಡಂಗನೆ
ಮಾರುತನ ಸುತನಱಿಯ ಬಲ್ಲೆವು ಕೇಳಿ ವುಱಿದವರು ।
ವಾರಣವ ರಥಹಯವ ಪತ್ತಿಯ
ಸಾರಶಸ್ತ್ರಾಸ್ತ್ರಗಳನಿತ್ತಾ
ನಾರಿಯನು ಪತಿಕರಿಸಿ ಸಂತೈಸಿದನು ಪಾಂಡವರ ॥ ೬೬

ದ್ರೌಪದಿಯನ್ನು ಕುರಿತು ಕರ್ಣನ ಮಾತು.

ಪೂತುರೇ ಪಾಂಚಾಲಿ ಭುವನ
ಖ್ಯಾತೆಯಾದೆಲೆ ಜಾಗು ನಿನ್ನಯ
ಬೈತಲೆಯ ಮಣಿ ಮಾಱುವೋದುದ ಮತ್ತೆ ಬಿಡಿಸಿದೆಲೆ ।
ಬೀತ ಮರಫಲವಾಯ್ತಲಾ ನಿ
ನ್ನಾತಗಳ ಬಹುಖೇದಜಲಧಿಗೆ
ಸೇತುವಾದೆಲೆ ನೀನೆನುತ ತಲೆದೂಗಿದನು ಕರ್ಣ ॥ ೬೭

ಹೊಕ್ಕಗೂಡಿನ ಹುಲಿಗಳನು ಹೊಱ
ಗಿಕ್ಕಿದೆಯಲೈ ಇಱುಬಿನೊಳು ಬಿ
ದ್ದಿಕ್ಕಲಂಗಳ ಸೇದಿದೆಯಲೈ ಕಣ್ಣ ವರೆಗಳಲಿ [1] ।
ಸೊಕ್ಕಿದುರು ಮಾನುಗಳ ಗಂಟಲೊ
ಳಿಕ್ಕಿದಂತಹ ಗಾಳಗಂಟಿನ
ಸಿಕ್ಕ ಬಿಡಿಸಿದೆ ಗರುವೆ ನೀನೆಂದುಲಿದನಾಕರ್ಣ ॥ ೬೮

ಕರ್ಣನ ಮೇಲೆ ಭೀಮನ ಕೋಪ.

ಘುಡುಘುಡಿಸಿದನು ರೋಷವಹ್ನಿಯ
ವಡಿಯ ಹೊಕ್ಕನು ಬಿಗಿದ ಹುಬ್ಬಿನ
ಬಿಡೆಯ ಭವಣಿಯ ಉಳಿಯ ಲವಣಿಯ ಲೋಚನದ್ವಯದ ।
ಕಡುಮುಳಿಸಿನುಬ್ಬಟೆಯ ಮಾರುತಿ
ಕಡುಹಿನಲಿ ಘುಗಿಘುಗಿಸಿ ಭಾರಿಯ
ಕಿಡಿಗೆದಱಿ ನೋಡಿದನು ಬಾಗಿಲ ಲಾಳವಂಡಿಗೆಯ ॥ ೬೯

ಧರ್ಮರಾಯನ ಸಮಾಧಾನ.

ಹಗೆಗಳೇ ಕೌರವರು ತೆಗೆ ಬಲು
ವಗೆ ಕಣಾ ಪ್ರಾರಬ್ಧಕರ್ಮವು [2]
ಸೆಗಳಿಕೆಯ ಸಸಿಯಾಗವೇ ನಿಜಸತ್ಯಭಾಷೆಗಳು ।

---

1 ನೋಯಲೀಯದೆ ಕೆಲಕೆ ತೆಗೆದೆಯಲೈ, ಚ. 2 ಕಾಮಾದಿರಿಪುಗಳು, ಚ.

ಉಗುಳುಗುಳು ಕೋಪವನು ರಾಧೆಯ
ಮಗ ವಿಕಾರಿ ಕರ್ಣ ವೃಕೋದರ
ಜಗಡುಗೊಳಿಸದಿರೆಂದು ನುಡಿದನು ಧರ್ಮನಂದನನು ॥ ೩೦

ಬಾ ವೃಕೋದರ ನಕುಲ ಬಾ ಸಹ
ದೇವ ಬಾರೈ ತಮ್ಮ ಫಲುಗುಣ
ಭೂವರನೆ ನೀವ್ ಬನ್ನಿ ಯೆನಲವನೀಶನೈತಂದು ।
ಆವುದೈ ಕರ್ತವ್ಯ ನೀವೇ
ದೈವಗುರುಪಿತರೆಂದು ವಿಗೆ ಸಂ
ಭಾವನೋಕ್ತಿಯಲಾಡಿದನು ಧೃತರಾಷ್ಟ್ರ ಭೂಪತಿಗೆ ॥ ೩೧

ಮಕ್ಕಳನಗವರಲ್ಲ ನೀವೇ
ಮಕ್ಕಳೈವರು ಮಗನೆ ನಮ್ಮದು
ಮಕ್ಕಳಾಟಿಕೆಯಾಯ್ತಲಾ ಸೌಬಲನ ದೆಸೆಯಿಂದ ।
ಮಿಕ್ಕು ನೀ ಸೈರಿಸುವುದೆ [1] ವ್ಮದು
ಬಕ್ಕುಡಿಯು ಬೇಳಂಬ ನಿಮ್ಮಲಿ
ಕಕ್ಕುಲಿತೆ ಯಿಲ್ಲೆನುತ ತೆಗೆದಪ್ಪಿದನು ಧರ್ಮಜನ ॥ ೩೨

ಆಗ ಬಹು ವಿಧವಾಗಿ ಪಾಂಡವರನ್ನು ಧೃತರಾಷ್ಟ್ರನು
ಸಮಾಧಾನ ಪಡಿಸಿದುದು.

ಎನ್ನನೀಕ್ಷಿಸು ಮಗನೆ ತಾಯ್ ನಿಮ
ಗನ್ಯಳೇ ಗಾಂಧಾರಿ ಪಿತನೆಂ
ದೆನ್ನ ಕಾಂಬಿರಿ ವೃದ್ಧನೆಂದು ಗತಾಕ್ಷ ತಾನೆಂದು ।
ಮನ್ನಿಸುವಿರೆಲೆ ಮಕ್ಕಳಿರ ಸಂ
ಪನ್ನಸತ್ಯರು ನೀವು ಕರ್ಮಿಗ
ಳನ್ನವರು ರೋಷಾಭಿಸಂಧಿಯ ಮಱೆದು ಬಿಡಿ ಯೆಂದ ॥ ೩೩

1 ನೀವ್ ಸೈರಿಸಿದರೆ, ಕ. ಖ.

ರೂಢಿಗಗ್ಗದ ರಾಜಸೂಯದ
ಲೂಡಿ ನಿರ್ಜರಕಟಕವನು ಖಯ
ಖೋಡಿಯನು ಬಿಡಿಸಿದೆ ಯೆಲಾ ತ್ರಿದಶರಲಿ ಪಾಂಡುವಿನ ।
ಮಾಡುವೆಯೆಲಾ ಮಗನೆ ತಾನೀ
ಗೂಡ ಬಿಸುಟರೆ ಸುರರ ಸಂಗದೊ
ಳಾಡುವಂತಿರೆ ತನಗೆ ಗತಿ ನೀನಲ್ಲದಾರೆಂದ ॥ ೭೪

ಪಾಲಿಸವನಿಯನೆನ್ನ ಮಕ್ಕಳ
ಖೂಳತನವನು ಮನಕೆ ತಾರದಿ
ರಾಲಿಸದಿರಪರಾಧಿವಾಚಾಳರ ವಚೋಮತವ ।
ಕಾಲದೇಶಾಗಮನ ನಿಗಮದ
ಡಾಳವಱಿದೈಹಿಕಪರತ್ರದ
ಚಾಳಿಯಲಿ ನಡೆ ಕಂದ ಯೆಂದಪ್ಪಿದನು ಧರ್ಮಜನ [1] ॥ ೭೫

ಸತ್ಯಕ್ಕೆ ತಪ್ಪಿ ನಡೆಯುವುದಿಲ್ಲವೆಂದು ಧರ್ಮರಾಯನ ಉತ್ತರ.

ಸೋತೆವೆಮ್ಮೈವರನು ಜಾಜಿನೊ
ಳೀತಳೋದರಿ ಸಹಿತ ಕೇಳ್ಲೆ
ತಾತ ಪೋಪುದುವುಚಿತವೇ ನೀವ್ ಕಳುಹುವುದು ಮತವೆ ।
ನೀತಿಯಲ್ಲದು ಧರಣಿಯೊಳು ವಿ
ಖ್ಯಾತಿ ಸಲ್ಲದು ಲೋಕ ಮೆಚ್ಚದು
ಮಾತು ಪೊಲವಹುದುಚಿತವಲ್ಲೆಂದವನಿಪತಿ ನುಡಿದ ॥ ೭೬

ಎಲೆ ಮಗನೆ ನಿನಗುಂಟೆ ಪಾತಕ
ಹಟವು ಸತ್ಯವು ಧರ್ಮವೆಂಬಿವು
ಕುಲತಿಲಕ ನೀನಲ್ಲದಾರುಂಟೆಮ್ಮ ವಂಶದಲಿ ।
ಒಲಿದು ಕೇಳುವುದೆಮ್ಮ ಮಾತನು
ತಿಳಿದು ಹೋಹುದು ಪುರಕೆ ನಿಮ್ಮಯ
ಲಲನೆಸಹಿತೆಂದವನಿಪತಿ ತಿಳುಹಿದನು ಧರ್ಮಜನ ॥ ೭೭

---

1 ವಿಘಾಳಿಸದೆ ನಡೆ ಕಂದ ಯೆಂದನು ಪುರಳಿ ತೆಗೆದಪ್ಪಿ, ಚ,

ಪಾಂಡವರಿಗಾಗಿ ಧೃತರಾಷ್ಟ್ರನ ಉಪಚಾರ.

ತರಿಸಿದನು ಮಡಿವರ್ಗದವರೆಲ್ಲಾಂ
ಬರವನಂಬುಜಮುಖಿಗೆ ರತ್ನಾ
ಭರಣವನು ವಿವಿಧಾನುಲೇಪನಚಿತ್ರಸಂಪುಟವ ।
ಅರಸನಿತ್ತನು ವೀಳಯವ [1] ಕ
ರ್ಪೂರದ ತವಲಾಯಿಗಳನಂತಃ [2]
ಪುರ [3] ಶಿವರ ಕಳುಹಿದನು ಗಾಂಧಾರಿಯನು ಕಾಣಿಸಿದ ॥ ೭೮

ದ್ರೌಪದಿಯನ್ನು ಕುರಿತು ಗಾಂಧಾರಿಯ ಸಮಾಧಾನ.

ನೋಡಲಾಗದು ಮಕ್ಕಳಿರ ಕುಲ
ಗೇಡಿಗಳ ಕಪಟವನು ನಮ್ಮನು
ನೋಡಿ ಮಱವುದು ಪಾಂಡುವೆಂದಿಹುವಂಧಭೂಪತಿಯ ।
ನಾಡೆ ನೋಡಲು ತಾಯೆ ಬಾ ಮಗ
ಮಾಡಿದನುಚಿತಶತವನೆಲ್ಲವ
ಮಾಡಿದೆನು ತಾನೆಂದಳಾದ್ರೌಪದಿಗೆ ಗಾಂಧಾರಿ ॥ ೭೯

ಮಱೆದನಾಗಳ ವಿಗಡವಿಧಿಯೆ
ಚ್ಚರಿಸಿದೊಡೆ ತದ್ವ್ಯಕ್ತಿಮುಖದಲಿ
ಮುಱಿದುದೆಮ್ಮಯ ಪೂರ್ವದುಷ್ಪ್ರಾರಬ್ಧ ಕರ್ಮಫಲ ।
ಹೆರರನೆಂಬುದು ಖೂಳತನವೇ
ನಱಿಯದವರೇ ಪಾಂಡುಸುತರೆಂ
ದುಱುಬೆಯಲಿ ಬಿನ್ನೈಸಿದಳು ಗಾಂಧಾರಿಗಬುಜಮುಖಿ ॥ ೮೦

ಧೃತರಾಷ್ಟ್ರನ ಮಾತನ್ನು ನಂಬಿದುದು.

ಸಾಕು ನೇಮವ ಕೊಡಿ ಯೆನುತ ಕುಂ
ತೀಕುಮಾರರು ಬೀಱುಕೊಂಡರು

---

1 ಅರಸ ನಿತ್ತನು ನೂಕಿದನು, ಕ. ಖ. ಡ. 2 ನಭ್ಯಂ, ಕ. ಜ. ಡ. 3 ತರ, ಕ. ಖ. ಡ.

ನೂಕಿ ಹೊಕ್ಕುದು ದಾಳವಟ್ಟದಲಿವರ ಪರಿವಾರ ।
ತೋಕಿದುವು ಸೀಗುರಿಗಳೆಡಬಲ
ದಾಕೆಯಲಿ ಪಾಂಡವಕುಮಾರಾ
ನೀಕ ಬೆರಸಿತು ಕರಿತುರಗರಥಪಾಯದಳಸಹಿತ ॥ ೮೧

ಕಳೆದೆವೇ ಖಳರೊಡ್ಡಿದಿಱುಬಿನ
ಕುಳಿಗಳನು ಕೈತಪ್ಪಮಾಡದೆ
ಸಲಹಿದೆವು ಸತ್ಯವನು ಸುಜನರ ಕಲೆಗೆ ಸಂದೆವೆಲೆ ।
ಕಳವಳದ ಕಡುಗಡಲೊಳಾೞದೆ
ಸುಳಿದೆವಿತ್ತಲು ಶಿವ ಶಿವಾ ಯೆಂದು
ಕುಲಜ ಗದುಗಿನ ವೀರನಾರಾಯಣನ ಕರುಣದಲಿ ॥ ೮೨

ಹದಿನಾರನೆಯ ಸಂಧಿ ಮುಗಿದುದು.

## ಹದಿನೇಳನೆಯ ಸಂಧಿ.

ಸೂಚನೆ.

ದ್ಯೂತಮುಖದಲಿ ಸಕಲರಾಜ್ಯವ
ಸೋತು ತನ್ನನುಜಾತಮುನಿಸಂ
ಘಾತಸಹಿತವನೀಶ ವನವಾಸಕ್ಕೆ ಹೊಱವೆಂಟ ॥

ಪಾಂಡವರು ಈ ವರ್ತಮಾನವನ್ನು ಮಕ್ಕಳಿಗೆ ತಿಳಿಸಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತೀನಂದನರು ತ
ಮ್ಮಾಳೊಡನೆ ಹೇೞಿದರು ಸೌಭದ್ರಾದಿತನಯರಿಗೆ ।
ಬಾಲಿಕೆಯ ಬೇಳಂಬವನು ಜೂ
ಜಾಳಿಗಳ ಜಜ್ಝರತನವನು
ಕೇಳಿ ಬೈದುದು ಸೇನೆ ಖತಿಯಲಿ ಖಳಚತುಷ್ಟಯವ ॥ ೧

ಎತ್ತಿತೀಪಾಳೆಯವು ನಿಜಪುರ
ದತ್ತ ತಿರುಗಿತು ಜನಜನಿತ ರಾ
ಜೋತ್ತಮನ ಕಡೆಯಾಯ್ತು ಸತ್ಯಕ್ಷಮೆ ಪರಾಕ್ರಮಕೆ ।
ಇತ್ತಲಡು ಪಾಯ್ಬಿಗೆ ಬಿಸುಗುದಿ
ಕಿತ್ತಡವು ಕಾರ್ಪಣ್ಯ ಕಪಟ ಖ
ಳೋತ್ತಮರ ಹೃದಯದಲಿ ಮೂಡಿತು ನೃಪತಿ ಕೇಳೆಂದ ॥ ೧

ದುಶ್ಯಾಸನನು ದುರ್ಯೋಧನನ ಮುಂದೆ ಪಾಂಡವರು ತಮ್ಮ ಊರಿಗೆ
ಹೊರಟದ್ದನ್ನು ತಿಳಿಸಿದುದು

ರವಿಯುದಯದಲಿ ಕೌರವೇಂದ್ರನ
ಭವನಕೈತಂದನು ಕುಠಾರರ
ಜವಳಿಯನು ಕರೆಸಿದನು ರಾಧಾಸುತನ ಸಾಬಲನ ।
ಅವನಿಪತಿಗಾಂಧಾರಿಯರು ಪಾಂ
ಡವರ ಮನ್ನಿಸಿ ಕಳುಹಿದರು ತ
ಮ್ಮವನಿಗೈದಿದರೆಂದನಾದುಶ್ಯಾಸನನು ನಗುತ ॥ ೨

ಮುಖಿಮುಖಿದು ಪಟ್ಟಣವ ನೋಡುತ
ನರವೃಕೋದರರೌಡುಗಚ್ಚು ತ
ತಿರುಗಿದರು ಗಡ ಗಾಢಬದ್ಧಭ್ರುಕುಟಿಭೀಷಣರು ।
ಕರಿಯು [1] ಸೊಗಡಿನ ಮೃಗಪತಿಗೆ ಮೈ
ಹರಿದ ಪಂದಿಗೆ ನೊಂದಹಾವಿಂ
ಗರಸ ಮೈಚಾಚಿದೆ ಯೆಲಾ ನೀನೆಂದನಾಶಕುನಿ ॥ ೪

ಆಗ ಕರ್ಣನ ವಾಕ್ಯ.

ಅವರ ಹೆಂಡಿರ ಮುಂದಲೆಯ ಹಿಡಿ
ದವಗಡವ ಮಾಡಿಸಿದೆ [2] ಪಟ್ಟದ

1 ಕಿಬ್ಬುಯ್ಯ, ಕ. ಖ. ಡ. 2 ದೆವ್ವ, ಕ. ಖ. ಡ.

ಯುವತಿಯುನು ಸಲೆ ಲಜ್ಜೆಗೆಡಿಸಿದೆ ನಿಮ್ಮ [1] ಲಾಪನಿತ |
ಅವಳ ದೈವ್ರೋದಯದಲ್ಲಿಸಲೆ
ಸವಡಿ ಸೀರೆಯ ಸುತ್ತು ಬಳೆದುದು
ನಿವೆಗದಾಗಳ ಮೆಱೆದು ಹಿಂಗಿದುದೆಂದನಾಕರ್ಣ ‖ ೫

ಬೊಪ್ಪನಿತ್ತನು ವರವ ನಮಗದ
ತಪ್ಪಿಸಲು ತೀರುವುದೆ ಭೀಮನ
ದರ್ಪಕರ್ಜುನನುಬ್ಬಟೆಗೆ ಮೊಡಿದೆವು ಮದ್ದುಗಳ |
ತಪ್ಪಿಸಿತಲಾ ದೈವಗತಿ ನ
ಮ್ಮಪ್ಪನೇ ಕೆಡಿಸಿದನು ನಮಗಿ
ನ್ನಪ್ಪುದಾಗಲಿ ಯೆಂದು ನುಡಿದನು ಕೌರವರ ರಾಯ ‖ ೬

ಜಯವಹುದೆ ನಿರ್ವೇದದಲಿ ನಿ
ರ್ಭಯವಹುದೆ ಬಿಸುಸುಯ್ಲಿನಲಿ ನಿ
ರ್ಣಯವಹುದೆ ರಿಪುನೃಪರಿಗಿದು ತಾ ನೀತಿಮಾರ್ಗದಲಿ |

ನಿಮ್ಮ ತಂದೆತಾಯಿಗಳನ್ನು ಮೊದಲು ಸರಿಮಾಡೆಂದು
ಶಕುನಿಯ ಉಪದೇಶ.

ನಿಯತವಿದು ನಿಶ್ಶೇಷ ನಿಮ್ಮ
ನ್ವಯಕೆ ನಿರ್ವಾಹವನು ಗಾಂಧಾ
ರಿಯಲಿ ನಿಮ್ಮಯ್ಯನಲಿ ಬೆಸಗೊಳ್ಳೆಂದನಾಶಕುನಿ ‖ ೭

ಅರಸ ಕೇಳ್ ಧೃತರಾಷ್ಟ್ರಭೂಪತಿ
ಯರಮನೆಗೆ ನಡೆತಂದರೀನಾ
ಲ್ವರು ವಿಷಾದವಿಡಂಬವಿಹ್ವಳಕರಣವೃತ್ತಿಯಲಿ |
ಪರಿವಿಡಿತದಿ ಕುಳ್ಳಿರಿಸಿದರು ಸಹ
ಚರರ ಶೋಧಿಸೆ ಕಡು ರಹಸ್ಯದೊ
ಳರಸಿಯನು ಬರಹೇಳಿದರು ಗಾಂಧಾರಿದೇವಿಯನು ‖ ೮

---

[1] ಯುವತಿಯಾಕೆಯ ಭಂಗಪಡಿಸಿದೆ, ಚ.

ತಂದೆಯನ್ನು ಕುರಿತು ದುರ್ಯೋಧನನ ನಿಷ್ಠುರ ಭಾಷಣಗಳು.

ಅವರ ದಾಸ್ಯವ ಬಿಡಿಸಿ ನಿಜರಾ
ಜ್ಯವನು ಕರುಣಿಸಿ ನೀತಿಯಲಿ ನಿ
ಮ್ಮವರ ಕಳುಹಿದಿರೆಂದು ಕೇಳಿದೆವಾಯ್ತು ಪರಿತೋಷ ।
ಅವರು ನಿಮಗತಿಭಕ್ತರೈ ಬಾಂ
ಧವರಲಾ ಬಟ್ಟೆಕೇನು ಧರ್ಮ
ಪ್ರವರರಿಗೆ ನೀವೊಲಿದಿರೆಂದನು ಕೌರವರ ರಾಯ ॥ ೯

ನಾವಲೇ ಹೊರಗವರ ಹೆಂಡಿರ
ಹೇವ ಗೆಡಿಸಿದೆವವರ ಸೋಲಿಸಿ
ಜೀವಮಾತ್ರವನುಳುಹಿ ಸೆಳೆದೆವು ಸಕಲವಸ್ತುಗಳ ।
ನೀವು ಕರುಣಿಸಿದಿರಿ ಕೃಪಾವಿ
ರ್ಭಾವ ಹಿರಿಯರಲುಂಟಲೇ ತ
ಪ್ಪಾವುದೈ ತಪ್ಪಾವುದೆನುತಲ್ಲಾಡಿದನು ಶಿರವ ॥ ೧೦

ತಾಯೆ ನೇಮವೆ ಹಗೆಯ ಕೈಯ್ಯಲಿ
ಸಾಯಲಾರೆವು ಸಾಗರಾಂತ್ಯದ
ರಾಯರಿಲ್ಲವೆ ಹೊಕ್ಕೆಯಲಾಪೆವು ಜಂದಬಸುರುಗಳ ।
ಕಾಯಿದನು ಕರುಣದಲಿ ತಂದೆ ಸ
ಹಾಯಕರ ಪಾಂಡವರ ಗೂಡಿ ಚಿ
ರಾಯು ಬದುಕಿರಲೆಮ್ಮ ಬಿಡಿ ಯೆಂದೆರಗಿದನು ಪದಕೆ [1] ॥ ೧೧

ದುರ್ಯೋಧನನ ದೂಷಣ.

ಏಕೆ ಬೆಸಗೊಳ್ಳಲೆಗೆ ಸುಡಲವಿ
ವೇಕವಿಷಮಗ್ರಹವಿಕಾರ
ವ್ಯಾಕರಣದುರ್ಲಲಿತನಿಷ್ಫಲವಿಪ್ರಲಾಪ ವಿದು ।

1 ರಾಯು ಬದುಕಿರಲೆಮ್ಮ ಕಳುಹೆಂದೆರಗಿದನು ಪದಕೆ, ಚ.

ಈಕುಲವನೀಪುರವ ನೀಲ
ಕ್ಷ್ಮೀಕರವ ನೀಜನವ ನೀವಿಭ
ವಾಕೃತಿಯನಂಬುಧಿಯೊಳದ್ದುವ ನಿನ್ನ ಮಗನೆಂದ ‖ ೧೦

ಪಾಂಡವರ ಗುಣಕಥನ.

ಸರಿಹಸುಗೆಯಿಂದರ್ಧರಾಜ್ಯದ
ಸಿರಿಗೆ ಯೋಗ್ಯರು ಬಾಹುಸತ್ವಕೆ
ಸುರರು ಸರಿಯಿಲ್ಲಕಟ ಪಾಡೇ ಮನುಜಜಂತುಗಳು ।
ಚರಿತವೆಂಬೊಡೆ ಋಷಿಗಳಿಗೆ ಗೋ
ಚರಿಸದವರಾಚರಣೆ ನಿಮಗೆಂ
ತರಿವಿನಾಶನಸಿದ್ಧಿಯೆಂದನು ಸುಯ್ದು ಧೃತರಾಷ್ಟ್ರ ‖ ೧೩

ದುರ್ಯೋಧನನು ಕೋಪದಿಂದ ಹೊರಡುವಿಕೆ.

ಬೇಹವರು ಸಮರಾಜ್ಯದಲಿ ಸಂ
ದೇಹವೇ ಮೇಲವರು ಸತ್ವದ
ಸಾಹಸದ ಸತ್ಯದ ಸದಾಚಾರದ ನಿವಾಸರಲೈ ।
ಸ್ನೇಹಿತರು ನಿಮಗವರ ಮೇಲವ
ಗಾಹಿಸದೆ ಯನ್ಯಾಯದಲಿ ಸ
ದ್ರೋಹರಾವೆಮಗಿನ್ನು ನೇಮವೆ ಯೆನುತ ಹೊಱವಂಟ ‖ ೧೪

ತಂದೆಯು ಮಗನನ್ನು ಪುನಃ ಕರೆಕಳಿಹಿಸುವಿಕೆ.

ಕಲಕಿತರಸನ ಕರಣಕಂಗಳ
ಕುಳಿಗಳಲಿ ನೀರೊಱೆತವಕಟಕ
ಟೆಲೆಗೆ ಕರೆಯಾ ಪಾಪಿಕುರುವಂಶಾಂತಕನನೆನಲು ।
ಸೆಳೆದು ತಂದರು ಕರ್ಣಶಕುನಿಗ
ಳಟಿಲಿಗನ ತೆಗೆದಪ್ಪಿದನು ಕುರು
ತಿಲಕ ನೀನುಱಿದೊಡಲ ಹೊರೆವೆನೆ ಯೆಂದನಂಧನೃಪ ‖ ೧೫

ದುರ್ಯೋಧನನನ್ನು ಕುರಿತು ಸಮಾಧಾನ.

ಏನ ಮಾಡುವುದವರ ಕೆಡಿಸುವು
ದೇನುಪಾಯವ ಕಂಡೆ ದೈವ
ಧ್ಯಾನನಿಷ್ಠರ ಮುರಿವುದರಿದನ್ಯಾಯಮಾರ್ಗದಲಿ ।
ಏನು ನಿನ್ನಭಿಮತವು ನಿನ್ನೊಳ
ಗಾನು ಹೊರಗೇ ಕಂದ ನುಡಿ ದು
ಮ್ಮಾನ ಬೇಡೆನ್ನಾಣೆನುತ ಸಂತೈಸಿದನು ಮಗನ ॥ ೧೬

ಪಾಂಡವರ ವಿಷಯದಲ್ಲಿ ದುರ್ಯೋಧನನ ಅಭಿಪ್ರಾಯ.

ನೊಂದರವರಗ್ಗಳಿಸಿ ಹೃದಯದೊ
ಳೊಂದಿ ಬೆರಸರು ತೆರಹು ಮರಹಿನೊ
ಳಂದಗೆಡಿಸಿದೊಡಲ್ಲದುಳಿಹರು ನಿನ್ನ ಸಂತತಿಯು ।
ಬಂದು ಸತ್ತಿಗೆ ನಮ್ಮದಿಲ್ಲಿಗೆ
ನಿಂದುದೆನಿಸಲಿ ನಾವು ನಿಲಲವ
ರೊಂದು ಸತ್ತಿಗೆಯಾಗಿ ಸಲಹಲಿ ನಿಖಿಳರಾಜ್ಯವನು ॥ ೧೭

ಹುದುವ ಸೈರಿಸಿ ಬಳಸಿದರು ದ್ರೌ
ಪದಿಯುನವರೈವರು ಧರಿತ್ರಿಯು
ಹುದುವ ಸೈರಿಸಲಾರೆನವರೊಡನಿಂದುವೊಡಲಾಗಿ ।
ಒದೆದು ಕಳ ನಮ್ಮನಿಬರನು ನೇ
ಹದಲಿ ಸಲಹೈವರನು ನೀನಿಂ
ದೊದೆವುದೈವರ ನಮ್ಮ ಹಿಡಿ ಬೇಡಿಲ್ಲ ಮತವೆಂದ ॥ ೧೮

ಅನಿಲಜನ ಬಾಯ್ಬಡಿಕತನವ
ರ್ಜುನನ ಬಿಂಕಬೊಬ್ಬಾಟ ಸಹದೇ
ವನ ಸಗರ್ವದ ಮಾತು ಮೈಯ್ಯಿಕ್ಕುವುದೆ ಬಟಿಕಿನಲಿ ।

ಮನೆವೊಗವೆ ಕಾಣಿಸದೆ ಘನಕಾ
ನನದೊಳಗೆ ಸುಳಿವಂತೆ ಮಂತ್ರವ
ನೆನದೆನಿದು ನಿಮ್ಮಡಿಯ ಚಿತ್ತಕೆ ಬಹೊಡೆ ಬೆಸಸೆಂದ ॥ ೧೯

ಅದಕ್ಕೆ ಧೃತರಾಷ್ಟ್ರನ ಅಂಗೀಕಾರ.

ಮರುಳು ಮಗನೈ ಶಿವ ಶಿವಾ ಮನ
ಬಲಿದನೇ ತಾನಕಟ ನಿಮ್ಮೈ
ಶ್ವರಿಯ ಹಗೆ ದಾಯಾದ್ಯರುಗಳಭ್ಯುದಯದಲಿ ಸೊಗಸೆ ।
ದುರುಳರವದಿರು ದೈವಮುಖದೆ
ಚರಿಕೆ ಘನ ಕೆಡರೆಂದು ಮೋ
ಗರೆ ಕೊರೆಮನದ ಸೂಸಕದ ನೇಹವ ನಟಿಸುತಿಹೆ ಯೆಂದ ॥ ೨೦

ಪಾಂಡವರನ್ನು ಕರೆಸಿಕೊಡೆಂದು ಮಗನು ಕೇಳಿದುದು.

ಕರೆಸಿಕೊಡಿ ನೀವಿಲ್ಲಿಗವರೈ
ವರನು ಜೂಜಿನೊಳೊಂದು ಹಲಗೆಯ
ಲರಸ ಚಿತ್ತೈಸಲದು ಹನ್ನೆರಡಬುದ ವಿಪಿನದಲಿ ।
ವರುಷವೊಂದಜ್ಞಾತವದಱೊಳ
ಗಱಿದೆವಾದೊಡೆ ಮತ್ತೆ ಬನದಲಿ [1]
ವರುಷಹದಿಮೂಱಕ್ಕೆ ಕೊಡುವುದು [2] ಮತ್ತೆ ವೀಳೆಯವ ॥ ೨೧

ಧರೆಯ ಗೆಲಿದರೆ ಭೀಮಫಲುಗುಣ
ರುರುವಣಿಸುವರು ಭೀಷ್ಮವಿದುರರು
ಗುರುಕೃಪರು ಸೈರಿಸರು ದಟ್ಟಿಸಿ ಮರಳಿ ಕೊಡಿಸುವರು ।
ವರುಷಸಂಖ್ಯೆಯಲವರ ಸತ್ಯದ
ಭರದಲವನಿಯ ಕೊಂಬುದಿದು ತಾ
ಪರಮಮಂತ್ರವಿದೆಂದು ನುಡಿದರು ಖಳಚತುಷ್ಟಯವು ॥ ೨೨

---

1 ಮರಳಿ ವಿಪಿನಕ್ಕೆ, ಚ. 2 ಹನ್ನೆರಡಕ್ಕೆ ಕೊಡುವೆವು, ಚ.

ಅಹುದು ಮಂತ್ರವಿದೆಂದು ಚಿತ್ತಕೆ
ಬಹೊಡೆ ಕಳುಹಿ ಮನುಷ್ಯರನು ಕರೆ
ಸಹಿತರನು ವಿದುರಾದಿಗಳ ಕೊಂಡೆಯಕೆ ಕಿವಿಗೊಡದೆ |
ಕುಹಕವುಂಟೇ ನಮ್ಮ ಕಳುಪುವು
ದಹ ಮತವ ಬೆಸಸೆನಲು ನಿಮ್ಮೊಳು
ಕುಹಕ ವುಂಟೇ ಮಗನೆ ಕರೆಸುವೆನೀಗ ಪಾಂಡವರ || ೨೩

ಅವರನ್ನು ಪ್ರಾತಿಕಾಮಿಕನಿಂದ ಕರೆಸುವುದು.

ಪ್ರಾತಿಕಾಮಿಕ ಬಾ ಯುಧಿಷ್ಠಿರ
ಭೂತಳೇಶನ ಕರೆದು ತಾರೈ
ತಾತ ಕರೆಸಿದನೆಂಬುದಿಂದ್ರಪ್ರಸ್ಥದಲ್ಲಿರಲಿ |
ಪ್ರೀತಿಪೂರ್ವಕವಲ್ಲದಿಲ್ಲಿ ವಿ
ಘಾತಿಯಿಲ್ಲೆಂದುಚಿತವಚನದೊ
ಳಾತಗಳ ಕರೆ ಯೆಂದು ಬೆಸಸಿದನವಗೆ ಧೃತರಾಷ್ಟ್ರ[1] ೨೪

ಅದಕ್ಕೆ ಭೀಷ್ಮಾದಿಗಳ ಅನುತಾಪ.

ಕೇಳಿದರು ಭೀಷ್ಮಾದಿಗಳು ಬರ
ಹೇಳಿದುದ ಪಾಂಡವರನಕಟಾ
ಹೇಳಿದರೆ ಕೌರವರ ನೂರ್ವರನಂತಕಾಲಯಕೆ |
ಹೇಳಿಗೆಯ ಹೇಳಿದನೆ ಹಾವಿನ
ಮೇಲುಮುಚ್ಚಳ ಮುಱಿಯಲೆಂದಿದ
ಕೇಳಿದೆವೆ ಕೌತುಕವನೆಂದರು ಕುದಿದು ತಮ್ಮೊಳಗೆ || ೨೫

ಉಱುವ ಮಕ್ಕಳನಿಕ್ಕಿ ಸಾಧಿಸು
ವಱಕೆಯಾವುದು ಹೇಳಲಾಗದೆ
ಕುಱಿಗಳೇ ನಿನ್ನವರು ಬಲಿ ಯಿದು ಮೇಲೆ ವಿಧಿಯೆನುತ[2] |

---

1 ನೊಡಗೊಂಡು ಬಾ ಹೋಗೆಂದನಂಧನೃಪ, ಚ.

2 ಬಲ್ಲರೇ ಮೇಲಣಾಪಜಯವ, ಚ.

ಮಱುಗುವಳು ಗಾಂಧಾರಿ ಮಕ್ಕಳ
ಹಱಿವ ಕಂಡರೆ ಮೇಲೆ ನಿನಗೇ
ನಱಿಯಬಾರದೆ ಮರುಳೆ ಯೆಂದಱಲಿದನು ಕಲಿಭೀಷ್ಮ ॥ ೨೬

ಕೊಂಬುದೇ ಖಳಜನಕೆ ಸಾಧುಗ
ಳೆಂಬ ಮಾತು ವಿಧಾತೃಕಲ್ಪಿತ
ವೆಂಬ ವಿಷದುಬ್ಬಟೆಕೆ ಗಾರುಡವೇನ ಮಾಡುವುದು ।
ತುಂಬುವುದು ಬತ್ತುವುದು ಕಾಲನ [1]
ಡೊಂಬಿದಾರಿಗೆ ಸಾಧ್ಯ ನಾವೇ
ನೆಂಬೆವಿದಕೆಂದಱಲಿದರು ಭೀಷ್ಮಾದಿಸಜ್ಜನರು ॥ ೨೭

ಇವರ ವಂಚಿಸಿ ರಜನಿಮಧ್ಯದೊ
ಳವನ ಕಳುಹಿದೊಡಾತನೈತಂ
ದಿವರ ಪಾಳೆಯದೊಳಗೆ ಹೊಕ್ಕನು ಹಲವುಪಯಣದಲಿ ।
ಅವನಿಪತಿ ಮಱುದಿವಸ ಬೀಡೆ
ತ್ತುವ ನಿಧಾನವನಱಿದು ರಾಯನ
ಭವನಿಕೆಯ ಹೊಱಬಾಹೆಯಲಿ ದಂಡಿಗೆಯನವನೀಶ ॥ ೨೮

ಕರೆದು ಹೇಳಿದನಾಗ ಪಡಿಹಾ
ರರಿಗೆ ತಾನೇ ಪ್ರಾತಿಕಾಮಿಕ
ನರಸ ಕಳುಹಲು ಬಂದೆನಗ್ಗದ ರಾಜಕಾರಿಯಕೆ ।
ಧರಣಿಪಾಲಂಗಱುಹಿ ಯೆನೆ ನೃಪ
ವರಗೆ ಬಿನ್ನಹಮಾಡೆ ಕರೆಸಿದೊ
ಡಿರದೆ ಹೊಕ್ಕನು ದೂತನಂದಾರಾಯನೋಲಗವ ॥ ೨೯

ದೂತ ಬಂದ ಸಂಗತಿಯನ್ನು ಹೇಳಿದುದು.

ದರುಶನವನಿತ್ತವನಿಪಾಲನ
ಚರಣದಲಿ ವೈಯಿಕ್ಕಿ ನಿಂದನು

1 ಬಿತ್ತುವುದು, ಚ.

ನರವೃಕೋದರನಕುಲಸಹದೇವರಿಗೆ ಕೈಮುಗಿದು ।
ಧರಣಿಪನ ಮೊಗಸನ್ನೆಯಲಿ ಕು
ಳ್ಳಿರಲಿದೇನೈ ಪ್ರಾತಿಕಾಮಿಕ
ಬರವು ಬೇಗದೊಳಾಯ್ತೆನುತ ಬೆಸಗೊಂಡನಾಭೀಮ ॥ ೨೦

ಬರವು ಬೇರೇನೊಡೆಯರಟ್ಟಿದ
ರರಸನಲ್ಲಿಗೆ ಮುನ್ನ ಜೂಜಿನೊ
ಳೊರಸೊರಸು ಮಿಗೆ ಮಸೆದುದಿತ್ತಂಡಕ್ಕೆ ಮನಮುಸಿಸು ।
ಹರದು ಹೋಯ್ತದು ಹೃದಯಶುದ್ಧಿಯೊ
ಳೆರಡರಸುಗಳು ಜೂಜನಾಡಲಿ
ಮರಳಿ ಬಿಜಯಂಗೈವುದೆಂದಟ್ಟಿದನು ಧೃತರಾಷ್ಟ್ರ ॥ ೨೧

ಭೀಮನ ಆಕ್ಷೇಪವಾಕ್ಯ.

ಮರಳಿ ಕರೆಸುವುದೆಂದು ಕಂಬನಿ
ವೆರಸಿ ಕುರುಪತಿಪಿತನ ಚಿತ್ತವ
ಕರಗಿಸಿದನೋ ಮೇಣು ತಾ ಕರೆಸಿದಳೊ ಗಾಂಧಾರಿ ।
ಕರೆಸುವವದಿರು ಭಂಡರೋ ಮೇಣ್
ಮರಳಿ ಹೋಹರು ಭಂಡರೋ ಸೀ
ನಱಿವುದೇನೈ ಪ್ರಾತಿಕಾಮಿಕಯೆಂದನಾಭೀಮ ॥ ೨೨

ಸಮಾಧಾನದ ನುಡಿಗಳು.

ಬೊಪ್ಪನವರಟ್ಟಿದರೆ ಹರ ಹರ
ತಪ್ಪ ನೆನೆವರೆ ಭೀಮ ಸೈರಿಸು
ತಪ್ಪನಾಡಿದೆ ನಮಗೆ ಮುನಿವಳೆ ತಾಯಿಗಾಂಧಾರಿ ।
ತಪ್ಪದೊಮ್ಮೆಗೆ ಪಾಂಡುಕುಂತಿಗೆ
ಮುಪ್ಪಿನಲಿ ಮರುಳಾಟವಾಗಲಿ
ತಪ್ಪುವನೆ ಧೃತರಾಷ್ಟ್ರನೆಂದನು ನಗುತ ಯಮಸೂನು ॥ ೨೩

ಖಳರು ಮೊದಲಲಿ ಕೌರವರು ಕಲಿ
ಮೊಳೆಯನಂಕುರಿಸುವ ಕುವಿದ್ಯಾ
ಕಲಿತಮಾಯುರು ಕರ್ಣಶಕುನಿಗಳವರ ಸಂಗದಲಿ ।
* ಹೊಳವನಡೆಯುವನೆಡಹುವನು ನಿ
ರ್ಮಳನಹನ ನಿಜಪಿತನ ದೋಷವ
ಕಳೆದು ನಿಜಭಾವದಲಿ ಭಜಿಸುವುದೆ ಮತವೆಂದ ॥ ೩೪

ಆಗ ಜನಗಳ ಅಭಿಪ್ರಾಯ.

ನೆನಹಿನಭಿಮತವಲ್ಲ ದುರ್ಯೋ
ಧನನ ದುಷ್ಟರ ಕರ್ಮಗತಿಯಿದು [1]
ಜನಪತಿಯು ವಶವಲ್ಲ ಗಾಂಧಾರಿಗೆಯುಲಂಘ್ಯವಿದು ।
ಅನುನಯದ ಹೊತ್ತಲ್ಲ ನೀವ್ ಹ
ಸ್ತಿನಪುರವ ಹೊಕ್ಕಾಗಳೇ ಕಾ
ನನಕೆ ಗಮಿಸುವಿದೆಂದರಾಧೌಮ್ಯಾದಿಮಂತ್ರಿಗಳು ॥ ೩೫

ಕರೆಯೆ ಕಾದುವುದಾಡುವುದು ಸಂ
ಗರಕೆ ಜೂಜಿಂಗಿದು ಮಹೀಶರ
ಪರಮಧರ್ಮವಲೇ ನಿಧಾನಿಸೆ ವೈದಿಕಾಂಗದಲಿ ।
ಗುರುವಲಾ ಧೃತರಾಷ್ಟ್ರನಾತನು
ಕರೆಸಿದಲ್ಲಿ ವಿಘಾತಿ ಬಹುದೇ
ಬರಲಿ ಸೈರಿಸಬಲ್ಲೆನೆಂದನು ಧರ್ಮಸುತ ನಗುತ ॥ ೩೬

ಜನಕನಾಜ್ಞೆಯ ಮೀಱಿ ಬಳಿಸುವು
ದನುಚಿತವು ನಮಗಿನ್ನು ಭೀಮಾ

* ತಿಳಿದು ನಡೆವವನಲ್ಲವಿದು ನಿ
ರ್ಮಲದ ನೀತಿಗೆ ಸಲ್ಲ ನಿಜಪಿತ
ನೊಳಗು ನಿರ್ಮಲವಿಲ್ಲವೆಂದನು ನಗುತ ಕಲಿಭೀಮ, ಡ. ।

1 ಶಾಖಲಕರ್ಣರಭಿಮತ,

ರ್ಜುನನಕುಲಸಹದೇವರಭಿಮತವೆಮ್ಮ ಮತವೆನಲು ।
ಮನವೊದಲು ಕರಣಂಗಳಾತ್ಮಂ
ಗನುಚರರೊ ಬಾಧಕರೊ ನಿಮ್ಮಯ
ಮನಕೆ ಸಲ್ವಂತಾಗಲೆಂದರು ಪವನಜಾದಿಗಳು ॥ ೩೭

ಮರಳಿ ಪಾಳಯ ಬಿಡಲಿ ಚರರನು [1]
ಕರೆದು ಹೇಚೆಂಪವನಿಪತಿ ಗಜ
ಪುರಿಗೆ ತಿರುಗಿದನಱಿಯನೇ ಕೌರವರ ಕೃತ್ರಿಮವ ।
ಕೊರಳಲಿಕ್ಕಿದ ವಿಧಿಯ ಕಣ್ಣಿಯ
ಹುರಿ ಬಲುಹಲೇ ಧರ್ಮಸುತನೊಡೆ
ಮುಱಿಚಲಾಪನೇ ಕೇಳು ಜನಮೇಜಯ ಮಹೀಪಾಲ ॥ ೩೮

ಸುತರು ಸಚಿವರು ಮಂತ್ರಿಗಳು ನಿಜ
ಸತಿಯರಾಪ್ತರು ಬಂಧುಗಳು ಭೂ
ಪತಿಗಳನುಜರು ಬುಧರು ಚಾತುರ್ಬಲದ ನಾಯಕರು ।
ಮತವು ಮರಳುವುದಲ್ಲ ಧರಣೀ
ಪತಿಗೆ ದುಸ್ತರ ಕರ್ಮಗತಿ ಸಂ
ಮತವಲೇ ನಮಗಿನ್ನೇನೆನುತ ನಡೆದುದು ಜನಸ್ತೋಮ ॥ ೩೯

ಪಾಂಡವರು ಹಸ್ತಿನಾಪುರಕ್ಕೆ ಬಂದುದು

ಭರದ ಪಯಣವಲಿವರು ಹಸ್ತಿನ
ಪುರದ ಹೊಱಬಾಹೆಯಲಿ ಬಿಟ್ಟರು
ಪರಿರಚಿತಗಜತುರಗಶಾಲೆಯ ವಿಪುಳವೀಧಿಯಲಿ ।
ಬಿಱಿಯೆ ನೆಲನಳ್ಳಿಱಿವ ವಾದ್ಯದ
ವೊಱೆವ ಭೇರಿಯ ಜಡಿವ ಕಹಳ
ಸ್ವರದ ಕಳಕಳ ಜಱಿದುದಬುಜಭವಾಂಡಖರ್ಪರವ ॥ ೪೦

---

[1] ಬಿಷ್ಟರ, ಚ.

ಪುರಪ್ರವೇಶ.

ಏನಿದದ್ಭುತರಭಸ ವಿದಲೇ
ಮಾನನಿಧಿಗಳು ಮರಳಿ ಕುಂತೀ
ಸೂನುಗಳ ಬಲ ಬಂದು ಬಿಟ್ಟದು ಪುರದ ಬಾಹೆಯಲಿ ।
ಏನು ಕೌರವರೊಡನೆ ಶರಸಂ
ಧಾನವೋ ವಿನಯಾನುಗುಣಸಂ
ಧಾನವೋ ತಾನೆನುತ ಗಜಬಜಿಸಿದುದು ಗಜನಗರ ॥ ೪೧

ಪುರವ ಹೊಕ್ಕನು ನೃಪತಿ ಪರಿವೃತ
ಪರಿಜನದಲಾರಾಜಬೀದಿಯು
ನೆರವಿ ನೆರವಿಯು ಜನದ ಪುನರಾಗಮನವಿಸ್ಮಯವ ।
ಪರಿಣತಸ್ತ್ರೀಬಾಲವೃದ್ಧರ
ವಿರಸವಚನವನಾಲಿಸುತ ನೃಪ
ನರಮನೆಗೆ ಬಂದೆಐಗಿದನು ಧೃತರಾಷ್ಟ್ರನಂಘ್ರಿಯಲಿ ॥ ೪೨

ಧೃತರಾಷ್ಟ್ರನ ಕ್ಷೇಮಾಲಿಂಗನಾದಿಗಳು.

ಅರಸ ತೆಗೆದಪ್ಪಿದನು ಭೂಪತಿ
ಹರುಷದಲಿ ಧರ್ಮಜನ ಭೀಮನ
ನುರುತರಪ್ರೇಮದಲಿ ಮನ್ನಿಸಿ ಫಲುಗುಣಾದಿಗಳ ।
ಅರಸಿಯರ ಸುಕುಮಾರಕರನಾ
ದರಿಸಿ ಮಧುರರಸೋಕ್ತಿಯಲಿ ವಿ
ಸ್ತರದ ನುಡಿಗಳ ನುಡಿದು ಮಗುಳಿಂತೆಂದ ನಸುನಗುತ ॥ ೪೩

ಸೋಲದಲಿ ಮನ ನೊಂದು ಹೋದುದು
ಹೋಲದೆಮ್ಮಭಿಮತಕೆ ನಿಮ್ಮೊಳು
ಮೇಳದಿಂದೊಂದಾಗಿ ಮಜ್ಜನಭೋಜನಾದಿಗಳ ।
ಲೀಲೆಯಲಿ ಮಾಡುವುದು ಸದ್ಯೂ
ತಾಳಿಯಲಿ ರಮಿಸುವುದು ಮನದ ವಿ
ಟಾಳವಿಲ್ಲದೆ ಬದುಕಿ ನಿಮ್ಮೊಳಗೆಂದನಂಧನೃಪ ॥ ೪೪

ಮೃದುವಾಕ್ಯಗಳಿಂದ ಧರ್ಮರಾಯನಿಗೆ ದ್ಯೂತದಲ್ಲಿ
ಬುದ್ಧಿಯನ್ನು ಹುಟ್ಟಿಸುವಿಕೆ.

ಕೃತಕವಿಲ್ಲದೆ ಬಂದೆ ನೀನೀ
ವ್ಯತಿಕರಕೆ ಮನ ಬಹೊಡೆ ಸುಖರಸಂ
ಗತಸುಹೃದ್ದ್ಯೂತದಲಿ ರಮಿಸೈ ಮಗನೆ ನೀನೆನುತ ।
ಸುತತನದ ಸಾಹಾರ್ದಸಂಭಾ
ವಿತದ ಹೊಱಬಾಹೆಯಲಿ ಧರಣೀ
ಪತಿಯನುಪಚರಿಸಿದನು ಚದುರಿಗತನದಿ ಧೃತರಾಷ್ಟ್ರ ॥ ೪೫

ಸರ್ವಲೋಕವಿನಾಶಕರವೀ
ಗುರ್ವಣೆಯು ದೈವಾಭಿಪಾಕಕೆ
ದರ್ವಿಯಾದುದು ಧರ್ಮಪುತ್ರನ ಬುದ್ಧಿವಿಸ್ತಾರ ।
ಸರ್ವಜನವೊಂದೆಸೆ ಯುಧಿಷ್ಠಿರ
ನೊರ್ವನೊಂದೆಸೆ ಶಕುನಿಕೌರವ
ರಿರ್ವರೊಂದೆಸೆ ಮಿಕ್ಕರಿಗೆ ಮತವಿಲ್ಲ ಜೂಜಿನಲಿ [1] ॥ ೪೬

ಧರ್ಮರಾಯನು ದ್ಯೂತವನೊಪ್ಪಿದುದು.

ಅಕಟಕಟ ಧರ್ಮಜನ ಬುದ್ಧಿ
ಪ್ರಕರವೀತೆರನಾಯ್ತು ತನ್ನೊಂ
ದಕುಟಿಲತ್ವವೆ ಬಲ್ಲನವರಭಿಮತವ ತಾನಱಿಯ ।
ಯುಕುತಿ ತೋಱದೆ ಮತ್ತೆ ಜೂಜಿನ
ವಿಕಳತನಕೆಡೆಗೊಂಡು ಕೌರವ
ಶಕುನಿಗಳ ದುರ್ನೀತಿಗೊಳಗಾದನು ಮಹೀಪಾಲ ॥ ೪೭

ಬಂದು ಕುಳ್ಳಿರ್ದನು ಸಭಾಸದ
ವೃಂದ ನೆಱೆದುದು ಮತ್ತೆ ಜೂಜಿನ
ದಂದುಗದ ದುರ್ವ್ಯಸನ ಮುಸುಕಿತು ಧರ್ಮಜನ ಮತಿಯ ।

1 ಜೂಜಿನಭಿಮತವರಸ ಕೇಳೆಂದ, ಚ.

ತಂದು ಮಣಿಮಯ ಸಾರಿಹಲಗೆಯ
ನಂದು ಮೋಹರಿಸಿದರು ಜೂಜಿಂ
ಗಿಂದುಕುಲದವನೀಶನನುವಾದನು ಸರಾಗದಲಿ ॥ ೪೮

ಎಲ್ಲನಿತು ಖಯಖೋಡಿ ಚಿತ್ತದೊ
ಳಿಲ್ಲ ನಿಜಪಾಂಡಿತ್ಯಪರಿಣತಿ
ಬಿಲ್ಲ ಬಿಸುಟುದು ಕೆದಱಿ ಹೋಯ್ತು ವಿವೇಕವಿಜ್ಞಾನ ।
ಖುಲ್ಲರೊಡನೆಯೆ ಕೇಳಮೇಳದ
ಭುಲ್ಲವಣೆ ವೆಂಟಣಿಸೆ ಪುರಜನ
ವೆಲ್ಲ ಮಱುಗಿತು ಧರ್ಮಜನ ಮಱುಜೂಜಿನುಬ್ಬಟಕೆ ॥ ೪೯

ತೆಗೆದು ಸಾರಿಯ ಹೂಡಿ ಹಾಸಂ
ಗಿಗಳ ಹೊಸೆದನು ಶಕುನಿ ಧರ್ಮಜ
ಹೊಗಱು ಹೊಣೆಯನು ನುಡಿವುದೊಡ್ಡವನಿದು ವಿನೋದವಲೆ ।
ಬಗೆವುದೊಂದೇ ಹಲಗೆ ಮೇಲಣ
ಮಗುಣ ಸಲ್ಲದು ಜೂಜುಗಾಱಱ
ವಿಗಡತನವಲ್ಲೆನುತ ನೃಪತಿಗೆ ಸೂಸಿದನು ನಗೆಯ ॥ ೫೦

ಲಲಿತರಾಗದಲಗಿದ ಗೋರಿಯ
ಬಲುಗುಡಿಯ ಮೃಗದಂತೆ ವಿಷಯದ
ಕುಳಿಯೊಳಗೆ ಕಾಲೊಡ್ಡಕಿ ಬಿದ್ದ ಸುಯೋಗಿಯಂದದಲಿ ।
ಕಲಿತವಿಕಳಾವೇಶದಲಿ ವಿ
ಹ್ವಲಿತವಿವಿಧಶ್ರೋತ್ರನಯಸಂ
ವಲಿತನೆಂದನು ಶಕುನಿ ನೀ ನುಡಿಯೊಡ್ಡವೇನೆನುತ ॥ ೫೧

ಪಣನಿರ್ಣಯ.

ಧರಣಿಪತಿ ಕೇಳ್ ನಿನ್ನ ಧಾರಿಣಿ
ಕುರುಪತಿಯ ನೆಲನೊಡ್ಡವಿಂತೀ
ಯೆರಡು ತಂಡದೊಳಾರು ಸೋತರು ಸೋತ ಭೂಪತಿಗೆ ।

ವರುಷಹನ್ನೆರಡಱಲಿ ಬನದೊಳ
ಗಿರವು ಮೇಲಜ್ಞಾತವೊಂದೇ
ವರುಷ ಹದಿಮೂಱಾಗೆ [1] ಪೋಗುವುದು ತಪ್ಪಿ ಪಟ್ಟಣವ ॥ ೫೦

ಮಱೆಯೊಳಿಹುದಜ್ಞಾತವಾಸದೊ
ಳಱಿದರಾದೊಡೆ ಮತ್ತೆ ಬನದಲಿ
ಚರಿಸುವುದು ಹನ್ನೆರಡುವರುಷವು ಸತ್ಯ ಭಾಷೆ ಯಿದು ।
ಮುಱಿದು ತಪ್ಪಿದನೃಪನನೀಶ್ವರ
ನಱಿವನೈ ಸಲೆ ರಾಜಧರ್ಮವ
ಮೆಱೆವರಾಡುವುದೊಡ್ಡವೀ ಪರಿಯೆಂದನಾಶಕುನಿ ॥ ೫೩

ಅಂಜುವೊಡೆ ನಿಲು ಜೂಜುಗಾಱನೆ
ಭಂಜವಣೆಗೊಳಗಹರೆ ಬಾ ನೃಪ
ರೆಂಜಲಿಸಿ ಬಿಡಬಹುದೆ ಪರಮದ್ಯೂತರಸಸುಧೆಯ ।
ರಂಜಕರು ನಾವಲ್ಲ ಜೂಜಿಗ
ಕಂಜಭವ ತಾನೆನ್ನೊಡನೆ ಕೆಲ
ರಂಜದಿಹರಾರೆಂದು ಗರ್ವವ ಸೂಸಿದನು ಶಕುನಿ ॥ ೫೪

ಉಗ್ರಭಾಷೆಯಿದೇಕೆ ಶಿವ ಶಿವ
ವಿಗ್ರಹಪ್ರತಿಮುಖದ ವಿಷವೀ
ವೆಗ್ಗಹದಲಿದು ಬೆಂದು ಹೋಗದೆ ಭರತಸಂತಾನ ।
ನಿಗ್ರಹಿಸಲೇಕಕಟ ಕುರುಕುಲ
ದಗ್ರಿಯನನೆಂಬಖಿಳಸಚಿವರು [2]
ದಗ್ರಚರಿತರು ಮುಱಿದು ನುಡಿದರು ನೀತಿವಚನದಲಿ ॥ ೫೫

ವಿದುರ ಗುರು ಗುರುಸೂನು ಬಾಹ್ಲಿಕ
ನದಿಯ ಮಗ ಗಾಂಧಾರಿ ಕುಂತೀ

---

[1] ಹದಿನಾಲ್ಕಱಲಿ, ಚ. [2] ಸೇವ್ಯ, ಕ. ಖ.

ಸುದತಿ ಭೂರಿಶ್ರವ ಯುಯುತ್ಸು ವಿಕರ್ಣಸಂಜಯರು ।
ಇದು ವಿಷಮವೆಂದರು ಕೃಪ ದ್ರೌ
ಪದಿವೃಕೋದರಪಾರ್ಥಯಮಳರು
ಕುದಿದರೊಳಗೊಳಗಾಡಲಂಮದೆ ರಾಯನಿದಿರಿನಲಿ ॥ ೫೬

ಕ್ಷಿತಿಪ ಕೇಳ್ ದುರ್ವ್ಯಸನವಿಷಮ
ವ್ಯತಿಕರದ ಭಾಷೆಯನು ನೃಪ ಮಿಗೆ
ಪತಿಕರಿಸಿದನು ಶಕುನಿ ಹಾಸಂಗಿಗಳ ಹಾಯ್ಕಿದನು ।
ಸತಿಯ ದಕ್ಷಿಣನಯನವಾಭೂ
ಪತಿಯ ವಾಮಭುಜಾಕ್ಷಿಗಳು ದು
ರ್ಗತಿಯ ಸೂಚಿಸಿ ತೋಱುತಿರ್ದುವು ನಿಮಿಷನಿಮಿಷದಲಿ ॥ ೫೭

ಜೂಜಿನಲ್ಲಿ ಧರ್ಮರಾಯನು ಸೋತದ್ದು.

ದಾಯವೇ ಮಝು ಪೂತು ದುಗತಿಗ
ನಾಯಸವಲೇ ಚೌಕವೊಂದೇ
ಕಾಯಲಾಗದೆ ಹಾಯ್ಕು ಹಾಯ್ಕೆಂದೊದಱಿ ಗರ್ಜಿಸಿದ ।
ರಾಯ ಸೋತನು ಧರ್ಮಸುತ ಕುರು
ರಾಯ ಗೆಲಿದನು ಕಟ್ಟು ಗುಡಿಯನು
ರಾಯನೂರೊಳಗೆಂದು ಮಿಗೆ ಬೊಬ್ಬಿಱಿದನಾಶಕುನಿ ॥ ೫೮

ಹಣುಗಿತರಸನ ವದನ ತಾಳಿಗೆ
ಯೊಣಗಿತವನಿಗೆ ನಟ್ಟ ದೃಷ್ಟಿಯು
ಜುಣುಗಿದುಬ್ಬಿನ ಕಾದ ದೇಹದ ಕಳತಳಕೀತನದ [1] ।
ಕುಣಿವ ಬೆಱಗಿನ ಸತ್ವದಲಿ [2] ಕೇ
ವಣಿಸಿದಱಿವಿನ ವಿಕೃತಕರ್ಮದ
ಕುಣಿಕೆಗೊಲದೊಲದರಸನಿದ್ದನು ಹೊತ್ತು ದುಗುಡದಲಿ ॥ ೫೯

---

1 ಮಣಿದ ನೆನಹಿದ ಮುಱಿದ ಮಹಿಮೆಯ ತಾಗಿದಪದೆಸೆಯ, ಚ.

2 ಜುಣುಗಿದುಬ್ಬಿನ, ಚ.

ಉಬ್ಬು ಮುಱಿದುದು ತಮ್ಮೊಳೊಬ್ಬರ
ನೊಬ್ಬರೀಕ್ಷಿಸಿ ಕೈಯ್ಯ ಗಲ್ಲದ
ನಿಬ್ಬರದ ನಿಡುಸುಯ್ಲ ಖೋಡಿಯ ಮನದ ಕೊಳ್ಗುದಿಯ ।
ಜಬ್ಬುಲಿಯ ಜಾಳಿಗೆಯ ಚಿಂತೆಯ
ಹಬ್ಬುಗೆಯ ಹರವರಿಯ ಖೇದದ
ಮಬ್ಬಿನಲಿ ಮುಳುಗಿದರು ಫಲುಗುಣಪವನಜಾದಿಗಳು ॥ ೬೦

ದ್ರೌಪದಿಯೂ ಧರ್ಮರಾಜ ಮೊದಲಾದವರು ಮಾತನಾಡುವಿಕೆ.

ಕಂಡಿರೇ ಧೃತರಾಷ್ಟ್ರನನು ಕೈ
ಕೊಂಡಿರೇ ವನದೀಕ್ಷೆಯನು ಪಿತ
ನಂಡಲೆದು ಕೃಷ್ಣಾಜಿನವನುಡಿಗೊಱೆಯ ಸಿತ್ತನಲೆ ।
ಚಂಡಿಕೊಂಡರೆ ನೀವು ನಿಮ್ಮಯ
ಭಂಡತನ ಸಾಕಿನ್ನು ವನವಾ
ಖಂಡಲಪ್ರಸ್ಥವಲೆ ನಮಗಿನ್ನೆಂದಳಿಂದುಮುಖಿ ॥ ೬೧

ವಾರಕದ ರತ್ನಾಭರಣಶೃಂ
ಗಾರವೇಕಿನ್ನವನು ತೆಗೆಯಲಿ
ಧಾರಿಣಿಯ ಲಂಪಟವನುೞಿಯಲಿ ವನವನಚ್ಚರಲಿ ।
ಭೂರಿಸಭೆಯಲಿ ನಮ್ಮ ಭಂಗಿಸಿ
ನಾರಿಯರು ಗಹಗಹಿಸಿ ನಗುತಿಹ
ಕಾರಣವೆ ಕೈಕೊಳಲಿ ತೆಗೆ ಶೃಂಗಾರಗಳನೆಂದ ॥ ೬೨

ಕಳೆದು ಬಿಸುಟರು ಮತ್ತೆ ರತ್ನಾ
ವಳಿಯ ವಿವಿಧಾಭರಣವನು ಪರಿ
ಲಲಿತಕೃಷ್ಣಾಜಿನವ ಹೊದೆದರು ಹಾಯ್ಕಿ ಹಚ್ಚಡವ ।
ನಳಿನಮುಖಿ ಬಹುವಿಧದ ಮುಕ್ತಾ
ವಳಿಯಲಂಕಾರವನುಗಿದು ಸಭೆ
ಯೊಳಗೆ ಬಿಸುಟಳು ನಿಂದಳಬಲೆ ನಿಜಾನುರೂಪದಲಿ ॥ ೬೩

ಸಾಲದೇ ನಮಗಿನ್ನು ಕೌರವ
ನೋಲಗದ ಫಲವಾಯ್ತಲೇ ವನ
ಮಾಲೆ ಕೊರಳಿಂಗಲ್ಲ ಚರಣಾಭರಣವಾದುದಲೆ ।
ಬೀೞುಕೊಳ್ಳರೆ ಬೊಪ್ಪನವರನು
ಮೇಲೆ ಮೋಹದ ತಾಯುಲಾ ನಡೆ
ಹೇೞಿ ಕಳುಹಿಸಿ ಕೊಂಬೆವೆಂದನು ಭೂಪತಿಗೆ ಭೀಮ ॥ ೬೪

ಬಂದರಿವರರಮನೆಗೆ ನೇಮವೆ
ಯೆಂದು ಪದಕೆಱಗಿದರು ಕಂಬನಿ
ಯಿಂವ ನೆನೆದನು ತಂದೆ ಮಕ್ಕಳ ಬಿಸುಟು ಬದುಕುವನೆ ।
ಇಂದುಮುಖಿ ಮಱುಗಿದಳು ನಾವಿ
ನ್ನೆಂದು ಕಾಂಬೆವು ನಿಮ್ಮನಕಟಕ
ಟೆಂದಳತಿಮೋಹಿತಳಲೇ ಕುಂತಿಯು ಕುಮಾರರಿಗೆ ॥ ೬೫

ವನದೊಳತ್ಯಾಯಾಸ ಸೀವೆಂ
ತನುಭವಿಸುವಿರಿ ಪಾಪಿ ದುರ್ಯೋ
ಧನನ ದುರ್ಜನಸಂಗ ನಿಮಗದು ಸಿಂಗಿಯಾದುದಲೆ ।
ವನಿತೆ ನಿಮ್ಮೊಡನೆಂತು ತೊಳಲುವ
ಳನವರತ ಗಿರಿಗುಹೆಯ ಗಟ್ಟಿ
ವನೆನುತ ನುಡಿದಳು ಕುಟಿಲಗರ್ಭದ ಗುಣದ ಬಳವಿಗೆಯ ॥ ೬೬

ಬೀಳುಗೊಡಿರೇ ಸಾಕು ವಿಪ್ರಳಕೃ
ಪಾಳುಗಳಲಾ ವಿಧಿಯ ಚಿತ್ರವಿ
ಟಾಳಗತಿಗೇನಾಯ್ತು ಹದಿಮೂಱಬುದವವಧಿಯಲೆ ।
ಮೇಲೆ ನಿಮ್ಮಾತ್ಮಜರಿಗವನಿಯ
ಪಾಲನೆಯು ಪರುಠವದ ಪಟ್ಟನೆ
ಪಾಳಿಸುವೆರದಕೇನು ಜಂಜಡ ವೆಂದನಾಧೌಮ್ಯ ॥ ೬೭

ಫಲಕುಜದ ಪಲ್ಲವದ ಪದಕರ
ತಳದ ವಿಪುಳತಮಾಲಪತ್ರದ
ಲಲಿತಕೇತಕಿನಖದ ದಾಡಿಮದಂತಪಙ್ಕ್ತಿಗಳ ।
ನಳಿನನಯನದ ಮಧುಪಕುಲಕುಂ
ತಳದ ಬನಸಿರಿ ಸವತಿಯಾದಳು
ಜಲಜಮುಖಿಪಾಂಚಾಲಿಗೆಂದನು ಧೌಮ್ಯ ನಸುನಗುತ ॥ ೬೮

### ವನವಾಸಕ್ಕೋಸ್ಕರ ಪಾಂಡವರ ಪ್ರಯಾಣ.

ಇವರು ಕಳುಹಿಸಿಕೊಂಡರಾನೃಪ
ಭವನವನು ಹೊಱವಂಟರೊಡನು
ತ್ಸವವಿಹೀನರು ವಿದುರಭೀಷ್ಮದ್ರೋಣ ಗೌತಮರು ।
ಅವನಿಪತಿದುರ್ಯೋಧನಾದಿಗ
ಳವನ ಸಹಭವರುೞಿಯೆ ಬಂದರು
ವಿವಿಧಜನರೊತ್ತೊತ್ತಿ ಮಸಗಿತು ರಾಜಬೀದಿಯಲಿ॥ ೬೯

ಸಂದಣಿಸಿದುದು ಕೇರಿಕೇರಿಯ
ಮಂದಿಮನೆಗಳ ಮೇಲೆ ಘನತರ
ವೃಂದದಲಿ ಘನಸೌಧಶಿಖರದೊಳಂದು ಶೋಕದಲಿ ।
ನಿಂದುದಲ್ಲಿಯದಲ್ಲಿ ನೋಟಕ
ರಿಂದ ಕೆತ್ತುದು ಬೀದಿ ಜೂಜಿನ
ಬಂದಿಯಲಿ ಸಿಲುಕಿದ ನೃಪಾಲರು ನಡೆದರೊಗ್ಗಿನಲಿ ॥ ೭೦

ಕುತ್ತುದಲೆಗಳ ಮೃಗದ ತೊಗಲಿನ
ಸುತ್ತುಹೊದಕೆಗಳಡದ ಕೈಗಳ
ಲೆತ್ತಿದಾಯುಧತತಿಯ ಭಂಗದ ಭೂರಿತಾಪದಲಿ ।
ಹೊತ್ತುವೆದೆಗಳ ಹೊಗುವ ಮೋಱೆಯ
ಕಿತ್ತಡದ ಕಡುಗೋಪಸಮತೆಗ
ಳೆತ್ತಡಿಗೆ ತಡವಾಯ್ತು ನೃಪರೈತಂದರೊಗ್ಗಿನಲಿ ॥ ೭೧

ಮುಂದೆಯಾದನು ಪಾರ್ಥನಾತನ
ಹಿಂದೆ ಭೂಪತಿ ಧರ್ಮಪುತ್ರನ
ಹಿಂದೆ ಮಾದ್ರೀತನಯರನಿಬರ ಹಿಂದೆ ಪಾಂಚಾಲಿ ।
ಹಿಂದೆ ಕುಂತೀದೇವಿ ಯಾಕೆಯ
ಹಿಂದಣಾತನು ಭೀಮನೆಂದಾ
ಮಂದಿ ತೋರಿದುದೊಬ್ಬರೊಬ್ಬರಿಗಿವರನೀಕ್ಷಿಸುತ ॥ ೭೦

ಪಾಂಡವರ ವಿಷಯದಲ್ಲಿ ಜನಗಳಿರುವ ಅಭಿಪ್ರಾಯ.

ಹರನ ಜೋಡು ಮುರಾಂತಕನ ಸರಿ
ದೊರೆ ವಿರಿಂಚನ ಪಾಡು ಶಕ್ರನ
ಸರಿಸದವರಿಗೆ ಭಂಗ ವೀವಿಧಿ ಯಿೂವಿಪತ್ತುಗಳ ।
ಸುರರು ಕೊಂಡಾಡುವರು ಮಿಕ್ಕಿನ
ನೊರಜುಗಳ ಪಾಡೇನು ಶಿವ ಶಿವ
ಕರುಣಿಯಲ್ಲ ವಿಧಾತ್ರನೆಂದುದು ಕೂಡೆ ಜನನಿಕರ ॥ ೭೧

ಇವರ ಹವಣೇ ಮುನ್ನ ರಘುಸಂ
ಭವನು ರಾಜ್ಯವ ಬಿಸುಟು ಹೋಗನೆ
ಯವರಿಗೆಲ್ಲಂ ಮುನ್ನ ನಳ ಪುಷ್ಕರನ ಬಾಧೆಯಲಿ ।
ಅಡವಿಯನೆ ಬಿಸುಟಡವಿಗೈದನೆ
ಭುವನಪತಿಗಳು ಮುಂದೆ ರಿಪುಗಳ
ನವಗಡಿಸಿ ಸಾಮ್ರಾಜ್ಯವಾಳರೆ ಯೆಂದುದಖಿಳಜನ ॥ ೭೮

ಈ ವಿಕಾರವನೈದೆ ಮಾಳ್ಪನು
ದೇವಕಿಯ ಸುತನಿಲ್ಲಿ ಭುವನವ
ತೀವಿದಾಭಾರವನು ಕಳೆಯಲು ಕಷ್ಟಜೀವಿಗಳ ।
ಓವಿ ಕೊಲಿಸುವ ಭರದಿ ಪಾಂಡವ
ರ್ಗೀವಿಧಿಯ ಮಾಡಿವರ ಕೈಯಿಂ
ದೇವಕೀಸುತ ಕೌರವರ ಕೊಲಿಸುವನೆಂದುದಖಿಳಜನ ॥ ೭೩

ಅಭಿಮನ್ಯು ಮೊದಲಾದವರಿಗೆ ಪಾಂಡವರ ದರ್ಶನ.

ಕೇಳಿದಭಿಮನ್ಯುಪ್ರಮುಖಭೂ
ಪಾಲತನುಜರು ಸಚಿವರಾಪ್ತರು
ಪಾಳೆಯದ ತಲ್ಲಣದ ಜೋಡಿಯ ಜನಮನೋವ್ಯಥೆಯ |
ಹೇಳಲರಿಯೆನು ಬಂದುಕಂಡರು
ಘೋಳಿಡುತ ಪದಕೆಳಗಿದರು ನೃಪ
ನಾಳಿ ನೀರೇರಿದುವು ನನೆದನು ನಯನವಾರಿಯಲಿ || ೨೬

ಸಮಸ್ತೈಶ್ವರ್ಯವನ್ನು ಕೌರವರಿಗೆ ಒಪ್ಪಿಸಿದುದು.

ಕರೆಸಿದನು ಪರಿವಾರವನು ನಿಮ
ಗರಸು ಕೌರವ ನಮ್ಮ ಗಜರಥ
ತುರಗಕೊಟ್ಟಿಗೆ ಭಂಡಿಗುಡಿಕೋಟಾರಕೊಪ್ಪರಿಗೆ |
ಸರಕು ಸರ್ವಸ್ವಗಳು ಕೌರವ
ನರಮನೆಗೆ ನಡೆಯಲಿ ವನಾಂತದ
ಲಿರವು ನಮಗಿನ್ನೆಂದು ನುಡಿದನು ಸಚಿವರಿಗೆ ಸಹದೇವ || ೨೭

ಕರಿಗಳನು ಕೌರವನ ಮಾವಂ
ತರಿಗೆ ಕೈಗೊಳಿಸಿದರು ರಥಚಯ
ತುರಗತತಿ ಕೈವರ್ತಿಸಿತು ಸೂತರಿಗೆ ಗೋಪರಿಗೆ |
ಸರಕನವನಿಪನನುಚರರಿಗು
ತ್ತರಿಸಿದರು ರಥಿಕಾಳಿಮಾವಂ
ತರು ಸುಭಟರಳವಡಿಸಿ ಕೊಂಡರು ಕಾನನೋಚಿತವ || ೨೮

ಹರಿದರಿಂದ್ರಪಸ್ಥಕರಸನ
ಚರರು ಸಚಿವರು ಪೊಕ್ಕು ಪಾಂಡ
ವರರಮನೆಯ ಮುದ್ರಿಸಿದರಲ್ಲಿಯ ನಾಡುಬೀಡುಗಳ |
ಕರೆಸಿ ಕಾಣಿಕೆ ಕೊಂಡು ನಾನಾಂ
ತರದ ನಾಯಕವಾಡಿಗಳ ಸಂ
ವರಣೆಗಳ ಸಂತೈಸಿದರು ಕುರುರಾಜಮುದ್ರೆಯಲಿ || ೨೯

ಅರಸ ಕೇಳಾಶ್ಚರ್ಯವನು ಗಜ
ಪುರದ ಬೀದಿಯೊಳವರು ಬರುತಿರೆ
ದುರುಳನಾದುಶ್ಶಾಸನನು ಹರಿತಂದನೇಡಿಸುತ ।
ಬೆರಳನಾಡಿಸಿ ಹೋದರೀಹೋ
ದರಸು ಕಾನನದೆತ್ತು ಪುನರಪಿ
ಸರಿದುವೆತ್ತುಗಳೆನುತ ಬಂದನು ಹಿಂದೆ ಪವನಜನ ॥ ೮೦

ತಿರುಗಿ ಕಂಡನು ಭೀಮನುಬ್ಬಿದ
ಹರುಷಹೃದಯನನಧಿಕರೋಷದ
ಲುರುವಣಿಸಿ ನೋಡಿದನು ಭೂಪತಿ ಮೊಗದ ಸನ್ನೆಯಲಿ ।
ತಿರುಹಿದನು ತಮ್ಮನನು ಮಾರುತಿ
ತಿರುಹಿ ಹಾಯ್ಕೀ ಹಿಡಿದ ಗದೆಯನು
ಯುರಸಸಂಜ್ಞೆಯೊಳಂಜಿ ನಡೆದನು ಭೂಪ ಕೇಳೆಂದ ॥ ೮೧

ಪುರವ ಹೊಱವಂಟವರು ಗಂಗಾ
ವರನದಿಯ ತೀರದಲಿ ನಿಂದರು
ಪರಿಜನವ ಕಳುಹಿದರು ಧೃತರಾಷ್ಟ್ರನ ಪಸಾಯುತರ ।
ಗುರುಜನಕೆ ಪೊಡವಟ್ಟು ಬೀಳ್ಕೊಂ
ಡರು ನದೀಜದ್ರೋಣಕೃಪರನು
ಕರೆದು ಕುಂತಿಯ ನಿಲಿಸಿದರು ವಿದುರನ ನಿವಾಸದಲಿ ॥ ೮೨

ಇರವು ಹನ್ನೆರಡಬುದ ವನದೊಳು
ಶರಭಭೇರುಂಡಾದಿದನುಜೋ
ತ್ಕರರ ಬಾಧೆಯನಂತಕರಿಸುವ ನಮ್ಮ ಬುದ್ಧಿಗಳ ।
ಪರುಠವಣೆ ತಾನಿಲ್ಲಿಗಹುದೈ
ಹರಿಯ ಕರುಣವದುಂಟು ನಿನಗೆಂ
ದರಸನನು ಹರಸಿದರು ಗುರುಭೀಷ್ಮಾದಿಸಜ್ಜನರು ॥ ೮೩

ಧೃತರಾಷ್ಟ್ರನು ಪಾಂಡವರ ಸ್ಥಿತಿಯನ್ನು ವಿದುರನನ್ನು ಕೇಳಿದುದು.

ಕಳುಹಿ ಮರಳಿಯೆ ವಿದುರನೃಪತಿಯು
ನಿಳಯಕೈತಂದನು ಕುಮಾರರ
ಕಳುಹಿ ಬಂದ್ಯೆ ತಮ್ಮ ಮತವೇನ್ಯೆ ಯುಧಿಷ್ಠಿರನ ।
ಉಚಿದವರ ಹದನೇನು ದ್ರೌಪದಿ
ಲಲನೆಯೇನೆಂದಳು ನಿಧಾನವೆ
ತಿಳಿದು ಬಂದ್ಯೆ ಹೇಳೆನುತ ಧೃತರಾಷ್ಟ್ರ ಬೆಸಗೊಂಡ ॥　　೮೪

ಮುನಿಪ ಜಪಿಸುತ ನಡೆದನಗ್ನಿಯು
ವಿನುತಸೂಕ್ತವನೆತ್ತುಗೈದು ವಿ
ನನಿಲಜನು ದುಗುಡವಲಿ ಫಲುಗುಣಯಮಳರೊಂದಾಗಿ ।
ವನಿತೆಯನು ನಡುವಿಟ್ಟು ಹೋಖವೆಂಟರು
ಯುಧಿಷ್ಠಿರನೃಪತಿ ನಿಯತದಿ
ನೆನಯುತಿದ್ದನು ವೀರನಾರಾಯಣನ ಪದಯುಗವ ॥　　೮೫

ಹದಿನೇಳನೆಯ ಸಂಧಿ ಮುಗಿದುದು.

ಇತಿ ಶ್ರೀಮದಚಿನ್ತ್ಯ ಮಹಿಮ ಗದುಗು ವೀರನಾರಾಯಣ ಚರಣಾರ
ವಿಂದ ಮಕರಂದ ಮಧುಪಾನ ಪುಷ್ಟಪಚಷ್ಟಪ್ರದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ
ಕರ್ಣಾಟ ಭಾರತಕಥಾಮಂಜರಿಯೊಳ್
ಸಭಾಪರ್ವಂ ಮುಗಿದುದು.

# ಶೋಧನ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 8 | 7 | ನಿಶ್ಚ | ನೀಶ್ವ |
| 11 | 6 | ಖೂಳ | ಖೂಳಂ |
| 13 | 20 | ನ್ನರ | ನ್ನಿರ |
| 29 | 19 | ಕಿನ | ಕ್ಕಿನ |
| 30 | 7 | ದ್ವಂದ | ದುಂದಃ |
| 35 | 23 | ಸ | ಸೆ |
| 43 | 11 | ಪ್ರೊ | ಪ್ರೋ |
| 76 | 21 | ಷಿ | ಷ್ಟಿ |
| 79 | 29 | ಸಿನೀ | ಸಿನಿ |
| 88 | 4 | ರಪ | ರಪಃ |
| 106 | 25 | ಡಿನು | ಡಿವಸ |
| 110 | 25 | ಲಾಯದು | ಲಾವದು |
| 112 | 12 | ನಚಿ | ನಪ್ಪಿ |
| 128 | 1 | ಗನ್ನು | ಸನ್ನು |
| 130 | 16 | ಎನಲು | ಎನೆ |
| ,, | 17 | ಮುಖ್ಯ | ಮುಖ್ಯಪ್ರ |
| 139 | 19 | ಪಗು | ವಾಗು |
| 147 | 17 | ಭೀಷ | ಭೀಷ್ಮ |
| 152 | 1 | ಕೃಷ | ಕೃಷ್ಣ |
| ,, | ,, | ಕೆ | ಕೆ |
| 190 | 21 | ಕೃಷ | ಕೃಷ್ಣ |
| 197 | 13 | ಸತ್ತ | ಮುನ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 223 | 23 | ಯ್ದ್ದನು | ಯಿಂದೆನು |
| 239 | 22 | ವೆಂತರಿ | ತರಿ |
| 245 | 1 | ದುರ್ಯೋ | ದುರ್ಯೋಧ |
| 247 | 11 | ಸೈಂಧಿ | ಸೈಂಧ |
| 258 | 12 | ಒಣ್ಣ | ಖಣ್ಣ |
| 268 | 10 | ಳವ್ಮೊ | ಳವ್ಮ್ರೊ |
| 274 | 10 | ವರ | ವರ್ಗ |
| 285 | 7 | ರಾಜ | ಪರಾಜ |
| 293 | 15 | ಹೋದ | ಹೋದಧಿ |
| 295 | 23 | ಕೃಷ | ಕೃಷ್ಣ |

Government Oriental Library Series

EDITED BY PANDITS UNDER THE SUPERVISION OF THE CURATOR, GOVERNMENT ORIENTAL LIBRARY, MYSORE

Kannada Section No. VII

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

೪ನೆಯ ಸಂಪುಟ

## ಅರಣ್ಯಪರ್ವ

THE

# KARNATAKA MAHABHARATA

BY

KUMARAVYASA MAHAKAVI

## Volume IV

## ARANYA PARVA

EDITED BY

V. SYAMACHARYA

*Pandit, Government Oriental Library, Mysore*

Published under the authority of the Government of His Highness the Maharaja of Mysore

MYSORE:

PRINTED AT THE GOVERNMENT BRANCH PRESS

1918

# ಅವತರಣಿಕೆ.

ಈ ಪುಸ್ತಕವು ಕರ್ಣಾಟಕ ಮಹಾಭಾರತದ ನಾಲ್ಕನೆಯ ಸಂಚಿಕೆಯಾಗಿರುವುದು. ಈ ಗ್ರಂಥಕರ್ತನಾದ ಕುಮಾರವ್ಯಾಸನ ವಿಷಯದಲ್ಲಿ ಮತ್ತು ಆತನ ಭಾಷೆಯ ವಿಷಯದಲ್ಲಿಯೂ ಆವಶ್ಯಕವಾಗಿ ಬರೆಯಬೇಕಾದ ವಿಷಯಗಳೆಲ್ಲಾ (ಕನ್ನಡ ಸೆಕ್‌ಷನ್ 3—4ನೆಯವುಗಳಾದ) ಉಪೋದ್ಘಾತ ಸಂಚಿಕೆ ಮತ್ತು ಸಂಭವಪರ್ವ ಇವುಗಳ ಅವತರಣಿಕೆಯಲ್ಲಿ ಪ್ರಾಯಿಕವಾಗಿ ಹೇಳಲ್ಪಟ್ಟಿವೆ, ಆದುದರಿಂದ ಈ ಪುಸ್ತಕದಲ್ಲಿ ಅಡಗಿರುವ ಗ್ರಂಥಕ್ಕೆ ಸಂಬಂಧಿಸಿದ ವಿಶೇಷವಿಷಯಗಳನ್ನು ಮಾತ್ರ ಬರೆವುದು ಈಗ ಆವಶ್ಯಕವಾಗಿದೆ.

ಈ ಪುಸ್ತಕದಲ್ಲಿ ಆರಣ್ಯಕಪರ್ವ 1, ಕಿಮ್ಮೀರವಧಪರ್ವ 2, ಅರ್ಜುನಾಭಿಗಮನಪರ್ವ 3, ಕೈರಾತಪರ್ವ 4, ಇಂದ್ರಲೋಕಾಭಿಗಮನಪರ್ವ 5, ತೀರ್ಥಯಾತ್ರಾಪರ್ವ 6, ಜಟಾಸುರವಧಪರ್ವ 7, ನಿವಾತಕವಚಯುದ್ಧಪರ್ವ 8, ಆಜಗರಪರ್ವ 9, ಮಾರ್ಕಂಡೇಯಸಮಾಖ್ಯಾಪರ್ವ 10, ದ್ರೌಪದೀಸತ್ಯಭಾಮಾಸಂವಾದಪರ್ವ 11, ಘೋಷಯಾತ್ರಾಪರ್ವ 12, ಕುಂಡಲಾಹರಣಪರ್ವ 13, ದ್ರೌಪದೀಹರಣಪರ್ವ 14, ಆರಣೇಯಪರ್ವ 15, ಎಂದು ಹದಿನೈದುಪರ್ವಗಳು ಅಡಗಿವೆ.

ಈ ಅರಣ್ಯಪರ್ವದಲ್ಲಿ ಚ. ಡ. ಛ. ಗುರ್ತುಗಳುಳ್ಳ ಪುಸ್ತಕಗಳಲ್ಲಿ 3—4 17·23·25 ಈ ಸಂಧಿಗಳು ಇರುವುದಿಲ್ಲ. ಆದರೂ ಖ. ಝ. ಗ, ಗುರ್ತುಗಳುಳ್ಳ ಪುಸ್ತಕಗಳಲ್ಲಿ ಮೇಲೆ ಕಂಡ ಸಂಧಿಗಳು ಕಂಡು ಬಂದುದರಿಂದ ಅವುಗಳು ಉಪೇಕ್ಷೆಗೆ ಅರ್ಹವಲ್ಲವೆಂದು ಭಾವಿಸಿ ಈ ಪುಸ್ತಕದಲ್ಲಿ ಮುದ್ರಿಸಲ್ಪಟ್ಟವು.

ಈ ಗ್ರಂಥಕಾರನ ವಿಷಯದಲ್ಲಿ ಹೇಳಬೇಕಾದ ವಿಷಯಗಳು ಪ್ರಾಯಿಕವಾಗಿ 1ನೆಯ ಸಂಚಿಕೆಯ ಅವತರಣಿಕೆಯಲ್ಲಿ ನಿರೂಪಿಸಲ್ಪ

ಟ್ಟಿವೆ. ಆದರೆ ಅರಣ್ಯಪರ್ವದ 7ನೆಯ ಸಂಧಿಯಲ್ಲಿ ಕೆಲವು ಪದ್ಯ ಗಳನ್ನು ಸಾವಧಾನವಾಗಿ ಪರಾಮರ್ಶಿಸಿದರೆ, ಈ ಕವಿಯನ್ನು ಶಿವಭಕ್ತ ನಾದ ಅದ್ವೈತಿ ಎಂದು ನಿರ್ಧರಿಸಬಹುದೆಂಬ ಕೆಲವರ ಅಭಿಪ್ರಾಯ ವನ್ನು ಅರಣ್ಯಪರ್ವದಲ್ಲಿಯೇ ವಿಚಾರಮಾಡುವುವೆಂದು ಹೇಳಿದ್ದೆವಷ್ಟೆ ಆಪ್ರಕಾರ ಸ್ವಲ್ಪ ವಿಚಾರವು ಮಾಡಲ್ಪಡುತ್ತದೆ. ಈ ಗ್ರಂಥಕರ್ತನು ಶಿವ ಭಕ್ತನಾದ ಅದ್ವೈತಿಯೆಂದು ಹೇಳುವುದಕ್ಕೆ ಅನುಕೂಲವಾಗಿ ತೋರುವ 7ನೆ ಸಂಧಿಯಲ್ಲಿರುವ ಪದ್ಯಗಳು.

"ಆವನನು ಜೀವಾತ್ಮಚೈತ
ನ್ಯಾವಲಂಬನದಲ್ಲಿ ಈಶ್ವರ
ನಾವನೀತನೊಳಮಗೆ ತೋಟಿಯೆ ಶಿವ ಶಿವಾ ಯೆಂದ ॥ ೭—೫೫

"ಲೋಕರಚನಾ ರಕ್ಷೆ ಸಂಪ್ರತಿ
ವ್ಯಾಕರಣೆ ತಾನಾರಧೀಜಗ
ದೇಕದೈವದ ಕೂಡೆ ತೋಟಿಯೆ ಶಿವ ಶಿವಾ ಯೆಂದ ॥ ೭—೫೬

"ಅವನೊಬ್ಬನಣೋರಣೀಯನ
ದಾವನುರುಮಹತೋಮಹೀಯನ
ದಾವ ನುರುಂತರ ॥ ೭—೬೩

"ಸರಸಿಜಾಸನ ವಿಷ್ಣು ರುದ್ರೇ
ಶ್ವರಸದಾಶಿವರಾವಳೊಬ್ಬಳ
ಚರಣಸೇವಾಸಂಗದಲ್ಲಿಯೆ ಸುಪ್ರತಿಷ್ಟಿತರು ।
ಪರಮ ಶಕ್ತಿಯದಾವನಂಘ್ರಿಗೆ
ಶಿರವನೊಡ್ಡುವಳಾ ಪರಾತ್ಪರ
ಪರಮಶಿವನಲಿ ಸೆಣಸಿದೆವಲಾ ಶಿವ ಶಿವಾ ಯೆಂದ" ೭—೬೬

ಇವೇ ಮೊದಲಾದ ಪದ್ಯಗಳು ಅರ್ಜುನನು ಕಿರಾತರೂಪಿಯಾದ ಶಿವನೊಡನೆ ಯುದ್ಧವನ್ನು ಮಾಡಿ ಆ ಕಿರಾತನು ಶಿವನೆಂದು ವ್ಯಕ್ತವಾ

ಗಲು ತಾನು ಮಾಡಿದ ಕಾರ್ಯವು ಅನುಚಿತವೆಂದು ಚಿಂತಿಸುವ ರೀತಿ ಯನ್ನು ಹೇಳುತ್ತವೆ. ಈ ಸಂದರ್ಭವನ್ನು ಚನ್ನಾಗಿ ಬುದ್ಧಿವಂತರು ಪರಿಭಾವಿಸಿದರೆ ಈ ಪದ್ಯಗಳು ಮೇಲೆ ಹೇಳಿದ ಅಭಿಪ್ರಾಯಕ್ಕೆ ಸಾಧಕ ವೆಂದು ಹೇಳಲವಕಾಶವಿರುವುದಿಲ್ಲ.

ಹೇಗೆಂದರೆ—ಈ ಶ್ಲೋಕಗಳು ಅರ್ಜುನನು ಚಿಂತಿಸಿದ ರೀತಿ ಯನ್ನು ತಿಳಿಸುತ್ತವೆಯೇ ಹೊರತು ಗ್ರಂಥಕಾರನ ಮತವನ್ನು ತಿಳಿಸು ವುವಲ್ಲ. ಅರ್ಜುನನು ಮಹಾಜ್ಞಾನಿಯೆಂದು ಸರ್ವಸಮ್ಮತನಾದುದರಿಂದ ಅರ್ಜುನನ ಮತವು ದ್ವೈತಾ ದ್ವೈತಾದಿಮತಗಳಲ್ಲಿ ಒಂದೆಂದು ನಿಶ್ಚಯಿ ಸುವುದು ಶಕ್ಯವಲ್ಲ. ಈ ಪ್ರಕರಣದಲ್ಲಿ ಅರ್ಜುನನು ಶಿವಭಕ್ತಿಯನ್ನು ತೋರಿಸಿದಂತೆ ಸ್ಥಳಾಂತರಗಳಲ್ಲಿ ವಿಷ್ಣುಭಕ್ತಿಯನ್ನು ಇನ್ನು ಹೆಚ್ಚಾಗಿ ವ್ಯಕ್ತಪಡಿಸಿದಂತೆ ಪ್ರತಿಪಾದಿಸುವ ವಚನಗಳು ದೊರೆಯುತ್ತವೆ. ಅರ್ಜುನನ ಮತವು ಯಾವುದಾದರೂ ಆಗಲಿ ಕವಿಯ ಮತವು ಅರ್ಜುನನ ಮತವೇ ಯೆಂದು ಹೇಳುವುದಕ್ಕೆ ಸಾಧಕವೇ ಇಲ್ಲವಾದುದ ರಿಂದ, ಈ ವಚನಗಳಿಂದ ಕವಿಯ ಮತದ ನಿಶ್ಚಯವಾಗುವುದಿಲ್ಲ. ಮತ್ತು ಅರ್ಜುನನು ಶ್ರೀಕೃಷ್ಣ ಪ್ರೇರಣಾನುಸಾರವಾಗಿ ಪಾಶುಪತಾಸ್ತ್ರ ವನ್ನು ಸಂಪಾದಿಸಲು ಶಿವಸನ್ನಿಧಿಗೆ ಬಂದು ಶಿವಾರ್ಚನೆಯನ್ನು ಮಾಡಿ ದಾಗ ಈ ಸಂಭವವು ಉಂಟಾಯಿತಲ್ಲವೆ ? ಫಲಕಾಮನೆಯಿಂದ ಆರಾಧ ನೆಯನ್ನು ಮಾಡತಕ್ಕವನು ತನ್ನಿಂದ ಆರಾಧಿಸಲ್ಪಡುವ ದೇವತೆಗೆ ಸಂತೋಷಕರವಾದ ಧ್ಯಾನಸ್ತುತಿಮೊದಲಾದುದನ್ನು ಮಾಡುವುದು ಸಹ ಜವಲ್ಲವೆ ? ಆದರೆ ಅದ್ವೈತಮತಪ್ರಕಾರವಾಗಿ ಧ್ಯಾನಕಾಲದಲ್ಲಿ ತೋರುವ ಧರ್ಮಗಳೆಲ್ಲವೂ ಆರೋಪಿತವಾದುದರಿಂದ ಶಿವನಲ್ಲಿ ಸರ್ವೋ ತ್ತಮತ್ವಾದಿಗಳನ್ನು ಫಲಾರ್ಥವಾಗಿ ಆರೋಪಿಸಿ ಅರ್ಜುನನು ಉಪಾಸಿ ಸಿದನೆಂದು ಹೇಳಬಹುದಾಗಿದೆ. ಆದುದರಿಂದ ಈ ಪದ್ಯಗಳು ತತ್ತ್ವ ವನ್ನು ತಿಳಿಸುವುವಲ್ಲ ಅಲ್ಲದೆ ಅರ್ಜುನನು ಮತ್ತು ಇತರಪಾಂಡ ವರು ಸರ್ವದಾ ಶ್ರೀಕೃಷ್ಣನನ್ನೇ ಪರದೇವತೆಯೆಂದು ನಂಬಿದವರೆಂಬುದು ಇದೇ ಗ್ರಂಥದಲ್ಲಿ ಅನೇಕ ಭಾಗಗಳಲ್ಲಿಯೂ ಮತ್ತು ಭಗವದ್ಗೀತೆಯ ಲ್ಲಿಯೂ ಅತ್ಯಂತ ಸ್ಪಷ್ಟವಾಗಿರುತ್ತದೆ.

ಇದರಿಂದ ಶಿವಸರ್ವೋತ್ತಮತ್ವವು ಅರ್ಜುನನ ಮತವೇ ಅಲ್ಲದಾ ಗಿರುವಾಗ ಅರ್ಜುನನ ಧ್ಯಾನಪ್ರಕಾರವನ್ನು ಅನುವದಿಸುವ ಗ್ರಂಥ ಕಾರನು ಆಮತದವನೆಂದು ಹೇಳುವುದು ಸಕಾರಣವಾಗಿರುವುದಿಲ್ಲ.

ಹೀಗೆಯೇ ಶಿವನನ್ನು ಸಮೀಪಿಸಿದಾಗ ಅರ್ಜುನನ ಅಪರಾಧ ಕ್ಷಮಾಪನಪೂರ್ವಕವಾದ ಶಿವಸ್ತುತಿವಾಕ್ಯಗಳು ಕೂಡ ಗ್ರಂಥಕಾರನ ಮತವನ್ನು ತಿಳಿಸುವುದಕ್ಕೆ ಅನುಕೂಲವಲ್ಲ ವಾಸ್ತವವಾಗಿ ಮೂಲಭಾರ ತದಲ್ಲಿ ಈ ಪ್ರಕರಣದಲ್ಲಿ ಕಂಡು ಬರುವ ಕೆಲವು ಶ್ಲೋಕಗಳ ಅಭಿಪ್ರಾ ಯವನ್ನು ತಿಳಿಸುವ ವಾಕ್ಯಗಳು ಕರ್ಣಾಟಕ ಭಾರತದಲ್ಲಿ ಈಪ್ರಕರಣ ದಲ್ಲಿ ಕಂಡುಬರುವುದಿಲ್ಲ. ಕೆಲವು ಅಭಿಪ್ರಾಯುಗಳಿಗೆ ಸಂವಾದಿಯಾದ ವಾಕ್ಯಗಳು ಕಂಡುಬಂದರೂ ಆ ವಾಕ್ಯಗಳು ಸರ್ವಮತದವರೂ ತಮ್ಮ ತಮ್ಮ ಮತಾನುಸಾರವಾಗಿ ಹೊಂದಿಕೆಮಾಡಿಕೊಳ್ಳಲು ತಕ್ಕು ವಾಗಿವೆ. ಆದುದರಿಂದ ಇಲ್ಲಿರುವ ವಾಕ್ಯಗಳು ಕೂಡ ಮೂಲಭಾರ ತದಲ್ಲಿರುವ ವಾಕ್ಯಗಳಂತೆ ಸರ್ವಮತಗಳಿಗೂ ಅನುಕೂಲವಾಗತಕ್ಕವು ಗಳಾಗಿವೆ. ಮೂಲಭಾರತದಲ್ಲಿಲ್ಲದ ಅಭಿಪ್ರಾಯುಗಳನ್ನು ತಿಳಿಸುವ ವಾಕ್ಯ ಗಳು ಮತಾಭಿಮಾನಿಗಳಿಂದ ಸೇರಿಸಲ್ಪಟ್ಟವೆಂದಾಗಲಿ ಇತರ ಮತಗಳಿಗ ನುಕೂಲವಾದ ವಾಕ್ಯಗಳು ಗ್ರಂಥದಿಂದ ತೆಗೆದು ಹಾಕಲ್ಪಟ್ಟವೆಯೆಂ ದಾಗಲಿ ಹೇಳಬಹುದಾಗಿದೆ. ಆದುದರಿಂದ ಇಷ್ಟುಮಾತ್ರದಿಂದೇ ಗ್ರಂಥ ಕಾರನ ಮತನಿರ್ಣಯುವು ಆಗುವುದಿಲ್ಲ.

ಅಲ್ಲದೆ ಮೊದಲನೆಯು ಸಂಪುಟದ ಅವತರಣಿಕೆಯುಲ್ಲಿ ಗ್ರಂಥ ಕಾರನು ಇಂತಹ ಮತದವನೆಂಬುದನ್ನು ನಿರ್ಣಯಿಸುವುದಕ್ಕೆ ಸಾಧಕ ಗಳೆಂದು ನಾವು ತೋರಿಸಿರುವ ಆದ್ಯಂತಗಳಲ್ಲಿ ವೀರನಾರಾಯಣನಾ ಮಾಂಕನಾದಿಗಳೇ ಸಾಧಕಗಳೆಂದು ತಿಳಿವುದುಚಿತವೆಂದು ಹೇಳಬಹು ದಾಗಿದೆ.

ಇದೇ ವಿಷಯದಲ್ಲಿ ಅದ್ವೈತಮತದ ತತ್ವವನ್ನು ಅರಿತು ವಿಚಾರ ಮಾಡಿದರೆ ಆ ಮತದ ಪ್ರಕಾರ ಶೈವವೈಷ್ಣವ ವಿಭಾಗವು ಅನಾವಶ್ಯಕ

ಮೆಂಬುವು ಮೊದಲಾದುವನ್ನು ಅಮತ ರಹಸ್ಯವ್ಯಕ್ತಿ ಪೂರ್ವಕವಾಗಿ ತಿಳಿಸಿದರೆ ಸರ್ವಜನರಿಗೂ ಗ್ರಾಹ್ಯವಾಗಲಾರದೆಂದು ಸಂಕ್ಷೇಪಿಸಲ್ಪಟ್ಟಿದೆ.

ಇದರ ಶೋಧನಕ್ಕಾಗಿ ಉಪಯೋಗಿಸಿರುವ ಪುಸ್ತಕಗಳ ವಿವರಣೆ.

| ಗುರ್ತು | ಗ॥ ಓ॥ | ಲೈಬ್ರರಿ ನಂಬರು | ವಿಶೇಷ. |
|---|---|---|---|
| ಕ. | ನಂ॥ | 70 | ಸಮಗ್ರ. |
| ಖ | ,, | ,, | ಸಮಗ್ರ ಕೌರ್ಪ್ರಸ್ ಪ್ರೊಪ್ರೈಟರಾದ ಮ॥ ಮಾದಪ್ಪನವರಿಂದ ಬಂದದ್ದು. |
| ಗ | ,, | 251 | ಸಮಗ್ರ. |
| ಘ | ,, | 57 | ಅಸಮಗ್ರ. |
| ಜ | ,, | 2 | ಸಮಗ್ರ. |
| ಝ | ,, | 266 | ಅಸಮಗ್ರ. |
| ಟ | ,, | 205 | ಸಮಗ್ರ. |
| ಡ | ,, | 227 | ಸಮಗ್ರ. |

ಮೇಲೆ ತೋರಿಸಿದ ಪುಸ್ತಕಗಳೊಳಗೆ ಅನೇಕ ಪುಸ್ತಕಗಳಲ್ಲಿ ಕಂಡು ಅತ್ಯಂತಸಂಗತವಾಗಿರುವುದನ್ನು ಪುಸ್ತಕಮಧ್ಯದಲ್ಲಿ ಸೇರಿಸಿ ಉಳಿದ ಏನೋ ಒಂದು ರೀತಿಯಾಗಿ ಹೊಂದಿಸಿಕೊಳ್ಳಬಹುದಾದ ಪುಸ್ತಕಾಂತರ ಪಾಠಗಳನ್ನು ಆಯಾ ಪುಟದ ಕೆಳಗಡೆ ಆಯಾ ಪುಸ್ತಕದ ಗುರ್ತಿನೊಡನೆ ತೋರಿಸಿದೆ. ಪ್ರಾಯಿಕವಾಗಿ ನಿರ್ಮೂಲವಾಗಿಯೂ ಅನಾವಶ್ಯಕವಾಗಿಯೂ ಯಾವ ಶೋಧನೆಯೂ ಮಾಡಲ್ಪಟ್ಟಿರುವುದಿಲ್ಲ. ಇದರ ಮೇಲೂ ಪ್ರಾಮಾದಿಕ ದೋಷಗಳೇನಾದರೂ ಇದ್ದರೆ ಗುಣಜ್ಞರು ಕ್ಷಮಿಸುವುದಕ್ಕೆ ಯೋಗ್ಯವಾಗಿರುವುದರಿಂದ ಗುಣಗ್ರಾಹಿಗಳು ಅಭಿಜ್ಞರೂ ಆದವರೆಲ್ಲರೂ ಸಂತೋಷಿಸುವರೆಂದು ನಂಬಿದೆ.

# ಶೋಧನ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 2 | 19 | ಧರ | ಧಾರ |
| 4 | 10 | ಬಟೆ | ಬಟಿ |
| 14 | 18 | ನಿಷ | ನಿಷ್ಟ |
| 15 | 19 | ವ್ಯೃ | ವ್ಯೈ |
| 16 | 9 | ವ | ವೇ |
| 48 | 24 | ಗ್ರಾವೋ | ಗಾವೋ |
| 50 | 18 | ಚೌ್ರ | ಜೌ್ರ |
| 52 | 24 | ಲವೆ | ಲವ |
| 53 | 16 | ಮಿಂಗೆತ | ಿಂಗೆ |
| ,, | 17 | ದ್ಧಾ | ಧಾ |
| 56 | 15 | ವರ್ತಿ | ವತಿ |
| 67 | 9 | ಕರಣಾ | ಕರುಣಾ |
| 70 | 4 | ತಿಂಳ | ತಿಂಗಳ |
| 70 | 16 | ಭ್ರಮುಸು | ಭ್ರಮಿಸು |
| 70 | 23 | ಕವು | ಕ್ರವು |
| 142 | 6 | ಕೇಳ | ಖೇಳ |
| 143 | 12 | ಬಾಲ | ಬಾಲಿ |
| 146 | 10 | ದೇವಿ | ದೇವ |
| 153 | 7 | ನಲೆದೊ | ನಲೆದ |
| 158 | 24 | ಖುತ | ಖುತು |
| 169 | 1 | ಭೀವ | ಭೀವು |
| 180 | 13 | ಹೊಗ | ಹೋಗ |
| 180 | 13 | ಭೀನು | ಭೀವು |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 211 | 13 | ರತ | ತರ |
| 214 | 24 | ಸಕಂ | ಸಕ್ಕಂ |
| 224 | 13 | ತೆಯಾರು | ತಯಾರು |
| 225 | 7 | ನಿಂದ್ಯದ | ನಿಂದ್ಯರ |
| 261 | 5 | ತುಷ್ಟ | ತುಷ್ಟಿ |
| 284 | 15 | ಹಾಯು | ಹಾಯ್ದು |
| 286 | 20 | ಮುದುದೇ | ಮುಱಿದುದೇ |
| 315 | 14 | ಗಿದ | ಗಿದು |
| 328 | 21 | ಗಳು | ಗಳ |
| 364 | 9 | ವಿವಲ | ವಿಮಲ |

## ವಿಷಯಸೂಚಿಕೆ.

ವಿಷಯ | ಪುಟ

೧ನೆಯ ಸಂಧಿ—

## ೪ನೆಯ ಸಂಧಿ—

೫ನೆಯ ಸಂಧಿ—

| ವಿಷಯ | | | ಪುಟ |
|---|---|---|---|



ನೆಯ ಸಂಧಿ—

ವಿಷಯ | ಪುಟ

೯ನೆಯ ಸಂಧಿ—



೧೦ನೆಯ ಸಂಧಿ—

ವಿಷಯ ಪುಟ

೨೮ನೆಯ ಸಂಧಿ--

ನೆಯ ಸಂಧಿ—

ಎ೦ನೆಯ ಸಂಧಿ—

ಎಳನೆಯು ಸಂಧಿ —

೨೬ನೆಯ ಸಂಧಿ—

| ವಿಷಯ | ಪುಟ |
| --- | --- |

ಶ್ರೀ

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

# ಅರಣ್ಯಪರ್ವ

## ಚತುರ್ಥ ಸಂಪುಟ

## ಒಂದನೆಯ ಸಂಧಿ

ಸೂಚನೆ.

ಸಕಲರಾಜ್ಯವನುಳಿದವರು ಕಾ
ಮ್ಯಕಮಹಾಕಾನನಕೆ ಬಂದುಳಿ[1]
ಬಕ[2] ಕುಲಾಂತಕ ಕೆಡಹಿದನು ಕಿಮ್ಮೀರದಾನವನ ॥

ಪಾಂಡವರು ಗಂಗೆಯನ್ನು ದಾಟಿ ಉತ್ತರ ತೀರದಲ್ಲಿ ಇರುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಗಂಗಾತೀರದಲಿ ಭೂ
ಪಾಲಕರು ಗುರುಭೀಷ್ಮವಿದುರಾದ್ಯಖಿಳಬಾಂಧವರ ।
ಬೀಳುಕೊಟ್ಟರು ಗಜಪುರದ ಜನ
ಜಾಲವನು ಕಳುಹಿದರು ಗಂಗಾ
ಕೂಲದುತ್ತರಭಾಗದಲಿ ಮಾಡಿದರು ವಿಶ್ರಮವ ॥

---

1 ದೊಳಗೆಕೀ, ಡ.        2 ಚಕ, ಡ.

ರಾಯನನ್ನು ಪುರಜನಗಳು ಹಿಂಬಾಲಿಸಿದುದು.

ನಿಲಿಸೆ ನಿಲ್ಲದೆ ಬಂದರರಸನ
ಬೞಿಯಲಗ್ಗದ ಮಂಡಲೇಶ್ವರ
ರೊಲಿದು ಸಾಕಿದ ರಾಜಪುತ್ರರು ಹಲವುಮನ್ನಣೆಯ ।
ಬಲುಭಟರು ಬಾಹತ್ತರದ ನಿ
ಶ್ಚಲನಿಯೋಗಿಗಳಾಶ್ರಮಿಗಳ
ಗ್ಗಳೆಯ ವಿಪ್ರಸ್ತೋಮ ಬಂದುದು ಕೋಟಿಸಂಖ್ಯೆಯಲಿ ॥ ೧

ಧರ್ಮರಾಯನ ಚಿಂತೆ.

ತಿರುಗಿ ಕಂಡನು ಭೂಮಿಭಾರದ
ನೆರವಿಯನು ಮೂಗಿನಲಿ ಬೆರಳಿ [1]
ಟ್ಟರಸ ತಲೆದೂಗಿದನು ಸುಯ್ದನು ಬೈದು ದುಷ್ಕೃತವ ।
ಧರಣಿ ಸೇರಿದುದಹಿತರಿಗೆ ಕರಿ
ತುರಗರಥವೆಮಗಿಲ್ಲ ವಿಪಿನದ
ಪರಿಬವಣೆಗಿವರೇಕೆ ಬೆಸಗೊಳು ಭೀಮ ನೀನೆಂದ [2] ॥ ೨

ನಿಲ್ಲಿರೈ ದ್ವಿಜನಿಕರ ಕಳುಹಿಸಿ
ಕೊಳ್ಳಿರೈ ಪುರವರ್ಗ ನೇಮವ
ಕೊಳ್ಳಿರೈ ಪರಿವಾರ ಮಕ್ಕಳ ತಂಡವೊದಲಾಗಿ ।
ಎಲ್ಲಿ ಮಳೆ ಮರ ಗಾಡು ಪಲ್ಲವ
ಫುಲ್ಲಫಲಪಾನೀಯಪೂರಿತ
ವೆಲ್ಲಿ ರಾಯನ ಸೆಜ್ಜೆ ಯರಮನೆಗೆಂದನಾಭೀಮ ॥ ೩

ಜನಗಳು ರಾಯನನ್ನು ಸ್ತುತಿಸುವಿಕೆ.

ಅವನಿಪತಿ ಚಿತ್ತೈಸು ಬಹಳಾ
ರ್ಣವವ ಹೊಗು ಹಿಮಗಿರಿಯಲಿರು ಭೂ
ವಿವರಗತಿಯಲಿ ಗಮಿಸು ಗಾಹಿಸು ಗಹನಗಹ್ವರವ ।

---

1 ಗಲ್ಲದಲಿ ಕರವಿ, ಚ.    2 ನಿಲಿಸೆಂದ, ಟ.

ಎವಗೆ ನೀನೇ ಜೀವ ನೀನೇ
ವಿವಿಧಧನ ಗತಿ ನೀನೆ ಮತಿ ನೀ
ನವಗಡಿಸಬೇಡಕಟ ಕೃಪೆಮಾಡೆಂದುದಖಿಳಜನ ‖ ೫

ತುಂಬಿದನು ಕಂಬನಿಯನಕಟ ವಿ
ಡಂಬಿಸಿತೆ ವಿಧಿ ಯೆನ್ನ ನಿನಿಬರ
ನಂಬಿಸುವೆ ಪರಿಯೆಂತು ವಸನಗ್ರಾಸವಾಸದಲಿ ।
ತುಂಬಿ ಸವಿಗೆಡಹಿದಳಲಕ್ಷ್ಮಿಯು
ಮುಂಬಿಗನೊಳಪದೆಸೆಯು ಪಂತದ [1]
ಚುಂಬಕನೊಳೇನುಂಟು ಫಲವೆಂದರಸ ಬಿಸುಸುಯ್ದ ‖ ೬

ಧೌಮ್ಯರು ಸೂರ್ಯನನ್ನು ಪ್ರಾರ್ಥಿಸೆಂದು ಹೇಳುವಿಕೆ.

ಭೇದ [2] ವೇಕೆಲೆ ನೃಪತಿ ಹರುಷ ವಿ
ಷಾದದಲಿ ಸುಖದುಃಖದಲಿ ನುತಿ
ವಾದಪರಿವಾದದಲಿ ಸಮಬುದ್ಧಿಗಳಲೇ ಬುಧರು ।
ಈದುರಂತದ ಚಿಂತೆ ಬೇಡೀ
ದ್ವಾದಶಾತ್ಮನ ಭಜಿಸಿದೊಡೆ ಭ
ಕ್ಷ್ಯಾದಿಬಹುವಿಧದನ್ನ ಸಿದ್ಧಿಪುದೆಂದನಾಧೌಮ್ಯ ‖ ೭

ಧರಣಿಪತಿ ಕೇಳ್ ಧೌಮ್ಯವಚನಾಂ
ತರದೊಳಮರನದೀವಿಗಾಹನ
ಪರಮಪಾವನಕರಣನೀಕ್ಷಿಸಿ ತರಣಿಮಂಡಲವೆ ।

ಧರ್ಮರಾಯನ ಸೂರ್ಯಪ್ರಾರ್ಥನೆ.

ಮುರುಹಿ ಮೂಲಾಧರಪವನನ
ನುರುಸುಷುಮ್ನೆಗೆ ನೆಗಹಿ ನಿಶ್ಚಲ
ವರಸಮಾಧಿಯೊಳಿನನ ಮೆಚ್ಚಿಸಿದನು ಮಹೀಪಾಲ [3] ‖ ೮

---

1 ಕುಂತದ, ಚ　ಕುಂದದ, ಟ.　　2 ಖೇದ, ಡ.

3 ನೆನೆಯುಲು ಬಂದನಾಕ್ಷಣಕೆ, ಝ.

ಸೂರ್ಯನು ಪಾಂಡವರಿಗೆ ಅಕ್ಷಯ ಪಾತ್ರವನ್ನು ಕೊಟ್ಟದ್ದು.

ಏನು ವರಿಸಿದೆ ಧರ್ಮಸುತ ಹೇ
ಳೆನಲು ಕಂದೆಱೆಯುತ್ತ ನುಡಿದನು
ನೀನಲ್ಲೆ ತ್ರೈಮೂರ್ತಿರೂಪನು ಕರ್ಮಸಾಕ್ಷಿಯಲ್ಲೈ ।
ತಾನು ಬಿನ್ನಹಮಾಡಲೇಕೀ
ಕಾನನದಿ ವಿವಿಧಾನ್ನಪಾನ
ಕ್ಕೇನಪಾಯವು ವಿಲ್ಲದಂತಿರೆ ಕರುಣಿಸುವುದೆಂದೆ ॥ ೯

ವರವನಿತ್ತೆನು ನಿನಗೆ ಹೇಮದ
ಚರುಕವಿದೆ ವಿವಿಧಾನ್ನಪಾನೋ
ತ್ಕರದ ತವನಿಧಿ ನಿನ್ನ ವಧು ಬಾಣಸದ ಕರಣದಲಿ ।
ಇರವು ರಚಿಸಲಿ ಬಟೆಕುಣಲಿ ಸಾ
ವಿರವನಂತರ ನೀವು ಬಟಿಕಂ
ಬುರುಹಮುಖಿ ಮಱುದಿವಸವೀಪರಿಯೆಂದನಾದ್ಯುಮಣಿ ॥ ೧೦

ಭೂಮಿಪತಿ ಭುಲ್ಲವಿಸಿದನು ನಿ
ಸ್ಸೀಮಸಂತೋಷದಲಿ ಸುಜನ
ಸ್ತೋಮರಕ್ಷಣಕಾದ ನಿರ್ವಾಹದ ನಿರೂಢಿಯುಲಿ ।
ಆಮುನೀಂದ್ರಂಗೆಱಗಿದನು ನಿಜ
ಕಾಮಿನಿಯು ಕರೆದೀಹದನು ಸು
ಪ್ರೇಮದಿಂದಱುಹಿದನು ಭೀಮಧನಂಜಯಾದ್ಯರಿಗೆ [1] ॥ ೧೧

ಇವರು ತಿರುಗಿದರಿತ್ತಲಡವಿಯು
ಭವಣಿಗೆಯು ಭಾರಾಂಕಭಾಷೆಯು
ಲವಿರಳಿತಜನಜಾಲಸಹಿತಾರಣ್ಯವಾಸದಲಿ [2] ।

ಇತ್ತ ಮೈತ್ರೇಯನು ದುರ್ಯೋಧನನನ್ನು ನೋಡುವಿಕೆ.

ಅವನಿಪತಿ ಕೇಳಿತ್ತಲಾ ಕೌ

---

[1] ತನ್ನ ಸಹೋದರವ್ರಜಕ್ಕೆ, ಚ. [2] ಮಾರ್ಗದಲಿ, ಚ.

ರವನ ನಗರಿಗೆ ಪಾರಿಕಾಂಕ್ಷಿ
ಪ್ರವರನೊಬ್ಬನು ಬಂದು ಕಂಡನು ಕೌರವೇಶ್ವರನ ॥ ೧೦

ಮುನಿಯು ಸತ್ಕರಿಸಿದನು ಕೌರವ
ಜನಪನಾಮುನಿಮುಖ್ಯನೀತನ
ವಿನುತರಚಿನೆಗೆ ಮೆಚ್ಚಿ ನುಡಿದನು ರಾಜಕಾರಿಯುವ ।

ಮೈತ್ರೇಯನು ಪಾಂಡವರಿಗೆ ರಾಜ್ಯವನ್ನು ಕೊಡು ಎಂದು ಹೇಳಿದುದು.

ನಿನಗಿದೊಂದೇ ಕೊಱತೆ ಪಾಂಡವ
ಜನಪರನು ಜೂಜಿನಲಿ ಸೋಲಿಸಿ
ಕನಲಿಸಿದೆ ನೀ ಕೆಡುವೆ ಯೆಂದನು ಕೌರವೇಶ್ವರನ[1] ॥ ೧೩

ಹೋದ ಕೃತಿಯುಂತಿರಲಿ ಸಾಕಿ
ನ್ನಾದರೆಯು ಕೌಂತೇಯರನು ಕರೆ
ದಾದರಿಸಿ ಕೊಡು ಧರೆಯನೆನೆ ಕೊಪ್ಪರಿಸಿ ಖಾತಿಯಲಿ ।

ಮೈತ್ರೇಯನು ತನ್ನ ಮಾತನ್ನೊಪ್ಪದಿರಲು ಶಾಪವನ್ನು ಕೊಡುವಿಕೆ.

ಹೊಯ್ದು ತೊಡೆಯನು ಹಗೆಗೆ ಕೊಡುವೆನೆ
ಮೇದಿನಿಯನೆನೆ ರೋಷಶಿಖೆಯಲಿ
ಕಾದುದಾತನ ಹೃದಯ ಶಪಿಸಿದನಂದು ಮೈತ್ರೇಯ ॥ ೧೪

ತೊಡೆಗಳನು ಕಲಿಭೀಮ ಬವರದೊ
ಳುಡಿದು ಬಿಸುಡಲಿ ಯೆಂದು ಖತಿಯಲಿ[2]
ನುಡಿಯೆ ಮುನಿಪನ ಸಂತವಿಟ್ಟನು ಬಂದು ಧೃತರಾಷ್ಟ್ರ ।
ತೊಡೆಗೆ ಬಂದುದು ತೋಟಿ ಸಾಕಿ
ನ್ನೊಡಬಡಿಸಿ ಫಲವಿಲ್ಲ ನಮ್ಮೆಯು
ನುಡಿಗೆ ಮಱುಮಾತಿಲ್ಲೆನುತ ಮುನಿ ಸರಿದನಾಶ್ರಮಕೆ ॥ ೧೫

---

[1] ಯುದಱಿಂದ ಬಲುಗೇಡಹುದು ನಿನಗೆಂದ, ಚ.  [2] ಶಾಪವ, ಚ.

ಆಮಹಾಮುನಿಶಾಪಭಯವನು
ಭೀಮಸೇನನ ಬಲುಹ ನೆನೆಯುತ
ವೈಮನಸ್ಯದ ಬೇಗೆಯಲಿ ಬಲು ಬೆಂದು ಬೇಸಱದೆ ।
ಭೂಮಿಪತಿ ಕರೆಸಿದನು ವಿದುರನ
ನಾಮಹಾಜ್ಞಾನಿಯನು ಮುನಿಪನ
ತಾಮಸವನಱುಹಿದರೆ ಬಳಿಕಿಂತೆಂದನಾವಿದುರ ॥ ೧೬

ಮೈತ್ರೇಯನ ಮಾತನ್ನು ವಿದುರನು ಒಪ್ಪಲು ವಿದುರನನ್ನು ಧಿಕ್ಕರಿಸಿದುದು.

ತಪ್ಪದಿದು ನಿನ್ನಾತಗಳ ಭುಜ
ದರ್ಪತೀವ್ರಜ್ವರದ ವಿಕಳರ
ನೊಪ್ಪಿ ಕಾದೆ ಸುಯೋಧನಾದ್ಯರು ಜನಿಸಲೀಜಗಕೆ ।
ತಪ್ಪುವುದೆ ಋಷಿವಚನ ಸಂಧಿಯೊ
ಳೊಪ್ಪುಕೊಳು ಪಾಂಡವರನಲ್ಲದೊ
ಡಪ್ಪಿಕೊಂಬಳು ಮೃತ್ಯು ನಿನ್ನ ಕುಮಾರಕರನೆಂದ ॥ ೧೭

ಎನಲು ಕಿಡಿ ಕಿಡಿ ಯಾಗಿ ಕೌರವ
ಜನಪ ವಿದುರನ ಬೈದು ಕುಂತಿಯ
ತನುಜರಲಿ ಬಾಂಧವನಲಾ ಹೋಗವರ ಹೊರೆಗೆಂದು ।

ಕಾಮ್ಯಕವನವನ್ನು ಕುರಿತು ವಿದುರನ ಗಮನ

ಮುನಿದು ಗರ್ಜಿಸೆ ಜೀಯ ಕರ ಲೇ
ಸೆನುತ ಮನದುಬ್ಬಿನಲಿ ಪಾಂಡವ
ಜನಪರಿಹ ಕಾಮ್ಯಕವನಾಂತರಕೈದಿದನು ಬಳಿಕ [1]॥ ೧೮

ಇದಿರುಗೊಂಡರು ಹಿರಿದು ಮನ್ನಿಸಿ
ವಿದುರನನು ಕೊಂಡಾಡಿದರು ಕೇ
ಳಿದರು ಧೃತರಾಷ್ಟ್ರಾದಿಗಳ ಸುಕ್ಷೇಮಕುಶಲವನು ।

[1] ತಕೆ ಬಂದನಾವಿದುರ, ಡ.

ವಿದುರನಾಗಮನಪ್ರಪಂಚದ
ಹದನನೆಲ್ಲವ ಕೇಳಿದರು ಹೇ
ಳಿದನು ನಿಜವೃತ್ತಾಂತವನು ವಿದುರಂಗೆ ಯಮಸೂನು ‖ ೧೯

ಧೃತರಾಷ್ಟ್ರನು ವಿದುರನನ್ನು ಕರೆಕಳುಹಿಸಿದುದು.

ಇತ್ತಲಾವಿದುರನ ವಿಯೋಗದ
ಚಿತ್ತದಂತಸ್ತಾಪದಲಿ ನೃಪ
ಮತ್ತೆ ದೂತರ ಕಳುಹಿ ಕರೆಸಿದನಾತನನು ಪುರಕೆ [1] ।
ಹೆತ್ತಮಕ್ಕಳ ಬಿಡು ಪೃಥಾಸುತ
ರತ್ತ ತಿರುಗೆನೆ ಖಾತಿಗೊಂಡೆನು
ಮತ್ತೆ ಮುನಿಯದಿರೆಂದು ವಿದುರನನಪ್ಪಿದನು ನೃಪತಿ ‖ ೨೦

ಪಾಂಡವರ ಸ್ಥಿತಿಯನ್ನು ಕೇಳುವಿಕೆ.

ಆವ ಬನದಲಿ ಪಾಂಡುಸುತರಿಗೆ
ಠಾವು ನಿನಗೇನೆಂದರನಿಬರ
ನಾವ ಬನದಲಿ ಕಂಡೆ ಕೂಡೆನಿತುಂಟು ಪರಿವಾರ ।
ಆವುದಭಿಮತ ಭೀಮಸೇನನ
ಭಾವವೇನು ಯುಧಿಷ್ಠಿರಾದಿಗ
ಳಾವ ಭಂಗಿಯಲಿದ್ದರೆಂದನು ನಗುತ ಧೃತರಾಷ್ಟ್ರ ‖ ೨೧

ಅರಸ ಕೇಳ್ ಗಂಗಾನದಿಯಲು
ತ್ತರಿಸಲವರಿಗೆ ಕಮಲಮಿತ್ರನ
ಕರುಣವಾಯಿತು ಕನಕಪಾತ್ರೆಯೊಳಕ್ಷಯಾನ್ನದಲಿ ।
ಪರಿಕರದ ಪರುಠವಣೆಯಲಿ ಸಾ
ವಿರದ ಶತಸಂಖ್ಯಾತಧರಣೀ
ಸುರನಿಯೋಗಿಗಳಾಪ್ತಜನಸಹಿತೈದಿದರು ವನವ ‖ ೨೨

---

[1] ದನು ಕರೆತರಿಸಿದನು ಗಜಪುರಿಗೆ, ಡ.

ಜನಪ ಕೇಳ್ ಕಿಮ್ಮೀರನೆಂಬವ
ನನಿಮಿಷರಿಗುಬ್ಬಸದ ಖಳನಾ
ತನ ವಿಭಾಡಿಸಿ ಹೊಕ್ಕರವರಾರಣ್ಯಮಂದಿರವ ।
ದನುಜನೇ ಕಿಮ್ಮೀರನಾತನ
ನನಿಲಜನೊ ಫಲುಗುಣನೊ ಕೊಂದಾ
ತನೊ ಯುಧಿಷ್ಠಿರನೊ ನೃಪ ವಿಸ್ತರವಾಗಿ ಹೇಳೆಂದ ॥ ೨೩

ಅರಸ ಕೇಳುವುದೇಕಚಕ್ರದೊ
ಳೊರಸಿದನಲಾ ಭೀಮನಾತನ
ಹಿರಿಯನೀಕಿಮ್ಮೀರ ಬಾಂಧವನಾಹಿಡಿಂಬಕಗೆ ।
ಧರಣಿಪನ ಪರಿವಾರದುಬ್ಬಿನ
ಭರವ ಕಂಡನು ತನ್ನ ತಮ್ಮನ
ಹರಿಬವನು ಮರಳಿಚುವೆನೆಂದಿದಿರಾದನಮರಾರಿ ॥ ೨೪

ಕಾಮ್ಯಕವನಕೆ ಬರಲು ಕಿಮ್ಮೀರನು ದಾರಿಗೆ ಅಡ್ಡಕಟ್ಟಿದುದು.

ಇವರು ಮೂಱೇ ದಿನಕೆ ಕಾಮ್ಯಕ
ನವಮಹಾಕಾನನಕೆ ಬರೆ ದಾ
ನವನು ದಾರಿಯು ಕಟ್ಟಿ ನಿಂದನು ಕೋಪ ಭುಗಿಲಿಡಲು [1] ।
ಅವನ ಕಂಗಳ ಕೆಂಪಿನಲಿ ಮೋ
ಣವನ ದಾಡೆಯ ಮಿಂಚಿನಲಿ ಖಳ
ನವಯವವ ಕಂಡಳುಕಿ ನಿಂದರು ಮುಂಗುಡಿಯ ಭಟರು ॥ ೨೫

ಮುಂದೆ ಘೋರಾರಣ್ಯವಿದೆ ಸುರ
ಬಂದಿಕಾಱನ ಕಾಹಿನಲಿ ಕಾ
ಳಂದಿಯುದರದ ಮೆಬ್ಬಿನಂತಿದೆ ತೀವ್ರತರತಿಮಿರ ।
ಇಂದಿನಿರುಳಲಿ ಬದುಕಿದರೆ ಸಾ

1 ಕೈಯಮುಷ್ಟಿಯಲಿ, ಡ.

ಆಗ ಪಾಂಡವರ ಭಯ.

ವೆಂದಿಗೆಮಗಿಲ್ಲೆನುತ ಭಯದಲಿ
ನಿಂದುದಲ್ಲಿಯದಲ್ಲಿ ಪಾಂಡುಕುಮಾರಪರಿವಾರ [1] || ೨೬

ದೈತ್ಯನ ಘೋರವಾದ ಧ್ವನಿ.

ಅಡಿಗಡಿಗೆ ಮಾನವರ [2] ಸೊಗಡವ
ಗಡಿಸುತಿದೆ ಬರಹೇೞು ನೆತ್ತರು
ಗುಡುಹಿಗೈನೆಯರೆಲ್ಲಿ ಶಾಕಿನಿಡಾಕಿನೀನಿಕರ |
ತಡೆಯ ಬೇಡಾ ತಿನ್ನೆನುತ ಬೊ
ಬ್ಬಿಡುತ ಖಳ ತಱುಬಿದನು ರಾಯನ
ಮಡದಿ ಹೊಕ್ಕಳು ಮಱೆಯನರ್ಜುನಭೀಮಧರ್ಮಜರ || ೨೭

ಎಲೆಲೆ ರಾಕ್ಷಸ ಭೀತಿ ಹೋ ಹೋ [3]
ನಿಲಲಿ ನೀವ್ ನಿಮಿಷಾರ್ಧಮಾತ್ರಕೆ [4]
ಗೆಲುವರೀ ನೃಪರೆನುತ ಮುನಿ ರಕ್ಷೋಘ್ನಸೂಕ್ತವನು |
ಹಲವುವಿಧದಲಿ ಜಪಿಸಿ ದಿಙ್ಮಂ
ಡಲದ ಬಂಧವ ರಚಿಸಿ ಜನಸಂ
ಕುಲವ ಸಂತೈಸಿದನು ಧೌಮ್ಯನು ಮುಂದೆ ಭೂಪತಿಯ || ೨೮

ಪಾಂಡವಕಿರ್ಮೀರರ ಸಂವಾದ.

ಆರು ನೀವ್ ನಡುವಿರುಳು ಪಾಂಡುಕು
ಮಾರಕರು ನಾವಿತ್ತಲೇನು ವಿ
ಚಾರಿಸಲು ನೀವಾರು ನಾವಾ ಬಕಹಿಡಿಂಬಕರ |
ವೈರಿಗಳಲಾ ಹೊಲ್ಲಹೇನು ವಿ
ಕಾರಿಗಳನೊಡೆಹೊಯ್ದು ಶೋಣಿತ
ವಾರಿಯೋಕುಳಿಯಾಡಬೇಹುದೆನುತ್ತ ಖಳ ಜಱಿದ || ೨೯

---

[1] ದಲ್ಲಿ ಪಾಂಡುಕುಮಾರಕರ ಸೇನೆ, ಡ. [2] ಮಾನಿಸರ, ಚ.
[3] ಹೋಗದೆ, ಚ. [4] ನಿಲು ನಿಲೇವ್ಪೋ ನಿಮಿಷಮಾತ್ರಕೆ, ಚ.

ಭೀಮನ ಪರಾಕ್ರಮವಾಕ್ಯ

ಮಿಡಿದನರ್ಜುನ ಧನುವನಾತನ
ತಡೆದು ನಿಂದನು ಭೀಮನಸುರನ
ಕೆಡೆಹಿ ಕಾಮ್ಯಕವನದ ಭೂಮಿಯ ಭೂತಸಂತತಿಗೆ ।
ಬಡಿಸುವೆನು ನೀ ಸೈರಿಸೆನುತವ
ಗಡಿಸಿದನು ಕಲಿ ಭೀಮನಂತ್ಯದ
ಸಿಡಿಲ ಸೆಱೆಬಿಟ್ಟಂತೆ ಬೊಬ್ಬಿಡುತಿರ್ದನಾಭೀಮ ॥ ೩೦

ದೈತ್ಯನ ಪರಾಕ್ರಮವಾಕ್ಯ.

ಎಂಜಲೇನನು ಪವನಜನ ಕೈ
ಕೊಂಬದೈತ್ಯನೆ ಹೆಮ್ಮರನ ಹೆ
ಗ್ಗೊಂಬ ಮುಱಿದನು ಸವಱಿದನು ಶಾಖೋಪಶಾಖೆಗಳ ।
ತಿಂಬೆನಿವನನು ತಱಿದು ತಮ್ಮ ಹಿ
ಡಿಂಬಕನ ಹಗೆ ಸಿಲುಕಿತೇ ನಾ
ನಂಬಿದುದು ಬಲುದೈವವೆನುತಿದಿರಾದನಮರಾರಿ ॥ ೩೧

ಹಣುಗುವಾಯುತದೃಷ್ಟಿಯೋರೆಯ
ಕುಣಿವಮೀಸೆಯ ದೈತ್ಯನೂಲಿದಿ
ಟ್ಟಣಿಸಿ ಬರಲಾ ಭೀಮನಾಧರ್ಮಜಗೆ ಮಾರುತಗೆ ।
ಕ್ಷಣದಿ ನಮಿಸುತುದಾರವೀರಾ
ಗ್ರಣಿ ಕಿಡಿಯ ವದನದಲಿ ಸೂಸುತ
ಸೆಣಸಲನುವಾಗಿರ್ದ ಕೇಳ್ ನೃಪ ಸಮರಸಂಭ್ರಮವ ॥ ೩೨

ಯುದ್ಧ ಜರುಗಿದಕ್ರಮ.

ಹೊಯ್ದನವನುರವಣಿಸಿ ಕುಸಿದೊಡೆ[1]
ಹೊಯ್ದು ಹೊಕ್ಕನು ಭೀಮನೆಲವೋ
ಕೈದು ಮರನೇ ಸೆಳಗೆ ಸಡೆವುದೆ ಭದ್ರಮದದಂತಿ ।

---

1 ಮುಱಿದೊಳ,

ಕೈದುವಿಲ್ಲಾ ತರಿಸಿ ಕೊಡುವೆನು
ಕೈದುವನು ಬಿಲುಸರಳನೆನುತವೆ
ಹೊಯ್ದು ಹುರಿಯೋಹುರಿ ಯೆನುತ ಗಹಗಹಿಸಿದನು ಭೀಮ ||೩೩

ಮುಳುಕಿಸುವ ಪವನಜನ ನೆತ್ತಿಯ
ನೆಱಗಿದನು ಬಟಿಕವನ ಹೊಯ್ಲಿನ
ಬಿಱುಸಿನೈಯ್ಯನೊ ಸಿಡಿಲ ಶಿಷ್ಯನೊ ವಜ್ರಕರಹತಿಯೊ |
ಕಱಗಿದನು ಮಯಣಾದಿಮಗಳಿಂ
ದೆಱೆದ ಕಾಹಿನ ಕಱುವೆನಲು ಕು
ಕ್ಕುರಿಸಲಸುರನನಿಕ್ಕಿದನು ಚಾಪಳಚಪೇಟದಲಿ || ೩೪

ಕಿರ್ಮೀರನ ಮರಣ.

ಡೆಂಡಣಿಸಿ ಸುರವೈರಿ ದೊಪ್ಪನೆ
ದಿಂಡು ಗೆಡೆದನು ನೀಲಶೈಲದ
ದಂಡಿಕಾಱಿನ ದೇಹಗರ್ತದ ರಕ್ತನಿರ್ಝರದ |
ದೊಂಡೆಗರುಳಿನ ಬಾಯಿಜೊಲಿನ
ಕುಂಡಲಿತಕರಜಂಘೆಗಳ ಬಿಡು
ಮೆಂಡೆಗೆದಱಿದ ಖಳನ ಕಂಡುದು ಭೂಸುರವ್ರಾತ || ೩೫

ಅರಸ ಹೇಳುವುದೇನು ಹೋರಿದ
ನರೆಘಳಿಗೆ ಕೊಂಡಾಡಿ ಬಟಿಕಿ
ಟ್ಟೊರಸಿ ಹುಡಿಯಲಿ ಹೂಱಿದನು ಕಿರ್ಮೀರದಾನವನ |
ಬೆಱಸಿತಾ ವಿಪ್ರೌಘವಾಮುನಿ
ವರಿಯರೀಕಾಮಿನಿಯರೀ ನೃಪ
ವರನ ಪರಿಕರವಾಮಹಾಕಾಮ್ಯಕವನಾಂತರವ || ೩೬

ತಳಿತು ಬಿಟ್ಟುದು ಕೂಡೆ ಹರಹಿನ
ಹಱುವೆದಲಿ ದ್ವಿಜನಿಕರ ರಚಿಸಿದ
ತಳಿರಗುಡಿಗಳ ಪರ್ಣಶಾಲೆಯ ಭದ್ರಭವನಿಕೆಯ |

ಮೆಳೆಯು ಮಂಟಪ ಹೊದಱದುಱುಗಲ
ನೆಳಲ ಚೌಕಿಗೆ ವಿಪುಳವೆರಸಂ
ಕುಳದೊಳೋಲಗಶಾಲೆ ಮೆಱೆದುದು ಧರ್ಮನಂದನನ ॥ ೩೭

ಆಸಕಲಸಾಮ್ರಾಜ್ಯಲಕ್ಷ್ಮಿವಿ
ಲಾಸದರಮನೆಗಳನು ಮಱೆಸಿದು
ದಾಶರಭಶಾರ್ದೂಲಸೇವಿತಘೋರಕಾಂತಾರ ।
ಆಸುಧಾಕಲಿತಾನ್ನವೇ ಫಲ
ರಾಸಿಯಾದುದು ಗೇಯರಸವಿ
ನ್ಯಾಸವೇ ಮಧುಮಕ್ಷಿಕವ್ರಜಜಂಬುಕಧ್ವಾನ ॥ ೩೮

ದಿನಪ ಕೃಪೆಮಾಡಿದನಲೇ ಕಾಂ
ಚನಮಯದ ಭಾಂಡವನು ಬಳಿಕಾ
ವನಜಮುಖಿ ಮಾಡಿದ ಸುಪಾಕದ ಷಡ್ರಸಾನ್ನದಲಿ ।
ಮುನಿಜನಕೆ ಪರಿಜನಕೆ ಭೂಸುರ
ಜನಕೆ ತುಷ್ಟಿಯು ಮಾಡಿ ಭೂಪತಿ
ವನದೊಳಿರ್ದನು ವೀರನಾರಾಯಣನ ಕರುಣದಲಿ ॥ ೩೯

ಒಂದನೆಯ ಸಂಧಿ ಮುಗಿದುದು.

---

## ಎರಡನೆಯ ಸಂಧಿ.

### ಸೂಚನೆ.

ಸಕಲಯದುಬಲಸಹಿತ ಭಕ್ತ
ಪ್ರಕರಪಾಲಕನೊಲಿವು ವಿಗೆ[1] ಕಾ
ಮ್ಯಕಮಹಾಕಾನನಕೆ ಬಿಜಯಂಗೈದನಸುರಾರಿ ।

---

[1] ನೊಲವಿನಲಿ, ಚ.

ಪಾಂಡವರ ವರ್ತಮಾನವನ್ನು ಕೇಳಿ ಕೃಷ್ಣನು ಅವರಿದ್ದೆಡೆಗೆ ಬಂದುದು.

ಅರಸ ಕೇಳೈ ದ್ವಾರಕಾಪುರ
ವರಕೆ ಬಂದುದು ವಾರ್ತೆ ಶ್ರೀತಾಂ
ಬರನ ಬಹಳಾಸ್ಥಾನದಲಿ ವರ್ತಿಸಿದುದಡಿಗಡಿಗೆ |
ಧರೆಸಹಿತ ನಿಜವಸ್ತುವಾಹನ
ಪರಮವಿಭವವ ಬಿಸುಟು ಬಾರಿಯ
ಪರಿಭವದಿ ನಟ್ಟಡವಿಯೊಕ್ಕರು ಪಾಂಡುಸುತರೆಂದು ||　　೧

ಕೇಳಿ ತಲೆದೂಗಿದನು ಮೂಗಿನ
ಮೇಲುವೆರಳಿನ ಹೊತ್ತುದುಗುಡದ
ತೂಳುದುಬ್ಬೆಯ ನೆಟ್ಟನೋಟದ ನೆಗ್ಗಿನುತ್ಸವದ |
ಹೂಳಿದೂಹೆಯ ಹಿಡಿದ ನೆನಹಿನ
ಹೇಳಲಱಿದೆನೆ ಘುದಿದ ಭಾವದೆ
ಲಾಲಿಸಿದನಸುರಾರಿ ದೂತವ್ರಜದ ಬಿನ್ನಪವ ||　　೨

ಅಕಟ ಕಪಟದ್ಯೂತದಲಿ ನೃಪ
ಮುಕುರದುನ್ನತಿ ಮುಱಿದುದೇ ಕೌ
ಳಿಕದಲೀ ಕೌರವರು ಕೊಂಡರೇ ಧರ್ಮಜನ ನೆಲನ |
ಅಕುಟಿಲರಿಗೇಕಿದು ನಿರಾಬಾ
ಧಕರಿಗೇಕಿದು ಸಕಲಸುಜನ
ಪ್ರಕರವೆಂದ್ಯರಿಗೇಕೆನುತ ಬಿಸುಸುಯ್ದನಸುರಾರಿ[1] ||　　೩

ಹಿರಿದು ಹರಿ ಚಿಂತಿಸಿದನೀವ್ಯತಿ
ಕರವನಱಿಯದ ಮುಗ್ಧರಿದನಾ
ರಱಿವರೈ ವಿಶ್ವಂಭರಾಭಾರೋಪರೋಧನಕೆ |

---

[1] ನುತ್ತ ಸುರಾರಿ ಚಿಂತಿಸಿದ, ಚ.

ಧರಣಿಯಲಿ ಮೈಗೊಂಡು ದೈತ್ಯರ
ನೊರಸಿದನು ಬಳಿಕುಚಿದ ಪಾಂಡವ
ಕುರುನೃಪರ ಕದಡಿಸಿದನೆಲೆ ಭೂಪಾಲ ಕೇಳೆಂದ || ೪

ಏನನೆಂಬೆನು ಜೀಯ ಕಡು ದು
ಮ್ಮಾನದಲಿ ಹೋಚಿವಂಟು ಬಂದನು
ದಾನವಾಂತಕನೈದಿದುವು ದಂಡಿಗೆಗಳರಸಿಯರ |
ಆನಿಖಿಳನೃಪವರ್ಗಯಾದವ
ಸೇನೆ ಕವಿದುದು ಪಾಂಡುಪುತ್ರರ
ಕಾನನವೆ ಕರುಣಾಳು ಹೊಕ್ಕನು ಹಲವು ಪಯಣದಲಿ || ೫

ಆಗ ಅನೇಕರಾಜರ ಆಗಮನ.

ಕೇಳಿದಾಗಳ್ ಬಂದರಾಪಾಂ
ಚಾಲಕೈಕಯಧೃಷ್ಟಕೇತುವ
ರಾಳಕುಂತೀಭೋಜಸೃಂಜಯಸೋಮಕಾದಿಗಳು |
ಮೇಲೆಮೇಲೀನಾಲ್ಕುದಿಕ್ಕಿನ
ಮೂಲೆಯರಸುಗಳವರ ಕಂಡುಪ
ಲಾಲಿಸಲು ಬರುತಿರ್ದರಾಕಾಮ್ಯಕವಮಹಾವನಕೆ || ೬

ಪಾಂಡವರು ಸರ್ವರನ್ನು ಆದರಿಸಿದುದು.

ಇವರು ಬಂದರು ನಿಖಿಳಭೂಸುರ
ನಿವಹಸಹಿತಿದಿರಾಗಿ ವರಬಾಂ
ಧವರೊಳಭಿವಂದ್ಯರಿಗೆ ತತ್ಸಮರಿಗೆ ಕನಿಷ್ಠರಿಗೆ |
ಅವರವರಿಗವರುಚಿತಸತ್ಕಾ
ರವನು ಮಾಡಿ ಮುರಾರಿಯಂಘ್ರಿಯ
ನವಿರಳಾಶ್ರುಗಳಿಂದನಾದಿದರರಸ ಕೇಳೆಂದ || ೭

ಬೇಟಿ ಬೇಟಿಯ್ಯವರನು ತೆಗೆದು ಮು
ರಾರಿಯಪ್ಪಿದನಡಿಗಡಿಗೆ ದೃಗ್

ವಾರಿಗಳನೊರಸಿದನು ಪೀತಾಂಬರದ ಸೆಱಗಿನಲಿ |

ದ್ರೌಪದಿಯು ಶ್ರೀಕೃಷ್ಣನ ಪಾದದ ಮೇಲೆ ಬಿದ್ದುದು.

ಸಾರೆಸಾರೆನಲುಪ್ಪಡಣೆಯು ವಿ
ಕಾರವಿನ್ನೇಕೆನುತ ರಾಯನ
ನಾರಿ ಬಂದಳು ಕವಿದು ಬಿದ್ದಳು ಹರಿಯ ಚರಣದಲಿ ॥ ೮

ಒಱಲಿದಳು ದೆಸೆಯೊಡನೊಱಲೆ ಮಿಗೆ
ಹೊಱಳಿದಳು ಹರಿಪಾದದಲಿ ಮೈ
ಮೆಱೆದಳಂಗನೆ ತನುವ ಮುಸುಕಿದ ಕೇಶಪಾಶದಲಿ |
ಕಱಗಿದಳು ಕಂದಿದಳು ಮೊಮ್ಮಲ
ಮಱುಗಿ ಕರುಗಂದಿದಳು ದೃಗ್ಜಲ
ದೊಱತೆಯುಕ್ಕಿತು ಮೇಲೆ ಮೇಲೆ ಮಹೀಶನಂಗನೆಗೆ ॥ ೯

ಶ್ರೀಕೃಷ್ಣಸ್ತುತಿ.

ಹಿಂದೆ ಸೀರೆಯ ಸೆಳೆಯಲಕಟ ಗೋ
ವಿಂದ ರಕ್ಷಿಸನಾಥನಾಥ ಮು
ಕುಂದ ಕಾಯ್ಯೈ ಕೃಷ್ಣ ರಕ್ಷಿಸು ಕರುಣಿಸಸುರಾರಿ |
ಇಂದಿರಾಪತಿಯೇ ಯಶೋದಾ
ನಂದನನೆ ಕಾರುಣ್ಯನಿಧಿ ಸಲ
ಹೆಂದೊಡುಱುಹಿದ ದೈವ ನೀ ಮೈದೋಱಿದೈ ತನಗೆ ॥ ೧೦

ಶ್ರುತಿಗಳಿಗೆ ಮೈದೋಱೆ ಸುಪತಿ
ವ್ರತೆಯರಿಗೆ ಗೋಚರಿಸೆ ಯತಿಸಂ
ತತಿಗೆ ನಿರ್ಮಳಸಾರಸರ್ವಜ್ಞಾನಭಾವನೆಗೆ |
ಮತಿಗೊಡದ ಮಹಿಮಾಂಬುನಿಧಿ ಯೆನ
ಗತಿಶಯವ ನೆಱೆ ಮಾಡಿ ಲಜ್ಜಾ
ಸ್ಥಿತಿಯನುಱುಹಿದ ದೈವ ನೀ ಮೈದೋಱಿದೈ ತನಗೆ ॥ ೧೧

ಪತಿಗಳಿವರಂಜಿದರು ಧರ್ಮ
ಸ್ಥಿತಿಯನಱುದವರಳುಕಿದರು ತ
ತ್ಪಿತೃಪಿತಾಮಹಗುರುಗಳಡಗಿದರವನಿಯನು ಬಗಿದು ।
ಗತಿವಿಹೀನೆಗೆ ಕೃಷ್ಣ ನೀನೇ
ಗತಿಯೆನುತ ಬಾಯ್ಬಿಡಲು ಲಜ್ಜಾ
ಸ್ಥಿತಿಯನುೞುಹಿದ ದೈವ ನೀ ಮೈದೋಱಿದೈ ತನಗೆ ॥ ೧೦

ಹೆಸರುಗೊಂಡರೆ ಹಿಂದೆ ಬಂದು
ಬ್ಬಸದ ಭಾರವ್ಯಸನವನು ಹಿಂ
ಗಿಸಿದೆ ಸಾಕ್ಷಾತ್ಪದದ ದರುಶನವೇನನಿತ್ತಪುದೊ ॥
ಹೆಸರುಗೊಳಲಱಿಯದೆ ಮನೋವಾ
ಗ್ವಿಸರ ಮರಳಿದ ತರ್ಕನಿಗಮ
ಪ್ರಸರಣದ ಪರಬೊಮ್ಮ ನೀ ಮೈದೋಱಿದೈ ತನಗೆ ॥ ೧೨

ದಾನಯಜ್ಞ ತಪೋವ್ರತಾನು
ಷ್ಠಾನನಿಷ್ಠರು ಕಾಣರಷ್ಟವಿ
ಧಾನಯೋಗದ ಸಿದ್ಧರಱಿಯರು ನಿಮ್ಮ ಸುಚಿವುಗಳ ।
ಜ್ಞಾನಮುದ್ರಾತ್ರಿಪುಟಿಯನು ಸಂ
ಧಾನರಹಿತಜ್ಞಪ್ತಿರೂಪನು
ನೀನೆನಿಪ ಪರಬೊಮ್ಮ ನೀ ಮೈದೋಱಿದೈ ತನಗೆ । ೧೪

ಕಾಯಿದೈ ಪ್ರಹ್ಲಾದಮಾರ್ಕಂ
ಡೇಯುವನಗಜವಂಬರೀಷನ
ಕಾಯಿದೈ ಕಾರುಣ್ಯದಲಿ ಪಾತಕಿಯಜಾಮಿಳನ ।
ಕಾಯಿದೈ ಗೋವಿಂದ ಯೆನೆ ಯೆ
ನ್ನಾಯತಿಕೆಯಭಿಮಾನವನು ನೀ
ಕಾಯಿದೈ ಯೆಂದೆನುತ ಪದದಲಿ ಹೊಱಳಿದಳು ತರಳೆ ॥ ೧೫

### ದ್ರೌಪದಿಗೆ ಶ್ರೀಕೃಷ್ಣನ ಸಮಾಧಾನ

ಏಳು ತಾಯೆ ಮಹಾಸತಿಯೆ[1] ಪಾಂ
ಚಾಲಿ ನೊಂದೌ ತಂಗಿ ಯೆನುತ ಕೃ
ಪಾಳು ಕಂಬನಿದೊಡೆದು ಕೊಡಹಿದನವಯವದ ರಜವ |
ಮೇಲು ಮುಚ್ಚಳದೆಱೆದ ತನುವಿನ
ಹೇಳಿಗೆಯ ಶೋಕಾಹಿ ಯೆಂತಿರೆ
ಲೋಲಲೋಚನೆಯುಬ್ಬಲು ಮಿಗೆ ಹೆಕ್ಕಳಿಸಿತಡಿಗಡಿಗೆ || ೧೬

ಆಸಕಲಪರಿವಾರವಾಧರ
ಣೀಶರಾಮುನಿನಿಕರವಾಜನ
ವಾಸತೀನಿಕುರುಂಬವಾಗಜಘೋಟಕವ್ರಾತ |
ಆಸರೋಜಾನನೆಯ ಬಹಳ
ಕ್ಲೇಶವನು ಕಂಡಕ್ಷಿಜಲವಾ
ರಾಸಿಯಲಿ ತೇಂಕಾಡಿತೇನೆಂಬೆನು ಮಹಾದ್ಭುತವ || ೧೭

ಮುಡಿಯ ಸಂವರಿಸಬಲೆ ಸೀರೆಯ
ನುಡು ನವಾಂಬರವಿದೆ ವಿರೋಧವ
ಬಿಡು ಸುಯೋಧನರಾಜಸಂತತಿಯುರಿದುದಿನ್ನೇನು |
ಕೆಡಿಸಿಕೊಂಡರು ನಾಯ್ಗಳಿನ್ನದ
ನುಡಿದು ಫಲವೇನಕಟ ಕೈಕೊಂ
ಡಪ್ಪವಿಯನುಭವ ಸಮೆಯೆ ಸೈರಿಪುದೆಂದನಸುರಾರಿ || ೧೮

ತುಱುಬುಕಟ್ಟುವೆ ಹದನ ನಿಮ್ಮಡಿ
ಯಱಿಯದೆಂಬೆನೆ ಸಕಲಸಚರಾ
ಚರದ ಚೇತನರೂಪದೇಹಿನಿಕಾಯಕೃತಿಸಾಕ್ಷಿ |
ತಱಿದು ದುಶ್ಶಾಸನನ ವಕ್ಷದೊ

1 ಸರೋಜಮುಖಿ, ಚ.

ಳೊಱೆವ ರಕುತದಲದ್ದಿ ಕಟ್ಟುವ
ತುಱುಬನಱಿಯಾ ಕೃಷ್ಣ ಯೆಂದಳು ನಗುತ ಪಾಂಚಾಲಿ ‖ ೧೯

ಐಸಲೇ ದುರ್ಯೋಧನಾದಿಗ
ಳೇಸರವದಿರು ಭೀಮಪಾರ್ಥರ
ಬೀಸಱಿಕೆ ಬಲುಗೈಯೆ ಬರ್ಹಿರ್ಮುಖರ ಭಾರವಣೆ ।
ದೂಷಕನ ರಕ್ತದಲಿ ನಿನ್ನಯ
ಕೇಶವನು ಕಟ್ಟಿಸುವೆ ನಿನ್ನೀ
ಭಾಷೆ ಯೆನ್ನದು ತಾಯೆ ತವಕಿಸಬೇಡ ನೀನೆಂದ ‖ ೨೦

ವರತಪಸ್ವಿನಿ ನೀನು ನಿನ್ನನು
ಕೆರಳಚಿದರೇ ನಾಯ್ಗಳಕಟಾ
ಭರತಸಂತತಿ ಫಲಿತಕದಳಿಯು ತೆಱದಲಾಯಿತಲ ।
ಕುರುಜನಱಿಯದೆ ಹೋದಡೆಯು ಕಂ
ಗರುಡರಾದರೆ ಭೀಷ್ಮವಿದುರಾ
ದ್ಯರು ಮಹಾದೇವಿನುತ ಮುರರಿಪು ತೂಗಿದನು ಶಿರವ ‖ ೨೧

ಶಕುನಿ ಕಲಿಸಿದ ಕಪಟವೇ ಕೌ
ಳಿಕದ ಜೂಜಿದು ನಿಮ್ಮನೀ ಕಾ
ಮ್ಯಕಕೆ ತಂದುದು ದ್ಯೂತದಲಿ ನಾವಿಲ್ಲಲೇ ಯೆನಲು ।
ಸಕಲಜೀವರ ಕರ್ಮಸಾಕ್ಷಿ
ಪ್ರಕಟ [1] ಚೈತನ್ಯಸ್ವರೂಪಾ
ತ್ಮಕನು ನೀನಲ್ಲಿಲ್ಲ [2] ಹುಸಿ ಹುಸಿ ಯೆಂದಳಿಂದುಮುಖಿ ‖ ೨೨

ನಿಮಗೆ ತೊಂದರೆಬಂದಾಗ ನಾನು ದ್ವಾರಕೆಯಲ್ಲಿರಲಿಲ್ಲವೆಂದು
ಶ್ರೀಕೃಷ್ಣನ ವಾಕ್ಯ.

ದೇವಿ ತಾನಿದನಱಿದೊಡಾವಸು [3]
ದೇವನಾಣೆ ಮಹಾದ್ಭುತವನದ [4]

1 ಪ್ರಕರ, ಚ. 2 ನೀನಲ್ಲಿಲ್ಲ, ಚ.
3 ನಿದನಱಿದೆನಾದೊಡೆ, ಡ. 4 ಭೂಪಿಸಲು ವಸುದೇವನಾಣೆಪು, ಡ.

ನಾವನಖಿಯನು ಯದುನೃಪಾಲವಿಪತ್ಪರಂಪರೆಯು[1] ।
ನೀವು ಮಾಡಿದ ಯಜ್ಞಮುಖದ ಫ
ಲಾವಳಿಯುಲಾವಿರಲು ಮುತ್ತಿತು
ದೇವರಿಪುಬಲನಿಕರವಸ್ಮದ್ದ್ವಾರಕಾಪುರಿಯು ॥ ೧೩

ಸಾಲ್ವಪುರಿಗೆ ಯುದ್ಧಕ್ಕೆ ಹೋದ ಸಂಗತಿಯನ್ನು ಹೇಳಿದುದು.

ಲಗ್ಗೆಗಳುಕುವುದಲ್ಲಲೇ ಬಲು
ದುರ್ಗವದು ದುರ್ಭೇದವದಱೊಳ
ಗಗ್ಗಳೆಯರಿದ್ದರು ಹಲಾಯುಧಮನ್ಮಥಾದಿಗಳು ।
ಬಗ್ಗಿ ಕವಿವಕಠೋರದೈತ್ಯರ
ನುಗ್ಗು ನುಸಿಮಾಡಿದರು ಸೋಲದ[2]
ಸುಗ್ಗಿಯಾಯಿತು[3] ಮಾರ್ಬಲದೊಳಬುಜಾಕ್ಷಿ ಕೇಳೆಂದ ॥ ೧೪

ಅಳುಕಿ ಮುತ್ತಿಗೆದೆಗೆದು ಸಾಲ್ವನ
ದಳ ಮುಱಿದು ನಿಜಪುರಕೆ ಹಾಯ್ದುದು
ಗೆಲವು ಸಾತ್ಯಕಿ[4] ರಾಮಕಾಮಾದಿಗಳ ವಶವಾಯ್ತು ।
ಬಳಿಕ ನಿಮ್ಮಯ ರಾಜಸೂಯಕೆ
ಕಳಶವಿಟ್ಟು ಮದೀಯನಗರಿಯ
ಕಳಕಳವ ಸಂತೈಸಿ ನಡೆದೆವು ಸಾಲ್ವಪುರಿಗಾಗಿ ॥ ೧೫

ಏನನೆಂಬೆನು ಸಾಲ್ವಪುರದ ನ
ವೀನಮಾಯಾರಚನೆಯನು ತನ
ಗಾನಲಸದಳ ವೃಚದಗೀರ್ವಾಣರಿಗೆ ಗೋಚರವೆ ।
ದಾನವನ ಮಾಯಾಪುರದ ಸಂ
ಸ್ಥಾನವರ್ಮವನಱಿದು ಶರಸಂ
ಧಾನದಲಿ ಸಂಹರಿಸಿದೆವು ಸಾಲ್ವಾದಿರಿಪುಭಟರ ॥ ೧೬

---

[1] ಹಾವಿನೋದವನೇವೊಗಟ್ವೆನು ಯದುಪರಂಪರೆಯ, .ಡ.

[2] ಹರಣದ, ಚ. [3] ನೆಱೆದುದು, ಚ. [4] ನಮ್ಮಯ, ಚ.

### ಆಗ ನಿಮ್ಮಲ್ಲಿ ಜೂಜು ಸಂಭವಿಸಿತೆಂದು ಶ್ರೀಕೃಷ್ಣನ ವಚನ

ಅತ್ತಲಾಕೋಲಾಹಲದಲಿರ
ಲಿತ್ತಲಾದುದು ಜೂಜು ನಿಮ್ಮ ವಿ
ಪತ್ತು ಕಂಡುದು ತೆರಹ ತಪ್ಪಿಸಿ ನಮ್ಮ ಸುಚಿವುಗಳ |
ಇತ್ತಲಾವಿರೆ ಮೇಣು ದ್ವಾರಕೆ
ಯತ್ತಲಿರೆ ನೀವೆಡವಿಯೊಕ್ಕರೆ
ಹೆತ್ತಳೋ ದೇವಕಿ ಮಗನನೆಂದನು ಮುರಧ್ವಂಸಿ || ೨೭

### ದ್ರೌಪದಿಯು ಮಾಡಿದ ಶ್ರೀಕೃಷ್ಣಸ್ತುತಿ.

ದ್ವಾರಕೆಯುಲಿರು ಮೆತ್ಪುರದಲಿರು
ದೂರದಲ್ಲಿರು ಮೇಣು ನಿಮ್ಮಿಯು
ಸಾಚಿ ನಿಮ್ಮಡಿ ಇರಲಿ ನಿಮ್ಮಾ ಪಾಂಡುನಂದನರ |
ಭಾರ ನಿನ್ನದು ಭಕ್ತಜನದಾ
ಧಾರ ನಿನ್ನದನಾಥರಾವತಿ
ಕಾರುಣಿಕ ನೀನೆಂದು ಬಿದ್ದಳು ಮತ್ತೆ ಚರಣದಲಿ || ೨೮

ಮಗನ ಕರೆವರೆ ಯಮನ ದೂತರ
ತಗುಳುವೆಂದು ಸಮೀಪವರ್ತಿಯೆ
ನಗಧರ ಶ್ರೀಕಾಂತ ಸಲಹೆನೆ ಮುನಿಕುಮಾರಕನ |
ಉಗಳಿಚಿದೆಲಾ ಮೃತ್ಯುವಿನ ತಾ
ಳಿಗೆಯಿನೆಂದು ಸಮೀಪವರ್ತಿಯೆ
ಜಗನುಮೆಯ ನೀ ಜಾಣನಹೆ ಯೆಂದಳು ಸರೋಜಮುಖಿ || ೨೯

### ನಿನ್ನ ಪ್ರತಿಜ್ಞೆಯನ್ನು ನಡೆಸಿ ಕೊಡುವೆನೆಂದು ಶ್ರೀಕೃಷ್ಣನ ವಚನ.

ಆಯಿತೇಳೌ ತಂಗಿ ನೀ ಪಿರಿ
ದಾಯಸವನನುಭವಿಸಲುದಿಸಿದೆ
ರಾಯನಾಡಿದ ಭಾಷೆ ಸಲಲಿ ವನಪ್ರವಾಸದಲಿ |

ವಾಯುತನುಜನ ನುಡಿ ಯೆಲೇ ನಿ
ನ್ನಾಯತಿಕೆ ಹೋಣೆಯಾಪ್ರತಿಜ್ಞೆಗೆ
ತಾಯೆ ನಾ ಹೊಣೆ ಯೆಂದು ಕೊಟ್ಟನು ಸತಿಗೆ ನಂಬುಗೆಯ || ೩೦

ವನದಲ್ಲಿ ಕೆಲವು ಕಾಲವನ್ನು ಕಳೆಯಬೇಕೆಂದು ಹೇಳುವಿಕೆ.

ಸಂತವಿಟ್ಟನು ಬೇಱೆ ಬೇಱೆ ಕೃ
ತಾಂತಸುತಭೀಮಾದಿಗಳ ಮುನಿ
ಸಂತತಿಯ ಮನ್ನಿಸಿದನವರವರುಚಿತವೃತ್ತಿಯಲಿ |
ಎಂತು ಹದಿಮೂಱಬ್ದವೀನೃಪ
ಸಂತತಿಗೆ ಸೌಹಾರ್ದವಕಟ ವ
ನಾಂತರದಲೆಂದಸುರರಿಪು ನುಡಿದನು ಯುಧಿಷ್ಠಿರಗೆ || ೩೧

ಪಾಂಡವರ ಹೆಂಡರುಮಕ್ಕಳನ್ನು ಅವರವರ ತೌರುಮನೆಗಳಿಗೆ ಕಳುಹಿಸಿದುದು.

ಕಳುಹುವುದು ಸೌಭದ್ರನನು [1] ನಿಜ
ಲಲನೆಯರನವರವರ ತಾಯ್ಮನೆ
ಗಳಿಗೆ ಬೀಟ್ಕೊಡಿ ನಿಮ್ಮ ಪಂಚದ್ರೌಪದೀಸುತರ |
ಹಱುವ ದಾಟಲಿ ದ್ರುಪದನಂದನೆ
ಯುಱಲಸಿಖಿಗಿಂಧನವಲೇ ಕುರು
ಕುಲದ ಕರಡದ ಬಣಬೆ ಕಾದುವುದಿಲ್ಲ ಬೞಿಕೆಂದ [2] || ೩೨

ಎಂದು ಕಳುಹಿ ಸುಭದ್ರೆಯನು ನರ
ನಂದನನ ಬೀಟ್ಕೊಳಿಸಿದನು ನೃಪ
ನಂದನರ ಕಳುಹಿಸಿದನಾಪಾಂಚಾಲಪತಿಯೊಡನೆ |
ಇಂದುವದನೆಯ ಸಂತವಿಟ್ಟು ಮು
ಕುಂದ ರಥವೇಱಿದನು ಕುಂತೀ
ನಂದನರು ಕಳುಹುತ್ತ ಬಂದರು ಕಮಲಲೋಚನನ || ೩೩

---

[1] ಸೌಭದ್ರೆಯನು, ಚ. [2] ಕಾಮರುಹುವುದು ಕೇಳೆಂದ, ಚ.

ಬೀಳುಕೊಂಡರು ಕೃಷ್ಣನನು ಪಾಂ
ಚಾಲಪತಿಯನು ಪಂಚಕೈಕೆಯ
ಚೋಳಕೇರಳಪಾಂಡ್ಯಕುಂತೀಭೋಜಸೃಂಜಯರ ।
ಬೀಳುಕೊಟ್ಟರು ಧೃಷ್ಟಕೇತುನೃ
ಪಾಲಮೊದಲಾದಖಿಳಧರಣೀ
ಪಾಲಕರು ದುಗುಡದಲಿ ಹೊಕ್ಕರು ತಮ್ಮ ನಗರಿಗಳ ॥ ೨೪

ಎರಡನೆಯ ಸಂಧಿ ಮುಗಿದುದು.

---

## ಮೂರನೆಯ ಸಂಧಿ.

### ಸೂಚನೆ.

ಯಜ್ಞಪುರುಷನ ನೇಮದಲಿ ಪಿತೃ
ಯಜ್ಞವನು ಯಮಸೂನು ರಚಿಸಲ
ಭಿಜ್ಞಮುನಿಗಳ ವರಿಸಿ ವಿಧಿವಿಹಿತದಲಿ ಪೂಜಿಸಿದ ॥

ಪಾಂಡವರ ಪ್ರಾರ್ಥನೆಯಂತೆ ಇನ್ನೊಂದು ದಿವಸ ಶ್ರೀಕೃಷ್ಣನು ಇರುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತಿಯ ಪತಿಯ ತದ್ದಿನ
ಕಾಲ ಬಂದುದು ಕೃಷ್ಣ ನಿರುತಿರೆ ತದ್ವನಂಗಳಲಿ ।
ಹೇಳಿದರೆ ಶ್ರೀಕೃಷ್ಣನೆಂದನು
ಕೇಳು ಧರ್ಮಜ ಋುಷಿಗಳೈವರ
ಕಾಲದಲಿ ಕರೆ ನಾಳೆತನಕಿಹೆನೆಂದನಸುರಾರಿ ॥ ೧

ಆಗ ಪಾಂಡುರಾಯರ ಶ್ರಾದ್ಧ ನಡೆದಕ್ರಮ.

ಮಾಡು ವಿಶ್ವೇದೇವರಿಬ್ಬರ
ರೂಢರೀದೂರ್ವಾಸಧೌಮ್ಯರ
ನೋಡಿ ಮಾಡೈ ಮುಖ್ಯಕ್ಷಣದಲಿ ವ್ಯಾಸಕೌಶಿಕರ ।
ಮಾಡು ಪ್ರಪಿತಾಮಹರ ಠಾವಿಗೆ
ಬೇಡಿಕೊಳ್ ಜೈಮಿನಿಯನತಿಥಿಗೆ
ಮಾಡು ನಮ್ಮನು ಶ್ರಾದ್ಧರಕ್ಷೆಗೆ ಭೂಪ ಕೇಳೆಂದ ॥ ೧

ಕೇಳಿ ಧರ್ಮಜ ಕ್ಷಣವನಿತ್ತನು
ಮೇಲೆ ನಾಲ್ವರಿಗಲ್ಲಿ ಜೈಮಿನಿ
ಯಾಲಯುವ ನಾವಱಿಯೆವೆಂದೆನೆ ಕೃಷ್ಣ ನಸುನಗುತ ।
ಲೋಲಮುನಿಯಾಶ್ರಮವು ಹಿಮಗಿರಿ
ಶೈಲದೊತ್ತಿನಲಿರುವುದಲ್ಲಿಗೆ
ನೀಲಗಿರಿಯೆಂಬೊಂದು ನಗವಿದೆ ದಿವ್ಯವನದಲ್ಲಿ ॥ ೨

ಅಲ್ಲಿಗನಿಲಜ ಪೋಗಿ ಕ್ಷಣವನು
ನಿಲ್ಲದಿತ್ತೊಡೆ ಬಱಿಕ ಶ್ರಾದ್ಧವ
ನೊಲ್ಲೆನೆನ್ನನು ದುಃಖ ಬಂದರೆ ಪರರ ಕಾರ್ಯಕ್ಕೆ ।
ಒಲ್ಲೆನೆನ್ನನು ಶವವ ಹೊಱಲಿಕೆ
ಒಲ್ಲೆನೆನ್ನನು ಬಂದ ದುರಿತಕೆ
ಒಲ್ಲೆನೆನ್ನನು ಪರರ ಸುಖಗಳ ರಾಯ ಕೇಳೆಂದ ॥ ೪

ಒಲ್ಲೆನೆನ್ನನು ತೀರ್ಥಯಾತ್ರೆಯ
ನೊಲ್ಲೆನೆನ್ನನು ದೇವಯಾತ್ರೆಯ
ನೊಲ್ಲೆನೆನ್ನನು ಪರರ ವಂದಿಸೆ ವೇದಸಂಹಿತೆಯ ।
ಒಲ್ಲೆನೆನ್ನನು ನಿತ್ಯಕರ್ಮವ
ನೊಲ್ಲೆನೆನ್ನನು ದುಃಖಬಂದರೆ
ಒಲ್ಲೆನೆನ್ನನು ಪುಣ್ಯಕಥನವ ರಾಯ ಕೇಳೆಂದ ॥ ೫

ಭೂಮಿಯಲಿ ಪರರನ್ನಪಾನವ
ಸೋಮಶೇಖರ ಧರಿಸಲರಿಯನು
ಕಾಮುಕರು ತಾವೇನನರಿಸುವರರಸ ಚಿತ್ತೈಸು ।
ಭೂಮಿಸುರನೃಪವೈಶ್ಯಶೂದ್ರ
ಸ್ತೋಮದಲಿ ನೋಡಲ್ಕೆ ವಿಪ್ರ
ಸ್ತೋಮವೇ ಸತ್ಪಾತ್ರವೆಂದನು ದಾನವಧ್ವಂಸಿ ॥ ೬

ಅದನು ಧರಿಸಲು ದ್ವಿಜನೆ ಯೋಗ್ಯನು
ಮುದದಿ ಲೋಕವನುಂಡು ರಕ್ಷಿಸೆ
ಸದೆ ಬಡಿವನುಂಡವರ ಪಾಪವನಿದು ನಿರರ್ಥಕವೆ ।
ನದಿಗೆ ವಿಪ್ರಂಗನಲಗಾಗಲು
ವಿಧಿಸಿಹುದೆ ಯನುಚಿತವ ವೈರಿಗೆ
ಮುದದಿ ಸಂದೊಡೆ ನಾಲ್ಕುವರ್ಣದೊಳಾರು ಹೇಳೆಂದ ॥ ೭

ಎಂದ ಮಾತನು ಕೇಳಿ ಧರ್ಮಜ
ನಂದು ಕಳುಹಿದನನಿಲಜನ ನಲ
ವಿಂದಲೈತಂದಂಘ್ರಿಗೆಱಗಿದನೊಲಿದು ಜೈಮಿನಿಗೆ ।
ತಂದೆ ನೀನಾರೆನಲು ಪವನಜ
ಬಂದಕಾರ್ಯವದೇನೆನಲು ತಾ
ಬಂದೆನಗ್ರಜ ಬೆಸಸೆ ನಿಮ್ಮಡಿಗೆಂದನಾಭೀಮ ॥ ೮

ಆವ ಕಾರಿಯ ವಾವ ಕಾರಣ
ವಾವುದಭಿಮತ ಬೆಸಸೆನಲು ಭೂ
ದೇವ ಬಿನ್ನಹ ತದ್ದಿವಸವಿದು ನಮ್ಮ ಜನಕಗೆ ।
ನೀವು ಕ್ಷಣವನು ಸ್ವೀಕರಿಸಿ ಯೆನೆ
ಭಾವದಲಿ ಕಡು ನೊಂದು ನಿನಗೀ
ತಾವನಾರಱುಹಿದರು ಯೆನೆ ಕೈಮುಗಿದನಾಭೀಮ ॥ ೯

ಭೀಮಸೇನನ ಮಾತಿಗೆ ಜೈಮಿನಿಯ ಚಿಂತೆ.

ಮುನಿಪನತಿಚಿಂತಿಸಿದನೆನಗೀ
ಘನತರದ ರಾಜಾನ್ನವಿದನಾ
ಹ್ಲೆಣಿಸುವೆನೆ ರಾಜಪ್ರತಿಗ್ರಹ ಕ್ರೂರತರವಿದನು ।
ತನಗೆ ಹರಿವುದೆ ಗಸಣಿ ಬೇಡೆಂ
ದೆನುತ ದೂರಾಶ್ರಮದೊಳಿರುತಿರೆ
ಮುನಿಪ ಮುನಿದನು ಕೃಷ್ಣಗಾವಪರಾಧಿ ತಾನೆಂದು ॥ ೧೦

ಬಲ್ಲೆನೆಂದೊಡೆ ಘಾತಕಕೆ ಕಡೆ
ಯಿಲ್ಲ ಧರಿಸಿದೊಡಿದಱ ಲಘುತನ
ವಿಲ್ಲದಿಹುದೇ ದೇಹದಲಿ ಮಾಸಾಂತ ಸರಿಯಂತ ।
ಎಲ್ಲಜನಮಾಡಿದ ಸುಕೃತಫಲ
ವೆಲ್ಲವಾತಗೆ ಸೇರುವುದು ನಮ
ಗಿಲ್ಲ ಹೋ ಹೊ ಶಿವಾ ಯೆನುತ ತುಂಬಿದನು ಕಂಬನಿಯ ॥ ೧೧

ಆವಪರಿಯಪರಾಧವ್ರೋ ನಮ
ಗೀವಿಪತ್ತಡಸಿದುದು ಶಿವ ಶಿವ
ದೇವ ನೀನೇ ಬಲ್ಲೆ ಯೆನುತವೆ ತೂಗಿದನು ಶಿರವ ।
ನಾವು ನೆನೆದಿಹುದೊಂದು ಹರಿ ತಾ
ಭಾವಿಸಿದ ಮತ್ತೊಂದನೆನುತವೆ
ದೇವಋಷಿ ನುಡಿಸಿದನು ಪವನಜ ಹೇೞು ಹೇೞೆಂದ ॥ ೧೨

ಆಗ ಭೀಮಸೇನನು ಶ್ರೀಕೃಷ್ಣನ ಅಪ್ಪಣೆಯಂತೆ ತಮ್ಮನ್ನು
ಕರೆದುದು ಯೆಂದು ಹೇೞುವಿಕೆ.

ಎಂದ ನಮ್ಮಗ್ರಜನು ದೇವ ಮು
ಕುಂದನನು ಬೆಸಗೊಂಡ ಜೈಮಿನಿ
ಯೊಂದಿದಾಶ್ರಮವಾವುದೆನೆ ಕರುಣಿಸಿದನಿಂದೆಮಗೆ ।

ಎಂದೊಡುಬ್ಬಿದ ದೇವನೆನನು ನನೆ
ದಿಂದು ದಂದುಗ ಬಡಕೃಪೇಕ್ಷಣ
ದಿಂದ ನಿಜವೆನು ತೋರ್ಪ ಭರವಿದು ಯೆನುತ ಕೈಕೊಂಡ ॥ ೧೩

ಜೈಮಿನಿಯು ಧರ್ಮರಾಯನನ್ನು ಸ್ತುತಿಸುವಿಕೆ.

ಆವ ಭಾವದಲಿದ್ದೊಡವರನು
ಶ್ರೀವರನು ಕರುಣಿಸಿದ ಬಗೆಯಲಿ
ಭೂವರನ ಹೊರೆಗೈದಿ ಬಂದನು ಕೃಪೆಯಲಾನೃಪನ ।
ನೋವೆನಾರಣ್ಯದಲಿ ಕಳಿವ್ರದ
ಕಾಯುವೆನು ಸಂತೈಸೆ ಬಂದನ
ದಾವೆಋುಷಿ ಧರ್ಮಜಗೆ ಸರಿ ದೊರೆ ಯೆಂದನಾಮುನಿಪ ॥ ೧೪

ಶ್ರೌತಕರ್ಮಕೆ ಸಿಲುಕನಿವ ಶಾ
ಸ್ತ್ರೋಕ್ತಕರ್ಮಕೆ ಸಿಲುಕನತಿಸಂ
ಪ್ರೀತಿಯಹ ನವವಿಧದ ಬಕುತಿಗೆ ಸಿಲುಕ ಮುನಿವರರ ।
ಭ್ರಾಂತು ಬಟಿಕಧ್ಯಾತ್ಮನಿಷ್ಠರಿ
ಗಿಂತು ತೋಱುವೆನಲ್ಲ ನಿಜವನ
ದೆಂತು ಧನ್ಯನೊ ಧರ್ಮನಂದನನೆಂದನಾಮುನಿಪ ॥ ೧೫

ನಾವು ವೃದ್ಧರು ಪಥವೆಮಗೆ ದು
ರ್ಭಾವ ಕಾಲಕೆ ಹೋಹ ಬೇಹುದಿ
ದಾವ ಹದನೆಂದೆನಲು ಪವನಜ ನಿಂದು ಕೈಮುಗಿದ ।
ನೀವು ಬಿಜಯಂಗೈಯ್ಯೆ ಹೆಗಲ
ಲ್ಲಾವವೇಗದಲೊಯ್ವೆನೆನೆ ನಗು
ತಾವಿಬುಧವರ ಬಱಲಿದಾಗಱುಹುವೆನು ನಡೆಯೆಂದ ॥ ೧೬

ಹಿಂದೆ ನೋಡದೆ ನಡೆ ಯೆನಲು ಹರಿ
ನಂದನನು ಬೇಗದಲಿ ಬರುತಿರೆ
ಮುಂದೆ ಬಹುವೇಗದಲಿ ಬಂದನು ಮುನಿ ವನಾಂತರಕೆ ।

ಬಂದು ಕುಳಿತು ಧ್ಯಾನದಿಂದಿರೆ
ಬಂದು ಕಂಡನು ಭೀಮ ಪೊಡಮ
ಟ್ಟೆಂದನಾಶ್ರಮಕೈದಬೇಹುದೆನುತ್ತ ಬೆಱಗಾದ ॥ ೧೭

ಮುಂದೆ ನಡೆಯೈ ಭೀಮ ದೇವ ಮು
ಕುಂದನೆಲ್ಲಿಹ ಧೌಮ್ಯ ದರ್ಭೆಯು
ತಂದು ಯುವತಿಲಶೃಂಗಿಶತಪತ್ರಾದಿತುಳಸಿಗಳ ।
ತಂದು ಶಿಷ್ಯರು ಸಾಧಿಸಿದರೆನೆ
ಬಂದನಾಧರ್ಮಜನು ಸ್ನಾನಗ
ಳಂದ ಕರ್ಮವ ವಿಧಿಸಿದನೆ ನೋಡೆಂದನಾಮುನಿಪ ॥ ೧೮

ಭೀಮನ ಆಗಮನ.

ತ್ವರಿತದಿಂದಲಿ ಮತ್ತೆ ಪವನಜ
ಮುರಹರನ ಬಳಿಗೈದಿ ಸುಮ್ಮನೆ
ಯಿರದೆ ವಿಮಲಗುಣರಹ ವೇದವ್ಯಾಸಧೌಮ್ಯರಿಗೆ ।
ಪಿರಿದು ಚರಣದಲೆಱಗಿದನು ಶ್ರೀ
ವರನು ಕರುಣದಲಂದು ಬೇಗನೆ
ಶಿರವ ತಡವರಿಸುತ್ತ ಕೇಳಿದನಾಗಮದ ಪರಿಯ ॥ ೧೯

ಶ್ರೀಕೃಷ್ಣನು ಜೈಮಿನಿಯ ಅಭಿಪ್ರಾಯವನ್ನು ಕೇಳಿದುದು.

ಏನ ನಿನ್ನೊಡನೆಂದನೈ ನೀ
ನೇನ ಮುನಿಯೊಡನೆಂದೆ ಯಿದಱ ವಿ
ಧಾನವನು ಪವಮಾನಸುತ ವಿಸ್ತರಿಸಿ ಹೇಳೆನಲು ।
ಭಾನುಸನ್ನಿಭ ಹರುಷದಲಿ ಯಮ
ಸೂನು ಹರಿಧೌಮ್ಯಾದಿಮುಖ್ಯರಿ
ಗಾನು ಭೂಪತಿಯನುಜನೆಱಗಿದೆನಧಿಕಭಕ್ತಿಯಲಿ ॥ ೨೦

ಚಿತ್ತವಿಸು ಮುರವೈರಿ ಯಾಮುನಿ
ಪೋತ್ತಮನ ಪೊರೆಗೈದಿ ಪೊಡಮಡ

ಲೆತ್ತಿದನು ಮನ್ನಿಸಿದ ನೀನಾರೆಂದು ಬೆಸಗೊಂಡ ।
ಇತ್ತ ಬರವೇನಾರು ಹೇಳೈ
ವಿಸ್ತರವನೆನೆ ಪಿತನ ಶ್ರಾದ್ಧನಿ
ಮಿತ್ತಕ್ಷಣವನು ಸ್ವೀಕರಿಸು ಯೆನೆ ಮುನಿಪ ಖತಿಗೊಂಡ ॥ ೨೧

ಅತ್ತನೈ ಮುನಿ ಕಣ್ಣನೀರುಗ
ಳೊತ್ತರವನೇನೆಂಬೆನೈ ಯೆನ
ಲೊತ್ತರಿಸಿದುವು ಧರ್ಮಪುತ್ರಗೆ ನಯನವಾರಿಗಳು ।
ಚಿತ್ತ ಮುಳಿದುದು ಹರಿಯ ನೇತ್ರದೊ
ಳೊತ್ತರಿಸಿ ಜಲ ಸುಳಿಯೆ ಮನವನು
ತೆತ್ತು ಸಂದೇಹದಲಿ ವಿಸ್ಮಿತನಾದನಾಭೀಮ ॥ ೨೨

ಮುನಿಯು ಅಸಮಾಧಾನವನ್ನು ಹೇಳಿದುದು.

ಎಂದನೀಪವಮಾನಸುತನು ಮು
ಕುಂದನನ ಬೆಸನೇನು ಮುನಿ ಕ್ಷಣ
ವೆಂದೆನಲು ಶೋಕಿಸಿದ ಕಾರಣವೇನು ಧರ್ಮಜಗೆ ।
ಬಂದ ವಿವರವ ವಿಸ್ತರಿಸೆ ನೆಱೆ
ಸಂದ ಕಣ್ಣೀರ್ಸುರಿದುದಿವ್ಮಡಿ
ಬಂದಪುವಿದೇನು ನಯನಾಂಬುಗಳು ಹದನೆಂತೆಂದ । ೨೩

ಕೇಳು ಪವಮಾನಜ ಪರಾನ್ನದೆ
ಕೀಳಹುದು ರಾಜಾನ್ನವಿದು ನಾ
ನಾಲಿಸಿದೆನೊಲಿದಾಯ್ತುಲಾತನಗೀಪ್ರತಿಗ್ರಹವು ।
ಮೇಲೆ ದೂರಾಶ್ರಮದೊಳೀಶ್ವರ
ನೋಲಗವ ನೆನೆದಿರ್ದ ತನಗೀ
ಹೋಲದಿಹ ರಾಜಾನ್ನ ಬರಲಂತದಕೆ ಶೋಕಿಸಿದ ॥ ೨೪

ಮಾನನಿಧಿ ಯಮಸೂನು ಮನದ ವಿ
ತಾನದಲಿ ಕಣ್ಣೀರ ಸುರಿದನು

ಹೀನವೀದೇಶಾಧಿಪತ್ಯವ ಸುಡಲಿ ಪಾತಕವ ।
ಈನೆಲನ ಹೊಱಲಾಪುದೇ ನ
ಮ್ಮಾನನಕೆ ಮುನಿಯೋಕರಿಸಿದನು
ಹೀನ ರಾಜಾಧೀಶತನವೆಂದೆನುತ ಬಿಸುಸುಯ್ದ ॥　　೨೫

ಅಸಮಧಾನಕ್ಕೆ ಕಾರಣವನ್ನು ಹೇಳೆಂದು ಶ್ರೀಕೃಷ್ಣನನ್ನು
ಕುರಿತು ಪ್ರಾರ್ಥನೆ.

ಮುನಿಪತಿಯು ಯಮಸುತನ ನಯನೋ
ಜ್ಜನಿತ ಸಲಿಲವಿದೇಕೆ ತನ್ನಯ
ಮನದ ಸಂದೇಹವನು ಬಿಡಿಸೆಲೆ ದೇವ ಚಿತ್ತೈಸು ।
ಘನತರದ ಹದಿನಾಲ್ಕು ಲೋಕವು
ಕುಣಿಯುತಿಹುದೀನಿನ್ನ ರೋಮದ
ಲಿನಿತಿದೇನೈ ನೀನಿದನು ತಿಳುಹೆಂದನಾಭೀಮ ॥　　೨೬

ಆಗ ಕೃಷ್ಣನ ಧರ್ಮೋಪದೇಶ.

ಭೀಮ ಕೇಳೈ ಯುಗದ ಧರ್ಮದ
ಧಾಮ ನೀನೇ ದ್ವಾಪರಾಂತಶಿ
ರೋಮಣಿಯಲಾ ಧರ್ಮಪುತ್ರನು ಸಕಲಭೂಪರಿಗೆ ।
ಸೋಮವಂಶವನುದ್ಧರಿಸಿದನು
ಕಾಮಿತವ ಭೂಸುರರಿಗಿತ್ತು ಮ
ಹಾಮಹಿಮೆಯಲಿ ಪಾಲಿಸುವನೀಯಖಿಳಭೂತಳವ ॥　　೨೭

ಈಮಹೀಪತಿ ಯುಟಿಯೆ ಮುಂದಣ
ಭೂಮಿಪಾಲರದಾವ ವಿಪ್ರರ
ಕಾಮಿಸುವರೈ ಹೇಮವಸ್ತ್ರಾಭರಣದಾನದಲಿ ।
ನಾಮವೊಂದನು ಭೂಸುರರ ನಿ
ರ್ನಾಮಕಂಗೈಸುವರು ಕೇಳಲೆ
ಕಾಮುಕರು ಕಲಿಯುಗದ ರಾಯರು ಭೀಮ ಕೇಳೆಂದ ॥　　೨೮

ಬಂದ ವಿಪ್ರಂಗನ್ನ ಹೊನ್ನನು
ತಂದು ಕೊಡಲಿಕೆ ಕ್ಲೇಶಗೊಂಬರು
ಮುಂದೆ ಕಲಿಯುಗದಲ್ಲಿ ವಿಪ್ರರ ಬಗೆವರಿಲ್ಲೆಂದ ।
ಇಂದಿದಕೆ ಕ್ಲೇಶವನು ಮಾಡಿದೆ
ತಂದೆ ಕೇಳ್ಕೆ ಭೀಮ ಗೋದ್ವಿಜ
ವೃಂದಭೂಸುರಧರ್ಮವಿದಕಾರ್ ಹಿತವರದಱಿಂದ ॥ ೨೯

ಕಱಗುವೆನು ಮುಂದಿವರಿಗಹುದೈ
ನೆಱೆ ನಿರೋಧವು ಕಲಿಯ ರಾಜ್ಯದೊ
ಳೊರಸಿ ಹೋಹುದು ಧರ್ಮ ದುರ್ಮಾರ್ಗಪ್ರವೃತ್ತಿಯಲಿ ।
ಧರಣಿಯಮರರು ಜಗದಲಧಮರು
ವರಪತಿವ್ರತೆಯರಿಗೆ ವೆಗ್ಗಳ
ಪಿರಿದು ಜಾರೆಯರಹರು ಗೋವಿಂದಧಿಕಕಸುನವೆಂದ ॥ ೩೦

ಮಾನಮನ್ನಣೆ ಹಿರಿದು ಕೇಳ್ಕೆ
ಹೀನರಹ ಘನನಾಲ್ಕು ವರ್ಣಕೆ
ಮಾನವೆಂಬುದು ಹೀನವಾಯ್ತಾ ವರ್ಣನಾಲ್ಕ ಱಲಿ ।
ಮಾನನೀಯರು ದ್ವಿಜರು ಶಕ್ರಸ
ಮಾನರಾ ಕ್ಷತ್ರಿಯರು ಮನುಜವಿ
ತಾನದಲಿ ವೈಶ್ಯಾದಿಜಾತಿಯೆ ಪೂಜ್ಯತರವೆಂದ ॥ ೩೧

ಭೀಮ ಕೇಳ್ಕೆ ವೇದಮಾರ್ಗ
ಸ್ತೋಮದಲಿ ಭೂಸುರರು ಘನಸಿ
ಸ್ಸೀಮರಪ್ಪರು ಬಳಿಕಲಮಳಕ್ಷತ್ರಿಯೋತ್ತಮರು ।
ಆಮಹಾವೈಶ್ಯೋತ್ತಮರ ಬಳಿ
ಕಾಮಹಾಶೂದ್ರರು ವಿಧವಿಧದ
ಕಾಮದಿಂದಲೆ ಯಧಮರಾದರು ಭೀಮ ಕೇಳೆಂದ ॥ ೩೨

ನಾಮಮಾತ್ರದೆ ವಿಪ್ರ ಭುಜಬಲ
ತಾಮಸನೆ ಕ್ಷತ್ರಿಯನು ಘನನಿ
ಸ್ಸೀಮಧನಿಕನೆ ವೈಶ್ಯ ಕೃಷಿಕನೇ ಶೂದ್ರನೆಂದೆನಿಸಿ ।
ಭೂಮಿಯಲಿ ವರ್ತಿಸುವರವರನು
ಲೋಮವಿಲೋಮಸನಾಮಭೇದವ
ಭೂಮಿಪತಿಗಳು ತಿಳಿವುದಿಲ್ಲಲೆ ಭೀಮ ಕೇಳೆಂದ ॥ ೩೩

ಮಾನಿನಿಯರುಪಭೋಗಕಾಲವ
ಮಾನಿಸರು ಘನಕಾಮುಕರು ವರ
ಮಾನಿನಿಯು ಷಣ್ಮಾಸಗರ್ಭದಲಕ್ಕು ಹಾನಿಯೊಳೆ ।
ಹೀನಬುದ್ಧಿಯಲಾಪತಿವ್ರತೆ
ಮಾನಿನಿಯರೊಡನೆಳಸಿದವನನು
ಮಾನವಿಲ್ಲದೆ ಕೆಡುವನಿಹಪರಕಲ್ಲದವನೆಂದ ॥ ೩೪

ಈಸಕಲಸನ್ಮಾರ್ಗಕವರ್ಮಾ
ಭ್ಯಾಸವೆಳ್ಳನಿತಿಲ್ಲ ಕೌರವ
ಕಾಶ್ಯಪೀಶ್ವರ ನೆನೆಸಿದನು ಷಣ್ಮಾಸಗರ್ಭದಲಿ ।
ಭಾಸುರದ್ಯುತಿಯೆನಿಪ ಸಾಂದ
ರ್ಯಾಸದೃಶಲಾವಣ್ಯಕೇಳಿಗೆ
ವಾಸವೆನಿಸುವ ಭಾನುಮತಿಯುನದಾಯ್ತು ಗತಿಯೆಂದ ॥ ೩೫

ಮುನ್ನ ಲಕ್ಷಣೆ ನವಸುಲಕ್ಷಣೆ
ಕುನ್ನಿ ಲಕ್ಷಣಗಾದಳದಱಿಂ
ಮುನ್ನ ಕನ್ನೆಯು ರಮಿಸಿದನು ಕುರುರಾಯನುಬ್ಬಿನಲಿ ।
ಮುನ್ನ ದ್ರುಪದಾತ್ಮಜೆಯು ಮಾನಕೆ
ಭಿನ್ನ ಗಂಡನು ಸಕಲದೋಷಕೆ
ಬನ್ನ ಬಡವನು ಯಿವನು ತಾ ಕಲಿಯಂಶ ಕೇಳೆಂದ ॥ ೩೬

ಈಯೆರಡುಕರ್ಮದಿ ಸುಯೋಧನ
ನಾಯುಷವದೈಶ್ವರ್ಯ ಕೆಡುವುದಿ
ದಾಯುವಾದರು ಮಾಡಲಾಗದು ಶಾಸ್ತ್ರನಿಶ್ಚಯಕೆ ।
ರಾಯ ನಿಮ್ಮಯ ಸತಿಯ ಭಾಗ್ಯದ
ದಾಯದಲಿ ನಿಮಗಕ್ಕು ಲೋಕ
ನ್ಯಾಯಸಂಪದ ಮೇಲೆ ಕೈವಲ್ಯಾದಿಫಲವೆಂದ ॥ ೩೭

ಇನಿತು ಹೇಳ್ದು ಮುರಾರಿ ಧರ್ಮಜ
ಮುನಿಯ ಕರೆಯೌ ಕುತುಪಕಾಲದಿ
ನೆನೆಹ ನೋಡಲು ಕಾಲತಪ್ಪಿದೊಡದುವೆ ಫಲವಹುದೆ ।
ಎನಲು ಮುದದಿಂದೆದ್ದು ಕರಯುಗ
ವನು ಶಿರದೊಳಾಂತನು ಹರುಷಮಿಗೆ
ಮುನಿಯ ಹೊರೆಗೈದಿದನು ಮೈಯ್ಯಿಕ್ಕಿದನು ಭಕ್ತಿಯಲಿ ॥ ೩೮

ಧರ್ಮರಾಯನನ್ನು ಕುರಿತು ಜೈಮಿನಿಯ ಸ್ತುತಿ.

ಮುನಿಪನಾಶೀರ್ವದಿಸುತಾಯುವು
ತನಯ ಸರಿಯೇ ನಿನಗೆ ರಾಯರು
ಘನತರದ ಪುಣ್ಯಾತ್ಮ ನೀನುತ್ತಮಚರಿತನೆಲೆ ।
ದನುಜಮರ್ದನ ನಿಮ್ಮ ಸಹಚರ
ನೆನಿಸಿಕೊಂಡೊಡನಾಡಿದನು ಘನ
ಸನಕನಾರದಮುಖ್ಯರಿಂಗಿನಿತಿಲ್ಲ ಸುಖವೆಂದ ॥ ೩೯

ಈಸುದಿನ ನಾನಾತಪದಲಾ
ಯಾಸ ಬಟ್ಟೆವು ಕಾಣೆವಾತನ
ನೇಸು ಧನ್ಯನೊ ನೀನೆನುತ ಮುನಿಯೆದ್ದನಾಕ್ಷಣಕೆ ।
ಭೂಸುರನು ಕೈವಿಡಿದು ಧರ್ಮನ
ಭಾಷಿಸುತ ನಡೆತಂದು ಕಂಡನು
ವಾಸುದೇವನನಂದು ಮೈಯ್ಯಿಕ್ಕಿದನು ಭಕ್ತಿಯಲಿ ॥ ೪೦

ಜೈಮಿನಿಯು ಶ್ರೀಕೃಷ್ಣನನ್ನು ನಮಸ್ಕರಿಸಿದುದು.

ಮುನಿಪ ಚೇತರಿಸಿದನು ಪುಳಕದ
ತನಿಯು ರೋಮದ ಗುಡಿಯು ಕಂಗಳ
ಕೊನೆಯುಲರ್ಘ್ಯಾಂಬುವಿನ ಭಕ್ತಿಯು ಭಾವಶುದ್ಧಿಯಲಿ ।
ನೆನೆದು ಕೃಷ್ಣ ಮುರಾರಿ ಗೋಪೀ
ತನಯ ಆನತಬಂಧುಹಿತ ನೀ
ನೆನುತ ಪದಪದ್ಮದಲಿ ಮೆಯ್ಯಿಕ್ಕಿದನು ಶ್ರೀಹರಿಗೆ ॥ ೪೧

ತ್ರಾಹಿ ಮಧುಸೂದನ ಪರಾತ್ಮಕ
ತ್ರಾಹಿ ಮುನಿಹೃತ್ಕಮಲವಾಸನೆ
ತ್ರಾಹಿ ಮನ್ಮಥಪಿತನೆ ಮಾಯಾತೀತ ಜಗದಧಿಪ ।
ತ್ರಾಹಿ ಚೈತನ್ಯಾತ್ಮ ನಿರ್ಮಲ
ತ್ರಾಹಿ ನಾನಾನಾಮರೂಪನೆ
ತ್ರಾಹಿ ದೇವರ ದೇವ ಯೆನುತಲೆ ಮುದದಿ ಪೊಡಮಟ್ಟ ॥ ೪೨

ಆಗ ಜೈಮಿನಿಗೆ ಶ್ರೀಕೃಷ್ಣನ ಆದರ.

ತೆಗೆದು ಹಿಡಿದೆತ್ತಿದನು ಕರದಿಂ
ದಘಹರನು ಬಿಗಿದಪ್ಪಿದನು ಸೋ
ಜಿಗದೆ ಕರದಿಂದೊತ್ತಿ ಜೈಮಿನಿಮುನಿಯ ಕೊಂಡಾಡಿ ।
ನಗುತ ನುಡಿಸಿದನೇನಿವೇನ್ನೆ
ಸುಗಮಋಷಿ ನಿನಗೇಕೆ ನಿಟ್ಟೈತ
ನಿಗಮಮತಸುಗುಣಾಬ್ಧಿ ಯೆನುತಾಮುನಿಯನೀಕ್ಷಿಸಿದ ॥ ೪೩

ಪಿತೃಯಾಗವನ್ನಾರಂಭಿಸೆಂದು ಶ್ರೀಕೃಷ್ಣನ ಆಜ್ಞೆ.

ಇಂದೆಮಗೆ ಸಿದ್ಧಿಸಿತು ನಾನಾ
ದಂದುಗಂ ಬಡುಮಾತಪಃಫಲ
ವೆಂದೆನುತ ಕೈಮುಗಿದು ದೂರ್ವಾಸನನು ಕೌಶಿಕನ ।

ವೆಂದ್ಯವೇದವ್ಯಾಸಧೌಮ್ಯರ
ನೆಂದು ಕುಶಲವ ಕೇಳಿ ಧರ್ಮಜ
ಗೆಂದ ನಡೆಸೈ ಕ್ರಿಯೆಯನೆಂದಾಜ್ಞಾಪಿಸಿದನೊಲಿದು ॥ ೪೪

ಯಾಗಕ್ರಮ.

ಎನಲು ಧರ್ಮಜ ಕರವ ಮುಗಿದನು
ದಿನಪತಿಯು ಮಧ್ಯಾಹ್ನಕೈದಲು
ಮುನಿಗಳೈವರ ಕಾಲ ತೊಳೆದನು ಕೃಷ್ಣನಾಜ್ಞೆಯಲಿ ।
ಅನಿಲಸಂಭವಮುಖ್ಯನಾಲ್ವರು
ಜನಪತಿಯು ಹೇಳಿದುದ ಮಾಡುತ
ತನತನಗೆ ರಕ್ಷೋಘ್ನಸೂಕ್ತವನೊಲಿದು ಜಪಿಸಿದರು ॥ ೪೫

ಹರಿಯು ತಾ ಕೈಕೊಂಡು ಶ್ರಾದ್ಧದ
ನಿರುತರಕ್ಷೆಯ ಬಳಿಯ ಪಾಂಡವ
ರರಸಿ ಬಡಿಸಿದಳೆಂದು ದಿವ್ಯರಸಾನ್ನಪಾನಗಳ ।
ಅರಸ ಕೇಳೈ ಪಾಂಡುಪುತ್ರರು
ಹರಿಸಮರ್ಪಣೆಮಾಡಿ ಪಿತೃಗಳ
ಪೊರೆದರಗ್ನೌಕರಣಬ್ರಾಹ್ಮಣಭೋಜನಾಂತದಲಿ ॥ ೪೬

ಮಾಡಿದರು ಪಿಂಡಪ್ರದಾನವ
ರೂಢಿಗಧಿಪತಿ ಶ್ರಾದ್ಧವೇಕೆನೆ
ನೋಡಿ ಹೇಚೈಮುನಿಪ ನೀನೆನೆ ರಾಯ ಕೇಳೆಂದು ।

ಪಿತೃಯಾಗದಿಂದ ಪಿತೃಗಳಿಗೆ ಆಗುವ ತೃಪ್ತಿಕ್ರಮ.

ರೂಢಿಯಲಿ ಜನಿಸಿದರಿಗಹುದೈ
ಮಾಡಿದಗ್ನೌಕರಣ ನಾಕಾ
ರೂಢಗತರಿಂಗಹುದು ಭೂಸುರರುಂಡಫಲವೆಂದ ॥ ೪೭

ಜವಪುರಕೆ ಬಿದ್ದವರಿಗಹುದೈ
ಅವಧರಿಸಲಾ ಪಿಂಡಶ್ರಾದ್ಧವು
ಯಿವನು ಮಾಡಲು ಬಾರದಾರಿಗೆ ಕೃಷ್ಣನಾಜ್ಞೆಯಿದು ।
ಅವನಿಪತಿ ಚಿತ್ತೈಸು ಪಾಂಡವ
ರವರು ಮಾಡಿದ ಶ್ರಾದ್ಧಕರ್ಮದ
ಸೇವನ ಸತ್ಕೃತವಾಯ್ತು ತಾ ನೆಟ್ಟಿ ಮಂತ್ರತಂತ್ರದಲಿ ॥ ೪೮

ಹರಿಯು ಕಾರುಣ್ಯಾವಲೋಕನ
ಸರಣಿಯಲಿ ಸಂಪೂರ್ಣವಾದುವು
ಧರಣಿಪತಿ ನಿಮ್ಮವರು ಮಾಡಿದ ಶ್ರಾದ್ಧಕರ್ಮಗಳು ।
ನಿರುತವಾದುವು ಅಷ್ಟಶುದ್ಧಿಯು
ಕೊರತೆ ಯಿಲ್ಲದೆ ಪೂರ್ಣವಾದುವು
ಸರಸಿಜಾಕ್ಷನ ಚರಣ ದರುಶನ ಸಫಲವಾಯ್ತೆಂದ ॥ ೪೯

ಜೈಮಿನಿಯು ಸಂತೋಷಪಟ್ಟು ಪಾಂಡವರನ್ನು ಆಶೀರ್ವದಿಸುವಿಕೆ.

ಬಳಿಕ ಪಾಂಡುವ ನೃಪನ ಶ್ರಾದ್ಧದೆ
ನಳಿನನಾಭಾದಿಗಳು ಭೋಜಕ
ರೊಲಿದು ಹರಸಿದರಂದು ಪಾಂಡುಕುಮಾರರೈವರನು ।
ಕಳುಹಿದರು ಮುನಿವರರ ತಮ್ಮಯ
ನಿಳಯಕಾಗಲು ಬಳಿಕ ಜೈಮಿನಿ
ಮುಳುಗಿದನು ಪರಿತುಷ್ಟನಾದನು ಹರಿಕೃಪಾಬ್ಧಿಯಲಿ ॥ ೫೦

ನಮ್ಮ ಪಾಪದ ರಾಸಿ ಬೆಂದುದು
ಸುಮ್ಮನೀಪಾಂಡವರ ಗೃಹದಲಿ
ಯೊಮ್ಮೆ ಯನ್ನವನುಣಲಿಕೆನುತವೆ ನಡೆದನಾಶ್ರಮಕೆ ।
ಕರ್ಮಕರ್ತೃ ಪರ್ಣದಲನ್ನವ
ಬ್ರಹ್ಮರುದ್ರಾದಿಗಳು ಬಯಸುವ
ರೆಮ್ಮ ಪುಣ್ಯವ ನೋಡಿರೈ ಸಲೆ ಪಾಂಡುನಂದನರ ॥ ೫೧

ತಮ್ಮ ತಾವಾಗಱಸಿ ಕೃಷ್ಣನೆ
ಯೆಮ್ಮ ಕಾಣಿಸಿಕೊಟ್ಟನೀಗಲು
ನಿಮ್ಮನಿಹಪರಕೀರ್ತಿಯಲಿ ರಕ್ಷಿಸಲಿ ಮುರವೈರಿ ।
ಬೊಮ್ಮವಿದರೀಪಾಂಡವರ ಸಲೆ
ಕರ್ಮಪಟವನು ಹರಿಯುತಲೆ ತಾ
ತಮ್ಮ ಪಾಂಡವನಿಳಯವನು ಬಿಡನೆನುತ ಬೀಳ್ಕೊಳಲು ॥ ೫೦

ಆಗ ದ್ರೌಪದಿಯು ಶ್ರೀಕೃಷ್ಣನ ಪಾದದ ಮೇಲೆ ಬಿದ್ದು
ಪ್ರಾರ್ಥಿಸಿದುದು.

ಬೞಿಕ ಪಾಂಡವರಾಯರನು ಬೀ
ಳ್ಕೊಳಲು ದ್ರೌಪದಿಲಲನೆ ನೆಱೆ ಬಂ
ದಳುರಳಿದಳು ತಾ ಕೃಷ್ಣದೇವನ ಚರಣಕಮಲದಲಿ ।
ಎಲೆ ಮುರಾಂತಕ ಕೃಷ್ಣ ನಮ್ಮನು
ಹೞುವದಲಿ ನೀನಿರಿಸಿ ಹೋದರೆ
ಬೞಲೆವೇ ತಾವೆನಲು ನಗುತಸುರಾರಿ ಯಿಂತೆಂದ ॥ ೫೭

ಸಂತವಿಸಿ ಪಾಂಡವರನಾಮುನಿ
ಸಂತತಿಯು ಮನ್ನಿಸಿ ಮಹೀಭೃ
ದಾಂತರವ ನಿಶ್ಚೈಸಿ ಭಾರತಪಾರಿಶೇಷಿಕವ ।
ಅಂತರಾತ್ಮಕನೊಲವಿನಲಿ ಜಗ
ದಂತರಂಗಸ್ಥಾಯಿಲಕ್ಷ್ಮೀ
ಕಾಂತ ಬಿಜಯಂಗೈದು ಹೊಕ್ಕನು ದ್ವಾರಕಾಪುರವ ॥ ೫೮

ಮೂರನೆಯ ಸಂಧಿ ಮುಗಿದುದು.

## ನಾಲ್ಕನೆಯ ಸಂಧಿ.

**ಸೂಚನೆ.**

ಬರುತ ಕಂಡನು ಕಣ್ವನಾಶ್ರಮ
ವರದ ಜಂಬೂಫಲವ ಮಾರುತಿ
ತರಲು ಯಮಸುತ ಹಲುಬೆ ಮುರರಿಪು ಶಾಖೆಗೇಱಿಸಿದ ||

ಧರ್ಮರಾಯನು ಮುನಿಜನಗಳೊಡನೆ ವನದಲ್ಲಿ ಸಂಚರಿಸುವಿಕೆ.

ಕೇಳು ಜನಮೇಜಯ ಧರಿತ್ರೀ
ಪಾಲ ಯಮಸುತ ಮುನಿಜನಂಗಳ
ಮೇಳದಲಿ ಹೊಱವಂಟು ತನ್ನನುಜಾತರೊಡಗೂಡಿ |
ತಾಳಿಗೆಯ ತಲ್ಲಣದ ಗಿರಿಗಳ
ಮೇಲೆ ಚರಿಸುತ ಬಂದು ವಿಪಿನ
ವ್ಯಾಳಗಜಶಾರ್ದೂಲಸಿಂಹಾದಿಗಳನೀಕ್ಷಿಸುತ || ೧

ಬರಬರಲು ಮುಂದೊಂದು ವನದಲಿ
ಚರಿಪ ಪಕ್ಷಿಮೃಗಾಳಿ ತಳಿತಿಹ
ಬಿರಿಮುಗುಳನೀಕ್ಷಿಸುವ ಮಱಿದುಂಬಿಗಳ ಮೇಳವದ |

ಆವನದ ವರ್ಣನೆ.

ಪರಿಪರಿಯ ಹಣ್ಣುಹಂಪಲುಗಳು [1]
ಚ್ಚರಿಸೆ [2] ಕೊಡುತಿರೆ ಪಕ್ಷಿಮೃಗಕುಲ
ವೆರಸಿ ಮೆಱೆದುವು ವನದ ಸುತ್ತಲು ರಾಯ ಕೇಳೆಂದ || ೨

ತುಂಬುರರಳಿ ಲವಂಗಪಾದರಿ
ನಿಂಬಚೂತಪಲಾಶಪನಸಸು

---

[1] ಪುರಪೂ ಫಲಂಗಳ, ಚ. ಛ. [2] ನಿರದ್ಯೆ, ಚ. ಛ.

ಜಂಬುಗುಗ್ಗುಳಶೋಕವಟಪುನ್ನಾಗಚಂಪಕದ ।
ಕುಂಭಿನಿಯಲುಳ್ಳಖಿಳವೃಕ್ಷಕ
ದಂಬದಲಿ ವನ ಮೆಱೆದುದದನೇ
ನೆಂಬೆನೈ ಪರಿವಾರ ತುಂಬಿದುದಾವನಾಂತರವ ॥ ೩

ತಿಳಿಗೊಳನ ಮಧ್ಯದಲಿ ಮೆಱೆದಿಹ
ನಳಿನನೃಪನಿದಿರಿನಲಿ ಮಧುಪಾ [1]
ವಳಿ [2] ರವದ ಗಾಯಕರ ಪಿಕಪಾಠಕರ ನೃತ್ಯಗಳ ।
ಲಲಿತನವವಿಧ [3] ವಾದ್ಯಗಳ ಘೋಳು
ಘೋಳಿಪ ಕೊಳರ್ವಕ್ಕಿಗಳ ಲಕ್ಷ್ಮಿ
ಲಲನೆಯುರಮನೆ ಯೆನಲು ಮೆಱೆದುದು ಕೊಳವು [4] ಕೇಳೆಂದ ॥ ೪

* ಬಂದು ಭೂವರ ಕೊಳನ ತೀರದಿ
ನಿಂದೊಡಾಕ್ಷಣ ತಳಿರ ತಿರಿತಂ
ದಂದು ಮನೆಮಾಡಿದರು ಭೂಸುರತತಿಗೆ ಋಷಿಜನಕೆ ।
ಅಂದದಲಿ ಪಾಳಯುವ ಬಿಟ್ಟಾ
ನಂದದಲಿ ನಲಿದಾಡುತಿರೆ ರವಿ
ಯಂದಿೞಿದನಪರಾಂಬುಧಿಗೆ ಭೂಪಾಲ ಕೇಳೆಂದ ॥ ೫

ದಿನಪನಪರಾರ್ಣವವನೈದಲು
ವನಜ ಮುಗಿದುದು ಚಕ್ರವಾಕದ
ಮನಕೆ ಖತಿ ಕುಮುದಿನಿಗೆ ಮುದ ಯಾಮಿನಿಗೆ ಸಂತೋಷ ।

---

[1] ಮುತ್ತಿಗೆ, ಜ. [2] ಯುಳ್ಳ, ಖ. [3] ನವಿಲಿನ, ಚ. ಛ. [4] ಭೂಪ, ಚ.

* ಬಂದು ಭೂಪತಿ ಕೊಳನ ತೀರದಿ
ನಿಂದು ತಮಗಾಶ್ರಮದ ಠಾವಹು
ದೆಂದು ಭೀಮಂಗಱುಹಲಾಕ್ಷಣವಾತನೈತಂದು ।
ತಂದು ತಳಿರನು ಪರ್ಣಶಾಲೆಗ
ಳಂದದಲಿ ರಚಿಸಿದನು ಭೂಸುರ
ವೃಂದ ಬಿಟ್ಟುದು ಧರ್ಮಪುತ್ರನ ಸುತ್ತುವಳಯದಲಿ ॥ ಚ. ಛ.

‡ ಕನಕಮಯರಥವೇಱಿ ರವಿ ಬರೆ
ವನಜವರಳಿತು ಕುಮುದ ಮುಚ್ಚಿದು
ದನುಪಮಾನಂದದಲಿ ಷಟ್ಪದ ಮೊಱೆಯಿತೊಲವಿಂದ ‖　　೬

ಗಂಗಾತೀರದಲ್ಲಿಯೇ ಮಧುಮಾಸವನ್ನು ಕಳೆದುದು.

ಋಷಿಗಳೊಳು ಮೇಳವು ವರಾಸನ
ವೆಸೆವ ವನದೊಳಗತುಳಗಂಗಾ
ಪ್ರಸರದಲ್ಲಿಯು ಸ್ನಾನ ಭೋಜನ ಕಾಲದಲಿ ಪಾನ ।
ಮಿಸುಪಸುತಿಯು ವಿಲಾಸಗಳ ಸಂ
ತಸದೆ ಕೇಳುತ ಮಥಿಸುತೊನಲುತ
ವಸುಮತೀವರನಿರ್ದನಾಮಧುಮಾಸ ಕಳಿವನಕ [1] ‖　　೭

ಗ್ರೀಷ್ಮರುತುವು ಬರಲು ಜಂಬೂಫಲವನ್ನು ಕೊಡುವ
ಇಚ್ಛೆ ಹುಟ್ಟಿದುದು.

ಕಳಿದುದಾಮಧುಮಾಸ ಪಸರಿಸಿ
ಸುೞಿದುದೊಯ್ಯನೆ ಗ್ರೀಷ್ಮಋತುವಿನ
ಸುಳಿವು ಜಂಬೂಫಲವ ಬ್ರಾಹ್ಮರಿಗೀವ ಬುದ್ಧಿಯಲಿ ।
ತೊಳಲಿದರು ಹೇರಡವಿಯಲಿ ಕಡು
ಬೞಲಿದರು ಪಾಂಡವರು ದೊರಕದೆ
ಬೞಿಕಲೈದುಪವಾಸವಾದುದು ದ್ರುಪದನಂದನೆಗೆ ‖　　೮

ಆ ವನದಲ್ಲಿ ಭೀಮಸೇನನು ಬೇಟೆಯಾಡಿದುದು.

ಇರುತಿರಲು ಕಲಿಭೀಮ ಮೃಗಯಾ
ತುರದಲೈದಿದನಾಕಿರಾತರು
ಕರೆಯೆ ಹೊಕ್ಕನು ಬಹಳವಿಪಿನಗಿರಿವ್ರಜದ ಗುಹೆಯ ।

---

‡ ಕನಕಮಯವರರಥವನಡರಿಯೆ
ದನುಜರನು ಸಂಹರಿಸೆ ಕಮಲಿನಿ
ಮನದೊಳುತ್ಸಾಹಿಸಲು ರವಿಯುದಯಾಚಲಕೆ ಬಂದ ‖ ಚ. ಛ.

[1] ಧರೆಯಮಜನೆಸೆದನು ಭೂಪ ಕೇಳೆಂದ, ಚ. ಛ.

ವರಹ ಮರೆ ಸಾರಂಗ ಹೆಬ್ಬುಲಿ
ಕರಡಿ ವೃಕ ಶಾರ್ದೂಲ ಕೇಸರಿ
ಕರಿಕಳಭ ಮುಱಿಗೆಡೆದು ವ್ರೋಡಿದುವಖಿಳದೆಸೆದೆಸೆಗೆ [1] ॥ ೯

ಹಾಸದಲಿ ಹಿಡಿದೆಳೆವನಾಯ್ಗಳ
ಬೀಸುವೆಲೆಗಳ ಕಾಲುಕಣ್ಣಿಯು
ಬೀಸುಬಡಿಗೆಯು ಧನುಸರಳ ಪಾರಿವದಕುಪ್ಪಸದ ।
* ಕೇಶದಲಿ ತಳಿರುಗಳ ಕಟ್ಟಿ ವಿ
ಲಾಸದಲಿ ಹರಿತಹ ಕಿರಾತರು
ಘಾಸಿಯಾದರು ಪವನಜನ ಬೆಂಬಱಿಯಲೊಡೆದುಱಿದು * ॥ ೧೦

ಕೊಡಹಿ ಬಿಸುಟನು ಕೇಸರಿಯ ಕಾ
ಲ್ವಿಡಿದು ಸೀಱಿದ ಕರಿಗಳನು ಬೊ
ಬ್ಬಿಡುತ ಹಿಡಿದಪ್ಪಳಿಸಿದನು ಶಾರ್ದೂಲಪೆರ್ಬುಲಿಯ ।
ಅಡಿಗೆಡಹಿ ಪೇರ್ಮೊಱಿ ವರಾಹನ
ಮಡದಲುಱಿ ಘಟ್ಟಿಸಿ ವಿನೋದದಿ
ನಡೆಯೆ ಧರೆ ಕಂಪಿಸಿತು ಬಸವೞಿದುದು ಕಿರಾತಚಯ [2] ॥ ೧೧

ತಿರುಗಿ ಕಂಡನು ಭೀಮ ಧಗೆಯಿಂ
ಪರಿತರುವ ಶಬರರನು ಮೆಯ್ಯಲಿ
ಸುಱಿವ ಬೆಮರಿನ ಚರಣದೆಡಹುಗಳೊತ್ತುಗಲ್ಲುಗಳ ।
ಉಱುವನಾಸಿಕದುಸುರಲೊಡೆವ
ಭರದಲೇಱುತ ಬೀಱುತವೆ
ಹರಿಯಿಸುತಲೌಕುವ ವೃಗಾಳಿಯ ಕೊಂದು ಕೂಗುತ್ತ ॥ ೧೨

---

1 ಒಡಿದುವು ದೆಸೆದೆಸೆಗೈದಿ ತಲ್ಲಣಿಸಿ, ಚ. ಛ. ಝ.

2 ಭೀಮನ ಪದದ ಘಲ್ಲಣೆಗೆ, ಚ.

* ಕೇಶದಲಿ ತಳಿರುಗಳ ಬಿಗಿದು ವಿ
ಳಾಸದಲಿ ಹೊಱವಂಟು ಹೆಬ್ಬಲೆ
ಬೀಸಿದರು ಬೇಂಟಿಗರು ಬಹಳವೃಗಂಗಳನು ಕೆಡಹಿ ॥ ಚ. ಛ. ಝ.

ಬಂದನೀಪರಿ ಬೇಟೆಯಾಡುತ [1]
ನಿಂದು ಹತವಾದಖಿಳಮೃಗಗಳ
ನಂದು ವ್ಯಾಧಾನೀಕಕಿತ್ತನು ಸೇರವೆಯುನಱಿದು [2] |
ತಂದರವದಿರು ತಮತಮಗೆ ಹರಿ
ತಂದು ತರುಶಿಖಿಯಿಂದ ದಹಿಸಿದ
ರಂದು ಮಾಂಸವನೊಲಿದು ಭಕ್ಷಿಸಿದರು ವಿನೋದದಲಿ ॥ ೧೩

ಆಗ ಭೀಮಸೇನನಿಗೆ ದೂರದಲ್ಲಿ ಒಂದು ವೃಕ್ಷವು ಕಣ್ಣಿಗೆ ಬೀಳುವಿಕೆ.

ಮುಂದೆ ಕಂಡನು ದೂರದಲ್ಲಿಹ
ನಂದನಕ್ಕೆಣೆಯೆನಿಪ ವನವನು [3]
ಸಂದಣಿಯು ಪೂಗೊಂಚಲಿನ ಪಲ್ಲವದ ಶಾಖೆಗಳ |
ಗೊಂದಣದ ತರುಮಧ್ಯದಲ್ಲಿಹು
ದೊಂದುಜಂಬೂವೃಕ್ಷ ಮುಱಿದಿರೆ
ನಿಂದು ನೋಡುತ ಭೀಮ ವಿಸ್ಮಯಗೊಳುತ ನಡೆತಂದ ॥ ೧೪

ಆಜಂಬೂವೃಕ್ಷದಲ್ಲಿ ಫಲವನ್ನು ಕೊಯಿದುದು.

ಇದು ವಿಚಿತ್ರದ ಫಲವು ತಾನೊಂ
ದಿದೆ ಮತಂಗಜ ಘಾತ್ರದಲಿ ನಾ
ನಿದನು ಕೊಂಡೊಯ್ವೆನು ಮಹೀಪಾಲನ ನಿರೀಕ್ಷಣೆಗೆ |
ಗದೆಯ ಕಕ್ಷದೊಳೌಕಿ ಮಾರುತಿ
ಮುದದಿ ಕೃಷ್ಣನ ನೆನೆಯುತಾನಂ
ದದಲಿ ವೃಕ್ಷವನಡರಿ ಕೊಯ್ದಿಳುಹಿದನು ತವಕದಲಿ ॥ ೧೫

ಫಲವ ತಲೆಯಲಿ ಹೊತ್ತು ಬೇಗದಿ
ನಲವು ಮಿಗೆ ನಡೆತಂದು ಭೂಪನ

---

[1] ಬಂದಿನದಿ ಬೇಂಟೆಯಲಿ ಚರಿಸುತ, ಛ. ಚ.

[2] ಬೇಡರ ನಿಕರಕಿತ್ತನು ಪವನಾತ್ಮಜನು, ಛ. ಚ.

[3] ನಂದನದ ಮೆಳೆತರುನಿಕಾಯದ, ಚ.

ಬೞಿಯಲದ ತಂದಿೞುಹಿಂದರೆ ಯಮತನುಜ ಬೆಱಗಾಗಿ |
ಕೆಲದಲಿದ್ದನುಜರಿಗೆ ಋಷಿಜನ
ಗಳಿಗೆ ನೋಡಿರಿ ಯೆನಲು ಶಿವ ಶಿವ
ಜಲಧಿಶಯನನೆ [1] ಬಲ್ಲನೆಂದರು ಸಕಲಋಷಿವರರು || ೧೬

ಎನಲು ಸಹದೇವನೆ ಯುಧಿಷ್ಠಿರ
ಜನಪ ಬೆಸಗೊಳ್ ಜೀಯ ಹರ ಹರ
ದನುಜರಿಪುಹರಕಮಲಭವರಿಗೆ ಕೊಡುವ ಶಾಪವನು |
ಅನುವೆ ಕಾಣೆನು ಕಣ್ವಮುನಿ ತಾ
ಮುನಿದನಾದೊಡೆ ಶಪಿಸುವನದೆಂ
ದನು ತ್ರಿಕಾಲಜ್ಞಾನಿಮಾದ್ರೀಸುತನು ಭೂಪತಿಗೆ || ೧೭

ವರುಷಕೊಂದೇ ಫಲವಹುದು ಅದ
ನಱಿದು ಯೋಗಧ್ಯಾನದಲಿ ಕ
ಣ್ದೆಱೆಯೆ ಕರಪುಟವನರಳಿಚಲಾಗಲಾಫಲವು |
ಕರಕೆ ಬರುವುದು ಮುನಿಪ ಕೊಂಬನು
ಹರುಷದಿಂದಾ ಫಲವ ಮಾರುತಿ
ತಱಿದು ಕೆಡಿಸಿದನೆನೆ ತ್ರಿಕಾಲಜ್ಞಾನಿ ಸಹದೇವ || ೧೮

ಕಂದೆಱೆದು ಮುನಿ ನೋಡಿದರೆ ನಮ
ಗಿಂದು ಹರುವಹುದೆನುತ ಧರ್ಮಜ
ನೊಂದು ಫಲುಗುಣಭೀಮಸಹದೇವಾದಿಗಳ ಸಹಿತ |
ಬಂದನತಿವೇಗದಲಿ ಪವನಜ
ನಂದು ವೃಕ್ಷವ ತೋಱಿಸಿದನೇ
ನೆಂದು ಬಣ್ಣಿಪೆ ಬಹಳಕೊನೆಗಳ ಗಗನಚುಂಬಿತವ || ೧೯

ಕಂಡು ಯಮಸುತನತಿಶಯದಲಿದ
ಖಂಡಪರಶುವೆ ಬಲ್ಲ ನಾವ್ ಮುಂ

1 ನಳಿನನಾಭನೆ, ಚ.

ಕೊಂಡು ಮಾಡಿದ ದುಷ್ಕೃತದ ಫಲವೆನುತ ಬಿಸುಸುಯ್ದು |
ಚಂಡವಿಕ್ರಮಭೀಮ ತಾ ಕೈ
ಕೊಂಡು ಜ್ಞಾನವಿವೇಕದಲಿಯು
ದ್ದಂಡತನದಿಂ ತಂದ ಹತ್ತಿಸಲರಿದು ನಮಗೆಂದ || ೨೦

ಕೇಳಿರೈ ನೆರೆದಖಿಳಮುನಿಜನ
ಜಾಲವೀವನದೊಳಗೆ ಬೆಳೆದುದು
ಲೀಲೆಯಲಿ ವರಜಂಬುತರುವಿದಕೊಂದು ವರುಷದಲಿ |
ತಾಳುವುದು ವೊಂದೊಂದುಫಲ ದಿಟ
ಜೋಲುತವೆ ಕಂಡೆಱಿಯೆ ಕರದಲಿ
ಬೀಟಲಿದ ಕೈಕೊಂಡು ತೃಪ್ತಿಯನೈದುವೆನು ಕಣ್ವ || ೨೧

ಭೂಪಗೆಂದನು ಧೌಮ್ಯಮುನಿಯಾ
ತಾಪಸಾಗ್ರ್ಯನ ಬಾಯ ತುತ್ತಿದ
ನೀಪವನಸುತ ತಂದನಱಿಯದೆ ಫಲವ ಕೇಳಿನ್ನು |
ಭೂಪವರನೆ ವಿಷಪ್ರಯೋಗವು
ವ್ಯಾಪಿಸಿದೊಡೊಬ್ಬಸನು ಸರ್ವ
ಸ್ವಾಪಹಾರವು ಬ್ರಹ್ಮವಸ್ತುಗಳಿದುವೆ ಬಲುಹೆಂದ || ೨೨

ವಂದನೀಯರ ಮೇಲೆ ನಿಂದೆಯು
ನೆಂದಿಗೂ ತಾ ಕೇಳಲಾಗದು
ಹಿಂದೆ ಚೈದ್ಯನು ಗಾಱುಗೆಡೆದನು ಕೃಷ್ಣನಂಘ್ರಿಯಲಿ |
ಅಂದದನು ನೀವ್ ಕೇಳಿದಾಫಲ
ದಿಂದ ರಾಜ್ಯವ ಬಿಸುಟರಣ್ಯದ
ದಂದುಗವನನುಭವಿಸಲೊದಗಿದುದೆಂದನಾಮುನಿಪ || ೨೩

ಎನಲು ಗದ್ಗದರವದ ರೋಮಾಂ
ಚನದಕಾಯದ ಸಲೆಬಿಡದಕಂ
ಬನಿಯ ಬಾಗಿದಸಿರದ ಗಲ್ಲದಕೈಯ್ಯ ಭೂಪಾಲ |

ಮುನಿಪನಂಘ್ರಿಯುಲೆಱಗಿ ಯಿಾಹ
ಣ್ಣೆ ನಲಿ ಹೊಟ್ಟೆಯು ಹೊಱೆಯುಲಾರೆನು
ದನುಜಹರನೇ ಶಿವ ಶಿವಾ ಯು ನಮ ಶ್ರೀವಾ ಯೆಂದ ‖ ౨౪

ಅಕಟ ಬ್ರಹ್ಮಸ್ವದಲಿ ಬಲುಪಾ
ತಕ ನಿಲಲಿ ಮುನಿ ಯೆದ್ದು ರೋಷದ
ಮುಖದಲೆನಗೈತಂದು ಶಾಪವ ಕೊಡುವನೋ ಮೇಣು ।
ಯುಕುತಿ ಯಿದಕಿನ್ನಾವುದೋ ದೇ
ವಕಿಯು ನಂದನ ಕೃಷ್ಣ ವತ್ಸಾಂ
ತಕ ಮಹಾದೇವನುತ ಕಡು ದುಮ್ಮಾನಮನನಾದ ‖ ౨౫

ತಿರುಗಿತರಗಿನ ಮಾಡದುರಿ ಹೊಡ
ಕರಿಸಿತುರಗಾಲಿಂಗನದ ಪದ
ಮುರಳಿತಮುರೇಶ್ವರನ ಹುಯ್ಯಲು ಮುಖಸಮಾಪ್ತಿಯುಲಿ ।
ಧರೆಯ ದೂಷಕಚೈದ್ಯನಿಂದವ
ಕರಿಸಿ ಧರ್ಮವಿವೇಕವಱಿಯಿತು
ಶರಣಜನವತ್ಸಲನೆ ಕರುಣಿಸಲೆಂದನಾಭೂಪ ‖ ౨౬

ಹೇೞಿರೈ ಋಷಿಗಳಿರ ಹಣ್ಣನು
ಮೇಲೆ ಹತ್ತುವುಪಾಯುವನು ಮುನಿ
ಜಾಲದೊಳಗೆಂದೆನಲು ನುಡಿದನು ಧೌಮ್ಯ ನಸುನಗುತ ।
ಹೇೞಲರಿದಿದ ನಿಮ್ಮ ಪಾಲಿಪ
ಬಾಲಕೇಳೀಕೃಷ್ಣ ಬಲ್ಲನು
ಕಾಲವನು ನೂಕದೆ ಮಹಾತ್ಮನ ಭಜಿಸು ನೀನೆಂದ ‖ ౨౭

ಎನಲು ಭೂಪನು ಕೃಷ್ಣ ರಕ್ಷಿಸು
ದನುಜಹರ ಗೋವಿಂದ ರಕ್ಷಿಸು
ವನಜನಾಭ ಮುಕುಂದ ರಕ್ಷಿಸು ದಾನವಾಂತಕನೆ [1] ।

---

[1] ರಾವಣಾಂತಕನೆ, ಚ,

ಮನಸಿಜನ ಪಿತ ರಾಮ ರಕ್ಷಿಸು
ಘನಮಹಿಮ ಕೇಶವನೆ ರಕ್ಷಿಸು
ನೆನೆವ ಭಕ್ತರ ಭಾಗ್ಯನಿಧಿ ಮಾಧವನೆ ರಕ್ಷಿಪುದು ‖　೨೮

ಎಂದು ಸ್ಮರಿಸುತ್ತಿರಲು ನೃಪ ಗೋ
ವಿಂದ ವಿಮಲಜ್ಞಾನದಲಿ ಸಾ
ನಂದದಿಂದವೆ ಸತ್ಯಭಾಮಾದೇವಿಯರ ಕೂಡೆ ।
ಇಂದುಮುಖಿ [1] ಪವಮಾನಜನ ದೆಸೆ
ಯಿಂದ ಪಾಂಡುಕುವರರಿಗೆ ಕೇ
ಡಿಂದು ಬಂದುದು ಋಷಿಯ ಶಾಪದಿ ಶಿವ ಶಿವಾ ಯೆಂದ ‖　೨೯

ಎನುತ ಮಂಚವನಿಳಿದನಾಗಳ್ [2]
ದನುಜಹರ ಕಮಲಾಕ್ಷಿ ನೀ ನಿ
ಲ್ಲೆನುತಬಹುವೇಗದಲಿ ಬಂದನು ಕಾಮ್ಯಕಾಟವಿಗೆ [3] ।
* ನೆನೆದವರ ಹೃದಯದಲಿ ತಾನಿಹ
ನೆನಲು ಋಷಿಕುಲಭೂಸುರರು ಮೊದ
ಲಿನಲಿ ಬಂದಂಘ್ರಿಯಲೆಱಗೆ ಗರುಡಧ್ವಜವನಿಳಿದ * ‖　೩೦

---

1 ಮಂದಮತಿ, ಚ.　2 ಸಿಂಹಾಸನವನಿಳಿದಾ, ಟ.　3 ಧರ್ಮಜನ ಹೊರೆಗೆ, ಚ.

* ನೆನೆಯೆ ಲಕ್ಷ್ಮೀಕಾಂತ ಬಂದನು
ಘನದುರಿತದಾವಾಗ್ನಿ ಬಂದನು
ಯೆನುತ ಮೆಯ್ಯಿಕ್ಕಿದನು ಮುನಿಜನಸಹಿತಯಮಸೂನು, ಚ. ‖
ತೆಗೆದು ತಕ್ಕೈಸಿದನು ಭೂಪನ
ವಿಗೆ ಹರುಷದಲಿ ಭೀಮಪಾರ್ಥರ
ನೆಗಹಿ ಮೈದಡವಿದನು ಮಾದ್ರೀಸುತರ ದ್ರೌಪದಿಯ ।
ನಗುತ ಋಷಿಜನವಿಪ್ರಧೌಮ್ಯಾ
ದಿಗಳನುಚಿತೋಕ್ತಿಯಲಿ ಮನ್ನಿಸು
ತಗಧರನು ನೋಡಿದನು ಜಂಬೂಫಲದ ಘನತರುವ ‖
ಈ ಪದ್ಯವು ಚ. ಛ. ಪುಸ್ತಕದಲ್ಲಿ ಸಿಕ್ಕುತ್ತದೆ.

ಮಾನನಿಧಿಗಳು ಕಂಡರಾವರ
ವೈನತೇಯಧ್ವಜನನಾಕ್ಷಣ
ಭೂನುತರು ಬಂದೆಱಗಿದರು ಪರಮಾತ್ಮನಂಪ್ರಿಯಲಿ ।
ಮಾನಿನಿಯುರಥಿದ್ವೈವ ಬಂದು ಮ
ನೋನುರಾಗದ ರಹಿಯು ರಸದಲಿ
ತಾ ನೊಸಲ ಚಾಚಿದಳು ಹರಿಪದಕಮಲದಲಿ ಹೊಗಟಿ । ೩೧

ಮೈದಡವಿದನು ಕೃಷ್ಣ ತನ್ನಯ
ಮೈದುನರ ಕರತಳದಲೆತ್ತಿದ
ನೈದೆಯಾಗೆಂದೆನುತ ವರಪಾಂಚಾಲನಂದಿನಿಯು ।
ವೇದರಾಶಿಗಳಱಸಿ ಕಾಣವ
ದೈದಲಱಿಯಿವು ಪಾಂಡವರ ಪು
ಣ್ಯೋದಯುವ ಬಣ್ಣಿಸುವರಾರೆಂದೆಱಗಿದನು ಧೌಮ್ಯ ॥ ೩೨

ಮೋಱೆ ಬಾಡಿದುದಧರಸಂಪುಟ
ವಾಱಿದುದು ಕಣ್ಣಾಲಿ ಯೊದ್ದುದು
ತಾಱಿತವಯುವ ತಂಗಿ ತನುವಿನುಪದ್ರವೇನೆನಲು ।
ತೋಱುವೀಸಚರಾಚರಂಗಳ
ನೂಱಿಕೊಂಡಿರುವಾಮಹಾತ್ಮಗೆ
ಬೇಱೆ ಬಿನ್ನಹವಾವುದೆಂದಳು ದ್ರೌಪದೀದೇವಿ ॥ ೩೩

ಅಸುರರಿಪು ಕೇಳ್ ಹಿಡಿದ ಹಣ್ಣನು
ಬೆಸುವ ಬಿನ್ನಣವೆಂತಿದನ ಸಂ
ಧಿಸಲರಿದೆ ಬಟಿಕೇನು ಸಾಂದೀಪಂಗೆ ತತ್ಸುತನ ।
ಬಸೆದು ತಂದಿತ್ತನುಪಮದ ಸಾ
ಹಸದಚಿಂತ್ಯನು ನೀನಲೇ ಪಾ
ಲಿಸಲು ಬೇಹುದು ನಮ್ಮನೆಂದೆಱಗಿದಳು ಪಾಂಚಾಲಿ ॥ ೩೪

ಏಟು ತಾಯೆ ಸರೋಜಮುಖಿ ಮುನಿ
ಯೂಟಿಗವ ಪರಿಹರಿಸಿ ನೀವ್ ಬ್ಬಟಿ

ಕಾಳಗಾಡುವೆವೆಮ್ಮ ಯೆನುತೆತ್ತಿದನು ಮೌನಿನಿಯು ।
ಬಾಲತನವೊದಲಾಗಿ ಬಲ್ಲಿರಿ
ಖೇಳಮೇಳದಲೆಮ್ಮ ನೀವೇ
ಹೇಳಿರೇ ದೇವತ್ವವೆಮಗಿಲ್ಲೆಂದನಸುರಾರಿ ॥ ೩೫

ಕಾಳುಮಾಡಿದಿರಕಟಕಟ ನೀವ್
ಮೇಲಣಾಟಿಯದೆ ಋಷಿಯ ಶಾಪವ
ನಾಲಿಸದೆ ಮೂಢಾತ್ಮರಂದದಿ ನೆನೆದಿರನುಚಿತವ ।
ಏಳಿ ಫಲದಲಿ ತೊಟ್ಟು ಪೊಣಗದ
ವೇಳೆಯಲ್ಲಿದಿರಿಟ್ಟು ಹಣ್ಣನು
ಹೇಳಿರೈ ನಿಮ್ಮನುಮತಂಗಳ ನಿಶ್ಚಯದಲೆಂದ ॥ ೩೬

ಎನಲು ತಂದಿರಿಸಿದರು ಫಲವನು
ವನಜನಾಭನನೀಕ್ಷಿಸುತ ತ [1]
ಮ್ಮನುನಯವ ಹೇಳಿದರು ಚಿತ್ತೈಸರಸ ಬಗೆಬಗೆಯ [2] ।
ಇನಶಶಿಗಳಿಂದ್ರಾನಲಾಂತಕ
ದನುಜವರುಣಸಮೀರಹರಸಖ
ಮನಸಿಜಾರಿ ನಮೋ ಯೆನುತ ಬಿನ್ನೈಸಿದನು ಭೂಪ ॥ ೩೭

* ಸತ್ಯವೇ ತಾಯ್ ಮತ್ತೆ ಜ್ಞಾನವು
ನಿತ್ಯನಹ ಪಿತ ಧರ್ಮವನುಜನು
ಮಿತ್ರನೇ ಕಡು ದಯೆಯೆ ಶಾಂತಿಯೆ ಸತಿ ಕ್ಷಮೆಯೆ ಪುತ್ರ ।

---

ಶ್ಲೋಕ ॥ ಸತ್ಯಂ ಮಾತಾ ಪಿತಾ ಜ್ಞಾನಂ ಧರ್ಮೋಭ್ರಾತಾ ದಯಾ ಸಖಾ ।
ಶಾಂತಿಃ ಪತ್ನೀಕ್ಷಮಾ ಪುತ್ರಃ ಷಡೇತೇ ಮಮ ಬಾಂಧವಾಃ ॥

[1] ಹೇಳಿಕೆಯಲಾ, ಚ.ಟ.

[2] ಕ್ಷಣಕೆ ಕುಂತೀತನುಜ ಹೇಟಿನೆ ಕೈಗಳನು ಮುಗಿದು, ಚ.

* ಸತ್ಯವೇ ನಿಜಮಾತೆ ಜ್ಞಾನವೇ
ನಿತ್ಯನಹ ಪಿತ ಧರ್ಮವನುಜನು
ಮತ್ತೆ ದಯೆಯೇ ಮಿತ್ರ ಶಾಂತಿಯೆ ಪತ್ನಿ ಕ್ಷಮೆ ಸೂನು ।

ಕಾಯುವೆಂಬುದನಿತ್ಯ ಬೆಂಭಾಗದಲಿ ಬಲುಮೃತ್ಯು ।
ಬಾಯ ಬಿಡುತಿರೆ ನೆಚ್ಚಿ ಕೆಡುವುದ
ಪಾಯದಲಿ ಜಗವೆಱಿಯೆ ಧರ್ಮೋ
ಪಾಯುವಿಹಪರಪಥ್ಯವೆನೆ ಫಲವೇಱುದುದು ಮೊಳಿನ ॥ ೪೦

* ಅನುಜೆ ನಿನ್ನಿಷ್ಟವೆನು ನುಡಿ ನುಡಿ
ಯನುಸರಣೆ ಬೇಡೆಂದೆನಿಪ ಕೃ
ಷ್ಣನ ಘನವಚನವನು ಕೇಳ್ದು ಲಜ್ಜಾವಿನತಮುಖಿಯಾಗಿ ।
ತನಗೆ ಮಱೆಯೇ ತನುಜರಾಗಲಿ
ಜನಕಸುತರಾರಾದೊಡಾಗಲಿ
ವನಿತೆಯರ ಮನವೆ ಸಲೆ ಭ್ರಮಿಸುವುದೆಂದಳಿಂದುಮುಖಿ ॥ ೪೩

ಹತ್ತದಿರೆ ಫಲ ಬಟ್ಟಿಕಲಾದೇ
ವೋತ್ತಮನು ನಸುನಗುತ ನುಡಿದನು
ವೃತ್ತಗುಣಸಂಪನ್ನೆ ಪತಿಭಕ್ತಿಯರಿಗಧಿದೇವಿ ।
ಚಿತ್ತದಲಿ ನೀನಿರಿಸದೇನುವ
ವಿಸ್ತರಿಸು ಯೆಂದೆಂಬ ಕೃಷ್ಣನ
ಮತ್ತಕಾಶಿನಿ ನೋಡಿ ಕೈಮುಗಿದೆಂದಳೀನುಡಿಯ ॥ ೪೪

---

ಶ್ಲೋಕ॥ ಸುಂದರಂ ಪುರುಷಂ ದೃಷ್ಟ್ವಾ ಭ್ರಾತರಂ ಪಿತರಂ ಸುತಂ ।
ಯೋನಿದ್ರ್ರವತಿ ನಾರೀಣಾಂ ತಥ್ಯಂ ಚಾಸ್ಮಿಮಾಹ ಕೇಶವ ॥

* ಭಾವವಹ ಪುರುಷರನು ಕಾಣುತ
ಭಾವಿಸಲು ಪಿತಸುತರ ಅನುಜರ
ತಾವಿನಲಿ ಯಾದರೆಯು ಯೋನಿದ್ರವಣ ಸತಿಯರಿಗೆ ।
ಭಾವದಲಿ ಮಱೆಪಿಡಿದು ನುಡಿಯಲಿ
ಕಾವಿಗಡ ಫಲವಡಱದಿರುತಿರೆ
ದೇವ ನುಡಿದನು ವಂಚಿಸದೆ ನಿಶ್ಚಯವ ಹೇಪೆಂದು ॥

ಶ್ಲೋಕ ॥ ಪಂಚ ಮೇ ಪತಯಸ್ಸಂತಿ ಮಹ್ಯಂ ಷಷ್ಠೋಪಿ ರೋಚತೇ ।
ಪುರುಷಾಣಾಮಭಾವೇನ ಸರ್ವಾ ನಾರ್ಯಃ ಪತಿವ್ರತಾಃ ॥

ರೂಪಗುಣವಿಕ್ರಮವಿರಾಜಿತ
ರೂಪರೈವರು ಪತಿಗಳಿರೆ ಚಿ
ತ್ತೋಪಚಾರಕೆ ಮಿಾಅಿ ಬಯಸುವೆನಾಜಿನೆಯ ಪತಿಯ |
ಶ್ರೀಪತಿಯೆ ಚಿತ್ತವಿಸು ಲಲನಾ
ರೂಪಮಾತ್ರಕೆ ಪುರುಷಲೋಭ
ವ್ಯಾಪಿಸದಿರೆ ಪತಿವ್ರತೆಯರಹರೆಂದಳಿಂದುಮುಖಿ || ೪೫

ಆ ಜಂಬೂಫಲವನ್ನು ಸ್ಥಳಕ್ಕೆ ಸೇರಿಸಿದುದು.

ಪತಿಗಳೀಶ್ವರನಾಜ್ಞೆಯಿಂದವೆ
ಯತಿಶಯದಲೈವರು ಮನಸ್ಸಿನ
ಮತದೊಳಾರಾಗಿಹುದು ಮತ್ತೊಂದಿಲ್ಲ ಚಿತ್ತದಲಿ |
ಸ್ಮೃತಿವಿಯಲಿ ಪರಪುರುಷರನು ದು
ರ್ಮತಿಯಲೊಡಬಡುವವಳು ಸತಿಯೇ
ಸತತಕರುಣಾಕರನೆ ಯೆನೆ ಫಲ ಠಾವಿಗಡರಿದುದು || ೪೬

* ಕೌತುಕವ ಕೇಳರಸ ಹಣ್ಣವ
ನೀತಳಕೆ ಪುಟ ನೆಗೆದು ಮುನ್ನಿನ
ರೀತಿಯಲಿ ಹರಿದೊಯ್ಯನೆ ಹತ್ತಿದುದು ಬೇಗದಲಿ |

---

* ಹರುಷ ಮಿಗೆ ಮುನಿಜನಕೆ ಧೌಮ್ಯನು
ಕರಗಳನು ನೆಗಹುತ ಯುಧಿಷ್ಠಿರ
ಧರಣಿಪತಿ ಕೇಳ್ ಕೃಷ್ಣನಿರೆ ನಿನಗಾವುದರಿದೆಂದು |
ಇರದೆ ದೇವನ ಪಾದಪಂಕಜ
ಕೆಆಗಿದುದು ಮುನಿನಿಕರ ಬುಧಜನ
ನಿರತಪರಮಾನಂದದಿಂದೈದಿದರು ತದ್ವನವ ||
ಮುನಿಪಕಣ್ವನು ಕಂದೆಅೆದು ಪರ
ಮನನು ಜಾನಿಸಿ ಕರವನರಳಿಚ
ಲೊನೆದು ಬಿದ್ದುದು ಪಣ್ಣು ಕಂಡನು ನಗುತ ಮನದೊಳಗೆ |
ವನಜನಾಭನ ತಂತ್ರವಿದು ಪಾ
ವನಸುರೂಪನ ನೋಟ್ಸೆನೆಂದಾ
ಮುನಿಪ ಫಲಸಹ ಬಂದು ಕಂಡನು ಕೃಷ್ಣಪಾಂಡವರ || ಚ. ಛ.

ಕಣ್ವರುಷಿಯು ತಪಸ್ಸಿನಿಂದೇಳುವಿಕೆ.

ಆತಗಳ ಕೈವಿಡಿದು ಯದುಕುಲ
ಜಾತ ನಡೆತಂದೊಂದು ಕೊಳದೆಡೆ
ಗಾತನತ್ತಲು ಮುನಿಪ ಕಂದೆರೆದೆದ್ದನೆಂದಿನೊಲು ॥ ೪೭

ಲೀಲೆಯಲಿ ಮುನಿ ಬಂದು ನೋಡುತೆ
ಮೇಲುಚಿತ್ರದಲಚ್ಚರಿಯಲುಪ
ಲಾಲಿಸುತ ತಲೆದೂಗಿ ಜಡೆಯೊಲಿದಾಡಲೆಡಬಲಕೆ ।
ಲಾಲಿಸದೆ ಕೊಂಯಿದ್ದಕ್ಷಣದೊಳದ
ಕೀಲಿಸಿದೊಡವ ಶಿವನೊ ಬ್ರಹ್ಮನೊ
ನೀಲಮೇಘಶ್ಯಾಮನೋ ಯಿವರೊಬ್ಬರಹರೆಂದ ॥ ೪೮

ಎಂದು ಮುನಿ ತರುತಳವ ನೋಡಿದ
ನಂದು ಚರಣಂಗಳನು ಹಲವಿರೆ
ಬಂದವಹಿಪನದಾವನೋ ತಾನೀಕ್ಷಿಸುವೆನೆನುತ ।
ಬಂದ ಪಾರ್ಥಿವಜನದ ಹೆಜ್ಜೆಯ
ಹಿಂದುಗೊಂಡೈತಂದು ಕಂಡನು
ಮುಂದೆ ರಾಜಮರಾಳನಾದಾಂಬುಜಸರೋವರವ ॥ ೪೯

ಆಗ ಆ ಮುನಿಗೆ ಕೃಷ್ಣದರ್ಶನ.

ನಳನಳಸುತಿಹ ಕೊಳನ ತಡಿಯಲಿ
ತಳಿತ ತಣ್ಣೆಳಲೊಳಗೆ ಹಾಸಿದ
ತಳಿರ ಸಿಂಹಾಸನದ ಸುತ್ತಲು ಬಳಸಿ ಪಾಂಡವರ ।
ನಳಿನಲೋಚನನೆ ಧೌಮ್ಯಮುನಿ
ಗಳು ವೊಲಿದು ಕೈವಾರಿಸಲು ಕೃಷ್ಣಗೆ
ಫಲವ ಕಾಣಿಕೆಯಿತ್ತು ಕಂಡನು ಮುನಿ ಮುರಾಂತಕನ ॥ ೫೦

ಇದಿರೊಳಿರಿಸಿದನಾ ಫಲವ ಸಂ
ಮದದಿ ಹೊಂಪುಳಿಯೋಗಿ ಮುನಿಯಾ
ಪದುಮನಾಭಂಗೆಱಗಿ ತೆಗೆಸಿರೆ ಫಲವನೆಂದೆನಲು ।

ಮದನಪಿತ ನಸುನಗುತ ಮುನಿಪನ
ಹದುಳ ಮಿಗೆ ಸೈವಿಟ್ಟು ನೆಗಹಿದ
ನುದಿತಫಲವನು ಹಂಚಹೇಳಿದನಾನೃಪನ ಸತಿಗೆ [1] ॥ ೫೧

ವರಮುನೀಶ್ವರನಿತ್ತ ಫಲವನು
ಹರಿಣಲೋಚನೆಗೀಯಲಾಪಂ
ಕರುಹಮುಖಿ ಬಾಗಿನವನಿತ್ತಳು ಮುನಿಪಗೊಲವಿನಲಿ ।
ಪರಮಹರುಷದಿ ಹತ್ತುಭಾಗಾಂ
ತರವ ಮಾಡಿ ಮುರಾರಿ ಕರೆ ಕರೆ
ಧರಣಿಸುರರನು ಸರ್ವರನು ಬರಹೇಳು ಬೇಗದಲಿ ॥ ೫೨

ಆ ಹಣ್ಣನ್ನು ವಿಪ್ರರಿಗೆ ಕೊಟ್ಟುದು.

ಬರಿಸಿ ಋಷಿಗಳನವರವರ ತರ
ವರಿದು ಕೊಡಿಸಿದನುಳಿದುದನು ಭೂ
ಸುರರ್ಗೆ ಭೂಪರಿಗೆ ಮುನಿಸತಿಯರಿಗೆ ದ್ರೌಪದಿಗೆ ।
ಮುರಹರನು ತಾ ಕೊಂಡು ಕಣ್ವಂ
ಗಿರಿಸಿ ನಾನಾಜನಕೆ ಹಂಚಲು
ಹಿರಿದು ಭುಂಜಿಸಿತಾ ಫಲವನವನೀಶ ಕೇಳೆಂದ ॥ ೫೩

ಪಾರಣೆಯು ನೆಱೆ ಮಾಡಿದರು ಮಿಗೆ ತ
ದ್ಧಾರುಣೀಪತಿ ಯಿಷ್ಟಿ ಸಂದುದು
ವಾರಿಜಾಂಬಕನಾನನವ ನೋಡುತ್ತ ಮುನಿ ಮರಳಿ ।
* ಸಾರವಹಸರಸೋಕ್ತಿಯಲಿ ಸಂ
ಪೂರಣಪ್ರೀತಿಯಲಿ ನುಡಿದನು
ದಾರಮುನಿಜನವಿಕ್ಷಿಸಲು ಕೈಮುಗಿದು ಭಕ್ತಿಯಲಿ ॥ ೫೪

---

1 ನೃಪಾಲಂಗೆ ಚ. ಛ.

* ಸಾರವಹ ಸುಸ್ಥಾನಕೈದಿದ
ನಾರು ಭಾವಿಸಬಲ್ಲರಾಮುರ
ವೈರಿಯನುಪಮಮಹಿಮೆಗಳ ಭೂಪಾಲ ಕೇಳೆಂದ ಚ. ಛ. ।

ಹಣ್ಣ ಹರಕೆಯದೆತ್ತ ನಿಮ್ಮಗ
ರಣ್ಯವೆನುಭವವೆತ್ತ ಭೀಮನ
ಕಣ್ಣಿಗೀಫಲ ತೋಱಲಾಗಲೆ ಹರಿಯು ಬರವೆತ್ತ ।
ಗಣ್ಯವೇ ಪರವೆನಗೆ ಕಂಡೆನ
ಗಮ್ಯಮೂರ್ತಿಯನಾಂ ಪುರಾಕೃತ
ಪುಣ್ಯತರು ಫಲಿಸಿತು ತನಗೆನುತಾಗ ಮುನಿ ನುಡಿದ ॥ ೫೫

ಮುನಿಪ ಕಳುಹಿಸಿಕೊಂಡು ಹೋದನು
ವನಕೆ ಬೞಿಕಾಕೃಷ್ಣನನು
ಮನದೊಳಗೆ ಭಾವಿಸುತ ಸಂತೋಷದಲಿ ಮುೞುಗುತ್ತ ।
ತೊನೆಲುತಡಿತಡಿಗೊನೆದು ಹೊಗೞುತ
ದನುಜವೈರಿಯ ಲೀಲೆಯನುಪಮ
ವೆನುತ ನರ್ತಿಸುತಾಗ ತಾಪಸರೊಡನೆ ನುಡಿವುತ್ತ ॥ ೫೬

ದೇವ ನಿಮ್ಮಡಿಯಂಘ್ರಿಕಮಲವ
ನಾವ ನೆನೆವನವಂಗೆ ಜಗದಲಿ
ಸಾವುಹುಟ್ಟಿಲ್ಲೆಂಬುವೈ ವರವೇದಶಾಸ್ತ್ರಗಳು ।
ನಾವಲೇ ಕೃತಕೃತ್ಯರಿಂದೀ
ದೇವಸಾಕ್ಷಾತ್ಕಾರದರುಶನ
ವೀವುದಧಿಕವೆನೋರಥವನೆಂತೆಂದ ಸಹದೇವ ॥ ೫೭

ಹರಿಯೊಲಿದು ವೈದಡವಿಯ್ಯವರ
ತರುಣಿಯನು ಸಂತೈಸಿಯಾ ಮುನಿ
ವರರನುಪಚರಿಸಿದನು ಪರಮಪ್ರಿಯತರೋಕ್ತಿಯಲಿ [1] ।
ಉರುತರೋತ್ತರಸಿದ್ಧಿ ನಿಮಗಿ
ನ್ನಿಂದೆ ಫಲಿಸುವುದೆಂದು ಸೂಚಿಸಿ
ಮರಳಿ ತನ್ನಯ ಪುರಕೆ ಗಮನೋದ್ಯೋಗಯುತನಾದ ॥ ೫೮

[1] ಬುದ್ಧಿಯನೊರೆದು ಧರ್ಮಜಗೆ, ಚ.

ಸತ್ಯವನು ಸಲಹುವುದು ಕ್ಷಮೆಯನು
ಹೊತ್ತು ನಡೆಸುವುದಣ್ಣನಾಜ್ಞೆಯ
ಚಿತ್ತದಲಿ ನೀವ್ ದಾಂಟದಿಹುದಾರಣ್ಯವಾಸದಲಿ ।
ನಿತ್ಯನೇಮವ ನಡಿಸುತಾಮುನಿ
ಪೋತ್ತಮನ ಧೌಮ್ಯನ ನುಡಿಯ
ಸತ್ಕೃತ್ಯವನು ಪಾಲಿಸುತಲಿಹುದಿನ್ನೆಂದನಸುರಾರಿ ॥ ೫೯

ಭೀಮನೆಂಬವ ದುಡುಕನೀ ಸು
ತ್ರಾಮಸುತ ಸ್ಯೆರಣೆಯುಮನದವ
ನೀಮಹಾಸತಿ ಯಿಂದು ರಿಪುಗಳ ಕೊಲಿಸಲೆಳಸುವಳು ।
ಭೂಮಿಪತಿ ಕೇಳೆಂದು ವರಲ
ಕ್ಷ್ಮೀಮನೋಹರ ಧೌಮ್ಯಮುನಿಯೆನೆ
ಪ್ರೇಮದಲಿ ಮುನಿನಿಕರವನೆ ಹದುಳಿಸಿದನೊಲವಿನಲಿ ॥ ೬೦

ಎಂದು ಬುದ್ಧಿಯ ಹೇಳಿ ಧೌಮ್ಯನ
ವಂದನೆಯ ಕೈಕೊಳುತ ಪಾಂಡುವ
ನಂದನರು ನಮಿಸಲ್ಕೆ ತೆಗೆದಪ್ಪಿದನು ಹರುಷದಲಿ ।
ಬಂದನಾಭೂಪತಿ ಮುರಾಂತಕ
ನಂದಣದ ಬಲದೆಸೆಯಲನಿಲಜ
ಮುಂದೆ ವಾಮದಿ ಪಾರ್ಥಯಮಳರು ದ್ರೌಪದೀದೇವಿ ॥ ೬೧

ಹಿಂದೆ ಬರುತಿರಲೆಡೆಯಲಲ್ಲಿಯೆ
ಸಿಂದು ಕಳುಹಿದನುಚಿತದಿಂ ಸಲೆ
ಬಂಧುಗಳನೊಲವಿನಲಿ ಯದುಕುಲದಿನಪ ಕೇಳೆಂದ ।

ಶ್ರೀಕೃಷ್ಣನು ದ್ವಾರಕೆಗೆ ಹೋದುದು.

ಇಂದುವದನೆಯ ಹರಸಿ ಕಳಹಿಸ
ಬಂದ ಬಂದರ ಹರಸಿ ಪ್ರೇಮದ
ಲಂದು ದ್ವಾರಾವತಿಯ ಹೊಕ್ಕನು ದಾನವಧ್ವಂಸಿ ॥ ೬೨

ಕಾಲದವಧಿಯ ಕಡೆಯ ಹಾಯ್ದುವ
ಶೀಲತಾಂಗಿಯ ರಮಣನೆಂದು ಸ
ಲೀಲೆಯಲಿ ಮುನಿನಿಕರ ಸಹಿತಾಶ್ರಮಕೆ ನಡೆತಂದು ।
ಮೇಲಣಾಗತದನುವ ಪಂಥದ
ಮೇಲೆ ಮಾಡಲು ಬೇಕೆನುತ ಮುನಿ
ಜಾಲದೊಡನೈತಂದು ನೆನೆದನು ವೀರನಾರಣನ ॥ ೬೩

ನಾಲ್ಕನೆಯ ಸಂಧಿ ಮುಗಿದುದು.

---

## ಐದನೆಯ ಸಂಧಿ.

**ಸೂಚನೆ.**

ಭಜಿಸಿದನು ನರನಿಂದ್ರಕೀಲದೊ
ಳಜಸುರಾರ್ಚಿತಪಾದಪೀಠನ
ತ್ರಿಜಗದಧಿಪತಿಯನು ಮಹಾನಟರಾಯ ಧೂರ್ಜಟಿಯ ॥

ಕಾಮ್ಯಕವನದ ಸಂಚಾರ.

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡುಕುಮಾರರಟವಿಯ
ಪಾಳಿಯಲಿ ಪರುಠವಿಸಿದರು ಪದಯುಗಪರಿಭ್ರಮವ ।
ಲೋಲಲೋಚನೆ ಸಹಿತ ತತ್ಕುಲ
ಶೈಲದಲಿ ತದ್ವಿಪಿನದಲಿ ತ
ತ್ಕೂಲವರ್ತಿಗಳ ತೀರದಲಿ ತೊಳಲಿದರು ಬೇಸಱದೆ ॥ ೧

ಫಲಮೃಗಾವಳಿ ಸವೆದುದಿನ್ನೀ
ಹೞುವ ಸಾಕಿನ್ನೊಂದರಣ್ಯ
ಸ್ಥಳವ ನೋಡಲಿ ಕಟಕ ನಡೆಯಲಿ ವಿಪ್ರಸಂಕುಲದ ।

ದ್ವೈತವನ ಪ್ರವೇಶ.

ಸುಲಭವೀವನವೆಂದು ತಮ್ಮೊಳು
ತಿಳಿದು ಪಾರ್ಥಯುಧಿಷ್ಠಿರರು ಮುನಿ
ಕುಲಸಹಿತ ನಲವಿನಲಿ ಹೊಕ್ಕರು ದ್ವೈತಕಾನನವ ॥ ೧

ಅರಸ ಕಳುಹಿದ ದೂತನಾಗಜ
ಪುರವ ಹೊಕ್ಕು ತದೀಯವಾರ್ತಾ
ಭರದ ವಿವರವನರಿದು ಬಂದನು ಕಂಡನವನಿಪನ ।
ಕುರುನೃಪಾಲನ ಬಲುಹನಾತನ
ಸಿರಿಯನಾತನ ಮದವನಾತನ
ಪರಿಯನರುಹಿದನಬುಜಮುಖಿಪವನಜರು ಕೇಳವಳಿಸೆ ॥ ೨

ದ್ರೌಪದೀಭೀಮಸೇನರ ಕೋಪ.

ಮೊದಲಿಸಿದಳು ದ್ರುಪದತನುಜೆ ವೃ
ಕೋದರನನರ್ಜುನನನವನಿಪ
ನಾದಿಯಾದ್ಯೈವರನು ಕೌರವನೃಪನ ಪತಿಕರಿಸಿ ।
ಆದೊಡೀಕುರುರಾಜವಂಶ
ಚ್ಛೇದಧೀರಕುಠಾರವೆನುತ ವೃ
ಕೋದರನು ತೂಗಿದನು ಗದೆಯನು ಗಾಢಕೋಪದಲಿ ॥ ೪

ಧರ್ಮರಾಯನ ಸಮಾಧಾನ.

ಏಕಿದೇಕೆ ವೃಥಾ ನಿಶಾಟ
ವ್ಯಾಕರಣಪಾಂಡಿತ್ಯವಕಟ ವಿ
ವೇಕವಿರಹಿತನೈ ವೃಕೋದರ ದ್ರುಪದಸುತೆಯಂತೆ ।
ಸಾಕು ಸಾಕೈ ತಮ್ಮ ಸತ್ಯವೆ
ಸಾಕು ಸಾಕು [1] ಮದೀಯಪುಣ್ಯ
ಶ್ಲೋಕತೆಯನುಬುಹೆಂದು ಗಲ್ಲವ ಪಿಡಿದನಸಿಲಜನ ॥ ೫

---

[1] ನಮಗೆ, ಚ.

ಅರಸಿ ನಿನ್ನಯ ಶೋಕವಹ್ನಿಯೊ
ಳುರಿವುದರಿನೃಪಜಲಧಿ ಕೇಳಂ
ಬುರುಹಲೋಚನೆ ನಿನ್ನ ಲೋಚನವಾರಿಪೂರದಲಿ ।
ಕುರುನೃಪಾಲನ ಸತಿಯು [1] ಶೋಕ
ಸ್ಫುರದನಲನುಜ್ವಲಿಸುವುದು ರಿಪು
ವಿರಚಿಸಿದ ವಿಪರೀತಕಿದು ವಿಪರೀತವಹುದೆಂದ ‖ ೬.

ಆಗ ವೇದವ್ಯಾಸರ ಆಗಮನ.

ಆಸಮಯದಲಿ ಬಂದನಗ್ಗದ
ಭೂಸುರನು ಶ್ರೀಕಂಠನೋ ಪ
ದ್ಮಾಸನನ ಪಲ್ಲಟವೊ ಕಮಲಾಂಬಕನ ಚುಂಬಕವೊ ।
ಭಾಸುರಕ್ರತುಶತದ ರೂಪವಿ
ಲಾಸವೊ ಶ್ರುತಿಕೋಟಿಗಳ ವಿ
ನ್ಯಾಸಭವನವೊ ದೇವ ವೇದವ್ಯಾಸಮುನಿರಾಯ ‖ ೭

ಧರ್ಮರಾಯನ ಆದರ

ಹಾ ಮಹಾದೇವಾ ಇದಾರು ಮ
ಹಾಮುನೀಶ್ವರರೆನುತ ಮುನಿಪ
ಸ್ತೋಮವೆದ್ದುದು ಧರ್ಮನಂದನನವರಿಗಿದಿರಾಗಿ ।
ಪ್ರೇಮಪುಳಕದ ನಯನಸಲಿಲದ
ರೋಮಹರುಷದ ಸತ್ಯಭಾವದ
ಭೂಮಿಪತಿ ಮೆಯ್ಯಿಕ್ಕಿದನು ಮುನಿವರನ ಚರಣದಲಿ ‖ ೮

ಮುನಿಗಳ ಆದರ.

ವಿವಿಧಮುನಿಗಳ ಗೋತ್ರನಾಮ
ಪ್ರವರಸಹಿತಭಿವಾದನಾದ್ಯು
ತ್ಸವವ ಕೈಕೊಳುತನಿಬರನು ಮನ್ನಿಸಿದನುಚಿತದಲಿ ।

---

[1] ಅಱಿವುದಿನ್ನರಿಯ, ಕ.

ಯುವತಿ ಪದಕೆಱಗಿದರೆ 'ಭೂಯಾ
ತ್ತ್ವವ ಮನೋರಥ' ವೆನುತ ನಸುನಗು
ತವನಿಪಾಲನ ಪರ್ಣಶಾಲೆಗೆ ಮುನಿಪನೈತಂದ ॥ ೯

ಇದೆ ಪವಿತ್ರಪಲಾಶಪತ್ರದ
ಲುದಕವರ್ಘ್ಯಾಚಮನಪಾದ್ಯ
ಕ್ಕಿದೆ ವಿಮಲದರ್ಭೋಪರಚಿತಾಸನವಿಳಾಸದಲಿ ।
ಇದುವೆ ಕಾಂಚನಪಾತ್ರಜಲ ವೆಂ
ದಿದು ವರಾಸನವೆಂದು ಕೈಕೊಂ
ಬುದು ಯಥಾಸಂಭವದೊಳೆಂದನು ಧರ್ಮಸುತ ನಗುತ [1] ॥ ೧೦

ವೇದವ್ಯಾಸರಿಗು ಪಾಂಡವರಿಗು ಸಂವಾದ.

ಈಪವಿತ್ರೋದಕವಲೇ ದೋ
ಷಾಪಹರ ದರ್ಭಾಸನದೊಳಿಂ
ದೀಪ್ಯಧಿಪಿಸರ್ವಾಧಿಪತ್ಯವು ಸೇರುವುದು ನಿನಗೆ ।
ಭೂಪ ಕೇಳ್ಕೆ ಜೇನುನೊಣದ ಮ
ಧೂಪಚಯವವಕಿಲ್ಲಲೇ ಸ
ರ್ವಾಪಹಾರವು ಪರರಿಗಾಕೌರವನ ಸಿರಿಯೆಂದ ॥ ೧೧

ಒಡಲು ಬೀಟಲಿ ಮೇಣು ತಮ್ಮದಿ
ರಡವಿಯುಲಿ ಹಾಯಿಕ್ಕಿ ಹೋಗಲಿ
ಮಡದಿ ಮುಳಿಯಲಿ ಜಱಿದು ಬೀಟಲಿ ಧರಣಿ ಕುರುಪತಿಗೆ ।
ಎಡೆಯಲುಟಿದವರಾಗುಹೋಗಿನ
ಗೊಡವೆ ಯೆನಗಿಲ್ಲಿನ್ನು ಸತ್ಯದ
ನುಡಿಗೆ ಬಾಧೆಗಳಿಲ್ಲದಂತಿರೆ ಕರುಣಿಸುವುದೆಂದ ॥ ೧೨

ಬಾಧೆಯುಂಟೇ ನಿನ್ನ ಸತ್ಯಕೆ
ಸಾಧಿಸುವುದವಧಿಯನು ನಿನ್ನ ವಿ
ರೋಧಿಗಳಿಗೆ ನಿವಾಸವಹುದು ಕೃತಾಂತಲೋಕದಲಿ ।

---

[1] ನಂದನನು, ಚ.

ಆಧಿಪತ್ಯಭ್ರಮಿತರಲಿ ರಾ
ಜ್ಯಾದಿಯಲಿ ಕಡಗೊಂಡಿರಖಿಳನಿ
ರೋಧವನು ಕಡನನು ಸಮೃದ್ಧಿಕವಾಗಿ ಕೊಡಿ ಯೆಂದ ॥ ೧೩

ವ್ಯಾಸರನ್ನು ಕುರಿತು ಮುನಿಗಳ ನುಡಿ.

ಆವುದರಿದಿವರಿಗೆ ಭವತ್ಕರು
ಣಾವಲೋಕನವುಂಟು ಪುನರಪಿ
ದೇವಕೀನಂದನನಲೊದಗುವ ಮೋಲುನೋಟದಲಿ ।
ಈವಿಪತ್ತೇಸೆರದು ಪಾಂಡವ
ಜೀವನಕೆ ನೀವಿಬ್ಬರಿರಲೆಂ
ದಾವಿಭಾಂಡಕಶೌನಕಾದಿಗಳೆಂದರಾಮುನಿಗೆ ॥ ೧೪

ಕರೆಸಿ ದ್ರುಪದಾತ್ಮಜೆಯು ಕಂಬನಿ
ಯೊಳತೆಯಾಲಿಲು ನುಡಿದನಾಕೆಯು
ಕರುಣದಲಿ ಕವಿಗೊಂಡಕಳಕಳವನು ವಿಭಾಡಿಸಿದ ।

ವ್ಯಾಸರು ಧರ್ಮರಾಜನಿಗೆ ಮಂತ್ರೋಪದೇಶ ಮಾಡಿದುದು.

ಧರಣಿಪತಿಗೇಕಾಂತಭವನದೊ
ಳೊರೆದನೀಶ್ವರಬೀಜ [1] ಮಂತ್ರಾ
ಕ್ಷರವನಂಗೋಪಾಂಗಮುದ್ರಾಶಕ್ತಿಗಳು ಸಹಿತ ॥ ೧೫

ಇದು ಮಹೀಶರ ಶೋಕಹರವಿಂ
ತಿದು ವಿರೋಧಿಪ್ರಬಲಭಂಜನ
ವಿದು ಸಕಲಪುರುಷಾರ್ಥಸಾಧನವಖಿಳದುರಿತಹರ ।
ಇದು ಮಹಾಧಿವ್ಯಾಧಿಹರವಿಂ
ತಿದನು ನೀಕೊಳ್ಳರ್ಜುನಂಗೊರೆ
ವುದು ರಹಸ್ಯದೊಳೆಂದು ಮುನಿ ಕರುಣಿಸಿದನರಸಂಗೆ ॥ ೧೬

---

1 ವಿಷಯ, ಚ.

ಅರ್ಜುನನು ಇಂದ್ರಕೀಲದಲ್ಲಿ ಈಶ್ವರನನ್ನು ಪ್ರಾರ್ಥಿಸಲೆಂದು ವ್ಯಾಸರ ಆಜ್ಞೆ.

ಪಾರ್ಥನೈದುವುದಿಂದ್ರಕೀಲದೊ
ಳರ್ಥಿಸಲಿ ಶಂಕರನನಖಿಳ
ಸ್ವಾರ್ಥಸಿದ್ಧಿಗೆ ಬೀಜವಿದು ಬೇಱೊಂದ ಬಯಸದಿರು |
ವ್ಯರ್ಥರವದಿರು ನಿನ್ನ ಹಗೆಯು ಕ
ದರ್ಥನದೊಳಿನ್ನೇನು ಜಗಕೆ ಸ
ಮರ್ಥನೊಬ್ಬನೆ ಶಂಭು ಕೃಪೆ ಮಾಡುವನು ನಿನಗೆಂದ || ೧೭

ವ್ಯಾಸರು ತಮ್ಮಾಶ್ರಮಕ್ಕೆ ಹೋಗುವಿಕೆ.

ಇಂದುಮುಖಿಯನು ಭೀಮನನು ಯಮ
ನಂದನನನರ್ಜುನನು ಯಮಳರ
ನಂದು ಕೊಂಡಾಡಿದನು ಮೈದಡವಿದನು ಹರುಷದಲಿ |
ಬಂದು ಸಂದಣಿಸಿದ ಮುನಿದ್ವಿಜ
ವೃಂದವನು ಮನ್ನಿಸಿ ನಿಜಾಶ್ರಮ
ಮಂದಿರಕೆ ಮುದದಿಂದ ಬಿಜಯಂಗೈದನಾಮುನಿಪ || ೧೮

ವ್ಯಾಸರ ಅಪ್ಪಣೆಯನ್ನು ಅರ್ಜುನನಿಗೆ ತಿಳಿಸುವಿಕೆ.

ಅರಸ ಕೇಳೈ ಮುನಿಪನತ್ತಲು
ಸರಿದನಿತ್ತಲು ಪಾರ್ಥನನು ನೃಪ
ಕರೆದು ವೇದವ್ಯಾಸನಿತ್ತುಪದೇಶವಿಸ್ತರವ |
ಅಱುಹಿದನು ಕೈಲಾಸಸೀಮಾ
ವರುಷದಲ್ಲಿಹುದಿಂದ್ರಕೀಲದ
ಗಿರಿ ಮಹೇಶಕ್ಷೇತ್ರವಲ್ಲಿಗೆ ಹೋಗು ನೀನೆಂದ || ೧೯

ಅಲ್ಲಿ ಭಜಿಸುವುದಮಳಗಿರಿಜಾ
ವಲ್ಲಭನ ನಾಮ್ನಾಯನಿಕರಕೆ [1]
ದುರ್ಲಭನನಧಿದೈವವನು ಬ್ರಹ್ಮೇಂದ್ರಭಾಸ್ಕರರ |

1 ಜಿಹ್ವೆಗೆ, ಚ.

ಬಲ್ಲೆನೆಂಬರ ಬಹಳಗರ್ವವ
ಘಲ್ಲಿಸುವ ಗಡ ತನ್ನ ಭಕ್ತರು
ಬಲ್ಲಿದರು ತನಗೆಂಬ ಬೋಳೆಯುರರಸನಿಹನೆಂದ ‖ ೨೦

ಏಬು ನಿಷ್ಪ್ರತ್ಯೂಹದಲಿ ಶಶಿ
ಮೌಳಿ ತಲೆದೋಱಲಿ ತದೀಯುಶ
ರಾಳಿಗಳು ಸಿದ್ಧಿಸಲಿ ಸೇರಲಿ ಶಿವನ ಕೃಪೆ ನಿನಗೆ ।
ಸೋಲದಿರು ಸುರಸತಿಯರಿಗೆ ಸ
ಮ್ಮೇಳವಾಗದಿರವರೊಡನೆ ಕೈ
ಮೇಳವಿಸುವುದು ಕಾಮವೈರಿಯ ಚರಣಕಮಲದಲಿ ‖ ೨೧

ಮುಗ್ಗದಿರು ಮಾಯೆಯಲಿ ಮದದಲಿ
ನೆಗ್ಗದಿರು ರೋಷದ ವಿಡಂಬದ
ಲಗ್ಗಳೆಯುತನದಿಂದಹಂಕೃತಿಭರದಿ ಮೆಱೆಯದಿರು ।
ಹಿಗ್ಗಿಸದಿರಾತ್ಮನನು ಲೋಭದೊ
ಳೊಗ್ಗದಿರು ಲಘುವಾಗದಿರು ಮಿಗೆ
ಹಿಗ್ಗದಿರು ಹೊಗಳಿಕೆಗೆ ಮನದಲಿ ಪಾರ್ಥ ಕೇಳೆಂದ ‖ ೨೨

ಆಡದಿರಸತ್ಯವನು ಕಪಟವ
ಮಾಡದಿರು ನಾಸ್ತಿಕರೊಡನೆ ಮಾ
ತಾಡದಿರು ಕೆಳಗೊಳ್ಳದಿರು ವಿಶ್ವಾಸಘಾತುಕರ ।
ಖೋಡಿಗಳೆಯದಿರಾರುವನು ಮೈ
ಗೂಡದಿರು ಪರವಧುವಿನಲಿ ರಣ
ಖೇಡನಾಗದಿರೆಂದು ನುಡಿದನು ನೃಪತಿಯರ್ಜುನಗೆ ‖ ೨೩

ಕ್ರೂರರಿಗೆ ಶಠರಿಗೆ ವೃಥಾಹಂ
ಕಾರಿಗಳಿಗತಿಮೂರ್ಖ[1] ರಿಗೆ ಯುಪ
ಕಾರಿಯುಪಘಾತರಿಗೆ ಭೂತದ್ರೋಹಿಜೀವರಿಗೆ ।

1 ಕುಟಿಲ, ಚ.

ಜಾರರಿಗೆ ಜಡರಿಗೆ ನಿಕೃಷ್ಟಾ
ಚಾರರಿಗೆ ಪಿಸುಣರಿಗೆ ಧರ್ಮವಿ
ದೂರರಿಗೆ ಕಲಿ ಪಾರ್ಥ ಕೇಳ್ಪರಲೋಕವಿಲ್ಲೆಂದ ॥　　೨೪

ಭ್ರಾತೃಮಿತ್ರವಿರೋಧಕಗೆ ಪಿತೃ
ಮಾತೃಘಾತಿಗೆ ಖಳನಿಗುತ್ತಮ
ಜಾತಿನಾಶಕನಿಂಗೆ ವರ್ಣಾಶ್ರಮವಿದೂಷಕಗೆ ।
ಜಾತಿಸಂಕರಕಾರಿಗಾಕ್ರೋ
ಧಾತಿರೇಕಿಗೆ ಗಾಢಗರ್ವಿಗೆ
ಭೂತವೈರಿಗೆ ಪಾರ್ಥ ಕೇಳ್ಪರಲೋಕವಿಲ್ಲೆಂದ ॥　　೨೫

ಸ್ವಾಮಿಕಾರ್ಯವಿಘಾತುಕಂಗತಿ
ಕಾಮುಕಗೆ ಮಿಥ್ಯಾಪ್ರಲಾಪಿಗೆ
ಭೂಮಿದೇವದ್ವೇಷಿಗತ್ಯಾಶಿಗೆ ಬಕವ್ರತಿಗೆ ।
ಗ್ರಾಮಣಿಗೆ ಪಾಷಂಡಿಗಾತ್ಮವಿ
ರಾಮಕಾರಿಗೆ ಕೂಟಸಾಕ್ಷಿಗೆ
ನಾಮಧಾರಿಗೆ ಪಾರ್ಥ ಕೇಳ್ಪರಲೋಕವಿಲ್ಲೆಂದ ॥　　೨೬

ಅದಱಿನಾವೆಂಗುಪಹತಿಯ ಮಾ
ಡದಿರು ಸಚರಾಚರದ ಚೈತ
ನ್ಯದಲಿ ನಿನ್ನನೆ ಬೆಱಸಿ ಕಾಂಬುದು ನಿನ್ನ ತನುವೆಂದು ।
ಬೆದಱದಿರು ಬಲುತಪಕೆ ಶೂಲಿಯ
ಪದಯುಗವ ಮಱೆಯದಿರು ಹರಿಯನು
ಹೃದಯದಲಿ ಪಲ್ಲಟಿಸದಿರು ಸುಖಿಯಾಗು ಹೋಗೆಂದ ॥　　೨೭

ಕರುಣಿಸಲಿ ಕಾಮಾರಿ ಕೃಪೆಯಿಂ
ವರಮಹಾಸ್ತ್ರವನಿಂದ್ರಯಮಭಾ
ಸ್ಕರಹುತಾಶನನಿರುತಿವರುಣಕುಬೇರವಾರುತರು ।

ಸುರರು ವಸುಗಳು ಸಿದ್ಧವಿದ್ಯಾ
ಧರಮಹೋರಗಯಕ್ಷಮನುಕಿಂ
ಪುರುಷರೀಯಲಿ ನಿನಗೆ ವಿಮಳಸ್ವಸ್ತಿವಾಚನೆಯ ॥ ೨೪

ಎನೆ ಹಸಾದವೆನುತ್ತ ಯಮನಂ
ದನಗೆ ಭೀಮಂಗೆಱಗಿದನು ಮುನಿ
ಜನಕೆ ಮೈಯ್ಯಿಕ್ಕಿದನು ಮುಳುಗಿದನಕ್ಷತೌಘದಲಿ ।
ವಿನಯದಲಿ [1] ಮುನಿವಧುಗಳಾಶೀ
ರ್ವಿನುತದಧಿದೂರ್ವಾಕ್ಷತೆಯನು
ಬ್ಬಿನಲಿ ಕೈಕೊಳುತನುಜರನು ಮನ್ನಿಸಿದನುಚಿತದಲಿ ॥ ೨೫

ನೆನೆಯದಿರು ತನುಸುಖವ ಮನದಲಿ
ನೆನೆ ವಿರೋಧಿಯ ಸಿರಿಯನೆನ್ನಯ
ಘನತರದ ಪರಿಭವವ ನೆನೆ ನಿಮ್ಮಗ್ರಜರ ನುಡಿಯ ।
ಮುನಿವರನ ಮಂತ್ರೋಪದೇಶವ
ನೆನೆವುದು ಭವನ ಚರಣಕಮಲವ
ನೆನುತ ದ್ರೌಪದಿ ಯೆಱಗಿದಳು ಪಾರ್ಥನ ಪದಾಬ್ಜದಲಿ ॥ ೨೦

ಹರನ ಚರಣವ ಭಜಿಸುವೆನು ದು
ರ್ಧರತಪೋನಿಷ್ಠೆಯಲಿ ಕೇಳಲೆ
ತರುಣಿ ಪಾಶುಪತಾಸ್ತ್ರವಾದಿಯ ದಿವ್ಯಮಾರ್ಗಣವ ।
ಪುರಹರನ ಕೃಪೆಯಿಂದ ಪಡೆದಂ
ತರಿಗಳನು ಸಂಹರಿಸಿ ನಿನ್ನಯ
ಪರಿಭವಾಗ್ನಿಯ ನಂದಿಸುವೆನೇಚೆಂದನಾಪಾರ್ಥ ॥ ೨೧

ಬಿಗಿದ ಬತ್ತಳಿಕೆಯನು ಹೊನ್ನಾ
ಯುಗದ ಖಡ್ಗಕಠಾರಿಚಾಪವ
ತೆಗೆದನಳವಡೆಗಟ್ಟಿ ಬದ್ದುಗೆದಾರಗೊಂಡೆಯವ ।

[1] ವನಜಮುಖಿ, ಕ. ಜ. ಟ. ಡ.

ದುಗುಡಹರುಷದ ಹುಗಿಲದಲೆಯೊ
ತ್ತುಗಳಿಗಿಟ್ಟೆಡೆಯಾಗಿ ಗುಣವಾ
ಳಿಗಳ ಮಣಿ ಕಲಿಪಾರ್ಥ ಬೀಳ್ಕೊಂಡನು ನಿಜಾಗ್ರಜನ ‖ ೨೦

ಆಗ ಆದ ಸುಶಕುನಗಳು.

ಹರಡೆ ವಾಮದಲುಲಿಯೆ ಮಧುರ
ಸ್ವರದಲಪಸವ್ಯದಲಿ ಹಸುಬನ
ಸರಸವಾಹಿತಮಾಗೆ ಸೂರ್ಯೋದಯದ ಸಮಯದಲಿ ।
ಹರಿಣಭಾರದ್ವಾಜನುಡಿಕೆಯು
ಸರಟನಕುಲನ ತಿರಿದುಗಳ ಕು
ಕ್ಕುರನ ತಾಳಿನ ಶಕುನವನು ಕೈಕೊಳುತ ನಡೆತಂದ ‖ ೨೨

ನೀಲಕಂಠನ ಮನದ ಬಯಕೆಗೆ
ನೀಲಕಂಠನೆ ಬಲಕೆ ಬಂದುದು
ಮೇಲುಪೋಗಿನ ಸಿದ್ಧಿ ದೈತ್ಯಾಂತಕನ ಬುದ್ಧಿಯಲಿ ।
ಕಾಲಗತಿಯಲಿ ಬಳಿಕ ಪರರಿಗ
ಕಾಲಗತಿಯನು ಕಾಂಬೆವೈ ಸಲೆ
ಶೂಲಧರನೇ ಬಲ್ಲನೆನುತೈತಂದನಾಪಾರ್ಥ ‖ ೨೪

ಇಂದ್ರಕೀಲಪರ್ವತದ ಬಳಿಗೆ ಹೋದುದು.

ಅರಸ ಕೇಳ್ಳೆ ಬಳಿಕ ಭಾರತ
ವರುಷವನು ದಾಂಟಿದನು ತಂಪಿನ
ಗಿರಿಯು ತಪ್ಪಲನಿಳಿದನಾಹರಿವರುಷಸೀಮೆಯಲಿ ।
ಬೆರಸಿದನು ಬಳಿಕುತ್ತರೋತ್ತರ
ಸರಣಿಯಲಿ ಸೈನಡೆದು ಹೊಕ್ಕನು
ಸುರರ ಸೇವ್ಯವೆನಿಂದ್ರಕೀಲಮಹಾಮಹೀಧರವ ‖ ೨೫

ಅದರ ಸಮೀಪದ ವನದ ವರ್ಣನೆ.

ಗಿಳಿಯು ಮೃದುವಾತುಗಳ ಮಱಿಕೋ
ಗಿಲೆಯು ಮಧುರಧ್ವನಿಯ ಹಂಸೆಯು

ಕಳರವದ ಮಱಿನವಿಲ ಕೇಕಾರವದ ನಯಸರದ ।
ಮೆಲುದನಿಯು ಪೊರುವದ ತುಂಬಿಯು
ಲಲಿತಗೀತದ ಬನದ ಸಿರಿ ಬಗೆ
ಗೊಳಿಸಿತ್ತೈ ಪೂರ್ವಾಭಿಭಾಷಿತದಲಿ ಧನಂಜಯನ ॥ ೨೬

ಸೊಂಪೆಸೆವ ಕೋಗಿಲೆಯ ದನಿ ದೆಸೆ
ಕಂಪಿಸುವ ತಂಬೆಲರ ಪೂವಿನ
ಜೊಂಪವನು ಜೊಂಪಿಸುವ ಮಱಿದುಂಬಿಗಳ ಮೇಳವದ ।
ಪೆಂಪ್ರೊಗುವ ದಾವರೆಗೊಳಂಗಳ
ತಂಪಿನೊದವಿನ ಬನದ ಸೊಗಸಿನ
ಸೊಂಪು ಸೆಳೆದುದು ಮನವನೀತನ ನರಪ ಕೇಳೆಂದ ॥ ೨೭

ಚಾರುತರಪರಿಪಕ್ವನವಖ
ರ್ಜೂರರಸಧಾರಾಪ್ರವಾಹವ
ನೋರವೇಕ್ಷುವಿಭೇದವಿದ್ರುಮರಸದ ದಾಳಿಂಬ ।
ಭೂರಿಜಂಬುಮಧೂಕಪನಸ
ಸ್ಫಾರರಸಪೂರಾನುಕಲಿತವಿ
ಹಾರಸುರಮಹಿಳಾಭಿರಂಜನವಖಿಲವನಭೂಮಿ [1] ॥ ೨೮

ವಿಲಸದಭ್ರಂಲಿಹಮಹಾತರು
ಕುಲದಿನಮರನದೀಸ್ತನಂಧಯ
ಫಲರಸದ ನದಿಗಳಲಿ ದಿಕ್ಕೂಲಂಕಷೋನ್ನತಿಯ [2] ।
ಸುಳಿವ ಪರಿಮಳಪವನನಿಂ ಕಂ
ಗೊಳಿಸಿತರ್ಜುನಕಾಮ್ಯಸಿದ್ಧಿ
ಸ್ಥಳದೊಳಂತರ್ವಿಳಿತಕಾನನವರಸ ಕೇಳೆಂದ ॥ ೨೯

---

[1] ...ಮಧುರಾಮ್ರಾಳಿಗಳ ಫಲ । ದೋರಣದಿನಂದೆಸೆವುತಿರ್ದುದು ಬಹಳವನ ಭೂಮಿ, ಚ.

[2] ಫಳರಸದ ನದಿಗಳ ಲತಾಸಂ । ಕುಳದ ನಾನಾಕುಸುಮದಿಂದೊಪ್ಪುವ ಕೊಳಂಗಳಲಿ, ಚ.

ಇದು ಶಿವನ ಕ್ಷೇತ್ರವೆಂದು ಆಕಾಶವಾಣಿಯಾಗುವಿಕೆ.

ಇಲ್ಲಿ ನಿಲ್ಲರ್ಜುನತಪೋಧನ
ಗಿಲ್ಲಿ ನೆಲೆ ಶ್ರುತಿಯುವತಿ ಸೂಸುವ
ಚಲ್ಲೆಗಂಗಳ ಮೊನೆಗೆ ಮಿಸಲುಗುಡದ ಮೈಸಿರಿಯು।
ದುರ್ಲಲಿತದಷ್ಟಾಂಗಯೋಗದ
ಕೊಲ್ಲಣಿಗೆಗೊಳಗಾಗದಪ್ರತಿ
ಮಲ್ಲಶಿವನ ಕ್ಷೇತ್ರ ವಿದೆ ಯೆಂದುದು ನಭೋನಿನದ ॥ ೪೦

ವನಪ್ರವೇಶ ಮಾಡಿ ಅರ್ಜುನನ ತಪಸ್ಸು.

ಧರಣಿಪನ ಬೀಳ್ಕೊಂಡು ಮಾರ್ಗಾಂ
ತರದೊಳಾರಡಿಗೈದು ಹೊಕ್ಕನು
ಹರನ ಕರಣಾಸಿದ್ಧಿ ಸಾಧನವೆನಿಪ ಗಿರಿವನವ।
ಮೂಱುದಿವಸದುದಯದಲಿ ಮಿಂದನು
ಸರಸಿಯಲಿ ಸಂಧ್ಯಾಭಿಮುಖದಲಿ
ತರಣಿಗರ್ಘ್ಯವನಿತ್ತು ದೇವವ್ರಜಕೆ ಕೈಮುಗಿದ ॥ ೪೧

ವಿನುತಶಾಂಭವಮಂತ್ರಜಪಸಂ
ಜನಿತನಿರ್ಮಳಭಾವಶುದ್ಧಿಯು
ಮನದೊಳರ್ಜುನನೆತ್ತಿ ನಿಂದನು ದೀರ್ಘಬಾಹುಗಳ।
ನೆನಹು ನೆಮ್ಮಿತು ಶಿವನನಿತರದ
ನನೆಗೊನೆಯು ತೆರಳಿಕೆಯು ಕೊಡಚೆಯು
ಮನದ ಸಂಚಲವೀಚುವೋದುದು ಕಲಿಧನಂಜಯನ ॥ ೪೨

ಮುಗುಳುಗಂಗಳ ಮೇಲುಗುಡಿದೋ
ಳುಗಳ ಮಿಡುಕುವತುಟಿಯು ತುದಿಗಾ
ಲುಗಳ ಹೊರಿಗೆಯು ತಪದ ನಿರಿಗೆಯು ನಿಷ್ಪ್ರಕಂಪನದ।
ಬಿಗಿದ ಬಿಲ್ಲಿನ ಬೆನ್ನಬತ್ತಳಿ
ಕೆಗಳ ಕಿಗ್ಗಟ್ಟಿನ ಕಠಾರಿಯು
ಹೆಗಲೆಡಾಯುಧದ ಹೊಸತಪಸಿ ತೊಡಗಿದನು ಬಲುತಪವ ॥ ೪೩

ಇಂದ್ರನ ಆಗಮನ ಮತ್ತು ಸಂವಾದ.

ಅರಸ ಕೇಳ್ಳೆ ವಿಪ್ರವೇಷವ
ಧರಿಸಿ ಧರೆಗಿಳಿದನು ಸುರೇಶ್ವರ
ತರಹರಿಸದೀಮಾತ ನುಡಿದನು ನಿಜಕುಮಾರಂಗೆ |
ಮರಿಚಮೌಕ್ತಿಕಲೋಹಹೇಮಾ
ಭರಣ ಚರ್ಮದುಕೂಲಮಿಳಿಹಾ
ದರಿಯು ಹೂವಿನ ದಂಡೆಗೇಕನಿವಾಸವೇಕೆಂದ || ೪೪

ಆವ ಸೇರುವೆ ತಪಕೆ ಚಾಪಶ
ರಾವಳಿಗೆ ಶಮೆ ದಮೆಗೆ ಖಡ್ಗಕೆ
ದಾವ ಸಂಮೇಳನ ವಿಭೂತಿಗೆ ಕವಚಸೀಸಕಕೆ |
ಆವುದಿದಭಿಧಾನ ತಪವೋ
ಡಾವರಿಗಪಿದ್ಯಾಸಮಾಧಿಯೊ
ನೀವಿದೆಂಥಾಋಷಿಗಳಂಬುದನರಿಯೆ ನಾನೆಂದ || ೪೫

ಕಂದೆಱೆದು ನೋಡಿದನು ನೀವೇ
ನೆಂದೊಡೆಯು ಹೃದಯಾಬ್ಜಪೀಠದೊ
ಳಿಂದುಮೌಳಿಯು ನಿಲಿಸಿ ಮೆಚ್ಚಿಸುವೆನು ಸಮಾಧಿಯುಲಿ |
ಇಂದಿನೀಬಹಿರಂಗಚಿಹ್ನದ
ಕುಂದುಹೆಚ್ಚಿನಲೇನು ಫಲವೆನ
ಲಂದು ತಲೆದೂಗಿದನು ಸುರಪತಿ ತೋಱಿದನು ನಿಜವ || ೪೬

ಅರ್ಜುನನಿಗೆ ಇಂದ್ರನ ವರದಾನ.

ಮಗನೆ ನಿನ್ನಯ ಮನದ ನಿಷ್ಠೆಗೆ
ಸೊಗಸಿದೆನು ಹಿರಿದಾಗಿ ಹರನಿ
ಲ್ಲಿಗೆ ಬರಲಿ ಪಾಲಿಸಲಿ ನಿನ್ನ ಮನೋಭಿವಾಂಛಿತವ |

ಹಗೆಗೆ ಹರಿವಹುದೆಂದು ಸುರಮೌ
ಳಿಗಳ ಮಣಿ ಸರಿದನು ವಿಮಾನದೊ
ಳಗಧರನ ಮೈದುನನ ಮಹಿಮೆಯನಿನ್ನು ಕೇಳೆಂದ ‖ ೪೭

ಐದನೆಯ ಸಂಧಿ ಮುಗಿದುದು.

## ಆರನೆಯ ಸಂಧಿ.

### ಸೂಚನೆ.

ಮುನಿನಿಕರ ಬಿನ್ನವಿಸೆ ಕರುಣಾ
ವನಧಿ ಶಂಭು ಕಿರಾತಮಯರೂ
ಪಿನಲಿ ಹೊಕ್ಕನು ಬನದೊಳೆಚ್ಚನು ಮೂಕದಾನವನ ‖

ಅರ್ಜುನನು ಧ್ಯಾನವನ್ನು ಮಾಡಿದುದು.

ಮರಳಿದನು ದಿವಿಜೇಂದ್ರನಿತ್ತಲು
ಹರನೊಳಗೆ ಹೊರೆಯೆತ್ತಿದಂತಃ
ಕರಣ ಹಿಗ್ಗಿತು ಹುದುಗಿದುದು ಬಹಿರಂಗಭಾವನೆಯು ।
ಧರಣಿ ಮೊದಲೆನೆ ಭೂತಪಂಚಕ
ಮರುತಪಂಚಕವಿಷಯದಿಂದ್ರಿಯ
ಕರಣವಿವೃತ್ತಿ ಮೃದುತತ್ವಾತ್ಮಕನ ಚಿಂತಿಸಿದ ‖ ೧

ಮೇಲೆ ವಿದ್ಯಾರಾಗನಿಯತಿಯು
ಕಾಲಕಲನಾತ್ಮಕನ ಮಾಯೆಯು
ಮೇಲುವೋಗಿನ ಸಿದ್ಧವಿದ್ಯಾರೂಪನೀಶ್ವರನ ।
ಕೇಳು ನೃಪತಿ ಸದಾಶಿವನನು
ತ್ತಾಳಶಕ್ತಿಯನಖಿಳತತ್ತ್ವದ
ಮೌಳಿಮಣಿಯನಖಂಡಶಿವನನು ಪಾರ್ಥ ಚಿಂತಿಸಿದ ‖ ೨

ಮೂಱುದಿನಕೊಮ್ಮೆ ಫಲದಾ
ಹಾರದಲಿ ನೂಕಿದನು ತಿಂಗಳ
ನಾಱುದಿವಸಕೆ ಫಲವ ಕೊಂಡನು ತಿಂಗಳೆರಡಱಲಿ ।
ಮೂಱುತಿಂಗಳ ಕಳೆದನಿಂತೀ
ಱಾಱುದಿವಸಕೆ ಕಂದಮೂಲಾ
ಹಾರದಲಿ ತಱಗೆಲೆಯಲಿರ್ದನು ನಾಲ್ಕುಮಾಸದಲಿ ॥ ೩

ಬಳಿಕ ಪವನಾಹಾರದಲಿ ನಿ
ಸ್ಖಲಿತಶಿವಪದಭಕ್ತಿ ಸುಧೆಯಲಿ
ತಳಿತರೋಮಾಂಚನದ ಕಂದದ ಕುಂದದವಯವದ ।
ಥಳಥಳಿಸುವಾನನದ ಸತ್ವೋ
ಜ್ಜ್ವಲಿತಚಿತ್ತದ ಸುಪ್ರಭಾವದ
ಬಳವಿಗೆಯಲುತ್ಕೋಚವಾದುದು ತಪ ಧನಂಜಯನ ॥ ೪

ಯಮದೊಳುತ್ಪಾದಿಸಿದ ನಿಯಮ
ಶ್ರಮವ ಗೆಲಿದನು ಶಂಭುವಿನ ಪದ
ಕಮಲ ಬೈಸಿಕೆಯಾದುದೆತ್ತಿದ ಜೀವ ಪವನನಲಿ ।
ಭ್ರಮಿಸುವಿಂದ್ರಿಯಗಣವನುಱಿದಾ
ಕ್ರಮಿಸಿ ಶಂಕರಭಾವದಲಿ ಸಂ
ಕ್ರಮಿಸಿ ಧರಿಸಿ ಸಮಾಧಿಯನು ತಳೆದಾತ್ಮಪರನಾದ ॥ ೫

ವಿಮಳಮತಿ ಕೇಳಿಂದ್ರಿಯಾರ್ಥ
ಭ್ರಮೆಯ ಜಾಗ್ರದವಸ್ಥೆಯಂತ
ಸ್ತಿಮಿತಕರಣಭ್ರಮೆಯಲುದಿತಸ್ವಪ್ನವೀಥಿಯಲಿ ।
ಗಮಿತತದ್ವಾಸನೆಯ ಬೀಜ
ಕ ಮಸುಷುಪ್ತ್ಯಾವಸ್ಥೆಯಲಿ ಸಂ
ಕ್ರಮಿಸದಗ್ಗದ ತುರ್ಯಶಿವನನು ಪಾರ್ಥ ಚಿಂತಿಸಿದ ॥ ೬

ತಾನೆ ಶಿವನೋ ಮೇಣು ಶಿವನ
ಧ್ಯಾನ ತನಗದ್ವೈತದನುಸಂ
ಧಾನಕಿದು ಜವನಿಕೆಯೋ ಜೀವಾತುಮನ ಜಂಜಡವೊ ।
ಧ್ಯಾನವೋ ಮೇಣ್ ದ್ವೈತವೋ ತ
ದ್ಧ್ಯಾನಕರ್ತೃವೊ ತ್ರಿಪುಟರಹಿತನೊ
ತಾನು ಮೇಣೆನಲಾಯ್ತು ಚಿತ್ತದ ಶುದ್ಧಿಯರ್ಜುನನ ॥ ೭

ಮುನಿಯಿದೇನ್ನೈ ಚಿತ್ರವಾಯ್ತ
ರ್ಜುನನ ಚಿತ್ತದಲೇನು ತಾಮಸ
ಜನಿತಕರ್ಮವೋ ಶುದ್ಧತತ್ತ್ವಜ್ಞಾನಜಲಧಿಯಲಿ ।
ಮನಮುಳುಗಿ ಮಗುಳೆದ್ದು ಶಿತಿಕಂ
ಠನಲಿ ಶಸ್ತ್ರಾಸ್ತ್ರವನು ಬೇಡಿದ
ನೆನಲು ಜನಮೇಜಯಗೆ ವೈಶಂಪಾಯುಮುನಿ ನುಡಿದ [1] ॥ ೮

ಅರಸ ಕೇಳೈ ರಾಜಸಾಂತಃ
ಕರಣವೆದು ಕಾಮ್ಯೈಕಸಿದ್ಧಿ
ಸ್ಫುರಣಗೋಸುಗ ತಪವಲೇ ರಾಜ್ಯಾಭಿಲಾಷೆಯಲಿ ।
ಹರಚರಣನಿಕ್ಷಿಪ್ತಚೇತಃ
ಸ್ಫುರಣೆ ತತ್ಪರಿಯಂತವುಕ್ಕಿತು
ಪರಮವಸ್ತು ನಿಜಸ್ವಭಾವಕೆ ಚಿತ್ರವೇನೆಂದ ॥ ೯

ಮೇಲೆ ಮೇಲೀತನ ತಪೋಗ್ನಿ
ಜ್ವಾಲೆ ಜಡಿದುದು ತಡೆದುದಭ್ರ
ಸ್ಥಾಳಿಯಲಿ ಸ್ಯೈವರಿವ ಸೂರ್ಯಚಂದ್ರಮಪ್ರಭೆಯು ।
ಥಾಳಿಸುವ ಪರಿಧೌತಮೌನಿಕ
ರಾಳತೇಜೋಗರ್ಭತಮಧೂ
ಮಾಳಿಯಲಿ ಮೇಘಾಳಿ ಮುಸುಗಿದುದರಸ ಕೇಳೆಂದ ॥ ೧೦

1 ಮುನಿಯಿಂತೆಂದ ನಸುನಗುತ, ಚ.

ಈತನುಗ್ರತಪಃಪ್ರಭಾವ
ಖ್ಯಾತಿ ವಿಗಡಿಸಿತಖಿಳಲೋಕ
ವ್ರಾತವನು ಸೋತವನು ಕೌರವನೋ ಯುಧಿಷ್ಠಿರನೊ ।
ಈತನೀಶ್ವರನಸ್ತ್ರವನು ಕೈ
ಯಾತುಕೊಂಡರೆ ಬಳಿಕ ರಿಪುನೃಪ
ಜಾತರಿದಿರೇ ಕೇಳು ಜನಮೇಜಯ ಮಹೀಪಾಲ ॥ ೧೧

ಏನನೆಂಬೆನು ಪಾರ್ಥನುಗ್ರತ
ಪೋನಿದಾಘಜ್ವಾಲೆಯನುಸಂ
ಧಾನವನು ತತ್ಪರಿಸರದ ಪಾವನತಪೋಧನರ ।
ಮೌನವಡಗಿದುದು ಜಪಾನು
ಷ್ಠಾನ ಬಿಡೆ ಬೀಸಿತ್ತು ಸಮಾಧಿ
ಧ್ಯಾನ ಸೀಕರಿಯಾಯ್ತು ಸಾರವಿಚಾರ ಶಮಸಹಿತ ॥ ೧೨

ಅರ್ಜುನನ ಧ್ಯಾನಕ್ರಮವನ್ನು ತಿಳಿದು ಋಷಿಗಳ ಅಸೂಯೆ.

ಶ್ರುತಿಯಲುಳಿ ತಗ್ಗಿತು ವಿವೇಕ
ಸ್ಥಿತಿಗೆ ಪಲ್ಲಟವಾಯ್ತು ಮತ್ಸರ
ಮತಿಯು ಮೈಲಿಗೆ ಬಿದ್ದುದಾತ್ಮಜ್ಞಾನದೃಷ್ಟಿಯಲಿ ।
ಧೃತಿಯವರ ಬಾಹೆಯಲಸೊಯಾ
ಸತಿಯು ಕಾಹಿಯು ಮನದಲಿರ್ದರು
ಯತಿಗಳೀತನ ತಪದ ತೇಜದ ಹೊದರ ಹೊಯ್ಲಿನಲಿ ॥ ೧೩

ಕೋಪವೆ ರಟಿಸಿತಾಧಿಭೌತಿಕ
ತಾಪ ತಳಿತುದು ಹೃದಯವೀಶ್ವರ
ರೂಪವನು ಮುಚ್ಚಿದುದು ಮಾಯಾಮೋಹಮುದ್ರೆಯಲಿ ।
ಶಾಪಭೀತರಹಮ್ಮಮತೆಯು ಕ್ರ
ತಾಪರಾಧರು ಪ್ರಕೃತಿಗುಣಯು
ಜ್ಞೋಪವೀತರು ಮಸಗಿದರು ಮುನಿಗಳು ತಪೋವನವ ॥ ೧೪

ಆಗ ವನದಲ್ಲಿದ್ದ ಮುನಿಗಳು ಅರ್ಜುನನ ತಪಸ್ಸನ್ನು ನೋಡಿ
ಶಿವನನ್ನು ಮರೆಹೋದುದು.

ಹಳಿವ ಹಾವಸೆಮನದಲಿರ್ದರು
ಕೆಲರು ಕೆಲರೆಡೆಯಾಡುತಿರ್ದರು
ತಿಳಿವು ಮರೆವೆಗಳಲ್ಲಿ ಕೆಲರುಪಶಾಂತಿಭಾವದಲಿ |
ಕೆಲರಿದೇನಿವನಿಲ್ಲಿ ತೊಲಗಿಸಿ
ಕಳೆವುದೀತನನೆಂದು ತಮ್ಮೊಳು
ಕಳವಳಿಸುತೊಮ್ಮೊತ್ತವಾದುದು ಸಕಲಮುನಿನಿಕರ || ೧೫

ಕೆದಱಿದುದು ಜಡೆ ಯಕ್ಷಮಾಲೆಗ
ಳುದುರಿದುವು ಕರದಲಿ ಕಮಂಡಲು
ವೆದುರಿದುದು ಹಱಿವಾಯ್ತು ಹರಿಣಾಜಿನ ಮುನೀಶ್ವರರ |
ಕದಡಿತಂಗವಿಭೂತಿ ಕಡುಗೋ
ಪದಲಿ ಹರಿದರು ಹರಗಿರಿಯ ಹ
ತ್ತಿದರು ಕಂಡರು ರಾಜಮೌಳಿಯ ರಾಜಮಂದಿರವ | ೧೬

ಶಿವನ ಭವನವ ದೂರದಲಿ ಕಂ
ಡಿವರು ಮೈಯಿಕ್ಕಿದರು ವರಮುನಿ
ನಿವಹ ಬಂದುದ ಬಾಗಿಲವದಿರು ಬಿನ್ನಹದ ಹದನ |
ವಿವರಿಸಲು ಕರೆಸಿದನು ಕರುಣಾ
ರ್ಣವನ ಕಂಡರು ಮೈಯ್ಯ ಚಾಚಿದ
ರವನಿಯಲಿ ಜಯ ಜಯ ಮಹೇಶ ನಮಶ್ಶಿವಾ ಯೆನುತ || ೧೭

ಏೞಿರೈ ಸಾಕೇೞಿರೈ ಸಾ
ಕೇೞಿ ಕುಳ್ಳಿರಿ ಬಂದ ಕಾರ್ಯವ
ಹೇೞಿ ಯೆನೆ ಮುನಿನಿಕರ ವೆರ್ದುದು ನೊಸಲ ಕೈಗಳಲಿ |
ಹೇೞಿ ನೀವ್ ಹೇೞಿನ್ನು ಹಿರಿಯರು
ಹೇೞಿ ಯೆನುತೊಳಗೊಳಗೆ ಘೋೞಾ
ಘೋೞಿ ಮಸಗಿದುದೊಬ್ಬ ಮುನಿ ನಿಲಿಸಿದನು ಕಳಕಳವ || ೧೮

ನೀಲಲೋಹಿತ ಚಿತ್ತವಿಸು ಶಶಿ
ಮೌಳಿ ಬಿನ್ನಹ ನಿಗಮಮಹಿಳಾ
ಮೌಳಿಮಣಿನೀರಾಜಿತಾಂಘ್ರಿಸರೋಜಜನವಧಾನ ।
ಪಾಲಿಸುವುದಾರ್ತರನು ಪರಮಕೃ
ಪಾಳು ನೀನತಿದೀನರಾವು ವಿ
ಟಾಳಸಂಗತಿಯಾದುದಸ್ಮಜ್ಜಪತಪಸ್ಸ್ಥಿತಿಗೆ ॥ ೧೯

ಶಾಂತಿಯೇ ಮನೆ ನಿಮ್ಮ ಚರಣದ
ಚಿಂತೆಯೇ ಮನೆವಾರ್ತೆ ವರವೇ
ದಾಂತತತ್ತ್ವರಹಸ್ಯಮನನಾದಿಗಳು ಸರ್ವಸ್ವ ।
ದಾಂತಿಯೇ ಸುಖಭೋಗ ಮಾಯಾ
ಶ್ರಾಂತಿಯೇ ಮಾಹಾತ್ಮ್ಯವಿದು ಮುನಿ
ಸಂತತಿಗೆ ವರ್ತನವಲೇ ವೈದಿಕವಿಧಾನದಲಿ ॥ ೨೦

ಹೋದ ಹೊಲಬಿಲ್ಲದಟವಿಯೊಳಗೆ ದು
ರ್ಭೇದತಪವೇ ಹೊತ್ತುತಿದೆ ಜ
ಳ್ಳಾದುವೆಮ್ಮ ಸಮಾಧಿಸ್ಥೈರಣಿ ಶಮದಮಾದಿಗಳು ।
ಕಾದುದಾವನಭೂಮಿ ತರುಗು
ಲ್ಮಾದಿಗಳು ಕಟ್ಟೊಣಗಲಾದುವು
ತೀದುದೆಮ್ಮಯ ಜಪಸಮಾಧಿಯು ಕರ್ಮವಿಧಿಯಿಂದ [1] ॥ ೨೧

ರಾಯನೋ ವೇಣವನು ರಾವುತ
ನಾ [2] ಯಕನೊ ಋಷಿಯಲ್ಲ ಋಷಿಗೇ
ಕಾಯುಧಂಗಳ ಗೊಡವೆ ನಮಗೇಕದಟ ಬೂತಾಟ ।
ಸಾಯಕದ ಬತ್ತಳಿಕೆ ಚಾಪವ
ಡಾಯುಧದ ಕುಶಿಪೆರಳಜಡೆಗಳ
ನಾಯಕದಲನುಚಿತದ ಸಂಗದ ತಪಸಿ ಯಿಹನೆಂದ ॥ ೨೨

---

[1] ನಿತ್ಯ ವಿಧಿಯೊಬ್ಬನ ದೆಸೆಯಲಿಂದು, ಚ. [2] ಪಾ, ಚ.

ಆಡಿದೊಡೆ ನಾವ್ ಮುನಿಗಸೂಯೆಯು
ಮಾಡಿದವರಿದ ನಿಮ್ಮಡಿಗೆ ನಾ
ವಾಡದಿರ್ದೊಡೆ ಬಿಸಿಲರಾಶಿಯುನುರಿಯು ಸೂತಕವ |
ಕೂಡಿತೆಮ್ಮಯ ಕರ್ಮಗತಿ ತಪ
ಗೇಡಿಯುನು ಬಿಡದೆಬ್ಬಿಸೆಮಗೆಡೆ
ಮಾಡಿಕೊಡಬೇಕೆಂದು ಮೆಯ್ಯಿಕ್ಕಿತು ಮುನಿಸ್ತೋಮ ‖ ೨೩

ಮತ್ತೆ ನಮ್ಮನು ಪಿಸುಣರೆಂದೇ
ಚಿತ್ತವಿಸಲಾಗದು ತಪೋವನ
ಹೊತ್ತುತಿದೆ ವಿಪರೀತ ತಪಸಿಯು ತೀವ್ರತೇಜದಲಿ |
ಇತ್ತಲೊಂದು ತಪೋವನವ ನಮ
ಗಿತ್ತು ಕರುಣಿಸು ಮೋಕ್ಷಕಾರಿಯು
ನೆತ್ತಿ ಕಳ್ ಕಾರುಣ್ಯನಿಧಿ ಯೆಂದುದು ಮುನಿಸ್ತೋಮ ‖ ೨೪

ಆಗ ಈಶ್ವರನು ಜ್ಞಾನದೃಷ್ಟಿಯಿಂದ ಅರ್ಜುನನೆಂದು ತಿಳಿದು
ಮುನಿಗಳಿಗೆ ಅಭಯುವನ್ನು ಕೊಟ್ಟುದು.

ಕೇಳುತವನಾರೋ ಯೆನುತ ಶಶಿ
ಮೌಳಿ ವಿಮಲಜ್ಞಾನದೃಷ್ಟಿಯೊ
ಳಾಳನಱಿದನು ಮನದೊಳಗೆ ನಮ್ಮವನಲಾ ಯೆನುತ |
ಬಾಲಹಿಮಕರಕಿರಣದೊಡನೆ ಸ
ಮೇಳವಹ ನಗೆ ಮಿನುಗೆ ಮುನಿ
ಜಾಲವನು ನೋಡಿದನು ಸುರಿದನು ಕೃಪೆಯು ತನಿರಸವ ‖ ೨೫

ಅಱಿದೆನಾನಂಜದಿರಿ ಹುಯ್ಯಲ
ಬಱಿದೆ ತಂದಿರಿ ನಿಮ್ಮಗೆಲವಿಂ
ಗೆಱಗುವವನವ [1] ನಲ್ಲ ಬೇಱಿಹುದಾತನಂಘವಣೆ |

---

1 ಗೆರಡಬಗೆವವ, ಚ.

ಅಱುಹಲೇಕೆ ಭವತ್ತಪೋವನ
ನೆಱೆ ನಿಮಗೆ ನಾನವನನೆಬ್ಬಿಸಿ
ತೆಱಹ ಮಾಡಿಸಿ ಕೊಡುವೆನೆಂದನು ತ್ರೈಪುರಧ್ವಂಸಿ ॥ ೨೬

ಏಳಿ ನೀವಾಶ್ರಮಕೆ ಹೋಗಿ ಭ
ಡಾಳಿಸಲಿ ಮುನಿವರನ ತಪವಿ
ನ್ನೇಳಿ ಸಾಕೆಂದಭಯವಿತ್ತ ಕರಾಂಬುಜವ ನೆಗಹಿ ।

ಬೇಟೆಗಾಗಿ ಸರ್ವರನ್ನೂ ಸಿದ್ಧಪಡಿಸೆಂದು ನಂದೀಶ್ವರನಿಗೆ
ಶಿವನ ಅಪ್ಪಣೆ ಮತ್ತು ಡಂಗುರ.

ಬೀಳುಕೊಟ್ಟನು ಸಕಲಮುನಿಜನ
ಜಾಲವನು ಕರೆ ಭೂತನಿಕರವ
ಮೇಳವಿಸಹೇಳೆಂದು ನಂದೀಶ್ವರಗೆ ನೇಮಿಸಿದ ॥ ೨೭

ಅರಸ ಕೇಳ್ಕೈ ಬೇಂಟೆಯೆಂದೀ
ಶ್ವರನ ಕಟಕದಲಾಡಿದುದು ಡಂ
ಗುರದ ದನಿ ಡಾವರದಲೈದಿತು ನಿಖಿಳಭೂತಚಯ [1] ।

ಈಶ್ವರನು ಕಿರಾತವೇಷವನ್ನು ತಾಳಿದುದು.

ಪರಮಕರುಣಾಸಿಂಧು ಭಕ್ತರ
ಪೊರೆವ ಭರದಲಿ ಭೂರಿಮೃಗಯಾ
ಚರಣೆಗೋಸುಗ ಶಬರವರರೂಪವನು ಕೈಕೊಂಡ ॥ ೨೮

ತೆಗೆದು ತಲೆಮಾಲೆಯನು ಹಸುರಂ
ಗಿಗಳ ತೊಟ್ಟನು ಸುತ್ತುವರೆ ಹೀ
ಲಿಗಳ ಹರಹಿನ ಪಾರಿವದ ಚಲ್ಲಣವ ವೆಂಠಣಿಸಿ ।
ಬಿಗಿಜಡೆಯ ಶಶಿಮುಖಕೆ ಪತ್ರಾ
ಳಿಗಳ ಕಟ್ಟಿ ಕಿರಾತವೇಷದ
ವಿಗಡದೇವರ ದೇವ ಕೊಂಡನು ಚಾಪಮಾರ್ಗಣವ ॥ ೨೯

1 ಭುವನವನು, ಚ.

ಬಳಿಕ ಈಶ್ವರನ ಪರಿವಾರವೆಲ್ಲ ಕಿರಾತರ ರೂಪವನ್ನು ತಾಳಿದುದು.

ದೇವನನುರೂಪದಲಿ ನಿಂದರು
ದೇವಿಯರು ಗುಹಗಣಪತಿಗಳ
ಲ್ಲಾ ವಿನೋದವ ನೋಡಲಳವಡಿಸಿದರು ಶಾಬರವ ।
ಆವಿಗಡನಂದೀಶ ವೀರಕ
ದೇವವರರೇಣುಕಮಹೋದರ
ದಾವಶಿಖಿವರವೀರಭದ್ರಾದ್ಯಖಿಳದೇವಗಣ [1] ॥ ೨೦

ಅರಸ ಕೇಳ್ಸ ಸಪ್ತಮಾತೃಕೆ
ಯರು ಮಹೋಪನಿಷನ್ನಿತಂಬಿನಿ
ಯರು ದಿಶಾದೇವಿಯರು ಶ್ರುತಿವಿದ್ಯಾದಿಶಕ್ತಿಯರು ।
ಉರಗಿಯರು ವಿದ್ಯಾಧರಿಯರ
ಪ್ಸರಿಯರೌಷಧಮಂತ್ರದೇವತೆ
ಯರು ಪುಳಿಂದಿಯರಾದರು [2] ಮಹೇಶ್ವರಿಯು ಬಟಿಸಿನಲಿ ॥ ೨೧

ಧೃತಿ ಮಹೋನ್ನತಿ ತುಷ್ಟಿ ಪುಷ್ಟಿ
ಸ್ಮೃತಿ ಸರಸ್ವತಿ ಸಂವಿದಾಯತಿ
ಮತಿ ಮನಸ್ವಿನಿ ಸಿದ್ಧಿ ಕೀರ್ತಿ ಖ್ಯಾತಿ ಮಿತಿ ನಿಯುತಿ ।
ಗತಿ ಕಳಾಮಾನಿನಿ ಕಳಾವತಿ
ರತಿ ರಸಾವತಿ ಚಂಡಿ ಜಯೆ ಮಘು
ಮತಿ ಯೆನಿಪ ದೇವಿಯರು ಶಬರಿಯರಾಯ್ತು ನಿಮಿಷದಲಿ ॥ ೨೨

ಮಾರಿ ಚಾಮುಂಡಾ ಸ್ಮಶಾನಾ
ಗಾರವತಿ ವರಕಾಳರಾತ್ರಿ ಮ
ಹೀರಮಣಿ ಜಯಲಕ್ಷ್ಮಿ ಯೋಗಿನಿ ಯಜ್ಞಶಕ್ತಿಗಳು ।
ವೀರಸಿರಿ ವನಲಕ್ಷ್ಮಿ ಶಾಕಿನಿ
ವಾರಿದೇವತೆ ಡಾಕಿನೀಮುಖಿ
ಭೂರಿಶಕ್ತಿಗಳೈದೆ ಶಬರಿಯರಾಯ್ತು ನಿಮಿಷದಲಿ ॥ ೨೩

---

1 ಭೂತಗಣ, ಟ 2 ರಾಯ್ತುಪರಮೋ, ಚ. ಟ.

ಜಾಳಿಸಿದ ಹದವಿಲ್ಲುಗಳ ಬಡಿ
ಕೋಲುಗಳ ಸಂಕಲೆಯನಾಯ್ಗಳ
ಕೋಲುವಲೆಗಳ ಕಣಿ ವಲೆದಡಿವಲೆಯ ನಿಡಿವಲೆಯ |
ಕಾಲುಕಣ್ಣಿಯ ಹೆಬ್ಬಲೆಯ ಬೆ
ಳ್ಳಾಲಹೊಱೆಗಳ ಗಳಗಳಂಟಿನ
ಮೇಲುಗೊಂಬಿನ ಬೇಟೆಕಾಱರು ಬೞಿಸಿದರು ಶಿವನ || ೩೪

ಶ್ರುತಿಗಳೊೞಗತರ್ಕಶಾಸ್ತ್ರದ
ಗತಿಯ ಸೋಹಿನ ತಂತ್ರಸಮಯಸಂ
ಗತಿಯ ಸೋಂಪಿನ ವಿವಿಧಜಪಯಜ್ಞಾದಿಗಳ ಬಲೆಯ |
ವ್ರತದ ಜಂತ್ರದ ಕಣ್ಣಿಗಳ ಸ
ತ್ಕೃತಿಯ ಕೋಲ್ಗುಂಡುಗಳ ಯೋಗ
ಸ್ಥಿತಿಯ ಸರಳಿನ ಬೇಟೆಕಾಱರು ಬೞಿಸಿದರು ಹರನ || ೩೫

ಶ್ರವಣಮನನದ ಬೀಸುವಲೆ ಶಾಂ
ಭವಸುವೇದದ ದೀಕ್ಷೆಗಳ ಬಲು
ಗವಣೆಗಳ ಪಶುಪಾಶಬಂಧದ ಬೋಳೆಯಂಬುಗಳ |
ನವವಿಧಾಮಳಭಕ್ತಿಗಳ ರಣ
ದವಕದೀಹದ ಹುಲ್ಲೆಗಳ ಮೃಗ
ಭವವಿದಾರಣಸುಭಟರೈದಿತು ಶಿವನ ನೇಮದಲಿ || ೩೬

ಸೋಹಿದರೆ ದೆಸೆದೆಸೆಗೆ ಹಾಯ್ದುವು
ಮೋಹತಮದಂಭಾದಿಮೃಗತತಿ
ತೋಹಿನಲಿ ಬಿದ್ದುವು ಮಹಾಪಾತಕಮದೇಭಚಯ |
ದ್ರೋಹದೀಯದ ಮೃಗವಪಾಯುವ
ರಾಹ ಸಂಕೀರ್ಣೋಪಪಾತಕ
ವಾಹರಿಪುಗಳನಂತವೞಿದುವು ಹರನ ಬೇಂಟೆಯಲಿ || ೩೭

ಜಯಜಯೆಂದುದು ನಿಖಿಳಜಗ ಶ್ರುತಿ
ಚಯ ಭಡಾಳಿಸಿ ಹೊಗಳುತಿರ್ದುವು
ನಯನಗೋಚರವಾಯ್ತು ಸಾಕ್ಷಾತ್ಪರಮಶಿವತತ್ತ್ವ ।
ಲಯದ ಜನನದ ಸುಳಿಯ ಸಂಸ್ಕೃತಿ
ಲಯಸಮುದ್ರವ ಸುಳಿದು ಕಳೆ ನಿ
ರ್ಭಯವು ಭಕ್ತರಿಗೆಂಬವೋಲ್ ಮಸಗಿತು ಮಹಾಶಬ್ದ ॥ ೩೮

ಕಿರಾತ ವೇಷಿಯಾದ ಈಶ್ವರನು ಸಪರಿವಾರನಾಗಿ ಇಂದ್ರ
ಕೀಲಕ್ಕೆ ಬಂದುದು.

ಹೇಳುವರೆ ರೋಮಾಂಚನವಲಾ
ಕೇಳು ನೃಪ ಕೈಲಾಸವಾಸಿಯ
ಲೀಲೆಯನು ನಿಜಭಕ್ತಜನಸಂದರ್ಶನಾರ್ಥವಲ ।
ಆಳು ನಡೆತಂದಿಂದ್ರಕೀಲದ
ಶೈಲವನು ಬೆಳಸಿತು ಮಹಾದ್ಭುತ
ದೇಳಿಗೆಯನೇನೆಂಬೆನೈ ಕೈರಾತವಿಭ್ರಮವ ॥ ೩೯

ಈ ರಭಸವನ್ನು ಮೂಕದಾನವನು ಕೇಳಿ ಹಂದಿಯ ರೂಪವನ್ನು
ತಾಳಿ ಬಂದುದು.

ಇಂಬಿನಲ್ಲಿಹ ಮೂಕದಾನವ
ನೆಂಬನೊಬ್ಬನ ತನ್ಮಹಾದ್ರಿನಿ
ತಂಬವನದ ನಿಕುಂಜದಲಿ ನಿರ್ಭಯವಿಹಾರದಲಿ ।
ಚುಂಬಿಸಿತು ಬಲುರಭಸವದು ವಿಲ
ಯಾಂಬುಧಿಯ ಕಳಕಳವೆನೆ ಸುರರ
ತಿಂಬೆನೀಕ್ಷಣವೆನುತ ಖಳನಾಲಿಸಿದನಾಧ್ವನಿಯ ॥ ೪೦

ಹಂದಿಯಾದನು ದನುಜನಾಗಿರಿ
ಕಂದರವ ಹೊಱವಂಟು ಬೇಟೆಯ
ಮಂದಿಯೊಳಗಡಹಾಯ್ತುತೆತ್ತಿದನಡ್ಡಬಿದ್ದವರ ।

ಹಂದಿಯಿದು ಬಿಡು ನಾಯ್ಗಳನು ಬಿಡು
ಹಿಂದಹಿಡಿ ಕೆಡೆ ಕುತ್ತು ಕೈಕೊ
ಳ್ಳೆಂದು ಗಜಬಜಿಸಿತ್ತು ಗಾವಳಿ ಗಹನಮಧ್ಯದಲಿ ॥ ೪೧

ಎಳೆವೆಱೆಯನಡುವಿರ್ದ್ದ ರಾಹುವೊ
ಲಳವಡುವ ದಾಡೆಗಳ ದೊಯು ಮಿಗೆ
ಬೆಳೆದನೀಲಾಚಲಕೆ ಸರಿಯೆಂದೆನಿಪ ಹೇರೊಡಲ ।
ಮುಳಿದು ಗರ್ಜಿಸಿ ಕಿಡಿಸುರಿವೆಕಂ
ಗಳ ಸರೌದ್ರಾಟೋಪದಲಿ ಕೆ
ಕ್ಕಳಿಸಿದೆಕ್ಕಲ ನೋಡುತಿರ್ದುದು ದೇವಸಂತತಿಯು ॥ ೪೨

ಕೂಡೆ ಕಟ್ಟಿತು ಭೂತಗಣ ದನಿ
ಮಾಡಿ ಭರದಬ್ಬರಿಸಿ ಮೇಱೆಯು
ನೀಡಿ ನಾಯ್ಗಳು ತುಡುಕಿದುವು ತಿರುಗಿದರೆ ಹಿಮ್ಮಡಿಯು ।
ಝೂಡಿಸುತ ಕವಿದೆಕ್ಕಲಂದೋ
ಡಾಡಿ ಬಿರಿದುದು ನೂಱುಘಾಯದಿ
ನೋಡುತಿರ್ದುದು ಸೇನೆ ಕಂಡನು ಶೂಲಿ ಸೂಕರನ ॥ ೪೩

ಈಶ್ವರನ ಬಾಣದ ಪೆಟ್ಟಿನಿಂದ ಧ್ವನಿಮಾಡುತ್ತಾ ಬಂದ ಹಂದಿಯನ್ನು ಪಾರ್ಥನು ನೋಡಿದುದು.

ಇದುವೆ ಸಮಯವಲಾ ಯೆನುತ ಹೂ
ಡಿದನು ಬಾಣವನುಗಿದು ಪೂರಾ
ಯದಲಿ ತೆಗೆದು ಪಿನಾಕಿ ಯೆಚ್ಚನು ಮೂಕದಾನವನ ।
ಒದೆದು ಹಾಯ್ದುದು ಬಾಣಗಱಿ ದೋ
ಱಿದುದು ಬದಿಯಲಿ ಕೊಡಹಿ ಘೋೞಿಡು
ತದು ಧನಂಜಯನತ್ತ ಹರಿದುದು ಹೊತ್ತಕಣೆಸಹಿತ ॥ ೪೪

ಪಾರ್ಥನ ಬಾಣದಿಂದ ಹಂದಿಯು ಮೃತವಾಗುವಿಕೆ.

ಬಂದು ಗಿರಿಕಂದರದೊಳಹ ಮುನಿ
ವೃಂದದೊಳಗಡಹಾಯ್ದು ಕೆಡಹುತ
ಹಂದಿ ಮೋಹಿಯ ನೆಗಹಿ ಮಲೆವುತ ಗಜಱಿ ಗರ್ಜಿಸಿತು ।
ಮುಂದಿ ಬೆದಱುತ ಘೋಳಿಡುತಲಾ
ಯಿಂದುಧರನೇ ಬಲ್ಲ ಶಿವ ಶಿವ
ಯೆಂದು ಮೊಱೆಯಿಡೆ ಕೇಳಿ ಕಣ್ದೆಱೆದೆದ್ದನಾಪಾರ್ಥ ॥ ೪೫

ಕಂಡನರ್ಜುನನೀವರಾಹನ
ದಂಡಿ ಲೇಸಲ್ಲೆನುತ ಬಾಣವ
ಗಾಂಡಿವದೊಳಳವಡಿಸಿ ಬೊಬ್ಬಿಱಿದೆಚ್ಚನಾಖಳನ ।
ದಿಂಡುಗೆಡೆದುದು ಕಾಲ ಕೊಡಹುತ
ಗಂಡಶೈಲದ ವೋಲು ಭೂತವ
ದಿಂಡುದಱಿದಾಹಂದಿ ಬಿದ್ದುದು ಪಾರ್ಥಸಿದಿರಿನಲಿ ॥ ೪೬

ಹಂದಿ ನನ್ನದು ನನ್ನದು ಯೆಂದು ಶಿವಾರ್ಜುನರ ವಿವಾದ.

ಬಂದನೀಶ್ವರ ನಾವು ಕೆಡಹಿದ
ಹಂದಿ ನಮ್ಮದು ತೆಗೆ ಯೆನಲು ನರ
ನೆಂದನೆನ್ನಂಬಿನಲಿ ಬಿದ್ದುದು ಸಾಕು ನೀನೆನಲು ।
ಬಂದುದೀಕಾಮಿಷವಿರೋಧದ
ಕಂದು ಪಾರ್ಥನ ಚಿತ್ತದಲಿ ಬಾ
ಲೇಂದುಧರನೆಂದೆತ್ತ ಬಲ್ಲನು ಕೋಪಿದನು ಶಿವನ ॥ ೪೭

ಆರನೆಯ ಸಂಧಿ ಮುಗಿದುದು.

## ಏಳನೆಯ ಸಂಧಿ.

**ಸೂಚನೆ.**

ಕದನಮುಖದಲಿ ಖೋಡಿಯಿಲ್ಲದೆ
ಬೆದಱದೊದಗಿದ ನರಗೆ ಕಾರು
ಣ್ಯದಲಿ ಕಾಮವಿರೋಧಿ ಕೊಟ್ಟನು ಪಾಶುಪತಶರವ ||

ಕಿರಾತನನ್ನು ಕುರಿತು ಅರ್ಜುನನು ನಿನ್ನ ಯಜಮಾನನನ್ನು
ಕರೆದು ತಾ ಎಂದು ಹೇಳಿದುದು.

ಎಲೆ ಕಿರಾತ ಮದೀಯಬಾಣದ
ಬಲೆಗೆ ನೀ ಮೃಗವಾಗದಿರು ನಿ
ನ್ನಳವ ಮೆಱೆಯೈ ಬನದ ನರಿಮೊಲಹಕ್ಕಿಹರಿಣನಲಿ |
ಗೆಲಿದಗರುವನು ನೀನು ನಿನ್ನ
ಗ್ಗಳಿಕೆಗಾನಂಜುವೆನೆ ನಿನ್ನಯ
ದಱಿಕೆ ಪತಿಯುಂಟಾದೊಡಾತನ ಕೊಂಡು ಬಾ ಯೆಂದ || ೧

ಈಶ್ವರನು ನಕ್ಕು ಪಾರ್ವತಿಯ ಮುಂದೆ ಈತನ ಪರಾಕ್ರಮ
ವನ್ನು ಹೇಳಿದುದು.

ಎನಲು ನಕ್ಕನು ಶಂಭು ಬಕುತನ
ಮನದ ಧೃತಿಯನು ಭುಜಬಲವನಾ
ತನ ಪರಾಕ್ರಮಲಕ್ಷ್ಮಿಯನು ಪಾರ್ವತಿಗೆ ತೋಱಿಸಿದ |
ನೆನೆದು ನುಡಿದನಿದೇನು ತಮ್ಮಡಿ
ನಿನಗೆ ತಪದಲಿ ಖಡ್ಗವೇಕೀ
ಧನುಶರಾವಳಿ ಯೇಕೆ ನಿನ್ನಂಘವಣೆ ಯೇನೆಂದ || ೨

ಅರ್ಜುನನ ಉಪೇಕ್ಷಾವಾಕ್ಯಗಳು.

ಏಕೆ ನಿನಗೀತಪದ ಚಿಂತೆ ವಿ
ವೇಕಶಾಸ್ತ್ರವಿಚಾರವಿದು ವಿಪಿ
ನೌಕಸರ ಸಂಹಾರವಿದ್ಯಾವೃದ್ಧಿ ನಿನ್ನದಲೆ ।
ಆಕೆವಾಳರ ಕರೆಸು ನೀನೇ
ಕಾಕಿ ನಿನ್ನಲಿ ಹರಿಯದಾಹವ
ವೇಕೆ ನಿನಗೆಂತೆಂದು ಕಪಟಕಿರಾತನನು ಜಱಿದ ॥ ೩

ಈಶ್ವರನ ವಾಕ್ಯ.

ನೀವು ಬಲ್ಲಿರಿ ಶಾಸ್ತ್ರದಲಿ ಶ
ಸ್ತ್ರಾವಳಿಯಲಾವಿಂದು ಪಕ್ಷಿಮೃ
ಗಾವಳಿಯ ಬೇಂಟೆಯಲಿ ಬಲ್ಲೆವು ಜಾತಿಧರ್ಮವಿದು ।
ನೀವು ಬಲುಹುಳ್ಳವರು ನಿಮ್ಮೊಡ
ನಾವು ಸೆಣಸುವರಲ್ಲ ನಿಮ್ಮವೊ
ಲಾವ ಋಷಿ ಶಸ್ತ್ರಜ್ಞನಾತನ ಬಿರುದ ತಡೆಯೆಂದ ॥ ೪

ಅರ್ಜುನನು ನಾನು ಈಶ್ವರನ ಶಿಷ್ಯನೆಂದು ಹೇಳಿದುದು.

ಕಟಕಿಯೇಕೆ ಪುಳಿಂದ ನಾವು
ಬ್ಬಟೆಯ ತಪಸಿಗಳೆಂಬುದಿದು ಪರಿ
ಸ್ಫುಟವಲೇ ತಪ್ಪೇನು ನಿನ್ನೊಡನೆಂದು ಫಲವೇನು ।
ಜಟೆಮೃಗಾಜಿನಭಸ್ಮದೊಡನು
ತ್ಕಟಧನುಶ್ಶರಖಡ್ಗದಲಿ ಧೂ
ರ್ಜಟಿ ಯಿಹನು ನಾವವರ ಶಿಷ್ಯರು ಶಬರ ಕೇಳೆಂದ । ೫

ಅದಕ್ಕೆ ಈಶ್ವರನ ನುಡಿ.

ಲೋಕಶಿಕ್ಷಕರಲ್ಲಲೇ ನಮ
ಗೇಕೆ ನಿಮ್ಮಯ ತಪದ ಚಿಂತೆ ಪಿ
ನಾಕಧರನಡಹಾಯ್ದುರೆಯು ಬಿಡೆವೆಮ್ಮ ವಾಸಿಗಳ ।

ಈಕಳಂಬವಿದೆಮ್ಮದೆನುತ ವ
ನೌಕಹದ ನೆಳಲಿನಲಿ ನಿಂದು ಪಿ
ನಾಕಿ ನುಡಿದನು ಕಡಿವನೀತನ ಮನದ ಸೈರಣೆಯ ‖ ೬

ಪಾರ್ಥನು ಕೋಪದಿಂದ ಬಾಣಗಳನ್ನು ಹಾಕಿದುದು.

ಮಸಗಿದನು ನಿನ್ನಾತನುಗಿದೆ
ಬ್ಬಿಸಿದ ಹುಲಿಯೋ ನೊಂದ ಹಂದಿಯೊ
ಹಸಿದ ಭುಜಗನೊ ಕಾದಕಟ್ಟುಕ್ಕಿನ ಛಡಾಳತೆಯೊ ।
ಉಸುರುಗಳ ಕಬ್ಬೊಗೆಗಳಾಲಿಯು
ಬಿಸುಗುದಿಯ ಬಲುಕೆಂಡವೆಂಬಿನ
ಹೊಸಮಸೆಗಳುರಿ ಝೂಡಿ ಝುಳಪಿಸಿ ಪಾರ್ಥ ಖತಿಗೊಂಡ ‖ ೭

ಆದೊಡಿದ ಕೊಳ್ಳೆನುತ ಕೆನ್ನೆಗೆ
ಸೇದಿ ಬಿಟ್ಟನು ಸರಳನದು ಹಿಂ
ದಾದುದಾಬಳಿ ಸರಳನದ ಹಿಂದುಳುಹಿ ಮತ್ತೊಂದು ।
ಹೋದುದದು ಹಿಂದಿಕ್ಕಿ ಮತ್ತೊಂ
ದೈದಿತತಿವೇಗಾಯ್ಲ ತನದನು
ವಾದಸಾಧ್ಯದ ಸರಳು ಕವಿದುವು ಬಿಟ್ಟಸೂಟಿಯುಲಿ ‖ ೮

ಏನ ಹೇಳುವೆನರಸ ಶರದಭಿ
ಮಾನದೇವತೆಯುಂಟಲಾ ಹರಿ
ಸೂನುವೆಱಿಯುದೊಡಾಕೆಯುಱಿಯುಳ ಚಂಡಿಕಾದೇವಿ ।
ಭಾನುಮಂಡಲದಂಧಕಾರದ
ವೈನತೇಯುನ ಭುಜಗತತಿಯು ಸ
ಮಾನಧರ್ಮವ ಕಂಡೆನೀಶನೊಳರ್ಜುನಾಸ್ತ್ರದಲಿ ‖ ೯

ಮಂಜು ಮುಸುಕಿದೊಡೇನು ಪರ್ವತ
ವಂಜುವುದೆ ಹಾಲಾಹಲವ ನೊಣ
ನೆಂಜಲಿಸುವುದೆ ವಡಬುಸಿಖಿ ನನೆವುದೆ ತುಷಾರದಲಿ ।

ಕಂಜನಾಳದಿ ಕಟ್ಟುವೆಡವುದೆ
ಕುಂಜರನು ನರಶರದ ಜೋಡಿನ
ಜುಂಜುವೊಳೆಯಲಿ ಜಾಹ್ನವೀಧರ ಜಾಱುವನೆ ಯೆಂದ ॥ ೧೦

ಮತ್ತೆ ಸುಱಿದನು ಸರಳ ಮಳೆಯುನ
ದೆತ್ತ ನಭದೆಸೆಯೆತ್ತ ಧಾರುಣಿ
ಯೆತ್ತಲರ್ಜುನನೆತ್ತ ಕಪಟಕಿರಾತ ತಾನೆತ್ತ ।
ಹೊತ್ತಹೊಗರಿನ ಮೊಱೆವ ಗಱಿಗಳ
ಮುತ್ತುಗಿಡಿಗಳ ಬಾಯಧಾರೆಯು
ಮೊತ್ತವೆಂದೌಕಿದುವು ಮೃತ್ಯುಂಜಯನ ಸಮ್ಮುಖಕೆ ॥ ೧೧

ಕೋಪದಿಂ ಬಂದ ವಿನಾಯಕಾದಿಗಳನ್ನು ಸಮಾಧಾನ ಪಡಿಸಿದುದು.

ಕೆರಳಿದನು ಹೇರಂಬ ಗುಹನ
ಬ್ಬರಿಸಿದನು ರೋಷದಲಿ ಮಸಗಿತು
ತರತರದ ವರವೀರಭದ್ರಾದ್ಯಖಿಳಭೂತಗಣ ।
ಹರನು ಕಂಡನಿದೇನಿದೇನ
ಬ್ಬರಿ ಧನಂಜಯನೆಮಗೆ ನೂರ್ಮಡಿ
ಪರಮಹಿತ ನಿಮ್ಮಿಂದ ನೀವ್ ಗಜಬಜಿಸಬೇಡೆಂದ ॥ ೧೨

ಈಶ್ವರಾರ್ಜುನರ ಪರಸ್ಪರಬಾಣವೃಷ್ಟಿ.

ಎನುತ ಕೊಂಡನು ಧನುವನಾಪಾ
ರ್ಥನ ಶರೌಘವನೆಚ್ಚೊಡೀಶನ
ಮೊನೆಗಣೆಯಲಕ್ಕಾಡಿದುವು ಬಾಡಿದುವು ಬಱಿಸರಳು ।
ಕನಲಿ ಕಿವಿವರೆಗುಗಿದು ಘಡ ಹೋ
ಗೆನುತ ಮಗುಟೆಚ್ಚನು ಧನಂಜಯ
ನನಿತುಶರವನು ಕಡಿದು ಮದನವಿರೋಧಿ ಮಗುಟೆಚ್ಚ ॥ ೧೩

ಎಸುಗೆಯೊಳ್ಳಿತು ಶಬರನತಿಸಾ
ಹಸಿಕನೈ ಬಿಲ್ಲಾಳಲಾ ಸಮ
ಬೆಸನನೆಚ್ಚನು ನಮ್ಮೊಡನೆ ಮಝುಪೂತು ಪಾಯ್ಕೆನುತ ।

ಹೊಸಮಸೆಯ ಹೊಗರಲಗುಗಳ ದ
ಳ್ಳಿಸುವ ಧಾರೆಯ ಕೆಂಗರಿಯ ಥಾ
ಳಿಸುವ ಕಣೆಗಳ ಶರಧಿಯನು ಕವಿಸಿದನು ಕಲಿಪಾರ್ಥ ॥ ೧೪

ಅರ್ಜುನನ ಬಾಣಗಳು ಮುಗಿದರೂ ಉತ್ಸಾಹ
ಏಕರೀತಿಯಾಗಿರುವಿಕೆ.

ಈಡಿರಿದುವೊಂದೊಂದಱಲಿ ಹೊಗೆ
ಝೂಡಿ ಝುಳಪಿಸುವುರಿಗಳಲಿ ಸರ
ಳೋಡಿದುವು ಗಾಂಡಿವವನೊದೆದು ಮಹೇಶನಿದಿರಿನಲಿ ।
ಕಾಡಿದರೆ ಕಾರುಣ್ಯನಿಧಿ ಕೊಂ
ಡಾಡುತಿರ್ದನು ಪಾರ್ಥನಂಬಿನ
ಮೂಡಿಗೆಯ ಸಂವರಣೆ ಸವೆದುದು ಸವೆಯದಾಟೋಪ ॥ ೧೫

ಎಲೆ ಕಿರಾತ ಕಿರಾತರೊಳಗ
ಗ್ಗಳೆಯನಹೆಯೋ ದೇವದಾನವ
ರೊಳಗೆ ಸ್ವೈರಿಸಿ ನಿಲುವನಾವನು ನಮ್ಮ ವಿಲಗದಲಿ ।
ಅಳುಕದಿರು ಕಲಿಯಾಗೆನುತ ತುದಿ
ಹಿಳುಕ ಮಂತ್ರಿಸಿ ದಿವ್ಯಬಾಣಾ
ವಳಿಗಳಲಿ ಬಾಲೇಂದುಮೌಳಿಯನೆಚ್ಚನಾಪಾರ್ಥ ॥ ೧೬

ಅರ್ಜುನನ ಬಾಣಗಳನ್ನು ಈಶ್ವರನು ನುಂಗಿದುದು.

ಏಸುಮಂತ್ರಾಸ್ತ್ರದಲಿ ಮುಸುಕಿದೊ
ಡ್ಡೈಸುವನು ಹರ ನುಂಗಿದನು ಮಗು
ಚೇಸುಕೂರಂಬುಗಳಲೆಚ್ಚೊಡೆ ಕಡಿದನಂಬಿನಲಿ ।
ಈಸುವೆಗ್ಗಳರಾರೆನಿಪ ಜಿ
ಜ್ಞಾಸೆ ಬೇಡಾ ಕ್ಷಾತ್ರತಾಮಸ
ವೇಸು ಬಲುಹೋ ನಿಮ್ಮ ಜಾತಿಗೆ ಭೂಪ ಕೇಳೆಂದ ॥ ೧೭

ಆಗ ಅರ್ಜುನನ ಪರಿತಾಪ.

ಅಂದು ಖಾಂಡವವನದ ದಹನದಿ
ಬಂದುದಕ್ಷಯಬಾಣ ಬಾಣದಿ
ಯಿಂದು ಬಱಿತುದು ಬಹಳಜಲನಿಧಿ ಬತ್ತುವಂದದಲಿ।
ಇಂದುಮೌಳಿಯ ಸೇವೆಗಿಂದು ಪು
ಳಿಂದ ಕಂಟಕನಾದನೇ ಹಾ
ಯೆಂದು ಗರ್ಜಿಸಿ ಚಾಪದಿಂದಪ್ಪಳಿಸಿದನು ಶಿವನ॥ ೧೮

ಕಳಚಿದನು ದಂಡೆಯಲಿ ಘಾಯವ
ನಳುಕಿದನಲಾ ಯೆನುತ ಮಗುೞಿ
ಪ್ಪಳಿಸಿದನು ಮೇಲ್ವಾಯ್ದು ಹೊಯ್ದನು ಜಱಿದು ಝೋಂಪಿಸುತ।
ಮೆಲುನಗೆಯಲರ್ಜುನನ ಚಾಪವ
ಸೆಳೆದು ಕೊಂಡನು ತನ್ನ ಭಕ್ತನ
ಬಳವಿಗೆಯನೇ ಮಾಡಿ ಹೇಯೆಂದುದು ಸುರಸ್ತೋಮ॥ ೧೯

ಅರ್ಜುನನು ಭಯಗೊಂಡುದು.

ತಿಳಿವನುಗಿದಡಿಗಿಕ್ಕಿ ಮಱವೆಯ
ಕಳಕಳವೆ ಮೇಲಾಯ್ತು ತಾಮಸ
ಜಲನಿಧಿಯ ತಳಮಳಲ[1] ಮುಟ್ಟಿತು ಮನ ಧನಂಜಯನ।
ಸೆಳೆದನೊರೆಯಲಡಾಯುಧವ ಬೀ
ಟೆಲವೊ ಶಬರಾ ಯೆನುತ ಹೊಯ್ದನು
ತಳಿರೆಲೆಯ ತಳದೆಳವೆಱಿಯನೆಲೆವನೆಯ ಪಶುಪತಿಯ॥ ೨೦

ಮರದ ಹೆಗ್ಗೊಂಬುಗಳಲಿಟ್ಟನು
ತಿರುಹಿ ಕಲ್ಗುಂಡುಗಳ ಮಳೆಯಲಿ
ಹರನ ಮುಸುಕಿದನೇನನೆಂಬೆನು ಪಾರ್ಥನುರುವಣೆಯ।

[1] ತಾಯ್ಮಳಲ, ಚ.

ಸರಳಸಾರದಲಿನಿತುವೆನು ಕ
ತ್ತರಿಸಿ ಕರುಣಾಜಲಧಿ ನುಡಿದನು
ಮರುಳ ತಪ್ಪೇಡಿ ಕೈದುವುಳ್ಳರೆ ಕೊಂಡು ಬಾ ಯೆಂದ ॥ ೨೧

ಬಾಹುಯುದ್ಧಕ್ಕಾಗಿ ಈಶ್ವರನನ್ನು ಕರೆದುದು.

ಕೈದುವೇಕೆ ಪುಳಿಂದ ನಮ್ಮೊಡ
ನೈದಿಸಾ ಭುಜಯುದ್ಧವನು ಬಲು
ಗೈದುವಿದೆಲಾ ಮುಷ್ಟಿ ನಿನಗದು ಪಾಯಬೊಕ್ಕೆಯುವ ।
ಕಾದುಕೊಳ್ಳನುವಾಗು ನಿನ್ನವ
ರೈದಿ ನೋಡಲಿ ಯೆನುತ ಭುಜವನು
ಹೊಯ್ದು ನಿಂದನು ಪಾರ್ಥನುಱೆ ಬೆಱಗಾಗೆ ಭೂತಗಣ ॥ ೨೨

ಪಾರ್ವತಿಯ ಮುಂದೆ ಈತನ ತಪಸ್ಸಿನ ಕ್ರಮವನ್ನು
ಹೇಳಿದುದು.

ಕಂಡಿರೇ ದೇವಿಯರೆ ನರನು
ದ್ದಂಡತನವನು ತಱಗೆಲೆಯು ಕೈ
ಕೊಂಡು ತಿಂಗಳು ನಾಲ್ಕ ಪವನಾಹಾರದಲಿ ಬಚಿಕ ।
ದಂಡಿಸಿದನೀದೇಹವನು ನಾ
ವೆಂಡಲೆಯಲೊದಗಿದನಲೇ ಸಮ
ದಂಡಿಯಲಿ ನಮ್ಮೊಡನೆ ಯೆಂದನು ನಗುತ ಶಶಿಮೌಳಿ ॥ ೨೪

ಹಾಱಿತಾಯುಧವೆಂದು ಭೀತಿಗೆ
ಮೊಱಹೋದನೆ ವೀರರಸ ನೋಱೆ
ಯಾಱಿತೇ ನಿಜಬಾಹುಸತ್ವದೊಳುಂಟೆ ಖಯಖೋಡಿ ।
ಮಿಾಱಿ ಹತಕಂತುಕದ ವೋಲು ಪುಟ
ವೇಱುತಿದೆ ವಿಕ್ರಮ ಛಡಾಳಿಸಿ
ಬೀಱುತಿದೆ ಭುಜಭಾರಿಯಂಕವ ದೇವಿ ನೋಡೆಂದ ॥ ೨೫

ಈತ ನರನೆಂಬನು ಕೃಷ್ಣ ಸಂ
ಗಾತಿ ನಾರಾಯಣಋಷಿಗೆ ತಾ
ನೀತಗಳು ಹರಿಯಂಶಭೂತರು ಭಕ್ತರಿವರೆಮಗೆ ।
ಈತನೆಮ್ಮಯ ಪಾಶುಪತವಿ
ಖ್ಯಾತಬಾಣವ ಬೇಡಿ ತಪದಲಿ
ವೀತರಾಗದ್ವೇಷನಾದನು ಕಾಂತೆ ಕೇಳೆಂದ ॥ ೧೬

ಪಾರ್ಥ ಮತ್ತು ಈಶ್ವರನ ಬಾಹುಯುದ್ಧ.

ಕೊಡುವೆನೀತಂಗೆಮ್ಮ ಶರವನು
ಮಡದಿ ಮತ್ತೆಯು ನೋಡು ಪಾರ್ಥನ
ಕಡುಹನೆನುತಿದಿರಾಗಿ ಬಾಹಪ್ಪಳಿಸಿ ಬೊಬ್ಬಿಡುತ ।
ಹಿಡಿದರಿಬ್ಬರು ಕೈಗಳನು ಹೊ
ಕ್ಕೊಡನೆ ಹತ್ತಾಹತ್ತಿಯಲಿ ಮಿಗೆ
ಜಡಿತೆಯಲಿ ಜಾವಡಿಸಿದರು [1] ಬಹುವಿಧದ ಬಿನ್ನಣವ ॥ ೧೭

ಬಿಗಿವ ಬಿಡಿಸುವ ಬಿಡಿಸಿದಾಕ್ಷಣ
ತೆಗೆವ ಕಳಚುವ ಕೊಂಬಲಳಿಯಲಿ
ಹೊಗುವ ಹತ್ತುವ ಲವಣಿಯಲಿ ಲಾಗಿಸುವ ಹೊಱವಡುವ ।
ಚಿಗಿವ ತೊಡಚುವ ಬಿಡುವ ಬೀಸುವ [2]
ಬಗಿವ ಬಳಸುವ ಬಂಧಗತಿಯಲಿ
ಲಗಡಿಸುವ ಲೋಕೈಕವೀರರು ಹೊಕ್ಕು ಹೆಣಗಿದರು ॥ ೧೮

ಕರವಳಯ ಕರಹತಿಯ [3] ಡೊಕ್ಕರ
ಶಿರವ ಧಣುಧಣುವಟ್ಟೆತಳ ಭೊ
ಪ್ಪರ ದುವಂಗುಲಕಂದ ಡೊಕ್ಕರ ತೋಱಹತ್ತದಲಿ ।
ಸರಿಸಮರ್ಕಟಬಂಧಪಟ್ಟೆಸ
ಉರಗಬಂಧನಬಾಹುದಱುವಂ
ತರಲಗಡಿಯಂಬಿನಿತರಲಿ ತೋಱದರು ಕೌಶಲವ ॥ ೧೯

1 ಚಾಳೈದರು, ಚ. 2 ಚಿಗಿವ ಬಿಡಿಸುವ, ಚ. 3 ತಳಹತ್ತು, ಚ. ಟ

ಮುಱಿವ ಬಿಡಿಸುವ ಡಗೆಯ ಸೈರಿಸಿ
ತೆರಳಿಚುವ ತಳವೇಲುಗಳಲು
ತ್ತರಿಸವೇಱುವ ಬೀಱೆ ಚರಿಸುವ [1] ಸುೞಿವ ವಂಚಿಸುವ |
ಹೊರಳ್ವತನಿಹೋರಟೆಯ ಸತ್ತ್ವೋ
ತ್ಕರದ ಶಮವೆನು ಶಂಭು ಶಿಷ್ಯಗೆ
ಪರಿವಿಡಿಯ ತೋಱಿಸುವ್ರೊಲಿರ್ದನು ಭೂಪ ಕೇಳೆಂದ || ೩೦

ಘಾಯವುಂಟೇ ತೋಱು ನೀ ನಡು
ಪಾಯ ಬಿಡು ಜೊಕ್ಕೆಯವನೆನುತಲ
ಜೇಯನೊಡನಿದಿರೆದ್ದು ತಿವಿದನು ಹರನ ಪೇರುರವ |
ಘಾಯ ಘಾತಿಗೆ ನಿಮ್ಮ ಮತವೆಮ
ಗಾಯ್ತೆನುತ ತ್ರಿಪುರಾರಿ ಕಡು ಪ್ರೊ
ರಾಯದಲಿ ಕರವೆತ್ತಿನಸು ತಿವಿದನು ಧನಂಜಯನ || ೩೧

ತರಹರಿಸಿ ನರನಿಕ್ಕಿದನು ಶಂ
ಕರನ ವಕ್ಷಸ್ಸ್ಥಳವನೆಡೆಯಲಿ
ಮುಱಿದು ಕಳಚಿ ಗಿರೀಶನೆಱಗಿದನಿಂದ್ರನಂದನನ |
ಮರಳಿ ತಿವಿದನು ಪಾರ್ಥನೀತನ
ಶಿರಕೆ ಕೊಟ್ಟನು ಶಂಭುವಿಂತಿ
ಬ್ಬರ ವಿಷಮಘಾಯದ ಗಡಾವಣೆ ಘಲ್ಲಿಸಿತು ಜಗವ || ೩೨

ಸುಯ್ಲ ಹೊಗೆಗಳ ಹೊದರುದಿವಿಗಳ
ಮೆಯ್ಲುಳಿಯ ಮುಱಿವುಗಳ ದೃಢವೇ
ಗಾಯ್ಲರಿಕ್ಕಿದ ಘಾಯಘಾತಿಗೆ ಮುಷ್ಟಿ ಕಿಡಿಯೇಱೆ |
ಶಯ್ಲಹತಿಗಳ ಭಾರಣೆಯ ಬಿರು
ವ್ರೊಯ್ಲ ಬೆಳೆ ಸಿರಿವಂತರಿವರೆನ
ಲೈಲಪ್ಯೆಲದ ಜರಡುಗಳ ನರನಾಥ ಕೇಳೆಂದ || ೩೩

1 ಹತ್ತುವ, ಟ.

ತ್ರಾಣವೆಂತುಟೊ ಶಿವ ಶಿವಾ ಸ
ತ್ರಾಣನಹೆ ಬಹುದಿವಸ ಭುವನ
ಪ್ರಾಣನೇ ಪೋಷಣದಲಾ ಮಝು ಪೂತು ಜಗಜಟ್ಟಿ ।
ಕಾಣೆ ನಿನಗೆ ಸಮಾನನನು ಶಿವ
ನಾಣೆ ಗುಣವಲಸೂಯೆಯೋ ತ
ನ್ನಾಣೆ ನೋಡಾ ಶಬರಿ ಯೆಂದನು ನಗುತ ಶಶಿಮೌಳಿ [1] ॥ ೨೪

ಅರ್ಜುನನು ಈಶ್ವರನನ್ನು ಬೇಡಿದುದು.

ನಿನಗೆ ನಾ ಬೆಱಗಾದೆ ನೀನಿಂ
ದೆನಗೆ ಮೆಚ್ಚಿದೆ [2] ದೇವದಾನವ
ಜನವೆನಗೆ ಪಾಡಲ್ಲ ನೀ ಹಲ್ಲಣಿಸಿದ್ದೆ ನಮ್ಮಾ ।
ಇನನೊ ಮೇಣ್ ದೇವೇಂದ್ರನೋ ಹರಿ
ತನುಜನೋ ಹರಿಯೋ ಮಹಾದೇ
ವನೊ ಕಿರಾತನೊ ಮೇಣೆನುತ ಮತ್ತೆಱಗಿದನು ಶಿವನ ॥ ೨೫

ಅರ್ಜುನನನ್ನು ನೋಡಿ ಶಿವನ ಪಶ್ಚಾತ್ತಾಪ.

ಘಾಯವೆನು ಮನ್ನಿಸುತ ಶಿವ ಪೂ
ರಾಯದಲಿ ಮುಟ್ಟಿದನು ಪಾರ್ಥನ
ಬಾಯೊಳೊಕ್ಕುದು ರುಧಿರ ನಾಸಿಕದೆರಡುಬಾಹೆಯಲಿ ।
ನೋಯೆ ನೊಂದನು ವಿಗಡ ಮುನಿಯಲ
ಪಾಯವಾದುದಕಟಕಟಾ ತ
ಪ್ಪಾಯಿತ್ತೆ ತಪ್ಪಾಯ್ತೆನುತ ಮಱುಗಿದನು ಮದನಾರಿ ॥ ೨೬

ಬಿರಿದುದೀತನ ಗರ್ವಗಿರಿ ಮೊಡ
ಮುಱಿದುದೀತನ ಶಕ್ತಿ ಸಲೆ ಟೆ
ಬ್ಬರಿಸಿತಿಂದ್ರಿಯವರ್ಗ ನಗ್ಗಿತು ನೆನಹಿನೊಡ್ಡವಣೆ ।
ಹರಿದುದಂಗಸ್ವೇದಜಲ ಕಾ
ಹುರಕೆ ಕಾಲ್ವೊಳೆಯಾಯ್ತು ಮತಿನಿ
ಬ್ಬರದ ಬೆಱಗಿನ ಬೆದೆಯಲಿ ಬೆಂಡಾದನಾಪಾರ್ಥ ॥ ೨೭

1 ಮದನಾರಿ, ಚ. ಟ.  2 ವಂಚಿಸದೆ, ಕ,

ಅರ್ಜುನನ ಸಂತಾಪ.

ಆವ ಸುವ್ರತಭಂಗವೋ ಮೇ
ಣಾವ ದೈವದ್ರೋಹವೋ ಮೇ
ಣಾವ ಶಿವಭಕ್ತಾಪರಾಧವೊ ಪೂರ್ವಜನ್ಮದಲಿ ।
ಆವ ಹಿರಿಯರ ಹಳಿದೆನೋ ತಾ
ನಾವ ಧರ್ಮವನಳಿದೆನೋ ತನ
ಗೀವಿಧಿಯ [1] ಪರಿಭವವಮಹೀರುಹ ಫಲಿತವಾಯ್ತೆಂದ ॥ ೩೮

ಈತ ದಿಟಕೆ ಪುಳಿಂದನೇ ವಿ
ಖ್ಯಾತನರ ತಾನಲ್ಲಲೇ ದಿಟ
ಜಾತಿಪಾರ್ಥನೆ ತಾ ನಿಧಾನಿಸೆ ಶಬರನಿವನಲ್ಲ ।
ಈತ ಪಲ್ಲಟವಾದನೋ ಮೇಣ್
ಶ್ವೇತತುರಗನ ಪಲ್ಲಟವೊ ಕುಂ
ತೀತನುಜ ತಾನಲ್ಲ ನಿಶ್ಚಯವೆಂದು ಚಿಂತಿಸಿದ ॥ ೩೯

ಅಱಿದನೇ ಶಿವನೆಂದು ದೈವದ
ಸರಿಯ ಬಲುಹನು ಕಂಡೊಡೆಯು ದಿಟ
ವಱಿಯಬಹುದೇ ರಹಸ್ಯ ಮಾಯಾಗೋಪಿಕಾತ್ಮಜನ ।
ಅಱುಹಿಕೊಡವೇ ವೇದಶಿರವೆ
ಚ್ಚರಿಸಿ ತನ್ನನಖಂಡಚಿನ್ಮಯ
ನಱಿವು ತಾನೆಂದಾವನಱಿವನು ಭೂಪ ಕೇಳೆಂದ ॥ ೪೦

ಹಂದಿಯೈತರಲೇಕೆ [2] ಬನದ ಪು
ಳಿಂದನಲಿ ಸೆಣಸಾಗಲೇತಕೆ ಪು
ಳಿಂದವಮಾನಕರು ತಾವವಮಾನ್ಯ ರಾದೆವೆಲೆ ।
ಇಂದುಮೌಳಿಯುಪೇಕ್ಷೆಯೋ ತಾ
ನಿಂದು ಶಿವಪದಭಕ್ತಿಶೂನ್ಯನೊ
ಮಂದಭಾಗ್ಯನು ತಾನಲಾ ಹಾ ಯೆನುತ ಚಿಂತಿಸಿದ ॥ ೪೧

---

1 ಗಾಪಪರಿ, ಚ. 2 ಯೇತಕೆತನಗೆ, ಚ.

ತಿರುಗಿ ಶಿವನನ್ನು ಪ್ರಾರ್ಥಿಸಲಾರಂಭಿಸಿದುದು.

ಏಕೆ ಚಿಂತೆ ವೃಥಾ ಮನೋವ್ಯಥೆ
ಕಾಕಲಾ ನಾವಜ್ಞರಾಗೆ ಪಿ
ನಾಕಿ ಮಾಡುವುದೇನು ಮಱೆಯೊಗುವೆನು ಮಹೇಶ್ವರನ ।
ಈಕಿರಾತನ ಹರಿಬವನು ಬೞಿ
ಕೇಕೆ ನಿಮಿಷಕೆ ಗೆಲುವೆನೆಂದು ವಿ
ವೇಕಶಿರಿಯು ಕಟಾಕ್ಷ ಚಿತ್ತಕೆ ಮಾರಿದನು ಮನವ ॥ ೪೦

ಮಣಲಲಿಂಗವ ಮಾಡಿದನು ನಿ
ರ್ಗುಣನ ಸಗುಣಾರಾಧನೆಯು ಮ
ನ್ನಣೆಗಳಲಿ ವಿಸ್ತರಿಸಿದನು ವಿವಿಧಾಗಮೋಕ್ತಿಯಲಿ ।
ಕಣಗಿಲೆಯು ಬಂಧುಗೆಯು ಕಕ್ಕೆಯು
ಸಣಶಿರೀಷದ ಕುಸುಮದಲಿ ರಿಪು
ಗಣಭಯಂಕರನನರ್ಚಿಸಿದನಂಧಾಸುರಾಂತಕನ ॥ ೪೩

ಅಮಲಶೈವಸ್ತವವ ಹೇೞುತ
ನಮಿಸಿದನು ಬಲ ಬಂದು ಪುನರಪಿ
ವಿಮಲಮತಿ ವ್ಯೈಯ್ಯಿಕ್ಕಿದನು ಭಯಭರಿತಭಕ್ತಿಯಲಿ [1] ।
ಕಮಲಸಂಭವವಂದ್ಯ ಗಿರಿಜಾ
ರಮಣ ಭಕ್ತಕುಟುಂಬಿ ದೇವೋ
ತ್ತಮ ತ್ರಿಯಂಬಕ ಪುಷ್ಟಿವರ್ಧನ ಕರುಣಿಸುವುದೆಂದ ॥ ೪೪

ಗೆಲಿದನೆನ್ನನು ಶಬರನೀತನ
ಗೆಲುವಶಕ್ತಿಯು ಕೊಡು ಕಿರಾತನ
ಬಲುಹ ಭಂಗಿಸಿತೆನ್ನ ಬಿಂಕದ ಪ್ರೌಡೆಯು ನೀನಿರಲು ।
ಹಲವು ಮಾತೇನಿವನ ಗೆಲುವ
ಗ್ಗಳಿಕೆಯನು ಕೃಪೆಮಾಡೆನುತ ಪರ
ಬಲದಿಶಾಪಟ ಭುಜವನೊದರಿಸುತಿತ್ತ ಮುಂಡಾದ ॥ ೪೫

1 ನಿಜಭಾವಶುದ್ಧಿಯಲಿ, ಚ.

ತಿರುಗಿ ಯುದ್ಧಕ್ಕೆ ಕರೆಯುವಾಗ ಶಿವನು ಪ್ರತ್ಯಕ್ಷವಾದುದು.

ಕಾಣಬಹುದೋ ಶಬರ ನಿನ್ನಯ
ಪ್ರಾಣವೆನ್ನಾಧೀನ ವೆಱಿಯಾ
ಸ್ಥಾಣುವಿನ ಬಲುಹುಂಟು ಹಿಂಡುವೆನಿನ್ನು ನಿಸ್ಸಸುವ ।
ಗೋಣ ಮುಱಿವೆನು ತುಡುಕಿದರೆ ಶಿವ
ನಾಣೆ ಬಾ ಸಂಮುಖಕೆ ಹಾಣಾ
ಹಾಣಿಗಿನ್ನನುವಾಗೆನುತಲೆವೆಯಿಕ್ಕದೀಕ್ಷಿಸಿದ ॥ ೪೬

ಕಂಡನರ್ಜುನನೀಕಿರಾತನ
ಮಂಡೆಯಲಿ ತಾ ಮೆಳಲಲಿಂಗದ
ಮಂಡೆಯುಲಿ ಪೂಜಿಸಿದ ಬಹುವಿಧಕುಸುಮಮಂಜರಿಯ ।
ಕಂಡನಿತ್ತಲು ಮುಱಿದು ಪುನರಪಿ
ಕಂಡನೀಶಬರಂಗಿದೆತ್ತಣ
ದಂಡಿಯಿದು ತಾನೆನುತ ಬೆಱಗಾಗಿದ್ದನಾಪಾರ್ಥ[1] ॥ ೪೭

ಆಗಲಿದನಾರ್ಕೈವೆನೆನುತವೆ
ನಾಗವೋಕ್ತಾದಿ ಮತ್ತೆ ಲಿಂಗದ
ಮೇಗರೆಯ ನಿರ್ಮಾಲ್ಯವನು ಬೇಱಿಱಿಸಿ ಭಕ್ತಿಯುಲಿ ।
ಪೂಗಳನು ತಱಿದೊಟ್ಟಿ ಕರುಣಾ
ಸಾಗರನ ಬಲವೆಂದು ದಕ್ಷನ
ಯಾಗಹರನೆ ನಮಶ್ಶಿವಾಯೆನುತಿತ್ತ ಮುಂದಾದ ॥ ೪೮

ಮತ್ತೆ ಕಂಡನು ಖಂಡಪರಶುವಿ
ನುತ್ತಮಾಂಗದೊಳೀಚೆಯುಲಿ ಲಿಂ
ಗೋತ್ತಮಾಂಗದ ಮೇಲೆ ಕಾಣನು ಕುಸುಮಮಂಜರಿಯ ।
ಕುತ್ತಿದುವು ಕೌತುಕವ ಕಂಗಳು
ಹೊತ್ತವೆದುಭುತವನು ಭಯಾನಕ
ವೆತ್ತ ರಸದಲಿ ಮುಳುಗಿದುವು ಕಂಗಳು ಧನಂಜಯನ ॥ ೪೯

---

1 ದಂಡಿಯೋ ಹಾಯೆನುತಸ್ಸೈವೆಱಗಾದನಾಪಾರ್ಥ, ಚ.

ಶಿವನಲಾ ಸಾಕ್ಷಾಚ್ಚತುರ್ದಶ
ಭುವನಕರ್ತೃವಲಾ ಕಿರಾತ
ವ್ಯವಹರಣೆಯಲಿ ಸುಚಿದನಸ್ಮದನುಗ್ರಹಾರ್ಥವಲ |
ಎವಗೆ ನಿರಶನ ತಪದ ಪಿತ್ತದ
ಭವಣೆ ತಲೆಗೇಱಿದುದಲಾ ಶಿವ
ಶಿವ ಮಹಾದೇವಾ ಯೆನುತ ಮಱುಗಿದನು ಕಲಿಪಾರ್ಥ || ೫೦

ಯುದ್ಧಮಾಡಿದ್ದಕ್ಕಾಗಿ ಅರ್ಜುನನ ಪಶ್ಚಾತ್ತಾಪ.

ಹೃದಯವಿಬ್ಬಗೆಯಾಯ್ತು ಕಂಗಳು
ಹೆದಱಿದುವು ವೈವರ್ಣ್ಯದಲಿ ತನು
ಗದಗದಿಸಿತಡಿಗಡಿಗೆ ಝಡಿದುದು ರೋಮಪುಳಕದಲಿ |
ಉದುರಿದುದು ನೇತ್ರಾಂಬು ಬಿಂಕದ
ಬೆದರಿಕೆಯು ಮೂಢತೆಯು ತಿಳುಹಿನ
ಮುದದ ಖೇದದ ಘಾಯಘಾಸಿಗೆ ಪಾರ್ಥನೊಳಗಾದ || ೫೧

ಸ್ವೇದಜಲದಲಿ ಮಿಂದು ಪುನರಪಿ
ಖೇದಪಂಕದೊಳದ್ದಿ ಬಹಳವಿ
ಷಾದರಜದಲಿ ಹೊರಳಿ ಭಯರಸನದಿಯೊಳೀಸಾಡಿ |
ಮೈದೆಗೆದು ಮರನಾಗಿ ದೆಸೆಯಲಿ
ಬೀದಿವರಿವುತ ವಿವಿಧಭಾವದ
ಭೇದದಲಿ ಮನ ಮುಂದುಗೆಡುತಿರ್ದುದು ಧನಂಜಯನ || ೫೨

ಏಸು ಬಾಣದೊಳೆಚ್ಚಡೆಯು ಹೊಱ
ಸೂಸಿದುವು ತಾನಱಿದುದಿಲ್ಲ ಮ
ಹಾಶರವ ಕಳುಹಿದೊಡೆ ನುಂಗಿದನಡಱಿದೆನೆ ತಾನು |
ಆಶರಾಸನಖಡ್ಗವೆನು ಕೊಳ
ಲೈಸರೊಳಗೆಚ್ಚತ್ತೆನೇ ಹಿಂ
ದೇಸುಜನ್ಮದ ಜಾಡ್ಯಜವನಿಕೆಯೋದುದೆನಗೆಂದ || ೫೩

ಆವನನು ಜಪಯಜ್ಞದಲಿ ಸಂ
ಭಾವಿಸುವರಾವನ ಪದಾಂಬುಜ
ಸೇವೆಯಲಿ ಸನಕಾದಿಗಳು ಧನ್ಯಾಭಿಮುನಿಗಳು ।
ಆವನೊಬ್ಬನೆ ನಾದಬಿಂದುಕ
ಳಾವಿಶೇಷಾತೀತನಾತನೊ
ಳಾವು ಸಮರಕೆ ಸೆಣಸಿದೆವಲಾ ಶಿವ ಶಿವಾ ಯೆಂದ ॥ ೫೪

ಆವನನು ಯಜ್ಞಾದಿಕರ್ಮದೊ
ಳಾವನನು ನಿಯಮಾದಿಯೋಗದೊ
ಳಾವನನು ವಿವಿಧಾರ್ಚನಾಂಕಿತಭಕ್ತಿಮಾರ್ಗದಲಿ ।
ಆವನನು ಜೀವಾತ್ಮಚೈತ
ನ್ಯಾವಲಂಬನದಲ್ಲಿಯಾಶ್ವರ
ನಾವನೀತನೊಳಮಗೆ ತೋಟಿಯೆ ಶಿವ ಶಿವಾ ಯೆಂದ ॥ ೫೫

ಲೋಕವಾವನ ಮಾಯೆ ಯಾಜಗ
ದಾಕೆವಾಳರದಾರು ಚಂದ್ರಾದಿ
ವಾಕರಗ್ರಹರಾಶಿತಾರೆಗಳಾರ ತೇಜದಲಿ ।
ಲೋಕರಚನಾರಕ್ಷೆಸಂಹೃತಿ
ವ್ಯಾಕರಣೆ ತಾನಾರದೀಜಗ
ದೇಕದೈವದ ಕೂಡೆ ದಂಡಿಯೆ [1] ಶಿವ ಶಿವಾಯೆಂದ ॥ ೫೬

ಜೀವರೂಪನು ಸಾಕ್ಷಿ ಕೂಟ
ಸ್ಥಾವಲಂಬನಕರ್ತೃ ಚೇತನ
ನಾವನೀ ಕ್ಷೇತ್ರಜ್ಞನಂತರ್ಯಾಮಿಸಂಜ್ಞೆಯಲಿ ।
ಆವನಮಳಪ್ರತ್ಯಗಾತುಮ
ನಾವನುರುಪರಮಾತ್ಮನೀಶ್ವರ
ನಾವನಾತನೊಳಮಗೆ ತೋಟಿಯೆ ಶಿವ ಶಿವಾಯೆಂದ ॥ ೫೭

---

[1] ತೋಟಿಯೆ, ಚ.

ಸ್ಫುರದಲಿಂಗನು ಲಿಂಗಮೂಲೋ
ತ್ಕರನುದಾರವ್ಯಕ್ತಸದಸ
ತ್ಪರದಪರ ಶಿವನಾರು ಶೈವೋತ್ಕರುಷಲಿಂಗದಲಿ ।
ಪರಮಪರರೂಪಾತ್ಪರಾತ್ಪರ
ತರನಿರೂಪನದಾವನಾತನೊ
ಳರರೆ ತಾವೆಚ್ಚಾಡಿದೆವಲಾ ಶಿವ ಶಿವಾ ಯೆಂದ ॥　　೫೮

ಅಉಕಾರಉಕಾರವಿಮಲಮ
ಕಾರಯುಕ್ತೇಕಾಕ್ಷರದ ವಿ
ಸ್ತಾರಿಯಾವನು ಮಾತೃಕಾಕ್ಷರರೂಪನಕ್ಷಯನು ।
ಆರು ವಾಙ್ಮಯನಾರು ವಾಚಕೋ
ದೂರನಾರು ವಚೋನಿಯಾಮಕ
ನಾರವನ ಕೂಡೆಮಗೆ ದಂಡಿಯೆ ಶಿವ ಶಿವಾ ಯೆಂದ ॥　　೫೯

ಗಾಹು ಹತ್ತಾಹತ್ತಿ ಗಡ ನಿ
ರ್ದೇಹನೊಡನೆ ಮಹಾಶರೌಘಕೆ
ಮೋಹು ಗಡ ಜೀವನವು ಮೃತ್ಯುಂಜಯನ ಸೀವೆಯಲಿ ।
ಆಹ ಮೊದಲೆ ಗಡ ಸುನಿಗಮ
ವ್ಯೂಹದೂರನ ಕೂಡೆ ಹರನೊಡ
ನಾಹವಕೆ ಸಮಜೋಳಿ ನಾವ್ ಗಡ ಶಿವ ಶಿವಾ ಯೆಂದ ॥　　೬೦

ಹೂಡಿ ಜಗವನು ಜಗದ ಜೀವರ
ಕೂಡೆ ಬೆರಸಿ ಸಮಸ್ತವಿಷಯದೊ
ಳಾಡಿ ಸೊಗಸುವನಾತನುಪಭೋಗಪ್ರಪಂಚದಲಿ ।
ಹೂಡದಟ್ಟಿಯದೆ ಗಮಿಸಿ ಮರಳದ
ಕೂಡದಗಲದ ನಿತ್ಯತೃಪ್ತನಿ
ರೂಢನೊಡನೆಚ್ಚಾಡಿದೆವಲಾ ಶಿವ ಶಿವಾ ಯೆಂದ ॥　　೬೧

ಎವೆಗೆರಡು ಕಣ್ ವಿಶ್ವತಶ್ಚ
ಕ್ಷುವಿನೊಡನೆ ಸಕ್ರೋಧದರುಶನ
ವೆವೆಗೆರಡುಭುಜ ವಿಶ್ವತೋಭುಜನೊಡನೆ ಸಂಗ್ರಾಮ ।
ಭುವನಚರಣನ ವಿಶ್ವತೋಮುಖ
ಶಿವನ ನಮ್ಮಾಕಾಲು ನಾಲಿಗೆ
ಯುವಗಡಿಸಿ ಗೆಲಲಾವ್ ಸಮರ್ಥರೆ ಶಿವ ಶಿವಾ ಯೆಂದ ॥ ೬೭

ಆವನೊಬ್ಬನಣೋರಣೀಯು ನ
ದಾವನುರುಮಹತೋಮಹೀಯುಕ
ದಾವನುರುತರದೃಷ್ಟಿಸಂಗತವಿಶ್ವಸಮಯದಲಿ ।
ಆವನೊಬ್ಬನ ನಾಮರೂಪಗು
ಣಾವಲಂಬನನಲ್ಲದೀಶ್ವರ
ನಾವನಾತನ ಕೂಡೆ ತೋಟಿಯೆ ಶಿವ ಶಿವಾ ಯೆಂದ ॥ ೬೩

ಸೇವ್ಯನನು ಸತ್ಕ್ರಿಯೆ [1] ಗಳಲಿ ದ್ರ
ಷ್ಟವ್ಯನನು ದೃಢಚಿತ್ತದಲಿ ಶ್ರೋ
ತವ್ಯನನು ಮಂತವ್ಯನನು ಸಂಕೀರ್ತಿತವ್ಯನನು ।
ಅವ್ಯಯನನಕ್ಷಯನನಭವನ
ನವ್ಯಸನನಜ್ಞಾನದಲಿ ಯೋ
ದ್ಧವ್ಯನೆಂಬೇ [2] ಸೆಣಸಿದೆವಲಾ ಶಿವ ಶಿವಾ ಯೆಂದ ॥ ೬೪

ಸ್ಫುರದಕಾರಾದಿಯಹಕಾರೋ
ತ್ತರದ ಶಬ್ದಬ್ರಹ್ಮಮಯ ವಿ
ಸ್ತರದಹಂತತ್ವದ ಮಹತ್ತತ್ವಾತಿಶಯಪದದ ।
ಪುರುಷಮೂಲಪ್ರಕೃತಿಗಳನು
ತ್ತರಿಸಿ ತೊಳತೊಳತೊಳಗಿ ಬೆಳಗುವ
ಪರಮಶಿವನಲಿ ಸೆಣಸಿದೆವಲಾ ಶಿವ ಶಿವಾ ಯೆಂದ ॥ ೬೫

---

[1] ಸತ್ಕೃತಿ, ಚ, ಟ.  [2] ಗವ್ಯಪೇತನ, ಚ

ಸರಸಿಜಾಸನವಿಷ್ಣು ರುದ್ರೇ
ಶ್ವರಸದಾಶಿವರಾವಳೊಬ್ಬಳ
ಚರಣಸೇವಾಸಂಗದಲ್ಲಿಯೆ ಸುಪ್ರತಿಷ್ಠಿತರು ।
ಪರಮಶಕ್ತಿಯದಾವನಂಘ್ರಿಗೆ
ಶಿರವನೊಡ್ಡುವಳಾಪರಾತ್ಪರ
ಪರಮಶಿವನಲಿ ಸೆಣಸಿದೆವೆಲಾ ಶಿವ ಶಿವಾ ಯೆಂದ ॥ ೬೬

ಈಪರಿಯಲರ್ಜುನನ ಮನದನು
ತಾಪವನು ಕಾಣುತ್ತ ಶಾಬರ
ರೂಪರಚನೆಯ ತೆಱೆಯ ಮೆಱೆಯಲಿ ಮೆಱೆವ ಚಿನ್ಮಯನ ।
ರೂಪನವ್ಯಾಹತನಿಜೋನ್ನತ
ರೂಪರಸದಲಿ ನರನ ಚಿತ್ತದ
ತಾಪವಡಗಲು ತಂಪನೆಱೆದನು ತರುಣಶಶಿಮೌಳಿ ॥ ೬೭

ಈಶ್ವರನು ತನ್ನ ರೂಪವನ್ನು ಅರ್ಜುನನಿಗೆ ತೋರಿಸಿದುದು.

ಅರಸ ಕೇಳ್ಳೆ ನಿಮ್ಮ ಪಾರ್ಥನ
ಪರಮಪುಣ್ಯೋದಯವನೀಶನ
ಕರುಣವನು ಶುಕಸನಕಸಿದ್ಧಾದ್ಯರಿಗಗೋಚರವ ।
ನಿರುಪಮಿತನಿಜರೂಪವನು ವಿ
ಸ್ತರಿಸಿದನು ವಿವಿಧಪ್ರಭಾವೋ
ತ್ಕರದ ನಿಱುಗೆಯ ತೋಱಿದನು ಶ್ರುತಿಕೋಟಿ ಕೈಮುಗಿಯೆ ॥
ಬಲಿದ ಚಂದ್ರಿಕೆಯೆಱಕವೆನೆ ತೊಳ
ತೊಳಗಿ ಬೆಳಗುವ ಕಾಯಕಾಂತಿಯ
ಪುಲಿದೊಗಲ ಕೆಂಜೆಡೆಯ ಕೇವಣದಿಂದು ಫಣಿಪತಿಯ ।
ಹೊಳೆವ ಹರಿಣನನಕ್ಷಮಾಲಾ
ವಲಯದಭಯದ ವರದಕರಪರಿ
ಕಲಿತನೆಸೆದನು ಶಂಭು ಸದ್ಯೋಜಾತರೂಪದಲಿ ॥ ೬೮

ಹೊಳೆವ ಕುಂಕುಮಕಾಂತಿಯಲಿ ಥಳ
ಥಳಿಪ ಗಜಚರ್ಮದುಡುಗೆಯು
ಲಲಿತದಂತಪ್ರಭೆಯು ದರಹಸಿತಾನನಾಂಬುಜದ |
ವಿಲಸಿತಾಭಯಕರದ ಪರಿಕರ
ಲುಳಿತಪರಶು ಮೃಗಾಕ್ಷಮಾಲಾ
ವಳಿಗಳೊಪ್ಪಿರೆ ವಾಮದೇವಾನನದಿ ರಂಜಿಸಿದ || ೨೦

ಕಾಳಮೇಘನಿಭಾಂಗ [1] ದುರುದಂ
ಷ್ಟ್ರಾಳಿಭೀಷಣದಮಲಮಣಿಜಪ
ಮಾಲಿಕೆಯ ಶ್ರುತಿಮುಖದ ಪಾಶಾಂಕುಶದ ಡಮರುಗದ |
ಶೂಲಘನಖಟ್ವಾಂಗದ್ರುಹಿಣಕ
ಪಾಲಫಣಿವಲಯದ ಕರೋಟಿಯ
ಮಾಲೆಯಿಂದ ಮಹೋಗ್ರನೆಸೆದನು ಘೋರವಕ್ತ್ರದಲಿ || ೨೧

ಪರಶುಡಮರುಗಖಡ್ಗಖೇಟಕ
ಶರಧನುಶ್ಶೂಲದ ಕಪಾಲದ
ಕರದ ರಕ್ತಾಂಬರದ ಫಣಿಪನ ಭೋಗಭೂಷಣದ |
ಸ್ಫುರದಘೋರದ ಭೇದದಭಯದ
ಕರದ ಪಾಶಾಂಕುಶಗಳಲಿ [2] ತ
ತ್ಪುರುಷಮುಖದಲಿ ಮೆಱೆದನೆಱಕದ ಮಿಂಚಿನಂದದಲಿ || ೨೨

ಎಳೆಯ ಮುತ್ತಿನ ಥಾಳವೆನು ಮು
ಕ್ಕುಳಿಸುವಂಗಚ್ಛವಿಯ ಭಯವರ
ಲುಳಿತ ಜಪಮಣಿವೇದಪಾಶಾಂಕುಶದ ಡಮರುಗದ |
ಲಲಿತಖಟ್ವಾಂಗದ ಕಪಾಲದ
ಹೊಳೆವ ಶೂಲದ ಕರದ ನಿಗಮಾ
ವಳಿಶಿರೋಮಣಿ ಮೆಱೆದನಂದೀಶಾನವಕ್ತ್ರದಲಿ || ೨೩

---

1 ಸುವರ್ಣ, ಚ. [2] ಪರಶುವು ಗಂಗಳಲಿ, ಚ.

ಬೇಱೆಬೇಱುರಿಗಣ್ಣುಗಳ ಘೂ
ತ್ಕಾರದಹಿಬಂಧದ ಜಟಾಕೋ
ಟೀರಭಾರದ ಮುಖಚತುಷ್ಟಯಭುಜಚತುಷ್ಟಯದ ।
ವಾರಿಜಾಸನವಿಷ್ಣುರುದ್ರಾ
ಧಾರನೀಶ್ವರಪಂಚವಕ್ತ್ರಾ
ಕಾರದಲಿ ಶಿವ ಮೆಱೆದ ಪಂಚಬ್ರಹ್ಮರೂಪಿನಲಿ ॥ ೩೪

ಶ್ರುತಿಗಳುಪನಿಷದಾದ್ಯಖಿಳದೇ
ವತೆಯರಾಕಲ್ಪಿತಕಿರಾತಾ
ಕೃತಿಯನುಱಿದರು ಸುತ್ತಿದರೀಶನ ಸುತ್ತುವಳಯದಲಿ ।
ಸ್ಮಿತಮಧುರಮುಖಕಾಂತಿ ಕಲ್ಲೋ
ಲಿತಕಟಾಕ್ಷಚ್ಛವಿಯಲೀಶನ
ಧೃತಿಯಲೀಡಿರಿದೆಡದಲೆಸೆದರು ಗೌರಿದೇವಿಯರು ॥ ೩೫

ಸನಕನಾರದಭೃಗುಪರಾಶರ
ತನುಜಭಾರದ್ವಾಜಗೌತಮ
ಮುನಿವಸಿಷ್ಠಸನತ್ಕುಮಾರನು ಕಣ್ವನುಪಮನ್ಯು ।
ಬನಕೆ ಬಂದರು ಪಾರ್ಥ ತಪವಿದು [1]
ನಿನಗೆ ಸಿದ್ಧಿಸಿತೆಮಗೆ ಲೇಸಾ
ಯ್ತೆನುತ ಮೆಯ್ಯಿಕ್ಕಿದುದು ಶಿವನಂಘ್ರಿಯಲಿ ಮುನಿನಿಕರ ॥ ೩೬

ಜಯ ಜಯೆಂದುದು ನಿಖಿಳಜಗವ
ಕ್ಷಯನ ದರುಶನಕೆಂದು ಶ್ರುತಿಕೋ
ಟಿಯು ಗಡಾವಣೆ ಘೋಷಿಯಾದುದು ಹರನ ಘಲ್ಲಣೆಗೆ ।
ನಿಯತವೇನೋ ಜನ್ಮಶತಸಂ
ಚಯದೊಳರರೆ ಕೃತಾರ್ಥನರ್ಜುನ
ಜಯವೆನಲು ಮೊಱಗಿದುವು ಭೇರಿಗಳಮರಕಟಕದಲಿ ॥ ೩೭

1 ಕೇಳಿದು, ಚ.

ಈಶ್ವರನ ರೂಪವನ್ನು ನೋಡಿ ಅರ್ಜುನನು ಬೆರಗಾದುದು

ಬಿಟ್ಟಸೂಟಿಯೊಳೆದ್ದು ಹರುಷಕೆ
ಕೊಟ್ಟ ಮನವನು ನೋಡುತಿರ್ದನು
ನಟ್ಟದೃಷ್ಟಿಯೊಳೊಗುವ ಜಲಬಿಂದುಗಳ ಪುಳಕದಲಿ ।
ಬಿಟ್ಟು ಹಿಡಿದನು ಹರನ ಕಾಣದೆ
ತೊಟ್ಟ ಝುಗೆಗಳ ರೋಮಹರುಷದ
ಲಿಟ್ಟೆಡೆಯ ವ್ಯೆದವಕದರ್ಜುನ ನಿಂದು ಬೆಱಗಾದ ॥ ೭೮

ಹರಹಿನಲಿ ಹೊದರೆದ್ದು ಹರುಷದ
ಹೊರಳಿಯಲಿ ಹೊಡಕರಿಸಿ ಚಿತ್ತವ
ತಿರುಹಿ ಹಿಡಿದನು ಮನಕೆ ಬುದ್ಧಿಯು ಹಮ್ಮು ಹಮ್ಮುಗೆಯು ।
ಕೊರಳಂಗೊಳಿಸಿ ಕುಲಾಲಚಕ್ರದ
ಪರಿಭವಣೆಗೆಯು ಪಾಡಿನಲಿ ಕಾ
ತರಿಸುತವನಿಗೆ ವ್ಯೆಯ್ಯ ಕೊಟ್ಟನು ಚಾಚಿ ಭುಜಯುಗವ ॥ ೭೯

ಈಶ್ವರನನ್ನು ಕುರಿತು ಅರ್ಜುನನ ಪ್ರಾರ್ಥನೆ.

ಕ್ಷಮಿಸುವುದು ಸರ್ವೇಶ ಸರ್ವೋ
ತ್ತಮ ವೃಥಾ ಸುಭಟಾಭಿಮಾನ
ಭ್ರಮಿತನನು ಮೋಹಾಂಧಕೂಪಜಲಾವಗಾಹದಲಿ ।
ಸ್ತಮಿತನನು ದುರ್ಬೋಧಭೇದ
ಭ್ರಮಿತನನು ಕಲ್ಯಾಣಪದನಿ
ರ್ಗಮಿತನನು ಕಾರುಣ್ಯನಿಧಿ ಕೈಗಾಯಬೇಕೆಂದ ॥ ೮೦

ಅಱಿದಱಿದು ಮತಿಗೆಟ್ಟ ಮಾನವ
ಕುಱಿಯೆಲಾ ನೆಱೆ ಕಂಡು ಕಂಡೀ
ತೆಱದ ಖೂಳನಲಾ ವಿವೇಕದ ಮೂಗು ಮೂರಿಯೆಲ ।
ಬಱಿಮನದ ಬಾಹಿರನೊಳೆನ್ನಲಿ
ಮೆಱೆವುದಪರಾಧವನು ನಿಮ್ಮನು
ಮೆಱೆವುದೈ ಕಾರುಣ್ಯನಿಧಿ ಕೈಗಾಯಬೇಕೆಂದ ॥ ೮೧

ಜಯ ಜಗತ್ತ್ರಯನಾಥ ಭಕ್ತಾ
ಶ್ರಯ ಸದಾಶಿವ ಸಾಧುವತ್ಸಲ
ಲಯವಿಹೀನ ಮಹೇಶ ಮನ್ಮಥಹರ ಮಹಾದೇವ |
ಭಯರಹಿತ ಭಾಳಾಕ್ಷ ಲೋಕ
ವ್ಯಯಭವನ ದುರ್ಲಕ್ಷ ದೇವ
ತ್ರಯನಮಸ್ಕೃತ ನಿಗಮಸತ್ಕೃತ ಕರುಣಿಸುವುದೆಂದ || ೮-೨

ದೇವ ದೇವ ಕೃಪಾಂಬುನಿಧಿ ಭ
ಕ್ತಾವಲಂಬನ ಭಕ್ತದೇಹಿಕ
ಸೇವಕಪ್ರಿಯ ಭೂತಭಾವನ ಭಾವನಾತೀತ |
ದೇವವಂದಿತ ಕಾಲರೂಪ ಮ
ಹಾವಿಭವ ಭಯರಹಿತ ಪಾವನ
ಪಾವಕಾಂಬಕ ಶ್ರುತಿಕುಟುಂಬಿಕ ಕರುಣಿಸುವುದೆಂದ || ೮-೩

ಸರ್ವಗತ ಸರ್ವಜ್ಞ ಸರ್ವದ
ಸರ್ವಭಾವನ ಸರ್ವತೋಮುಖ
ಸರ್ವಪೂಜಿತ ಸರ್ವಸಾಧಕ ಸರ್ವಗುಣನಿಳಯ |
ಸರ್ವ ಸರ್ವಾಶ್ರಯ ಸವೋಹಿತ
ಸರ್ವಮಯ ಸರ್ವೇಶ್ವರೇಶ್ವರ
ಸರ್ವದುಃಖಾಪಹ ಮಹೇಶ್ವರ ಕರುಣಿಸುವುದೆಂದ || ೮-೪

ರೂಪರಹಿತಸರೂಪ ನಿರ್ಮಳ
ರೂಪ ವಿಶ್ವಾಧಾರ ಸದಸ
ದ್ರೂಪ ವಿಮಲವ್ಯೋಮರೂಪಕ ಸರ್ವತೋರೂಪ |
ರೂಪರಸಗಂಧಾದಿವಿಷಯಸ
ರೂಪ ರೂಪಾತೀತ ಸಂವಿ
ದ್ರೂಪ ವಿಮಲವಿರೂಪಲೋಚನ ಕರುಣಿಸುವುದೆಂದ || ೮-೫

ಪರಮಹಂಸ ಪರಾತ್ಮ ಪರಮೇ
ಶ್ವರ ಪರಬ್ರಹ್ಮೈಕವಿಗ್ರಹ
ಪರಮಶಿವ ಪರತತ್ವರೂಪ ಪರಾತ್ಪರಾನಂದ ।
ಪರಮಗುಣಪರಶಕ್ತಿ ವಾಗೀ
ಶ್ವರ ಪರಾರ್ತಿಹರೇಶ ಪರಶಂ
ಕರ ಪರಂಜ್ಯೋತಿಯೆ ಪರೋತ್ತಮ ಕರುಣಿಸುವುದೆಂದ ॥ ೮೬

ಲಿಂಗಮಯ ನಿರ್ಲಿಂಗ ತೇಜೋ
ಲಿಂಗ ಲಿಂಗಾತ್ಮಕ ಸದಾಶಿವ
ಲಿಂಗ ನಿರ್ಮಳಲಿಂಗ ಲಿಂಗಸ್ಥಿತ ಮಹಾಲಿಂಗ ।
ಲಿಂಗವಿಲಸಿತಲಿಂಗ ಚಿನುಮಯ
ಲಿಂಗ ಚೇತನಲಿಂಗ ದುರ್ಗಾ
ಲಿಂಗಿತಾಂಗವಿಲಾಸ ಶಂಕರ ಕರುಣಿಸುವುದೆಂದ ॥ ೮೭

ನಿರವಧಿಕ ನಿರ್ಮಾಯ ನಿರ್ಗುಣ
ನಿರುಪಮಿತ ನಿರ್ದ್ವಂದ್ವ ನಿಸ್ಸ್ಪೃಹ
ನಿರವಯವ ನಿರ್ಲೇಪ ನಿರವಗ್ರಹ ನಿರಾಧಾರ ।
ನಿರುಪಮ ನಿರಾಮಯ ನಿರಂತರ
ನಿರವಶೇಷ ನಿರಂಗ ನಿರ್ಮಳ
ನಿರತಿಶಯ ನಿಷ್ಕಳ ಮಹೇಶ್ವರ ಕರುಣಿಸುವುದೆಂದ ॥ ೮೮

ವಾಮದೇವ ದುರಂತವಿಭವ
ವ್ಯೋಮಕೇಶ ಕೃತಾಂತಹರ ನಿ
ಸ್ಸೀಮ ಮೃತ್ಯುಂಜಯ ಸಮಂಜಸ ಸರ್ವತೋಭದ್ರ ।
ಭೀಮ ಭರ್ಗ ಕಪರ್ದಿ ಕಲ್ಪಿತ
ನಾಮರೂಪಕ್ರಿಯ ವೃಷಧ್ವಜ
ಕಾಮಹರ ಕರುಣಾಮಹಾರ್ಣವ ಕರುಣಿಸುವುದೆಂದ ॥ ೮೯

ಈಶ್ವರನನ್ನು ಕುರಿತು ಪರಿಪರಿಯಾಗಿ ಅರ್ಜುನನ ಪ್ರಾರ್ಥನೆ.

ರಚಿತಮಾಯ ಏಮಾಯ ಮಾಯಾ
ನಿಚಿತ ಮಾಯಾಧಾರ ಮಾಯಾ
ರುಚಿತ ಮಾಯಾರೂಪ ಮಾಯಾಮಯ ಜಗನ್ಮಾಯ ।
ರಚಿತತೇಜೋಮಯ [1] ಹಿರಣ್ಯ
ಪ್ರಚಯತೇಜ ಸುತೇಜ ಗೌರೀ
ಕುಚಯುಗಾಂಕಿತವಕ್ಷ ಲಕ್ಷಿಸಿ ಕರುಣಿಸುವುದೆಂದ ॥　　೯೦

ಹರ ಹರಾ ತ್ರ್ಯಮೂರ್ತಿರೂಪವ
ಧರಿಸಿ ಯತುಳಮಹಾಷ್ಟಮೂರ್ತಿಯ
ಧರಿಸಿ ಯನುಪಮವಿಶ್ವಮೂರ್ತಿಯ ಧರಿಸಿ ರಂಜಿಸುವ ।
ಪರಿಯನರಿವವರಾರು ದೇವಾ
ಸುರಮುನೀಶರಿಗರಿದು ವರವನು
ಕರುಣಿಸಲು ಬಂದೈ ಮಹಾದೇವೆಂದನಾಪಾರ್ಥ ॥　　೯೧

ದೇವ ಸುರದನುಜೇಂದ್ರವಂದಿತ
ದೇವ ಮನುಮುನಿನಿಕರಪೂಜಿತ
ದೇವ ತತ್ತ್ವಾಕಾರ ಭಾವಿಪೊಡೆ ಬಹುಗುಣನಾಮ [2] ।
ದೇವ ಸಾಕಾರದಲಿ ನಿಜಭ
ಕ್ತಾವಳಿಯನುದ್ಧರಿಸುವ ಮಹಾ
ದೇವ ಕರುಣಿಸಿದೈ ಯನಾಥಂಗೆಂದನಾಪಾರ್ಥ ॥　　೯೨

ಹರನೆ ಗಂಗಾಧರನೆ ಗಿರಿಜಾ
ವರನೆ ಶಶಿಶೇಖರನೆ ದಕ್ಷಾ
ಧ್ವರಹರನೆ ಶಂಕರನೆ ನಿಜಭಕ್ತರ ಮನೋಹರನೆ ।

1 ಶುಚಿಸತೇಜೋಬಲ, ಚ.　　2 ಅತಿನಿರಾಕಾರ, ಚ.

ಕರುಣಿಸುವುದುದ್ಧರಿಸುವುದು ಸಂ
ಹರಿಸು ಮತ್ಪರಿಭವವನೆಂದುರು
ತರದ ಭಕ್ತಿಯಲಿಂದು ಸೈಗೆಡೆದಿರ್ದ ನಾಪಾರ್ಥ ॥ ೯೩

ಧರಣಿಪತಿ ಕೇಳೀಶನೀತನ
ಹೊರೆಗೆ ಬಿಜಯಂಗೈದು ಪಾರ್ಥನ
ಶಿರವ ಹಿಡಿದೆತ್ತಿದನು ಬಿಗಿದಪ್ಪಿದನು ಬರಸೆಳೆದು ।
ಮರುಳು ಮಗನೆ ಮಹಾತಪಸ್ವಿಂ
ಚರಣೆಯಲಿ ನೊಂದೈ ಯೆನುತ ಕಡು
ಗರುಣಿ ಕರುಣಾಮೃತಸಮುದ್ರದೊಳದ್ದಿದನು ನರನ ॥ ೯೪

ಈಶ್ವರನು ಅರ್ಜುನನನ್ನು ಆದರಿಸಿದುದು.

ಕೂಡೆ ಮೈದಡವಿದನು ಮಿಗೆ ಮುಂ
ಡಾಡಿದನು ಮನ ನೋಯದಿರು ನೀ
ಮಾಡಿದುಪಹತಿ ಯೆಂಬುದೆನಗರ್ಚನೆ ನಮಸ್ಕಾರ ।
ಕೋಡದಿರು ಕೊಂಕದಿರು ಭಕ್ತಿಗೆ
ನಾಡೆ ಮೆಚ್ಚಿದೆನೆನ್ನ ಚಿತ್ತಕೆ
ಖೋಡಿಯಿಲ್ಲೆಲೆ ಮಗನೆ ಯೆಂಗುಹಗಣಪರಾಣೆಂದ ॥ ೯೫

ನರನು ನೀ ಪೂರ್ವದಲಿ ಪೀತಾಂ
ಬರನ ವಿಮಳಾಂಶಪ್ರಸೂತನು
ಪರಮಋಷಿ ನೀನೆಮ್ಮ ಭಕ್ತನು ಚಿಂತೆ ಬೇಡಿನ್ನು ।

ಅರ್ಜುನನಿಗೆ ಈಶ್ವರನು ಖಡ್ಗಾದಿಗಳನ್ನು ಕೊಟ್ಟುದು.

ವರದನಾದೆನು ಮಗನೆ ಶಸ್ತ್ರಾ
ತ್ಕರವನಿದನೀ ಮುನ್ನ ಕೊಳ್ಳೆಂ
ದುರುತರಪ್ರೇಮದಲಿ ಕೊಟ್ಟನು ಖಡ್ಗ ಶರಧನುವ ॥ ೯೬

ಸಲಿಸುವೆನು ನೀ ಬೇಡಿದುದನ
ಸ್ಖಲಿತವೆಂಜದಿರಿನ್ನು ಸಾಕೆನೆ
ಸುಲಭ ನೀ ಭಕ್ತರಿಗೆ ಭಯವಿನ್ನೇಕೆ ತನಗೀಗ ।

ಆಗ ಅರ್ಜುನನು ಅಸ್ತ್ರಗಳನ್ನು ಬೇಡಿದುದು.

ಸಲಿಸು ಪಾಶುಪತಾಸ್ತ್ರವೆನು ವೆ
ಗ್ಗಳೆಯ ಬ್ರಹ್ಮಶಿರೋಸ್ತ್ರವೆನು ಕೈ
ಗೊಳಿಸುವುದು ಕೃಪೆಯುಳ್ಳಡೆಂದನು ನಗುತ ಕಲಿಪಾರ್ಥ ॥೯೭

ಸವೆಡಿನುಡಿಯುಂಟೇ ಚತುರ್ದಶ
ಭುವನದಾಹವದಕ್ಷವೀಬಾ
ಣವೆನು ಕೊಟ್ಟೆನು ಮಗನೆ ಬ್ರಹ್ಮಶಿರೋಮಹಾಶರವ ।
ದಿವಿಜದನುಜಭುಜಂಗಮಾದಿಗ
ಳವೆಗಡಿಸಲುಚಿ ಹೆಚ್ಚುವುದು ಸಂ
ಭವಿಸಿದಾಹುತಿ ಯಿದಕೆ ಶರವುದ್ದಂಡಬಲನೆಂದ ॥ ೯೮

ಈಶ್ವರನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಟ್ಟುದು.

ಸರಸಿಯುಲಿ ಮಿಂದಾಚಮನವಿ
ಸ್ತರಣವೆಲ್ಲವೆ ಮಾಡಿ ಶೂಲಿಯು
ಚರಣದಲಿ ಮೆಯ್ಯಿಕ್ಕಿ ನಿಂದನು ಬಾಗಿ ಕೈಮುಗಿದು ।
ಸರಳಸಾಂಗೋಪಾಂಗಮಂತ್ರೋ
ಚ್ಚರಣಸಂಹೃತಿಮೋಕ್ಷವನು ವಿ
ಸ್ತರದಿ ರಹಸ್ಯದಲಿ ಕೊಟ್ಟನು ಪಾಶುಪತಶರವ ॥ ೯೯

ಆಗ ದೇವತೆಗಳ ಸಂತೋಷ.

ಜಗವು ಘೇ ಯೆಂದುದು ಜಯಧ್ವನಿ
ಗಗನದಲಿ ಗಾಢಿಸಿತು ಹೂವಿನ
ಮುಗುಳ ತನಿಮಳೆ ಸುರಿದುದೀಶ್ವರನಂಘ್ರಿಕಮಲದಲಿ ।

ಢಗೆಯು ತಳಿ ಮೊಳೆದುದು ಮನೋರಥ
ದಗಳು ತುಂಬಿತು ನರನ ಮನಬು
ದ್ಧಿಗಳು ನೆಱೆ ಸಿಲುಕಿದುವು ಹರುಷೋತ್ಸವದ ದಾಟಿಯಲಿ ॥ ೧೦೦

ಹರನ ಕೋಮಲಪಾಣಿಕಮಲ
ಸ್ಪರುಶಪೀಯೂಷದಲಿ ಮುಳುಗಿದ
ನರನ ತನು ನಿರ್ಮೋಕಮುಕ್ತ ಭುಜಂಗದಂದದಲಿ ।
ಕಿರಣಲಹರಿಯ ಲಳಿಯ ದಿವ್ಯೋ
ತ್ಕರದ ಚಪಳಚ್ಛವಿಯ ಚಾರು
ಸ್ಫುರಣದಲಿ ಬೋಳೈಸಿದುದು ಸುರನರರ ಕಣ್ಮನವ ॥ ೧೦೧

ಸುರಮುನೀಶ್ವರವೇದಮಂತ್ರೋ
ಚ್ಚರಣನಾದದ ಗರುಡಗಂಧ
ರ್ವರ ಮಹಾಸ್ತುತಿರವದ ತುಂಬುರುನಾರದಾದಿಗಳ ।
ವರರಸಾನ್ವಿತಗೀತದೂರ್ವಶಿ
ಯರ ಸುನೃತ್ಯದ ದಿವ್ಯವಾದ್ಯದ
ಹರನ ಕರುಣಾಂಬುಧಿಯಲೋಲಾಡಿದನು ಕಲಿಪಾರ್ಥ ॥ ೧೦೨

ಧರೆಗೆಸೆವ ಧರ್ಮಾರ್ಥಕಾಮೋ
ತ್ಕರವನನುಪಮಮೋಕ್ಷಪದವನು
ಧುರದೊಳಹಿತರ ಗೆಲುವಶೌರ್ಯೋನ್ನತಿಯ ಸಾಹಸವ ।
ಕರುಣಿಸಿದನಪ್ಪಿದನು ಕರೆದನು
ಗಿರಿತನುಜೆ ನೀನುದ್ಧರಿಪುದೀ
ಪರಮಭಕ್ತನನೆನಲು ಕರುಣದೊಳೀಕ್ಷಿಸಿದಳಗಜೆ ॥ ೧೦೩

ಸ್ತುತಿಯಿಂದ ಸಂತುಷ್ಟಳಾದ ಗಿರಿಜೆಯು ಅರ್ಜುನನಿಗೆ
ವರವನ್ನು ಕೊಡುವಿಕೆ.

ಗಿರಿಜೆ ತ್ರಿಜಗನ್ಮಾತೆ ರಕ್ಷಿಸು
ಪರಮಕರುಣಾಮೂರ್ತಿಯಂಬಿಕೆ

ಶಿರಿ ಸರಸ್ವತಿ ದುರ್ಗೆ ಚಂಡಿಯರೆಂಬನಾಮದಲಿ ।
ಚರಿಸುತಿಹ ನಿನ್ನೇಕಶಕ್ತಿಯು
ಪರಿಯನಱಿವವರಾರೆನುತ ತ
ಚ್ಚರಣಕಮಲಕ್ಕೆಱಗಿ ಪುಳಕಿತನಾದನಾಪಾರ್ಥ ॥ ೧೦೪

ಕಂಜನಾಭನ ಮೈದುನನೆ ಬಾ
ಅಂಜದಿರು ನಿನಗಾಂತರಿಪುಗಳ
ಭಂಜಿಸುವ ಸಾಮರ್ಥ್ಯದನುವನು ತಳೆದು ರಂಜಿಸುವ ।
ಅಂಜನಾಸ್ತ್ರವನಿತ್ತೆ ಮಗನೆ ಧ
ನಂಜಯನೆ ನಿನಗೆಂದು ಕರುಣದಿ
ಮಂಜುಳಾರವದಿಂದ ತಚ್ಛಸ್ತ್ರವನು ಬೆಸಸಿದಳು ॥ ೧೦೫

ಬಂದುದಶಶತಸಾವಿರದ ಹೆಸ
ರಿಂದ ಲಕ್ಷವು ಕೋಟಿಯಗಣಿತ
ದಿಂದ ನಿನಗಾಂತಧಟರಿಪುಗಳು ತಿಂದು ತೇಗುವುದು ।
ಬಂದು ಬೆಸನನು ಬೇಡುವುದು ತಾ
ನೊಂದು ಶರರೂಪಾಗೆನುತ ಮೋದ
ದಿಂದ ವರಮಂತ್ರೋಪದೇಶವನಿತ್ತಳರ್ಜುನಗೆ ॥ ೧೦೬

ದೇವಿಯರು ಕೃಪೆಯಿಂದ ಪಾರ್ಥಂ
ಗೋವಿ ಕೊಟ್ಟರು ದಿವ್ಯಬಾಣವ
ನೋವಿ ಗಣಪತಿ ತಾನು ಕೊಟ್ಟನು ಜಯಮಹಾಶರವ ।
ಆವಜನ್ಮದ ಸುಕೃತಫಲವಿದು
ತೀವಿತೋ ಪಲುಗುಣಗೆನುತ್ತವೆ
ದೇವತತಿ ಕೊಂಡಾಡುತಿರ್ದುದು ಭೂಪ ಕೇಳೆಂದ ॥ ೧೦೭

ಆಗ ಗಣೇಶ ಷಣ್ಮುಖರಿಂದ ಅಸ್ತ್ರಲಾಭ.

ಕರಿಮುಖನ ಷಣ್ಮುಖನ ಚರಣ
ಕ್ಕೆಱಗಿ ನುತಿಸುತ್ತಿರಲು ಪಾರ್ಥನ

ಪರಮಭಕ್ತಿಗೆ ಮೆಚ್ಚಿ ಬಿಗಿದಪ್ಪಿದರು ಕರುಣದಲಿ ।
ವರಮಹಾಸ್ತ್ರಂಗಳನು ಮಂತ್ರೋ
ತ್ಕರವನವರೊಲಿದಿತ್ತು ಗೆಲು ನೀ
ಧುರದೊಳಹಿತರನೆಂದು ಹರಸಿದರಾಧನಂಜಯನ ॥ ೧೦೮

ನಿನ್ನ ಕಾರ್ಯಗಳಿಗೋಸ್ಕರ ಹೋಗೆಂದು ಶಿವನ ಆಜ್ಞೆ.

ಸರಳ ಸಾಂಗೋಪಾಂಗವನು ನಿನ
ಗಱುಹಿದೆನು ನೀನಿನ್ನು ಶಕ್ರನ
ಪುರಿಗೆ ನಡೆ ನಿನ್ನುತ್ತರೋತ್ತರಕಾರ್ಯಗತಿಗಳಿಗೆ ।
ಹರಿ ಸಹಾಯನು ನಮ್ಮ ಸತ್ವದ
ಪರಮರೂಪಾತ್ಮಕನು ಕಣಾ ನೀ
ನಱಿದಿರೆಂದು ಮಹೇಶ ಬೀಳ್ಕೊಟ್ಟನು ಧನಂಜಯನ ॥ ೧೦೯

ಅರ್ಜುನನಿಗೆ ಈಶ್ವರನು ವರವನ್ನು ಕೊಟ್ಟುದು.

ನಿಮ್ಮ ಕಥೆ ವೇದೋಕ್ತವಾಗಲಿ
ನಿಮ್ಮ ಚರಿತ ಸುಚರಿತವಾಗಲಿ
ನಿಮ್ಮ ಕಥನಾಮೃತವನಾಲಿಸಿ ಕೇಳ್ದ ರಘಕೆಡಲಿ ।
ನಿಮ್ಮ ನಿಂದಿಸಿದವರುಗಳು ದು
ಷ್ಕರ್ಮಿಗಳು ಪಾತಕರು ತಾನಿದು
ನಮ್ಮ ಮತವೆಂದು ಭವ ಹರಸಿದನಾಧನಂಜಯನ ॥ ೧೧೦

ದೇವಿಯರು ಗುಹಗಣಪಮುಖ್ಯಗ
ಣಾವಳಿಗೆ ಪೊಡಮಟ್ಟನವರ ಕೃ
ಪಾವಲೋಕನದಿಂದ ಹೊಂಪುಳಿಯೋದನಡಿಗಡಿಗೆ ।
ದೇವ ರಜತಾಚಲಗಮನಸಂ
ಭಾವನೋದ್ಯೋಗದಲಿ ಮಿಗೆ ಗಾಂ
ಡೀವಿಯನು ನೆಱೆ ನೋಡಿ ಕೃಪೆಯಿಂದ ಭವನಿಂತೆಂದ ॥ ೧೧೧

ಬಳಿಕ ಈಶ್ವರನು ಕೈಲಾಸವನ್ನು ಕುರಿತು ತೆರಳಿದುದು.

ಪುರಹರನು ಕರೆದರ್ಜುನನ ಸುರ
ಪುರಕೆ ಪೋಗುತೆ ನೀನು ಬಚಿಕಾ
ಸುರಸಮಿತಿಗಳ ವೈರಿಗಳ ವಧಿಸೆಂದು ಬೆಸಸುತ್ತ ।
ಹರಿಯಜರುಸಹಿತ ಭವ ರಜತಾ
ಚಲಕೆ ಬಿಜಯಂಗೈದನಿತ್ತಲು
ನರನು ಸ್ವೈವೆಱಗಾಗಿ ಚಿಂತಾಚಿತ್ರದಂತಿರ್ದ ॥ ೧೧೦

ಆಗ ಅರ್ಜುನನ ಪಶ್ಚಾತ್ತಾಪ.

ಹರನ ಕೃಪೆಯುಂ ಪಡೆವುದರಿದಾ
ದರಿಸುವರೆ ಶಸ್ತ್ರಾಭಿಲಾಷೆಯೆ
ಮರುಳತನದಲಿ ವ್ಯರ್ಥನಾದೆನಲಾ ಮಹಾದೇವ ।
ಧರೆಯು ಕಾಮಿತವೆಂದು ಸುಖವನು
ಮಱೆದನಕಟಕಟಾ ದುರಾಗ್ರಹ
ಪರಿವೃತಂಗೆ ಸುಬುದ್ಧಿಯೇಕಹುದೆಂದನಾಪಾರ್ಥ ॥ ೧೧೩

ಹರನು ಮಾಡುವುದೇನು ಕರ್ಮದ
ತರವು ನಮಗರಿಯಾಗಿ ತಾಗಲು
ಹರನು ಪಾಪದ ಪುಣ್ಯದೊಡಲಿಗೆ ಸಾಕ್ಷಿರೂಪನಲೆ ।
ಧರೆಯೊಳಗೆ ಶತಕೋಟಿಜನ್ಮಾಂ
ತರವು ಮಾಡಿದ ಪಾಪಪುಣ್ಯವು
ನರರ ಬೆನ್ನಲಿ ಬಹುದು ಹುಸಿಯಲ್ಲೆಂದನಾಪಾರ್ಥ ॥ ೧೧೪

ಎತ್ತಿದೀಬಲುಚಲವು ನೆಱೆ ತಾನೇ
ನುತ್ತರಿಪುದೀಕ್ಷತ್ರಧರ್ಮವ
ದುತ್ತರೋತ್ತರವಹುದು ಮತ್ತಾಚಲದ ಬಲುಹಿಂದ ।
ಮತ್ತೆ ಬಹುಮಾತೇಕೆ ಯಗ್ರಜ
ನಿತ್ತ ಬೆಸದಿಂ ನಡೆದೆನೆಂಬ ಸು
ವೃತ್ತವದೆ ಸತ್ಕೀರ್ತಿಸಾಧನವೆಂದನಾಪಾರ್ಥ ॥ ೧೧೫

ಮುರಹರನು ತಾನೆಮಗೆ ಗುರುವರ
ಗುರುಪದಕಮಲಯುಗದ ಭಕ್ತಿಯು
ಲಭಿಸಿದ ನಿಜಮೂರ್ತಿಯನು ಕಂಡು ಕೃತಾರ್ಥನಾದೆನೆಲ ।
ಹರಿದುದಘಕುಲವೆನುತ ಪುಳಕೋ
ತ್ಕರದ ಹರುಷದಲಾಧನಂಜಯ
ಪರಮಗದುಗಿನ ವೀರನಾರಾಯಣನ ಕರುಣದಲಿ ॥ ೧೧೬

ಏಳನೆಯ ಸಂಧಿ ಮುಗಿದುದು.

---

ಸೂಚನೆ.

## ಎಂಟನೆಯ ಸಂಧಿ.

ಹರನ ಪಾಶುಪತಾಸ್ತ್ರಲಾಭೋ
ತ್ಕರುಷಹರುಷೋತ್ಸವದಲಿಂದ್ರನ
ಪುರವ ಹೊಕ್ಕನು ಪಾರ್ಥನೆಸೆದನು ಶಕ್ರಪೀಠದಲಿ ॥

ಅರ್ಜುನನ ಯೋಚನೆ.

ಕೇಳು ಜನಮೇಜಯ ಧರಿತ್ರೀ
ಪಾಲ ವರಕೈಲಾಸವಾಸಿಯ
ಬೀಳುಕೊಂಡನು ತದ್ವಿಯೋಗದಲಿಂದ್ರಕೀಲದಲಿ ।
ಮೇಲುದುಗುಡದಲಸ್ತ್ರಲಾಭವ
ನಾಲಿಸದೆ ಶಂಕರಪದಾಂಬುಜ
ದೋಲಗದ ಶಿರಿ ತಪ್ಪಿತೆನುತುಮ್ಮಳಿಸಿದನು ಪಾರ್ಥ ॥ ೧

ಮರುಳದೇವಾರ್ಜುನೆಯೊ ಕನಸಿನ [1]
ಶಿರಿಯೊ ಶಿಶುವಿನ ಕೈಯ್ಯ ರತ್ನವೊ
ಹರಿಕರದ ಮಾಲೆಯೊ ಮದೀಯವಿವೇಕವಿಭ್ರಮವೊ ।
ಹರನನೀಚರ್ಮಾಕ್ಷಿಯಲಿ ಗೋ
ಚರಿಸಿ ಬೇಡಿದುದಂಬು ಮರ್ತ್ಯರೊ
ಳರವು ಮಝುಭಾಪೆನ್ನ ಪುಣ್ಯಾವೆನುತ್ತ ಬೆಱಗಾದ ॥ ೦

ಆಗ ವರುಣನ ಆಗಮನ.

ಅರಸ ಕೇಳದ್ಭುತವನಿತ್ತಲು
ಚರವುದಿಗ್ಭಾಗದಲಖಿಳಜಲ
ಚರನಿಕಾಯದ ಮುಂಗುಡಿಯಲಿಕ್ಕೆಲದ ಫಣಿಕುಲದ ।
ಸುರನದೀನದಕೋಟಿಗಳ ಸಾ
ಗರದ ಪರಿವಾರದಲಿ ಬಂದನು
ವರುಣನಮರೇಂದ್ರನ ಕುಮಾರನ ಕಾಂಬ ತವಕದಲಿ ॥ ೭

ವಿಕಟರಾಕ್ಷಸಯಕ್ಷಜನಗು
ಹ್ಯಕರು ಕಿನ್ನರಗಣಸಹಿತ ಪು
ಷ್ಪಕದಲೈತಂದನು ಧನೇಶ್ವರನಾತಪೋವನಕೆ ।
ಸಕಲಪಿತೃಗಣಸಹಿತ ದೂತ
ಪ್ರಕರಧರ್ಮಾಧ್ಯಕ್ಷರೊಡನಂ
ತಕನು ಬೆಱಸಿದನಿಂದ್ರಕೀಲಮಹಾಮಹೀಧರವ [2] ॥ ೪

ಆಗ ಇಂದ್ರನು ಭೂಲೋಕಕ್ಕೆ ಬರುವಿಕೆ.

ಹಿಡಿದ ಸಾಲಿನ ಸತ್ತಿಗೆಯ ಬಲ
ಕೆಡಕೆ ಕೆದಱುವ ಸೀಗುರಿಯ ಮುಂ
ಗುಡಿಯ ವಿದ್ಯಾಧರಮಹೋರಗಯಕ್ಷಕಿನ್ನರರ [3] ।

---

1 ಕಳ್ಳನ, ಡ, 2 ವನಾಂತರವ, ಡ. 3 ರಾಕ್ಷಸರ, ಡ.

ಜಡಿವಕಹಳಾರವದ ನೆಲದು
ಗ್ಗಡಣೆಗಳ ಕೈವಾರಿಗಳ ಗಡ
ಬಡೆಯು ಗರುವಾಯಿಯಲಿ ಗಗನದಿನಿಳಿದನಮರೇಂದ್ರ ॥ ೫

ದಿಕ್ಪಾಲಕರು ಅರ್ಜುನನನ್ನು ಉಪಚರಿಸಿದುದು

ಕಂಡನನಿಬರ ಬರವನೊಲಿದಿದಿ
ರ್ಗೊಂಡನವರವರುಚಿತದಲಿ ಮುಂ
ಕೊಂಡು ಮನ್ನಿಸಿ ಮನವ ಹಿಡಿದನು ಲೋಕಪಾಲಕರ ।

ಇಂದ್ರಾದಿಗಳು ಬಾಣಗಳನ್ನು ಕೊಟ್ಟುದು.

ಖಂಡಪರಶುವಿನಸ್ತ್ರವನು ಕೈ
ಕೊಂಡೆ ನಿನಗೇನರಿದು ನೀನು
ದ್ದಂಡಬಲನೆಂದನಿಬರುಪಚರಿಸಿದರು ಫಲುಗುಣನ ॥ ೬

ಅರ್ಜುನನಿಗೆ ಇಂದ್ರನ ಆದರ.

ಆಮಹಾಸ್ತ್ರಕೆ ಬಳುವಳಿಯ ಕೊ
ಳ್ಳೈ ಮದೀಯಾಸ್ತ್ರವನೆನುತ ಸು
ತ್ರಾಮನಿತ್ತನು ದಿವ್ಯಬಾಣವನೈಂದ್ರಸಂಜ್ಞಕವ ।
ಸಾಮವರ್ತಿಕದಂಡವಾರುಣ
ತಾಮಸದ ಸಮ್ಮೋಹನವನೆಂ
ದಾಮಹಾಂತಕವರುಣಧನಪರು ಕೊಟ್ಟರಂಬುಗಳ ॥ ೭

ಎಲೆ ಧನಂಜಯ ನಿನಗಿದೇನ
ಗ್ಗಳದ ಶರವೇ ನಿನ್ನ ಭಕ್ತಿಗೆ
ಸಿಲುಕಿದನು ಶಿವನಾತನಂಬಿದೆ ನಿನ್ನ ಸೀಮೆಯಲಿ ।
ಸುಲಭ ನಿನಗಿಂದಮಲಲಕ್ಷ್ಮೀ
ನಿಳಯ ನೀನೇ ಪೂರ್ವದಲಿ ನಿ
ರ್ಮಲಿನನರಋುಷಿ ಯೆನುತ ಹರಿ ತೆಗೆದಪ್ಪಿದನು ಮಗನ ॥ ೮

ಕ್ರತತಪಸ್ಸಂಭಿನ್ನಖೇದ
ಕ್ಷತಶರೀರವ್ಯಥೆಯನಮರಾ
ವತಿಯೊಳಗೆ ಕಳೆ ರಥಸಹಿತ ಕಳುಹುವೆನು ಮಾತಲಿಯ ।
ಕ್ರತುಶತದ ಕೈಗಾಣಿಕೆಯ ದೀ
ಕ್ಷಿತರ ಶಿರಿಯೆಂತವರ ಮನವಾ
ರತೆಯದೆಂತುಟೊ ನೋಡಬೇಹುದು ಪಾರ್ಥ ನೀನೆಂದ ॥ ೯

ಹೈ ಹಸಾದವು ನೂಱುಯಜ್ಞದ
ಮೋಹು ಗಾಡನು ಮೆಟ್ಟಲಿವ್ಮಾ
ಹೂಹೆಗಳಗಳವಡುವದೊಲ್ಲವೆ ನಿಮ್ಮ ಕರುಣದಲಿ ।
ಐಹಿಕದಲಾಮುಷ್ಮಿಕದ ಸ
ನ್ನಾಹ ಸಂಭವಿಸುವೊಡೆ ನಿಷ್ಪ್ರ
ತ್ಯೂಹವೆಂದೆಱಗಿದನು ಫಲುಗುಣನಿಂದ್ರನಂಘ್ರಿಯಲಿ ॥ ೧೦

ದಿಕ್ಪಾಲಕರು ಹೊರಟು ಹೋಗಲು ಮಾತಲಿಯು ಸರಥನಾಗಿ ಬಂದುದು.

ಬೀೞುಗೊಟ್ಟರು ನರನನೀದಿ
ಕ್ಪಾಲರಂತರ್ಧಾನದೊಡನೆ ಸ
ಮೇಳರಾದರು ಶಕ್ರಸಾರಥಿ ಸುಳಿದನಭ್ರದಲಿ ।
ಜಾಳಿಗೆಯ ಮಣಿವೆಳಗುಗಳ ವೈ
ಹಾಳಿಗಳ ವೈಡೂರ್ಯದೀಪ್ತಿನಿ
ವಾಳಿಗಳ ಸುಪತಾಕೆಬೆಳಗುವ ಹೇಮರಥಸಹಿತ ॥ ೧೧

ಅರಸ ಕೇಳ್ಳೈ ಹತ್ತುಸಾವಿರ
ತುರಗನಿಕರದ ಲಳಿಯ ದಿವ್ಯಾಂ
ಬರದ ಸಿಂದದ ಸಾಲುಸತ್ತಿಗೆಗಳ ಪತಾಕೆಗಳ ।
ಖರರುಚಿಯ ಮಾರಾಂಕವೋ ಸುರ
ಗಿರಿಯ ಸೋದರವೋ ಮೃಗಾಂಕನ
ಮೞುದಲೆಯೊ ಮೇಣೆನಲು ರಥ ಹೊಳೆದಿೞಿದುದಂಬರದಿ ॥ ೧೨

ಆರಥವನ್ನು ನೋಡಿ ಅರ್ಜುನನು ವಿಸ್ಮಿತನಾದುದು.

ಏನಿದಚ್ಚರಿ ಮೇಲೆ ಮೇಲೆ ನ
ವೀನದರುಶನವೆನ್ನ ಪುಣ್ಯವ
ನೂನವೈ ಸಲೆ ಯೆನುತ ನರನಿದಿರ್ಗೊಂಡನಾರಥವ [1] |
ನೀನಹೈ ಕಲಿಪಾರ್ಥನೆಂಬ ಮ
ಹಾನರೇಶ್ವರನೆನುತ ಮಿಗೆ ಸ
ಮ್ಮಾನಿಸುತ ಸುರಪತಿಯ ಸಾರಥಿ ನಿಲಿಸಿದನು ರಥವ || ೧೩

ಲಲಿತಹೇಷಾಧ್ವನಿಯ ಹಯಮಂ
ಡಲಿಯ ಮೌಳಿಯ ಮೇಲುದಾಯದ
ಲುಳಿಯ ಚೀತ್ಕೃತಿರವದ ಪಟಪಟಲತೆಜದ ಪಟವಿಗೆಯ |
ಚಲತುರಗಖುರಹತಿಯ ರಭಸೋ
ಚ್ಚಳಿತಧೂಳೀಧೂಸರದ ರಥ
ದೊಳಗೆ ನಿಂದನು ಶಕ್ರಸಾರಥಿ ನುಡಿಸಿದನು ನರನ || ೧೪

ಮಾತಲಿಯು ಅರ್ಜುನನನ್ನು ಸ್ತುತಿಸುವಿಕೆ.

ಏಱು ಫಲುಗುಣ ಹರಿವರೂಥದ
ಮೇಲೆ ಬಿಜಯಂಗೈವೆ ಬಹಳಫ
ಲಾಳಿಯಿದೆಲಾ ನಿನ್ನ ಪುಣ್ಯದ್ರುಮದ ಬೇಱೊಡೆಯೆ |
ಸಾಲಕುಱಿವಱಿಹಿಗಳ ಕರ್ಮದ
ಕೂಲಿಗರ ಜಡಜಂಜಪೂಗರ
ಜಾಲದಾಶೆಯನಿಮಿಷರ ಪುರ ವಶವಾಯ್ತು ನಿನಗೆಂದ || ೧೫

ಬಲ್ಲರಾರದನಶ್ವಮೇಧದ
ಮಲ್ಲರನುಕ್ರತರಾಜಸೂಯರು
ಬಲ್ಲರೇ ಕಡೆಬೀಡಕೋಟಿಯ ಗುಡಿಯ ಬೊಡ್ಡಿಯರ |

---

[1] ನಿದಿದಾದರಾರಥಕೆ, ಬ.

ಎಲ್ಲಿಯುಮರಾವತಿ ನರಾಧಮ
ರೆಲ್ಲಿ ನಾವೀಶ್ವರನ ಕರುಣದ
ಭುಲ್ಲವಣೆಯಲಿ ಭಾಗ್ಯರೈಸಲೆ ಯೆಂದನಾಪಾರ್ಥ ॥ ೧೬

ಅರ್ಜುನನು ಹೊರಡುವಾಗ ವನದಲ್ಲಿದ್ದವರನ್ನು ಆಜ್ಞೆ ಕೇಳಿದುದು.

ಎನುತ ತೇರಿನೊಳೊಂದು ಕಾಲಿ
ಟ್ಟನು ಧನಂಜಯನಿಂದ್ರಕೀಲದ
ಬನಕೆ ಕೈಮುಗಿದೆಱಗಿ ನುಡಿದನು ಮಧುರವಚನದಲಿ ।
ಮುನಿಜನವೆ ಪರ್ವತವೆ ಪಂಕಜ
ವನವೆ ತರುಲತೆ ಗುಲ್ಮಖಗಮೃಗ
ವನಚರರೆ ತಾ ಹೋಗಿ ಬಹೆನೈ ನಿಮ್ಮನುಜ್ಞೆಯಲಿ ॥ ೧೭

ಅರ್ಜುನನು ರಥದಲ್ಲಿ ಕುಳಿತ ಬಳಿಕ ರಥವನ್ನು ವೇಗದಿಂದ ಬಿಡುವಿಕೆ.

ಎಂದು ರಥವೇಱಿದನು ಪಾರ್ಥ ಪು
ರಂದರನ ಸಾರಥಿ ಗುಣೌಘವ
ನೊಂದುನಾಲಿಗೆಯಿಂದ ಹೊಗೞಿದನಾಧನಂಜಯನ ।
ಗೊಂದಣದ ವಾಘೆಗಳನೆಲ್ಲವ
ನೊಂದುಗೂಡಿ ಕಿರೀಟಿ ದೃಢವಾ
ಗೆಂದು ಮಾತಳಿ ಚಪ್ಪರಿಸಿದನು ಚಪಲವಾಜಿಗಳ ॥ ೧೮

ಆವ ಜವವೇನೆಂಬ ಗತಿ ಮೇ
ಣಾವದೃಢ ವೇಗಾಯ್ಲತನ ತಾ
ನಾವ ಸೊಟಿಯದಾರು ಬಲ್ಲರು ವಹಿಲವಿವರಣವ ।
ತೀವಿತಾಕಾಶವನು ಹೇಷಾ
ರಾವವೀತನ ಹುಂಕೃತಧ್ವನಿ
ನಾವಿಗಡರಥಚಕ್ರಚೀತ್ಕೃತಿಚಪಳನಿರ್ಘೋಷ ॥ ೧೯

ಆಗ ಅರ್ಜುನನು ಭೂಗೋಳ ಖಗೋಳಗಳನ್ನು ಹೇಳೆಂದು ಕೇಳಿದುದು.

ತೇರು ಮೇಲಕ್ಕಡಱೆ ನುಡಿದನು
ಸಾರಥಿಗೆ ಕಲಿಪಾರ್ಥ ವಿವರಿಸು
ಧಾರುಣಿಯ ಪರ್ವತಸಮುದ್ರದ್ವೀಪನದನದಿಯ ।
ತೋಱುವೀಲೋಕಂಗಳಳತೆಯ
ಚಾರುಸಪ್ತದ್ವೀಪಗಣನೆಯ
ಸೂರ್ಯಮೊದಲಾದವರ ಗತಿಯನು ತಿಳಿಯಹೇಳೆಂದ ॥ ೨೦

ಧರೆಯನಾಂತವರಾರು ಧಾರುಣಿ
ಯಿರವದೇತಱ ಮೇಲೆ ದಿಕ್ಪಾ
ಲರ ಪುರಂಗಳವೆಲ್ಲಿಹುವು ಬ್ರಹ್ಮಾಂಡವೆನಿತಗಲ ।
ಉರುತರಗ್ರಹರಾಶಿಗಳ * ವಿ
ಸ್ತರವು ತಾನೆನಿತೆನಿತುಯೋಜನ
ವಱುಹೆನಲು ಮಾತಲಿ ನಗುತ ಕಲಿಪಾರ್ಥಗಿಂತೆಂದ ॥ ೨೧

ಅವನಿಪತಿ ಕೇಳಿಂದ್ರಸಾರಥಿ
ವಿವರಿಸಿದನಾತಂಗೆ ಭೂಮಿ
ಭುವನಕೋಶದ ಸಂನಿವೇಶವನದ್ರಿಜಾಲಗಳ ।
ಇವು ಕುಲಾದ್ರಿಗಳಿವು ಪಯೋನಿಧಿ
ಯಿವು ಮಹಾದ್ವೀಪಂಗಳಿವು ಮಾ
ನವರ ಧರಣಿ ಸ್ವರ್ಗಮಿಲ್ಲಿನ್ನಿತ್ತ ನೋಡೆಂದ ॥ ೨೨

ಕೇಳು ನೀನೆಲೆ ಪಾರ್ಥ ತಾರಾ
ಮಾಲೆಗಳ ವಿವರವನು ರವಿರಥ
ಕಾಲಚಕ್ರವನೈದಿ ಗಗನಾಂಗಣದಿ ಚರಿಯಿಪುದ ।

---

* ಯಾಧ್ರುವನಿರವು ಮೇಲೆನಿತೆನಿತು ಯೋಜನವಱುಹೆನಲು ಪಾರ್ಥಂಗೆ ಮಾತಲಿ ನಗುತ ವಿವರಿಸಿದ, ಚ.

ಲೀಲೆಯಿಂದಬುಜೋದರನು ಸಲೆ
ಪಾಲಿಸುವ ಲೋಕಗಳನೆಂದವ
ಶೂಲಿಯಂಘ್ರಿಯ ನೆನೆದು ಪೇಳ್ದದ ಭುವನಕೋಶವನು ॥ ೨೩

ಧರೆಯ ವಿಸ್ತಾರವನು ಮಿಗೆ ಭಾ
ಸ್ಕರನ ದಿವ್ಯವರೂಥದಂದವ
ಪರಮಲೀಲೆಗಳಿಂದ ಮಾತಲಿ ತಿಳುಹಿದನು ನರಗೆ ।
ವರಸುಮೇರುವ ಬಳಸಿದದ್ರಿಗ
ಳಿರವ ಕೀಲಕಪರ್ವತಂಗಳ
ನರುಹಿದನು ಸುರಪತಿಯ ಸಾರಥಿ ಕಲಿಧನಂಜಯಗೆ ॥ ೨೪

ಮಾತಲಿಯು ಭೂವಿಸ್ತಾರವನ್ನು ಹೇಳಿದುದು.

ಕೆಳಗಣಂಡಕಟಾಹ ತೊಡಗಿಯೆ
ಜಲವು ತುಂಬಿಹುದದಱ ಘಾತವು
ತಿಳಿಯಲಿಪ್ಪತ್ತೈದುಕೋಟಿಯ ಪವಣ ಪಡೆದಿಹುದು ।
ಇಳೆಯದಱ ಮೇಲೊಂದುಕೋಟಿಯ
ವಳೆದಲಿಹುದಲ್ಲಿಂದ ಮೇಲಣ
ದಳತೆಯದು ಚೌಷಷ್ಟಿ[1] ಕೋಟಿಯಜಾಂಡ ಪರಿಯಂತ ॥ ೨೫

ಧಾರಿಣಿಯನಹಿ ತಾಳ್ದನಾತನ
ವೀರಕಮಠನು ಪೊತ್ತನಿಬ್ಬರ
ಭಾರವನು ನಿಜಶಕ್ತಿ ಧರಿಸಿದಳೊಂದುಲೀಲೆಯಲಿ ।
ತೋರಗಿರಿಗಳು ವೆರಸಿದಿಳೆ ತಾ
ನೀರೊಳದ್ದುವುದೆಂದು ಸಲೆಮದ
ವಾರಣಂಗಳು ಧರಿಸಿ ಕೊಂಡಿಹುವೆಂಟುದಿಕ್ಕಿನಲಿ ॥ ೨೬

ಹತ್ತಿರೆಯಲಿಹುದತಳವಲ್ಲಿಂ
ದತ್ತ ವಿತಳ ಸುತಳ ತಳಾತಳ
ದೊತ್ತಿನ ಮಹಾತಳರಸಾತಳ ಕೆಳಗೆ ಪಾತಾಳ ।

[1] ಚೌವೀಸ, ಟ.

ಬಿತ್ತರದ ಲೋಕಂಗಳೇಳು ಧ
ರಿತ್ರಿಯೊಳಗೊಂದೊಂದಱಂತರ
ಹತ್ತು ಹತ್ತು ಸಹಸ್ರಯೋಜನ ಪಾರ್ಥ ಕೇಳೆಂದ ॥ ೧೭

ಉತ್ತಮವು ಭೂಲೋಕವಲ್ಲಿಂ
ದತ್ತ ಭುವಸುವಲೋಕವಲ್ಲಿಂ
ದತ್ತ ಮಹಜನಲೋಕ ವಲ್ಲಿಂದತ್ತ ತಪಲೋಕ ।
ಉತ್ತಮೋತ್ತಮವಿವಕೆ ಮೇಲಣ
ಸತ್ಯಲೋಕಾದಿಗಳ ನೋಡಿ ಧ
ರಿತ್ರಿಯಲಿ ಬಲುಗಾಱುಕೊಟ್ಟನು ಲೋಕಪಾಲಕರ ॥ ೧೮

ಥರವಿಡಿದ ಮೇಲಣ ಜಗಂಗಳು
ತರಣಿಮಂಡಲ ತೊಡಗಿಯತಿವಿ
ಸ್ತರವೆನಿಪ ಬ್ರಹ್ಮಾಂಡ ಪರಿಯಂತಡಕಿಲಾಗಿಹುವು ।
ಮರುತನಾಧಾರದಲಿ ಲಕ್ಷ್ಮೀ
ಕರವೆನಿಸಿ ದೇವರುಗಳಿಂದವೆ
ಭರಿತವಾಗಿಹುವವರ ಮಹಿಮೆಯ ಹೇೞಲರಿದೆಂದ ॥ ೧೯

ಧರಣಿ ತಾನೈವತ್ತುಕೋಟಿಯ
ಹರಹು ಸಪ್ತಸಮುದ್ರಹೊಱಗಾ
ವರಿಸಿ ಜಂಬೂದ್ವೀಪ ನಡುವಿಹುದಲ್ಲಿ ಭದ್ರಾಶ್ವ ।
ವರುಷ ಭಾರತಕೇತುಮಾಲವು
ಕುರುವರುಷವಿವು ಪತ್ರವಾಸುರ
ಗಿರಿಯು ಹೊಱಗಾಗಿಹುವು ಕರ್ಣಿಕೆಯಂತೆ ಕನಕಾದ್ರಿ ॥ ೨೦

ಲಕ್ಕದೊಳು ಹದಿನಾಱುಸಾವಿರ
ಸಿಕ್ಕಿತವನಿಯೊಳಾಳುಗೊಂಡುದು
ಲೆಕ್ಕ ಚೌರಾಶೀತಿಸಾಫಿರಯೋಜನದ ನಿಲವು ।

ಲೆಕ್ಕಿಸಲು ಗಿರಿಶಿಖರದಗಲವ
ದಕ್ಕು ಮೂವತ್ತೆರಡುಸಾವಿರ
ದಿಕ್ಕಿನೊಡೆಯರಿಗೆಂಟುಪಟ್ಟಣವದಱ ಮೇಲಿಹುವು ॥ ೨೧

ಚತುರ್ಮುಖಬ್ರಹ್ಮನ ಪುರದ ವರ್ಣನೆ.

ನಡುವೆ ಚತುರಾನನನ ಪಟ್ಟಣ
ದೆಡೆ ದೆರಹು ಹದಿನಾಲುಸಾವಿರ
ಕಡು ಚಲುವಿನಿಂದೆಸೆವ ಮಿಸುನಿಯ ಕೋಟೆ ನವರತುನ ।
ಎಡೆಗೆಡೆಗೆ ಕೇವಣಿಸಿದಂಗಡಿ
ಗಡಣೆಯಿಲ್ಲದ ಹರ್ಮ್ಯನಿಚಯಕೆ
ಪಡಿ ಚತುರ್ದಶಭುವನದೊಳಗಿಲ್ಲೆನಿಸಿ ಮೆಱೆದಿಹುದು ॥ ೨೨

ಅಲ್ಲಿದ್ದ ಜನಗಳ ವರ್ಣನೆ.

ಹರಳುಗಳ ಕೇವಣದ ಮಂಗಳ
ತರವೆನಿಪ ತೊಡಿಗೆಗಳ ದಿವ್ಯಾಂ
ಬರದಿ ಬೆಳಗುವ ತನುಲತೆಯ ನವಮಣಿಯ ಮೌಳಿಗಳ ।
ತರಳಲೋಚನದಿಂದುವದನದ
ಪರಮಸೌಭಾಗ್ಯದ ವಿಳಾಸದ
ಪರಿಜನಂಗಳು ಕಮಲಭವಪುರದಲ್ಲಿ ನೆಲಸಿಹರು ॥ ೨೩

ಅಲ್ಲಿ ಮೇಲಿಂದಿಳಿದು ಬರುವ ಗಂಗೆಯನ್ನು ವರ್ಣಿಸುವಿಕೆ.

ಹಲವುನೆಲೆ ಚಲುವಿಕೆಗೆ ಸಲೆ ಹೊಂ
ಗಳಶ ಲೋಕಕೆ ವಿಮಲಹೇಮದ
ಕೆಲಸಗತಿಯಲಿ ಚೆಲುವೆನಿಸಿದುಪ್ಪರಿಗೆ ನೋಱ್ಪರಿಗೆ ।
ಹೊಳಹಿನಲಿ ಥಳಥಳಿಸುತಿಹುದದು
ನಳಿನಪೀಠನ ಭವನ [1] ನಭದಿಂ
ದಿೞಿದ ಗಂಗೆಯ ಧಾರೆ ಮೆಱೆದುದು ಪುರದ ಬಾಹೆಯಲಿ ॥ ೨೪

---

[1] ಭವಪಟ್ಟಣದಿ, ಕ.

ಮೇರೆಯಿಲ್ಲದ ದೇವತತಿಗಳ
ಭಾರದಿಂ [1] ಜಗ ಜಱಿವುದೆಂದಾ
ಮೇರುವಿಂಗಣೆಯಿಟ್ಟ ರಜತಸ್ತಂಭವೋ ಮೇಣು ।
ಸಾರತರಸುಕೃತವನು ಸಂಚಿಸಿ
ಧೀರರೈದುವ ಸತ್ಯಲೋಕದ
ದಾರಿ ಯೆಂಬಂದದಲಿ ಗಂಗೆಯು ಧಾರೆ ಮೆಱೆದಿಹುದು ॥ ೩೫

ನರಸುರರು ಮೊದಲಾದ ಸಚರಾ
ಚರದ ಜೀವರಘಂಗಳನು ಸಂ
ಹರಿಸಲೋಸುಗ ಸತ್ಯಲೋಕದಿನಿೞಿದು ಬಹ ಗಂಗೆ ।
ಧರೆ ಧರಿಸಲರಿದೆನುತ ಕನಕದ
ಗಿರಿಯ ಶಿಖರದ ನಡುವೆ ನಿಂದಾ
ಪರಮಪಾವನೆ ತಿರುಗಿ ಹರಿದಳು ನಾಲ್ಕು ಮುಖವಾಗಿ ॥ ೩೬

ಅಳಕನಂದೆ ಸುಚಕ್ಷು ನಿರ್ಮಳ
ಜಲದ ಭದ್ರೆಯು ಸೀತೆ ಯೆಂಬಿವು
ಬಟಿಕ [2] ದಕ್ಷಿಣವಾದಿಯಾಗಿ ಪ್ರದಕ್ಷಿಣಾಧ್ವದಲಿ [3] ।
ಇೞಿದು [4] ಮೇರುವಿನಿಂದ ಕುಲಗಿರಿ
ಗಿೞಿದು ಜಾಹ್ನವಿ ನಾಲ್ಕು ದಿಕ್ಕಿನ
ಜಲಧಿಯನು ಬೆರಸಿದಳಘಹರೆ ಪಾರ್ಥ ಕೇಳೆಂದ [5] ॥ ೩೭

ನಾನಾದಿಕ್ಕುಗಳಲ್ಲಿರುವ ಪರ್ವತ ವೃಕ್ಷನದನದೀವರ್ಣನೆ.

ಸುರಪತಿಯ ದಿಕ್ಕಿನಲಿ ಬೆಳದಿಹು
ದರಳಿ ಜಂಬೂವೃಕ್ಷ ತೆಂಕಲು
ಪಿರಿದೆನಿಸಿ ತನಿವಣ್ಣ ರಸ ನದಿಯಾಗಿ ಹರಿದಿಹುದು ।

---

1 ಭುವನ ಜಡಿದಿಹ, ಕ. ಝ. 2 ತಿಳಿಯೆ, ಚ. 3 ಪದಕ್ಷಿಣಾರ್ಧದಲಿ, ಚ
4 ಸುೞಿದು, ಚ. 5 ಳಘಹರೆ ಪಾರ್ಥಕೇಳೆಂದ, ಚ.

ವರುಣನಿಹ ದೆಸೆಯಲಿ ಕದಂಬವು
ಹರಸಖನ ಕಕುಭದಲಿ ವಟವೀ
ಸುರರಿಗಾಶ್ರಯವೆನಿಸಿ ಕೀಲಕಗಿರಿಯ ಮೇಲಿಹುವು ॥ ೩೮

ಸುರಗಿರಿಯ ಮೊದಲಲ್ಲಿ ಕೀಲಕ
ಗಿರಿಯು ನಾಲ್ಕವರಲ್ಲಿ ಕೇಸರ
ಸರಸಿ ನಾಲ್ಕರುಣೋದೆ ಭದ್ರ ಸಿತೋದೆ ಮಾನಸದ ।
ಹೊಱಗೆ ನಾಲ್ಕುದ್ಯಾನ ಕೀಲಕ
ಗಿರಿಯುದಯವೈವತ್ತುಯೋಜನ
ಹರಹು ತಾನೆ ಸಹಸ್ರಯೋಜನವದಱ ದಿಕ್ಕಿನಲಿ [1] ॥ ೩೯

ಮಂದರಾಚಲ ಮೂಡ ತೆಂಕಲು
ಗಂಧಮಾದನಗಿರಿಯು ಪಶ್ಚಿಮ
ದಿಂದ ಬಡಗಣಪಾರ್ಶ್ವವೆಂಬಿವು ಕೀಲಕಾದ್ರಿಗಳು ।
ನಂದನವು ಬಡಗಣದು ಪಡುವಣ
ಚಂದವಹ ವೈಭ್ರಾಜ ತೆಂಕಲು
ಗಂಧಮಾದನ ಚೈತ್ರರಥ ಮೂಡಣದು ಕೇಳೆಂದ ॥ ೪೦

* ವರಸಿತಾಂತರಬಿಂದುಮಂದರ
ಕುರುರುರುಚಕಗಳಿಂದ್ರದಿಕ್ಕಿನ
ಲುರುಕಳಿಂಗಪತಂಗನಿಷಧನಿಷಾದ ತಾವಿಂತು [2] ।

---

1 ಶಿಖರದಲಿ, ಚ. ಝ. 2 ತಾವ್ಯೀಘ. ಖ.

* ಸೀತಳಾಂತಕ ಕುಂಡಮಳಯ ಕು
ರಾತಿವೈರಂತಕವು ಮೂಡಲು
ನೀತಿವಿದನೆ ತ್ರಿಕೂಟ ಶಿಶಿರಪತಂಗರುಚಿ ನಿಷಧ ।
ಖ್ಯಾತವಿವು ತೆಂಕಣದು ಕಪಿಲನ
ಜಾತವಾರಿಧಿ ಗಂಧಮಾದನ
ತಾತವಿವು ಸುಖವಾಸ ವಿಗೆ ವೈಡೂರ್ಯ ಪಶ್ಚಿಮದಿ * ॥ ಚ.

ತಿರುಗಿ ದಕ್ಷಿಣದಲ್ಲಿ ಮಧುಮಾ
ನ್ಯರಸಕುಮುದಸುಪಾರ್ಶ್ವವಾಪಿಂ
ಜರಗಳಿವು ವಾರುಣದಿಶಾಭಾಗದೊಳು ರಂಜಿಪುವು ॥ ೪೧

ನಾಗ ಕಾಲಾಂಜನವು ಹಂಸನು
ಮೇಘಪುಷ್ಪಕ [1] ಶಂಕಕೂಟವ
ನೀಗಲೀಕ್ಷಿಸು ಬಡಗದಿಕ್ಕಿನೊಳಹ ಕುಲಾದ್ರಿಗಳು [2] ।
* ಮೇಗೆ ಕೇಳೈದೈದು ದೆಸೆಗಳ
ಗಿರಿಯುಲಾಹೋಜ್ಞಹರು ಸುರಜನ
ಯೋಗಿಸಿದ್ಧನಿಷೇವಿತರು ತಾವಾಗಿ ವಿಭವದಲಿ ॥ ೪೨

ಧಾರುಣಿಯು ನಡುವಳಸಿ ಬೆಳದಿಹ
ಮೇರುಗಿರಿಯನು ಬಳಸಿ ವೃತ್ತಾ
ಕಾರವಾಗೆಸೆದಿಹುದು ಜಂಬೂದ್ವೀಪ ನವಖಂಡ ।
ಮೇರೆಯಾಗಿಪ ಗಿರಿಕುಲಂಗಳ
ತೋರದಗಲವನುನ್ನತಂಗಳ
ಸಾರಹೃದಯನೆ ನಿನಗೆ ಕಲಿಮಲದೂರ ತಿಳುಹುವೆನು [3] ॥ ೪೩

ಕುರು ಹಿರಣ್ಮಯ ರಮ್ಯಕವು ಸುರ
ಗಿರಿಯನೊಳಕೊಂಡಿಪ್ಪಿಳಾವೃತ
ಹರಿವರುಷಕಿಂಪುರುಷಭಾರತಕೇತುಮಾಲಗಳು [4] ।

---

1 ಮೇಗೆ ವೃಷಭನು, ಚ 2 ಬಡಗ ಲೆಖ್ಖಕೆ ನಾಲ್ಕುವನು ಬಳಿಕ, ಚ.
4 ಯಾಪಶ್ಚಿಮಾಶಾ ಶರಧಿ ಪರಿಯಂತಿಪ್ಪವರುಷವು ಕೇತುಮಾಲವದು, ಚ
3 ಸಾರಹೃದಯರು ಬಲ್ಲರೈಕಲಿಪಾರ್ಥ ಕೇಳಿಂದ, ಝ.

* ಮೇಗೆ ಕೇಳೀರೈದು ಕೇಸರ
ವಾಗಿ ದಿಕ್ಕುಗಳಲಿ ಸುರಾಲಯ
ವಾಗಿಯು ಬಳಸಿಹವು ದೇವವ್ರಾತಸೇವಿತವು, ಕ, ಖ.

ಪಿರಿಯಶೃಂಗ ಶ್ವೇತ ವಿಂಧ್ಯದ
ಗಿರಿ ನಿಷಧನಗ ಹೇಮಕೂಟದ
ಗಿರಿ ಹಿಮಾಲಯವಾಗಪರಜಲಧಿಯನು ಮುಟ್ಟಿಹುವು ॥ ೪೪

ಸುರಗಿರಿಯು ಬಳಸಿಪ್ಪಿಳಾವೃತ
ವರುಷದಿಂದವೆ ಮೂಡಲೊಪ್ಪುವೆ
ಪಿರಿಯಗಿರಿ ಮಾಲ್ಯವತ ಜಲನಿಧಿ ಕನಕಭದ್ರಾಶ್ವ ।
ವರುಷ ಪಡುವಣ ಗಂಧಮಾದನ
ಗಿರಿ ತೊಡಗಿ ಪಶ್ಚಿಮದ ಜಲನಿಧಿ
ಪರಿಗಣಿತವರುಷವನು ತಿಳಿವೊಡೆ ಕೇಳು ಮೂಲವದು ॥ ೪೫

ವರುಷಮಧ್ಯದ ಪರ್ವತಂಗಳ
ಹರಹು ತಾನೆರಡೆರಡುಸಾಸಿರ
ವರುಷ ನವನವನವಸಹಸ್ರವದಾ ಸುಮಧ್ಯದಲಿ ।
ವರುಷವೆರಡೈವತ್ತನಾಲ್ಕಱ [1]
ಪರಿಗಣಿತಮೂಡಣದು ಪಡುವಣ
ದೆರಡುಸಾಸಿರವೆನಿಸಿ ಮೆಱೆವುದು ಹೊಱಗೆ ಲವಣಾಬ್ಧಿ ॥ ೪೬

ದೇವಕೂಟದ ಜಠರವೆಂಬಿವು
ಭಾವಿಸಲು ಮಾಲ್ಯವತದಿಕ್ಕೆಲ
ನಾವಿಧದಿ ಕೈಲಾಸಪರ್ವತ ಗಂಧಮಾದನವು ।
ಭೂವಳಯದಲಿ ಪುಣ್ಯವಂತರು
ಭಾವಿಸುವೊಡಾಯಿಾಶದಿಕ್ಕಿನ
ದೇವಕೂಟದ ನಿಕರ ಪಡುವಣಗಿರಿಯ ಪ್ರಾಂತ್ಯದಲಿ [2] ॥ ೪೭

---

1 ವರುಷವದು ಮೂವತ್ತನಾಲ್ಕಱ, ಚ.

2 ಕೋವಿದನೆ ಕೇಳ್ಭೂಮಿವಲಯದೊ
ಳಾವಿಶಾಲದ ಪಾರಿಯಾತ್ರದ
ದೇವಯೋಗ್ಯದ ಗಿರಿಗಳಿಕ್ಕೆಲ ನಿಷಧ ಪರ್ವತಕೆ, ಚ.

ನೀಲಗಿರಿ ಯಿಕ್ಕೆಲಕೆ ವಾರಿಧಿ
ಮೇಲೆನಿಪ್ಪ ತ್ರಿಶೃಂಗವಿವು ಮೈ
ನೀಳದಲಿ ಪೂರ್ವಾಪರದ ಜಲನಿಧಿಯ ಮುಟ್ಟಿಹುವು ।
ಹೇಳಿದೆಂಟುಪಪರ್ವತಾಗ್ರವಿ
ಶಾಲ ತಾನೆಂಬತ್ತುಯೋಜನ
ಕೇಳಿಳಾವೃತ ಮೇರೆಯಾಗಿಹ ಗಿರಿಯ ಲೆಕ್ಕವನು ॥ ೪೮

ವರ್ಷದಧಿಪತಿಗಳು.

ವರುಷದೊಡೆಯನಿಳಾವೃತಕೆ ಸಂ
ಕರುಷಣನು ಭದ್ರಾಶ್ವದೊಳು ಹಯ
ಶಿರನು ಹರಿವರುಷಕ್ಕೆ ನರಹರಿ ಕೇತುಮಾಲದಲಿ ।
ಸಿರಿಯು ಮಗ ರಮ್ಯಕಕೆ ಮತ್ಸ್ಯನು
ಪಿರಿಯಕಮಠ ಹಿರಣ್ಮಯಕೆ ಯವ
ಧರಿಸು ಕುರುವರುಷದಲಿ ವರಹನು ಪಾರ್ಥ ಕೇಳೆಂದ ॥ ೪೯

ರಾಮ ಕಿಂಪುರುಷಕ್ಕೆ ಭಾರತ
ಭೂಮಿಯಲಿ ನಾರಾಯಣರು ತಿಳಿ
ನಾಮಧಾರಕ ಹನುಮ ವಸುಧಾದೇವಿಯಲಿ ಯಮನು[1] ।
ಆಮನು ಜಗಚ್ಚಕ್ಷುಲಕ್ಷ್ಮೀ
ಪ್ರೇಮದಿಂ ಪ್ರಹ್ಲಾದನಿಜನಿ
ಸ್ಸೀಮ ಭದ್ರಾಶ್ವಕೆ ಸದಾಶಿವರಿವರು ಪಾಲಕರು ॥ ೫೦

ವರುಷವನು ಗಿರಿಗಳನು ಬಳಸಿಹ
ಪಿರಿಯಲವಣಸಮುದ್ರವದಱಿಂ
ತರದಿ ಪ್ಲಕ್ಷದ್ವೀಪ ಯಿಕ್ಷುಸಮುದ್ರವಲ್ಲಿಂದ ।
ಇರಲು ಶಾಲ್ಮಲಿಯದಱ ಹೊಱಗಣ
ಸುರೆಯ ಶರನಿಧಿಯೊಂದನೊಂದಾ
ವರಿಸಿ ಪರಿಭಾವಿಸಲು ತದ್ದ್ವಿಗುಣಂಗಳಾಗಿಹುವು ॥ ೫೧

---

1 ನಾರದನು, ಚ,

ತಿಳಿವೊಡಾಸುರೆಯಿಂದ ಕುಶ ಘೃತ
ಜಲಧಿ ಕ್ರೌಂಚದ್ವೀಪವೆಂಬಿವ
ರಳತೆಗಿಮ್ಮಡಿಯಾದುದಾದಧಿಶರಧಿ ತದ್ದ್ವಿಗುಣ ।
ಇಳೆಯು ಮೇಲೆಸೆದಿಪ್ಪ ಶಾಕದ
ಬಳಿಯು ದುಗ್ಧವದೊಂದನೊಂದನು
ಬಳಸಿಕೊಂಡಿಹುದಬುಜನಾಭನ ನಿಳಯ ತಾನಲ್ಲಿ ॥　　೫೭

ಶ್ರೀಪತಿಯ ನಗರ ಮತ್ತು ಅದರ ವರ್ಣನೆ

ಚೆಲುವಿಕೆಗೆ ನೆಲೆಯೆನಿಸಿ ಮೆಱೆವುದು
ಪ್ರಳಯ ಯೆಂದೂ ಯಿಲ್ಲ ಲಕ್ಷ್ಮೀ
ನಿಳಯನಿಹನನವರತ ಸುಳಿಯವು ಮೃತ್ಯುಮಾಯೆಗಳು ।
ಬಳಕೆ ಸಲ್ಲದು ಕಲಿಯು ಕಾಲದ
ಹೊಲಬು ಹೊದ್ದದು ಹರಿಯು ರೂಪನು
ತಳೆದ ಪುರವನು ಕ್ಷೀರವಾರಿಧಿ ಬಳಸಿ ಕೊಂಡಿಹುದು ॥　　೫೩

ಯೋಗಿಗಳ ನೆಲೆವೀಡು ಬೊಮ್ಮದ
ಸಾಗರವು ಸನಕಾದಿಮುನಿಗಳ
ಭೋಗಭೂಮಿ ಯನಂತನಿಗಮಗಳುಪನಿಷತ್ತುಗಳ ।
ಆಗರವು ಮೂಲೋಕದರ್ಪಣ
ವಾಗಿ ದುಗ್ಧೋದಧಿಯೊಳೆಸೆವುದು
ಶ್ರೀಗಧೀಶನ ನಗರ ನೋಡೆಲೆ ಪಾರ್ಥ ನೀನೆಂದ ॥　　೫೪

ಜಲಜನಾಭನ ದುಗ್ಧಜಲಧಿಯ
ಬಳಸಿಕೊಂಡಿಹ ಪುಷ್ಕರದ ಹೊಱ
ವಳಯದಲಿ ಮೆಱೆದಿಹುದು ಸ್ವಾದೂದಕದ ಜಲರಾಶಿ ।
ಇಳೆಗೆ ಕೋಟೆಯನಿಕ್ಕಿದಂತಿರೆ
ಬಳೆದ ಲೋಕಾಲೋಕಪರ್ವತ
ತಿಳಿವೊಡಲ್ಲಿಂದತ್ತ ತಿಮಿರವಜಾಂಡಪರಿಯಂತ ॥　　೫೫

ಲಕ್ಷ ಜಂಬೂದ್ವೀಪವಾಪರಿ
ಲಕ್ಷ ಲವಣಸಮುದ್ರ ನಾಲುಕು
ಲಕ್ಷ ಪ್ಲಕ್ಷದ್ವೀಪ ಇಕ್ಷುಸಮುದ್ರಪರಿಯಂತ ।
ಲಕ್ಷವೆಂಟು ಸುಶಾಲ್ಮಲಿಯು ಸುರೆ
ಲಕ್ಷ ಷೋಡಶ ಘೃತಸಮುದ್ರವು
ಲಕ್ಷ ಮೂವತ್ತೆರಡು ಕೌಂಚದ್ವೀಪ ದಧಿಗೂಡಿ ॥ ೫೬

ಲಕ್ಷ ತಾನಱುವತ್ತುನಾಲ್ಕಾ
ಗಿಕ್ಷು ಸಾಗರ ಕ್ಷೀರಕೋಟಿಯು
ಲಕ್ಷ ಯಿಪ್ಪತ್ತೆಂಟು ಪುಷ್ಕರ ಸುಜಲ ವೊಂದಾಗಿ ।
ಮಿಕ್ಕಕೋಟಿದ್ವಯದ ಮೇಲಣ
ಲಕ್ಷದೈವತ್ತಾಱು ಯೋಜನ
ವಕ್ಕ ಹೇಮದ ಭೂಮಿ ಲೋಕಾಲೋಕಪರಿಯಂತ [1] ॥ ೫೭

ಹತ್ತುಲಕ್ಷವು ಹೀನವಾಗಿ
ಪ್ಪತ್ತುಕೋಟಿಯು ಹರಹು ಪೂರ್ವದ
ಸುತ್ತು ಮೇಲಾಗಿಹುದು ಗಭೋದಕದ ಪರಿಯಂತ ।
ಇತ್ತ ಸುರಗಿರಿಯಿಂದ ಹಿಂದಿ
ಪ್ಪತ್ತುಕೋಟಿಯು ಕೂಡೆ ನೋಡೆ ಧ
ರಿತ್ರಿ ತಾನೈವತ್ತುಕೋಟಿಯು ಲೆಕ್ಕ ಕೇಳೆಂದ ॥ ೫೮

ಮೆರುಪ ವೊಂಬತ್ತಾಗಿಹುದು ವಿ
ಸ್ತರದ ಜಂಬೂದ್ವೀಪ ವೊಂದೇ
ವರುಷ ವೇಪಾಗಿಹುದು ಶತಸಂಖ್ಯಾತವಾದ್ವೀಪ ।
ನಿರುತಕಡೆಯು ದ್ವೀಪವೆಂಬುದು
ವರುಷವೆರಡಾಗಿಹುದು ಮಾನಸ
ಗಿರಿಯುದಱ ನಡುವಿಹುದು ಚಕ್ರದ ಕಂಬಿಯುಂದದಲಿ ॥ ೫೯

---

1 ಗಿರಿಸಹಿತ, ಚ.

ಮೆರುಷವೆರಡಾಗೊಪ್ಪುತಿಹ ಪು
ಷ್ಕರದ ನಡುವಣ ಮಾನಸೋತ್ತರ
ಗಿರಿಯುದಯುವೈವತ್ತುಸಾವಿರಹರಹು ಲಕ್ಷವಲೆ [1] |
ಹರಿಕುಮಾರಕ ಕೇಳ್ಲೈ ಯಾ [2]
ಗಿರಿಯು ಶಿಖರದ ಮೇಲೆ ದಿಗ್ದೇ
ವರ ಪುರಂಗಳು ಶಿರಿಗೆ ನೆಲೆವನೆಯಾಗಿ ಮೆಱೆದಿಹುವು || ೬೦

ಅಷ್ಟದಿಕ್ಪಾಲಕರ ಪುರಗಳು.

ಸುರಪನದುವೇ ಸ್ವರ್ಗಸಾರವು
ನಿರುತದಲಿ ಸಂಯಮನಿಯೆಂಬಾ
ಪುರವು ಕಾಲನ ನಗರಿ ತೆಂಕಲು ಪಶ್ಚಿಮಾದ್ರಿಯುಲಿ |
ವರುಣನದು ಶುದ್ಧಿಮತಿ ಯಕ್ಷೇ
ಶ್ವರಗೆಸೆವುದಾಕಾಂತಿಮತಿ ಶಿಖಿ
ನಿರುತಿಮರುದೀಶಾನ್ಯರಿಗೆಯುವರವರ ನಾಮದಲಿ || ೬೧

ಉರಗನಾಳಾಂಬುಜಕುಸುಮವೀ
ಧರಣಿ ಕರ್ಣಿಕೆ ಮೇರುಗಿರಿ ಕುಲ
ಗಿರಿನಗಂಗಳು ಬಳಸಿ ಕೇಸರದಂತೆ ಮೆಱೆದಿಹುವು |
ಸರಸಿರುಹಭವನದಱ ಮಧ್ಯದೊ
ಳಿರಲು ಭೂತಳವೈದೆ ಮೆಱೆವುದು
ಶಿರಿಮಹಾವಿಷ್ಣುವಿನ ನಾಭೀಕಮಲದಂದದಲಿ || ೬೨

ಧರೆಯು ವರುಷದ್ವೀಪಗಿರಿಗಳ
ಶರಧಿಗಳ ಸುರಶೈಲದಗ್ರದ
ಹರನ ಚತುರಾನನನ ಪಟ್ಟಣದಿರವ ತಿಳುಹಿದೆನು |

---

[1] ತದ್ದ್ವಿಗಣ, ಚ. [2] ಪಿರಿದು ಪುಣ್ಯಶ್ಲೋಕ ಕೇಳಾ, ಚ.

ಸೂರ್ಯ ರಥ ಮತ್ತು ನಕ್ಷತ್ರಗಳ ಸ್ಥಿತಿ.

ಸರಸಿರುಹಬಂಧುವಿನ ರಥವಿಹ
ಪರಿಯು ಚರಿಸುವ ಪಥದ ತಾರೆಗ
ಳಿರವ ನೀ ಕೇಳೆಂದು ಮಾತಲಿ ನುಡಿದನರ್ಜುನಗೆ ॥ ೬೩

ಗಾಲಿ ಮಾನಸಗಿರಿಯ ಶಿಖರದ
ಮೇಲೆ ತಿರುಗುವುದೊಂದು ಕಡೆ ಸುರ
ಶೈಲದಲಿ ಬಿಗಿದಿಹುದು ಕೋಟಿಯ ಮೇಲೆ ಯೈವತ್ತು ।
ಏಳುಲಕ್ಷದ ನೀಳ ರಥದ ವಿ
ಶಾಲವದು ಮೂವತ್ತು ಸಾವಿರ
ಮೇಲೆ ಧ್ರುವಮಂಡಲವ ಬಿಗಿದಿಹುದನಿಲಪಾಶದಲಿ ॥ ೬೪

ಹರಿವ ಗಾಲಿಯ ನಾಭಿಮೂಲ [1]
ಕ್ಕಿರುವ [2] ಚಾತುರ್ಮಾಸಗಳು ಘನ
ತರದ ಷಡೃತುವಯನ ಚಕ್ರವು ಚಾರುಚತುರಯುಗ ।
ತರವಿಡಿದ ಸಂವತ್ಸರವು ಘನ
ತರದ ಪರಿವತ್ಸರವಿಡಾವ
ತ್ಸರವು ವಿದ್ವತ್ಸರವು ವತ್ಸರವೆಂದು ಮೊಳೆಯಾಯ್ತು ॥ ೬೫

ಉರಗನಾಳದ ಹೊರಜೆ ನವಸಾ
ಸಿರದ ಕುಱುಗುಣಿ ಯಾಚಕುಗಳ ತಾ
ವೆರಡು ಮಡಿ ತೊಂಬತ್ತು ಒಂದುಸಹಸ್ರದರ್ಘವದು ।
ಪರಿಯನೊಗನದಱಧ-ಸಂಖ್ಯೆಗೆ
ಸರಿಯೆನಿಪ ಮೇಲಚ್ಚು ಮಂಗಳ
ತರವೆನಿಪ ನವರತ್ನರಚನೆಯ ಚಿತ್ರರಥವೆಂದ ॥ ೬೬

---

1 ಮೂಲಿ, ಚ. 2 ಚ್ಚರಿಯ, ಚ.

ಕರಸಹಸ್ರನ ರಥಕೆ ಹೂಡಿದ
ತುರಗ ಛಂದೋಮಯವು ಸಾರಥಿ
ಯರುಣ ಕಾಲವೆ ಗಾಲಿ ನವಕೋಟಿಯನು ಚರಿಯಿಸುಗು ।
ವರವರೂಥದ ಮಧ್ಯದೊಳು ವಿ
ಸ್ತರದ ಮಣಿಪೀಠದಲಿ ಮಿಗೆ·ದಿನ
ಕರನು ಗ್ರಹಭವನಕ್ಕೆ ತಾನಾಧಾರನಾಗಿಹನು ॥ ೬೭

ಸೂರ್ಯಮೊದಲಾದಗಳ ಗ್ರಹಸ್ಥಾನವು.

ಹರಿ ತರಣಿಗಿಂದುವಿಗೆ ಕರ್ಕಟ
ಧರಣಿಜಂಗಜ ವೃಶ್ಚಿಕವು ಹಿಮ
ಕರನ ತನಯಗೆ ಮಿಥುನ ಕನ್ಯೆ ಬೃಹಸ್ಪತಿಗೆ ಚಾಪ ।
ಪಿರಿಯಝುಷತುಲೆ ವೃಷಭದಾನವ
ಗುರುವಿನವು ಮೃಗಕುಂಭ ಮಂದಂ
ಗಿರವು ನಿಜಗೃಹ ರಾಹುಕೇತುಗಳವರ ಕೂಡಿಹುವು ॥ ೬೮

ಲಕ್ಷವುರ್ವಿಗೆ ರವಿಯು ರಥ ಶಶಿ
ಲಕ್ಷವೆರಡು ತ್ರಿಲಕ್ಷಯೋಜನ
ಮಿಕ್ಕಹುವು ನಕ್ಷತ್ರ ಬುಧನಿಹನೈದುಲಕ್ಷದಲಿ ।
ಲಕ್ಷವೇಳಾ ಶುಕ್ರ ಕುಜ ನವೆ
ಲಕ್ಷ ಗುರು ಹನ್ನೊಂದುಲಕ್ಷವು
ಲಕ್ಷ ವಸುಧಾತಳಕೆ ಶನಿ ಹದಿಮೂಱುವರೆಲಕ್ಷ ॥ ೬೯

ವಿದಿತವಿಂತಿದು ಸಪ್ತಋಷಿಯರ
ಸದನವದು ಹದಿನಾಲ್ಕುಲಕ್ಷವು
ಮುದದಿ ನೆಲಸಿಹನಾ ಧ್ರುವನು ತಾ ಹದಿನೈದುಲಕ್ಷದಲಿ ।
ಅದಱ ಮೇಲಿಹ ವಿಷ್ಣು ಪದದಲಿ
ಸದಮಳಾತ್ಮಕ ಶಿಂಶುಮಾರನು
ಪದುಳದಲಿ ಲೋಕಕ್ಕೆ ಸಲೆಯಾಧಾರವಾಗಿಹನು ॥ ೭೦

### ಮಂದೇಹರೆಂಬ ದೈತ್ಯರ ವೃತ್ತಾಂತ.

ವರಕುಮಾರಕ ನೀನು ಕೇಳ್ಕೈ
ಪಿರಿಯಲೋಕಾಲೋಕವೆಂಬಾ
ಗಿರಿಯ ಬಳಸಿದ ಕಾಳುಗತ್ತಲೆಯೊಳಗೆ ಮೆಱೆದಿಹರು |
ಧರೆಯೊಳರುಣದ್ವೀಪವದಱೊಳು
ನೆರೆದ ಮಂದೇಹರುಗಳೆಂದಾ
ಶ್ಚರಿಯದಲಿ ಸರಸಿರುಹಸಂಭವನಿಂದಲುದಿಸಿದರು || ೨೧

ಹರಿಹರವಿರಿಂಚಿಗಳು [1] ಮೊದಲಾ
ದುಱುವ ದೇವರುಗಳೊಳು ಮತ್ತಾ
ಥರವಿಡಿದು ಹದಿನಾಲ್ಕುಲೋಕದೊಳುಳ್ಳ ದೇವರೊಳು |
ತರಣಿ ಯತಿಬಲವಂತನೆಂಬುದ
ನಱಿದು ಪೂರ್ವದಸುರರು ಸಾಸಿರ
ಕರದ ದಿನನಾಥನೊಳು ಸಲೆ ಕಾಳಗವ ಬಯಸುವರು || ೨೨

ಪರಿಕಿಸಲು ಪರಮಾತ್ಮ ದಿನಕರ
ಹರವಿರಿಂಚಾದಿಗಳು ಸೂರ್ಯನ
ನೆರೆದು ಸುತಿ ಕೈವಾರಿಸುತ್ತಿರೆ ಘನಮಹಾಮಹಿಮ |
ಕಿರಣದುರಿಯಮಹಾಪ್ರತಾಪನು
ತರಣಿಯೆಂದಾತನೊಳು ಕಾದಲು
ಸರಸಿರುಹಸಂಭವನ ಮೆಚ್ಚಿಸಿ ವರವ ಪಡೆದಿಹರು || ೨೩

ಕಾಲವೆಂಬುದು ರವಿಯು ಗಾಲಿಯು
ಕಾಲಗತಿಯೈ ಸಲೆ ಕೃತಾಂತಗೆ
ಲೀಲೆ ಸೃಷ್ಟಿಸ್ಥಿತಿಲಯವು ಸಚರಾಚರಂಗಳಲಿ |
ಕಾಲಚಕ್ರದ ಖಚರಗತಿಯಲಿ
ಕಾಲಗತ್ತಲೆಯನು ವಿದಾರಿಸಿ
ಪಾಲಿಸುವ ಲೋಕಂಗಳನಿತುವ ಪಾರ್ಥ ನೋಡೆಂದ || ೨೪

---

1 ಹರವಿರಿಂಚಾದಿಗಳು, ಕ, ಖ.

ಧರಣಿ ತಾನೈವತ್ತು ಕೋಟಿಯು
ಹರಹು ಭೂಮಿಗೆ ಹತ್ತುಮಡಿ ಖ
ರ್ಪರಕಟಾಹವದಕ್ಕೆ ದಶಗುಣ ದಶಗುಣೋತ್ತರದ ।
ಪರಿವಿಡಿಯಲುದಕಾಗ್ನಿ ಹರಿಪು
ಷ್ಕರವಿಹುದು ಮಹದಾದಿಪರಿವಿ
ಸ್ತರಣವೀಬ್ರಹ್ಮಾಂಡವೀಪರಿ ಯಡಕಿಲಾಗಿಹುವು ॥ ೨೫

ಅವನಿಪತಿ ಕೇಳಿಂದ್ರಸಾರಥಿ
ವಿವರಿಸಿದನೀತಂಗೆ ಭೂಮಿಯ
ಭುವನಕೋಶದ ಸಂನಿವೇಶವನದ್ರಿಜಲಧಿಗಳ ।
ಇವು ಕುಲಾದ್ರಿಗಳಿವು ಪಯೋಧಿಗ
ಳಿವು ಮಹಾದ್ವೀಪಂಗಳಿವು ಮಾ
ನವರ ಧರಣಿ ಸ್ವರ್ಗ ಮೇಲಿನ್ನಿತ್ತ ನೋಡೆಂದ ॥ ೨೬

ಭೂಲೋಕದಲ್ಲಿ ಪುಣ್ಯವನ್ನು ಮಾಡಿ ಸ್ವರ್ಗಕ್ಕೆ ಹೋದವರನ್ನು ತೋರಿಸಿದುದು.

ಈವಿಮಾನದ ಸಾಲ ಸಂದಣಿ
ತೀವಿಕೊಂಡಿದೆ ಗಗನತಳದಲಿ
ದೇವಕನ್ಯಾ ಶತಸಹಸ್ರದ ಖೇಳಮೇಳದಲಿ ।
ಭೂವಳಯದಲಿ ಸುಕೃತಿಗಳು ನಾ
ನಾವಿಧದ ಜಪದಾನಯಜ್ಞ ತ
ಪೋವಿಧಾನದಲೊದಗಿದವರನು ಪಾರ್ಥ ನೋಡೆಂದ ॥ ೨೭

ಭೂತದಯೆಯಲಿ ನಡೆದನೀತೋ
ರ್ಪಾತ ನಿರ್ಮಳ ಸತ್ಯಭಾಷಿತ
ನೀತ ತೀರ್ಥವಿಹಾರಿ ಸಜ್ಜನನೀತ ಶುಚಿ ಯಾತ ।
ಈತ ನಿರ್ಮತ್ಸರನಸೂಯಾ
ತೀತನಿವನತಿವಿಪ್ರಪೂಜಕ
ನೀತ ಮಾತಾಪಿತರ ಭಕ್ತನು ಪಾರ್ಥ ನೋಡೆಂದ ॥ ೨೮

ಈತನಿಂದ್ರಿಯವಿಜಯಿ ದುಷ್ಕೃತ [1]
ಭೀತ [2] ನಿವ ವೇದಾಧ್ಯಯನಪರ
ನೀತ ಪರಹಿತನಿವ ಯಥಾಲಾಭೈಕಸಂತೋಷಿ ।
ಈತ ಶುಚಿರುಚಿ ಯಿಾತ ನಿರ್ಮಳ
ನೀತ ನಿರ್ಭಯನೀತ ನಿಸ್ಸ್ಪೃಹ
ನೀತ ರಾಗದ್ವೇಷರಹಿತನು ಪಾರ್ಥ ನೋಡೆಂದ ॥ ೭೯

ಇತ್ತ ನೋಡೈ ಸ್ವಾಮಿಕಾರ್ಯಕೆ
ತೆತ್ತ ತನ್ನೊಡಲನು ರಣಾಗ್ರದೊ
ಳತ್ತಲೈದನೆ ಭೂಮಿಕನ್ಯಾಗೋಧನಾವಳಿಯ ।
ಇತ್ತವನು ಸತ್ಪುತ್ರರನು ತಾ
ಹೆತ್ತವನು ಗೋವಿಪ್ರಬಾಧೆಗೆ
ಸತ್ತವನಲೇ ಪಾರ್ಥ ನೋಡುತ್ತಮವಿಮಾನದಲಿ ॥ ೮೦

ಮೇಲೆಮೇಲೈದರೆ ಸುತಾರಾ
ಮಾಲೆಗಳವೋಲ್ ರಾಜಸೂಯದ
ಮೇಲು ಯಜ್ಞದ ವಾಜಿಮೇಧದ ಭೂರಿಸುಕೃತಿಗಳು ।
ಕಾಳಗದೊಳರಿಸುಭಟಶಿತಕರ
ವಾಳಧಾರಾತೀರ್ಥಸೇವ್ಯನೃ
ಪಾಲರೈದರೆ ದೀಪ್ಯಮಾನವಿಮಾನಮಧ್ಯದಲಿ ॥ ೮೧

ಪುರಾತನ ಚಕ್ರವರ್ತಿಗಳನ್ನು ತೋರಿಸಿದುದು.

ಈತ ಭರತನು ದೂರದಲಿ ತೋ
ರ್ಪಾತನವೆ ಹರಿಶ್ಚಂದ್ರ ನಳನೃಗ
ರೀತಗಳು ಪುರುಕುತ್ಸನೀತ ಮರುತ್ತನೃಪನೀತ ।
ಈತ ಹೈಹಯ ದುಂದುಮಾರಕ
ನೀತ ನಹುಷದಿಳೀಪದಶರಥ
ನೀತ ರಘು ತಾನೀತ ಶಂತನು ಪಾರ್ಥ ನೋಡೆಂದ ॥ ೮೨

---

[1] ಸತ್ಕೃತ, ಚ.    [2] ನೀತ, ಚ.

ಇದೆ ಬುಸಂಖ್ಯಾತಕ್ಷಿತೀಶ್ವರ
ರುದಿತಬಹುಪುಣ್ಯೋಪಕ್ಲೃತಭೋ
ಗದಲಿ ಭಾರತವರುಷ ನಿಮ್ಮದು ಪುಣ್ಯಭೂಮಿ ಕಣಾ ।
ಇದಱೊಳಗೆ ಜಪಯಜ್ಞದಾನಾ
ಭ್ಯುದಯುವೈದಿಕಕರ್ಮನಿಷ್ಠರ
ಪದವಿಗಳ ಪರುಠವಣೆಯುನು ಕಲಿಪಾರ್ಥ ನೋಡೆಂದ ॥ ೮೩

ಅಮರಾವತಿಯನ್ನು ನೋಡೆಂದು ಮಾತಲಿ ಹೇಳಿದುದು.

ಹೊಳೆವುತಿದೆ ದೂರದಲಿ ರಜತಾ
ಚಲವ ಕಡೆದಂದದಲಿ ಕೆಲದಲಿ
ಬಲವಿರೋಧಿಯ ಪಟ್ಟದಾನೆ ಸುರೇಂದ್ರನಂದನನೆ ।
ನಿಳಯುವದೆನಸು ದೂರದಲಿ ಥಳ
ಥಳಿಸುವಮಳಮಣಿಪ್ರಭಾಪರಿ
ವಳಯುರಶ್ಮಿನಿಬದ್ಧದಮರಾವತಿಯು ನೋಡೆಂದ ॥ ೮೪

ಅರ್ಜುನನು ಅಮರಾವತಿಯನ್ನು ಪ್ರವೇಶಿಸಿದುದು.

ಪೊಕ್ಕನಮರಾವತಿಯನರ್ಜುನ
ನೆಕ್ಕತುಳದಲುಪಾರ್ಜಿಸಿದ ಪು
ಣ್ಯಕ್ಕೆ ಸರಿಯೇ ನಹುಷನಳಭರತಾದಿಭೂಮಿಪರು ।
ಉಕ್ಕುವತಿಪರಿಮಳದ ಪವನನ [1]
ತೆಕ್ಕೆಗಳ ಲಾವಣ್ಯಲಹರಿಯು
ಸೊಕ್ಕುಗಳ ಸುರಸೂಳೆಗೇರಿಗಳೊಳಗೆ ಬರುತಿರ್ದ ॥ ೮೫

ಆಗ ಅರ್ಜುನನನ್ನು ಕಂಡು ಇಂದ್ರನು ತನ್ನ ಅರ್ಧಾಸನದಲ್ಲಿ ಕುಳಿಸಿದುದು.

ಇಳಿದು ರಥವನು ದಿವಿಜರಾಯನ
ನಿಳಯುವನು ಹೊಕ್ಕನು ಕಿರೀಟಿಯು
ನಳವಿಯಲಿ ಕಂಡಿದಿರುವಂದನು ನಗುತ ಶತಮನ್ಯು ।

---

[1] ಉಕ್ಕಿದ:ವು ಪರಿಮಳದ ತೇಜದ, ಚ.

ಸೆಳೆದು ಬಿಗಿದಪ್ಪಿದನು ಕರದಲಿ
ಕಳುಕಿ ಕರವನು ತಂದು ತನ್ನಯ
ಕೆಲದೊಳಗೆ ಕುಳ್ಳಿರಿಸಿದನು ಸಿಂಹಾಸನಾರ್ಧದಲಿ ॥ ೮೬

ನೂಱುಪಶುಗೆಡಹಿಂಗೆ ಸುರೇಂದ್ರನು
ಮಾಱುವನು ಗದ್ದುಗೆಯು ಬಱಿದೇ
ಸೂಱೆಗೊಂಡನು ಸುರಪತಿಯು ಸಿಂಹಾಸನದ ಸಿರಿಯು ।
ಮೂಱುಯುಗದರಸುಗಳೊಳೀತಗೆ
ತೋಱಲೆಣೆಯಿಲ್ಲರಸ ಶಕ್ರನ
ನೂಱುಮಡಿ ತೇಜದಲಿ ತೊಳತೊಳಗಿದನು ಕಲಿಪಾರ್ಥ ॥ ೮೭

ಆಗ ಅರ್ಜುನನನ್ನು ನೋಡಲು ಸರ್ವರು ಬಂದುದು.

* ನುಸಿಗಳವದಿರು ಮರ್ತ್ಯರೆಂಬವ
ರೊಸಗೆಯಮರಾವತಿಯೊಳೇನಿದು
ಹೊಸತಲಾ ಬಂದಾತನಾರೋ ಪ್ರೂತು ಮಝು ಯೆನುತ ।
ವಸುಗಳಾದಿತ್ಯರು ಭುಜಂಗಮ
ರಸುರಗಂಧರ್ವಾದಿದೇವ
ಪ್ರಸರ ಬಂದುದು ಕಾಣಿಕೆಗೆ ಪುರುಹೂತನಂದನನ ॥ ೮೮

ಅಂದಿನುತ್ಸವವಮರನಿಕರದ
ಸಂದಣಿಯನೇನೆಂಬೆನಿಂದ್ರನ
ಮಂದಿರದೊಳೊತ್ತೊತ್ತಿ ಜಡಿದುದು ಝಳದ ಝಾಡಿಯಲಿ ।
ಮುಂದಿ ತೊಲಗಲಿ ತೆರಹ ಕೊಡಿಸಾ
ನಿಂದವರ ಹೊಯ್ ಗಜಬಜವ ಮಾ
ಣೆಂದು ಗರ್ಜಿಸಿತಿಂದ್ರನಾಸ್ಥಾನದಲಿ ಸುರನಿಕರ ॥ ೮೯

ನೂಕು ಬಾಗಿಲ ಚಾಕು ಬಣಗು ದಿ
ವೌಕಸರ ನಿಲಿಸಲ್ಪಪುಣ್ಯರ
ನೇಕೆ ಹೊಗಿಸಿದೆ ಬಹಳದಾನತಪೋಪವರ್ಜಿತರ ।

ಓಕುಳಿಯ ನೆಮದಿಂದ ತೆಕ್ಕೆಯ
ಬಾಕುಳಿಗಳುರುವಣಿಸಿತೇ ತವೆ
ಗೇಕೆ ರಂಭಾದಿಗಳ ಸೋಂಕೆಂದುದು ಸುರಸ್ತೋಮ ॥ ೯೦

ಆಗ ಆಸಭೆಯಲ್ಲಿ ಸ್ವೇಚ್ಛೆಯಾಗಿ ಬಂದವರನ್ನು ತಡೆದುದು.

ತೊಲಗಿಸಾ ಮಂದಿಯನು ತೆಗೆ ಬಾ
ಗಿಲನೆನಲು ಕವಿದುದು ಸುರೇಂದ್ರನ
ಲಲನೆಯರು ಲಾವಣ್ಯಲಹರಿಯ ಲಲಿತವಿಭ್ರಮದ ।
ಸುಳಿಗುರುಳ ನಿಟ್ಟೆಸಳುಗಂಗಳ
ಹೊಳೆವಕದಪಿನ ನುಣ್ಗೊರಳ ಬಲು
ಮೊಲೆಯ ಮೋಹರ ನೂಕಿತಾ ಪರಿವಾರನಾರಿಯರ [1] ॥ ೯೧

ಆಗ ಊರ್ವಶಿ ಮೊದಲಾದವರು ಇಂದ್ರನ ಸಭೆಗೆ ಬಂದುದು.

ಉಗಿದರೋ ಕತ್ತುರಿಯ ತವಲಾ
ಯಿಗಳ ಮುಚ್ಚಳವೆನೆ ಕವಾಟವ
ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ ।
ಹೊಗರಲಗು ಹೊಳಹುಗಳ ಕಡೆಗ
ಣ್ಣು ಗಳ ಬಲುಗರುವಾಯ ಮುಸುಕಿನ
ಬಿಗುಹುಗಳ ಬಿರುದಂಕಕಾತಿಯರಿಂದ್ರನೋಲಗದ ॥ ೯೨

ನೇವುರದ ನುಣ್ದನಿಯ ಕಾಂಚಿಯ
ಕೇವಣದ ಕಿಂಕಿಣಿಯ ರಭಸದ
ನೇವಣಗಳೊಲವುಗಳ ಮೌಳಿಯ ಮುಱಿದಮುಸುಕುಗಳ ।
ಭಾವದುಬ್ಬಿನ ಚಲ್ಲೆಗಂಗಳ
ಠಾವರದ ಡೊಳ್ಳಾಸಕಾತಿಯ
ರಾವಿಬುಧಪತಿಯೋಲಗವ ಹೊಕ್ಕರು ನವಾಯಿಯಲಿ ॥ ೯೩

1 ನೂಕಿತವರೀವಾರನಾರಿಯರು, ಝು.

ವರತಿಲೋತ್ತಮೆ ರಂಭೆ ಮಧುರ
ಸ್ವರೆ ಘೃತಾಚಿ ಸುಕೇಶಿ ಗೌರೀ
ಶ್ವರಿ ವರೂಥಿನಿ ಚಿತ್ರಲೇಖೆ ಸುರೇಖೆ ಚೈತ್ರರಥಿ [1] ।
ಸುರಭಿ ಗಂಧಿನಿ ಚಾರುಮುಖಿ ಸಾಂ
ದರಿಯುನಿಧಿ ಯುೂರ್ವಶಿ ಸುಲೋಚನೆ
ಸುರಸೆಯೆನಿಪಂಗನೆಯರೈದಿತು ಕೋಟಿಸಂಖ್ಯೆಯಲಿ ॥ ೯೪

ಆಗ ಅಲ್ಲಿ ನಡೆದ ಗಾನನರ್ತನಾದಿಗಳ ವರ್ಣನೆ.

ಏನನೆಂಬೆನು ಜೇಯು ಶಕ್ರಾ
ಸ್ಥಾನವೆಲ್ಲಾ ದಿವ್ಯವಾದ್ಯಸು
ಗಾನನರ್ತನವಿಮಳತೂರ್ಯತ್ರಯದ ಮೇಳವದ ।
ಆನಿತಂಬಿನಿಯರ ಸುರೇಖಾ
ಸ್ಥಾನಕದ ನಿಳುಗೆಯ ಸುಧಾಳದ
ನೂನಸಮ್ಮೋಹನದ ತೂಕದ ಭಾವಭಂಗಿಗಳ ॥ ೯೫

ರಸದ ಸಂಸ್ಥಾಪನೆಯ ಭಾವದ
ಬೆಸುಗೆಗಳ ಹಸ್ತಾಭಿನಯದ್ಯ
ಕ್ಪ್ರಸರಣದ ಗತಿ ಸಾತ್ವಿಕಾಂಗಿಕಸುಗತಿವಿಭ್ರಮದ ।
ವಿಷಮಸಮಕರಣದ ಕಳಾಪದ
ಕುಸುರಿಗಳ ವರಲಾಸ್ಯತಾಂಡವ
ವೆಸೆದುದೈ ರಂಭಾದಿನರ್ತಕಿಯರಲಿ ಪೊಸತೆನಿಸಿ ॥ ೯೬

ಗಾನರಸದಲಿ ಮುಳುಗಿತಮರಾ [2]
ಸ್ಥಾನವೆತ್ತಣ ವಾದ್ಯನರ್ತನ
ವೇನೆನಲು ಘನವಾದ್ಯ ಗತಿ ಸಮ್ಮೋಹಿಸಿತು ಸಭೆಯ ।
ಗಾನವಾದ್ಯವದೆತ್ತ ನೃತ್ಯರ
ಸಾನುಭವ ಭಾರವಿಸಿತನ್ಯೋ
ನ್ಯಾನುರಂಜಕವಾಯ್ತು ತೂರ್ಯತ್ರಯದ ಮೇಳಾಪ ॥ ೯೭

[1] ಪೂರ್ವಚಿತ್ತಿಸುಲೇಖೆ ಚಿತ್ರರಥಿ, ಚ.  [2] ತಿಂದ್ರಾ, ಚ.

ಆಸಭೆಯಲ್ಲಿ ಊರ್ವಶಿಯನ್ನು ಅರ್ಜುನನು ನೋಡಿದುದು.

ಈಯುವಮಾನುಷನೃತ್ಯವಾದ್ಯಸು
ಗೇಯರಸದಲಿ ಮುಳುಗಿ ಕರಣದ
ಲಾಯತೊಡಕದೆ ಪಾರ್ಥನಿದ್ದನು ಧೈರ್ಯಶಿಖರಿಯಲಿ ।
ಈಯುವತಿ ತಾನಾವಳೋ ಕುಸು
ಮಾಯುಧನ ಖಂಡೆಯವಲಾ ಮರ್ಳು
ಮಾಯೆ ಯೆನುತೂರ್ವಶಿಯನವೆ ಯಿಕ್ಕದೆ ನಿರೀಕ್ಷಿಸಿದ ॥ ೯೮

ಸಭೆಯ ಸಮಾಪ್ತಿ.

ಪಾರುಖಾಣೆಯನಿತ್ತನಾಜಂ
ಭಾರಿ ಯೂರ್ವಶಿರಂಭೆಮೇನಕಿ
ಗೌರಿಮೊದಲಾದಖಿಳಪಾತ್ರಕೆ ಸಾನುರಾಗದಲಿ [1] ।
ನಾರಿಯರು ನಿಖಿಳಾಮರರು ಬೀ
ಡಾರಕೈದಿತು ಹರದುದೋಲಗ
ವಾರತಿಯ ಹರಿವಾಣ ಸುಳಿದುದು ಸಾಲು ಸೊಡರುಗಳ ॥ ೯೯

ಅರ್ಜುನನ ಬಳಿಗೆ ಊರ್ವಶಿಯನ್ನು ಕಳುಹಿಸೆಂದು ಇಂದ್ರನ ಅಪ್ಪಣೆ.

ಅರಸ ಕೇಳಾರೋಗಿಸಿದರಿ
ಬ್ಬರು ಸಮೇಳದಲಿದ್ದು ಬೀಳುಕೊಂ
ದರಮನೆಗೆ ಕಳುಹಿದನು ಪವಡಿಸುವೊಡೆ ಕುಮಾರಕನ [2] ।
ಸುರಪನಿತ್ತಲು ಚಿತ್ರಸೇನನ
ಕರೆಸಿದನು ಫಲುಗುಣನ ಭಾವವ
ನಱುಹಿದನು ನಮ್ಮೂರ್ವಶಿಯ ಕಳುಹೆಂದು ನೇಮಿಸಿದ ॥ ೧೦೦

ಊರ್ವಶಿ ಮನೆಗೆ ಚಿತ್ರಸೇನನು ಬಂದುದು.

ಇನಿಬರಿರೆ ರಂಭಾದಿಸೀಮಂ
ತಿನಿಯರೊಳಗೂರ್ವಶಿಯೊಳಾದುದು
ಮನ ಧನಂಜಯನೀಕ್ಷಿಸಿದನನಿಮೇಷದೃಷ್ಟಿಯಲಿ ।

---

1 ನಿಜಾತ್ಮಜನ, ಖ. 2 ಪರಮಹರುಷದಲಿ, ಚ.

ವನಿತೆಯನು ಕಳುಹೇಱು ನೀನೆಂ
ದೆನೆ ಹಸಾದವೆನುತ್ತ ದೇವಾಂ
ಗನೆಯ ನಿಳಯಕೆ ಬಂದನಾತನು ಹರಿಯ ನೇಮದಲಿ ॥ ೧೦೧

ತಾಯೆ ಚಿತ್ತೈಸರಮನೆಯ ಸೂ
ಟಾಯುತನು ಬಂದೈದನೆನೆ ಕಮ
ಲಾಯತಾಂಬಕಿ ಚಿತ್ರಸೇನನ ಕರೆಸಿದಳು ಬಱಿಕ ।
ತಾ ಯೆನುತ ವಸ್ತ್ರಾಭರಣದ ಪ
ಸಾಯವಿತ್ತಳು ಪರಿಮಳದ ತವ
ಲಾಯಿಗಳ ನೂಕಿದಳು ವರಕತ್ತುರಿಯ ಕರ್ಪೂರದ ॥ ೧೦೨

ಅಣಕವೆಲ್ಲಿದು ರಾಯನಟ್ಟಿದ
ಮಣಿಹವೋ ನಿಜಕಾರ್ಯಗತಿಗಳ
ಕಣಿಕೆಯೋ ಕರ್ತವ್ಯವಾವುದು ನಿಮಗೆ ನಮ್ಮಲ್ಲಿ ।
ಗುಣಭರಿತ ಹೇಟೆನಲು ನಸುನಗೆ [1]
ಕುಣಿಯೆ ಮುಖದಲಿ ಮಾನಿನಿಗೆ ವಂ
ಠಣಿಸಿ ಲಜ್ಜಾಭರದಿ ನುಡಿದನು ದೂತನೀಮಾತ ॥ ೧೦೩

ಚಿತ್ರಸೇನನು ಇಂದ್ರನ ಅಪ್ಪಣೆಯನ್ನು ಹೇಳಿದುದು

ಎಮಗೆ ಮಗನರ್ಜುನನು ನೀನಿಂ
ದೆಮಗೆ ಸೊಸೆಯಹುದಾತನಂತ
ಸ್ತಮಿರವನು ತೊಳೆ ನಿನ್ನ ಕುಚಯುಗಕಾಂತಿಲಹರಿಯಲಿ ।
ಕಮಲಮುಖಿ ನೀ ಕಮಲವಾತನು
ಭ್ರಮರ ನೀ ಸುರವನದ ಸಿರಿ ಮಧು
ಸಮಯ ಮರ್ಜುನನೆಂದು ಬೆಸಸಿದನಮರಪತಿಯೆಂದ ॥ ೧೦೪

ಕೇಳುತಿರೆ ರೋಮಾಂಚ ಲಜ್ಜೆಯ
ಜೋಳಿ ಯೆದ್ದುದು ಝೊಂಪಿಸಿತು ಪುಳ
ಕಾಳಿ ಭಯವ ಪರುಠವಿಸಿದುದನುರಾಗದಭಿಮಾನ [2] ।

---

1 ಮುಗುಳ್ನಗೆ, ಕ, ಖ. 2 ಕಾಳಿಗಳು ಪಂಠಣಿಸಿದುದಭಿಮಾನದನುರಾಗ, ಖ.

ಮೇಲೆ ಮೇಲಭಿಲಾಷೆ ಧೈರ್ಯವ
ಚಾಳವಿಸೆ ಪರಿತೋಷಪೂರಣ
ದೇಳುವಮುಳುಗಾಯ್ತುತ್ತರಕೆ ನಸುಬಾಗಿದಳು ಶಿರವ ॥ ೧೦೫

ಆತನುತ್ತಮನಾಯಕನು ವಿ
ಖ್ಯಾತೆ ನೀ ಸುರಲೋಕದಲಿ ಲ
ಜ್ಜಾತಿಶಯವೇಕಿಲ್ಲಿ ನಾವೇ ನಿಮ್ಮ ಪರಿವಾರ ।
ಸೋತರೆಯು ದಿಟ ಭಂಗವಿಲ್ಲ ಪು
ರಾತನದ ನಳನಹುಷಭರತಯ
ಯಾತಿನೃಪರೊಳಗೀತನಗ್ಗಳನಬಲೆ ಕೇಳೆಂದ ॥ ೧೦೬

ರಾಯನಟ್ಟಿದ ನೇಮ ಗಡ ಕಮ
ನೀಯವೆಲ್ಲಾ ನಿನ್ನ ನುಡಿ ರಮ
ಣೀಯಕರವಿದು ನಿನ್ನ ರಚನೆ ಮಹಾನುಭಾವವಲೆ ।
ಆಯಿತಿದು ನೀ ಹೋಗೆನುತಬು
ಜಾಯತಾಕ್ಷಿ ಮನೋತ್ಸವದಿ ನಾ
ರಾಯಣನ ಮೈದುನನ ಬರೆದಳು ಚಿತ್ತಭಿತ್ತಿಯಲಿ ॥ ೧೦೭

ಎಂಟನೆಯ ಸಂಧಿ ಮುಗಿದುದು.

ಸೂಚನೆ.

ಒಂಭತ್ತನೆಯ ಸಂಧಿ.

ಭಯಭರಿತಭಕ್ತಿಯಲಿ ಕಾಮಾ
ರಿಯನು ಗೆಲಿದರ್ಜುನನು ಹರವೈ
ರಿಯನು ಗೆಲಿದನು ಧೈರ್ಯದಿಂದೂರ್ವಶಿಯ ಶಾಪದಲಿ ॥

ಊರ್ವಶಿಯು ಸಾವಿರಾರು ನರ್ತಕಿಯರನ್ನು ಕರೆಸಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಪಾರ್ಥನ ಮೆಯ್ಯ ಹುಲುರೋ
ಮಾಳಿ ಹರಿಯದು ಮನುಮಥನ ಖಂಡೆಯದ ಗಾಯದಲಿ ।
ಬೀಳುಕೊಟ್ಟಳು ಚಿತ್ರಸೇನನ
ನಾಲತಾಂಗಿ ಸಹಸ್ರಸಂಖ್ಯೆಯ
ಕೇಳವೇಳದ ಸತಿಯರನು ಕರೆಸಿದಳು ಹರುಷದಲಿ ॥ ೧

ವನಜಲೋಚನೆ ಮಾಡಿದಳು ಮ
ಜ್ಜನವನಮಲದುಕೂಲಪರಿಮಂ
ಡನದಲೆಸೆದಳು ವಿವಿಧರತ್ನಾಭರಣಶೋಭೆಯಲಿ ।
ತನತನಗೆ ಭರಣಿಗಳಲನುಲೇ
ಪನವ ತಂದರು ವಿಲಸದಧಿವಾ
ಸನೆಯ ಕುಸುಮದ ಮೊಗ್ಗೆಯಲಿ ರಚಿಸಿದರು ಶಿರಿಮುಡಿಯ ॥ ೨

ತಿಗುರ ಗೆಲಿದಳು ತಿಲಕವನು ತಿ
ತ್ತಿಗರಲಂಕರಿಸಿದರು ಹೊಳಹಿನ
ಹೊಗರ ಹೊಸಜವ್ವನದ ಜೋಡಿಯ ಝಾಡಿ ಯಿಮ್ಮಡಿಸೆ ।
ಉಗಿದೊರೆಯ ಕೂರಲಗೊ ಧಾರೆಯ
ನೊಗೆದ ಬಲುಖಂಡೆಯವೊ ಕಾಮನ
ಹಗೆಗೆ ಹುಟ್ಟಿದ ಧೂಮಕೇತುವೊ ರೂಪೊ ಸುರಸತಿಯ ॥ ೩

ಪರಿಮಳದ ಪುತ್ಥಳಿಯೊ ಚಲುವಿನ
ಕರುವಿನೆರಕವೊ ವಿಟರ ಪುಣ್ಯದ
ಪರಿಣತಿಯೊ ಕಾಮುಕರ ಭಾಗ್ಯದ ಕಲ್ಪತರುಫಲವೊ [1] ।
ಸ್ಮರನ ವಿಜಯಧ್ವಜವೊ ಮನ್ಮಥ
ಪರಮಶಾಸ್ತ್ರದ ಮೂಲಸೂತ್ರವೊ
ಸುರಸತಿಯರಧಿದೇವತೆಯೊ ವರ್ಣಿಸುವೊಡರಿದೆಂದ ॥ ೪

1 ಸಪಕ್ವಫಲರಸವೊ, ಖ.

ಲೋಕವಶ್ಯದ ತಿಲಕವೋ ಜಗ
ದೇಕರತುನವೊ ವಿಗಡಮುನಿಚಿ
ತ್ತಾಕರುಷಣದ ಮಂತ್ರವಾದವೊ ಮುನಿತಪಃಫಲವೊ ।
ಲೋಕಸೌಂದರ್ಯೈಕಸರ್ಗವೊ
ನಾಕಸುಖ ಸಾಕಾರವೋ ರೂ
ಪೈಕತಾನವೊ ಚಿತ್ರವಾಯ್ತೂರ್ವಶಿಯ ರೂಪಿನಲಿ ॥ ೫

ನೆರೆದರಬಲೆಯರಂಗವಟ್ಟದ
ಪರಿಮಳದ ಮುತ್ತಿಗೆಯ ತುಂಬಿಯ
ತೆರಳಿಕೆಯ ಕತ್ತಲೆಯ ಬೆದಱಿಪ ಕಣ್ಣ ಬೆಳಗುಗಳ ।
ಪರಿಪರಿಯ ಪೊಂದೊಡಿಗೆಗಳ ಪರಿ
ಪರಿಯಲುಡಿಗೆಯ ದೇಶಿ ಮಿಗೆ ಪರಿ
ಪರಿಯ ಮುಡಿಗಳ ಮುಗುದೆಯರು ಬಳಸಿದರು ಬಾಲಕಿಯ ॥ ೬

ಹೆಗಲ ಹಡಪದ ಹಿಡಿದ ಮುಕುರಾ
ಳಿಗಳ ಚಿಮ್ಮುವ ಚಾಮರದ ಹಾ [1]
ವುಗೆಯ ಹೇಮನಿತಂಬಕಳಶದ ತಾಳವೃಂತಕದ ।
ಮುಗುದೆಯರು ಮನುಮಥನ ಮನೆಯಾ
ಳುಗಳು ಮುಸುಕಿತು ಮಾನಿನಿಯ ದಂ
ಡಿಗೆಯ ವೈಗಾತಿಗಳ ದುವ್ವಾಳಿಗಳ ಲಹರಿಯಲಿ ॥ ೭

ತುರಗಮೇಧದ ರಾಜಸೂಯದ
ವರಮಹಾಕ್ರತುಕಾಱರೀಕೆಯ
ಚರಣದಂಗುಟದುದಿಯ ಕಾಂಬರೆ ಪೂತು ಫಲುಗುಣನ ।
ಪರಮಪುಣ್ಯವದೇನೊ ತಾನಿ
ದ್ದರಮನೆಗೆ ಸತಿ ಬಂದಳೇನ
ಚ್ಚರಿ ಯೆನುತ ಹೊಗಳಿದರು ಮಾಗಧರಿಂದ್ರನಂದನನ ॥ ೮

1 ಸೀಗುರಿಯ, ಚ:

ಧರಣಿಪತಿ ಕೇಳಿವಳ ತೊತ್ತಿರ
ಹೊಱಗೆಲಸದವದಿರ ಪಸಾಯತಿ
ಯರಿಗೆ ಪಡಿಗವನಿಡಲು ಸಲ್ಲರು ಸೋಮಯಾಜಿಗಳು ।
ವರುಣಸೂನು ಜಯಂತನಳಕೂ
ಬರರು ಸಮೆಯುವನೊಮ್ಮೆ ಪಡೆ
ಯರು ವರುಷವ್ರೋಲ್ಸೈಸುವರು ಸಾಧದ ದಾರವಟ್ಟದಲಿ ॥ ೯

ಊರ್ವಶಿಯು ಅರ್ಜುನನ ಮನೆಗೆ ಬಂದುದು.

ಜನಮನದ ಸಂಕಲೆವನೆಯೊ ಲೋ
ಚನಮೃಗದ ತಡೆವೇಂಟೆಕಾತಿಯೊ
ಮನುಮಥನ ಸಂಜೀವನೌಷಧಿಯೋ ಮಹಾದೇವ ।
ಮನಸಿಜನ ಮಾರಾಂಕ ಕಾಮುಕ
ಜನದ ಜೀವಾರ್ಥಕ್ಕೆ ವಿಭುವೆಂ
ದೆನಿಸಿದೂರ್ವಶಿ ಬಂದಳರ್ಜುನದೇವನರಮನೆಗೆ ॥ ೧೦

ಊರ್ವಶಿಯ ಸಂಗಡ ಬಂದ ತರುಣಿಯರ ವರ್ಣನೆ.

ಮೆಲುನುಡಿಗೆ ಗಿಳಿ ಹೊದ್ದಿದುವು ಸರ
ದುಲಿಗೆ ಕೋಗಿಲೆಯೌಕಿದುವು ಪರಿ
ಮಳದ ಪೂರಕೆ ತುಂಬಿದುವು ತುಂಬಿಗಳು ಡೊಂಬಿನಲಿ ।
ಹೊಳೆವ ಮುಖಕೆ ಚಕೋರಚಯ ವಿ
ಟ್ಟಳಿಸಿದುವು ನೇವುರದ ಬೊಬ್ಬೆಗೆ
ಸಿಲುಕಿದುವು ಹಂಸೆಗಳು ಕಮಲಾನನೆಯ ಕೆಳದಿಯರ ॥ ೧೧

ಅಲರ್ದ ಕೆಂದಾವರೆಯ ಹಂತಿಯೊ
ತಳಿತಮಾವಿನ ಬನವೊ ಮಿಗೆ ಕ
ತ್ತಲಿಪ ಬಹಳತಮಾಲಕಾನನವೋ ದಿಗಂತದಲಿ ।

ಹೊಳೆವ ವಿದ್ರುಮವನವೊ ಕುಸುಮೋ
ಚ್ಚಳಿತಕೇತಕಿದಳವೊ ರಂಭಾ
ವಳಿಯೊ ಕಾಂತಾಜನವೊ ಕಮಲಾನನೆಯು ಮುಂಗುಡಿಯೊ ॥೧೦

ಊರ್ವಶಿಯು ಅರ್ಜುನನಿದ್ದ ಮನೆಗೆ ಬಂದುದು.

ಬಂದಳೂರ್ವಶಿ ಬಳ್ಳಿಮಿಂಚಿನ
ಮಂದಿಯಲಿ ಮುಖದಿತಿವ ಮುಖಿಮುಗಿ
ಲಂದದಲಿ ದಂಡಿಗೆಯನಿಳಿದಳು ರಾಜಭವನದಲಿ ।
ಮುಂದೆ ಪಾಯವಧಾರು ಸಖಿಯರ
ಸಂದಣಿಯ ಸಿಂಜಾರವದ ಸೊಗ
ಸಿಂದ ಶಬ್ದಬ್ರಹ್ಮ ಸೋತುದು ಸೊರಹಲೇನೆಂದ ॥ ೧೩

ಬಾಗಿಲಲಿ ಬಾಗಿಲಲಿ ನಿಂದರು
ಸೋಗೆಗಣ್ಣ ಬಲೆಯರು ಸೆಜ್ಜೆಯ
ಬಾಗಿಲಲಿ ಚಾಮರದ ಹಡಪದ ಚಪಳೆಯರು ಸಹಿತ ।
ಆಗರುವೆ ಹೊಕ್ಕಳು ಮಹಾಹಿಯ
ಭೋಗತಲ್ಪದ ಹರಿಯೊಲಿಹ ಶತ
ಯಾಗಸುತನನು ಕಂಡಳಂಗನೆ ಮಣಿಯ ಮಂಚದಲಿ ॥ ೧೪

ಹೊಳೆವ ಮಣಿದೀಪಾಂಶುಗಳ ಮು
ಕ್ಕುಳಿಸಿದುವು ಕಡೆಗಂಗಳಿಂದೂ
ಪಲದ ಭಿತ್ತಿಯ ಬೆಳಗನಣಿದುದು ಬಹಳತನುಕಾಂತಿ ।
ಕೆಳದಿಯರ ಕಂಠದಲಿ ಕೈಗಳ
ನಿಳುಹಿ ನಿಂದಳು ತರುಣಿ ನೃಪ
ಕುಲತಿಲಕನಂಗೋಪಾಂಗದಲಿ ಹರಹಿದಳು ಕಣ್ಮನವ ॥ ೧೫

ಎಳೆಯಬೆಳುದಿಂಗಳವೊಲೀಕೆಯ
ಥಳಥಳಿಪ ಮುಖಚಂದ್ರಮನ ತಂ
ಬೆಲರು ಸುಳಿದುದು ಸಾರತರಪರಿಮಳದ ಹರಹಿನಲಿ ।

ತಿಳಿದುದೀತನ ನಿದ್ರೆ ಕರಣಾ
ವಳಿಯು ಪರಮಪ್ರೀತಿರಸದಲಿ
ಮುಳುಗಿ ಸುಖಭಾರದಲಿ ಭುಲ್ಲೈಸಿದನು ಕಲಿಪಾರ್ಥ ॥ ೧೬

ಹರ ಮಹಾದೇವೀಯುಘಾಟದ
ಪರಿಮಳವಿದೆತ್ತಣದೆನುತ ವೈ
ಮುಱಿದು ಕಂಡನಪೂರ್ವಪರಿಮಳಸಾರದಲಿ ಪಾರ್ಥ ।
ಕಿರಣಲಹರಿಯ ದಿವ್ಯರತ್ನಾ
ಭರಣರುಚಿರತರಪ್ರಭಾಪಂ
ಜರದೊಳಗೆ ಹೊಳಹೊಳವಮದನಾಲಸೆಯನೂರ್ವಶಿಯ ॥ ೧೭

ಆಗ ಅರ್ಜುನನು ಊರ್ವಶಿಗೆ ಮರ್ಯಾದೆ ಮಾಡಿದುದು.

ಹಾ ಮಹಾದೇವಿ ಯಿವಳಾ ಸು
ತ್ರಾಮನೋಲಗದೊಳಗೆ ನರ್ತನ
ರಾಮಣೀಯಕರಚನೆಯಲಿ ರಂಜಿಸಿದಳಾಸಭೆಯ ।
ಈ ಮಹಿಳೆಯಭಿವಂದನೀಯೆ ನಿ
ರಾಮಯದ ಶಶಿವಂಶಜನನಿಸ
ನಾಮೆಯಲ್ಲಾ ಶಿವ ಯೆನುತ ಮಣಿಮಂಚದಿಂದಿೞಿದ ॥ ೧೮

ಅರ್ಜುನನು ಊರ್ವಶಿಯನ್ನು ಕುರಿತು ಬಂದಕಾರಣವನ್ನು ಕೇಳಿದುದು.

ಏನು ಬಿಜಯಂಗೈದಿರಿತ್ತಲು
ಮಾನನಿಧಿ ಕುಳ್ಳಿರಿ ಸುರೇಂದ್ರನ
ಮಾನಿನಿಯರಭಿವಂದನೀಯರು ನಾವು ಕೃತಾರ್ಥರಲೆ ।
ಏನು ಬೆಸಸೆನಗೇನು ಹದ ನಿಮ
ಗಾನು ಮಗನು ವಿಚಾರವೇಕೆ ಮ
ನೋನುರಾಗದಲಱುಹಿ ಯೆಂದನು ಪಾರ್ಥನೂರ್ವಶಿಗೆ ॥ ೧೯

ನುಡಿಗೆ ಬೆಱಗಾದಳು ಮನೋಜನ
ಸಡಗರಕೆ ತಗ್ಗಿದಳು ಪಾರ್ಥನ
ನಡವಳಿಗೆ ಮೆಚ್ಚಿದಳು ಬೆಚ್ಚಿದಳಂಗಜಾಸ್ತ್ರದಲಿ ।

ಕಡುಗಿದಳು ಖಾತಿಯಲಿ ಬೋಟಿಯು [1]
ಬಿಡೆಯದಲಿ ಭಯಗೊಂಡಳೂರ್ವಶಿ
ಮಿಡುಕಿದಳು ವಿವಿಧಾನುಭಾವದ ರಸದ ಭಂಗಿಯಲಿ ॥ ೨೦

ಆಗ ಊರ್ವಶಿಯ ಚಿಂತೆ.

ಏಕೆ ನುಡಿದನೊ ಚಿತ್ರಸೇನಕ
ದೇಕೆ ತಾ ಕೈಕೊಂಡೆನೆತ್ತಣ
ಕಾಕುವೊತಿಗೆ [2] ಕೋಳುವೋದೆನು ಕಾಮನೆಂಬವಗೆ ।
ಲೋಕವರ್ತಕನಲ್ಲದಿವನನ
ದೇಕೆ ವಿಧಿ ನಿರ್ಮಿಸಿದನೋ ತಾ
ನೇಕೆ ಯಿವನೇಕೆಂದು ಸುಯ್ದಳು ಬೈದು ಕಮಲಜನ ॥ ೨೧

ವಿಕಳಮತಿಯೋ ಮೋಹಿವ ನಪುಂ
ಸಕನೊ ಜಡನೋ ಶ್ರೋತ್ರಿಯನೊ ಬಾ
ಧಕನೊ ಖಳನೋ ಖೂಳನೋ ಮಾನವವಿಕಾರವಿದು ।
ವಿಕಟತಪಸಿನ ದೇವದೈತ್ಯರ
ಮಕುಟವಾಂತುದು ವಾಮಚರಣವ
ನಕಟ ಕೆಟ್ಟೆನಲಾ ಯೆನುತ ಕರಗಿದಳು ಕಮಲಾಕ್ಷಿ ॥ ೨೨

ಅರ್ಜುನೋರ್ವಶಿಯರ ಸಂವಾದ.

ಎಲವೊ ರಾಯನ ಹೇಳಿಗೆಯಲಂ
ಡಲೆದನೆನ್ನನು ಚಿತ್ರಸೇನಕ
ನಲುಗಿ ನಟ್ಟುವು ಕಾಮಶರವೆನ್ನಂತರಂಗದಲಿ ।
ಬಲಿದು ಬಂದಬಲೆಯನು ಟಿಕ್ಕರಿ
ಗಳವುದೇ ವಿಟಧರ್ಮವಕಟಾ
ತಿಳಿಯಲಾ ತಾನಾವಳೆಂಬುದನೆಂದಳಿಂದುಮುಖಿ ॥ ೨೩

---

[1] ಲಜ್ಜೆಯು, ಚ. [2] ಕ್ವಾಕುಮೂಳಗೆ, ಕ, ಖ,

ಶಿವ ಶಿವೀಮಾತೇಕೆ ಕಾಮನ
ಭವಣಿಯಲಿ ನೀವಖಿಯದಿರೆ ವಾ
ಸವನ ನೇಮವು ಚಿತ್ರಸೇನನ ನುಡಿಗಳಂತಿರಲಿ ।
ಎಮಗೆಕರ್ತವ್ಯವಲಿ ಮನ ಸಂ
ಭವಿಸುವುದೆ ನೀವೆಮ್ಮ ವಂಶೋ
ದ್ಭವಕೆ ಜನನಿಯಲಾ ಯೆನುತ ಕೈಮುಗಿದು ಪೊಡಮಟ್ಟ [1] ॥ ೧೪

ನಾರಿ ನೀ ಪೂರ್ವದಲಿ ನಮ್ಮ ಪು
ರೂರವನ ಸತಿ ನಿನಗೆ ಬಟಿಕ ಕು
ಮಾರ ಜನಿಸಿದನಾಯು ವಾತನೊಳುದಿಸಿದನು ನಹುಷ ।
ವೀರರಾಜಪರಂಪರೆಯು ಬರ
ಲಾರಿಗಾವುದಿಸಿದೆವು ನೀವು ವಿ
ಚಾರಿಸಿಮದಿಲ್ಲಾ ಯೆನುತ ವಿನಯದಲಿ ನರ ನುಡಿದ ॥ ೧೫

ಪ್ರಣವದರ್ಥವಿಚಾರವೆತ್ತಲು
ಗಣಿಕೆಯರ ಮನೆಯಲಿ ಸ್ವರಾಕ್ಷರ
ಗಣಿತಲಕ್ಷಣವೇಕೆ ರತಿಕೂಟದ ವಿಳಾಸದಲಿ [2] ।
ಬಣಗುಭಾರತವರುಷದವದಿರ
ಭಣಿತೆ ಯೆಮ್ಮಾ ದೇವಲೋಕಕೆ
ಸಣಬಿನಾರವೆ ಚೈತ್ರರಥದೊಳಗೆಂದಳಂದುಮುಖಿ ॥ ೧೬

ಅಯ್ಯನೈಯ್ಯನು ನಿಮ್ಮವರ ಮು
ತ್ತಯ್ಯನಾತನ ಭಾವ ಮೈದುನ
ನಯ್ಯನಗ್ರಜರನುಜರೆಂಬೀಜ್ಞಾತಿಬಾಂಧವರ ।
ಕಯ್ಯಲರಿಗಳ ಹೊಯ್ದು ಸಿರನರಿ
ದುಯ್ಯಲಾಡಿದವರ್ಗೆ ಮೋಕ್ಷಾಖ
ದೈಯ್ಯಗಳಗಾನೊಬ್ಬಳೆಂದಳು ನಗುತ ನಳಿನಾಕ್ಷಿ ॥ ೧೭

1 ವಿನಯದಲಿ ನರ ನುಡಿದ, ಚ.    2 ಕೇಳಿ ವಿಧಾನದಲಿ, ಚ.

ಮಱೆಯು ಮಾತಂತಿರಲಿ ನೀನಿದ
ಮಱೆದು ಕಳೆ ಮಾನಿನಿಯುರಿಚ್ಚೆಯು
ನಱಿಯುಧವನು ಸುರೇಂದ್ರನಾಗಲಿ ಚಂದ್ರನಾಗಿರಲಿ ।
ಕುಱಿ ಕಣಾ ಘಡ ಖೂಳ ನೀನೆಂ
ತಱಿವೆ ಯೆನೆ ನಡುನಡುಗಿ ಕೈಮುಗಿ
ದೆಱಗಿ ಮಗುಳೀಮಾತನೆಂದನು ಪಾರ್ಥನೂರ್ವಶಿಗೆ ॥ ೨೮

ಇದು ಮನುಷ್ಯಶರೀರ ಸದ್ಧ
ರ್ಮದಲಿ ತನ್ನವಸಾನಪರಿಯಂ
ತಿದಱೊಳವ್ಯಭಿಚಾರದಲಿ ವರ್ತಿಸಿದ ಬಳಿಕಿನಲಿ ।
ತ್ರಿದಶರಲ್ಲಿಗೆ ಬಂದೊಡಾವಾ
ರ್ಗದಲಿ ನಡೆವುದು ದೇವತಾದೇ [1]
ಹದಲಿ ಬಲವತ್ತರವು ದೇಹವಿಶೇಷವಿಧಿ ಯೆಂದ [2] ॥ ೨೯

ಅಹುದಹುದಲೇ ಶಾಸ್ತ್ರ [3] ಪಥದಲಿ
ಬಹಿರಿ ನೀವೇ ಶಾಸ್ತ್ರ [4] ವಿಧಿಸಂ
ನಿಹಿತರೆಂಬುದನಱಿಯದೇ ಮೂಜಗದ ಜನವೆಲ್ಲ ।
ಮಹಿಳೆಯೊಬ್ಬಳೊಳ್ಬೆರೊಡಗೂ
ಡಿಹರು ನೀವೇ ನಲ್ಲಲೇ ನಿ
ಸ್ಪೃಹರು ನೀವ್ ನಿಮ್ಮಲ್ಲಿ ಹರ ಹರ ಯೆಂದಳಿಂದುಮುಖಿ ॥ ೩೦

ತಾಯು ನೇಮದಲಂದು ಕಮಲದ
ಳಾಯುತಾಕ್ಷಿಯುಸಂಗವೈವರಿ
ಗಾಯಿತದು ತಪ್ಪೇನು ಜನನಿಯು ನುಡಿಯುಲಂಘ್ಯವಲೆ ।

---

1 ದೇವವಿಧಿನಾ, ಖ.

2 ನಿದಕೆ ತಪ್ಪುವನಲ್ಲ ವಿಷಯುವ ಸುಡು ಶಿವಾ ಯೆಂದ, ಖ.

3 ಶ್ರೌತ, ಜ. 4 ಸ್ಮಾರ್ತ, ಜ.

ಕಾಯಸಾಖ್ಯಕೆ ಕಾಮತತ್ವವಿ
ಡಾಯಿತಪ್ಪದೆ ವೇಡೆಗೊಂಡ ನ
ವಾಯಿಯಲಿ ದುರ್ಗತಿಗೆ ದುವ್ವಾಳಿಸುವೆನಲ್ಲೆಂದ ॥ ೨೧

ತಾಯ ನೇಮದಲ್ಲೈವರಿಗೆ ಕಮ
ಲಾಯತಾಕ್ಷಿಯ ಕೂಟವೇ ಸುರ
ರಾಯ ನಿಮ್ಮಯ್ಯ ನುಡಿಯೆ ಲಂಘ್ಯವೆ ನಿನಗೆ ಪಿತೃವಚನ ।
ರಾಯನಟ್ಟಲು ಬಂದೆ ನಾಕುಸು
ಮಾಯುಧನ ಕಗ್ಗೊಲೆಯ ಕಳಚುವು
ಪಾಯವನು ನೀ ಒಲ್ಲೆ ಯೆಂದಳು ವನಿತೆ ವಿನಯದಲಿ ॥ ೨೦

ಸರಸಿಜದ ಮಧು ಮಧುಕರನನನು
ಕರಿಸಿದೊಡೆ ಚಂದ್ರಿಕೆ ಚಕೋರನ
ವರಿಸಿದೊಡೆ ನಿಧಿ ಲಕ್ಷ್ಮಿಸುಚಿದೊಡೆ ನಯನವೀಥಿಯಲಿ ।
ಗರುವೆಯರು ಮೇಲಿಕ್ಕಿ ಪುರುಷನ
ನರಸಿದೊಡೆ ಜಾರುವರೆ ಸುಡಲಾ
ಸರಸಿಜವನಾಚಂದ್ರಿಕೆಯನಾನಿಧಿಯನಾವಧುವ ॥ ೨೨

ತಿಳುಹಿದರೆ ಸುರಲೋಕದವರತಿ
ಗಳಹಿಯರಲಾ ಯೆಂಬೆ ಮನ್ಮಥ
ಖಳ ಕಣಾ ನಿಷ್ಕರುಣಿ ನೀ ಸಾಭಾಗ್ಯಗರ್ವ[1] ದಲಿ ।
ಒಲುವೆ ಬಿದ್ದುದು ವಾಸಿಯಲಿ ಕಂ
ದೊಳಸುಗೊಂಡುದು ಕಾಮ ಕಣುವಿನ
ಮೊಳಗಿದುವು ಜೋಡಿಯಲಿ ಯೆಂದಳು ಖಾತಿಯಲಿ ತರಳೆ ॥ ೨೪

ಕಾಡಲಾಗದು ನಿನ್ನೊಡನೆ ಮುಖ
ದಾಡಲಮ್ಮೆನು ಮನಕೆ ಧೈರ್ಯದ
ಜೋಡ ತೊಟ್ಟಿದಿರಾಗಿ ನಿಲೆ ನನೆಯಂಬು ನಾಂಟುವುವೆ ।

---

1 ವರ್ಗ, ಕ,

ಖೋಡಿಯೇಕಿದಕವ್ವೆ ಮಕ್ಕಳು
ನೋಡ ಬಂದರೆ ಬೇಟೆ ಕಷ್ಟವ
ನಾಡುವರೆ ಬಲ್ಲವರು ಬಿಜಯಂಗೈಯ್ಯಿ ನೀನೆಂದ ‖ ೩೫

ಆಗ ಊರ್ವಶಿಯು ಕೋಪದಿಂದ ಅರ್ಜುನನಿಗೆ ಶಾಪವನ್ನು ಕೊಟ್ಟುದು.

ರೋಷ ವೆರಡೆಲೆಯಾಯ್ತು ಲಜ್ಜೆಯು
ಮಿಾಸಲಟಿದುದು ಬಹುವಿಧದ ಬಲು
ವಾಸಿಗಳು ಪಲ್ಲವಿಸಿದುವು ಕೆಲ್ಲವಿಸಿತನುತಾಪ ।
ಆಸೆ ಪೈಸರವೋಯ್ತು ಕಡು ಝಳ
ಸೂಸಿದುದು ಮೈಯ್ಯೊಳಗೆ ಕಂಗಳು
ಕೇಸುರಿಯ ಮುಕ್ಕುಳಿಸಿದುವು ಹೆಕ್ಕಳಿಸಿ ಕಾಮಿನಿಗೆ ‖ ೩೬

ಸೊಂಪಡಗಿತು ಮುಖೇಂದು ತನುಲತೆ
ಕಂಪಿಸಿದುದಡಿಗಡಿಗೆ ಮೈ ತನು
ಗಂಪಿನಲಿ ಮಘಮಘಿಸಿತಮಳಸ್ವೇದಸಲಿಲದಲಿ ।
ತಂಪಿನಲಿ ಶಿಖಿ ಮಧುರದಲಿ ಕಡು
ನುಂಪಿನಲಿ ಬಿರಿಸಮೃತದಲಿ ವಿಷ
ಗುಂಪಿನಲಿ ನೆಲೆಯಾದವೋಲ್ ಸತಿಗಾಯ್ತು ಘನರೋಷ ‖ ೩೭

ಕೆತ್ತಿದುವು ತುಟಿ ಕದಪಿನಲಿ ಕೈ
ಹತ್ತಿದುದು ತೂಗಿದಳು ಶಿರವನು
ತತ್ತಕೋಪಾಯುಧವ ಮಸೆದಳು ಧಾರೆ ಗಂಗಳಲಿ ।
ಎತ್ತಿದುಬ್ಬೇಗದ ವಿಕಾರದ
ಚಿತ್ತಬುದ್ಧಿ ಮನಂಗಳಾತ್ಮನ
ಜೊತ್ತಿಸಿದುವದ್ಭುತದಹಂಕಾರದಲಿ ಭಾಮಿನಿಯು ‖ ೩೮

ಎಲವೊ ಭಂಡರ ಭಾವೆ ಖೂಳರ
ನಿಳಯ ಖಳರಧಿದೈವ [1] ವೆಂಟಕ

1 ನಾಥ, ಚ.

ತಿಲಕ ಗಾವಿಲರೊಡೆಯ ಬಂಧುವೆ ದುಷ್ಟ ನಾಯಕರ |
ಎಲೆ ಮರುಳೆ ತಾನಾವಳೆಂಬುದ
ತಿಳಿಯಲಾನೀನಾವನೆಂಬುದ
ನಿಳೆಯಲಱಿಯರೆ ಭಂಡ ಫಡ ಹೋಗೆಂದಳಿಂದುಮುಖಿ ‖ ೩೯

ಒಲಿದು ಬಂದವರಾವು ಸೊಬಗಿನೊ
ಳೊಲಿಸಿ ಮಱುಗಿಪ ವಿಟನು [1] ನೀನತಿ
ಸುಲಭರಾವ್ ದುರ್ಲಭನು ನೀ ದೇವೇಂದ್ರಕಟಕದಲಿ |
ಎಲೆ ನಪುಂಸಕ ಗಂಡು ವೇಷದ [2]
ಸುಟಿವು ನಿನಗೇಕೆನುತ ಸತಿ ಕಳ
ವಳಿಸಿ ಕೈಯೆತ್ತಿದಳು ಹಿಡಿ ಹಿಡಿ ಶಾಪವಿದೆ ಯೆನುತ ‖ ೪೦

ತುಳುಕಿತದ್ಭುತಕೋಪ ಸುಯ್ಲಿನ
ಝಳಹೊಡೆದು ಮೂಗುತಿಯ ಮುತ್ತಿನ
ಬೆಳಕು ಕಂದಿತು ಕುಂದಿತಮಲಚ್ಛವಿ ಮುಖಾಂಬುಜದ |
ಹೊಳೆಹೊಳವ ಕೆಂದಳದ ಸೆಳ್ಳುಗು
ರ್ಗಳ ಮಯೂಖದೆ ಮಣಿಯ ಮುದ್ರಿಕೆ
ಗಳ ಮರೀಚಿಯಲೆಸೆದುದೆತ್ತಿದ ಹಸ್ತ ಪೂರ್ವಶಿಯ ‖ ೪೧

ರಾಹು ತುಡುಕಿದ ಶಶಿಯೊ ಮೇಣ್ರೌ
ದ್ರಾಹಿಮಸ್ತಕದ ಮಣಿಯೋ ಕಡು
ಗಾಹಿನಮೃತವೊ ಕುಪಿತಸಿಂಹದ ಗುಹೆಯೊ ಮೃಗಮದವೊ |
ಲೋಹಧಾರೆಯ ಮಧುವೊ ಕಲಿತಹ
ಲಾಹಲದ ಕಜ್ಜಾಯವೆನಿಸಿತು
ರೂಹು ಸುಮನೋಹರಭಯಂಕರವಾಯ್ತು ಸುರಸತಿಯ ‖ ೪೨

ನರಮೃಗಾಧಮ ನಿಮ್ಮ ಭಾರತ
ವರುಷಭೂಮಿಯೊಳೊಂದು ವರುಷಾಂ

[1] ಮಿಡ, ಚ. [2] ಜೋಹದ, ಕ. ಖ.

ತರ ನಪುಂಸಕನಾಗಿ ಚರಿಸು ನಿರಂತರಾಯದಲಿ |
ಹರಿಯ ಮೆಱೆಹೊಗು ಹರನನೀನನು
ಸರಿಸು ನಿಮ್ಮಯ್ಯಂಗೆ ಹೇೞದು
ನಿರುತ ತಪ್ಪದು ಹೋಗೆನುತ ಮುಖದಿರುಹಿದಳು ತರಳೆ || ೪೩

ಆಗ ಅರ್ಜುನನು ಸುಮ್ಮನೆ ಚಿಂತೆ ಮಾಡಿದುದು.

ಮೂಗನಾದನು ಬಹಳ ಧೈರ್ಯದ
ಬೇಗಡೆಯು ಬಿಡೆ ಬಿಗಿದಬೆಱಗಿನ
ಮೂಗಿನಂಗುಲಿಗಳಲಿ ಧನಂಜಯನೊಲಿದೊಲಿದು ಶಿರವ |
ಆಗಡಿಗರಿವರಮರವಧುಗಳು
ನಾಗರಿಗರಿವರೆತ್ತ ಭಾರತ
ಭೋಗತರು ನಾವೆತ್ತಲಿದು ಘಟಿಸಿದುದು ವಿಧಿಯೆಂದ || ೪೪

ಸುರಪತಿಗೆ ಸೂಚಿಸಿದೆನೇ ಪೋಣ
ಕರೆಸಿಬೆನೆ ಕಮಲಾನನೆಯು ಸಿ
ಷ್ಠರದ ನುಡಿಗಪರಾಧವುಂಟೇ ನಾನು ಮಾಡಿದುದು |
ಪುರುಷತನಕ ನಪುಂಸಕದಲಾ
ಚರಿಸಬಲ್ಲೆನೆ ಸಾಕು ದೇಹಾಂ
ತರವನಂಗೀಕರಿಸುವೆನಲಾ ತನ್ನ ಸುಡಲೆಂದ || ೪೫

ಎಲೆ ವಿಧಾತ್ರ ಕೃತಾಪರಾಧ
ಸ್ಥಳಕೆ ದಂಡಪ್ರಾಪ್ತಿಯಲ್ಲದೆ
ವಿಲಸಿತದ ವೇದಾರ್ಥದಲಿ ಮನ್ವಾದಿಮಾರ್ಗದಲಿ |
ಚಲಿಸದಾಚರಿಸಿದರೆ ಪುಣ್ಯ
ಸ್ಖಲನೆಗೇನು ನಿಮಿತ್ತ ಪಕಟಾ
ಗಳಿತಪೌರುಷನಾಗಿ ಬದುಕುವನಲ್ಲ ತಾನೆಂದ || ೪೬

ತಪವನಾಚರಿಸಿದರೆ ವರಪಾ
ಶುಪತಶರವೆನಗಾಯ್ತು ಸತ್ಯವೆ
ತಪವಲಾ ಯೆಂದಱಿದು ನಡೆದರೆ ಷಂಡತನವಾಯ್ತು |

ತಪವೆರಡು ಸರಿಫಲದೊಳಾದುದು
ವಿಪರಿಯಾಸದ ಗತಿ ಗಹನವೇ
ವಿಪುಳಕರ್ಮಸ್ಥಿತಿ ಯೆನುತ ತೂಗಿದನು ನಿಜಶಿರವ ॥ ೪೭

ಶಿವನ ಶರವೆನಗಾಯ್ತು ರಿಪುಕೌ
ರವರ ರಕುತದ ರಾಟಳವನೆ
ತ್ತುವೆನು ಕಟ್ಟುವ ಮುಡಿಯನೆಂಬೆನೆ ದ್ರೌಪದೀಸತಿಗೆ ।
ಇವಳು ಭಂಗಿಸಿ ಬೂತುಗೆಡದೀ
ಹವಣನಾರಿಗೆ ಹೇಳುವೆನು ವರ
ಯುವತಿಗೀನುಡಿಯೊಸಗೆಯೇ ಹಾ ಯೆನುತ ಚಿಂತಿಸಿದ ॥ ೪೮

ಅರ್ಜುನನಿದ್ದ ಮನೆಗೆ ಇಂದ್ರನು ಬಂದು ಮಾತನಾಡಿದುದು.

ಅರಸ ಕೇಳ್ಚೈ ಚಿತ್ರಸೇನನ
ಕರೆಸಿ ಯೂರ್ವಶಿ ಪಾರ್ಥ ಮಾಡಿದ
ಪುರುಳತನವನು ದೂಱಿದರೆ ಸುರಸತಿಯ ಸಂತೈಸಿ ।
ಸುರಪತಿಗೆ ಗಂಧರ್ವನಿವರಿ
ಬ್ಬರ ವಿರೋಧನಿಬಂಧನವನೆ
ಚ್ಚರಿಸಲರ್ಜುನನ ಮನೆಗೆ ಬಂದನು ಬಲಧ್ವಂಸಿ ॥ ೪೯

ಮಗನನಪ್ಪಿದನೆನ್ನ ತಂದೆಗೆ
ದುಗುಡವೇಕೆಂನಾನೆಗೆತ್ತಣ
ಬೆಗಡಿದೆಂನರಸಂಗಿದೆತ್ತಣದೆಸೆಯ ದುಮ್ಮಾನ ।
ಮೊಗದ ತನಿ ಹಳಹಳಿಕೆ ನೇತ್ರಾಂ
ಬುಗಳೊಳದ್ದುದು ನಿಜಮನೋವೃ
ತ್ತಿಗಳೊಳಗೆ ನುಡಿ ಮುಚ್ಚಿಗಿತೇನಿದು ಚಿತ್ರವಾಯ್ತೆಂದ ॥ ೫೦

ಆಗ ಅರ್ಜುನನು ಸುಮ್ಮನೆ ಇರಲು ಇಂದ್ರನು ಸಮಾಧಾನ
ವನ್ನು ಹೇಳಿದುದು.

ನುಡಿಗೆ ತಲೆವಾಗಿದನು ಲಜ್ಜೆಯ
ಬಿಡೆಯದಲಿ ಜೋವೇರಿದಂತೆವೆ

ಮಿಡುಕದಿರೆ ಮಗುಳಪ್ಪಿ ಹರಿ ಮೊಗ ನೆಗಹಿ ಮುಂಡಾಡಿ ।
ಬಿಡು ಮನೋಗ್ಲಾನಿಯನು ಸತಿ ಕಡೆ
ನುಡಿದುದೆಲ್ಲವನೆನಗೆ ಸ್ಫೈರಿಸು
ಮಡದಿಯುರಲೇನುಂಟು ಫಲವೆನ್ನಾಣೆ ಹೇಳೆಂದ ॥　　೫೧

ಎಲೆ ಕಿರೀಟಿ ವೃಥಾ ಮನೋವ್ಯಥೆ
ತಳೆದುದೇ ಯೂರ್ವಶಿಯ ಶಾಪದ
ಲಳುಕಿದ್ಬೆ ತತ್ಕ್ರೋಧ ನಿನಗುಪಕಾರವಾಯಿತಲ ।
ಹಬುವದಲಿ ಹನ್ನೆರಡುವರುಷದ
ಕಳಹಿನಜ್ಞಾತದಲಿ ವರುಷವ
ಕಳಿವೊಡಿದು ಸಾಧನವೆ ಯಾಯ್ತು ಶಿಖಂಡಿತನವೆಂದ ॥　　೫೨

ಖೋಡಿಯಿಲ್ಲಲೆ ಮಗನೆ ಚಿಂತಿಸ
ಬೇಡ ನಿಮ್ಮಜ್ಞಾತಕಿದು ನೆಱೆ
ಜೋಡಲಾ ಜಾಣಾಯ್ಲರಿಪುಜನದೃಷ್ಟಿಶರಹತಿಗೆ ।
ಕೂಡಿತಿದು ಪುಣ್ಯದಲಿ ಸುರವಧು
ಮಾಡಿದುಪಕೃತಿ ನಿನ್ನಭಾಷೆಯ
ಬೀಡ ಸಲಹಿದುದಱಿಯೆ ನೀ ಸಾಹಿತ್ಯನಲ್ಲೆಂದ ॥　　೫೩

ಇಂದ್ರನು ತನ್ನ ಮನೆಗೆ ಅರ್ಜುನನನ್ನು ಕರೆತಂದುದು.

ಎಂದು ಪಾರ್ಥನ ಸಂತವಿಟ್ಟು ಪು
ರಂದರನು ತನ್ನರಮನೆಗೆ ನಡೆ
ತಂದನರ್ಜುನಸಹಿತ ವಿವಿಧವಿನೋದವಿಭವದಲಿ ।
ಅಂದು ಶಿಖಿಪವನಾದಿಗಳು ನಲ
ವಿಂದ ಕೊಟ್ಟರು ಶರವನಮರೀ
ನೃಂದ ಸೂಸಿತು ಸೇಸೆಯನು ಜಯರವದ ರಭಸದಲಿ ॥　　೫೪

ಅಲ್ಲಿ ಅರ್ಜುನನಿಗೆ ಬಹುವಿಧಾಸ್ತ್ರಶಸ್ತ್ರಲಾಭ.

ಸುರಪ ಕಳಿಸಿದನಸ್ತ್ರಶಸ್ತ್ರಾ
ತ್ಕರರಹಸ್ಯವನಮರಭುವನದ

ಹೀತಳವ ಸೋತನು ಕಣಾ ಕಲಿಯಿಂದ ಪುಷ್ಕರಗೆ ।
ಭೂತಳವ ಬಿಟ್ಟಡವಿಗೈದಿದ
ನಾತ ನಿಜವಧುಸಹಿತ ಬನದಲಿ
ಕಾತರಿಸಿ ನಿಜಸತಿಯು ಬಿಸುಟನು ಹಾಯ್ದನಡವಿಯುಲಿ ॥ ೬

ಬಳಿಕ ಕರ್ಕೋಟಕನ ದೆಸೆಯಿಂ
ದಳಿಯೆ ನಿಜಋತುಪರ್ಣಭೂಪನ
ನಿಳಯುವೆನು ಸಾಱಿದನು ಬಾಹುಕನೆಂಬ ನಾಮದಲಿ ।
ಲಲನೆ ತೊಳಲುತ ಬರುತ ತಂದೆಯು
ನಿಳಯುವೆನು ಸಾಱಿದಳು ಬಳಿಕಾ
ನಳಿನಮುಖಿಯಿಂದಾಯ್ತು ನಳಭೂಪತಿಗೆ ನಿಜಧರಣಿ [1] ॥ ೭

ಆತನಾಪತ್ತದು ಮಹೀಪತಿ
ಗೀತಳೋದರಿಸಹಿತ ತನ್ನೀ
ಭ್ರಾತೃಜನಸಹಿತೀಮಹಾಮುನಿಮುಖ್ಯಜನಸಹಿತ ।
ಕಾತರಿಸುತಿಹೆ ನಿನ್ನವೋಲ್ ವಿ
ಖ್ಯಾತರಾರ್ರೈ ಲೋಕದೊಳಗೆಂ
ದಾತಪೋನಿಧಿ ಸಂತವಿಟ್ಟನು ಧರ್ಮನಂದನನ ॥ ೮

* ನಳಮಹೀಪತಿ ಯುಶ್ವಹೃದಯುವ
ತಿಳಿದು ಋತುಪರ್ಣನಲಿ ಮರಳಿಯೆ
ಗೆಲಿದನಾಪುಷ್ಕರನ ವಿದ್ಯಾಬಲದ ಮಹಿಮೆಯುಲಿ ।
ಗೆಲಿದು ಕೌರವಶಕುನಿಗಳು ನಿ
ನ್ನಿಳೆಯು ಕೊಂಡರು ಮರಳಿ ಜೂಜಿಂ
ಗಳುಕಬೇಡೆಂದಕ್ಷಹೃದಯುವ ಮುನಿಪ ಕರುಣಿಸಿದ ॥ ೯

---

1 ರಾಜ್ಯ, ಚ.

* ನಳಮಹೀಪತಿ ಯುಕ್ಷಹೃದಯುವ
ತಿಳಿದು ಋತಪರ್ಣನಲಿ ಕಾಲವ
ಕಳಿದು ಗೆಲಿದನು ಪುಷ್ಕಳನ ವಿದ್ಯಾತಿಮಹಿಮೆಯುಲಿ, ಚ. ।

ಬಱಿಕ ರೋಮಶಸಹಿತನೃಪಕುಲ
ತಿಲಕ ಬಂದನಗಸ್ತ್ಯನಾಶ್ರಮ
ದೊಳಗೆ ಬಿಟ್ಟನು ಪೇಳೆಯುವೆನಾಮುನಿಯು ಚರಿತವನು ।
ತಿಳುಹಿದನು ರೋಮಶನು ವೃತ್ರನ
ಕಲಹಕೆಂದು ದಧೀಚಿ ಮುನಿಪತಿ
ಯೆಲುವನಮರರು ಬೇಡಿದುದನಱುಹಿದನು ಜನಪತಿಗೆ ॥ ೧೦

ಆಮುನಿಯು ಕಂಕಾಳದಲಿ ಸು
ತ್ರಾಮ ಕೊಂದನು ವೃತ್ರನನು ಬಱಿ
ಕಾಮಹಾದಾನವರು ರಕ್ಕಸಕೋಟಿಜಲಧಿಯಲಿ ।
ಭೀಮಬಲರಡಗಿದರು ಬಂದೀ
ಭೂಮಿಯಲ್ಲಿ ವಸಿಷ್ಠನಾಶ್ರಮ
ದಾಮುನೀಂದ್ರರ ತಿಂದರವರು ಸಹಸ್ರಸಂಖ್ಯೆಯಲಿ ॥ ೧೧

ಚ್ಯವನನಾಶ್ರಮದಲ್ಲಿ ಮೂಱನು
ತಿವಿದು ಭಾರದ್ವಾಜನಾಶ್ರಮ
ಕವರು ಮುನಿದೆಪ್ಪತ್ತನುಂಗಿದರೇನನುಸುರುವೆನು ।
ದಿವಿಜರಿತ್ತಲಗಸ್ತ್ಯನನು ಪರು
ಠವಿಸಿದರು ಸಾಗರವನಾಮುನಿ
ಹವಣಿಸಿದ ಜಠರದಲಿ ಕೊಂದರು ಸುರರು ದಾನವರ ॥ ೧೨

ಸಗರಸುತಚರಿತವನು ಕಪಿಲನ
ದೃಗುಶಿಖಿಯಲುರಿದುದನು ಬಱಿಕವ
ರಿಗೆ ಭಗೀರಥನಿೞುಹಿದಮರನದೀಕಥಾಂತರವ ।
ವಿಗಡಮುನಿ ಯಿಲ್ವಲನ ವಾತಾ
ಪಿಗಳ ಮರ್ದಿಸಿ ವಿಂಧ್ಯಗಿರಿಹ
ಬ್ಬುಗೆಯ ನಿಲಿಸಿದಗಸ್ತ್ಯಚರಿತವ ಮುನಿಪ ವಿವರಿಸಿದ ॥ ೧೩

ಬಱಸಿಡಿಲ ಬೊಬ್ಬೆಯಲಿ ಪರ್ವತ
ಬಿಱಿಯೆ ಬಲುಗತ್ತಲೆಯು ಬಿಂಕಕೆ
ನರರ ಕಣ್ಮನ ಹೂಳ್ ತೂಳಿತು ಮಱೆ ಮಹೀತಳವ ‖ ೨೧

ಮರನ ಮರ ತಕ್ಕೈಸಿದುವು ಕುಲ
ಗಿರಿಯು ಗಿರಿ ಮುಂಡಾಡಿದುವುತೆರೆ
ತೆರೆಗಳಲಿ ತೆರೆ ತಿವಿದಾಡಿದುವು ಸಾಗರದ ಸಾಗರದ ।
ಧರಣಿ ಕದಡಲು ಸವಡಿಯಡಿಕಿಲು [1]
ಜರಿಯದಿಹುದೇ ಜಗದ ಜೋಕೆಗೆ [2]
ಹರಿಗೆ ಹೇಱೆನೆ ಬೀಸಿದುದು ಬಿಱುಗಾಳಿ ಬಿಱುಸಿನಲಿ ‖ ೨೨

ಕೆದಱಿತಲ್ಲಿಯದಲ್ಲಿ ಮಱೆಯೊಳು
ಹುದುಗಿತಲ್ಲಿಯದಲ್ಲಿ ಕಣಗಿಲು
ಕದಳಿಗಳ ಮುಱಿಗೊಂಡುದಲ್ಲಿಯದಲ್ಲಿ ಹರಿಹರಿದು ।
ಬೆದಱಿತಲ್ಲಿಯದಲ್ಲಿ ಕರಕರ
ದೊದಱುತಲ್ಲಿಯದಲ್ಲಿ ಬಲು ಮಱೆ
ಸದೆದುದಿವರನು ಸೇಡಿಗೊಂಡುದು ಜನದ ಸುಮ್ಮಾನ [3] ‖ ೨೩

ಬಗೆದು ಹೊಕ್ಕರು ಮೆಳೆಗಳನು ಮಿಂ
ಚುಗಳ ಕಣ್ಬೆಳಗಿನಲಿ ದಾರಿಯು
ತೆಗೆತೆಗೆದು ಸಾಱಿದರು ಸಂದಣಿ ನರನ ಹೆಮ್ಮರನ ।
ಬಿಗಿದ ರೋಮದ ಹುದಿದ ಕೈಗೊ
ಪ್ಪಿಗಳ ನಡುಕದ ಮೈಯ್ಯ ಕಡು ಸೇ
ಡುಗಳ ಶೀತದ ಸಕಲಜನ ಹುದುಗಿದುದರಣ್ಯದಲಿ ‖ ೨೪

---

1 ಧರಣಿಗಿಕ್ಕಿದಿಳಿಂಪನಡಕಿಲು, ಚ. 2 ಬೋನಕೆ, ಚ,

3 ಸಕಲಜನನಿಕರ, ಖ.

ಹೊಳೆವ ಕಂಗಳ ಕಾಂತಿ ಬಲುಗ
ತ್ತಲೆಯು ಝಳಪಿಸೆ ಘೋರವಿಪಿನ
ದೊಳಗಿಕುಲಾಳಕಿ ಬಂದಳುಬ್ಬಳ ಮಡೆಗೆ ಕೈಯೊಡ್ಡಿ ।
ಬಲಿದು ವ್ಯೈ ನಡುನಡುಗಿ ಹಲುಹಲು
ಹಳಚಿ ನನೆದಳು ವಾರಿಯುಲಿ ತನು
ಹಳಹಳಿಸಿ ಬಱಲಿದಳು ಚರಣದ ಹೊನಲ ಹೋರಟೆಗೆ ॥ ೨೫

ಆಗ ಮಳೆಯಲ್ಲಿ ತೊಂದರೆಪಟ್ಟು ಹಿಂದೆ ನಿಂತ ದ್ರೌಪದಿಯನ್ನು
ಹುಡುಕಿ ಆದರಿಸಿದುದು.

ಎಡಹುವೆರಳಿನ ಕಾಲಮುಳುಗಳ
ಕಡುವೆಡೆಯು ಘಾಟಳಿಪಗಾಳಿಯು
ಸಿಡಿಲುಮಿಂಚಿನ ಘಲ್ಲಣೆಯು ಘೋರಾಂಧಕಾರದಲಿ ।
ಒಡನೆ ಮಾನಿಸರಿಲ್ಲ ಕರೆದರೆ
ನುಡಿವರಿಲ್ಲ ಕರದ್ವಯದಿ ತಡ
ವಿಡುತ ಪೈಸರದೊಳಗೆ ಸೂಸಿತು ವ್ಯೈ ಮಹಾಸತಿಯು ॥ ೨೬

ಗಾಳಿಗೊಱಗಿದ ಕದಳಿಯಂತಿರೆ
ಲೋಲಲೋಚನೆ ಘಟ್ಟುಗೆಡೆದಳು
ಮೇಲುಸರ ಬಲುಮೂರ್ಛೆಯುಲಿ ಮುದ್ರಿಸಿದಚೇತನವ ।
ಬಾಲೆ ಯಿರೆ ಬೆಳಗಾಯ್ತು ತೆಗೆದುದು
ಗಾಳಿ ಬಿಱುವಡೆ ಭೀಮನಕುಲನ್ರ
ಪಾಲರಱಸಿದರೀಕೆಯನು ಕಂಡವರ ಬೆಸಗೊಳುತ ॥ ೨೭

ಬರುತ ಕಂಡರು ಬಟ್ಟೆಯುಲಿ [1] ನಿ
ರ್ಭರದ ಮೂರ್ಛಾಮೋಹಿತಾಂತಃ
ಕರಣೆಯನು ಹಾ ಯೆನುತ ಬಿದ್ದರು ಪವನಜಾದಿಗಳು ।

---

1 ಹೊದೆಯೊಳಗೆ, ಕ, ಖ.

ದುರ್ಗವಿದೆ ನಮ್ಮಂಥ್ರ ಶಕ್ತಿಯು
ನುಗ್ಗಿ ಬೀತುದು ಸಾಹಸಿಗ ನೀ
ನಗ್ಗಳೆಯರಿದೆ ನಿನ್ನವರು ಪಡಿಗಿ [1] ರಿಗಳಾಗಿರಿಗೆ |
ಹುಗ್ಗಿಗರ ಹೆಗಲೇಱಿಸೊಂದೇ
ಲಗ್ಗೆಯಲಿ ಹಾಯ್ಸನೆ [2] ಹಸಾದದ
ಮೊಗ್ಗೆಗೈಗಳ ದನುಜ ತಗ್ಗಿದನರಸನಿದಿರಿನಲಿ || ೩೬

ಆಗ ಘಟೋತ್ಕಚನು ಸರ್ವರನ್ನು ಬದರಿಕಾಶ್ರಮಕ್ಕೆ ಕರೆತಂದುದು.

ಹೊತ್ತನರಸನನರಸನನುಜರ
ನೆತ್ತಿದನು ನೃಪನರಸಿಯನು ಬೞಿ
ಕೆತ್ತಿ ಕೈವೀಸಿದನು ಭಟರಿಗೆ ತೋಱಿ ಪರಿಜನವ |
ಹೊತ್ತರನಿಬರನಸುರಭಟರೊ
ತ್ತೊತ್ತೆಯಾದುದು ಬೆನ್ನಿನಲಿ ಬಿಗಿ
ದೆತ್ತಿ ಹಾಯ್ದರು ಮುಗಿಲಧಟ್ಟನ ಪರಿಯ ಜೋಡಿಯಲಿ || ೩೭

ಅಸುರದೇಹಸ್ಪರ್ಶವಸಮಂ
ಜಸವಲಾ ತನಗೆನುತ ಮುನಿರೋ
ಮಶನು ಗಗನೇಚರರ ಗತಿಯಲಿ ಬಂದನಿವರೊಡನೆ |
ವಿಷಮಗಿರಿಕಾನನಕದಧ್ವ
ಪ್ರಸರವನು ಹಿಂದಿಕ್ಕಿ ಹೊದ್ದಿದ
ರೆಸೆವನರನಾರಾಯಣಾಶ್ರಮವರತಪೋವನವ || ೩೮

ಅಲ್ಲಿ ಯಖಿಳಋಷಿವ್ರಜವು ಭೂ
ವಲ್ಲಭನನಾತಿಥ್ಯಪೂಜಾ
ಸಲ್ಲಲಿತಸಂಭಾವನಾಮಧುರೋಕ್ತಿರಚನೆಯಲಿ |

---

1 ಲಕ್ಷ್ಯ, ಚ, 2 ನಡಸೆನ್ನೆ, ಚ,

ಅಲ್ಲಿಗಲ್ಲಿಗೆ ಸಕಲಮುನಿಜನ
ವೆಲ್ಲವನು ಮನ್ನಿಸಿದನಾವನ
ದಲ್ಲಿ ನೂಕಿದನೆಂಟುದಿನವನು ನೃಪತಿ ಕೇಳೆಂದ ॥ ೩೯

* ಶ್ರೀಲತಾಂಗಿಯು ರಮಣನೆಂದು ಸ
ಲೀಲೆಯಲಿ ಮುನಿನಿಕರಸಹಿತಾ
ಕಾಲದವಧಿಯು ಕಡೆಯು ಹಾಯ್ತುನ್ನತ ಭೂಪನಿಂತಿರ್ದ ।
ಮೇಲೆ ಮೇಲ್ಬೈತರುವ ಶುಭಕರ
ಕಾಲನೋಡುತ ಮುದಿತಸದ್ದ್ವಿಜ
ಜಾಲ ನೈತಂದಂದು ನೆನೆದನು ವೀರನಾರಣನ ॥ ೪೦

ಹತ್ತನೆಯ ಸಂಧಿ ಮುಗಿದುದು.

---

## ಹನ್ನೊಂದನೆಯ ಸಂಧಿ.

### ಸೂಚನೆ.

ಕಂಡನಡವಿಯೊಳನಿಲಜನನಾ
ಖಂಡಲನ ತನುಜನ ಪತಾಕಾ
ದಂಡದಲಿ ನಿಲುವಂತೆ ವರವನು ಪಡೆದನಾ ಭೀಮ ॥

ಆಗ ದ್ರೌಪದಿಯು ಸೌಗಂಧಿಕ ಪುಷ್ಪದ ವಾಸನೆಯನ್ನು
ಅನುಭವಿಸಿ ವಿಸ್ಮಿತಳಾದುದು.

ಕೇಳು ಜನಮೇಜಯ ಧರಿತ್ರೀ
ಪಾಲ ನರನಾರಾಯಣಾಶ್ರಮ
ಕೂಲವತಿಗಳ ನಂದನದ ನಿರ್ಮಲಸರೋವರದ ।

---

* ೪೦ ನೆಯ ಶ್ಲೋಕವು ಅನೇಕ ಪುಸ್ತಕಗಳಲ್ಲಿ ಇರುವುದಿಲ್ಲ.

ಕೇಳಿಕೆಯ ನವಿಲುಗಳ ತುಂಬಿಯ
ಮೇಳವದ ಗೀತದ ವಿನೋದದ
ಲಾಳಿದರು ವನವಾಸಸಾಮ್ರಾಜ್ಯವನು ಸೊಗಸಿನಲಿ ॥ ೧

ಪರಮಧರ್ಮಶ್ರವಣಸೌಖ್ಯದೊ
ಳರಸನಿರೆ ಬದರಿಯಲಿ ಪೂರ್ವೋ
ತ್ತರದ ದೆಸೆವಿಡಿದೆಸೆದತಿಶಯಗಂಧಬಂಧುರದ ।
ಭರಣಿ ಮನ್ಮಥ ಪೋತವಣಿಜನ
ತರಣಿ ತರುಣಭ್ರಮರಸೇವಾ
ಸರಣಿಯೆನೆ ಸುಳಿದುದು ಸಮೀರಣನಾಮಹಾದ್ರಿಯಲಿ ॥ ೨

ಸರಸಸೌಗಂಧಿಕದ ಪರಿಮಳ
ಭರದ ಭಾರವಣೆಯಲಿ ತಿಳಿಗೊಳ
ನುಱುಬುದೆಱೆಗಳ ತಿವಿಗುಳಿನ ತುಂತುರುತುಷಾರದಲಿ ।
ಮೊಱೆದುಲಿವ [1] ಮಱಿದುಂಬಿಗಳ ಮೋ
ಹರದ ಮೋಡಾಮೋಡಿಯಲಿ ಡಾ
ವರಿಸಿತೈದಿಂದ್ರಿಯದಲೊಂದಿರೆ ಸಕಲಮುನಿಜನವ ॥ ೩

ಮೇಲುತರದತಿಪರಿಮಳದ ವೈ
ಹಾಳಿಯಲಿ ಸಲೆ ಬೀದಿವರಿದು ಚ
ಡಾಳಿಸುವ ಸೊಗಸಿನಲಿ ಸೊಂಪಾದಳು ಸರೋಜಮುಖಿ ।
ಸೋಲಿಸಿತಲಾ ಚಕೋರಿಯಲಿ ಸಂ
ಪಾಳಿಸಿದ ಸೌಗಂಧವಿನ್ನು ವಿ
ಶಾಲಪದ್ಮವದೆಂತುಟೆನುತವೆ ತೂಗಿದಳು ಶಿರವ ॥ ೪

ಆಪುಷ್ಪವನ್ನು ಭೀಮಸೇನನನ್ನು ಪ್ರಾರ್ಥಿಸಿದುದು.

ಅರಸನಲಿ ಮೋಹ ನಕುಲಸಹದೇ
ವರಲಿ ತನ್ನ ಮನೋರಥಕೆ ವಿ
ಸ್ತರಣವಾಗದು ನುಡಿವೊಡಿಲ್ಲರ್ಜುನ ಸಮೀಪದಲಿ ।

[1] ಮೊರೆದೊಗುವ, ಚ.

ಅರಿಭಯಂಕರ ಭೀಮ ನೀ ಗೋ
ಚರಿಸುವನಲಾ ಯೆನುತಲಾತನ
ಹೊರೆಗೆ ಬಂದಳು ನಗುತ ನುಡಿದಳು ಮಧುರವಚನದಲಿ ॥ ೫

ಹಿರಿದು ಸೊಗಸಾಯ್ತು ನಗಪೂರ್ವದ
ಪರಿಮಳದ ಕೇಳಿಯಲಿ ನೀವಾ
ಸರಸಿಜವ ತಂದಿತ್ತು ತನ್ನ ಮನೋಗತವ್ಯಥೆಯ ।
ಪರಿಹರಿಪುದೆನಲಬುಜವದನೆಯ
ಕುರುಳನುಗುರಲಿ ತಿದ್ದಿದನು ತ
ತ್ಸರಸಿಜವ ತಹೆನೆನುತ ಕೊಂಡನು ನಿಜಗದಾಯುಧವ ॥ ೬

ಭೀಮಸೇನನು ಹೊರಟಾಗ ದಾರಿಯಲ್ಲಾದ ಚಿತ್ರಕಾರ್ಯಗಳು.

ಬಿಗಿದ ಬತ್ತಳಿಕೆಯನು ಹೊನ್ನಾ
ಯುಗದ ಖಡ್ಗಶರಾಸನವ ಕೊಂ
ಡಗಧರನ ನೆನೆದನಿಲಸುತ ಹೊಱಮಂಟನಾಶ್ರಮವ ।
ಬಿಗಿದು ಹೊಕ್ಕನರಣ್ಯವನು ಬೊ
ಬ್ಬೆಗಳ ಬಿರುದಿನ ಬಾಹುಸತ್ವದ
ವಿಗಡಭೀಮನ ಕಾಲ್ದುಳಿಗೆ ಕಂಪಿಸಿತು ವನನಿವಹ ॥ ೭

ಒದಱಿದರೆ ಪರ್ವತದ ಶಿಖರದ
ಉದುರಿದುವು ಹೆಗ್ಗುಂಡುಗಳು ಮುಱಿ
ದೊದೆಯೆ ಬಿದ್ದುವು ಬೇಱುಸಹಿತ ಮಹಾದ್ರುಮಾಳಿಗಳು ।
ಗದೆಯ ಹೊಯ್ಲಿನ ಗಂಡಶೈಲವೊ
ಕದಳಿಗಳೊ ತಾವಱಿಯೆವುಬ್ಬಿದ
ಮದಮುಖನ ಹುರಿಮುಸಕ ಮುಱಿದುದು ಗಿರಿತರುವ್ರಜವ ॥ ೮

ಮುಡುಹು ಸೋಂಕಿದೊಡಾಮಹಾದ್ರಿಗ
ಳೊಡನೆ ತೋರಹತರು ಕೆಡೆದುವಡಿ
ಯಿಡಲು ಹೆಜ್ಜೆಗೆ ತಗ್ಗಿದುದು ನೆಲಸಹಿತ ಹೆದ್ದವರು ।

ಒಡೆದುದಿಳೆ ಬೊಬ್ಬಿಱಿತಕೀತನ
ತೊಡೆಯು ಗಾಳಿಗೆ ಹಾಱಿದುವು ಕಿಱು
ಗಿಡುಮರಂಗಳು ಮಿಾಱಿ ನಡೆದನು ಭೀಮನಡವಿಯಲಿ ॥ ೯

ಹುಲಿ ಕರಡಿ ಕಾಡಾನೆ ಸಿಂಹಾ
ವಳಿಗಳೀತನ ದನಿಗೆ ಯೋಜನ
ದಳವಿನಲಿ ಹಾಯ್ದೋಡಿದುವು ನೋಡುತ್ತ ಮುಱಿಮುಱಿದು ।
ಹೞುವು ತಳಪಟವಾಯ್ತು ದಿಗ್ಗಜ
ತುೞಿದ ಬಾಳೆಯ ಬನದವೊಲು ವೆ
ಗ್ಗಳೆಯನೈ ಕಲಿಭೀಮ ನಡೆದನು ಬನದ ಮಧ್ಯದಲಿ ॥ ೧೦

ಬಿರಿದುವದ್ರಿಗಳನಿಲಸುತನು
ಬ್ಬರಿದ ಬೊಬ್ಬೆಗೆ ಮಿಕ್ಕ ಮೃಗತತಿ
ಶರಭಶಾರ್ದೂಲಂಗಳಿಲ್ಲ ವಿಲೋಚನಾಂತ್ಯದಲಿ ।
ಮರಗಿರನ ಮೃಗಗಿಗನ ಪಾಡೇ
ನರಸ ಭೀಮನ ದನಿಗೆ ಬೆಚ್ಚದೆ
ಗಿರಿಗುಹೆಗಳೇ ಮಲೆತು ನಿಂದುವು ದನಿಗೆ ದನಿಗೊಡುತ ॥ ೧೧

ಆಗ ಭೀಮಸೇನನ ಧ್ವನಿಯಿಂದ ಹನುಮಂತನು ಆಲೋಚಿಸಿದುದು.

ಆಮಹಾದ್ರಿಯ ತಪ್ಪಲಲಿ ನಿ
ಸ್ಸೀಮಕದಳೀಷಂಡದಲಿ ರಘು
ರಾಮನಾಮಸುಧಾಭಿಷೇಕಸಮಗ್ರ ಸೌಖ್ಯದಲಿ ।
ಭೀಮವಿಕ್ರಮನಿದ್ದನೀಯು
ದ್ದಾಮಸಿಂಹಧ್ವನಿಗೆ ನಿದ್ರಾ
ತಾಮಸದ ತನಿಮದವಡಗೆ ಕಣ್ದೆಱೆದನಾಹನುಮ ॥ ೧೨

ಏನಿದೆತ್ತಣ ರಭಸ ವೀಗಿರಿ
ಸಾನುವಿದಮಾನುಷವಿಹಾರ
ಸ್ಥಾನವಿವನಾರೋ ಮಹಾದೇವಪ್ರಚಂಡನಲ ।

ಈನಿನದ ನಮ್ರಂದಿನಗ್ಗದ
ವಾನರರ ಗರ್ಜನೆಗೆ ಗುರುವಾ
ಯ್ತೀನನೆಂಬೆನೆನುತ್ತ ಮೆಲ್ಲನೆ ಮಿಡುಕಿದನು ಹನುಮ ॥ ೧೩

ಆಗ ಹನುಮಂತನು ತನ್ನ ಬಾಲವನ್ನು ದೊಡ್ಡದಾಗಿ ಮಾಡಿ ದಾರಿಯಲ್ಲಿಟ್ಟುದು.

ನಿಱಿನಿಱಿಲುನಿಱಿಲೆನುತ ಹೆಮ್ಮರ
ಮುಱಿದುದಾತನ ರೋಮ ಸೋಂಕಿನ
ಲಿಱಿಕಿಲಾದುದು ಧರಣಿಯುನಿಲಜ ಮುಱಿದ ಮಗ್ಗುಲಲಿ ।
ಉಱುವಬಾಲವ ಬೆಳಸಿ ದಾರಿಯು
ತೆಱಹುಗೊಡದೆಡೆಯೊಡ್ಡಿ ಮನುಜನ
ಮುಱುಕವನು ತಾ ಕಾಂಬೆನಿನ್ನೆನುತಿರ್ದನಾಹನುಮ ॥ ೧೪

ಭೀಮಸೇನನ್ನು ಕುರಿತು ಹನುಮಂತನು ನೀನಾರೆಂದು ಕೇಳಿದುದು.

ಮುಱಿಯದಂತಿರೆ ಲಘುವಿನಲಿ ಹೆ
ಮ್ಮರನನೊಯ್ಯನೆ ನೆಮ್ಮಿ ಕುಳ್ಳಿ
ರ್ದಿರಿದಿಶಾಪಟನು ನುಡಿಸಿದನು ಪವಮಾನನಂದನನ ।
ಬರವಿದೆಲ್ಲಿಗೆ ಮರ್ತ್ಯನೋ ಖೇ
ಚರನೊ ದೈತ್ಯನೊ ದಿವಿಜನೋ ಕಿ
ನ್ನರನೊ ನೀನಾರೆಂದು ಭೀಮನ ನುಡಿಸಿದನು ಹನುಮ ॥ ೧೫

ಅದಕ್ಕೆ ಭೀಮಸೇನನ ಉತ್ತರ.

ನಾವು ಮರ್ತ್ಯರು ದೂರದಲಿ ರಾ
ಜೀವಗಂಧಸಮೀರಣನ ಸಂ
ಭಾವನೆಗೆ ಸೊಗಸಿದಳು ಸತಿಯಾಕೆಯ ಮನೋರಥದೆ [1] ।
ತಾವರೆಯ ತಹೆನೆನುತ ಸಿಂಹಾ
ರಾವದಲಿ ವಿಕ್ರಮಿಸೆ ವಿಗಡನ
ಡಾವರವ ಬಲುಬಾಲ ತಡೆದುದು ಪವನಜನ ಪಥವ ॥ ೧೬

1 ವಚಸ್ಸಿನಲಿ, ಚ.

ದಾರಿಯಲ್ಲಿಟ್ಟ ಬಾಲವನ್ನು ತೆಗೆಯೆಂದು ಹನುಮಂತನನ್ನು ಕೇಳಿದುದು.

ಗದೆಯ ಮೊನೆಯಲಿ ನೂಕಿದನು ರೋ
ಮದಲಿ ಚಲಿಸದ ಬಾಲ ನೋಡಿದ
ನಿದು ವಿಚಿತ್ರವಲಾ ಯೆನುತ ನುಡಿಸಿದನು ಕಪಿವರನ ।
ಒಡೆದುವದ್ರಿಗಳೆಚವವೆನ್ನಂ
ಗದಲಿ ತಾ ಬಲ್ಲಿದನು ಬಾಲದ
ಕದವ ತೆಗೆ ಬಟ್ಟೆಯಲೆನುತ ಗರ್ಜಿಸಿದನಾಭೀಮ ॥ ೧೭

ನೀವು ನೂಕಿಕೊಂಡು ಹೋಗಿರೆಂದು ಹನುಮಂತನ ಉತ್ತರ.

ನೀವು ಬಲ್ಲಿದರಿದಕೆ ಸಂಶಯ
ವಾವುದಲ್ಲದೊಡೀಮದದ್ವಿಭ
ವೀವಿಹಗಕುಲವೀಮೃಗವ್ರಜವಂಜುವ್ರವೆ ನಿಮಗೆ ।
ನಾವು ವೃದ್ಧರು ನಮ್ಮ ಬಾಲವ
ನಾವು ಹದುಳಿಸಲಾರೆವೀಗಳು
ನೀವು ತೊಲಗಿಸಿ ಬಿಜಯ ಮಾಡುವುದೆಂದನಾಹನುಮ ॥ ೧೮

ಐಸಲೇ ತಪ್ಪೇನೆನುತ ತನೆ
ಗೇಸು ಬಲುಹುಂಟೈಸರಲಿ ಕ
ಟ್ಟಾಸುರದಲೌಕಿದನು ಬಾಲವನೊದಱ ಬೊಬ್ಬಿಱದು ।
ಗಾಸಿಯಾದನು ಪವನಸುತನೆ
ಳ್ಳೈಸು ಮಿಡುಕದು ಬಾಲವೂರ್ಧ್ವ
ಶ್ವಾಸಲಹರಿಯ ಲಡಿಗಡಿಗೆ ಲಟಕಟಿಸಿದನು ಭೀಮ ॥ ೧೯

ತೆಗೆದು ನಿಂದನು ಭೀಮ ಹೊಯ್ವ
ಳ್ಗಗಳ ತಲ್ಲಣವಡಗಲೊಳತಾ
ಳಿಗೆಗೆ ಕವಳವ ನೂಕಿದನು ಕರ್ಪೂರದ ಹಳುಕುಗಳ ।

ಡಗೆ ಮರಳೆ ಮರುವಲಗೆಗೌಡೊ
ತ್ತುಗಳ ಬಲಿದವಯುವದ ಸತ್ರಾ
ಣಿಗಳ ದೇವನು ತಾವುರಿಯಲೊದಗಿದನು ಬಾಲದಲಿ ॥　೨೦

ಎಷ್ಟು ಪ್ರಯತ್ನ ಮಾಡಿದರೂ ಬಾಲವು ಹಾಗೆ ಇರಲು
ಭೀಮನ ಚಿಂತೆ.

ಮಿಡುಕಿದುದು ಮಹಿಯಿಂದ ಭೀಮನ
ಮಿಡುಕು ನಿಂದುದು ಬಾಲದಲಿ ತುದಿ
ನಡುಗದನಿಲಜನಂಗವೆಟ್ಟದ ಕಡುಹು ಕಂಪಿಸದು ।
ತೊಡಕಿ ಕೆಟ್ಟುದು ಕಾರ್ಯದುರ್ಲಭ
ನೊಡನೆ ಭಂಗವ್ಯಾಪ್ತಿ ತನ್ನನು
ಸುಡಲೆನುತ ಹಿಮ್ಮೆಟ್ಟಿ ಮಮ್ಮಲ ಮರುಗಿದನು ಭೀಮ ॥　೨೧

ಈತ ಕಪಿರೂಪಿನಸುರೇಂದ್ರನೊ
ಭೂತನಾಥನೊ ಮೇಣು ವಿಮಲ
ತ್ರೇತೆಯಲಿ ದಶಮುಖನ ಹಾಣಾಹಾಣಿಗಳ ಕಪಿಯೊ ।
ಏತೆರವೊ ನಮ್ಮಬ್ಬುಟೆಗಳಿಂ
ದೀತ ಗೆಲಿದನು ಬಾಲದಲಿ ಸ
ತ್ವಾತಿಶಯವಿನ್ನೀತಗೆಂತುಟೊ ಶಿವ ಶಿವಾ ಯೆಂದ ॥　೨೨

ಆಗ ಹನುಮಂತನನ್ನು ನೀನಾರೆಂದು ಕೇಳಿದುದು.

ಭೀಮ ಗಡ ತಾನೌಕಿ ನಿರಲು
ದ್ದಾಮಬಾಲದ ನಿದ್ರೆ ತಿಳಿಯದು
ರೋಮತತಿ ಮಸೆಗಾಣಿಸಿದುವೆನ್ನುತ್ತಮಾಂಗದಲಿ ।
ಈಮನುಷ್ಯಶರೀರವಪಜಯ
ಧಾಮವಲ್ಲಾ ಹರ ಹರಾ ನಿ
ಸ್ಸೀಮಕಪಿ ನೀನಾರೆನುತ ಪವನಜನ ಬೆಸಗೊಂಡ ॥　೨೩

ನಾವು ವಾನರರಟವಿಯಲಿ ಫಲ
ಜೀವಿಗಳು ನಿಸ್ಸತ್ವರಿಲ್ಲಿಯು
ತಾವೆ ಬಿಡಲನ್ಯತ್ರಗಮನತ್ರಾಣವಿಲ್ಲ ಮಗೆ ।

ಹಾಗೆಯೇ ಹನುಮಂತನು ಕೇಳಿದುದು.

ನೀವು ದಿಟವಾರ್ಯೆ ಮಹಾಸಂ
ಭಾವಿತರು ಸುರನರಭುಜಂಗರ
ಲಾವಕುಲ ನಿಮಗೆಂದು ಭೀಮನ ನುಡಿಸಿದನು ಹನುಮ ॥ ೨೪

ಭೀಮಸೇನನ ಉತ್ತರ.

ಮನುಜರಾವ್ ಸೋಮಾಭಿಕುಲದಲಿ
ಜನಿಸಿದನು ವರಪಾಂಡುವಾತನ
ತನುಜರಾವ್ ಯುಧಿಷ್ಠಿರಾರ್ಜುನಭೀಮಯಮಳರಲೆ ।
ಬನಕೆ ಬಂದೆವು ನಮ್ಮ ದಾಯಾ
ದ್ಯನ ವಿಕಾರದ್ಯೂತಕೇಳೀ
ಜನಿತಕಿಲ್ಬಿಷದಿಂದ ರಾಜ್ಯಭ್ರಂಶವಾಯ್ತೆಂದ ॥ ೨೫

ಬಿಳಿಕ ಸೌಗಂಧಿಕನ ಪವನನ
ಬಿಳಿವಿಡಿದು ನಾ ಬಂದೆನೆಮ್ಮಯ
ಲಲನೆ ಕಾಮಿಸಿದಳು ಸಹಸ್ರದಳಾಬ್ಜದರುಶನವೆ ।
ತಿಳಿಯಲಿದು ವೃತ್ತಾಂತ ನೀನ
ಸ್ಖಲಿತಬಲ ನೀನಾರು ನಿನ್ನನು
ತಿಳುಹಬೇಕು ಮಹಾತ್ಮ ಕಪಿ ನೀನೆನುತ ಕೈಮುಗಿದ ॥ ೨೬

ಹನುಮಂತನ ಉತ್ತರ.

ನಾವು ಹಿಂದಣ ಯುಗದ ರಾಘವ
ದೇವನೋಲೆಯಕಾಱರಾಸು
ಗ್ರೀವಮಿತ್ರರು ಪವನನಿಂದಂಜನೆಗೆ ಜನಿಸಿದೆವು ।

ನಾವು ನಿಮ್ಮೊಡಹುಟ್ಟಿದರು ಸಂ
ಭಾವಿಸಿತು ನಮ್ಮಿಷ್ಟವೆನೆ ನಗು
ತಾವೃಕೋದರನೆಱಗಿದನು ಕಲಿಹನುಮನಂಘ್ರಿಯಲಿ ॥ ೩೭

ಆಗ ಹನುಮಂತನನ್ನು ಸ್ತುತಿಸಿದುದು.

ಜರುಗಿನಲಿ ಜಾಂಬೂನದದ ಸಂ
ವರಣೆಕಾಱಿಂಗೆಡೆಯೊಳಿರ್ದುದು
ಪರಮನಿಧಿ ಮೆಯ್ಯುಪ್ಪಿತು ಪುಣ್ಯೋದಯದ ಫಲವೆನಗೆ ।
ಸರಸಿ ಯೆತ್ತಲು ಗಂಧವೆತ್ತಲು
ಬರವಿದೆತ್ತಣದೆತ್ತ ಘಟಿಸಿದು
ದರರೆ ಮಾರುತಿ ತಂದೆ ನೀನೆಂದೆನುತ ಬಣ್ಣಿಸಿದ ॥ ೩೮

ಹಿರಿಯರೆನಗಿಬ್ಬರು ಯುಧಿಷ್ಠಿರ
ಧರಣಿಪತಿ ನೀನೊಬ್ಬರೈಯ್ಯಂ
ದಿರುಗಳಿಬ್ಬರು ಮಾರುತನು ನೀನೊಬ್ಬನಿಂದೆನಗೆ ।
ಗುರುಗಳಿಬ್ಬರು ಬಾದರಾಯಣ
ಪರಮಋಷಿ ನೀನೊಬ್ಬನೆಂದುಪ
ಚರಿಸಿದನು ಪವಮಾನನಂದನನಂಜನಾಸುತನ ॥ ೩೯

ತೀದುದೆಮಗೆ ವನಪ್ರವಾಸದ
ಖೇದವರ್ಜುನನಗಲಿಕೆಯ ದು
ರ್ಭೇದವಿಷದಿಂದಿಱಿದು ಹೋದುದು ಹರ ಮಹಾದೇವ ।
ಹೋದರಾಜ್ಯಭ್ರಂಶ ಬಹಳವಿ
ಷಾದ ಬೀತುದು ನಿಮ್ಮ ಕಾರು
ಣ್ಯೋದಯವು ನಮಗಾಯ್ತಲಾ ಚರಿತಾರ್ಥರಾವೆಂದ ॥ ೪೦

ಭೀಮನನ್ನು ಸ್ತುತಿ.

ಲಲಿತವಚನಕೆ ನಿನ್ನ ಭುಜದ
ಗ್ಗಳಿಕೆಗಾ ಮೆಚ್ಚಿದೆನು ಹಿಮಕರ
ಕುಲಪವಿತ್ರರು ಜನಿಸಿದರಲಾ ಪಾಂಡುಜಠರದಲಿ ।

ಗೆಲವು ನಿಮಗಹಿತರಲಿ ಪಾರ್ಥನ
ಕೆಲವುದಿವಸಕೆ ಕಾಂಬಿರಿಮಗೆಯು
ಫಲಿಸಿತೀದಿನವೆಂದು ಕೊಂಡಾಡಿದನು ಹನುಮಂತ ‖ ೩೧

ಸಮುದ್ರತರಣದ ರೂಪವನ್ನು ತೋರಿಸೆಂದು ಭೀಮನ ಪ್ರಶ್ನೆ.

ಅಂಜುವೆನು ಬಿನ್ನಹಕೆ ಬಾಂಧವ
ವಂಜಿಕೆಯು ನಭಕೊತ್ತುತಿದೆ ಕೇ
ಳಂಜನಾಸುತ ತನ್ನ ಸಲಿಗೆಯು ಮಾತ ಸಲಿಸುವೊಡೆ ।
ಅಂಜದೆಂಬೆನು ದನುಜಪುರಕೆ ಧ
ನಂಜಯನ ಹೊತ್ತಿಸಿದ ಖಳರನು
ಭಂಜಿಸಿದ ಸಾಗರವ ದಾಂಟಿದ ರೂಪು ತೋಱೆಂದ ‖ ೩೨

ಈಯುಗದ ಗುಣಧರ್ಮವಾತ್ರೇ
ತಾಯುಗದವರಿಗೈದದಾತ್ರೇ
ತಾಯುಗವು ಸರಿಯಲ್ಲ ಕೃತಯುಗದೇಕದೇಶದಲಿ ।
ಆಯುಗದಲಾಮನುಜರಾಸ
ತ್ವಾಯುವಾ ಸಾಮರ್ಥ್ಯವಾತರು
ವಾಯುಯುಗದಲಿ ಸಲ್ಲದೆಂದನು ನಗುತ ಹನುಮಂತ ‖ ೩೩

ಕೃತಯುಗದವರು ತ್ರೇತೆಯುವರಿಂ
ದತಿಪರಾಕ್ರಮಯುಕ್ತರವರದು
ಭುತಬಲರು ತ್ರೇತೆಯುವರಿಂ ದ್ವಾಪರಸ್ಥಿತಿಗೆ ।
ವಿತತಸತ್ವರು ಕಲಿಯುಗದ ದು
ರ್ಮತಿಮನುಷ್ಯರಿಗವರು ಕ್ಷೀಣಾ
ಕೃತಿ ಕಣಾ ಯುಗಧರ್ಮ ಕೃತವೊದಲಾಗಿ ಕಲಿಯುಗಕೆ ‖ ೩೪

ಹೀನಸತ್ವರು ಸತ್ಯಧರ್ಮ ವಿ
ಹೀನರರ್ಥಪರಾಯಣರು ಕುಜ
ನಾನುರಕ್ತರು ವಿಮಲವರ್ಣಾಶ್ರಮವಿದೂಷಕರು ।

ದಾನಿಗಳು ದುಷ್ಪಾತ್ರದಲಿ ಗುಣ
ಮೌನಿಗಳು ಗರ್ವಿತರು ಮಿಥ್ಯಾ
ಜ್ಞಾನಿಗಳು ಕಲಿಯುಗದ ಮನುಜರು ಭೀಮ ಕೇಳೆಂದ ॥ ೩೫

ಅದಱಿನೀದ್ವಾಪರದ ಕಡೆಯ
ಲ್ಲುದಿತಮಾನುಷ ಧರ್ಮಸಂಶಯ
ವಿದಱೊಳೆಮ್ಮಯ ರೂಪು ಗೋಚರವಲ್ಲ ಮರ್ತ್ಯರಿಗೆ ।
ಇದು ನಿಧಾನವು ಭೀಮ ಯೆನೆ ತ
ತ್ಪದಯುಗಕೆ ಮಗುಟೆಱಗೆ ನಿರ್ಬಂ
ಧದಲಿ ಬಿನ್ನಹಮಾಡಲೆಮ್ಮನು ತೋಱಬೇಕೆಂದ [1] ॥ ೩೬

ಆರೂಪವನ್ನು ಭೀಮಸೇನನಿಗೆ ಹನುಮಂತನು ತೋರಿಸಿದುದು.

ಆದೊಡಿನ್ನು ನಿರೀಕ್ಷಿಸೆನುತ ನಿ
ನಾದದಲಿ ನೆಲ ಬಿಱಿಯೆ ಬಾಲದ
ವೀದಿವರಿ ಬಾಸಳಿಸೆ ಘನನಕ್ಷತ್ರಮಂಡಲವ ।
ಮೇದಿನಿಯ ಹೊಱಕಾಱರಳ್ಳದೆ
ಯಾದರಳುಕಿದುವದ್ರಿಗಳು ಸ
ಪ್ತೋದಧಿಗಳುಕ್ಕಿದುವೆನಲು ಹೆಚ್ಚಿದನು ಹನುಮಂತ ॥ ೩೭

ಮೇರುವಿನ ತಪ್ಪಲಲಿ ಬೆಳೆದ ಬ
ಲಾರಿಚಾಪವೊ ಮೇಣ್ ತ್ರಿವಿಕ್ರಮ
ನಾರುಭಟೆಯಲಿ ಜಡಿವ ಜ್ಯೋತಿರ್ಗಣದ ಬಲುಮಿಣಿಯೊ ।
ಬಾರಿಸುವ ಬಲುಬಾಲವಾ ಜಂ
ಭಾರಿಭವನವನೆಳ್ಳಿಱಿಯೆ ತ್ರಿಪು
ರಾರಿ ಯೊಡ್ಡಿನ ಹೊಳಹಿನಲಿ ಹೊಳಹೊಳದನಾಹನುಮ ॥ ೩೮

1 ರೂಪತೋಱೆಂದ, ಚ.

ಆರೂಪವನ್ನು ನೋಡಿ ಭೀಮಸೇನನು ಭೀತನಾದುದು.

ನೋಡಿದನು ನಡುಗಿದನು ಕಂಗಳ
ಕೋಡಿಯಲಿ ನೀರೊಚಿಯು ಹರುಷದ
ಝೂಡಿಯಲಿ ಝೊಪ್ಪೆದ್ದು ಮನ ಡೆಂಡೆಣಿಸಿ ಭೀತಿಯಲಿ ।
ಬಾಡಿ ಮೋಱೆಯನೆತ್ತಿ ಕೈಗಳ
ನೀಡಿ ಕೈಯಲಿ ಮುಚ್ಚಿ ಮರಳಿಯೆ
ನೋಡಿ ಶಿವ ಶಿವ ಯೆನುತ ಬೆಚ್ಚಿದನೆಂದು ಕಲಿಭೀಮ ॥ ೩೯

ಸಾಕುಸಾ ಕಂಜಿದೆನು ಮನುಜರು
ಕಾಕುಬಲರು ನಿಜಸ್ವಭಾವವ
ನೇಕೆ ಬಿಡುವೆವು ತಿಳಿದು ತಿಳಿಯೆವು ಕಂಡೊಡಂಜುವೆವು ।

ಹನುಮಂತನು ಪೂರ್ವರೂಪವನ್ನು ತಾಳಿದುದು.

ಸಾಕು ಪೂರ್ವದ ರೂಪಿನಲಿ ನಿ
ವ್ಯಾಕುಲನ ಮಾಡೆನಲು ಭೀಮನ
ನಾಕಪೀಶ್ವರ ನಗುತ ಮುನ್ನಿನ ರೂಪ ಕೈಕೊಂಡ ॥ ೪೦

ಅಂಜದಿರು ನೀನಿನ್ನು ಮೆಚ್ಚಿದೆ
ನಂಜಲಿಸು ನಾ ಸಲಿಸುವೆನು ನ
ಮ್ಮಂಜನಾದೇವಿಯರು ಕುಂತೀದೇವಿಯಾದರೆಲೆ ।
ರಂಜಕರು ನಾವಲ್ಲ ಹೇಱು ಸ
ಮಂಜಸದಲೆನೆ ಭೀಮ ನಗುತ ಧ
ನಂಜಯನ ಟೆಕ್ಕೆಯಕೆ ಬಿಜಯಂಗೆಯ್ಯಬೇಕೆಂದ ॥ ೪೧

ಐಸಲೇ ಸಲಿಸಿದೆನೆನುತ ಕಪಿ
ಯಾಸಮಯದಲದೃಶ್ಯನಾಗೆ ವಿ
ಕಾಸವಾದುದು ವಿಸ್ಮಯಕೆ ಪವಮಾನನಂದನನ ।
ಆಸುಗಂಧಿಕಕಮಲವನ ತಾ
ನೇಸುದೂರವೊ ದ್ರುಪದಸುತೆ ತನ
ಗೇಸು ಮುನಿವಳೊ ಯೆನುತ ಮಿಗೆ ಹರಿದನು ವನಾಂತದಲಿ ॥೪೨

ಸರೋವರದರ್ಶನ.

ಧರಣಿಪತಿ ಕೇಳ್ ಬಟಿಕ ವಿಪಿನಾಂ
ತರವನಂತವ ಕಳೆದು ಬರೆ ಬರೆ
ಸರಸಿಜದ ಮೋಹರದ ಮುಂದೈತಪ್ಪ ಪರಿಮಳದ ।
ಮೊಱೆವ ತುಂಬಿಯ ಥಟ್ಟುಗಳ ತನಿ
ವರಿವ ತಂಪಿನ ತುಱುಗಲಿನ ತ
ತ್ಸರಸಿಯನು ದೂರದಲಿ ಕಂಡುಱುಬಿದನು ಕಲಿಭೀಮ ॥ ೪೩

ಬಗುಮಿಗೆಯ ಪರಿಮಳದ ಕಂಪಿನ
ತಗಡತೆಕ್ಕೆಯ ಬೀದಿವರಿಗಳ
ಮುಗುಳವೊಗ್ಗೆಯ ತಗೆವ ತುಂಬಿಯ ಲಳಿಯ ಲಗ್ಗೆಗಳ ।
ಹೊಗರ ಹೊರಳಿಯ ಕಿಱುದೆಱೆಯ ನೂ
ಕುಗಳ ತಳಿತ ತುಷಾರಭಾರದ
ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ ॥ ೪೪

ಝಳದ ಲಳಿ ಬಟಕಟಿಸೆ ಮಾರ್ಗ
ಸ್ಖಲಿತಖೇದಸ್ವೇದಬಿಂದುಗ
ಳೊಳಸರಿಯೆ ರೋಮಾಳಿ ಕಾಣಿಸೆ ತೃಷೆಯ ದೆಸೆ ಮುಱಿಯೆ ।
ತಳಿತುದಾಪ್ಯಾಯನವಮನೋರಥ
ಫಲಿಸಿತರಸಿಯ ಹರುಷದರ್ಪಣ
ಬೆಳಗುವುದು ಮಝುಭಾಪೆನುತ ಭುಲ್ಲವಿಸಿದನು ಭೀಮ ॥ ೪೫

ಅಲ್ಲಿ ಕುಬೇರಪರಿವಾರಕ್ಕು ಭೀಮಸೇನನಿಗೂ ಸಂವಾದ.

ಸಾರೆ ಬರೆ ಬರೆ ಕಂಡನಲ್ಲಿ ಕು
ಬೇರನಾಳಿದ್ದುದು ತದೀಯಸ
ರೋರುಹದ ಕಾಹಿನಲಿ ಯಕ್ಷರು ಲಕ್ಷಸಂಖ್ಯೆಯಲಿ ।
ಸಾರೆ ಚಾಚಿದ ಹರಿಗೆಗಳ ಬಲು
ಕೂರಲಗು ಹೊದೆಯಂಬುಚಾಪಕ
ತಾರಿ ಸಲ್ಲೆಯ ಸಬಳಗಳ ಸೋಪಾನಪಜ್ಕ್ತಿಯಲಿ ॥ ೪೬

ಯೆದ್ದರವರಿದಿರಾಗಿ ಭೀಮನ
ಹೊದ್ದಿದರು ನೀನಾರು ಹದ್ದಿಗೆ
ಬಿದ್ದಿನನೊ ಮೇಣ್ ಮಿತ್ರಭಾವದಲೆಮಗೆ ಬಿದ್ದನನೊ ।
ಉದ್ದರುಟುತನ ನಿನ್ನ ಮೋಟಿಯು
ಲಿದ್ದುದೈ ನೀನಾರು ನಿನಗೇ
ನಿದ್ದುದಿಲ್ಲಿ ಯೆನುತ್ತ ನುಡಿದರು ಯಕ್ಷರನಿಲಜನ ॥ ೪೭

ನಾವಲೇ ಕುಂತೀಕುಮಾರರು
ಭೂವಧೂವಲ್ಲಭರು ನಮ್ಮಯ
ದೇವಿಗಾದುದು ಬಯಕೆ ಸೌಗಂಧಿಕಸರೋರುಹದ ।
ಠಾವ ಗಾಣಿಸಿ ಕೊಂಡು ತಹುದೀ
ತಾವರೆಯುನೆನೆ ಬಂದೆವಿಲ್ಲಿಗೆ
ನೀವು ಕಾಹಿನ ಭಂಟರೆಮ್ಮನು ತಡೆಯಲರಿದೆಂದ ॥ ೪೮

ಆಭಟರು ಕುಬೇರನಲ್ಲಿಗೆ ಹೋಗಬಹುದೆಂದು ಭೀಮಸೇನನನ್ನು
ಕಂಡು ಹೇಳಿದುದು.

ಐಸಲೇ ತಪ್ಪೇನು ನೀ ಯ
ಕ್ಷೇಶನಲ್ಲಿಗೆ ಪೋಗಿ ಬೇಡುವು
ದೀಸರೋರುಹವಾವ ಘನ ಧನಪತಿಯುದಾರನಲೆ ।
ಮೀಸಲಿನ ಸರಸಿಯಲಿ ದೃಷ್ಟಿಯ
ಸೂಸಬಹುದೇ ರಾಯನಾಜ್ಞೆಯ
ಭಾಷೆ ಯಿಲ್ಲದೆ ಬಗೆಯಲರಿದೆಂದುದು ಭಟಸ್ತೋಮ ॥ ೪೯

ಬೇಡಲರಿಯೆವು ಬೇಡುವರು ಕೂ
ಡಾಡುವವರಾವಲ್ಲ ಕದನವ
ಬೇಡಬಲ್ಲೆವು ಕರೆಯಿಕೊಡಲಾಪರೆ ಧನೇಶ್ವರನ ।
ಬೇಡುವುದು ಗದೆ ನಿಮ್ಮ ವಕ್ಷವ
ತೋಡಿ ನೆತ್ತರುಗೊಳದೊಳೋಕುಳಿ
ಯಾಡುವುದನೆಂದನಿಲಸುತ ತೂಗಿದನು ನಿಜಗದೆಯ । ೫೦

ಭೀಮಸೇನನಿಗೂ ಕುಬೇರಭಟರಿಗೂ ಯುದ್ಧ.

ಎಲೆಲೆ ಕವಿ ಕವಿ ಯಕ್ಷರಾಕ್ಷಸ
ದಳವ ತಾನೊಟ್ಟೈಸುವನು ಹೆ
ಬ್ಬುಲಿಯೆಡೆಗೆ ಹೋತು ಹೊಡಕರಿಸಿತು ಮಹಾದೇವ ।
ತಲೆಯ ಹೊಯ್ ಚಂಡಾಡುತಿನ್ನಿವ
ನೆಲುವನೆನುತೀಟಿಯಲಿ ಸಬಳದ
ಲಲಗಿನಲಿ ಖಡ್ಗದಲಿ ಹೊಯ್ದರು ಪವನನಂದನನ ॥ ೫೧

ತಾಗಿದೆಳಮುಳ್ಳಿನಲಿ ಮದಗಜ
ಸೀಗುರಿಸುವುದೆ ಭಟರ ಕೈದುಗ
ಳೇಗುವುದು ಪವಮಾನಸುತ ಕೈಕೊಂಡ ಖಾತಿಯಲಿ ।
ತಾಗಿದವದಿರನಿಕ್ಕಿದನು ರಣ
ದಾಗಡಿಗರನು ಸೆಕ್ಕಿದನು ಕೈ
ದಾಗಿಸಿದನನಿಬರಲಿ ಗಂಡುಗತನದ ಗಾಡಿಯಲಿ ॥ ೫೨

ಗಾಢಿಸಿತು ಗಜಬಜ ಕುಬೇರನ
ಬೀಡಿನಗ್ಗದ ಸುಭಟರೇ ಕೈ
ಮಾಡಿರೈ ಕೊಳಗಾಹಿಗಳು ಫಡ ಹೋಗದಿರಿ ಯೆನುತ ।
ಝಾಡಿಸಿದ ಮಣಿಮಯದ ಗದೆಯಲಿ
ತೋಡು ವೈಲಿನ ತುಡುಕುಘಾಯದ
ನೀಡುಮೊನೆಗಳ ವಿಗಡನಿಕ್ಕಿದ ನಿಖಿಳರಾಕ್ಷಸರ ॥ ೫೩

ಹಾಱಿದುವು ಹಂಸೆಗಳು ತುದಿವೆರ
ನೇಱಿದುವು ನವಿಲುಗಳು ತುಂಡವ
ನೂಱಿ ನೀರೊಳು ಮುಳುಗಿ ಮರಳ್ದುವು ಜಕ್ಕವಕ್ಕಿಗಳು ।
ಚೀಱಿದುವು ಕೊಳರ್ವಕ್ಕಿ ದಳದಲಿ
ಜಾಱಿ ತಾವರೆಯೆಲೆಯ ಮೆಱೆಗಳ
ಲಾರಡಿಗಳಡಗಿದುವು ಕೋಳಾಹಳಕೆ ಪವನಜನ ॥ ೫೪

ಚೆಲ್ಲಿದರು ರಕ್ಕಸರು ಯಕ್ಷರು
ಬಿಲ್ಲ ಬಿಸುಟರು ಗುಹ್ಯಕರು ನಿಂ
ದಲ್ಲಿ ನಿಲ್ಲರು ಕಿನ್ನರರನಿನ್ನೇನ ಹೇಳುವೆನು ।
ಗೆಲ್ಲವಿದು ಲೇಸಾಯ್ತು ಮಾನವ
ನಲ್ಲ ನಮಗೀಭಂಗ ಭಯರಸ
ವೆಲ್ಲಿ ಭಾಪುರೆ ವಿಧಿಯೆನುತ ಚಿಂತಿಸಿತು ಭಟನಿಕರ ॥ ೫೫

ಆಗ ಭೀಮಸೇನನ ದಯೆ.

ಗಾಯವಡೆದರು ಕೆಲರು ಕೆಲರಸು
ಬೀಯವಾದುದು ಬಿಡುದಲೆಯ ಬಲು
ನಾಯಕರು ಸಂತೈಸಿದರು ಕೌಬೇರಭವನದಲಿ ।
ವಾಯುಸುತ ನಿಜವಿಜಯ ಶಿರಿಯ ಪ
ಸಾಯಿತಂಗಭಿಷೇಕವೆಂದು ಗ
ದಾಯುಧವನಲುಗಿದನು ನೀರಲಿ ಚಾಚಿದನು ತಡಿಗೆ ॥ ೫೬

ತೊಳೆದು ಚರಣಾನನವನಾನಡು
ಗೊಳದೊಳಗೆ ಹೊಕ್ಕಡಿಗಡಿಗೆ ಮು
ಕ್ಕುಳಿಸಿ ತೀರದಲುಗುಳಿ ದಿವ್ಯಾಂಭೋಜಪರಿಮಳದ ॥
ತಳುವದಲೆ [1] ತನಿಹೊರದ ಶೀತಳ
ಜಲವ ಕೊಂಡಾಪ್ಯಾಯಿತಾಂತ
ರ್ಲಲಿತಹೃದಯನು ನಿಮಿರ್ದು ಹಿಡಿದನು ಮೇಲಪಚ್ಚೆಗಳ ॥
ಚಾಚಿದನು ಬಱಿಕೈಯ್ಯನಬುಜಕೆ
ಚಾಚುವಿಭಪತಿಯಂತೆ ತುಂಬಿಗ
ಳಾಚಡಾಳಧ್ವನಿಯ ಘಟ್ಟಣೆ ಮಿಗಲು ಚಿಮ್ಮಿದುವು ।
ವೀಚಿ ಮಸಗಿದ ಕೊಳನೊ ಜನರುಷಿ
ಯಾಚರಣೆಯೋ ಕಮಲವನವನು
ಲೋಚನದಿ ಲಾವಣಿಗೆಗೊಂಡನು ನಿಮಿಷದಲಿ ಭೀಮ ॥ ೫೮

1 ಥಿಳಸದಲೆ, ಚ.

ತೀಱಿದು ತಾವರೆವನವ ಕಕ್ಷದೊ
ಳೇಱಿಕೆ ಗದೆಯುನು ಕೊಂಡು ಸರಸಿಯು
ಹೊಱವಳಯುದಲಿ ನಿಂದು ಕಾಹಿನ ಯಕ್ಷರಾಕ್ಷಸರ ।
ಒಱಲಿ ಕರೆದನು ನಿಮ್ಮ ಕೊಳನಿದೆ
ಬಱಿದೆ ದೂರದಿರೆಮ್ಮನೆನುತಾ
ಸರಿನವೊತಿನ ನಲವಿನಲಿ ಮರಳಿದನು ಕಲಿಭೀಮ ॥ ೫೯

ಹನ್ನೊಂದನೆಯ ಸಂಧಿ ಮುಗಿದುದು.

## ಹನ್ನೆರಡನೆಯ ಸಂಧಿ.

### ಸೂಚನೆ.

ಭೀಮ ಕೊಂದನು ಕಲಿಜಟಾಸುರ
ನಾಮ ಸಾಮಣಿಮಂತನನು ಬೞಿ
ಕೀಮಹೀತಳ ಕಿಱಿದು ಕಂಡನು ಪಾರ್ಥನಗ್ರಜನ ॥

### ಧರ್ಮರಾಯನ ಚಿಂತೆ.

ಕೇಳು ಜನಮೇಜಯ ಯುಧಿಷ್ಠಿರ
ನೋಲಗದಲುತ್ಪಾತಶತವಿವ
ರಾಲಿಗಳನಂಜಿಸಿದುವತಿರಂಜಿಸಿದುವದ್ಭುತವ ।
ಕೇಳಿದನಿದೇನೆಂದು ವರವಿ
ಪ್ರಾಳಿಯನು ಧೌಮ್ಯಾದಿಋಷಿಗಳು
ಹೇೞಿದರು ತಚ್ಛಕುನಸಂಗತಿಗಳ ಫಲೋತ್ತರವ ॥ ೧

ಸರಸಸೌಗಂಧಿಕದ ಪುಷ್ಪೋ
ತ್ಕರಕೆ ಪವನಜ ಹೋದನೆಂಬುದ
ನರಸಿಯಿಂದಱಿದವನಿಪನು ಪೂರಾಯದುಗುಡದಲಿ ।

ನರನ ಹದನೇನೋ ವೃಕೋದರ
ನಿರಲು ತಾನೆಂತೆನುತ್ತ ಚಿಂತಾ
ಭರದಲಿದ್ದನು ಭೀಮಸೇನನ ಕಾಂಬ ತವಕದಲಿ ॥ ೧

ಆಸಕಲಪರಿವಾರರಾಣೀ
ವಾಸಸಹಿತಾರಣ್ಯಭವನಾ
ಭ್ಯಾಸಿ ಬಂದನು ಭೀಮಸೇನನ ಗಮನಪಥವಿಡಿದು ।
ಆಸುಗಂಧಿಕಕಮಲಪರಿಮಳ
ಬಾಸಣಿಸಿತೀಜನಮನೋವಿ
ನ್ಯಾಸವನು ಇದೆ ಬಂದನನಿಲಜನೆಂದುದಖಿಳಜನ ॥ ೩

ಧರ್ಮರಾಯನು ಭೀಮಸೇನನನ್ನು ನೋಡಿದುದು.

ಎನಲು ಬಂದನು ಭೀಮನಂಬುಜ
ವನವಿದಿರು ಬಂದಂತೆ ಕಂಪಿನ
ತನಿರಸದ ತಾವರೆಯ ತೆಕ್ಕೆಯ ಕೊಳನ ತೋಱಿಕೆಯ ।
ಜಿನುಗುತುಂಬಿಯ ಜಾಳಿಗೆಯ ತನಿ
ಮಿನುಗು ಮೋಱೆಯ ಕಣ್ಣ ಕೆಂಪಿನ
ಘನಭಯಂಕರಭೀಮನಿರವನು ಕಂಡನವನೀಶ ॥ ೪

ಸೆಳೆದು ತಕ್ಕೈಸಿದನು ತಾವರೆ
ಗೊಳನ ತೋಟಿಯ ಹದಕೆ ಕಂಪಿಸಿ
ಬೞಿಕ ಕಪಿದರುಶನದ ಕೌತೂಹಲಕೆ ಘುಲ್ಲವಿಸಿ ।
ನಳಿನಗಂಧದ ಗಾಢತರಸುಖ
ದೊಳಗೆ ಪೊಂಪುಳಿಯೋಗಿ ಭೂಪತಿ
ತಿಲಕನಿರ್ದನು ಗಂಧಮಾದನಗಿರಿಯ ತಪ್ಪಲಲಿ ॥ ೫

ಗಿರಿಯ ತುದಿಗೇಱುವ ಮಹೀಶನ
ಭರವಸವನಶರೀರರವ ಪರಿ
ಹರಿಸಲಿಱಿದನು ಮರಳಿ ಬಂದನು ಬದರಿಕಾಶ್ರಮಕೆ ।

ಅರಸ ಕೇಳೈ ಮತ್ತೆ ಮಾರಿಯು
ಪರುಠಪವನನಿಲಜನು ಬೇಂಟೆಗೆ
ಹರಿದನಿತ್ತಲು ಬಂದು ಮುಸುಕಿತು ದಾನವರ ಧಾಟಿ ‖ ೬

ಖಳಜಟಾಸುರನೆಂಬನಾದ್ವಿಜ
ಕುಲವ ಬೆದಱಿಸಿ ಯಮಳರೊಡನಿ
ಟ್ಟಣಿಸಿ ಕಾದಿ ಕಠೋರದಲಿ ಹಿಡಿದನು ಮಹಾಸತಿಯ ;
ಬಲುಗಡಿಯನಿವನೊಡನೆ ಹೋರಿಯೆ
ಬಳಲಿದರು ಬೆಂಬತ್ತಿದರು ಗಾ
ವಳಿಯ ಗಜಬಜ ತಿರುಗಿತತ್ತಲು ಪವನಜನ ಹೊರೆಗೆ ‖ ೭

ತಳಿರಕೈಗಳ ಮೊಱೆವಬಾಯ್ಗಳ
ಜಲದ ಕಂಗಳ ತಾಪದಿಂ ಗಳ
ದೊಳಥಗೆಯ ಹೊಯ್ವಳ್ಳೆಗಳ ಬಲುಭಯದ ಕೌಳ್ಗಳ ।
ಕಳಕಳದ ಕಾಲುವೆಯ ಭಂಗದ
ಹೊಳಹುಗಳ ಹೋಲುವೆಯ ಸವ್ಯಾ
ಕುಳರ ಕಂಡನು ಭೀಮನೇನೇನೆಂದುಬೆಸಗೊಂಡ ‖ ೮

ಹಿಡಿದನರಸಿಯನವನಿಪತಿ ಹಿಡಿ
ವಡೆದನನುಜರು ಸಹಿತ ಹಾರುವ
ರಡವಿಯಲಿ ಹಾಯಿದರು ಚೆಲ್ಲಿತು ನಮ್ಮ ಪರಿವಾರ ।
ಕಡುಹು ಘನವಿದೆ ದಾನವರ ಮಂ
ಗಡವೆನಲು ಘನಸಿಂಹನಾದದ
ಸಿಡಿಲ ಶಿಕ್ಷಾಗುರುವೆನಲು ಮಸಗಿದನು ಕಲಿಭೀಮ ‖ ೯

ಧಾಟಿ ಯಿಟ್ಟನು ದಾನವರ ದೆ
ಕ್ಖಾಳದಲ್ಲಿಗೆ ಘಲ್ಲಿಸಿದನು
ಬ್ಬಾಳುಗಳು ಹೊಯ್ದೊಱಸಿ ಬಿಡಿಸಿದ ತನ್ನವರ ಸೆಱೆಯ ।

ಸೀಳಿ ನಾಯ್ಗಳ ನೆತ್ತರಿನ ತನಿ
ಗಾಲುವೆಯಲೀ ಬೆಳಸುವೆನು ದಿವ
ಜಾಳಿಗಳ ಸಂತೋಷಸಸಿಯನೆನುತ್ತ ಗರ್ಜಿಸಿದ ॥ ೧೦

ಮಸಗಿತದ್ಭುತಯುದ್ಧ ವಿಬ್ಬರಿ
ಗಸಮಧಾಳಾಧೂಳಿಯಲಿ ಘ
ಲ್ಲಿಸಿದನವನನು ದಂಡೆಯಲಿ ತಡೆಗಾಲಲೊಡೆ ಹೊಯ್ದು ।
ಬಿಸುಗುದಿಯ ನವರುಧಿರಜಲ ಜಾ
ಳಿಸೆ ನವದ್ವಾರದಲಿ ದೈತ್ಯನ
ಕುಸುಕಿಱಿದು ತಿವಿತಿವಿದು ಕೊಂದನು ಕಲಿಜಟಾಸುರನ ॥ ೧೧

ಅರಸ ಕೇಳಾದಾನವನ ತನು
ಬಿರಿದು ಬಿದ್ದುದು ಬಾತ ಹೆಣನು
ಬ್ಬರದ ಹೊಲಸಿದ ಗವಲು ಕವಿದುದು ಕೂಡೆ ವನದೊಳಗೆ ।
ಧರಣಿಪತಿ ತದ್ಬರಿಕಾಶ್ರಮ
ವರತಪೋವನದಿಂದ ತೆಂಕಲು
ತಿರಿಗಿ ಬಂದನು ಸಾಱಿದನು ವೃಷಪರ್ಣನಾ[1] ಶ್ರಮಕೆ ॥ ೧೨

ಆತಪೋವನವಿವರ ಫಲ್ಗಣೆ
ಗಾತುದಿಲ್ಲ ವಿನೋದದಲಿ ವಿ
ಖ್ಯಾತಶೈಲದ ಮೇಖಲೆಯ ತುದಿಗಡಱಿದನು ಕಲಿ ಭೀಮ ।
ಆತ ನಸು ಹಳಚಿದನು ದೈತ್ಯನ
ಭೀತ ಮಣಿಮಾನೆಂಬವನು ಪದ
ಘಾತಿಯಲಿ ಲಟಕಟಿಸೆ ಗಿರಿಯಲಿ ಕಾದಿದರು ಭಟರು ॥ ೧೩

ಕೊಂದನವನನು ವಿಗತಶಾಪನು
ನಿಂದನಿದಿರಲಿ ಯಕ್ಷರೂಪಿನೊ
ಳಂದಗಸ್ತ್ಯನ ಶಾಪವೃತ್ತಾಂತವನು ವಿವರಿಸಲು ।

1 ಪರ್ವತಾ, ಚ.

ಬಂದನಲ್ಲಿಗೆ ಯಕ್ಷಪತಿ ನಲ
ವಿಂದಲಿವರನು ವಿವಿಧವಸ್ತುಗ
ಳಿಂದ ಸಂತಸಬಡಿಸಿ ಕೊಂಡಾಡಿದನು ಪಾಂಡವರ ॥ ೧೪

ಅರಸನತಿಸಂತೋಷಮಯಸಾ
ಗರದಿ ಮುಳುಗುವನೊಮ್ಮೆ ನಿಮಿಷಕೆ
ನರನ ವಿರಹದ ದುಃಖಸಾಗರದೊಳಗೆ ಸೈಗೆಡವ ।
ಪರಮಋಷಿಗಳ ಮಧುರವಚನೋ
ಕ್ತರದಿ ತಿಳಿವನದೊಮ್ಮೆ ಪುನರಪಿ
ಮರುಳಹನು ಫಲುಗುಣನ ನೆನೆನೆನೆದರಸ ಕೇಳೆಂದ ॥ ೧೫

ಅರಸನಲಿ ಬೇಟೂಟಿ ಬಟಿಕಂ
ಕುರಿಸಿದುದು ಭೀಮನಲಿ ನಕುಲನ
ಲೆರಡು ಮೂರೆಲೆಯಾಯ್ತು ಸಹದೇವನಲಿ ಕವಲೊಡೆದು ।
ಅರಸಿಯಲಿ ಸಲೆ ಹೂತು ಕಾತ
ಬ್ಬರಿಸುತಿರ್ದುದು ಶೋಕಲತೆ ತ
ತ್ಪರಿಕರದ ಕರುಣಾವಳಿಯ ಹಬ್ಬುಗೆಯ ಹರಹಿನಲಿ ॥ ೧೬

ಮಱೆದನೋ ನಮ್ಮನಿಬರನು ಧಿಟ
ಮಱೆಯಲುಚಿತವಲೇ ಸುರೇಂದ್ರನ
ಸೆಱಗು ಸೋಂಕುವ ಸಲುಗೆ ಸಲುವುದೆ ಮರ್ತ್ಯಜಾತಿಯಲಿ ।
ಉಱುವೆಸುರಪನ ಸಾರಸೌಖ್ಯದೊ
ಳಱಿಯನೋ ನಮ್ಮನಿಬರಲಿ ಬಲು [1]
ಸೆಱೆಗೆ ನರನಂಗೈಸನೆಂದವನೀಶ ಚಿಂತಿಸಿದ ॥ ೧೭

ವಾಮನಯನಸ್ಫುರಣಪರಿಗತ
ವಾಮಬಾಹುಸ್ಪಂದವಾದುದು
ಭಾಮಿನಿಗೆ ಭೂಪತಿಗೆ ಜನಿಸಿತು ದಕ್ಷಿಣಾಂಗದಲಿ ।

---

1 ನಮ್ಮಾಪ್ತವ ಸದ, ಚ.

ವೈಮನಸ್ಯವ್ಯಸನನಿರಶನ
ಕೀಮಹಾಶಕುನಂಗಳಿವೆ ಯೆಂ
ದಾಮಹೀಪತಿ ನೆನೆಯುತಿರ್ದನು ಫಲುಗುಣನ ಬರವ ॥ ೧೮

ಅರಸ ಕೇಳ್ಯೆ ಹಿಮದ ಹೊಯ್ಲಿನ
ಸರಸಿಜಕೆ ರವಿಯಂತೆ ಶಿಶಿರದ
ಸರಿದೆಲೆಯ ಬನದಲಿ ವಸಂತನ ಬರವಿನಂದದಲಿ ।
ಸುರವಿಮಾನಶ್ರೇಣಿಗಳ ನವ
ಪರಿಮಳದ ಪೂರದಲಿ ಭಾರತ
ವರುಷಕಿಳಿದನು ಪಾರ್ಥ ಬಂದನು ಧರ್ಮಜನ ಹೊರೆಗೆ ॥ ೧೯

ಏನನೆಂಬೆನು ಜೀಯ ಕುಂತೀ
ಸೂನು ಕಂಡನು ದೂರದಲಿ ಸುರ
ಮಾನಿನೀಜನದಂಗವಟ್ಟದಪೂರ್ವಪರಿಮಳದ ।
ಆನನೇಂದುಗಳಾಭರಣವು
ಕ್ತಾನುಕೃತತಾರಾಮಯೂಖ ವಿ
ತಾನದಲಿ ಹೊಳೆಹೊಳೆವ ದಿವ್ಯಸುರೇಂದ್ರಮಣಿರಥವ ॥ ೨೦

ಆರದೀರಥವೆನುತ ತಿರುಗಿ ಮ
ಹೀರಮಣನಾಲಿಗಳು ಹರಿದುವು
ಭಾರಣೆಯ ಜನನಯನಕೋಟಿಯ ಕೊಲ್ಲಣಿಗೆ ಮಿಗಿಲು ।
ಭೂರಿಮಣಿರಶ್ಮಿಗಳ ಚಿಮ್ಮುವ
ಚಾರುಚಾಮರ ತುರಗತತಿಯು ಗ
ಭೀರಹೇಷಾರವದಲಿಳಿದುದು ರಥ ಸುರೇಶ್ವರನ ॥ ೨೧

ರಥ ಸುರೇಶನದೀತ ನಂಮತಿ
ರಥನಲಾ ನೆಱೆ ನೋಂತು ಪಡೆದಳೊ
ಪೃಥೆಯೆನುತ ಕವಿವುದು ಮುನಿವ್ರಜ ಮಿಕ್ಕವರ ಮಿಗುತ ।

ಮಥಿತರಿಪುವವಧಾನ ಲೋಕ
ಪ್ರಥಿತ ನಿರುಪಮವೆಂಬ ಸುರಸಾ
ರಥಿಯು ನೆಲನುಗ್ಗಡಣೆಯುಲಿ ನಗುತಿರ್ದದನಾರಥವ ॥ ೨೨

ಅರಸ ಕೇಳುಬ್ಬಿನಲಿ ಭೀಮನ
ಧರಣಿಪನ ರೋಮಶನ ಧೌಮ್ಯನ
ಚರಣದಲಿ ಮೆಯ್ಯಿಕ್ಕಿ ಕೈಮುಗಿದೆಱಗಿ ಮುನಿಜನಕೆ ।
ಹರಸಿದನು ಪ್ರೊಡವಂಟ ನಕುಲಾ
ದ್ಯರನು ಮಧುರಪ್ರೀತಿವಚನ
ಸ್ಫುರದಮಂದಸ್ನೇಹದಲಿ ನೋಡಿದನು ಪರಿಜನವ ॥ ೨೩

ಬಿಗಿದಗವಸಣಿಗೆಯಲಿ ಸೂರ್ಯನ
ನುಗಿವವೋಲ್ ಮಾಣಿಕ್ಯಮಯರ
ಶ್ಮಿಗಳು ರಂಜಿಸೆ ಮಿಗೆ ಸುರೇಶ್ವರನಿತ್ತ ಭೂಷಣವ ।
ತೆಗೆತೆಗೆದು ಯಮನಂದನಂಗೋ
ಲಗಿಸಿ ಭೀಮಂಗಿತ್ತು ನಕುಲಾ
ದಿಗಳ ಮೆಯ್ಯಲಿ ತೊಡಿಸಿದನು ಕೈಯ್ಯಾಱೆ ಕಲಿಪಾರ್ಥ ॥ ೨೪

ಕರೆಸಿ ಕಾಣಿಸಿದನು ಸುರಾಧೀ
ಶ್ವರನ ಸಾರಥಿಯನು ಸುರೇಶನ
ವರವರೂಥದ ಸನ್ನಿವೇಶದ ಸಕಲಶೋಭೆಗಳ ।
ಅರಸಮೊದಲಾದಖಿಳಜನಭೂ
ಸುರರು ಕಂಡುದು ಮಾತಳಿಯ ಸ
ತ್ಕರಿಸಿ ಸಂಭಾವಿಸಿದನವನೀಪತಿ ಸರಾಗದಲಿ ॥ ೨೫

ಕುಶಲವೇ ದೇವೇಂದ್ರನಾತನ
ಶಶಿವದನೆಯರು ಸುಖಿಗಳೇ ರಾ
ಕ್ಷಸರು ವಶವರ್ತಿಗಳೇ ನಿರ್ಜರನಗರ ನಿರ್ಭಯವೆ ।

ದೆಸೆಯವರು ಮೌಳಿಗಳವರು ಮ
ನ್ನಿಸುವರೇ ಸುರಲೋಕಸೌಖ್ಯ
ವ್ಯಸನಭರಭಂಗಿಸದಲೇ ಹೇಳೆಂದನಾಭೂಪ ॥ ೧೬

ಹದುಳಿಗನು ದೇವೇಂದ್ರನಾತನ
ಸುದತಿಯರು ಸುಖಜೀವಿಗಳು ನೆಱೆ
ತ್ರಿದಶರುಱೆ ಬಲ್ಲಿದರು ವಶವರ್ತಿಗಳು ದಿಗಧಿಪರು ।
ಮದಮುಖದ ರಾಕ್ಷಸರು ಮಾಯಾ
ವಿಧದ ದನುಜರು ಧೂಳಿಪಟವಾ
ಯ್ತುದಱಿನೀ ಸುರಲೋಕ ಸೌಖ್ಯದೊಳಿಹುದು ಕೇಳೆಂದ ॥ ೧೭

ಭಜಿಸಿದೈ ಭರ್ಗನನು ಶಾಂಭವ
ಯಜನಸಾರಸಮಾಧಿ ಶಿವ ಪದಕೆ
ರಜವ ಬೆಱಸಿತೆ ಬಗೆಯ ಕುಳಿ ತವರಾಯ್ತೊ ತಡಿದೆಗೆದು ।
ವಿಜಯಶಬ್ದವು ಪಾರ್ಥಕೃತಿಯಲಿ
ಮಜಡವಿಲ್ಲಲೆ ವೈರಿರಾಯರ
ಕುಜನತಾವಿಚ್ಛಿದ ಸಾಧ್ಯವೆ ಯೆಂದನಾಭೂಪ ॥ ೧೮

ಜೀಯ ಚಿತ್ತೈಸಿಂದ್ರನಲ್ಲಿ ಸ
ಹಾಯವಾದನು ಶಿವನ ಕಾರು
ಣ್ಯಾಯುಧವೆ ಮಸೆದುದು ಸುರೇಂದ್ರಸ್ನೇಹ ಸಾಣೆಯಲಿ ।
ಗೇಯವೇ ಧೂರ್ಜಟಿಯ ಶರ ಲೋ
ಕಾಯತರಿಗೇನೆಂಬೆನದು ನಿ
ರ್ದಾಯದಲಿ ವಶವರ್ತಿಯಾದುದೆನಗೆಂದನಾಪಾರ್ಥ ॥ ೧೯

ಹರನ ಕರುಣಾಲಾಭ ಲೋಕೋ
ತ್ತರದ ಪರಿತೋಷದಲಿ ತಾನಿರೆ
ಸುರಪ ಕಳುಹಿದನೀರಥವನೀವಿಮಲಮಾತಳಿಯ ।

ಕರೆಸಿದನು ನಿಜನಗರಿಗಾ ನಿ
ರ್ಜರನಿಕರವಾಸತಿಯರಾದಿ
ಕ್ಕರಿವೃಢರು ಕೊಂಡಾಡಿತೆನ್ನನು ಭೂಪ ಕೇಳೆಂದ ॥ ೩೦

ಪಾಶುಪತಶರಭುವನದೂರ್ಧ್ವ
ಶ್ವಾಸವತಿಕೋವಿದರಲೇ ಜಿ
ತ್ಕೈಸಿ ಬಲ್ಲಿರಿ ನಿಮ್ಮಡಿಗಳಾಮ್ನಾಯವೀಧಿಯಲಿ ।
ಆಶರವಲೇ ಸೇರಿತೆನಗೆ ಮ
ಹೇಶನಿಂದಲ್ಲಿಂದ ಬಳಿಕ ಸು
ರೇಶನತಿಮನ್ನಿಸಿದನಮರಾವತಿಯೊಳೊಲವಿನಲಿ ॥ ೩೧

ಖ್ಯಾತಿವಡೆದೆನು ಶಿವನ ಕಾರು
ಣ್ಯಾತಿಶಯಕಿದು ಫಲವೆ ಸಾಕಿ
ನ್ನೆತಕೀರಾಜಸವಿಡಂಬವಿಕಾರಕುಚಿತನಲೆ ।
ವೀತಿಹೋತ್ರಪರೇತಪತಿಪುರು
ಹೂತವರುಣಾದಿಗಳು ಕಾಂಡ
ವ್ರಾತದಲಿ ತೊಳೆದರು ಮನೋರಥಕಲಿತಕರ್ದಮವ ॥ ೩೨

ಕೇಳಿ ವಿಗೆ ಹಿಗ್ಗಿದನು ತನುರೋ
ಮಾಳಿ ತಳಿತುದು ಹರುಷವಾರಿಗ
ಳಾಲಿಗಳ ಹೊಚಿದವು ತೊಚಿದುವಂತರವ್ಯಥೆಯು ।
ತೋಳ ಹಿಡಿದೆಳೆದಪ್ಪಿ ಪಾರ್ಥನ
ಬೋಳವಿಸಿದನು ಪೌರವಾನ್ವಯ
ಪಾಲಕನೆ ಯೆಂದರಸ ಕೊಂಡಾಡಿದನು ಫಲುಗುಣನ ॥ ೩೩

ಮುಖಿದುದಿನ್ನೇನಹಿತಬಲ ಹಗೆ
ಹಋಿದುದ್ಯೆ ದ್ರೌಪದಿಯ ಮರೌಳಿಗೆ
ಕಖುಬಿದವರಿಗೆ ಕಾಣಲಾಯ್ತು ಕೃತಾಂತನೋಲಗವ ।

ಕಱಿದನೇ ಕರುಣವೆನು ಹರ ಹರ
ಪೆಱಿನೊಸಲಬಲುದೈವನಿನಿತರ
ಹೊಱಿಗೆ ಗದುಗಿನ ವೀರನಾರಾಯಣನ ಕರುಣದಲಿ ॥ ೩೪

ಹನ್ನೆರಡನೆಯ ಸಂಧಿ ಮುಗಿದುದು.

---

## ಹದಿಮೂರನೆಯ ಸಂಧಿ.

---

ಸೂಚನೆ.

ಲೀಲೆ ಮಿಗೆ ನರನಮರಲೋಕದ
ಕಾಲಿಕೇಯನಿವಾತಕವಚರ
ಸೀಟಿ ಬಿಸುಟಂದವನು ವಿವರಿಸಿದನು ಮಹೀಪತಿಗೆ ॥

ಕೇಳು ಜನಮೇಜಯ ಧರಿತ್ರೀ
ಪಾಲ ಧರ್ಮಜನರ್ಜುನನನುಪ
ಲಾಲಿಸಿದನುಱೆ ಮುಱುಗಿದನು ಪುಳಕಾಂಬುಪೂರದಲಿ ।
ಹೇೞು ಪಾರ್ಥ ಕಪರ್ದಿಯಸ್ತ್ರ
ವ್ಯಾಳಸಂಗ್ರಹಣಪ್ರಪಂಚವ
ನಾಲಿಸುವೆನೆನೆ ನೃಪತಿಗಭಿವರ್ಣಿಸಿದನಾಕಥೆಯ ॥ ೧

ಹರನ ಶರಲಾಭಪ್ರಸಿದ್ಧಿಗೆ
ಕರೆಸಿದನು ಹರಿಯಲ್ಲಿ ಸುರಪತಿ
ಗಱುಹಿದನು ಸುರರಿಪುಗಳೋಟಿಗವನು ಸುರಾಚಾರ್ಯ ।
ಅರಿಗಳವುಗೆ ನಿವಾತಕವಚರು
ಸುರಪದವಿ ಸೋಪದ್ರವದ ನಿ
ಷ್ಠುರವಿದೆಂದು ರಹಸ್ಯದಲಿ ತನಗೆಂದನಮರೇಂದ್ರ ॥ ೨

ಅರ್ಜುನನನ್ನು ಕುರಿತು ಇಂದ್ರನು ಸ್ವರ್ಗದ ತೊಂದರೆಯನ್ನು ಹೇಳಿದುದು.

ಶಿವನ ಕೃಪೆ ನಿನಗಾಯ್ತು ನಿರ್ಜರ
ನಿವಹವಿದೆ ನಾಕದಲಿ ಬಲುದಾ
ನವರ ವಿಲಗದಿ ಬೆಚ್ಚುವ್ರೋದುದು ಸ್ವರ್ಗಸೌಖ್ಯಫಲ ।
ಜವನ ಭಯ ಜೀವರಿಗೆ ದುರ್ಜನ
ರವಗಡವ್ರು ಸುಜನರಿಗೆ ತಮ ಶಶಿ
ರವಿಗಳಿಗೆ ಮುನಿವಂತೆ ಖಳರಿದೆ ಯೆಂದನಮರೇಂದ್ರ ॥ ೩

ಮುದದ ನೆಲೆ ಶುಭದಿಕ್ಕ ಸೊಗಸಿನ
ಸದನ ಸೌಖ್ಯದ ಗರುಡಿ ಸೋಂಪಿನ
ಪದವಿ ಲೀಲೆಯ ತಾಣ ತಾಯ್ಮನೆ ಖೇಳಮೇಳವದ ।
ಮು ದದ ಮಡು ಭೋಗೈಕನಿಧಿ ಸಂ
ಪದದ ಜನ್ಮಸ್ಥಲ ಮನೋರಥ
ದುದಯಗಿರಿ ಹಿಂದೀಸುದಿನವೆಮರಾವತೀನಗರ ॥ ೪

ಕಳವಳದ ನೆಲೆ ಭಯದ ಜನ್ಮ
ಸ್ಥಲ ವಿಷಾದದ ಪೇಟೆ ಖಾತಿಯ
ನಿಳಯ ಖೋಡಿಯ ಕಟಕ ಭಂಗದ ಸಂಭವಸ್ಥಾನ ।
ಅಳುಕಿನಂಗಡಿ ಹಳವಿನಾಡುಂ
ಬೊಲ ನಿರೋಧದ ಶಾಲೆ ದುಗುಡದ
ಕಳನೆನಿಸಿತೀನಗರಿ ಯೀಗಳು ಪಾರ್ಥ ಕೇಳೆಂದ ॥ ೫

ಸಿಡಿಲಕಾಲದೊಳಡಗುವಂತಿರೆ
ಕಡಲು ಕಲ್ಪದೊಳುಕ್ಕುವಂತಿರೆ
ಪ್ರೌಢವಿಯಾಕಸ್ಮಿಕದೊಳಿಟವಂತಿರೆ ರಸಾತಳಕೆ ।

ತುಡುಕುವುದು ರಕ್ಕಸರ ಭಯ ಹುಡಿ
ಹುಡಿಯಹುದು ಸುರವಿಭವವೆಮಗಿ
ಮ್ಮಡಿಯಲವರು ನಿವಾತಕವಚರು ಪಾರ್ಥ ಕೇಳೆಂದ ॥ ೬

ಕೆತ್ತ ಕದ ತೆಗೆಯದು ಸುರೌಘದ
ಹೊತ್ತ ಸರಕಿಳಿಯದು ಸುಕಲ್ಪಿತ
ಮತ್ತಗಜರಥವಾಜಿ ತೆಗೆಯವು ಪುರದ ಬಾಹೆಯಲಿ ।
ತೆತ್ತು ಹರಿಯದು ಕಾದಿ ರಣದಲಿ
ಸತ್ತು ಹಿಂಗದು ಸುರರ ಸತಿಯರು
ತೊತ್ತಿರಾದರು ಖಳರ ಮನೆಗಳಿಗೆಂದನಮರೇಂದ್ರ ॥ ೭

ಭಯದ ಬಾಹೆಯಲಪಸರದ ನಿ
ಶ್ಚಯದ ದುಮ್ಮಾನದ ವಿಘಾತಿಯ
ಲಯದ ಲಾವಣಿಗೆಯಲಿ ರಾಗದ ತಡಿಯ ಸಂಕಟದ ।
ದಯೆಯ ಪಾಡಿನ ಹೃದಯಕಂಪದ
ನಯನದೊಱತೆಯ ಬಗೆಯ ಕೊಱ
ತೆಯ ಜಯದ ಜೋಡಿಯ ದೇವನಿದೆ ನೋಡೆಂದನಮರೇಂದ್ರ ॥ ೮

ಅಲ್ಲಿ ದೈತ್ಯರು ಮೂಱುಕೋಟಿಗ
ಳಲ್ಲಿ ಸಮಸತ್ವರು ಮಹಾರಥ
ರಲ್ಲದಿಲ್ಲವರೊಳಗೆ ದೇವತ್ರಯಕೆ ಬಲ್ಲಿದರು ।
ಗೆಲ್ಲ ನಿನಗಹುದವರೊಡನೆ ಕಳು
ವಿಲ್ಲ ತನ್ನಿಂದಱಿದ ವಿದ್ಯೆಗ
ಳೆಲ್ಲವಕೆ ಗುರುದಕ್ಷಿಣೆ ಯಿದೆಂದನು ಬಲಧ್ವಂಸಿ ॥ ೯

ಅವರುಪೇಕ್ಷೆಯಲುಱವು ಮೋಕ್ಷ ನ
ಮ್ಮವರ ಬೇಹಿನ ಸುಱವಿನಲಿ ಮೋ
ಣವರನಳುಕಿಸುವಾಧಿದೈವಿಕಕರ್ಮಗತಿಗಳಲಿ ।

ದಿವಿಜರಿಂದವರುಳಿದರಾದಾ
ನವರ ಘಟ್ಟಿಸಿ ದೇವಲೋಕವ
ನೆವಗೆ ನಿರುಪದ್ರವದಲೆಡೆ ಮಾಡೆಂದನಮರೇಂದ್ರ ॥ ೧೦

ಇಂದ್ರನ ಅಪೇಕ್ಷೆಯಂತೆ ದೈತ್ಯರ ಮೇಲೆ ಯುದ್ಧಕ್ಕೆ
ಹೊರಟುದು.

ಹೈ ಹಸಾದವು ನಿಮ್ಮ ಕೃಪೆಯುವ
ಗಾಹಿಸುವೊಡೇನರಿದು ದೈತ್ಯರು
ಸಾಹಸಿಕರೇ ಸದೆವೆನೀ ಪುರಜನಕೆ ಹಿತವಹರೆ ।
ಆಹರಾಸ್ತ್ರದೊಳಮರವೈರಿ
ವ್ಯೂಹಭಂಜನವೆಹುದು ನಿಷ್ಪ್ರ
ತ್ಯೂಹ ನಿಶ್ಚಯವೆಂದು ಬಿನ್ನೈಸಿದೆನು ತಾನೆಂದ ॥ ೧೧

ಈರಥವನೇ ಹೂಡಿಸಿದೆನೀ
ಸಾರಥಿಯ ಬೆಸಸಿದೆನು ಸುರಪರಿ
ವಾರ ನೆರೆದುದನೆಣಿಸಲಳವೇ ಕೋಟಿಜಿಹ್ವೆಯಲಿ ।
ವಾರಣದ ಹಯರಥಪದಾತಿಯ
ಭಾರಣೆಗೆ ದಿವ ನೆರೆಯದಿಂದ್ರನ
ವೀರಭಟರೆನ್ನೊಡನೆ ನೆರೆದುದು ಭೂಪ ಕೇಳೆಂದ ॥ ೧೨

ಹೊಲಬಿಗರು ಹರಿದರು ಸುರೇಂದ್ರನ
ದಳದ ಮೌನ್ಯರ ಸನ್ನೆಯಲಿ ದಿಗು
ವಳಯದಗಲದೊಳೊಲೆವ ಲಲಿತಚ್ಛತ್ರಚಮರಿಗಳ ।
ಜಲಧಿ ಜಲಧಿಯ ಹಳಚಲಗಿದ
ವ್ವಳಿಪ ವಾದ್ಯಧ್ವನಿಯ ಡಾವರ
ಸೆಳೆದುದಸುರಸಮೂಹಧೈರ್ಯವನರಸ ಕೇಳೆಂದ ॥ ೧೩

ಆಳು ನಡೆದುದು ಮುಂಗುಡಿಯು ಹರಿ
ಧಾಟಿ ನೂಕಿ ಹಿರಣ್ಯನಗರಿಯ
ಮೂಲೆಗೈದಿತು ಹೊಯ್ದು ದಲ್ಲಿಯ ಬಿನುಗು ಬಿಚ್ಚಟೆಯು |
ಸೂಳವಿಸಿದುವು ಸನ್ನೆಯಲಿ ನಿ
ಸ್ಸಾಳ ದನುಜಪುರೋಪಕಂಠದ
ಕೂಲವತಿಗಳ ತೀರದಲಿ ಬಿಡಿಸಿದೆನು ಪಾಳಯವ || ೧೪

ಅಱಿಯದಾಪಟ್ಟಣವಿದೇನೋ
ಹೊಱಗೆ ಗಜಬಜವೆನೆ ಸುಪರ್ವರ
ಕುಱುಹುಗಳನಱಿದಮರರಿಪುಗಳು ಹರಿದರರಮನೆಗೆ |
ಬಿಱುನುಡಿಯ ಸುಮ್ಮಾನದುಬ್ಬಿನ
ನೆಱೆ ನಗೆಯ ನಯನಾಂಬುಗಳ ಖಳ
ರೆಱಗಲತಿಸುಮ್ಮಾನವೇನೆಂದಸುರ ಬೆಸಗೊಂಡ || ೧೫

ಜೀಯ ಬಲೆಗಳ ತೆಗಿಸು ನಡೆ ನಿ
ರ್ದಾಯದಲಿ ನಿಮ್ಮಡಿಯ ಬೇಂಟೆಗೆ
ರಾಯ ಮೃಗ ನಡೆತಂದವಿವೆ ನಗರೋಪಕಂಠದಲಿ |
ಹೋಯಿತಸುರರ ಕೈಯ್ಯ ಹಸದಿರು
ಪಾಯ ಪಾಯವಧಾರೆನಲು ಖಳ
ರಾಯನೆತ್ತಣ [1] ಮೃಗವದಾವುದೆನುತ್ತ ಬೆಸಗೊಂಡ || ೧೬

ರೂಢಿಸಿದನವರೇಂದ್ರನಮರರ
ವೇಡೆಯಾಯ್ತು ಹಿರಣ್ಯನಗರಿಗೆ
ಗಾಢಬಲರದೆ ವರುಣಯಮಾಗ್ನಿವಾಯುಗಳು |
ರೂಢಿಗಚ್ಚರಿಯಾಯ್ತಲಾ ಪರಿ
ಗೂಢಮೃಗಗಣ ಬಂದುದೀ ನಿ
ರ್ಮೂಢರನ ಹಿಡಿತರಿಸೆಂದನು ದೂತನೊಡೆಯಂಗೆ || ೧೭

---

1 ರಾಯ ಕೇಳುತ, ಚ.

ಇವನ ಹೊಯ್ ಕಟವಾಯ ಕೊಯ್ ತ
ಪ್ಪವನೆ ಸುರಪತಿ ಶಿವ ಶಿವಾ ಸುರ
ರವಗಡಿಸುವರೆ ವೇಡೆ ಗಡ ಹೈರಣ್ಯನಗರಿಯಲಿ ।
ಇವನ ಸೀಜೆನೆ ಹೊಱಗೆ ಸುರಸೈ
ನ್ಯವೆನು ಸೀೞಿಯೆ ಬಱಿಕ ನೀ ನಿ
ನ್ನವನ ಮನವೊಲಿವಂತೆ ಮಾಡೆನೆ ಖಳನು ಬೆಱಗಾದ ॥ ೧೯

ಬಂದನೇ ಸುರರಾಜನಕಟೈ
ತಂದು ಮುತ್ತಿತೆ ದಿವಿಜಬಲ ತರು
ಣೇಂದುಧರನೇ ತರಿಸಿದನೆ ಶಿವ ಶಿವ ವಿಶೇಷವಲ ।
ಇಂದಿನಲಿ ಕಡೆ ಯೆಮಗೆ ವೋಣು ಪು
ರಂದರನು ನಿರ್ನಾಮನೈ ಸಲೆ
ಯೆಂದು ಬಿಟ್ಟನು ಚಮೂಣಿಯನು ಪಟುಭಟರ ಬೊಬ್ಬೆಯಲಿ [1] ॥
ಧರಣಿಪತಿ ಚಿತ್ತೈಸು ವೇಲೆಯು
ಸಿರವನೊಡೆದುಬ್ಬೇಱ್ವ ಘನಸಾ
ಗರದ ವೊಲ್ ಸಿಡಿದೊದಱಿ ಕವಿದುದು ಕೂಡೆ ವಂಕದಲಿ ।
ಕರಿತುರಗರಥರಾಜಿ ಕಾಲಾ
ಳುರವಣಿಸಿತೇನೆಂಬೆನಸುರರ
ಧೊರೆಯು ಸನ್ನೆಗೆ ಸೂಳವಿಪನಿಸ್ಸಾಳಕೋಟಿಯಲಿ ॥ ೨೦

ಅಸುರರು ಯುದ್ಧಕ್ಕೋಸ್ಕರ ಸಿದ್ಧರಾದುದು.

ಕವಿದುದಸುರರ ಚಮೂಣಿ ಬೊಬ್ಬೆಯು
ವಿವಿಧವಾದ್ಯಧ್ವನಿಯು ಕಹಳಾ
ರವದ ಕೋಳಾಹಳಕೆ ತುಂಬಿತು ಬಹಳಭೇರಿಗಳು ।
ರವಿಯುನಾಕಾಶವ ದಿಗಂತವೆ
ತಿವಿದು ಕೆಡರುವಧೂಳಿ ತಿಮಿರಾ
ರ್ಣವವಲೈ ತ್ರೈಜಗವೆನಲು ಝೋಂಪಿಸಿದುದರಿಸೇನೆ ॥ ೨೧

[1] ವೊಗನೋಡಿ, ಕ, ಖ

ದಾನವರ ಧಕ್ಕಡತನವೆನದ
ನೇನನೆಂಬೆನು ಜೀಯ ತೊಳದು
ಮಾನೆಗಳು ತುಱುಗಿದುವು ತೇಜಿಗಳುಱುಬಿದವು ತೇರು ।
ಆನಲಳವೇ ಭಟರ ಶರಸಂ
ಧಾನವನು ಬಲುಸರಳ ಸೂಟಿಯ
ಸೋನೆಯಲಿ ಜಗ ಮುಳುಗಿತೆನೆ ಝೂಡಿಸಿತು ಖಳಸೇನೆ ॥ ೨೦

ಮುಱಿದುದಮರರ ಚಕೂಣಿ ದಾನವ
ರುಱುಬೆಗಳುಕಿತು ಸಿದ್ಧವಿದ್ಯಾ
ಧರಮಹೋರಗಯಕ್ಷರಾಕ್ಷಸಗುಹ್ಯಕಾದಿಗಳು ।
ಹೊರಗೆ ವನವೀಧಿಯಲಿ ಕಾಹಿನ
ಕುಱುವದಲಿ ಗೋಪುರದಲೌಕಿದ
ಸುರರ ಮುಱಿದರು ಮೇಲುಗಾಳಗವಾದುದಸುರರಿಗೆ ॥ ೨೧

ಕೆಣಕಿದಮರರು [1] ಕೋಲುಗಟ್ಟಿತು
ಬಣಗುಸುರರೋಸರಿಸಿ ಭಾರಾಂ
ಕಣವನನ್ನಿದಿರಿನಲಿ ಬಿಸುಟರು ಸೂಸಿ ದೆಸೆದೆಸೆಗೆ ।
ರಣವನದನೇನೆಂಬೆನೈ ಧಾ
ರುಣಿಪತಿಯೆ ವಿಗ್ರಹದ ವಿಸ್ತಾ
ರಣನಿಗುರ್ಗಣೆ ವಿಗಡಿಸಿತು ವಿಬುಧರ ವಿಡಾಯಿಗಳ ॥ ೨೨

ಬಳಿಕ ಬಿಟ್ಟನು ರಥವನೀಮಾ
ತಳಿ ವಿಭಾಡಿಸಿ ಹೊಕ್ಕ ಚಕೂಣಿಯ
ಬಲಸಮುದ್ರದ ಮಧ್ಯದಲಿ ಮುಳುಗಿತು ವರೂಥವಿದು ।
ಬಲದೊಳಚ್ಚನು ಹಿಂದು ಮುಂದಿ
ಟ್ಟಳಿಸಿದರನಿಟ್ಟೊರಸಿದೆನು ಮುಂ
ಕೊಳಿಸಿ ಮೇಲ್ವಾಯ್ದವರ ಮುಱಿದೆನು ವಾಮಭಾಗದಲಿ ॥ ೨೩

1 ಸುರರು, ಚ.

ಕೆಟ್ಟುದಸುರರ ಚಮೂಣಿ ದಳ ಜಗ
ಜಟ್ಟಿಗಳು ನುಗ್ಗಾಯ್ತು ದಿವಿಜರ
ಥಟ್ಟಿನಲಿ ಬೊಬ್ಬಾಟವಾಯ್ತು ಗಭೀರಭೇರಿಗಳು ।
ಬಿಟ್ಟಮಂಡೆಯಲಸುರಸುಭಟರು
ಕೆಟ್ಟು ಹಾಯ್ದರು ಕೂಡೆ ಹೆಣ ಸಾ
ಲಿಟ್ಟತೋಟಿ ಯೆನಲರುಣಜಲ ನಗರೋಪಕಂಠದಲಿ ॥ ೬೬

ಅಸುರರು ಅರ್ಜುನನ್ನು ಸ್ತುತಿಮಾಡಿದರೆಂದು ಹೇಳಿದುದು.

ನೂಕಿ ದೈತ್ಯರ ಚಮೂಣಿಯನು ಮುಱಿ
ದೌಕಿ ದುರ್ಗವ ಹೊಗಿಸಿದನು ಸ
ವ್ಯಾಕುಲರು ಸೂಸಿದರು ಭಯವ ನಿವಾತಕವಚರಿಗೆ ।
ಆಕೆವಾಳನು ಜೀಯ ನಮ್ಮ ದಿ
ವೌಕಸರ ಪರಿಯಲ್ಲ ಯುದ್ಧ
ವ್ಯಾಕರಣಪಾಂಡಿತ್ಯವುಂಟೆಂದೆನ್ನ ದೂಱಿದರು ॥ ೬೭

ಕೇಳಿದನು ಕಡುಗೋಪದಲಿ ಸಿಡಿ
ಲೇಱಿಗೆಯಲೆದ್ದನಸುರೇಂದ್ರಗೆ
ಮೇಲುಗಾಳಗವೇ ಸುಪರ್ವರು ನಮ್ಮ ಸದೆವರಲೆ ।
ಕಾಲಗತಿಯೋ ಮೇಣ್ಕಪರ್ದಿಯ
ಕೀಲಕವೊ ರವಿಯೊಡನೆ ತಮ ಕೈ
ಮೇಳವಿಸಿತೇ ಶಿವ ಶಿವಾ ಯೆಂದಸುರ ಹಲುಮೊಱೆದ ॥ ೬೮

ಭಟರ ಬರಹೇಟಾ ಸುರೇಂದ್ರನ
ಕಟಕವಿಕ್ಕಿದ ವೇಡೆಯಲಿ ಲಟ
ಕಟಿಸುತಿದೆ ದಾನವರು ಮಾನಚ್ಯುತಿಯ ಮನ್ನಿಸದೆ ।
ನಿಟಿಲನಯನನನೇಡಿಸುವ ಚಾ
ವಟೆಯರಾವೆಡೆ ಚತುರರಣಲಂ
ಪಟರಡಱ ಬರಹೇಟೆನುತ ಮಿಗೆ ಗರ್ಜಿಸಿದ ॥ ೬೯

ದಾನವರ ಧಕ್ಕಡತನವೆನದ
ನೇನನೆಂಬೆನು ಜೀಯ ತೂಳಿದು
ವಾನೆಗಳು ತುಱುಗಿದುವು ತೇಜಿಗಳುಱುಬಿದವು ತೇರು ।
ಆನಲಳವೇ ಭಟರ ಶರಸಂ
ಧಾನವನು ಬಲುಸರಳ ಸೂಟಿಯ
ಸೋನೆಯಲಿ ಜಗ ಮುಳುಗಿತೆನೆ ಝೂಡಿಸಿತು ಖಳಸೇನೆ ॥ ೨೨

ಮುಱಿದುದಮರರ ಚೂಣಿ ದಾನವ
ರುಱುಬೆಗಳುಕಿತು ಸಿದ್ಧವಿದ್ಯಾ
ಧರಮಹೋರಗಯಕ್ಷರಾಕ್ಷಸಗುಹ್ಯಕಾದಿಗಳು ।
ಹೊರಗೆ ವನವೀಧಿಯಲಿ ಕಾಹಿನ
ಕುಱುವದಲಿ ಗೋಪುರದಲೌಕಿದ
ಸುರರ ಮುಱಿದರು ಮೇಲುಗಾಳಗವಾದುದಸುರರಿಗೆ ॥ ೨೩

ಕೆಣಕಿದಮರರು [1] ಕೋಲುಗಟ್ಟಿತು
ಬಣಗುಸುರರೋಸರಿಸಿ ಭಾರಾಂ
ಕಣವನನ್ನಿದಿರಿನಲಿ ಬಿಸುಟರು ಸೂಸಿ ದೆಸೆದೆಸೆಗೆ ।
ರಣವನದನೇನೆಂಬೆನೈ ಧಾ
ರುಣಿಪತಿಯೆ ವಿಗ್ರಹದ ವಿಸ್ತಾ
ರಣನಿಗುರ್ಗಣೆ ವಿಗಡಿಸಿತು ವಿಬುಧರ ವಿಡಾಯಿಗಳ ॥ ೨೪

ಬಱಿಕ ಬಿಟ್ಟನು ರಥವನೀಮಾ
ತಳಿ ವಿಭಾಡಿಸಿ ಹೊಕ್ಕು ಚೂಣಿಯ
ಬಲಸಮುದ್ರದ ಮಧ್ಯದಲಿ ಮುಳುಗಿತು ವರೂಥವಿದು ।
ಬಲದೊಳೆಚ್ಚನು ಹಿಂದು ಮುಂದಿ
ಟ್ಟಳಿಸಿದರನಿಟ್ಟೊರಸಿದೆನು ಮುಂ
ಕೊಳಿಸಿ ಮೇಲ್ವಾಯ್ದವರ ಮುಱಿದೆನು ವಾಮಭಾಗದಲಿ ॥ ೨೫

---

1 ಸುರರು, ಚ.

ಕೆಟ್ಟುದಸುರರ ಚಮೂಣಿ ದಳ ಜಗ
ಜಟ್ಟಿಗಳು ಸುಗ್ಗಾಯ್ತು ದಿವಿಜರ
ಘಟ್ಟನಲಿ ಬೊಬ್ಬಾಟವಾಯ್ತು ಗಭೀರಭೇರಿಗಳು ।
ಬಿಟ್ಟನುಂಡೆಯಲಸುರಸುಭಟರು
ಕೆಟ್ಟು ಹಾಯ್ದರು ಕೂಡೆ ಹೆಣ ಸಾ
ಲಿಟ್ಟತೋಟಿ ಯೆನಲರುಣಜಲ ನಗರೋಪಕಂಠದಲಿ ॥ ೭೬

ಅಸುರರು ಅರ್ಜುನನ್ನು ಸ್ತುತಿಮಾಡಿದರೆಂದು ಹೇಳಿದುದು.

ನೂಕಿ ದೈತ್ಯರ ಚಮೂಣಿಯನು ಮುಱಿ
ದೌಕಿ ದುರ್ಗವ ಹೊಗಿಸಿದೆನು ಸ
ವ್ಯಾಕುಲರು ಸೂಸಿದರು ಭಯವ ನಿವಾತಕವಚರಿಗೆ ।
ಆಕೆವಾಳನು ಜೀಯ ನಮ್ಮ ದಿ
ವೌಕಸರ ಪರಿಯಲ್ಲ ಯುದ್ಧ
ವ್ಯಾಕರಣಪಾಂಡಿತ್ಯವುಂಟೆಂದೆನ್ನ ದೂಱಿದರು ॥ ೭೭

ಕೇಳಿದನು ಕಡುಗೋಪದಲಿ ಸಿಡಿ
ಲೇಳಿಗೆಯಲೆದ್ದನಸುರೇಂದ್ರಗೆ
ಮೇಲುಗಾಳಗವೇ ಸುಪರ್ವರು ನಮ್ಮ ಸದೆವರಲೆ ।
ಕಾಲಗತಿಯೋ ಮೇಣ್ಕಪರ್ದಿಯ
ಕೀಲಕವೊ ರವಿಯೊಡನೆ ತಮ ಕೈ
ಮೇಳವಿಸಿತೇ ಶಿವ ಶಿವಾ ಯೆಂದಸುರ ಹಲುಮೊಱೆದ ॥ ೭೮

ಭಟರ ಬರಹೇಳಾ ಸುರೇಂದ್ರನ
ಕಟಕವಿಕ್ಕಿದ ವೀಡೆಯಲಿ ಲಟ
ಕಟಿಸುತಿದೆ ದಾನವರು ಮಾನಚ್ಯುತಿಯ ಮನ್ನಿಸದೆ ।
ನಿಟಿಲನಯನನನೇಡಿಸುವ ಚಾ
ವಟೆಯರಾವೆಡೆ ಚತುರರಣಲಂ
ಪಟರಡಱ ಬರಹೇಳೆನುತ ಮಿಗೆ ಗರ್ಜಿಸಿದ ॥ ೭೯

ಅಸುರರು ಹೆಚ್ಚಾಗಿ ಬಂದು ಮುತ್ತುವಿಕೆ.

ನೆಱೆದರಸುರರು ಕಾಳಕೂಟದ
ಕಱುವಿನೆಱಕವೊ ಸಿಡಿಲ ದಳ್ಳುರಿ
ದಿರುಳ ದಡ್ಡಿಯೊ ಪ್ರಳಯಭೈರವನುಬ್ಬಟೆಯ ಪಡೆಯೊ ।
ಹರನ ನಯನಜ್ವಾಲೆಯುವದಿರ
ಗರುಡಿಯೋ ಗಾಢಾಯ್ಲತೇಜದ
ದುರುಳದಾನವಭಟರು ಬಂದರು ಕೋಟಿಸಂಖ್ಯೆಯಲಿ ॥ ೩೦

ನೆರೆದಿರೈ ಪರಿಭವದ ನೆಲೆಯಲಿ
ನೆರೆದಿರೈ ದುಷ್ಕೀರ್ತಿಸತಿಯಲಿ
ನೆರೆದಿರೈ ಸಲೆ ಹೊರೆದಿರೈ ದುರ್ಗತಿಗೆ ಡೊಳ್ಳುಗಳ[1] ।
ಸುರರಲೇ ನೀವ್ ನಿಮ್ಮ ಹೆಂಡಿರ
ಕುರಳಕೈದೊಳಸಿಂಗೆ ಮಿಗೆ ಕಾ
ತರಿಸುತಿದೆ ವಾಸವನೊಡನೆ ವಾಸಿಗಳ ಬಿಡಿಯೆಂದ ॥ ೩೧

ಜೀಯ ಖಾತಿಯಿದೇಕೆ ದಿವಿಜರ
ರಾಯನರಸಿಯ ನಿನ್ನ ತೊತ್ತಿರ
ಲಾಯದಲಿ ತೋಱುವೆವು ತಾ ತಾ ವೀಳಯವನೆನುತ ।
ಹಾಯಿದರು ತಮ ತಮಗೆ ಮುಂಗುಡಿ
ದಾಯದಲಿ ಘಟ್ಟಿಸುವ ನಿಸ್ಸಾ
ಳಾಯುತದ ಬಹುವಿಧದ ವಾದ್ಯದ ಲಳಿಯ ಲಗ್ಗೆಯಲಿ ॥ ೩೨

ಒಡೆದುದಿಳೆಯೆನೆ ಸಮವಿಷಮದುರಿ
ಗಡಲು ಶಿವ ಶಿವಾ ಯೆನೆ ವಿಘಾತಿಯ
ಲಿಡೆ ದಡಿಗದಾನವರು ಕವಿದರು ಕೆದಱಿ ಸುರಬಲವ ।
ಘಡಘಡಿದಿರಾಗಲಿ ಸುರೇಂದ್ರನ
ತೊಡಕ ಹೇಱಾ ಕಾಲಲಿದೆಲಾ
ತೊಡರೆನುತ ಹೊಯ್ದರಸುರರು ಸುರರ ಸಂದಣಿಯ ॥ ೩೩

---

[1] ದುಷ್ಕೃತಿಯಲೊಡಲುಗಳ, ಚ.

ದೇವತೆಗಳ ಜಯ.

ಮುಱಿದುದಮರರು ಮತ್ತೆ ಬೊಬ್ಬಿಱಿ
ದುಱುಬಿದೆನು ಹೆಸರೆನಿಸಿದಸುರರ
ತಱಿದೆನೆದಱೊಳು ಕೋಟಿಸಂಖ್ಯೆಯನೈಂದ್ರಬಾಣದಲಿ ।
ಹಱಿದುದಮರಾರಿಗಳು ಕೋಟಿಯು
ಹೊಱಗೆ ಸುರಬಲವೌಕಿ ಬಿಟ್ಟುದು
ತುಱುಗಿತಮರರು ಖಳರ ದುರ್ಗದ ತೆನೆಯ ತುದಿಗಳಲಿ ॥ ೩೪

ಎಲೆಲೆ ಸುರಪತಿಯಾಳುಕೋಟಿಯು
ನಿಱಿವುತದೆ ನಡೆ ಯೆನುತ ರಕ್ಕಸ
ರುಲಿದು ಕವಿದುದು ಖಾತಿಯಲಿ ಮಿಗೆ ಭಾಷೆಗಳ ಕೊಡುತ ।
ತಲೆಯ ಹೊಯ್ದ ಡೆಗೆಡಹು ಸುರಪನ
ಲಲನೆಯರ ಮುಂದಲೆಯ ಕೊಯ್
ಹುಲುಸುರರು ಸರಿಯೆ ಮುಝು ಯೆನುತ್ತೈದಿದರು ರಣಭಟರು ॥೩೫

ಅಸುರರ ಜಯ.

ಏನನೆಂಬೆನು ಜೀಯ ಬೞಿಕಾ
ದಾನವಾಧಿಪರುಬ್ಬೆಯನು ಸುರ
ಮಾನವರು ತರಹರಿಸಲಳವೇ [1] ಖಳರ ಘಲ್ಲಣೆಯ ।
ವೈನತೇಯನ ಪಕ್ಷಹತಪವ
ಮಾನನಂತಿರೆ ಭಟರ ಸುಯ್ಲಿನೊ
ಳಾನಿರೂಢಿಯ ಸುರರು ಹಾಱಿತು ಸೂಸಿ ದೆಸೆದೆಸೆಗೆ ॥ ೩೬

ತೋಱು ತೋಱುಮರೇಂದ್ರ ನಾವೆಡೆ
ತೋಱುಸೈರಾವತವದೆತ್ತಲು
ತೋಱಿಸುಚ್ಚೈಶ್ರವವನೆಲ್ಲಿಹರಗ್ನಿ ಯುಮಗಿಮರು ।

1 ಲಾಹರ, ಟ.

ತೋಱಿರ್ದ ಕೈಗುಣವೆನಸುರರ
ಗಾಱುಗೆದಱಿದ ಗರ್ವಿತರ ವೈ
ದೋಱಿಕೆಟಾ ಕಾಣಬಹುದೆನುತುಱುಬಿದರು ಭಟರು || ೩೭

ಕಱಿದರವದಿರು ಕಲ್ಪಮೇಘದ
ಬಿಱುವಳೆಯುವೊಲು ಸರಳನನಿತುವ
ತಱಿದು ತೆತ್ತಿಸಿದೆನು ತದಂಗೋಪಾಂಗದಲಿ ಸರಳ |
ಅಱಿಯರೆನ್ನನು ಶಕ್ರನೆಂದೇ
ತಱುಬಿ ದಿಙ್ಮಂಡಲವ ಮುಸುಕಿದ
ರಿರಿತಕಂಜದ ದಿಟ್ಟನಾವೆನು ಸುರರ ಘಟ್ಟನಲಿ || ೩೮

ಝುಗಝುಗಿಪ ಬಾಣಾಗ್ನಿ ಭುಗುಭುಗು
ಭುಗಿಲೆನಲು ದಿವ್ಯಾಸ್ತ್ರತತಿಯಲಿ
ಹೊಗೆಯ ತೋಱಿಸಿದೆನು ಚತುರ್ದಶಭುವನಭವನದಲಿ |
ವಿಗಡರದ ಲೆಕ್ಕಿಸದೆ ಲೋಟಿಸಿ
ಮುಗುಚಿದರು ಮದ್ಬಾಣಮಹಿಮೆಯ
ನೊಗಡಿಸಿತು ಕಾಲಾಗ್ನಿ ಕಾಲಾಂತಕರಿಗಾಸುರರ || ೩೯

ಧೊರೆಗಳೞಿತು ರಥತುರಂಗಮ
ಕರಿಗಳಲಿ ಕಾಲಾಳ ಬಿಂಕವ
ನರಸ ಬಣ್ಣಿಸಲಱಿಯೆನಾಸುರಕಲಹಕರ್ಮವಲೆ |
ಸರಿಗರೆದ್ದುದು ಮೂಱುಕೋಟಿಯು
ಸುರರು ಸರಿಗಳಲಿಟ್ಟರಶನಿಯ
ಶರದಲೆಡೆಯುಲಿ ತಱಿಬಿದರು ಕೈಸೋತುದೆನಗೆಂದ || ೪೦

ದೇವಾಸುರರ ಅಸ್ತ್ರಯುದ್ಧ.

ಲಟಕಟಿಸುವಾಮೂಱುಕೋಟಿಯು
ಭಟರು ಕಱಿದರು ಕಲುವೆಳೆಯುನು
ಬ್ಬಟೆಯನದನೇನೆಂಬೆನವದಿರ ಸಮರಸಂಭ್ರಮವ |

ಕುಟಿಲತನದಿಂದೊದಗಿದರು ಕಲು
ಕುಟಿಗಶರ ಶತಕೋಟಿಯಲಿ ಪಡಿ
ಭಟಬಲವ ಬೆದಱಿಸಿದೆ ಚಿತ್ರೈಸೆಂದನಾಪಾರ್ಥ ॥ ೪೧

ತೆರಳರವದಿರು ಹೂಡಿದರು ದ
ಳ್ಳುರಿಯ ಧಾರೆಯ ಪಾವಕಾಸ್ತ್ರವ
ನರಸ ಹೊಗಡದು ಭುವನ ಹೊಯ್ದುದು ಝಳ ಜಗತ್ರಯವ ।
ಸರಕು ದೆಗೆದುದು ಸತ್ಯಲೋಕಕೆ
ಥರಥರದ ಜಗವಿಂದ್ರಸಾರಥಿ
ಜಱಿದು ಜವ ಗುಂದಿದನು ಝಾಡಿಸುವನಲನುಬ್ಬೆಯಲಿ ॥ ೪೨

ಸಾರಥಿಯ ಸಂತೈಸಿ ತೇರಿನ
ವಾರುವಂಗಳ ನೇಣನೋಜೆಯೊ
ಳೋರಣಿಸಿ ಸಂವರಿಸಿ ರಥವನು ವರುಣಬಾಣದಲಿ ।
ವಾರಿಧಿಯ ಕೆದಱಿದೆನು ಕಟ್ಟಿದು
ಭೂರಿಗಿಡಿಗಳು ಮೂರುತನ ಕೈ
ವಾರ ಕುಂದಿದುದಸುರಮುಖದನಲಾಸ್ತ್ರ ಪರಿಹರಿಸಿ ॥ ೪೩

ಅವರು ಮಗುಟೆಚ್ಚರು ಶಿಲೀಮುಖ
ದವೆಯುವದಲುಬ್ಬರಿಸಿ ಗಿರಿಗಳು
ಕವಿಯೆ ಕಡಿದೊಟ್ಟಿದೆನು ಭಾರಿಯವಜ್ರಬಾಣವಲಿ ।
ಅವರು ತಿಮಿರಾಸ್ತ್ರದಲಿ ಕೆತ್ತರು
ಭುವನನಯನದ ಕದವನಾಗಳ
ರವಿಯ ಶರದಲಿ ಮುಱಿದೆನಗುಳಿಯನರಸ ಕೇಳೆಂದ ॥ ೪೪

ಬಚ್ಚಿಕ ಸುಱಿದರು ಹಾವುಗಳ ಹೆ
ಮ್ಮೆಟೆಯನಲ್ಲಿಗೆ ಗರುಡಬಾಣವ
ಸುಟಿಸಿದೆನು ಬಚ್ಚಿಕಾದುದರ್ಥಗ್ರಾಸವಾಶರಕೆ ।

ಉಲಿದು ದನುಜರು ಮುತ್ತಿ ಕೆಂಡದ
ಮಳೆಯ ಕರೆದರು ಮಗುಳೆ ಜಲಧಿಯ
ತುಳುಕಿದೆನು ತೊಡಕಾಯ್ತು ಸಾರಥಿ ಮುತ್ತಿ ಬಸವಳಿದ ॥ ೪೫

ಸಾರಥಿತ್ವದ ಕೈಮೆ ತಪ್ಪಿತು
ಕಾರಶರಸಂಧಾನವೆರಡಱ
ಭಾರ ಬಿದ್ದುದು ಮೇಲೆ ದನುಜರ ಮೂಱುಕೋಟಿಯುದು ।
ಧೀರರಾತ್ಮಸ್ತುತಿಗೆ ನಾಚದ
ರಾರು ಜೀಯ ಮಹಾಹವದ ವಿ
ಸ್ತಾರವನು ಮಾತಳಿಯ ಕೈಯ್ಯಲಿ ಚಿತ್ತವಿಸಿ ಯೆಂದ ॥ ೪೬

ನಿವಾತಕವಚರ ಸಂಹಾರ.

ತೊಡಚಿದೆನು ಬ್ರಹ್ಮಾಸ್ತ್ರವನು ಹುರಿ
ಯೊಡೆದುದಸುರರು ಮುಲಿತವರನಿ
ಕ್ಕಡಿಯ ಮಾಡಿತು ಬಂದುದಳಿವು ನಿವಾತಕವಚರಿಗೆ ।
ಕಡುಹಿನಿಂದಾಗ್ನೇಯವಾರುಣ
ದಡಬಳಿಗರನು ಬಾಚಿದುವು ಬಱ
ಸಿಡಿಲ ಸೆಱೆ ಬಿಟ್ಟಂತೆ ಕಳಚಿದುವಸುರಬಲದಸುವ ॥ ೪೭

ಕಾಲಕೇಯರೊಡನೆ ಯುದ್ಧ ಮಾಡಿದುದು.

ಕಾಳದನುಜರು ಮೂಱುಕೋಟಿಯೊ
ಳಾಳುತಿಯುದಕ್ಕಾಡಿತಮರರ
ಸೂಳೆಯರ ಸೆಱೆ ಬಿಟ್ಟುದರಿನಗರದಲಸಂಖ್ಯಾತ [1] ।
ಧೂಳಿಪಟವಾಯಿತು ಹಿರಣ್ಯಾಪು
ರಾಲಯದ ನೆಲೆಗಟ್ಟು ಮುರಳಿಯೆ
ಕಾಲಕೇಯರ ಪುರಕೆ ಬಂದೆನು ಭೂಪ ಕೇಳೆಂದ ॥ ೪೮

1 ನಗರೋಪಕಂಠವಲ್ಲಿ, ಚ.

ಕೆರಳಿತಲ್ಲಿ ನಿವಾತಕವಚರ
ಮರಣವಾರ್ತೆಯ ಕೇಳಿದಸುರರು
ಪುರದ ಬಾಹೆಯೊಳಡ್ಡ ಹಾಯ್ದರು ತಡುಬಿದರು ರಥವ ।
ಅರಸ ಚಿತ್ತೈಸವದಿರಲಿ ಪರಿ
ಪರಿಯ ಮಾಯಾರಚನೆ ರಂಜಿಸಿ
ತೆರಡುಸಾವಿರ ಮಡಿಗೆ ಮಿಗಿಲು ನಿವಾತಕವಚರಿಗೆ ॥ ೪೯

ಅವರ ಮಾಯೆಗೆ ತನ್ನ ಮಾಯೆಯು
ಲವರ ಬಲುಹವರಿಚ್ಛಿತಕೆನ್ನಲಿ
ಸವಡಿ ಮಿಗಿಲವರೂಹೆಗಿಚ್ಛೆಯಲೂಹೆ ಹತ್ತುಮಡಿ ।
ಅವರ ಕೈಮೆಗೆ ತನ್ನ ಕೈಮೆಯು
ಹವಣು ಹಿರಿದವರೆಸುಗೆಗೆನ್ನಲಿ
ರಪಣ ನೂರ್ಮಡಿ ಯೆನಿಸಿ ಕಾದಿದೆನರಸ ಕೇಳೆಂದ ॥ ೫೦

ಬೀಸಿದರು ಬಿಱುಗಾಳಿಯಾಗಿ ಮ
ಹಾಸಮುದ್ರದ ನೂಕುದೆಱೆಯಲಿ
ಬೇಸರಿಸಿದರು ಹುರಿದರವನಿಯನಗ್ನಿ ರೂಪದಲಿ ।
ಆಸುರದ ತಮವಾಗಿ ರವಿಶತ
ದಾಸರಿನ ಬಿಸಿಲಾಗಿ ಮಾಯಾ
ಭ್ಯಾಸಿಗಳು ಮೋಹಿಸಿದರದನೇ ವರ್ಣಿಸುವೆನೆಂದ ॥ ೫೧

ಘೋರತರವದು ಬಚಿಕ ದುಷ್ಪ್ರತಿ
ಕಾರವಿತರರಿಗಿಂದುಮೆಳಿಯು
ಸಾರತರ ಕೃಪೆಯಾಯ್ತಲೇ ಸರಹಸ್ಯಸಾಂಗದಲಿ ।
ಬಾರಿಸಿದುದಾವಂಗದಲಿ ಮಾ
ಯಾರಚನೆಯಾವಿವಿಧವಿವರಣ
ದಾರುಭಟೆಯಲಿ ಸೀೞಿ ಬಿಸುಟೆನು ಶಿಲ್ಪದಲಿ ಖಳರ ॥ ೫೨

ಮುಱಿದುದಸುರರ ಮಾಯೆ ಕಾಹಿನೊ
ಳೆಱದ ರಸದವೊಲಿದ್ದರನಿಬರು
ತಱುಬಿ ನಿಂದರು ತೂಳಿದರು ಗಜಹಯರಥೌಘದಲಿ ।
ತಱಿದುವುಗಿದುವು ತುಂಡಿಸಿದುವವನಿ
ದೆಱಗಿದುವು ಸೀಳಿದುವು ಕೊಯ್ದುವು
ಕೊಱೆದು ಕುಪ್ಪಳಿಸಿದುವು ನಿಮಿಷಕೆ ಶರವರಿವ್ರಜವೆ ॥ ೫೩

### ಕಾಲಕೇಯರ ಪರಾಜಯ.

ಜೇಯ ವಿಗಡಬ್ರಹ್ಮಶರ ವಿಂ
ದ್ರಾಯುಧದ ಮುಂಗುಡಿಯುಲಿದುದು
ಮಾಯಕಾಱ ಮೋಹರವನುಬ್ಬಟೆ ಚತುರ್ಬಲವ ।
ಹೋಯಿತಸುರರ ಸೇನೆ ಸರಿದುದು
ನಾಯಕರು ನಾನಾದಿಗಂತ
ಸ್ಥಾಯಿಗಳು ಸ್ವರ್ಗಾದಿಭೋಗಕೆ ರಾಯ ಕೇಳೆಂದ ॥ ೫೪

ಕಡುಹುವೆಗ್ಗದ ಕಾಲಕೇಯರ
ಗೊಡವೆ ತೀಱಿತು ಸುರರ ಬಲುಸೆಱೆ
ಬಿಡಿಸಿದವು ಬಟೆಕಾಯ್ತು ಕಡು ಸನ್ಮಾನ ಸುರಕುಲಕೆ ।
ಒಡೆದುದಿಳೆ ಯೆನೆ ಬಾಹುವಿನ ಬಿಱು
ನುಡಿಯ ಕೈಗಳ ತುದಿಬೆರಳ ಬೆಂ
ಬಿಡಿಕೆಗಳ ಸುರಭಟರು ಹರಿದರು ಮುಂದೆ ಸುರಪುರಕೆ ॥ ೫೫

ಕಟ್ಟು ಗುಡಿಯನು ಖೋಡಿಯೇ ಜಗ
ಜಟ್ಟಿಗಳು ನುಗ್ಗಾಯ್ತಲೇ ನೀ
ನಟ್ಟಸಸಿ ಸುರಕುಜವಲೇ ಕೊಡದೇ ಮನೋರಥವ ।
ಕೆಟ್ಟುದಹಿತನಿವಾತಕವಚರ
ಥಟ್ಟು ಹುಡಿಹುಡಿಯಾಯ್ತು ದನುಜರ
ಹುಟ್ಟು ಹುರಿದುದು ಜೇಯ ಯೆಂದರು ಚರರು ಸುರಪತಿಗೆ ॥ ೫೬

ಶತ್ರುನಾಶವಾಗಲಾಗಿ ಸುರರು ಸುಖದಿಂದಿರುವಿಕೆ.

ಕಾಲಕೇಯರ ನಗರಿಯಲಿ ದು
ವ್ವಾಳಿಸಿತಲೇ ಮೃತ್ಯು ದಿವಿಜರ
ಸೂಳೆಯರು ಸೆಜೆ ಬಿಟ್ಟು ಬಂದರು ಯಕ್ಷಕಿನ್ನರರ ।
ಕಾಲಸಂಕಲೆ ಕಡಿದುವಾಖಳ
ರೂಳಿಗಕೆ ಕಡೆಯಾಯ್ತು ಸುರಪುರ
ದಾಳುವೇರಿಯ ಕಾಹು ತೆಗೆಯಲಿ ಯೆಂದರಾಚರರು ॥ ೫೭

ಪುರದ ಬಾಹೆಯ ಕೋರಡಿಯ ಸಂ
ವರಣೆ ತೆಗೆಯಲಿ [1] ನಿರ್ಭಯದಿ ಸಂ
ಚರಿಸುವುದು ನಂದನದೊಳಗೆ ನಿಮ್ಮಡಿಯ ರಾಣಿಯರು ॥
ಥರಥರದ ಕೊತ್ತಳದ ಕಾಹಿನ
ಸುರಭಟರು ಸುಖನಿದ್ರೆಗೆಯ್ಯಲಿ
ನಿರುತವಿದು ನಿಜನಿಳಯದೊಳಗೆಂದುದು ಸುರಜನವ್ರಾತ ॥ ೫೮

ಕೇಳಿದನು ಹರುಷಾಶ್ರು ಹೊದಿಸಿದು
ವಾಲಿಗಳ ಸಾವಿರವೆನುಬ್ಬಿದ
ಮೇಲುಮುದದ ಸರೋಮಪುಳಕದ ಪೂರ್ಣಸೌಖ್ಯದಲಿ ।
ಬಾಲೆಯರ ಬರಹೇಳು ರತ್ನನಿ
ವಾಳಿಗಳ ತರಹೇಳೆನುತ ಸುರ
ಮೌಳಿಮಂಡಿತಚರಣನೆದ್ದನು ಬಂದನಿದಿರಾಗಿ ॥ ೫೯

ಕವಿದುದಮರವ್ರಾತ ಕಾಂತಾ
ನಿವಹ ಹೊಱವಂಟುದು ಸುರೇಂದ್ರನ
ಭವನದಲಿ ಗುಡಿ ನೆಗಹಿದುವು ಸುರಪುರದ ಚೌಕದಲಿ ।

---

1 ಮರಳಲಿ, ಕ, ಖ.

ತವೆತವೆಗೆ ತನಿವರಿವ ಜನದು
ತ್ಸವವನದನೇನೆಂಬೆನಂದಿನ
ದಿವಸದೊಸಗೆಯನಮರಲೋಕದಲರಸ ಕೇಳೆಂದ ॥ ೬೦

ಅರ್ಜುನನು ಈ ವೃತ್ತಾಂತವನ್ನು ಹೇಳಿ ಇವೆಲ್ಲವೂ ತಮ್ಮ ಕೃಪಾ
ಲಬ್ಧವೆಂದು ಹೇಳಿದುದು.

ಇದಿರುವೆಂದನು ಪದಯುಗದಲೆ ಬಿ
ಗಿದರೆ ತೆಗೆದಪ್ಪಿದನು ಸನ್ಮಾ
ನದ ಸಘಾಡವನೇನನೆಂಬೆನು ಸಾವಿರಾಲಿಗಳ ।
ಹೊದಱಿನಲಿ ಹೊದಿಸಿದನು ಮಿಗೆ ನಾ
ದಿದನು ಹರುಷಾಶ್ರುಗಳಲೀಯ
ಭ್ಯುದಯವೇ ನಿಮ್ಮಡಿಯ ಕರುಣಾಕಟಾಕ್ಷಕೃತಿಯೆಂದ ॥ ೬೧

ಸುರರು ಕೊಂಡಾಡಿದರು ಸುರಮುನಿ
ವರರು ಪರಮಾಶೀರ್ವಚೋವಿ
ಸ್ತರಕೆ ಫಲವಿದೆಲಾ ಭವಚ್ಚರಣಾಂಬುಜಾಲೋಕ ।
ಅರಿಸುಭಟಸಂತೋಷಮಯಸಾ
ಗರವೆ ಸುಱಿಯುವೆ ಸರಳುವೆಡಬ
ಸ್ಫುರಣಮೇಘಜ್ವಾಲೆ ಜಾಲಕರಾಳಜಿಹ್ವೆಯಲಿ ॥ ೬೨

ಧರ್ಮರಾಯನ ಸಂತೋಷವಚನಗಳು.

ಲೇಸು ಮಾಡಿದೆ ನಾಕವನು ಖಳ
ರೀಸುಕಾಲ ವಿಭಾಡಿಸಿದರೆ ಸು
ರೇಶನಾಪತ್ತಿಂಗೆ ನಿರ್ವಾಪಣವ ರಚಿಸಿದೆಲ ।
ಈಸು ಪುಣ್ಯೋದಯಕೆ ಪೂರ್ವವು
ಹೀಶಕುಲ ನೋಂತುದೆ ಯೆನುತ ಸಂ
ತೋಷಮಯಜಲಧಿಯಲಿ ಕೀಳ ಮೇಲಾದನವನೀಶ [1] ॥ ೬೩

ಹೊಗೆಚಿ ನಿಲ್ಲದು ಜಿಹ್ವೆ ತೆಕ್ಕೈಯು
ಸೊಗಸಿನಲಿ ವೈದಣಿಯದೀಕ್ಷಣ
ಯುಗಳ ಬೀಯದು ನೋಡಿ ಪಾರ್ಥನ ಮೂತ ಸವಿಸವಿದು ।
ತೆಗೆದು ನಿಲ್ಲದು ಕರ್ಣಯುಗ ಸುರ
ನಗರಿಯುತ್ತಮಗಂಧಭರದಲಿ
ಮಗುಟಿ [1] ದರಸನ ನಾಸಿಕವು ಭೂಪ [2] ಕೇಳೆಂದ ॥ ೬೪

ನೃಪನ ಮುದವೆನು ಭೀಮಸೇನನ
ವಿಪುಳಸಂತೋಷವನು ನಕುಲನ
ಚಪಳಮದವೆನು ಪುಳಕವನು ಸಹದೇವನವಯವದ ।
ದ್ರುಪದಸುತೆಯುತ್ಸವವ ಮುನಿಜನ
ದಪಗತಗ್ಲಾನಿಯನು ಪರಿಜನ
ದುಪಚಿತಾನಂದವನು ಬಣ್ಣಿಸಲಚಿಯೆ ನಾನೆಂದ [3] ॥ ೬೫

ಶಿವನ ಘಾಟದ ಶರ ಚತುರ್ದಶ
ಭುವನಭಂಜನವಿದು ಮದೀಯಾ
ಹವಕೆ ಹೂಣಿಗನಾಯ್ತುಲೇ ಹೇರಾಳಸುಕೃತವಿದು ।
ಎವಗೆ ತೋಚಿಸಬೇಹುದೀಶಾಂ
ಭವಮಹಾಸ್ತ್ರಪ್ರೌಢ ಕೇಳೀ
ವಿವರಣವೆ ಕಾಂಬರ್ತಿಯಾಯ್ತೆಂದನು ಧನಂಜಯಗೆ ॥ ೬೬

ಜೀಯ ನಿಮ್ಮ ಕೃತಿಯನು ಶಂಭುವಿ
ನಾಯುಧದಲೋಸರಿಸುವೆನಾ
ಗ್ನೇಯವಾಯುವ್ಯೈಂದ್ರಕೌಬೇರಾಸ್ತ್ರಕೌಶಲವ ।
ಆಯತದೆ ತೋಱಿಸುವೆನೀಗಳ
ನಾಯತವು ರವಿತುರಗನಿಕರದ
ಲಾಯ ನೀಡಿತು ಪಶ್ಚಿಮಾಶಾ ಗಿರಿಯ ತಪ್ಪಲಲಿ ॥ ೬೭

---

1 ಮುಗಿಯ, ಚ. 2 ಗಂಧವವಹವನೀಶ, ಚ.

3 ಉರಿದು ತನಗೆಗೆಂದ, ಚ.

ಅರಸ ಕಳುಹಿದನಿಂದ್ರಸೂತನ
ನರಮನೆಗೆ ಬಂದನು ಪಲಾಶದ
ಹಿರಿಯ ಚೌಕಿಗೆಗಳಲಿ ಮುನಿಗಳ ಖೇಳಮೇಳದಲಿ [1] ।
ಅರಸಿ ಬಣ್ಣದ ಸೊಡರ ಸುಳಿ [2] ದಳು
ಹರಸಿದರು ಮುನಿವಧುಗಳಕ್ಷತೆ
ವೆರಸಿ ಗದುಗಿನ ವೀರನಾರಾಯಣನ ಮೈದುನನ ॥ ೬೮

ಹದಿಮೂರನೆಯ ಸಂಧಿ ಮುಗಿದುದು.

## ಹದಿನಾಲ್ಕನೆಯ ಸಂಧಿ.

ಸೂಚನೆ.

ಅಡವಿಯಲಿ ಫಣಿಭೋಗದಲಿ ಬಿಗಿ
ವೊಡೆದು ಬಳಲಿದ ಭೀಮಸೇನನ
ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ ॥

ಕೇಳು ಜನಮೇಜಯ ಧರಿತ್ರೀ
ಪಾಲ ಪಾಶುಪತಾಸ್ತ್ರವೇದದ
ಪಾಳಿಯುಚ ರಣೆಯಲಿ ತತ್ಪ್ರಣವಸ್ವರೂಪವೆನೆ ।
ಮೇಳವಿಸಿತರುಣಾಂಶು ಪೂರ್ವಾದಿ
ಶಾಲತಾಂಗಿಯ [3] ಶಿರದ ಮೌಳಿಯ
ಬಾಲಮಣಿ ಕಂಡಂತೆ ಮೆಱೆದುದು ಬಿಂಬ ದಿನಮಣಿಯ [4] ॥ ೧

---

1 ....ಧನಂಜಯಂ ವೆರಸಿ ಪರ್ಣದಚೌಕಿಗೆಯಲಿ ಮುನೀಂದ್ರ ಮೇಳದಲಿ, ಚ.

2 ಬಲಿ, ಚ.

3 ಮಂಡನೋಚಿತ, ಚ.

4 ಮೌಳಿಮಾಣಿಕವೆನಲು ಮೆಱೆದುದು ಬಿಂಬ ದಿನಮಣಿಯ, ಚ.

ಅರಸನುಪ್ಪವಡಿಸಿದನೆದ್ದನು
ವರವೃಕೋದರನರ್ಜುನನ ದ್ವಿಗು
ಸರಸಿರುಹವರಳಿದುವು ಮಾದ್ರೀಸುತರು ವೈಮುಖಿದು ।
ಹರಿಯು ನೆನೆದರು ನಿದ್ರೆ ತಿಳಿದುದು
ಪರಿಜನಕೆ ಮುನಿನಿಕರವಿದ್ದುದು
ತರಣಿ ಸಂಧ್ಯಾಸಮಯಸತ್ಕೃತಿಜಪಸಮಾಧಿಯಲಿ ॥　　೧

ಮುನಿಜನಕೆ ಕೈಮುಗಿದು ಯಮನಂ
ದನನ ಪಾದಕ್ಕೆಱಗಿ ಶಂಭುವ
ನೆನೆದು ಗವಸಣಿಗೆಯಲಿ ತೆಗೆದನು ಗರುವ ಗಾಂಡಿವವ ।
ಜನಪ ಕೇಳ್ಕೆ ಕೊಪ್ಪಿನಲಿ ಸಿಂ
ಜಿನಿಯ ಸಿಕ್ಕಿದನಳ್ಳಿಱಿದು ಮಾ
ರ್ದನಿ ದಿಗಂತರವೊದೆಱಲೊದಱಿಸಿದನು ಮಹಾಧನುವ ॥　　೩

ಘೋರರತಲಯಭೈರವನ ಹೂಂ
ಕಾರವೋ ಸಂಹಾರ ಸುತಿಯೋಂ
ಕಾರವೋ ಕಲ್ಪಾಂತತಾಂಡವವೇದಪಂಡಿತನ ।
ಆರುಭಟೆಯೋ ಮೇಣ್ ತ್ರಿವಿಕ್ರಮ
ವೀರಪದಭಿನ್ನಾಬ್ಜಜಾಂಡಕ
ಠೋರರವವೆನೆ ಮೊಱೆದುದರ್ಜುನಚಾಪಟಂಕಾರ ॥　　೪

ಏನಿದದ್ಭುತರವವೆನುತ ವೈ
ಮಾನಿಕರು ನಡುನಡುಗಿದರು ಗ
ರ್ವಾತಿಶಯ ಗತವಾಯ್ತಲೇ ಗಜಪುರದ ಗರುವರಿಗೆ ।
ಆನಿರುತಿಯಮವರುಣವಾಯುಕ್ರ
ಶಾನುಧನಪಮಹೇಶರೈತರ
ಲಾನೆಯಲಿ ಹೊಱವಂಟನಂಬರಗತಿಯಲಮರೇಂದ್ರ ॥　　೫

ನೆಱೆದುದಭ್ರದೊಳಮರಗಣ ಮುನಿ
ವರರು ಸಹಿತ ಯುಧಿಷ್ಠಿರಾದಿಗ
ಳೆರಡುಮಂಕವ ಹೊದ್ದಿದರು ಹರಿತನಯನೆಡಬಲವ ।
ತರುನಿಕರ ಗಿರಿನಿಚಯವಲ್ಲಿಯು
ಪರಿಜನವ ತಱುಬಿದುದು ತನಗಿದ
ನರಸ ಬಣ್ಣಿಸಲಳವೆ ನರನ ಮಹಾಸ್ತ್ರನಾಟಕವ ॥ ೬

ಮೊದಲಲೈಂದ್ರ[1] ಮಹಾಸ್ತ್ರವನು ಹೂ
ಡಿದನು ಹೊಗೆದುದು ಭುವನದಿಕ್ಕುಗ
ಳೊದಱಿದುವು ಪಂಠಿಸಿತು ರವಿರಥ ಗಗನಮಾರ್ಗದಲಿ ।
ಉದಧಿ ಯುದಧಿಯು ತೆಱೆಯ ಗಂಟಿ
ಕ್ಕಿದುವು ಹರ ಹರ ಹೇೞಬಾರದ
ಹೊದರು ಹೊದಿಸಿತು ಕೀಳುಮೇಲಣ ಜಗದ ಹಂತಿಗಳ ॥ ೭

ಅಹಹ ಬೆಂದುದು ಭುವನವಿದು ವಿ
ಗ್ರಹದ ಸಮಯವೆ ತಮ್ಮ ಲೀಲೆಗೆ
ಕುಹಕಮತಿಗಳು ತಂದರೈ ತ್ರೈಜಗಕೆ ತಲ್ಲಣವ ।
ರಹವಿದೇನೆಂದಭ್ರತಳದಿಂ
ಮಹಿಗೆ ಬಂದನು ದೇವಮುನಿ ದು
ಸ್ಸಹವಿದೇನೈ ಪಾರ್ಥ ಹೋ ಹೋ ಸಾಕು ಸಾಕೆಂದ ॥ ೮

ತೊಡಚದಿರು ಬ್ರಹ್ಮಾಸ್ತ್ರವಿದು ಬಾಯ್
ಗಡಿಯನಿದು ನಿಮಿಷದಲಿ ಭುವನವ
ನಡುಗಿ ತಣಿಯದಿದೊಂದು ಮತ್ತೀಶಾಂಭವಾದಿಗಳ ।
ತೊಡಚದಿರು ಸಂಹಾರಸಮಯವ
ನೆಡೆಯಲನುಭವಿಸುವುದು ಜಗವಿದು
ಕೆಡಿಸದಿರು ಕೆಡಿಸದಿರು ತೆಗೆ ತೆಗೆ ಯೆಂದನಾಮುನಿಪ ॥ ೯

---

[1] ಮೊದಲೊಳನಲ, ಚ.

ಲಕ್ಷ್ಯವಿಲ್ಲದೆ ತೊಡಚುವರೆ ನಿ
ರ್ಲಕ್ಷ್ಯಶರವೇ ನೀನುಪಾರ್ಜಿಸಿ
ತಕ್ಷಯವಲಾ [1] ಪಾರ್ಥ ಗಣನೆಯ ಗುತ್ತಿನಂಬುಗಳ ।
ಶಿಕ್ಷೆ ರಕ್ಷೆಗೆ ಬಾಣವೊಂದೇ
ಲಕ್ಷ್ಯವಿದು ನೀನಱಿಯದುದಕೆ ವಿ
ಲಕ್ಷ್ಯನಾದೆನು ತಾನೆನುತ ಮುನಿ ನುಡಿದನರ್ಜುನಗೆ ॥ ೧೦

ಹರಮಹಾಸ್ತ್ರಾದಿಗಳ ಲೀಲೆಯ
ನರಸ ನೋಡಲು ಬೇಹುದಾದೊಡೆ
ಬೆರಸುವುದು ತತ್ಸಮಯ ಸ್ವೈರಿಸು ನೃಪನ ಕಣ್ಮನವ ।
ಹೊಱವೆ ಹೇರಾಳದ ಮಹಾಸಂ
ಗರವಹುದು ಮುಂದಣಕಥಾವಿ
ಸ್ತರವ ವಿರಚಿಸಬಾರದನುಚಿತವೆಂದನಾಮುನಿಪ ॥ ೧೧

ಅರಸ ಕೇಳ್ಳೈ ನಾರದನ ನುಡಿ
ಗುರುತರವಲೇ ಪಾರ್ಥ ನಾಚಿಲು
ದಿರುವ ಮಗುಚಿಟ್ಟುಹಿದನು ಮುನಿಪನ ಮಾತ ಮನ್ನಿಸಿದ ।
ಹರದುದಮರರ ಮೇಲೆ ನೋಡುವ
ನೆರವಿ ದಿಗುಪಾಲಕರು ನಿಜವಂ
ದಿರಕೆ ಸರಿದರು ದೇವಮುನಿ ಹಾಯಿದನು ಗಗನದಲಿ ॥ ೧೨

ಇವರು ಕಾಮ್ಯಕಕಾನನವನನು
ಭವಿಸಿ ಬಟಿಕಲ್ಲಿಂದ ಹೊಱವಂ
ಟವಗಡೆಯ ಪರ್ವತಕೆ ಬಂದರು ಯಾಮುನಾಹ್ವಯದ ।
ದಿವಿಜರಿಪು ಹೈಡಿಂಬನಾತುದಿ
ಗವರನೇಱಿಸಿದನು ತದಗ್ರದ
ಲವನಿಪತಿ ಕೆಲದಿವಸವಿದ್ದಲ್ಲಿಂದ ಹೊಱವಂಟ ॥ ೧೩

---

1 ದಕ್ಷರವಲೇ, ಚ.

ಅರಸ ಕೇಳ್ಕೈ ಕಾರ್ತಿಕೇಯನ
ವರಮಹಾಶ್ರಮಕ್ಕೈದಿದನು ಮುನಿ
ವರರು ಸಹಿತೊಲವಿನಲಿ ನೂಕಿದನೊಂದುವತ್ಸರವ ।
ಧರಣಿಪತಿ ಬೃಹದಶ್ವನಾಶ್ರಮ
ವರಕೆ ಬಂದನು ತೀರ್ಥಸೇವಾ
ಪರಮಪಾವನಕರಣನಿದ್ದನು ಪರ್ಣಶಾಲೆಯಲಿ ॥ ೧೩

ಬಂದನೊಬ್ಬನು ಪವನಸುತನ ಪು
ಳಿಂದನಟವೀತಟದ ಖಗಮೃಗ
ವೃಂದದಿಕ್ಕೆಯ ಹಕ್ಕೆಯಾಡುಂಬೊಲದ ಸೋಹೆಗಳ ।
ನಿಂದ ನೆಲೆ ನಿರ್ದಾಣ ಹೆಜ್ಜೆಗ
ಳಿಂದ ಭೇದಿಸಿ ಕಂಡೆ [1] ಚಿತ್ತೈ
ಸೆಂದು ಬಿನ್ನಹ ಮಾಡುತಿರ್ದನು ಭೀಮಸೇನಂಗೆ ॥ ೧೪

ಇದೆ ಮಹಾಕಾನನವು ನಸು [2] ದೂ
ರದಲಿ ವೃಕಶಾರ್ದೂಲಕೇಸರಿ
ರದನಿಕಳಭಕ್ರೋಡಶಿಖಿಲೂಲಾಯಸಾರಂಗ ।
ಮದದ ರಹಿಯಲಿ ಮಾನಿಸರು ಸೋಂ
ಕಿದರು ಸೆಡೆಯವು ಹೊಲನ ಹೊದರಿ
ಕ್ಕಿದುವು ದೇಹದ ಹಿಂಡಿನಂತಿರೆ ಜೀಯ ಚಿತ್ತೈಸು ॥ ೧೫

ಮೇಹು ಗಾಡಿನೊಳವರ ವ್ಯೆಮೆಗೆ
ಸೋಹಿದರೆ ಸೂವಲೆಯ ಸುಬ್ಬಲೆ
ಯಾಹವದಲೇ ತೋಳತಿಕ್ಕೆಯ ತೋಟಿ ತೇಗುವೊಡೆ ।
ತೋಹಿನಲಿ ತೊದಳಾಗಿ ಗೋರಿಯ
ಗಾಹಿನಲಿ ಗುಱಿ ಗಡಬಡಿಸೆ ಹುಲು
ಸಾಹಸಕಂಜುವೆವು ನೀನೇಟೆಂದನಾಶಬರ ॥ ೧೬

---

1 ಜೀಯ, ಚ.    2 ಕಾಂತಾರವತಿ, ಚ.

ಕಂಡ ಮೃಗ ಮೃಗೇದೆಗೆಯುದಿಕ್ಕಿಯು
ಹಿಂಡು ಹೊಳಹಿನ ಹುಲಿಯು ಕರಡಿಯು
ಮಿಂಡವಂದಿಯು ಲಾವಣಿಗೆಯು ಲುಲಾಯುಲಾಲನೆಯು ।
ತೊಂಡು ಮೊಲನ ತೊಡಂಕುನವಿಲಿನ
ಮಂಡಲಿಯು ಮೋಳವ ಖಡ್ಗಿಯು
ಹಿಂಡುಗಳ ತೋಱಿಸುವೆನೇಱೆಂದನನಿಲಜನ ॥ ೧೮

ಅಂಗ ಚಿತ್ತವನಿತ್ತನಾಶಬ
ರಂಗೆ ಬಲೆಗಳ ತೆಗಿಸಿದನು ಹಸು
ರಂಗಿಯುನು ತೊಟ್ಟನು ಛಡಾಳಿಸೆ ಪದದೊಳಕ್ಕಡವ ।
ಸಿಂಗಶರಭವನೆಳವಿಗೊಡಲವ
ರಂಗಳಿಯುಲಡುಪಾಯುಲೌಡಿಯು
ಜಂಗುಣಿಯು ಜೋಡಿಸಿದರಂದು ಜವಾಯ್ಲ ಜಾಯಿಲನ ॥ ೧೯

ಮಡಿದ ಕೊಡಕೆಗಳೊಡ್ಡಿ ದುರದೊ
ಪ್ಪಿಡಿಮನಡುಸ ಕೊಂಕಿದುಗುರಿನ
ಕಡುಮನದ ನಿರ್ಮಾಂಸಜಂಘೆಯು ಕೆಂಪಿನಾಲಿಗಳ ।
ಸಿಡಿಲಘನಗರ್ಜನೆಯು ಗಗನವ
ತುಡುಕುವಾಕುಳಿಕೆಗಳ ಮೊರಹಿನ
ಮಿಡುಕುಗಳ ನಾಯ್ ನೂಕಿದುವು ಹಾಸದ ವಿಳಾಸದಲಿ ॥ ೨೦

ಹೆಸರನಾಯ್ಗಳ ಹಾಸಹರಿದು
ಬ್ಬಸದಲುಱದರಿಗರಿದು ಹಿಡಿಮೃಗ
ಮಸಗಿದುವು ಹದವಿಲುಗಳೊದೆದುವು ಹೆದೆಯ ಹರಹಿನಲಿ ।
ನುಸುಳಿದುವು ಮೊಲನುರಿಯ ಹೊಗೆಗಳ
ದೆಸೆವಿಡಿದು ಕೆದಱಿದುವು ಹೊಲದಲಿ
ಹಸುಬಹರಡಿಗಳೇನನೆಂಬೆನು ಶಕುನಸೂಚನೆಯ ॥ ೨೧

ಬಗೆಯನವಶಕುನವ ಮೃಗವ್ಯಧ
ಸೊಗಡಿನಲಿ ಸಿಲುಕಿದವುನೋವ್ರ
ತ್ತಿಗಳೊಳುಂಟೆ ವಿವೇಕಧರ್ಮವಿಚಾರವಿಸ್ತಾರ ।
ಹೊಗರೊಗುವ ಹೊಂಗರಿಯ ಬಿಲುಸರ
ಳುಗಳ ಹೊದೆನಡೆದುದಡವಿಯ
ಬೆಗಡುಗೊಳಿಸಿತು ಮುಂದೆ ಪುಳಿಂದಸಂದೋಹ ॥ ೨೦

ಭಂಡಿಗಳ ಬೆಳ್ವಾರವಲೆಗಳ
ಖಂಡವಲೆಗಳ ತಡಿಕೆವಲೆಗಳ
ಗುಂಡುವಲೆಗಳ ಬೀಸುವಲೆಗಳ ಕಾಲುಕಣ್ಣಿಗಳ ।
ದಂಡಿವಲೆಗಳ ತೊಡಕುವಲೆಗಳ
ಹಿಂಡುವಲೆಗಳ ಮುಯುಣದಂಟಿನ
ವಂಡವಿಗೆವಲೆಗಳ ಕಿರಾತರು ಕೆದಱಿತಗಲದಲಿ ॥ ೨೩

ಏನನೆಂಬೆನು ಭೂಪ ಹೊಕ್ಕನು
ಕಾನನವನನಿಲಜನು ಶಬರವಿ
ತಾನವಿಕ್ಕಿದ ವೇಡೆಗಳ ಬೆಳ್ವಾರಸುತ್ತುಗಳ ।
ಕಾನನದ ಹಳ್ಳದ ಶಿಲೋಚ್ಚಯ
ಸಾನುಗಳ ಗಹ್ವರದ ಗಂಡ
ಸ್ಥಾನದೀರ್ಘದ್ರೋಣಿಗಳಲಱಸಿದರು ಮೃಗಕುಲವ ॥ ೨೪

ಕಳಚಿ ಹಾಸವನಬ್ಬರಿಸಿ ಕು
ಪ್ಪಳಿಸಿ ಕಂಠೀರವನ ಮೋಹಱಿಗೆ
ನಿಲುಕಿ ಕವಿದುವು ಬಿದ್ದ ಹಾಯ್ದುವು ಹಣುಗಿ ತುಡುಕಿದುವು ।
ಸೆಳದುವುಡಿದುಕ್ಕಳಿಸಿ ಯೊಡಬಲ
ಬಳಸಿದುವು ಮೇಲ್ವಾಯ್ದು ನಿಂದು
ಚ್ಚಳಿಸಿದುವು ಕುಸುಬಿದುವು ಕುನ್ನಿಗಳಖಿಳಮೃಗಕುಲವ ॥ ೨೫

ಬೇಟೆಯಾಡುವಾಗ ಮೃಗಗಳು ಇದ್ದ ಕ್ರಮ.

ಬೊಬ್ಬೆಗಳ ಪಟಹದ ಮೃದಂಗದ
ಸರ್ಬಲಗ್ಗೆಯ ಸೋಹಿನಲಿ ಸುಟಿ
ವೆಬ್ಬರಕೆ ಹಿಂಡೊಡೆದು ಹಾಯ್ದುವು ಸೂಸಿ ದೆಸೆದೆಸೆಗೆ ।
ತೆಬ್ಬಿದುವು ಬೆಳ್ಳಾರವಲೆ ಹರಿ
ದುಬ್ಬಿ ಹಾಯ್ದರೆ ವೇಡೆಯವರಿಗೆ
ಹಬ್ಬವಾಯ್ತೇನೆಂಬೆನಗಣಿತಮೃಗನಿಪಾತನವ ॥ ೨೮

ಹೊಕ್ಕು ತಿವಿದರು ಸಬಳದಲಿ ಜಡಿ
ವೆಕ್ಕಲನನಳವಿಯಲಿ ಹರಿಣನ
ನಿಕ್ಕಿದರು ನಾರಾಚದಲಿ ಸೈವರಿದು ಸೈರಿಭನ ।
ಸೊಕ್ಕಿದರು ಸುರಿಗಿಯಲಿ ಹೊದಱಲಿ
ಹೊಕ್ಕು ಹುಲಿಗಳ ಕೆಣಕಿ ಖಡುಗದ
ಲಿಕ್ಕಡಿಯ ತೋಱಿದರು ತೂಱಿದರಖಿಳಮೃಗಕುಲವ ॥ ೨೯

ಗಾಯವಡೆದೆಕ್ಕಲನ ರಭಸದ
ಜಾಯಿಲನ ಗಳಗರ್ಜನೆಯ ಪೂ
ರಾಯದೇಱಿನ ಕರಡಿ ಕಾಡಾನೆಗಳ ಕಳಕಳದ ।
ನೋಯಲೊಱಲುವ ಶರಭಸಿಂಹಲು
ಲಾಯವೃಕಶಾರ್ದೂಲಶಶಗೋ
ಮಾಯುವೊದಲಾದಖಿಳಮೃಗರವ ತುಂಬಿತಂಬರವ ॥ ೩೦

ಮುಳುದೊಡಕಿನೊಳು ಕೂದಲೊಂದೇ
ಸಿಲುಕಿ ನಿಂದುವು ಚಮರಿಮೃಗ ಮೆಱ
ಗಳಿಗೆ ಮೊಲೆಗೊಡುತಿರುಕಿನಲಿ ಹುದುಗಿದುವು ಪುಲ್ಲೆಗಳು ।
ಎಳೆವೆಱಿಯ ನಡೆಗಲಿಸಿ ನಿಂದುವು
ಮೆಲೆತು ಸಿಂಹದ ಮಿಥುನ ಹಿಂಡಿನ
ಕಳಭವೆನು ಹಿಂದಿಕ್ಕಿ ವನಕರಿ ತೋಟಿದುವು ಪಡೆಯ ॥ ೩೧

ಭೀಮಸೇನನು ಸಿಂಹಾದಿಗಳನ್ನು ಕೊಂದುದು.

ಪಡೆ ಬೆದಱೆ ಪಡಿತಳಿಸಿ ಪವನಜ
ಹಿಡಿದು ಬೀಸಿದನಾನೆಗಳನವೆ
ಗಡಿಸಿ ಸಿಂಹವ ಸೀಳಿದನು ಹೊಯ್ದೊತ್ತುವೆಕ್ಕಲನ ।
ಮಡದಲುಱೆ ಘಟ್ಟಿಸಿದ ಮುಷ್ಟಿಯೊ
ಳಡಸಿ ತಿವಿದನು ಹುಲಿಯು ಕರಡಿಯು
ಕೊಡಹಿದನು ಕೊಂದನು ವನಾಂತದೊಳಖಿಳಮೃಗಕುಲವ ॥ ೨೦

ಆಗ ಒಂದು ಹಂದಿ ತಪ್ಪಿಸಿಕೊಂಡು ಅರಣ್ಯದಲ್ಲಿ ಓಡಿದುದು.

ಈತನುಱುಬೆಗೆ ಬೆದಱಿತುರುಸಂ
ಘಾತದಲಿ ಹೆಬ್ಬಂದಿಯೊಂದು ವಿ
ಘಾತದಲಿ ಹಾಯ್ದುದು ಕಿರಾತವ್ರಜವನೊಡೆದುಳಿದು ।
ಈತನಱಿಯಟ್ಟಿದನು ಶಬರ
ವ್ರಾತವುಳಿದುದು ಹಿಂದೆ ಭೀಮನ
ಭೀತಿಯಲಿ ಹೊಕ್ಕುದು ಮಹಾಗಿರಿಗಹನಗಹ್ವರವ ॥ ೨೨

ಮುಡುಹು ಸೋಂಕಿದೊಡುಲಿದು ಹೆಮ್ಮರ
ನುಡಿದು ಬಿದ್ದುವು ಪಾದಘಾತದೊ
ಳಡಿಗಡಿಗೆ ನೆಗ್ಗಿದುದು ನೆಲನುಬ್ಬರದ ಬೊಬ್ಬೆಯಲಿ ।
ಜಡಿದುದಬುಜಭವಾಂಡವೆನಲವ
ಗಡೆಯು ಭೀಮನ ಕಳಕಳಕೆ ಕಿವಿ
ಯೊಡೆಯೆ ತೀದುದು ನಿದ್ರೆ ಮುಱಿದೆಕ್ಕಿಯ ಮಹೋರಗನ ॥ ೨೪

ಅದನ್ನು ಅಟ್ಟಿಕೊಂಡು ಹೋದಾಗ ಸರ್ಪವು
ಭೀಮನನ್ನು ಹಿಡಿದುದು.

ತೆಕ್ಕೆ ಸಡಲಿತು ತಱಗೆಲೆಯ ಹೊದ
ಱಿಕ್ಕಲಿಸೆ ಮೈಮುಱಿಯಲನಿಲಜ
ನೆಕ್ಕತುಳದಲಿ ಮೇಲೆ ಹಾಯ್ದನು ಕಾಣದಹಿಪತಿಯ ।

ಸಿಕ್ಕಿದುವು ಹೆದ್ದೊಡೆಗಳುರಗನ
ತೆಕ್ಕೆಯಲಿ ಡೆಂಢಣಿಸಿ ಫಣಿಪತಿ
ಡೊಕ್ಕರಕೆ ಹಬ್ಬಿದನು ಬಿಗಿದನು ಭಟನ ಹೇರುರವ ॥ ೩೫

ಅದನ್ನು ಬಿಡಿಸಲು ಮಾಡಿದ ಭೀಮನು ಪ್ರಯತ್ನ ವ್ಯರ್ಥವಾಗುವಿಕೆ.

ಝಾಡಿಸಲು ಝಾಡಿಸಲು ಬಿಗುಹತಿ
ಗಾಢಿಸಿತು ಕೊಡಹಿದೊಡೆ ಮಿಗೆ ವ್ಯೆ
ಗೂಡಿ ಬಿಗಿದುದು ಭುಜಗವಳಯದ ಮಂದರಾದ್ರಿಯನ ।
ರೂಢಿಸಿದ ಭುಜಬಲದ ಸಿರಿಯೆ
ಕ್ಕಾಡಿತೇ ತನಗೆನುತ ಖಾಡಾ
ಖಾಡಿಯಲಿ ಕಾತರಿಸಿ ಕಳವಳಿಸಿದನು ಕಲಿಭೀಮ ॥ ೩೬

ಭಟ ಮರಳೆ ಸಂತೈಸಿ ಕೊಂಡಟ
ಮಟಿಸಿ ಗದೆಯಲಿ ಹೊಯ್ದು ಬಿಗುಹಿನ
ಕಟಕವನು ಬಿಚ್ಚಿದನು ಹೆಚ್ಚಿದನುಬ್ಬಿ ಬೊಬ್ಬಿಡುತ ।
ಪುಟದ ಕಂತುಕದಂತೆ ಫಣಿ ಉಟ
ಕಟಿಸಲೌಕಿತು ಮತ್ತೆ ಗಿಡಗನ
ಪುಟದ ಗಿಳಿಯಂದದಲಿ ಗಿರಿಗಿರಿಗುಟ್ಟಿದನು ಭೀಮ ॥ ೩೭

ಆಗ ಅಪಶಕುನಸೂಚನೆಯಿಂದ ಅರಣ್ಯಕ್ಕೆ ಧರ್ಮ ರಾಯನು ಬಂದುದು.

ಅರಸ ಕೇಳಿತ್ತಲು ಮಹೀಶನ
ಹೊರೆಯಲಾಯ್ತುತ್ಪಾತಶತ ನಿ
ಷ್ಠುರವಿದೇನೋ ದೈವಕೃತಫಲವಾವುದಿದಕೆನುತ ।
ಕರೆಸಿ ಧೌಮ್ಯಂಗಱುಹಲಿದು ನ
ಮ್ಮರಸುಗಳಿಗಪಘಾತಸೂಚಕ
ವಱಿದಿದಱ ನಿರ್ವಾಹವೆಂದರೆ ನೃಪತಿ ಚಿಂತಿಸಿದ ॥ ೩೮

ಭೀಮನಾವೆಡೆಯೆನೆ ಕಿರಾತ
ಸ್ತೋಮಸಹಿತ ಮೃಗವ್ಯಕೇಳೀ
ಕಾಮನೈದಿದನೆನಲು ನೃಪ ಹೊಱವಂಟನಾಕ್ಷಣಕೆ ।
ಭೂಮಿಸುರರೊಡನೈದಿ ಬರೆ ಸಂ
ಗ್ರಾಮಧೀರನ ಹೆಜ್ಜೆವಿಡಿದು ಮ
ಹೀಮನೋಹರನಱಸಿ ಹೊಕ್ಕನು ಘೋರಕಾನನವ ॥ ೩೯

ವನದಲ್ಲಿ ಸರ್ಪಾಕ್ರಾಂತನಾದ ಭೀಮನ ದರ್ಶನ.

ಹುದುಗಿದಗ್ಗದ ಸತ್ವದುತ್ಸಾ
ಹದ ನಿರೂಢಶ್ವಾಸದಲಿ ಗದು
ಗದಿಪಕಂಠದ ತಳಿತಭಂಗದ ತಿರುಗುವಾಲಿಗಳ ।
ಹೆದರದೆಯು ಹೇರಾಳಶೋಕದ
ಕೆದಱುಗೇಶದ ಕೆಳಕೆ ಜೋಲಿದ
ಗದೆಯು ಗರುವಾಯುತದ ಭೀಮನ ಕಂಡನವನೀಶ ॥ ೪೦

ಅದಕ್ಕೋಸ್ಕರ ರಾಯನ ಚಿಂತೆ.

ಅಕಟ ಹಿಂದನುಭವಿಸಿದೆವು ಕಂ
ಟಕ ಹಲವನೀಪರಿಯು ಬಲುಕಂ
ಟಕ ಮಹಾಕರ್ದಮದೊಳದ್ದಿತೆ ವಿಧಿ ಮಹಾದೇವ ।
ವಿಕಟಮದನಾಗಾಯುತತ್ರಾ
ಣಕನ ಸಾಹಸವಡಗಿತೇ ವನ
ವಿಕಟಭುಜಗಾಟೋಪ ತೌಳಿಯೊಳೆಂದು ಚಿಂತಿಸಿದ ॥ ೪೧

ಏನು ಕುಂತೀಸುತನಪಾಯವೆ
ದೇನು ಫಣಿಬಂಧದ ವಿಧಾನವಿ
ದೇನು ನಿನಗೆ ವಿನೋದವ್ರೋ ತ್ರಾಣಾ [1] ಪಚಯವಿಧಿಯೊ ।

---

[1] ಪ್ರಾಣಾ, ಚ.

ಏನಿದಕೆ ಕರ್ತವ್ಯ ನವಗೀ
ಹೀನದೆಸೆಗೆ ನಿಮಿತ್ತ ದುಷ್ಕೃತ
ವೇನು ಶಿವ ಶಿವ ಯೆನುತ ನುಡಿಸಿದನನಿಲನಂದನನ ॥ ೪೦

ನೋಡಿದನು ಕಂದೆರೆದು ಕಂಠಕೆ
ಹೂಡಿದುರಗನ ಘೋರಬಂಧದ
ಗಾಢದಲಿ ನುಡಿ ನೆಗ್ಗಿ ನುಡಿದನು ಬೆರಳ ಸನ್ನೆಯಲಿ ।
ಖೇಡನಾದನಜಾತರಿಪು ಮೊ
ತಾಡಿದನಹಿಪತಿಯ ನೆಲೆ ನಾ
ಡಾಡಿಗಳ ನಾಟಕದ ಫಣಿಯಲ್ಲಾರು ಹೇಳೆಂದ ॥ ೪೩

ಆ ಸರ್ಪವನ್ನು ಕುರಿತು ಧರ್ಮರಾಯನ ಪ್ರಶ್ನೆ.

ಅನಿಲಸುತನಪರಾಧಿಯೋ ನೀ
ವಿನಯಹೀನನೊ ಮೇಣು ಪರಪೀ
ಡನವ್ಯಥಾದುಷ್ಕರ್ಮಸಂಗ್ರಹ ಬೇಹುದೇ ನಿನಗೆ ।
ದನುಜನೋ ಗಂಧರ್ವನೋ ಯ
ಕ್ಷನೊ ಸರೀಸೃಪರೂಪದಿವಿಜೇಂ
ದ್ರನೊ ನಿಧಾನಿಸಲರಿಯೆ ನೀನಾರೆಂದನವನೀಶ ॥ ೪೪

ಕೇಳಿದನು ಫಣಿ ಭೀಮಸೇನನ
ಮೌಳಿ ತಲ್ಪದ ತಲೆಯ ಹೊಳಹಿನ
ನಾಲಗೆಯ ಚೂರಣದ ಝುಡಿತೆಗೆ ಚಲಿಸುವಾಲಿಗಳ ।
ಮೇಲುವೊಗದಲಿ ನೃಪನ ನುಡಿಗಳ
ನಾಲಿಸುತ ನುಡಿದನು ಕರಾಳಾ
ಭೀಳದಂಷ್ಟ್ರಾಂತರವಿಸಂಸ್ಥುಳಜಿಹ್ವೆಗಳ ಜಡಿದು ॥ ೪೫

ಆಗ ಸರ್ಪದ ಉತ್ತರ.

ಏನಹನು ನಿನಗೀತ ನೀನಾ
ರೇನು ನಿನ್ನಭಿಧಾನ ವಿಪ್ರನ
ಸೂನುವೋ ಕ್ಷತ್ರಿಯನೊ ವೈಶ್ಯನೊ ಶೂದ್ರಸಂಭವನೊ ।

ಏನು ನಿನಗೀಬನಕೆ ಬರವು ನಿ
ದಾನವೇನು ಹೇಚೆನಲು ಕುಂತಿಯ
ಸೂನು ನುಡಿದನು ತನ್ನ ಪೂರ್ವಾಪರದ ಸಂಗತಿಯ ॥ ೪೬

ಸೋಮವಂಶಪರಂಪರೆಯಲು
ದ್ದಾಮಪಾಂಡುಕ್ಷಿತಿಪ ಜನಿಸಿದ
ನಾಮಹೀಶನ ಸುತಯುಧಿಷ್ಠಿರನೆಂಬುದಭಿಧಾನ ।
ಭೀಮನೀತನು ಪಾರ್ಥನಕುಲಸ
ನಾಮಸಹದೇವಾಖ್ಯಪಾಂಡವ
ನಾಮಧೇಯರು ನಾವೆ ಯೆಂದನು ಭೂಪನಾಫಣಿಗೆ ॥ ೪೭

ಬೀತುದಖಿಳೈಶ್ವರ್ಯ ಕಪಟ
ದ್ಯೂತದಲಿ ಕೌರವರು ಕೊಂಡರು
ಭೂತಳದಲೆಮಗಾಯ್ತು ಬಟಿಕಟವೀಪರಿಭ್ರಮಣ ।
ಈತನೆನ್ನೊಡಹುಟ್ಟಿದನು ನೀ
ನೀತನನು ಬಿಡಬಹೊಡೆ ಬಿಡು ವಿ
ಖ್ಯಾತರಿಗೆ ಪರಪೀಡೆ ಧರ್ಮವಿನಾಶಕರವೆಂದ ॥ ೪೮

ಆದೊಡೆಲೆ ಧರಣೀಶ ಧರ್ಮವ
ನಾದರಿಸುವೈ ಧರ್ಮವೆಂಬುದು
ವೇದಮಾರ್ಗವಲೈ ಸುಧರ್ಮದ ಸಾರಸಂಗತಿಯ ।
ಕೈದುವುಳ್ಳೊಡೆ ಕಾದು ನಿನ್ನಯ
ಸೋದರನ ಬಿಡುವೆನು ಮನಃ ಪರಿ
ಖೇದವನು ಬಿಸುಟೆನ್ನು ಧರ್ಮರಹಸ್ಯವಿಸ್ತರವ ॥ ೪೯

ಉಸುರಬಹುದೈ ಧರ್ಮತತ್ತ್ವ
ಪ್ರಸರಣವಿದೇ ಯೆಂದು ನೀ ಶಂ
ಕಿಸಲು ವೇದಸ್ಮೃತಿಪುರಾಣತ್ರಾಣ ತುಟ್ಟಿಸದೆ ।

ಎಸೆವ ವಿಪ್ರರ ಮತಿಗೆ ಸಂಭಾ
ವಿಸುವ ಧರ್ಮವನಱುಹುವೆನು ನೀ
ಬೆಸಗೊಳೆಂದನು ಧರ್ಮಸುತ ನಹುಷಂಗೆ ವಿನಯದಲಿ ॥　　೫೦

ಧರ್ಮದ ವಿಷಯದಲ್ಲಿ ಸರ್ಪದ ಪ್ರಶ್ನೆ.

ಎಸೆವ ವಿಪ್ರರ ಮತಿಗೆ ಸಂಭಾ
ವಿಸುವ ಧರ್ಮಸ್ಥಿತಿಯನಭಿವ
ರ್ಣಿಸುವೆನೆಂದೈ ಭೂಮಿಪತಿ ಭೂದೇವಕುಲದೊಳಗೆ ।
ಎಸೆವ ವಿಪ್ರನದಾರು ಪರಿಶೋ
ಭಿಸುವುದೀ ಬ್ರಾಹ್ಮಣ್ಯವೇತಱ
ದೆಸೆಯೊಳದನೇ ಮುನ್ನ ಹೇಟೆನೆ ರಾಯನಿಂತೆಂದ ॥　　೫೧

ಧರ್ಮರಾಯನ ಉತ್ತರ.

ಉರಗ ಕೇಳ್ ಪಿತೃಮಾತೃವಂಶೋ
ತ್ಕರವಿಶುದ್ಧಸದಾಗ್ನಿಹೋತ್ರಾ
ಚರಿತವಾಸ್ವಾಧ್ಯಾಯ ಸತ್ಯವಹಿಂಸೆ ಪರಿತೋಷ ।
ವರಗುಣಂಗಳಿವಾವನಲಿ ಗೋ
ಚರಿಸಿತಾತನೆ ವಿಪ್ರನೆಂಬರು
ಹಿರಿಯರೆಂದನು ಧರ್ಮಸುತ ನಹುಷಂಗೆ ವಿನಯದಲಿ ॥　　೫೨

ಆಯಿತಿದು ಮತವಾದುದೈ ಸ್ವಾ
ಧ್ಯಾಯವೆಂಬುದದೇನು ಸತ್ಯದ
ಕಾಯವಾವುದಹಿಂಸೆ ಪರಿತೋಷಂಗಳದೇನು ।
ರಾಯ ಹೇಟಿದಱಿರವ ನಿಜಗುಣ
ದಾಯತವನೆನೆ ಧರ್ಮವತಿರವ
ಣೀಯವೆನೆ ನಹುಷಂಗೆ ವಿವರಿಸಿದನು ಮಹೀಪಾಲ ॥　　೫೩

ನಿಯುತವೀಕ್ಷೊೀತ್ರಾದಿಸಂಚೀಂ
ದ್ರಿಯದ ನಿಗ್ರಹ ದಮವೆನಿಪ್ಪುದು
ಭಯವನಿತರರಿಗಾಚರಿಸದಿಹುದೇ ಯಹಿಂಸೆ ಕಣಾ ।
ನಯವಿದನೆ ಚಿತ್ತವಿಸು ಲೋಕ
ತ್ರಯವನೊಂದೇ ಸತ್ಯದಿಂದವೆ
ಜಯಿಸಬಹುದಾಸತ್ಯವುಳ್ಳನೆ ವಿಪ್ರನವನೆಂದ ॥ ೫೪

ಸತ್ಯವೇ ಸ್ವಾಧ್ಯಾಯ ಸತ್ಯವೆ
ನಿತ್ಯಕರ್ಮವಿಧಾನ ವೊಂದೇ
ಸತ್ಯವೇ ಜಪ ಹೋಮ ಯಜ್ಞ ಧ್ಯಾನದಾನತಪ ।
ಸತ್ಯವುಳ್ಳರೆ ಶೂದ್ರ ದ್ವಿಜರಿಂ
ದತ್ಯಧಿಕನಾದ್ವಿಜರೊಳಗೆ ವರ
ಸತ್ಯಹೀನನೆ ಹೀನಜಾತಿಗನೆಂದನಾಭೂಪ ॥ ೫೫

ಧೀರನಾವನು ಧಿಟ್ಟನಾರು ವಿ
ಕಾರಿ ಯಾರು ವಿನೀತನಾರಾ
ಚಾರಹೀನನದಾರು ಸುವ್ರತೆಯಾರು ಶಠನಾರು ।
ಕ್ರೂರನಾರತಿಕಷ್ಟನಾರು ವಿ
ಚಾರಿಯಾರು ವಿಮುಕ್ತನಾರು ವಿ
ದೂರನಾರಿಹಪರಕೆ ಭೂಮಿಪಾಲ ಹೇಳೆಂದ ॥ ೫೬

ನಾರಿಯರ ಕಡೆಗಣ್ಣ ಹೊಯ್ಲಿನ
ಧಾರೆಗಳುಕದ ನಾವನಾತನೆ
ಧೀರನಾತನೆ ಧಿಟ್ಟನಬಲೆಯರುಬ್ಬುಗವಳದಲಿ ।
ಮೀರೆದಪ್ಪಿದವನೆ ವಿಕಾರಿ ವಿ
ಚಾರಪರನೆ ವಿನೀತನನ್ಯಾ
ಚಾರಯುತನಾಚಾರಹೀನನು ಫಣಿಪ ಕೇಳೆಂದ ॥ ೫೭

ಕೃತಕವಲ್ಲದೆ ದ್ವಂದ್ವಸಹನೇ
ವ್ರತಿ ಮುಮುಕ್ಷು ವಿಚಾರಯುಕ್ತನು
ಕೃತಕನೇ ಶಠನಪ್ರಗಲ್ಭಕೃತಘ್ನನೇ ಕ್ರೂರ ।
ಕ್ಷಿತಿಗೆ ಲೋಭಿಯೆ ಕಷ್ಟನಾತ್ಮನಿ
ರತನೆ ಮುಕ್ತನು ವೇದಮಾರ್ಗ
ಚ್ಯುತನೆ ಲೋಕದ್ವಯಕೆ ದೂರನು ಸರ್ಪ ಕೇಳೆಂದ ॥ ೫೮

ಆರು ಭಂಡರು ಸುಜನನಿಂದ್ಯದ
ದಾರು ಹಾಲಾಹಲಸರೂಪಕ
ರಾರು ಸಾಹಸಿಯಾರು ಸಜ್ಜನರಾರು ಶುಚಿಯಾರು ।
ಆರು ಹಗೆ ಸಖರಾರು ಸೇವ್ಯರ
ದಾರು ದುರ್ಲಭರಾರು ದುಸ್ಸಹ
ರಾರು ದುರ್ಮತಿಯಾರು ಧರ್ಮಜ ತಿಳಿಯ ಹೇಳೆಂದ ॥ ೫೯

ವ್ಯಸನಿ ನಿಂದ್ಯನು ರಣದೊಳೊಡೆಯನ
ಬಿಸುಟು ಹೋಹನೆ ಭಂಡನತಿಸಾ
ಹಸಿಕನೇ ಸೇವಕನು ಮಿತ್ರದ್ರೋಹಿಯೇ ವಿಷನು ಕಣ ।
ಪಿಸುಣನೇ ಹಗೆ ಪರಸತಿಗೆ ಮನ
ಮಿಸುಕದವನೇ ಶುಚಿ ಪರಾರ್ಥ
ವ್ಯಸನಿಯೇ ಸಜ್ಜನನು ಸರ್ಪಾಧೀಶ ಕೇಳೆಂದ ॥ ೬೦

ವಿನುತಪರತತ್ವಜ್ಞನತಿಸೇ
ವ್ಯನು ಸುದುರ್ಲಭನೇ ಜಿತೇಂದ್ರಿಯ
ನನುಗುಣನೆ ಸಖನು ಸ್ಥೈರಿಸದವನೆ ದುಸ್ಸಹನು ।
ಮನುಜರಲಿ ದುರ್ಮತಿಯುಲಾ ದು
ರ್ಜನರಿಗಾಶ್ರಯವೆಂದು ತೋಱಿದು
ದೆನಗೆ ನಿನಗಭಿಮತವೆ ಸರ್ಪಾಧೀಶ ಕೇಳೆಂದ ॥ ೬೧

ಅಹುದಲೇ ಬಳಿಕೇನು ವಿದ್ಯಾ
ಮಹಿಮೆ ದಾನತಪೋಗುಣಕೆ ಸ
ನ್ನಿಹಿತನೀಧರ್ಮದಲಿ ಸತ್ಯಾಚಾರಶೀಲದಲಿ ।
ಕುಹಕಿಯಲ್ಲ ವಿರೋಧಿಯಲ್ಲತಿ
ಸಹಜನೈ ಸಾರಜ್ಞನಲ್ಲೆನ
ಬಹುದೆ ನಿನ್ನುಕುತಿಗಳನೆಂದನು ನಹುಷನರಸಂಗೆ ॥ ೬೦

ಅರಸ ಕೇಳ್ಳ ಕ್ಷಾತ್ರತೇಜವೆ
ಹೊರೆವುದೇ ಬ್ರಹ್ಮಣ್ಯಶಕ್ತಿ
ಸ್ಫುರಣ ನೀನೀಬ್ರಹ್ಮವರ್ಗದ ಸಾರಸಾಖ್ಯದಲಿ ।
ಮೆಱೆದೆಲಾ ವಿಪ್ರಾವಮಾನವೆ
ಸಿರಿಗೆ ನಂಜು ಕಣಾ ಮಹೀಸುರ
ವರರುಪಾಸನೆ ನಿನಗೆ ನೀ ಕೃತಕೃತ್ಯನಹೆಯೆಂದ ॥ ೬೩

ನೂಱುಯಜ್ಞದ ಹೊಯ್ಲುರಿಗೆ ಹರಿ
ದೇಱಿದೆನು ಸುರಪತಿಯ ಪೀಠವ
ನೋಱುಗುಡಿಸಿತು ಪದವಿಯದು ವಿಪ್ರಾವಮಾನದಲಿ ।
ಮಾಱುಮಾತೇನೈ ಮಹೀಸುರ
ರೇಱಿಸಿದರೇಱುವುದು ಮುನಿದರೆ
ಕಾಱಿಸುವರೈ ಕೋಟಿಯಜ್ಞವನೆಂದನಾನಹುಷ ॥ ೬೪

ಸರ್ಪವು ತನ್ನ ವೃತ್ತಾಂತವನ್ನು ಧರ್ಮರಾಯನನ್ನು
ಕುರಿತು ಹೇಳಿದುದು.

ಎನ್ನ ವೃತ್ತಾಂತದ ನಿದಾನವ [1]
ಮುನ್ನ ನೀ ಬೆಸಗೊಳಲು ಹೇಳಿದೆ
ನಿನ್ನು ನಿನ್ನಭಿಧಾನವನು ನೀನಾವನೆಂಬುದನು ।

1 ರಹಸ್ಯವ, ಖ.

ಇನ್ನು ಕೇಳುವೆನೆನಲು ನಿಮ್ಮಲಿ
ಮುನ್ನಿನವನು ಯಯಾತಿಯಯ್ಯನು
ತನ್ನ ನಾಮವೆ ನಹುಷನೆಂಬುದು ನೃಪತಿ ಕೇಳೆಂದ ||　　೬೫

ಮಾಡಿದೆನು ಶತಮಖವನದು ಹೋ
ಗಾಡಿತಿಂದ್ರನನಲ್ಲಿ ತನಗೆಡೆ
ಮಾಡಿತರಮನೆ ಕಂಡುದಾತೆತ್ತೀಸ ಕೋಟಿಗಳು |
ನಾಡು ಬೀಡೆನಗಾಯ್ತು ವಶ ಖಯು
ಖೋಡಿಯಿಲ್ಲದೆ ಶಕ್ರಪದದಲಿ
ರೂಢಿಸಿದೆನದನೇನ ಹೇಳುವೆನೆನುತ ಬಿಸುಸುಯ್ದ ||　　೬೬

ಅರಸ ಕೇಳೈ ರಂಭೆಯೂರ್ವಶಿ
ವರತಿಲೋತ್ತಮೆ ಗೌರಿ ಮೇನಕಿ
ಸುರಭಿ ಗಂಧಿನಿ ಮಂಜುಘೋಷೆ ಸುಕೇಶಿ ಮೊದಲಾದ |
ಸುರಸತಿಯರೆನ್ನರಮನೆಯ ತೊ
ತ್ತಿರುಗಳಾದರು ಮೂಱುಲಕ್ಷದ
ಹೊಱಗೆ ಮೂವತ್ತಾಱುಸಾವಿರವೆಂದನಾನಹುಷ ||　　೬೭

ಈಸು ನಾರಿಯರಿರಲು ಬಯಲಭಿ
ಲಾಷೆ ದಿವಿಜೇಶ್ವರನ ರಾಣೀ
ವಾಸದಲಿ ಕಂಗಟ್ಟಿ ತಂದುದು ತನ್ನನೀವಿಧಿಗೆ |
ಮೀಸಲಿನ ಮಾನಿನಿಯರಲಿ ಮನ
ದಾಸೆ ಮನುಜರ ಮುಱಿವುದಕೆ ತಾ
ನೈಸಲೇ ದೃಷ್ಟಾಂತವೆಂದನು ನಹುಷನರಸಂಗೆ ||　　೬೮

ಆಧಿ ಬಿದ್ದುದು ಶಚಿಯ ಮೇಲಣ
ವೇಧೆಯಲಿ ವಿಟಬುದ್ಧಿ ಸಿರಿಗೆ ವಿ
ರೋಧಿಯೈ ಸಲೆ ಸತಿಯುಪಾಯವ ಮಾಡಿ ಋಷಿಗಳಿಗೆ |

ಬೋಧಿಸಿದರವರೆನ್ನ ವಾಹನ
ಸಾಧನವೆಯಾದರು ಮುನೀಂದ್ರ ವಿ
ರೋಧವಾಯ್ತೆನಗಲ್ಲಿ ಶಪಿಸಿದನಂದಗಸ್ತ್ಯಮುನಿ ॥ ೬೯

ಸರ್ಪ ಪರಿಸರ್ಪ ತ್ವಮೆನೆ ಘಡ
ಸರ್ಪ ನೀನಾಗೆನಲು ತನ್ನಯ
ದರ್ಪವನು ಕೆಡೆನೂಕಿ ಬಿದ್ದೆನು ಮುನಿಯು ಚರಣದಲಿ ।
ಸರ್ಪತನದನುಭವಕೆ ಕಡೆ ಯೆಂ
ದಪ್ಪುದೆನೆ ಧರ್ಮಜನ ವರವಾ
ಗ್ದರ್ಪಣದಲಹುದೆಂದೊಡಿದು ಸಂಘಟಿಸಿತೆನಗೆಂದ ॥ ೭೦

ಎನುತ ದಿವ್ಯಾವಯವಕಾಂತಿಯು
ಮಿನುಗುವೋಹರದೇಕ್ಷೆ ಮೂಡಿದು
ವನಿಮಿಷಾಂಗದಲುರಗಕಾಯದ ಕೋಹಳಯನುಗಿದು ।
ಜನಪ ನಿನ್ನೊಡಹುಟ್ಟಿದನ ಕೊ
ಳ್ಳೆನುತ ಹೇಮವಿಮಾನದಲಿ ಸುರ
ವನಿತೆಯರ ವ್ರೋಲಗದಲೆಸೆದನು ನಹುಷನಭ್ರದಲಿ ॥ ೭೧

ದುಗುಡದಲಿ ಬರೆ ಭೀಮಸೇನನ
ತೆಗೆದು ಬಿಗಿದಪ್ಪಿದನು ಖೇದದ
ಹೊಗಳಿದೇಕೆ ವೃಥಾಮನೋವ್ಯಥೆಯು ತಾಳದಿರು ।
ಜಗವೆಱಿಯೆ ನಮ್ಮನ್ವಯದ ಪೂ
ರ್ವಿಗನಲಾ ನಹುಷಂಗೆ ಬಂದು
ಬ್ಬೆಗದ ಹದನಿದು ನಮ್ಮ ಪಾಡೇನೆಂದನಾಭೂಪ ॥ ೭೨

ನಿನ್ನ ದೆಸೆಯಿಂದಾಯ್ತಲೇ ಪ್ರತಿ
ಪನ್ನ ಶಾಪವಿಮೋಕ್ಷ ವಿದಱಲಿ
ನಿನ್ನದರ್ಪಕೆ ಹಾನಿಯೇ ಹೇರಾಳಸುಕೃತವಿದು ।

ತನ್ನರಿಷ್ಟವನೀಕ್ಷಿಸದೆ ಪರ
ರುನ್ನತಿಯ ಬಯಸುವರು ಸಜ್ಜನ
ರಿನ್ನು ಸಾಕೆಂದೊರಸಿದನು ಕಂಬನಿಯನನಿಲಜನ [1] ॥ ೭೩

ತಿಳುಹಿ ತಂದನು ಸಕಲಮುನಿ ಸಂ
ಕುಲಸಹಿತ ತನ್ನಾಶ್ರಮಕೆ ಕೋ
ಮಲೆಯ ನುಡಿಯಲಿ ಬಿಡಿಸಿದನು ಭೀಮನ ಮನೋವ್ಯಥೆಯ ।
ಅಳಿವು ನಮಗೆಲ್ಲಿಯದಪಾಯದ
ಜಲಧಿಗಳು ಬತ್ತುವುವು ಯದುಕುಲ
ತಿಲಕಗದುಗಿನ ವೀರನಾರಾಯಣನ ಕರುಣದಲಿ ॥ ೭೪

ಹದಿನಾಲ್ಕನೆಯ ಸಂಧಿ ಮುಗಿದುದು.

## ಹದಿನೈದನೆಯ ಸಂಧಿ.

ಸೂಚನೆ.

ಕರುಣಿ ಬಿಜಯಂಗೈದು ಪಾಂಡವ
ಧರಣಿಪನ ಸಂತೈಸಿ ಯಾದವ
ರರಸನಿರೆ ಬಂದರು ಮೃಕಂಡುತನೂಜನಾರದರು [2] ॥

ಧರ್ಮಭೀಮರನ್ನು ಸಮಾಧಾನ ಗೊಳಿಸಿದುದು.

ಚಿತ್ತವಿಸು ಜನಮೇಜಯ ಕ್ಷಿತಿ
ಪೋತ್ತಮನೆ ಧರ್ಮಜನ ಮುಖದಲಿ
ಕೆತ್ತುದುಗುಡವ ಕಳಚಿ ಭೀಮನ ಖೇದವನು ಬಿಡಿಸಿ [3] ।

---

1 ಪವನಜನ ಕಂಬನಿಯ, ಚ.

2 .... ನಿದ್ದನು ಸಕಲಮುನಿಜನಸಹಿತ ವನದೊಳಗೆ, ಚ.

3 ಭೀಮನ ತಂದರಾಶ್ರಮಕೆ, ಖ. ಚ.

ಮತ್ತಕಾಶಿನಿ ಧೌಮ್ಯನಖಿಲಮ
ಹೋತ್ತಮರು ಪೀಯೂಷಮಧುರರ
ಸೋತ್ಕರದ ನುಡಿಗಳಲಿ ನಾದಿದರನಿಲಜನ ಮನವ ॥ ೧

ಮುಗಿಲು ಬಱತುದು ಬಱಿಯುಗಡಬಡೆ
ಗಗನಕುಳದುದು ಕೊಂಡನೆಲನನು
ತೆಗೆದು ನಿಂದುದು ಹೇಡಿಯಂಗದವೊಲು ನದೀನಿವಹ ।
ನಗುವ ಕೊಳನ ಚಕೋರಚಯ [1] ಹಂ
ಸೆಗಳು ಮೆಱೆದುವು ನಗುವ ತುಂಬಿಯು
ಸುಗುಡತನ ತಾವರೆಯೊಳೆಸೆದುದು ಶರದ ಸಮಯದಲಿ ॥ ೨

ತಿರುಗಿ ಕಾಮ್ಯಕವನಕೆ ಬಂದುದು.

ಸವೆದುದೀ ನವಿಲ್ಲಿ ಫಲಮೃಗ
ನಿವಹ ಬೀತುದು ನಮ್ಮ ಕಾಲಾ
ಟವನು ಸೈರಿಸಿ ನಿಲುವ ವನವನು ಕಾಣೆ ತಾನೆನುತ ।
ನಮಗೆ ಮಗುಟಾಕಾಮ್ಯಕದ ವನ
ಭವನವೈ ಸಲೆ ಯೆನುತಲಾಮುನಿ
ನಿವಹಸಹಿತವನೀಶ ಕಾಮ್ಯಕವನಕೆ ನಡೆತಂದ ॥ ೩

ಆಶರತ್ಕಾಲವನು ತದ್ವನ
ವಾಸದಲಿ ನೂಕಿದನು ಮುನಿ ಪರಿ
ತೋಷವಂಗಸ್ಫುರಣೆ ಸೂಚಕ ಶಕುನ ಮೊದಲಾದ ।
ವಿಾಸಲಱಿಯುಲು ಹರುಷದ ಸದಾ
ವೇಶದಲಿ ಮನವುಕ್ಕಿ ಹಿಗ್ಗಿದ
ನೀಶಕುನಸುಮ್ಮಾನ ಯಿದಕೇನಹುದೊ ಫಲವೆಂದ ॥ ೪

[1] ಭ್ಯಾಗತೆಯ, ಚ.

ಇದಕೆ ಕೃಷ್ಣಾಗಮನವೇ ಫಲ
ದುದಯವೈ ಸಲೆ ಯೆನುತಲಿರೆ ಬಂ
ದಿದಿರು ನಿಂದನು ದೂತನೊಬ್ಬನು ದ್ವಾರಕಾಪುರಿಯ ।
ಇದೆ ಕೃಪಾನಿಧಿ ಬಂದನಸುರಾ
ಭ್ಯುದಯಘಾತಕ ಬಂದ ರಿಪುಬಲ
ಮದನರುದ್ರನು ಬಂದನಿದೆ ಯೆಂದನು ಮಹೀಪತಿಗೆ ॥ ೫

ಸೂಚಿಸಿದುದೇ ಶಕುನ ಪುನರಪಿ
ಗೋಚರಿಸಿತೇ ಗರುವನಿಧಿ ನಾ
ವಾಚರಿಸಿತೇನೊ ಶಿವ ಶಿವ ಭವಭವಸಹಸ್ರದಲಿ ।
ನಾಚಿದುವು ನಿಗಮಂಗಳಾವನ
ಸೂಚಿಸುವುವೆಮ್ಮೊಳಗೆ ಕೃಪೆಯುಲ
ರೋಚಕವನಾದೈವಮಾಡದೆನುತ್ತ ಹೊಱವಂಟ ॥ ೬

ಹಱುವವನು ಹೊಱವಂಟು ಗರುಡನ
ಹಱವಿಗೆಯ ದೂರದಲಿ ಕಂಡನು
ತುಳುಕಿದುವು ಸಂತೋಷಜಲ ನಿಟ್ಟೆಸಳುಕಂಗಳಲಿ ।
ತಳಿತರೋಮಾಂಚನದ ಸಮ್ಮದ
ಪುಳಕದಲಿ ಪೂರಾಯದುಬ್ಬಿನ
ಲಿಳೆಯೊಡೆಯ ವೈಯಿಕ್ಕುತೈದಿದನಖಿಳಜನಸಹಿತ ॥ ೭

ಶ್ರೀಕೃಷ್ಣನ ಆಗಮನ.

ಇೞಿದು ದಂಡಿಗೆಯಿಂದ ಕರುಣಾ
ಜಲಧಿ ಬಂದನು ಕಾಲನಡೆಯಲಿ
ಸೆಳೆದು ಬಿಗಿದಪ್ಪಿದನಿದೇನಾಸುರವಿದೇಕೆನುತ ।
ಬೞಿಕ ಭೀಮಾರ್ಜುನರ ಯಮಳರ
ನೊಲಿದು ಮನ್ನಿಸಿ ಸತಿಯ ಲೋಚನ
ಜಲವ ಸೆಱಗಿನಲೊರಸಿ ಸಂತೈಸಿದನು ಬಾಲಿಕೆಯ ॥ ೮

ಕುಶಲ ಪ್ರಶ್ನೆ.

ಕುಶಲವೇ ಕುರುರಾಯನೂಳಿಗ
ವೆಸಕದಲೆ ನಿಮ್ಮತ್ತಲವಧಿಯು
ದೆಸೆ ಸಮೀಪವೆ ತೊಳಲಿದಿರೆಲಾ ವನವನಂಗಳಲಿ ।
ಪಶುಪತಿಯು ಹಿಡಿದಂಬು ಕೈವ
ಶ್ರಿಸಿತಲಾ ಪಾರ್ಥಂಗೆ ನಮಗಿಂ
ದೊಸಗೆಯಾಯಿತು ಪುಣ್ಯವೆಂದನು ಹರಿ ಮಹೀಪತಿಗೆ ॥ ೯

ಧರ್ಮರಾಯನು ತಮ್ಮ ವೃತ್ತಾಂತವೆಲ್ಲವನ್ನು ಹೇಳಿದುದು.

ಆಗಲೀವೈಷ್ಣವಕೆ ನಮ್ಮಯ
ತಾಗುಫಟ್ಟನ ರಕ್ಷೆ ತೊಡಚಿದು
ದಾಗಲಿರ್ದುದು ಪಾಶುಪತ ಶರವೆದಱ ಬೞಿವಿಡಿದು ।
ಈಗಲೊಸಗೆಯೆ ತಮ್ಮ ಪಂಚಕ
ದಾಗುಹೋಗನು ಹೊತ್ತು ನಡಸಿದೊ
ಡಾಗ ನಮಗಾಯ್ತೊಸಗೆ ಯೆಂದನು ನೃಪತಿ ವಿನಯದಲಿ ॥ ೧೦

ತೊಳಲಿದೆವೆಲೈ ಕೃಷ್ಣ ತಪ್ಪದೆ
ಹೞುವಹೞುವವನಮರಪುರದಲಿ
ಕೆಲವುದಿನವಿರಲರ್ಜುನಂಗಾಯ್ತೂರ್ವಶಿಯು ಶಾಪ ।
ಖಳರನಲ್ಲಿ ನಿವಾತಕವಚರ
ಗೆಲಿದು ಬಂದನು ಪಾರ್ಥನಿತ್ತಲು
ಕೆಲಬರಸುರರ ಕಾದಿ ಕೊಂದನು ಭೀಮನಡವಿಯಲಿ ॥ ೧೧

ಇಂತು ತಲೆಯೊತ್ತುತ ಮಹಾವಿಪಿ
ನಾಂತರವ ತೊೞಲಿದೆವು ಬೞಿಕ ವ
ನಾಂತದೊಳಗೊಂದಾಮುದೂಳಿಗ ನಹುಷನೃಪತಿಯಲಿ ।
ಭ್ರಾಂತಿಯೈ ಸಲೆ ಭೀಮನುರಗಾ
ಕ್ರಾಂತನಾದನು ಧರ್ಮಕಥೆಯಲಿ
ಸಂತವಾಯ್ತು ವಿಶಾಪನಾದನು ನಹುಷನಾಕ್ಷಣಕೆ ॥ ೧೨

ಮರಳಿ ಕಾಮ್ಯಕವನದ ದಳವಂ
ದಿರವನೇ ನೆಲೆಮಾಡಿದೆವು ವಿ
ಸ್ತರಣವಿದು ಹಿಂದಾದ ವಿಪಿನಾಂತರಪರಿಭ್ರಮದ ।
ಕರುಣಿ ನಿಮ್ಮಡಿಯಂಘ್ರಿಕಮಲದ
ದರುಶನದಿನಾಯಾಸಪಾರಂ
ಪರೆಗೆ ಬಿಡುಗಡೆಯಾಯ್ತೆನುತ ವೈಯಿಕ್ಕಿದನು ಭೂಪ ॥ ೧೩

ಏಳೆನುತ ತೆಗೆದಪ್ಪಿದನು ಕರು
ಣಾಳು ಕೇಳ್ಕೆ ಭೂಪ ಸುರಪತಿ
ಯಾಲಯದೊಳೂರ್ವಶಿಯ ಶಾಪವು ಬಂದೊಡೇನಾಯ್ತು ।
ಲೀಲೆಯಿಂದೀಭೀಮ ದೈತ್ಯರ
ಭಾಳಲಿಪಿಯನು ತೊಡೆದ ನಿನ್ನಯ
ಬಾಳುಬರಹವು ಮುಂದೆ ಯೆಂದನು ನಗುತ ಮುರವೈರಿ ॥ ೧೪

ಆಗ ನಾರದ ಮಾರ್ಕಂಡೇಯರು ಬಂದುದು.

ರಾಯ ಕೇಳಾಕ್ಷಣಕೆ ಮಾರ್ಕಂ
ಡೇಯನಾರದರಿೞದರಬುಜದ
ಳಾಯತಾಕ್ಷಂಗೆಱಗಿದರು ಭಯಭರಿತಭಕ್ತಿಯಲಿ ।
ತಾಯಿ ಕಱುಗಳ ಬಿಡದವೊಲು ನಿ
ರ್ದಾಯದಲಿ ನಿಜಭಕ್ತಸಂಗದ
ಮಾಯೆ ಬಿಡದೈ ನಿಮ್ಮದೆಂದರು ಹೊರಳಿ ಚರಣದಲಿ ॥ ೧೫

ಮಾರ್ಕಂಡೇಯರು ಧರ್ಮರಾಯನನ್ನು ಸ್ತುತಿಮಾಡಿದುದು.

ತಪದಲುರಿದು ಸಮಾಧಿಯೋಗದ
ಉಪಶಮದಲುಬ್ಬೆದ್ದು ಹೋನದ
ಜಪದ ಜಂಜಡದೊಳಗೆ ಸಿಲುಕಿ ಜನಾರ್ದನನ ಮಱೆವ ।
ಅಪಸದರು ನಾವ್ ಕರ್ಮನಿಷ್ಠೆಯ
ಕೃಪಣರಾವ್ ಕೇಳ್ ನಿನ್ನ ಮೇಲಣ
ಕೃಪೆಯ ನೋಡೈ ಭೂಪ ಯೆನುತೀಕ್ಷಿಸಿದರಚ್ಯುತನ ॥ ೧೬

ಈಯಘಾಟದ ದೈವವಿದು ನಿ
ರ್ದಾಯದಲಿ ನಿಮ್ಮೊಳಗೆ ಸೇರಿತು
ರಾಯರಿರ್ದರು ಹಿಂದೆ ಭರತಭಗೀರಥಾದಿಗಳು ।
ಆಯಿತೇನವರಿಗೆ ಸರೋಜದ
ಳಾಯತಾಕ್ಷನ ಚರಣಸೇವೆ ನಿ
ರಾಯಸದೆ ಸಹವಾಸಭೋಜನವೆಂದರಾನೃಪಗೆ ॥ ೧೭

ವರುಷಹದಿನಾರರಲಿ ಮೃತ್ಯುವ
ಪರುಠವಿಸಿದುದು ಕರ್ಮಗತಿ ಮುರ
ಹರನ ಸೇವೆಯ ಮಾಡಿ ಸವೆದೆನು ಸರ್ವಭಾವದಲಿ ।
ಕರುಣಿ ಬಿಜಯಂಗೈದು ಮೃತ್ಯುವಿ
ನುರಿಯ ಗಂಟಲಲಿರ್ದ ತನ್ನನು
ಬರೆಸೆಳೆದನೆಂದಮಲಮಾರ್ಕಂಡೇಯಮುನಿ ನುಡಿದ ॥ ೧೮

ಓಕರಿಸಿದುದು ಮೃತ್ಯುವೆನ್ನನು
ಲೋಕದಿಂ ಹೊರಗೆಂದು ಯಮಗಿಮ
ರಾಕರಣೆಗಳ ಜೀವಜಾತಿಯೊಳಲ್ಲ ನೀನೆಂದು ।
ಲೋಕದಲಿ ಡಂಗುರವ ಹೊಯ್ಸಿದ
ನೀಕಮಲನಾಭನೆ ಕಣಾ ಕರು
ಣೈಕನಿಧಿ ನಿಮಗೊಲಿದನೆಂದನು ಮುನಿ ಮಹೀಪತಿಗೆ ॥ ೧೯

ಪ್ರಳಯ ಕಾಲದಲ್ಲಿ ನಡೆದ ಕ್ರಮವನ್ನು ಹೇಳಿದುದು.

ಧರಣಿಪತಿ ಕೇಳ್ ಪ್ರಳಯದಲಿ ಸಾ
ಗರದ ತೆರೆ ಮುಂಡಾಡುವೊಲು ಸಾ
ಗರದ ಕೂಟಕೆ ಸಕಲಜಲಧಿಗಳೇಕರೂಪದಲಿ ।
ಧರೆಯ ಮುಳುಗಿಸಿ ಮೇಲೆಮೇಲು
ಬ್ಬರಿಸಿ ಜಗದಡಿಕಿಲದ ಜೋಡಿಯ
ಜರುಹಿದುವು ನೀರೇರಿತಗ್ಗದ ಸತ್ಯಲೋಕದಲಿ ॥ ೨೦

ಜಗದ ಜೀವರ ಕರ್ಮಬೀಜಾ
ಳಿಗಳ ಬೈತ್ರವ ತನ್ನ ಬಾಲಕೆ
ಬಿಗಿದು ನೀರಲಿ ನುಸುಳಿದನು ಮತ್ಸ್ಯಾವತಾರದಲಿ ।
ಬಗೆಯಲಾ ಹರಿ ಯಿಾತನೇ ಋ
ಗ್ಯುಗಳಗೋಚರನಾದನಡಿಸುವ
ನಿಗಮವೀತನ ಹೆಜ್ಜೆ ಗಾಣವು ಭೂಪ ಕೇಳೆಂದ ॥ ೬೧

ಮರಳಿ ಹೂಡಿದನೀಜಗದ ವಿ
ಸ್ತರಣವನು ಮಾಯಾಮಹೋದಧಿ
ಹೊರೆದನುನ್ನತಸತ್ವದಲಿ ಮೇಲಾದ ಲೋಕಗಳ ।
ಉರಿಯಲದ್ದುವನಿವನು ಲೀಲಾ
ಚರಿತವಿದು ಕೃಷ್ಣಂಗೆ ನಿನ್ನಯ
ಸಿರಿಯೆ ಸಿರಿ ಬಡತನವೆ ಬಡತನ ವೆಂದನಾಮುನಿಪ ॥ ೬೨

ಅರಸ ಕೇಳ್ ಕಲ್ಪಾಂತದಲಿ ಬಿಡೆ
ಬಿರಿದುದೀಬ್ರಹ್ಮಾಂಡ ಬಹಿರಾ
ವರಣಜಲನಿಧಿಜಲದೊಳೊಂದಾಯ್ತೇನ ಹೇಳುವೆನು ।
ಹರಿ ವಿನೋದದೊಳಾಲದೆಲೆಯಲಿ
ಸಿರಿಸಹಿತ ಪವಡಿಸಿದನಿನಶಶಿ
ಕಿರಣವಿಲ್ಲ ಮಹಾಂಧಕಾರ ಸಭಾರವಾಯ್ತೆಂದ ॥ ೬೩

ಈನೆಲನನೀಚಂದ್ರಸೂರ್ಯ ಕೃ
ಶಾನು ತೇಜವನೀಸಮೀರಣ
ನೀನಭವ ತಾ ಕಾಣೆನೊಂದೇಸಲಿಲಸೃಷ್ಟಿಯಲಿ
ಏನ ಹೇಳುವೆನೆನ್ನ ಚಿತ್ತ
ಗ್ಲಾನಿಯನು ಬಲುತೆಙೆಯು ಹೊಯ್ಲಿನೊ
ಳಾನು ಮುಳುಗುತ್ತೇಳುತಿರ್ದೆನು ಭೂಪ ಕೇಳೆಂದ ॥ ೬೪

ಆಗ ಮಾರ್ಕಂಡೇಯರು ತನ್ನ ದುರವಸ್ಥೆಯನ್ನು ಹೇಳಿದುದು.

ಹೇಳಲೇನದು ಮೃತ್ಯುವಿನ ಗೋ
ನಾಳಿಯೊಳಗಂದಿಕ್ಕಿಯುಲೊಲ್ಲದೆ
ಕಾಳುಮಾಡಿದೆನೇ ಮುರಾರಿಯ ಭಜಿಸಿ ಭಕ್ತಿಯಲಿ ।
ಬಾಲಕನೊಳವಗುಣವನಕಟಾ
ತಾಳಬಹುದೇ ತಾಯೆ ಮೃತ್ಯುವ
ತಾಳಿಗೆಯ ತೆಗೆದೆನ್ನನೊಳಕೊಳ್ಳೆಂದು ಹಲುಬಿದೆನು ॥ ೨೫

ನೀರು ಹೊಕ್ಕುದು ನೂಕಿ ವಿವಿಧ
ದ್ವಾರದಲಿ ಬೆಂಡೇಳ್ವೆನೊಮ್ಮತಿ
ದೂರ ಮುಳುಗುವೆನಷ್ಟಬೀಳ್ವೆನು ತೆರೆಯ ಹೊಯ್ಲಿನಲಿ ।
ಯಾರಿಗುಬ್ಬಸವೆನ್ನ ಮರಣವೆ
ನಾರು ಕಂಡರು ಹೇಸಿ ತನ್ನನು
ದೂರಬಿಸುಟಳು ಮೃತ್ಯು ಬಳಲಿದೆ ನಿಂತು ಹಲಕಾಲ ॥ ೨೬

ಆಗ ಅಚ್ಯುತನ ಬಳಿಗೆ ಬ್ರಹ್ಮನು ಬಂದುದು.

ಮುಳುಗುತೇಳುತ ಬರುತ ವಟಕುಜ
ದೆಲೆಯಲೀತನ ಕಂಡೆನೈ ನಾ
ನೆಳತಟಕೆ ಬಿದ್ದಂತೆ ತೆರೆಯೆಡೆದೆರೆಗೆ ತನಿಗೆಡೆದು ।
ಜಲಜಸಂಭವನಾಜಲವ ಮು
ಕ್ಕುಳಿಸುತುಗುಳುತ ನಾಲ್ಕುಮುಖ
ದಲಿ ನಿಲುಕಿ ನಿಗುರುತ ಬಂದನು ಕಂಡನಚ್ಯುತನ ॥ ೨೭

ಆಗ ಬ್ರಹ್ಮಾಚ್ಯುತರ ಸಂಭಾಷಣೆ.

ಆರು ನೀನೆಂದಾತನೀತನ
ಸಾರಿದನು ಬೆಸಗೊಳಲು ಜಗದಾ
ಧಾರಕನು ಜಗದುದರ ಹರಿ ತಾನೆಂದೊಡಜ ನಗುತ ।

ಭೂರಿಜಗವೆನ್ನುದರದಲಿ ನೀ
ನಾರು ಜಗಕೆಂದುಲಿದು ಗರ್ವವಿ
ಕಾರದಲಿ ಪರಮೇಷ್ಠಿ ನಿಜತೇಜವ ವಿಭಾಡಿಸಿದ ॥ ೨೮

ಆದುವೇ ನಿನ್ನುದರದಲಿ ಜಗ
ವಾದೊಡೀಕ್ಷಿಪೆನೆನುತಲಾಕಮ
ಲೋದರನು ಕಮಲಜನ ಜಠರವ ಹೊಕ್ಕು ಹೊಱಮೆಂಟು ।
ಭೇದಿಸಿದೆ ತಾನೆನ್ನ ಜಠರವ
ಲಾದ ಲೋಕವನೆಣಿಸಿ ಬಾರೆನ
ಲಾದುರಾಗ್ರಹಿ ಯಿೞಿದನಸುರಾಂತಕನ ಜಠರವಲಿ [1] ॥ ೨೯

ಹೊಲವು ದಪ್ಪಿದನಲ್ಲಿ ಭುವನಾ
ವಳಿಗಳಿದ್ದುವು ಕೋಟಿರುದ್ರಾ
ವಳಿಗಳಿದ್ದರು ಕೋಟಿಪರಮೇಷ್ಠಿಗಳು ಶತಕೋಟಿ ।
ಹುಲು ನೊರಜು ಸಾಗರದ ಸಲಿಲವ
ನಳವವೊಲು ನೋಡಿ ಹಾಱಿ ಗಗನದ
ತಲೆಮೊದಲಕಾಣಿಸುವೆನೆಂಬವೊಲಾಯ್ತು ಕೇಳೆಂದ ॥ ೩೦

ಹಲವುಯುಗಪರ್ಯಂತ ವಲ್ಲಿಯೆ
ತೊೞಲಿ ಕಡೆಗಾಣದೆ ಕೃಪಾಳುವ
ನೊಲಿದು ಹೊಗೞಿದನಜನು ಸಹಸ್ರವೇದಸೂಕ್ತದಲಿ ।
ಬೞಿಕ ಕಾರುಣ್ಯದಲಿ ನಾಭೀ
ನಳಿನದಲಿ ತೆಗೆದನು ವಿರಿಂಚಿಗೆ
ನಳಿನಸಂಭವನೆಂಬ ಹೆಸರಾಯ್ತಂದು ಮೊದಲಾಗಿ ॥ ೩೧

ಆಮಹಾಜಲಕಗ್ನಿ ಮುಖದಲಿ
ಹೋಮವಾಯ್ತು ತದಗ್ನಿಯುಡಗಿದು
ದಾಮರುತ್ತಿನೊಳಾಬಹಳಬಹಿರಂಗಪವಮಾನ ।

[1] ವದನದಲಿ. ಖ.

ವ್ಯೋಮದಲಿ ತದಹಂಮಹತ್ತು ವಿ
ರಾಮವಾಪ್ರಕೃತಿಯಲಿ ಮಾಯಾ
ಕಾಮಿನಿಗೆ ಪರಮಾತ್ಮನಲ್ಲಿ ಲಯವೆಂದನಾಮುನಿಪ ॥ ೩೦

ಏಸುದಿನ ವೀಜಗದ ಬಾಳುವೆ
ಯೇಸುದಿನ ವೀಪ್ರಳಯಮಯ ಪರಿ
ಭಾಸಮಾನಬ್ರಹ್ಮತೇಜೋರೂಪ ವೇಸುದಿನ ।
ಆಸದಾನಂದೈಕರಸವೆ ಪ್ರ
ಕಾಶಿತವವಿದ್ಯಾಪ್ರಪಂಚವಿ
ಲಾಸವಾಯ್ತು ವಿಭಾಗಸೃಷ್ಟಿವಿಧಾನಚಿಂತೆಯಲಿ ॥ ೩೩

ತಿರುಗಿ ಸೃಷ್ಟಿಕ್ರಮ ನಿರೂಪಣ.

ಏಕಮೇವಾದ್ವಿತಿಯವೆಂಬ ನಿ
ರಾಕುಳತತೇಜೋನಿಧಿಗೆ ಮಾ
ಯಾಕಳತ್ರದೊಳಾಯ್ತು ನಿಜಗುಣಭೇದವದಱಿಂದ ।
ಆಕಮಲಭವನೀಮುಕುಂದಪಿ
ನಾಕಿಯೆಂಬಭಿಧಾನದಲಿ ತ್ರಿಗು
ಣಾಕೃತಿಯ ಕೈಕೊಂಡನುರುಲೀಲಾವಿನೋದದಲಿ ॥ ೩೪

ಆರಜೋಗುಣಕಬುಜಭವನ ವಿ
ಕಾರಿ ತನ್ನ ಶರೀರದರ್ಧವ
ನಾರಿಯನು ಮಾಡಿದನು ಶತರೂಪಾಭಿಧಾನದಲಿ ।
ಸೇರಿಸಿದನರ್ಧದಲಿ ಮನುವೆನು
ದಾರಚರಿತನು ಸಕಲಧರ್ಮದ
ಸಾರವನು ವಿಸ್ತರಿಸಿದನು ಮನು ಭುವನವಿಭುವಾಗಿ ॥ ೩೫

ಭೃಗುಪುಲಸ್ತ್ಯವಸಿಷ್ಠದಕ್ಷಾ
ದಿಗಳನಿಪ್ಪನವಪ್ರಜೇಶ್ವರ
ರೊಗುಮಿಗೆಯ ಮಾಡಿದರು ಸೃಷ್ಟಿಗೆ ಬೇಱೆ ಬೇಱವರು ।

ಜಗದ ಜೋಡಣೆಯಾಯ್ತು ಭೂತಾ
ಳಿಗೆ ಚತುರ್ವಿಧಸೃಷ್ಟಿಯೊಡ್ಡಣೆ
ನಿಗಮಮತದಲಿ ಹೂಡಿತವನೀಪಾಲ ಕೇಳೆಂದ ॥ ೩೬

ಚತುರ್ಯುಗಗಳ ಸ್ಥಿತಿ.

ಆದಿಯಲಿ ಕೃತಯುಗ ಹರಿಶ್ಚಂ
ದ್ರಾದಿಗಳು ಸೂರ್ಯಾನ್ವಯಕೆ ಬುಧ
ನಾದಿ ನಿಮ್ಮನ್ವಯಕೆ ಬಳಿಕ ಪುರೂರವಕ್ಷಿತಿಪ ।
ಮೇದಿನಿಯನಾಯುಗದೊಳವರೋ
ಪಾದಿ ಸಲಹಿದರಿಲ್ಲ ಬೆಳಗಿತು
ವೇದಬೋಧಿತಧರ್ಮ ಸೂರ್ಯಪ್ರಭೆಗೆ ಸರಿಯಾಗಿ ॥ ೩೭

ಆಯುಗದ ತರುವಾಯಲಾ ತ್ರೇ
ತಾಯುಗವೆಲೇ ಬಳಿಕ ಧರ್ಮದ
ಲಾಯದಲಿ ಕಟ್ಟಿದರಧರ್ಮವನೊಂದುಪಾದದಲಿ ।
ರಾಯ ಕೇಳ್ಳೆ ದ್ವಾಪರದಲಿ ದ್ವ
ಡ್ಡಾಯದಲಿ ತಾ ಧರ್ಮವೆರಡಡಿ
ಬೀಯವಾದುದು ನಿಂದುದೆನಿಸಿತು ತನ್ನ ದೆಸೆಯಿಂದ ॥ ೩೮

ಕಲಿಯ ರಾಜ್ಯದಲೊಂದುಪಾದದ
ಸಲುಗೆ ಧರ್ಮಕ್ಕಹುದು ಸಲೆ ವೆ
ಗ್ಗಳೆಯವದಟೊಳಸತ್ಯ ಬಂಧುದ್ರೋಹ ಮತ್ಸರವು ।
ಕಳವು ಹಿಂಸೆಯನೀತಿ ಲೋಭ
ಸ್ಖಲಿತವಾಬಿಡಿ ಠಕ್ಕು ವಂಚನೆ
ಹಟವು ಹಾದರ ಕವತೆಯೆಂಬಿವೆರಾಬ್ಬು ಹಿರಿದೆಂದ ॥ ೩೯

ಈ ಯಧರ್ಮವ ಪತಿಕರಿಸಿ ತ
ನ್ನಾಯತಕೆ ಭೂತಳವ ತಂದು ನಿ
ರಾಯಸದಲೇ ಬಳಸುತಿದ್ದನು ದುಂದುವೆಂಬಸುರ ।

ರಾಯ ಕೇಳಾದೈತ್ಯನನು ತ
ನ್ನಾಯುಧಕೆ ಬಲಿಗೊಟ್ಟು ಬಚ್ಚಿಕ
ಸ್ಥಾಯಿ ಧರ್ಮವ ಬಲಿದು ಕೊಟ್ಟನು ದುಂದುಮಾರನೃಪ ‖ ೪೦

ಆನೃಪನ ರಾಜ್ಯದಲಿ ಯಜ್ಞ ವಿ
ಧಾನವೈದಿಕವಿಧಿಕ್ರತಾನು
ಷ್ಠಾನಯಮನಿಯಮಾದಿಯೋಗವಿಶಿಷ್ಟನೀತಿಯಲಿ ‖
ದೀನಭಾವವನುಳಿದು ಯಾಚ್ಞಾ
ಹೀನವೃತ್ತಿಯ ಬಿಸುಟು ಲೋಕದಿ
ಭಾನುತೇಜದಿಲೆಸೆದುದಂದು ಮಹೀಸುರವ್ರಾತ ‖ ೪೧

ರಣದೊಳಹಿತರ ಶಿರದ ಪಿದುಳೌ
ತಣವು ಶಸ್ತ್ರಕೆ ವಿತ್ತ ಭೂಸುರ
ಗಣಕೆ ವರಯೌವನದ ವಿಭ್ರಮ ನಿಜಸತೀಜನಕೆ ।
ಗುಣ ಮನುಷ್ಯವ್ರಜಕೆ ಪರಿರ
ಕ್ಷಣವಶೇಷಪ್ರಜೆಗೆನಲು ಧಾ
ರುಣಿಪತಿಗಳೊಪ್ಪಿದರು ಕೃತಯುಗದಾದಿಕಾಲದಲಿ ‖ ೪೨

ಪ್ರೌಢನೇ ವ್ಯವಹರಿಸಲಗ್ಗದ
ಮೂಢನೇ ಬರಲೊಂದೆ ಸತ್ಯ ನಿ
ರೂಢಿಯಲಿ ವಾಣಿಜ್ಯಸುವ್ಯವಹಾರಮಾರ್ಗದಲಿ ।
ಗಾಢವಿಕ್ರಯಸಕ್ರಯದಲೀ
ಗೂಢಕರು ಮೂಲ್ಯೈಕಲಾಭನಿ
ರೂಢಪರರೊಪ್ಪಿದರು ವೈಶ್ಯರು ಧರ್ಮಕಾಲದಲಿ ‖ ೪೩

ನಿಜಕೃಷಿವ್ಯವಸಾಯದಲಿ ತ
ದ್ದ್ವಿಜಕುಲದ ಶಿಶ್ರೂಷೆಯಲಿ ಪಾ
ದಜರು ಕೃತಕೃತ್ಯರು ಚತುರ್ವರ್ಣದಲಿ ಮಾರ್ಗವಿದು ।

ನಿಜನಿಜಾಂಗದ ಧರ್ಮಗತಿಯಲಿ
ಮಜಡರಾದರೆ ಮನುಜರಾದವ
ರಜನ ಪರಮಾಯುಷ್ಯಪರಿಯಂತಿಹರು ನರಕದಲಿ ॥ ೪೪

ಅಲ್ಲಿ ಆಶ್ರಮಚತುಷ್ಟಯದ ಸ್ಥಿತಿ.

ನಯವಿದನೆ ಕೇಳ್ ವೇದಶಾಸ್ತ್ರಾ
ಧ್ಯಯನದಲಿ ಪಿತೃಮಾತೃಶಿಶ್ರೂ
ಷೆಯಲಿ ಗುರುಪರಿಚರ್ಯದಲಿ ವಿಮಲಾಗ್ನಿಕಾರ್ಯದಲಿ ।
ನಿಯತಮೌನವ್ರತದ ಸಂಗ
ಪ್ರಿಯದ ಶೌಚಾಸ್ತೇಯದಿಂದ್ರಿಯ
ಜಯದ ವಿಮಲಬ್ರಹ್ಮಚರ್ಯಾಶ್ರಮದ ಗತಿಯೆಂದ ॥ ೪೫

ದೇವಗುರುಪಿತೃವಹ್ನಿಶಿಶ್ರೂ
ಷಾವಧಾನ ನಿರಂತಷಟ್ಕ
ರ್ಮಾವಲಂಬ ನಿಜೋಂನತಾಲಾಭೈಕಸಂತೋಷ ।
ಪಾವನವ್ರತ ನಿಜಪುರಂಧ್ರಿಯ
ಸೇವೆ ಸತ್ಯಾಸ್ತೇಯಶೌಚಗ
ಳಾವಳಿಗಳುಳ್ಳಾತ ಗೃಹಪತಿ ಯೆಂದನಾಮುನಿಪ ॥ ೪೬

ವನವನದೊಳಾಶ್ರಮದೊಳಗೆ ಕುಲ
ವನಿತೆಸಹಿತಮಲಾಗ್ನಿಹೋತ್ರದ
ನೆನಹು ತಪ್ಪದೆ ಕಂದಮೂಲಫಲಾಶನಂಗಳಲಿ ।
ವಿನುತಯಜ್ಞ ತಪೋವ್ರತಾದಿಗ
ಳನಿತರಲಿ ನಿಷ್ಣಾತನಾದರೆ
ವಿನುತವಾನಪ್ರಸ್ಥನೆಂಬರು ರಾಯ ಕೇಳೆಂದ । ೪೭

ಮದನನಂಬನು ಮುರಿದು ರೋಷವ
ಕದನದಲಿ ಸೋಲಿಸುತ ಲೋಭವ
ನೊದೆದು ಮೋಹವ ನೂಕಿ ಯುಟಿದೀಮದವ ಮತ್ಸರವ ।

ಎದೆಯುಲಂಕವ ಬರೆದು ವೈರಾ
ಗ್ಯದ ಸುಸಮ್ಯಗ್ಜ್ಞಾನಯೋಗದ
ಪದದ ಬೆಳಸಿರಿವಂತನೇ ಯತಿ ಯೆಂದನಾಮುನಿಪ ॥ ೪೮

ಧರಣಿಪತಿ ಕೇಳ್ ಜಾತಿಧರ್ಮವಿ
ಪರಮಧರ್ಮದ ಸಾರ ವಿದನಾ
ಚರಿಸಿ ಸಿದ್ಧಿಯನೈದಿದನು ಪಿತೃಮಾತೃಭಕ್ತಿಯಲಿ ।
ಬಳಿಗೆ ಬಣ್ಣಕೆ ಬೆರಸಿ ವೇದೋ
ಚ್ಚರಿತಧರ್ಮವ ತಿಳುಹಿದನು ಭೂ
ಸುರಗೆ ಧರ್ಮವ್ಯಾಧನಾತನ ಕಥೆಯ ಕೇಳೆಂದ ॥ ೪೯

ಹದಿನೈದನೆಯ ಸಂಧಿ ಮುಗಿದುದು.

---

## ಹದಿನಾರನೆಯ ಸಂಧಿ.

### ಸೂಚನೆ.

ಮುನಿಗಳುಪಕಥೆಯಲಿ ಯುಧಿಷ್ಠಿರ
ಜನಪತಿಯು ಸಂತೈಸೆ ಕಾಮ್ಯಕ
ವನದಿನಸುರಾರಾತಿ ಬಂದನು ದ್ವಾರಕಾಪುರಿಗೆ ॥

ವಿಪ್ರನ ಕೋಪದಿಂದ ಪಕ್ಷಿಯು ಮೃತಿ.

ಕೇಳು ಜನಮೇಜಯ ಧರಿತ್ರೀ
ಪಾಲ ಮಾರ್ಕಂಡೇಯಮುನಿಪತಿ
ಹೇಳಿದನು ವೇದೋಕ್ತಧರ್ಮದ ಸಾರಸಂಗತಿಯ ।
ಶೀಲಗುಣಸಚ್ಚರಿತದಲಿ ಸಂ
ಮೇಳವಿಸಿ ಮೌದ್ಗಲ್ಯವಂಶವಿ
ಶಾಲನೊಬ್ಬನು ವಿಪ್ರನಿದ್ದನು ಬ್ರಹ್ಮಚರಿಯದಲಿ ॥

ಧರಣಿಪತಿ ಕೇಳಾ ಮಹೀಸುರ
ವರನು ವೇದಾಧ್ಯಯನಪರನನ
ವರತವಿದ್ಯಾಭ್ಯಾಸಶೀಲನು ವನವಲೊಂದುದಿನ ।
ಮರದ ಮೊದಲಲಿ ವೇದಪಾಠಕ
ನಿರೆ ಮಹೀರುಹದಗ್ರದಲಿ ಸಂ
ಚರಿಸುತಿಹ ಖಗವಿಷ್ಠೆ ಬಿದ್ದುದು ಮೇಲೆ ಭೂಸುರನ ॥ ೨

ಮೇಲೆ ನೋಡಿದನಧಿಕರೋಷ
ಜ್ವಾಲೆಯಲಿ ಗಱಿ ಸೀದು ಧರಣಿಯ
ಮೇಲೆ ಬಿದ್ದುದು ವಿಹಗವೀತನ ಮುಂದೆ ತನು ಬೆಂದು ।

ಭಿಕ್ಷೆಯನ್ನಿಡುವವಳ ಉತ್ತರ.

ಲೀಲೆಯಲಿ ಭೂದೇವನಲ್ಲಿಂ
ಮೇಲೆ ಭಿಕ್ಷಾಟನಕೆ ಭೂಸುರ
ರಾಲಯದ ಹಂತಿಯಲಿ ಹೊಕ್ಕನು ಭೂಪ ಕೇಳೆಂದ ॥ ೩

ಬಂದು ಮನೆಯಲಿ ಭಿಕ್ಷೆಗೋಸುಗ
ನಿಂದನಾಮನೆಯಾಕೆ ಭಿಕ್ಷವ
ತಂದಪೆನು ನಿಲ್ಲೆನುತ ಪತಿಪರಿಚರ್ಯೆಯನು ಮಾಡಿ ।
ತಂದು ಭಿಕ್ಷೆಯ ಹಿಡಿಯೆನಲ್ ದ್ವಿಜ
ನಂದು ಮುಳಿದೀಕ್ಷಿಸಿದೊಡಾಸತಿ
ಯೆಂದಳೆಲೆ ಮರುಳೆ ಕುಜಾಗ್ರದ ವಿಹಗನಲ್ಲೆಂನು ॥ ೪

ಋಷಿಕ ತನ್ನ ವರ್ತಮಾನವನ್ನು ಹೇಳಿ ಧರ್ಮವ್ಯಾಧನ
ಬಳಿಗೆ ಕಳುಹಿಸಿದುದು.

ಬೆರಗಿನಲಿ ದ್ವಿಜನೆಂದ ನೀನೆಂ
ತಱಿದೆ ಹೇಪೆನೆ ವಿಪ್ರ ನಿಗಮವ
ನಱಿಯೆ ಧರ್ಮರಹಸ್ಯತತ್ವದ ಸಾರಸಂಗತಿಯ ।

ಅಱಿದೆ ಪತಿಪರಿಚರ್ಯದಲಿ ಕೈ
ಮೆಱೆಯದಾರಾಗಲಿ ಸುಧರ್ಮದ
ಲೆಱಕವುಳ್ಳಡೆ ಧನ್ಯರೆಂದಳು ಕಾಂತೆ ಮುನಿಸುತಗೆ[1] ॥ ೫

ಇಲ್ಲಿಗಿದೆ ನಾಲ್ಕೈದುಯೋಜನ
ದಲ್ಲಿ ಪಟ್ಟಣವದಱೊಳೊಬ್ಬನು
ಬಲ್ಲನಗ್ಗದ ಧರ್ಮಮುದಾ ಘಟನವಿಘಟನದ ।
ಅಲ್ಲಿಗೈದುವುದಾತನಲಿ ನೀ
ನೆಲ್ಲವನು ತಿಳಿ ನಿನ್ನ ಚಿತ್ತದೊ
ಳಿಲ್ಲಲೇ ಪರಿಪಾಕವೆಂದುಪದೇಶಿಸಿದಳಬಲೆ ॥ ೬

ಹೆಸರು ಧರ್ಮವ್ಯಾಧನಾತನ
ದೆಸೆಯುಲಱಿ ಹೋಗೆನಲು ಬಂದನು
ವಸುಧೆಯಮರನು ನಗರಿಗಾಸತಿ ಕೊಟ್ಟ ಕುಱುಹಿನಲಿ ।
ಹಸಿದು ಬೀದಿಗಳೊಳಗೆ ತೊಳಲುತ
ಘಸಣಿಗೊಳುತ ಪುರಾಂತದಲಿ ಕ
ರ್ಕಶಪುಳಿಂದರ ಕೇರಿಯಿರೆ ಕಂಡಲ್ಲಿಗೈತಂದ ॥ ೭

ಧರ್ಮ ವ್ಯಾಧನ ಅಂಗಡಿ.

ಬಸೆನೆಣನ ಸುಂಟಿಗೆಯ ಹರಹಿದ
ಹಸಿಯತೊಗಲಿನ ತಳಿತಖಂಡದ
ಹಸರದುರುಗಲ ಕಾಳಿಜದ ಜಂಗಡೆಯ ಗಳಿಗೆಗಳ ।
ಬಸೆಯ ಪರಿವಿಯ ಸಾಲತೊರಳೆಗೆ
ಬೆಸಳಿಗೆಯ ಕುಱಿದಲೆಯ ಹಂತಿಯ
ಕುಸುರಿದೆಲುವಿನ ಕೋದವಿಾನಂಗಡಿಯಲೈತಂದ ॥ ೮

ಬರಬರಲು ದೂರದಲಿ ವಿಪ್ರನ
ಬರವ ಕಂಡಿದಿರಾಗಿ ಬಂದುಪ
ಚರಿಸಿದನು ಬಂದ್ಯೆ ಪತಿವ್ರತೆಯುನ್ನ ದೂಱಿದಳ ।

---

1 ಭೂಸುರಗೆ, ಚ.

ಧರಣಿಯುಮರೋತ್ತಮರಿಗಿದು ಸಂ
ಚರಣಯೋಗ್ಯಸ್ಥಾನವಲ್ಲಾ
ದರಿಸುವರೆ ಬಾ ಯೆನುತ ತನ್ನಾಲಯಕೆ ಕೊಂಡೊಯ್ದ ॥ ೯

ಆತನು ತನ್ನ ಚರಿತ್ರವನ್ನು ಹೇಳಿದುದು.

ಬಳಿಗೆ ಮಂಚದ ಮೇಲೆ ನಡುಗುವ
ತಲೆಯು ತೆರಳಿದವೈಯ್ಯ ಬೆಳುಪಿನ
ತಲೆನವಿರ ತಗ್ಗಿದಶರೀರದ ನೆಗ್ಗಿದವಯವದ ।
ತಳಿತನರೆಗಳ ತಾರಿದಾನನ
ದೀಡಿದಹುಬ್ಬಿನ ಹುದಿದಕಂಗಳ
ಚಲಿತವದನದ ವೃದ್ಧರನು ತೋರಿದನು ಮುನಿಸುತಗೆ ॥ ೧೦

ಇವರು ಮಾತಾಪಿತೃಗಳೆನ್ನಯ
ಯುವತಿ ಯಿವಳಿವನೆನ್ನ ಮಗನಿಂ
ದಿವರ ರಕ್ಷೆಗೆ ಬೇಂಟೆಯಾಡುವೆನಡವಿಯುಪವಿಯಲಿ ।
ಕವಲುಗೋಲಲಿ ಮೃಗಗಣವ ಕೊಂ
ದವನು ತಹೆನಂಗಡಿಯುಲವ ಮಾ
ಱುವೆನು ಲಾಭವನಲ್ಲಿ ಮಾಡೆನು ವಿಪ್ರ ಕೇಳೆಂದ ॥ ೧೧

ದೊರಕಿದನಿತಾದ್ರವ್ಯದಲಿ ವಿ
ಸ್ತರಿಸುವೆನು ಸಕುಟುಂಬವಿದನಾ
ಹೊರೆವೆನಾರ್ಜಿಸುವೆನು ಕುಟುಂಬಕೆ ತಕ್ಕನಿತುಧನವ ।
ನಿರುತವಿದು ಮಾತಾಪಿತರಪರಿ
ಚರಿಯದಲಿ ರಾಗಾದಿದೋಷಾ
ಚರಣವದು ಮನವಚನಕಾಯದಲಿಲ್ಲ ತನಗೆಂದ ॥ ೧೨

ಭೂತಹಿಂಸೆಯಿದಲ್ಲ ತನಗಿದು
ಮಾತೃಪಿತೃರಕ್ಷಾರ್ಥವೆಮ್ಮಯ
ಜಾತಿಧರ್ಮವು ಮಾಂಸವಿಕ್ರಯಮೃಗವಧಾದಿಗಳು ।

ಜಾತಿಧರ್ಮತ್ಯಾಗಕರ್ಮ ವಿ
ಜಾತಿಧರ್ಮಗ್ರಹಣವೆ ವಿ
ಖ್ಯಾತಕುಂಭೀಪಾಕಸಾಧನ ವಿಪ್ರ ಕೇಳೆಂದ ॥ ೧೩

ವಿತಥಭಾಷಿತವನ್ಯವಿತ್ತಾ
ಹೃತಿ ಪರವ್ಯಾಪಾದವಾತ್ಮ
ಸ್ತುತಿ ಪರಸ್ತ್ರೀವ್ಯಸನನತ್ಯಾಚಾರ ಬಕವೃತ್ತಿ ।
ಕೃತವಿನಾಶನ ಡಂಭ ಹಿಂಸಾ
ರತಿ ನಿಜಾನ್ವಯಧರ್ಮ ಕರ್ಮ
ಚ್ಯುತಿಗಳಿವು ದೋಷಾಂಕುರಂಗಳು ವಿಪ್ರ ಕೇಳೆಂದ ॥ ೧೪

ಸಾಂಗವೇದಾಧ್ಯಯನ ಸಜ್ಜನ
ಸಂಗ ಶಾಸ್ತ್ರಶ್ರವಣ ತೃಷ್ಣಾ
ಭಂಗಯುಜನವು ದಾನಮೌನವ್ರತ ಸದಾಚಾರ ।
ಮಾಂಗಲಿಕಕರ್ಮಾಭಿಯೋಗ ಕು
ಲಾಂಗನಾರತಿಪಾತ್ರಚಿಂತೆ ಪ
ರಾಂಗನಾವೈಮುಖ್ಯವಿವು ಸದ್ಧರ್ಮಗತಿ ಯೆಂದ ॥ ೧೫

ಧನಮದವ ಸತ್ಕುಲಮದವ ಯೌ
ವನಮದವ ವಿದ್ಯಾಮದವ ಪರಿ
ಜನಮದವ ವೈಭವಮದವ ನಾಚಾರಪಥಮದವ ।
ಮನನದಿಂ ಶ್ರವಣದಿ ಸಿಧಿಧ್ಯಾ
ಸನದಿನಿವ ನಭಕೊತ್ತಿ ವಿದ್ಯಾ
ವಿನಯಸಾಶೀಲ್ಯದಲಿ ನಡೆವುದು ವಿಪ್ರ ಕೇಳೆಂದ ॥ ೧೬

ನೀವು ಜಾತಿಯಲಧಿಕತರರಿಂ
ದಾವು ಜಾತಿವಿಹೀನರಾಗಿಯೆ
ಭಾವಶುದ್ಧಿಯಲೆಸೆವಧರ್ಮಾಚಾರ ಮಾರ್ಗದಲಿ ।

ಆವದೂಣೆಯವಿಲ್ಲವೀದ್ವಿಜ
ದೇವಗುರುಪರಿಚರ್ಯದಲಿ ಸಂ
ಭಾವಿತರು ನಾವಾದೆವೆಮ್ಮನು ನೋಡಿ ನಡೆ ಯೆಂದ ‖ ೧೭

ಈಪರಿಯಲುರುಧರ್ಮಕಥನಾ
ಳಾಪದಲಿ ಮುನಿಸುತನ ಸಂ
ದೇಹಾಸನೋದವ ಕಳಚಿ ಕಳುಹಿದನಾಮಹೀಸುರನ ।

ಆಗ ನಾರದಾದಿಗಳು ಧರ್ಮರಾಯನಿಗೆ ಸಮಾಧಾನವನ್ನು
ಹೇಳಿ ಹೊರಡುವಿಕೆ.

ಭೂಪ ಕೇಳ್ಕೈ ಕ್ಷಾತ್ರಧರ್ಮಕ
ಳಾಪದಲಿ ನಿನಗಿಲ್ಲ ಕೊರತೆ ಕೃ
ತಾಪರಾಧರು ಕೌರವರು ನಿರ್ನಾಮರಹರೆಂದ ‖ ೧೮

ಬಾಹುಬಲ ಬಲವೆಲ್ಲ ಧರ್ಮ
ದ್ರೋಹಿಗಳಿಗೆ ಸುಧರ್ಮನಿಷ್ಠರ
ಸಾಹಸವು ಕಿಱಿದಾದೊಡೆಯು ಕೊಲುವರು ವಿರೋಧಿಗಳ ।
ಆಹರಾತ್ಮಜ ಹಸುಳೆತನದ
ವ್ಯೂಹದಲಿ ತಾರಕನನಿಕ್ಕಿದ
ನಾಹವದ ಜಯಸಿರಿಯು ಧರ್ಮದ ಬೆನ್ನಲಿಪ್ಪುದೆಂದ ‖ ೧೯

ಎಂದು ಮಾರ್ಕಂಡೇಯಮುನಿ ಯಮ
ನಂದನನನಿತಿಹಾಸಕಥೆಗಳ
ಲಂದವಿಟ್ಟನು ಚಿತ್ತವನು ಜಯಜಿರೋಡಿಗಳ ಕಳೆದು ।
ಕಂದು ಕನಲಿಕೆ ಯೇಕೆ ನಿಮಗೆ ಮು
ಕುಂದನೊಲವಿದೆ ಬಯಕೆ ಬೇಱೇ
ಕೆಂದು ಮಾರ್ಕಂಡೇಯನಾರದರಡಱಿದರು ನಭವ ‖ ೨೦

ದ್ರೌಪದಿ ಸತ್ಯಭಾಮೆಯರ ಸಂವಾದ.

ಅರಸ ಕೇಳ್ಳೆ ದ್ರೌಪದಿಗೆ ಹರಿ
ಯರಸಿ ನುಡಿದಳು ಸತ್ಯಭಾಮಾ
ಸರಸಿಜಾನನೆ ನಗೆನುಡಿಯ ಸಂಮೇಳಖೇಳದಲಿ |
ಅರಸಿ ಕೌತುಕವೆನಗೆ ನೀನ್ಯೈ
ವರಿಗೆ ಸತಿ ವಲ್ಲಭರ ಚಿತ್ತಾ
ಕರುಷಣವು ನಿನಗೆಂತು ಸೇರಿಹುದೇಕಭಾವದಲಿ || ೨೧

ಮಂತ್ರಸಿದ್ಧಿಯೊ ಮೇಣು ಶಾಬರ
ಯಂತ್ರರಕ್ಷೆಯೊ ಬಟಿಕಲೌಷಧಿ [1]
ತಂತ್ರತಿಲಕವೊ ರಮಣರಿವರ್ಗೈವರ ವಶೀಕರಣ |
ಯಂತ್ರಮಯಹೂಹೆಗಳು ನೃಪರೀ
ಯಂತ್ರಸೂತ್ರದ ಕುಣಿಕೆ ನಿನ್ನಲಿ
ಯಂತ್ರಣವೆ ಹೇಳೌ ನಿಧಾನವನೆಂದಳಿಂದುಮುಖಿ || ೨೨

ದೇವಿ ಯೆಂದಳು ಸತ್ಯಭಾಮಾ
ದೇವಿಯರು ಮುಗ್ಧೆಯರಲಾ ತಾ
ನಾವ ಮಂತ್ರದ ತಂತ್ರ ತೊಡಕಿನ ತೋಟಿಯುಳ್ಳವಳು |
ಭಾವಶುದ್ಧಿಯಲೈವರನು ಸಂ
ಭಾವಿಸುವೆನವರವರ ಚಿತ್ತದ
ಭಾವವಱಿದುಪಚರಿಸುವೆನು ಚತುರತೆಯ ಚಾಳಿಯಲಿ || ೨೩

ಬಲವಱಿದು ಹತ್ತುವುದು ಚಿತ್ತದ
ಸಲೆಯಱಿದು ನೆಮ್ಮುವುದು ಮುರಿವಿನ
ಹೊಳವಱಿದು ಹಿಂಗುವುದು ಹೊಗುವುದು ಮನದೊಳೊಳವಱಿದು
ಸುಳಿವಱಿದು ಸೋಂಕುವುದು ತವಕಕೆ
ಬಲಿದು ಮುನಿವುದು ಸವಿಯ ಬೇಟವ
ನೆಳಸಿ ಬೆಸವುದು ಬಗೆಯಲೆಂದಳು ನಳಿನಮುಖಿ ನಗುತ || ೨೪

---

1 ಮೇಣ್ವರೌಷಧ, ಜ.

ರಸಿಕ ಹರಿ ಹದಿನಾಱುಸಾವಿರ
ಶಶಿಮುಖಿಯರಲಿ ಬೇಟ ಜಾಣಿನ
ಲೆಸಕ ನೆಮ್ಮಿತು ಬಗೆಯ ಭಂಗವ್ಯಾಪ್ತಿ ಕೃಷ್ಣನಲಿ ।
ನುಸುಳು ನೆಲೆ ಡಿಳ್ಳಾಯ [1] ಪಯ್ಸರ
ಬೆಸುಗೆ ಬಿಗುಹುಳುಕೊತ್ತು ಕಲೆಗಳ
ರಸದ ಪಸರವನಱಿಯಬಾರದು ವಿಗಡವಿ [2] ಟರುಗಳ ॥　೨೫

ನೀವು ಮುಗ್ಧೆಯರತಿವಿದಗ್ಧನು
ದೇವಕೀಸುತನೆನ್ನವರು ಧ
ರ್ಮ್ಮಾವಲಂಬರು ದಿಟ್ಟರಲ್ಲ ಮನೋಜಕೇಳಿಯಲಿ ।
ನೀವು ಸೊಬಗಿನ ನಿಧಿಗಳ್ಳೆ ಶತ
ಸಾವಿರದ ಸತಿಯರಲಿ ಕೃಷ್ಣನ
ಜೀವವಿಶ್ರಮಸತಿಯರೆಂದಳು ನಗುತ ನಳಿನಾಕ್ಷಿ ॥　೨೬

ಅರಸ ಕೇಳ್ಕೆ ಸತ್ಯಭಾಮಾ
ಸರಸಿಜಾನನೆ ದ್ರುಪದಸುತೆಯರು
ಸರಸಮೇಳದೊಳೊಪ್ಪಿದರು ಚತುರೋಕ್ತಿಲೀಲೆಯಲಿ ।
ಹರಿ ಯುಧಿಷ್ಠಿರಭೀಮಪಾರ್ಥರು
ವರಮುನಿಗಳಿತಿಹಾಸಮಯಬಂ
ಧುರಕಥಾಕೇಳಿಯಲಿ ಕಳೆದರು ಹಲವುದಿವಸಗಳ ॥　೨೭

ಹಗೆಗಳಮರಾರಿಗಳು ನಮ್ಮಯ
ನಗರಿ ಶೂನ್ಯಾಸನದಲಿರ್ದುದು
ವಿಗಡರಾಮಾದಿಗಳು ವಿಷಯಂಗಳ ವಿನೋದಿಗಳು ।
ಅಗಲಲಾರೆನು ನಿಮ್ಮ ಮನದೊ
ಲಗಕೆ ಬಿಡೆಯವ ಕಾಣೆನೆಂದನು
ನಗುತ ಕರುಣಾಸಿಂಧು ಯಮನಂದನನ ಮೊಗ ನೋಡಿ ॥ ೨೮

---

[1] ಡಿಳ್ಳಾಸ, ಟ.　　[2] ಚದುರ, ಟ.

ನುಡಿದ ಕಾಲಾವಧಿಗೆ ಜರೆ ತೆರೆ
ಯಡಸಿದುವು ಜಾಣಿನಲಿ ಸತ್ಯವ
ನಡೆಸಿದಿರಿ ಕಡೆಸಾರಿಗೆಯಲುನ್ನತಿಯ ಕೆಡಿಸದಿರಿ ।
ಕಡುಮನದ ಕರ್ಣಾದಿಗಳು ಕೈ
ದುಡುಕಿದರೆ ಕೈಗಾಯ್ದು ಧರ್ಮದ
ತಡಿಗೆ ಜಾಱಿ ಜಯಾಧ್ವದಲಿ ಜಂಘಾಲರಹಿರೆಂದ ॥ ೨೯

ಮೆಱೆಯಲಿಹ ಕಾಲದಲಿ ಬಲಿದೆ
ೞ್ಕಱದಿಹುದು ಬೇಕಾದರೆಮಗೆ
ೞ್ಕಱಿಸಿ ಕಾರ್ಯಸ್ಥಿತಿಯ ನಿಶ್ಚೈಸುವುದು ನಮ್ಮೊಳಗೆ ।
ಅಱದಿಹುದು ನೀವೆಂದು ರಾಯರಿ
ಗಱುಹಿ ಭೀಮಾದಿಗಳಿಗುಚಿತವ
ನೆಱೆ ನುಡಿದು ದ್ರೌಪದಿಯ ಮನ್ನಿಸಿ ಮರಳಿದನು ಪುರಕೆ ॥ ೩೦

ಅಱಿಸಿ ಹರಿಯಾಮ್ನಾಯತತಿ ಕು
ಕ್ಕುಱಿಸಿದುವು ಮುನಿವರ ಸಮಾಧಿಗೆ
ಕಱುಬುವವರಾವಲ್ಲಿ ಕಾಣರು ನಖದ ಕೊನೆಗಳನು ।
ಅರಸ ತಾನೇ ಹರಿಹವಿದು ತ
ನ್ನೞಕದವರನು ಬಿಡದೆ ಸಲಹುವ
ಕರುಣವೆಂತುಟೊ ರಾಯ ಗದುಗಿನ ವೀರನಾರಣನ ॥ ೩೧

ಹದಿನಾರನೆಯ ಸಂಧಿ ಮುಗಿದುದು.

## * ಹದಿನೇಳನೆಯ ಸಂಧಿ.

**ಸೂಚನೆ.**

ವಿಪಿನದಲಿ ಪಾಂಚಾಲಿ ಭಕುತಿಯು
ತಪದಲಿರೆ ದೂರ್ವಾಸನುಗ್ರವ
ನಪಹರಿಸಲಸುರಾರಿ ಬಂದನು ಪಾಂಡವರ ಬಳಿಗೆ ||

ಪಾಂಡವರು ದ್ವೈತವನದಲ್ಲಿ ವಾಸಮಾಡಿದುದು.

ಚಿತ್ತವಿಸು ಜನಮೇಜಯಕ್ಷಿತಿ
ಪೋತ್ತಮನೆ ನಿನ್ನವರು ಬನದಲಿ
ಹತ್ತುವರುಷವನಿಂತು ನೂಕಿದರಿರದೆ ಲೀಲೆಯಲಿ |
ಉತ್ತಮೋತ್ತಮಯಾಮುನಾನದಿ
ತೀರ್ಥಸೇವಾಶೀಲದಿದ್ದರು
ಮತ್ತೆ ಮುನಿಜನಸಹಿತ ಹರುಷದಿ ದ್ವೈತಕಾನನದಿ || ೧

ದೂರ್ವಾಸರ ಆಗಮನ.

ಆಸುಯೋಧನನೇಕಛತ್ರವಿ
ಲಾಸದುರ್ವೀರಾಜ್ಯಪದವಿ
ನ್ಯಾಸವಿಭವದ ಸುಲಭಸೌಖ್ಯವನನುಭವಿಸುತಿರಲು |
ಭೂಸುರವ್ರಜವೆರಸಿ ವರವಿ
ನ್ಯಾಸಮುನಿಜನಸಹಿತಲಾದೂ
ರ್ವಾಸಮುನಿಪತಿ ಬಂದು ಪೊಕ್ಕನು ಹಸ್ತಿನಾಪುರವ || ೨

---

* ಈ ಸಂಧಿ ಬಹು ಪುಸ್ತಕಗಳಲ್ಲಿ ಇರುವದಿಲ್ಲ.

ದುರ್ಯೋಧನನು ದೂರ್ವಾಸರನ್ನು ಮರ್ಯಾದೆ
ಯಿಂದ ಕರೆತಂದುದು.

ಮುನಿಯು ಬರವನು ಕೇಳ್ದು ದುರ್ಯೋ
ಧನನು ಭೀಷ್ಮದ್ರೋಣಗೌತಮ
ರಿನತನಯಗುರುಸೂನುವಿದುರಾದಿಗಳನೊಡಗೊಂಡು ||
ವಿನುತಭೂಸುರನಿವಹ ಕಾಂತಾ
ಜನದ ಕನ್ನಡಿಕಲಶವಾದ್ಯ
ಧ್ವನಿಯುಲಾಗಿದಿರ್ಗೊಂಡು ತಂದನು ಕಾಣಿಕೆಯ ನೀಡಿ || ೩

ವಂದನೆಯ ಕೈಕೊಳುತ ಗಂಗಾ
ನಂದನನ ಕೈವಿಡಿದು ಬರೆ ನೃಪ
ಮುಂದೆ ಕರ್ಣಾದಿಗಳ ಗಡಣದಿ ಹೊಕ್ಕನರಮನೆಯ |
ಬಂದನಂಗನೆಸಹಿತ ನಮಿಸಿದೊ
ಡಂಥಭೂಪನ ಹರಸಿ ಹರುಷದ
ಲಂದು ಮುನಿ ಮಂಡಿಸಿದನುನ್ನತಸಿಂಹಪೀಠದಲಿ || ೪

ದುರ್ಯೋಧನನು ದೂರ್ವಾಸರಿಗೆ ಆತಿಥ್ಯ ಮಾಡಿದುದು.

ಹೊಳೆವ ಹೊಂಗಳಶದಲಿ ತುಂಬಿದ
ಜಲದಲಾಮುನಿಪತಿಯ ಪಾದವ
ತೊಳೆದು ಮಧುಪರ್ಕಾದಿಮನ್ನಣೆಗಳನು ವಿಸ್ತರಿಸಿ |
ಬಳಿಕ ಕುಶಲವ ಕೇಳ್ದು ಮುನಿಸಂ
ಕುಲವನೊಲಿದಾದರಿಸಲಿತ್ತಲ
ದೊಳಗೆ ಮಿಗೆ ಯೆಡೆಯಾಗಲಾರೋಗಣೆಗೆ ಮುನಿ ಪೊಕ್ಕ || ೫

ಷಡುರಸಾನ್ನದಲಾದರಣೆಯಿಂ
ದುಡುಗೆಯಿಂದವೆ ತುಷ್ಟಿಬಡಿಸಿದ
ಪೊಡವಿಪಾಲಕ ಮುನಿಗಳಷ್ಟಾಶೀತಿಸಾವಿರವ |

ಕಡುಸುಖದ ಸಂನ್ಯಾಸಿವೇಷದ
ಮೃಡನು ಮನದಲಿ ಕೌರವನ ಮೈ
ದಡವಿ ಮೆಚ್ಚಿದೆ ಮಗನೆ ಬೇಡೊಲಿದುದನು ನೀನೆಂದ ॥ ೬

ಅರಸ ಕೇಳೈ ಹಸ್ತದಲ್ಲಿಹ
ಪರುಷವನು ಕಲ್ಲೆಂದು ಟಿಕ್ಕೈಯು
ಹರಳಿನಲಿ ಹರಹಿಸುವ ಮೂಢಮನುಷ್ಯರಂದದಲಿ ।
ಕುರುಕುಲಾಗ್ರಣಿ ನುಡಿದನಿನಿಬರು
ವೆರಸಿ ಪಾಂಡವರರಸಿ ಯಮಳರೊಡ
ನಿರದೆ ಗ್ರಾಸವ ಬೇಡಿ ನೀವ್ ನಮಗಿತ್ತ ವರವೆಂದ ॥ ೭

ಭೂಪ ಕೇಳಿದು ದಿನಕೆ ನಿನ್ನಾ
ಳಾಪವನು ಕೈಗೊಂಡೆವೆನುತಾ
ತಾಪಸೋತ್ತಮನೇಳಲೆದ್ದುದು ನೃಪ ಮುನಿವ್ರಾತ ।
ತಾಪಸರು ಬಳಿವಿಡಿದು ಮಿಗೆ ಬಳಿ
ಕಾಪುರವ ಹೊಱವಡಲಿಭಪುರ
ಭೂಪ ಭೀಷ್ಮದ್ರೋಣರನು ಕಳುಹಿದನು ಮನೆಗಳಿಗೆ ॥ ೮

ಅಗಡುಮುನಿಪತಿ ಯೊಡ್ಡಿದನಲಾ
ವಿಗಡವನು ಮುನಿಯುಗ್ರದೋಷದ
ಸೆಗಳಿಕೆಗೆ ಪಾಂಡವರು ಸವೆದಂತಾಗದಿರರೆನುತ ।
ದುಗುಡದಲಿ ಗಾಂಗೇಯವಿದುರಾ
ದಿಗಳು ಮನೆ ಹೊಗಲಿತ್ತ ಕೌರವ
ನಗುತ ಕರ್ಣಾದಿಗಳ ಗಡಣದಿ ಹೊಕ್ಕನರಮನೆಯ ॥ ೯

ಇತ್ತಲಾ ದೂರ್ವಾಸಮುನಿ ಯೆಂ
ಭತ್ತಯೆಂಟುಸಹಸ್ರರೊಗ್ಗಿನ
ಲುತ್ತಮರ ವನಕಾಗಿ ಬಂದನು ನಗುತ ಕೌರವನ ।

ಮತ್ತೆ ಮುನಿಗಳು ಕಂಡರೇ ದು
ರ್ವೃತ್ತಿಯನು ಶಿವ ಯೆನುತ ತಲೆದೂ
ಗುತ್ತ ಸಾಹಂಕಾರನಲಿ ಕಾಠಿನ್ಯಭಾವದಲಿ ॥ ೧೦

ದೂರ್ವಾಸರು ಪಾಂಡವರು ಇದ್ದೆಡೆಗೆ ಬಂದುದು.

ಮಱುದಿವಸ ಸತಿಯುಂಡಸವುಯುವೆ
ನಱಿದು ಮುನಿಪತಿ ಬರಲು ಕಪಟದ
ನಿಱುಗೆಯನು ಬಲ್ಲನೆ ಯುಧಿಷ್ಟಿರನೆದ್ದು ಮುನಿಸಹಿತ ।
ಕಿಱಿದೆಡೆಯಲಿದಿರ್ಗೊಂಡು ಭಕ್ತಿಯ
ಹೊಱೆಯೊಳಗೆ ಕುಸಿದಂತೆ ನಡೆತಂ
ದೆಱಗಿದನು ಮುನಿಪದಕೆ ತನ್ನನುಜಾತರೊಡಗೂಡಿ ॥ ೧೧

ಆಗ ಪರಸ್ಪರ ಕುಶಲ ಪ್ರಶ್ನೆ.

ಕುಶಲವೇ ನಿಮಗೆನುತಲೈವರ
ನೊಸಲ ಹಿಡಿದೆತ್ತಿದನು ಕರದಿಂ
ದೊಸೆದು ಧೌಮ್ಯಾದಿಗಳ ಭೂಸುರಜನವ ಮನ್ನಿಸಿದ ।
ಹೊಸಕುಶೆಯ ಪೀಠದಲಿ ಮುನಿ ಮಂ
ಡಿಸಿದನರ್ಘ್ಯಾಚಮನಪಾದ್ಯ
ಪ್ರಸರಮಧುಪರ್ಕಾದಿ ಪೂಜೆಯ ಮಾಡಿ ನೃಪ ನುಡಿದ ॥ ೧೨

ದೇಶ ಕಾನನ ವೆಚಲ ವಾಸವು
ಭೂಸುರವ್ರಜ ವಾತ್ಮಜನವು ಪ
ಲಾಶಪರ್ಣವೆ ಪಾತ್ರ ಭೋಜನ ಕಂದಮೂಲಫಲ ।
ಈಸರಸಿಪಾನೀಯಮಜ್ಜನ
ವಾಸವೀಗ್ರಹ ಭುವನರಾಜ್ಯವಿ
ಲಾಸವೆಮ್ಮದು ಜೀಯ ಚಿತ್ತವಿಸೆಂದನಾಭೂಪ ॥ ೧೩

ಧಾರುಣೀಪತಿ ಹೇೞಬಹುದುಪ
ಚಾರವೇಕಿದು ರಾಜ್ಯಪದವಿ
ಸ್ತಾರವಾವುದು ರಾಜಋಷಿ ನಿನಗಾರು ಸರಿಯುಂಟೆ ।

ದೂರ್ವಾಸರು ಭೋಜನವನ್ನಪೇಕ್ಷಿಸಿದುದು.

ಸಾರೆಯಾಯಿತು ಸಮಯವೆಮ್ಮ ಕ್ಷು
ಧಾರಪಣವ್ರಣವಿವಿಧಪೀಡಾ
ಹಾರಿಯೇನು ಚಿಕಿತ್ಸೆಯೆಂದನು ಮುನಿಪ ಭೂಪತಿಗೆ ॥　　೧೪

ಆವಜನ್ಮದ ಸುಕೃತ ಫಲ ಸಂ
ಭಾವಿಸಿತೊ ನಿಮ್ಮಡಿಯ ದರ್ಶನ
ಕಾವ ಫಲವಿದು ಕೊಟ್ಟೆನೆಂದನು ನೃಪತಿ ಮುನಿಪತಿಗೆ ।
ಆವಿಗಡ ಮುನಿ ಬೞಿಕನುಷ್ಠಾ
ನಾವಲಂಬನಕತ್ತ ತೆರಳಲು
ಭೂವಧೂವರ ಕರೆಸಿದನು ದ್ರುಪದಾತ್ಮಜೆಯ ಬೇಗ ॥　　೧೫

ಆಗ ನಾನಾವಿಧಚಿಂತೆ.

ಅರಸಿ ಯಾರೋಗಿಸಿದ ಹದನನು
ಬರವಿನಲಿ ನೃಪ ತಿಳಿಯಲಂತಃ
ಕರಣ ಕಳವಳಗೊಳಲು ಸುರಿದುದು ನಯನಜಲಧಾರೆ ।
ಉರಿಹೊಡೆದ ಕೆಂದಾವರೆಯ ವೋಲ್
ಕರಕುವರಿಯಲು ಮುಖ ಕಪೋಲದಿ
ಕರವನಿಟ್ಟು ಮಹೀಶ ತೊನಹುತ ನುಡಿದನಿಂತೆಂದು ॥　　೧೬

ತುಡುಕಿ ಸುರಪನ ಸಿರಿಯ ಶರಧಿಯ
ಮಡುವಿನಲಿ ಹಾಯ್ಕಿದನು ರೋಷವ
ಹಿಡಿದೊಡೀಗಲೆ ಸುಟ್ಟು ಬೊಬ್ಬಿಡುವನು ಜಗತ್ತ್ರಯವ ।
ಮೃಡಮುನೀಶನು ತನಗೆ ಶಾಪವ
ಕೊಡಲಿ ನಾನದಕಂಜೆ ತನ್ನಯ
ನುಡಿಗನೃತಸಂದಷ್ಟವಾದರೆ ಕೆಟ್ಟೆ ತಾನೆಂದ ॥　　೧೭

ಕೇಳಿ ದಿಟ ನೀವೆಮ್ಮ ನುಡಿ ಸಂ
ಭಾವಿಸದೆ ಸಂಕಲ್ಪವೇಱಿದರೆ
ಸೋಲುವಱಿವುದು ಕೃಷ್ಣ ಪೈದೋಱೆಂದಳಿಂದುಮುಖಿ ॥ ೨೫

ಹಿಂದೆ ನಾನಾಪಾಯದಿರುಬಿನ
ಬಂಧನವ ಬಿಡಿಸಿದೆ ಯೆಲ್ಲೈ ಗೋ
ವಿಂದ ಕರುಣಾಸಿಂಧು ಮುನಿವೃಂದನತಪಾದ ।
ಇಂದು ರುದ್ರನು ತಪ್ಪ ಸಾಧಿಸಿ
ಕೊಂದರೆಮ್ಮನು ಕಾಯ್ವರಾರೆಲೆ
ಮಂದರಾದ್ರಿಧರಾಮರಾಶ್ರಿತಕಲ್ಪಕುಜ ಕೇಳು ॥ ೨೬

ಅಱಸುವೆನೆ ಪರಿಪೂರ್ಣ ಕೇಳೆಂ
ದಱುಹುವೆನೆ ಸರ್ವಜ್ಞ ಸಾಕಿ
ನ್ನಱಸಿ ಮಾಡುವುದೇನು ತಾಯ್ ನೀನಾವು ಶಿಶುಗಳಲೆ ।
ಕುಱುಹು ದೋಱೈ ಕೃಷ್ಣ ಕರುಣವ
ಕಱೆದು ಕಳಯ್ಯೆ ಭಕ್ತರರ್ಥವ
ಹೊಱೆವ ಹೊಂಪುಳ್ಳದಟರಾರೆಂದಳು ಸರೋಜಮುಖಿ ॥ ೨೭

ಮುನ್ನವೇ ಮುನಿದಂಬರೀಷಗೆ
ಬೆನ್ನ ತೆತ್ತನ ಹರನ ನೇತ್ರದ
ವಹ್ನಿಯೊಳಗುದ್ಧರಿಸು ಕೆಡುವರು ಪಾಂಡುನಂದನರು [1] ।
ಉನ್ನತೋನ್ನತ ಕೃಷ್ಣ ರಕ್ಷಿಸು
ಪನ್ನಗಾರಿಧ್ವಜನೆ ರಕ್ಷಿಪು
ದನ್ಯಗತಿಯಾರೆನುತ ಹಲುಬಿದಳಂದು ನಳಿನಾಕ್ಷಿ ॥ ೨೮

ಬಳಿಕ ನಿನ್ನಯ ವರಸುದರ್ಶನ
ಸುೞಿವು ದೋಱಲು ಕೋಟಿಸೂರ್ಯರ
ಬೆಳಗ ಬೀಱುತ ಹೊತ್ತಿ ಹೊಗಲುರಿ ಮೂಱುಲೋಕದಲಿ ।

---

1 ವಹ್ನಿಯೊಳಗುದಯಿಸಿದ ಕಂಗಿಡಿ ಸುಡಲು ಕಂಗೆಡುತ್ತ, ಚ

ಬಲುಬಿಸಿಲಲಾಯೆಂದು ಚಂದ್ರಿಕೆ
ಬೆಳಗೆನಲು ಘನರೋಷವಹ್ನಿಯು
ಕಳೆದು ಬೀರಲು ವಿಕಳ [1] ಚಂದ್ರಮನಾದ ದೂರ್ವಾಸ ॥ ೨೯

ಚಿಗಿದು ಬೆಂಬತ್ತಲರಿ ಮುನಿ ಮೂ
ಜಗವನೆಲ್ಲವ ತೊಳಲಿ ಭಕ್ತಿಯು
ಬಿಗುಹಿನಲಿ ವೈಯಾರಿ ಶ್ರುತಿಶೀರ್ಷೋಕ್ತರೀತಿಯಲಿ [2] ।
ಹೊಗೆಚಿದರೆ ಹಿಂದೆಗೆದುದಾ ಮುನಿ
ಬೆಗಡ ಬಿಡಿಸಿತು ನೃಪನ ಕಾಯ್ದುದಿ
ಸುಗುಣಶೇಖರ ಕೃಷ್ಣ ಕಮಲಾಂಬಕನೆ ವೈದೋಜ್ಯೆ ॥ ೩೦

ಅವನಿಪತಿ ಕೇಳಖಿಳವೇದ
ಸ್ತವಕೆ ತಾನಡೆಗೊಡದ ಮಹಿಮಾ
ರ್ಣವನನೇಸುಭವಂಗಳಲಿ ಭಜಿಸಿವರೊ ಪಾಂಡವರು ।
ಯುವತಿಯುಕ್ಕೆಯು ಸ್ಥೈರಿಸದೆ ಯಾ
ದವಶಿರೋಮಣಿ ಬಂದನಾಪಾ
ರ್ಥಿವರು ಕಂಡರು ದೂರದಲಿ ಜನನಾಥ ಕೇಳಂದ ॥ ೩೧

ಮುಗುಳುನಗೆಗಳ ಹೊಂಗುವಂಗದ
ದೃಗುಯುಗಳದಾನಂದಬಿಂದುಗ
ಳೊಗೆಯೆ ಸಂತಸವೆತ್ತು ಹರುಷಸ್ವೇದಸಂಪುಟದ ।
ಬಗೆಯು ಬೆರಸದ ಪರವಸದೊಳಾ
ನಗೆಯೊಳಡೆಗೊಂಡತುಳಜನ್ಮದ
ಮೊಗುದಪಾಂಡವರೆಙಗಿದರು ಧೌಮ್ಯಾದಿಗಳು ಸಹಿತ ॥ ೩೨

ಶ್ರೀಕೃಷ್ಣನ ಆಗಮನ.

ರಥವಿಳಿದನಸುರಾರಿ ಸುಮನೋ
ರಥವಿದಿರು ಬಪ್ಪಂತೆ ಕುಂತೀ
ಸುತರ ನಿಜಭುಜಸಾರೆ ತಕ್ಕೈಸಿದನು ಹರುಷದಲಿ ।

1 ಚಕಿತ, ಚ.　　2 ಸಾರೂಪ್ಯಮಾನದಲಿ, ಚ.

ಕ್ಷಿತಿಯುಮೆರರಾಶೀರ್ವಚನಸಂ
ಸ್ತುತಿಗೆ ತಲೆವಾಗುತ್ತ ಮಿಗೆ ದ್ರೌ
ಪತಿಯು ಹೊರೆಗೈದಿದನುಘೀ ಯೆಂದುದು ಸುರಸ್ತೋಮ ॥ ೩೩

ಜ್ಞಾನ [1] ಗೋಚರನಾಗಿ ವನಿತೆಯ
ಮಾನಸದಲಿಹ ಪರಮಹಂಸನು
ಮಾನವಾಕೃತಿಯಾಗಿ ತೋರಿದ ಬಾಹ್ಯರಚನೆಯಲಿ ।
ಮಾನಿನಿಯು ಮೈದಡಹಿ ಚಿಂತೆಯ
ದೇನು ತಂಗಿ ಲತಾಂಗಿ ಹೇಳಾ
ಮೌನಮುದ್ರೆಯದೇನೆನಲು ಕಂದೆರೆದಳೆಂದುಮುಳಿ ॥ ೩೪

ದ್ರೌಪದಿಯು ಸಂತೋಷದಿಂದ ಪಾದದಲ್ಲಿ ಬಿದ್ದು
ಸ್ತುತಿಮಾಡಿದುದು.

ಉಬ್ಬಿದಳು ಹರುಷದಲಿ ಗಾಢದ
ಮಬ್ಬುವರಿದುದು ಪುಳಕವಾರಿಯೊ
ಳುಬ್ಬಸವನೊಡೆಹಾಯ್ದು ನಿಂದಳು ನಯನವಾರಿಯಲಿ ।
ಸಭ್ಯತಾಲತೆ ಹೂತು ಹಸರಿಸಿ
ಹಬ್ಬಿ ಫಲವಾದಂತೆ ಕಾಯುವ
ನಿಬ್ಬರದಲೀಡಾಡಿದಳು ಹರಿಪದಪಯೋಜದಲಿ ॥ ೩೫

ಧರಣಿಯನು ಬಿಡದಳೆದು ಹೆಚ್ಚಿದ
ಚರಣವಿದು ಕಾಳಿಂಗಮರ್ದನ
ಚರಣವಿದು ಹರಳಾದಹಲ್ಯೆಯ ಶಾಪಹರಣ ವಿದು ।
ಚರಣವಿದು ಸುರನದಿಯ ಸೃಜಿಸಿದ
ಚರಣವಿದು ಶಕಟಪ್ರಭಂಜನ
ಚರಣವಿದು ಯೆನುತ ಕೊಂಡಾಡಿದಳು ಹರಿಪದವ ॥ ೩೬

---

[1] ಧ್ಯಾನ, ಚ.

ಶ್ರೀಕೃಷ್ಣನು ಪಾಂಡವರ ಇಷ್ಟವನ್ನು ನೆರವೇರಿಸಿದುದು.

ಗಾತಗಳಿಗೆ [1] ದು ಸಮಯುವೇ ಹೇ
ಚೇತಕೀಸ್ತುತಿಯಂತರಂಗದ
ಲಾತುರವಿದೇನೆನುತ ಹಿಡಿದೆತ್ತಿದನು ಬಾಲಿಕೆಯ |
ಬೀತತರು ಶುಕನಿಕರಕೀವುದೆ
ಯೌತಣವನಲೆ ತುಷ್ಟಬಡಿಸುವ
ರೀತಿಯನು ನೀ ಬಲ್ಲೆ ಯೆಂದಳು ಕಮಲಮುಖಿ ನಗುತ ‖ ೩೩

ಶೌರಿ ಕೇಳ್ನಾಕ್ಷಾತ್ತು ಶಿವನವ
ತಾರವಹ ದೂರ್ವಾಸ ಮುನಿ ಪರಿ
ವಾರಸಹಿತೈತಂದೊಡಭ್ಯಾಗತವ ನೃಪನಿತ್ತ |
ತೀರಿತಕ್ಷಯದನ್ನವಿಂದು * ಮು
ರಾರಿ ಮುನಿಯೂಟಕ್ಕೆ ಯೇನ್ನೈ
ಪಾರಣೆಯು ಮಾಡುವನು ನಿನ್ನಯ ಪೋಣದ್ಯೆವರನು * ‖ ೩೪

ನಾವು ಹಸಿದೈತಂದೊಡೀಪರಿ
ದೇವಿ ನಾನಾದೂಱ ದೂಱುವು
ದಾವುದುಚಿತವು ಹೇಳೆನಲು ನಡುನಡುಗಿ ಕೈಮುಗಿದು |
ದೇವ ನಿಮ್ಮಯ ಹಸಿವ ಕಳೆವೊಡೆ
ಭಾವಶುದ್ಧಿಯ ಭಕ್ತಿ ಬೇಱಿ
ಲ್ಲಾವು ಚಂಚಲಹೃದಯರೆಂದಳು ನಗುತ ನಳಿನಾಕ್ಷಿ ‖ ೩೫

ಮಾತುಗಳು ಸೊಗಸುವುವೆ ಕೇಳ್ ಕ್ಷು
ಧಾತುರರಿಗೆಲೆ ತಂಗಿ ತಾವು
ಪ್ರೀತಿಯಿಂದೊಲಿದಿತ್ತುದೆ ಸುಧೆ ನಮಗೆ ಪಥ್ಯವಿದು |

---

1 ಸ್ತೋತ್ರ, ಜ.

* ..............................ಮು
ಹಾರುಷಿಗೆಯಾಹಾರ ನಿನ್ನಯ
ವೀರಪ್ರೈಮುನರೆಂದು ಬಿನ್ನೈಸಿದಳು ನಳಿನಾಕ್ಷಿ ‖, ಜ.

ನಿತಕೀಜಂಜಡವೆನಲು ಜಲ
ಜಾತಮುಖಿ ಕಂಪಿಸುತ ಕುಮುದಾ
ರಾತಿಯಿತ್ತಾ ಸ್ಥಾಲಿಯನು ತಂದಿತ್ತಳಿದೆ ಯೆನುತ ॥ ೪೦

ಕಂಡು ಕಿಂಚಿತ್ಪಾಕಶೇಷವೆ
ಪುಂಡರೀಕಾಂಬಕನದನು ಕೈ
ಕೊಂಡು ತಾನದನುಂಡು ತಲೆದೂಗಿದನು ತೇಗಿದನು ।
ಭಾಂಡ ತುಂಬಿತು ಮತ್ತೆ ನಲಿಯುತ
ಚಂಡಹೃದಯನ ನುಡಿಯ ವಿಷವನು
ಖಂಡಿಸಿದೆಲಾ ಯೆನುತ ಕೊಂಡಾಡಿದನು ಕೋಮಲೆಯ ॥ ೪೧

ಆಗ ದೂರ್ವಾಸರು ಕೃಷ್ಣಾಗಮನವನ್ನು ತಿಳಿದುದು.

ಅರಸ ಕೇಳೀಚೆಯಲಿ ಮದದು
ಬ್ಬರದ ತನುವಿನ ತಳಿತರೋಮೋ
ತ್ಕರದ ಹೃಷ್ಟಿಯ ಬಳ್ಳಿದೇಗಿನ ಹಿಗ್ಗುವೆಳ್ಳಗಳ ।
ಕೊರಳಗಡಚಿದ ಹೊಟ್ಟೆಗಳ ಋಷಿ
ವರರುಸಹದೂರ್ವಾಸಮುನಿಯಾ
ಸರಸಿಜಾಕ್ಷನ ಬರವ ಕಂಡನು ದಿವ್ಯದೃಷ್ಟಿಯಲಿ ॥ ೪೨

ಬಂದನೇ ಗೋವಿಂದ ಭಕ್ತರ
ಬಂಧುವೇ ಈತನೊಳುಮನಸಿಗೆ
ಬಂದಮನುಜರ ಸೆಣಸ ಮಾಡುವರಾರುಭುವನದಲಿ ।
ಎಂದೆನುತ ದೂರ್ವಾಸಮುನಿಪತಿ
ಬಂದು ಕಂಡನು ಕೃಷ್ಣರಾಯನ
ನಂದು ಕುಂತೀಸುತನ ರಾಯನ ಪರ್ಣಶಾಲೆಯಲಿ ॥ ೪೩

ಆಗ ಕೃಷ್ಣದೂರ್ವಾಸರ ಪ್ರೇಮಾಲಿಂಗನ ಸಂವಾದಗಳು.

ಕಾಣುತಿದಿರೆದ್ದಸುರಮರ್ದನ
ಕಾಣಿಕೆಯನಿತ್ತೆರಗಿ ಹೊೋ ಹೋ
ಸ್ಥಾಣುವಿನ ಬರವೆತ್ತಲಿಂದಾಯ್ತೆಂದು ಕೈಮುಗಿಯೆ ।

ಮಾಣು ಮೋಹವ ನಾವು ಮಾನವ
ರಾಣೆ ನಾಟಕದಲ್ಲಿ ನುಡಿ ಯಿದು
ಜಾಣ ನೀನಹೆ ಯೆನುತ ಹಾಯ್ಕ್ದಪ್ಪಿದನು ಮುನಿ ಹರಿಯ ॥ ೪೪

ಯತಿಗಳ್ಯತರೆ ಗಾರುಹಸ್ತ್ಯ
ವ್ರತಿಯು ವಂದಿಸಬೇಹುದಾಪ
ದ್ಧತಿಯು ತೋರುವ ಪಥವಿದ್ಯೆ ಸಲೆ ನೀನು ವಂದಿಪ್ಪುದು ।
ಅತಿಸಹಜವೈ ಕೃಷ್ಣ ಕುಳ್ಳಿರು
ಶ್ರುತಿಶಿರೋಮಣಿ ಕುಳ್ಳಿರೈ ವ್ಯಾ
ಹೃತಗೃಹಸ್ಥನೆ ಕುಳ್ಳಿರೆನುತವೆ ಮುನಿಪ ಮನ್ನಿಸಿದ ॥ ೪೫

ಮುನಿಪನಿರ್ದನು ಕುಶೆಯ ಪೀಠದಿ
ದನುಜಹರ ಕೆಲಕಡೆಯುಲಾ
ತನ ಕೆಲದಲ್ಯೆದರು ಬಳಿಕ ಬುಧಜನರವರ ಮಧ್ಯದಲಿ ।
ತನತನಗೆ ದೂರ್ವಾಸನಾಜ್ಞೆಯೊ
ಳನಿತು ಅಷ್ಟಾಶೀತಿಸಾವಿರ
ಮುನಿಗಳಿರಲಂದಬಲೆ ಬಂದಳು ಹರುಷಭಾವದಲಿ ॥ ೪೬

ತುಂಬಿ ಕುಳ್ಳಿರ್ದಖಿಳಮುನಿನಿಕು
ರುಂಬ ಸಭೆಯೊಳಗಿರ್ದ ಮುನಿಪಂ
ಗಂಬುಜಾನನೆ ನಮಿಸೆ ಹರಸಿದನ್ಯೆದೆಯಾಗೆನುತ ।
ಹಂಬಲಿಸುತಿಹ ನಿಗಮಶಾಸ್ತ್ರಗ
ಳಿಂಬುಗೊಡದಿಹ ಗಾಢದೈವವು
ಬೆಂಬಳಿಯಲಿರಲರಿದದಾವುದಸಾಧ್ಯವೇನೆಂದ ॥ ೪೭

ದೈವಶವ ಮಾಡಿದರಲ್ಯೆ ಬಲು
ದೈವವನು ಕುರುಕುಲದ ಬೇಱನು
ಕೊಯ್ವನೀಹರಿ ಬಳಿಸಲಿಸಿ ಭೀಮಾರ್ಜುನಾಸ್ತ್ರದಲಿ ।

* ಕಾವೆ ನಿಮ್ಮನು ಬಟಿಕ ಕಡೆಯಲಿ
ಭೂವಧುವ ಸೇರಿಸುವೆ ಕೊಡುವೆನು
ಕೈವಲವನಂಜಿ ಕೈವಿಡಿದು ಕಲ್ಪಿತಸಿದ್ಧವಹುದೆಂದ * ‖ ೪೮

ಧರ್ಮರಾಯರು ದೂರ್ವಾಸರನ್ನು ಭೋಜನಕ್ಕಾಗಿ ಕರೆದುದು.

ಎಲೆ ಮುನೀಶ್ವರ ನಿಮ್ಮ ನುಡಿಯು
ಸ್ಖಲಿತವಿದು ಯಿಹಪರದ ಗತಿ ನಿ
ರ್ಮಲವು ಕೃಷ್ಣನ ಕೂರ್ಮೆಯಿರಲರಿದಾವುದೆರಡಲಿ ।
ನಳಿನಸಖನಪರಾಂಬುರಾಶಿಯು
ನಿಲುಕುತೈದನೆ ಹಸಿದುದೀಮುನಿ
ಬಳಗವಾರೋಗಣೆಗೆ ಚಿತ್ತವಿಸೆಂದನಾಭೂಪ ‖ ೪೯

ಆಗ ತೃಪ್ತರಾಗಿ ದೂರ್ವಾಸರು ಆಡಿದಮಾತುಗಳು.

ಬೇರು ನೀರುಂಡಾಗ ದಣಿಯದೆ
ಭೂರುಹದ ಶಾಖೋಪಶಾಖೆಗ
ಳೋರಣಿಯು ನಿಜದೇಹವಂಗೋಪಾಂಗವೆಂದೆಂಬ ।
ಶ್ರೀರಮಣಸಂತುಷ್ಟನಾದರೆ
ಬೇರೆ ಭೋಜನ ನಮಗೆ ಬೇಹುದೆ
ಭೂರಮಣ ಹೇಟೆಂದು ನಗುತಿಂತೆಂದನಾಮುನಿಪ ‖ ೫೦

ಮೃಷ್ಟಭೋಜನದಿಂದ ನಾವ್ ಸಂ
ತುಷ್ಟರಾವೊಲಿದುದನು ಬೇಡ್ಕೆ
ದುಷ್ಟಕೌರವ ನಮ್ಮ ಕಳುಹಿದ ಧೂರ್ತವಿದ್ಯೆಯಲಿ ।
ಕಷ್ಟಕೈಗೂಡಿದರೆ ಮಿಗೆ ವ್ರತ
ಗೆಟ್ಟರೇ ಪಾಂಡವರು ಹರಿಪದ
ನಿಷ್ಠರನು ನಿಲುಕುವರೆ ದುರ್ಜನರೆಂದನಾಮುನಿಪ ‖ ೫೧

---

* ಕಾವನೈ ನಿಮ್ಮೈವರನು ಕೈ
ಗಾವನೇ ವರರಾಜ್ಯಲಕುಮಿಯು
ಕೈವಿಡಿವ ಸಂಕಲ್ಪಸಿದ್ಧಿಪುದೆಂದನಾಮುನಿಪ, ‖ ಚ.

ಎಂದು ಹರಿಯನು ಹೊಗಳಿ ನಾನಾ
ಚಂದದಲಿ ಪಾಂಡವರ ತಿಳುಹಿ ಮು
ನೀಂದ್ರ ತನ್ನಾಶ್ರಮಕೆ ಸರಿದನು ತಾಪಸರು ಸಹಿತ ।
* ಅಂದು ಕುಂತೀಸುತರನತಿಕೃಪೆ
ಯಿಂದ ಮನ್ನಿಸಿ ವೀರನಾರಣ
ನಂದು ಬಿಜಯಂಗೈದ ಸಂದಾದ್ವಾರಕಾಪುರಿಗೆ * ॥ ೫೦

ಹದಿನೇಳನೆಯ ಸಂಧಿ ಮುಗಿದುದು.

## ಹದಿನೆಂಟನೆಯ ಸಂಧಿ.

### ಸೂಚನೆ.

ರಾಯ ಕುರುಪತಿವಿದುರಗುರುಗಾಂ
ಗೇಯಕೃಪರಲ್ಲನಲು ಪಾಂಡವ
ರಾಯವಿಪಿನಕೆ ಘೋಷಯಾತ್ರೆಯ ನೆವದಲೈತಂದ ॥

ಕೃಷ್ಣನು ದ್ವಾರಕೆಗೆ ಹೊರಡಲು ಪಾಂಡವರ ಚಿಂತೆ.

ಕೇಳು ಜನಮೇಜಯ ಧರಿತ್ರೀ
ಪಾಲ ನಿಜನಗರಕ್ಕೆ ಲಕ್ಷ್ಮೀ
ಲೋಲ ಬಿಜಯಂಗೈದನಿತ್ತಲು ಪಾಂಡುನಂದನರು ।
ಮೇಲುದುಗುಡದ ಮುಖದ ಚಿಂತೆಯ
ಜಾಳಿಗೆಯ ಜಡಮನದಲಿದ್ದರು
ಸೂಳುಸುಯ್ಲಿನ ಹೊಯ್ಲ ನಾಸಾಪುಟದ ಬೆರಳಿನಲಿ ॥ ೧

* ಅಂದು ಕುಂತೀನಂದನರಿಗಾ
ನಂದಸುಖವನು ಕರೆದು ದೇವಮು
ಕುಂದ ಬಿಜಯಂಗೈದು ಹೊಕ್ಕನು ದ್ವಾರಕಾಪುರಿಯ, ಚ.

ಸೂಜಿಯೋದುದು ರಾಜ್ಯಸಿರಿ ಮು
ಮ್ಮಾಳಿವೋದುದು ಲಜ್ಜೆ ಬೆಟ್ಟವ
ಸೇಳಿ ಕಾನನಕಿಳಿದು ವನದಿಂವಡಲಿ ಗಿರಿಕುಲವ ।
ತಾಳಿಘಟ್ಟಿಗೆ ಹಾಯ್ದು ಸುಖ ಮನ
ದೇಳು ಮಸಗಿ ಮುರಾರಿ ಕೃಪೆಯನು
ತ್ರೋಳಿ ಯಡಗಿದನಕಟವಿಧಿಯೆಂದಳಿಲಿದನು ಭೂಪ ॥ ೧

ಎಹಗೆ ಸ್ಮರಿಸಿ ನಿಂದರೋ ವ್ರಜ
ಮಹಿಳೆಯರು ಕೃಷ್ಣಾಂಘ್ರಿವಿರಹದ
ದಹನತಾಪಸ್ತಂಭಕೌಷಧಪಾನಶೌಂಡರಿಗೆ ।
ಅಹಹ ಕೊಡುವೆನು ತನ್ನನೆನುತು
ಮ್ಮಹದ ಮೊನೆಮುಳಿದವನಿಪತಿ ನಿ
ಸ್ಪೃಹೆಯುಳಿರ್ದನು ರಾಜಕಾರ್ಯವಿಹಾರಲೀಲೆಯಲಿ ॥ ೨

ಕಾಮ್ಯಕವನದಿಂದ ಬಂದ ಬ್ರಾಹ್ಮಣನಿಂದ ಪಾಂಡವರ
ವರ್ತಮಾನ ಕೇಳಿದುದು.

ಅರಸ ಕೇಳ್ಳು ಹಸ್ತಿನಾಪುರ
ವರಕೆ ಕಾಮ್ಯಕವನದಿ ಬಂದನು
ಧರಣಿಸುರನ್ನೆತಂದು ಕರ್ಣಾದಿಗಳ ಭವನದಲಿ ।
ಇರಲಿರಲು ಧೃತರಾಷ್ಟ್ರಭೂಪತಿ
ಕರೆಸಿ ಬೆಸಗೊಂಡನು ಯುಧಿಷ್ಠಿರ
ನಿರವನಟವೀತಟಪರಿಭ್ರಮಭೂರಿಭೂಷಣನ[1] ॥ ೪

ವಿವಿಧವನಪರ್ಯಟನದಾಯಾ
ಸವನು ತತ್ಪರಿಸರದ ಕಂಟಕ
ನಿವಹವನು ದಾನವರ ದಕ್ಕಡತನದ ಘಟ್ಟಣೆಯ ।

---

1 ಪರಿಭ್ರಮಣೈಕಭೀಷಣನ, ಚ.

ಅವಚಿದಾಪತ್ತಿನ ಮನಃಖೇ
ದವನು ಖೋಡಿಯು ಖತಿಯು ಲಜ್ಜಾ
ವಿವರಣವನಱುಹಿದನು ದ್ವಿಜ ಧೃತರಾಷ್ಟ್ರಭೂಪತಿಗೆ ॥ ೫

ಅದರಿಂದ ಧೃತರಾಷ್ಟ್ರರಾಯನ ಚಿಂತೆ.

ಈ ವಿಧಿಯೆ ಪಾಂಡವರಿಗಕಟಾ
ಸಾವು ಬಾರದು ತನಗೆ ತಾ ಮು
ನ್ನಾವ ನೋಹಿಯನಿಚಿದೆನೋ ಶಿವ ಭವಸಹಸ್ರದಲಿ ।
ಈ ವಿಲಾಸವನೀವಿಭವಸಂ
ಭಾವನೆಯನೀಪದವನೀಪು
ತ್ರಾವಳಿಯ ಸುಡಲೆನುತ ಮಿಗೆ ಮಱುಗಿದನು ಧೃತರಾಷ್ಟ್ರ ॥ ೬

ಮರಳಿ ಮರಳಿ ಯುಧಿಷ್ಠಿರನ ಮನ
ದಿರವ ಭೀಮನ ಖತಿಯ ಪಾರ್ಥನ
ಪರಿಯ ನಕುಲನ ನಿಲವನಾ ಸಹದೇವನಾಯತವ ।
ತರಳೆಯುಬ್ಬೆಯನಾ ಪುರೋಹಿತ
ವರನ ಖೇದವನಾಮುನೀಂದ್ರರ
ಪರಗತಿಯನಡಿಗಡಿಗೆ ಕೇಳುತ ಮಱುಗಿದನು ನೃಪತಿ ॥ ೭

ಇದನ್ನು ನೋಡಿ ಕರ್ಣಾದಿಗಳ ಪ್ರಶ್ನೆ ಮತ್ತು
ರಾಯನ ಉತ್ತರ.

ಅಳಲುವೀ ಧೃತರಾಷ್ಟ್ರ ಭೂಪನ
ಕಳಕಳವನುಱೆ ಕೇಳಿ ಹರುಷದೊ [1]
ಳುಲಿದು ತಂಬುಲ ಸೂಸೆ ನಕ್ಕರು ಹೊಯ್ದು ಕರತಳವ ।
ಖಳಶಿರೋಮಣಿಗಳು ಮಹೀಶನ
ನಿಳಯಕೈತಂದರು ವಿಲೋಚನ
ಜಲವ ಸೆಱಗಿನೊಳೊಱಸಿ ನುಡಿದರು ಖೇದವೇಕೆಂದು ॥ ೮

1 ಕಳವ ಕೇಳುತ ಕರ್ಣ ಶಕುನಿಗ, ಚ.

ಖೇದವೇಕೆಂದೆಸು ಮಕ್ಕಳು
ಬೀದಿಗರುವಾದರು ವನಾಂತದ
ಲಾದಚಿತ್ತವ್ಯಥೆಯ ಕೇಳಲು ಬೆಂದುದೆನ್ನೊಡಲು ।
ಆದಿವಾಕರನಂತೆ ನಿಚ್ಚಲು
ಕಾದುದುದಯಾಸ್ತಮಯದಲಿ ದನು
ಜಾದಿಖಳರೊಡನಡವಿಗೋಟಲೆ ಯೆಂದು ಬಿಸುಸುಯ್ದ ॥ ೯

ಅದಕ್ಕೆ ಶಕುನಿಯ ಸಮಾಧಾನ.

ಈಕುಮಾರಕರಲ್ಲಲೇ ಕುಂ
ತೀಕುಮಾರರು ನವೆವುತಿದ್ದರೆ
ಸಾಕು ಶೋಕಗಳೇಕೆ ಸತ್ವಾಧಿಕರು ಸಜ್ಜನರು ।
ಈಕುರುಕ್ಷಿತಿಪತಿಯ ಅನ್ಯಾ
ಯ್ಯೆಕಲವವುಂಟೇ ವಿಚಾರಿಸಿ
ಶೋಕವನು ಬಿಡಿ ಬಯಲಡೊಂಬೇಕೆಂದನಾಶಕುನಿ ॥ ೧೦

ವಿಷಯಲಂಪಟರಕ್ಷಲೀಲಾ
ವ್ಯಸನಕೋಸುಗವೊತ್ತೆ ಯಿಟ್ಟರು
ವಸುಮತಿಯ ಅನ್ಯಾಯವುಂಟೇ ನಿನ್ನ ಮಕ್ಕಳಲಿ ।
ಉಸುರಲಮ್ಮದೆ ಸತ್ಯವನು ಪಾ
ಲಿಸಲು ಹೊಕ್ಕರರಣ್ಯವನು ತ
ದ್ವ್ಯಸನಫಲಭೋಗಿಗಳಗಟಲುವಿರೇಕೆ ನೀವೆಂದ ॥ ೧೧

ಅವರು ಕುಹಕೋಪಾಯದಲಿ ಕೌ
ರವರ ಕೆಡಿಸದೆ ಮಾಣರರ್ಜುನ
ಪವನಜರ ಭಾಷೆಗಳ ಮಱೆದಿರೆ ಜೂಜುಸಭೆಯೊಳಗೆ ।
ಅವರು ಸುಜನರು ನಿಮ್ಮವರು ಖಳ
ರವರು ಸದಮಲಸಾಧುಗಳು ಕೌ
ರವರಸಾಧುಗಳೆಂದು ತೋಱಿತೆ ನಿಮ್ಮ ಚಿತ್ತದಲಿ ॥ ೧೨

ಗಳಹನನಿಲಜ ಗಾಢಗರ್ವದ
ಹುಳುಕನರ್ಜುನನವರ ದೇಹದ
ನೆಳಲು ಮಾದ್ರೀಸುತರು ಮಕ್ಕಳು ವಿಪುಳಸಾಹಸರು ।
ಅಳಲಬಹುದರಸಂಗೆ ಘಳಗೆಗೆ
ತಿಳಿವನವದಿರ ಸಂಗದಲಿ ಮನ
ಮುಳಿವನೆರಡಿಟ್ಟಹನು ಧರ್ಮಜನೆಂದನಾಶಕುನಿ ॥ ೧೩

ಅವರ ವನವಾಸದ ದಿನಂಗಳು
ನವಗೆ ಸುದಿನ ಸುಖಾನುಭವವವ
ರವಧಿ ತುಂಬಿದ ಬಳಿಕ ನೋಡಾ ಸಾಧುಗಳ ಪರಿಯು ।
ನಿವಗೆ ದುರ್ಯೋಧನನ ಸಾಮ್ರಾ
ಜ್ಯವ ನಿರೀಕ್ಷಿಸುವರ್ತಿಯಲಿ ಪಾಂ
ಡವರ ಹಂಬಲ ಬಿಡುವುದುಚಿತವಿದೆಂದನಾಶಕುನಿ [1] ॥ ೧೪

ಬೇವು ತಾ ಪರಿಪಕ್ವವಾದರೆ
ಹಾವು ಮೆಕ್ಕೆಗೆ ಸಾಕ್ಷಿ ಗಡ ಧ
ರ್ಮಾವಮಾನದ ಕವಿಗೆ ಕಾಮಾದಿಗಳ ನೆರವಿ ಗಡ ।
ಆವಿಡಂಬದ ಶಕುನಿಕರ್ಣರು
ಜೀವಸಖರೈ ತಮ್ಮೊಳಗೆ ದು
ರ್ಭಾವಭೀಕರಹೃದಯ ನುಡಿದನು ಕರ್ಣನರಸಂಗೆ ॥ ೧೫

ಶಕುನಿಯು ಹೇಳಿದ್ದನ್ನು ಕರ್ಣನು ಅನುಮೋದಿಸಿದುದು.

ಆಹ ಶಕುನಿಯ ಮಾತಿನಲಿ ಸಂ
ದೇಹವೇ ಪಾಂಡವರು ಬಂಧು
ದ್ರೋಹಿಗಳು ತಮ್ಮವಧಿ ತುಂಬಲು ಕೇಡತಹರೆಂಬ ।
ಊಹದನು ತಪ್ಪುವುದೆ ನೀವತಿ
ಮೋಹದಲಿ ಬಿಡೆ ಬಿಸಿದು ಬಿದ್ದರೆ
ಕಾಹುರರು ಕುರುಪತಿಯ [2] ಕೆಡಿಸುವರೆಂದನಾಕರ್ಣ ॥ ೧೬

1 ಮುಳಿವುದುಚಿತವು ಕರ್ಣ ಹೇಳೆಂದ, ಚಕ. 2 ಕೌರವರ, ಚಕ,

ಈಸುಖದ ಸುಗ್ಗಿಯಲಿ ನಿನ್ನವ
ರೇಸು ಹೆಚ್ಚುಗೆಯಾಗಿ ಬದುಕಿದ
ರೈಸುವನು ನೆಱೆ ನೋಡಿ ಹಿಗ್ಗದೆ ಪಾಂಡುನಂದನರು |
ಘಾಸಿಯಾದರು ಘಟ್ಟಬೆಟ್ಟದ
ಪೈಸರದಳಂದಚಿಲಿ ಮಱುಗುತ
ಸೂಸಿದೈ ಸಾಹಿತ್ಯಭಾಷೆಯನೆಂದನಾಕರ್ಣ || ೧೭

ಸೊಗಸು ತಳಿತುದು ತರಳಮನ ತಳ
ಮಗುಚಿದಂತಾಯ್ತು ವೆರೊಲವು ಕಾ
ಡಿಗೆಯು ಕೆಸಱೊಳಗ್ಗದ ನೀಲದ ಸರಿಗೆ ಸರಿಯಾಯ್ತು |
ಮುಗುಳುಗಂಗಳ ಬಾಷ್ಪಬಿಂದುವ
ನುಗುರಕೊನೆಯಲಿ ಮಿಡಿದು ಕರ್ಣನ
ಹೊಗೞಿದನು ಬೞಿಕೇನು ಸಿಂಗಿಯಲುಂಟೆ ಸವಿಯೆಂದ || ೧೮

ಹೋಗಲಾಪಾಂಡವರ ಚಿಂತೆಯು
ನೀಗಿದೆವು ನೀವಿನ್ನು ನೆನೆವು
ದ್ಯೋಗವೇನೆನೆ ನಗುತ ನುಡಿದರು ಕರ್ಣಶಕುನಿಗಳು |

ಘೋಷಯಾತ್ರೆಗೆ ಹೋಗುವುದಕ್ಕೆ ಉಪಾಯ.

ಈಗಳೀವಿಭವದ ವಿಲಾಸದ
ಭೋಗದಗ್ಗಳಿಕೆಗಳ ಭುಜದ
ರ್ಪಾಗಮವನವರಿದ್ದ ಬನದಲಿ ತೋಱಬೇಕೆಂದ || ೧೯

ನಾಡೊಳಗೆ ತುಱುಹಟ್ಟಿಯಲಿ ಹೊಲ
ನಾಡಿ ಹೆಚ್ಚಿದ ಗೋಕದಂಬವ
ನೋಡುವುದು ನೆವ ಕುರುಪತಿಯು ಗಾಢದ ಸಗಾಢಿಕೆಯು |
ನೋಡಿ ನಸಿಯಲಿ ಪಾಂಡುಸುತರವ
ರಾಡುಗಾಡಿನ ಹೊಲನ ಹೊರೆಯಲಿ
ಕೂಡೆ ತನುಪರಿವಳದಲರಮನೆ ಮಾಡಬೇಕೆಂದ [1] || ೨೦

1 ಯುಂಗನಾನಿವಹ, ಚ.

ವನದ ಚಿಮ್ಮಂಡೆಗಳ ಘೋರ
ಧ್ವನಿಗಳಲಿ ಕಿವಿ ಮೃಗಕುಲದ ಸೊಗ
ಡಿನಲಿ ನಾಸಿಕ ರೌದ್ರಭೂತಾಲೋಕನದಿ ನಯನ ।
ಜನಪರುಚಿ ಬೆದಱುವರು ನಿನ್ನರ
ಮನೆಯ ಸತಿಯರ ನೇವುರದ ನು
ಣ್ದನಿಗಳಲಿ ತನುಗಂಧದಲಿ ರೂಪಿನಲಿ ಸೊಗಸಿನಲಿ ॥ ೨೧

ಅದಕ್ಕೆ ಧೃತರಾಷ್ಟ್ರನ ಅಸಮ್ಮತಿ.

ಸಿರಿಗೆ ಸಫಲತೆಯಹುದು ನಾನಿದ
ನಱಿಯೆ ನೀವೆವರಿದ್ದವಿಪಿನಾಂ
ತರಕೆ ಗಮಿಸುವುದುಚಿತವೇ ಮನಮುನಿಸು ನಱು ಬಲಿದು ।
ಕೆರಳಿದರೆ ಕಾಳಹುದು ಭೀಮನ
ದುರಳುತನವೀಕೌರವೇಂದ್ರನ
ಹುರುಡು ಹುರಿಯೇಱುವುದು ಮತವಲ್ಲೆಂದನಂಧನೃಪ ॥ ೨೨

ಧೃತರಾಷ್ಟ್ರನನ್ನು ಸಮ್ಮತಿಪಡಿಸಿದುದು.

ಹೂಣೆಯೇಕ [1] ವರೊಡನೆ ಸೆಣಸಿನ
ಸಾಣೆಯಿಕ್ಕುವೆ ಮಸೆವ ಕದನವ
ಕಾಣೆವೆಮ್ಮಱಿಕೆಯಲಿ ಸಲುಗೆಯ ಸಾಧುಸಾಮದಲಿ ।
ರಾಣಿಯರ ರಹಿಯಿಂದ ರಂಜಿಸಿ
ಜಾಣಿನಲಿ ಬಹೆವರಸ ನಿಮ್ಮಡಿ
ಯಾಣೆ ಯೆಂದೊಡಬಡಿಸಿದರು ನೃಪ ಕರ್ಣಶಕುನಿಗಳು ॥ ೨೩

ಇದು ಉಚಿತವಲ್ಲೆಂದು ಭೀಷ್ಮಾದಿಗಳು ಹೇಳಿದುದು.

ಪರಿಮಿತದಲೀವಾರ್ತೆನೆಗಳಿದು
ದರಮನೆಯಲಿದನೆಲ್ಲ ಕೇಳ್ದರು
ಗುರುವಿದುರಗಾಂಗೇಯಕೃಪರಱಿದರು ತಮ್ಮೊಳಗೆ ।

---

[1] ಹೊಗೆಪವ, ಚ.

ಕರೆಸಿ ನುಡಿದರು ಕರ್ಣಸೌಬಲ
ಕುರುಪತಿಗಳಿಗೆ ಘೋಷಯಾತ್ರಾ
ಭರವನಱಿದೆವು ಹೋಹುದನುಚಿತವೆಂದರನಿಬರಿಗೆ ॥ ೧೪

ಅವಗಡೆಯುನಾಭೀಮ ನೀವೆಂ
ಬವರು ನಿಸ್ಸೀಮರು ಚತುರ್ಬಲ
ನಿವಹ ಸಿಲ್ಲದು ತುಡುಕುವುದು ತುೞಿವುದು ತಪೋವನವ ।
ವಿವಿಧಋಷಿಗಳನೇಡಿಸುವರೀ
ಯುವತಿಯರು ಕೈಕಾಲುಮುಟ್ಟನ
ಬವರ ಗಂಟಕ್ಕುವುದು ಲೇಸಲ್ಲೆಂದನಾಭೀಷ್ಮ ॥ ೧೫

ಸಾಱಿದೆವು ನಿಮ್ಮೊಡನೆ ಬಾರೆವು
ದೂಱಲಾಗದು ನಮ್ಮನಿನಿಬರ
ಮಿಱಿದರೆ ರಣಭಂಗ ತಪ್ಪದು ಹೋಗಿ ನೀವೆನಲು [1] ।
ದೂಱ ತಾರೆವು ನಿಮಗೆ ನಾವ್ ಕೈ
ಮಿಱಿ ನಡೆಯುವು ಕಾರ್ಯಗತಿಯುಲಿ
ಜಾಱಿ ಝಡಿತೆಯು ಮಾಡೆವೆಂದನು ಕೌರವರ ರಾಯ ॥ ೧೬

ಆದರೇಳಿ [2] ಶುಭಾಶುಭದ ಫಲ
ಬೀದಿವರಿಸುವುದೈಸಲೇ ನಿಮ
ಗೀದುರಾಗ್ರಹವೇಕೆ ಕಾಂಬಿರಿ ಫಲವನಗ್ರದಲಿ ।

ಯಾರ ಮಾತನ್ನೂ ಕೇಳದೆ ಘೋಷಯಾತ್ರೆಗೆ ಹೊರಡುವಿಕೆ.

ಆದುದಾಗಲಿ ಹೋಗಿ ಯೆನೆ ದು
ರ್ಭೇದಗರ್ವಗ್ರಂಥಿಕಲುಷವಿ
ನೋದಶೀಲರು ಭುಜವ ಹೊಯ್ದರು ನೋಡಬಹುದೆನುತ ॥ ೧೭

---

1 ಹೋಗಬೇಡೆನಲು, ಚ. 2 ರಲ್ಲಿ, ಚ.

ಘೋಷಯಾತ್ರಾವರ್ಣನ.

ಊರೊಳಗೆ [1] ಸಾಱಿದರು ಕೊಟ್ಟರು
ವಾರಕವನಬಲಾಜನಕೆ ಭಂ
ಡಾರ ಸವೆದುದು ಗಣಿಕೆಯರಿಗಾಭರಣದಾನದಲಿ |
ಸಾರಪರಿಮಳವಸ್ತುಗಳ ಬಲು
ಭಾರಣೆಯ ಪೆಟ್ಟಿಗೆಗಳೊಟ್ಟಿತು
ತೇರುಗಳ ಮೇಲೊದಗಿತಕ್ಷೋಹಿಣಿಯ ನಾರಿಯರು || ೧೮

ಬಿಗಿದಬೀಯಗಬದ್ಧರದಭಂ
ಡಿಗಳು ರಾಣಿಯ ಮಾಸದಂದಣ
ತೆಗೆದುವ್ರೊಱಲುವ ಕಂಚುಕಿಗಳುಗ್ಗಡದ ರಭಸದಲಿ |
ಗಗನ ಮಡಗಿತು ಪಲ್ಲವದ ಸ
ತ್ತಿಗೆಯ ಸಾಲಿನಲಿ ಝಲ್ಲರಿಯ ಝೊ
ಡಿಗಳಲಾಡುವ ಚಮರಸೀಗುರಿಗಳ ಪತಾಕೆಯಲಿ || ೧೯

ಸಮಡಿಯಾನೆಯ ಮೇಲೆ ಗಣಿಕಾ
ನಿವಹ ದಂಡಿಗೆಗಳಲಿ ಕೆಲವರು
ಯುವತಿಯರು ಕೆಲರಶ್ವಚಯದಲಿ ರಥನಿಕಾಯದಲಿ |
ಯುವತಿಮಯವೋ ಸೃಷ್ಟಿ ಗಣಿಕಾ
ಯುವತಿಯರ ನೆಲನೀದುದೋ ದಿ
ಗ್ವಿಮರ ಕಱಿದುದೊ ಕಾಂತೆಯರನೆನೆ ಕವಿದುದಗಲದಲಿ || ೨೦

ಧರಣಿಪತಿ ಕೇಳ್ ಹತ್ತುಸಾವಿರ
ಕರಿಘಟಾವಳಿ ಯೆಂಟುಸಾವಿರ
ವರರಥವು ರಾವುತರ ವಾಘೆಯಲಿ ಹಯಕೋಟಿ |
ಬಿರುದಿನಗ್ಗದ ಭಟರ ಸಂಖ್ಯೆಯ
ನಱಿಯೆನಿಂತಿದು ಘೋಷಯಾತ್ರಾ
ಪರುಠವಣೆಯ ಮಹಾಚತುರ್ಬಲ ಕೌರವೇಶ್ವರನ || ೨೧

1 ಕೇರಿಯಲಿ, ಚ.

ನೆರೆದುದಗಣಿತವೆಂದಿಜನ ಕವಿ
ವರರು ವಿದ್ವಾಂಸರು ವಿಧಾವಂ
ತರು ಸುನರ್ತಕ ಕಥಕಪರಿಹಾಸಕರು ಮಾಗಧರು ।
ಚರರು ಮಲ್ಲರು ಬೇಟೆಕಾಱರು
ಪರಿಜನಾವಳಿಸಹಿತ ವಿಪಿನಾಂ
ತರಕೆ ಪಯಣದ ಮೇಲೆ ಪಯಣದಲರಸನೈತಂದ ॥ ೩೦

ಆಕಾಲದಲ್ಲಿ ಅಪಶಕುನಗಳಾದರೂ ಅದನ್ನು ಉಪೇಕ್ಷಿಸಿ
ಹೊರಡುವಿಕೆ.

ಅರಸ ಕೇಳವರತ್ತ ಪಯಣದ
ಭರದಲೈತರೆ ಮುಂದೆ ವಾಯಸ
ವೆರಡು ತಮ್ಮೊಳು ಕದನಮುಖದಲಿ ವಾಮದೆಸೆಗಾಗಿ ।
ಮರೆದುವಲ್ಲಿಂ ಬಳಿಕ ಹಸುಬನ
ಸರುವು ವಾಮದೆ ಗರ್ದಭನ ಬಲ
ಕರಿಯ ಹಕ್ಕಿಯ ತಡೆಯ ಮನ್ನಿಸದೈದಿದನು ಭೂಪ ॥ ೩೩

ಇಂದು ಕಂಡವಶಕುನಗತಿಯಲಿ
ಮುಂದೆ ಲೇಸಲ್ಲೆನುತ ನುಡಿಸಿದೊ
ಡಂದು ಸಚಿವಪಸಾಯ್ತರಾಷ್ಟ್ರರು ಮಂತ್ರಿವರ್ಗಚಯ ।
ಚಂದವಾಗದು ಶಕುನಗತಿ ಮರ
ಳೆಂದು ಹೇಳಲು ಬಾರೆವಾವೆನೆ
ಮುಂದಣಗ್ರಹ ಘನವೆನುತ ಮಱುಗಿದರು ಮಂತ್ರಿಗಳು॥ ೩೪

ದ್ವೈತವನಕ್ಕೆ ಹೋಗಿ ಅಲ್ಲಿನ ಗೋವುಗಳನ್ನು ನೋಡಿದುದು.

ಧರಣಿಪತಿ ಕೇಳ್ ದ್ವೈತವನಬಂ
ಧುರನದೀತೀರದಲಿ ವನದಲಿ
ಸರಸಿಯಲಿ ದೀರ್ಘಿಕೆಗಳಲಿ ವಾಪೀತಟಾಕದಲಿ ।

ಬೆರಸಿ ಬಿಟ್ಟುದು ಕೂಡೆ ಪಾಳೆಯ
ವರಮನೆಯು ಗುಡಿ ನೆಗಹಿದುವು ವಿ
ಸ್ತರಿಸಿದುವು ಮಂಡವಿಗೆ ಲಾಯದ ಭವ್ಯಭವನಗಳು ॥ ೩೫

ಕರೆಸಿದನು ಕೀಲಾರಿಗಳನಾ
ದರಿಸಿ ಹಟ್ಟಿಯ ತುರುಗಳಲ್ಲವ
ಕರೆಸಿ ನೋಡಿದನಲ್ಲಿ ಹಿಂಡಿನ ಕೋಟಿಸಂಖ್ಯೆಗಳ ।
ಹರಿವ ಹಾರುವ ಪಂಠಿಸುವ ಸೈ
ವರಿವ ಮರಳುವ ಮುರಿವ ನಿಲುವೆಳ
ಗರುಗಳನು ನೋಡಿದನು ನಗುತ ನರೇಂದ್ರನೊಲವಿನಲಿ ॥ ೩೬

ಬೆಳವಿಣಿಯ ವಿಂಡಿ ಗೊಲೆವ ಬಾಲದ
ನೆಲಕೆ ನಿಗುರುವ ಗಂಗೆದೊಗಲಿನ
ಹಲಗೆಬೆನ್ನಿನ ಸಿಡಿಲಮುರಿಯೊನೆ ವೊರೆವ ಹುಂಕೃತಿಯ ।
ಕೆಲವಿದಿರುಬರಲದ್ರಿಯದ್ರಿಯ
ಹಳಚುವಂತಿರೆ ಹರಿವ ಹಾರುವ
ಸಲಗನೀಡಿರಿದಾಡುತಿರ್ದುವು ಹಿಂಡುಹಿಂಡಿನಲಿ ॥ ೩೭

ಆಗ ಅನೇಕಗೋವುಗಳನ್ನು ದಾನವಾಗಿಕೊಡುವಿಕೆ.

ತರಿಸಿ ಹೋರಿಯ ಗವಿಯ ಗೂಳಿಯ
ಬರೆಸಿದನು ಕೆಲಕೆಲವ ಕೃಷಿಕರಿ
ಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ ।
ಕರೆಸಿ ಕೊಟ್ಟನು ಭಟ್ಟರಿಗೆ ಮ
ಲ್ಲರಿಗೆ ಗಾಯಕರಿಗೆ [1] ವಿಧಾವಂ
ತರಿಗೆ ಬಹುವಿಧಬಹಳವಂದಿಗೆ ಮಾಗಧವ್ರಜಕೆ ॥ ೩೮

ಅಂಗ ಚಿತ್ತವನಿತ್ತು ಮೊದಲಿನ
ಪುಂಗವನ ಸತ್ಕರಿಸಿ ಹಿಂಡಿನ
ಪಂಗಡದ ಗೋಪಾಲನಿಕರಕೆ ಕೊಟ್ಟನುಡುಗೊರೆಯ ।

---

1 ವಿಟರಿಗೆ ನಟ,ಜ.

ಹಿಂಗಿದುವು ತುಱುಬೇಟೆಯಾಡಿ ಮೃ
ಗಂಗಳಿಗೆ ಮದ್ದಱಿದು ಗಡಿ ಭಾ
ಗಂಗಳನು ಕೊಡಿಸಿದನು ಪರಿವಾರಕೆ ವಿನೋದದಲಿ ॥ ೩೮

ಹದಿನೆಂಟನೆಯ ಸಂಧಿ ಮುಗಿದುದು.

## ಹತ್ತೊಂಬತ್ತನೆಯ ಸಂಧಿ.

**ಸೂಚನೆ.**

ಪರಿವಿಡಿಯಲಾದ್ವೈತವನದಲಿ
ಬೆರಸಿ ಬಿಟ್ಟುದು ಬೀಡು ಗಂಧ
ರ್ವರಿಗೆ ಕೌರವಬಲದೊಡನೆ ಮಸೆದುದು ಮಹಾಸಮರ ॥

ಪಾಂಡವರು ಇದ್ದ ವನದ ಬಳಿ ದುರ್ಯೋಧನನು ಪಾಳೆಯವನ್ನು ಬಿಡಿಸಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ತುಱುಪಳ್ಳಿಗಳ ನೋಡಿ ಮ
ನಾಳಿ ದಪ್ಪದೆ ಬೇಟೆಯಾಡಿ ಸಮಸ್ತದಳಸಹಿತ ।
ಲೀಲೆ ಮಿಗಲಾಪಾಂಡವರ ವನ
ವೇಲೆಯಲಿ ನಿಸ್ಸಾಳರಭಸದ
ಸೂಳ ಸಂಕೇತದಲಿ ನೃಪ ಬಿಡಿಸಿದನು ಪಾಳಯವ ॥ ೧

ಲಾಯ ನೀಡಿತು ಮುಂದೆ ರಾವುತ
ಪಾಯಕರಿಗೆಡವಂಕ ಮಂತ್ರಿಪ
ಸಾಯಿತರು ಕರ್ಣಾದಿಗಳಿಗೆಡೆಯಾಯ್ತು ಬಲವಂಕ ।

ರಾಯನರಮನೆ ಮೌಕ್ತಿಕದ ಕಳ
ಶಾಯುತದ ಬೆಳಗಿನಲಿ ಪಾಂಡವ
ರಾಯನೆಲೆವನೆಗಳನು ನಗುತಿರ್ದುದು ನವಾಯಿಯಲಿ ॥ ೧

ಆಗ ಪರಿವಾರದ ತರುಣಿಯರ ಕಾರ್ಯಗಳು.

ಅರಸ ಕೇಳ್ಕೌರವೇಶ್ವರ
ನರಸಿಯರು ಲೀಲೆಯಲಿ ಶತಸಾ
ವಿರಸಖೀಜನಸಹಿತ ಹೊಱವಂಟರು ವನಾಂತರಕೆ ।
ಸರಸಿಜದ ನಿಜಗಂಧದಲಿ ತನು
ಪರಿಮಳವ ತಕ್ಕೈಸಿ ವನದಲಿ
ತರಳೆಯರು ತುಂಬಿದರು ಮಱಿದುಂಬಿಗಳ ಡೊಂಬಿನಲಿ ॥ ೩

ಕೆಲರು ಹೊಂದಾವರೆಯ ಹಂತಿಯ
ಕೊಳನ ಹೊಕ್ಕರು ಬಿಲ್ವಫಲಗಳ
ನಿಲುಕಿ ಕೊಯ್ದರು ಕೊಡಹಿ ಮೊಲೆಗಳ ಮೇಲುದಿನ ನಿಱಿಯ ।
ಕೆಲರು ಹೂಗೊಂಚಲಿನ ತುಂಬಿಯ
ಬಳಗವನು ಬೆಂಕೊಂಡರುಲಿಪರೆ
ಗಿಳಿಗೆ ಹಾರದ ಬಲೆಗಳನು ಹಾಯ್ಕಿದರು ಕೊಂಬಿನಲಿ ॥ ೪

ಪಾರಿಜಾತವ ಪಾದರಿಯ ನಾ [1]
ನಾರಿಯರು ಕೆಲರಾ [2] ವನದಲಿ ಚ
ಕೋರಿಗಳ ನಿಲಿಸಿದರು ಕೆಲಕೆಲರಂಗಪರಿಮಳಕೆ ।
ಸಾರಿದರೆ ಮಱಿದುಂಬಿಗಳ ಸುಖ
ಪಾರಣೆಯ ಬೆಸಗೊಳುತ ನಗುತ ವಿ
ಕಾರಿಗಳು ವೇಡೈಸಿದರು [3] ನೃಪ ಮುನಿಜನಾಶ್ರಮವ ॥ ೫

---

1 ಪಾರಿವದುಪಾಧ್ಯರನು ನಮಿಸುತೆ. ಖ. ಚ.
2 ವಾರನಾರಿಯರಾ, ಖ, ಚ.
3 ವೊಡ್ಡೈಸಿದರು, ಚ.

ನೇವುರದ ದನಿ ದಟ್ಟೈಸಿತು ವೇ
ದಾವಳಿಯ ನಿರ್ಘೋಷವೆನು ನಾ
ನಾವಿಭೂಷಣಕಾಂತಿ ಕೆಣಕಿತು ಮುನಿಸಮಾಧಿಗಳ ।
ಆವಧೂಜನದಂಗಗಂಧ
ಪ್ರಾವರಣ ಹುತಚರುಪುರೋಡಾ
ಶಾವಳಿಯ ಸೌರಭವ ಮುಸುಕಿತು ವನದ ವೆಳಯದಲಿ ॥ ೬

ಹೊಕ್ಕರಿವರಾಶ್ರಮವ ತುಱುಗಿದ
ತಕ್ಕರಂತಃಕರಣ ತುರಗಕೆ
ದುಕ್ಕುಡಿಯನಿಕ್ಕಿದರು ತಿರುಹಿದರೆರಡುವಾಘೆಯಲಿ ।
ಸಿಕ್ಕಿದುವು ಧಾಟಿಯಲಿ ಧೈರ್ಯದ
ದಕ್ಕಡರಮನ ಹರಹಿನಲಿ ಹಾ
ಯಿಕ್ಕಿದರು ಕಡೆಗಣ್ಣ ಬಲೆಗಳ ಮುನಿಮೃಗಾವಳಿಗೆ ॥ ೭

ಸ್ರುಕ್‌ಸ್ರುವವ ಮುಟ್ಟಿದರು ಧೌತಾಂ
ಶುಕದೊಳಗೆ ತಂಬುಲವ ಕಟ್ಟಿದ
ರಕಟುಪಾಧ್ಯರ ನೋಟಿಯನು ತೀಡಿಸುತ ಬೆರಳಿನಲಿ ।
ಚಕಿತಧೃತಿಯರು ದೀಕ್ಷಿತರ ಚಂ
ಡಿಕೆಗಳನು ತುಡುಕಿದರು ಮುನಿವಟು
ನಿಕರಶಿರದಲಿ ಕುಣಿಸಿದರು ಕುಂಚಿತಕರಾಂಗುಲಿಯ ॥ ೮

ಆಗ ಅಲ್ಲಿದ್ದ ಬ್ರಾಹ್ಮಣರ ಅವಸ್ಥೆ

ರಾಯರೆಂಬವರಿಲ್ಲಲಾ ಸ್ವಾ
ಧ್ಯಾಯ ಕೆಟ್ಟುದು ಮುಟ್ಟಿದರುಪಾ
ಧ್ಯಾಯರನು ಶೂದ್ರೆಯರು ಸೆಳೆದರು ಮೌಂಜಿಮೇಖಲೆಯ ।
ಹಾಯಿದರು ಯಜ್ಞೋಪವೀತಕೆ
ಬಾಯಲೆಂಜಲಗಿಡಿಯ ಬಗೆದರ
ಲಾಯೆನುತ ಬಿಟ್ಟೋಡಿದರು ಸಬ್ರಹ್ಮಚಾರಿಗಳು ॥ ೯

ಕೆದಱಿದರು ಗಡ್ಡವನುಪಾಧ್ಯರು
ಬೆದಱಿನಿಂದರಿದೇನು ನೀವ ಮಾ
ಡಿದವಿಟಾಳವ ಹೇೞುವೆವು ಕುಂತೀಕುಮಾರರಿಗೆ ।
ಇದು ಮಹಾಮುನಿಸೇವಿತಾಶ್ರಮ
ವಿದಱ ಶಿಷ್ಟಾಚಾರವನು ಕೆಡಿ
ಸಿದವರೇ ಕ್ಷಯುವಹರು ಶಿವ ಶಿವ ಯೆಂದರಾದ್ವಿಜರು ॥ ೧೦

ಆಗ ದ್ವಿಜರಿಗೂ ತರುಣಿಯರಿಗೂ ನಡೆದ ವಿವಾದ.

ಹೇೞದರೆ ಕುಂತೀಕುಮಾರರು
ಕೇಳಿ ಮಾಡುವುದಾವುದೋ ವನ
ಪಾಲಕರು ತಾವಿಂದು ಪೃಥ್ವೀಪಾಲ ನರ್ಮ್ಮಡೆಯು ।
ಹೇೞಿ ಬೞಕಜು-ನನ ಭೀಮನ
ಧಾೞಿಯನು ತರಲಹಿರೆನುತ ಘಾ
ತಾಳಿಯರು ಮುನಿಜನವ ಬೈದರು ಬಹುವಿಕಾರದಲಿ ॥ ೧೧

ಶಾಂತರುಱೆ ವಿಜಿತೇಂದ್ರಿಯರು ವೇ
ದಾಂತನಿಷ್ಠರು ಸುವ್ರತಿಗಳ
ಶ್ರಾಂತವೇದಾಧ್ಯಯನಯಾಜ್ಞಿಕಕರ್ಮಕೋವಿದರು ।
ಸಂತತಾನುಷ್ಠಾನಪರರನ
ದೆಂತು ನೀವಾಕ್ರಮಿಸುವಿರಿ ವಿ
ಭ್ರಾಂತೆಯರು ನೀವೆನುತ ಜಱಿದರು ಕಾಮಿನೀಜನವ ॥ ೧೨

ಒದೆದು ಪದದಲಿ ಕೆಂದಳಿರ ತೋ
ಱಿದೆವಶೋಕೆಗೆ ಮಧ್ಯಗಂಡೂ
ಷದಲಿ ಬಕುಳದ ಮರನ ಭುಲ್ಲವಿಸಿದೆವು ಕುರುವಕಕೆ ।
ತುದಿವೊಲೆಯ ಸೋಂಕಿನಲಿ ಹೂದೋ
ಱಿದೆವು ಕಂಣ್ಣೊ ೞೆಯಲಿ ತಿಲಕವ
ಕದುಕಿದೆವು ನೀವಾವ ಘನ ಘಡ ಯೆಂದರಬಲೆಯರು ॥ ೧೩

ಬಲುವೊಲೆಯು ಸೋಂಕಿನಲಿ ಶಾಂತರ
ತಲೆಕೆಳಕ ಮಾಡುವೆವು ಕಡೆಗ
ಣ್ಣಲಗಿನಲಿ ಕೊಯ್ದೊತ್ತುವೆವು ವಿಜಿತೇಂದ್ರಿಯರ ಮನವ ।
ಎಳನಗೆಗಳಲಿ ವೇದಪಾಠರ
ಕಲಕುವೆವು ವೇದಾಂತನಿಷ್ಠರ
ಹೊಳಸ ದುವ್ವಾಳಿಸುವೆವೆಮಗಿದಿರಾರು ಲೋಕದಲಿ [1] ॥ ೧೪

ಎನುತ ಕವಿದುದು ಮತ್ತೆ ಕಾಂತಾ
ಜನಸುಯೋಧನನರಮನೆಯ ಸೊಂ
ಪಿನ ಸಖೀನಿಕುರುಂಬ ತುಂಬಿತು ವರತಪೋವನವ ।
ಮನಸಿಜನ ದಳ ನೂಕಿತೇಚೇ
ಚೆನುತ ಚೆಲ್ಲಿತು ಮುನಿನಿಕರ ನೃಪ
ವನಿತೆಯಿದಿರಲಿ ಸುಳಿದರವದಿರ ಮುಂದೆ ಸಂದಣಿಸಿ ॥ ೧೫

ಆಗ ಆತರುಣಿಯರು ದ್ರೌಪದಿಯನ್ನು ನೋಡಿ ಆಡಿದ ಮಾತುಗಳು.

ಈಕೆ ಪಾಂಡವಸತಿ ಕಣಾ ತೆಗೆ
ಯಾಕೆ ಯತಿದಾರಿದ್ರ್ಯಮೂರುತಿ
ಯಾಕೆಯಲ್ಲಡಗಿಹಳು ರಾಣಿಯವಾಸವೆಂಬರಲೆ ।
ಈಕೆಯಹುದಲ್ಲಿದಕೆ ಪಣವೇ
ನೀಕೆ ಬಣಗಕಟೆನುತ ಕಾಂತಾ
ನೀಕ ತಮ್ಮೊಳು ನುಡಿವುತಿರ್ದುದು ತೋಱಿ ಬೆರಳನಲಿ ॥ ೧೬

ಕುಣಿವರಂದುಗೆಗಾಲ ಝಣಝಣ
ಝಣಝಣತ್ಕೃತಿರವ ಮಸಗೆ ಕಂ
ಕಣದ ದನಿ ದೋಱುವರು ನುಡಿನುಡಿಸೇರದಂದದಲಿ ।
ಮಣಿಮಯದ ಕುಂಡಲವನಲುಗುವ
ರೆಣಿಸುವಂತಿರೆ ಕೊರಲ ಹಾರದ
ಮಣಿಗಳನು ಮುತ್ತುಗಳ ಮಿಱಿವರು ಮುಱಿದ ಮೌಳಿಯಲಿ ॥ ೧೭

---

1 ವಿದಿರಾರೊಂದು ನಿಮಿಷದಲಿ, ಚ. ಕ. ಖ.

ಈ ತೊಂದರೆಯನ್ನು ಧರ್ಮರಾಯನಿಗೆ ತಿಳಿಸುವಿಕೆ.

ಬಟಿಯಲೈದಿತು ಮುನಿಗಳವರುಪ
ಟಳವನರಸಂಗಱುಹಿದರು ವೆ
ಗ್ಗಳಿಸಿ ಭೀಮಂಗೆಂದರರ್ಜುನಯಮಳರಿದಿರಿನಲಿ ।
ಉಟಿದರೆಮಗೀವನವಿಟೂಳ
ಪ್ರಳಯವಾದುದು ಕಾನನಾಂತರ
ನಿಳಯದಲಿ ನಿಲಿಸೆಮ್ಮನೆಂದುದು ಸಕಲಮುನಿನಿಕರ ॥ ೧೮

ಇದಕ್ಕೆ ಧರ್ಮರಾಯನ ಸಮಾಧಾನ.

ಅರಸಲಾ ಕುರುರಾಯನಾತನ
ಬರವು ತುಱುಪಳ್ಳಿ [1] ಗಳ ಗೋವಿ
ಸ್ತರಣಕೋಸುಗವೈಸೆ ಪಾಳೆಯ ಸಾರ್ವಭೌಮನದು ।
ಪರಿಸರದಲಿದ್ದುದು ವಿನೋದಕೆ
ತರುಣಿಯರು ಬರಲೇಕೆ ನೀವೆ
ಬ್ಬರಿಸುವಿರಿ ನಮ್ಮವರಲಾ ಯೆಂದನು ಮಹೀಪಾಲ ॥ ೧೯

ಭೀಮನ ಕೋಪವನ್ನು ಧರ್ಮರಾಯನು ಶಮನ ಮಾಡುವಿಕೆ.

ಔಡು ಗಚ್ಚಿದನಂಘ್ರಿಯಲಿ ನೆಲ
ಬೀಡ ಬಿಡಲೊದೆದನು ಕರಾಂಗುಲಿ
ಗೂಡಿ ಮುಱಿದೌಕಿದನು ಖತಿಯಲಿ ನಿಜಗದಾಯುಧವ ।
ನೋಡಿದನು ಕುರುರಾಯನಲಿ ಹೊ
ಯ್ದಾಡಿ ಬರಬೇಕೆಂಬ ಭೀಮನ
ಮೋಡಿಯನು ನೃಪನಱಿದು ಸಂತೈಸಿದನು ಸಾಮದಲಿ ॥ ೨೦

ದುರ್ಯೋಧನನ ಸ್ತ್ರೀಜನರ ಬರುವಿಕೆಯ ವರ್ಣನೆ.

ಕರೆಸಿದನು ನೃಪ ವಾರಿಕೇಳಿಗೆ
ವರವಧೂವರ್ಗವನು ಕೇಳಿದು
ತಿರುಗಿತಂಗಜ [2] ಥಟ್ಟು ಝಣ ಝಣರವದ ರಭಸದಲಿ ।

---

[1] ವಟ್ಟ, ಜ.    [2] ತಿಚ್ಛೆಯ, ಜ. ಶ. ಟಿ.

ಸರಿದಿಟಿವ ನಿಱಿಯೊಂದು ಕೈಯಲಿ
ಸುರಿವರಳಮುಡಿ ಯೊಂದು ಕೈಯಲಿ
ಭರದೆ ಗಮನಸ್ವೇದಜಲ ಮಘಮಘಿಸೆ ದೆಸೆದೆಸೆಗೆ ॥ ೨೧

ಬಲುಮೊಲೆಗಳಲ್ಲಿ ಱಿಯಲೇಕಾ
ವಳಿಗಳನು ಕೆಲಕೊತ್ತಿ ಮೇಲುದ
ಕಳಚಿ ನಡುಗಿಸಿ ನಡುವನಂಜಿಸಿ ಜಘನಮಂಡಲವ ।
ಅಳಕನಿಕರವ ಕುಣಿಸಿ ಮಣಿಕುಂ
ಡಲವನಲುಗಿಸಿ ಹಣೆಯ ಮುತ್ತಿನ
ತಿಲಕವನು ತನಿಗೆದಱಿ ನಡೆದುದು ಕೂಡೆ ಸತಿನಿವಹ ॥ ೨೨

ತಾರಕೆಗಳುಚಿದಂಬರದ ವಿ
ಸ್ತಾರವೋ ಗತಹಂಸಕುಲಕಾ
ಸಾರವೋ ನಿಸ್ಸಾರವೋ ನಿರ್ಮಳತಪೋವನವೋ ।
ನಾರಿಯರ ದಳ ನೂಕಿದರೆ ತನು
ಸಾರಭದ ದಳ ತೆಗೆಯದಾಕಾಂ
ತಾರದೊಳಗೇನೆಂಬೆನಾಸಾಗಂಧಬಂಧುರವ ॥ ೨೩

ಅಲರ್ದ ಹೊಂದಾವರೆಯ ಹಂತಿಯೊ
ತಳಿತಮಾವಿನ ಬನವೊ ಮಿಗೆ ಕ
ತ್ತಲಿಪ ಬಹಳತಮಾಲಕಾನನವೋ ದಿಗಂತದಲಿ ॥
ಹೊಳೆವ ವಿದ್ರುಮವನವೊ ಕುಸುಮೋ
ಚ್ಚಳಿತಕೇತಕಿದಳವೊ ರಂಭಾ
ವಳಿಯೊ ಕಾಂತಾಜನವೊ ಕಮಲಾಕಾರವದನೆಯರೊ ॥ ೨೪

ಅರಸ ಕೇಳ್ಕೈ ವಾರಿಕೇಳಿಗೆ
ಕುರುಪತಿಯ ನೇಮದಲಿ ಶತಸಾ
ವಿರಸರೋಜಾನನೆಯರೈದಿತು ವನವನಂಗಳಲಿ ।
ಪರಿಮಳದ ಪಸರಣದ ಪದ್ಮಾ

ಕರಸಹಸ್ರದ ಸಾಲಸುಮನೋ
ಹರಮಹೋದ್ಯಾನವನು ಕಂಡೈತಂದರಬಲೆಯರು ‖ ೨೫

ರಾಯಕುವರರು ಸಚಿವಮಂತ್ರಿ ಪ
ಸಾಯಿತರ ಮಕ್ಕಳು ಚಮೂಪರ
ನಾಯಕರ ನಂದನರು ವಿಟರು ವಿನೋದಿಗಳು ಪುರದ ।
ಆಯತಾಕ್ಷಿಯರೊಡನೆ ರಾವುತ
ಪಾಯಕರ ಸುತರೋಳಿವೋಳಿನ
ವಾಯಿಗಳ ನಾಗರಿಕರೈದಿತು ಕೋಟಿಸಂಖ್ಯೆಯಲಿ ‖ ೨೬

ಆರಭಟಕೆ ಕೋಪದಿಂದ ವನಪಾಲರು ಬರುವಿಕೆ.

ತವಗೆ ತಟ ಮುಳುವೇಲಿ ಬಾಗಿಲ
ಜವಳಿಗದ ಬೀಯಗದಲಿದ್ದು ದು
ದಿವಿಜವನ ವೃದ್ದಂಡತರಪರಿಮಳದ ಪೂರದಲಿ ।
ಯುವತಿಯರ ದಳ ನೂಕಿತುದಕೋ
ತ್ಸವವ್ಯಥಾಕೇಳಿಯಲಿ ಕನಕೋ
ದ್ಭವಕವಾಟವನೊದೆದು ಕರೆದರು ಕಾಹಿನವರುಗಳ ‖ ೨೭

ಆರಿವರು ಕರೆವವರೆನುತ ಸುರ
ವೀರರೌಕಿತು ಬಾಗಿಲಲಿ ನೀ
ವಾರೆನಲು ತೆಗೆ ಕದವನರಿಯಾ ರಾಯಕುರುಪತಿಯ [1] ।
ವಾರನಾರಿಯರವನಿಪತಿಯು ಕು
ಮಾರರಿದೆ ಬೇಹವರು ಸರಸಿಯು
ವಾರಿಕೇಳಿಗೆ ಬಂದೆವೆಂದರು ಗಜರಿ ಗರ್ಜಿಸುತ ‖ ೨೮

ಆಗ ಗಂಧರ್ವರು ಜಲಕೇಳಿಯನ್ನು ತಡೆಯಲು ಸಿದ್ಧವಾಗುವಿಕೆ.

ಹೊಗಬಹುದೆ ಗಂಧರ್ವರಾಯನ
ಮಗನ ಬನವಿದು ನೋಡಿದರೆ ದ್ಯ
ಗ್ಯಗಳದೆವೆ ನೀವು ಕಣಾ ಘಡ ಹೋಗಿ ಹೋಗಿಯೆನೆ ।

1 ನರಮನೆಯ, ಚ.

ತೆಗೆ ವಿಕಾರವ ನವೆಡ್ಮೊ ಡನೆ ತೆಗೆ
ತೆಗೆ ಕದವ ಗಂಧರ್ವನಾರಿಗೆ
ಮಗನದಾವವನೆನುತ ಹೊಕ್ಕರು ತಟಿಯ ಮುಱಿದೊದೆದು ॥೨೯

ಒಱಲಿದುವು ಕಹಳೆಗಳು ಕಾಹಿನ
ಸುರಭಟರು ನೆರೆದೆಸೆ ಮುಸುಂಡಿಯ
ಪರಶುಮುದ್ಗರಚಾಪಮಾರ್ಗಣ ಸಬಳಸೂನೆಗೆಯ ।
ಹರಿಗೆ ಖಡ್ಗದಲರಿಭಟರ ಚ
ಪ್ಪರಿಸಿದರು ಗಂಧರ್ವಭಟರಿಗೆ
ಕುರುಪತಿಯ ಸುಭಟರಿಗೆ ತೊಡಕಿತು ತೋಟಿ ತೋಪಿನಲಿ॥ ೩೦

ಚೆಲ್ಲಿದರು ಚಪಳೆಯರು ಮುನಿಜನ
ವೆಲ್ಲ ಪಾಂಡವರಾಶ್ರಮದ ಮೂಗ
ಲಲ್ಲಿ ಮೊನೆಗಣೆ ಮೆಱೆದು ಮುಱಿದುವು ಮೊನೆಯ ಮುಂಬಿಗರ ।
ಚೆಲ್ಲಗಂಗಳ ಯುವತಿಯರ ನಾ
ನೆಲ್ಲಿ ಕಾಣೆನು ಕಾಮುಕರು ನಿಂ
ದಲ್ಲಿ ನಿಲ್ಲದೆ ಹಾಯ ರವನೀಪತಿಯ ಪಾಳೆಯಕೆ ॥ ೩೧

ಬಱಿಯ ಮಕ್ಕಳ ತಂಡವೇ ಹೊ
ಕ್ಕುಱಿದುದವದಿರನುಱಬಿ ದಿವಿಜರು
ಜಱಿದು ನೂಕಿತು ವನವನೊಳಬಿದ್ದವರ ಹೊಱವಡಿಸಿ ।
ಮುಱಿದು ತಟಿಗಳ ಬಲಿದು ಬಾಗಿಲ
ಹೊಱಗೆ ನಿಂದರು ವಾರಿಕಳಿಯ
ಮೆಱೆದು ಶೋಣಿತವಾರಿಕೇಳಿಗೆ ಬನ್ನಿ ನೀವೆನುತ ॥ ೩೨

ನೃಪಸುತರ ಪಡಿಬಲಕೆ ಬಂದುದು
ವಿಪುಲಬಲ ಹಲ್ಲಣಿಸಿ ಹೊಯ್ ಹೊ
ಯ್ಯಪಶದರ ಗಂಧರ್ವಸುಭಟರನೆನುತ ಸೂಟಿಯಲಿ ।

ಕುಪಿತರಜಿಯಿಟ್ಟಿದರು ತೋಪಿನ
ಕಪಿಗಳಾವೆಡೆ ಕಾಣಬಹುದಿ
ನ್ನುಪಚರರನಿನ್ನೇನು ಹೊಗಿಸಿದರವರನಾವನವ ॥ ೨೩

ಬಂದ ಬಲ ಹೇರಾಳ ತೆಗೆ ತೆಗೆ
ಯೆಂದು ತೋಪಿನ ಕಡೆಗೆ ಹಾಯ್ದುಜಿ
ನಿಂದು ನೆರಹಿದರಕಟ ಗಂಧರ್ವರು ಭಟವ್ರಜವ ।
ಬಂದುದದು ನಡುಬನಕೆ ಕೌರವ
ವೃಂದವನು ಕರೆದರು ವಿನೋದಕೆ
ಬಂದಿರೈ ನಾರಾಚಸಲಿಲಕ್ರೀಡೆ ಯಿದೆ ಯೆನುತ ॥ ೨೪

ಮುಜಿಯಿಸುತ ಗಂಧರ್ವಬಲ ಮು
ಕ್ಕುಜಿಕಿ ಕೌರವಬಲವ ತತ್ತರ
ದಜಿದು ತರಹರವಿಲ್ಲನಿಸಿ ಹೊಗಿಸಿದರು ಪಾಳಯವ ।
ಹೊಜಗುಡಿಯು ಹೊಅಪಾಳಯದ ಭಟ
ರಜುಹಿದರು ಕುರುಪತಿಗೆ ಖತಿಯಲಿ
ಜಜಿದು ಜೋಡಿಸಿ ಬಿಟ್ಟನಕ್ಷೋಹಿಣಿಯ ನಾಯಕರ ॥ ೨೫

ಹಲ್ಲಣಿಸಿದುದು ಚಾತುರಂಗವ
ದೆಲ್ಲ ಕವಿದುದು ಹೊಕ್ಕದಿವಿಜರ
ಚೆಲ್ಲ ಬಡಿದರು ಚಾಚಿದರು ತೋಪಿನ ಕವಾಟದಲಿ ।
ನಿಲ್ಲದಾಕಿದರಂತಕನ ಪುರ
ದೆಲ್ಲೆಯಲಿ ಹೆಕ್ಕಳದ ಖಡುಗದ
ಘಲ್ಲಣೆಯ ಖಣಿಖಟಿಲ ಗಾಢಿಕೆ ಘಲ್ಲಿಸಿತು ನಭವ ॥ ೨೬

ಯುದ್ಧದಿಂದ ವನಕ್ಕಾದ ದುರವಸ್ಥೆಯನ್ನು ಚಿತ್ರಸೇನನಿಗೆ ತಿಳಿಸುವಿಕೆ.

ಬಲದ ಪದಘಟ್ಟನೆಗೆ ಹೆಮ್ಮರ
ನುಲಿದು ಬಿದ್ದುದು ಸಾಲಪೂಗಾ
ವಳಿಕಪಿತ್ಥಲವಂಗತುಂಬುರನಿಂಬದಾಳಿಂಬ ।

ಫಲಪಲಾಶರಸಾಲಶಮಿಗು
ಗ್ಗುಲಮಧೂಕಾಶೋಕಬಿಲ್ವಾ
ಮಲಕಜಂಬೀರಾದಿಗಳು ನುಗ್ಗಾಯ್ತು [1] ನಿಮಿಷದಲಿ ॥ ೩೭

ಕದಡಿದುವು ಸರಸಿಗಳು ಕೆಡೆದುವು
ಕದಳಿಗಳು ಗೊನೆಸಹಿತ ಸೆಳದೊಱ [2]
ಗಿದುವು ಮುಂಡಿಗೆ ಮುಱಿದು ಮಿನುಗುವ [3] ನಾಗವಳ್ಳಿಗಳು ।
ತುದಿಗೊನೆಯ ಚೆಂದೆಂಗು ಖರ್ಜೂ
ರದಲಿ ಕಾಣೆನು ಹುರಳನಾರಾ
ಮದ ವಿರಾಮವನೇನನೆಂಬೆನು ನಿಮಿಷಮಾತ್ರದಲಿ ॥ ೩೮

ತೋಟ ಹುಡಿಹುಡಿಯಾಯ್ತು ಮುಱಿದುದು
ತೋಟಿಯಲಿ ನಮ್ಮವರು ಹಗೆಗಳ
ಘಾಟದವರಾಚೆಯಲಿ ದುರ್ಬಲ ನಮ್ಮದೀಚೆಯಲಿ ।
ಆಟವಿಕದಳ ಹೊಯ್ದು ಮಿಂಡರ [4]
ಮೀಟನೆತ್ತಿದರವರು ಕಾಹಿನ
ಕೋಟಲೆಗೆ ನಾವೊಲ್ಲೆವೆಂದರು ಚಿತ್ರಸೇನಂಗೆ ॥ ೩೯

ಆಗ ಗಂಧರ್ವರಾಜನು ಯುದ್ಧಕ್ಕೆ ಬಂದುದು.

ಅವರು ಮರ್ತ್ಯರು ನಮ್ಮದಕಟಾ
ದಿವಿಜರೀವಿಧಿಯಾದುದೇ ಕವಿ
ಕವಿ ಯೆನುತ ಬೇಹವರಿಗಿತ್ತನು ರಣಕೆ ವೀಳೆಯವ !
ಗವಿಯ ಗರುವರು ಗಾಢಿಸಿತು ಮಾ
ನವರ ಮಱುಕಕೆ ಮು  ದುದೇ ಸುರ
ನಿವಹ ಸುತಲಾಹವವವೆನುತ್ತೈದಿದರು ಸೂಟಿಯಲಿ [5] ॥ ೪೦

---

1 ಕದಂಬವು ನುಗ್ಗುನುಸಿಯಾಯ್ತೆಂದು, ಚ.
2 ಮುಂಡಿಗೆ, ಚ. 3 ಮುದುಱಿ ನೆಲಕೊಱಗಿದುವು ಮಿಱುಗುವ, ಚ.
4 ರೊಳಹೊಕ್ಕು ಬೀರರ, ಖ. 5 ಸಂದಣಿಸಿ, ಚ.

ಕೌರವರ ಪರಾಜಯ.

ಆತುದಿದು ತೋಪಿನಲಿ ಗಂಧ
ರ್ವಾತಿರೇಕವ ಸೈರಿಸಿತು ಪದ
ಘಾತಧೂಳೀಪಟಲ ಪರಿಚುಂಬಿಸಿದುದಂಬರವ ।
ಭೀತಿ ಬಿಟ್ಟುದೆ ಮನುಜರಿಗೆ ನ
ವ್ಯಾತಗಳ ಕೂಡಹುದಲೈ ಕಾ
ಲಾತುದೇ ಕಲಿತನಕೆನುತ ಕೈಕೊಂಡರವಗಡಿಸಿ ॥ ೪೧

ಆರು ನಿಲುವರು ದೇವಲೋಕದ
ವೀರರಲ್ಲಾ ವಿಗಡರೆಸುಗೆಯ
ಭೂರಿಬಾಣದ ಹಿಂಡು ತಱಿದುವು ಹೊಗುವ ದಂಡಿಗರ ।
ವಾರುವನು ಮುಖದಿಱಿಹಿದುವು ಮದ
ವಾರಣಂಗಳು ಕೊಡಹಿದುವು ಹೊಂ
ದೇರು ಮುಗ್ಗಿದವುರ್ಗ್ಗ ಮುಱಿದುದು ಮಿಗುವಕಾಲಾಳ ॥ ೪೨

ಮುಱಿದುದಿದು ಗಂಧರ್ವಬಲ ವಿ
ಕ್ಕುಱುಬಿಕೊಂಡೇ ಬಂದುವಗ್ಗದ
ಗರುವರಚಿದರು ಬಱಿಯುದುರ್ಯಶ ವೃಚಿದುದರಸಂಗೆ ।
ಕರಿತುರಗರಥಪಾಯಿದಳಹೆಣ
ಹೊರಳಿಗಟ್ಟಿತು ಪಾಳೆಯದ ಗೋ
ಪುರದ ಹೊಱಬಾಹೆಯಲಿ ಸಿಂದುದು ಬಲಕೆ ಬೇಹವರು ॥ ೪೩

ಮುಱಿದು ಬರುತಿದೆ ಜೀಯ ನಾಯಕ
ರುರಿವವರ ಬಲುಘಾಯದಲಿ ಕು
ಕ್ಕರಿಸಿದರು ಗಂಧರ್ವರಿದೆ ಕಡೆವನದ ಕಾಹಿನಲಿ ।
ಮರಳಿ ಪಾಳೆಯ ಬಿಡಲಿ ಮೋಹ ಹಗೆ
ಯಿಱಿತಕಂಫೈಸುವರ ಬಿಡು ಕೈ
ಮೆಱೆಯ ಬೇಡೆನೆ ಬೆರಳ ಮೂಗಿನಲರಸ ಜೆಱಿಗಾದ ॥ ೪೪

ಹತ್ತೊಂಬತ್ತನೆಯ ಸಂಧಿ ಮುಗಿದುದು.

## ಇಪ್ಪತ್ತನೆಯ ಸಂಧಿ.

---

**ಸೂಚನೆ.**

ರಾಯದಳವೆನು ಮುಱಿದು ಕೌರವ
ರಾಯನನುಜರು ಸಹಿತ ಗಗನಕೆ
ಹಾಯಿದನು ಗಂಧರ್ವಪತಿ ಸುರಪತಿಯ ನೇಮದಲಿ ||

ಆಗ ದುರ್ಯೋಧನನ ಚಿಂತೆ.

ಕೇಳು ಜನಮೇಜಯ ಧರಿತ್ರೀ
ಪಾಲ ವನಪಾಲಕರ ಜಗಳದೊ
ಳಾಳು ನೊಂದುದು ಧರೆಗೆ ಬಿದ್ದುದು ತೋಟ ತೋಪಿನಲಿ |
ಆಲಿಗಳ ಕಣ್ಣೋಟದೊಲಹಿನ
ಮೌಳಿಯುಬ್ಬಿನ ಸುಯ್ಲ ದುಗುಡದ
ಜಾಳಿಗೆಯ ಜಡಮನದಲಿದ್ದನು ಕೌರವರ ರಾಯ || ೧

ಜೀಯ ದುಗುಡವಿದೇಕೆ ದಿವಿಜರ
ರಾಯ ಶಿಖಿ ಯಮ ನಿರುತಿ ಜಲಧಿಪ
ವಾಯು ಧನದ ಶಿವಾದಿಗಳ ಸಾಹಸಕೆ ಮೂವಡಿಯ |
ರಾಯಭಟರಿದೆ ನೇಮಿಸಾ ಸುರ
ರಾಯನೂರಿನ ಹಾಡುಗರು ಹುಲು
ನಾಯಕರಿಗೀಸೇಕೆ ಖತಿ ಬೆಸಸೆಂದನಾಕರ್ಣ || ೨

ಕರ್ಣಾದಿಗಳು ಯುದ್ಧವನ್ನು ಮಾಡಿದುದು.

ನೇಮವಾಯಿತು ಸುಭಟರೊಳಗೆ ಸ
ನಾಮರೆದ್ದರು ಕರ್ಣಸೌಬಲ
ಭೂಮಿಪತಿಯನುಜಾತಬಾಹ್ಲಿಕಶಲ್ಯನಂದನರು |

ಸೋಮದತ್ತನ ಸುತ ಕಳಿಂಗ ಸು
ಧಾಮಚಿತ್ರಮಹಾರಥಾದಿಮ
ಹಾಮಹಿಮರನುವಾಯ್ತು ರಥಗಜಹಯನಿಕಾಯದಲಿ ‖ ೩

ನೂಕಿದರು ಮುಂಗುಡಿಯವರು ಬನ [1]
ದಾಕೆಯಲಿ ಹೊಯ್ದರು ವಿರೋಧಿದಿ
ವೌಕಸರನಿಕ್ಕಿದರು ಸಿಕ್ಕಿದರವರು ಸಬಳದಲಿ ।
ಆಕೆವಾಳರು ಕರ್ಣಶಕುನಿಗ
ಳೇಕೆ ನಿಲುವರು ಬಿರಿದುಪಾಡಿನ
ನೇಕಭಟರೊಳಹೊಕ್ಕು [2] ತಿವಿದರು ಬೆರಸಿ ಸುರ [3] ಬಲನ ‖ ೪

ಮತ್ತೆ ಮುಱಿದುದು ದೇವಬಲ ಬೆಂ
ಬತ್ತಿ ತಿವಿದರು ಕೌರವನ ಭಟ
ರೆತ್ತಿ ಹಾಯ್ಕಿದರದಟಗಂಧರ್ವರ ಭಟವ್ರಜವ ।
ತೆತ್ತಿಸಿದ ಸರಳೇಱ ಸುರಿಗರು
ಳೊತ್ತುಗೈಗಳ ತಾಳಿಗೆಯ ತಲೆ
ಹೊತ್ತು ರಕ್ತದ ರಹಿಯಲೋಡಿತು ಸೇನೆ ಸುರಪುರಕೆ ‖ ೫

ಹೊಯ್ಲಾದುದು ಚಿತ್ರಸೇನನ
ಬಯ್ಲೇತಕೆ ಬೇಱೆ ಘಾಯದ
ವೈಯ್ಯ ಬಿಸುಟಾಯುಧದ ಬೆನ್ನಲಿ ಬಿಟ್ಟಮಂಡೆಗಳ ।
ಸುಯ್ಯಬಹಳದ ಭಟರು ತೊದಳಿಸು
ತೊಯ್ಯನೆಂದರು ಜೀಯ ಕರ್ಣನ
ಕೈಯ್ಯಲಮರರ ಜೀವವಿದೆ ಜಾಱುವುದು ನಿಮಿಷದಲಿ [4] ‖ ೬

---

[1] ಬಲ, ಟ.　[2] ಬಿದ್ದು, ಚ.　[3] ಪರ, ಚ.

[4] ನಯವೆಂದ, ಚ, ಹಿತನಿಮಗೆ, ಕ. ಖ.

ಸುರಪನಾನುಡಿಗೇಳಿ ಶಿವ ಶಿವ
ನರರ ಕೈಯ್ಯಲಿ ಘಾಸಿಯಾದರೆ
ಸುರರೆನುತ್ತವೆ ಚಿತ್ರಸೇನನ ನೋಡಲವನೆಂದು ।
ಅರಸ ನೀವೆಮವೆ ತನಗೆ ತೆಂದಾ
ಕುರುಪತಿಯ ನೊಡಹುಟ್ಟಿದರ ಸಹಿ
ತೊಱಗಿಸುವೆ ನಿಮ್ಮಡಿಯ ಚರಣದೊಳೆನುತ ಬೀಟ್ಕೊಂಡ ॥ ೭

ಗಂಧರ್ವನು ಸೈನಿಕರಿಗೆ ಅಭಯವನ್ನು ಹೇಳಿದುದು.

ಕಳವಳಿಸದಿರಿ ಧನುವ ತಾ ಹೆ
ಬ್ಬಲವ ಕರೆ ಕರೆ ಹುಲುಮನುಷ್ಯರ
ಬಲುಹು ಗಡ ಬಯಲಾಯ್ತು ಗಡ ಗಂಧರ್ವರಾಟೋಪ ।
ನೆಲದೊಳೂಕ್ಕೊಡೆ ಶೋಣಿತಕೆ ಱು
ಟಳವ ಹಿಡಿ ಬರಹೇಳು ಶಾಕಿನಿ
ಕುಲವ ಡಾಕಿನಿಯರನು ನೆತ್ತರಗುಡುಹಿ ಗೈನೆಯರ ॥ ೮

ಏನ ಹೇಳುವೆನರಸ ದಿವಿಜರ
ಸೇನೆಯಲ್ಲಾ ಛತ್ರಚಮರವಿ
ತಾನದಲಿ ನಭವಿಲ್ಲ ನಗಹಿದಸುಬಳ ಶಲ್ಯಹಕೆ ।
ವೈನುಸುಳ ಕಾಣೆನು ಸಮೀರನ
ಭಾನುಕಿರಣದ ಸುಳಿವನೀಶ್ವರ
ತಾನೆ ಬಲ್ಲನು ಶಿವ ಶಿವೆನೆ ಜೋಡಿಸಿತು ನಿಮಿಷದಲಿ ॥ ೯

ತಿನ್ನಡಗ ಕೊಯ್ನೆಣನ ಮನುಜರ
ಬೆನ್ನಲುಗಿ ತನಿಗರುಳನಕಟಾ
ಕುನ್ನಿಗಳಿರುದ್ಯಾನವನು ನೆಱೆ ಕೆಡಿಸಿ ಕಳೆದಿರಲ ।
ಮುನ್ನ ಮುಱಿದವರಾರೆನುತಲಾ
ಪನ್ನರನು ತೊಲಗಿಸುತ ಸುರಪನ
ಮನ್ನಣೆಯ ಗಂಧರ್ವಬಲ ಬೆರಸಿದುದು ಪರಬಲವ ॥ ೧೦

ಹೊಯ್ದು ರೊಳಬಿದ್ದವರ ಮುಂದಲೆ
ವಾಯ್ದು ತಿವಿದರು ಮುರಿದ ಮೊಳೆಯು
ಹಾಯ್ದು ಕರುಳಿನ ಮಿದುಳಜೋಡಿನ ಬಸಿವಶೋಣಿತದ |
ಕೈದುಗಳ ಖಣಿಖಟಿಲ ಹೊಯ್ಲಿನ
ಬಾಯ್ದಣಿಯೆ ಬೈಗುಳನಲುಭಯದ
ಕೈದುಗಾರರು ನೀಗಿದರು ನಿಜಪತಿಯ ಹಣರುಣವ ‖ ೧೧

ಬಿಟ್ಟಸೂಟಿಯ ಕುದುರೆಗಾಲಿಲಿ
ನಿಟ್ಟೆಡೆಯುಲಾಕುವ ಮದೇಭದ
ಥಟ್ಟುಗಳನುಬ್ಬೆದ್ದು ಗಗನವನಡರ್ವ ತೇರುಗಳ [1] |
ಬಿಟ್ಟನಾರಾಚದ ವಿಘಾತದೊ
ಳಿಟ್ಟಸೆಲ್ಲೆ ಹಸಬಳಬಿಟ್ಟೇ
ಲಿಟ್ಟಿಗಳ ಮಳೆ ನಾದಿದುವು ಕಾದಿದರಿಂತು ಚಮೂಣಿಯಲಿ ‖ ೧೨

ಆಗ ಕೌರವಸೇನೆಯ ದುರವಸ್ಥೆ.

ಮುಱಿದು ಚಮೂಣಿಯ ಭಟರು ತಂದರು
ಬಿಱಿಸಿನರನೆಲೆಗಿದು ನಿಹಾರದೊ
ಳೞಿದು ನೆಱೆ ಸೊಪ್ಪಾಗೆ ಸಾರಿತು ಸರಿದು ಹಿನ್ನೆಲೆಗೆ |
ಸುಱಿಯಲರುಣಾಂಬುಗಳ ನದಿ
ಹೊಱವುಱಿಯೆ ದೊರೆಗಿಕ್ಕಿದರು ಬೊ
ಬ್ಬಿರಿದಿಱಿವ ಧನಿ ಥಟ್ಟಿಸಿತು ನಿಸ್ಸಾಳ ಹತಿ ದನಿಯ ‖ ೧೩

ನೂಕಿದರೆ ಕರ್ಣಾದಿದೊರೆಗಳ
ಥಾಕನಾನುವರಾರು ದಿವಿಜಾ
ನೀಕದಲಿ ಧಕ್ಕಡರು ದುವ್ವಾಳಿಸಿತು ಯಮಪುರಕೆ [2] |
ತೋಕಿದುವು ನಾರಾಚ ದಶದಿಶೆ
ಯೋಕರಿಸಿದುವೊ ಸರಳನೆನೆ ಸ
ವ್ಯಾಕುಳರ ಹಿಂದಿಕ್ಕಿ ಹಿಂಡಿದನಸುವನತಿಬಲರ ‖ ೧೪

---

1 ಹರಿಸುವ ರಥದ ಥಾಜಿಗಳ, ಚ, 2 ಮಿಗೆ ದುವ್ವಾಳಿಸಿತು ನಭಕೆ, ಚ,

ಕೌರವಸೇನೆಯ ಪರಾಕ್ರಮ.

ಮುಱಿವಡಾಗಂಧರ್ವಬಲ ಹೊ
ಕ್ಕಿಱಿದು ಕೌರವರಾಯದಳದಲಿ
ಕುಱುಹಿನವರಪ್ಪಿದರು ಖಚರೀಜನದ ಕುಚಯುಗವ ।
ಉಱುಬಿತರೆನಲೆ ಚಿತ್ರಸೇನನ
ಸೆಱಗ ಹಿಡಿದರು ಸಮರ ಹೊಯ್ ಹೊಯ್
ಕುಱಿವುನದ ಕುನ್ನಿಗಳನೆನುತೇಱಿದನು ಮಣಿರಥವ ॥ ೧೫

ಧನುವ ಕೊಂಡನು ತನ್ನತೊಕದ
ವಿನುತಭಟರೊಗ್ಗಾಯ್ತುವಾದ್ಯ
ಧ್ವನಿಯು ಧಟ್ಟಣೆ ಧಾತುಗೆಡಿಸಿತು ಜಗದ ಜೋಡಿಗಳ ।
ಮನುಜರಿವದಿರ ಮುಱಿದು ಬಹಭಟ
ರನಿಮಿಷರು ಬಯಲಾಯ್ತು ಕಟಕಟ
ದನುಜರಿಪುಗಳ ದೆಸೆಗಳೆಱದವೆ ಶಿವ ಶಿವಾ ಯೆಂದ ॥ ೧೬

ನೂಕಿದನು ಗಂಧರ್ವಸೇನೆಯೊ
ಳಾಕೆವಾಳರ ಮುಂದೆ ತಾನವಿ
ವೇಕಿಯೇ ದೊರೆತನದಲಿದ್ದನು ಸಕಲದಳಸಹಿತ ।
ಸೋಕಬಹುದೇ ಕರ್ಣ ಕೆಲಬಲ
ದಾಕೆವಾಳರ ಕೊಂಬನೇ ನೆಱೆ
ತೋಕಿದನು ಗಂಧರ್ವಬಲಜಲಧಿಯನು [1] ನಿಮಿಷದಲಿ ॥ ೧೭

ಗಾಯವಡೆದರು ಕೆಲರು ನೆಲದಲಿ
ಲಾಯ ನೀಡಿತು ಕೆಲಬರಿಗೆ ಪೂ
ರಾಯದೆಸುಗೆಗೆ ಹಸುಗೆಯಾದರು ಭಟರು ದೆಸೆದೆಸೆಗೆ ।
ಆಯುಧದ ಮೆದೆಯೊಡ್ಡಿ ತಾಕ
ಣಾಯತಾಕ್ಷನ [2] ಕೆಣಕಿ ಖೇಚರ
ರಾಯದಳ ನುಗ್ಗಾಯ್ತು ದೊರೆ ಹೊಕ್ಕನು ಮಹಾಹವವ ॥

---

1 ಜಲಧಿಯನೊಂದು, ಚ.    2 ಸ್ತ್ರಾನ, ಚ.

ಚಿತ್ರಸೇನನ ಯುದ್ಧ.

ತೊಲಗು ಮರ್ತ್ಯರಿಗೀಸುದರ್ಶದ
ಗೆಲುವುತನವೇ ನಿಮಿಷ ಸ್ವೈರಿಸು
ಹುಲುಭಟರು ಹುರಿವೆ ಪ್ರತಾಪಾನಳನ ಸೆಗಳಿಯಲಿ ।
ಅಳುಕುವುದೆ ಖಚರೇಂದ್ರಜಳಧರ
ನೆಲವೊ ತೋಱಾ ಚಾಪವಿದ್ಯಾ
ಕಲೆಯ ನೋಡುವೆನೆನುತ ಬೊಬ್ಬಿಱಿದೆಚ್ಚ ನಿನಸುತನ ॥ ೧೯

ಹೇಟಿಬಹುದೆ ಸುರೇಂದ್ರಭವನದ
ಸೂಳೆಯರ ಸೂಚಾಯತದ ವಾ
ಚಾಳತನಕೇನೊಜಿವೆ ನಟರಿಗೆ ಮುಖ್ಯವಿದ್ಯೆಯೆಲ ।
ಆಳುತನದಂಗದಲಿ ಬಹೊಡೆ ಶ
ರಾಳಿಯಲಿ ಮಾತಾಡೆನುತ ಕೆಂ
ಗೋಲಿನಲಿ ಸಲೆ ಹೂಚಿದನು ವುದ್ಯಾನವನತಳವ ॥ ೨೦

ಪೂತು ಮಝು ಮರ್ತ್ಯರಲಿ ಬಿಲ್ವಿ
ದ್ಯಾತಿಶಯ ಕಿಱಿದುಂಟಲಾ ತಾ
ನೀತ ಕರ್ಣನೆ ಕೌರವೇಂದ್ರಗೆ ಬೇಹಭಟನಿವನೆ ।
ಆತುಕೊಳ್ಳದೊಡೆ ಯೆನುತ ದಿಗು
ಜಾತವಂಬಿನಲಡಗೆ ರಿಪುಶರ
ಜಾತವನು ಹರೆಗಡಿದು ಕರ್ಣನ ಧನುವ ಖಂಡಿಸಿದ ॥ ೨೧

ಕರ್ಣನು ಗಂಧರ್ವರನ್ನು ಓಡಿಸಿದುದು.

ಇದು ಶರಾವಳಿ ಯುಹುದು ಸರಿಗವು
ಪದನಿಗಳ ಸರವಲ್ಲಲಾ ಸೇ
ರಿದ ಧನುರ್ವಿದ್ಯಾತಿಶಯಯೋಗ್ಯತೆ ವಿಶೇಷವಲ ।
ಇದು ಮನುಷ್ಯರ ಕಲುಹೆ ನೋಡೆನು

ತೊಡಚಿ ಹೊಸಚಾಪದಲಿ ಕಲಿ ಚಿ
ವ್ಕಿದನು ಚಾಮೀಕರಸುರೇಖಾವಳಿಶರಾವಳಿಯು [1] ‖ ೨೨

ಕಡಿದು ಗಂಧರ್ವನ ಶರೌಘವ
ನಡಸಿ ನಟ್ಟವು ಕರ್ಣಶರ ಸೈ
ಗೆಡಹಿದುವು ಕಿಂಪುರುಷಗುಹ್ಯಕಯಕ್ಷರಾಕ್ಷಸರ ।
ಹೊಡೆಕರಿಸಿ ಹೊದರೆದ್ದು ಬಲಸಂ
ಗಡಿಸಿ ತಳವರಿಗೆಯಲಿ ಕರ್ಣನ
ಬಿಡುಸರಳ ಭೀತಿಯಲಿ [2] ಬೆದಱದೆ ನೂಕಿತಳವಿಯಲಿ ‖ ೨೩

ಸಂಧಿಸಿತು ಪಡೆ ಚಿತ್ರಸೇನನ
ಹಿಂದೆ ನಿಲಿಸಿ ವಿರೋಧಿಶರಹತಿ
ಗಂದವೆಱಯದೆ ಮುಸುಕಿದರು [3] ಕಟ್ಟಳವಿಯಲಿ ರಥವ ।
ಮುಂದುಗೆಟ್ಟನು ಕರ್ಣನೆನೆ ಕೈ
ಗುಂದಿದರು ಸಾಬಲಸುಯೋಧನ
ನಂದನರು ದುಶ್ಶಾಸನಾದಿಸಮಸ್ತಪರಿವಾರ ‖ ೨೪

ನೂರಜಿನೆರಕೆಯು ಗಾಳಿಯಲಿ ಹೆ
ಮ್ಮರದ ಮೊದಲಳುಕುವುದೆ ಛಡ ಕಾ
ತರಿಸದಿರಿ ಕೌರವರೆನುತ ಕಲಿಕರ್ಣ ಬೊಬ್ಬಿಱಿದು ।
ಶರನಿಧಿಗೆ ಬಡಬಾಗ್ನಿ ಮುನಿವವೊ
ಲುರುವಣಿಪ ಹೆಬ್ಬಲವನೊಂದೇ
ಸರಳಿನಲಿ ಸವೆಱಿದನು ಸುಳಿಸಿದನೌಕಿ ನಿಜರಥವ ‖ ೨೫

ಗೆದ್ದುದೇ ರಣವೆಲವೊ ದಿವಿಜರ
ದೊದ್ದೆಯಲಿ ಸೂಳೆಯರ ಜಾತಿಯು [4]
ಬಿದ್ದಿನರ ವೀಳೆಯದ ಬದಗರು ಭಟರ ಮೋಡಿಯಲಿ ।

---

1 ಶಿಲೀಮುಖವ, ಚ. 2 ಬೀದಿಯಲ್ಲಿ, ಚ.
3 ಮುತ್ತಿದುದು, ಚ. 4 ಚಾರಿಗೆ, ಚ,

ಹೊದ್ದಿದರೆ ಹುರುಳಹುದೆ ಭಯರಸ
ದದ್ದುಗೆಯ ಮಂಜಿಡಿಕೆಮನದವ
ರಿದ್ದು ಫಲವೇನೆನುತ ಕೈಮಾಡಿದನು ಕಲಿಕರ್ಣ ॥ ೧೬

ನೊಂದುದಾತನ ಪೊರೆಯ ಸುಭಟರು
ಸಂದಣಿಗಳಕ್ಕಲಿಸಿ ಬಿದ್ದುದು
ಮುಂದೆ ಬಲುಗಂಧರ್ವಬಲವಿನಸುತನ ಶರಹತಿಗೆ ।
ಬಂದುನಿಮಿಷಕೆ ಮತ್ತೆ ಪಡಿಬಲ
ಬಂದುದಗಣಿತಯಕ್ಷರಾಕ್ಷಸ
ವೃಂದ ಮುಕ್ಕುರುಕಿದುದು ಕರ್ಣನ ರಥದ ಮುಂಕಣಿಯ ॥ ೧೭

ಆಯುದ್ಧವನ್ನು ಪಾಂಡವರು ನೋಡಿದುದು.

ಅರಸ ಕೇಳೀಚೆಯಲಿ ಕೌರವ
ರರಸ ಬಂದನು ಸರ್ವದಳಸಹಿ
ತೆರಡು ಬಲದುಬ್ಬರದ ಬೊಬ್ಬೆಗೆ ಬಿರಿದುದವನಿತಳ ।
ನರವೃಕೋದರನಕುಲಸಹದೇ
ವರು ಕುತೂಹಲದಿಂದ ಸುತ್ತಣ
ಮೊಱಡಿಗಳ ಮೇಲಿದ್ದು ನೋಡಿದರಾಮಹಾಹವವ ॥ ೧೮

ತೆಗಿಸಿದನು ನೃಪನಿನಸುತನ ಮು
ತ್ತಿಗೆಯನೆರಡೊಡ್ಡಿನಲಿ ಸೂಸುವ
ಹೊಗರಗಣೆಗಳ ಹೊಯ್ವಡಾಯುಧ ಕಡಿವಪರಶುಗಳ ।
ಬಗಿವ ಸಬಳದ ಲೋಟಿಸುವ ಲೌ
ಡಿಗಳ ಚಿಮ್ಮುವ ಸುರಗಿಗಳ ಕಾ
ಳಗದ ರೌದ್ರಾಟೋಪವಂಜಿಸಿ [1] ತಮರರಾಲಿಗಳ ॥ ೧೯

ನೂಕಿದುದು ತೋಪಿನ ತುದಿಗೆ ಮೆಗು
ಟೌಕಿದುದು ಪಾಳಯಕೆ ಮುಱಿದು ದಿ
ವೌಕಸರು ಜಾಱುವರು ಜೋಡಿಸಿ ಮತ್ತೆ ಕುರುಬಲವ ।

1 ರಂಜಿಸಿ,

ತೋಳುವರು ಗಂಧರ್ವ ರುಭಯಾ
ನೀಕದೊಳಹರಿಸಾಹರಿಯು ಸ
ವ್ಯಾಕುಲರನೀಕ್ಷಿಸುತಲಿದ್ದರು ಪವನಜಾದಿಗಳು ॥ ೩೦

ಈಸು ಕೊಂಡಾಡಿದರೆ ಸುರರುಪ
ಹಾಸವಾಡುವರೆಮ್ಮನೆನುತ ಮ
ಹಾಸಗರ್ವರು ಚಿತ್ರಸೇನನ ಮನ್ನಣೆಯ ಭಟರು ॥
ಪಾಶಚಕ್ರಮುಸುಂಡಿಪರಿಘ
ಪ್ರಾಸಪರಶುಕ್ರಪಾಣಸಬಳಶ
ರಾಸನಾದಿಯ ಕೈದುಗಾಱರು ಕದನಕನುವಾಯ್ತು ॥ ೩೧

ಜೋಡುಮಾಡಿತು ಖಚರಬಲ ಕೈ
ಮಾಡಿ ಕವಿದುದು ಚಿತ್ರಸೇನನ
ಜೋಡಿಯಲಿ ಜರ್ಝರರಿಱಿದರು ಮುಂದೆ ಮುಂಗುಡಿಯ ।
ಓಡಿದರೆ ಹಾವಿಂಗೆ ಹದ್ದಿನ
ಕೂಡೆ ಮಱುಕವೆ ಫಡ ಯೆನುತ ಕೈ
ಮಾಡಿದರು ರಿಪುಭಟರು ನಿಂದರು ನಿಮಿಷಮಾತ್ರದಲಿ ॥ ೩೨

ಗಿಳಿಯ ಹಿಂಡಿನ ಮೇಲೆ ಗಿಡುಗನ
ಬಳಗ ಕವಿವಂದದಲಿ ಸೂಟಿಯೊ
ಳಳವಿಗೊಡ್ಡಿದ ಚಾತುರಂಗವನಿಕ್ಕಡಿಯ ಮಾಡಿ ।
ಎಲೆ ಸುಯೋಧನ ಬೀಱುಕೈದುವ
ನಿಳುಹಿ ಖೇಚರರಾಯನಂಘ್ರಿಯೊ
ಳಲವೊ ರವಿಸುತ ಹೋಗೆನುತ ಹೊಕ್ಕಿಱಿದರುರುವಣಿಸಿ ॥ ೩೩

ಕರ್ಣನು ಅಸ್ತ್ರಗಳನ್ನು ಬಿಡುವಿಕೆ.

ಹೊಡಕರಿಸಿ ಹೊದರೆದ್ದು ಬಲಸಂ
ಗಡಿಸಿ ತಲೆವರಿಗೆಯಲಿ ಕರ್ಣನ
ಬಿಡುಸರಳ ಬೆದಱಿಕೆಗೆ ಬೆದಱದೆ ನೂಕಿತಳವಿಯಲಿ ।

ಘಡ ಸುಯೋಧನ ತೊಲಗು ಕರ್ಣನ
ಕಡುಹಿನಲಿ ಫಲವೇನು ನಿನ್ನಯ
ಪಡೆಯು ಬಂದರೆ ಕೆಡದೆ ಯೆಂದುದು ಕೂಡೆ ಸುರಸೇನೆ ॥ ೨೪

ಕರ್ಣ ಚಿತ್ರಸೇನರ ಪರಸ್ಪರಾಸ್ತ್ರಯುದ್ಧ .

ಗರುವರೇ ನೀವೆಲವೊ ಸುರಪನ
ಪುರದ ನಟ್ಟುವಿಗರು ಸುಯೋಧನ
ನರಮನೆಯ ನಟ್ಟುವಿಗಳಿಗೆ ಪಾಡಹಿರಿ ತುಡುಕು [1] ವೊಡೆ ।
ಅರಸುಪರಿಯಂತೇಕೆ ನಿಮಗೇನು
ತರಿಭಟರಿಗಾಗ್ನೇಯವಾರುಣ
ನಿರುತಿಮೊದಲಾದಸ್ತ್ರಚಯವೆನು ಕವಿಸಿದನು ಕರ್ಣ ॥ ೨೫

ನೈರುತಕ್ಕಾಗ್ನೇಯಯಾವ್ಯಕ
ವಾರುಣಕೆ ಸುರರೊಡೆಯರೆವ್ಮಲಿ
ವೈರಬಂಧವಿದುಂಟೆ ಸಾಧನ ನಿನಗೆ ದಿವ್ಯಶರ ।
ಸೇರಿದರೆ ನಿನಗಾದರಿದಕೋ
ವಾರುಣ ಪ್ರತಿಕಾರ ಪಾವಕ
ನೈಋತಾದಿಗೆ ಕೊಳ್ಳನುತ ಗಾಂಧರ್ವಪತಿ ಯೆಚ್ಚ ॥ ೨೬

ಗಬ್ಬರಿಸಿದುವು ದಿವ್ಯಶರಚಯ [2]
ಗರ್ಭವೆ ಪ್ರತಿಕಾರಿಶರ ಮಗ್ಗು
ಹೆಬ್ಬಿಸಿದನಿನಸೂನು ಪರ್ವತತಿಮಿರಫಣಿಶರವ ।
ಪರ್ಬತಕೆ ವಜ್ರಾಸ್ತ್ರ ತಿಮಿರದ
ಹಬ್ಬುಗೆಗೆ ರವಿಬಾಣ ಹಾವುಗ
ಳೊಬ್ಬುಳಿಗೆ ಗರುಡಾಸ್ತ್ರವೆನು ಗಂಧರ್ವಪತಿ ಯೆಚ್ಚ ॥ ೨೭

ಸವೆದುವಿನಸುತನಂಬು ಖೇಚರ
ನವಗಡಿಸಿ ಕವಿದೆಚ್ಚನೀತನ

---

1 ನೋಡುವರೆ, ಕ, ಚ.    2 ವಿಶಿಖದ, ಚ.

ಸವಗಸೀಸಕಜೋಡು ತೊಟ್ಟವು ಸರಳಜೋಡುಗಳ ।
ಕವಿದುದೆಡಬಲವೆಂಕದಲಿ ಸುರ
ನಿವಹ ಸೂಟಿಯು ಸರಳಸೋನೆಯು [1]
ಲವಗಡಿಸಿತ [2] ಡಿಗಡಿಗೆ ಕರ್ಣನ ರಥದ ವಾಜಿಗಳು ॥ ೩೮

ಗಂಧರ್ವನು ಕರ್ಣನನ್ನು ಅಸ್ತ್ರಗಳಿಂದ ನೋಯಿಸಿದುದು

ಜೋಡು ಹರಿದುದು ಸೀಸಕದ ದಡಿ
ಬೀಡೆ ಬಿರಿದುದು ತಲೆಯ ಚಿಪ್ಪಿನ
ಜೋಡು ಜಱಿದುದು ಮನಕೆ ಸುಱಿದುದು ಸೊಗಡು ರಣರಸದ ।
ಖೋಡಿ ಕೊಪ್ಪರಿಸಿದುದು ಧೈರ್ಯವ
ನೀಡಿಱಿದುದಪದೆಸೆ ವಿಟಾಳಿಸಿ
ಖೇಡತನ ಘುಲ್ಲವಿಸುತಿರ್ದುದು ಭಾನುನಂದನನ ॥ ೩೯

ಕರ್ಣನು ಗಂಧರ್ವನನ್ನು ನೋಯಿಸಿದುದು.

ಮತ್ತೆ ಕೊಂಡನು ಬಿಲುಸರಳ ನಭ
ಕೊತ್ತಿದನು ರಣಭಯುನನಹಿತನ
ಕುತ್ತಿದನು ಕಣೆ ನಲಿ ಕದಡಿದನು ಮನದೊಳರಿಭಟನ ।
ಕೆತ್ತಿದನು ಕೂರಲಗಿನಲಿ ಮೈಳು
ಮುತ್ತ ಹೂತಂದದಲಿ ಹುದುಗಿದ
ನೆತ್ತರಿನ ನೆಣವಸೆಯೊಳಸೆದನು ರಥದೊಳಾಖಚರ ॥ ೪೦

ನೊಂದೊಡುಬ್ಬಿತು ದರ್ಪಶಿಖಿ ಖತಿ
ಯಿಂದ ಮದದುಬ್ಬಿನಲಿ ಘಾತದ
ಕಂದುಕದವೋಲ್ ಕುಣಿದುದಂತಃಖೇದ ಕೊಬ್ಬಿನಲಿ ।
ನೊಂದುದಿನಿಸಿಲ್ಲಕಟ ದೈತ್ಯರ
ದಂದುಗಗಲಾವಿಂದು ಮರ್ತ್ಯರು
ಬಂದಿವಿಡಿದರೆ ಬಲುಹನೆನುತೋರಂತೆ ಚಿಂತಿಸಿದ ॥ ೪೧

---

[1] ಸೋನೆಗೆ, ಟ. [2] ಡವರಿಸಿದುವ, ಚ.

ತಿರುಗಿ ಗಂಧರ್ವನು ಬಿಟ್ಟ ಅಸ್ತ್ರಗಳ ವಿಷಯದಲ್ಲಿ
ಕರ್ಣನು ಬೆರಗಾದುದು.

ಖತಿಯೊಳುಗಿದನು ದಿವ್ಯಬಾಣ
ಪ್ರತತಿಯನು ರಥಸೂತಹಯಸಂ
ತತಿಶರಾಸನಕೇತುದಂಡಚ್ಛತ್ರಚಾಮರವ |
ಹುತವಹನೊಳೊಟ್ಟಿದನು ಸಮರ
ವ್ಯತಿಕರದೊಳಾಗ್ನೇಯಶರ ಚಿ
ಮ್ಮಿತು ಛಡಾಳಿಸಿ ಕೆಂಡ ಗೆದಱಲು ಕರ್ಣ ಬೆಱಗಾದ || ೪೦

ಕರ್ಣನು ಹಿಂದಾಗಲು ಕೌರವರು ಚಿಂತೆ ಮಾಡಿದುದು.

ವಿರಥನಾದನು ಹಲಗೆಖಡ್ಗದ
ಲರಿಭಟನ ಪಡಿಮುಖಕೆ ಚಿಮ್ಮಿದ
ನೆರಡನೊಂದಂಬಿನಲಿ ಕಡಿದನು ಜಡಿದನಿನಸುತನ |
ತಿರುಗಿ ಹಾಯ್ದನು ಕರ್ಣನಾತನ
ಮುಱಿವ ಕಂಡು ವಿಕರ್ಣ ತನ್ನಯ
ವರರಥವ ಚಾಚಿದನು ಬೋಳೈಸಿದನು ಭಾನುಜನ || ೪೭

ಪೈಸರಸಿತೋ ಕುರುಚತುರ್ಬಲ
ಘಾಸಿಯಾದನು ಕರ್ಣನಿದು ಥೊರೆ
ಗೈಸಲೇ ದುಮ್ಮಾನವೆನುತಲ್ಲಲ್ಲಿ ಕುರುಸೇನೆ |
ಓಸರಿಸಿದುದು ಸಮರಮುಖದಲಿ
ಸೂಸಿದರು ಸಮರಥರು ಸೋಲವ
ನಾಸುಯೋಧನ ನಗುತ ಕಂಡನು ನೋಡಿ ಕೆಲಬಲನ || ೪೪

ಅವನಿಪನ ಮೊಗಸನ್ನೆಯಲಿ ಸೂ
ಳವಿಸಿದುವು ನಿಸ್ಸಾಳಕೋಟಿಗ
ಳವಚಿದುದು ಬಹುವಿಧದ ವಾದ್ಯಧ್ವನಿ ದಿಶಾಮುಖವ |

ತವತವಗೆ ಧುರತೋರಹತ್ತರು
ತವಕಿಸುತ ಹುರಿಯೇಱಿದರು ಕೌ
ರವರು ಕರ್ಣನ ಹಂಬದಾಹವವೆನಗೆ ತನಗೆನುತ ॥ ೪೫

ಗಂಧರ್ವನ ಮೇಲೆ ಕೌರವರು ಯುದ್ಧ ಮಾಡಿದುದು

ಮುಱಿದು ಬಲ ಸಂವರಿಸಿ ಪಡಿಮುಖ
ಕುಱುಬಿದುದು ದುರ್ಯೋಧನಾನುಜ
ರಱಸಿದರು ಗಂಧರ್ವನಾವೆಡೆ ತೋಱು ತೋಱೆನುತ ।
ತಱುಬುವುದು ಜಯವೊಮ್ಮೆ ಮನದಲಿ
ಕಱುಬುವುದು ಮತ್ತೊಮ್ಮೆ ತಪ್ಪೇ
ನಿಱಿದಸಹಸವ ತೋಱೆನುತ ಬೆರಸಿದರು ಪರಬಲವ ॥ ೪೬

ಅರಸನನುಜರೆ ನೀವು ಕರ್ಣನ
ಹರಿಬದವರೇ ಹರ ಹರೆಮಗಿ
ನ್ನರಿದಲ್ಲೈ ನಿಮಗೀಸು ಖತಿ ಝೋಂಪಿಸಿತು ಬೞಕೇನು ।
ತರಹರವು ತಮಗಿಲ್ಲಲಾ ಪೂ
ತುಱೆ ಯೆನುತ ಪಡಿತಳಿಸಿ ಗಂಧ
ರ್ವರ ಚಮೂಪರು ನೂಕಿದರು ತೋಕಿದರು ಪರಬಲವ । ೪೭

ಎಚ್ಚರಿಱಿದರು ಹೊಯ್ದರಿಟ್ಟರು
ಚುಚ್ಚಿದರು ಸೀೞಿದರು ನೂಕಿದ
ನಿಚ್ಚಟರ ಸೇದಿದರು ದಡಿವಲೆಕಣ್ಣಿವಲೆಗಳಲಿ ।
ಕೊಚ್ಚಿದರು ನುಗ್ಗಿದರು ಕೊಯಿದ್ದರು
ನುಚ್ಚುನುಱಿಮಾಡಿದರು ಹರಿಬಕೆ
ಹೆಚ್ಚಿಹೊಗುವ ಮಹೀಶನನುಜರ ಮನ್ನಣೆಯ ಭಟರ ॥ ೪೮

ಅವರನ್ನು ಸೋಲಿಸಲು ದುರ್ಯೋಧನನೇ ಯುದ್ಧಕ್ಕೆ ಬರುವಿಕೆ.

ಗಾಯವಡೆಯದರಿಲ್ಲ ಸಾಯದೆ
ನೋಯದವರಿಲ್ಲ ರಡುಬಲದಲಿ
ಬೀಯವಾದರು ಸುಭಟರೆನೆ ಗಂಧರ್ವಪತಿ ಮುಳಿದು ।

ರಾಯನನುಜರನಟ್ಟಿದನು ದೀ
ರ್ಘಾಯುವನು ಹಿಡಿದನು ವಿಕರ್ಣನ
ನೋಯಲೆಚ್ಚನು ಕೆದಱಿದನು ಕೌರವಚತುರ್ಬಲವ ॥ ೪೯

ಘಡ ಯೆನುತ ಕುರುರಾಯನಾತನ
ಪಡಿಮುಖಕೆ ನೂಕಿದನು ಜೋಡಿಸಿ
ಜಡಿವ ನಿಸ್ಸಾಳಾಯತದ ಕಹಳೆಗಳ ಕಳಕಳದ ।
ಬಿಡುರಥದ ಘಟ್ಟಣೆಯ ಧಾಟಿಯ
ಕಡುಗುದುರೆಗಳ ನೆತ್ತಿಯಂಕುಶ
ದೆಡೆಯ ಘಟೆಯಾನೆಗಳ ದಳ ಸಂದಣಿಸಿತೊಗ್ಗಿನಲಿ ॥ ೫೦

ನುಗ್ಗನಿವ ಕೈಕೊಂಬನೇ ರಣ
ದಗ್ಗಳದ ಮೌಳಿಯಲಿ ಕದನದ
ಹುಗ್ಗಿಗರ ಸಾಕಿದನು ಶಾಕಿನಿಡಾಕಿನೀಜನವ ।
ಬುಗ್ಗಿ ಕವಿದರನಿಂದ್ರಲೋಕದ
ಸುಗ್ಗಿಯಲಿ ಸೇಱಿಸಿದನಾಹವ
ದುಗ್ಗಡವನೇನೆಂಬೆನೈ ಗಾಂಧರ್ವವಿಕ್ರಮವ ॥ ೫೧

ಮೀಟೆನಿಪ ಗಂಧರ್ವರೊಂದೇ
ಕೋಟಿ ಕವಿದುದು ಕುರುಬಲಕೆ ಪಡಿ
ಕೋಟೆಯಾದುದು ನೃಪತಿ ಸಿಲುಕಿದನವರ ವೇಡೆಯಲಿ ।
ದಾಟಿತರಸನ ಧೈರ್ಯ ಕೈದುಗ
ಳಾಟ ನಿಂದುದು ಕರದ ಹೊಯ್ಲಲಿ
ನೋಟಕರು ಘೋಳೆಂದರಿತ್ತಲು ಪಾಂಡವರ ವನದ ॥ ೫೨

ಆಗ ದುರ್ಯೋಧನನನ್ನು ನೋಡಿ ಜನಗಳು
ಪರಿಹಾಸ ಮಾಡಿದುದು,

ಮುತ್ತಿದರಿಬಲಜಾಲವನು ನಭ
ಕೊತ್ತಿ ದಿವ್ಯಾಸ್ತ್ರದಲಿ ಸೀಳಿದ
ನೆತ್ತ ಮುಱಿದೋಡಿದರೆ ರಥವನು ಹರಿಸಿ ಬೇಗದಲಿ ।

ಒತ್ತಿ ಹರಿತಹರಥತುರಂಗಮ
ಮುತ್ತಿದಿಭಸಂಘಾತವನು ನೃಪ
ನೊತ್ತಿ ಕಡಿದನು ಹಯವ ಗಜರಥವೃತದಕಾಲಾಳ ॥ ೫೩

ಇತ್ತ ಕೌರವರಾಯ ರಥವನ
ದೆತ್ತಿ ಬಿಟ್ಟನು ಖಚರರಾಯನ
ಸುತ್ತಣಿಯ ಚತುರಂಗಸೇನೆಯನಸಮಬಾಣದಲಿ ।
ತೆತ್ತಿಗರ ಕರೆ ನಿನಗೆ ನೂಕದೆ
ನುತ್ತ ಶರಸಂಧಾನಚಯದಲಿ
ಮೆತ್ತಿದನು ಮೊನೆಗಣೆಗಳಲಿ ಖಚರೇಂದ್ರ ಕೈಮರೆಯ ॥ ೫೪

ದುರ್ಯೋಧನನು ಗಂಧರ್ವನ ವಶವಾದುದು.

ಮುಱಿದ ಬಲ ಗರಿಗಟ್ಟಿನೋಡಿ
ಧರಣಿಪನ ಮುಂಗಡಿಯಲೇಱಿತು
ತುರಗಗಜರಥಹರಿಗೆಸಬಳಮುಸುಂಡಿಪರಿಘದಲಿ ।
ಉರುಬಿದನು ಖಚರೇಂದ್ರ ಕೌರವ
ರರಸ ಸೌಬಲಸೈಂಧವರು ಕೈ
ಮರೆದು ಹಿಂಗಿತು ಕೌರವೇಶ್ವರ ಸಿಲುಕಿದನು ಹಗೆಗೆ ॥ ೫೫

ಇಟ್ಟಣಿಸಿದರು ಮುಟ್ಟಿ ರಾಯನ
ನಟ್ಟಲೀಸದೆ ಕುರುಚತುರ್ಬಲ
ಹೊಟ್ಟುಗಳ ತೂಱಿದರು ಹಿಡಿದರು ಕೌರವಾನುಜರ ।
ಮುಟ್ಟಿ ಬಂದುದು ಕೇಡು ರಾಯನ
ನಟ್ಟಿ ಹಿಡಿದುದು ದಿವಿಜಬಲ ಜಗ
ಜಟ್ಟಿ ಚಿತ್ರಾಂಗದನು ನೋಡಿದ ಕೌರವೇಶ್ವರನ ॥ ೫೬

ಅರರೆ ಧೊರೆ ಸಿಕ್ಕಿದನು ನೆಱೆ[1] ಡಾ
ವರಿಸುವರ ಹೊಯ ಹೊಯ್ಯೆನುತ ಖೇ
ಚರರ ಕಂಬಿಗಳಾಡಿದುವು ಸುತ್ತಲು ಸುಯೋಧನನ ।

1 ಧೊರೆಡೊಂಬಿಯಲ್ಲಿ, ಚ.

ಅರಸರಂಜದಿರಂಜದಿರಿ ಯೆನು
ತುರುವಣಿಸಿ ಕೌರವನರೇಂದ್ರನ
ಕರದ ಕೈದುವನೀಸಿಕೊಂಡನು ಖಚರಪತಿ ನಗುತ ॥ ೫೭

ಹಯದ ಪಡಿವಾಘೆಯಲಿ ಬಾಹು
ದ್ವಯುವ ಬಿಗಿದನು ತನ್ನ ರಥದಲಿ
ಜಯವಿಹೀನನನಿರಿಸಿದನು ಕುರುರಾಯವಲ್ಲಭನ ।
ಭಯಭರಿತದುಶ್ಶಾಸನನ ದು
ರ್ಜಯನ ಚಿತ್ರಾಂಗದವಿಕರ್ಣನ
ನಯವಿದೂರರ ತಂದರಿಪ್ಪತ್ತೈದುಸಹಭವರ ॥ ೫೮

ಇಳಿದು ಗಜವನು ಕೈದುಗಳನೆಲ
ಕಿಳುಹಿ ಜೋಧರು ವಾರುವದಿನಿಳೆ
ಗಿಳಿದ ರಾವುತರು ಹಾಯ್ಕಿದರು ದೂಹತ್ತಿಲೌಡಿಗಳ ।
ಬಿಲುಸರಳ್ಗಳ ಬಿಸುಟು ರಥಿಕರು
ನೆಲಕೆ ಹಾಯ್ದರು ಹೊತ್ತ ಕೈದುವ
ನಿಳುಹಿ ಪಯದಳ ಬೀಳುಕೊಂಡುದು ಖೇಚರೇಶ್ವರನ ॥ ೫೯

ಮುಟ್ಟದಿರಿ ಪರಿವಾರಕೈದುವ
ಕೊಟ್ಟು ಹೋಗಲಿ ಧೊರೆಗಳಾದರ
ಬಿಟ್ಟವರಿಗಮರೇಂದ್ರನಾಣೆ ಯೆನುತ್ತ ಸಾರಿದರು ।
ಕೆಟ್ಟುದೀ ಕುರುಪತಿಯ ದಳ ಜಗ
ಜಟ್ಟಿಗಳು ಕರ್ಣಾದಿಗಳು ಮುಸು
ಕಿಟ್ಟು ಜಾಱಿತು ಕಂಡದೆಸೆಗವನೀಶ ಕೇಳೆಂದ ॥ ೬೦

ಖಿನ್ನನಾದನು ಪಾರ್ಥನನಿಲಜ
ನುನ್ನತೋತ್ಸವನಾದನತಿಸಂ
ಪನ್ನಸಮ್ಮದರಾದರಾಮಾದ್ರೀಕುಮಾರಕರು ।

ಇನ್ನು ಪಾಂಡವರಾಜ್ಯಸಿರಿ ಯೆಮ<br>
ಗಿನ್ನು ಲೇಸಹುದಕಟ ದೈವದ<br>
ಗನ್ನಗತಕವೆ ಯೆನುತ ಹಿಗ್ಗಿತು ಮುನಿಜನಸ್ತೋಮ [1] ‖ ೬೧

ಭಾವನವರರ್ತಿಯಲಿ ಜಲಕೇ<br>
ಳೀವಿನೋದಕೆ ಬಂದು ಗಂಧ<br>
ರ್ವಾವಳಿಯ ಕೇಳಿಯಲಿ ಚಿತ್ರ್ಯಸಿದರಲಾ ಯೆನುತ ।<br>
ದೇವಿಯರು ನಸುನಗುತ ಚಿತ್ತದ<br>
ಚಾವಡಿಯಲೋಲೈಸಿ ಕೊಂಡರು<br>
ಭೂವಳಯದೇಕಾಧಿಪತ್ಯದ ಸಾಖ್ಯಸಂಪದವ ‖ ೬೨

ಕೇಳಿದನು ಯಮಸೂನು ದುಗುಡವ<br>
ತಾಳಿದನು ನಳನಹುಷಭರತನೃ<br>
ಪಾಲಪಾರಂಪರೆಯಲುದಿಸಿದ ಸೋಮವಂಶದಲಿ ।<br>
ಕೋಳು ಹೋದುದೆ ಕೀರ್ತಿ ಯೆಮ್ಮಾ<br>
ಬಾಳಿಕೆಯ ಸುಡಲೆನುತ ಚಿಂತಾ<br>
ಲೋಲನಿದ್ದನು ವೀರನಾರಾಯಣನ ನೆನೆಯುತ್ತ ‖ ೬೩

ಇಪ್ಪತ್ತನೆಯ ಸಂಧಿ ಮುಗಿದುದು.

---

## ಇಪ್ಪತ್ತೊಂದನೆಯ ಸಂಧಿ.

---

**ಸೂಚನೆ.**

ರಾಯದಳವನು ಮುರಿದು ಕೌರವ<br>
ರಾಯನನು ಕೊಂಡೊಯ್ವ ಖೇಚರ<br>
ರಾಯನನು ತಾಗಿದನು ಮರಳಿಚಿ ತಂದನಾಪಾರ್ಥ ‖

---

1 ವಧೂನಿಕರ, ಕ. ಖ.

ದುರ್ಯೋಧನನನ್ನು ಹಿಡಿದಾಗ ಕೌರವರ ಪರಿವಾರವು ಓಡಿಹೋದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಸಿಕ್ಕಿದನತ್ತ ಕುರುಭೂ
ಪಾಲನದನೇ ಹೇಳುವೆನು ಪಾಳಯದ ಗಜಬಜವ |
ಆಳು ಹಾಯ್ದುದು [1] ಕಂಡಮುಖದಲಿ
ಕೀಳುಮೇಲೊಂದಾಯ್ತು ಧನಿಕರ
ಪೇಟೆಗೆಯ ಧನ ಸೂಱೆವೋದುದು ಕೇರಿಕೇರಿಯಲಿ || ೧

ಕುದುರೆ ಹಾಯ್ದುವು ಕಂಡಕಡೆಯಲಿ
ಮದಗಜಾವಳಿಯೋಡಿದುವು ವರ
ಸುದತಿಯರು ಬಾಯ್ವಿಡುತ ಹರಿದರು ಬಿಟ್ಟಮಂಡೆಯಲಿ |
ಕದಡಿದುದು ಜನಜಲಧಿ ಝೂಡಿಸಿ
ಬೆದಱಿದರು ಕೋಡಿಗಳು [2] ರಾಯನ
ಹದನದೇನೆನುತ ಹರದರು ಹರಿದರಗಲದಲಿ || ೨

ಕೌರವರ ಪತ್ನಿಯರ ರೋದನ.

ಗಾಳಿಯುಱಿಯದು ರವಿಯ ಕಿರಣಕೆ
ಬಾಲೆಯರು ಗೋಚರವೆ ದಡ್ಡಿಯ
ಮೇಲು ಬೀಯಗದಂಗರಕ್ಷೆಯ ಕಂಚುಕಿವ್ರಜದ |
ಮೇಳವವದೇನಾಯ್ತೊ ಬೀದಿಯ
ಗಾಳುಮಂದಿಯ ನಡುವೆ ಕುರುಭೂ
ಪಾಲನರಸಿಯರಳುತ ಹರಿದರು ಬಿಟ್ಟಮಂಡೆಯಲಿ || ೩

ಭಾನುಮತಿ ಬಂದು ಧರ್ಮರಾಯನನ್ನು ಮೊರೆಹೊಗುವಿಕೆ.

ಕುರುಪತಿಯ ದುಶ್ಶಾಸನಾದಿಯ
ರರಸಿಯರು ಚೌಪಟದಲೊದರಿದ
ರರಸನುಪಹತಿಗೊಪ್ಪುಗೊಟ್ಟರೆ ಕರ್ಣಶಕುನಿಗಳು |

---

1 ನಡೆದುದು, ಚ. 2 ನೆಱೆದು, ಕವಱಿದುವು ಕೇರಿಗಳು, ಜ, ಟ.

ಗುರುನದೀಸುತರಿದ್ದರೀಪರಿ
ಪರಿಭವಕೆ ಪಾಡಹುದೆ ಪಾಂಡವ
ರರಸನಿಹ ವನವಾವುದೆಂದೊಱಲಿದಳು ಭಾನುಮತಿ ॥ ೪

ಅರಸಿಯರು ಸಖಿಯರು ಕುಮಾರಿಯ
ರರಸನನುಜರ ಹೆಂಡಿರನಿಬರು
ನೆರಪಿ ಬಂದಳು ಭಾನುಮತಿ ಯಮತನುಜನಾಶ್ರಮಕೆ ।
ಕರುಣಿ ರಕ್ಷಿಸು ಸೋಮವಂಶೋ
ದ್ಧರಣ ರಕ್ಷಿಸು ಸತ್ಯಧರ್ಮದ
ಸಿರಿಯೆ ರಕ್ಷಿಸೆನುತ್ತ ಧೊಪ್ಪನೆ ಕೆಡೆದಳಂಘ್ರಿಯಲಿ ॥ ೫

ನಾದಿದಳು ನೃಪನಂಘ್ರಿಯನು ನಯ
ನೋದಕದ ಧಾರೆಯಲಿ ಭಾಳವ
ತೀದು ತಿಲಕದ ಗಂಧದಲಿ ಬೈತಲೆಯ ಮುತ್ತಿನಲಿ ।
ಆದರಿಸಿ ನವಕುಸುಮದಲಿ ಘನ
ರೋದನಧ್ವನಿಮಂತ್ರದಲಿ ನೃಪ
ಪಾದಪೂಜೆಯ ರಚಿಸುವಂತೊಲೊಪ್ಪಿದಳು ಭಾನುಮತಿ ॥ ೬

ಖಳರು ಕೌರವರೆಂದು ಸಜ್ಜನ
ಕುಲಶಿರೋಮಣಿ ನೀನು ಕರುಣಾ
ಜಲಧಿ ನೀನಪರಾಧಿಗಳು ನಾವಹೆವು ಜಗವಱಿಯೆ ।
ಹುಳಿಗೆ ಹಾಲಳುಕಿದರೆ ಹಾಲಿನ
ಜಲಧಿ ಕೆಡುವುದೆ ಜೀಯ ತನ್ನವ
ರೆಳಸಿ ಕೊಂಡರು ಕಾಯಬೇಕೆಂದೊಱಲಿದಳು ತರಳೆ ॥ ೭

ರಾಯರಿಗೆ ಬಿನ್ನಹವ ಮಾಡೌ
ತಾಯೆ ಕೇಳೌ ದ್ರೌಪದಿಯೆ ಹಿರಿ
ದಾಯಸವ ಬಡಿಸಿದನು ಕುರುಪತಿ ನಿನ್ನ ಮೈದುನನು ।

ನೋಯಿಸಲು ಶ್ರೀಗಂಧ ನಿಜಗುಣ
ದಾಯತವ ಬಿಡದಂತೆ ನೀವೇ
ಕಾಯಬೇಹುದು ಪತಿಯನೆಂದೊಱಲಿದಳು ಭಾನುಮತಿ ॥ ೮

ಧರ್ಮರಾಯನು ಭಾನುಮತಿಯನ್ನೆತ್ತಿ ಸಮಾಧಾನಪಡಿಸಿದುದು.

ಚುಂಬಿಸಿತು ಕಡುಶೋಕ ಮಿಡಿದನು
ಕಂಬನಿಯನುಗುರಿನಲಿ ಘನಕರು
ಣಾಂಬುನಿಧಿ ಸೀವರಿಸಿ ವ್ಯೈಗುಡಿಯಿರಿದರೋಮದಲಿ ।
ಹಂಬಲಿಸಬೇಡಕಟ ಕುರುಪತಿ
ಯೆಂಬನಾರವ ಬೊಪ್ಪನವರೇ
ನೆಂಬರೇಱೌ ತಾಯೆ ಯೆನುತತ್ತಿದನು ಭಾಮಿನಿಯು ॥ ೯

ಗಂಧರ್ವರನ್ನು ಗೆಲ್ಲುವುದಕ್ಕಾಗಿ ಭೀಮಸೇನನಿಗೆ ಹೇಳುವಿಕೆ.

ಭೀಮ ಬಾ ಕುರುರಾಜಕುಲಚೂ
ಡಾಮಣಿಯೆ ತಾ ಹೋಗು ಕದನೋ
ದ್ದಾಮದರ್ಪನ ತಾ ನಿಜಾನ್ವಯಕುಮುದಚಂದ್ರಮನ ।
ತಾ ಮನೋವ್ಯಥೆ ಬೇಡ ನೃಪಚಿಂ
ತಾಮಣಿಯೆ ತಾ ಹೋಗೆನಲು ಕರ
ತಾಮರಸವನು ಮುಗಿದು ಬಿನ್ನಹಮಾಡಿದನು ಭೀಮ ॥ ೧೦

ಅದಕ್ಕೆ ಭೀಮಸೇನನ ಅಸಮ್ಮತಿ.

ಬೆಸಸಬೇಹುದು ನೀತಿಶಾಸ್ತ್ರದ
ಬೆಸುಗೆ ತಪ್ಪದೆ ರಾಜಧರ್ಮದ
ಮುಸುಡು ಕಂದದೆ ಖೋಡಿವಿಡಿಯದೆ ಕುಶಲರಾದವರು ।
ಎಸಗುವುದು ತಾವಾವ ಕಾರ್ಯದೊ
ಳಸುವನಿಕ್ಕಿ ತದರ್ಥವನು ಪರ
ರೆಸಗಿದರೆ ನಮಗೇನು ಬಾಧಕವೆಂದನಾಭೀಮ ॥ ೧೧

ತಮ್ಮ ಸಂಕಟಕಿವರು ವಿನಯವ
ನೆಮ್ಮ ಬಿನ್ನಹವ ಮಾಡುತಿದ್ದರೆ
ನಿಮ್ಮಡಿಗೆ ಪರಿತೋಷವೇ ಕರ್ತವ್ಯ ವಿಷಯದಲಿ ।
ಎಮ್ಮ ಮನ ಮುಂಚುವುದು ಕಾರ್ಯದ
ಹೆಮ್ಮೆಗೆಯು ನೀವಱಿಯಿರೇ ತಮ
ತಮ್ಮ ದುಷ್ಕೃತ ತಮಗೆ ಫಲಿಸಿದರೇನು ನಿಮಗೆಂದ ॥ ೧೦

ಧರ್ಮರಾಯನ ನೀತಿವಾಕ್ಯಗಳು.

ಅನುಜ ಕೇಳಪಕಾರಿಜನದಲಿ
ನೆನೆವುದುಪಕಾರವನು ಗುಣಹೀ
ನನಲಿ ಗುಣವನು ತೋಱುವುದು ಗರುವರಿಗೆ ತೊಡಿಗೆಯಿದು ।
ಅನುಜನಲ್ಲಾ ನಮಗೆ ಕೌರವ
ಜನಪನವರಪರಾಧಶತವನು
ನೆನೆವೊಡಿದು ಹೊತ್ತೇ ಮಹಾದೇವೆಂದನಾಭೂಪ ॥ ೧೩

ಭರತವಂಶದೊಳವರ ಭಂಗವೆ
ನಿರುತವೆಮ್ಮದು ನಮ್ಮ ಭಂಗ
ಸ್ಫುರಣವವರದು ನೀನಱಿಯೆ ತಾವಱಿಯೆವೀಹದನ ।
ಪರರ ಕಲಹಕೆ ನಾವು ನೂಱೈ
ವರುಗಳಂತಃಕಲಹಕದು ನೂ
ರ್ವರು ವಿಚಾರಿಸಲೈವರಾವೆಂದನು ಮಹೀಪಾಲ ॥ ೧೪

ಆವನಾಗಲಿ ಬೇಡಿದಂಗೊಲಿ
ದೀವುದೇ ನೃಪಧರ್ಮ ಹಗೆ ಕೆಳೆ
ಯಾವನಾಗಲಿ ಸೆಣಸಿದರೆ ಕಾದುವುದೆ ನೃಪನೀತಿ ।
ಆವನಾಗಲಿ ಶರಣುವೊಕ್ಕರೆ
ಕಾವುದೇ ಕ್ಷತ್ರಿಯರ ಮತ ವಿ
ನ್ಯಾವುದುಚಿತವು ಭೀಮ ನೀ ಹೇಳೆಂದನಾಭೂಪ ॥ ೧೫

ಆರಿಗಾರುಪಕಾರಿಗಳು ಮೇ
ಣಾರಿಗಾರಪಕಾರಿಗಳು ತಾ
ನಾರಿಗಾರುಂಟವರ ಕೃತಕರ್ಮಗಳ ಸಂಸ್ಕಾರ ।
ಹೋರಿಸುವುದಳಿಸುವುದು ಸೌಖ್ಯಕೆ
ಸೇರಿಸುವುದಿದಕಹಿತಹಿತರೆಂ
ದಾರ ಮುಱಿವುದು ಮನ್ನಿಸುವುದೈ ಭೀಮ ಹೇಳೆಂದ ॥ ೧೬

ಅದಱಿನಾಚೆಯ ಭವದ ದುಷ್ಕೃತ
ವೊದಗಿತೀಜನ್ಮದಲಿ ವನವಾ
ಸದ ಪರಿಕ್ಲೇಶಾನುಭವಕಿವರೇನ ಮಾಡುವರು ।
ಒದಗಿತುತ್ಸಾಹದಲಿ [1] ಪರರ
ಭ್ಯುದಯವನು ಬಯಸುವುದು ಪರರಿಗೆ
ಮುದವನಾಚರಿಸುವುದು ಧರ್ಮಜ್ಞರಿಗೆ ಗುಣವೆಂದ ॥ ೧೭

ಯುದ್ಧಕ್ಕೋಸ್ಕರ ಅರ್ಜುನನನ್ನು ಆಜ್ಞಾಪಿಸಿದುದು.

ಎಣಿಸಲೇಕಿನ್ನದನು ಕೌರವ
ಗಣ ಮರಳಿ ಬಂದಲ್ಲದಾರೋ
ಗಣೆಯ ಮಾಡೆನು ಪಾರ್ಥ ನೀ ನುಡಿ ನಿನ್ನ ಹವಣೇನು ।
ರಣದೊಳರಿಗಳ ಮುಱಿದು ಕುರುಧಾ
ರುಣಿಪತಿಯ ತಹುದುಂಟೆ ಯೆನೆ ಬಿಲು
ಗಣೆಗಳನು ತಿದ್ದಿದನು ಫಲುಗುಣ ಹೂಡಿದನು ರಥವ ॥ ೧೮

ಧರ್ಮರಾಯನ ಅಪೇಕ್ಷೆಯಂತೆ ಅರ್ಜುನನು ಯುದ್ಧಕ್ಕೆ ಹೊರಟುದುದು.

ಎಮಗೆ ನುಡಿ ಬೇಱುಂಟೆ ನೀತಿ
ಭ್ರಮಿತರಾವಲ್ಲನಿಲಸುತನು
ಭ್ರಮಿತನವ ಸೈರಿಸುವುದೈ ಕಾರುಣ್ಯನಿಧಿ ನೀನು ।

1 ಒದಗಿದುತ್ಸವದಲ್ಲಿ, ಚ.

ನಿಮಿಷದಲಿ ಗಂಧರ್ವಕನನಾ
ಕ್ರಮಿಸಿ ಕೌರವಗಣವ ನಿಜಪದ
ಕಮಲದಿದಿರಲಿ ಕೆಡಹಿ ತೋಱುವೆನೆನುತ ಹೊಱವಂಟ ‖ ೧೯

ಮುಱಿದು ಚೆಲ್ಲಿದ ಸಕಲಕುರುಬಲ
ನೆರೆದುದರ್ಜುನನೊಡನೆ ಸೂಟಿಯ
ಲರಿಭಟರ ಬೆಂಬತ್ತಿದನು ಘಡ ನಿಲ್ಲು ನಿಲ್ಲೆನುತ |
ಸೆಱೆಯ ಬಿಡು ಗಂಧರ್ವಲೋಕವ
ನುರುಹುವೆನು ಹಿಂದಿಕ್ಕಿ ಕೊಂಬನ
ಶಿರವ ಚೆಂಡಾಡುವೆನೆನುತ ಕವಿದೆಚ್ಚನಾಪಾರ್ಥ ‖ ೨೦

ಸರಳಿನುಬ್ಬೆಗೆ ಸೆಡೆದು ಸಮರಕೆ
ತಿರುಗಿ ನಿಂದುದು ಖಚರಬಲವು
ಬ್ಬರದ ಬೊಬ್ಬೆಯಲುರುಬಿದರು ಶರಹತಿಗೆ ಸೈರಿಸುತ |
ಉರುಳಿದುವು ಗಂಧರ್ವಶಿರ ನಭ
ಸರಳಮಯದಿಗುಜಾಲವೆಂಬಿನ
ಹೊರಳಿಯಲಿ ಹೊದಿಸಿದುದೆನಲು ಕವಿದೆಚ್ಚನಾಪಾರ್ಥ ‖ ೨೧

ಮೊಱೆವ ಗಱಿಗಳ ಮೊನೆಯಲು
ದುರುವ ಹೊರಳಿಗಿಡಿಗಳ ಬಾಯಧಾರೆಗ
ಳುರಿಯ ಹೊದರಿನ ಹುದಿದ ಹೊಂಬರಹದ ಸುರೇಖೆಗಳ |
ಸರಳು ಹೊಕ್ಕುವು ಹಿಕ್ಕಿದುವು ಖೇ
ಚರಬಲವನೊಕ್ಕಿದುವು ಕೂರಿದು
ವರಿಭಟರ ಚುಚ್ಚಿದುವು ಕೊಚ್ಚಿದುವೆಂಟುದೆಸೆಗಳಲಿ ‖ ೨೨

ಕೋಲ ಬಲುಮಳೆಗೊಡ್ಡಿ ಹರಿಗೆಯ
ಮೇಳಯವ ಮಱೆಗೊಂಡು ಖೇಚರ
ರಾಳು ನಿಂದೆಚ್ಚುದು ನಿಹಾರದಲರ್ಜುನನ ರಥವ |

ಕೋಲುಗಳನಾಹರಿಗೆ ಹಲಗೆಯು
ಮೇಳಯುವನಾವುರೆಯುಲುಗಿದೆಸು
ವಾಳನೊಂದಂಬಿನಲಿ ಸಂದಣಿಗೆಡಹಿದನು ಪಾರ್ಥ ॥ ೨೩

ಮುಟ್ಟಿ ಜೇಣನನು ಖಚರಬಲ ಹುರಿ
ಗಟ್ಟಿ ತಲೆವರಿಗೆಯಲಿ ಪಾರ್ಥನ
ಕಟ್ಟಳವಿಯಲಿ ಚೂರಿಸಿದರುಬ್ಬಣದ ಮೊನೆಗಳಲಿ ।
ಧಿಟ್ಟರಹಿರೋ ಕೌರವೇಂದ್ರನ
ಕಟ್ಟಿದಾತನ ಕರೆಯಿ ನಿಮ್ಮನು
ಮುಟ್ಟಿದರೆ ನೃಪನಾಣೆ ಯೆನುತೊಡೆಹಾಯ್ಸಿದನು ರಥವ ॥ ೨೪

ಗಜದ ಪದಘಟ್ಟಣೆಯು ಬಹಳಂ
ಬುಜದವೋಲ್ ರಥಚಕ್ರಹತಿಯಲಿ
ಗಿಜಿಗಿಜಿಯ ಮಾಡಿಸಿದ ಖೇಚರ ಚಟುಳಪಟುಭಟರ ।
ವಿಜಯನಲ್ಲಾ ಸುರಪುರದ ಮಾ
ರಜಿಗನಾವೆಡೆ ಕುರುಬಲದ ಗಜ
ಬಜದ ಗರುವನ ತೋಱೆನುತ ತೆಗೆದೆಚ್ಚನಾಪಾರ್ಥ ॥ ೨೫

ಅಳವಿಯಲಿ ಕೈಮಾಡಿ ಖೇಚರ
ನಳಲಿಗರು ಮುಮ್ಮಳತರಾದರು
ಬೆಳಗಿದುವು ದಿವ್ಯಾಸ್ತ್ರಧಾರೆಗಳಖಿಳದಿಕ್ತಟವ ।
ತಳಪಟದೊಳಾಸೆರೆಸಹಿತ ಕೈ
ಚಳಕದಲಿ ತೆಗೆದೆಸುತ ಸಮರಕೆ
ಮಲೆತು ನಿಂದನು ಚಿತ್ರಸೇನನು ಪಾರ್ಥನಿದಿರಿನಲಿ ॥ ೨೬

ಬಿಡು ಸೆಱೆಯನವಗಡೆಯತನವೆ
ಮ್ಮೊಡನೆ ಸಲ್ಲದು ಸೂಳಯರ ಸುರೆ [1]
ಗುಡುಹಿ [2] ಗಳ ಸರಪಾದಿಗಳ ಸೇರುವೆಯಲೊಪ್ಪುವುದು ।

---

1 ಸುತಿ, ಕ. 2 ಗುರುಪ್ಪಿ, ಕ.

ಫಡ ಯೆನುತ ನಾರಾಚದಲಿ ಬಲ
ನೆಡನ ಕೀಲಿಸಿ ಪಿಂಗಡೆಯುವುಂ
ಗಡೆಯು ಕಟ್ಟಿದನಂಬಿನಲಿ ಖಚರಾಧಿಪನ ರಥವ ‖ ೨೭

ನೂಕದಿರಲಾಹವಕೆ ಸಮ್ಮುಖ
ವೇಕೆನುತ ಹತ್ತಿದನು ಗಗನವ
ನಾಕಿರೀಟಿಯು ಗೆಲುವೆನೆಂದುಬ್ಬರದ ಗರ್ವದಲಿ [1] ।
ನಾಕನಿಳಯರ ಮಾರ್ಗದಲಿ ಸ
ವ್ಯಾಕುಳನು ಭುಲ್ಲವಿಸುತಿರೆ ಲೋ
ಕೈಕವೀರನಲಾ ಧನಂಜಯನಡಹಿದನು ನಭವ ‖ ೨೮

ಎಲವೊ ಕೌರವಸಹಿತ ಕಮಠನ
ಕೆಳಗೆ ಧ್ರುವನಿಂ ಮೇಲೆ ಹೊಕ್ಕರೆ
ಕೊಲುವೆನಲ್ಲದೆ ಬಿಡುವೆನೇ ಫಡ ನಿಲ್ಲು ನಿಲ್ಲೆನುತ ।
ತುಳುಕಿದನು ಕೆಂಗೋಲನಿನವುಂ
ಡಲಕೆ ದಿಗ್ಭ್ರಮೆಯಾಯ್ತು ನಭದಲಿ
ಸುಲಿವ ಸುರರ ವಿಮಾನತತಿ ಚೆಲ್ಲಿದುವು ದೆಸೆದೆಸೆಗೆ ‖ ೨೯

ಚಿತ್ರಸೇನನು ಹೇಳಿದ ನೀತಿ.

ತಿರುಗಿ ನಿಂದನು ಖಚರಪತಿ ನಿ
ಷ್ಠುರವಿದೇನೈ ಪಾರ್ಥ ನೀ ಕಡು
ಮರುಳೊ ಮೂರ್ಖನೊ [2] ಜಡನೊ ಪಿತ್ತಭ್ರಾಂತಿವಿಹ್ವಲನೊ ।
ಧುರದ ಕೌತುಕಗರಳವುಂಭ್ರಾಂ
ತರಿತಹೃದಯನೊ ನಿಲ್ಲು ಚಾಪದ
ಶರವನುಪಸಂಹರಿಸು ತನ್ನಯ ಮಾತ ಕೇಳೆಂದ ‖ ೩೦

ಹುಲಿಯು ಮುಳಿದೊತ್ತಿದರೆ ಪಶುಸಂ
ಕುಲಕೆ ಸಂಕಟವೇನು ವಾಯಸ
ಕುಲವ ಕೈಮಾಡಿದರೆ ಕೋಟಲೆಯೇನು ಕೋಗಿಲೆಗೆ ।

1 ಬೊಬ್ಬೆಯಲಿ. ಚ. 2 ಮೂಢನೊ, ಜ.

ಖಳರ ಕೊಪ್ಪರಿಸಿದರೆ ಸುಜನರ
ತಲೆಗೆ ವೇದನೆ ಯೇನು ಕೌರವ
ಕುಲವೆ ಕಟ್ಟಿದ [1] ರೇನು ಜಠರದ ಶೂಲೆ ನಿನಗೆಂದ ॥ ೩೧

ಹೋಧ ಮಾರಿಯು ಕರೆದು ಮನೆಯೊಳ
ಗಾದರಿಸಿದವರುಂಟೆ ನೀರಲಿ
ನಾದ ಕೆಂಡವನುರುಹಿ ಮುಡಿದವರುಂಟೆ ಮಂಡೆಯಲಿ ।
ಕೈದು ಮುಖಿದರೆ ಹಗೆಗೆ ತನ್ನಾಯು
ಕೈದು ಕೊಟ್ಟವರುಂಟೆ ಕುರುಪನ
ತೀದರೀತನ ಬಿಡಿಸಿಕೊಂಬುದು [2] ಲೇಸೆ ನಿಮಗೆಂದ ॥ ೩೨

ಜನಪನೀತಿಯೊ ಮೇಣು ಬೋಳಯು
ತನವೊ ಬಿಲುಜಾಣಿಕೆಯು ಬಿಂಕವೊ
ನಿನಗೆ ಕದನದ ಕಲುಹೆಯೋ ನಾವರಿಯೆವಿದನೀಗ ।
ಬನಕೆ ಮರಳ್ಕೆ ಮರುಳ ನೀ ಪುದು
ಮನೆಯು ಹಾವನು ಹದ್ದು ಹಿಡಿದರೆ
ಮನಕಳವ ಮಾಡುವರೆ ಬಿಜಯುವ ಮಾಡು ನೀನೆಂದ ॥ ೩೩

ಅರ್ಜುನನು ಅಣ್ಣನ ಅಪ್ಪಣೆಯೇ ಮುಖ್ಯವೆಂದು ಹೇಳಿದುದು

ನಟರಲಾ ನೀವ್ ಸುರಪುರದ ಚಾ
ವಟಿಯರ್ಕೈ ಚತುರೋಕ್ತಿಗಳಲಟ
ಮಟಿಸಿದರೆ ನಾ ಮರಳುವೆನೆ ಬಿಡು ಬಿಡು ಸುಯೋಧನನ ।
ಕಟು ಮಧುರ ವುರಿ ಶೀತವತಿಸಂ
ಕಟವು ಸುಖ ವಿಷವಮೃತವಾವುದು
ಘಟಿಸಲಗ್ರಜನಾಜ್ಞೆಯದು ತಮಗೆಂದನಾಪಾರ್ಥ ॥ ೩೪

[1] ನದ್ದಿದ, ಪ. [2] ಕರಸಿಕೊಂಬುದು, ತ.

ಧರ್ಮವಾಗಲಿ ಮೇಣು ಜಗದಲ
ಧರ್ಮವಾಗಲಿ ರಾಜಮಂತ್ರದ
ಮರ್ಮವಾಗಲಿ ನೀತಿಬಾಹಿರವಾಗಲದು ಮೇಣು ।
ಧರ್ಮಪುತ್ರನ ಬೆಸನೆ ವೈದಿಕ
ಧರ್ಮವೆಮಗದು ರಾಜಮಂತ್ರದ
ನಿರ್ಮಳಿನಮತವೆಮಗೆ ಬೇಱೊಂದಿಲ್ಲ ಗತಿ ಯೆಂದ [1] ॥ ೩೫

ನುಸುಳುಗಂಡಿಯಿದಲ್ಲ ಕೌರವ
ವಸುಮತೀಶನನಕಟ ಬಿಡು ನಿ
ನ್ನಸುರಿಗುಬ್ಬಸ ಮಾಡೆನಂಘ್ರಿಗಳಾಣೆ ಧರ್ಮಜನ ।
ಮಸಗುವೊಡೆ ಹಿಡಿ ಧನುವನೆನುತೆ
ಬ್ಬಿಸಿದನವಿರಳಶರವನಾತನ
ಮುಸುಕಿದುವು ಮುಕ್ಕುರಿಕಿದುವು ರಥಸನ್ನಿವೇಶದಲಿ ॥ ೩೬

ಆಗ ಅರ್ಜುನ ಚಿತ್ರಸೇನರಿಗೆ ಕೌರವರನ್ನು ಬಿಡಿಸುವ ವಿಷಯದಲ್ಲಿ
ಯುಕ್ತಾಯುಕ್ತ ವಿಚಾರ.

ಕೋಲ ಬಱಿದೇ ಬೀಯ ಮಾಡದಿ
ರೇಳು ಫಲುಗುಣ ಮರಳು ನೀ ದಿಟ
ಕೇಳುವರೆ ನಾಸಿವನ ಕಟ್ಟಿದೆನಿಂದ್ರನಾಜ್ಞೆಯಲಿ ।
ಪಾಲಿಸಾ ನಿಮ್ಮಯ್ಯ ಬೆಸಸಿದ
ನೇಳಿಸದೆ ಕೇಳಸಲು ಕೆಂಗರಿ
ಗೋಲ ದೂಗುತ ಪಾರ್ಥ ನುಡಿದನು ಚಿತ್ರಸೇನಂಗೆ ॥ ೩೭

ಕುರುಪತಿಯ ಕಟ್ಟೆಂದು ಸುರಪತಿ
ಕರೆದು ಬೆಸಸಿದ ನಿನಗೆ ನನಗೆ
ಮ್ಮರಸ ನೇಮವ ಕೊಟ್ಟನೀಕುರುಪತಿಯ ಬಿಡಿಸೆಂದು ।
ಸುರಪತಿಗೆ ಕೃತಕಾರ್ಯ ನೀನಾ

1 ನಮಗೆಂದ, ಡ.

ಗಿರಲು ನಾವೇಕೃತಾರ್ಥರಾಗಿಯೆ
ಮರಳಿ ಜನಪನ ಕಾಂಬುದುಚಿತವೆ [1] ಜಾಣನಹೆ ಯೆಂದ ॥ ೩೮

ಎಲೆ ಧನಂಜಯ ಕೌರವೇಶ್ವರ
ನೊಲವು ಮಿಗಿಲೈತಂದು ತನ್ನಯ
ಲಲನೆಯರ ಸೌಭಾಗ್ಯ ತನ್ನನುಜಾತರಾತ್ಮಜರ ।
ಬಲುಹ ರವಿಸುತಸೌಬಲಾದ್ಯರ
ಸಲೆ ಮದವ್ಯುಖರ ತನ್ನಬಲದಲಿ
ತಳೆದ ಚಾತುರ್ಬಲವ ನೀವ್ ನೋಡಲ್ಕೆ ನಡೆತಂದ ॥ ೩೯

ಇದನಱಿತು ದೇವೇಂದ್ರ ಮದಮುಖ
ಗುದಿಸಿದಗ್ಗದ ಮಾನಹಾನಿಯ
ನೊದಗಿ ಮಾಡುವುದೆಂದು ತನಗಗ್ಗಳದ ಪರವಿತ್ತು ।
ಮುಂದದಿ ಕಳುಹಲು ನಿಮ್ಮ ಪಕ್ಷದ
ಲೊದಗಿದೆನು ತಾನಕಟ ದುರ್ಧರ
ದದಟು ನಿನಗಿದ ಚಿತವೆ ನಮ್ಮಲಿ ಲೇಸು ಲೇಸೆಂದ ॥ ೪೦

ಆದರೂ ಅಣ್ಣನ ಅಪ್ಪಣೆಯಂತೆ ಇವನನ್ನು ಬಿಡಿಸಬೇಕಾಗಿದೆ ಎಂದು ಹೇಳಿದುದು.

ಆದೊಡೆಲೆ ಗಂಧರ್ವಪತಿ ದು
ರ್ಯೋಧನನುಮೊದಲಾಗಿ ಕೌರವ
ರಾದರದಲೈತಂದ ಕಾರ್ಯವಿದಹುದು ಸಿದ್ಧವಲೆ ।
ಆದರೆಯು ಯಮಸುತನ ಚರಣದೊ
ಳಾದರದಿ ಬಿದ್ದವರ ಕಾವುದು
ಮೇದಿನೀಶರ ಧರ್ಮವಿದು ಲೇಸಾಗಿ ನೋಡೆಂದ ॥ ೪೧

ಬಿಡುವೆ ಯಾದರೆ ನೃಪನ ಸೆಱೆಯನು
ಬಿಡಿಸುವೆನು ಮೇಣಲ್ಲದಿದ್ದೊಡೆ
ಬಿಡಿಸುವೆನು ನಿನ್ನಸುರ ಸೆಱೆಯನು ನಿನ್ನದೇಹದಲಿ ।

---

1 ಕಾಂಬವ್ಯೈಸಲೆ, ಕ. ಖ.

ನುಡಿಗೆ ತೆರಹಿಲ್ಲೇಚೆನುತಲವೆ
ಗಡೆಯುನೆಚ್ಚನು ಕಾಳಕೂಟದ
ಕಡಲು ಕವಿವಂದದಲಿ ಕವಿದುವು ಪಾರ್ಥನಂಬುಗಳು ॥ ೪೦

ಆಗ ಚಿತ್ರಸೇನನು ಧರ್ಮರಾಯನ ಬಳಿಗೆ ಬಂದು ಅರ್ಜುನನನ್ನು ಸ್ತುತಿಮಾಡಿದುದು.

ಕಡಿದನರ್ಜುನನಂಬು ನಿನ್ನವ [1]
ಗಡವಿದೇಕೈ [2] ಮರುಳೆ ಕೆಂಡವ
ಮಡುಲೊಳಕ್ಕುವುದರ್ತಿಯೇ ಸಂಧಾನ ನಿಮಗೆಮಗೆ ।
ಬಿಡುವೆನಿನಿಬರ ಸೆಱೆಗಳನು ನಿ
ಮ್ಮೊಡೆಯನಲ್ಲಿಗೆ ಕೊಂಡುಬಹೆನೆಂ
ದೊಡನೆ ಬಂದನು ಧರ್ಮಪುತ್ರನ ಬಳಿಗೆ [3] ಖಚರೇಂದ್ರ ॥ ೪೩

ಸೋಲವೆಮ್ಮದು ನಿಮ್ಮ ತಮ್ಮನೆ
ಮೇಲುಗೈ ನಿಮ್ಮಡಿಗಳಾಜ್ಞಾ
ಪಾಲಕರು ಭೀಮಾರ್ಜುನರು ಮಾದ್ರೀಕುಮಾರಕರು ।
ಕಾಳಗದೊಳೆಮ್ಮಖಿಳಖಚರರ
ಧೂಳಿಪಟಮಾಡಿದರು ಲಕ್ಷ್ಮೀ
ಲೋಲ ನಿಮಗೊಳ್ಳಿದನು ಗದುಗಿನ ವೀರನಾರಯಣ ॥ ೪೪

ಇಪ್ಪತ್ತೊಂದನೆಯ ಸಂಧಿ ಮುಗಿದುದು.

## ಇಪ್ಪತ್ತೆರಡನೆಯ ಸಂಧಿ.

ಸೂಚನೆ.

ಕಳುಹಿದನು ಯಮಸೂನು ವಂಶ
ಪ್ರಳಯನನು ಪ್ರಾಯೋಪವೇಶವ
ತಿಳುಹಿ ದೈತ್ಯರು ಸಂತವಿಟ್ಟರು ಕೌರವೇಶ್ವರನ ॥

---

1 ನೀನವ, ಡ. 2 ಗಡಿಸಲೇತಕೆ, ಡ. 3 ಬನಕೆ, ಡ.

ಕಟ್ಟಿದ ದುರ್ಯೋಧನನನ್ನು ಧರ್ಮರಾಯನ ಬಳಿಗೆ ತಂದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವನೃಪನ ತಂದು ಕೃ
ಪಾಳುವಿನ ಚರಣಾಗ್ರದಲಿ ಕೆಡಹಿದನು ಕಲಿಪಾರ್ಥ ।
ತೋಳ ಹಿಂಗಟ್ಟುಗಳ ಮೋರೆಯ
ಕಾಳಕೆಯ ಬಿಱುದಲೆಯ ನೀರೊಱೆ
ವಾಲಿಗಳ ಕುರುಭೂಪನಿದ್ದನು ತಮ್ಮದಿರುಸಹಿತ ॥ ೧

ಗಂಧರ್ವನು ತನ್ನ ಅಭಿಪ್ರಾಯವನ್ನು ಧರ್ಮರಾಯನ ಮುಂದೆ ಹೇಳಿದುದು.

ಕೊಳ್ಳಿ ಸೆಱೆಯನು ನಿಮ್ಮ ಸಹಭವ
ರೆಲ್ಲರುಂ ಕಡುಮೂರ್ಖರಿದು ನಿ
ಮ್ಮೆಲ್ಲರಿಗೆ ಮತವೈಸಲೇ ನಾವೆಂದು ಫಲವೇನು ।
ಖುಲ್ಲರಿವದಿರ ಬಿಡಿಸಿದಕೆ ತಳು
ವಿಲ್ಲದಹುದಪಘಾತ ಸಾಕಿ
ನ್ನೆಲ್ಲಿಯದು ನಯ ಬೀಳುಗೊಡಿ ನೀವೆಂದನಾಖಚರ ॥ ೨

ಆಗ ಆತನಿಗೆ ಮರ್ಯಾದೆಮಾಡಿ ಕಳುಹಿದುದು.

ಮಾನಭಂಗವೆ ಬರಲಿ ಮೇಣಭಿ
ಮಾನವಾಲಿಂಗಿಸಲಿ ಚರಣದೊ
ಳಾನತರ ಪಾಲಿಸುವುದೇ ಕ್ಷತ್ರಿಯರ ಮಾರ್ಗ [1] ವಿದು ।
ನೀನೆಮಗೆ ಬಾಂಧವನೆನುತ ಸ
ನ್ಮಾನದಲಿ ಕಳುಹಿದನು ಬೞಿಕು
ದ್ಯಾನದಲಿ ದೇವೇಂದ್ರನೆತ್ತಿದನೞಿದ [2] ಖೇಚರರ ॥ ೩

ಆಗ ಧರ್ಮರಾಯನ ಅಪ್ಪಣೆಯಂತೆ ಬಂದು ದ್ರೌಪದಿಯು ಇವರ
ಅವಸ್ಥೆಯನ್ನು ನೋಡಿದುದು,

ಕಳುಹಿದನು ಖೇಚರನನವನಿಪ
ತಿಲಕನೀತನ ನೋಡಿದನು ನಿಜ

---

1 ಧರ್ಮ, ಚ.	2 ನಖಿಳ, ಫ,

ಲಲನೆಯನು ಕರೆದನು ಸುಯೋಧನ ನೊಂದನಕಟನುತ ।
ನಳಿನಮುಖಿ ಹೆಡಗೈಯ್ಯ ಬಿಡುಕಲು
ನೆಲನು ಹಾಸಿಕೆ ಹಂಸತಲ್ಪದ
ಪಳಿಕಿನಲಿ ಪವಡಿಸುವಗೀವಿಧಿಯೇ ಶಿವಾ ಯೆಂದ ॥ ೪

ಎಲ್ಲರನ್ನು ಬಿಡಿಸಿ ದುರ್ಯೋಧನಾದಿಗಳಿಗೆ ಉಪಚಾರವನ್ನು ಹೇಳಿದುದು.

ಬಂದಳಬುಜಾನನೆ ಸುಯೋಧನ
ನಂದವನು ನೋಡಿದಳು ಸುಯ್ದಳು
ಬೆಂದ ವಿಧಿ ಬಂಧನವ ತಂದುದೆ ಸಾರ್ವಭೌಮರಿಗೆ ।
ಬಂದು ಕೈ ಗಲ್ಲದಲಿ ಬಿಡಿಸಿದ
ಳೊಂದು ಕೈಯಲಿ ಭುಜದ ಪಾಶವ
ನಿಂದುಮುಖಿ ದುರ್ಯೋಧನನ ದುಶ್ಶಾಸನನು ಸಹಿತ ॥ ೫

ಕೆಳದಿಯರ ಕೈಯ್ಯಿಂದ ಕೊಯ್ಸಿದ
ಳುಳಿದ ಕೌರವನನುಜವರ್ಗದ
ಬಲುಹುರಿಯ ನೇಣುಗಳನವದಿರ ಗೋಣುಗಳ ಮೇಣಿಯೆ [1] ।
ಅಳಲಿಸಿದನೇ ಚಿತ್ರಸೇನನ
ಕೊಲಿಸಬೇಹುದು ಕಳುಹಿ ಕಷ್ಟವ
ಬಳಸಿದನು ಭೂಪಾಲನೆಂದಳು ನಳಿನಮುಖಿ ನಗುತ ॥ ೬

ಅರಸ ನೊಂದೈ ಮರ್ದನಕೆ [2] ಮ
ಲ್ಲರುಗಳಿಲ್ಲೆಮಗೊತ್ತುವೊಡೆ ಕಲು
ಹರಳು ಮಜ್ಜನಮಾಡುವೊಡೆ [3] ಶೀತಾಂಬು ತಿಳಿಗೊಳದ ।
ಹರಿಣಶಾರ್ದೂಲಾದಿಚರ್ಮಾಂ
ಬರವೆ ಸಮೆಕಟ್ಟೆಮಗೆ ರತ್ನಾ
ಭರಣವೇ ರುದ್ರಾಕ್ಷಿ ಯೆಂದಳು ನಳಿನಮುಖಿ ನಗುತ ॥ ೭

---

[1] ಗೋಣ ಕೊಯಿವಂತೆ, ಟ. [2] ಬಂಧನಕೆ, ಜ, ಡ. [3] ಮಾಡುವರೆ, ಡ.

ವಾರುವನು ವಟಶಾಖೆ ಗಿರಿಗಳು
ತೋರಕರಿಗಳು ಭದ್ರಗಜ ವನ
ಭೂರುಹದ ನೆಳಲೆಮಗೆ ಸತ್ತಿಗೆ ಪಲ್ಲವವ್ರಾತ ।
ಚಾರುಚಾಮರ ಕಿಱುವೊಱಡಿ ವಿ
ಸ್ತಾರಪೀಠವು ಹಂತಿಕಾಱರು
ಭೂರಿಸರ್ಪಾವಳಿಗಳರಮನೆ ಹೊದರು ಹೊಸವೆಳೆಯು ॥ ೮

ಈವಿಪತ್ತಿನ ನಿಮ್ಮ ಸಿರಿಯು ಸಂ
ಭಾವಿಸುವರೆಮಗಾವ ವಸ್ತುಗ
ಳೀವಿಧಿಗಳೇಕೆಮ್ಮ ಬಾಳಿಕೆಯೆಂದು ನಸುನಗುತ [1] ।
ದೇವನಿರ್ಪನು ಧರ್ಮಸುತ ನಿ
ನ್ನಾವುದುಚಿತಾನುಚಿತವೆಂಬುದ
ಭಾವನವರೇ ಬಲ್ಲಿರೆಂದಳು ದ್ರೌಪದೀದೇವಿ ॥ ೯

ಮಾನಿನಿಯು ಕಟಕಿಯ ಮಹಾಸ್ತ್ರಕೆ
ಮೌನವನು ಮಱೆಗೊಂಡು ಕಲುಷ
ಧ್ಯಾನಸಿದ್ಧನು ಚಿತ್ತದಲಿ ಬೇಱೊಂದ ಚಿಂತಿಸುತ ।

ಭಾನುಮತಿಯು ಧರ್ಮರಾಯನಿಗೆ ನಮಸ್ಕಾರ ಮಾಡಿದುದು.

ಭಾನುಮತಿ ಕೈಮುಗಿದಳೀಕ
ರ್ಣಾನುಗತತಾಟಂಕಮುದ್ರೆಯ
ನೀನಲ್ಲೈ ದಯೆಗೈದೆ ಯೆಂದೆಱಗಿದಳು ಚರಣದಲಿ ॥ ೧೦

ಎತ್ತಿದನು ನಾರಿಯನು [2] ನೃಪತಲೆ
ಗುತ್ತಲೇಕೆ ನಿನಗೆ ಬಂದಾ
ಪತ್ತು ನಮ್ಮದು ನಮ್ಮ ತೊಡಕಿನ ತೋಟಿಗಳು ನಿಮಗೆ ।
ಹೆತ್ತತಾಯ್ ಗಾಂಧಾರಿಸತಿ ನಾ

---

1 ದುಗುಡದಲಿ, ಚ. 2 ರಾಣಿಯನು ಚ. ಛ.

ವಿತ್ತಾಡಿಗಳಕಟಕಟ ನೀದು
ಕ್ಷಿತ್ತನಹೆ ಯೇಕೆಂದು ನುಡಿದನು ನೃಪತಿ ಕೌರವನ ‖ ೧೧

ದುರ್ಯೋಧನನಿಗೆ ಧರ್ಮರಾಯನು ಹೇಳಿದ ಮಾತುಗಳು.

ದ್ರೋಣರೆಂದುದ ಮಾಡೆ ಭೀಷ್ಮರ
ವಾಣಿ ವಿಷವೈ ನಿನಗೆ ವಿದುರನು
ರಾಣಿಕವ ನಿನ್ನಲ್ಲಿ ಬಲ್ಲನೆ ಬಗೆಯೆ ನೀನವರ ।
ಪ್ರಾಣವಾಯುಗಳವರು ಸುಭಟ
ಶ್ರೇಣಿ ದೇಹಕೆ ನಿನ್ನ ತನು ನಿ
ತ್ರಾಣವದಱಿಂದಾಯ್ತು ಪರಿಭವವೆಂದನಾಭೂಪ ‖ ೧೨

ದುರ್ಯೋಧನನು ಅವಮಾನಿತನಾಗಿ ಹೊರಟುದು.

ಬಿಡಿಸಿದಧರದ್ವಯವಿಷಾದದ
ತಡಿಯ ಚಿತ್ತದ ನೃಗೆ ಬೇಱೊಂ
ದೆಡೆಯಲಿದ್ದುದು ಬೀಳುಕೊಂಡನು ಧರ್ಮನಂದನನ ।
ಒಡನೆ ಬಂದರು ರಾಣಿಯರು ಕೈ
ಗುಡಿಯವರ ಸುದ್ದಿಯಲಿ ಸೂಸಿದ
ಪಡೆಯು ನಿಮಿಷಕೆ ನೆರೆದುದಿನಸುತಸೌಬಲರು ಸಹಿತ ‖ ೧೩

ಭಟರ ಬೊಬ್ಬೆಗಳಡಗಿದುವು ಬಾ
ಯ್ದುಟಿಗಳಾಡವು ವಂದಿನಿಕರಕೆ
ಪಟಹಪಣವವ್ಯದಂಗವಿದ್ದುವು ಮೌನದೀಕ್ಷೆಯಲಿ ।
ಚಟುಳಗಜಹಯರಥದವರು ಲಟ
ಕಟಿಸದಿದ್ದರು ಕೌರವೇಂದ್ರನ
ಕಟಕ ದುಮ್ಮಾನದಲಿ ಬಂದುದು ಹಸ್ತಿನಾಪುರಕೆ ‖ ೧೪

ಹೊಗಲಿ ಪಾಳೆಯ ಪುರಪ್ರವೇಶವು
ಬ್ಬಗದ ಬೆಳ ಸಿರಿವಂತನೆತ್ತಿದ

ದುಗುಡದಲಿ ಕುಳ್ಳಿರ್ದನಾಸುರನದಿಯ ತೀರದಲಿ ।
ಹೊಗುವವೋರೆಯ ನೆಲಕೆ ನೆಟ್ಟಾ
ಲಿಗಳ ನಿಖಿಳೇಂದ್ರಿಯದರೋಚಕ
ಬಿಗಿಯಬೇಗೆಯ ಬೇಸಱಿನ ಬಿಸುಗುದಿಯ ಸುಯ್ಲಿನಲಿ ॥ ೧೫

ದುರ್ಯೋಧನನ ಪ್ರಾಯೋಪವೇಶ.

ತರಿಸಿ ಗಂಗಾಜಲವ ಗೋಮಯ
ವೆರಸಿ ಕುಶಸಂಮಾರ್ಜನವ ವಿ
ಸ್ತರಿಸಿ ಪರಿಕರಶುದ್ಧಿಯಲಿ ಪಸರಿಸಿದ ಬರ್ಹಿಯಲಿ ।
ನಿರಶನವ್ರತವೆಂದು ಮಂತ್ರೋ
ಚ್ಚರಿತಸಂಕಲ್ಪದಲಿ ಕೌರವ
ರರಸ ಪವಡಿಸಿದನು ಕೃತಪ್ರಾಯೋಪವೇಶದಲಿ ॥ ೧೬

ಹೊಗಿಸಬೇಡಾರುವನು ಕರ್ಣಾ
ದಿಗಳ ಮೊದಲಾಗೆಂದು ದಡ್ಡಿಯ
ನುಗುಳಗಂಡಿಯ ಕಾಹ ಕೊಟ್ಟನು ತನ್ನ ಜೀಹವರ ।

ಆಗ ಭಾನುಮತಿ ಬಂದು ಸಮಾಧಾನ ಹೇಳಲು ನಡೆದ ಸಂವಾದ.

ದುಗುಡದಲಿ ಪರಿವಾರ ಬಂದೋ
ಲಗಿಸಿ ಹೊಱಗೇ ಹೋಗುತಿರ್ದುದು
ನಗುತ ಹೊಕ್ಕಳು ಭಾನುಮತಿ ಕಂಚುಕಿಯನೊಡೆನೂಕಿ [1] ॥ ೧೭

ಏನು ದಿಟ ಸಂಕಲ್ಪವಿನಿತಕೆ
ತಾನು ಹೊಱಗೇ ಹೊಗುವೆವೇಳು ಕೃ
ಶಾನುವನು ಬೀೞುವೆವು ನಡೆ ಭಾಗೀರಥಿಯ ಮಡುವ ।
ಮಾನನಿಧಿಯೋ ವಿವಿಧಗರಳವಿ
ತಾನವನು ತರಿಸುವೆನು ನಿಶ್ಚಯ
ವೇನು ನಿರಶನಮರಣವೇಕೆಂದಳು ಸರೋಜಮುಖಿ ॥ ೧೮

1 ತುಳಿದು, ಕ. ಖ.

ತರುಣಿ ನೀ ಹೆಸರಿಸಿದುವಿವು ದು
ರ್ಮರಣಸಾಧನ ವಿಮಲದರ್ಭಾ
ಸ್ತರಣವಿದು ಪಾವನವಲಾ ಪ್ರಾಯೋಪವೇಶದಲಿ ।
ಪರಿಹರಿಸುವೆನು ದೇಹವನು ಸುಡ
ಲರಸುತನವನು ಪಾಂಡುಪುತ್ರರ
ಕರುಣಕಲುಷಿತಕಾಯವಿದನಾದರಿಸುವೆನೆ ಯೆಂದ ॥ ೧೯

ಈನಿರಾಹಾರವು ನಿರರ್ಥಕ
ವೇನನೆಂಬೆನು ಜೀಯ ಮುಖಿದಭಿ
ಮಾನ ಬೆಸುವುದೆ ಬಣ್ಣವೆಟಿವುದೆ ಬಂದದುರ್ಯಶದ ।
ಆನದೀಸುತವಿದುರನೆಂದುದ
ನೀನುಪೇಕ್ಷಿಸಿ ಕಳವೆ ಹೆಂಗುಸು
ಸೀನಖಿಯೆ ಯೆನಬೇಡ ಚಿತ್ತವಿಸೊಂದು ಬಿನ್ನಪವ ॥ ೨೦

ತಮ್ಮನೆಱೆ ಪ್ರೊಟ್ಟೈಸಿ ರಣದಲಿ
ನಮ್ಮ ಬಿಡಿಸಿದರವರು ನೀವಿ
ನ್ನೆಮ್ಮ ಹಿಂದಣಗುಣವ ನೋಡದಿರೆಂದು ಯಮಸುತನ ।
ನಮ್ಮ ನಗರಿಗೆ ಕರಸಿ ಧರೆಯನು
ನಮ್ಮ ಪಟ್ಟಣಸಹಿತ ಕೊಟ್ಟರೆ
ನಿಮ್ಮಡಿಗಳನು ಲೋಕ ಮೆಚ್ಚುವುದೆಂದಳಿಂದುಮುಖಿ[1] ॥ ೨೧

ಕರೆಸಿದರೆ ದಿಟಬಾರರವರಾ
ಧರಣಿಯನು ಕೈಕೊಂಡು ನಿಲುವರು
ವರುಷಹದಿಮೂಱಾದೊಡಲ್ಲದೆ ಕೊಟ್ಟ[2] ರೀನೆಲನ ।
ಅರಿಗಳುಪಟಳದಿಂದ ತಪ್ಪಿಸಿ
ಮರಳಿಚಿದ ಜೀವೋಪಕಾರಕೆ
ಕುರುಕುಲಾಗ್ರಣಿ ಲೇಸಮಾಡಿದನೆಂಬುದೀಲೋಕ ॥ ೨೨

---

1 ಳಬುಜಾಕ್ಷಿ, ಕ. ಖ. 2 ಮೆಟ್ಟ, ಚ.

ನುಡಿದವಧಿ ಹದಿಮೂಱುವರುಷದ
ಹೆಡತಲೆಯನೊದೆದೆದ್ದು ನಿಮ್ಮಯ
ಪೊಡವಿಯರ್ಧಕೆ ಬಲೆಯ ಬೀಸದೆ ಬಿಡುವರೇ ಬೞಿಕ |
* ನುಡಿಯ ಸಲಿಸದ ಮುನ್ನ ಕೊಟ್ಟೊಡೆ
ಕಡು ಕೃತಘ್ನತೆ ತಪ್ಪುವುದು ಮಿಗೆ
ನುಡಿಯಲವ್ಮಿನು ರಾಜಕಾರ್ಯವನೆಂದಳಿಂದುಮುಖಿ || ೨೩

ಮೞಿವ ಹಗೆಯೇ ನಾವು ಮಾಡಿದ
ನೞಿಯಲಾ ಮೊದಲಿಸಿ ಧರ್ಮಜ
ನಿಱಿವೆ ಕತ್ತಿ ಕಣಾ ಸದಾ ಪಾಂಚಾಲಿಪವನಜರು |
ಮಱುಗಲೇತಕೆ ಭಾನುಮತಿ ನಿ
ನ್ನಱುವ ಮಗನಲಿ ರಾಜ್ಯಲಕ್ಷ್ಮಿಯ
ಹೊಱಿಸಿ ನೀ ಬದುಕೆಮ್ಮ ಕಾಡದೆ ಪೋಗು ನೀನೆಂದ || ೨೪

ಸಾಕು ಸಾಕೀಮಾತಿನಲಿ ಜಗ
ದೇಕರಾಜ್ಯದ ಪಟ್ಟವಾಯಿತವಿ
ವೇಕಿಗಳಿಗಧಿದೈವ ತಾನೆನಗೀಸು ಹಿರಿದಲ್ಲ |
ಮೂಕಭಾವದ ದೀಕ್ಷೆಯೆನಗೆಂ
ದಾಕಮಲಮುಖಿ ಯಿದ್ದಳಿತ್ತಲು
ನೂಕು ನೂಕಾಯ್ತುರಮನೆಯ ದಂಡಿಗೆಗಳಿಟ್ಟಣಿಸಿ || ೨೫

ಆಗ ಗಾಂಧಾರಿಯು ಹೇಳಿದುದು,

ಬಂದಳಾಗಾಂಧಾರಿ ಸೊಸೆಯರ
ವೃಂದಸಹಿತುರುವಣಿಸಿ ಹೊಕ್ಕಳು
ನಿಂದು ನೋಡಿದಳಾತನಿರವನು ಕುಶೆಯ ಹರಹಿನಲಿ |
ಕಂದಿದಳು ಕಡುಶೋಕಶಿಖಿಯಲಿ
ಬೆಂದೆನೇಟ್ಯೈ ಮಗನೆ ಹಾಸಿಕೆ
ಯಿಂಗ ಲೇಸಾಯ್ತೆನುತ ಕುಳ್ಳಿರ್ದಳು ಸವಿಪಾಪದಲಿ || ೨೬

* ನುಡಿಯ ಸಲಿಸದ ಮುನ್ನನೀಕೆ. | ಟ್ಟೊಡೆ ಕೃತಜ್ಞತೆ ತಪ್ಪುವುದೆ, ಕ. ಖ.

ಏನು ದರ್ಭಾಸ್ತರಣಶಯನವಿ
ದೇನು ಕಾರಣವನಶನವ್ರತ
ವೇನ ಸಾಧಿಸಲಾದುದೀಪ್ರಾಯೋಪವೇಶದಲಿ ।
ಏನು ಸಿದ್ಧಿ ಯಿದಕ್ಕೆ ಮೋಹಿದ
ಮೌನಮುದ್ರೆಯ ಬಿಟ್ಟು ಹೇಳೆ
ನ್ನಾಣೆಯೆಂದಳು ಹಣೆಯ ಹಣೆಯಲಿ ಬಾಚಿದಳು ಮಗನ ॥ ೨೭

ದುರ್ಯೋಧನನ ನುಡಿ.

ತಾಯೆ ಹೇಳುವುದೇನು ಪಾಂಡವ
ರಾಯರುಳುಹಿದರೊಡಲನಿನ್ನಿದ
ಱಾಯಸವ ತಾ ಹೇಳಲಱಿಯೆನು ಹೊಱಗೆ ಕೇಳುವುದು ।
ನೋಯಲೇತಕೆ ನಿಮಗೆ ಮಕ್ಕಳು
ತಾಯೆ ನೂಱುಂಟನಿಬರಲಿ ಕುಂ
ದಾಯಿತೊಂದೈಸಲೆ ಮನೋವ್ಯಥೆಯೇಕೆ ನಿಮಗೆಂದ ॥ ೨೮

ಮಾಡಿದೆನು ಸಂಕಲ್ಪವಿದಱಲಿ
ಗೂಡ ಕಳಚುವೆನೊಮ್ಮೆ ನೀವೇ
ನೋಡಿ ಸಂತಸಬಡುವುದಾದುಶ್ಶಾಸನಾದಿಗಳ ।
ಕೇಡಿಗನು ಕುರುವಂಶಕೆಂದಿಳೆ
ಯಾಡುವುದು ತನ್ನೊಬ್ಬನನು ತಾ
ಮಾಡಿದವ ನೆಱೆ ಮುಳುಗಿದರೆ ಕುಲಕೆಲ್ಲ ಲೇಸೆಂದ ॥ ೨೯

ಉಸುರು ಬೀಯದ ಮುನ್ನ ರಾಜ್ಯವ
ನೊಸೆದು ಕೊಟ್ಟೆನು ಪಟ್ಟಬಂಧನ
ದೊಸಗೆಯಲಿ ಕೌತುಕವನೀಕ್ಷಿಪಿಯಾರೆ ಕೇಳುವೆನು ।
ಅಸುವನಳುಕದೆ ಬಿಡುವೆನೌ ಶಂ
ಕಿಸದೆ ದುಶ್ಶಾಸನಗೆ ಪಟ್ಟವ
ನೆಸಗಿ ನಡೆಯೌ ತಾಯೆ ಬಿಜಯಂಗೈಯ್ಯಿ ನೀನೆಂದ ॥ ೩೦

ಧೃತರಾಷ್ಟ್ರರಾಯರ ಆಗಮನ ಮತ್ತು ಉಚಿತಭಾಷಣ.

ಆಸಮಯದಲಿ ವಿಗತನಯನವ
ಹೀಶ ಬಂದನು ಜನಪದದ ವಿ
ನ್ಯಾಸದುಗ್ಗಡಣೆಯಲಿ ವಿದುರನ ಹೆಗಲ ತೋಳಿನಲಿ ।
ಆಸಱಿನ ಬಿಸುಗುದಿಯ ಚಿಂತೆಯ
ಬೇಸಱಿನ ಬಿಸುಸುಯ್ಲ ರಾಣೀ
ವಾಸಕುಃವಿದಿರೆದ್ದ ದಖಿಳಾಭರಣರಭಸದಲಿ ॥ ೩೧

ಸಂತವಿಡಿರೇ ಮಗನ ನಿಜದೇ
ಹಾಂತಕೃತಸಂಕಲ್ಪ ಗಡ ನೃಪ
ನಂತರಂಗರ ಕರೆಸಿ ಯೆಂದಳಚಲಿದಳು ಗಾಂಧಾರಿ ।
ಭ್ರಾಂತಿಬಿಡದೇ ಚತುರಚಿತ್ತಕೆ
ಚಿಂತೆ ಬೇಱೊಂದಾಯ್ತು ರಾಯನ
ಹಂತಿಕಾಜರು ಬರಲಿ ಹಿಡಿಯಲಿ ನಿರಶನವ್ರತವ ॥ ೩೨

ಸಾಕು ಮಗನೆ ದುರಂತಚಿಂತೆ ಯಿ
ದೇಕೆ ಸಂಕಲ್ಪಾಭಿಯೋಗ
ವ್ಯಾಕುಲತೆ ಬೇಡೇಱು ಪಾಲಿಸು ಸಕಲಭೂತಳವ ।
ಆಕುಮಾರರ ಕರೆಸಿ ಗುಣದಲಿ
ಸಾಕುವುದು ಜೀವೋಪಕಾರಕೆ
ಕಾಕ ನೆನೆಯಿದಿರೆನುತ ಮುಂಡಾಡಿದನು ನಂದನನ ॥ ೩೩

ದುರ್ಯೋಧನನು ತನಗೆ ಈ ಜಗತ್ತು ಬೇಡವೆಂದು ಹೇಳಿದುದು,

ಸವೆದು ಹೋಯ್ತಾಯುಷ್ಯ ತನಗಿ
ನ್ನವನಿಯಾಗದು ಮೆಱೆ ಯುಧಿಷ್ಠಿರ
ಪವನಜರು ನಿಮಗನ್ಯರೇ ಕರೆಸುವುದು ರಾಜ್ಯದಲಿ ।
ಅವರುಗಳ ನಿಲಿಸುವುದು ನೆಲನ

ರ್ಧವನು ದುಶ್ಶಾಸನಗೆ ಕೊಡುವುದು
ನಿವಗೆ ಚಿತ್ತಕೆ ಬಹೊಡೆ ಯೆಂದನು ತಂದೆಗವನೀಶ ॥ ೩೪

ಅದಕ್ಕೆ ಧೃತರಾಷ್ಟ್ರನ ಉತ್ತರ.

ಆದೊಡವರಂತಿರಲಿ ನಿನಗಿ
ನ್ನೀದುರಾಗ್ರಹ ಬೇಡ ನಿನ್ನಣಿ
ವಾದೊಡೀಕುರುವಂಶವೃದ್ಧಿಯದು ಪಟ್ಟವಾವನಲಿ ।
ಬೀದಿಗಲಹದಲೊಮ್ಮೆ ಕೈಸರ
ವಾದೊಡದು ಪರಿಹರಿಸಿದವರೇ
ಸೋದರರಲಾ ಹೆಚ್ಚುಕುಂದೇನೆಂದನಂಧನೃಪ ॥ ೩೫

ದುರ್ಯೋಧನನ ಮಾತು.

ಕಲಹ ಬೀದಿಯೊಳಾಯ್ತು ಖೇಚರ
ರಲಿ ವಿನೋದದಲಹಿತರೆಡಹಾ [1]
ಯ್ದೆಳೆದು ತಂದನು ಪಾರ್ಥ ಬಾಹುದ್ವಯದ ಸೇಣಾಗಳ ।
ನಳಿನಮುಖಿ ಕಡು ಮೌಳಿಯಲಿ ಮೂ
ದಲಿಸಿ ಕೊಯ್ದಳು ತನಗೆ ಭಂಗದ
ಲುಳಿವುದೆತ್ತಣ ಮಾತು ಕರುಣಿಸಿ ಬೊಪ್ಪನೀವೆಂದ ॥ ೩೬

ದೋಷ ನಿಮಗಿಲ್ಲೆಮ್ಮ ಮೇಲಭಿ
ಲಾಷೆಯನು ಬಿಡಿ ನಿಮ್ಮ ಮಗ ಕುಲ
ಭೂಷಣನಲಾ ಧರ್ಮಸುತನಾತನಲಿ ಹುರುಡಿಸುವ ।
ರೋಷ ವುಂಟೇ ತನಗೆ ನಿಮಗದು
ಭೂಷಣವು ತಾನಲ್ಲ ನಾನಾ
ಘೋಷಿಸುವೆನೈ ಧರ್ಮಸುತನರಸಾಗಬೇಕೆಂದು [2] ॥ ೩೭

ಸಾರವೀನುಡಿ ಕಟಕಿಯಲ್ಲ ವಿ
ಚಾರಪರರಿಗೆ ನಿಮ್ಮ ಚಿತ್ತಕೆ

---

[1] ಹಿತರಡಹಾ, ಟ. [2] ಪಾಂಡುಸುತರರಸಾಗಬೇಕೆಂದು, ಚ.

ಬಾರದಿದ್ದರೆ ನಿಲಲಿ ದುಶ್ಶಾಸನನ ಕರೆಸುವುದು ।
ಸೇರಿಸುವುದವನಿಯನು ಮೋಹಿದು
ಭಾರವೇ ನಮ್ಮರಮನೆಗೆ ವಿ
ಸ್ತಾರದಿಂದವೆ ಚಿತ್ತವಿಸಿ ಯೆನುತತ್ತ ಮುಂತಾದ ॥ ೩೮

ತಂದೆಯ ಮಾತನ್ನು ಕೇಳದೇ ಇರಲು ಹಿಂದಿರುಗುವಿಕೆ.

ಮುನಿಸಿನಲಿ ಧೃತರಾಷ್ಟ್ರ ತನ್ನರ
ಮನೆಗೆ ತಿರುಗಿದನತ್ತ ನಾರೀ
ಜನವನೆಲ್ಲವ ಬೀಳುಕೊಟ್ಟನು ಬೈದು ಖಾತಿಯಲಿ ।

ಭೀಷ್ಮಾದಿಗಳು ಬಂದು ಹೇಳಿದುದು.

ಮನಕದಡಿ ಕಾತರಿಸಿ ಗಂಗಾ
ತನುಜಗುರುಜದ್ರೋಣಗೌತಮ
ರನುಚಿತಪ್ರಾರಂಭಭೀತರು [1] ಬಂದರೊಗ್ಗಿನಲಿ ॥ ೩೯

ರಾಯನಿಹ ಹದನೇನು ನಿದ್ರಾ
ನಾಯಿಕೆಯ ಮೋಳವದಲಿರ್ಪನೆ
ಜೀಯ ಯೆನಲೊಳಹೊಕ್ಕು ನಿಂದರು ನೃಪಸಮೀಪದಲಿ ।
ಆಯಿತೇ ನಾವೆಂದ ನುಡಿಯದು
ಹೋಯಿತನಶನದಿಂದ ದೇಹದ
ಬೀಯದಲಿ ಸಂಕಲ್ಪ ಗಡ ಹೇಳೆಂದನಾಭೀಷ್ಮ ॥ ೪೦

ದುರ್ಯೋಧನೋಕ್ತಿ.

ಈಸುದಿನ ಸಾಮ್ರಾಜ್ಯಸೌಖ್ಯವಿ
ಲಾಸದಲಿ ಬಳಸಿದೆನು ಸಾಕಿ
ನ್ನೀ ಶರೀರವ ನೂಕಿ ನಿಲುವೆನು ಮುಕ್ತಿರಾಜ್ಯದಲಿ ।
ಆಶೆಯುವೆನಿಯೊಳಿಲ್ಲ ವಿಷಯಾ

---

[1] ಚಿತ್ತರು, ಕ. ಖ.

ಭ್ಯಾಸಕೊಮ್ಮೆ ವಿರಕ್ತಿದೆಸೆಯುಹು
ದೈಸಲೇ ಗುರು ನೀವು ಬೆಸಸುವುದೆಂದನಾಭೂಪ ‖ ೪೧

ಭೀಷ್ಮಪ್ರತ್ಯುಕ್ತಿ.

ಕೇಳಿದೆವು ಹಿಂದಾದ ಖೇಚರ
ರೊಳಿಗವನೆಡಹಾಯ್ದು ನಿನ್ನವ
ರೋಲಗಿಸಿದಂದವನು ನಿನಗದಱಿಂದ ಪರಿಭವವೆ ।
ತಾಳದಂತಿರಲವರ ಕರೆಸುವೆ
ವೇಳು ಭೀಮಾರ್ಜುನರ ನಿನಗಿ
ನ್ನಾಳುಗೆಲಸದೊಳಿರಿಸಿ ನಡೆಸುವೆವೆಂದನಾಭೀಷ್ಮ ‖ ೪೨

ದುರ್ಯೋಧನನು ತನ್ನ ದುಃಖವನ್ನು ಹೇಳಿಕೊಳ್ಳುವಿಕೆ.

ಮೊದಲು ಧೃತರಾಷ್ಟ್ರಂಗೆ ನಾ ಜನಿ
ಸಿದೆನು ಬಳಿಕೀದೇಹ ಧರ್ಮಜ
ನುದರದಿಂದವೆ ಬಂದುದಿನ್ನವರೊಡನೆ ಮತ್ಸರವೆ ‖
ಅದು ನಿಲಲಿ ದುರ್ವಿಷಯವೈರಾ
ಗ್ಯದಲಿ ದೇಹವ ಬಿಡುವೆನಲ್ಲದೆ
ಬೆದಱುಮನಸಿನೊಳಿಲ್ಲ ಬಿಜಯಂಗೈಯ್ಯಿ ನೀವೆಂದ ‖ ೪೩

ಆಗ ಭೀಷ್ಮಾದಿಗಳ ವಚನ.

ನಾವು ಪಡಿಬಾಹಿರರು ಬೀಯದ
ಸೇವಕರು ಸಮ ಹಂತಿಕಾಱರಿ
ಗೀವುದೈಸಲೆ ದೃಢಮುದ್ರಿತಾಂತರ್ಮಾನಸಾವೃತವ ।
ಭೂವಧುವ ಬೋಳವಿಸು ತಾವೆನು
ಜೀವಿಗಳು ತಮ್ಮೊಲಿದುದಾಗಲಿ
ಸಾವುದನುಚಿತವೆಂದು ನುಡಿದರು ಭೀಷ್ಮಗುರುಕೃಪರು ‖ ೪೪

ಎಮ್ಮ ನುಡಿಗಳು ಪಥ್ಯವಾದೊಡೆ
ನಿಮ್ಮ ಕರ್ಣಾದಿಗಳ ಕರೆಸುವು

ದೆಮ್ಮ ನುಡಿಗವರೆಂದ ಮಾತನುಸಾರಿ ಯೆನಿಸಿದರೆ ।
ಬಮ್ಮ ಕೈಕೊಂಬುದು ವೃಥಾ ನೃಪ
ಧರ್ಮವೆನು ಬಿಡಬೇಡ ಸಮರವ[1]
ನೆಮ್ಮಿ ಸಾವುದು ಗರುವರಿಗೆ ಗುಣವೆಂದರವರೆಂದು[2] ॥ ೪೫

ಭೀಷ್ಮಾದಿಗಳ ಮಾತನ್ನು ನಡಿಸದೇ ಇರಲು ಅವರು
ಹಿಂತಿರುಗಿದುದು.

ಕದನವಾರಲಿ ಪಾಂಡುಸುತರಲಿ
ಕದನವಾಡುವುದುಚಿತವೇ ನಮ
ಗಿದಿರು ಬಟಿಕಾರುಂಟು ಭಾರತವರುಷಭೂಮಿಯುಲಿ ।
ಇದನಱಿದು ಸಂಕಲ್ಪಭಂಗಾ
ಸ್ಪದವ ಮಾಡುವುದುಚಿತವೇ ನಿಜ
ಸದನಕಭಿಮುಖರಾಗಿ ಕರುಣಿಪುದೆಂದನವನೀಶ ॥ ೪೬

ಐಸಲೇ ದೈವೋಪಹತಮನ
ದಾಸಱಾರಿಂದಡಗುವುದು ನಾ
ವೇಸನೊಱಲಿದೊಡಾಗದವರೇ ಬಂದು ನಿಲಿಸುವರು ।

ಕರ್ಣಾದಿಗಳ ಆಗಮನ ಮತ್ತು ಭಾಷಣ.

ಈಸಱಲಿ ಮರಳುವೆವೆನುತ ನಿಜ
ವಾಸಕ್ಕೈದಿದರಿತ್ತಮೋಹಿದು
ವಾಶಕುನಿಕರ್ಣಾದಿಗಳ ದಂಡಿಗೆಗಳೊಗ್ಗಿನಲಿ ॥ ೪೭

ಹೊಕ್ಕು ರಾಯನ ಕಂಡರನಿಬರು
ಹೊಕ್ಕು ಹುಲ್ಲಿನ ಮೇಲೆ ಹರ ಹರ
ಮಕ್ಕಳಾಟಿಕೆಯೇನಿದಗ್ಗದ ಸಾರ್ವಭೌಮರಿಗೆ ।

---

1 ಸಮರದೊ, ಟ. 1 ಕದನವ, ಜ. 2 ಗುಣವು ಗರುವರಿಗೆಂದನಾಭೀಷ್ಮ, ಚ.
2 ಳೊಮ್ಮೆಸಾವುದು ಗರುವರಿಗೆ ಗುಣವೆಂದ ನಾಭೀಷ್ಮ, ಟ.
2 ನೆಮ್ಮುವುದು ತಾನಕಟಗುಣವಲ್ಲೆಂದನಾಭೀಷ್ಮ, ಜ.

ಸಿಕ್ಕುವನು ಹಗೆ ತನಗೆ ತಾನೇ
ಸಿಕ್ಕುವನು ಹಗೆಗಳಿಗೆ ಲೋಕದೊ
ಳಕ್ಕಜವೆ ಜಯವಿಜಯವೆಂದರು ಕರ್ಣಶಕುನಿಗಳು ॥ ೪೮

ಹರಿಬ ಬೇಕೇ ಮತ್ತೆ ಗಂಧ
ರ್ವರಿಗೆ ದೂತರನಟ್ಟಿ ಭೀಮನ
ನರನೊಳನುಸಂಧಾನವೇ ನಾಲ್ಕೆಂಟುದಿವಸದಲಿ ।
ಧರೆಯೊಳವರಿರದಂತೆ ಘಟ್ಟಿಸಿ
ತೆರಳಿಚುವೆವಕಟಕಟ ದರ್ಭೆಯ
ಹರಹಿ ಹಕ್ಕೆಯನಿಕ್ಕಲೇಕೆಂದೊದಱಿದರು ಖಳರು ॥ ೪೯

ದೂತರಮರರಿಗಟ್ಟುವೆನೆ ತಾ
ಬೂತು ಭೀಮಾರ್ಜುನರ ಕೂಡೆ ವಿ
ಘಾತಿ ಕೈಯೊಡನುಚಿತವೇ ಕೆಡೆನುಡಿಯದೇ[1] ಲೋಕ ।
ಈತನುವನೀಪರಿಯಲೇ ನಿ
ರ್ಧೂತವನು ಮಾಡುವೆನು ನಮ್ಮನು
ಜಾತನಲಿ ಭೂವಧುವ ಸೇರಿಸಿ ಬದುಕಿ ನೀವೆಂದ ॥ ೫೦

ಅವರ ಮಾತನ್ನು ಒಪ್ಪದೆ ಇರಲು ಅವರು ಹಿಂತಿರುಗುವಿಕೆ.

ನಿನ್ನೊಡನೆ ಹುತವಹನ ಹೊಗುವೆವು
ಮನ್ನಣೆಯ ಮಾತಲ್ಲ ನಿನ್ನಿಂ
ಮುನ್ನ ಮುಂಡಿತಶಿರದೊಳುಚಿವೆವು[2] ತೀರ್ಥಯಾತ್ರೆಯಲಿ ।
ಎನ್ನ ಮನ[3] ವೀರಸೌಬಲನ ಮನ[4]
ನಿನ್ನ ಕೆಲರಲಿ ಬೆಱಸುವುದೆ ಬೇ
ಱಿನ್ನು ಮಾತೇಕೆನುತ ಮುಱಿದರು ತಮ್ಮ ಮನೆಗಳಿಗೆ ॥ ೫೧

---

[1] ನುಡಿವುದೇ, ಟ. [2] ಳಿಸಿವೆವು, ಚ. [3] ಮತ, ಚ. [4] ಮತ, ಚ.

ದುಶ್ಶಾಸನನು ಬಂದು ದುಃಖಿಸಿದುದು.

ಉಳಿವ ಭಟ್ಟರ ನಿಲಿಸಿದನು ಸಮ
ನೆಲನ ಹೊಗಳುವ ವಾಹಕರ ಕಳ
ಕಳವ ನಭಕೊತ್ತಿದನು ಕಹಳಾರವಕೆ ಕೋಪಿಸುತ ।
ತಲೆ ಮುಸುಕಿನಲಿ ತಾಳಿದೊಡಲಿನ
ತಳತದುಗುಡದ ಮೋಹೆಯಲಿ ಕುರು
ಕುಲಭಯಂಕರನೈದಿದನು ದುಶ್ಶಾಸನನು ನೃಪನ ॥ ೫೭

ಹೊಕ್ಕನೊಳಗನುರಾಯನಂಘ್ರಿಯೊ
ಳಿಕ್ಕನೊಡಲನು ಲೋಚನಾಂಬುಗ
ಳುಕ್ಕಿದುವು ನೆನೆನೆನೆದು ಸಲೆ [1] ಕರಣೇಂದ್ರಿಯಾದಿಗಳು ।
ಬಿಕ್ಕಿದನು ಬಿರಿಬಿರಿದು ಸೆಱಗಳು
ಮುಕ್ಕುಱಕಿದುವು ಕೊರಳ ಹೃದಯದೊ
ಳೊಕ್ಕಲಿಕ್ಕಿತು ಶೋಕಪಾವಕವಾನೃಪಾತ್ಮಜಗೆ ॥ ೫೮

ಅನುಜನದ್ಭುತಶೋಕರಸದಲಿ
ಕೊನರಿತರಸನ ಮೋಹ ಕುರುಕುಲ
ವನಪರಶು ಕುಳ್ಳಿರ್ದನೊಯ್ಯನೆ ಮೋನಿನಿಯ ಮಲಗಿ ।
ನಿನಗಿದೇನುಬ್ಬೇಗವೀಹ
ಸ್ತಿನಪುರದ ಸಾಮ್ರಾಜ್ಯಸಿರಿ ರಿಪು
ಜನಪರಿಗೆ ಹುರುಡಿಸಳ ಹೇಳೆಂದೆತ್ತಿದನು [2] ಹಣೆಯ ॥ ೫೯

ಸೆಳೆದು ಬಿಗಿದಪ್ಪಿದನು ಲೋಚನ
ಜಲವ ತೊಡೆದನು ಪಾಂಡುಪುತ್ರರು
ಸೆಳೆದುಕೊಳ್ಳರೆ ನೆಲನನಕಟಾ ಮತ್ಸರೋಕ್ಷದಲಿ ।
ಕುಲವ ನೀನುದ್ಧರಿಸು ಸೇಸೆಯ

1 ಕಳವಳಿಸಿದುವು, ಚ. 2 ಹುದುಗೊಳಿಸದೇಳೆಂದೆತ್ತಿದನು, ಟ

1 ಕರಣೇಂದ್ರಿಯಾದಿಗಳುರಿದುವಿನ್ನೇನು, ಡ.

ತಳುವೆ ತಾ ಮುಂದಿಟ್ಟು ಬಱಿದಿ
ನ್ನುೞಿಲದಿರು ಪ್ರಾಯೋಪವೇಶವ ಬಿಡೆನು ತಾನೆಂದ ॥ ೫೫

ಅೞಿದೊಡೞಿವೆ ಭವತ್ಪರೋಕ್ಷದೊ
ಳುೞಿವೆನೇ ನಿನ್ನರಸಿ ಧರೆಗಾ
ನಳುಪುವೆನೆ ನಿನ್ನಱಿವನೀಕ್ಷಿಪ ಧೈರ್ಯ ತನಗುಂಟೆ ।
ನೆಲನ ಕುಂತಿಯು ಮಕ್ಕಳೀಕ್ಕೈ
ಕೊಳಲಿ ಮಾಣಲಿ ಸಿರಿಗೆ ಸೇಸೆಯು
ತಳುವರಿಗೆ ತಿಳಿ ನಿನ್ನ ಬಿಡದಿಹ ಭಾಷೆ ತನಗೆಂದ ॥ ೫೬

ಧಾತುಗೆಡಲೇಕೀಸು ಕಾತೊಡೆ
ಬೀತುಹೋಹುದು ಬೀತಮರನೇ
ಕಾತಿಹುದಲ್ಲೈ ಹತ ವಿಧಿಗೆ ವಿಪರೀತಕೃತಿ ಸಹಜ ॥
ಆತಗಳ್ ನಮಗುಪಕರಿಸಿ ವಿ
ಖ್ಯಾತರಾದರು ಮರಳಿ ತಾ ವಿ
ನ್ನಾತಗಳನೞಿಲಿಸುವುಪಾಯವ ಕಂಡೊಡೇನೆಂದ ॥ ೫೭

ಮರಳು ತಮ್ಮ ವೃಥಾ ಖಳಾಡಂ
ಬರವಿದಲ್ಲದೆ ಪಾಂಡುಪುತ್ರರ
ಪರಿಭವಿಸಲೊಡಬಡುವರೇ ವಿದುರಾದಿಬಾಂಧವರು[1] ॥
ಅರಮನೆಗೆ ನೀ ಹೋಗು ಹಸ್ತಿನ
ಪುರಿಗೆ ನೀನರಸಾಗು ಮೋಹದ
ಮರಳುತನವೀಕ್ಷತ್ರಧರ್ಮವಿದೆಲ್ಲ[2] ಕೇಳೆಂದ ॥ ೫೮

ಮಗಗೆ ಮುನಿವನು ತಂದೆ ತಂದೆಗೆ
ಮಗ ಮುನಿವನೊಡಹುಟ್ಟಿದರು ಬಲು
ಪಗೆ ಕಣಾ ತಮ್ಮೊಳಗೆ ಭೂಪರಿಗೆಲ್ಲ ವಿದ್ಯೆಯಿದು ॥
ಜಗದ ಪರಿವಿಡಿ ನಮ್ಮದಲ್ಲದೆ

1 ಬಾಹಿರರು, ಕ. ಖ. ಚ.  2 ಕ್ಷತ್ರಧರ್ಮದೊಳಿಲ್ಲ, ಚ

ಸೊಗಸಿ ರಾಜ್ಯವನಿತ್ತು ನೀನಿದ
ನೊಗುಚಿದರೆ ತನ್ನಾಣೆ ಯೆನುತಪ್ಪಿದನು ಸಹಭವನ [1]॥ ೪೯

ದುಶ್ಶಾಸನನು ಹಿಂತಿರುಗಿದುದು.

ಭ್ರಾಂತಿಯೇಕೆ ಭವತ್ಪರೋಕ್ಷದ
ಲಂತಕನ ಪುರವಲ್ಲದುರ್ವೀ
ಕಾಂತೆಗಳುಪಿದೆನಾದರೊಡಹುಟ್ಟಿದನೆ ನಿಮ್ಮಡಿಯು ॥
ಸಂತವಿಡುವೀಮಾತು ಸಾಕಿ
ನ್ನಂತಿರಲಿ ನಿಮಗೇನು ಹದನಾ
ತಂಕನೊಳೀಹದನನೀಕ್ಷಿಪೆನೆನುತ [2] ಹೊಱವಂಟ ॥ ೬೦

ನಗರಕ್ಕೆ ಬರಬೇಕೆಂದು ಪುರಜನರ ಪ್ರಾರ್ಥನೆ.

ಧರಣಿಪತಿ ಕೇಳ್ ಬಳಿಕ ಹಸ್ತಿನ
ಪುರದ ನಿಖಿಳಶ್ರೇಣಿಕುಲನಾ
ಗರಿಕಜನಪರಿವಾರ ಮಂತ್ರಿಪಸಾಯ್ತ ಪೌರಜನ ॥
ಅರಸ ಬಿಜಯಂಗೈದು ನಮ್ಮನು
ಹೊರೆವುದಲ್ಲದೊಡಾವನಾಂತರ
ವರಕೆ ಸೇಮವ ಕೊಡುವುದೆಂದೊದಱಿದರು ತಮತಮಗೆ ॥ ೬೧

ದುಶ್ಶಾಸನನೇ ಮುಂದೆ ನಿಮ್ಮಗರಸಾಗುವನೆಂದು ಹೇಳುವಿಕೆ.

ಪುರಜನದೊಳವರವರ ಮುಖ್ಯರ
ಕರೆಸಿದನು ದುಶ್ಶಾಸನನು ನಿಮ
ಗರಸು ನೃಪನೀತಿಯಲಿ ಪಾಲಿಸುವನು ಮಹೀತಳವ ॥
ಧರೆಯನಾತಂಗಿತ್ತೆ ತನಗೀ
ಸುರನದಿಯ ತೀರದಲಿ ಕಾಶೀ
ಶ್ವರನ ಸನ್ನಿಧಿಯಿರವು ಘಟಿಸಿದುದೆಂದನಾಭೂಪ ॥ ೬೨

1 ತೆತ್ತಿದನು ಖಳಪತಿಯು, ಡ, 2 ಯ್ಯಂತರದೊಳಾಹದನನೀಕ್ಷಿಪುದೆನುತ, ಚ,

ಹೀಗಿರುವಾಗ ದೈತ್ಯರು ಬಂದು ಸಹಾಯರಾಗಿರುವೆವೆಂದು
ಹೇಳಿದುದು.

ರಾಯನೀಪರಿನುಡಿದು ಜನಸಮು
ದಾಯವನು ಕಳುಹಿದನು ಸೂನೋ[1]
ಪಾಯಸಾಪೇಕ್ಷನು ವರಸಮಾಧಿಯಲಿರಲು ರಾತ್ರಿಯಲಿ |
ದಾಯವಿದು ನಮಗೆಂದು ದೈತ್ಯನಿ
ಕಾಯ ಬಂದು ರಸಾತಳಕೆ ಕುರು
ರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ ‖ ೬೩

ಅರಸ ನೀ ಪ್ರಾಯೋಪವೇಶದಿ
ಮರಣದೀಕ್ಷಿತನಾದೆ ಗಡ ನಿ[2]
ಮ್ಮರಸುತನಕನುಚಿತವ ಬಗೆದೈ ಕಾಳುಮಾಡಿದೆಲ[3] |
ಸುರರು ಪಾಂಡುಕುಮಾರರಾಗವ
ತರಿಸಿದರು ಗೆಲವವದಿರಿಗೆ ತಾ
ವಿರಲು ಸುಡಲೀದೈತ್ಯವಂಶವನೆಂದರಾಖಳರು ‖ ೬೪

ಸಾಯದಿರು ನಿನಗಿಂದ-ಮೊದಲು ಸ
ಹಾಯರಾಹವಕೆ ರಿಪುಕೌಂ
ತೇಯರಿಗೆ ಕೊಡಬೇಡ ನೀನು ತಿಲಾಂಶಭೂತಳವ |
ಲಾಯಸಹಿತೀಗಜರಥಾಶ್ವನಿ
ಕಾಯ ನಿನ್ನದು ದೈತ್ಯಸಚಿವಪ
ಸಾಯಿತರು ನಿನ್ನವರು ಸಾವೆವು ನಿನ್ನ ಸಮರದಲಿ ‖ ೬೫

ಮಾನವರು ತಾವಿಂದು ನೀವೇ
ದಾನವರು ಗಂಧರ್ವರಿಂದಭಿ
ಮಾನವೆಮಗಕ್ಕಾಡಿಹೋಯಿತು ಹೇಆಲೇನದನು |
ಮಾನಿನಿಯು ಮೂದಲೆಯನಾಪವ

---

[1] ಸಾಮನೋ, ಕ, ಖ, ಟ.  [2] ಗಡ ನೀ, ಟ.

[3] ಮರಳಿಲ್ಲನಾವಿರುತಿರಲು ನಿನಗೇತಕೀ ಚಿಂತೆ, ಟ.

ಮಾನಸುತನ ಸಗರ್ವವಚನವ
ನೇನ ಹೇೞುವೆನೆನುತ ಸುಯ್ದನು ಕೌರವರ ರಾಯ ॥ ೬೬

ನರರು ನೀವ್ ದಾನವರು ತಾವೆಂ
ದಿರದಿರೊಡಹುಟ್ಟಿದರು ನಿಮಗಿ
ನ್ನರಸ ವೇೞ್ವಾಯಿತರು [1] ವೆಗ್ಗಳದೈತ್ಯಭಟರೆಲ್ಲ ।
ಸುರಪುರದ ಸೂಳೆಯರ ಪಡಿಗವ
ನಿರಿಸುವರು ಗಂಧರ್ವರವದಿರ
ಕರುಳ ತಿಂಬೆವು ತಾವೆನುತ ಘರ್ಜಿಸಿತು ಖಳನಿಕರ ॥ ೬೭

ಎಂದು ಭೂಪನ ತಿಳುಹಿ ಕಳುಹಲು
ಬಂದು ಮರಳಿ ಮಹೀತಳಕೆ ತ
ನ್ನಿಂದುವದನೆಯು ಮಾತಿನಲಿ ನಿಂದಾತ ತಾನಾಗಿ ।
ಬಂದನರಮನೆಗಖಿಳಜನವಾ
ನಂದರಸದಲಿ ಮುೞುಗೆ ಪುರದಲಿ [2]
ಸಂದಣಿಸಿದುವು ಗುಡಿಗಳೊಸಗೆಯ ಲಳಿಯ ಲಗ್ಗೆಯಲಿ ॥ ೬೮

ಮತ್ತೆ ನೆಗ್ಗಿತು ನಯವಧರ್ಮದ
ಕುತ್ತುದಲೆ ನೆಗಹಿದುದು ಸತ್ಯದ
ಬಿತ್ತು ಹುರಿದುದು ಪಟ್ಟಗಟ್ಟಿತು ಮಿಗೆ ಕೃತಘ್ನತೆಗೆ ।
ನೆತ್ತಿ ಕಣ್ಣಾಯ್ತಧಮತೆಗೆ ನಗೆ
ಯೊತ್ತಿತಾಱಿಡಿ ಸುಜನಮಾರ್ಗವ
ಕೆತ್ತುದಟಮಟವೀಸುಯೋಧನಸೌಮನಸ್ಯದಲಿ ॥ ೬೯

ಮಱೆದು ಕಳೆದನು ಬಂದಲಜ್ಜೆಯ
ಬಱನದಿನವನು ಮುಂದಣಾಪಹತಿ
ಗುಱುವದೈತ್ಯರ ಮೈತ್ರ್ಯದಲಿ ಹಿಗ್ಗಿದನು ನೆನೆನೆನೆದು ।
ಮುಱಿದುದಿನ್ನೇನಹಿತದರ್ಪದ

---

1 ವೆಳ್ಳಾಯಿತರು, ಕ. ಖ. ಚ.    2 ಪುರನಪಿ, ಕ. ಖ.

ಹೊಱಗೆ ಯೆಂದುತ್ಸವದಲವೆನಿಪ
ಮೆಱೆದನಧ್ವರಶಾಲೆಯಲಿ ಮಾಡಿದ ಮಹಾಕ್ರತುವ ॥ ೩೮

ಕೇಳಿದರು ಪಾಂಡವರು ಕುರುಭೂ
ಪಾಲಕನ ಸಂಕಲ್ಪವನು ಪಾ
ತಾಳದಲಿ ಸುರವೈರಿವರ್ಗದ ಸಾರಸಂಗತಿಯ ।
ಮೇಲಣಧ್ವರಕರ್ಮವನು ನಗು
ತಾಲಿಸಿದರಡಿಗಡಿಗೆ ಲಕ್ಷ್ಮೀ
ಲೋಲನಂಘ್ರಿಯ ನೆನೆವುತಿರ್ದರು ವೀರನಾರಣನ ॥ ೩೯

ಇಪ್ಪತ್ತೆರಡನೆಯ ಸಂಧಿ ಮುಗಿದುದು.

---

## ಇಪ್ಪತ್ತಮೂರನೆಯ ಸಂಧಿ.

---

ಸೂಚನೆ.

ಚಂಡಬಲರಾಧೇಯನೆಡೆಗಾ
ಖಂಡಲನು ಬರಲಿತ್ತ ಕೊಟ್ಟನು
ಕುಂಡಲವ ಕವಚವನು ಪಡೆದನು ಸುರಪನಾಯುಧವ ॥

ಕರ್ಣನಿಂದೊಡಗೂಡಿ ದುರ್ಯೋಧನನ ಚಿಂತೆ.

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವ ಘೋಷಯಾತ್ರೆಯ
ಮೇಲೆ ದ್ರೌಪದಿ ಬಂದುದಕೆ ಧರ್ಮಜನು ಮಾಡಿದುದ ।
ಬಾಲಿಕೆಯ ನುಡಿ ಚಿತ್ರಸೇನನ
ಕಾಳಗದಿ ತನಗಾದ ಭಂಗದ
ಸೋಲವನು ಚಿಂತಿಸುತಲಿರ್ದನು ಕರ್ಣನೊಡಗೂಡಿ ॥

ನಾಳೆ ಕರ್ಣನನೆಯ್ದಿ ಸುರಪತಿ
ಲೀಲೆಯಲಿ ಕುಂಡಲವ ಕವಚವ
ಕೋಟುಗೊಂಡೈತಪ್ಪನೆನೆ ರವಿಯರಿದು ಮನದೊಳಗೆ |
ಹೇಳುವೆನು ಕರ್ಣಂಗೆ ಶಕ್ರನ
ಬೇಳುವೆಗೆ ಸಿಲುಕದಪರಿಯನೆಂ
ದಾಲಿಸುತ ರವಿಯಿದ್ದನಿತ್ತಲು ರಾಯ ಕೇಳೆಂದ || ೨

ಇರುತಿರುತ ರವಿಸೂನು ಗಂಧ
ರ್ವರಲಿ ತನ್ನಯ ಕೀರ್ತಿಲತೆ ಪೈ
ಸರಿಸಿದಂದವನೈದೆ ಚಿಂತಿಸುತಿರಲು ರಜನಿಯಲಿ |
ತರಣಿ ಕಂದನ ಮೋಹದಿಂದವೆ
ಧರೆಗೆ ಬಂದನು ನಾಗನಗರಿಯ
ನಿರದೆ ಬಂದಪನರ್ಧರಾತ್ರಿಯೊಳರಸ ಕೇಳೆಂದ || ೩

ತರಣಿ ನಡುವಿರುಳೈದಿ ಕರ್ಣನ
ಹೊರೆಯೊಳಾವಿರ್ಭವಿಸಲಾಗಳ
ಸುರವರಿಯನಾಗಮನವಾಕಸ್ಮಿಕವಿದೇನೆಂದ |
ಬರಲಿಕಾತನ ಮನೆಯ ಕಾಹಿನ
ಚರರರಿಯದಂದದಲಿ ಕರ್ಣಗೆ
ಸರಿಯೆ ನಳನಹುಷಾದಿರಾಯರು ಪುಣ್ಯದೇಹಿಗಳಲಿ || ೪

ಭರದಿ ಮೈಮುರಿದೆದ್ದು ಮಂಚದೊ
ಳಿರದೆ ಕೆಲಸಾರುತ್ತ ತನುವನು
ಭರಿತಪುಳಕದ ಬಳವಿಯಲಿ ನೋಡಿದನಿದಾರೆನುತ |
ಹರಿಯೊ ಗಮನಿಯೊ ಹರನೊ ಬರುವನು
ಹರಿಯೊ ನಿಜಮಾರುತಿಯೊ ದೇವೋ
ತ್ತರನು ಸಾಕ್ಷಾದ್ಧರಿಯೆನುತ ಮೈಯ್ಯಿಕ್ಕಿದನು ಪದಕೆ || ೫

ಬಾಗಿಲಲಿ ಬಂಧನವು ಸಡಿಲಿವೆ
ಈಗ ದೀಪಜ್ವಾಲೆ ಮಸುಳಿದು
ವೀಗ ನೀವೆಂತಿಲ್ಲಿಗೈದಿದಿರೆನುತ ಬೆಱಗಾಗೆ ।
ಯೋಗದಿಂದವೆ ನಿಜವ ತೋಱಿಸ
ಲಾಗ ರವಿಸುತ ಹರುಷದಲಿ ತಲೆ
ವಾಗಿರಲು ಕೈವಿಡಿದು ಮಗನನು ನುಡಿಸಿದನು ತರಣಿ ॥ ೬

ಕರ್ಣನಿಗೆ ಸೂರ್ಯನ ಹಿತೋಕ್ತಿ.

ಮಗನೆ ಕೇಳ್ಕೈ ಸುರಪನೆಯ್ದುವ
ನಗಡುಗೊಳಿಸಲು ಕವಚವನು ನೀ
ತೆಗೆದು ಕೊಡದಿರು ಕುಂಡಲವನೀಯದಿರು ನೀನೆನಲು ।
* ಮುಗಿದ ಕರದಲಿ ನುಡಿದನಾಗಳ
ಗಗನಮಣಿಯನು ನೋಡುತವೆ ಮಿಗೆ
ಸುಗಮವೇ ಸಂಸಾರ ನಿತ್ಯವೆ ತಾತ ಕೇಳೆಂದ ॥ ೭

ನಾಕುಮುಖದಲಿ ಕಮಲಸಂಭವ
ಲೋಕವನು ನಿರ್ಮಿಸುವನದಱೊಳು
ಕಾಕನೈಯ್ದುವ ನಿಜಮನುಷ್ಯಶರೀರಿ ತಾನಾಗಿ ।
ಒಕರಿಸುವೀವಿಷಯಧರ್ಮವಿ
ವೇಕೆ ತನಗೀ ಸತ್ಯವೊಂದೇ
ಸಾಕು ಕೇಳಲೆ ತಂದೆ ಚಿತ್ತೈಸೆಂದನಾಕರ್ಣ ॥ ೮

ಕರ್ಣನು ಅದನ್ನೊಪ್ಪದೆ ತನ್ನ ಔದಾರ್ಯವನ್ನು
ಹೊಗಳಿಕೊಂಡುದು.

ಆಡಿದರೆ ಚಿತ್ತದಲಿ ಖತಿಯನು
ಮಾಡಬೇಡೆಲೆ ತಾತ ತನಗೀ

---

* ಮುಗಿದ ಕರದಲಿ ನುಡಿದನಾಕಲಿ
ಯುಗದ ಕರ್ಮದ ದೇಹವಿದನಾ
ಸೊಗಸುವೆನೆ ಸತ್ಕೀರ್ತಿ ಧರ್ಮವೆ ತನಗೆ ಗತಿಯೆಂದ, ಖ.

ಗೂಡಿನಲಿ ಹಿತವಿಲ್ಲ ಕಾವರಾದಿಗಳಿಗಾಶ್ರಯುವ ।
ಮಾಡಿ ದೃಢವನು ಶಿಬಿವಧೀಚಿಯು
ಗೂಡಿದೀಜೀಮೂತವಾಹನ
ರೂಢಿಗಿವರೊಳಗಿರ್ದ ಕೀರ್ತಿಯನಱವೆನಲ್ಲೆಂದ ॥ ೯

ತನಯನಿಂಗಿತವಱಿದು ತನ್ನಯ
ಮನದೊಳಗೆ ಮತ್ತೊಂದುಪಾಯುವ
ನೆನೆದು ರವಿ ನುಡಿಸಿದನು ಕಂದನ ಮೇಲಣೊಲವಿನಲಿ ।
ಅನುಪಮದ ಶಕ್ತಿಯನು ನೀನಾ
ದನುಜರಿಪುವಿನಲೀಸಿಕೋ ಯೆಂ
ದೆನುತ ರವಿಯುಡಱದನು ಗಗನವನರಸ ಕೇಳೆಂದ ॥ ೧೦

ತರಣಿಯಂತರ್ಧಾನದಲಿ ನಿಲೆ
ತರಣಿನಂದನ ಹರುಷಚಿಂತಾ
ಭರದಲಿದ್ದನು ರಜನಿಯುಡಗಿದುದರುಣನುದಯದಲಿ ।
ಹರಿಯ ನಾಮವ ನೆನೆಯುತಂಗವ
ಮುಱಯುತುಪ್ಪವಡಿಸಿದನುರುತರ
ತರಣಿಗರ್ಘ್ಯ ಕ್ರಿಯೆಯ ಮಾಡಿದ ಭಕ್ತಿಭಾವದಲಿ ॥ ೧೧

ವಿಪ್ರವೇಷಧಾರಿಯಾಗಿ ಇಂದ್ರನು ಬಂದುದು.

ಬಂದುದಿನ[1] ಶತಮನ್ಯು ವಿಪ್ರರ
ಚಂದದಲಿ ನಡೆತಂದು ಕರ್ಣನ
ಮಂದಿರಕೆ ಬರಲಾತನಿದಿರೆದ್ದವರ ಸಂತೈಸಿ ।
ತಂದು ಜಲವನು ಪದಯುಗವ ತೊಳೆ
ದಂದು ಪೀಠದಿ ಕುಳ್ಳಿರಿಸಿ ಪದ
ಕಂದು ನಮಿಸಿದನರ್ಘ್ಯವಿತ್ತಾದರಿಸಿ ಮನ್ನಿಸಿದ ॥ ೧೨

---

1 ಅಂದಿನಲಿ, ಕ,

ಏನು ಬಿಜಯಂಗೈದ ಹದನನು
ಮಾನನಿಧಿ ನೀವ್ ಬೆಸಸಿ ಯೆನೆ ರವಿ
ಸೂನುವಿಂಗಿತವಱಿಯುತಾಶೀರ್ವಾದವನು ಮಾಡಿ ।
ಸಾನುರಾಗದಿ ಹರಸಿದರೆ ವರ
ಭಾನುನಂದನ ಮೆಚ್ಚಿ ನಿಮ್ಮಡಿ
ಯೇನುವನು ವರಿಸಿದುದನಿತ್ತಪೆನೆಂದನಾಕರ್ಣ ॥ ೧೩

ಇಂದ್ರನು ಕವಚಕುಂಡಲಗಳನ್ನು ಬೇಡಿದುದು.

ಕೊಡು ತನಗೆ ನೀನಿಂದು ಕವಚವ
ದೃಢತರದ ಕುಂಡಲವೆನೆನಲಾ
ನುಡಿಗೆ ರವಿಸುತ ಖಡುಗದಲಿ ಸೀಳಿದನು ನಿಜತನುವ ।

ಕರ್ಣನ ದಾನ.

ಹಿಡಿ ಯೆನುತ ಕುಂಡಲವ ಕವಚವ
ನೊಡನೆ ತಾ ಧೈರ್ಯದಲಿ ಶಕ್ರಗೆ
ಕೊಡಲು ನಿಜರೂಪಿನಲಿ ನಿಂದನು ಬಿಗಿದಬೆಱಗಿನಲಿ ॥ ೧೪

ದೇವದಾನವ ಯಕ್ಷಗಂಧ
ರ್ವಾವಳಿಯು ಸುಭಟರಲಿ ಬಳಿಕಿ
ನ್ನಾವ ಸಾಹಸಿಧೀರನೆಂಬುದನಱಿದುದಿಲ್ಲವಲ ।
ಭಾವಿಸಲು ಸರ್ವಾಂಗರಕ್ತದಿ
ಪೂವಲಿಯ ಮಾಡಿದನು ವೀರರ
ದೇವನೀನೆಂದಿಂದ್ರ ಕೊಂಡಾಡಿದನು ಭಾನುಜನ ॥ ೧೫

ಮೆಚ್ಚಿದೆನು ರವಿಸುತನೆ ನೀ ಮನ
ಮೆಚ್ಚಿದುದ ವರಿಸೆನಲು ತಾ ನೆನೆ
ದಚ್ಚರಿಯ ಬೇಡಿದನು ಶಕ್ತಿಯನೀವುದೆನಗೆನಲು ।

ಇಂದ್ರನು ತನ್ನಾಯುಧವನ್ನು ಕರ್ಣನಿಗೆ ಕೊಟ್ಟುದು.

ಬಿಚ್ಚಿ ಗವಸಣಿಗೆಯಲಿ ತನ್ನಯ
ನಚ್ಚಿನಾಯುಧವನ್ನು ಕರ್ಣನ
ನಿಚ್ಚಟದ ಮನವೈದೆ ಹರುಷದಿ ಕೊಟ್ಟನಮರೇಂದ್ರ ॥ ೧೬

ವರಿಸಿದನು ನಿನಗಾಂತರಿಪುಗಳ
ನೊಱಸಿ ಬಱಿಕಿದು ತನ್ನನೆಯ್ದುವ
ವರವಿದಕೆ ಪ್ರತಿಕಾರವಹವರಿಲ್ಲ ಕೇಳೆಂದ ।
ಹರಸಿ ಕರ್ಣನ ಬೀಳುಕೊಟ್ಟು
ದರಿಸಿ ಸುರಪತಿ ಚಿಗಿದನಭ್ರದೊ
ಳುರುಪರಾಕ್ರಮಿ ಯಿದ್ದನಿತ್ತಲು ಭೂಪ ಕೇಳೆಂದ ॥ ೧೭

ಇಪ್ಪತ್ತಮೂರನೆಯ ಸಂಧಿ ಮುಗಿದುದು.

---

## ಇಪ್ಪತ್ತನಾಲ್ಕನೆಯ ಸಂಧಿ.

---

**ಸೂಚನೆ.**

ರಾಯನರಸಿಯ ಹಿಡಿದೆಳೆವರಿಪು
ರಾಯದಳವನು ಮುಱಿದು ಫಲುಗುಣ
ವಾಯುಜರು ಪರಿಭವಿಸಿ ಬಿಟ್ಟರು ಕಲಿಜಯದ್ರಥನ ।

ಕೌರವನ ಬಿಡುಗಡೆಯನ್ನು ಸೈಂಧವನು ಕೇಳಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಲೆಕ್ಕಕೆ ಸಂದುದಟವೀ
ಪಾಳಿಪರ್ಯಟನ ಪ್ರಬಂಧಕೆ ವರುಷಹನ್ನೊಂದು ।
ಮೇಲೆಮೇಲೌಕುವ ವಿಪತ್ಕ

ಲ್ಲೋಲಕೋಲಾಹಲಿತಕಲುಷಕ
ರಾಳಕಾಲಾಂಬುಧಿಯೊಳೀಸಾಡಿದರು ಬೇಸಱದೆ ‖ ೧

ಸಿಂಧುದೇಶಕೆ ಬಂದನವನಿಪ
ಬಂಧಕೃತಿಯಲಿ ಬೞಿಕ ಬಿಡುಗಡೆ
ಯಂಧಭೂಪತಿಯಳಿಯ ಕೇಳಿದನಾಜಯದ್ರಥನು ।
ಅಂಧತೆಯನೇನೆಂಬೆನೈ ಪ್ರತಿ
ಬಂಧಕರು ಬೇಡೆನಲು ಜಯದಭಿ
ಸಂಧಿಯಲಿ ಸೀವರಿಸೆ ಸಂವರಿಸಿದನು ಸೈನಿಕವ ‖ ೨

ನೆರಹಿದನು ಹದಿಮೂಱುಸಾವಿರ
ಕರಿಘಟೆಯನೈವತ್ತುಸಾವಿರ
ತುರಗವನು ಹದಿನೆಂಟುಸಾವಿರಕನಕಮಯರಥವ ।
ಚರಣಚಾಪಟರೈದುಲಕ್ಕವ
ಬರಿಸಿದನು ಬಹುವಾದ್ಯರವ ದಿ
ಕ್ಕಿರವ್ರೊಡೆಯೆ ಸೂಳೈಸೆ ಮೇಳೈಸಿದನು ಮೋಹರವ ‖ ೩

ಜೋಯಿಸರ ಮಾತನ್ನುಪೇಕ್ಷಿಸಿ ಹೊರಟುದು.

ಜೇಯ ಭಾಸ್ಕರಭೌಮರಶುಭ
ಸ್ಥಾಯಿಗಳು ಗುರುಮಂದರಭಿಭವ
ದಾಯಿಗಳು ವಿಪರೀತದೆಸೆ ಬುಧಶುಕ್ರರಾಹುಗಳ ।
ಯಾಯಿಗಳಿಗಪಜಯ ನಿವಾಸ
ಸ್ಥಾಯಿಗೊಳ್ಳಿತು ಚಿತ್ತವಿಸೆ ಯೆನೆ
ಜೋಯಿಸರ ಜವನಿಕೆಗೆ ಸಿಲುಕೆನೆನುತ್ತ ಹೊಱವಂಟ ‖ ೪

ನಾನಾವಿಧ ಅಪಶಕುನಗಳು.

ಉರಿ ಹೊಗೆಯ ದಿಕ್ಕಿನಲಿ ಹಕ್ಕಿಗ
ಳೊಱಲಿದುವು ಗೋಮಾಯುರವವ
ಬ್ಬರಿಸಿದುದು ದೆಸೆದೆಸೆಗಳಲಿ ಸೂಚಿಸಿತು ರಣಭಯವ ।

ದುರುಳನದ ಕೈಕೊಂಬನೇ ಕುರು
ನರಪತಿಯು ತತ್ಸಂಪ್ರದಾಯದ
ಗರುಡಿಕಾಱನಲಾ ಚತುಷ್ಟಯದುಷ್ಟಮಂತ್ರಿಗಳ ॥ ೫

ಪಾಂಡವರ ಆಶ್ರಮದ ಬಳಿ ಬಂದು ಸೈಂಧವನು ಇಳಿದುದು.

ಭರದ ಪಯಣದ ಮೇಲೆ ಪಯಣದೊ
ಳುರುವಣಿಸಿ ನಡೆತಂದು ಪಾಂಡವ
ರರಸನಿಹ ವಿಮಳಾಶ್ರಮದ ವಿಪಿನೋಪಕಂಠದಲಿ ।
ಹರಹಿದುವು ಗುಡಿ ಗಜಹಯದ ಮಂ
ದಿರರಚನೆ ರಹಿಯಾಯ್ತು ಬಿಟ್ಟನು
ಕುರುನೃಪಾಲನ ಮೈದುನನು ಭೂಪಾಲ ಕೇಳೆಂದ ॥ ೬

ದೂತರೊಡನೆ ಆಭರಣಗಳನ್ನು ಕಳುಹಿದುದು.

ಏನ ನೆನೆದನೊ ದುಷ್ಟಮಂತ್ರವಿ
ತಾನದೀಕ್ಷಿತ ಕಳುಹಿದನು ಮದ
ನಾನುರಾಗದಲಾಭರಣವನುಲೇಪನಾದಿಗಳ ।
ಸಾನುನಯದಲಿ ಪಾಂಡುಪುತ್ರರ
ಮಾನಿನಿಗೆ ಕೊಡಿ ನಿರ್ಜನದೊಳಬು
ಜಾನನೆಯ ಸೇರಿಸುವುದೆಮಗೆಂದಟ್ಟಿದನು ಚರರ ॥ ೭

ಬನದೊಳಡಗಿದರವರು ಕುಂತೀ
ತನಯರೈವರು ಬೇಂಟೆಯಾಡಲು
ನೆನೆದು ಧೌಮ್ಯನನಬುಜಮುಖಿಯಾಶ್ರಮದ ಕಾಹಿಂಗೆ ।
ಮುನಿಜನಂಗಳ ನಿಲಿಸಿಕೊಂಡರು
ಧನುವ ಬೆಂಬತ್ತಳಿಕೆಗಳ ನೃಪ
ಜನಲಲಾಮರು ಬನಬನದಲಱಸಿದರು ಮೃಗಕುಲವ ॥ ೮

ಹೋದರವರತ್ತಲು ವಿಕಾರವಿ
ನೋದಶೀಲರು ದುಷ್ಟರುಬ್ಬಟೆ

ಬೀದಿವರಿದುದು ಪರ್ಣಶಾಲೆಗೆ ಬಂದರಂಗನೆಯು |
ಆದರಿಸಿ ಮುನಿಜನವನೊಯ್ಯನೆ
ಕೈದುಗಳ ಹೊಱಗಿರಿಸಿ ದೂರದ
ಲಾದುರಾತ್ಮರು ಕಂಡು ಮೆಯ್ಯಿಕ್ಕಿದರು ಮಾನಿನಿಗೆ || ೯

ದೇವಿ ಚಿತ್ತೈಸುವುದು ನಿಮ್ಮಯ
ಭಾವ ಕೌರವನೃಪನ ಮೈದುನ
ಭಾವಿಸಲು ದುಶ್ಶಳೆಯ ರಮಣನು ಕಲಿಜಯದ್ರಥನು |
ಈವಿವಿಧರತ್ನಾಭರಣ ಪ
ಟ್ಟಾವಳಿಯನನುಲೇಪನಾದಿಯ
ಪಾವುಡವನವಧರಿಸಬೇಕೆಂದಿಱುಹಿದರು ಮುಂದೆ || ೧೦

ಎಸೆವಳೇ ದುಶ್ಶಳೆ ಜಯದ್ರಥ
ಕುಶಲನೇ ಪಾವುಡುವನೀವೊ
ಪ್ಪಿಸುವುದೊಡೆಯರ ಮುಂದೆ ಬಿಜಯಂಗೈವರೀಕ್ಷಣಕೆ |
ಶಿಶುಗಳಾವೆಮಗೀಸ್ವತಂತ್ರದ
ಯೆಸಕವೆಲ್ಲಿಯದಕಟವಸ್ತು
ಪ್ರಸರವೆಮಗೇಕೆಂದು ನುಡಿದಳು ನಳಿನಮುಖಿ ನಗುತ[1] || ೧೧

ನಾರಸೀರೆಯನುಡುವೆವೆಮಗಾ
ಹಾರವೇ ಫಲಮೂಲತತಿ ಶೃಂ
ಗಾರವೆಮಗೆ ಪತಿವ್ರತಾಗುಣವಲ್ಲದಿತರದಲಿ |
ಸೇರುವುದೆ ಮನವಿದನು ಪಾಂಡುಕು
ಮಾರರಿಗೆ ತೋಱಿಸುವುದೈ ಬೀ
ಡಾರವನು ಬಿಡಿ ಬೇಱೆ ವನದೊಳಗೆಂದಳಬುಜಾಕ್ಷಿ || ೧೨

---

1 ನಗುತ ನಳಿನಾಕ್ಷಿ, ಚ.

ಅವುಗಳನ್ನು ಸ್ವೀಕರಿಸದೆ ಇರಲು ಸೈಂಧವನಿಗೆ ತಿಳುಹಿದುದು.

ತಾಯೆ ನೀನಿವನೊಪ್ಪುಗೊಂಬುದು
ರಾಯ ಬಡವನೆ ಮತ್ತೆ ಪಾಂಡವ
ರಾಯರಿಗೆ ಪಾವುಡವನಟ್ಟುವವಿವನುಪೇಕ್ಷಿಸದೆ ।
ಆಯತಾಂಬಕಿ ತೆಗಿಸಿ ಯೆನೆ ನಡಿ
ರಾಯಸವಿದೇಕೆನುತ ದೂತರ
ನಾಯುವತಿ ಜಱಿದೊಳಗೆ ಹೊಕ್ಕಳು ತಳಿರ ಮಂಟಪವ ॥ ೧೩

ಮಸುಳಿತವದಿರ ಮೋಱೆ ಕಾರ್ಯದ
ಬೆಸುಗೆ ಹತ್ತದೆ ಸತಿಯ ನುಡಿಯಲಿ
ರಸವ ಕಾಣದೆ ಖಾತಿಯಲಿ ಮರಳಿದರು ಪಾಳೆಯಕೆ ।

ಸೈಂಧವನ ಬರುವಿಕೆ.

ಉಸುರಲಮ್ಮರು ಜೀಯ ಸೋಲಳು
ಶಶಿವದನೆ ಗುಣಸಾಮದಲಿ ಸಾ
ಧಿಸುವುದರಿದೆನೆ ತಾನೆ ನೋಡುವೆನೆನುತ ಹೊಱವಂಟ ॥ ೧೪

ಹೆಗಲಹಿರಿಯುಬ್ಬಣಕಠಾರಿಯ
ಬಿಗಿದುಡಿಗೆ ರತ್ನಾಭರಣ ಝುಗ
ಝುಗಿಸೆ ಝಣಝಣರವದ ರಭಸದ ಖಡಿಯ ಮಿಗೆ ಮೆಱೆಯೆ ।
ಬಗುವೆಸಾಧುಜವಾಜಿಕತ್ತುರಿ
ಯುಗರುಪರಿಮಳದಂಗಸಾರದ
ವಿಗಡಹೊಕ್ಕನು ಬನವನಾಪಾಂಚಾಲಿಯಾಶ್ರಮವ ॥ ೧೫

ತೊಲಗಿದುದು ಮುನಿನಿಕರವೀತನ
ಸುಳಿವ ಕಂಡು ಸುತೇಜದಲಿ ಖಳ
ತಿಲಕ ಬಂದನು ಪರ್ಣಶಾಲೆಯ ಮುಖದ ಮಂಟಪಕೆ ।

ಸೈಂಧವನ ಮಾತು.

ಲಲನೆ ಮೊಳಹೊಗಲೊಡನೆ ಹೊಕ್ಕನು
ನಳಿನಮುಖಿ ಬಂದವ ಜಯದ್ರಥ
ನಳುಕಲೇಕೆ ದ್ರೌಪದಿಯೆ ನೀನೆನುತ ಮಂಡಿಸಿದ ‖ ೧೬

ದ್ರೌಪದಿಯ ಮಾತು.

ಬೆದಱಲೇತಕೆ ನಮ್ಮ ನಾದನಿ
ಮೆದವಳಿಗ ನೀನಾದರೊಡಹು
ಟ್ಟಿದನು ನೀನಹೆ ಯೆನಗೆ ನಿನ್ನಲಿ ಬೇಱೆ ಭಯವೇನು |
ಸದನವಿದು ಪತಿಶೂನ್ಯ ತಾನೆಂ
ಬುದು ಸತಿವ್ರತೆಯಲ್ಲಿ ಯನುಚಿತ
ವಿದು ವಿಚಾರವ ಬಲ್ಲ ನೀನೆಂದಳು ಸರೋಜಮುಖಿ ‖ ೧೭

ಅಹಹ ಪಾತಿವ್ರತ್ಯವತಿಸ
ನ್ನಿಹಿತವಲ್ಲಾ ನಿನಗೆ ಹಲಬರ
ಮಹಿಳೆ ಸತಿ ಯೆನಿಸುವೊಡೆ ಸೂಳೆಯರೇಕಪುರುಷರಲಿ |
ವಿಹರಿಸುವರೇ ಲೋಕಧರ್ಮದ
ರಹಣಿ ರಚಿಸುವುದೈಸಲೇ ನಮ
ಗಿಹುದು ಮತವಲ್ಲದರೆ ಮಾಣಲೆನುತ್ತ ಮುಱಿದೆದ್ದ ‖ ೧೮

ತರಳೆ ಮಿಗೆ ತಲ್ಲಣಿಸಿ ತಳರೋ
ವರಿಯ ಹೊಗುತಿರಲಟ್ಟಿ ಮೇಲುದ
ಬರಸೆಳೆದು ತುಱುಬಿಂಗೆ ಹಾಯ್ದನು ಹಿಡಿದು ಕುಸುಬಿದನು |
ಬರಲಿದಳು ಹಾ ಭೀಮ ಹಾ ನೃಪ
ವರ ಧನಂಜಯ ಹಾ ಯೆನುತ ಕಾ
ತರಿಸೆ ಕಮಲಾನನೆಯ ಕಂಠವನವಚಿ ಹೊಱವಂಟ ‖ ೧೯

ಮುನಿಜನಗಳ ಬುದ್ಧಿವಾದ.

ರಾಣಿವಾಸವಲಾ ಯುಧಿಷ್ಠಿರ
ನಾಣೆ ಬಿಡು ಬಿಡು ಯೆನುತ ಸುಜನ

ಶ್ರೇಣಿ ಯಡ್ಡೈಸಿದರೆ ಬೀಸಿದನವನೆನ್ನು ಖಂಡೆಯವ ।
ರಾಣಿ ನಡೆ ನಡೆ ನಮಗೆ ಪಾಂಡವ
ರಾಣೆ ಯಿಟ್ಟರು ಮುನಿಗಳಲ್ಲಿರ
ಲಾಣೆ ತಪ್ಪುವುದೆನುತ ಹೊಱವೆಂಟಿಸಿದನಾಶ್ರಮವ ॥ ೨೦

ಒಡನೆ ಬಂದನು ಧೌಮ್ಯಮುನಿ ಮೊಱೆ
ಯಿಡುತ ಘನರಕ್ಷೋಘ್ನ ಸೂಕ್ತವ
ನಡಿಗಡಿಗೆ ಜಪಿಸುತ ಜಯದ್ರಥ ಬೇಡಬೇಡೆನುತ ।
ಮಿಡುಕುದೈತರಲೌಕಿ ಹೊಕ್ಕನು
ಪಡೆಯ ಮಧ್ಯದ ರಥವನೇಱಿಸಿ
ನಡೆದನವ ಸೂಟಿಯಲಿ ತಾಟಿಸಿ ರಥದ ವಾಜಿಗಳ ॥ ೨೧

ಚೆಲ್ಲಿತೀ ಋಷಿವರ್ಗ ದೆಸೆದೆಸೆ
ಗೆಲ್ಲ ಹರಿದರು ಬಾಯಮೋಱೆಯ
ಪಲ್ಲವದಪಾಣಿಗಳ ಸೂಸುವಬರ್ಹಿಸಮಿಧೆಗಳ ।
ತಲ್ಲಣದ ತೋಪಿನ ವಿಷಾದದ
ವಲ್ಲರಿಯ ಹೂದೊಡಬೆಗಳ ಹೊ
ಯ್ವಲ್ಲಗಳ ಋಷಿಜನವ ಕಂಡರು ಪಾಂಡುನಂದನರು ॥ ೨೨

ಋಷಿಜನರಿಂದ ಅಲ್ಲಿನ ವರ್ತಮಾನವನ್ನು ಕೇಳಿದುದು.

ಏನು ಗಜಬಜ ಋಷಿಜನಂಗಳಿ
ಗೇನಪಾಯವು ನಮ್ಮ ಬನದಲಿ
ದಾನವರ ದುರ್ಘಟದ ದುರ್ನಯವಲ್ಲಲೇ ಯೆನುತ ।
ಹಾ ನರೇಂದ್ರ ಮನೋಹರದ ಮೃಗ
ಯಾನಿರೂಢಿಯ ಬಿಸುಟು ಬಂದನಿ
ದೇನಿದೇನೊಳಗವೆನುತ ಭೀಮಾರ್ಜುನರು ನಗುತ[1] ॥ ೨೩

1 ಬೆಸಗೊಂಡನವರುಗಳ, ಚ.

ಹೇಱಲಮ್ಮೆವು ಜೀಯ ಸಿಂಧುನೃ
ಪಾಲದಶಮುಖನಾದನಾಪಾಂ
ಚಾಲಿ ಜಾನಕಿಯಾದಳಿಂದಿನ ರಾಜಕಾರ್ಯವಿದು ।
ಮೇಲೆ ರಾಘವತನದ ತೋಟಿಯು
ತೋಳ ಬಿಂಕವು ನಿಮ್ಮದೆನೆ ನರ
ಪಾಲನನುಜರು ನಗುತ ಹರಿದರು ಬಿಟ್ಟ ಸೂಟಿಯಲಿ ॥ ೨೪

ಐದುವಡೆ ಮೇಣ್ಮಂತ್ರಸಿದ್ಧಿಯು
ಕೈದು ಮನೆಯಲಿ ಬೇಂಟೆಕಾಱಱ
ಕೈದು ಕೈಯ್ಯಲಿ ಸಮಯುವಲ್ಲ ಮಹಾಸ್ತ್ರಕರ್ಷಣಕೆ ।
ಮೈದುನನ ವ್ಯಸರಸಕೀಹುಲು
ಗೈದು ಸಾಲದೆ ತಂಗಿ ದುಶ್ಶಳೆ
ಯೈದೆತನ ಬಯಲಾಯ್ತೆನುತ ಬೆಂಬತ್ತಿದರು ಖಳನ ॥ ೨೫

ಭೀಮಾರ್ಜುನಸೈಂಧವರ ಯುದ್ಧ.

ಕಂಡರಡವಿಯುಲವನನೆಲವೋ
ಭಂಡ ಫಡ ಹೋಗದಿರೆನುತ ಕೈ
ಗೊಂಡು ಸುರಿದರು ಸರಳನಾಪಿಂಗಳಿಯು ಸೇನೆಯಲಿ[1] ।
ಭಂಡರಿವದಿರು ತಾವು ಕಡುಹಿನ
ಖಂಡೆಯುದ ಸಿರಿವಂತರಿವರು
ದ್ದಂಡಭಟರೆನುತಾಜಯದ್ರಥ ನಿಲಿಸಿದನು ರಥವ ॥ ೨೬

ಸೆಱೆಸಹಿತ ತಾನೈದುವೆನು ನಿಜ
ಪುರಿಗೆ ನೀವಾನುವುದು ಭೀಮನ
ನಿಱಿವುದರ್ಜುನನೊಡನೆ ನಿಮಗುಗ್ಗಡದ ಸಮರವಿದು ।
ಇಱಿತಕಂಜದೆ ಸ್ವಾಮಿಕಾರ್ಯದ
ಹೊಱಿಗೆಯುಳ್ಳನವಾಯ ಬಿರುದಿನ
ಮುಱುಕವುಳ್ಳಭಟಾಳಿ ನಿಲುವುದು ತಡೆವುದರಿಭಟರ ॥ ೨೭

1 ಸ್ವಾಳಿಯುತ್ತೆ ೨೨ ಟ

ಸೈಂಧವನ ರಥವನ್ನು ತಡೆದುದು.

ಎಂದು ವಾಘೆಯ ಕೊಂಡು ರಥವನು
ಮುಂದೆ ದುವ್ವಾಳಿಸಿದನಿತ್ತಲು
ಹಿಂದೆ ನಿಂದುದು ಗಜರಥಾಶ್ವಪದಾತಿಚತುರಂಗ ।
ಇಂದುಮುಖಿಸಹ ತೇರು ಹಾಯ್ದುದು
ಮುಂದೆ ಹೊಳ್ಳುಗರಡ್ಡವಿಸಿದರೆ
ಬಂದ ಹೊಲ್ಲೆಹವೇನೆನುತ ಹೊಕ್ಕೆಚ್ಚನಾಪಾರ್ಥ ॥ ೧೮

ಮುಱಿದು ಮರನನು ಭೀಮನಹಿತರ
ನೊಱಸಿದನು ಮಲೆತಾನೆಗಳ ಹೊ
ಕ್ಕುಱುಬಿದನು ತುಱುಗಿದನು ಭಟರ ಭದ್ರವಿಮಾನದಲಿ ।
ಜುಱಿತಡಗಿನಿಂಡೆಗಳ ಮಿದುಳಿನ
ನಿಱಿಗರುಳನೊಣವಸೆಯ ಜಿಗಿಯಲಿ
ಮೊಱೆದುದಾಮರನಲ್ಲಿ ತಳಿತುದು ಹೂತುವೆಂಬಂತೆ ॥ ೧೯

ಸಾಯಲಾರದೆ ಸುಭಟವರ್ಗವೆ
ಕಾಯಲಿರಿಸಿದೆ ಭಟರ ತಲೆಗಳು
ಬೀಯವಾದುವು ಮತ್ತೆ ರಪಣವ ತೋಱಿಸಾ ರಣಕೆ ।
ರಾಯರಂಗವನೆತ್ತ ಬಲ್ಲ ನಿ
ಜಾಯುಧವ ಹಿಡಿ ನಿನ್ನ ಬಿರುದಿನ
ಬಾಯಲೆಱೆವುದು ಮಧುವನೆನುತುರುವಣಿಸಿದನು ಭೀಮ ॥ ೨೦

ಧನುವ ಕೊಂಡನು ಸರಳಸಾರದ
ಲನಿಲಜನು ಮುಸುಕಿದನು ಪಾರ್ಥನ
ಮೊನೆಗಣೆಯ ತಱಿದೊಟ್ಟೆ ಬೊಬ್ಬಿಱಿದನು ಜಯದ್ರಥನು ।
ತನತನಗೆ ಸೈಂಧವನ ಬೆಂಗಾ
ಹಿನ ಭಟರು ಭಾರಣೆಯಲೈದಿದ
ರನಿತುವನು ನಿಮಿಷದಲಿ ನಿರ್ನೈಸಿದನು ಕಲಿಪಾರ್ಥ ॥ ೨೧

ಅಂಜದಿರು ಕಮಲಾಕ್ಷಿ ಧೌಮ್ಯನಿ
ರಂಜನನ ಸುತಿವಾಕ್ಯವೇ ಪವಿ
ಪಂಜರವಲೇ ಯೆನುತ ಹಾಯ್ದನು ಪವನಸುತ ರಥಕೆ ।
ಕುಂಜರನು ಕೈಯಿಕ್ಕಿ ನಿಲುಕದೆ
ಕಂಜವನವನಿಲಜನ ಝಾಡಿಯು
ಜಂಜಡಕೆ ಧಿಟ್ಟನೆ ಜಯದ್ರಥನರಸ ಕೇಳೆಂದ ॥ ೩೨

ಸೆಳೆದೊಡಾಯುಧವಾತನೀತನ
ನಿಲುಕಿ ಹೊಯ್ದನು ದಂಡೆಯಿಂದದ
ಕಳೆದು ಮಾರುತಿ ಹೊಕ್ಕಡವ ಚಿಮ್ಮಿದನು ಚೀಲಯುವ ।
ಖಳನ ಬಾಹುವನೊದೆದು ತುಱುಬಿಗೆ
ನಿಲುಕಿ ಕುಸುಬಿದನವನ ಗೋಣಿನ
ನಲಗ ಹೊಡಲು ಕಂಡನರ್ಜುನನಾವೃಕೋದರನ ॥ ೩೩

ಭೀಮ ಬಿಡಿಸದಿರವನ ಗಂಟಲ
ನೀಮದಾಂಧನನೊಯ್ದು ಕೆಡಹುವ
ಭೂಮಿಪತಿಯಂಘ್ರಿಯಲಿ ಕಾಯಲಿ ಮುನಿದು ಮೇಣ್ಕೊಲಲಿ ।
ತಾಮಸನ ಬಿಗಿ ಯೆನಲು ನಗುತು
ದ್ದಾಮನೆಂದನು ಕೊಲುವೆನೆಂದೇ
ಕಾಮಿಸಿದೆನ್ನೈ ಪಾರ್ಥ ಕೆಡದೇ ಯೆನ್ನ ಸಂಕಲ್ಪ ॥ ೩೪

ನೆನೆಯದಿರು ಸಂಕಲ್ಪಹಾನಿಯು
ನನುಚಿತಕೆ ಮನವೊಡದಿರು ಮಾ
ನಿನಿ ಯಿರಲಿ ರಥದಿಂದ ಕುನ್ನಿಯ ಕೆಡಹು ಧಾರುಣಿಗೆ ।
ಮುನಿಪನೇಱಲಿ ರಥದ ವಾಜಿಯು
ನನುಕೊಳಿಸಿ ಸಾರಥ್ಯದಲಿ ಬರ
ಲೆನುತ ಭೀಮನ ಮನದ ಖತಿಯನು ಬಿಡಿಸಿದನು ಪಾರ್ಥ ॥ ೩೫

ಸೈಂಧವನನ್ನು ಕಟ್ಟಿ ಧರ್ಮರಾಯನ ಬಳಿಗೆ ತಂದುದು.

ವೈರಿಬಾಹುದ್ವಯುವ ಬದ್ದುಗೆ
ದಾರದಲಿ ಕಟ್ಟಿದನು ನಾರೀ
ಚೋರ ನಡೆ ನಡೆ ಯೆನುತ ತಿವಿದನು ಬಿಲ್ಲಕೊಪ್ಪಿನಲಿ ।
ಕೌರವೇಂದ್ರನ ಮತವೊ ನಿನ್ನವಿ
ಕಾರವೋ ಹೆಂಗಳ್ಳವಿದ್ಯೆಯು
ನಾರು ಕಲಿಸಿದರೆನುತ ತಂದರು ಧರ್ಮಜನ ಹೊರೆಗೆ ॥ ೩೬

ಅಣ್ಣನ ಅಪ್ಪಣೆಯಿಂದ ಭೀಮನು ಸೈಂಧವನನ್ನು ಬಿಡುವಿಕೆ.

ಸಿಂಧುಭೂಪನಲಾ ಭುಜಾಗ್ರದ
ಬಂಧನವ ಬಿಡು ಭೀಮ ಶಿವ ಶಿವ
ನೊಂದನೈ ನಿಷ್ಕರುಣಿ ನೀನೆಂದೆನಲು ನರನಾಥ [1] ।
ಕೊಂದು ಬಿಸುಡುವನೇವು ಕಂದ
ರ್ಪಾಂಧಕನನುಳುಹುವೊಡೆ ತನಗಿ
ನ್ನಿಂಧನವ ಹೂಡಿಸುವುದೈಸಲೆ ಯೆಂದನಾಭೀಮ ॥ ೩೭

ಹದನಿದೊಳ್ಳಿತು ತಂಗಿ ವೈಧ
ವ್ಯದಲಿ ನವೆಯಳ ಸುಬಲನಂದನೆ
ಯುದರ ಕುಂತೀದೇವಿಯುದರಕೆ ಭಿನ್ನಭಾವನೆಯೆ ।
ಕದನದಲಿ ಹಿಡಿವಡದವರ ಕೊಲು
ವುದು ನರೇಂದ್ರರ ಧರ್ಮವಲ್ಲಿ
ನ್ನಿದಱ ಮೇಲಾವಱಿಯೆವೆಂದನು ಧರ್ಮನಂದನನು ॥ ೩೮

ಈತನಱಿಯದೆ ಮತ್ಪ್ರತಿಜ್ಞಾ
ಖ್ಯಾತಿಮಸುಳದೆ ತಿದ್ದುವದನೇ
ಭೂತಳಾಧಿಪ ನೀವು ಬೆಸಸುವುದೆನಲು ಮುನಿಜನವ ।

---

[1] ಸೀವೆಂದನವನೀಶ, ಚ,

ಆತ ನೋಡಿದನಾವುದಿದಕನು
ನೀತಿಯೆನೆ ಧರ್ಮವ್ಯಾದಿಸುಜನ
ವ್ರಾತ ನಿಶ್ಚೈಸಿದುದು ಮನದಲಿ ಧರ್ಮನಿರ್ಣಯುವ ॥ ೩೯

ಮಾನಧನರಿಗೆ ವಧೆಯೆನಿಪುದಭಿ
ಮಾನಭಂಜನವಿವನು ಕಟ್ಟಭಿ
ಮಾನಿ ಭಂಗಿಸಿ ಬಿಟ್ಟೊಡೀತಂಗಿದುವೆ ಮರಣವಲ ।
ಈನುಡಿಯು ಸಲಿಸಿದನು ಕಲಿಪವ
ಮಾನಸುತನಿದು ಧರ್ಮಶಾಸ್ತ್ರವಿ
ಧಾನವನು ಚಿತ್ತೈಸಿ ಯೆಂದುದು ಸಕಲಮುನಿನಿಕರ ॥ ೪೦

ಅಹುದೆನುತ ಕಲಿ ಭೀಮ ಮಾಡಿದ
ರಹವನದನೇನೆಂಬೆನೈ ಕೂ
ರಿಹಕಠಾರಿಯ ಹಣಿಗೆಯಲಿ ಬಾಚಿದನು ಸಿರಿಮುಡಿಯ ।
ಅಹಿತಶಿರವಿದೆಲಾ ಯೆನುತ ಗೃಹ
ಮಹಿಳೆಯರು ವಿಹಿತಾಂಗುಲಿಯ ಸಂ
ಪ್ರಹರಣದಿ ಪರಿಭವಿಸಿದರು ಘೊಳ್ಳೆನಲು ನಿಖಿಳಜನ ॥ ೪೧

ಬಿಟ್ಟರೀತನ ತೋಳ ಹಿಂಗೈ
ಗಟ್ಟುಗಳ ನೆಲೆ ಘಡ ಕುನ್ನಿ ಹೋಗೆನೆ
ಕೆಟ್ಟಕೇಡನದೇನ ಹೇಳುವೆನಾಜಯದ್ರಥನ ।
ಬೆಟ್ಟದಿಂದುರುಳುವೆನೊ ಹಾಸಱೆ
ಗಟ್ಟ ಹೊಗುವೆನೊ ಮಡುವನೆನುತಡಿ
ಯಿಟ್ಟನಂತಃಕಲುಷ ಚಿತ್ತದುರಂತಚಿಂತೆಯಲಿ ॥ ೪೨

ಜಲಿಕ ಸೈಂಧವನ ತಪಸ್ಸು

ಚಿಂತಿಸಿದೊಡೇನಹುದು ಹೊಗುವೆನು
ಕಂತುಮಥನನ ಮಱೆಯನಿವದಿರಿ
ಗಂತಕನು ತಾನಹೆನು ಗೆಲುವೆನು ಬಳಿಕ ಬವರದಲಿ ।

ಭ್ರಾಂತಿಯೇ ಬಿಡು ತನ್ನನೆನುತ ಪು
ರಾಂತಕಧ್ಯಾನದಲಿ ವಿಮಲ
ಸ್ವಾಂತನೇಕಾಗ್ರದಲಿ ಭಜಿಸಿದನಿಂದುಶೇಖರನ ॥ ೪೩

ಇವನ ನಿಷ್ಠೆಗೆ ಮೆಚ್ಚಿ ಗೌರೀ
ಧವನು ಮೈದೋಱಿದನು ರಾಜ
ಪ್ರವರ ಕೊಟ್ಟೆನು ಬೇಡು ಸಾಕು ಭವನ್ಮನೋರಥವ ।
ವಿವರಿಸೆನೆ ಕಂದೆಱೆದು ಮುಂದಣ
ಶಿವನ ಕಂಡನು ಮೈಯ್ಯ ಜಾಚಿದ
ನವನಿಯಲಿ ಜಯ ಜಯ ಮಹೇಶ ನಮಶ್ಶಿವಾಯ ಯೆನೆ ॥ ೪೪

ಸೈಂಧವನಿಗೆ ಈಶ್ವರನು ವರವನ್ನು ಕೊಟ್ಟುದು

ವರದನಾದ್ಯೆ ಶಂಭು ಕರುಣಾ
ಕರ ಹಸಾದವು ಪಾಂಡುಸುತರೈ
ವರನು ದಿನವೊಂದಱಲಿ ಗೆಲುವುದು ತನಗಭೀಷ್ಟ ವಿದು ।
ಕರುಣಿಸಾದರೆ ಯೆನಲು ನಕ್ಕನು
ಗಿರಿಸುತೆಯ ಮೊಗ ನೋಡಿ ಭಾರಿಯ
ವರವನೆ ವರಿಸಿದನು ಜಯದ್ರಥನೆಂದನಿಂದುಧರ ॥ ೪೫

ಪಾಶುಪತಶರವೆನ್ನ ಸತ್ವವಿ
ಲಾಸನದೆ ಫಲುಗುಣನ ಕೈಯ್ಯಲಿ
ವಾಸವಾಬ್ಜಭವಾದಿಬಿರುದರ ಬಗೆಯದಾಹವಕೆ ।
ಆಸುಭಟ ನೊಬ್ಬನನುಳಿಯೆ ಬಳಿ
ಕೇಸು ಪಾಂಡವರುಗಳನೊಂದೇ
ವಾಸರದಿ ಗೆಲು ಹೋಗು ನೀನೆಂದನು ಮಖಧ್ವಂಸಿ ॥ ೪೬

ಸಾಕು ಜೀಯ ಹಸಾದ ವೆಂದವಿ
ವೇಕನಿಧಿ ಬೀಳ್ಕೊಂಡನೀಶನ
ನೀಕುಮಾರರು ಬನದಲಿದ್ದರು ಖತಿಯ ಭಾರದಲಿ ।

ನೂಕು ನೂಕಾಡುವ ವಿಪತ್ತಿನ
ವೈಕೃತಿಗೆ ನಾನೊಬ್ಬನೇ ದಿಟ
ವಾಕೆವಾಳನೆ ಶಿವ ಶಿವಾ ಯೆಂದರಸ ಬಿಸುಸುಯ್ದ ॥ ೪೭

ಯುಧಿಷ್ಠಿರಮಾರ್ಕಂಡೇಯಸಂವಾದ

ಬಂದಮಾರ್ಕಂಡೇಯಮುನಿಗಭಿ
ವಂದಿಸಿದನೀಬ್ರಹ್ಮಸೃಷ್ಟಿಯು
ಲಿಂದು ತಾನಲ್ಲದೆ ಸುಧಾಕರಸೂರ್ಯವಂಶದಲಿ ।
ಹಿಂದೆ ನವೆದವರಾರು ಪರಿಭವ
ದಿಂದ ನಮ್ಮಂದದಲಿ ವಿಪಿನದೊ
ಳಿಂದುಮುಖಿಯರು ಭಂಗ ಬಟ್ಟರೆ ಯೆನುತ ಬಿಸುಸುಯ್ದ ॥೪೮

ಎನಲು ನಕ್ಕನು ಮುನಿಪನವನಿಪ
ಜನಶಿರೋಮಣಿ ಕೇಳು ನಿಮ್ಮಾ
ಬನದೊಳಬುಜಾನನೆಯನೊಯ್ದನಲೇ ಜಯದ್ರಥನು ।
ಅನುಜರಾಗಳೆ ಹರಿದು ಮರಳಿಚಿ
ವನಜಮುಖಿಯನು ತಂದರವನನು
ನೆನೆಯಬಾರದ ಭಂಗಬಡಿಸಿದರೆಂದನಾಮುನಿಪ ॥ ೪೯

ಅರಸ ಮಱುಗದಿರಾವಪಾಡಿನ
ನರಪತಿಗಳ್ಳೆ ನೀವು ವಿಶ್ವಂ
ಭರನ ಘನತೆಯ ಕೇಳಿದಱಿಯಾ ಕೈಟಭಾಂತಕನ ।
ವರಮುನಿಯ ಶಾಪವನು ತಾನೇ
ಧರಿಸಿ ನರರೂಪಿನಲಿ ನವೆದುದ
ನರಸ ಬಣ್ಣಿಸಲೆನ್ನ ಹವಣಲ್ಲೆಂದನಾಮುನಿಪ ॥ ೫೦

ಶ್ರೀರಾಮಕಥೆಯನ್ನು ಮಾರ್ಕಂಡೇಯರು ಹೇಳಿದುದು

ಅಡವಿಯಲಿ ತೊಳಲಿದನು ರಾಮನ
ಮಡದಿಯನು ರಕ್ಕಸನು ಕದ್ದನು

ಕೆಡಿಸಿ ಬೞಿಕಱಿಸಿದನು ರಾಣೀವಾಸವನು ಕೂಡೆ ।
ಕಡಲ ಮಧ್ಯದ ಖಳನೊಡನೆ ಕೈ
ದುಡುಕಲಲ್ಲಿಗೆ ತೆತ್ತಿಗರು ನಾ
ಡಡವಿಗೋಡಗದಾಳುಕುಮರೆಗಳ ಸುರವಿಗ್ರಹಕೆ ॥ ೫೧

ಸಾಗರದ ತೆಱೆಗಳಲಿ ಗಿರಿಗಳ
ತೂಗಿ ಸೇನೆಯ ನಡೆಸಿ ದಶಶಿರ
ನಾಗ ಹಿಂಗಿಸಿ ರಾಮ ರಮಣಿಯ ಬಿಡಿಸಿದಾಯಸವ ।
ಈಗಳೀನರರೇನನಾನುವ
ರಾಗರುವರಘುರಾಮ ವಜ್ರಕೆ
ಬೇಗಡೆಯ ವಿಧಿ ಮಾಡಿತೆಂದನು ಮುನಿ ನೃಪಾಲಂಗೆ ॥ ೫೨

ಎಂದು ರಾಮಾಯಣವ ವಿಸ್ತರ
ದಿಂದ ಹೇೞುತ ಸಂತವಿಟ್ಟನು
ಕಂದುಕಸರಿಕೆ ಯಡಗಿತಾಧರ್ಮಜನ ಚಿತ್ತದಲಿ ।
ಸಂದಣಿಸೆ ತನುಪುಳಕಪರಮಾ
ನಂದರಸಮಯನಯನಜಲಭರ
ದಿಂದಲೆಸೆದರು ವೀರನಾರಾಯಣನ ಕರುಣದಲಿ ॥ ೫೩

ಇಪ್ಪತ್ತನಾಲ್ಕನೆಯ ಸಂಧಿ ಮುಗಿದುದು.

## ಇಪ್ಪತ್ತೈದನೆಯ ಸಂಧಿ.

ಸೂಚನೆ.

ಮಾರಣದ ಮಂತ್ರದಲಿ ಪಡೆದನು
ದಾರಮೃತ್ಯುವನರಸ ಕೌರವ
ವೀರ ಪಾಂಡುಕುಮಾರಕರನೊಱಸೆಂದು ನೇಮಿಸಿದ ।

ಮಾರ್ಕಂಡೇಯನು ನಾನಾಕಥೆಗಳನ್ನು ಹೇಳಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ರಾಮಾಯಣವನಾಮುನಿ
ಹೇಳಿದನು ಹೋಳಿದನು ಭೂಪನ ಮಾನಸವ್ಯಥೆಯ |
ಹೇಳಿದನು ಸಾವಿತ್ರಿಯುನ್ನತ
ಶೀಲವನು ಪತಿಭಕ್ತಿಯಿಂದಲೆ
ಕಾಲನುಂಗಿದ ಪತಿಯ ತಾ ಮರಳಿಸುತ ತಂದುದನು || ೧

ಪತಿಭಕುತಿಯುನ್ನತಿಕೆಯಲಿ ನಿ
ಷ್ಠಿತೆಯಲಾ ಸಾವಿತ್ರಿಯಾಕೆಯು
ನುತಚರಿತ್ರರ ಪೋಲು ನಿಮ್ಮಾ ದ್ರೌಪದೀದೇವಿ ||
ಹಿತವನಾಚರಿಸುವಳು ವಂಶೋ
ನ್ನತಿಯನುದ್ಧರಿಸುವಳು ನಿಮಗುಪ
ಹತಿಯದೆಲ್ಲಿಯದೆಂದು ಮಾರ್ಕಂಡೇಯಮುನಿ ನುಡಿದ || ೨

ಮಾನನಿಧಿಸಾವಿತ್ರಿಯ ಉಪಾ
ಖ್ಯಾನವನು ಕೇಳಿದನು ಚಿತ್ತ
ಗ್ಲಾನಿಯನು ಬೀಳ್ಕೊಟ್ಟನಮಳೋತ್ಸಾಹಭಾವದಲಿ ||
ಕಾನನಾನುಭವಕ್ಕೆ ಕಡೆ ಯಿ
ನ್ನೇನು ನಮಗೆನುತತುಳಹರುಷಾ
ನೂನಕುಂತೀತನುಜರಿರ್ದರು ಪರ್ಣಶಾಲೆಯಲಿ || ೩

ಹಿಂಗಿದುವು ಹನ್ನೊಂದುವರೆವರು
ಷಂಗಳಟವೀತಟದೊಳಿರಲಾ
ತಿಂಗಳೊಳಗೊಂದಾದುದಾಪತ್ತಾಮಹೀಶರಿಗೆ ||
ತುಂಗವಿಕ್ರಮನೀಮುನೀಶ್ವರ
ಸಂಗತಿಯ ಸೊಗಸಿನಲಿ ಬಹುದಿವ
[illegible] || ೪

ಕೀಚಕನು ಕೌರವರ ಗೋವುಗಳನ್ನು ಹಿಡಿದುಕೊಂಡು ಹೋದುದು.

ಇತ್ತಲಾಕುರುರಾಯವೆಳತವ
ಮುತ್ತಿದನು ಕೀಚಕನು ತುರುಗಳ
ನೊತ್ತವನು ತೋಳಡಿದು ತಿರುಗಿದನತ್ತ ವಹಿಲದಲಿ ||
ಬಿತ್ತಿದರು ಕುರುಪತಿಗೆ ಭಯುವನು
ತತ್ತಳದ ತವಕದಲಿ ರಾಯನ
ನೊತ್ತದಕ್ಷೋಹಿಣಿಯು ಮಾರ್ಬಲಸಹಿತ ಹೊರವಂಟ ||　　೫

ಭೀಷ್ಮಾದಿಗಳು ಕೀಚಕನನ್ನು ತಡೆದುದು.

ನದಿಯ ಮಗ ಗುರು ಗುರುತನೂಜನು
ವಿದುರಭಾರದ್ವಾಜಮುಖ್ಯರು
ಕದನಗಲಿಗಳು ಕರ್ಣಸೌಬಲಸಕಲಭಟನಿಕರ ||
ಮದಮುಖದ ಕಾಲಾಳು ತೇರಿನ
ಕುದುರೆ ಮದಗಜರಾಜಿಬಹಳಾ
ಭ್ಯುದಿತ ಬಲ ನೆರೆದೆದ್ದು ನಡೆದುದು ಭರದ ಪಯಣದಲಿ ||　　೬

ಬಿಟ್ಟಸೂಟಿಯೊಳ್ಳೆದಿ ಪಯಣದೊ
ಳಟ್ಟಣಿಸಿ ನಿಂದಲ್ಲಿ ನಿಲ್ಲದೆ
ಮುಟ್ಟಿ ಬಂದರು ತಾಗಿದರು ಚಹೂಣಿಯಲಿ ನಾಯಕರು ||
ಬಟ್ಟವಿಸಿ ಕೀಚಕನು ಮುಳಿದರೆ
ಯಟ್ಟಿ ಹೊಯ್ದರು ಪುರಕೆ ಮುಷ್ಟಾ
ಮುಷ್ಟಿಯಲಿ ಗುರುಭೀಷ್ಮರವಿಸುತರಡ್ಡಗಟ್ಟಿದರು ||　　೭

ಎಲವೊ ಕೀಚಕ ಹೋಗದಿರು ನಿ
ಲ್ಲೆಲವೊ ಹುಲುಮಂಡಳಿಕ ನಿನ್ನಯ
ಬಲುಗಡಿಯ ತೋರುವುದು ನಿನ್ನಂತರದ ರಾಯರಲಿ ||
ತೊಲಗು ಸ್ಥೈರಿಸೆನುತ್ತಲುಜಿ ಬಿಲು

ಬಲುಸರಳ ಸರಿವಳೆಯ ಸುರಿಯ
ಲ್ಕಲಘುವಿಕ್ರಮ ಕೀಚಕನು ಸವೆಱದನು ಶರತತಿಯ ॥ ೮

ಎರಡುಶರದಲಿ ಕರದ ಚಾಪವ
ತರಿದನಾರವಿಸೂನು ತುರಗವ
ವರರಥವ ಹುಡಿಮಾಡಿದನು ಗಂಗಾಕುಮಾರಕನು ।
ಶರತತಿಯುಲವನುರವನುದರವ
ಬಿರಿಯ ಕೆತ್ತಿದ ದ್ರೋಣ ನೊಸಲಲಿ
ಯಿರದೆ ಹಾಯ್ದನು ಕೀಚಕನು, ಪರಿಭವದ ಸೂಱೆಯಲಿ ॥ ೯

ಮುಱದನುತ್ತರನಾವಿರಾಟನು
ಪುರಕೆ ಸರಿದನದಿತ್ತ ತುಱುಗಳು
ಮರಳಿದುವು ತಾ ಯಿರುಳುಗಾಳಗದೊಳಗೆ ನಲವಿನಲಿ ।
ಅರಸ ಕೌರವರಾಯ ಹಸ್ತಿನ
ಪುರಿಗೆ ಬಂದನು ಮತ್ತೆ ರಿಪುಗಳ
ಪರಿಹರಿಸುವೆಂದವನು ನೆನೆದೋರಂತೆ ಚಿಂತಿಸಿದ ೧೦

ದುರ್ಯೋಧನನು ಮಾರಣಹೋಮಕ್ಕೋಸ್ಕರ ಕನಕನನ್ನು ಕರೆಕಳುಹಿದುದು.

ಅರಸ ಕೇಳೈ ಕನಕನೆಂಬನು
ವರಮಹಾಮಾರಣದ ಯಜ್ಞದ
ಪರಿಯನಱಿಯುವನೆಂದು ಕುರುಪತಿ ಕರೆದು ಬೆಸಗೊಳಲು ।
ಕರವ ಮುಗಿದನು ಕೇಳು ಭಾಷೆಯ
ನರಸ ಯಜ್ಞವರಚಿಸುವೆನು ಕುರು
ಸರಸಿರುಹವನದಿನಪನೆಂಬುದ ಕೇಳ್ದು ನೀನಱಿಯು ॥ ೧೧

ಕನಕನು ತನ್ನನ್ನು ಹೊಗಳಿಕೊಂಡುದು.

ವಿತಳಗಳನೇಱುವೆನು ಬಗಿದಾ
ಯುತಳದಲ್ಲಡಗಿರಲಿ ಮೋಣೀ

ಕ್ಷಿತಿಯನೇಱಿನು ಮೀಱಿ ಬ್ರಹ್ಮನ ಪುರಿಯೊಳಡಗಿರಲಿ ।
ಪೃತೆಯ ಮಕ್ಕಳ ಕೊಂದು ಪೂರ್ಣಾ
ಹುತಿಯೊಳಗ್ನಿಗೆ ಬೀಳದೊಡೆ ಸ
ನ್ನುತಹುತಾಶನಗೀವೆ ತನುವನು ಕೇಳು ಕುರುರಾಯ ॥ ೧೨

ಮೃಡನು ತನ್ನಯ ಜಡೆಯುಡಿಯನಡು
ಗಡಲಮಡುವಿನೊಳಿರಿಸಿ ಕೊಳ್ಳಲಿ
ಬಿಡದೆ ಪಾಂಡುಕುಮಾರರಡಗಲಿ ಹರಿಯ ಹೊಕ್ಕುಳಲಿ ।
ಮಡಗಿ ಕೊಳಲಾಬ್ರಹ್ಮ ತನ್ನಯ
ನಡುಕಮಂಡಲದೊಳಗೆ ರಿಪುಗಳ
ಕಡಿದು ತಿನಿಸುವೆನಿದಕೆ ಸಂಶಯವೇಕೆ ಹೇಳೆಂದ ॥ ೧೩

ಆಗ ದುರ್ಯೋಧನನು ಯಜ್ಞಸಾಧನವನ್ನು ಒದಗಿಸಿಕೊಟ್ಟುದು.

ಎನಲು ಹರುಷಿತನಾಗಿ ಕೌರವ
ಜನಪನೇಕಾಂತದಲಿ ಮನ್ನಿಸಿ
ಕನಕಗೊಲಿದೊಡನಿತ್ತನನುಪಮಹೋಮಸಾಧನವ ।
ನೆನೆದ ರೀತಿಯ ತಂತ್ರ[1]ಮಾರಣ
ದನುಪಮಿತಮಂತ್ರೋಚ್ಚರಿತರಹ
ವಿನುತಪೂಜಾಪಾತ್ರರನು ಕರೆಸಿದನು ಭೂಸುರರ । ೧೪

ಚರುಘೃತಾದಿಯ ಸಂಸ್ತರಣದಿಂ
ಬರುಹಿಹೊಱಿಗಳ ಸಮಿಧೆಯಾಹುತಿ
ವರಣಮಂತ್ರಾನ್ಸ್ವಾಹಪೂರ್ಣಾಹುತಿಸದಾಕೃತಿಯ ।

ಯುದ್ಧದಲ್ಲಿ ಭೂತೋತ್ಪತ್ತಿ.

ಕರಣಕಾರ್ಪಣ್ಯದಲಿ ಹುತವಹ
ಗೊಱೆದು ಮೊಚ್ಚೆಸಲಗ್ನಿಕುಂಡದೊ
ಳುರುಭಯಂಕರಭೂತವುದಿಸಿತು ರೌದ್ರರೂಪಿನಲಿ ॥ ೧೫

---

1 ನೆನೆದನೊದರುವಮಂತ್ರ, ಖ.

ಮೂಱುಮೊಗ ಬಾಯ್‌ಱು ಕಣ್ಣಿ
ರಾಱು ಕೃತ್ಯೆಯು ಬೆನ್ನೊಳೊಪ್ಪುವ
ಮೂಱುಕಾಲುಗಳೇೞುಕೈ ಕಣ್ಣೊಂದು ನೆತ್ತಿಯಲಿ ।
ತೋರಕರದ ಕಪಾಲವೊಂದುಱೆ
ಮೀಱಿ ಮೆಱೆವ ತ್ರಿಶೂಲಬಟ್ಟಲ
ಭೂರಿಭೀಕರಭೂತ ನುಡಿದುದು ಕೃತ್ಯವೇನೆಂದು ॥ ೧೬

ಆ ಭೂತವು ಕನಕನ ಅಪೇಕ್ಷೆಯಂತೆ ಪಾಂಡವರನ್ನು ಕೊಲ್ಲಲು ಅವರ ಆಶ್ರಮಕ್ಕೆ ಬಂದುದು.

ಹೋಗು ಪಾಂಡವರಾಯರಿಹ ವನ
ಕಾಗಿ ನೀನವರೈವರನು ನೆಱೆ
ನೀಗಿ ನೀನಾಹುತಿಯನಿಂದನುವಾಗಿ ಭಕ್ಷಿಪುದು ।
ಬೇಗದಲಿ ಕೊಲು ಹೋಗಿಯವರನು
ಸಾಗಿಸಿಯೆ ಯಡಗಗ್ನಿಕುಂಡದೊ
ಳೀಗಿದುವೆ ತಾ ನೇಮವೆಂದನು ಕನಕ ಕೈಮುಗಿದು ॥ ೧೭

ಎಂದು ನೇಮಿಸೆ ಭೂತ ಭುಗಿಭುಗಿ
ಲೆಂದು ಧಗಧಗಿಸುತ್ತಲುರಿ ಭುಗಿ
ಲೆಂದು ಕರ್ಬೊಗೆ ತುಡುಕಲಬುಜಭವಾಂಡಮಂಡಲವ ।
ನಿಂದು ನೋಡುತ ಕೆಲಬಲನನೋ
ರಂದದಿಂ ದಗೆ ಪಾಂಡುಪುತ್ರರ
ನಂದಗೆಡಿಸುವೆಭರದೊಳೈದಿತು ಘೋರಕಾನನಕೆ ॥ ೧೮

ಕಂಡು ವ್ಯೋಮೆಱೆದಾಗ ಖಗಗಳು
ದಿಂಡುಗೆಡೆದುವು ಹೊಗೆಯ ಹೊಯ್ಲಿನ
ಚಂಡತರದ್ಯೆವೆಕ್ಕೆ ಸರಿಯಿದಿರಿಲ್ಲವೆಂದೆನಲು ।
ಗಂಡುಗರ್ವವುದಾರತೇಜೋ
ದ್ದಂಡಮಂಡಿತರಾಹುಗಜನು
ದ್ದಂಡಭೂತ ವಿಪಿನಕ್ಕೆ ನಡೆದುದು ಪಾಂಡವಾಶ್ರಮಕೆ ॥ ೧೯

ಆಗ ಶ್ರೀಕೃಷ್ಣನು ಪಾಂಡವರ ಸಂರಕ್ಷಣೆಗೋಸ್ಕರ ಉಪಾಯ
ವನ್ನು ಚಿಂತಿಸಿದುದು.

ಇತ್ತಲಾದ್ವಾರಕೆಯೊಳಗೆ ದೇ[1]
ವೋತ್ತಮನು ತಾ[2] ನಱಿದು ತನ್ನಯ
ಚಿತ್ತದಲಿ ಕೃತ್ರಿಮದ ಮುಖದೊಳಗಱಿವರಿವರೆನುತ ।
ಮೃತ್ಯುವಿರಹಿತರೂಪನಾಕ್ಷಣ
ಕಿತ್ತಲೊಬ್ಬನೆ ನಡೆದು ಬಂದನು
ಭಕ್ತವತ್ಸಲನಾಗಿ ಮಮ ಪ್ರಾಣಾ ಹಿ ಬಿರುದೆನಿಸಿ ॥ ೨೦

ಯಮನ ನೆನೆಯಲು ಬಂದನಾಕ್ಷಣ
ಕಮಲನಾಭಗೆ ಕರವ ಮುಗಿದನು
ಯಮಗೆ ಬೆಸನೇನುಂಟು ಜೀಯ ನಿರೂಪಿಸುವುದೆನಲು ।
ಸುಮನಸಾನತಚರಣ ನುಡಿದನು
ವಿಮಳಕೃತ್ರಿಮಮುಖದಲೞಿವರು
ಹವಣ ಹೇಳೆಂದೆನಲು ನುಡಿದನು ಭಾನುನಂದನನು ॥ ೨೧

ದೇವ ನೀನೇ ಬಲ್ಲೆ ಮಾಯಾ
ಕೋವಿದನು ನೀನಱಿಯದುದ ನಾ
ವಾವತೆಱದಿಂ ತಿಳಿವೆವೀಪಾಂಡವರ ಜೀವನಕೆ ।
ಆವತೆಱದಿಂದುೞಿವು ಘಟಿಸುವು
ದಾವ ಬಗೆಯನು ಬಲ್ಲಿರೆನೆ ರಾ
ಜೀವಲೋಚನ ನಗುತ ಬೞಿಕಿಂತೆಂದನಾಯಮಗೆ ॥ ೨೨

ಅಸುವನುೞಿದವರುಗಳ ಮುಟ್ಟದು
ವಿಷದ ಕೊಳದೊಳಗಿರಲು ಕೊಲ್ಲದು
ಅಸಮತತ್ವದ ಧರ್ಮಸಾರವ ನುಡಿಯುತಿರೆ ಕಂಡು ।

---

1 ಳೋಲಗ ಖ, ಝ. 2 ವಿತ್ತುಹರಿಯಿದ, ಖ, ಝ.

ಮಿಸುಕದಿದು ತಾ ಮರಳಿ ಕನಕನ
ವಸುಮತೀಶನ ಮುಖಿದು ಪೋಪುದು[1]
ವಿಷಮಭೂತಕ್ಕಂಜಭವಾದಿಗಳರಿದು ಕೇಳೆಂದ ॥ ೨೩

ಯಮನಿಗೆ ಯಕ್ಷನಾಗೆಂದು ಹೇಳಿ ತಾನು ಮೃಗರೂಪವನ್ನು ತಾಳುವೆನೆಂದು ಹೇಳಿದುದು.

ನೀನು ವನದೊಳು ವಿಷಸರೋವರ
ದಾನದಿಯು ಕಾದಿಹುದು ನಾನಾ
ಮಾನನಿಧಿಗಳ ಅಗ್ನಿಹೋತ್ರದ ಮನೆಯು ಹೊಕ್ಕಲ್ಲಿ ।
ನ್ಯೂನದೌಪಾಸನದ ಅರಣಿಯು
ಸಾನುರಾಗದಿ ಮೃಗದೊಳೊಯ್ವೆನು
ಕಾನನಾಂತರಬಳಿಸಲುವರೆನ್ನೊಡನೆ ನೃಪವರರು ॥ ೨೪

ಆ ಭೂತವು ಇದನ್ನು ನೋಡಿ ಹಿಂತಿರುಗುವುದೆಂದು ಹೇಳಿದುದು.

ಬಂದು ಮಾರ್ಗಶ್ರಮದ ಬಳಲಿಕೆ
ಯಿಂದ ನೀರಡಸುವರು ವಿಷವನು
ಮುಂದರಿಯದೀಂಟುವರು ಸಾವರು ಬಳಿಕಲವನಿಪರು ।
ನಿಂದು ನೀರೊಳು ಧರ್ಮಶಾಸ್ತ್ರವ
ನಂದದಿಂ ನಿನ್ನೊಡನೆ ಪೇಳುವ[2]
ಸಂಧಿಯಲಿ ಯಾಕೃತ್ಯೆ ತಾನನುಚಿತದಿ ಮರಳುವುದು[3] ॥ ೨೫

ಎನಲು ಯಮ ಕೈಕೊಂಡು ಬೀಳ್ಕೊಂ
ಡನುಪಮನ ಮನವೇಗದಿಂ ತಾ
ನೆನೆದ ನಿರ್ಮಿಸಿಯಾಕ್ಷಣದಿ ವಿಷಸರಸಿ ಯಮನಲ್ಲಿ ।
ಘನತರದ ಯಕ್ಷಸ್ವರೂಪದ
ವಿನುತಮಾಯೆಯೊಳಡಗಿದನು ಯಮ
ಜನಪ ಕೇಳ್ ಕೃಷ್ಣರಾಯನ ಕಪಟನಾಟಕವ ॥ ೨೬

---

1 ಅಸುವ ಭಕ್ಷಿಸಿ ಯಡಗುವುದು ಮಿಗೆ, ಝು, ಖ.
2 ಪೇಳುತ, ಖ. 3 ಸಂದಿರಲಿ ಕಾಹೂತಕೃತಿಯನುಚಿತದಿ ಮರಳುವುದು, ಕ.

ಸಾರವೆಹ ಮೃಗರೂಪದಿಂದನು
ಸಾರಿಯಾಗಲು ಹೊತ್ತು ಕೃಷ್ಣನು
ದಾರಪಾಂಡವರಾಯ ವಿಮಳಾಶ್ರಮದ ವನತತಿಯು ।
ಕಾರಣಿಕಮೃಗವೆರಣಿಯನು ಕೊಂ
ಡೋರೆಯಲಿ ಕೊಂಡೊಯ್ವೆನುತವೆ
ವೋರೆಯಿಂದೀಕ್ಷಿಸುತಲಿರ್ದುದು ಕೇಳು ಕೌತುಕವ ॥ ೨೭

ಆರನಾರೈ ಕೊಲುವರಾರಿಂ
ದಾರು ಸಾವರು ಹರಿಯುವೊಪತಿ
ನೀರಜಾದ್ಯರು ಮುನಿಯೆ ಹರಿವುದೆ ಆಯು ತೀರದೊಡೆ ।
ಮಾರಿ ಮೃತ್ಯುಗಳೊತ್ತಿ ಮೊಬ್ಬಿಪ
ಕಾರವಾವುದು ಸತ್ಯನಿಷ್ಠರ
ಸಾರಭಕ್ತರ ಕಾವ ಗದುಗಿನ ವೀರನಾರಣನು ॥ ೨೮

ಇಪ್ಪತ್ತಐದನೆಯ ಸಂಧಿ ಮುಗಿದುದು.

## ಇಪ್ಪತ್ತಾರನೆಯ ಸಂಧಿ.

### ಸೂಚನೆ.

ಧರಣಿಪತಿ ತಂದಿತ್ತನಾದ್ವಿಜ
ನರಣಿಯನು ಬಳಿಕಮಲಧರ್ಮದ
ಸರಣಿಯಿಂದೆತ್ತಿದನು ಬನದಲಿ ನಿಜಸಹೋದರರ ॥

ಪಾಂಡವರು ವನದಲ್ಲಿದ್ದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡುಕುಮಾರರಡವಿಯ
ಪಾಳಿಯಲಿ ಕಾಲವನು ಕಳಿದರು ಹಲವುಮಾಸವನು ।
ಆಳಿದರು ವನವಾಸದಾಯುಸ

ದ್ವಾರಕೆಯ ಸಾಮ್ರಾಜ್ಯವನು ಸಂ
ಮೇಳಸೌಖ್ಯವ ಸೌಮನಸ್ಯದ ಸುಖದ ಭಾರದಲಿ ‖ ೧

ಮೃಗರೂಪಿಯಾಗಿ ಅರಣಿಯನ್ನು ಕೊಂಡೊಯ್ದುದು.

ಪಾಲಿಸಲು ಭಕ್ತರನು ಪರಮುದ
ಯಾಳು ದ್ವಾರಕೆಯಿಂದ ಲಕ್ಷ್ಮೀ
ಲೋಲ ಬಿಜಯಂಗೈದು ಪಾಂಡವರಕ್ಷಣಾರ್ಥದಲಿ ।
ಕಾಲನನು ಕರೆದೊಂದುಪಾಯವ
ಮೇಳವಿಸಿ ತಾ ಬಟಿಕ ಭೂಸುರ
ನಾಲಯವ ಸಾರಿದನು ಹೊಮ್ಮಿಯಾಕೃತಿಯು ತಾಳಿ ‖ ೨

ವಿಮಲವಾನಪ್ರಸ್ಥಜನರಾ
ಶ್ರಮದೊಳಗೆ ಸಾರಂಗಮೃಗವಿಳೆ
ಯಮರನೌಪಾಸನದ ಸಾಧನದರಣಿಯನು ಕೊಂಡು ।
ಕಮಲಸಖನುದಯದಲಿ ಸಂಧ್ಯಾ
ರಮಣಿಯಭಿವಂದನೆಗೆ ಸನ್ಮುನಿ
ಸಮಿತಿ ಹಿಂಗಿದ ಬಟಿಕ ಕೊಂಡೋಡಿತ್ತು ವಿಪಿನದಲಿ [1] ‖ ೩

ಎಲೆಲೆ ಮೃಗವರಣಿಯನು ವಂಚಿಸಿ
ಕಳೆದುದೋ ಕಾಳಾಯ್ತೆನುತ ತ
ಲ್ಲಳಿಸಿದಳು ನಿಜಪತಿಯು ಭಯದಲಿ ಮುನಿಯು ಮಧುವೆಂದು ।
ಹೊಳಯು ಸಂಜೆಯು ಸಾಧುಗಳು
ಕಳವಳಿಸಲಾದ್ವಿಜನಖಿದು ಪಾರ್ಥಿವ
ರಿಳೆಯು ಬಿಟ್ಟಿರಲಾ ಯೆನುತ ಹರಿತಂದನಾಶ್ರಮಕೆ ‖ ೪

ಧರ್ಮರಾಯರಲ್ಲಿ ಈ ಸಂಗತಿಯನ್ನು ತಿಳಿಸಿದುದು.

ಎಲೆ ಯುಧಿಷ್ಠಿರ ದೋಷವಿದು ನಿ
ಸ್ಖಳವಿಗೈದುವುದರಣಿಯನು ಮೃಗ

1 ಇತು ವನಾಂತಗಕೆ, ಚ

ವೆಳದು ಕೊಂಡೀಹೊದರ ಹೊಕ್ಕುದು ಬಹಳಕಾನನವ ।

ಅರಣಿಯನ್ನು ತಂದುಕೊಡುವುದಕ್ಕಾಗಿ ಹೋದ ಪಾಂಡವರನ್ನು
ವಿಷಸರೋವರಕ್ಕೆ ಕರೆತಂದುದು.

ಅಱಿದುದನ್ವಾಧಾನ ವಿತರರ
ಹಱಿವಿಗಾನೊಳಗಾದೆನೆನೆ ದ್ವಿಜ
ತಿಲಕನೌಪದ್ರವವನಱಿದವನೀಶ ಹೊಱವೆಂಟ ॥ ೫

ಜಾಳಿಸಿದ ಹೆದೆಬಿಲ್ಲು ಮುಮ್ಮೊನೆ
ಬೋಳಗಳ ನಿಡುಗುಂಡುಗಳ ಬಡಿ
ಕೋಲುಗಳನೆಕ್ಕಡವನುರುಪಾರಿಯದ ಕುಪ್ಪಸವ ।
ಮೇಳವಿಸಿ ಹೊಱವೆಂಟನವನೀ
ಪಾಲ ಬೇಂಟೆಗೆ ಮೃಗದ ಹೆಜ್ಜೆಯ
ಮೇಲೆ ಹೆಜ್ಜೆಯ ಹರಿಸಿದನು [1] ತನ್ನನುಜರೊಡಗೂಡಿ ॥ ೬

ಕಾಣಿಸುತ ಕಂಗಳಿಗೆ ತಾನತಿ
ಜಾಣಿನಿಂದುಱಿ ದೂರವಲ್ಲದೆ
ಕಾಣಿಸುತ್ತರಣಿಯನು ನೋಡುತ ಮುಱಿದು ಕೆಲಬಲನ ।
ಕ್ಷೋಣಿಪತಿಗಳು ಮುಟ್ಟೆ ಬರಲ
ಕ್ಷೀಣಮೃಗ ಪುಟನೆಗೆದು ಹಾಱುತ
ಕೇಣದಲಿ ಕೊಂಡೊಯ್ದುದಿವರನು ವಿಷಸರೋವರಕೆ ॥ ೭

ತರಣಿಯನ್ವಯನಂದು ಮಾಯಾ
ಹರಿಣನನು ಬೆಂಬತ್ತಿ ವಿಹ್ವಲ
ಕರಣನಾದಂದವರು ಮಹದಾರಣ್ಯವಾಸದಲಿ [2] ।
ಧರಣಿಪತಿ ಬಱಿಸಲಿಸಿ ಮುನಿಪತಿ
ಯರಣಿಯನು ಕೊಂಡೊಯ್ವ ಹುಲುಮೃಗ
ಸರಣಿಯಲಿ ಸೈವರಿದರಂದಾರಣ್ಯಮಾರ್ಗದಲಿ [3] ॥ ೮

---

1 ನಡಸುವನು, ಚ. 2 ವೀಧಿಯಲ್ಲಿ, ಕ. ಖ. 3 ಕರ್ಣಮಾರ್ಗಣರು, ಚ.

ಇಱುಬಿನೊಳಗದೆ ಕುತ್ತು ಪೆರ್ಮ್ಮರ
ದುಱಗಲೊಳಗದೆ ತೊಡಚು ಬಾಣವ
ನೆಱಗಿ ತಿವಿ ತೋಡಿಟ್ಟೆಯುಲಿ ಸಿಡಿವಲೆಯನೊಡ್ಡೆನುತ ।
ಅಱಸಿದರು ನಟ್ಟಡವಿಯುಲಿ ಸುಂ
ದುಱುಬಿದರು ಬೆಳ್ಳಾರವಲೆಗಳ
ಹರಹಿ ಸೊಪ್ಪಿನ ಸೋಹಿನಲಿ ಸಿಲುಕಿಸಿದರಾಮೃಗವ ॥ ೯

ಆ ಮೃಗವನ್ನು ಹಿಡಿದುದು.

ಕೇಳು ಜನಮೇಜಯ ಹಿಮಾಂಶುವಿ
ಶಾಲವಂಶಜರಡವಿಯುಲಿ ಮುನಿ
ಪಾಲನರಣಿಯನೊಯ್ದ ಮೃಗವನು ಹಿಡಿದರೊಳಬಿದ್ದು ।

ಆಗ ದಾಹವಾಗಲು ನೀರನ್ನು ತಾರೆಂದು ನಕುಲನಿಗೆ
ಹೇಳಿದುದು.

ಮೇಲೆ ತೋಱಿತು ಥಗೆ ಮಹೀಶರ
ತಾಳಿಗೆಗಳೊಣಗಿದುವು ಬೞಲಿಕೆ
ಯೇಱಿಗೆಯುಲಾಸನ್ನಲತೆಯಿಱುಬಿನಲಿ ಮಲಗಿದರು ॥ ೧೦

ದೂರವಾದುದು ನಿಳಯುವೀಕ್ಷಾಂ
ತಾರ ನಿರ್ಜಲವೈದಲಂಘ್ರಿಗೆ
ಭಾರ ಪದವಿನ್ನೇನು ಹದನೆಂದರಸನಱಿವೞಿದು ।
ನೀರ ತಾರೈ ಹೋಗು ನಕುಲ ಸ
ರೋರುಹದ ಪತ್ರದಲಿ ನಿರ್ಮಲ
ವಾರಿಯನು ತಹುದೆಂದು ಕುಂತೀಸೂನು ನೇಮಿಸಿದ ॥ ೧೧

ನಕುಲನ ಗಮನ.

ಬಗೆದನೇ ಬೞಲಿಕೆಯನತಿಸಹ
ಸಿಗಳ ದೇವನು ಹಿರಿಯನಾಜ್ಞೆಯ
ನುಗುಳಲಮ್ಮದೆ ಧನುವ ಕೊಂಡನು ನಡೆದನತಿಪಥವ ।

ದ್ರಗುಮನೋಮಂಜುಳದ ಕಂಜಾ
ಳಿಗಳ ಕಡುಪರಿಮಳದ ಪಸರದ
ಸೊಗಸು ಮಿಗೆ ತೀಡಿತ್ತು ಪದ್ಮಾಕರದ ಪವಮಾನ ॥ ೧೨

ಹಿತವನೈ ಹಿರಿಯೈಯ್ಯನೆನಗಂ
ದತುಳಬಲ ಪರಿತೋಷದಲಿ ಮಾ
ರುತನ ಬೞಿವಿಡಿದೈದಿದನು ನಕುಲಾಂಕನಾಕೊಳನ ।
ಹತಿಯಹುದು ನಿನಗೊಮ್ಮೆ ತಪ್ಪದು
ಹಿತವು ಬೞಿಕೆಂಬಂತೆ ಖಗ ಸಂ
ತತಿಗಳುಲಿದೊಪ್ಪಿದುವು ಪದ್ಮಾಕರದ ತೀರದಲಿ ॥ ೧೩

ಇರವಿನಲಿ ರಚನೆಯಲಿ ಮಧುರೋ
ತ್ತರವ ನೆಱೆ ಬೀಱುತ್ತಲಂತಃ
ಕರಣದಲಿ ಕತ್ತರಿಸಿ ಕೊಂಡಿಹಕುಜನರಂದದಲಿ ।
ಪರಿಮಳದ ಪಸರದಲಿ ಶೈತ್ಯೋ
ತ್ಕರುಷದಲಿ ಲೇಸೆನಿಸಿ ಕುಡಿದರೆ
ಹರಣವನೆ ಹಿಂಗಿಸುವ ಸರಸಿಯ ವಾರಿ ಚೆಲುವಾಯ್ತು ॥ ೧೪

ಖಳರ ಸತ್ಯದ ವೋಲು ವಂಚಿಸಿ
ಕಳೆದುದಾತನ ಮನವ ಮಾಯೆಯ
ಚಲುವಿನಂತಿರೆ ಚದುರುಗೆಡಿಸಿತು ತಿಳಿಯಲರಿದೆನಿಸಿ ।
ಲಲನೆಯರ ಹೃದಯದವೊಲೀಕ್ಷಿಸೆ
ನೆಲೆಯನೀಯದ ಕೃತಕಸರಸಿಯ
ಸುಲಭತೆಗೆ ಸಹದೇವನಣ್ಣನು ಸೋತು ನಡೆತಂದ ॥ ೧೫

ಇೞಿದು ಮೊನೆಮುಂಜೆಱಗನಗ್ರಕೆ
ಬಲಿದು ಹೊಕ್ಕನು ಜಾನುದಘ್ನ
ಸ್ಥಳವನಂಜಳಿಯಿಂದ ತೊಳೆದನು ಚರಣವದನವನು ।

ತುಳುಕಿದನು ವಾರಿಯನು ತನ್ನಯ
ಬಳಲಿಕೆಯ ಪರಿಹರಿಸಿ ಭೂಪತಿ
ಗಳಿಗೆ ಬಳಿಕಾನೊಯ್ವೆನೆಂದನು ತನ್ನ ಮನದೊಳಗೆ ‖ ೧೬

ನಕುಲನು ನೀರನ್ನು ಕುಡಿವಾಗ ಯಕ್ಷನು ಬೇಡೆಂದು ಹೇಳಿದುದು.

ಜಲವನಂಜಳಿಯಿಂದ ಮೊಗದೀಂ
ಟಲು ನೆನೆಯಲಭ್ರದಲಿ ಗುಹ್ಯಕ
ನುಲಿದನೆಲೆ ನಕುಲಾಂಕ ಮಾಣೆನಗುತ್ತರವ ರಚಿಸಿ ।
ಬಳಿಕ ಸಲಿಲವನೀಂಟು ಮಾತುಗ
ಳೊಳವು ಮರುಳಾಗದಿರೆನಲು ಥಗೆ
ಗಳುಕಿ ಬಳಲಿಸೆ ಮೇಲನಾಲಿಸಿ ಮೀಱಿದನು ನುಡಿಯ ‖ ೧೭

ನಕುಲನು ಕೆಳಗೆ ಬೀಳಲು ಸಹದೇವನ ಆಗಮನ.

ಜಡಿಯಲೆರಡಳ್ಳೆಗಳು ಕೊಳದಲಿ
ಕುಡಿದನುದಕವನಬುಜದೆಲೆಯಲಿ
ಪಿಡಿದನನಿಬರಿಗಮಲಜಲವನು ಮರಳಿ ನಿಮಿಷದಲಿ ।
ತಡಿಯನಡರಲು ಧೊಪ್ಪನವನುಱ
ಕೆಡೆದು ಪರವಶನಾದನಿತ್ತಲು
ತಡೆದನೇಕೆಂದಟ್ಟಿದನು ಸಹದೇವನನು ನೃಪತಿ ‖ ೧೮

ತವಕ ಮಿಗೆ ನಡೆತಂದು ಮೈಮಱ
ದವನ ಕಂಡನು ಬಹಳ ಥಗೆ ಪರಿ
ಹರಿಸಲುದಕವ ಕುಡಿದು ಬಳಿಕಾರೈವೆನಿದನೆನುತ ।

ಆತನು ಯಕ್ಷನ ಮಾತನ್ನುಪೇಕ್ಷಿಸಲು ಕೆಳಗೆ ಬೀಳುವಿಕೆ.

ಲವಲವಿಸಿ ತಾಳಿಗೆಯ ತಲ್ಲಣ
ದವನು ಹೊಕ್ಕನು ಕೊಳನನಮಳಾಂ
ಬುವನು ಮೊಗೆದನು ಮೊಗಕೆ ನೆಗಹಲು ಮೇಲೆ ದನಿಯಾಯ್ತು ‖

ಬಿಡುಬಿಡೆಲೆ ಸಹದೇವ ತನ್ನಯ
ನುಡಿಗೆ ಮಾಱುತ್ತರವ ಕೊಡು ಮುಂ
ಗೆಡದೆ ಮುಂದಣ ನಿನ್ನ ಮನ ಕಂಡಿಂತು ಮರುಳಹರೆ ।
ಮಿಡಿಯಲೆಳಸದಿರೆನಲು ಥಗೆಯುವ
ಗಡಿಸೆ ಸ್ವೈರಿಸಲಱಿಯದುತ್ತರ
ಗುಡದೆ ಜಲವೀಂಟಿದನು ದಾಂಟಿದುದಸು ಕಳೇಬರವ॥ ೨೦

ಈತನತಿ ವ್ಯಾಮೋಹದನಿತ್ತಲು
ಕಾತರಿಸಿದನು ಭೂಪನಿಬ್ಬರ
ಮಾತು ಮುಖದಿರುಹಿತ್ತು ಶಿಶುಗಳಿಗಾವಹದನಾಯ್ತೊ ।

ಅರ್ಜುನಾಗಮನ.

ತಾತ ಹೋಗ್ಯೆ ಪಾರ್ಥ ಬಾಲಕ
ರೇತಕತ್ತಲು ತಡೆದರೆಂಬುದ
ನೀ ತಿಳಿದು ತಾ ಜಲವನೆನೆ ಕೈಕೊಂಡು ನಡೆತಂದ ॥ ೨೧

ಹಿಮದ ಗಾಳಿಯು ಪಥವಿಡಿದು ಮೆ
ಧ್ಯಮದ ಪಾಂಡವನೈತರುತ ಮುಂ
ದಮಲಸರಸಿಯ ತೀರದಲಿ ಕೀಲಿಸಿದ ಮಗ್ಗುಲಲಿ ।
ಯಮಳರೊಱಗಿರೆ ಕಂಡು ಮನದಲಿ
ತಮವ ಹಿಡಿದನು ನೀರಕುಡಿದೀ
ಮಮತೆ ಮಿಗಲಾರೈವೆನೆನುತೀಟಿದನು ಸರೋವರವ ॥ ೨೨

ಚರಣವದನವ ತೊಳೆದು ಥಗೆ ಡಾ
ವರಿಸಲಕ್ಷ್ಮಣನಾಗಿ ಕರದಲಿ
ತೆಱೆಗಳನು ತೆಗೆನೂಕಿ ಮೊಗೆದನು ಗರಳಮಯಜಲವ ।
ಮರುಳೆ ನೀ ಕೌಂತೇಯ ಮಾದ್ರೀ
ಯರನು ನೋಡುವುದೇನು ನನಗು
ತ್ತರವನಿತ್ತುದಕವನು ಕುಡಿ ಯೆಂದುದು ನಭೋನಿನದ [1] ॥ ೨೩

1 ವಚನ, ಚ.

ಮೇಲನಾರೈವೆನೆ ಸುತೃಷ್ಣಾ
ಲೋಲಚಿತ್ತನು ಕಾಮಮೃಗಯಾ
ಕೇಳಿಲಂಪಟನರ್ಥಲಾಭದ್ಯೂತಲೋಲುಪನು ।

ಅರ್ಜುನನು ಪರವಶನಾಗಿ ಕೆಳಗೆ ಬಿದ್ದುದು.

ಕೇಳು ಜನಮೇಜಯ ತಟಾಕದ
ಕಾಳಕೂಟವನೀಂಟಿ ತಡಿಯಲಿ
ಕಾಲಿಡುತ ಡೆಂಢಣಿಸಿದನು ಮೈಮರೆದನಾಪಾರ್ಥ ॥ ೧೪

ಮಡಿದರಿತ್ತಲು ಮೂವರನುಜರು
ತಡೆದರೇನು ವಿಚಿತ್ರವಾಯಿತು
ನಡೆ ಸಮೀರಕುಮಾರ ನೀ ಹೋಗತ್ತಲಡಗದಿರು ।

ಭೀಮನು ಬಂದು ಇವರ ಸ್ಥಿತಿಯನ್ನು ನೋಡಿ ತಾನೂ
ನೀರನ್ನು ಕುಡಿದುದು.

ತಡೆಯದೈತಹುದೆನೆ ಹಸಾದದ
ನುಡಿಯಲವನೈದಿದನು ಹೆಜ್ಜೆಯ
ಹಿಡಿದು ಬಟಿಸಲಿಸಿದನು ಬರೆ ಬರೆ ಕಂಡನದ್ಭುತವ ॥ ೧೫

ಥಟ್ಟುಗೆಡೆದಸುಗಳೆದ ತನ್ನೊಡ
ಹುಟ್ಟಿದರನೀಕ್ಷಿಸಿದನುಸುರಿನ
ಬಟ್ಟೆಯನು ನೋಡಿದನು ಮೂಗಿನ ಬೆರಳ ಬೆಳಗಿನಲಿ ।
ಮುಟ್ಟಿತಿವರಿಗೆ ಮರಣವಿನ್ನೇ
ನಟ್ಟಿ ಕೊಲುವೆನು ಜವನ ಮೃತ್ಯುವ
ನಿಟ್ಟೆಲುವೆನುದುರಿಸುವೆನೆನುತೊದಱಿದನು ಕಲಿಭೀಮ ॥ ೧೬

ಮನ್ನಣೆಗೆ ಹಿರಿಯೈಯ್ಯನೆಂದಾ
ನಿನ್ನು ಬಗೆವೆನೆ ಜವನ ಗಂಟಲ
ಮುನ್ನ ತಿರುಹುವೆನೆನುತ ಕಿಡಿಕಿಡಿಯಾಗಿ ಖಾತಿಯಲಿ ।

ಇನ್ನೊದಱ ಫಲವೇನು ಕುಡಿವೆನು
ಮುನ್ನ ಜಲವನು ಬಳಿಕ ನೋಡುವೆ
ನೆನ್ನವರ ಮಾರ್ಗವನೆನುತ ಮೊಗೆದನು ವಿಷೋದಕವ ॥ ೨೭

ಮಾಣುಮಾಣುತ್ತರವ ಕೊಡು ಮುಂ
ಗಾಣಬೇಹುದು ತಂದೆ ತನಗೀ
ಕ್ಷೋಣಿಯಲಿ ಪೂರ್ವದ ಪರಿಗ್ರಹವೀಸರೋವರವು ।
ಜಾಣನಾದರೆ ಜಾರಬಿಡು ಬಿಡು
ಕೇಣವನು ಮಾಣೆನಲು ಗಗನದ
ವಾಣಿಯನು ಮನ್ನಿಸದೆ ಪವನಜನೀಂಟಿದನು ಜಲವ ॥ ೨೮

ಭೀಮನೂ ಪರವಶನಾಗಿ ಬಿದ್ದುದು.

ದಡದಡಿಸಿ ಕೊಳನಿಂದ ಹೊಱಟಡಿ
ಯಿಡುತ ಬಱಲಿದನನಿಲಸುತನವ
ರೊಡನೆ ಮೆಯ್ಯಿಕ್ಕಿದನು ಕಳಚಿದ ನೀಲಗಿರಿಯಂತೆ ।

ಆಗ ಧರ್ಮರಾಯನ ಆಗಮನ.

ಅಡಿಗೆಡೆದನಾಭೀಮನಿತ್ತಲು
ಕಡು ನಿರೋಧವ ಹಿಡಿದು ತಾನೇ
ನಡೆದು ಬಂದನು ಧರ್ಮಸುತನಾಕೊಳನ ಪಥವಿಡಿದು ॥ ೨೯

ಮೇಲೆ ಮಗುಳ್ದಾಲಿಗಳ ಚಾಚಿದ
ತೋಳ ಮೇಲಣ ತಲೆಯ ಸುಯ್ಲಿನ
ಲೀಲೆಯಡಗಿದ ಮುಖದ ಮಸುಳಿದ ಕಾಯಕಾಂತಿಗಳ ।
ಮೇಲೆ ಮಸಗಿದ ಮಗ್ಗುಲಿನಲಿಹ
ನಾಲುವರನೀಕ್ಷಿಸಿ ಮಹೀಪತಿ
ಕೋಲು ಮಱವೊನೆಗೊಂಡವೋಲ್ ಮಱುಗಿದನು ಚಿತ್ತದಲಿ ॥

ಮುಸುಕನರೆದೆಗೆದವರವರ ಮುಖ
ದುಸುರುಗಳನೀಕ್ಷಿಸಿದನಕಟಾ

ಶಿಶುಗಳಿಗೆ ಕಡುಹಾನಿಯಾಯಿತೆ ಶಿವ ಶಿವ ಮಹಾದೇವ ।
ನಿಶಿತಶಸ್ತ್ರದ ಗಾಯವಿಲ್ಲು
ಬ್ಬಸದ ಸಾವಿಂಗಾವುದೋ ತಾ
ನಸುಗಳೆಯುದೆಯು ಕೆಟ್ಟೆನೆಂದಱಲಿದನು ಮನದೊಳಗೆ ॥ ೩೧

ಧರ್ಮರಾಯನ ಪ್ರಳಾಪ.

ಇಂದಿನಲಿ ಕಡೆಯಾಯ್ತಲಾ ವಿಮ
ಲೇಂದುವಂಶಕೆ ಕೌರವನ ಛಲ
ಸಂದುದಿನ್ನಹಿತಾವನೀಶರಿಗಾಯ್ತು ಪರಿತೋಷ ।
ಕೊಂದರಾರೋ ಅಕಟಕಟ ಅರ
ವಿಂದನಾಭನ ಕೃಪೆಗೆ ಬಾಹಿರ
ನಿಂದು ತಾನಾದೆನೆ ಮಹಾದೇವೆನುತ ಚಿಂತಿಸಿದ ॥ ೩೨

*ಹರ ಹರಾ ಶಂಕರ ಕೃಪಾಕರ
ಪೊರೆಯೊ ಪುರಹರ ಆವತೆರದಿಂ
ತೊರೆವೆನೊಡಲಿದನಕಟಕಟ ಶ್ರೀಕಾಂತ ಮುರವೈರಿ ।
ಗರುಡವಾಹನ ಕಮಲಲೋಚನ
ಧರೆಗೆ ಹೊರೆಯಾದೆನ್ನ ತನುವನು
ಯಿರದೆ ಬಿಸುಡುವತೆರನ ಕೃಪೆಮಾಡೆಂದನಾಭೂಪ ॥ ೩೩

ಧಾರುಣಿಗೆ ಬಲವಂತತಮ್ಮದಿ
ರೋರಣದಿ ಮಿಗೆ ನಾಲ್ವರಿರುತಿರೆ
ಭೂರಿಮುದದಿಂ ದಡವಿಯೋ ಸಾಮ್ರಾಜ್ಯವೆನುತಿದ್ದೆ ।
ಆರಿಗೊಱಲುವೆನಾರ ಸಾರುವೆ
ನಾರು ತನ್ನನು ಸಲಹುವರು ಕಾಂ
ತಾರದೊಳಗಾನೊಬ್ಬನಾದೆನೆ ಶಿವ ಶಿವಾ ಯೆಂದ ॥ ೩೪

---

* 33ನೆಯ ಪದ್ಯದಿಂದ ಆರುಪದ್ಯಗಳು ಕ, ಗ, ಝ ಪುಸ್ತಕಗಳಲ್ಲಿರುತ್ತವೆ.

ಎಲ್ಲಿ ಗರಳವ ಕುಡಿವೆನೋ ತಾ
ನೆಲ್ಲಿ ಸುರಗಿಯನೊಡ್ಡಿ ಬೀಳ್ವೆನೊ
ಯೆಲ್ಲಿ ನೂಕುವೆನೀತನುವ ಯಿದನೆಂತು ಕಳಚುವೆನು।
ಫುಲ್ಲನಾಭನ ಕೃಪೆಗೆ ಬಾಹಿರ
ನಲ್ಲದೊಡೆ ಕೃಪೆದೋಱನೇ ತಮ
ಗಿಲ್ಲಿ ಕಡೆಯಾಯ್ತಡವಿಯೊಳಗೆಂದೆನುತ ಹಲುಬಿದನು॥ ೩೫

ಆವಜನ್ಮದ ದುರಿತಫಲನಿಂ
ದೀವಿಪತ್ತಿಗೆ ಸೇರಿಸಿತು ಮು
ನ್ನಾವನೋಂಪಿಯನರೆಯನೋಂತೆನೊ ಯಿಲ್ಲದಿರೆ ತನ್ನ।
ಜೀವಸಖರುಗಳಿಂಗೆ ಮರಣವೆ
ತೀವಿ ತಾ ಕಣ್ಣಾಱೆ ಕಂಡಿ
ನ್ನಾವಬಾಳಿಕೆಗೊಡಲ ಹಿಡಿದಪೆನೆನುತ ಹೊರಳಿದನು॥ ೩೬

ತೊಱೆದಿರೇ ತಮ್ಮದಿರ ತನ್ನನು
ಮಱೆದಿರೇ ಸುಕುಮಾರರಿರ ಮ್ಮೆ
ಮುಱಿದಿರೇ ತಾ ಮಾಡಿದವಗುಣದಖಿಳದಾಯುಸವ।
ನೆಱೆಯ ತಾಳುತ ನಿಮ್ಮ ಮನ ಬೇ
ಸಱಿಕೆ ಯಾದುದೆ ಆವ ತೆರದಿಂ
ದುಱುವಪ್ರಾಣವ ತೊಱೆದಿರೆಂದನು ದೆಸೆಗೆ ಬಾಯ್ವಿಡುತ॥ ೩೭

ಎಂದು ದೆಸೆದೆಸೆಗಳಿಗೆ ಬಾಯ್ವಿಡು
ತಂದು ನಾನಾತೆರದಿ ನಿಜಗುಣ
ವೃಂದವನು ಹಲುಬಿದನು ತಮ್ಮದಿರಿರವನೀಕ್ಷಿಸುತ।
ಕಂದರಿವರನು ಕಾಣೆನೇ ಹಾ
ಯೆಂದು ಥಗೆಯುವಗಡಿಸಲಾಕ್ಷಣ
ನಿಂದು ನೋಡಿದ ಕೊಳನ ಜಲವನು ಭೂಪನಱವೆಱದು॥ ೩೮

ನೀರನ್ನು ಕುಡಿಯಲು ಧರ್ಮರಾಯನ ಪ್ರಯತ್ನ.

ಹೋಗಲಿನ್ನೀ ನೀರುಗುಡಿದಿವೆ
ರಾಗಹೋಗಿಸುವೆನೆನುತ ಥಗೆ
ತಾಗಿದವೆನಿಪನಿಟಿದು ಹೊಕ್ಕನು ವಿಷಸರೋವರವ ।
ಬಾಗಿ ಮೊಗೆದನು ಜಲವನಭ್ರದೊ
ಳಾಗಲಾದುದು ರಭಸವೆಲೆ ಸಕ
ಲಾಗಮಜ್ಞ ಮಹೀಶ ಕೇಳೆಂದುದು ನಭೋನಿನದ ॥ ೩೯

ಅನುಜರವಿವೇಕಿಗಳು ಪರಿಣತ
ತನದಲಧಿಕನು ನೀ ನಿಧಾನಿಸಿ
ತನಗೆ ನುಡಿಯುತ್ತರವನಿತ್ತು ನಿರಂತರಾಯುದಲಿ ।
ತನುವಿಗಾಪ್ಯಾಯನವ ಮಾಡುವು
ದೆನಲು ಸ್ಥೈರಿಸಿ ಥಗೆಯ ನೋಡದೆ
ಘನಪಥದ ನುಡಿಯಾರದಂದವನೀಶನಾಲಿಸಿದ ॥ ೪೦

ಬಿಸುಟನುದಕವನಾನುಡಿಯನಾ
ಲಿಸಿದನಾರೈ ನೀನು ನಿನಗಾ
ಗಸದಲಿರವೇನಸುರನೋ ಕಿನ್ನರನೊ ನಿರ್ಜರನೊ ।
ಉಸುರೆನಲು ತಾಂ ಯಕ್ಷನೀಸಾ
ರಸವು ನನ್ನದು ನಿನ್ನ ತಮ್ಮದಿ
ರಸುವನೆಳೆದಪೆನಾನು ಕೇಳ್ಕೈ ಧರ್ಮಸುತ ಯೆಂದ ॥ ೪೧

ಬಾಲಕರು ನೀವೆನ್ನ ಮಾತನು
ಕೇಳಿ ಯುದಕವ ಕುಡಿವುದೆನೆ ಭೂ
ಪಾಲ ನಿನ್ನವರೆನ್ನ ಮಾತನು ಕೇಳಿ ಮನ್ನಿಸದೆ ।

ಯಕ್ಷನು ಹೇಳಿದುದು.

ಮೇಲುಗಾಣದೆ ನೀರಗುಡಿದು ವಿ
ಟಾಳಿಸಿದರಿಂದೆನ್ನ ಮಾತನು
ಕೇಳಿ ನೀನುತ್ತರವ ರಚಿಸೆಲೆ ರಾಯ ನೀನೆಂದ ॥ ೪೨

* ಆವುದೈನಿನ್ನ ಜಿತ ನಿನಗಾ
ನಾವ ಪರಿಯಿಂದುಸುರ್ವೆ ನೀನದ
ನೋವಿ ಬೆಸಗೊಳಲೆನಿತ ಕೇಳುವೆನೆನಲು ಗುಹ್ಯಕನು ।
ನೀವು ಕರ ಧರ್ಮಜ್ಞರೆಂಬಭಿ
ಭಾವಿಗಳು ಗಡ ಧರ್ಮಕಥನವ
ನೋವಿ ರಚನೆಯ ರಚಿಸುವುದು ಯೆನೆ ನೃಪತಿಯಿಂತೆಂದ ॥ ೪೩

ಧರ್ಮರಾಯನ ವಾಕ್ಯ.

ಧರ್ಮವೆಂಬುದನುಸುರಬಹುದೇ
ಧರ್ಮವಾರಿಗೆ ಗೋಚರವು ತ
ದ್ಧರ್ಮಸಾರವನರಿವನಾರೀವರ್ತಮಾನದಲಿ ।
ಧರ್ಮವರಿದುದನರುಪುವೆನು ತಾ
ನಿಮ್ಮ ಚಿತ್ತಕೆ ಸೊಗಸಿದೊಡವುದ
ನೆಮ್ಮ ಕೇಳಲೆ ಖಚರ ಪ್ರಶ್ನೆಯ ನೃಪತಿಗಿಂತೆಂದ ॥ ೪೪

ಯಕ್ಷ ಮತ್ತು ಧರ್ಮರಾಯನ ಪ್ರಶ್ನೋತ್ತರಗಳು.

ಜಲನಿಧಿಗೆ ಸರಿ ಸರಸಿಯಾವುದು
ನೆಲಕೆ ಹಿತವೆನದಾರು ಮರ್ತ್ಯ
ವಳಿಗೆ ಮಾತೆಯದಾರು ಸೂರ್ಯಪ್ರಭೆಗೆ ಸರಿಯೇನು ।
ತಿಳುಹು ಧರ್ಮಜ ಸಕಲಧರ್ಮಾ
ವಳಿಯ ಸಾರವನೆನಲು ಯಕ್ಷನ
ಬಲುಮೆಗವನೀಪಾಲನತಿಪರಿತೋಷದಲಿ ನುಡಿದ ॥ ೪೫

ಗಗನವೆಬುಧಿಗೆ ಸರಿ ಸರೋವರ
ಜಗಕೆ ಹಿತವೆನು ಶಕ್ರ ಮರ್ತ್ಯ
ಳಿಗಳ ಮಾತಾರೂಪುಗೋವುಗಳದು ನಿದಾನ ಕಣಾ ।
ಬಗೆಯಲಗ್ಗದ ಸತ್ಯವೆಂಬುದು

* 43 –44ನೆಯ ಪದ್ಯಗಳು ಕ, ಗ, ಝ, ಪುಸ್ತಕಗಳಲ್ಲಿಲ್ಲ.

ಗಗನಮಣಿಗೆಣೆ ಯೆನಲು ಚಿತ್ತಕೆ
ಸೊಗಸಿ ತಲೆದೂಗಿದನು ಮಗುಳಿಂತೆಂದನಾಖಚರ ॥ ೪೬

ನಯವಿದನೆ ಕೇಳಾವನೈ ಕ್ಷ
ತ್ರಿಯನು ವಿಪ್ರನೊಳಾವನೈ ಶ್ರೋ
ತ್ರಿಯನು ಸುಜನರೊಳಾವನೈ ಮಹಪುರುಷನೆಂಬುವನು ।
ನಿಯುತಧೀರನದಾರು ದೇವ
ಪ್ರಿಯನದಾವನು ಕಠಿನಕಷ್ಟಾ
ಶ್ರಯನದಾವನು ಧರ್ಮಸುತ ಹೇಳೆಂದನಾಖಚರ ॥ ೪೭

ಧೃತಿಯುತ ಕ್ಷತ್ರಿಯನು ವೇದ
ವ್ರತಯುತ ಶ್ರೋತ್ರಿಯನಹಿಂಸಾ
ರತನು ಮಹಪುರುಷನು ಸುಧೀರನು ಸಾಧುಸೇವಕನು ।
ಸತತ ಪರರುಪಕಾರಿ ದೇವ
ಪ್ರತತಿವಲ್ಲಭ ಪರರ ಗುಣದು
ನ್ನತಿಯ ಸೈರಿಸದವನೆ ಕಷ್ಟನು ಯಕ್ಷ ಕೇಳೆಂದ ॥ ೪೮

ನಿಂದ್ಯನಾವನು ಲೋಕದೊಳಗಭಿ
ವಂದ್ಯನಾವನು ಜೀವವಿರೆ ಮೃತ
ನೆಂದೊಡಾವನು ದೇಶ ಕಳವಹುದಾವತೆರದಿಂದ ।
ಸಂದ ಯಜ್ಞವದೆಂತು ಕೆಡುವುದು
ತಂದೆ ಹೇಳೆನೆ ಧರ್ಮಸುತ ಸಾ
ನಂದದಿಂದವೆ ಕಾಣಿಸಿದನಾ ಖಚರಗುತ್ತರವ ॥ ೪೯

ಕೇಳು ಪರನಿಂದಕನೆ ನಿಂದ್ಯನು
ಹೇಳಲೇಂ ಪರಹಿತನೆ ವಂದ್ಯನು
ಹೇಳಿದಿಚ್ಛೆಗೆ ನಡೆವ ನೃಪತಿಗೆ ಕೆಡುವುದಾದೇಶ [1] ।
ಕೇಳು ನಡೆವೆಣನೇ ದರಿದ್ರನು

[1] ನೃಪನಿಂದಳಿವುದಾದೇಶ, ಚ.

ಸೊಲದೇಶಿಸಿದ ದಕ್ಷಿಣೆಯು ಯ
ಜ್ಞಾಳಿ ನಿಷ್ಫಲವೆಂದು ನುಡಿದನು ರಾಯುಕೌಂತೇಯು ॥　　೫೦

ನರಕಿ ಯಾವನು ಸುಜನರಲಿ ಬಾ
ಹಿರನದಾವನು ಲೋಕವಱಿಯಲು
ಹರಣವಿರೆ ಹೊಂದಿದನದಾವನು ಭೂಮಿಪಾಲರಲಿ ।
ಮರುಳನಾವನು ಮಾನಭಂಗದಿ
ಭರಿತನಾವನು ಹೇೞು ಧರ್ಮಜ
ಸರಸಿಯುಲಿ ಬೞಿಕುದಕವನು ಕುಡಿ ಯೆಂದನಾಱುಚರ ॥　　೫೧

ಕೊಳದ ಮಧ್ಯದಿ ಧರ್ಮನಂದನ
ತಿಳುಹುತಿರ್ದನು ಧರ್ಮತತ್ವವ
ಬೞಲಿದನು ಬಿರುತಡಿಯಲೀ ಕೌರವನ ಕೃತ್ರಿಮದ ।
ಬಲುಬಿರಿವಫನಭೂತ ಬಂದುದು
ನೆಲೆಯು ಧರ್ಮಜನಾಗ ಕಂಡುದು
ಎಲೆ ಮಹಾದೇವೆನುತ ಮುಱಿದುದು ಹಸ್ತಿನಾಪುರಿಗೆ ॥　　೫೨

ಎನೆ ಕೃತಘ್ನನೆ ನರಕಿ ವಿದ್ಯಾ
ಧನಮದಾಂಧನೆ ಬಾಹಿರನು ಹೊ
ಕ್ಕನುವರವ ಹಿಂಗುವ ಮಹೀಪತಿ ಜೀವವಿರೆ ಮೃತನು ।
ವಿನುತಗುರುವಱಿಯದನೆ ಮರುಳಂ
ಗನೆಯುರಲಿ ವಿಶ್ವಾಸಪರನೇ
ಜನವಱಿಯಲಭಿಮಾನಹೀನನು ಯಕ್ಷ ಕೇಳೆಂದ ॥　　೫೩

ಒಲಿದನೊಡಲನು ಧರ್ಮಸಂಗತಿ
ಗಳ ಸುಸಂವಾದದಲಿ ನಿಜತನು
ಪುಳಕ ಗಬ್ಬರಿಸಿದುದು ಸಲೆ ನೀಗಿದುವು ದುಷ್ಕೃತವ ।
ಎಲೆ ಮಹೀಪತಿ ಮೆಚ್ಚಿದೆನು ಬೇ

ಡಱಿದ ತಮ್ಮಂದಿರಲಿ ವ್ರೊಬ್ಬನ
ತಲೆಯು ಬದುಕಿಸಿ ಕೊಡುವೆನೆನೆ ಯಮತನುಜನಿಂತೆಂದ ॥ ೫೬

ಅಸುವನಿತ್ತೈ ಯಕ್ಷಪತಿ ಜೀ
ವಿಸಲಿ ನಕುಲನು ಧನ್ಯ ತಾನೆನೆ
ನಸುನಗುತ ಚೇತರಿಸಿ ವ್ಯೆಮುಱಿದೆದ್ದ ನಾನಕುಲ ।
ನಿಶಿತಮತಿ ಮೆಚ್ಚಿದೆನು ಮಗುಳಿ
ನ್ನಸುವನೊಬ್ಬಂಗಿತ್ತೆನೆನೆ ಜೀ
ವಿಸಲಿ ಸಹದೇವಾಂಕನೆಂದನು ಧರ್ಮನಂದನನು ॥ ೫೫

ಜನಪ ನಿನ್ನಾಳಾಪವೆನ್ನಯ
ಮನಕೆ ವಿಸ್ಮಯವಾಯ್ತು ಭೀಮಾ
ರ್ಜುನರು ನಿನ್ನೊಡಹುಟ್ಟಿದರು ನೀನವರಿಗತಿಹಿತನು ।
ಅನುಜರವರಿರಲೇಕೆ ಮಾದ್ರಿಯ
ತನುಜರೆಚ್ಚರ ಬಯಸಿದ್ಯೆ ಹೇ
ಟೆನಲು ನಸುನಗೆ ಮೊಳೆಯೆ ನುಡಿದನು ಧರ್ಮನಂದನನು ॥ ೫೬

ಸಾವು ಬೊಪ್ಪಂಗಾಗೆ ಮಾದ್ರೀ
ದೇವಿ ತನ್ನನು ಕರೆದು ಶಿಶುಗಳ
ನೋವುಕೇಡಿದು ನಿನ್ನದಾರೈದಿವರ ಸಲಹುವದು ।
ಭಾವಭೇದವನಣುವ ಬಗೆಯದೆ
ಕಾವುದೈ ಯೆಲೆ ಮಗನೆ ಬೆಸಸಿದ
ಳಾವೆಪರಿಯಲಿ ಮಱೆವೆನೈ ಮಾದ್ರೀಕುಮಾರಕರ ॥ ೫೭

ಎನಲು ಮೆಚ್ಚಿದನೆಱಿದ ಭೀಮಾ
ರ್ಜುನರ ಹರಣವನಿತ್ತು ನಿಜನಂ
ದನನನಪ್ಪಿದನೊಲವು ಮಿಗೆ ಯಮರಾಜನೈತಂದು ।
ತನುಜ ಸಾಕಿನ್ನಾಯ್ತು ನಿಮಗೀ
ವನನಿವಾಸವು ಬೀಱುಕೊಡಿ ಮುನಿ
ಜನವೆ ನಿನ್ನಜ್ಞಾತವಾಸಕೆ ಮನವ ಮಾಡೆಂದ ॥ ೫೮

ಆ ಭೂತವು ಕನಕನನ್ನು ತಿಂದುಹೋಗುವಿಕೆ.

ಆ ಸಮಯದಲಿ ಕನಕ ಹರಹಿಸಿ
ದಾಸುಹೋಮಕೆ ತೃಪ್ತಿ ವಡೆಯಿಸಿ
ವ್ಯಾಸಲಿನ ಪೂರ್ಣಾಹುತಿಯು ಕೊಡುವಾಮುಹೂರ್ತದಲಿ ।
ಭಾಸುರದ ತೇಜಃಪ್ರಕಾಶವ
ವ್ಯಾಸಲಟಿಯದ ಭೂತ ನಡೆತಂ
ದಾಸಗರ್ವನ ಕನಕನನು ತಿಂದಡಗಿತಗ್ನಿಯೊಳು ॥ ೫೯

ಬಳಿಕ ಯಮನು ಈ ವೃತ್ತಾಂತವನ್ನು ಮಗನಿಗೆ ಹೇಳಲಾಗಿ
ಕೃಷ್ಣನನ್ನು ಕೊಂಡಾಡಿದುದು.

ಯಮನ ಬಟಿಕೊಲಿದೀಪ್ರಸಂಗದ
ಕ್ರಮವ ಕೃತ್ಯೆಯು ಹದನನೆಲ್ಲಾ
ಯಮತನೂಜಂಗಱುಹೆ ತದ್ವೃತ್ತಾಂತಸಂಗತಿಯು ।
ಕಮಲನಾಭನ ಕರುಣದಳತೆಯು
ಕ್ರಮವನಱುಹಿಸಿ ಬಟಿಕ ಮುಂದಣ
ವಿಮಲದಜ್ಞಾತಕ್ಕೆ ನೇಮಿಸಿ ಹರಹಿದನು ಮಗನ ॥ ೬೦

ನೀವು ಪಾಂಡವರೆಂದು ನಿಮ್ಮನ
ದಾವ ಮಾನವರಱಿಯದಿರಲಿ ಮ
ಹಾವಿಭವದಲಿ ಬೆಳಗುವುದು ಬಟಿಕವನಿಮಂಡಲವ ।
ದೈವಬಲ ನಿಮಗುಂಟು ಮೇಣಿ
ನ್ನಾವುದರಿದಲ್ಲೆಂದು ತನುಜನ
ನೋವಿ ಮನ್ನಿಸಿ ಬೀಳುಕೊಟ್ಟನು ಪಾಂಡುನಂದನರ ॥ ೬೧

ಅರಣಿಯನು ತಂದಿತ್ತು ಧರಣೀ
ಸುರನ ಮನ್ನಿಸಿ ಕಳುಹಿ ಮುನಿಗಳ [1]
ಕರೆಸಿ ಧೌಮ್ಯಾದಿಗಳಗೀಹದನಱುಹಿ ಬಳಿಕಿನಲಿ [2] ।

1 ಮುನಿಗಳನು ಭೂ, ಚ
2 ಸುರರ ಸಚಿವರ ಪರಿಕರರ ಧೌಮ್ಯಾದಿಮಂತ್ರಿಗಳ, ಚ.

ವೆರಸು ಭದ್ರಾಸೂನುಪಾಂಚಾ
ಲರನು ಧೃಷ್ಟದ್ಯುಮ್ನ ಮೊದಲಾ
ಗಿರೆ ನಿಜಾಪ್ತರನವರವರ ಪಟ್ಟಣಕೆ ಕಳುಹಿದನು ॥ ೬೦

* ಹರಿನಮೋ ಜಯ ಭಕ್ತರಘಸಂ
ಹರ ನಮೋ ಜಯ ಸಕಲಭುವನೇ
ಶ್ವರ ನಮೋ ಜಯ ಕೃಷ್ಣ ಕೇಶವ ವಿಷ್ಣು ವಾಮನನೆ ।
ಪರಮಪುಣ್ಯಶ್ಲೋಕ ಜಯ ಗುಣ
ಭರಿತ ನಿರ್ಮಳರೂಪ ಜಯ ಜಯ
ಕರುಣಿ ರಕ್ಷಿಸು ರಾಯ ಗದುಗಿನ ವೀರನಾರಯಣ ॥ ೬೩

ಅಂದು ಭೂಪತಿ ನೆರೆದಪರಿಜನ
ವೃಂದವನು ಸಂತವಿಸಿ ನೀವು ಮನ
ಬಂದ ಠಾವಿನಲಿಹುದು ವೆಮ್ಮ ಜ್ಞಾತಹೋಪನಕಾ ।
ಎಂದು ಕಳುಹಿಸಿ ಅನುಜರೊಡನಾ
ಯಿಂದುಮುಖಿ ಸಹಗಮಿಸಿದನು ನಲ
ವಿಂದ ನೆನೆವುತ ವೀರನಾರಾಯಣನ ಶಿರಿಪದವ ॥ ೬೪

§

ಇತಿ ಶ್ರೀಮದಚಿಂತ್ಯಮಹಿಮಗದಗು ವೀರನಾರಾಯಣ ಚರಣಾರವಿಂದ
ಮಕರಂದಪಾನ ಪುಷ್ಟವಚಷಟ್ಪದೀನಿಕಾಯ ಶ್ರೀಮತ್
ಕುಮಾರವ್ಯಾಸಯೋಗೀಂದ್ರವಿರಚಿತಮಪ್ಪ
ಕರ್ಣಾಟ ಭಾರತಕಥಾ ಮಂಜರಿಯೊಳ್
ಅರಣ್ಯಪರ್ವಂ ಮುಗಿದುದು.

---

* ಕೆಲವು ಪುಸ್ತಕಗಳಲ್ಲಿ ಈ ಪದ್ಯವಿದೆ.

§ ತಾಯಿತಂದೆಯು ನೀನೆ ಸರ್ವರಿ । ಗೀಯಸತ್ತು ಜಗತ್ತು ನಿನ್ನಲಿ ಮಾಯೆಯಿಂ ತೋರುವುದು ನಿನ್ನನು ತಿಳಿಯಲ್ಪಡಗುವುದು । ಮಾಯಿ ನೀ ಸವಿಶೇಷಮಿಥ್ಯೆಯು ॥ ಮಾಯೆಯಾಚೆದದ್ವೈತ ಸತ್ಯವು ॥ ರಾಯಗದುಗಿನ ವೀರನಾರಾಯಣನೆ ಪೆರತಿಲ್ಲ ॥ ಇದು ಮುದ್ರಿತವಾದ ಒಂದು ಪುಸ್ತಕದಲ್ಲಿ ಮಾತ್ರ ಇರುವುದರಿಂದ ಗ್ರಂಥದಲ್ಲಿ ಸೇರಿಸಲಿಲ್ಲ.

UNIVERSITY OF MYSORE

ORIENTAL LIBRARY PUBLICATIONS

KANNADA SERIES No. 8.

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

೫ ನೆಯ ಸಂಪುಟ

## ವಿರಾಟಪರ್ವ

THE

# KARNATAKA MAHABHARATA

BY

KUMARAVYASA MAHAKAVI

Volume V

## VIRATA PARVA

EDITED BY

R. SHAMA SASTRY, B.A., M.R.A.S.,

*Curator, Government Oriental Library, Mysore,*
*Periodical Lecturer to Post-graduates' Classes,*
*Calcutta University.*

MYSORE:

PRINTED AT THE GOVERNMENT BRANCH PRESS

1920

# ಅವತರಣಿಕೆ.

ಇದು ಕರ್ಣಾಟಕ ಮಹಾಭಾರತದ ಐದನೆಯ ಸಂಪುಟವು. ಇದರಲ್ಲಿ ಪ್ರವೇಶಪರ್ವ ಕೀಚಕವಧಪರ್ವ ಸಮಯಪಾಲನಪರ್ವ ಗೋಹರಣಪರ್ವ ವೈವಾಹಿಕಪರ್ವಗಳನ್ನು ಒಳಗೊಂಡಿರುವ ವಿರಾಟ ಪರ್ವವು ಸಮಗ್ರವಾಗಿದೆ. ಇದರಲ್ಲಿ ಪಾಂಡವರು ಅರಣ್ಯವನ್ನು ಬಿಟ್ಟು ವಿರಾಟರಾಯನ ಪಟ್ಟಣಕ್ಕೆ ಬಂದುದು ಮೊದಲುಗೊಂಡು ಅಭಿಮನ್ಯು ವಿವಾಹಾಂತವಾದ ಕಥೆಯು ಹನ್ನೊಂದು ಸಂಧಿಗಳಿಂದ ಸಂಪೂರ್ಣ ವಾಗಿ ಹೇಳಲ್ಪಟ್ಟಿದೆ.

ಇದರ ಶೋಧನೆಯು ಕ. ಖ. ಚ. ಜ. ಝ. ಟ. ಎಂಬ ಓಲೆಯ ಪುಸ್ತಕಗಳ ಸಹಾಯದಿಂದ ಮಾಡಲ್ಪಟ್ಟಿದೆ. ಪಾಠಾಂತರಗಳನ್ನು ಸೂಚಿಸುವ ಅಂಕಗಳು ಪಾಠಾಂತರಗಳನ್ನು ಹೊಂದುವ ಭಾಗದ ಕೊನೆಯಲ್ಲಿಡಲ್ಪಡುತ್ತಿದ್ದುವು. ಅವು 140ನೆಯ ಪುಟದ ಮೊದಲಿಂದ ಪಾಠಾಂತರಗಳನ್ನು ಹೊಂದುವ ಭಾಗಗಳ ಮೊದಲಲ್ಲಿಡಲ್ಪಟ್ಟವೆ. ಎಲ್ಲವು ಗಳಲ್ಲಿಯೂ ಇಲ್ಲದೆ ಒಂದೆರಡು ಪುಸ್ತಕಗಳಲ್ಲಿರುವ ಅನಾವಶ್ಯಕ ಗಳೆಂದು ತೋರಿದ ಪದ್ಯಗಳು ಮೇಲೆ ನಕ್ಷತ್ರಚಿಹ್ನವನ್ನು ಹಾಕಿ ಕೆಳಭಾಗದಲ್ಲಿ ಬರೆಯಲ್ಪಟ್ಟವೆ.

ಬಹು ಪುಸ್ತಕಾನುಸಾರಿಯಾಗಿ ಅಥವಾ ಶುದ್ಧವಾಗಿ ಅಥವಾ ಸರಸವಾಗಿರುವ ಪಾಠಗಳು ಮೇಲುಗಡೆಯಲ್ಲಿಡಲ್ಪಟ್ಟವೆ. ಪಾಠಾಂತರ ಗಳೂ ಲೇಖನಾದಿದೋಷಗಳನ್ನು ಹೋಗಲಾಡಿಸಿ ಸರಿಪಡಿಸಿ ಕೆಳಭಾಗ ದಲ್ಲಿ ಬರೆಯಲ್ಪಟ್ಟವೆ. ಅವುಗಳಲ್ಲಿಯೂ ಒಂದೊಂದು ಪಾಠವು ಮೇಲಣ ಪಾಠಕ್ಕಿಂತಲೂ ಸರಸವಾಗಿ ಕಾಣಬಹುದು. ಆದರೂ ಬಹುಪುಸ್ತಕಾನು ಸರಣೆಯಿಂದಲೊ ಶುದ್ಧಿಯನುಸರಣೆಯಿಂದಲೊ ಬೇರೆ ಪಾಠವನ್ನು ಮೇಲಿಟ್ಟು ಅದು ಕೆಳಗಿಡಲ್ಪಟ್ಟಿರುವುದು. ರಸಜ್ಞರಾದ ಪಂಡಿತರು

ತಮಗಿಷ್ಟವಾದ ಪಾಠವನ್ನು ಅಂಗೀಕರಿಸಬಹುದು "ಲೋಕೋಭಿನ್ನ ರುಚಿ" ಎಂಬುದು ಸುಪ್ರಸಿದ್ಧವಾಗಿದೆ.

ಸಂಸ್ಕೃತ ಮಹಾಭಾರತದಲ್ಲಿರುವಂತೆ ಈಗ ಅಚ್ಚಾಗಿರುವ ಕನ್ನಡ ಭಾರತದ ಪುಸ್ತಕಗಳಲ್ಲಿಯೂ ಓಲೆಯುಗರಿಯು ಬಹುಪುಸ್ತಕಗಳಲ್ಲಿಯೂ ಕೀಚಕವಧಪರ್ವಕ್ಕೆ ಪೂರ್ವದಲ್ಲಿಯೇ ಸಮಯಪಾಲನಪರ್ವವು ಕಂಡುಬರುತ್ತದೆ. ಯಾವುದೋ ಒಂದು ಸಂಸ್ಕೃತಮಹಾಭಾರತ ಪುಸ್ತಕವನ್ನು ಅನುಸರಿಸಿರುವ, ಈ ಪುಸ್ತಕದ ಕಾಪಿಗೆ ಮೂಲವಾದ ಕ. ಪುಸ್ತಕದಲ್ಲಿರುವುದನ್ನನುಸರಿಸಿ ಈ ಪುಸ್ತಕದಲ್ಲಿ ಕೀಚಕವಧಪರ್ವವು ಸಮಯಪಾಲನಪರ್ವಕ್ಕೆ ಪೂರ್ವದಲ್ಲಿಯೇ ಬರೆಯಲ್ಪಟ್ಟಿದೆ.

ಮಧ್ಯಭಾಗಗಳಲ್ಲಿ ಅಲ್ಲಲ್ಲಿ ತೋರಿಸುತ್ತಿದ್ದ ಸೂಚನೆಗಳು ಪದ್ಯಗಳ ಮಧ್ಯಭಾಗದಲ್ಲಿಯೂ ಬರುತ್ತಿದ್ದುದರಿಂದ ಮನಸ್ಸಿನಲ್ಲಿ ಪೂರ್ವೋತ್ತರ ಸಂಬಂಧಗಳನ್ನು ಕಲ್ಪಿಸಿಕೊಳ್ಳುತ್ತಾ ಅವಿಚ್ಛಿನ್ನಾನುಪೂರ್ವಿಯನ್ನು ಓದಿಕೊಂಡು ರಸಾಸ್ವಾದವನ್ನು ಮಾಡುವವರಿಗೆ ಬೇಸರವುಂಟಾಗುವುದೆಂದು ಆ ಸೂಚನೆಗಳನ್ನು ಬಿಟ್ಟು ಕೊನೆಯ ಕೆಲವು ಭಾಗದಲ್ಲಿ ಪದ್ಯಗಳು ಮಾತ್ರವೇ ಆನುಪೂರ್ವಿಯಾಗಿ ಬರೆಯಲ್ಪಟ್ಟಿವೆ.

ಮೊದಲಲ್ಲಿ ಓದಿದವರಿಗೆ ಕಥಾಂಶವೂ ಪದ್ಯಗಳ ಮುಖ್ಯತಾತ್ಪರ್ಯಗಳೂ ತಿಳಿಯುವಂತೆ ವಿಷಯಸೂಚಿಕೆಯು ಸ್ವಲ್ಪ ವಿಸ್ತಾರವಾಗಿ ಬರೆಯಲ್ಪಟ್ಟಿದೆ.

ಪ್ರಮಾದದಿಂದ ಉಂಟಾದ ತಪ್ಪುಗಳನ್ನು ತಿಳಿಸುವುದಕ್ಕಾಗಿ ಶುದ್ಧಿಪತ್ರಿಕೆಯೂ ಇಡಲ್ಪಟ್ಟಿರುವುದು.

ಈ ಪುಸ್ತಕದ ಅರ್ಧಭಾಗಕ್ಕೆ ಮುಂದಣ ಭಾಗವು ಶೋಧನಕಾರ್ಯವಲ್ಲಿ ವಿಶೇಷಪರಿಚಿತನಲ್ಲದ ನನ್ನ ಶೋಧನೆಗೆ ಒಳಪಟ್ಟಿದ್ದುದರಿಂದ ಅದರಲ್ಲಿ ಪ್ರಮಾದದಿಂದ ತಪ್ಪುಗಳು ಸ್ವಲ್ಪ ಹೆಚ್ಚಾಗಿ ಬಂದರೂ ಗುಣೈಕಪಕ್ಷಪಾತಿಗಳಾದ ಪಂಡಿತರು ಕ್ಷಮಿಸಿ ತಿದ್ದಿಕೊಳ್ಳುವರೆಂದು ನಂಬಿರುವ,

ಟಿ. ಎಸ್. ಸುಬ್ಬರಾಯಶಾಸ್ತ್ರಿ,

ಕರ್ಣಾಟಪಂಡಿತ.

| ವಿಷಯ | ಪುಟ |
|---|---|

ವಿಷಯ — ಪುಟ

ವಿಷಯ ಪುಟ

| ವಿಷಯ | ಪುಟ |
| --- | --- |

| ವಿಷಯ | ಪುಟ |
|---|---|

೭ನೆಯ ಸಂಧಿ—

| ವಿಷಯ | ಪುಟ |
|---|---|

| ವಿಷಯ | ಪುಟ |
|---|---|

ನೆಯ ಸಂಧಿ :—

| ವಿಷಯ | ಪುಟ |
| --- | --- |

ವಿಷಯ | ಪುಟ

೧೦ನೆಯ ಸಂಧಿ—

ವಿಷಯ ಪುಟ

| ವಿಷಯ | ಪುಟ |
|---|---|

| ವಿಷಯು | ಪುಟ |
|---|---|

ಶ್ರೀ

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

# ವಿರಾಟಪರ್ವ.

## ಪಂಚಮ ಸಂಪುಟ.

## ಒಂದನೆಯ ಸಂಧಿ.

ಸೂಚನೆ.

ಕಾಯಿದರು ಸತ್ಯವನು ವನವಾ
ಸಾಯುತವ ನೆಱೆ ಗೆಲಿದು ಪಾಂಡವ
ರಾಯರೋಲೈಸಿದರು ಬಂದು ವಿರಾಟನಗರಿಯಲಿ ||

ಪಾಂಡವರು ಅಜ್ಞಾತವಾಸಕ್ಕೆ ಉಪಾಯವನ್ನು ಚಿಂತಿಸಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಮುನಿಜನನೃಪ [1] ಜನಂಗಳ
ಬೀಳುಗೊಟ್ಟನು ಭೂಮಿಪತಿ [2] ಬಲವಂದು ಹುತವಹನ |
ಮೇಲುಶಕುನದ ಚಾರುನಿನದವ
ನಾಲಿಸುತ ಸೋದರರು ಸಹಿತ ವ
ನಾಲಯವ ಹೊಱವಂಟು ಸೇರಿದರೊಂದು ವಟಕುಜವ || ೧

1 ಧರ್ಮಜ ಮುನಿ, ಟ. 2 ನಗರಿಯನು, ಟ,

* ಬಂದು ವಟಕುಜದಡಿಯಲೈವರು
ನಿಂದು ದ್ರೌಪದಿಸಹಿತ ನೆಳಲೊಳ
ಗಂದು ವಿಶ್ರಮಿಸಿದರು ಚಿಂತಿಸಿ ಧರ್ಮನಂದನನು ।
ಹಿಂದೆ ಹನ್ನೆರಡಬುದ ಸವೆದುವು
ಮುಂದಣನುವಿನ ಹದನು ತಮಗಿ [1]
ನ್ನೊಂದಬುದವಜ್ಞಾತವೃತ್ತಕ ಟವಾಯ್ತಲಾ ಯೆಂದ [2] ॥ ೧

ಬಡಗಲವರದು ಮೂಡಣರಸುಗ
ಳಡೆಗೆಣೆಯುರಾತಂಗೆ ತೆಂಕಣ
ಕಡೆಯವರು ಕಂಡಿಹರು ಕೆಲಬಲದವರು ಕೊಂಡೆಯರು ।
ಪಡುವಣವರತಿಕ್ರಶರು ನಮಗಿ
ನ್ನಡಗಿರಲು ತೆಱನಾವುದೆಂದೆನೆ
ನುಡಿದನರ್ಜುನದೇವನವನೀಪತಿಗೆ ವಿನಯದಲಿ ॥ ೨

ವಿರಾಟನ ಪಟ್ಟಣವು ವಾಸೋಚಿತವೆಂದು ಅರ್ಜುನನು ಹೇಳಿದುದು.

ವಳಿತವನು ಹೊಕ್ಕಿಱಿದು ಕೌರವ
ರೊಳಗೆ ಹಗೆಯಾಗಿಹನು ಕೀಚಕ
ಬಲ ವಿರಾಟಂಗವನ ದೆಸೆಯಿಂ [3] ಛಿದ್ರವಿಹೀನವದು ।
ಮುಳಿದು ಹೇಱಿಕೆಯಾದ ರವಿಸುತ
ಕಲಿತ್ರಿಗರ್ತಾದಿಗಳನಿಪ ಮಂ
ಡಳಿಕರನು ಕೈಕೊಳ್ಳದಾಳುವೆರವರು ಪಶ್ಚಿಮವ ॥ ೪

ಅದಕ್ಕೆ ಧರ್ಮರಾಯನ ಸಮ್ಮತಿ.

ನೃಪತಿ ನಿಶ್ಚೈಸಿದನು ಮತ್ಸ್ಯಾ
ಧಿಪನ ನಗರಿಯೊಳಲ್ಲಿ ಸ್ವೈರಿಸಿ

---

* ಖ. ಟ. ಈ ಪುಸ್ತಕಗಳಲ್ಲಿ ಈ ಪದ್ಯವಿರುವುದಿಲ್ಲ.

1 ಶಿಂಗನುಗತಿ ಬಟಿ, ಚ. 2 ಕೊಂದುವರುಷಜ್ಞಾತವಾಸಕ್ಕಾವ ಠಾವೆಂದ, ಚ.
3 ಛಿದ್ರಹಿಂ, ಖ.

ಕೃಪಣತನದಲಿ ನೂಕಬೇಹುದು ನುಡಿದವತ್ಸರವ |
ಗುಪಿತವೆಂತಳವಡುವುದಾಶ್ರಯ
ದಪದೆಶೆಯನೆಂತಾನುವಿರಿ ನಿ
ಷ್ಕೃಪೆಯೊಳೆಂತಾನೆಂಬೆನೆಂದನು ಧರ್ಮನಂದನನು || ೫

ಪಾಂಡವರು ಮತ್ತು ದ್ರೌಪದಿಯು ಬೇರೆಬೇರೆ ವೇಷವನ್ನು ಧರಿಸಿದುದು.

ದೇವ ನಿಮ್ಮಯ ಮತವೆ ಮತವೆಮ
ಗಾವವೇಷದ ವಿವರ ನಿಮಗದ
ನೀವು ಬೆಸಸುವುದೆಂದು ಭೀಮಾರ್ಜುನರು ಬಿನ್ನವಿಸೆ |
ನಾವು ಭೂಸುರವೇಷದಲಿ ಸಂ
ಭಾವಿತರು ಮತ್ತಲ್ಲಿ ಸನ್ಯಾ
ಸಾವಲಂಬನ ಕಂಕನೆಂಬಭಿಧಾನ ತನಗೆಂದ || ೬

ವಲಲನೆಂಬಭಿಧಾನದಲಿ ನೃಪ
ನಿಳಯುವನು ಸಾಱುವೆನು ತಾನೆಂ [1]
ದುಲಿಯೆ ಮಾರುತಿ ನುಡಿದ ವರನಾಟ್ಯವಿ [2] ದವೇಷವನು |
ಫಲುಗುಣನು ಸಾಯಗೋನಿವಾಸ
ಸ್ಥಳವಿಳಾಸಿತರೆನಲು ಯಮಳರು
ಲಲನೆ ಬಿನ್ನಹಮಾಡಿದಳು ಸೈರಂಧ್ರಿವೇಷವನು || ೭

ತೋಱಲಿದಿರಿ ಹನ್ನೆರಡುವರುಷವು
ಹಱುವದಲಿ ಸೊಂಪಡಗಿ ಪರರೊಡ
ನುಱಗೆಲಸದಱಗವಿದೆಂತ್ರೈ ಸಾರ್ವಭೌಮರಿಗೆ |
ಒಱಲಿದಿರಿ ಹಿರಿದಾಗಿ ನಿಮ್ಮುವ
ನುಲಿಸಿದ ತನ್ನಂತೆ ಪಾಪಿಗ
ಳೂಳರೆ ಭುವನದೊಳೆಂದು ಕುಂತೀಸೂನು ಬಿಸುಸುಯ್ದ || ೮

1 ನೆನುತ್ತಾ, ಖ. 2 ಚಳಿಸಿದನುತ ಬಿನ್ನೈಸಿದನು ನಟ್ಟುವಿಗ, ಖ.

ಒಡಲ ಬಟ್ಟೆ ನೆಳಲಿಂಗೆ ಗತಿ ಬೇ
ರ್ಪಡಿಸಿಹುದೆ ಸುಖದುಃಖವಿವು ನಿ
ಮ್ಮಡಿಗಳಲಿ ತನು ನಾಲ್ಕುಬಲಿ ಜೀವಾತ್ಮ ನೀವೆಮಗೆ ।
ಅಡವಿಯೇ ಸಾಮ್ರಾಜ್ಯ ನಿಮ್ಮಡಿ
ಯೊಡನಿರಲು ನೀವಿಲ್ಲದಿರೆ ಪುರ
ವಡವಿ ಯೆಮಗಹುದೆಂದು ಬಿನ್ನೈಸಿದರು ಭೂಪತಿಗೆ ॥ ೯

ತುಷ್ಟನಾದನು ನೃಪತಿ ಕೃತಪರಿ
ಶಿಷ್ಟಪಾಲನು ಜಗದೊಳತ್ಯು
ತ್ಕೃಷ್ಟಚರಿತನು ತೆಂಕದೆಸೆಗೆ ಸಹೋದರರು ಸಹಿತ ।
ದುಷ್ಟಮೃಗಗಳ ಬೇಂಟೆಯಾಡಿ ವ
ಸಿಷ್ಠಮುನಿಯಾಶ್ರಮದ ಸುಜನರ
ರಿಷ್ಟವನು ಪರಿಹರಿಸುತೈತಂದರು ಸರಾಗದಲಿ ॥ ೧೦

ತಮ್ಮ ಬಳಿಯಿದ್ದ ಆಯುಧಗಳನ್ನು ಒಂದು ಮರದಲ್ಲಿರಿಸಿದುದು.

ಬಂದು ಮತ್ಸ್ಯಪುರೋಪಕಂಠದ
ನಂದನದ ಕೆಲಕಡೆಯಲನಿಬರು
ಬಂದು ನಾಲುಕು ದೆಸೆಯನೀಕ್ಷಿಸಿ ನಿಜವಿಲಾಸದಲಿ ।
ತಂದಚರ್ಮದಲಖಿಳಕೈದುವ
ನೊಂದುಹೆಣನಾಕಾರದಲಿ ಬಿಗಿ
ದೊಂದು ಬನ್ನಿಯ ಮರದ ತುದಿಯಲಿ ಕಟ್ಟಲೇಱಿದರು ॥ ೧೧

ತೆಗೆಯದಿರಿ ನೀವೆಂದು ತುಱುಗಾ
ಹಿಗಳನಂಜಿಸಿ ಧರ್ಮಸುತ ದೃಗು
ಯುಗವ ಮುಚ್ಚಿ ಸುರೇಂದ್ರಯಮವರುಣಾದಿಗಳಿಗೆಱಗಿ ।
ವಿಗಡನೀಕಲಿಭೀಮನೀಕೈ
ದುಗಳನೀತಂಗೀಯದಿರಿ ಕೈ
ಮುಗಿದು ಬೇಡುವೆನೆಂದು ಸುರರಿಗೆ ನುಡಿದನವನೀಶ ॥ ೧೨

ಈವುದಾಬೇಡಿದರೆ ಪಾರ್ಥಂ
ಗೀವುದೀಯಜ್ಞಾತವಾಸದೊ
ಳೀವಿಗಡಭೀಮಂಗೆ ಕೊಡದಿರಿ ಯೆನಲು ಖತಿಗೊಂಡು ।
ನೀವು ಕುಂತಿಯ ಮಕ್ಕಳಾದಿರಿ
ನಾವು ದುರ್ಯೋಧನನವರು ತ
ಪ್ಪಾವುದಿದಕೆಂದನಿಲಸುತನೌಡೊತ್ತಿ ಗರ್ಜಿಸಿದ ॥　　೧೩

ಸುರನಿಕರ ಕಾದಿರಲಿ ಮೋಣೀ
ಧರಣಿ ಕೊಡೆನೆಂದೆನಲಿ ಹಸ್ತಿನ
ಪುರಕೆ ಧಾಳಿಯನಿಡುವೆನಮರರ ಮೋಹುಗಳ ತಿವಿದು ।
ಉರುತರಾಸ್ತ್ರವನೊಯ್ವೆನೆಂದ
ಬ್ಬರಿಸಿ ಮಾರುತಿ ನುಡಿಯೆ ತಮ್ಮನ
ಭರದ ಖತಿಯನು ನಿಲಿಸ ತೆಗೆದಪ್ಪಿದನು ಭೂಪಾಲ ॥　　೧೪

ಅವಧಿ ಯೊಂದೇವರುಷವಿದಱೊಳ
ಗೆವಗೆ ಸೈರಣೆಯುಂಟು ನೀ ಮುನಿ
ದವಗಡಿಸಿದೊಡೆ ಬೞಿಕ ಸೈರಿಸಲಱಿಯೆ ಮನವಮುಳಿದು ।
ಅವನಿಯುಲಿ ಹನ್ನೆರಡುವರುಷವು
ಸವೆದುವಿದು [1] ನಿಷ್ಫಲವಲಾ ಕೌ
ರವರಿಗತಿಲಾಗಹುದು ನೀನೇ ಬಲ್ಲೆ ಹೋಗೆಂದ ॥　　೧೫

ಧರ್ಮರಾಯನು ಯತಿವೇಷದಿಂದ ವಿರಾಟನಗರಿಗೆ ಬಂದುದು.

ಹದುಳವಿಟ್ಟನು ಭೀಮನನು ಸಾ [2]
ಮದಲಿ [3] ಮತ್ಸ್ಯನ ಪುರಿಗೆ ಯತಿವೇ
ಷದಲಿ ಬಂದನು ಹೊನ್ನಸಾರಿಯಚೀಲಕಕ್ಷದಲಿ ।
ಇದಿರೊಳಾನತರಾಯುಷ್ತು ಕಂಡವ

---

1 ಸವೆದುದು, ಛ　　2 ನಿ, ಖ　　3 ಮಾದನು, ಕ.

ರುದಿತತೇಜಃಪುಂಜದಲಿ ಸೂಂ
ಪೊದವಿ ಬರಲು ವಿರಾಟ ಕಾಣಿಕೆಗೊಂಡು ನಡೆತಂದ[1] ॥ ೧೬

ಇತ್ತ ಬಿಜಯಂಗೈಯೆ ಹಿರಿಯರಿ
ದೆತ್ತಣಿಂದೈತಂದರೈಯ
ತ್ಯುತ್ತಮದ ವೇಷದ ಮಹಾತ್ಮರ ಕಂಡು ಬದುಕಿದೆವು ।
ಚಿತ್ತವಿಸು ಭೂಪಾಲ ಪಾಂಡವ
ರತ್ತ ವನವಾಸಕ್ಕೆ ನಡೆಯ
ಲ್ಕಿತ್ತ ಬಂದೆವು ಮುನ್ನಿನೋಲಗವೆಂತರಿಸಿತಾಗೆ ॥ ೧೭

ಕೆಟ್ಟುದಿಂದ್ರಪ್ರಸ್ಥ ಪಾಂಡವ
ರುಟ್ಟು ಹೋದರು ನಾರಸೀಱೆಯ
ನಟ್ಟಡವಿ ಮನೆಯಾಯ್ತು ರಾಜಾನ್ವಯದ ರಾಯರಿಗೆ ।
ಬಿಟ್ಟರೆಮ್ಮನು ಜಠರಭರಣಕೆ
ನೆಟ್ಟನಾಶ್ರಯವಿಲ್ಲದಿರೆ ಕಂ
ಗೆಟ್ಟು ಬಂದೆವು ಕಂಕನೆಂಬಭಿಧಾನ ತನಗೆಂದ ॥ ೧೮

ಓಲಗಕೆ ಬಂದಖಿಳರಾಯರ
ಮೌಳಿಮೌಕ್ತಿಕಮಣಿಮಯೂಖನಿ
ವಾಳಿಯಲಿ ನೆಱೆ ಮೆಱೆವುದಾತನ ಪಾದಪದ್ಮಯುಗ ।
ಕಾಲವಾವನನಾವಪರಿಯಲಿ
ಕೀಳುಮಾಡದು ಧರ್ಮಪುತ್ರನ
ನಾಳುಗೊಂಡನು ಮತ್ಸ್ಯನೆಲೆ ಜನಮೇಜಯಕ್ಷಿತಿಪ ॥ ೧೯

ಆದುದೈ ನಿರ್ವಾಹ ಕಂಕಂ
ಗಾದುದಾ ಮತ್ಸ್ಯೇಶನಿಂದ ವಿ
ವಾದವಿಲ್ಲದೆ ಸೇವೆ ನಿಜವಾದಂತೆ ಯಿರುತಿರಲು ।

---

ಕಾಣಿಸಿಕೊಂಡನುಚಿತದಲಿ, ಚ

ವಿರಾಟನಗರಿಗೆ ಭೀಮನು ಬಂದುದು.

ಹೋದುವಿತ್ತಲು ಕೆಲವುದಿನ ತನ
ಗಾದ ಸಾಹಾಯ್ಯದಲಿ ರಿಪುಬಲ
ಭೇದಿ ಮಾರುತಿ ಬಂದು ಹೊಕ್ಕನು ಮತ್ಸ್ಯಪುರವರವ [1] ‖ ೨೦

ಏನು ಪರಿಣತಿ ನಿನಗೆ ಬಾಣಸಿ
ಯಾನು ಭೀಮನ ಮನೆಯವನು ಮ
ತ್ತೇನು ಭುಜಬಲವಱಿವೆನಗ್ಗದ ಮಲ್ಲವಿದ್ಯೆಯಲಿ ।

ಅರ್ಜುನನ ಬರುವಿಕೆ.

ನೀನಧಿಕನೆಂದಾಸವಿರಾರನ
ಸೂನುವನು ಮನ್ನಿಸಿದನಿತ್ತಲು
ಮಾನನಿಧಿ ಮಱುದಿವಸ ಹೊಕ್ಕನು ಪಾರ್ಥನಾಹೊಳಲ ‖ ೨೧

ಸುರಪನರಸಿಯ ಶಾಪದಲಿ ಸಿತ
ತುರಗ ನೆಱೆವೆಣ್ಣಾಗಿ ಮತ್ಸ್ಯೇ
ಶ್ವರನ ಮಗಳಿಗೆ ನಾಟ್ಯವಿದ್ಯಾಭ್ಯಾಸ ಸಂಗದಲಿ ।

ನಕುಲ ಸಹದೇವರು ವಿರಾಟನಗರಕ್ಕೆ ಬಂದುದು.

ಇರಲು ಯಮಳರು ತುರಗಗೋವ್ರಜ
ಭರಣರಾದರು ಬೞಿಕ ಪಾಂಡವ
ರರಸಿ ಸಾರಿದಳೋಳವಿನಲಿ ವೈರಾಟಪಟ್ಟಣವ ‖ ೨೨

ದ್ರೌಪದಿಯ ಆಗಮನ.

ತರಣಿಗಂಜಿದೊಡಿಂದು ತಲೆಗಾ
ಯ್ದಿರಿಸಿದನೊ ಮಱೆಯಾಗಿ ತಿಮಿರದ
ಹೊರಳಿಗಳನೆನೆ ಮುಡಿಗೆ ಮೋಹಿದವೇಣಿವಲ್ಲರಿಯ ।

1 ಕಂಡನು ಮತ್ಸ್ಯಭೂಪತಿಯ, ಖ. ಜ.

ಹಿರಿದು ಸೈರಿಸಲಾರೆನೆಂದೊಡ
ನಿರಿಸಿದನೊ ಕೈರವವನೆನಲೆಂ
ದರಳುಗಂಗಳ [1] ಥಾಳವೊಪ್ಪಿರೆ ಬಂದಳಿಂದುಮುಖಿ ॥ ೨೩

ಮೊಲೆಯ ಮೇಲುದ ಜಾಱೆ ಜಾಱಿದ
ರಳವಮನರು ಕಂಗಳನ ಮಿಂಚಿನ
ಹೊಳಹಿನಲಿ ನಡೆಗೆಟ್ಟು ನಿಂದರು ಚಿತ್ತವಿಹ್ವಳರು ।
ತೆಳುವಸುರು ತಲೆದೋಱೆ ತೋಱಿದು
ದಲಗು ಮುಱುವೊನೆಯೆನಲು ವಿಟ
ರಳವಳಿಯೆ ನಡೆತರುತಿರ್ದಳಂಗನೆ ಬೀದಿಬೀದಿಯಲಿ ॥ ೨೪

ಎಲೆಲೆ ಮದನನ ಗಜವು ತೊತ್ತಳ
ದುಳಿದುದೋ ಕಾಮುಕರನೆನೆ ಗಾ
ವಳಿಯೊಳಗೆ ಗಾಱಾಯ್ತು [2] ಗರುವಿಕೆ ವಿಟವಿದೂಷಕರ ।
ಅಳುಕಿದರು ಮನುಮಥನ ಗರುಡಿಯ
ಬಲುಮೊಕಾಱರು ಬಂದಳಗ್ಗದ
ನಳಿನಮುಖಿ ಬಹುಜನದ ಬಗೆಗಚ್ಚರಿಯನೊದವಿಸುತ ॥ ೨೫

ದ್ರೌಪದಿಯ ರೂಪವನ್ನು ನೋಡಿ ರಾಣೀವಾಸದವರು ಬೆರಗಾದುದು.

ಜನದ ಜಾಣಕ್ಕಾಡಲೀ ಮೋ
ಹನಮಹೋದಧಿ ಮತ್ಸ್ಯನೃಪನಂ
ಗನೆಯ ನಿಳಯಕೆ ಬರಲು ಬೆಱಗಾಯ್ತಖಿಳನಾರಿಯರು ।
ವನಿತೆ ಮಾನಿಸಿಯಲ್ಲ ಮನುಜರಿ
ಗಿನಿತು ರೂಪೆಲ್ಲಿಯದು ವಿಸ್ಮಯ
ವೆನುತ ಮನದೊಳಗಳುಕಿದರು ಮತ್ಸ್ಯೇಶನರಸಿಯರು ॥ ೨೬

1 ಧರರೆಕಂಗಳ, ಚ. 2 ಕಾಳಾಯ್ತು, ಕ. ಖ.

ಸುದೇಷ್ಣೆಯು ಇಷ್ಟದಂತೆ ರಾಜಮಂದಿರಕ್ಕೆ
ದ್ರೌಪದಿಯು ಬಂದುದು.

ಬರವ ಕಂಡು ಸುದೇಷ್ಣೆ ಮನದಲಿ
ಹರುಷ ಮಿಗೆ ಹಿಗ್ಗಿದಳು ಕರೆ ಕರೆ
ತರುಣಿ ಯಾರೆಂದಟ್ಟಿದಳು ಕೆಳದಿಯರನನಿಬರನು [1] |
ಸರಸಿಜಾಯತಗಂಧವನು ಮೋ
ಹರಿಸಿ ಮುಂಚುವ ಪರಿಮಳವನಂ
ದರಿಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ || ೨೬

ಕೆಳದಿಯರು ಕಾಣಿಸಿದರರಸನ
ಲಲನೆಯನು ಪರ್ಯಂಕಪೀಠದ
ಕೆಲಕೆ ಕರೆದಳು ಕಮಲವದನೆಯನುಚಿತವಚನದಲಿ ||
ನಳಿನಮುಖಿ ನೀನಾರು ನಿನಗಾ
ರೊಳರು ರಮಣರು ಮಾಸಿಕೊಂಡಿಹ
ಮಲಿನವೃತ್ತಿಯಿದೇಕೆನುತ ಬೆಸಗೊಂಡಳಂಗನೆಯ || ೨೭

ದ್ರೌಪದಿಯ ನುಡಿ.

ಅತುಳಬಲಗಂಧರ್ವರೈವರು
ಪತಿಗಳೆನಗುಂಟೆನ್ನ ಚಿತ್ತಕೆ
ಖತಿಯ ಮಾಡಿದೊಡೊಂದುವರುಷವು ಬಿಡುವೆನವರುಗಳ |
ಸತತವಾಕುಂತೀಕುಮಾರರ
ಸತಿಯರೋಲೈಸಿದ್ದೆ ಬಚ್ಚಿಕವ
ರತಿಗಹನದಲಿ ನಿಷ್ಠರಾಗಲು ತನಗೆ ಬರವಾಯ್ತು || ೨೮

ಏನ ಮಾಡಲು ಬಲ್ಲೆಯೆಂದರೆ
ಮಾನಿನಿಯು ಸಿರಿಮುಡಿಯ ಕಟ್ಟುವೆ
ಸೂನ ಮುಡಿಸುವೆವರ ಕಟಾಕ್ಷಕೆ ಕಾಡಿಗೆಯನಿಡುವೆ |

---

1 ನಿಬ್ಬರನು, ಕ. ಖ.

ಪನ ಹೇಳಿದ ಮಾಡ ಬಲ್ಲೆನು
ಸಾನುರಾಗದೊಳೆಂದೆನಲು ವರ
ಮಾನಿನಿಯು ನಸುನಗುತ ನುಡಿಸಿದಳೆಂದು ವಿನಯದಲಿ ‖ ೩೦

ಎನಲು ಮೆಚ್ಚಿದಳಾವಿರಾಟನ
ವನಿತೆ ವೀರರ ವಧುವನಾಸಖಿ
ಜನದೊಳಗೆ ಮನ್ನಿಸಿದಳನಿಬರಿಗಾಯ್ತು ನಿರ್ವಾಹ ।
ಮನದ ದಗೆಯುಡುಗಿದುದು ಮತ್ಸ್ಯೇ
ಶನ ಪುರಾಂತರದೊಳಗೆ ಪ್ರೇಮದಿ
ದನುಪಮಿತಭುಜಸತ್ವರಿದ್ದರು ಭೂಪ ಕೇಳೆಂದ ‖ ೩೧

ಒಂದನೆಯ ಸಂಧಿ ಮುಗಿದುದು.

## * ಎರಡನೆಯ ಸಂಧಿ.

ಸೂಚನೆ.

ಕುಸುಮಶರನುರುವಣೆಯ ಗಾಯವ
ಲೆಸುಗೆವಡೆದನು ಕೀಚಕನು ತ
ನ್ನಸುವಿನಳತೆಯ ನೋಡದೇ ತುಡುಕಿದನು ದ್ರೌಪದಿಯ ‖

ಪಾಂಡವರು ವಿರಾಟನ ಬಳಿ ಸುಖದಿಂದ ಕಾಲವನ್ನು ಕಳೆದುದು.

ಕೇಳು ಜನಮೇಜಯ ಧರಿತ್ರೀ
ಪಾಲ ನಿಮ್ಮ್ರವು ಪೂರ್ವಭೂಮಿಪ[1]
ಪಾಲರಿದ್ದರು ಗುಪಿತದಿಂದ ವಿರಾಟನಗರಿಯಲಿ ।

* ಚ. ಪುಸ್ತಕದಲ್ಲಿ ಈ ಸಂಧಿಯು ಮೂರನೆಯದಾಗಿದೆ.

1 ಪೃಥ್ವೀ, ಚ. ಚ.

ಕಾಲ ಸವೆದುದು ಹತ್ತು ತಿಂಗಳ
ಮೇಲೆ ಮತ್ತೊಂದತಿಶಯೋಕ್ತಿಯು
ನಾಲಿಸೈ ವಿಸ್ತರದಲಱಿಪುವೆನೆಂದನಾಮುನಿಪ ॥ ೧

ಜವನ ಮಗ ಸಂನ್ಯಾಸಿವೇಷದಿ
ಪವನಸುತ ಬಾಣಸಿನ ಮನೆಯಲಿ
ದಿವಿಜರಾಯನ ತನಯನಿದ್ದ ಶಿಖಂಡಿವೇಷದಲಿ ।
ಜವಳಿಮಕ್ಕಳು ಗೋಹಯಂಗಳ
ನಿವಹಕಧಿಪರು ಕಮಲಮುಖಿ ಕಾ
ಲವನು ಕಳೆದಳು ರಾಯನರಸಿಯ ಕೆಳದಿಯರ ಗೂಡಿ ॥ ೨

ಆಸುದೇಷ್ಣಾ ದೇವಿಯರ ನಿಡು
ಕೇಶವನು ಹಿಕ್ಕುವಳು ಮುದದಲಿ
ಪೋಸಮಲ್ಲಿಗೆಯರಳದೆಖ್ಖಳವನು ಮುಡಿಸುವಳು ।
ಆಸತಿಯ ಮನವೊಲಿದು ನಡೆವಳು
ಲೇಸುಲೇಸೆಂದೆನಿಸಿ ಬಾಳುವ
ಭಾಷೆಯನು ಸಲಿಸುತ್ತಲಿರ್ದಳು ಪತಿಗಳಾಜ್ಞೆಯಲಿ ॥ ೩

ಆವಿರಾಟನ ರಾಜಧಾನಿಯೊ
ಳಾವಿಲಾಸವ ಮುಸುಕಿದರು ಪರ
ಸೇವೆಯಲಿ ಪಾಂಡವರು ಕಳೆದರು ಹತ್ತುಮಾಸವನು ।
ರಾವಣನು ಮುನ್ನೊಮ್ಮೆ ಸೀತಾ
ದೇವಿಗಳುಪಿದ ಕಥೆಯ ಪೊಲು ಸಂ
ಭಾವಿಸೈ ಕೀಚಕವಿಳಾಸವನೆಂದನಾಮುನಿಪ [1] ॥ ೪

ಬಂದಾನೊಂದು ದಿವಸ ಕೀಚಕನು ತನ್ನ ಅಕ್ಕನನ್ನು
ನೋಡಲು ಬಂದುದು.

ಬಂದುದಿವಸ ವಿರಾಟನರಸಿಯ
ಮಂದಿರವನೋಲೈಸಲೆಂದೈ

1 ಭಾವಿಸಿದ ಕೀಚಕಕ ವಿಡಂಬವ ಕೇಳು ಭೂಪಾಲ, ಚ.

ತಂದನಾಕೆಯು ತನ್ನ ಕೀಚಕನತುಳಭುಜಬಲನು |
ಹಿಂದೆ ಮುಂದಿಕ್ಕೆಲದ ಸತಿಯರ
ಸಂದಣಿಯ ಮಧ್ಯದಲಿ ಮೆರೆವರ
ವಿಂದವದನೆಯು ಕಂಡು ಕಾಣಿಕೆ ಯಿತ್ತು ಪೊಡಮಟ್ಟ || ೫

ಅನುಜನನು ತೆಗೆದಪ್ಪಿ ಸಿಂಹಾ
ಸನದ ಕೆಲದೊಳಗಿರಿಸಿ ಮುದದಲಿ
ಮನದಣಿಯೆ ಮನ್ನಿಸಿದಳಂಗನೆ ತತ್ಸಹೋದರನ |
ತನುಪುಳಕ ತಳೆದೊಲಿದಲವನು
ಬ್ಬಿನಲಿ ಸತ್ಕೃತನಾಗಿ ಕಮಲಾ
ನನೆಯನು ನೋಡಿದ ಸುದೇಷ್ಣೆಯ ಮೇಳದಬಲೆಯರ || ೬

ಆಗ ಕೀಚಕನಿಗೆ ಪಾಂಚಾಲಿಯ ದರ್ಶನ.

ಅವರ ಮಧ್ಯದೊಳಮಲತಾರಾ
ನಿವಹದಲಿ ರೋಹಿಣಿಯವೊಲು ಸುರ
ಯುವತಿಯರೊಳೂರ್ವಶಿಯವೊಲು ನದಿಗಳಲಿ ಜಾಹ್ನವಿಯ |
ಅವಯವದ ಪರಿಮಳದ ಪಸರಕೆ
ಕವಿವ ತುಂಬಿಯ ಸಾರಸಂಗೀ
ತವನು ಕೇಳುತ ಕಂಡನವ ಪಾಂಚಾಲನಂದನೆಯ || ೭

ಮೊದಲೊಳವನವಳಂಗವಟ್ಟವ
ನೊದವಿ ನೋಡಿದೊಡಲ್ಲಿಯೇ ಗಾ
ಢದಲಿ ನೆಟ್ಟವು ಕೀಳಲರಿದಾಯ್ತಾಲಿಗಳನಲುಗಿ |
ಮದನ ಮಸೆದೋಟಿದನು ಹೂಗಣೆ
ಹೃದಯವನು ಹೊಚ್ಚಿದುವು ಹರ ಹರ
ಬೆದಬಿದನು ಹಮ್ಮೈಸಿದನು ಖಳನೊಂದು ನಿಮಿಷದಲಿ || ೮

ಸಲೆ ಯಿವಳು ಮೂಜಗವ ಮೋಹಿಪ
ತಿಲಕವೋ ಕಾಮಂಗೆ ಕಟ್ಟಿದ
ಕಳನ ಭಾಷೆಗೆ ನಿಂದ ಮಾಸಾಳೋ ಮಹಾದೇವ ।
ಕೊಲೆಗಡಿಗ ಕಂದರ್ಪಕನ ಕೂ
ರಲಗೊ ಮದನನ ಸೊಕ್ಕಿದಾನೆಯೊ
ನಳಿನಮುಖಿ ಯಿವಳಾವ ಸತಿ ಯೆಂದಳುಪಿ ನೋಡಿದನು ॥ ೯

ಜಗವ ಕೆಡಹಲು ಜಲಜಸಂಭವ
ಬಿಗಿದ ಬಲೆ ಯಿವಳಲ್ಲಲೇ ಮೂ
ಜಗದ ಯತಿಗಳನೆಸಲು ಮನುಮಥನೆಸೆದ ಕೂರಲಗೊ ।
ವಿಗಡನಾದನು ಕಾಮನಂಬುಗ
ಳುಗಿದುವೆದೆಯಲಿ ನಟ್ಟದೃಷ್ಟಿಯು
ತೆಗೆಯಲಳಿಯದೆ ಸೋತು ಕೀಚಕ ಪಾತಕವ ನೆನೆದ ॥ ೧೦

ಆಗ ಕೀಚಕನ ಅವಸ್ಥೆ.

ನಿಂದು ನೋಡಿದ ದ್ರೌಪದಿಯ ಮುಖ
ದಂದವನು ಕಂಡಾಗ ಕೀಚಕ
ನೊಂದನೆನೆ ಮುಖದಿರುಹಲೆಚ್ಚನು ಕಾಮ ಕೈಗೂಡಿ ।
ಅಂದು ಬೆಱಗಾದನು ಮಹಾಸತಿ
ಯಿಂದು ತುಳಿದಳು ಮನವ ಯಿವಳಾ
ರೆಂದು ಭಾವಿಸಿ ಚಾಚಿದನು ಕದಪಿನಲಿ ಕರತಳವ ॥ ೧೧

ಸೂಱೆಯೋದುದು ಚಿತ್ತ ಕಂಗಳು
ಮಾಱುವೋದುವು ಖಳನ ಧೈರ್ಯವ
ತೋಱೆ ಕಾಣೆನು ಕರಣದಲಿ ಕಳಕಳದ ಬೀಡಾಯ್ತು ।
ಮಿಾಱಿ ಮೊಗವಂಗಜನ ಶರದಲಿ
ದೋಱವೋದುದು ಹೃದಯ ಕಣ್ಣೂರಿ
ಗಾಱ ಯಿವಳಾರೆನುತ ಗಜಬಜಿಸಿದನು ನಿಮಿಷದಲಿ ॥ ೧೨

ಅಱಿವು ತಲೆಕೆಳಗಾಯ್ತು ಧೈರ್ಯದ
ಸಿಱಿಗೆ ನಗೆಗೇಡಾಯ್ತು ಲಜ್ಜೆಯ
ಹೊಱಿಗೆ ಬಱದೊಱೆಯಾಯ್ತು ಕರಿವೊಳೆಯಾಯ್ತು ಭಯಬೀಜ
ಮೊಱವೆ ಗರಿಗಟ್ಟಿತು ಮನೋಭವ
ಸಿಱಿಗೆಲಸ ಬಲುಹಾಯ್ತು ಹೊಗೞುವೊ
ಡಱಿಯೆನಾತನ ಚಿತ್ತದಂತಸ್ತಾಪದೇಳ್ಗೆಯನು [1] ‖ ೧೩

ಬೀಳುಗೊಂಡುದು ಲಜ್ಜೆ ಮಹಿಮೆಯ
ಕೀಲು ಕಳಚಿತು ದ್ರುಪದತನುಜೆಯ
ನಾಲಿಯಲಿ ನುಂಗಿದನು ಮನದಲಿ ಸತಿಯ ಸೆಱೆವಿಡಿದು |
ಕೇಳು ಜನ್ನಪವಕ್ಕ ಸಿಮ್ಮಡಿ
ಯೋಲೆಕಾತಿಯರೊಳಗೆ ವಿರಾಟನ
ವೋಲಗ್ಗೈಯಿವಳಾರೆನುತ ಬೆಸಗೊಂಡನಗ್ರಜೆಯ ‖ ೧೪

ಈಕೆ ಗಂಧರ್ವರ ರಮಣಿ ನ
ವ್ಯಾಕೆಯಾಗಿಯೆ ಮಾನ್ಯವೃತ್ತಿಯೊ
ಳೀಕೆಯಿನು ಸಲಹುವೆವು ಬಲ್ಲಿದರಿವಳ ವಲ್ಲಭರು |
ಸಾಕು ಬೇಡಾರಕ್ಕೆ ನೀ ಹೋ
ಗೀಕೆ ನಿನಗಹಳಲ್ಲ ನಿಂದಿರು
ಕಾಕನಾಡದಿರೆನುತ [2] ಬೀೞುಗೊಟ್ಟಳು ನಿಜಾನುಜನ ‖ ೧೫

ತಾಱಿತಂತಃಕರಣ ಕಾಮನ
ಕೂಱುಗಣೆಗೀಡಾಯ್ತು ವೈಮನ
ದೇಱುಮುಚ್ಚದು ದುಗುಡ ಬಲಿದುದು ಮುಸುಕು ಮೋಱೆಯಲಿ |
ವಿಱಿ ನಿಜಮಂದಿರಕೆ ಫಗೆ ವೈ
ದೋಱಿ ಬಂದನು ಮಱುದಿವಸ ತಲೆ
ದೋಱಿ ಕಂಡನು ದ್ರೌಪದಿಯನರಮನೆಯ ಬಾಗಿಲಲಿ ‖ ೧೬

[1] ದೀಪನವ, ಕ. ಖ. ಝ. [2] ನುಡಿಯದಿರೆಂದು, ಝ.

ಕಳುಹಿದನು ತನ್ನೊಡನೆ ಬಹ ಗಾ
ವಳಿಯ ಪರಿವಾರವನು ತನ್ನಯ
ಬಳಿಯ ಹಡಪದ ಬಾಲಕನ ಹಿಂದಿಕ್ಕಿ ನಡೆತಂದ |
ಬಲಿದು ಸಿಂಹದ ಸತಿಗೆ ನರಿ ಮನ
ವೊಲಿದು ಬಪ್ಪಂದದಲಿ ಗರುಡನ
ಲಲನೆಗಹಿ ಬಯಸುವವೊಲವನೈದಿದನು ಬಾಲಿಕೆಯ || ೧೭

ರತಿಯ ಸೊಬಗಂತಿರಲಿ ವರಪಾ
ರ್ವತಿಯ ರೂಪಂತಿರಲಿ ಬೊಮ್ಮನ
ಸತಿಯ ಚೆಲುವಂತಿರಲಿ ಈಬಾಲಿಕೆಯ ರೂಪಿಂಗೆ |
ಪ್ರತಿಯ ಕಾಣೆನು ಪಾಂಡವರ ದ್ರೌ
ಪತಿಗೆ ಸರಿ ಮಿಗಿಲೆನಿಸಿ ತೋರುವ
ಸತಿಯ ವಿಭ್ರಮ ನೆಟ್ಟುದೆನ್ನಯ ಮನದೊಳೆನುತಿರ್ದ || ೧೮

ಕೀಚಕನು ದ್ರೌಪದಿಯ ಸಮೀಪಕ್ಕೆ ಬಂದು ಮಾತನಾಡಿಸಿದುದು.

ಖಳನ ಮನದಿಂಗಿತವ ತನ್ನೊಳು
ತಿಳಿದು ಕಾಮಿನಿ ಬೆದರಿದಳು ಕಳ
ವಳಿಗ ಸೋತನು ಕೆಟ್ಟೆನೆಂದಳು ತನ್ನ ಮನದೊಳಗೆ |
ತೊಲಗಿ ಹಿಂದಡಿಯಿಡಲು ಕೀಚಕ
ನಳುಕನೈತಂದಬುಜವದನೆಯ
ಬಳಿಗೆ ಬಂದನು ನುಡಿಸಲಾಗದೆ ತರಳೆ ನೀನೆಂದ [1] || ೧೯

ಎಲೆ ಮರುಳೆ ಬೇಡಳುಪದಿರು ಕೂ
ರಲಗ ಕೊರಳಿಗೆ ಬಯಸದಿರು ಕಳ
ವಳಿಸದಿರು ಕೈಯೊಡನೆ ನಿನ್ನರಮನೆಗೆ ತಿರುಗುವುದು |
ಸುಲಭೆ ನಾ ನಿನಗಲ್ಲ ನಿನ್ನನು
ಕೆಲರು ನಗುವರು ಪರಮಸದ್ಗತಿ
ತೊಲಗುವುದು ಮಾಣೆನುತ ಮುಖದಿರುಹಿದಳು ಲಲಿತಾಂಗಿ || ೨೦

---

1 ಸಿಂದು ನುಡಿದನು ಮಧುರ ವಚನದಲಿ, ಝ.

ನಿಲ್ಲೆಲೆಗೆ ಸೈರಂಧ್ರಿ ಕಾಮನ
ಬಲ್ಲಹದ ಬಲುಗಾಯ ತಾಕಿತು
ಬಲ್ಲೆ ಸೀನವೃಷಧಿಯ ಬದುಕಿಸಿಕೊಳ್ಳು ತನ್ನೊಡಲ ।
ಮೆಲ್ಲನಡಿ ಯಿಡು ಮಾತ ಮನ್ನಿಸು
ಚೆಲ್ಲೆಗಂಗಳನೆನ್ನ ಮುಖದಲಿ
ಚೆಲ್ಲಿ ಸತ್ರಾಣಿಸಲು ಬೇಹುದು ವಿಗಡಜೀವನವ ॥ ೧೧

ಎಳನಗೆಯ ಬೆಳದಿಂಗಳನು ನೀ
ತಳೆದು ತಾಪವ ಕೆಡಿಸು ಮಧುರದ
ಮೆಲುನುಡಿಯ ಸುಧೆಯಿಂದ ತೃಷ್ಣೆಯನಕಟ ಪರಿಹರಿಸು ।
ಅಳಿಮನವ ಬಡತನದ ನಿನ್ನಯ
ಕಳಶಕುಚಲಕ್ಷ್ಮಿಯಲಿ ಕಳೆ ಮನ
ದೊಲವನಿತ್ತಲು ತಿದ್ದಬೇಹುದು ಕಾಂತೆ ಕೇಳೆಂದ ॥ ೧೨

ತೋಳತೆಕ್ಕೆಯ ತೊಡಿಸಿ ಕಾಮನ
ಕೋಲ ತಪ್ಪಿಸು ಖಳನ ಕಗ್ಗೊಲೆ
ಯುಟಿಗವ ಕೇಳ್ದು ಸುರದಿಹರೆ ಸಮರ್ಥರಾದವರು ।
ಸೋಲಿಸಿದ ಗೆಲವಿಂದ ಬಲು ಮಾತಾ
ತಾಳಿ ಯಿವನೆನ್ನದಿರು ಹರಣದ
ಮೇಲೆ ಸರಸವೆ ಕಾಯಬೇಹುದು ಕಾಂತೆ ಕೇಳೆಂದ ॥ ೧೩

ಅದನ್ನು ಕೇಳಿ ಪಾಂಚಾಲಿ ನಡುಗಿದುದು.

ಕೇಳಿ ಕಿವಿ ಮುಚ್ಚಿದಳು ಮನದಲಿ
ಮೇಳದೈವರ ನೆನೆದು ಶಿವ ಶಿವ
ಶೂಲಪಾಣಿ ಮುಕುಂದ ಯೆನುತಾರವಿಯನೀಕ್ಷಿಸುತ ।
ಕಾಳಮೂಳನಲಾ ಖಳಾಗ್ರಣಿ
ಮೇಲುಗಾಣನಲಾ ಮದಾಂಧನ [1]
ಸೋಲಿಸುವರಾರುಂಟೆನುತ ನಡುಗಿದಳು ನಳಿನಾಕ್ಷಿ [2] ॥ ೧೪

---

[1] ದುರಾತ್ಮನ, ಝು. ಜ. [2] ತಲೆಬಾಗಿದಳು ತರಳೆ, ಚ.

ಎಲೆ ದುರಾತ್ಮ ಮಹಾಪರಾಧವ
ಬಳಸುವರೆ ಬಯಲಿಂಗೆ ನಿನ್ನಯ
ಕುಲದ ಬೇಱನು ಕೊಯ್ವರೇ ಫಲವಾವುದಿದಱಿಂದ [1] ।
ಹಱಿವು ಹೊದ್ದದೆ ಹೆತ್ತವೆರು ಮ
ಕ್ಕಳುಗಳೆಂಬೀ ಬದುಕು ಮೋಣದೆ
ಯೆಳಸಿಕೊಂಬಂತಾದುದೆಂದಳು ಪಾಂಡವರ ರಾಣಿ ॥ ೨೫

ಕೀಚಕ ಪಾಂಚಾಲಿಯರ ವಿವಾದ.

ಎಲೆಗೆ ಪಾತಕಿ ನಿನ್ನ ಕಣ್ಣಿಂ
ಬಲಗಿನಲಿ ಯೆನ್ನೆದೆಯ ನೋಯಿಸಿ
ತೊಲಗಬಹುದೇ ಕರುಣವಿಲ್ಲವೆ ನಿನ್ನ ಮನದೊಳಗೆ ।
ಒಲಿದು ಬಂದೆನು ಕಾಮನೂಱಿಗ
ಬಲುಹು ವೈರಿಯ ಭಯವ ತಪ್ಪಿಸಿ
ತಲೆಯ ಕಾಯಲು ಬೇಹುದೆಂದನು ನಗುತ ಕೀಚಕನು [2] ॥ ೨೬

ಕಾತರಿಸದಿರು ಮಂದಿವಾಳದ
ಮಾತುಗಳು ಬೇಡಕಟ ಕೆಡದಿರು
ಸೋತರೇನದು ಮನುಜಧರ್ಮವು ಚಿತ್ತ ಚಂಚಲವು ।
ಈತತುಕ್ಷಣ ವಾರುಕೇಳದೊ
ಜಾತಗಳು ಸ್ವೈರಿಸರು ದೇವ
ವ್ರಾತದಲಿ ಬಲ್ಲಿದರು ತನ್ನವರೆಂದಳಿಂದುಮುಖಿ ॥ ೨೭

ದ್ರೌಪದಿಗೆ ಖಳ ನುಡಿದನೆನ್ನಾ
ಟೋಪವನು ನೀನಱಿಯೆ ಬಡವರ
ಕೋಪವೌಡಿಗೆ ಮೃತ್ಯು ನಿನ್ನವರೇನ ಮಾಡುವರು ।

---

1 ಕೊಯ್ವರೇಬಹುದಾವದಿದರಿಂದ, ಚ, ಛ, ಖ.
2 ಬೇಕೆನುತ ಕೀಚಕನು ಕೈಮುಗಿದ, ಚ.

ಆಪಿನವರಂತಿರಲಿ ನೀನೆನ
ಗೋಪಳಾದರೆ ಸಾಕು ಮಲೆತೊಡೆ
ಯಾಪಿನಾಕಿಗೆ ತೆರಳುವೆನೆ ಬಟಿಕಲ್ಲಿ ನೋಡೆಂದ ॥ ೭೮

ಹುಳುಕನಲ್ಲಾ ತುಂಬಿ ಕೋಗಿಲೆ
ಗಳಹನಲ್ಲಾ ಶಶಿವಸಂತರ
ಬಲುಹು ಮಾನ್ಯರನಿಱಿಯವೇ ತಂಗಾಳಿ ಧಾರ್ಮಿಕನೆ ।
ಖಳನಲಾ ಮಾಕಂದ ಲೋಕದ
ಕೊಲೆಗೆಡಿಗನಲ್ಲಾ ಮನೋಭವ
ನಿಟಿಕೆಗೊಂಬರೆ ಪಾಪಿಯೊಲಿಯದೆ ಕೊಲುವರೇ ಯೆಂದ ॥ ೭೯

ಒಲಿದೆ ನೀನಹುದಾನು ಕೊಲ್ಲೆನು [1]
ಕೊಲುವ ಸುಭಟರು ಬೇಱೆ ಬಯಲಿಗೆ
ಹಲವು ಗಳಹಿದರೇನು ಫಲವಿಲ್ಲ [2] ಕಟ ಸಾಱಿದೆನು ।
ಮುಳಿದರಾದರೆ ಕೇಳು [3] ನಿನ್ನಯ
ತಲೆಯ ಕೊಯ್ಯದೆ ತುಷ್ಟರಾಗರು
ಕಲಕುವೆರು ನಿನ್ನನ್ವಯಾಬ್ಧಿಯನೆಂದಳಿಂದುಮುಖಿ ॥ ೩೦

ಎಲವೊ ಬಾಹಿರ ಹಲವು ಮಾತನು
ಗಳಹದಿರು ನೀ ಬದುಕವೊಲಿದೊಡೆ
ಕೊಲುವರೆನ್ನಯ ಪತಿಗಳದಱಿಂ ಬೇಗ ತೊಲಗುವುದು ।
ಚಲುವವಧು ಕೇಳಲೆ ದುರಾತ್ಮಕ
ರಟಿವರೇ ಯೆನ್ನನು ಧರಿತ್ರಿಯೊ
ಳಟಿವ ಹಟಿವನು ಹೊತ್ತು ಬದುಕುವುದೆಂದನಾಖಳನು ॥ ೩೧

ಸಾವು ತಪ್ಪದು ತನಗೆ ಕಾಮನ
ಡಾವರವು ಘನ ನಿನ್ನ ನೆರೆದೇ
ಸಾವೆನಲ್ಲದೆ ಕಾಮನಂಬಿಂಗೊಡಲನೊಪ್ಪಿಸೆನು ।

---

[1] ಒಲಿದು ನಿನ್ನನು ನಾವು ಕೊಲ್ಲೆವು, ಚ. ಛ.
[2] ಬೇಡ, ಕ. ಖ.
[3] ತಿಳಿಸಿದರೆ ಯೆನ್ನವರು, ಚ.

ಭಾವೆ ನೋಕಲು ಬೇಡ ನಿನ್ನ ಕೃ
ಪಾವಲೋಕನದಿಂದಲೆನ್ನಯ
ಜೀವವನು ಸಲಹೆನುತ ಖಳ ನಸುನಗುತ ಕೈಮುಗಿದ [1] ॥ ೩೦

ಪರರ ಸತಿಗಳುಪಿದರೆ ಪಾತಕ
ದೊರಕುವುದು ಜಯಲಕ್ಷ್ಮಿ ತ್ರಿ
ಸರಿವಳು ಧರೆಯೊಳಗ್ಗದ ಕೀರ್ತಿ ಮಾಸುಗು ಗತಿಗೆ ಕೇಡಹುದು ।
ಕೊರಳುಹಲವಾದಸುರನಂತಕ
ಪುರವನೈದಿದ ಕಥೆಯು ನೀ ಕೇ
ಳ್ದಱಿಯಲಾ ಕಡುಮೂರ್ಖನೆಂದಳು ಸರೋಜಮುಖಿ ॥ ೩೩

ಮೇಲೆ ಸದ್ಗತಿ ಬೆಂದುಹೋಗಲಿ
ಕಾಲನವರೈತರಲಿ ಬಂಧುಗ
ಳೇಳಿಸಲಿ ಯೆನ್ನವರು ತೊಲಗಲಿ ರಾಣಿಯರು ಬಿಡಲಿ ।
ಬಾಲೆ ನಿನಗಾನೊಲಿದೆ ಕಾಮನ
ಕೋಲು ತನ್ನನು ಮರಳಲೀಯವು
ಲೋಲಲೋಚನೆ ಬಿಱುಬ ನುಡಿಯದೆ ತನ್ನನುಱುಹೆಂದ ॥ ೩೪

ಕುಲದಲೊಬ್ಬನು ಜನಿಸಿ ವಂಶವೆ
ನೞಿದನಕಟಕಟೆಂಬ ದುರ್ಯಶ
ವುೞಿವುದಲ್ಲದೆ ಲೇಸ ಕಾಣೆನು ಬಱಿದೆ ಗಳಹದಿರು ।
ಕೊಲೆಗೆಡಿಕೆಯೋ ಪಾಪಿಹೆಂಗುಸು
ಹಲಬರನು ಕೊಲಿಸಿದಳು ಸುಡಲೆಂ
ದೞಲುವರು ನಿನ್ನಖಿಳನಾರಿ [2] ಯರೆಂದೊಡಿಂದುಮುಖಿ ॥ ೩೫

---

1 ಭಾವೆ ನೋಕದಿರೆನ್ನವರ ರಾ
ಜೀವಮುಖಿ ಕೃಪೆಮಾಡು ತನ್ನಯ
ಜೀವನವನುಳುಹೆನುತ ಕಮಲಾನನೆಗೆ ಕೈಮುಗಿದ, ಚ ಛ,

2 ರಾಣಿ, ಚ,

ಹರಿವಿರಿಂಚಿಗಳಾದೊಡೆಯು ಸಂ
ಗರದೊಳನಗಿದಿರಿಲ್ಲ ಮರುಳೇ
ತರುಣಿ ನಿನ್ನವರೇನು [1] ತೋಱೂ ನಿನ್ನವಲ್ಲಭರ ।
ಪರಸತಿಯು ಸೆಱೆಗೆಯ್ಯೆನುತ್ತಿತು
ನೆರೆದು ಕೋಡಗವಿಂತು ಸುಭಟನು
ಸರಿದನಂತಕನಗರಿಗಱಿಯಾ ಯೆಂದಳಿಂದುಮುಖಿ * ॥ ೩೬

ಸೀಱಿ ನೂಕದಿರೆನ್ನ ಮನ ನೆಱೆ
ಮಾಱುವೋದುದು ನಿನ್ನ ಚಿತ್ತವ
ಸೂಱೆಗೊಂಡಿನ್ನೇಕೆ ಕೊರಲಿಂಗಲಗ ಹೂಣಿಸುವೆ ।
ಜಾಱದಿರು ಯೆನ್ನೆದೆಗೆ ತಾಪವ
ಬೀಱದಿರು ಕಾರುಣ್ಯವನು ಕೈ
ದೋಱೆನಗೆ ಕಮಲಾಕ್ಷಿ ಮರಣವ ಮಾಣಿಸೆನಗೆಂದ ॥ ೩೭

ಮರುಳೆ ಮನದ ವಿಕಾರಮಾರಿಯು
ಸರಸವಾಡುವರುಂಟೆ ಮೃತ್ಯುವ
ನೆರೆವರೇ ದಳ್ಳುರಿಯು ಪ್ರತಿಮೆಯ ನಪ್ಪುವರೆ ಬಯಸಿ ।
ಗರಳಕಂಗೈಸುವರೆ ಪಾಪಿಯೆ
ಮರಳು ನಿನ್ನರಮನೆಗೆ ಯೆನ್ನಯ
ಗರುವಗಂಡರು ಕಡಿದು ಹರಹುವರೆಂದಳಿಂದುಮುಖಿ ॥ ೩೮

ನ್ಯಾಯುವನು ಮಿಗೆ ಗೆಲುವುದೀಯು
ನ್ಯಾಯುವಧಿಕವು ಧರ್ಮಪರರೇ
ಸ್ಥಾಯಿಗಳು ತಿಮಿರಕ್ಕೆ ಭಾಸ್ಕರಗಾವುದಂತರವು ।

---

[1] ನಿನ್ನೊಡನೇನು, ಚ.

* ನೆರವಿಕೋಡಗ ಕೊಲ್ಲವೇದಶಶಿರನ ಮಡುಹಿದನಾವನೋ ಹೇಳೆಂದ
ಳಬುಜಾಕ್ಷಿ, ಕ. ಖ.

ಕಾಯುರೆನ್ನ ವರವರ ಕೈಗುಣ
ದಾಯತವ ಬಲ್ಲವರೆ ಬಲ್ಲರು
ನಾಯಿ ಸಿಂಹಕ್ಕಿದಿರೆ ಘಡ ಹೋಗೆಂದಳಬುಜಾಕ್ಷಿ ॥　　೩೯

ಕೀಚಕನು ತನ್ನ ಅಕ್ಕನನ್ನು ನೋಡಿದುದು.

ಹೂಣೆ ಹೊಕ್ಕುದು ವಿರಹದಾಸೆಯು
ಕಾಣೆನಾಕೆಯ ಮೂರ್ತಿನಲಿ ಮುಂ
ಗಾಣಿಕೆಯೊಳೇ ಸೂಱೆಯೋದುದು ಮನದ ಸರ್ವಸ್ವ ।
ತ್ರಾಣ ಸಡಿಲಿತು ಬುದ್ಧಿ ಕದಡಿ ಕೃ
ಪಾಣಪಾಣಿ ವಿರಾಟರಾಯನ
ರಾಣಿಯುರಮನೆಗೈದಿದನು ಕಂಡನು ನಿಜಾಗ್ರಜೆಯ ॥　　೪೦

ಸುದೇಷ್ಣೆಯು ಕೀಚಕನನ್ನು ಆದರಿಸಿದುದು.

ಹಣೆಯನಂಘ್ರಿಗೆ ಚಾಚಲೆತ್ತಿದ
ಳಣುಗಿಗನ ತೆಗೆದಪ್ಪಿ ಮುದವಾ
ರಣನೆ ಕುಳ್ಳಿರೆನುತ್ತ ನೋಡಿದಳಾಸಹೋದರನ ।
ಹೆಣಮುಸುಡು ಬಿದ್ದದೆ ಲತಾಂಗಿಯು
ಕೆಣಕಿದನು ಕಡುಪಾಪಿ ವಂಶವ
ಹಣಿದವಾಡದೆ ಮಾಣನೇಗುವೆನೆನುತ ಮಱುಗಿದಳು ॥　　೪೧

ಅಱಿದುದಗ್ಗದ ಮಹಿಮೆ ಮುಸುಡಿನ
ಬೆಳಕು ಬೀತುದು ಬಹಳಚಿಂತಾ
ಜಲಧಿಯೊಳಗದ್ದಂತೆ ಸೊಂಪಡಗಿತು ನಿಜಾಕಾರ ।
ಕುಲಶಿರೋಮಣಿ ಹೇೞು ಚಿತ್ತದ
ನೆಲೆಯನೆನೆ ನಸುನಾಚಿ ಮದನನ
ಹಿಳುಕು ಸುಮತಿಯು [1] ಸೀಱೆ ಬಚಿಕಿಂತೆಂದನವ ನಗುತ ॥ ೪೨

1 ಮಮತೆಯು, ಖ.

ಕೀಚಕನು ತನ್ನ ಇಚ್ಛೆಯನ್ನು ತಿಳಿಸಿದುದು.

ಬೇಱೆ ಬಿನ್ನಹವೇನು ಸತಿಯರ
ನೋಱುಮಡಿ ರೂಪಿನಲಿ [1] ಚಿತ್ತವ
ಸೂಱೆಗೊಂಡವಳಹಳು ನಿಮ್ಮೋಲಗದ ಸತಿಯರಲಿ |
ಮಾಱಿದಳು ಮದನಂಗೆ ಜೀವಿಸ
ಲಾಱೆನಾಕೆಯನೊಳಗುಮಾಡಿಸಿ
ತೋಱಿದರೆ ತನ್ನೊಡಲೊಳಸುವಿಂಗಹುದು ನಿರ್ವಾಹ || ೪೩

ಆಕೆಯ ಅಸಮಾಧಾನ ಮತ್ತು ಬುದ್ಧಿವಾದ.

ಕೀರ್ತಿಲತೆ ಕುಡಿವೋಣಗಿತ್ತೈ ಮದ
ನಾರ್ತನಾದೈ ಕುಲಕೆ ಕಾಲನ
ಮೂರ್ತಿ ನೀನವತರಿಸಿದೈ ಸಂವರಿಸಿದೈ ಜಸವ [2] |
ಸ್ಫೂರ್ತಿಗೆಡೆ ಮನುಜರಿಗೆ ರಾವಣ
ನಾರ್ತಿಯಪ್ಪುದು ಅಱಿಯಲಾಕಡು [3]
ಧೂರ್ತ ನಿನಗಂಜುವೆನೆನುತ ನಡುಗಿದಳು ನಳಿನಾಕ್ಷಿ || ೪೪

ಬೇಟವೇ ಪರವಧುವಿನಲಿ ಕೈ
ಮಾಟವೇ ಪರವಿತ್ತದಲಿ ತೆಗೆ
ದೋಟವೇ ಕದನದಲಿ ಗುಣವೇ ರಾಜಪುತ್ರರಿಗೆ |
ಆಟವಿಕರೊಡನಾಡಿ ಕಲಿತು ವಿ
ರಾಟನನು ಕೊಲಲೆಳಸಿದೈ ನಿ
ನ್ನಾಟಕಾವಂಜುವೆವೆನುತ ಮುಖದಿರುಹಿದಳು ತರಳ || ೪೫

ಕುಲವನಿತೆಯರ ಕೂಟದಿಂದವೆ
ಕುಲದ ತಲೆ ಕುಡಿ ಹಬ್ಬುವುದು ಪರ
ಲಲನೆಯರ ಸಂಭೋಗಸುಖವದು ರಕ್ತವಿಪರೀತ |

---

1 ಚೆಲುವಿನಲ್ಲಿ, ಖ. ಚ,

2 ಸಂಹರಿಸಿದೈ ಕುಲವ, ಚ.    3 ನಾರ್ತನೇಮರುಳಾದೆ ತವಮ್ಮನೆ, ಚ. ಖ,

ಎಲೆ ಮರುಳೆ ಮುನ್ನಾ ಸುರೇಶ್ವರ
ನಳುಪಿ ತಾನೇನಾದನಗ್ಗದ
ಬಲುಹನುಳ್ಳ ದಶಾನನನ ನೆನೆ ಯೆಂದಳಿಂದುಮುಖಿ ॥ ೪೬

ಅವಳ ಗಂಡರು ಸುರರು ಸುರರಿಗೆ
ನವೆಗದಾವಂತರವು ಮುನಿದರೆ
ದಿವಿಜಬಲಕಿದಿರುಂಟೆ ನಮ್ಮನದಾರು ಕಾವವರು ।
ಅವಳ ತೊಡಕೇ ಬೇಡ ಸತಿಯರ
ನಿವಹದಲಿ ನೀನಾರ ಬಯಸಿದೊ
ಡವಳ ನಾ ಮುಂದಿಟ್ಟು ಮದುವೆಯನೊಲಿದು ಮಾಡುವೆನು ॥ ೪೭

ಅಕ್ಕನನ್ನು ಕುರಿತು ಕೀಚಕನ ಪ್ರಾರ್ಥನೆ.

ಅಕ್ಕ ಮರುಳೌ ಚಿತ್ತವವಳಲಿ
ಸಿಕ್ಕಿ ಬೇರ್ವಱಿಯಿತ್ತು ಬಱಿದೇ
ಮಿಕ್ಕ ಡಿಂಭಕೆ ಮದುವೆಯುಂಟೇ ಮನವ ಬೇಱುರಿಸಿ ।
ಮಕ್ಕಳಾಟಿಕೆಯಾದರಾಗಲಿ
ತಕ್ಕರಲ್ಲೆಂದೆನಲಿ ಸಲಹುವೊ
ಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ ॥ ೪೮

ತಪ್ಪ ಮಾಡಿದೆ ತಮ್ಮ ನಿನಗವ
ಳಪ್ಪಳಲ್ಲಲೆ ಮರುಳೆ ಜೀವಕೆ
ಮುಪ್ಪ ಬಯಸಿದೆ ಮಱೆದು ಕಳೆಯೌ ಮತ್ತೆ ನೆನೆಯದಿರು[1] ।
ತಪ್ಪದಿರು ಕೈಕೊಂಡೆಸೆವ ಕಂ
ದರ್ಪನಂಬಿಗೆ ನೋಯದಿರು ನುಡಿ
ಯೊಪ್ಪವಲ್ಲಿದು ತಮ್ಮ ಯೆನುತ ಸುದೇಷ್ಣೆ ಕನಲಿದಳು ॥ ೪೯

ಸೊಗಸವಿತರರ ಮಾತು ಕಣ್ಣು ಗ
ಳೊಗಡಿಸವು ಮಿಕ್ಕವರ ರೂಹನು
ಹಗೆಗಳಾಗಿಹುವುೞಿದವರ ನಾಮಗಳು ನಾಲಿಗೆಗೆ ।

---

1 ಬೆಳಸದಿರು, ಖ.

ಸೆಗಳಿಕೆಯ ಶಶಿಯಾದೆನೆನ್ನಯ
ಬಗೆಯ ಸಲಿಸೌ ಹರಿದ ಕರುಳಿನ
ಮೃಗದ ಮೆಱೆಯನು ಕಾಯಬೇಕೆಂದೆಱಗಿದನು ಪದಕೆ ॥ ೫೦

ಕೀಚಕನು ತನ್ನ ಮನೆಗೆ ಹೋದುದು.

ಆಲಿ ಸೀರೇಱಿದುವು ತಮ್ಮನ
ಮೇಲೆ ತಳಿತುದು ಮೋಹ ಕಾಲನ
ಪಾಳಯಕೆ ಕೈಗೊಟ್ಟಳಂಗನೆ ನೆಗಹಿದಳು ಖಳನ ।
ಏಳು ಭವನಕೆ ಹೋಗು ತರುಣಿಯ
ನಾಳೆ ನಾ ಕಳುಹುವೆನು ಪರಸತಿ
ಮೇಳ ಲೇಸಲ್ಲೆಂದು ಕಳುಹಿದಳಾಸಹೋದರನ [1] ॥ ೫೧

ಮನದೊಳಗೆ ಗುಡಿಗಟ್ಟಿದನು ಮಾ
ನಿನಿಯ ಕರುಣಾಪಾಂಗರಸಭಾ
ಜನವು ಪುಣ್ಯಾವಲಾ ಯೆನುತ ಬೀಳ್ಕೊಂಡನಗ್ರಜೆಯ ।
ಮನದೊಳೊದವಿದ ಮರುಳುತನದು
ಬ್ಬಿನಲಿ ಹೊಕ್ಕನು ಮನೆಯನಿತ್ತಲು
ದಿನಕರಂಗಾಯ್ತಸ್ತಮಯವಸ್ತಾಚಲಾದ್ರಿಯಲಿ ॥ ೫೨

ಆಗ ಚಂದ್ರೋದಯವಾಗಲು ಕೀಚಕನಿಗೆ ಆದ ಅವಸ್ಥೆ.

ಸಲೆ ದಿಗಂಗನೆ ಯಿಟ್ಟ ಚಂದನ
ತಿಲಕವೋ ಮನುಮಥನ ರಾಣಿಯ
ಚೆಲುವೆಗೈಗನ್ನಡಿಯೊ ಮದನನ ಬಿರುದಿನೊಡ್ಡಣವೊ ।
ತಳಿತ [2] ವಿರಹಿಯ ಸುಡುವ ಕೆಂಡದ
ಹೊಳಹೊ ಬೆಸಗೊಳಲೇನು ರಜನೀ
ವಳಯದಲಿ ಶಶಿಯುದಯವಾದನು ಜಗವನುಜ್ವಳಿಸಿ ॥ ೫೩

---

[1] ಬೀಳುಗೊಟ್ಟಳು ನಿಜಾನುಜನ, ಚ. [2] ಸುರತ, ಚ.

ಬೆಚ್ಚಿದುವು ಚಕ್ರಾಂಕಯುಗ ತಾ
ವ್ರಚ್ಚಿದುದು ಮೞದುಂಬಿ ಕುಮುದವ
ಮುಚ್ಚಿದುವು ಮುಸುಡುಗಳನಂಬುಜರಾಜಿ ತಮತಮಗೆ |
ಹೆಚ್ಚಿದುವು ಸಾಗರದ ತೆೞೆಗಳು
ಬೆಚ್ಚಿದರು ಜಾರೆಯರು ಚಂದ್ರಮ
ಕಿಚ್ಚನೊಟ್ಟಿದನಕಟ ಸಕಲವಿಯೋಗಿಜನಮನಕೆ | ೫೪

ಕೀಚಕನಿಗೆ ವಿರಹದ ತಾಪ.

ಖಳನ ವಿರಹದ ತಾಪದುರಿ ಪೆ
ಗ್ಗಳಿಸೆ ತನ್ನರಮನೆಗೆ ಬಂದನು
ಕಳವಳಿಗ ಹಾ ಯೆನುತ ಕೆಡೆದನು ತಳಿರ ಹಾಸಿನಲಿ |
ನಳಿನವೈರಿಯು ಸುಟವು ತನ್ನಯ
ಕೊಲೆಗೆ ಬಂದುದು ಪಾಪಿ ಕಮಲಜ
ಚಲವಿಲೋಚನೆಗೇಕೆ ಮಾಡಿದನಿನಿತುಚೆಲುವಿಕೆಯ || ೫೫

ಉರಿದುದೊಡಲೊಳು ವೀಳಯದ ಕ
ರ್ಪೂರದ ಹಳಕುಗಳಮಳಗಂಧದ
ಸರಸಕರ್ದಮ ಕಱಿಕುವೆಱಿದುದು ಪೂಸಿದಂಗದಲಿ |
ಹೊರಳ ನೀರಿನ ಪೊಟ್ಟಣವು ದ
ಳ್ಳುರಿಯೊಲಾದುದು ಬಲಿದ ಚಂದ್ರಿಕೆ
ಬೆರಸಿ ಕರಗಿದ ತವರವಾಯಿತು ಕೀಚಕನ ಮನಕೆ || ೫೬

ಹಾಸಿದೆಳದಳಿರೊಣಗಿದುದು ಹೊಗೆ
ಸೂಸಿದುದು ಸುಯಿಲಿನಲಿ ಮೆಲ್ಲನೆ
ಬೀಸುತಿರೆ ಸುಳಿವಾಳಯೆಲೆ ಬಾಡಿದುದು ಝಳಹೊಯ್ದು |
ಆಶಶಿಯು ಕೋಗಿಲೆಯು ತುಂಬಿಯು
ನಾಸರೋಜವೆ ಮಲ್ಲಿಗೆಯು ಕೈ
ವೀಸಿದನು ಕುಸುಮಾಸ್ತ್ರನಾಕೀಚಕನ ಕಗ್ಗೊಲೆಗೆ || ೫೭

ಪರಿಮಳದೆ ಸುಳಿವಾಲವಟ್ಟದೊ
ಳಿರದೆ ಪೂಸಿದ ಗಂಧಕರ್ಪೂರ
ವರರೆ ಸೀದುವು ಕೀಚಕನ ಕಾಮಾಗ್ನಿತಾಪದಲಿ ।
ವರಪತಿವ್ರತೆಗಳುಪಿದವನಾ
ಹರಣದಾಶೆಯ ಮಱೆದು ಪಾತಕ
ಹೊರಳುತಿರ್ದನು ಚಂದ್ರಕಾಂತದ ಮಣಿಯ ಮಂಚದಲಿ [1] ॥೫೮

ತೂಱಿದುವು ಪರಿಮಳದ ಪುಷ್ಪಗ
ಳೂಱಿದುವು ಮಧುಕರವು ಹರುಷದ
ಲಾಱಿದುವು ಶಶಿಕಾಂತಶಿಲೆಗಳು ಮುಗಿಯೆ ಕೈರವವು ।
ಸಾಱಿದುವು ಮಂದಿರದ ಕಹಳೆಗ
ಳೇಱಿದುವು ಪೂರ್ವಾಚಲಕೆ ರವಿ
ಬೀಱಿದನು ಕರದಿಂದ ಕಾಂತಿಯ ಜಗದ ಜನ ನಲಿಯೆ ॥ ೫೯

ಅರೆಘಳಿಗೆ ಯುಗವಾಗಿ ನೂಕಿದ
ನಿರುಳನುದಯಾಚಲದ ಶಿರದಲಿ
ತರಣಿ ತಲೆದೋಱಿದನು ತೊಡೆದನು ಭುವನದಂಧತೆಯ ।
ಪರಿಮಳದ ಪಾವುಡದಿಸಳಿಗಳ
ಕರೆಸಿದುವು ತಾವರೆಗಳನೆ ಕಾ
ತರಲತಾಂಗಿಯ ಸುಯ್ಲು ತಾಗಿತು ಕುಮುದಿನೀಪತಿಗೆ ॥ ೬೦

ಎರಡನೆಯ ಸಂಧಿ ಮುಗಿದುದು.

---

1 ಮೇಲುಮಚ್ಚಿನಲಿ, ಛ. ಚ.

## ಮೂರನೆಯ ಸಂಧಿ.

ಸೂಚನೆ.

ರಾಯ ಕುರುಬಲವಿಲಯಕರನೆಬ
ಜಾಯತಾಕ್ಷಿಯ ಸಲಹಿ ಕೀಚಕ
ರಾಯವಂಶಾರಣ್ಯವನು ಸವರಿದನು ಕಲಿಭೀಮ ||

ಕೀಚಕನ ಮನೆಗೆ ಹೋಗಿ ಮಧುವನ್ನು ತಾರೆಂದು ಸುದೇಷ್ಣೆಯು
ಸೈರಂಧ್ರಿಗೆ ಹೇಳಿದುದು.

ಬಯಸಿದಳು ಮೃತ್ಯುವನು ಕಡುಪಾ
ಪಿಯು ಮನೋಧರ್ಮವನು ಜನಮೇ
ಜಯಮಹೀಪತಿ ಕೇಳು ಪಾಂಚಾಲಿಯನು ಕರೆಸಿದಳು |
ನಯವಿಹೀನೆ ಸುದೇಷ್ಣೆ ಬಂದಾ
ಕೆಯನು ಬೆಸಸಿದಳಲಗೆಯನುಜಾ
ಲಯದೊಳುತ್ತಮಮಧುವ ನೀ ಝಡಿತೆಯಲಿ ತಹುದೆಂದು || ೧

ಅದಕ್ಕೆ ದ್ರೌಪದಿಯ ಉತ್ತರ.

ಅಮ್ಮನಲ್ಲಿಗೆ ದೇವಿ ನಿಮ್ಮಯ
ತಮ್ಮ ದುರುಳನು ಲೇಸು ಹೊಲ್ಲಹ
ವೆಮ್ಮ ತಾಗುವುದಾತನಟ್ಟಿದರೆ ಬಟ್ಟಿಕ ಹಟ್ಟಿವೆಮಗೆ |
ನಿಮ್ಮ ನಾವೋಲೈಸಿ ನಿಮಗೆ ವಿ
ಕರ್ಮವನು ಮಾಡುವುದು ನಮಗದು
ಧರ್ಮವಲ್ಲುಚಿತವರ ಕಳುಹುವುದೆಂದಳಿಂದುಮುಖಿ || ೨

ಎನಲು ಘುಗಿಲೆಂದಳು ಸುಡೇತಕೆ
ಮನದ ಗರ್ವವ ನುಡಿವೆ ನಿನ್ನಿಂ
ದೆನಗೆ ಮೋಹನ್ನವರಿಗುಂಟೇ ಹಾನಿಹರಿಬಗಳು |
ಅನುಜನಾರೆಂದಱಿಯೆ ಸಾಕಾ
ತನ ಸಮೀಪಕೆ ಹೋಗಿ ಬಾ ನಡೆ
ಯೆನಲು ಕೈಕೊಂಡಬಲೆ ಹೊಱವಂಟಳು ನೃಪಾಲಯುವ [1] ॥ ೩

ಶ್ರೀಕೃಷ್ಣನನ್ನು ಸ್ತುತಿಸಿ ಕೀಚಕನ ಮನೆಗೆ ಹೋದುದು.

ಹರಿ ಹರಿ ಶ್ರೀಕಾಂತ ದಾನವ
ಹರ ಮುಕುಂದ ಮುರಾರಿ ಗತಿಶೂ
ನ್ಯರಿಗೆ ನೀನೇ ಗತಿಯಲಾ ಗರುವಾಯಿಗೆಟ್ಟೆನಲ್ಲೆ |
ಕುರುಕುಲಾಗ್ರಣಿ ಸೆಳೆದ ವಸ್ತ್ರಾ
ಕರುಷಣದ ಭಯ ಮತ್ತೆ ಬಂದಿದೆ
ಕರುಣಿ ನೀನೇ ಬಲ್ಲೆ ಯೆನುತಡಿಯಿಟ್ಟಳಬುಜಾಕ್ಷಿ ॥ ೪

ದೇವಿ ನೇಮಿಸಲಱಿಯೆನೆಂದೊಡಿ
ದಾವಧರ್ಮವು ಶಿವ ಶಿವೀಹದ [2]
ಸಾವನವರಿಗೆ ತಹುದು ಬದ್ಧವಿಘಾತಿ ಯಿದು ಬಲುಹು [3] |
ಸೇವೆ ಯಿದಕೇ ಕಷ್ಟವೆಂಬುದು [4]
ಕೋವಿದರ ಮತ ಶಿವ ಶಿವಾ ರಾ
ಜೀವಲೋಚನ ಕೃಷ್ಣ ಬಲ್ಲೆ ಯೆನುತ್ತ ಗಮಿಸಿದಳು ॥ ೫

---

[1] ನಿಜಾಲಯುವ, ಖ. ಚ.

[2] ನಾವು ಗರ್ವಿಗಳೊಲಿದೊಡಿವನಿಗೆ, ಝ.

[3] ಸಾವುತಂದವರೆಂದು ಬಂದ ವಿಘಾತಿಯಿದು ಬಲುಹು, ಝ

[4] ಸೇವಿಸುವುದೇ ಕಷ್ಟವೆಂಬುದು, ಚ.

ಸುರಪ ಶಿಖಿ ಯಮ ನಿರುತಿ ವರುಣಾ
ದ್ಯರಿಗೆ ವಂದಿಸಿ ಕಣ್ಣವೆಯ ಬಿಗಿ
ದರಘಳಿಗೆ ನಿಂದಬುಜಮಿತ್ರನ ಭಜಿಸಿ ಕಣ್ದೆಱೆಯೆ |
ದುರುಳ [1] ದೈತ್ಯನ ಕಾಹ ಕೊಟ್ಟನು
ತರಣಿ ತರುಣಿಗೆ ಮಂದಮಂದೋ
ತ್ತರದ ಗಮನದಲಬಲೆ ಬಂದಳು ಕೀಚಕನ ಮನೆಗೆ ॥ ೬

ಹಾರನೂಪುರಝಣಝಣಿತಝೇಂ
ಕಾರ ಘನರವವೆಂದು ಭವನಮ
ಯೂರ ಕುಣಿದುದು ವರಕಟಾಕ್ಷದ ಮಿಂಚು ಥಳಥಳಿಸೆ |
ಆರು ಹೊಗಳುವರಂಗವಟ್ಟದ
ಸೌರಭದ ಪರಿಮಳಕೆ ತುಂಬಿಯ
ಸಾರ ಕಟ್ಟಿತು ಬಂದಳಂಗನೆ ಕೀಚಕಾಲಯಕೆ ॥ ೭

ಮನುಮಥನ ಮದದಾನೆ ಕಂದ
ರ್ಪನ ಮಹಾಮಂತ್ರಾಧಿದೇವತೆ
ಜನರು ಮರುಳಹ ಮದ್ದು ಸಂಸ್ಕೃತಿಸುಖದ ಸಾಕಾರ |
ಮನಸಿಜನ ಮಸೆದಲಗು ಜನಮೋ
ಹನತಿಲಕ ಲಾವಣ್ಯಸಾಗರ
ಜನಿತ ಲಕ್ಷ್ಮಿ ಲತಾಂಗಿ ಬಂದಳು ಕೀಚಕನ ಮನೆಗೆ ॥ ೮

ಕೀಚಕನು ದ್ರೌಪದಿಯನ್ನು ನೋಡಿ ಬೆರಗಾದುದು.

ಕುಡಿತೆಕಂಗಳ ಚಪಳೆ ಯುಂಗರ
ವಿಡಿಯುನಡುವಿನ ನೀಱೆ ಹಂಸೆಯ
ನಡೆಯ ನವಿಲಿನಮೌಳಿಕಾತಿ ಪಯೋಜಪರಿಮಳದ |
ಕಡುಚೆಲುವೆ ಬರಲವನು ತನು ನಡು
ನಡುಗಿ ನಿಂದನದಾವ ಹೆಂಗುಸು
ಪಡೆದಳೀ ಚಲುವಿಕೆಯನೆನುತಡಿಗಡಿಗೆ ಬೆಱಗಾದ [2] ॥ ೯

---

1 ಮುಖಿದ, ಚ. 2 ನೆನುತೀಕ್ಷಿಸಿದನಂಗನೆಯ, ಚ.

ಅಱಿದು ನೆತ್ತರುಗಾಣದಲಿಗಿದು
ನೆಱೆ ಬಿಗಿಯೆ ವ್ಯೈಬಾಸುಳೇಳದ
ಹುರಿ ಬಲಿದ ನೇಣ ಸೋಂಕಿದರೆ ಹೊಗೆ ಮಸಗದೆದೆಗಿಚ್ಚು |
ಆರರೆ ಕಂಗಳ ಧಾರೆಯಾವೆನ
ಕೊರಳ ಕೊಯ್ಯದಿದಾವನಱಿತೆಯು
ಹುರುಳುಗೆಡಿಸದಿದಾವ ನಿಲುವನು ಶಿವ ಶಿವಾ ಯೆಂದ ‖ ೧೦

ಆವ ಜನ್ಮದ ಸುಕೃತಫಲ ನೆರೆ
ದೀವಧುವ ಸೇರಿದರು ಧನ್ಯರು
ತಾವಲಾ ಬಱಿಕೇನು ಪೂರ್ವದ ಸುಕೃತಸರ್ವಸ್ವ |
ಭಾವಿಸಲು ಸುರಚಂದನಾದಿಗ [1]
ಳೀವಸಿತೆಗೆಲ್ಲಿಂಪ ಮೇಲಿ
ನ್ನಾವ್ರುದತಿಶಯವುಂಟೆನುತ ಖಳರಾಯನಿದಿರೆದ್ದ ‖ ೧೧

ಬಳಿಕ ಕೀಚಕನು ಹಿಡಿಯುವಾಗ ದ್ರೌಪದಿಯು ಓಡಿದುದು.

ತರುಣಿ ಬಾ ಕುಳ್ಳಿರು ಮದಂತಃ
ಕರಣದೆಡರಡಗಿದುದು ಕಾಮನ
ದುರುಳುತನಕಾನಂಜುವೆನೆ [2] ನೀನೆನಗೆ ಬಲವಾಗೆ |
ಬಿರುದ ಕಟ್ಟುವೆನಿಂದುವಿಗೆ ಮಧು
ಕರಗೆ ಕೋಗಿಲೆಗೆಂದು ಖಳನು
ಬ್ಬರಿಸಿ ನುಡಿಯಲು ಖಾತಿಗೊಂಡಿಂತೆಂದಳಿಂದುಮುಖಿ ‖ ೧೨

ಬಾಯಿ ಹುಳುವುದು ಬಯಲ ನುಡಿದೊಡೆ
ನಾಯಿತನ ಬೇಡೆಲವೊ ಕೀಚಕ
ರಾಯನಂಗನೆ ಕಳುಹೆ ಬಂದೆನು ಮಧುವ ತರಲೆಂದು |
ಸಾಯಬೇಕೇ ಹಸಿದ ಶೂಲವ
ಹಾಯಿ ಹೋಗೆನೆ ನಿನ್ನ ಬೈಗಳು
ನೋಯಿಸುವುವೇ ತನ್ನನೆನುತವೆ ತುಡುಕಿದನು ಸತಿಯು [3] ‖ ೧೩

1 ಸುಕೃತಾವಳಿಗಳಿಂ, ಚ. 2 ಕಿನ್ನಂಜುವೆನೆ, ಚ. 3 ಪಿಡಿದನಾಕ್ಷಣವ, ಕ.

ಕರವನೊಡೆ ಮುಂಜಿಚಿದಳು ಬಟ್ಟಲ
ಧರೆಯೊಳೀಡಾಡಿದಳು ಸತಿ ಮೊಗ
ದಿರುಹಿ ಬಾಗಿಲ ದಾಂಟಿದಳು ಭಯದಲಿ ನಡುಗಿ ಡೆಂಡಣಿಸಿ ।
ತರಳೆ ಹಾಯ್ದಳು ಮೊಲೆಯ ಜಘನದ
ಭರದಿ ಬಡನಡು ಮುಱಿಯದಿಹುದೇ
ವರಸಭಾಗ್ಯತೆಗೆನಲು ರಭಸದೊಳೋಡಿದಳು ಸಭೆಗೆ ॥　　೧೪

ಆಗ ದ್ರೌಪದಿಯನ್ನು ಹೊಡೆದು ಕೆಡವಿದುದು.

ಬಡನೆ ಬೆಂಬತ್ತಿದನು ತುಱುಬನು
ಹಿಡಿದು ತೊತ್ತಿನ ಮಗಳೆ ಹಾಯ್ದೊಡೆ
ಬಿಡುವೆನೇ ತಾನೆನುತ ಹೊಯ್ದನು ಕಾಲೊಳೊಡೆಮೆಟ್ಟಿ ।
ಕೆಡೆದು ರಕುತವ ಕಾಱಿ ಹುಡಿಯಲಿ
ಮುಡಿಮುಸುಕೆ ಬಿಱುಗಾಳಿಯಲಿ ಸೈ
ಗೆಡದ ಕದಳಿಯ ಕಂಭದಂತಿರೆ ಕಾಂತೆ ಹೊರಳಿದಳು ॥　　೧೫

ಆಗ ಬಡನೆ ಇದ್ದ ಭೂತವು ಕೀಚಕನನ್ನು ಹೊಡೆದುದು.

ಕರುಳ ತೆಗೆ ತಿನ್ನಡಗನೆನುತು
ಬ್ಬರಿಸಿ ಸೂರ್ಯನು ಕೊಟ್ಟದಾನವ
ನುರುಮೆಣಿಸಿ ಕೀಚಕನ ಹೊಯ್ದನು ಹಿಡಿದು ಕುಸುರಿದನು ।
ದುರುಳ ನಡೆಗೆಡೆದೆದ್ದು ಮಹಿಲದೊ
ಳೊಱಲುತೋಡಿದನಾಲಯಕೆ ಬೞಿ
ಕರಸ ಮೊದಲಾದಖಿಳಜನ ನಡುಗಿತ್ತು ಭಯ ಹೊಯ್ದು ॥ ೧೬

ದ್ರೌಪದಿಯ ವಾಕ್ಯ.

ಹೊಡೆ ಮರಳಿ ಮುಱಿದೆದ್ದು ಕೇಶದ
ಹುಡಿಯ ಕೊಡಹುತ ಮೊಲೆಗೆ ಮೋಲುದ
ತೊಡಿಸಿ ಗಲ್ಲದ ರಕುತವನು ಬೆರಳಿಂದ ಮಿಡಿಮಿಡಿದು ।

ನುಡಿಯಲಾಗದೆ ಖಳನು ಹೆಂಗುಸ
ಬಡಿಯೆ ನೋಡುತ್ತಿಹರೆ ಹಿರಿಯರು
ಹಿಡಿದ ಮೌನದ ಹೊತ್ತು ಲೇಸೆಂದಬಲೆ ಯೊಱಲಿದಳು ॥ ೧೭

ಶಿವ ಶಿವಾ ಪಾಪಿಗಳು ಪತಿಯಾ
ದವರ ತಾಗಲಿ ಸುಯ್ಲು ಕಟ ನಾ
ಲುವರ ನಡುವಣ ಹಾವು ಸಾಯದು ನಿರಪರಾಧಿಯನು ।
ಅವಗಡಿಸಿದನು ಖಳನು ಧರ್ಮದ
ವಿವರ ಶುದ್ಧಿಯನಾಡದೀಜನ
ನಿವಹ ಘೋರಾರಣ್ಯವಾಯ್ತೆನುತೊಱಲಿದಳು ತರಳೆ ॥ ೧೮

ಎಲೆ ವಿದೇಶಿಗ ಕಂಕಭಟ್ಟನೆ
ಹಲವು ಧರ್ಮವ ಬಲ್ಲೆ ಗಡ ನೃಪ
ತಿಲಕಗಱುಹುವುದೇನು ಸಂನ್ಯಾಸಿಗಳಿಗುಚಿತವಿದು ।
ತಿಳಿ ವಿದೇಶಿಗರಿಗೆ ವಿದೇಶಿಗ
ರೊಲವು ಸಮನಿಸಬೇಕು ಸಭೆಯಲಿ
ಬಲವಿಹೀನರಿಗಾಪ್ತರಿಲ್ಲೆಂದಬಲೆಯೊಱಲಿದಳು [1] ॥ ೧೯

ಧರ್ಮರಾಯನ ಸಹನ.

ಧೈರ್ಯವನು ನೆಱೆ ಬಲಿದು ಮೇಲಣ
ಕಾರ್ಯಭಾಗವನಱಿದು ನೃಪ ನಿಜ
ಭಾರ್ಯೆಯನು ಸಂತೈಸದಿರ್ದನು ಧರ್ಮನಂದನನು ।
ಶೌರ್ಯಕವಸರವಲ್ಲ ನಮಗಿ
ನ್ನಾರ್ಯನಾಜ್ಞೆ ಯೆನುತ್ತ ಮಾಣ್ದಾ
ತುರ್ಯವಿದ್ದರು ಭೀಮಸೇನಾದಿಗಳು ದುಗುಡದಲಿ ॥ ೨೦

1 ಬಲುಹು ಹಿರಿಯರಿದೇನವಮಾಡುವಿರೆಂದಳಿಂದುಮುಖಿ, ಕ.

### ಭೀಮನ ಯೋಚನೆ.

ನೊಂದಳಕಟಾ ಸತಿ ಯೆನುತ ಮನ
ನೊಂದು ಮೋಱೆಯು ಬಲಿದು [1] ಖತಿಯಲಿ
ಕಂದಿದನು ಮೈಮುಱಿದು ರೋಷದಲೌಡನೊಡೆಯೊತ್ತಿ ।
ಮಂದಿಯಱಿಯದ ಮ್ರೋಲು ಚೇಷ್ಟೆಯೊ
ಳೊಂದಿ ಮೆಲ್ಲನೆ ಬಾಗಿ ನೋಡಿದ
ನಂದು ರಾಜಾಲಯದ ಮುಂದಣ ಮರನನಾಭೀಮ ॥　　೨೧

ಬಳಗೆ ನಿಶ್ಚೈಸಿದನು ಮೊದಲಲಿ
ಹಿಱಿದು ಹಿಂಡುವೆನಿವಳ ಬಡಿದಾ
ಖಳನನವರೊಡಹುಟ್ಟಿದರನವನಾಪ್ತಪರಿಜನವ ।
ಬಳಿಕ ಪರಿಜನ ಸಹ ವಿರಾಟನ [2]
ಕೊಲುವೆನಱಿಯದ ಮುನ್ನ ಕೌರವ
ಕುಲವ ಸವರುವೆನೆಂದು ಕಿಡಿಕಿಡಿಯೋದನಾಭೀಮ ॥　　೨೨

### ಭೀಮನ ಇಂಗಿತವನ್ನು ತಿಳಿದ ಧರ್ಮರಾಯನ ವಾಕ್ಯ.

ಆತನಿಂಗಿತದನುವನಱಿದು ಮ
ಹೀತಳಾಧಿಪ ಧರ್ಮಸುತನತಿ
ಕಾತರಿಸದಿರು ವಲಲ ಸೈರಿಸು ಸೈರಿಸಕಟೆನುತ ।
ಈತರುವ ಮುಱಿಯದಿರು ಸುಜನ
ವ್ರಾತಕಾಶ್ರಯ ವೂರ ಹೊಱಗೆ ಮ
ಹಾತಿಶಯತರುವುಂಟು ನಿನ್ನಯ ಬಾಣಸಿನ ಮನೆಗೆ ॥　　೨೩

ಧರ್ಮಮಯತರುವಿದನು ಮುಱಿಯದಿ
ರೆಮ್ಮ ನುಡಿಗಳ ಕೇಳೆನಲು ಮಿಗೆ
ಸುಮ್ಮನೋಲಗದಿಂದ ಸರಿದನು ಭೀಮ ದುಗುಡದಲಿ ।

---

1 ಸೈವೆಱಗಾಗಿ, ಚ.　　2 ವಿಗಡವಿರಾಟರಾಯನ, ಚ.

ಕರ್ಮಫಲವಿದು ನಿನಗೆ ಕಾಮಿನಿ
ನಿಮ್ಮ ಭವನಕೆ ಹೋಗು ಶಿಕ್ಷಿಸ
ಲಮ್ಮದೀಸಭೆ ಬಗೆಯನಾತನು ಮತ್ಸ್ಯಭೂಪತಿಯು ‖ ೨೪

ಕೋಪಕವಸರವಲ್ಲ ಪತಿಗಳು
ಕಾಪುರುಷರೇ ನಿನ್ನವರು ಪರಿ
ತಾಪವನು ಬೀಳ್ಕೊಡು ಪತಿವ್ರತೆಯರಿಗೆ ಗುರು ನೀನು [1] ।
ದೀಪವಲ್ಲಾ ಕ್ಷಮೆಯುಳಿದೋ
ಷಾಪಹಾರವು ಸರ್ವಧರ್ಮದ
ರೂಪನೆಲೆಯಾಕ್ಷಮೆ ಯೆನಲು ಬಳಿಕೆಂದಳಿಂದುಮುಖಿ ‖ ೨೫

ನೀರು ಹೊಳಗಿಕ್ಕುವುದು ಮೊಳಿ
ಬಾರಿ ಬಳಿಕದು ಪಾಪಿ ಝೂಡಿಸೆ
ಸೈರಿಸದುವೆಸ್ತ್ಯಾಯಬಹುಳತೆಗೇನ ಮಾಡುವುದು ।
ಸೈರಣೆಗೆ ತಾನವಧಿ ಯಿಲ್ಲಾ
ಪೌರುಷದ ಒಗೆ ಬಂಜೆಯಾಯಿತು
ಆರಯಿಕೆಯಲಿ ಜುಣುಗಿ ಜಾಱುವಿರೆಂದಳಿಂದುಮುಖಿ ‖ ೨೬

ಅರರೆ ಹೆಂಗುಸು ದಿಟ್ಟೆಮೌನದೊ
ಳಿರಲಿದಾವಂತರವು ರಾಯನ
ಹೊರೆಯಲೀಬಾಯ್ಬಡಿಕತನ ಗರುವಾಯಿಯೇ ಯೆನಲು ।
ಕರಳಿಸಳು ಲಲಿತಾಂಗಿ ಮಿಲ್ಲಿಯು
ಹಿರಿಯರಲಿ ಫಲವಿಲ್ಲ ಮಾರುತಿ
ಗಱುಹುವೆನು ಬಟ್ಟಿಕಾದುದಾಗಲಿ ಯೆನುತ ತಿರುಗಿದಳು ‖ ೨೭

ದ್ರೌಪದಿಯು ಸುದೇಷ್ಣೆಯು ಮುಂದೆ ಕೀಚಕನ ವರ್ತಮಾನ
ವನ್ನು ತಿಳಿಸಿದುದು.

ಆಸುದೇಷ್ಣೆಯು ಮನೆಗೆ ಬರಲವ
ಳೀಸತಿಯು ನುಡಿಸಿದಳು ತಂಗಿ ವಿ

---

1 ಪುಣ್ಯಾಪಥು ನೀನು, ಚ.

ಳಾಸವೆಱದಿದೆ ಮುಖದ ದುಗುಡವಿದೇನು ಹದನೆನಲು |
ಏಸು ಮೆಱೆವೆಯುಲರಸುತನದ ಮ
ಹಾಸಘಾಡಿಕೆ ಯೆಮ್ಮ ನೀವೆಪ
ಹಾಸಮಾಡುವಿರೆಂದು ದ್ರೌಪದಿ ನುಡಿದಳರಸಿಯನು [1] ॥ ೨೮

ದುರುಳ ನಿಮ್ಮೊಡಹುಟ್ಟಿದನು ನೀ
ವೆರಸುಗಳು ತಿರುಕುಳಿಗಳಾವಿ
ನ್ನಿರಲು ಬಾರದು ನೃಪತಿ ತಪ್ಪಿದೊಡಾರು ಕಾವವರು |
ಕರೆಸಿ ಬುದ್ಧಿಯು ಹೇಳೆ ಯೆನ್ನನು
ಹೊರೆಯಲಾಪರೆ ಹೊರೆಯಿರಲ್ಲದೊ
ಡರಸಿ ಕಳುಹುವುದೆನಲು ಬಳಿಕಿಂತೆಂದಳಾರಾಣಿ ॥ ೨೯

ಸುದೇಷ್ಣೆಯು ಸಮಾಧಾನ ವಾಕ್ಯಗಳು.

ಲಲನೆ ಕೇಳನ್ಯಾಯದವರನು
ಕೊಲಿಸುವೆನು ಭಯ ಬೇಡ ಪರಸತಿ
ಗಳುಪಿದವನೊಡಹುಟ್ಟಿದನೆ ಕಡುಪಾಪಿ ಹಗೆ ಯೆನಲು |
ಕೊಲಿಸುವರೆ ನೀವೇಕೆ ತಪ್ಪಿನ
ಬಳಿಯಲೆನ್ನಾತಗಳು ಕೀಚಕ
ಕುಲವ ಸವರುವರೆನಗೆ ಕಾರಣವಿಲ್ಲ ಸಾಱಿದೆನು ॥ ೩೦

ದ್ರೌಪದಿಯು ಯೋಚನೆ.

ಎಂದು ಬೀಳ್ಕೊಂಡಬಲೆ ತನ್ನಯ
ಮಂದಿರಕೆ ಬಂದೊಳಗೊಳಗೆ ಮನ
ನೊಂದು ಸ್ವೈವೆಱಗಾಗಿ ಚಿಂತಿಸಿ ನೂಕಿದಳು ಹಗಲ |
ಕೊಂದುಕೊಂಬೆನೆ ಯಾತ್ಮಘಾತಕ
ನಿಂದೆ ಮುಂದಣ ಭವಕೆ ಪಾತಕ
ಹಿಂದೆ ಹತ್ತದೆ ಮಾಣದೇಗುವೆನೆನುತ ಮಱುಗಿದಳು ॥ ೩೧

1 ನುಡಿದಳೊಡತಿಯನು, ಚ.

ಆವ ಕೊಂಡವ ಹಾಯ್ವೆನೋ ಮೇ
ಣಾವ ಬೆಟ್ಟವನಡರಿ ಬೀಳುವೆ
ನಾವ ಮಡುವನು ಹೊಗುವೆನೋ ಹಾಸರೆಯ ಗುಂಪಿನಲಿ ।
ಆವ ಗರಳವ ಕುಡಿವೆ ಮೇಣಿ
ನ್ನಾವ ಪಾತಕದೊಳಗೆ ಬೀಳುವೆ
ಸಾವು ಸಮನಿಸದೆಂದು ದ್ರೌಪದಿ ಹಲವು ಹಲುಬಿದಳು ॥ ೩೦

ಆವ ಹೆಂಗುಸನೞಲಿಸಿದೆ ಮು
ನ್ನಾವ ಸೋಂಪಿಯ ನೊಡೆಮುರಿದೆ ಮೇ
ಣಾವ ಪಾಪದ ಫಲಕೆ ಹಿಡಿದೆನೊ ಸಂಚಕಾರವನು ।
ಆವ ಹೆಂಗುಸು ನವೆದಳೆನ್ನವೊ
ಲಾವಳೊಱಲುತೆ ಮಱುಗಿದಳು ತಾ
ಯಾವಳೆನ್ನಂದದಲಿ ಪಡೆದವರುಂಟೆ ಮಕ್ಕಳನು ॥ ೩೩

ಆರಿಗುಸುರುವೆನಾರ ಸಾಱುವೆ
ನಾರಿಗೊಱಲುವೆನಾರಿಗಱುಹುವೆ
ನಾರ ಬೇಡುವೆನಕಟ ಹೆಂಗುಸುಜನ್ಮವನು ಸುಡಲಿ ।
ಘೋರಪಾತಕಿಯೆನ್ನವೊಲು ಮು
ನ್ನಾರು ನವೆದವರುಂಟು ಮರಣವು
ಬಾರದೆಂದೊಱಲಿದಳು ಬಸಿರನು ಹೊಯ್ದು ಶಶಿವದನೆ ॥ ೩೪

ಯಮಸುತಂಗಱುಹುವೆನೆ ಧರ್ಮದ
ಕ್ಷಮೆಯ ಗರ ಹೊಡೆದಿಹುದು ಪಾರ್ಥನು
ಮಮತೆಯುಳ್ಳವನೆಂಬೆನೇ ತಮ್ಮಣ್ಣನಾಜ್ಞೆಯಲಿ ।
ಭ್ರಮಿತನಾಗಿಹನುೞಿದರಿಬ್ಬರು
ರಮಣರವರೀನಾಯ ಕೊಲಲ
ಕ್ಷಮರು ನಿಸ್ಸಂದೇಹವೆಂದಳು ತನ್ನ ಮನದೊಳಗೆ ॥ ೩೫

ಎಲ್ಲರೊಳು ಕಲಿಭೀಮನೇ ಮಿಡು
ಕುಳ್ಳ ಗಂಡನು ಹಾನಿ ಹರಿಬಕೆ
ನಿಲ್ಲದಂಗೈಸುವನು ಕಡು ಹೀಹಾಳಿಯುಳ್ಳವನು |
ಖುಲ್ಲನಿವನುಪಟಳವನಾತಂ
ಗೆಲ್ಲವನು ತಿಳುಹುವೆನು ಬಳಿಕವ
ನಲ್ಲಿ ಹುರುಳಿಲ್ಲದೊಡೆ ಕುಡಿವೆನು ಘೋರತರವಿಷವ || ೩೬

ಭೀಮಸೇನನು ಇದ್ದ ಸ್ಥಳಕ್ಕೆ ದ್ರೌಪದಿ ಬಂದುದು.

ನಿಳಯವನು ಹೊಱವಂಟು ಕಂಗಳ
ಬೆಳಗು ತಿಮಿರವ ಕೆಡಿಸೆ ಕಂಕಣ
ಲಲಿತಝೇಂಕೃತಿಯಿಂದ ತೂಗುವವಾಮಭುಜಲತೆಯು |
ಒಲಿದು ಮೇಲುದ ನೂಕಿ ನಡುಗುವ
ಮೊಲೆಯ ಭರದಲಿ ಯಡಿಯಿಡುತ ಕಳ
ವಳದ ಕರಣದಲಬಲೆ ಬಂದಳು ಬಾಣಸಿನ ಮನೆಗೆ || ೩೭

ಪಾಕಶಾಲಾಸ್ಥಿತಿ

ಕೆಲದೊಳೊಟ್ಟಿದ ಪತ್ರಶಾಕಾ
ವಳಿಯ ಫಲರಾಶಿಗಳ ಕಳವೆಯ
ಹೊಳವುತಿಹ ರಾಜಾನ್ನದಕ್ಕಿಯ ಸಾಲ ಹರಿಯಣದ |
ಕೆಲಬಲದ ಸಂಭಾರಚೂರ್ಣದ
ಲಲಿತಬೋನದ ವಿವಿಧಭಕ್ಷ್ಯಾ
ವಳಿಯ ಬಾಣಸಿನೊಳಗೆ ಬಂದಳು ಮತ್ತಗಜಗಮನೆ || ೩೮

ತಱಿದಕುಱಿಗಳ ಹಂದಿಯಡಗಿನ
ಜಾಱಿತರಕುತದ ಮೊಲನ ಖಂಡದ
ಕೀಱಿದಗುಬ್ಬಿಯ ಕೀಸಿ ಸೀಳಿದ ನವಿಲಲಾವುಗೆಯ |
ತುಱುಗಿದೆಲುವಿನ ಸಾಲಸುಂಟಿಗೆ

ಮೆಱೆವ ಮಾಂಸದ ರಾಶಿಗಳ ಪರ
ದೆಱಕೆಗಳ ಕಂಡಬಲೆ ಹೊಗಲೆದಳೆಡಬಲದ ಮನೆಯ ॥ ೩೯

ಆರಲಱೆದನೊ ಭೀಮನೀಸೂ
ವಾರವಿದ್ಯೆಯ ಭಾಪು ವಿಧಿ ಮುನಿ
ವಾರನಾವಂಗದಲಿ ಬರಿಸದು ಶಿವ ಶಿವಾ ಯೆನುತ ।
ನಾರಿ ನಸುನಗುತೊಳಗೆ ಹೊಕ್ಕು ಬ
ಕಾರಿ ಮಂಚದಲಿರಲು ನಿದ್ರಾ
ಭಾರವಿಪ್ವಲಕರಣನನು ಹೊದ್ದಿದಳು ದುಗುಪದಲಿ ॥ ೪೦

ಎಬ್ಬಿಸಲು ಭುಗಿಲೆಂಬನೋ ಮೇ
ಣೊಬ್ಬಳೇತಕೆ ಬಂದೆ ಮೋಱೆಯ
ಮಬ್ಬಿದೇನೆಂದೆನ್ನ ಸಂತೈಸುವನೊ ಸಾಮದಲಿ ।
ತುಬ್ಬುವುದೊ ತಾ ಬಂದ ಬರವಿದು
ನಿಬ್ಬರವಲಾ ಜನದ ಮನಕಿ
ನ್ನೆಬ್ಬಿಸಿಯೆ ನೋಡುವೆನೆನುತ ಸಾಱದಳು ವಲ್ಲಭನ ॥ ೪೧

ಭೀಮಸೇನನನ್ನು ಸಿದ್ರೆಯಿಂದೆಬ್ಬಿಸಿ ವೃತ್ತಾಂತವನ್ನು ಕೇಳಿದುದು.

ಮೆಲ್ಲಮೆಲ್ಲನೆ ಮುಸುಕ ಸಡಿಲಿಸಿ
ಗಲ್ಲವನು ಹಿಡಿದಲುಗಲಪ್ರತಿ
ಮಲ್ಲನೆದ್ದನು ನೋಡಿದನು ಪಾಂಚಾಲನಂದನೆಯ ।
ವಲ್ಲಭೆಯ ಬರವೇನು ಮುಖದಲಿ
ತಲ್ಲಣವು ತಲೆದೋಱುತಿದೆ ತಳು
ವಿಲ್ಲದಱುಹಿರುಳೇಕೆ ಬಂದೆ ಲತಾಂಗಿ ಹೇಳೆಂದ ॥ ೪೨

ಸ್ವೈರಿಸರು ಬಾಣಸಿನ ಭವನದ
ನಾರಿಯರು ದುರ್ಜನರು ಖುಲ್ಲರು
ತಾರರಿವೆರರಮನೆಯ ನಾಯಗಳು ನಾವು ದೇಶಿಗರು ।

ಭಾರವಿದು ಕೆಲರಱಿಯದಂತಿರೆ
ನಾರಿ ನೀ ಹೇಟೆನುತ ದುಗುಡವಿ
ದಾರದೆಸೆಯಿಂದಾದುದೆನೆ ಬಿನ್ನೈಸಿದಳು ರಾಣಿ ॥ ೪೩

ನಿನ್ನೆ ಹಗಲಱಿಯಟ್ಟಿ ಕೀಚಕ
ಕುನ್ನಿಯೊದೆದನು ರಾಜಸಭೆಯಲಿ
ನಿನ್ನ ವೆಂದಿಗರಿರಲು ಪರಿಭವವುಚಿತವೇ ತನಗೆ ।
ಎನ್ನನವ ಬೆಂಬಳಿಯ ಬಿಡ ನಾ
ನಿನ್ನು ಬದುಕುವೆಳಲ್ಲ ಪಾತಕ
ನಿನ್ನ ತಾಗದೆಮಾಣದನಲಾಭೀಮ ಖತಿಗೊಂಡ ॥ ೪೪

ಉಸರಲಾಗದು ನಿನ್ನ ಹರಿಬಕೆ
ಮಿಸುಕುವವರಾವಲ್ಲ ಹೆಂಡಿರ
ಗಸಣಿ ಗೊಂಬವರಲ್ಲ ಹುದುವಿನ ಗಂಡುತನವಿದನು ।
ಶಶಿವದನೆ ಸುಡು ಕಷ್ಟವೀಯುಪ
ದೆಸೆಯವರು ನಾವಲ್ಲ ನಿನ್ನವ
ರಸಮಸಾಹಸರುಟಿದ ನಾಲ್ವರಿಗಱುಹು ಹೋಗೆಂದ ॥ ೪೫

ದ್ರೌಪದೀ ಭೀಮಸೇನರ ಸಂವಾದ.

ರಮಣ ಕೇಳುಟಿದವರು ತನ್ನನು
ರಮಿಸುವರು ಮಾನಾರ್ಥವೆನೆ [1] ನಿ
ರ್ಗಮಿಸುವರು ನೀನಲ್ಲದುಟಿದವರುಚಿತ ಬಾಹಿರರು ।
ಮಮತೆಯಲಿ ನೀ ನೋಡು ಚಿತ್ತದ
ಮಮತೆಯನು ಬಿಡದಿರು ಕುಠಾರನ
ಯಮನ ಕಾಣಿಸಿ ಕರುಣಿಸೆಂದಳು ಕಾಂತೆ ಕೈಮುಗಿದು ॥ ೪೬

ಕಲಹಕಾದರೆ ನಾವು ರಮಿಸುವ
ರುಟಿದವರು ಬಟಿಕೇನು ಗಾದೆಯ

1 ಅಭಿಮಾನವನು, ಕ.

ಬಳಿಕ ಕೆಲಬರು ಘಳಿಸಿವರೆ ಕೆಲರುಂಡು ಜಾಜುವರು ।
ಅಳುಕಿ[1] ನುಡಿವವರಲ್ಲ ನಿನ್ನಯ
ಹಳಿವು ಬರಬವೆ ಹೇಳ ಚಿತ್ತವೆ
ತಿಳುಹಿಕೊಂಬುದು ನಾವು ಭೀತರು ಧರ್ಮಜನ ದೆಸೆಗೆ ॥ ೪೭

ಹೊದ್ದುವುದು ಫಲ್ಗುಣನ ಪದದಲಿ
ಬಿದ್ದು ಯಮನಂದನನ ಮನವನು
ತಿದ್ದುವುದು ಸಹದೇವನಕುಲರ ಕೈಯ್ಯೊಳಿಸುವುದು ।
ಗೆದ್ದು ಕೊಡುವರು ನಿನ್ನ ಪಾಲಿಸ
ದಿದ್ದರಾದರೆ ದೋಷವವರನು
ಹೊದ್ದುವುದು ಸಾಕಿನ್ನು ನಿನ್ನಯ ತೊಡಕು ಬೇಡೆಂದ[2] ॥ ೪೮

ಹೆಂಡತಿಯು ಹರಿಬದಲಿ ಯೊಬ್ಬನೆ
ಗಂಡನಾದರೆ ವೈರಿಯನು ಕಡಿ
ಖಂಡವನು ಮಾಡುವೆನು ಮೇಣ್ಣಾನ್ನೊಡಲನಿಕ್ಕುವೆನು ।
ಗಂಡರೈವರು ಮೂಱುಲೋಕದ
ಗಂಡರೊಬ್ಬಳನಾಳಲಾರಿರಿ
ಗಂಡರೋ ನೀವ್ ಷಂಡರೋ ಹೇಳೆಂದಳಿಂದುಮುಖಿ ॥ ೪೯

ಅಂದು ಕೌರವರಾಯ ಸಭೆಯಲಿ
ತಂದು ಸೀಱೆಯ ಸುಲಿಸಿದನು ತಾ
ನಿಂದು ಕೀಚಕಕುನ್ನಿಯೊದೆದನು ವಾಮಪಾದದಲಿ ।
ಅಂದು ಮೇಲಿಂದಾದ ಭಂಗಕೆ
ಬಂದುದಾವುದು ನೀವು ಬಲ್ಲಿದ
ರೆಂದು ಹೊಕ್ಕರೆ ಹೆಣ್ಣ ಕೊಂದಿರಿ ಯೆಂದಳಿಂದುಮುಖಿ ॥ ೫೦

---

1 ಹಳವು, ಕ. 2 ನೀನಿನ್ನು ಬಱಿದೇಕಾಡಬೇಡೆಂದ, ಚ.

ಭೀಮನ ವಾಕ್ಯ.

ದಾನವರು ಮಾನವರೊಳನ್ನಭಿ
ಮಾನವನು ಕೊಂಬವನ ಹೆಸರನ
ದೇನನೆಂಬೆನು ನೊಂದು ನುಡಿವರೆ ಖಾತಿಯಿಲ್ಲ ನಗೆ ।
ಈ ನಪುಂಸಕರೊಡನೆ ಹುಟ್ಟಿದ
ನಾನು ಮೂಗುಳ್ಳವನೆ ಮಾನಿನಿ
ನೀನು ತೋಱಿದ ಪರಿಯಲೆಂಬುದು ಭೀತಿ ಬೇಡೆಂದ ೫೧

ಅಂದು ದುಶ್ಶಾಸನನ ಕರುಳನು
ತಿಂದೊಡಲ್ಲದೆ ತಣಿವು ದೊರೆಕೊಳ
ದೆಂದು ಹಾಯ್ದರೆ ಹಲುಗಿರಿದು ಮೋಹಿಸಿದ ಯಮಸೂನು ।
ಇಂದು ಕೀಚಕ ನಾಯನೆಱಗುವೆ
ನೆಂದು ಮರನನು ನೋಡಿದರೆ ಜೀ
ಡೆಂದ ಹದನನು ಕಂಡೆ ಯಿನ್ನೆನಗುಂಟೆ ಯುಪವಾದ [1] ॥ ೫೨

ಹೆಣ್ಣ ಹರಿಬಕ್ಕೋಸುಗುವೆ ತ
ಮ್ಮಣ್ಣನಾಜ್ಞೆಯ ಮೀಱಿ ಕುಂತಿಯ
ಚಿಣ್ಣ ಬದುಕಿದನೆಂದು ನುಡಿವರು ಕುಜನರಾದವರು ।
ಅಣ್ಣನವರಿಗೆ ದೂಱುವುದು ನಾ
ವುಣ್ಣ ದುರಿ ಯಿವು ರಾಯನಾಜ್ಞೆಯ
ಕಣ್ಣಿಯಲಿ ಬಿಗಿವಡೆದು ಕೆಡೆದೆವು ಕಾಂತೆ ಕೇಳೆಂದ ॥ ೫೩

ಗಂಡುಗರ್ವವ ನುಡಿಯೆ ನಿಮ್ಮಯ
ದಂಡಿ ತಾನದು ಬೇಱೆ ನಾವೀ
ಭಂಡತನದಲಿ ಬದುಕಲಱಿಯೆವು ಧರ್ಮನಿರ್ಮಾಣವನು ।
ಕೊಂಡು ಕೊನರುವರಲ್ಲ ರಾಯನ
ನಂಡಲೆದು ಕೀಚಕನ ತಲೆಯನು
ಚಂಡನಾಡಿಸು ರಮಣಿ ನೀನರ್ಜುನಗ ಹೇಚೆಂದ ॥ ೫೪

1 ನೀನೆನಗುಂಟೆಯುಪರಾಧ, ಚ.

ತರುಣಿ ನೀ ಕೇಳಿಂದು ಮೊದಲಾ
ಗರಸಿ ನೀ ನಾಲ್ವರಿಗೆ ನಾವೆಡೆ
ಮುಱಿದವರು ಬಿಟ್ಟವರು ನಿನ್ನಯ ಸೂಳುಪಾಳೆಯವ ।
ಅರಸನಂ ಪ್ರಾರ್ಥಿಸುವುದರ್ಜುನ
ಪವನನಕುಲಸಹದೇವರಿಗೆ ವಿ
ಸ್ತರಿಸಿ ಹೇಳುವುದೆನ್ನೊಡನೆ ಫಲಸಿದ್ಧಿಯಿಲ್ಲೆಂದ ॥ ೫೫

ಅದಕ್ಕೆ ದ್ರೌಪದಿಯ ಅಸಮಾಧಾನ ವಾಕ್ಯಗಳು.

ಕೇಳುತಿದ್ದಳು ಕೊರಳಸೆಱೆ ಗೋ
ನಾಳಗೌಕಿತು ಬಿಕ್ಕಿ ಬಿಕ್ಕಿ ವಿ
ಶಾಲಲೋಚನೆ ಬಳಿಕ ನನೆದಳು ನಯನವಾರಿಯಲಿ ।
ಶೂಲ ಮುಖಮೊನೆಗೊಂಡವೊಲು ಸುಳಿ
ವಾಳ ಝಳತಾಗಿದವೊಲುದರ
ಜ್ವಾಲೆ ನೆತ್ತಿಯನೇಱೆ ಮಿಡುಕಿದಳಬಲೆ [1] ಬಿಸುಸುಯ್ದು ॥ ೫೬

ಕೆಂದಳದ ಸೆಕೆಯಲಿ ಕಪೋಲವು
ಕಂದಿ ಕಸರಿಕೆಯಾಯ್ತು ಸಿಡುಸುಯಿ
ಲಿಂದ ಸೀಕರಿಯೋಡುವೇಕಾವಳಿಯ ಮುತ್ತುಗಳು ।
ಸಂದಣಿಸಿದೆವೆಗಳಲಿ ಬಾಷ್ಪದ
ಬಿಂದು ತಳಿತುದು ನಷ್ಟದೃಷ್ಟಿಯೊ
ಳಿಂದುಮುಖಿ ನೆನೆನೆನೆದು ತೂಗಿದಳಡಿಗಡಿಗೆ ಶಿರವ ॥ ೫೭

ಆವ ಹೆಂಗುಸನೞಲಿಸಿದೆ ಮು
ನ್ನಾವನೋಂಪಿಯ ನಳಿದೆನೋ ಮೇ
ಣಾವ ಪಾಪದ ಫಲಕೆ ಹಿಡಿದೆನೊ ಸಂಚಕಾರವನು ।

---

1 ನೆತ್ತಿಗೆ ಸಿಲುಕಿ ಹಲುಬಿದಳಬಲೆ, ಚ.

ಆವ ಹೆಂಗುಸು ನವೆದಳೆನ್ನವೊ
ಲಾವಳಱಲುತೆ ಮಱುಗಿದಳು ಮ
ತ್ತಾವಳೆನ್ನಂದದವಮಗಳ ಪಡೆದವಳು ಲೋಕದಲಿ ॥ ೫೮

ಆವ ಗರಳವ ಕುಡಿವೆನೋ ಮೇ
ಣಾವ ಬೆಟ್ಟವನಡರಿ ಬೀಳ್ವೆನೊ
ಆವ ಮಡುವನು ಹೊಗುವೆನೋ ಹಾಸಱೆಯ ಗುಂಪಿನಲಿ ।
ಆವ ಕುಂಡವ ಹಾಯ್ವೆನೋ ಮೇ
ಣಾವ ಪಾವಕನೊಳಗೆ ಬೀಳ್ವೆನೊ
ಸಾವು ಸಮನಿಸದೆನಗೆನುತ ಮಱುಗಿದಳು ಕಮಲಾಕ್ಷಿ ॥ ೫೯

ಇನ್ನು ಹುಟ್ಟದೆ ಯಿರಲಿ ನಾರಿಯ
ರೆನ್ನವೊಲು ಭಂಗಿತರು ಭುವನದೊ
ಳಿನ್ನು ಜನಿಸಲು ಬೇಡ ಗಂಡರು ಭೀಮಸನ್ನಿಭರು ।
ಎನ್ನ ವೋಲ್ ಪಾಂಡವರ ವೋಲ್ ಸಂ
ಪನ್ನ ದುಃಖದೊಳಾರು ನವೆದರು
ಮುನ್ನಿನವರೊಳಗೆಂದು ದ್ರೌಪದಿ ಹಿರಿದು ಹಲುಬಿದಳು ॥ ೬೦

ಮಂದೆಗೆಳಸಿದ ಪಾಪಿ ಕೌರವ
ನಂದು ಮುಂದಲೆವಿಡಿದ ಸೈಂಧವ
ಬಂದು ಬಟಿಕಾರಣ್ಯವಾಸದೊಳೆನ್ನನೆಳದೊಯ್ದ ।
ಇಂದು ಕೀಚಕನಾಯ ಕಾಲೊಳು
ನೊಂದೆ ನಾನಿದು ಮೂಱುಬಾರಿಯ
ಬಂದ ಭಂಗವೆ ಸಾಕೆನುತ ಬಸವಳಿದಳಬುಜಾಕ್ಷಿ ॥ ೬೧

ಜನನವೇ ಪಾಂಚಾಲರಾಯನ
ಮನೆ ಮನೋವಲ್ಲಭರದಾರೆನೆ
ಮನುಜಗಿನುಜರು ಗಣ್ಯರೇ ಗೀರ್ವಾಣರಿಂ ಮಿಗಿಲು ।

ಎನಗೆ ಬಂದೆಡಱೀವಿರಾಟನ
ವನಿತೆಯರುಗಳ ಮುಡಿಯ ಕಟ್ಟುವ
ತನುವ ತಿಗುರುವ ಕಾಲನೊತ್ತುವ ಕೆಲಸದುತ್ಸಾಹ ॥ ೬೦

ಹಗೆಗಳಿಗೆ ತಂಪಾಗಿ ಬದುಕುವ
ಮುಗುದರಿನ್ನಾರುಂಟು ಭಂಗಕೆ
ಹೆಗಲಕೊಟ್ಟನುವ ವಿರೋಧಿಗಳುಂಟೆ ಲೋಕದಲಿ ।
ವಿಗಡಬಿರುದನು ಬಿಸುಟು ಬಡಿಹೋ
ರಿಗಳು ಪಾಂಡವರಂತೆ ಮೂಗು
ರ್ಚಿಗಳದಾರುಂಟೆಂದು ದ್ರೌಪದಿ ಹಿರಿದು ಹಲುಬಿದಳು ॥ ೬೧

ಕಾಲಯಮ [1] ಕೆರಳಿದರೆ ಮುಱಿವೆ
ಬ್ಬಾಳುತನದವರೆನ್ನನೊಬ್ಬಳ
ನಾಳರಾರಿರಿ ಪಾಪಿಗಳಿರಪಕೀರ್ತಿಗಳುಕರಲ ।
ತೋಳಹೊಱೆ ನಿಮಗೇಕೆ ಭೂಮೀ
ಪಾಲವಂಶದೊಳುದಿಸಲೇತಕೆ
ಕೂಳುಗೇಡಿಂಗೊಡಲ ಹೊಱುವಿರಿ ಯೆಂದಳಿಂದುಮುಖಿ ॥ ೬೨

ಧರೆಯ ಭಂಡಾರವನು ಪುರವನು
ಕರಿತುರಗರಥಪಾಯಿದಳವನು
ಕುರುಕುಲಾಗ್ರಣಿ ಸೆಳೆದುಕೊಂಡನು ನಿಮ್ಮ ಹೊಱವಡಿಸಿ ।
ದುರುಳ ಕೀಚಕಗೆನ್ನ ಕೊಟ್ಟಿರಿ
ಪರಿಮಿತವಲಿರವಾಯ್ತು ನಿಮ್ಮ
ವರಿಗೆ ಲೇಸಲ್ಲಕಟ ಯೆಂದಬುಜಾಕ್ಷಿ ಹಲುಬಿದಳು ॥ ೬೩

ಆವ ಭಾಗ್ಯಾಧಿಕನೊ ಕೌರವ
ದೇವನರಸುಗಳೊಡೆಯತನವನು
ನೀವು ಕೃಷ್ಣನ ಕೂರ್ಮೆಯಲಿಧರ್ಮದೊಳುಸಿಲುಕಿಹಿರಿ ।

---

1 ಕಾಲನನ್ನು, ಚ.

ನೀವು ತಟತಟವಾಗಿ ಲೋಗರ
ಸೇವೆಯಲಿ ಬೆಂದೊಡಲ ಹೊಱುವಿರಿ
ಸಾವವೆಳು ನಿಮಗಂಜಲೇಕಿನ್ನೆಂದಳಿಂದುಮುಖಿ ॥ ೬೬

ಭೀಮ ಕೊಟ್ಟೈ ತನಗೆ ಸಾವಿನ
ನೇಮವನು ನಿಮ್ಮಣ್ಣನಾಜ್ಞೆ ವಿ
ರಾಮವಾಗದೆ ಬದುಕೆ [1] ಧರ್ಮದ ವೈಸಿರಿಯನಱಿದು ।
ಕಾಮಿನಿಯು ಕೇಳಿಯಲಿ ನೆನೆವುದು
ತಾಮಸದಿ ತಾ ಮೀಱಿ ನಡೆದು
ದ್ದಾಮತೆಯ ಸೈರಿಸುವುದೆಂದೆಱಗಿದಳು ಚರಣದಲಿ ॥ ೬೭

ದ್ರೌಪದಿಯನ್ನು ಸಮಾಧಾನಪಡಿಸಿ ಭೀಮಸೇನನು
ಮಾಡಿದ ಪ್ರತಿಜ್ಞೆ.

ಎನಲು ಕಂಬನಿದುಂಬಿದುದು ಕಡು
ನೆನೆದುದಂತಃಕರಣ ರೋಷದ
ಘನತೆ ಹೆಚ್ಚಿತು ಹಿಂಡಿದನು ಹಗೆಗಳನು ಮನದೊಳಗೆ ।
ತನುಪುಳಕ ವುಬ್ಬರಿಸೆ ದಿಮ್ಮನೆ
ವನಿತೆಯನು ತೆಗೆದಪ್ಪಿ ವರಲೋ
ಚನಪಯೋಧಾರೆಗಳ ತೊಡೆದನು ಭೀಮ ಸೆಱಗಿನಲಿ ॥ ೬೮

ಕುರುಳ ನೇವರಿಸಿದನು ಗಲ್ಲವ
ನೊರಸಿ ಮುಂಡಾಡಿದನು ಮಂಚದ
ಹೊರೆಯ ಗಿಂಡಿಯ ನೀರಿನಲಿ ತೊಳೆದನು ಮುಖಾಂಬುಜವ ।
ಅರಸಿ ಬಿಡು ಬಿಡು ಖಾತಿಯನು ವಿ
ಸ್ತರಿಸಲೇಕಿನ್ನಣ್ಣ [2] ನಾಜ್ಞೆಯ
ಗೆರೆಯ ದಾಂಟಿದೆ ದಾಂಟಿದೆನು ಹೋಗೆಂದನಾಭೀಮ ॥ ೬೯

---

1 ನಡೆಯ, ಖ. ಚ.　　2 ಕೆಮ್ಮಣ್ಣ, ಚ.

ಬಸುರ ಬಗಿವೆನು ಕೀಚಕನ ನಸು
ಮಿಸುಕಿದರೆ ವೈರಾಟ ವಂಶದ
ಹೆಸರ ತೊಡೆವೆನು ನಮ್ಮನಜಿದೊಡೆ ಕೌರವವ್ರಜವ ।
ಕುಸುರಿದಱಿವೆನು ಭೀಮ ಕಷ್ಟವ
ನೆಸಗಿದನು ಹಾ ಯೆಂದರಾದೊಡೆ
ಮುಸುಡನವರಾದ್ರಿಯಲಿ ತೆಗೆವೆನು ದೇವಸಂತತಿಯ ॥ ೭೦

ಮುನಿದನಾದೊಡೆ ಯಣ್ಣ ತನವಿಂ
ದಿನಲಿ ಹರಿವುದು ಪಾರ್ಥನಕುಲರು
ಕನಲಿದರೆ ಕೈದೋಱುವೆನು ಸಹದೇವನಿವರುಗಳ ।
ಅನುಜನೆಂಬೆನೆ ಕೃಷ್ಣ ಹಾಯೊದ್ದೊಡೆ
ಘನವಮುರಾರಿಯ ವಿಘಾಱುವೆನು ಬಱಿ
ಕೆನಗೆ ಸಮಬಲರಾರು ತಱಿವೆನು ಕೀಚಕವ್ರಜವ [1] ॥ ೭೧

ಈಸುದಿನವೆಮ್ಮಣ್ಣನಾಜ್ಞಾ
ಪಾಶದಲಿ ಸಿಕ್ಕಿರ್ದ್ದೆ ಸಿಂಹದ
ಕೂಸ ನರಿ ಕೆಣಕುವವೊಲೀ ಕುರುಕೀಚಕಾದಿಗಳು ।
ಘಾಸಿಯಾದರು ಕೆಣಕಿ ನಾಯ್ಗಳ
ಪೀಸಬಡ್ಡಿಯಲಸುವ ಕೊಂಬೆನು
ವಾಸಿಧರ್ಮದ ಮೇರೆ ತಪ್ಪಿತು ಕಾಂತೆ ಕೇಳೆಂದ ॥ ೭೨

ಕೀಚಕನನ್ನು ನಾಟ್ಯ ಮಂಟಪಕ್ಕೆ ಬರುವಂತೆ ಮಾಡೆಂದು
ಹೇಳಿದುದು.

ತರುಣಿ ಕೀಚಕ ಕೌರವೇಂದ್ರರ
ಹರಣಕಿದ ಕೋ ಸಂಚಕಾರವ
ಹಿರಿದು ಮುನಿದರೆ ಭೀಮ ಬಗೆವನೆ ನೀತಿಗೀತಿಗಳ ।

---

1 ಕೀಚಕಾನ್ವಯವ, ಚ.

ಕೆರಳಿಚಿದೆ ಯಿನ್ನೇನು ನಿನ್ನಯ
ಹರಿಬವೆನ್ನದು ನಾಯಿ ಜಾರನ
ಕರೆದು ಸಂಕೇತದಲಿ ಸೂಚಿಸು ನಾಟ್ಯಮಂಟಪವ ‖　　೩೩

ಅಲ್ಲಿಗಿರುಳ್ಳೆತಂದು ಮರೆಯಲಿ
ಖುಲ್ಲನುದರವ ಬಗೆದು ರಕುತವ
ಚೆಲ್ಲುವೆನು ಶಾಕಿನಿಯರಿಗೆ ಸಂದೇಹವೇನಿದಕೆ ।
ಅಲ್ಲಿ ಕೆಲಬಲನಱಿದುದಾದರೆ
ಬಲ್ಲೆನದಕೌಷಧಿಯ ಕರೆಮರೆ
ಯಿಲ್ಲ ಮಾನಿನಿ ಹೋಗೆನುತ ಬೀಳ್ಕೊಟ್ಟನಂಗನೆಯ ‖　　೩೪

ಹರುಷದಲಿ ಹೆಚ್ಚಿದಳು ಪುರುಷರ
ಪುರುಷನಲ್ಲಾ ಭೀಮ ತನ್ನಯ
ಪರಮಸುಕೃತೋದಯವಲಾ ನೀನೊಬ್ಬನೆಂದೆನುತ ।
ಅರಸಿ ಕಾಂತನ ಬೀಳುಕೊಂಡಳು
ಮರಳಿದಳು ನಿಜಭವನಕಿತ್ತಲು
ತರಣಿ ತೆಗೆದನು ತಾವರೆಯ ಬಾಗಿಲಿನ ಬೀಯಗವ ‖　　೩೫

ಮಾರ್ಗದಲ್ಲಿ ಬರುತ್ತಾ ಕೀಚಕನನ್ನು ನೋಡಿದುದು.

ಆದಿವಸವರಮನೆಗೆ ಬರುತ ವೃ
ಕೋದರನ ವಲ್ಲಭೆಯ ಕಂಡನು
ಕೈದುಡುಕಲಂಜಿದನು ಮಾತಾಡಿಸಿದನಂಗನೆಯ ।
ಹೋದಿರುಳ ಯುಗವಾಗಿ ನೂಕಿದೆ
ನೀ ದಯಾಂಬುಧಿ ಕುಸುಮಶರ ಯಮ
ನಾದ ನೀನೇ ಬಲ್ಲೆ ಯೆಂದನು ಕೀಚಕನು ನಗುತ ‖　　೩೬

ಕುಸುಮಶರ ಯಮನಹನವ್ಯತವೇ
ವಿಷವಹುದು ಕೇಳಾಲಿಕಲುಗಳು
ಬಿಸಿಯಹುವು ಬಾಂಧವರು ವೈರಿಗಳಹರು ನಿಮಿಷದಲಿ ।

ಬಸೆದರೊಲ್ಲದರರಹರು ಲೋಗದ
ಶಶಿವದನೆಗಳುಪಿದ ದುರಾತ್ಮನ
ವಸುಧೆ ಹೊರೆವುದೇ ಪಾಪಿಕೀಚಕ ಯೆಂದಳಿಂದುಮುಖಿ ॥ ೭೭

ಬಳಿಕ ನಿನ್ನ ಪುರಾಣಧರ್ಮವ
ತಿಳಿದುಕೊಂಬೆವಿದೊಮ್ಮೆ ನಿನ್ನಯ
ಲಲಿತಕರುಣಾಕಟಾಕ್ಷಕವಚವ ತೊಡಿಸಿ ತನ್ನೊಡಲ ।
ಅಳುಕದೆಸುವ ಮನೋಜನಂಬಿನ
ಹಿಳುಕಮುಱಿಡಿಂಗರಿಗನಹೆನೆಂ
ದಳುಪಿ ಮನದಲಿ ಖೂಳ ಕಮಲಾನನೆಗೆ ಕೈಮುಗಿದ ॥ ೭೮

ದ್ರೌಪದಿಯು ಕೀಚಕನಿಗೆ ನಾಟ್ಯಮಂಟಪದಲ್ಲಿರೆಂದು ಹೇಳಿದುದು.

ಅಱಿದರಾದರೆ ನಿನ್ನ ವಂಶವ
ತಱಿವರೆನ್ನವರೆಲವೊ ಕೆಲಬಲ
ನಱಿಯದಂತಿರೆ ಬಂದು ನಾಟ್ಯದ ಗರುಡಿಯೊಳಗಿಹುದು ।
ನೆಱಿದುದಾಯುಷ ನಿನಗೆ ಕತ್ತಲೆ
ಮಱಿಯೊಳೈತಹೆನು ಯೆನ್ನನು
ಮಱೆದು ನೀ ಬಿಡೆ ಯಾದುದಾಗಲಿ ಯೆಂದಳಿಂದುಮುಖಿ ॥ ೭೯

ಅಂದಖಿಳಸಾಮ್ರಾಜ್ಯವಿದಿರ್ದೈ
ತಂದವೊಲು ಖಳ ಹಿಗ್ಗಿದನು ಪೂ
ರ್ಣೇಂದುವದನೆಯು ಮೇಲುವಾಯಲು ಮನದೊಳನುಗಯ್ಯೆ ।
ಮುಂದುಗೆಡದಿರು ಕೊಟ್ಟಸನ್ನೆಗೆ
ಬಂದು ನೀನಿರು ಕೆಲದವರು ಕೇ
ಳಿಂದು ನಗುವೆಂದವನು ಮಾಡದಿರೆಂದಳಿಂದುಮುಖಿ ॥ ೮೦

ಖಳ ಹಸಾದವ ಹಾಯ್ಕಿ ತನ್ನಯ
ನಿಳಯಕೈದಿದನಬುಜಬಾಂಧವ
ನಿಚಿದನಸ್ತಾಚಲದ ತಪ್ಪಲ ತಾವರೆಯ ಬನಕೆ !

ಈ ವರ್ತಮಾನವನ್ನು ಭೀಮಸೇನನಲ್ಲಿ ಹೇಳಿ ಸಿದ್ಧಪಡಿಸಿದುದು.

ನಳಿನಮುಖಿ ನಲವಿನಲಿ ಬಲುಗ
ತ್ತಲೆಯ ಹಬ್ಬುಗೆಯೊಳಗೆ ಕಂಗಳ
ಬೆಳಗು ಬಟ್ಟೆಯ ತೋಱೆ ಬಂದಳು ಬಾಣಸಿನ ಮನೆಗೆ ‖ ೮೧

ಭೀಮ ನಿಂದಿರು ನಾಟ್ಯನಿಳಯವ
ನಾಮದಾಂಧಗೆ ನುಡಿದು ಬಂದೆನು
ತಾಮಸವ ಮಾಡದಿರು ಹೂಡದಿರಲ್ಪಬುದ್ಧಿಗಳ |
ಕಾಮುಕನ ನಡೆಗೆಡಹಿ ನಿಜಸು
ಪ್ರೇಮವನು ತೋಱೆನಲು ನಗುತು
ದ್ದಾಮನೆದ್ದನು ಘಳಿಯನುಟ್ಟನು ಮಲ್ಲಗಂಟಿನಲಿ ‖ ೮೨

ಖಳನ ಮುಱಿಯೆಂದಬಲೆ ಹಣೆಯಲಿ
ತಿಲಕವನು ರಚಿಸಿದಳು ಸೇಸೆಯ
ತಳೆದಳೇರಿಸಿ ತಿಗುರ ಗೆಲಿದಳು ಹಿಣಿಲ ಹೊಸಪರಿಯ |
ಬಲುಭುಜನ ಹರಸಿದಳು ಕಗ್ಗ
ತ್ತಲೆಯೊಳಗೆ ನಡೆತಂದು [1] ನಾಟ್ಯದ
ನಿಳಯಮಧ್ಯದ ಮಣಿಯ ಮಂಚದ ಮೇಲೆ ಪವಡಿಸಿದ ‖ ೮೩

ಕೀಚಕನು ಸಂಕೇತಸ್ಥಾನಕ್ಕೆ ಬಂದುದು.

ಉಱುವ ಮಾರಿಯ ಬೇಟದಾತನು
ತುಱುಬಿನಲಿ [2] ಮಲ್ಲಿಗೆಯ ಮೊಗ್ಗೆಯ
ನಿಱುಕಿದನು ಪೂಸಿದನು ಸಾದುಜವಾದಿಕತ್ತುರಿಯ |

---

[1] ಯಹಬ್ಬುಗೆಯೊಳಗೆ, ಚ.    [2] ತುಱುಗಿದನು, ಚ.

ಮೆಱೆವ ಗಂಡುಡುಗೆಯನು ರಚಿಸಿದ
ಸೆಱಗನೊಯ್ಯಾರದಲಿ ಸುರಗೆಯ
ತಿರುಹುತಿರುಳೊಬ್ಬನೆ ನಿಜಾಲಯದಿಂದ ಹೊಱವಂಟ ॥ ೪

ಕಾಲಪಾಶದಲೆಳಸಿಕೊಂಬ ಕ
ರಾಳವಂತಿ ಸುಡುಗಾಡಲ್ಲೈತಂ
ದಾಲಯವ ಹೊಕ್ಕನು ಕೃತಾಂತನ ಬಾಯ ಹೊಗುವಂತೆ ।
ಮೇಲೆಮೇಲವಶಕುನಶತಕವ
ನಾಲಿಸದೆ ಸುಮ್ಮಾನದಲಿ ಕೇ
ಡಾಳಿ ಬಂದನು ಮಂಚವಿದ್ದೆಡೆಗಾಗಿ ತವಕದಲಿ [1] ॥ ೫

ವನಜಮುಖಿ ವೀಳೆಯವನನುಲೇ
ಪನವ ಮಲ್ಲಿಗೆಯ ದಳಭೂಷಣ
ವನುಪಮಾಂಬರವಿವೆ ಮನೋಹರವಹರೆ ಚಿತ್ತೈಸು ।
ನಿನಗೆ ಪಾಸಟಿಯಾನು ಯೆನ್ನವೊ
ಲನಿಮಿಷರೊಳಾರುಂಟು ಚೆಲುವರು
ಮನುಜರೆನಗೆಣೆ ಯಿಲ್ಲಲೆಗೆ ಸೈರಂಧ್ರಿ ಕೇಳೆಂದ ॥ ೬

ಕೀಚಕ ಭೀಮಸೇನರ ನುಡಿಗಳು.

ಎನ್ನವೋಲ್ ಪುರುಷರಲಿ ಚೆಲುವರ
ಮುನ್ನ ನೀ ಕಂಡಱಿದೆಯಾದೊಡೆ
ಯೆನ್ನಮೇಲಾಣೆಲೆಗೆ ಹುಸಿಯದೆ ಹೇೞು ಹೇಳೆಂದು ॥
ಮುನ್ನ ನಿನ್ನಿಂದಧಿಕದಬಲೆಯ [2]
ರೆನ್ನನೇ [3] ಬಯಸುವರು ನಾರಿಯ
ರೆನ್ನ ಕಂಡರೆ ಸೋಲದವರಿಲ್ಲಲೆಗೆ ಕೇಳೆಂದ [4] ॥ ೭

1 ತಡವರಿಸಿ, ಚ.
2 ನಿನ್ನಂತಪ್ಪಸತಿಯರು, ಚ.
3 ಎನ್ನನೇ, ಚ.
4 ನಿನ್ನಾಣೆ, ಚ.

ಎಲವೊ ಕೀಚಕ ನಿನ್ನ ಹೋಲುವ
ಚೆಲುವರಿಲ್ಲಂತಿರಲಿ ಲೋಕದ
ಲಲನೆಯರ ಪರಿಯಲ್ಲ ತನ್ನಯ ರೂಪು ಬೇಱೊಂದು ।
ಇಳೆಯೊಳನಗೆಣೆ ಯಿಲ್ಲ ನಿನಗಾ
ನೊಲಿದು ಬಂದೆನು ತನ್ನ ಪರಿಯನು
ಬಳಿಕ ನೋಡು ಬೇಗ ತೋಱುವೆನೆಂದನಾಭೀಮ ॥　　೮೮

ಎನಗೆ ಪುರುಷರು ಸೋಲದವರಿ
ಲ್ಲೆನಗೆ ಪಾಸಟಿ ನೀನು ನಿನಗಾ
ನೊಲಿದು ಬಂದೆನು ನೋಡು ಯೆನ್ನಯ ಹೆಣ್ಣುತನದನುವ ।
ಎನಲು ಹರುಷದಲುಬ್ಬಿ ಕೀಚಕ
ನನಿಲಜನ ವೈದಡವಿ ವೃತ್ತ
ಸ್ತನವ ಕಾಣದೆ ಹೆದಱಿ ಬಳಿಕಿಂತೆಂದನವ ನಗುತ ॥　　೮೯

ಭೀಮ ಕೀಚಕರ ಹೊಡೆದಾಟ.

ಎಲೆಗೆ ಕಲುವ್ಯೆಯ್ಯಾದೆ ಕಡು ಕೋ
ಮಲತೆ ಯೆತ್ತಲು ಕರ್ಕಶಾಂಗದ
ಬಲುಹಿದೆತ್ತಲು ಮಾಯವೇಷವ ಧರಿಸಿದೆಯೊ ಮೇಣು ।
ತಿಳುಹೆನಲು ಕೇಳಲವೊ ಪರಸತಿ
ಗಳುಪಿದಾತಂಗಮೃತ ವಿಷ ಕೋ
ಮಲತೆ ಕರ್ಕಶವಹುದೆನುತ ತುಡುಕಿದನು ಮುಂದಲೆಯ ॥ ೯೦

ಚಪಳೆ ಫಡ ಹೋಗೆನುತ ಹಾಯ್ದನು
ಕೃಪಣಮತಿ ಮುಂಗಯ್ಯನನಿಲಜ
ನಪರಭಾಗಕೆ ಹಾಯ್ದು ಹಿಡಿದನು ಕೀಚಕನ ತುಱುಬ ।
ವಿಪುಳಬಲ ಕಳವಳಿಸಿದನು ಕಡು
ಕುಪಿತನಾದನು ಹೆಂಗುಸಲ್ಲಿವ
ನಪಸದನು ತೆಗೆ ಕರುಳನೆನುತೊಳಹೊಕ್ಕು ಹೆಣಗಿದನು ॥　　೯೧

ತಿವಿದನವನುರವಣಿಸಿ ಮಾರುತಿ
ಕವಿದು ಹೆಣಗಿದನಡಸಿ ಹೊಯ್ದೊಡೆ
ಬವರಿಯಲಿ ಕಳದೌಕಿದರೆ ಮಡಮುರಿಯದೊಳಹೊಕ್ಕು ।
ಸವಡಿಮಂದರದಂತೆ ಕೀಚಕ
ಪವನಸುತರೊಪ್ಪಿದರು ಭೀಮನ
ಯುವತಿ ನಗುತಾಲಿಸುತಲಿದ್ದಳು ಹೊಯ್ಲ ಹೋರಟೆಯ ॥ ೯೨

ಎಱಗಿದರೆ ಕೀಚಕನ ಗಾಯಕೆ
ತಱಹರಿಸಿ ಕಲಿಭೀಮ ಮಂಡಿಸಿ
ಮುಱಿವೊಡೆದು ಮುಱಿದೆದ್ದು ರೋಷದಲೌಡನೊಡೆಗಚ್ಚಿ ।
ಬಱಸಿಡಿಲು ಪರ್ವತದ ಶಿಖರವ
ನೆಱಗುವಂತಿರೆ ಖಳನ ನೆತ್ತಿಯ
ನೆಱಗಿದನು ಕಲಿಭೀಮ [1] ನುನ್ನತಬಾಹುಸತ್ವದಲಿ ॥ ೯೩

ಅರಿಯ ಮುಷ್ಟಿಯ ಗಾಯದಲಿ ತಲೆ
ಬಿರಿಯೆ ತನು ಥೆಂಡಣಿಸಿ ಕಂಗಳು
ತಿರುಗಿ ಜೋಲುತೆ ಮೆಲ್ಲಮೆಲ್ಲನೆ ಯಸುವ ಪಸರಿಸುತ ।
ಕೆರಳಿ ಕರಿ ಕೇಸರಿಯ ಹೊಯ್ದರೆ
ತಿರುಗುವಂತಿರೆ ಭೀಮಸೇನನ
ಬರಿಯ ತಿವಿದನು ಬೀಟೆನುತ ಖಳರಾಯ ರೋಷದಲಿ ॥ ೯೪

ಕೀಚಕನ ಮರಣ.

ತಿರುಗಿ ಪೈಸರಹೋಗಿ ಪವನಜ
ಮರಳಿ ತಿವಿದನು ಕೀಚಕನ ಹೇ
ರುರವನೆದೆ ಜರ್ಝರಿತವಾಯಿತು ಕಾಱಿದನು ಕರುಳ ।
ಬಿರಿದುವಾಲಿಗಳೊಲೆದೊಲೆದು ಕಂ
ಣ್ತಿರುಗಿ ಧೊಪ್ಪನೆ ಕೆಡೆದು ನಿಮಿಷಕೆ
ಹೊರಳಿ ಹರಣವ ಕಳುಹಿ ಕಳದುದು ಕಾಯ ಕೀಚಕನ ॥ ೯೫

[1] ರಣಧೀರ, ಚ.

ತಲೆಯುನೆದೆಯೊಳಗಿಕ್ಕಿ ಕೈ ಕಾ
ಲ್ಗಳನು ಬಸುರೊಳಗಿಕ್ಕಿ ದೂರಕೆ
ತೊಲಗಿದನು ತೋಱಿದನು ತರುಣಿಗೆ ಕೀಚಕನ ಹದನ ।
ಖಳನು ಕಾಲನ ಕೋಣ ತುಳಿದಂ
ತಿಳೆಯೊಳೊಱಗಿರೆ ಕಂಡು ಕಾಮಿನಿ
ಕಳವಳಿಸಿ ನಗುತಾಗ ತಕ್ಕೈಸಿದಳು ವಲ್ಲಭನ [1] ॥ ೯೬

ಈವರ್ತಮಾನವು ಅವನ ತಮ್ಮಂದಿರಿಗೆ ತಿಳಿಯಲು ಅವರು ಬಂದುದು.

ತರುಣಿ ಬಿಡು ಸಾರೆನುತ ಪವನಜ
ಸರಿದನತ್ತಲು ದ್ರುಪದನಂದನೆ
ಕರೆದು ನುಡಿದಳು ಕಾಹಿನವರಿಗೆ ಕಿಚಕನ ಹದನ ।
ದುರುಳ ಬಲುಹಿಂದೆನ್ನನೆಳದರೆ
ಕೆರಳಿದರು ಗಂಧರ್ವರೀತಗೆ
ಹರುವ ಕಂಡರು ನೋಡಿ ಯೆನೆ ಹರಿತಂದರವಳೊಡನೆ ॥ ೯೭

ಅರಸಿ ಕೈದೀವಿಗೆಯಲವನಿಹ
ಪರಿಯ ಕಂಡರು ಕಾಹಿನವದಿರು
ಹರಿದು ಹೇಳಿದರಾತನನುಜರಿಗಗ್ರಜನ ಹದನ [2] ।
ಕರದಿ ಬಾಯ್ಗಳ ಹೊಯ್ದು ಹೊಟ್ಟೆಯೊ
ಳುರಿ ಭಡಾಳಿಸೆ ಬಿಟ್ಟಮಂಡೆಯೊ
ಳಿರದೆ ಬಂದರು ಕೀಚಕನ ಸೋದರರು ಬಾಯ್ಬಿಡುತ ॥ ೯೮

ಆರು ಗತಿ ಯೆಮಗಕಟ ಕೀಚಕ
ವೀರ ದೇಶಿಗರಾದೆವಾ ವಿ
ನ್ನಾರ ಸೇರುವೆವೆನುತ ಹಲುಬಿದರವನ ತಕ್ಕೈಸಿ ।

---

1 ಕಳಕಳಿಸಿದಳು ಭೀಮಸೇನನನಪ್ಪಿ ದುಂಡಾಡಿ, ಚ.

2 ನನುಜಾತತರಿಗೆ ಬೇಗದಲಿ, ಚ.

ಕ್ರೂರಕರ್ಮರು ನಿನ್ನ ಕೊಂದವ
ರಾರು ಹಾ ಹಾ ಯೆನುತ ಹಲುಬಲು
ವಾರಿಜಾನನೆ ಮುಗುಳು ನಗೆಯಲಿ ನೋಡಿದಳು ಖಳರ ॥ ೯೯

ಆಗ ಅವರು ದ್ರೌಪದಿಯನ್ನು ಹಿಡಿದು ಕಟ್ಟಿದುದು.

ಇವಳಿಗೋಸುಗವೀತದನೇ ಸಹ
ಭವನು ತಪ್ಪೇನೆನುತ ನಡುವಿರು
ಳವೆದಿರ್ದೈತಂದರು ವಿರಾಟಂಗಱುಹಿದರು ಹದನ ।
ಅವಳನಾತನ ಕೂಡೆ ಕಳುಹುವ್ರೊ
ಡೆವಗೆ ನೇಮವೆ ಯೆನುತ ಬೀಳ್ಕೊಂ
ಡವರು ಮರಳುತೆ ಬಂದು ಹಿಡಿದರು ಕಮಲಲೋಚನೆಯು ॥ ೧೦೦

ತೆಗೆದು ಮಂಚದಲವನ ಹೆಣನನು
ಬಿಗಿದು ಯಾತನ ಕಾಲದೆಸೆಯಲಿ
ನಗುವುದಿನ್ನೊಮ್ಮೆನುತ ಕಟ್ಟಿದರವರು ಕೋಮಲೆಯ [1] ।
ಬೆಗಡುಗೊಂಡಂಭೋಜಮುಖಿಯು
ಬ್ಬಗದಲೊಱಲಿದಳಕಟಕಟ ಪಾ
ಪಿಗಳಿರಾ ಗಂಧರ್ವರಿರ ಹಾ ಯೆನುತ ಹಲುಬಿದಳು ॥ ೧೦೧

ಬಳಿಕ ದ್ರೌಪದಿ ಸ್ಮರಿಸಿದಾಗ ಭೀಮಸೇನನು ಬಂದು ಬಿಡಿಸಿದುದು.

ಕೇಳಕಟ ಜಯವಿಜಯಸೇನನೆ
ಕೇಳು ವಿಜಯಜಯಾಬ್ಧಿಸೇನನೆ
ಕೇಳು ಜಯಸೇನನೆ ದುರಾತ್ಮಕರೆನ್ನನೆಳೆದೊಯ್ದು ।
ಬೀಳಿಕುವರಗ್ನಿಯಲಿ ನೀವಿದ
ಕೇಳಿ ತಡಮಾಡದಿರಿ ಯೆನಲದ
ಕೇಳಿದನು ಕಲಿಭೀಮ ಸತಿಯಾಕ್ರಂದನಧ್ವನಿಯ ॥ ೧೦೨

1 ಕಾಮಿನಿಯ, ಚ.

ಈದುರಾತ್ಮರಿಗಗ್ರಜನೆ ಸಾ
ವೈದದೇ ತಮ್ಮಣ್ಣನಲ್ಲಿಗೆ
ಹೊಯ್ದು ಕಳುಹಲು ಬೇಕಲಾ ಕುನ್ನಿಗಳನೀಕ್ಷಣಕೆ ।
ಬೈದೊಡೇನಹುದೆನುತ ಝೋಂಪಿಸಿ
ಹೊಯ್ದು ಮಾರುತಿ ರುದ್ರಭೂಮಿಯು
ನೈದಿದನು ಘಡ ಯೆನುತ ಕೊಂಡನು ಮುಱಿದು ಹೆಮ್ಮರನ ॥೧೦೩

ಎಲೆಲೆ ಗಂಧರ್ವಕನ ಹೆಂಗುಸ
ಕಳಚಿ ಬಿಡಿರೋ ಪಾಪಿ ಹೋಗಲಿ
ಕೊಲೆಗಡಿಗನಿವನೆನುತ ಹೆಣನನು ಬಿಸುಟು ದೆಸೆದೆಸೆಗೆ ।
ತಲೆಗೆದಱಿ ಕೆಟ್ಟೋಡೆ ನಕ್ಕನು
ಕಳಕಳಿಸಿ ಕಲಿ ಭೀಮನೆಲೆ ನಾ
ಯ್ಗಳಿರ ಜಾಱಿದರಿನ್ನು ಬಿಡುವೆನೆ ಯೆನುತ ಬೆಂಕೊಂಡ ॥೧೦೪

ಉಪಕೀಚಕರ ಸಂಹಾರ,

ತಿರುಹಿದನು ಹೆಮ್ಮರನನನಿಬರ
ಧರೆಯೊಳಟ್ಟೊರಸಿದನು ದೆಸೆದೆಸೆ
ಗೋಱಿಲಿ ಚಿಮ್ಮುವ ಚಪಳರನು ಬೆಂಬತ್ತಿ ಬರಿಕೈದು ।
ಕುಱಿದಱಿಯು ಮಾಡಿದನು ನೂಱೈ
ವರನು ಕೊಂದನು ಸತಿಯು ಬಿಡಿಸಿಯೆ
ಮರಳಿ ಮಿಣ್ಣನೆ ಬಂದು ಹೊಕ್ಕನು ಬಾಣಸಿನ ಮನೆಯು ॥ ೧೦೫

ಸುಳಿಯಲಮ್ಮದು ಪಾರಜನವಿವೆ
ರಳಿವ ವಚನಿಸಲಮ್ಮದೀಕೆಯು
ನೆಲುಕಲಮ್ಮದು ನೋಡಲಮ್ಮದು ಮಂದಿ ತಮತಮಗೆ ।
ನಳಿನಮುಖಿ ನಸುನಗುತ ತಿಳಿಗೊಳ
ದೊಳಗೆ ಹೊಕ್ಕಳು ಮಿಂದು ಬೀದಿ
ಗಳೊಳಗೆ ಬರುತಿರೆ ಕಂಡು ಕೈಗಳ ಮುಗಿದರಲ್ಲಲ್ಲಿ [1] ॥ ೧೦೬

---

1 ಮುಗಿದುದಖಳಜನ, ಚ.

ಈಕೆಗೋಸುಗವೆಚಿದನಕಟವಿ
ವೇಕಿ ಕೀಚಕನೆಂದು ಕೆಲಬರಿ
ದೇಕೆ ನಮಗೀಚಿಂತೆ ಶಿವ ಶಿವ ಯೆನುತ ಕೆಲಕೆಲರು |
ನೂಕಿ ನೋಡುವ [1] ಮಂದಿಮಧ್ಯದ
ಲೀಕೆ ಮೆಲ್ಲನೆ ಬರುತಲಾ ಲೋ
ಕೈಕವೀರನ ಕಂಡಳಾ ಬಾಣಸಿನ ಬಾಗಿಲಲಿ || ೧೦೭

ಮುಗುಳು ನಗೆಯಲಿ ಕಣ್ಣ ಕಡೆಯಲಿ
ವಿಗಡಭೀಮನ ನೋಡಿದಳು ಕೈ
ಮುಗಿದೆವಾವ್ ಗಂಧರ್ವಪತಿಗೆ ನಮೋ ನಮೋ ಯೆನುತ |
ಹೊಗರಿಡುವ ಹರುಷದಲಿ ರೋಮಾ
ಳಿಗಳ ಗುಡಿಯಲಿ ತನ್ನ ನಿಳಯಕೆ
ಮುಗುದೆ ಬಂದಳು ಸೂರ್ಯನಡಱಿದನುದಯಪರ್ವತಕೆ ||೧೦೮

ಊರೊಳಗೆ ಗುಜುಗುಜಿಸಿ ವಾರ್ತಾ
ಭಾರ ಮಸಗಿತು ನೆರವಿನೆರವಿಯೊ
ಳಾರ ಬಾಯ್ಗಳೊಳಾದರೆಯು ಜಪವಾಯ್ತು ಜನಜನಿತ |
ಭೂರಿಚಿಂತಾತುರ ವಿರಾಟನು
ಮಾರಿಯೋ ಸೈರಂಧ್ರಿಯೋ ಯಿಾ
ನಾರಿ ಯಿರಬೇಡೆಂದು ತನ್ನಯ ಸತಿಗೆ ನೇಮಿಸಿದ || ೧೦೯

ವಿರಾಟನ ಅಪ್ಪಣೆಯಿಂದ ದ್ರೌಪದಿಯನ್ನು ಹೋಗೆಂದು ಹೇಳಿದುದು.

ಅಳಲು ಕೈಮಿಗಲಾವಿರಾಟನ
ಲಲನೆ ಸೈರಂಧ್ರಿಯನು ಕರೆಸಿದ
ಳೆಲೆ ಮಹಾತುಮೆ ತಾಯೆ ನೀನಿಲ್ಲಿರಲು ಬೇಡಿನ್ನು |
ಹೊಳಲೊಳಿದ್ದರೆ ಭೀತಿ ಘನ ನೀ
ವೊಲಿದ ತಾವಿಗೆ ಬಿಜಯಮಾಡುವು
ದುಳುಹಬೇಹುದು ತಮ್ಮನೆನಲಿಂತೆಂದಳಂದುಮುಖಿ || ೧೧೦

---

1 ಕವಿದುದು, ಚ.

ಅದಕ್ಕೆ ದ್ರೌಪದಿಯು ತನ್ನ ಅಪರಾಧ ವಿಲ್ಲೆಂದು ಹೇಳಿದುದು.

ಎಮ್ಮದೇನಪರಾಧ ದೇವಿಯೆ
ನಿಮ್ಮ ತಮ್ಮನು ತಪ್ಪಿ ನಡೆದರೆ
ಯೆಮ್ಮ ರಮಣರು ಸೈರಿಸದೆ ಸೀಳಿದರು ದುರ್ಜನರ ।
ನಿಮ್ಮ ನಾವೋಲೈಸಿ ಮರಳಿಯೆ
ನಿಮ್ಮ ಕೆಡಿಸುವರಲ್ಲ ಧೂರ್ತರು
ತಮ್ಮ ಕತದಲಿ ತಾವು ಕೆಟ್ಟರು ನೀತಿಬಾಹಿರರು ॥ ೧೧೧

ತಾವೆ ತಮ್ಮಿಂದಳಿದರದು ಸಾ
ಕಾವು ನಿಮಗಂಜುವೆವು ನಿಮ್ಮಲಿ
ಯಾವುದೂ ತಪ್ಪಿಲ್ಲ ನೀವಿಲ್ಲಿರಲು ಬೇಡೆನಲು ।
ನಾವು ಮುನ್ನಿಹರಲ್ಲ ನಿಮ್ಮಯ
ಸೇವೆಯಲಿ ಹದಿಮೂರುದಿವಸವು
ನೀವು ನೂಕಿದೊಡಿರದೆ ಮಾಣೆವು ದೇವಿ ಚಿತ್ತೈಸು ॥ ೧೧೨

ಅಳುಕದಿರಿ ಹದಿಮೂರುದಿವಸವು
ಕಳೆದ ಬಳಿಕೆಮಗಿಲ್ಲ ಲೇಸಹು
ದಳಿದು ಹೋದರು ದುಷ್ಟರಾದವರಿನ್ನು ಭಯಬೇಡ ।
ಕಲಹದವರಾವಲ್ಲೆನುತ ನಿಜ
ನಿಳಯವನು ಸಾರಿದಳು ದ್ರೌಪದಿ
ಘಳಿಗೆಘಳಿಗೆಗೆ ಕೀಚಕನ ವೃತ್ತಾಂತ ಪಸರಿಸಿತು ॥ ೧೧೩

ಮೂರನೆಯ ಸಂಧಿ ಮುಗಿದುದು.

## ನಾಲ್ಕನೆಯ ಸಂಧಿ.

ಸೂಚನೆ.

ಅರಸು ಕುರುಪತಿ ಪಾಂಡುನಂದನ
ರಱಿಕೆಯಾಗಲು ಮಲ್ಲಬಳಗವ
ಕರೆಸಿ ಕಳುಹಲು ವಲಲ ಕೊಂದನು ಮತ್ಸ್ಯನಗರಿಯಲಿ ||

ದುರ್ಯೋಧನನ ಯೋಚನೆ.

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡುಕುಮಾರರಡವಿಯ
ಬೀಱುಕೊಂಡಜ್ಞಾತವಾಸದೊಳಿರಲು ಕೌರವನು |
ಕಾಲ ಸವೆದುದು ಪಾಂಡುಸುತರಿಗೆ
ಮೇಲೆ ನೆಗಱುವುದಾವ ರಾಯರ
ವೂಟಿಗವು ತಾನೆನುತ ತಿಳುಹಿದನವನು ಭೀಷ್ಮಂಗೆ || ೧

ಮತ್ಸ್ಯದೇಶದಿಂದ ಬಂದ ದೂತನು ಕೀಚಕನ ಮರಣ
ವನ್ನು ತಿಳಿಸಿದುದು.

ದ್ರೋಣ ಗೌತಮವರ್ಯ ಗಂಗಾ
ಸೂನುವಶ್ವತ್ಥಾಮನೆನಿಪ ಮ
ಹಾನುಭಾವರು ದುಷ್ಟಮಂತ್ರಿಚತುಷ್ಕಪೋಷಕನು |
ಸಾನುರಾಗದಲಿರೆ ನೃಪತಿ ಸು
ಮ್ಮಾನದಿಂದೋಲಗದೊಳಿರುತಿರೆ
ಮೀನದೇಶಾಧಿಪನ ನಗರದಿ ಬಂದನೊರ್ವ ಚರ || ೨

ತಂದು ಹರಹಿದ ಕೀಚಕನ ಮೃತಿ
ಯಂದವನು ನೃಪ ಕೇಳಿ ದೂತಂ
ಗೆಂದ ಮಡುಹಿದ ವೀರನಾವನು ಮರ್ತ್ಯಜಾತಿಯಲಿ |

ಇಂದುಮುಖಿಯನು ಕರೆಯಲೋಸುಗ
ಬಂದು ಗಂಧರ್ವಕರು ಕೀಚಕ
ವೃಂದವನು ಸವರಿದರು ಕೌರವರಾಯ ಚಿತ್ತೈಸು ‖　೩

ದುರ್ಯೋಧನನ ಊಹೆ.

ದೇವಲೋಕದ ಸತಿಗೆ ಮರ್ತ್ಯರೊ
ಳಾವ ಹೋಲಿಕೆ ಯುಂಟು ಮಡುಪಲ
ದಾವವೀರನ ಕಾಣೆ ಕೀಚಕನತುಳಭುಜಬಲನು ।
ಭಾವಿಸಲು ಪಾಂಡವರ ಸತಿಯನು
ಭಾವಜನ ಕೇಳಿಂಗೆ ಬಯಸಲು
ಪಾವಮಾನಿಯೆ ಕೊಂದ ನಿಶ್ಚಯವೆಂದನಾಭೂಪ ‖　೪

ಸತ್ಯವಿದು ಪಾಂಡವರು ವಿಪಿನವ
ನುತ್ತರಿಸಿ ಯಜ್ಞಾತವಾಸಕೆ
ಗುಪ್ತದಲಿ ತಾವಿಪ್ಪರಲ್ಲಿ ವಿರಾಟನಗರಿಯಲಿ ।

ಮಲ್ಲರ ಕಳುಹುವ ಯೋಚನೆಯನ್ನು ಮಾಡಿದುದು.

ಯುಕ್ತಿಯಲಱಿಯಬಾರದೈ ರಿಪು
ಕೃತ್ರಿಮವು ಇದನಱಿವೆನೆನುತಲಿ
ಚಿತ್ತದಲಿ ತಾ ತಿಳಿದು ಮಲ್ಲರ ಕಳುಹಬೇಕೆಂದ ‖　೫

ಕಳುಹೆ ಮಲ್ಲರ ಭೀಮನಿದ್ದರೆ
ವುಟಿಯಲೀಯನು ಮತ್ತೆ ಪಾಂಡವ
ರುಚಿವು ದೊರೆತರೆ ಜಯಿಸಬಹುದೈ ಯೆಂದು ಚಿಂತಿಸುತ ।
ತಿಳುಹಿದನು ಭೀಷ್ಮಂಗೆ ದ್ರೋಣಗೆ
ನಲವು ಮಿಗೆ ಹರುಷದಲಿ ದೂತರ
ಕಳುಹಿ ಕರೆಸಿದ ಮನೆಯ ಮಲ್ಲರ ಕೌರವರ ರಾಯ ‖　೬

ಮಲ್ಲರ ಬರುವಿಕೆ.

ಕರೆಸಿದನು ಜೀಮೂತಮಲ್ಲನ
ಕರೆಸಿದನು ಸಿಂಧೂರಮಲ್ಲನ
ಕರೆಸಿದನು ಜಗಜಟ್ಟಿಮಲ್ಲನ ವೀರದೇವುಲನ ।
ಕರೆಸಿದನು ಗಜವೈರಿಮಲ್ಲನ
ಕರೆಸಿದನು ಶಾರ್ದೂಲಮಲ್ಲನ
ಕರೆಸಿದನು ಶಾಕಂಬರೀಕನನತುಳಭುಜಬಲನ ॥ ೭

ಪುಂಡರೀಕನ ಪಿಂಗಳಾಕ್ಷನ
ಚಂಡಬಲ ರಣಜಟ್ಟಿ ರಣದು
ದ್ದಂಡಕೇಸರಿ ವೀರಬಾಹುಮಹಾಮದೋನ್ನತದ ।
ಹಿಂಡುಗಲಕನು ವುಗ್ರಕೇಶಿಪ್ರ
ಚಂಡ ಭೈರವರಾಹು ಕಲಿಭೇ
ರುಂಡರೆಂಬತಿಬಲರು ಬಂದರು ರಾಯನೋಲಗಕೆ ॥ ೮

ಕದನಕರ್ಕಶ ಕಾಲಭೈರವ
ಮಧುವನಾನರಸಿಂಹಘಾಟನ
ಸದೆದುಱಿವ ನಾಗರಿಕಜಟ್ಟಿಗ ವೀರಬೇತಾಳ ।
ಗದೆವಿಭಾಡನು ವೀರನರಸುರ
ಚದುರಚಪಳನು ಬಾಹುವಿಕ್ರಮ
ಮುದದಲಂದೈನೂಱು ಬಂದರು ನೃಪತಿಯೋಲಗಕೆ ॥ ೯

ಒಬ್ಬನೈಸಾವಿರವ ಕೊಂದವ
ನೊಬ್ಬನೀಱಗ ವೆರಡ ಕೊಂದವ
ನೊಬ್ಬ ನಾಕಿಬ್ಬದಿಯ ನೆಱಗಿದನಾಮೃಗಾಧಿಪನ ।
ಹೆಬ್ಬುಲಿಯ ನಾರೇಱ ಸೀಱಿದ
ನಿಬ್ಬರುಗಳೊಂದಾಗಿ ಕೂಡಿಯೆ
ಬೊಬ್ಬುಳಿಯನೊಡೆವಂತೆ ಕೊಂದರು ಹಲವುಮಲ್ಲರನು ॥ ೧೦

ಉಡಿದನೊಬ್ಬನು ಗಜದ ದಾಡೆಯ
ಮಡಿಯಲನುಗೈಸಿದನು ಕರಿಯನು
ಪಡೆದವನು ತಾನಿವನ ಘಾಡದ ಸಿಡಿಲನಡಹಾಯ್ದು ।
ಒಡನೆ ಬೊಬ್ಬಿಡುವನು ಮಹಾಹವ
ತೊಡರಿಚುವರಿಲ್ಲೆ ಯೆನುತ ನೆಱೆ
ಮಿಡುಕುವನು ತಾನೀತನೆಂದನು ಭೂಪ ಕೇಳೆಂದ ॥ ೧೧

ಅವರು ತಮ್ಮನ್ನು ತಾವೇ ಹೊಗಳಿ ಕೊಂಡುದು.

ಹೊಡೆದು ಭುಜವನು ಹುಂಕರಿಸಿ ಕಿಡಿ
ಯಿಡುವ ಮೀಸೆಯ ತಿದ್ದು ತೊಲವಿನ
ಲಡಿಗಡಿಗೆ ಯಾರ್ಭಟಿಸಿ ನಿಂದನು ಮಲ್ಲಜೀಮೂತ ।
ನುಡಿ ನೃಪತಿ ಹದನೇನು ರಿಪುಗಳ
ಮಡುಹಿ ಬರಲೋ ಮೇಣು ಕೈಸೆಱೆ
ಹಿಡಿದು ತರಲೋ ಯೇನು ಹದನೆಲೆ ನೃಪತಿ ಹೇಳೆಂದ ॥ ೧೨

ಮಲ್ಲನಾಜೀಮೂತನಾಡಿದು
ದೆಲ್ಲವನು ಕೇಳ್ದಾಗ ಸಿಂಧುರ
ಮಲ್ಲನೆಂದನು ರಾಯ ಕುರುಪತಿ ವೀರ ಚಿತ್ರೈಸು ।
ನಿಲ್ಲದರಿಯನು ವಶವ ಪಿಡಿದೊರ
ಸಿಲ್ಲಿಗೈತಹೆ ಬೆಸಸು ಮನ್ಮನೋ
ವಲ್ಲಭನೆ ಕೇಳೆಂದು ನುಡಿದನು ರಾಯ ಕೇಳೆಂದ ॥ ೧೩

ಅವರನ್ನು ಕುರಿತು ದುರ್ಯೋಧನನ ಅಪ್ಪಣೆ.

* ಈಪರಿಯ ತಂತಮ್ಮ ಶೌರ್ಯ ಪ್ರ
ತಾಪವನು ವಿಸ್ತರಿಸೆ ಕೌರವ
ಭೂಪನೆಂದನು ನೀವು ಪೞ್ಚಿಮಮತ್ಸ್ಯಪುರವರಕೆ ।

* ಈಪರಿಯಭಟ್ಟಗಳು ತಮ್ಮ ಪ್ರ
ತಾಪವನು ವಿಸ್ತರಿಸೆ ಕುರುಕುಲ
ದೀಪನಪ್ಪಣೆಗೊಟ್ಟು ಮಗುಟಿಂತೆಂದನವರೊಡನೆ ।

ವ್ಯಾಪಿಸಿಯೆ ನೀವ್ ಮಲ್ಲವಿದ್ಯೆಯ
ತೋಪ ಮೆಱಿವುದು ಭೀಮನಿದ್ದರೆ
ಆಪುರದಲೊತ್ತೊತ್ತಿ ಹೊಗಳಿಸಿ ನಿಮ್ಮ ಬಿರುದುಗಳ ॥ ೧೪

ಸುದ್ದಿಯಿಲ್ಲದೆ ಹೋದ ಪಾಂಡವ
ರಿದ್ದರಾದೊಡೆ ಬೀದಿಗಲಹದ
ಯುದ್ಧಕೆಳಸದೆ ತಿರುಗಿಸುವುದೊಬ್ಬನನು ಕರಿಪುರಿಗೆ ।
ಉದ್ಧರುಟುತನ ಬೇಡ ಮಲ್ಲರ
ಗೆದ್ದು ನೀವಾರಾಜಕಾರ್ಯಕೆ
ಬುದ್ಧಿಮಾರ್ಗವಿದೀಗ ಪಯಣವ ಮಾಡಿ ನೀವೆಂದ ॥ ೧೫

ತರಿಸಿದನು ಹೊಂದೊಡವೆ ರತ್ನಾ
ಭರಣ ವೊಪ್ಪುವ ತೋಳ ಭಾಪುರಿ
ವರಮಣಿಗಳಿಂದೆಸೆವ ಬಿರುದಿನ ಕಡೆಯ ಸರಪಳಿಯ ।
ಕೊರಳ ಹಾರದ ವಜ್ರಮಾಣಿಕ
ತುಱುಗಿತೊಳುವ ಕಾಲಪೆಂಡೆಯ
ಮೆರಸುವಸ್ತ್ರಾದಿಗಳ ವೀಳ್ಯೆಯವಿತ್ತು ಬೀಳ್ಕೊಂಡ ॥ ೧೬

ಚಂದನದ ಕುಂಕುಮದ ಕಸ್ತೂರಿ
ಗಂಧವನುಲೇಪನ ಜವಾದಿಯ
ಗಂಧಕೇಸರಿವೀಳಯುವ ಕರ್ಪುರದ ಹಳಕುಗಳ ।
ಛಂದಛಂದದ ರತುನತೊಡಿಗೆಗ
ಳಿರದಲಂಕೃತಿಗೈದು ಹೊಱವಂ
ಟೊಂದುಠಾವಿನಲಿದ್ದು ನಡೆದುದು ಮಲ್ಲಸಂದೋಹ ॥ ೧೭

---

ವ್ಯಾಪಿಸುವುದವನಿಯುಲಿ ಮಲ್ಲರ
ತೋಪು ಜಾಳಿಯ ಮೆಱೆದು ಹೊಗಳಿಸಿ
ಯಾಪುರದಲೇ ತನ್ನಬಿರುದಾವಳಿ ಪರಾಕ್ರಮವ, ಚ. ॥

ಹೊಡೆದುದೈ ಭೇರಿಗಳು ತಂಬಟ
ವೆಡಬಲದ ಡೌಡೆಗಳು ಮಿಗೆ ಬೊ
ಬ್ಬಿಡುವ ನಿಸ್ಸಾಳದ ಮಹಾರವರಾಯಗಡಿಬಡಿಯ |

ಮಲ್ಲರ ಪ್ರಯಾಣ.

ಘುಡಿಘುಡಿಪ ಹೆಗ್ಗಾಳೆ ಮೊಳಗುವ
ಬೆಡಗುಜಾಗಟೆ ಬೊಬ್ಬೆಯಲಿ ಜಗ
ನಡುಗೆ ಗಜಪುರದಿಂದ ಬಂದರು ಪಯಣಗತಿಗಳಲಿ || ೧೮

ಸುರನದಿಯನುತ್ತರಿಸಿ ಗೋದಾ
ವರಿಯ ಹೊಱಗೈದಿದರು ತರಣಿಯ
ಕಿರಣಲಹರಿಯ ಹೊಯ್ಲಿನಲಿ ಶ್ರಮವಾಗೆ ಪರಿಹರಿಸಿ |
ಮಱುದಿವಸ ತೆರಳಿದರು ಮಲ್ಲರು
ನೆರೆದು ನಡೆದುದು ಬಂದು ಕೃಷ್ಣೆಯ
ವರನದಿಯೊಳಾಯಿತ್ತು ಬೀಡು ವಿನಾಥಪುರದಲ್ಲಿ || ೧೯

ಮಾರ್ಗದಲ್ಲೊಂದೆಡೆಯಲ್ಲಿ ಒಬ್ಬನೊಬ್ಬಗೆ ದುಸ್ಸ್ವಪ್ನ.

ತಳೆದುದಾದಿವಸದಲಿ ಜಟ್ಟಿಯ
ಬಳಗ ರಾತ್ರಿಯೊಳೊಂದುದಿನ ನೆಱೆ
ಯುಱದು ಸಾವುದ ಕಂಡು ಮೈಮುಱಿದೆದ್ದು ಕಳವಳಿಸಿ |
ಚಳಿಸಿ ಬೆದಱಿದರೇನೊ ಬೊಬ್ಬಿಱಿ
ದೊಳಗೆ ಹೊಕ್ಕಿತೊ ಸಿಂಹವೆನೆ ಕಳ
ವಳಿಸಿ ಮಲ್ಲರು ಮಬ್ಬಿನಲಿ ತೂಳಿದರು ದೆಸೆದೆಸೆಗೆ || ೨೦

ಏನಿದೇನಾಶ್ಚರ್ಯ ಕರೆಯುವ
ನೇನ ಕಂಡನೊ ಕನಸಿನಲಿ ತಾ
ನೇನನೆಂಬೆನು ರಹವನೆನುತಡಿಗಡಿಗೆ ಬೆಱಗಾಗಿ |
ಮೌನದಲಿ ಮುಱುಗಿದುದು ತಂದರು
ಹೀನಹೃದಯನನೆಂದನವನು ಮ
ನೋನುರಾಗವೆನುಱದು ಕನಸಿನ ಭಯವು ದಿಟವೆಂದು || ೨೧

ಕಾಲವಲ್ಲದಕಾಲಬಱಶಿಡಿ
ಲೇಱಗೆಯಲುಬ್ಬೆದ್ದು ಮಲ್ಲರ
ಪಾಳೆಯವನೆಱಗುವುದನಾನದ ಕಂಡೆ ಸ್ವಪ್ನದಲಿ |
ಕಾಳುಗಿಚ್ಚಿನ ಬಲುಮೆಯಂತಿರೆ
ಧಾಳಿ ಬಂದುದು ಮೇಲೆ ಮತ್ಸ್ಯದ
ಹೇಱುವರೆ ಭಯಗೊಂಬೆನೆಂದನು ಮರಳಿ ಮಲ್ಲರಿಗೆ || ೨೦

ಕಾಲಗತಿ ಯೆಂತಹುದೊ ರಿಪುಗಳು
ಶೀಲವುಳ್ಳವರೆಂದು ನುಡಿವರು
ಮೇಲೆ ಯಪಜಯವಹುದು ರಣದಲಿ ಸಾಕದಂತಿರಲಿ |
ಕೇಳು ತಾ ಜೀಮೂತಮಲ್ಲನು
ಹೇಱು ಹೇಱೆನ್ನೊಮ್ಮೆ ಸಿಡಿಲು ಭ
ಡಾಳದಲಿ ನೆಱೆಯೆಱಗಿತೇ ಸಟೆ ಯೆನುತ ನಡೆಗೊಂಡ || ೨೧

ಮತ್ಸ್ಯದೇಶಕ್ಕೆ ಮಲ್ಲರು ಬಂದು ರಾಜನಿಗೆ ತಿಳಿಸೆಂದು
ಹೇಳಿದುದು.

ಹಲವುಪಯಣದ ಮೇಲೆ ಮತ್ಸ್ಯನ
ಹೊಱಲಿಗಿವರೈತಂದು ಭಟರನು
ಕಳುಹಿದರು ಪುರದರಸಗೆಮ್ಮಯ ಬರವನಱುಹೆನುತ |
ನಲವು ಮಿಗಲೈತಂದು ಕೋಟೆಯ
ವಳೆಯ ಹೊಕ್ಕರು ಬಱಿಕ ರಾಜಾಂ
ಗಳವ ಸಾರುತೆ ತಿಳುಹಿದರು ಬಾಗಿಲಿನ ಸುಭಟರಿಗೆ || ೨೨

ಕೇಳುತವರವರಂತರಂಗಕೆ
ಕೇಳೆ ಬಱಿಕಾನಾಲಿ ಯೆಂಬವ
ನೇಱನೆಮುದಂತಸ್ಥದವೆ ತಾ ಕಂಡು ಭೂಪತಿಯು |
ಕೇಳಿದೆನು ಯೆಲೆ ಜೀಯ ನಮ್ಮ ನೃ
ಪಾಲಭವನದಲೊರ್ವ ಚರನಿಂ
ಮೇಲೆ ನುಡಿಯ ನದೆಂತು ಬೆಸಸುವೆಯೆಂದನಾನೃಪಗೆ || ೨೩

ಬಂದು ಕಂಡು ವಿರಾಟರಾಯಗೆ
ನಿಂದು ಕರಗಳ ಮುಗಿದು ಮಲ್ಲರು
ಬಂದು ಪುರಬಾಹೆಯಲಿ ಬಿಟ್ಟುದ ಹೇಳಿದನು ನೃಪಗೆ ।
ಮುಂದೆ ಕಳುಹಿದರೆನಲು ನೃಪ ತಾ
ನೆಂದನಾ ದಾರುಕನ ಕರೆಯೆನ
ಲಂದು ಪುರವೆಣಿಸಿದನು ಭೂಮೀಪಾಲನೋಲಗಕೆ ॥ ೨೬

ಕರವ ಮುಗಿದಾ ದಾರುಕನ ಕೂ
ಡರಸ ನೇಮವನಿತ್ತು ಮಲ್ಲರ
ಕರೆ ಯೆನಲು ತಿರುಗಿದನು ಭಟ್ಟನು ಸಹಿತ ವಹಿಲದಲಿ ।
ಪುರದ ಹೊರಬನದಲ್ಲಿ ಯಿರುತಿ
ರ್ದರನು ಕಂಡು ನೃಪಾಲನೆಂಮನು
ಕರೆಯ ಕಳುಹಿದನೆಂದೊಡೆದ್ದರು ಮಲ್ಲರತಿಮುದದಿ ॥ ೨೭

ಪರಿಪರಿಯ ಶೃಂಗಾರದಲಿ ಮ
ಲ್ಲರುಗಳೇಳಲು ಮುಂದೆ ನಾದಿಪ
ಬಿರಿದು ಜಾಗಟೆಡೌಡೆಪಾತಕನಿಕರರೊಗ್ಗಿನಲಿ ।
ಪುರವ ಹೊಕ್ಕರು ರಾಜಸಭೆಗೊಡ
ನಿರದೆ ನಡೆಯಲು ಮತ್ಸ್ಯ ಭೂಪತಿ
ಸಿರಿಯೊಳೋಲಗವಿತ್ತು ಕುಳ್ಳಿರ್ದನು ಸರಾಗದಲಿ ॥ ೨೮

ಉರವಣಿಸಿ ಮುಂದುಘ್ಘಡಿಪ ಭ
ಟ್ಟರುಗಳಲ್ಲರ ನಿಲಿಸಿ ತಾಳಿಯ
ವರಮಣಿಗಳಿಂದೆಸೆವ ಭೂಮೀಪತಿಗೆ ಜೀಮೂತ ।
ಶಿರವ ಬಾಗುತ ನಿಂದಿರಲು ಸಭೆ
ನೆರದು ನೋಡಲು ಮತ್ಸ್ಯಭೂಪತಿ
ಯಿರವದೆಲ್ಲಿಹುದೆಂದು ನುಡಿಯಲು ನುಡಿದ ಜೀಮೂತ ॥ ೨೯

ಇಂದುವಂಶದಲಧಿಕರಾಯರ
ವೃಂದದೊಳಗಾನಹುಷಪುತ್ರರು

ಸಂಗರಾಮಾಲೆಯಲಿ ಬಟಿಕಾಶಾಂತಭೂಪತಿಗೆ ।
ನಂದನನು ಜನಿಸಲ್ಕೆ ಯವನಿಗೆ
ಯಂಥನೃಪ ಜನಿಸಿದನು ಆತನ
ನಂದನನು ಕುರುರಾಯನಾತನ ಮಲ್ಲರಾವೆಂದ ॥ ೩೦

ಏನು ನಿಮ್ಮಯ ಬರವು ನಗರದ
ಲೇನು ಕೆಲಸವು ನೃಪತಿದೇಶದ
ಜಾಣಿಕೆ ಯೇನು ತನುದರ್ಪದುಬ್ಬಿನ ಬರವೊ ಹೇಳೆನಲು ।
ಧ್ಯಾನಿಸಿಯೆ ನಾವ್ ಬಂದ ಕೆಲಸವ
ಕಾಣಿಸುವ ಭಾರವಣೆ ನಿಮ್ಮದು
ಮಾನನಿಧಿ ಕೌರವನು ಕಳುಹಿದ ಮಲ್ಲಗಾಳಗಕೆ ॥ ೩೧

ಅದು ನಿಮಿತ್ತಾದಿ ನಾವು ಬಂದಿಹ
ಹದನಿದೀಗಿದು ರಾಯ ಕೇಳೆನೆ
ಮುದದಿ ಮನದುಬ್ಬಿನಲಿ ನುಡಿದನು ಮತ್ಸ್ಯನೃಪ ನಗುತ ।
ಹದನಹುದು ಮಲ್ಲರಿಗೆ ಬಹುದೇ
ಶದಲಿ ಕೃಪಣತೆಯುಂಟು ನಿಮ್ಮಯ
ಮೃದುವಚನ ಬಲುಮೋಡಿಗಾಡಿಕೆಗಾರು ಸರಿಯೆಂದ ॥ ೩೨

* ಕೇಳಿದನು ಕಾರಿಯವ ಸಂತಸ
ದೇಳಗೆಯಲಿಂತೆಂದ ನಮ್ಮಲಿ
ಕಾಳಗವೆ ವರಜಟ್ಟಿಗಳು ಯಿಹರತಿವಿನೋದವೆಲ ।

* ಏಳಿ ಸೀವ್ ಪಾಳಯಕೆ ಮಲ್ಲರು
ಮೇಳವಿಸಿ ಹೋಗೆನುತ ಭೂಮಿಪಾ
ಪಾಲಕನು ಬೀಡೆಕೊಟ್ಟನತಿಮನ್ನಣೆಯಲವರಿಗೆ ।
ಕೋಳಿಮೇಷವು ತಂಡುಲಗ್ಗದ
ಮೇಳವಿಪ ಸೊಜ್ಜಿಗೆಯಮೃತಮಧು
ಮೇಲಲಂಪೆಯಲಿ ಕಳುಹಿ ಬೇಗದಲೆನುತಲೊಳಹೊಕ್ಕ ॥ ಕ.

ಏಳ ನೀವ್ ಬೀಡಿಕೆಗೆ ಕದನಕೆ
ನಾಳೆ ಕರೆಸುವೆನೆಂದು ಭೂಪತಿ
ಹೇಳಿದನು ಚರರಿಂಗೆ ಪಡಿಪಾನಗಳ ಕೊಡಿಸೆಂದು ॥ ೩೩

ಬಳಿಕ ವಿರಾಟನ ಚಿಂತೆಗೆ ಕಂಕಮುನಿಯು ಹೇಳಿದ ಉಪಾಯ.

ಏನು ಹದವಿದಕಿನ್ನು ಕೌರವ
ಮಾನಭಂಗವ ಕಂಡು ಕಳುಹಿದೊ
ಡಾನುವವರಿವರೊಡನೆ ಕಾಣೆನು ನಮ್ಮ ಮಲ್ಲರಲಿ ।
ಮಾನನಿಧಿ ಹೊಱವಂಟು ಸಭೆಯೊಳ್
ನೂನರಾಗದಿ ಯಿರಲು ಕಾಲನ
ಸೂನು ನುಡಿದನು ಕೇಳು ಜನಮೇಜಯ ಮಹೀಪಾಲ ॥ ೩೪

ಕರೆಸು ನಿಮ್ಮಯ ಮಲ್ಲರನು ಸಂ
ಗರವ ಜಯಿಸಲಿ ಜಯಿಸದಿರಲಾ
ಪರಿಯು ಬಿಡುವರೆ ರಾಯಲಕ್ಷಣಗಳನು ವಹಿಸಿದರ್ ।
ಕರೆಸಿದರೆ ತವಮತಮಗೆ ತವಕದಿ
ಹಿರಿದು ಶೃಂಗಾರವನು ಮಾಡಿಯೆ
ನೆರೆದು ಬಂದರು ಮೊಜಿವಡೌಡೆಯ ವಾದ್ಯರಭಸದಲಿ [1] ॥ ೩೫

ತುಳುವ ತುಂಬರನಾಗನಾದಳ
ವಳಿಗಮುಖ್ಯರು ಬಂದು ಸಭೆಯಲಿ
ನಲಿದು ಮಿಗೆ ಗರ್ಜಿಸಿತು ರಾಯನ ಮುಂದೆ ಕೆಲಕೆಲರು ।
ಛಲದೊಳಗೆ ಬಲದೊಳಗೆ ಮಲ್ಲರ
ಬಳಗಗಂಡನು ತಾನು ಹೇಳೆಂ
ಬುಲುಹುಗಳ ಸಂತೈಸಿ ನಗುತ ವಿರಾಟನಿಂತೆಂದ ॥ ೩೬

---

1 ಕರೆಸೆನಲು ಕಳುಹಿದನು ದೂತರ
ನಿರದೆ ಬಂದುದು ಡೌಡೆಜಾಗಟೆ
ನೊಜಿಯೆ ಬಿರುದಿನ ಭಟ್ಟರುಲಿಯಲು ಮತ್ಸ್ಯನೋಲಗಕೆ ॥ ಚ.

ಕಳುಹಿದನು ಗಜಪುರದ ನೃಪಕುಲ
ತಿಲಕನಿವರನು ಮಲ್ಲಯುದ್ಧಕೆ
ಹೊಚಿಲಿಗೈದಲು ನಿಮ್ಮ ಕರೆಸಿದೆವೆನಲು ತವೆುತಮಗೆ ।
ನಲಿದು ಹರುಷದಲಂದು ಬಾಹ
ಪ್ಪಳಿಸಿ ಮುಷ್ಟಿಯ ಜಡಿದು ಕದನ
ಕ್ಕೆಳಸಿದರು ಕಳುಹಿದರು ದೂತರು ಮಲ್ಲರಿದ್ದೆಡೆಗೆ ॥ ೩೭

ಚರರ ಕಳುಹಲು ಬಂದರವದಿರ
ಕರೆದು ತಿರುಗಿದರಾಕ್ಷಣದಲುಜಿ
ಹಿರಿದು ಶೃಂಗಾರವನು ಮಾಡಿದರೇನ ಪೇಳುವೆನು ।
ಕರಿಯ ಮೋಹರ ಹರಿವವೊಲು ಬಂ
ದುರವಣಿಸಿ ನಡೆತಂದು ನೃಪನೆುಂ
ದಿರವ ಹೊಗಲದ ಕಂಡು ನೃಪತಿ ವಿರಾಟ ಮನ್ನಿಸಿದ ॥ ೩೮

ಬರಲು ಯಿವರಿದಿರಾಗಿ ಬಂದರು
ಕರವೆ ಧರಣಿಯಲುದ್ದಿ ಮಿಗೆಯು
ಬ್ಬರಿಸಿ ಭುಜವನು ಹೊಡೆದು ನಿಂದಿರೆ ಕಂಡು ಖಾತಿಯಲಿ ।
ಧುರವ ಜಯಿಸಿದರಾದರಿವದಿರ
ಶಿರವ ಚಂಡಾಡುವೆನೆನುತ ಮೋ
ಹರಿಸಿ ಕಿಡಿಕಿಡಿಯೊಳಗಿ ಸಿಂಧುರಮಲ್ಲ ಮಾರಾಂತ ॥ ೩೯

ಅಳವಿಯಲಿ ಬಂದೊಬ್ಬರೊಬ್ಬರು
ಹಳಚಿದರು ಹೆರೆಸಾರಿಮುಷ್ಟಿಯ
ಲುರುವೆ ಪುಟನೆಗೆದೆದ್ದು ತಿವಿದನು ತುಡುಕೆ ಸಿಂಧುರನ [1] ।
ಅಳುಕದವನಾಭುಜದ ಸತ್ವದಿ
ಬಚಲಿ ಸಿಂಧುರ ತುಡುಕಿ ನೆಲಕ
ಪ್ಪಳಿಸೆ ಶಿರ ಶತಚೂರ್ಣವಾದುದು ಬೆದಱಿತಾಸ್ಥಾನ । ೪೦

1 ಹಿಡಿದನು ತಿವಿದು ಸಿಂಧುವನ, ಚ,

ಮಡಿದನವ ಶವ ದೆಗೆದು ರಣಕವ
ಗಡಿಸಲಾಚೌದಂತಮಲ್ಲನು
ಜಡಿದು ಹಳಚಿದ ನೊಂದು ಸಿಂಧುರಮಲ್ಲ ರಿಪುಶಿರವ ।
ಮಡಿಮುಱಿದು ಕಿತ್ತಿಟ್ಟ ಡೌಡೆಯ
ಹೊಡೆ ಯೆನಲು ಝಮ್ಮೆಂದು ಕುಟ್ಟಲು
ನಡುಗಿ ಸಾಯಾಸ್ಥಾನ ಮೇಲ್ ಜನಮೇಜಯಕ್ಷಿತಿಪ ॥ ೪೧

ಮುಡುಹ ಚಪ್ಪರಿಸುತ್ತ ದಱಿದುಱಿ
ಜಡಿವೆನುಕ್ಕಿನ ಕೊಡಲಿಯನು ಯವ
ಗಡೆಯನಾರೆನುತೆಱಗಿದನು ಸಿಂಧುರನ ಮಸ್ತಕವ ।
ಕೆಡೆದನವ ತತ್ತರಿಸಿ ಬೀಱುತ
ಹೊಡಕರಿಸಿಕೊಂಡಿವನ ಶಿರವನು
ಮಡದಲೆಱಗಲು ಸಿಡಿದುವಾಲಿಗಳವನಿಗೊಱಗಿದನು ॥ ೪೨

ಎದ್ದನವ ಬೊಬ್ಬಿಱಿದು ಸಿಂಧುರ
ಗೆದ್ದಗರ್ವವನುಗುಱೆನುತಲು
ಬ್ಬಿದ್ದು ಹೊಕ್ಕನು ತೋಳ ತೆಕ್ಕೆಯ ಮಲ್ಲ ಹೋಲಿಕೆಗೆ ।
ಭದ್ರಗಜ ಕಯ್ಯಿಕ್ಕಿದವೊಲುರಿ
ದೆದ್ದು ಸಿಂಧುರ ತರಹರಿಸಿ ಮೇ
ಲೆದ್ದು ಬರಸೆಳದೊದೆದು ಕುಸಿದೆತ್ತಿದನು ಮುಷ್ಟಿಯಲಿ ॥ ೪೩

ಎಱಗಿದನು ತಲೆಬಿರಿಯಲಾಮು
ಕ್ಕುಱುಕಿ ಶೋಣಿತಧಾರೆ ಬಾಯಿಂ
ದೊಱತೆ ಯಿಡೆ ವ್ಯಮಱದು ತುಂಬುರ ಕಳನ ಮಧ್ಯದಲಿ ।
ಬಱಗಿದನು ಕಂಡುಱಿದ ಮಲ್ಲರ
ಧುರಕೆ ಮಿಸುಕದೆ ಮುಸುಕದಲೆಯಲಿ
ಸರಿವವರ ನೃಪ ಕಂಡು ದುಗುಡವ ಹೊತ್ತು ಬೆಱಗಾದ ॥ ೪೪

ಅವನಿಪತಿ ಕೇಳುಱಿದ ಮಲ್ಲರ
ಹವಣಱಿದು ಸಿಂಧುರನು ತನ್ನೊಳು
ಬವರವನು ಜಯಿಸುವರು ತಾಪ್ ಬೇಗದಲಿ ಬರಲೆಂದು ।
ಕವಿದು ಹಳಚಲು ಜೋಡಿಸಲು ಯುವ
ನಿವಿಷದಲಿ ಯುನಿಬರನು ಬಟಿಕಾ
ಜವಳಿಯಿಂದಪ್ಪಳಿಸಿದನು ಕಂಠರಸ ಮೋಹಿಸಿದ ॥ ೪೫

ವಿರಾಟನು ತನ್ನ ದೇಶದ ಮಲ್ಲರು ಸಾಯಲು ಯುದ್ಧ
ವನ್ನು ನಿಲ್ಲಿಸಿದುದು.

ಧುರವ ಜಯಿಸಿದಿರಿಂದು ಯುದ್ಧಕೆ
ಕರೆಸುವೆನು ಸಾಕೆನುತ ವರಕ
ರ್ಪುರದ ವೀಳೆಯವಿತ್ತು ನೃಪ ಬೀಱ್ಕೊಟ್ಟನನಿಬರನು ।
ಅರಸ ಮರುಳೃ ಮನ್ನಿಸಿದೆ ಸಂ
ಗರಕೆ ನೇಮವನಿತ್ತು ಯುಕಟೂ
ಪುರಿಯು ನೂಕಿದೆ ಪುಱಿದಮಲ್ಲರನೆಂದನಾಕಂಕ [1] ॥ ೪೬

ಆಗ ಕಂಕಮುನಿ ವಲಲನನ್ನು ಮಲ್ಲಯುದ್ಧಕ್ಕೆ ಕರೆಸೆಂದು
ಹೇಳಿದುದು.

ಬವರವನು ಮನ್ನಿಸಲು ಬೇಕೆಂ
ದವನಿಪತಿ ನೆಱೆ ನುಡಿಯೆ ಮಲ್ಲರ
ನಿವಹ ವೈತಹುದೆಂದು ನೇಮವನಿತ್ತುದೊಳಿತಾಯ್ತು !
ಅವನಿಸುರವೇಷದಲಿ ರಂಜಿಪ
ದಿವಿಜನರಪತಿಯಂತೆ ಧರ್ಮಜ
ವಿವರಿಸಲು ಕೇಳಿದನು ಜನಮೇಜಯ ಮಹೀಪಾಲ [2] ॥ ೪೭

1 ಮರಣ ಪುಱಿದರಿಗಾಯಿತೆಂದನು ನಗುತ ಕಂಕಮುನಿ, ಚ.
2 ಅವರು ಬಂದರು ನಾಳೆಮಾಡುವ
ಹವಣದಾವುದು ಬಿಟ್ಟುಕಳೆ ಹೇ
ಱುವೆನು ನಿನಗಿನ್ನೊಮ್ಮೆಗೆಲುಗೈಯುಹ ಮನೋರಥವ ॥ ಚ.

ಅವನಿಪತಿ ಕೇಳ್ನಿನ್ನ ಬಾಣಸಿ
ನವನು ಮಲ್ಲನು ಭೀಮಸೇನನ
ಭವನದಲಿ ಬಲುಮಲ್ಲವಿದ್ಯೆಯ ಸಾಧಿಸಿದನವನು ।
ಪವನಸುತನಿಂ ಬಲುಮೆ ಯಾತನು
ಜವಕೆ ಜವವೊದಗುವನು ನೀನಿಂ
ದಿವನ ಕರೆಸುವುದೆನಲು ಮತ್ಸ್ಯನೃಪಾಲನಿಂತೆಂದ ॥ ೪೮

ಅದಕ್ಕೆ ರಾಜನ ಅಸಮ್ಮತಿ

ಎಲೆ ಮಹೀಸುರ ಯಾವಿವೇಕವ
ಬಳಸುವೆನೆ ನೀನರಿಯದಿದ್ದೊಡೆ
ತಿಳಿದೆನಾನೆಲ್ಲವನು ಸಂಹರಿಸುವನು ಸಿಂಧುರನು ।
ಉಳಿದವರ ಗಣಿಸುವನೆ ತಾ ಹಿಂ
ದುಳಿದವರು ದುರ್ಬಲರೆಂದು ಬಡವನ
ಕೊಲಿಸ ಬಗೆವರೆ ಕಂಕ ನೀ ಹೇಳೆಂದನಾಮತ್ಸ್ಯ ॥ ೪೯

ತಿರುಗಿ ಹೇಳಿ ವಲಲನನ್ನು ಕರೆಕಳುಹಿಸುವಿಕೆ.

ಬಲ್ಲೆನಾತನ ಕೈಗುಣಕೆ ಸರಿ
ಯಿಲ್ಲ ಸುಭಟರೊಳುಳಿದಸಾಹಸ
ಮಲ್ಲನಿವನೊಳಗಱಿವ ಪವನಜಮಲ್ಲಕೌಶಲವ ।
* ಅಲ್ಲವೆಂದೆನೆ ನೃಪತಿ ತಾ ತ
ಪ್ಪಲ್ಲ ಜಯಿಸಲಿ ಮೇಣು ಸೋಲಲಿ
ಬಲ್ಲೆನಾನಂಜದಿರು ಬೇಗದಿ ಕರೆಸು ನೀನೆಂದ ॥ ೫೦

ನನಗೆ ಕಾರಣವಿಲ್ಲ ಮಡಿದೊಡೆ
ನಿನಗೆ ಬಹುದಪಕೀರ್ತಿ ಬೇಡೆನೆ

---

* ಕೊಳ್ಳುಗಳೆಯಲುಬೇಡ ನೃಪವರ
ಕೊಳ್ಳುಗಳೆಯಲು ಮೇಣು ಸೋಲಲಿ
ಬಲ್ಲೆ ನಾನದಕಂಜದಿರು ಕರೆಸೆಂದನಾಕಂಕ ॥ ಕ.

ಯನಿಲಸುತನಿಂ ಬಲ್ಲಿದನು ನೀನವನ ಕರೆಸೆನಲು ।
ತನಗದೇಕೀವಾದ ನಮ್ಮಯ
ಮನೆಯ ಮಲ್ಲರ ಗೆಲವು ಬರಲೆಂ
ದನಿಮಿಷದ ದೇಶಾಧಿಪತಿ ಕರೆಸಿದನು ವಲಲನನು ॥ ೫೧

ವಲಲನು ರಾಜನ ಮುಂದೆ ಬಂದು ಮಾತನಾಡಿದುದು.

ಮುಱಿವ ಮೀಸೆಯು ಹೊದಱಿದಲೆ ಕೆಂ
ಪೊಱೆದ ಕಂಗಳ ಹೊಗರುವೋಱಿಯು
ತುಱುಗಿದುಬ್ಬಿನ ರೋಮಪುಳಕದ ಬಿಗಿದಪುಬ್ಬುಗಳ ।
ಹೊರೆದ ದೇಹದ ನಿರುತ ರೌದ್ರದ
ಮರುತಜನು ಕದನಕ್ಕೆ ಕಾಲನು
ಕರೆವವೊಲು ನಡೆತಂದು ನಿಂದನು ಮತ್ಸ್ಯನಿದಿರಿನಲಿ ॥ ೫೨

ಬರವ ಕಾಣುತ ಮತ್ಸ್ಯನೃಪನುಪ
ಚರಿಸಿ ವಲಲಂಗೆಂದನೀ ಸಂ
ಗರವ ಜಯಿಸಿದರೆಮ್ಮ ಮಲ್ಲರು ಉತ್ತರಾಹಿಗಳು ।
ಧುರವ ಬಲ್ಲೈ ಮಲ್ಲವಿದ್ಯೆಯ
ನಱಿತಿಹೈ ನೀನೆಂದು ಮುನಿವರ
ನಱುಹೆ ಭೂಪನು ಕೇಳ್ದ ನಿನ್ನಂತಸ್ಥವೇನೆಂದು ॥ ೫೩

ಎನಲು ಕಿಱುನಗೆ ಮಿನುಗೆ ಮುಖದಲಿ
ಯನಿಲಜನು ಮಗುಪೆಂದನೇತಕೆ
ಜನಪ ಚಿಂತಿಪೆ ಸತ್ತೊಡೆನಗದು ರಾಜಕಾರ್ಯವಲೆ ।
ಅನುವರವ ಜಯಿಸಿದೊಡೆ ನೀವೆಂ
ದನಿತು ಮಲ್ಲರು ವುತ್ತರಾಯಿಗ
ಳೆನಗೆ ನಿಮ್ಮಯ ಕರುಣ ಸಾಕೆಂದನಿಲಜನು ನುಡಿದ ॥ ೫೪

ಪ್ರಾಣದತಿಶಯವೇನು ಮಿಗೆ ಸಂ
ಗ್ರಾಣಿಸುವುದಿನ್ನೊಮ್ಮೆ ನಾನೇ

ಕಾಣೆ ಕಾಣುವೆನವರ ಜೀವದ ನೆಲಕಡೆಯನೆಲ್ಲ ।
ಕ್ಷೋಣಿಪತಿ ಕರೆಸಿದರೆ ಮಲ್ಲ
ಶ್ರೇಣಿ ಬಂದುದು ಧುರವ ಜಯಿಸುವ
ತ್ರಾಣಿಗನ ಕರೆಸೆನುತಲಿದ್ದರು ರಾಜಸಭೆಯೊಳಗೆ [1] ॥　　೫೫

ಮಲ್ಲವಲಲರ ವಿವಾದ.

* ದಿಟ್ಟನಹೆ ಬಾಣಸಿನ ಮನೆಯುಲಿ
ಕಟ್ಟುಳಿಲ್ಲದ ಕೂಳ ತಿಂದುಱೆ
ಹೊಟ್ಟೆಯನು ನೆಱೆ ಬೆಳಸಿ ದೇಹದಲುಬ್ಬಿ ಗೊಬ್ಬಿನಲಿ ।
ಹೊಟ್ಟುಗುಟ್ಟಿದೊಡಾಗಲೆದೆ ಜಗ
ಜಟ್ಟಿಗಳ ಕೂಡಕಟ ಮಝ್ಝು ರೇ
ಬಿಟ್ಟು ಸುಮ್ಮನೆ ಹೋಗು ಸಿನಗಳವಿಲ್ಲ ಹೋಗೆಂದ ॥　　೫೬

ಆಗಲದಕೇನೆಮ್ಮ ಸಮರೋ
ದ್ಯೋಗವನು ನಾವ್ ಮಾಡ್ಪೆವದನಿಂ
ನೀಗ ನೋಡಿದ ಮೇಲೆ ಗಹಗಹಿಸುವುದು ನೀತಿಯೆಲ ।
ಪೋಗರೆಯದುಬ್ಬಿನಲಿ ನಕ್ಕರೆ
ಹೋಗಿ ಬಿಡುವೆನೆ ಸೋಲಿಸದೆ ಹೆಱೆ
ಸಾಗುವೆನೆ ಯೆನ್ನೊಡನೆ ಸೆಣಸೆಂದನಿಲಜನು ನುಡಿದ ॥　　೫೭

---

[1] ಶ್ರೇಣಿಯನು ಕರೆಸಿದನು ಮಲ್ಲರ । ಕಾಣದಾಸಿಂಧೂರಸಿಂತೆಂದನು ನರಾಧಿಪಗೆ ॥ ಜ.

* 55-56 ಪದ್ಯಗಳ ಮಧ್ಯದಲ್ಲಿ ಜ. ಪುಸ್ತಕದಲ್ಲಿ ಮುಂದೆ ಬರೆದಿರುವಪದ್ಯ ಪಿದೆ.

ನರಪತಿಯೆ ಚಿತ್ತೈಸು ನಿನ್ನೆಯ
ಪರಿಯ ಮಾಡದೆ ಸತ್ವವಂತರ
ಕರೆಸೆನಲು ಪವನಜನ ತೋಱಿದರೊಡನೆ ಗಹಗಹಿಸಿ ।
ತಿರುಕುಳಿಗನಿವನೆಂದರದಟು
ಪ್ಪರಿಸಿ ಪುಟ ನೆಗೆದೆದ್ದು ತಿವಿಯಲು
ಮೆಱೆದು ಕೊನರುವ ಕೋಪದಿಂ ತಾ ಮಸಗಿ ಬೊಬ್ಬಿಟ್ಟ ॥ ಕ.

ಎಲವೊ ಬಾಣಸಿ ಯೆನ್ನೊಡನೆ ಹೆ
ಕ್ಕಳಿಸಿ ಸಮರವ ತೊಡಕಿದರೆ ನಿ
ಟ್ಟೆಲುವ ಮುಱಿವೆನು ಯೆನುತ ಸಿಂಧುರ ಗಾಢಗರ್ವದಲಿ ।
ಹಳಚಿದನು ಖತಿ ಯೇಱೆ ಬಾಹ
ಪ್ಪಳಿಸಿ ತಿವಿಯಲು ಭೀಮ ನಗುತದ
ಕಳುಕದಿರೆ ಭೀತಿಯಲಿ ಸಿಂಧುರ ಹೊಕ್ಕನುರವಣಿಸಿ ॥ ೫೮

### ಸಿಂಧುರ ಮತ್ತು ಪಿಂಗಳನ ಪರಾಜಯ.

ಎಱಗಿದರೆ ಕರಘಾತದುರುಬೆಯ
ಪರಿಹರಿಸಿ ನಿಮಿಷದಲಿ ಮಲ್ಲನ
ಬರಸೆಳೆದು ಬಿಗಿಯಪ್ಪಿ ಹೊಕ್ಕಿಱಿದವನಿಯಲಿ ಕೆಡಹಿ [1] ।
ನಿಱಿನಿಟಿಲುನಿಟಿಲೆಂದು ನಿಟ್ಟೆಲು
ಮುಱಿಯೆ ಶೋಣಿತವಾರಿ ಬಾಯಿಂ
ದೊಱತೆ ಯಿಡೆ ಸಿಂಧುರನು ಮಲಗಿದ ಸಭೆಯ ಮಧ್ಯದಲಿ ॥ ೫೯

ಎದ್ದನಾಗಜಸಿಂಗ ಬಾಣಸಿ
ದೊದ್ದೆಗೂಳನ ವೈಸಿರಿಯ ಬಲು
ಬಿದ್ದನಿಕ್ಕುವ ಭೂತಪವಮಾನಜನ ಕಿಬ್ಬರಿಯ ।
ಗುದ್ದಿದರೆ ಕಲಿಭೀಮನದಕು
ಬ್ಬೆದ್ದು ಗೋಣನು ತಿರುಹಿ ಬಸುರೊಳ
ಗದ್ದಯಿಸಿಯುರೆದರೆದು ಕಾಲಲಿ ತಿಕ್ಕಿದನು ಭೀಮ ॥ ೬೦

ಖತಿಯೊಳುರಿ ದೆಗೆದೆದ್ದು ಪಿಂಗಳ
ನತಿಶಯದ ಕುಶಲದಲಿ ಕಲಿಭೂ
ಪತಿಯ ಚಿತ್ತೈಸೆನುತ ಹೊಕ್ಕನು ತೋಳ ತೆಕ್ಕೆಯಲಿ ।

---

1 ಧರಿಸಿ ನಿಮಿಷದಿ ಸಿಂಧುರನ ಸರ
ಸರನೆ ಬಿಗಿಯಪ್ಪಿದನು ಕುಕ್ಕರಿಸಿದನು ಭೂಮಿಯಲಿ ॥ ಚ.

ಧೃತಿಗೆಡದೆ ಹೋರಿದರು ಸಾಧಕ
ದತಿಶಯದ ಬಲುಹಿನಲಿ ಜಾಣರು
ಮತಿಗೆ ಗೋಚರವಲ್ಲ ಭೀಮನ ಬಲವ ಬಣ್ಣಿಪೊಡೆ [1] ॥　　೬೧

ಕಂಡು ಪವನಜ ತುಡುಕಿ ಮಿಗೆ ಮುಂ
ಕೊಂಡು ನೆಲಕಪ್ಪಳಿಸೆ ಮೆಲ್ಲನೆ
ದೊಂಡೆಗರುಳುಱೆ ಸೂಸೆ ಚೆಲ್ಲಿತು ರಾಜಸಭೆಯೊಳಗೆ ।
ಖಂಡಮಿದುಳಿನ ಹೊನಲಿನಲಿ ಕಡಿ
ಖಂಡಶೋಣಿತವಾರಿಯೊಳು ಮಿಗೆ
ದಿಂಡುಗೆಡದೊಱಗಿದನು ಪಿಂಗಳ ಸಭೆಯ ಮಧ್ಯದಲಿ ॥　　೬೨

ಎಲೆಲೆ ಬಾಣಸಿ ತತ್ತಹೊತ್ತಿನ
ಚಲವೆ ಮರಳಿಚಬೇಕು ಮಲ್ಲನ
ಗೆಲಿದು ಕೊಡು ಹರುಷಾಮೃತವನೆನ್ನಾತನೀನಿಂದು ।
ಗೆಲವು ಬಲ್ಲರೆ ಹೋರು ನೀನೆನ
ಲಲಘುಬಲ ನಸುನಗುತ ಭೂಪತಿ
ತಿಲಕ ನೋಡೆಂದೆನುತ ಹಿಡಿದನು ಯುದ್ಧರಂಗದಲಿ ॥　　೬೩

ಭೀಮ ಜೀಮೂತರ ಹೋರುವಿಕೆ.

ಧಿಟ್ಟನಹೆ ಬಾಣಸಿಗ ಸವಿಯೊಳ
ಗಟ್ಟಕೂಳನ ತಿಂದು ದೇಹದೊ
ಳಟ್ಟೆಯಲಿ ಸಿರವಿರಲಹಂಕಾರದಲಿ ನೀನೆಂದು ।
ಧಟ್ಟಸುತ ಜೀಮೂತಮಲ್ಲನು
ಕಟ್ಟಳವಿ ಕೈದುವುದೆನುತ ಕೂ
ಗಿಟ್ಟು ಹೊಕ್ಕನು ತೋಳ ತೆಕ್ಕೆಯ ಮಲ್ಲಗಾಳಗಕೆ ॥　　೬೪

ಪೈಸರದ ಬಲು ಬಂಧಧಕ್ಕಡ
ವಾಸುಗಿಯ ಮೋಳವೆದ ಮರಪ

---

1 .................... ಯುಕ್ತಿಯುಲಿ ಜಾಣಿನ
ಧೃತಿಮುಱಿದು ಮಂಡಿಸಿಯೆ ಮಲ್ಲನು ಯುದ್ಧರಂಗದಲಿ ॥ ಚ.

ಕ್ಷ್ನೀಶ ಮಾರುತಿ ಕದನಕ್ಕೈವಡಿಯಿಂದ ಮಿಗಿಲೆನಲು ।
ಈಸು ಹತಾತ್ತಹತ್ತಿಯಲಿ ಸಲೆ
ರೋಷದಲಿ ಜೀಮೂತ ಭೀಮನ
ಘಾಸಿಗಳುಕದೆ ತೋಱಿದನು ಬಲು ಮಲ್ಲಬಿನ್ನಣವ [1] ॥ ೬೫

ಅದುರಿತಂಘ್ರಿಗೆ ಭೂಮಿ ದಿಕ್ಕರಿ
ಯೊದಱಿತಹಿಪತಿ ಯುಳುಕೆ ಕೂರ್ಮನು
ಬೆದಱಿ ಬಿದ್ದನು ಭೀಮ ಜೀಮೂತಕರ ಪದಹತಿಗೆ ।
ಹೆದಱಿ ಚಲಿಸಿತು ರಾಜಸಭೆ ನೆಱೆ
ಹದುಳಿಪುದೆ ಪುರಜನವು ಹೇಟೆನೆ
ಪದಹತಿಯೊಳದುಭುತವೆ ತೋಱಿದುದಾಮಹಾಸಭೆಗೆ [2] ॥ ೬೬

ಬದಱಿಸಿದೊಡಿತ್ತಂಡಬಾಹುವ
ಬೆದಱಿತಮರವ್ರಾತ ಶಬ್ದಕೆ
ಕದಡಿತಗ್ಗದ ಕಡಲು ಭೂಮಿಯು ಹೊತ್ತ ದಂತಿಗಳು ।
ಮದವಡಗಿ ಶಿರ ನೊಂದು ಧರಣಿಯು
ನಡುಗಿಸಿದರೇನೆಂಬೆನಿಬ್ಬರ
ಪದಹತಿಗೆ ನೆಲನಿೞಿದುದತಳಕೆ ಭೂಪ ಕೇಳೆಂದ ॥ ೬೭

ಅದುಭುತದ ಬವರಿಯಲಿ ಭೀಮನು
ಮದದ ಮಲ್ಲರ ಮುಂದೆ ನಿಂತುಱೆ
ಯೆದೆಯ ಬಾರಿಸಿಕೊಳುತಲೊದಱಿದನಾಗ ಜೀಮೂತ ।
ವದನಗಳನೌಡೊತ್ತಿ ಕರಗಳ
ನಧಿಕಸುಭಟರು ತೀಡಿ ದಿಕ್ಕುಗ
ಳೊದಱೆ ಭುಜ ಹೊಯ್ವುತ್ತ ನಿಂತರಗಾಧಬಲಭಟರು ॥ ೬೮

---

[1] ಮಾಸೆಯಲಿ ಸಭೆ ಬೆದಱಿ ನಿಂದುದು ನೃಪತಿ ನೃಪರಿರಲು, ಚ.

[2] ಕದನಗಲಿಗಳು ತಿವಿವಸೂನುಗಳಿಂದ ಭಯವಾಯ್ತು, ಚ.

ತೋಳುಗಳ ಹಿಡಿದೆಳೆಯೆ ಭೀಮನು
ಕಾಲುಕಾಲುಗಳಿಂದ ಘಟ್ಟಿಸೆ
ಬೀಳುತೇಳುತ ಹೋರುತಿದ್ದರು ಅಸಮಪಟುಭಟರು ।
ಕೇಳುತಿರ್ದರು ಮಲ್ಲರಿಬ್ಬರ
ಏಳಿಗೆಯ ಕದನವನು ಕಾಣುತ
ಕಾಲನಂದನನಾಗ ಬೆದರಿದನಧಿಕಚಿಂತೆಯಲಿ ॥ ೧೯

ಒತ್ತಿದರೆ ನೆಲನೊಡನೆ ಧಡಧಡಿ
ಸಿತ್ತು ಸುಭಟರ ಪದದ ಘಾತಿಗೆ
ಯೊತ್ತಿದನು ಕಲಿಭೀಮ ಭೀಮನನೊತ್ತಿ ಜೀಮೂತ ।
ಪೃಥ್ವಿಪತಿ ನೋಡೆಂದು ಚೀಱಲು
ಮತ್ತೆ ಭೀಮನ ಖತಿಗೊಳುತ ಬಲು
ಮತ್ತೆ ಮಲ್ಲನ ತಿವಿದು ಮಿಗೆ ಬೊಬ್ಬಿಱಿದನಿದಿರಿನಲಿ ॥ ೨೦

ಎದ್ದು ವಾಘೆಯೊಳೊತ್ತಿ ಭೀಮನ
ಗುದ್ದಿದನು ಲೇಸಾಗಿ ಮಲ್ಲನ
ನದ್ದಿದನು ನೆಲಕಿಕ್ಕಿ ಭೀಮನ ಬಾಹುಸತ್ವದಲಿ ।
ತಿದ್ದಿತಾತನ ದೆಸೆ ಯೆನಲು ಬಿಡಿ
ದೆದ್ದು ಮಲ್ಲನು ಭೀಮನನು ನೆಲ
ಕುದ್ದಿ ಮಂಡಿಯ ಕೊಂಡು ಹೋರಿದನಳುಕೆ ಭೂಪಾಲ ॥ ೨೧

ಎಱಗಿದನು ಪರ್ವತವ ಬಱಸಿಡಿ
ಲೆಱಗುವಂತಿರೆ ಭೀಮನೇಳುತ
ಜಱಿದು ಮುಱಿದೊಳಹೊಕ್ಕು ತೆಕ್ಕೆಯೊಳಾಗ ಪಟುಭಟರು ।
ತಱುಬಿ ನಿಂದರದೊರ್ವರೊರ್ವರು
ಮಱೆದು ಮೂರ್ಛಿತರಾದರೆಂಬಂ
ತೆಱಕದಂತಿರೆ ನಿಂದು ಹೋರಿದರಿಬ್ಬರೊಂದಾಗಿ ॥ ೨೨

ಮಡವು ಮೊಳಕೈ ಮಂಡಿ ಬಾಹುಗ
ಳೊಡೆದು ಜರ್ಝರರಾಗಿ ರೋಷದಿ
ಬಿಡದೆ ಔಕುಗಳೊತ್ತಿ ಮುಷ್ಟಿಯ ಘಾತಪಾತದಲಿ ।
ತಡವರಿಸುತೇಳುತ್ತ ಬೀಳುತ
ಕೊಡವುತೊಬ್ಬರನೊಬ್ಬರಾಗಲು
ಪೊಡವಿಯಲಿ ಹೋರುತ್ತ ಹೊರಳಿದರರಸ ಪಟುಭಟರು [1] ॥ ೨೩

ಕಡಲು ಕಡಲೊಳು ಹಳಚುವಂತಿರೆ
ಸಿಡಿಲು ಸಿಡಿಲೊಳು ಯೆಱಗುವಂತಿರೆ
ಕಡುಹು ಮಿಗೆ ಜೀಮೂತಭೀಮರ ಹೊಯ್ಲು ಹೋರಟೆಯು ।
ಬಿಡದೆ ನೋಡುತ ನಡುಗಿದುದು ಮಿಯು
ದೆಡೆಯು ನೋಡುವ ನೆರವಿ ವ್ಯೋಮಚ
ದೊಡಲ ಸಂಚದೊಳಿದ್ದುದಲ್ಲಿಯು ಮಡದಿಯರ ನಿವಹ ॥ ೨೪

ಮಲ್ಲ ಗೆದ್ದನು ಯಿಾಕ್ಷಣದಿ ಗೆಲ
ವಿಲ್ಲ ವಲಲನಿಗಾಯ್ತು ಹೋ ಹೋ
ನಿಲ್ಲು ಪಡಿಸಣಿ ಗೆದ್ದನಾಗಲೆ ಗೆದ್ದನಾವಲಲ ।
ಗೆಲ್ಲ ಸೋಲವನಱಿಯದಾಜನ
ವೆಲ್ಲ ಬೆಱಗಾಗಿರಲು ಚೌಪಟ
ಮಲ್ಲರಿದ್ದರು ಮೇರು ಮೇರುವ ಹಳಚುವಂದದಲಿ ॥ ೨೫

ಲಾಗಿನಲಿ ಬವರಿಯಲಿ ಬಡಮುಱಿ
ದಾಗಿನಲಿ ತಗರೇಱಿನಲಿ ವ್ಯೈ
ಲಾಗಿನಲಿ ತೆಕ್ಕೆಯಲಿ ಸವಡಿಯ ಡೆಕ್ಕರಿಕ್ಕೆಯಲಿ ।
ಆಗರುವರಿತ್ತಂಡ ಸಮಬಲ
ರಾಗಿ ಗೆಲುಸೋಲುಗಳ ಬಗೆ ಸಂ
ದೇಹವಾಗಿರೆ ಭೀಮಜೀಮೂತಗಳು ಹಳಚಿದರು ॥ ೨೬

1 ಹೊರಳುತ್ತ ಹೋರಿದರರಸ, ಖ,

ಅರರೆ ಸಿಕ್ಕಿದ ಮಲಲ ಹೋ ಹೋ
ಅರರೆ ಸೋತನು ಮಲ್ಲನೆಂಬ
ಬ್ಬರವು ಮಸಗಿದರೆ ಭೀಮ ಕೇಳಿದನಧಿಕರೋಷದಲಿ |
ತಿರುಗಿ ಪೈಸರದಿಂದ ಮಲ್ಲನ
ನೊರಸಿದನು ಮುಷ್ಟಿಯಲಿ ನೆತ್ತಿಯ
ತರತರಿಸೆ ಸಂತವಿಸಿ ತಿವಿದನು ಮಲ್ಲಮಾರುತಿಯು || ೩೭

ಅದ್ದಿದುವು ಬದಿಯೊಳಗೆ ಭೀಮನ
ಗುದ್ದುಗಳು ಜೀಮೂತಮಲ್ಲನ
ನುದ್ದರುಟು ಬಯಲಾಯ್ತು ಸಂದುದು ಭಾರಿಯಗ್ಗಳಿಕೆ [1] |
ಹೊದ್ದಿದನು ಭೂಮಿಯಲಿ ಮೈಮುಱಿ
ದೊದ್ದ ಕೊಳುತಲೆ ಚಲಿಸಿ ಕಳನೊಳು
ಬಿದ್ದ ಹೊರಳಲು ಬಂದು ಕುಣಿದನು ಖಳನ ವಕ್ಷದಲಿ | ೩೮

ಜೀಮೂತನ ಸಂಹಾರ.

ಮೆಟ್ಟಿ ಸಜ್ಜನೆ ಸೀಳಿ ನೆಲಕಟ್ಟಿ
ಯಟ್ಟಿ ಹೊಯ್ದನು ಹೊಯ್ದ ಭರದಲಿ
ನಿಟ್ಟೆಲುವು ಹುಡಿಯಾಯ್ತು ಕಂಡನು ಮನೆಯೊಳಾಯಮನ |
ದಿಟ್ಟರಾದರೆ ಕವಿಯೆನಲು ಮತಿ
ಗೆಟ್ಟು ತಮತಮಗೆಲ್ಲ ಭೀಮನ
ಘಟ್ಟಿಸುತ ಮುತ್ತಿದರು ಮಲ್ಲರು ಮುಷ್ಟಿಗಳ ಜಡಿದು || ೩೯

ಅನೇಕ ಮಲ್ಲರನ್ನು ಸಂಹರಿಸಿದುದು.

ಕಂಡು ಪವನಜ ಗಹಗಹಿಸಿ ಮುಂ
ಕೊಂಡು ತುಱಿದನು ಯೆಡಬಲದೊಳುಱಿ
ಹಿಂಡು ಜಟ್ಟಿಗರಸುವನಜಗಿಜಿಯಾಗೆ ಸಭೆಯೊಳಗೆ |

1 ಹಾರಿತು ಕುರುಪತಿಯ ಮಂತ್ರ, ಚ.

ದೊಂಡೆಗರುಳೊಡಸೂಸೆ ಸಭೆಯಲಿ
ದಿಂಡುಗೆಡೆದರು ಬಂದ ಮಲ್ಲರು
ಕಂಡರೈ ಭಾನುಜನ ಪಟ್ಟಣಕಂದು ಯೈನೂಱು ॥ ೪೦

ರಾಜನ ಸಂತೋಷ.

ಏನಿದೇನೈ ವಲಲ ನಿನ್ನನ
ದೇನಱಿಯದೆಂದಿದ್ದೆವೈ ಸು
ಮ್ಮಾನದಿಂದಲಿ ನಿಖಿಳಮಲ್ಲರ ಜಯಿಸಿ ಜಯಸಿರಿಯ ।
ಮಾನಿನಿಯ ಕೈವಿಡಿದು ಮಲ್ಲರ
ಸಾನುರಾಗವ ಬಳಸಿಕೊಂಡೆ ಸ
ಮಾನನನು ನಾವ್ ಕಾಣೆವೆಂದೆನುತಾಗ ಮನ್ನಿಸಿದ ॥ ೪೧

ಮೆಚ್ಚಿದನು ಭೂಪಾಲ ವಲಲನ
ಹೆಚ್ಚಿ ಕೊಂಡಾಡಿದನು ಮುನಿಯೊಳ
ಗೆಚ್ಚರಿಸಿದನು ಲೇಸ ಮಾಡಿದೆ ನಿನ್ನ ದೆಸೆಯಿಂದ ।
ಕಿಚ್ಚು ನಂದಿದ ತೆರನವೊಲು ಮಾ
ಯಚ್ಚವಕೆ ಮಿಗಿಲಾಯ್ತು ಪೂತುಱೆ
ನಿಚ್ಚಟದ ಸಾಹಸಿಕ ನೀನೆಂದುಲಿದನಾಮತ್ಸ್ಯ ॥ ೪೨

ಹರದುದೋಲಗ ಮತ್ಸ್ಯಭೂಪತಿ
ಕರೆಸಿ ಚರರನು ಸಭೆಯನೆಂದಿನ
ಪರಿಯ ಮಾಡೆಂದಿತ್ತು ನೇಮವ ಕಂಕನನು ಕಳುಹಿ ।
ಮರುತಜನ ಬೀಳ್ಕೊಟ್ಟು ಚಿಂತೆಯ
ಪರಿಹರಿಸಿ ಸುಸ್ಥಿತಿಯನೈದಿದ
ನರಸ ಕೇಳೈ ಪಾಂಡವರ ಸಾಹಸವಿದೀಗೆಂದ ॥ ೪೩

ಸಂದುದವರಜ್ಞಾತವಾಸದ
ಬಂಧನಕೆ ದಿನಮೂಱುಮುಱಿಯಲು
ವೊಂದುವರುಷವ ಕೇಳು ಜನಮೇಜಯ ಮಹೀಪಾಲ ।

ಅಂದು ಧರ್ಮಜ ಗುಪ್ತವಾಸದ
ಬಂಧನದ ಬೇಗೆಯನು ಹರಿಸಿಯೆ
ಇಂದು ನಮ್ಮನು ಕಾದನೆಂದನು ವೀರನಾರಯಣ ॥ ೮೪

ಕೌರವೇಂದ್ರನ ಮನೆಯ ಮಲ್ಲರ
ತೋರಹತ್ತರ ಮುರಿದನದಟ ಸ
ಮೀರಸುತನೆಂದರಿಕೆ ಯಾಗದೆ ಗೆಲಿದು ಬದುಕಿದರು ।
ವೀರನಾರಾಯಣನ ಕರುಣಾ
ವಾರಿಧಿಯ ಕಾಲುವೆಯ ಭಾಗ್ಯದ
ಚಾರುಶಾಲೀವನದ ವೀರರು ತೊಳಗಿ ಬೆಳಗಿದರು ॥ ೮೫

ನಾಲ್ಕನೆಯ ಸಂಧಿ ಮುಗಿದುದು.

## ಐದನೆಯ ಸಂಧಿ.

ಸೂಚನೆ.

ವಿಗ್ರಹಕೆ ಸಮೆತಳಸಿ ಕುರುಕುಲ
ದಗ್ರಣಿಯ ಮುಂಕೊಂಡು ದಕ್ಷಿಣ
ಗೋಗ್ರಹಣದಲಿ ಭೀಮ ಹಿಡಿದನು ಕಲಿಸುಶರ್ಮಕನ ॥

ದುರ್ಯೋಧನನ ಚರರು ಪಾಂಡವರು ಎಲ್ಲಿಯೂ ಇಲ್ಲೆಂದು
ಹೇಳಿದುದು.

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವದೂತರವನಿಯ
ಮೇಲೆ ಹೊಕ್ಕರಸಿದರು ರಿಪುಕುಂತೀಕುಮಾರಕರ [1] ।
ಹೋಲುವೆಯನೊಳಗಾಗಿ ಹಿಡಿಯದೆ [2]

[1] ತೊಳಲುತಲರಸಿ ಕಾಣದೆ ಪಾಂಡುನಂದನರ, ಚ.

[2] ಹೋಲುವಿಕೆಯಿಂ ಹಿಡಿಯಲಾರದೆ, ಚ.

ಕಾಲ ಸವೆಯಲು ನಾಲ್ಕುದಿಕ್ಕಿನ
ಮೂಲೆಯುವರೈತಂದು ಬಿನ್ನೈಸಿದರು ಕುರುಪತಿಗೆ ॥ ೧

ವಿತಳದೊಳು ಹೊಕ್ಕಿರಲಿ ಯಮರಾ
ವತಿಯೊಳಗೆ ಮೇಣಿರಲಿ ನವ್ಮ್ಮಾ
ಕ್ಷಿತಿಯೊಳಗೆ ಸುಳುಹಿಲ್ಲ ರಿಪುಕುಂತೀಕುಮಾರಕರ ।
ಮತಿಯ ಹಬ್ಬುಗೆಯಿಂದ ನಾನಾ
ಗತಿಯೊಳಗೆ ಹೊಕ್ಕಱಸಿದೆವು ಭೂ
ಪತಿಯೆ ಕೇಳ್ ನಿರ್ನಾಮವಾದರು ನಿನ್ನ ವೈರಿಗಳು ॥ ೨

ಎನಲು ನಸುನಗೆಯಿಂದ ಮನವಲಿ
ನನಗೆ ಹಗೆಯಿಲ್ಲೆಂದು ದೂತರ
ಮನವೊಲಿದು ಮನ್ನಿಸಿದ ನಾಲುಕುಕಡೆಯ ವಾರ್ತೆಗಳ ।
ತನತನಗೆ ಮಂತ್ರಿಗಳು ಬೆಸಗೊಳ
ಲನಿತು ದೂತರೊಳೊಬ್ಬ ನುಡಿದನು
ವಿನಯದಲಿ ಕೀಚಕನ ಹದನನು ರಾಯನಿದಿರಿನಲಿ ॥ ೩

ಒಬ್ಬ ದೂತನು ಕೀಚಕಾದಿಗಳ ಸಂಹಾರವಾರ್ತೆಯನ್ನು ಹೇಳಿದುದು.

ಬಂದುವಾರ್ತೆಯಲೈ ತ್ರಿಗರ್ತಾ
ನಂದಕರವಿದು ಜೀಯ ಕೀಚಕ
ವೃಂದವನು ಗಂಧರ್ವರಿರುಳೈತಂದು ಖಾತಿಯಲಿ ।
ಕೊಂದು ಹೋದರು ರಾವಣನ ವಿಧಿ
ಯಿಂದು ಕೀಚಕಗಾಯಿತೆನೆ ಕೇ
ಳ್ದೊಂದು ನಿಮಿಷ ಮಹೀಶ ಮೌನವ ಹಿಡಿದು ಬೆಱಗಾದ ॥ ೪

ಹೇಳು ಹೇಳೆನ್ನೊಮ್ಮೆ ಮತ್ಸ್ಯನ
ತೋಳು ಮುಱಿದುದೆ ಸುಭಟರೊಳು ಕ
ಟ್ಟಾಳು ಕೀಚಕ ಮಡಿದನೇ ಗಂಧರ್ವರಿಱಿದವರೆ ।

ಮೇಲಣ್ಣವರಿಗೆ ಮರ್ತ್ಯರಿಗೆ ಕೈ
ಕಾಲುಮುಟ್ಟನ ತೋಟಿ ಯೇತಕೆ
ಹೋಲದಿದು ಹುಸಿ ಹೋಗೆನುತ ಮುಖದಿರುಹಿದನು ಭೂಪ ॥ ೫

ಅಹುದು ಜೀಯವಧರಿಸು ದಿವಿಜರ
ಮಹಿಳೆ ಯೋಲೈಸಿದಳು ಮತ್ಸ್ಯನ
ಮಹಿಳೆಯನು ಬೞಿಕಾಕೆಯೋಲಗದೊಳಗೆ ಸತಿಯಿರಲು ।
ಕುಹಕಿ ಕಂಡಳುಪಿದರೆ ನಾಟ್ಯದ
ಗೃಹಕೆ ಸೂಚನೆಗೊಟ್ಟು ನಿಮಿಷಕೆ
ರಹವ ಮಾಡಿದರವರು ಸವರಿದರಖಿಳಕೀಚಕರ ॥ ೬

ಅವನಿಪತಿ ಮೂಗಿನಲಿ ಕರಪ
ಲ್ಲವವನಿಟ್ಟನು ತಲೆಯ ತೂಗಿದ
ನವಳು ದ್ರೌಪದಿ ಖಳನ ಕೊಂದವ ಭೀಮ ಗಂಧರ್ವ ।
ದಿವಿಜಸತಿ ಯೆತ್ತಲು ವಿರಾಟನ
ಭವನದೋಲಗವೆತ್ತಲದು ಪಾಂ
ಡವರ ಕೃತ್ರಿಮತಂತ್ರ ಮಱೆಯಿಱಿಗಾಱರವರೆಂದ ॥ ೭

ಪರಿಮಳವ ಕದ್ದೋಡುವನಿಲನ
ಹರಿವ ಹೆಜ್ಜೆಯ ಹತ್ತುವರೆ ಮಧು
ಕರನೆ ಬಲ್ಲದು ಜೀಯ ಬಲ್ಲಿರಿ ನಿಮ್ಮವರ ಪರಿಯ ।
ಹರದ ಮಾತಿನ ಹದನು ತಾನಿದು
ಚರರಿಗದು ಗೋಚರಿಸುವುದೆ ಯೆಂ
ದರಸನನು ಕೊಂಡಾಡಿದರು ಮಂತ್ರಿಗಳು ತಮತಮಗೆ ॥ ೮

ಆಗ ಮತ್ತು ಕೆಲವು ದೂತರು ಬಂದು ಜೀಮೂತನನ್ನು ಸಂಹರಿಸಿ
ದುದನ್ನು ತಿಳಿಸಿದುದು.

ದೂತರುಗಳೈತಂದರಾಜೀ
ಮೂತಕೀಚಕರೊಂದೆ ಪಥವೆಂ
ದಾತಗಳು ಬಚ್ಚಿಕುಸುರೆ ಕೇಳಿದ ಕೌರವರ ರಾಯ ।

ಅದಕ್ಕೆ ಆಪ್ತರನ್ನು ಕರೆಸಿ ಯೋಚಿಸಿದುದು.

ಭೀತನಾದನು ಕರೆಸಿ ಗಂಗಾ
ಜಾತನೊದಲಾದಖಿಳಸಚಿವರ
ನಾತನೆಂದನು ಕೇಳಿ ದೂತರ ಬಿನ್ನಹದ ಹರುಬ ॥ ೯

ಕೇಳಿದಿರೆ ಜೀವೂತಮಲ್ಲನ
ಸೀಳಿದಾಕಾರವನು ಕುರುಕುಲ
ಜಾಲ ಕೇಳ್ದರೆ ಯೆನುತ ಹೇಳಿದ ಮಲ್ಲ ಬಿದ್ದುದನು ।
ಲೋಲಪಾಂಡವರಾ ವಿರಾಟನ
ಆಲಯುವನಾಶ್ರಯಿಸಿ ಗುಪ್ತದ
ಬಾಳಿಕೆಯೊಳಿಹರಿದಕೆ ಸೂಚನೆ ಮಲ್ಲಕೀಚಕರು ॥ ೧೦

ಕೊಲೆಯು ಮಾಡಲು ಭೀಮನಲ್ಲದೆ
ಯಿಳೆಯೊಳಾನುವರಿಲ್ಲ ಸುಭಟರ
ಬಲುಹು ನೆಱೆಯದು ಕೀಚಕನ ಜಿವೂತನಿದಿರಿನಲಿ ।
ನಿಲುವರನು ತಾ ಕಾಣೆ ಕೌರವ
ತಿಲಕ ಭೀಮಾರ್ಜುನರ ಮಿದಿರೊಳು
ನಿಲುವನಾರೈ ಕರೆಸಿ ಬದುಕುವುದೆಂದನಾಭೀಷ್ಮ ॥ ೧೧

ಬಳಿಕ ಧರಣಿಯು ಮೇಲೆ ನಿನ್ನೊಳು
ಮಲೆವ ರಾಯರ ಕಾಣೆ ಕರ್ಣನ
ಹುಳುಕುಬುದ್ಧಿಯು ಕೇಳಿ ನಿನ್ನಯು ಕುಲವನದ್ದದಿರು ।
ಬಲುಹ ನೆಚ್ಚದಿರೆಮ್ಮ ದ್ರೋಣನ
ತಲೆಯು ತಱಿವನು ಪಾರ್ಥ ಮುಳಿದರೆ
ಕಳವಳಿಗರೀಕರ್ಣಶಕುನಿಜಯದ್ರಥಾದಿಗಳು ॥ ೧೨

ಕರ್ಣನ ಮಾತಿನಂತೆ ದುರ್ಯೋಧನನ ಪ್ರತಿಜ್ಞೆ.

ಎನಲು ಕರ್ಣನು ಬಳಿಕ ನುಡಿದನು
ಜನಪತಿಯೆ ಕೇಳ್ಳೆನು ಪಾರ್ಥನ
ನನುವರದಿ ಕೈಕೊಂಬೆನೇ ಗೆಲುವೆನು ತ್ರಿಯಂಬಕನ ।

ಎನಲು ಹರುಷಿತನಾಗಿ ಕೌರವ
ಜನಪ ನುಡಿದನು ಕರ್ಣನಿರೆ ಯಿಾ
ಬಿನುಗುಪಾಂಡವರೆನಗೆ ಗಹನವೆ ಕರೆಸೆನವರುಗಳ ‖ ೧೩

ವಿದುರನು ಹಿತವನ್ನು ಹೇಳಿದುದು.

ಕೇಳು ಕೌರವರಾಯ ಪಾಂಡವ
ರೊಟ್ಟಿಗವ ನೀನಱಿಯೆ ಭೀಮನ
ತೋಳ ಬಲುಹಿಂಗೆ ನಿಲುವನಾರ್ಯ ದೇವದೈತ್ಯರಲಿ ।
ಬಾಟಿಕೆಯ ನೀನೋಲ್ಲೆ ಭೀಷ್ಮರು
ಹೇಟಿದನು ಕೈಕೊಳ್ಳ ನೀತಿಯ
ನೇಳದವ ಮಾಡುವನೆ ಜನಪತಿ ಯೆಂದನಾವಿದುರ ‖ [1] ೧೪

ತಾಮಸರ ನುಡಿಗೇಳಿ ಜೂಜಿನ
ಸೀಮೆಯೆಂಬುದ ನೆಗಟಿ ಸತ್ಯದ
ಭೂಮಿಯನು ನೆಱೆ ಕೊಂಡೆ ಮತ್ಸ್ಯನ ಗೋವಿಗೆಳಸದಿರು ।
ಸೋಮಧರನಿದಿರಲ್ಲ ಭೂಪತಿ
ಭೀಮನೆದ್ದರೆ ನಿಮ್ಮ ಕಂಡವ
ಕಾಮಿನಿಯ ಮುಡಿಗಿಕ್ಕಿ ಮುಡಿಸುವ ಹೋಗಬೇಡೆಂದ ‖ ೧೫

ಗೋಗ್ರಹಣದ ಯೋಜನೆ.

ಪ್ರೌಢಿಯುಳ್ಳಿದ ಕೇಳಿ ಬಲ್ಲನು
ರೂಢಿಯಲಿ ಸಮಬಳರು ಭೀಮ ಸ
ಗಾಢದಲಿ ಬಲಭದ್ರಕೀಚಕಶಲ್ಯರೆಂಬವರು ।
ಗೂಢರನು ಗರುವಾಯಿಗೆಡಿಸಿ ಸ
ಗಾಢಿಕೆಯ ನೆಱೆ ಮೆಱೆಯ ಬೇಹುದು
ರೂಢಿ ಸಮೆತಳಿಸಿತ್ತು ಸೇನೆಯ ನೆರಹಬೇಕೆಂದ ‖ ೧೬

[1] ಯೆಂದನು ಸಂಜಯನು ಬಟಿಕ, ಖ.

ಅರಿವಿರಾಟನ ಪುರಕೆ ಹಾಯಿದು
ತುಱುಸೆಱೆಯ ವಿಡಿಸಿದರೆ ಪಾಂಡವ
ರಿರರು ಧರ್ಮದ ಮೇರೆ ಮರ್ಯಾದೆಗಳ ಬಲ್ಲವರು ।
ಅರಿಬಲವನಂಘೈಸುವರು ನಾ
ವೆಱಿದುಕೊಂಬೆವು ಬಳಿಕ ವನದಲಿ
ವರುಷಹದಿಮೂಱಕ್ಕೆ ಕೊಡುವೆವು ಮತ್ತೆ ವೀಳಯವ ॥ ೧೭

ಅದಕ್ಕೆ ಕರ್ಣಾದಿಗಳ ಅನುಮತಿ.

ಬಳ್ಳಿತಿದು ನಿರ್ದಿಷ್ಟನಯ ನ [1]
ಮ್ಮೆಲ್ಲರ [2] ಭಿಮತವಹುದು ರಿಪುಗಳ
ಖುಲ್ಲವಿದ್ಯೆಯನಱಿವುಪಾಯಕೆ ಬೇಱೆ ಮತವಿಲ್ಲ !
ಅಲ್ಲಿ ಪಾಂಡವರಿಹರು ಸಂಶಯ
ವಿಲ್ಲ ದೇಶದ ಸೊಂಪು ಸಿರಿ ಮ
ತ್ತೆಲ್ಲಿಯೂ ಹಿರಿದಿಲ್ಲ ನಿಶ್ಚಯವೆಂದನಾಕರ್ಣ ॥ ೧೮

ಗುರುವಿಗಭಿಮತವಹೊಡೆ ಕೃಪ ಮುಖ
ದಿರುಹದಿದ್ದೊಡೆ ಭೀಷ್ಮ ಮನದಲಿ
ಮುಱಿಯದಿರ್ದೊಡೆ ಗುರುಕುಮಾರನ ಮತಿಗೆ ಸೇರುವೊಡೆ ।
ವರಶಕುನಿಯಹುದೆಂದೊಡೀಸೋ
ದರರು ತಪ್ಪಲ್ಲೆಂದರಾದೊಡೆ
ಅರಸ ನೆಗಱ್ದುದೆ ಮಂತ್ರವೆಂದು ಸುಶರ್ಮ ಹೊಗಳಿದನು ॥೧೯

ಮತವಹುದು ತಪ್ಪಲ್ಲ ಪಾಂಡವ
ಗತಿಯನಱಿವೊಡೆ ಮಾರ್ಗವಿದು ಸ
ನ್ಮತವು ನಿರ್ಮಲನೀತಿಕಾಱಱ ಮತಿಗೆ ಮನೆಯಹುದು ।
ಅತಿಗಳೆತವಾಯ್ತವಧಿ ದಿವಸ
ಸ್ಥಿತಿಗಳ್ಳೆದಾಱಾಗಿ ಬರಲಾ
ಕ್ಷಿತಿಗೆ ಪಾಂಡವರುತ್ತರಾಯಿಗಳೆಂದನಾಭೀಷ್ಮ ॥ ೨೦

1 ನಿರ್ದೋಷನಿರ್ಣಯ, ಚ. 2 ವೆಲ್ಲರ, ಚ.

ಪರಿಗಣಿಸಿ ನೋಡಿದರೆ ಮಾಡಿದ
ವರುಷ ವಿಧಿಯಲಿ ಹೆಚ್ಚು ಕುಂದುಂ
ಟುರವಣಿಸಿ ಮಾಡುವುದು ನೆಗಳಿದ ರಾಜಕಾರಿಯವ ।
ಅಱಿಯಲೇ ಬೇಕಾವ ಪರಿಯಲಿ
ಅಱಿದೆವಾದರೆ ಯುತ್ತರೋತ್ತರ
ಧರಣಿ ಕುರಪತಿಗೆಂದರಾದ್ರೋಣಾದಿನಾಯಕರು ॥ ೨೧

ಸೇನೆ ಹೊರಡುವುದಕ್ಕೆ ದುರ್ಯೋಧನನ ಅಪ್ಪಣೆ.

ಬೀಡು ನಡೆಯಲಿ ಮುಂದೆ ಮತ್ಸ್ಯನ
ನಾಡೊಳಗೆ ಕಟಕದಲಿ ದೂತರು
ಕೂಡೆ ಸಾರಲಿ ಕರೆಯಲಕ್ಷೋಹಿಣಿಯ ನಾಯಕರ ।
ಜೋಡಿಸಲಿ ಗುಡಿಗಟ್ಟಿ [1] ಪೆಂಡೆಯ
ಗೂಡಿ ಕೋಟೆಗೆ ಭಂಡಿ ನೆಱಿಯಲಿ
ನಾಡ ಬಿಟ್ಟಿಗಳೆಂದು ಕೌರವರಾಯ ನೇಮಿಸಿದ ॥ ೨೨

ಆಗ ಬಂದ ಬ್ರಾಹ್ಮಣರು ಮತ್ತು ಪರಮಣ್ಡಲಿಕರ ಸನ್ಮಾನ.

ಮೇಲೆ ರವಿ ತೋಱಿದನು ಮೂಡಣ
ದೇಟಿಗೆಯ ಹೊಱವಂಟು ಕೌರವ
ನಾಲಯವ ತುಂಬಿದುದು ಭೂಸುರವಿತತಿ ಸಂದಣಿಸಿ ।
ಏೞುಲಕ್ಷತುರಂಗ ಮೌಕ್ತಿಕ
ಥಾಳ ಮಕುಟದ ಕಯ್ಯ ದರ್ಭೆಯ
ಮೇಲುಗುಲದವರೈದಿದರು ಭೂಪಾಲ ಕೇಳೆಂದ ॥ ೨೩

ಕುರುಕುಲೇಶ್ವರ ಬಂದು ವಿಪ್ರರ
ಚರಣಕೆಱಗಿದ ನಿಂದು ಕರಗಳ
ಸೆಱಗನೊಡ್ಡಿದ ವೇದಮಂತ್ರದ ಪುಣ್ಯದಕ್ಷತೆಯ ।

---

[1] ಗುಡ್ಡಿಡಿದ, ಚ.

ಶಿರವ ಬಾಗಿಸಿ ತುಂಬಿಕೊಂಡನು
ವರಸುಹಸ್ತನು ಧರಣಿದೇವರ
ಕರವ ತುಂಬಿದ ಹೇಮವಿತ್ತವನಿತ್ತು ವೀಳಯವ ॥ ೨೪

ಎಸೆವ ವಿಪ್ರರ ಕಳುಹಿ ಪೀಠದೊ
ಳೊಸೆದು ತಾ ಕುಳಿತಾಗ ಕರೆಸಿದ
ವಸುಮತೀಶರ ಮಕುಟವರ್ಧನಮಂಡಲೀಕರನು ।
ಉಸುರಿ ಕಾರ್ಯವ ಪಾಂಡುನಂದನ
ರೆಸಗಿ ಯಿಳೆಯನು ಸೇಱದಂದದ
ಹಸನ ನೆನೆದೆನು ಯೆಂದು ಹೊಱವಂಟರಸ ನಡೆತಂದ ॥ ೨೫

ಹರಿದುದೋಲಗ ಮಱುದಿವಸ ಗುಡಿ
ಹೊಱಗೆ ಹೊಯ್ದುವು ಸನ್ಮುಹೂರ್ತದೊ
ಳರಸ ಹೊಱವಂಟನು ಸುಶರ್ಮಾದಿಗಳ ಗಡಣದಲಿ ।
ಸುರನದೀಸುತಕರ್ಣಕೃಪಗುರು
ಗುರುಸುತಾದಿಮಹಾಪ್ರಧಾನರು
ಕರಿತುರಗರಥಪತ್ತಿಯಲಿ ಹೊಱವಂಟರೊಗ್ಗಿನಲಿ ॥ ೨೬

ಮೋಹರವ ಮೇಳೈಸಿದನು ನಿ
ರ್ವಾಹವನು ನಿಶ್ಚೈಸಿದನು ಮ
ತ್ತ್ರೋಹಿಕಾಱಱ ಮನವ ಸೋದಿಸಿಕೊಂಡು ತುಱುಗೊಂಬ ।
ಸಾಹಸರನಟ್ಟಿದನು ವೈರಿಗ
ಳಾಹವಕೆ ನೆಲನಗಲದಲಿ ಬಲ
ಮೋಹಿಸಿತು ನೆರಸಿದನು ಬಹಳಕ್ಷೋಹಿಣೀಬಲವ ॥ ೨೭

ಕರಿಗಳಿಗೆ ಗುಳ ಬೀಸಿದುವು ವರ
ತುರಗ ಹಲ್ಲಣಿಸಿದುವು ತೇಜಿಯ
ತರಿಸಿ ರಥವನು ಹೂಡಿ ಕೈದುವ ಸೆಳೆದು ಕಾಲಾಳು ।

ಅರಸನಿದಿರಲಿ ಮೋಹಿದುದು ಸೀ
ಗುರಿಯು ಸಬಳದ ಸಾಲಿನೊಳಗಂ
ಬರವೆ ಮುಸುಕಿತು ಧರಣಿ ನೆಗ್ಗಿತು ನೆಱೆದುದಕ್ಷೋಣಿ ॥ ೨೮

ಸೆಳವೆ ಸಿಂಧದ ಕವಿವ ಹೀಲಿಯು
ತಳಿತ ತೋಮರ ಚಮರಡೊಂಕಣಿ
ಗಳ ವಿಡಾಯುದಲವುಮ ಕೆತ್ತುದು ಗಗನಮಾರ್ಗದಲಿ [1] ।
ಸುಳಿಯಲನಿಲಂಗಿಲ್ಲ ಪಥ ಕೈ
ದೊಳಸಬಾರದು ರವಿಗೆ ನೆಲನೀ
ದಱವನಾನುವೊಡರಿದೆನಲು ಜೋಡಿಸಿತು ಕುರುಸೇನೆ ॥ ೨೯

ಬಳಿಕ ದುರ್ಯೋಧನನು ಹೊರಟುದು.

ಆರತಿಯನೆತ್ತಿದರು ಬಳಿಕು
ಪ್ಪಾರತಿಯ ಸೂಸಿದರು ಘನಮದ [2]
ವಾರಣದ ಗದ್ದುಗೆಯೊಳಗೆ ಕುರುರಾಯ [3] ಕುಳ್ಳಿರಲು ।
ಸಾರಿದರು ಭಟ್ಟರು ಕುರುಕ್ಷಿತಿ
ಧಾರುಣೀಶನ ಬಿರುದು ಮಿಗೆ ಕೈ
ವಾರಿಸುವ ಜಯರವದೊಡನೆ ನಿಸ್ಸಾಳ ಸೂಳವಿಸೆ ॥ ೩೦

ಹೊಗುದುದಂಬರವವನಿ ನಡುಗಿತು
ಗಗನಮಂಡಲ ಪರಿವಿಡಿಯು ತಾ
ರೆಗಳು ಸೂಸಿತು ಸುರಿದುವರುಣಾಂಬುವಿನ ಧಾರೆಗಳು ।
ದಿಗುವಳಯದಲಿ ಧೂಮಕೇತುಗ
ಳೊಗೆದುವದ್ಭುತಭೂತಕೋಟಿಗ
ಳಗಲದಲಿ ಕಾಣಿಸಲು ಹಸ್ತಿನಾಪುರವ ಹೊಱವಂಟ ॥ ೩೧

ರಾಯದಱ ನಡೆತಂದುದೊಗ್ಗಿನ
ನಾಯಕರು ಮನ್ನೆಯರು ರಾಜಪ

---

1 ವಳ್ಳಿಱಿಯ, ಚ,    2 ರಥ, ಚ,
3 ದೋರಣದ ಮಧ್ಯದಲಿ ಕೌರವರರಾಯ, ಚ.

ಸಾಯಿತರು ಸಂರಂಭಸಂವರಣೆಯಲಿ ನಡೆಗೊಳಲು |
ತಾಯಿ ಮೆಳಲುಪ್ಪರಿಸೆ ಜಲನಿಧಿ
ಬಾಯ ಬಿಡೆ ಗರ್ಜಿಸುವ ನಿಸ್ಸಾ
ಳಾಯತದ ಸೂಚೋದಗಿದುವು ಪಯಣದ ಏವಾಡಿಯಲಿ [1] ‖ ೩೦

ಪಳಹರದ ಪಲ್ಲವದ ಪಸರದ
ಘಳಿಯ ಪಟ್ಟೆಯ ತೋಮರದ ಹೊಳ
ಹೊಳೆವ ಚಮರದ ಸೀಗುರಿಯ ಡೊಂಕಣಿಯ ತಿಂಥಿಣಿಯ |
ಬೆಳಗೊಡೆಯ ಝಲ್ಲರಿಯ ಝಾಡಿ
ಗಳೊಳಗೆ ಗಗನವು ತೀವಿತೆನೆ ಹೆ
ಕ್ಕಳಿಸಿ ನಡೆದುದು ಸೇನೆ ಪಯಣದ ಮೇಲೆ ಪಯಣದಲಿ ‖ ೩೩

ಪೊಡವಿ ಜಡಿದುದು ಫಣಿಯ ಹೆಡೆಗಳು
ಮಡಿದುವಾಶಾದಂತಿಗಳು ತಲೆ
ಗೊಡಹಿದುವು ಬಲದೊಳಗೆ ಮೊಬಗುವ ಲಗ್ಗವರೆಗಳಗೆ |
ಕಡಲು ಮೊಗೆದುದು ರತುನವನು ನೆಲ
ನೊಡೆಯಲಗ್ಗದ ಸೇನೆ ಮಹೀಲದಿ
ನಡೆದು ಬರಲಾಧೂಳು ತುಂಬಿತು ರವಿಯ ಮಂಡಲವ ‖ ೩೪

ಪ್ರಳಯಪಟುಜಲರಾಶಿ ಜಡಿದುದೊ
ತಳಿತಸಂದಣಿಗಿಲ್ಲ ಕಡೆಗೀ
ದಳಕೆ ಮಾರ್ಮಲೆತಾರು ಬದುಕುವರಿಂದ್ರಯಮರೊಳಗೆ |
ಹುಲುನೃಪರಿಗೀಯೊಡ್ಡ ಮುಖವ
ಗ್ಗಳಕೆ ಯೆಲ್ಲಿಯದೆನುತ ಹೊದರಿನ
ಕಳಕಳಿಕೆಯಲಿ ನೂಕಿ ನಡೆದುದು ಘಟ್ಟು ಮೇಳೈಸಿ [2] ‖ ೩೫

---

1 ಸ..ಚೊಪನೆಪಯಣದ ಮೇಲೆ ಪಯಣದಲಿ, ಚ.

2 ಹುಲುನೃಪರಿಗೀಯೊಡ್ಡು ಗಡ ಯಿಾ
ಬಲುಹು ಹೊದರಿನ ಹೊರಳಿ ಯಿಾಕಳ
ಕಳಿಕೆ ಯೇಕೆನೆ ನಡಿಕಿದುದು ಕುರಸೇನೆ ಘಟ್ಟೈಸಿ, ಚ.

ಬಳಿಕ ವಿರಾಟನ ದೇಶವನ್ನು ಪ್ರವೇಶಿಸಿ ಗೋಪಾಲಕರನ್ನು
ತೊಂದರೆ ಪಡಿಸಿದುದು.

ಕೆಲವು ಪಯಣದೊಳಾವಿರಾಟನ
ನೆಲನ ಹೊಕ್ಕರು ಮೋಹರವ ನೆಡೆ
ಗಳದು ತೆಗೆದರು ಚಕೋಣಿಯಲಿ ವಾಜಿಗಳ ಪರುಠವಿಸಿ ।
ಕೆಲವು ತುರುಗಳಗಾಸುಶರ್ಮನ
ಕಳುಹಿದರು ಚತುರಂಗಬಲದಲಿ
ದಟದುಱವೆ ಹಾಕಿದರು ಗೊಲ್ಲರ ಕೆಡಹುತುರುವಣಿಸಿ ॥ ೩೬

ಎರಡುಮೋಹರವಾಗಿ ತೆಂಕಲು
ಹರಿದು ತುರುಗಳ ಕಡೆಯಿ ನಾವು
ತ್ವರದಲಾನುವೆವೆನುತ ನೃಪತಿ ತ್ರಿಗರ್ತರನು ಕಳುಹೆ ।
ಹುರಿಯೊಡೆದು ಹದಿನಾಱುಸಾವಿರ
ವರಮಹಾರಥರೊಗ್ಗಿನಲಿ ದು
ರ್ಧರಸುಶರ್ಮನು ಧಾಳಿ ಯಿಟ್ಟನು ತೆಂಕದಿಕ್ಕಿನಲಿ ॥ ೩೭

ಅಸಿತಪಕ್ಷಾಷ್ಟಮಿಯ ದಿನ ಸಂ
ಧಿಸಿದೊಡಾಳದ್ದುದು ವಿರಾಟನ
ಪಶುಸಮೂಹವ ಮುತ್ತಿದರು ಗೋಪಾಲಕರ ಕೆಡೆಹಿ ।
ಹೊಸಮುಖಕೆ ಸೀವರಿಸಿ ಹೊದ್ದರೆ
ದೆಸೆದೆಸೆಗೆ ಹಿಂಡೊಡೆದು ಹಾಯ್ದುವು
ಮಸಗಿತಂಭಾರವದ ರವುಕುಳ [1] ವಾಯ್ತು ನಿಮಿಷದಲಿ ॥ ೩೮

ಎಲೆಲೆ ತುರುಗಳ ಕೊಂಡರೋ ಹು
ಯ್ಯಲಿಗೆ ಹರಿಸೋ ಸಾಯೆನಗ್ಗದ
ನಿಲವು ಮುಂದಿದೆ ಯೆನುತ ಗೋವರು ಕೈದುಗಳ ಸೆಳೆದು ।

1 ಕಳಕಳ, ಚ.

ಬಿಲುದುಡುಕಿ ಮಸೆಯಂಬುಗಳ ಬ
ತ್ತಳಿಕೆಗಳ ಹೊಡೆಗೆದಱಿ ಚಾತು
ರ್ಬಲವ ಕೆಡೆವುತ ಬಂದರಾತುಱುಗಾಯಿನಾಯಕರು || ೩೯

ಸಿಡಿಲು ಕುಧರವನೆಱಗುವಂತಿರೆ
ಜಡಿವ ಭೇರಿಗಳಿಳ್ಳಱಿಯೆ ಕೈ
ದುಡುಕಿ ತೇಜಿಯ ಕಟ್ಟಿ ನೂಕಿದರಂದು ರಾವುತರು |
ಅಡಗುಮುಟಿದರು ಬಾಳೆಯುಡವಿಯು
ನಡಸಿ ಗಜ ತುಟಿವಂತೆ ಗೋವರ
ಕೆಡಹಿ ತತ್ತಳದುಟ್ಟಿದು ಹೊಕ್ಕಿದು ವಿಗಡಕುರುಸೇನೆ || ೪೦

ಆಳು ಸುತ್ತಲು ಕಟ್ಟಿ ತುಱುಗಳ
ಕೋಳಹಿಡಿದರು ಬೊಬ್ಬಿಱಿದು ಗೋ
ಪಾಲರಾಂತರೆ ಕೆಡೆಹಿದರು ಕಡಿಖಂಡಮಯವಾಗೆ |
ಮೇಲೆ ಮೇಲ್ಕೈತಪ್ಪ ಹೆಬ್ಬುಲ
ವಾಳುಕುಮುರೆಯು ಕಂಡು ನೂಕದು
ಕಾಳಗವು ತಮಗೆನುತ ತಿರುಗಿತು ಗೋವರುಟ್ಟಿದವರು || ೪೧

ಮುಸುಕು ಕಂಬಳಿಗೋಲ [1] ಕಲ್ಲಿಯ
ಬಿಸುಟು ಗಾಯದ ಗೋವರನು ಹೊ
ತ್ತಸುವ ಕೊರಳಲಿ ಹಿಡಿದು ನಾಲಗೆ ಯೊಣಗಿ ಥಗೆಹೊಯ್ದು |
ವಿಷಮರಣಭೀತಿಯಲಿ ಕಂದಿದ
ಮುಸುಡ ತೊದಲಿನ ನುಡಿಯ ಮರಣದ
ದೆಸೆಯ ಕೈಸನ್ನೆಗಳ ಘಾತರೆಯ್ದಿದರು ಪುರವ || ೪೨

ಗೋಪಾಲಕರು ವಿರಾಟನಿಗೆ ಈ ವಾರ್ತೆಯನ್ನು ಹೇಳಿದುದು.

ಬಸಿವ ನೆತ್ತರ ಗೋಪರರಸಂ
ಗುಸುರಲಾರದೆ ಧೊಪ್ಪನಡೆಗೆಡೆ
ದಸುವ ಕಳೆದರು ಕೆಲರು ಕೆಲಬರು ಸುತ್ತಲಿಸಿ ಕೊಂಡು [2] |

1 ವಿಸುಪಕಂಬಳಿ ಕೋಂಬು, ಚ.  2 ತನುವ ಸಂತವಿಸಿ, ಖ.

ಅಸಮಬಲವೆದ್ದು ಜೇಯ ಗೋವರ
ಕುಸುರಿದರಿದರು ಹತ್ತುಸಾವಿರ
ಪಶುಸಮೂಹವ ಹಿಡಿದರೆಂದರು ಮತ್ಸ್ಯಭೂಪತಿಗೆ [1] ‖ ೪೩

ಕೇಳಿ ಬಿಸುಸುಯ್ದನು ವಿರಾಟನೃ
ಪಾಲನಿಂದಿನಲರಿದನೇ ಕ
ಟ್ಟಾಳು ಕೀಚಕನೆಂದು ನೋಡಿದನಂದು ಕೆಲಬಲನ |
ಆಳು ಗಜಬಜಿಸಿತ್ತು ಹಾಯಿಕು
ವೀಳಯವನಿಂದೆನಗೆ ತನಗೆಂ
ದೋಲಗದೊಳಬ್ಬರಣೆ ಮಸಗಿತು ಕವಡಿತಾಸ್ಥಾನ ‖ ೪೪

ವಿರಾಟನ ಸೇನೆಯು ಯುದ್ಧಕ್ಕೋಸ್ಕರ ಬಂದುದು.

ಕೇಳಿ ಸಿಡಿಲೇರಿಗೆಯಾಲೆದ್ದು ನೃ
ಪಾಲಕರು ಗಜಬಜಿಸೆ ರಭಸದೊ
ಳೋಲಗವ ಹೊರವಂಟು ನಡೆದರು ಭಾಷೆಗಳ ಕೊಡುತ |
ಆಳು ಕೈದುವ ಕೊಂಡು ಕರಿಘಟೆ
ಮೇಳವಿಸಿ ಹಲ್ಲಣಿಸೆ ತೇಜಿಗ
ಳೋಳಿಯಲಿ ರಥ ಹೂಡಿ ಕವಿದುದು ಮತ್ಸ್ಯಪರಿವಾರ ‖ ೪೫

ಹೊಳಲ ಕಾಹಿಂಗುತ್ತರನ ಬೆಂ
ಬಳಿಗೆ ಕೆಲಬರನಿರಿಸಿ ಚಾತು
ರ್ಬಲಸಹಿತ ಹೊರವಂಟು ನಡೆದನು ರಾಯನೊಗ್ಗಿನಲಿ |
ನೆಲೆಯನರಿದ ವಿಕರ್ಮದಲಿ ತ
ವ್ಮೊಳಗೆ ನೋಡಲು ಕೌರವರು ತುರು
ಗಳನು ಹಿಡಿದರೆನುತ್ತ ಧರ್ಮಜ ಜನನುಜರಿಗೆ ನುಡಿದ ‖ ೪೬

---

1 ಗೋವರುಳಿದವರು, ಖ.

ಆಗ ಭೀಷ್ಮಾದಿಗಳು ನಮ್ಮನ್ನು ಪರೀಕ್ಷಿಸುವುದಕ್ಕೋಸ್ಕರ
ಕೌರವಾಗಮನವೆಂದು ಹೇಳಿದುದು.

ಇವರು ತಮ್ಮೊಳಗೆಂದರಿದು ನ
ಮ್ಮವರ ಬಲ ತುಱುಗೊಂಡವರು ಕೌ
ರವರು ನಮ್ಮ ಪರೀಕ್ಷೆಗೋಸುಗ ಬಂದ ಹದನಹುದು ।
ಅವಧಿ ತೀರದ ಮುನ್ನ ಕಾಣಿಸಿ
ನಮಗೆ ಮಗುಱಾರಣ್ಯವಾಸವ
ನವರು ಕರುಣಿಸ ಬಂದರೆಂದರು ಧರ್ಮಜಾನುಜರು [1] ॥ ೪೭

ಆಗ ಧರ್ಮರಾಯನ ಯೋಚನೆ.

ಅವಧಿ ತೀರಲಿ ಮೇಣು ಮೀಱಲಿ
ನಮಗೆ ತುಱುಹುಯ್ಯಲನು ಕೇಳಿಯೆ
ಕಿವಿಯೊಳುದಕವ ಕೊಂಡೊಡಾಪಾತಕವನೆಣಿಸುವೊಡೆ ।
ಎಮಗೆ ನೂಕದು ಸಾಕದಂತಿರ
ಲವರ ಬೆಂಬಳಿ ವಿಡಿದು ವರಗೋ
ನಿವಹವನು ಮರಳಿಚುವೆನೆಂದನು ಧರ್ಮನಂದನನು ॥ ೪೮

ಎಂದು ತಮ್ಮಂದಿರು ಸಹಿತ ಯಮ
ನಂದನನು ಕಲಹಾವಲೋಕಾ
ನಂದಜಲಪರಿಲುಳಿತಕೋಮಲಕಾಯನನುವಾಗಿ ।
ಅಂದು ಮತ್ಸ್ಯನ ನೇಮದಲಿ ನಡೆ
ತಂದು ರಥವೇಱಿದನು ಪಾರ್ಥನ
ಹಿಂದಕಿರಿಸಿ ವಿರಾಟನೊಡನವನೀಶ ಹೊಱವಂಟ ॥ ೪೯

ಬೀಱುಕೊಂಡುದು ನುಡಿದವಧಿ ಯಿ
ನ್ನಾಳುತನವನು ತೋಱಬೇಹುದು
ಕಾಲವನು ನೂಕಿದೆವು ಮಱೆದಿಹುದುಚಿತವಲ್ಲ ನುತ ।

---

1 ಬಂದರೆಂದನು ಧರ್ಮನಂದನನು, ಚ.

ಕಾಳಗಕ್ಕನುವಾಗಿ ಪಾರ್ಥನ
ಮೇಲಣಾಹವಕಿರಿಸಿ ತಮ್ಮಯ
ನಾಲುವರು ನಡೆದರು ವಿರಾಟನ ಕೂಡೆ ಬಲವಾಗಿ ॥ ೫೦

ವರವಿರಾಟನ ಸೋದರರು ಸಾ
ವಿರದ ಸಂಖ್ಯೆಯ ರಾಜಪುತ್ರರು
ಕೊರಳಪದಕದ ಕಾಲತೊಡರಿನ ಮಣಿಯಮೌಳಿಗಳ ।
ಪರಿಮಳದಕತ್ತುರಿಯ ತಿಲಕದ
ಹೊರೆದಗಂಧದ ತೋರಮುಡುಹಿನ
ಕರದಖಂಡೆಯರಥಟಕ್ಕೈದಿದರಾನೆಕುದುರೆಯಲಿ ॥ ೫೧

ವಿರಾಟನ ಸೇನೆ ಕೌರವರ ಮೇಲೆ ಬಿದ್ದುದು.

ತೂಳುವರೆಗಳ ಲಗ್ಗೆಯಲಿ ಕೆಂ
ಧೂಳಿ ಮಸಗಿ ವಿರಾಟಭೂಪತಿ
ಯಾಳು ಕವಿದರೆ ಕೊಂಡು ಸೈರಿಸಿ ತಱುವೆ ಹಿಂದಿಕ್ಕಿ ।
ಕಾಳಗವ ಕೊಟ್ಟರು ಛಡಾಳಿಸಿ
ಸೂಳವಿಸೆ ನಿಸ್ಸಾಳ ದಿಕ್ಕಿನ
ಮೂಲೆ ಬಿರಿಯೆ ವಿರಾಟಬಲ ಹಳಚಿದುದು ಪರಬಲವ ॥ ೫೨

ತುರಗ ತುರಗವು ರಥ ರಥಂಗಳು
ಕರಿ ಕರಿಯು ಗೊಂದಣದ ಮೋಹರ
ಹರಿಗೆ ಹರಿಗೆಯು ಸಬಳದಿಟ್ಟೆಯು ಬಿಗಿದಬಿಲ್ಲುಗಳ ।
ಉರುವಣಿಸಿ ರಥ ರಥಗಳನೆ ತ
ತ್ತರಿಸಿ ನಾಯಕನಿಕರ ಬೊಬ್ಬಿ
ಟ್ಟರರೆ ಕವಿ ಕವಿ ಯೆನುತ ಕವಿದುದು ಉಭಯಬಲವೆಂದು ॥೫೩

ಬಿಡು ಸುಶರ್ಮಕ ಹೋಗದಿರು ತಲೆ
ಗೊಡುವೊಡಿದಿರಾಗೆನುತ ರಿಪುವಂ
ಗಡಿಗರನು ಮೂದಲಿಸಿ ಹೊಕ್ಕರು ರಾಯರಾಹುತರು ।

ತೊಡಚಿದರು ಬಿಲುಗೋಲ ಬಲ್ಲವ
ರೊಡನೆ ತಲೆವರಿಗೆಗಳ ಮೋಹರ
ಜಡಿದು ಖಂಡೆಯಕಾಱಭಟರೊಗ್ಗಾಗಿ ನೂಕಿದರು ॥ ೫೪

ವಿರಾಟನ ಸೇನೆಯನ್ನು ನೋಡಿ ಕೌರವರ ಅಪಹಾಸ.

ಫಡ ವಿರಾಟನ ಚುಕ್ಕಿಗಳಿರವ
ಗಡಿಸದಿರಿ ಸಾಯದಿರಿ ಬಿಚ್ಚಿದ
ಹೆಡತಲೆಯ ಹಾವಾದ ಕೀಚಕನಱಿದನಿನ್ನೇನು ।
ಮಿಡುಕಿ ಕಟಕವ ಹೊಕ್ಕು ನರಿ ಹಲು
ಬಿಡುವ ವೊಲು ವಿರಾಟ ಕೆಟ್ಟನು
ಕಡೆಗೆನುತ ಕೈಹೊಯ್ದು ನಕ್ಕುದು ಕೂಡೆ ಕುರುಸೇನೆ ॥ ೫೫

ವಿರಾಟಸುಶರ್ಮರ ಯುದ್ಧ.

ಕೋಡಕೈಯ್ಯಲಿ ನೂಕಿದರು ಕೈ
ಮಾಡ ತೇಜಿಯ ಥಟ್ಟು ಚೂಣಿಯ
ಬೀಡಿನಲಿ ತಿವಿದಾಡಿದರು ಕೊಂಕಣಿಗಭಟರೈದಿ [1] ।
ಕೂಡೆ ಕೈಕೊಂಡಾನೆಥೊರೆಗಳು
ಝೂಡಿಯಲಿ ಹೊಯ್ದಾಡಿದರು ಕೆ
ಟ್ಟೋಡಿದರು ಬಿರುದರು ಸುಶರ್ಮನ ಸೇನ ಮುಱಿವೊಡೆದು ॥
ಕುದುರೆ ಹೊಕ್ಕವು ದಂತಿಘಟೆ ತೂ
ಱಿದುವು ರಥವಾಜಿಗಳು ಸೇನೆಯ
ಹೊದರ ಹೊಯ್ದುವು ಕೂಡೆ ಕಾಲಾಳಿಱಿದು ಕಾದಿದರು ।
ಎದೆಯ ನೆಟ್ಟವು ಬಾಣ ಕೆಲಬರ [2]
ಬದಿಯೊಡೆದು ಕರುಳೊಕ್ಕು ನೆತ್ತಿಯ [3]
ಮಿದುಳ ಸುರಿಯಲು ಸತ್ತರುಬ್ಬರಿಸಿದುವು ನೊಱೆ ಮಸಗಿ ॥ ೫೬

1 ಡೊಂಕಣಿಯ ಪಟುಭಟರು, ಖ.
2 ಕದಡಿ ತಾ ದಱ ಮೈಯೆಳೊಕ್ಕವು, ಚ.
3 ಬದಿರಿದೆಲುಗಳ ಮುಱಿದನೆತ್ತಿಯ, ಚ.

ದಿಂಡುಗೆಡೆದುದು ದಂತಿಘಟೆ ಕಡಿ
ಖಂಡವಾದುದು ತುರಗದಳ ಮುಂ
ಕೊಂಡಿಳಿದು ಕಾಲಾಳು ಕೆಡೆದುದು ತಾರುಥಟ್ಟನಲಿ ।
ತುಂಡಿಸಿತು ರಥವಾಜಿ ಮಿದುಳಿನ
ದಂಡೆಯಲಿ ರಣಭೂಮಿ ರಕುತದ
ಗುಂಡಿಗೆಗಳೊಗ್ಗಾಯ್ತು ಶಾಕಿನಿಡಾಕಿನೀಜನಕೆ ॥ ೫೮

ಚೂಣಿಯಲಿ ಬಲ ಮುರಿದು ಧೊರೆಗಳ
ಮೇಲೆ ಬಿದ್ದುದು ಬವರ ಬಳಿಕೆ
ಚ್ಛಾಳುತನದಲಿ ಹೊಕ್ಕು ದಂವ್ಯಾಳಿಸುತ ನಿಜರಥವ ।
ಮೇಲು ದಳ ಕವಿದುದು ಮಹಾರಥ
ರೇಳುಸಾವಿರ ಮತ್ಸ್ಯರಾಜನ
ಕಾಳಗಕೆ ತೆಗೆದುದು ತ್ರಿಗರ್ತರ ಸೇನೆ ಮುಳಿವಡೆದು ॥ ೫೯

ಚೂಣಿ ಮುರಿದುದು ಕಲಿವಿರಾಟನು
ಕೇಣವಿಲ್ಲದೆ ಕಾದಿದನು ಕೈ
ಗೋಣು ಕುಣಿದಾಡಿದುವು ರಕುತದ ತೆಱೆಸು ಕಡಲೊಳಗೆ ।
ಹೂಣಿಗರು ಕಡಿವಡೆಯೆ ಕದನದ
ಜಾಣರನು ಮೂದಲಿಸಿ ಬಿರುದಿನ
ಕೇಣದಲಿ ನಗುತಾಸುಶರ್ಮಕ ಮುತ್ತಿ ಕೋಪದಲಿ ॥ ೬೦

ಬಲ ಮುರಿದು ಬರುತಿರಲು ಖಾತಿಯು
ತಳೆದು ವೀರಸುಶರ್ಮನಂಬಿನ
ಮಳೆಯ ಕಱೆಯುತ ರಿಪುವಿರಾಟನ ರಥವ ತಱುಬಿದನು ।
ಎಲವೊ ಫಡ ಫಡ ಮತ್ಸ್ಯ ಹುಲುಮಂ
ಡಳಿಕ ನಿನಗೇಕಾಳುತನ ವೆಂ
ದುಲಿದು ಕೈಕೊಂಡೆಚ್ಚು ಕಾದಿದನಾವಿರಾಟನಲಿ ॥ ೬೧

ಕವಿದು ಹುಯ್ಯಲು ಹರಿಬಕಾಱರು
ತಿವಿದು ಮತ್ಸ್ಯನ ಬಲವ ಸೀಳುತ
ಬವರದಲಿ ಬೆನ್ನಟ್ಟಿದನು ರಿಪುನಾಯಕರ ಕೆಡುಹಿ ।
ಅವನಿ ನೆಗ್ಗಲು ಪಾಯದಟವದ [1]
ಹವಣಿಸುವೆರಾರೆನೆ [2] ಸುಶರ್ಮಕ
ನವಳಿ ಹೊಯ್ದು ವಿರಾಟನೊಡನವಗಡಿಸಿ ಕಾದಿದನು ॥ ೬೦

ವಿರಾಟನನ್ನು ಸುಶರ್ಮನು ಹಿಡಿದುದು.

ಸರಳು ತೀರಲು ಕಿತ್ತು ಸುರಗಿಯ
ತಿರುಹಿ ತಿವಿದಾಡಿದರು ಮುಳಿದರೆ
ಪರಿಘದಲಿ ಕಾದಿದರು ಹೊಕ್ಕರು ಹಲಗೆಖಡ್ಗದಲಿ ।
ಬೆರಸಿ ಹೊಯ್ದಾಡಿದರು ಮತ್ಸ್ಯನ
ಭರವ ಹೊಗಳುತ ಕಲಿಸುಶರ್ಮಕ
ನುರುವಣಿಸಿದನು ಘಾಯವಡೆದು ವಿರಾಟನನು ಹಿಡಿದ ॥ ೬೧

ಸಿಕ್ಕಿದನು ಧೊರೆಯೊಪ್ಪುಗೊಟ್ಟರು
ಚುಕ್ಕಿಗಳು ಕೀಚಕನ ನೆಳಲಿರೆ
ಸಿಕ್ಕಲೀಸುವನೇ ವಿರಾಟನನೆನುತ ಬಲ ಬೆದಱೆ ।
ಉಕ್ಕಿದಾತನ ಹೆಗಲು ಬೇವುದು
ಮಕ್ಕಳಾಟಿಕೆಯಾಯ್ತು ತಾವ್ ಕೈ
ಯಿಕ್ಕಬೇಕೆಂದೊದಱಿದರು ಮತ್ಸ್ಯನ ಸಹೋದರರು ॥ ೬೨

ಹೂಣಿ ಹೊಕ್ಕು ವಿರಾಟಕಾಳಗ
ದಾಣಿ ಕೇಣವ ನಱಿಯದೊಬ್ಬನೆ
ಚೂಣಿಯಲಿ ಸಿಕ್ಕಿದನು ಧೊರೆ ಹಿಡಿವಡೆದನೆನೆ ಸೇನೆ ।
ಪ್ರಾಣ ಕೊರಳಲಿ ನಿಲಲು ರಣಬಿ
ನ್ನಾಣಿಗರು ಜವಗುಂದೆ ಭಂಗವ
ಕಾಣಲಾರದೆ ಧರ್ಮಸುತ ಭೀಮಂಗೆ ತೋಱಿಸಿದ ॥ ೬೩

---

1 ತವತವಗೆ ಮುಱಿಯೊಡೆದು ಬರುತಿರ, ಖ. 2 ಲವನಿಪತಿ ತಱುಬಲು, ಖ.

ಧರ್ಮರಾಯನು ವಿರಾಟನನ್ನು ಬಿಡಿಸೆಂದು ಭೀಮನಿಗೆ ಹೇಳಿದುದು.

ಬಲವನಾಯಕವಾಯ್ತು ಮತ್ಸ್ಯನ
ಕುಲಕೆ ಬಂದುದು ಕೇಡು ಸುಮ್ಮನೆ
ನಿಲುವುದನುಚಿತ ಭೀಮ ಬಿಡಿಸು ವಿರಾಟಭೂಪತಿಯ |
ಗೆಲವು ಪರಬಲಕಾದುದೆನೆ ರಿಪು
ಬಲದವಾನಲನಣ್ಣನಾಜ್ಞೆಯ
ತಲೆಯೊಳಾಂತನು ಮುಂದಣಾಲದ ಮರನ ನೋಡಿದನು || ೬೬

ಹೆಮ್ಮರವನಿದ ಕಿತ್ತು ವೈರಿಸು
ಶರ್ಮಕನ ನೊರಸುವೆನು ಬವರವ
ನೆಮ್ಮಿದರೆ ಮೋಹರವನಱಿವೆನು ಜೀಯ ನೋಡೆನಲು |
ತಮ್ಮ ಸೈರಿಸು ಮರನ ಮುಱಿಯದಿ
ರೆಮ್ಮ ಮಾತನು ಕೇಳು ಹೊಲ್ಲಹ
ವೆಮ್ಮ ತಾಗದೆ ಮಾಣದೆಂದನು ಧರ್ಮಸುತ ನಗುತ || ೬೭

ಮರನ ಮುಱಿದರೆ ನಮ್ಮನಱಿವನು
ಕುರುಕುಲಾಗ್ರಣಿ ಯಿಾಯಮಾನುಷ
ಪರಮಸಾಹಸ ಭೀಮಸೇನಂಗಲ್ಲದಿಲ್ಲೆಂದು |
ಅಱಿಕೆಯಹುದೆನೆ ಭೀಮನೆಂದನು
ಕುರುಕುಲಾಗ್ರಣಿ ಸಹಿತಿದೆಲ್ಲವ
ನೊರಸಿ ಕಳೆದೊಡೆ ಬಳಿಕ ನಮಗಾರುಂಟು ಮುನಿವವರು || ೬೮

ಉಗ್ರಕರ್ಮವ ನೆನೆಯ ಬೇಡ ಮ
ಹೋಗ್ರದಲಿ ಸಾಧಿಸಿದೆವವಧಿಸ
ಮಗ್ರವನು ಸಾಕಿನ್ನು ಬಿಡಿಸು ವಿರಾಟಭೂಪತಿಯ |
ವಿಗ್ರಹವ ಜಯಿಸೆನಲು ರಿಪುಕುಲ
ದಗ್ರಿಯನು ಬೀಳ್ಕೊಂಡು ವಿಲಯಮ
ಹೋಗ್ರಸನ್ನಿಭನರೆದನಿಭಹಯರಥಪದಾತಿಗಳ || ೬೯

ಸರಳ ಸಾವಿರದೆಂಟುಸಾವಿರ
ತುರಗವನು ಸೀಳಿದನು ಕರಿಗಳ
ನೆರವಿಯೈನೂರೆಂತು ಮುರಿದನು ತೇರುಸಾವಿರವ ।
ಅರಿಪದಾತಿಯು ಲಕ್ಷಸಂಖ್ಯೆಯು
ನೊರಸಿದನು ಬೆಂಬತ್ತಿ ಬಿಡು ಬಿಡು
ಧೊರೆವಿರಾಟನನೆನುತ ಹಿಡಿವನು ಕಲಿಸುಶರ್ಮಕನ ॥ ೨೦

ಎಲವೆಲವೊ ಕಲಿ ಮಲಲ ನಮ್ಮನು
ಸಲಹಿದವನಲ್ಲಾ ವಿರಾಟನು
ಸಿಲುಕಿದನು ದಾತಾರನವಸರಕೊದಗಬೇಹುದೆನೆ ।
ಉಲಿದು ಕೈಕೊಂಡಟ್ಟಿದನು ರಿಪು
ಬಲವ ತತ್ತಳಿದುಳಿಯೆ ಕವಡಿಕೆ
ಯೊಳಗೆ ಕಲುಬಿದ್ದಂತೆ ಕೆದರಿತು ವೈರಿಪಾಯಿದಳ ॥ ೨೧

ಪಶುವ ಬಿಡು ಬಿಡು ಮಾರಿ ಕೆಂಳದ
ಮಸಕವಾಯಿತು ವಿರಾಟಭೂಪನ
ಗಸಣಿ ಬೇಡೆನುತ ಸುಶರ್ಮಕ ತಿರುಹಿದನು ರಥವ ।
ಅಸಮರಣದಲಿ ಭಟರು ಕೈದುವ
ಬಿಸುಟು ಬದುಕುವ ಶಿರವ ತಡವುತ
ದೆಸೆದೆಸೆಗೆ ಜಾಳಿಸಿತು ಗೆಲಿದನು ಭೀಮನಾಹವವ ॥ ೨೨

ಆಗ ವಿರಾಟನ ಸಂತೋಷವಚನಗಳು.

ಮಲಲ ಮೆಚ್ಚಿದೆನೈ ಮಹಾದೇ
ವಲಘುಭುಜಬಲ ನನ್ನ ಬಿಡಿಸಿದೆ
ಸಿಲುಕಿದೆನ್ನು ಹಗೆಗೆಂದು ಬೋಳೈಸಿದನು ಮತ್ಸ್ಯನೃಪ ।
ಬಳಿಕ ಯಮನಂದನನು ಬಿಡಿಸಿದ
ಕಲಿಸುಶರ್ಮನನಿರುಳು ಕಾಳಗ
ದೊಳಗೆ ತುಱು ಮರಳಿದುವು ಗೆಲಿದರು ಪಾಂಡುನಂದನರು ॥೨೩

ನೀವೆ ಯರಸುಗಳೆಂದು ನಿಮ್ಮಯ
ಸೇವೆಯಲಿ ತಾನಿಹೆನು ನಾಲ್ವರಿ
ದಾವದೇಶದ ವೀರರೋ ಕಂಕಾದಿಭಟರೆನುತ ।
ಆವಿರಾಟನು ನುಡಿಯೆ ಸನ್ಮಾ
ನಾವಲಂಬಕೆ ತುಷ್ಟನಾದೆನು
ಭಾವಿಸೂಡೆ ಧರೆಯೆಮ್ಮದೆಂದನು ಧರ್ಮನಂದನನು ॥ ೨೪

ಮಾನಭಂಗದ ಮೇಲೆ ಕೌರವ
ಸೇನೆ ಸೆರಿಯೆ ಸುಶರ್ಮ ಕಡು ದು
ಮ್ಮಾನದಲಿ ತಲೆವಾುಸುಕಿನಲಿ ತಿರುಗಿದನು ಪಾಳಯಕೆ ।
ಭಾನು ಭುವನದ ನಯನವುದ್ರಾ
ವಾನಮುದ್ರೆಯ ಮುಖಿಯಲುತ್ತರ
ಕ್ಷೋಣಿಯಲಿ ಗೋಗ್ರಹಣವನು ಮಾಡಿದನು ಕುರುರಾಯ ॥ ೨೫

ಏನಿದೇನು ಸುಶರ್ಮ ನಿನ್ನಯ
ನೀನಿದೆತ್ತಲು ಹೋದೆ ನಿನ್ನಯ
ಸೇನೆ ಗಜಹಯವೆತ್ತ ಹೋದುವು ರಥವದೇನಾಯ್ತು ।
ಹೀನಕಳಯಾಯ್ತೆನುತಲಾವರ
ಭಾನುಮತಿ ನೆಱೆ ನುಡಿಯೆ ಜೀಯವ
ಧಾನ ಬಿನ್ನಹ ನುಡಿಯನಿಂನವಧರಿಸಿ ಕೇಳೆಂದ ॥ ೨೬

ಶತ್ರುವನು ನೆಱೆ ಗೆಲಿದು ಕಾಲನ
ಪುತ್ರನಾಜ್ಞೆ ಯೊಳೊಂದು ಪರಬ
ಲ ಮೃತ್ಯು ಪವನಜ ತುಱುವ ಮರಳಿಸಿ ಮತ್ಸ್ಯನೃಪಸಹಿತ ।
ಪೊತ್ತಹರುಷದ ಸಂಭ್ರಮದಿ ಪುರ
ಕುತ್ತರೋತ್ತರದಿಂದಲೈದೆ ನೃ
ಪೋತ್ತಮನು ನೆನಯುತ್ತಲಿರ್ದನು ವೀರನಾರಣನ ॥ ೨೭

ಐದನೆಯ ಸಂಧಿ ಮುಗಿದುದು.

## ಆರನೆಯ ಸಂಧಿ.

ಸೂಚನೆ.

ವೈರಿಭಟಸಂವರ್ತನೂತನ
ಭೈರವನು ಕಲಿಪಾರ್ಥ ಸಮರೋ
ದಾರಸಾರಥಿಯಾದನಂದು ವಿರಾಟನಂದನಗೆ ||

ಕೌರವರ ಸೇನೆ ಯುದ್ಧ ಮಾಡಿದ ಕ್ರಮ.

ಕೇಳು ಜನಮೇಜಯ ಸುಯೋಧನ
ನಾಳು ಮುತ್ತಿತು ತುರುಗಳನು ಮೇ
ಲಾಳು ಕವಿದುದು ಭೀಷ್ಮಕರ್ಣದ್ರೋಣಮೊದಲಾಗಿ |
ಕೋಲಸೂಟಿಯ ಸರಿವಳೆಗೆ ಗೋ
ಪಾಲಪಡೆ ಮುಗ್ಗಿದುದು ಗೋವರ
ಸಾಲ ಹೊಯ್ದರು ಕರ್ಣದುಶ್ಶಾಸನಜಯದ್ರಥರು || ೧

ಹೆಣಗಿ ತುರುಗಳ ಕಾಹಿನವರುರು
ವಣಿಸಿ ಕೆಡಹಿತು ಬಡಬವಹ್ನಿಯ
ಕೆಣಕಿದುದಕದ ಬೀಡು ಕವಿವಂದದಲಿ ಬಿಲುದೆಗೆದು |
ಮಣಿಮಕುಟವರ್ಧನರ ಸಮರಾಂ
ಗಣದೊಳಗೆ ಗೋಪಾಲಕರು ರಿಂ
ಗಣಗುಣಿದು ತೆಗೆದೆಸುತ ಬಂದರು ಮರಣಾಲಂಪಟರು || ೨

ರಾಯಚಕೂಣಿಯ ಚಾತುರಂಗದ
ನಾಯಕರು ಮೇಳೈಸಿ ಸಮರೋ
ಪಾಯದಲಿ ಹಿಂದಿಕ್ಕಿ ಕವಿದರು ಕೋಡಕೈಗಳಲಿ |

ಸಾಯಲಲಸದ ಗೋವರನು ಕ[1]
ಯ್ಯಾಯತಿಕೆ ಪೂರೈಸೆ ಕೊಂದರೆ[2]
ವಾಯುವಾದುದು ಹರಿಬಕಾಱಱ ಸೇನೆ ರಣದೊಳಗೆ ॥ ೩

ಮೇಲುದಱಿಕಿದಿರಾಗಿ ತುಱುವರಿ
ಗಾಳಗದೊಳೊಡೆ ಮುಗ್ಗಿ ಗೋಪರು
ಧೂಳಿಗೋಟೆಯ ಕೊಂಡರಮರರ ರಾಜಧಾನಿಯನು ।
ಸಾಲೊಡೆದು ಕೆಟ್ಟೋಡಿದರು ಗೋ
ಪಾಲನೊಬ್ಬನ ಹಿಡಿದು ಮೂಗಿನ
ಮೇಲೆ ಸುಣ್ಣವ ಬರೆದು ಬಿಟ್ಟರು ಹಗೆಯ ಪಟ್ಟಣಕೆ ॥ ೪

ವಿರಾಟನ ಸೇನೆ ಹಿಂತಿರುಗಿದುದು.

ಗರುವ ಗೋವರು ಹರಿದು ಸಂ
ಗರದಿ ಕೆಡೆದರು ರಾಯವೋಹರ
ತೆರಳಿಕೆಯ ತುಱುಗಳನು ಹಿಂದಿಕ್ಕಿದರು ಕಾಳಗಕೆ ।
ಬಿರುದರಾರುಂಟವರ ಕಳುಹೆನೆ
ಕರದ ಬಿಲ್ಲನ ಬಿಸುಟು ಬದುಕಿದ
ಶಿರವ ತಡೆವುತ ಗೋವನೊಬ್ಬನು ಪುರಕೆ ನಡೆತಂದ ॥ ೫

ಗಣನೆಯಿಲ್ಲದೆ ನಿನ್ನೆ ಸಮರಾಂ
ಗಣದ ಭಾರಣೆ ನೂಕಿತೆಲವೋ
ರಣದ ವಾರ್ತೆಯದೇನೆನುತ ಜನವೆಲ್ಲ ಗುಜುಗುಜಿಸೆ ।
ರಣವು ಕಿಱಿದಲ್ಲೆನುತ ಧಗೆ ಸಂ
ದಣಿಸಲವನೈತಂದು ಮೇಳದ
ಗಣಿಕೆಯರ ಮಧ್ಯದಲಿ ಮೊಱೆದಿರೆ ಕಂಡನುತ್ತರನ ॥ ೬

ದೂತನು ಬಂದು ಪರಾಜಯವಾರ್ತೆಯನ್ನು ಹೇಳಿದುದು.

ಬೆಗಡುಮುಸುಕಿದ ಭೀತಿಹೆಚ್ಚಿದ
ಧಗೆಯಹೊಯ್ಲುಗಳ ತುದಿನಾ

[1] ಕ್ಕೈ, ಚ.　　[2] ಗಾಯದ ಸುತನೆ ಸಱಿಯಕೊಂಡರು, ಚ.

ಲಗೆಯ ತೊದಲಿನನುಡಿಯ ಬೆರಗಿನ [1] ಬರತತಾಳಿಗೆಯ ।
ಅಗಿವಹುಯ್ಯಲುಗಾಱನೊಡ್ಡೋ
ಲಗಕೆ ಬಂದನು ನೃಪವಿರಾಟನ
ಮಗನ ಕಾಲಿಂಗೆಱಗಿದನು ದೂಱಿದನು ಕಳಕಳವ ॥ ೭

ಏಳು ಮನ್ನೆಯಗಂಡನಾಗು ನೃ
ಪಾಲ ಕೌರವರಾಯ ತುಱುಗಳ
ಕೋಳವಿಡಿದನು ಸೇನೆ ಬಂದುದು ಧರಣಿಯಗಲದಲಿ ।
ಧಾಳಿ ಬರುತಿದೆ ಕರೆಸಿಕೋ ನಿ
ನ್ನಾಳು ಕುದುರೆಯ ರಾಣಿವಾಸದ
ಗೂಳೆಯವ ತೆಗಿಸೆಂದು ನುಡಿದನು ಬಿನ್ನಹದ ಹರುವ [2] ॥ ೮

ಏನೆಲವೊ ತುದಿಮೂಗಿನಲಿ ಬೆಳು
ಪೇನು ಥಗೆ ಹೊಯ್ದೇಕೆ ಬಂದೆ ಯಿ
ದೇನು ನಿನ್ನಿನ ರಣವನ್ನೆಯ್ಯನು ಗೆಲಿದುದೇನಾಯ್ತು ।
ಏನು ಭಯ ಬೇಡೆನ್ನ ಕಲಹನಿ
ಧಾನವಾರ್ತೆಯದೇನೆನಲು ಕುರು
ಸೇನೆ ಬಂದುದು ತುಱುವ ಹಿಡಿದರು ಬಡಗದಿಕ್ಕಿನಲಿ ॥ ೯

ರಾಯ ತಾ ನೈತಂದನಾತನ
ನಾಯಕರು ಗುರುತನುಜಗುರುಗಾಂ
ಗೇಯಶಕುನಿಕಳಿಂಗಕರ್ಣಜಯದ್ರಥಾದಿಗಳು ।
ಜೇಯ ಬಿನ್ನಹ ದಟ್ಟದ ಘನತೆಗೆ
ತಾಯಿ ಗಡ ವೊಕ್ಕುಡಿತವೋಹರ
ದಾಯತವ ತಾನೆತ್ತ ಬಲ್ಲೆನು ಹೊಕ್ಕು ಹೊಗಱುವೊಡೆ ॥ ೧೦

ಎತ್ತ ದೂವಾಳಿಸುವೊಡಾಲಿಗ
ಳತ್ತಲಾನೆಯ ತಟ್ಟು ಕಾಲಾ
ಳೊತ್ತರದ ರಥವಾಜಿರೂಢಿಯ ರಾಯರಾವುತರು ।

---

[1] ಬಿರುಬಿನ, ಖ. [2] ಬಿರುವ, ಚ.

ಸುತ್ತ ಬಳಸಿಹುದೆತ್ತ ಸೇನೆ ಮನಹರಿ
ವತ್ತ ಮೋಹರವಲ್ಲದನ್ಯವ
ಮತ್ತೆಕಾಣೆನು ಜೀಯ ಹದನಿದು ವೈರಿವಾಹಿನಿಯ ॥ ೧೧

ಒಡ್ಡಿದರೊ ಪಡಿನೆಲನನವನಿಯ
ದಡ್ಡಿಯೋ ಹೇಳೆನಲು ಝಲ್ಲರಿ
ಯೊಡ್ಡು ತಳಿತುದು ಚಮರಸೀಗುರಿಗಳ ಪತಾಕೆಯಲಿ ।
ಅಡ್ಡಹಾಯ್ದಿನಕಿರಣ ಪವನನ
ಖಡ್ಡತನಕಾಳಾಯ್ತು [1] ಕೌರವ
ನೊಡ್ಡನಭಿವರ್ಣಿಸುವೊಡರಿಯೆನು ಜೀಯ ಕೇಳೆಂದ ॥ ೧೨

ತಳಿತಮಿಂಚಿನ ಬಳಗ ಮೊಳಗಿನ
ವೆಳೆಯ ದಿನಮಣಿಯುದಯವಹ್ನಿಯ
ಬೆಳೆ ಸಮುದ್ರದ ಘುಳುಘುಳುಧ್ವನಿಯಲ್ಲದೊಡ್ಡಿಲ್ಲ ।
ತಿಳಿವು ಸಮನಿಪುದೆನಗೆ ಪ್ರಳಯದ
ಜಲಧಿಯಲಿ ಗೋಪಾಲಜಾಲ ಹರಿ
ದಳಿದು ಹಿಡಿದರು ಸೆಜೆಯನಮರಾವತಿಯ ಸೂಳೆಯರ ॥ ೧೩

ಬಳಗೆ ನೀ ಕಾದುವೊಡೆ ದುರ್ಗವೆ
ಬಲಿಸು ಬವರವ ಹಿಂದುಗಳೆಯದೆ
ಕಲಿತನದ ಮನವುಳ್ಳೊಡೀಗಳೆ ನಡೆಯಬೇಹುದೆನೆ ।
ಕೆಲಬಲನ ನೋಡಿದನು ವಿರಾಸೆಯ
ನಲುಗಿದನು ತನ್ನಿದಿರಮೇಳದ
ಲಲನೆಯರ ಮೊಗ ನೋಡುತುತ್ತರ ನಗುತನಿಂತೆಂದ ॥ ೧೪

ಉತ್ತರನ ಪೌರುಷವಚನಗಳು.

ನೂಕು ಕುನ್ನಿಯನಾಹವದ ಭೀ
ತಾಕುಲನ ತಾನೀಗ ಹೆಂಡಿರ
ಸಾಕಿ ಬದುಕುವ ಲವಲವಿಕೆಯಲಿ ಜಾಱಿ ಬಂದೀಗ ।

1 ನಗೆಯಾಯ್ತು

ಕಾಕ ಬಳಸುವನಿವನು ನಾನು
ದ್ರೇಕಿಸಲು ಸಮರದಲಿ ನಿಲುವರೆ
ನಾಕದವರಿಗೆ ನೂಕದೆಂದನು ಸತಿಯರಿದಿರಿನಲಿ ‖ ೧೫

ಆಗ ಕೆಲವರು ಉತ್ತರನನ್ನು ಸ್ತುತಿಸಿದುದು.

ಎನಿತು ಬಲ ಘನವಾದೊಡೇನದು
ನಿನಗೆ ಗಹನವೆ ಜೇಯ ಜಗದಲಿ
ದಿನಪನಿದಿರಲಿ ದಿಟ್ಟತನವೇ ತಮದ ಗಾವಳಿಗೆ ।
ಬಿನುಗುರಾಯರ ಬಿಂಕ ಗೋನೆರ
ವೊನೆಗೆ ಮೆಱೆದೊಡೆ ಸಾಕು ನಿಂದಿರು
ಜನಪ ತೋಱಿಸು ಕೈಗುಣವ ಕೌರವನ ಥಟ್ಟನಲಿ ‖ ೧೬

ಎಂದೊಡುಬ್ಬರಿಸಿದನು ತಾ ಕಲಿ
ಯೆಂದು ಬಗೆದನು ಮೀಸೆಯನು ಬೆರ
ಳಿಂದ ತಿರುಹುತ ಮುಗುಳುನಗೆಹರುಷದಲಿ ಮೈಮೆಱೆದ ।
ಸಂದಣಿಸೆ ರೋಮಾಂಚ ಕೆಲಬಲ
ದಿಂದುಮುಖಿಯರ ನೋಡಿದನು ನೆಲ
ವಿಂದ ನುಡಿದನು ತನ್ನ ಪೂರುಷ [1] ತನದ ಪರಿಣತಿಯ ‖ ೧೭

ಉತ್ತರನು ತನ್ನನ್ನು ಹೊಗಳಿಕೊಂಡುದು.

ಅಹುದಹುದು ತಪ್ಪೇನು ಜೂಜಿನ
ಕುಹಕದಲಿ ಪಾಂಡವರ ಸೋಲಿಸಿ
ಮಹಿಯ ಕೊಂಡಂತೆನ್ನ ಕೆಣಕಿದನೇ ಸುಯೋಧನನು ।
ಸಹಸದಿಂದವೆ ತುಱುವ ಮರಳಿಚಿ
ತಹೆನು ಬಳಿಕಾ ಕೌರವನ ನಿ
ರ್ವಹಿಸಲೀವೆನೆ ಸೂಱೆಗೊಂಬೆನು ಹಸ್ತಿನಾಪುರವ ‖ ೧೮

---

1 ಪೌರುಷ, ಕ. ಖ. ಜ.

ಹಿಡಿದು ರಾಜ್ಯವ ಕೊಂಡು ಹೆಂಗುಸ
ಬಡಿದು ಪಾಂಡವರಾಯರನು ಹೊಱ
ವಡಿಸಿ ಕೊಬ್ಬಿದ ಭುಜಬಲವನೆನ್ನೊಡನೆ ತೋಱಿದನೆ ।
ಬಡಯುಧಿಷ್ಠಿರನೆಂದು ಬಗೆದನೆ
ಕಡುಗಿದರೆ ಕೌರವನ ಕೀರ್ತಿಯ
ತೊಡೆವೆನೞಿಯೆನಲಾಯೆನುತ ಸುಕುಮಾರ ಖತಿಗೊಂಡ । ೧೯

ತನಗೆ ಬಡಪಾಂಡವರ ತಱುಬಿದ
ಮನದ ಗರ್ವದ ಕೊಬ್ಬು ಕಾಲನ
ಮನೆಯನಾಳ್ವುದಲ್ಲದಿದ್ದರೆ ತನ್ನ ವೈರವನು ।
ನೆನೆವನೇ ದುರ್ಯೋಧನಗೆ ಮೇ
ದಿನಿಯ ರುಣ ತೀರಿದುದು ಮಝು ಭಾ
ಪೆನುತ ಸತಿಯರ ಮುಂದೆ ಭಾಷೆಯ ನುಡಿದ ಸುಕುಮಾರ [1] ॥೨೦

ವನಿತೆಯರ ಸಭೆಯಲಿ ಸಗಾಢದ
ದಿನಪ ತೇಜದ ಶೌರ್ಯದರ್ಪವ
ಜಿನುಗಿದನು ತನ್ನಳವನರಿಯದೆ ರಾಜಭವನದಲಿ ।
ತನತನಗೆ ಕಾಮಿನಿಯರಹುದೆನೆ
ಜನಪನುತ್ತರರಾಯ ಗರ್ಜಿಸಿ
ಕನಲಿದನು ಕೌರವನ ಬೈದೆಡಗಾಲ ತೊಡರುಲಿಯೆ ॥　　೨೧

ಏನ ನೆನೆದನೊ ಬಂದು ಕೆಟ್ಟನು
ಭೂನರೇಂದ್ರರೊಳೆನ್ನ ತೋಳಿನ
ನೂನಬಲವನು ಕೇಳಿದಱಿಯನೆ ಪರಬಲಾಂತಕನ ।

---

[1] ನೆನೆದು ದುರ್ಯೋಧನನು ತಾ ಮೇ
ದಿನಿಯನಾಳ್ವರೆ ಹಾ ಮಹಾದೇ
ವೆನುತಲುತ್ತರಬಿರಿದನುಡಿದನು ಹೆಂಗಳಿದಿರಿನಲಿ, ಜ.

ತಾನು ಬಂದು ವಿಹಾರದಲಿ ಭುವ
ನಾನುರಂಜಕನಾಗಿ ತಿರುಗಿದೊ
ಡೇನು ತನಗಿಲ್ಲೆಂದು ಕಮಲಾನನೆಯರೊಳು ನುಡಿದ ॥ ೨೨

ಜವನ ಮಿಾಸೆಯ ಮುಱಿದನೋ ಭೈ
ರವನ ದಾಡೆಯನಲುಗಿದನೊ ಮೃ
ತ್ಯುವಿನ ಮೇಲುದ ಸೆಳೆದನೊ ಕೇಸರಿಯ ಕೆಣಕಿದನೊ ।
ಬವರವನು ತೊಡಗಿದನಲಾ ಕೌ
ರವನಕಟ ಮರುಳಾದನೆಂದಾ
ಯುವತಿಯರ ಮೊಗ ನೋಡುತುತ್ತರ ಬಱಿದೆ ಕೆದಱಿದನು ॥

ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕೆಲರಧಮಕುಲದಲಿ ಜನಿಸಿ ಬಂದವರು ।
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟವರೊಳೆಂದು ಕು
ಮಾರ ನೊಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ ॥ ೨೪

ಅಱಿಯೆನೇ ಗಾಂಗೇಯನನು ತಾ
ನಱಿಯದವನೇ ದ್ರೋಣ ಕುಲವಲಿ
ಕೊಱತೆಯಾಗಿಹ ಕರ್ಣನೆಂಬುವನೆನಗೆ ಸರಿಯಹನೆ
ಬಱಿಯ ಬಯಲಾಡಂಬರದಿ ತುಱು
ಸೆಱೆಯ ಹಿಡಿದರೆ ತಮ್ಮ ಹೆಂಡಿರ
ಸೆಱೆಯ ತಾರದೆ ಮಾಣೆನೆಂದುತ್ತರನು ಗರ್ಜಿಸಿದ [1] ॥ ೨೫

ಪೊಡವಿಪತಿಗಳು ಬಂದು ತುಱುಗಳ
ಹಿಡಿವರೇ ಲೋಕದಲಿ ಯುಧಮರ
ಬಡಮನದ ಮನ್ನೆಯರ ವೈಸಿರಿ ಕೌರವನೊಳಾಯ್ತು ।

---

1 ಮಾಣ್ಬೆನೆಂದನು ನಾರಿಯರ ಮುಂದೆ, ಚ.

ಕಡೆಗೆ ದುರ್ಯಶ ವುಟಿವುದಲ್ಲದೆ
ಬಿಡುವೆನೇ ಗೋಧನವನೆನ್ನೊಳು-
ತುಡುಕಿ ಬದುಕುವನಾವನೆಂದನು ಖಂಡೆಯವ ಜಡಿದು ॥ ೧೬

ಬಲವ ಮುಱಿವೆನು ಹಸ್ತಿನಾಪುರ
ದೊಳಗೆ ತಾಣಾಂತರವನಿಕ್ಕುವೆ
ತೊಲಗಿಸುವೆ ಕೌರವನ ಸೇನೆಯ ಧೂಳಿಪಟವಮಾಡಿ ।
ಗೆಲವ ತಹೆನೆಂದುತ್ತರನು ಕೋ
ಮಲೆಯರಿದಿರಲಿ ಬಾಯ್ಗೆ ಬಂದುದ
ಗಳಹುತಿರ್ದನು ಬೇಕು ಬೇಡೆಂಬವರ ನಾಕಾಣೆ ॥ ೧೭

ಪರರು ನಿಜಸಾಹಸವ ಹೊಗಟಿದೊ
ಡಿರದೆ ಲಜ್ಜಿಸಬೇಕು ತನ್ನಯ
ಹಿರಿದು ಪೂರುಷ [1] ತನವ ತಾನಾಡಿದರೆ ಫಲವೇನು ।
ಇರವಿದನೆ ಗಹಗಹಿಸಿ ಮನದಲಿ
ತರಳೆಯರು ನಗಲಾವಿರಾಟನ
ವರಕುಮಾರಕನಿಂದೆ ನುಡಿದನು ಹೆಂಗಳಿದಿರಿನಲಿ ॥ ೧೮

ಆಗ ಉತ್ತರನು ಸಾರಥಿಯಿಲ್ಲದುದಕ್ಕೆ ಚಿಂತೆಮಾಡಿದುದು.

ನುಡಿದು ಫಲವೇನಿನ್ನು ಸಾರಥಿ
ಮಡಿದ ನಿನ್ನಿನ ಬವರದಲಿ ನಾ
ನುಡುಹನಾದೆನು ಶಿವ ಶಿವಾ ಯೆಂದೆನ್ನ ಕೈಮನಕೆ ।
ಗಡಣಿಸುವ ಸಾರಥಿಯನೊಬ್ಬನ
ಪಡೆದೆನಾದರೆ ಕೌರವೇಂದ್ರನ
ಪಡೆಗೆ ಹಬ್ಬವ ಮಾಡುವೆನು ತೋಱುವೆನು ಕೈಗುಣವ ॥ ೧೯

[1] ಪೌರುಷ, ಕ. ಖ. ಚ.

ಸಾರಥಿಯು ಶಿವ ಕೊಟ್ಟನಾದರೆ
ಮಾರಿಗುಬ್ಬಸವಾಗದಂತಕ
ನೂರು ತುಂಬದೆ ಹಬ್ಬವಾಗದೆ ರಣಪಿಶಾಚರಿಗೆ ।
ದೋರೆಗರುಳಲಿ ಶಾಕಿನಿಯರೊಡ
ಲೇರು ತುಂಬದೆ ಡೊಳ್ಳು ನೂಕದೆ
ಭೂತಭೇತಾಳರಿಗೆ ಹೋಹುದೆ ಬಱಿದೆ ರಣವೆಂದ ॥ ೩೦

ಪಳಹರನ ಮೇಳವಿಸಿ ಬಿರುದಿನ
ಬಳಿಯು ಚವರಿಯು ಬೀಸಿ ವಲೆತರ
ತಲೆಯು ಶೂಲದೊಳೊತ್ತಿ ತೇಜಿಗಳ ತಿರುಹಿ [1] ।
ಕಲಿತನದ ಭಟನೀಗ ನಿಲುವ
ಗ್ಗಳದ ಸೂತನ ತಂದು ಕೊಟ್ಟರೆ
ಗೆಲುವೆನೆಂದನು ರಣವ ಸರಸಿಜವದನೆಯರ ಮುಂದೆ ॥ ೩೧

ಆಗ ಅರ್ಜುನನು ತಾನು ಸಾರಥಿಯಾಗಿರುವಂತೆ ಅಪೇಕ್ಷಿಸಿದುದು.

ಕೇಳುತಿರ್ದನು ಪಾರ್ಥನೀತನ
ಬಾಲಭಾಷೆಗಳಲ್ಲವನು ಪಾಂ
ಚಾಲೆಗೆಕ್ಕಟಿ ನುಡಿದನಾವಿನ್ನಿಹುದು ಮತವಲ್ಲ ।
ಕಾಲ ತುಂಬಿತು ನಮ್ಮ ರಾಜ್ಯದ
ಮೇಲೆ ನಿಲುಕಲು ಬೇಕು ಕೌರವ
ರಾಳು ನಮಗೋಸುಗವೆ ಬಂದುದು ಕಾಂತೆ ಕೇಳೆಂದ ॥ ೩೨

ನರನ ಸಾರಥಿಯೆಂದು ನೀನು
ತ್ತರೆಗೆ ಸೂಚಿಸು ನನ್ನನೀಗಲೆ
ಕರೆಸೆನಲು ಕೈಕೊಂಡು ದ್ರೌಪದಿ ಬಂದಳೂಲವಿನಲಿ ।

---

1 ಶೂಲದ ಸಿಂದವೆತ್ತಿಸಿ ಸೀಗುರಿಯು ಬಿಗಿಸಿ, ಖ.

ಈ ವರ್ತಮಾನವನ್ನು ದ್ರೌಪದಿಯು ಉತ್ತರೆಗೆ ಹೇಳಿದುದು.

ತರುಣಿ ಕೇಳರ್ಜುನನ ಸಾರಥಿ
ವರಬೃಹನ್ನಳೆ ಖಾಂಡವಾಗ್ನಿಯು
ಹೊರೆದ ಗಡ ತಾನೆಂದು ಸತಿಯುತ್ತರೆಗೆ ಹೇಳಿದಳು ॥　　೨೨

ಕೇಳಿ ಹರುಷಿತೆಯಾದಳುತ್ತರೆ
ಯೋಲಗಕೆ ಬಂದಣ್ಣನಂಘ್ರಿಗೆ
ಲೋಲಲೋಚನೆ ಯೆರಗಿ ಕೈಮುಗಿದೆಂದಳೀಹದನ ।
ಕೇಳಿದೆನು ಸಾರಥಿಯು ನೆಲೆಯನು
ಕಾಳಗಕೆ ನಡೆ ಯಣ್ಣದೇವ ನೃ
ಪಾಲಕರ ಜಯಿಸೆಂದೊಡುತ್ತರ ನಗುತ ಬೆಸಗೊಂಡ ॥　　೨೪

ತಂಗಿ ಹೇಳೌ ತಾಯೆ ನಿನಗೀ
ಸಂಗತಿಯನಾರರುಹಿದರು ಬಟಿ
ಕಂಘವಣೆಯುಳ್ಳವನೆ ಸಾರಥಿತನದ ಕೈಮೆಯುಳಿ ।
ಮಂಗಳವಲಾ ಬಟಿಕ ರಣದೊಳ
ಭಂಗನಹೆ ನಿನ್ನಾಣೆ ತನ್ನಯ
ತುಂಗವಿಕ್ರಮತನವನುಱುಹಿದೆ ಲೇಸು ಲೇಸೆಂದ ॥　　೨೫

ಎಂದಳೀ ಸೈರಂಧ್ರಿ ಸುರಪನ
ನಂದನವ ಸುಡುವೆಂದು ಪಾರ್ಥನ
ಮುಂದೆ ಸಾರಥಿಯಾದ ಗಡ ನಾವಱಿಯೆವೀ ಹದನ ।
ಹಿಂದುಗಳೆಯದೆ ಕರೆಸು ನಮ್ಮ ಬೃ
ಹನ್ನಳೆಯನೆನೆ ನಗುತ ಲೇಸಾ
ಯ್ತೆಂದು ಪರಮೋತ್ಸಾಹದಲಿ ಸೈರಂಧ್ರಿಗಿಂತೆಂದ ॥　　೨೬

ಸಾರಥಿಯು ಕೊಟ್ಟೆನ್ನನುಱುಹಿದೆ
ವಾರಿಜಾನನೆ ಲೇಸ ಮಾಡಿದೆ
ಕೌರವನ ತನಿಗರುಳ ತೆಗೆವೆನು ತಡವ ಮಾಡಿಸದೆ ।

ನಾರಿ ನೀನೇ ಹೋಗಿ ಪಾರ್ಥನ
ಸಾರಥಿಯು ತಾ ಯೆನಲು ನಮ್ಮನು
ವೀರ ಬಗೆಯನು ನಿಮ್ಮ ತಂಗಿಯು ಕಳುಹಿ ಕರೆಸೆಂದು ॥ ೩೭

ಉತ್ತರೆಯು ಬೃಹನ್ನಳೆಯನ್ನು ಕರೆಯುವುದಕ್ಕೆ ಹೋದುದು.

ತಾಯೆ ನೀನೇ ಹೋಗಿ ಸೂತನ
ತಾ ಯೆನಲು ಕೈಕೊಂಡು ಕಮಲದ
ಳಾಯತಾಕ್ಷಿ ಮನೋಭವನ ಮಱಿಯಾನೆಯಂದದಲಿ ।
ರಾಯಕುವರಿ ನವಾಯಗತಿಗರು
ವಾಯಿಯಲಿ ಬರೆ ವಿಟರ ಕರಣದ
ಲಾಯ ತೊಡಕಿತು ತಗೆದಳಂಗನೆ ಜನರ ಕಣ್ಮನವ ॥ ೩೮

ಐದುಶರವೇಕೊಂದು ಬಾಣವಿ
ದೈದದೇ ಯಿನ್ನಮಮ ಕಾಮನ
ಕೈದುಕಾಱತನಕ್ಕೆ ಕೋಡದೆ ಕೊಂಕರಾದವರು [1] ।
ಕಾಯ್ದು ಕೊಳ್ಳನೆ ಮುನಿಮನವನಡ
ಹಾಯ್ದು ಹಿಡಿಯೆನೆ ಹಿರಿಯರನು ವಿಧಿ
ಕೊಯ್ದನಕಟಾ ಕೊರಳನೆಂದುದು ನಗುತ ವಿಟನಿಕರ ॥ ೩೯

ಅರಳುಗಂಗಳ ಬೆಳಗು ಹೊಯ್ದು
ಬ್ಬರಿಸೆ ಚಿತ್ತದ ತಿಮಿರ ಹೆಚ್ಚಲು
ಕುರುಳ ಕಾಳಿಕೆ ತಾಗಿ ಮುಖ ಬಿಳುಪೇಱ ವಿಟಜನದ ।
ಸರಸತರಲಾವಣ್ಯರಸದಿಂ
ದುರಿಮುಸಗೆ ಜನಹೃದಯದಲಿ ವೈ
ಪರಿಮಳದ ಪಸರಿನಲಿ ಪದ್ಮಿನಿ [2] ಬಂದಳೊಲವಿನಲಿ ॥ ೪೦

ನಡೆ ನಡೆಯ ಬಂಧಿಸಿತು ನೋಟವ
ನುಡುಗಿಸಿತು ಕಡುನೋಟ ಸತಿಯಳ
ನುಡಿಯ ಮೇಳದ ಮಾತು ಮನುಜರ ಮಾತ ಮಾಣಿಸಿತು ।

[1] ಕಂದದಿಹರಾರು, ಚ.  [2] ಉತ್ತರೆ, ಕ, ಖ.

ಬಿಡಿಸಿತಧರದ ರಾಗ ರಾಗವ
ಬಡತನವ ಹೆಚ್ಚಿಸಿತು ನಡುವಿನ
ಬಡತನವು ವಿಟಜನಕೆನಲು ನಡೆತಂದಳಿಂದುಮುಖಿ ॥ ೪೧

ಕುರುಳ ತಿದ್ದುತೆ ಮೊಲೆಗೆ ಮೇಲುದ
ಸರಿಯುತೀಕ್ಷಾವಳಿಯ ಮೆಲ್ಲನೆ
ತಿರುಗಿ ಹಾಯ್ಕುತ ಬಿಡುಮುಡಿಯ ನೆಡಗೈಯೊಳೊಂದಿಸುತೆ ।
ಮರನಿರಾಜಿಯ ನಿಱಿಯ ರಭಸದ
ಚರಣದಂದುಗೆ ದನಿಯ ಗಮನದ
ಭರದಿ ಕಿಱುಬೆಮರಿಡುತೆ ನಡೆತಂದಳಿಂದುಮುಖಿ ॥ ೪೨

ಪಾರ್ಥನ ಪ್ರಶ್ನೆ

ಬರವ ಕಂಡನು ಪಾರ್ಥನೇನು
ತ್ತರೆ ಕುಮಾರಿ ಕಠೋರಗತಿಯಲಿ
ಬರವು ಭಾರಿಯಕಾರ್ಯವೇನು ಸೂಚಿಸುತಲಿದೆ ಯೆನಲು ।

ಉತ್ತರೆಯ ಉತ್ತರ.

ಬರವು ಬೇಱಿಲ್ಲೆನ್ನ ಮಾತನು
ಹುರುಳುಗೆಡಿಸದೆ ಸಲಿಸುವೊಡೆ ನಿಮ
ಗಱುಹಿದಪೆನೆನೆ ಮೀಱಬಲ್ಲೆನೆ ಮಗಳ ಹೇಳೆಂದ ॥ ೪೩

ನೆರೆದು ಬಂದರು [1] ಹಸ್ತಿನಾಪುರ
ದರಸುಗಳು ಹೊಲನೊಳಗೆ ಶತಸಾ
ವಿರದ ತುಱುಗಳ ಹಿಡಿವರಟಿಪುದು ಗೋಪಪಡೆ ಕಾದಿ ।
ಮುರಳಿಚುವರೆಮ್ಮಣ್ಣದೇವನ
ಧುರಕೆ ಸಾರಥಿಯಿಲ್ಲ ನೀವಾ
ನರನ ಸಾರಥಿಯೆಂದು ಕೇಳಿದೆವೆಂದಳಿಂದುಮುಖಿ ॥ ೪೪

1 ಪುರಕೆ ಸಾಯ್ದರು, ಚ.

ಬೃಹನ್ನಳೆಯು ಸಾರಥಿಯಾಗಲೊಪ್ಪಿ ಉತ್ತರನ
ಬಳಿಗೆ ಬಂದುದು.

ಇನ್ನು ನೀವೇ ಬಲ್ಲಿರೆನೆ ನಡೆ
ನಿನ್ನ ಮಾತನು ಮಾಱಬಲ್ಲೆನೆ
ಮುನ್ನ ಸಾರಥಿಯಹೆನು ನೋಡುವೆನೆನುತ ಮಹಿಲದಲಿ ।
ಬೆನ್ನೊಳಬಲೆಯನೈದಿ ಬರೆ ಸಂ
ಪನ್ನನೋಲಗಕೈದೆ ನಿಜಹರು
ಷೋನ್ನತಿಯಲುತ್ತರಕುಮಾರಕ ಕರೆದು ಮನ್ನಿಸಿದ ॥ ೪೫

ಉತ್ತರ ಬೃಹನ್ನಳೆಯರ ಸಂವಾದ.

ಎಲೆ ಬೃಹನ್ನಳೆ ತೆತ್ತುದೆನಗ
ಗ್ಗಳೆಯರೊಳು ವಿಗ್ರಹವು ಸಾರಥಿ
ಯುಚಿದನೆನ್ನವನೀನು ಸಾರಥಿಯಾಗಿ ಸಮರದಲಿ ।
ಉಱುಹಬೇಹುದು ನೀ ಸಮರ್ಥನು
ಫಲುಗುಣನ ಸಾರಥಿಯಲೈ ನೀ
ನೊಲಿದು ಮೆಚ್ಚಲು ಕಾದಿ ತೋಱುವೆನಹಿತಸೇನೆಯಲಿ ॥ ೪೬

ಎಲೆ ಕುಮಾರಕ ನಿನ್ನ ತಂಗಿಗೆ
ಕಲಿಸುವಗ್ಗದ ನಾಟ್ಯವಿದ್ಯೆಗ
ಳೊಳಗೆ ಪರಿಣತಿ ತನಗಿದಲ್ಲದೆ ರಾಯರಿಧಿರಿನಲಿ ।
ನಿಲಲು ತಾನಂಜುವೆನು ಕೊಳುಗುಳ
ದೊಳಗೆ ಸಾರಥಿತನವ ಬಲ್ಲೆನೆ
ಎಲೆ ಕುಮಾರನೆ ಯೆನಲು ತಾನಿರೆ ಭೀತಿಬೇಡೆಂದ ॥ ೪೭

ಭರತವಿದ್ಯಾವಿಷಯದಲಿ ಸಲೆ
ಪರಿಚಯವು ನಮಗಲ್ಲದೀ ಸಂ
ಗರದ ಸಾರಥಿತನವ ಮಱೆದೆವು ಹಲವುಕಾಲದಲಿ ।

ಅರಿಭಟರು ಭೀಷ್ಮಾದಿಗಳು ನಿಲ
ಲರಿದು ಸಾರಥಿತನದ ಕೈಮನ
ಬರಡರಿಗೆ ದೊರೆಕೊಂಬುದೇ ರಣಸೂಜಿ ಯಲ್ಲೆಂದ ॥ ೪೮

ಆನಿರಲು ಭೀಷ್ಮಾದಿಗಳು ನಿನ
ಗೇನ ಮಾಡಲು ಬಲ್ಲರಳುಕದೆ
ನೀನು ಸಾರಥಿಯಾಗು ನಿಮಿಷಕೆ ಗೆಲುವೆನವರುಗಳ ।
ನಾನದಾರೆಂದಱಿಯಲಾ ಗುರು
ಸೂನುಕರ್ಣದ್ರೋಣರೆಂಬವ
ರಾನಱಿಯದವರಲ್ಲ ಸಾರಥಿಯಾಗು ಸಾಕೆಂದ ॥ ೪೯

ಎಲೆ ಮರುಳೆ ತಾನೆತ್ತ ಚಾತು
ರ್ಬಲದ ಮೋಹರವೆತ್ತ ಗರುಡಿಯ
ನಿಳಯದೊಳಗುತ್ತರೆಗೆ ತಾನೀಭರತವಿದ್ಯೆಯನು ।
ಕಲಿಸಿ ಜೀವಿಸುವರ್ಗೆ ಕೌರವ
ಬಲವ ಕಂಡರೆ ಭೀತಿ ಘನವೆನೆ
ಕಳಕಳಿಸಿ ನಗುತಾಬೃಹನ್ನಳೆಗುತ್ತರನು ನುಡಿದ ॥ ೫೦

ಅಂಜದಿರು ಸಾರಥಿಯೆ ತನ್ನದು
ರಂಜಕದ ನುಡಿಯಲ್ಲ ಕಾವಳ
ವಂಜಿಸುವುದೇ ಇನನ ತನ್ನ ಪರಾಕ್ರಮವನಱಿಯೆ ।
ಭಂಜಿಸುವೆನಹಿತರನು ನಾಕದ
ಕಂಜವದನೆಯರಪ್ಪವೊಲು ನಿನ
ಗಂಜಿಕೆಯದೇಕೆನಲು ನಗುತಿಂತೆಂದನಾಪಾರ್ಥ ॥ ೫೧

ಆಗ ಬೃಹನ್ನಳೆಯು ಸಾರಥಿತ್ವವನ್ನೊಪ್ಪಿ
ರಥವನ್ನೇರಿದುದು.

ವೀರನಹೆ ಬೞಿಕೇನು ರಾಜಕು
ಮಾರನಿಱಿವೊಡೆ ಹರೆಯುವೆಲ್ಲಾ
ಸಾರಥಿತ್ವವ ಮಾಡಿ ನೋಡುವೆ ರಥವ ತರಿಸೆಂದು ।

ವಾರುಣದ ಮಂದಿರದೊಳಾಯಿದು
ಚಾರುತುರಗಾವಳಿಯ ಬಿಗಿದನು
ತೇರ ಸಂವರಿಸಿದನು ರಥವೇಱಿದನು ಕಲಿಪಾರ್ಥ ॥ ೫೨

ವೀರಕುವರವಿಭಾಡ ರಾಯಕು
ಮಾರಮಸ್ತಕಶೂಲ ವೈರಿಕು
ಮಾರಕೇಸರಿ ರಾಯರೆದೆದಲ್ಲಣದ ನಿಶ್ಶಂಕ ।
ಧೀರಕುವರಕುಠಾರ ಮಲ್ಲಕು
ಮಾರಗಿರಿವಜ್ರ ಯೆನಲು ತಾ
ನಾರಿಯರ ಬಿರುದಿನನುಡಿಯ ಕೇಳಿಯಲಿ ಪೊಱಮಂಟ ॥ ೫೩

ಮೀಸೆಗಳ ತಿರುಹುವನು ಭುಜದ ವಿ
ಲಾಸವನು ನೋಡುವನು ಬಿರುದಿನ
ಭಾಷೆಗಳನಡಿಗಡಿಗೆ ಕೇಳುತೆ ತುಱುವ ಸೆಱೆಹೊಯ್ದು ।
ಆಸುಯೋಧನಬಲವ ಕಾಲನ
ಮೀಸಲಿಗೆ ಮಾಡುವೆನೆನುತೆ ಪರಿ
ತೋಷಸಂರಂಭದಲಿ ಮಾತಿನ ವೀರ ಬರುತಿರ್ದ ॥ ೫೪

ಮಂಗಳಾರತಿ ಯೆತ್ತಿದರು ನಿಖಿ
ಳಾಂಗನೆಯರುತ್ತರಗೆ ನಿಜಸ
ರ್ವಾಂಗಶೃಂಗಾರದಲಿ ಹೊಳೆಯುತೆ ಬಂದು ರಥವೇಱೆ ।

ಕವಚವನ್ನು ತರಿಸಿ ತಾನೇ ತೊಡಿಸಿದುದು.

ಹೊಂಗೆಲಸದಾ ಕವಚವನು ಪಾ
ರ್ಥಂಗೆ ಕೊಟ್ಟನು ಜೋಡುಸೀಸಕ
ವಂಗದೊಳಗಳವಡಲು ರಾಜಕುಮಾರನನುವಾದ ॥ ೫೫

ನರನು ತಲೆಕೆಳಗಾಗೆ ಕವಚವ
ಸರಿಯುತಿರೆ ಘೊಳ್ಳೆಂದು ಕೈ ಹೊ
ಯು ರಸಿಯರು ನಗೆ ನಾಚಿದಂತಿರೆ ಪಾರ್ಥ ತಲೆವಾಗಿ ।

ತಿರುಗಿ ಮೇಲ್ಮೊಗವಾಗೆ ತೊಡಲು
ತ್ವರೆ ಬಳಿಕ ನಸುನಗಲು ಸಾರಥಿ
ಯಱಿಯನು ತಪ್ಪೇನೆನುತಲುತ್ತರ ತಾನೆ ತೊಡಿಸಿದನು ॥ ೫೬

ಕವಚವನು ತೊಡಲಱಿಯದವನಾ
ಹವಕೆ ಸಾರಥಿತನವ ಮಾಡುವ
ಹವಣು ತಾನೆಂತೆನುತ ನಕ್ಕರು ನಿಖಿಳನಾರಿಯರು ।
ಬವರವನು ನಮ್ಮಣ್ಣ ಗೆಲಿದಪ
ನವರವರ ಪರಿಧಾನವಾಭರ
ಣವನು ಸಾರಥಿ ಕೊಂಡು ಬಾ ಯೆಂದಳು ಸರೋಜಮುಖಿ ॥

ಆಗ ಬೃಹನ್ನಳೆಯು ರಥವನ್ನು ನಡೆಸಲು ಸರ್ವರೂ
ಹಿಂಬಾಳಿಸುವುದು.

ನಸುನಗುತೆ ಕೈಕೊಂಡನರ್ಜುನ
ನೆಸಗಿದನು ರಥವನು ಸಮಿಾರನ
ಮಿಸುಕಲೀಯದೆ ಮಿಕ್ಕು ನಡೆದುವು ರಥದ ವಾಜಿಗಳು ।
ಹೊಸಪರಿಯ ಸಾರಥಿಯಲಾ ನವ
ಗಸದಳವು ಸಂಗಾತ ಬರಲೆಂ
ದುಸಿರದುಚಿದುದು ಹಿಂದೆ ಪುರದಲಿ ಚಾತುರಂಗಬಲ ॥ ೫೭

ಪುರದ ರಣಮಂಡಲದ ಬಾಗಿಲ
ನುರವಣಿಸಿ ಹೊಱಕೋಟೆಗಳ ಪರಿ
ಪರಿಯ ಬಾಗಿಲ ಕಳಿದು ಹರಿದುದು ತೇರು ವಹಿಲದಲಿ ।
ತೆರೆಯ ಮೇಲಣ ತೆಪ್ಪದಂತಿರೆ
ಧರಣಿಯೊಲೆದುದು ಗಾಲಿಗಳ ಡಾ
ವರದ ಭಾರಿಗೆ ಕೊಱೆಮದಿಳ್ ವರರಥದ ಬಿಱುವರಿಗೆ ॥ ೫೮

ಎಲೆ ಬೃಹನ್ನಳೆ ಬವರದೊಳಗೆ
ನ್ನಳವಱಿದು ರಥವೆಸಗಬೇಕೆಂ
ದುಲಿಯೆ ಕೇಳುತೆ ಪಾರ್ಥನತಿವೇಗದಲಿ ನಡೆತರಲು ।

ಬಳಸಿ ತೋಱುವೆ ನಿನ್ನ ಮೆಚ್ಚನು
ಕಲಿಸುವೆನು ನೋಡೆನುತೆ ವಾಘೆಯ
ನಿಳುಹಿ ತೇಜಿಯನಡಹಿ ವಹಿಲದೊಳೌಕಿದನು ರಥವ ॥ ೬೦

ಗತಿಗೆ ಕುಣಿದುವು ನಾಸಿಕದ ಹುಂ
ಕೃತಿಯು ಪವನನ ಹಳಿವಲುಳಿಯುಲಿ
ಗತಿಯು ಸಂಚಿತಪಂಚಧಾರಾಪ್ರಾಥವಾಜಿಗಳು ।
ವಿತತರಥಪದದಳಿತವಸುಧೋ
ತ್ಪತಿತಧೂಳೀಪಟಳಪರಿಚಯಂ
ಬಿತದಿಶಾಮುಖಸ್ಯೈದಿದನು ಕುರುರಾಯ ಮೋಹರವ ॥ ೬೧

ಮುಂದೆ ರಥವೆಸಗಿದನು ಪಾರ್ಥನು
ಬಂದನುತ್ತರಸಹಿತ ವಹಿಲದೊ
ಳಂದು ಬಡಗಣದೆಸೆಗೆ ಮೇಲಣ ಸುರರು ನೋಡುತಿರೆ ॥
ಇಂದಿನಾಹವದೊಳಗೆ ನರ ರಿಪು
ವೃಂದವನು ಜಯಿಸುವನೆನುತಲಾ
ನಂದದಿಂದವೆ ಹರುಷಿಯಾದನು ವೀರನಾರಯಣ ॥ ೬೨

ಆರನೆಯ ಸಂಧಿ ಮುಗಿದುದು.

## ಏಳನೆಯ ಸಂಧಿ.

ಸೂಚನೆ.

ಚಂಡರಿಪುಬಲವಿಲಯಹರನು
ದ್ದಂಡಶಸ್ತ್ರಾಸ್ತ್ರವನು ಕೈ
ಕೊಂಡು ಸುರಪನ ಸೂನು ತಡೆದನು ವೈರಿಮೋಹರವ ॥

ಉತ್ತರನು ಕುರಸೇನೆಯನ್ನು ನೋಡಿದುದು.

ಎಲೆ ಪರೀಕ್ಷಿತತನಯ ಕೇಳ್ ನೃಪ
ತಿಲಕನತಿವೇಗದಲಿ ರಥವನು
ಕೊಳುಗುಳಕೆ ತರೆ ಕಂಡನುತ್ತರ ಮುಂದೆ ದೂರದಲಿ ।
ತಳಿತಕುಂತದ ಬಾಯಿಧಾರೆಯ
ಹೊಳವುಗಳ ಹೊದರೆದ್ದ ಸಿಂಧದ
ಸೆಳೆಯ ಸೀಗುರಿಗಳ ಸುರಂಭದ ಸಕಲವೋಹರವ ॥ ೧

ಕರಿಘಟಾವಳಿಯೊಡ್ಡುಗಲ್ಲಿನ
ತುರಗನಿಕರದ ತೆರೆಯ ತೇರಿನ
ಹೊರಳಿಗಳ ಸುಳಿಯಾತಪತ್ರದ ಬಹಳಬುದ್ಬುದದ ।
ನರನಿಕಾಯದ ಜಲಚರೌಘದ
ತರದ ವಾದ್ಯಧ್ವನಿಯ ರವದು
ಬ್ಬರದಲಿದ್ದುದು ಬಹಳಜಲನಿಧಿಯಂತೆ ಕುರುಸೇನೆ [1] ॥ ೨

ಜಡಿವಖಡ್ಗದ ಕಿಡಿಯ ಸೇನೆಯ
ತೊಡರುಗಳ ಕೇಸುರಿಯ ಬಲದು
ಗ್ಗಡದರಭಸದ ರೌದ್ರರವೇಛಟಛಟಿತನಿಸ್ವನದ ।
ಇಡಿದಧೂಳಿಯ ಧೂಮರಾಶಿಯ
ಪಡೆ ವಿರಾಟನ ಸುತನ ಕಂಗಳ
ಗೊಡನೊಡನೆ ದಾವಾಗ್ನಿಯಂತಿರೆ ತೋಱಿತಿದಿರಿನಲಿ ॥ ೩

ಪ್ರಳಯಮೇಘದ ಮಾಲೆಯೋ ಕರಿ
ಕುಲವೊ ಸಿಡಿಲಿನ ಗರುಡಿಯೋ ಕಳ
ಕಳವೊ ಕಲ್ಪಾನಳನ ಧೂಮಾವಳಿಯೊ ಕೈದುಗಳೊ ।
ನೆಲನ ದಡ್ಡಿಯ ಬೆಟ್ಟದಡವಿಯೊ
ತಳಿತರೆಕ್ಕೆಯವೋ ಜಗಂಗಳ
ನಳಿವಜಲಧಿಯೊ ಸೇನೆಯೋ ನಾನಱಿಯೆನಿವನೆಂದ ॥ ೪

---

1 ಬಲಜಲಧಿ, ಕ. ಖ.

ಆಗ ಉತ್ತರನು ಹೆದರಿ ರಥವನ್ನು ಹಿಂದಕ್ಕೆ ತಿರುಗಿ
ಸಿಂದು ಹೇಳಿದುದು.

ಕಡೆಗೆ ಹಾಯ್ದುವು ಕಂಗಳೀಬಲ
ಗಡಲ ಮನವೀಸಾಡಲಾರದು
ಪೊಡಲುವಿಡಿದಿರಲೇನ ಕಾಣಲು ಬಾರದದ್ಭುತವ ।
ಪೊಡವಿ ಯಿಾದುದೊ ಮೋಹರವೆನಿದ
ರೊಡನೆ ಕಾದುವನಾವನಾತನೆ
ಮೃಡನು ಶಿವ ಶಿವ ಕಾದಿ ಗೆಲಿದೆವು ಬಲಕೆ ನವೊ ಯೆಂದ ॥ ೫

ಕಾಳಕೂಟದ ತೊಱೆಯೊ ಮಾರಿಯ
ಗೂಳಯುವೊ ಮೃತ್ಯುವಿನ ಗಂಟಲ [1]
ತಾಳಿಗೆಯೋ [2] ಭೈರವನ ಥಟ್ಟೊ ಜವನ ಜಂಗುಳಿಯೊ ।
ಕಾಲರುದ್ರನ ನೊಸಲ ವಹ್ನಿ
ಜ್ವಾಲೆಯೋ ಕೌರವನ ಸೇನಾ
ಜಾಲವೊ ಶಿವ ಶಿವಾ ಯೆನುತೆ ಹೆದಱಿದನು ಸುಕುಮಾರ ॥ ೬

ಸಾರೆ ಬರಬರಲಿವನ ಮನವು
ಬ್ಬಾರಿಸಿತು ಮೈಮುಱಿದು ರೋಮವಿ
ಕಾರ ಮಿಗೆ ಕಾಹೇರಿತವಯವವಡಿಗಡಿಗೆ ನಡುಗಿ ।
ಭೂರಿಭಯತಾಪದಲಿ ತಾಳಿಗೆ
ನೀರು ತೆಗೆದುದು ತುಟಿಯೊಣಗಿ ಸುಕು
ಮಾರ ಕಣ್ಣೆವೆ ಸೀಯೆ ಕೈಯಲಿ ಮುಚ್ಚಿದನು ಮುಖವ ॥ ೭

ಹಸಿದ ಮಾರಿಯು ಕಟಕದಲಿ ಕುಱಿ
ನುಸುಳಿ ಬದುಕುವುದೆ ಬೃಹನ್ನಳೆ
ಯೆಸಗದಿರು ತೇಜಿಗಳ ತಡೆ ಚವ್ಕಟಿಗೆಯನು ಬಿಸುಡು ।

---

[1] ಜಕ್ಕಣಿಯ, ಕ. ಖ. [2] ಪಾಳೆಯವೊ, ಕ. ಖ.

ಮಿಸುಕಬಹುದೇ ಪ್ರಳಯಕಾಲನ
ಮುಸುಕನುಗಿವವರಾರು ಕೌರವ
ನಸಮಬಲನೈ ರಥವ ಮರಳಿಚು ಪುರಕೆ ಬೇಗೆಂದ ॥ ೮

ಬೃಹನ್ನಳೆಯು ಉತ್ತರನಿಗೆ ಧೈರ್ಯವನ್ನು ಹೇಳಿದುದು.

ಎಲೆ ಕುಮಾರಕ ಮೊದಲಚುಂಬನ
ದೊಳಗೆ ಹಲು ಹೋದಂತೆ ಕಾಳಗ
ದೊಳಗೆ ಬೆರಸದ ಮುನ್ನ ಹಿಡಿದೈ ಸಮರಭೀತಿಯನು !
ಅಳುಕಲಾಗದು ನಿಮ್ಮ ತಂದೆಯ
ಕುಲಕೆ ಕುಂದನು ತಾರದಿರು ಮನ
ಗೆಲವಿನಲಿ ಕಾದೆನುತೆ ರಥವನು ಹರಿಸಿದನು ಪಾರ್ಥ ॥ ೯

ಸಾರೆಬರಬರಲವನ ತನು ಮಿಗೆ
ಬಾರಿಸಿತು ವೈಮುರಿದು ರೋಮವಿ
ಕಾರದಲಿ ಕಾಹೇರಿತವಯವ ನಡುಗಿತಡಿಗಡಿಗೆ ।
ಭೂರಿಭಯತಾಪದಲಿ ತಾಳಿಗೆ
ನೀರುದೆಗೆದುದು ತುಟಿಯೊಣಗೆ ಸುಕು
ಮಾರ ಕಣ್ಣೆವೆ ಸೀಯೆ ಕರದಲಿ ಮುಚ್ಚಿದನು ಮುಖವ ॥ ೧೦

ಏಕೆ ಸಾರಥಿ ರಥವ ಮುಂದಕೆ
ನೂಕಿ ಗಂಟಲ ಕೊಯ್ವೆ ಸುಡುಸುಡು
ಕಾಕಲಾ ಕಣ್ಣೊಡೆಯುತಿದೆ ಕಾಣಾ ಮಹಾಬಲವ ।
ನಾಕನಿಳಯರಿಗರಿದು ನಿನಗೆ ವಿ
ವೇಕವೆಳ್ಳನಿತಿಲ್ಲಲಾ ತೆಗೆ
ಸಾಕು ವಾಘೆಯ ಮರಳಿ ಸೆಳೆ ತೇಜಿಗಳ ತಿರುಹೆಂದ ॥ ೧೧

ನುಡಿಯ ಕೇಳದೆ ಮುಂದೆ ನಾಲ್ಕಂ
ಟಡಿಯ ನರ್ಜುನ ರಥವ ನಡಿಸಲು
ಹಿಡಿದಬಿಲ್ಲಂಬುಗಳು ಬಿದ್ದುವು ಕೈಯ ನರತೆಗೆದು ।

ಹಿಡಿ ಹಯುವನಿಱಗಾಱ ಸಾರಥಿ
ನುಡಿವವರು ನಾವು ಹಗೆಗಳ ನಿ
ನ್ನೊಡೆಯರಲ್ಲಾ ಸ್ವಾಮಿದ್ರೋಹಿತೆ ಲೇಸು ಲೇಸೆಂದ ॥ ೧೦

ಎಂದೊಡರ್ಜುನ ನಗುತೆ ರಥವನು
ಮುಂದೆ ನಾಲ್ಕೆಂಟಡಿಯು ನೂಕಲು
ಕೊಂದನೈ ಸಾರಥಿ ಯೆನುತೆ ಸಂವರಿಸಿ ಮುಂಜೆಱಗ ।
ನಿಂದು ಮೆಲ್ಲನೆ ರಥದ ಮೊದಲಿಗೆ
ಬಂದು ಧುಮ್ಮಿಕ್ಕಿದನು ಬದುಕಿದೆ
ನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟಮಂಡೆಯಲಿ ॥ ೧೩

ನೋಡಿದನು ಕಲಿಪಾರ್ಥನೀ ಕೇ
ಡಾಡಿ ಕೆದಱಿದ ಕೇಶದಲಿ ಕ
ಟ್ಟೋಡುತಿರಲೆಲೆ ಪಾಪಿ ಹಾಯ್ದನು ಹಿಡಿಯ ಬೇಕೆನುತೆ ।
ಕೂಡೆ ಸೂಟಿಯೊಳಟ್ಟಿ ಲಿಳಿಯ
ಲ್ಲಾಡಿತಹಿಪತಿ ಕುಸಿದ ನತ್ತಲು
ನೋಡಿ ಕೌರವಸೇನೆ ಕೆಡೆದುದು ನಗೆಯ ಕಡಲೊಳಗೆ ॥ ೧೪

ಎಲೆಲೆ ಕಾದಲು ಬಂದ ವೀರನ
ಬಲುಹ ನೋಡಾ ಶಿವ ಶಿವಾ ಬೆಂ
ಬಳಿಯಲಟ್ಟುವ ವೀರನಾರೋ ದಿಟ್ಟನವನಹನು ।
ತಿಳಿಯಲರಿದಿವನಾವನೋ ವೆ
ಗ್ಗಳೆಯನಹ ನಾಕಾರದಲಿ ನೆಱೆ
ಫಲುಗುಣನ ಹೋಲುವನೆನುತೆ ಗಜಬಜೆಸಿತರಿಸೇನೆ ॥ ೧೫

ಈತ ಸಾರಥಿಯುಳಿವಿಯಲಿ ಮಿಗು
ವಾತನುತ್ತರನರ್ಜುನಂಗೀ
ಸೂತತನವೆತ್ತಲು ನಪುಂಸಕ ವೇಷ ತಾನೆತ್ತ ।

ಈತನರ್ಜುನನಾಗಲಾ ಪುರು
ಹೂತನಾಗಲಿ ರಾಮನಾಗಲಿ
ಯಾತೊಡಿಱಿವೆನು ಬರಲಿಯೆಂದನು ಖಾತಿಯಲಿ ಕರ್ಣ ॥ ೧೬

ಇತ್ತಲರ್ಜುನನುತ್ತರನ ಬೆಂ
ಬತ್ತಿದನು ನಿಲು ಹೋದೆಯಾದರೆ
ಕಿತ್ತು ಬಿಸುಡುವೆ ನಿನ್ನ ಶಿರವನು ನಿಲ್ಲು ನಿಲ್ಲೆನಲು ।
ಮಿತ್ತುವೋ ಸಾರಥಿಯೊ ಪಾಪಿಯು
ನೆತ್ತಣಿಂದವೆ ಮಾಡಿಕೊಂಡೆನೆ
ನುತ್ತೆ ಮರಳಿಯೆ ನೋಡಿ ನಿಲ್ಲದೆ ಮತ್ತೆ ಸೈವರಿದ ॥ ೧೭

ಇಟ್ಟಣಿಸಿ ನರ ನೂಱುಹೆಜ್ಜೆಯೊ
ಳಟ್ಟಿ ಹಿಡಿದನಿದೇನ ಮಾಡಿದೆ
ಹುಟ್ಟಿದೆಯೊ ಹಾದರಕೆ ಬಾಹುಜಬೀಜವೋ ಮೇಣು ।
ದಿಟ್ಟತನ ಮಿಗೆ ಹೆಂಗಳಿದಿರಲಿ
ಹೊಟ್ಟುಗುಟ್ಟಿದೆ ಹಗೆಗಳಿದಿರಲಿ
ಬಿಟ್ಟುಕೊಂಡೆ ದುರಾತ್ಮ ಮುಱಿದೆ ವಿರಾಟನನ್ವಯವ ॥ ೧೮

ಹಲುಗಿರಿದು ಬಾಯೊಳಗೆ ಬೆರಲ್ಗಳ
ನಿಳುಹಿ ತಲೆವಾಗಿದನು ಸಾರಥಿ
ಕಳುಹಿ ಕಳೆಯೈ ನಿನ್ನ ಬಸಿರಲಿ ಮರಳಿ ಬಂದವನು ।
ಕೊಳುಗುಳದೊಳೀಯೊಡ್ಡ ಮುಱಿವ
ಗ್ಗಳಿಕೆಯುಂಟೇ ಲೋಗರಿಂದವೆ
ಕೊಲಿಸದಿರು ನೀಂ ಕುತ್ತಿ ಕೆಡಹು ಕಠಾರಿಯಿದೆ ಯೆಂದ ॥ ೧೯

ಮನದೊಳೊಡಲೊಡೆವಂತೆ ನಗುತ
ರ್ಜುನನು ಗಜಱಿದನೆಲವೊ ಸಭೆಯಲಿ
ವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆಬಂದಂತು ।

ಅನುವರದೊಳೇನಾಯ್ತು ರಿಪುವಾ
ಹಿನಿಯುನಿಱಿಯದೆ ನಾದನರಿಯುವ್ರೊ
ಲೆನಗೆ ನೀ ಹಲುಗಿರಿಯೆ ಬಿಡುವೆನೆ ಕಾದು ನಡೆ ಯೆಂದ ॥ ೨೦

ಹೇವ ಬೇಡಾ ವೀರರೀಪರಿ
ಜೀವಗಳ್ಳರ ಪಥವ ಹಿಡಿವರೆ
ಸಾವಿಗಂಜುವೆವೇ ನಪುಂಸಕರೆಮ್ಮ ನೋಡೆನಲು ।
ನೀವು ವೀರರು ನೆಱೆ ನಪುಂಸಕ
ರಾವು ಸಾವವರಲ್ಲ ಲೋಕದ
ಜೀವಗಳ್ಳರಿಗಾವು ಗುರುಗಳು ಬಿಟ್ಟು ಕಳುಹೆಂದ ॥ ೨೧

ಹಱುಕನೇ ನೀನೆಲವೊ ರಾಯರೊ
ಳುಱುವದೊರೆ ನಿಮ್ಮಯ್ಯ ನಿನಗಿಂ
ದಿಱಿವ ಮೊಱೆವವಸರವಲಾ ಜವ್ವನದ ಧುರಭರವ ।
ಸರಿಗಳೆಯದಪಕೀರ್ತಿ ರವಿಶಶಿ
ಮುಱಿದು ಬೀಳ್ವನ್ನಬರ ವೆಲೆನರ
ಗುಱಿಯೆ ನಡೆ ಕಾಳಗಕೆನುತೆ ಹಿಡಿದೆಳದನುತ್ತರನ ॥ ೨೨

ಕೊಳುಗುಳದೊಳೋಡಿದೊಡೆ ಹಜ್ಜೆಗೆ
ಫಲ ಮಹಾಪಾತಕವು ಮುಂದ
ಣೊಗ್ಗಲಿದು ಹಜ್ಜೆಯನಿಡಲು ಹಜ್ಜೆಗೆಯಶ್ವಮೇಧಫಲ ।
ಅಳಿದನಾದೊಡೆ ದೇವಲೋಕದ
ಲಲನೆಯರು ತೊತ್ತಿರು ಸುರೇಂದ್ರನು
ನೆಲನನುಪ್ಪಡಿಸುವನು ವೀರಸ್ವರ್ಗವಹುದೆಂದ ॥ ೨೩

ಧುರದೊಳೋಡಿದಪಾತಕವ ಭೂ
ಸುರರು ಕಳೆದಪರಶ್ವಮೇಧವ
ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಲಹುದೆನಲು ।

ಸುರರ ಸತಿಯರನೊಲ್ಲೆ ವೆಮಗೆ
ಮ್ಮರಮನೆಯ ನಾರಿಯರೆ ಸಾಕೆ
ಮ್ಮರಸುತನವೆಮಗಿಂದ್ರಪದ ನೀ ಬಿಟ್ಟು ಕಳುಹೆಂದ ॥ ೨೪

ಆಳೊಳೊಡ್ಡುಳ್ಳವನು ತೋರಿಯು
ತೋಳುಗಳ ಹೊತ್ತಪನು ಮನೆಯಲಿ
ಸೂಳೆಯರ ಮುಂದುಲಿದು ಬಾಷ್ಕಳಗೆಡೆದು ಬಂದೀಗ ।
ಕೋಲನಿಕ್ಕದೆ ಗಾಯವಡೆಯದೆ
ಕಾಲುವೇಗವ ತೋಱದೊಡೆ ನಿಂ
ನೋಲಗದೊಳಂತಕಟ ನಾಚದೆ ಕುಳಿತಿಹೆಯೊ ಎಂದ ॥ ೨೫

ಕಿತ್ತು ಕೊಂಡಾನಾಚಿಕೆಗೆ ನೆಱೆ
ಕುತ್ತಿಕೊಳಬೇಕೆಂಬ ಗಾದೆಯ
ನಿತ್ತ ಹೊದ್ದಿಸಬೇಡ ನಾವಂಜುವೆವು ಕಾಳಗಕೆ ।
ತೆತ್ತಿಗನು ನೀ ನಹಿತನಂತಿರೆ
ಮಿತ್ತುವಹರೇ ನಿನಗೆ ಬೇಡಿದು
ದಿತ್ತು ಸಲಹುವೆನೆನ್ನ ಕೊಲಿಸದೆ ಬಿಟ್ಟು ಕಳುಹೆಂದ ॥ ೨೬

ವಳಿತವನು ವಾರುವವ ಮುಕ್ತಾ
ವಳಿಯಲಂಕಾರವನು ಗಜವನು
ಲಲನೆಯರ ನಾನೀಸಿ ಕೊಡುವೆನು ರಾಜಭವನದಲಿ ।
ಎಲೆ ಬೃಹನ್ನಳೆ ಯೆಮ್ಮ ಬೊಪ್ಪನು
ಸಲಹಿದೊಡೆ ಕೈಯೊಡನೆ ತೋಱಿದೆ
ಕಲುಮನವಲಾ ನಿನ್ನದೆಂದರೆ ಪಾರ್ಥನಿಂತೆಂದ ॥ ೨೭

ಬಿಡಲು ಕಿಡುವುದು ನಾಳೆ ನಾಡಿದು
ಪೊಡವಿಯುಳ್ಳನ್ನಬರ ಲೋಕದೊ
ಳಡಗದಿಹುವಪಕೀರ್ತಿ-ಕೀರ್ತಿಗಳೆಂಬುವಿದು ನಿರುತ ।

ಸುಡಲಿ ಜೀವನದಾಸೆಯನು ಕಿಡು
ವೊಡಲ ಭುಕ್ತಿಯು ಭೋಗಕೋಸುಗ
ಕಿಡಿಸಬೇಡಿಹಪರದ ಗತಿಗಳನೆಂದನಾಪಾರ್ಥ ॥ ೨೮

ಪೊಡವಿಪತಿಗಳ ಬಸಿಱು ಬಂದೀ
ಯೊಡಲ ಕಕ್ಕುಲಿತೆಯಲಿ ಕಾಳಗ
ದೆಡೆಗೆ ಬಾರದರಿಲ್ಲ ಭೂತಭವದ್ಭವಿಷ್ಯದಲಿ ।
ನುಡಿಯಲಹುದೇ ಬಂಜೆ ನುಡಿಯನು
ಸುಡುಸುಡೆಲವೋ ರಾಜಬಾಹಿರ
ನಡೆ ವರೂಥದ ಹೊರೆಗೆ ಕಾದಲು ಬೇಡ ಬಾಯೆಂದ ॥ ೨೯

ಕಾದುವೆನು ಮಾಱೊಡ್ಡಿನಲಿ ನೀ
ಚೋದಿಸೆನ್ನಯ ರಥವನಕಟಾ
ವಾದವೇನು ನೆರೆ ಮಾಣು ಸಾರಥಿಯಾಗು ಸಾಕಿನಲು ।
ಆದಿಯಲಿ ನೀನಾವರಾಯರ
ಕಾದಿ ಗೆಲಿದೈ ಹುಲುಬೃಹನ್ನಳೆ
ಯಾದ ನಿನಗೀಕದನ ನಾಟ್ಯದ ವಿದ್ಯೆಯಲ್ಲೆಂದ ॥ ೩೦

ಎನ್ನಯೊಂದಿಗರಾಜಪುತ್ರರಿ
ಗಿನ್ನು ಮೊಗಸಲು ಬಾರದಿದೆ ನೀ
ನೆನ್ನ ಸಾರಥಿ ಮಾಡಿಕೊಂಡೀ ಬಲವ ಗೆಲುವೆಯಲಾ [1] ।
ಅನ್ನಿಯರ ಮನಗಾಂಬರಲ್ಲದೆ
ತನ್ನ ತಾ ಮನಗಾಂಬರೇ ಈ
ಗನ್ನಗತಕವ ನಾನು ಬಲ್ಲೆನು ಬಿಟ್ಟು ಕಳುಹೆಂದ ॥ ೩೧

ಎಲವೊ ಸಾರಥಿಯಾಗು ಬಾ ಬಿಡೆ
ಗಳಹಿದರೆ ಕಟವಾಯ ಕೊಯ್ವೆನು
ಗೆಲುವೆನೀಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ ।

1 [illegible]

ಬಟಿಕ ನೀ ನಗು ನಡೆ ಯೆನುತೆ ಪರ
ಬಲಭಯಂಕರನುತ್ತರನ ಹೆಡ
ತಲೆಯ ಹಗರನೊಳಕಿ ತಂದನು ರಥವನೇರಿಸಿದ ॥ ೭೦

ನಡೆಗೊಳಿಸಿದನು ರಥವ ಮುಂದಕೆ
ನಡಿಸಲುತ್ತರ ನುಡಿದ ಸಾರಥಿ
ಕಿಡಿಸದಿರು ವಂಶವನು ರಾಯನ ಹಿಂದೆ ಹೆಸರಿಲ್ಲ ।
ಬಿಡು ಮಹಾಹವವೆನಗೆ ನೂಕದು
ತೊಡೆಯದಿರು ನೊಸಲಕ್ಕರವ ನೀ
ನೊಡೆಯ ಕಿಂಕರರಾಗಿಹೆವು ನಾವಿಂದು ಮೊದಲಾಗಿ ॥ ೭೭

ಖೇಡತನ ಬೇಡೆಲವೊ [1] ರಣದೊಳ
ಗೋಡಿಸುವೆ ನಹಿತರನು ಹರಣವ
ಹೂಡಿಸುವೆ ನಂತಕನ ನಗರಿಗೆ ಘಟ್ಟನೊಡೆಹಾಯ್ದು ।
ಕೋಡದಿರು ಕೊಂಕದಿರು ಧೈರ್ಯವ
ಮಾಡಿ ಸಾರಥಿಯಾಗೆನುತೆ ಕಲಿ
ಮಾಡಿಕೊಂಡುಯ್ದನು ಸಮೀಪದ ಶಮಿಯ ಹೊರೆಗಾಗಿ ॥ ೭೪

[2] ಇಳಿದರಿಬ್ಬರು ರಥವ ಬನ್ನಿಯ
ಬಳಸಿ ಕೈಮುಗಿದರ್ಜುನನು ಕರ
ತಳವ ನೆಗಹಿ ಸುರೇಂದ್ರಯಮವರುಣಾದಿಗಳಿಗೆಱಗಿ ।
ಕಳದೆವಜ್ಞಾತವನು ಕೃಪೆಯಲಿ
ಸಲಿಸಬೇಹುದು ಕೈದುಗಳನೆಂ
ದುಲಿದು ನೇಮವ ಪಡೆದು ಬಟಿಕುತ್ತರನೊಳಿಂತೆಂದ ॥ ೭೫

ಮರನನೇರಿದರೊಳಗೆ ಪಾಂಡವ
ರಿರಿಸಿ ಹೋದರು ಕೈದುಗಳ ನೀ
ಹರಣಭರಣಕ್ಷಮೆಗಳಲಿ ತೆಗೆದೆನಗೆ ನೀಡೆನಲು ।

---

1 ಖೇಡನಾಗದಿರೆಲವೊ, ಝ. 2 ಈ ಪದ್ಯವು ಕೆಲವು ಪುಸ್ತಕಗಳಲ್ಲಿಲ್ಲ.

ಅರಸುಮಕ್ಕಳು ಮುಟ್ಟಲನುಚಿತ
ಮರದ ಮೇಲಣ ಹೆಣನಿದೇನೈ
ವರಬೃಹನ್ನಳೆ ಮತ್ತೆ ಕೆಲಸವ ನೆನಗೆ ಹೇಳೆಂದ ॥ ೩೬

ಹೊಱಗೆ ತೊಗಲೊಳು ಬಿಗಿದು ಕೆಲಬಲ
ನಱಿಯದಂತಿರೆ ಪಾಂಡುನಂದನ
ರುಱುವ ಕೈದುವ ನಿರಿಸಿದರು ಹೆಣನಲ್ಲ ತೆಗೆಯೆನಲು ।
ಸೆಱಗನಳವಡೆ ಸಿಕ್ಕಿ ಭೀತಿಯು
ತೊಱೆದು ತುದಿಮರನೇಱಿ ನೇಣ್ಗಳ
ಹಱಿದು ಕೈದುವ ಕಂಡು ಮಿಗೆಯಂಜಿದನು ಭಯಹೊಯ್ದು ॥ ೩೭

ಕಾಳಭುಜಗನೊ ಖಡ್ಗವೋ ಶರ
ಜಾಲವೋ ಕಲ್ಪಾಂತವಹ್ನಿ
ಜ್ವಾಲೆಯೋ ಕೈದುಗಳೊ ಕಾಲಾಂತಕನ ದಾಡೆಗಳೊ ।
ತೋಳು ಧರಿಸುವೊಡರಿದು ನೋಡಿದೊ
ಡಾಲಿಯುರೆ ಬೆಂದುವು ಬೃಹನ್ನಳೆ
ಕಾಳು ಮಾಡಿದೆ ಕೊಂದೆಯೆನುತೋರಂತೆ ನಡುಗಿದನು ॥ ೩೮

ಹೊಗರ ಹೊರಳಿಯ ಹೊಳೆಹು ಬಾಯ್ದಾ
ರೆಗಳ ತಳಪದ ಕಾಂತಿ ಹೊನ್ನಾ
ಯುಗದ ಬಹುಳಪ್ರಭೆ ಶರೌಘದ ನಯದ ಗಹಗಹಿಕೆ ।
ಝಗಝಗಿಸೆ ಕಣ್ಮುಚ್ಚಿ ಕೈಗಳ
ಮುಗಿದು ಸಾರಥಿಗೆಂದ ನೆನ್ನನು
ತೆಗೆದುಕೊಳ್ಳುತ ತಂದೆ ಸಿಲುಕಿದೆ ಶಸ್ತ್ರಸೀಮೆಯಲಿ ॥ ೩೯

ತುಡುಕಲಹುದೇ ದೋಷಿ ಹಾವಿನ
ಕೊಡನ ನೆನಗಿದು ಕೈದುವೇ ಬರ
ಸಿಡಿಲು ಡಾವಣಿಯಾಗಿ ಯಿದೆ ಕೈಯಿಕ್ಕಲಂಜುವೆನು ।

ಬಿಡಿಸು ಸಾರಥಿ ಯೆನ್ನ ನನೆ ಫಡ
ನಡುಗದಿರು ಫಲುಗುಣನ ನೆಸ ಕೈ
ದುಡುಕು ಕೈವಶವಹುದು ತೆಗೆ ಸಾಕೆಂದನಾಪಾರ್ಥ ॥ ೪೦

ಎನಲು ನಲವೇಱಿದನು ತನ್ನಯ
ಮನಕೆ ಧೈರ್ಯವ ಮಾಡಿಕೊಂಡನು
ನನೆದು ನೋಡುವೆನೆಂದು ಪಾರ್ಥನ ನೆನೆದು ವೈರಾಟ ।
ತನುಪುಳಕ ತಲೆದೋಱಲಿಂದ್ರನ
ತನಯುನನು ಮನದಲ್ಲಿ ವಂದಿಸಿ
ಘನತರದ ಗಾಂಡೀವವನು ಕೈದುಡುಕಲನುವಾದ ॥ ೪೧

ಉಲಿದು ಸತ್ತ್ವದೊಳೌಕಿ ಕಾಯುವ
ಬಲಿದು ತೆಕ್ಕೆಯೊಳೊತ್ತಿ ಬೆವರುತೆ
ಬಳಲಿ ನೀಡಿದ ನರ್ಜುನನ ಕರತಳಕೆ ಗಾಂಡಿವವ ।
ಬಲುಹಿನಿಂದೌಡೊತ್ತಿ ತೆಗೆತೆಗೆ
ದುಳಿದ ಬಿಲ್ಗಳ ನೀಡಿ ಮರನನು
ಮೆಲಗಿ ಥಗೆಯಿಂದಳ್ಳೆಹೊಯ್ದು ಕುಮಾರ ನಿಂತೆಂದ ॥ ೪೨

ಗಿರಿಯುನೆತ್ತಲು ಬಹುದು ಬಿಲುಗಳ
ತೆರಳಿಚುವೊಡಾಱೆನು ಬೃಹನ್ನಳ
ಧರಿಸಲಾಪ್ಪೆ ನೀ ಸಮರ್ಥನು ನಿನಗೆ ನಮೊಯೆನುತೆ [1] ।
ಸರಳ ಹೊದೆಗಳ ದೇವದತ್ತವ
ಪರಶುತೋಮರಕುಂತವಸಿಮು
ದ್ಗರಗದಾದಂಡಾದಿಶಸ್ತ್ರವ ತೆಗೆದು ನೀಡಿದನು ॥ ೪೩

ಹೇಱು ಸಾರಥಿ ಬಿಲ್ಲಿದಾವನ
ತೋಳಗಳವೆಡುವುದು ಮಹಾಶರ

[1] ಶರಣೆನುತೆ, ಖ. ಝ.

ಜಾಲ ಬೆಸಕೈದಪ್ಪುವಿದಾರಿಗೆ ಮಿಕ್ಕ ಬಿಲ್ಲುಗಳು [1] ।
ಕಾಳಗದೊಳಿವ ನಾರು ಹಿಡಿವರು
ಮೇಲುಗೈದುಗಳಾರಿಗಿವು ಕೈ
ಮೇಳವಿಸುವುವು ಮನದ ಸಂಶಯು ಹಿಂಗೆ ಹೇಳೆಂದ ॥ ೪೪

ಇದು ಕರ್ಣಾ ಗಾಂಡೀವ ತಾನೆಂ
ಬುದು ಮಹಾಧನು ಪಾರ್ಥನದು ಬಳಿ
ಕಿದು ಯುಧಿಷ್ಠಿರಚಾಪವೀಧನು ಭೀಮಸೇನನದು ।
ಇದು ನಕುಲಕೋದಂಡ ಬಿಲು ತಾ
ನಿದುವೆ ಸಹದೇವನದು ಭಾರಿಯು
ಗದೆ ಯಿದನಿಲಜನದು ಕಿರೀಟಿಯು ಬಾಣವಿವೆ ಎಂದ ॥ ೪೫

* ಅವರವರ ಬತ್ತಳಿಕೆಯುನು ಚಾ
ಪವನು ಶರವನು ಕಂಬುಖಡ್ಗವ
ಕವಚವನು ಸೀಸಕವ ರಥವನು ಬಿರುದ ಕೆಕ್ಕೆಯುವ ।
ವಿವಿಧಶಸ್ತ್ರಾಸ್ತ್ರವನು ಫಲುಗುಣ
ವಿವರಿಸಲು ಬೆರಗಾಗಿ ಸಾರಥಿ
ಯಿವನು ತಾನಾರೆಂದು ಮತ್ಸ್ಯನ ಸೂನು ಬೆಸಗೊಂಡ ॥ ೪೬

---

1 ಕೈದುಗಳು, ಕ. ಜ.

* ಈ ಪದ್ಯವು 45-46ನೆಯ ಪದ್ಯಗಳ ಮಧ್ಯದಲ್ಲಿ ಟ. ಎಂಬ ಪುಸ್ತಕದಲ್ಲಿದೆ.

ವ್ರಣದ ಬಂಧದ ಜಿಗಿಯ ರುಧಿರಾ
ರುಣದ ರೌದ್ರದ ಮಾಣಿಕದ ಕೇ
ವಣದ ಮುತ್ತಿನ ನೀಲ ವೈಡೂರ್ಯಗಳಿನೆಸೆಯುತಿಹ ।
ರಣವಿಜಯ ಫಲುಗುಣನ ಬಿಲ್ಲಿದು
ಮಣಿಯದು ಸುರಾಸುರರಿಗಿದು ತಾ
ಘನ ನಿರೀಕ್ಷಿಸು ಮತ್ಸ್ಯಸುತ ಎಂದನು ಧನಂಜಯನು ॥

ಆರು ನೀ ನರ್ಜುನನೊ ನಕುಲನೊ
ಮಾರುತನ ಮಗನೋ ಯುಧಿಷ್ಠಿರ
ವೀರನೋ ಸಹದೇವನೋ ಮೇಣವರ ಬಾಂಧವನೋ ।
ಧೀರ ಹೇಳೈ ಬೇಡಿಕೊಂಬೆನು
ಕಾರುಣಿಕ ವಿಸ್ತರಿಸು ಪಾಂಡುಕು
ಮಾರರಾಯುಧತತಿಯು ನೀನೆಂತರಿಯಬಹುದೆಂದ ॥　　೪೭

ಆದೊಡಾನರ್ಜುನನು ಬಾಣಸಿ
ಯಾದ ವಲಲನು ಭೀಮ ವರಯತಿ
ಯಾದ ಕಂಕನು ಧರ್ಮಪುತ್ರನು ನಿಮ್ಮ ಗೋಕುಲವ ।
ಕಾದವನು ಸಹದೇವ ರಾವುತ
ನಾದವನು ನಕುಲನು ವಿಳಾಸಿನಿ
ಯಾದವಳು ಸೈರಂಧ್ರಿ ಯೈವರ ರಾಣಿ ಕೇಳೆಂದ [1] ॥　　೪೮

ಅಹುದು ಬಳಿಕೇನುಚಿದವರಿಗೀ
ಮಹಿಮೆ ತಾನೆಲ್ಲಿಯದು ಕಾಣಲು
ಬಹುದಲಾ ಜೀವಿಸಿದೊಡತಿಶಯವನು ಮಹಾದೇವ ।
ಗಹನ ಮಾಡದೆ ನುಡಿದ ತಪ್ಪಿನ
ಬಹುಳತೆಯ ಭಾವಿಸದೆ ತನ್ನನು
ಕುಹಕಿ ಯೆನ್ನದೆ ಕಾಯಬೇಕೆಂದಂಘ್ರಿಗೆರಗಿದನು ॥　　೪೯

ಮೌಳಿಯನು ಹಿಡಿದೆತ್ತಿ ನಿನ್ನಯ
ಮೇಲೆ ತಪ್ಪಿಲ್ಲೆನುತೆ ಫಲುಗುಣ
ಬೋಳವಿಸೆ ಬಳಿಕೆದ್ದು ಕೈಮುಗಿದೆಂದನುತ್ತರನು ।
ಬಾಲಕನ ಬಿನ್ನಹವ ನೊಂದನು
ಕೇಳಬೇಹುದು ನಿನ್ನ ದಶನಾ
ಮಾಳಿಯನು ಪೇಳ್ವಲ್ಪಮತಿಯನು ತಿಳುಹಬೇಕೆಂದ ॥　　೫೦

---

1 ರಾಣೀವಾಸವೆಮಗೆಂದ, ಕ.

1 ಎನಲು ನಸುನಗುತರ್ಜುನನು ಫಲು
ಗುಣ ಧನಂಜಯ ಜಿಷ್ಣು ಸಿತವಾ
ಹನ ವಿಜಯ ಬೀಭತ್ಸು ಪಾರ್ಥ ಕಿರೀಟಿ ಮೊದಲಾದ ।
ವಿನುತಕೃಷ್ಣನು ಸವ್ಯಸಾಚಿಗ
ಳೆನಿಪಪೆಸರುಂಟೆನುತೆ ಪುನರಪಿ
ತನಗೆ ಬಂದಂದವನು ವಿಸ್ತರವಾಗಿ ವಿವರಿಸಿದ ॥ ೫೯

ನಂಬಿದೆನು ಲೇಸಾಗಿ ನಿಜ ಯು
ವಿಂಬುಗೊಂಡುದು ಪಾರ್ಥ ನಿನಗೀ
ಡೊಂಬಿದೇಕೈ ಹುಲುಬೃಹನ್ನಳೆತನದ ಬಲುರೂಪು ।
ಅಂಬುಜಾಕ್ಷನ ಸಾಹಸಪ್ರತಿ
ಬಿಂಬವಲ್ಲಾ ನೀನು ನಿನ್ನ ವಿ
ಡಂಬಿಸಿದ ರೂಹಿಂಗೆ ಕಾರಣವೇನು ಹೇಳೆಂದ ॥ ೫೦

ಇದು ಕಣಾ ಧರ್ಮಜನ ಸತ್ಯಾ
ಭ್ಯುದಯಕೋಸುಗ ವೂರ್ವಶಿಯ ಶಾ
ಪದಲಿ ಬಂದುದು ಹೊತ್ತು ನೂಕಿದೆನೊಂದುವತ್ಸರವ ।
ಇದಕೆ ನಲ್ಜೋಡಾಯ್ತು [2] ನಿರ್ವಿ
ಘ್ನದಲಿ ದಾಂಟಿದೆ ವವಧಿಯುನು ನ
ಮ್ಮದಟತನವನು ಭೀತಿ ಯಿಲ್ಲದೆ ನೋಡು ನೀನೆಂದ ॥ ೫೨

---

1 ಎನೆ ನಗುತೆ ಜಿಷ್ಣು ಫಲುಗುಣನ
ರ್ಜುನಕ್ಕೆ ಧನಂಜಯ ಸವ್ಯಸಾಚಿಯು
ಘನವಿಜಯ ಬೀಭತ್ಸು ಪಾರ್ಥ ಕಿರೀಟಿ ಸಿತವಾಹ ।
ಎನಿಪ ನಾಮಾವಳಿಯು ಮುನ್ನಿನ
ವಿನುತಕೃಷ್ಣಾಭಿಧೆಯು ನುಸಿರ್ದವು
ತನಗೆ ಬಂದಂದವನು ವಿಸ್ತರವಾಗೆ ವಿವರಿಸಿದ ॥

ಎಂದಿದ್ದರೆ ಪದ್ಯವು ಸರಿಯಾಗಿ ತೋರುವುದು.

2 ನಿಜ್ಜೋಡಾಯ್ತು, ಟ. ನೀಜೋಡಾಯ್ತು, ಚ. ನಿಜ್ಜೋಡಾಯ್ತು. ಜ.

ಬಳಿಯ ನುಗ್ಗೊತ್ತಿದನು ಕೌರವ
ಬಲದ ಗಂಟಲ ಬಳಿಯ ಮುಱಿವವ್ರೊ
ಲಲಘುಸಾಹಸಿ ಪಱಿಯನುಟ್ಟನು ಮಲ್ಲಗಂಟಿನಲಿ ।
ತಲೆನವಿರ ಹಿಣಿಲಿಱಿದು ತಿಲಕವ
ಗೆಲಿದು ಕಿಗ್ಗಟ್ಟಿನ ಕಠಾರಿಯ
ಹೊಳೆವಗೊಂಡೆಯ ಮೆಱೆಯೆ ಗಂಡಂದವನು ಕೈಕೊಂಡ ॥೫೪

ತೇರ ತೆಗೆದನು ತನ್ನ ಮುನ್ನಿನ
ವಾರುವಂಗಳ ಹೂಡಿದನು ಕಪಿ
ವೀರ ನೆನೆಯಲು ಬಂದು ಮಂಡಿಸಿದನು ರಥಾಗ್ರದೊಳು ।
ಬಾರು ಸೀಸಕ ಜೋಡು ಕುಲಿಸದ
ಸಾರಕವಚವ ಬಿಗಿದು ಬೊಬ್ಬೆಯ
ಭಾರಣೆಯು ಮಿಗೆ ಧನುವ ಕೊಂಡನು ತಿರುವನೇರಿಸಿದ ॥ ೫೫

ರಾಯ ಧರ್ಮಜ ಬಾಳುಗೆನುತೆ ನಿ
ಜಾಯುಧಂಗಳಿಗೆಱಗಿದನು [1] ಸುರ
ರಾಯನಂದನ ನಲವಿನೊಳು ಗಾಂಡಿವವ ಜೇವಡೆದು ।
ರಾಯಗುವರನ ಸೂತತನದ ವಿ
ಡಾಯಿ ಯಱಿಯಲು ಬಹುದೆನುತೆ ಸವ
ರಾಯತಾಸ್ತ್ರನು ಸಾರ್ಥ ವ್ಯೂಹದೊಳಱಿದನು ಪರಬಲಕೆ । ೫೬

ಸಡಿಲ ಬಿಡೆ ವಾಘೆಯನು ಚಿಮ್ಮಿದು
ವಡಿಗಡಿಗೆ ಗರುವಾಯ್ಲ [2] ತೇಜಿಗ
ಳೊಡೆದುದಿಳೆ ಯೆನೆ ಗಜಱು ಮಿಗೆ ಗರ್ಜಿಸಿದುವೆಳ್ಳಱಿದು ।
ಕುಡಿ ನೊಱೆಯ ಕಟವಾಯ ಲೋಳೆಯೊ
ಳೊಡಲ ಸಂಚದ ನುಡಿಯ ಘುಳು ಘುಳು
ಗುಡುವ ನಾಸಾಪುಟದ ಝೋಂಕೃತಿ ಮಸಗೆ ಚಿಮ್ಮಿದುವು ॥ ೫೭

1 ಧದ ಗುರುವಿಂಗೆಱಗಿ, ಜ. 2 ಗತಿವಾಯ್ಲ, ಟ,

ಖುರಪುಟದೊಳಾಕಾಶಭಿತ್ತಿಯ
ಬರೆವವೊಲು ಸೂರಿಯನ ತುರಗವ
ಕರೆವವೊಲು ಕೈಗಟ್ಟಿ ದುವ್ವಾಳಿಸುವೊಡಾಹವಕೆ ।
ಅರರೆ ಪೂತುರೆ ಹಯವೆನುತೆ ಚ
ಪ್ಪರಿಸಲೊಡ್ಡನೂಕಿದುವು ಕೆಂಧೂ
ಳಿರದೆ ನಭಕುಪ್ಪರಿಸಿ ರವಿಮಂಡಲವ ನಂಡಲೆಯೆ ॥ ೫೮

ತೋಱುವೀಸೇನೆಯೊಳು ಕೌರವ
ನಾರು ಭೀಷ್ಮನದಾರು ಕೃಪ ತಾ
ನಾರು ದ್ರೋಣ ನದಾವ ನಶ್ವತ್ಥಾಮ ನಾವವನು ।
ವೀರ ಹೇಳೆನಗಿಲ್ಲಿ ಕರ್ಣನ
ದಾರು ತಾ ಕಂಡಱಿಯೆ ನೆನಲಾ
ವೈರಿದಲ್ಲಣ ಪಾರ್ಥ ನಗುತುತ್ತರನೊಳಿಂತೆಂದ ॥ ೫೯

ಉದಯದರುಣನ ಕರುವ ಹಿಡಿದಂ
ದದೊಳು ವರ್ಣಚ್ಛವಿಯೊಳೊಪ್ಪುವ
ಕುದುರೆಗಳ ತೊಳತೊಳಗಿ ಬೆಳಗುವ ಕೊಡನ ಹಱವಿಗೆಯ ।
ಗದಗದಿಪ ಮಣಿಮಯದ ತೇರಿನ
ಕದನಕೋಳಾಹಳನು ಗರುಡಿಯ
ಸದನಸರ್ವಜ್ಞನನು ನೋಡೈ ದ್ರೋಣ ನವ ನೆಂದ ॥ ೬೦

ನವರತುನಕೇವಣದ ರಥದತಿ
ಜವದ ತೇಜಿಯ ತಿಕ್ಕೆಗಳ ರೌ
ರವದ ರೌದ್ರಾಯುಧದ ಗಡಣದ ಹರಿಯ ಹಱವಿಗೆಯ ।
ಬವರಭೈರವ ನಾದ ನೀತನು
ಶಿವಗೆ ಸದೃಶನು ನೊಸಲ ನಯನದೊ
ಳಿವನು ಜಿತಸಂಗ್ರಾಮ ನಶ್ವತ್ಥಾಮ ನಿಸ್ಸೀಮ ॥ ೬೧

ಲಲಿತರತ್ನಪ್ರಭೆಯು ತೇರಿನೊ
ಳುಲಿವ ಬಹುವಿಧವಾದ್ಯರಭಸದ
ಕಳಕಳದ ಕಡುದರ್ಪದಿಂದಳ್ಳಿರಿವ ತೇಜಿಗಳ |
ಲಳಿಯ ಲಹರಿಯ ಲಗ್ಗೆಯೊಳು ಸಮ
ತಳಿಪ ಬಿಲುಟಂಕಾರರವದೊಳು
ತೊಳಗುವವ ಕಲಿಕರ್ಣ ನತುಳಪರಾಕ್ರಮಾನಲನು ‖ ೬೦

ಖುರದೊಳವನಿಯ ಹೊಯ್ಯು ಲಳವಿಯೊ
ಳುರಿ ಮಸಗಲುಬ್ಬೇಳ್ವ ತೇಜಿಯ
ಮಿಱುಪ ಮುಕ್ತಾವಳಿಯ ತೇರಿನ ನವವಿಲಾಸದೊಳು |
ಸರಳ ತಿರುಹುತ ನಿಂದು ಧನುವಿನ
ನಿರುತವನು ನೋಡುತ್ತ ನೆಱೆ ಘೋಂ
ಕರಿಪ ನತಿಬಲ ನಾಕೃಪಾಚಾರಿಯನು ನೋಡೆಂದ ‖ ೬೭

ಅತ್ತಲಿರ್ಪನೆ ಬಹುಳಬಲದೊ
ತ್ತೊತ್ತೆಯೊಳು ನಮ್ಮುಭಯರಾಯರ
ಮುತ್ತಯನು ತಾನವನು ಹೂಡಿದ ಬಿಳಿಯ ತೇಜಿಗಳ |
ತೆತ್ತಿಸಿದ ಹೊಂದೇರ ಸಿಂದದ
ಸತ್ತಿಗೆಯ ಸಾಲಿನೊಳು ರಿಪುಗಳ
ಮಿತ್ತು ವಾತನು ವೀರಗಂಗಾಸುತನು ನೋಡೆಂದ ‖ ೬೪

ಅಗಿವ ಹಾವಿನ ಹೞವಿಗೆಯ ಕೈ
ನೆಗಹಿ ಮುಸುಕಿದ ಝಲ್ಲರಿಯ ಮಿಗೆ
ಗಗನತಳದೊಳು ಮೆಱೆವ ಸೀಗುರಿಗಳ ಪತಾಕೆಗಳ |
ನೆಗಹಿ ನಿಮಿರುವ ಠೆಕ್ಕೆಯದ ಮದ
ವೃಗುವ ಕರಿಗಳ ಮಧ್ಯದವೆ ತಾ
ನಗಡುದುರ್ಯೋಧನನು ಜೂಜಿನ ಜಾಣ ನಿವನೆಂದ ‖ ೬೫

ಅವನ ಬಲವಂಕದೊಳು ನಿಂದವ
ನವನು ಭೂರಿಶ್ರವನು ಭಾರಿಯ
ಭುವನಪತಿಯೆಡವಂಕದೊಳು ನಿಂದವ ಜಯದ್ರಥನು ।
ತವತವಗೆ ಬಲುಗೈಗಳೆನಿಸುವ
ಶಿವನ ನೊಸಲಂದದೊಳು ಮೆಱೆವವ
ರವನಿಪಾಲರು ಮಕುಟವರ್ಧನರವರ ನೋಡೆಂದ ॥ ೬೬

ಹೊಗಳಲನುಪಮ ಸೇನೆಯಿಂತಿದು
ದುಗುಣವೆಂಥಾಸುರನ ಸೇನೆಗೆ
ತಿಗುಣ ವಿದು ರಾವಣನ ಮೋಹರಕೆನುತೆ ಫಲುಗುಣನು ।
ಹಗೆಯ ಭುಜದಗ್ಗಳಿಕೆಯನು ನೆಱೆ
ಹೊಗಳೆ ತೋಱಿದ ನುತ್ತರಗೆ ಮೊಳ
ನಗೆಯ ಮನದೊಳಗಾಗ ಸ್ಯೈವೆರಗಾದ ಸುಕುಮಾರ ೬೭

ತುರಗಹೇಷಿತ ರಥದ ಝೇಂಕೃತಿ
ವರಧನುಷ್ಟಂಕಾರ ಕಪಿಯ
ಬ್ಬರಣೆ ಪಾರ್ಥನ ಬೊಬ್ಬೆ ನಿಷ್ಠುರದೇವದತ್ತರವ ।
ಅರರೆ ಹೊದರೆದ್ದುದು ಗಿರಿವ್ರಜ
ಬಿರಿಯೆ ಜಲನಿಧಿ ಜರಿಯೆ ತಾರಕೆ
ಸುರಿಯೆ ಸುರಕುಲ ನೆರೆಯೆ ಭೀತಿಯೊಳಹಿತಬಲ ಹರಿಯೆ ॥೬೮

ಸಿರವ ಸಿಡಿಲೆಱಗಿದವೊಲುತ್ತರ
ತಿರುಗಿ ಬಿದ್ದನು ಮೂರ್ಛೆಯೊಳು ಹೊಡೆ
ಮರಳಿದುವು ಕಣ್ಣಾಲಿ ಕಾಱಿದುವರುಣವಾರಿಗಳ ।
ಹೊರಳುತಿರಲೆಲೆ ಪಾಪಿ ಸೈರಿಸ
ಲರಿಯೆ ನೀನೆನುತೆ ಫಲುಗುಣನಾ
ನೆಱಗಿನೊಳು ಬೀಸಿದನು ಕುಳ್ಳಿರಿಸಿದನು ರಥದೊಳಗೆ ॥ ೬೯

ಏನು ಮತ್ಸ್ಯಕುಮಾರ ಬವಣಿಯು
ದೇನು ನಿನಗಿಂದೆನಲು ಜಗದವ
ಸಾನದಂದಿನ ಸಿಡಿಲು ಸುಳಿಯಲು ಬೆಂದುದೆನ್ನೊಡಲು ।
ಆನಲಾಪೆನೆ ನಿನ್ನ ಬಹುಳ
ಧ್ವಾನವನು ಸಾಕೆನ್ನ ಕಳುಹು ಮ
ಹಾನಿನಾದವ ಮಾಣು ಮಾಣೆನೆ ಪಾರ್ಥನಿಂತೆಂದ ॥ ೭೦

ಖೇಡನಾಗದಿರದ್ಭುತಧ್ವನಿ
ಮಾಡೆನಂಜದಿರಂಜದಿರು ಧೃತಿ
ಮಾಡಿಕೊಂಡೀರಥವ ಜೋಡಿಸೆನುತ್ತ ಸಂತೈಸಿ ।
ಮೂಡಿಗೆಯೊಳಂಬುಗಿದು ತಿರುವಿಗೆ
ಹೂಡಿದನು ಫಲುಗುಣನ ಕದನವ
ನೋಡಲಮರಶ್ರೇಣಿ ಮೋಳೈಸಿತ್ತು ಗಗನದೊಳು ॥ ೭೧

ಏಳನೆಯ ಸಂಧಿ ಮುಗಿದುದು.

## ಎಂಟನೆಯ ಸಂಧಿ.

ಸೂಚನೆ.

ಕದನಚಾಪಲಟವುಲ್ಲ ಪರಬಲ
ಮದನಮದಹರರುದ್ರನಹಿತರ
ಸದೆದು ಮರಳಿಚಿದನು ವಿರಾಟನ ನಿಖಿಳಗೋಕುಲವ ॥

ಭಯವು ಬಾರೈಸಿತ್ತು ಜನವೋ
ಜಯ ಮಹೀಪತಿ ಕೇಳು ಕುರುಸೇ
ನೆಯೊಳು ಭೀಷ್ಮದ್ರೋಣರಱಿದರು ಪಾರ್ಥನೆಂಬುವನು |
ಜಯವು ಜೋಡಿಸಲಱಿಯದಿದು ಸಂ
ಶಯವೆ ಸುಳಿವುತ್ಪಾತಶತವಿದು
ಲಯದ ಬೀಜವು ಭೀಷ್ಮ ಚಿತ್ತೈಸೆಂದನಾದ್ರೋಣ || ೧

ಸುರಿಯುತಿವೆ ಕಂಬನಿಗಳನು ಕರಿ
ತುರಗತತಿಯೊರೆಯುಗಿದಡಾಯುಧ
ಮುಱಿದು ಬಿದ್ದವು ಬೀಸುತಿದೆ ಬಿಱುಗಾಳಿ ಬಲ ಬೆದಱೆ |
ನೆಱೆಯುತಿವೆ [1] ತಾರಕೆಗಳಭ್ರದೊ
ಳರುಣಮಯಜಲಧಾರೆ ಯಿದೆ ತರ
ತರದೊಳು ಪ್ರತಿಸೂರ್ಯಮಂಡಲ ವೆಂದನಾದ್ರೋಣ || ೨

ಇದೆ ಬಹುಳಭೂಕಂಪದದ್ಭುತ
ವಿದೆ ದಿಶಾವಳಿ ಧೂಮಕೇತುಗ
ಳಿದೆ ಪತಾಕಾಭಂಗ ವಿದೆ ವಿಪರೀತಪರಿವೇಷ |
ಇದು ಸಮಾಹಿತವಲ್ಲ ರಾಜಾ
ಭ್ಯುದಯಕರವೇ ಭೀಷ್ಮ ನಮ್ಮನು
ಸದೆಯದಿಹನೇ ಸುರಪನಂದನ ನೆಂದನಾದ್ರೋಣ || ೩

ಬಿರಿಯಲಬುಜಭವಾಂಡವಿದೆ ಕಪಿ
ವರನ ಕಳಕಳ ದೇವದತ್ತದ
ಧರಧುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದೆ |
ನರನ ನಿಷ್ಠುರ ಸಿಂಹರವ ವಿದೆ
ತುರಗದಳ್ಳಿಱಿ ಸಾರುತಿದೆ ಸಂ
ಗರಕೆ ಸಾಹಸಮಲ್ಲ ವೊಳಗಿದ ನೆಂದ ನಾದ್ರೋಣ || ೪

---

1 ಸುರಿಯುತಿವೆ, ಜ.

* ಎಂದು ಪಾರ್ಥನ ಸತ್ತ್ವಸಾಹಸ
ದಂದವನು ಕಲಶೋದ್ಭವನು ನಲ
ವಿಂದೆ ಕೊಂಡಾಡುತ್ತೆ ಗಂಗಾಸುತಗೆ ಹೇಳುತಿರೆ ।
ಸಂದಣಿಸಿ ಕೋಪಾಗ್ನಿ ವದನದೊ
ಳಂದು ಕಿಡಿಗೆದಱಲು ದಿವಾಕರ
ನಂದನನು ಪಲುವೊರೆದು ಖಾತಿಯೊಳವರನಿಂತೆಂದ ॥ ೫

ಒಲವೆ ಬೆದಱಿಸಿ ಹಗೆಯ ಭುಜದ
ಗ್ಗಳಿಕೆಯನು ಕೊಂಡಾಡಿ ಸಾವಿಯ
ನಿಱಿಕೆಗಾಂಬಿರಿ ನಿಮ್ಮ ಪೈಕಕೆ ಖುಲ್ಲತನ ಸಹಜ ।
ಫಲುಗುಣನೆ ಯಾಗಲಿ ಸುರೇಂದ್ರನೆ
ನಿಲಲಿ ಭಾರ್ಗವರಾಮನಾಗಲಿ
ಗೆಲಿದು ಕೊಡುವೆನು ಬರಲಿ ಯೆಂದನು ಖಾತಿಯೊಳು ಕರ್ಣ ॥ ೬

---

* ಓಡಿದವ ನುತ್ತರನು ಬೆಂಬಳಿ
ಗೂಡಿ ಹಿಡಿತಂದುಱಿಹಿದವ ಜಾ
ಜಾಡಿ ಮಹಿಷಿಯ ನೋತ ಮಹಿಪರೊಳೊಬ್ಬನವನಹನು ।
ನಾಡ ಬಯಕೆಗೆ ಬಂದರವಧಿಯ
ಮಾಡಿದರು ಫಲುಗುಣನ ನಿಲಿಪಿದು
ನೋಡೆನುತೆ ಕರ್ಣಂಗೆ ತೋಱಿಸಿದನು ಕೃಪಾಚಾರ್ಯ ॥

ನಿಲ್ಲಿ ಕಳಕಳ ಬೇಡ ಹೋ ಹೋ
ಬಿಲ್ಲ ಡಾವರವಿದೆ ಸಿತಾಶ್ವನ
ಘಿಲ್ಲಣಿಯ ಕೂಗಾಟವಿದೆಕೋ ಸಿಡಿಲಿನಂದದೊಳು ।
ತಲ್ಲಣಿವಿದಹಿತರೊಳು ರಿಪುಗಳ
ಚಲ್ಲಬಡಿವೆನು ನಮಗುಪಾಯವ
ನಿಲ್ಲಿ ನೆರೆಯಲುಬೇಕೆನುತೆ ಕಲಶೋದ್ಭವನು ನುಡಿದ ॥

ಈ 2 ಪದ್ಯಗಳು 4—5 ಪದ್ಯಗಳ ಮಧ್ಯದಲ್ಲಿ 'ಖ' ಗುರುತಿನ ಪುಸ್ತಕದಲ್ಲಿವೆ.

ನರನು ನರನೆಂ [1] ದನವರತ ತಲೆ
ಬಿರಿಯೆ ಹೊಗಳುವಿರಾನಿರಲು ಸಂ
ಗರಕೆ ತಲೆದೋಱಿದೊಡೆ ತಱಿವೆನು ಲೋಕಪಾಲಕರ |
ನರನ ತೆತ್ತಿಗರಹಿರಿ ತತ್ತಡೆ
ಪುರದೊಳಗೆ ಕೌರವನವರು ದು
ಶ್ಶರಿತರೆರಡಿಟ್ಟಹಿರಿ ಶೂಳರು ನಿಮ್ಮೊಳೇನೆಂದ || ೭

ಹೊಕ್ಕು ತಾಂ ಬಳಸಲಿಸಿದೊಡೆ ಹಿಂ
ದಿಕ್ಕಿ [2] ಕೊಳ್ವನದಾರು ಹಗೆವನ
ಸಿಕ್ಕಿದುರಗನ ಸೆಳವನಾವನು ಗರುಡತುಂಡದೊಳು |
ಎಕ್ಕತುಳದೊಳು ವೈರಿಪಾರ್ಥನ
ನೊಕ್ಕಲಿಕ್ಕುವೆ ನರಸ ನಿನ್ನೀ
ಚುಕ್ಕಿಗಳ ಚಾಪಳವ ಕೇಳದಿರೆನ್ದನಾಕರ್ಣ || ೮

ಎನಲು ಭುಗಿಲೆಂದನು ಕೃಪಾಚಾ
ರ್ಯನು ಸುಯೋಧನ ಕೇಳು ರಾಧಾ
ತನಯನಿವ ಬಗುಳದೊಡೆ ನಿಶ್ಶಯವೆಂದು ಬಗೆಯದಿರು |
ಅನುವರದೊಳರ್ಜುನನ ಗೆಲುವ್ರೊಡೆ
ಯೆನಗೆ ನಿನಗೀತಂಗೆ ಕೆಲಬರಿ
ಗನಿಮಿಷರಿಗಳವಹುದೆ ಬಲ್ಲೈ ಪಾರ್ಥನಧಟುಗಳ || ೯

ಮಾಡಿದನು ಹರನೊಡನೆ ಖಾಡಾ
ಖಾಡಿಯನು ಸುರಪತಿಯ ತೋಟವ
ಬೇಡಿದೊಡೆ ಬೇಳದನು ವಹ್ನಿಗೆ ರಾಜಸೂಯದೊಳು |
ರೂಢಿಯುತ್ತರ [3] ದೊರೆಗಳರ್ಥವ
ಹೂಡಿಸಿದ ನರಮನೆಗೆ ದೈತ್ಯರ
ಬೀಡ ಬರಿಕೈದನು ಹಿರಣ್ಯಕಪುರನಿವಾಸಿಗಳ || ೧೦

1 ದನುತವನನೆರ್ದೆ ಬಿರಿಯೆ, ಟ. 2 ಕೊಂಬವನಾರುಹಗೆಯನು, ಟ.
3 ಕುರುಗಳ, ಟ.

ಬಾಗಿಸಿದ ಬಿಲ್ಲಿನೊಳು ರಾಯರ
ಮೂಗ ಕೊಯ್ದನು ಮದುವೆಯೊಳು ನೀ
ನೀಗಳರಿದಱುವೆ ಕೌರವೇಂದ್ರನ ನಂದು ಬಿಡಿಸಿದಲ |
ಆಗರುವಸೈಂಧವನ ಮುಡಿಯು ವಿ
ಭಾಗಿಸಿದ ಭಟನಾರು ಪಾರ್ಥನ
ಲಾಗುವೇಗವ [1] ನಾರು ಬಲ್ಲರು ಕರ್ಣ ಕೇಳೆಂದ ‖ ೧೧

* * * * *

ಮರುಳ ಕಣ್ಣಿಗೆ ಕೊಡನ ತೋರದೊ
ಳರದೆ ಸಾಸವೆ ನಿಮ್ಮ ಕಣ್ಣಿಗೆ
ನರನು ದೊಡ್ಡಿದನುಳಿದ ವೀರರ ಕಣ್ಗೆ [2] ತೃಷಮಾತ್ರ |
ಮರುಳುಹಾರುವೆ ಗದ್ಯಪದ್ಯದ
ಸರಸವಿದ್ಯೆಗಳಲ್ಲದೀಸಂ
ಗರದ ಸಾಹಸವಿದ್ಯೆ ನಿಮಗೇಕೆಂದನಾಕರ್ಣ ‖ ೧೨

ಹಣೆಗೆ ಮಟ್ಟಿಯು ಬಿಡಿದು ದರ್ಭೆಯು
ಹಣಿದು ಬೆರಳೊಳು ಮುರುಹಿ ದೋತ್ರದ
ದಣಿಬವನು ನಿಱವಿಡಿದು ಮಹಳದ ಮನೆಯು ಚೌಕದೊಳು |

---

* 11-12 ನೆಯ ಪದ್ಯಗಳ ನಡುವೆ ಈ ಪದ್ಯವು ಚ. ಎ.ಬ ಪುಸ್ತಕವಲ್ಲಿ ದೊರೆಯುತ್ತದೆ.

ಎಲವೊ ಗಂಧರ್ವರು ವನಾಂತರ
ದೊಳಗೆ ನೀನೇ ಕಾಣುತಿರಲಾ
ಸಲುಹಿದನ ಹಿಡಿದುಯ್ಯೊಡಾರೈ ಬಿಡಿಸಿದತಿಬಲರು |
ಬಲುಹನೆಮ್ಮೊಳು ಕೆದರದಿರು ಕೈಹಾಳು
ಗುಳಕೆ ಬಂದವ ಪಾರ್ಥ ನಿನ್ನ
ಗ್ಗಳಿಕೆಗಕಟಾ ಸರಿಯೆ ತೊಲತೊಲಗೆಂದನಾ ದ್ರೋಣ ‖

1 ನಾವನಱಿವನು, ಟ.   2 ತೃಸವಗಾತ್ರ, ಟ.

ಮಣೆಗೆ ಮಂಡಿಸಿ ಕುಳ್ಳಿತುಂಬಾ
ತಣದ ವಿದ್ಯೆಯು ಬಲ್ಲಿರಲ್ಲದೆ
ರಣವಿಚಾರದ ಗೊಡವೆ ನಿಮಗೇಕೆಂದನಾಕರ್ಣ ‖ ೧೩

ಇಂದು ಪಿತೃದಿನ ವಿಂದು ಸಂಕ್ರಮ
ವಿಂದು ಸೂರ್ಯಗ್ರಹಣ ಹರಿದಿನ
ವಿಂದು ಯಜ್ಞಾರಂಭದಿನ್ಯವಡ್ಡಂತಿ ಲೇಸೆಂದು ।
ಬಂದು ನಾನಾಮುಖದ ದಾನಗ
ಳಿಂದೆ ವಸ್ತುವ ಬಾಚಿ ಹೊಳ್ಳಿಸಿ
ತಿಂದು ಕೊಬ್ಬಿದ ನಿಮಗೆ ಸುಭಟರ ಮಾತದೇಕೆಂದ ‖ ೧೪

* * * * *

ಬಲ್ಲಿರೈ ಕೌರವನ [1] ಧನವನು
ಹೊಳ್ಳಿಸಲು ವ್ಯಾಪ್ತಾನ್ನದಿಂದವೆ
ಡೊಳ್ಳ ಬಳೆಯಿಸಿ ರಾಜಗುರುತನದಿಂದೆ ಬೆಳೆತಿಹಿರಿ ।
ಬಿಲ್ಲ ವಿದ್ಯಾವಿಷಯ [2] ದರಿಭಟ
ಮಲ್ಲ [3] ರೊಡನೆಯುವಿದ್ಯವಿದು ಜಡ
ರೆಲ್ಲರಿಗೆ ಸುಲಭವೆ ಜಪಾನುಷ್ಠಾನವಲ್ಲೆಂದ ‖ ೧೫

---

1 ರಾಜ್ಯವ, ಟ. 2 ಚೌಪಟ್ಟ, ಝ. 3 ಚಾಪಳೆ, ಝ.

* ಮಾರಣದ ಹೋಮದೊಳು ಯಂತ್ರದ
ಸಾರವೈದಿಕಕರ್ಮದೊಳು ಕೃತ
ಧೀರತನದೊಳು ಮನವ ಮುಟ್ಟಿವಿರಿ ನುಡಿಯ ಶಾಪದೊಳು ।
ವೈರಿಗಳ ಕಿಡಿಸುವಿರಿದಲ್ಲದೆ
ಹಾರುವರು ಪೊಕ್ಕಿರಿದು ಕೊಂದುದ
ನಾರು ಬಲ್ಲರು ಗಂಡುಗಳು ನೀವಲ್ಲ ಹೋಗೆಂದ ‖

ಈ ಪದ್ಯವು 14ನೆಯ ಪದ್ಯದ ಮುಂದೆ ಜ. ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಕೇಳಿದಶ್ವತ್ಥಾಮ ಕಿಡಿಗಳ
ನಾಲಿಗಳೊಳುಗುಳಿದನು ಕೇಳಲೆ
ಖೂಳ ಸೂತನ ಮಗನೆ ಸುಭಟಾಂಗದೊಳು ಬರೆಯನಲಾ ।
ಕೀಳುಜಾತಿಗೆ ತಕ್ಕ ನುಡಿಗಳು
ಮೇಳವಿಸಿದುವು ಕುಲವ ನಾಲಗೆ
ಹೇಳಿತೆಂಬುದು ತಪ್ಪದಾಯಿತು ಕರ್ಣ ಕೇಳೆಂದ ॥ ೧೬

ನಗುವೆ ವಿಪ್ರರ ನಾವರಾಯನ
ಮಗನೊ ನೀನೀದಾನಧರ್ಮಾ
ದಿಗಳೊಳರ್ಥವ ನಾವು ಕೊಂಬರು ವಿಪ್ರ ಹೊಙಗಾಗೆ ।
ಜಗವ ರಕ್ಷಿಸಲಾವು ಕೊಳ್ವವು
ಮಗುಳೆ ಕೊಡುವೆವು ಬಾಹುಜಾರ್ಥ್ಯಾ
ದಿಗಳು ಕೊಡುವರು ತತ್ಪರಿಗ್ರಹಯೋಗ್ಯರಲ್ಲೆಂದ ॥ ೧೭

ಉಳಿದವರ್ಣತ್ರಯಕೆ ಬೆಸಗೈ
ವಳವಿಯೊಳು ಶೂದ್ರನು ಕೃತಾರ್ಥನು
ತಿಳಿಯೆ ನೀನಾರಿವರೊಳಗೆ ಕೊಳ್ವವನೊ ಕೊಡುವವನೋ ।
ಕುಲವಿಹೀನನ ತಂದು ಕೌರವ
ತಿಲಕ ಪತಿಕರಿಸಿದೊಡೆ ನಾಲಗೆ
ಯುಲಿಯಲಾಯ್ತೇ ಕರ್ಣ [1] ನಿನ್ನಯ ಭವವ ನೆನೆ ಯೆಂದ ॥

ಪರರು ಪತಿಕರಿಸಿದೊಡೆ ಲಜ್ಜೆಗೆ
ಸಿರವ ನಸುಬಾಗುವರು ಗರುವರು
ದುರುಳ ನೀಂ ದುಱುದುಂಬಿತನದೊಳು ನಿನ್ನ ಹೊಗಳದೊಡೆ ।
ಗರುವವರ್ಮಾನ್ಯರು ಮೆಚ್ಚು ವರೆ ಸಸಿ
ನಿರು ಮಹಾತ್ಮರು [2] ನಿನ್ನೊಳಿದಿರು
ತ್ತರವ ಕುಡುವರೆ ಗಳಹತನವೆನ್ನೊಡನೆ ಬೇಡೆಂದ ॥ ೧೯

[1] ಮುನ್ನಿನ, ಜ.  [2] ನಿನ್ನೊಡನೆಯುತ್ತರವ, ಟ.

* ಗರುಡಿಯೊಳು ಸಾಮುಗಲಿಸುವ ಶಿ
ಷ್ಯರನು ಕುಳ್ಳಿರ್ದೋದಿಸುವ ಬಂ
ಧುರದ ತರುಣಾದಿಗಳ ಸಂತತಿಗಳೊಳು ಸುಖಯಿಸುವ ।
ಪರರ ಮನೆಯೊಳು [1] ಜಾತವೆಂದರೆ
ಹರುಷದೊಳು ಹಿಗ್ಗುವ ವಿಡಂಬದ
ಪರಿಯು ನಾಥರು ನೀವು ನಿಮಗೇಕೆಂದನಾಕರ್ಣ ॥ ೨೦

ತೆಗೆವೆ ತಾಳಿಗೆಗಡಿತನಕ ನಾ
ಲಗೆಯು ಕೊಯ್ವೆನು ಮುನಿದು ತನ್ನೋ
ಲಗವ ತೆಗಿಸಲಿ ಕೌರವನು ನಿನಗೊಲಿದು ಪತಿಕರಿಸಿ ।
ಅಗಣಿತೋಪಮ ಗುರುವ ನಿಂದಿಸಿ
ನಗುವೆ ನಿನ್ನನು ಕೊಲುವೆ ನೆನುತಾ
ಳುಗಳ ದೇವನು ಸೆಳೆದನಶ್ವತ್ಥಾಮ ಖಂಡೆಯುವ ॥ ೨೧

ಆಳು ಮತ್ಸರದಧಿಕರೋಷದ
ಮೇಲುನುಡಿಯುಂಕುರಿಸೆ ಕುರುಭೂ
ಪಾಲನಿಬ್ಬರ ತೆಗೆದನುಚಿತೋಕ್ತಿಯೊಳು ಸಂತೈಸಿ ।
ಕಾಳಗಕೆ ತೆತ್ತವನೊಡನೆ ನಿ
ಮ್ಮಾಳುತನವನು ತೋಱು ಯೊಳಗೊಳ
ಗಾಳುವಾಸಿಯ ತೋಟ ಬೇಡೆಂದರಸ ಮಾಣಿಸಿದ ॥ ೨೨

ಬಂದು ಭೀಷ್ಮಂಗೆಱಗಿ ಕೈಮುಗಿ
ದೆಂದನೀತನು ಪಾರ್ಥನಾದೊಡೆ
ಹಿಂದಣಂತಿರೆ ನವೆಯಬೇಹುದು ವರುಷಹದಿಮೂಱು ।
ಸಂದುದಿಲ್ಲಜ್ಞಾತವಾಸಕೆ
ಮುಂದೆ ದಿನವಿಹುದೆನ್ನ ಲೆಕ್ಕದೊ
ಳೆಂದು ಕುರುಪತಿ ನುಡಿಯೆ ನಗುತಿಂತೆಂದನಾಭೀಷ್ಮ ॥ ೨೩

* ಈ ಪದ್ಯವು, ಚ. ಜ, ಟ. ಪುಸ್ತಕಗಳಲ್ಲಿಲ್ಲ.

1 ಚೌಲ್ಯರ್ಥು.

ಮಗನೆ ಕೇಳೀರ್ೈದುವರುಷಕೆ
ಮಿಗುವುವೆರಡೇ ಮಾಸ ಮಾಸಾ
ದಿಗಳ ನವರನುಭವಿಸಿದರು ಹದಿಮೂಱು ವತ್ಸರವು ।
ಮಿಗುವವಧಿ ಬುಧರಱಿಯೆ ನಿನ್ನಿನ
ಹಗಲು ನಿನ್ನದು ಪಾಂಡುತನಯರು
ಪುಗುವೊಡಿಂದಿನ ದಿವಸವವೆರದು ಕಂದ ಕೇಳೆಂದ ॥ ೨೪

ಜಲಧಿ ಮೇರೆಯ ನೊಡೆದು ಹಾಯಲಿ
ನೆಲನ ಸಿಳುಹಲಿ ದಿಗಿಭ ವಿನಮಂ
ಡಲಕೆ ಕಾಳಿಕೆಯಿಡಲಿ ನಡೆದಾಡಲಿ ಕುಲಾದ್ರಿಗಳು ।
ಅಳುಪಲಱಿವನೆ ಸತ್ಯಭಾಷೆಗೆ
ಕಲಿಯುಧಿಷ್ಠಿರನೃಪತಿ ಯನ್ವಯ
ತಿಲಕನಱಿಯಾ ತಂದೆ ಕೌರವರಾಯ ನೀನೆಂದ ॥ ೨೫

ಸಾಕದಂತಿರಲಿನ್ನು ಕಾಳಗ
ನೂಕಲಱಿಯದು ಪಾರ್ಥ ಕೊಲುವೊಡೆ
ಬೇಕು ಬೇಡೆಂಬವರ ಕಾಣೆನು ಹಲವುಮಾತೇನು ।
ಆಕುಮಾರರ ಕರಿಸಿ ಸಂಧಿಯ
ನಾಕೆವಾಳರ ಮುಂದೆ ಮಾಡಲು
ಲೋಕದೊಳು ಸರಿಯಿಲ್ಲ ನಿನಗೆ ಮಹೀಶ ಕೇಳೆಂದ ॥ ೨೬

ಕಂಡುದಳವಿ ವಿರೋಧಿಗೆಮಗೆಯು
ಕೊಂಡುದೇ ಬಲುಗೈದು ಮನಮುಂ
ಕೊಂಡು ಹೊಕ್ಕದು ಕಳ ನದಲ್ಲದೆ ಪಾಂಡುಸುತರೊಡನೆ ।
ಉಂಡು ಮೇಣುಟ್ಟೊಲಿದು ಬದುಕುವ
ಬಂಡತನವೆಮಗುಂಟೆ ವೈರವ
ಕೊಂಡೆಸಗಬೇಕೆಂದು ನುಡಿದನು ಕೌರವರ ರಾಯ ॥ ೨೭

ಮೇಲೆ ನೆಗಳುವ ಹದನ ನಿಲ್ಲಿಂ
ಮೇಲೆ ನೀನೇ ಬಲ್ಲೆ ಯೆನುತೆ ವಿ
ಶಾಲಮತಿ ಬಿಸುಸುಯ್ದು ಕೌರವ ಕೆಟ್ಟನಕಟೆನುತೆ ।
ಕಾಳಗವೆ ನಾವಾನುವೆವು ಪಶು
ಜಾಲಸಹಿತಿಭಪುರಿಗೆ ನೀ ಕಿರಿ
ದಾಳೊಡನೆ ನಡೆ ಯೆಂದು ಸೇನೆಯು ನೆರಡುವೊಡಿಸಿದ ॥ ೨೮

ಕೌರವೇಂದ್ರನ ಕೂಡೆ ಸೇನಾ
ಭಾರವನು ಪರುಠವಿಸಿ ಕಳುಹಿದ
ನಾರುಭಟೆಯೊಳು ಭೀಷ್ಮ ನಿಂದನು ಥಟ್ಟ ಮೇಳೈಸಿ ।
ವೀರಕರ್ಣ ದ್ರೋಣ ಗೌತಮ
ಭೂರಿಬಲ ಗುರುಸೂನು ಶಕುನಿ ಮ
ಹಾರಥಾದಿಯ ಕೂಡಿಕೊಂಡನು ನರನ ಕಾಳಗಕೆ ॥ ೨೯

ಇತ್ತಲಖಿಳಮಹಾರಥಾದಿಯ
ನೊತ್ತಲಿಕ್ಕಿ ಸುಯೋಧನನು ಪುರ
ದತ್ತ ಗೋಕುಲಸಹಿತ ಹಾಯ್ದನು ಪೂತು ಮಝ ಎನುತೆ ।
ಮುತ್ತಯನು ಮಾಡಿದ ಪಯೋಗದ
ತತ್ತ್ವವಿದೆ ಲೇಸಾಯ್ತು ಬೇಗದೊ
ಳುತ್ತರನೆ ಕೊಳ್ಳಡದ ವಾಘೆಯ ನೆಂದನಾ ಪಾರ್ಥ ॥ ೩೦

ತುರುಗಳನು ಮರಳಿಚುವುದೆಮಗಿಂ
ದುಱುವ ಕಾರ್ಯವು ತತ್ತ ಕೆಲಸದ
ಹೊಱಗೆಯನು ನಿರ್ಣೈಸಿ [1] ಒಟಕಿನೊಳವರ ಪಾರುಷವ ।
ನಱಿದು [2] ಕೊಳ್ವೆನು ಕೊಳ್ಳು ವಾಘೆಯ
ನಿಱಿತದೆಡೆಯೊಳು [3] ಭೀತಿಗೊಳ್ಳದೆ
ತಱಿದು ತಿರುಗುವ ಲಾಗುವೇಗವ ನೋಡು ನೀನೆಂದ ॥ ೩೧

---

[1] ಬಚಿಕಾವಿವರಧೀವಸವ, ಜ. [2] ಕೊಂಬೆವು, ಜ.
[3] ಭೀತಿಗೊಳದಿರು, ಚ.

ಎನಲು ಚಪ್ಪರಿಸಿದನು ತೇಜಿಗ
ಳನಿಲಜವದೊಳು ನಿಗುರಿದುವು ಮುಂ
ಮೊನೆಯುವರ ಮನ್ನಿಸದೆ ಬೆಂಬತ್ತಿದನು ಕೌರವನ ।
ಜನಪ ಬಿಡು ಬಿಡು ತುರುಗಳನು ಫಲು
ಗುಣ ಕಣಾ ಬಂದವನು ಕುರುಕುಲ
ವನದವಾನಲನರಿಯೆ ಯೆನುತುತ್ತರನು ಬೊಬ್ಬಿರಿದ ॥ ೩೦

ಎಲೆಲೆ ನರ ಜಾರಿದನು ರಾಯನ
ಬಳಿಯ ಹತ್ತಿದ ನಡ್ಡಹಾಯ್ದತಿ
ಬಳನ ತೆಗೆ ನಮ್ಮತ್ತಲೆನುತಾದ್ರೋಣಗೌತಮರು ।
ಹಿಳುಕ ಕೆನ್ನೆಗೆ ಸೇದಿ ಬೊಬ್ಬೆಯು
ಕಳಕಳದಿ ನಡಗಟ್ಟಿದರು ನಿ
ಲ್ಲೆಲವೊ ಫಲುಗುಣ ಕಾದಿ ನೀನೊಟ್ಟೈಸಿ ಹೋಗೆನುತ ॥ ೩೩

ನಗುತ ಫಲುಗುಣ ನೆರಡೆರಡು ಕೋ
ಲುಗಳ ನವರವರಂಘ್ರಿಗೆಚ್ಚನು
ತೆಗೆದು ಹಾಯ್ದನು ಮತ್ತೆ ಕೌರವರಾಯಮೋಹರಕೆ ।
ಹೊಗರುಗುವ ಹೊಸಕಣೆಯ ವಡ್ಡಿಯ
ಬಿಗಿದ ನೆಡದೊಳು ಬಲದೊಳದಿರೊಳು
ಸೆಗಳಿಕೆಯ ಸಸಿಯಾಯ್ತು ಕೌರವಸೇನೆ ನಿಮಿಷದೊಳು ॥ ೩೪

ಬಿರಿದುವಾನೆಗಳರ್ಜುನನ ಬಿಲು
ದಿರುವಿನಬ್ಬರಕತಿರಥರ ಬಾಯ್
ದೊರಳೆ ಹಾಯ್ದುವು ವಿಗಡಹನುಮನ ಗಾಢಗರ್ಜನೆಗೆ ।
ಸಿರ ವೊಡೆದು ಸಿಡಿದುದು ಪದಾತಿಯು
ನರನ ಶಂಖಧ್ವನಿಗೆ ಕುರುಬಲ
ಹೊರಳಿಯೊಡೆದುದು ಹಾರಿ ಬಿದ್ದುದು ಹೆದರಿ[1] ಹಮ್ಮೈಸಿ ॥ ೩೫

---

1 ತೂಳಿದುವು, ಟ.

ಎಲೆಲೆ ನರನೋ ಸುಭಟಜೀವರ
ದೞದುಳ್ಳಿಗನೋ ದಿಟ್ಟರಾಯರ
[1] ದೞದ ವಹ್ನಿಯೊ ಪಾರ್ಥನೋ ಘನ ಕಾಲಭೈರವನೋ |
ಗೆಲುವರಾವೆಡೆ ಕರ್ಣ ಕೃಪ ಸಾ
ಬಲ ಜಯದ್ರಥರೆಂಬವರ ಹೆಡ
ತಲೆಗೆ ನಾಲಗೆ ಹೋಯಿತೆಂದುದು ಕೂಡೆ ಕುರುಸೇನೆ || ೩೬

ಮರಳಿ ಹೊಗೆ ಹಿಂಡಾಕಳನು ಗೋ
ವರನು ಬಿಡು ಹೆಡಗೈಯ ಕೊಯ್ದನ
ಮ್ಮರಸ [2] ನನುದಪ್ಪಿದನು ತುಱುಸೆಱೆಗೊಳ್ವರೇ ನೃಪರು |
ಕೊರಳ ಕಡಿತಕೆ ಹೊಕ್ಕ ಹಗೆಗಳ
ಸರಳಗುಸಿರನು ತೆರದಿರೆಂದ
ಬ್ಬರಿಸಿ ಕುರುಬಲ ಬಾಯ ಬಿಟ್ಟುದು ರಾಯ ನಿದಿರಿನೊಳು || ೩೭

ಬೊಬ್ಬಿಱಿದು ನರನಿಸಲು ಕಣೆಗಳು
ಹಬ್ಬಿದುವು ಹುರಿಗೊಂಡು ಹೂಣಿಗ
ರೊಬ್ಬುಳಿಯ ಹರೆಗಡಿದು [3] ಕರಿಗಳ ಹೊದಱ ಮಿದೆಗೆಡಹಿ |
[4] ತಿಬ್ಬನೊದೆದಣಿಗೆದ್ದು ಗಱಿವೊರೆ
ದಬ್ಬರಿಸಿ ಕಬ್ಬಕ್ಕಿ ಗಗನವ
ಮಬ್ಬಿಡುವವೊಲು [5] ಮುಸುಕಿದುವು ಫಲುಗುಣನ ಶರಜಾಲ ||

ತುಡುಕಿ ಖಂಡವ ಕಚ್ಚಿ ಹಾಱುವ
ಗಿಡುಗನಂತಿರೆ ಭಟರ ಗಂಟಲ
ಕಡಿದು ಹಾಯ್ದಂಬುಗಳು ಬಿದ್ದುವು ಕೋವತಲೆಗಳೊಳು |

---

1 ದೞದವಾಗ್ನಿಯೊ, ಚ. 2 ನಯದಪ್ಪಿದನು, ಚ. 3 ತೇರಿನ, ಚ.
4 ತೆಬ್ಬ, ಚ. 5 ತುಡುಕಿದುವು, ಚ, ಮುಸಗಿದುವು, ಜ,

ಅಡಸಿದುವು ನಿಱಿಸಿಟ್ಟಲು ಗರಿ ದೆಲು
ಪೊಡೆದು ಥಟ್ಟುಗಿದಾರೆಗಳ ನಡೆ
ಗಡಹಿದುವು ಗಱಿಗಿಂತ ಹಾಯ್ದುವು ಪಯದ ಹೊಟ್ಟೆಯೊಳು ॥

ಕರುಳ ಬಾಯೊಳು ಕಾಱಿ ಕಾಲಾ
ಳೊರಲಿ ಕೆಡೆದುದು ಬೋಳೆಯಂಬುಗ
ಳಱಿಯೆ ಸಮಸೀಳಾಗಿ ಬಿದ್ದುವು ಗಜದ ಹೋಳುಗಳು |
ಕೊರಳು [1] ಹಱಿದೊಱೆತದ್ದ ರಕುತದ
ಹೊರಳಿಗಳ ಹೊನಲಿನೊಳು ಮುಳುಗಿತು
ತುರಗ ಕರಿ ರಥ ಪತ್ತಿ ಹೊಸಕುಮ್ಮರಿಯು ಕೋಲಿಸಿತು ॥ ೪೦

ಹರಿಗೆ ಖಂಡಿಸಿ ಜೋಡು ಸೀಸಕ
[2] ಜರಿದು ಬಲುದೋಳುಡಿದು ಗೋಣರೆ
ಹಱಿದು ನಿಟ್ಟೆಲು ಮುಱಿದು ತೊಡೆ ಮುರೆಗಡಿದು ತಲೆಯೊಡೆದು|
ನರ ಹಱಿದು ಕರುಳೊಕ್ಕು ನೆಣನು
ಬ್ಬರಿಸಿ ಕಾಳಿಜ ಹಾಯ್ದು ನೆತ್ತರು
ಸುರಿದು ಹಱಿದೊಗ [3] ಲೇಳ ಹೊರಳಿತು ವೈರಿಪಾಯದಳ ॥೪೧

ಮುಂದೆ ಕವಿದಂಬುಗಳು ಸುಭಟರ
ಕೊಂದು ಬಿಸುಟುವು ಮತ್ತೆ ಬಳಿಯೊಳು
ಬಂದುವಕೆ ಗುಱಿಯಿಲ್ಲ ಹೊಗಳುವೆ ನೇನನದ್ಭುತವ |
ಬಂದ ಗುಱಿಗೆರಡಂಬ ತುಡಬೇ
ಡೆಂದು ಪಾರ್ಥನ ಬೇಡಿಕೊಂಡುವು
ಸಂದ ಮಂತ್ರಾಸ್ತ್ರಂಗಳೆಲೆ ಜನಮೇಜಯಕ್ಷಿತಿಪ ॥ ೪೨

* * * *

---

1 ಹಱಿದೊಱೆತೆದ್ದ, ಬ. 2 ಜಱಿದು, ಟ. 3 ಲೆಳೆಯ. ಜ.

* ಮೊರೆದು ಬಿಱುಗೋಲುಗಳು ವಜ್ರದ
ಸರಪಳಿಯ ಥಟ್ಟುಗಿದು ಲೋಹದ
ಸಿರದ ಬಲುಸೀಸಕವ ಸಿವ್ಮೆಗೊಂಡು ಪಟುಭಟರ |

ಹಿಕ್ಕಿದುವು ಹಯಬಲವ ಸುಭಟರ
[1] ನೊಕ್ಕಿ ತೂಱಿದುವಾನೆಗಳ ಸಾ
ಲಿಕ್ಕಿ ನಟ್ಟುವು ಬಹಳರಕುತದ ಕೆಸಱ ಕೈಗಳೊಳು ।
ಮುಕ್ಕಿದುವು ಮಲತರನು ಮಾಂಸವ
ನಿಕ್ಕಿ ಯಾದ್ವಿಜಕುಲಕೆ ಸತ್ರವ
ನಿಕ್ಕಿದುವು ದಿಗುವಲಯದೊಳು ರಣಧೀರನಂಬುಗಳು ॥ ೪೩

ಬಗ್ಗೊಡೆಯದೌಂಕಿದ ಮಹೀಶರು
ಮುಗ್ಗಿದರು ಮುಂನಾದ ಮೇಳದ
ಮೊಗ್ಗೆನೊಳು ಮುಂಕೊಂಡಬಿರುದರು ಬಿಸುಟರೊಡಲುಗಳ ।
ನುಗ್ಗು ನುಸಿಯಾಯ್ತತಿರಥರು ಮಿಗೆ
ಮೊಗ್ಗರದ ಮೊನೆ ಮುಱಿಯೆ ಕಾಲನ
ಸಗ್ಗಳಿಯು ಸೆಳೆದಂತೆ ಸುರಿದುವು ರಕುತದಾರೆಗಳು ॥ ೪೪

ಕಾಲದೊಳು ಪರಿಪಕ್ವವಾದ ವಿ
[2] ಶಾಲವಾದೀಜಗದ ಜಂಗವು

---

ಬರಿಯ ಕವಚವನುಗಿದು [3] ತೇಜಿಯ
ಕರಿಯ ಹಕ್ಕರಿಕೆಗಳನಡಹಾ
ಯ್ದುರವಣಿಸಿದುವು ಪಾರ್ಥನೆಚ್ಚಂಬುಗಳು ರಥದೊಳಗೆ ॥
ಮಂಡೆಯೊಳು ಕೈಯಿಟ್ಟು ಕೆಲಬರು
ಸೆಂಡಿರೋಲೆಯ ಕಾಯೆನುತಯು
ದ್ದಂಡರಾವುತರು ಕರವುಗಿದರು ಕೈದುಗಳ ಬಿಸುಟು ।
ಮಂಡಳಿಕರುಂ ಮರಳಿದರುಕೈ
ಕೊಂಡು ಕೌರವರಾಯ ತುಱುಗಳ
ಹಿಂಡ ಹಿಂದಿಕ್ಕಿದನು ಸರಿದನು ಭೀಷ್ಮವ್ಯಾಹರಕೆ ॥

ಎಂಬೆರಡು ಪದ್ಯಗಳು ಟ. ಪುಸ್ತಕದಲ್ಲಿಯೂ ಮೊದಲನೆಯ ಪದ್ಯಮಾತ್ರ ಖ. ಪುಸ್ತಕದಲ್ಲಿಯೂ ೪೨ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತವೆ.

[1] ನೊಕ್ಕಲಿಕ್ಕಿದು, ಚ. [2] ಶಾಲಿತಸ್ಥಾವರದ, ಟ.

[3] ಜಿಂಚೆಯ ಕರಿಯನೈದಾಱೀಳ ನೊಡಗೊಂಡು, ಟ.

ಜಾಲವನು ಕಾಲಾಗ್ನಿ ಕವಿಕವಿದಟ್ಟಿ ಸುಡುವಂತೆ ।
ಮೇಲೆ ಮೇಲೊಡಗವಿವ ಬಾಣ
ಜ್ವಾಲೆಯೊಳು ಕುರುಸೈನ್ಯಕಾನನ
ಮಾಲೆಯನು ಕಲಿಪಾರ್ಥಪಾವಕನುರಿಹಿದನು ಮುಳಿದು ॥ ೪೫

ಆವ ಬಿಲ್ಲಾಳಾವ ಲಾಗುವ
ದಾವ ಗಾಡಿಕೆ ಯಾವ ಚಳಕವ
ದಾವ ಶರಸಂಧಾನ ವಾವ ವಿಹಾರ ವಾವ ಪರಿ ।
ರಾವಣನೊಳಿಂದ್ರಾರಿ ರಾಘವ
ದೇವ ಲಕ್ಷ್ಮಣರಲ್ಲಿ ಕಾಣೆ ನ
ದಾವ ಗರುಡಿಯ ವಿದ್ಯೆ ಮಝು ಭಾಪೆಂದನಾಹನುಮ ॥ ೪೬

ಕಾಣಬಾರದು ಬಿಡುವ ಹೂಡುವ
ಕೇಣವನು ಪರಮಾಣುಪುಂಜವ
ಕಾಣವೇ ಕಣ್ಣುಗಳು ನಮ್ಮವು ಮರ್ತ್ಯದಾಲಿಗಳೇ ॥
ಜಾಣಪಣವಿದು ಶಿವ ಸುದರ್ಶನ
ಪಾಣಿಗಳಗರಿದಮರರಾಯನ
ರಾಣಿಯಾಣೆ ಯೆನುತ್ತೆ ಬೆರಗಾಯಿತ್ತು ಸುರನಿಕರ ॥ ೪೭

ಏಱುವಡೆದರು ಕೆಲರು ಕೆಲರಸು
ಸೂಱೆವೋದುದು ಕೆಲರು ಕೆಲರೆದೆ
ಡೋಱುಗಳ ಪೂರಾಯಗಾಯದೊಳುಸಿರ ತೆಗೆಬಗೆಯ ।
ಕಾಱಿದರು ರಕುತವನು ಸಗ್ಗಕೆ
ಗೂಱು ಮಾಱಾಡಿದರು ತಲೆಗಳ
ಹೇಱಿದರು ಹರಣವನು ಕೊಟ್ಟಿಗೆ ಕಾಲನರಮನೆಗೆ ॥ ೪೮

ಚಲ್ಲಿ ಹೋದರು ಕೆಲರು [1] ಕೆಲಬರು
ಬಿಲ್ಲ ಬಿಸುಟರು ಕೋಲು ಕಟ್ಟಿತು
[2] ಗೆಲ್ಲಗೆಟ್ಟರು ಕೆಲರು ಪಾರ್ಥನ ಕೋಲ [3] ಕೋಹಿನೊಳು ।

---

[1] ಕೆಲರೊಳು ಬಿಲ್ಲಬಿರುದರು ಕೋಲುಕಟ್ಟಿತು, ಓ. [2] ಎಲ್ಲಿಗಱಿದರು, ಜ,
[3] ತೋಹಿನೊಳು, ಝ.

ಮೆಲ್ಲಮೆಲ್ಲನೆ ಸರಿವ ಕೌರವ
ಮಲ್ಲನನು ಕಂಡಡ್ಡವಿಸಿ ತುಱು
ಗಳ್ಳ ಹೋಗದಿರೆನುತೆ ಮೊದಲಿಸಿದನು ಕಲಿಪಾರ್ಥ ॥ ೪೯

ಕಾಯಲಾಪ್ಪೊಡೆ ಕರೆಯಿರೈ ಕ
ರ್ಣಾಯುತಾಸ್ತ್ರರ [1] ನಕಟ ಕೌರವ
ರಾಯ ಸಿಲುಕಿದ ನೆಲ್ಲಿ ಭೀಷ್ಮದ್ರೋಣ ಕೃಪರೆನುತೆ ।
ಬಾಯ ಬಿಡೆ ಕುರುಸೇನೆ ಗುರು ಗಾಂ
ಗೇಯ ಶಕುನಿ ವಿಕರ್ಣ ಕೃಪ ರಾ
ಧೇಯ ಸೈಂಧವ ಚಿತ್ರಸೇನಾದಿಗಳು ಕೂಡಿದರು ॥ ೫೦

ಇತ್ತ ತುಱುಗಳ ಬಿಟ್ಟು ರಾಯನ
ತೆತ್ತಿಗರು ತಲ್ಲಣಿಸಿ ಹರಿದರು
[2] ಹೊತ್ತಿದರು ಹೊಗೆ ನೆಗಹಿದಾಹವಗಹನಗರ್ವಿತರ ।
ಸುತ್ತ ಗೋವರ ಸನ್ನೆಯೊಳು ಪುರ
ದತ್ತ ಮುಂತಾದುದು ಪಶುವ್ರಜ
ವುತ್ತರನು ಮುಳುಗಿದನು [3] ಪರಿತೋಷಪ್ರವಾಹದೊಳು ॥ ೫೧

ಬಿಗಿದ ಕೆಚ್ಚಲ ತೊರೆದುಗುವ ಹಾ
ಲುಗಳ ಮಿಗೆ ಸೂಳದ್ದ ಬಾಲದ
ಮೊಗ ನೆಗಹಿ ದೆಸೆದೆಸೆಯ ನೋಡುವ ಬೆಚ್ಚಿ ಬಿಱುವರಿವ ।
ಅಗಿದು ಸರಳಿಸಿ ನಿಲುವ ಹೊಸಬರ
ಸೊಗಡಿಗವ್ವಳಿಸುತ್ತ ಗೋವರು
ತೆಗೆದ ಪಥದೊಳು ತೆಕ್ಕೆವರಿದುವು ಹಿಂಡು ಸಂದಣಿಸಿ ॥ ೫೨

1 ನೃಪತಿ ಮಾರಿಯ ಬಾಯ ತುತ್ತಾದನು ಕರ್ಣ ಕೃಪ ದ್ರೋಣರೆಲ್ಲನುತೆ. ಚ.

2 ಹೊತ್ತಿದುದು ಹೊಗೆಯುಗ್ಗಣಿತಾಹವಗಹನಗರ್ವಿತರ, ಚ. ಹೊತ್ತಿದುವು ಹೃದಯಂಗಳಾಹವಗಹನಗರ್ವಿತರ, ಖ.

3 ಪರಿತೋಷಾಂಬು ಪೂರದೊಳು, ಜ.

ಕೆಲವು ಕಡೆಗಂದಿಗಳ ಬಾಲದ
ಬಳಿಗೆ ಮೊಗಿಟ್ಟಡಿಗಡಿಗೆ ಮನ
ನಲಿದು ಮೋಹಿಯನೆತ್ತಿ ಸುಕ್ಕಿಸಿ ಮತ್ತೆ ಹರಿಹರಿದು ।
ಮೆಳೆತು ಕಾಲೊಳು ನೆಲನ ಕೆರೆದ
ವ್ವೆಳಸಿ ಮತ್ತೊಂದಿದಿರು ವರೆ ಬಲು
ಸಲಗನೀಡಿಮಿಡಾಡುತಿರ್ದುವು ಹಿಂತು ಹಿಂಡಿನೊಳು ॥ ೫೩

ತಿರುಗಿ ಕೆಂದೂಳಿಡುತೆ ತುರುಗಳು
ಪುರಕೆ ಹಾಯ್ದುವು ನಲವು ನಿಗಲು
ತ್ತುರಕಿರೀಟಿಗಳಾಂತು ನಿಂದರು ಮತ್ತೆ ಕಾಳಗಕೆ ।
ಅರಸು ಮೋಹರ ಮುರಿದ ಹರಿಬಂ
ಮರಳಿಚುವ ಮಿಡುಕುಳ್ಳ [1] ವೀರರು
ಬರಲಿಯೆಂದಡಿಗಡಿಗೆ ಬಿಲ್ಲನುತೂಗಿದನು ಪಾರ್ಥ ॥ ೫೪

ಎಂಟನೆಯ ಸಂಧಿ ಮುಗಿದುದು.

---

## ಒಂಭತ್ತನೆಯ ಸಂಧಿ.

### ಸೂಚನೆ.

ರಾಯ [2] ರಿಪುಬಲಜಲಧಿವಡಬನ
ಜೇಯನರ್ಜುನನಖಿಳಕೌರವ
ರಾಯದಳವನು ಜಯಿಸಿದನು ಸಮ್ಮೋಹನಾಸ್ತ್ರದೊಳು ॥
*

---

1 ವೀರರ ಧುರಕೆ ಬರಹೇಳೆನುತೆ, ಚ.   2 ಕುರುಬಲ, ಚ.

* ಕೇಳು ಜನಮೇಜಯ ಧರಿತ್ರೀ
ಪಾಲಕುತ್ತರನು ಸಮರದ
ಲೀಲೆಯೊಳು ತಾಂ ಮರಳಿ ನಿಂದನು ಧುರಕೆ ಗಮತಳಿಸಿ ।

ಮೆರಳಿದುವು ತುಱು ಮೂರಿಗೌತಣ
ಮೆರಳಿ ಹೇಳಿತು ಹಸಿದ ಹೆಬ್ಬುಲಿ
ಮೊಱೆಯೆ [1] ಮೈದೋಱಿದುವು ಹುಲುಮೃಗವೇನನುಸಿರುವೆನು ।
ಧರಣಿಪನ ಹಿಂದಿಕ್ಕಿ ಸೌಬಲ
ದುರುಳ ದುಶ್ಶಹಸೈಂಧವಾದಿಗ
ಳುಱುಬಿದರು ತಱುಬಿದರು ಪರಬಲಕಾಲಭೈರವನ ॥ ೧

*
ಹತ್ತುಸಾವಿರರಥ ಸಹಿತ ಭಟ
ರೊತ್ತಿ ಕವಿದರು ಲಗ್ಗೆವಱೆಗಳ
ಬಿತ್ತರದ ಬೈಬೈದು ಸಾರುವ ಗೌಱುಗಹಳೆಗಳ ।
ಸತ್ತಿಗೆಯ ಸಾಲುಗಳೊಳಂಬರ
ತತ್ತುದೈ ಕುಲಶೈಲನಿಚಯದ
ನೆತ್ತಿ ಬಿರಿಯಲು ಮೊಳಗಿದುವು ನಿಸ್ಸಾಳಕೋಟಿಗಳು ॥ ೨

---

ಕಾಳಗಕ್ಕರಿಭಟರ ಕರೆಯೆ ನೃ
ಪಾಲ ಕರ್ಣದ್ರೋಣಭೀಷ್ಮರು
ಮೇಳವಿಸಿ ನಿಲೆ ಕಂಡು ಮೆಲ್ಲನೆ ರಥವ ನಿಲಿಸಿದನು ॥

ಈ ಪದ್ಯವು ಕ. ಪುಸ್ತಕದಲ್ಲಿ ಮಾತ್ರ ಸೂಚನೆಯ ನಂತರ ದೊರೆಯುತ್ತದೆ.

1 ದನಿದೋಱಿದುವು, ಟ. ಮೊನೆದೋಱಿದುವು, ಖ.

* ಎಲೆಲೆ ನರನಿವ ನೋಡೆನುತೆ ಕೈ
ಚಳಕದೊಳು ಕೈಕೊಳ್ಳಿ ಮೋಹರ
ದೊಳಗೆ ತಿರುಗಿದ ನೆತ್ತ ಸಾರಿದ ನಟ್ಟೆ ಹಿಡಿ ಯೆನುತೆ ।
ನೆಲದೆಗೆದು ಬಿಱುಗಾಳಿಯೊಳಗಣ
ಬಲುಮುಗಿಲವೊಲು ಸೇನೆ ತಱಪಱ
ದೊಳಗೆ ತಱುಬಿತು ಮುಕುಟವರ್ಧನಕೋಟಿನಾಯಕರ ॥

ಈ ಪದ್ಯವು ಒಂದನೆಯ ಪದ್ಯದ ಮುಂದೆ ಕ. ಟ. ಎಂಬ ಪುಸ್ತಕಗಳಲ್ಲಿ ಮಾತ್ರ ದೊರೆಯುತ್ತದೆ.

ಚಂಬಕನ ಹಱಿ ಡಕ್ಕೆ ಡಮರುಗ
ಬೊಂಬುಳಿಯು ಗೋಮುಖದ ಡೌಡೆಯು
ಕೊಂಬುಕಹಳೆಯು ರಾಯ [1] ಗಿಡಿಗನ ಪಟಹ ಡಿಂಡಿಮದಾ ।
ತಂಬಟದ ನಿಸ್ಸಾಳದಬ್ಬರ
ತುಂಬಿತದು ನೆಲ [2] ಬಿರಿಯೆ ಬಲವಾ
ಡಂಬರದೊಳರ್ಜುನನ ಮುಳುಕಿತು ದೊರೆಯು ಸನ್ನೆಯೊಳು ॥ ೩

ಮರಳಿದುವು ತುಱುವೆಂಬ ಗರ್ವದ
ಗಿರಿಗೆ ಕೊಳ್ ಕುಲಿಶವನು ಸೇನೆಯು
ನೊರಸಿದುತ್ಸವಜಲಧಿಗಿದೆ ಕೊಳ್ ಬಾಡಬಾನಲನ ।
ಅರಸನಳುಕಿದನೆಂಬ ಜಯವು
ಬ್ಬರದ [3] ಬೆಳಸಿಗೆ ಕಡುನಿದಾಘದ
[4] ಬಿಱುಬಿಸಿಲ ಕೊಳ್ಳೆಂದು ಕೈಕೊಂಡೆಚ್ಚರತಿರಥರು ॥ ೪

* ಮೊಗಕೆ ಹರಿಗೆಯು ಚಾಚಿ ಕಾಲಾ
ಳಗಿದು ಕವಿದುದು [5] ಸರಳ ಸರಿಯೊಳು
ಬಿಗಿದ ಬಿಲ್ಲಾಳೌಕಿತುರವಣಿಸಿದರು ಸಬಳಿಗರು ।
ಉಗಿದಡಾಯುಧವೇಱಿದರು [6] ಭಾ
ಷೆಗಳ ರಾವ್ತರು ಕೆಂಗಱಿಯ ಕೋ
ಲುಗಳ ಹೆಮ್ಮಳಗಱಿವ ಕವಿದರು ಜೋದರತಿರಥರು ॥ ೫

ಅರರೆ ರಾವುತು ರಾವುತೆಂಬ
ಬ್ಬರಣೆ ಮಸಗಿದುದೊಂದುಕಡೆಯೊಳು
ಸರಿಸಸಬಳಿಗ ಪೂತು ಪಾಯಕು ವೆಂಬ ಕಳಕಳಿಕೆ ।

---

1 ಗಿಡಿಮಿಡಿ, ಕ. 2 ಕುಸಿಯೆ, ಜ. ಟ. 3 ಗಿರಿಗಿವೆ, ಕ.
4 ಬರಸಿಡಿಲು, ಕ. 5 ಬಿಟ್ಟಸರಳಿಯು, ಚ. 6 ವೆಗ್ಗಳಿಯು, ಜ.

* ಮೊಗಕೆಹರಿಗೆಯು ಎಂಬುದೇ ಮೊದಲಾದ ಈನೆಯ ಪದ್ಯವೂ ಅರರೆರಾವುತು ಮೊದಲಾದ ೬ನೆಯ ಪದ್ಯವೂ ಝ ಎಂಬ ಪುಸ್ತಕದಲ್ಲಿಲ್ಲ.

ಧಿರುರೆ ಸಾರಥಿ ಹಳು ಹಳೆಂಬ
ಬ್ಬರಣೆ ಮಸಗಿದುದೊಂದುಕಡೆಯೊಳು
ಕರಿಘಟೆಯು ಕಡುಹೊಂದುಕಡೆಯೊಳು ಮುಸುಕಿತರ್ಜುನನ ॥ ೬

ಸುರಪನಡವಿಯು ಚುರ್ಚಿದೊಡೆ ಸುರ
ರರಮನೆಯ [1] ಗಾಯಕರ ಗೆಲಿದೊಡೆ
ಜರಡುಜಂತ್ರದ ಮೀನನೆಚ್ಚೊಡೆ ರಾಯಕಟಕದೊಳು ।
ಗೊರವನೊಳು ಕಾದಿದೊಡೆ ಹೆಂಗುಸ
ನಿರುಳು ಕವೆದ್ದೋಡಿವೊಡೆ ದಿಟ ನೀಂ
ಧುರಕೆ ಧೀರನೆ ಪಾರ್ಥ ಫಡ ಎನುತೆಚ್ಚರತಿರಥರು ॥ ೭

ಭಂಡರುಲಿದೊಡೆ ಗರುವರದ ಮಾ
ರ್ಕೊಂಡು ನುಡಿವರೆ ಸಾಕದೇತಕೆ
ದಿಂಡುದಱಿವೆನು ನಿಮಿಷ ಸೈರಿಸಿ ನಿಂದು ಕಾದುವೊಡೆ ।
ಕೊಂಡಹಜ್ಜೆಯ ಹಂಗಿಗರು ಮಿಗೆ
[2] ಗಂಡುಗಿಡುವಿರಿ ನಿಮ್ಮ ನುಡಿಗಳ
ಕಂಡು ಬಲ್ಲೆನೆನುತ್ತ ಫಲುಗುಣ ನೆಚ್ಚನತಿರಥರ ॥ ೮

ಗುರುಸುತನ ಬಿಟ್ಟ ರಥವ ನೈಸಾ
ಸಿರವ ಮುಱಿದನು ಕರ್ಣನೊಡನೆಯ
ವರಮಹಾರಥವೆಂಟುಸಾಸಿರವನು ರಣಾಗ್ರದೊಳು ।
ಗುರುನದೀಜರ ಬಿಟ್ಟ ರಥವ ಸಾ

---

1 ನಾಯಕರ. ಝ.

2 ಮಿಂಡುಗಿಡದಿರಿ, ಚ. ಮಿಂಡುಗಿಡುವಿರಿ, ಜ. ಖ. ದಿಂಡುಗಿಡುವಿರಿ, ಟ. ಕೊಂಡುಗೆಡೆದರೆ, ಝ. (ತೊಂಡುಗೆಡೆದೊಡೆ ಎಂದಿರಬೇಕಾದುದಕ್ಕೆ ಕೊಂಡು ಎಂದು ಬಿದ್ದಿರಬಹುದೆಂದೂಹಿಸಲವಕಾಶವಿದೆ.)

ಸಿರವ [1] ಸೈಂಧವಕೃಪಸುಯೋಧನ
ರರಸುಭಟ್ಟನ ರಥವ [2] ಮುಱಿದನು ಹತ್ತುಸಾಸಿರವ ॥ ೯

* ಸವಗ ಸೀಳಿತು ಕೃಪನ ಭೀಷ್ಮನ
ಕವಚ ಹಱಿದುದು ದ್ರೋಣ ನೊಂದನು
ರವಿಯ ಮಗ ಮಸಗಿಂಡ ನಶ್ವತ್ಥಾಮ ನೈಮಱೆದ ।
ಅವನಿಪತಿಗೇಱೂಯ್ತು ಸಲೆ ಸೈ
ನ್ಧವಶಕುನಿದುಶ್ಯಾಸನಾದಿಗ
ಳವಯವದೊಳಂಬು [3] ಗಳನಾಯ್ದರು ತೋದರಕುತದೊಳು ॥ ೧೦

ಕಡಿವಡೆದುದ ಕ್ಷೋಣಿಬಲ [4] ಬೆಂ
ಗೊಡದೆ ನೊಂದರು ಹಲಬರಿನ್ನೇ
ನೊಡಲುಗಳ ಮೇಲಾಸೆ [5] ಯೆಂದಬ್ಬರಿಸಿ ಮಿಗೆ ಮಸಗಿ ।
[6] ಸೆಡೆದು ಸೊಪ್ಪಾದಖಿಳವೀರರ
ಗಡಣವನು [7] ಬೋಳೈಸಿ ಮಗುಳವ
ಗಡಿಸಿ ನೂಕಿತು ಸೇನೆ ಭೀಷ್ಮದ್ರೋಣರಾಜ್ಞೆಯೊಳು ॥ ೧೧

---

1 ಕೊಂದನು ವರ, ಚ. ಝ.  2 ಸೀಳಿದ ಹತ್ತು, ಚ. ಝ.

* ಈ ಪದ್ಯವು, ಕ. ಚ. ಪುಸ್ತಕಗಳಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

ತುರಗದಱಿವೆಂಭತ್ತುಸಾಸಿರ
ಕಲಘಟೆಯನೈವತ್ತುಸಾಸಿರ
ವರರಥವ ಹುಡಿಮಾಡಿದನು ಹನ್ನೆರಡುಸಾಸಿರವ ।
ಧುರಕೆ ಮೆಗ್ಗಳರಾದ ರಥಿಕರ
ಸಿರವ ತಱಿದನು ಮೂಱುಕೋಟಿಯ
ನರಸ ಕಾಲಾಳುಗಳ ಗಣನೆಯ ನಱಿವರಾರೆಂಬ ॥

3 ಗಳನಾದುವು, ಜ.

* ಈ ಪದ್ಯವೂ ಝ. ಪುಸ್ತಕದಲ್ಲಿಲ್ಲ.

4 ಬೆಂಗುಡುವಸುಭಟರ ನೋಡಿ ಯಿನ್ನೇ, ಚ,  5 ಯೆಂದಬ್ಬರಣೆ, ಟ.

6 ಜಡಿಬುತಮುಬುವ ಕಡುಸರಾಕ್ರಮದಗತರುಮುಬಿತು ಮತ್ತೆ, ಜ.

7 ಮೇಳೈಸಿ, ಖ.

ಖತಿಯೊಳಶ್ವತ್ಥಾಮ ನೀರವಿ
ಸುತನ ಜಱಿದನು ಗಾಯುವಡೆದೈ
ಪ್ರತಿಭಟನ ಭಾರವಣೆ ಲೇಸೈ ಕರ್ಣ ನೀ ನಱಿದೈ ।
ಅತಿಬಲನು ನೀ ನಹಿತಭಟವನ
ಹುತವಹನು ನೀ ನಿರಲು ಕುರುಭೂ
ಪತಿಯು ಬಲ ನುಗ್ಗಾಯ್ತಲಾ ನಿಷ್ಕರುಣಿ ನೀ ನೆಂದ ॥ ೧೨

ಭಟನು ನಾನಿರಲುಭಯರಾಯರ
ಕಟಕದೊಳಗಿನ್ನಾವನೆಂದು
ಬ್ಬಟೆಯನುಡಿಗಳ ನುಡಿದು ಬಾಚಿದೆ ಕೌರವನ ಹಣವ ।
ಭಟನು ಫಲುಗುಣ ನಹನೆ ತೋಱು
ಪಟುತನವ ನೆಲೆ ಅಪಜಯಸ್ತ್ರೀ
ವಿಟನೆ ವಿಹ್ವಲನಾದೆ ಯೆಂದನು [1] ದ್ರೋಣ ನಸುನಗುತ ॥ ೧೩

ಆಗಳೇಱಿಸಿ ನುಡಿದ ನುಡಿ ತಾ
ನೀಗ [2] ಳಱಿದುದೆ ಬಂಜೆವಾತನು
ಮೇಗನಱಿಯದೆ [3] ತಱಿಚುಗೆಡೆವರೆ ವೀರರಾದವರು ।
ಈಗಳಾಂಹಾರುವರು ಬಾಹುಜ
ನಾಗಿ ನೀ ನರ್ಜುನನ ತುಱುಗಳ
ಬೇಗ ಮರಳಿಚಿ [4] ತಂದು ತೋಱದೆ ಮೋಣೆ ದಿಟವೆಂದ ॥ ೧೪

---

[1] ದ್ರೋಣಸುತ, ಖ. ಚ. (ಇದಕ್ಕನುಸಾರವಾಗಿ ಮೇಲೆ ದ್ರೌಣಿ ಎಂದಿದ್ದರೆ ಚೆನ್ನಾಗಿ ತೋರುತ್ತದೆ.)

[2] ಳೇನಾಯ್ತೆಂಬ ಮಾತಿನ | ತಾಗ, ಚ. ಝ. ಜ. ಳಾದುದೆ ಬಂಜೆಮಾತಿನ ತಾಗ, ಟ.

[3] (?) ಜಬುಂಚಿಕೆಡೆವರೆ ಎಂದಿದ್ದರೆಸುಲಭವಾಗಿ ತೋರುತ್ತದೆ,

4. ಕೊಂಡುಬಾರದೆ, ಚ.

ಎಲವೊ ಗರುಡಿಯು ಕಟ್ಟ ಕ್ರಮವನು
ಕಲಿಸಿ ಬದುಕುವ [1] ಮೇಣು ಕಲೆಗಳ
ಕಲಿಸಿ ಬದುಕುವ ಕೃಪಣವೃತ್ತಿಯು ನಿಮ್ಮ ಕೂಡೆಮಗೆ ।
ಕಲಹವೇತಕೆ ಕಾಣಬಹುದೆಂ
ದಲಘುಭುಜಬಲಭಾನುಸುತ ಕಡು
ಮುಳಿದು ಘಡ ಘಡ ಪಾರ್ಥ ವೈದೋಱಿನುತೆ ಮಾಱಾಂತ ॥

ಇತ್ತಲಿತ್ತಲು ಪಾರ್ಥ ನಿಲು ನಿಲು
[2] ಮುತ್ತಯನ ಹಾರುವರ ನಂಜಿಸಿ
ಹೊತ್ತುಗಳೆದರೆ [3] ಹೋಹುದೇ ವೈದೋಱು ಕೈದೋಱು ।
ತೆತ್ತಿಗರ ಕರೆ ನಿನ್ನ ಬೇರನು
ಕಿತ್ತು ನೀರೊಳು ತೊಳೆ [4] ವೆ ರಿಪುಭಟ
ಮೃತ್ಯುವಲ್ಲಾ ಕರ್ಣನೆನುತಿದಿರಾಗಿ ನಡೆತಂದ ॥ ೧೬

ಉಂಟು ನೀನಾಹವದೊಳಗೆ ಗೆಲ
ಲೆಂಟೆದೆಯಲಾ ನಿನ್ನ ಹೋಲುವ
[5] ರುಂಟೆ ವೀರರು ಕೌರವೇಂದ್ರನ ಬಹುಳಕಟಕದೊಳು ।
ಟೆಂಟಣಿಸವಿದಿರಾಗು ನಿನ್ನಯ
ಸುಂಟಿಗೆಯು ನಿತ್ತಖಿಳಭೂತದ
ನಂಟ ನರ್ಜುನ ನೆನಿಸಿ ಕೊಳ್ವೆನು ಕರ್ಣ ಕೇಳೆಂದ ॥ ೧೭

---

1 ಮೇಣು ಕಾಳಗಗಲಿಸಿ ಜಾಣಾಗುವ, ಕ. ಮಾತ್ಸ್ಯವೃತ್ತಿಯು ನೊಲಿದು ತೋಱುವ, ಚ, ಝ.

2 ಮುತ್ತವರ, ಟ.

3 ಬಿಡುವೆನೇ, ಟ.

4 ವೆನಖಿಯಾ ಮಿತ್ತು ಕರ್ಣನ ಸೇನೆನುತ್ತ, ಟ.

5 ಬಂಟರುಂಟೇ, ಜ.

ಚಕಿತಚಾಪರು ಗಾಢಬದ್ಧ
[1] ಭ್ರುಕುಟಭೀಷಣಮುಖರು ರೋಷ
ಪ್ರಕಟಪಾವಕವಿಸ್ಫುಲಿಂಗರು ಕೂಡೆಸಮತಳಿಸಿ ।
ವಿಕಟಕರವೇಲ್ಲಿತಮಹಾಸಾ
ಯಕರು ನಿಷ್ಠುರಸಿಂಹಗರ್ಜನ
ವಿಕಲಿತಾ [2] ಚಲಸನ್ನಿಬದ್ಧರು ಹೊಕ್ಕು ಹೆಣಗಿದರು ॥ ೧೮

ಫೂತು ರೇ ಬಿಲುಗಾಱ ಮೆಚ್ಚು ರೇ
ಸೂತನಂದನ ಬಾಣರಚನಾ
ನೂತನದ ಬಿಲುವಿದ್ಯೆ ಭಾರ್ಗವಸಂಪ್ರದಾಯವಲೆ ।
ಆತುಕೊಳ್ಳೈ ನಮ್ಮ ಬಲುಮೆಗ
ಳೀತಱತಿಶಯವೆನುತೆ ಸರಳಿನ
ಸೇತುವನು ಕಟ್ಟಿದನು ಗಗನಾಂಬುಧಿಗೆ ಕಲಿಪಾರ್ಥ ॥ ೧೯

ಮೇಲುಗೈಯಹೆ ಬಿರುದರೊಳು ಬಿ
ಲ್ಲಾಳು ನೀ ನಹೆ ಚಾಪ [3] ವಿದ್ಯಾ
ಫಾಳನೇತ್ರನ ಗರುಡಿಯಲ್ಲಾ ಕಲಿತಮನೆ ನಿನಗೆ ।
ಕೋಲು ನಮ್ಮವು ಕೆಲವು ಸಮಗ
ಯ್ಯಾಳ್ ನಿನಗಾನೆನುತೆ ನೋಟಕ
ರಾಲಿ ಝೋಂಪಿಡೆ ಕರ್ಣ ತುಳುಕಿದ [4] ನಸ್ತ್ರಸಾಗರವ ॥ ೨೦

ಅಹಹ ಫಲುಗುಣ ನೋಡಲಮ್ಮೆನು
ಬಹುಳಬಾಣಾದ್ವೈತ ವಾದುದು
ಮಹಿ ಮಹಾದೇವೆನು [5] ತೆ ಸಾರಥಿ ಮುಚ್ಚಿದನು ಮುಖವ ।

---

[1] ಭ್ರುಕುಟಿಲರು ಭೀಷಣರು ರೋಷ ।
ಪ್ರಕುಟಿಲರು ಪಟುಭಟರುಹೊಕ್ಕುದು ಕೂಡೆ ಸಮತಳಿಸಿ ॥ ಜ.
[2] ಗರುಚೇಕಿತಾನಲ ಹೊಕ್ಕರುರವಣಿಸಿ ॥ ಜ. [3] ವಿದ್ಯೆಗೆ, ಟ.
[4] ನಂಬಿನಂಬುಧಿಯ, ಚ.ಜ.ಝ. [5] ತವುತ್ತರಮುಚ್ಚಿದನು ಮುಸುಕ । ಟ.

ರಹವ ಮಾಡದಿರೆಲವೊ ತನಗಿದು
ಗಹನವೇ ನೋಡೆನುತೆ ನರನತಿ
ಸಹಸದೊಳು ಕೆದಱಿದನು ಕರ್ಣನ ಬಾಣಪಂಜರವ ॥ ೨೧

ವೀರ ನಲ್ಲಾ [1] ಬನದ ರಾಜಕು
ಮಾರ ನಲ್ಲಾ ಕೌರವನ ಬಡಿ
ಹೋರಿ ಯಲ್ಲಾ ತಿರಿದೆಲಾ ದಿಟ ವೇಕಚಕ್ರದೊಳು ।
ನಾರಿಯರ ನಾಟಕದ [2] ಜೋಹವ
ನಾರು ತೆಗೆದರು ಪಾರ್ಥ ನಿನಗೀ
ಶೌರಿಯದ ಸಿರಿ [3] ಯೇಕೆನುತೆ ತೆಗೆದೆಚ್ಚ ನಾಕರ್ಣ ॥ ೨೨

[4] ಬಲುಗಡೆಯು ನಹೆ ಬೇಂಟೆಗಾಱರ
[5] ಬಲದ ಮೊದಲಿಗ ನಹೆ ವಿರೋಧಿಯು
ದಱಿಕೆ ನೀ ನೊಡ್ಡುಳ್ಳ ಭಟನಹೆ ಸ್ವಾಮಿಕಾರಿಯಕೆ ।
ತಲೆಯ ತೆಱುವವನಹೆ ಕುಭಾಷೆ [6] ಗೆ
ಮಲೆವವರು ನಾವಲ್ಲ ಸೈರಿಸು
ಬಱಿಕೆನುತೆ ಕಲಿಪಾರ್ಥ ಸುರಿದನು ಸರಳ ಸರಿವಳೆಯ ॥ ೨೩

ಅದ್ದನೋ ಬಾಣಾಂಬುನಿಧಿಯೊಳು
ಬಿದ್ದನೋ ವಿತಳದೊಳು ಮೇಣ್ವಿಧಿ
ಕದ್ದನೋ ಕೈವಾರವೇತಕೆ ಕಾಣೆ ನಿನಸುತನ ।
ತಿದ್ದಿ ತಾತನ ದೆಸೆ ನದೀಸುತ
ನಿದ್ದನಾದೊಡೆ ಕೌರವೇಂದ್ರನ
ಹೊದ್ದಹೇಪೆಂದೊದಱುತಿರ್ದುದು ಕೂಡೆ ಗುರುಸೇನೆ ॥ ೨೪

---

1 ಸುರರ, ಟ. 2 ಜೋಹವ, ಖ. ಚ. ಝ. ಟ. 3 ಯೆಂತೆನುತೆ, ಟ.
4 ಬಲುಗಡಿಯ, ಚ. ಜ. ಝ. ಟ. 5 ಬಳಗವುಳ್ಳವನಹೆ, ಖ. ಬಲಕೆ ಮೇಲುಳ್ಳವ, ಚ. ಬಲವನುಳ್ಳವನಹೆ, ಜ. ಬಲಕೆಬಲುಗೈಯಹೆ, ಝ.
6 ಗೆಮುಳಿವವರು, ಖ. ಚ. ಯನುಱುವವರು, ಟ.

ಇಡಿದವೋಡದ ಮುತ್ತಿಗೆಯು ಮೋ
ಲೊಡೆದು ಮೂಡುವ ರವಿಯವೊಲು ನೆಱಿ
ಕಡಿದು ಶರಪಂಜರವ ಹೂಡಿದ ನರ್ಜುನನ ಮುಸುಕೆ ।
ನಡುಗಿದನು ವೈರಾಟ ಹಯ [1] ವಡಿ
ಗಡಿಗೆ ನೊಂದುವು ಹನುಮ [2] ನಂಬರ
ವೊ ಯ್ಬೊಬ್ಬಿಱಿದನು ಮಹಾದ್ಭುತವಾಯ್ತು [3] ನಿಮಿಷದೊಳು

ಸೋಲವಾಯಿತು ಕರ್ಣಗೆಂಬರ
ನಾಲಗೆಯು ಕೊ [4] ಯ್ಯಲವೊ ಮಝು ಬಿ
ಲ್ಲಾಳು ರಾಯನ ಪಟ್ಟದಾನೆ ವಿರೋಧಿಭೂಪತಿಯು ।
ಭಾಳದಕ್ಕರ ತೊಡೆದುದೋ ತೆಗೆ
ಕಾಳಗವ ನೆಂದಖಿಳಕುರುಬಲ
ಜಾಲ ಬೊಬ್ಬಿಡೆ ಕರ್ಣ ಮಿಱಿದನು ಬಿಲ್ಲ ಬಲುಮೆಗಳ ॥ ೭೬

ಅರಿಭಟನ ಶರಜಾಲವೆನು ಸಂ
ಹರಿಸಿದನು ನಿಮಿಷದೊಳು ಫಲುಗುಣ
ನೆರಡುಶರದೊಳು ಸಾರಥಿಯ ನ್ಯೆದಂಬಿನೊಳು ರಥವ ।
ಶರಚತುಷ್ಟಯದಿಂದೆ ಕರ್ಣನ
ಕರದ ಬಿಲ್ಲನು ಕಡಿಯೆ ಭಗ್ನೋ
ತ್ಕರುಷಭಂಗಿತನಾಗಿ ಸರಿದನು ಮೌನದೊಳು ಕರ್ಣ ॥ ೭೭

ಓಟವೇ ಅಪಜಯದ ನಾರಿಯ
ಬೇಟವೇ ಬೆಸಗೊಳ್ಳ ರೈ ಯೊಳ
ತೋಟಿಗೊತ್ತೋಳಹುದು ನಾಲಗೆ ಯಿಾಗಳೇನಾಯ್ತು ।

---

1 ವಿಷ್ಮಡಿಸಿ, ಚ. 2 ನತಿಭಯವಡಸೆ, ಚ. 3 ಸಂಗ್ರಾಮ, ಚ. ಝ.

4 ಯ್ದಂಗೆ ಸುಭಟರ । ಸೋಲವದು ರಾಯಂಗೆ ಸೋಲವೆ ನೂಕುನೂಕೆನುತ॥ ಚ

ಆಟವಿಕಭೂಪತಿಯ ಕೀರ್ತಿಯ
ಕೂಟಣಿಗಳೂ [1] ಗ್ಗಾಯ್ತು ತೆಗೆ ಮರು
ಳಾಟ ಎಮಗೇಕೆನುತ ಪಾರ್ಥನ ತಾಗಿದನು ದ್ರೋಣ ॥ ೨೮

ಇದಿರುಗೊಳ್ಳೆ ಪಾರ್ಥ ವಿಪ್ರ
ರ್ಗದಟತನ ಮೆಲ್ಲಿಯದು ಕರ್ಣನ
ಸದೆಬಡಿದ ಸಾಹಸಕೆ ಹಿಗ್ಗದಿರೆಮ್ಮ ಕೈಗುಣವೆ ।
ಕದನದೊಳು ನೀ ನೋಡು ಕೈಸಾ
ರಿದುವು ಗಡ ಕಾಮಾರಿ ಹಿಡಿವ
ಗ್ಗದ ಶರಾವಳಿ ಯುವಿಜ ಪರಿಯೆಂತೆಮಗೆ ತೋಱಿಂದ ॥ ೨೯

ಇದಿರುಗೊಂಡೆನು ವಂದಿಸಿದೆ ನೆ
ಮ್ಮುದಯ ನಿಮ್ಮದು ನಿಮ್ಮ ದೆಸೆಯಿಂ
ವಿದಿತ ಎನಗೀವಿದ್ಯೆ ನೀಂ ಕಾಮಾರಿ ಮುರವೈರಿ ।
ಹೃದಯ ನಿಮ್ಮದು ಕಾಳಗಕೆ ನಿ
ಮ್ಮಿದಿರೊಳಾಳೇ ತಾನು ಕರುಣಾ
ಸ್ಪದರು ನೀವೆಂದೆಱ್ಗ ನರ್ಜ್ಜುನ ನವರ ಸಿರಿಪದಕೆ ॥ ೩೦

ವಿನಯವುಚಿತವೆ ತತ್ತ್ವ ಸಮಯ [2] ದ
ಮೊನೆಯೊಳಾವಿದಿರಾದೊಡಾವುದು
ಜನಪರಿಗೆ ಕರ್ತವ್ಯವದು ಸಾಕುಚಿತ ಮಾತೇಕೆ ।
ತನುಜ ಸೈರಿಸು ಸೈರಿಸೆನುತ
ರ್ಜ್ಜನು ನಿರಂತರಬಾಣವರ್ಷದಿ
ನನಿಮಿಷಾವಳಿ ಪೂತುರೆನೆ ಕೈದೋಱಿದನು ದ್ರೋಣ ॥ ೩೧

---

1 ಳಗ್ಗಾಯ್ತು ಸಲೆಮರುಳಾಟಕಿನ್ನೇನೆನುತ, ಟ.

2 ಧೊ ಳನುವಱಿದು ಕಾದುವುದುಚಿತ ಮೇಣ್, ಜ.

ಭಾವಿಸಲು ಪ್ರತಿಬಿಂಬದೊಳು ಬೇ
ಱಾವುದತಿಶಯವುಂಟು ನೀವೆನ
ಗಾವ ಘರಿಯೊಳು ಕಲಿಸಿದಿರಿ ನಿಮಗೊಪ್ಪಿಸುವೆ ಸದನು ।
ನೀವು ನೋಡುವುದೆನುತೆ ನರ ನಿಸ
ಲಾವುದಂಬರ ವಾವು ದವೆನಿಯು
ದಾವುದರಿಬಲ ವೆನಲು ಹಬ್ಬಿತು ಪಾರ್ಥ ಶರಜಾಲ ॥ ೩೭

ವಿಷಯಲಂಪಟತನದೊಳಾಂ ನಿ
ರ್ವಿಸಿದೆ ನಶ್ವತ್ಥಾಮನನು ನೀ
ನೆಸೆವ ಮಗಸ್ಯ ಪಾರ್ಥ ಮೋಹದ ಕಂದ ನೀ ನೆಮಗೆ ।
ಇಸುಗೆಕಾಱರಿಗಾರಿಗೀಶರ
ವಿಸರ ಸಂಭವಿಸುವುದು ಮಝುರೇ
ವಿಷಮವೀರನ ಕೈಚಳಕ ಲೇಸೆಂದ ನಾ ದ್ರೋಣ ॥ ೩೪

ಎನುತೆ ಸುರಿದನು ಸರಳ ಸಾರವ
ನನಲಗರ್ಭದ ಬಾಯ ಧಾರೆಗ
ಳನಿಲಗರ್ಭದ ಗಱಿಗಳಶನಿ[1] ಯುದರದ ಮಿಂಟುಗಳ ।
ಮೊನೆಯ ಬಂಬಲಿ ಡಿಯ ಹೊಗರಿನ
ತನಿಹೊಗೆಯ ಹೊದಱುಗಳ[2] ಪುಂಖ
ಧ್ವನಿಯ ದಟ್ಟಣೆ ಮಿಗಲು ಕವಿದುವು ದ್ರೋಣನಂಬುಗಳು ॥

ದೇವ ಭಾರದ್ವಾಜ ಶರವಿ
ದ್ಯಾವಿಷಯ ನವರುದ್ರ ಘನಶ
ಸ್ತ್ರಾವಳೀ ನಿರ್ಮಾಣ ನೂತನ ಕಮಲಜನೆ ಯೆನುತೆ ।

---

1 ಯ ಗರ್ಭಮಿಂಟೆಗಳ. ಖ. ಟ. ಯ ಮಿಂಟೆಯಂಬುಗಳ, ಝ.

2 ಶಂಖಧ್ವನಿಯ. ಜ. ಝ. ಟ.

ಕೋವಿದನ ಶರತಿಮಿರವೆನು ಗಾಂ
ಡೀವವಿಗಳಿತಬಾಣಭಾನುಕ
ರಾವಳಿಯೊಳಪಹರಿಸಿದನು ಸುರನಾಥಸುತ ನಗುತೆ ॥ ೩೫

ಹಿಳುಕ ನೀಂದುದೊ ಗಗನ ವಂಬಿನ
ಜಲಧಿ ಜರಿದುದೊ ಪಾರ್ಥನೆಂಬ
ಗ್ಗಳವಿರಿಂಚನ ಬಾಣಸೃಷ್ಟಿಯೊ ಬಲ್ಲರಾರಿದನು ।
ಇಳೆಯ ಮರ್ತ್ಯರು ಶಿವಶಿವಾ ತೆಗೆ
ಫಲುಗುಣಗೆ ಸರಿಯೆಂಬವರ ಬಾಯ್
ಹುಳುವುದೋ ಗುಣಕೇಕೆ ಮತ್ಸರ ವೆಂದುದಮರಗಣ ॥ ೩೬

ಬಳಿಕ ಪಾರ್ಥನ ಬಾಣದೊಳು ಬಸ
ವಳಿಯೆ ಸಾರಥಿ ಮೆಲ್ಲಮೆಲ್ಲನೆ
ತೊಲಗಬಗೆದನು ದ್ರೋಣ ನಿತ್ತಲು ಕರ್ಣ ನೀಕ್ಷಿಸುತೆ ।
ಎಲೆಲೆ ಶಸ್ತ್ರಾಚಾರ್ಯ ಗೆಲಿದನು
ಫಲುಗುಣನ ನಿನ್ನೇನು ಕೌರವ
ಬಲಕೆ ಹಗೆಹಱಿವಾಯ್ತು ರಾಜಾಭ್ಯುದಯ ವಾಯ್ತೆಂದ ॥ ೩೭

ಘಡಘಡೆಲವೋ ಕರ್ಣ ಸಾರಥಿ
ಮಡಿದೊಡೇನದು [1] ಭಂಗವೇ ಕಾ
ಪಡೆಯುವಿರು ನೋಡಾದೊಡಯ್ಯನ ಹರಿಬದಾಪವವ ।
ನುಡಿಗೆ ತೆಱಹಾಯ್ತೆಂಬ ಖುಲ್ಲರ
ಬೆಡಗ ನೋಡೆನುತುಗ್ರಚಾಪವ
ಮಿಡಿದು ಮಂಡಿಸಿ ಹರನ ಹೋಲುವ ಯುಧಟ ಮಾರಾಂತ ॥ ೩೮

ಆವುದೈ [2] ನಿನ್ನಱಿತ ವದು ವಿ
ದ್ಯಾವಿಷಯದೊಳು ಚಾಪವೇದಾ

1 ಸೋಲವೇ. ಚ. ಟ. ಕೊಱತೆಯೇ. ಜ.

2 ನೀವಱಿತಿಹುದು. ಚ.

ರ್ಥಾವಳಿಯು [1] ಶರತತಿ ಯುಪನ್ಯಾಸಂಗಳಂತೆಂದು |
[2] ಕೋವಿದಾಭಾಸಕರ ಜಯ ನಿನ
ಗಾವ ಪರಿ ತೆಗೆ ಶಸ್ತ್ರವಿದ್ಯಾ
ಭಾವಗೋಷ್ಠಿಯು ಬಲ್ಲಡರಿ ಯೆಂದೆಚ್ಚ ನರ್ಜುನನ || ೩೯

ಅಕ್ರಮವೆ ತ್ರೈಲೋಕ್ಯವಿದ್ಯಾ
ಚಕ್ರವರ್ತಿಗಳೆಂದು ನೀವೀ
ವಿಕ್ರಮದ ಮಹಿತಿನೊಳು ಮೇಗಟಿ ಮೆಟಿವ ಭಟರುಗಳ |
ಶಕ್ರನಳುಕುವ ಬಾಹುಬಲ ರಿಪು
ಚಕ್ರದೊಳಗಿನ್ನಾರಿಗುಂಟಿದು
ವಕ್ರಭಣಿತೆಯು ಸಲುವು ದಶ್ವತ್ಥಾಮಗೆನುತೆಚ್ಚ || ೪೦

ಅರ್ಜುನನ ಶರವಿದ್ಯೆ ವಿವರಿಸೆ
ದುರ್ಜಯವಲಾ ಗರುವತನದೊಳು
ಗರ್ಜಿಸಿದೊಡೇನಹುದೆನುತೆ ಗುರುಸೂನು ಹರುಷದೊಳು |
ನಿರ್ಜರರು ಮೆಚ್ಚು ಪೂತುರೆನಲಾ
ವರ್ಜಿಸಿದ ತಿರುವಿನೊಳು ಸಂಗರ
ನಿರ್ಜಿತಾರಿಯು ನಿಸಲೆ ಕವಿದುವು ಕಣೆಗಳಂಬರಕೆ || ೪೧

ಗುರುತನುಜನಲ್ಲಾ ವಿಭಾಡಿಸಿ
ಹುರುಳುಗಿಡಿಸಲು ಬಹುದೆ ನೋಡು
ತ್ತರ ಸುಯೋಧನಸೈನ್ಯಶರಧಿಯು ಗುಂಪಿನತಿಬಲರ |
ಹರನ ಪೋಲುವ ಶಸ್ತ್ರವಿದ್ಯಾ
ಧರರು ಮರ್ತ್ಯರೊಳಹರೆ ಲೇಸೆಂ
ದುರುಳಗಡಿದನು ಪಾರ್ಥನಶ್ವತ್ಥಾಮ ನಂಬುಗಳ || ೪೨

1 ಶಶಿಮೌಳಿಕೋಪನ್ಯಾಸವೆಂತೆಂತು, ಚ. ಝ. ನಿರ್ಮಲಿತಕೋಪನ್ಯಾಸ ವೆಂತೆಂತು, ಜ.

2 ಕೋವಿದರ ಭೂಸುರರ ಯುಕ್ತಿಗೆ, ನೀವು ಕೊಂಡಿರೆ, ಕ. ಕೋವಿದರು ಭೂಸುರರು ಜಯ ನಿನಗಾವಜಾತಿಗೆ, ಝ.

ಗುರುಸುತನ ಶರಜಾಲವನು ಸಂ
ಹರಿಸಿ ಮಗುಬಿಸೌಘವನು ವಿ
ಸ್ತರಿಸಿದನು ಕಲಿಪಾರ್ಥನಾತನ ಸರಳುಗಳ ಸವೆಯೆ ।
ತರಣಿಬಿಂಬವ ನಭವ ಹೊಚಿತು
ಗುರುಸುತನ ಸರ ವೆಮವೆ ಮತ್ತಿ
ಬ್ಬರಿಗೆ ಸಮಬಲವಾಗಿ ಸಮೆತಳಸಿತ್ತು ರಣಕೇಳಿ ॥ ೪೩

ತೀರವರ್ಜುನನಂಬು ರಣದೊಳು
ತೀರಿದುವು ಗುರುಸುತನ ಶರ ಕೈ
ವಾರವೇ ಕೈಗುಂದಿ ನಿಂದನು ದ್ರೋಣನಂದನನು ।
ಮೇರು ಮೊಗದಿರುಹಿತ್ತಲಾ ರಣ
ಧೀರ ನಶ್ವತ್ಥಾಮ ಸೋತನು
ಸಾರೆನುತೆ ಕೃಪ ನುಜುಬಿದನು ತಜುಬಿದನು ಫಲುಗುಣನ ॥ ೪೪

ತಂದೆಮಕ್ಕಳು ಸೋತ ರಿನ್ನೇ
ನೆಂದು ಮುಯ್ಯಾನದಿರು ನಿಲು ನಿ
ಲ್ಲೆಂದು ಕೃಪನಡಹಾಯ್ದು ಪಾರ್ಥನ ರಥವ ನೂಡೆಯಿಸಲು ।
ಬಂದ ಪರಿ ಲೇಸೆನುತೆ ಫಲುಗುಣ
ನೊಂದು ಕವಲಂಬಿನೊಳು ಗುರುಗಳಿ
ಗಿಂದು ವಂದಿಸಬೇಕೆನುತೆ ಕೀಲಿಸಿದ ನಾರಥವ ॥ ೪೫

ತಂಹರಿಸಿ ಸರಳೈದಜೊಳು ಸಂ
ಹರಿಸಿ ಕೊಳ್ಳಂದೆಚ್ಚೊಡೀತನ
ತುರಗವನು ತಾಗಿದುವು ನೊಂದುವು ರಥದ ವಾಜಿಗಳು ।
ಕೆರಳಿ ಫಲುಗುಣ ನರ್ಧಚಂದ್ರನ
ಸರಳಿನೊಳು ಸಾರಥಿಯು ತುರಗವ
ಕರದ ಬಿಲ್ಲನು ಕಡಿಯೆ ತೊಲಗಿದ ನಾಕೃಪಾಚಾರ್ಯ ॥ ೪೬

ಎಲೆಲೆ ಕರ್ಣ ದ್ರೋಣ ಗುರುಸುತ
ರಲಘುಭುಜಬಲಕ್ಕೃಪನು ಹೊಕ್ಕಿಱಿ
ದಳುಕಿದರು ಮುಗ್ಗು ಪ್ರೂತುರೆಂತುಟೊ ಪಾರ್ಥ ನಗ್ಗಳಿಕೆ ।
ಗೆಲುವ ನೊಬ್ಬನೆ ನಮ್ಮ ಬಲದೊಳು
ನಿಲುಕಿ ಹಿಂಗುವ ಸುಭಟರಿನಿಬರು
ಸುಲಭ ವೆಮಗೀಸೋಲ ವೆಂದುದು ನಿಖಿಳಕುರುಸೇನೆ ॥ ೪೭

ಬಾಯ ಬಿಟ್ಟುದು ನೆಱೆದಕೌರವ
ರಾಯದಱ ವಡ ಮುಖದೊಳಧಟರು
ಹಾಯಿದರು ತಮತಮಗೆ ತೆಱದರಸಾಯ್ತು ಕುರುಸೇನೆ ।
ಕಾಯಬೇಕೆಂದೆನುತೆ ವರಗಾಂ
ಗೇಯ ಚಾಪವ ತುಡುಕಿ ಬೆರಳೊಳು
ಸಾಯಕವ ತೂಗುತ್ತೆ ತಡೆದನು ಪಾರ್ಥನುರವಣೆಯ ॥ ೪೮

ಓಡಿದಾಳಲ್ಲಲ್ಲಿ ಧೈರ್ಯವ
ಮಾಡಿತಬ್ಬಾಳೊಗ್ಗಿನೊಳು ಹುರಿ
ಗೂಡಿ ತಬ್ಬರ ಮಗುಟೆ ನಿಬ್ಬರ ವಾಯ್ತು ನಿಮಿಷದೊಳು ।
ಕೂಡೆ ಗಱಿಗಟ್ಟಿತು ಚತುರ್ಬಲ
ಜೋಡುಮಾಡಿತು ಕವಿದುದೀತನ
ಕೂಡೆ ಘನಗಂಭೀರಭೇರಿಯ ಬಹುಳರಭಸದೊಳು ॥ ೪೯

ತೊಲಗು ರಾಜಪಿತಾಮಹನ ಖತಿ
ಬಲುಹು ತೆತ್ತಿಗರಹಡೆ ರುದ್ರನ
ನಳನನಾಭನ ಕರಿಸು ನೀಂ ಶಿಶು ಸಾರು ಸಾರೆನುತೆ ।
ಉಲಿಯೆ ಬೞಿಯ ಮಹಾರಥರು ಕಳ
ಕಳದ ಕಹಳೆಯ ಪಾಠಕರ ಗಾ
ವಳಿಯ ಬಿರುದಿನ ಬಹುಳತೆಯೊಳೈತಂದನಾಭೀಷ್ಮ ॥ ೫೦

ಪೂತು ರೇ ಕಲಿಪಾರ್ಥ ಭುವನ
ಖ್ಯಾತನಾದ್ಯೆ ಕಂದ ದ್ರೋಣನ
ಸೂತಸುತ ಕೃಪ ಗುರುತನೂಜರ ಗೆಲಿದೆ ಬಳಿಕೇನು ।
ಬೀತುದೇ ನಿಮ್ಮವಧಿ ಕುರು [1] ಬಲ
ಜಾತವನು ಗೆಲಿದಿನ್ನು ನಿಮ್ಮಯ
ಭೂತಳವ ಬಯಸುವಿರೆ ನೀವೆನುತೆಚ್ಚನಾಭೀಷ್ಮ ॥　　೫೧

ನಿಮ್ಮ ಕಾರುಣ್ಯಾವಲೋಕನ
ವೆಮ್ಮ ಸಿರಿ ಬೇರಿಲ್ಲ ಕಾಳಗ
ದಮ್ಮುಗೆಯ ವಿಕ್ರಮದ ವಿವರಣವಿದ್ಯ [2] ಫಲಿಸುವುದೇ ।
ಬಿಮ್ಮು ಬೀಸರ ವುಂಟೆ ನಿಮ್ಮಯ
ಸೊಮ್ಮಿನವರಿಗೆ ಬೇರೆ ರಾಜ್ಯದ
ಹೆಮ್ಮೆ ತಮಗೇಕೆನುತೆ ಕೈಯೊಡನೆಚ್ಚನಾಪಾರ್ಥ ॥　　೫೨

ಇಸಲು ಪಾರ್ಥನ ಬಾಣವನು ಖಂ
ಡಿಸುತೆ ಸೂತನ ನೆರಡರೊಳು ಕೀ
ಲಿಸಿದ ನೈದಂಬಿನೊಳು ಹನುಮನ ಹಣೆಯ ನೊಡೆಯೆಚ್ಚ ।
ನಿಶಿತಶರವೆಂಟರೊಳು ಕವಚವ
ಕುಸುರಿದರಿದನು ನರನ ವಕ್ಷದ
ಬಿಸುಗೆ ಬಿಡೆ ಮೂರಂಬಿನೊಳು ಮುರಿಯೆಚ್ಚು ಬೊಬ್ಬಿರಿದ ॥

ಅರಿಯ ಶರಹತಿಗುತ್ತರನು ತನು
ಬಿರಿಯೆ ಬಸವಳಿದನು ಕಪೀಶ್ವರ
ನೊರಲಿದನು ರಾವಣನ ಗಾಯವ ನೆನೆದನಡಿಗಡಿಗೆ ।
ಮರೆದು ಮಲಗಿದ ಸೂತನನು ನಾ
ಲ್ಕರಡು ಗಳಿಗೆಯು ಬೀಸಿ ಮೂಗಿನೊ
ಳೆರಲ ಕಂಡನು ಪಾರ್ಥನೆತ್ತಿದನಳುಕಿದುತ್ತರನ ॥　　೫೪

1 ಕುಲಜಾತನನು. ಕ. ಚ. 2 ಫಲಿಸುವರೆ. ಕ. ಝ.

[1] ಕವಚವಿದೆ ಕೊಳ್ ಬಾಣಧಾರಾ
ನಿವಹಶಸ್ತ್ರಾಸ್ತ್ರಂಭವಿನ್ನಾ
ಹವದೊಳಂಜದಿರೆನುತೆ ಕುಡಲುತ್ತರನು ದುಗುಡದೊಳು |
ಬವರದಾದಿಯೊ [2] ಳುಚಿಯದೇ ಕೊಂ
ದವನು ನೀನೋ ಭೀಷ್ಮನೋ ಎನ
ಲವನ ನುಡಿಗರ್ಜುನನು ನಗುತಪರಾಧವುಂಟೆಂದ ॥ ೫೫

ಹದುಳಿಸಿನ್ನಂಜದಿರು ಬಾಣೌ
ಘದ ನಿವಾರಣವಿದು ವಿಚಾರಿಸ
ಲೆದೆ [3] ಬಿರಿದು ನಾಂ ನೊಂದೆನಿದೆ ನೋಡೆನ್ನ ಗಾಯವನು |
ಒದೆದು ಕೊಳುತ್ತೈದಾನೆ ಸಿಂಧದ
ತುದಿಯ ಹನುಮನು ವಜ್ರಮಯದೇ
ಹದೊಳು ನಟ್ಟವು ಕೋಲು ಮುನಿದೊಡೆ ರುದ್ರನೀಭೀಷ್ಮ ॥೫೬

ಎಂದು [4] ನೂಱಂಬಿನೊಳು ಗಂಗಾ
ನಂದನನ ಮುಸುಕಿದನು ಸಾರಥಿ
ನೊಂದನಾಧ್ವಜದಂಡ ಮುಱಿದುದು ರಥ ವಿಸಂಚಿಸಿತು |
ಮುಂದುಗೆಟ್ಟನು ಭೀಷ್ಮನಹುದೋ
ಕಂದ ಎನುತಾಱಂಬಿನೊಳು ಖತಿ
ಯಿಂದೆ ಪಾರ್ಥನನಿಸಲು ಘಟ್ಟಿಗಿದಂಬು [5] ಹಾಱಿದುವು ॥ ೫೭

---

1 ಕವಳವಿದೆ ಕೋ ಬಾಣಶಸ್ತ್ರ | ನಿವಹಧಾರಾ, ಕ. ಜ. ಝ. ಕವಳವಿದೆ ಕೋ ಬಾಣಶಸ್ತ್ರದ | ನಿವಹಧಾರಾ, ಚ, ಕವಚವಿದೆ ಕೋ ಬಾಣಶಸ್ತ್ರದ ನಿವಹಧಾರಾ, ಖ.

2 ಳೆನ್ನ ಕಳುಹವೆ ಬವರದೊಳುಕೊಂದವನು ನೀನೆನ, | ಖ. ಳೆನ್ನನುಱಿ ಕೊಂ, ಚ. ಝ. ಳಳುಕವೇ ಕೊಂ, ಜ.

3 ಬಿರಿಯುಲಾಂ ನೊಂದೆ ನೀನೆನೋಡೆನ್ನ ದೇಹವನು, ಖ.

4 ಮೂಱಂಬಿನೊಳು, ಜ. 5 ಹಾಯಿದುವು, ಖ. ಝ.

ಬಱೆತುದರ್ಜುನ ನೊಡಲಿ ನೊಳು ದುಱು
ದುಱಿದ [1] ರುಧಿರದ ಧಾರೆ ಸೂರ್ಯನ
ನೆಱೆವೆಣಿಗೆಯೊಳು ನಿಂದು ತೊಟ್ಟನು [2] ವರಮಹಾಶರವ |
ತಱಿದನೆಡೆಯೊಳು ಭೀಷ್ಮನುಱೆ ಬೊ
ಬ್ಬಿಱಿದು ಬಱಿಕಾಗ್ನೇಯಬಾಣದ
ಗಱಿಯ ಮಂತ್ರಿಸಿ ಹೂಡಿದನು ಕುರುಸೇನೆ ಕಳವಳಿಸೆ ‖ ೫೮

ವರುಣಬಾಣದೊಳಸ್ತ್ರವನು ಪರಿ
ಹರಿಸಿದನು ಕಲಿಭೀಷ್ಮನೊಬ್ಬೊ
ಬ್ಬರು ಪರಾಜಯರೋಷಪಾವಕವಿಸ್ಫುಲಿಂಗಿತರು |
ಹರಿಸಿದರು ಕೌಬೇರ ಮಾರುತ
ನಿರುತಿ ಯಮ ಪುರುಹೂತ ಶಂಕರ
ಪರಿಗತಾಸ್ತ್ರವಳಿಗಳನು ಗಾಂಗೇಯಫಲುಗುಣರು ‖ ೫೯

ಮಲೆತು ನಿಲುವೊಡೆ ಭೀಷ್ಮನಲ್ಲದೆ
ಕೆಲರು ಪಾರ್ಥನ ದಿವ್ಯಬಾಣಾ
ವಳಿಯ ಘಾರಾಘಾರಿ [3] ಗಿಂದಿನ ಭೀಷ್ಮನುರವಣೆಗೆ |
ಕಲಿಧನಂಜಯನಲ್ಲದಿದಿರೊಳು
ನಿಲುವರುಂಟೇ ಸುರನರೋರಗ
ರೊಳಗೆ ಕೆಲರೆಂದಿಂದ್ರ ನುಡಿದನು ಬೆರಳನೆ ಉಲಿದೊಲೆದು ‖ ೬೦

ಪೂತು [4] ರೇ ಕಲಿಪಾರ್ಥ ಬಿಲುವಿ
ದ್ಯಾತಿಶಯನಿಧಿ [5] ಜಾಗು ಗಂಗಾ
ಜಾತ ಹರಮುರವೈರಿಗಳ ಮಿಕ್ಕಿರಿ ಮಹಾದೇವ |

---

[1] ರುಧಿರವ್ರಣ ಸುಧೈರ್ಯವ, ಖ. ಚ. ಟ.　[2] ನರ, ಖ. ಚ. ಜ.
[3] ಗಿದಿರೇ, ಚ. ಝ.　[4] ಪಾಯಕು ಭೀಷ್ಮ, ಚ. ಝ. ಟ,
[5] ಪಾರ್ಥ ಜಾಗು ಪುರಾತನನ ಮುರವೈರಿಯನು, ಚ. ಝ. ಟ.

ಈತಗಳು ಜನಿಸಿದೊಡೆ ಹಿಂದೆ ಮ
ಹೀತಳವ ಖಳನುಯ್ವನೇ ಮೇಣ್
ಸೀತೆ ಬನದೊಳು ನವೆವಳೇ ಎನುತಿರ್ದುದಮರಗಣ ॥ ೬೧

ಹಿಂದೆ ಕರ್ಣನ ಕೈಮೆಯೆನು ಗುರು
ನಂದನನ ಬಿಲುಗಾಱತನವೆನು
ಮಂದರೋಪಮಧೈರ್ಯನಾಚಾರಿಯನ ಪರಿಣತಿಯು ।
[1] ಬಂದಕೃಪನಗ್ಗಳಿಕೆಯೆನು ನಲ
ವಿಂದೆ ಕಂಡೆ ನಿದಾವ ಪರಿಯು
ಳ್ಳಂದ ನುತ್ತರ ನರ್ಜುನಗೆ ಗಾಂಗೇಯನುರವಣೆಯು ॥ ೬೨

ಎನೆ ಕುಮಾರಕ ಕಾರ್ತವೀರ್ಯಾ
ರ್ಜುನನ [2] ಸಾಸಿರತೋರತೋಳ್ಗಳ
ವನವ ಕಡಿದನು ವೀರಭಾರ್ಗವರಾಮನತಿಬಲನು ।
ಮುನಿದು ಮಲೆತೊಡೆ ಬೆಱಗನಾತನ
ಮನಕೆ ಬಿತ್ತಿದ ನೀತ ನೀತನೊ
ಳೆನಗೆ ಸರಿ ನೂಕುವುದೆ ಕಾಳಗವೆಂದನಾಪಾರ್ಥ ॥ ೬೩

ಮತ್ತೆ ಗಂಗಾಸೂನು ಪಾರ್ಥನ
[3] ಕೆತ್ತಿಸಿದ ನೈದಂಬಿನೊಳು ರಥ
ಕಿತ್ತು ಮರಳಲು ಮೂಱುವಜ್ರಾಸ್ತ್ರದೊಳು ಕೀಲಿಸಿದ ।
[4] ಪುತ್ತವನು ಬಗಿದುರಗ ಪುಗುವವೊ
ಲುತ್ತರಿಸಿದುವು ಶರವಿಸರ ಧೃತಿ
ವೆತ್ತು ಫಲುಗುಣನವಱನೆಚ್ಚನು ಹತ್ತುಬಾಣದೊಳು ॥ ೬೪

---

1 ಇಂದ್ರು, ಕ. ಟ. ನಿಂದ್ರ, ಖ. 2 ನಿಪ್ಪತ್ತೊಂದುವಂಶದವನವ, ಖ. ತೋಳಿನ ಬನವ ಕಡಿದನು ಘನಪರಾಕ್ರಮಿ ವೀರ, ಜ. 3 ನೆತ್ತಿಸಿದನೈ, ಖ.
4 ಹುತ್ತಕುರಗನು ಬಗಿದು ಪುಗುವವೊಲು, ಜ. ಹುತ್ತನುರಗನು ಬಗಿದು ಪುಗುವವೊಲು, ಟ.

ನರನ ಶರದೊಳು ಭೀಷ್ಮನೆದೆ ಜ
ರ್ಝರಿತವಾಗಲು ಝೊಮ್ಮಿನೊಳು ತರ
ಹರಿಸಲಱಿಯದೆ ಮಲಗಿ ನಿಂದನು ರಥದ ಕವ್ಬುಗೆಯ |
ಅರರೆ ಸೋತನು ಭೀಷ್ಮ ನಿನ್ನೀ
ನುರಿದುದೋ ಕುರುಸೇನೆ ಸಿಲುಕಿದ
ದೊರೆ ಯೆನುತೆ ಬಾಯ್ವಿಡಲು ಕೌರವರಾಯ ಪೊರಮಟ್ಟ || ೬೫

ಸೀಳು ನಾಯ್ಗಳ ಬಾಯ ಕೆಲಬಲ
ದಾಳ ಹಂಗಿನ ದೊರೆಯ ಸುಭಟರ
ಸೋಲವದು ರಾಯರಿಗೆ ಸೋಲವೆ ನೂಕು ನೂಕೆನುತೆ |
ಕೋಲ ಹೊದೆಗಳ ಕೆದಱಿ ಸಿಂಧವ
ಮೇಲೆ ಹಾವನು ಹಾಯ್ಕಿ ಸಾರಥಿ
ಮೇಳವಿಸಿದನು ನೃಪನ ರಥವನು ನೆರೆದರತಿರಥರು || ೬೬

1 ಕೆಲಕೆ ಕೆದಱಿದ ಬಲಜಲಧಿ ಯೊ
ಬ್ಬುಳಿಗೆ ಬಂದುದು ತಳಿತಸತ್ತಿಗೆ
ಗಳ ವಿಡಾಯಿಯೊಳ್ಳಿಱಿವ ನಿಸ್ಸಾಳಕೋಟಿಗಳ |
ಉಲಿವಕಹಳೆಯ 2 ಪಾಠಕರ 3 ಗಾ
ವಳಿಯ ನಾನಾವಾದ್ಯರಭಸವು
ಮೊಱಗೆ ಸುಭಟರು ಹೊಗೞಿದರು ಕೌರವನ ಬಿರುದುಗಳ || ೬೭

---

1 ಕಲಕಿಕೆ, ಚ. ಝ. ಟ. 2 ಬೈಗುಳಿಡಗೈತಳದಬಾಯ್ಬುಲಗೈಯ ನೊಳೆಪಡ ಬಲದ ಭಟರುಬ್ಬೇಱಿದರು ಕೌ. ಕ, ಬೈಗುಳಿಡಗೈತಳದ ಬಾಯ್ಬುಲಗೈಯ ನೆಗಹಿದ ಬಲದ ಭಟ್ಟರು ಚೀಱಿದರು ಕೌ. ಖ. ಬೈಗುಳಿಡಗೈದಳದ ಬಾಯ್ಬುಲಗೈಯನೊಲೆದೊಡೆ ಬಱಿಕ ಭಟ್ಟರು ಕೆದಱಿದರು ಕೌ. ಜ. ಬೈಗುಳಿಡಗೈ ದಳದ ಬಾಯ್ಬುಲಗೈಯನೊಲೆದಳಬಱಿಗಭಟ್ಟರು ಬೀಱಿದರು ಕೌ, ಟ.

3 ಕಳಕಳದನಾನಾವಾದ್ಯರಭಸದ ಬಱಿಯಭಟ್ಟರ ಹೊಗೞಿಕೆಯೊಳ್ಳೆ ತಂದ ಕುರುರಾಯ, ಚ.

ಬಗ್ಗು ಮುಱಿಯದೆ ಸೇನೆ ಮೊಱಗುವ
ಲಗ್ಗೆ ವೆಱೆಯೊಳು ಹೆಣನ ತುಟಿದೊಡ
ಮುಗ್ಗಿ ಕವಿದುದು ಕೌರವೇಂದ್ರನ ಮೊಗದ ಸನ್ನೆಯೊಳು ।
ಹುಗ್ಗಿಗರ ಹುರಿ ಬಲುಹು ನಿಗುಱುವ
ನಿಗ್ಗವನು ನಿಲ್ಲೆನುತ ಸೇನೆಯ
ನಗ್ಗಡಲ ಬೀಱಿಸಿದ ನರ್ಜುನ ನಗಣಿತಾಸ್ತ್ರದೊಳು ॥ ೬೮

ವೀರರಿದಿರಹ ಹೊತ್ತು ರಣವೈ
ಲಾರರಾದರು [1] ಕೆಲರು ಕೆಲಬರು
ಭೈರವನ ಸಾರೂಪ್ಯರಾದರು ಪೂತು ಪಾಯ್ಕನುತ ।
ಕೌರವನು ಕರ್ಣಾದಿಗಳ ನುಡಿ
ಯೋರೆಪ್ರೋರೆಯೊಳವಗಡಿಸಿ ಹೊಂ
ದೇರ ದುವ್ವಾಳಿಸುತ ಮೊದಲಿಸಿದನು ಫಲುಗುಣನ ॥ ೬೯

ಬಾಲವೃದ್ಧರ ವಿಪ್ರರನು ನೀಂ
ಕಾಳಗದೊಳೋಡಿಸಿದೆನೆಂದೀ
ಮೇಲುಮೂಗಿನೊಳಿರಲಿದೇನೈ ಪಾರ್ಥ ಮರುಳಾದೈ !
ಆಳಿದಡವಿಯು ರಾಜ್ಯವಲ್ಲದೆ
ಮೇಲೆ ಧರಣಿಯು ಬಯಸಿದೊಡೆ ನಿಮ
ಗಾಳಲೀವೆನೆ ಹೋಗು ಹೋಗಾರಣ್ಯಕೆನುತೆಚ್ಚ ॥ ೭೦

ಗಾಱುಗೆಡೆಯದಿರೆಲವೊ ಸತ್ಯವ
ಮೀಱಲಮ್ಮದೆ ಲೋಕ ನಿನ್ನನು
ದೂಱಬೇಕೆಂದಡವಿಯೊಕ್ಕವು ಹೊಲ್ಲಹೇನಿದಕೆ ।
ಹಾಱಿ ಹೋಯಿತ್ತವಧಿ ಯಿನ್ನೀ

1 ಮರಳಿತೆಗೆಯುತ ಕ. ಖ. ಚ. ಮರಳಿತೆಗೆವೊಡೆ, ಜ. ಝ.

ಮೀಱಿ ಗಱಿಹುವೆ ನಿನ್ನ ಗಂಟಲ
ನೂಱಿ ರಾಜ್ಯವ [1] ಕೊಳುವೆ ಸ್ವೈರಿಸೆನುತ್ತೆ ನರನೆಚ್ಚ ॥ ೭೦

*

ಅಱಿಯೆ ನೀ ನೆಲೆ ಮರುಳೆ ಗರುಡನ
ತಱವರಿಕೆಯೊಳು ಹಾವು ಕನ್ನವ
ಕೊಱೆದು ಬದುಕುವುದೇ ವೃಥಾ ಕಕ್ಕುಲಿತೆ ಯೇಕಿನ್ನು ।
ತಱಿದು ತಿಱಿಕಲ್ಲಾಡುವೆನು ನಿ
ಮ್ಮುಱುವರೈವರ ಸಿರವನರ್ಜುನ
ಬಱಿದೆ ಗಱಿಹದಿರೆನುತೆ ಕೌರವರಾಯು ತೆಗೆದೆಚ್ಚ ॥ ೭೦

ಗರುಡ ನೀನಹೆ ನಿನ್ನ ಪಕ್ಕವ
ನೊರಸಿ ಹೆಡತಲೆಗಡರಿ ಬೆನ್ನಲು
ಮುಱಿಯೆ ಮುವ್ವಾಳಿಸುವ ಮುರರಿಪುವೆನ್ನ ನೀನಱಿಯಾ ।
ತರಹರಿಸು ಕಲಿ [2] ಯಾದೊಡೆಂದ
ಬ್ಬರಿಸಿ ಕೌರವನೆದೆಯ [3] ನಗುಳಿದ
ನೆರಡುಬಾಣದೊಳರುಣಜಲ [4] ಧಾರೆಗಳ ಕಾಣಿಸಿದ ॥ ೭೨

---

1 ತೆಗೆವೆ ಸ್ವೈರಿಸೆನುತ್ತ ನರನೆಚ್ಚ, ಖ. ತೆಗೆದು ಕೊಳ್ವೆವು ಸ್ವೈರಿಸೆನುತೆಚ್ಚ. ಚ.ಝ.

* ಎಲವೊ ಕೌರವ ಹಿಂದೆ ಜೂಜಿನ
ಕಲುಹೆಯೊಳು ಮೋದಿಸಿಯು ಕೊಂಡುದು
ಗೆಲುವಹುದೆ ನೋಡಾದೊಡಿನ್ನೀಸಿನ್ನ ಭೂತಳಕೆ ।
ಹಲಗೆ ಯಿದು ಕುರುಭೂಮಿ ಸಿನ್ನಯ
ಕುಲದ ತಲೆ ಸಾರಿಗಳು ಶರದೊಳು
ಗೆಲಲು ಬಂದೆನು ಹಾಯ್ಕು ಹಾಸಂಗಿಗಳನೆನುತೆಚ್ಚ ॥

ಈಪದ್ಯವು ಕ. ಚ. ಪುಸ್ತಕಗಳಲ್ಲಿ 71ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತದೆ.

2 ಯಾಗೆನುತ್ತ, ಚ. ಜ. ಟ. ಯಾಗೆನ.ತ ಬೊಬ್ಬಿಱಿದು, ಝ,

3 ನುಗುಳಿದ, ಕ. ಖ. ಚ. ಝ.

4 ದೊಱತೆಗಳ, ಖ. ಚ. ಜ. ಟ.

ಅವನ ಭಾರಿಯ ಪಲ್ಲಿಸೀರೆಗ
ಳವಯವದ ರಕುತದೊಳು ತೋದುವು
ಜವವೆಱದು ಸಾರಥಿಗೆ ಸೂಚಿಸೆ ರಥವ ಮರಳಿಚಿದ ।
ಕವಿದನರ್ಜುನ ನೋಡದಿರು ಕೌ
ರವ ಪಲಾಯನವೆಕಟಕಟ ಪಾ
ರ್ಥಿವರ ಪಂತವೆ ಮರಳಿ ನಿಂದಿರು ಕೊಲುವುದಿಲ್ಲೆಂದ ॥ ೨೪

ಮಾತು ಹೞಸದ ಮುನ್ನ ಕಾಲ್ಗಳು
ಸೋತು ತೆಗೆದುವು ಹೊಳ್ಳುವಾತಿದು
ನೀತಿಯೋ ನರಪತಿಗಳಿಗೆ ಬಹುಭಂಗವನ್ವಯಕೆ ।
ಭೀತನಾಗದೆ ಕಾದಿ ಮಡಿದನ
ಮಾತುಗಳಲಾ ಪುಣ್ಯಕಥನವು
ಭೂತಳಾಧಿಪ ಮರಳಿ [1] ನೋಡೆನ್ನಾಣೆ ನೋಡೆಂದ ॥ ೨೫

ಹುರುಳುಗೆಟ್ಟುದು ಗರುವತನ ವೆಂ
ದರಸ ನಾಚಿದ ನಧಿಕಧೈರ್ಯೋ
ತ್ಕರುಷದೊಳು ಕಲಿಯಾಗಿ ನಿಂದನು ಮತ್ತೆ ಕಾಳಗಕೆ ।
ದೊರೆಯ ದುಗುಡವ ಕಂಡು ತವತವ
ಗುರವಣಿಸಿದರು ಸಕಲಸುಭಟರು
ಹೊರಳಗಟ್ಟಿತು ಸೇನೆ ನಿಚ್ಚಟ [2] ದೞವೆ ನಿಶ್ಚೈಸಿ ॥ ೨೬

ನೊಂದ ನವನಿಪ ನಿಂದು ಪಾರ್ಥನ
ಕೊಂದು [3] ತೋಱುವೆ ನೆನುತೆ ರವಿಸುತ
ನೊಂದುಕಡೆಯೊಳು ವೊಱಗಿದನು ಬಲುಬಿಲ್ಲ ಜೇವಡೆದು ।
ಬಂದುಕಡೆಯೊಳು ಮಸಗಿದನು ಗುರು
ನಂದನನು ವೃಷಸೇನ [4] ಸೈಂಧವ
ರೊಂದುಕಡೆಯೊಳು ಭೀಷ್ಮದುಶ್ಶಾಸನ [5] ಕೃಪಾದಿಗಳು ॥ ೨೭

---

[1] ನಿಂದೊಡೆ ಕೊಲುವುದಿಲ್ಲೆಂದ, ಜ. ಟ [2] ತನವ, ಜ. [3] ಹೋಗುವೆನೆಂದು, ಕ.
[4] ದುರ್ಜಯ, ಖ. [5] ಜಯದ್ರಥರು, ಖ.

ಗುರು ಚಡಾಳಿಸಿ ಹೊಕ್ಕ [1] ನೊಪ್ಪೃ
ಗುರವಣಿಸಿದನು ಬಾಹ್ಲಿಕನು ಭೂ
ಸುರಕಳಿಂಗ ಸುಕೇತು ಶಕುನಿ ವಿಕರ್ಣ ದುಸ್ಸಹರು ।
ನರನ ಮುಸುಕಿದರೊಂದುಕಡೆಯೊಳು
ತೆರಳಿಕೆಯು ತೇಜಿನೊಳು ಬಲ ವೋ
ಹರಿಸಿ ಕವಿದುದು ಸುತ್ತ ಮುತ್ತಿತು ಕಲಿಧನಂಜಯನ ॥ ೭೮

ಅಂಗವಿಸಿತರಿಸೇನೆ ಲೋಕವ
ನುಂಗಿ ತಳೆಯುಲು [2] ಕುಣಿವ ಭರ್ಗನ
ರಂಗಭೂಮಿಯು ತೊಳವ ಜಲಧಿಯು ಜೋಕೆ ಯುಂದದೊಳು ।
ಭಂಗಿತರ ಮುಖುವೆಲಗೆಯೊಳು ಸ
ರ್ವಾಂಗಬಲ ಜೋಡಿಸಿತು ನಮ್ಮಿಟಿ
ವಿಂಗೆ ಹದನೇನೆನುತೆ ಮತ್ಸ್ಯನ ಸೂನು [3] ಜೆಸಗೊಂಡ ॥ ೭೯

* ಅಂಜದಿರು ಕಲಿಯಾಗು ಸೂರ್ಯನ
ಮಂಜು ಮುಸುಕಿದೊಡೇನು ರಿಪುಬಲ
ಪುಂಜವನು ತತ್ಕ್ಷಣದೆ ಜಯಿಸುವೆ ನೊಂದುಬಾಣದೊಳು ।
ರಂಜಕರ ನುಡಿಯಲ್ಲ ವೆನುತೆ ಧ
ನಂಜಯನು ನುಡಿಯುತ್ತು ಮಿರೆ ರಿಪು
ಭಂಜಕನ ಮುತ್ತಿದುದು ಕೌರವರಾಜಸಕಲಬಲ ॥ ೮೦

ಸರಳ ಕಟೆಯುತೆ ಬಹ ಬಲವ ನಾ
ಪರಬಲಾಂತಕ ನೋಡಿ ತನ್ನಯ

---

1 ನೊಂದೆಸೆ, ಖ, ಚ. 2 ಬಗೆದಭಾರ್ಗವ, ಕ. ಖ. ಝ.
3 ಚಿಂತಿಸಿದ, ಕ. ಖ. ಜ. ಬೆದರಾದ, ಝ. ಕೈಮುಗಿದ, ಟ.
* ಅಂಜದಿರು ಮೊದಲಾದ ಪದ್ಯವೂ ಸರಳಕಟೆಯುತೆ ಮೊದಲಾದ ಪದ್ಯವೂ ಜ. ಝ. ಟ. ಪುಸ್ತಕಗಳಲ್ಲಿಲ್ಲ.

ಸಿರವ ತೂಗುತ ರಿಪುಬಲವ ಗೆಲಲರಿದು ಬಟಿಕೆನುತೆ ।
ಕರದ ಭಾರಿಯ ಗಾಂಡಿವವ ಬೊ
ಬ್ಬಿಱಿದು ಜೇವಡೆಗೈದು ನಸುನಗು
ತರಿಬಲವ ಸಮ್ಮೋಹನಾಸ್ತ್ರದೆ ಸಿಲುಕಿಸುವೆ ನೆಂದ ॥ ೮೧

ನೆರೆದ ತಿಮಿರದ ಥಟ್ಟು ಸೂರ್ಯನ
ತೆರಳಿಚುವವೊಲು ಮೇಘಘಟೆಗಳ
ಮುಱಿದ ಮೋಹರ ಮೆವುಕಿ ಪವನನ ಸೆರಗ ಹಿಡಿವಂತೆ ।
ತೆರಳದೊತ್ತಂಬರಿಸಿ ತನ್ನಯ
ಸರಳೊಳಱಿದಾಹೇಱನ ತುಱಿದ
ಬ್ಬರಿಸಿ ಬರೆ ಸಮ್ಮೋಹನಾಸ್ತ್ರವ ಹೂಡಿದನು ಪಾರ್ಥ ॥ ೮೨
*

ಇಸಲು ಸಮ್ಮೋಹನದ ಶರ ಪಸ
ರಿಸಿತು ಬಲದೊಳು ಬಹುಲನಿದ್ರಾ
ವ್ಯಸನವಿಹ್ವಲಿತಾಂತರಂಗರು ಮೆಯ್ಯ ನೂಲೆದೊಲೆದು ।
ಉಸಿರ ಸಂಚದ ನಾಡಿ ಯುವಗಾ
ಹಿಸಲು ತೊಱೆದರು ಮೈಮಱೆದು ತಲೆ
ಮುಸುಕಿನೊಳು ಬಲ ತೆಕ್ಕೆಗೆಡೆದುದು ಕೂಡೆ ಕಳವಳಿಸಿ ॥ ೮೩

* ನೆರೆದತಿಮಿರದ ಮೊದಲಾದ ಪದ್ಯದ ಮುಂದೆ ಕ. ಖ. ಚ. ಪುಸ್ತಕಗಳಲ್ಲಿ ಈ ಪದ್ಯವು ಹೆಚ್ಚಾಗಿ ದೊರೆಯುತ್ತದೆ.

ತುಡುಕಿದನು ಸಾಗರದ ನಡುವಣ
ವಡಬನನು ಹಿಡಿವಂತೆ ಮಿಗೆ ಘುಡು
ಘುಡಿಪ ಸರಳನು ಹೂಡಿದನು ಸುರರಾಲಿ ನಲಿದಾಡೆ ।
ತೊಡಚಿ ತೆಗೆದಾಕರ್ಣಪೂರಕೆ
ಬಿಡಲು ಜಡಿಯುತೆ ಬಾಣ ಬರೆ ತೂ
ಕಡಿಸಿ ಕೆಡೆದುದು ಭೀಷ್ಮ ಹೊಱತಾಗಖಿಳಕುರುಜಾಲ ॥

* ತನುವ ನೊಳೆದುವು [1] ದಡವಡಿಸಿ ಕಿವಿ
ಗೊನೆಯ ಜೋಲಿಸಿ [2] ಮಂಡಿಗಾಲ್ಗಳೊ
ಳನುವರದೊಳಾಕೊರಳ ಮುರಳಿಚಿ ಕೈಯುನೊಳಗಿಕ್ಕಿ |
[3] ತನತನಗೆ ಬಲುಜೋದರೊಂದೆಸೆ
ಕನಸ ಕಾಣಲು ಗುರು ನದೀಜರ
ಘನಬಲದ ಕೋಟಾನುಕೋಟಿಗಜಂಗಳೊಱಗಿದುವು ॥ ೧೪

ದೃಗುಯುಗವ [4] ನರೆದೆಱೆದು ರೋವಾ
ಳಿಗಳ ತೆಕ್ಕೆಗೆ ಸಾರಿ ಕೊರಳರೆ
ಮುಗುಚೆ ಹಿಂಗಾಲೊಂದುಮುರವೆನು ತೂಗಿ ತೊನೆತೊನೆದು |
ಬಗೆಯ ನುಡಿದುವು ಹೊನ್ನ ಮುರಗೋ
ಡುಗಳ ಮೇಲಡಗೆಡೆದು ನಿದ್ರಾ
ವಿಗಡರಾಗಲು ರಾವುತರು ತಂತಮ್ಮ ಕುದುರೆಗಳು ॥ ೧೫

ಸೆಳೆ ಸಡಿಲೆ ಕೈದುಗಳು ಕೈಯಿಂ
ಕಳಚೆ ಯೊಬ್ಬರ ನೊಬ್ಬರೊತ್ತಲು
ಮಲಗಿ ಬೆಂಬತ್ತಳಿಕೆ ಬದಿಯೊಳಗಡಗೆ ತೋಳುಗಳ |
ತಲೆಯೊಳೊಱಗಿಸಿ ಗುರುಗುರಿಸಿ ರಥ
ದೊಳಗೆ ನಿದ್ರಾಕುಲರು ಸಾರಥಿ
ಗಳು ಬೆರಸಿ ನಿದ್ರೆಯೊಳು ಮೈಮಱೆದಿರ್ದ ರತಿರಥರು ॥ ೧೬

ಸರಳ ಸೊಕ್ಕವಗಡಿಸೆ ಕೃಪ ಮೈ
ಮಱೆದ ನತ್ತಲು ದ್ರೋಣ ನಿತ್ತಲು
ಪರಮನಿದ್ರಾಸಕ್ತನಾದನು ತನ್ನ ಮಗನೊಡನೆ |

---

* ತನುವನೊಳೆದುವು ಮೊದಲಾದ ಪದ್ಯವೂ ಅದರ ಮುಂದಣ ಮೂರು ಪದ್ಯಗಳೂ, ಜ, ಟ. ಎಂಬ ಪುಸ್ತಕಗಳಲ್ಲಿಲ್ಲ.

1 ತಡವರಿಸಿ, ಖ. 2 ಕೊಂಕಿ ಮುರಗೋ | ಡಿನೊಳು ಕುಸಿದುವು, ಖ.

3 ತೊನೆದುಕೆಡೆದರು ಜೋದರಲ್ಲಿಯೆ ಕನಸುಗಂಡರು ಮಾಣೆನಲು ಕುರು ಬಲದೊಳಗೆ ಹಾ, ಖ. 4 ನೆಱೆದೆಗೆದು, ಕ, ಖ.

ಕರದ ಬಿಲು ನಸು ಸಡಿಲೆ ಕರ್ಣನು
1 ಮೆಱೆದ ನೆತ್ತಲು ರಥದೊಳೆತ್ತಲು
ದುರುಳದುರ್ಯೋಧನನೊಡನೆ ವ್ಯೆಮೆಱೆದುದಾಸೇನೆ ॥ ೮೭

*
ಕನಸು ಮೋಹಿಣಿ ಱು ಸುಷುಪ್ತಿಯು
ದೆನಿಪವಸ್ಥಾತ್ರಯದೊಳಗೆ ಜೀ
ವನು ವಿಸಂಚಿಸಿ ಬೀಟ್ವ ನಲ್ಲದೆ ತುರ್ಯ ಸಿಲುಕುವನೆ ।
ಇನಿತುಬಲ ತೂಕಡಿಸಿ ಘೂರ್ಮಿಸಿ
ತನಿಗೆಡೆಯೆ ಭಾಗೀರಥೀನಂ
ದನನು ನಿರ್ಮಲ ನಾಗಿ ತೊಳ ತೊಳಗಿದನು ರಥದೊಳಗೆ ॥೮೮

* ಎಣಿಸುವೊಡೆ ಯೇಕಾದಶಾಕ್ಷೌ
ಹಿಣಿಯು ಬಲವನು ಪಾರ್ಥ ನೊಬ್ಬನೆ
ರಣದೊಳಡಗೆಡಹಿದನು ಮೋಹನಮಂತ್ರಬಾಣದೊಳು ।

---

1 ದುರುಳದುರ್ಯೋಧನನು ದುಸ್ಸಹ ವರವಿವಿಂಶತಿ ಶಕುನಿ ದುಶ್ಶಾಸನರು ಪೊಱಗಿದರು, ಖ.

* ಈ ಪದ್ಯವು 87ನೆಯ ಪದ್ಯದಮುಂದೆ ಕ. ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಸೇನೆ ವ್ಯೆಮಱೆದೊಱಗ ಲಧಟನಿ
ದಾನ ಹೋಗದಱುಹಿತು ನಿದ್ರಾ
ಮಾನವಿಭ್ರಮವನು ಸಕಲಸಂಸಾರದಂದದೊಳು ।
ಏನ ಹೇಱುವೆ ನದನು ಕದನದ
ಕಾನನದೊ ಳತಿರಥರು ವಿಜಯನ
ನೂನಬಲಸಮ್ಮೋಹನಾಸ್ತ್ರದ ಬಾಧೆಗೊಳಗಾಯ್ತು ॥

* ಎಣಿಸುವೊಡೆ ಯೇಕಾದಶಾ ಕ್ಷೌಹಿಣಿಯು ಮೊದಲಾದ ಪದ್ಯವು, ಜ. ಝ. ಟ. ಎಂಬ ಪುಸ್ತಕಗಳಲ್ಲಿಲ್ಲ. ಇಱಿದು ದ್ರೋಣನ ಎಂಬುದೇ ಮೊದಲಾದ ಪದ್ಯವೂ ಧರಣಿಪಾಲನ ಎಂಬುದೇ ಮೊದಲಾದ ಪದ್ಯವೂ. ಚ. ಜ. ಟ. ಪುಸ್ತಕಗಳಲ್ಲಿಲ್ಲ.

ಕುಣಿಯುತಂಬರದೊಳಗಲರ ಸಂ
ದಣಿಯ ನಮರರು ಸೂಸಿದರು ಫಲು
ಗುಣನು ರಥವನು ನೂಕಿದನು ಸಿಜಮುಹಿಮು ರಿದ್ದೆಡೆಗೆ ॥　　೮೯

ಇಳಿದು ದ್ರೋಣನ ಚರಣಕಮಲಂ
ಗಳಿಗೆ ತನ್ನಯ ನೊಸಲ ಚಾಚಿದ
ನಳವಿಯೊಳು ಭೀಷ್ಮಂಗೆ ಮುಯ್ಯಿಕ್ಕಿದನು ರಥದೊಳಗೆ ।
ಸುಳಿದು ಕರ್ಣನ ಮಕುಟಪಟ್ಟೆಯ
ಸೆಳೆದು ದುರ್ಯೋಧನನ ವಸ್ತ್ರವ
ಸುಲಲಿತಾಭರಣವನು [1] ನೀಂ ತೆಗೆ ಯೆಂದ ನುತ್ತರಗೆ ॥　　೯೦

ಧರಣಿಪಾಲನ ಮುಕುಟವನು ಕ
ತ್ತರಿಸಿ ದುಶ್ಶಾಸನನ ಘನಮಣಿ
ಸರದ ರತ್ನವ ನುಡಿದು ಭೂರಿಶ್ರವ ಜಯದ್ರಥರ ।
ಹೊರಳಿಚಿದ [2] ನು ವಿಶೋಕಕುಮರರ
ಹುರುಳುಗೆಡಿಸಿದ ನಖಿಳರಾಜರ
ಸಿರಕೆ ಭಂಗವ ಪ್ರೋಕ್ಷಿಸಿ ಫಲುಗುಣ ನಡರಿದನು ರಥವ ॥　　೯೧
*

---

1 ತೆಗೆದುತ್ತರಗೆ ನೀಡಿದನು, ಖ.　　2 ನಾನಾಕುಮಾರರ ನರುಳೆ ಕೆಡಹಿದ ನಖಿಳ ಕೌರವಧುರಕೆ ಭಂಗವ ಮಾಡಿ ಘ. ಖ,

* ಈ ಪದ್ಯವು, ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

ಇತ್ತಲರ್ಜುನ ಮತ್ಸ್ಯತನಯಂ
ಗಿತ್ತ ಕೆಲಸವ ನೀನು ರಥದಿಂ
ಹೊತ್ತುಗಳೆಯದೆ ಹೋಗಿ ರಣದೊಳು ಭಾನುನಂದನನ ।
ಉತ್ತಮದ ನವರತ್ನಪದಕವ
ಚಿತ್ತರಬ ದೇವಾಂಗವಸ್ತ್ರವ
ನುತ್ತರೆಗೆ ಕೊಡಬೇಕು ತಾ ಪೋಗೆಂದು ನೇಮಿಸಿದ ॥

ಫಲುಗುಣನ ನೇಮದೊಳು ರಥದಿಂ
ದಿಳಿದ ನುತ್ತರ ನವನಿಪನ ಕೋ
ಮಲ ಸುವಸ್ತ್ರಾಭರಣವನು ಕರ್ಣ ಕೃಪ ಗುರುಸುತರ ।
ಸುಲಲಿತಾಂಬರ ರತ್ನ ಭೂಷಂ
ಗಳನು ಕೊಂಡಪರಿದನು ರಥವನು
ಬಿಲುದುಡುಕಿ ಗಾಂಗೇಯ ನಡಹಾಯ್ದನು ಧನಂಜಯನ ॥ ೯೦

ಎರಡುಶರದೊಳು ಚಾಪವನು ಕ
ತ್ತರಿಸಿ ಭೀಷ್ಮನ [1] ಕಡುಹ ನಿಲ್ಲಿಸಿ
ಭರದೆ ಮಕುಟವ ಬೀಳಲೆಚ್ಚನು ಮೂಱುಬಾಣದೊಳು ।
ತಿರುಗಿದನು ಕಲಿಪಾರ್ಥ ನಗುತು
ತ್ತರಸಹಿತ ಬನ್ನಿಯೊಳು ಕೈದುವ
ನಿರಿಸಿ ಮುನ್ನಿನ [2] ರಥವ ಜೋಡಿಸಿ ನಗರಿಗೈತಂದ ॥ ೯೩

*

* ಸೆಣಸಿದವ ನೇಕಾದಶಾಕ್ಷೌ
ಹಿಣಿಯ ಪತಿ ಕರ್ಣಾದಿಗಳು ಭಾ
ರಣೆಯ ಸುಭಟರತಿಬಲರು ಭೀಷ್ಮ ದ್ರೋಣ ಗೌತಮರು ।

1 ನಿಲಿಸಿ ಕೌರವ ಧರಣಿಪಾಲನ ಮಕುಟವನು ಮೂಱಂಬಿನೊಳು ಕಡಿದು ಖ. ಜ. ಟ. ಕಡುಹ ನಿಲ್ಲಿಸಿ ಧರಣಿಪಾಲನ ಮಕುಟವನು ಮೂಱಂಬಿನೊಳು ಕಡಿದು, ಝ. 2 ತೆಱದೆ ಸಾರಥಿತನವ ಕೈಕೊಂಡ, ಜ.

* ಈ ಪದ್ಯವು ಕ. ಎಂಬ ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

ಇತ್ತ ಭಂಗದ ಪಡಪಿನೊಳು ರಿಪು
ವೆತ್ತ ತಿರುಗಿತು ಜವಗೆ ಬಾಣಸ
ವಿತ್ತು ಫಲುಗುಣ ಮತ್ಸ್ಯಸುತ್ತಸಹಿತ ನಡೆತಂದ ।
ಅತ್ತ ದೇವಾನೀಕ ಸುರನರ
ರುತ್ತಮರು ಮುಝು ಭಾಪ್ಪುರೆನೆ ಹೊಗ
ಲುತ್ತೆ ಹೊಕ್ಕರು ತಮ್ಮ ನಿಳಯವ ಭೂಪ ಕೇಳೆಂದ ॥

* ಈ ಪದ್ಯವು, ಜ. ಪುಸ್ತಕದಲ್ಲಿಲ್ಲ.

ರಣದೊಳಗನಿಬರ ನೊಬ್ಬನೇ ನೆಱೆ
ಹಣಿದ ನೆಂದಮರಾಳಿ ಗಗನಾಂ
ಗಣದೆ ಹೊಗೞಿತು ವೀರನಾರಾಯಣನ ಮೈದುನನ ॥ ೯೪

ಒಂಭತ್ತನೆಯ ಸಂಧಿ ಮುಗಿದುದು.

---

## ಹತ್ತನೆಯ ಸಂಧಿ.

### ಸೂಚನೆ.

ಅರ್ಜುನನು ಉತ್ತರನೊಡನೆ ವಿರಾಟರಾಯನ ಪಟ್ಟಣಕ್ಕೆ ಬಂದುದು.

ರಾಯಕೌರವಸೈನ್ಯಕದಳೀ
ವಾಯು ವುತ್ತರಸಹಿತ ನಿರ್ಜರ
ರಾಯನಂದನ ಬಂದು ಹೊಕ್ಕನು ಮತ್ಸ್ಯಪುರವರವ ॥

ಕೇಳು ಜನಮೇಜಯಧರಿತ್ರೀ
ಪಾಲ ಭಂಗದ [1] ಮೇಲೆ ಕೌರವ
ಜಾಲ ತಿರುಗಿತು ವಹಿಲದೊಳು ಗಜಪುರಿಗೆ ನಡೆತಂದು |
ಮೇಲುಮುಸುಕಿನ ಮೊಗದ ಮಾದ್ಯದ
[2] ಸೋಲ ದೊಸಗೆಯೊ ಳಖಿಳನೃಪರು ನಿ
ಜಾಲಯಂಗಳ ಬಂದು ಹೊಕ್ಕರು ಹೊತ್ತ ದುಗುಡದೊಳು ॥ ೧

---

1 ಮೇಲೆ ರಿಪುಭಟಜಾಲ, ಖ. ಹಡಪಿನೊಳು ಕುರು | ಜಾಲ ತಿರುಗಿತು ಗಜಪುರಿಗೆ ದುಗುಡದೊಳು ನಡೆತಂದು, ಜ. ಹಡಪಿನೊಳು ಭಟ | ಜಾಲ, ಟ. ಹಡಪಿನೊಳು ರಿಪು | ಜಾಲ, ಝ. 2 ಮೇಳವೋಗಿನದೊಳಖಿಳ, ಖ. ಟ. ಮೇಲೆ ವೋಗಿನದೊಳಖಿಳ. ಚ. ಮೇಲುವೊಗದೊಳಖಿಳ, ಜ. ಮಾಳಿಯೊಳಹಿನೊಳಖಿಳ, ಝ.

ಬಟಿಕ ಫಲುಗುಣ ನಿತ್ತಲಾವುರ
ದೊಳಗೆ ಕೈದುವ ನಿರಿಸಿ ಮುನ್ನಿನ
ಹುಲುರಥವ ಮೇಳೈಸಿ ಸಾರಥಿತನವ ನನುಗೊಳಿಸೆ ।
ಇಟಿದು ಪಾರ್ಥನ ವ್ಯೆದಡವಿ ಕಪಿ
ಕುಲಲಲಾಮನು [1] ಬೀಱುಕೊಂಡನು
ಹೊಱಲ ಹೊರೆಯೊಳು ನಿಂದು ನರ ನುತ್ತರನೊಳಿಂತೆಂದ ॥ ೧

ಕರೆದು ದೂತರಿಗಱುಹು ನೀನೇ
ಧುರವ ಜಯಿಸಿದೆ ನೆಂದು ನಾವಿ
ರ್ದ್ದರವ ನಿಂದಱುಹದಿರು ಪಸರಿಸು ನಿನ್ನ ವಿಕ್ರಮವ ।
ಅರಸ ನಿನ್ನನೆ ಮನ್ನಿಸಲಿ ಪುರ
ಪರಿಜನಂಗಳು ನಿನ್ನ ವಿಜಯದ
ಹರುಷದೊಳು ಹೆಚ್ಚಿರಲಿ ನೇಮಿಸಿದಂತೆ ಮಾಡೆಂದ ॥ ೨

ಎನಲು ನೀನೇ ಬಲ್ಲೆ ಸರಿ ಲೇ
ಸೆನುತ ದೂತರ ಕರೆದು ಮತ್ಸ್ಯನ
ತನಯ ಕೌರವಬಲವ ಜೈಸಿದ ನೆಂದು ಹೇಱುವುದು ।
ಜನಪನಲ್ಲಿಗೆ ಹೋಗಿ ಯೆಂದಾ
ತನು ನಿಯಮಿಸುತ್ತಿರ್ದ್ದ ನತ್ತಲು
ಜನಪಕುಂತೀಸುತರು ಸಹಿತೈತಂದರೊಲವಿನೊಳು ॥ ೪

ಅರಮನೆಯ ಹೊಕ್ಕವನಿಪತಿಯು
ತ್ತರನ ಕಾಣದೆ ಕಂದನೆತ್ತಲು
ಸರಿದ ನೆನೆ ರಾಣಿಯರು ಬಿನ್ನೈಸಿದರು ಭೂಪತಿಗೆ ।
ಕುರುಬಲವ ನಂಗೈಸಿದನು ವು
ತ್ತರೆಯು ಗುರು ಸಾರಥಿತನವ ನನು
ಕರಿಸಿದನು ಕೆಲಬಲನ ಹಾರದೆ ಕದನಕ್ಕೈದಿದನು ॥ ೫

1 ನಭಕೆ ಹಾಯ್ದನು. ಖ. ಚ. ಟ. ಬನಕೆ ಹಾಯ್ದನು. ಜ.

ಎಂದೊಡೊಡಲೊಳು ಕೂರಲಗು ಮು೬ು
ದಂದದೊಳು ಕಳವಳಿಸಿದನು ಮನ
ನೊಂದ ನಕಟ ಕುಮಾರ ನೆತ್ತಲು ರಾಯುದಟ ವೆತ್ತ ।
ಬಂದವರು ಭೀಷ್ಮಾದಿಗಳು [1] ಮಿಗೆ
ನಿಂದು ತರಹರಿಸುವೊಡೆ ತಾನೇ
ನಿಂದುಧರನೇ ಮರುಳಲಾ ಮಗ ನೆನುತೆ ಚಿಂತಿಸಿದ ॥ ೬

ಮಗಗೆ ಪಡಿಬಲ ವಾಗಿ ಬಲುಮಂ
ತ್ರಿಗಳ ನವನಿಪ ಬೀಳುಕೊಟ್ಟನು
ದುಗುಡದಿಂದಿರೆ ಹೊಚಲು ಕೈಸೂಟಿಗಳ ಕಳಕಳದ ।
ಮೊಗದ ಹರುಷದೊಳಖಿಳದೂತಾ
ದಿಗಳು ಬಂದರು ಗುಡಿಯು ಕಟ್ಟಸು
ನಗರಿಯೊಳು ಕಳುಹಿದಿರುಗೊಳಿಸು ಕುಮಾರಕನ ನೆನುತೆ ॥ ೭

ರಾಯುಕುವರಪಿತಾಮಹನು ರಿಪು
ರಾಯುಕುನರಮುರಾರಿ ಕೌರವ
ರಾಯಭಟ್ಟವಿಭಾಡ ನರಿರಾಜಗಜಪಂಚವಮುಖ ।
ಜೇಯು ಬಿನ್ನಹ ಕರ್ಣ ಗುರು ಗಾಂ
ಗೇಯು ಮೊದಲಾದಖಿಳಕೌರವ
ರಾಯುದಟವೆನು ಗೆಲಿದ ನುತ್ತರ ತುಱುವ ಮರಳಿಚಿದ ॥ ೮

ಕೇಳಿ ಮಿಗೆ ಹಿಗ್ಗಿದನು ತನುರೋ
ಮಾಳಿ ತಳಿತುದು ಬಹುಳಹರುಷದ
ದಾಟಿಯೊಳು ಮನ ಮುಂದುಗೆಟ್ಟುದು ಕಂಗ ಳರಳಿದುವು ।

---

[1] ತನಗಿಂದು ತರಹರಿಸುವೊಡೆ, ಕ, ಟ. ತನಗಿಂದು ಪರಿಹರಿಸುವೊಡೆ, ಖ. ತಾನಿಂದು ತರಹರಿಸುವೊಡೆ, ಜ, ಝ.

ಲಾಲಿಸುತೆ ಸರ್ವಾಂಗ [1] ಚಿತ್ತದೊ
ಳಾಟೆ ಜನಪ ಪಸಾಯವೆನು ದೂ
ತಾಳಿಗಿತ್ತನು ಸುಲಿದ ರವೆದಿರು ರಾಯನೋಲಗವ ॥ ೯

ಇದಿರಗೊಳಹೇಳಿದನಲು ಸರ್ವಾಂ
ಗದ [2] ರುಚಿರಕಾನ್ತಿಗಳ ಶೃಂಗಾ
ರದ ಸುರೇಖೆಯ ಲಲಿತಚಿತ್ರಾವಳಿಯ ಮುಸುಕುಗಳ ।
ಸುದತಿಯರು ಪೊರಮಟ್ಟು ರೊಗ್ಗಿನ
ಮೃದುಮೃದಂಗದ ಕಹಳೆಗಳ ಸಂ
ಪದದ ಸೊಂಪುಗಳೆಸೆಯೆ ರಾಜಕುಮಾರಿಯರು [3] ಮುಂದೆ ॥೧೦

ಕವಿದು ನೂಕುವ ಹರುಷವನು ಸಂ
ತವಿಸಲರಿಯದೆ ಕಂಕ ನಿನ್ನೊಡ
ನೆವಗೆ ವಿಮಲದ್ಯೂತಕೇಳಿಗೆ ಚಿತ್ತ ವಾಯ್ತೆನಲು ।
ಅವನಿಪತಿ ಕೇಳಜ್ಜಿನೊಳು ಪಾಂ
ಡವರು ಸಿಲುಕಿದ ರವರ [4] ಪರಿಯೊಳು
ಭುವನದೊಳು ನವೆದವರದಾರೆಂದನು ವಿರಾಟಂಗೆ ॥ ೧೧

ಅವರು ರಾಜ್ಯವ ನೊಡ್ಡಿ ಸೋತವ್ರೊ
ಳಿವಗೆ ಪಣ ಬೇಱಿಲ್ಲ ಹರುಷೋ

---

[1] ಹರುಷದೊ, ಕ. ಚಿತ್ತದ ವೀಳಯವ ನೊಲಿದರಸ ನಾದೂ, ಖ. ಚಿತ್ತವ ಧೂಳಿಝುಳದ ಪಸಾಯವನು ದೂ, ಚ. ಪುಳಕಿಸಿ ವೀಳಯವನುಡುಗೊಱೆಯ ನಾದೂ, ಜ. ಚಿತ್ತದ ಧಾಟಿಯೊಳು ದೂತಾಳಿಗೆ ಪಸಾಯವನು ಕೊಟ್ಟನು ಸು, ಝ

[2] ಮಣಿಯ ಮೌಕ್ತಿಕದ, ಕ. ಲಿಮಣಿಮೌಕ್ತಿಕದ, ಚ, ಝ. ಣಿಯಲು, ಜ.

[3] ನಡೆಯೆ . ಖ. ಚ. ಝ. ನಡುವೆ, ಜ. ಟ.

ವಿಧಿಯನು ಭುವನದೊಳು ಬಂದವ, ಖ. ಚ. ಜ. ಝ. ಟ.

ತ್ಸವೆಕುವರಾಭ್ಯುದಯವಿಜಯಶ್ರವಣಸುಖ [1] ವಿರಲು ।
ಎವಗೆ ಮನವಾಯ್ತೊಡ್ಡು ಸಾರಿಯ
ನಿವಹವನು ತೆಗೆ ಯೆನಲು ಹೊಡಿದ
ನವನಿಪತಿ ನಸುನಗುತೆ ಹಾಸಂಗಿಗಳ ಹಾಯ್ಕಿದನು ॥ ೧೨

ಕೇಳಿ ಸಮತಳಿಸಿತ್ತು [2] ಮತ್ಸ್ಯನೃ
ಪಾಲ ನೆಂದನು ಕಂಕ ನೋಡೈ
ಕಾಳಗವೆ ನುತ್ತರನು ಗೆಲಿದನು ರಾಯಥಟ್ಟಿನೊಳು ।
ಶೂಲಪಾಣಿಗೆ ಸೆಡೆಯದಹಿತಭ
ಟಾಳಿ ಸೋತುದು ದಿವಿಜನರರೊಳು
ಹೋಲುವವರುಂಟೇ ಕುಮಾರ [3] ರು ಹೇಳು ಹೇಳೆಂದು ॥ ೧೩

ಸೋತುದುಂಟರಿಸೇನೆ ಸುರಭಿ
ವ್ರಾತ ಮರಳಿದುದುಂಟು ಗೆಲವಿದು
ಕೌತುಕವಲೇ ಬಗೆಯಲದುಭುತ ವೆನ್ನ ಚಿತ್ತದೊಳು ।
ಮಾತು ಹೋಲುವೆ ಯುಹುದು ಜನವಿ
ಖ್ಯಾತಸಾರಥಿ ಯಿರಲು ಕುವರಗೆ
ಭೀತಿ ತಾನೆಲ್ಲಿಯುದು ತಪ್ಪೇನೆಂದ ನಾಕಂಕ ॥ ೧೪

ಎಲೆ ಮರುಳೆ ಸನ್ಯಾಸಿ ಮತ್ಸರ
ದೊಳಗೆ ಮುಳುಗಿದ ಚಿತ್ತ ನಿನ್ನದು
ಗೆಲುವಿನೊಳು ಸಂದೇಹವೇ ಹೇಳಾವು [4] ದದುಭುತವು ।
ಅಳುಕುವವನೆ ಕುಮಾರ ಸಾರಥಿ
ಬಲುಹ ನುಳ್ಳವನೇ [5] ಬೃಹನ್ನಳ
ಯೊಳು ನಿರಂತರಪಕ್ಷ [6] ವೆಂದು ವಿರಾಟ ಖತಿಗೊಂಡ ॥ ೧೫

---

1 ಮಿಗಲು, ಖ. ಚ. ಟ. 2 ನಗುತೆ ನೃ, ಖ. ಜ. ಝ. ಟ,
3 ನ ನೆಂದನವಸೀಶ, ಖ. ನ ನೆಂದನಾಮತ್ಸ್ಯ, ಕ. ಚ. ಜ. ಝ.
4 ದಂತರವು, ಕ, ಖ. ಚ. ದತಿಶಯವು, ಟ.
5 ನಪುಂಸಕನೊಳು, ಖ, ಚ. ಝ. ಟ. 6 ಪಾತವಿದೆಂದನಾಮತ್ಸ್ಯ, ಜ.

ನಾರಿಯರ ಮೈಗುಱುಹು ಪುರುಷರ
ಚಾರುಚಿಹ್ನವ [1] ಕೂಡಿ ಕೊಂಡಿಹ
ಸಾರಥಿಯು ದೆಸೆಯಿಂದೆ [2] ಗೆಲಿದನು ಗೆಲಿದನೆಂಬಿದನು ।
ಸೈರಿಸಿದೆ [3] ನಾ ನೆನ್ನಪರಿಯಿಂ
ದಾರೊಡನೆ ಮಾತಾಡದಿರು ನಿ
ಸ್ಸಾರಹೃದಯನು ಕಂಕ ನೀಂ ದುಷ್ಟಾತ್ಮ ಹೋಗೆಂದ ॥ ೧೬

ಖತಿಯು ಹಿಡಿಯದಿರರಸ ದಿಟ ನೀ
ನತಿಶಯವ ಬೆದಕುವೊಡೆ ಜನಸ
ಮ್ಮತವು ಸಾರಥಿ ಗೆಲಿದ ನೆಂದೇ ಹೊಯ್ಸು ಡಂಗುರವ ।
ಸುತನು ಸಾರಥಿ ಯೆಂದು ಸಾರಿಸು
ವಿತಥ ವಲ್ಲಿದು ಪಕ್ಷಪಾತ
ಸ್ಥಿತಿಯು ನಾಡೆನು ಕವಲುನಾಲಗೆ ಯಿಲ್ಲ ತನಗೆಂದ ॥ ೧೭

ನಿನ್ನ ಮೋಹದ ಕಂಗಳಿಗೆ ಸುತ
ನುನ್ನತೋನ್ನತಸತ್ವ ನೆಂದೇ
ಮುನ್ನ ತೋಱಿತು ಹೊಲ್ಲಹವೆ ಸಾಂಸಾರಿಕಭ್ರಮೆಗೆ ।
ಇನ್ನು ಬಗೆ ಗೆಲಿದವ ಬೃಹನ್ನಳ
ನಿನ್ನ ಮಗಗಳುಕುವರೆ ಭೀಷ್ಮರು
ಕರ್ಣ ಗುರು ಕೃಪ ಗುರುತನೂಭವ ರೆಂದನಾಕಂಕ । ೧೮

ಎನಲು ಖತಿ ಬಿಗುಹೇಱಿ ಹಲುಹಲು
ದಿನುತೆ ಕಂಗಳೊಳುರಿಯು ನುಗುಱುತೆ
[4] ಕನಲು ಮಿಗಲೌಡೊತ್ತಿ ಕನಕದ ಸಾರಿಯನು ನೆಗಹಿ ।

---

1 ಮಾಡಿಕೊಂಡಿಹ, ಖ. 2 ಕುವರನು ಗೆ, ಖ. 3 ನಿಂದೆನ್ನ, ಖ. ತಾನೆನ್ನ ಪರಿಯಂತಾರೊಡನೆ, ಚ. ನಾ ನಿಸುವಪರಿಯಿಂನಾರೊಡನೆ, ಜ. ನಾ ನೆನ್ನ ಪರಿಯೊಂದಾರೊಡನೆ, ಟ. 4 ಕನಲಿಬಿಗಿದೌಡೊತ್ತಿ. ಖ. ಚ. ಜ. ಝ. ಟ.

ಜನಪತಿಯು ಹಣೆ ಯೊಡೆಯಲಿಡೆ ಜಾ
ಜಿನ ಗಿರಿಯು ನಿರ್ಜರದವೊಲು ಭೋಂ
ಕೆನಲು ರುಧಿರದ ಧಾರೆ ಚಿಮ್ಮಿತು ಸಿರದ ಸೆರೆ ಯೊಡೆದು ॥ ೧೯

ಸೈರಿಸುತೆ ಯುಮಸೂನು ರಕ್ತದ
ಧಾರೆಯನು ಕೈದುಂಬಿ ಹಿಡಿದತಿ
ಧೀರ ನೋರೆಯ ನೋಟದೊಳು ಸೈರಂಧ್ರಿಯನು ಕರೆಯೆ ।
ನಾರಿ ಹರಿತಂದಕಟ ನೊಂದನು
ಕಾರಣಿಕಸನ್ಯಾಸಿ ಯೆನುತೆ ನಿ
[1] ಕಾರಿಸುತೆ ಸೀರೆಯೊಳು ತೊಡೆದಳು ಬಹುಳಶೋಣಿತವ ॥ ೨೦

ಮಡದಿ ಕರಪಲ್ಲವದೊಳೂರಸಿದ
ಳಡಿಗಡಿಗೆ ಹಣೆಯನು ಕಪೋಲವ
ತೊಡೆದು ತೊಳೆದಳು ಮುಖವ ನಿದನವ ಕಂಡು ಬೆಱಗಾಗಿ ।
ಹಿಡಿದೆ ರಕ್ತವನೇಕೆ ಕಾಮಿನಿ
ನುಡಿ ನಿದಾನವ ನೀತ ನೊಂದೊಡೆ
ಮಿಡುಕಲೇತಕೆ ನೀ ನೆನುತೆ ದ್ರೌಪದಿಯು ಬೆಸಗೊಂಡ ॥ ೨೧

ಉರಿದು ಹೋಹುದು ನಿನ್ನ ರಾಜ್ಯದ
[2] ಸಿರಿಯು ಬದುಕಿತಿದೊಂದು [3] ಬೋಱದೆ
ಪರಮಯುತಿ ಕಾಯಿದನು ಕೈಯೊಳು ತುಂಬಿ ರಕುತವನು ।
ಅರಸ ಕೇಳೀಮುನಿಯ ನೆತ್ತರು
ಧರೆಯೊಳೂಕೆ ಕ್ಕಡೆ ಯಾಪ್ರದೇಶವ
ನೊರಸಿ ಕಳವುದು [4] ಕಲಿಬ್ಬಹನ್ನಳಗೇಱಿಸಿದ [5] ಬಿರುದು ॥೨೨

---

[1] ಕಾರಿಸಿದ, ಕ. ಜ. [2] ಧರಣಿ, ಖ. ಜ. ಟ [3] ಪೇಳುವೆ, ಚ. ಬಾರಿಗೆ, ಜ. ಝ. [4] ಪರ, ಜ. ಝ. ದಿಟ, ಚ. ಟ. [5] ಭಾಷೆ, ಚ. ಮಾತು, ಟ.

ಈಕೆ ಯಾರಿವರಾರೊ ನಾಟ್ಯ
ವ್ಯಾಕರಣಪಂಡಿತ ಬೃಹನ್ನಳೆ
ಯೇಕೆ ಯಿವರೇಕಳಿಯಬಾರದು ಕಾಲುಕೀಲುಗಳ ।
ಏಕೆ ನಮಗೀಚಿಂತೆ ಯೆನುತವಿ
ವೇಕಿ ಯಿ [1] ರೆ ಬೆಚ್ಚಿಕಿತ್ತು ಪುರದೊಳು
ನೂಕುನೂಕಾಯಿತ್ತು ನೋಡುವ ನೆರವಿ ಯುತ್ತರನ ॥ ೧೩

* ಇದಿರುವಂದರು ಮಂತ್ರಿಗಳು ವರ
ಸುದತಿಯರು ಸೂಸಿದರು ಸೇಸೆಯ
ನುದಿತಮಂಗಳಘೋಷ ವಾದ್ಯನಿನಾದ ರಭಸದೊಳು ।
ವದನ ವಿದೆ ಕಳಗುಂದಿ [2] ಜಯದ
ಭ್ಯುದಯ ತಾ ನೆಂತಾಯ್ತೆನುತೆ ಕೋ
ವಿದರು ತಮ್ಮೊಳಗಾಡುತಿರ್ದರು ಕೂಡೆ ಗುಜುಗುಜಿಸಿ ॥ ೧೪

ಎಂದಿನವ ನುತ್ತರನು ಗಂಗಾ
ನಂದನನ ನೀಹೂಹೆ ಗೆಲಿದನು
ಸಂದಸುಭಟ ದ್ರೋಣಕರ್ಣಾದಿಗಳ ನೋಡಿಸಿದ ।
ಎಂದು ಕೆಲಬರು ಕೆಲಬರಿವ ಗೆಲಿ
ದಂದ ವಾಗಿರದೀಬೃಹನ್ನಳೆ
ಯಿಂದೆ ಸಂಭಾವಿಸುವುದೆಂದುದು ಮಂದಿ ತಮತಮಗೆ ॥ ೧೫

ಲೀಲೆ ಮಿಗಲುತ್ತರನ ಪುರಜನ
ಜಾಲ ಜೀಯೆನಲಿದಿರುವಂದ ನಿ
ವಾಳಿಗಳನೂಕಿದನು ಕೈವಾರಿಗಳ ಕೋಪಿಸಿದ ।
ಆಲಿ ಯುವನಿಯು ಬರೆಯೆ ಮುಸುಕಿನ
ಮೇಲುದುಗುಡದ ಭಾರದೊಳು ರಾ
ಜಾಲಯಕೆ ಬರಲಿದಿರುವಂದಪ್ಪಿದನು ನಂದನನ ॥ ೧೬

---

[1] ರುತಿರಲಿತ್ತು. ಖ. ಜ. ಝ. * ಈ ಪದ್ಯವು, ಝ. ಪುಸ್ತಕದಲ್ಲಿಲ್ಲ.
[2] ರಣದ. ಖ.

ಬಾ ಮಗನೆ ಸೋಮಕುಲದ ನೃಪಚಿಂ
ತಾಮಣಿಯೆ ಕುರು [1] ರಾಯಮೋಹರ
ಧೂಮಕೇತುವೆ ಕಂದ ಬಾ ಯೆಂದಪ್ಪಿ [2] ಕುಳ್ಳಿರಿಸೆ ।
ಕಾಮಿನಿಯರುರುಪುಷ್ಪರತಿಗಳಭಿ
ರಾಮ ವಸ್ತ್ರ ನಿವಾಳಿ ರತ್ನ
ಸ್ತೋಮ ಬಣ್ಣದ ಸೊಡರ [3] ಸುಳಿವುಗ ಳಸೆದುವೊಗ್ಗಿನೊಳು ॥

ಬೆಪ್ಪ ಸಾಕೀಬಯಲ ಡೊಂಬಿನ
ಗೊಪ್ಪವುದೆ ವೀರೋಪಚಾರವಿ
ದೊಪ್ಪುವರಿಗೊಪ್ಪುವುದು ತೆಗಿಸೆನಲರಸ ನಸುನಗುತೆ ।
ದಪ್ಪ ವುಳ್ಳರಿಗೀಸು ಮಂಗಳ
ವೊಪ್ಪದೇ ಭುವನದೊಳಗಾವಂ
ಗೊಪ್ಪುವುದು ಬಲದಿಂ ನಿಗರ್ವಿತ ನೆಂದ ನವನೀಶ ॥ ೨೮

ಮಗನೆ ಕರ್ಣದ್ರೋಣ ಭೀಷ್ಮಾ
ದಿಗಳ ನೊಬ್ಬನೆ ಗೆಲಿದೆಯ್ಯ ಕಾ
ಳಗದ ಕಡುಗಲಿತನ ವಿದುಂಟೇ ಪೂರ್ವರಾಜರೊಳು
ದುಗುಡ ಬೇಡೆನ್ನಾಣೆ ಹೆತ್ತರ
ಮೊಗಕೆ ಹರುಷವ ತಂದೆ ನೀಂ ಹಂ
ಗಿಗನೆ ಮಿಗೆ ತಲೆಗುತ್ತಲೇಕೆನುತೆತ್ತಿದನು ಮೊಗವ ॥ ೨೯

ಕಾದಿ ಗೆಲಿದವ ಬೇಟಿ ಸಾರಥಿ
ಯಾದವಂಗೀಸೇಕೆ ನಿಮ್ಮಡಿ
ಯಾದರಿಸಲೊಡೆಮುಖಿಕಬಲ್ಲೆನೆ [4] ನಾಚಿಸದಿರೆನಲು ।
ಕಾದಿ ಗೆಲಿದವ ನೀನು ಸಾರಥಿ
ಯಾದವನು ತಂಗಿಯ ಬೃಹನ್ನಳೆ
[5] ಭೇದ ವೇಕೆಲೆ ಮಗನೆ ಬಲ್ಲೆನು ನಿನ್ನ ಪೌರುಷವ ॥ ೩೦

---

1 ರಾಜವಂಶದ, ಜ. 2 ಮುಂಡಾಡಿ, ಖ. ಕುಳ್ಳಿರಿಸಿ, ಚ. ಟ. ದನು ಮಗನ, ಜ. ಝ. 3 ಸುಳಿಸಿದ ತನಯನಿದಿರಿನೊಳು, ಓ. ಚ. 4 ಬೊಪ್ಪ ಬೇಡೆನಲು, ಝ. 5 ವಾದ ಬೇಡೆಲೆ, ಖ. ಚ. ಜ. ಝ. ಟ.

ಅಧಟಿತನ ಮೆನಗುಂಟೆ [1] ಬೆಂದುದ
ಬೆದಕಬೇಡೆಲೆ ತಂದೆ ಹಗಲಿನ
ಕದನವೆನು [2] ಹರಿ ಬಂದು ಗೆಲಿದನು ಬೊಪ್ಪ ನುಡಿಸದಿರು ।
ಉದಯದೊಳು ಗೆಲಿದಾತನನು ನಿ
ಮ್ಮಿದಿರಿನೊಳ್ ತೋಱುವೆನು ಬೀಡೊಕ್ಕಡು
ಸದನಕೆಂದು ಕುಮಾರ ಕಳುಹಿಸಿಕೊಂಡ ನರಮನೆಗೆ ॥ ೩೧

ಇತ್ತಲರ್ಜುನದೇವ ಸಾರಿದ
ನುತ್ತರೆಯ ಭವನವನು ತಾಂ ತಂ
ದುತ್ತಮಾಂಬರ ವಿವಿಧರತ್ನಾಭರಣ ವಸ್ತುಗಳ ।
ಇತ್ತ ನಾಕನ್ನಿಕೆಗೆ ಮುದ ಮಿಗ
ಲುತ್ತರೆಯ ಮನೆಯಿಂದೆ ಶಶಿಕುಲ
ಮತ್ತವಾರಣ ಬಂದ ನಾ [3] ಭೀಮಾಗ್ರಜನ [4] ಬಳಿಗೆ ॥ ೩೨

ಬಳಿಕ ಸಂಕೇತದೊಳು ಭೂಪನ
ನಿಳಯವನು ಕಲಿಭೀಮ ಹೊಕ್ಕನು
ನಳಿನಮುಖಿ ಸಹದೇವ ನಕುಲರು ಬಂದರಾಕ್ಷಣಕೆ ।
ಫಲುಗುಣನು ಪೊಡಮಟ್ಟ ನಿಬ್ಬರಿ
ಗುಱಿದವರು ಪಾರ್ಥಂಗೆ ವಂದಿಸ
ಲೊಲಿದು ಬಿಗಿಯಪ್ಪಿದ [5] ರು ಸೋದರ ರೆಲ್ಲ ಹರುಷದೊಳು ॥

ಉಱಿದ ನಾಲ್ವರು ಕಲಿತ್ರಿಗರ್ತರ
ಗೆಲಿದ ಪರಿಯನು ಪಾರ್ಥ ಕೌರವ
ಬಲವ ಭಂಗಕೆ ತಂದ ಪರಿಯನು ಹೇಱುತಿರುತಿರಲು ।

---

[1] ಬೆಂದುದ ಬೆದಕಿ ಬೇಯಿಸಬೇಡ ಹಗಲಿನ, ಖ, ಬೆಂದುದ ಬೆದಕಿ ನೋಯಿಸ ಬೇಡ ಹಗಲಿನ, ಚ. ಟ. ಬೆಂದುಗ ಬೆದಕಬೇಡೆಲೆತಾತ ಹಗಲಿನ, ಜ. ಝ, [2] ಹರಿತನುಜಗೆಲಿದನು. ಟ. [3] ಧರ್ಮಜನಮಂದಿರಕೆ, ಖ. [4] ಮನೆಗೆ, ಚ. ಜ. ಪೊರೆಗೆ, ಝ.
[5] ನು ಸಾಹಸಧೈರ್ಯಸಹಭವರ, ಖ,

ನಿಲುಕಿ ರಾಯನ ಹಣೆಯ ಗಾಯವ
ಬಟ್ಟಿಕ ಕಂಡ ನಿದೇನು ನೊಸಲಿಂ
ದಿಳಿಯುತಿವೆ ನಸು ರಕ್ತಬಿಂದುಗಳೆಂದನಾ ಪಾರ್ಥ ॥ ೩೪

[1] ಅನುನಿಮಿತ್ತದೊಳಾಯ್ತು ಸಾಕದ
ನೆನೆಯ ಲೇತಕೆ ಮಾಣೆನಲು ಮಿಗೆ
ಕನಲುತರ್ಜುನ ನಜುದ ನಾದ್ರೌಪದಿಯು ಸೂರುಳಿಸಿ ।
ಮನದೊಳುರಿದೆದ್ದನು ವಿರಾಟನ
ತನುವ [2] ಹೊಕ್ಕಿಸಿ ರಕುತವನು ಶಾ
ಕಿನಿಯರಿಗೆ ಹೊಯ್ಸುವೆನು ಹೊಲ್ಲಹ ವೇನು ಹೇಳೆಂದ ॥ ೩೫

ಕಳುಹಬೇಕಾಕೀಚಕೇಂದ್ರನ
ಬಳಗ ವಿದ್ದಲ್ಲಿಗೆ ವಿರಾಟನ
[3] ನೆಲೆ ದುರಾತ್ಮಕ ಸಾರಿಯೊಳು ಹಣೆಯೊಡೆಯ ಲಿಟ್ಟನಲಾ ।
ನೆಲದೊಳೂಕ್ಕುದೆ ರಕುತ ಪಿವಿದಿರ
ಕುಲವ ನೊರಸುವೆ ನಿವನ ಸೀಳಿದು
ಬಲಿಯ ಕುಡುವೆನು ಭೂತಗಣಕೆನುತೆದ್ದ ನಾಭೀಮ ॥ ೩೬

ಕಾಕ ಬಳಸಲು ಬೇಡ ಹೋ ಹೋ
ಸಾಕು ಸಾಕೈ ತಮ್ಮ ಮಾಣು
ದ್ರೇಕವನು ನೆಲ ರಕುತಗಂಡೊಡೆ ನಿನ್ನ ಮೇಲಾಣೆ ।

---

1 ಅನುವರದೊಳೇನಾಯ್ತು, ಕ. ಅನುಚಿತವಿದರಿಂದವಾಯ್ತೆನೆ, ಝ.

2 ಸೀಳಿದು ಬಲಿಯ ಕೊಡುವೆನು ಮನುಜಪತಿಗೀವೆತೆಯ ತಂದನೆ ಶಿವಶಿವಾ ಯೆಂದ, ಝ.

3 ತಲೆಯ ರಣಪಾಲಿಗನಲೆ ಶಿವಶಿವ ಮಹಾದೇವ, ಕ. ತಲೆಯ ಹೊಯ್ದರೆ ಕಳುಹುವೆನು ಶಿವ ಶಿವ ಮಹಾದೇವ, ಖ. ತಲೆಯ ಹೊಯ್ಗಳಪಾಲಿಗನೊ ಶಿವ ಶಿವ ಮಹಾದೇವ, ಚ. ತಲೆಗೆ ಹೊಯಿಗುಳು ಪಾಲಿಗನೊ ಹೇಳೆನು ಮಹಾದೇವ, ಟ.

ಈಕಮಲಲೋಚನೆಯು [1] ಸೆಱಗಿಗೆ
ಸೇಕ ವಾದುದು ರಕುತದೊಳು ಸು
ವ್ಯಾಕುಲತೆ ಬೇಡೆಂದು [2] ಭೀಮನ ಹಿಡಿದ ನಾಭೂಪ ॥ ೩೭

ತಿಂಬೆ ನೀತನ ಜೀವವನು ಪತಿ
ಯೆಂಬ ಗರ್ವಿತ ನಿವನ ನೆತ್ತಿಯು
[3] ತುಂಬು ಬಿಡಲೆಱಗುವೆನು ತಱಿವೆನು ಮತ್ಸ್ಯಸಂತತಿಯು ।
ಅಂಬುಜಾಕ್ಷಿಗೆ ಕೀಚಕನ ಬೇ
ಳಂಬ ವೀತನ [4] ಕೂಟ ಭೂತಕ
ದಂಬತುಷ್ಟಿಯು ಮಾಡಬೇಹುದು ಸೆಱಗ ಬಿಡಿ ಯೆಂದ ॥ ೩೮

ಇವನ ನಾ ವ್ರೋಲೈಸಿ ಕೈಯೊಡ
ನಿವಗೆ ಮುನಿದೊಡದೇನ ನೆಂಬುದು
ಭುವನಜನ ನೀಂ ಭ್ರಮಿಸದಿರು ಸೈರಣೆಗೆ ಮನವಾಡು ।
ಎವಗೆ ನೋವಿನ ಹೊತ್ತು ದುಷ್ಕೃತ
ವಿವರಣದ ಫಲ ವಿದಕೆ ಲೋಗರ
ನವಗಡಿ [5] ಸಿದೊಡೆ ಹಾನಿ ನಮಗೆನೆ ಭೀಮ ನಿಂತೆಂದ ॥ ೩೯

ಬಱಿಯು ಧರ್ಮದ ಜಾಡ್ಯದೊಳು ವೈ
ಮಱೆದು ಬನದೊಳು ಬೇರುಬಿಕ್ಕೆಯು
ನಱಿಸಿ [6] ತೊಱಲ್ದುದು ಸಾಲದೇ [7] ಹದಿಮೂಱು ವತ್ಸರವು ।
[8] ಉಱುಕುಗೊಂಡೊಡೆ [9] ರಾಜತೇಜವ
ಮೆಱೆವ ದಿನ ವೆಂದಹುದು ನೀವಿ
ನ್ನಱಿಯಿರೆಮ್ಮನು ಹರಿಯಬಿಡಿ ಸಾಕೆಂದ ನಾಭೀಮ ॥ ೪೦

---

1 ಸೆಱಗಭಿ ಷೇಕವಾದುದು ರಕ್ತವನೆ ಸು ವ್ಯಾಕುಲತೆ ಬೇಡೆಂದು ಗಲ್ಲವ ಹಿಡಿದನನಿಲಜನ, ಖ. 2 ಸಂತೈಸಿದನು ಸಹಭವನ, ಕ. ಝ. 3 ತುಂಬಬಿಡ, ಚ. ತುಂಬಲೆಱಗು, ಝ. 4 ಮಾತು, ಚ. 5 ಸಲೀಕೆಂದು ಸಂತೈಸಿದನು ಸಹಭವನ, ಕ. ಝ. 6 ತಿರುಗಿದೆ ವಿನ್ನಬರ, ಕ. 7 ಹನ್ನೆರಡುವತ್ಸರವು, ಚ. 8 ಉಱುಪುಗೊಂಡೊಡೆ, ಝ. 9 ಕ್ಷಾತ್ರತೇಜವ, ಖ. ಜ. ಝ. ಟ.

ಉದಯದೊಳು [1] ನಾವಿನಿಬ ರಾತನ
ಸದನ [2] ದೊಳು ನೃಪಪೀಠವನು ಗ
ರ್ವದೊಳು ನೆಮ್ಮುವ ನಾತ ನೆಮ್ಮೊಳು ಖಾತಿಯನು ಹಿಡಿಯೆ ।
ಮದಮುಖನ ನೊರಸು [3] ವೆವು ಹರುಷದೊ
ಳಿದಿರುಗೊಂಡೊಡೆ ಮನ್ನಿಸು [4] ವೆ ವಿಂ
ತಿದುವೆ ಸಮ್ಮತ ವೆಂದು [5] ಸಂತೈಸಿದನು ಸಹಭವನ ॥ ೪೧
*

ಹತ್ತನೆಯ ಸಂಧಿ ಮುಗಿದುದು.

---

## ಹನ್ನೊಂದನೆಯ ಸಂಧಿ.

ಅಭಿಮನ್ಯುವಿನ ವಿವಾಹಕ್ಕೆ ಕೃಷ್ಣಸ್ವಾಮಿ ಬಂದುದು.

**ಸೂಚನೆ.**

ರಾಯ ಪಾಂಡವ [6] ಜೀವ ಭಕ್ತನಿ
ಕಾಯಲಂಪಟ ನಮಲಯಾದವ
ರಾಯ ಬಿಜಯಂಗೈದ ನಭಿಮನ್ಯುವಿನ [7] ಪರಿಣಯಕೆ ॥

---

1 ನಮ್ಮನಿಬ, ಕ. ಚ. ಜ. ಟ. 2 ದಲ್ಲಿಯು ಕನಕಪೀಠವ ನಡರಿ ಕುಳ್ಳಿರಲವನು ಗರ್ವಿಸಿ ಖಾತಿ. ಟ. 3 ವುವು ಪಮಳನೊಳಿದಿರು, ಖ. 4 ವುದಿಂತಿದು, ಖ. 5 ನಿಶ್ಚೈಸಿದನು ಯಮಸೂನು, ಖ. 6 ಜೀಯ, ಟ. 7 ಪರಿಣತೆಗೆ, ಜ. ಟ.

* ಈ ಪದ್ಯವು ಖ. ಪುಸ್ತಕದಲ್ಲಿ ಸಂಧಿಯ ಕೊನೆಯಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಕಳೆದೆವಜ್ಞಾತವನು ಮೇಣಾ
ಕೆಲಸದಾರೈಕೆಗಳ ನಮ್ಮೀ
ಲಲಿತವೈಭವಕಿಳೆಯ ಮೇಗಣ ಸಾರಸಖ್ಯತೆಗೆ ।
ಕಳವಳಿಸದಿರಿ ಚಿಂತೆ ಬೇಡೆವು
ಗೊಲವ ನೀವನನುಪಮಕರುಣಾ
ಜಲಧಿ ಯಹ ಜಲಜಾಕ್ಷ ನಗ್ಗದ ವೀರನಾರಯಣ ॥

ಕೇಳು ಜನಮೇಜಯ ಧರಿತ್ರೀ
ಪಾಲ [1] ಚರಿತಾಜ್ಞಾತವಾಸವ
ಬೀಳುಕೊಟ್ಟರು ಬಹುಳಹರುಷದೊಳರುಳ ನೂಕಿದರು ।
[2] ಮೇಲಣವರಭ್ಯುದಯವೆನು ಕೈ
ಮೇಳವಿಸಿ ಕುಡುವಂತೆ ಮೂಡಣ
ಶೈಲ [3] ಮುಖದೊಳು ಕೆಂಪು ತೋಱಿತು ಭಾನುಮಂಡಲದ ॥ ೧

ಏಱುಕುದುರೆಯ ಖುರಪುಟದ ಕೆಂ
ದೂಳಿಯೋ ಕುಂತೀಕುಮಾರಕ
ರೇೞಿಗೆಯ ತನಿರಾಗರಸ ವುಬ್ಬರಿಸಿ ಪಸರಿಸಿತೋ ।
[4] ಹೇೞಲೇನು ಮಹೇಂದ್ರವರದಿ
ಗ್ಬಾಲಕಿಯ ಬೈತಲೆಯ ಕುಂಕುಮ
ಜಾಲವೋ ನೋಡೆನಲು ದಿನಪನ ಚರಣ ರಂಜಿಸಿತು ॥ ೨

ಸರಸಿಜದ [5] ಪರಿಮಳಕೆ ತುಂಬಿಯ
[6] ಮೆರವನಿತ್ತನು ಚಂದ್ರಕಾಂತಕೆ
ಬೆಱಗನಿತ್ತನು ಚಕ್ರವಕ್ಕಿಯ ಸೆಱೆಯ ಬಿಡಿಸಿದನು ।
ಕೆರಳೆ ನೈದಿಲ ಸಿರಿಯ ಸೂಱೆಯ
[7] ತರಿಸಿದನು ಪರರಾಜತೇಜವ
ನೊರಸಿದನು ರವಿ ಮೂಡಣದ್ರಿಯೊಳೆತ್ತನೋಲಗವ ॥ ೩

ಹರಹರ ಶ್ರೀಕಾಂತ ಎನುತೈ
ವರು ಕುಮಾರಕರುಪ್ಪವಡಿಸಿದ
ರರಿವಿನಾಶರು ಮಾಡಿದರು ಮಾಂಗಲ್ಯಮಜ್ಜನವ ।

---

1 ರವರಜ್ಞಾತ, ಖ. 2 ಮೇಲೆಯುವರ, ಚ.

3 ಶಿಖರದೊಳುಪ್ಪವಡಿಸಿದನಬ್ಜಿನೀರಮಣ, ಚ.

4 ಹೇೞಲರಿದೆನಲಮರವರ, ಚ. ಜ. ಝ. 5 ಮಧುಕರದಗುಂಪಿಗೆ ಹರುಷವಿತ್ತನು, ಖ. 6 ತೆಱವಕೊಟ್ಟನು, ಕ. ಥರವ ಕೊಟ್ಟನು, ಚ. ಜ. ಝ. ಥರವಬಿಟ್ಟನು, ಟ. ಬರಿಸಿದನು, ಟ.

ವರ ವಿಭೂಷಣ ಗಂಧ ಮಾಲ್ಯಾಂ
ಬರ ಪರಿಷ್ಕೃತರಾಗಿಯುವನೀ
ಸುರರಿಗಿತ್ತರು ಧೇನು ಮಣಿ ಕನಕಾದಿವಸ್ತುಗಳ ॥ ೪

ತಮದ ಗಂಟಲ [1] ನೊಡೆದು ಹಾಯ್ದ
ದ್ಯುಮಣಿಮಂಡಲದಂತೆ [2] ಚೀವ
ಭ್ರಮೆ [3] ಯು ಕವಚವ ಕಳೆದು ಹೊಳಹೊಳವಾತ್ಮನಂದದೊಳು ।
ವಿಮಳ ಬಹುಳ [4] ಕ್ಷತ್ರರಶ್ಮಿಗ
ಳಮಮ ದೆಸೆಗಳ ಬೆಳಗೆ ರಾಜೋ
ತ್ತಮಯುಧಿಷ್ಠಿರದೇವ ನೆಸೆದ ನು [5] ದಾರತೇಜದೊಳು ॥ ೫

ಪರಮ [6] ಸತ್ಯವ್ರತಮಹಾಕ್ರತು
ವರದೊಳವಭೃಥಮಜ್ಜನವ ವಿ
ಸ್ತರಿಸಿ [7] ಭೀಮಾದಿಗಳುಸಹಿತ ವಿರಾಟನರಮನೆಗೆ ।
ಅರಸ ಬಂದನು ಮಣಿಖಚಿತಕೇ
ಸರಿಸುಪೀಠವ ನಡರಿದನು ನಿಜ
ಚರಣ [9] ಸೇವೆಯೊಳೆಸೆದ ರೊಡಹುಟ್ಟಿದರು [10] ಪರುಠವಿಸಿ ॥ ೬

ಅವನಿಪನ ಸಿಂಹಾಸನವ ನೇ
ಱುವ ಸುಗರ್ವಿತರಾರು ನೋಡಿದೊ
ಡೆವೆಗಳುರಿಯುವೆ [11] ನೂಕೆನುತೆ ಕಂಚುಕಿಗಳೈತಂದು ।
ಇವರ [12] ವಿಮಲಕ್ಷತ್ರತೇಜವ
ನವಗಡಿಸಲಂಜಿದರು ಹರಿತಂ
ದವದಿರೆಬ್ಬಿಸಿ ಬಿನ್ನವಿಸಿದರು ಮತ್ಸ್ಯಭೂಪತಿಗೆ ॥ ೭

---

1 ನೊಡೆದು ಮಾಡುವ, ಕ. ಚ. ಜ. ಝ. ಟ. 2 ಚಿತ್ತ, ಚ. 3 ಗಳಡಗಿದ ಖಚಿಕ, ಕ. 4 ಬ್ರಹ್ಮರಶ್ಮಿಯು ವಿಮಲದೆಸೆಯೊಳು, ಝ. 5 ರಾಜತೇಜ, ಖ. ಚ. ಜ. ಟ. 6 ಮಂಗಳವರಮಹಾ, ಖ. 7 ದೊಲು ಮಜ್ಜನವ ಮಾಡಿ ವಿರಾಟ, ಚ. 8 ದರಸಿ ದ್ರೌಪದ ಯೆಸೆದಳೊಡ, ಟ. 9 ಸೀಮೆಯೊ, ಖ. ಚ. 10 ಭೂಪತಿಯು, ಜ. ಬಳಸಿನೊಳು, ಝ. 11 ನೋಡೆನುತೆ, ಖ. 12 ನೀಕ್ಷಿಸಿ.ಕ್ಷತ್ರ, ಕ. ಖ. ಚ.

ಜೇಯ ಸಿಂಹಾಸನಕೆ ದಿವಿಜರ
ರಾಯನೋ ಶಂಕರನೊ ಮೇಣ್ ನಾ
ರಾಯಣನೊ ನರನಲ್ಲ ದೇವರು ಬಂದು ನೋಡುವುದು ।
ಕಾಯಲಸದಳ ವೆಮಗೆನಲು ನಿ
ರ್ದಾಯದೊಳು ನೆಲೆಗೊಂಡ [1] ನಿರ್ಭಯ
ದಾಯತವು ತಾನೆಂತೆನುತ್ತೆ ವಿರಾಟ ಚಿಂತಿಸಿದ ॥ ೮

ಕರಿಸಿದನು ಪುರೋಹಿತರನು
ತ್ತರನ ನಖಿಳಮಹಾಪ್ರಧಾನರ
ನರಮನೆಯ ಪ್ರೌಢಮಟ್ಟ ನೋಲಗಸಾಲೆಗೈತಂದು ।
[2] ತರೆದು ಕೀಸಿದ ಚಂದ್ರಬಿಂಬದ
ಕಿರಣಲಹರಿಗಳೆನಲು ವಿಮಳಾ
ಭರಣರತ್ನಪ್ರಭೆಯ ಕಂಡನು ನೃಪತಿ ದೂರದೊಳು ॥ ೯

ಹರನ ನಾಲುಕುಮುಖದ ಮಧ್ಯ
ಸ್ಫುರಿತದೀಶಾನನವೊಲಾಸೋ
ದರಚತುಷ್ಟಯಮಧ್ಯದೊಳು ಕಂಡನು ಯುಧಿಷ್ಠಿರನ ।
ಅರಸಿಯನು ವಾಮದೊಳು ವಿವಿಧಾ
ಭರಣಮಣಿರಶ್ಮಿಗಳ ಹೊದಚಿನ
ಹೊರಳಿಯೊಳು ಕಣ್ಣಾಲಿ ಕೋರೈಸಿದುವು ಪರಿಜನಕೆ ॥ ೧೦

ಮೇಳವೇ [3] ಜಡಮನದ ಮರ್ತ್ಯರು
ಕಾಲಿಡಲು ತಾವಲ್ಲ ಮನುಜರ
ಹೋಲುವೆಯ ನಾಟಕದ ನಿರ್ಜರಮಂಡಲೇಶ್ವರರು ।

---

1 ನಿರ್ಜರರಾಯ ನಾರವ ನೆಂದೆನುತ್ತೆ ವಿರಾಟ, ಖ. ನಿರ್ಜರ ರಾಯ ನಾವನೊ ಎನುತ ಮತ್ಸ್ಯನೃಪಾಲ ಚಿಂತಿಸಿದ, ಚ. 2 ಕರಗಿ ಕಾಸಿದ, ಕ. ಖ. ಕರಗಿ ಕೀಸಿದ, ಚ, ಝ. ಹರಿಯ ಕೇಸರ ಚಂದ್ರ, ಜ. 3 ಘಡ ಮನದ ಮತ್ಸರ ಕಾಲಿಡುವೊಡಳವಿಲ್ಲ, ಕ. ಬಡಮನದ, ಚ. ಘಡ ಮನದ ಮತ್ಸರ ಕಾಲಿಡಲು ತಾವಲ್ಲ. ಜ. ಝ. ಘಡ ಮದದ ಮತ್ಸರ ಕಾಲಿಡಲು, ಟ.

ಆಲಿಗಳು ಮೇಲಿಕ್ಕಲಮ್ಮವು
ಶೂಲಪಾಣಿಯು ಪರಮತೇಜದ
ಚೂಳಿಕೆಯೊ ಶಿವ ಶಿವ ಎನುತ್ತೆ ವಿರಾಟ ಬೆಜಗಾದ ॥　　೧೧

ವಲಲ ಕಂಕ ಬೃಹನ್ನಳೆಯು ವೈ
[1] ಸೋಚಿವ ಹೋಲುವರೆಂದು ಕೆಲಬರು
ಕೆಲರಿದೆತ್ತಣ ನರರು ತೆಗೆ ಸುರಲೋಕಪಾಲಕರು ।
ತಿಳಿಯಲರಿದಿದನೆನುತೆ ಕೆಲಬರು
ತಳವೆಳಗುಗೊಳುತಿರಲು ಮಂದಿಯು
ತೊಲಗ ನೂಕಿಸಿ ತಂದೆಗುತ್ತರ ನಗುತೆ ಯಿಂತೆಂದ ॥　　೧೨

ತಾತ ಬಿನ್ನಹ ನಿನ್ನ ವೈರಿ
ವ್ರಾತವನು ಗೆಲಿದಾತ [2] ನಾತನೋ
ಪಾರ್ಥ ನಾತನ ಮುಂದೆ ಮೆರೆವವ ಕೀಚಕಾಂತಕನು ।
ಈತ ನಕುಲನು ಕೆಲದೊಳೀತನೋ
ಪಾರ್ಥ ಸಹದೇವಾಂಕ ನಿನಿಬರಿ
ಗಾತ ಹಿರಿಯನು ಧರ್ಮನಂದನನೆಂದು ತೋರಿಸಿದ ॥　　೧೩
*

---

1 ಉಳಿಯ, ಜ. ವಳಿಯ, ಝ. ಟ.　　2 ನರ್ಜುನ ಸೀತ ಸೀತನ, ಖ. ನರ್ಜುನ ನಾತ ನಾತನು ಭೀಮಸೇನನು ಕೀ. ಚ, ಸೀತನೀಪಾರ್ಥ, ಜ. ಝ. ಪಾರ್ಥನು ಈತ ನಿನ್ನಯ ಹರಿಬವನು ಗೆಲಿದಾತ ಕಲಿಭೀಮ, ಟ.

* ಈಪದ್ಯವು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

ಜ್ಯೋತಿಮಣಿಮಯದಂತೆ ಹೊಳೆಹೊಳೆ
ವಾತ ಧರ್ಮಜ ನತುಳಭುಜಬಲ
ಖ್ಯಾತಭೀಮಸುಪಾರ್ಥರೆಂಬ ಮಹಾಮಹೇಶ್ವರರು ।
ಈತ ನಕುಲನು ಕೆಲದೊಳಾತನೋ
ಪಾರ್ಥ ಸಹದೇವಾಂಕನೈವರ
ಶ್ರೀತರುಣಿಯಿರವಿನ್ನು ಪೇಳುವೆ ಬೊಪ್ಪ ಕೇಳೆಂದ ॥.

ರಮಣಿ ಯೈವರಿಗೀಕೆ ಕೆಲದೊಳು
ಕಮಲಮುಖಿ [1] ಪಾಂಚಾಲಿ [2] ತಾವೀ
ವಿಮಲಗುಣರಾಮಾಭಿರಾಮರು ಪಾಂಡುನಂದನರು ।
ಎಮಗೆ ಭಾರಿಯ ಭಾಗ್ಯಲಕ್ಷ್ಮಿಯ
ಮಮತೆ [3] ಕೈಸಾರಿದುದು ನೃಪಪದ
ಕಮಲದೊಳು ಬೀಳುವೆವು ನಡೆ ನಡೆ ಧನ್ಯರಾವೆಂದ ॥ ೧೪

ಈತನೀ ಧರ್ಮಜನು ದಿಟ ತಾ
ನೀತನೇ ಪವನಜನು ನಿಶ್ಚಯ
ವೀತನೇ ಫಲುಗುಣನು ಮಾದ್ರೀಜಾತರೀ ಇವರು ।
ಈತಳೋದರಿ ದ್ರುಪದಸುತೆಯೀ
ಕೌತುಕವಲಾ ಭುವನಜನವಿ
ಖ್ಯಾತ ರೆಲ್ಲಿಂದೆಲ್ಲಿ ಮೂಡಿದರೆಂದು ಬೆಱಗಾದ ॥ ೧೫

ವರುಷವೊಂದಜ್ಞಾತವಾಸವ
[4] ನಿರದೆ ನೂಕಿದರಿಲ್ಲಿ ಬಳಕೆಯ
ಹೊರೆಯೆ ಹೆಸರವು ಬೇಱೆ ನಡವಳಿಯುಂಗವಣೆ ಬೇಱೆ !
ಮರುಳಿನಂತಿರೆ ಜಗಕೆ ತೋಱನೆ
ಪರಮತತ್ವಜ್ಞಾನಿ ಯುಮಿತ್ರ
ಯರಸುತನ ಫಲಿಸಿತ್ತು ನಡೆ ನಡೆ ಧನ್ಯರಾವೆಂದ ॥ ೧೬

---

1 ಯನು ನೋಡು, ಜ. ಝ. ಟ. 2 ತಾನೀವಿಮಲ ಮತಿ, ಖ. ಲಕ್ಷ್ಮೀರಮ ಣಾತೇಜೋಭಿಮಾನರು, ಚ. ತಾವಿಂ ದಮಲಗುಣಗೆರ್ವಾಭಿರಾಮರು ತೊಳಗಿ ಡರು, ಜ. ತಾನೀವಿಮಲಗುಣನಾಮಾಭಿಯುಕ್ತರು ಪಾಂಡುನಂದನರು, ಝ. ೀ ಮಮಲಗುಣನಿಧಿಪೂಜಿತಾಮರ ಪಾಂಡುನಂದನರ, ಟ.

3 ಯನು ಚಿತ್ತೈಸು, ಖ. ಝ. ಟ.

4 ಸುರುಳೆ,-ಖ. ಜ. ಝ. ಟ.

ದರುಶನಕೆ ಮಣಿಕನಕವಸ್ತುವ
ತರಿಸಿ ಮುದದೊಳು [1] ಮುಳುಗಿ ನಿಜಪರಿ
ಕರಸಹಿತ ಮೈಯಿಕ್ಕಿದನು ಕಾಣಿಕೆಯ ನೊಪ್ಪಿಸುತೆ ।
ವರನೃಪಾಲ ತ್ರಾಹಿ ಭುವನೇ
ಶ್ವರ ಪರಿತ್ರಾಯಸ್ವ ಕರುಣಿಸು
ಕರುಣಿಸೆಂದಂಘ್ರಿಗಳ ಹಿಡಿದನು ಮತ್ಸ್ಯಭೂಪಾಲ ॥ ೧೭

ಬಗೆದೆ ನಪರಾಧವನು ಕರುಣಾ
ಳುಗಳ ಬಲ್ಲಹ ನೀನು ನಿನ್ನಂ
ಘ್ರಿಗಳ [2] ಗೀತಲೆ ನಂಟ ನೀನಿದ ಕಾಯಬೇಕೆನುತೆ ।
ಮಿಗೆ [3] ಬಕುತಿಭಾವದೊಳು ನಿಜಮಂ
ತ್ರಿಗಳು ಮಕ್ಕಳು ಸಹಿತ ಮನನಂ
ಬುಗೆಯ ಮೆಱೆದನು ಮತ್ಸ್ಯನೃಪತಿ ಮಹೀಶನಿದಿರಿನೊಳು ॥ ೧೮

ಆಸುಧೇಷ್ಣೆ ಕುಮಾರಿಯೊಡನೆ ವಿ
ಲಾ [4] ಸಿನೀಜನವೆರಸಿ ರಾಣೀ
ವಾಸದಲ್ಲಿಗೆ ಬಂದು ಕಾಣಿಕೆಗೊಟ್ಟು ಮೈಯಿಕ್ಕೆ ।
ಆಸಕಲಪರಿವಾರ ಪುರಜನ
ದೇಶಜನ ದರುಶನವನಿತ್ತು ಮ
ಹೀಶನನು ಕೈಮುಗಿದು ಕಂಡುದು [5] ಬಹುಳಹರ್ಷದೊಳು ॥ ೧೯

ಮುಗುಳುನಗೆಯೊಳು ಭೀಮಪಾರ್ಥರ
ಮೊಗವ ನೋಡಿದ ನವನಿಪತಿ ಕೈ
ಮುಗಿದು ತಲೆವಾಗಿದರು ತಮ್ಮಂದಿರು ಮಹೀಪತಿಗೆ ।

---

1 ಮತ್ಸ್ಯನೃಪ ಸತಿ ವೆರಸಿ ಕಾಣಿಕೆಯಿಕ್ಕಿ ಮೈಯಿಕ್ಕಿದನು ಭಕ್ತಿಯೊಳು, ಖ. ಮುಳುಗಿಹರುಷೋತ್ಕರುಷದೊಳು ಮಿಗೆಯಿತ್ತು ಮೈಯಿಕ್ಕುತ್ತ ಕಾಣಿಕೆಯ, ಚ. ಮುಳುಗಿ ಜನಪರಿ, ಝ. 2 ಗಹಿತವ ಬಗೆದ ಸೀತಲಗಾಯ, ಚ. ಗೀತಲೆ ಬಂಟನೀನಿದ, ಜ. 3 ಭರಿತಭಕ್ತಿಯೊಳು, ಚ. ಭಕುತಿ ಭೀತಿಯೊಳು, ಟ.
4 ಸದೊಳು ನಡೆತಂದು ರಾಣೀ, ಕ. 5 ಕಾಣಿಕೆಯನೀಡಿ, ಕ.

ತೆಗಿಸಿದನು ಕಾಣಿಕೆಯು ನಾವೆಂ
ತ್ರಿಗಳ ನಾಪರಿವಾರವೆನು ದ್ರೃಗು
ಯುಗದ ಕರುಣಾರ ದೊಳನಿಬರ ಹೊರೆದುವೆನ್ನಿಸಿದ ॥ ೨೦

ಸಿರವನೆತ್ತಿ ವಿರಾಟಭೂಪನ
ಕರೆದು ಹತ್ತಿರೆ ಪೀಠದೊಳು ಕು
ಳ್ಳಿರಿಸಲೊಡೆವೆುಱಿಚಿದನು ಕೆಲದೊಳು ಗದ್ದುಗೆಗೆ ಸರಿದು ।
ಪರಮಸುಕೃತ ವಲಾ ಧರಾಧೀ
ಶ್ವರನ ದರುಶನ ವಾಯ್ತು ಧನ್ಯರು
ಧರೆಯೊಳನ್ನಿಂದಾರು ಭಾವಿಪ್ರೊಡೆಂದನಾವುತ್ಸ್ಯ ॥ ೨೧

ದೇಶ ನಿಮ್ಮದು [1] ಸರ್ವರಾಜ್ಯದ
ಕೋಶ ನಿಮ್ಮದು ತನ್ನ ಜೀವವಿ
ಲಾಸ ನಿಮ್ಮದು ಸಲಿಸಬೇಹುದು ಬಿನ್ನಹದ ಹದನ ।
ಈಸಮಂಜಸದಿವಸದೊಳು ಸಿಂ
ಹಾಸನದೊಳಭಿಷೇಕವೆನು ಭೂ
ಮೀಶ ವಿಸ್ತರಿಸುವೆನು ಚಿತ್ತೈಸೆಂದನಾವುತ್ಸ್ಯ ॥ ೨೨

ಎನಲು ನಗುತೆಂದನು ಮಹೀಪತಿ
ವಿನಯ ಮಧುರರಸಾಭಿಷೇಕವ
ನೆನಗೆ ಮಾಡಿದೆ ಸಾಕು ಪುನರುಕ್ತಾಭಿಷೇಚನವೆ ।
ಜನವಿದೆಮ್ಮದು ನೀನದೆಮ್ಮಯ
ತನು ಧರಿತ್ರಿ ಯಿದೆಮ್ಮ [2] ದೆಂಬೀ
ನೆನಹು ತಾನುಪಚಾರ [3] ವಾಕವಿದೆಂದನಾಭೂಪ ॥ ೨೩

---

[1] ನಗರಹೆಚ್ಚಿದ ಕೋಶ, ಕ. ಖ. ಚ. ಜ. ಝ. [2] ದಿನ್ನೇಕಿನಿತು ತಾನುಪಚಾರಯೋಗ ವಿದೆಂದ, ಚ. ದಿನ್ನೀನೆನಹು ಸಾಕುಪಚಾರ ಯೋಗ್ಯವೆ ಎಂದ, ಜ. ದೆನ್ನೀನೆನಹುತಾನುಪಚಾರವಾಕವಿದೆಂದ, ಟ.

[3] ಭಾವವೆ ಎಂದ, ಕ. ಖ.

ನೊಂದವರು ಭೀಮಾರ್ಜುನರು ಹಗೆ
ಯಿಂದೆ ಹಱುವವ ಹೊಕ್ಕು ಮನದೊಳು
ಕಂದು ಕಸರಿಕೆ ಹೋಗದಾದುರ್ಯೋಧನಾದಿಗಳ ।
ಕೊಂದು ಕಳವಳಿಯಿತ್ತು ಗಜಪುರಿ
ಗೆಂದು ಗಮಿಸುವೆವೆಂಬ ತವಕಿಗ
ರಿಂದು ತಾವೇ ಬಲ್ಲರಿವರೆಂದನು ವಿರಾಟಂಗೆ ॥ ೨೪

ಎಂದೊಡುತ್ತರ ನರಸನಂಘ್ರಿಯೊ
ಳ್ಂದು ಮಕುಟವ ಚಾಚಿ ಬಿನ್ನಪ
ವಿಂದು ನೀಮವ ಕುಡಿ ಕುಮಾರಿಯನೀವೆನರ್ಜುನಗೆ ।
ಎಂದೊಡೇಟೇಟೆಂದು ನಸುನಗೆ
ಯಿಂದೆ ಪಾರ್ಥನ ನೋಡೆ ಕೈಮುಗಿ
ದೆಂದ ನಾತನು ಮನದ ನಿಶ್ಚಯವೇನು ಯುಧಿಷ್ಠಿರಗೆ ॥ ೨೫

ಪುರುಷವೀಕೆಗೆ ನಾಟ್ಯವಿದ್ಯೆಯ
ಪರುಠವಿಸಿದೆನು ತಂದೆ [1] ಯಂತಿರೆ
ತರುಣಿ ಭಜಿಸಿದಳಾಪ್ರಕಾ [2] ರದ ಶಿಷ್ಯನಿಷ್ಠೆಯೊಳು ।
ಗುರುತನದ [3] ಗರುವಾಯಿಗೆಟ್ಟ
ನ್ನರಸಿಯಾಗಲಿ ಯೆಂಬು [4] ವನುಚಿತ
ವರಕುಮಾರಿಯ ನೀವ್ರೊಡಭಿಮನ್ಯುವಿಗೆ [5] ಕುಡಲೆಂದ ॥ ೨೬

ಎವಗೆ ನೀ [6] ವೇನಾತನೇನು
ತ್ಸವದೊಳಾಗಲಿ ಯೆನೆ ವಿರಾಟನ
ನವನಿಪತಿ ಮನ್ನಿಸಿದ ನಿತ್ತನು ನಗುತೆ ವೀಳೆಯವ ।

---

1 ಯೆಂಪೇ ತರುಣಿ, ಚ. 2 ರವೊಳಿನ್ನು ಮನವೊಳಗೆ, ಚ. ರರಹಸ್ಯ ವಚನದೊಳು, ಚ. ರದ ಹಾಸ್ಯವಚನದೊಳು, ಝ. ಶರಹಸ್ಯನಿಷ್ಠೆಯೊಳು, ಟ
3 ಸಾಮರ್ಥ್ಯಸಾಕಿನ್ನು, ಟ. 4 ದಿಲ್ಲೀವರ, ಟ. 5 ಕೊಡಿಯೆಂದ, ಜ, ಝ, ಟ. 6 ನೇ ತಾತನೆನುತುತ್ಸವ, ಖ. ನೇ ನಾಥನೆನುತುತ್ಸವ, ಚ.

ಎವಗೆ ಪರಮಸ್ವಾಮಿ ಯೆ [1] ಮ್ಮುದು
ಭವದ ನೆಲೆ ಯೆಮ್ಮೈ ವರಸು ಯಾ
ದವಶಿರೋಮಣಿ ಕೃಷ್ಣನಭಿಮತ ವೆಮ್ಮ ಮತವೆಂದ || ೧೭

ಪೊಡವಿಯೊಡೆತನ ವೆಮಗೆ [2] ವಿುಗೆ ಕ
ಟ್ಟೊಡೆಯು ಕೃಷ್ಣನು ಕೃಷ್ಣ ನೊಡಬ
ಟ್ಟೊಡೆ ವಿವಾಹ ನಿರಂತರಾಯವು ಚಿಂತೆ [3] ಬೇಡೆನಲು |
ಬಡಬಡಲಿ ಮೇಣಿರಲಿ ಗುರು ನಿ
ಮ್ಮಡಿ ಮುರಾರಿಯು ತೋಱಿಸುವಿರಾ
ದೊಡೆ ಕೃತಾರ್ಥನು ತಾನೆನುತೆ ಹಿಗ್ಗಿದನು ಮತ್ಸ್ಯನೃಪ | ೧೮

ಪರಿಪರಿಯು ಪಾವುಡವ ಕಟ್ಟಿಸಿ
ಹರುಷದೊಳು ಬಿನ್ನಹದ ವಾಲೆಯು
ಬರಿಸಿದನು [4] ವೇಗಾಯ್ಲ ದೂತರ ನಟ್ಟಿದನು ನೃಪತಿ |
ಚರರು ಪಯಣದ ಮೇಲೆ ಪಯಣದೆ
ಭರದೆ ಬಂದರು ಕೃಷ್ಣ ರಾಯನ
ಪುರಕೆ ಪರಿತೋಷದೊಳು [5] ಕಂಡರು ರಾಜಮಂದಿರವ || ೧೯

ಬರವ ಬಿನ್ನಹಮಾಡೆ ಪಡಿಹಾ
ರರು ಮುರಾರಿಯು ನೇಮದೊಳು ಚಾ
ರರನು ಹುಗಿಸಲು ಬಂದು [6] ಹೊಕ್ಕರು ಕೃಷ್ಣನೋಲಗವ |
ದರುಶನವ [7] ಮಾಡಿದರು ಚರಣಾಂ
ಬುರುಹದೊಳು ಮೆಯ್ಯಿಕ್ಕಿ ದೇವನ
ಹೊರೆಯೊ [8] ಳಿರಿಸಿದರಿವರು ಕಳುಹಿದ ಬಿನ್ನವತ್ತಳೆಯು || ೨೦

---

1 ಮ್ಮುತ್ಸವದನೆಲೆವನೆಯ್ಯ, ಚ 2 ತಾ ಕಟ್ಟೊಡೆಯನಾಶ್ರೀಕೃಷ್ಣ, ಖ. ತಾಕಟ್ಟೊಡೆಯು ಶ್ರೀಪತಿಕೃಷ್ಣ, ಚ. ತಾ ಕಟ್ಟೊಡೆಯು ಶ್ರೀಹರಿಕೃಷ್ಣ, ಜ
3 ಬೇಡಿದಕ್ಕೆ, ಖ, ಜ. 4 ಬೇಗದೊಳು ದೂತರ, ಖ. ಚ. ಜ. ಝ.
5 ಹೊಕ್ಕರು, ಚ. 6 ಕಂಡರು, ಖ. ಚ. 7 ನೀಡಿದರು, ಖ. ಝ. ಟ. ಸಿತ್ತವರು, ಜ. 8 ಳಿಟಿಹಿದರಿವರು, ಖ. ಚ. ಝ.

ನಸುನಗುತೆ ಮುರವೈರಿ ಮಿಗೆ ಮ
ನ್ನಿಸಿದನವರನು ಪಾಂಡುತನಯರ
ಕುಶಲವನು ದ್ರೌಪದಿಯ ಸುಕ್ಷೇಮವನು ಬೆಸಗೊಳಲು ।
ಕುಶಲರನಿಬರು ಜೀಯ ಭಕ್ತ
ವ್ಯಸನ ನಿಮ್ಮದು ಸುಖದೊಳುಜ್ಜೀ
ವಿಸಿದರನಿಬರು ನಿಮ್ಮಡಿಯ ಕರುಣಾಕಟಾಕ್ಷದೊಳು ॥　　೩೧

ಕಳುಹಿದುಡುಗೊರೆ ಜೀಯ ನಿಮ್ಮಡಿ
ಗಳಿಗೆ ರಾಣೀವಾಸವರ್ಗಕೆ
ಬಲಗೆ ದೇವಕಿದೇವಿವಸುದೇವುಗ್ರಸೇನರಿಗೆ ।
ಕುಲಗುರುಗಳಕ್ರೂರ ನುದ್ಧವ
ಬಲುಭುಜರು ಕೃತವರ್ಮ ಸಾತ್ಯಕಿ
ಲಲಿತಸಾಂಬ ಕುಮಾರಕಂದರ್ಪಾನಿರುದ್ಧರಿಗೆ ॥　　೩೨

ಎನಲು ನಸುನಗೆಯಿಂದೆ ಕುಂತೀ
ತನಯ ರಟ್ಟಿದ ಪಾವುಡಂಗಳ
ನನಿತುವನು ತೆಗಿಸಿದನು ಕೆಲದೊಳು ಸಂಧಿವಿಗ್ರಹಿಯ ।
ದನುಜಹರ ನೀಕ್ಷಿಸಲು ಲಿಖಿತವ
ನನುನಯದೊಳಳವಡಿಸಿ ಬಿನ್ನಹ
ವೆನುತೆ ನೇಮವ ಕೊಂಡು ಕಳಕಳ ವೆಡಗೆ ವಾಚಿಸಿದ ॥　　೩೩

ಸ್ವಸ್ತಿ ದಾನವರಾಜಕುಂಜರ
ಮಸ್ತ [1] ಕಾಂಕುಶ ಖೇಲನಾಪ
ರ್ಯಸ್ತಯದುಕುಲಸಿಂಹ ಸಂಹೃತಜನ್ಮ ದುರಿತಹರ ।

1 ಕೇಸರಿ ಭುವನಜನಭೂರ್ಯಸ್ತಕರ ಯದುಸಿಂಹ, ಖ. ಚ. ಕಾಂಕುಶವು ಧುರಹರಸಿಂಹ ಸ್ತಯದುಕುಲವೃಜಿನ ಸಂಹೃತಿ ಜನದದುರಿತಹರ, ಜ ಕಾಂಕಣ ಖೇಲನಾಪರ್ಯಸ್ತಕಲಿಯದುಸಿಂಹ, ಟ.

ಹಸ್ತಕಲಿತಸುದರ್ಶನೋತ್ಥಗ
ಭಸ್ತ್ರಲವ ನಮಿತಾರ್ಕಶತಪರಿ
ವಿಸ್ತರಣ ಚಿತ್ತೈಸು ಕುಂತೀಸುತನ ಬಿನ್ನಪವ ॥ ೩೪

*

ದೇವ ನಿಮ್ಮಡಿಗಳ ಕೃಪಾಸಂ
ಜೀವನಿಯೊಳೆಮ್ಮಸುಗ ಳೊಡಲಿನ
ಠಾವ [1] ನುಚ್ಚಿ ರಲೊಡೆದು ಹಾಯ್ದವು ವಿಪಿನ [2] ಮಂದಿರವ ।
ಈವೆರುಷದಜ್ಞಾತವಾಸ ಗ
ತಾವಶೇಷ ವದಾಯ್ತು ಕಂಗಳಿ
ಗೀವು [3] ದವೆಯುವೆದರ್ಶನಾಮೃತಪಾನಸಂಪದವ ॥ ೩೫

ದಾಟದೆವು ನುಡಿದವಧಿಯನು ವೈ
ರಾಟಪುರದೊಳು ತುಱು ವಿಡಿದು ಮೈ
ನೋಟಕೋಸುಗ ಬಂದು ನುಗ್ಗಾಯಿತ್ತು ಕುರುಸೇನೆ ।
ತೋಟಿಜಯಿಸಿದೊಡೆಮ್ಮನಱಿದು ವಿ

---

* ಕ, ಪುಸ್ತಕದಲ್ಲಿ ವಾರ್ಧಿಕಷಟ್ಪದಿಯಾಗಿ ರಚಿತವಾದ ಅಸಂಬದ್ಧವಾಗಿರುವ ಈ ಪದ್ಯವು ಹೆಚ್ಚಾಗಿ ದೊರೆಯುತ್ತದೆ.

ಶ್ರೀಮದನುಪಮಚರಿತನಿಖಿಳಲೋಕಾರಾಧ್ಯ
ಕಾನುಪಿತಕಾರುಣ್ಯನಿಧಿಕಮಲಭವವಂದ್ಯ ।
ಮಾಮನೋಹರಮಹಾಪುರುಷದೇವರದೇವದನುಜಕುಲದಾವಾನಲಾ ॥
ಸಾಮಜಪ್ರಿಯಗೋಪವೇಷಗೋವಿಂದನೀ
ಲಾಂಬರ ಪ್ರೇಮನಿಸ್ಸೀಮಸದ್ಗುಣದಾಮ ।
ರಾಮರಾಜೀವದಳನೇತ್ರಪಾವನಗಾತ್ರ ಲಾಲಿಪುದುಬಿನ್ನಹವನೊಲಿದೊಲಿದು ॥

1 ನೆಮ್ಮಿದುವೊದೆದು ಖ. ಚ. ನುರ್ಚಿದೆವೊಡೆದು ಹಾಯ್ದವು ಗಹನಗಹ್ವರವ, ಝ. 2 ಮಂಡಲವ, ಟ. 3 ದಾದರಾಶನವ ನಿಮ್ಮಯ ಪಾದಪಂಕಜದ, ಖ. ಚ. ಜ. ಝ.

ರಾಟಿ ಮನ್ನಿಸಿ ತನ್ನ ಮಗಳ ಕಿ
ರೀಟಿತನಯಂಗೀವ [1] ಭರವಿದು ದೇವರವಧರಿಸಿ ॥ ೩೬

ಮದುವೆ ಯೆಂಬುದು ನವ [2] ನಿಜಶ್ರೀ
ಪದವತೋಱಿಸಬೇಕು ವಸವಾ
ಸದ ಮಹಾಯಾಸದ ಸುಸಂತಾಪವನು ಬೀಟ್ಕೊಳಿಸಿ ।
ಕದಡು ಹೋಗಲು ಕಾಣಬೇಹುದು
ಹದುಳವಿಟ್ಟೆವು [3] ಗುಚಿತವಚನದ
ಹದವಳೆಯೊಳುತ್ಸಾಹಸಸಿಯನು [4] ಸಲಹಬೇಕೆಂದ ॥ ೩೭

ಕರುಣಿ ಬಿಜಯಂಗೈದು ಭಕ್ತರ
ಹೊರೆಯಬೇಹುದು ಬೇಡಿ [5] ಕೊಳ್ವವು
ಕರಿಸಲೇಕೆಳಗಂದಿ ಕಱುಗಳ ನಱಸುವಂದದೊಳು ।
ಚರಣಭಜಕಕುಟುಂಬಿ ಯೆಂಬೀ
ಬಿರುದ ಪಾಲಿಸಿ ಬಿನ್ನಹವ ನವ
ಧರಿಸಿ ಕಾಣಿಸಿಕೊಳ್ವುದೆಮಗೆ ಮಹಾಪ್ರಸಾದವದು ॥ ೩೮

ಕೇಳಿದನು ಹರುಷದೊಳು ಕಡುಕರು
ಣಾಳು ಹೊಂಪುಳಿಯೋಗಿ ಬಳಿಕುತರ
ಮೇಲಣೊಲವೆರತನದ ಪರಮಸ್ನೇಹ [6] ರಸ ರಹಿಸೆ ।
ಕೇಳಿದೆವೆ ಹರಹರ ಯುಧಿಷ್ಠಿರ
ನೋಟಿಗೆಯ ನಾಕಾರವೇಶ್ವರ
ನೊಟಗವ ನೆನುತಸುರರಿಪು [7] ತೂಗಿದನು ನಿಜಶಿರವ ॥ ೩೯

---

1 ಹದನಿದು ದೇವ ಚಿತ್ತೈಸು, ಖ. ಚ. ಭರವಸ ದೇವ ಚಿತ್ತೈಸು, ಜ. ಭರವಿದ ನೋಡಲವಧರಿಸಿ, ಟ.　2 ದೊಳಗೆ ಸಿರಿ, ಖ. ಚ. ನುದೇವರ ಪದವ ಕಾಣಲುಬೇಕು, ಝ.　3 ಗಭಯುವಚನದ, ಖ. ಚ.　4 ದೇವಸಲಹುವುದು, ಖ. ಚ. ಟ. ಕಾಯಬೇಕೆಂದ, ಜ.　5 ಕೊಂಡೆವು ಆರರ ಕೇಳೆಳೆಗಂದಿ ಕಾಯುಂದ ಬಾಧೆ ಕಱುಗಳಿಗೆ, ಝ　6 ಪಸರಿಸಿತು, ಖ. ಚ. ರಸಪ್ರೊಸರೆ, ಜ.　7 ನೋಡಿದನು ಕೆಲಬಲನ, ಖ. ಚ. ಜ. ಟ.

ಚಿಂತೆ ಬೀತುದು ಪಾಂಡುಮೂವನ
ಸಂತತಿಗಳಜ್ಞಾತವಾಸವ
[1] ನಿಂತು [2] ಪಂಥದ ಮೇಲೆ [3] ಕಳೆದರು ನಮ್ಮ ಪುಣ್ಯದೊಳು ।
ಕುಂತಿದೇವಿಯರುಮ್ಮಳಿಸಲಾ
ವೆಂತು ಬದುಕುವೆವಕಟಿನುತ್ತ ನಿ
ರಂತರವು ಮಱುಗುವೆನು ಬೊಪ್ಪನು ಶಿವಶಿವಾ ಯೆಂದ ॥ ೪೦

ಬವಣೆ ಗೆಯ್ದುಬಂದಡವಿಯೊಳು ಪಾಂ
ಡವರು ನವೆದರು ರಾಜ್ಯವನು ಕೌ
ರವರು ತಾವನುಭವಿಸುತಿದ್ದರು [4] ನಡೆದುದಿನ್ನೆಬರ ।
ಅವರ ಸೊಗಸೇ ನಮ್ಮ ಸೊಗಸುಗ
ಳವರ ದುಗುಡವೆ ನಮ್ಮ ದುಗುಡಗ
ಳವರ ವಿಮಲಾಭ್ಯುದಯ ವೆಮ್ಮಭ್ಯುದಯ ವಹುದೆಂದ ॥ ೪೧

ಕಾಲ ಕೈಗೂಡಿದೊಡೆ ಲೇಸಿನ
ಮೇಲೆ ಲೇಸುಗಳೊದಗುವುವು ಭೂ
ಪಾಲಕುಂತೀ [5] ಸುತರ ಕಾಣಿಕೆ ಮೊದಲ ಮಂಗಳವು ।
ಮೇಲೆ ತಂಗಿಯ ಮಗನ ಮದುವೆ ವಿ
ಶಾಲಶುಭವಿದು ಸಕಲಯಾದವ
ಜಾಲ ಪಯಣವ ಮಾಡಲೆಂದಸುರಾರಿ ನೇಮಿಸಿದ ॥ ೪೨

ಚಿಕರರಿಗುಡುಗೊಱೆ ಗಂಧ ವಖಿಳಾ
ಭರಣ ಕಪ್ಪುರ ವೀಳಯವ ನಿ
ತ್ತರಿದಿಶಾಪಟ ಬೀಱುಕೊಟ್ಟನು ರಾಯಸವ ಬರಿಸಿ ।
ಮರಳಿ ದೂತರು ಬಂದು ಮತ್ಸ್ಯನ

1 ನೆಂತು, ಖ. ಚ. 2 ಗನ್ನದ, ಜ. 3 ಕಳೆದರೊ, ಖ. ಚ.
4 ನವೆದರಿನ್ನೆಬರ, ಖ. ಚ. ಝ. 5 ತನಯರೇಱಿಗೆಮೊದಲ, ಕ. ಝ.

ಪುರವ ಪೊಕ್ಕರು ಕೃಷ್ಣರಾಯನ
ಕರುಣದಳತೆಯ ಬಿನ್ನವಿಸಿದರು ಪಾಂಡುತನಯರಿಗೆ ॥ ೪೩

*

ಬಳಿಕ ಸುಮುಹೂರ್ತದೊಳು ಮತ್ಸ್ಯನ
ಹೊಳಲ ಪೊಱಮಟ್ಟುತ್ತರಾಶಾ
ವಳಯದೊಳು ರಚಿಸಿದ ರುಪಪ್ಲವ್ಯಾಖ್ಯಪುರವರವ ।
ನೆಲನಗಲದೊಳು [1] ಝಲ್ಲಿಪಟ್ಟೆಯ
ನೆಳವಡಿಸಿದರು ನಿಖಿಳನೃಪರಿಗೆ
ಬಳಿಯ [2] ನಟ್ಟದರುತ್ತರೋತ್ತರ [3] ವಾದುದವರುದಯ ॥ ೪೪

ಜೋಳಿ ಹಱಿದುದು ನಿಖಿಳರಾಯರಿ
ಗೋಲೆಯುಡುಗೊಱೆ [4] ಯಿಕ್ಕಿದುವು ಪಾಂ
ಚಾಲಪತಿ ಪೊಱಮಟ್ಟ [5] ಮೂಱಕ್ಷೋಣಿಬಲಸಹಿತ ।
ನೀಲನು [6] ಯುಧಾಮನ್ಯು ಸಮರಕ
ರಾಳಧೃಷ್ಟದ್ಯುಮ್ನ ಕೀರ್ತ್ತಿವಿ
ಶಾಲವೀರಶಿಖಂಡಿ ಸಹಿತಾದ್ರುಪದ ನೈತಂದ ॥ ೪೫

---

* ವಾರ್ಧಿಕ ಷಟ್ಪದಿಯಿಂದ ರಚಿತವಾದ ತಪ್ಪುಬಿದ್ದಿರುವ ಈ ಪದ್ಯವು, ಕ. ಪುಸ್ತಕದಲ್ಲಿ ಹೆಚ್ಚಾಗಿ ಸೇರಿಸಲ್ಪಟ್ಟಿದೆ.

ಶ್ರೀಮನ್ಮಹಾರಾಜರಾಜರಾಜಾಧೀಶ
ಸೋಮವಂಶೋದ್ಧರಣಧರಣಿಪಾಗ್ರಣಿಕೀರ್ತಿ
ಕಾಮುಕಾರುಕುಲತಿಲಕಕುಂತೀಕುಮಾರದಯುಸಾರಸದ್ಗುಣವಿಚಾರ ।
ಭೂಮಿೂಶರನ್ವಯಾಭರಣಭೂಭೃದ್ರತ್ನ
ಹೇಮಾದ್ರಿಗಿರಿಧೈರ್ಯ್ಯಸತ್ಯಸಿಧಿಸಮರನಿ
ಸ್ಸೀಮಸದ್ಗುಣಧಾಮಧರ್ಮಜಭಾವನವರುಚಿತ್ತೈಸುವುದುಬಿನ್ನಪವನೊಲಿದು ನಲಿದು ॥

1 ಕಟ್ಟ ಪೇಟೆಯ, ಜ, ಝ. ಕಟ್ಟ ಪಟ್ಟೆಯ, ಟ. 2 ಲಟ್ಟದರು. ಖ. ಚ. ಜ. ಝ. ಟ. ಕಾರ್ಯ್ಯಸಂಗತಿಯ, ಜ. ಕಾರ್ಯ್ಯಗತಿಗಳಿಗೆ, ಝ. 4 ಯಟ್ಟದುವು. ಖ. ಚ. ಸಹಿತವಾಪಾಂಚಾಲ, ಝ. 5 ನೇಱಕ್ಷೋಣಿಬಲ, ಜ. 6 ದಯುಸುಮುನ್ಯು, ಖ. ಚ.

ಇದಿರುಗೊಂಡರು ಹರುಷದೊಳು ದ್ರೌ
ಪದಿಯ ಬಾಂಧವಪೈಕವೆನು ಪಂ
ಥದೊಳು ಕಾಣಿಸಿಕೊಂಡರಖಿಳಮಹಾಮಹೀಶ್ವರರ ।
ಒದವಿತಖಿಳಕ್ಷೋಣಿಬಲಸಂ
ಪದ ವೆನಂತಸುವಸ್ತುಗಳ ಸೊಂ
ಪೊದವೆ [1] ಕವಿಯಿತು ಮಂದಿ ಮದುವೆಯ ಮಂಗಳೋತ್ಸವದ ॥

ದೇವ [2] ನೀಬಹನೆಂ [3] ದು ಬಂದರು
ದಾವಣಿಯ ರಾಹದನ ನಱಿದು ಮ
ಹಾವಿಲಾಸದೊಳೊಪ್ಪವಿಟ್ಟರು ತಮ್ಮ ಪಾಳೆಯವ ।
ಹೂವಲಿಯ ಬೀದಿಗಳ ನವರ
ತ್ನಾವಳಿಯ ಸೂಸಕದ ಛದ್ರದ
ಲೋವೆಗಳ ಲಂಬಳದೊಳಸೆದುವು ಕೇರಿಕೇರಿಗಳು ॥ ೪೭

ಚಾರುತರಕತ್ತುರಿಯ ಸಾದಿನ
ಸಾರಣೆಯ ಕುಂಕುಮದ [4] ಪಚ್ತಿಯ
ಕಾರಣೆಯ ನವಚಿತ್ರಪತ್ರದ ಬಹುಳಭಿತ್ತಿಗಳ ।
ಓರಣದ ಬೀದಿಗಳ ತಳಿಗೆಯ
ತೋರಣದ [5] ಹೊಂಜಗಲಿಗಳ ಪ
ನ್ನೀರ ಚಳೆಯದ ರಚನೆಯೊಳು ಮನೆಮನೆಗಳೊಪ್ಪಿದುವು ॥ ೪೮

ಕಟ್ಟಿದುವು ಗುಡಿ ಮನೆಗಳೊಳು ಮೇ
ಲ್ಕಟ್ಟು ಬಿಗಿದುವು ಪುರದ ನಾರಿಯ
ರಿಟ್ಟು ತೊಟ್ಟರು ಕಳಸ ಕನ್ನಡಿ ಸಹಿತ ದೇಶಿಯೊಳು ।

---

1 ಕೈಗೈಯಿತ್ತು ಮದುವೆಯ ಮಂಗಳಾಭ್ಯುದಯ, ಕ.
2 ನಿದೆ ಬಹನೆಂದು, ಖ. ಚ. 3 ದೊದಱಿದರು, ಟ.
4 ಪಂಕಿತ, ಝ. ತಳಪದ, ಟ. 5 ಹೊಂಗಜ್ಜೆಗಳ, ಝ.

ಇಟ್ಟಣಿಸಿ ಗಜ ವಾಜಿ ರಥ ಸಾ
ಲಿಟ್ಟು ಹೊಱವಡೆ ದನುಜರಾಯುಘ
ರಟ್ಟನನು ನಡೆದಿದಿರುಗೊಂಡರು ಪಾಂಡುನಂದನರು ॥ ೪೯

ಕಳಸ ಕನ್ನಡಿ ವಾದ್ಯರವವೆಂ
ಗಳ ಮಹಾಂಬುಧಿ ಮಸ [1] ಗಿದುದುಚಾ
ಪಳ ಪತಾಕಾವಳಿಯು ವಿಮಳಚ್ಛತ್ರ [2] ಚಾಮರದ ।
ಹೊಳೆವಕಂಗಳ [3] ಮುಖದ ಕಾಂತಿಯು
ಮೊಲೆಗಳೊಡ್ಡಿನ ಮಂದಗಮನದ
ತಳತಮುಸುಕಿನ ಮೌಳಿಕಾತಿಯು ರೆಸೆದರೊಗ್ಗಿನೊಳು ॥ ೫೦

ಹೊಳಹು ಮಿಗೆ ದೂರದೊಳು ಗರುಡನ
ಹಱವಿಗೆಯ ಕಂಡಂದಳಂಗಳ
ನಿೞಿದು ಮೆಯ್ಯಿಕ್ಕಿದರು ದ್ರುಪದವಿರಾಟ [4] ಪಾಂಡವರು ।
ಬೞಿಕ ಭೂಪರು ಕಾಲುನಡೆಯೊಳು
ನಲಿದು ಬರುತಿರಲಾನೆಯಿಂದಿಳಿ
ಗಿೞಿದು ಬಿಜಯಂಗೈದ ನಸುರಾರಾತಿ [5] ನಸುನಗುತೆ ॥ ೫೧

ಇತ್ತ ನವರಿಗೆ ಸಮಯುವೆನು ಸುರ
ರುತ್ತಮನು ನಿಗಮೌಘ ವೆರಸಿದೊ
ಡತ್ತಲಿತ್ತಲೆ ಸರಿವ ಮುನಿಗಳ [6] ಮನಕೆ ವ್ಯೆಗುಡದ ।
ಹೆತ್ತಮಕ್ಕಳು ನಿಲಲಿ ಭಕ್ತರ

1 ಗಮಿಗೆ ಚಾ, ಜ. ಝ. ಗಿದವೊಲು ಚ್ಚ್ಯಳ, ಟ. 2 ಪಚ್ಚೆಗಳ, ಜ.
3 ಕದಪು, ಝ. 4 ಸೃಂಜಯರು, ಖ. ಚ.
5 ಕರುಣದೊಳು, ಖ. ಚ. ಜ. ಟ. ಯೊಲವಿನೊಳು, ಝ.
6 ಮತಿಗೆವ್ಯೆ, ಖ. ಚ. ಜ.

ನಿತ್ತ ಕರೆ ನೆನೆವರಿಗೆ [1] ತನ್ನನು
ತೆತ್ತು ಬದುಕು [2] ವೆ ನೆಂಬ ಬೋಳೆಯರರಸ ನಡೆತಂದ ॥ ೫೦

ಬಲದ ಪದಗಟ್ಟಣೆಯ ಧೂಳಿಯು
ಸುಳಿ ಮುಸುಕಿದಂಬರದ ಮಾರ್ಗದ
ಝಳದ ಕಿರುಬಿಂದುಗಳ ಲಲಿತ ಕಪೋಲಮಂಡಲದ ।
ಕೆಲದ ಪಾಯವಧಾರುಗಳ ಕಳ
ಕಳದ ಕರುಣಾರಸವ ಸೂಸುವ
ಮೆಲುನಗೆಯ ಸಿರಿಮೊಗದ ಕೃಷ್ಣನ ಕಂ [3] ಡು ದಖಿಲಜನ ॥

ಬಾಗಿ ನಿಡುಭರಿಕ್ಕೈಗಳನು ಹಣೆ
ಗಾಗಿ ಮುರುಹಿದುವಾನೆಗಳು ತಲೆ
ವಾಗಿ ಗುಡಿಗಟ್ಟಿದುವು ಹೇಷಾರವದ ತೇಜಿಗಳು ।
ತೂಗಿ ತನುವನು ಪುಳಕ [4] ದೊಳು ಮನ
ಲಾಗು ಮಿಗೆ ಮೈಮರೆದು ಹರುಷದ
ಸಾಗರದೊಳೋಲಾಡುತಿರ್ದುದು ಸಕಲತಳತಂತ್ರ ॥ ೫೪

ಅಂಗನೆಯ ರರವಿಂದನಾಭನ
ಮಂಗಳಶ್ರೀಮೂರ್ತಿ ಸುಧೆಯನು
ಕಂಗಳೊಳು ಕುಡಿಕುಡಿದು ಪಡೆಯರು ಮತ್ತೆ ತಣಿವುಗಳ ।
ಅಂಗಜನ ಪೆತ್ತಯ್ಯ ನೀರೂ
ಪಿಂಗೆ ಬಡವನೆ ಎನುತೆ ಮುರಹರ
ನಂಗಶೋಭೆಯ ಬಂದಿಯೊಳು ಸಿಲುಕಿತ್ತು ಸಕಲಜನ ॥ ೫೫

---

1 ತನ ವನು, ಟ.

2 ವಮರುಳುತಾ ತೆಂಬಂತೆನಡೆ, ಟ.

3 ಡುದಾಸೇನೆ, ಕ. ಜರೊಲವಿನೊಳು, ಖ. ಚ.

4 ದೊದವಿನ, ಖ. ಚ.

[1] ಎರಡುಕೈಯೊಳು ತುಂಬಿ ರತುನವ
ಸುರಿದು ಮೈಯಿಕ್ಕಿದನು ಭೂಪತಿ
[2] ಚರಣದೊಳು ಚತುರಾಸ್ಯವೆಂದ್ವಾನ ವಿಮಲಭಕ್ತಿಯೊಳು।
ನರ ವೃಕೋದರ ನಕುಲ ಸಹದೇ
ವರು ವಿರಾಟ ದ್ರುಪದ ಮೊದಲಾ
ಗಿರೆ ಸಮಸ್ತನೃಪಾಲ [3] ಜನ ಮೈಯಿಕ್ಕಿತೊಲವಿನೊಳು॥ ೫೬

ಸಿರವ [4] ನೆಗಹಿ ಯುಧಿಷ್ಠಿರನ [5] ಮೈ
ಮುರಿಯಲೀಯದೆ ಕೃಷ್ಣ ನಪ್ಪಿದ
ನುರುತರಪ್ರೇಮದೊಳು ಭೀಮಾರ್ಜುನರ ಯುಮಳರನು।
ಹರುಷದೊಳು [6] ತೆಗೆದಪ್ಪಿ ಭೂಮೀ
ಶ್ವರರ ಮನ್ನಿಸಿದನು ವಿಳಾಸಿನಿ
ಯರವಿಡಾಯಿಯೊಳರಸಿ ಬಂದಳು ಕಂಡಳ [7] ಚ್ಯುತನ॥ ೫೭

ಕಾಣಿಕೆಯ [8] ಕೈಕೊಂಡು ರಾಯನ
ರಾಣಿಯನು ಮನ್ನಿಸಿದ ತನ್ನಯ
ರಾಣಿವಾಸದ ಹೊರೆಗೆ ನೇಮವ [9] ನಿತ್ತು ಕಳುಹಿದನು।
ರಾಣಿರುಕುಮಿಣಿಯಾದಿ [10] ಯಾದವ
ಕ್ಷೋಣೀಧರನರಸಿಯರನನಿಬರ
ಕಾಣಿಕೆಯ ಕೊಟ್ಟೆರಗಿ ದ್ರೌಪದಿ ಕಂಡಳೊಲವಿನೊಳು॥ ೫೮

---

1 ಕರತೆರಡರೊಳು, ಖ. ಚ. ಎರಡುಸೇರೆಯ, ಟ.

2 ಹರುಷಮಿಗೆತೆಗೆದಪ್ಪಿಮುಂಡಾಡಿದನುಧರ್ಮಜನ, ಖ. ಚ.

3 ಕರು, ಖ. ಚ. ಝ. ಕರುಮೆಯ್ಯಿಕ್ಕಿದರುಹರಿಗೆ, ಜ. ಕರುಮೆಯ್ಯಿಕ್ಕಿತೊಗ್ಗಿನೊಳು, ಟ. 4 ತಡಹಿ, ಖ. ಚ. 5 ಬಾಅರಸಬಾರೆಂದೆನುತೆಯಪ್ಪಿದನು, ಖ. ಚ. 6 ಬಿಗಿಯಪ್ಪಿ, ಖ. ಚ. 7 ಗಧರನ, ಜ.

8 ನಿತ್ತೆಬಿಗೆರಾ, ಖ. ಚ. 9 ಕೊಟ್ಟು, ಕ. ಜ. ಝ.

10 ಯಾಗಿರೆ, ಕ. ಖ, ಚ. ಜ.

ದರುಶನವ [1] ನಿತ್ತಿತ್ತು ವಸುದೇ
ವರನು ದೇವಕಿದೇವಿಯರ ಸಂ
ಕರುಷಣನನು ಮಹೋಗ್ರಸೇನನ ಕಂಡ [2] ರೊಲವಿನೊಳು ।
ವರಸುಭದ್ರಾದೇವಿ ಭಾವಂ
ದಿರಿಗೆ ವಂದಿಸಿದಳು ಕುಮಾರನು
ಹರುಷ [3] ದಿಂದಪ್ಪಿದನು ಬಂದಭಿಮನ್ಯು ಪಾಂಡವರ ॥ ೫೯

ಕೈದಣಿಯೆ ವಸುದೇವ ನಳಿಯನ
ನ್ನೈದಡವಿದನು ಮಗನೆ ಬನದೊಳ
ಗುಯ್ದು ವಿಧಿ ಬಂಧಿಸಿತಲಾ ಸಾಕಿನ್ನು ದೈವವೆನು .
ಬೈದು ಮಾಡುವುದೇನು ದ್ರೌಪದಿ
ಯೈದೆತನ ವುಂಟಾಗೆ [4] ದುರಿತವ
ಕೊಯ್ದು ನರಲೋಕಕ್ಕೆ ಸುಳಿದಿರಿ ಯೆಮ್ಮ ಪುಣ್ಯದೊಳು ॥ ೬೦

ಅರಸಿಯೈದೆತನಕ್ಕೆ ಯೆಮ್ಮಿಕ್ರ
ವರ ನಿಜಾಯುಷ್ಯಕ್ಕೆ ರಾಜ್ಯದ
ಸಿರಿಯು ಸೊಂಪಿಗೆ ನಿಮ್ಮ ಮಗ [5] ಸೀಕೃಷ್ಣ ಹೊಣೆ ಯೆಮಗೆ ।
ಸುರರು ಸರಿ ಯಿಲ್ಲೆಮಗೆ ಮಿಕ್ಕಿನ
ನರರು ಗಣ್ಯರೆ ಮಾವ ಕೇಳೆಂ
ದರಸ ವಸುದೇವರನು ಮಧುರೋಕ್ತಿಯೊಳು ಮನ್ನಿಸಿದ ॥ ೬೧

[6] ತಂದೆತಾಯ್ಗಳು ಬೇಡ ಕೈವಿಡಿ
ದಿಂದುಮುಖಿಯರನೊಲ್ಲೆನೈ ಮನ
ಸಂದು ಮೆಚ್ಚಿಹೆ ನಿನ್ನ ಭಕ್ತರೊಳೆಂಬ ನನವರತ ।

---

1 ನೊಲಿದಿತ್ತು, ಕ. ಖ. ಚ. 2 ನವಸೀಶ, ಕ. ಖ. ಚ. ಜ.
3 ಘಿಗಲಪ್ಪಿ, ಜ. ಝ. 4 ಬನದಿಂದೆಯ್ದಿ ಸುಖದೊಳುಬಂದಿರಿಲ್ಲಿಗೆ, ಖ. ಚ.
5 ಶ್ರೀಕೃಷ್ಣ, ಕ. ಖ. ಚ. ಜ. ಝ.
6 ತಂದೆ ಬೇಡೆಮಗವ್ವೆ ಬೇಡೆಮಗಿಂದುವಖಿಯರುಬೇಡತಾವುನ, ಖ. ಚ. ಟ.

ನೊಂದೆ ನೆಂಬನು ತನ್ನವರು [1] ಮನ
ನೊಂದರಾದೊಡೆ [2] ತನ್ನವರ ತನು
ವಿಂದು ಕೃಷ್ಣಂಗಲ್ಲದಿಲ್ಲಲೆ ಮಗನೆ ಕೇಳೆಂದ ॥ ೬೨

ಅರಸಿಯರ ಬಗೆಗೊಳ್ಳ ಮಕ್ಕಳ
ಸರಕುಮಾಡನು ದೇಶಕೋಶದ
ಸಿರಿಯ ಗಣಿಸನು [3] ಕಡ್ಡಿಗೊಳ್ಳನು ಗಾಢಗರ್ವಿತರ ।
ಹರಿಪರಾಯಣರೆಂದೊಡತ್ತಲೆ
ಹರಹಿಕೊಳ್ವನು ಮಗನ [4] ಶೀಲವು
ನರರ ಪರಿಯಲ್ಲೆಂದನಾವಸುದೇವ ನಳಿಯಂಗೆ ॥ ೬೩

ಲೋಗರೇ ನೀವೆಮಗೆ ನಿಮಗರ
ಗಾಗಿ ಕರಗುವ ನದು ನಿಲಲಿ ತನ
ಗಾಗದ [5] ವರಿಗೆ ತನ್ನ ಕೊಡುವನು ಕೊಲುವರಗೆಗೊಲಿವ ।
ಲೋಗರೆನ್ನವರೆನ್ನನೆನೆವರಿ
ಗಾಗಿ ಬದುಕುವೆ ನೆಂಬ [6] ಬಿಡುಗೈ
ಬಾಗಿ ಕೃಷ್ಣನ ನೇನ ಹೇಳುವೆ ನೆಂದ ನರಸಂಗೆ ॥ ೬೪

---

ಖಿಂಗೆ, ಖ. ಚ. ಟ.

2 ತನ್ನವರು ತನಗೆಂದು, ಖ. ಚ. ತನ್ನವರತನದಿಂದೆ ಕೃಷ್ಣಂಗಲ್ಲದಿಲ್ಲಲೆ, ಜ. ತನ್ನಯೊಡೆತನವಿಂದು, ಝ. ತನ್ನವರ ತನವಿಂದು, ಟ.

3 ಖಡ್ಡಿಗೊಳ್ಳನು, ಕ. ಚ. ಖಡ್ಡಿಗೊಳ್ಳನು ತುರಗಗಜರಥವ, ಜ. ಕಟ್ಟಿಕೊಳ್ಳನು ತುರಗಗಜರಥವ, ಝ.

4 ಹೋಲುವ ಸರಿಸದವರಿಲ್ಲೆಂದ, ಖ. ಚ.

5 ವರನುಕೊಲುವಭಕ್ತರಿಗಾಗಿಹಗೆಗೊಳುವ, ಜ.

6 ಬಿರುದೈಜಾಗು ಕೃಷ್ಣನ, ಚ. ಬಿರುದಿನಬಾಗಿಕೃಷ್ಣ, ಟ.

ಬೊಪ್ಪ [1] ನವರೀಯೆಮ್ಮ ದೂಱದೆ
ಯಿಪ್ಪವರು [2] ತಾವೆಲ್ಲ ಸಾಕೀ
ಯೊಪ್ಪದೊಳು ಬಾಯೆಂದು ಮುರರಿಪು ಕರೆದನವನಿಪನ।
ಚಪ್ಪರಿಸಿ ಕೌರವರು ತುಱುಗಳ
ತಪ್ಪಿಸಿ [3] ದೊಡೇನಾಯ್ತು ಪಾರ್ಥನ
[4] ದರ್ಪದನುವೆಂ [5] ತೆನುತೆ ಬೆಸಗೊಂಡನು ಮುರಧ್ವಂಸಿ॥ ೬೫

ಹೂಹೆಗೆಲ್ಲಿಯು ದರ್ಪ ವೆನುಜನ
ಸಾಹಸವು ಬೇಱೇನು ಯಂತ್ರದ
ಹಾಹೆ ಯಂತ್ರಿಯನುೞಿದು ಚೇಷ್ಟಿಸಬಲ್ಲುದೇ ಬೇಱೆ।
ದೇಹಿ ನೀ ನಾವೆಲ್ಲ ನಿನ್ನಯ
ದೇಹ ವಿದಱೊಳಗೆಮಗೆ ಗರ್ವ
ಗ್ರಾಹ ವೆಲ್ಲಿಯದೆನುತೆ ಬಿನ್ನೈಸಿದನು ಯಮಸೂನು॥ ೬೬

ಎಸಳುವೊನೆ [6] ಮೇಲಾಗಿ ತಾವರೆ
ಮುಸುಕುತಿದೆ ನೈದಿಲಿನ ನೆತ್ತಿಯು
ಬಿಸುಗೆ ಬಿಡುತಿದೆ ಜಕ್ಕವಕ್ಕಿಯು ತೆಕ್ಕೆ ಸಡಿಲುತಿದೆ।
ದೆಸೆದೆಸೆಯು ಶಾಣಾಂತರದ ಹೊಂ
ಬಿಸಿಲು ಬೀತುದು ಜೀಯ ಬಿನ್ನಹ
ವೆಸು [7] ಧೆ ತಂಪೇಱಿತ್ತು [8] ಬಿಜಯಂಗೆಯ್ಯಬೇಕೆಂದ॥ ೬೭

---

1 ನವರೇ ಎಮ್ಮ, ಟ. 2 ನೀವೆಲ್ಲ, ಟ.

3 ದುದೇನಾಯ್ತು, ಖ. ಚ. ಜ.

4 ಚಪ್ಪರಣೆತಾನೆಂತುಟೆಂದನುನಗುತೆ ಮುರವೈರಿ, ಝ.

5 ತೆಂದುಮುರರಿಪುನಗುತೆಬೆಸಗೊಂಡ, ಖ. ಚ. ದೆನುತೆಬೆಸಗೊಂಡನುಯುಧಿಷ್ಠಿರನ, ಜ. 6 ಮೊದಲಾಗಿತಾವರೆಮುಸುಳುತಿದೆ, ಕ. ಚ. ಮುಂತಾಗಿ, ಜ. ಮುಂತಾಗಿತಾವರೆನುಸುಳುತಿದೆ, ಝ. 7 ರರಿಪುಗೆಂದನುಯುಧಿಷ್ಠಿರದೇವಕ್ಕೈಮುಗಿದು, ಕ. ಜ. 8 ಸಂಧ್ಯಾಸಮಯವಾಯ್ತೆಂದ, ಖ. ಚ. ಝ.

ನಗುತೆ ಹರಿ ನಿಂದಿರಲು ಕೈ [1] ದೀ
ವಿಗೆಯುವರು ಹೊದ್ದಿವರು [2] ವುವ್ವಾ
ಹಿಗೆಗೆ ಬಿಜಯಂಗೈವ ಜಯಜಯಾವನಲು ಸುರಸಿಕರ।
ಬಿಗಿದದಡ್ಡಿಯ ಬದ್ದರದ ಬೀ
ಯಗದ ರಾಣೀವಾಸದಂದಣ
ತೆಗೆದು ನಡೆದುವು ಮುಂದೆ ಸಂದಣಿಸಿತ್ತು ಯದುಸೇನೆ॥ ೬೮

* ಹೊಕ್ಕನಸುರಾರಾತಿ ಪಾಂಡವ
ರಿಕ್ಕೆಲಕೆ ಬರೆ [3] ನಗರಿಯನು ಮು
ಯ್ಯಿಕ್ಕೆ [4] ಬೀದಿಯ [5] ಧೂಳಿ ಕವಿದುದು ಮಂದಿಸಂದೋಹ।
ಹೊಕ್ಕು ಹೊಗಳುವ ಶ್ರುತಿ [6] ತತಿಯ ಕೈ
ಮಿಕ್ಕು ಕಳೆದನು ಪಾಂಡುಸುತರಿಗೆ
ಸಿಕ್ಕಿದನು ಹರಿ ಯೆನುತುಮಿರ್ದುದು [7] ಸೂರಿಸಂದೋಹ॥ ೬೯

ಮೇಲೆ ಬೀಳುವ ಮಂದಿಯನು ಕೈ
ಗೋಲಿನವರಪ್ಪಳಿಸೆ ಲಕ್ಷ್ಮೀ
ಲೋಲ ನವದಿರ ಜಡಿದು ಕಾಣಿಸಿಕೊಳುತೆ ಪುರಜನವ।
ಮೇಲುನೆಲೆಯುಪ್ಪರಿಗೆಗಳ ವರ
ಬಾಲೆಯರ ಕಡೆಗಣ್ಣ ಧಾಳಸಿ
ವಾಳಿಗಳ ಕೈಗೊಳುತೆ ಹೊಕ್ಕನು ರಾಜಮಂದಿರವ॥ ೭೦

---

1 ದಂಡಿಗೆಯವರು ಕೈಗುಡಲು ದುವ್ವಾರಿಗೆಗೆ ಬಿಜಯಂಗೈದ ನುಥಿ ಯೆನೆ ಸಕಲಮುನಿನಿಕರ, ಖ. ಚ. 2 ದುವ್ವಾರಿಗೆಗೆ, ಕ, ದುವ್ವಾರಿಗೆಗೆ ಬಿಜಯಂಗೈದನುಥಿಯೆನೆ ಸಕಲಮುನಿನಿಕರ, ಜ. ದಂಡಿಗೆಯೊಳಗೆ, ಝ.

* ಹೊಕ್ಕನಸುರಾರಾತಿ ಎಂಬುದೇ ಮೊದಲಾದಪದ್ಯವು ಝ ಪುಸ್ತಕದಲ್ಲಿಲ್ಲ.

3 ಭೂರಿಯೊಳು, ಕ. 4 ಮುಂದಿಯ ಧೂಳು ಕವಿದುದು ಮುಂದೆ ಸಂದಣಿಸಿ, ಖ. ಚ. 5 ಮುಂದೆಸಂದಣಿಸಿದುದು ಪೌರಜನ, ಜ. 6 ಗಳಿಗೆ ವ್ಯೆಯಿಕ್ಕಿ ತೋಱನು, ಖ. ಚ. 7 ಮೇಲೆ ಸುರಸಿಕರ, ಖ. ಚ.

ಹಿಡಿದರಾರತಿಗಳನು ಬಣ್ಣದ
ಸೊಡರು ತಳಿತುವು ಮುಂದೆ ನೆಲನು
ಘುಡಿಸೆ ಭೀಮಾರ್ಜುನರು ಕೈಗುಡೆ ಧರ್ಮನಂದನನು ।
ಹಿಡಿದ ಕೈದೀವಿಗೆಗಳನು ಕೈ
ದುಡುಕಿ ತಿವಿದಾಡುವ ಸುಕಾಂತಿಯು
ಕಡಲು ಮಣಿಮಯಪೀಠದೊಳು ಕುಳ್ಳಿರ್ದನಸುರಾರಿ ॥ ೭೧

ಬೀಳುಕೊಟ್ಟನು ಬೇಹ ಭೂಮಿಪ
ಪಾಲರನು ಕುಂತೀಕುಮಾರರ
ಮೇಳದೊಳು ಪರಿಮಿತದೊಳಸುರಾರಾತಿ ನಸುನಗುತೆ ।
ಸೋಲದೊಳು ಮೈದಣಿದು ಕುರುಭೂ
ಪಾಲನುಚಿತವ [1] ಮಾಡೆ ರಾಜ್ಯವ
ಪಾಲಿಸುವ ಹದನುಂಟೆ ನಿಮ್ಮಾಳಾಪ ವೇನೆಂದ ॥ ೭೨

ಮರಳಿದುವು ತುಱು ವಿತ್ತಲಹಿತರು
ಸರಿದರತ್ತಲು ಮತ್ಸ್ಯ ನೆಮ್ಮಾ
ವರನು ನಾವೆಂದಱಿದು ಕೊಂಡಾಡಿದನು ವಿನಯದೊಳು ।
ವರಸುಭದ್ರಾನಂದನಂಗು
ತ್ತರೆಯು ನೀವರ್ಧಿಯೊಳಿರಲವನು
ಕರೆಯಲಟ್ಟಿದೆವೆಂದು ಬಿನ್ನಹಮಾಡಿದನು ನೃಪತಿ ॥ ೭೩

ಕೊಳುಕೊಡೆಗೆ ಸೇರುವೊಡೆ ಮದುವೆಯ
ನೊಲಿದು ದೇವರು ಮಾಡುವುದು ಮೇ
ಲಿಳೆಯ ಕಾರ್ಯಕೆ ಬುದ್ಧಿಗಲಿಸುವುದೆಮ್ಮನುದ್ಧರಿಸಿ ।
ಬಳಿಕ ಬಿಜಯಂಗೆಯ್ವುದಿದು ಹದ
ನೆಲೆ ದಯಾಂಬುಧಿ ಕೇಳೆನಲು ನೃಪ
ತಿಲಕನುಚಿತದ ಬಿನ್ನಹಕೆ ಮನವೊಲಿದು ಹರಿ ನುಡಿದ ॥ ೭೪

[1] ಮಾಡಿರಾಜ್ಯವನಾಳಿಸುವ ಹದನುಂಟೆ, ಖ. ಚ. ಟ.

ಕೊಳುಕೊಡೆಗೆ [1] ತಪ್ಪೇನು ವಸುಕುಲ
ದೊಳು ವಿರಾಟನು ಚಂದ್ರವಂಶಾ
ವಳಿ [2] ಯೊಳಧಿಕರು ನೀವ್ರು ಕಾಲದೊಳಗಿಲ್ಲ ಪಾಪವುಗಳು ।
ಬಳುನುಡಿಗಳೊಳು ದೈವಶಕುನಾ
ವಳಿಗಳಾದೊಡೆ ಹರುಷದೊಳು ಮಂ
ಗಳಮುಹೂರ್ತವ ಮಾಡಿ ಯೆಂದನು ಕೃಷ್ಣ ನಸುನಗುತೆ ॥ ೨೪

ಬಸಗೆಯೊಳು ನಿಸ್ಸಾಳತತಿ ಗ
ರ್ಜಿಸಿದು ದಖಿಳನರೌಘ ವೃತ್ತಾ
ಹಿಸಲು ಕನ್ಯಾವರಣ ವಾಗಲು ವೈದಿಕೋಕ್ತಿಯೊಳು ।
ಹಸೆಯೊಳಭಿಮನ್ಯುವನು ಸಿಂಗಾ
ರಿಸಿತು ಯದುಪಾಂಚಾಲಪುತ್ರೀ
ಪ್ರಸರ ಮಿಗೆ ಮೆಟ್ಟಕ್ಕಿ ಜೀರಿಗೆ ಬೆಲ್ಲ ವನುವಾಯ್ತು ॥ ೨೫

ವರಮುಹೂರ್ತದ ಗಳಿಗೆವಟ್ಟಲ
ಚರಿತದೊಳು ಪುಣ್ಯಾಹರವವಿ
ಸ್ತರದೊಳಕ್ಷತೆ [3] ತುಂಬಿ ತಂದರು ವಿಮಳಮಂಟಪಕೆ ।
ಪರಮಋಷಿಗಳು ಹೋಮದೊಳು ಶಿಖಿ
ವರನ ಬಲಗೊಳಿಸುತೆ ಕುಮಾರಿಯು
ಬರಿಸೆ ಸಪ್ತಪದಿಯೊಳು ಬಂದಳು ವರನ ವಾಮದೊಳು ॥ ೨೬

[4] ವಿಭವದೊಳು ಗುರುದೈವಸದ್ವಿಜ
ಸಭೆಯ ನಾರಾಧಿಸಿದ ರವನೀ
ವಿಭುಗಳಿತ್ತರು [5] ಮುಹಿಗಳನು ವ್ರಡುಗೊಡೆಯ ಭೂಷಣವ ।

---

1 ತಪ್ಪಿಲ್ಲ, ಕ. ಖ. ಚ, 2 ಯುವರು ನೀವಾಭಿಜಾತ್ಯದೊಳಿಲ್ಲ ಹಟಿವುಗಳು, ಟ.
3 ವೆರಸಿತಂದರು, ಜ. ಝ. 4 ವಿಭವದೈವತಿಯಾಗಿ ಸದ್ವಿಜವಿಭುಗಳನು ಮನ್ನಿಸಿದ, ಜ. ಟ. ವಿಭವವಿಮ್ಮಡಿಯಾಗಿಸದ್ವಿಜ, ಝ.
5 ಮುಯ್ಯನುಡುಗೊರೆ ರತ್ನಭೂಷಣವ, ಖ. ಚ. ತುಋುಗಳುಡುಗೊರೆ ರತ್ನ ಭೂಷಣವ, ಝ.

ಅಭವಸನ್ನಿಭವೀರ ನಾಗೆಂ
ದ್ರಿಭಗಮನೆಯರು ಕೃಷ್ಣನರಸಿಯ
ರಭಿಜನಾಮಲತಿಲಕನನು ಹರಸಿದರು ಹರುಷದೊಳು ॥ ೭೮

ಇದು ಸುಭೋಗದ ಗರುಡಿ ಬಹುಸಂ
ಪದದ ನೆಲೆಮನೆ ಸೊಂಪಿನಾಗರ
ವಿದು ಪರಾನಂದಪ್ರವಾಹದ ಜನ್ಮಭೂಮಿ ಯಿದು ।
ಮುದದ ಕೇಳೀಸ್ಥಾನ ವಿಮಲಾ
ಭ್ಯುದಯದೋಲಗಶಾಲೆ ಲಕ್ಷ್ಮೀ
ಸದನ ಮೆನೆ ರಂಜಿಸಿದುದಭಿಮನ್ಯುವಿನ ವೈವಾಹ ॥ ೭೯

ಯಾದವರು ಪಾಂಚಾಲಮತ್ಸ್ಯರು
ಚೇದಿಪತಿಗಳು ಪಾಂಡ್ಯಸೋಮಕ
ರಾದಿಯಾದನ್ವಯದೊಳಗಣಿತಬಂಧು [1] ವರ್ಗ ಮನು ।
ಆದರಿಸಿದನು ವಿನಯ [2] ದೊಳು ಗಂ
ಧಾದಿವಸ್ತುಗಳಿಂದೆ ತಣಿದುದು
ಮೇದಿನೀಜನ ಮನಿಸನ ಸನ್ಮಾನದಾನದೊಳು ॥ ೮೦

ಮರಚತುರ್ಥಿಯೊಳಿರುಳು ಮೆಱೆದರು
ಪುರದೊಳುತ್ಸಾಹದೊಳು ದಂಪತಿ
ವರರು [3] ಭೂಪಕದಂಬದದ್ಭುತಚಾತುರಂಗದೊಳು ।
ಮೆಱುದಿವಸ [4] ವ್ರೋಕುಳಿಯ ನತಿವಿ
ಸ್ತರಿಸಿದರು ಪನ್ನೀರ ಹೊಂಗೊ
ಪ್ಪರಿಗೆಗಳ ಕುಂಕುಮದ [5] ನವ ಪರಿಮಳದ ರಚನೆಯೊಳು ॥ ೮೧

1 ಬಳಗವನು, ಜ. ಟ. 2 ನುಡಿವಿವಿಧಾದಿ, ಖ. ಚ. 3 ಭೂಮೀ ಲಂಬದ, ಕ. ಜ. ಟ. ಭೂಮಿಕದಂಬದ, ಖ. ಚ. ಭೂಮಿವಿಡಂಬದ, ಝ.

4 ಮವಭೃಥಮನತಿ, ಜ. ಟ. 5 ಸಾದುಜವಾದಿರಚನೆ, ಕ. ಖ. ಚ. ಪಟವಾಸಕದ, ಜ. ಸಾದುಜವಾದಿಕತ್ತುರಿಯ, ಝ.

ಕನಕವೆಯುಶೃಂಗದೊಳು [1] ಜಾಜಿಯು
ನೆನೆಯು ಕಂಚುಳಿಕೆಯೊಳು ಮದನನ
ಮೊನೆಯು ಖಾಡಾಖಾಡಿಕಾತಿಯು [2] ರೈದೆ ಹೊಯ್ದೊಯ್ದು ।
ದನುಜಹರನರಸಿಯರು ಕುಂತೀ
ತನಯರರಸಿಯರೊಡನೆ ಮತ್ಸ್ಯನ
ವನಿತೆಯರು ಪಾಂಚಾಲಿಯರು ಪ್ರೋಕುಳಿಯನಾಡಿದರು॥ ೮೦

*

ಧರಣಿಹೊರೆದುದು ಗಂಧರಸಕ
ಸ್ತೂರಿಯು ಪನ್ನೀರುಗಳ ಪ್ರೊನಲೊಡ
ವೆರಸಿ ದೆಸೆ ಕಂಪಿಟ್ಟುದಂಬುಧಿಘನತುಷಾರದೊಳು।
ತರಣಿ ಪರಿಮಳಿಸಿದನು ಪವನನ
ಸುರಭಿತನ ವೆಚ್ಚರಿಯೆ ಗಗನದ
ಪರಮಸೌರಭ ಕಲಸಿಕೊಂಡುದು ಸಕಲಸುರಕುಲವ॥ ೮೨

ಬಳಿವೆಳೆಯು ನಖಿಳಾವನೀವಮಂ
ಡಲವ ನನುಪಮಕೋಶವನು ವರ
ಲಲನೆಯರ ಗಜವಾಜಿರಥವ ಪದಾತಿಗೋವ್ರಜವ।

1 ಜಾಜಿನನನೆಯು ಕಂಚುಕಿಗಳೊಳು, ಖ. ಚ.

2 ರವನಿಪನವೇಲೆ, ಖ. ಚ. ರೈದೆಹೊಯ್ದಾಡಿ, ಕ. ಜ

* ಖ ಪುಸ್ತಕದಲ್ಲಿ 82ನೆಯ ಪದ್ಯದ ಮುಂದೆ ಈ ಪದ್ಯವು ಹೆಚ್ಚಾಗಿ ದೊರೆಯುತ್ತದೆ.

ಅರಸ ಭೀಮಾರ್ಜುನರದೊಂದೆಸೆ
ಹರಿವಿರಾಟದ್ರುಪದರೊಂದೆಸೆ
ಸರಸಪರಿಮಳಜಲವಚೆಲ್ಲಿದರವರವರಮೇಲೆ ।
ವರಸುಭದ್ರಾಜಾತ ಸಗುತು
ತ್ತರೆಗೆ ಸೂಸಿದೊಡಾಕೆಯಾಪ್ತರು
ಹುರಿಗೊಳಿಸೆ ಹೊಯ್ದಳು ಕಿರೀಟಕುಮಾರಕನ ಮೇಲೆ ॥

ಅಳಿಯಗಿತ್ತು ವಿರಾಟನೃಪ ಯದು
ಕುಲವ ಪಾಂಚಾಲಿಕರ ಮತ್ಸ್ಯರ
ವಳಿಯ ನುತ್ತಮವಸ್ತುವಾಹನದಿಂದಮನ್ನಿಸಿದ ॥ ೮೪

ಆದುದಭಿಮನ್ಯುವಿನ ಮದುವೆ ಮ
ಹಾದಯಾಂಬುಧಿ ಕೃಷ್ಣರಾಯನ
ಪಾದದರುಶನ ವಾಗಲಿಮ್ಮಡಿಸಿತ್ತದೆಮ್ಮುದಯ!
ಮೇದಿನಿಯ ನಾವೊತ್ತೆಯಿಟ್ಟೆವು
ಕಾದು ಕೊಂಡೆವು ಸತ್ಯವನು ಮೋ
ಲಾದಹದನನು ಕರುಣಿಸೆಂದನು ಭೂಪ ನರಯಣಿಗೆ ॥ ೮೫

ಹನ್ನೊಂದನೆಯ ಸಂಧಿ ಮುಗಿದುದು.

---

ಶ್ರೀಮದಚಿನ್ತ್ಯಮಹಿಮಗದುಗುವೀರನಾರಾಯಣಚರಣಾರವಿಂದನಿರಂತರ
ಧ್ಯಾನಮಧುಪಾನಪುಷ್ಟಮಚಷ್ಪಟ್ಟದನಿಕಾಯಮಪ್ಪ ಶ್ರೀಮತ್ಕು
ಮಾರವ್ಯಾಸಯೋಗೀನ್ದ್ರವಿರಚಿತಮಪ್ಪ ಕರ್ಣಾಟಕ
ಭಾರತಕಥಾಮಞ್ಜರಿಯೊಳ್ ವಿರಾ
ಟಪರ್ವಂ ಸಮಾಪ್ತಂ.

---

# ಶುದ್ಧಿ ಪತ್ರಿಕೆ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 4 | 12 | ತಂದರು | ತಂದನು |
| 5 | 1 | ಈವುದಾ | ಈವುದಾಂ |
| 19 | 7 | ಕೊರಳು | ಕೊರಲು |
| 26 | 11 | ದ.ವು | ದನು |
| 30 | 5 | ಕೊರಳ | ಕೊರಲ |
| 41 | 9 | ಯುವ | ಯುವು |
| ,, | 24 | ನಗ | ನಗೆ |
| ,, | 25 | ಗುಂಟು | ಗುಂಟೆ |
| 65 | 22 | ನಿುದಿ | ನಿಂದಿ |
| 67 | 23 | ಜಾಗಟು | ಜಾಗಟೆ |
| 77 | 1 | ಗಳ | ಗಳ |
| 85 | 7 | ನೋಲ್ಗೆ | ನೊಲ್ಗೆ |
| 89 | 21 | ಹಸ್ತಿನಾ | ಹಸ್ತಿನ |
| 90 | 8 | ಝೂಡಿ | ಝೂಡಿಗ |
| 97 | 19 | ಮುಱಿದು | ಮುಱ್ಱಿದು |
| 113 | 9 | ನಡೆತಂ | ನಡೆದೈತಂ |
| 118 | 17 | ದ್ದಂಡ | ದ್ದಂಡಬಲ |
| 120 | 9 | ಗೆಯೋ | ಗೆಯೊ |
| ,, | ,, | ಥಟ್ಟೊ | ಥಟ್ಟೋ |
| 121 | 11—16 | 7ನೆಯ ಪದ್ಯವಾಗಿ ಬಂದಿರುವುದರಿಂದ ಈ ಪದ್ಯವು ಬಿಡತಕ್ಕುದು | |
| ,, | 25 | ಬಿದುವು | ಬಿದ್ದುವು |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 124 | 21 | ನುಘ್ಘ್ನಡಿಸು | ನುಗ್ಗಡಿಸು |
| ,, | 24 | ಲಹುದೆನಲು | ಲಹುದೆಮಗೆ |
| 127 | 1 | ಬಟಿಕ | ಬಟಿಕ |
| 143 | 9 | ಕೊಂಬರು | ಕೊಳ್ವರು |
| 150 | 4 | ಮಲತರನು | ಮಲೆತರಸು |
| 158 | 10 | ಹರಿಬಂ | ಹರಿಬವ |
| 162 | 6 | ವೊಯೆು | ವೊಡೆಯೆು |
| 168 | 3 | ಮುುಝು | ಮಝು |
| 169 | 3 | ಬಟಿಕೇನು | ಬಟಿಕೇನು |
| ,, | 13 | ಪರ್ಥನ | ಪಾರ್ಥನ |
| 182 | 3 | ಸುತರ ! | ಸುತರ । |
| 186 | 4 | ಇದಿರಗೊಳ | ಇದಿರುಗೊಳ |
| ,, | 9 | ರಜ | ರಾಜ |
| 191 | 12 | ನವಿನೀಶ | ನವನೀಶ |
| ,, | 15 | ರಾಜರೊಳು | ರಾಜರೊಳು । |
| 194 | 25 | ಹನ್ನೆರಡು | 7 ಹನ್ನೆರಡು |
| 202 | 3 | ರದೊಳನಿ | ರಸದೊಳನಿ |
| 207 | 8 | ಸಲಹಬೇಕೆಂದ | ದೇವಸಲಹುವುದು |
| ,, | 23 | ದೇವಸಲಹುವುದು. ಖ. ಚ. ಟ. | ಸಲಹಬೇಕೆಂದ. ಕ, ಝು. |
| 216 | 9 | ಚೇಷ್ಟಿಸ | ಚೇಷ್ಟಿಸ |
| 218 | 3 | ಘ್ಘಡಿಸೆ | ಗ್ಗಡಿಸೆ |

# University of Mysore

Oriental Library Publications

KANNADA SERIES No. 12

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

೬ನೆಯ ಸಂಪುಟ

# ಉದ್ಯೋಗಪರ್ವ

---

THE

# KARNATAKA MAHABHARATA

BY

**KUMARAVYASA MAHAKAVI**

## Vol. VI

# UDYOGA PARVA

EDITED BY

DR. R. SHAMA SASTRY, B.A., PH.D., M.R.A.S.,

*Curator, Government Oriental Library, Mysore, Director of Archæological Researches in Mysore, Periodical Lecturer to the Post-Graduates' classes of the Calcutta University, and B. B. R. A. S. Campbell Memorial Medalist*

MYSORE

PRINTED AT THE GOVERNMENT BRANCH PRESS

1922

# ಅವತರಣಿಕೆ.

ಇದು ಕರ್ಣಾಟಕ ಮಹಾಭಾರತದ ಆರನೆಯ ಸಂಪುಟವು. ಇದರಲ್ಲಿ—ಸೇನೋದ್ಯೋಗಪರ್ವ, ಸಂಜಯಯಾನಪರ್ವ, ಪ್ರಜಾಗರ ಪರ್ವ, ಸನತ್ಸುಜಾತಪರ್ವ, ಯಾನಸನ್ಧಿ ಪರ್ವ, ಭಗವದ್ಯಾನಪರ್ವ, ಸೈನ್ಯನಿರ್ಯಾಣಪರ್ವಗಳನ್ನು ಒಳಗೊಂಡಿರುವ ಉದ್ಯೋಗಪರ್ವವು ಪೂರ್ಣವಾಗಿದೆ. ಸಂಸ್ಕೃತ ಮಹಾಭಾರತದಲ್ಲಿರುವ ಉಲೂಕದೂತಾಗಮನರಥಾತಿರಥಸಂಖ್ಯಾನಾಮ್ಬೋಪಾಖ್ಯಾನಪರ್ವಗಳು ಹೇಳಲ್ಪಟ್ಟಿಲ್ಲ. ಶ್ರೀಕೃಷ್ಣನು ಅರ್ಜುನನ ಸಾರಥಿತ್ವವನ್ನು ವಹಿಸಿದುದು ಮೊದಲುಗೊಂಡು ಪಾಣ್ಡವರು ಕುರುಕ್ಷೇತ್ರಕ್ಕೆ ಸೇನಾಸಮೇತರಾಗಿ ಪ್ರವೇಶ ಮಾಡಿದರು ಎಂಬುದರ ವರೆಗೂ ಕಥೆಯು ಹೇಳಲ್ಪಟ್ಟಿರುವುದಲ್ಲದೆ ಪ್ರಜಾಗರಪರ್ವದಲ್ಲಿ ವಿದುರನು ಧೃತರಾಷ್ಟ್ರನಿಗೆ ಹೇಳಿದ ನೀತಿಯೂ ಸನತ್ಸುಜಾತಪರ್ವದಲ್ಲಿ ಬ್ರಹ್ಮನಮಾನಸಪುತ್ರರಾದ ಸನತ್ಸುಜಾತರು ಧೃತರಾಷ್ಟ್ರನಿಗೆ ಹೇಳಿದ ನೀತಿಯೂ ಹೇಳಲ್ಪಟ್ಟಿವೆ.

ಆದರೆ ಸಂಸ್ಕೃತದ ಮಹಾಭಾರತದಲ್ಲಿ ಹೇಳಿರುವಂತೆ ಇದರಲ್ಲಿಯೂ ವಿದುರನು ತಾನು ಸಾಮಾನ್ಯವಾದ ನೀತಿಯನ್ನು ಹೇಳಿ ಆತ್ಮವಿಚಾರವನ್ನು ಹೇಳಬೇಕೆಂದು ಅಪೇಕ್ಷಿಸಿದ ಧೃತರಾಷ್ಟ್ರನಿಗೆ ತಾನು ಶೂದ್ರನಾದುದರಿಂದ ಆತ್ಮವಿದ್ಯೋಪದೇಶವನ್ನು ಮಾಡಲು ಯೋಗ್ಯನಲ್ಲವೆಂದೂ ಅದನ್ನು ಉಪದೇಶಿಸಲು ಬ್ರಹ್ಮರ್ಷಿ ಸನತ್ಸುಜಾತರೇ ಯೋಗ್ಯರೆಂದೂ ಅವರಿಂದ ಬ್ರಹ್ಮವಿದ್ಯೆಯ ಉಪದೇಶವನ್ನು ಪಡೆಯಬಹುದೆಂದೂ ಹೇಳಲು; ಧೃತರಾಷ್ಟ್ರನು ಧ್ಯಾನದಿಂದ ಸನತ್ಸುಜಾತರನ್ನು ತನ್ನ ಹತ್ತಿರಕ್ಕೆ ಬರಮಾಡಿಕೊಂಡು ಬ್ರಹ್ಮವಿದ್ಯೆಯನ್ನು ಉಪದೇಶಿಸುವಂತೆ ಪ್ರಾರ್ಥಿಸಲು; ಸನತ್ಸುಜಾತರು ಧೃತರಾಷ್ಟ್ರನಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿ ಅವನನ್ನು ಕೃತಾರ್ಥನನ್ನಾಗಿ ಮಾಡಿದರು.

ಎಂದು ಸೂಚಿಸಿ ಸನತ್ಸುಜಾತಪರ್ವದ ಆದಿಭಾಗದಲ್ಲಿ ಕೆಲವುಪದ್ಯಗಳು ಮಾತ್ರ ಬ್ರಹ್ಮ ವಿದ್ಯೆಗೆ ಸಂಬಂಧಿಸುವಂತೆ ಹೇಳಲ್ಪಟ್ಟಿರುವುವು. ಮುಂದೆ ಹಲವುಕಡೆಗಳಲ್ಲಿ ಹೇಳಲ್ಪಟ್ಟಿರುವ ಸಾಮಾನ್ಯನೀತಿಗಳೇ ಸಙ್ಗ್ರಹಿಸಲ್ಪಟ್ಟವೆ. ಆದಿಭಾಗದಲ್ಲಿ ಹೇಳಿರುವ ಬ್ರಹ್ಮ ವಿದ್ಯಾವಿಷಯಗಳೂ ಯಾವುದೋ ಒಂದು ಕ್ರಮದಿಂದ ಸ್ವತಂತ್ರವಾಗಿ ಸಂಗ್ರಹಿಸಿ ಹೇಳಲ್ಪಟ್ಟವೆಯೇ ಹೊರತು ಸಂಸ್ಕೃತಭಾರತದ ಸನತ್ಸುಜಾತೀಯವನ್ನು ಅನುಸರಿಸಿಲ್ಲ.

ಕವಿಯು ಸ್ವತನ್ತ್ರವಾಗಿ ಹಲವು ನೀತಿಗ್ರಂಥಗಳನ್ನು ಉಪನಿಷತ್ತು, ಗೀತೆ, ಪುರಾಣ ಮೊದಲಾದುವುಗಳಿಂದಲೂ ಸಂಸ್ಕೃತ ಮಹಾಭಾರತದಲ್ಲಿಯೇ ಹೇಳಿರುವ ಇತರ ಭಾಗಗಳಿಂದಲೂ ಸಂಗ್ರಹಿಸಿ ಅವುಗಳ ಅರ್ಥವನ್ನು ತಾನು ಉದ್ದೇಶಿಸಿರುವ ಕರ್ಣಾಟಭಾಷೆಯಲ್ಲಿ ಭಾಮಿನೀ ಷಟ್ಪದಿಗಳಿಂದ ಅನುವಾದಮಾಡಿರುತ್ತಾನೆ. ಈತನು ಅನುವಾದಮಾಡಿರುವ ಅರ್ಥಗಳನ್ನು ಹೇಳುವ ಸಂಸ್ಕೃತದ ಮೂಲಗ್ರಂಥಗಳನ್ನೆಲ್ಲವನ್ನೂ ಇಲ್ಲಿ ಬರೆದು ತೋರಿಸುವುದಕ್ಕೆ ಸಾಧ್ಯವಾಗಿದ್ದರೂ ಅವುಗಳನ್ನು ಹುಡುಕುವುದಕ್ಕೆ ಬಹುಕಾಲವು ಬೇಕಾಗಿರುವುದರಿಂದಲೂ ಅಷ್ಟು ಅವಕಾಶವು ಇಲ್ಲಿ ನಮಗೆ ದೊರೆಯದಿರುವುದರಿಂದಲೂ ಎಲ್ಲಾ ಮೂಲ ಗ್ರಂಥಗಳನ್ನೂ ಇಲ್ಲಿ ಉದಾಹರಿಸುವುದಿಲ್ಲ.

ಇದರಲ್ಲಿ ಸಂಗ್ರಹಿಸಲ್ಪಟ್ಟಿರುವ ನೀತಿಗಳನ್ನು ಹೇಳುವ ಕೆಲವು ಸಂಸ್ಕೃತಗ್ರಂಥಗಳು ಮಾತ್ರ ಇಲ್ಲಿ ಮಾದರಿಗಾಗಿ ಆಯಾ ಅರ್ಥವನ್ನು ಅನುವದಿಸಿರುವ ಕನ್ನಡದ ಪದ್ಯಗಳೊಡನೆ ಉದಾಹರಿಸಲ್ಪಡುವುವು.

ಅವು ಯಾವುವೆಂದರೆ :—

ಚಿತ್ತವಿಸು ಧೃತರಾಷ್ಟ್ರನೃಪ ಪರ
ತತ್ತ್ವವಿದ್ಯಾವಿಷಯಭೇದವ
ಬಿತ್ತರಿಸುವೆನು ಸಕಲಸಚರಾಚರದೊಳಗೆ ನೀನು ।

ಉತ್ತಮಾಧಮವೆನ್ನದೇ ಕಾ
ಣುತ್ತೆ ಹರುಷವಿಷಾದದೊಳು ಮುಳು
ಗುತ್ತಿರದೆ ಸಮರಸದೊಳಿಹುದುಪದೇಶ ನಿನಗೆಂದ ॥

ಸಂಧಿ ೪, ಪದ್ಯ ೫.

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಣ್ಡಿತಾಸ್ಸಮದರ್ಶಿನಃ ॥
ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।

ಇತ್ಯಾದಿಃ

ಭಗವದ್ಗೀತೆಯಲ್ಲಿ :— ಅ ೫, ಶ್ಲೋ ೧೮. ಅ ೧೪, ಶ್ಲೋ ೨೪.

ಅವನಿಪತಿ ಕೇಳಾತ್ಮನಿಂ ಸಂ
ಭವಿಸಿತಂಬರವಂಬರದೊಳಾ
ಪವನ ಪವನನೊಳಗ್ನಿಯಗ್ನಿಯೊಳಾದುದಾಭುವನ ।
ಭುವನದಿಂ ಧರೆ ಧರಣಿಯಿಂದು
ದ್ಭವಿಸಿತೋಷಧಿಯೋಷಧಿಗಳಿಂ
ದವತರಣವನ್ನಾದಿ ಪುರುಷಪ್ರಕೃತಿ ವಿಕೃತಿಗಳ ॥

ಸಂಧಿ ೪, ಪದ್ಯ ೬.

ಆತ್ಮನ ಆಕಾಶಸ್ಸಂಭೂತಃ, ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃ ಪೃಥಿವೀ ಪೃಥಿವ್ಯಾ ಓಷಧಯಃ ಓಷಧೀಭ್ಯೋಽನ್ನಂ ಅನ್ನಾತ್ಪುರುಷಃ ॥

ತೈತ್ತಿರೀಯೋಪನಿಷತ್ತಿನಲ್ಲಿ :— ವ ೨, ಅ ೧.

ಸೃಷ್ಟಿಸಂಹಾರದೊಳು ಭೂತದ
ಕಟ್ಟಳೆಯ ಗತ್ಯಾಗತಿಗಳೊಳು
ಮುಟ್ಟಿಸಿದ ವಿದ್ಯೆಯೊಳವಿದ್ಯೆಯೊಳಪ್ರತಿಮನೆನಿಸಿ ।

ನಷ್ಟಿಯೊಳು ತುಷ್ಟಿಯೊಳು ಮನವನು
ಬಿಟ್ಟು ಹಿಡಿಯದೆ ಕಾಲಕರ್ಮವ
ಮುಟ್ಟಿ ನಿಲೆ ಭಗವಂತನೆನಿಸುವನವನ ಕೇಳೆಂದ ॥

ಸಂಧಿ ೪, ಪದ್ಯ ೮.

ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಾಗತಿಂ ಗತಿಂ ।
ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋಭಗವಾನಿತಿ ॥

ವಿಷ್ಣುಪುರಾಣದಲ್ಲಿ :— ಅಂ ೬, ಅ ೫, ಶ್ಲೋ ೭೮.

ತ್ಯಜಿಸುವುದು ದುಸ್ಸಂಗವನು ಮಿಗೆ
ಭಜಿಸುವುದು ಸತ್ಸಂಗವನು ಗಡ
ಬಳಿಕವಿರಹೋರಾತ್ರಿಯೊಳು ಧರ್ಮವನೆ ಸಂಗ್ರಹಿಸು ।
ಭಜಿಸು ನಿತ್ಯಾನಂದವಸ್ತುವ
ವಿಜಯನಹ ಯುಧಿಷ್ಠಿರಗೆ ತತ್ತ್ವವ
ನಿಜವಿದೆಲೆ ಧೃತರಾಷ್ಟ್ರ ಚಿತ್ತೈಸೆಂದನಾ ಮುನಿಪ ॥

ಸಂಧಿ ೪, ಪದ್ಯ ೧೦.

ತ್ಯಜ ದುರ್ಜನಸಂಸರ್ಗಂ ಭಜ ಸಾಧುಸಮಾಗಮಂ ।
ಕುರು ಪುಣ್ಯಮಹೋರಾತ್ರಂ ಸ್ಮರ ನಿತ್ಯಂ ಜಯ ದ್ವಯಂ ॥

ಗರುಡಪುರಾಣದ ಆಚಾರಕಾಂಡದಲ್ಲಿ :— ಅ ೧೦೮, ಶ್ಲೋ ೨೬.

ಕಾಯವಿದು ನೆಲೆಯಲ್ಲ ಸಿರಿ ತಾ
ಮಾಯೆರೂಪಿನ ಮೃತ್ಯುದೇವತೆ
ಬಾಯ ಬಿಡುತಿಹಳಾವುದೀತನ ಕಾಲಗತಿಯೆಂದು ।
ದಾಯವಱಿವ ಮಹಾತ್ಮರಿದಕೆ ಸ
ಹಾಯಧರ್ಮವ ರಚಿಸುವುದು ನಿ
ರ್ದಾಯದೊಳು ಕೈಸೂಱೆಗೊಳ್ವುದು ಮುಕ್ತಿರಾಜ್ಯವನು ॥

ಸಂಧಿ ೪, ಪದ್ಯ ೧೧.

ಗ್ರಂಥಾಂತರದಲ್ಲಿ:—

ಅನಿತ್ಯಾನಿ ಶರೀರಾಣಿ ವಿಭವೋನೈವ ಶಾಶ್ವತಃ ।
ನಿತ್ಯಂ ಸನ್ನಿಹಿತೋಮೃತ್ಯುಃ ಕರ್ತವ್ಯೋಧರ್ಮಸಙ್ಗ್ರಹಃ ॥

ಹಲವುವರ್ಣದೊಳೆಸೆವ ಗೋಸಂ
ಕುಲದೊಳೊಂದೇ ವರ್ಣದೊಳು ಕಂ
ಗೊಳಿಸುವಿಕ್ಷೀರಾಮೃತವು ವ್ಯೈಗೊಂಡು ತೋರ್ಪಂತೆ ।
ಹೊಲಬುಗೆಟ್ಟ ಚರಾಚರಂಗಳ
ಸುೞಿವಿನೊಳು ಸುೞಿದಡಗಿ ಕಡೆಯೊಳು
ನಿಲುವ ನಿಜವೊಂದಲ್ಲದೆರಡಿಲ್ಲೆಂದನಾಮುನಿಪ ॥

ಸಂಧಿ ೪, ಪದ್ಯ ೧೪.

ಗವಾಮನೇಕವರ್ಣಾನಾಂ ಕ್ಷೀರಸ್ಯಾಪ್ಯೇಕವರ್ಣತಾ ।
ಕ್ಷೀರವತ್ಪಶ್ಯತೇ ಜ್ಞಾನಂ ಲಿಙ್ಗಿನಸ್ತು ಗವಾಂ ಯಥಾ ॥

ಬ್ರಹ್ಮಬಿನ್ದೂಪನಿಷತ್ತಿನಲ್ಲಿ ಮನ್ತ್ರ ೧೯.

ಅತಿಶಯದ ಸುಕೃತವನು ವಿರಚಿಸಿ
ಗತಿವಡೆದು ಸ್ವರ್ಗಾದಿಭೋಗೋ
ನ್ನತಿಕೆಯನು ಭೋಗಿಸಿದ ಸಮನನ್ತರದೊಳವನಿಯೊಳು ।
ಪತನ ತಪ್ಪದು ಮರಳಿ ಬಾರದ
ಗತಿಯನಱಿದು ಮಹಾನುಭಾವರ
ಮತವಿಡಿದು ನಡೆವುದು ನಿಯಮವು ಭೂಪಾಲ ಕೇಳೆಂದ ॥

ಸಂಧಿ ೪, ಪದ್ಯ ೧೪.

ತೇ ಪುಣ್ಯಮಾಸಾದ್ಯ ಸುರೇನ್ದ್ರಲೋಕಮಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್ ॥
ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ ॥

ಭಗವದ್ಗೀತೆಯಲ್ಲಿ:— ಅ ೯. ಶ್ಲೋ ೨೦, ೨೧.

ಸಕಲಧರ್ಮದಸಾರವನು ಮತಿ
ವಿಕಲನಾಗದೆ ಚಿತ್ತವಿಸು ಬಾ
ಧಕವದಾವುದು ನಿನಗದನು ನೀನನ್ಯರುಗಳಲ್ಲಿ ।
ಯುಕುತಿಯಿಂದವೆ ತಿಳಿದು ನಡೆಯಲು
ಮುಕುತನಹೆ ಸಂಸಾರದೊಳು ಸಾ
ಧಕವಿದೊಂದೇ ಸಕಲಜನವೆುತವೆಂದನಾಮುನಿಪ ॥

ಸಂಧಿ ೪, ಪದ್ಯ ೧೫.

ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ ।
ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥

ಭಗವದ್ಗೀತೆಯಲ್ಲಿ :— ಅ ೩, ಶ್ಲೋ ೩೦.

ನಳಿನಮಿತ್ರನು ಪಶ್ಚಿಮಾಮ್ಬುಧಿ
ಗಿಱಿಯೆ ನಾನಾಪಕ್ಷಿಜಾತಿಗ
ಳುಲಿಯುತ್ತೈತಂದೊಂದುವೃಕ್ಷವನೇಱಿ ರಾತ್ರಿಯನು ।
ಕಳೆದು ದೆಸೆದೆಸೆಗಳಿಗೆ ಹರಿವವೊ
ಲಿಳೆಯ ಭೋಗಾದೃಷ್ಟ ತೀಱಿದ
ಬೞಿಕ ಲೋಕಾನ್ತರವನೈದುವೆರರಸಕೇಳೆಂದ ॥

ಸಂಧಿ ೪, ಪದ್ಯ ೧೮.

ಏಕವೃಕ್ಷೇ ಸದಾ ರಾತ್ರೌ ನಾನಾಪಕ್ಷಿಸಮಾಗಮಃ ।
ಪ್ರಭಾತೇऽನ್ಯಾದಿಶೋಯಾನ್ತಿ ಕಾ ತತ್ರ ಪರಿವೇದನಾ ॥

ಗರುಡಪುರಾಣಾಚಾರಕಾಣ್ಡದಲ್ಲಿ :— ಅ ೧೧೩, ಶ್ಲೋ ೪೬.

ಪೊಡವಿಯೊಳಗುದಯಿಸುವ ಪಾತಕ
ವಿಡದು ಭೂಪನನದು ಪುರೋಹಿತ
ನೆಡೆಗೆ ಬೞಿಕಾಮೂರ್ಖಶಿಷ್ಯನ ದೋಷ ಗುರುವಿಂಗೆ ।
ಮಡದಿ ಮಾಡಿದ ಪಾತಕವು ಪತಿ
ಗೊಡಲಿಹುದು ಪರಮಾರ್ಥದೀಪರಿ
ವಿಡಿಯನಱಿಯದೆ ಕಿಡುತಿಹುದು ಜನವೆಂದನಾಮುನಿಪ ॥

ಸಂಧಿ ೪, ಪದ್ಯ ೧೯.

ಗ್ರನ್ಥಾನ್ತರದಲ್ಲಿ:—

ರಾಜಾ ರಾಷ್ಟ್ರಕೃತಂ ಪಾಪಂ ರಾಜಪಾಪಂ ಪುರೋಹಿತಃ ।
ಭರ್ತಾ ಭಾರ್ಯಾಕೃತಂ ಪಾಪಂ ಶಿಷ್ಯ ಪಾಪಂ ಗುರುರ್ಭಜೇತ್ ॥

ಸಿಲೆಯು ರೂಹನು ಮೂಢರುಗಳ
ಗ್ಗಳೆಯು ಪಾವಕನನು ಮಹೀಸುರ
ರಿಳಯೊಳಗೆ ಪರಮಾತ್ಮನೇ ಪರದೈವ ತಾನೆಂದು ।
ಬಲಿದು ಪೂಜಿಸುತಿಹರು ಹೃದಯಾಂ
ಗಳದೊಳಗೆ ವರಯೋಗಿಗಳು ಕೈ
ವಳಸುವುದು ಜಗವೀಪ್ರಕಾರದೊಳರಸ ಕೇಳೆಂದ ॥

ಸಂಧಿ ೪, ಪದ್ಯ ೨೩.

ಗ್ರನ್ಥಾನ್ತರದಲ್ಲಿ :—

ಅಗ್ನಿರ್ದೇವೋದ್ವಿಜಾತೀನಾಂ ಮುನೀನಾಂ ಹೃದಿ ದೈವತಂ ।
ಪ್ರತಿಮಾಸ್ವಲ್ಪಬುದ್ಧೀನಾಂ ಸರ್ವತ್ರ ಸಮದರ್ಶಿನಾಂ ॥

ಜ್ಞಾನಿಗಳನೊಡಬಡಿಸಬಹುದ
ಜ್ಞಾನಿಗಳನಹುದೆನಿಸಬಹುದೈ
ಜ್ಞಾನಲವವನು ಕೂಡಿಕೊಂಡಿಹ ದುರ್ವಿದಗ್ಧರನು ।
ಏನ ತಿಳುಹಲು ಬಹುದು ವಿಷ್ವ
ಕ್ಸೇನಗಳವಲ್ಲರಸ ಮಿಕ್ಕಿನ
ಮಾನವರ ಪಾಡಾವುದೈ ಹೇಳೆಂದನಾಮುನಿಪ ॥

ಸಂಧಿ ೪, ಪದ್ಯ ೨೪.

ಅಜ್ಞಸ್ಸುಖಮಾರಾಧ್ಯಸ್ಸುಖತರಮಾರಾಧ್ಯತೇ ವಿಶೇಷಜ್ಞಃ ।
ಜ್ಞಾನಲವದುರ್ವಿದಗ್ಧಂ ಬ್ರಹ್ಮಾಪಿ ನರಂ ನ ರಂಜಯತಿ ॥

ಭರ್ತೃಹರಿ ಸುಭಾಷಿತ ನೀತಿ ಶತಕದಲ್ಲಿ :— ಶ್ಲೋ ೩.

ದಾನವೊಂದಾ ಪಾಲನೆಯು ಸಂ
ಧಾನವೊಂದಿರ್ದುಂ ಧರುಮವಿದಱೊಳು
ದಾನದಿಂದಮರಾದಿಪದರಂಗಳ ಸೌಖ್ಯಸಂಪದವು ।
ದಾನವೇ ಸಂಸಾರಸಾಧನ
ದಾನದಿಂ ಪಾಲನೆಯು ಫಲದಿಂ
ಸ್ಥಾನ ದೊರೆವುದು ಕಡೆಯೊಳಚ್ಯುತಪದವೆ ಫಲವೆಂದ ॥

ಸಂಧಿ ೪, ಪದ್ಯ ೨೫.

ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋಽನುಪಾಲನಂ ।
ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂಪದಂ ॥

ಬೃಹಸ್ಪತಿ ಸ್ಮೃತಿಯಲ್ಲಿ :— ಶ್ಲೋ. ೧೩.

ವರುಷ ಮೂಱು ಸಹಸ್ರ ಮೇಣ್ಮೂ
ಱಱೊಳು ಪಕ್ಷತ್ರಯದೊಳಗೆ ಬಂ
ದಱುಹುವುದು ದಿನ ಮೂಱಱೊಳು ಸಂದೇಹವೇನಿದಕೆ ।
ಧರೆಯೊಳುತ್ಕಟಪುಣ್ಯಪಾಪೋ
ತ್ಕರದ ಫಲವಿಹದಲ್ಲಿ ಸೂಚಿಸಿ
ಪರಿಕಿಸುವುದು ಪರಲೋಕದೆಡೆಗವನೀಶ ಕೇಳೆಂದ ॥

ಸಂಧಿ ೪, ಪದ್ಯ ೨೩.

ಗ್ರನ್ಥಾನ್ತರದಲ್ಲಿ :—

ತ್ರಿಭಿರ್ವರ್ಷೈಸ್ತ್ರಿಭಿರ್ಮಾಸೈಸ್ತ್ರಿಭಿಃಪಕ್ಷೈಸ್ತ್ರಿಭಿರ್ದಿನೈಃ ।
ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ ॥

ತನ್ನ ಗೃಹದೊಳು ಮಾನ್ಯನತಿಸಂ
ಪನ್ನಪೂಜ್ಯನು ಭೂಮಿಪಾಲನು
ತನ್ನ ದೇಶದೊಳಧಿಕನೈ ಗ್ರಾಮದೊಳು ಧನಿ ಪೂಜ್ಯ ।

ಭಿನ್ನವಿಲ್ಲದೆ ಹೋದ ತಾವಿನೊ
ಳನ್ಯರೆನಿಸದೆ ವಿಶ್ವದೊಳು ಸಂ
ಪನ್ನ ಪೂಜಾಪಾತ್ರರೈ ವಿದ್ವಾಂಸರುಗಳೆಂದ ||

ಸಂಧಿ ೪, ಪದ್ಯ ೪೪.

ಗ್ರನ್ಥಾನ್ತರದಲ್ಲಿ :—

ಸ್ವಗೃಹೇ ಪೂಜ್ಯತೇ ಮೂರ್ಖಃ ಸ್ವಗ್ರಾಮೇ ಪೂಜ್ಯತೇ ಧನೀ |
ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ ||

ಒರ್ವನಹನ್ನೈ ಶೂರ ನೂಱ
ಕ್ಕೊರ್ವನಹ ಸಾವಿರಕೆ ಪಂಡಿತ
ನೊರ್ವನಹನ್ನೈ ವಕ್ತೃ ದಶಸಾವಿರಕೆ ಲೋಕದೊಳು |
ಒರ್ವದಾನಿಯು ಕಾಣೆನ್ನೈ ತಾ
ನೊರ್ವರೊರ್ವರಿಗೊಂದೆ ಗುಣವದು
ಸರ್ವಗುಣಸಂಪನ್ನರೈ ವಿದ್ವಾಂಸರುಗಳೆಂದ ||

ಸಂಧಿ ೪, ಪದ್ಯ ೪೫.

ಗ್ರನ್ಥಾನ್ತರದಲ್ಲಿ :—

ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ |
ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ||

ದೈವದಾಧೀನದೊಳು ಜಗವಾ
ದೈವ ಮಂತ್ರಾಧೀನ ಮಂತ್ರವು
ಭೂವಿಬುಧರಾಧೀನವಾಗಿಹುದಾಗಿ ಲೋಕದೊಳು |
ದೈವವಾಬ್ರಾಹ್ಮಣರದಲ್ಲದೆ
ಭಾವಿಸಲು ಬುಧರಿಂದವಧಿಕವೆ
ದೈವವೆಂಬುದ ಕಾಣೆನೈ ನಾವೆಂದನಾವಮುನಿಪ ||

ಸಂಧಿ ೪, ಪದ್ಯ ೫೦

ಗ್ರನ್ಥಾನ್ತರದಲ್ಲಿ :—

ದೈವಾಧೀನಂ ಜಗತ್ಸರ್ವಂ ಮನ್ತ್ರಾಧೀನನ್ತು ದೈವತಂ ।
ತನ್ಮನ್ತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣೋಮಮ ದೇವತಾ ॥

ಕರಿತುರಗವೊದಲಾದ ವಸ್ತುಗ
ಳರಮನೆಗಳೊಳು ಪುತ್ರಮಿತ್ರರು
ತರುಣಿಯರು ಸಹಭವರು ಗೋತ್ರಜರಡವಿಯೊಳಗಿಕ್ಕಿ ।
ಮರಳುವರು ನಿಜಸುಕೃತದುಷ್ಕೃತ
ವೆರಡು ಬೆನ್ನೊಳ ಬಹುವುವುಱದುದ
ನರಸ ಬಲ್ಲವನಾವನೈ ಹೇಳೆಂದನಾಮುನಿಪ ॥

ಸಂಧಿ ೪, ಪದ್ಯ ೬೨.

ಅರ್ಥಾಗೃಹೇ ನಿವರ್ತನ್ತೇ ಶ್ಮಶಾನೇ ಮಿತ್ರಬಾನ್ಧವಾಃ ।
ಸುಕೃತಂ ದುಷ್ಕೃತಂ ಚೈವ ಗಚ್ಛನ್ತಮನುಗಚ್ಛತಿ ॥

ಗರುಡಪುರಾಣದಲ್ಲಿ ಪ್ರೇತಖಣ್ಡ ಧರ್ಮಕಾಣ್ಡದಲ್ಲಿ, :— ಅ ೧೦, ಶ್ಲೋ ೨೫.

ಪರಿಪರಿಯ ಯಜ್ಞವನು ವಿರಚಿಸಿ
ಸುರಪತಿಯ ಸಂತುಷ್ಟಿವಡಿಸಲು
ಸುರಿವನೈ ಸಂಪೂರ್ಣವಾಗಿ ಸುವೃಷ್ಟಿಯನು ಜಗಕೆ ।
ಹರಿಹಯನು ಸಸ್ಯಾದಿಕಂಗಳ
ಹೊರೆಯಲೋಸುಗ ಮುಯ್ಗೆ ಮುಯ್ಯಾ
ಗಿರುತಿಹುದು ಭುವನದ್ವಯದೊಳವನೀಶ ಕೇಳೆಂದ ॥

ಸಂಧಿ ೪, ಪದ್ಯ ೬೦.

ದೇವಾನ್ ಭಾವಯತಾನೇನ ತೇ ದೇವಾ ಭಾವಯನ್ತು ವಃ ।
ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ॥

ಭಗವದ್ಗೀತೆಯಲ್ಲಿ :— ಅ ೩, ಶ್ಲೋ ೧೧.

ಮಾಡುತಿಹ ಯಜ್ಞವನು ಪರರಿಗೆ
ಮಾಡಿಸುವ ವೇದಾಧ್ಯಯನವನು
ಮಾಡುತಿಹ ತದ್ವಿಷಯದೊಳು ಯೋಗ್ಯರನು ಮಾಡಿಸುವ ।
ಮಾಡುತಿಹ ದಾನವನು ಲೋಗರು
ನೀಡುತಿರಲೊಳಕೊಳ್ವ ಗುಣವನು
ಕೂಡಿಕೊಂಡಿಹನೇ ಸಮರ್ಥನು ವಿಪ್ರರೊಳಗೆಂದ ॥

ಸಂಧಿ ೪, ಪದ್ಯ ೬೫.

ಯಜನಂ ಯಾಜನಂ ಚೈವ ತಥಾ ದಾನಪ್ರತಿಗ್ರಹೌ ।
ಅಧ್ಯಾಪನಂ ಚಾಧ್ಯಯನಂ ಷಟ್ಕರ್ಮಾ ಧರ್ಮಭಾಗ್ದ್ವಿಜಃ ॥

ಅನುಶಾಸನಪರ್ವದಲ್ಲಿ :— ಅ ೧೪೧, ಶ್ಲೋ ೬೮.

ಯುವತಿಯರು ಗಾಯಕರು ಕಿತವರು
ತವತವಗೆ ಕೈವಾರಿಸುವರಾ
ಮನುಜನವನೇ ಪಙ್ಕ್ತಿದೂಷಿತನಿಹಪರಂಗಳಿಗೆ ।
ಇವರು ಮೂವರು ನಿಂದಿಸುವರಾ
ಮನುಜನವ ಸರ್ವಜ್ಞನೆನಿಸುವ
ನವನಿಪತಿ ಚಿತ್ತವಿಸು ಧರ್ಮರಹಸ್ಯವಿಸ್ತರವ ॥

ಸಂಧಿ ೪, ಪದ್ಯ ೬೭.

ಯಂ ಪ್ರಶಂಸನ್ತಿ ಕಿತವಾ ಯಂ ಪ್ರಶಂಸನ್ತಿ ಚಾರಣಾಃ ॥
ಯಂ ಪ್ರಶಂಸನ್ತಿ ಬನ್ಧಕ್ಯೋನ ಸ ಜೀವತಿ ಮಾನವಃ ॥

ವಿದುರನೀತಿಯಲ್ಲಿ :— ಅ ೩೮, ಶ್ಲೋ ೪೫.

ಅರಸ ಕೇಳ್ಮೆ ಮಾರ್ಗ ಮೂಱಾ
ಗಿರುತಿಹುದು ಸಂಪೂರ್ಣಧನ ಗುರು
ಪರಿಚರಿಯ ಪರಿವರ್ತನೆಗಳೆಂಬಿನಿತನತಿಗಳೆದು ।

ತಿರುಗಿ ಬಂದೊಡೆ ನಾಲ್ಕನೆಯ ಪತ
ದೊರಕಲರಿಯದು ಕಳೆಗಳನು ಸಂ
ಹರಿಸುವ ನರೋತ್ತಮರುಗಳಿಗವನೀಶ ಕೇಳೆಂದ ||

ಸಂಧಿ ೪, ಪದ್ಯ ೮೮

ಗ್ರನ್ಥಾನ್ತರದಲ್ಲಿ:—

ಗುರುಶುಶ್ರೂಷಯಾ ವಿದ್ಯಾ ಪುಷ್ಕಲೇನ ಧನೇನ ವಾ |
ಅಥವಾ ವಿದ್ಯಯಾ ವಿದ್ಯಾ ಚತುರ್ಥಾನ್ನೋಪಲಭ್ಯತೇ ||

ತನ್ನ ದಾನವನಪಹರಿಸಿ ಕೊಂ
ಡನ್ಯರಿತ್ತುದಕಡ್ಡಬೀಳುವ
ಕುನ್ನಿಜನರರುವತ್ತುಸಾವಿರವರುಷಪರಿಯಂತ |
ಭಿನ್ನವಿಲ್ಲದೆ ವಿಷ್ಠೆಯೊಳು ಕ್ರಿಮಿ
ಜನ್ಮದಲ್ಲಿಹರಿದನರಿದು ನೀ
ನಿನ್ನ ಕೊಟ್ಟುದನುಳುಹಿ ಕೊಳ್ವುದು ಧರ್ಮವೆಲ್ಲೆಂದ ||

ಸಂಧಿ ೪, ಪದ್ಯ ೯೩.

ಸ್ವದತ್ತಾಂ ಪರದತ್ತಾಂ ವಾ ಯೋಹರೇತ ವಸುಂಧರಾಂ |
ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ||

ಬೃಹಸ್ಪತಿಸ್ಮೃತಿಯಲ್ಲಿ :— ಶ್ಲೋ ೧೯.

ವರಶ್ರುತಿಸ್ಮೃತಿಗಳು ಕಣಾ ಭೂ
ಸುರರ ದೃಷ್ಟಿಗಳಿವೆರಡೊಳೊಂದಕೆ
ಕೊರತೆಯಾಗಲು ಕಾಣನೆನಿಸುವನೆರಡನರಿಯದಿರೆ |
ಸಿರುತವಿದು ಜಾತ್ಯಂಧನೆನಿಸುವ
ನರಸ ಕೇಳ್ಳೆ ಮಾಂಸದೃಷ್ಟಿಗ
ಳಿರವಲೇ ಸರ್ವತ್ರಸಾಧಾರಣವು ಲೋಕದೊಳು ||

ಸಂಧಿ ೪, ಪದ್ಯ ೯೬.

ಶ್ರುತಿಸ್ಮೃತೀ ದ್ವೇ ವಿಪ್ರಾಣಾಂ ಚಕ್ಷುಷೀ ದೇವನಿರ್ಮಿತೇ ।
ಕಾಣಸ್ತತ್ರೈಕಯಾ ಹೀನೋದ್ವಾಭ್ಯಾಮನ್ಧಃ ಪ್ರಕೀರ್ತಿತಃ ॥

ಹಾರೀತಸ್ಮೃತಿಯಲ್ಲಿ :— ಅಧ್ಯಾಯ ೧, ಶ್ಲೋ ೭೫.

ದಾನವಿರಹಿತನಾಗಿ ಜನಿಸುವ
ಮಾನವಗೆ ದಾರಿದ್ರ್ಯವದಱಿನ
ನೂನದುಷ್ಕೃತಗೆಯ್ವನದಱಿಂ ಘೋರತರನರಕ ।
ಆನರಕದಿಂ ಮರಳಿ ಪಾತಕ
ಯೋನಿಯೊಳು ದಾರಿದ್ರ್ಯವದು ತಾ
ನೇನ ಮಾಡಿಯು ಬೆನ್ನ ಬಿಡದವನೀಶ ಕೇಳೆಂದ ॥

ಸಂಧಿ ೪, ಪದ್ಯ ೧೦೩.

ಗ್ರನ್ಥಾನ್ತರದಲ್ಲಿ :—

ಅದಾನದೋಷೇಣ ಭವೇದ್ದರಿದ್ರಃ ದಾರಿದ್ರ್ಯದೋಷಾತ್ತು ಕರೋತಿ ಪಾಪಂ ।
ಪಾಪಾದ್ದರಿದ್ರಃ ಪುನರೇತಿ ಜನ್ಮ ಪುನರ್ದರಿದ್ರಃ ಪುನರೇವ ಪಾಪೀ॥

ಗಗನದಗಲದಿನುಗುವ ವೃಷ್ಟಿಯೊ
ಳೊಗೆದ ಕೀಲಾಲವು ಸಮುದ್ರವ
ಹೊಗುವವೊಲು ನಾನಾಪ್ರಕಾರದ ರೂಪುಗಳೊಳೆಸೆವ ।
ಜಗುಮಿಗೆಯ ದೈವದ ಪದಾಂಬುಜ
ಯುಗಳರಚನೆಯ ಪೂಜನಗಳಿವು
ಜಗದುಪರನನು ಮುಟ್ಟದಿಹುವೇ ಭೂಪ ಕೇಳೆಂದ ॥

ಸಂಧಿ ೪, ಪದ್ಯ ೧೦೬.

ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ ।
ಸರ್ವದೇವನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ ॥

ಪಾಣ್ಡವಗೀತೆಯಲ್ಲಿ :— ಶ್ಲೋ ೪೦

ಜಲದೊಳಗೆ ವಾರಾಹವಿಷ್ಣು
ಸ್ಥಲದೊಳಗೆ ವಾಮನನು ವನಸಂ
ಕುಲದೊಳಗೆ ನರಸಿಂಹನಾಗಿಯೆ ಭಕ್ತನಿಕರವನು ।
ಸಲಹುತಿಹನೊಮ್ಮೆಯು ಜಗತ್ತ್ರಯ
ದೊಳಗು ಪೊರೆಗೆಂದೆನ್ನದೀಪರಿ
ಜಲರುಹಾಕ್ಷನು ಕೃಷ್ಣ ಕೇಶವನಲ್ಲದಿಲ್ಲೆಂದ ॥

ಸಂಧಿ ೩, ಪದ್ಯ ೧೦೭

ಜಲೇ ರಕ್ಷತಿ ವಾರಾಹಃ ಸ್ಥಲೇ ರಕ್ಷತಿ ವಾಮನಃ ।
ಅಟವ್ಯಾಂ ನಾರಸಿಂಹಶ್ಚ ಸರ್ವತಃ ಪಾತಿ ಕೇಶವಃ ॥

ಬ್ರಹ್ಮಾಂಡಪುರಾಣದಲ್ಲಿ ಇನ್ದ್ರನಾರದ ಸಂವಾದದಲ್ಲಿ ವಿಷ್ಣು ಪಂಜರ ಸ್ತೋತ್ರದಲ್ಲಿ— ಶ್ಲೋ ೧೫

ಹೀಗೆ ಹಲವುಕಡೆಗಳಿಂದ ಅನೇಕನೀತಿಗಳು ಸಂಗ್ರಹಿಸಲ್ಪಟ್ಟಿರುವುದರಿಂದ ಕವಿಯು ಬಹು ಗ್ರಂಥಗಳನ್ನು ನೋಡಿದವನೆಂದು ಶ್ಲಾಘಿಸಬಹುದಾದರೂ ಬ್ರಹ್ಮವಿಷಯವನ್ನು ಹೇಳುವೆನೆಂದು ಪ್ರತಿಜ್ಞೆಮಾಡಿ ಅಪ್ರಸ್ತುತಗಳಾದ ಅನೇಕಸಾಮಾನ್ಯನೀತಿಗಳನ್ನು ಹೇಳುವುದು ಇಂತಹ ದೊಡ್ಡಗ್ರಂಥವನ್ನು ರಚಿಸಿದ ಉದ್ದಾಮನಾದ ಈ ಕವಿಯ ಯೋಗ್ಯತೆಗೆ ಕುಂದನ್ನುಂಟುಮಾಡುವುದೇ ಹೊರತು ಪ್ರಶಸ್ತಿಯನ್ನುಂಟುಮಾಡಲಾರದು. ಆದುದರಿಂದ ಈ ಕವಿಯು ಪಂಡಿತಪಾಮರ ಸಾಮಾನ್ಯವಾಗಿ ಎಲ್ಲರಿಗೂ ತಿಳಿಯುವಂತಿರಬೇಕೆಂದು ಸುಲಭಶೈಲಿಯಿಂದ ರಚಿಸಿದ ಈ ಗ್ರಂಥದಲ್ಲಿ ಪಂಡಿತೈಕವೇದ್ಯವಾದ ಬ್ರಹ್ಮವಿಷಯವನ್ನು ವಿಸ್ತರಿಸಿ ಬರೆದರೆ ಪಾಮರರಿಗೆ ತಿಳಿಯದೆ ಅಸ್ವಾರಸ್ಯವೂ ಬೇಸರವೂ ಉಂಟಾಗಿ ಎಲ್ಲರಿಗೂ ಸುಖಪ್ರವೃತ್ತಿಯು ಹುಟ್ಟಲಾರದೆಂದು ಭೀಷ್ಮಪರ್ವದಲ್ಲಿ ಗೀತಾರ್ಥವನ್ನು ಸಂಗ್ರಹಿಸಿ ಹೇಳಿರುವಂತೆ ಇಲ್ಲಿಯೂ ಬ್ರಹ್ಮವಿಷಯವನ್ನು ಸಙ್ಗ್ರಹಿಸಿ ಹೇಳಿರಬಹುದು. ಸಂಗ್ರಹವಾಗಿ ಹೇಳಿರುವ ಗೀತಾರ್ಥವನ್ನು

ಉಪ್ಪಾರಹಳ್ಳಿ ರಾಮಪ್ಪನೆಂಬವರು ವಿಸ್ತರಿಸಿ ಹೇಳಿರುವಂತೆ ಯೆಲ್ಲಿ
ಕಡೆಯಲ್ಲಿಯೂ ಅತ್ಯಾದರದಿಂದ ಪುರಾಣವನ್ನು ಹೇಳುತ್ತಾ ತಮ್ಮ
ಪ್ರೌಢಿಮೆಯನ್ನು ತೋರಿಸುತ್ತಿರುವ ಹಲಬರೊಳಗೆ ಯಾರೋ ಕೆಲ
ವರು ಬ್ರಹ್ಮವಿಷಯದಲ್ಲಿ ಅನಭಿಜ್ಞರಾದರೂ ಅಭಿಜ್ಞರಂತೆ ನಟಿಸಿ
ಪಾಮರರಿಗೆ ವಿಸ್ತರಿಸಿ ಹೇಳುವುದಕ್ಕೆ ಸೇರಿಸಿದ ಪದ್ಯಗಳು ಹಲವು
ಇದರಲ್ಲಿಯೂ ಬೆರೆದು ಅಸಂಬದ್ಧವಾಗಿವೆ ಯೆಂದು ತೋರುತ್ತದೆ.
ಆದುದರಿಂದಲೇ ಮಾತೃಕೆಗಳಲ್ಲಿ ಒಂದೊಂದರಲ್ಲಿ ಒಂದೊಂದುವಿಧವಾದ
ಪಾಠವು ಬಿದ್ದಿದೆಯೆಂದು ಊಹಿಸಬಹುದು. ಕೆಲವುಪ್ರತಿಗಳಲ್ಲಿ ಆದಿ
ಪರ್ವದಲ್ಲಿ ಬರೆದಿರುವ ಅವತಾರಕಥೆ ಐರಾವತಕಥೆ ಮೊದಲಾದುವೂ
ಗ್ರಂಥಾನ್ತರದಿಂದ ಸಂಗ್ರಹಿಸಿ ಹೆಚ್ಚಾಗಿ ಸೇರಿಸಲ್ಪಟ್ಟುವೇ ಆಗಿವೆ.
ಇದಕ್ಕೆ ಒಂದು ಪುರಾತನಪ್ರತಿಯಲ್ಲಿ (ಓರಿಯಂಟಲ್ ಲೈಬ್ರರಿಯಲ್ಲಿರುವ
೨ನೆಯ ನಂಬರಿನ ಪುಸ್ತಕದಲ್ಲಿ) ಆರಣ್ಯಪರ್ವದ ಕೊನೆಯಲ್ಲಿ ೧೫೪
ನೆಯ ಪತ್ರದಲ್ಲಿ ಪರ್ವಗಳ ಸಂಧಿ ಪದ್ಯಗಳ ಸಂಖ್ಯೆಯನ್ನು ತೋರಿಸು
ವಾಗ ಆದಿಪರ್ವಕ್ಕೆ ಹಿಟ್ಟಿಗಮಹಾಭಾರತದ ಕಥೆ ಸಹ ಸಂಧಿ ......
ಪದನು ೩೦।೫೩ ಎಂದು ಬರೆದಿರುವುದೇ ಆಧಾರವಾಗಿದೆ. ಹಿಟ್ಟಿಗಮಹಾ
ಭಾರತವೆಂಬ ಗ್ರಂಥವು ನಮಗೆ ದೊರೆತಿಲ್ಲ. ಕೆಲವರು ಈ ಕವಿಯು
ಅಭಿಜ್ಞನಲ್ಲವೆಂದೂ ಯಾವನೋ ಒಬ್ಬ ಅಧಿಕಾರಿಯಲ್ಲಿ ಸೇವಾವೃತ್ತಿ
ಯಲ್ಲಿದ್ದನೆಂದೂ ಆ ಅಧಿಕಾರಿಯು ಮನೆಯಲ್ಲಿ ಸಂಸ್ಕೃತಮಹಾಭಾರತದ
ಪುರಾಣವನ್ನು ಹೇಳಿಸುತ್ತಿದ್ದ ಸಮಯದಲ್ಲಿ ಈತನೂ ಪುರಾಣವನ್ನು
ಕೇಳುತ್ತಾ ಇದ್ದು ಹತ್ತುಪರ್ವಗಳನ್ನು ಮಾತ್ರ ಹೇಳಿದುದನ್ನು ಕೇಳಿ
ತನಗೆ ಆ ಮನೆಯನ್ನು ಬಿಡಬೇಕಾಗಿ ಬಂದುದರಿಂದ ಮುಂದಣ ವಿಷಯ
ವನ್ನು ಕೇಳದೆ ತಾನು ಕೇಳಿದ್ದ ಭಾಗವನ್ನೇ ಭಕ್ತಿಯಿಂದುಂಟಾದ ಉತ್ಸಾ
ಹದಿಂದ ತನಗೆ ಅಲ್ಪವಾಗಿ ತಿಳಿದಿರುವ ಕನ್ನಡದ ಭಾಷೆಯಲ್ಲಿ ಮನ ಬಂದಂತೆ
ರಚಿಸಿದನೆಂದೂ ಪುರಾಣವನ್ನು ಹೇಳುವಾಗ ಪರಾಧೀನನಾದ ತನಗೆ
ಯಾವವಿಷಯಗಳನ್ನು ಕೇಳುವುದಕ್ಕವಕಾಶವು ದೊರೆಯಲಿಲ್ಲವೋ ಆ
ವಿಷಯಗಳನ್ನು ಮಾತ್ರ ಇಲ್ಲಿ ಹೇಳದೇ ಬಿಟ್ಟಿರುವನೆಂದೂ ಹೇಳುತ್ತಾರೆ.

ಕವಿಯು ಹೇಳಿರುವ ವಿಷಯಗಳನ್ನೂ ವರ್ಣಿಸಿರುವ ಕ್ರಮ
ಗಳನ್ನೂ ಉಪಯೋಗಿಸಿರುವ ಅಪೂರ್ವಗಳಾದ ಪದಗಳನ್ನೂ ಮನಸ್ಸಿ
ನಲ್ಲಿ ತೋರಿದ್ದ ಅರ್ಥವನ್ನು ಸುಲಭವಾಗಿ ತಿಳಿಯುವಂತೆ ಹೇಳುವ ರೀತಿ
ಯನ್ನೂ ಅನಾಯಾಸದಿಂದ ರಚಿಸಿರುವ ಕಾವ್ಯಬಂಧದ ಸರಣಿಯನ್ನೂ
ಗ್ರಂಥದ ಆದಿಭಾಗದಲ್ಲಿ ತಾನೇ ಹೇಳಿಕೊಂಡಿರುವ ಉದ್ದಾಮತೆಯನ್ನೂ
ನೋಡಿದ ಯಾರುತಾನೆ ಕವಿಯು ಅಭಿಜ್ಞನಲ್ಲವೆಂದು ಹೇಳುವರು.
ಸಂಗೀತಸಾಹಿತ್ಯೋಭಯವಿಶಾರದನಾದ ಈ ಕವಿಯು ತನ್ನ ಗ್ರಂಥವು
ಓದುವವರಿಗೂ ಕೇಳುವವರಿಗೂ ಚರಿತ್ರಾಪೇಕ್ಷಿಗಳಿಗೂ ಅರ್ಥಾನುಸಂ
ಧಾನದಿಂದ ರಸಾಸ್ವಾದವನ್ನು ಮಾಡುವವರಿಗೂ ಸಂತೋಷವನ್ನುಂಟು
ಮಾಡುವಂತೆ ಇರಬೇಕೆಂದು ಯೋಚಿಸಿ, ರಾಗದಿಂದೋದುವುದಕ್ಕೆ ಕ್ಲೇಶ
ವನ್ನುಂಟುಮಾಡುವ ಸುಶ್ರಾವ್ಯವಲ್ಲದ ವ್ಯಂಜನಾಂತಶಬ್ದಗಳನ್ನು
ರಾಗಕ್ಕನುಕೂಲಿಸುವಂತೆ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಹೊಸಕನ್ನಡ
ಕ್ಕನುಸಾರವಾಗಿ ಸ್ವರಾಂತಗಳನ್ನಾಗಿಯೂ ತದ್ಭವಗಳಲ್ಲಿ ಸಂಸ್ಕೃತಶಬ್ದ
ಗಳ ಸಂಯುಕ್ತಾಕ್ಷರಗಳನ್ನು ವಿರಳವಮಾಡಿ ಅಕಾರೇಕಾರೋಕಾರ
ಗಳನ್ನು ನಡುವೆ ಸೇರಿಸಿ ಹೇಳುವಂತೆ ಕನ್ನಡಶಬ್ದಗಳ ಸಂಯುಕ್ತಾಕ್ಷರ
ಗಳನ್ನು ವಿರಳಮಾಡಿ ಉಚಿತವಾದಸ್ವರವನ್ನು ಸೇರಿಸಿ ಓದುವುದಕ್ಕೆ
ಸುಲಭವಾದುವುಗಳನ್ನಾಗಿಯೂ ರೇಫಸಂಯುಕ್ತಾಕ್ಷರಗಳನ್ನು ಶಿಥಿಲ
ವಾಗಿ ಉಪಯೋಗಿಸಬಹುದೆಂಬ ವೈಯಾಕರಣರಮಾತನ್ನು ಉಪಲಕ್ಷಣ
ವನ್ನಾಗಿಟ್ಟುಕೊಂಡು ಇತರ ಸಂಯುಕ್ತಾಕ್ಷರಗಳನ್ನೂ ಶಿಥಿಲಗಳನ್ನಾಗಿ
ಯೂ ಮಾಡಿಕೊಂಡು ಪ್ರಯೋಗಿಸಿರುತ್ತಾನೆ.

ಛಂದೋಭಂಗಾನನ್ವಿತತ್ವಾದಿದೋಷಗಳು ಅಜ್ಞರಾದ ಲೇಖಕ
ರಿಂದುಂಟಾಗಿರುವುವೇ ಹೊರತು ಕವಿಕೃತದೋಷಗಳೆಂದು ಹೇಳಲಾಗು
ವುದಿಲ್ಲ. ಆದುದರಿಂದಲೇ ಒಂದೊಂದು ಪುಸ್ತಕದಲ್ಲಿ ಒಂದೊಂದುವಿಧ
ವಾದ ಪಾಠವು ದೊರೆಯುತ್ತದೆ. ಕವಿಕರಲಿಖಿತವಾದ ಪುಸ್ತಕವು ಸಿಕ್ಕಿ
ದರೆ ಅದರಲ್ಲಿ ಇಂತಹ ದೋಷಗಳು ದೊರೆಯಲಾರವು. ಒಂದೊಂದು
ಕಡೆಯಲ್ಲಿ ಕ್ಲಿಷ್ಟಾನ್ವಯವು ಅವಾರ್ಯವಾಗಿ ತೋರಿ ಬಂದರೂ ಅದು

ಇಟ್ಟ ಪದವನ್ನು ತೆಗೆಯದೆ ಮುಂದೆ ತದನುಸಾರವಾದ ರಚನೆಯನ್ನೇ ಮಾಡುತ್ತಾ ಪದ್ಯಗಳನ್ನು ಪೂರ್ತಿಮಾಡುತ್ತಿದ್ದ ಕವಿಯ ಅಸಾಧಾರಣ ಶಕ್ತಿಯಿಂದುಂಟಾದುದೆಂದು ಊಹಿಸಬಹುದು. ಇಟ್ಟ ಪದವನ್ನು ತೆಗೆಯುವುದಿಲ್ಲವೆಂಬ ಈ ವಿಷಯವನ್ನು ಕವಿಯೇ ಹೇಳಿಕೊಂಡಿದಾನೆ. ರಾಗದಿಂದ ಓದುವುದಕ್ಕೆ ಅನುಕೂಲಿಸುವಂತೆ ರಚಿಸಲ್ಪಟ್ಟಿದೆ ಯೆಂಬುದಕ್ಕೆ ಈ ಲೈಬ್ರರಿಯಲ್ಲಿಯೇ ಇರುವ ಒಂದು ಪುರಾತನವಾದ ಓಲೆಯ ಪುಸ್ತಕದಲ್ಲಿ (೨ನೆಯ ನಂಬರಿನ ಪುಸ್ತಕದಲ್ಲಿ) ಆದಿಪರ್ವದ ಎಲ್ಲಾ ಸನ್ಧಿಗಳಿಗೂ ಒಂದೊಂದು ಸಂಧಿಯಲ್ಲಿ ಒಂದೊಂದು ವಿಧವಾದ ರಾಗವು ಬರೆಯಲ್ಪಟ್ಟಿರುವುದೂ ಈಗ ಕನ್ನಡದ ಭಾರತವನ್ನು ಓದುವವರೆಲ್ಲರೂ ಹಲವುರಾಗಗಳಿಂದ ಓದುತ್ತಿರುವುದೂ ನಿದರ್ಶನವಾಗಿವೆ. ಮೇಲೆ ಹೇಳಿದ ಪುರಾತನವಾದ ಓಲೆಯ ಪುಸ್ತಕದಲ್ಲಿ ಬರೆದಿರುವ ರಾಗಗಳು.

| ಸಂಧಿ ಸಂಖ್ಯೆ. | ರಾಗದ ಹೆಸರು. |
|---|---|
| ೧ ನೆಯ ಸಂಧಿಯಲ್ಲಿ | ಪತ್ರವು ಹೋಗಿರುವುದರಿಂದ ರಾಗವು ಗೊತ್ತಿಲ್ಲ |
| ೨ ನೆಯ ಸಂಧಿಯಲ್ಲಿ | ಶಾಂತಮುಲಹರಿ |
| ೩ ನೆಯ ಸಂಧಿಯಲ್ಲಿ | ಬವುಳಿ |
| ೪ ನೆಯ ಸಂಧಿಯಲ್ಲಿ | ಸಾಲಂಗನಾಟಿ |
| ೫ ನೆಯ ಸಂಧಿಯಲ್ಲಿ | ಮಾಲವ |
| ೬ ನೆಯ ಸಂಧಿಯಲ್ಲಿ | ,, |
| ೭ ನೆಯ ಸಂಧಿಯಲ್ಲಿ | ಕನ್ನಡಗೌಳ |
| ೮ ನೆಯ ಸಂಧಿಯಲ್ಲಿ | ರಾಮಕ್ರಿ |
| ೯ ನೆಯ ಸಂಧಿಯಲ್ಲಿ | ನಾಟಿ |
| ೧೦ ನೆಯ ಸಂಧಿಯಲ್ಲಿ | ,, |
| ೧೧ ನೆಯ ಸಂಧಿಯಲ್ಲಿ | ಕಾಂಬೋದಿ |
| ೧೨ ನೆಯ ಸಂಧಿಯಲ್ಲಿ | ಮಲಹರಿ |
| ೧೩ ನೆಯ ಸಂಧಿಯಲ್ಲಿ | ನಾಟಿ |
| ೧೪ ನೆಯ ಸಂಧಿಯಲ್ಲಿ | ಶಾಂತಮಲಹರಿ |
| ೧೫ ನೆಯ ಸಂಧಿಯಲ್ಲಿ | ಮಾಳವ |

| ಸಂಧಿ ಸಂಖ್ಯೆ. | ರಾಗದ ಹೆಸರು. |
|---|---|
| ೧೬ ನೆಯ ಸಂಧಿಯಲ್ಲಿ | ಮಲಹರಿ |
| ೧೭ ನೆಯ ಸಂಧಿಯಲ್ಲಿ | ನಾಟಿ |
| ೧೮ ನೆಯ ಸಂಧಿಯಲ್ಲಿ | ಧನ್ಯಾಸಿ |
| ೧೯ ನೆಯ ಸಂಧಿಯಲ್ಲಿ | ನಾಟಿ |
| ೨೦ ನೆಯ ಸಂಧಿಯಲ್ಲಿ | ಶಾಂತಮಲಹರಿ |
| ೨೧ ನೆಯ ಸಂಧಿಯಲ್ಲಿ | ,, |
| ೨೨ ನೆಯ ಸಂಧಿಯಲ್ಲಿ | ಕನ್ನಡಗೌಳ |
| ೨೩ ನೆಯ ಸಂಧಿಯಲ್ಲಿ | ಓಲೆಯು ಹೋಗಿದೆ |
| ೨೪ ನೆಯ ಸಂಧಿಯಲ್ಲಿ | ,, |
| ೨೫ ನೆಯ ಸಂಧಿಯಲ್ಲಿ | ನಾಟಿ |
| ೨೬ ನೆಯ ಸಂಧಿಯಲ್ಲಿ | ,, |
| ೨೭ ನೆಯ ಸಂಧಿಯಲ್ಲಿ | ಕೇತಾರಗೌಳ |
| ೨೮ ನೆಯ ಸಂಧಿಯಲ್ಲಿ | ಆಹರಿ |
| ೨೯ ನೆಯ ಸಂಧಿಯಲ್ಲಿ | ,, |
| ೩೦ ನೆಯ ಸಂಧಿಯಲ್ಲಿ | ಕೇತಾರಗೌಳ |
| ೩೧ ನೆಯ ಸಂಧಿಯಲ್ಲಿ | ಶಾಂತಮಲಹರಿ |
| ೩೨ ನೆಯ ಸಂಧಿಯಲ್ಲಿ | ಕನ್ನಡಗೌಳ |
| ೩೩ ನೆಯ ಸಂಧಿಯಲ್ಲಿ | ಮಲಹರಿ |
| ೩೪ ನೆಯ ಸಂಧಿಯಲ್ಲಿ | ,, |
| ೩೫ ನೆಯ ಸಂಧಿಯಲ್ಲಿ | ನಾದನಾಮಕ್ರಿಯೆ |
| ೩೬ ನೆಯ ಸಂಧಿಯಲ್ಲಿ | ಬವುಳಿ |
| ೩೭ ನೆಯ ಸಂಧಿಯಲ್ಲಿ | ನಾಟಿ |
| ೩೮ ನೆಯ ಸಂಧಿಯಲ್ಲಿ | ಮಲಹರಿ |
| ೩೯ ನೆಯ ಸಂಧಿಯಲ್ಲಿ | ಬವುಳಿ |
| ೪೦ ನೆಯ ಸಂಧಿಯಲ್ಲಿ | ಓಲೆಯು ಹೋಗಿದೆ. |

ಈ ನಾರಣಪ್ಪನು ತನ್ನ ಭಾರತವನ್ನು ರಾಗದಿಂದ ಎಲ್ಲರಿಗೂ ತಿಳಿಯುವಂತೆ ಓದುತ್ತಾ ಜನರ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿದ್ದುದರಿಂದಲೇ ಈ ಗ್ರಂಥಕ್ಕೆ ಬಹುಪ್ರಾಶಸ್ತ್ಯವೂ ಎಲ್ಲಾ ಕಡೆಯಲ್ಲಿಯೂ ಶೀಘ್ರಪ್ರಚಾರವೂ ಉಂಟಾಯಿತೆಂದೂಹಿಸ ಬಹುದು.

ಈ ಕವಿಯ ಮತದ ವಿಷಯದಲ್ಲಿ ಅನೇಕರು ಅನೇಕವಿಧವಾಗಿ ಹೇಳುತ್ತಾರೆ. ಹಿಂದೆ ಹೇಳಿರುವಂತೆ ಹೆಚ್ಚಾಗಿ ಸೇರಿಸಿರುವ ಭಾಗಗಳನ್ನು ಬಿಟ್ಟರೆ ದ್ವೈತಮತದ ವೈಷ್ಣವಬ್ರಾಹ್ಮಣನೆಂದು ಹೇಳುವುದಕ್ಕೆ ಸಾಕಾದಷ್ಟು ಪ್ರಮಾಣವು ದೊರೆಯುವುದಿಲ್ಲ.

ಮತ್ತು

"ಶಿವನ ಬಲದಿಂದಧಿಕ ಬಲವೆನು ಕಾಣೆ" (೩-೩೧)

"ಸಿರಿರಹಿತ ಶಿವನಾದೊಡಾತನ ಸರಕುಮಾಡದು ಲೋಕ" (೩-೩೭)

"ಭಾಳನೇತ್ರನು ದೈವದೊಳು" (೩-೬೪)

"ಅಭವನಂಘ್ರಿಯ ಸೇವೆಯೊಳು ಹರಿನಿಭನೆನಿಸಿ" (೩-೭೭)

"ಹರಿಬಕುತಿ ಲೋಲುಪನೆನಿಸಿ ಶಂ<br>
ಕರನ ಬದ್ಧದ್ವೇಷಿಯಹ ಶಂ<br>
ಕರನ ಭಕ್ತಿಯೊಳಧಿಕನಾಗಿಯೆ ವಿಷ್ಣುವಿನ ಮೇಲೆ ।<br>
ಎಟಕವಿಲ್ಲದ ಕರ್ಮಚಂಡಾ<br>
ಲರುಗಳಪ್ಪತ್ತೇಳುಕೋಟಿಯು<br>
ನರಕದೊಳಗೋಲಾಡುತಿಹರವನೀಶ ಕೇಳೆಂದ" ॥

ಸಂಧಿ ೭, ೧೧೩.

"ಹಲವು ವರ್ಣದೊಳೆಸೆವ ಗೋಸಂ<br>
ಕುಲದೊಳೊಂದೇ ವರ್ಣದೊಳು ಕಂ<br>
ಗೊಳಿಸುವೀಕ್ಷೀರಾಮೃತವು ಮೈಗೊಂಡು ತೋರ್ಪಂತೆ ।<br>
ಹೊಲಬುಗೆಟ್ಟ ಚರಾಚರಂಗಳ<br>
ಸುಳುವಿನೊಳು ಸುಳಿವಡಗಿ ಕಡೆಯೊಳು<br>
ನಿಲುವ ನಿಜ ಮೊಂದಲ್ಲದೆರಡಿಲ್ಲೆಂದನಾಮುನಿಪ" ॥

ಸಂಧಿ ೪, ೧೩.

ಬಂದು ವಸ್ತುವನೆರಡು ಮಾಡುವೆ<br>
ನೆಂದು ಬುದ್ಧಿಭ್ರಾಂತಿಯೊಳು ಮನ<br>
ಸಂದು ಸಮ್ಯಗ್ಜ್ಞಾನದುದಯದ ನೆಲೆಯ ಕಾಣಿಸದೆ ।

ದಂದುಗಂಬಡುತಿಹುದು ತತ್ತ್ವದ
ಹಿಂದುಮುಂದಱಿಯದೆ ಮಹಾತ್ಮರು
ಬಂದ ಪಥದೊಳು ಬಾರದೇ ಕಿಡುತಿಹುದು ಜಗವೆಂದ ॥

ಸಂಧಿ ೪, ೧೬.

ಬಂದು ಪರವಸ್ತುವಿನ ಬಱಿಯೊಳು
ಬಂದುವಬುಜಭವಾಂಡ ಕೋಟಿಗೆ
ಛಂದೊಪವು ಬೇಱಿಲ್ಲ ಸರ್ವವು ವಿಷ್ಣುಮಯವೆಂದ ॥

ಸಂಧಿ ೪, ೨೮.

ಜೀವಪರಮರಭೇದವೆನು ಸಂ
ಭಾವಿಸದೆ ವೇದಾನ್ತಶಾಸ್ತ್ರವ
ನಾವಮುಖವೆಂದಱಿಯದೇ ದಾಸೋಽಹವೆಂದೆನುತೆ ।
ಕೋವಿದರ ಸಂಗವನುಜಿದು ಮಾ
ಯಾವಿಲಾಸದ ಬಗೆಯ ನೋಡದೆ
ಸಾವುತಿಹುದೈ ದ್ವೈತವವನೀಪಾಲ ಕೇಳೆಂದ ॥

ಸಂಧಿ ೪, ೭೭.

ಉತ್ತಮರ ಸಂಗದೊಳಗೋಲಾ
ಡುತ್ತೆ ದುರ್ವಿಷಯಂಗಳನು ಮುಱಿ
ದೊತ್ತಿ ಸಕಲಚರಾಚರದ ಸುಖದುಃಖವನು ತಾನು ।
ಹೊತ್ತು ನಡೆಯುತೆ ಪುಣ್ಯಪಾಪವಿ
ದೆತ್ತಣದು ತನಗೆಂಬ ಕಾಣಿಕೆ
ಯುತ್ತರೋತ್ತರಸಿದ್ಧಿ ಚಿತ್ತೈಸೆಂದನಾಮುನಿಪ ॥

ಸಂಧಿ ೪, ೭೮.

ಎಂಬುವೇ ಮೊದಲಾದ ವಚನಗಳು ಪರಿಶೀಲಿಸಿದರೆ ದ್ವೈತ ಮತಕ್ಕೆ ವಿರುದ್ಧವಾಗಿ ತೋರುತ್ತವೆ. ಆದುದರಿಂದ ಈ ಕವಿಯು ಅದ್ವೈತಿಯೆಂದೇ ಹೇಳಬಹುದು. ಈ ವಿಷಯವನ್ನು ಮ॥ ರಾ॥ ಬಿ. ಕೃಷ್ಣಪ್ಪನವರು ೧೯೦೧ನೆಯ ವರುಷದ ಎಂಟ್ರೆನ್ಸ್ ಪರೀಕ್ಷೆಗೆ ನಿಯಮಿತವಾದ ಪದ್ಯಗ್ರಂಥದ ಪೀಠಿಕೆಯಲ್ಲಿ ವಿಸ್ತಾರಪಡಿಸಿ ಬರೆದಿರುವುದರಿಂದ ಇಲ್ಲಿ ಸಂಕ್ಷೇಪಿಸಿದೆ.

ಆದರೆ ಮ॥ ರಾ॥ ನರಸಿಂಹಾಚಾರ್ಯರೂ ಮ॥ ರಾ॥ ಕೃಷ್ಣಪ್ಪನವರೂ ನಾರಣಪ್ಪನು ಶೈವನಾಗಿದ್ದ ಚಾಮರಸನ ತಂಗಿಯನ್ನು ಮದುವೆ ಮಾಡಿಕೊಂಡಿದ್ದನೆಂದೂ ಪ್ರೌಢದೇವರಾಯನ ಕಾಲದಲ್ಲಿದ್ದವನೆಂದೂ ೧೪೩೦ನೆಯ ವರ್ಷವೇ ಇವನ ನಿಜವಾದ ಕಾಲವೆಂದೂ ಹೇಳುತ್ತಾರೆ. ಈ ವಿಷಯಗಳನ್ನು ಚೋರಬಸವಚರಿತ್ರೆ, ಗುರುರಾಜ ಚಾರಿತ್ರ, ಭೈರವೇಶ್ವರಕಾವ್ಯಕಥಾಸೂತ್ರರತ್ನಾಕರ, ಎಂಬ ಗ್ರಂಥಗಳಲ್ಲಿ ಹೇಳಿರುವ ವರ್ಣನೆಗಳಿಂದ ದೃಢಪಡಿಸುತ್ತಾರೆ. ಆ ಗ್ರಂಥಗಳಲ್ಲಿ ಹೇಳಿರುವುದೇನೆಂದರೆ- ಚೋರಬಸವ ಚರಿತ್ರೆಯಲ್ಲಿ—ಚಾಮರಸನು ತೀರ್ಥಯಾತ್ರೆಯನ್ನು ಮಾಡಿಕೊಂಡು ಹಂಪೆಯ ಹರಿಹರಶಿವಾಚಾರ್ಯನ ಸಮೀಪಕ್ಕೆ ಬರಲು ಆತನು ಎದ್ದು ಬಂದು ಚಾಮರಸನ ಕೈಯಂ ಪಿಡಿದು ಕರೆದುಯ್ದು ಅಧಿಕಾಸನವನಿತ್ತು ಕುಳ್ಳಿರಿಸಿ ತತ್ಕಾಲಯೋಗ್ಯೋಪಚಾರಂಗಳಂ ಮಾಡಿ ಎತ್ತಣಿಂ ಬಂದೆ ? ಪುರವಾವುದು ? ಪೆಸರೇನು ? ವಿರತಿಯಂ ಕೈಗೊಂಡುದೇಕೆ ? ಕ್ರಮವಾಗಿ ಹೇಳು ಎಂದು ಚಾಮರಸನಂ ಕೇಳಲು ಚಾಮರಸನು.

ಗುರುವೆ ನಾಂ ಪುಟ್ಟಿದೆಡೆ ಗದುಗು ಚಾಮರಸನೆಂ
ಬರುವೆನ್ನ ಪೆಸರ ನಮ್ಮನುಜಾತೆಯೊರ್ವಳನು
ವರಕುಮಾರವ್ಯಾಸಗಿತ್ತಿಹೆವು ವವನು ನಾವ್ಪಂ ಸುಖದೊಳಿರುತಿ
ರ್ದೆವು ।

ಇರುತಿರಲ್ಕೊಂದು ವಾಸರದೆ ನಮ್ಮಿರ್ವರಾ
ಪುರದಧಿಪ ಕರಿಸಿ ಗೀರ್ವಾಣವಾಗ್ಭಾರತವ
ನಿರದೆ ಕನ್ನಡದ ನುಡಿಯಿಂ ಪೇಳಿರೆಂದು ನೇಮಿಸಲು ಕೈಕೊಂಡು
ಬಂದು ॥

ಪೂರ್ವಾರ್ಧವಾನುತ್ತರಾರ್ಧವವ ಮಾಡುತಿರೆ
ಪೂರ್ವದೇಶಗಳಿಂದೆ ವಿದ್ವಾಂಸರೈತಂದು
ಪುರ್ವೀಶನಿಂದೆ ತೇಜಂಬಡೆದು ವೀವಾರ್ತೆಗೇಳಿ ನಮ್ಮೆಡೆಗೆ ಬರಲು।

ಗರ್ವಮುಱದವರ್ಗೆ ಯೋಗ್ಯೋಪಚಾರಂಗೈದು
ತವರ್ಷಾಯಿಯಾಸನವನಿತ್ತು ಕುಳ್ಳಿರಿಸಾದಿ
ಪರ್ವಸಹಮುಸಿರ್ದನಿತು ಪುಸ್ತಕವ ಮುಂದಿಡಲು ಮೋದಿಯ
ಥೈರ್ಸಿ ನಲಿದು ॥

ಲಕ್ಷಣಾಲಂಕಾರರಸಭಾವಚಿತ್ರಾಪ
ರೋಕ್ಷದಿಂ ರಸಭರಿತಮಾಗಿರಲುಮವರು ಪ
ದೀರ್ಕ್ಷಿಸುತ್ತಿರಲಾಗ ನಾನು ಪುಸ್ತಕವ ಬೆರಲಿಂ ಪುಸುಕೆ ರುಧಿರ್ಗ
ರೆದುದು ।

ಅದನ್ನು ನೋಡಿ ವಿಸ್ಮಿತರಾಗಿ ಹೋಗುತ್ತಿದ್ದ ಆ ಭೂಸುರರು ಕುಮಾರವ್ಯಾಸನ ಪುಸ್ತಕವನ್ನು ನೋಡಿ ನಿಸ್ಸಾರವಾಡಲು ಅವನು ಕೋಪಿಸಿಕೊಂಡು ಹೆಂಡತಿಯನ್ನು ಕರೆದು ನಿಮ್ಮಣ್ಣನ ಕಾವ್ಯಕ್ಕೆ ನನ್ನ ಕಾವ್ಯವು ನಿಸ್ಸಾರವಾಯ್ತು. ದೊರೆಯಿಂದ ನನಗೆ ಯಾವ ಮರ್‍ಯಾದೆಯೂ ದೊರೆಯಲಾರದು. ನಾನಿಲ್ಲಿರದೆ ಕಾಶೀಯಾತ್ರೆಗೈದಪೆನು. ಎಂದು ಹೇಳಲು ಪತಿವಿರಹವನ್ನು ಸಹಿಸಲಾರದ ಆತನ ಹೆಂಡತಿಯು ಪತಿಯೊಡನೆ ನಾನು ಆ ಪುಸ್ತಕವನ್ನು ತಂದು ಸುಟ್ಟುಹಾಕುವೆನು. ನೀಂ ಸೈರಿಸೆಂದು ಹೇಳಿ ನಾನಿಲ್ಲದಾಗ ನನ್ನ ಮನೆಗೆ ಬಂದು ಆ ಪುಸ್ತಕವನ್ನು ತೆಗೆದು ಕೊಂಡು ಹೋಗಿ ದಹಿಸಿ ಗಂಡನನ್ನು ಸಮಾಧಾನ ಪಡಿಸಿದಳು. ನಾನು ಆ ಪುಸ್ತಕವು ಹೋದುದರಿಂದ ವ್ಯಥೆಯನ್ನು ಹೊಂದಿ ಎಲ್ಲವನ್ನೂ ತ್ಯಜಿಸಿ ಯತಿಯು ಮಾರ್ಗದಿಂದ ತೀರ್ಥಯಾತ್ರೆ ಮಾಡುತ್ತಾ ಇಲ್ಲಿಗೆ ಬಂದು ಪೂಜ್ಯರಾದ ನಿಮ್ಮನ್ನು ಕಂಡೆನು, ಎಂದು ಹೇಳಿ ನೀವು ಪ್ರಸನ್ನರಾಗಿ ರಾಘವಾಂಕನನ್ನು ರಕ್ಷಿಸಿದುದನ್ನು ನಾನು ಕೇಳಿದ್ದೆನು. ನನ್ನನ್ನು ಔದಾಸೀನ್ಯವಹಿಸದೆ ಧನ್ಯನಂ ಮಾಡಬೇಕು.” ಎಂದು ಪ್ರಾರ್ಥಿಸಿದನು. ಹರೀಶ್ವರನು ಆತನನ್ನು ಕುರಿತು ನೀನು ನರಸ್ತುತಿ ಯನ್ನು ಮಾಡಿದುದರಿಂದ ಉಂಟಾದ ಮಹಾದೋಷವು ಶರಣರ ಮಹಿಮೆಯನ್ನು ಕೇಳಿ ಪಠಿಸಿ ಅವರನ್ನು ಪೊಗಳಿದೊಡೆ ಪೋಗುವುದು, ಲಿಂಗದೀಕ್ಷೆಯನ್ನು ಪಡೆದೊಡೆ ನಿಜಮೋಕ್ಷಮಪ್ಪುದು ಎಂದು ಹೇಳಿ

ಪ್ರಮಥೇಂದ್ರ ಘೋರಬಸವನ ಮಹಿಮೆಯನ್ನು ವರ್ಣಿಸಿ ಅವನ ನಾಲಿಗೆ
ಯಲ್ಲಿ ಪಂಚಾಕ್ಷರಿಯನ್ನು ಬರೆದು ಕಳುಹಲು ಅವನು ವಿರೂಪಾಕ್ಷ
ನನ್ನೊಲಿಸಿ ಅವನಪ್ಪಣೆಯನ್ನು ತಾಳಿ ಉದ್ಭಾನವೀರಭದ್ರನಲ್ಲಿಗೆ ಬಂದು
ಅವನಿಂದ ಲಿಂಗೋಪದೇಶದೀಕ್ಷೆಯನ್ನು ಪಡೆದು ಅವನ ನಿರೂಪದಿಂದ
ಪ್ರಭುಲಿಂಗ ಲೀಲೆಯನ್ನು ತಿಳಿದುಕೊಂಡು ಹಂಪೆಯಲ್ಲಿ ರಾಘವ, ಭೀಮ
ಕವಿ, ಲಕ್ಕಣ, ಮಂತ್ರಿ ಮೊದಲಾದ ಶಿವಭಕ್ತಕವಿಗಳ ಮಧ್ಯದಲ್ಲಿ ಬೆಳಗು
ತ್ತಿರ್ದ ಹರಿಹರಶಿವಾಚಾರ್ಯನೆಡೆಗೈತಂದು ಅವನೊಡನೆ ಪ್ರಭುಲಿಂಗ
ಲೀಲೆಯನ್ನು ಹೇಳುತ್ತಿರ್ದನು. ಈ ವಾರ್ತೆಯು ದೇವರಾಜನಿಗೆ
ತಿಳಿಯಲು ಆ ರಾಜನು ಚಾಮರಸನನ್ನು ಕರೆಯಿಸಿ ಅವನು ರಚಿಸಿದ
ಪ್ರಭುಲಿಂಗ ಲೀಲೆಯನ್ನು ಓದಿಸಲು ಅಲ್ಲಿದ್ದ ಕವಿಗಳೆಲ್ಲ ಮುಕ್ತಿ
ಸಾಮ್ರಾಜ್ಯ ಸಾಧನವಾವುದೆಂದು ಹೊಗಳಿದರು. ದೇವರಾಜನು ಮೆಚ್ಚಿ
ಚಾಮರಸನನ್ನು ಪಟ್ಟದ ಗಜದ ಮೇಲೆ ಕೂರಿಸಿ ಚಿನ್ನದ ಪಲ್ಲಕ್ಕಿ
ಯಲ್ಲಿ ಪುಸ್ತಕವನ್ನಿಟ್ಟು ಪಂಚಕ್ರೋಶದಲ್ಲಿ ಮೆರೆವಣಿಗೆಯಂ ಮಾಡಿಸಿ
ಮುಂಗಡೆಯ ಸೋಪಾನವಿಳಿದು ರಥವೀಧಿವಿಡಿದೈದಿ ವಿರೂಪಾಕ್ಷನಂ
ಬೀಳ್ಕೊಂಡು ಹರೀಶ್ವರನ ಮಠದಲ್ಲಿಳುಹಿ ಅರಮನೆಗೆ ಹೋದನು. ಇತ್ತ
ಚಾಮರಸನು ಪ್ರೀತಿಯಿಂದ ಶಿವಗೋಷ್ಠಿಯಲ್ಲಿರಲು ಒಬ್ಬ ಭೂಸುರನು
ಬಂದು ಗದುಗಿನ ರಾಜನು ಕುಮಾರವ್ಯಾಸನಿಗೆ ಕನಕಸ್ನಾನವನ್ನು
ಮಾಡಿಸುತ್ತಿರುವನು ಎಂದು ಹೇಳಲು ಚಾಮರಸನು ಕೋಪಾರೂಢ
ನಾಗಿ ಪಂಡಿತರೊಡನೆ ಅಂದಣ, ಭೇರಿ, ಕಹಳೆ, ಭಟ್ಟರ ಪೊಗಳಿಕೆ
ಮೊದಲಾದ ಆಡಂಬರದಿಂದ ಹೊರಟು ಆ ಊರಿನ ಉಪವನಕ್ಕೈದಿ
ಬೀಡಂ ಬಿಟ್ಟು ಭೇರಿಯನ್ನು ಹೊಡಿಸಲು ಈ ಸಮಾಚಾರವನ್ನು
ರೂಢೀಶನು ಕೇಳಿ ಇದಿರ್ಗೊಂಡು ಮೆರೆವಣಿಗೆ ಮಾಡಿಸಿಕೊಂಡು
ಕರೆದುಯ್ದು ಉನ್ನತಾಸನದಲ್ಲಿ ಕೂರಿಸಿ ಉಪಚರಿಸಿ ಕುಮಾರವ್ಯಾಸನು
ನೀವು ಹೋದಮೇಲೆ ಭಾರತವನ್ನು ಸಂಪೂರ್ತಿಗೊಳಿಸಿದುದಕ್ಕಾಗಿ
ಅವನಿಗೆ ಸುವರ್ಣಾಭಿಷೇಕವನ್ನು ಮಾಡಿಸುತ್ತಿರುವೆನು. ಈ ಕಾಲಕ್ಕೆ
ಸರಿಯಾಗಿ ನೀವೂ ಬಂದಿರಿ ಎಂದು ಹೇಳಲು ಚಾಮರಸನು ಶವಕೆ ಶೃಂಗಾರ
ಮಾಡಿದಂತೆ ಸತ್ತಪ್ರಬಂಧಕ್ಕೆ ಕನಕಸ್ನಾನವನ್ನು ಮಾಡಿದೊಡೆ ಫಲ

ವೇನು ? ವ್ಯರ್ಥವೆನೆ ರಾಜನು ಜೀವನದ ಪ್ರಬಂಧಗಳುಂಟೆ ? ಎಂಬು ಕೇಳಿದುದಕ್ಕೆ ಉಂಟೆಂದು ಹೇಳಿ ಚಾಮರಸನು ತಾನು ಮಾಡಿದ ಪ್ರಭುಲಿಂಗ ಲೀಲೆಯನ್ನು ಓದಿ ಯಭಿಪ್ರಾಯವನ್ನು ವಿಸ್ತರಿಸಲು ರಾಜನು ದಿಟವೆಂದು ಚಾಮರಸಂಗೆರಗಿ ಅವನು ಪೇಳ್ದಂತೆ ಕುಮಾರವ್ಯಾಸನ ಭಾರತವನ್ನು ನಿಸ್ಸಾರಗೈದು ಕನಕಸ್ನಾನವಂ ಪರಿಹರಿಸಿ ಚಾಮರಸ ನಿಂದ ವೀರಶೈವದೀಕ್ಷೆಯನ್ನು ಪಡೆದು ಕೊಂಡನು ಎಂದು ಹೇಳಿದೆ.
ಗುರುರಾಜ ಚಾರಿತ್ರದಲ್ಲಿ :—

ಕವಿಗಮಕಿಗಳು ಶಾಸ್ತ್ರಕೋವಿದರು ಪಂಡಿತರು
ವಿವಿಧೇತಿಹಾಸಪೌರಾಣಂಗಳಂತಿಳಿದ
ಪ್ರವರಬುಧರಾಸ್ಥಾನದೊಳು ಕುಳಿತು ಕವಿತಾಪ್ರೌಢ
ರಾರೆಂದೆನೆ ।
ವಿವರಿಸೀವರ್ತಮಾನದೆ ಕುಮಾರವ್ಯಾಸ
ಕವಿವಿನುತ ಚಾಮರಸರೆಂದಿರ್ವರಂ ಕರೆದು
ಭುವನನುತಭಾರತವ ಕರ್ಣಾಟಭಾಷೆಯೊಳಗುಸಿರಿ ನೀವೆಂದೊರೆ
ಯಲು ॥
ಇಬ್ಬರುಂ ಬೇರೆಯೊಂದೊಂದು ಕೃತಿವೇಳುತಿರೆ
ಕಬ್ಬಿಗರು ಬಂದು ಚಾಮಣ್ಣ ನಿನ್ನಯ ಕಾವ್ಯ
ದಬ್ಬರವ ನೋಳ್ಪೆವೆನೆ ಪುಸ್ತಕವ ತಂದು ಕಾಳಗದ ಕಥನದ
ವಾಲೆಯ ॥
ಹೆಬ್ಬೆರಲೊಳಂ ಹಿಡಿದು ಹಿಂಡೆ ರಕ್ತಂ ಬೀಳೆ
ಸಬ್ಬರೆಲ್ಲಂ ಕಾಣುತಹುದು ರಸಕಾವ್ಯವೆಂ
ದುಬ್ಬಿ ಕೊಂಡಾಡುತ್ತೆ ಪೋದರಾವಾರ್ತೆಯ ಕುಮಾರವ್ಯಾಸಂ
ಕೇಳುತೆ ॥
ಚಿಂತಿಸುತೆ ಕಲುಷಮಾನಸನಾಗಿ ತನ್ನ ನಿಜ
ಕಾಂತೆಯೊಡನೆಂದ ನಿಮ್ಮಣ್ಣ ಹೇಳಿದ ಕೃತಿಯ
ನೀಂ ತಂದು ಸುಟ್ಟು ಬಿಟ್ಟೊಡಾಂ ಬಾಳ್ವನಲ್ಲದೊಡೆ ಸತ್ತಪೆ
ನೆನ್ನಲು ।

ಅಂತು ಗೈದಳು. ನೀರೆ ಕೃತಿ ಪೋದುದಂ ತಿಳಿದು
ಭ್ರಾಂತಿಯಿಂ ಚಾಮರಸನಿರೆ ಸ್ವಪ್ನದೊಳು ಶಿವಂ
ಮುಂತೆ ಪ್ರತ್ಯಕ್ಷಮಾಗೆಮ್ಮ ಕೀರ್ತಿಸದನ್ಯದೈವಮಂ ಕೀರ್ತಿಸು
ವರೆ ||

ಮುನ್ನ ಕಕ್ಕಯ್ಯಗಳ ಸುಪ್ರಸಾದವ ತಂದು
ಸನ್ನುತಾಮಲಬಸವಗಿತ್ತಪಿಲಕ ನೀನು
ಚೆನ್ನಾಗಿ ತಿಳಿದುಕೋ ಯೆಂದು ಸೂಚಿಸಿ ಪೋಗಲೆಚ್ಚತ್ತು
ಸಂತಸದೊಳು |

ಮನ್ನಾಥ ನೀನೆ ನಿನ್ನಯ ಕರುಣದಿಂ ಪೊರೆದೆ
ಯೆನ್ನಿಂದೆ ಧನ್ಯರಿಲ್ಲೆಂದು ವೈರಾಗ್ಯಸಂ
ಪನ್ನತೆಯೊಳುಂ ನಿರಾಕರಿಸಿ ಸಂಸಾರಮಂ ಪಂಪಾಪುರಕ್ಕೆಯ್ದಿದ ||

ಎಂಬುದೇ ಮೊದಲಾದ ವಿಷಯವು ಸಂಕ್ಷೇಪವಾಗಿ ಹೇಳಲ್ಪಟ್ಟದೆ.

ಭೈರವೇಶ್ವರಕಾವ್ಯ ಕಥಾಸೂತ್ರರತ್ನಾಕರದಲ್ಲಿ:—

ಪಂಪಾಕ್ಷೇತ್ರದಲ್ಲಿ ಬಪ್ಪುವ ಹಂಪೆಯ ಶಂಕರಾಚಾರ್ಯರ ಮಗ ಮಾದರಸನು; ಆವನ ಮಗ ಹಂಪೆಯ ಹರೀಶ್ವರನು; ಆವನ ಗುರು ಮಾಯಿದೇವಾಚಾರ್ಯನು. ಹರೀಶ್ವರನು ಮಾಯಿದೇವಾಚಾರ್ಯನಿಂದ ಶೈವೋಪದೇಶವಂ ಪಡೆದುಕೊಂಡಿದ್ದನು. ದ್ವಾರಸಮುದ್ರದ ನೃಸಿಂಹ ಬಲ್ಲಾಳನು ಪದ್ಮರಸರೆಂಬ ಆರಾಧ್ಯಪುಂಗವರ್ಗೆ ಪ್ರಧಾನಿಪಟ್ಟಮಂ ಕಟ್ಟಿ ಹಂಪೆಯ ಹರೀಶ್ವರದೇವಂಗೆ ರಹಸ್ಯವಂ ಬರೆವ ಕರಣಿಕರ ಹಿರಿಯತನವಂ ಕೊಟ್ಟು ಕರಣಿಕತ್ವಕೆ ಮಡಗಿಕೊಂಡಿರಲು ಹರಿಯಣ್ಣ ಪಂಡಿತನು ವಿಷ್ಣು ಮೊದಲಾದನ್ಯದೈವಕ್ಕೆ ಪೊಡೆಮಡಲೊಲ್ಲೆನು ಎಂದು ಪ್ರತಿಜ್ಞೆಯಂ ಮಾಡಿಕೊಂಡು ಪ್ರತಿಭಟಿಸಿದವರಿಗೆ ಪ್ರಭಾವವಂ ತೋರಿಸಿ ರಾಜನಿಂದ ಬಹುಮಾನವನ್ನು ಪಡೆದನು. ಎಂಬುದೇ ಮೊದಲಾದ ವಿಷಯವು ಹೇಳಲ್ಪಟ್ಟದೆ. ಮತ್ತು ಆಂಧ್ರದೇಶದ ಓರುಗಲ್ಲೆಂಬ ಪಟ್ಟಣದಲ್ಲಿ ಪ್ರತಾಪರುದ್ರನೆಂಬ ಅರಸಿರಲು ಅಲ್ಲಿದ್ದ ಏಕದಂಡಿ, ದ್ವಿದಂಡಿ,

ತ್ರಿದಂಡಿ ಯೆಂಬ ವೈಷ್ಣವಕವಿಗಳನ್ನು ವಿದ್ಯಾನಗರದ ಉಭಯ ಕವಿ
ಶರಭ ಭೇರುಂಡನೆಂಬ ಬಿರುದಾಂತ ರಾಘವಪಂಡಿತನು ಕವಿಮುಖಕವಾಟ
ವೆಂಬ ಪದ್ಯಶಾಸ್ತ್ರವಂ ರಚಿಸಿ ತತ್ಪ್ರತಮೂಲಕವಾಗಿ ಸೋಲಿಸಿ
ರಾಜನಿಂದ ಅವರನ್ನು ಹೊರಡಿಸಿ ತಾನು ಮರ್ಯಾದೆಯನ್ನು ಹೊಂದಿದನು ;
ಎಂಬುದೇ ಮೊದಲಾದ ವಿಷಯವೂ ಹೇಳಲ್ಪಟ್ಟಿದೆ.

ಇದರಲ್ಲಿ ಚೋರಬಸವ ಚರಿತ್ರೆಯಲ್ಲಿ 'ಪೂರ್ವಾರ್ಧಮಾನುತ್ತರಾ
ರ್ಧವವ ಮಾಡುತಿರೆ' ಎಂಬುದಕ್ಕೆ ಒಂದು ಪದ್ಯದಲ್ಲಿಯೇ ಚಾಮರಸನು
ಪೂರ್ವಾರ್ಧವನ್ನೂ ಕುಮಾರವ್ಯಾಸನು ಉತ್ತರಾರ್ಧವನ್ನೂ ಮಾಡು
ತ್ತಿದ್ದರು ಎಂದು ಅರ್ಥಮಾಡಿದರೆ ಗ್ರಂಥಪೃಥಕ್ತ್ವವೂ ಚಾಮರಸನ
ಗ್ರಂಥಕ್ಕೆ ಮಾತ್ರ ಪ್ರಶಂಸೆಯೂ ಪುಸ್ತಕದಾಹವೂ ಸಂಭವಿಸುವುದಿಲ್ಲ.
ಗುರುರಾಜಚಾರಿತ್ರದ 'ಇಬ್ಬರುಂ ಬೇರೆಯೊಂದೊಂದು ಕೃತಿಪೇಳುತಿರೆ'
ಎಂಬ ವಚನವು ವಿರುದ್ಧವಾಗುತ್ತದೆ. ಆದುದರಿಂದ ಪೂರ್ವಾರ್ಧವನ್ನು
ಎಂದರೆ ಆದಿಪಂಚಕವನ್ನು ಚಾಮರಸನೂ ಉತ್ತರಾರ್ಧವ ಎಂದರೆ
ಯುದ್ಧಪಂಚಕವನ್ನು ಕುಮಾರವ್ಯಾಸನೂ ಬರೆದರೆಂದು ಹೇಳಬೇಕು.
ಹಾಗೆ ಹೇಳಿದರೆ 'ನಾನು ಪುಸ್ತಕವ ಬೆರಲಿಂ ಪುಸುಕೆ ರುಧಿರ್ಗರೆದುದು'
ಎಂಬ ಚೋರಬಸವಚರಿತ್ರೆಯ ವಚನವೂ 'ಚಾಮಣ್ಣ ನಿನ್ನಯ
ಕಾವ್ಯದಬ್ಬರವನೋಳ್ಪೆನೆ ಪುಸ್ತಕವ ತಂದು ಕಾಳಗದ ಕಥನದ
ಮಾಲೆಯ ಹೆಬ್ಬೆರಲೊಳಂ ಹಿಡಿದು ಹಿಂಡೆ ರಕ್ತಂ ಬೀಳೆ' ಎಂಬ ಗುರು
ರಾಜ ಚಾರಿತ್ರದ ವಚನವೂ ಯುದ್ಧಭಾಗವನ್ನು ಚಾಮರಸನ ಗ್ರಂಥ
ವೆಂದು ತಿಳಿಸುವುದರಿಂದ ವಿರುದ್ಧವಾಗುತ್ತವೆ. ಆದುದರಿಂದ ವಿರುದ್ಧಾರ್ಥ
ಪ್ರತಿ ಪಾದಕಗಳಾದ ಈ ಗ್ರಂಥಗಳು ಅಪ್ರಮಾಣಗಳು ಎಂದು
ಹೇಳುವುದೂ ಯುಕ್ತವಾಗುವುದಿಲ್ಲ. ಆದಿಪಂಚಕದಲ್ಲಿ ಹೇಳಿರುವ
ಯುದ್ಧವಿಷಯದ ಮಾಲೆಯೆಂದು ಹೇಳಿ ಸಮಾಧಾನಮಾಡಿಕೊಳ್ಳಬಹುದು.
ಶೈವಸ್ತುತೀತರನಿಂದಾತಿಶಯೋಕ್ತಿಗಳು ಮತಾಭಿಮಾನದಿಂದ ಕಲ್ಪಿತ
ಗಳಾದರೂ ಈ ಗ್ರಂಥಗಳಲ್ಲಿ ಹೇಳಿರುವ ದೇಶಗಳೂ ರಾಜರೂ ಅಧಿಕಾರಿ
ಗಳೂ ಕವಿಗಳೂ ಯಥಾರ್ಥವಾಗಿಯೇ ಹೇಳಲ್ಪಟ್ಟಿದಾರೆಂಬುದರಲ್ಲಿ

ಪ್ರಬಲವಾದಬಾಧಕಗಳಾವುವೂ ತೋರುವುದಿಲ್ಲ. ಆದುದರಿಂದ ಈ ಗ್ರಂಥಗಳಲ್ಲಿ ಹೇಳಿರುವುದನ್ನು ಆಧಾರವಾಗಿಟ್ಟುಕೊಂಡು ವಿಮರ್ಶೆ ಮಾಡಿದರೆ. —

ಕುಮಾರವ್ಯಾಸ, ಇವನ ಸಂಬಂಧಿಯಾಗಿಯೂ ವಿರೋಧಿಯಾಗಿಯೂ ಇದ್ದ ಚಾಮರಸ, ಚಾಮರಸನಿಗೆ ಲಿಂಗೋಪದೇಶ ದೀಕ್ಷೆಯನ್ನುಪದೇಶಿಸಿದ ಉದ್ಧಾನವೀರಭದ್ರ, ಚಾಮರಸನನ್ನು ಪಂಚಾಕ್ಷರಿಯನ್ನುಪದೇಶಿಸಿ ಉದ್ಧಾನವೀರಭದ್ರನ ಸಮಾಪಕ್ಕೆ ಕಳುಹಿಕೊಟ್ಟ ಹರಿಹರಶಿವಾಚಾರ್ಯ, ಹರಿಹರಶಿವಾಚಾರ್ಯನಿಂದ ರಕ್ಷಿತನಾದ ಅವನ ಭಾಗಿನೇಯನಾದ ರಾಘವಾಂಕ, ಚಾಮರಸನಿಗೆ ಬಹುಮಾನಮಾಡಿದ ಹಂಪೆಯ ದೇವರಾಜ, ಕುಮಾರವ್ಯಾಸನಿಗೆ ಕನ್ನಡದಲ್ಲಿ ಭಾರತವನ್ನು ಪೂರ್ಣವಾಗಿ ಮಾಡಿದುದಕ್ಕೋಸುಗ ಕನಕಸ್ನಾನವನ್ನು ಮಾಡಿಸುತ್ತಿದ್ದು, ಅದನ್ನು ಕೇಳಿ ಕುಪಿತನಾಗಿ ಬಂದ ಚಾಮರಸನಿಂದ ಬೋಧಿತನಾಗಿ, ಆತನ ಪ್ರಭುಲಿಂಗಲೀಲೆಯನ್ನು ಕೇಳಿ, ಭಾರತವನ್ನು ನಿಸ್ಸಾರಗೊಳಿಸಿ, ಕನಕಸ್ನಾನಮಂ ಪರಿಹರಿಸಿ, ವೀರಶೈವದೀಕ್ಷೆಯನ್ನು ಪಡೆದ ಗದುಗಿನೊಡೆಯ, ಹರಿಹರಶಿವಾಚಾರ್ಯನಿಂದ ಸತ್ಕೃತನಾಗಿ ಅವನಿಗೆ ವಿರೂಪಾಕ್ಷೈಕ್ಯ ಕಾಲವನ್ನುಪದೇಶಿಸಿದ ಕೆರೆಯಪದ್ಮರಸ, ಕೆರೆಯಪದ್ಮರಸನಿಗೆ ಪ್ರಧಾನಿಪಟ್ಟಮಂ ಕಟ್ಟಿ ಹಂಪೆಯ ಹರೀಶ್ವರನಿಗೆ ಕರಣಿಕರಪಿರಿಯತನಮಂ ಕೊಟ್ಟಿದ್ದ ದ್ವಾರಸಮುದ್ರದ ಅರಸನಾದ ನೃಸಿಂಹಬಲ್ಲಾಳ ರಾಘವಾಂಕಪಂಡಿತನಿಂದ ಕವಿಮುಖಕವಾಟವೆಂಬ ಗ್ರಂಥಮುಖದಿಂದ ಸೋಲಿಸಲ್ಪಟ್ಟ ಏಕದಂಡಿ, ದ್ವಿದಂಡಿ, ತ್ರಿದಂಡಿಗಳೆಂಬ ವೈಷ್ಣವ ಕವಿಗಳಿಗೆ ಆಶ್ರಯನಾಗಿದ್ದ ಓರುಗಲ್ಲಿನ ಆಂಧ್ರರಾಜ ಪ್ರತಾಪರುದ್ರ ಇವರೆಲ್ಲರೂ ಸಮಕಾಲಿಕರೆಂದು ನಿಸ್ಸಂದೇಹವಾಗಿ ತೋರುತ್ತದೆ. ಮತ್ತು ಗುರುರಾಜಚಾರಿತ್ರದಲ್ಲಿ ೧೩ನೆಯ ಸಂಧಿಯ ಆದಿಭಾಗದಲ್ಲಿ "ಎನೆ ಕೀರ್ತಿವೆತ್ತು ಪಂಪಾವಿರೂಪಾಕ್ಷಾಂಘ್ರಿಯನೆ ನುತಿಸಿ" ಎಂಬುದೇ ಮೊದಲಾದ ಪದ್ಯಗಳಿಂದ ಹೇಳಿರುವ ರಾಘವಾಂಕಾದಿಚರಿತ್ರಭಾಗದಲ್ಲಿ

ರಾಘವಾಂಕನು ಕುಮಾರವ್ಯಾಸನನ್ನು ಗೆಲಿದನೆಂದೂ ಪದ್ಮರಸನ ಬಳಿಗೆ ಹೋಗಿದ್ದನೆಂದೂ ಪ್ರತಾಪರುದ್ರನಿಂದ ಪೂಜೆಪಡೆದನೆಂದೂ ಪದ್ಮರಸನು ನೃಸಿಂಹ ಬಲ್ಲಾಳನ ಬಳಿಯಲ್ಲಿ ಮಂತ್ರಿಯಾಗಿದ್ದನೆಂದೂ ಹೇಳಿದೆ. ಇದರಿಂದಲೂ ರಾಘವಾಂಕ, ಕುಮಾರವ್ಯಾಸ, ಪದ್ಮರಸ, ಪ್ರತಾಪರುದ್ರ, ನೃಸಿಂಹ ಬಲ್ಲಾಳರು ಸಮಕಾಲದವರೆಂದು ತೋರುತ್ತದೆ. ನೃಸಿಂಹ ಬಲ್ಲಾಳನು ೧೨ನೆಯ ಶತಮಾನದವನಾದುದರಿಂದ ಇವನ ಮಂತ್ರಿಯಾದ ಪದ್ಮರಸನೂ ಪದ್ಮರಸನನ್ನು ಪ್ರತಿಭಟಿಸಿದ ರಾಘವಾಂಕನೂ ರಾಘವಾಂಕ ನಿಂದ ಜಿತನಾದ ಕುಮಾರವ್ಯಾಸನೂ ರಾಘವಾಂಕನಿಗೆ ಮರ್ಯಾದೆಯನ್ನು ಮಾಡಿದ ಪ್ರತಾಪರುದ್ರನೂ ೧೨ಯ ಶತಮಾನದವರೆಂದು ನಿಶ್ಚಿತವಾಗು ತ್ತದೆ. ನೃಸಿಂಹಬಲ್ಲಾಳನೂ ಇವನ ಮಗ ವೀರಬಲ್ಲಾಳನೂ ಹನ್ನೆರಡನೆಯಶತಮಾನದಲ್ಲಿದ್ದವರೆಂದು ರೈಸ್ ಸಾಹೇಬರು ತಮ್ಮ * ಗೆಜೆಟಿಯರಿನಲ್ಲಿ ಬರೆದಿರುತ್ತಾರೆ. ಕೃಷ್ಣಾ ಡಿಸ್ಟ್ರಿಕ್ಟಿನ ಚೆಬ್ರೋಲು ಪಟ್ಟಣದ ನಾಗೇಶ್ವರದೇವಾಲಯದ ಕಂಭದ ಮೇಲೆ ಕೆತ್ತಿರುವ ಶಾಸನದಲ್ಲಿರುವ :—

> ಏಷಾಂ ವಂಶೇ ರಘೂಣಾಂ ಕ್ಷಿತಿಪತಿರಭವದ್ದುರ್ಜಯಶ್ಶೌರ್ಯ
> ಕೇಲಿಃ ।
> ಸ್ಫೂರ್ಜದ್ಭೂಮಾ ತತೋಭೂತ್ ಪ್ರತಿಕರಟಘಟಾಶಾತನೋ ಬೇತ
> ರಾಜಃ ॥
> ಚಕ್ರೇ ವಿಕ್ರಾನ್ತಬಾಹುಸ್ತದನು ವಸುಮತೀಪಾಲನಂ ಪ್ರೋಲ
> ಭೂಪಃ ।
> ತತ್ಪುತ್ರೋ ರುದ್ರದೇವಸ್ತದುಪರಿ ಚ ನೃಪೋತ್ತಂಸರತ್ನಂ
> ಬಭೂವ ॥ ೮
> ತತಸ್ತತ್ಸೋದರ್ಯಃ ಸ್ವಭುಜಧೃತಸಾಮ್ರಾಜ್ಯಮಹಿಮಾ
> ಮಹಾದೇವಕ್ಷೋಣೀರಮಣ ಇತಿ ಗೀತಸ್ತ್ರಿಭುವನೇ ।

---

* ೧೮೯೯ನೇ ವರ್ಷದ ಮೈಸೂರ್ ಗೆಜೆಟಿಯರಿನ ಒಂದನೆಯ ಭಾಗದ ೪೯೯ ನೆಯ ಪುಟದಲ್ಲಿ.

ಅಭೂತ್ಸೋಮಾನಮ್ರಕ್ಷಿತಿಪತಿಶಿರೋಮಣ್ಣನಮಣಿ
ಪ್ರಭಾಭಿರ್ವ್ಯಕ್ತಾಪದಾಮ್ಬುರುಹಮಕರನ್ದವ್ಯತಿಕರಃ ॥ ೯

ಅಥಗಣಪತಿದೇವಃ ಪ್ರಾದುರಾಸೀದಮುಷ್ಮಾತ್ ।
ಸುರತರುರಿವಸಿಂಧೋಃಶ್ಲಾಘ್ಯವಿಶ್ರಾಣನಶ್ರೀಃ ॥

ಎಂಬ ಗ್ರಂಥಗಳಿಂದ ಸೂರ್ಯವಂಶ್ಯರಾದ ರಘುರಾಜರ ಕುಲದಲ್ಲಿ ಹುಟ್ಟಿದ * ದುರ್ಜಯನೆಂಬ ರಾಜನೂ ಅನನ್ತರದಲ್ಲಿ ವೇತರಾಜನೂ ಆ ಮೇಲೆ ಪ್ರೋಲರಾಜನೂ ಬಳಿಕ ಅವನ ಮಗನಾದ ರುದ್ರದೇವ ಅಥವಾ ಪ್ರತಾಪರುದ್ರನೆಂಬ ರಾಜನೂ (ನೃಪೋತ್ತಂಸರತ್ನಂ) ಆ ಮೇಲೆ ಅವನ ತಮ್ಮನಾದ ಮಹಾದೇವರಾಜನೂ ಆ ಮೇಲೆ ಅವನ ಮಗನಾದ ಗಣಪತಿ ರಾಜನೂ ಆಂಧ್ರದೇಶದ ಓರುಗಲ್ಲಿನಲ್ಲಿ ರಾಜ್ಯವಾಳುತ್ತಿದ್ದರೆಂದು ತಿಳಿಯುತ್ತದೆ.

---

* ವಿದ್ಯಾನಾಥನ ಪ್ರತಾಪರುದ್ರೀಯವೆಂಬ ಗ್ರಂಥದಲ್ಲಿ ಹೇಳಿರುವ :—

ಸೂರ್ಯಸೋಮಾನ್ವಯಾವಾತ್ಯಮಹತ್ತ್ವಾದ್ವ್ಯಾಧರೀಕೃತಾ ।
ಅಸ್ಮಾಭಿರಧಿಕುರ್ವಾಣೈಃಕಾಕತೀಯಕುಲಸ್ಥಿತಿಮ್ ॥
ಸಾಹಸಪ್ರಂಶವವ್ಯಂದವಾಂಛಮಹತೀಯೋದ್ವೇಕುಲೇನಿರ್ಮಿತೇ ।
ತೇಜಾತೇಲಘೂನೀಗುಣೈರ್ವಿಜಯಿನಿಶ್ರೀಕಾಕತೀಯಾನ್ವಯೇ ॥
ಭೂಪಾಲೇಷುಭವತ್ಪ್ರತಾಪಯಶಸೋಃಪೂರ್ಣಾರ್ಕಚನ್ದ್ರಶ್ರಿಯೋಃ ।
ಪ್ರಾಪ್ತ್ಯಾನುಗ್ರಹಮೂರ್ಜಿತೇಷುಪುನರಪ್ಯೇತೇಲಭೇತೇಸ್ಥಿತಿಮ್ ॥
ಮನ್ತ್ರಿಣಃ—ಸ್ವಾಮಿನ್ನೇತೇಸೋಮಾರ್ಕವಂಶ್ಯಾನರಪತಯೋಮಹತೀಮರ್ಹಣಾಮರ್ಹನ್ತಿ ॥
ವಂಶೋಯಂಕಾಕತೀಯಾನಾಂವೀರರುದ್ರೇಣಭೂಷಿತಃ ।
ಅನ್ವವಾಯಃಕಕುತ್ಸ್ಥಾನಾಂರಾಮೇಣೇವಪರಿಷ್ಕೃತಃ ॥

ಎಂಬುವೇ ಮೊದಲಾದ ವಚನಗಳನ್ನು ಪರ್ಯಾಲೋಚಿಸಿದರೆ ಕಾಕತೀಯ ವಂಶವು ಸೂರ್ಯವಂಶ್ಯರಾದ ರಘುರಾಜರ ವಂಶಕ್ಕಿಂತಲೂ ಬೇರೆಯಾದುದೆಂದು ತೋರುತ್ತದೆ. ಆದುದರಿಂದ "ಏಷಾಂವಂಶೇರಘೂಣಾಂ" ಎಂಬ ಶಾಸನದವಚನವು ನಂಬತಕ್ಕದೆಂದು ತೋರುವುದಿಲ್ಲ.

ಒಂದು ವೇಳೆ ಶಾಸನದ ವಚನವೇ ನಿಜವಾದುದೆಂದು ಹೇಳುವುದಾದರೆ ವಿದ್ಯಾನಾಥನ ವಚನಗಳು ತಪ್ಪಾದುವೆಂದು ಹೇಳಬೇಕಾಗುತ್ತದೆ. ಸಹೃದಯರಾದ ವಿಮರ್ಶಕರು ನೋಡಿ ನಿಶ್ಚಯಿಸಿಕೊಳ್ಳಬಹುದು.

ವಿದ್ಯಾನಾಥಕವಿಯಿಂದ ರಚಿತವಾದ ಪ್ರತಾಪರುದ್ರಯಶೋಭೂಷಣವೆಂಬ ಗ್ರಂಥದಲ್ಲಿ ಹೇಳಿರುವ:—ಏಕಶಿಲಾನಗರಪುಣ್ಯರಾಶೇಃ, ರಾಜ್ಞ ಏಕಶಿಲಾನಗರವಾಸಿನೋ ಮಹಾದ್ವಿಜಾಸ್ತು ಏತೇ, ರಾಜ್ಞ ಏಕಶಿಲಾನಗರೀವಲ್ಲಭ,

ಭೂಭೃತ್ಸುತಾಮಹಾದೇವೌ ಪಿತರೌ ಯಸ್ಯ ವಿಶ್ರುತೌ ।
ನರನಾಗಾಕೃತಿಃ ಶ್ರೀಮಾನ್ ಸ ದೇವಃ ಶ್ರೇಯಸೇಸ್ತು ವಃ ॥

ಕೌಸಲ್ಯಾಸೀತ್ಪ್ರಥಮಜನನೀ ದೇವಕೀ ಚ ದ್ವಿತೀಯಾ ।
ವಿಷ್ಣೋರ್ಮಾತಾ ತದನು ಮಹಿತಾ ಮುಮ್ಮುಡಾಮ್ಬಾ ತೃತೀಯಾ ॥
ಯಸ್ತ್ರೇತಾಯಾಂ ರಘುಪತಿರಭೂದ್ದ್ವಾಪರೇ ಶೌರಿರಾಸೀತ್ ।
ತ್ರಾತುಂ ಕ್ಷೋಣೀಂ ಸ ಜಯತಿ ಕಲೌ ವೀರರುದ್ರಾವತಾರಃ ॥

ಸೈವೋಮಾ ಚೇತಿ ನಿರ್ದಿಷ್ಟಾ ಸೋಮಾಚೇತಿ ಪ್ರಥಾಮಗಾತ್ ।
ತವ ಮಾತಾ ಶಿವಾ ಸಾಕ್ಷಾತ್ ದೇವೋ ಗಣಪತಿಃ ಪಿತಾ ॥

ಯೋ ರುದ್ರೋ ರಜತಾಚಲೇ ಸ್ಥಿತಿಮಗಾದರ್ಧಾಙ್ಗನಾರಿಃ ಪುರಾ ।
ಸೋಯಂ ಸಮ್ಪ್ರತಿ ಕಾಕತೀಶ್ವರಕುಲೇ ಸರ್ವಾಙ್ಗನಾರೀ ಸ್ಥಿತಃ ॥

ಮನ್ತ್ರಿಣಃ — ಏವಮೇವೈತತ್ ॥ ಅನ್ಯಥಾ ಕಥಮೀಶ್ವರ ಪ್ರಸಾದಾದೃತೇ ನಿರಙ್ಕುಶಂ ಸ್ತ್ರೀವ್ಯಕ್ತಿವಿಶೇಷಸ್ಯ ಲೋಕಾಧಿಪತ್ಯಂ । ಏವಂ ಮಾನುಷಶಂಭುನಾ ಗಣಪತಿಮಹಾರಾಜೇನಾಭ್ಯನ್ತರಸ್ಯಾನುಭವ ಮಹಿಮ್ನಸ್ಸದೃಶಮತ್ರ ಪುತ್ರ ಇತಿ ವ್ಯವಹಾರಃ ಕೃತಃ ತದನುಗುಣಾ ಚ ರುದ್ರ ಇತ್ಯಾಖ್ಯಾ.

ವತ್ಸ ಕಾಕತೀಯಕುಲಪ್ರದೀಪ.

ಸ್ವೀಕೃತೇ ಪುತ್ರಭಾವೇನ ದೌಹಿತ್ರೇ ಪ್ರಾಙ್ಮಮಾಜ್ಞಯಾ ।
ಅಸ್ಮಿನ್ನಿಧೇಹಿ ಧೌರೇಯೇ ಗುರ್ವೀಮುರ್ವೀಧುರಾಮಿತಿ ॥

ಎಂಬುದೇ ಮೊದಲಾದ ವಚನಗಳಿಂದ ಆನ್ಧ್ರದೇಶದ ಓರುಗಲ್ಲಿನಲ್ಲಿ ರಾಜ್ಯಮಾಡುತ್ತಿದ್ದ ಗಣಪತಿಮಹಾರಾಜನು ಸೋಮಾಮ್ಬ ಎಂಬ ಪಟ್ಟಮಹಿಷಿಯಲ್ಲಿ ರುದ್ರಾಮ್ಬ ಎಂಬ ಮಗಳನ್ನು ಪಡೆದು ಅವಳ ಭಾವಿಯಾದ ಸೌಭಾಗ್ಯಾತಿಶಯದ ಲಕ್ಷಣಗಳನ್ನು ಮನಸ್ಸಿನಲ್ಲಿ ಯೋಚಿಸಿ ಪುರುಷಸಿಂಹಸಾಮಾನ್ಯವಾದ ಗುಣಗಳಿಗೆ ಅನುಸಾರವಾಗಿ ರುದ್ರದೇವನೆಂದು ಹೆಸರಿಟ್ಟು ಕರೆಯುತ್ತಾ ಪುರುಷನೆಂದೇ ವ್ಯವಹರಿಸುತ್ತಿದ್ದು ಕೆಲವು ಕಾಲದ ಮೇಲೆ ದೈವಾಧೀನನಾಗಲು ರುದ್ರಾಮ್ಬೆಯು ತನ್ನ ಸಾಹಸದಿಂದ ರಾಜ್ಯವನ್ನು ವಹಿಸಿ ರುದ್ರದೇವನೆಂಬ ಹೆಸರಿನಿಂದಲೇ ವ್ಯವಹರಿಸಲ್ಪಡುತ್ತಾ ಪ್ರಜೆಗಳನ್ನು ಪಾಲಿಸುತ್ತಿದ್ದಳು, ಈಕೆಗೆ ಮುಮ್ಮಡಾಮ್ಬ ಎಂಬ ಒಬ್ಬಳು ಮಗಳಿದ್ದಳು. ಅವಳನ್ನು ಮಹಾದೇವನೆಂಬ ರಾಜನಿಗೆ ಕೊಟ್ಟು ವಿವಾಹಮಾಡಿ, ಅವರಿಗೆ ಮಗನಾಗಿಯೂ ಪ್ರತಾಪಶಾಲಿಯಾಗಿಯೂ ಇದ್ದ ಪ್ರತಾಪರುದ್ರನು ಪ್ರಾಪ್ತವಯಸ್ಕನಾಗಲು ಜನನ ಕಾಲದಲ್ಲಿಯೇ ಈಶ್ವರಾಜ್ಞೆಯಿಂದ ಪುತ್ರಭಾವದಿಂದ ಸ್ವೀಕೃತನಾಗಿದ್ದ ಅವನಲ್ಲಿ ರಾಜ್ಯಭಾರವನ್ನು ವಹಿಸಿದಳೆಂದು ತಿಳಿಯುತ್ತದೆ.

ಇವರಲ್ಲಿ ಪ್ರೋಲರಾಜನು ಕ್ರಿ. ಶ. ೧೧೫೦ರಲ್ಲಿಯೂ ರುದ್ರ ಅಥವಾ ಪ್ರತಾಪರುದ್ರ ದೇವರಾಜನು ಕ್ರಿ. ಶ. ೧೧೬೩ರಲ್ಲಿಯೂ ಗಣಪತಿರಾಜನು ಕ್ರಿ. ಶ. ೧೨೩೧ರಲ್ಲಿಯೂ ರುದ್ರಾಂಬೆ ಅಥವಾ ರುದ್ರದೇವರಾಜನು ಕ್ರಿ. ಶ. ೧೨೬೩ರಲ್ಲಿಯೂ ಪ್ರತಾಪರುದ್ರ ದೇವ ಅಥವಾ ವೀರರುದ್ರದೇವರಾಜನು ಕ್ರಿ. ಶ. ೧೨೯೪ರಲ್ಲಿಯೂ ರಾಜ್ಯದಲ್ಲಿದ್ದರೆಂದು ಶಾಸನಾದಿಗಳಿಂದ ಗೊತ್ತುಮಾಡಲ್ಪಟ್ಟಿದೆ.

ಆನ್ಧ್ರದೇಶದ ಓರುಗಲ್ಲಿನ ಕಾಕತೀಯರಾಜರ ಕ್ರಮವನ್ನೂ ಅವರ ರಾಜ್ಯಕಾಲವನ್ನೂ ತೋರಿಸುವ ಪಟ್ಟಿ.

(೧) ದುರ್ಜಯ
|
(೨) ವೇತರಾಜ (ತ್ರಿಭುವನಮಲ್ಲ)
|
(೩) ಪ್ರೋಲರಾಜ
| (೧೧೫೦)

- (೪) ರುದ್ರದೇವ (ಪ್ರತಾಪರುದ್ರದೇವ) (೧೧೬೨)
- (೫) ಮಹಾದೇವ
  |
  (೬) ಗಣಪತಿರಾಜ (ಇವನ ಪತ್ನಿ (೧೨೩೧) ಸೋಮಾಂಬ)
  |
  (೭) ರುದ್ರಾಂಬ (ರುದ್ರದೇವ) (೧೨೫೭)
  |
  ಮುಮ್ಮಡಾಂಬ (ಇವಳ ಪತಿ ಮಹಾದೇವ)
  |
  (೮) ಪ್ರತಾಪರುದ್ರದೇವ (ರುದ್ರಾಂಬೆಗೆ ಅಥವಾ ರುದ್ರದೇವನಿಗೆ ದತ್ತ) (೧೨೯೪)

ಈ ಓರುಗಲ್ಲಿನ ಕಾಕತೀಯರಾಜರ ವಂಶಕ್ರಮವೂ ಅವರ ಕಾಲವೂ ಸಿ. ಮೇಬೆಲ್‌ಡಫ್‌ರವರ ೧೮೯೯ನೆಯ ಇಸವಿಯ ದಿ ಕ್ರೋನೋಲಜಿ ಆಫ್ ಇಂಡಿಯ ಎಂಬ ಪುಸ್ತಕದ ೨೯೨ನೆಯ ಪುಟದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಆ ವಂಶಕ್ರಮವೂ ಇಲ್ಲಿ ಬರೆದಿರುವುದಕ್ಕೆ ಅನುಸಾರಿಯಾಗಿದೆ. ಇಲ್ಲಿ ಹೇಳಿರುವ ವೇತರಾಜನು ಬೆಟ್ಮರಾಜನೆಂದೂ ಪ್ರೋಲರಾಜನು ಪ್ರೌಢರಾಜನೆಂದೂ ವ್ಯವಹರಿಸಲ್ಪಟ್ಟಿರುತ್ತಾರೆ. ವೇತ

ಮಹಾರಾಜ ಪ್ರೋಲರಾಜ-ಶಬ್ದಗಳೇ ಇತರರಿಂದ ಬೆಟ್ಮರಾಜ, ಪ್ರೌಢ ರಾಜ ಎಂದು ಉಚ್ಚರಿಸಲ್ಪಟ್ಟಿವೆ ಎಂದು ತೋರುತ್ತದೆ. ಕೆ. ಪಿ. ತ್ರಿವೇದಿ ಗಳೂ ಪ್ರತಾಪರುದ್ರೀಯದ ಉಪೋದ್ಘಾತದ xxi.xxii ನೆಯ ಪುಟ ಗಳಲ್ಲಿ ಈ ಅಂಶವನ್ನು ಬರೆದಿರುತ್ತಾರೆ.

ಇವರಲ್ಲಿ ೧ನೆಯ ರುದ್ರದೇವ ೨ನೆಯ ಪ್ರತಾಪರುದ್ರದೇವ ಇವರ ರಾಜ್ಯದ ವಿಷಯಗಳನ್ನು ವರ್ಣಿಸಿರುವ ಪ್ರತಾಪರುದ್ರೀಯ ವೆಂಬ ಗ್ರಂಥದಲ್ಲಿ ಭೈರವೇಶ್ವರಕಾವ್ಯಕಥಾಸೂತ್ರರತ್ನಾಕರದಲ್ಲಿ ಪ್ರತಾಪರುದ್ರರಾಜನ ಸಭಿಕರೆಂದು ಹೇಳುವ ಏಕದಂಡಿ, ದ್ವಿದಂಡಿ, ತ್ರಿದಂಡಿ, ಎಂಬ ಕವಿಗಳ ಹೆಸರು ಕಂಡುಬರುವುದಿಲ್ಲವಾದುದರಿಂದ ಈ ಕವಿಗಳು ೨ನೆಯ ಪ್ರತಾಪರುದ್ರನ ಸಭೆಯಲ್ಲಿದ್ದರೆಂದು ಹೇಳುವುದು ಯುಕ್ತವಾಗಿದೆ. ಈ ಕವಿಗಳನ್ನು ಕವಿಮುಖಕವಾಟವೆಂಬ ಪದ್ಯ ಗ್ರಂಥದಿಂದ ಸೋಲಿಸಿದ ರಾಘವಪಂಡಿತನು ಕಾಕತೀಯವಂಶದ ಮೊದಲ ನೆಯ ಪ್ರತಾಪರುದ್ರನ ಸಮಕಾಲದವನು ಎಂದೇ ಹೇಳಬೇಕು, ಈ ಪ್ರತಾಪರುದ್ರದೇವನು ೧೪ನೆಯ ಶತಮಾನದವನೆಂದು ನಿಶ್ಚಯವಾಗಿ ರುವುದರಿಂದ ರಾಘವಾಂಕಪಂಡಿತನೂ ೧೪ನೆಯ ಶತಮಾನದವನೆಂದು ಹೇಳಬೇಕು. ಈ ರಾಘವಾಂಕನಿಗೆ ಸೋದರದ ಮಾವನಾಗಿ ಸ್ವಲ್ಪ ಹೆಚ್ಚುಕಡಮೆಯಿಂದ ಸಮಕಾಲಿಕನಾಗಿಯೂ ೧೪ನೆಯ ಶತಮಾನದ ನೃಸಿಂಹಬಲ್ಲಾಳನ ಕರಣಿಕಾಧಿಪತಿಯಾಗಿ ಅವನ ಸಮಕಾಲಿಕನಾಗಿಯೂ ಇದ್ದ ಹರಿಹರಶಿವಾಚಾರ್ಯನೂ ೧೪ನೆಯ ಶತಮಾನದವನೆಂದು ಗೊತ್ತಾ ಗುತ್ತದೆ. ಹರಿಹರಶಿವಾಚಾರ್ಯನಿಂದ ಬೋಧಿತನಾದ ಚಾಮರಸನೂ ಅವನ ತಂಗಿಯ ಗಂಡನಾಗಿ ಪ್ರತಿಕಕ್ಷಿಯಾಗಿದ್ದ ಕುಮಾರವ್ಯಾಸನೂ ೧೪ನೆಯ ಶತಮಾನದವರೆಂದು ಹೇಳುವುದು ಉಚಿತವಾಗಿ ತೋರುತ್ತದೆ.

ಮೇಲೆ ಹೇಳಿದ ಚೆನ್ನಬಸವ ಚರಿತ್ರೆ, ಗುರುರಾಜಚಾರಿತ್ರ, ಭೈರವೇಶ್ವರಕಾವ್ಯಕಥಾಸೂತ್ರರತ್ನಾಕರ ಗ್ರಂಥಗಳನ್ನು ಹಲವುಕಡೆ ಗಳಲ್ಲಿ ಪ್ರಮಾಣವಾಗಿ ಉದಾಹರಿಸಿರುವ ಮ|| ರಾ|| ನರಸಿಂಹಾಚಾರ್ಯರೂ

ಮ॥ ರಾ॥ ಬಿ. ಕೃಷ್ಣಪ್ಪನವರೂ ಹೇಳಿರುವ ಕ್ರಿ. ಶ. (೧೪೩೦) ೧೫ನೆಯ ಶತಮಾನವು ಎಂಬ ಕುಮಾರವ್ಯಾಸನ (ನಾರಣಪ್ಪನ) ಕಾಲವು ನಿಶ್ಚಿತವಾದುದೆಂದು ಹೇಳುವುದಕ್ಕಾಗುವುದಿಲ್ಲ. ಇವರು ಹೇಳುವ ೧೫ನೆಯ ಶತಮಾನವನ್ನು ಒಪ್ಪಿಕೊಂಡರೆ ಇದಕ್ಕೆ ಮೊದಲೇ ಕ್ರಿ. ಶ. ೧೩೧೦ ರಲ್ಲಿ ತುರುಕರಿಂದ ಧ್ವಸ್ತವಾಗಿದ್ದ ದ್ವಾರಸಮುದ್ರದ ವಿಷಯವೂ, ಪೂರ್ವದಲ್ಲಿಯೇ ಕ್ರಿ. ಶ. ೧೩೨೨ ರಲ್ಲಿ ಕಳೆದು ಹೋಗಿದ್ದ ಓರುಗಲ್ಲಿನ ರಾಜ್ಯದ ವಿಷಯವೂ, ಇವರೇ (ನರಸಿಂಹಾಚಾರ್ಯರೇ) ಕವಿಚರಿತ್ರೆಯಲ್ಲಿ ಬರೆದಿರುವ ಹರೀಶ್ವರಾದಿ ಕಾಲವಿಷಯವೂ ವಿರುದ್ಧವಾಗುತ್ತವೆ. ಕ್ರಿ. ಶ. ೧೩೧೦ರಲ್ಲಿ ದೇಹಲೀ ಚಕ್ರವರ್ತಿಯ ದಳವಾಯಿಯಾದ ಮಲ್ಲಿಕ್ ಕಾಫೂರನು ದ್ವಾರಸಮುದ್ರವನ್ನು ಹಾಳುಮಾಡಿದನೆಂದು ಚರಿತ್ರಕಾರರು ಹೇಳುತ್ತಾರೆ. ಕ್ರಿ. ಶ. ೧೪೨೪ ಕ್ಕೆ ಹಿಂದೆಯೇ ಓರುಗಲ್ಲಿನಲ್ಲಿ ಹಿಂದುಗಳಾದ ಅರಸರ ಹೆಸರು ತಪ್ಪಿ ಮುಸಲ್ಮಾನರೇ ಆಳುತ್ತಿದ್ದರೆಂದು ಎಲ್ಲ ಚರಿತ್ರಕಾರರೂ ಹೇಳುತ್ತಾರೆ.

ಕರ್ಣಾಟಕವಿಚರಿತೆಯಲ್ಲಿ ಒಂದನೆಯ ಭಾಗದಲ್ಲಿ ೧೯೦೩ನೆಯ ಇಸವಿಯ ಪುಸ್ತಕದ ೧೬೬ನೆಯ ಪುಟದಲ್ಲಿ:—

ಆದರೆ ಹರೀಶ್ವರ, ರಾಘವ, ಕೆರೆಯಪದ್ಮರಸ, ಇವರು ಸುಮಾರು ೧೧೬೫ ರಲ್ಲಿ ಇದ್ದರು. ಎಂಬುದಕ್ಕೆ ಪ್ರಬಲವಾದ ಕಾರಣಗಳಿವೆ. ಎಂದುಪಕ್ರಮಿಸಿ ಹರೀಶ್ವರ, ಕೆರೆಯಪದ್ಮರಸ, ನೃಸಿಂಹಬಲ್ಲಾಳ, ರಾಘವಾಂಕ, ಪ್ರತಾಪರುದ್ರ, ಹಂಪೆಯ ದೇವರಾಜರು ಸಮಕಾಲದವರೆಂದು ಸಕಾರಣವಾಗಿ ಸಮರ್ಥಿಸಲ್ಪಟ್ಟಿದೆ.

ಆದುದರಿಂದ ಹರೀಶ್ವರಾದಿಗಳಿಗೆ ಸಮಕಾಲದವನಾದ ಕುಮಾರವ್ಯಾಸ (ನಾರಣಪ್ಪ) ನನ್ನು ೧೫ನೆಯ ಶತಮಾನದವನೆಂದು ಹೇಳುವುದು ಯುಕ್ತವಾಗುವುದಿಲ್ಲ. ಎಲ್ಲ ವಿಷಯದಲ್ಲಿ ವಿರೋಧವಿಲ್ಲದಂತೆ ಸಾಮಂಜಸ್ಯವನ್ನು ತೋರಿಸುವ ಈ ಶೈವಗ್ರಂಥಗಳನ್ನು ಹರೀಶ್ವರಾದಿಗಳ

ವಿಷಯದಲ್ಲಿ ಪ್ರಮಾಣವೆಂದು ಒಪ್ಪಿ ಕುಮಾರವ್ಯಾಸನ (ನಾರಣಪ್ಪನ) ವಿಷಯದಲ್ಲಿ ಮಾತ್ರ ಅಪ್ರಮಾಣವೆಂದು ಹೇಳುವುದು ಸರ್ವಸಮ್ಮತವಾಗಲಾರದು.

ಹಂಪೆಯಲ್ಲಿದ್ದ ದೇವರಾಜನು ವಿದ್ಯಾರಣ್ಯರು ವಿಜಯನಗರವನ್ನು ಸ್ಥಾಪಿಸುವುದಕ್ಕೆ ಬಹುಕಾಲದ ಹಿಂದೆ ಇದ್ದ ಯಾವನೋ ಒಬ್ಬ ಸಾಮಾನ್ಯರಾಜನಾಗಿರಬೇಕು. ಅದೇ ಕಾಲದಲ್ಲಿ ಗದುಗಿನಲ್ಲಿಯೂ ಒಬ್ಬ ಸಾಮಾನ್ಯರಾಜನಿದ್ದನೆಂದು ತಿಳಿಯುತ್ತದೆ. ಅದು ಹೊರತು ಕುಮಾರ ವ್ಯಾಸನು ಮ|| ರಾ|| ನರಸಿಂಹಾಚಾರ್ಯರು ಹೇಳುವಂತೆ ವಿಜಯನಗರದ ಪ್ರೌಢದೇವರಾಯನ ಕಾಲದವನಲ್ಲ. ಕುಮಾರವ್ಯಾಸ ಚಾಮರಸರಿಗೆ ಭಾರತವನ್ನು ಕನ್ನಡದಲ್ಲಿ ಬರೆಯುವಂತೆ ಹೇಳಿದ ರಾಜನು ಹಂಪೆಯ ದೇವರಾಜನಲ್ಲ. ಭಾರತವನ್ನು ಕನ್ನಡದಲ್ಲಿ ಬರೆವಂತೆ ಹೇಳಿದವನೂ ಕುಮಾರವ್ಯಾಸನಿಗೆ ಕನಕಸ್ನಾನವನ್ನು ಮಾಡಿಸುವುದಕ್ಕಾರಂಭಿಸಿ ಚಾಮರಸನ ಹೇಳಿಕೆಯಿಂದ ತಿರಸ್ಕರಿಸಿ ಶೈವದೀಕ್ಷೆಯನ್ನು ವಹಿಸಿದವನೂ ಗದುಗಿನ ರಾಜನು. ಇವನ ನಾಮಾದಿಗಳು ಸರಿಯಾಗಿ ಈ ಗ್ರಂಥಗಳಿಂದ ಗೊತ್ತಾಗುವುದಿಲ್ಲ. ಆನೆಯ ಮೇಲೆ ಮೆರವಣಿಗೆಯನ್ನು ಮಾಡಿಸಿದವನು ಹಂಪೆಯ ದೇವರಾಜನು * ಆದುದರಿಂದ ಕುಮಾರವ್ಯಾಸ (ನಾರಣಪ್ಪ) ನು ಪ್ರೌಢದೇವರಾಜನ ಕಾಲದವನೆಂದು ಊಹಿಸಿ ತನ್ಮೂಲಕವಾಗಿ ಕ್ರಿ. ಶ. ೧೪೩೦ ರಲ್ಲಿ ಎಂದರೆ ೧೫ನೆಯ ಶತಮಾನದಲ್ಲಿ ಇದ್ದವನೆಂದು ನಿಶ್ಚಯಿಸಿರುವುದು ಸರಿಯಾಗಿ ತೋರುವುದಿಲ್ಲ. ಹಿಂದೆ ಹೇಳಿರುವ ಕಾರಣಗಳಿಂದ ಕ್ರಿ. ಶ. ೧೧೬೫ ರಲ್ಲಿ ಎಂದರೆ ೧೨ನೆಯ ಶತಮಾನದಲ್ಲಿದ್ದವನೆಂದು ಊಹಿಸುವುದು ಉಚಿತವಾಗಿ ತೋರುತ್ತದೆ. ವಿಮರ್ಶಕರಾದ ವಿದ್ವಾಂಸರು ವಿಭಾವಿಸಿ ನೋಡಿ ನಿಶ್ಚಯಿಸಿಕೊಳ್ಳಬಹುದು.

ಈ ಭಾಗವನ್ನು ಶೋಧಿಸುವಾಗಲೂ ೫ನೆಯ ಸಂಪುಟದ ಶೋಧನೆಗೆ ಉಪಯೋಗಿಸಿದ ಪುಸ್ತಕಗಳೇ ಸಹಕಾರಿಗಳಾಗಿದ್ದುವು.

---

* xxiii ನೆಯ ಪುಟವನ್ನು ನೋಡಿ.

ಈ ಆರನೆಯ ಸಂಪುಟದ ಶೋಧನೆಯಲ್ಲಿಯೂ ಪಾಠಭೇದಗಳು ಹಿಂದಣ ಸಂಪುಟದಂತೆಯೇ ತೋರಿಸಲ್ಪಟ್ಟವೆ.

ಪ್ರಜಾಗರಪರ್ವದಲ್ಲಿ ಹೇಳಿರುವ ನೀತಿಬೋಧಕಗಳಾದ ಪದ್ಯಗಳು ಒಂದೊಂದು ಪ್ರತಿಯಲ್ಲಿ ಒಂದೊಂದು ವಿಧವಾಗಿರುವುವಲ್ಲದೆ ಭಿನ್ನಾನುಪೂರ್ವಿಗಳಾಗಿಯೂ ನ್ಯೂನಾಧಿಕಸಂಖ್ಯಾಕಗಳಾಗಿಯೂ ಇವೆ. ಸಾಧ್ಯವಾದ ರೀತಿಯಲ್ಲಿ ಅವುಗಳನ್ನು ಪ್ರಸ್ತುತಕ್ಕೆ ಸಂಬಂಧಿಸುವಂತೆ ಬಹು. ಪುಸ್ತಕಾನುಸರಣೆಯಿಂದ ಬದಲಾಯಿಸಿ ಆನುಪೂರ್ವಿಯು ಕಲ್ಪಿಸಲ್ಪಟ್ಟಿದೆ. ಆವರೂ ಸಾಕಾದಷ್ಟು ಅವಕಾಶವು ದೊರೆಯದುದರಿಂದ ಅತಿತ್ವರಿತವಾಗಿ ನಡೆದ ಈ ಶೋಧನೆಯಲ್ಲಿ ಸಾಂಕರ್ಯಾಪ್ರಸ್ತುತತ್ವಾದಿ ದೋಷಗಳು ಅವಶಿಷ್ಟಗಳಾಗಿರಬಹುದು ಶೋಧನೆಯ ಪ್ರಯಾಸವನ್ನರಿತ ಮಹಾಶಯರು ಕ್ಷಮಿಸಿ ಸರಿಮಾಡಿದರೆ ಮುಂದಣ ಮುದ್ರಣದಲ್ಲಿ ಪರಿಶುದ್ಧವಾಗುವುದು. ಅನೇಕಪ್ರತಿಗಳಲ್ಲಿಲ್ಲದೆ ಒಂದೆರಡರಲ್ಲಿ ಮಾತ್ರ ಹೆಚ್ಚಾಗಿರುವ ಪದ್ಯಗಳು ಕೊನೆಯಲ್ಲಿ ಕೆಳಭಾಗದಲ್ಲಿ ಬರೆಯಲ್ಪಟ್ಟವೆ.

ಹಿಂದೆ ಅಚ್ಚಾಗಿರುವ ಪುಸ್ತಕಗಳಲ್ಲಿ ಒಂಬತ್ತನೆಯ ಸಂಧಿಯಲ್ಲಿಯೇ ಭಗವದ್ವಿಶ್ವರೂಪಪ್ರದರ್ಶನವಿಷಯವೂ ಸೇರಿಸಲ್ಪಟ್ಟಿದೆ. ಇದರಲ್ಲಿ. ಒಂಬತ್ತನೆಯ ಸಂಧಿಯ ಸೂಚನೆಯಲ್ಲಿ ಸೇರದಿರುವ ಭಗವದ್ವಿಶ್ವರೂಪಪ್ರದರ್ಶನವಿಷಯವು ಪ್ರತ್ಯೇಕವಾಗಿ ಸೂಚಿಸಲ್ಪಟ್ಟು ಹತ್ತನೆಯಸಂಧಿಯಾಗಿ ಹೇಳಲ್ಪಟ್ಟಿರುವುದರಿಂದ ಉದ್ಯೋಗಪರ್ವದ ಸಂಧಿಗಳ ಸಂಖ್ಯೆಯು ಹೆಚ್ಚಾಗಿದೆ.

ಪಾಠಕರ ಸೌಕರ್ಯಕ್ಕಾಗಿ ವಿಷಯಸೂಚಿಯೂ ಪ್ರಮಾದದಿಂದ ಉಂಟಾದ ತಪ್ಪುಗಳ ಶುದ್ಧಿಯನ್ನು ತಿಳಿಸುವ ಶುದ್ಧಿಪತ್ರಿಕೆಯೂ ಮೊದಲೇ ಸಂಬಂಧಿಸಲ್ಪಟ್ಟವೆ.

ಬುದ್ಧಿಸಮಯದೋಷಗಳಿಂದ ಉಂಟಾಗಿರುವ ತಪ್ಪುಗಳನ್ನು ಗುಣೈಕಗ್ರಾಹಿಗಳಾದ ಪಂಡಿತರು ಕ್ಷಮಿಸಿ ತಿದ್ದಿಕೊಳ್ಳುವರೆಂದು ನಂಬಿರುವ ;—

ಟಿ. ಎಸ್. ಸುಬ್ಬರಾಯಶಾಸ್ತ್ರಿ
ರೆಸಿಡೆಂಟ್‌ಪಂಡಿತ.

# ವಿ ಷ ಯ ಸೂ ಚಿ ಕೆ .

| ವಿಷಯಗಳು. | ಪುಟ. |
|---|---|
|  | ೧೬ |

ವಿಷಯಗಳು. ಪುಟ.

| ವಿಷಯಗಳು. | ಪುಟ. |
|---|---|
| ಸ್ವದೇಶದಲ್ಲಿ ಸುಭಿಕ್ಷವೂ ಪರದೇಶದಲ್ಲಿ ದುರ್ಭಿಕ್ಷವೂ ಉಂಟಾಗಿರುವಾಗ ಕ್ಷೇತ್ರಯಾತ್ರೆಯನ್ನು ಮಾಡಬೇಕು ಎಂದುದು .... .... | ೩೭ |
| ದೇವಾಂಶ, ಬ್ರಾಹ್ಮಣ್ಯ, ವಿಜ್ಞಾನಗಳಿರುವಸ್ಥಲಗಳನ್ನು ತಿಳಿಯಬೇಕೆಂದುದು .... .... .... .... | ,, |
| ಸರ್ವಸ್ವದಿಂದಲೂ ಆತ್ಮನನ್ನು ರಕ್ಷಿಸಬೇಕೆಂದುದು .... .... | ೩೮ |
| ತಾನೆ ಚೆನ್ನಾಗಿ ಪರಿಶೀಲಿಸಿ ಮಾಡುವ ಕಾರ್ಯಕ್ಕೆ ಹಳಿವಿಲ್ಲವೆಂದುದು .... | ,, |
| ಅಸದೃಶ ಬಂಧು ಶತ್ರು ಸಂತೋಷ ತೇಜೋಭಾಗ್ಯ ಬಲಗಳನ್ನು ವಿವರಿಸಿದುದು .... .... .... .... | ,, |
| ಮನೆಯಲ್ಲಿ ಆವಶ್ಯಕವಾಗಿರಬೇಕಾದ ನಾಲ್ವರ ವಿವರಣೆಯು .... | ೩೯ |
| ಅವಶ್ಯಕರ್ತವ್ಯಗಳಾದ ನಾಲ್ಕರ ವಿವರಣೆಯು .... .... | ,, |
| ಭೂಮಂಡಲದಲ್ಲಿ ಉತ್ತಮರ ಸ್ವರೂಪದ ವಿವರಣೆಯು .... .... | ,, |
| ಲೋಕವನ್ನು ಬಯಸುವವನು ಸೇವಿಸಬೇಕಾದ ಪಂಚಾಗ್ನಿಗಳ ವಿವರಣೆಯು | ,, |
| ಸತ್ಪುತ್ರ ಸ್ವರೂಪದ ವಿವರಣೆಯು .... .... .... | ೪೦ |
| ಮಕ್ಕಳನ್ನು ಮೃಗಸದೃಶರನ್ನಾಗಿ ಮಾಡಿದೆಯೆಂದು ಧೃತರಾಷ್ಟ್ರನಿಗೆ ವಿದುರನು ಹೇಳಿದುದು .... .... .... | ,, |
| ಐಶ್ವರ್ಯವುಳ್ಳವನನ್ನೇ ಸರ್ವಗುಣಸಂಪನ್ನನೆಂದು ಲೋಕವು ಸಂಭಾವಿಸುವುದೆಂದು ಹೇಳಿದುದು .... .... .... | ,, |
| ಐಶ್ವರ್ಯಾದಿಗಳು ಅಸ್ಥಿರಗಳೆಂದು ಹೇಳಿದುದು .... .... | ,, |
| ಧರಾಪಾಲನಾದಿಗಳು ನರಪತಿಗಳಿಗೆ ನ್ಯಾಯ್ಯಗಳೆಂದುದು .... | ೪೧ |
| ರಾಜೋತ್ತಮನಿಂದ ತ್ಯಾಜ್ಯಗಳಾದ ಐಶ್ವರ್ಯಕ್ಕೆ ಕಂಟಕಗಳಾದ ಆರು ದೋಷಗಳ ವಿವರಣೆಯು .... .... .... | ,, |
| ಸಭ್ಯನಾದ ಬ್ರಾಹ್ಮಣನ ನಿಂದೆಯಿಂದ ಉಂಟಾಗುವ ಫಲವನ್ನು ಹೇಳಿದುದು .... .... .... .... | ,, |
| ಕೃತಘ್ನರಿಗೆ ಉಂಟಾಗುವ ಫಲವನ್ನು ಹೇಳಿದುದು .... .... | ,, |
| ಮೂಢರ ಸ್ವರೂಪವನ್ನು ವಿವರಿಸಿದುದು .... .... | ೪೨ |
| ದರ್ಪಾತಿರೇಕದಿಂದ ಮಾಡಿದ ಕಾರ್ಯವು ಕೆಡುವುದೆಂದುದು .... | ,, |
| ವಂದ್ಯರಾದ ಜನರ ವಿವರಣೆಯು .... .... .... | ,, |
| ತ್ಯಾಜ್ಯರಾದ ಜನಗಳ ವಿವರಣೆಯು .... .... .... | ,, |

| ವಿಷಯಗಳು. | ಪುಟ. |
|---|---|

ವಿಷಯಗಳು. ಪುಟ.

ವಿಷಯಗಳು. ಪುಟ.

ವಿಷಯಗಳು. | ಪುಟ.

| ವಿಷಯಗಳು. | ಪುಟ |
|---|---|
| ಶ್ರೀಕೃಷ್ಣನು ತನ್ನ ಅಭಿಪ್ರಾಯವನ್ನು ಹೇಳಿದುದು .... .... | ೨೧೪ |
| ದೃಷ್ಟದ್ಯುಮ್ನನಿಗೆ ಸೇನಾಪತಿತ್ವದ ಪಟ್ಟಾಭಿಷೇಕವನ್ನು ಮಾಡಿದುದು .... .... .... .... | ,, |
| ಸೈನಿಕರು ರಣಪ್ರಯಾಣಕ್ಕಾಗಿ ಸುಮುಹೂರ್ತದಲ್ಲಿ ಹೊರಬೀಡ ಬಿಟ್ಟುದು .... .... .... .... | ೨೧೫ |
| ಪಾಂಡವರು ಶ್ರೀಕೃಷ್ಣನೊಡನೆ ಪ್ರಯಾಣಮಾಡಿದುದು .... | ೨೧೬ |
| ಪಾಂಡವಸೇನಾಪ್ರಯಾಣದ ವರ್ಣನೆಯು. .... .... .... | ೨೧೭ |
| ಪಾಂಡವರು ಸೇನಾಸಮೇತರಾಗಿ ಕುರುಕ್ಷೇತ್ರಕ್ಕೆ ಹೋಗಿ ಇಳಿದುದು .... | ೨೧೮ |
| ಕುರುಕ್ಷೇತ್ರದಲ್ಲಿ ರಾಜಾಲಯಾದಿಗಳನ್ನು ರಚಿಸಿದುದು .... .... | ೨೧೯ |
| ಪಾಳೆಯದ ಹೊರಭಾಗದಲ್ಲಿ ಕೋಟೆ ಮೊದಲಾದುವುಗಳನ್ನು ರಚಿಸಿದುದು | ೨೨೦ |
| ಪಾಳೆಯದ ರಕ್ಷಕರ ವರ್ಣನೆಯು ... .... .... | ,, |

# ಶುದ್ಧಿಪತ್ರಿಕೆ.

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೧ | ೧೦ | ಮಱೆಯು | ಮೞೆಯು |
| ,, | ೧೩ | ಹಿಳಿದು 3 ಕೊಂಡೆವು | ಹಿೞಿದು 3 ಕೊಂದೆವು |
| ೧೨ | ೮ | ಧಾಳ್ ಧೂಳಿ | ದಾಟೊದಾಱಿ |
| ೧೩ | ೧೫ | ಮುಳುಗಾಡಿ | ಮುಱುಗಾಡಿ |
| ೧೯ | ೩ | ಮಗುಳಿಚಿದನಾಶಲ್ಯ | ಮಗುೞಿಚಿದನಾಶಲ್ಯ |
| ೨೪ | ೬ | ಮುನಿದೊಡಾವನ | ಮುಳಿದೊಡಾವನ |
| ೨೬ | ೧೨ | ಕಿಡಿಯೋದನಾಭೀಮ | ಕಿಡಿಯಾದನಾಭೀಮ |
| ೨೮ | ೧೧ | ಪುತ್ರರಿಗಿನ್ನು | ಪುತ್ತ್ರರಿಗಿನ್ನು |
| ೩೨ | ೪ | ಪಾಷಂದಿಂ | ಪಾಪದಿಂ |
| ,, | ೧೬ | ನೆರಹಿದ | ನೆರೆಹಿದ |
| ,, | ೧೯ | ಮಲೆತುಱೆ | ಮಲೆತುೞೆ |
| ೩೩ | ೧೧ | ಪಿಟಾಱಿಸಲು | ವಿಟ್ಟಾಳಿಸಲು |
| ೪೦ | ೮ | ನೆಱೆದ | ನೆೞೆದ |
| ೪೧ | ೨೦ | ಮಱೆದವ | ಮೞೆದವ |
| ೪೫ | ೧೨ | ಹೊಗಳುವರ | ಹೊಗೞುವರ |
| ೪೯ | ೧೪ | ಹೊಗಳುವುದಂದವೇ | ಹೊಗೞುವುದಂದವೇ |
| ೫೦ | ೧೦ | ಮನದಳಲು | ಮನದೞಲು |
| ೫೧ | ೯ | ಪುತ್ರನೆಂಬಿವು | ಪುತ್ತ್ರನೆಂಬಿವು |
| ೫೩ | ೧ | ಪುತ್ತ್ರರೊಳದಾವುದು | ಮಿತ್ರರೊಳದಾವುದು |
| ,, | ೩ | ಅಭವವನಂಘ್ರಿಯು | ಅಭವನಂಘ್ರಿಯು |
| ೫೪ | ೨೧ | ತತ್ವಜ್ಞಾನ | ತತ್ತ್ವಜ್ಞಾನ |
| ೫೫ | ೧೧ | ಧೀರ್ಘ | ದೀರ್ಘ |
| ೫೮ | ೬ | ಕೆಳೆಂದ | ಕೇಳೆಂದ |

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೬೩ | ೯ | ಕುಕ್ಕಟ | ಕುಕ್ಕುಟ |
| ೭೨ | ೯ | ನನೆದ | ನೆನೆದ |
| ೮೦ | ೧೮ | ಕೈಸೂಱೆಗೊಂಬುದು | ಕೈಸೂಱೆಗೊಳ್ವುದು |
| ೮೮ | ೩ | ಸೂಱೆಗೊಂಬುದು | ಸೂಱೆಗೊಳ್ವುದು |
| ೯೩ | ೪ | ದುವರ್ಗಾಗ | ದುರ್ವಾಗ್ |
| ೯೮ | ೩ | ಕೊಂಬ | ಕೊಳ್ವ |
| ೧೦೪ | ೭ | ಕಾಯ್ದುದಕ | ಕಾದುದಕ |
| ,, | ೧೦ | ಎದ್ದುದಿಹ | ಐದದಿಹ |
| ೧೦೫ | ೨ | ಕೊಟ್ಟುದನುಳಿಹಿ | ಕೊಟ್ಟುದನುಱಿಹಿ |
| ,, | ೨೧ | ನಿಶ್ಚೈಸುವರು | ನಿಶ್ಚೈಸುವರು |
| ೧೦೬ | ೪ | ನಿರತ | ನಿರುತ |
| ೧೧೧ | ೧೫ | ಭೂಭಾರವನಿಳುಹಿ | ಭೂಭಾರವನಿಱುಹಿ |
| ೧೧೫ | ೧೭ | ಬೇಱರೊಬ್ಬರೊಳು | ಬೇರೊಬ್ಬರೊಳು |
| ೧೧೭ | ೨೪ | ಶಿಷನೆ | ಶಿಷ್ಟನೆ |
| ೧೨೧ | ೧೯ | ಪು-<br>ರವರವ | ಪುರ<br>ವರವ |
| ೧೨೬ | ೧೬ | ಹಿಡಿದೆಳೆದು | ಹಿಡಿದೆಱೆದು |
| ೧೨೭ | ೧೨ | ಕಿಡಿಯೊಗಿ | ಕಿಡಿಯಾಗಿ |
| ೧೩೨ | ೨೪ | ಉಳುಹುವನೆ | ಉಱುಹುವನೆ |
| ೧೩೩ | ೨ | ನೆರ | ನೆಱೆ |
| ೧೩೮ | ೧೩ | ಕಿಱುಬೆವರ | ಕಿಱುಬೆವರ |
| ೧೪೦ | ೪ | ರಸದೆಱೆದ | ರಸದೆಱೆದ |
| ೧೫೦ | ೨೪ | ಸೌರಾಷ್ರ | ಸೌರಾಷ್ಟ್ರ |
| ೧೫೧ | ೧೮ | ಮುಱಿದರೊಡ್ಡಯು | ಮುಱಿದರೊಡ್ಡುಗು |
| ೧೬೫ | ೧೫ | ದವ್ಮುಪರಸನೆ | ದವ್ಮುಪರರೆನೆ |
| ೧೬೬ | ೨೪ | ಕೊಗೆಡಿಬಾಱ್ವುದು<br>ಪಥ್ಯನಿನಂ | ಕೊಡಿಬಾಱ್ವುದುಪಥ್ಯನಿನಗಂ |
| ೧೭೦ | ೮ | ಅವನಿಪರು | ಅವನಿಪತಿ |
| ,, | ೯ | ಕೆಡದಿರನೆಂದ | ಕೆಡದಿರೆಯೆಂದ |

| ಪುಟ. | ಪಙ್ಕ್ತಿ. | ಅಶುದ್ಧ | ಶುದ್ಧ. |
|---|---|---|---|
| ೧೩೦ | ೮ | ತಳಕಿಳಿದ | ತಳಕಿೞಿದ |
| ೨೧೦ | ೫ | ನುಳುಹಿ | ನುೞುಹಿ |
| ೨೧೪ | ೧೧ | ಸೇನಾಪತ್ಯವನು | ಸೈನಾಪತ್ಯವನು |
| ೨೧೩ | ೧೧ | ಕಾಲ್ದುಳಿಯ | ಕಾಲ್ದುೞಿಯ |

ಶ್ರೀ

ಕುಮಾರವ್ಯಾಸಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

# ಉದ್ಯೋಗಪರ್ವ.

ಷಷ್ಠ ಸಂಪುಟ.

## ಒಂದನೆಯ ಸಂಧಿ.

ಶ್ರೀಕೃಷ್ಣಸ್ವಾಮಿ ಅರ್ಜುನನಿಗೆ ಸಾರಥಿಯಾದುದು.

ಸೂಚನೆ.

ನಂಬಿದವರಿಗೆ ತನ್ನ ತೆತ್ತಿಹ
ನೆಂಬ ಬಿರುದನು ಮೆಱೆಯೆ ಭಕ್ತಕು
ಟುಂಬಿ ಸಾರಥಿಯಾದ ನೊಲಿದರ್ಜುನಗೆ ಮುರವೈರಿ ‖

ಕೇಳು ಜನಮೇಜಯ ಧರಿತ್ರೀ
ಪಾಲ ಕುಂತೀತನಯರುನ್ನತ
ದೇಳಿಗೆಯ ನೇನೆಂಬೆನೈ ಕಾರುಣ್ಯಸಿಂಧುವಲಾ ।
ಶ್ರೀಲತಾಂಗಿಯ ರಮಣ [1] ನೈವರೊ
ಳಾಳೊಡೆಯರಾರೆಂಬ ಭೇದವ
ಬೀಳುಕೊಟ್ಟೇ ನಡಿಸುತಿರ್ದನು ತನ್ನ ಮೈದುನರ ‖ ೫೧

ಹೇಳಿಗೆಗೆ ಬಾಯ್ಬಿಡುವ ವೇದದ
ತಾಳಿಗೆಗಳೊಣಗಿದುವು ಘನತೆಯ
ಮೇಲೆ ತನ್ನದು ಘನತೆ ಯೆಂಬುದ ನತ್ತ ಬೇಱಿರಿಸಿ ।

---

[1] ನನಿಬರೊ, ಝು.

ಕಾಲಿಗೆಱಗುವ ನಾಯುಧಿಷ್ಠಿರ
ನೇಱಲೊಡನೇಱುವನು ಕೃಷ್ಣನ
ಲೀಲೆಯನುಪಮವೆಂದು ವೈಶಂಪಾಯಮುನಿ ನುಡಿದ ॥ ೨

ಬಂದುದಿನ ವೊಡ್ಡೋಲಗಕ್ಕೆಯ್ತಂದು ನಿಖಿಳಾವನಿಪ ರಾಯರ
[1] ಬೃಂದದೊಳು ಮುರವೈರಿ ನುಡಿದನು ರಾಜಕಾರಿಯವ ।
ಹಿಂದೆ ಜೂಜಿನ ವಿಲಗದೊಳು ಮನ
ನೊಂದರಿರ್ದ ರಡವಿಯೊಳು ಧರೆಗಿ
ನ್ನೆಂದು ಸೇರುವರೇನು ಹದನೀಪಾಂಡುತನಯರಿಗೆ ॥ ೩

ದೇವ ನೀನೇ ಬಲ್ಲೆ ನಿನ್ನಯ
ಭಾವ ನೀಧರ್ಮಜನ ಬಹುಮಾ
ನಾವಮಾನದ ಹೊಱಿಗೆ ನಿನ್ನದು ಹರಣಭರಣವನು ।
ನೀವು ಬಲ್ಲಿರಿ ಕಾಲೊಳೊದೆದುದ
ನೋವಿ ತಲೆಯೊಳು ಹೊತ್ತು ನಡಿಸುವ್ರೊ
ಡಾವು ಬಲ್ಲೆವು ಜೀಯ ಎಂದನು ದ್ರುಪದಭೂಪಾಲ ॥ ೪

ಕಳುಹುವುದು ಶಿಷ್ಟರನು ಧರಣೀ
ತಳವ ಬೇಡಿಸುವಲ್ಲಿ ಸಾಮವ
ಬಳಸುವುದು ಭೀಷ್ಮಾದಿಗಳಿಗಟ್ಟುವುದು ವಿನಯದೊಳು ।
ತಿಳುವುದಾತನ ನೆಲೆಯ ನಲ್ಲಿಂ
ಬೞಿಕ ನಯವಿಲ್ಲೆಂದೊಡಾಹವ
ದೊಳಗೆ ಕೈದೋಱುವುದು ಮತವೆಂದನು ಮುರಧ್ವಂಸಿ ॥ ೫

ಎಲೆ ಮರುಳೆ ಮುರವೈರಿ ಕೌರವ
ರೊಲಿಯರೀಹದನನು ಯುಧಿಷ್ಠಿರ
ನಿಳೆಯ ಸೋತನು ಜೂಜುಗಾಱರ ಮೋಱೆಮಾರ್ಗದೊಳು ।

---

[1] ಮುಂದೆಯೊಳು, ಕ. ಜ. ಮುಂದಿಯೊಳು, ಟ.

ನೆಲನ [1] ನಾಳಲಿ ಮತ್ತೆ ಗೆಲಿದೇ
ಕೊಳಲಿ ಮೇಣ್ಕಾದಲಿ ಸುಯೋಧನ
ನೊಳಗೆ ತಪ್ಪಿಲ್ಲೆಂದು ನುಡಿದನು ನಗುತ ಬಲರಾಮ ॥ ೬

ಲೇಸನಾಡಿದೆ ರಾಮ ಬಳಿಕೀ
ನಾಸುಯೋಧನ ನಧಮನೇ ನೀ
[2] ನೇಸನೇಱಿಸಿಕೊಂಡು [3] ನುಡಿವೈ ಮತ್ತೆ ಕೆಲಬರೊಳು ।
ಆಸುರದ ಕತ್ತಲೆಯ ಬೀಡು ಮ
ಹಾಸಹಾಯವು ಗೂಗೆಗಳಿಗಪ
ಹಾಸವೇ ದಿಟವೆನುತ ಸಾತ್ಯಕಿ ನಗುತ [4] ಕೈಕೊಂಡ ॥ ೭

ಬಲನ ಮಾತೇನಿವನ ಭಾಗ್ಯದ
ನೆಲೆಯೆ ಘಡ ಕೌರವರ ಶತಕದ
ತಲೆಗೆ ತಾ ವೀಳೆಯವ ನೆಲೆ ಕುಂತೀಕುಮಾರಕನೇ ।
ನೆಲನ ನಲಗಿನ ಮೊನೆಯೊಳಲ್ಲದೆ
ಮೆಲುನುಡಿಯ ಸಾಮದೊಳು [5] ನಿಮಗಿ
ನ್ನಳುಕಿ ಕುಡುವರೆ ಧರೆಯೊಳಧಿಕಕ್ಷತ್ರಿಯಾತ್ಮಜರು ॥ ೮

ಕಾದಿ ಸಾವುದು ಮೇಣು ರಿಪುಭಟ
ನಾದವನ ನೆತ್ತಿಯೊಳು ಸಬಳವ
ಕೋದು ಕೊಳ್ವುದು ನೆಲನ ನಿದು ಬಾಹುಜರ ಮಕ್ಕಳಿಗೆ ।
ಮೇದಿನಿಯ ಬೇಡುವೊಡೆ ಮಟ್ಟೆಯ
ತೇದು ಹಣೆಯೊಳು ಬಡಿದು ದರ್ಭೆಯ
ಕೋದು ಸ್ವಸ್ತಿಯ ಹಾಯ್ಕುವುದು ಹಾರುವರ ಮತವೆಂದ ॥ ೯

1 ನೋಡಲಿ, ಟ. 2 ವೀಸ ನೇಱಿಸಿಕೊಂಡು ನುಡಿವಿರಿ, ಜ.
3 ನುಡಿದೊಡೆ, ಝ. 4 ಖತಿಗೊಂಡ, ಜ. ಝ. ಟ.
5 ನೀಂ ಮನವಳುಕಿ ಕೊಳ್ವರೆ ಧರೆಯೊಳೀಕ್ಷತ್ರಿಯರ ಸುತರೆಂದ, ಜ.

ಎನಲು ನಕ್ಕನು ದ್ರುಪದನಿದು ನ
ವ್ಕ್ಮನುಮತವು ಕಾಳಗದೊಳಲಗಿನ
ಮೊನೆಯೊಳಲ್ಲದೆ ಮಹಿಯು ಬಿಡುವನೆ ಕೌರವೇಶ್ವರನು ।
ವಿನುತಸಾತ್ಯಕಿ ಕೇಳು ನೆಲೆಯನು
ಜನಪ [1] ರನ್ನೆಬರೊಬ್ಬ ದೂತನ
ವಿನಯದೊಳು ಕಳುಹುವುದು [2] ಭೇದವ ನಱಿಯಬಹುದೆಂದ॥೧೦

ವಿಹಿತವಿದು ಪಾಂಚಾಲಕನ ಮತ
ವಹುದು ರಾಯರಿಗಟ್ಟುವುದು ವಿ
ಗ್ರಹವ ಸೂಚಿಸಿ ಕರೆದು ಕೊಳ್ವುದು ಬೇಹ ಭೂಭುಜರ ।
ಬಹುಳ ಬಲಸಂವರಣೆಯೊಳು ಸಂ
ನಿಹಿತರಾಗಿಹುದಿತ್ತಲತ್ತಲು
ಮಹಿಯು ಬೇಡಲು ಕಳುಹಿ ಶಿಷ್ಟರ ನೆಂದನಸುರಾರಿ ॥ ೧೧

ಮದುವೆಗೋಸುಗ ಬಂದೆವಾವಿಂ
[3] ದಿದಱ ಮೇಲಣ ರಾಜಕಾರ್ಯದ
ಹದನನಱಿ [4] ವುವುದಟ್ಟಿದೊಡೆ ಬಹೆವಾವು ವಹಿಲದೊಳು ।
ಹದುಳವಿಹುದೆಂದಸುರರಿಪು ಕರು
ಣದೊಳು ಕುಂತೀಸುತರ ನಾದ್ರೌ
ಪದಿಯ ನಭಿಮನ್ಯುವ ಸುಭದ್ರೆಯ [5] ಹರಸಿ ಬೀಳ್ಕೊಂಡ ॥ ೧೨

ಕೂಡಿಕೊಂಡಿಹುದಿವ [6] ರ ಮಕ್ಕಳ
ನೋಡಲಾಗದು ಹೆಚ್ಚು ಕುಂದನು
ನಾಡ ಬೇಡಲು ಬುದ್ಧಿವಂತರ ನಲ್ಲಿಗಟ್ಟುವುದು ।

---

1 ತನ್ನವನೊಬ್ಬ, ಝ. 2 ಸಾಮವ ಬಳಸಬಹುದೆಂದ, ಟ.
3 ನಿದಱ ಮೇಲೇನಾದಕಾ, ಕ. ದಿದಱ ಮೇಲಿನ್ನಾದಕಾ, ಜ. ನದಱ ಮೇಲಿನ್ನಾವ ಕಾ, ಝ. 4 ದಟ್ಟುವುದು ಬಹೆವಾವು ಸಾಕದನ್ನೆಬರ, ಕ.
5 ಕರಸಿ, ಟ. 6 ರುಮಕ್ಕಳು, ಜ. ಟ.

[1] ಕೂಡೆ ಸೋದಿಸಿ ಸಜ್ಜೆಯೊಳು ವೈ
ಗೂಡಿ ಯಾರೋಗಣೆ [2] ಯೊಳಚ್ಚರು
ಮೂಡಿ ಕೊಂಡಿಹುದೆಂದು ದ್ರುಪದವಿರಾಟರಿಗೆ ನುಡಿದ ॥ ೧೩

ಎಂದು ಕಳುಹಿಸಿಕೊಂಡು ನಾರೀ
ಬೃಂದಯುದುಬಲಸಹಿತ ದೇವ ಮು
ಕುಂದ ಬಿಜಯಂಗೈದ ನತ್ತಲು ದ್ವಾರಕಾಪುರಿಗೆ ।
ಬಂದುದಿನವಾಳೋಚನೆಯು ನೆಲೆ
ಯಿಂದೆ ಕರೆದು ಪುರೋಹಿತನ ನಲ
ವಿಂದೆ ಕಳುಹಿದ ದ್ರುಪದನಾಕೌರವನ ಪಟ್ಟಣಕೆ ॥ ೧೪

ಓಲೆಯುಡುಗೊರೆಸಹಿತ ಧರಣೀ
ಪಾಲರಿಗೆ ಪಾಂಡವ [3] ರು ಬಿಟ್ಟರು
ಕಾಳಗಕೆ ಬಲವಾಗಲೋಸುಗ ಕರೆದರಲ್ಲಲ್ಲಿ ।
ಆಳುಕುದುರೆಯು ನೆರೆಹಿ [4] ಬಂದರು
ಮೂಲೆಯರಸುಗಳಲ್ಲ ಕುರುಭೂ
ಪಾಲನಲ್ಲಿಗೆ ಕೆಲರು ಕೆಲಬರು [5] ಪಾಂಡವರ ಪೊರೆಗೆ ॥ ೧೫

ಧರಣಿ ಯೊಡೆಗಿಡೆ ರಾಯಮೋಹರ
ತೆರಳುತಿಬ್ಬರು ರಾಯರಿಗೆ ಕೈ
ನೆರವ ತೋಱಲು ಕವಿದು ಬಂದುದು ಕಾಣೆನಳತೆಗಳ ।
ಅರಿಗಳುರೆಹೆಚ್ಚಿದರು ವೈಮಱ

---

1 ಕೂಡೆ ನೋಡಿಸಿ, ಕ. ಕೂಡೆ ಸಂಧಿಸಿ, ಝ. ಕೂಡಿ ಸೋದಿಸಿ, ಟ.
2 ಗಳೊಳು ಮನಗಂಡಿ ಬೆರಸಿಹುದೆಂದು, ಕ. ಜ. ಝ.
3 ರಕಿಷ್ಟರು, ಕ. ಟ. ರಕಿಷ್ಟರ, ಜ. ರುಕಿಷ್ಟರು, ಝ.
4 ದೆಸೆಗಳ, ಕ. ಜ. ಝ. ದಿಕ್ಕಿನ, ಟ.
5 ಪಾಂಡುತನಯರಿಗೆ, ಕ. ಜ. ಝ. ಟ.

ದಿರಲು ಮಹಿಪಮಗಮಾನ್ಯ ವಹುದಿಂ
ನುರವಣಿಸಬೇಕೆಂದು ಕೌರವರಾಯ ಚಿಂತಿಸಿದ ‖ ೧೬

ಹದನ ನಾಪ್ತರಿಗಱಿಹಿದನು ಗುಪಿ
ತದೊಳು ಕೃಷ್ಣನ ನೊಳಗುಮಾಡುವ
ಮುದದೆ ಕೌರವ ಬಂದನಂದಾದ್ವಾರಕಾಪುರಿಗೆ ।
ಅದನು ಭೇದಿಸಿ ಬೇಹಿನವರಱು
ಹಿದರು ಕುಂತೀಸುತರಿಗತಿವೇ
ಗದೊಳು ಧರ್ಮಜನಳುಕಿ ಕಳುಹಿದ ನಿಂದ್ರನಂದನನ ‖ ೧೭

ಬೀೞುಕೊಂಡರ್ಜುನನು ಲಕ್ಷ್ಮೀ
ಲೋಲನಲ್ಲಿಗೆ ಬರುತೆ ಕಂಡನು
ಲೀಲೆಯೊಳು ನರ್ತಿಸು [1] ವ ನವಿಲನು ಬಲದೊಳಡಹಾಯ್ದು ।
ಮೇಲೆ ಹಂಗನ ಬಲವ ಹರಿಣೀ
ಜಾಲದೆಡನನು ತಿರ್ದುವಲ್ಲಿ ವಿ
ಶಾಲಶಕುನವನಾಲಿಸುತೆ ಹರುಷದೊಳು ನಡೆತಂದ ‖ ೧೮

ಮೊರೆದು ಮಿಗೆ ತಲೆಯೊತ್ತಿ ತೆರೆವ್ಮೈ
ಮುರಿದು ಘುಳುಘುಳುಘುಳಿತಘನನಿ
ಷ್ಠುರನಿನಾದದ ಗಜರು ಭಾಡಿಸೆ ಬಹುಳಲಹರಿಯೊಳು ।
ತೆರೆತೆರೆಯು ತಿವಿದೆದ್ದು ಗಗನ [2] ಕೆ
ಪರಿಯೆ ವಿತಳಕೆ ಸುರಿದು ಸುಳಿಯಂ
ತರಿಸೆ ಸಾಗರನುಬ್ಬುಗವಳವ ಕೊಂಡವ್ರೋಲ್ [3] ಮೆಱೆದ ‖ ೧೯

ಪೂತು ಮಝು ಸಾಗರನ ಬಲುಹು ಮ
ಹಾತಿಶಯವೈ ಯಿವನನಂಜಿಸ
ಲಾತಗಳು [4] ಗರ್ವಿತರು ಬೆಟ್ಟವನೊಟ್ಟಿ ನೆತ್ತಿಯೊಳು ।

---

1 ಸುತೆ ನವಿಲನು ಬಲನ ನೆಡವಾಯ್ದು, ಝು. 2 ವನಿರದೊದೆಯೆ ವಿತಳಕೆ ಸುಳಿ ಭೋಂಕರಿಸೆ, ಝು. 3 ಕುಣಿದ, ಝು. 4 ವರ್ವಿಗರು, ಜ, ವರ್ವಿಗಳು, ಝು.

ಈತ ನೆಮಗಂಜುವನೆ ಎನುತೆ ವಿ
ಧೂತರಿಪುಬಲ [1] ಬಂದು ಕಂಡನು
ಪಾತಕದ ಹೆಡತಲೆಯು ದಡಿಯನು ದ್ವಾರಕಾಪುರಿಯ ‖ ೨೦

ಅಟ್ಟಿ ಬಳಲಿದ ಶ್ರುತಿಗೆ ಹರಿ ಮೈ
ಗೊಟ್ಟ ಠಾವಿದು ತಾಪಸರು ಜಪ
ಗುಟ್ಟಿ ಜೆನುಗಿದೊಡವರ ನುಜ್ಜೀವಿಸಿದ ಠಾಣವಿದು |
ಹುಟ್ಟುಸಾವಿನ ವಿಲಗದವರನು
ಬಿಟ್ಟ ಠಾವಿದು [2] ಕಾಲಕರ್ಮದ
ಥಟ್ಟು ಮುಖಿವಡೆದೋಡಿದೆಡೆಯಿದು ಶಿವಶಿವಾ ಯೆಂದ ‖ ೨೧

ಪರಮನಾರಾಯಣ ಪರಾಯಣ
ರಿರಲು ಪರತರವೆಂದು ಮುರಹರ
ಒರೆದ ಠಾವಿದು ಮುಕ್ತಿ ಯಿಲ್ಲಿಯೆ ಕರತಳಾಮಳಕ |
ಭರಿತಬೊಮ್ಮದ ಸುತ್ತುಗೊಣಸನು
ಸರಿವ ಠಾವಿದು ತರ್ಕತಂತ್ರದ
ತರದಯುಕುತಿಯು ತೊಱಿಸುಗೊಳ್ಳದ ಠಾವಲಾ ಯೆಂದ ‖ ೨೨

ಹೊಗಲುತರ್ಜುನನಸುರರಿಪುವಿನ
ನಗರಿಗೈತಂದರಮನೆಗೆ ಬರ
ಲಗಧರನು ಮಂಚದೊಳು ನಿದ್ರಾಂಗನೆಯ ಕೇಳಿಯೊಳು |
ಸೊಗಸು ಮಿಗಲರೆದೆಱಿದ ಲೋಚನ
ಯುಗಳ ಸಮತಳಿಸಿದ ಸುಷುಪ್ತಿಯ
ಬಿಗುಹಿನೊಳು ಪರಮಾತ್ಮನೆಸೆದನು ಭ್ರಾಂತಿಯೋಗದೊಳು ‖

ಮುಕುಳಕರಪುಟನಾಗಿ [3] ಭಯಭರ
ಚಕಿತಚಕಿತ್ತ ಶರೀರನಬುಜಾಂ

---

[1] ಮುಂದೆ, ಝ.  [2] ತರ್ಕತಂತ್ರದ ಥಟ್ಟು ಮುಱಿದೆಡೆಯಾಡಿ, ಟ.
[3] ಭವಭಯಚಕಿತ, ಕ

ಬಕನ ಸೆಬ್ಬಿ ಸಲಮ್ಮದೊಯ್ಯನೆ ಚರಣಸೀಮೆಯೊಳು |
ಅಕುಟಿಲನು ಸಾರಿದನು ಬಳಿಕಾ
ವಿಕಳದುರ್ಯೋಧನನು ನಿಗಮ
[1] ಪ್ರಕರಮೌಳಿಯು [2] ಮೌಳಿಯತ್ತಲು ಸಾರ್ದು [3] ಮಂಡಿಸಿದ || ೨೪

ಇರಲು ನಿಮಿಷದೊಳಸುರರಿಪು ವ್ಯಿ
ಮುರಿದು ವೃಪ್ಪವಡಿಸಿದ ನಿದಿರೊಳು
ಸುರಪತಿಯು ಸೂನುವನು ಕಂಡನು ನಗೆಯು ವೊಳ ಮಿನುಗೆ |
ತಿರುಗಿ ನೋಡುತೆ [4] ತಲೆಯು ದೆಸೆಯೊಳು
ಕುರುಕುಲೇ [5] ಶ್ವರನತಿವಿಕಾರಿತೆ
ಯಿರವ ಕಂಡನಿದೇನಿದೇನೆಂದಸುರರಿಪು ನುಡಿದ || ೨೫

ವೀಳಯವ ತಾಂ ಕೊಂಡು ಕುರುಭೂ
ಪಾಲಪಾರ್ಥರಿಗಿತ್ತು ಲಕ್ಷ್ಮೀ
ಲೋಲ ನುಡಿಸಿದನುಭಯರಾಯರಿಗಿತ್ತ ಬರವೇನು |
ಹೇಳಿರೈ ಬರವಘಟಿತವಲಾ
ವೇಳವೇ [6] ಕಡುಮಾನ್ಯರೆಮ್ಮಾ
ಯಾಲಯಕೆ ಬರವೇನೆನಲು ಕುರುರಾಯ ನಿಂತೆಂದ | ೨೬

ಯಾದವರು ಕೌರವರೊಳುಂಟೇ
ಭೇದ ವಾವ್ಯೆತಂದೊ [7] ಡೆಂವೊಳ
ಗಾದ [8] ಲಾಘವವೇನು ನಿಮ್ಮವೊಲಾರು ಸಖರೆಮಗೆ |

ಸೋದರರ ವ್ಯಸನ ಕದಡಿದುವು ದಾ
ಯಾದಪಿಷಯದೊಳನ್ನು ಧರಣಿಗೆ
ಕಾದುವೆವು [1] ನಮ್ಮಿಬ್ಬರಿಗೆ ಬಲವಾಗಬೇಕೆಂದ ॥ ೧೭

ಕೌರವೇಶ್ವರ ಕೇಳು ಧರಣೀ
ನಾರಿ [2] ಯಾರೊಡನೊಕ್ಕತನವಿ
ದ್ದಾರ ಮೆಚ್ಚಿ ದಳಾರ ಸಂಗಡವುರಿಯ ಹಾಯ್ದಳು ।
ಭೂರಿಮುಮುಕಾರದೊಳು ನೃಪರು ವಿ
ಚಾರಿಸದೆ ಧರೆ ತಮ್ಮದೆಂದೇ
ನಾರಕದ ಸಾಮ್ರಾಜ್ಯಕ್ಕೈದುವರೆಂದು ಹರಿ ನುಡಿದ ॥ ೧೮

ನಾಡಿಗೋಸುಗ ಸೋದರರು ಹೊ
ಯ್ದಾಡಿ ಹಳಿಹಂಚಾದರೆಂಬುದ
ನಾಡದಿಹುದೇ ಲೋಕ ಕನುಲಜನುಸಿರಿಹನ್ನೆಬರ ।
ಬೇಡ ಖತಿ ನಿಮ್ಮೊಳಗೆ ನೀಂ ಕೈ
ಗೂಡಿ ಬದುಕುವುದೊಳ್ಳಿತಾಂ ನೆಱೆ
ನೋಡಿ ಸಂತಸಬಡುವೆ ವೆಂದನು ದಾನವಧ್ವಂಸಿ ॥ ೧೯

ತಗರೆರಡ ಖತಿಗೊಳಿಸಿ ಬಲುಗಾ
ಳಗವ ನೋಡುವರಂತೆ ನಿಮ್ಮನು
ತೆಗೆತೆಗೆದು ಕಲಿಮಾಡಿ ಬಿಡುವರು [3] ಖುಲ್ಲರಾದವರು ।
ನಗುತೆ ಹೆಱಹಿಂಗುವರು ಹಿಸುಣರು
ಬಗು [4] ಳದವದಿರು ಬಳಿಕ ಕಡೆಯೊಳು
ಹುಗುವಿರೈ ನೀವಿಬ್ಬರಪ [5] ಕೀರಿತಿಯ ಹಾದರಕೆ ॥ ೨೦

---

1 ನಮ್ಮಿನಿಬರಿಗೆ, ಜ. ನೀವಿಬ್ಬರಿಗೆ, ಝ. ಟ.

2 ನಾರಾಯಣನ ವಧು ಮಾತ್ರ, ಟ.

3 ಕುಜನರಾದವರು, ಝ. 4 ಳುವವದಿರು ಮತ್ತೆ ಕಡೆ, ಟ.

5 ಕೀರ್ತ್ಯಂಗನೆಯ ಮನೆಯ, ಟ.

ಅವಧರಿಸು ಮುರವೈರಿ ಧರ್ಮ
ಶ್ರವಣಕೋಸುಗ ಬಾರೆವಾಂ ಪಾ
ರ್ಥಿವರ [1] ಪಂಥದ ಕದನವಿದ್ಯಾಕಾಮ ವಿಮೆಗಾಯ್ತು ।
ಸಿವಗೆ ನಾವಿತ್ತಂಡ ಸರಿ ಪಾಂ
ಡವರಿಗೆಯು ಮನದೊಲವಿನೊಳು ಕೌ
ರವರಿಗೆಯು ಬಲವಾಗಬೇಕೆಂದನು ಸುಯೋಧನನು ॥ ೩೧

ಎನಲು ತಂಬುಲ ಸೂಸೆ ನಗುತ
ರ್ಜುನನ ನೋಡಿದನಸುರರಿಪು ನಿ
ನ್ನನುವ ಹೇಳ್ಬೈ ಪಾರ್ಥನೆನೆ ತಲೆವಾಗಿ ಕೈಮುಗಿದು ।
ಎನಗೆ ಮತ ಬೇಱೇನು ದುರ್ಯೋ
ಧನನ ಮತವೇ ತನ್ನ ಮತ ನಿ
ಮ್ಮನುನಯುವೆ ನಯುವೆಮ್ಮೊಳೇಸ್ವಾತಂತ್ರ್ಯವಿಲ್ಲೆಂದ ॥ ೩೨

ಆದೊಡಾವಿಹೆ ವೊಂದುಕಡೆಯೊಳು
ಕಾದುವವರಾವಲ್ಲ ಬಲ [2] ನಾ
ಯಾದವೆರು ಕೃತವರ್ಮ ನಾ ರಾಯುನ ಮಹಾಸೇನೆ ।
ಕಾದುವವರಿವರೊಂದುದೆಸೆ ಯೆುರ
ಡಾದುವಿವಱೊಳು ಮೆಚ್ಚಿದುದ ನೀ
ನಾದರಿಸಿ ವರಿಸೆಂದು ಪಾರ್ಥಂಗಸುರರಿಪು ನುಡಿದ ॥ ೩೩

ಮುರಮಥನ ಬಿನ್ನಹವು ಕೌರವ
ನರಸ ನತಿಸಿರಿವಂತ ನಿದ ಸಂ
[3] ತರಿಸಲಾಪನು ಬಹುಳಯಾದವಸೈನ್ಯಸಾಗರವ ।

---

1 ಕದನದ ಪಂಥವಿದ್ಯಾ, ಜ.

2 ಸಹ ಯಾದವರು, ಝ. 3 ವರಿಸಲಾಪನು, ಜ. ಹರಿಸಲಾಪನು, ಟ.

ಧರೆಯು ಸಂಪದ ವಿಲ್ಲ ವಡವಿಯು
ತಿರುಕರಾವೆಮಗಿನಿಬರನು ಸಂ
[1] ತರಿಸಲಪ್ಪುದೆ ಕೃಷ್ಣ ನೀನೇ ಸಾಕು ನಮಗೆಂದ ‖ ೩೪

ನಾವು ಬಡವರು ಬಡವರಿಗೆ ದಿಟ
ನೀವು ಬೆಂಬಲವೆಂಬ ಬಿರುದನು
ದೇವ ಕೇಳಿದು ಬಲ್ಲೆನೆಂದನು ಪಾರ್ಥ ಕೈಮುಗಿದು ।
ನೀವು ಸುಖದೊಳು ಪಾಂಡವರನು
ಜೀವಿಸುವುದೆಮಗುಚಿತ ಯದುಭೂ
ಪಾವಳಿಯು ಕೃಪೆಮಾಡಿ ಯೆಂದನು ಕೌರವರ ರಾಯ ‖ ೩೫

ಮಱೆಯು ಮಾತುಗಳೇಕೆ ಪಾಂಡವ
ರೆಱಕ ನಿಮ್ಮೊಳು ಹಿರಿದು ಪಾರ್ಥಗೆ
ಮಱುಗುವಿರಿ ಹಿರಿದಾಗಿ ಮನವುಬ್ಬೆಂಟು ನಿಮ್ಮೊಳಗೆ ।
ಉಱುವ ಕಾರ್ಯಕೆ ಕಡೆಯೊಳಾವೇ
ಹೊಱಗು ಸಾಕಂತಿರಲಿ ನೀಂ ಹೊ
ಕ್ಕಱಿಯಲಾಗದು [2] ಮತ್ತೆ ಯಿದನೇ ಬೇಡಿಕೊಳ್ಳುವೆನು ‖ ೩೬

ಮೊಲೆಯು ನುಂಬಂದೊಬ್ಬ ದನುಜೆಯು
ಹಿಳಿದು [3] ಕೊಂಡೆವು ಶಕಟನನು ತನು
ಗಳದೆ [4] ವಘ ಹಯು ವತ್ಸ ಧೇನುಕ ವೃಷಭ ಭುಜಗರನು ।

---

1 ವರಿಸಲಾಪುದೆ ಕೃಷ್ಣ ನೀ ಸಾಕೆಂದನಾಪಾರ್ಥ, ಜ. ತರಿಸಲಾಪೆವೆ ಕೃಷ್ಣ ನೀ ಸಾಕೆಂದನಾಪಾರ್ಥ, ಝ. ಹರಿಸಲಾಪೆವೆ ಕೃಷ್ಣ ನೀ ಸಾಕೆಂದನಾಪಾರ್ಥ, ಟ.

2 ಕೃಷ್ಣ ಯಿದನೇ ಬೇಡಿಕೊಂಡವನು, ಕ. ಕೃಷ್ಣ ಯೆಂದನು ಕೌರವರ ರಾಯ, ಝ. ಮತ್ತೆ ಯಿದನೇ ಬೇಡಿಕೊಂಡವನು, ಟ.

3 ವೊದೆದೆವು, ಕ. ಝ.　　4 ಧೇನುಕ ವತ್ಸ ನಗ ಹಯು ವೃಷಭ ಭುಜಗರನು, ಕ. ಝ.

ಬಲುಗಜವ ಮಲ್ಲರನು ಮಾವನ
ನೆಱೆದು ಮಾಗಧಬಲವ ಬಱಿಕೈ
[1] ದಱಿಸಿದೆವು ದಾನವರ ಹೆಂಡಿರ ನಾಹವಾಗ್ರದೊಳು ॥ ೩೭

ಕಾಲಯವನನ ದಂತವಕ್ರನ
ಸೀಳಿದೆವು ಮುರ ನರಕ [2] ಶುಂಭರ
ಸಾಲುವನ ಪೌಂಡ್ರಕನ [3] ಡಿಬಿಕನ ಹಂಸ ಬಕರುಗಳ ।
ಕಾಳಗದೊಳ [4] ಟ್ಟಱಿದು ಬಾಣನ
ತೋಳ ತಱಿವೆಂದಾಯ್ತು ಧಾಳಾ
ಧೂಳಿ ಯಾಹವ ವಿಂದುವೌಳಿಯೊ ಳವಗೆ ಮುನಿಸಿನೊಳು ॥ ೩೮

ಹಸುಳತನ ಮೊದಲಾಗೆ ಬಲುರ
ಕ್ಕಸರೊಡನೆ ತಲೆಯೊತ್ತಿ ರಣದಾ
ಯಸವ ಸೈರಿಸಿ ಹೊಯ್ದು ಕೊಂದೆವು ಕೋಟಿದಾನವರ ।
ಮಿಸುಕಲಾಱೆವು ಚಕ್ರ ಭಂಡಾ
ರಿಸಿತು ಮುನ್ನಿನ ಜೌವನದ ಬಲ
ಮಸುಳತಾವೆಂಡಾಡಿಭಟ್ಟರು ನೃಪತಿ ಕೇಳೆಂದ ॥ ೩೯

ಎನಲು ಬಲುಲೇಸೆಂದು ಕೌರವ
ಜನಪ ಕಳುಹಿಸಿಕೊಂಡು ಬಲರಾ
ಮನನು ಕೃತವರ್ಮನನು [5] ಕಂಡನು ನಿಖಿಳಯಾದವರ ।
[6] ಇನಿತುಬಲಸಹಿತೊಲವಿನೊಳು ಹ
ಸ್ತಿನಪುರಕೆ [7] ಮರಳಿದನು ಬಳಿಕೀ
ದನುಜರಿಪು ನಸುನಗುತೆ ಯಿಂತೆಂದನು ಧನಂಜಯಗೆ ॥ ೪೦

---

1 ಪಱಿಸಿದೆವು, ಕ. 2 ಕುಂಭನ, ಟ.
3 ಹಂಸನ ಡಿಬಿಕವೋಹರವ, ಕ. ಝ.
4 ಟ್ಟಣಿಸಿ, ಕ. ಟೆಕ್ಕರಿಸಿ, ಝ. 5 ಕೊಂಡನು, ಝ.
6 ವಿನುತಬಲ, ಟ. 7 ಹಾಯ್ದನು, ಟ.

ಸುರಗಿಯನು ಬಿಸುಟೊಱೆಯ ನಂಗೀ
ಕರಿಸಿದವ್ರೊಲಿಂದಾಹವದ ಧರ
ಧುರದ ಯಾದವಬಲವ ನೊಲ್ಲದೆ ಮಂದಮತಿ ಯಾಗಿ ।
ಮರುಳ ಕಾದದ ಕಟ್ಟದೆಮ್ಮನು
ಬಱಿದೆ ಬಯಸಿದೆ ಯಿದನು ಕೇಳ್ದೊಡೆ
ಮರುಳುಗುಟ್ಟದೆ ಮಾಣ್ಬರೇ ನಿಮ್ಮ [1] ಗ್ರಜಾನುಜರು ॥ ೪೧

ಎನಲು ಗಹಗಹಿಸಿದ ನಿದಾರಿಗೆ
ಮನವ ಕದ್ದಾಡುವಿರಿ ನಿಜಶಿ
ಷ್ಯನೊಳು [2] ನೋಟಕದಿಂದ್ರಜಾಲವೆ ನಿಮ್ಮ ಗರುಡಿಯೊಳು ।
ಎನಗೆ ಶ್ರಮವುಂಟದು ನಿಲಲಿ ಯೆ
ನ್ನನುಜರಗ್ರಜರಱಿಯರೇ ನಿ
ಮ್ಮನುಪಮಿತಮಹಿಮಾವಲಂಬನವೆಂದನಾಪಾರ್ಥ ॥ ೪೨

ನಾವು ಬಱಿಗೈಯವರು ಬರಲೆಮ
ಗಾವುದಲ್ಲಿಯು ಕೆಲಸ ವುಂಡುಂ
ಡಾವು ಕುಳ್ಳಿ [3] ಹರಲ್ಲ ಹಂಗಾಗಿರೆವು ಕಟಕದೊಳು ।
ದೇವರೆಂದೇ ನೀವು ಬಗೆವಿರಿ
ದೇವತನ ಪೆಮಗಿಲ್ಲ ವೆಂಬುದ
ನಾವು [4] ಬಲ್ಲೆವು ಬಂದು ಮಾಡುವುದೇನು ಹೇಳೆಂದ ॥ ೪೩

ದೇವಮಾತ್ರವೆ ನೀವು ದೇವರ
ದೇವರೊಡೆಯರು ಹೊಗಳುವೊಡೆ ವೇ
ದಾವಳಿಗಳಳವಲ್ಲ ಸಾಕಾಮಾತದಂತಿರಲಿ ।
ನಾವು ಭಕ್ತರು ಭಕ್ತಭೃತ್ಯರು

---

1 ಣ್ಣತಮ್ಮದಿರು, ಝ. ಟ. 2 ನಾಟಕದಿಂದ್ರ, ಝ.
3 ಹೆವಲ್ಲಿ ಹಂಗಾಗಿಹೆವು, ಝ. 4 ಬಾರೆವು, ಟ.

ನೀವು ಸಾರಥಿ ಯಾಗಿ [1] ನಮ್ಮನು
ಕಾವುದೆಂ [2] ದರ್ಜುನನು ಹಣೆಚಾಚಿದನು ಹರಿಪದಕೆ ‖ ೪೪

ಎನಲು ನಗುತೆತ್ತಿದನು ಸಾರಥಿ
ತನವ ಕೈಕೊಂಡನು ಕೃಪಾಳುವಿ
ನನುನಯುವ ನಾವೆತ್ತ ಬಲ್ಲೆವು [3] ಭೃತ್ಯವರ್ಗದೊಳು ।
ತನಗಹಂಕೃತಿ ಯಿಲ್ಲ ವೈರೋ
ಚನಿಯು ಪಡಿಹಾಱಕೆ ಕಿರೀಟಿಯು
ಮನೆಯು ಬಂಡಿಯು ಬೋವತನ ವೆಲೆ ನೃಪತಿ ಕೇಳೆಂದ ‖ ೪೫
*

ಒಂದನೆಯ ಸಂಧಿ ಮುಗಿದುದು.

---

1 ಭೃತ್ಯರ, ಝ. 2 ದೆಱಗಿದನು ಫಲುಗುಣ ಹರಿಯ ಚರಣದೊಳ್, ಕ.
3 ನೃಪತಿ ಮಾರ್ಗದೊಳು, ಟ.
* 45ನೆಯ ಪದ್ಯದ ಮುಂದೆ, ಕ. ಪುಸ್ತಕದಲ್ಲಿ

ಎಂದು ಮುರರಿಪು ವರ್ಜುನನ ನಲ
ವಿಂದ ಸಾರೋಗಣೆಯ ಮಾಡಿಸಿ
ಚಂದದೊಳು ಹೊಱವಟ್ಟನೊಡನಾದ್ವಾರಕಾಪುರಿಯ ।
ಮುಂದೆ ದೂತರು ಬೇಗದಿಂದೈ
ತಂದು ಧರ್ಮಜನೊಡನೆ ಹರಿ ತಾಂ
ಬಂದ ನೆಂಬುದ ನುಸಿರಿದರು ಜನಮೇಜಯಕ್ಷಿತಿಪ ‖

ಎಂಬ ಪದ್ಯವೂ ಝ. ಪುಸ್ತಕದಲ್ಲಿ.

ಫಲುಗುಣನು ಹರುಷದೊಳು ಹೆಚ್ಚಿಯೆ
ಬಲವೊಡೆದು ನಲಿನಲಿದು ಮನದೊಳು
ಮಲಗಿ ಕೌರವನೃಪನ ಗೆಲಿದವನೆಂಬ ಹರುಷದೊಳು ।
ತಳೆದು ಪುಳಕವ ನುಡಿನಗೆಯ ಕಂ
ಗಳೊಳು ಸುರಿವಾನಂದಜಲದೊಳು
ತಳೆಯ ಮಿಗಿಲಂದಪ್ಪಿ ಹರಸಿದ ವೀರನಾರಯಣ ‖

ಎಂಬ ಪದ್ಯವೂ ಹೆಚ್ಚಾಗಿ ದೊರೆಯುತ್ತವೆ.

## ಎರಡನೆಯ ಸಂಧಿ.

ಸಂಜಯನು ಧರ್ಮರಾಯನ ಬಳಿಗೆ ಬಂದುದು.

ಸೂಚನೆ.

ಬಂದು ಕಂಡನು ಸಂಜಯನು ಯಮ
ನಂದನನ ನಲ್ಲಿಂದೆ ಮರಳಿದು
ಬಂದು ಕೌರವನೃಪತಿಗರುಹಿದನವರಮಾತುಗಳ ||

ಎಲೆ ಪರೀಕ್ಷಿತತನಯ ಕೇಳು
ಮ್ಮಳಿಸಿದನು ಯಮಸೂನು ಮುರರಿಪು
ಫಲುಗುಣಗೆ ಮೈಗುಡುವನೋ ಕೌರವನಿಗೊಳಗಹನೋ |
ತಿಳಿಯ ಲರಿದೆನುತಿರಲು ಬಲಗ
ಣ್ಣಲುಗಿತಿದಿರೊಳು ಕೈಯ ಗುಡಿಯೊಳು
ಸುಳಿದ ನೊಬ್ಬನು ಬಹುಳ ಮಾರ್ಗಶ್ರಮದ ಭಾರದೊಳು || ೧

ಇದಿರುಗೊಳ್ಳೀಬರಸ ನಡೆ ಕಟ
ಕದೊಳು ಕಟ್ಟಿಸು ಗುಡಿಯ ನಹಿತರ
ಸದೆದೆ ಹೋಗಿನ್ನೇನು ಸರಿಯೇ ನಿನಗೆ ಸುರಗಿರರು |
ಪದವ [1] ನಱಸಿದೊಡಾಟಿ [2] ಗೊಂಡನು
ಸದಮಲಶ್ರುತಿತತಿಯ ನೆಂಬ
ಗ್ಗದ ಮಹಾಪರದೈವ ಬಿಜಯಂಗೈ [3] ದ ನೇಟೆಂದ || ೨

ಕಥೆಗೆ ನಿನ್ನೊಡಹುಟ್ಟಿದನ ಸಾ
ರಥಿತನವ ಕೈಕೊಂಡ ನಿನ್ನೀ
ಪೃಥಿವಿ ನಿನ್ನಯ ರಾಣಿವಾಸವು ಚಿಂತೆ ಬೇಡಿದಕೆ |

---

1 ನಡಸಿದೊಡಾಟಿಗೊಂಡಾಸದಮಲ, ಝ. 2 ಗೊಂಬನು ಸದಮಲಶ್ರುತಿ ಮತಿಯ ನೆಂಬ, ಟ. 3 ದಯಿದೆ ಯೆಂದ, ಟ.

ವ್ಯಥಿತ ವಾಯಿತು ವೈರಿಬಲ [1] ಸಂ
ಪ್ರಥಿತಸಾಹಸ ನಾದೆ ನೀನೆನೆ
ಶಿಥಿಲಸಂಶಯ ನಂಗಚಿತ್ತವೆ ನಿತ್ತ ನಾತಂಗೆ ॥ ೩

ಉಕ್ಕಿ ವಿಸಟಂಬರಿವ ಹರುಷದ
ತೆಕ್ಕೆಯೊಳು ಕೈಗುಡುವ ನೃಪ [2] ಜನ
ವಿಕ್ಕಲಿಸೆ ಪೊಱಮಟ್ಟ ನರಸನು ಸಕಲದಳಸಹಿತ ।
ಮಿಕ್ಕು ಬರೆ ಬರೆ ಕೃಷ್ಣನನು ಕಂ
ಡೊಕ್ಕ ನೊಡಬನು ಚರಣದೊಳು ಸಾ
ಕಕ್ಕಜ ವಿದೇನೆನುತೆ [3] ಹರಿ ನೆಗಹಿದನು ಧರ್ಮಜನ ॥ ೪

ಪರಕೆ ಪರತರವಸ್ತುವನು ಗೋ
ಚರಿಸಿದೆವಲೇ ಮುನಿಜನಂಗಳ
ವರಸಮಾಧಿಗೆ ಸಮಯ ವಿಲ್ಲದ ದೇವ ನೆಮಗೊಲಿದೈ ।
ಕರುಣಿ ಬಿಜಯಂಗೈ [4] ದೆ ಯೆನೆ ಮುರ
ಹರನು ನಗುತಿಂತೆಂದ ನಾವೀ
ನರನ ಸಾರಥಿ ಯಲ್ಲದೆಲ್ಲಿಯ ವಸ್ತು ಹೇಟೆಂದ ॥ ೫

ಬಯಲಿಗೆಮ್ಮನು ನಾಚಿಸದೆ ಪಾ
ಳೆಯಕೆ ನಡೆ ಯೆಂದಸುರರಿಪು ಸೇ
ನೆಯನು ಕೈವೀಸಿವನು ಬಂದನು ರಾಜಮಂದಿರಕೆ ।
ನಿಯುತ ವಿತ್ತಲು ಕೇಳು ಜನಮೇ
ಜಯ ಮಹೀಪತಿ ಧರ್ಮಸುತನೋ
ಲೆಯ ಹದನ ನಱಿ [5] ದಾಗ ಶಲ್ಯನೃಪಾಲ ಪೊಱಮಟ್ಟ ॥ ೬

---

1 ಸುಪ್ರತಿಕ, ಕ. 2 ಜನಧಿಕ್ಕರಿಸೆ, ಝ. ತಿಗಳಿಕ್ಕೆಲದೆ ಪೊಱಮಟ್ಟ, ಟ. 3 ತೆಗೆದಪ್ಪಿದನು ಧರ್ಮಜನ, ಕ. 4 ದಿರೆನೆ ಮುರ, ಝ. ಗೈವುದೆನೆ ಟ. 5 ದಂತೆ, ಕ. ಟ

ಮೇಳವಿಸಿ ಪ್ರೊಆಮ [1] ಟ್ಟದಗಣಿತ
ದಾಳು ಕುದುರೆಯು ಕೂಡಿ ಬರುತಿರೆ
ಕೇಳಿದನು ಕುರುರಾಯ ನಾಮದ್ರಾಧಿಪನ ಬರವ ।
ಆಳೊಳಗ್ಗಳ ನಧಟಶಲ್ಯನೃ
ಪಾಲನನು ತಿರುಹಿದೊಡೆ ಗೆಲುವುದು
ಕಾಳಗವು ತನಗೆಂದು ನಿಶ್ಚೈಸಿದನು [2] ಮನದೊಳಗೆ ॥ ೭

[3] ಮುಂದಖಿಳವಸ್ತುಗಳ ಜೋಡಿಸಿ
ಬಂದು ಪಾಳೆಯಬಿಡುವ ಠಾವಿನೊ
ಳಂದ ಮಿಗೆ ಮಾಡಿಸಿದ ಗುಡಿ ಮಂಡವಿಗೆ ಚೌಕಿಗೆಯ ।
ಬಂದು ಯೋಜನದಗಲದೊಳು ಹಯ
ವೃಂದ ಗಜ ಶಾಲೆಗಳ [4] ಕೌರವ
ನಂದು ಪರುಠವಿಸಿದನು ಬಾಣಸವಖಿಳವೋಹರಕೆ ॥ ೮

ಬಂದು ಬಿಡುವನ್ನೆಬರ ಮುನ್ನಿನ
ಮಂದಿರವ ಹೊಗುವಂತೆ ಶಲ್ಯನ
ಮುಂದಿ ಸಂತೋಷದ ಸಮುದ್ರದೆ ಮೂಡಿ [5] ಮುಳುಗಾಡಿ ।
ಮುಂದೆ ನಡೆಯಲು ಮತ್ತೆ ಮುನ್ನಿನ
ಚಂದದೊಳು ಮನೆ ಮನೆಗ [6] ಳನು ನಲ
ವಿಂದೆ ರಚಿಸಿದ ನೃದೆ ಕುರುಪತಿ [7] ಪಯಣ ಪಯಣದೊಳು ॥ ೯

---

[1] ಟ್ಟನಗಣಿತ, ಕ. ಝ. ಟ. [2] ಚಿತ್ತದೊಳು, ಕ, ಝ.

[3] ಎಂದಖಿಳ, ಕ. ಝ. ಟ. [4] ಪರುಠವದಿಂದೆ ರಚಿಸಿದ ಕೂಳ ಬಾಣವ ನಖಿಳವೋಹರಕೆ, ಕ. ಪರುಠವದಿಂದೆ ರಚಿಸಿದ ಕೂಳ ಠಾಣವ ನಖಿಳ, ಝ. ಪರುಠವದಿಂದೆ ರಚಿಸಿದ ಕೂಳ ಖಾಣವ ನಖಿಳ, ಟ.

[5] ಮುಳಗಾಡೆ, ಝ. ಟ. [6] ಳೊಳು ಮುದದಿಂದಿರಲು ರಚಿಸಿದನು ಕುರುಪತಿ, ಟ. [7] ಹಲವು ಪಯಣದೊಳು, ಝ ಟ.

* ಆರು ನಯದೊಳು ನಮ್ಮ ಖಿಳದಳ
ಭಾರವನು ಸಂತೈಸಿದವ ಕುರು
ವೀರನೋ ಯಮಸೂನುವೋ ಲೇಸಾಗೆ ಮೆಚ್ಚಿದೆನು।
ಆರು ಮಾಡಿಸಿದವರು ಬಂದೊಡೆ
ಹಾರ[1] ಲೇಕೆನ್ನೊಡಲ ತೆಱ ವೆನು
ಧೀರ ವೈದೋಱಲಿ ಯೆನುತೆ ಹೊಯ್ಸಿದನು ಡಂಗುರವ॥ ೧೦

ನಗುತೆ ಕೌರವರಾಯ ನವನೋ
ಲಗಕೆ ಬರಲಿದಿರೆದ್ದು ಮುದದೊಳು
ತೆಗೆದು ಬಿಗಿಯಪ್ಪಿದನು ಕುಶಲವ ನೈದೆ[2] ವಿಸ್ತರಿಸಿ।
ಮಗನೆ ನೀನೇ ರಚಿಸಿದಾತನು
ಬಗೆ ದಣಿಯೆ[3] ಬೇಡುವುದು ತಾಂ ಹಂ
ಗಿಗನು ನಿನಗೆನೆ ಮಾವ ಬಿನ್ನಹ ಮರಳಿ ನೀವೆಂದ॥ ೧೧

ಎನಗೆ ಬೆಂಬಲವಾಗಿ ಕುಂತೀ
ತನಯರನು ಬಿಡಿ ಮರಳಿ ನೀಂ ಹ
ಸ್ತಿನ ಪುರಿಗೆ[4] ನೀವಿತ್ತ ವರವಿನೆ ಶಲ್ಯ ಮನವಳುಕಿ।
ತನುಜ ಕೈಕೊಂಡೆನು ಯುಧಿಷ್ಠಿರ
ಜನಪ ನಳಿಯನು ನೀನು ಲೋಗನೆ
ಎನಗೆ ನೀವಿತ್ತಂಡ ಸರಿ ನಿಮ್ಮತ್ತ ಬಹೆ ನೆಂದ॥ ೧೨

ಅಗಲಿದೆನು ಪಲಗಾಲ ವೈವರ
ಮೊಗವ ನೀಕ್ಷಿಸಿ ಮರಳುವೆನು ಬಂ
ಧುಗಳ ದರುಶನ ಫಲವಲಾ ಸಂಸಾರತರುವಿಂಗೆ।

---

* ಆರುನಯದೊಳು ಮೊದಲಾದ ಪದ್ಯವು, ಝ. ಪುಸ್ತಕದಲ್ಲಿಲ್ಲ.

[1] ದೆನ್ನನು ತೆಱುವೆ ಮಾಡದ ಧೀರ, ಕ. [2] ಬೆಸಗೊಂಡ, ಟ.

[3] ನೀ ಬೇಡು ತಾ, ಟ [4] ತನಗಿತ್ತ, ಝ. ನಮಗಿತ್ತ, ಟ.

ಮಗನೆ ಸೇನೆಯು ಕೊಂಡು ವಾರಣ
ನಗರಿಗೈದುವುದೆಂದು ಭೂಪನ
ಮಗುಳಚಿದನಾಶಲ್ಯ ಬಂದನು ಪಾಂಡವರ [1] ಹೊರೆಗೆ ॥ ೧೩

ಇದಿರುಗೊಂಡರು ಕಾಣಿಕೆಯು ನಿ
ಕ್ಕಿದರು ತೆಗೆದಪ್ಪಿದರು ಹಲಗಾ
ಲದೊಳು ಹೂಚಿದ ಹರುಷವನು [2] ಕೈಗಾಗುವಮಾಡಿದರು ।
ಮುದದಿ [3] ನೆಲ್ಲರ ಕುಶಲವನು ಕೇ
ಳಿದನು ದುರ್ಯೋಧನಗೆ ಸಿಲುಕಿದ
ಹದನ ನೆಲ್ಲವ ಹೇಳಿದನು ನಿರ್ವಿಣ್ಣಮನನಾಗಿ ॥ ೧೪

ಆದೊಡೇನೆಲೆ ಕಂದ ತಪ್ಪದು
ಮೇದಿನಿಯು ಸಿರಿ [4] ನಿನಗೆ ಸತ್ಯವ
ಕಾದು ಹದಿಮೂಱಬ್ದ ನವೆದಿರಿ ಮುಂದೆ ಲೇಸಹುದು ।
ಕಾದಿ ವೃತ್ರಾಸುರನ ಮುಱಿದಪ
ವಾದದೊಳು ಸಿರಿ ಹೋಗಿ ದುಃಖಿತ
ನಾದ ನಿಂದ್ರನು ಮತ್ತೆ ಬದುಕಿದ ಶಚಿಯು ದೆಸೆಯಿಂದೆ ॥ ೧೫

ನಹುಷನನು ಕೆಡೆನೂಕಿ ಮುನಿಗಳ
ಮಹಿಮೆಯೊಳು ಸಾಮ್ರಾಜ್ಯದೊಳು ಸಂ
ನಿಹಿತ ನಾದನು ಮತ್ತೆ ದಿವಿಜರ ರಾಯ [6] ಮೊದಲಾಗ ।
ಅಹಿತರವಗಡಿಸಿದೊಡೆ [7] ಕುಸಿದನು
ಬಹುಳಲೇಸನು ಬಱಿಕ ಕಂಡನು
ಮಹಿ ನಿನಗೆ ಬೆಸಗೈಯೆ [8] ಬದುಕುವಿರೆಂದನಾಶಲ್ಯ ॥ ೧೬

---

1 ಮನೆಗೆ, ಝ. [2] ತಾವಾಗವಮಾಡಿದರು, [3] ನೈವರ ಕುಶಲ, ಝ.
4 ನಿಮಗೆ, ಟ. [5] ರಾಧದೊಳು, ಝ. [6] ಮೊದಲಾಗಿ, ಝ.
ರೊಳಗಾಗಿ, ಟ. [7] ಪುಸಿಯನು, ಝ. [8] ಯುದ್ಧ ಬದುಕು, ಝ. ಟ,

ಆದೊಡಾಕರ್ಣಂಗೆ ಸಾರಥಿ
ಯಾದಿರಾದೊಡೆ ಸಮರಮುಖದೊಳು
ವಾದತೇಜೋವಧೆಯ ಮಾಡುವುದವನ ನವೆಗಡಿಸಿ ।
ಕಾದಿ ಕುಡುವುದು ನಾವು ಗೆಲುವವೊ
ಲಾದರಿಸುವುದು ನಮ್ಮ ನೆಂದಾ
ಮೇದಿನೀಪತಿ ಶಲ್ಯನನು ಕಳುಹಿದನು ಸತ್ಕರಿಸಿ ॥ ೧೭

ಬೀಱುಕೊಂಡನು ಶಲ್ಯ ನಿತ್ತಲು
ಹೇಱುವರ ಮನ ಮುರಿಯೆ ನೋಟಕ
ರಾಲಿ ಝೊಮ್ಮಿಡೆ ಕಾದುವರ ಮನ ಮೂಱುಕವಲಾಗೆ ।
ಜಾಳಿಗೆಯ ಹೊಗರಲಗಿನುರಿಯ ಛ
ಡಾಳ ನಭದೊಳು ಝುಗಝುಗಿಸೆ ಹೇ
ರಾಳದಾಳ್ಕುದುರೆಯೊಳು ಬರುತಿರ್ದುದು ನೃಪಸ್ತೋಮ ॥ ೧೮

ದೆಸೆಗಳಂಟಱ ಮೂಲೆ ಬಿರಿ[1] ದೇ
ಪಸರಿಸಿತು ಹಳಬೊಮ್ಮಗಹುದೇ
ಹೊಸವಿಧಾತ್ರನ ಸೃಷ್ಟಿಯಿದು[2] ಹೊಸತೇನ ಹೇಱುವೆನು ।
ಕುಸಿಯನೇ ಕೂರುಮನು ಭಾರಕೆ
ನಸಿಯನೇ ನಾಗೇಂದ್ರ ನಾನೆಗ
ಳುಸಿರು ಹದುಳವೆ ಹೇಱೆನಲು ಬರುತಿರ್ದುದಾಸೇನೆ ॥ ೧೯

ಚೋಳ ಪಾಂಡ್ಯರು ಕೇರಳರು ಶಿಶು
ಪಾಲನಂದನ ಧೃಷ್ಟಕೇತು ವ
ರಾಳ ಭೋಟಕ ಚೀನ ಮಾಗಧ[3] ಕರ್ಪರಾದಿಗಳು ।
ಮೇಳಿ ಮೇಳೈತಂದು ಭೀಮಂ
ಗಾಳುದೋಱಿದರಿತ್ತ ಕುರುಭೂ
ಪಾಲಕನ ಕೂಡಿದರು ಭಗದತ್ತಾದಿಭೂಭುಜರು ॥ ೨೦

---

1 ಯದೆ ಅಸಮಬಲಹ, ಝ. 2 ಹೆಸರೇನು ಹೊಗಱುವನ, ಟ.
3 ಬರ್ಬರಾದಿ, ಟ.

ದ್ರುಪದರಾಜಪುರೋಹಿತನು ಕುರು
ನೃಪನ ನಿತ್ತಲು ಬಂದು ಕಂಡನು
ವಿಪುಳಮತಿ ಮಾತಾಡಿದನು ನಿಜರಾಜಕಾರಿಯವ ।
ಕೃಪಣತನದೊಳು ಕೌರವನು ಗುರು
ಕೃಪರ ಭೀಷ್ಮರ ಮಾತ ನೊಲ್ಲದೆ
ಚಪಲಕರ್ಣನ ಕೂಡೆ ನಿಶ್ಚೈಸಿದನು [1] ಕಾಳಗವ ॥ ೨೧

ನೆನೆದಮಂತ್ರವ ತನ್ನ ತಂದೆಯು
ಮನದ ಮಚ್ಚದೊಳೂರೆದು ಕರ್ಣನ
ನೆನಹಿನೊಳು ಪುಟವಿಟ್ಟು ಶಕುನಿಯು ನೀತಿಯೊಳು ನಿಗುಚಿ ।
ಅನುಜಮತದೊಳು ವಿಸ್ತರಿಸಿ ವ್ಯೈ
ದುನನ ಮತದೊಳು ಬಣ್ಣವಿಟ್ಟನು
ಜನಪ ನಪಕೀರ್ತ್ಯಂಗನೆಗೆ ತುಡಿಸಿದನು ಭೂಷಣವ ॥ ೨೨

ಹರುಷದೊಳು ಸಂಜಯನ ನಾಗಳ
[2] ಕರೆದು ಕುರುಪತಿ ಬುದ್ಧಿಗಲಿಸಿದ
ನರಿನೃಪನ ಪಾಳೆಯಕೆ ಹೋಹುದು ನುಡಿವುದವಗಡಿಸಿ ।
ಧರೆಯ ಬೇಡಿಸಿ ಕಳುಹಿದಿರಿ ಸಂ
ಗರದೊಳಸಿಧಾರೆಯೊಳು ಕುಡುವೆವು
ಬಚಿದೆ [3] ಕೊಟ್ಟೊಡಧರ್ಮ ವೆಂಬುದು ಧರ್ಮತನಯಂಗೆ ॥ ೨೩

ಬೀಳುಕೊಂಡನು ಮಂತ್ರಿ ಪಯಣದ
ಮೇಲೆ ಪಯಣದೊಳೈದಿ ಪಾಂಡುನೃ
ಪಾಲಕರ ಪಾಳೆಯಕೆ ಬಂದನು ರಾಯಗಜುಹಿ [4] ದನು ।

---

[1] ನಿಜಮತವ, ಕ. ಕಾಳಗಕೆ, ಟ.  [2] ಕರಿಸಿ, ಝ. ಟ.

[3] ಕೊಟ್ಟೊಡೆ ಧರ್ಮ, ಝ. ಟ.  [4] ಸಲು, ಟ.

ಕೇಳು ಬೀಡಾರವನು ಬೀಯುವ
ಹೇಳಿಸಿದ ನಾ ಮಱುದಿವಸ ವೊ
ಡ್ಡೋಲಗವ ರಚಿಸಿದನು ಕುಂತೀಸೂನು [1]ವಾದಿಯೊಳು ॥ ೨೪

ಹರಿ ವಿರಾಟ ದ್ರುಪದ ಕೈಕೆಯ
ರಿರಲು ಬಲವಂಕದೊಳು ವಾಮದೊ
ಳಿರೆ ವೃಕೋದರ ಫಲುಗುಣಾದಿಗಳಖಿಳಮಂತ್ರಿಗಳು ।
ತರುಣಿಯರು ಪರಿಮಳದ ಜಂಗಮ
ಭರಣಿಯರು ಮನ್ಮಥವಿರಿಂಚನ
ತರುಣಿಯರು ಕುಳ್ಳಿರ್ದರರಸನ ಹಿಂದೆ ಸಂದಣಿಸಿ ॥ ೨೫

ಕರಣಿಕರು ಮಾಂತ್ರಿಕರು ವೈದ್ಯರು
ಸರಸಕವಿಗಳು ತಾರ್ಕಿಕರು ವರ
ಭರತನಿಪುಣರು ಪಾಠಕರು ಗಾಯಕರು ವಾದಿಗಳು ।
ಕರಿತುರಗಶಿಕ್ಷಕರು ಲಕ್ಷಣ
ಪರಿಣತರು ಕೋವಿದರು ಸಾಮಂ
ತರುಪಹಾಸಕ ವಂದಿ ವೈತಾಳಿಕರು ತೋಱಿದರು ॥ ೨೬

ಮಾವತರು ಚಿತ್ರಿಗರು ಮಲ್ಲರು
ರಾವುತರು ಶಿಲ್ಪಿಗರು ಮಾಯಾ
ಕೋವಿದರು ಕರ್ಣಾಂಘ್ರಿವಿಕಳರು ಮೂಕ ವಾಮನರು ।
ದ್ರಾವಕರು ಜೂಜಾಳಿಗಳು ಪರಿ
ಚಾವಣಿಗರು ವಿದೇಶಿಗಳು ಮೃಗ
ಜೀವಿಗಳು ಶಕುನಜ್ಞರೆಸೆದರು ರಾಜಸಭೆಯೊಳಗೆ ॥ ೨೭

ಸಾಲ ಮಕುಟದ ರತ್ನರಶ್ಮಿಯು
ದಾಳಿ ಗೆಲಿದುದು ತಮವ ನಿನ್ನಿ
ಮೇಲುತಕ್ಕೆಯು ತರಣಿತೇಜದ ಹಬೆಯು ಹಂಗೇಕೆ ।

---

[1] ಪ್ರೀತಿಯೊಳು, ಝ. ಠೀವಿಯೊಳು, ಟ.

ಮೇಲೆ ಕೈದೀವಿಗೆ [1] ಗಳಧಿಕ
ಜ್ವಾಲೆಯೊಳು ಪುನರುಕ್ತವೆನೆ ಭೂ
ಪಾಲನೋಲಗ ವೆಸೆದುದಿಂದ್ರನ ಸಭೆಗೆ ವೆಗ್ಗಳಿಸಿ ॥ ೧೮

ಕಳಕಳವೆ ಘಡ ಮೋಹು ಮೋಹೆಂ
ದುಲಿಯೆ ಕಂಚುಕಿನಿಕರ ಮೆಂಗೈ
ತಳದ ಬಾಯೊಳು ರಾಯರಿದ್ದರು ಮಣಿದ ಮುಕುಟದೊಳು ।
ನಳಿನನಾಭನು ನಗುತೆ ಪರಮೆಂ
ಡಲದ ಶಿಷ್ಟ [2] ನು ಬರಲಿ ಯೆನೆ ಬಾ
ಗಿಲೊಳು ಕೈದುವ ಕೊಂಡು ಹುಗಿಸಿದರಂದು ಸಂಜಯನ ॥ ೧೯

ಬಂದು ಕಾಣಿಕೆಗೊಟ್ಟು ಹರುಷದೊ
ಳಂದು ಮೆಯ್ಯಿಕ್ಕಿದನು ಭಯದೊಳು
ನಿಂದು ನೋಡಿದ ನೆಡಬಲ [3] ದ ಮಂಡಳಿಕಮನ್ನೆಯರ ।
ಸಂದ ಯಮನೋ ನಿರುತಿಯೋ ಪೌ
ರಂದರನೊ ಪಾವಕನೊ ವರುಣನೊ
ಮಂದಿ ಯಿದು ತಾಂ ಮರ್ತ್ಯರೇ ಹಾ ಯೆನುತೆ ಬೆಱಗಾದ ॥ ೨೦

ಸುಳಿದಲೆಯ ಕೆಮ್ಮೀಸೆಗಳ ಮಿಗೆ
ಬಳೆದ ಮುಡುಹುಗಳೊಡ್ಡಿದುರದ
ಜಬ್ಬಳಿತರೋಮದ ನೊಸಲ ಡೋರಿಯ ತಲೆಯ ಕಲಿಮುಖದ ।
ಬಲಿದ ಹುಬ್ಬಿನ [4] ತೋರತೋಳಿನ
ಹೊಳೆವ ದಾಡೆಯ ಹೊಗರ ಮೋಱೆಯ
ಕಲಿಮನದ ಕದನಪ್ರಚಂಡರ ಕಂಡು ಬೆಱಗಾದ ॥ ೨೧

---

1 ಯೊಳಧಿಕಜ್ವಾಲೆಗಳು, ಝ. 2 ನಕರೆಯೆನಲು, ಝ.
3 ದಮನ್ನೆಯರ ಮಾವುತರ, ಝ. ಗಳ ಮಹಾಮಹೀಶ್ವರರ, ಟ.
4 ಬಿಟ್ಟಕಂಗಳ, ಕ. ಚ.

ಹಳುವದೊಳು ಹನ್ನೆರಡುವರುಷವು
ತೊಳಲಿದರು ಸಿರಿ ಪೋಗಿ ನಿಮಿಷಕೆ
ನೆಲನ ರಾಯರು ನೆರೆದು ಜೀಯೆನುತಿದೆ ಮಹಾದೇವ ।
ನಳಿನನಾಭನ ಕರುಣದಳತೆಗೆ
ನಿಲುಕದಿಹುದೇನುಂಟು ಮುರರಿಪು
ಮುನಿದೊಡಾಪನ ಮಱೆಯ ನೆಂದನು ತನ್ನ ಮನದೊಳಗೆ॥ ೩೦

ಇಳುಹಿದನು ಹೊರೆಯೊಳು ಮಹೀಪತಿ
ಕಳುಹಿಮುಖಗೊಱೆಗಳನು ಭೂಪತಿ
ತಿಲಕ ಧರ್ಮಜ ನೊಪ್ಪುಗೊಂಡನು ನೃಪನ ಪಾವುಡವ ।
ಬಲವು ಬೊಪ್ಪನೊಳುಂಟಲಾ ಮ
ಕ್ಕಳನು ಮಱೆಯನು ಲೇಸು ಸಂಜಯ
ತಿಳುಹು ತಾತನ ಕುಶಲವನು ಗಾಂಧಾರಿದೇವಿಯರ ॥ ೩೧

ಗುರು ಪಿತಾಮಹ ಗೌತಮರ ಸ
ಚ್ಚರಣಕಮಲಂಗಳಿಗೆ ಕುಶಲವೆ
ಗುರುಸುತನು ಸುಕ್ಷೇಮಿಯೇ ಕುರುರಾಯನಿರವೆಂತು ।
ಕುರುಪತಿಯು ಸೋದರರು ಮಕ್ಕಳು
ಸರಸಿಜಾನನೆ ಭಾನುಮತಿ ಮಿ
ಕ್ಕರಸಿಯರು ಕರ್ಣಾದಿಗಳು ನಿರ್ವೃತರೆ ಹೇಳೆಂದ ॥ ೩೨

ಸುಖಿಗಳಸಿಬರು ಜೀಯ ನಿಮ್ಮಯ
ನಿಖಿಲಬಾಂಧವರನು ಸಹೋದರ
ಸಖಿ ಸುತಾದಿಗಳನು ಪುರೋಹಿತ ಪೌರ ಪರಿಜನವ ।
ಮುಖಸಮುದ್ಭವೆ ಮೊದಲು ಪಂಕಜ
ಮುಖಿಯರನು ಬೆಸಗೊಂಡು ಕಳುಹಿದ
ರಖಿಳಕುರುನಂದನರು ಭೀಷ್ಮ ದ್ರೋಣ ಗೌತಮರು ॥ ೩೩

ಮುನ್ನ ಭೀಷ್ಮ ದ್ರೋಣ ಗೌತಮ
ರುನ್ನತದ ಕಾರುಣ್ಯದೊಳು ಸಂ
ಪನ್ನ ಸಾಹಸರಾದೆ [1] ವಾಚರಿಸಿದೆವು ಧರ್ಮವನು ।
ಇನ್ನು ಧೃತರಾಷ್ಟ್ರಾವನೀಶನು
ತನ್ನ ಮಕ್ಕಳ ಬಾಂಧವರ ಪ್ರತಿ
ಪನ್ನತೆಯು [2] ತಾಂ ಕಾಣ್ಬನೆಂದನು ಧರ್ಮಸುತ ನಗುತೆ ॥ ೩೬

ಏನು ಬಂದಿಹ ಹದನು ಕಾರ್ಯವ
ನೇನ ನೆಂದನು ಕೌರವೇಶ್ವರ
ನೇನ ನೆಕ್ಕಟಿಗರೆದು ಬುದ್ಧಿಯ ಕಲಿಸಿ ಕಳುಹಿದನು ।
ಏನುವನು ನೀ ನುಚಿಪದಿರು ವಿನ
ಯಾನುಗತವಾಗಿರಲಿ ಮೋಹ ಶೌ
ರ್ಯಾನುಗತವಾಗಿರಲಿ ಬಿನ್ನವಿಸೆಂದ ನಸುರಾರಿ ॥ ೩೭

ನಾಡ ಬಯಸುವೊಡೆಮ್ಮೊಡನೆ ಹೊ
ಯ್ದಾಡುವುದು ಸಂಪ್ರತಿಗೆ ಚಿತ್ತವ
ಮಾಡಲಾಗದು ಸಂಧಿ ವೀರಕ್ಷತ್ರಿಯರ ಮತವೇ ।
ಬೇಡುವರೆ ಪಾರ್ಥಿವರು ನಾವದ
ನಾಡಬಾರದು ತಮ್ಮ ಜನನವ
ನೋಡಿ ನುಡಿವರು ಪಾಂಡುಸುತರಲ್ಲೆಂದು ಹೇಟೆಂದ ॥ ೩೮

ಮೊದಲೊಳಮಲ ಬ್ರಹ್ಮಚರ್ಯವು
ಮದುವೆಯಾಯಿತು ಬಳಿಕ ವನವಾ
ಸದೊಳು ವಾನಪ್ರಸ್ಥ ವೆಂಬಾಶ್ರಮವ ನಳವಡಿಸಿ ।
ತುದಿಗೆ ತಾಂ ಸನ್ಯಾಸವನು ಮಾ
ಡಿದನು ಮತ್ತುಳುಪುವೊಡೆ ರಾಜ್ಯದ
ಪದವಿ [3] ಗನುಚಿತ ವಾಯ್ತು ಯಮಜಂಗೆಂದು ಹೇಟೆಂದ ॥ ೩೯

1 ವಾದರಿಸಿದೆವು ಸತ್ಯವನು, ಟ. 2 ಸಚಿಕೆಾ, ಟ. 3 ಯನುಚಿತ, ಚ.

ತಳಿತಜೌವನದುಬ್ಬುಗಳ ಕಳ
ವಳಿಗ ರರ್ಜುನ ಭೀಮ ರೆಂಬವ
ರೊಳಗೆ ವೈರವ ಬಿತ್ತಿ [1] ಬೆಳಸುವ ಕೃಷ್ಣ ಹಗೆ [2] ನಮಗೆ ।
ಉಳಿದ ದ್ರುಪದ ವಿರಾಟರೆಂಬೀ
ಪುಳು [3] ಗಳೂಲಿದಂತೋರೆಗೆಡೆ [4] ವರ
ತಿಳಿಯೆ ತಾನೇ ಕಡೆಗೆ ಕೆಡದಿರ ನೆಂದು ಹೇಟೆಂದ ॥ ೪೦

ಸಾಕು ಕೌರವನಾಯ ಮಾತನ
ದೇಕೆ [5] ಚಿತ್ತೈಸುವಿರಿ ದೂತನೆ
ನೂಕು ನೂಕು ಕುಠಾರದುರ್ಯೋಧನನ ನೊಡೆಹೊಯ್ದು ।
ಶಾಕಿನಿಯರಿಗೆ ರಕುತ [6] ಧಾರೆಯೊ
ಳೋಕುಳಿಯ ನಾಡಿಸುವೆ ನಿಲು ತಡ
ವೇಕೆನುತ ಘುಡುಘುಡಿಸಿ ಕಿಡಿ ಕಿಡಿ ಯೋದನಾ ಭೀಮ ॥ ೪೧

ಬೆಸಸುವುದು ಹಿಂದಾದ ಜೂಜಿನೊ
ಳೆಸೆದ ಜಾಡ್ಯವ ಸಾಕು ಧರ್ಮದ
ದೆಸೆಗೆ ನೀನಿನ್ನುತ್ತರಾಯಿ ಸುಯೋಧನನ [7] ಕಡಿದು ।
ದೆಸೆದೆಸೆಯ ದೈವಂಗಳಿಗೆ [8] ಪಸ
ರಿಸುವೆ ವೆಂಮನು ಕಳುಹೆನುತ ಗ
ರ್ಜಿಸಿದರಂದಭಿಮನ್ಯು ಸಾತ್ಯಕಿ ಭೀಮನಂದನರು ॥ ೪೨

ಕದಡಿತಾಳಸ್ಥಾನ ಕಲ್ಪಾಂ
ತದ ಮಹಾ [9] ಸಿಡಿಲಂತೆ ವೀರರು
ಕೆದಱಿ ತಮತಮಗೆದ್ದು ನುಡಿದರು ಕಂಡೆಯುವ ಜಡಿದು ।

---

[1] ಸುಡುವನು, ಟ.
[2] ತನಗೆ, ಚ.ಟ.
[3] ಕರೊಲಿ, ಕ. ಚ.ಗಳವರಾವೋರೆ, ಟ.
[4] ದರೆ, ಚ.
[5] ಬಿತ್ತರಿಸುವಿರಿ, ಝ.
[6] ವಾರಿಯೊಳಾ, ಚ. ಝ. ವಾರಿಧಿಯೋಕುಳಿ, ಟ.
[7] ಕುಲವ, ಟ.
[8] ಸರಿಹಸುಗೆಗೆವ್ಮನು, ಟ.
[9] ಧ್ವನಿಯಂತೆ, ಟ.

ಉದಿರೆ ಹೊಯ್ವೆವು ಹಲ್ಲುಗಳ ಕಿ
ಬ್ಬದಿಯೊಳುಗಿವೆವು ಕರುಳ ಸಹಿತರ
ತಿದಿಯ ಸುಲಿವೆವು[1] ಬಿಸುಡು ಸೇವುವ ನೆಂದರತಿ[2] ಬಲರು ‖೪೩

[3] ಆತನಿಂದೇನಹುದು[4] ಹೊಲ್ಲಹ
ವಾತನಿಂದೇನಹುದು[5] ಲೇಸುಗ
ಳಾತನಿಂ[6] ದೇಬರಲಿ ಹಿಂದಣ ಕಾನನಾಲಯ[7] ದ ।
[8] ಯಾತ[9] ನೆಯ ಸೈರಿಸಿದ ತವುಗಿಂ
[10] ದಾತ ನುಡಿದೊಡೆ ಹಾನಿಯೇ[11] ನೀಂ
ಕಾತರಿಸದಿರಿ ಯೆಂದು ಸಂತೈಸಿದನು ಯುವುಸೂನು ‖　೪೪

ಕಳುಹಿದನು ಬೀಡಾರಕವನಿಪ
ತಿಲಕನಾಸಂಜಯನ ನಲ್ಲಿಂ
ಬಳಿಕ ಮುಱುದಿನ ಕೃಷ್ಣ ಪಾರ್ಥರು ಸಂಜಯನ ಕರಿಸಿ ।
ಬಲುಹುವುಲುಹಿನ ನುಡಿಗಳಿಂದವೆ
ತಿಳುಹಿದರು ಮುಱುದೆವೆಸದೋಲಗ
ದೊಳಗೆ ದೂತನ ಕರಿಸಿ ಬೀಟ್ಕೊಟ್ಟನು ಯುಧಿಷ್ಠಿರನು ‖　೪೫

[12] ಜನಕನನು ಗಾಂಧಾರಿ ದುರ್ಯೋ
ಧನನ ನವರೊಡಹುಟ್ಟಿದರ ನಂ
ಗನೆಯರನು ದುಶ್ಶಳೆಯ ಸೈಂಧವ ಕರ್ಣ ಶಕುನಿಗಳ ।
ವಿನುತಬಾಹ್ಲಿಕ ಶಲ್ಯ ಭಗದ
ತ್ತನ ನದೀಸುತ ಗುರು ಕೃಪರ ಗುರು
ತನುಜನನು ಮನ್ನಿಸಿ[13] ದೆವುಚಿತದೊಳೆಂದು ಹೇಬೆಂದ ‖　೪೬

---

1 ಬೆಸಸು ನೇವುವ, ಟ.　　2 ರಥರು ಟ.
3 ಈ ತ, ಕ. ಜ. ಝ.　　4 ಲೇಸುಗಳೀತ, ಕ. ಜ. ಝ. ಲೇಸು ಗಳಾತ, ಟ.　　5 ಹೊಲ್ಲಹವಾ, ಕ. ಜ. ಝ ಟ.　　6 ದವೆಬ, ಕ. ಜ. ಝ.
7 ವು, ಕ, ಜ.　　8 ಆತ, ಕ, ಜ. ಝ. ಟ.　　9 ನೇಸ್ಯೆ, ಕ. ಜ. ಟ. ನೇವೂಡಿದನು, ಝ.　　10 ದೀತ, ಕ. ಜ. ಝ.　　11 ನಿಲಿ, ಝ. ಟ
12 ಜನಪನನು, ಟ.　　13 ದನುಚಿತ, ಕ.

ವರಪುರೋಹಿತರನು ಸುಸಾವಂ
ತರನು ವೈದ್ಯರ ವಿಮಳವಿದುರನ
ನರಮನೆಯ ವಿಶ್ವಾಸಿಗಳ ನೋಲಗದ ಗಣಿಕೆಯರ ।
ಕರಿಹಯಾಧ್ಯಕ್ಷರನು ಪಡಿಹಾ
ರರನು ಬಾಹತ್ತರ ನಿಯೋಗದ
ಪರಿಜನದ [1] ಕುಶಲವನು ಕೇಳಿದೆವೆಂದು ಹೇಳೆಂದ ॥ ೪೭

ಹೊನ್ನಿನೊಳು ಮಧುರೋಕ್ತಿಯೊಳು [2] ಸವಿ
ಯನ್ನವುಡುಗೊಱೆಗಳೊಳು ಶಿಷ್ಟನ
ಮನ್ನಿಸಿದ ನವನೀಶ ನುಚಿತದೊಳವನ ಬೀಳ್ಕೊಟ್ಟ ।
ಪನ್ನಗನ ಸಿರಿಮಂಚದಾತನು
ಬೆನ್ನೊಳಿರುತಿರೆ ಪಾಂಡುಪುತ್ರರಿ
ಗಿನ್ನು ಮಂಗಳವೆನುತೆ ಸಂಜಯ ಬಂದ ನಿಭಪುರಿಗೆ ॥ ೪೮

ಬಂದ ನಾಧೃತರಾಷ್ಟ್ರರಾಯನ
ಮಂದಿರ [3] ಕೆ ಕಂಡನು ಮಹೀಶ [4] ನ
ನೊಂದೆರಡುಮಾತಿನೊಳು ಸೂಚಿಸಿ ಮರಳಿದನು ಮನೆಗೆ ।
ಅಂದಿನಿರುಳೊಳು ನಿದ್ರೆ ಬಾರದೆ
ನೊಂದು ವಿದುರನ ಕರಿಸಿ ರಾಯನ
ತಂದೆ ಬಿಸುಸುಯ್ಯುತ್ತೆ ನುಡಿದನು ವಿದುರದೇವಂಗೆ ॥ ೪೯

ಎರಡನೆಯ ಸಂಧಿ ಮುಗಿದುದು.

---

[1] ಪುರಜನದ ಕುಶಲವ ಕೇಳ್ದೆವೆಂದೆನ್ನು, ಕ. ಝ. ಪುರಜನದ ಕುಶಲ ವಕೇಳ್ದೆವೆನ್ನೆಂದ. ಚ.

[2] ವಿವಿಧಾನ್ನ, ಕ. ಸಂಪನ್ನ, ಝ. ವಿಪುಲಾನ್ನ, ಟ. [3] ವಹೊಕ್ಕನು, ಟ.

[4] ನೊಳೊಂದೆರಡು, ಟ.

## ೩ ನೆ ಯ ಸ ಂ ಧಿ.

### ವಿದುರನೀತಿ.

---

ಸೂಚನೆ.

ತಿಳುಹಿದನು ವಿದುರನು ಮಹೀಪತಿ
ತಿಲಕನನು ನಯನೀತಿಧರ್ಮಂ
ಗಳ ಸುಸಂಗತಿಯಿಂದೆ ನೂಕಿದರವರು ಯಾಮಿನಿಯ ||

*

ನಾಳ ಸಭೆಯೊಳು ಬಂ [1] ದು ಸಂಜಯ
ಹೇಳುವೆನು [2] ಸುದ್ದಿಯನು ಸಂಧಿಯೊ
ಕಾಳಗವೊ ಮುಂದರಿಯಬಾರದು ದುಗುಡ ವಾಯ್ತು [3] ನಗೆ |
ಹೇಳು ನಿರುತವ ನಿಂದಿನಿರು [4] ಳೊಳು
ಬೀಳುಕೊಂಡುದು ನಿದ್ರೆಯೆನೆ ಭೂ
ಪಾಳಕನ ಸಂತೈಸಿ ಬಳಿಕಿಂತೆಂದನಾವಿದುರ || ೧

---

* ನೀತಿಯನು ತಾಂ ವಿದುರವಾಕ್ಯದ
ರೀತಿಯೊಳು ಗಾಂಗೇಯನೊಳು ಸಂ
ಭೂತವಾದ ಸುರಾಜಧರ್ಮವ ಮೋಕ್ಷಧರ್ಮವನು |
ಪ್ರೀತಿಯಿಂದಾದರಿಸಿ ಕೇಳದ
ಪಾತಕರ ಜನ್ಮವು ನಿರರ್ಥಕ
ವೀತಕೀಭಾರತದ ಮಹಿಮೆಯ ನರಿವರಾರೆಂದ ||

ಈ ಪದ್ಯವು ಸೂಚನೆಯ ಮುಂದೆ ಕ. ಖ. ಚ. ಝ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

1 ದುಸ್ಸಿದ್ಧಿಯ, ಚ. ದಹದನನು ಝ. ಟ.

2 ಸಂಜಯನು, ಚ. ಝ. ಟ. 3 ವಗೆ, ಖ. ಮಗೆ, ಚ. ಝ. ಟ.
4 ಳನು, ಖ. ಚ. ಟ.

ಬಲವಿಹೀನನು ಬಲ್ಲಿದನ ಕೂ
ಡೊಲಿದು ತೊಡಕಲವಂಗೆ ಕಾಮದ
ಕಳವಳದೊಳಿರ್ದಂಗೆ ಧನದ [1]ೞಿವಿನೊಳು ಮಱುಗುವಂಗೆ ।
ಕಳವಿನೊಳು ಕುದಿವಂಗೆ ದೈವದ
ನೆಲೆಯ ನಱಿಯದವಂಗೆ ದಿಟವಿದು
ತಿಳಿಯೆ ಬಾರದು ನಿದ್ರೆಯೆಂದನು ಭೂಪತಿಗೆ ವಿದುರ ॥ ೧

*

ಬಂದಱಿಂದೆರಡಹುದನಱಿ ಮೂ
ಱಿಂದವೆನು ತಿಳಿ ನಾಲ್ಕಱೊಳು ಮನ
ಸಂದಿ [2]ಸ ದಿರೈದಱೊಳು ವರ್ಜಿಪುದಾಱಿ ನೇೞಱೊಳು ।
ಬಂದಿಸದಿ ರೆಂಟನು ವಿಚಾರಿಸಿ
ಮುಂದುವರಿಯೊಂಬತ್ತಱೊಳು ನೆಱೆ
ಸಂದಿಸದಿರೀರೈದಱೊಳು ಭೂಪಾಲ ಕೇಳೆಂದ ॥ ೨

ತನ್ನ ಚಿಂತೆಯದೊಂದು ದೈವದ
ಗನ್ನಗತಕವದೆರಡು ಭಾವದ
ಬನ್ನಣೆಯ ಬಗೆ ಮೂಱು ದೈವದ ಭಿನ್ನವುಂಬ ನಾಲ್ಕು ।

---

[1] ಳವಿನೊಳು, ಝ. ಳಲಿನೊಳು, ಟ.
ಜನಪ ಕೇಳೈ ಪೂರ್ವದೊಳು ಕೇ
ಶಿನಿಯ ವೃತ್ತಾಂತವನುರೆ ವಿರೋ
ಚನಸುಧನ್ವರ ಕಲಹವನು ಕನ್ಯಾವಿಷಯದಿಂದೆ ॥
ಮುನಿಸಿನೊಳು ನಡೆತರಲು ಪ್ರಹ್ಲಾ
ದನದೆಸೆಯೊಳವರಿಬ್ಬರಿಗೆ ಹಂ
ಸನೊಳು ಹಱಿವಾಯ್ತೆಂಬ ಕಥನವ ನಱುಹಿದನು ವಿದುರ ॥

ಎಂಬ ಪದ್ಯವು ಕ. ಚ. ಝ. ಪುಸ್ತಕಗಳಲ್ಲಿಎರಡನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತದೆ.

[2] ರದಿರೈ, ಕ. ಝ.

ತನ್ನ ನೆನ [1] ಹೆನ್ನಂತೆ ಕಾರ್ಯವು
ಚೆನ್ನಹಡೆ ಲೋಕಕ್ಕೆ ತಾ ಬೇ
ಱನ್ನು ದೈವವದೇಕೆ ತಾನೇ ದೈವರೂಪೆಂದ ॥ ೪

ಬಂದುವರ ವೆನ್ಣಱಿಹಿದವ ಗುರು
ವ್ರೊಂ [2] ದು ಪಾಯದೊಳುಳುಹಿದವ ಗುರು
ಬಂದ ವಿಗ್ರಹದೊಳಗೆ ರಕ್ಷಿಸಿದಾತ ಪರಮಗುರು ।
ಬಂದೆರಡುಮೂಱ್ಱುಸಲೇ [3] ಸಾ
ಕೆಂದು ಗರ್ವೀಕರಿಸಿದವರುಗ
ಳೊಂದುವರು ಚಂಡಾಲಯೋನಿಯೊ [4] ಳರಸ ಕೇಳೆಂದ ॥ ೫

ತನ್ನ ಕಾರಿಯಕಾರಣವ ನುಱಿ
ದನ್ನಿಗರ ಚಿಂತೆಯನು ಮಾಡುವು
ದುನ್ನತಿಕೆ ತಾನಲ್ಲ ನೀತಿಜ್ಞರಿಗೆ ಭಾವಿಸಲು ।
ಮನ್ನಿಸುವುದಾತ್ಮನನು ಮಿಕ್ಕದ
ನನ್ನರಿಗೆ ಮಾಡುವುದದಲ್ಲದೆ
ತನ್ನ ತಾಂ ಮಱೆದಿಹುದು [5] ಮತವಲ್ಲೆಂದನಾವಿದುರ ॥ ೬

ಹಾವು ಹಲವನು ಹಡೆದು ಲೋಕಕೆ
ಸಾವೆ ತಹವೊಲು [6] ನೂಱುಮಕ್ಕಳ
ನಾವಪರಿಯೊಳು ಹಡೆದು ಕಿಡಿಸಿದೆ ಭೂಮಿಭಾರಕರ ।
ಭಾವಿಸಲು ಸರ್ವಜ್ಞ ಸರ್ವಗು
ಣಾವಲಂಬನ ನೊಬ್ಬ ನರ್ಜುನ
ದೇವ ಸಾಲದೆ ನಾಡ ನಾಯ್ಗಳೊಳೇನು ಫಲವೆಂದ ॥ ೭

ದೀಪದೀಪವ ತೊಳಲಿ ಕರ್ಮಕ
ಳಾಪದೊಳು ಕುದಿಕುದಿದು ನಾನಾ
ರೂಪಿನಿಂದಾರ್ಜಿಸುವ ಸುಕೃತದ ಗೊಡವೆ ತಾನೇಕೆ ।

---

[1] ಹಿದ್ದನ್ತೆಕಾ, ಝ.  [2] ದಪಾಯ, ಟ.  [3] ತಾನೆಂದು, ಟ.
[4] ಳೆಂದನಾವಿದುರ, ಕ.  [5] ಚಿತ್ತ, ಟ.  [6] ಹಲವುಮಕ್ಕಳ, ಚ.

ಭೂಪ ಕೇಳ್ಳೈ ಸತ್ಯವೊಂದೇ
ಸೋಪಸನವು ಸಗ್ಗಕ್ಕೆ ಜನ್ಮದ
ಕೂಪರಕ್ಕಿದು ನಾವೆಯಾಗಿಹುದೆಂದನಾವಿದುರ ॥ ೮

ಪಾಸಂಡಿಂದಾರ್ಜಿಸಿದೊಡರ್ಥವೆ
ನಾಫಲವೆನುಂಬವರಿಗಿಲ್ಲಾ
ಪಾಪವೊಬ್ಬಂಗಪ್ಪ [1] ದಲ್ಲದೆ ವಿಷದ ಫಣಿಯಂತೆ ।
ಕಾಪಥವೆ ನಾಶ್ರಯಿಸಿ ಕೋಪಾ
ಟೋಪದಿಂದುತ್ತಮರ ಸರ್ವ
ಸ್ವಾಪಹಾರವ ಮಾಡಿ ಬದುಕುವು ದಾವಗುಣವೆಂದ ॥ ೯

ಬವೆರವೊಗದೊಳು ವೈರಿರಾಜರ
ನವಗಡಿಸಿ ತಂದಾಧನವ ಭೂ
ದಿವಿಜತತಿಗಿತ್ತಾಫಲವ ನಿನಿತೆಂದು ಗಣಿಸುವೊಡೆ ।
ದಿವಿಜಪತಿಗಾಗದು ಕಣಾ ಮಾ
ನವಪತಿಗೆ ಸದ್ಧರ್ಮವದು ನಿ
ನ್ನವೆನು ನೀತಿಯ ನಱಿಯನ್ಯೆ ಧೃತರಾಷ್ಟ್ರ ಕೇಳೆಂದ ॥ ೧೦

ಧರಣಿಯುಮರರ ಧನದೆ [2] ನೆರಹಿದ
ಕರಿತುರಗವೊದಲಾದ ದಳವು
ಬ್ಬರದೆ ಮೆಚ್ಚಿಹುದರಿನೃಪಾಳಿಕಯುದ್ಧಪರ್ಯಂತ ।
ಜರಿದು ನಸಿವುದು ವಾಹಿನಿಗೆ ಮಳೆ
ತುಱಿ ಮಳಲ ಕಟ್ಟೆಯುವೊಲಿದನಱಿ
ವರಸುಗಳು ವರ್ಣೋತ್ತಮರ ದೆಸೆಗಂಜಬೇಕೆಂದ ॥ ೧೧

---

1 ದಾರ್ಜಿಸಿದಂದುಗರನಂತೆ, ಚ. ದಾರ್ಜಿಸಿದುರಗನಂದದೊಳು, ಝ. ಟ
2 ಸಲಹಿದ, ಖ. ಝ. ಟ.

ಏಸು ಧರ್ಮದೊಳಾರ್ಜಿಪನು ಧನ
ವೈಸು ಸಿರಿ ವರ್ಧಿಸುವುದದರಿಂ
ದೇಶವಂಗಳ ಪುತ್ರಮಿತ್ರಕಳತ್ರತತಿವಿಜಯ ।
ಪೈಸರಿಸುವುದು ಬಂದ ಬಱಿವಿಡಿ
ದಾಸುರದಪಥದಿದನಱಿದು ಧರ
ಣೀಶ ಧರ್ಮವ ಹಿಡಿ ಯಧರ್ಮವ ಬಿಟ್ಟು ಕಳೆ ಯೆಂದ ॥ ೧೨

*
ಉರಗನವುಡಿದೊಡದಱ ವದನದೊ
ಳಿರದೆ ಮೋಹಾದಷ್ಟದೇಹದೊ
ಳಿರದೆ ರುಧಿರವು ಹರಿವವೋಲು ದುಷ್ಟಾಧಿಕಾರಿಗಳ ।
ಬರಸೊರಸಿನಿಂ ಜನಪದದ ಸಿರಿ
ಹರೆವುದರಸಿಂಗಿಲ್ಲದಾಪ್ರಜೆ
ಗಿರದುಭಯಹಿಂಗುವುದನಱಿವೈ ರಾಯ ನೀನೆಂದ ॥ ೧೩

†
ಹರಿವನದಿ ತನ್ನಿಚ್ಛೆಯೊಳು ದಡ
ವೆರಡ ಕಿಡಿಸುವವೋಲು ನಾರಿಯ
ರುರವಣಿಗೆ ಕೈಗೊಟ್ಟು ನಡಿಸಿದೊಡುಭಯವಂಶವನು ।
ನೆಱಿಪುವರು ನೀರೊಳಗೆ ಮೋರೆಯ
ಮುಱಿಯಲೀಯದೆ ಮಾರ್ಗದೊಳು ಮ
ತ್ಸರಿಸದಾಳುವುದನುನಯವು ಭೂಪಾಲ ಕೇಳೆಂದ ॥ ೧೪

---

* ಧರ್ಮದಾಧಾರದೊಳು ಜಗವಾ
ಧರ್ಮಿಯನು ಜನವಾಶ್ರಯಿಸುವುದು
ಧರ್ಮವೇ ಕಿಡಿಸುವುದು ಜನ್ಮಾಂತರದ ಪಾತಕವ ।
ಧರ್ಮದೊಳೆ ಸರ್ವವು ಪ್ರತಿಷ್ಠಿತ
ಧರ್ಮವೆಂಬುದು ಪರಮ ಪದಱಿಂ
ಧರ್ಮವನು ಬಿಟ್ಟಿಹುದು ಮತವಲ್ಲೆಂದನಾವಿದುರ ॥
ಈ ಪದ್ಯವು ಕ. ಪುಸ್ತಕದಲ್ಲಿ ಹೆಚ್ಚಾಗಿದೊರೆಯುತ್ತದೆ.

† ಉರಗ ನಗಿದೊಡೆ ಮೋಹ ಶಸ್ತ್ರದಿ
ಳಿಱಿದೊಡೊಬ್ಬನೆ ಮಡಿವ ನಂತ

ಧರೆಯೊಳಗೆ ಕಡುಮೂರ್ಖರಿವರಿ
ಬ್ಬರು ಕಣಾ ದುರ್ಯೋಧನನು ದಶ
ಶಿರನು ಗೋಗ್ರಹಣದೊಳು ವನಭಂಗದೊಳು ಮುಂಕೊಂಡು ।
ಅರಿಭಟರ ಸತ್ವಾತಿಶಯದು
ಬ್ಬರದ [1] ಬಲ್ಲುಹನು ಕಂಡು ಕಂಡೆ
ಚ್ಚರದೆ ಮರುಳಹುದುಚಿತವೇ ಹೇಳೆಂದನಾವಿದುರ ॥ ೧೫

ಕರಣಿಕನ ಹಗೆಗೊಂಡವಂಗೈ
ಶ್ವರಿಯಹಾನಿ ಚಿಕಿತ್ಸಕನನಾ
ದರಿಸದಾತಂಗಾಗದಾಯುಷ್ಯಾಭಿವೃದ್ಧಿಯದು ।
ಅರಸ ಕೇಳಾಯುಷ್ಯ [2] ಭಾಗ್ಯಗ
ಳೆರಡು ಕಿಡುವುವು [3] ವಿಪ್ರವೈರಿಗೆ
ನಿರುತ ಬದ್ಧದ್ವೇಷ ಲೇಸಲ್ಲೆಂದನಾವಿದುರ ॥ ೧೬

ಧರೆಯೊಳಗೆ ರವಿಮಂಡಲವ ನೊಡೆ
ದುರವಣಿಸಿ ಹಾಯ್ವವರು ದಿಟ ವಿ
ಬ್ಬರು ಕಣಾ ಸನ್ಯಾಸಿಯಾಗಿಯೆ ಯೋಗಮಾರ್ಗದೊಳು ।
ಹರಣವನು ಬಿಟ್ಟವರು ಘನಸಂ
ಗರದೊಳಭಿಮುಖರಾಗಿ ಮರಣಾಂ
ತರವ ನೈದಿದವರುಗಳವನೀಪಾಲ ಕೇಳೆಂದ ॥ ೧೭

---

ಲ್ಲರಸು ನೆಗಳಿದ ಮಂತ್ರ [4] ಸಿದ್ಧಿಸಲರಿನೃಪಾಲಕರ ।
ಸಿರಿಸಹಿತವಾಸಕಲಬಲಸಂ
ಹರಣವಹುದಿದ ನಱಿದು ಗುಪ್ತದ
ಪರಮಮಂತ್ರರಹಸ್ಯ ಮುಟೇ ರಾಯ ನಿನಗೆಂದ ॥
ಈಪದ್ಯವು, ಖ. ಚ. ಟ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.
1 ಯುದ್ಧವಕಂಡು, ಖ. ಟ. ಗರ್ವವ, ಚ.
2 ಭವುಷೆಗ, ಖ. ಚ. ಜ. ಟ.
3 ತಪ್ಪದವನೀಸುರರ ಬದ್ಧ, ಕ. ಚ. ಜ. ಝ.
4 ಭಿನ್ನಿಸ.

ಮಾತೃಪಿತೃಗ[1]ಳು ಶತ್ರುಭಾವವ
ನಾತು ನಿಜ[2] ಸಂತಾನದೊಳು ಸಂ
ಪ್ರೀತಿಯನು ನೆಲೆಗೊಳಿಸಿ ಸರ್ವಜ್ಞಾ[3]ಧಿಕಾರದೊಳು ।
ಖ್ಯಾತರನು ಮಾಡಿದೊಡೆ ಹಂಸ
ವ್ರಾತಮಧ್ಯದ ಬಕನವೊಲು ವಿ
ಖ್ಯಾತಸಭೆಯೊಳಯೋಗ್ಯರಹ[4]ರೇ ಭೂಪಕೇಳೆಂದ ॥ ೧೮

ಸುರರ ಮೇಳದೊಳಾಡುವವರಿ
ಬ್ಬರೆ ಕಣಾ ಪ್ರಭುವಾಗಿಯು ಕ್ಷಮೆ
ವೆರಸಿದವನು ದರಿದ್ರನಾಗಿಯು ದಾನಿಯೆನಿ[5]ಸುವನು ।
[6]ಅರಿದೆನಿಸದತಿಧನಿಕಧರ್ಮ್ಮೋ
ತ್ಕರುಷ ದುರ್ಬಲಯುತನ ಸ್ವೈರಣೆ
ಸರಿಸ[7]ವೆನಿಸದು ರಾಯ ಚಿತ್ತೈಸೆಂದನಾವಿದುರ ॥ ೧೯

ಧರಣಿ ನುಂಗುವಳಿಬ್ಬರನು ಸಂ
ಗರವ ಜಯಿಸದ ನೃಪನ ದೇಶಾಂ
ತರವ ಚರಿಸದ ಪಂಡಿತನ ನಿದು ಶಾಸ್ತ್ರಸಿದ್ಧವಲೆ ।
ಅರಸುಗುಲದೊಳು ಪುಟ್ಟ[8]ಸಾಪ
ತ್ನರಿಗಳುಕಿ ದೇಹಾಭಿಲಾಷೆಯೊ
ಳುರಗನಂತೊಳಗಿಹುದು[9]ಲೇಸಲ್ಲೆಂದನಾವಿದುರ ॥ ೨೦

ನರಜನುಮವತ್ಯಧಿಕ ವದಟೊಳು
ಗುರುಹಿರಿಯರೆಂದಱಿದು ದಾನ
ಕ್ಕರುಹರ[10]ಹರಲ್ಲೆಂದು ನೋಡದೆ ಮೂಢಮಾರ್ಗದೊಳು ।

---

1 ಳಶತ್ರು, ಕ. ಖ. ಝ. 2 ಸಂಧಾನದೊಳು, ಕ. 3 ತಿಕಾರ, ಝ.
4 ರೆಲೆಭೂಪ, ಟ. 5 ಸಿದನು, ಖ. 6 ಅರಿದೆನಿಸಿದ, ಜ. ಹಿರಿದೆನಿಸಿದ, ಝ
7 ವಲ್ಲಿದು, ಚ. ಝ. 8 ದಾಯಾದರಿಗಳುಕಿ, ಕ. ಖ.
9 ಮತಪಲ್ಲೆಂದ, ಖ. ಚ. ಝ, ಧರ್ಮವೆ ಎಂದ, ಜ. ಟ.
10 ಹುದ, ಕ. ಜ. ಟ.

ಕರೆದಪಾತ್ರಂಗಿತ್ತು ಪಾತ್ರನ
ಪರಿಹರಿಸಲಾಯೆರಡಱಿಂ [1] ಸಂ
ಹರಣಿಪ್ಪೈದುವ್ರುದಾರ್ಜಿಸಿದ ಧನವ [2] ರಸ ಕೇಳೆಂದ ‖ ೨೧

ತಂದೆತಾಯಿಗಳಬ್ರಾತ್ಮಜ
ಬೃಂದವೆನು ನೆಱೆ ಸಲಹಿ ತತ್ಸುತ
ರಿಂದೆ ಲೇಸನು ಪಡೆವವೊಲು ತಜ್ಜನಪದದ ಜನವ ।
[3] ಕುಂದಿಸದೆ ನೃಪ ಮಂತ್ರಿಗ [4] ಳು ಸಾ
ನಂದದಿಂ ರಕ್ಷಿ [5] ಸಲು ಬಟಿಕ [6] ದ
ಱಿಂದೆ ಸಕಲೈಶ್ವರ್ಯ [7] ಸೇರುವುದೆಂದನಾವಿದುರ ‖ ೨೨

ಕಾಮಿನಿಯರುಗಳಾರು ಕೆಲಬರು
ಕಾಮಿ [8] ಸಲು ಕಾಮಿಸುವರಲ್ಲದೆ
ತಾಮಸ [9] ದಿನಾಮೂರುಕರು ಪೂಜಿಸಿದ ಪೂಜೆಗಳ ।
ಪ್ರೇಮದಿಂ [10] ಪೂಜಿಸುವರಲ್ಲದೆ
[11] ಸೀಮೆವಿಡಿದಿಹುದಾಗದೆಂಬುದ
ನಾವುದಾಂಧರು ಬಲ್ಲರೇ ಧೃತರಾಷ್ಟ್ರ ಕೇಳೆಂದ ‖ ೨೩

ತನ್ನ ಸುಖದುಃಖಂಗಳೊಳು ನಿ
ರ್ಭಿನ್ನರಹ ಬಾಂಧವರ ವರ್ಜಿಸಿ
ಗನ್ನಗತಕದೊಳುಂಡು ಜಾಱುವ ಗಾವಿಲರ ಕೂಡಿ ।
[12] ಭಿನ್ನರನು ಪತಿಕರಿಸಿ ಬಹುಮತಿ
ಯುನ್ನತಿಕೆಯನು ವಿರಚಿಸುವೊಡದು
ತನ್ನ ತಾನೇ ಕೊಂದುಕೊಂಡುದು ಭೂಪ ಕೇಳೆಂದ ‖ ೨೪

---

1 ದವೆಹರೆವುದ್ಭೈಯಾ, ಕ. 2 ವನೀಶ, ಕ.
3 ಗೊಂದಿಸದೆ, ಖ. ಜ. ಟ. ನೊಂದಿಸದೆ, ಚ. ವಂದಿಸದೆ, ಝ.
4 ಳಸಾ, ಖ. ಙ. ಝ. ಳನಾ, ಚ. 5 ಸಿಯೆ, ಟ. 6 ವಱಿಂದೆ, ಟ.
7 ವಡೆವುದು ರಾಯ ಕೇಳೆಂದ, ಟ 8 ಸಿದ, ಚ. ತವ, ಝ.
9 ದೆತಾಮೂ, ಕ. 10 ದೊಡಬಡುವ, ಚ.
11 ನೇಮವಿಡಿದಿಹು, ಚ. 12 ಅನ್ಯರನು, ಕ. ಜ. ಝ. ಟ.

ಪಿತನಿರಲು ದಾತಾರನಿರೆ ನಿಜ
ಪತಿಯಿರಲು ಸುತ ದಾಸ ಸತಿ ಯೀ
ತ್ರಿತಯದೊಳ್ ಸ್ವಾತಂತ್ರ್ಯ ತಾನಿಲ್ಲಾವಕಾಲದೊಳು ।
ಕ್ಷಿತಿಯೊಳುತ್ತಮಮಧ್ಯಮಾಧಮ
ಗತಿಯ ಪುರುಷತ್ರಯವ ನವರಾ
ಯತವ ನವರಿಂಗಿತವ ನಱಿವೈ ರಾಯ ನೀನೆಂದ ॥ ೨೪

ಮಾಲೆಗಾಱಸಿಳೀಮುಖನ ಪಶು
ಪಾಲಕನವೋಲ್ ಪ್ರಜೆಯ ರಕ್ಷಿಸಿ
ಮೇಲೆ ತೆಗೆವೈ ಧನವ [1] ಮುಳಿದಂಗಾರಕಾರಕನ ।
ವೋಲು [2] ಕಡುದುರ್ವ್ಯಾಘ್ರನಂತೆ [3] ವಿ
ಟಾಳಿಸಲು ಜನ ನಸಿಯಲರಸಿನ
ಬಾಱಕೆಗೆ [4] ಸಂದೇಹವಾಗದೆ ಭೂಪ ಕೇಳೆಂದ ॥ ೨೫

ಬೆಳಸು ಘನ ತೃಣ ವಧಿಕ ಜಲ ನಿ
ರ್ಮಲ ವೆನಿಪ ಕಾಲದೊಳು ಪರಮಂ
ಡಲಕೆ ನಡೆವುದು [5] ದುಷ್ಟಘಾತವಿಹೀನ ನೆಂದೆನಿಸಿ ।
[6] ಬಲುಹಹುದು ನಿಜಬಲಕೆ [7] ಬಱವಾ
ನೆಲನ ಮೆಟ್ಟಲು ವೈರಿಸೇನಾ
ವಳಿಗೆ ಹೀನತೆಯೊದಗುವುದು ಧೃತರಾಷ್ಟ್ರ ಕೇಳೆಂದ ॥ ೨೬

ಎಲ್ಲಿಹುದು ಋಣಭಯವು ಮನುಜರೊ
ಳಲ್ಲಿಹುದು ದೇವಾಂಶ ನಿಜವಾ
ಗೆಲ್ಲಿಹುದು ಸನ್ಮಾರ್ಗಭೀತಿ ಯದಲ್ಲಿ ಬ್ರಾಹ್ಮಣ್ಯ ।

[1] ನುಱಿದ, ಖ.  [2] ತಡೆದುರು, ಖ. ಜ. ಝ. ಗಡ ದುರು, ಚ. ಟ.
[3] ವಿತಾಳಿಸಲು, ಜ. ಟ.  [4] ಕೇಡಹುದ, ಚಿತ್ತ್ಯಸಂದನಾವಿದುರ, ಖ.
ಸಂದೇಹವೇ ಭೂಪಾಲ ಕೇಳೆಂದ, ಚ. ಸಂದೇಹವಱಿಮಾ ರಾಯ ಕೇಳೆಂ
ದ, ಜ. [5] ಘೃಷ್ಟಪುಷ್ಟವಿಹಾರವೆಂದೆನಿಸಿ. ಚ. ತುಷ್ಟಿಪುಷ್ಟಿವಿಹೀನವೆಂದೆ
ನಿಸಿ. ಝ. ವೃಷ್ಟ........ಪೋತ್ರವೆಂದೆನಿಸಿ, ಟ. [6] ಗೆಲವಹುದು, ಚ.
[7] ಬಲವಾ, ಝ. ಬಱಿಸಿನ, ಟ.

ಎಲ್ಲಿಹುದು ಪರಸತಿಯುರಂಜಿಕೆ
ಯುಲ್ಲಿಹುದು ವಿಜ್ಞಾನ ವಿದ ನಱಿ
ದಲ್ಲದಿಹಪರವಿಲ್ಲ ಚಿತ್ತೈಸೆಂದನಾವಿದುರ ॥ ೧೮

ರಕ್ಷಿಸಿದ ಧನದಿಂ ಪುರಂಧ್ರಿಯು
ರಕ್ಷಿಸುವುದು ಪುರಂಧ್ರಿಯಿಂದವೆ
ರಕ್ಷಿಸುವುದಾತ್ಮನನು ಧನ[1]ವಿಡಿದಾವಕಾಲದೊಳು ।
ಲಕ್ಷಭೇದವ ನಱಿದು [2] ನಡೆದು ವಿ
ಲಕ್ಷವನು ಮುಱಿದಾತ್ಮ ರಕ್ಷೆಯು
[3] ಲಕ್ಷಿಸುವುದನುನಯವೆಲೈ ಧೃತರಾಷ್ಟ್ರ ಕೇಳೆಂದ ॥ ೧೯

ತಿಳಿದು ನಾಲ್ವರೊಳೊರೆದ ಕಾರ್ಯವ
ನುಳಿವುದಿಬ್ಬರ ನಿಬ್ಬರೊಳು ಮ
ತ್ತುಳಿವುದೊಬ್ಬನ ನೊಬ್ಬನಿಂ ನಿಶ್ಚೈಸಿ ಬಳಿಕವನ ।
ಕಳೆದು ತಾನೇ ತನ್ನೊಳಗೆ ಬಗೆ
ಗೊಳ ವಿಚಾರಿಸಿ ಮಾಳ್ಪ ಕಾರ್ಯಕೆ
ಹಳಿವು ಹೊಱುವುದೆ ರಾಯ ಚಿತ್ತೈಸೆಂದನಾವಿದುರ ॥ ೨೦

ನಿವಡಿಸಿದ ವಿದ್ಯಕ್ಕೆ ಸಮಬಂ
ಧುವನು ರೋಗಾವಳಿಗೆ ಸಮಶ
ತ್ರುವನು ಸಂತಾನಕ್ಕೆ ಸಮಸಂತೋಷದುದಯವನು ।
ರವಿಗೆ ಸಮವಹ ತೇಜವನು ವಾ
ಸವನ [4] ಸಮಭಾಗ್ಯವನು [5] ಜಗದೊಳು
ಶಿವನ ಬಲದಿಂದಧಿಕಬಲವನು ಕಾಣೆ ನಾನೆಂದ ॥ ೨೧

---

1 ದಿಂದಾ, ಕ. 2 ಪಕ್ಷವಿಪಕ್ಷವನು, ಕ. ಝ. ನಡೆದು ವಿಪಕ್ಷರನು, ಚ.
3 ನೀಕ್ಷಿಸುವುದ, ಕ. ಖ. ಜ. ಝ. ಟ. ರಕ್ಷಿಸುವುದ, ಚ.
4 ಸೌಭಾಗ್ಯವನು, ಖ. ಜ. 5 ಬಲದೊಳು, ಚ. ಜ. ಝ. ಟ.

ಹಿರಿಯಮಾನೋನ್ನತಿಕೆಯನು ಬಂ
ಧುರದ ಧನವನು ಗಾರುಹಸ್ತ್ಯದ
ಪರಮಧರ್ಮವ ನಾವ ಬಯಸುವ ನವನಭವನದೊಳು ‖
ನಿರುತವೃದ್ಧ ಜ್ಞಾತಿ ವಂಶೋ
ತ್ತರ [1] ವಿಷಣ್ಣನು ಪ್ರಿಯದರಿದ್ರನು
ವರಭಗಿನಿ ಯನಪತ್ಯೆ ಯಿಂತೀನಾಲ್ವರಿರಲೆಂದ ‖ ೩೦

ಧರಣಿಪತಿ ಚಿತ್ತೈಸು ಪೂರ್ವದೊ
ಳೊರೆದ ನಿಂದ್ರಂಗಮರಗುರು ದೇ
ವರೊಳು ಸಂಕಲ್ಪವನು ಕೃತವಿದ್ಯರೊಳು ವಿನಯವನು ‖
ಹಿರಿಯರೊಳು ಸಂಭಾವನೆಯ ಸಂ
ಹರಣಪದವನು ಪಾಪಕಾರ್ಯದೊ
ಳಿರದೆ ಮಾಡುವುದೆಂಬ ನಾಲ್ಕನು ರಾಯಕೇಳೆಂದ ‖ ೩೩

ಆವುದೀ ಲೋಕಕ್ಕೆ ಹಿತ ವದ
ನೋವಿ ನ [2] ಡಿಸುವ ಜಗಕೆ ನಿಂದೆಯ
ದಾವುದದನಾಚರಿಸದಿಹ [3] ನಾಸ್ತಿಕರ ನಂಬುಗೆಯ ‖
ಠಾವು [4] ಗಾಣಿಪ ತತ್ತ್ವವಿಜ್ಞಾ
ನಾವಲಂಬನ ನೆನಿಪ ನಾತನೆ
ಭೂವಲಯದೊಳಗುತ್ತಮನು ಧೃತರಾಷ್ಟ್ರ ಕೇಳೆಂದ ‖ ೩೪

ಪಿತನು ಗುರು ಶಿಖಿ ಯಾತ್ಮ ತಾಯೆಂ
ಬತುಳಪಂಚಾಗ್ನಿಯನು ಕ್ರಮದಿಂ
ಪ್ರತಿದಿನವು ಪರಿಚರಿಯಮಾಳ್ಪುದು ಲೇಸ ಬಯಸುವೊಡೆ ‖

1 ದರಿದ್ರಪ್ರಿಯ ನಪತ್ಯಾಂತರಭಗಿನಿ ಯೀನಾಲ್ವರಿರಬೇಕೆಂದನಾ ವಿದುರ ಕ. ಖ. ಝ. ದರಿದ್ರಪ್ರಿಯ ನಪತ್ಯಾಂತರಭಗಿನಿ ಯೀನಾಲ್ವರಿರಬೇಕೆಂದನಾ ವಿದುರ, ಜ. 2 ಡೆವಜನಕ್ಕೆ ನಿಂದೆಯದಾವುದದ, ಕ. ಖ. ಟ. 3 ಪರ ಸತಿಯ ನಂಬುಗೆಯ, ಟ. 4 ಗಾಣದ, ಝ.

ಪಿತೃಗಳನು ದೇವರನು [1]ಭೂತಗ
ಳತಿಥಿಗಳ ಯತಿಗಳನು [2]ಪೂಜಿಸಿ
ವಿತತಧರ್ಮವ ಕೀರ್ತಿಯನು ಪಡೆದವನೆ ಸುತನೆಂದ ‖ ೩೪
ವರುಷ ವೈದಱೊಳರಸೆನಿಸಿ ದಶ
ವರುಷ ದಾಸತ್ವ[3]ದೊಳು ಭಾವಿಸಿ
[4]ಬರಲು ಹದಿನಾಱನೆಯ ವರುಷವು ಮಿತ್ರನೆಂದೆನಿಸಿ ‖
ಪರಿವಿಡಿ [5]ಯೊಳಾರೈದು ಮದವ
ತ್ಸರವ [6]ಕಿಡಿಸದೆ ನೆಱೆದ ಮಕ್ಕಳ
ನರಮೃಗ[7]ಗಳನು ಮಾಡಿದೈ ಧೃತರಾಷ್ಟ್ರ ಕೇಳೆಂದ ‖ ೩೬
ಸಿರಿಯನುಳ್ಳವನೇ ಕುಲೀನನು
ಸಿರಿಯನುಳ್ಳವನೇ ಸುಶೀಲನು
ಸಿರಿಯನುಳ್ಳವನೇ ವಿದಗ್ಧನು ಸಕಲಗುಣಯುತನು ‖
ಸಿರಿಯನುಳ್ಳವನೇ ಮಹಾತ್ಮನು
ಸಿರಿರಹಿತ ಶಿವನಾದೊಡಾತನ
ಸರಕುಮಾಡದು ಲೋಕ ಚಿತ್ತೈಸೆಂದನಾ ವಿದುರ ‖ ೩೮
ಸಿರಿ ನೆಲೆಯೆ ಯೌವನ ನೆಲೆಯೆ ಮೈ
ಸಿರಿ ನೆಲೆಯೆ [8]ತನು ನೆಲೆಯೆ ಕಂಡೆಯ
ಸಿರಿ ನೆಲೆಯೆ ನಿನಗರಸುತನ ವು[9]ಳ್ಳನ್ನ ನೀತಿಯೊಳು‖

---

1 ಭೃತ್ಯರನತಿಥಿ, ಕ. ಖ. ಚ ವೃದ್ಧರನತಿಥಿ, ಜ. ಋಷಿಗಳನತಿಥಿ, ಝ.
2 ಪೂಜಿಪುದಿತರಕೀರ್ತಿಯ ಧರ್ಮವನು, ಖ. ಪೂಜಿಸಿ ಪಿತನ ಕೀರ್ತಿಯ ಧರ್ಮವನು, ಜ. ಪೂಜಿಪುದತುಳಕೀರ್ತಿಯು ಧರ್ಮವನು, ಝ.
3 ವನು, ಕ. ಟ. 4 ವರುಷಹದಿನಾಱಱೊಳು ಪುತ್ರರ, ಕ. ಖ. ಚ. ಜ. ಝ. ಟ. 5 ಗಳಲಿ ನಡಿಸಿ, ಕ, ಚ. ಜ. ಟ.
6 ಮಾಡದೆ, ಕ. ಚ. ಜ. ಝ. ಮಾಣಿಸಿ, ಟ. 7 ವ ಮಾಡಿದೆಯಲ್ಲೈ, ಕ. ವನೀಮಾಡಿದೈ, ಖ. ಚ. ವ ಮಾಡುವರೆ ಚಿತ್ತೈಸೆಂದನಾವಿದುರ, ಜ. ವ ನೀಮಾಡುವರೆ, ಝ. ಟ.
8 ನಿನಗಿನ್ನು ಖಂಡೆಯು, ಖ. ಭಾವಿಪೊಡೆ ಖಂಡೆಯು, ಜ.
9 ಳನಕ ಧರ್ಮದೊಳು, ಖ. ಳ್ಳಲ್ಲಿ ನೀತಿ, ಜ. ಟ.

ಧರೆಯ ರಕ್ಷಿಸು ಬಂಧುಗಳ [1] ನಾ
ದರಿಸು ಧರ್ಮವ ಸಾಧಿಸಿಂತಿದು
ನರಪತಿಗಳಿಗೆ ನೀತಿ ಚಿತ್ತೈಸೆಂದನಾವಿದುರ ‖ ೩೮

ಸಿರಿಗೆ ಕಂಟಕ ವಾಱು ದೋಷವ
ನೊರೆವೆ ನಾಲಸ್ಯವೆನು ಭಯವನು
ಮಱವೆಯನು ನಿದ್ರೆಯನು ಕೋಪವ ದೀರ್ಘಸೂತ್ರತೆಯ |
ಪರಿಹರಿಸಬಲ್ಲವನಿಪಾಲಂ
[2] ಗೆರವೆನಿಸದೈಶ್ವರ್ಯ ವವನು
ರ್ವರೆಯೊಳಗೆ ರಾಜೋತ್ತಮನು ಧೃತರಾಷ್ಟ್ರ ಕೇಳೆಂದ ‖ ೩೯

ಧನಮದದೆ ಕುಲಮದದೆ ಘನಯೌ
ವನಮದದೆ ವಿದ್ಯಾಮದದೆ ಗುರು
ವನು ವಿಭಾಡಿಸಿ ನೀನು ತಾನೆಂದೆನುತಹಂಕರಿಸಿ |
[3] ಕನಲಿ ವಿಪ್ರಸಭಾಸ್ಥಳದೊಳೊ
ಬ್ಬನ ವಿಭಾಡಿಸಿ ನುಡಿದ ಮನುಜನು
ಜನಿಸುವನಲ್ಲೈ ಬ್ರಹ್ಮರಾಕ್ಷಸನಾಗರಣ್ಯದೊಳು ‖ ೪೦

ಸಲಹಿದೊಡೆಯನ ದಿವ್ಯಮಂತ್ರವ
ಕಲಿಸಿದಾಚಾರಿಯರು [4] ನವಸರ
ದೊಳಗೆ ತಲೆಗಾಯ್ದವನ ದುರ್ಭಿಕ್ಷದೊಳು ಸಲಹಿದನ |
ಜಲದೊಳಾಱದನ ನೆತ್ತಿದನ [5] ನುರಿ
ಯೊಳಗೆ ಪರಿಹರಿಸಿದನ ಮಱೆದವ
ರಿಱೆವರೈ ಕುಲಕೋಟಿಸಹಿತ ಮಹಾಂ [6] ಧನರಕದೊಳು ‖ ೪೧

---

1 ಸತ್ಕರಿಸು, ಕ. ನುದ್ಧರಿಸು, ಟ. 2 ಗರುವೆನಿಸಿ, ಖ. ಚ.
3 ಮುನಿಸಿನೊಳು ಸಾತ್ತ್ವಿಕರುಗಳಿೞಳೊಬ್ಬನ, ಜ. ಟ.
4 ನನುವರದೊಳಗೆ, ಝ. 5 ವ್ಯೃತಿಯೊಳಗೆ, ಝ.
6 ತನರಕ, ಚ.

ಒಲಿದವಳ ಬಿಟ್ಟೊಲ್ಲದವಳಿಗೆ
ಹಲುಬುವವ ನಹಿತರೊಳು ಸಖ್ಯ
ವಳಿಯ ನೆಸಗುವ ನಱಿಯುವುದ ನಾ ಬಲ್ಲನೆಂಬವನು ।
[1] ಒಲಿದು ಕೇಳದೆ ಹೇೞುವವ ಕೈ
ನಿಲುಕಲಱಿಯದ ಕಾರ್ಯದೊಳು ಹಂ
ಬಲಿಸಿ ಮಱುಗುವ ನವನೆ ಮೂಢನು ರಾಯ ಕೇಳೆಂದ॥ ೪೦

ಹರುಷ ದರ್ಪ ಕ್ರೋಧ ಲಜ್ಜಾ
ತುರತೆ ಮಾ [2] ನ ವಿಮಾನ ವಿವೇಕೊಳು
ನಿರತತಮನೆಂದೆನಿಸಿ ಕೃತ್ಯಾಕೃತ್ಯಕೌಶಲವ ।
ವಿರಚಿಸು [3] ವಕಾಲದೊಳು ವಿರಚಿಸ
ಲಱಿಯದತಿದರ್ಪಾತಿರೇಕೋ
ತ್ತರದೆ ಮಾಡಿದ ಕಾರ್ಯವೇನಹುದೆಂದನಾವಿದುರ ॥ ೪೧

ಕರೆಕರೆದು ಮೃಷ್ಟಾನ್ನವನು ಭೂ
ಸುರರಿಗೀವ [4] ಸದಾಗ್ನಿಹೋತ್ರಾ
ಚರಿತನನು ವೇದಾಂತವೇದಿಯ ನಾಪತಿವ್ರತೆಯ ।
ಉರುತರದ ಮಾಸೋಪವಾಸಿಯ
ನಿರದೆ ಮಾಸಸಹಸ್ರಜೀವಿಯ
ನರಸ ಕೇಳ್ವಂದಿಸುವರ್ಬೈ ತ್ರ್ಯಮೂರುತಿಗಳೆಂದ ॥ ೪೪

ಬಿಸುಟು ಕಳವುದು ನೀತಿಶಾಸ್ತ್ರವ
ನುಸಿರದಾಚಾರಿಯನ ವೇದ
ಪ್ರಸರ ವಿಲ್ಲದ ಋತ್ವಿಜನ ರಕ್ಷಿಸದ ಭೂಭುಜನ ।

---

1 ಒಲಿಯದುಪದೇಶ ಹೇೞು, ಖ.

2 ನಾವಮಾನ, ಖ. 3 ತೆಶೀತೋಷ್ಣ ಕಾಲದೊ ಳಿರಲು ಭಯ ವರ್ಧಿಸಿ ಯುದಱಿಂ ಪರಿಹರಿಸದಾಕಾರ್ಯವೆಸಗುವ ನವನೆ ಪಂಡಿತನು॥, ಖ. ಙ. ಟ.

4 ವನ, ಕ.

ಬಸೆಯುದಬಲೆಯುನೂರೊಳಾಡುವ
ಪಶುವ ಕಾವನ ನಡವಿ [1] ಗುಱಿಯುಹ
ನಿಶಿಯೊಳಾಡದನರನ ನೆಲೆ ಧೃತರಾಷ್ಟ್ರ ಕೇಳೆಂದ ॥ ೪೫

*

ವ್ಯಸನವೇೞಱ ಕಾಲುಕಣ್ಣಿಯ
ಹಸರದೊಳಗಳವೆಱಿದು ಹೆಚ್ಚಿದ
ವಿಷಯದಿಱುಬಿನೊಳದ್ದು ಮೋಹಯಾಮಯುದ ತೋಹಿನೊಳು ।
ಬಸವೞಿದು ಷಡ್ವರ್ಗ [2] ದೆಡೆಯೊಳು
ನುಸುಳುಗಂಡಿಯ ನೀಕ್ಷಿಸದೆ ತಾ
ಮಸದೊಳಿರುತಿಹುದುಚಿತವೇ ಹೇಱೆಂದನಾವಿದುರ ॥ ೪೬

ಅತಿಬಲನ ಹಗೆಗೊಳ್ವ ನಿಹಪರ
ಗತಿ [3] ವಿಚಾರವ ಮಱೆವ ಲೋಕ
ಸ್ಥಿತಿಯ ನುಲ್ಲಂಘಿಸುವ [4] ಮರ್ಮಜ್ಞನ ವಿರೋಧಿಸುವ ।

---

1 ಗುಱಿಯುಹ ನುಸಿಯನಾಪ್ವನ ನಿವರ ನೈವರ ಭೂಪ, ಖ. ಗುಱಿಯುಹ ನುಸಿಯುದಾಳ್ದನ ಬಿಷುವೃದ್ಧೈ ಭೂಪಾಲ, ಚ. ಯೊಳು ಹಂಪಿ ಸದಲಾಡುವ ನಾಸ್ತಿಕರ ನೆಲೆ ಭೂಪ, ಜ. ಯೊಳಗಿಹ ನಿಶಿಯೊಳಾಡುವನಾವ ನೆಲೆ, ಝ. ಗುಱಿಯುಹ ನುಸಿಯ ನಾಯುನು ನಿಂತಱುವರನು ರಾಯ, ಟ

*ಚೋರನು ಚಿಕಿತ್ಸಕನು ರಾಯನು
ನಾರಿ ಯಾಜಕ ಪಂಡಿತರೆನಿ
ಪ್ಪಾಱುಜನ ವಿರ್ದೆಡೆಯೊಳೇ ಜೀವಿಸುವರಱುವರೊಳು ॥
ಭೂರಿನಿದ್ರಾಂಗನೊಳು ರೋಗಶ
ರೀರಿಯೊಳು ವಾದಿಯೊಳು ಕಾಮುಖಿ
ಕಾರಿಯೊಳು ಯಜಮಾನಮೂರ್ಖರೊಳೆಂದನಾವಿದುರ ॥

ಈ ಪದ್ಯವು ಕ. ಖ. ಚ. ಜ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.
2 ವೀಧಿಯ, ಖ. ಜ. ದೇಶಗ್ಗಿಯ,ಚ. 3 ಯಭ್ಯಾರವ, ಚ. ಟ.
4 ಧರ್ಮಜ್ಞನ, ಖ.

ವಿತತಭಾಷಿತನಪ್ಪ ತನ್ನಿಂ
ಗಿತವ ಪರರಾಯತವೆಱಿಯದ
ಕ್ಷಿತಿ [1] ಪ ನವ ಮೂಢಾತ್ಮನೈ ಧೃತರಾಷ್ಟ್ರ ಕೇಳೆಂದ ॥ ೪೭

ಬಲುಹಱಿದು ಕೋಪಿಸುವ ಬದುಕಿನ
ಬಲೆಯುಱಿದು ಕುಡುವಾ [2] ತ್ಮಹಿತವೆನು
ತಿಳಿದು ನಿರ್ಮಳ [3] ವೆನಿಸಿ ಮೇಲಣ ತಾಗುಬಾಗುಗಳ ।
ಹೊಲಬಱಿದು ಸುಖದುಃಖದೊಳು ಸಂ
ಚಲಿಸದಿಹ [4] ನೆಱೆ ಗೂಢಸಂಧಿಯೊ
ಳೊಳಗುದೋಱದೆ ನಡೆವವನೆ ಭೂಪಾಲ ಕೇಳೆಂದ ॥ ೪೮

ದಾನವಿಲ್ಲದ ವಿತ್ತ ಬುಧಸ
ನ್ಮಾನವಿಲ್ಲದ ರಾಜ್ಯ ಬಲುಸುಯಿ
ದಾನ ವಿಲ್ಲದ [5] ಸುದತಿ ಸೂರಿಗಳಿಲ್ಲದಾಸ್ಥಾನ ।
ಜ್ಞಾನವಿಲ್ಲದ ತಪವು ವೇದವಿ
ಧಾನವಿಲ್ಲದ ವಿಪ್ರ ಶರಸಂ
ಧಾನವಿಲ್ಲದ ಸಮರ [6] ಮೆಱೆಯದು ರಾಯ ಕೇಳೆಂದ ॥ ೪೯

ದಿನವ ಬಂಜೆಯ ಮಾಡದಾವಗ
ವಿನಯಪರನಹ ದೈವಗುರು [7] ಪೂ
ಜನೆಯ ಬುಧ [8] ಸೇವನೆಯ ಕಾಲೋಚಿತ [9] ದ ವಿವರಿಸುವ ।

---

[1] ಯೊಳಗೆ, ಕ. ಖ. ಚ. ಜ. ಝ.
[2] ತಹಿತ, ಕ. ಖ. ನೆನಿಸಿ, ಚ. ಝ. ವನಿಸ, ಟ.
[4] ಗಂಗೆಯ ಮಡುವಿನಂತೊಳ, ಕ. ಖ.
[5] ನೃಪತಿ, ಖ. [6] ವೇಱುವುದೆ, ಜ. ಟ.
[7] ಸೇವನೆಯ, ಖ. ಪೂಜೆಯನು, ಜ.
[8] ಪೂಜನೆಯ, ಖ. ಸೇವೆಯನು, ಜ.
[9] ದವಿತರಣವ, ಕ. ದವಿವರಣವ, ಖ. ಜ. ದವಿವರಣೆಯ, ಝ. ದವಿತರಣದ, ಟ.

ಮನನದಿಂ ಶ್ರವಣದೆ ನಿದಿಧ್ಯಾ
ಸನದೆ ದಿನವನು [1] ಕಳೆಯುವಾತನು
ಮನುಜರೊಳಗುತ್ತಮನಲೈ ಧೃತರಾಷ್ಟ್ರ ಕೇಳೆಂದ ‖ ೫೦

ಸಲುವೆ ನೆಂದಂತಃಪುರಕೆ ಸಂ
ಚಲಿಸುವವ ನಾಪ್ತರನು ಬಿಸುಟ
ಗ್ಗಳಿಸುವವ ನಹಿತರೊಳು ಧರ್ಮವ ನುಳಿದಧರ್ಮವನು ।
ಬಳಸುವವ ನೇಕಾಂತದಲ್ಲಿಗೆ
ಸುಳಿವವನು ಹಸಿವಿಲ್ಲದುಂಬವ
ನಿಳೆಯೊಳಗೆ ಮೂಢಾತ್ಮನೈ ಧೃತರಾಷ್ಟ್ರ ಕೇಳೆಂದ ‖ ೫೧

ಬುಧರೊಡನೆ ಹಗೆಗೊಳ್ವ ಬುಧರನು
ನಿಧನವೈದಿಪ ಬುಧರ [2] ನೇಳಿಪ
ಬುಧರ ಜರಿದರೆ ನಲಿವ ಬುಧರನು ಹೊಗಳುವರ ಪಱವ ।
ಬುಧರನಧಮರ ಮಾಳ್ಪ ಬುಧರನು
ವಿಧಿಗೊಳಿಪ ಬುಧರೆನಲು ಕನಲುವ
ರಧಮಭೂಪರಿಗೆಂಟುಗುಣವು ವಿನಾಶಕರವೆಂದ ‖ ೫೨

ಕುಸುಮಫಲತಾಂಬೂಲಗಂಧ
ಪ್ರಸರಭೋಜನ ಗಮನ ನೆನಹೆಂ
ಬೆಸೆವ ಕಾರ್ಯಗಳನಿಬರೊಡಗಿರಲೊಬ್ಬನೆಚ್ಚರಿಕೆ ।
ಎಸೆಯುವಿನಿತಱೊಳಾಬ್ಬನೇ ವ
ರ್ತಿಸುವುದವನೀಪಾಲನೀತಿಗೆ
ಸಸಿನ ವೆನಿಸದು ರಾಯ ಚಿತ್ತೈಸೆಂದನಾವಿದುರ ‖ ೫೩

[3] ಕಳಿತತರಣಿಯ ಕಿರಣದೊಳು ನಿ
ರ್ಮಳದ ಜಲದೊಳು ದುಗ್ಧಪಾನಂ
ಗಳೊಳು ವರಯುವತಿಯುರ ಸಂಭೋ [4] ಗಾಂತರಂಗಳೊಳು ।

1 ಕಳಿವನಾತನು, ಕ. ಖ. ಜ. ಝ. ಕಳಿವನಾತನು, ಟ. 2 ನೆಱಲಿಸ, ಕ. ಝ.
3 ಕಳಿದ, ಕ. ಟ. ಗಳಿತ, ಜ. ತಳಿತ, ಝ. 4 ಗಾಂತರಂಗದೊಳು, ಖಗ
ದೊಳು ಭೂಸುರರ, ಜ. ಝ. ಟ.

ತಳತಹೋಮದ ಹೊಗೆಗಳೊಳು [1] ದಿನ
ಗಳೆಯಲವೆಗಾಯುಷ್ಯವೃದ್ಧಿಯು
ಬಲಿವುದೈ ದಿನದಿನದೊಳವನೀಪಾಲ ಕೇಳೆಂದ ॥ ೫೪

ಎಳೆಯರವಿರಶ್ಮಿಯೊಳು [2] ಪ್ರೇತ
ಸ್ಥಳದ ಧೂಮವ್ರಾತದೊಳು ಗಾ
ವಿಲ [3] ರಹ ಸುವೃದ್ಧೆಯರ ಸಂಭೋಗಾಂತರಂಗ [4] ಳೊಳು ।
ಕೊಱಕೆನೀರಿನ ಬಳಕೆಯೊಳು ಕ
ತ್ತಲೆಯ ದಧಿಭೋಜನದೊಳಾಯು [5] ಷ
ವಿಱಿದು ಹೋಹುದು ದಿನದಿನದೊಳವನೀಶ ಕೇಳೆಂದ ॥ ೫೫

ಗುರುವಿರೋಧ ಮಹೀಸುರರ ಮಾ
ತ್ಸರಿಯು ದೈವದ್ರೋಹ ಗುಣಸಂ
ಹರಣ ಬಂಧುದ್ವೇಷ ವತ್ಯಾ [6] ಲೀಢವಾಕ್ಯಕಥನ ।
ಶರಣಜನ [7] ದಂಡಿತ್ವವೆಂಬಿವ
ನರೆವಱಿಸದಂಗೈಪ ಭೂಪನ
ಸಿರಿಗೆ ಮೂಡುಗು ಕೇಡು ನಿಮಿಷದೊಳರಸ ಕೇಳೆಂದ ॥ ೫೬

[8] ಮಸುಳಿಸಿರ್ದ ದುಕೂಲ ರದನದೊ
ಳಸೆವ ಹಾವಸೆ ಭುಕ್ತದುನ್ನತ

---

1 ಸಂಚಲಿಸುವ, ಕ. ಖ. ಜ. ಝ. ದಿನ ಬಲದೊಳಾಯುಷ್ಯಾಭಿವೃದ್ಧಿಯು ಬಳವಿಗೆಗಳಹವರಸ ಚಿತ್ತಯಿಸೆಂದನಾವಿದುರ, ಟ.

2 ಪ್ರೇತಾಂಗಳದ, ಚ. ಜ. ಟ.

3 ವಯೋ, ಕ. ಖ. ಜ. ಝ. ಟ. 4 ದೊಳು, ಖ. ಚ. ಜ. ಝ. ಟ.

5 ವೃತ್ತೊಲಗಿ ಹೋಹುದು, ಖ, ಷವಿಱಿದು ಹೋಗದೆ, ಚ. ಟ.

6 ಕಾಂಕ್ಷೆ ದೀನತನ, ಖ. 7 ಪಾಂಡಿತ್ಯ, ಚ. ಜ. ಝ.

8 ಮಸಗಿ ಜೋಡಿಸಿ ಕರವೆರಡಱಿಂ ದೆಸಗಿ ತಲೆಯನು ತುಱುಬಿಸಿ ರಾತ್ರಿಯೊಳೆಸೆವ ನಿಷ್ಠುರವಾಕ್ಯ, ಖ.

ದೆಸೆಕ ನಿಷ್ಠುರವಾಕ್ಯ ವುದಯಾಸ್ತಮಯಕಾಲದೊಳು ।
ಎಸೆವನಿದ್ರಾಂಗನೆಯೊಳೊಂದಿರೆ
ಬಿಸಜಲೋಚನ ನಾದೊಡೆಯು ವ
ರ್ಜಿಸುವೆಳವೆನೆನು ಭಾಗ್ಯವೆಧು ಭೂಪಾಲ ಕೇಳೆಂದ ॥ ೫೩

ನಾಗವಲ್ಲಿಯು ಹಿಂದುಮುಂದನು
ನೀಗಿ ಕಳೆಯದೆ ಚೂರ್ಣ ಪರ್ಣ
ತ್ಯಾಗ ವಿಲ್ಲದೆ ದಂತಧಾವನಪರ್ಣವನು ಸವಿದು ।
ಭೋಗಿಸುವನಮರೇಂದ್ರನಾಗಲಿ
ನಾಗಭೂಷಣ ನಾಗಲಾತನ
ನೀಗಿ ಕಳೆವಳು ಭಾಗ್ಯವೆಧು ಭೂಪಾಲ ಕೇಳೆಂದ ॥ ೫೪
*
ಉದರವೊಂದು ವಿಭಾಗ ನಾಲ್ಕಾ
ಗದಬೊಳನ್ನರಸಕ್ಕೆರಡು ಮೇ
ಲುದಕಕೊಂದಾವಾಯುಸಂಚರಣೆಗಳಿ [1] ಗೊಂದಾಗಿ ।
ತುದಿಯೊಳೊಂದೇ ಮಾರ್ಗದೊಳು ತ
ಪ್ಪದೆ ನಡಿಸಲಾರೋಗ್ಯ ವಹುದೀ
ಹದನಬಿದು ಭೋಜನವ ಮಾಡುವುದರಸ ಕೇಳೆಂದ ॥ ೫೫

---

* ಸ್ಥಾನಪಂಚಕದಿಂದ್ರಿಯದ ಸಂ
ಸ್ಥಾನದೊಳು ನಿದ್ರಾಂಗನೆಯು ಸ
ನ್ಮಾನಿಸುವುದಾಸಾಧನದ ಪಂಚಕದ ಪರಿಣತಿಯು ।
ಸ್ಥಾನವಬಿದಾರೋಗಣೆಯು ಸಂ
ಧಾನವನು ಚಿತ್ತೈಸುವುದು ರಾ
ಜಾನುಮತವಿದು ಸಕಲಸುಖಕರವೆಂದನಾವಿದುರ ॥

ಈ ಪದ್ಯವು 58ನೆಯ ಪದ್ಯದ ಮುಂದೆ ಖ. ಚ. ಜ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

1 ಗೆಡೆಯಾಗಿ, ಕ. ಚ. ಜ. ಝ. ಟ.

ನೋಡಿದ ಸಚರಾಚರ ವಿದೆಲ್ಲವು
ನರರ ನಿಜಭೋಜನಕೆ ಜನಿಸಿದು
ವರಸ ಕೇಳಿದಡೊಳಗೆ ಭೋಜ್ಯಾಭೋಜ್ಯವ [1] ಸ್ತುಗಳ|
ಪರಿಯಱಿದು ಬಳಸುವರುಗಳು ಘನ
ತರದ ಸುಕೃತವ ನೈದುವರು ಭೂ
ವರರೊಳಗೆ ಸಂದೇಹವೇ ಹೇಳೆಂದನಾವಿದುರ || ||೬೦

ಜನಜನಿತಮಲಮೂತ್ರ ಮೂಱಾ
ಱೆನಿಸುವುವು ರತಿಯೊಂದು ನಿಜಭೋ
ಜನವೆರಡು [2] ನಿಶೆಯೊಂದೊಱಗು ತಾಂಬೂಲ ಹದಿನೈದು |
ಇನಿತುವನು ತಪ್ಪದೆ ನಡಿಸಲಾ
ಜನಪಗಾರೋಗ್ಯಾ [3] ತ್ಮಸುಖ ಸಂ
ಜನಿಸುವುದು ದಿನದಿನದೊಳವನೀಪಾಲ ಕೇಳೆಂದ || ೬೧

ತುರಗ [4] ಹಾಯ್ವ್ವಧ್ವವನು ಸಿಡಿಲಿನ
ಧರಧುರದ ಗರ್ಜನೆಯು ನಾರಿಯು
[5] ರಱಿವ ಪುರುಷನ ಭಾಗ್ಯದೇವತೆಯೊಲಿವ ಕಾಲವನು |
ವರುಷದುದಯುವ ಬಱನ ಬರವನು
[6] ನಿರವಿಸುವೊಡೆ ವಿಧಾತ್ರಗಳವ
ಲ್ಲರಸ ಕೇಳ್ ಮನುಜಂಗೆ ಗೋಚರಿಸುವುದೆ ಹೇಱೆಂದ || ೬೨

ಬಡತನ [7] ದೊಳ್ ಒದಗಿ [8] ದವ ಹಗೆಯಾ
ದೊಡೆಯು ನಂಟನು ನಂಟ ತಾನಾ
ದೊಡೆಯು ಬಂದ ವಿಪತ್ತಿನೊಳಗೆ ಪರಾಙ್ಮುಖನೆ ಆಗಿ |

---

1 ನು ತಿಳಿದು|| ಪರಿಪರಿಸಬಲ್ಲವರು, ಕ, ಖ. ಚ. ಜ. ಝ. ಟ.
2 ಸುವ್ಯಕ್ತವರ, ಝ. ಸುಯಿಲೊಂದು ವರ, ಟ.
3 ತಿಶಯಸಂ, ಖ. 4 ಹೃದಯಧ್ವನಿಯು, ಕ. ಚ. ಜ. ಝ.
5 ರೆರಕ, ಕ. ಝ. 6 ವಿರಚಿಸುವೊಡೆ, ಕ. ಝ. ವಿರಚಿಸುವುದು, ಚ. ಜ. ಟ.
7 ದ ದುಃಖದೊಳು ಶಾಂತಿಯು ನುಡಿಯು ನುಡಿದವ ನಂಟ ತಾನಾ, ಕ.
8 ದೊಡೆ, ಚ. ಜ. ಝ. ಟ.

ನುಡಿಸದವನೇ ಹಗೆ ಶರೀರದೊ
ಳಡಸಿದಾರುಜೆ ಬಾಧೆಗಡವಿಯು
ಗಿಡಮರಂಗಳು ರ [1] ಕ್ಷಣೆಗೆ ಭೂಪಾಲ ಕೇಳೆಂದ ‖ ೬೩

ಕಾಲದೊಳಗೆ ವಸಂತ ವಿದ್ಯಾ
ಜಾಲದೊಳಗೆ ಕವಿತ್ವ [2] ವರವಾ
ಹಾಳಿ [3] ಯೊಳು ಗಜ ಬೇಹಿನ ಮಿತ್ರಶ್ರೇಣಿಯೊಳು ವಾಣಿ ।
ಭಾಳನೇತ್ರನು ದೈವದೊಳು ಬಿ
ಲ್ಲಾ [4] ಳಿನೊಳು ಮನುಮಥನು ಧನದೊಳು
ಹೇಳಲೇನಭಿಮಾನವೇ ಧನ ವರಸ ಕೇಳೆಂದ ‖ ೬೪

[5] ಮುಂದೆ ಗುರುವನು ಬಂಧುಜನವನು
[6] ಹಿಂದೆ ಕರ್ಮಾಂತ್ಯದೊಳು ಸೇವಕ
ಬೃಂದವನು ಕೊಂಡಾಡುವುದು ಸಾಹಿತ್ಯಮಾರ್ಗವಿದು ।
ಹಿಂದೆ ಮುಂ [7] ದೆಂದೆಂದು ನಿನ್ನಯ
ನಂದನರ ನಾರಿಯರ ಹೊಗಳುವು
ದಂದವೇ ಭೂಪಾಲ ಚಿತ್ತೈಸೆಂದನಾವಿದುರ ‖ ೬೫

ತುರಗದೆಡಬಲ ಗಜದ ಸಮ್ಮುಖ
ತರುಣಿಯರುಗಳ ಸರ್ವತೋಮುಖ
ಹಿರಿದುದುರ್ಜನರಿರ್ದ ದೇಶ ವದ್ಯೆದೆ ವ್ಯಾಘ್ರಮುಖ।
ಭರದಿ ನಾದೇಶವನು [8] ಬಿಟ್ಟರ

1 ಕ್ಷಿಸವೆ, ಕ. ಚ. ಜ. ಝ. ಟ. 2 ಗಜವೈ, ಕ. ಖ. ಚ. ಝ. ಟ. 3 ಮಿತ್ರಶ್ರೇಣಿಯೊಳಗೆ ಸರಸ್ವತೀದೇವಿ, ಕ. ಖ. ಯೊಳುದೇವೇನ್ದ್ರ, ಚ. ಝ. 4 ಳ್ವತನದೊಳು ಮದನ. ಚ. 5 ಹಿಂದೆ, ಖ. 6 ಮುಂದೆ ಕಾವ್ಯಾರ್ಥದೊಳು, ಖ. 7 ದುವಾಗ, ಕ. ಖ. ಚ. ಜ. ಝ. 8 ಕಳೆದೇ ವರುಷದೊಳು ಸಂನ್ಯಾಸಗಮನಾಂತರವ, ಚ. ಬಿಟ್ಟರವರಿಸದಾರಣ್ಯದೊಳು ಗಮನಾಂತರವನೈದುವು, ಜ. ಬಿಟ್ಟರವರಿಸದನ್ಯಗ್ರಾಮಗಮನಾಂತರವನೈದುವು, ಟ.

ವರಿಸದನ್ಯತ್ರದೊಳು ಗಮನೋ
ತ್ತರವ ಮಾಡುವುದಲ್ಲದಲ್ಲಿಹುದುಚಿತವಲ್ಲೆಂದ ॥ ೬೬

ಪಶುಗಳಂತ್ಯವ ನಂತ್ಯಜರು ಸುರ
ವಿಸರದಂತ್ಯವ ನಸುರರೆಚ್ಚ[1] ಖಿ
ನುಸುರಿನಂತ್ಯವ ಚೋರ ನಿಜಗುಣದಂತ್ಯವನು ಮೃತ್ಯು ।
ಕೃಷಿವರುಷದಂತ್ಯವನುಬಜನಾ
ಲಿಸಿ ಕವಿವವೊಲು ರಾಯರಂತ್ಯದ
[2] ದೆಸೆಯು ಬಯಸುವ ರಥವನ್ನೃಪ ರವನೀಶ ಕೇಳೆಂದ ॥ ೬೭

ಬಲುಪ್ರಧಾನನ ವೈರ ಹಿತವಹ
ಲಲನೆಯರ ಮನದಳಲು ಹಗೆಯೊಳು
ಬಳಸುವಂತಸ್ಥತೆ ಯುನಾವುಕರೊಡನೆ ಕೆಳೆಗೊಟ್ಟ ॥
ಬಲದೊಡನೆ [3] ಹಗೆ ತನ್ನ ಸತ್ವದ
ನೆಲೆಯುನಱಿಯದ [4] ನೃಪನ ಬಾಳಿಕೆ
ಸುಟಿವಗಾಳಿಗೆ ಮಲೆವ [5] ದೀವಿಗೆಯುಂತೆ ಧೃತರಾಷ್ಟ್ರ ॥ ೬೮

ಹುಸಿ ಪರದ್ರೋಹವು ಪರಸ್ತ್ರೀ
ವ್ಯಸನ ನಿಂದೆ ಯುಸೂಯೆ ಮಾನ್ಯ
ದ್ವಿಷತೆ ಪತಿತ[6] ನ ಮೇಳ ವಾತ್ಮಸ್ತುತಿ ಯೆನಿಪ್ಪವನು ।
ಬಿಸುಟು ತದ್ವಿಪರೀತದೊಳು ವ
[7] ರ್ತಿಸುವ [8] ನವನೇ ರಾಯ ನಾತಗೆ
ವಸುಧೆಯೊಳಗೆಣೆ ಯಾವನೈ ಧೃತರಾಷ್ಟ್ರ ಕೇಳೆಂದ ॥ ೬೯

---

1 ರುವುಸಿರ್ರಿ, ಝ. 2 ಜಸವ, ಜ. ಹೆಸರನಱಿದೌಕುವರಥವನ್ನೃಪರರಸ, ಟ.
3 ನಿರ್ಬಂಧ ಧರ್ಮದ, ಖ. ಜ. ಟ. ನಿರ್ಬಂಧ ದೈವದ, ಝ.
4 ಭೂಪತಿಯ ಸಿರಿ ಖ. ದಾನಿಗಳ ಸಿರಿ, ಚ. ಜ. ಟ. ಮಾನವರ ಸಿರಿ, ಝ.
5 ದೀಪಿಕೆ ಕಿಡುವುದೇ ನರಿದೆ, ಖ. ದೀಪವು ಕೇಳು, ಚ. ಜ. ಝ. ಟ.
6 ಸಮೇತ, ಚ, ಜ. ಟ. 7 ಚರಿಸದೆ ನಡೆವನೆ, ಜ. 8 ನುತ್ತಮ, ಖ.

ಇದು ಹಿತಾಹಿತ ವಿದು [1] ಶುಭೋದಯ<br>ವಿದು ಸಕಲಪುರುಷಾರ್ಥ ಸಾಧನ<br>ವಿದು ಸುಜನಸನ್ಮಾರ್ಗ ವಿದು ಸಂಸಾರವಿಪುಳಫಲ ।<br>ಇದು [2] ಸುಲಭ ವಿದು ದುರ್ಲಭವು ತಾ<br>ನಿದು ಸುನಿಶ್ಚಯ ವೆಂಬ ಕಾರ್ಯದ<br>ಹದನ ನಱಿವನೆ ರಾಯ ಚಿತ್ತೈಸೆಂದನಾವಿದುರ ॥ ೭೦

ಶತ್ರು ಕಾಲ [3] ವು ದೇಶ ವರ್ಗ [4] ವು<br>ಮಿತ್ರನುದಯೋಪಾಯಕರಣ [5] ವು<br>ಪುತ್ರನೆಂಬಿವು ಮೂಱುತೆಱನಾಗಿಪ್ಪುವಿವಱೊಳಗೆ ।<br>[6] ಕ್ಷತ್ರಧರ್ಮವಿವೇಕವೆನಿ [7] ಪಿವ<br>ಮಿತ್ರಗೊಳಿಪನೆ ರಾಯ ನವೆಗೆ ಧ<br>ರಿತ್ರಿಯೊಳಗೆಣೆ ಯಾವನೈ ಧೃತರಾಷ್ಟ್ರ ಕೇಳೆಂದ ॥ ೭೧

ಎಲ್ಲಿ ಸುಲಲಿತವಿದ್ಯೆ ಬಹುಧನ<br>ವೆಲ್ಲಿ ಗಣಿಕಾನೀಕಮಣಿಗಣ<br>ವೆಲ್ಲಿ ಗಜಜಾತ್ಯಶ್ವ [8] ವೆಲ್ಲಿ ವರೂಥಸಂದೋಹ ।<br>ಎಲ್ಲಿ [9] ಸುಭಟನಿಕಾಯ ನೆರೆದಿಹು<br>ದಲ್ಲಿ ತನ್ನಾಧೀನವಾಡಲು<br>ಬಲ್ಲ [10] ವನೆನೃಪ ನಾತಗಿದಿರಾರೀಧರಿತ್ರಿಯೊಳು ॥ ೭೨

---

1 ಸುಖೋದಯ, ಚ. 2 ಸುಬಲ ದುರ್ಬಲವಿದೆಂದಾಪ್ತದ, ಚ. ಸುಬಲವಿದು ದುರ್ಬಲವು ತಪ್ಪದು, ಜ. 3 ಸುದೇಶ, ಕ. ಖ. ಚ. ಜ. ಝ. ಟ.

4 ಸುಮಿತ್ರ, ಕ. ಖ. ಚ. ಜ. ಝ. ಟ.

5 ಸುಪಾತ್ರ, ಕ. ಖ. ಜ. ಝ 6 ಗಾತ್ರವಿಡಿದಿಹಪ್ರೋಲು ಸಕಲದೆ, ಖ.

7 ಪವನೊತ್ತಿ, ಕ. ಪಿನುಹುತ್ರ, ಚ. ಪವನೊತ್ತು, ಜ. ಪವಗೋತ್ರ, ಝ. ಪಿವಯೋತ್ರ, ಟ. 8 ಸುಭಟ, ಚ. 9 ವಸ್ತುಸಪೂರ್ವ, ಚ.

10 ವಂಗಿದಿರಾವನೈ ಭೂಪ ಲ ಕೇಳೆಂದ, ಚ. ಜ.

ದ್ವಾರ ವೊಂಬತ್ತಿಂದ್ರಿಯದ [1] ಹಂ
ಕಾರಕರಣಚತುಷ್ಟಯಂಗಳ
ಸಾರಭೂತಾಳಿಗಳ ಸುಳುವಿನ ಪಂಚವಾಯುಗಳ ।
ಹೋರಟೆಗಳೊಳು [2] ಬಳಲಿ ಜೀವ ನ
ಧೀರ ನಹವೊಲು ಪಾಂಡುಪುತ್ರರ
ಕೌರವರ ಬೇಳಂಬದೊಳು ಬೆಂಡಾದೆ ನೀನೆಂದ ॥ ೭೩

ಮತ್ತ ನಾಕ್ರಾಂತಪ್ರಮತ್ತೋ
ನ್ಮತ್ತರತಿಕುಪಿತಾನನನು ಚಲ
ಚಿತ್ತ ನತಿಕಾಮುಕನು ಲುಬ್ಧನು [3] ಭೀತನಾದವನು ।
ಕ್ಷುತ್ತು ಘನವಾಗುಳ್ಳ ನಿಂತೀ
ಹತ್ತುಜನ ಪಾವಾಗ ಧರ್ಮದ
ತತ್ತ್ವವಣೆಗಳ ನಱ [4] ವರೈ ಧೃತರಾಷ್ಟ್ರ ಕೇಳೆಂದ ॥ ೭೪

ದಾನ ವಿಷ್ಟಾಪೂರ್ತ [5] ವಿನಯಸು
ಮಾನದೇವಾರ್ಚನೆ ಮಹೀಸುರ
ಧೇನುಸಂತರ್ಪಣ [6] ಸದಾತಿಥಿಪೂಜೆ ಗುರುಭಕ್ತಿ ।
ಧ್ಯಾನ ದೀನಾನಾಥಬಂಧುವಿ
ತಾನ ಶರಣಾಗತಸುರಕ್ಷಾ
[7] ಸ್ನಾನತೀರ್ಥಂಗಳನು ಮಾಡಲುಬೇಹುದವನಿಪರು ॥ ೭೫

ಧರೆಯೊಳೀಹೊತ್ತಿನೊಳು [8] ನಿನಗೈ
ಶ್ವರಿಯದೊಳು ಮಕ್ಕಳೊಳು ಕಂಡೆಯು
ಸಿರಿಯೊಳೊಡವುಟ್ಟಿ [9] ದರು ಸಪ್ತಾಂಗದೊಳು ಸತಿಯರೊಳು ।

---

[1] ಸಂಸಾರ, ಖ. [2] ತೊಳಲಿಯನುದಿನ, ಖ.
[3] ಶೂರನೆಂಬವನು, ಕ. ಜ. ಮದ್ಯಪಾನಿಗಳು, ಖ. ರೋಗಿಯೆಂಬವನು, ಝ.
[4] ಯರೈ, ಖ. ಜ. ಝ. [5] ನಿಜಸನ್ಮಾನ, ಜ.
[6] ಮಹಾತಿಥಿ, ಚ. ಜ. [7] ಸ್ಥಾನಧರ್ಮಾದಿಗಳ, ಖ. ನವೀನತೀರ್ಥಂಗಳನು, ಜ. ಸ್ಥಾನತೀರ್ಥಂಗಳನು, ಝ. [8] ನಮಗೈ, ಕ. ನಿಮಗೈ, ಝ.
[9] ದರ, ಖ. ಝ.

ಗುರು [1] ಪಿತರು ಬಹುಬಂಧುಜನಪು
ತ್ರರೊಳದಾವುದು ಕೊರತೆ ಕೌಂತೇ
ಯರ ನೆರವಿಗರ ಮಾಡು [2] ವೊಡೆ ಧೃತರಾಷ್ಟ್ರ ಕೇಳೆಂದ ॥ ೩೬

ಉಭಯಕುಲಶುದ್ಧಿಯೊಳು ಹೆಚ್ಚಿದ
ವಿಭವದೊಳು [3] ವಿಕ್ರಮದೊಳಧಿಕ
ಪ್ರಭೆಗಳೊಳು ಸತ್ಯದೊಳುಸಾಹಿತ್ಯದೊಳು ವಿನಯದೊಳು ।
ಅಭವವನಂಘ್ರಿಯು ಸೇವೆಯೊಳು ಹರಿ
ನಿಭನೆನಿಸಿ [4] ಬದುಕುವನು ರಾಜ್ಯಕೆ
ವಿಭುವೆನಿಸುವನು ರಾಯ ಚಿತ್ತೈಸೆಂದನಾವಿದುರ ॥ ೩೭

ವೇಸಿಯುಹ ಪರ್ಯಂಕದೆಡೆಯೊಳು
ದಾಸಿಯುಹ ಪರಿಚರ್ಯೆಯೊಳು ನಿ
ದೋರ್ಷಿಯುಹ ಪತಿಭಕ್ತಿಯೊಳು [5] ಮೋಹದೊಳು ತಾಯೆನಿಸಿ ।
[6] ಲೇಸುಕಾರ್ಯಕೆ ಮಂತ್ರಿಯೆನಿಸುವ
ವೈಸಿರಿಯನುಳ್ಳವಳು ರಾಣೀ
ವಾಸ ವೆಂದೆನಿಸುವಳು ಚಿತ್ತೈಸೆಂದನಾವಿದುರ ॥ ೩೮

ತಂದೆತಾಯಿಗಳಾಜ್ಞೆಯನು ಸಾ
ನಂದದೊಳು ಪಾಲಿಸುತೆ ಮದವನು
ಮುಂದುಗೆಡಿಸುತೆ ಧರ್ಮದೊಳು ರಾಜ್ಯವನು ರಕ್ಷಿಸುತೆ ।
ಬಂಧುವರ್ಗವ ಸಲಹಿ ಭೂಸುರ
ಬೃಂದವನು [7] ರಕ್ಷಿಸುವೊಡವ ಮಗ
ನೆಂದೆನಿಸುವನು ರಾಯ ಚಿತ್ತೈಸೆಂದನಾವಿದುರ ॥ ೩೯

---

[1] ಪಿತಾನುಜ ಬಂಧು, ಖ. ಜ. ಟ.　[2] ವುದು ಕ್ಷನುಚಿತವಲ್ಲೆಂದ, ಟ.
[3] ವಿಗ್ರಹದೊಳ, ಖ. ಜ. ಟ.　[4] ಮೆಱೆವವನು, ಖ. ಟ.
[5] ವಿನಯದೊಳು ತಾನೆನಿಸಿ, ಝ.　[6] ಏನು ಕಾರ್ಯಕೆ, ಚ. ಟ.
[7] ಸತ್ಕರಿಸುವನು, ಖ. ನೆಱೆ ಹೊರೆವೊಡವ, ಜ. ಸತ್ಕರಿಸಿದವ, ಝ.

ನರಿಕಟಕಭೇದಕನ ನಾನಾಯುಧವಿಶಾರದನ ।
ಭರಿತಧೈರ್ಯನ ಪತಿಹಿತನ [1] ಸಂ
ಗರಸಪಾರನ ಸೂರ್ಯರೋಮನ
ನಿರದೆ ಸೇನಾಪತಿಯ ಮಾಡುವುದರಸ ಕೇಳೆಂದ ॥ ೮೬

[2] ತಿಳಿದವನ ಮತಿವಿದನ ಭಾಷಾ
ವಳಿಲಿಪಿಜ್ಞನ ಸಾಕ್ಷರನ ಮಂ
ಡಳಿಕಸಾಮಂತರ ವಿಶೇಷದೊಳವ [3] ಸರವನರಿವ ।
ಸಲೆ ಕರವ ಕಳುಹಿಸುವ ನಿಲಿಸುವ
ಬಲುಹ ನುಳ್ಳನ ಸುಕರ [4] ದುಷ್ಕರ
ಕಳಂಕದಾತನ ಸಂಧಿವಿಗ್ರಹಿ ಯೆನಿಸಬೇಕೆಂದ ॥ ೮೭

[5] ಸಲುವ ತಾ ದೃಷ್ಟಾನುಮಾನಂ
ಗಳೊಳು ನಿಪುಣನ ಸಿಕ್ಷಲಸ ಸಿ
ಷ್ಕಳನ ರಾಗದ್ವೇಷರಹಿತನ ಬಹುಲಿಪಿಜ್ಞಕನ ।
ಹಲವುಬುದ್ಧಿಯನುಳ್ಳವನ ಕೃ
ಚಳಕ [6] ಬರೆಹನ ವಾಚಕನ ಬಗೆ
ಗೊಳಿಸಿ ಕರಣಿಕಪತಿಯ ಮಾಡುವುದರಸ ಕೇಳೆಂದ ॥ ೮೮

ವಸನ ಮಣಿಗಣ [7] ಲೋಹ ಕಾಂಚನ
ವಿಷಯ ಭೇದವ ಬಲ್ಲ ಕೊಟ್ಟುದ
ನೆಸಿಯಲೀಯದೆ ತಾನುಭಕ್ಷಿಸವಹಿ ನಿಧಾನವನು ।
ಬಸೆದು ಕಾದಿಪ್ಪಂತೆ ಕಾ [8] ದಿಹ
ಮುಸಿಯಮಾಸ್ತನ ಬಹುಕುಟುಂಬ
ವ್ಯಸನವುಳ್ಳನ ಮಾಳ್ಪುದೈ ಭಂಡಾರರಕ್ಷಕನ ॥ ೮೯

---

[1] ಕಾಪುರದೊಳಧಿಕನ, ಖ. ಸಂಗರಸಧಾರನ, ಟ.

[2] ಕುಲನನುಳ್ಳವನಧಿಕಭಾಷಾವಳಿಯ ಸಾಕಾರಕನ ಪರಮಂಡಳಿ, ಕ. ಖ.

[3] ರವರ, ಝ. [4] ಪರಿತವ ಕಳೆವ ನಾತನ, ಖ. [5] ಸಲೆ ಶ್ರುತ, ಖ. ಜ. ಝ.

[6] ಲಿಖಿತನ, ಖ. ಜ [7] ನಿವಹ, ಜ. [8] ಯರ್ವ, ಕ. ಝ.

ಮನ ವಚನ ಕಾಯದೊಳು ದಾತಾ
ರನೊಳು ಹಿತವೃತ್ತವನ ನಿಯತನ
ವಿನುತವನಿತಾವಿಮುಖನನು ನಿಶ್ಚಲನಿರೋಧಕನ ।
ಮುನಿವರರ ಬುದ್ಧಿಯೊಳು ಸಿಲುಕದ
ವನ [1] ನಿಜಾಪ್ತನ ನಿಯತವಿದ್ವ್ಯನ
ಜನಪ [2] ಚಿತ್ತೈಸುವುದಲೇ ತಾಂಬೂಲಧಾರಕನ ॥ ೯೦

ಪಿತೃಪಿತಾಮಹಸೂಪಶಾಸ್ತ್ರಾ
[3] ಗತನ ಕೈಕರಣೆಗಳೊಳಧಿಕನ
ನತಿಶುಚಿಯ ಸಾಧಕನ ನಕ್ರೋಧಿಯ ನನಾಲಸನ ।
[4] ಪತಿಹಿತನ ಷಡ್ರಸವಿಶೇಷೋ
[5] ನ್ನತನ [6] ನಿತರಾಲಯವಿದೂರನ
ಪತಿಕರಿಸುವುದು ಸೂಪಕಾರತೆಗರಸ ಕೇಳೆಂದ ॥ ೯೧

[7] ನಿಶಿತಪರಿಮಳ [8] ದಿಂದವಾವೋ
ದಿಸಿದ ಗಂಧದ್ರವ್ಯದೊಳು ಬಂ
ಧಿಸಿದ ಜೀವನ [9] ವನ್ನು ತನ್ನಯ ಜೀವನವಿದೆಂದು ।
ವಸುಮತೀಶಂಗಿತ್ತು ತಾ ಭೋ
ಗಿ [10] ಸದೆ ಬಳಸದೆ ದುರ್ಹೃದರತೊಲ
ಗಿಸುವವನೆ ಪಾನೀಯಧಾರಕ ನರಪ ಕೇಳೆಂದ ॥ ೯೨

---

1 ನಶೇಷಕಲಾಪ್ರವೀಣನ, ಖ. ಬ. 2 ತಿಯು ಚಿತ್ತೈಸುವುದುತಾಂ, ಖ. ಜ.
3 ಯತ್ರದ, ಜ. ನ್ವಿತನ, ಝ. ಯುತನ, ಟ. 4 ಮತಿಯುತನ, ಝ.
5 ಚಿತನ, ಖ. ಚ್ಛ್ರಿತನ, ಝ. 6 ನಿರ್ಪೋಷಿಯ; ಕ.
7 ಎಸೆವ, ಕ. 8 ವೋದದಿಂ ವೋ, ಕ. ವೋದದಿಂ ವೋಧಿಸಿ ಸು, ಖ.
9 ಜೀವ, ಖ. 10 ಸಿದ ವಿಮಲಾಹೃದವನುಜ್ಜಿ, ಖ,

ಉನ್ನತ [1] ನ ರೂಪಾಧಿಕನ ಸಂ
[2] ಪನ್ನದಕ್ಷನ ನನ್ಯರೆನ್ನವ
ರೆನ್ನದವರವರಿಂಗಿತಾಕಾರಪ್ರಭೇದಕನ ।
ಮನ್ನಣೆಗೆ ಬೆಱೆಯದನ ನಾಪ್ತನ
[3] ತನ್ನ ಕಾರ್ಯದೊಳಕ್ರಮಪ್ರತಿ
ಪನ್ನ [4] ನನು ಪಡಿಯಱನಮಾಡುವ್ರುದರಸ ಕೇಳೆಂದ ॥ ೯೩

ಪಲಿತಕಾಯ ಕುರೂಪಿಯನು ಸಿ
ರ್ಮಳನ ಲೋಭಿಯ [5] ಸಾವಧಾನನ
ಸಲೆ ಜಿತೇಂದ್ರಿಯನಿಂಗಿತಾಕಾರಪ್ರಭೇದಕನ ।
[6] ಕಲಿಮಲಿನತನುರುಚಿಯ ನಬಲಾ
ವಳಿಯ ಸುಯಿದಾನದೊಳು ನಿಲಿಸುವು
ದಿಳೆಯೊಳಗ್ಗದ [7] ಜಾಣರಾದವರೆರರಸ ಕೇಳೆಂದ ॥ ೯೪

ಗ್ರಾಮಮೂಱಱ ಸಂಚರಣೆಗಳ
ಸೀಮೆ [8] ಯೊಳು ಸರಿಗಮಪ [9] ಧನಿಗಳ
ನೇಮ [10] ವಪ್ಪದೆ ಪರಣಾಭರಣದ [11] ಪರಿಪುತಿರುಪುಗಳ ।
ಕೋಮಲಿತಶಾರೀರಹೃದಯದ
ರಾಮಣೀಯಕರಚನೆಗಳೊಳು ಸ
ನಾಮ ನೆನಿಸುವ ನವನೆ ಗಾಯಕ ನರಸ ಕೇಳೆಂದ ॥ ೯೫

---

1 ದ, ಕ, ಝ. 2 ಪೂರ್ಣ, ಕ. ಖ. ಜ. ಟ.
3 ನಸ್ಯಕಾರ್ಯ್ಯಜಿತಶ್ರ, ಕ. ಖ. ಜ. ಝ. 4 ಪಡಿಯಾರಕನ, ಕ. ಖ. ಝ. ಟ.
5 ಸಾವಧಾನಿಯ, ಖ. ಜ. ಟ. 6 ಕಲಿಮನನ ಕಡುಶುಚಿಯ, ಝ.
7 ರಾಜರಭಿಮತಪರಸ, ಖ. ಜಾಣತನವೆಲೆ ರಾಯ, ಝ.
8 ಗಳ, ಖ. 9 ಧ್ವನಿಸ, ಖ.
10 ತಪ್ಪದೆ, ಖ. ಜ. ಝ. 11 ಹೆಂಪ್ರತಿಪ್ರಗಳ, ಕ. ಹೆಂಪ್ರತಿರುಪುಗಳ, ಖ. ಹೆಂಪುಸೊಂಪುಗಳ, ಜ. ಯಿಂಪುಸೊಂಪುಗಳ, ಝ.

ತಾಳಲಯಬೊಂಬಾಳ [1] ಮಿಶ್ರದ
ಹೇಟಿಕೆಯು [2] ನಾಟಕಶುದ್ಧದ
ಸಾಳಗದ ಸಂಕೀರ್ಣದೇಶಿಯ ವಿವಿಧರಚನೆಗಳ ।
ಮೇಳವಣಿ [3] ದೌಡವದ ಷಾಡವ
ದೇಹಿಗೆಯು ಸಂಪೂರ್ಣಮಾರ್ಗದ
ಸೂಳುಗಳ ಲಯಮಾನವಱಿವವನವನೆ [4] ಗಾಯಕನು ॥ ೯೬

ಬರಲು ಕಂಡೊಡೆ ವಂದಿಸುತ್ತಂ
ತರಿಸುತಂತರಿಸುತ್ತೆ ಮಿಗೆ ಹ
ತ್ತಿರ ವೆನಿಸದತಿದೂರ ವೆನಿಸದೆ ಮಧ್ಯಗತಿ ಯೆನಿಸಿ ।
ಪರಿವಿಡಿಯೊ [5] ಳೋಲೈಸುತರಸಿನ
ಸಿರಿಮೊಗವ ನೀಕ್ಷಿಸುತೆ ಬೆಸಸಿತ
ನರೆಮರಿಸದಾಕ್ಷಣವೆ ಮಾಡಿದೊಡವನೆ ಸೇವಕನು ॥ ೯೭

ಹರುಷದೊಳು ನಿಜಜನನಿ ಗರ್ಭವ
ಧರಿಸಿಕೊಂಡಾಡುವವೊಲುತ್ತಮ
ಪುರುಷನಂತರ್ಯಾಮಿಯನು ತಾಳ್ವಂತೆ ಭೂಭುಜರ ।
ಧರಿಸಿ ಸುಖಸಂಗತಿಗಳೊಳು ಸಂ
ಚರಿಸುತ್ತಾಳ್ದನ ಹಾನಿವೃದ್ಧಿಯೊ
ಳಿರಲು ಬೆಸವರೆನಿಪರ್ಕೆ ಭೂಪಾಲ ಕೇಳೆಂದ ॥ ೯೮

[6] ಕುಟಿತೆಮಂನೀಕ್ಷಿಸುತೆ ಬಟ್ಟೆಯ
ಮೆಳೆಮರಂಗಳ ಹೊಯ್ಲ ತಪ್ಪಿಸಿ
ನೆಳಲ [7] ನೆಸಗುತೆ ವೇಗಗತಿಸಾಮಾನ್ಯಗತಿಗಳೊಳು ।

---

1 ಶುದ್ಧದ, ಕ. 2 ನಾಟಾಗ, ಖ. ಜ. ನಾಟ್ಯವಿಯ, ಝ.
3 ಯುತೆ ವಾದ್ಯಸಾಧನ, ಕ. ಗೌಳವಡ ಪಾಡವ, ಖ. ದೊಡ್ಡವದ ಷಾಡಿನಯೋ ಜ. ದಾಡಿಸುವ ಸಾಧನ, ಝ. 4 ನಟ್ಟುವನು, ಝ.
5 ಳೊಪ್ಪಿಸುತುಮರ, ಟ. 6 ಬಲದವರ, ಟ.
7 ನಿಟ್ಟಿಸಿ, ಕ ನಟಿಸು, ಖ. ಜ. ನೀಕ್ಷಿಸಿ, ಝ.

[1] ಬಟ್ಟೆವಿಡಿದು ಭೂಭುಜರ ಯಾನಂ
ಗಳೊ [2] ಳಗಳುಕದೆ ಪಗೆಯು ಸ್ಫೈರಿಸಿ
ಬಳಸುವವನೇ ಛತ್ರಧಾರಕ ನರಸ ಕೇಳೆಂದ ॥ ೯೯

ಎಡಬಲನ ನಾರಯ್ಯುತೊಡೆಯನ
ಬಿಡದೆ ನೋಡುತೆ ಮಕ್ಷಿಕಂಗಳ
ಗಡಣವನು ಕೆದರಿಸುತೆ [3] ಕಿಗ್ಗಣ್ಣಿಕ್ಕಿ ಕೆಲಬಲನ ।
ಜಡಿದು ನೂಕುತೆ ಸ್ವಾಮಿಕಾರ್ಯಕೆ
[4] ಯೆಡೆ ಯೆನಿಸುತಾವಾಗ ಸೇವೆ [5] ಯು
ಬಿಡದೆ ಪ್ರೊಪ್ಪುಸ ಚಮರಧಾರಕ ನರಸ ಕೇಳೆಂದ ॥ ೧೦೦

[6] ಗಾಯದೊಳುವೋಕ್ಷ [7] ಚಕೊಕ್ಕ ಯದೊಳಡಿ
ಪಾಯು [8] ದಂಡೆಯೊಳಗಡೆಯೊಳಗುಪ
ಕಾಯದೊಳಗೆ ನವಾಯಿಗಳ [9] ಬಿನ್ನಣದೆ ಬೇಸಱದೆ ॥
ಸ್ಥಾಯಿಯೊಳು ಸಂಚಾರದೊಳು ಸಮ
ಗ್ರೈಯೆನಿಸಿ ನಾನಾವಿನೋದದ
ದಾಯುವಱಿವ [10] ನೆ ಮಲ್ಲ ನೆನಿಸುವನು ರಾಯ ಕೇಳೆಂದ ॥ ೧೦೧

---

1 ಬಲುಹಿನೊಳು ಭೂಸುರರ ಯಾನಂಗಳನು ತಪ್ಪಿಸಿಡಗೆಯ, ಟ.

2 ಳುಸಿಕ್ಕ ಪಡಗೆಯು, ಝ. ಳಗಹಿತರಾಯರಿ, ಕ.ಖ. ಝ. ಯುಬ್ಬುಗವ ಳದೊಳಹಿತರಾಯರಿ, ಜ.

3 ಕಿಡಿಗಣ್ಣಿಂದೆಕೆಲಬಲನ ಬಿಡದೆ ನೋಡುತೆ, ಝ. 4 ಕಡೆಯೆನಿ, ಖ ನಡೆ, ಝ. ಯೆಡೆಯೆನಿಸದಾವಾ, ಟ. 5 ಗೆಸೆಡೆಯದಿಹನೇ, ಝ. ಟ.

6 ಕಾಯ, ಖ. 7 ಚಕೋರಿಬೆಸ್ತು, ಟ. 8 ಗಳೊಳುಪಕಾಯದೊ ಳಗೆ, ಖ. ಟ. 9 ಬಿನ್ನಾಣದೊಳು ಬಟಿಸಂದು ಬೇ, ಖ. ಟ.

10 ವಸವನೆನುಲ್ಲನು ರಾಯ, ಕ. ಖ. ಝ. ಟ.

ಹಿಂದೆ ಮಾಡಿದ ಸುಕೃತಫಲ [1] ವೆನು
ತಂದು ತೋರುವವೊಲು ನಾನಾ
ಚಂದದಾಪತ್ತಿನೊಳು ಹರಿ ನಿಜ [2] ಭಕ್ತಸಂತತಿಯು ।
ಮುಂ [3] ದೆನಿಲುವವೊಲವನಿಪಾಲರ
ದಂದುಗದ ಹೊತ್ತಿನೊಳು ಗಜಹಯ
ಬೃಂದವನು ಚಾಚುವನೆ ಪಾಹಕ ನರಸ ಕೇಳೆಂದ ॥ ೧೦೨

[4] ಹೆಬ್ಬಲವ ನೊಡೆದುಚಿಸಿ ಭೂಮಿಯ
ನಿಬ್ಬಗೆಯು ಮಾ [5] ಡಿಸುತೆ ಗಜಹಯ
ದೊಬ್ಬುಳಿಯು [6] ಹರೆಗಡಿಸಿ ಕಾದಿಸು [7] ತಾನೆಗಳ ಮೇಲೆ ।
ಬೊಬ್ಬಿಱಿದು [8] ಸರಪಣಿಯು [9] ಸುರಿಸುರಿ
[10] ದುಬ್ಬರದ ಬವರದೊಳು ಕಡಿದರಿ
ಗುಬ್ಬಸವ ಮಾಡುವನೆ ಜೋದನು ರಾಯ ಕೇಳೆಂದ ॥ ೧೦೩

ಬಿಟ್ಟಸೂಟಿಯೊಳರಿನೃಪಾಲರ
ಮುಟ್ಟಿ ಮೂದಲಿಸುತ್ತ [11] ಮುಂದಣ
ಥಟ್ಟನೊ [12] ಡೆಹೊಯ್ದಹಿತಬಲದೊ [13] ಳುಚಾರಿವರಿವರಿದು ।

---

1 ವೈತಂಡುಸಾರುವ, ಕ. ಖ. ಚ. ಜ. ಝ.
2 ಬಕುತಿ ನಿಲುವಂತೆ, ಜ. ಭಕ್ತಿಸಂಗದೊಳು, ಟ. 3 ದುವರಿವ, ಜ.
4 ಪರ್ವತವನೊಡೆದುಚಿದು, ಕ. ಪರ್ಬಲವನೊಡೆತುಚಿದು, ಖ. ಸರ್ಬಕವನೊಡೆತುಚಿದು, ಝ. ಪರ್ಬತವನೊಡೆದುಚಿಸಿ, ಟ. 5 ಡುತೆ ಮಹಾರಥರೊ, ಕ. ಖ. ಜ. ಝ 6 ಹರೆಗಡಿದು, ಕ. ಖ. ಜ. ಝ. ನೆಱೆ ಗಡಿದು, ಟ.
7 ವಾನೆ, ಕ. ಖ. ಜ. ಝ. ಟ. 8 ಪರದಱಿವ, ಟ. 9 ಕಱೆಯುತೆ, ಕ. ಖ. ಝ. ಕೆದಱುತೆ, ಜ. 10 ಸರ್ಬದಱಿದೊಳಗಹಿತರಾಯರಿ, ಕ. ಖ. ಝ. ಯುಬ್ಬಗವಳದೊಳಹಿತರಾಯರಿ, ಜ. 11 ವೋಹಿದ, ಖ. ಟ. 12 ಡಹೊ ಕ. ಡಹಾ, ಖ. ಟ. ಡೆಹಾ, ಜ. 13 ಳಗಾನೆವರಿ, ಕ. ಖ. ಜ. ಝ.

[1] ಹೊಟ್ಟುಗುಟ್ಟುತೆ ಹೆಣನ [2] ಲೊಟ್ಟಾ
ಲೊಟ್ಟೆ ಮಸಗಲು ಕಣನ ಚೌಕದೊ
ಳ [3] ಟ್ಟಯಾಡಿಸಬಲ್ಲೊಡವ ರಾವುತನು ಕೇಳೆಂದ ॥ ೧೦೪

ಕುದುರೆಗಳ ನಾರಯ್ದು ರಥವನು
ಹದುಳಿಸುತೆ ಸಾರಥಿಯು [4] ನೋಡುತೆ
ಯಿದಿರ ಮುಱಿಯುತೆ ತನ್ನ ಕಾಯಿದುಕೊಳುತೆ [5] ಯೆಡಬಲನ ।
ಸದೆದು ಮುರಳುವ ಲಾಗುವೇಗದ
ಕದನಕಾಲಾನಲ [6] ನು ತಾನೇ
ಮೊದಲಿಗ ನಲ್ಲೈ ರಥಿಕರಿಗೆ ಭೂಪಾಲ ಕೇಳೆಂದ ॥ ೧೦೫

ಬೇಸಱದೆ ಕಾಳೋರಗನ [7] ವೇ
ಢೈಸಿ ಕಟ್ಟುಱುಹೆಗಳು ಕಂಡವೆ
ಸೂಸಿ ಕಡಿಕಡಿದೊಟ್ಟುವಂದದೊಳಹಿತಬಲದೊಳಗೆ ।
ಓಸರಿಸದೊಳಹೊಕ್ಕು ಸಮರವಿ
ಲಾಸವನು ನೆಱೆ ಮೆಱೆವ ಕೇಶಾ
ಕೇಶಿಗೊದಗುವ ನವನೆ ಕಾಲಾಳರಸ ಕೇಳೆಂದ ॥ ೧೦೬

ಕುನಖಿ ಕುಷ್ಠಿ [8] ಕುಚೇಲನನು ಕು
ಬ್ಜನನು ವಿಧವಾಂಗನೆಯು ಪಾಪಿಯು
ತನುವಿಕಾರಿಯು ನಂಗಹೀನನ [9] ಪಂಗುವಂಧಕನ ।
ಘನರುಜಾಂಗನ ಬಿಡುದಲೆ [10] ಯುರೋ

---

1 ಹಿಟ್ಟು, ಕ. ಖ. ಜ. ಝ. ಟ. 2 ನೊಟ್ಟೆಲೊಳೊಟ್ಟೆ, ಝ.
3 ಟ್ಟೆಯಾಡಿ, ಕ. ಖ. ಜ. 4 ನಯುಯ್ವುತ್ತಿದಿರ ಖ. ಝ.
5 ತಲಬಲನ, ಖ. ಝ. 6 ನಹೋಲ್ವನೆ, ಟ.
7 ನಡ್ಡೈಸಿ, ಕ. ಖ. ಝ. ಟ. 8 ತಕುಜನನತಿಕು, ಖ. ಕುಶೀಲನ, ಜ ಕುಚೇಷ್ಟನ, ಝ. ಕುಚಾಯು, ಟ. 9 ಪಂಗುಲಾಂಧಕನ, ಜ. ಟ. ಮೂಕನಂಧಕನ, ಝ. 10 ಯೊಳಿದ್ದನನುವುಪ್ಪವ, ಕ. ಖ ಝ.

ದನಿಯು ನುತ್ಸವಡಿಸುವ ಸಮಯದೊ
ಳನಿಬರನು ಕಾಂಬುದು ಮಹೀಶರಿಗುಚಿತವಲ್ಲೆಂದ ‖ ೧೦೩

ಕಳಸ ಕನ್ನಡಿ ತುರಗ ಗಜ ಗೋ
ಕುಲ ವೃಷಭ ಬುಧ [1] ನಿಚಯ ಗಿರಿಸಂ
ಕುಲ ಸು [2] ಮಿತ್ರರು ಮಾತೃ ಪಿತೃ ವರವಾಹಿನೀ [3] ನಿಕರ |
ಜಳಧಿ [4] ವಸನ ಚ್ಛತ್ರವುರ್ವೀ
ಲಲನೆಯುರ ನೀಕ್ಷಿಸುವುದವನಿಪ
ತಿಲಕರುಪ್ಪವಡಿಸುವ ಸಮಯದೊಳರಸ ಕೇಳೆಂದ ‖ ೧೦೪

ಶ್ವಾನ ಕುಕ್ಕುಟ ಕಾಕ ಬಕ ಪವ
ಮಾನ ಖಗಪತಿ ದೇವ ರಜನಿ ಕೃ
ಶಾನುಗಳ ಗರ್ದಭನ ವೃಷಭನ ಶಿಂಶುಮಾರಕನ |
ವಾನರನ ಹಯದ ದ್ವಿಪದ ಪಂ
ಚಾನನನ ಮೃಗಪೋತಕನ ಗುಣ
ವಾನರೇಂದ್ರರೊಳಿರಲು ಬೇಹುದು ಭೂಪ ಕೇಳೆಂದ ‖ ೧೦೫
*

---

1 ಯುಗ್ಮಗಿರಿ, ಝ. 2 ವಾಸಿನಿ, ಕ. ಖ. ಜ. ಝ. 3 ನಿಚಯ, ಚ. ಟ.
4 ವನಶಸ್ತ್ರಾಸ್ತ್ರವು, ಕ. ಖ. ಝ. ಟ.

*

ಸೂಕರನ ತುಂಬಿಯು ಮರಾಳನ
ಭೇಕಮ್ಮರಿಯು ಕಾರುಕನ ವನ
ಕೋಕಿಲನ ಬರ್ಹಿಯು ಸುಧಾಕಿರಣಾನ ದಿನಾಧಿಪನ |
ಆಗಸದ ದರ್ಪಣದ ಬಕರ
ತ್ನಾಕರನದೊಂದೊಂದು ಗುಣ ವಿಂ
ಬೇಕು ನೃಪತಿಗೆ ನಿನ್ನೊಳುಂಟೇ ರಾಯಹೇಳೆಂದ ‖

ಟ. ಪುಸ್ತಕದಲ್ಲಿ ಈ ಪದ್ಯವು ಹೆಚ್ಚಾಗಿ ದೊರೆಯುತ್ತದೆ

ಪರಿಪರಿಯ ದಾನಂಗಳನು ಕರೆ
ಕರೆ [1] ದು ಲೋಗರಿಗಿತ್ತು ಪರರನು
ಹೊರೆದು ತನ್ನಾಶ್ರಿತರ ನ [2] ತಿಗಳದಾಪ್ತಬಾಂಧವರ ।
ಸರಕುಮಾಡದೆ ಗರ್ವದಿಂ [3] ದೊ
ತ್ತರಿಸುತಿಹ ಪಾತಕರ ಪದವಿಯ
ನರಸ ಬಣ್ಣಿಸಲಾರು ಬಲ್ಲರು ಯಮನ ನಗರಿಯೊಳು ॥ ೧೧೦

†

ಕೋಪವೆಂಬುದನರ್ಥಸಾಧನ
ಕೋಪವೇ ಸಂಸಾರಬಂಧನ
ಕೋಪದಿಂ [4] ದಿಹಪರದ ಸುಕೃತವು ಲಯವನೈದುವುದು ।
ಕೋಪವನು ವರ್ಜಿಸಲು ಬೇಹುದು
ಕೋಪವುಳ್ಳವ ನಾವನಾಗಲಿ
ಕಾಪುರುಷ ನಿಜಪರಕೆ ಸಲ್ಲನು ರಾಯ ಕೇಳೆಂದ ॥ ೧೧೧

---

1 ದಪಾತ್ರ ಗಿತ್ತು, ಕ. 2 ತಿಥಿಯದಾಸಬಾಂಧ, ಟ.
3 ದುಬ್ಬರಿಸು, ಖ. ಜ. ಟ.

†
ಮೂಱುಕೋಟಿಯ ಕೋಟಿಯರ್ಧವ
ನೀಱಿದಿಹ ರೋಮಾಳಿಸಂಖ್ಯೆಯೊ
ಳಾಱದೆನ್ನದೆ ನಿಜಪತಿಯ ಸಹಗಮನದೊಳು ತನುವ ।
ತೂಱಿದಬಲೆಯರುಗಳದೆಸೆಯಿಂ
ದಾಱುಮತಿ ಸ್ವರ್ಗಾದಿಭೋಗವ
ಸೂಱೆಗೊಂಬರು ತಪ್ಪದವನೀಪಾಲ ಕೇಳೆಂದ ॥

ಈಪದ್ಯವು ಕ. ಖ. ಜ. ಝ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

4 ದುರಿತರದ, ಖ.

5 ತತ್ಪತಿಗಳವನೀಶಕೇ, ಖ.

ಗರುವ ಮಾನ್ಯನು [1] ಮಾನಿ ಸುದಯಾ
ಪರನು ಕಡುಕುಚಿ ಭೋಗಿ ರೂಪ್ಪೋ
ತ್ತರನು ಧನಿಕನು ರಾಜಪೂಜ್ಯನು ಕೀರ್ತಿವಲ್ಲಭನು ।
ಗುರುಜನಕೆ ಗುರು ವಿದ್ಯೆಯುಳ್ಳವ
ನರಸ ಕೇಳ್ಳೆ ವಿದ್ಯೆ ಯಿಲ್ಲದ
ನರನು ನರಪಶು ವವನ ಜನ್ಮ ನಿರರ್ಥ [2] ಕೇಳೆಂದ ॥ ೧೧೨

*

ಹರಿಬಕುತಿಲೋಲುಪನೆನಿಸಿ ಶಂ
ಕರನ ಬದ್ಧದ್ವೇಷಿಯಹ ಶಂ
ಕರನ ಭಕ್ತಿಯೊಳಧಿಕನಾಗಿ [3] ಯೆ ವಿಷ್ಣುವಿನ ಮೇಲೆ ।
ಎಱಕವಿಲ್ಲದ ಕರ್ಮಕಾಂಡಾ
ಳರುಗಳಪ್ಪತ್ತೇೞುಕೋಟಿಯು
ನರಕದೊಳಗೋಲಾಡುತಿಹರವನೀಶ ಕೇಳೆಂದ ॥ ೧೧೩

ಯತಿ ಕಿಡುಗು ದುಸ್ಸಂಗದೊಳು ಭೂ
ಪತಿ ಕಿಡುಗು ದುರ್ಮಂತ್ರಿಯೊಳು ವರ
ಸುತ ಕಿಡುಗು ಲಾಲನೆಗಳೊಳು ಕೃಷಿ ಕಿಡುಗುಪೇಕ್ಷೆಯೊಳು ।

---

* ಆವನೊಬ್ಬನು ಸತ್ಯಕೋಸುಗ
ಭಾವಶುದ್ಧಿಯೊಳೊಡರಿಚುವ ಶಪ
ಥಾವಳಿಯು ನವಸಾನದೊಳು ತದ್ಧರ್ಮವನು ಯಮನು ।
ಓವನನ್ಯಾಯದೊಳು ಸೂರುಳ
ನೋವಿ ರಚಿಸಿದವಂಗೆ ಗತಿ ಯಿ
ನ್ನಾವುದೆಂಬುದ ನಾರು ಬಲ್ಲರು ಭೂಪ ಕೇಳೆಂದ ॥

ಈ ಪದ್ಯವು ಕ, ಖ, ಜ, ಝ, ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

1 ಮುನಿಕದೈವಾ, ಕ, ಝ. ಮುನಿತದೈವಾ, ಜ.
2 ಕರವೆಂದ, ಝ. 3 ಯುವಿ, ಕ, ಝ. ಟ.

ಮತಿ ಕಿಡುಗು ಮಧುಪಾನದೊಳು ಸ
ದ್ಗತಿ ಕಿಡುಗು ದುರ್ವ್ಯಸನದೊಳು ನಿಜ
ಸತಿ ಕಿಡುಗು ಸ್ವಾತಂತ್ರ್ಯದೊಳು ಭೂಪಾಲ ಕೇಳೆಂದ ॥ ೧೧೪
*

ಉಂಡು ತೀರಿಸಬೇಕು ತಾ ಮುಂ
ಕೊಂಡು ಮಾಡಿದ [1] ಪುಣ್ಯಪಾಪದ
ತಂಡವೇನು ತರಹರಣೆ ಯಿಲ್ಲದೆ ಭವಭವಂಗಳೊಳು ।
ಹಿಂಡಿಹಿಂಡವುದು [2] ಬೆಂಬಿಡದೆ ಸಮ
[3] ದಂಡಿಯೊಳು ಹಗೆಕೆಳೆ [4] ಯುರೆನ್ನದೆ
ಗಂಡುಗಿಡಿಸದೆ ಬಿಡುವುದೇ ವಿಧಿ ಯೆಂದನಾವಿದುರ ॥ ೧೧೫

ಕೂಡಿದೆಡೆಯೊಳಕೃತ್ಯಶತವನು
ಜೋಡಿಸಿದವರು ಮಿತ್ರರಿಗೆ ಕಡು
ಗೇಡಚಿಂತಿಸಿದವರು ಪುರುಷಾರ್ಥಂಗಳನು ತಮಗೆ ।
ಮಾಡಿದವರುಗಳಿಗೆ ವಿಘಾತಿಯು
[5] ಹೂಡಿದವದಿರು ನರಕದೊಳಗೋ .
ಲಾಡದಿಹರೇ ರಾಯ ಚಿತ್ತೈಸೆಂದನಾವಿದುರ ॥ ೧೧೬

---

* ದೊರೆಗಳಿಗೆ ಬಡವರಿಗೆ ಕಷುಮೂ
ರ್ಖರಿಗೆ ದುಃಖಿಗೆ ಸುಖಿಗೆ ಸರ್ವ
ಜ್ಞರಿಗೆ ಭಾವವಿದರಿಗೆ ಶರಣರಿಗಾತ್ಮ ಜೀವರಿಗೆ ।
ಧರೆಯೊಳಗೆ ಗಾಂಧರ್ವವಿದ್ಯೆಗೆ
ಸರಿಸವಹ ಬಂಧುಗಳು ದೊರಕುವು
ದರಿದು ಭೂತ ಭವಿಷ್ಯದೊಳಗವನೀಶ ಕೇಳೆಂದ ॥

ಈ ಪದ್ಯವು ಕ. ಜ. ಝ. ಟ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

1 ಸುಕೃತ ದುಷ್ಕೃತ ಭಂಡ, ಕ. ಸುಕೃತದುಷ್ಕೃತತಂಡವ, ಝ.
2 ಲೋಕದೊಳು, ಝ. 3 ದಂಡೆಯೊಳು, ಜ. ಟ.
3 ಗಳೆನ್ನದೆ, ಕ. ಝ. ಟ. 5 ಜೋಡಿಸಿದವರು, ಕ.

ಸ್ನೇಹಪೂರ್ವಕದಿಂದೆ ಮನದೊ [1] ಳು
ಗೂಹಿಸಲು ಲಕ್ಷ್ಮೀಶ ನವರಿಗೆ
ಬೇಹ ಪುರುಷಾ [2] ರ್ಥಂಗಳಹವೆಲ್ಲಿದೊರ್ಡಲ್ಲಲ್ಲಿ।
ಈ ಹದನು ತಪ್ಪುವುದೆ ಕೂರ್ಮನ
[3] ಮೋಹದೊಳು ತತ್ಸಂತತಿಗೆ ನಿ
ರ್ವಾಹ ಮಹವೋಲರಸ ಚಿತ್ತೈಸೆಂದನಾವಿದುರ ॥ ೧೧೩

*

ಕುಲಜನಾಗಲಕುಲಜನಾಗಲಿ
ಜಲರುಹಾಕ್ಷನ ನಾಮಕೀರ್ತನ
ದೊಳಗೆ [4] ಬಾಳುವ ನಾವ ನಾತನು ಸುಕೃತಿ [5] ಯೆನಿಸುವನು।
ಉಳಿದ ಜಪ ತಪ ಹೋಮ ನೇಮಂ
ಗಳೊಳು ಸಂಸಾರಾಂಬುಧಿ [6] ಯಿನು
ಚ್ಚಳಿಸಬಹುದೇ ರಾಯ ಚಿತ್ತೈಸೆಂದನಾವಿದುರ ॥ ೧೧೪

---

1 ಳುಗಾಹಿ, ಟ. 2 ರ್ಥಗಳ ಕುಡುವನದೆಲ್ಲಿ ತಾನಿರಲಿ ಕ. ರ್ಥಗಳ ಕುಡುವನದೆಲ್ಲಿ ಯಿರಲರಸ್ಸಿ, ಝ. ರ್ಥಂಗಳಹ ವಿದನಱಿದು ಮನದೊಳಗೆ, ಟ.
3 ದೇಹದೊಳು, ಕ.

* ವಿದ್ಯೆ ಸತ್ಕುಲ ಬಹುವಿವೇಕವು
ಬುದ್ಧಿ ಚಾತುರ್ಯ ನುಡಿಯು ಸಡಗರ
ಶುದ್ಧ ಚಿತ್ತ ಸುಶೀಲ ಭುಜಬಲ ಭದ್ರವೊದಗಿಸುವ।
ಉದ್ಯಮವು ಮೊದಲಾದ ಗುಣಗಣ
ವಿದ್ದು ಫಲವೇನೀಜಗದ ತೊರೆ
ಮುದ್ದು ಹೊದ್ದದ ನರಗೆ ದಾರಿದ್ರ್ಯಾಂಗನಾವರಗೆ ॥

ಈ ಪದ್ಯವು ಜ. ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತದೆ.

4 ಬದುಕುವನಾವನ್ನೈ ಕಡುಸು, ಖ. ಬೆರಸಿಹನಾ, ಜ. ಬಳಸುವ, ಟ.
5 ಯೆಂಬವನು, ಕ. ಖ. ಜ. ಟ.
6 ಯನುಚ್ಚಳಿಸ, ಕ. ಯನುತ್ತರಿಸ, ಖ. ಜ. ಝ. ಟ.

ಜಾತರೂಪದ ಲೇಸುಹೊಲ್ಲಹ
ನೀತಿಹೋತ್ರ [1] ಸುದಾಹಕಾರಣ
ಭೂತವಾಗಿಹುದದಹಗೆ ಸದಸತ್ತುಗಳ ಭೇದವನು ।
ನೀತಿಮುಖದಿಂದಱಿವುದುತ್ತಮ
ನೀತ ಮಧ್ಯಮ ನೀತ [2] ಕುತ್ಸಿತ
ನೀತ ನೆಂಬುದ ನರಸ ಚಿತ್ತೈಸೆಂದನಾವಿದುರ ॥ ೧೧೯

ಅವನಿಯೊಳು ಜನ ಜನಿತಧನಧಾ
ನ್ಯವನು [3] ಕಳಹೊಲಗ್ಗೆದು ಸಂತೋ
ಷವನು ಮಾಡುವ ಕಡೆಯೊಳೊಂದಕೆ ನೂಱುಮಡಿಯಾಗೆ ।
ಲವಲವಿಕೆ ಮಿಗೆ ಯೆತ್ತಿ ಸಪ್ತಾಂ
ಗವನು ಸಲಹುತ್ತಿರಲು ಬೇಹುದು
ರವಿಯುವ್ರೊಲು ಸಾಸಿರವೊಗದೊಳವನೀಶಕೇಳೆಂದ ॥ ೧೨೦

ದೇವತಾಸ್ಥಾನದೊಳು ವಿಪ್ರಸ
ಭಾವಳಯದೊಳು [4] ರಾಜಪುರುಷರ
ಸೇವೆಯೊಳು [5] ಗುರುಸದನದೊಳು ನದಿಯೊಳು ತಟಾಕದೊಳು ।
ಗೋವುಗಳ ನೆರವಿಯೊಳು ಮೆರಬ್ರಂ
ದಾವನದೊಳುಪಹತಿಯು ಮಾಡುವು
ದಾವೆಗುಣ [6] ಗರುವಾಹಿಯೆಂದನು ಭೂಪತಿಗೆ ವಿದುರ ॥ ೧೨೧

ಹರನ ಕೊರಳಿಂಗಾಭರಣವಾ
ದುರಗ ಪವನಾಹಾರವಾದಂ
ತರಸ ನಿನ್ನಯ ಬಸಿಱು ಬಂದೇನಹರು ಪಾಂಡವರು ।

---

[1] ನದಾಹ, ಕ. ಝ. ನದೇಹ, ಖ. ನದೆಸಗೆ, ಜ.
[2] ಕನಿಯುಸನೀತ, ಕ. ನಧಮುವನೀತ, ಖ. ಕನಿಷ್ಠನೀತ, ಜ. ಝ.
[3] ಕಳಹಲ, ಖ. ಟ. ತಳಹರಿಗೆಯ್ದು, ಝ.
[4] ಸಜ್ಜನರುಗಳ, ಜ. [5] ರವಿಶಶಿಗಳುದಯಾಸ್ತಮಯಕಾಲದೊಳು, ಜ.
[6] ಗರುವರಿಗೆ ಚಿತ್ತೈಸೆಂದನಾವಿದುರ, ಜ.

[1] ಧರೆಯನಾಳುವ ಭಾಗ್ಯ ವಿಲ್ಲದೆ
ನರಪಶುಗಳಾದರು ಕಣಾ ನೀ
ನಿರಲವರಿಗೀವಿಧಿಯೆ ಚಿತ್ತೈಸೆಂದನಾವಿದುರ ॥ ೧೨೨

ಇನನುದಯಿಸಲಿ ಪಶ್ಚಿಮಾದ್ರಿಯೊ
ಳನಲನೊಮ್ಮೆ ಹಿಮಾಂಶುವಾಗಲಿ
ಕನಕಗಿರಿಗಲ್ಲಾಟವಾಗಲಿ ಪರ್ವತಾಗ್ರದೊಳು ।
ವನಜ ವಿಕಸಿತವಾದೊಡಂ ಸ
ಜ್ಜನರುಗಳು ನುಡಿದೆರಡನಾಡರು
ಮನವಚನಕಾಯದೊಳು ಚಿತ್ತೈಸೆಂದನಾವಿದುರ ॥ ೧೨೩

* [2] ನಾಯಿಗಳ ನುಡಿಗೇಳಿ [3] ನೀನು ವೃ
ಥಾಯು [4] ದೊಳು ಕೆಡದೆಯೆ ಯುಧಿಷ್ಠಿರ
ರಾಯನನು ಕರಿಸುವುದು ಭೀಷ್ಮಾದಿಗಳ ಮುಂದಿಟ್ಟು ।
[5] ನ್ಯಾಯಮುಖದೊಳು ಸಕಲರಾಜ್ಯ
ಶ್ರೀಯೊಳರ್ಧವನಿತ್ತು ಬದುಕುವು
ದಾಯತಿಕೆ [6] ಯೊಳಗಹುದು ಚಿತ್ತೈಸೆಂದನಾವಿದುರ ॥ ೧೨೪

---

1 ನರಪಶುಗಳಾದರು ಕಣಾ ನೀ ನಿರಲು ವನವಾಸದೊಳು ಜೀವವ ಹೊರೆವು ದವರಿಗೆ ವಿಧಿಯೆ, ಜ. ಟ.

* ಕರಿಸು ಯಮನಂದನನ ರಾಜ್ಯದ
ಸಿರಿಯನೀವುದು ಕಾಡಿ ಕೊಡು ಕರಿ
ತುರಗರಥಭಂಡಾರವನು ದಾಯಾದ್ಯಭಾಗದೊಳು।
ಹಿರಿಯಭೀಷ್ಮದ್ರೋಣರನಿಬರ
ಕರಿಸಿಕೊಡು ಮುಂದಿಟ್ಟು ರಾಜ್ಯವ
ನರಸಕೊಡು ಕೊಡು ಕೀರ್ತಿಯುಳಿವುದದೆಂದನಾವಿದುರ ॥
ಎಂದು, ಚ. ಪುಸ್ತಕದಲ್ಲಿ ಪಾಠವಿದೆ.

2 ನ್ಯಾಯಮಾರ್ಗವ ಬಿಟ್ಟು ನೀ ನಿರ್ದಾಯ, ಜ. ರಾಯ ನಡೆ ಜೀವವನು. ನಚ್ಚಿ ವೃ, ಟ. 3 ನಚ್ಚಿ, ಚ. 4 ಕೆಡಬೇಡಾಯು, ಚ. ಟ. ದೊಳು ಕೆಡದಿರು, ಜ. ದಾಯಭಾಗದೊಳಖಿಳ, ಜ. 6 ಯಾಹುದತಸ, ಜ. ಟ.

ನಳನೃಪತಿ ದಮಯಂತಿ ಸೀತಾ
ಲಲನೆ ರಾಘವದೇವ ದ್ರೌಪದಿ
ಕಲಿಯುಧಿಷ್ಠಿರನೃಪತಿ ಯಿವರಿಂತಾಱುಮಾನಿಸರು ।
ಇಳೆಯೊಳುತ್ತಮಕೀರ್ತಿಗಳು [1] ಜಾ
ವಳದ ಪುರುಷರೆ ಧರ್ಮಪುತ್ರನ
ಗೆಲುವ ಪರಿ ಯೆಂತೈ ಮಹಾದೇವೆಂದನಾವಿದುರ ॥ ೧೨೫

ಜನಪ ಕೇಳೈ ಸ್ಕಂದನನು ರಾ
ಮನನು ಹನುಮನ ಭೀಮಸೇನನ
ವಿನತೆಯಾತ್ಮಜನಿಂತಿದೈವರ ಭಾವಶುದ್ಧಿಯೊಳು ।
ನೆನೆದವರ ದುರಿತಂಗಳೋಡುವು
ವೆನಲು ನೀವೀಪವನಪುತ್ರನ
ನನುವರದೊಳಂತಕಟ ಜಯಿಸುವಿರೆಂದನಾವಿದುರ ॥ ೧೨೬

ಬಲಿ ವಿಭೀಷಣ ಭೀಷ್ಮ ನಾರದ
ಫಲುಗುಣರು ಪ್ರಹ್ಲಾದದೇವನು
ಜಲರುಹಾಕ್ಷನ ನಚ್ಚು ಮೆಚ್ಚಿನ ಡಿಂಗರಿಗರಿವರು ।
ಸುಲಭವೇ ನಿನಗಿವರ [2] ಕೂಡಾ
ಕಲಹ ಬೀಭತ್ಸುವಿನ ಕೈಮನ
ದಳವ ನಱಿಯಾ ಕಂಡು ಕಾಣದ ಮರುಳಹರೆಯೆಂದ ॥ ೧೨೭

ಚಕ್ರವರ್ತಿಗ [3] ಳೆಱುವರೀಭೂ
ಚಕ್ರದೊಳಗವರಿಗೆ ಮುರಾರಿಯು
ಚಕ್ರವೇ ಬೆಸ [4] ಕೈವುದಲ್ಲದೆ ಪಾಂಡುತನಯರಿಗೆ ।
ಚಕ್ರಿ ತಾ [5] ನೊಲಿದವರ ಸೇನಾ

---

1 ಚಾಪಳದ ಪುರುಷನೆ, ಝ. 2 ಕೂಡಣ, ಕ. ಚ. ಜ. ಝ. ಟ. 3 ಳಾಱಿಲೇ, ಕ. ಜ. ಟ. 4 ಗೈವುದ, ಕ. ಝ. 5 ಬಂದವರ, ಕ. ಜ. ಝ.

ಚಕ್ರದೊಳಗಿಹನಾಯುಧಿಷ್ಠಿರ
ಚಕ್ರವರ್ತ್ತಿ [1] ಗದಾವನೈ ಸರಿಯೆಂದನಾವಿದುರ ‖ ೧೭

ಹರಿಹಯನು ಗುಹ ರಾಮ ಬಾಣಾ
ಸುರನು ದಶಶಿರ ಭೀಮಸೇನಾ
ದ್ಯರು ಕಣಾ ಗಿರಿಜಾಧಿನಾಥನ ಡಿಂಗರಿಗರಿವರು ।
ಸರಸವೇ ಮೃತ್ಯುಂಜಯನ ಕೂ
ಡರಸ ನೀನಿನ್ನಳವನಱಿಯದೆ
ಮರುಳಹುದೆ ಪವನಜನೊಡನೆ ಸಮಗ್ರೆಯೆ ನೀನೆಂದ ‖ ೧೮

ಎಲ್ಲಿ ಯೋಗಾಧಿಪತಿ ಮುರಹರ
ನೆಲ್ಲಿ ಯರ್ಜುನದೇವ ನಿಹ [2] ನ
ಲ್ಲಲ್ಲಿ ಜಯ [3] ಸಿರಿಯಲ್ಲದೇ ಬೇಱಿಲ್ಲ [4] ಕೇಳ್ಸತತ ।
ಬಲ್ಲವರು ಬಲ್ಲರು ಕಣಾ ನೀ
ನಿಲ್ಲಿ ಪಾಂಡುಕುಮಾರರೊಳು ಸರಿ
ಯಲ್ಲ ಬಲ್ಲ್ಯ ಹಿಂದೆ ಬಂದ ವಿಪ [5] ತ್ಪರಂಪರೆಯ ‖ ೧೩೦

ಹಿಂದೆ ಗೋಗ್ರಹಣದೊಳು ದ್ರುಪದನ
ನಂದನೆಯ ವೈವಾಹದೊಳು ಬಳಿ
ಸಂದ ಗಂಧರ್ವಕನ ದೆಸೆಯೊಳು ಘೋಷಯಾತ್ರೆಯೊಳು ।
ಬಂದ ಭಂಗವ ಕಂಡು ಕಂಡೇ
[6] ನೆಂದು ಪಾಂಡುಕುಮಾರರೊಳ [7] ಗನು
ಸಂಧಿಸುವೆ ಕಲಹವನು ಚಿತ್ತೈಸೆಂದನಾವಿದುರ ‖ ೧೩೧

---

1 ಗೆ ಸರಿಸರಿನ್ನಿಲ್ಲೆಂದ್ಯ, ಜ. 2 ತಾನಲ್ಲಿ, ಜ.
3 ವೆಧುವಲ್ಲ, ಜ. 4 ನಂಬುವುದು, ಜ. 5 ತ್ತಿನಾಜಯುವ, ಜ.
6 ಮುಂದವಾತಿಯಾಹೆ ಪಾಂಡವರೊಳನು, ಚ. 7 ಗಭಿಸಂಧಿ ಯನುಚಿತ
ರಾಯು, ಜ.

ಇಳೆಯ ನವಪ್ರಾಪ್ತಿಯೊಳು ಗೋಷ್ಪದ
ದಳತೆಯನಿತುವ ನೊತ್ತಿಕೊಂಡವ
ಗುಳಿವು ನರಕದೊಳೆಂದು ಸಾರ್ವ್ವವು ವೇದಕೋಟಿಗಳು ।
ತಿಳಿದು ಪಾಂಡವರಾಜಧರಣೀ
ವಳಯವೆಲ್ಲವ ಪುತ್ರ್ರಮೋಹದೆ
ಸೆಳೆದ ದುಷ್ಕರ್ಮಕ್ಕೆ ನಿಷ್ಕೃತಿ ಯುಂಟೆ ಹೇಳೆಂದ ॥ ೧೩೦

ಸಕಲನೀತಿರಹಸ್ಯವನು ಸು
ವ್ಯಕುತವೆನಲಱಿ ಹಿ [1] ದನು ತ [2] ತ್ತ್ವ
ಸಕುತಿ ಯಾದೊಡೆ ನನೆದ ನಂದು ಸನತ್ಸುಜಾತನನು ।
[3] ಮುಕುತಿಗಮಲಬ್ರಹ್ಮವಿದ್ಯಾ
ಪ್ರಕಟವೆನು ನೆಱೆ ಮಾಡಿ ಚಿತ್ತದ
ವಿಕಳತೆಯ [4] ನೊಡೆಮೆಟ್ಟಿ [5] ಧೃತರಾಷ್ಟ್ರನನು ಬೋಧಿಸಿದ ॥

ಮೂರನೆಯ ಸಂಧಿ ಮುಗಿದುದು.

---

1 ದೆನು, ಕ. ಝ. 2 ತ್ತ್ವದ ಯುಕುತಿಹಡೆಯಲು, ಜ. ತ್ಕತೆಯು ಕುತಿಯಾದೊಡ ನೆನೆಯಿ ನೀವೆ, ಝ. ತ್ವದಯುಕುತಿರೂಪನ, ಟ.
3 ಬಕುತಿಯ, ಚ. 4 ಕೆಡೆ, ಜ. ಸಲಹುವನೆಂಬು ಬೋ, ಝ. ಧೃತರಾಷ್ಟ್ರಂಗೆ ಬೋ, ಚ. ಜ. ಟ.

ಕೆಲವುಪದ್ಯಗಳು ಒಂದೆರಡುಪುಸ್ತಕಗಳಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತವೆ. ಆದುದರಿಂದ ಅವುಗಳನ್ನು ಗ್ರಂಥಮಧ್ಯದಲ್ಲಿ ಸೇರಿಸಲಿಲ್ಲ. ಅವು ಯಾವುವೆಂದರೆ—

ಚಲನವಿಲ್ಲದ ನಾಕದಿಂದಿಳೆ
ಗಿಳಿದವರ ಹೃದಯದೊಳು ನಾಲುಕು
ನೆಲಸಿಹುವು ದಾನಪ್ರಶಂಸೆಯು ತಾರತಮ್ಯಗಳು ।

ಸುಲಲಿತದನುಡಿ ದೇವತಾರ್ಚ್ಚನೆ
ಗಳು ಮಹೀಸುರವರರ ಪೂಜಾ
ವಳಿಗಳಿಂಬಿವು ರಾಯ ಚಿತ್ತೈಸೆಂದನಾವಿದುರ ॥ ೧

ನರಕದಿಂದೊಗೆದವರ ಕೃತ್ಯದ
ತೆರಳಿಕೆಗಳಿವಸೂಯೆ ಗುರುಧಿ
ಕ್ಕರಣೆ ಮಾತಾಪಿತರವಜ್ಞತೆ ಯಾಸುರದ ಕಲಹ ।
ಪೊಱಗಣ ಸ್ತುತಿನಿಂದೆಗಳು ಭೂ
ಸುರರ ಬದ್ಧದ್ವೇಷ ಜನಸಂ
ಹರಣ ವೆಂಬಿವು ನಿತ್ಯವಿಧಿಯಾಗಿಹುವು ಕೇಳೆಂದ ॥ ೨

ಪಾತಕರ ಪದವಿಗಳು ಮಾಂಸ
ವ್ರಾತದೊಳು ಮದ್ಯದೊಳು ವಿಷಮ
ದ್ಯೂತದೊಳು ದುರ್ಮಾರ್ಗ ಮುಖದೊಳು ಲಯವನೈದುವುವು ।
ಏತಕೀಪಿಕುಮಂದಫಲಸಂ
ಜಾತ ಬಲಿಭುಕ್ಕುಗಳಿಗಲ್ಲದೆ
ಖಾತೆಯಹುದೇ ಪರಮಹಂಸಾವಳಿಗೆ ಲೋಕದೊಳು ॥ ೩

ಪರುಸ ಸೋಂಕಲು ಲೋಹ ಕಾಂಚನ
ಸರಿಸವಾಗದೆ ಮಾಣ್ಬುದೇ ಮುರ
ಹರನ ನಾಮವನಱಿದು ಮರೆದುಂ ನೆನೆದ ಮನುಜರಿಗೆ ।
ಮರಳಿ ಜನ್ಮವದೆಲ್ಲಿಯದು ಕೇ
ಳರಸ ನಿನ್ನಯ ಭಾಗ್ಯಲಕ್ಷ್ಮಿಗೆ
ಸರಿಯ ಕಾಣೆನು ಪೂರ್ವಪುರುಷರೊಳೆಂದನಾವಿದುರ ॥ ೪

ಮಡದಿ ನಿಜನಿಳಯವನು ಬಿಟ್ಟಡಿ
ಗಡಿಗೆ ಪರಗೃಹದೊಳಗೆ ಬಾಯನು
ಬಡಿದು ಮನೆ ಮನೆವಾರ್ತೆಯನ್ನದೆ ಬೀದಿಗಲಹವನು ।
ಒಡರಿಚುತೆ ಪತಿಯೊಬ್ಬನುಂಟೆಂ
ದೆಡಹಿ ಕಾಣದ ದಿಟ್ಟೆ ಹತ್ತನು
ಪಡೆದೊಡೆಯು ವರ್ಜಿಸುವುದೈ ಭೂಪಾಲ ಕೇಳೆಂದ ॥ ೫

ಧರೆಯೊಳಗೆ ಶುಚಿಯಹನು ವೈಶ್ಯಾ
ನರನು ಮಾಯಾಕ್ರಾಂತಿ ಪಿಂಗಿದ
ಪರಮಋಷಿ ಕವಿವರನು ಸುಕೃತಾಚಾರಿ ಯೆನಿಸುವನು |
ಹರಿಹರಾತ್ಮಕನಾಮಕೀರ್ತನ
ವೆರಸಿ ಬದುಕುವ ನೊಬ್ಬ ನೀಯೈ
ವೆರಗಳಲ್ಲದೆ ಭುವನದೊಳಗನ್ಯತ್ರವಿಲ್ಲೆಂದ || ೬

ಸಮತೆ ಬೆಂಬಲವಾಗಿ ಬಹುದೈ
ಸಮತೆಯುಳ್ಳವಗೇನಸಾಧ್ಯವು
ಸಮತೆಯಿಂದವೆ ಭುವನವೆಲ್ಲವು ತನ್ನದಾಗಿಹುದು |
ಸಮತೆಯೊಳು ನೀ ನೋಡಿ ನಡೆವುದು
ಸಮತೆ ಯೆಂಬುದು ಸರ್ವಸಾಧನ
ಸಮತೆಯನು ಬಿಟ್ಟಿಹುದು ಮತವಲ್ಲೆಂದನಾವಿದುರ || ೭

ವಿದ್ಯೆಯೊಳು ವೈದ್ಯದೊಳು ಪರಹಿತ
ದುದ್ಯಮನಶೀಲರೊಳು ಪತಿಯೊಳು
ಸದ್ಯನಿಯಮಯೋಗದೊಳು ನಿಜಗುರುಪದದ ಭಕ್ತಿಯೊಳು |
ಸದ್ವ್ಯಮಣಿತೇಜದೊಳು ಖತಿಯೊಳ
ವಿದ್ಯೆಯುಂ ಮಾಳ್ಪರಿಗೆ ಮಹಿಯೊಳು
ಸದ್ಯಫಲವದು ತಪ್ಪದವನೀಪಾಲ ಕೇಳೆಂದ || ೮

ಪ್ರಾಣವೆಂಬುದನಿತ್ಯ ನಿತ್ಯಾಭಿ
ಮಾನವನು ರಕ್ಷಿಪುದು ಜಗದೊಳು
ಪ್ರಾಣವಳಿವುದು ಕೀರ್ತಿಯಾಚಂದ್ರಾರ್ಕ ವುಳಿವುದಲೆ |
ಕ್ಷೋಣಿಪತಿವರ ಧರ್ಮಸಾರವ
ಕೇಣವಿಲ್ಲದೆ ಕೇಳಿ ಬದುಕಾ
ಪ್ರಾಣಪೋಪುದು ಕೀರ್ತಿಯುಳಿವುದೆ ಎಂದನಾವಿದುರ || ೯

ಅಱಿದಱಿದು ಬಂಧುಗಳ ಕೂಡಿಹು
ದಱಿದಱಿದು ಭಾಗ್ಯದೊಳು ಮೆಱೆದಿಹು
ದಱಿದು ನಿಜಸತಿಪುತ್ತ್ರಮಿತ್ರರನೆಲ್ಲ ಕೂಡಿಹುದು |

ಅಜಿವಿನೊಳಗಜಿತ ಹುದುವೆಯ ತಾ
ಹಿರಿದು ಧನಧಾನ್ಯಂಗಳಿಂದವೆ
ಹರಿದು ಬಂಧುವ ಹಾರದಿಹುದರಿದೆಂದನಾವಿದುರ ॥ ೧೦

ವನಿತೆಮಕ್ಕಳು ವೊಡನೆ ಬಾರರು
ತನುಸಹಿತ ಬಂಧುಗಳು ಬಾರರು
ದಿನದಿನದೊಳೊದವಿಸಿದ ದುಷ್ಕೃತ ಬೆನ್ನ ಬಿಡದಿಹುದು ।
ಅನವರತ ನೀನೊಲಿದು ಮಾಡಿದ
ವಿನಯಧರ್ಮಪರೋಪಕಾರವು
ನಿನಗೆ ಬೆಂಬಲವಾಗಿಹುದು ಕೇಳೆಂದನಾವಿದುರ ॥ ೧೧

ಸಾರ ಮೂಜನಿಸುವುದಲೇ ಸಂ
ಸಾರದೊಳು ಸತ್ಸಂಗ ವೇದಾ
ಚಾರಪರನಹ ಸುತನು ಕಾಶೀದೇಶವಾಸಿತ್ವ ।
ಧಾರಿಣಿಯೊಳಿದಕಧಿಕವುಂಟೆಂ
ದಾರು ಕೆಲಬರು ನುಡಿಯುಲದು ನಿ
ಸ್ಸಾರಪಾರಂಪರಿ ಯಲ್ಲೈ ಭೂಪಾಲ ಕೇಳೆಂದ ॥ ೧೨

ಧರ್ಮವೆಲ್ಲಿಹುದಲ್ಲಿ ಜಯ ಸ
ದ್ಧರ್ಮವೆಲ್ಲಿಹುದಲ್ಲಿ ಸಿರಿ ತ
ದ್ಧರ್ಮಸಂರಕ್ಷಕರು ಹರಿ ಧೂರ್ಜಟಿ ಪಿತಾಮಹರು ।
ಧರ್ಮದೂರನು ನಿನ್ನವನು ಸ
ತ್ಕರ್ಮಬಾಹಿರನಾತ್ಮರಚಿತವಿ
ಕರ್ಮದೋಷದೊಳಿಳಿವನಿನ್ನವನೆಂದನಾವಿದುರ ॥ ೧೩

ದೇಹ ಮೊದಲೊಳು ತನ್ನದಲ್ಲವ
ದೂಹಿಸಲು ತನುವಿಡಿದು ಬಂಧುಸ
ಮೂಹಪುತ್ರಕಳತ್ರರೆನ್ನವರೆಂಬ ಮಮತೆಯೊಳು ।
ಮೋಹಮಯಜಲಧಿಯೊಳು ಮುಳುಗಿ
ಸ್ನೇಹದ ನದೇಕರಸ ನಿತ್ಯವಿ
ದೇಹ ನೀನೆಂದಱಿದು ದುಃಖವನೊದೆದು ಕಳೆ ಯೆಂದ ॥ ೧೪

ದ್ಯೂತದೊಳು ಮದ್ಯದೊಳು ಶೌನಕಂ
ಜಾತಿಯೊಳು ನಿದ್ರೆಯೊಳು ಕಲಹವಿ,
ಘಾತಿಯೊಳು ಮೈಥುನದೊಳಾಹಾರದೊಳು ಬಳಿಸಂದ ।
ಕೈತವದೊಳುದ್ಯೋಗದೊಳು ದು
ರ್ನೀತಿಯೊಳು ಪರಸತಿಯರೊಳು ಸಂ
ಪ್ರೀತಿ ಬಲಿವುದು ಬೆದಕಬೆದಕಲು ರಾಯ ಕೇಳೆಂದ ॥ ೧೫

ವನದೊಳಗೆ ತೃಣಜಲದೆ ಜೀವಿಪ
ವಿನುತಸಾಧುಮೃಗಾವಳಿಯ ಸಂ
ಹನನದೊಳು ವನಚರಕೆ ಮೃಗವೊಂದಕ್ಕೆ ಬ್ರಹ್ಮವಧೆ ।
ಜನಿಸುವುದು ಪ್ರತ್ಯೇಕ ಮೃಗವೆನಿ
ತನಿತಖಿಳವಿಗೆ ಕೇಳು ನಿಜಸ
ಜ್ಜನರ ವಧೆ ಸಾಮಾನ್ಯವೇ ಹೇಳೆಂದನಾವಿದುರ ॥ ೧೬

ತಳತಳಿಪ ಪಂಚೇಂದ್ರಿಯದೊಳೊಂ
ದುಳಿಯದೊಂದನು ಬಗೆಯದೊಂದಱ
ಬಳಿಯ ವಿಸ್ತರಿಸುವುದು ನರರ ವಿವೇಕವಿಜ್ಞಾನ ।
ಜಲವ ಘಟದೊಳು ತೀವಿ ಚಕ್ರವು
ಕಳಚಿದವೊಲಿಂತಿದನಱಿತು ನಿ
ರ್ಮಳಜಿತೇಂದ್ರಿಯ ನೆನಿಪುದವನೀಪಾಲ ಕೇಳೆಂದ ॥ ೧೭

# ನಾಲ್ಕನೆಯ ಸಂಧಿ.

## ಸನತ್ಸುಜಾತನೀತಿ

---

### ಸೂಚನೆ.

ಮುನಿವರನ ಕರುಣದೊಳು ಕೌರವ
[1] ಜನಪ ನಮಲಬ್ರಹ್ಮವಿದ್ಯೆಯ
ನನುಕರಿಸಿ ಚರಿತಾರ್ಥಭಾವದೊಳಿರುಳ ನೂಕಿದನು ||

ಕೇಳು ಜನಮೇಜಯ ಧರಿತ್ರೀ
ಪಾಲ ವಿದುರನ ಬೋಧೆಗಂಧನೃ
ಪಾಲ ನಂತಃಕರಣಶುದ್ಧಿಯ ನೈದಿದನು ಬಳಿಕ |
ಹೇಳು ಹೇಳೆನ್ನಾತ್ಮವಿದ್ಯಾ
ಮೂಲಮಂತ್ರಾಕ್ಷರದ ಬೀಜವ
ನಾಲಿಸುವೆ ನೆನೆ ನಗುತೆ ಕೈಮುಗಿದೆಂದನಾವಿದುರ || ೧

ಅವಧರಿಸು ಪರತತ್ತ್ವವಿದ್ಯಾ
ವಿವರಭೇದ [2] ವ ನನ್ಯಜಾತಿಗ
ಳಿವಗೆ ಸಲುವುದೆ ಮುನಿವರನ ಕರುಣೋದಯದೊಳಹುದು |
ಅವರಿವರುಗಳ ಮುಖದೊಳಿದು ಸಂ
ಭವಿಸುವುದೆ ಬ್ರಹ್ಮೋಪದೇಶದ
ಶ್ರವಣ ಬಲ್ಲವನಾವನೈ [3] ಧೃತರಾಷ್ಟ್ರ ಕೇಳೆಂದ || ೨

---

1 ಜನಕ, ಕ. ಚ. ಜ.   2 ಗಳನ್ಯ. ಖ.
3 ಹೇಳೆಂದನಾವಿದುರ, ಖ.

[1] ಒರ್ವನೇ ಬಲ್ಲವನು ಲೋಕದೊ
[2] ಳಿರ್ವರಿಲ್ಲ ಸನತ್ಸುಜಾತನು
[3] ಸರ್ವಗುಣಸಂಪನ್ನನಾತನ [4] ಭಜಿಸಿದೊಡೆ ನೀನು ।
[5] ಸರ್ವಗನಹೆ ಯೆನಲಾಮುನಿ [6] ಪನೆಡೆ
ಸಾರ್ವ ಭಾವದೊಳರಸನಿರಲಾ
[7] ಗುರ್ವಿಯಮರರ [8] ತಿಲಕ ಕೃಪೆಯೊಳು ಬನ್ದನಾಮುನಿಪ ॥ ೩

ನೆನೆಯಲೊಡನೆ ಸನತ್ಸುಜಾತನು
ಮನೆಗೆ ಬರಲಿದಿರೆದ್ದು ಕೌರವ
[9] ಜನಪ ಮೆಯ್ಯಿಕ್ಕಿದನೆನಗೆ ಬ್ರಹ್ಮೋಪದೇಶವನು ।
ಮುನಿಪ ನೀ ಕೃಪೆಮಾಡಬೇಕೆನ
ಲನುನಯದೊಳವನೀಪತಿಗೆ ಜನ
ಜನಿತವೆನಲಱುಪಿದನಲ್ಲೆ [10] ಪರಲೋಕಸಾಧನವ ॥ ೪

ಚಿತ್ತವಿಸು [11] ಧೃತರಾಷ್ಟ್ರನೃಪ ಪರ
ತತ್ತ್ವವಿದ್ಯಾ [12] ವಿಷಯಭೇದವ
ಬಿತ್ತರಿಸುವೆನು ಸಕಲಸಚರಾಚರದೊಳಗೆ ನೀನು ।

---

1 ಒಬ್ಬನೇ, ಚ. ಜ. ಝ. ಟ.  2 ಳಿಬ್ಬರಿಲ್ಲ, ಚ. ಜ. ಝ. ಟ.
3 ಸಬ್ಬಗುಣ, ಚ. ಜ. ಝ.  4 ನೆನಿಸಿದೊಡೆ, ಖ.
5 ಸೇವ್ಯನಹೆ, ಕ. ಖ. ಟ. ಸೇಬ್ಯನಹೆ, ಜ. ಸಬ್ಬನಹೆ, ಝ.
6 ಯಕರ್ತವ್ಯ, ಕ. ಖ. ಜ. ಟ. ಯನೇತುಬ್ಬ, ಚ. ಯಕರ್ತಭ್ಯ, ಝ.
7 ನಿರ್ವಹಿಪಮುನಿ, ಕ. ವಿರ್ಭವಿಸಿದನು, ಚ. ಜ. ಟ. ವುದ್ಭವಿಸಿದನು, ಝ.
8 ವಿಪ್ರಕುಲಕಮಲಾರ್ಕನಾಕ್ಷಣಕೆ, ಕ. ಚ. ಟ. ವಿಪ್ರಕುಲಕಮಲಾಕ್ಷನಾ ಕ್ಷಣಕೆ, ಜ. ಝ.  9 ಜನಕ, ಕ. ಖ. ಚ. ಜ. ಝ.
10 ಬ್ರಹ್ಮೋಪದೇಶವನು, ಕ. ಪರಮೋಕ್ಷಸಾಧನವ, ಚ.
11 ಪರತತ್ತ್ವವಿದ್ಯದ ಪೊತ್ತದಭಿನವವಿಷಯ, ಚ.  12 ವಿವರ, ಝ.

ಉತ್ತಮೋಧಮ[1]ವೆನ್ನದೇ ಕಾ
ಣುತ್ತೆ ಹರುಷವಿಷಾದದೊಳು ಮುಳು
ಗುತ್ತಿರದೆ ಸಮರಸದೊ[2]ಳಿಹುದುಪದೇಶ ನಿನಗೆಂದ ॥ ೫

ಅವನಿಪತಿ ಕೇಳಾತ್ಮನಿಂ ಸಂ
ಭವಿಸಿತಂಬರ ವಂಬರದೊಳಾ
ಪವನ ಪವನನೊಳಗ್ನಿ ಯಗ್ನಿಯೊಳಾದುದಾಭುವನ ।
ಭುವನದಿಂ ಧರೆ ಧರಣಿಯಿಂದು
ದ್ಭವಿಸಿತೋಷಧಿ ಯೋಷಧಿಗಳಿಂ
ದವ[3] ತರಣ ಮನ್ನಾದಿಪುರುಷಪ್ರಕೃತಿವಿಕೃತಿ[4] ಗಳ ॥ ೬

ನೇತ್ರ ನಾಸಿಕ ಪಾಣಿ ಪಾದ
ಶ್ರೋತ್ರವೆಂಬಿವು ತಮ್ಮೊಳೊಂದೇ
ಸೂತ್ರದೊಳು ಸಂ[5] ಸೃಷ್ಟವಾಗಿ ಸಮಾನಬುದ್ಧಿಯೊಳು ।
ಗಾತ್ರವಿಡಿದಿಹವೋಲು[6] ವಿಶ್ವದ
ಮೈತ್ರಿಯೊಳು ಮನಸಂದು ಪಾತ್ರಾ
ಪಾತ್ರವೆನ್ನದೆ ಬೆರಸಿ ಬದುಕುವು[7] ದಧಿಕಗುಣವೆಂದ ॥ ೭

* ಸೃಷ್ಟಿ ಸಂಹಾರದೊಳು ಭೂತದ
ಕಟ್ಟಳೆ[8] ಯು ಗತ್ಯಾಗತಿಗಳೊಳು
ಮುಟ್ಟಿಸಿದ ವಿದ್ಯೆಯೊಳವಿದ್ಯೆಯೊಳಪ್ರತಿಮನೆನಿಸಿ ।
ನಷ್ಟಿಯೊಳು ತುಷ್ಟಿಯೊಳು ಮನವನು
ಬಿಟ್ಟು ಹಿಡಿಯದೆ ಕಾಲಕರ್ಮವ
ಮೆಟ್ಟಿ ನಿಲೆ[9] ಭಗವನ್ತನೆನಿಸುವ ನರಸಕೇಳೆಂದ ॥ ೮

---

1 ರೆನ್ನದೇ, ಕ. ಖ. ಟ. 2 ಳೊದಗಿಹುದೆಂದನಾಮುನಿಪ, ಖ.
3 ತರಿಸಿತಾತ್ಮಾದಿ, ಕ. ಖ. ತರಿಸಿತನ್ನಾದಿ, ಚ. ಜ.
4 ಗಳು, ಕ. ಖ. ಚ. ಜ. ಟ. 5 ತುಷ್ಟವಾಗಿ, ಝ. ಟ.
6 ವಿಷಯದ, ಚ. 7 ದಾನಗುಣ, ಚ.
8 ಗಳಗತಾಗ, ಕ. ಝ. ಯಸುಗತಾಗ, ಚ. 9 ಬಲವಂತನೆ, ಝ.
* 8 9 ನೆಯ ಪದ್ಯಗಳು ಟ. ಪುಸ್ತಕದಲ್ಲಿಲ್ಲ.

ಅಣುವಿನೊಳು ಲಘುವಿನೊಳು ಗುರುವಿನ
ಗಣನೆಯೊಳು ಮಹಿಮೆಯೊಳು [1] ಪ್ರಾಪ್ತಿಯು
ಭಣಿತೆ [2] ಗಳೊಳೀಶತ್ವದೊಳು ಪ್ರಾಕಾಮ್ಯಪರಿವಿಡಿಯು ।
ಕುಣಿಕೆಗಳೊಳು ವಶಿತ್ವದೊಳು ವೆಂ
ಟಣಿಸಿ ರೇಚಕಪೂರಕದ ರಿಂ
ಗಣವೆ ನೆಱಿವುದು ಯೋಗಸಿದ್ಧಿಗೆ ಲಕ್ಷಣವಿದೆಂದ ॥ ೯

ತ್ಯಜಿಸುವುದು ದುಸ್ಸಂಗವನು ಮಿಗೆ
ಭಜಿಸುವುದು ಸತ್ಸಂಗವನು ಗಜ
ಬಜಿಸದಿರಹೋರಾತ್ರಿಯೊಳು ಧರ್ಮವನೆ ಸಂಗ್ರಹಿಸು ।
[3] ಭಜಿಸು ನಿತ್ಯಾನಂದವಸ್ತುವ
ವಿಜಯನಹೆ ಯಿಹಪರಕೆ ತತ್ತ್ವದ
ನಿಜವಿದೆಲೆ ಧೃತರಾಷ್ಟ್ರ ಚಿತ್ತೈಸೆಂದನಾಮುನಿಪ ॥ ೧೦

ಕಾಯ ವಿದು ನೆಲೆಯಲ್ಲ ಸಿರಿ ತಾ
ಮಾಯೆರೂ [4] ಪಿನ ಮೃತ್ಯುದೇವತೆ
ಬಾಯ ಬಿಡುತಿಹಳಾವುದೀತನ ಕಾಲಗತಿ ಯೆಂದು ।
ದಾಯವಱಿವ ಮಹಾತ್ಮರಿದಕೆ ಸ
ಹಾಯಧರ್ಮವ ರಚಿಸುವುದು ನಿ
ರ್ದಾಯದೊಳು ಕೈಸೂಱೆಗೊಂಬುದು ಮುಕ್ತಿರಾಜ್ಯವನು ॥೧೧

ಕೆಟ್ಟಮಾರ್ಗದೊಳಿಂದ್ರಿಯಂಗಳ
ಬಿಟ್ಟು [5] ಮುಱಿಯಾಟದೊಳು ಮನಸಂ
[6] ತುಷ್ಟನಾಗಿ ಯನಿತ್ಯಸಂಸಾರದ ಸುಖಕ್ಕೆಳಸಿ ।

---

[1] ಪಾರ್ಥಿವ, ಚ. ಜ. [2] ಗಳೊಳು ವಿಭುತ್ವ, ಕ. ಝ. ಯೊಳು ತತ್ತ್ವಂಗಳೊಳು ಪ್ರಕಟಿತದ ಪರಿವಿಡಿದು, ಖ. ಗಳ ಚಿತ್ತದ ವಿಪ್ರಕಟತ್ವದೊಳು ಪರಿ, ಚ. ಗಳೊಳು ವಶಿತ್ವದೊಳು ಪ್ರಕಟಿತದ ಪರಿ, ಜ. [3] ಭಜಿಸು ನಿತ್ಯಾನಿತ್ಯವ, ಖ. ಸೃಜಿಸು ನಿತ್ಯಾನಿತ್ಯವ ಚ. ಜ. ಝ. ಟ. [4] ಪಿದು, ಜ.
[5] ಮುಱಿವಾಯೆಯೊಳು, ಖ. ಮಱಿಯಾ, ಚ. ಮೊಱೆಯಾ, ಜ. ಝ.
[6] ದಷ್ಟವಾಗಿ ಖ. ದಷ್ಟನಾಗಿ, ಚ. ಜ.

ಹುಟ್ಟುಸಾವಿನ ವಿಲಗದೊಳು [1] ಕಂ
ಗೆಟ್ಟು ನಾನಾಯೋನಿಯೊಳು [2] ತಟ್ಟೆ
ಗುಟ್ಟು [3] ಬಳಲುವುದುಚಿತವೇ ಹೇಳೆಂದನಾಮುನಿಪ ॥ ೧೨

ಹಲವುವರ್ಣದೊಳೆಸೆವ ಗೋಸಂ
ಕುಲದೊಳೊಂದೇ ವರ್ಣದೊಳು ಕಂ
ಗೊಳೆ [4] ಸುವೀಕ್ಷೀರಾಮೃತವು ವ್ಯೈಗೊಂಡು ತೋರ್ಪಂತೆ ।
ಹೊಲಬುಗೆಟ್ಟು ಚರಾಚರಂಗಳ
ಸುಳಿವಿನೊಳು ಸುಳಿದಡಗಿ ಕಡೆಯೊಳು
ನಿಲುವ ನಿಜವೊಂದಲ್ಲದೆರಡಿಲ್ಲೆಂದನಾಮುನಿಪ ॥ ೧೩

ಅತಿಶಯದ ಸುಕೃತವನು ವಿರಚಿಸಿ
ಗತಿವಡೆದು ಸ್ವರ್ಗಾದಿಭೋಗೋ
ನ್ನತಿ [5] ಕೆಯನು ಭೋಗಿಸಿದ ಸಮನಂತರದೊಳವನಿಯೊಳು ।
ಪತನ ತಪ್ಪದು ಮರಳಿ ಬಾರದ
[6] ಗತಿಯನರಿದು ಮಹಾನುಭಾವರ
[7] ಮತವಿಡಿದು ನಡೆವುದು ನಯವು ಭೂಪಾಲ ಕೇಳೆಂದ ॥ ೧೪

ಸಕಲಧರ್ಮದ ಸಾರವನು ಮತಿ
ವಿಕಳನಾಗದೆ ಚಿತ್ತವಿಸು ಬಾ
ಧಕವದಾವುದು ನಿನಗದನು ನೀನನ್ಯರುಗಳಲ್ಲಿ ।

---

1 ತಟಗುಟ್ಟಿ, ಖ. 2 ಭವಪಟ್ಟು, ಖ. 3 ತೊಳಲು, ಜ. ಬೀಳುವು, ಝ.

4 ಸಿತಾಕ್ಷೀರಾಮೃತವು ತೋರ್ಪಂತೆಕೈಕೊಂಡು, ಖ. ಸುವೀಕ್ಷೀರಾಮೃತದತೆಜಿದಂತೆ ವ್ಯೈಗೊಂಡು, ಜ. ಸಾತಿಶ ಕ್ಷೀರಾಮೃತದತೆಜನಂತೆ ವ್ಯೈಗೊಂಡು, ಟ.

5 ಯನುಜಿ, ಖ. ಕೆಯೊಳನುಭವಿಸಿದ, ಚ. 6 ಮತವನ, ಖ. ಜ.

7 ಗತಿ, ಖ. ಚ. ಜ. ಝ.

ಯುಕುತಿಯಿಂದವೆ [1] ತಿಳಿದು ನಡೆಯಲು
ಮುಕುತನಹೆ ಸಂಸಾರದೊಳು ಸಾ
ಧಕ ವಿದೊಂದೇ ಸಕಲಜನಮತವೆಂದನಾಮುನಿಪ ॥ ೧೫

ಒಂದುವಸ್ತುವನೆರಡುಮಾಡುವೆ
ನೆಂದು ಬುದ್ಧಿಭ್ರಾಂತಿಯೊಳು ಮನ
ಸಂದು ಸರ್ವ್ವಗಾಜ್ಞನದುದಯದ [2] ನೆಲೆಯು ಕಾಣಿಸದೆ ।
ದಂದುಗಂಬಡುತಿಹುದು ತತ್ತ್ವದ
ಹಿಂದುಮುಂದಱಿಯದೆ ಮಹಾತ್ಮರು
ಬಂದ ಪಥದೊಳು ಬಾರದೇ ಕೆಡುತಿಹುದು ಜಗವೆಂದ ॥ ೧೬

ಪ್ರಣವವೊಂದಾವರ್ಣಮೊಱಿಱ
ಗುಣವಿಡಿದು ತೋಱುವ ಚರಾಚರ
ವೆಣಿಸಬಾರದು ವಿಶ್ವದೊಳು [3] ನಿಸ್ಸೂತವಾಗಿಹುದು ।
ಹಣಿದು [4] ಬೀಱಲು ಹೊಳೆವ ಜ್ಯೋತಿ
ರ್ಗಣದವೊಲು ತೊಳತೊಳಗಿ ಬೆಳಗುವ
ಗುಣರಹಿತ [5] ನ ನಿಜಸ್ವರೂಪ [6] ವಿದೆಂದನಾಮುನಿಪ ॥ ೧೭

ನಳಿನಮಿತ್ರನು ಪಶ್ಚಿಮಾಂಬುಧಿ
ಗಿಳಿಯೆ ನಾನಾಪಕ್ಷಿಜಾತಿಗ
ಳುಲಿಯುತ್ತೈತಂದೊಂದುವೃಕ್ಷವ ನೇಱಿ ರಾತ್ರಿಯನು ।
ಕಳೆದು ದೆಸೆದೆಸೆಗಳಿಗೆ ಪರಿವವೊ
ಲಿಳೆಯ ಭೋಗಾದೃಷ್ಟ ತೀಱಿದ
ಬಳಿಕ ಲೋಕಾಂತರವ ನೈದುವರೆರಸೆ ಕೇಳೆಂದ ॥ ೧೮

[1] ಮಾಡಿದರೆನಿರ್ಮಲ, ಕ. ಖ. ಚ. ಜ. ಝ.
[2] ನೆಲೆಯು, ಕ. ಖ. ಚ. ಜ. ಝ. ಟ.
[3] ನಿಸ್ತೂಲವಾಗಿ, ಖ. ನಿಶ್ಚಿಂತನಾಗಿ, ಚ. ಝ. ನಿಸ್ತುತ್ಯವಾಗಿ, ಜ.
[4] ಬೆಳಗಲು, ಖ. [5] ನಿಜತತ್ತ್ವರೂಪನನಱಿಯಬೇಕೆಂದ ಜ.
[6] ವನಱಿವರಾರೆಂದ, ಚ.

ಪೊಡವಿಯೊಳಗುದಯಿ [1] ಸುವೆ ಪಾತಕ
ಬಿಡದು ಭೂಪ [2] ನನದುಪುರೋಹಿತ
[3] ನೆಡೆಗೆ ಬಚಿಕಾಮೂರ್ಖಶಿಷ್ಯನ ದೋಷ ಗುರು [4] ವಿಂಗೆ |
ಮಡದಿ ಮಾಡಿದ ಪಾತಕವು ಪತಿ
ಗೊಡಲಿಹುದು ಪರಮಾರ್ಥದೀಪರಿ
ಖಿಡಿಯು ನಖಿಯುದೆ ಕಿಡುತಿಹುದು ಜನವೆಂದನಾಮುನಿಪ ‖ ೧೯

ದುರ್ಜನರಿಗಂಜುವುದು ಲೋಕವು
ಸಜ್ಜನರ ಲೆಕ್ಕಿಸದು ತಾರ್ಕ್ಷ್ಯ [5] ನ
ಹಜ್ಜೆಯೊಳ [6] ಗಿಹ ದಂದಶೂಕನ ನರ್ರಿ ಸುವರೊಲಿದು |
[7] ಉಜ್ಜ್ವಲಿತ [8] ಭಕ್ತಿಯೊಳು ಬಹುಳವಿ
ತರ್ಜೆಯೊಳು ಮೂಢಾತ್ಮರಿಕ್ಕಿದ
ಹಜ್ಜೆ ಯಿದು ಲೋಕಕ್ಕೆ ಚಿತ್ರ್ಯಸೆಂದನಾಮುನಿಪ ‖ ೨೦

ತಳಪಟದೊಳಖಿಯುಷ್ಯರಾಶಿಯು
ನಳವೆ ಕೊಳಗವು ಸೂರ್ಯನೆಂಬುದ
ತಿಳಿದಹೋರಾತ್ರಿಗಳ [9] ಸಂಖ್ಯೆಯು [10] ಸಲುಗೆಯುಂಕಿಪುದು |
ಬಳಸುವುದು ಸನ್ಮಾರ್ಗದೊಳು ಮುಂ
ಕೊಳಿಸುವುದು ಸದ್ಧರ್ಮದೊಳು [11] ಕಳ
ವೆಳಸದಿರು ಷಡ್ವರ್ಗದೊಳು ಭೂಪಾಲ ಕೇಳೆಂದ ‖ ೨೧

---

1 ಸಿದ, ಚ. ಜ.　　2 ರನದು, ಚ. ಜ.
3 ರೆಡೆ, ಚ. ಜ.　　4 ಏನದು, ಚ. ಜ. ಝ.
5 ನುಸ್ತೆ, ಚ. ಝ.　　6 ಗಿರೆ, ಖ. ಚ. ಝ.　　7 ಊರ್ಜಿತವ, ಕ.
8 ಬುದ್ಧಿಯೊಳು, ಜ.　　9 ಶಂಕೆಯು, ಝ.
10 ಸಲುಗೆಯುಂಕಿಸದೆ, ಖ. ಚ. ಜ. ಸಲಿಗೆಯುಂ ಕುಸಿದು, ಝ. ಸೊಲಿಗೆ ಯುಂಕಿಸದೆ, ಟ.　　11 ವೆಗ್ಗಳಿಸದಿರು, ಖ.

[1] ನಷ್ಟ ವಿದು ಸಂಸಾರದೊಳಗು
ತ್ಕೃಷ್ಟ ವಿದು [2] ಮನ್ವಾದಿಮಾರ್ಗದ
[3] ಸೃಷ್ಟಿ ಯಿದು ಲೋಕಾಂತರದ ಸುಖದುಃಖದೇಳಿಗೆಯು।
ಹುಟ್ಟುವೆಟ್ಟಿನ ಕಾಲಕರ್ಮದ
ಕಟ್ಟಳೆ [6] ಯಿದೆಂದಱಿದು ನಡೆವಂ
ಗಿಷ್ಟಳಿಸುವ್ರದದಾವುದೈ ಹೇಳೆಂದನಾಮುನಿಪ ॥ ೧೦

ಸಿಲೆಯು ರೂಹನು [7] ಮೂರ್ಖರುಗಳ
ಗ್ಗಳೆಯು ಪಾವಕನನು ಮಹೀಸುರ
ರಿಳೆಯೊಳಗೆ ಪರಮಾತ್ಮನೇ ಪರದೈವ ತಾನೆಂದು ।
ಒಲಿದು ಪೂಜಿಸುತಿಹರು ಹೃದಯಾಂ
ಗಳದೊಳಗೆ ವರಯೋಗಿಗಳು ಕೈ
[8] ವಳಸುವುದು ಜಗವೀಪ್ರಕಾರದೊಳರಸ ಕೇಳೆಂದ ॥ ೧೩

ಜ್ಞಾನಿಗಳನೊಡಬಡಿಸಬಹುದ
ಜ್ಞಾನಿಗಳನಹುದೆನಿಸಬಹುದೈ
ಜ್ಞಾನಲವವನು ಕೂಡಿಕೊಂಡಿಹ ದುರ್ವಿದಗ್ಧರನು ।
ಏನ ತಿಳುಹಲು ಬಹುದು ವಿಷ್ವ
ಕ್ಸೇನಗಳವಲ್ಲರಸ ಮಿಕ್ಕಿನ
ಮಾನವರ ಪಾಡಾವುದೈ ಹೇಳೆಂದನಾಮುನಿಪ ॥ ೧೪

---

1 ನಷ್ಟಯಿದು, ಕ. ಚ. ಜ. ನಟ್ಟಯಿದು, ಝ. ಕಷ್ಟವಿದು, ಟ.
2 ಮನ್ವಾದಿ, ಕ. ಖ. ಚ. ಜ. ಟ.
3 ದುಷ್ಟವಿದು, ಖ. ದೃಷ್ಟಿಯಿದು, ಚ. ಜ. ಬಟ್ಟೆಯಿದು, ಟ.
4 ಹುಟ್ಟುವೋಡಿನ, ಕ. ಸೃಷ್ಟಿವೆಟ್ಟಿನ, ಚ.
5 ಇಷ್ಟಗಳಿವೆಂದಱಿವು ನಡೆ ನಿನಗಿಷ್ಟವೆನಿಸುವುದು, ಚ.
6 ಗಳೆಂದಱಿದು, ಜ. ಟ.
7 ಮೂರ್ಖರು, ಖ. ಚ. ಜ. ಟ.
8 ವೆಳಸುವುದು, ಕ ದೊಳಸುವುದು, ಖ.

ದಾನವೊಂದಾಪಾಲನೆಯು [1] ಸಂ
ಧಾನವೊಂದೀಯುಭಯ ವಿದಱೊಳು
ದಾನದಿಂ [2] ದಹುದಿಹಪರಂಗಳ ಸೌಖ್ಯ ಸಂಪದವು ।
ದಾನವೇ ಸಂಸಾರಸಾಧನ
ದಾನದಿಂ ಪಾಲನೆಯು ಫಲ [4] ವಿ
ನ್ನೇನ ಹೇೞುವೆ ಕಡೆಯೊಳಚ್ಯುತಪದವೆ ಫಲವೆಂದ ॥ ೨೫

ಅರಸ ನೊಡೆಯನು ದಂಡನಾಥನು
ಗುರು ಹಿರಿಯ ನುತ್ತಮನು ದೈವಾ
ಪರನು ಸಾಹಿತ್ಯನು [5] ಸದಸ್ಯನು ಸತ್ಪುರುಷನೆಂದು ।
ಪರಿಪರಿಯ ಗುಣನಾಮದೊಳಹಂ
ಕರಿ [6] ಸುವರು ಜೀವಾತ್ಮ ತೊಲಗಿದೊ
ಡಿರದೆ ಹೆಣನೆಂದೆಂಬರೈ ಭೂಪಾಲಕೇಳೆಂದ ॥ ೨೬

ವರುಷ [7] ಮೂಱಾಮಾಸ ಮೇಣ್ಮೂ
ಱಱೊಳು ಪಕ್ಷತ್ರಯದೊಳಗೆ ಬಂ
ದಱುಹುವುದು [8] ದಿನಮೂಱಱೊಳು ಸಂದೇಹವೇನಿದಕೆ ।
ಧರೆಯೊಳುತ್ಕಟಪುಣ್ಯಪಾಪೋ
ತ್ಕರದ ಫಲ [9] ವಿಹದಲ್ಲಿ ಸೂಚಿಸಿ
ಮರಳುವುದು ಪರಲೋಕದೆಡೆಗವನೀಶ ಕೇಳೆಂದ ॥ ೨೭

ಒಂದು ಭೂಪಿಂಡದೊಳು ನಾನಾ
ಚಂದ [10] ದಾಪ್ರಾಣಿಗಳು ಜನಿಸುವ
ವೊಂದುತೇಜಸ್ಸಿನೊಳು ನಾನಾಜ್ಯೋತಿಯುದಯಿ [11] ಪುವು ।

---

1 ಫಲದಾನವೊಂದಾಗಿಳೆಯೊಳದಱೊಳು, ಖ. 2 ದಾದಹ, ಖ.
3 ಸಂತುಷ್ಟಿ, ಖ. ಝ. 4 ಕಿನ್ನೇನನೆಂಬೆನ-ಕ, ಖ. ಕಿನ್ನೇನ, ಚ. ಜ. ಝ.
5 ಸದ್ವೈವನು, ಚ. ಸಧರ್ಮನು, ಜ. 6 ಸದಿರು, ಖ. 7 ಮೂಱಱ, ಕ,ಖ.ಝ.
8 ಕೃತಸಂಚಿತವು ಸಂ, ಝ. 9 ವಿದುತಪ್ಪಬಾರದು, ಖ. ವಿದ್ದಲ್ಲಿ, ಚ.
ವಹುದಲ್ಲಿ ಝ. 10 ದೊಳು ಪ್ರಾ, ಕ. 11 ಸುಗು, ಖ. ಝ. ಟ.

ಬಂದುಪರವಸ್ತುವಿನ ಬಳಿಯೊಳು
ಬಂದುವಬುಜಭವಾಂಡಕೋಟಿಗ
ಳೆಂದೊಡವು ಬೇಱಲ್ಲ ಸರ್ವವು ವಿಷ್ಣುಮಯವೆಂದ ‖ ೨೮

*
ತಾನಿದಿರು ಹಗೆ ಕೆಳೆ ವಿವೇಕ
ಜ್ಞಾನ [1] ವಿಜ್ಞಾನ ವಿಹಪರಗಳ
ಹಾನಿವೃದ್ಧಿ ಯಮಾರ್ಗಮಾರ್ಗದೊಳೇಕಚಿತ್ತದೊಳು ।
ದಾನಧರ್ಮ ಪರೋಪಕಾರವಿ
ಧಾನ [2] ದೀಕ್ಷಾಕರ್ಮನಿಷ್ಠರು
ಮಾನನೀಯರು ಮಹಿಪ ಚಿತ್ತೈಸೆಂದನಾಮುನಿಪ ‖ ೨೯

* ಕರಣಗುಣಸಂ [3] ಹನನಸಂ [4] ಧ್ಯಂ
ತರದವಸ್ಥಾರೂಪಲೋಕೋ
ತ್ತರದ ತಾಪತ್ರಯದ ಲಕ್ಷಣಲಕ್ಷ್ಯಗಳನಱಿದು ।
[5] ಪರಿವಿಡಿಯ ಮೂರ್ತಿತ್ರಯಂಗಳ
ಗುರುಲಘುವನಾರೈದು ನಡೆವಂ
ಗರಿದೆನಿಸುವುದದಾವುದೈ ಹೇಳೆಂದನಾಮುನಿಪ ‖ ೩೦

---

* ಧರಣಿಜಲದಿಂದಾದ ಭೋಜ್ಯದ
ಮರುತಪಾವಕರಾಹುತಿಯ ಕೊಳು
ತಿರಲು ದುಃಖಾವಾಸವಾಗನು ಸತತತನುವಾಗಿ ।
ಇರುತಿಹನು ಪರಮಾತ್ಮನೆಂಬುದ
ನಱಿಯದೇ ತಾನುಂಡೆನೆಂಬೀ
ಪುರುಷನಾವವನವನ ಹೆಸರೇನೆಂದನಾಮುನಿಪ

ಈ ಪದ್ಯವು ಕ. ಝ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ .

1 ವಿಜ್ಞಾನಂಗಳಿಹಪರಪಾ, ಕ. ಖ. ಚ. ಝ. ವಿಜ್ಞಾನಂಗಳಿಹಪರಪಾ, ಜ.
2 ದೀಕ್ಷದುಕ, ಝ. 3 ಪರಣ, ಕ.ಜ. ಝ. 4 ಧ್ಯಾಂತರ, ಖ. ಜ. ಝ
5 ಪರಿಪರಿಯ, ಕ. ಝ. * ೩೦ನೆಯ ಪದ್ಯವು ಚ. ಟ. ಪುಸ್ತಕಗಳಲ್ಲಿಲ್ಲ.

ವೇದ ನಾಲ್ಕಾಶ್ರಮವು ತಾ ನಾ
ಲ್ಕಾದಿಮೂರುತಿ ನಾಲ್ಕು ವರ್ಣ ವಿ
ಭೇದ ನಾಲ್ಕಾಕರಣ ನಾಲ್ಕು ವುಪಾಯನಾಲ್ಕರೊಳು ।
ಭೇದಿಸಲು ಪುರುಷಾರ್ಥನಾಲ್ಕರಿ
ಹಾದಿಯರಿದು ವಿಮುಕ್ತ[1] ನಾಕವ
ನೈದು[2] ವನು ಸಂದೇಹವೇ ಹೇಳೆಂದನಾಮುನಿಪ ॥ ೩೧

ಭೂತ[3] ವರ್ಗಪ್ರಾಣವರ್ಗನಿ
ಪಾತ[4] ವಧ್ವರಕೃತ್ಯಗಳ ಸಂ
ಜಾತ ಮುಖ[5] ವಾದಾವರಣಸಂಗತಿಯು ಸೋಹೆಗಳ ।
ಧಾತುಮೂಲಾದಿಗಳನರಿ[6] ದು ಸು
ನೀತಿಯುಳ್ಳಿಹಪರವ ಗೆಲುವುದು
ಭೂತಳದೊಳುತ್ತಮವಲೇ ಧೃತರಾಷ್ಟ್ರ ಕೇಳೆಂದ ॥ ೩೨

ಆರು ಗುಣ ಋತು[7] ಪಾಱು ವರ್ಗವ
ದಾಱು ದರ್ಶನ[8] ವಾಱು ವಂಗವ
ದಾಱು ಭೇದದ ಬಗೆಯನಱಿದುತ್ಕೃಷ್ಟಮಾರ್ಗದೊಳು ।

---

1 ನಾಲುಕನ್ಯೆ, ಕ. ಚ. ಝ. ನಾಲ್ಕಕ್ಕೈ, ಟ. 2 ವರು, ಚ. ಜ. ಝ.

3 ವರ್ಣಸ್ಥಾನಸರ್ಗ, ಕ. ಝ. ವರ್ಣಸ್ನಾನಸಲಿಲವಿದೂತ, ಖ. ವರ್ಗಸ್ಥಾನ ಸರ್ವನಿಪಾತ, ಚ. ಪರ್ವಸ್ಥಾನಪರ್ವನಿ. ಜ.

4 ಪದಱೊಳುಕೃತ್ಯಕಳಸಂ, ಕ. ವಧ್ವರಕೃತ್ಯಕಳಸಂ. ಖ. ಚ. ವಧ್ವರಕೃತ್ಯಕಳಸಂ; ಜ. ಪದಱೊಳುಕೃತ್ಯಗಳಸಂ, ಝ.

5 ವಾವರಣರಸಸಂ, ಕ. ಚ. ಝ. ವಾರಣಶರಧಿಸಂತತಿ, ಖ. ವಾವರಣಶರಸಂತತಿ, ಜ.

6 ದೀರೀತಿಯು, ಕ. ದುವೆನೀತಿಯಿಂದಿಹ, ಖ. ಜ. ದುಸುನೀತಿಯಿಂದಿಹ, ಚ. ದೀನೀತಿಯಿಂದಿಹ, ಝ.

7 ವರ್ಣವರ್ಗ, ಕ. ವರ್ಣವರ್ಣ, ಖ. ಜ. ಝ.

8 ಪಾತ್ರನಂಗ, ಕ. ಖ. ಚ. ಜ. ಪಾತ್ರವರ್ಣ, ಝ ಟ.

[1] ತೋಱುವೀಮಾಯಾಪ್ರಪಂಚವ
ಮೀಱಿ ಕೇಡಿಲ್ಲದ ಪದವ ಕೈ
ಸೂಱೆಗೊಂಬುದು ಪರಮಮಂತ್ರವಿದೆಂದನಾಮುನಿಪ ॥ ೩೩
*
† ಜಲಧಿ [2] ಮಾತೃಕೆ ವಾರ ಕುಲಗಿರಿ
ಗಳ ವಿಭಕ್ತಿದ್ವೀಪದಂಗಾ
ವಳಿಮುನೀಶ್ವರರುಗಳ ಧಾತುಗಡಣದ ವೇದಿಗಳ ।
ತಿಳಿದು ಕಾಲದ ಗತಿಯು ಗಮಕಂ
ಗಳನಱಿದು ನಡೆವವರುಗಳು ನಿ
ರ್ಮಳದೊಳಡಪದೆ ಬೆರಸಿ ಕೊಳ್ವರು ಮುಕ್ತಿರಾಜ್ಯವನು ॥೩೪

ಕಾಯ [3] ದಿಂ ದಂಡಪ್ರಣಾಮ ವಿ
ಧೇಯವರ್ಗನೆ ಯೋಗ ಸಿದ್ಧಿ ನಿ
ಕಾಯ [4] ವಾಯುತಭೋಗದ ಸ್ಥಿತಿಗತಿಯು ನಾರೈದು ।

---

[1] ನೇರುವೀ, ಝ.

* ಲೋಕದೊಳಗಣ ಪುಣ್ಯಪಾಪಂ
ನೀಕವನು ಯಮರಾಜನಾಲಯ
ದಾಕೆವಾಳಂಗರುಹುವರು ಹದಿನಾಲ್ಕುಮುಖದಿಂದ ।
ನಾಕುಕಡೆಯೊಳು ಕವಿದು ಬರಿಸುವ
ರಾಶಿ ದಿನದಿನದಲ್ಲಿ ಗರ್ವೋ
ದ್ರೇಕದೊಳು ಪ್ಯಮಱೆದು ಕೆಡಬೇಡೆಂದನಾಮುನಿಪ ॥

ಈ ಪದ್ಯವು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

† ಮೂವತ್ತನಾಲ್ಕನೆಯ ಪದ್ಯವು ಚ. ಝ. ಟ. ಪುಸ್ತಕಗಳಲ್ಲಿಲ್ಲ.

[2] ಶರರಸನಿಕರಮಾತೃಕೆವಳವಿಭಕ್ತಿಗಳಂಗದೀಪಾವಳಿ, ಕ. ಶರಮಾತೃಕೆಯ ರಸಕರತಳವಿಭಕ್ತಿಗಳಂಗದೀಪಾವಳಿ, ಖ. ಶರಮಾತೃಕೆಯ ನಿಕರಂಗಳ ವಿಭಕ್ತಿಗಳಂಗದೀಪಾವಳಿ, ಜ. [3] ದಿಗ್ಬಂಧಪ್ರಣಾಮ, ಖ.

[4] ಕಾಯತದಿಂದ್ರಿಯಂಗಳ, ಕ.ಕಾಯಕದಿಂದ್ರಿಯಸ್ಥಿತಿಗತಿಯ ಜ. ಝ.

ಆಯುವನು ವಿರಚಿಸುತೆ ಮೇಲಣ
ಬೀಯುವಿದು ತನಗೆಂಬುದನು ನಿ
ರ್ಣಾಯದೊಳು ನಿಶ್ಚೈ [1] ಸಿ ನಡೆವುದು ಪರಮಮತವೆಂದ ॥೩೫

ನವನವ [2] ವ್ಯೂಹಂಗಳಬುಜೋ
ದ್ಭವನ [3] ಪಾಟಿ ವಿಖಂಡ ನವರಸ
[4] ನವವಿಧಗ್ರಹ [5] ದಧಿಕ ನಾಟಕಲಕ್ಷಣವನರಿದು ।
ನವವಿಧಾಮಳಭಕ್ತಿರಸವನು
ಸವಿದು ನಿತ್ಯಾನಿತ್ಯವಸ್ತುವ
ನವರಸವನಾರೈದು ನಡೆವುದೆ ಪರಮಮತವೆಂದ ॥ ೩೬

ಹತ್ತುಮುಖದೊಳು ಲೋಕದೊಳಗು
ತ್ಪತ್ತಿಯಾದ ಚರಾಚರಂಗಳೊ
ಳುತ್ತಮಾಧಮವೆನ್ನದೆಯೆ ಹರಿ ಸರ್ವಗತನಾಗಿ ।
ಸುತ್ತುವನು ನಾನಾತೆಱದೊಳು ವಿ
ಚಿತ್ರಚರಿತನು ಕಪಟನಾಟಕ
ಸೂತ್ರಧಾರಕನೆಂದಱಿದು ಸುಖಿಯಾಗು ನೀನೆಂದ ॥ ೩೭

ಲೇಸ [6] ಮಾಡಿದಿರೆನ್ನ ಚಿತ್ತದ
ಬೇಸಱಿಕೆ ಬಯಲಾಯ್ತು ನಿಮ್ಮುಪ
ದೇಶದಿಂದೆ ಕೃತಾರ್ಥನಾದೆನು ಗೆಲಿದೆನಿಹಪರವ ।
ಗಾಸಿಯಾದುದು ರಾಗ ಲೋಭದ
ಮೀಸಲಟಿದುದು ನಿಮ್ಮ ಕೃಪೆಯಿಂ
ದೇಸು ಧನ್ಯನೊ ತಾನು ಚಿತ್ತೈಸೊಂದುಬಿನ್ನಪವ ॥ ೩೮

---

[1] ಸಬೇಹುದು ರಾಯ ಕೇಳೆಂದ, ಖ. ಜ,

[2] ಬ್ರಹ್ಮಾ, ಕ. [3] ನಾಳದ, ಕ. ದಾಳವಿ, ಖ. ನಾಳಿವಿ, ಜ. ಪಾಳುವಿ, ಟ.

[4] ದವಿನಯದ ನಿಗ್ರಹದ ನಾಟಕ, ಖ. [5] ವಿಧಿಯನಾ, ಟ.

[6] ನಾಡಿದಿರೆನ್ನ, ಚ. ಜ. ಟ.

ಸ್ವರ್ಗವಾವುದು ನರಕವಾವುದು
[1] ವಿಗ್ರಹದೊಳಹ ಸಿದ್ಧಿಯಾವುದ
ನುಗ್ರಹದೊಳೇನಹುದು ಪಾತ್ರಾಪಾತ್ರವೆಂದೇನು ।
ಉಗ್ರವಾವುದು ದೈವದೊಳಗೆ ಸ
ಮಗ್ರವಾವುದು [2] ಧರ್ಮದೊಳಗ
[3] ವ್ಯಗ್ರದಿಂದುಪದೇಶಿಸಲು ಬೇಕೆಂದನಾಭೂಪ ॥ ೩೯

ಸುಲಭ [4] ನತಿಸಾಹಿತ್ಯ ಮಂಗಳ
ನಿಳಯ ನಗಣಿತಮಹಿಮ ನನ್ವಯ
ತಿಲಕ ನನುಪಮಚರಿತ ದೈವಾ [5] ಪರನು ಪುಣ್ಯನಿಧಿ ।
ಕುಲಯುತನು ಕೋವಿದನು ಕರುಣಾ
ಜಲಧಿ ಕೌತುಕ [6] ಮುಕ್ತಿವಿದನೆಂ
ದಿಳೆ ಹೊಗಳುತಿರಲದುವೆ ತಾನೇ ಸ್ವರ್ಗ ಕೇಳೆಂದ ॥ ೪೦

ಪಾತಕನು ಪತಿತನು ಕೃತಘ್ನನು
ಘಾತುಕನು ದುರ್ಮತಿ [7] ದುರಾತ್ಮ ನ
ಗೀತ ಹರದೂಷಕನು ದುರ್ಜನ ನಪ್ರಯೋಜಕನು ।
ನೀತಿಹೀನನು ಜಾತಿಧರ್ಮಸ
ಮೇತದೈವದ್ರೋಹಿ [8] ಯೆನಲದು
ಭೂತಳದೊಳೇ ನರಕ ಚಿತ್ತೈಸೆಂದನಾಮುನಿಪ ॥ ೪೧

ದೇಹವಿಡಿದಿಹ ಧರ್ಮ ವದು ನಿ
ರ್ದೇಹದೊಳು ದೊರಕುವುದೆ ಮಾನವ

1 ನಿಗ್ರಹ, ಖ. ಚ. 2 ಧೈರ್ಯದೊ, ಖ.
3 ಭ್ಯಗ್ರದಿಂ, ಖ. ಚ. ಜ. ಟ. 4 ವಾತಿ. ಕ. 5 ಚಾರಪು, ಝ.
6 ಯುಕ್ತನಹುದೆಂದಿಳೆ, ಕ. ಯುಕ್ತಿ, ಖ. ಚ. ಜ. ಝ. ಟ.
7 ದುರಾಢ್ಯನನೀತ, ಕ, ಖ. ದುರಾಢ್ಯನು ಭೀತ, ಚ. ದುರಾಢ್ಯನನೀತಿ ಹರ, ಝ. 8 ಯೆಂಬುದು. ಕ.

ದೇಹವೇ ಸಾಧನ [1] ಕಣಾ ಪುರುಷಾರ್ಥ [2] ನಿಷ್ಠರಿಗೆ ।
ಐಹಿಕಾಮುಷ್ಮಿಕದ ಗತಿ ಸ
ಮ್ಮೋಹಿಸುವು [3] ದು ಶರೀರದೊಳು ಸಂ
ದೇಹವೇ ಧೃತರಾಷ್ಟ್ರ ಚಿತ್ತೈಸೆಂದನಾಮುನಿಪ ॥ ೪೦

ಗರುಡಪಂಚಾಕ್ಷರಿಯೊಳಲ್ಲದೆ
ಗರಳಭಯವೆಡಗುವುದೆ ವಿಷ್ಣು
ಸ್ಮರಣೆಯಿಂದಲ್ಲದೆ ಮಹಾಪಾತಕಕೆ [4] ಕಡೆಯುಹುದೆ ।
ಹಿರಿದುಸಂಸಾರಾಂಬುಧಿಯನು
ತ್ತರಿಸುವರೆ ಗುರುಮುಖದೊಳಲ್ಲದೆ
ನಿರತಿಶಯವಹುದಾವುದೈ ಹೇಳೆಂದನಾಮುನಿಪ ॥ ೪೨

ತನ್ನ ಗೃಹದೊಳು ಮೂರ್ಖ ನತಿಸಂ
ಪನ್ನ ಪೂಜ್ಯನು ಭೂಮಿಪಾಲನು
ತನ್ನ ದೇಶದೊಳಧಿಕನೈ ಗ್ರಾಮದೊಳು ಧನಿ ಪೂಜ್ಯ ।
ಭಿನ್ನವಿಲ್ಲದೆ ಹೋದ ಠಾವಿನೊ
ಳನ್ಯರೆನಿಸದೆ ವಿಶ್ವದೊಳು ಸಂ
ಪನ್ನಪೂಜಾಪಾತ್ರರೈ ವಿದ್ವಾಂಸರುಗಳೆಂದ ॥ ೪೪

ಒರ್ವನಹನೈ ಶೂರ ನೂರಱ
ಕ್ಕೊರ್ವನಹ ಸಾವಿರಕೆ ಪಂಡಿತ
ನೊರ್ವನಹನೈ ವಕ್ತ ಶತಸಾವಿರಕೆ ಲೋಕದೊಳು ।
ಒರ್ವದಾನಿಯು ಕಾಣೆನೈ ತಾ
ನೊರ್ವರೊರ್ವರಿಗೊಂದೆ ಗುಣವೆದು
ಸರ್ವಗುಣಸಂಪನ್ನರೈ ವಿದ್ವಾಂಸರುಗಳೆಂದ ॥ ೪೫

---

[1] ಸಕಲವು, ಕ, ಜ. ಝ.		[2] ಶೀಲರಿಗೆ, ಕ. ಜ. ಜೀವರಿಗೆ. ಖ. ಝ.
[3] ದಶರೀರ, ಕ. ಚ.		[4] ಲಯುವಹುದೆ, ಖ. ನಡೆಯುಹುದೆ. ಝ.

ಸತಿಯರಿಗೆ ಗತಿಯಾವುದೈ ನಿಜ
ಪತಿ [1] ಯದಲ್ಲದೆ ವಿಪ್ರಜಾತಿಗೆ
ಹುತವಹನು ವರ್ಣತ್ರಯಕೆ ಭೂದೇವರುಗಳಿರಲು ।
ಕ್ಷಿತಿಯೊಳಧಿಕವದಾವುದೈ ಭೂ
ಪತಿಯೆ ಕೇಳಿಹಪರದ ಸುಖಸಂ
ಗತಿಯನೊಲುವೊಡೆ ಪೂಜೆ[2]ಸೈ ಬ್ರಾಹ್ಮಣರ ನೀನೆಂದ ॥ ೪೬

* [3]ಮೆಱೆವ ಸಚರಾಚರವಿದೆಲ್ಲವ
ನಿರುತ ತಾನೆಂದಱಿತು ತನ್ನಿಂ
ದಿರವು ಬೇಱಿಲ್ಲೆಂಬ ಕಾಣಿಕೆಯಾವನೊಬ್ಬನೊಳು ।
ಇರುತಿಹುದದಾವಗವುವನು ಸ
ತ್ಪುರುಷನಾತನ ಪೂಜಿಸುವುದಿಹ
ಪರದ ಸುಕೃತವ ಬಯಸು [4] ವವರವನೀಶ ಕೇಳೆಂದ ॥ ೪೭

ಜಾರನನು ಕಂಟಕನ [5] ಹಿಸುಣನ
ಚೋರನನು ಷಂಡನನು ಸವುದುವಿ
ಕಾ [6] ರಭೇದಿಯನಿಂತಱುವರನು ತಾ ಕಂಡು ಮನ್ನಿಸದೆ ।
ದೂರದೊಳು ವರ್ಜಿಸುವುದು ಬಹಿ
ಷ್ಕಾರಿಗಳು ಸರ್ವ [7] ಕ್ಕವರುಗಳು
ಸಾರವಿದು ಸತ್ಪುರುಷರಭಿಮತವೆಂದನಾಮುನಿಪ ॥ ೪೮

ಮೊದಲೊಳಾಮಾಹಿಷಿಕನನು ಮ
ಧ್ಯದೊಳು ವೃಷಲೀವಲ್ಲಭನನಂ
ತ್ಯದೊಳು ವಾರ್ಧುಷಿಕನನು ಕಂಡವರುಗಳ ಭಾಗ್ಯನಿಧಿ ।

---

1 ಗಳಲ್ಲದೆ, ಕ. ಚ. ಝ. ಟ. 2 ಸುವುದೈ ಬ್ರಾಹ್ಮಣೋತ್ತಮರ, ಚ. ಟ.
3 ನೆರೆದ, ಝ. 4 ವೊಡೆ ಭೂಪಾಲ ಕೇಳೆಂದ, ಝ.
5 ಹಿಂಸನ, ಕ. ಜ. 6 ರಿಭೇದಿ, ಕ. 7 ಕ್ಕೆನಿಗವುದ, ಕ.
* ಈ ೪೭ನೆಯ ಪದ್ಯವು ಖ, ಜ, ಟ, ಪುಸ್ತಕಗಳಲ್ಲಿಲ್ಲ.

ಕದಡಿ ಹರಿವುದು ಕಂಡಮುಖದೊಳು
ಸದಮಳತಶಾಸ್ತ್ರಾರ್ಥನಿಶ್ಚಯ
ವಿದನಱಿದು ನಡೆವುದು ನಯವು ಭೂಪಾಲ ಕೇಳೆಂದ ॥ ೪೯

ಕುಲವಮಹಿಷಿ ದುರ್ಮಾರ್ಗ- ಮುಖದೊಳು
ಗಳಿಸಿದರ್ಥವನುಂಡು ಕಾಲವ
ಕಳೆವ ನಿರ್ಭಾಗ್ಯರು ಕಣಾ ಮಾಹಿಷಿಕರೆಂಬವರು ।
ಇಳೆಯೊಳವರೊಡನಾಡಿದವದಿರು
ಗಳಿಗೆ ನರಕಾರ್ಣವದೊಳಾಱುತೆ
ಮುಳುಗುತಿಹುದಲ್ಲದೆ ವಿಚಾರಿಸೆ ಸುಗತಿಯಿಲ್ಲೆಂದ ॥ ೫೦

* ಲವಲವಿಕೆಯೊಳು ಶೂದ್ರಿಯರ ಸಂ
ಗವನು ಬಯಸುವ ಭೂಸುರರು ರೌ
ರವದ ನರಕವನೈದುವರದಲ್ಲದತಿಕಾಮದೊಳು ।
ಅವಳ ಬಿಡದನುಭವಿಸಿ ಸಂತಾ
ನವನು ಪಡೆದವರುಗಳು ಬ್ರಾಹ್ಮ
ಣ್ಯವನು ರಚಿಸುವರೇ ಮಹೀಪತಿ ಯೆಂದನಾಮುನಿಪ ॥ ೫೧

---

* ಈ ಪದ್ಯವು, ಜ. ಟ. ಪುಸ್ತಕಗಳಲ್ಲಿಲ್ಲ. ಚ. ಪುಸ್ತಕದಲ್ಲಿ ಈ ಪದ್ಯದ ಮುಂದೆ—

ನೆರಹಿ ಧರ್ಮವನರ್ಥವಾಗು
ತ್ತಿರೆ ಮಹಾರ್ಘ್ಯದೊಳಖಿಳವಸ್ತುವ
ದೊರಕಿಸುತೆ ಬಡ್ಡಿಯನು ಮೊದಲಿಂದಿಕ್ಕಿ ಲೆಕ್ಕವನು ।
ವಿರಚಿಸುವನಾವಾವನಿಹಪರ
ವರಸಕೇಳೈ ಸರ್ವಕರ್ಮ
ಕ್ಕರುಹರಲ್ಲವರುಗಳು ಚಿತ್ತೈಸೆಂದನಾಮುನಿಪ ॥

ಎಂಬ ಪದ್ಯವೂ ಹೆಚ್ಚಾಗಿ ದೊರೆಯುತ್ತದೆ.

ದೈವದಾಧೀನದೆ ೊಳು ಜಗವಾ
ದೈವ ಮಂತ್ರಾಧೀನ ಮಂತ್ರವು
ಭೂವಿಬುಧರಾಧೀನವಾಗಿಹುದಾಗಿ ಲೋಕದೊಳು ।
ದೈವವೇಬ್ರಾಹ್ಮಣರದಲ್ಲದೆ
ಭಾವಿಸಲುಬುಧರಿಂದವಧಿಕವ
ದೈವವೆಂಬುದ ಕಾಣೆವೈ ನಾವೆಂದನಾಮುನಿಪ ॥ ೫೮

[1] ಕುಲಿಶಗತಿಯೊಳು ಕಡೆದ ಸಿಲೆಯನು
ಕಲುಕುಟಿಕನಿಟ್ಟುಹುವನದಲ್ಲದೆ
ಹಲವುಪರಿಯಿಂದದನು ಲೋಕಕೆ ದೈವವೆನು ಮಾಡಿ ।
ನಿಲಿಸುವವರುಂಟೇ ಸುರಾಸುರ
ರೊಳಗೆ ವಿಪ್ರೋತ್ತಮರುಟಿಯೆ ಜಗ
ದೊಳಗೆ ದೈವವದಾವುದೈ ಹೇಳೆಂದನಾಮುನಿಪ ॥ ೫೯

ಎಣಿಸಬಹುದುರ್ವರೆಯ ಸೈಕತ
ಮಣಿಯನೋರಂದದೊಳು ಗಗನಾಂ
ಗಣದೊಳ್ಬತಹ ವೃಷ್ಟಿಬಿಂದುವನೆಣಿಕೆಗೊಳಬಹುದು ।
ಎಣಿಸಬಾರದಿದೊಂದು ದಿವಿಜರ
ಗಣ [2] ಕಗೋಚರವಹುದು ಸದ್ಬ್ರಾ
ಹ್ಮಣನ ನೊಬ್ಬನ ರಕ್ಷಿಸಿದ ಫಲವರಸ ಕೇಳೆಂದ ॥ ೬೦
*

---

1 ಕೆಲಸಗತಿಯೊಳು. ಕ. ಖ. ಚ. ಜ. ಝ. ಟ.

2 ಕಗೋ , ಜ. ಝ. ಟ.

* ಖ. ಪುಸ್ತಕದಲ್ಲಿ—

ಕೆಸರೊಳಡಗಿರ್ದಾಳುತೇಳುವ
ಪಶುವನದನಾಬ್ರಾಹ್ಮಣಸ್ತ್ರೀ
ಪಶುವನೊಂದಾಸತಿಯ್ಚನಾಬ್ರಾಹ್ಮಣನಬಂಧನವ ।

ಜಾತಿಧರ್ಮವೆನನುಕರಿಸಿ ವರ
ಮಾತೃಪಿತೃಪರಿಚರಿಯದೊಳು ಸಂ
ಪ್ರೀತಿವಡೆಯುತೆ ಪರಗುಣಸ್ತುತಿನಿಂದೆಗಳನುಳಿದು ।
ಭೂತನಾಥನ ಭಕ್ತಿಯೊಳು ವಿ
ಖ್ಯಾತ[1] ವಹ ಗುರುದೈವದೊಳು ಮತಿ
ಭೀತಿ ಹಿರಿದಿರಲದುವೆ ಕೇಳ್ ಸುಕೃತಕ್ಕೆ ಕಡೆಯೆಂದ ॥ ೫೫

ಅರ್ಥದಿಂದಹ ಸಿದ್ಧಿಯಾವುದ
ನರ್ಥವೆಂಬುದದೇನು ತನಗಾ
ಸ್ವಾರ್ಥವೇನು ಪರಾರ್ಥ[2] ವಾವುದು ಧರ್ಮಮಾರ್ಗದೊಳು ।
ತೀರ್ಥವಾವುದು ವಿಪ್ರರೊಳಗೆ ಸ
ಮರ್ಥರಾರು ಸಭಾಸ್ಥಳದೊಳಾ
ವ್ಯರ್ಥಜೀವಿಗಳಾರು[3] ಬಿತ್ತರಿಸೆಂದನಾಭೂಪ ॥ ೫೬

ಧನವೆನುಳ್ಳ ಮಹಾತ್ಮನಾವುದ
ನೆನೆದೊಡದು ಕೈಸಾರುವುದು ನಿ
ರ್ಧನಿಕ ಬಯಸಿದ ಬಯಕೆ ಬಯಲಹುವಲ್ಲದೇ ಬೇಱೆ ।
ಧನಿಕನಂತೆ ಸಮಸ್ತಸುಖಸಂ
ಜನಿಸುವುದೆ ಸರ್ವಕ್ಕೆ ಸಾಧನ
ಧನವದಲ್ಲದೆ ಭುವನದೊಳಗನ್ಯತ್ರವಿಲ್ಲೆಂದ ॥ ೫೭

---

ವಸುಧೆಯೊಳಗೆ ಕುಟುಂಬವೊಂದರ
ಸಸಿಯನುದ್ಧರಿಸಿದವಮಹಾತುವು
ರೆಸೆವರೈಸ್ವರ್ಗಾದಿಭೋಗದೊಳೆಂದನಾಮುನಿಪ ॥

ಎಂಬ ಪದ್ಯವು ಹೆಚ್ಚಾಗಿ ದೊರೆಯುತ್ತದೆ.

1 ರಹಗುರು ವಿಪ್ರರೊಳು, ಝ.

2 ದಿಂದಹುದಾವುದವನಿಯೊಳು, ಕ. ಖ. ಝ.

3 ಚಿತ್ತೈಸೆಂದನಾಮುನಿಪ, ಕ. ಚ.

ವ್ಯರ್ಥರುಗಳೊಡನಾಟ ತನ್ನಾ
ಸ್ವಾರ್ಥವಿಲ್ಲದರುಗಳ ಕೂಟ ಪ
ರಾರ್ಥದಿಂ ಜೀವಿಸಿದೊಡಾತನ ಬದುಕು ಲೋಕದೊಳು |
ಅರ್ಥವಿಲ್ಲದ ಸಿರಿಯು ಸಡಗರ
ವರ್ಥಿಯಿಲ್ಲದ ಬಾಳುವೆಗಳಿವೆ
ನರ್ಥಪಾರಂಪರಿಯುಲ್ಳೈ ಭೂಪಾಲ ಕೇಳೆಂದ ॥ ೫೮

ನೋಡುವುದು ಧರ್ಮವೆನು ಸುಜನರ
ಕೂಡುವುದು ಪರಪೀಡೆಯೆಂಬುದ
ಮಾಡಲಾಗದು ಕರಣವುಳಿಯೊಳ್ಳದಾಟವೆನು |
ಆಡಲಾಗದು [1] ದಸ್ಯುಜನವೆನು
ಕೂಡಲಾಗದದೆಂಬ ಮಾರ್ಗವ
ನೋಡಿ ನಡೆವುದು ತನಗೆ ಪರಮಸ್ವಾರ್ಥ ಕೇಳೆಂದ ॥ ೫೯

ಕರಿ ತುರಗ ಮೊದಲಾದ ವಸ್ತುಗ
ಳರಮನೆಗಳೊಳು ಪುತ್ರಮಿತ್ರರು
ತರುಣಿಯರು [2] ಸಹಭವರು ಗೋತ್ರಜರಡವಿಯೊಳಗಿಕ್ಕಿ |
ಮರಳುವರು ನಿಜಸುಕೃತದುಷ್ಕೃತ
ವೆರಡು [3] ಬೆನ್ನೊಳ್ ಬಹುವು ವೃಜಿದುದ
ನರಸ ಬಲ್ಲವನಾವನೈ ಹೇಳೆಂದನಾಮುನಿಪ ॥ ೬೦

ಧರ್ಮದಾಧಾರದೊಳಿಹುದು ಜಗ
ಧರ್ಮವುಳ್ಳರನಾಶ್ರಯಿಸುವುದು
ಧರ್ಮವೇ ನೂಕುವುದು ಜನ್ಮಾಂತರದ ಪಾತಕವ |
ಧರ್ಮವೇ ಸರ್ವಪ್ರಧಾನವು
ಧರ್ಮವೆಂಬುದು ಪರಮಪದವಾ
ಧರ್ಮವನು ಬಿಟ್ಟಿಹುದು ಮತವಲ್ಲೆಂದನಾಮುನಿಪ ॥ ೬೧

---

[1] ವಂತ್ಯಜನವನು ಬೇಡಲಾಗದು, ಚ. ಶತ್ರುಜನ, ಜ.
[2] ಸಹಚರರು, ಟ. [3] ಬೆಂಬಿಡದಲ್ಲದುಳಿ, ಕ. ಝ.

ಪರಿಪರಿಯ ಯಜ್ಞವನು ವಿರಚಿಸಿ
ಸುರಪತಿಯ ಸಂತುಷ್ಟಿಪಡಿಸಲು
ಸುರಿವನೈ ಸಂಪೂರ್ಣವಾಗಿ ಸುವೃಷ್ಟಿಯನು ಜಗಕೆ ।
ಹರಿಹಯನು ಸಸ್ಯಾದಿಕಂಗಳ
ಹೊರೆಯಲೋಸುಗ ಮುಯ್ಗೆ ಮುಯ್ಯಾ
ಗಿರುತಿಹುದು ಭುವನದ್ವಯದೊಳವನೀಶ ಕೇಳೆಂದ ॥ ೬೦

ಎತ್ತಲಾನುಂ ತೀರ್ಥವೆಂಬುದ
ಚಿತ್ತವಿಸುವೊಡೆ ಸರ್ವತೀರ್ಥದ
ಸತ್ತ್ವವನು ಸನ್ನಿಹಿತನಾಗವಧರಿಸು ನಿನಗದನು ।
ಬಿತ್ತರಿಸುವೆನು ವಿಪ್ರಪಾದವಿ
ಮುಕ್ತವಿಮಲೋದಕವನಾವನು
ನೆತ್ತಿಯೊಳು ಮಿಗೆ ಧರಿಸುವನು ಕೃತಕೃತ್ಯನವನೆಂದ ॥ ೬೧

ಶರಧಿಯೊಳು ಹರಿ ಯೋಗನಿದ್ರೆಯೊ
ಳಿರಲು ಭೃಗುವೈತಂದು ಲಕ್ಷ್ಮೀ
ಧರನ ವಕ್ಷಸ್ಥಳವನೊದೆಯಲು ಮುನಿಯ ಚರಣವನು ।
ಸಿರಿಯುರದೊ [1] ಳಾಂತೊತ್ತೆ ಧರಣೀ
ಸುರರು ಮೆಟ್ಟಿದರು ತೀರ್ಥಪಾದರು
ಧರೆಯೊಳಗೆ ಬುಧರಿಂದವಧಿಕದ ತೀರ್ಥವಿಲ್ಲೆಂದ ॥ ೬೪

ಮಾಡುತಿಹ ಯಜ್ಞವನು ಪರ [2] ರಿಗೆ
ಮಾಡಿಸುವ ವೇದಾಧ್ಯಯನವನು

---

[1] ಳಚಿಕ್ಕೊತ್ತೆ ಧರಣೀಸುರನ ಮೆಟ್ಟಿದನು ತೀರ್ಥಪಾದವು, ಕ. ಳಂದೊತ್ತಿ ಧರಣೀಸುರನ ಮೆಟ್ಟಿದನು ತೀರ್ಥಪಾದನು, ಖ. ಳಚಿಕ್ಕೊತ್ತಿ ಧರಣೀಸುರರ ಮೆಟ್ಟಿಸಿದು ತೀರ್ಥವಾವುದು, ಚ. ಳಚಿಕ್ಕೊತ್ತಿ ಧರಣೀ ಸುರರ ಮೆಟ್ಟಿದನು ತೀರ್ಥಪಾದವ, ಜ, ಟ. [2] ರೊಳು ಮಾಡುತಿಹ ವೇದಾಧ್ಯಯನವನು ಮಾಡಿಸುವ ಕಾಲದೊಳು ಸಕಲರೊಳೊಮ್ಮೆ ವಿನಯದೊಳು ಮಾಡಿಸುತೆ ವಿಘ್ನಗಳು ಬರಲದ ಕೊಡೆಪರಿಹರಿಸುತ್ತಯವರನು ಕೂಡಿ, ಖ.

ಮಾಡುತಿಹ ತದ್ವಿಷಯದೊಳು ಯೋಗ್ಯರನು ಮಾಡಿಸುವ ।
ಮಾಡುತಿಹ ದಾನವನು ಲೋಗರು
ನೀಡುತಿರಲೊಳಕೊಂಬ ಗುಣವನು
ಕೂಡಿಕೊಂಡಿಹನೇ ಸಮರ್ಥನು ವಿಪ್ರರೊಳಗೆಂದ ॥ ೬೫

ವೇದಪುರುಷರ ದೇಹದೊಳಗೆ [1] ವಿ
ಭೇದವಿಲ್ಲದೆ ಜಲಜಸಂಭವ
ನಾದಿಯಾದ ಸಮಸ್ತದೇವರು ನೆಲೆವನೆಗಳಾಗಿ ।
[2] ಕಾದುಕೊಂಡಿಹರಂತುಕಾರಣ
[3] ವಾದಿಸದೆ ವಿಪ್ರೋತ್ತಮರನಭಿ
ವಾದಿಸುವುದುತ್ತಮವಲ್ಲೈ ಭೂಪಾಲ ಕೇಳೆಂದ ॥ ೬೬

ಯುವತಿಯರು ಗಾಯಕರು ಕಿತವರು
ತವತವಗೆ ಕೈವಾರಿಸುವರಾ
ವವನನವನೇ [4] ಪಙ್ಕ್ತಿದೂಷಿತನಿಹಪರಂಗಳಿಗೆ ।
ಇವರು ಮೂವರು ನಿಂದಿಸುವರಾ
ವವನನವ ಸರ್ವಜ್ಞನೆನಿಸುವ
ನವನಿಪತಿ ಚಿತ್ತೈಸು ಧರ್ಮರಹಸ್ಯ ವಿಸ್ತರವ ॥ ೬೭

ಜ್ಞಾತವೇನಜ್ಞಾತವಾವುದು
ನೀತಿಯಾವುದನೀತಿಯಾವುದು
ದ್ವೈತವೇನದ್ವೈತವಾವುದು ವೈದಿಕಾಂಗದೊಳು ।
ಖ್ಯಾತಿಯೇನಖ್ಯಾತಿಯಾವುದು
ಭೀತಿಯಾವುದಭೀತಿಯಾವುದು
ನೀತಿಯಿಂದೆ ಮುನೀಶ ಬಿತ್ತರಿಸೆಂದನಾಭೂಪ ॥ ೬೮

---

1 ವಿಷಾದ, ಚ. ನಿಷೇಧವಿ, ಜ.
2 ನೇದು, ಕ. ಚ. ಝ.
3 ಬಾಧಿಸದೆ; ಚ.
4 ಪತಿತದೂಷಿತ, ಜ.

ಧರಣಿಯಮರರ ಸೇವೆಯನು ವಿ
ಸ್ತರಿಸಿ ಸತ್ಕಾರದೊಳವರನಾ
ದರಿಸಿ ಬಹುಮಾನವನು ವಿರಚಿಸಿದಾಮಹಾತ್ಮರಿಗೆ |
ಎರವೆಹುದೆ ಸ್ವರ್ಗಾಪವರ್ಗದ
ಸಿರಿಯದೆಂಬುದನಱಿದು ನಡೆವಂ
ಗರಿದದಾವುದು ರಾಯ ಚಿತ್ತೈಸೆಂದನಾಮುನಿಪ || ೧೯

ಯೋನಿಮುಖವೆಂಭತ್ತುನಾಲ್ಕು ವಿ
ಯೋನಿಮುಖವೆಂಭತ್ತುನಾಲ್ಕು ನ
ವೀನಜನ್ಮಂಗಳೊಳು ಜನಿಯಿಸಿ ಕಡೆಯ ಕಣೆಯದೊಳು |
ಮಾನವರ ಬಸಿಱಿನೊಳು ಬಂದ
ಜ್ಞಾನತರರಾಗಟಿವುದಿದು ಕ
ರ್ಮಾನುಗತವಾಗಿಹುದಲೇ ಭೂಪಾಲ ಕೇಳೆಂದ || ೨೦

ಪಾನದಿಂ ಸೂಕರನು ಬುಧರವ
ಮಾನದಿಂ ಕ್ಷಯರೋಗಿ ಗುರುಜನ
ಹಾನಿಯಿಂ ಸಲೆ ಕುಷ್ಠಿ ಗರ್ವದೆ ಕುಕ್ಕುಟಾಸ್ವಯನು |
ಹೀನಗತಿಯಿಂದುರಗ ನಾನಾ
ಯೋನಿಗಳೊಳು ಚರಾಚರವು ಕ
ರ್ಮಾನುಗತವಾಗುದಯಿಸುವುದವನೀಶ ಕೇಳೆಂದ || ೨೧

ಪರರ ಪಟುತರವಾದದೊಳು ಮೂ
ಕರವೊಲಿಹ ಪರಜನರ ಕಟುಕೋ
ತ್ತರದೊಳಗೆ ಬಧಿರತ್ವವಿಹ ಪರದಾರದರುಶನವು |
ದೊರಕಿದೊಡೆ ಜಾತ್ಯಂಧನೆನಿಸುವ
ಪುರುಷನಾವವನವನು ಸಾಕ್ಷಾ
ತ್ಪರಮಪುರುಷೋತ್ತಮನಲ್ಲೈ ಭೂಪಾಲ ಕೇಳೆಂದ || ೨೨

ಇಷ್ಟಸಂತರ್ಪಣವ ಮಾಡಿ ವಿ
ಶಿಷ್ಟಪೂಜಾಪಾತ್ರರನು ಸಂ
ತುಷ್ಟಿಬಡಿಸುತೆ ಧರ್ಮದೊಳು ರಾಜ್ಯವನು ರಕ್ಷಿಸುತೆ ।
ಕೊಟ್ಟವರ ಕೊಂಡವರನೋತೊಡ
ಬಟ್ಟವರನನುಜಾತ್ಮಜರನೊಳ
ಗಿಟ್ಟುಕೊಂಡಿಹುದುಚಿತವಿದು ಭೂಪಾಲ ಕೇಳೆಂದ ॥ ೩೩

ನುಡಿದುದನು ಪೂರೈಸಿ ಕಾಲದ
ಕಡೆಯ ಕಾಣಿಸಿ ಹೋಹವರ ಬೀ
ಳ್ಕೊಡುತೆ ಹಳೆಯರನಾಪ್ತರನು ಮನ್ನಿಸುತೆ ತನ್ನವನು ।
ಬಿಡದೆ ಸೇವೆಯ ಮಾಡುವವರನು
ಹಿಡಿದು ನಾನಾತೆರದ ಪದವಿಯ
ಕೊಡುತಿಹುದು ನೃಪನೀತಿ ಚಿತ್ತೈಸೆಂದನಾಮುನಿಪ ॥ ೩೪

ವಿಲಗನಾಗದೆ ದೇಶವ
ಹಿಡಿದು ಹಿಂಡುತೆ ದಾನಧರ್ಮವ
ನುಡಿದು ದೇವಬ್ರಾಹ್ಮರೆನ್ನದೆ ಕಂಡ ಜನರಿಂದೆ ।
ಗಳಿಗೆಗಳಿಗೆಗೆ ದಂಡದೋಷವ
ಕೊಳುತೆ ಕಡೆಯೊಳಧೋಗತಿಗೆತಾ
ನಿಳಿವ ಹೋಹುದು ನೀತಿಯೋ ಹೇಳೆಂದನಾಮುನಿಪ ॥ ೩೫

ಯೋನಿಯಲ್ಲದ ತಾವುಗಳೊಳು ವಿ
ಯೋನಿಯಹ ವಿಷಯಂಗಳೊಳು ಪಶು
ಯೋನಿಯೊಳು ಸಂಭೋಗಿಸುವ ಪಾತಕರ ಪದವಿಗಳ ।
ಏನ ಹೇಳಲು ಬಹುದು ನರಕವಿ
ತಾನದೊಳಗೋಲಾಡಿ ಬಳಿಕಾ
ಶ್ವಾನಯೋನಿಗಳಲ್ಲಿ ಜನಿಸುವರೆಂದನಾಮುನಿಪ ॥ ೩೬

ಜೀವಪರಮರಭೇದವನು ಸಂ
ಭಾವಿಸದೆ ವೇದಾಂತಶಾಸ್ತ್ರವ
ನಾವಮುಖವೆಂದಱಿಯದೇ ದಾಸೋಹವೆಂದೆನುತೆ ।
ಕೋವಿದರ ಸಂಗವನುೞಿದು ಮಾ
ಯಾವಿಲಾಸದ ಬಗೆಯ ನೋಡದೆ
ಸಾವುತಿಪುದ್ವೈತವೆವನೀಪಾಲ ಕೇಳೆಂದ ॥ ೩೭

ಉತ್ತಮರ ಸಂಗದೊಳಗೋಲಾ
ಡುತ್ತೆ ದುರ್ವಿಷಯಂಗಳನು ಮುಱಿ
ದೊತ್ತಿ ಸಕಲಚರಾಚರದ ಸುಖದುಃಖವನು ತಾನು ।
ಹೊತ್ತು ನಡೆಯುತೆ ಪುಣ್ಯಪಾಪವಿ
ದೆತ್ತಣದು ತನಗೆಂಬ ಕಾಣಿಕೆ
ಯುತ್ತರೋತ್ತರಸಿದ್ಧಿ ಚಿತ್ತೈಸೆಂದನಾಮುನಿಪ ॥ ೩೮

ಬಲಿಯ ರಾಜ್ಯ ವಿಭೀಷಣನ ಸಿರಿ
ಜಲನಿಧಿಯ ಗಾಂಭೀರ್ಯ ಬಾಣನ
ಬಲುಹದಭಿಮನ್ಯುವಿನ ಭುಜಬಲ ವೀರರಾಘವನ ।
ಚಲ ದಧೀಚಿಯ ದಾನ ಪಾರ್ಥನ
ಕೆಳೆ ಯುಧಿಷ್ಠಿರನೃಪನ ಸೈರಣೆ
ಗಳವಡುವ ಬದುಕುಳ್ಳೊಡದುವೇ ಖ್ಯಾತಿ ಕೇಳೆಂದ ॥ ೩೯

ಇರುಳು ಹಗಲನವರತ ಪತಿಪರಿ
ಚರಿಯವನು ಮಾಡುತ್ತೆ ಪರಪುರು
ಷರನು ನೆನೆಯದೆ ಹಲವುಸಂತತಿಗಳಿಗೆ ತಾಯಾಗಿ ।
ಇರುತೆ ದೇವಬ್ರಾಹ್ಮರನು ಸ
ತ್ಕರಿಸಿ ತಾ ನೀನೆನ್ನದಂತಃ
ಪುರದೊಳಸೆಯೆ ಗೃಹಸ್ಥೆಯೆನಿಸುವಳರಸ ಕೇಳೆಂದ ॥ ೪೦

*

ಮುಡಿಯ ನೇವರಿಸುತ್ತ ಮೇಲುದ
ನಡಿಗಡಿಗೆ ಸಡಿಲಿಸುತೆ ಮೌನವ
ಹಿಡಿದಧೋಮುಖಿಯಾಗಿ ಕಿಗಣ್ಣಿಕ್ಕಿ ಕೆಲಬಲನ ।
ಬಿಡದೆ ನೋಡುತೆ ಮುಗುಳುನಗೆಯೊಳು
ಜಡಿದು ಜಾಱುವ ಜಾರವನಿತೆಯ
ಗೊಡವೆಗೊಳಗಾಗಿಹುದಪಖ್ಯಾತಿಯಲಿ ಕೇಳೆಂದ ॥ ೮೧

ಗುರುವಿನೊಳು ತಂದೆಯೊಳು ತಾಯೊಳು
ಹಿರಿಯರೊಳು ದೈವದೊಳು ಪಾಪದ
ಪರಿಗತಿಗಳೊಳು ಗೋವಿನೊಳು ತೀರ್ಥದೊಳು ತನ್ನುವನು ।
ಹೊರೆದ ದಾತಾರನೊಳು ಮಂತ್ರದ
ಪರಮಸೀಮೆಗಳಲ್ಲಿ ಧರಣೀ
ಸುರರೊಳಂಜಿಕೆ ಹಿರಿದಿರಲುಬೇಕೆಂದನಾಮುನಿಪ ॥ ೮೨

ನೀತಿವಿದನಲ್ಲದ ಕುಮಂತ್ರಿಯು
ಧೀತಿಪರನಲ್ಲದ ಪುರೋಹಿತ
ನೇತಕಿವರಿಂದಾವ ಪುರುಷಾರ್ಥಂಗಳ್ಳಮುನ್ನವು ।
ಕಾತರಿಸಿ ಸಮರಾಂಗಣಕೆ ಬಲು
ಬೀತನಹ ಭೂಭುಜನ ದೆಸೆಯಿಂ
ಬೀತು ಹೋಹುದು ಸಕಲಸಂಪದವೆರಸ ಕೇಳೆಂದ ॥ ೮೩

---

* ಪೊಡವಿಯೆ ಾಳಗೆ ಪುರೋಹಿತರನವ
ಗಡಿಸಿ ಧರ್ಮದ ಬಲದೆ ನಾಕಕೆ
ನಡೆವ ರಾಯರ ಹೊಯಿದ್ದಳಿಗೆ ಕೆಡಹು ಾರಥ ಾಗತಿಗೆ ।
ಕಿಡಿಸುವರು ರಾಷ್ಟ್ರವನು ಕ್ಷಾತ್ರ ್ರ
ತಡೆಗಡಿದು ಚತುರಂಗಬಲವನು
ಹಡಿಹುಡಿಯು ಮಾಡುವರು ನಿರ್ಜರರರಸ ಕೇಳೆಂದ ॥

ಈ ಪದ್ಯವು ಕ, ಜ, ಟ, ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಧರ್ಮವಾವುದು ಮೇಣು ಜಗದೊಳ
ಧರ್ಮವಾವುದು ರಾಜಮಂತ್ರದ
ಮರ್ಮವಾವುದು ಮಾರ್ಗವಾವುದಮಾರ್ಗವೆಂದೇನು ।
ಕರ್ಮವಾವುದು ವಿಧಿವಿಹಿತದು
ಷ್ಕರ್ಮವಾವುದದೆಂಬ ಭೇದವ
ನಿರ್ಮಿಸಿರೆ ಸಾಕೆಂದು ಬಿನ್ನಹಮಾಡಿದನು ಭೂಪ ॥ ೮೪

ಸತಿಸಹಿತ ವಿರಚಿಸಿದ ಧರ್ಮ
ಸ್ಥಿತಿ ಸವೃದ್ಧಿಕವಾಗಿ ಸಲುವುದು
ಪತಿಗದಲ್ಲದೆ ತನ್ನ ಸ್ವಾತಂತ್ರ್ಯದೊಳು ಮಾಡಿದುದು ।
ಅತಿಶಯುವೆನ್ನೆದದು ಕಣಾ ಭೂ
ಪತಿಯೆ ಕೇಳಿಹಪರದ ಗತಿ ನಿಜ
ಸತಿಯು ದೆಸೆಯಿಂದಲ್ಲದೇ ಫಲಿಸುವುದು ಹುಸಿಯೆಂದ ॥ ೮೫

ಅತಿಥಿಪೂಜೆಯನುಳಿದ ಜೀವ
ನ್ಮೃತನ ಧರ್ಮಸ್ಥಿತಿಯನಪಹರಿ
ಸುತೆ ಬಹನದಲ್ಲದವನನು ನಿರ್ಯಾಣಕಾಲದೊಳು ।
ಗತಿಗೆಡಿಸಿ ಕೊಂಡುಯ್ದು ವೈವ
ಸ್ವತನು ನಾಯಕನರಕದೊಳಗ
ದ್ದುತೆ ಬಹನು ಕುಲಕೋಟಿಸಹಿತವನೀಶ ಕೇಳೆಂದ ॥ ೮೬

ತಮ್ಮ ಕಾರ್ಯನಿಮಿತ್ತ ಗರ್ವವ
ನೆಮ್ಮಿದೊಡೆ ತದ್ಗರ್ವದಿಂದುಜಿ
ದಿಮ್ಮಿತಹುದಾಕಾರ್ಯವೆಂತ್ಯಜರಾಲಯಂಗಳಿಗೆ ।
ನಿರ್ಮವಂತೆಯೊಳು ನಡೆದುಪಕೃತಿಯೊ
ಳುಮ್ಮಹವನೈದುವವೊಲೊದಗುವ
ಕರ್ಮಗಳನೊಳಹೊಯ್ದು ಕೊಳ್ವುದು ಮರ್ಮ ಕೇಳೆಂದ ॥

ಅರಸ ಕೇಳ್ಳೈ ಮಾರ್ಗ ಮೊಖ್ಯಾ
ಗಿರುತಿಹುದು ಸಂಪೂರ್ಣ ಧನಗುರು
ಪರಿಚರಿಯು ಪರಿವರ್ತನೆಗಳಂಬಿನಿತನತಿಗಳೆದು ।
ತಿರುಗಿ ಬಂದೊಡೆ ನಾಲ್ಕನೆಯ ಪತ
ದೊರಕಲಖಿಯುದು ಕಳಗಳನು ಸಂ
ವರಿಸುವ ನರೋತ್ತಮರುಗಳಿಗವನೀಶ ಕೇಳೆಂದ ॥ ೮೮

ಕಾಯದ್ದುದಕದಾಸ್ನಾನವೆಂಬುದ
ವೈದಿಕಾಂಗದೆ ಮಂತ್ರಸಾಧನ
ವೇದಹೀನರಿಗಿತ್ತದಾನವು ಶ್ರಾದ್ಧಕಾಲದೊಳು ।
ಎಯ್ದದಿಹ ದಕ್ಷಿಣೆಗಳೆಂಬಿವು
ಬೂದಿಯೊಳು ಬೇಳದ ಹವಿಸ್ಸಿನ
ಹಾದಿಯಲ್ಲದೆ ಫಲವನೀಯವು ರಾಯ ಕೇಳೆಂದ ॥ ೮೯

ಇಹಪರದಗತಿ ದಾನಧರ್ಮದ
ಬಹುಳತೆಗಳ ತಪಃಪ್ರಭಾವದ
ವಿಹಿತಪುಣ್ಯದ ಫಲದ ಬಳವಿಗೆಯೊಂದು ನೂಖ್ಯಾಗಿ ।
ಬಹುದು ಸದ್ವಂಶದೊಳು ಜನಿಸಿದ
ಮಹಿಮನಿರೆ ಲೋಕಾಂತರದ ಸುಖ
ವಹುದು ಸಂತಾನಾಭಿವೃದ್ಧಿಯನ್ನೈದಬೇಕೆಂದ ॥ ೯೦

ಚೋರನನು ಕಾಣುತ್ತೆ ಮರಳಿದು
ಚೋರನೆಂದೊಡೆ ಪತಿತನನು ನಿ
ಷ್ಠುರತನದಿಂ ಪತಿತನೆಂದೊಡೆ ಸಮವು ದೋಷವದು ।
ಸಾರುವುದು ಮಿಥ್ಯೋತ್ತರದೊಳು ವಿ
ಚಾರಿಸದೆ ನುಡಿವವರಿಗಿವ್ಮಡಿ
ನಾರಕದ ಫಲ ತಪ್ಪದವನೀಪಾಲ ಕೇಳೆಂದ ॥ ೯೧

ವಿನುತಮಧುಕೈಟಭರ ಮೇದ
ಸ್ಸಿನೊಳು ಮೇದಿನಿಯಾದುದದ ತಾ
ನನುಭವಿಸುವೊಡೆ ಪುಣ್ಯಕೀರ್ತಿಗಳೆಂಬ ಪರಿಮಳದ ।
ಹೊನಲಿನೊಳು ಸಲೆ ಹೊರೆದು ಲೇಸಾ
ಗನುಭವಿಸುವುದದಲ್ಲದಿದ್ದೊಡೆ
ದನುಜಮಾಂಸವ ಭಕ್ಷಿಸಿದ ಫಲವೆಂದನಾಮುನಿಪ ॥ ೯೦

ತನ್ನ ದಾನವನಪಹರಿಸಿ ಕೊಂ
ಡನ್ಯರಿತ್ತುದಕಡ್ಡಬೀಳುವ
ಕುನ್ನಿ ಜನರಱುವತ್ತು ಸಾವಿರವರುಷಪರಿಯಂತ ।
ಭಿನ್ನವಿಲ್ಲದೆ ವಿಷ್ಠೆಯೊಳು ಕ್ರಿಮಿ
ಜನ್ಮದಲ್ಲಿಹರಿದನಱಿದು ನೀ
ನಿನ್ನಕೊಟ್ಟುದನುಳುಹಿಕೊಳ್ವುದು ಧರ್ಮವೆಲ್ಲೆಂದ ॥ ೯೩

ಕರಣಮಾಱಱೊಳತ್ತವಸ್ತುವ
ನಿರಿಸಿಕೊಂಡಿರೆ ಮಾಸಮಾಸಾಂ
ತರದೊಳೊಂದಕೆ ನೂಱುಮಡಿಯೊಳು ಕೋಟಿಪರಿಯಂತ ।
ಹಿರಿದಹುದು ದಾನಪ್ರಶಂಸೆಯು
ನರಸ ಕೇಳ್ಳೈ ಸ್ವರ್ಗನರಕವಿ
ದೆರಡಕೊಂದೇ ದಾನ ಕಾರಣವೆಂದನಾಮುನಿಪ ॥ ೯೪

ದುಷ್ಕೃತವನೆಸಗುವರು ಫಲದೊಳು
ಕೊಕ್ಕರಿಸುವರು ಸುಕೃತವೆಂಬುದ
ಲೆಕ್ಕಿಸರು ತತ್ಫಲವನಿಚ್ಛೈಸುವರು ಮಾನವರು ।
ಇಕ್ಕದೆಱಿಯದೆ ಬಿತ್ತಿ ಬೆಳೆಯದೆ
ಪುಕ್ಕಟೆಯೆ ಸ್ವರ್ಗಾದಿಭೋಗವು
ಸಿಕ್ಕಲಱಿವುದೆ ರಾಯ ಚಿತ್ತೈಸೆಂದನಾಮುನಿಪ ॥ ೯೫

ವರಶ್ರುತಿಸ್ಮೃತಿಗಳು ಕಣಾ ಭೂ
ಸುರರ ದೃಷ್ಟಿಗಳಿವೆಯೊಳೊಂದಕೆ
ಕೊರತೆಯಾಗಲು ಕಾಣನೆನಿಸುವನೆರಡನರಿಯದಿರೆ ।
ನಿರತವಿದು ಜಾತ್ಯಂಧನೆನಿಸುವ
ನರಸ ಕೇಳ್ಮೆ ಮಾಂಸದೃಷ್ಟಿಗ
ಳಿರವಲೇ ಸರ್ವತ್ರ ಸಾಧಾರಣವು ಲೋಕದೊಳು ॥ ೯೬

ವಾಚಿಸದೆ ವೇದಾರ್ಥನಿಚಯವ
ನಾಚರಿಸದಾಲಸ್ಯದಿಂದು
ತ್ಕೋಚಿಯಾಗಿ ಪರಾನ್ನದೊಳು ಸಂಪುಷ್ಟತನುವಾದ ।
ನೀಚನಹ ಭೂಸುರನ ಕರುಳನು
ಬಾಚುವಳಲೈ ಮೃತ್ಯುವವನು ನಿ
ಶಾಚರನು ದ್ವಿಜನಲ್ಲ ಚಿತ್ತೈಸೆಂದನಾಮುನಿಪ ॥ ೯೭

ಸರಸಿಜಾಕ್ಷನ ದಿವ್ಯನಾಮ
ಸ್ಮರಣವನು ಶ್ರುತಿಮೂಲವಾಕ್ಯೋ
ತ್ಕರುಷವನು ಭೂತಕ್ಕೆ ಹಿತವಹ ಮಾತನತಿಗಳೆದು ।
ಪರರ ವಂಚನವ ತ್ರಿಕರಣದೊಳು
ಚರಿಸಲಾಗದು ಸರ್ವಥಾ ಸ
ತ್ಪುರುಷರಭಿಮತವಿದು ಕಣಾ ಭೂಪಾಲ ಕೇಳೆಂದ ॥ ೯೮

ಉತ್ತಮರುಗಳ ನಿಂದಿಸುತ ದು
ರ್ವೃತ್ತನಾಗಿಯಧರ್ಮಕೋಟಿಯ
ನಿತ್ಯವಿಧಿ ತನಗಾಗೆ ಧರ್ಮದ ತಾರತಮ್ಯವನು ।
ಎತ್ತಲೆಂದರಿಯದೆ ಜಗಕ್ಕತಿ
ಮತ್ತನಾಗಿಹ ವೇದಬಾಹ್ಯನ
ಮೃತ್ಯುದೇವತೆ ಮುರಿದು ಮೋದುವಳರಸ ಕೇಳೆಂದ ॥ ೯೯

ಲೋಕಸಮ್ಮತವಾವುದದನು ನಿ
ರಾಕರಿಸುವವೆರುಗಳು ತಾವೇ
ನಾಕವಾಳರೆ ಜಗಕೆ ತಮ್ಮನದಾರು ಬಲ್ಲವರು ।
ಬೇಕು ಬೇಡೆಂಬುದಕೆ ತಾವವಿ
ವೇಕಿಗಳು ಮೊದಲಿಂಗೆ ಪ್ರಾಮಾ
ಣೀಕರುಗಳವರಲ್ಲ ಚಿತ್ತೈಸೆಂದನಾಮುನಿಪ ॥　　೧೦೦

ಚಕ್ರಿಯೊಬ್ಬಗೆ ಹತ್ತುಕಡಿಕರ
ಲೆಕ್ಕವೆಂತಾಚಕ್ರಿಹತ್ತಱ
ಲೆಕ್ಕವೊಬ್ಬಧ್ವಜಿಗೆಯಾಧ್ವಜಿಹತ್ತಱ ಸಮಾನ ।
ಲೆಕ್ಕ ವೇಶಿಗೆ ವೇಶಿಹತ್ತಱ
ಲೆಕ್ಕವೊಬ್ಬರಸಿಂಗೆ ಪಾತಕ
ವೊಕ್ಕಲಿಕ್ಕುವುದರಸುತನ ಸಾಮಾನ್ಯವಲ್ಲೆಂದ ॥　　೧೦೧

ಬಲುಕರಿಸಿ ಭೂಮಿಯೊಳಗೊಂದಂ
ಗುಲವನೊತ್ತಿದವಂಗೆ ಪಶುಸಂ
ಕುಲದೊಳೊಂದೇ ಗೋವನಪಹರಿಸಿದ ದುರಾತ್ಮಂಗೆ ।
ಅಱಿಪಿ ಪರರಂಗನೆಯುರೊಳಗೊ
ಬ್ಬಳನು ಭೋಗಿಸಿದಂಗೆ ನರಕದೊ
ಳುಱುವದಲ್ಲದೆ ಬೇಱೆ ಗತಿಯಿಲ್ಲೆಂದನಾಮುನಿಪ ॥　　೧೦೨

ದಾನವಿರಹಿತನಾಗಿಜನಿಸುವ
ಮಾನವಗೆ ದಾರಿದ್ರ್ಯವದಱಿನ
ನೂನದುಷ್ಕೃತಗೆಯ್ವನದಱಿಂ ಘೋರತರನರಕ ।
ಆನರಕದಿಂ ಮರಳಿ ಪಾತಕ
ಯೋನಿಯೊಳು ದಾರಿದ್ರ್ಯವದು ತಾ
ನೇನ ಮಾಡೆಯು ಬೆನ್ನ ಬಿಡದವನೀಶ ಕೇಳೆಂದ ॥　　೧೦೩

*
ಮೋರೆದಪ್ಪಿದ ಜಪ ಸುಕಲ್ಪಿತ
ಧಾರೆಯುಡುಗಿದ ದಾನ ದರ್ಭಾ
ಕಾರವಿರಹಿತವಾದ ಸಂಧ್ಯಾವಂದನಾದಿಗಳು |
ಪಾರವೈದದ ಶೌಚ ವಿನಯವಿ
ಹಾರವಿಲ್ಲದ ಪೂಜೆ ತಾವುಪ
ಕಾರಿಯಹುವೇ ರಾಯ ಚಿತ್ತೈಸೆಂದನಾಮುನಿಪ || ೧೦೪

---

* ಪಾಕಶಾಸನನೈದೆ ವೃತ್ರನ
ಧಾಕುಗಿಡಿಸಿ ದಧೀಚಿಯಸ್ಥಿಯೊ
ಳೌಕಿ ಹೊಯ್ಯಲು ದಾನವನ ತನು ನೀರೊಳಡಗೆಡೆಯು |
ತೂಕಗುಂದಿ ಜಲಾಧಿದೇವತೆ
ಯೂಕಪರ್ದಿಯು ಕರುಣದೊಳು ದ
ರ್ಭಾಕೃತಿಯು ಕೈಕೊಂಡುದವನೀಪಾಲ ಕೇಳೆಂದ ||

ಆದಿಯೊಳು ಕಮಲಾಸನನು ಮಧು
ಸೂದನನು ಮಧ್ಯದೊಳು ಮೇಲಣ
ಹಾದಿಯೊಳು ಗಿರಿಜೇಶನೀತ್ರೈಮೂರ್ತಿಮಯವಾಗಿ |
ಕಾದುಕೊಂಡಿಹುದಖಿಲಲೋಕವ
ನೈದೆ ದರ್ಭಾಂಕುಶದ ಮಹಿಮೆಯು
ಭೇದವನು ಬಣ್ಣಿಸುವನಾವನು ಭೂಪ ಕೇಳೆಂದ ||

ಬೆರಳ ಮೊದಲೊಳು ಭೂಸುರರು ನಡು
ವೆರಳೆಡೆಯೊಳಾಪಾರ್ಥಿವರು ತುದಿ
ಬೆರಳೊಳಗೆ ವೈಶ್ಯರುಗಳೀಕ್ರಮದೊಳು ಪವಿತ್ರವನು |
ಧರಿಸಬೇಹುದು ದಕ್ಷಿಣಕರಾಂ
ಬುರುಹದೊಳು ದಿನದಿನದ ಸಂಧ್ಯಾಂ
ತರದ ಸಮಯದೊಳರಸ ಚಿತ್ತೈಸೆಂದನಾಮುನಿಪ ||

ಎಂಬ ಮೂರುಪದ್ಯಗಳು ಖ. ಜ. ಪುಸ್ತಕಗಳಲ್ಲಿ 103ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತವೆ.

*
ಶ್ರುತಿಯವೊಲು ಪಾವನತೆ ಕುರುಭೂ
ಪತಿಯವೋಲಭಿಮಾನ ಲಕ್ಷ್ಮೀ
ಪತಿಯವೋಲ್ ಸತ್ಕೀರ್ತಿ ವಿದುರನವೋಲು ಸುಜ್ಞಾನ ।
ಕ್ಷಿತಿಯವೋಲ್ ಸ್ಥೈರಣೆ ಸುಹೃತ್ಸಂ
ತತಿಯವೋಲ್ ಪರಿಣಾಮ ಕುಂತೀ
ಸುತರವೊಲು ಸತ್ಯಾಧಿಕತೆ ಮೂಜಗದೊಳಿಲ್ಲೆಂದ ॥　　೧೦೫

ಗಗನದಗಲದಿನುಗುವ ವೃಷ್ಟಿಯೊ
ಳೂಗೆದ ಕೀಲಾಲವು ಸಮುದ್ರವ
ಹೊಗುವವೊಲು ನಾನಾಪ್ರಕಾರದ ರೂಪುಗಳೊಳಸೆವ ।
ಬಗುವಿಗೆಯ ದೈವದ ಪದಾಂಬುಜ
ಯುಗಳರಚನೆಯ ಪೂಜನೆಗಳವು
ಜಗದುದರನನು ಮುಟ್ಟದಿಹುವೇ ಭೂಪ ಕೇಳೆಂದ ॥　　೧೦೬

ಜಲದೊಳಗೆ ವಾರಾಹವಿಷ್ಣು
ಸ್ಥಳದೊಳಗೆ ವಾಮನನು ವನಸಂ
ಕುಲದೊಳಗೆ ನರಸಿಂಹನಾಗಿಯೆ ಭಕ್ತನಿಕರವನು ।
ಸಲಹುತಿಹನೊಮ್ಮೆಯು ಜಗತ್ತ್ರಯ
ದೊಳಗು ಹೊಱಗೆಂದೆನ್ನದೀಪರಿ
ಜಲರುಹಾಕ್ಷನು ಕೃಷ್ಣ ಕೇಶವನಲ್ಲದಿಲ್ಲೆಂದ ॥　　೧೦೭

---

* ಗುರುತನುಜನವೊಲಾಯು ನೀಲಾಂ
ಬರನವೊಲು ಬಲ ದಶರಥನವೊ
ಲ್ಸಿರಿ ನದೀಜನವೋಲು ಶೌರ್ಯವು ರಘುಪತಿಯವೋಲು ।
ಅರಿವಿನಾಶನ ನಹುಷನವೊಲೈ
ಶ್ವರಿಯ ಮಾರುತಿಯವೊಲು ಗತಿ ಸಂ
ವರಿಸುವುದು ಹರಿಯೊಲಿದ ಮನುಜರಿಗಲ್ಲದಿಲ್ಲೆಂದ ॥

ಎಂಬ ಪದ್ಯವು, ಖ. ಪುಸ್ತಕದಲ್ಲಿ 104ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತದೆ.

ಕತ್ತಲೆಯ ಕಾಲಾಟ ಸೂರ್ಯನ
ನೊತ್ತುವುದೆ ದುಷ್ಕರ್ಮಕೋಟಿಗ
ಳತ್ತಮುಟ್ಟುವುವೆ ಮಹಾಪುರುಷರನು ಖಗಪತಿಯು ।
ಮುತ್ತುವುದೆ ವಿಷ ಕೃಷ್ಣರಾಯನ
ಭಕ್ತರನು ಪರಿಭವಿಸುವುದು ತಾ
ನೆತ್ತಲದು ಜಡಜೀವರಿಗೆಯುಳಿವೆಡುವುದಿಲ್ಲೆಂದ ॥ ೧೦೮

ಅಱಿಯಬಾರದು ಮುಂದೆ ಬಹ ದಿನ
ಬಿಱಿಸು ನೀನೆಚ್ಚತ್ತು ನಡೆ ಮೈ
ಮಱೆಯದಿರು ನಿನ್ನಾತ್ಮಜರ ವೈರಾನುಬಂಧದೊಳು ।
ಬಱಿದಹುದು ಬ್ರಹ್ಮಾಂಡವಿದ ನೀ
ನಱಿಯೆ ಮೇಲಣ ತಾಗುಬಾಗಿನ
ಹೊಱಿಗೆ ದೈವಾಧೀನವಾಗಿಹುದೆಂದನಾಮುನಿಪ ॥ ೧೦೯

ತೆಱಹುಗುಡದೆ ಧರಿತ್ರಿಯೊಳಗಿಡಿ
ಕಿಱಿದ ದೈತ್ಯಸಹಸ್ರಕೋಟಿಯ
ತಱಿದು ಭೂಭಾರವನಿಳುಹಿ ನಿರ್ಜರರ ದುಗುಡವನು ।
ಹಱಿದು ಹಾಯಿಕಿ ಭಕ್ತರನು ನೆಱಿ
[1] ಮೆಱೆಯಲೋಸುಗ ಜನಿಸಿದನು ಹರಿ
ಯಱಿಯಲಾ ಶ್ರೀಕೃಷ್ಣರಾಯನು ಮನುಜನಲ್ಲೆಂದ ॥ ೧೧೦

ಆತನಾಪಾಂಡವರ ಹರಿಬವ
ನಾತು ಪಾರ್ಥನ ರಥಕೆ ತಾನೇ
ಸೂತನಾದನಲೈ ನಿಮಗೆ ಜಯವೆಂತಹುದು ಹೇಱು ।
ಭೂತಳವನೊಪ್ಪಿಸುವುದಸುರಾ
ರಾತಿಯನು ಮಱೆವೊಕ್ಕು ಬದುಕುವು
ದೀತತುಕ್ಷಣವಲ್ಲದಿದರ್ದೊಡೆ ಕಿಡುವಿರಕಟೆಂದ ॥ ೧೧೧

1 ಹೊರೆ. ಖ. ಜ.

ಜಲಧಿಯೊಳು ದುಗ್ಧಾಬ್ಧಿ ತೀರ್ಥಾ
ವಳಿಗಳೊಳು ಸುರನದಿ ಮುನೀಶ್ವರ
ರೊಳಗೆ ವೇದವ್ಯಾಸನಾಪ್ರತಿಗಳೊಳು ಹನುಮಂತ ।
ಜಲರುಹಾಕ್ಷನು ದೈವದೊಳು ಕೇ
ಳುತ್ತಿದ ಭೂಮೀಪಾಲರೊಳಗ
ಗ್ಗಳೆಯನೈ ಧರ್ಮಜನು ಪೃಥ್ವೀಪಾಲ ಕೇಳೆಂದ ॥ ೧೧೦

ಈಪರಿಯ ಬೋಧೆಯೊಳು ನೃಪನನು
ತಾಪವನು ಮಾಣಿಸಿ ಕುಬುದ್ಧಿ
ವ್ಯಾಪಕನು ಧೃತರಾಷ್ಟ್ರನೆಂಬಪಕೀರ್ತಿಯನು ಬಿಡಿಸಿ ।
ಕಾಪಥಂಗಳ ನಿಲಿಸಿ ತತ್ತ್ವಕ
ಲಾಪವಿಮಲಜ್ಞಾನದುದಯದ
ರೂಪ ಕಾಣಿಸುವಂತೆ ಸೂರ್ಯೋದಯವ ಕಾಣಿಸಿದ । ೧೧೩

ಧರಣಿಪನ ಸಂತೈಸಿ ಸನ್ಮುನಿ
ವರನು ತನ್ನಾಶ್ರಮಕೆ ತಿರುಗಿದ
ನುರತರಪ್ರೇಮದೊಳು ಧೃತರಾಷ್ಟ್ರವನೀಶ್ವರನು ।
ಪಱಿಯುದಮಲಾನಂದರಸದೊಳು
ಹೊರೆದು ಪೊಂಪುಳಿವೋಗಿ ಲಕ್ಷ್ಮೀ
ವರನ ನೆನೆದನು ರಾಯ ಗದುಗಿನ ವೀರನರಯಣನ ॥ ೧೧೪

ನಾಲ್ಕನೆಯ ಸಂಧಿಯು ಮುಗಿದುದು.

---

* ಬೆರಸಿ ದಂಡೆಯೊಳಿಹರು ಚಿತ್ತವ
ಬೆರಸಿಹರು ಬೇಱೊಬ್ಬರೊಳು ನಿಜ
ದೆರಕವೊಬ್ಬನೊಳಿಹುದು ಬೇಱೊಬ್ಬನೊಳಗೊಲವಿಹುದು ।

ವಿರಹುವುನವೆರಡೊಡಲು ಚಿತ್ತದ
ಪರಿಯೆರಡು ವೈಯೆರಡು ನಾರಿಯ
ರೆರಡನಲ್ಲದೆ ಬಗೆಯರವನೀಪಾಲ ಕೇಳೆಂದ ॥ ೧

ಜನಪ ಕೇಳ್ ಸಂಗಿಯನು ಕೃತಿಹೀ
ನನನು ಸೃಷ್ಟಾಗ್ನಿತ್ರಿತಯು ನಾ
ಶನನ ಬಹ್ವಾಶಿಯನು ಸತತಗ್ರಾಮಯಾಜಕನ ।
ಮನುಜನಿಂದನಶಪಥಕಾರಿಯ
ನನಭಿಷೇಕದ ನೀಚದೇವಲ
ಕನ ವೃಥಾ ಮಂದಿಗಳ ಪೂಜಿಪುದಂಗವಲ್ಲೆಂದ ॥ ೨

ವಹ್ನಿ ಪೂಜೆಯ ವಿರಚಿಸದೆ ದಿನ
ಹನ್ನೆರಡನುಳಿದವನು ಕಾಲದ
ಮನ್ನಣೆಗಳೊಳು ಸಂಜೆಯನು ಮಾಡದ ಮಹೀಸುರನು ।
ತನ್ನ ಮುಖದಿಂ ನಾಲ್ಕು ವೇದವ
ಭಿನ್ನವಾಗಿಯೆ ಮಾಡುವವನುರೆ
ಜನ್ಮಜನ್ಮದೆ ಶೂದ್ರನಹನ್ನೈ ರಾಯ ಕೇಳೆಂದ ॥ ೩

ತನ್ನ ಮುಖದಿಂದಾರ್ಜಿಸಿದ ಸಂ
ಪನ್ನ ಧನವುತ್ತಮವು ಪಿತೃಧನ
ವಿನ್ನು ಮಧ್ಯಮ ಸಹಜಧನವು ಕನಿಷ್ಠ ಸತಿಯ ಧನ ।
ಸನ್ನಿಹಿತವಧಮಾಧಮವದ
ಕೆನ್ನಳವೆ ಬಣ್ಣಿಸಲು ಪರಧನ
ದುನ್ನತಿಯೊಳಪದಶೆಯ ಬದುಕನು ರಾಯ ಕೇಳೆಂದ ॥ ೪

ದೆಸೆಗಳೇ ವಾಸಸ್ಸು ಲೀಲಾ
ಪ್ರಸರಣವು ನಿರ್ಲಜ್ಜೆ ಜಡೆ ರಂ
ಜಿಸುವ ಧೂಳೀಧೂಸರತೆ ಗಂಗಾಧರನವೋಲು ।
ಎಸೆವ ಸುತರುಗಳಿಲ್ಲದಿರೆ ಶೋ
ಭಿಸುವುದೇ ಸಂಸಾರವೆಂಬುದು
ವಸುಧೆಯೊಳು ಪುಣ್ಯಾಧಿಕರುಗಳಿಗಲ್ಲದಿಲ್ಲೆಂದ ॥ ೫

ಯುವತಿಯರು ಪಾದಜರೊಳಾವಿ
ರ್ಭವಿಸಬಾರದು ಪಾಪಿಕಾಲಿಯು
ಪವಿರಳಿತಜಪ ತೀರ್ಥಸೇವೆ ತಪಸ್ಸು ಮಂತ್ರಮುಖ |
ಶಿವನ ಪೂಜೆಗಳುತ್ತಮಾಶ್ರಮ
ವಿವನಳುಕದಂಘ್ರೈಸೆ ನರಕಾ
ರ್ಣವದೊಳಗೆ ಮುಳುಗಾಡದಿಹರೇ ರಾಯ ಕೇಳೆಂದ || ೬

ಕುಲಕೆ ಕಡೆ ಮಡದಿಯರು ಧನಸಂ
ಕುಲಕೆ ಕಡೆ ಬ್ರಹ್ಮಸ್ವ ನೃಪಸಂ
ಕುಲಕೆ ಕಡೆ ನಿರುಪಾಧಿ ಬ್ರಾಹ್ಮಣ್ಯಕ್ಕೆ ಕಟ್ಟಕಡೇ |
ನಿಲವಳಿಯದ ಸ್ವಾಂತರಂಗದ
ಬಳಕೆ ಯಿತಿರಲಳಿವುಳಿವ ನೀ
ತಿಳಿದು ನಡೆವೈ ರಾಯ ಚಿತ್ತೈಸೆಂದನಾಮುನಿಪ || ೭

ಕೆಸರೊಳಡಿಯಿಟ್ಟುಬ್ಬಿತೇಳದ
ಪಶುವನೊಂದನು ಬ್ರಾಹ್ಮಣಸ್ತ್ರೀ
ಪಶುವಿನೊಂದಾಸೆರೆಯನಾಬ್ರಾಹ್ಮಣನಬಂಧನವ |
ವಸುಧೆಯೊಳಗೆ ಕುಟುಂಬವೊಂದಜ
ಸಸಿಯನುದ್ಧರಿಸುವ ಮಹಾತ್ಮರು
ರೆಸೆವರೈ ಸ್ವರ್ಗಾದಿಭೋಗದೊಳರಸ ಕೇಳೆಂದ || ೮

ಈ ಪದ್ಯಗಳು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತವೆ.

## ಯಾನ ಸಂಧಿಪರ್ವ

## ಐದನೆಯ ಸಂಧಿ.

ಕೌರವೇಶ್ವರನು ಸಂಜಯನನ್ನು ಜರೆದುದು

---

ಸೂಚನೆ

ವೀರಪಾಂಡವರಧಟನಾದನು
ಜಾರಿ ಹೇಳಿದ ವಚನರಚನೆಯ
ಕೌರವಗೆ ಬಂದಱುಹೆ ಕೋಪಿಸಿ ಸಂಜಯನ ಜಱೆದ ॥

ಬೀಳುಕೊಂಡುದು ರಜನಿ ಕುರುಭೂ
ಪಾಲನುಪ್ಪವಡಿಸಿದನೋಲಗ
ಶಾಲೆಯೊಳು ನೆರೆಹಿದನು ಸಭ್ಯರನಾಪ್ತಮಂತ್ರಿಗಳ ।
ಕೇಳುವೆವು ಕರೆ ಸಂಜಯನನವ
ರೋಲಗದ ವೈಸಿರಿಯನೆಂದು ನೃ
ಪಾಲನಟ್ಟಿದ ದೂತನೊಡನೈತಂದ ಸಂಜಯನು ॥ ೧

ಬಂದು ಮೆಯ್ಯಿಕ್ಕಿದನು ಕುರುನೃಪ
ವೃಂದವನು ಪರಿವಾರವನು ಯಮ
ನಂದನನು ಬೆಸಗೊಂಡು ಕಳುಹಿದನುಚಿತವಚನದೊಳು ।
ಎಂದು ಬಱಿಕಿನ ರಾಜಕಾರ್ಯವ
ನಂದು ಬಿನ್ನೈಸಿದನು ಚಿತ್ತೈ
ಸೆಂದು ಧೃತರಾಷ್ಟ್ರಂಗೆ ದುರ್ಯೋಧನಗೆ ಕೈಮುಗಿದು ॥ ೨

ಜೀಯ ಬಿನ್ನಹವಿಂದು ಪಾಂಡವ
ರಾಯರೈಶ್ವರ್ಯವನು ಸಾವಿರ
ಬಾಯ ಶೇಷನು ಹೊಗಳಲಳವಲ್ಲೆನ್ನ ಪಾಡೇನು ।

ನಾಯಕರ ಕಡುಹುಗಳನವರವ
ರಾಯುತವನನಿಬರಿಗೆ ಕವಲದ
ಳಾಯತಾಕ್ಷನ ಕರುಣದಳತೆ ವಿಚಿತ್ರವಾಯ್ತೆಂದ ‖ ೩

* ಓಲಗದೊಳುಬ್ಬಿದ ನುಡಿಗಳ
ಹೊಟೆ ತಮ [1] ತಮಗೆದ್ದು ಜಱೆದರು
ಕಾಳಗಕೆ ಕೈಗಟ್ಟಿ ಹಿಂಡೆದ್ದೊದಱಿದವನಿಪರ ।
ಮೇಲೆ ಸಂತೈಸಿದನು ಧರ್ಮನೃ
ಪಾಲನಲ್ಲಿಂ ಬೞಿಕ ಮುರಹರ
ನಾಲಯಕೆ ಪರಿಮಿತದೊಳರ್ಜುನನೆನ್ನ ಕರಿಸಿದನು ‖ ೪

ದೇವನಿದ್ದನು ಸತ್ಯಭಾಮಾ
ದೇವಿಯರ ನಸುಮಲಗಿಯರ್ಜುನ
ದೇವನಂಕದ ಮೇಲೆ ಸಿರಿಪದಕಮಲವನು ನೀಡಿ ।
ನಾವು ಬರಲೆಮಗುಚಿತದೊಳು ಸಂ
ಭಾವನೆಯ ಮಾಡಿಸಿದನೆಮಗಿ
ನ್ನಾವುದನು ನೇಮಿಸಿದಿರೆನಲಿಂತೆಂದನಸುರಾರಿ ‖ ೫

ಎಮಗೆ ಸರಿಯಿತ್ತಂಡದಲ್ಲಿಯು
ಮಮತೆ ಬೇಱೊಬ್ಬರೊಳು ಪಕ್ಷ
ಭ್ರಮೆಯ ಮಾಡೆವು ಹಿತವ ಬಯಸುವೆವೆರಡುಸಂತತಿಗೆ ।

---

* ಖ. ಪುಸ್ತಕದಲ್ಲಿ 3 ನೆಯ ಪದ್ಯದ ಮುಂದೆ.
ಮುನ್ನ ಸಭೆಯೊಳಗಾನುನುಡಿದಾ
ಗನ್ನಗತಗದ ನುಡಿಗೆ ಭೂಪರು
ಭಿನ್ನರಾಗೊಡನೆದ್ದು ಬೞಿಕವಗಡಿಸಲೆನ್ನುವನು ।
ಮನ್ನಿಸಿದನಾಧರ್ಮಸುತನುರೆ
ಸನ್ನಿಹಿತದೊಳು ಮಱುದೆವಸ ಕರೆ
ದೆನ್ನ ಫಲುಗುಣ ಭೀಮರೊಡನಿಂತೆಂದನಸುರಾರಿ ‖
ಎಂಬ ಪದ್ಯವು ಹೆಚ್ಚಾಗಿ ದೊರೆಯುತ್ತದೆ.

1 ತಮಗೆನ್ನ. ಜ.

ಕಮಲಮುಖಿ ಸುಲಿವಡೆದು ಲಕ್ಷ್ಮೀ
ರಮಣ ಲಕ್ಷ್ಮೀರಮಣ ಲಕ್ಷ್ಮೀ
ರಮಣ ಎಂದೊರಲಿದೊಡೆ ಸಂಜಯ ನೊಂದೆ ನಾನೆಂದ ॥ ೬

ಕಾವುದೈ ಗೋವಿಂದ ಸಲಹೈ
ದೇವಕೀಸುತ ಗಂಡರೈವರ
ಭಾವ ಬಿಟ್ಟತು ನೀನಲ್ಲೈ ದೇಸಿಗರಿಗಧಿದೈವ ।
ದೇವ ಕೆಟ್ಟೆನು ಕೆಟ್ಟೆನೈ ಕರು
ಣಾವಲೋಕನದಿಂದೆ ಸಲಹೈ
ಜೀವನವನೆಂದೊರಲೆ ಸಂಜಯ ನೊಂದೆ ನಾನೆಂದ ॥ ೭

ಭಂಟರಾಂ ಭಕ್ತರಿಗೆ ನೆನೆವರು
ನಂಟರೆಮಗೊಲಿದಂತೆ ಹೊಗಳಿದೊ
ಡೆಂಟುಮಡಿ ಮೆಚ್ಚುವೆವು ಮೆಚ್ಚೆವು ತರ್ಕಸಾಧಕರ ।
ಉಂಟು ಪಾಂಡವರೈವರೊಳು ಬಲು
ನಂಟತನ ಮಜಿ ಯೋಕೆಯಿವರಿಗೆ
ಕಂಟಕರು ನಮಗಾದ ಕಂಟಕರೆಂದನಸುರಾರಿ ॥ ೮

ನೆನೆವುದೆಂದನು ಪಾರ್ಥನಾಕಾ
ನನದೊಳಗೆ ಗಂಧರ್ವನೊಳು ಬಂ
ದನುವನಾಗೋಗ್ರಹಣದೊಳುಮಾಡಿದ ಪಲಾಯನವ ।
ವನಜಮುಖಿಯನು ಬಯಸಿದೊಡೆ ಬಿ
ಲ್ಲಿನೊಳು ಬಡಿವಡೆದುದನು ಕೌರವ
ಜನಪ ಮಱೆದಿರಲಾಗದೆಂದರಸಂಗೆ ಹೇಳೆಂದ ॥ ೯

ವೀರಭೀಮನ ಗದೆಯ ಹೊಯ್ಲಿನ
ಭಾರಣೆಯನೆನ್ನ ತುಳಚಾಪದ
ಸಾರಶಸ್ತ್ರಾವಳಿಯ ಮಳೆಗಾಲದ ಮಹಾದ್ಭುತವ ।

ಧೀರನಕುಲನ ಸಾತ್ಯಕಿಯ ಬಲು
ಕೂರಸಿಯ ಸಹದೇವಮತ್ಸ್ಯರು
ವಾರತೆಯ ನಿಮ್ಮರಸನಱಿದಿಹುದೆಂದನಾಪಾರ್ಥ ॥ ೧೦

ಅಂದು ಜೂಜಿನ ಸಭೆಯೊಳಗೆ ನಾ
ವೆಂದ ಮಾತುಗಳುಂಟು ತಾವದ
ಮುಂದೆ ನೋಡಲಿ ಕರ್ಣಶಕುನಿಸುಯೋಧನಾದಿಗಳು ।
ಇಂದು ನೆನೆವುದು ದೇಶಕಾಲವ
ಹಿಂದುಗಳೆಯದೆ ಬೇಗ ಮಾಡುವೆ
ವೆಂದು ಬಿನ್ನಹಮಾಡಹೇಳಿದನರ್ಜುನನು ನಿಮಗೆ ॥ ೧೧

ತೊಡೆಗಳಿಗೆ ಸುಕ್ಷೇಮವೇ ನಿ
ನ್ನೊಡೆಯನವನೊಡವುಟ್ಟಿದನ ಮೈ
ಜಡಿದುದೇ ಪಾಲಿಸಿದೊಡನಿಬರಿಗಹುದು ರುಧಿರಜಲ ।
ಒಡನೆ ಹುಟ್ಟಿದ ನೂರ್ವರುಂ ಮೈ
ಗೆಡರಲೇ ಬೆಸಗೊಳ್ವುದಂಜದೆ
ಯೊಡೆಯರಿಗೆ ಹೊಣೆಗೊಂಡೆ ಹೇಳೆಂದಟ್ಟಿದನು ಭೀಮ ॥ ೧೨

ಸಾಕು ಸಂಜಯ ಗಳಹದಿರು ಘಡ
ನೂಕಿವನನಾರಲ್ಲಿಗಟ್ಟಿದ
ರಾಕುತಾರರ ಬಯಲ ಗೃಹಗರ್ಜನೆಯ ಗರ ಹೊಡೆದು ।
ತೇಕಿ ತಲೆಕೆಳಗಾದನಿವನವಿ
ವೇಕಸಾಗರನೆಲೆ ನೃಪತಿ ಜಗ
ದೇಕವೀರನು ಕರ್ಣ ತಾನಿರೆ ಸಂಧಿಯೇಕೆಂದ ॥ ೧೩

ಮಂದೆಯೊಳು ಮೈಮಱೆದು ಬಾಹಿರ
ರೆಂದ ಮಾತನು ರಾಜಸಭೆಯೊಳು
ತಂದು ಹರಹುವನಿವನು ಶಿಷ್ಟನೆ ಜಗದ ಭಂಡನಲಾ ।

ಇಂದುಮೌಳಿಯನೊಂದುಬಾರಿಗೆ
ಹಿಂದುಮುಂದನು ಮಾಡುವೆನು ತಾ
ಮೊಂದಿ ಕುಂತೀಮಕ್ಕಳಿದಿರೇ ಎಂದನಾಕರ್ಣ ॥ ೧೪

ಭಂಡನೇ ಸಂಜಯನು ಲೋಕದ
ಭಂಡ ನೀನೆಲೆ ಕರ್ಣ ನಿನಗಾ
ಪಾಂಡವರ ಪರಿಯಂತವೇನಿನ್ನವರ ಸೇನೆಯೊಳು ।
ಪುಂಡನೊಬ್ಬನೆ ಸಾಕು ಕೆದಱುವೆ
ಗಂಡುಗರ್ವದ ಮಾತ ನಿನ್ನನು
ದಿಂಡುದಱಿವೆನು ಮುನಿದೊಡರ್ಜುನನೆಂದನಾಭೀಷ್ಮ ॥ ೧೫

ಖುಲ್ಲನಿವನೀಕರ್ಣನವದಿರು
ಬಲ್ಲಿದರು ಬವರದೊಳು ಹಿಂದಿವ
ನಲ್ಲಿ ನಂಬುಗೆಯುಂಟೆ ಮರುಳೇ ಹೇೞ ಫಲವೇನು ।
ಇಲ್ಲ ನೋಡರ್ಜುನನಗೆ ಪಡಿ ನರ
ರಲ್ಲಿ ನಿರ್ಜರರಲ್ಲಿ ಪನ್ನಗ
ರಲ್ಲಿ ಕೈವಾರಿಗಳ ನಾವಿನ್ನೆಂದನಾಭೀಷ್ಮ ॥ ೧೬

[1] ಮುಱಿಯದಿರು ಗಾಂಗೇಯನೆಂದುದು
ಪರಮತತ್ತ್ವವು ಪಾರ್ಥನನು ಸಂ
ಗರದೊಳಾನುವರಿಲ್ಲ ಕೇಳ ಸುರಾಸುರಾಳಿಯೊಳು ।
ದುರುಳರಾಡುವ ಹೊಳ್ಳುನುಡಿಯದು
ಹಿರಿಯರಭಿಮತವಲ್ಲ [2] ಸಂಧಿಗೆ
ಕೊರಳುಗೊಳಿಸುವುದುಚಿತವೆಂದನು ದ್ರೋಣನರಸಂಗೆ ॥ ೧೭

ಹುರುಳುಗಿಡಿಸುವಿರಾವು ನುಡಿದೊಡೆ
ಕರಗಿ ಕುಂತಿಯ ಮಕ್ಕಳೆಂದೊಡೆ
ಹರೆಹಿಕೊಳ್ವಿರಿ ಡಿಂಭವೆಮ್ಮೊಳು ಜೀವವವರಲ್ಲಿ ।

---

1 ಮಱೆಯದಿರು, ಖ. 2 ಸಂಧಿಯನೆರಹುಗೊಳಿಸು, ಖ.

ಭರತಸಂತತಿಗಳೊಳು ಕೆಲಬರು
ನರರೆ ಕೆಲಬರು ಸುರರೆ ಸಾಕಂ
ತಿರಲಿ ಸಮರದೊಳೆನ್ನ ನೋಡೆಂದನು ಸುಯೋಧನನು ॥ ೧೮

ಬೇಡ ಮಗನೇ ಕೃಷ್ಣರಾಯನು
ರೂಡಿಸಿದ ಕಟ್ಟಾಳು ಕೆಲಕೆಲ
ರಾಡುವರು ಸಾಕ್ಷಾತುಲಕ್ಷ್ಮೀಕಾಂತ ಹರಿಯೆಂದು ।
ಕೂಡಿಕೊಂಡಿಹನಾತನವರನು
ಕೇಡನೊಂದನು ಮಾಡಲೀಯನು
ನಾಡನೊಪ್ಪಿಸು ಮಗನೆಯೆಂದನು ಬೆದಱಿ ಧೃತರಾಷ್ಟ್ರ ॥ ೧೯

ಮರುಳುಗಳಲಾ ಬೊಪ್ಪನವರೀ
ಮುರಹರನು ಹರಿಯೆಂದು ಮುನ್ನವೆ
ಅಱಿದಿಹೆನು ನೀವಂಜದಿರಿ ನಿಮಗಾಗದವಸಾನ ।
ಗುರುನದೀಸುತಮುಖ್ಯರಿರಲೀ
ಕುರುಕುಲಕೆ ಕೇಡಹುದೆ ಕೊಲುವೊಡೆ
ಸುರಪತಿಯು ಸುತನಳವೆಎಂದನು ಕೌರವರ ರಾಯು ॥ ೨೦

ಭಾರ ಹೆಚ್ಚಿ ದೊಡೊಱಲಿ ಧರಣೀ
ನಾರಿ ಬಿನ್ನಹಮಾಡಿದೊಡೆ ದೈ
ತ್ಯಾರಿ ಬಿಜಯಂಗೈದನಿಲ್ಲಿಗೆ ಮನುಜವೇಷದೊಳು ।
ಭೂರಿದೈತ್ಯರನೊರಸಿದನು ಕೈ
ಯಾರೆ ಬಳಿಕರ್ಜುನನ ಕೈಯೊಳು
ಕೌರವರ ಕೊಲಿಸುವನು ನಾವಿನ್ನಂಜಲೇಕೆಂದ ॥ ೨೧

ಕಾವನಾತನು ಕೊಲುವನಾತನು
ಸಾವನಾತನ ಕೈಯೊಳಾಗಲಿ
ನೀವು ಪಾಂಡವರೊಡನೆ ಸುಖದೊಳು ರಾಜ್ಯವಾಳುವುದು ।

ಸಾವವರು ನಾವಂಜಿ ಬದುಕೆವು
ನೀವು ಚಿಂತಿಸಬೇಡಿ ನಿಮ್ಮನು
ಕಾವನೈ ಕರುಣದೊಳು ಗದುಗಿನ ವೀರನಾರಯಣ ॥ ೨೮

ಐದನೆಯ ಸಂಧಿಯು ಮುಗಿದುದು.

---

## ಭಗವದ್ಯಾನಪರ್ವ

## ಆ ರ ನೆ ಯ ಸಂ ಧಿ .

ಕೃಷ್ಣಸ್ವಾಮಿಯು ಪಾಂಡವರೊಡನೆ ಆಲೋಚಿಸಿದುದು.

---

ಸೂಚನೆ.

ಸಮರದನುಸಂಧಾನದೊಳು ಸಂ
ಭ್ರಮಿಸೆ ಶೌರಿ ಸಮೀರಸುತನನು
ಸಮತೆಯೊಳು ಸೇರಿಸಿದನೆಂದು ಸಮಗ್ರಸೂಕ್ತಿಯೊಳು ॥

ಕೇಳು ಜನಮೇಜಯಧರಿತ್ರೀ
ಪಾಲ ಧರ್ಮಜನಹಿತಮಂತ್ರಿಯು
ಬೀಳುಕೊಟ್ಟನು ಬಂದನಸುರಾರಾತಿಯೋಲಗಕೆ ।
ಮೇಲಣನುವಿನ್ನೇನು ಲಕ್ಷ್ಮೀ
ಲೋಲ ಕರುಣಿಸು ಕೌರವಕ್ಷಿತಿ
ಪಾಲನೊಳು ನಮಗೇನು ಘಟಿಸುವುದೆಂದು ನೃಪ ನುಡಿದ ॥ ೧

ಕ್ಷಮೆಗೆ ಸೇರುವರಲ್ಲ ಮೂರ್ಖರು
ಕುಮತಿಗಳು ಮುಂದರಿಯ [1] ದವರ
ಕ್ರಮದನೆಗಳಿಕೆಯಳಿವುದನ್ವಯದಮಳ ಕೀರ್ತಿಗಳ ।

---

1 ರವರಕ್ರಮದೆ ನೆಗಳಿದೊಡಳಿವುವನ್ವಯದಮಲಕೀರ್ತಿಗಳು, ಟ.

ನಮಗೆ ಹದನಿನ್ನೇನು ಸಂಧಿಯೊ
ಸಮರವೋ ಚಿತ್ತೈಸಿ ಬೆಸಸೈ
ಕಮಲಲೋಚನ ಎಂದು ಬಿನ್ನೈಸಿದನು ಯಮಸೂನು ॥

ಏನು ನಿನ್ನಭಿಮತವು ವರಸಂ
ಧಾನವೋ ಸಂಗ್ರಾಮವೋ ನಯ
ವೇನು ಮನದೊಳವರಿಯೊಳಿರಿಸದೆ ಹೇಳು ನಿಶ್ಚಯವ ।
ನೀನೊಲಿದ ಹದನಾವುದದನೊಲಿ
ದಾನು ಘಟಿಸುವೆನೆಂದು ಕುಂತೀ
ಸೂನುವನು ಬೆಸಗೊಂಡನಸುರಾರಾತಿ ನಸುನಗುತೆ ॥

ಅಱಿವುವೊಡಲುಗಳವನಿ ಸಾಗರ
ಮೆಱೆಯಲುಱುವುದು ಕೀರ್ತಿ ಸೋದರ
ರೊಳಗೆ ನೆಱೆ ಕಡಿದಾಡಿ ಬದುಕಿದನೆಂಬ ದುರ್ಯಶದ ।
ಹೞಿವು ಹೊಱುವುದು ದೇವ ಸುಡಲೀ
ನೆಲನನಾ ಕೌರವನ ಕೈಯೊಳು
ಕೆಲವುನಗರಂಗಳನು ಕೊಡಿಸಿಯೆ ಸಂತವಿಡು ಎಂದ ॥

ವರಕುಶಸ್ಥಳವನು ವೃಕಸ್ಥಳ
ಪುರವ ವಾಸಂತಿಯನು ಕೌರವ
ಧರಣಿಪಾಲನೊಳೀಸಿಕೊಡುವುದು ವಾರಣಾವತವ ।
ಶರಧಿಮೇರೆಯೊಳೈದನೆಯ ಪು
ರವರವನೊಲಿದುದ ಕೊಡಲಿ ಮನವ
ಚ್ಚರವೆ ಮೆಱೆದೋಲೈಸುವೆವು ಧೃತರಾಷ್ಟ್ರಭೂಪತಿಯ ॥

ನೀವು ಬಿಜಯಂಗೈದು ಸಂಧಿಯ
ನಾವಪರಿಯೊಳು ಘಟಿಸಿ ಕುರುಭೂ
ಪಾವಳಿಯೊಳವಿಸ್ಮರವು ಸಂಭವಿಸುವವೊಲೆಸಗುವುದು ।

ಲಾವಕರ ನುಡಿಗಳೊಳು ಕೆಡುವುದು
ಕೋವಿದರ ಮತವೆಲ್ಲ ಮೇಲೆಮ
ಗಾವಮನವುನಿಸಿಲ್ಲ ಸಂಧಿಯು ರಚಿಸಿ ಸಾಕೆಂದ ॥ ೬

ಎನೆ ಮುರಾಂತಕನೆಳುಕಿ ಯುಮನಂ
ದನನ ಮತಿ ಸಂಧಾನದೊಳು ಸಂ
ಜನಿಸಿತಾದೊಡೆ ಕಾಣೆನವನಿಯು ಹೊಱಗೆ ಹಱವುಗಳ ।
ಮನದೊಳನುಸಂಧಾನವೆಂತಕ
ತನುಜನೊಳು ತೊಳಸಾಯ್ತು ತೋಟಿಯು
ನೆನೆಹು ತಾನೆಂತೆಂದು ಚಿಂತಿಸುತಿರ್ದನಸುರಾರಿ ॥ ೭

ಎಲೆ ಕೃತಾಂತಜ ವೈರಿಭೂಮಿಪ
ಕುಲಕೃತಾಂತ ಸರಾಗನತಿನಿ
ರ್ಮಲನು ನೀನಹೆಯಾಸುಯೋಧನನಧಿಕಕಲ್ಮಷನು ।
ನೆಲನ ಕೊಡಲಱಿಯನು ವೃಥಾ ಕ
ಕ್ಕುಲಿತೆಯಲ್ಲದೆ ಕಾಣೆನಿದಱೊಳು
ಫಲವೆನೆಂದಸುರಾರಿ ನುಡಿದನು ಧರ್ಮನಂದನಗೆ ॥ ೮

ಅರಸನಭಿಮತವಿಂದು ಸಂಧಿಗೆ
ತೆರಳತಲೆ ಪವಮಾನಸುತ ನಿ
ನ್ನ ಱಿತವಾವುದು ಮನವ ವಂಚಿಸಬೇಡ ಹೇಱೆನಲು ।
ಧರಣಿಪತಿ ತಪ್ಪುವನೆ ಕರ್ಕಶ
ತರವ ಕದನದೊಳೇನುಫಲ ಸೋ
ದರರ ವಧೆಗೊಡಬಡುವನಲ್ಲಸುರಾರಿ ಕೇಳೆಂದ ॥ ೯

ಹಗೆಯೊಳಮ್ಮವರಲ್ಲಿಯೆದೆಗಿ
ಚ್ಚುಗಳ ಖುಲ್ಲಕುಠಾರರಪನಂ
ಬುಗೆಯು ಬಳಸಿದರದು ಪುರಾಕೃತಕರ್ಮದವಶೇಷ ।

ಬಗೆಯೆನವಮಾನವನು ಕೌರವ
ರಗಡುಮಾಡಿದರೆಂಬ ಚಿತ್ತದ
ದುಗುಡವೆಮಗಿನ್ನಿಲ್ಲ ಸಂಧಿಯ ರಚಿಸು ಸಾಕೆಂದ ॥ ೧೦

ಎಲೆ ಮಹಾದೇವಾಯ್ತು ಹಾಲಾ
ಹಲ ಸುಧಾರಸವುಕ್ಕಿದುರಿಯು
ಗ್ಗಳದ ಸೀತಲವಾಯ್ತು ಸಿಡಿಲಾಟೋಪ ನಯವಾಯ್ತು ।
ಕೊಳುಗುಳಕೆ ಪವಮಾನನಂದನ
ನಳುಕಿದನು ಮಝು ಮಾಯೆ ಕುಂತೀ
ಲಲನೆ ಪಡೆದಳೊ ಮಗನನೆಂದನು ದಾನವಧ್ವಂಸಿ ॥ ೧೧

ಈತನಭಿಮತವಿದು ಜಗದ್ವಿ
ಖ್ಯಾತಸಾಹಸ ಪಾರ್ಥ ಹೇಳೈ
ನೂತನಾಳಾಪವನು ಕೇಳ್ವೆವು ಶ್ರುತಿರಸಾಯನವ ।
ಭೀತಿ ಬೇಡೆಂದೆನಲು ನಮಗಿ
ನ್ನೇತರಭಿಮತವೇನ ಹೇಳಿದೊ
ಡಾತುಕೊಳ್ವೆನು ಸಿರದೊಳೆಂದನು ಪಾರ್ಥ ಕೈಮುಗಿದು ॥ ೧೨

ನಕುಲ ನೀ ಹೇಳೇನು ಹದ ನಿ
ನ್ನ ಕುತಿ ಸಾಮವೊ ಮೇಣು ಸಮರವೊ
ಸುಕರಮಂತ್ರವೆನಬೆವೆ ನೀನೆಮಗಂಜಬೇಡೆನಲು ।
ಯುಕುತಿಯೇ ಹಾಗಹುದುಭಯರಾ
ಜಕವ ಸಂತೈಸುವುದು ಬೇಚುವು
ಗುಕುತಿಯೆಲ್ಲಿಯದೆಂದನಾಮಾದ್ರೇಯ ವಿನಯದೊಳು ॥ ೧೩

ಆವುದಭಿಮತವೇನು ಹದ ಸಹ
ದೇವ ನೀ ಹೇಳೆನಲು ಕೇಳಲೆ
ದೇವ ಸೇರದು ಸಂಧಿ ಸಂಗರವೆನಗೆ ಸಮ್ಮತವು ।

ಆವವಿಧದೊಳು ಸಮರವನೆ ಸಂ
ಭಾವಿಸುವುದೆನೆ ನಗುತೆ ವರರಾ
ಜೀವಲೋಚನನಟ್ಟಿದನು ದ್ರೌಪದಿಗೆ ಚರರುಗಳ ॥ ೧೪

ದೇವಿ ಚಿತ್ತೈಸುವುದು ವರವಸು
ದೇವನಂದನನಟ್ಟಿದನು ಸಂ
ಭಾವಿಸುವುದರಿರಾಯರೊಳು ಸಂಧಾನಸಂರಂಭ ।
ನೀವು ಬಿಜಯಂಗೈದು ಚಿತ್ತದೊ
ಳಾವ ಹದ ನಾಹದನನಾ ರಾ
ಜೀವನಾಭಂಗರುಹಿ ಯೆಂದರು ಚರರು ಕೈಮುಗಿದು ॥ ೧೫

ಏನು ಹದನೇನೇನು ವರಸಂ
ಧಾನವೇ ಕೌರವರೊಡನೆ ಸು
ಮ್ಮಾನವೇ ಪತಿಗಳಿಗೆ ಪಾಪಿಗಳಿಱಿದರೋ ಸತಿಯು ।
ದಾನವಾಂತಕನೆಸಗುವನೆ ತ
ಪ್ಪೇನು ತಪ್ಪೇನೆನುತೆ ನಸುಮುಸು
ಳ್ದಾನನಾಂಬುಜದಬಲೆ ಬಂದಳು ಕೃಷ್ಣನೋಲಗಕೆ ॥ ೧೬

ಭ್ರೂಲತೆಯು ಸುರಚಾಪದುರುಕೇ
ಶಾಳಿಗಳ ಕಾರ್ಮುಗಿಲಪಾಂಗದ
ಸಾಲ ಕುಡಿಮಿಂಚುಗಳ ನೂಪುರರವದ ಮೊಳಗುಗಳ ।
ಆಲತಾಂಗಿಯು ಗಮನವೇ ಮಳೆ
ಗಾಲದಂತಿರೆ ಧಾರ್ತರಾಷ್ಟ್ರಕು
ಲಾಳಿ ನಿಲುವುದೆ ಪವನಜನ ಸಂಪ್ರತಿಯು ಸೇರುವೆಗೆ ॥ ೧೭

ಕವಿದ ಚಿತ್ರಾವಳಿಯು ದಡ್ಡಿಯು
ವಿವಿಧಭಟರುಗ್ಗಡಣೆಯೊಳು ವರ
ಯುವತಿ ಬಂದಳು ಸಖಿಯರೊಯ್ಯಾರದೊಳು ನೃಪಸಭೆಗೆ ।

ನವವಲಾಹಕದೊಳಗೆ ಮಿಂಚಿನ
ಗವಿಸಹಿತ ಮಱಿವೋಡವಾವಿ
ರ್ಭವಿಸಿತೆನೆ ದಂಡಿಗೆಯನಿೞಿದಳು ಹೊಕ್ಕಳೋಲಗವ ॥ ೧೮

ಎಲೆ ಸಮೀರಕುಮಾರ ಸಂಪ್ರತಿ
ಗೆಳಸಿದೈ ಕಲಿತನವ ನೀರೊಳು
ಕಲಕಿದೈ ಕೈವಾರವಾದುದೆ ಕೌರವೇಂದ್ರನೊಳು।
ಕಲಿಸಿದೈ ಕೃಷ್ಣಂಗೆ ನೀತಿಯ
ಬಳಸಿದೈ ಬಹುಮತವ ನರಕದೊ
ಳೞಿಹಿದೈ ಶಶಿಕುಲವನೆಂದನಿಲಜನ ನೋಡಿದಳು ॥ ೧೯

ಬೇಡಲಟ್ಟುವನೇ ಮಹೀಪತಿ
ನಾಡೊಳೈದೂರುಗಳನವರೊಳು
ಮಾಡುವಾತನು ಕೃಷ್ಣನೇ ಸಂಧಾನವನು ನಿಮಗೆ।
ಕೇಡುಗರ ಕೌರವನೃಪಾಲರ
ಕೂಡಿ ಬದುಕುವ ಭೀಮಸೇನನೆ
ರೂಢಿಸಿತಲಾ ನಿಮ್ಮ ಸಿರಿ ಸೋದರರ ಸೇರುವೆಗೆ ॥ ೨೦

ಯತಿಗಳಾದಿರಿ ನೀವು ರೋಷ
ಚ್ಯುತರಲೇಬೞಿಕೇನು ಧರ್ಮ
ಜ್ಞತೆಯ ನೆಲೆಗಳನಱಿದ ಮನವೆೞಗುವುದೆ ಕಾಳಗಕೆ।
ಕ್ಷಿತಿಯಪಾಲಿಸುವುದು ವಿರೋಧ
ವ್ಯತಿಕರವ ಬಿಸುಡುವುದು ಕುಂತೀ
ಸುತರು ಕೌರವನೊಡನೆ ಸುಖದೊಳು ರಾಜ್ಯವಾಳುವುದು ॥ ೨೧

ಭೀಮ ಬಲವೆದರಾತಿಸೇನಾ
ಭೀಮ ಕುರುಕುಲಕುಸುಮಮಾರ್ಗಣ
ಭೀಮ ಮಱಿದೈ ಮಾನಿನಿಯ ಘನಮಾನಹಾನಿಗಳ

ರಾಮನಬಲೆಗೆ ಕುದಿದ ಬಲುಸಂ
ಗ್ರಾಮವೆನು ನೀ ಕೇಳ ಬಯಲಾ
ಪ್ರೇಮದೊಳು ನೋಡೆನ್ನ ನೆಂದಳು ದ್ರೌಪದೀದೇವಿ ॥ ೧೧

ಧರೆಗೆ ಕಟ್ಟಭಿಮಾನ ಹೆಂಡಿರ
ಹರಿಬವಾಹರಿಬದೊಳು ಕೆಡಹುವ
ರರಿಯನವಗಡಿಸಿದೊಡೆ ಸಾವರು ವಾಸಿಯುಳ್ಳವರು ।
ಸುರನರೋರಗರೊಳಗೆ ನಿಮ್ಮೈ
ವರಿಗೆ ಸರಿಯಿಲ್ಲೈವರಬಲೆಯು
ಹರಿಬದೊಳು ಹಂಗಾದರೆಂಬಪದೆಸೆಗೆ ನೋನುವರೇ ॥ ೧೨

ಸೋಲ ಗೆಲ್ಲವದೇಕೆ ಕುರುವಂ
ಶಾಳಿಯೊಳು ಸೋದರರು ನೀಂ ಪಾಂ
ಚಾಲರಾವೇ ಹೊಱಗು ನಿಮ್ಮೊಳು ಸಲುಗೆ ನಮಗೇಕೆ ।
ಮೇಳವೇ ಸಿರಿ ಗಳಸಲರಿದು ಜ
ನಾಳಿ ಹೆಂಡಿರಪೂರ್ವವೇ ಕ್ಷಿತಿ
ಪಾಲಕರು ನೀವಾಗಲೆಮಗದು ಪರಮಪರಿಣಾಮ ॥ ೧೪

ಮುಂದಲೆಯ ಹಿಡಿದೆಳದು ಸಭೆಯೊಳು
ತಂದು ಸೀರೆಯ ಸೆಳೆದರವದಿರ
ಮುಂದೆ ಮೌನದೊಳಿದ್ದರಲ್ಲದೆ ಪತಿಗಳುಸುರಿದರೆ ।
ಅಂದು ನೀ ಹಿಂದಿಕ್ಕಿ ಕೊಂಡುದ
ನಿಂದು ಮಱದೈ ಸಂಧಿಗೋಸುಗ
ಮುಂದುವರಿದೈ ಕೃಷ್ಣ ಎಂದಳು ದ್ರೌಪದೀದೇವಿ ॥ ೧೫

ತನಯರೈವರು ವೀರಸಹದೇ
ವನು ಘಟೋತ್ಕಚನೀಸುಭದ್ರಾ
ತನಯನೆನ್ನಯ ತಂದೆ ಮೂಱು ಕ್ಷೌಹಿಣೀಸೇನೆ ।

ಇನಿಬರೇ ಕಾದುವರು ದುಶ್ಯಾ
ಸನನ ರಕುತವ ಕುಡಿದು ಕುರುಕುಲ
ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ ॥ ೨೬

ವರಸತಿಯು ಬಿಸುಸುಯ್ಲ ಗಾಳಿಯೊ
ಳುರಿ ಚಡಾಳಿಸೆ ರೋಷವುಯುದು
ಬ್ಬರದೊಳೌಡೊತ್ತಿದನು ಹಿಡಿದನು ಖತಿಯುನಹಿತರೊಳು ।
ತರುಣಿ ಸೈರಿಸು ಸೈರಿಸಿನ್ನೀ
ಸುರಿವ ಕಂಬನಿಗಳಿಗೆ ಶತಸಾ
ವಿರಮಡಿಯು ಕಂಬನಿಯು ಸುರಿಸುವೆ ಹಗೆಯು ಹೆಂಡಿರೊಳು ॥

ಉರಿಯೊಗುವ ಮೀಸೆಯುನು ಬೆರಳೊಳು
ಮುರಿದು ನೆಗಹಿದ ವಾಮಕರದೊಳು
ತರುಣಿಯುನು ಸಂತೈಸಿ ಕಿಡಿಕಿಡಿಯೋಗಿ ಖಾತಿಯೊಳು ।
ನರಕಮರ್ದನ ಕೇಳು ಕೌರವ
ನರಿಗಳದಿರೇ ಕೀಱುವೆನು ಕುಲ
ಗಿರಿಗಳನು ತೊಡೆವೆನು ಕೃತಾಂತನ ಬಾಳದಕ್ಕರವೆ ॥ ೨೮

ಯುಮಸುತನ ಬಗೆಯುಂತುಟೆಂದಾ
ಕ್ರಮಕೆ ಮೊಗದಿರುಹಿದೆನು ದಿಟವೀ
ಕಮಲವದನೆಯು ಹರಿಬವೆನ್ನದು ಪತಿಗಳನಿಬರೊಳು ।
ಎಮಗೆ ಸಂಪ್ರತಿಗಿಲ್ಲ ಮನ ಘನ
ಸಮರವೇ ಸರ್ವಾರ್ಥ ಕೋಪ
ಶ್ರಮಕೆ ರಿಪುರುಧಿರಾಂಬುಪಾನವೆ ವಿಪುಳಫಲವೆಂದ ॥ ೨೯

ಕೆಡಹಿ ರಿಪುವನು ಕರುಳುದಂಡೆಯು
ಮುಡಿಸುವೆನು ಮಾನಿನಿಗೆ ರಕುತವ
ಕುಡಿಯುಲೆಱೆವೆನು ಶಾಕಿನಿಯುರಿಗೆ ತತ್ಸಹೋದರರ

ನಡೆದು ಸಂಧಿಯ ಮಾಡು ಮುರರಿಪು
ಕೊಡಿಸು ನಾಲ್ಕೂರುಗಳ ನಿವರಿಗೆ
ತಡೆಯದೆರಡೂರುಗಳ ಕೊಳ್ವನು ಕೌರವೇಂದ್ರನೊಳು ॥ ೩೮

ಆಱನೆಯ ಸಂಧಿ ಮುಗಿದುದು.

---

## ಏ ಳ ನೆ ಯ ಸ ಂ ಧಿ .

ಕೃಷ್ಣಸ್ವಾಮಿ ಹಸ್ತಿನಾಪುರಿಗೆ ಬಂದುದು.

---

ಸೂಚನೆ.

ದುರಿತವಿಪಿನಕೃಶಾನು ಯದುಕುಲ
ವರಕುಶೇಶಯಭಾನು ನಿಜಪದ
ಶರಣಜನಸುರಧೇನು ಹೊಕ್ಕನು ಹಸ್ತಿನಾಪುರವ ॥

ದೇವ ಸಂಧಿಯನಱಿದು ಮಾಡುವು
ದಾವು ಮೊಗದಿರುಹಿದವರೀಸಹ
ದೇವನೀಯಭಿಮನ್ಯುವೀದ್ರೌಪದಿಘಟೋತ್ಕಚರ ।
ಭಾವವೆಮ್ಮಯ ಭಾವವರ್ಜುನ
ದೇವಧರ್ಮಜನಕುಲರೆಂದುದ
ನಾವು ಮಿಸುಕುವರಲ್ಲ ಚಿತ್ತೈಸೆಂದನಾಭೀಮ ॥ ೧

ಕೆಲರು ಸಂಪ್ರತಿಗೊಲಿವರಿದಱೊಳು
ಕೆಲರು ವಿಗ್ರಹಕೆಳಸುವರು ನಿ
ಮ್ಮೊಳಗೆ ನಿಶ್ಚಯವಿಲ್ಲದಿರೆ ನೃಪಕಾರ್ಯವೆಂತಹುದು ।

ತಿಳಿದು ಹೇಳಿವೆನೀಶ ಪರಮಂ
ಡಲಕೆ ಪಯಣವ ಮಾಡುವೊಡೆ ನಾ
ವೆಳುಕಿದವೆರಲ್ಲೆನಲು ಕೃಷ್ಣಂಗರಸನಿಂತೆಂದ ‖ ೧

ವಿದಿತವೈದೂರುಗಳ ಕೊಟ್ಟೊಡೆ
ಹದುಳವಿಡುವುದು ಮುನಿದರಾದೊಡೆ
ಕದನವನು ಜೋಡಿಸುವುದುಚಿತಾನುಚಿತದನುವಱಿದು ।
ಹದನ ನೀನೇ ಬಲ್ಲೆ ಸಾಕಿ
ನ್ನಿದು ನಿದಾನವು ಬಗೆಯಲೆಮ್ಮ
ಭ್ಯುದಯ ನಿನ್ನಾಧೀನವೆಂದನು ಧರ್ಮನಂದನನು ‖ ೭

ಪಯಣವನು ನಿಶ್ಚೈಸಿ ದನುಜಾ
ರಿಯನು ಬೀಳ್ಕೊಂಡವನಿಪತಿ ಪಾ
ಳಯದೊಳಗೆ ಸಾಱಿಸಿದನಗ್ಗದ ಮಂಡಳೀಕರಿಗೆ ।
ನಯವಿದನು ಮಱುದಿವಸ ಮಂಗಳ
ಮಯಮುಹೂರ್ತದ ಜೋಯಿಸರ ಜೋ
ಕೆಯೊಳು ನಿರ್ಗಮನಿರತನಾದನು ಕೃಷ್ಣನೊಲವಿನೊಳು ‖ ೪

ವೊರೆಯೆ ದುಂದುಭಿಶಂಖಕಹಳೆಗ
ಳುರುಮೃದಂಗಾದಿಗಳು ಭೂಸುರ
ಸುರಭಿಗಳ ಬಲವೆಂದು ದಧಿದೂರ್ವಾಕ್ಷತಾದಿಗಳ ।
ಧರಿಸಿ ಧರಣೀದೇವರನು ಸ
ತ್ಕರಿಸಿ ಕರತಳದಿಂದೆ ನಾಸಿಕ
ದೆರಲ ಚಂದ್ರೋದಯವನೀಕ್ಷಿಸಿ ದೇವ ಪ್ರೊಱಮಟ್ಟ ‖ ೫

ಘನಬಳಾಹಕಸೈನ್ಯಸುಗ್ರೀ
ವನನು ನಿರ್ಮಳಮೇಘಪುಷ್ಪವ
ನನುವಿನೊಳು ಹೂಡಿದನು ಸಾತ್ಯಕಿ ಹೇಮಮಯರಥಕೆ ।

ಧನುವೆನಸ್ತ್ರ ಸುದರ್ಶನಂಗಳ
ಕನಕಕವಚಕ್ಕ ಪಾಣವನು ಸೆಂ
ದನದೊಳಿರಿಸೆಂದಸುರರಿಪು ಸಾತ್ಯಕಿಗೆ ನೇಮಿಸಿದ ॥ ೬

ಇವರಿಗವದಿರು ನೆಟ್ಟನೆ ಎಮ್ಮುನಿ
ವವರು ನಾವಿವರವರು ಮತ್ತಂ
ತಿವರಿಗವನಿಯನೀಸಿ ಕೊಡುವುದೆ ನಮ್ಮ ಭರವಸಿಕೆ ।
ಅವಗಡಿಸಿದೊಡೆ ಕಾದುವೆವು ಕೌ
ರವರು ಖುಲ್ಲರು ರಥದೊಳಗೆ ಕೈ
ದುವನು ತುಂಬೆಂದಸುರರಿಪು ಸಾತ್ಯಕಿಗೆ ನೇಮಿಸಿದ ॥ ೭

ಕಲಿತಸನ್ನಾಹದೊಳು ಸಾರಥಿ
ಸುಟಿಸಿದನು ಹೊಂದೇರನಭ್ರಕೆ
ತಳಿತುವಮಲಚ್ಛತ್ರಚಾಮರಸಿತಪತಾಕೆಗಳು ।
ಅಳುಕೆ ನೇನಕ್ಷೋಣಿಬಲವಿ
ಟ್ಟಳಿಸಿ ನೆರೆದುದು ರಥಕೆ ದಾನವ
ಕುಲದಿಶಾಪಟ ಕೃಷ್ಣ ಬಿಜಯಂಗೈದನೊಲವಿನೊಳು ॥ ೮

ಕಳುಹುತೈತಂದಖಿಲಪಾಂಡವ
ಬಲಕೆ ನೇಮವ ಕೊಟ್ಟು ಧರ್ಮಜ
ಫಲುಗುಣರ ನಿಲಿಸಿದನು ಸಹದೇವನನು ನಕುಲನನು ।
ಕಳುಹಿದನು ನೀಂ ಮರಳನಲು ಬೆಂ
ಬಳಿಯೊಳನಿಲಜನೈದಿ ಹಗೆಯೊಳು
ಕಲಹವನು ಮಸಗೆಂದು ನಂಬುಗೆಗೊಂಡು ಮರಳಿದನು ॥ ೯

ದೇವಿಯರು ನೀಂ ಮರಳಿಯೆನೆ ರಾ
ಜೀವನಾಭನ ಹೊರೆಗೆ ದ್ರೌಪದಿ
ದೇವಿ ಬಂದಳು ಹಣೆಯ ಚಾಚಿದಳಂಘ್ರಿಕಮಲದೊಳು ।

ಸ್ಥಾವರಕೆ ಜಂಗಮಕೆ ನೀನೀ
ಜೀವಚೇಷ್ಟಕನವದಿರಂತ
ರ್ಭಾವವೇನು ನೀಂ ಬಲಿಯಲಾಗದು ಸಂಧಿಕಾರ್ಯದೊಳು ॥ ೧೦

ಖಳರು ತಮ್ಮಸ್ಮೃತಿಯ ಕೀಲನು
ಕಳಚಿ ಕಳೆಗರು ಮರಳಿ ಹೊಡುವ್ರೊ
ಡಳುಕಿದರು ನನ್ನವರು ಪತಿಗಳ ಪರಮವೈರಿಗಳು ।
ಹಳಿವ ನೀನೇ ಬಲ್ಲೆಯಿನ್ನೆ
ನ್ನಳಿವ ನೀನೇ ಬಲ್ಲೆ ಹಿರಿದಾ
ಗಳಲಿದೆನು ಸಲಹೆಂದು ಹೊರಳಿದಳಬಲೆ ಚರಣದೊಳು ॥ ೧೧

ಏಳು ತಾಯೆ ಸರೋಜಮುಖಿ ವಿಪಿ
ನಾಲಯದೊಳತಿನವೆದೆ ನಿನ್ನವ
ರಾಳಿಗೊಂಡಂದವನು ಬಲ್ಲೆನು ನಿನ್ನ ಹರಿಬದೊಳು ।
ಕಾಳಗವನೇ ಬಲಿದು ಬಹೆನಿವ
ರೇಳಿಲವ ಮಾಡಿದೊಡೆ ರಿಪುಗಳ
ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯೊಳು ॥ ೧೨

ದೇವಕಿಯ ಮೇಲಾಣೆ ವರವಸು
ದೇವನಂಘ್ರಿಗಳಾಣೆ ಮನ್ಮಥ
ದೇವನಾಣೆ ನಿದಾನವನು ಕೇಳಬಲೆ ನಿನ್ನಾಣೆ ।
ನಾವು ಸಂಧಿಯ ನೆವದೊಳವದಿರ
ಭಾವವೇನು ಕಲಿಮಾಡಿ ಕೋಪವ
ತೀವಿ ಸಂಧಿಯ ಮುರಿದು ಬಹೆವಿದ ನಂಬು ನೀನೆಂದ ॥ ೧೩

ಮರಳಿದಳು ತರಳಾಕ್ಷಿ ಮುರರಿಪು
ಬರುತೆ ಮುಂಬಟ್ಟೆಯೊಳು ಕಂಡನು
ವರಭರದ್ವಾಜಾಖ್ಯ ಗೌತಮ ಕಣ್ವ ಕೌಶಿಕರ ।

ಉರಗಮಾಲಿ ಮತಂಗ ಗಾರ್ಗ್ಯಾಂ
ಗಿರಸ ನಾರದ ಶುಕ ಪರಾಶರ
ಪರಶುರಾಮ ಶ್ವೇತಕೇತು ಪ್ರಮುಖಮುನಿವರರ ॥ ೧೪

ಮುನಿವರರನುಪಚರಿಸಿದನು ಹ
ಸ್ತಿನಪುರಿಗೆ ಸಂಘಾತದೊಳು ಬಹೆ
ವೆನಲು ಬರಹೇಳಿದನು ಸಕಲಮಹಾಮುನೀಶ್ವರರ ।
ಘನಕುಶಸ್ಥಳಪುರದೊಳಡಗೈ
ದನು ಸುಯೋಧನನಲ್ಲಿಗಟ್ಟಿದ
ವಿನುತದೂತರು ಬಿನ್ನವಿಸಿದರು ಮುರಹರನ ಬರವ ॥ ೧೫

ಕೇಳಿದನು ಧೃತರಾಷ್ಟ್ರನಾಸಿರಿ
ಲೋಲನಾಗಮನವನು ಚಿತ್ತವ
ಹೂಳಿ ಹೆಚ್ಚಿದ ಹರುಷದಿಂದುಬ್ಬಿದ ನಡಿಗಡಿಗೆ ।
ಹೇಳಿದನು ವಿದುರಂಗೆ ಬಂಡಾ
ರಾಲಯದೊಳುಳ್ಳಖಿಳವಸ್ತುವ
ಜಾಳಿಗೆಯ ಪೆಟ್ಟಿಗೆಯೊಳಾಯ್ದರು ಸಾರವಸ್ತುಗಳ ॥ ೧೬

ಎಲೆ ವಿದುರ ಕೇಳೈ ಸುಯೋಧನ
ನುಡಿಯುಳಖಿಳಮಹಾಪ್ರಧಾನರು
ನಳಿನನಾಭನನಿದಿರುಗೊಳಲಿ ಕೃತಾರ್ಥರಾದವರು ।
ಹೊಳಲು ಗುಡಿತೋರಣದೊಳೆಸೆಯಲಿ
ಕಳಸಕನ್ನಡಿಸಹಿತ ನಡೆಯಲಿ
ನಳಿನವದನೆಯರೆಂದು ನೇಮಿಸಿದನು ಮಹೀಪಾಲ ॥ ೧೭

ತೆಗೆದ ವಸ್ತುವನೀಯದಿರು ಹರಿ
ಹಗೆ ಕಣಾ ಕುಂತೀಕುಮಾರರು
ಹಗೆಗಳೇ ಮನ್ನಿಸಿದರೆಂದುಳುಹುವನೆ ಮುರವೈರಿ ।

ನಗರಿಗಾತನು ಬರಲಿ ಯಾದವ
ನಗಡುತನಕೌಷಧವ ಭಲ್ಲನು
ಬಿಗಿದು ಕೆಡಹುವೆನೆಂದು ನುಡಿದನು ಕೌರವೆರ ರಾಯು ‖ ೧೮

ಖಾತಿಗೊಂಡನು ಭೀಷ್ಮನೆಲೆ ಕಡು
ಪಾತಕಿಯೆ ಕೃಷ್ಣನನು ನೀಬಿಗಿ
ವಾತನೇ ಬಟಿಕೇನು ಬಲ್ಲನು ನಿನ್ನ ಸಾಹಸವೆ ।
ಈತನಾಡುವೆ ಮಾತ ಕೇಳಲು
ಪಾತಕವು ಬಹುದೆಂದು ಗಂಗಾ
ಜಾತನೋಲಗದಿಂದೆ ಸರಿದನು ತನ್ನ ಮಂದಿರಕೆ ‖ ೧೯

ಪುರವ ರಚಿಸಿದರುದಯದೊಳು ಬಿ
ತ್ತರ ಮಿಗಲು ಗಾಂಗೇಯ ಗೌತಮ
ಗುರು ವಿದುರ ಶಲ್ಯಾದಿ ಸುಜನರು ಬಂದರಿದಿರಾಗಿ ।
ತರುಣಿಯರು ಕೆಂದಳಿರ ಕಲಶದ
ಕರತಳದ ಗರುವಾಯಿಯೊಳು ಪಂ
ಕರುಹನಾಭನನಿದಿರುಗೊಂಡರು ವಿತತವಿಭವದೊಳು ‖ ೨೦

ಥಳಥಳಿಸೆ ದೂರದೊಳು ಗರುಡನ
ಹಲವಿಗೆಯೆ ಕಂಡಖಿಳಜನವಂ
ಜುಳಿಯನಿಟ್ಟದು ಭಾಳದೊಳು ಪರಿಶುದ್ಧಭಾವದೊಳು ।
ನಳಿನನಾಭನ ಮಧುರಮೂರ್ತಿಯು
ಲಲಿತಕಾಂತಿಯು ಕಡಲೊಳಗೆ ನೆರೆ
ಮುಳುಗಿದುವು ಪುರಜನದ ಕಣ್ಮನವೊಂದುನಿಮಿಷದೊಳು ‖ ೨೧

ಮಂದಿ ಮೊಯ್ಯಿಕ್ಕಿತು ಮುರಾಂತಕ
ನಿಂದು ಮನದೊಲವಿನೊಳು ಗಂಗಾ
ನಂದನದ್ರೋಣಾದಿಗಳನೆತ್ತಿದನು ಕರುಣದೊಳು ।

ಮಂದಿರದ ಸುಕ್ಷೇಮಕುಶಲವ
ನಂದು ಕೇಳುತೆ ವೀಳೆಯವನಾ
ಮಂದಿಗಿತ್ತನು ದೇವ ಬಂದನು ಹಸ್ತಿನಾಪುರಿಗೆ ॥ ೧೧

ಗಿಳಿಯು ತುಂಬಿಯು ಹಂಸೆಗಳ ಕೋ
ಗಿಲೆಯು ಕೊಳರ್ವಕ್ಕಿಗಳ ಕೊಂಚೆಯು
ಕೊಳಲುವಕ್ಕಿಯು ಜಕ್ಕವಕ್ಕಿಯು ನವಿಲ ಪಾರಿವದ ।
ಕಳಕಳದ ಕರ್ಣಾಮೃತದ ತನಿ
ವೆಱೆಯು ಕಱೆದುದು ಯಾದವೇಂದ್ರನ
ಬಲದ ಕಿವಿಯೊಳಗಿಭಪುರಿಯ ಹೊಱವಳಯದುದ್ಯಾನ ॥ ೧೩

ನಸುಬಿರಿದ ಪರಿಪಕ್ವದಾಡಿಮ
ರಸದೊಳರವಟ್ಟಿಗೆಗಳನು ದರ
ಹಸಿತಪಂಕಜಗಳತಮಕರಂದದ ತಟಾಕವನು ।
ರಸಭರಿತಖರ್ಜೂರಪನಸ
ಪ್ರಸರಸತ್ರವನೆಸಗಿದುಪವನ
ವೆಸದುದೈ ಧಾರ್ಮಿಕನವೊಲು ಯದುರಾಯನಿದಿರಿನೊಳು ॥ ೧೪

ಎಳಲತೆಯನೆಱಗಿಸುತೆ ಮಲಿತೊಡೆ
ತಳಿರುಗಳನಲ್ಲಾಡಿಸುತೆ ಪರಿ
ಮಳದ ಕಪ್ಪವ ಕೊಳುತೆ ಮಱಿದುಂಬಿಗಳ ಗೀತವನು ।
ಸಲೆ ಸೊಗಸಿ ಮಕರಂದನದಿಯೊಳು
ತಳಿತು ಬೀಡನೆ ಬಿಡುತೆ ಬನದೊಳು
ಸುಳಿದುದೈ ತೆಂಗಾಳಿ ಭೂಮಿಪಾಲನಂದದೊಳು ॥ ೧೫

ಮಗಮಗಿಪ ಹೊಂಬಾಳೆಗಳ ರಸ
ವುಗುವ ಮಧುರದ್ರಾಕ್ಷೆಗಳ ನಿಡು
ಮುಗಿಲ ತುಡುಕುವ ತೆಂಗುಗಳ ನೆಱೆ ಕಾತಹಲಸುಗಳ ।

ಬಿಗಿದ ಪಣ್ಗೊನೆವಾಳೆಗಳ ಸೊಂ
ಪೊಗೆದ ಖರ್ಜೂರದ್ರುಮೌಘದ
ಸೊಗಸು ಸೆಳೆದುದು ಮನವನಾಗಜನಗರದುಪವನದ ‖ ೧೬

* ಲಲಿತಶುಕಚಯಚಂಚುಪುಟನಿ
ರ್ದಳಿತಜಂಬೂಪಕ್ವಫಲರಸ
ಲುಳಿತನವಮಕರಂದಮಧುರರಸಾನುಪಾನದೊಳು ।
ತಳತಕಿನ್ನರಮಿಥುನಸುಖಪರಿ
ಮಿಳಿತಗೀತಶ್ರವಣಸನ್ನುತ
ಪುಳಿನಸುಪ್ತಮರಾಳವೆಸೆದುದು ಗಜಪುರೋದ್ಯಾನ ‖ ೧೭

* ಅರರೆ ಪಾತಾಳದ ವಿಳಾಸಿನಿ
ಯರಿಗೆ ಖಾತಿಗೆಯೋ ಸುದುರ್ಗದ
ಹಿರಿಯಗಳೊ ಬಲುಗೋಂಟೆಯೋ ನಿಚ್ಚಣಿಗೆಯೋ ದಿವದ ।
ಮುರಿಮುರಿದ ಹುಲಿಮುಖದ ಹೇಮದ
ತರದ ತೆನೆಗಳ ವಜ್ರಮಯದು
ರ್ಧರಕವಾಟದ ಪುಟದೊಳೆಸೆದುದು ಹಸ್ತಿನಾನಗರ ‖ ೧೮

ಹೊಗಳುತ್ತೈತಂದಸುರರಿಪು ಗಜ
ನಗರಿಯನು ಹೊಕ್ಕನು ಸುಯೋಧನ
ನಗಣಿತೈಶ್ವರ್ಯಕೆ ಮಹಾದೇವೆನುತೆ ತಲೆದೂಗಿ ।
ಬಿಗಿದ ಬೀದಿಯ ನಯದ ನೆಲೆಗ
ಟ್ಟುಗಳ ಮಣಿಮಯಹೇಮದುಪ್ಪರಿ
ಗೆಗಳ ಕೇರಿಗಳೊಳಗೆ ಬರುತಿರ್ದನು ಮುರಧ್ವಂಸಿ ‖ ೧೯

ಮುಂದೆ ಸುಚಿವಾನೆಗಳ ಕುದುರೆಯ
ಸಂದಣಿಯ ಕೀಲಿಸಿದ ಭೂಮಿಪ
ರಂದಣದ ಸಾಲುಗಳ ತೆಕ್ಕೆಯನುಚಿಯದಾಳುಗಳ ।

* ಈ ಪದ್ಯಗಳು ಟ. ಪುಸ್ತಕದಲ್ಲಿಲ್ಲ.

ಮಂದಿಯೊಳು ಹೊಗಲನಿಲಗಸದಳ
ವೆಂದೊಡುಚಿದರಿಗಳವೆ ಯೆನುತರ
ವಿಂದನಾಭನು ಬಂದನಾಧೃತರಾಷ್ಟ್ರನರಮನೆಗೆ ॥ ೩೮

ಇದಿರುವೆಂದನು ಕಾಣಿಕೆಯನಿ
ಕ್ಕಿದನು ಕುಶಲಕ್ಷೇಮವೆನು ಕೇ
ಳಿದನು ಭಕ್ತಿಯೊಳೆಱಗಿದನು ಧೃತರಾಷ್ಟ್ರನಾಹರಿಗೆ ।
ಸದನವನು ಹೊಕ್ಕಂತೆ ನಿಮಿಷಾ
ರ್ಧದೊಳು ಕುಳ್ಳಿರ್ದನಿಬರನು ಕಳು
ಹಿದನು ಕಾರುಣ್ಯದೊಳು ಗದುಗಿನ ವೀರನಾರಯಣ ॥ ೩೧

ಏಳನೆಯ ಸಂಧಿ ಮುಗಿದುದು.

---

## ಎಂಟನೆಯ ಸಂಧಿ.

### ಕೃಷ್ಣ ಸಂಧಾನ.

ಸೂಚನೆ.

ಶರಣದೇಹಿಕದೇವನೆಂಬೀ
ಬಿರುದು ಮೆಱೆಯಲು ರಾಯಭಾರವ
ಧರಿಸಿ ಕೌರವನರಮನೆಗೆ ನಡೆತಂದನಸುರಾರಿ ॥

ಕೇಳು ಜನಮೇಜಯ ಧರಿತ್ರೀ
ಪಾಲ ಮುರರಿಪು ಗುರುನದೀಜರ
ಬೀೞುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು ।

ಆಲಯಕೆ ವಿದುರಂಗೆ ಕೊಟ್ಟನು
ವೀಳಯವನೊಡನೈದಿ ಬಂದ ನೃ
ಪಾಲಕರ ಮೊಗಸನ್ನೆಯೊಳು ಕಳುಹಿದನು ಮನೆಗಳಿಗೆ ॥ ೧

ಶೌರಿ ಕಾಣಿಸಿಕೊಂಡನಾಗಾಂ
ಧಾರಿಯನು ಸುಕ್ಷೇಮಕುಶಲವ
ನಾರಯಿದು ಕಾಣಿಕೆಯ ಕೊಂಡನು ಕೊಟ್ಟನುಡುಗೊಱೆಯ ।
ಕೌರವನು ತನ್ನರಮನೆಗೆ ಹರಿ
ಬಾರದಿರನೆಂದಖಿಳವಿಧದೊಳು
ಸಾರವಸ್ತುವ ತರಿಸಿಯಾರೋಗಣೆಗೆ ಮಾಡಿಸಿದ ॥ ೨

ನಡುವೆ ಮಣಿಮಂಚದೊಳು ಮೆಲ್ಲಾ
ಸಡಕಿಲನು ಹಚ್ಚಡಿಸಿದರು ಮೇ
ಲಡಸಿದರು ನವರತ್ನಖಚಿತದ ಮೇಲುಕಟ್ಟುಗಳ ।
ಉಡುಗೊಱೆಯ ತರಿಸಿದನು ರಾಯನ
ಮಡದಿಯರು ಹೊಂಗಳಸಜಲವನು
ಪಡಿಗವನು ಹಿಡಿದಸುರರಿಪುವಿನ ಬರವ ಹಾರಿದರು ॥ ೩

ತವತವಗೆ ಗಾಂಗೇಯ ಗುರು ಕೃಪ
ರವಿಸುತಾದಿಗಳಸುರರಿಪು ನಿಜ
ಭವನಕೈತಹನೆಂದು ಸವೆದರು ಸಾರವಸ್ತುಗಳ ।
ಅವನಿಪನ ಬೀಡ್ಕೊಂಡು ಕೌರವ
ಭವನವನು ಹಿಂದಿಕ್ಕಿ ವರಭೂ
ಗವತ [1] ವಿದುರನ ಮನೆಗೆ ನಡೆತರುತಿರ್ದನಸುರಾರಿ ॥ ೪

---

1 ಮಸ್ತಕರತುನವಿದುರನ ಮನೆಗೆ ನಡೆತಂದ, ಕ. ಖ. ಜ.

ತೊಲಗಿದುವು ಜನಮನದ ಬಲುಗ
ತ್ತಲೆಗಳಿದಿರೊಳು ಕಂಡ ಜೀವರ
ಹಲವುಜನ್ಮಾಂತರದ ದುರಿತಾಂಭೋಧಿ ಬತ್ತಿದುವು ।
ಬಳಿಯ ಮುನಿಗಳು ಸಹಿತ ಕರುಣಾ
ಜಲಧಿ ವಹಿಲದೆ ಕೌರವೇಂದ್ರನ
ಹೊಱಲೊಳಗೆ ನಿಜಶರಣನರಮನೆಗಾಗಿ ಬರುತಿರ್ದ ॥ ೫

ಕರಣ ನಿರ್ಮಳವಾಯ್ತು [1] ತನುವು
ಬ್ಬರಿಸಿತತಿಪರಿತೋಷದೇಱಗೆ
ಪರಮಸುಖದೊಳು [2] ಮನವ ಮುಸುಕಿತು ನಯನಜಲವ್ರಗಲು ।
ಎರಡುದೋಱದ ಗಾಢಭಕ್ತಿಯ
ಭರದ ಲವಲವಿಕೆಯೊಳು ನಿಜಮಂ
ದಿರವ [3] ಪೊಱವಮಟ್ಟಿತ್ತು ಕಂಡನು ವಿದುರನಚ್ಯುತನ ॥ ೬

ಸಿರಿಮೊಗದ ಕಿಱುಬೆಮರ ತೀಜಿಯ
ಖುರಪುಟದ ಕೆಂದೂಳಿ ಸೋಂಕಿದ
ಸಿರಿಮುಡಿಯ ಕೊನೆಮಿಸೆಯೊಳು ಕೆಂಪಡರ್ದ ರೇಣುಗಳ ।
ಖರಮರೀಚಿಯ ಝಳಕೆ ಬಾಡಿದ
ತರುಣತುಲಸಿಯ ದಂಡೆಯೊಪ್ಪುವ
ಗರುವದೇವನ ಬರವ ಕಂಡನು ಬಾಗಿಲೊಳು ವಿದುರ ॥ ೭

ತನುವ ಮಱೆದನು ಪುಳಕಜಲದೊಳು
ನನೆದು ನಾರಾಯಣನ ಪದದ
ರ್ಶನದ ಹರ್ಷಾರ್ಣವದೊಳು ಮನಹೊಲಬುದಪ್ಪಿದನು ।
ನೆನೆವ ಸನಕಾದಿಗಳಿಗಿನ್ನುಂ
ಮನಗುಡದ ಮಹಿಮಾತಿರೇಕನು
ಮನೆಗೆ ಬಹ ಕರುಣಾಳುತನ ಪೊಸತೆನುತೆ ಹಿಗ್ಗಿದನು ॥ ೮

---

[1] ಮನವು, ಕ. ಚ. ಜ. ಟ. [2] ತನುವ ಮುಸುಕಿತು, ಕ. ಖ. ಜ. ತನುವ ಮಱೆದನು, ಚ. ಟ. [3] ಹೊಱವಡುವುತ್ತೆ, ಕ. ಹೊಱವಂಡುತ್ತೆ, ಖ. ಚ. ಜ. ಟ.

ವೇದದಬಿಕೆಗಳುಬಸುವುಪನಿಷ
ದಾದಿದಿವ್ಯಸ್ತುತಿಯು ಗಡಣೆಗೆ
ಹೋದ ಹೊಲಬಳವಡದ ಮುನಿಗಳ ಮನಕೆ ಮೈಗುಡದ ।
ಕಾದಿ ಕಡುಗುವ ತಾರ್ಕಿಕರು ಬೆಂ
ಡಾದರಲ್ಲದೆ ನಿಜವನಱಿಯುದ
ನಾದಿಸಿದ್ಧನ ಬರವು ಕೌತುಕವೆನುತ ನಡೆತಂದ ॥ ೯

ತೊಳಲುವುಪನಿಷದಬಿಕೆಯಿವು ಶ್ರುತಿ
ಗಳ ಸರಾಗದ ಬಳಕೆಯಿವು ಮುನಿ
ಗಳ ಸಮಾಧಿಗಳಾದಿಯಿವು ಯೋಗಿಗಳ ಬಳಕೆಯಿವು ।
ಎಲೆಲೆ ಭಕ್ತರ ಭಾಗ್ಯಶಾಲಿಯು
ಬೆಳಗಳವಲಾ ಎನುತ ಹರಿಪದ
ನಳಿನಯುಗಳದೊಳೊಡಲನೀಡಾಡಿದನು ಭಕ್ತಿಯೊಳು ॥ ೧೦

ನೋಡಿದನು ಮನದಣಿಯೆ ಮಿಗೆ ಕೊಂ
ಡಾಡಿದನು ಬೀದಿಯೊಳು ಹರಿದೆಡೆ
ಯಾಡಿದನು ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯು ।
ಕೂಡಿ ಕುಣಿದನು ಮನೆಯು ಮುಱಿದೀ
ಡಾಡಿದನು ಮೈಮಱೆದು ಹರುಷದ
ಗಾಡಿಕೆಯೊಳಪ್ರತಿಮನೆಸೆದನು ಭಕ್ತಿಕೇಳಿಯೊಳು ॥ ೧೧

ಹಸಿದು ನಾವೈತಂದೊಡೀಪರಿ
ಮಸಗಿ ಕುಣಿದಾಡಿದೊಡೆ ಮೇಣೀ
ವಸತಿಯುನು ನೀಂ ಮುಱಿದು ಬಿಸುಟೊಡೆ ನಮಗೆ ತಣಿವಹುದೆ ।
ವಸುಮತೀವಲ್ಲಭನವರು ಪ್ರಾ
ರ್ಥಿಸಿದೊಡೊಲ್ಲದೆ ಬಂದೆವೈ ನಾ
ಚಿಸದಿರೈ ಬಾ ವಿದುರ ಎನುತೊಳಹೊಕ್ಕನಸುರಾರಿ ॥ ೧೨

ನೆಱೆಯೆ ಕೃತ್ಯಾಕೃತ್ಯಭಾವವ
ಮಱೆದು ಕಳೆದನು ಮನ ಮುರಾರಿಯು
ನಿಱುಕಿ ಬಿಗಿದುದು ಕಂಗಳೊಡವೆಚ್ಚವು ಪದಾಬ್ಜದೊಳು |
ಅಱಿವು [1] ಮಯಣಕೆ ಭಕ್ತಿಮಯರಸ
ದೆಱೆದ ಪುತ್ತಳಿಯೆನಲು [2] ತಾ ಕಡು
ವೆಱಗ ಕೇಣಿಯು ಕೊಂಡವೊಲು ಮೌನದೊಳು ಮುಳುಗಿರ್ದ ||

ಒಲವೆರವು ಕೌತುಕವು ಪಾಲ್ಗಡ
ಲೊಳಗೆ ಮಲಗಿಹ ವಿಷ್ಣು ವಿದುರನ
ನಿಳಯದೊಳಗೊಕ್ಕುಡಿತೆ ಹಾಲೊಳು ಹಸಿವ ನೂಕಿದನು |
ಹೊಲಬುಗಿಡಿಸಿದನಖಿಳನಿಗಮಂ
ಗಳನು ತನ್ನಱಿಕೆಯೊಳು ಭಜಕಂ
ಗೊಲಿದು ತಾನ್ಯೈತಹುದು ಕರುಣದ ಘನತೆಯೆನೆ ಲೋಕ || ೧೪

ಹರಿಯು ಪದಕಮಲಾಭಿಷೇಕದ
ವರಪಯೋಬಿಂದುಗಳು ಕೌರವ
ನರಮನೆಯನೊಳಕೊಳ್ವವೊಲು ಕಡಲಾಗಿ ಹರಿದು ಬರೆ |
ಅರರೆ ಮುರಹರನೊಡನೆ ಹಾಲಿನ
ಶರಧಿ ಮೇರೆಯ ಮುಱಿದುದಿಳೆಗ
ಜ್ಜರಿಯೆನುತೆ ಭೀಷ್ಮಾದಿಗಳು ಹೊಗಳ್ದರು ಹರುಷದೊಳು ||೧೫

ತೊಲಗಿದಸು ಬಂದಂತೆ ತರಣಿಯ
ಹೊಳವು ಸೋಂಕಿದ ಜಕ್ಕವಕ್ಕಿಯ
ಬಳಗದಂತಿರೆ ಕೃಷ್ಣರಾಯನ ಬರವ ತಾ ಕೇಳ್ದು |

---

[1] ಮಯಣಾಮಯದ ಭಕ್ತಿಯ ಲೆರಗಿಸಿದ, ಕ. ಖ. ಚ. ಮಯಣಾಮಯದ ಭಕ್ತಿಯನೆರಗಿಸಿದ, ಜ. ಮಯಣಾಮಯದ ಭಕ್ತಿಯಲೆಱೆದ, ಟ.

[2] ಕಡು, ಕ. ಖ. ಚ. ಜ. ಟ.

ಪುಳಕ ಪಸರಿಸೆ ಪರಮಹರ್ಷವ
ತಳೆದು ದೇವನ ಕಾಣಿಕೆಯು ಕಂ
ಗಳಗೆ ಕಡುಲೋಲುಪತೆ ಮಿಗೆ ಹರಿತಂದಳಾಕುಂತಿ ॥ ೧೬

ಬರವ ಕಂಡಸುರಾರಿ ಮಂಚದೊ
ಳಿರದೆ ದಿಮ್ಮನೆ ನಿಂದು ನರರಾ
ಚರಣೆಗಳ ನಾಟಕವ ತಾನೇ ನಟಿಸಿ ತೋಱಿಸಿದ ।
ಹಿರಿಯರಿಗೆ ತಾ ಹಿರಿಯನೆನಿಸುವ
ಗರುವತನವನು ಬಿಸುಟು ಕುಂತಿಗೆ
ಕರವ ಮುಗಿದನು ಸಕಲಸನಕಾದಿಗಳು ನಲಿದಾಡೆ ॥ ೧೭

ಅಮಿತಕರುಣಾಸಿಂಧುವಿನ ಪದ
ಕಮಲದೊಳು ತಾವೆಱಗಿ ಪುಳಕೋ
ದ್ಗಮದ ಪಾವನತರದ ಸುಖಸಂರಂಭದೊಳು ಮುಳುಗಿ ।
ಗಮಿಸಲಱಿಯವು ಗರುವವೇದ
ಪ್ರಮಿತಿಗಳು ನೀನೆಂತು ನಡೆತಂ
ದೆಮಗೆ ಗೋಚರವಾದೆಯೆನುತಲೆ ಹೊಗಳಿದಳು ಕುಂತಿ ॥ ೧೮

ದೇವಕಿಯು ವಸುದೇವನಾಬಲ
ದೇವನನಿರುದ್ಧಾದಿಯದುಭೂ
ಪಾವಳಿಯು ಸುಕ್ಷೇಮಕುಶಲವ ಕುಂತಿ ಬೆಸಗೊಳಲು ।
ದೇವ ನಗೆಮೊಗದಿಂದೆ ಪರಮೆಸು
ದೇವದೇವಕ್ಯಾದಿಯಾದವ
ರಾವಿಲಾಸದ ಮಹಿಮರಿರವನು ಕುಂತಿಗಱುಹಿದನು ॥ ೧೯

ಯಮತನುಜನಧಿಕನು ಹಿಡಿಂಬಾ
ರಮಣನತಿಬಲ್ಲಿದನು ಪಾರ್ಥನ
ವಿಮಲವಿಗ್ರಹ ಲೇಸು ಸಕಲಮಹೀಶಪರಿವೃತರು ।

ಯಮಳರಿರವೆತಿಚೆಲುವು ನೇಹದ
ರಮಣಿಯಾಕೆಯು ಸುತರು ಸುಮಹೋ
ದ್ಯಮರು ಕೇಳೆಂದಸುರರಿಪು ಕುಂತಿಗೆ ನಿಯಾಮಿಸಿದ ॥ ೨೦

ನರನ ಮಗನಭಿಮನ್ಯು ಕುಶಲನು
ವರಸುಭದ್ರಾದೇವಿ ಮೊದಲಾ
ಗಿರಲು ಬಾಂಧವರೆಲ್ಲ ಜೀವಂತರು ನಿದಾನಿಸಲು ।
ಪರಮಮಿತ್ರರು ತಮ್ಮೊಳೊಂದಾ
ದರು ದ್ರುಪದನಕ್ಷೋಣಿಯುವರಿಗೆ
ನೆರವು ಬಂದುದು ರಾಜಕಾರ್ಯದ ಬಳಕೆ ಲೇಸೆಂದ ॥ ೨೧

ಅದಿತಿ ಮಕ್ಕಳ ಪಡೆದುದೇ ಲೋ
ಕದೊಳು ಫಲ ಕೌಸಲೆ ಕುಮಾರನ
ಪಡೆದು ಪಡೆದುದೆ ಸಫಲ ವಿನತೆಗೆ ಮಕ್ಕಳಾಯ್ತು ಫಲ ।
ಮುದದೆ ನೀನೇ ಮಕ್ಕಳನುಪಡೆ
ದದುವೆ ಫಲ ಕೇಳೆಂದು ಪರಿತೋ
ಷದೊಳು ಕುಂತಿಯ ಹೊಗಳಿದನು ಮುರವೈರಿಯುಚಿತದೊಳು ॥

ಲೋಕ ಮೆಚ್ಚಲು ನಿನ್ನ ಸುತರು ದೃ
ಢೈಕಸತ್ಯರು ನುಡಿದ ಕಾಲವ
ನೂಕಿದರು ರಾಜ್ಯಾಭಿಲಾಷೆಗೆ ಬಲವ ನೆರೆಹಿದರು ।
ಆಕುಮಾರರಿಗರ್ಧರಾಜ್ಯವ
ನೀಕುಠಾರನೊಳೀಸಿ ಕೊಡುವ ವಿ
ವೇಕದೊಳು ತಾ ಬಂದೆನೆಂದನು ಕುಂತಿಗಸುರಾರಿ ॥ ೨೩

ಪರಮಪರಿತೋಷದೊಳು ಕೃಷ್ಣನ
ವರಸುಧಾಮಯವಚನವನು ಪಂ
ಕರುಹಮುಖಿ ಕೇಳುತ್ತೆ ನನೆದಳು ನಯನವಾರಿಯೊಳು ।

ಮುರಮಥನನಾಕುಂತಿಗೆಲ್ಲವ
ನೊರೆದು ವಿದುರನ ಕರೆದು ಕೌರವ
ನರಮನೆಯ ಸಮಯವನು ನೋಡಿದು ನಮಗೆ ಹೇಳೆಂದ ‖ ೨೪

ಹೋಗು ನೀನಾತಂಗೆ ಪಾಂಡವ
ರಾಗಸಮುದಯ ಬಂದನೆಂಬುದ
ನೀಗಳಱುಪುವುದಾತ ಮಾಡಿದ ನಯದ ಬಳವಿಗೆಯ |
ತಾಗುಬಾಗಿನ ಹವಣನಾತನೊ
ಳಾಗನೋಡುವೆವೆನಲು ಕುರುಕುಲ
ಸಾಗರಾಗ್ನಿಯ ಮನೆಗೆ ಬಂದನು ವಿದುರ ಹರಿ ಬೆಸಸೆ ‖ ೨೫

ಓಲಗದೊಳಿರ್ದಖಿಳಮೂರ್ಖರ
ಮೌಳಿಯನು ಕಂಡವಧರಿಸು ಸಿರಿ
ಲೋಲ ಬಿಜಯಂಗೈಯಬವಸರವುಂಟು ಹೇಳೆನಲು |
ನಾಳೆ ಕಾಣಿಸಿಕೊಳ್ವವಿನ್ನೇ
ನಾಟಕಾಱನ ಬರವು ಹಗೆಗಳ
ಪಾಲಿಸುವ ಭರ ಸಂಧಿಕಾರ್ಯಕೆ ಬಾರದಿರನೆಂದ ‖ ೨೬

ನೋಡಿರೈ ಪಾಂಡವರು ಪಾತಕ
[1] ರಾಡುವಾಟವನಾಡಿದೊಡವೀ
ನಾಡಿನೊಳಗಿದು ಸಲುವುದವನಿಯೊಳಧಿಕಲೇಸೆನಿಸಿ |
ರೂಢಿಯೊಳಗಾಚಾರವಡಗಿತು
ಜೋಡೆಯೊಳ್ ಜನಿಸಿದರನೀಕೇ
ಡಾಡಿ ಕೂಡಿದನೆಂದು ಹೊಯ್ದನು ರವಿಸುತನ ಕರವ ‖ ೨೭

ನಾಳೆ ಭರಹೇಳೆಂದು ವಿದುರನ
ಬೀಳುಕೊಟ್ಟನು ಬೇಹ ಭಟರಿಗೆ
ವೀಳಯವ ನೀಡಿದನು ಹರೆದುದು ನೃಪತಿಯಾಸ್ಥಾನ |

---

[1] ರಾಡದಾಟವನಾಡಿ, ಚ. ಟ.

ಚಾಳಿಸಿತು ತಮ ಮೂಡಣಾದ್ರಿಯು
ಮೇಲೆ ತಲೆದೋಱಿದನು ರವಿ ಭೂ
ಪಾಲ ಕೌರವನಂದಿನೊಡ್ಡೋಲಗವ ರಚಿಸಿದನು | ೨೮

ಕರಿಸಿದನು ಮಣಿಮಕುಟಕಿರಣದ
ಗರುವರನು ಗಾಢಪ್ರತಾಪರ
ಬರಿಸಿದನು ತೂಕದ ಮಹಾಮಂಡಳಿಕಮನ್ನೆಯರ |
ಧುರವಿಜಯಸಿದ್ಧರನು ಚಾಮೀ
ಕರದ ಗದ್ದುಗೆಗಳಿಸಾಮಂ
ತರನು ಪೃಥ್ವೀಪಾಲರನು ನೆರೆಹಿದನು ಕುರುರಾಯ || ೨೯

ಬಲದ ಗದ್ದುಗೆಗಳೊಳು ಭಟರ
ಗ್ಗಳೆಯ ರವಿಸುತ ನದಿಯ ಮಗ ನೃಪ
ತಿಲಕದುಶ್ಶಾಸನ ಕೃಪ ದ್ರೋಣಾದಿನಾಯಕರು |
ಹೊಳೆವ ರತುನದ ಸಾಲ ಮಕುಟದ
ಚಲುವಿಕೆಯ ಸಂರಂಭದೊಳು ಗಜ
ಗಲಿಸಿದರು ಮಾಣಿಕ್ಯಮಯಭೂಷಣವಿಲಾಸದೊಳು || ೩೦

ಸತಿಸಹಿತ ಧೃತರಾಷ್ಟ್ರಭೂಪತಿ
ಸುತನ ಬಲವಂಕದೊಳು ಕನಕೋ
ಚಿತದ ಪೀಠದೊಳೆಸೆದನಾತನ ಬಲದ ಭಾಗದೊಳು |
ಚತುರಚತುರಾನನರು ತರ್ಕ
ಶ್ರುತಿಸಮಸ್ತಕಲಾಸ್ವತಂತ್ರರು
ನುತಗುಣರು ನೃಪಸಭೆಯೊಳೆಸೆದರು ಭೂರಿಸೂರಿಗಳು || ೩೧

ಮದವದತಿಬಲ ಶಕುನಿ ಸೈಂಧವ
ನಧಟನೃಪ ಕಾಂಭೋಜನತಿಸಂ
ಪದನು ಭೂರಿಶ್ರವ ಸುಲೋಚನ ವೀರವೃಷಸೇನ |

ಕದನಕಾಲಾನಲರು ವರಹೇ
ಮದ ಮಕುಟದವರರಸಸೇವಂ
ಕದೊಳು ಕುಳ್ಳಿರ್ದರು ಮಹಾಸ್ಥಾನಮಂಟಪದೊಳು ॥ ೨೦

ತರುಣಶೃಂಗಾರದ ಸಭಾಬಂ
ಧುರರು ನೂರ್ವರು ಕೌರವೇಂದ್ರನ
ವರಕುಮಾರರು ಮುಂದೆ ಮೆಱೆದರು ಲಕ್ಷಣಾದಿಗಳು ।
ವರಕಿರೀಟದ ಕಾಲ ತೊಡರಿನ
ಕೊರಳ ಪದಕದ ಕೈಯ ಸುರಗಿಗ
ಳರಸನನುಜರು ನೂರ್ವರೆಡವಂಕದೊಳು ಮೆಱೆದಿದರು ॥ ೨೨

ಮಿಸುಪ ತಮ್ಮ ಮುಖೇಂದುವೆನು ಸೈ
ರಿಸದ ಚಂದ್ರನ ಕಿತ್ತು ನಭದೊಳು
ಬಿಸುಟು ಬೇಗೆಗಳ ಹಿಡಿವರೆನೆ ಹೊಳೆವಲು ಸಭೆಯೊಳಗೆ ।
ಶಶಿವದನೆಯರ ಕೈಯ ಚಾಮರ
ವೆಸೆದುದಿಕ್ಕೆಲದೊಳು ಸುಯೋಧನ
ವಸುಮತೀಶನ ವೈಭವದೊಳಾಸ್ಥಾನ ಚೆಲುವಾಯ್ತು ॥ ೨೪

ಕಲಹವಿಲ್ಲದೆ ನೂಲಿನೆಳಯೊಳು
ತಲೆಯನರಿವ ವಿರೋಧಿರಾಯರ
ನಳುಕಿಸುವ ಸಾಮದೊಳು ರಿಪುಭೂಭುಜರ ಬೆದಱಿಸುವ ।
ಬಲಿದೊಡೊಳಲಂಚದೊಳು ಛಿದ್ರಿಸಿ
ಕೊಲುವ ಮುನಿದೊಡೆ ಮಂತ್ರಶಕ್ತಿಯೊ
ಳಳುಕಿಸುವ ಮಂತ್ರಿಗಳು ಮೆಱೆದರು ರಾಜಸಭೆಯೊಳಗೆ ॥ ೨೫

ಬರೆದ ಬಟ್ಟಿಕದು ವಿಧಿಯು ಸೀಮೆಯು
ಬರೆಹ ನಿಜಕಾರ್ಯಾರ್ಥಲಾಭವು
ದೊರಕಿದೊಡೆ ಪತಿಯರ್ಥ ನಿರ್ದೊಳು ಬರೆದ ಲಿಪಿಯಂತೆ ।

ಕರಗುಪಿತಲೋಲುಪತೆ ಲಂಚವ
ಪರಮಜೀವನ ಜಾಣರಾಸಿರಿ
ಕರಣದವರೊಪ್ಪಿದರು ಭೂಪಾಲಕನ ಸಭೆಯೊಳಗೆ ॥ ೩೬

ನಿಗಮ ತರ್ಕ ಪುರಾಣ ಕಾವ್ಯಾ
ದಿಗಳ ವಿಸಟಂಬರಿಗಳೊತ್ತೊ
ತ್ತೆಗಳಗಿಟ್ಟೆಡೆಯಾಗಿ ಹಿಗ್ಗಿದ ಜಠರದಗ್ರಿಯರು ।
ಬಗೆಯುಪನ್ಯಾಸದ ಸುಶಾಖಾ
ದಿಗಳ ಬೀಜಲು ಬೆಳೆದ ಗಡ್ಡದ
ವಿಗಡಭೂಯೋವಿದ್ಯರಿದ್ದರು ನೃಪನ ಸಭೆಯೊಳಗೆ ॥ ೩೭

ಸಲೆ ಸಮಸ್ಯದನಂತಪದ್ಯವ
ಘಳಿಲನನ್ವಯಿಸುವ ಸುಕಾಂತಿಯ
ಲಲಿತಮಧುರಸಮಾಧಿಸುಕುಮಾರಾದಿರಚನೆಯೊಳು ।
ಹಲವುಪಮೆಯುತ್ಪ್ರೇಕ್ಷೆರೂಪಕ
ಸುಲಲಿತಾಲಂಕೃತಿಚಮತ್ಕೃತಿ
ಗಳ ಚತುರ್ಭಾಷಾವಿಶಾರದಕವಿಗಳೊಪ್ಪಿದರು ॥ ೩೮

ನುಡಿದು ತಲೆದೂಗಿಸುವ ಮಂಚಿಗ
ನ್ನಡದಿನಾಹಾಯೆನಿಸಿ ಮೊಚ್ಚನು
ಪಡೆವ ವಾಗ್ಮಿಗಳೋದಿ ಹೊಗಳಿಸಿ ಕೊಳ್ವ ಗಮಕಿಗಳು ।
ಕೊಡುವ ಪದ್ಯದ ಸುಪ್ರಮೇಯದ
ಗಡಣೆಯುಬುಜಭವಾದಿವಿಬುಧಗಳು
ಬಿಡಿಸಲರಿದೆನಿಪತುಳತಾರ್ಕಿಕಕವಿಗಳೊಪ್ಪಿದರು ॥ ೩೯

ಸಂದ ಸಿರಿಸಂಚಯದ ನಯಬಂ
ಧುರದ ಗಮಕದ ಹವಣಿನೋಜೆಯ
ಕೊರಳ ಚಿತ್ರಾಶ್ರಯದ ವೀಣಾರವದ ನಿಜದನಿಯ ।

ಪರಮಸೌಳಂಗದ ವಿದೇಶಿಯ
ನಿರುತಪರಿಣತಿಗಳೊಳು ಮಾರ್ಗದ
ನಿರುಪಮದ ಗಾಯಕರ ನಾಯಕರೆಸೆವರೊಗ್ಗಿನೊಳು ॥ ೪೦

ನುತಶುಭೋದಯ ಜೀಯ ಶತ್ರು
ಪ್ರತತಿಸಂಹಾರಕ ಸಮಸ್ತ
ಕ್ಷಿತಿಪತಿ ಬ್ರಹ್ಮಾಯುರಸ್ತು ಎನುತ್ತೆ ಕೈಗಳಿಂ
ನುತಗುಣವ ಬಿರುದಾವಳಿಯ ಸಂ
ಗತಿಯನಭಿವರ್ಣಿಸುತೆ ಸಮಯೋ
ಚಿತದ ಮನ್ನಣೆವಡೆದು ಮೆಱೆದರು ಭಟ್ಟಸಂದೋಹ ॥ ೪೧

ನಳನ ನಹುಷನ ಶಾಲಿಹೋತ್ರನ
ಬಲುಮೆಯದು ಕಿಱಿದೆಂಬವಿದ್ಯಾ
ನಿಳಯವರರೇವಂತನೇಱುಗಟವನು ನಸುನಗುವ ।
ಬಲಿದ ದೃಢವಾಘೆಗಳ ಮುಷ್ಟಿಯ
ಲುಳಿಯ ಹಯಗಾಢಪ್ರತಾಪರು
ಹೊಳೆವ ಮುಕುಟದ ಸಾಲುಗಳೊಳೊಪ್ಪಿದರು ರಾವುತರು ॥ ೪೨

ಅತಿಮದದೆ ತನಿಸೊಕ್ಕಿದೈರಾ
ವತವ ಕಿವಿವಿಡಿದೆಱೆವ ದಿಗ್ಗಜ
ತತಿಯನಮಲಾಂಕುಶದೊಳಂಜಿಸಿ ಕೆಲಬಲಕೆ ಬಿಡುವ ।
ನುತಗಜಾರೋಹಕರು ಕುಂಭಭೂ
ಪತಿಯ ಹೊರೆಯೊಳು ಮೆಱೆವರಮರಾ
ವತಿಯ ರಾಯನ ಸಭೆಯ ಗೆಲಿದುದು ಕೌರವಾಸ್ಥಾನ ॥ ೪೩

ನಡೆದು ಪರಮಂಡಲದ ರಾಯರ
ಜಡಿದು ಕಪ್ಪವ ಸೆಳೆವ ಶಿಷ್ಯರ
ಗಡಣವೆಸೆದುದು ಪವನವೇಗದ ರಾಯಭಾರಿಗಳು ।

ಕಡುಗಿದರೆ ಕಾಲಂಗೆ ಬಿರುದಿನ
ತೊಡರನಿಕ್ಕುವೆ ಜವನ ದಾಡೆಯ
ತುಡುಕುವೆಗ್ಗದ ವೀರರೆಸೆದರು ದೃಷ್ಟಿಸರಿಸದೊಳು ॥ ೪೪

ಎಳೆಯ ಮಿಂಚಿನ ಕುಡಿಯ ಸೊಸುವ
ನಳಿನನಯನದ ಶಶಿಯ ಬಿಂಬವ
ಹೞಿವ ಹುರುಡಿಸುವಿಂದುಮುಖಿಯರು ಕೋಮಲಾಂಗಿಯರು ।
ಸೆಳೆನಡುವಿನಗ್ಗಳೆಯರೊಪ್ಪುವ
ಕಳಶಕುಚೆಯರು ಘನಜಘನೆಯರು
ಚಲವಳಕದವೆರದಸನಸೆಡವಂಕದೊಳು ಮೋಹಿದರು ॥ ೪೫

ಬಿಗಿದಮೊಲೆಗಳ ಮೆಱೆವ ಪೊಱವಾ
ಱುಗಳ ಬಿಂಬಾಧರದ ನಳಿತೋ
ಳುಗಳ ಕಮಲಾನನದ ಕೊಂಕಿದ ಕುರುಳ ತೆಳುವಸಿಱ ।
ಬಗೆಗೊಳಿಪ ಬಲುಮುಡಿಯ ರಂಭೋ
ರುಗಳ ಮೀನವಿಲೋಚನದ ಚಲು
ವುಗಳ ಪದ್ಮಿನಿಯರುಗಳೆಸೆದರು ರಾಜಸಭೆಯೊಳಗೆ ॥ ೪೬

ದಾನಗಂಧದ ಕಿಱುಮುಡಿಯ ಕಮ
ಲಾನನದ ನಿಡುದೋಳ ಲತೆಯ ನ
ವೀನಕೋಮಲವಾಗಿ ತೋಱುವ ಕಿಱಿಯ ಕಣ್ಣುಗಳ ।
ಆಸಿತಂಬದ ಪೊಳೆವ ಮೊಲೆಗಳ
ನೂನಮಧ್ಯದೊಳೆಸೆವ ಬಾಸೆಯ
ಮಾನವತಿಯರನಿಪ್ಪ ಹಸ್ತಿನಿಯರುಗಳೊಪ್ಪಿದರು ॥ ೪೭

ತಳಿತಮುಬ್ಬಿನ ಕುರುಳ ಕೊಂಕಿನ
ಬಳಲುಮುಡಿಗಳ ಕೆಂಪಿನಧರದ
ಚಲಿತನಯನದ ಗೌರವರ್ಣದನೂನರಾಗತೆಯ ।

ಜಲಜಗಂಧದ ಮೆಱೆವ ರೋಮಾ
ವಳಿಯು ಪೀವರಮಧ್ಯಜಂಘೆಯು
ಲಲಿತವದನದ ಶಂಖಿನಿಯರೆಸೆದರು ವಿಲಾಸದೊಳು ॥ ೪೮

ಗುರುನಿತಂಬದ ವಿತತವಕ್ಷದ
ಕಿಱುಬೆರಳು ತೊಡೆ ತೋಳು ಮುಡಿ ನಿಱಿ
ಗುರುಳುಗಳ ಗಾಡಿಕೆಯು ಬೀಗಿದ ನಡುವಿನಿಂದೆಸೆವ ।
ಕಿಱುವೊಲೆಯು ಮಧ್ಯಮದ ರತಿಗಳ
ಪರಮಸೌಭಾಗ್ಯದ ಸಮುದ್ರದ
ಗರುವಿಕೆಯು ಚಿತ್ತಿನಿಯರೆಸೆದರು ರಾಜಸಭೆಯೊಳಗೆ ॥ ೪೯

[ಗರುವಿಕೆಯು ಗಾಡಿಕೆಯು ಸುರತಾ
ತುರದ ಚಿತ್ತದ ಸಂಚುಬುದ್ಧಿಯು
ತರಳತರಮೃದುಮಧುರವಚನದ ಚಪಲಚತುರತೆಯು ।
ಸರಸೆಯರು ಕಡುಚಲುವಿಕೆಯೊಳ
ಚ್ಚರಿಯರಿಗೆ ಹೊಯ್ಕೈಗಳನಿಸುವ
ತರಳನಯನೆಯರೊಪ್ಪಿದರು ಕರ್ಣಾಟವನಿತೆಯರು ॥ ೫೦

ನಳಿನವದನದ ಹೊಳೆವ ಕಡೆಗಂ
ಗಳ ಸುಕಾಂತಿಯು ನವವಿಳಾಸದ
ಬಳವಿಗೆಯು ಶೃಂಗಾರದೊಯ್ಯಾರದ ವಿಡಂಬನದ ।
ಬಲುವೊಲೆಯು ಹಂಸೆಗಳ ನಡೆಯೊಳು
ಬಲುಮನದ ಬಲುರತಿಗಳಂತ್ಯದ
ಬೞಲಿಕೆಯು ಬೆಬ್ಬಳೆಯ ವರಚೋಳಿತಿಯರೊಪ್ಪಿದರು ॥ ೫೧

---

[ ] ಈ ಗುರುತಿನಲ್ಲಿ ಸೇರಿರುವ ೫೦ನೆಯ ಪದ್ಯವು ಮೊದಲುಗೊಂಡು ೬೩ನೆಯ ಪದ್ಯದ ವರೆಗಿರುವ ೧೪ ಪದ್ಯಗಳು ಚ. ಓ. ಪುಸ್ತಕಗಳಲ್ಲಿ ಇಲ್ಲ.

ತೋಳುಗಳ ಕೋಮಲತೆಗಳ ಬಂ
ಬಾಳಗೂದಲ ಕೊಂಕುಗುರುಳಿನ
ಲೋಲನಯನದ ದಂತಿಗಮನದ ಸುರಭಿಪರಿಮಳದ ।
ಲೀಲೆಯೊಳು ಸೊಗಸುವ ಮನೋಜನ
ಕೇಳಿಯೊಳು ಮಧ್ಯಮೆಯರೆನಿಸುವ
ಮೂಳವದ ಮಾನಿನಿಯರೆಸೆದರು ನೃಪನ ಸಭೆಯೊಳಗೆ ॥ ೫೦

ಸುರತಸೌಖ್ಯದ ಲಂಪಟತ್ವದ
ಕರಿಯ ಗಮನದ ಗಿಳಿಯ ನುಡಿಗಳ
ಗುರುನಿತಂಬದ ಶಶಿಯ ಬಿಂಬವನೇಳಿಪಾನನದ ।
ಪುರುಷರನು ಬಲುದೆಬದೆ ಮೋಹಿಪ
ಪರಿಮಳಕೆ ಮಿಗೆ ಕವಿವ ತುಂಬಿಯ
ಸರಸಿಜಾಕ್ಷಿಯರೆಸೆದರಾಪಾಂಚಾಲ ನಾರಿಯರು ॥ ೫೩

ಅಸಿಯಜಂಗೆಯ ವಿಕಟಜಘನದ
ಬಸಿಱ ಬಾಸೆಯ ಸೊಗಸು ಮಿಗೆ ರಂ
ಜಿಸುವ ನಡುವಿನ ಸುೞಿಯ ನಾಭಿಯ ವೃತ್ತಕುಚಯುಗದ ।
ಎಸೆವ ನಗೆಗಂಗಳ ವಿನೋದ
ಪ್ರಸರದೇೞ್ಗೆಯ ಕಾಮರಸ ಪಸ
ರಿಸುವ ಸುರತದ ಗುಜ್ಜರಿಯರೊಪ್ಪಿದರು ಸಭೆಯೊಳಗೆ ॥ ೫೪

ಘನತರದ ನಖಹತಿಗೆ ಘನಚುಂ
ಬನದ ಸೌಖ್ಯಕೆ ನಾಗರಿಕರನು
ಮನವೊಲಿದು ಕೈಕೊಳ್ವ ಸುರತದ ಚಪಳತೆಯೊಳೆಸೆವ ।
ಮುನಿಸುಹರಿಸಕೆ ಕಲಹಸರಸದ
ಕಿನಿಸುಗಳ ತುಂಗೋರುಜಂಘೆಯ
ವನಜಮುಖಿಯರು ಮೆಱೆದರಾಸೌರಾಷ್ಟ್ರನಾರಿಯರು ॥ ೫೫

ನುಡಿಯೊಳಮೃತದ ರಸವನೀಳಿವ
ನಡೆಯೊಳಂಚೆಯನಣಕವಾಡುವ
ಕುಡಿತೆಗಂಗಳ ಬಲೆಯ ಬೀಸುವ ಕಾಮಿಮೃಗಕುಲಕೆ ।
ಬೆಡಗು ಮಿಗೆ ಬಹುಕಾಮಭೋಗದ
ಕಡಲೊಳಗೆ ವಿಟಚಯವ ಮುಳುಗಿಪ
ಕಡುಗರುವೆಯರು ಸರಸೆಯರು ತೆಲುಗಿತಿಯರೊಪ್ಪಿದರು ॥ ೧೬

ಲಲಿತಸುಖಿ ಸುರತಾಂಗಿ ಸರಸಿಜ
ದಳವಿಲೋಚನೆ ಮಧ್ಯರತಿ ವಿಟ
ನೊಲಿದೊಡೊಲಿಯುಳು ಬೆರಸಿ ಬೆರಸದೆ ಮನವ ಬೈಚಿಡುತೆ ।
ನಳಿನಮುಖಿ ಬೇಟದೊಳು ಬೇಗೆಯ
ಬಳಯಿಸಲು ಕಡುಚಪಳ ಸುರತದ
ಕಲೆಯನರಿವ ಕಳಿಂಗವನಿತೆಯರೆಸೆದರೊಗ್ಗಿನೊಳು ॥ ೧೭

ಆಟಕಾತಿ ಸರೋಜಮುಖಿಯನು
ಕೂಲರತಿ ಕಮನೀಯರೂಪಿಣಿ
ಲೋಲಲೋಚನೆ ಕಠಿಣಕುಚಯುಗೆ ರಾಗವತಿಯೆನಿಪ ।
ಲೀಲೆಯೊಳು ಲೋಕವನು ಮೋಹಿಸಿ
ಸೋಲಿಸುವ ಸೊಬಗೆಯರು ಸಖಿಯರ
ಮೇಳವಣೆಯೊಳು ಮೆಱೆದರೊಡ್ಡಿಯ ದೇಶದಬಲೆಯರು ॥ ೧೮

ಗುರುನಿತಂಬದ ತರಳನಯನದ
ಕರಿಯುಗಮನದ ಗೌರವರ್ಣದ
ಸರಸಿಜಾನನಕಾಂತಿಗಳ ಪಾಟಳಿಯ ಪರಿಮಳದ ।
ಪುರುಷಕೇಳಿಯ ಕುಹಕಭಾವದ
ಚರಕೆಗಳ ಸಂಪೂರ್ಣ ಕಲೆಗಳ
ತರುಣಿಯರು ಲೇಸೆನಿಸಿದರು ಗೌಳವದ ನಾರಿಯರು ॥ ೧೯

ಒಲಿಸಲಱಿಯರು ವಿಟರ ಚಿತ್ತವ
ನಿಲಿಸಲಱಿಯರು ಕೂರ್ತೊಡೆಯು ತಾಂ
ಹಲವುಮಾತಿನೊಳಸುವನೀವರು ಹುಸಿಯ ಹುರುಡಿನೊಳು ।
ಕಲಹವನು ಕಲ್ಪಿಸುವರಭಿಮತ
ಚಳಮನದೊಳಾಡುವರು ಸುರತ
ಕ್ಕೊಲಿದು ಕೂಡುವ ಮನದವರು ಮಲಹಿತಿಯರೊಪ್ಪಿದರು ॥೭೦

ಮುಸುಕಿನೊಳು ಮೂಲೋಕವನು ಮೋ
ಹಿಸುವ ಕಡೆನೋಟದೊಳು ಕಂಠವ
ರಸುವನಲ್ಲಾಡಿಸುವ ಕೂಟದೊಳಮರಪದವಿಯನು ।
ಹುಸಿಯೆನಿಸಿ ತೋಱಿಸುವ ಮದನನ
ಹೆಸರ ಬಿರುದನು ಜಗದೊಳಗೆ ಸಾ
ಱಿಸುವರೆಸೆವಿಹರಲ್ಲಿ ಹೊಯಿಸಳದೇಶವಬಲೆಯರು । ೭೧

ನೋಡಲಱಿಯರು ವಿಟರ ಚಿತ್ತವ
ಕೂಡಲಱಿಯರು ಬಳಸಿ ಬೇಟವ
ಮಾಡಲಱಿಯರು ಹಣದೊಳಗೆ ಮಿಗೆ ಜೀವದುಱುವೆಂದು ।
ಬೇಡಿ ಬೇಸರಿಸುವ ವಿಲಾಸದ
ಜೋಡಿಗಳ ತೋಱಿಸುವ ಜೌವನ
ಗೇಡಿಗಳು ಚೆಲುವಾದರೈ ಕೊಂಕಣದ ವನಿತೆಯರು ೭೨

ಮುಡಿಯ ಭಾರದೊಳೊಲಿದು ತುಱುಬಿದ
ತೊಡಬೆಗಳ ಚೆಲುವಿಕೆಯೊಳೂರ್ವಶಿ
ಪಡಿಯೆ ಸಾರೆಂಬಂತೆ ಮೋಹವೊಯ್ಯಾರದೊದವುಗಳ ।
ಸಡಗರದೊಳಿನಿಸುಳಿನುಡಿಗೆ ತಲೆ
ಗೊಡಹಿಸುವ ಮಿಗೆ ಸರೆದರಾದೊಡೆ
ಕಡೆಯ ಕಾಣಿಸುವಧಟೆಯರು ತುಳುವಿತಿಯರೊಪ್ಪಿದರು ॥] ೭೩

ಮುರಿದು ನೋಡಿದೊಡಖಿಳರಾಜರು
ಸಿರವ ಬಾಗಲು ಲಾಟ ಮಾಳವ
ತುರುಕ ಕೊಂಕಣ ಗೌಳ ಗುಜ್ಜರ ವಂಗ ಹಮ್ಮೀರ |
ವರಕಳಿಂಗಾದಿಗಳು ಬೆಸಸೆನು
ತಿರಲು ಕೋಪಮಲಿಕೆಯರು ಸಿತಚಾ
ಮರವ ಚಿಮ್ಮಲು ಭೂಪ ಮೆಱೆದನು ಸಿಂಹಪೀಠದೊಳು ॥ ೬೪

ಆವರೀತಿಯುದಾವವಿಸ್ತರ
ದಾವದೇಶದ ಸಿರಿಯು ಸಿಂಗರ
ದಾವಪರಿಯ ವಿಲಾಸವಾವವಿಡಾಯಿ ತಾನೆನಲು |
ದಾವು ಹಟವಿಗೆಯಾದ ರಾಯನು
ರಾವಣಾರಿಯ ಕಾಣಿಕೆಗೆ ಬಲು
ಠೀವಿಯನು ತೋಱಿದನು ಸಾಱುವ ಭಟ್ಟರೋಳಿಯೊಳು ॥ ೬೫

*

ಬರಲಿ ಕರೆ ಕೃತವದ ಶಿಕ್ಷಾ
ಗುರುವನೆಂದವನೀಶ ದೂತರ
ಹರಿಯಬಿಟ್ಟನು ಹರಿಯು ನಿಳಯಕೆ ಹರಿಯು ಬೇಗದೊಳು |

---

* ವಿಭವವೆಸೆದುದು ವಿಗಡನೂತನ
ದಭವನೋಲಗದಂತೆ ಧಾಳಿಪ
ರಿಪುಸುಗನು ರಣರಂಗಚೌಪಟಮಲ್ಲ ಕುರುರಾಯ |
ಸಭೆಯ ಸಡಗರಿಸಿದನು ಕರೆ ಕರೆ
ತ್ರಿಭುವನದೊಳತಿವ್ಯೈವ ಗಡ ಎಂ
ದಭಿನುತನು ಕಳುಹಿದನು ವಿದುರನಮನೆಗೆ ಪಡಿಹರರ ॥

ಈ ಪದ್ಯವು ಕ. ಪುಸ್ತಕದಲ್ಲಿ ಮಾತ್ರ ೬೫ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತದೆ.

ಚರರು ಹರಿತಂದಸುರರಿಪುವಿನ
ಚರಣದೊಳು ಮೆಯ್ಯಿಕ್ಕಿ ನೊಸಲೊಳು
ಕರಪುಟಾಂಜಲಿ ಮೆಱೆಯುತಿರೆ ಬಿನ್ನಹವ ಮಾಡಿದರು ॥ ೬೬

ದೇವ ದೇವರ ಸಮಯವೇನೆ ರಾ
ಜೀವನಾಭನು ಮುಗುಳುನಗೆಯೊಳು
ಭಾವನವರಟ್ಟಿದರೆ ಹರಹರ ಬಹೆವು ನಾವೆನುತೆ ।
ರಾವಣನ ಪರಿ ನೆಲಸಿತಿವನೊಳು
ಸಾವಿಗಂಜುವೆನಲ್ಲ ಖಳ ಮಾ
ಯಾವಿದನು ನಮ್ಮಿಂತು ಕೊಳ್ಳದು ವಿದುರ ಕೇಳೆಂದ ॥ ೬೭

ಎನುತೆ ಮಂಚವ ನಿಳಿದು ವರಕಾಂ
ಚನವರೂಥಕೆ ಕೈಗುಡುವ ಯದು
ಜನನೆರಗ್ಗಡಣೆಯೊಳು ಬಿಜಯಂಗೈದನಸುರಾರಿ ।
ಮುನಿನಿಕರ ಸಂದಣಿಸಿ ತಭ್ರದೊ
ಳನಿಮಿಷಾವಳಿ ನೆರೆದು ವಿಭಪುರ
ಜನವೊಡನೆ ನಡೆತರಲು ಹರಿ ಬರುತಿರ್ದನೋಲಗಕೆ ॥ ೬೮

ಕಲಿಮಲದ ಹೊಲೆಗಲಸಿದಿಭಪುರಿ
ಯೊಳಗೆ ನಿರ್ಮಳವಾಯ್ತು ಕೃಷ್ಣನ
ಸುಲಭದರ್ಶನದಿಂದೆ ಬೆಂದುವು ಜನದ ಭವಬೀಜ ।
ಲಲನೆಯರು ತಂತಮ್ಮ ನಯನಂ
ಗಳಿಗೆ ದೇವನ ತಂದು ಸಮ್ಮದ
ಪುಳಕಿತಾಂಗಿಯರಾದರೆಲೆ ಜನಮೇಜಯಕ್ಷಿತಿಪ ॥ ೬೯

ದೇವ ಬಂದನು ತನ್ನ ನೆನೆವರ
ಕಾವ ಬಂದನು ದೈತ್ಯಕುಲವನ
ದಾವ ಬಂದನು ಭಾಗವತಜನಲೋಲುಪನು ಬಂದ ।

ಭಾವಿಸುವ್ರೊಡಘಹಾರಿ ಬಂದನು
ವ್ರೋವಿ ಭಜಿಸಲು ತನ್ನ ಬೀಱುವ
ದೇವ ಗದುಗಿನ ವೀರನಾರಣ ಬಂದನೋಲಗಕೆ ॥ ೭೦

ಅರಸ ಬಂದನು ಭಾಗವತಜನ
ಪುರುಷ ಬಂದನು ಭಕ್ತವತ್ಸಲ
ಕರುಣಿ ಬಂದನು ತನ್ನ ನೆನೆದೊಡೆ ಪರವನೀವವ ।
ಪರಮಪುರುಷೋತ್ತಮನು ಬಂದನು
ದುರಿತದುರ್ಗವಿಭಾಡ ಬಂದನು
ಧರೆಯ ಸಲಹುವ ದೇವ ಬಂದನು ನೃಪತಿಯೋಲಗಕೆ ॥ ೭೧

ಕಂಜಸಂಭವಪಿತನು ಬಂದನು
ನಂಜಿನೊಳು ಪವಡಿಸಿದ ಬಂದನು
ಕುಂಜರನ ಮೊರೆಗೇಳಿ ಸಲಹಿದ ದೇವ ತಾಂ ಬಂದ ।
ಅಂಜಿದಸುರನ ಕಾಯ್ದ ಬಂದನು
ಬಂಜನೆಗೆ ಬಲುದೈವ ಬಂದ ಧ
ನಂಜಯಾದ್ಯರ ಭಾವ ಬಂದನು ನೃಪತಿಯೋಲಗಕೆ ॥ ೭೨

ಸರಸಿಜಾಕ್ಷನು ಬಂದ ಯದುಕುಲ
ವರಶಿರೋಮಣಿ ಬಂದ ದಾನವ
ಶರಧಿವಡಬಾನಲನು ಬಂದನು ಸಿರಿಯರಸ ಬಂದ ।
ದುರಿತಕದಳಿಕುಠಾರ ಬಂದನು
ಸುರಸಮೂಹಾರಿ ತನು ಬಂದನು
ವರದ ಗದುಗಿನ ವೀರನರಯಣ ಬಂದನೋಲಗಕೆ ॥ ೭೩

ಯಾದವರ ಕುಲತಿಲಕ ಬಂದನು
ಸಾಧುಸಜ್ಜನರರಸ ಬಂದನು
ಮೇದಿನೀರಿಪುವಿಪಿನದಹನಕೃಶಾನು ತಾಂ ಬಂದ ।

ವೇದವೇದ್ಯನು ಬಂದನಿದೆ ಸನ
ಕಾದಿಪೂಜ್ಯನು ಬಂದನಬುಜಭ
ವಾದಿದೇವಪ್ರಿಯನು ಬಂದನು ನೃಪತಿಯೋಲಗಕೆ ॥ ೨೪

ಕ್ಷೀರವಾರಿಧಿಶಯನ ಬಂದನು
ವಾರಿಜೋದರ ಕೃಷ್ಣ ಬಂದನು
ಧಾರಿಣಿಯ ಹೊಱೆಗಳೆಯಲೋಸುಗ ಮನುಜವೇಷದೊಳು ।
ಭೂರಿದೈತ್ಯರನೊರಸಿ ಕೌರವ
ವಾರಿಧಿಯ ಮುಕ್ಕುಳಿಸಲೆಂದೀ
ಘೋರನೈತರುತಿರ್ದ [1] ನಂದು ನೃಪಾಲನೋಲಗಕೆ ॥ ೨೫

ಕ[illegible]ತರ ಕಡುದುರಿತರಾಶಿಗೆ
ಕೆಂಡವನು ಬೀಱುತ್ತ ಕೈಗಳ
ಮಂಡೆಗಾನಿಸಿದವರಿಗುದ್ಭವಕೋಟಿಗಳ ಸುಡುತ ।
ಚಂಡಮತಿಯೊಳು ಹೊಗೞಿದವರಿಗೆ
ಹಿಂಡುಮುಕುತಿಯನೀಯುತುವ ಉ
ದ್ದಂಡದೇವನು ಬರುತುಮಿರ್ದನು ನೃಪತಿಯೋಲಗಕೆ ॥ ೨೬

* ರಾಮ ಬಂದನು ಸಕಲಮುನಿಜನ
ಪ್ರೇಮಿ ಬಂದನು ಪಾಂಡವರ ಸು
ಕ್ಷೇಮಿ ಬಂದನು ಲಕ್ಷ್ಮಣಾಗ್ರಜ ನಿಖಿಳದಾತಾರ ।
ಭೂಮಿಯೊಳಗರ್ಥವನು ಬೇಡಲಿ
ಕಾಮಹಾತ್ಮನು ತಾನೆ ಬಂದನು
[2] ಭೀಮಬಲಮುರವೈರಿ ಬಂದನು ನೃಪತಿಯೋಲಗಕೆ ॥ ೨೭

---

ನಂಧ, ಖ. * ಈ ಪದ್ಯವು, ಚ. ಛ. ಟ. ಪುಸ್ತಕಗಳಲ್ಲಿಲ್ಲ.

2 ಕಾಮಪಿತ, ಕ. ಖ.

ಸುರರ ಸಲಹಿದ ದೇವ ಬಂದನು
ನರನ ಜೀವನಸಖನು ಬಂದನು
ಪರಮಕರುಣೋದಯನು ಬಂದನು ಕಾಮಪಿತ ಬಂದ ।
ದುರುಳರಾವಣವೈರಿ ಬಂದನು
ಸಿರಿಲತಾಂಗಿಯ ರಮಣ ಬಂದನು
ವರೆಯಹಲ್ಯೆಗೆ ಮೋಕ್ಷವಿತ್ತವ ಬಂದನೋಲಗಕೆ ॥ ೩೮

ಬರಲು ಮುರರಿಪುಗಿದಿರುವೆಂದುದು
ಸುರನದೀಜದ್ರೋಣ ಗೌತಮ
ಗುರುಸುತಾದಿಸಮಸ್ತಭೂಪಜಮೂಪಸಂದೋಹ ।
ಚರಣದೊಳು ಚಾಚಿದರು ಭೂಮಿಾ
ಶ್ವರರು ಮಕುಟವನಂದು ತಾರಾ
ಪರಿವೃತೇಂದುವಿನಂತೆ ಮೆಱೆದುದು ಪರಿಯ ಪದನಖರ ॥ ೩೯

ಅರಿದಲೈ ಮುರವೈರಿ ಸನಕಾ
ದ್ಯರ ಸಮಾಧಿಗೆ ಸಿಲುಕಿಯದಂಘ್ರಿಯು
ದರುಶನದ ಫಲಭೋಗ ಸಾರಿದುದಸ್ಮದಾದ್ಯರಿಗೆ ।
ಸುರನರೋರಗರೊಳು ಕೃತಾರ್ಥರು
ನಿರುತವಾವಲ್ಲದೊಡೆ ನಿಮ್ಮಯ
ಸರಸಿಜಾಂಘ್ರಿಯ ಸೇವೆ ದೊರಕುವುದಾವಮುನಿಗಳಿಗೆ ॥ ೪೦

ಎಂದು ಗಂಗಾನಂದನನು ನಲ
ವಿಂದೆ ಕೈಗುಡೆ ಸುರಗಿರಿಯ ತುದಿ
ಯಿಂದೆ ಮಿಱುಮಿಂಚುಗಳ ಮುಗಿಲಿೞಿವಂತೆ ಭೂತಳಕೆ ।
ಅಂದು ನೀಲಾಚಲನಿಕಾಯನು
ಸುಂದರಾಂಗದಕೌಸ್ತುಭಪ್ರಭೆ
ಯಿಂದೆ ಕಾಂಚನರಥವನಿೞಿದನು ದಾನವಧ್ವಂಸಿ ॥ ೪೧

ಸಮರಸರ್ವಜ್ಞರುಗಳಂಘ್ರಿಗೆ
ನಮಿಸಿದರು ಬರಲೋಲಗವು ಸಂ
ಭ್ರಮದೆ ಸಿರಿದಲೆವಾಗುತಿರ್ದುದು ನೊಸಲ ಕೈಗಳೊಳು ।
ಕಮಲಗಣ್ಣನ ದೇವನೇ ಸಾ
ಕೆಮಗೆ ಮಾಡುವುದೇನೆನುತ ತ
ತ್ಕುಮತಿಕೌರವನಿಳಿಯದಿರ್ದನು ಸಿಂಹವಿಷ್ಟರವ ॥ ೮೨

ಸೆಣಸು ಸೇರದ ದೇವ ನಿದಿರೊಳು
ಮಣಿಯದಾತನ ಕಾಣುತುವೆ ಧಾ
ರಿಣಿಯ ನೌಕಿದನುಂಗುಟದ ತುದಿಯಿಂದೆ ನಸುನಗುತ ।
ಮಣಿಖಚಿತಕಾಂಚನದ ಪೀಠದ
ಗೊಣಸು ಮುಱಿದುದು ನಭದೆ ಸುರಸಂ
ದಣಿಗಳಾ ಎನೆ ಹೊರಳಿ ಬಿದ್ದನು ಹರಿಯ ಚರಣದೊಳು ॥ ೮೩

ಧರಣಿಪತಿ ಸಿಂಹಾಸನದ ಮೇ
ಲಿರದೆ ಬಹರೇ ನಾವು ಬಂದೇ
ಹರಸುವೆವು ತಪ್ಪಾವುದೆನುತೆತ್ತಿದನು ಮಸ್ತಕವ ।
ಸುರನದೀಸುತ ಕೈಗುಡಲು ಕೇ
ಸರಿಯ ಪೀಠಕೆ ದೇವ ಬಂದನು
ಕುರುಕುಲಾಗ್ರಣಿಗಳ ಸುಸನ್ಮಾನವನು ಕೈಗೊಳುತ ॥ ೮೪

ಹರಿಯ ಹರಿವಿಷ್ಟರದ ಬಲದೊಳು
ಧರಣಿಪತಿ ಕುಳ್ಳಿರ್ದನಾತನ
ಹಿರಿಯಮಗನೆಡವಂಕದೊಳು ಕರ್ಣಾದಿಗಳು ಸಹಿತ ।
ಹರಿಯ ನೇಮವ ಕೊಂಡು ಸನ್ಮುನಿ
ವರರು ಕುಳ್ಳಿರ್ದರು ನದೀಸುತ
ತರಿಸಿದನು ಪಡಿಗವನು ಹೊಂಗಲಶದ ಸುವಾರಿಗಳ ॥ ೮೫

ಚರಣಯುಗಳವ ತೊಳದು ತೀರ್ಥವ
ಸಿರದೊಳಾಂತು ಮಹಾನುಭಾವನ
ದರುಶನದೆ ಮಮ ಜನ್ಮ ಸಫಲವೆನುತ್ತ ಕೈಮುಗಿದು ।
ಪರಶುರಾಮಾದಿಗಳ ಮಿಗೆ ಸ
ತ್ಕರಿಸಿ ಗಂಧಾಕ್ಷತೆಗಳಿಂದುಪ
ಚರಿಸಿ ಹೊಂಬಟ್ಟಲೊಳು ವೀಳೆಯವಿತ್ತನನಿಬರಿಗೆ॥ ೮೭

ಕುಶಲವೇ ಕುರುರಾಯ ಬಾರೈ
ಮುಸುಡ ದುಗುಡವಿದೇನು ಬಾ ಯೆಂ
ದಸುರರಿಪು ಕೌರವನ ಕರೆದನು ತನ್ನ ಸಂಮುಖಕೆ ।
ಉಸಿರಲಮ್ಮೆನು ಭಾವತನದೊಂ
ದೆಸೆವೆಸಲುಗೆಗೆ ನೇಮವಾದೊಡೆ
ಬಿಸಜಲೋಚನ ಬಿನ್ನಹವನವಧರಿಸಬೇಕೆಂದ ॥ ೮೭

ನೀವು ಬಿಜಯಂಗೈವಿರೆಂದು ಮ
ಹಾವಿಲಾಸದೊಳಳವಡಿಸಿ ನಾ
ನಾವಿಧದ ಷಡುರಸವ ತರುಣಿಯರಿಂದ ಸವೆಸಿದೆನು ।
ದೇವ ನಮ್ಮರಮನೆಗೆ ಬಾರದೆ
ನೀವು ವಿದುರನ ಮನೆಯೊಳುಂಡಿರಿ
ಗೋವಳಗತನ ನಿಮ್ಮ ಮೈಸಿರಿ ತಪ್ಪದಾಯ್ತೆಂದ ॥ ೮೮

ಈ ಕೃಪನದೀ ದ್ರೋಣನೀ ಗಂ
ಗಾಕುಮಾರನ ಮನೆಯ ಹೊಗದವಿ
ವೇಕಿ ತೊತ್ತಿನ ಮಗನ ಮನೆಯೊಳು ಹಸಿವ ನೂಕಿದಿರಿ ।
ಸಾಕಿದಾತನು ನಂದಗೋಪನು
ಕಾಕಬಳಸಲು ಸಲ್ಲದೇ ನಿಮ
ಗೇಕೆ ರಾಯರ ಠಾವಿ ಯೆಂದನು ಕೌರವರ ರಾಯ ॥ ೮೯

ಕುರುಪತಿಯು ಬಿಱುನುಡಿಯ ಕೇಳಿದು
ಕರಣದೊಳು ಕೋಪಾಗ್ನಿಯುಕ್ಕಲು
ಕೆರಳಿ ನಿರ್ಭೀತಿಯೊಳು ನುಡಿದನು ವಿದುರನರಸಂಗೆ ।
ದುರುಳ ನೀಂ ನಿಂದಿಸಿದ ನುಡಿಗು
ತ್ತರವನೀಯಲದೇಕೆ ನಿಮ್ಮಯ
ವರಜನನಿಗಾದಿಯೊಳು ಗಂಡನದಾರು ಹೇಳೆಂದು ॥ ೯೦

ನಾನಲೇ ತೊಱ್ತಿನ ಮಗನು ಕೇಳ್
ನೀನಲೇ ಅಜಪುತ್ರ ಸಕಟಾ
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ ।
ನೀನು ನಿನ್ನಯ ಕೊಂಕುಕೊರತೆಯ
ಹಾನಿವೃದ್ಧಿಯ ನೋಡವನಿಬರ
ನೇನುಕಾರಣ ನುಡಿವೆ ಕುರುಪತಿ ಯೆಂದನಾ ವಿದುರ ॥ ೯೧

ಕಡುಮುಳಿದು ಕಲಿಭೀಮ ನಿನ್ನಯ
ತೊಡೆಗಳನು ಮುಱಿವಾಸಮಯದೊಳು
ಪಿಡಿದು ನಿನ್ನನು ಕಾಯಬೇಕೆಂದುಱಿಹಿದೆನು ಧನುವ ।
ಕೆಡೆ ನುಡಿಸಿಕೊಂಡಿನ್ನು ಕಾವೆನೆ
ಪೊಡವಿಪತಿ ಕೇಳೆಂದು ವಿದುರನು
ಹಿಡಿದ ಬಿಲ್ಲನು ಮುಱಿದನಾ ಕುರುಸೇನೆ ಕಳವಳಿಸೆ ॥ ೯೨

ಧನು ಮುಱಿಯೆ ಗಾಂಧಾರಿ ಗತಲೋ
ಚನರು ಮಂಮಲಮಱುಗಿದರು ಭೂ
ಪನೆ ದುಗುಡ ಮಿಗಿಲಾಯ್ತು ಭೀಷ್ಮ ದ್ರೋಣರಳಲಿದರು ।
ಮನದ ಹರುಷದೊಳಂದು ಮಧುಸೂ
ದನನು ವಿದುರನ ತಿಳಿಹಿ ಕೇಳಲೆ
ಜನಪ ಕೌರವರಾಯ ನಮ್ಮಯ ಶೀಲ ಬೇರೆಂದ ॥ ೯೩

ಪ್ರಿಯದೊಳುಂಬುದು ಮೇಣು ವಿಪದಾ
ಶ್ರಯದೊಳುಂಬುದು ಮಾನವರಿಗಿದು
ನಿಯುತವೆಂತಲ್ಲಿದುವೆ ಕೇಳ್ಕೌರವರ ರಾಯ ।
ಪ್ರಿಯನು ನೀನೆಮಗಲ್ಲ ವಿಪದಾ
ಶ್ರಯವು ತಾಂ ಮುನ್ನಿಲ್ಲ ನಿನ್ನಾ
ಲಯದೊಳೆಮಗೆಂತೂಟ ಸಂಭವಿಸುವುದು ಹೇಳೆಂದ ॥ ೯೪

ಹಗೆಯನುಣಿಸುವುದಾಗದೈ ವೈ
ರಿಗಳ ನಿಳಯದೊಳನ್ನ ಪಾನಾ
ದಿಗಳ ಕೊಳಲಾಗದು ನಿಷಾನಿಸೆ ರಾಜನೀತಿಯಿದು ।
ಬಗೆಯೆ ನೀಂ ಪಾಂಡವರಿಗಹಿತನು
ವಿಗಡಪಾಂಡವ ರೆನ್ನ ಜೀವನ
ಹಗೆಯ ನಂಬುವೆನೆಂತು ಹೇಳ್ಕೌರವರ ರಾಯ ॥ ೯೫

ಸೇರುವೆನು ಸಕಳಂಕಚಂದ್ರನು
ವಾರಿಧಿಗೆ ನೀನಖಿಳಗೋಪೀ
ಜಾರ ಜಾರೆಯ ಮಕ್ಕಳಿಗೆ ನೀಂ ಜೀವ ತಪ್ಪೇನು ।
ಆರು ತನ್ಮಂದದ ಮಹಾತ್ಮ
ಸೇರುವರಲ್ಲೈ ಪಾಂಡುಪುತ್ರ
ಕೂರುಮೆಗೆ ನಾನಂಜೆ ನೀಂ ಬಂದನುವೆ ಹೇಳೆಂದ ॥ ೯೬

ಕುಲದವನ ಹೃದಯಾಂಧಕಾರವೆ
ಕಲಿಚಲೆಂದು ಹಿಮಾಂಶು ಹರಹಿದ
ನೆಳೆಯ ಬೆಳದಿಂಗಳನೆನಲು ಸುರರಿಪುಕುಲಾಂತಕನು ।

ತೊಳಪ ದಶನವಮಯೂಖತತಿ ಹೊಳೆ
ಹೊಳೆಯೆ ನುಡಿದನು ತತ್ಸಭಾವಂ
ಡಲಮಹಾಬ್ಧಿಯು ನುಡಿದೆರೆಯು ತನಿಗಡಣವೆಡಗಿರಲು ॥ ೯೭

* ಎಂಟನೆಯ ಸಂಧಿ ಮುಗಿದುದು.

## ಒಂಭತ್ತನೆಯ ಸಂಧಿ.

ಸ್ವಾಮಿ ಕೌರವನನ್ನು ಜರೆದುದು.

**ಸೂಚನೆ**

ಬಿಡು ನೆಲನ ಕೇಡುಗರ ಮಾತಿಂ
ಗೊಡಬಡದಿರಂತಕನ ನಗರಿಗೆ
ನಡೆಯಬೇಡೆಂದಸುರರಿಪು ಕೌರವನನುಱೆ ಜಱೆದ ॥

ಅವಧಿ ಸವೆದುದು ಪಾಂಡವರು ನಿ
ನ್ನವರು ವನವಾಸಪ್ರಯಾಸದೆ
ನವೆದರವದಿರ ಕೂಡಿ ಬದುಕುವುದಧಿಕಗುಣ ನಿನಗೆ ।
ಅವನಿಯರ್ಧವನೀವುದೀಯ
ಧ್ರುವದ ಬಾಚಿಕೆಯೊಳಗೆ ಪುರುಷಾ
ರ್ಥವನು ಸಂಚಿಸೆ ಕಲಿಯಬೇಹುದು ನೃಪತಿ ಕೇಳೆಂದ ॥ ೧

---

* ಚ. ಪುಸ್ತಕದಲ್ಲಿ— ೯೭ನೆಯ ಪದ್ಯದಕೆಳಗೆ.

ಸಿರಿವರನು ಯಾದವರ ಕುಲದೊಳು
ಪರಮಹಾತ್ಮನು ಕೃಷ್ಣರಾಯನು
ಮರುಳಕೌರವನೀತಿ ಯಾದವನೀತಿ ವಚನವನು ।
ಇರದೆ ಕೇಳುತ ಮನದೊಳಗೆಯುತಿ
ಪರುಷದಿಂ ಕೌರವಗೆ ನುಡಿದನು
ಪರಮಕರುಣಾಸಿಂಧು ಗದುಗಿನ ವೀರನಾರಯಣ ॥

ಅರಸುತನ ತನಗಧಿಕವಾಗುತೆ
ಬರಬರಲು ಕಣ್ಣಾಲಿಗಳು ತರ
ಪರಿಸಿ ಕಾಣವು ವರ್ತಮಾನದ ನೃಪರ ಬಳಿಕೆಯಿದು ।
ಸಿರಿಯು ಮದವೆಂಬಧಿಕತಾಮಸ
ದೊರಕಿದಾಗಳ ನೀತಿಕಾಱರ
ಪರಮವಚನಾಂಜನದಿನುಜ್ಜ್ವಲಿಸುವುದು ನಯುವೆಂದ ॥ ೧

ಕೋಶ ಬಲ ತಳತಂತ್ರಹೆಚ್ಚಿದ
ದೇಶ ದುರ್ಗವಮಾತ್ಯ ಮಿತ್ರ ಮ
ಹೀಶಜನವೆಂಬಿದುವೆ ಕೇಳ್ ಸಪ್ತಾಂಗಸನ್ನಾಹ ।
ಈಸು ನಿನಗುಂಟಲ್ಲ ಮಿತ್ರಮ
ಹೀಶರೆಂಬುದು ಕೋಱತೆ ಪಾಂಡವ
ರಾಸಹಾಯವು ಬರಲು ಬಿಱಕಿದಿರಿಲ್ಲ ನಿನಗೆಂದ ॥ ೩

ಹೇಱಿದೀಸಪ್ತಾಂಗದೊಳಗೊಂ
ದೇಱಿ ದಿಟವಾಗಿರ್ದ ನೃಪತಿಯು
ಬಾಱಿಕೆಗೆ ಸಂದೇಹವಱಿಯಾ ರಾಜನೀತಿಗಳ ।
ಹೇೞಲಮ್ಮುವರಿಲ್ಲ [1] ಹಿತವನು
ಹೇೞುದೊಡೆ ಕೈಕೊಳ್ಳ ಕುರುಕುಲ
ಮೌಳಿ ನಯುದೊಳು ನಡೆಯುಕಟ ನೀನೆಂದನಸುರಾರಿ ॥ ೪

ಸಾಮವೆಂಬುದು ರಾಜನೀತಿಗೆ
ತಾ ಮನೋಹರರೂಪು ಬದುಕುವ
ಭೂಮಿಪಾಲರ ವಿನುತವಿಭವಕೆ ಬೀಜಮಂತ್ರವಿದು ।
ಸಾಮ ತಪ್ಪಿದ ಬೞಕ ನೀತಿವಿ
ರಾಮವಾಗದೆ ಬಿಡದು ದಂಡದ
ಸೀಮೆಯೆಂಬುದುಪಾಯುದೊಳು ಸಾಮಾನ್ಯತರವೆಂದ ॥ ೫

---

[1] ಹಿತವರು, ಚ.

ಮಾಡಿದಪಕಾರಂಗಳನು ಮಱೆ
ದಾಡರವರತಿಮೋಹದೊಳು ನೀಂ
ಗೂಡಿ ಬದುಕುವ ಸುಡಿಯ ನುಡಿವರು ನಮ್ಮ ಮನ ಮೆಚ್ಚೆ ।
ಕಾಡಿನೊಳಗಾಡಿದರು ದುಃಖವ
ತೋಡಿದರು ನೀನವರಿಗುಚಿತವ
ಮಾಡಿ ನಾಡನು ಕೊಡುವುದೆಂದನು ದಾನವಧ್ವಂಸಿ ‖ ೬

ವಿದುರನುತ್ಸವ ಕೃಪನ ಸನ್ಮುದ
ನದಿಯ ಮಗನೊಲುವಂಧನೃಪನ
ಭ್ಯುದಯ ಕೇಳ್ವಸುರರಿಪು ನಯನುಡಿಯ ಗಡಣಿಸಲು ।
ಮದದ [1] ವೈಗಾಡಿಕೆಯ ಮನಲೇ
ಪದ ಮಹಾಖಳನಷ್ಟಭೋಗ [2] ವಿಡ
ಲುದಧಿಯೊಳಗದ್ದಂತೆಯಿದ್ದುದು ರಾಯನಾಸ್ಥಾನ ‖ ೭

ಕಳಕಳಿಕೆ ತಗ್ಗಿದ ಸಭಾವನ
ದೊಳಗೆ ಸಿಂಹಧ್ವನಿಯೊಳವನಿಪ
ಕುಲಕುಠಾರನು ಪರಶುರಾಮನು ನುಡಿದನರಸಂಗೆ ।
ಎಲೆ ಸುಯೋಧನ ಕೃಷ್ಣರಾಯನ
ನಳಲಿಸದಿರೈ ಲೋಭವತಿವಿ
ಗ್ಗಳದ ನಿರ್ಬಂಧವು ನಯಜ್ಞರಿಗುಚಿತವಲ್ಲೆಂದ ‖ ೮

ದಿವಿಜರಿದಿರಲ್ಲೆಂದು ದಂಭೋ
ದ್ಭವನು ನರನಾರಾಯಣಾಖ್ಯರ
ನವಗಡಿಸಿ ಮುಱಿವಡೆದು ಕೆಟ್ಟನು ಗಾಢಗರ್ವದೊಳು ।
ಅವರೊಳರ್ಜುನ ನರನು ಯದುಸಂ
ಭವನು ನಾರಾಯಣನು ಬಿಡು ನೀ
ನವರ ವೈರವನೆಂದು ಭಾರ್ಗವ ನುಡಿದನರಸಂಗೆ ‖ ೯

---

1 ವೈಗಾಣಿಕೆಯ, ಜ. 2 ವಿಡೆ ಬೆದಱಿ ಭಯಗೊಂಡಿದ ದಾಸ್ಥಾನ ಜನ ಮೌನದಲಿ, ಚ. ವಿಡಲಧಟನಿದರ್ಗಂತಿದರ್ದಧಾಯಾಸ್ಥಾನಜನವೆಲ್ಲ. ಕ. ಜ.

ತಪ್ಪಿ ನುಡಿಯನು ಪರಶುರಾಮನು
ದಪ್ಪವಿದು ಲೇಸಲ್ಲ ನೃಪ ನೀ
ನೊಪ್ಪಿಸುವುದರ್ಥಾವನೀತಳವನು ಸರಾಗದೊಳು ।
ತಪ್ಪಿ [1] ನುಡಿದೊಡೆ ಗರುಡದೇವನ
ದಪ್ಪವನು ಹರಿ ಸೆಳದು ಬಿಸುಡನೆ
ಒಪ್ಪಿ ತಾಗದಿರೆಂದು ನುಡಿದನು ಕಣ್ವನರಸಂಗೆ ॥ ೧೦

ಅಹುದು ಕಣ್ವನ ಮಾತು ಕೃಷ್ಣನ
ಮಹಿಮೆ ಘನವಿದನರಿದು ಗರ್ವ
ಗ್ರಹವಿಡಿದು ಮರುಳಾಗದಿರು ಮುನ್ನೊಬ್ಬ ಗಾಲವನು ।
ಬಹಳಗುರುದಕ್ಷಿಣೆಗೆ ತೊಳಲಿದು
ಮಹಿಯೊಳಲ್ಲಿಯು [2] ಘಟಿಸದಿರಲವ
ನಹವ ಮುರಿದನು ಬಳಿಕ ವಿಶ್ವಾಮಿತ್ರಮುನಿಯಂದು ॥ ೧೧

ನಿಮ್ಮ ಪೂರ್ವಯಯಾತಿ ನಾಕದೊ
ಳೆಮ್ಮವೋಲಾರುಂಟು ಜಗದೊಳು
ದರ್ಮಪರರೆನೆ ಸುರರು ಹಗರಿಕ್ಕಿದರು ಪೆಡತಲೆಗೆ ।
ದರ್ಮಪತ ಹುಲುವಟ್ಟೆಯೆನಿಸುವ
ಹಮ್ಮಿನೊಳು ಕೆಡಬೇಡ ನೀತಿಯು
ನೆಮ್ಮದವ ಕೆಡನೆಂದು ನಾರದ ನುಡಿದನರಸಂಗೆ ॥ ೧೨

ಅವನಿಪತಿ ಕೇಳಾವು ಪಾಂಡವ
ರವರು ಬನದೊಳು ಕಂದಮೂಲವ
ನಿವರು ಕೊಳ್ವರು ರುಷಿಗಳಿಗೆ ಹಂಗೇಕೆ ಭೂಮಿಪರ ।
ಇವರದಾವನ ಪಕ್ಷಪಾತ
ವ್ಯವಹರಣೆಯವರಲ್ಲ ಕೇಳಿಂ
ದಿವರ ನುಡಿಗಳನೆಂದು ನುಡಿದನು ಮತ್ತೆ ಮುರವೈರಿ ॥ ೧೩

[1] ನಡೆದೊಡೆ, ಚ.  [2] ಗಳಿಸುತಿರಲವನ, ಚ. ಜ.

ಬೆರಳ ಮೀಸೆಯೊಳಿಡುತೆ ಕಿಱುನಗೆ
ವೆರಸಿ ಕರ್ಣಾದಿಗಳ ವದನವ
ತಿರುಗಿ ನೋಡುತೆ ಹರಿಯ ನುಡಿಗಳ ಕಿವುಡುಗೇಳುತ್ತೆ ।
ಮರುಳುತನದಾಳಾಪವೇತಕೆ
ಮುರಮಥನ ಪಾಂಡವರ ಕಥನವ
ನೊರೆಯದಿರು ಕರ್ಣಕ್ಕೆ ಶೂಲವಿದೆಂದನಾಭೂಪ ॥ ೧೪

ಮೂವ ಮೊದಲು ಸಹಾಯ ಮಧ್ಯದೊ
ಳಾವಿರಾಟನ ಸಖ್ಯ ಕಡೆಯೊಳು
ನೀವು ಮಮ ಜೀವಾ ಹಿಯೆಂಬಿರಿ ನಿಮ್ಮ ಪಾಂಡವರ ।
ನಾವು ಕಡೆಯೊಳು ಹೊಱಗು ನಮಗಿ
ನ್ನಾವಭೂಪರ ಸಖ್ಯವಿಪ್ಪುದು
ದೇವ ನಾಚಿಸಬೇಡ ಸಂಧಿಯ ಮಾತ ಮಱೆಯೆಂದ ॥ ೧೫

ಅವರು ನಮ್ಮೊಳು ಸರಸವಾಡುವ
ಹವಣಿದಲ್ಲದೆ ರಾಜಕಾರ್ಯವ
ನವಗೆ ಯೋಚಿಸಿ ಕಳುಹಿದಂದವೆ ಮೆಚ್ಚೆ ನಾನಿದನು ॥
ಬವರ ಬೇಕೇ ಬೇಡಿ ಕೊಳ್ಳುವ
ದವನಿಗಿವನಿಯ ಮಾತ ನೀವಾ
ಡುವೊಡೆ ಪಾಂಡವರೇಕೆ ನಾವೇಕೆಂದು ಖಳ ನುಡಿದ ॥ ೧೬

ಮಾಡು ಸಂಧಿಯ ನಮ್ಮ ವಚನವ
ಕೋಡದಿರು ಸವಿಮಾತುಗಳ ನಿನ
ಗಾಡುವವರಿಗೆ ಚಿತ್ತಗುಡದಿರು ಹಿಸುಣ ಹೊಗಿಸದಿರು ।
ನಾಡ ನಾಲಗೆಗೆಳೆಯರೆಂದುದ
ಮಾಡದಿರು ಪಾಂಡವನೃಪಾಲರ
ಕೂಗೆಡಿ ಬಾಳ್ವುದು ಪಥ್ಯ ನಿನಗಂದಸುರರಿಪು ನುಡಿದ ॥ ೧೭

ಅವರಿಗಿಂದ್ರಪ್ರಸ್ಥದೊಳು ರಾ
ಜ್ಯವನು ಕುಳದೊಡನಿತ್ತು ನೀಂ ಪಾಂ
ಡವಪ್ರತಿಷ್ಠಾಚಾರ್ಯನೆಂಬೀಬಿರುದ ಧರಿಸಿದೊಡೆ ।
ಅವನಿಯೊಳು ನಿನ್ನೊಡನೆ ತಲೆದೋ
ರುವ ನೃಪಾಲಕರಿಲ್ಲ ನುಡಿಗಳು
ಕಿವಿಗೆ ಕರ್ಕಶವೀಗಳಾದೊಡೆ ಮುಂದೆ ಲೇಸೆಂದ ॥ ೧೮

ನೀತಿಗಾಲಯು ನಿಮ್ಮ ಸಿರಿಯಾ
ಖ್ಯಾತಿಗಿದು ನೆಲೆ ಸಕಲಸೌಖ್ಯ
ವ್ರಾತಕಿದು ಸದ್ಬೀಜವೆನಿಸಿತು ಕೌರವಾನ್ವಯವು ॥
ಭೂತಳದ ಲೋಲುಪತೆಯೊಳು ಕುಲ
ಘಾತುಕರು ತಾವೆಂಬಕೀರ್ತಿಗೆ
ಯೋತು ನೀಂ ನೆಲೆಯಾಗದಿರು ಕೇಳೆಂದನಸುರಾರಿ ॥ ೧೯

ಧರೆಯು ನೃಪರಿಗೆ ಹಸ್ತಿನಾಪುರ
ದರಮನೆಯು ಬಾಗಿಲೊಳು ಸಮೆಯುವು
ದೊರಕಲಂತದು ಪುಣ್ಯವೆಂಬೀಸಾರ್ವಭೌಮತೆಯು ।
ಸಿರಿಗೆ ಪಾಂಡವರನ್ಯರಾದೊಡೆ
ಮೆಱೆಯುಲಱಿವುದೆ ನಿನ್ನ ಸಿರಿ ಕಾ
ತರಿಗತನವನು ಮಾಣು ಕೇಳೆಂದಸುರರಿಪು ನುಡಿದ ॥ ೨೦

ಯಮಜ ನಿನಗೊಪ್ಪಿದನು ಪಾರ್ಥನ
ಮಮತೆ ನಿನ್ನೊಳು ಹಿರಿದು ಭೀಮನ
ತಮದ ನುಡಿ ಹಿಂಗಿದುದು ನಕುಲನು ನಿನ್ನೊಳೆಂದಱಿಯ ।
ತಮತಮಗೆ ತಮ್ಮಕ್ರ್ಯವರೊಣಿಸಿ
ನ್ನಮಲವಚನವ ಹಾರುತಿಹರಾ
ಭ್ರಮಿತನವ ಮಾಡದಿರು ನೀಂ ಸೋದರರ ಸಲಹೆಂದ ॥ ೨೧

ಧರ್ಮಜನ ಕಡುಮೋಹವೆಂಬುದು
ನಿಮ್ಮ ಚರಣದೊಳಿರಲಿ ಭೀಮನ
ಬಿಮ್ಮು ತಮ್ಮೊಳಗಿರಲಿ ಫಲುಗುಣನೊಲುಮೆಯುಂತಿರಲಿ ।
ಎಮ್ಮ ಭೂಮಿಯೊಳರೆಯು ಬೇಡುವ
ರೆಮ್ಮ ಬಂಧುಗಳಲ್ಲ ಸಂಧಿಗೆ
ತಮ್ಮ ನೊಡಬಡನೆಂದು ದುಃಶ್ಯಾಸನನ ನೋಡಿದನು ॥ ೨೨

ಬಂಧುಕೃತ್ಯದ ಮಾತು ಸೂರ್ಯಂ
ಗಂಧಕಾರವು ಸೇರುವುದೆ ನಿ
ರ್ಬಂಧದೊಳು ನೀವೇಕೆ ನುಡಿವಿರಿ ರಾಜಕಾರಿಯುವ ।
ಸಂಧಿಯೂಗದು ಪಾಂಡವರ ಸಂ
ಬಂಧ ನಮಗೇಕೆನುತೆ ಕರುಣಾ
ಸಿಂಧುವಿನ ಮೊಗನೋಡಿ ದುಃಶ್ಯಾಸನನು ಗರ್ಜಿಸಿದ ॥ ೨೩

*
ಈಹರಿಯು ನುಡಿಗೇಳು ದೈವದ
ಮೋಹ ತಪ್ಪಿದ ಬಳಿಕ ಸುಭಟರ
ಸಾಹಸದೆ ಹುರುಳಿಲ್ಲ ನಂಬದಿರೆಮ್ಮ ಬಲುಹುಗಳ ।
[1] ಆ ಹಿತವನೀಡಾಡದಿರು ವೈ
ದೇಹಿಯನು ಸೆಱೆಗೆಯ್ದ ಸ್ವಾಮಿ
ದ್ರೋಹಿಯನು ಹೋಲದಿರು ಕೌರವಎಂದನಾಭೀಷ್ಮ ॥ ೨೪

* ಕೆಡಿಸದಿರು ಧೃತರಾಷ್ಟ್ರ ಕುಲದೊಳು
ಕೊಡಲಿಗಾವನು ಹೋತು ವಂಶವ
ಕೆಡಿಸಿ ಕಳೆದೊಡೆ ಹಾನಿವೃದ್ಧಿಗಳೆಲ್ಲ ನಿನಗಹುದು ।
ನುಡಿಗೆ ನೀಂ ಮತಗುಡದೆ ಗರ್ವದ
ಗಡಣದೊಳು ಮುಂದಱಿಯದವದಿರ
ನೊಡಬಡಿಸಿ ಪಾಂಡವರ ಸ್ವಾಮ್ಯವ ಕೊಡಿಸು ನೀನೆಂದ ॥

ಈ ಪದ್ಯವು ಚ. ಜ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.
1 ಐಹಿಕವ, ಕ. ಚ. ಜ.

ಹಲಬರಜ್ಞಾನಪ್ರವೃತ್ತಿಯು
ಚಲದೊಳಗೆ ಕೈಬಳಸಿ ನರಕದೊ
ಳಿಳಿದ ಕಥೆ ಹಲವೆಂದು ಗೌತಮಕಶ್ಯಪಾದಿಗಳು ।
ತಿಳಿದು ನೀತಿಯು ಪದವ ತಂತ
ಮ್ಮೊಳಗೆ ಕೌರವಗರುಹಿ ಮುನಿಸಂ
ಕುಲದ ವಚನವ ಕಿವುಡುಗೇಳುತ್ತ ಮೊಗವ ತಿರುಹಿದನು ॥ ೨೫

ವ್ಯಾಸವಚನವನಾವೆಸಿಷ್ಠಮು
ನೀಶನೊಳುನುಡಿಗಳನು ಕೋವಿದ
ಕೌಶಿಕನ ಕಥನವನು ಕೈಕೊಳ್ಳದೆ ಸುಯೋಧನನು ।
ದೇಶವನು ಪಾಂಡವರಿಗೀವ
ಭ್ಯಾಸವೆಮ್ಮೊಳಗಿಲ್ಲ ನೀತಿಯು
ರಾಶಿಯಾನಹೆನೆನ್ನನೊಡಬಡಿಸುವಿರಿ ನೀವೆಂದ ॥ ೨೬

ಮಗನೆ ಸೋಮಾನ್ವಯುವ ನೀರೊಳು
ಹೊಗಿಸದಿರು ದನುಜಾರಿ ಮುನಿದೊಡೆ
ತೆಗೆಯದಿರನೆಮ್ಮಸುಗಳನು ಪಾಂಡವರ ಸಂತೈಸು ।
1 ವಿಗಡತನವಿದು ವಿರಸವಾಹಿಂ
ದೊಗೆದ ಜೂಜಿನ ಗಸಣಿ ಸಾಕೈ
ಮಗನೆ ಬೇಡಿದೆನೆಂದು ತಲೆವಾಗಿದಳು ಗಾಂಧಾರಿ ॥ ೨೭

ಧರ್ಮವಶದೊಳು ದೈವವಿಹುದಾ
ಧರ್ಮವಶದೊಳು ಜಯದ ಜೋಡಣೆ
ಧರ್ಮವಶದೊಳು ಸಕಲಸತ್ಯಜ್ಞಾನಸುಖವಿಹುದು ।

---

1 ವಿಗಡತನವನು ಬಿಟ್ಟು ಬಿಡು ನೀ । ನಗಡುವಾಡದೆ ಹಿಂದೆ ಜೂಜಿನ ನೊಗಸು ಸಾಕೈ ಮಗನೆ ಯೆಂದಳು ಬೞಿಕ ಗಾಂಧಾರಿ ॥ ಚ.

ಧರ್ಮವನು ಪಾಲಿಸುವ್ರೊಡಾಸ
ದ್ಧರ್ಮ ಪಾಂಡವಭೂಮಿಪಾಲರೊ
ಳುಮ್ಮಹವ ಬಿಡು ಮಗನೆ ಯೆಂದನು ನೃಪಗೆ ಧೃತರಾಷ್ಟ್ರ ||

ಮಾತ್ರವಚನವ ಮೀಱಿ ನಿಮ್ಮಯ
ತಾತನಾಜ್ಞೆಯ ನೂಕಿ ಹಿರಿಯರ
ಮಾತುಗಳನತಿಗಳೆದು ಹಿತವರ ಮಾತ ಮನ್ನಿಸದೆ |
ನೀತಿಯೊಳು ಮನಗುಡದೆ ಘನಗ
ರ್ವಾತುರದೊಳವನಿಪರು ಬಳಸಲು
ಮಾತು ಹಲವಱೊಳೇನು ಕೆಡದಿರನೆಂದನಾದ್ರೋಣ || ೨೯

*
ನೆಲನ ಬೇಡುವ ಪಾಂಡವರ ಭುಜ
ಬಲದೊಳಗೆ ಕುಂದಿಲ್ಲ ನೀತಿಯು
ತಿಳುಹಲ್ಕೆ ತಂದಸುರರಿಪು ಸಾಮಾನ್ಯಬಲನಲ್ಲ |
ಇಳೆಯೊಳರ್ಧವನೊಪ್ಪುಗೊಡು ಯದು
ಕುಲಲಲಾಮನ ನೇಮವನು ನೀಂ
ಸಲಿಸು ಕೆಡಿಸದಿರೀವಿಲಾಸವನೆಂದನಾದ್ರೋಣ || ೩೦

ಹಲವುಹೊಲ್ಲಹಗಳನು ಪಾಂಡವ
ರೊಳಗೆ ನೆನೆದೆನು ಮುಱಕು ಮಾಱಿಯೋ
ನಿಳೆಯ ಲೋಭದೊಳವರ ಕೆಡಿಸುವ ಹದನ ನೆಗೞಿದೆನು |

---

* ಇಳೆಯ ಭಾಗವ ಕೊಡೆನು ಸಮರಕೆ
ಕಾಳನ ಕೊಟ್ಟೆನು ಕೃಷ್ಣನನು ವಿ
ಗ್ಗಳಿಸಿ ಭೀಷ್ಮದ್ರೋಣ ಕೃಪ ಮೊದಲಾಗಿ ನಮ್ಮವರು |
ಬಲವರವು ನಿಮಗುಳ್ಳಡೀಗಳೆ
ತೊಲಗಿ ಪಾಂಡವರತ್ತ ಜಾಳಿಸಿ
ಹಲವುನುಡಿಯೊಳು ಮುಂದುಗೆಡಿಸದಿರೆಂದು ಖಳ ನುಡಿದ ||
ಈ ಪದ್ಯವು, ಖ. ಚ. ಜ. ಪುಸ್ತಕಗಳಲ್ಲಿ ೨೯ನೆಯ ಪದ್ಯದ ಮುಂದೆ

ನೆಲನ ಕೊಂಡೆನು ಜೂಜುಗಾಱರ
ವಿಲಗದೊಳು ಪಾಂಡವರ್ಗೆ ಪುನರಪಿ
ಹೞುವವೇ ಶರಣಲ್ಲದುಂಟೇ ಕೃಷ್ಣ ಹೇಳೆಂದ ॥ ೩೧

ತಾಗುವಪಕೀರಿತಿಗೆ ಹೇಸುವ
ರಾಗಿ ಸತ್ಯವೆ ಕಾದು ಹೞುವವ
ಭೋಗಿಸಿದೊಡದು ಕುಲಕೆ ಕುಂದೇ ಪಾಂಡುನಂದನರು ।
ನೀಗಿದರು ವನವಾಸವನು ಸರಿ
ಭಾಗದವನಿಯ ಕೊಳ್ವ ಚಲವನು
ಹೋಗಬಿಡುವನೆ ಭೀಮನೆಂದನು ಮತ್ತೆ ಮುರವೈರಿ ॥ ೩೨

* ಸಲುವರಾಜ್ಯದ ಭಾಗವನು ನಿನ
ಗೊಲಿದು [1] ಬಿಡುವರು ಗ್ರಾಮವೈದನು
ಸಲಿಸಿ ಪಾಂಡುಕುಮಾರರನು ನಿನ್ನತ್ತ ಮಾಡಿದೊಡೆ ।
ಕುಲದ ಕೊಲೆ ತಪ್ಪುವುದು ಸದ್ಗತಿ
ಸುಲಭವಪ್ಪುದು ನಿನ್ನ ಮನದೊಳು
ಹೊಳೆದ ಹದನನು ಹೇಳೆನುತೆ ನೇಮಿಸಿದನಸುರಾರಿ ॥ ೩೩

ಕೊಡು ಕುಶಸ್ಥಲವನು ವೃಕಸ್ಥಳ
ವೊಡವಿವಾಸಂತಿಯನು ಕುಳವನು
ಕೊಡಿಸಿ ಕಳೆ ಸಿರಿಕರಣದವರೊಳು ವಾರಣಾವತವ ।
ಕೊಡು ನಿನಗೆ ಮನ ಬಂದುದೊಂದನು
ನಡಿಸಿ ಕೊಡುವೆನು ಪಾಂಡವರೊಳವ
ಗಡೆಯುತನವಂತಿರಲಿ ನೃಪ ಕೇಳೆಂದು ಹರಿ ನುಡಿದ ॥ ೩೪

---

1 ಬಿಟ್ಟರು, ಕ. ಖ. ಜ.

* ೩೩ನೆಯಪದ್ಯವು, ಝ. ಟ. ಪುಸ್ತಕಗಳಲ್ಲಿಲ್ಲ.

[1] ಬೇಡಿದೈದೂರುಗಳು ನಮ್ಮಯ
ನಾಡುಗಳ ಮಂಡೆಗಳು ರಾಜ್ಯದ
ರೂಢಿಯೈದೂರುಗಳ ಬಳವಿಗೆ ಹಸ್ತಿನಾಪುರವು ।
ಬೇಡಲಱಿವನು ಮಾನ ನಿನಗಂ
ಕೂಡಲೇತಕೆ ನೆಲನ [2] ನೀರಡಿ
ಮಾಡಿಕೊಂಡ ಮಹಾತ್ಮ ನಿನಗಾನಂಜಿದಪೆನೆಂದ ॥ ೩೫

ಕರೆದು ಮೂಱಡಿನೆಲನ ಧಾರೆಯ
ನೆಱೆದ ಬಲಿ ತಳಕಿಳಿದನೆನ್ನೀ
ಧರೆಯೊಳೈದೂರುಗಳನಿತ್ತನಗಾವವಿಧಿಯಹುದೋ ।
ಪರಮಪುರುಷನು ನೀನು ನಿನಗಾಂ
ಶರಣುಪೊಕ್ಕನು ಬಂದ ಪತದೊಳು
ಮರಳಿ ಬಿಜಯಂಗೈವುದೆಂದನು ನಗುತೆ ಕುರುರಾಯ ॥ ೩೬

ಸಲಲಿ ನೀಂ ಪಾಂಡವರೊಳಿತ್ತಿದ
ಚಲದ ಬಳವಿಗೆಯಕಟ ನಿನ್ನಯ
ಬಳಗ ಬದುಕಲಿ ಮತ್ತೆ ನವೆಯಲಿ ಪಾಂಡುನಂದನರು ॥
ಜಲಧಿಮೇರೆಯ ಮಹಿಯೊಳೊಂದೇ
ಸ್ಥಲವನೈವರಿಗೀವುದೆನೆ ಕಳ
ವೆಳಗನವಗಡಿಸಿದನು ಜಱೆದನು ಜಗದ ಪಾಲಕನ ॥ ೩೭

ನೆಲದೊಳರ್ಧವನೀವುದಿಲ್ಲಾ
ಸ್ಥಲವನೈದನು ಮುನ್ನ ಕೊಡೆನೆ
ನ್ನಿಳೆಯ ಭಾಗವನೀಸ ಕೊಟ್ಟೊಡೆ ನಿನ್ನ ಮೇಲಾಣೆ ।
ನೆಲನ ಕಡೆಯೊಳು ಮುಳ್ಳುಮೊನೆಯು
ಚಳಿಪ ಧರಣಿಯನಿತ್ತನಾದೊಡೆ
ಬೞಿಕ ನೀಂ ನಗು ಹೋಗು ಬವರವ ಕೊಂಡು ಬಾ ಯೆಂದ ॥ ೩೮

---

1 ಬೇಡಿದೊಂದೊಂದೂರು ನಮ್ಮಯ, ಕ. ಜ. ಟ. 2 ಮೂಱಡಿ. ಟ.

ದನವ ಕಾವುದು ತೀರಿತೇ ಬನ
ಬನವ ತೊಱಲ್ವುದು ಕಡೆಯನ್ಯಿದಿತೆ
ಮುನಿಗಳನು ಬೋಱಗಳನೆಱಗಿಸಿಕೊಳ್ವುದನು ಬಿಸುಟು |
ವನನಿಧಿಯನೆಡೆಗೊಂಡು ನಡುಹಾ
ವಿನೊಳು ಹಕ್ಕೆಯನುಡುಗಿ ತಮ್ಮೊಳು
ಮನಕತವ ತಿಳುಹಲೋಸುಗ ಬಂದೆ ದಿಟವೆಂದ || ೩೯

ಹಗೆಯು ಸಂಧಿಯು ನಿಮ್ಮದೊಳೆಮ್ಮಯ
ಬಗೆಯನಱಿಯಲು ಬಂದೆ ಯಾದವ
ರಗಡುತನ ನಮ್ಮಲ್ಲಿ ಸಲ್ಲದು ಸಾಕು ನುಡಿಯದಿರು |
ಹಗೆ [1] ಯನಾದೊಡೆ ಕೊಂಡು ಬಾ ನಡೆ
ಮಗುಳ್ದೊಡಱಿಯಲು ಬಹುದು ನೀಂ ಹರಿ
ಹುಗಿಲುಮಾಡುವ ಮಂತ್ರ ಸಾಕಿನ್ನೆಂದನವನೀಶ || ೪೦

ಖತಿವಿಡಿದು ಮನದೊಳಗೆ ಮಣಿಮಯ
ಮತಗುಡದ ಫಣಿಕೇತನನ ಕಂ
ಡತುಳಬಲ ಗುರು ಸಿಂಧುತನಯಾದಿಗಳ ಮೊಗನೋಡಿ |
ಮತಿತರವನಿಯ ಬಯಸಿ ಕದನವ
ನತಿಮಥನದೊಳು ಬಗೆದೊಡೀತನ
ಸತಿಯು ಕಿವಿಯೋಲೆಗಳು ತಿರವಲ್ಲೆಂದನಸುರಾರಿ || ೪೧

ಎಲವೊ ಧ್ರುಪದನ ಮಗಳ ಮದುವೆಗೆ
ನೆಲನು ಬೆಸಲಾದಂತೆ ನೀಂ ಮೊದ
ಲಿಳೆಯ ರಾಯರು ನೆರೆದರಂದಿನ ಬಿಲ್ಲ ನೆಗಹುವೊಡೆ |
ಉಲಿದು ಹೋರಿದು ಕೆಡೆದರಂದತಿ
ಬಳರು ಧನುವನು [2] ತೊನೆದು ತೆಗೆದ
ಗ್ಗಳದ ಯಂತ್ರವ ಜಯಿಸನೇ ನರನನುವ ನೀನಱಿಯಾ || ೪೨

1 ಗಳವದಿರಕೊಂಡು, ಖ.  2 ಮುಱಿಯ, ಕ. ಚ.

ಅಡವಿಯೊಳು ಪಾಂಡವರ ಬೇಟೆಗೆ
ನಡೆದು ಬಂದೊಡೆ ಮುನಿದು ಖಚರನು
ಹಿಡಿಮುಡಿಯ ಬಿಗಿದಡರಿದನು ಗಗನವನು ಜಗವರಿಯೆ ।
ಬಿಡಿಸಿದನಲಾ ನರನು ಭೀಮನು
ಕಡಿವೆ ತಲೆಯಿದೆ ನಿನ್ನ ಕೊರಳೊಳು
ಸುಡು ಸುಡೆಲವೋ ಪಾಪಿ ಕೌರವ ನುಡಿಯಲೇಕೆಂದ ॥ ೪೩

ತುರುಗಳನು ಹಿಡಿದುಯ್ಯಲಾಕ್ಷಣ
ಪರಿಸಿ ಬಂದನು ಪೊಂದುರಥದೊಳು
ತುರುವ ಮರಳಿಚಿ ತರುಬಿ ನಿನ್ನುಮನೀಸಮರ್ಥರನು ।
ಮುರಿದು ಕೆಡಹಿದನೊಂದುಬಾಣದೆ
ಕೊರೆದು ಕೊಂದನು ನಿನ್ನ ಬಲವನು
ಬರಿಯ ಹೆಮ್ಮೆಯ ಕೆದರುವರೆ ನಮ್ಮೊಡನೆ ಹೇಳೆಂದ ॥ ೪೪

ಎಲವೊ ನಿನ್ನಯ ಭಂಗಕೋಟಿಗ
ಳಳತೆಗೆಯ್ದುವು ಕೈದುಗೊಂಡೊಡೆ
ಯುಱಿಯಲಾಪವರುಂಟೆ ಕುಂತಿಯ ಮಕ್ಕಳಿದಿರಿನೊಳು ।
ಗಱಹತನವನು ಮಾಡದಿರು ಕುರು
ಕುಲವ ಕಿಡಿಸದಿರಕಟ ಕುಟಿಲನೆ
ತಿಳಿಯೆ ಕೈಸಾರಿದೆನು ತೊಡಕಿದೊಡರಿಯದಿರೆಯೆಂದ ॥ ೪೫

ಬೇಡಮರುಳೇ ಪಾಂಡವರು ಕೈ
ಮಾಡಿದೊಡೆ ನೀನುಳಿಯೆ ನಿನ್ನಯ
ಕೇಡು ತನ್ನದು ಡಿಂಗರಿಗರಪಮಾನವೊಡೆಯನದು ।
ಮಾಡು ಸಂಧಿಯನೊಲ್ಲದಿದ್ದೊಡೆ
ನಾಡು ಮೆಚ್ಚಲು ಸಲುವುದಪಜಯ
ಜೋಡಿ ಮೇಲಣ ಹದನು ಸಾವನು ತಹುದು ನಿನಗೆಂದ ॥ ೪೬

ತುಱುಗಿ ಕಬ್ಬಕ್ಕಿಗಳು ಗೂಡಿನೊ
ಳೆಱಗುವಂತಿರೆ ಪಾರ್ಥನಂಬುಗ
ಳುಱುಬಿ ನಿನ್ನಯ ದೇಹದೊಳು ಮುಱಿವಾಗ ಸೈರಿಸದೆ ।
ಬಱಲಿ ನೀಂ ಕೆಡೆವಾಗ ಸಂಧಿಯ
ಮುಱಿದ ವಿಧಿಯನು ಬೞಿಕ ನೆನೆಯದೆ
ಬಱಿದೆ ತೀಱುವುದಲ್ಲ ಖಳ ಕೇಳೆಂದನಸುರಾರಿ ॥ ೪೭

ಕಿವಿಗೆ ಕಠಿಣವು ನಮ್ಮ ನುಡಿ ಯೆಂ
ದವನಿಪತಿ ಮುಖದಿರುಹದಿರು ರೌ
ರವದ ಸಂಗ್ರಾಮದೊಳು ಕಡುಗಿದ ಪವನನಂದನನ ।
ತಿವಿದಕಿವಿಗಳ ಗದೆಯ ಹೊಯ್ಲಿನ
ಕವಳವನು ದಿಟವೆಂತು ಸೈರಿಸ
ದವಮತಿಗೆ ನೀಂ ಗಂಡನಹೆ ಮರುಳರಸ ಕೇಳೆಂದ ॥ ೪೮

ಲೀಲೆಯೊಳು ನೀನಖಿಳರಾಯರ
ನೋಲಗಿಸಿಕೊಳಲಲಸಿ ಕಾಲನ
ಕಾಲಕೆಳಗೋಲೈಸುವುದು ಕುಂದಲ್ಲವೇ ನಿನಗೆ ।
ಸೋಲ ತಪ್ಪದು ಭೀಮಪಾರ್ಥರ
ಕೋಲು ಕೊಂಕುವುವಲ್ಲ ಧರಣಿಯ
ಲೋಲುಪತೆಯಿಂದೞಿಯಬೇಡೆಂದಸುರರಿಪು ನುಡಿದ ॥ ೪೯

ಈ ವಿಜಯವೀ ಬಳಗವೀ ಸಿರಿ
ಯೀ ವಿಳಾಸತೆಯೀ ಸಮರ್ಥತೆ.
ಯೀ ವಿಡಂಬತೆಯೀ ಸಮಗ್ರತೆ ಪಾಂಡವರ ಕೂಡೆ ।
ಭಾವಿಸಲು ಲೇಸಹುದು ಚಲದೊಳು
ನೀವು ಸಂದೊಡೆ ಬೞಿಕ ಕಡೆಯೊಳು
ಕಾವರಿಲ್ಲೆಲೆ ಭೂಪ ಮರುಳಾಳಾಪ ಬೇಡೆಂದ ॥ ೫೦

ಈ ಕುಮಾರರನೀ ಪ್ರಧಾನರ
ನೀ ಕುಠಾರಚತುಷ್ಟಯವನೀ
ಯಾಕೆವಾಳಿಕೆಯುಳ್ಳವರನೀಮಕುಟವರ್ಧನರ ।
ನಾಕದೊಳು ನೆಲೆಗೊಳಿಸಿ ನಿನ್ನವಿ
ವೇಕಶಿಖಿಯನು ನರನ ಬಾಣಾ
ನೀಕಜಲ ಮುಕ್ಕುಳಿಸದಿಹುದೇ ಎಂದನಸುರಾರಿ ॥ ೫೧

ಸಿಡಿಲು ಕುಱಿಗಳನುಱುಬಿ ತಿವಿವಂ
ತೆಡಬಲನನೊಡೆಹಾಯ್ದು ಪಲ್ಲವ
ಗೊಡೆಯ ಮುಱಿದೀಡಾಡಿ ಬಿರುದಿನ ಹಱವಿಗೆಯ ಕಡಿದು ।
ತೊಡೆಯ ಖಂಡಿಸಿ ನಿನ್ನ ಮಕುಟವ
ಹುಡಿಯೊಳೊರಸದೆ ಬಱಿದೆ ಬಿಡುವನೆ
ಜಡಿದನಾದೊಡೆ ಭೀಮನಾತನ ಬಲುಹ ನೀನಱಿಯಾ ॥ ೫೨

ನರನ ಗಾಂಡೀವಪ್ರತಾಪ
ಸ್ಫುರಿತನಾರಾಚಪ್ರಚಂಡೋ
ತ್ಕರದವಾನಲನಿಂದವೀ ಕೌರವಕುಲಾರಣ್ಯ ।
ಉರಿದು ನಂದದೆ ಮೋಣದಧಿಕರೊ
ಳಿರದೆ ತೊಡಕುವುದಾಗದೆಂಬುದ
ನಱಿಯೆಯಾ ನೀನೆಂದು ಜಱೆದನು ಕೌರವಾಧಿಪನ ॥ ೫೩

ಕಡೆಗೆ ಧೃತರಾಷ್ಟ್ರಾವನೀಶನು
ಮಡದಿಸಹಿತವನಾಥನಾಗಿಯೆ
ಕಿಡುವನೆಂಬುದ ಬಲ್ಲೆನಾಂ ಪಾಂಡವರ ಬಾಗಿಲೊಳು ।
ಪಡಿಗೆ ಪವಮಾನಜನ ಸಮೆಯುವ
ಪಡೆಯದಿಹ ತಱುವಾಯ ನಮಗದು
ನಡಿಸಿ ಕೊಡುವುದು ತಪ್ಪದಕಟಕಟೆಂದನಸುರಾರಿ ॥ ೫೪

ಮನದ ಸಂಕೇತದೊಳು ದುರ್ಯೋ
ಧನನ ಕಟ್ಟಿಲು ವಿದುರ ಗಂಗಾ
ತನಯ ಧೃತರಾಷ್ಟ್ರ ವಿಸಿಪರಾಲೋಚಿಸಿದ ಹದನ ।
ಮನದೊಳರಿದನು ಬಳಿಕ ದುಶ್ಶಾ
ಸನನು ದುರ್ಯೋಧನಗೆ ಯಿನಿಬರ
ನೆನಹ ಬಿನ್ನಹಮಾಡಿದನು ಖಾತಿಯೊಳು ಕಳವಳಿಸಿ ॥ ೫೫

ಹೆತ್ತವರು ಹಗೆಯಹೊಡೆ ನಾವಿ
ನ್ನೆತ್ತ ಸಾರುವೆವಣ್ಣದೇವರೆ
ಚಿತ್ತವಿಸಿದಿರೆ ರಾಜಕಾರ್ಯದ ಹದ ವಿಸಂಚಿಸಿತು ।
ಮುತ್ತಯನ ಕಿರಿಯಯ್ಯನಯ್ಯನ
ಚಿತ್ತ ಕೊಂಕಿತು ಸಾಕು ನಿಂದಿರೆ
ನುತ್ತೆಯಗ್ರಜಸಹಿತವೋಲಗದಿಂದೆ ಪೊಱಮಟ್ಟ ॥ ೫೬
*

ಒಂಭತ್ತನೆಯ ಸಂಧಿ ಮುಗಿದುದು.

---

* ಟ, ಪುಸ್ತಕದಲ್ಲಿ ಒಂಭತ್ತನೆಯ ಸಂಧಿಯಲ್ಲಿಯೆ ಪತ್ತನೆಯ ಸಂಧಿಯ ಪದ್ಯಗಳೆಲ್ಲ ಸೇರಿಹೋಗಿವೆಯಾದುದರಿಂದ ಒಂಭತ್ತು ಹತ್ತನೆಯ ಸಂಧಿಗಳು ಬೇರೆಯಾಗಿಲ್ಲ.

# ಹತ್ತನೆಯ ಸಂಧಿ.

---

ಸ್ವಾಮಿ ವಿಶ್ವರೂಪವನ್ನು ತೋರಿದುದು.

**ಸೂಚನೆ**

ಭಯರಹಿತನಿರ್ದುಣನನಮಲಾ
ದ್ವಯನ ಬಂಧಿಸಲೆಂದು ಕುರುಪತಿ
ನಿಯಮಿಸಲು ಬೆಳಗಿದನು ಮುರರಿಪು ವಿಶ್ವರೂಪದೊಳು ||

*

ಮುನಿದು ದುರ್ಯೋಧನನು ದುಶ್ಶಾ
ಸನನು ಕೆಲದರಮನೆಯೊಳಾಲೋ
ಚನೆಯ ಮಾಡಿದರಂದು ಸೌಬಲಕರ್ಣರೊಡಗೂಡಿ |
ದನುಜವೈರಿ ಕುಮಂತ್ರದೊಳು ಬೊ
ಪ್ಪನೊಳು ಖಾತಿಯನಿಕ್ಕಿದನು ಕೈ
ಮನದ ಕಲಿಗಳು ಕಟ್ಟಿ ಕೃಷ್ಣನನೆಂದನಾಭೂಪ || ೧

---

* ದೃಗುಯುಗವು ಕೆಂಪಾಗೆ ಕಬೊರ್ಗೆ
ನೆಗೆದುದುಸಿರೊಳು ಮುರಹರನ ಮೂ
ರ್ತಿಗಳು ಮೊನೆಯಂಬಾಗಿ ನಟ್ಟುವು ನೃಪನ ಚಿತ್ತದೊಳು |
ಬಗೆಗೆ ಭೀಕರವಾಯ್ತು ಕರ್ಣಾ
ದಿಗಳ ವದನವ ನೋಡಿ ಕೃಷ್ಣನ
ಬಿಗಿಯಲೆಂದಳವಡಿಸಿದರು ತಮತಮಗೆ ಕೌರವರು ||

ಈ ಪದ್ಯವು ಕ. ಚ. ಜ. ಪುಸ್ತಕಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಎರಡುಬಲವನು ಮಸೆದು ಕೊಲಿಸುವ
ಭರವು ಯಾವವೆನದು ನಿದಾನಿಸ
ಲರಿ ನಮಗೆ ಮುರವೈರಿಯಲ್ಲದೆ ಪಾಂಡುನಂದನರೆ |
ತರಿಸಿ ಹುರಿನೇಣುಗಳೊಳೀತನ
ಕರವೆರಡ ನೆಜಿ ಬಿಗಿದೊಡವದಿರು
ಕೆರಳಿ ಮಾಡುವುದಾವುದೆಂದನು ಕೌರವರ ರಾಯ ||　　೨

*
ಗಾಳಿಯುಪಶಮಿಸಿದೊಡೆ ವಹ್ನಿ
ಜ್ವಾಲೆ ತಾನೇ ನಿಲುವುದೀತನ
ತೋಳ ಬಿಗಿದೊಡೆ ಬಳಿಕ ಮನಗುಂದುವರು ಪಾಂಡವರು |
ಮೇಳವಿಸಿ ನೇಣುಗಳನೆನುತೆ ನೃ
ಪಾಲಕನು ಕಳವಳಿಸಿ ನುಡಿವುದ
ನಾಲಿಸುತೆ ಸಾತ್ಯಕಿ ಕರೆದು ಕೃತವರ್ಮಗಿಂತೆಂದ ||　　೩

ಆಳುಕುದುರೆಯು ಬಾಗಿಲಿಗೆ ಬರ
ಹೇಳು ಕೈದುವ ಕೊಂಡು ವೀರಭ
ಟಾಳಿ ಹತ್ತಿರೆ ನಿಲಲಿ ಕೈವೀಸಿದೊಡೆ ಕವಿಕವಿದು |

---

* ಅಂಜದಿರಿ ನೀವೆನುತೆ ಹೇಳಲು
ಮುಂಜೆರಗ ಖರೆ ಸಳೆದು ಖತಿಯೊಳು
ಕುಂಜರನು ಕೇಸರಿಯು ಮಜಿಯನು ತುಡುಕುವಂದದೊಳು |
ಮಂಜು ಪವನನ ಸೆಬಗೆ ಮಾರಿಯು
ಮಂಜರನ ಗಿಳಿಯೆರಗುವಂತಿರೆ
ಕಂಜನಾಭನ ಬಿಗಿಯ ಉಳವಡಿಸಿದರು ನೇಣುಗಳ ||

ಖಳಲಲಾಮನ ಖತಿಮಿಗುವ ಕ
ಣ್ಣಲಿಗೆ ಸನ್ನೆಗೆ ತಮತಮಗೆ ಕಳ
ವಳದೊಳಾದುಶ್ಯಾಸಕರ್ಣಾದಿಗಳು ಗಜಬಜಿಸಿ |
ಮಿಳಿಗಳನು ಮುಸುಕಿನೊಳು ತೆಗೆತೆಗೆ
ದಳವಡಿಸಿದರು ಕುಲವ ಜಲದೊಳು
ಕಲಕುವಂದದೆ ನೆಗಳಿದರು ಸೌಜನ್ಯಬಾಹಿರರು ||

ಈ ಪದ್ಯಗಳು ಖ. ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತವೆ.

ಬೀಱಿಹೊಯ್ಯುದು ಹೊಕ್ಕು ಗಂಡಿನ
ಮೇಲೆ ಗಂಡನು ಕಡಿದು ಕುರುಭೂ
ಪಾಲಕನ ನೂರೆನೆತ್ತರೊಳು ನಾದುವುದು ಮೇದಿನಿಯು ॥ ೪

ಎಂದು ಸುಭಟರಿಗುಱುಹಿ ಸಾತ್ಯಕಿ
ಬಂದು ಕೃಷ್ಣನ ಕಿವಿಯ ಹತ್ತಿರೆ
ನಿಂದು ವದನವ ಚಾಚಿ ಬಿನ್ನಹಮಾಡಿದನು ಹದನ ।
ಮಂದಮತಿಗಳು ತಪ್ಪಿದೊಡೆ ಮನ
ಗುಂದಲಾಗದು ದೇವ ಚಿತ್ತೈ
ಸೆಂದೊಡಸುರಾರಾತಿ ನಗುತಾಭೀಷ್ಮಗಿಂತೆಂದ ॥ ೫

ಪರಿಣತಪ್ರೌಢಿಗಳಿಗಂತಃ
ಕರಣ ನನೆವುದು ಸುಜನರಿಗೆ ನಿ
ಷ್ಠುರತೆಗಲ್ಲದೆ ಮನಮನೀಯದು ಮಹಿಯ ಮೂಢಜನ ।
ಕರಗುವುದು ಶಶಿಕಾಂತ ಚಂದ್ರನ
ಕಿರಣ ತಾಗಲು ವಜ್ರಹತಿಯನು
ಧರಿಸಿದಲ್ಲದೆ ಗಿರಿಗಳಳುಕವು ಭೀಷ್ಮ ಕೇಳೆಂದ ॥ ೬

ದೂತರಸು ಕಟ್ಟುವುದು ರಾಯರಿ
ಗೇತಱುಚಿತವು ನಮ್ಮ ಬಿಗಿಯಲು
ಕಾತರಿಸುತಿದೆ ನಿನ್ನ ಮೊಮ್ಮಂದಿರನು ನೀಂ ಕರಿಸಿ ।
ಮಾತನಾಡಿಸಿ ನೋಡು ನಮಗಾ
ಭೀತಿ ತಾನಿಲ್ಲೆನಲು ಗಂಗಾ
ಜಾತ ಧೃತರಾಷ್ಟ್ರಂಗೆ ನುಡಿದನು ಕೌರವನ ಹದನ ॥ ೭

ರೂಪಯುಕ್ತನರೂಪ ವಿಶ್ವ
ವ್ಯಾಪಿ ದುಗ್ಧಾಂಭೋಧಿವಾಸಿ ಕೃ
ಪಾಪರನ ನಿರುಪಮನ ನಿತ್ಯನ ನಿರ್ಮಳಾತ್ಮಕನ ।

ವೈಪರೀತ್ಯಚರಿತ್ರನನು ಚಿ
ದ್ರೂಪನನು ತನತನಗೆ ಕೌರವ
ಭೂಪತಿಯು ಸೇವೆುದೊಳು ಬಂಧಿಸಲೆಂದು ನೆಗಱುದರು ॥ ೮

ಜಲನಿಧಿಯು ಕಬೊರ್ಗೆಯು ದೂರದ
ಸುಱುವಿನಂತಿರೆ ರಜ್ಜು ಸರ್ಪನ
ಬಳಕೆಯಂತಿರೆ ಸ್ವಪ್ನ ರಾಜ್ಯವಿಳಸದಂದದೊಳು ।
ತಿಳಿಯಲುಂಟಿಲ್ಲೆಂಬ ಮಾಯೆಯು
ಬಳವಿಗೆಗೆ ಜನಮನವೆ ಬಂಧಿಸಿ
ತೊಲಗಿದಾತನ ಹಿಡಿದು ಬಂಧಿಸಲೆಂದು ನೆಗಱುದರು ॥ ೯

ವಿವಿಧಮುನಿಗಳ ಮನದೊಳಗೆ ಹೊಳ
ಕುವನು ಹೆಱಸಾರುವನು ಯೋಗಿಗ
ಳವಿರತಧ್ಯಾನದೊಳು ನಿಲುವನು ತೊಲಗಿ ಕಾಡುವನು ।
ಭುವನವನು ಬಸಿರೊಳಗೆ ಧರಿಸುವ
ನವನಿಯೊಳು ತಾನೊಗೆವ ಲೀಲಾ
ವಿವರನನು ನಿಗ್ರಹಿಸಬಗೆದರು ಭೂಪ ಕೇಳೆಂದ ॥ ೧೦

ತುಡುಕಲಱಿಯದು ದಿವ್ಯಮಂತ್ರದ
ಗಡಣ ಬೊಮ್ಮಾದಿಗಳ ಸೋಂಕಿನ
ಗೊಡವೆಗಳು ಗೋಚರಿಸಲಱಿಯವು ಗರುವಹರಿಯಿರವೆ ।
ಜಡಮತಿಯು ಬಹುಮೂಢಜನರವ
ಗಡಿಸಿ ದೇವನ ಬಿಗಿಯಲೆಂದಳ
ವಡಿಸಿದರು [1] ಸೇಣಾಗಳನೆಂದನು ಭೀಷ್ಮನಾನೃಪಗೆ ॥ ೧೧

ಅವನಿಪತಿ ಕೇಳಿದನು ಕನಲಿದು
ಶಿವಶಿವೆಂದನು ವಿದುರ ಕರೆ ಕೌ
ರವನು ಮಗನೇ ಮೃತ್ಯುವಲ್ಲಾ ಭರತಸಂತತಿಗೆ ।

1 ಭೀಷ್ಮಾದಿಗಳ ಮಾತುಗಳವುನ್ನಿಸದೆ, ಜ.

ಅವಳ ಬರಹೇಳುತ್ತ ಮಗನಾ
ಟವನು ನೋಡಲಿ ಹೆತ್ತ ಮೋಹದ
ಹವಣುಗಳ ಬೆಸಗೊಳ್ವ ಗಾಂಧಾರಿಯನು ಕರೆಯೆಂದ ॥ ೧೨

ಜನಪನಾಜ್ಞೆಯ ಮೇಲೆ ದುರ್ಯೋ
ಧನನ ತಂದರು ಸಭೆಗೆ ಬಳಿಕೀ
ವನಜಮುಖಿಗೀಹದನನರುಹಿದರಾಗಳೈತಂದು ।
ದನುಜರಿಪುವನು ಕಟ್ಟುವೈ ಕೃ
ಷ್ಣನನು ಬಿಗಿವೈ ದಿಟ ಮಗನೆ ಹೆ
ತ್ತೆನಗೆ ಹರುಷವ ತಂದೆಯೆಂದಳು ಮುಳಿದು ಗಾಂಧಾರಿ ॥ ೧೩

ನೆಟ್ಟನೆಲೆ ಧೃತರಾಷ್ಟ್ರನೃಪ ನೀ
ನಿಟ್ಟ ಕಿಚ್ಚಿದು ಪಾಪಿಮಗನನು
ಹುಟ್ಟಿದಾಗಳೆ ಬಿಸುಡಹೇಳಿರೆ ಬಾಳುಗೆಡೆದವನ ।
ಕಟ್ಟುವನು ಗಡ ಕೃಷ್ಣನನು ಕೈ
ಮುಟ್ಟುವನು ಗಡ ಗಗನವನು ಬಲು
ದಿಟ್ಟತನಕಿನ್ನೇನನೆಂದಪೆಯೆಂದಳಿಂದುಮುಖಿ ॥ ೧೪

ಮರುಳುಮಗನೇ ಕೃಷ್ಣರಾಯನ
ಕೆರಳಿಚುವರೇ ಯಾದವರು ನಮ
ಗೆರವಿಗರೆ ವಸುದೇವಗೆಮ್ಮೊಳು ಭೇದವೇ ನಿನಗೆ ।
ತರಳತನವಿದು ಬೇಡ ಖುಲ್ಲರ
ನೆರವಿಯೊಳಗಾಡಿದೊಡೆ ತಪ್ಪದು
ನರಕವೆಂದನು ಕುರುಪತಿಗೆ ಧೃತರಾಷ್ಟ್ರಭೂಪಾಲ ॥ ೧೫

ಎಲೆ ಮರುಳೆ ಧೃತರಾಷ್ಟ್ರ ನಂಟಿನ
ಬಳಕೆವಾತಿನ ಬಂಧುಕೃತ್ಯದ
ಬಳವಿಗೆಯೊಳೀನಿನ್ನ ಮಗನನು ಬೇಡಿಕೊಳಲೇಕೆ ।

ಮೊಳೆದು ಬಗುಳುವ ನಾಯ್ಗೆ ಚಂದ್ರಮ
ನಳುಕುವನೆ ನರಿಯೊರಲಿದೊಡೆ ಕಳ
ವಳಿಸುವುದೆ ಕಲಿಸಿಂಹವೆಂದನು ಖಾತಿಯೊಳು ವಿದುರ ॥ ೧೬

ನೊರಜು ಹೊಕ್ಕೊಡೆ ಕದಡುವುದೆ ಸಾ
ಗರದ ಜಲ ನೊಣವೆಱಗಿದೊಡೆ ಕುಲ
ಗಿರಿಗಳಲ್ಲಾಡುವುವೆ ಕೇಳ್ ಧೃತರಾಷ್ಟ್ರಭೂಪಾಲ ।
ತೆರಳಲಱಿವನೆ ಕೊಬ್ಬಿದೊಳ್ಳೆಯ
ಮೆಱೆಗೆ ಗರುಡನು ನಿನ್ನ ಮಕ್ಕಳ
ದುರುಳುತನಕಂಜುವನೆ ಮುರರಿಪುವೆಂದನಾವಿದುರ ॥ ೧೭

ಲೋಕ ವ್ಯೈಮೆಱೆವೆಂದು ಜಲಧಿಗ
ಳೌಕಿ ಹಳಚುವ ಹೊತ್ತು ತಾನಿಹ
ನೇಕವೇವಾದ್ವಿತಯ ಪರಮೇಕೋಹನೆಂದೆಂಬ ।
ಏಕನಾತುಮನೆಂಬ ವೇದಾ
ನೀಕ ಕೈವಾರಿಸಲು ಮೆಱೆವ ನಿ
ರಾಕೃತಿಯ ಪರಬೊಮ್ಮತತ್ತ್ವವ ದೀತನೋಡೆಂದ ॥ ೧೮

ಸಲಿಲಮಯವಾದಖಿಳಭುವನಾ
ವಳಿಯೊಳೊಮ್ಮೆ ವಿರಿಂಚಿ [1] ತಾನೇ
ಮುಱುಗುತ್ತೈತಂದಾಲದೆಲೆಮಂಚದೊಳು ಪವಡಿಸಿದ ।
ಹೊಳವನಿವನಾರೆಂದು ಜಠರದೊ
ಳಿಱಿದು ತದ್ಬ್ರಹ್ಮಾಂಡಶತದೊಳು
ಹೊಲಬುಗಿಡೆ ಹೊಕ್ಕಳೊಳು ಬೊಮ್ಮನನೀತ ನುಗುಳಿದನು ॥

ಪರಮತತ್ತ್ವವೆ ತದ್ವಚನಗೋ
ಚರವವಿದ್ಯಾಶಕ್ತಿ ಬೊಮ್ಮದ
ವರಮಹತ್ತೆಂದೆನಿಸಿತಾತನ [2] ಮಗನಹಂಕಾರ ।

---

1 ಯ್ರಾಱುತೆ, ಕ. ಖ.    ಮನದಹಂಕಾರ, ಕ. ಖ. ಟ.

ಸ್ಫುರದಹಂಕಾರಕ್ಕೆ ಮಕ್ಕಳು
ಮೆಱೆದರೈವರು ಭೂತವಿಸರೊಳು
ಹರಹಿದಾವನ ದೆಸೆಯೊಳುಂದಿಸಿದುದಾತ ನೋಡೀತ ॥ ೨೦

ಲೀಲೆಯಿಂದೆ ರಜೋಗುಣಕೆ ಮನ
ಮೇಲವಾದೊಡೆ ಮಾಡುವನು ಭುವ
ನಾಲಿಯನು ಸಲಹುವನು ಸಾತ್ವಿಕಗುಣಕೆ ಮನ ಮುರಿಯೆ ।
ಮೇಲೆ ತಾಮಸಗುಣಕೆ ತಿರುಗಿದೊ
[1] ಡಾ ಲಯುವ ಮಾಡುವನು ಗುಣಸಂ
ಮೇಲದೊಳು ಗುಣರಹಿತನೆಂಬ ಮಹಾತ್ಮ ನೋಡೀತ ॥ ೨೧

ಸಂಗಿಯೆನಿಸನು ಜಗವ ಹುಟ್ಟಿಸಿ
ನುಂಗಿದೊಡೆ ನಿಷ್ಕರುಣಿಯೆನಿಸನ
ದಂಗರಕ್ಷೆಯ ಮಾಡಿ ಮೋಹಿತನಲ್ಲ ಮೂಜಗಕೆ ।
ಜಂಗಮಸ್ಥಾವರಕೆ ಚೈತ
ನ್ಯಾಂಗನುತ್ತಮ ಘನಕೆ ಘನನಣು
ವಿಂಗೆ ತಾನಣುವೆನಿಪ ಪರತರವಸ್ತು ನೋಡೀತ ॥ ೨೨

ಆವನೊಬ್ಬನ ಬೆಳಗಿನಿಂದವೆ
ಜೀವನವು ರವಿಶಶಿಗಳಿಗೆ ಮಿಗು
ಲಾವನೊಬ್ಬನ ನೇಮದಿಂದವೆ ಪವನಪಾವಕರು ।
ಜೀವಿಸುವರಿಂತೊಬ್ಬನುರುಲೀ
ಲಾವಿನೋದದೆ ಬ್ರಹ್ಮವಿಷ್ಣು ಶಿ
ವಾವಳಿಗಳುದ್ಭವಿಸಿ ತೋಱುವುವಾತ ನೋಡೀತ ॥ ೨೩

ಈತನಾಮಧುಕೈಟಭರ ಮುಱಿ
ದಾತನುದಧಿಯೊಳಿಱಿದು ವೇದವ
ನೀತ ತಂದನು ಜಯ ವಿಜಯರಾದೈತ್ಯಜನ್ಮವನು ।

[1] ಡೂಳಿಗವ, ಕ. ಖ. ಟ.

ಈತ ತೊಡೆದನು ಪೌಂಡ್ರಕನನಂ
ದೀತ ಕೊಂದನು ಹಂಸ ಡಿಬಿಕರ
ನೀತನೊರಸಿದನರಸಚೈತ್ಯಸೆಂದನಾವಿದುರ ॥ ೨೪

ಘೊಸತಲಾಶ್ರುತಿಕೋಟಿಯೊಳಪುಪ
ನಿಷದರಾಶಿಗಳರಿ. ಕಾಣವು
ಬಸಿಱೊಳಗೆ ಬ್ರಹ್ಮಾಂಡಕೋಟಿಯು ಧರಿಸಿ ಕೊಂಡಿಹನು ।
ನುಸಿಗಳೀ ಕರ್ಣಾದಿದುಷ್ಟ
ಪ್ರಸರ ಮಂತ್ರಿಗಳವನ ನೇಮಂದೊ
ಳಸುರರಿಪುವನು ಬಿಗಿಯಲಳವಡಿಸಿದರು ನೇಣುಗಳ ॥ ೨೫

ಸೂಚಿಸುವ ಶ್ರುತಿನಿಕರ ಬರೆಬರೆ
ನಾಚಿದುವು ವೇದಾರ್ಥನೀತಿಯು
ವಾಚನೆಗಳಳವಡದು ನಿಂದುವು ನಿಜವ ಕಾಣಿಸದೆ ।
ಆಚರಿಸಲಳವಲ್ಲ ಮುನಿಗಳ
ಗೋಚರಕೆ ಮೈಗುಡದ ಹರಿಯನು
ನೀಚರಿವದಿರು ಬಿಗಿಯಲಳವೇ ಭೂಪ ಕೇಳೆಂದ ॥ ೨೬

*
ವಿದುರನಿಂತೆನುತಿರಲು ಮಿಂಚಿನ
ಹೊದಱು ಹುರಿಗೊಂಡಂತೆ ರವಿಶತ
ವುದಿರಿದುವು ಮೈಮುರಿದು ನಿಂದೊಡೆ ದೇವನಂಗದೊಳು ।

---

* ವಿದುರನಿಂತೆನುತಿರಲು ನರಪತಿ
ಯುದಕೆ ಕರ್ಣಾದಿಗಳ ನೋಡಲು
ಕದುಬಿದರದಭ್ಯಾಶದೊಳಿಸುತ ಶಕುನಿ ಸೈಂಧವರು ॥
ಹೊದಱುಹುರಿನೇಣುಗಳ ಕೈಯೊಳ
ಗೊದಱಿಸುತೆ ತವುತವುಗೆ ಸನ್ನೆಯ
ನೊದವಿ ಮೊಗವನು ನೋಡುತಿರ್ದರು ಖಳರು ಕೇಳೆಂದ ॥

ಈ ಪದ್ಯವು ಕ. ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಸದೆದುದಾಸ್ಥಾನವನು ಘನತೆೞ
ಜದೊಳು ಹರಿ ತಾಂ ಲೀಲೆ ಮಿಗೆ ತೋ
ಱಿದನು ನಿರುಪಮವಿಶ್ವರೂಪವನಾಮಹಾಸಭೆಗೆ ॥ ೧೭

ಮಿಗುಱೆ ಗಱಬಱವಾಯ್ತು ಭೀಷ್ಮಾ
ದಿಗಳ ನುಡಿಗಳು ಬಱಲಿದುವು ತಾ
ಳಿಗೆಗೆ ನೀರಸವಾಗೆ ಬೆಂಡೆದ್ದೊದಱಿದನು ಭೂಪ ।
ಬಗೆದು ತಮತಮಗೆದ್ದು ನೃಪನೋ
ಲಗದೊಳಸುರಾಂತಕನ ಕೈಗಳ
ಬಿಗಿಯಲೆಂದನುವಾಗೆ ಹಿಡಿದನು ವಿಶ್ವರೂಪವನು ॥ ೧೮

ಬಱಲಿದುವು ಶ್ರುತಿರಾಶಿಗಳು ನಿ
ರ್ಮಳಸುತೇಜವನಱಿ ಮುನಿಸಂ
ಕುಲವಚನಸಂಚರಿಸಿದುವು ಸಿದ್ಧಾಂತಯೋಗದೊಳು ।
ಸುಱಿವುದೋಱದ ವರ್ಣಭೇದಾ
ವಳಿಯನಱಿಯದ ದಿವ್ಯತೇಜದ
ನಳಿನನಾಭನು ಹಿಡಿದನಗ್ಗದ ವಿಶ್ವರೂಪವನು ॥ ೧೯
*

* ಮುಂದುವರಿಯಲು ನಿಜಮಹಾಪ್ರಭೆ
ಯಿಂದವದ್ಭುತವಾಗೆ ನೋೞ್ಪರಿ
ಗಿಂದು ಚೋದ್ಯವಿದೆನುತೆ ನೋಟಕಜನವು ಬೆಱಗಾಗೆ ।
ಒಂದುಯೋಜನದಗಲದಳತೆಯೊ
ಳೆಂದವಹ ಕಾಯಾಗ್ರಮೂಲದ
ಮಂದರೋದ್ಧರನಿರ್ದ ಮೂರ್ತಿಯು ಕಂಡುದಾಸ್ಥಾನ ॥
ಸಿಡಿಲ ಬಳಗವ ಹಿಡಿದು ಮುಪ್ಪುರಿ
ವಿಡಿದ ತೆಱನಂತಿರ್ದ ಕಣ್ಣು ತಾ
ನಡಗಿನೋಡುವ ನೋಟ ಮೂಜಗವೆಲ್ಲ ಮೋಹಿಸಲು ।
ಕಡುಚಲುವಮೈ ನೀಲವರ್ಣದ
ತೊಡರ ಹರೆಹಿನೊಳೊಪ್ಪೆ ತೋಱುವ
ಜಡರ ಮನಕನುವಾಗಿ ಪೀತಾಂಬರದೊಳೊಪ್ಪಿದನು ॥

ಚರಣದುಂಗುಟದಲ್ಲಿ ದೇವರು
ತುಱುಗಿದರು ನೊಸಲಿನೊಳು ಕಮಲಜ
ಸುರದೊಳಗ್ಗದ ರುದ್ರನಾಸ್ಯದೊಳಗ್ನಿವಾಯುಗಳು |
ಬೆರಳೊಳಿಂದ್ರಾದಿಗಳು ನಯನಾಂ
ಬುರುಹದೊಳು ರವಿ ನಾಭಿಯೊಳು ನಭ
ವರಭುಜಾಗ್ರದೊಳಖಿಳದಿಕ್ಪಾಲತತಿ ರಂಜಿಸಿತು || ೩೦

ಸುರರು ಖಚರರು ಕಿನ್ನರರು ಕಿಂ
ಪುರುಷರನುಪಮಸಿದ್ಧ ವಿದ್ಯಾ
ಧರರು ವಸುಗಳು ಮನುಗಳಾದಿತ್ಯರು ಭುಜಂಗಮರು |
ಗರುಡಗಂಧರ್ವಾಶ್ವಿನೀದೇ
ವರುಗಳಖಿಲಾಪ್ಸರಿಯರೆಸೆದರು
ಪರಮಪುರುಷನ ರೋಮರೋಮದ ಕುಳಿಯ ಚೌಕದೊಳು||೩೧

ಬಲದ ಭುಜದೊಳು ಪಾರ್ಥನೆಡದೊಳು
ಹಲಧರನು ಚರಣದೊಳು ಧರ್ಮಜ
ಕಲಿವೃಕೋದರ ನಕುಲ ಸಹದೇವಾದಿ ಯಾದವರು |
ಲಲಿತಕಾಂತಿಯೊಳಖಿಳತಾರಾ
ವಳಿಗಳಮಳಗ್ರಹವಿರಲು ತೊಳ
ತೊಳಗಿ ಮೆಱೆದನು ವಿಶ್ವರೂಪವಿಹಾರಿ ಮುರವೈರಿ || ೩೨

---

ಇಂದುಧರನಾಪಾರ್ವತಿಯು ಸಹ
ಬಂದು ಗಗನದೆ ನೋಡುತಿರಲಾ
ನಂದದಿಂದವೆ ತೋಱುತಿರಲಸುರರಿಪು ನಂದನನು |
ಬಂದು ದೇವನ ಘನತೆಯೊಳು ಸಲೆ
ನಿಂದು ಋಷಿಗಳು ದೇವತಂಡವು
ಕುಂದುಹೆಚ್ಚಿಸಿ ತಿಳಿಲ್ಲವೆನಲಂದರಿದರು ನಭವ |

ಈ ಮೂರು ಪದ್ಯಗಳು ೧೯ನೆಯ ಪದ್ಯದ ಮುಂದೆ ಕ. ಖ. ಪುಸ್ತಕಗಳಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತವೆ.

ಕಿವಿಗಳೊಳು ಕಂಗಳೊಳು ನಾಸಾ
ವಿವರದೊಳು ಹೊಗೆ ಮಸಗಿ ದಳ್ಳುರಿ
ತಿವಿದುದಾಕಾಶವನು ಕವಿದುದು ಕ್ರಾಂತಿ ದೆಸೆದೆಸೆಗೆ ।
ರವಿಯು ತಗಡೆನೆ ತಳಿತುದಾಯುಧ
ನಿವಹ ಸಾಸಿರಭುಜದ ಬಹುಳತೆ
ಯುವಗಡಿಸೆ ವೈಕುಂಠನೆಸೆದನು ವಿಶ್ವರೂಪದೊಳು ॥ ೩೩

ಅರಳ ಮಳೆ ಸೂಸಿದುವು ದುಂದುಭಿ
ಮೊರೆದುದಾಕಾಶದೊಳು ಮುದದಿಂ
ಧರಣಿ ಬಿರಿದುದು ತನುವ ನೂಕಿತು ಜಲಧಿ ದೆಸೆದೆಸೆಗೆ ।
ಕರಿಕಮಠರುಬ್ಬಾಳುತನ ವಿ
ಕ್ಕಿರೆ ಮಹಾದ್ಭುತವಾಯ್ತು ಕಂಡರು
ಹರಿಯ ರೂಪವನೊಬ್ಬ ಕೌರವನಲ್ಲದುಳಿದವರು ॥ ೩೪

ತಳುಕನುಗಿದೀಡಾಡಿ ಪರಿಣತ
ಪುಳಕಜಲದೊಳು ನನೆದು ಹರುಷದ
ಜಲಧಿಯೊಳು ಮನಮುಳುಗಿ ಭಕ್ತಿಯ [1] ಭಾರದೊಳು ಕುಸಿದು।
ಉಳುಕಿ ತಮತಮಗೆದ್ದು ಮುನಿಸಂ
ಕುಲಸಹಿತ ಗಾಂಗೇಯ ಕೃಪ ನಿ
ರ್ಮಲವಿದುರ ಗುರು ಸಂಜಯಾದಿಗಳೆರಗಿದರು ಪದಕೆ ॥ ೩೫ *

---

[1] ಭಾವದೊಳು, ಕ.ಖ. ಚ. ಟ.

* ಜಯತು ಯಾದವಕುಲಶಿರೋಮಣಿ
ಜಯತು ಸುರನರಫಣಿಪವಂದಿತ
ಜಯತು ಪಾಂಡವಕುಲಪ್ರತಿಷ್ಠಾಚಾರ್ಯ ಜಯ ಜಯತು ।
ಜಯತು ಪರತರ ಪರಮಪುರುಷನೆ
ಜಯ ಜಯತು ಮುರಹರ ಮುಕುಂದನೆ
ಜಯತು ಶ್ರೀ ಕೃಷ್ಣನೆ ಕೃಪಾಳುವೆ ಬಂದುದಾಸ್ಥಾನ ॥

ಈ ಪದ್ಯವು ಕ. ಪುಸ್ತಕದಲ್ಲಿ ೩೫ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತದೆ.

ಒಳಗೆ ಹೊಳದನು ಬಾಹ್ಯದೊಳು ಪ್ರ
ಜ್ವಲಿಸಿದನು ತಾನಲ್ಲದನ್ಯರ
ಬಳಕೆ ಮತ್ತೊಂದಿಲ್ಲದಂತಿರೆ ಕೂಡೆ ತೋಱಿದನು ।
ಒಳಗೆ ಬಿಗಿವವ್ರೊ ಹೊಱಗೆ ಕೃಷ್ಣನ
ಸಿಲುಕಿಸುವವ್ರೋ ತಿಳಿಯೆ ಕೃಷ್ಣರು
ಹಲಬರಾಗಿಹರಾರ ಕಟ್ಟುವೆವೆಂದರಾಖಳರು ॥ ೩೬

ಅನುಪಮಾದ್ವಯದಲ್ಲಿ ಮುಳ್ಳಿನ
ಮೊನೆಗೆ ಮೋಹುವ್ರೊಡಿಲ್ಲ ತೆಱಹಿಂ
ಬಿನಿತು ಪರಿಪೂರ್ಣದೊಳು ಸಚ್ಚಿನ್ಮಾತ್ರರೂಪದೊಳು ।
ಮನದ ಬಗೆ ಮುಟ್ಟದ ಮಹಾಮಹಿ
ಮನನು ಕಟ್ಟುವೆವೆಂತೆನುತೆ ತಮ
ತಮಗೆ ಕರ್ಣಾದಿಗಳು ಕೈಗಳ ಕದಪ ತೂಗಿದರು ॥ ೩೭

ಕಂಗಳನು ಕರುಣಿಸಿದನಂಧನೃ
ಪಂಗೆ ಬಚಿಕೀಕೃಷ್ಣರಾಯನ
ಮಂಗಳಶ್ರೀಮೂರ್ತಿಯನು ಮನದಣಿಯೆ ನೋಡಿದನು ।
ಕಂಗಳಡಗಲಿ ದೇವ ಸಿವಿಮ್ಮ
ಯಂಗವಟ್ಟನ ಕಂಡು ಮಗುಱೀ
ಕಂಗಳಿತರವ ಕಾಣಲಾಗದು ಕೃಪೆಯ ಮಾಡೆಂದ ॥ ೩೮

1 ಅಮಿತಕರುಣಾಸಿಂಧು ನೀನನು
ಪಮಚರಿತ್ರನು ನಿಮ್ಮಡಿಯ ಪದ
ಕಮಲದರುಶನದಿಂದೆ ಹಿಂಗಿದುವಘದ ರಾಶಿಗಳು ।
ಸಮತೆಯೊಳು ನೀಂ ನೋಡು ಶರಣರ
ಮಮತೆ ಬೇಹುದು ಜೀಯ ಲಕ್ಷ್ಮೀ
ರಮಣ ಕೃಪೆಮಾಡೆಂದು ಮೈಯಿಕ್ಕಿದಳು ಗಾಂಧಾರಿ ॥ ೩೯

1 ವಿಮಲಕರುಣಾ, ಖ. ಟ.

ಮಾನ ನಿನ್ನದು ಭಕ್ತಜನದಪ
ಮಾನ ನಿನ್ನದು ನಿನ್ನ ಶರಣರ
ಹಾನಿವೃದ್ಧಿಗಳೆಲ್ಲ ನಿನ್ನದು ಬೇಱೆ ಗತಿಯುಂಟೆ ।
ಆನತರ ತೇಜೋಭಿಮಾನವ
ನೀನೊಲಿದು ಸಲ[1] ಹೆಸುತೆ ಭಯದೊಳು
ಭಾನುಮತಿ ಮೈಯಿಕ್ಕಿದಳು ಮುರಹರನ ಚರಣದೊಳು ॥ ೪೦

ತಾತ ಬೆದಱದಿರೀಮುಕುಂದನ
ಕೈತವಕೆ ಬೆಚ್ಚದಿರು ಸಂಧಿಯು
ಮಾತು ತಾಂ ನಿಶ್ಚಯವೆ ನೀಂ ಬೆಸಗೊಳ್ಳು ಮುರಹರನ ।
ಭೂತಸಂತರ್ಯಾಮಿ ಜೀವ
ವ್ರಾತದೊಳು ಜನಜನಿತ ಜಗವೆ
ಲ್ಲೀತನಾಜ್ಞೆಯೊ[2] ಳಲೆವುದೆಂದನು ಕೌರವರ ರಾಯ । ೪೧

ಎನ್ನ ಹೃದಯದೊಳಿರ್ದು ನುಡಿವನು
ಗನ್ನದೊಳು ಸಂಧಿಯನು ರಿಪುಗಳೊ
ಳಿನ್ನು ನಿನ್ನೊಳಗಿವರೊಳಿದ್ದಾಡದನ ತಾನಱಿಪಿ ।
ಭಿನ್ನನಂತಿರೆ ತೋಱಿ ಭಿನ್ನಾ
ಭಿನ್ನನೆನಿಸಿಪ್ಪನು ಮೊಱೆವೆ ತಿಳಿಯಲು
ಭಿನ್ನನೀಮುರವೈರಿ[3] ನಾವಿನ್ನಂಜಲೇಕೆಂದ ॥ ೪೨

ಹಳಚುವುವು ಹಾಹೆಗಳು ಸೂತ್ರವ
ನಲುಗಿದೊಡೆ ತತ್ಪುಣ್ಯಪಾಪಾ
ವಳಿಗಳಾಹಾಹೆಗಳಿಗಂಟವೇ ಸೂತ್ರಧರನಿರಲು ।
ಕೊಲುವನನ್ಯರನನ್ಯರಿಂದವೆ
ಕೊಲಿಸುವಾಕಮಲಾಕ್ಷನಲ್ಲದೆ
ಯುಚಿತದಜೀವವ್ರಾತಕೀಸ್ವಾತಂತ್ರ್ಯವಿಲ್ಲೆಂದ ॥ ೪೩

---

1 ಹೆಂದುಮುದದೊಳು, ಚ. ಜ. 2 ಳಚಿವು, ಖ. 3 ಯಲ್ಲದೆಬೇಱೆ ದಾರೆಂದ, ಕ.

ನಾವು ಸಂಧಿಯನೊಲಿವೆವೆಮ್ಮ ಸ್ವ
ಭಾವದೊಳು ಹುಸಿಕಿಲ್ಲ ಸಂಪ್ರತಿ
ದೇವನಭಿಮತವಲ್ಲ ಬಲ್ಲೆನು ಮುರಹರನ ಮನವ |
ನೀವು ಮೇಗರೆಯರಿತವವರೀ
ರಾವಣಾದಿಯ ಬಗೆಯನರಿದರಿ
ನಾವೆನೀತನ ಕೈಯ ಬಾಯೊಳು ಭೀತಿ ಬೇಡೆಂದ ||　　೪೪

ಇರಿದನವನಿಗೆ ಧಾರಿಣಿಯ ಪ್ರೊಟಿ
ಗಳೆಯಲೋಸುಗವಿಲ್ಲಿ ನಮ್ಮವ
ರೊಳಗೆ ವೈರವ ಬಿತ್ತಿ ಬಳಿಕೈವರನು ಮಹಾಬಲವ |
ಛಲಕೆ ಮಣಿಯದೆ ರಾವಣಾದಿಗ
ಳೞಿದರಿದಲಾ ಕೀರ್ತಿ ಕಾಯವಿ
ದೞಿವುದಗ್ಗದ ಕೀರ್ತಿಯುೞಿದಿಹುದಂಜಲೇಕೆಂದ ||　　೪೫

ಮಣಿವ ಬದುಕುವನಲ್ಲ ಹಗೆಯೊಳು
[1] ಸೆಣಸಿ ಬಿಡುವವನಲ್ಲ ದಿಟ ಧಾ
ರಿಣಿಯ ಸಿರಿಗೆಳಸುವವನಲ್ಲಳುಕಿಲ್ಲ ಕಾಯದೊಳು |
ರಣಮಹೋತ್ಸವವೆನ್ನ ಮತ ಕೈ
ದಣಿಯೆ ಹೊಯ್ದಾಡುವೆನು ಕೃಷ್ಣನ
ಕೆಣಕಿದಲ್ಲದೆ ನೆಹಿಲದೊಳು ವ್ಯವಸ್ಥೆಯಿಲ್ಲೆಂದ ||　　೪೬

ಮನದೊಳಗೆ ನಸು ನಗುತ ಮುನ್ನಿನ
ಮನುಜನಾಕಾರವನು ತಾಂ ಮಗು
ಳನುಕರಿಸಿ ಧೃತರಾಷ್ಟ್ರ ಭೀಷ್ಮರಿಗೆಂದನೀ ಜನನ |
ಜನಪ ಕೌರವ ಪಾಂಡುನಂದನ
ರೆನಗೆ ಸರಿಯಾಚಿಂತೆಯೆಮಗೇ
ಕೆನುತ ರಾಜಾಲಯವನಪುರದ್ವಾಲಸಿ ಪ್ರೊಜಮೆಟ್ಟಿ ||　　೪೭

1 ಸೆಣಸ್ಯ ೬.

ಬಂದು ವಿದುರನ ಮನೆಗೆ ದೇವ ಮು
ಕುಂದ ಕುಂತಿಯು ಕರೆದು ನಿನ್ನಯ
[1] ಕಂದರೈವರ ಮೇಲೆ ಕೌರವನೃಪನ ಖತಿ ಬಲುಹು ।
ಇಂದು ಮುಳಿದುದು ಸಂಧಿ ನಿನ್ನಯ
ಕಂದಕರ್ಣನ ಬೇಡಿಕೊಳು ನೀ
ನೆಂದುಸೂಚಿಸಿ ಮರಳಿದನು ಮುರವೈರಿ ಹರುಷದೊಳು ‖ ೪೮

ವಿದುರ ಭಾರದ್ವಾಜ ಗೌತಮ
ನದಿಯಮಗ ಧೃತರಾಷ್ಟ್ರನಾತನ
ಸುದತಿ ಕರ್ಣ ವಿಕರ್ಣ ಶಲ್ಯ ಸುಬಾಹು ಗುರುಸುತರು ।
ವದನದುತ್ಸವವಡಗಿ ಕೃಷ್ಣನ
ಪದವನೋಲಗಿಸುತ್ತೆ ಬರೆ ಕರು
ಣದೊಳು ಕಮಲಾಕಾಂತನುಚಿತದೊಳವರ ಬೀಳ್ಕೊಟ್ಟ ‖ ೪೯

ನಯದೊಳೇಕಾಂತದೊಳು ಸಲೆ ಕಾ
ರಿಯವ ನುಡಿದವನಾಸೆವಾಸಿಯ
ಬಯಸಲಾಗದು ಹಿತವನೇ ಬಯಸುವುದು ಕುರುಕುಲಕೆ ।
ನಿಯುತವಿದು ಪಾಂಡವರೊಡನೆ ಸಂ
ಧಿಯೆ ಸರಸ ಸಮರಾಂಗವೀಯ
ನ್ವಯಕೆ ನಿರ್ಣಯವೆಂದು ನೀವಾತಂಗೆ ಸಾಱುವುದು ‖ ೫೦

ಎಂದು ಗಾಂಗೇಯಾದಿಗಳನರ
ವಿಂದನಾಭನು ಬೀಱುಕೊಟ್ಟನು
ನಿಂದು ತಾಂ ರವಿಸುತನ ಕರೆದನು ರಥದ ಹೊರೆಗಾಗಿ ।
ಬಂದು ಕಿಱಿದೆಡೆಗಾಗಿ ಕಳುಹುವು
ದೆಂದು ನೇಮಿಸಿ ಬೞಿಕ ತಾಪಸ
ಬೃಂದವನು ಕಳುಹಿದನು ಗದುಗಿನ ವೀರನಾರಯಣ ‖ ೫೧

ಹತ್ತನೆಯ ಸಂಧಿ ಮುಗಿದುದು

---

[1] ನಂದನರುಗಳ, ಚ.

## ಹನ್ನೊಂದನೆಯ ಸಂಧಿ.

ಕುಂತಿ ಕರ್ಣನನ್ನು ಕಂಡುದು—ಕರ್ಣನು ತಾಯಿಯನ್ನು ಕೇಡುದು.

ಸೂಚನೆ

ಸೇನೆಸುವೆಧಟರ ಗಂಡ ಸಮರಾಂ
ಗಣಕತುಳಭೇರುಂಡನಾದಿನ
ಮಣಿಯ ಸುತನುದ್ದಂಡಕರ್ಣನ ಕಂಡಳಾಕುಂತಿ ||

ಬಲಿದವರ ಜೀವಿಸುವ ಜಗೆ ತಾಂ
ಬಲ್ಯಹು ಮುರಮಥನಂಗೆ ಮುಸಿದೊಡೆ
ತಲೆಯ ಬರೆಹವ ತೊಡೆವನಲ್ಲದೆ ಬಳಿಕ ಸೈರಿಸನು |
ನಳಿನನಾಭನು ಭಜಕರಿಗೆ ಬೆಂ
ಬಳಿಯ ಬಿರುದನು ಭೇದದೊಳು ಕುರು
ಕುಲವ ಕೊಂದನು ಕೇಳು ಜನಮೇಜಯಮಹೀಪಾಲ || ೧

ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದೊಳು
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದೊಳು |
ಎನಗೆ ನಿಮ್ಮಡಿಗಳೊಳು ಸರಿಸೇ
ವನೆಯೆ ದೇವ ಮುರಾರಿಯುಂಜುವೆ
ನೆನಲು ತೊಡೆಸೋಂಕಿನೊಳು ಸಾರಿದು ಶೌರಿಯಿಂತೆಂದ || ೨

ಭೇದವಿಲ್ಲೆಲೆ ಕರ್ಣ ನಿನ್ನೊಳು
ಯಾದವರು ಕೌರವರೊಳಗೆ ಸಂ
ವಾದಿಸುವೊಡನ್ವಯಕೆ ಮೊದಲೆರಡಿಲ್ಲ ನಿನ್ನಾಣೆ |

ಮೇದಿನೀಪತಿ ನೀನು ಚಿತ್ತದೊ
ಳಾದುದಿಲ್ಲಱಿವೆನುತೆ ದಾನವ
ಸೂದನನು ರವಿಸುತನ ಕಿವಿಯೊಳು ಬಿತ್ತಿದನು ಭವವ ॥ ೩

ದಾನವಾಂತಕ ಬೆಸಸು ವಂಶವಿ
ಹೀನನನು ನಿಮ್ಮಡಿಗಳೊಡನೆ ಸ
ಮಾನಿಸುವರೇ ಸಾಕೆನುತೆ ತಲೆವಾಗಿ ಕೈಮುಗಿಯೆ ।
ಮಾನನಿಧಿಯೆನ್ನಾಣೆ ಬಾರೈ
ನೀನು ನಮ್ಮೆಲ್ಲರ ಹವಣೆ ವರ
ಭಾನುವಂಶಲಲಾಮ ನೀಂ ರಾಮಂಗೆ ಸರಿಯೆಂದ ॥ ೪

ಕಳದು ಕೊಂಡನು ವೀಳೆಯವನಂ
ಜುಳಿಯೊಳಾತಂಗಿತ್ತು ಕರ್ಣನ
ಕೆಲಕೆ ಬರಸೆಳೆದವನ ಕರದೊಳು ಕರತಳವನಿಕ್ಕಿ ।
ಎಲೆ ದಿವಾಕರತನಯ ನಿನ್ನಯ
ಕುಲವನಱಿಯೆಯಲಾ ಸುಯೋಧನ
ನೊಳು ವೃಥಾ ಸೇವಕತನದೊಳಿಹುದುಚಿತವಲ್ಲೆಂದ ॥ ೫

ಲಲನೆ ತಾಂ ಪಡೆದೈದುಮಂತ್ರಂ
ಗಳೊಳು ಮೊದಲಿಗ ನೀನು ನಿನ್ನಯ
ಬಱಿ ಯುಧಿಷ್ಠಿರದೇವ ಮೂಱನೆಯಾತ ಕಲಿಭೀಮ ।
ಫಲುಗುಣನು ನಾಲ್ಕನೆಯೊಳೈದನೆ
ಯೊಳು ನಕುಲಸಹದೇವರಾದರು
ಬಱಿಕ [1] ಮಾದ್ರೀದೇವಿಯುಲ್ಲಿಯದೊಂದುಮಂತ್ರದೊಳು ॥ ೬

ಅದಱಿನೀಪಾಂಡವರೊಳೈವರ
ಮೊದಲಿಗನು ನೀನಿರಲು ಧರಣಿಯು
ಕದನಪಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು ।

[1] ಮಾದ್ರಿಯೊಳೊಂದುಮಂತ್ರದೊಳಿಬ್ಬರುದಿಸಿದರು, ಕ. ಚ. ಜ. ಟ.

ಇದು ನಿದಾನವು ಕರ್ಣ ನಿನ್ನ
ಭ್ಯುದಯವನೆ ಬಯಸುವೆನು ನಿನ್ನಯ
ಪದಕೆ ಕೆಡಹುವೆನೈವರನು ಬಹುದೆನ್ನ ಸಂಗಾತ ‖ ೭

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾಡುವೆನು ಕೌರವ
ಜನಪಪಾಂಡವಜನಪರೋಲೈಸುವರು ಗದ್ದುಗೆಯ ।
ನಿನಗೆ ಕಿಂಕರರೆರಡುಸಂತತಿ
ಯೆನಿಸಲೊಲ್ಲದೆ ನೀನು ದುರ್ಯೋ
ಧನನ ಬಾಯ್ದಂಬುಲಕೆ ಕೈಯಾನುವುದೆ ಹೇಳೆಂದ ‖ ೮

ಎಡದ ಮೆಯ್ಯೊಳು ಕೌರವೇಂದ್ರನ
ಗಡಣ ಬಲದೊಳು ಪಾಂಡುಪುತ್ರರ
ಗಡಣವಿದಿರೊಳು ಮಾದ್ರ ಮಾಗಧ ಯಾದವಾದಿಗಳು ।
ನಡುವೆ ನೀನೋಲಗದೊಳೊಪ್ಪುವೆ
ಕಡುವಿಲಾಸವ ಬಿಸುಟು ಕುರುಪತಿ
ನುಡಿಯ ಜೀಯ ಹಸಾದವೆಂಬುದು ಕಷ್ಟ ನಿನಗೆಂದ ‖ ೯

ಶೌರಿಯದೊಳಿದಿರಿಲ್ಲ ಕುಲದೊಳು
ಸೂರಿಯನ ಸುತನೊಡನೆಹುಟ್ಟಿದ
ವೀರರಗ್ಗದ ಪಾಂಡುತನಯರು ನಿನ್ನ ವೈಭವಕೆ ।
ಆರು ಸರಿಯೈ ಕರ್ಣ ನಡೆ ನಡೆ
ಧಾರಿಣೀಪತಿಯಾಗಿ ನೀನಿರೆ
ವೈರವಿತ್ತಂಡಕ್ಕೆ ಬಟ್ಟೆಕಿಲ್ಲೆಂದನಸುರಾರಿ ‖ ೧೦

ಕೊರಳ ಸೆರೆ [1] ಹಿಗ್ಗಿದುವು ದೃಗುಜಲ
ವುರವಣಿಸೆ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ ।

1 ಯಾಟಿದುವು, ಖ.

ಹರಿಯು ಹಗೆ ಹೊಗೆದೋಱದುರುಹದೆ
ಬಱಿದೆ ಹೋಹುದೆ ತನ್ನ [1] ಜನನವ
ನಱುಹಿ ಕೊಂದನು ಹಲವುಮಾತೇನೆಂದು ಚಿಂತಿಸಿದ ‖ ೧೧

ಕಾದಿ ಕೊಲುವೊಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯೊಳು [2] ಹೊಗಲಿಲ್ಲ ।
ಭೇದದೊಳು ಹೊಕ್ಕಿಱಿದನೋ ಮಧು
ಸೂದನನು ತಾನಕಟನುತ ಚಿಂ
ತೋದಧಿಯೊಳದ್ದಂತೆ ಮೌನದೊಳಿರ್ದ್ದನಾ ಕರ್ಣ ‖ ೧೨

ಏನು ಹೇಳ್ವೈ ಕರ್ಣ ಚಿತ್ತ
ಗ್ಲಾನಿಯಾವುದು ನಿನಗೆ ಕುಂತೀ
ಸೂನುಗಳ ಬೆಸಗೆಯ್ಸಿಕೊಳ್ವುದು ಸೇರದೇ ಮನಕೆ ।
ಹಾನಿಯಿಲ್ಲೆನ್ನಾಣೆ ನುಡಿ [3] ದು
ವ್ಮ್ಯಾನವೇತಕೆ ಮರುಳುತನ ಬೇ
ಡಾನು ನಿನ್ನುಪದೆಸೆಯ ಬಯಸುವನಲ್ಲ ಕೇಳೆಂದ ‖ ೧೩

ಮರುಳುಮಾಧವ ಸಕಲರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ
ಯರು ಸುಯೋಧನರೆನಗೆ ಬೆಸಗೈವಲ್ಲಿ ಮನವಿಲ್ಲ ।
ಹೊರೆದ ದಾತಾರಂಗೆ ರಿಪುಗಳ
ಸಿರವನರಿದೊಪ್ಪಿಸುವೆನೆಂಬೀ
ಭರದೊಳಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ‖ ೧೪

---

[1] ವಂಶವ, ಖ. ಟ. [2] ಹೊಗಪಿಲ್ಲ, ಖ, ರುಣವಿಲ್ಲ, ಚ.
[3] ನುಡಿಮೌನ ,ಖ, ಟ.

ಒಡನೆ ಹುಟ್ಟಿದರೆಂಬ ಕಥನವ
ನೆಡೆಗುಡದೆ ಬಣ್ಣಿಸಿದೆ ಪಾಂಡವ
ರಡಗು ಬಾಣಕೆ ಬಲಿಯೆನಿಪ್ಪೀಫಲವ ಮಾಣಿಸಿದೆ ।
ನುಡಿದು ಫಲವೇನಿನ್ನು ಕೌರವ
ರೊಡೆಯನಾದಂತಹೆನು ಬಾರೆನು
ಪೊಡವಿಯೊಳು ನೀಂ ಹರಹಿಕೊಳು ನಿನ್ನವರ ನಿಲಿಸೆಂದ ॥ ೧೫

ಹಲವುಮಾತೇನಖಿಳಜನವೆಂ
ನುಱುವ ನೊಗಸದು ಕೌರವೇಶ್ವರ
ನೊಲವು ತಪ್ಪಿ[1]ದ ಬಱಿಕ ಜಗದೊಳಗಾಪ್ತಜನವಿಲ್ಲ ।
ಸಲಹಿದನು ಮನ್ನಣೆಯೊಳೆನಗ
ಗ್ಗಳಿಕೆಯಲ್ಲದೆ ಹೀನವೃತ್ತಿಯು
ಬಳಸಿ ನಡಿಸನು ಕೌರವೇಂದ್ರನನೆಂತು ಮಱೆದಿಹೆನು ॥ ೧೬

ನೋಡಿ ದಣಿಯನು ನಿಜವೃಚಿತವ
ಮಾಡಿ ದಣಿಯನು ಬಿರುದ ಹೊಗೞಿಸಿ
ಹಾಡಿ ದಣಿಯನು ಮಾನನಿಧಿಯನದೆಂತು ಮಱೆವೆನು ।
ಕಾಡಲಾಗದು ಕೃಷ್ಣ ಖ್ಯಾತಿಯ
ಮಾಡಲಾಗದು ಬಂದೆನಾದೊಡೆ
ರೂಢಿ ಮೆಚ್ಚದು ಕೌರವನ ಹಗೆ ಹರಿಒವೆನಗೆಂದ ॥ ೧೭

ವೀರಕೌರವರಾಯನೇ ದಾ
ತಾರನಾತನ ಹಗೆಯೆ ಹಗೆ ಕೈ
ವಾರವೇ ಕೈವಾರವಾವಂತಹೆನು ಕುರುನೃಪತಿ ।
ಶೌರಿ ಕೇಳ್ಕನಾಳೆ ಸಮರದ
ಭಾರದೊಳು ತೋಱುವೆನು ನಿಜಭುಜ
ಶೌರಿಯದ ಸಂಪನ್ನತೆಯನಾ ಪಾಂಡುತನಯರೊಳು ॥ ೧೮

---

[1] ಸ ಭುವನದೊಳಗೆನಗಾಪ್ತ, ಚ. ಜ. ಟ.

ಅರುಣಜಲದಾಜ್ಯದೊಳು ಬಂಬಲು
ಗರುಳಚರುವಿನೊಳಲುವಿನೊಟ್ಟಲ
ಬೆರಳ ಸಮಿಧೆಯೊಳಡಗಿನಖಿಳಾಹುತಿಯ ರಚನೆಯೊಳು ।
ನರಕಪಾಲದ ಪಾತ್ರೆಯೊಳು [1] ನಿಡು
ದೆರಳೆಗಳ ಕೇಶದ ಸುದರ್ಭಾಂ
ಕುರದೊಳಾಹವಯಜ್ಞ ದೀಕ್ಷಿತನಹೆನು ತಾನೆಂದ ॥ ೧೯

ಮಾರಿಗೌತಣವಾಯ್ತು ನಾಳಿನ
ಭಾರತವು ಬಹುಜೀವಹರವೀ
ಕೌರವನ ಋಣ ಹಿಂಗೆ ರಣದೊಳು ಸುಭಟಕೋಟಿಯನು ।
ತೀರಿಸಿಯೆ ಪತಿಯವಸರಕ್ಕೆ ಶ
ರೀರವನು ನೂಕುವೆನು ನಿನ್ನಯ
ಧೀರರೈವರ ನೋಯಿಸೆನು ರಾಜೀವಸಖನಾಣೆ ॥ ೨೦

ಎನಲು ಕರ್ಣನ ದೃಢವ ಕಂಡನು
ಮನದೊಳುತ್ಸಾಹಿಸಿದನಾದೊಡೆ
ಯನುಜರೈವರ ಹದನು ನಿನ್ನದು ಬಲುಹ ಮಾಡಿದೊಡೆ ।
ಮನಕೆ ಖತಿಯುಹುದಖುಹದಿದ್ದೊಡೆ
ಯೆನಗೆ ಗುಣವಲ್ಲೆಂಬ ಕಾರಣ
ವಿನಿತನಾನಱುಹಿದೆನು ನೀಂ ಸುಖಿಯಾಗು ಹೋಗೆಂದ ॥ ೨೧

ಬಂದೊಡೊಳ್ಳಿತು ಬಾರದಿದ್ದೊಡೆ
ಕಂದ ಕೇಳ್ಳ ಮಧುರವಚನದೆ
ಮಂದಮತಿಯನು ತಿಳುಹಿ ತಮ್ಮಂದಿರಿಗೆ ರಾಜ್ಯವನು ।
ಇಂದು ಕೊಡಿಸುವುದುಚಿತ ಸಂಪ್ರತಿ
ಗಿಂದು ಸೇರಿಸು ನಿನ್ನ ಮಾತನು
ಹಿಂದುಗಳೆಯನು ಕೌರವೇಶ್ವರನೆಂದನಸುರಾರಿ ॥ ೨೨

---

1 ತಿಳದೊರಳೆಗಳಕೇಶೌಘ, ಕ, ಖ, ಚ, ಜ, ಟ.

ಮಸೆದುದಿತ್ತಂಡಕ್ಕೆ ಮತ್ಸರ
ವೆಸವ ಸಂಗರರೀಗ ಸಂಧಿಯ
ನುಸಿರಿದೊಡೆ ಮನಗಾಣನೇ ಕೌರವಮಹೀಶ್ವರನು ।
ವಿಷಮನಹ ಕಟ್ಟಾಳು ಮಂತ್ರವ
ನೆಸಗಲಾಗದು ತನ್ನ ಬೀರಕೆ
ಮುಸುಳಹುದು ಮುರವೈರಿ ಸಂಧಿಯನಱಿಯೆನಾನೆಂದ ॥ ೭೩

ಕಳುಹಬೇಹುದು ದೇವ ದಿನಪತಿ
ಯಿೞಿದನಪರಾಂಬುಧಿಗೆ ಸಂಪ್ರತಿ
ಯುೞಿದ ಹೊತ್ತಿಂದೀಗ ನೆಟ್ಟನೆ ನೀವು ಪಾಂಡವರು ।
ಹುಲುಸರವಿ ಹಾವಹುದು ಹುತ್ತಿನ
ಬೞಿಯೆಳರಲಜ್ಞರಿಗೆ ಹಿಸುಣರ
ಬಳಕೆ ಹೊಗುವುದು ಕಳುಹಬೇಕೆಂದಂಘ್ರಿಗೆಱಗಿದನು ॥ ೭೪

ಬೀೞುಕೊಂಡನು ಮನೆಗೆ ಬಂದು ವಿ
ಶಾಲಮತಿ ಚಿಂತಿಸಿದನಾಸಿರಿ
ಲೋಲ ಮಾಡಿದ ಮಂತ್ರ ಮನದೊಳು ನಟ್ಟು ಬೇರ್ವರಿಯೆ ।
ಕಾಳುಮಾಡಿದನಕಟ ಕುರುಪತಿ
ಬಾೞಲಱಿಯದೆ ಕೆಟ್ಟನೀಗೋ
ಪಾಲ ಬಱಿದೇ ಬಿಡನು ಜೀವವ ಕೊಳ್ಳದಿರನೆಂದ ॥ ೭೫

ದನುಜರಿಪು ತನಗೊರೆದ ಮಂತ್ರದೊ
ಳನಸುತನು ಚಿಂತಿಸುತೆ ನಿದ್ರಾಂ
ಗನೆಯನುೞಿದನು ಕೌರವೇಂದ್ರಂಗಾಪ್ತರಿಲ್ಲೆನುತೆ ।
ಮನದೊಳಿರುಳು ವಿಚಾರಿಸುತ್ತಿರೆ
ವನಜವೆರಳಿದುವೆಂದು ನೈದಿಲು
ಮನವನಿೞುಹಲು ಸೂರ್ಯನಡರಿದನುದಯಪರ್ವತವ ॥ ೭೬

ವೀರ ರವಿಸುತನೊಂದುದಿನ ರವಿ
ವಾರದೊಳು ಪರಿತೋಷ ಮಿಗೆ ಭಾ
ಗೀರಥೀತೀರದೊಳು ತಾತಂಗರ್ಘ್ಯವನು ಕೊಟ್ಟು ।
ಸೌರಮಂತ್ರವ ಜಪಿಸುತಿರಲೌ
ದಾರಿಯದ ಸುರತರುವ ಕುಂತೀ
ನಾರಿ ಕಾಣಲು ಬಂದಳಾತ್ಮಜನಿದ್ದ ನದಿಗಾಗಿ ॥ ೨೭

ಬರಲು ತಾಯಿ ದಿರಾಗಿ ರವಿಸುತ
ನಿರದೆ ಬಂದನು ದಂಡದಂತಿರೆ
ಚರಣದೊಳು ಮೈಯಿಕ್ಕಲಾತನ ನೊಸಲ ನೆಗಹಿದಳು ।
ಬರಸೆಳೆದು ಬಿಗಿಯಪ್ಪಿದಳು ನೀ
ರುರವಣಿಸಿದುದು ನಯನದೊಳು ಸೆರೆ
ಕೊರಳಿಗೌಕಿದುದಳಲಿನಬುಧಿಯೊಳದ್ದಳಾಕುಂತಿ ॥ ೨೮

ಆಸಮಯದೊಳು ಗಂಗೆ ನಾರೀ
ವೇಷದೊಳು ನಡೆತಂದಳೆಲೆ ಕುಂ
ತೀಸತಿಯೆ ಕೈಯೆಡೆಯ ಕಂದನನೊಪ್ಪುಗೊಳು ನೀನು ।
ಈಸುದಿನಮಿವನಾಗುಹೋಗಿನ
ಗಾಸಿಯನು ಸಲೆ ಕಾಯ್ದೆನೆನ್ನಯ
ಭಾಷೆ ಸಂದುದೆನುತ್ತೆ ತಾಯಿಗೆ ಕೊಟ್ಟಳಾತ್ಮಜನ ॥ ೨೯

ಇರಲಿರಲು ರವಿ ಬಂದನೆಕ್ಕಟಿ
ಗರೆದನೀತನ ಕಿವಿಯೊಳೆಲ್ಲವ
ನೊರ್ಜದ ನಿನಗೆಲೆ ಮಗನೆ ಕುಂತೀದೇವಿ ತಾಯಹಳು ।
ಮುರಹರನ ಮತದಿಂದೆ ನಿನ್ನಯ
ಸೆರಳ ಬೇಡಲು ಬಂದಳಂದಾ
ಪರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ ॥ ೩೦

ಬೆಸಸಿದುದಕೆ ಹಸಾದವೆಂದನು
ಬಿಸಜಬಂಧುವ ಕಳುಹಿದನು ಮೆ
ನ್ನಿಸಿದನಿತ್ತಲು ಮಾತೆಯನು ಭಯಭರಿತಭಕ್ತಿಯೊಳು ।
ಒಸೆದು ಬಿಜಯಂಗೈವಹದನೇ
ನುಸಿರಬೇಹುದು ತಾಯೆಯೆನೆ ಶೋ
ಕಿಸುತ ನುಡಿದಳು ಕುಂತಿ ಕರ್ಣ್ಣನ ತೆಗೆದುಬಿಗಿಯುಪ್ಪಿ ॥ ೩೧

*   *   *

---

* ಹಾಡಿದೆನೆ ಮಾನದಣಿಯೆ ನಾಂ ಕೊಂ
ಡಾಡಿದೆನೆ ನಿನ್ನವನು ಹರಿದೆಡೆ
ಯಾಡಿದೆನೆ ತಾನೊಮ್ಮೆ ತೊಟ್ಟಿಲೊಳುಪ್ಪವಡಿಸಿದೆನೆ ।
ನಾಡಬಾಲಕರಂತೆ ನೀನಡೆ
ದಾಡಿ ಬಳಲಿದಿರೆತ್ತಿಕೊಂಡೆನೆ
ನಾಡ ಸಲಹುವ ನೃಪತಿ ಬಾರೆಂದಪ್ಪಿದಳು ಮಗನ ॥

ಮಗನೆ ಬಾರೈ ಯೆನ್ನ ಚಿತ್ತದೊ
ಳಗಲದಿಹ ಚಿಂತಾಮಣಿಯೆ ಬಾ
ಜಗದ ವಂದಿತನಾ ಜನಾರ್ದನ ಭಕ್ತ ನೀಂ ಬಾರ ।
ಪೊಗಳಲೆನ್ನಳವಲ್ಲ ದಾನದೆ
ಸುಗುಣನಿನ್ನಾರುಂಟು ಪೋಲುವ
ಮಗನು ನಿನ್ನವೊಲೆಂದು ಕರೆದಳು ಕುಂತಿ ವಿಸಮುದೊಳು ॥

ಕಂದ ಬಾರೈ ಯೆನ್ನ ಚಿತ್ತದೆ
ಕುಂದದಿಹ ಚಿಂತಾಮಣಿಯೆ ಬಾ
ತಂದೆ ಬಾರೈ ವರಜನಾರ್ದನಭಕ್ತ ನೀಂ ಬಾರ ।
ಇಂದು ಮೆದಿನಿಗೊಡೆಯ ಬಾರೈ
ತಂದೆ ಬಾರೈ ಕರ್ಣ ಎನುತಿಹ
ಇಂದುಮುಖಿ ನಂದನನ ಕರೆದಳು ತನ್ನ ಹೊರೆಗಾಗಿ ॥

ಉದಯವಾಗಲು ಸೂರ್ಯನೆರಡಕೆ
ಪದಕೆ ರಾಗದೆ ಬರುವ ಸಮಯಕೆ
ಬುಧಜನಕೆ ಹದಿನೆಂಟುಕೋಟಿಯನಿತ್ತದಾನದೊಳು ।

ಮುದದೆ ಮೆಚ್ಚಿಸುತಿಹನೆ ಬಾರೈ
ಸದಮಳಜ್ಞಾನಿಗಳ ಮಸ್ತಕ
ಕದನಗಲಿ ಬಾ ಯೆಂದು ಕರ್ಣನ ಕರೆದಳಾಕುಂತಿ ||

ಮಾತೆ ಕೇಳೌ ಎನ್ನ ಮಾತನು
ತಾತರಬ್ಬರದೇನು ನಿಮ್ಮೊಳು
ಜಾತಿಸಿದ ಪರಿಯೇನು ನಿಮ್ಮಡಿ ಬಂದ ಹದನೇನು |
ಜಾತಕ್ಷತ್ರಿಯಪಾಂಡುರಾಯನ
ನೋತು ನೀಂ ವಧುವಾಗಿಯಿರಲಿನ
ನಾತ ನಿಂದಾತಾತನೆಂಬುದ ತಿಳಿಯಹೇಳೆಂದ ||

ಮಗನೆ ಕೇಳೈ ಕುಂತಿಭೋಜಗೆ
ಮಗಳಹೆನು ತಾಂ ತನ್ನ ಬಾಲ್ಯದೆ
ಮುಗುದೆತನದೊಳು ಬಳೆಯುತಿರಲಾಕನ್ನೆಯೆಂದೆನಿಸಿ |
ಅಗಣಿತಾಂಬುಜಸೀಮೆಗೇರಿಗೆ
ಮಿಗೆ ಪಿತನು ಕಾಳಗಕೆ ನಡೆಯಲು
ವಿಗಡಮುನಿಪತಿ ತನ್ನ ಮನೆಗೈತಂದ ದುರ್ವಾಸ ||

ಬಂದ ಮುನಿಗಳಿಗರ್ಘ್ಯಪಾದ್ಯವ
ನಂದದಿಂ ತಾನಿತ್ತೆ ಭಕ್ತಿಯೊ
ಳಂದು ಶುಶ್ರೂಷೆಯೊಳು ಸತ್ಕರಿಸುತ್ತೆ ತಾನಿರಲು |
ಇಂದುಮುಖಿ ಬಾ ತಾಯೆ ಎನುತವೆ
ಮುಂದಣುತ್ಪಾದನೆಗೆ ಕಾರಣ
ವೆಂದು ಕಿವಿಯೊಳಗೈದುಮಂತ್ರವನಿತ್ತ ಮುನಿಯೆನಗೆ ||

ಆಮಹಾಮುನಿವರನ ಮಂತ್ರದೆ
ಕಾಮಿಸಿದೆ ಸಿಸುವೊಂದ ತಾನುರೆ
ವ್ಯೋಮಪುರುಷನು ಬರಲು ನಿನ್ನುತ್ಪತ್ತಿಯಾಯ್ತಲ್ಲಿ |
ಭೂಮಿಯೊಳಗಪಕೀರ್ತಿಗೋಸುಗ
ವೀಮಹಾಸತಿ ಗಂಗೆಗಿತ್ತೆನು
ಸೋಮಕುಲನಿಸ್ಸೀಮ ಬಾರೆಂದಪ್ಪಿದಳು ಮಗನ ||*

* ಈ ಪದ್ಯಗಳು ಖ. ಪುಸ್ತಕದಲ್ಲಿ ೩೧ನೆಯ ಪದ್ಯದ ಮುಂದೆ ಹೆಚ್ಚಾಗಿ ದೊರೆಯುತ್ತವೆ.

ಮಗನೆ ತಮ್ಮಂದಿರನು ಪಾಲಿಸು
ವಿಗಡತನವನು ಮಾಣು ಪರರೋ
ಲಗವೆ ನೀಂ ಮಾಡುವುದೆ [1] ನಿನಗಿತ್ತಂಡವನುಜರಲೇ ।
ಸೊಗಸು ನಾನೆಂದುದನು ಪಿಸುಣರ
ಹಗೆನುಡಿಯ ಕೇಳದಿರು ಪಟ್ಟವ
ಬಿಗಿಸಿಕೊಳು ಸಲಿಸೆನ್ನ ವಚನವನೆಂದಳಾಕುಂತಿ ॥ ೩೦

ತಾಯಹುದು ನಾಂ ಬಲ್ಲೆನಿದನಾ
ಕಾಯಜನ ಪಿತನಱುಹೆ ತಿಳಿದೆನು
ರಾಯರಿತ್ತಂಡಕ್ಕೆ ಪಟ್ಟದ ಹಿರಿಯ ತಾನಹುದು ।
ರಾಯನೆನ್ನನು ನಚ್ಚಿ ಹೊರೆದನು
ಸಾಯಲಳುಕುವೆನೇ ಸುಡೇತಱ
ದೀಯವನಿಬಾಳಿಕೆ ಕೃತಘ್ನಂಗಿಲ್ಲ ಗತಿಯೆಂದ ॥ ೩೧

ಮಕ್ಕಳೈವರಿಗಾಂ ಹಿರಿಯನಿದು
ತಕ್ಕ ಮಾತಲೆ ತಾಯೆ ಸಂದೇ
ಹಕ್ಕೆ ನೆಲೆಯಿಲ್ಲದುನಿಲಲಿ ಧಾರಿಣಿಯ ಬಯಸುವೊಡೆ ।
ತಕ್ಕುದೇ ದಾತಾರನರಸಿಯೊ
ಳೊಕ್ಕತನವಿರಲಾಱು ಮೆಚ್ಚುವ
ರಕ್ಕಹೇಱಾ ಹೇಸಳೇ ಜಯಲಕ್ಷ್ಮಿ ತನಗೆಂದ ॥ ೩೨

ಇಂದು ನೀವಱುಹಿದ ಬಱಿಕ ರವಿ
ನಂದನನೆ ಎಂದಱಿದೆನಲ್ಲದೆ
ಹಿಂದೆ ದುರ್ಯೋಧನನದಾವುದ ನೋಡಿ ಸಲಹಿದನು ।
ಬಂದು ಪಾಂಡವರೊಡನೆ ಕೂಡಿದೊ
ಡಿಂದು ಬಹುದಪಕೀರ್ತಿ ನಿಮ್ಮಡಿ
ಬಂದ ಕಾರ್ಯವೆ ಬೆಸಸಿ ಬೇಗದೊಳೆಂದನಾಕರ್ಣ ॥ ೩೩

---

1 ನಿನಗೀಗೈವರನುಜರಲೇ, ಚ. ನೀನಿರೆ ವಿನಯವಿತ್ತಂಡ, ಟ.

ಆದೊಡ್ಡೈವೆರು ಮಕ್ಕಳನು ತಲೆ
ಗಾದು ತೋಱ್ಪೈ ಕಂದ [1] ನಿನಗೇ
ನೀದುರಾಗ್ರಹವೊಪ್ಪುವುದೆ ಕೌರವನ ಸೇವೆಯೊಳು ।
ಹೋದ ಬಾಣವೆ ಮರಳೆ ತೊಡದಿರು
ಮೊದು ಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಱುಕೊಂಡನು ಬಂದನರಮನೆಗೆ ॥ ೭೬

ಹನ್ನೊಂದನೆಯ ಸಂಧಿ ಮುಗಿದುದು

---

# ಸೈನ್ಯನಿರ್ಯಾಣಪರ್ವ

## ಹನ್ನೆರಡನೆಯಸಂಧಿ.

### ಪಾಂಡವರು ಕುರುಕ್ಷೇತ್ರಕ್ಕೆ ಬಂದುದು.

ಸೂಚನೆ

ಅವನಿಯುದಿರಿತು ಗಗನ ತಾರಾ
ನಿವಹವನು ಬಿದಿರಿತ್ತು ವರಪಾಂ
ಡವರು ಕಳನೊಳು ವೆಂಟಣಿಸಿದರು ಕಮಠ ಟೆಂಟಣಿಸೆ ॥
ಕೇಳು ಜನಮೇಜಯ ಧರಿತ್ರೀ
ಪಾಲ ಸಂಧಿಯು ಮುಱಿದು ಲಕ್ಷ್ಮೀ
ಲೋಲನೈತರುತಿವರ ಹೊರೆಗಟ್ಟಿದನು ಸಾತ್ಯಕಿಯ ।
ಕೇಳಿದರು ಮುರಹರನ ಬರವನು
ಮೌಳಿಮಸ್ತಕದಖಿಳಧರಣೀ
ಪಾಲರಂದಿದಿರಾಗಿ ಬಂದರು ಸಕಲ [2] ಬಲಸಹಿತ ॥ ೧

---

1 ಕೇಳ್ವಿನಗೀದುರಾಗ್ರಹವೊಪ್ಪದೊಡೆ ಕೌರವನ ಸೇವೆಯೊಳು, ಚ. ನಿನಗೇ ನೀದುರಾಗ್ರಹವೊಪ್ಪದೇ ಕೌರವನ ಸೇವೆಯೊಳು, ಜ.

2 ದಳ, ಕ, ಖ, ಜ, ಜನ, ಟ.

ದೂರದೊಳು ದುರ್ಮ್ಮನಿಸಿದ ಪದ
ನಾರವಿಂದವ ಕಂಡು ಸಂಧಿಗೆ
ಸೇರರವದಿರು ಬಲಿದು ದಾಹವವೀತಸಿರವಿನೊಳು ।
ಶೌರಿಗಾಯ್ತ್ರಪಮಾನವಿದಲೇ
ಮೂರಿಗುತ್ಸವವೆನುತೆ ಬಂದನು
ಮಾರುತನ ಮಗನಸುರಮರ್ದನನಿಂಗಿತವನಱಿದು ॥ ೨

ದರುಶನವ ನೀಡಿದನು ಕೃಷ್ಣನ
ಚರಣದೊಳು ಮೆಯ್ಯಿಕ್ಕಿದನು ಮಿ
ಕ್ಕರಸುಗಳು ದ್ರುಪದಾದಿನಾಯಕರೆಱಗಿದರು ಪದಕೆ ।
ಪರಮಬಾಂಧವರೆಲ್ಲ ಚೇಮಂ
ತರೆ ನದೀಸುತ ವಿದುರ ಗುರು ಕೃಪ
ಗುರುತನುಜ ಧೃತರಾಷ್ಟ್ರರೆಂದನು ಧರ್ಮನಂದನನು ॥ ೩

ಭೂಮಿಪತಿ ನಿಜಬಾಂಧವರು ಸು
ಕ್ಷೇಮಿಗಳು ತಾವೆಲ್ಲ ನಿಮ್ಮಯ
ಕ್ಷೇಮವನು ಕೇಳಿದರು ಕಳುಹಿದರವರು ಹರಕೆಗಳ ।
ಆಮಹಾಸಂಗ್ರಾಮಮುಖದೊಳು
ತೋಮರದ ಕಾಣಿಕೆಗಳೊಳು ಸು
ಪ್ರೇಮವನು ಬಳೆಸುವುದು ದುರ್ಯೋಧನನ ಮತವೆಂದ ॥ ೪

ಭೂಮಿಯೊಳಗರ್ಧವನು ಬೇಡಿದೊ
ಡಾಮಹಿಪ ನಿಮ್ಮೈವರಿಗೆ ಸಂ
ಗ್ರಾಮಭೂಮಿಯನೈದೆ ಕೊಟ್ಟನು ನಿಮ್ಮೊಳಪ್ರಿಯನೆ ।
ಸಾಮದೊಳು ಸೊಗಸಿಲ್ಲ ನೀಂ ನಿ
ಸ್ಸೀಮರಾದೊಡೆ ಹರಿವುದಿಂದು
ದ್ದಾಮಕುರುಭೂಮಿಯೊಳು ಬಲಸಹಿತವರ ಪತಿಕರಿಸಿ ॥ ೫

ಮುನಿದೊಡೆಯು ನಿಮ್ಮೊಳಗೆ ನೀವೇ
ಮನ್ನಕತವ ಮಾಡುವಿರಿಯಗ್ರಜ
ರನುಜರೊಳು ಕದಡಾದೊಡುಪಶಮಿಸುವುದು ನಿಮ್ಮೊಳಗೆ ।
ಎನಗೆ ನಿಮ್ಮಯ ದೂಸಱಿಂದಾ
ದ್ದನಿತುಸಭೆಯೊಳು ಮಾನಹಾನಿಗ
ಳೆನಲು ನೊಂದನು ಧರ್ಮಸುತನಿಂತೆಂದ ನಸುನಗುತೆ ॥ ೬

ಮುಳಿದು ಸುರಗಿಯನುಗಿದು ಗಗನವ
ನಿಲುಕಿ ಮಾಡುವುದೇನು ನಿಮ್ಮಡಿ
ಗಳಿಗೆ ತಪ್ಪಿದ ತರಳರಖಿಳವ್ಯಾಪ್ತಿಯೇಗುವುದು ।
ಖಳರು ಮಾಡಿದ ಖತಿಯನೆಮ್ಮೊಳು
ತಿಳಿದು ಮಱೆಯಲು ಬೇಕು ಕರುಣಾ
ಜಲಧಿ ನೀವೆಂದಂಘ್ರಿಗಳ ಹಿಡಿದನು ಯುಧಿಷ್ಠಿರನು ॥ ೭

ಬಱಿದೆ ಕಾಡದಿರೇಱು ಮನದೊಳು
ಮೆಱೆದೆವಾಗಳೆ ಕೌರವರು ಮುಂ
ದಱಿಯದವಗಡಿಸಿದರು ಪೋಗಲಿಯೆಮ್ಮ ದೂಱೇಕೆ ।
ನೆಱೆವಣಿಗೆಯುಂಟಾದೊಡಿಂದಿನ
ಮೆಱುದೆವಸ ಸಂಗ್ರಾಮ ಸ್ಥಿರಿಸ
ಲಱಿಯರವದಿರು ನಡೆ ಕುರುಕ್ಷೇತ್ರಕ್ಕೆ ನೀನೆಂದ ॥ ೮

ಹಾನಿಯನು ತಾಂ ಹೊತ್ತು ಭೃತ್ಯರ
ಮಾನವನು ಪತಿಕರಿಸಬೇಹುದು
ತಾನೊಡೆಯನಾದಂಗೆ ಗುಣವೆಮ್ಮೊಡೆಯ ನೀನಾಗಿ ।
ಮಾನಭಂಗವ ಧರಿಸಿಯೆಮ್ಮಭಿ
ಮಾನವನು ನೀಂ ಸಲಹಿದೈ ಸಂ
ಧಾನವನು ಸೇರಿಸದೆ ಸಲಹಿದೆ ಯೆಂದನಾ ಭೀಮ ॥ ೯

ಮೋರಿಯುಱಕೆಗಳಡಗದಂತಕ
ನೂರು ತುಂಬದೆ ಶಾಕಿಸಿಯುರೊಡ
ಲೋರು ನನೆಯದೆ ಡಾಕಿಸಿಯರಿಗೆ ಡೊಳ್ಳು ಸಾಲಿಡದೆ |
ಕೌರವನ ತಸಿಗರುಳ ದಂಡೆಯು
ತೋರಣದ ಬಾಗಿಲೊಳು ವಿಭವದೆ
ವಾರಣಾಹ್ವಯನಗರಿಯನು ಹೊಗದಿಪನೆ ತಾನೆಂದ ॥ ೧೦

ತೋಱು ನಡೆ ಗಜಬಜಿಸಬೇಡಿಂ
ನಾಱುತಿಂಗಳ ನಾಳ ಪಯಣಕೆ
ಸಾಱಿಸೇಱಿಂದೆನುತುಪಪ್ಲವ್ಯಕ್ಕೆ ನಡೆತಂದು |
ಬೇಱೆಬೇಱವನೀಶರಿಗೆ ಮಣಿ
ಹಾಱರನು ಕಳುಹಿದನು ಕೃಷ್ಣನ
ದೂಱು ಬರಲಳವಡಿಸಿದರು ಸಂಗ್ರಾಮಸಾಧನವ ॥ ೧೧

ಗುಡಿಯು ಮಂಡವಿಗೆಗಳ ಹೊಱಿಗೆಗ
ಳಡಿಗಡಿಗೆ ಸಂಭ್ರಮಿಸಿದುವು ಬಱ
ಸಿಡಿಲು ಬೊಬ್ಬಿಡುವಂತೆ ಮಸೆವುವು ಕೂಡೆ ಕೈದುಗಳು |
ತಡಿಯ ಬಿಗಿಸುವ ಗುಱಿವ ಱಿಂಚೆಯ
ಗಡಣಿಸುವ ಬಲುಗೀಲುಗಾಲಿಯ
ತೊಡಿಸುವುತ್ಸವವಾಯ್ತುಪಪ್ಲವ್ಯದೊಳು ರಭಸದೊಳು ॥ ೧೨

ಹಿಳುಕ ತಿದ್ದುವ ಬಿಲ್ಲ ಬಾಗಿಸ
ಹೊಳಹನೊಯ್ಯಾರಿಸುವ ಮಾರ್ತ್ತಿರು
ಗಳನು ಜೋಡಿಸುವಖಿಳಕೈದುವ ಮಸೆವ ಮಂಡಳಿಯ |
ಕಳಕಳಿಕೆ ಬಲುಹಾಯ್ತು ರಾವುತ
ರೊಳು ಗಜಾರೋಹಕರ ರಥಿಕಾ
ವಳಿಗಳವರವರಂಗದೊಳು ಸಂವರಣೆಯೊಪ್ಪಿದುವು ॥ ೧೩

* * *

---

* ತಡಿಯ ಹೊಲಿಸುವ ಜೋಡುಗಳೊಳಹ
ಬಿಡದೆ ಹಮ್ಮುಗೆಗಳನು ಬಲಿಸುವ
ಕಡಿವಣದ ಕುಂಬಿಗಳ ವಾಗೆಯ ಬಿಗಿಯ ಕಾಪನೆಯ |
ಸಡಗರಿಸಿ ಸಂವರಿಸಿ ಹಲ್ಲಣ
ಪಡೆಯ ಹೊಂಬರೆಹದ ಸುರೇಖೆಯ
ನುಡಿಯಲರಿವೆನೆ ಕೂಡಿದರು ರಾವುತರು ನಿಮಿಷದೊಳು ||

ಗುಡುವುರಜೆಯಡಿವುರಜೆ ಬೆನ್ನಿನ
ಮಿಳಿಯ ಕಾಳಿಗೆವುರಜೆಯೊಪ್ಪುವ
ಗಳದ ಗಂಟೆಯನಂಕುಶದ ಹೊರೆಗಳ ಬಡಿಗೆಗಳನು |
ಪ್ರಳಯರವಿಗಳ ರಶ್ಮಿಯಂತಿರೆ
ಬೆಳಗ ಹೊಂಜೆಯನಾಯುಧವ ಕೈ
ಗೊಳಿಸುತಿರ್ದರು ಕರಿಯ ಸಜ್ಜೀಹಗಳ ಮಾವುತರು ||

ಗಾಲಿಗಳನಳವಡಿಸಿಯುಚ್ಚಿನ
ಕೀಲುಗಳ ಬಲಿಯುತ್ತ ಹಲಗೆಯ
ಸಾಲ ಜೋಡಿಸಿ ಜಯಪತಾಕಾಜಾಲವನು ರಚಿಸಿ |
ಕೋಲುಗಳ ಬಲಿಯುತ್ತ ಯಿಣಿಚಿವ
ಬಾಲಸುತರ್ತುಯ್ದ ಧ್ವಜಯವನು
ಲೀಲೆಯಿಂದಳವಡಿಸುತಿರ್ದರು ರಥಿಕಸಂದೋಹ ||

ಇನಿತು ಗಜಹಯರಥಪದಾತಿಯ
ಘನತರದ ಸಂವರಣೆಗಳ ತನ
ತನಗೆ ಸಜ್ಜೀಡುಗಳ ಜೋಡಿಸಿತಂದುಪಪ್ಲವದೆ |
ಜನಪಸಾ· ಡವರಿಸದೆ ನಾಳಿನ
ದಿನ ಕುರುಕ್ಷೇತ್ರಕ್ಕೆ ಪಯಣವ
ಮನಗೊಳಿಸಲಿನನಪರಪರ್ವತದಗ್ರವೇರಿದನು ||

ನಡೆಯ ಭರವಡಗಿತ್ತು ಜರೆ ತನ
ಗಡಸಿತೆಂದುರೆ ನೊಂದು ಖಾತಿಯ
ಕಡುಹು ಕುಂದಿತು ತೇಜವಡಗಿತು ತನ್ನ ರಶ್ಮಿಗಳ |

ಜೋಳಿ ಹರಿದುದು ದೆಸೆದೆಸೆಯ ಭೂ
ಪಾಲರಿಗೆ ರಾಯಸದ ಹದನನು
ಕೇಳಿದಾಗಲೆ ಕವಿದು ಬಂದರು ತಮ್ಮ ದಳಸಹಿತ ।
ಸೂಳವಿಸಿದುವು ಸನ್ನೆಯೊಳು ನಿ
ಸ್ಸಾಳವೆಂದಿನ ಮಱುದಿವಸ ವೈ
ಹಾಳಿಯಸು ಘೋಱಮಟ್ಟಿರನಿಬರು ದೈತ್ಯರಿಪುಸಹಿತ ॥ ೧೪

ಎಲೆಲೆ ನೆಲ ಬೆಸಲಾದುದೆನೆ ಬಲು
ದಳದ ತೆರಳಿಕೆ ತೀವಿತವನಿಯ
ತಳಪಟದ ಹಬ್ಬುಗೆಯೊಳಬ್ಬರಿಸಿದುವು ಬೊಬ್ಬೆಗಳು ।
ತಲೆವೊರೆಯ ಸೂಕದೊಳು ಫಣಿಪತಿ
ಯಳುಕೆ ತೊಟ್ಟನು ತರಣಿ ಸೇನೋ
ಚ್ಛಳಿತಧೂಳಿಯ ಝುಗೆಯನದ್ಭುತವಾಯ್ತು ದೆಖ್ಖಾಳ ॥ ೧೫

ಹಿಣಿಲ ಹಾಹೆಯ ಬಿರುದುಗಳ ಡಾ
ವಣಿಯ ನಾಯಕವಾಡಿಗಳ ಸಂ
ದಣಿಯ [1] ಸುಕರದ ಕೈದುಗಳ ವರವೀರನೂಪುರದ ।

---

ಕಡು ಕುಜನನುನದಂತೆ ಕತ್ತಲೆ
ಹೊಡಕರಿಸುತಿದೆಯೆಂದು ಕಡುಸಿ
ಗ್ಗಡಸಿ ಬಿದ್ದನು ರವಿಯು ತಾನೆನಲಸ್ತ ರಂಜಿಸಿತು ॥
ಅರಸ ಸಂಧ್ಯಾದೇವಿಯರನುಪ
ಚರಿಸಿ ಶೌರಿಯ ಪದಯುಗವ ನೆನೆ
ದರಿವಿದಾರಣ ಕರಸಿದನು ದ್ರುಪದಾದಿನಾಯಕರ ।
ಬರಿಸಿ ಕೃಷ್ಣಂಗೆಱಗಿ ನಾಳಿನ
ಧುರಕೆ ದಳಪತಿಯಾವನೆಂಬುದ
ಕರುಣಿ ಬೆಸಸೈ ತಂದೆಯೆಂದಲಿಂತೆಂದನಸುರಾರಿ ॥

ತಡಿಯುಹೊಲಿಸುವ ಮೊದಲಾದ ಆರುಪದ್ಯಗಳು ಕ. ಪುಸ್ತಕದಲ್ಲಿಮಾತ್ರ ಹೆಚ್ಚಾಗಿದೊರೆಯುತ್ತವೆ.

[1] ಸುಭಟರಕಾಲತೊಡರಿನ, ಟ.

ಕುಣಿವಸುಭಟರ [1] ಪಳರವದ ಡೊಂ
ಕಣಿಯ ಖೇಟಕಖಡ್ಗ ಬಲುಬಿಲು
ಗಣೆಯ ತಿಳಿವೊಡಸಂಖ್ಯೆಯಹ ಕಾಲಾಳ ನೋಡಿದರು ॥ ೧೬

ಅಳವಿಗೊಟ್ಟೊಡೆ ರವಿಯ ತುರಗವ
ನುಳುಹಿ ಮುಂಚುವ ಜವದ ನೊಸಲೊಳು
ಹೊಳೆವ ಕನ್ನಡಿಗಳ ಖುರಾಂತದ ಜಡಿವಜೋಡುಗಳ ।
ಬಿಳಿಯ ಚೌರಿಯ ಜಲ್ಲಿಗಳ ಹ
ತ್ತಳದ ರಾಹುತಸನ್ನೆಯೊಳು ನೆಲ
ನಲುಗೆ ನಿಗುರುವ ನಿಲುವ ನಿರುಪಮಹಯವ ನೋಡಿದರು ॥ ೧೭

ಶೈಲದೆಡಬಲದೊಱತೆಯೆನಲು ಕ
ಪೋಲದೊಳು ದಾರಿಡುವ ಮದಜಲ
ದಾಳಿಗಳ ಭರಿಕೈಯ ಲವುಡಿಯ ವಜ್ರಮುಷ್ಟಿಗಳ ।
ನಾಳಿವಿಲುಗಳ ರಾಯಜೋದರ
ಮೇಲುವಣೆಗಳ ಚಿತ್ರಗತಿಶುಂ
ಡಾಲಗಳ ನೋಡಿದರು ಗಜಸೇನಾಸಮುದ್ರದೊಳು ॥ ೧೮

ಥಳಥಳಿಪ [2] ಸೂಲಿಗೆಯ ಮುವ್ವೊನೆ
ಗಳ ರಥಾಂಗದ ಮೇಲುಪಸರದ
ಪಳಹರೆದ ಖುರಗತಿಯ ಜೋಡ ಜವಾಯ್ಲಕುದುರೆಗಳ ।
ಬಲದ ಬದ್ದರದೊಟ್ಟದಂಬಿನ
ಹೊಳೆವಹೊದೆಗಳ ಸೂತರುರವಣೆ
ಗಳ ಸುರೇಖೆಯ ಗತಿಯ ರಥರಾಜಿಗಳ ನೋಡಿದರು ॥ ೧೯

ಅವನಿಪಾಲರ ಮುಕುಟಮಣಿ ಮಣಿ
ನಿವಹದೆತ್ತಿದ ಖಡ್ಗ ಪರಶುಗ
ಳವಿರಳದ ತೆರೆಗಳ ಪತಾಕಾವಳಿಯ ಬಲುನೊಱೆಯ ।

---

1 ಪಳಹರದ, ಕ. ಖ. ಚ. ಜ.  2 ಸೂನಿಗೆಯ, ಚ. ಟ.

ವಿವಿಧಗಜಹಯಜಲಚರೌಘದ
ಪವನಜನ ಕೈಸನ್ನೆಗಳ ಘನ
ಪವನಹತಿಯೊಳು ಲಹರಿಮಸಗಿತು ಬಹುಳಬಲಜಲಧಿ ॥ ೨೦

ಹರಿಯುಧಿಷ್ಠಿರರೊಂದುಗಜಕಂ
ಧರದೊಳಿದ್ದರು ನಿಖಿಳಸೇನೆಯ
ತೆರಳಿಕೆಯ ತೋಱಿಸುತೆ ಬಂದರು ಭೀಮಫಲುಗುಣರು ।
ಬಿರುದಧೃಷ್ಟದ್ಯುಮ್ನಮೊದಲಾ
ಗಿರೆ ಕುತೂಹಲಿ ದ್ರುಪದಭೂವರ
ನುರವಣಿಸಿ ತೋಱಿಸಿದನೊಂದಕ್ಷೌಹಿಣೀಬಲವ ॥ ೨೧

ವರಯುಧಾಮನ್ಯೂತ್ತಮೌಜಸ
ರುರುಶಿಖಂಡಿ ಸುಚೇಕಿತಾನ ಸ
ಮರಧುರಂಧರವೀರಪಾಂಚಾಲ ಕ್ಷಿತೀಶ್ವರರು ।
ತುರಗಗಜರಥಪಾಯದಳಸಾ
ಗರದ ಸಂರಂಭದೊಳು ನಿಜಸಂ
ವರಣೆಯನು ತೋಱಿದರು ತಮ್ಮಕ್ಷೌಹಿಣೀಬಲವ ॥ ೨೨

ವರವಿರಾಟನು ಕಂಬುನೃಪನು
ತ್ತರ ಶತದ್ಯುಮ್ನ ಶತಚಂದ್ರಕ
ರುರುಶತಾನೀಕನು ಶತಾಯುಧನೆನಿಪ ಮತ್ಸ್ಯಪರು ।
ತುರುಕರುರುಸಾಹಣ ಸಮುದ್ರದ
ವರು ಯವನ ಖುರುಸಹಣ ಕಾಶೀ
ಶ್ವರರು ತಮ್ಮಕ್ಷೌಹಿಣಿಯ ತೋಱಿದರು ಧರ್ಮಜಗೆ ॥ ೨೩

ಜಯ ಸಮರಸುಸಮಗ್ರಬಲ ಕೈ
ಕಯನೃಪಾಲರು ತಮ್ಮಳಕ್ಷೋ
ಣಿಯನು ತೋಱಿದರಂದು ಗಜಕಂಧರದ ಭೂಪತಿಗೆ ।

ಭಯವಿಹೀನರು ಪಾಂಡ್ಯನೃಪ ಸೃಂ
ಜಯ ಸುಸೋಮಕಭೂಪರಕ್ಷೋ
ಣಿಯನು ತೋಱಿದರವನಿ ಕುಸಿದುದು ದೞದ ಪದಹತಿಗೆ ॥ ೧೪

ಚೇದಿದೇಶದ ಧೃಷ್ಟಕೇತು ಬ
ಲೋದಧಿಯೊಳಕ್ಷೋಣಿಯನು ಮೇ
ಳಾದ ಕುಂತೀಭೋಜನಕ್ಷೌಹಿಣಿಯ ತೋಱಿದನು ।
ಆದುದೇೞಕ್ಷೋಣಿಬಲ ಮೇ
ಳಾದ ನಾಯಕವೞಿದೆ ನೆಱೆ ಹಿರಿ
ದಾದುದಾಹವಸೇನೆ ಗೋಚರವಲ್ಲ ಗಣಿಸುವೊಡೆ ॥ ೧೫

ಕ್ಷತ್ರಧರ್ಮನು ನೀಲನು ಬೃಹ
ತ್ಕ್ಷತ್ರ ಸೂರ್ಯಧ್ವಜ ಸುವರ್ಚಸ
ಚಿತ್ರವರ್ಮ ಹಿರಣ್ಯವರ್ಮರು ಚಾರುಚೇಷ್ಟಕನು ।
ಶತ್ರುಮಥನನು ವಿಂಧ್ಯಗಿರಿಯ ಸು
ಹೋತ್ರನನ್ವಯದವರು ಪಾಂಡವ
ಮಿತ್ರರೊದಗಿದರೊಡನೆ ಜನಮೇಜಯಮಹೀಪಾಲ ॥ ೧೬

ವೀರಪಾರ್ಥಂಗಿರುಳು ಸೋತಂ
ಗಾರವರ್ಮನು ಗಗನಚರಪರಿ
ವಾರಬಹುಳದೆ ಬಂದು ಕಂಡನು ಕಲಿಯುಧಿಷ್ಠಿರನ ।
ಕೌರವೇಂದ್ರನನುಯ್ದ [1] ಸಮರಸು
ಧೀರಸಾಹಸಚಿತ್ರಸೇನನು
ದಾರಬಲದೊಳು ಬಂದು ಕಂಡನು ಮಿತ್ರಭಾವದೊಳು ॥ ೧೭

ಕಾರಿರುಳ ಪಟ್ಟಣಕೆ ಚಂದ್ರನ
ತೋರಣವ ಬಿಗಿದಂತೆ ದಾಡೆಗ
ಳೋರಣದ ಹೊಳಹುಗಳ ಹೊಗರಿಡುವೊಡಲ ಕಪ್ಪುಗಳ ।

---

1 ಸಮರೋದ್ಧಾರಚಿತ್ರಾಂಗದನು ಸೇನಾಭರದೊಳು ಬಂದಿವರ ಕಂಡನು, ಕ, ಖ, ಚ, ಜ.

ಭಾರಿದೇಹನು ಭಟಭಯಂಕರ
ತೋರಹತ್ತನು ದೈತ್ಯವಯಪರಿ
ವಾರಬಹುಳದೆ ಬಂದು ಕಂಡನು ಕಲಿಘಟೋತ್ಕಚನು ॥ ೭೮

ಬಲದ ದೆಖ್ಖಾಳವನು ನೋಡಿದ
ರೊಲವಿನೊಳು ನಿಜಸೇನೆಸಹಿತತಿ
ಬಲರುಪಪ್ಲವ್ಯಕ್ಕೆ ಬಂದರು ಹೊಕ್ಕರಾಲಯವ ।
ಬಳಿಕ ಸುಮುಹೂರ್ತದೊಳು ಪ್ರೊಢಗುಡಿ
ಗಳನು ಹೊಯ್ಸಿದರಂದು ಯದುಕುಲ
ತಿಲಕ [1] ಗದುಗಿನ ವೀರನಾರಾಯಣನ ನೇಮದೊಳು ॥ ೭೯

ಪರಿಮಿತಕೆ ತನ್ನಾಪ್ತಸಚಿವರ
ಕರಿಸಿ ಕೊಂಡನು ಕೃಷ್ಣರಾಯಂ
ಗರಸ ಬಿನ್ನಹಮಾಡಿದನು ನೃಪಕಾರ್ಯಸಂಗತಿಯ ।
ಧುರಕೆ ಸೇನಾನಾಥನಿಲ್ಲದೆ
ನೆರೆದ ಬಲ ಸಾಲಿಱುಹೆ ಮುಱಿದೊಡೆ
ಹರೆವವೊಲು ಹುರುಳಿಲ್ಲ ದಳಪತಿಯಾವನಹನೆಂದ ॥ ೩೦

ದ್ರುಪದನಾಗಲಿಯೆಂದು ಕೆಲಬರು
ವಿಪುಳಬಲನು ವಿರಾಟನಾಗಲಿ
ನೃಪಶಿಖಂಡಿಯೆಂದು ಕೆಲಬರು ಭೀಮಸುತನೆಂದು ।
ಅಪರಿಮಿತಮತವಾಗೆ ಸಮರ
ವ್ಯಪಗತಾರಿ ಸುರೇಂದ್ರಸುತನೀ
ದ್ರುಪದಸುತ ಸೇನಾಧಿಪತಿಯಹುದೆನ್ನ ಮತವೆಂದ ॥ ೩೧

ಬಿಂಬವನು ಬೇಱಿರಿಸಿ ಬಹುಮತ
ವೆಂಬ ಬಿಸಿಲೊಳು ರಾಜನಯವೆಂ
ದೆಂಬ ನೈದಿಲು ನಲವುಗೆಟ್ಟದೆ ಕೃಷ್ಣ ಹೇಳೆನಲು ।

---

1 ಸಹಿತಾಲೋಚನೆಯ ಮಾಡಿದರು ಹರುಷದೊಳು, ಟ,

ಎಂಬುದೇನಿನ್ನಿಲ್ಲಿ ಸುಭಟಕ
ದಂಬದಧಿಪತಿತನಕೆ ಪಲುಗುಣ
ನೆಂಬ ಮಾತೆಮ್ಮಭಿಮತವು ಭೂಪಾಲ ಕೇಳೆಂದ ॥ ೩೦

* ಅರಸ ಕೇಳ್ದು ಪದಾತ್ಮಜನೆ ಸರಿ
ದೊರೆಯದಾವನು ಲೋಕದೊಳು ನೀಂ
ಕರಿಸಿ ಪಟ್ಟವ ಬಿಗಿಯೆನಲು ಕೈಕೊಂಡು ಯಮಸೂನು ।
ತರಿಸಿ ಭದ್ರಾಸನವ ನೆಱೆ ಸಿಂ
ಗರಿಸಿ ಪುರದೊಳು ಮಂಗಳೋತ್ಸವ
ಮೆಱೆಯಲೆಂದಟ್ಟಿದನು ಚರರನು ಭೂಪ ದೆಸೆದೆಸೆಗೆ ॥ ೩೧

ಕರಿಸಿ ಧೃಷ್ಟದ್ಯುಮ್ನನನು ಸಂ
ಗರಕೆ ಸೇನಾಪತ್ಯವನು ವಿ
ಸ್ತರದಿನಳವಡಿಸಿದರು ಸುಮುಹೂರ್ತದೆ ಸರಾಗದೊಳು ।
ಪುರದೊಳಗೆ ಗುಡಿ ನೆಗಹಿದುವು ಭೂ
ಸುರರ ವಿಮಳಾಮ್ನಾಯರವ ವಿ
ಸ್ತರಿಸಲಳವಡಿಸಿದರು ಮಂಗಳವಿಹಿತ ವಸ್ತುಗಳ ॥ ೩೪

ಸೂಳವಿಸಿದುವು ಕಟಕದೊಳು ನಿ
ಸ್ಸಾಳಕೋಟಿಗಳಳ್ಳಿಱಿಯೆ ಹೆ
ಗ್ಗಾಳೆಗಳು ಸಾಱಿದುವು ಭಟರುಬ್ಬಟೆಯ ಬಿರುದುಗಳ ।
ಬಾಲಕಿಯರಾರತಿಯ ತಳಿಗೆಗ
ಳೋಳಿ ಸಂದಣಿಸಿದುವು ವರಪಾಂ
ಚಾಲತನುಜಂಗೆಸಗಿದರು ಮೂರ್ಧಾಭಿಷೇಚನವ ॥ ೩೫

ದರುಶನವನಿತ್ತಖಿಳಧರಣೀ
ಶ್ವರರು ಕಂಡರು ಸೂತಮಾಗಧ
ವರವಿಬುಧವೈತಾಳಿಕರ ಕಾರ್ಪಣ್ಯವಡಗಿದುವು ।

* ಈ ಪದ್ಯವು ಖ, ಚ, ಜ, ಟ, ಪುಸ್ತಕಗಳಲ್ಲಿಲ್ಲ.

ಧುರಕೆ ಧೃಷ್ಟದ್ಯುಮ್ನನಾಜ್ಞೆಯೊ
ಳಿರವು ನಿಮಗೆಂದೈದೆ ಭೂಪಾ
ಲರ ನಿವಾಸಂಗಳೊಳು ಹೊಯ್ಸಿದರಂದು ಡಂಗುರವ ॥ ೩೬

ರೂಢಿಸಿದ ಸುಮುಹೂರ್ತದೊಳು ಹೊಱ
ಬೀಡಬಿಟ್ಟರು ರಣಕೆ ಪಯಣವ
ಮಾಡಲೋಸುಗ ಸಾಱಿದರು ನೃಪಪಾಳೆಯಂಗಳೊಳು ।
ಕೂಡಿತಾಹವಸೈನ್ಯಸಾಗರ
ವೀಡಿರಿದು ನಡೆಗೊಂಡುದುದಧಿಯ
ನೋಡಿಸುವ ಜೋಡಿಗಳ ಜೋಕೆಯ ಘನರವಂಗಳೊಳು ॥ ೩೭

* * *

---

* ಮೊಳಗಿದುವು ನಿಸ್ಸಾಳ ಮಂತ್ರದ
ಕಳಕಳಿಕೆ ಮಿಗೆ ಭೂಸುರರು ನನೆ
ಗಳನು ಕೆದಱಿದರು ನೃಪತಿ ಕಳುಹಿದನವರನುಚಿತದೊಳು ।
ಬಲಜಲಧಿ ಕಾಣಿಕೆಯನಿಕ್ಕಿತು
ನಳಿನವದನೆಯರಾರತಿಯ ಕೈ
ಕೊಳುತೆ ಹರಿಪದಕೆಱಗಿ ಧೃಷ್ಟದ್ಯುಮ್ನನನುವಾದ ॥

ಹರೆದುದೋಲಗದಿರುಳು ಮೂಡಣ
ಗಿರಿಯ ತುದಿಯೊಳು ಕೆಂಪು ತೋಱಿ
ತ್ತರಿವಿದಾರಣಕೃಷ್ಣನುಪ್ಪವಡಿಸಿದನೊಲವಿನೊಳು ।
ಹರಿತನಯ ಹರಿಸೂನು ಹರಿತನು
ಜರು ಯಮಳರುಪ್ಪವಡಿಸಿದರಾ
ಹರಿಯ ಚರಣಕ್ಕೆಱಗಿ ರವಿಯುದಯಾದ್ರಿಗಡರಿದನು ॥

ಹರಿಯನೇಮದೊಳರಸ ಕರಿಸಿದ
ಧರಣಿಯಮರರ ಬಳಿಕ ಶುಭದಿನ
ವರಮುಹೂರ್ತದೊಳಿರದೆ ಹೊಯ್ಸಿದನಂದು ಹೊಱಗುಡಿಯ ।
ತರಿಸಿ ಕನಕಸುರತ್ನವಸ್ತ್ರಾ
ಭರಣವನು ಭೂಸುರರಿಗಿತ್ತನು
ಹರುಷಮಿಗೆ ಮುರಹರನೊಡನೆ ಪೊಱಮಟ್ಟನರಸನೆಯ ॥

ಹರಿಯು ಚರಣಕ್ಕೆರಗಿ ವಿಜಯದ
ಹರಕೆಗಳ ಕೈಕೊಂಡು ರಥವನು
ತುರಗಗಜವನು ಗಡಣ ವಿಂಗಲೇರಿದರು ಪಾಂಡವರು ।
ಗರುಡಸಿಂಧವನೆತ್ತಿ ದಾರುಕ
ನಿರದೆ ರಥವನು ಸುಚಿಸೆ ಯದುವರೋ
ಹರದ ಮಧ್ಯದೊಳಸುರಧೂಳೀಪಟ್ಟ[1] ನೇರಿದನು ॥ ೩೭

ಮುಂದೆ ಹರಿರಥವಸುರವೈರಿಯು
ಹಿಂದೆ ಧರ್ಮಜನೆಡಬಲದೊಳಾ
ನಂದನರು ಬೆಂಭಾಗದೊಳು ಭೀಮಾರ್ಜುನರು ಬರಲು ।
ಸಂದಣಿಸಿದುದು ಸೇನೆ ಸ್ವೈರಿಸಿ
ನಿಂದನಾದೊಡೆ ಫಣಿಗೆ ಸರಿಯಿ
ಲ್ಲೆಂದು ಸುರಕುಲವುಲಿಯೆ ನಡೆದರು ಪಾಂಡುನಂದನರು ॥ ೩೮

* * * *

---

ಕರಿಸಿದನು ಯಮಸೂನು ದ್ರುಪದಾ
ದ್ಯರ ವಿರಾಟಾಧೀಶಸಚಿವರ
ಬರಿಸಿದನು ವುನ್ನೆಯರನಕ್ಷೌಹಿಣಿಯ ನಾಯಕರ ।
ನರನನುಗನಭಿಮನ್ಯು ಮೊದಲಾ
ಗಿರೆ ಘಟೋತ್ಕಚಪಂಚಪಾಂಡವ
ರುರವಣಿಸಿ ನೆರೆದೈದಿದರು ಕಡುಕದನಕರ್ಕಶರು ॥
ಮೊಳಗಿದುವು ಮೊದಲಾದ ನಾಲ್ಕು ಪದ್ಯಗಳು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತವೆ.

1 ಪೊಱಮಟ್ಟ. ಕ. ಖ. ಚ. ಜ. ಟ.

* ಸುರಪನೈರಾವತವನಿಳುಹಿಯು
ವರ ಬಲದ ಗಜಯೂಥವೆಲ್ಲವ
ಕರೆಯಲೆತ್ತಿದ ಕೈಯ ಪುಷ್ಕರವೆಸೆವ ಭಾವಗಳ ।
ಪರಿಯನೇವೇಳುವೆನು ಯಮಸುತ
ನರಸುತನದ ಸುವಿಸ್ತರಕ್ಕೀ
ಧರಣಿ ಸಜ್ಜವೆಯೆಂದು ಹೇಳುವೊಲೆಸೆದುದಿಭಪಜ್ಕ್ತಿ ॥
ಈ ಪದ್ಯವು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

ಸಿಡಿಲು ಸಿಗುಱಿದ್ದಂತೆ ಚೂರಿಸಿ
ಜಡಿವೆಕ್ಕೈದುಗಳುಗಿದುವಬುಧಿಯ
ಕಡುದೆರೆಯ ಲಹರಿಯವೊಲುರವಣಿಸಿದುವು ಬೊಬ್ಬೆಗಳು ।
ನಡುಗಿತವನಿಯಜಾಂಡಕೋಟಿಗ
ಳೊಡೆಯಲವನಿಯ ಲಗ್ಗೆಸೂಳಿನ
ಹೊಡೆಗುಱಿನೊಳಬ್ಬರಿಸಿದುವು ನಿಸ್ಸಾಳಕೋಟಿಗಳು ॥ ೪೦

ಪ್ರಳಯಜಲಧಿಯು ಸಂಚಗೆಟ್ಟವೊ
ಲಿಳೆ ಕುಸಿಯೆ ಕಮಠಂಗೆ ಮೇಲುಸಿ
ರುಚಿಯೆ ದಿಗ್ದಂತಿಗಳು ಮೊಣಕಾಲೂರಲಹಿ ಕುಸಿಯೆ ।
ಬಲಮಹಾಂಬುಧಿ ಬಲುಗಡಲಮು
ಕ್ಕಳಿಸೆ ನಡೆದುದು ಕಡುಭರದ ಕಾ
ಲ್ದುಳಿಯ ಕದನಾಲಾಪಕರ ಕಾಹುರತೆ ಪೊಸತಾಯ್ತು ॥ ೪೧

*

ಗಜದ ಬೃಂಹಿತರವದ ವಾಜಿ
ವ್ರಜದ ಹೇಷಾಧ್ವನಿಯ ತೇರಿನ
ವಿಜಯಚೀತ್ಕೃತಿರವದ ಬಿಲುಟಂಕಾರಕಳಕಳದ ।
ಗಜಬಜಿಕೆ ಗಾಢಿಸಿತು ಬೊಬ್ಬೆಯ
ಗಜಱುಗಳ ಗರ್ಜನೆಗೆ ನಡುಗಿತು
ತ್ರಿಜಗವೆನಲ್ಕೈದಿದರು ಪಯಣದ ಮೇಲೆ ಪಯಣದೊಳು ॥ ೪೨

---

* ಇಳೆ ಜರಿಯೆ ದೆಸೆ ಹಿಗ್ಗೆ ದಿಕ್ಕರಿ
ತಲೆಗೊಡಹೆ ವಿತಳದೊಳೆ ಶೇಷನು
ತಲೆಯುಡುಗೆ ತರುಗಿರಿಗಳೆಲ್ಲವು ದಟಿಧ ಪದಹತಿಗೆ ।
ನೆಲಸರಿಸವಾಗಲ್ಕೆ ಕೆಂಧೂ
ಳೊಲೆದು ಮೇಲಣ ಶಿಂಶುಮಾರವ
ತಲೆಯೊಳಾಂತುದು ತಿರುಗಿ ಕುಡಿದುದು ಸಪ್ತಸಾಗರವ ॥

ಈ ಪದ್ಯವು ಕ. ಪುಸ್ತಕದಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಅರರೆ ನಡೆದುದು ರಾಯಕಟಕದ
ತೆರಳಿಕೆಯ ಸಂರಂಭವಿಳೆಗ
ಚ್ಚರಿಯ ಬೀರಿತು ವರಕುರುಕ್ಷೇತ್ರಕ್ಕೆ [1] ಗಮಿಸಿದರು ।
ಅರಿವಿಜಯಿಗಳು ನೆಲನ ಗೆಲಿದರು
ಹರಿಯ ನೇಮದೊಳಡೆಯಱಿದು ಬಲ
ಶರಧಿ ಬಿಟ್ಟುದು ಕಳನ ಪಶ್ಚಿಮದೆಸೆಯ ಪಸರದೊಳು ॥ ೪೩

ಸೂಳವಿಸಿದುವು ಸನ್ನೆಯೊಳು ನಿ
ಸ್ಸಾಳ ಲಗ್ಗೆಯನಡಱಿದುವು ಕಿಱು
ಗಾಳೆಸಂಚದೊಳೂದಿದುವು ಮೊಳಗಿಸಿದುವಬ್ಬರವ ।
ಕೇಳು ಜನಮೇಜಯಧರಿತ್ರೀ
ಪಾಲ ಮಾರ್ಗಶ್ರಮದ ಸೇನಾ
ಜಾಲ ಸ್ಥಿರವಾಗಿ ನಿಂದುದು ಸಮರಭೂಮಿಯೊಳು ॥ ೪೪
*

---

1 ವಹಿಲದೊಳು, ಕ. ಚ. ಜ.

* ಎಕ್ಕಸರದೊಳು ಕೋಟಿಭೇರಿಗ
ಳೊಕ್ಕಲಿಕ್ಕಿತು ಮೊರೆವ ಮುರಜದ
ತೆಕ್ಕೆಯೊಳು ಚಂಬಕನ ಡೌಡೆಯ ರಾಯಗಿಡಿಬಿಡಿಯ ।
ಮುಕ್ಕುಳಿಸಿ ಮೇಲಣ ಜಗಂಗಳ
ಹಿಕ್ಕಿ ಹೊಕ್ಕುದು ತಳವನಾದಶ
ದಿಕ್ಕು ಬಿರಿಯಲು ಮೊಳಗಿದುವು ಬಹುವಾದ್ಯನಿರ್ಘೋಷ ॥

ಹಣೆಯದನಿತುಂಬಿಡುವ ಕೊಂಬಿನ
ದನಿಯ ಕಹಳಾರವದ ಮೊಱೆವಾ
ನಕದ ಚೀರ್ಣಧ್ವನಿಯ ಮೌನಿಯ ನಾಗವಾಸರದ ।
ನೆರವಿ ಶಬ್ದಬ್ರಹ್ಮ ವಿಾಱಿ
ತ್ತರರೆ ಮೇಲಣ ಸತ್ಯಲೋಕವ
ಹಿರಿದು ಬಣ್ಣಿಸಲಱಿಯೆ ದಿಕ್ಕರಿ ಕೊಡಹಿದುವು ಕಿವಿಯ ॥

ಈ ಪದ್ಯಗಳು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತವೆ.

ಮೇಲುಗುಡಿಗಳ ಭದ್ರದುಪ್ಪರ
ಸಾಲೆಗಳ ಮಂಡವಿಗೆಗಳ ಬ
ಲ್ಲಾಳದಡ್ಡಿಯ ಚಂಪೆಯದ ಗೂಡಾರದೋವರಿಯ ।
ಸಾಲಕಳಸದ ಪಟ್ಟವಸ್ತ್ರದ
ಮೇಲುಕಟ್ಟಿನ ರಚನೆಯೊಳು ರಾ
ಜಾಲಯಂಗಳ ರಚಿಸಿದರು ಕುಂತೀಕುಮಾರರಿಗೆ ॥ ೪೫

ಅರಮನೆಯ ಬಲದೊಳು ಮುರಾಂತಕ
ನರಮನೆಯುದಟ ಕೆಲದೊಳರ್ಜುನ
ನಿರವು ಹಿಂದಣ ಭಾಗದೊಳು ನಕುಲಂಗೆ ಬೀಡಾರ ।
ಅರಿಭಯಂಕರಭೀಮಸೇನನ
ನಿರುಪಮಾಲಯವೆಡದದೆಸೆಯೊಳು
ಸರಿಸದೊಳು ಸೂತ್ರಿಸಿತು ಸಹದೇವಂಗೆ ನೃಪಭವನ ॥ ೪೬

*

ವೀರಪಾಂಡವರವರವರಸುಕು
ಮಾರವರ್ಗದ ಮಂಡವಿಗೆಗೂ
ಡಾರಗಳನೊಳಹೊಯ್ದು ಬಿಗಿದರು ತೆಱೆಯ ದಡ್ಡಿಗಳ ।
ವಾರಣದ ಶಾಲೆಯದು ಸುತ್ತಲು
ಭಾರಿಸಿತು ಪಾಂಚಾಲಮತ್ಸ್ಯರ
ಭೂರಿಬಲ ಬಿಟ್ಟುದು ಮಹೀಶರ ಗುಡಿಯ ಬಳಸಿನೊಳು ॥ ೪೭

---

ರಾಜಭವನದ ಮುಂದೆ ಬಲದೊಳು
ಮೂಜಗಕ್ಕಧಿದೈವವಗ್ಗದ
ರಾಜಸೂಯಕ್ರತುವ ಮಾಯ್ದ ಅನಿಳಯವನು ರಚಿಸಿ ।
ರಾಜರಾಜನ ಪುರಕೆ ಸರಿಮಿಗಿ
ಲೀಜಗಕ್ಕೆನೆ ದ್ರುಪದಸುತೆಯ ಸ
ಮಾಜರಿಗೆ ನಿಜಭವನವಾದುವು ನೃಪತಿ ಕೇಳೆಂದ ॥

ಈ ಪದ್ಯವು ಕ. ಪುಸ್ತಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ.

ಎರಡುಬಾಗಿಲ ಸೂತ್ರದೊಳು ವಿ
ಸ್ತರಿಸಿದಂಗಡಿ ಸೋಮವೀಧಿಯು
ತರಣಿವೀಧಿಯನವರವರ ಪಾಳೆಯಕೆ ಮುರಿವುಗಳ ।
ಸುರರು ಸೃಷ್ಟಿಸಬಾರದಿನ್ನು ಱು
ದರಿಗೆ ಗೋಚರವಹುದೆ ಕೌಂತೇ
ಯರ ಸಮಗ್ರದ ಬೀಡು ಕುರುಭೂಮಿಯೊಳು ರಂಜಿಸಿತು॥ ೪೮

ಕೇಳು ಜನಮೇಜಯಧರಿತ್ರೀ
ಪಾಲ ಬೀಡಿನ ರಕ್ಷೆ ಬಲಿದುದು
ಪಾಳೆಯದ ಬಲುಹೊದಕೆ ಹೊಱವಳಯದೊಳು ಕಲುಕೋಟೆ ।
ಮೇಲೆ ಪಡಿಯಗಳಾಶ್ರಯಕೆ ಮುಳು
ವೇಲಿ ದೀಹದ ಸಿಂಹ ಶರಭ
ವ್ಯಾಳ ಶಾರ್ದೂಲಾವಳಿಯು ಸುಯ್ಧಾನವೊಪ್ಪಿದುದು ॥ ೪೯

ಬಲದ ಮುಂಗಡಿ ಭೀಮನದು ಪಿಂ
ತಿಳೆಯೊಳಾತನ ಕಾಹು ಬೀಡಿನ
ವಳಯದಾರೈಕೆಗಳು ಸಾತ್ಯಕಿ ನಕುಲ ಪಾರ್ಥರಿಗೆ ।
ಬಲಮಹಾಂಬುಧಿಯೊಳಗಿರುಳು ಮೇ
ಲ್ಮಳವರನು ಹೈಡಿಂಬಿ ಪಾಂಡವೆ
ರುಱುವು ಗದುಗಿನ ವೀರನಾರಾಯಣನ ಸುಯ್ಧಾನ ॥ ೫೦

ಹನ್ನೆರಡನೆಯ ಸಂಧಿ ಮುಗಿದುದು.

---

ಶ್ರೀಮದಚಿಂತ್ಯಮಹಿಮಗದುಗುವೀರನಾರಾಯಣಚರಣಾರವಿಂದನಿರಂತರಧ್ಯಾನ
ಮಧುಪಾನಪುಷ್ಟವಚಷಟ್ಪದನಿಕಾಯಮಪ್ಪ ಶ್ರೀಮತ್ಕುಮಾರವ್ಯಾಸ
ಯೋಗೀಂದ್ರವಿರಚಿತಮಪ್ಪಕರ್ಣಾಟಕಭಾರತಕಥಾಮಂಜರಿಯೊಳ್
ಉದ್ಯೋಗಪರ್ವಂ ಸಮಾಪ್ತಂ ಮಂಗಳಂ

---

**University of Mysore**

Oriental Library Publications

KANNADA SERIES No. 20.

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

ಏಳನೆಯ ಸಂಪುಟ

# ಭೀಷ್ಮಪರ್ವ

THE

# KARNATAKA MAHABHARATA

BY

KUMARA VYASA

Vol. VII.

EDITED BY

D. SRINIVASACHAR, M.A.,
*Professor of Sanskrit, Maharaja's College, and Curator, Government Oriental Library, Mysore*

AND

D. L. NARASIMHACHAR, M.A.,
*Government Oriental Library, Mysore*

MYSORE
PRINTED AT THE GOVERNMENT BRANCH PRESS
1933

# ಮುನ್ನುಡಿ.

---

ಮೈಸೂರು ಪ್ರಾಚ್ಯಕೋಶಾಗಾರದವರು ಕರ್ಣಾಟಕ ಮಹಾಭಾರತವನ್ನು ಈಗ ದೊರೆಯಬಹುದಾದ ಹಸ್ತಲಿಖಿತ ಪ್ರತಿಗಳ ಸಹಾಯದಿಂದ ಶೋಧಿಸಿ ಅಚ್ಚುಹಾಕಿಸಬೇಕೆಂದು ಯೋಚಿಸಿ, ಇದುವರೆಗೆ ಮೊದಲಿನ ಐದು ಪರ್ವಗಳನ್ನು ಬೇರೆಬೇರೆ ಕಾಲದಲ್ಲಿ ಅಚ್ಚುಹಾಕಿಸಿ ಪ್ರಕಟಿಸಿರುವುದು ಸರಿಯಷ್ಟೆ. ಈಗ ಮುಂದಿನ ಐದು ಪರ್ವಗಳನ್ನು ಮುದ್ರಣಕ್ಕೆ ಸಿದ್ಧಪಡಿಸಬೇಕೆಂಬ ಅಭಿಪ್ರಾಯದಿಂದ ಪ್ರಾಚ್ಯಕೋಶಾಗಾರದ ಕಾರ್ಯನಿರ್ವಾಹಕ ಸಮಿತಿಯವರು ಈ ಕೆಳಗೆ ಕಾಣುವ ಸದಸ್ಯರನ್ನುಳ್ಳ ಸಂಪಾದಕ ಮಂಡಲಿಯನ್ನು ಏರ್ಪಡಿಸಿದ್ದಾರೆ. ಅವರಿಂದ ಈ ಭೀಷ್ಮಪರ್ವವು ಶೋಧಿತವಾಗಿ ಮುದ್ರಿತವಾಗಿದೆ :—

ಸಂಪಾದಕ ಮಂಡಲಿಯ ಸದಸ್ಯರು—

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.
,, ಟಿ. ಎಸ್. ವೆಂಕಣ್ಣಯ್ಯ, ಎಂ.ಎ.
,, ಡಿ. ಶ್ರೀನಿವಾಸಾಚಾರ್ಯ, ಎಂ.ಎ.
,, ಟಿ. ಎನ್. ಶ್ರೀಕಂಠಯ್ಯ, ಎಂ.ಎ.

ಈ ಪರ್ವವನ್ನು ಎಂಟು ಕೈಬರಹದ ಪ್ರತಿಗಳ ಆಧಾರದಿಂದ ತಿದ್ದಿದೆ. ಇವುಗಳಲ್ಲಿ ಚ.ತ.ಪ. ಪ್ರತಿಗಳನ್ನು ಬಿಟ್ಟು ಉಳಿದುವು ಕೋಶಾಗಾರದಲ್ಲಿರತಕ್ಕುವು. (ಚ.) ಎಂಬುದು ಅಳಿಲುಘಟ್ಟದ ಶಾನುಭೋಗರು ದಯವಿಟ್ಟು ಕೊಟ್ಟ ಪ್ರತಿ. (ತ.) ಎಂಬುದು ಶಾಸನದ ಇಲಾಖೆಯ ಅಸಿಸ್ಟೆಂಟರಾದ ಶ್ರೀಮಾನ್ ಆರ್. ರಾಮರಾಯರು, ಬಿ.ಎ., ಅವರ ಮೂಲಕ ಗೌಜುಗ್ರಾಮದ ಬ್ರಹ್ಮ. ಶ್ರೀ. ಗಣೇಶಭಟ್ಟರಿಂದ ಬಂದ ಪ್ರತಿ ; ಸಾಮಾನ್ಯವಾಗಿ ಶುದ್ಧವಾಗಿದೆ. (ಪ.) ಎಂಬುದು ಮದ್ರಾಸ್ ಪ್ರಾಚ್ಯ ಕೋಶಾಲಯದ 16–18–10ನೆಯ ನಂಬರಿನ ಪ್ರತಿ. ಇದು ಪ್ರಾಚೀನ ಪ್ರತಿಯಂತೆ ತೋರುತ್ತದೆ.

ಕೋಶಾಗಾರದ ಪ್ರತಿಗಳಲ್ಲಿ—

ಕ. ಇದು ಕೈಬರಹದ 205ನೆಯ ನಂಬರಿನ ಪ್ರತಿ. ಕ್ರಿ. ಶ. ೧೫೫೪ ರಲ್ಲಿ ಪ್ರತಿಮಾಡಲ್ಪಟ್ಟುದು. ಇದುವರೆಗೆ ನಮಗೆ ದೊರೆತಿರುವ ಕನ್ನಡ ಮಹಾಭಾರತದ ಕೈಬರಹದ ಪ್ರತಿಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದುದೆಂದು ಹೇಳಬಹುದು. ಇದರಲ್ಲಿರುವ ಪಾಠವು ಶುದ್ಧವಾಗಿರುವುದರಿಂದ ಸಾಮಾನ್ಯವಾಗಿ ಇದನ್ನೇ ಮೂಲಪಾಠವನ್ನಾಗಿ ಅಂಗೀಕರಿಸಿದೆ.

ಗ. ಇದು ಕೆ. ೨೦ನೆಯ ನಂಬರಿನ ಪ್ರತಿ. ಶಾ.ಶ. ೧೭೬೩ ರಲ್ಲಿ ಪ್ರತಿಯಾದುದು.

ಜ. ಇದು ಕೆ. ೩೨೫ನೆಯ ನಂಬರಿನ ಪ್ರಾಚೀನ ಪ್ರತಿ. ಇದರಲ್ಲಿ ಱಕಾರವು ಕ್ರಮವಾಗಿ ಉಪಯೋಗಿಸಲ್ಪಟ್ಟಿದೆ.

ಟ. ಇದು ಕೆ. ೭೫೧ನೆಯ ನಂಬರಿನ ಪ್ರತಿ.

ದ. ಇದು ಕೆ. ೧೬೩ನೆಯ ನಂಬರಿನ ಪ್ರತಿ. ಪಾಠವು ಶುದ್ಧವಾಗಿದೆ.

ಈ ಪರ್ವವನ್ನು ಶೋಧನೆ ಮಾಡುವುದರಲ್ಲಿ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪಾಠವನ್ನೇ ಮೂಲಪಾಠವನ್ನಾಗಿಟ್ಟುಕೊಂಡು, ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪಾಠಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿಯೂ, ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿ ಪರಿಶಿಷ್ಟವಾಗಿಯೂ ಕೊಟ್ಟಿದೆ.

ಕವಿಯ ಮತ್ತು ಯುದ್ಧಪಂಚಕದ ವಿಷಯವಾಗಿ ಉಪೋದ್ಘಾತವೊಂದನ್ನು ಯುದ್ಧಪಂಚಕದ ಕೊನೆಯ ಸಂಪುಟದಲ್ಲಿ ಬರೆಯಬೇಕೆಂದು ಸಂಪಾದಕ ಮಂಡಲಿಯವರು ಉದ್ದೇಶಿಸಿರುತ್ತಾರೆ.

ಪಾಠವನ್ನು ಶೋಧಿಸುವುದಕ್ಕೆ ಪ್ರತಿಗಳನ್ನು ದಯವಿಟ್ಟು ಕೊಟ್ಟ ಮಹನೀಯರಿಗೂ, ಅಚ್ಚಿಗೆ ಪ್ರತಿಯನ್ನು ಸಿದ್ಧಪಡಿಸುವುದಕ್ಕೆ ಸಹಾಯ ಮಾಡಿದ ಪ್ರಾಚ್ಯಕೋಶಾಗಾರದ ಶ್ರೀಮಾನ್ ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್, ಎಂ.ಎ., ಅವರಿಗೂ, ಪ್ರೂಫುಗಳನ್ನು ಶೋಧಿಸುವುದಕ್ಕೆ ಸಹಾಯ ಮಾಡಿದ ಪ್ರಾಚ್ಯಕೋಶಾಗಾರದ ಶ್ರೀಮಾನ್ ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ., ಅವರಿಗೂ ಸಂಪಾದಕ ಮಂಡಲಿಯವರು ಋಣಿಯಾಗಿದ್ದಾರೆ.

---

# ವಿಷಯಾನುಕ್ರಮಣಿಕೆ.

# ತಿದ್ದುಪಡಿ.

| ಪುಟ. | ಪಂಗ್ತಿ. | ಅಶುದ್ಧ. | ಶುದ್ಧ. |
|---|---|---|---|
| ೨೩ | ೯ | ನನಗುತ | ನಸುನಗುತ |
| ೩೫ | ೯ | ಯೆಂದ | ಎಂದ |
| ೬೩ | ೧೦ | ಕೀಳ್ಕಂಬ್ಬಿ | ಕೀಳ್ಕಬ್ಬಿ |
| | | | [ಕೀಳ್ಕಂಬಿ (ಪಾಠಾಂತರ) ಕ.] |
| ೮೭ | ೧ | ಆರನೆಯ | ಆಱನೆಯ |

# ಕನ್ನಡ ಮಹಾಭಾರತ

## ಭೀಷ್ಮ ಪರ್ವ

### ಮೊದಲನೆಯ ಸಂಧಿ

ಸೂಚನೆ॥ ವೈರಿ ಭಟಕುಲ ವಿಲಯ ರುದ್ರನು
ದಾರತೇಜೋಭದ್ರನಾ ಭಾ
ಗೀ [1]ರಥೀಸುತ[1] ಧರಿಸಿದನು ಕುರುಸೇನೆ [2]ಯೊ[2] ಡೆತನವ ॥

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವರಾಯನಲ್ಲಿಗೆ
ಕಾಳೆಗದ ಕಾತರಿಗರಿವರಟ್ಟಿದರು [3]ಭಟ್ಟರನು[3] ।
ಕೇಳಿದನು ಕುರುಭೂಮಿಯಲಿ ರಿಪು
ಜಾಲದುದಯವನಂದು ಕುರುಕುಲ
ಮೌಳಿ [4]ಕರೆಸಿದನಾಪ್ತರನು ಪರಿಮಿತಕೆ ಮಂತ್ರಿಗಳ[4] ॥ ೧

ರವಿಜಗುರುಸುತಶಲ್ಯಕಲಶೋ
ದ್ಭವರು ಸೌಬಲರಾದಿಯಾದವ
ರವನಿಪಾಲನ ಕಂಡರಂದೇಕಾಂತಭವನದಲಿ ।
ಅವನಿಪತಿ ಹದನೇನು ರಿಪುಪಾಂ
ಡವರ ಬೀಡಿನ ಗುಪ್ತದನುಮಾ
ನವನು ಚಿತ್ತಯಿಸಿದಿರೆ ಬೆಸಸುವುದೆನಲು ನೃಪ ನುಡಿದ ॥ ೨

---

[1] ರಥಿಯ ಮಗ (ತ.)  [2] ಗೊ (ಕ.ಪ.)  [3] ದೂತರನು (ಜ.)
[4] ಬರಸಿದನಾಪ್ತರನು⋯⋯(ಗ.), ಆಳೋಚನಕೆ ಕರೆಸಿದನಾಪ್ತಮಂತ್ರಿಗಳ (ಚ.), ಕರೆಸಿದನಾಪ್ತರನು ಪರಿಮಿತದ ಮಂತ್ರಿಗಳ (ಟ.), ಕರೆಸಿದಪರಿಮಿತಕೆ ತನ್ನಾಪ್ತ ಮಂತ್ರಿಗಳ (ತ.)

ಸಂದಣಿಸಿ ಕುರುಭೂಮಿಯಲಿ ತಾ
ವಂದಿ ಬಿಟ್ಟುದು ನಾಡ ಗಾವಳಿ
ಬಂದುದಲ್ಲಿಗೆ ಕಳುಹಿದರು ದೂತರನು ದುರ್ಜನರು ।
ನಂದಗೋಪನ ಮಗನ ಕೊಂಡೆಯ
ದಿಂದ ಕಲಿಯೇಱಿದರು ಕೃಪಣರ
ಕೊಂದಡಹುದಪಕೀರ್ತಿಯಿದಕಿನ್ನೇನು ಹದನೆಂದ ॥ ೩

ಭೂರಿ ನೆರೆದುದು ನಾಡ ಗಾವಳಿ
ಭಾರ ಧೃಷ್ಟದ್ಯುಮ್ನನದು ಗಡ
ಚಾರದೇವನ ಜೋಕೆ ಮಂದಿಯ ಕಾಹು ಕಟ್ಟು ಗಡ ।
ಧಾರುಣಿಯ ಲಂಪಟರು [1]ಕದನವ[1]
ಹಾರಿ ಬಂದರು ಗಡ ಕೃತಾಂತನ
ಭೂರಿ ಭೂತದ ಧಾತುವಾಯಿತು ಲೇಸು ಲೇಸೆಂದ ॥ ೪

ನಾಡ ಮನ್ನೆಯ ಗಿನ್ನೆಯರುಗಳ
ಕೂಡಿಕೊಂಡೆಮ್ಮೊಡನೆ [2]ಕಲಹವ[2]
[3]ಬೇಡಿ[3] ಮಹಿಪಾಲನೆಯ ಪಟ್ಟಕೆ ನೊಸಲನೊಡ್ಡುವರು ।
ನೋಡಿರೈ ನಿರುಪಮವಲಾ [4]ಕಾ
ಡಾಡಿ[4]ಗಳ ಕಲಿತನವನೆನೆ ಮಾ
ತಾಡಿದನು ಕಲಿಕರ್ಣನಾತನ ಮನದ ಮೈಸಿರಿಯ ॥ ೫

ನೆರೆದ ದೊದ್ದೆಯನೊರಸಬಹುದೇ
ನರಿದು ಜೀಯ ವಿರೋಧಿರಾಯರ
ನೆರವಿ ತಾನೇಗುವುದು ಗಹನವೆ ನಿನ್ನ ವೀರರಿಗೆ ।
ಕರಿಗಳಿಗೆ ಪ್ರತ್ಯೇಕವಿವೆ ಕೇ
ಸರಿಗಳೆಮ್ಮನು ಕಳುಹು ನಿಮ್ಮಡಿ
ಪರಿಮಿತಕೆ ಬರಲಾವ ಭಾರವಿದೆಂದನಾ ಕರ್ಣ ॥ ೬

---

[1] ಕಲಹವ (ತ.) [2] ಕದನವ (ಗ.ತ.) [3] ಮಾಡಿ (ಗ.ಜ.ಟ.ತ.)
[4] ನಾಡಾಡಿ (ಜ.ಚ.)

ಕಲಕುವೆನು ಪಾಂಡವರ ಸೇನಾ
ಜಲಧಿಯನು ತೇರಿನಲಿ ತಲೆಗಳ
ಕಳುಹುವೆನು ಕದನದಲಿ ಕೈದೋಱಿದ ಕುಠಾರಕರ ।
ಹೊಳಲ ಹೊಱಶೂಲದಲಿ ರಿಪುಗಳ
ಸೆಳಸುವೆನು ತಾ ವೀಳೆಯವನೆಂ
ದಲಘುಭುಜಬಲ ಕರ್ಣ ನುಡಿದನು ಕೌರವೇಂದ್ರಂಗೆ ॥ ೭

ಕುಲಿಶ ಪರಿಯಂತೇಕೆ ನೇಗಿಲ
ಬಳಿಯ ಹುಲುಪೆಟ್ಟಿಕೆ ವಿರೋಧಿಗ
ಳಳಿಬಲಕೆ ಕಲಿಕರ್ಣ ನೀ ಪರಿಯಂತ ಸಂಗರವೆ ।
ಹೊಳಲ ಪರಿವಾರಕ್ಕೆ ಸಾಱಿಸು
ಕೆಲಬಲದ ರಾಯರಿಗೆ ದೂತರ
ಕಳುಹಿ ನೆರಹಿಸು ಕಾದಿಸೆಂದನು ಕೌರವರ ರಾಯ ॥ ೮

ಮೂಗಿನಲಿ ಬೆರಳಿಟ್ಟು ಮುಕುಟವ
ತೂಗಿದನು ಚತುರಂಗಬಲವನು
ಬೇಗದಲಿ [1]ಕೊಳುಗುಳಕೆ[1] ಕಳುಹಿಸು ಗೆಲಿಸು ಕಾಳೆಗವ ।
ತಾಗಿ ಬಾಗದ ಮುರುಳುತನದು
ದ್ಯೋಗವಿದಕೇನೆಂಬೆನಕಟಕ
ಟೀಗ[2]ಲದ್ದು[2]ದು ಕೌರವಾನ್ವಯವೆಂದನಾದ್ರೋಣ ॥ ೯

ಹಿಂದೆ [6]ಗಳಹು[3]ವನಿವನು ಬಾ[4]ಯಿಗೆ[4]
ಬಂದಪರಿಯಲಿ ಪಾಂಡುತನಯರ
ಕೊಂದನಾಗಳೆ ಕರ್ಣನಿನ್ನಾರೊಡನೆ ಸಂಗ್ರಾಮ ॥
ಹಿಂದೆ [5]ಹಮ್ಮಿದ[5] ಸಮರದೊಳು ನಡೆ
ತಂದು ಖೇಚರನ[6]ಡಸಿ ಕ[6]ಟ್ಟಿದ
ಡಂದು ನಿನ್ನನು ಬಿಡಿಸಿದವನರ್ಜುನನೊ ರವಿಸುತನೊ ॥ ೧೦

---

[1] ದಂಡಿಂಗೆ (ಕ.), ದಂಡಿಗೆಯ (ತ.ಪ.) [2] ಅಳಿದು (ಟ), ಳಿದ್ದು (ಕ.)
[3] ಬಗಳು (ಕ.) [4] ಯಲಿ (ಪ.) [5] ಹಮ್ಮಿನ (ಪ.) [6] ಡ್ಡಗ (ಕ ತ)

ಸಾಹಸಿಗಳಲ್ಲಿಲ್ಲ ಹರಿ ತುಱು
ಗಾಹಿ ಪಾಂಡವರ್ದೈವರಡವಿಯ
ಮೇಹುಗಾಱರು ಬಂದ ಭೂಭುಜರೆಲ್ಲ ತಾ ನೆರವಿ |
ಆಹವಕೆ ನಿನ್ನೂರ ತಳವಱಿ
ಗಾಹಿನವರನು ಕಳುಹುವುದು ಸಂ
ದೇಹವೇ ನೀನಿಲ್ಲಿ ಸುಖದಲಿ ರಾಜ್ಯ[1]ಮಾಡೆಂದ[1] ‖ ೧೧

ಎಲೆ ಸುಯೋಧನ ಕಾಳುಗೆಡೆದರೆ
ಫಲವನಿದಱಲಿ ಕಾಣೆನಹಿತರ
ಬಲದ ಭಾರಣೆ [2]ಬಿಗುಹು[2] ಭೀಮಾರ್ಜುನರು ಬಲ್ಲಿದರು |
ನಳಿನನಾಭನ ಮಂತ್ರಶಕ್ತಿಯ
ಬಲುಹು ನೀವ್‍ನಿರ್ದೈವರವರ
ಗ್ಗಳ ಸದ್ದೈವರು ಕೆಟ್ಟಿರಿನ್ನೇನೆಂದನಾದ್ರೋಣ ‖ ೧೨

*ಅಸುರರಿಪುವಿನ ಮಾತ ನೀ ಮ
ನ್ನಿಸದೆ ಕೌರವಕುಲವನದ್ದಿದೆ
ನುಸಿಗಳಿವದಿರು [3]ಮುನಿದು ಪಾರ್ಥನನೇನ ಮಾಡುವರು[3] |
ಅಸುರರಲಿ ಸುರರಲಿ ಭುಜಂಗ
ಪ್ರಸರದಲಿ ಭೀಮಾರ್ಜುನರ ಸೈ
ರಿಸುವರುಂಟೇ ಕೆಟ್ಟಿರಿನ್ನೇನೆಂದನಾದ್ರೋಣ *‖ ೧೩

ಅವರಿಗಸುರಾಂತಕ ಸಹಾಯನು
ನಿವಗೆ ಗಂಗಾಸುತನ ಬಲವಾ
ಹವವನೀತನ ನೇಮದಲಿ ನೆಗಳುವುದು [4]ನೀತಿಯಿದು[4] |
ಅವರಿವರ ಮಾತಿನಲಿ ಫಲವಿ
ಲ್ಲವನಿಪತಿ ಕೇಳೆನಲು ಕಲಶೋ
ದ್ಭವನ [5]ಮತದಲಿ ಬಳಿಕ[5] ಮಣಿದನು ಕೌರವರ ರಾಯ ‖ ೧೪

---

[1] ವಾಳೆಂದ (ಟ.ಪ.) [2] ಮಿಗಿಲು (ಕ.ಗ.ಜ.ಟ ಪ.) * (ಕ.) ಪ್ರತಿಯಲ್ಲಿ ಮಾತ್ರ ಇಲ್ಲ. [3] ಮುಳಿದು ಮಾಡುವುದೇನು ಪಾರ್ಥನನು (ಚ.) [4] ನೇಮವಿದ್ದು (ಕ.ಚ.ಪ.) [5] ಮಾತಿಗೆ ಕೊರಳ (ಚ.)

ಮತವಹುದು ತಪ್ಪಲ್ಲ ಗಂಗಾ
ಸುತನ ತಿಳುಹುವ ವೀರಪಟ್ಟವ
ನತುಳಬಲಭೀಷ್ಮಂಗೆ ಕಟ್ಟುವೆನೆನುತ ಕುರುರಾಯ ।
ಮತದ ನಿಶ್ಚಯದಿಂದ ಗುರು ಗುರು
ಸುತನ ಕಳುಹಿದನಿತ್ತಲಬುಜ
ಪ್ರತತಿಯುತ್ಸ[1]ಹ[1] ವಡಗೆ ಪಡುವಣ ಕಡಲೊಳಿನನಿಳಿದಾ ॥ ೧೫

ವಿನುತ ಸಂಧ್ಯಾದೇವಿಗಭಿವಂ
ದನ ಜಪಾದಿಸಮಸ್ತದೇವಾ
ರ್ಚನೆಯ ಮಾಡಿಯೆ ರವಿತನೂಜನ ಕರಸಿ ಪಂತಿಯಲಿ ।
ಜನಪನಾರೋಗಿಸಿದನಾಪ್ತಾ
ವನಿಪ ಸಚಿವರು ಸಹಿತ ಭೀಷ್ಮನ
ಮನೆಗೆ ಬಂದನು ಕೌರವೇಶ್ವರನಂದಿನಿರುಳಿನಲಿ ॥ ೧೬

ಮುಂದೆ [2]ಹರಿದರು[2] ಕೈಯ ಕಂಬಿಯ
ಸಂದಣಿಯ [3]ಪಡೆವಳರು[3] ಗಂಗಾ
ನಂದನಂಗೀಹದನನರುಹಲು ಬಂದನಿದಿರಾಗಿ ।
ಕಂದುಮೋಱೆಯ ರಾಯನನು ತೆಗೆ
ದಂದಣದೊಳಾಲಿಂಗಿಸುತ ನಲ
ವಿಂದ ಮನ್ನಿಸಿ ತಂದನರಮನೆಗುಚಿತವಚನದಲಿ ॥ ೧೭

ಏನಿರುಳು ನೀ ಬಂದ ಹದನೇಲೆ
ಮಾನನಿಧಿ ಬೇಕಾದರೆಮ್ಮನು
ನೀನು ಕರೆಸುವುದಱುಪುವುದು ನಿಜಕಾರ್ಯಸಂಗತಿಯ ।
ಏನ ಹೇಳುವೆ ನಗೆಯುನನುಸಂ
ಧಾನದಲಿ ಪಾಂಡವರು ಕುರುಭೂ
ಮಿನಿವಾಸಕೆ ಬಂದು ಬಿಟ್ಟರು ಕಿಱಿದು ದಳಸಹಿತ ॥ ೧೮

---

[1] ವ (ಟ.ಪ.) [2] ಹರಿದುದು (ಜ.) [3] ಪಡಿಯಱರು (ಜ.)

ಹರಿಯು ಹಿಸುಣಿಕೆಯವರ ಚಿತ್ತವ
ಬೆರಸಿ ವೈರವ [1]ಬೆಳಸಿ[1] ಬಂದರು
ಧರೆಯ [2]ಭಾಗವ ಬೇಡಿ ಕದನವ ನೆನೆದರೆಮ್ಮೊಡನೆ[2] ।
ಹರನ ಸಮದಂಡಿಗಳು ನೀವೆಮ
ಗಿರಲು ಜಯಿಸುವ ವೀರನಾವನು
ಮರುಳುತನವನು ಧರ್ಮಪುತ್ರನೊಳಱಿಯಲಾಯ್ತೆಂದ ॥ ೧೯

ಬಂದರೇ ಪಾಂಡವರು ಸುದ್ದಿಯ
ತಂದರೇ ನಿನ್ನವರು ನಿನಗೇ
ನೆಂದು ಭಾಷೆಯ [3]ಕೊಟ್ಟರೀ[3]ಕರ್ಣಾದಿನಾಯಕರು ।
ಇಂದುಸಂತತಿಗುಱುವರಲ್ಲಾ
ಬಂದರೇನಪರಾಧವೇ ಇ
ನ್ನೆಂದು ಪರಿಯಂತವರು ನವೆವರು ಎಂದನಾಭೀಷ್ಮ ॥ ೨೦

ಜಗದ ಗುರುವಲ್ಲಾ ಮುರಾಂತಕ
ನಗಣಿತೋಪಮಮಹಿಮನಲ್ಲಾ
ಸಗುಣನಿರ್ಗುಣನಾ ಮಹಾತ್ಮನನಂತರೂಪನನು ।
ವಿಗಡಿಸಲು ಜಯವಹುದೆ ಜಾಣರ
ಬಗೆಗೆ ಬಹುದೇ ನಿನ್ನ ಮತವೆಲೆ
ಮಗನೆ ಮರುಳಾದ್ಯೆ ಮದಾಂಧರ ಮಾತುಗಳ ಕೇಳಿ ॥ ೨೧

ಮಿಕ್ಕ ಮಾತೇಕಿನ್ನು ನೀ ಹಿಂ
ದಿಕ್ಕಿ ಕೊಂಬರೆ ಕೊಲುವನಾವನು
ಮಕ್ಕಳಾವೆನಬೇಡ ಬಲ್ಲೆವು ನಿನ್ನ ವಿಕ್ರಮವ ।
ಹೊಕ್ಕು ಹಗೆಗಳ ಹೊಯ್ದು ದಿಗುಬಲಿ
ಯಿಕ್ಕಿ ನನ್ನಯ ಹರುಷಜಲಧಿಯ
ನುಕ್ಕಿಸಲು ಬೇಕೆನಲು ಕೇಳಿದು ಭೀಷ್ಮನಿಂತೆಂದ ॥ ೨೨

---

[1] ಬಳಸಿ (ಕ.) [2] ಬಯಲಾಸೆಯಲಿ ಹೆಸುಗೆಯ ಹಾರಿ ನಮ್ಮೊಡನೆ (ಜ.)
[3] ನಿತ್ತರೈ (ಜ.ಪ.)

ದೈವಬಲವವರಲ್ಲಿ ನೀವೇ
ದೈವಹೀನರು ಧರ್ಮಪರರವ
ರೈವ[1]ರೂ[1] ಸತ್ಪುರುಷಶೀಲರು ನೀವಧಾರ್ಮಿಕರು ।
ಮುಯ್ಯನಾನುವುದವರ್ಗೆ ಭುವನವು
ಬೈವುದೈ ನಿಮ್ಮನಿಬರನು ನಿಮ
ಗೈವಡಿಯು ಸಹಸಿಗಳವರು ದುರ್ಬಲರು ನೀವೆಂದ ॥ ೨೩

ದಯುವನತ್ತಲು ತಿದ್ದಿ ನಮ್ಮನು
ಭಯುಮಹಾಬ್ಧಿಯೊಳದ್ದಿ [2]ಸಮರದ
ಜಯುವನವರಿಗೆ ಮಾಡಿ ನಮ್ಮಭಿಮತವ ನೀಗಾಡಿ[2] ।
ನಯವ ನೀ[3]ವೊ[ಡ್ದು]ವರೆ[3] ನಿಮ್ಮನು
ನಿಯುಮಿಸುವರಾರುಂಟು ಭಾಗ್ಯೋ
ದಯವಿಹೀನನು ತಾನೆನುತ ಕುರುರಾಯ ಬಿಸುಸುಯ್ದ ॥ ೨೪

ಉಚಿತವನು ನಾನಱಿಯೆ ಪಾರ್ಥಕ
ರಚಿತ ನಿಜವನು ನುಡಿಯೆ ನಿನಗವು
ರುಚಿಸವೇ ಮಾಣಲಿ ಯದಂತಿರಲೀ ಕುಮಂತ್ರಿಗಳ ।
ವಚನವತಿಗಾಢದಲಿ ನಟ್ಟುದು
ಸಚಿವನಯುವಿನ್ನೇಕೆ ಸೇನಾ
ನಿಚಯುಕೆಮ್ಮನು ಮೊದಲಿಗನ ಮಾಡರಸ ಹೋಗೆಂದ ॥ ೨೫

ಖಳನ ಕಳುಹಿದನತಿಬಳನು ತ
ನ್ನೊಳಗೆ ನೆನೆದನು ಪಾಂಡುನಂದನ
ರುಳಿವು ತನ್ನದು ಮಿಾಱ ಕಾದುವಡಸುರರಿಪುವಿಹನು ।
ಅಳುಕಿ ಕಾದುವಡಿತ್ತ ಹಾವಿನ
ಹಳವಿಗೆಯು ಕಡುಮೂರ್ಖನಿಗೆ ಬೆಂ
ಬಲವ ಕಾಣೆನು ತನಗೆ ಹದನೇನೆನುತ ಚಿಂತಿಸಿದ ॥ ೨೬

[1] ರೇ (ಕ.ಟ.ತ.) [2] ಯ್ಯೆವರ । ನಯುವಿದಗ್ಧರಮಾಡಿ ಯೆಮ್ಮಭಿಮತವ ಮುರುಳ್ಮಾಡಿ (ಜ.) [3] ಪಟ್ಟುವರೆ (ಗ.), ಯೊಟ್ಟುವರೆ (ಜ.)

ಆದಡೇನಿದಿರಾದ ರಿಪುಬಲ
ವಾದುದನು ಸಂಹರಿಸಿ ಮಕ್ಕಳ
ಕಾದು ಬಿಸುಡುವೆನೊಡಲನಾ ಸಂಗ್ರಾಮಭೂಮಿಯಲಿ ।
ಆದುದಾಗಲಿ ಬಳಿಕ ಮಾಡುವ
ಭೇದ ಬೇಱಿಲ್ಲೆನುತ ಹೃತ್ಸಂ
ವಾದವನು ಬೀಳ್ಕೊಟ್ಟು ಗಂಗಾಸೂನು ಪವಡಿಸಿದ ॥

ಮಗನೊಡನೆ ಮೂದಲಿಸಿ ಭೀಷ್ಮನು
ಹೊಗುವ ಗಡ ಪರಸೇನೆಯನು ಕಾ
ಳೆಗವ ನೋಡುವೆನೆಂಬವೊಲು ತಲೆದೋಱಿದನು ದಿನಪ ।
ನಗೆಯುಡುಗಿ ನಾಚಿದವು ಕುಮುದಾ
ಳಿಗಳು ಮುಂಗಾಣಿಕೆಯ ಹರುಷದೊ
ಳಗಿದು ವಿರಹವ ಬೀಳುಕೊಟ್ಟುವು ಜಕ್ಕವಕ್ಕಿಗಳು ॥

ಅರಸನುಪ್ಪವಡಿಸಿದನವನೀ
ಶ್ವರವಿಹಿತಸತ್ಕರ್ಮವನು ವಿ
ಸ್ತರಿಸಿದನು ಚಾವಡಿಗೆ ಬಂದನು ಹರುಷದುಬ್ಬಿನಲಿ ।
ಚರರನಟ್ಟಿದನಖಿಳಧರಣೀ
ಶ್ವರನಿಕಾಯಕೆ ಸಕಲ ಸುಭಟರ
ಬರಿಸಿದನು ತರಿಸಿದನು ಪಟ್ಟಕೆ ಬೇಹ ವಸ್ತುಗಳ ॥

ಗುರುತನುಜ ರವಿಸೂನು ಮಾದ್ರೇ
ಶ್ವರ ಕೃಪ ದ್ರೋಣಾದಿಗಳು ಬಂ
ದರಮನೆಯ ಹೊಕ್ಕರು ನದೀನಂದನನ ಬಳಿವಿಡಿದು ।
ನೆರೆದರವನೀನಿರ್ಜರರು ಕೇ
ಸರಿಯ ಪೀಠವ ರಚಿಸಿ ವೈದಿಕ
ಪರಿಣತರ ಮತದಿಂದ ವಿಸ್ತರಿಸಿದರು ಮಂಗಳವ ॥

ಕಮಲಜನ ಹೋಲುವೆಯ ಧಾರುಣಿ
ಯಮರಕರದಲಿ ನಿಗಮಪೂತೋ
ತ್ತಮಸುವಾರಿಗಳಿಳಿದ[1]ವಜಸನ್ನಿಭನ[1] ಮಸ್ತಕಕೆ ।

---

[1] ವಘಸಂಹರನ (ಕ.ತ.ಪ.)

ಕಮಲಜನ ಕರದಿಂದ ಗಂಗಾ
ವಿಮಲನದಿಯಿಳಿತಂದು ಸಾರ್ದುದೊ
ಹಿಮಗಿರಿಯನೆಂಬಂತಿರಿಳಿದುದು ಪಟ್ಟದಭಿಷೇಕ ॥ ೩೧

ಆರತಿಯನೆತ್ತಿದರು ತಂದು
ಪ್ಪಾರತಿಯ ಸೂಸಿದರು ನೃಪಪರಿ
ವಾರವೆಲ್ಲವು ಬಂದು ಕಂಡುದು ಕಾಣಿಕೆಯ ನೀಡಿ ।
ಕೌರವೇಂದ್ರನ [1]ಮೋಹರದ ಗುರು[1]
ಭಾರ ಭೀಷ್ಮಂಗಾಯ್ತು ಸಮರದ
ವೀರಪಟ್ಟವನಾಂತನಾಚಾರ್ಯಾದಿಗಳು ನಲಿಯೆ ॥ ೩೨

ಈ ನದೀನಂದನನ ಬಲದಲಿ
ಸೇನೆ ಶಿವಗಂಜುವುದೆ ಕುಂತೀ
ಸೂನುಗಳಿಗಾರಣ್ಯ[2]ಜಪವಿನ್ನವರಿಗಿಳೆಯೇಕೆ[2] ।
ಮಾನನಿಧಿ ಭೀಷ್ಮಂಗೆ ಸಮರಸ
ಮಾನಭಟನಿನ್ನಾವನೆಂದು ಮ
ನೋನುರಾಗದ ಮೇಲೆ ಕೌರವರಾಯ ಬಣ್ಣಿಸಿದ ॥ ೩೩

ಎಲೆ ಮರುಳೆ ಭೂಪಾಲ ಕೌರವ
ಕುಲಪಿತಾಮಹನಹನು ಧರ್ಮಂ
ಗಳಲಿ ಪರಿಣತನಹನು ಕಾಳೆಗ[3]ವೆತ್ತಲಿವರೆತ್ತ[3] ।
ಗಳದ ಗರಳನ ದೊರೆಯು ಭಟಮಂ
ಡಲಿಯೊಳಗೆ ಮನ್ನಣೆಯ ಹೇಳೈ
ಕಳಿದ ಹರೆಯಂಗೆಂದು ಗಹಗಹಿಸಿದನು ಕಲಿಕರ್ಣ ॥ ೩೪

ತೊಗಲು ಸಡಿಲಿದ ಗಲ್ಲ ಬತ್ತಿದ
ಹೆಗಲು ನಡುಕಿದ ನರೆತ ಮೀಸೆಯ
ಜಗುಳ್ದ ಹಲುಗಳ ಹಾಯಿದೆಲುಗಳ ನೆಗ್ಗಿದವಯವದ ।

---

[1] ಬಹಳ ಸೇನಾ (ಕ.ಗ.ಜ.) [2] ವಲ್ಲದೆ ಮತ್ತೆಯಿಳೆಯುಂಟೆ. (ಗ.), ಪದವಿನ್ನವರಿಗಿಳೆಯೇಕೆ (ಜ.), ಜನಪದವವರಿಗಿಳೆಯೇಕೆ (ಟ.) [3] ವೇಕೆಯಿವರೇಕೆ (ಗ.)

ಅಗಿಯಲಲುಗುವ ತಲೆಯ ಮುಪ್ಪಿನ
ಮುಗುದ [1]ನೀ[ತ]ನಕಾದಹೇಳಿದು[1]
ನಗೆಯ ಸುರಿದ್ಯೈ ರಾಯಕಟಕದೊಳೆಂದನಾಕರ್ಣ ॥ ೩೫

ಇಲ್ಲಿ ಭೀಷ್ಮನು ರಾಘವನ ಬಲ
ದಲ್ಲಿ ಜಾಂಬವನುಭಯವೀರರು
ಬಲ್ಲಿದರು ಬಳಿಕುಳಿದ ಸುಭಟರ ಶೌರ್ಯವೊಪ್ಪುವುದೆ ।
ನಿಲ್ಲು ನೀ ಕೊಲಲೆಳಸುವರೆ ಹಗೆ
ಯಲ್ಲಿಗೊಪ್ಪಿಸಿ ಕೊಲಿಸಲೇತಕೆ
ಬಿಲ್ಲಿನಲಿ ಬಡಿದಡ್ಡಗೆಡಹುವೆನೆಂದನಾ ಕರ್ಣ ॥ ೩೬

ಹಾ ನುಡಿಯದಿರು ನಿನ್ನ ಹವಣಿನ
ಮಾನಿಸನೆ ಸುರಸಿಂಧುಜನು ತಾ
[2]ನೀನು ಮಿಗೆ ಮೇಲಱಿಯೆ[2] ಜವ್ವನದುಬ್ಬುಗೊಬ್ಬಿನಲಿ ।
ನೀನು ಸರಿಯೇ ರಾಮಕಟಕದ
ಹಾನಿಯನು ತಲೆಗಾಯ್ದು ಜಾಂಬವ
ಗೇನು ಕೊಱತೆಯೆನುತ್ತ ಜಱೆದನು ಗರುಡಿಯಾಚಾರ್ಯ ॥ ೩೭

ರಣದೊಳೊಡ್ಡಿದರಾತಿಗಳ ನೀ
ಹಣೆಯ ಪಟ್ಟದ ವೀರ ಜಯಿಸಲು
[3]ಹಣವಿಗಾ[3]ನೋಲೈಸೆ ಮಾಡುವೆನಡವಿಯಲಿ ತಪವ ।
ರಣದೊಳಿವನಡಗೆಡೆದನಾದರೆ
ಮಣಿಯದಿಱಿದಪೆನೆನ್ನೆಬರ ಮಾ
ರ್ಗಣೆಯನಾಹವದೊಳಗೆ ಸಂಧಿಸೆನೆಂದನಾ ಕರ್ಣ ॥ ೩೮

ಗಳಹದಿರು ರಾಧೇಯ ನಿನ್ನಯ
ಕುಲವ ನೋಡದೆ ಮೇರೆದಪ್ಪುವ
ಸಲುಗೆಯಿದಲೇ ಸ್ವಾಮಿಸಂಪತ್ತಿನ ಸಗಾಢತನ ।

---

[1] ನಿವ ಸೇನಾಧಿಪನೆ ನೀ (ಕ.), ರಿತ್ತನಜಯದಹೊಗಳಿದು (ಗ.), ರನು ನೀಕಾದಹೇಳಿದು (ಟ.) [2] ನೀ ಪೇಲನಱಿಯೆಯಲಾ (ಕ.ಪ.), ನೀಪೇಲನಱಿಯದೆ (ಚ.) [3] ಮಣಿದಾತಾ (ಚ.)

ಕಲಿಗಳುಳಿದಂತೆನ್ನ ಸರಿಸಕೆ
ನಿಲುವನಾವನು ದೇವದಾನವ
ರೊಳಗೆ ನಿನ್ನೊಡನೊರಲಿ ಫಲವೇನೆಂದನಾಭೀಷ್ಮ ॥ ೩೯

ಕೇಳು ನೃಪ ಕೇಳೈ ಜಯದ್ರಥ
ಕೇಳು ಗುರುಸುತ ಶಲ್ಯ ಕುಂಭಜ
ಕೇಳು ದುಶ್ಶ್ಯಾಸನ ವಿಕರ್ಣ ಸುಲೋಚನಾದಿಗಳು ।
ಕಾಳೆಗದೊಳರಿದಶಸಹಸ್ರ ನೃ
ಪಾಲಕರ ಮಣಿಖಚಿತನಿರ್ಮಲ
ಮೌಳಿಗಳ ದಿಗುಬಲಿಯ ಕೊಡುವೆನು ದಿವಸದಿವಸದಲಿ ॥ ೪೦

ಹರಿಯು ಚಕ್ರವ ತುಡುಕಿಸುವೆ ವಾ
ನರಪತಾಕನ ರಥವ ಹಿಂದಕೆ
ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ ।
ಸುರನರೋರಗರೊಳಗೆ ವಿಖ್ಯಾ
ದರಿಗೆ ಕಟ್ಟಿದ ತೊಡರು ಇವನು
ಬ್ಬರಿಸಿ ನುಡಿದರೆ ನೊರಜ ಕೊಲುವರೆ ಕೈದುವೇಕೆಂದ ॥ ೪೧

ಜಲಧಿಯುಬ್ಬಿದವೋಲು ಸಭಾಮಂ
ಡಲಿಯ ಸೌಹೃದವಾಗ್ವಿವಾದದ
ಕಳಕಳಿಕೆ ದಿಗುತಟವ ಗಬ್ಬರಿಸಿದುದು ಗಾಢದಲಿ ।
ಕೆಲರು ಭೀಷ್ಮನನಿನತನೂಜನ
ಕೆಲರು ಕೊಂಡಾಡಿದರು ಕೌರವ
ನಳುಕಿ ಭೀಷ್ಮನ ಬೇಡಿಕೊಂಡನು ವಿನಯಪರನಾಗಿ ॥ ೪೨

ಬೀಳುಕೊಂಡುದು ರಜನಿ ಮರುದಿನ
ವಾಳುಕುದುರೆಯು ನೆರಹಿ ಧರಣೀ
ಪಾಲ ಸುಮುಹೂರ್ತದಲಿ ಹೊಯ್ಸಿದನಂದು ಹೊರಗುಡಿಯ ।
ಸೂಳವಿಸಿದವು [1]ಲಗ್ಗೆಯಲಿ[1] ನಿ
ಸ್ಸಾಳಕೋಟಿಗಳುರುಚತುರ್ಬಲ
ಮೇಳವಿಸಿ ನಡೆದುದು ಸಮಸ್ತಮಹಾಮಹೀಶ್ವರರು ॥ ೪೩

---

[1] ಸನ್ನೆಯಲಿ (ಚ.)

ವೀರಧೃತರಾಷ್ಟ್ರಂಗೆ ವರ ಗಾಂ
ಧಾರಿಗೆಱಗಿದನವರ ಹರಕೆಯ
ಭೂರಿಗಳ ಕೈಕೊಂಡನವನೀಸುತರಿಗಭಿನಮಿಸಿ ।
ಚಾರುಚಮರದ ನಿಕರದವರೊ
ಯ್ಯಾರಿಸಲು ಜಯರವದ ರಭಸದು
ದಾರ ಮೆಱೆಯಲು ಬೀಳುಕೊಂಡನು ರಾಜಮಂದಿರವ ॥ ೪೪

ಒಡನೊಡನೆ ಕರಿತುರಗವೇಱಿದ
ರೊಡನೆ ಹುಟ್ಟಿದ ಶತಕುಮಾರರು
ಗಡಣದಾಪ್ತರು ಕರ್ಣ ಶಕುನಿ ಜಯದ್ರಥಾದಿಗಳು ।
ಅಡಸಿದವು ಸೀಗುರಿಗಳಭ್ರವ
ತುಡುಕಿದವು ಝಲ್ಲರಿಗಳಂತ್ಯದ
ಕಡಲಪೊಲು ಪಡೆ ನಡೆಯೆ ಹಸ್ತಿನಪುರವ ಹೊಱವಂಟ ॥ ೪೫

ಘುಗುಘುಗಿಪ ಚಂಬಕನ ಗಜಕೋ
ಟಿಗಳ ಮುಂದಣ ಡೌಡೆಗಳ ಭೂ
ಗಗನವೊಡನೊಡನೊದಱೆ ಮೊರೆವ ಗಭೀರಭೇರಿಗಳ ।
ಅಗಿವ ಪಟಹಮೃದಂಗಕಹಳಾ
ದಿಗಳ ಕಳಕಳ ರಭಸ ದಶದಿ
ಕ್ಕುಗಳ ಮಾತಾಡಿಸೆ ಮಹಾಬಲ ತೆರಳಿತಿಭಪುರಿಯ ॥ ೪೬

ಅಗಿವ ವಜ್ರದ ಹೊಳಕೆಗಳೊ ದಿಟ
[1]ಹಗಲ[1] ತಗಡೋ ಮೇಣು ಮಿಂಚಿನ
ಬಗೆಯ ಸೆಕ್ಕೆಯೊ ಸೂರ್ಯಕಾಂತಚ್ಛವಿಯ ತೆಕ್ಕೆಗಳೊ ।
ಜಗುಳಿದೊಱೆಗಳ ಜಾಳಿಗೆಯ ಹೊಗ
ರೊಗಲು ಝಳಪಿಸೆ ಹೊಳೆಹೊಳೆವ ಕೈ
ದುಗಳ ಹಬ್ಬುಗೆವೆಳಗು ಗಬ್ಬರಿಸಿದುದು ದಿಗುತಟವ ॥ ೪೭

ಜಲಧಿಗಳ ಕುಡಿದುದು ನಭೋಮಂ
ಡಲವ ಸೆಳೆದುದು ಸುರನದಿಯ ಮು
ಕ್ಕುಳಿಸಿತಖಿಲಾದ್ರಿಗಳ ನುಂಗಿತು ದಿವವನಳುಕಿಸಿತು ।

---

[1] ಮುಗಿಲ (ಟ.)

ನೆಲನ ಸವೆಸಿತು ನೇಸಱಿನ ಕಂ
ಗಳನು ಕದುಕಿತು ನೆನೆಯ ಬಾರದು
ನಳಿನಭವ [1]ಹರನಾದನೆನಲುಚ್ಚಳಿಸೆ[1] ಪದಧೂಳಿ ॥ ೪೮

ಸುರಿವ ಗಜಮದಧಾರೆಯ್ಳಲಿ ಹೊಸ
ಶರಧಿಗಳು ಸಂಭವಿಸಿದವು ನೃಪ
ವರರ ಮಕುಟದ ಮಣಿಯೊಳಾದರು ಚಂದ್ರಸೂರಿಯರು ।
ಗಿರಿಗಳಾದವು ದಂತಿಯಲಿ ಪಡಿ
ಧರಣಿಯಾದುವು ಛತ್ರಚಮರದ
ಲರರೆ ನೂತನಸೃಷ್ಟಿಯಾಯ್ತು ವಿರಿಂಚಸೃಷ್ಟಿಯಲಿ ॥ ೪೯

ಅರರೆ ನಡೆದುದು ಸೇನೆ ಕುಲಗಿರಿ
ಯೆರಡು ಕೂರುಮ ಫಣಿಪರಿಬ್ಬ
ಬ್ಬರ ದಿಶಾಮಾತಂಗಗಳ ಹದಿನಾಱನಳವಡಿಸಿ ।
ಸರಸಿಜೋದ್ಭವ ಸೃಜಿಸದಿರ್ದಾರೆ
ಧರಿಸಲಾಪುದೆ [2]ಧರಣಿಯೆನೆ[2] ಕುರು
ಧರೆಗೆ ಬಂದುದು ಸೇನೆ ಪಯಣದ ಮೇಲೆ ಪಯಣದಲಿ ॥ ೫೦

ನಡೆದು ಬಂದುದು ಕೌರವೇಂದ್ರನ
ಪಡೆ ಕುರುಕ್ಷೇತ್ರಕ್ಕೆ ಮೂಡಣ
ಕಡೆಯಲಳವಡಿಸಿದರು ಬೀಡಾಯಿತ್ತು ವಹಿಲದಲಿ ।
ಗುಡಿಗಳನು [3]ಬೀಸಿದರು[3] ಲೋಹದ
ತಡಿಕೆಗಳ[4]ನ[ಳ]ವಡಿಸಿ[4] ಬೀಡಿನ
ನಡುವೆ ರಚಿಸಿದರವನಿಪಾಲನ ರಾಜಮಂದಿರವ ॥ ೫೧

ಅಳವಿ ನಾಲ್ವತ್ತೆಂಟಱೊಳಗಿ
ಟ್ಟಳಿಸಿ ಬಿಟ್ಟುದು ಸೇನೆ ಕೋಟಾ
ವಳಯವಗಳೆಲ್ಲಲ್ಲಿ ತಳಿ ಮುಳುವೇಲಿ ಪಡಿಯುಗಳು ।

---

[1] ಧ್ರುವಲೋಕಚುಂಬಿಸಿತಂದು (ಟ.) [2] ಬಲವನೆನೆ (ಕ.ಗ.ಚ.)
[3] ಬಿಡಿಸಿದರು (ಚ.), ಹೊಯ್ಸಿದರು (ಟ.), ಬಿಗಿಸಿದರು (ಪ.) [4] ಥರಗೊಳಿಸಿ (ಚ.)

[1] ಕೆಲದೊಳೊಪ್ಪುವ ಭೋಗವತಿ ನಿ
ರ್ಮಲಗಭೀರೋದಕದ ನದಿ[1] ಕುರು
ಬಲದ ಪಾಳಯದಂ[2]ಗ[2]ವಿದು ಕೇಳೈ ಮಹೀಪಾಲ ॥ ೫೨

[3]ಪಡೆಯ[3] ಮುಂಗುಡಿ ಭೀಷ್ಮನದು [4]ಬಲ
ನೆಡ [ನು][4] ಪಿಂಗುಡಿಯಾತನದು ನೃಪ
ಗಡಣಬೀಡಿನ ಕಾಹು ಗಂಗಾಸುತನ [5]ಗುರುಭಾರ[5] ।
ನಡೆವಡಾತನ ನೇಮ ಮರಳಿದು
ಬಿಡುವಡಾತನ ಮಾತು ಕೌರವ
ಪಡೆಗೆ ಭಾರಿಯ ವಜ್ರಪಂಜರವಾದನಾ ಭೀಷ್ಮ ॥ ೫೩

ಕೇಳು ಜನಮೇಜಯ ಧರಿತ್ರೀ
ಪಾಲ ಧೃತರಾಷ್ಟ್ರಂಗೆ ಮಕ್ಕಳ
ಮೇಲೆ ನೆನಹಾಯ್ತಧಿಕಶೋಕೋದ್ರೇಕ ಪಲ್ಲವಿಸೆ ।
ಕಾಳೆಗದೊಳೇನಾದರೋ ಭೂ
ಪಾಲತಿಲಕರು ದೃಗುವಿಹೀನರ
[6]ಬಾಳಿಕೆ[6]ಯ ಸುಡಲೆನುತ ತನ್ನೊಳು ಹಿರಿದು ಚಿಂತಿಸಿದ ॥ ೫೪

ಆ ಸಮಯದಲಿ ರಾಯ ವೇದ
ವ್ಯಾಸಮುನಿ ನಡೆತಂದು ಗತಪರಿ
ತೋಷನನು ಸಂತೈಸಿ ಕರಸಿದನಂದು ಸಂಜಯನ ।
ಆಸಮರವೃತ್ತಾಂತ ನಿನಗೆ ಸ
ಮಾಸ ವಿಸ್ತರವಾಗಿರಲಿ ಭೂ
ಮಿಾಶತಿಲಕಂಗಱುಹುವುದು ನೀನೆಂದು ನೇಮಿಸಿದ ॥ ೫೫

ಪರಮ ವೇದವ್ಯಾಸ ಮುನಿಪನ
ಕರುಣವಾಗಲು ಕಂಗಳಿಗೆ ಗೋ
ಚರಿಸಿತೀ ಭಾರತಮಹಾಸಂಗ್ರಾಮ ಸೌರಂಭ ।

---

[1] ಕೆಲಬಲದೊಳೊತ್ತಾಗಿ ಮಿಗೆ ನಿರ್ಮಲದ ಯಮುನಾನದಿಯು ಜಲ (ಗ.)
[2] ದ (ಗ.) [3] ನಡೆವ (ಕ.ಚ.) [4] ಬಿಡುವಲೆಯು (ಕ.), ಬಲುವಡೆಯು (ಜ.), ಬಲನೆಡನ (ಟ.), ಬಲವಡೆಯ (ಪ.) [5] ಭರಭಾರ (ಗ.) [6] ಬಾಳುವೆ (ಪ.)

ಧುರದ ವೃತ್ತಾಂತವನು ಚಿತ್ತೈ
ಸರಸ ತಿಳುಹುವೆನೆಂದು ಸಲೆ ವಿ
ಸ್ತರಿಸ ಬಗೆದನು ಸಂಜಯನು ಧೃತರಾಷ್ಟ್ರಭೂಪತಿಗೆ ॥ ೫೬

ಅವಧರಿಸು ಧೃತರಾಷ್ಟ್ರ ಗಂಗಾ
ಭವನ ನೇಮದಲಂದು ಮಹದಾ
ಹವಕೆ ನಡೆದುದು ಕಟಕವಲ್ಲಿಯುಲೂಕನೆಂಬವನು ।
ಇವರು ಕಳುಹಿದೊಡವನು ರಿಪುಪಾಂ
ಡವರ ಹೊರೆಗೈತಂದನಿನ್ನಾ
ಹವಕೆ ನಿಂದಿರು ಧರ್ಮಪುತ್ರ ವಿಳಂಬವೇಕೆಂದ ॥ ೫೭

ಅಗ್ಗಳೆಯನೆಮ್ಮರಸ ಸಂಪ್ರತಿ
ನೆಗ್ಗಿ ಕೆಟ್ಟಿರಿ ನೀವು ನಿಮಗೀ
ಹುಗ್ಗಿಗರು ಹುರಿಗೂಡಿ ಗೆಲಿದಿನ್ನಿಳೆಯ ಕೊಡಿಸುವರೆ ।
[1]ಅಗ್ಗಿ[1]ತಾವಾತೇಕೆ ರಣದಲಿ
ನುಗ್ಗುನುಗ್ಗಾಗದೆ ಸಹೋದರ
ರೊಗ್ಗು ಮುಱಿಯದೆ ಮಾಣದಱಿಗೇಡಾಯ್ತು ನಿಮಗೆಂದ ॥ ೫೮

ಬೆಂಬಲಕೆ ತಾನೆಂದು ಬಯಲ ವಿ
ಡಂಬದಲಿ ಕಾಳೆಗವ ಮಸೆದರೆ
ನಂಬಿ ಕೆಟ್ಟಿರಿ ಕೃಷ್ಣನನು ನೀವೇನ ಮಾಡುವಿರಿ ।
ಇಂಬುಗೆಟ್ಟುದು ರೀತಿ ರಣಕೆ ತ್ರಿ
ಯಂಬಕನನಮರಾಧಿಪನ ಕೈ
ಕೊಂಬನೇ ಕೌರವನೆನಲು ಖತಿಗೊಂಡನಾ ಭೀಮ ॥ ೫೯

ಸೀಳು ಕುನ್ನಿಯ ಬಾಯನೆಲವೋ
ತೋಳ ತೀಟೆಯನವನ ನೆತ್ತಿಯ
ಮೇಲೆ ಕಳೆವೆನು [2]ಕಲಕುವೆನು ಕೌರವ ಬಲಾಂಬುಧಿಯಾ[2]।
ಹೇಳು ಹೋಗೀ ನಾಯನಾಡಿಸಿ
ಕೇಳುತಿರಲೇಕಹಿತಕುರುಕುಲ
ಕಾಲ[3]ಭೈರವ[3]ನೆಂದು ನಿನ್ನೊಡೆಯಂಗೆ ಹೇಳೆಂದ ॥ ೬೦

[1] ತಗ್ಗಿ (ಪ.) [2] ಸಾಲದೇ ಹಿಂದಾದ ಹೆಕ್ಕಳವು (ಟ.) [3] ಪವನಜ (ಟ.ಪ.)

ಮೊಡಲಿದ್ದುದು ಬಹಳ ಪೌರುಷ
ವಾಡಿ ಕೆಡಿಸಲದೇಕೆ ಕೌರವ
ರಾಡಿ ಕೆಡಿಸಲಿ ಮಾಡಿ ಕೆಡಿಸಲಿ ಚಿಂತೆ ನಮಗೇಕೆ ।
ಮಾಡಿದೆವು ಗುರುಭಾರವನು ಮುರ
ಗೇಡಿಯಲಿ ರಣಪಾರಪತ್ಯವ
ಮಾಡುವಾತನು ಕೃಷ್ಣನೆಂದನು ಧರ್ಮಸುತ ನಗುತ ॥ ೬೧

ವೈರಿಧೂತನ ಕಳುಹಿದನು ಕೈ
ವಾರಿಗಳು ಜಯಜಯಯೆನಲು ಹೊಂ
ದೇರ ತರಿಸಿದನಬುಜನಾಭನ ಪದಯುಗಕೆ ನಮಿಸಿ ।
ವಾರುವದ ಖುರನಾಲ್ಕಱಲಿ ಮಣಿ
ಚಾರುಕನಕವ ಸುರಿದು ಧರ್ಮಜ
ತೇರನೇಱಿದನೊದಱಿದವು ನಿಸ್ಸಾಳ ಕೋಟಿಗಳು ॥ ೬೨

ಹರಿಯು ಬಲವಂದಣ್ಣನಂಘ್ರಿಗೆ
ಶಿರವ ಚಾಚಿ ನಿಜಾಯುಧವ ವಿ
ಸ್ತರಿಸಿ ಪವನಜಪಾರ್ಥಮಾದ್ರೀಸುತರು ರಥವೇಱಿ ।
ಧುರಕೆ ನಡೆದರು ದ್ರುಪದಸಾತ್ಯಕಿ
ವರವಿರಾಟಾದಿಗಳು ಚೂಣಿಯೊ
ಳುರವಣಿಸಿದರು ಸೇನೆ ನಡೆದುದು ಮುಂದೆ ಸಂದಣಿಸಿ ॥ ೬೩

ಬಳಿಕ ಧೃಷ್ಟದ್ಯುಮ್ನನಾಜ್ಞೆಯೊ
ಳಳವಿಗೊಟ್ಟುದು ಸೇನೆ ಮೂಡಣ
ಜಲಧಿಗಾಂತುದು ಪಶ್ಚಿಮೋದಧಿಯೆಂಬ ರಭಸದಲಿ ।
ಪಳಹರದ ತೋಮರದ ಕುಂತಾ
ವಳಿಯ ಚಮರಚ್ಛತ್ರಮಯ ಸಂ
ಕುಳದಿನಾದುದು ಭೂತನಾಲ್ಕಾಕಾಶಗತವಾಗಿ ॥ ೬೪

ಮೊದಲನೆಯ ಸಂಧಿ ಮುಗಿದುದು.

# ಎರಡನೆಯ ಸಂಧಿ

**ಸೂಚನೆ** ‖ ಸೌಮದಲಿ ಪರಬಲದ ಸುಭಟ
ಸ್ತೋಮವನು ತನ್ನೊಳಗು ಮಾಡಿಯೆ
ಭೂಮಿಪತಿ ಯಮನಂದನನ ಸಂಗ್ರಾಮಕನುವಾದ ‖

ಕೇಳು ಜನಮೇಜಯ ಧರಿತ್ರೀ
ಪಾಲ ಧೃಷ್ಟದ್ಯುಮ್ನ ಭೀಷ್ಮರ
ಪಾಳೆಯದೊಳಂದಮಮ ಕೈಗೈದಿಳೆಗೆ ಹೊಸತೆನಿಸಿ ।
ಕಾಳೆಗಕ್ಕನುವಾಗಿ ರಥತುರ
ಗಾಳಿ ಕರಿ ಕಾಲಾಳು ದೊರೆಗಳ
ಮೇಲುಗೈಚಮರಿಗಳನೀಕ್ಷಿಸುತಿದ್ದುದುಭಯಬಲ ‖ ೧

ಮಡದ ಸೋಂಕಿಂ ಮುನ್ನ ಗಗನವ
ತುಡುಕಬಗೆದವು ತೇಜಿಗಳು ನಸು
[1]ಸಡಿಲಬಿಡೆ ವಾಘೆಯಲಿ ಚಿಗಿದುವು[1] ರಥದ ವಾಜಿಗಳು ।
ತುಡುಕುವಂಕುಶದಿಂದ ಮುನ್ನಿಳೆ
ಯೊಡೆಯೆ ಗಜ ಗಾಢಿಸಿದವರಸರ
[2]ಬಿಡುಹು ತಡೆದೆಡ[2] ಗಲಸಬಗೆದುವು ವಿಗಡಪಾಯದಳ ‖ ೨

ಗಜದ ಬಲುಗರ್ಜನೆಯ ವಾಜಿ
ವ್ರಜದ ಹೇಷಿತರವದ ತೇರಿನ
[3]ಗಜಬಜದ ಕಾಲಾಳು ಕಡುಹಿನ ಬೊಬ್ಬೆಯಬ್ಬರದ[3] ।
ಗಜಬುವಗ್ಗದ ಬೊಗ್ಗುಗಳ ದಿ
ಗ್ವ್ರಜವ ನುಡಿಸುವ ರಾಯಗಿಡಿಗನ
ವಿಜಯಬಲ ತೊಡರಿಕ್ಕಿತೈ ಕಲ್ಪಾಂತಸಾಗರಕೆ ‖ ೩

---

[1] ಸಡಿಲ ವಾಘೆಯ ಕೊಂಡು ಮಿಕ್ಕವು (ಕ.ಗ ಜ.) [2] ಕಡುಗಲಿಗಳೊಡೆ (ಟ.) [3] ವಿಜಯ ಚೀತ್ಕೃತಿರವದ ಬಿಲುಟಂಕಾರ ಕಳಕಳದ (ಟ.).

ತಿ[1][ಗಡ][1]ಲೊದಱುವ ಹರಿಗೆಗಳ ಗೌ
ಱಗಿವ ಹೆಗ್ಗಹಳೆಗಳ ಹೊನ್ನಾ
ಯುಗದ ಖಡುಗದ ಗಜಱು ಡೊಂಕಣಿಗಳ ಝುಣತ್ಕೃತಿಯಾ ।
ಬಿಗಿದ ಬಿಲು ಬೊಬ್ಬೆಗಳ ಬಿರುದರ
ವಿಗಡ ಮೂದಲೆಗಳ ಮಹಾಧ್ವನಿ
ಬಗಿದುದೈ ತಾವರೆಯ ತನಯನ ಕರ್ಣಕೋಟರವ ॥ ೪

ಕುಣಿವ ಕುದುರೆಯ ಮದದ ಬಲುಭಾ
ರಣೆಯಲೊಲೆವಾನೆಗಳ ತುರಗವ
ಕೆಣಕಿ ಸರಳಿಸಿ ಹಿಡಿವ ತೇರಿನ ಸೂತರೋಜೆಗಳ ।
ಅಣೆವ ಹರಿಗೆಯನೊಬ್ಬನೊಬ್ಬರ
[2]ನಣಸಿನಲಿ[2] ತಿವಿದಗಿವ ಭಟರೊ
ಡ್ಡಣೆ ಸಘಾಡಿಸಿತೆರಡುಬಲದಲಿ ಭೂಪ ಕೇಳೆಂದ ॥ ೫

ಝಳಪದಲಿ ಬೊಬ್ಬಿಡುವಡಾಯುಧ
ಹೊಳಹುಗಳ ಡೊಂಕಣಿಯ ತಳಪದ
ಬೆಳಗುಗಳ ಬಿಟ್ಟೇಱ ಧಾರೆಯ ಬಳ್ಳಿಮಿಂಚುಗಳ ।
ಅಲಗಿನುಬ್ಬರಗಿಡಿಯ ಹಬ್ಬುಗೆ
ಥಳಥಳಿಸಿ ಸೈಗಱೆದುದೈ ಹೆ
ಬ್ಬಲ ದಿವಾಕರಶತವನೆನೆ ಹೆಸರಿಡುವನಾರೆಂದ ॥ ೬

ಕೇಳು ಜನಮೇಜಯ ಧರಿತ್ರೀ
ಪಾಲ ಭೀಷ್ಮನ ಹೊರೆಗೆ ಕುರುಭೂ
ಪಾಲ ಬಂದನು ಬಿನ್ನವಿಸಿದನು ಮುಕುಳಕರನಾಗಿ ।
ಮೇಳದಲಿ ಮಂಡಳಿಸಿದರಿನ್ನೃಪ
ಜಾಲದಲಿ ಯಮಸೂನುವಾವನು
ಮೇಲೆ ಭೀಮಾರ್ಜುನರ ವಿವರಿಸಿ ತೋಱಬೇಕೆಂದ ॥ ೭

[1] ಗಿದ (ಗ.ಜ.ಟ.) [2] ನಣಕದಲಿ (ಟ.)

ನಸುನಗೆಯ ಚೂಣಿಯಲಿ ವದನದ
ರಸುಮೆ ಝಳಪಿಸೆ ಕೌರವೇಂದ್ರಂ
ಗುಸುರಿದನು ಕಲಿಭೀಷ್ಮನವಧರಿಸೈ ಮಹೀಪತಿಯೆ ।
ಪಸರಿಸಿದ ಮುಗಿಲೊಡ್ಡಿನಲಿ ಮಿಂ
ಚೆಸೆವವೊಲು ಗಜದಳದ ಮಧ್ಯದೊ
ಳೆಸೆವನಾತನು ವೀರಧೃಷ್ಟದ್ಯುಮ್ನ ನೋಡೆಂದ ॥ ೮

ಇವ ಕಣಾ ಪಾಂಡವರ ಸೇನಾ
ರ್ಣವಕೆ ನಾಯಕನಿವನ ಕೆಲಬಲ
ದವರು ತೆಕ್ಕೆಯ ತೇರ ತೇಜಿಯ ಥಟ್ಟಿನುನ್ನತಿಯ ।
ಬವರಿಗರು ಪಾಂಚಾಲಕುಲಸಂ
ಭವರು ದ್ರುಪದ ಸಹೋದರರರು ಮ
ತ್ತಿವರು ಸೃಂಜಯುವರಯುಧಾಮನ್ಯೂತ್ತಮೌಂಜಸರು ॥ ೯

ಡೊಂಕಣಿಯ ಹೊದರುಗಳಲೆಡಬಲ
ವಂಕದಾನೆಯ ಥಟ್ಟುಗಳ ನಿ
ಶ್ಶಂಕಮಲ್ಲನು ದ್ರುಪದನೀತ ವಿರಾಟನೃಪನೀತ ।
ಮುಂಕುಡಿಯ ನಾಯಕರಿವರು ಪತಿ
ಯಂಕಕಾಱರು ಇವರ ಬಳಿಯಲಿ
ಬಿಂಕದೆರಡಕ್ಷೋಣಿ ಬಲವದೆ ರಾಯ ನೋಡೆಂದ ॥ ೧೦

ಅವರ ಮೋಹರದಾಚೆಯಲಿ ನಿಂ
ತವರು ಕೊಂತೀಭೋಜ ಕೇಕಯ
ರವರ ಬಳಿಯಲಿ ತಳಿತುದೆರಡಕ್ಷೋಹಿಣೀಸೇನೆ ।
ಅವರ ಹತ್ತಿರೆ ಮೋಹರಿಸಿ ನಿಂ
ದವರು ಪಾಂಡ್ಯ ಶಿಖಂಡಿ ಸೋಮಕ
ರವರ ಮೋಹರದೊಳಗೆ ನೋಡಕ್ಷೋಹಿಣೀ ಸೇನೆ ॥ ೧೧

ಅರೆನೆಲೆಯ ದಳದತ್ತ ದೃಷ್ಟಿಯ
ಹರಿಯಬಿಡು ನೋಡಲ್ಲಿ ಕೌಂತೇ
ಯರ ಕುಮಾರರನಮಲ ಪಂಚ ದ್ರೌಪದೀಸುತರ ।

ಉರಿಯ ಕರುವಿಟ್ಟಂತೆ ವಿಲಯದ
ಹರನ ಖತಿ ಹೊಗೆವಂತೆ ಸಿಡಿಲಿನ
ಹೊರಳಿ ಹೊದಱಿದ್ದಂತೆ ನಿಂದವನವ ಘಟೋತ್ಕಚನು ‖ ೧೨

ಭೀಮಸೇನನ ಮಗನವನು ಸಂ
ಗ್ರಾಮಚಾಪಟನವನ ಬಳಿಯಲಿ
ತಾಮಸದ ಬಲುಮೊಗದ ಹೊಗರಿನ ಹೊಳೆವ ದಾಡೆಗಳ ।
ಕಾಮರೂಪಿಗಳೊಂದುಕೋಟಿ ಸ
ನಾಮದೈತ್ಯರು ಕುಂಭಕರ್ಣ
ಸ್ತೋಮವೆನಲದೆ ಲಯಕೃತಾಂತನ ಕ್ರೂರಪರಿವಾರ ‖ ೧೩

ಅವರ ಹೊರೆಯಲಿ ಫಲುಗುಣಗೆ ಮಲೆ
ವವರ ಗಂಡನು ರಿಪುಕುಮಾರಕ
ನಿವಹ[1]ಕಾಳಾನಳನು[1] ನೋಡಭಿಮನ್ಯುವರ್ಜುನನ ।
ಕುವರನಿವ ಮಗುವಲ್ಲ ಬಲುಗೆ
ಯ್ಯವನ ಮೋಹರದೊತ್ತಿನಲಿ ನಿಂ
ದವರು ಸಾತ್ಯಕಿ ಚೇಕಿತಾನ ಪ್ರಮುಖ ನಾಯಕರು ‖ ೧೪

ಅವರೊಳೊಂದಕ್ಷೋಣಿಯದು ಮಾ
ಧವನ ಮನೆಯದು ಧೃಷ್ಟಕೇತು
ಪ್ರವರನಾತನು ಚೈದ್ಯನಂದನನವರ ಕಂಡಿಹನು ।
ಅವರ ಹೊರೆಯಲಿ ವೀರಸೇನಾ
ನಿವಹದೊಳು ಸಹದೇವನಾತನ
ಸವಹರೆಯು ನಕುಲಾಂಕನಿವರಾಹವಧುರಂಧರರು ‖ ೧೫

ಇತ್ತಲಿದು ಕಲ್ಪಾಂತರುದ್ರನ
ಮೊತ್ತ ಕಾಳೋರಗನ ಜಂಗುಳಿ
ಮೃತ್ಯುವಿನ ಮೋಹರ ಕೃತಾಂತನ ಥಟ್ಟು ಭೈರವನ ।

[1] ಕೋಳಾಹಳನ (ಆ.)

ತೆತ್ತಿಗರ ದಾವಣಿಯೊಳಣ್ಣನ
ಮತ್ತವಾರಣ ಭೀಮಸೇನನ
ನಿತ್ತ ನೋಡೈ ಮಗನೆ ಕುರುಕುಲ ಕೇಣಿಕಾಱನನು ।　೧೬

ಕೆಲದಲಾ ತಱುವಾಯಲಾಹವ
ದಳ[1]ಲ[1]ಗರ ಮೇಳದಲಿ ಮಕುಟದ
ಲಲಿತರತ್ನಪ್ರಭೆಯ ಲಹರಿಯ ಲಾವಣಿಗೆ ಮಿಗಲು ।
ಚಲತುರಂಗದ ಭಾರಿಯಾನೆಯ
ದಳದ ರಥದ ಪದಾತಿಮಧ್ಯದ
ಹೊಳಹಿನಲಿ ನಿಂದಾತನಾತ ಮಹೀಶ ಧರ್ಮಜನು ॥　೧೭

ಆತನೆಡವಂಕದಲಿ ಹನುಮನ
ಕೇತನದ ಗರುವಾಯಿಯಲಿ ನವ
ಶಾತಕುಂಭವರೂಥದಲಿ ನೆಱೆ ತೀವಿದಸ್ತ್ರದಲಿ ।
ನೂತನಾಶ್ವನಿಕಾಯಖುರಪುಟ
ಧೂತಧೂಳೀಪ[2]ಟಲವಿಹಿತ[2] ನಿ
ಶಾತಘನ ಜಯಯುವತಿವಿಟನರ್ಜುನನ ನೋಡೆಂದ ॥　೧೮

ತಿಳಿಯಲೊಬ್ಬನ ರೋಮರೋಮದ
ಕುಳಿಯೊಳಗೆ ಬ್ರಹ್ಮಾಂಡಕೋಟಿಯ
ಸುಳಿವು ಗಡ ಶ್ರುತಿನಿಕರವೊರಲಿದರೊಳಗುದೋಱ ಗಡ ।
ಹಲವು ಮಾತೇನಾತನೀತನ
ಬಳಿಯ ಬಂಡಿಯ ಬೋವನಾಗಿಯೆ
ಸುಳಿವನಾತನ ನೋಡು ಮಗನೇ ವೀರನರಯಣನ ॥　೧೯

ಅದೆ [3]ದುರಂತದ[3] ದುರುಳ ದೊದ್ದೆಯ
ಹದನ ಬಣ್ಣಿಸಲೆನಗೆ ನೂಕದು
ತುದಿಯಲಱಿವೆನು ದಳದ ಮನ್ನೆಯ ಮಂಡಲೀಕರಲಿ ।

---

[1] ವಿ (ಪ.)　[2] ಟನಹಿತ (ಕ.ಜ.ಟ.)　[3] ಧುರಂಧರ (ಗ.ಫ.)

ಕದನವಿದು ಭಾರಂಕವಾರೆ
ಭ್ಯುದಯ ತಲೆದೋಱುವುದೊ ನಮಗೇ
ಕಿದಱ ಚಿಂತೆ ಮುರಾರಿ ಬಲ್ಲನು ಕಂದ ಕೇಳೆಂದ ‖ ೨೦

ಅವರೊಳೇಳಕ್ಷೋಹಿಣಿಬಲ ನ
ಮ್ಮವರೊಳಗೆ ಹನ್ನೊಂದು [1]ಮತ್ತವ
ರವರ ಸಖ್ಯಕೆ[1] ನೆರೆದುದೇಕಾದಶಶತಕ್ಷೋಹಿಣಿ ।
ತವಿಸುವರೆ ನನಗೊಂದು ದಿನ ಮೂ
ದಿವಸದಲಿ ಗುರುವೈದು ದಿವಸಕೆ
ರವಿಜ ನಿಮಿಷಕೆ ದ್ರೌಣಿ ನಿಮಿಷಾರ್ಧಕೆ ಧನಂಜಯನು * ‖ ೨೧

ತಾಗಲನುಗೈದುಭಯಬಲ ಕೈ
ಲಾಗನೀಕ್ಷಿಸುತಿರಲು ರಿಪುಬಲ
ಸಾಗರದ ಸೌರಂಭವನು ಮಿಗೆ ನೋಡಿ ಧರ್ಮಜನು ।
ತೂಗಿದನು ಶಿರವನು ಮಹಾಹವ
ವೀಗಲಾಗದ ಮುನ್ನ ಭೇದದ
ಲಾಗಿನಲಿ ಭೀಷ್ಮಾದಿಗಳ ಮನವೊಲಿಸಬೇಕೆಂದ ‖ ೨೨

ಬಂದು ಭೀಷ್ಮನ ಚರಣಕಮಲ
ದ್ವಂದ್ವದಲಿ ಚಾಚಿದನು ಮಕುಟವ
ನಿಂದಿನಾಹವದೊಳಗೆ ನಮಗಿನ್ನೇನು ನಿರ್ವಾಹ ।
ನಿಂದು ನೀವ್ ಕಾದುವರೆ ನಮಗಿ
ನ್ನೆಂದು ಹಱಿವುದು ಬವರವೆಮಗೇ
ನೆಂದು ಬೆಸಸಿದಿರೆನುತ ಕರುಣವ ತೋಱಿದನು ಭೂಪ ‖ ೨೩

---

[1] ಮತ್ತಂತಿವರಸಂಖ್ಯೆಗೆ

* ಎನಲು ಗುರುತನಯನ ಸಪಾಟಕೆ
ಕೊನರಿತಾತನ ಮನವಜಾಂಡಕೆ
ತನುಪುಲಕದುಬ್ಬಿನಲಿ ಪಾರ್ಥನ ಪಟುಪರಾಕ್ರಮಕೆ ।
ಮೊನೆಗಣಿಯ ನುಡಿ ಸೋಂಕೆ ಕರ್ಣವ
ನಿನಿತು ಕುಸಿದು ರಸಾತಳಕೆ ಕುರು
ಜನಪನ ನಿಬದ್ಧಪ್ರಲಾಪವ ಬಿಡಿಸಿದನು ಭೀಷ್ಮ ‖
ಈ ಪದ್ಯವು (ಗ.ಚ.ಟ.ಪ.) ಇವುಗಳಲ್ಲಿ ಮಾತ್ರ ಇದೆ.

ನೀವೞಿಯಲಾವುತ್ತರಾಯಿಗ
ಳಾವ ಪರಿಯಲು ಕೌರವರು ಬಹ
ಳಾವಮಾನವನೆಮಗೆ ನೆಗಳಿದರೆಮ್ಮ ಸತ್ಯವನು ।
ನೀವು ಮೆಚ್ಚಲು ನಡಸಿದೆವು ತಲೆ
ಗಾವುದುಂಟೇ ಕರುಣಿಸಲ್ಲದ
ಡಾವ ಹದನೆಂದೆವಗೆ ನೇಮವ ಕೊಟ್ಟು ಕಳುಹೆಂದ ॥ ೨೪

ಏಳು ಮಗನೇ ನಮ್ಮ ಮತಿಯನು
ಕೇಳೆನುತ ಭೂಪಾಲತಿಲಕನ
ಮೌಳಿಯನು ನೆಗಹಿದನು ಗಂಗಾಸೂನು ನನಗುತ ।
ಆಳುಗೊಂಡನು ಕೌರವನು ಪರ
ರಾಳುತನವೆಮಗಾಯ್ತು ಪರಸೇ
ವಾಲಘುಸ್ಥಿತರೆಮ್ಮನೇತಕೆ ನುಡಿಸಿದಪೆಯೆಂದ ॥ ೨೫

ಹಿರಿಯನಾಗಲಿ ಸುಜನನಾಗಲಿ
ಗರುವನಾಗಲಿ ಅರ್ಥವುಳ್ಳನ
ಚರಣಸೇವಾಪರರು ಜಗದಲಿ ವರ್ತಮಾನವಿದು ।
ಪರರ ಭಜಕರೊಳಾವಗುಣವಾ
ವಿರವದಾವಗ್ಗಳಿಕೆಯಾವುದು
ಗರುವತನವೈ ತಂದೆ ಪುರುಷಾಧಮನು ತಾನೆಂದ ॥ ೨೬

ಕೌರವನ ಧನವೆಂಬ ಘನಸಂ
ಸಾರಗುಣದೊಳು ಬದ್ಧನಾದೆನು
ಧೀರ ನಾನೇಗೈವೆನೆನೆ ಯಮಸೂನು ಕೈಮುಗಿದು ।
ವೈರವೃತ್ತಿಯ ರಣದೊಳೆಮ್ಮಲಿ
ತಾರದಿರು ಮೇಣುಭಯನೃಪರಿಗೆ
ಕಾರಣಿಕ ನೀ ಮುನಿದಡೆಮಗಿನ್ನಾಸೆಯಿಲ್ಲೆಂದ ॥ ೨೭

ಮಾನನಿಧಿ ಕೇಳ್ ಕೌರವಂಗಾ
ಧೀನವೆನ್ನಯ ತನು ವಿಧಾತ್ರಾ
ಧೀನವೆನ್ನಯ ಜೀವವದುಕಾರಣದಿನಾಹವಕೆ ।

ನೀನು ಚಿಂತಿಸಬೇಡ ನನ್ನವ
ಸಾನಕಾಲಕೆ ಮತ್ತೆ ಬರಲು ನಿ
ದಾನವನು ನೆಱೆ ಬುದ್ಧಿಗಲಿಸುವೆನೀಗ ಮರಳೆಂದ ॥ ೨೮

ಎನೆ ಹಸಾದವೆನುತ್ತ ಯಮನಂ
ದನನು ಕಳುಹಿಸಿಕೊಂಡು ಗಂಗಾ
ತನುಜನುಚಿತೋಕ್ತಿಗಳ ನೆನದಡಿಗಡಿಗೆ ಪುಳಕಿಸುತ ।
ವಿನುತಮತಿ ನಡೆತರಲು ಸುಭಟರು
ತನತನಗೆ ತೊಲಗಿದರು ಪಾಂಡವ
ಜನಪ ಮೈಯಿಕ್ಕಿದನು ದ್ರೋಣನ ಚರಣಕಮಲದಲಿ ॥ ೨೯

ಅರಸ ಬಂದನಪೂರ್ವವಾಯಿತು
ದರುಶನವು ತನಗೆನುತ ಗರುಡಿಯ
ಗುರು ಮಹೀಪಾಲಕನ ಮಕುಟವನೆತ್ತಿದನು ಬಳಿಕ ।
ಬರಸೆಳೆದು ಬಿಗಿಯಪ್ಪಿದನು ಸಂ
ಗರದ ಸಮಯದಲೇಕೆ ಬಂದಿರಿ
ಭರವಸದ ಬಗೆಯೇನು ಬಿನ್ನಹಮಾಡು ಸಾಕೆಂದ ॥ ೩೦

ಎವಗೆ ದೈವವು ನೀ[ನು] ಗುರು ನೀ
ನೆವಗೆ ತಾತನು ನೀನು ಮಹದಾ
ಹವದೊಳಗೆ ಪತಿಕರಿಸಿ ರಕ್ಷಿಸಲೊಡೆಯ ನೀನೆಮಗೆ ।
ಅವನಿಯಭಿಲಾಷೆಯಲಿ ತೆತ್ತುದು
ಬವರವೆಮಗಿನ್ನೇನು ಗತಿ ಕೌ
ರವಜಯೋಪಾಯಕ್ಕೆ ಹದನೇನೆಂದು ನೃಪ ನುಡಿದ ॥ ೩೧

ಅರಸ ಕೇಳರ್ಥಕ್ಕೆ ಧರಣೀ
ಶ್ವರರು ಕಿಂಕರರರ್ಥ ತಾ ಕಿಂ
ಕರತೆಯನು ಮಾಡುವುದು ಜಗದಲಿ ವರ್ತಮಾನವಿದು ।
ನಿರುತ ಕೌರವನರ್ಥದಲಿ ಕಿಂ
ಕರತೆಯೆಮಗಾಯಿತ್ತು ರಾಜ್ಯೈ
ಶ್ವರಿಯ ಸೇವಾಪರರಿಗೀ ಸ್ವಾತಂತ್ರ್ಯವಿಲ್ಲೆಂದ ॥ ೩೨

ಆದರೆಮಗಿನ್ನೇನು ಗತಿ ರಣ
ವಾದಸಿದ್ಧಿಯದೆಂತು ಜಯಸಂ
ಪಾದಕರು ನಮಗಾರೆನಲು ಗುರು ಕೇಳಿ ನಸುನಗುತ ।
ಕಾದುವಾ ಸಮಯದೊಳಗಪ್ರಿಯ
ವಾದ ನುಡಿಗಳ ಕೇಳಿದಾಕ್ಷಣ
ಮೇದಿನಿಯೊಳಾವಿರೆವು ಚಿಂತಿಸಬೇಡ ಹೋಗೆಂದ ॥ ೩೩

ಎನಲು ಪರಿತೋಷದಲಿ ಯಮನಂದ
ನನು ಕಳುಹಿಸಿಕೊಂಡು ನಡೆತಂ
ದನು ಮಹಾಹವರಂಗಮಧ್ಯದ ಕೃಪನ ಹೊರೆಗಾಗಿ ।
ವಿನಯದಲಿ ಬಿನ್ನಯಿಸೆ ಕೃಪನೆಂ
ದನು ನಿಧಾನಿಸಲಾವವಧ್ಯರು
ಜನಪ ನಿನ್ನನು ನಾವು ಕೊಲ್ಲೆವು ಮರಳು ನೀನೆಂದ ॥ ೩೪

ಕೃಪನ ಬೀಳ್ಕೊಂಡತುಳಜಯಲೋ
ಲುಪನು ಶಲ್ಯನ ಬಂದು ಕಂಡನು
ವಿಪುಳಮತಿ ಮಾತಾಡಿದನು ನಿಜರಾಜಕಾರಿಯವ ।
ಕೃಪೆಯ ಮಾಡುವುದೆವಗೆ ರಣದಲಿ
ತಪನತನಯನ ತೇಜವನು ನಿ
ಷ್ಕೃಪೆಯೊಳವಗಡಿಸೆಂದು ಶಲ್ಯನೊಳಭಯವನು ಪಡೆದ ॥ ೩೫

ಬಲದೊಳಗೆ [1] ಬೇಹವರ [1] ನಾಲ್ವರ
ನೊಳಗುಮಾಡಿ ಧರಾಧಿಪನು ಮನ
ಗೆಲವಿನಲಿ ಮರಳಿದನು ಕೌರವ ಮೋಹರವನುಳಿದು ।
ತಿಳಿದು ತನ್ನೊಳು ಭೀಮಸೇನನ
ಬಲು ಗದಾಘಾತದಲಿ ಕುರುಕುಲ
ವಳಿವುದೆಂದು ಯುಯುತ್ಸು ರಥದಿಂದಿಳಿದು ನಡೆತಂದ ॥ ೩೬

---

[1] ಹೆಸರಾಳ್ಗ (ಟಿ.)

ಎರಡು ಬಲ ಬೆಱಗಾಗಿ ನೋಡು
ತ್ತಿರೆ ಯುಯುತ್ಸು ಮಹೀಶನಂಘ್ರಿಗೆ
ಕರವ ಮುಗಿದೆಱಗಿದರೆ ಹಿಡಿದೆತ್ತಿದನು ಕರುಣದಲಿ ।
ಧರಣಿಪತಿ ನೀನಾರೆನಲು ಕೇ
ಳರಸ ಕೌರವನನುಜ ನಿಮ್ಮನು
ಶರಣುವೊಗಲೈತಂದೆಯಭಯುವನಿತ್ತು ಸಲಹೆಂದ ॥ ೩೭

ಹಿಂದೆ ರಾವಣನನುಜನಿರದೈ
ತಂದು ಶರಣಾಗತರ ರಕ್ಷಿಪ
ನೆಂದು ರಾಘವನಂಘ್ರಿಕಮಲವ ಕಂಡು ಬದುಕಿದನು ।
ಇಂದು ನಿಮ್ಮಂಘ್ರಿಗಳ ಮಱೆ[1]ವೊ[1]ಗ
ಬಂದೆನೆನ್ನನು ಪತಿಕರಿಸಬೇ
ಕೆಂದು ಕೌರವನನುಜ ಬಿನ್ನಯಿಸಿದನು ಭೂಪತಿಗೆ ॥ ೩೮

ಎನಗೆ ಭೀಮಾರ್ಜುನರವೊಲು ನೀ
ನನುಜನಲ್ಲದೆ ಬೇಱೆ ನಿನ್ನಲಿ
ಮನವಿಭೇದವ ಬಲ್ಲೆನೇ ಬಾಯೆನುತ ಕೈವಿಡಿದು ।
ಜನಪನಭಯುವನಿತ್ತು ಕೌರವ
ನನುಜನನು [2]ಕೊಂಡೊಯ್ದನಾಹವ
ದನುಕರಣೆಯಲಿ ಸೇನೆ ಗಜಬಜಿಸಿತ್ತು ಬೊಬ್ಬೆಯಲಿ[2] ॥ ೩೯

ಎರಡನೆಯ ಸಂಧಿ ಮುಗಿದುದು.

---

[1] ಯೊ (ಕ.ಗ.ಟ.) [2] ಕೊಂಡೊಯ್ವು ನಾರಾಯಣನ ಕಾಣಿಸೆ ದನು ಜರಿಪು ಮನ್ನಿಸಿದನುಚಿತದಲಿ (ಟ.)

# ಮೂರನೆಯ ಸಂಧಿ

ಸೂಚನೆ॥ ರಾಯದನುಜಘರಟ್ಟ ಪಾಂಡವ
ರಾಯಜಂಗಮಜೀವ ನಿರ್ಜಿತ
ಮಾಯಿ ನಿಜವನು ತೋಱು ಪಾರ್ಥನನೊಲಿದು ಬೋಧಿಸಿದ ॥ *

ಹಳಚಲನುವಾಯ್ತುಭಯಸೇನಾ
ಜಲಧಿ ಕಳಕಳ ಮಿಗಲು ಮಾರುತಿ
ಮೊಳಗಿದನು ಪೌಂಡ್ರಕವ ಭೂಪನನಂತವಿಜಯವನು ।
ಇಳೆ ಹಿಳಿಯೆ ಮಣಿಪುಷ್ಪಕದ ನಿ
ರ್ಮಲಸುಘೋ[1]ಷದೊಳಮಮ[1] ಕೋಳಾ
ಹಳಿಸಿದುದು ಸಹದೇವನಕುಲರು ಸಮರಕನುವಾ[2]ಯ್ತು[2] ॥ †

---

[1] ಷದರವವ (ಚ.ಪ.) ಷಾರವದಿ (ಟ.) [2] ಗಿ (ಚ.)

* ಈ ಪದ್ಯವು (ಕ.ಚ.) ಪ್ರತಿಗಳಲ್ಲಿಮಾತ್ರ ಸೂಚನೆಯಾದಮೇಲೆ ಇದೆ.

ಕೇಳು ಜನಮೇಜಯಧರಿತ್ರೀ
ಪಾಳ ಹಿಮ[ಕರ]ಕುಲಲಲಾಮರು
ಕಾಳೆಗಕೆ ಕೈದಟ್ಟಿ ಹರಿದುದು ಕಳನ ಚೌಕದಲಿ ।
ಆಳು ಗಜಬಜಿಸಿತ್ತು ರಾವುತ
ರೋಳಿ ಸೇರಿತು ಸರಿಸದಲಿ ದೆ
ಖ್ಖಾಳಿಸಿದುದಿಭರಥನಿಕಾಯದ ಬೆರಳ ಬೊಬ್ಬೆಯಲಿ ॥

† ಈ ಪದ್ಯವು (ಕ.ಚ.) ಪ್ರತಿಗಳಲ್ಲಿ ಮೂರನೆಯ ಪದ್ಯವಾಗಿದೆ.

ಹಿಂಡೊಡೆದು ಮುಂಗುಡಿಯ ತಾಕಯಿ
ಕೊಂಡು ದೂವಾಳಿಯಲಿ ರಥವನು
ಮಂಡಳಿಸಿ ಕೆಲ್ಲಯಿಸಿ ಲುಳಿಯಲಿ ಲಲಿತಪೇರಯವ ।
ಚಂಡಗತಿಚಾಳನೆಯಲುಬ್ಬಟೆ
ಗೊಂಡಿಸದೆ ವೇಡೆಯವ ಕೊಳ್ಳದೆ
ಗಾಂಡಿವಿಯ ಕೈಮನದ ಲಾಗನುಪೆಡೆದನಸುರಾರಿ ॥

ಮುರವಿಜಯ ನಿಜಪಾಂಚಜನ್ಯವ
ನಿರದೆ ಫಲುಗುಣ ದೇವದತ್ತ
ಸ್ಫುರಿತ[1]ರವವನು ರಚಿಸಿದನು[1] ಮೂಲೋಕ ವ್ಯೋಮಬೆಯೆ ।
ತುರಗವನು ಬೋಳಯಿಸಿ ವಾಘೆಯ
ತಿರುಹಿ ಚಮ್ಮಟಿಗೆಯಲಿ ತೇಜಿಯ
ಬರಿಯ ಬೆದಱಿಸಿ ಕೃಷ್ಣ ಪಾರ್ಥನ ರಥವ ಲುಳಿವಡೆದ ॥ ೨

ಚಟುಳಹಯಖುರಖಂಡಿತೋರ್ವೀ
ನಿಟಿಲನಿರ್ಗತಬಹಳಧೂಳೀ
ಪಟಲಧೂಸರಸಕಲಜಗದಸುರಾರಿ ನಲವಿನಲಿ ।
ಪಟುಗತಿಯ ಗರುವಾಯಿಯಲಿ ಸಂ
ಘಟಿಸಿ ಹಯುವನು ಸುಳಿಸಿದನು ಚೌ
ಪಟದೊಳೊಯ್ಯಾರಿಸುತ ಬೋಳಯಿಸಿದನು ಕಂಧರವ ॥ ೩

ಗತಿಗೆ ಕುಣಿದವು ನಾಸಿಕದ [2]ಹೂಂ
ಕೃತಿಯ ಫೇನೋನ್ನತಿಯ[2] ಬಳಿಯುವ
ಗತಿಯ ಕಬ್ಬಿಯ ಕೊಂಡಿಗಳ ಘಣಘಣಿತ ನಿಸ್ವನದ ।
ವಿತತ ಸೃಕ್ವದ ಲೋಳಿಗಳ ಸಂ
ಸೃತ ಜಠರಜಸ್ವೇದಜಲಲಾ
ಲಿತ ಹಯಾವಳಿ ಕಳನ ಗೆಲಿದವು ಹರಿಯ ನೇಮದಲಿ ॥ ೪

ನಿಲಿಸಿದನು ಫಲುಗುಣನ ರಥವನು
ತಳಪಟದೊಳೇನ್ಕೆ ಮಹಾರಥ
ರಳವಿಗೊಡ್ಡಿದೆ ನಿನ್ನೊಳುಂಟೇ ಕ್ಷೈಮನದ ಕಡುಹು ।
ಉಳಿಯ ಬಿಲುವಿದ್ಯಾಚಮತ್ಕೃತಿ
ಯಳವು ಗರುಡಿಯೊಳಲ್ಲದೀ ರಿಪು
ಬಲಕೆ ತೋಱಿಸಬಹುದೆ ಹೇಳೆಂದರ್ಜುನನ ಜಱೆದ ॥ * ೫

---

[1] ವನು ರವವುಚ್ಚರಿಸೆ (ಕ.ಗ.ಟ.) [2] ಪೂತ್ಕೃತಿಯ ಮುಖದುನ್ನತಿಯ (ಕ.ಗ.ಚ )

*ಸಹಸವೇನದು ಜೀಯ ನೆರೆದಿ
ರ್ದಹಿತಬಲವೆನಗಾವ ಘನ ಬಿ
ನ್ನಹವ ಕೇಳ್ಕೈ ಕೃಷ್ಣ ಕೌರವರಾಯ [1]ಥಟ್ಟಿನಲಿ[1] ।
ಬಹಳ ಬಲರಿವರಾರು ಸೇನಾನಿ
ವಹದಲಿ ನಾಯಕರ ವಿವರಿಸ
ಬಹರೆ ಬೆಸಸೆನೆ ಕೃಷ್ಣ ನುಡಿದನು ನಗೆಯ ಮೊಳೆ ಮಿನುಗೆ ॥ ೬

ಆದಡರ್ಜುನ ನೋಡು ಸೈನ್ಯಮ
ಹೋದಧಿಯ ಮಧ್ಯದಲಿ ಮೆಱೆವವ
ನಾ ದುರಂತಪರಾಕ್ರಮನು ಗಂಗಾಕುಮಾರಕನು ।
ಕಾದಲರಿದವನಖಿಲಬಲವಿಭು
ವಾದನಿವನತಿಬಲನು ಕಾಲನ
ಸಾದಿಸಿದ ಛಲದಂಕಮಲ್ಲನು ಭೀಷ್ಮ ನೋಡೆಂದ ॥ ೭

ಮಿಸುಪ ತುದಿವೆರಳಂಬುಗೊಲೆಗೇ
ಱಿಸಿದ ಬಿಲು ಮಣಿಮಯದ ಗದ್ದುಗೆ
ರಸುಮೆಗಳ ಜೋಡಿನಲಿ ಹೊಂದೇರಿನ ವಿಡಾಯಿಯಲಿ ।
ಮಸೆಗಣೆಯ ಬತ್ತಳಿಕೆ ತಿಗುರೇ
ಱಿಸಿದ ಮೈ ಕತ್ತುರಿಯ ತಿಲಕದ
ನೊಸಲಿನಾತನ ನೋಡು ಗರುಡಿಯ ಜಾಣ ದ್ರೋಣನನು ॥ ೮

---

* ಈ ಕೆಳಗಿರುವ ಪದ್ಯವು (ಕ.ಚ.) ಪ್ರತಿಗಳಲ್ಲಿ ಮೇಲೆ * ಈ ಚಿಹ್ನೆ ಇರುವ ಪದ್ಯಗಳ ಮಧ್ಯದಲ್ಲಿಯೂ (ಪ.) ಪ್ರತಿಯಲ್ಲಿ ನಾಲ್ಕನೆಯ ಪದ್ಯವಾಗಿಯೂ ಇದೆ.

ಧಿರುಧಿರಪ್ರತಿಮಲ್ಲಹರಿರವಿ
ತುರಗ ಚಳಗತಿ ಸೂಱೆಕಾರರ
ಬಿರುದುದಾನವ ವಾರುವದ ಮಱುಹಳುರೆ ಹಳುರೆನುತ ।
ಅರಿಶರಧಿಬೋಳೈಸಲುಱೆ ಉ
ಬ್ಬರಿಸಿದವು ಘುಲ್ಲೈಸಿ ಪಾರ್ಥನ
ವರವರೂಥದ ಕುದುರೆಗಳ ಚಿತ್ತೈಸು ಧೃತರಾಷ್ಟ್ರ ॥

[1] ನೊಡ್ಡಿನೊಳು (ಕ.ಗ.)

ರಾಯನಾತನ ಬಳಿಯಲಾಕ
rrಾಯತಾಸ್ತ್ರರು ಕಾರ್ಮುಕದ ಸ್ವಾ
ಧ್ಯಾಯಸಿದ್ಧರು ಹತ್ತುಸಾವಿರ ಮಕುಟವರ್ಧನರು ।
ಸಾಯಲಂಜದ ಸಿತಗರದೆ ತ
ನ್ನಾಯತದೊಳಪ್ರತಿಮ [1]ರೌದ್ರದ[1]
ನಾಯಕರ ನೆರವಿಯೊಳು ಶಲ್ಯನೃಪಾಲ ನೋಡೆಂದ ॥ * ೯

*ಗಣನೆಗೈದದ ಹೆಗಲ ಹಿರಿಯು
ಬ್ಬಣದ ಕನಕದ ಝುಗೆಯ ತಲೆಗ
ಡ್ಡಣೆಯ ನೇಣಿನ ಹೊಗರ ಮೋಟೆಯ ಕೆಂಪಿನಾಲಿಗಳ ।
ಮಣಿಮಯದ ತೇರುಗಳಲಾ ಸಂ
ದಣಿಯವರು ಮಾದ್ರೇಶನದು ಫಲು
ಗುಣ ನಿರೀಕ್ಷಿಪುದಿತ್ತಲೊಂದಕ್ಷೋಹಿಣೀ ಬಲವ ॥ ೧೦

ಕಳಶ ಸಿಂಧದ ಘಟ್ಟು ಸಮ್ಮುಖ
ದಳವಿಯಲಿ ವಿಕ್ರಮದ[2]ವಾಗ್ನಿಯ
ಝುಳದೊಳುರೆ[2] ಕಾಹೇಱಿದಾಲಿಯ ಬಿಗಿದ ಹುಬ್ಬುಗಳ ।
ಹಿಳುಕನವುಕಿದ ತುದಿವೆರಳ ನಡು
ಗಳದ ಕಪ್ಪಿನ ನೊಸಲ ನಯನದ
ಬಲುಭುಜನ ನೋಡಾತನಶ್ವತ್ಥಾಮ ನಿಸ್ಸೀಮ ॥ ೧೧

---

ಈ ಪದ್ಯವು ಮೇಲೆ * ಈ ಚಿಹ್ನೆಗಳಿರುವ ಪದ್ಯಗಳ ಮಧ್ಯದಲ್ಲಿ (ಪ.) ಪ್ರತಿಯಲ್ಲಿ ಮಾತ್ರ ಇದೆ.

* ಒಡನೊಡನೆಱಸಂಖ್ಯದಳವಿ
ಖ್ಯಾತರದ್ಭುತ ಸಮಮಹಾರಥ
ನೂತನಧ್ವರರಾತಿರಥರೆಂಬಗ್ಗದಾನೆಗಳು ।
ಆತನೊಡನಕ್ಷೋಹಿಣಿಕ್ಕೈಮನ
ವೀತಗೈವಡಿಹತ್ತುಮಡಿ ಪುರು
ಹೂತನಂದನ ನೋಡು ಬಲವಂಕದಲಿ ಮೋಹರನ ॥

[1] ಮಾದ್ರದ (ಗ.ಚ.ಪ.), ಮಾದ್ರಾ (ಟ.) [2] ಸೆಗಳಿಯು ಝುಳಪದಲ (ಗ.ಚ.ಟ.ಪ.)

ಈತನೊಡ್ಡಿನ ಸಾರೆ ಸಂಗರ
ಕಾತು ಕೊಂಡದೆ ಕೃಪನ ದಳಸಂ
ಘಾತ[1]ವೊಂದ[1]ಕ್ಷೋಣಿ ಸುಭಟರ ಸಾಲ ಮಧ್ಯದಲಿ ।
ಆತ ಗೌತಮನವನ ಬಳಿಯಲಿ
ಭೀತ ಬಾಹ್ಲಿಕವಿಂಧ್ಯರದೆ ವಿ
ಖ್ಯಾತರೊಂದಕ್ಷೋಣಿ ಕೌರವಸೈನ್ಯಶರಧಿಯಲಿ ॥ ೧೨

ಈತ ಮಾಳವನೀತ ಕೊಂಕಣ
ನೀತ ಗುಜ್ಜರನೀತ ಬರ್ಬರ
ನೀತ ಕೋಸಲನೀತ ಖೇಟಕನೀತ ಹಮ್ಮಿರ ।
ಈತ ಕೇರಳನೀತ ಸಿಂಹಳ
ನೀತ ಬೋಟಕನೀತ ಚೀನಕ
ನೀತ ಮಾಗಧನೀತ ದ್ರಾವಿಡನೀತ ಗೌಳನೃಪ ॥ ೧೩

ಆಳುಗೆಲಸಕೆ ಕೆಲಬರರಸನ
ಖೇಳಮೇಳಕೆ ಕೆಲರು ಕೆಲಬರು
ಬಾಲೆಯರ ಕೊಳುಕೊಡೆಯ [2]ಬಳಗದ[2] ಬಂಧುಕೃತ್ಯದಲಿ ।
ತೋಳ ಬಲುಹೊರೆಗಲಸಿ ಕೆಲಬರು
ಮೇಲೆ ನಮ್ಮಯ ಹಗೆಗೆ ಕೆಲಬರು
ಕಾಳೆಗದ ಕಾರ್ಮುಕನೃಪಾಲರ ನೆರವಿಯದೆಯೆಂದ ॥ ೧೪

ತಳಿತ ಪಲ್ಲವ ಸತ್ತಿಗೆಯ ಹೊಳ
ಹೊಳೆವ ಮೌಳಿಯ ರತುನ ಲಹರಿಯ
ಚಲಿಸಿ ಚಿಮ್ಮುವ ಚಮರಿ ಸೀಗುರಿಗಳ ವಿಡಾಯಿಯಲಿ ।
ಹಲಗೆಯಲಿ ತೆತ್ತಿಸಿದ ಹಾವಿನ
ಹಳವಿಗೆಯ ಹೊಂದೇರ ನೃಪಮಂ
ಡಳಿಯ ಮಧ್ಯದೊಳಾತ ದುರ್ಯೋಧನ ಮಹೀಪಾಲ ॥ ೧೫

---

[1] ವೆರಡ (ಟ.) [2] ಬಹಳದ (ಕ.ದ.)

ಅಳಲಿದುರಗನ ನೆರವಿ ಚೊಪ್ಪಿಗೆ
ಗಳೆದ ಸಾಳ್ವನ ಹಿಂಡು ಹಸಿದ
ವ್ಯಳಿಪ ಸಿಂಹದ ಹಂತಿ ಕುಪಿತ ಕೃತಾಂತನೊಡ್ಡವಣಿ ।
ಕೊಲೆಗೆಲಸಕುಬ್ಬೆದ್ದ ರುದ್ರನ
ಬಲವಿದೆನೆ ಹರಹರ ಮಹಾರಥ
ರಳವಿಗೊಟ್ಟಿದೆ ನೋಡು ದುರ್ಯೋಧನ ಸಹೋದರರ ॥ ೧೬

ಉಳಿಯ ಮಿಂಚಿನ ಮಂದೆ ಸುಗತಿಯ
ಝಳಕದನಿಲನ ಥಟ್ಟು ಬೀದಿಯ
ಬಳಿಗೆ ಪುರುಷಾಮೃಗದ ಗಾವಳಿಯೆನೆ ವಿಲಾಸದಲಿ ।
ಹೊಳೆವ ಚಮರಿಯ ಸುತ್ತುಝಲ್ಲಿಯ
ನೆಲಕುಗಿವ ಜೋಡುಗಳ ತೇಜಿಯ
ದಳವ ನೋಡೈ ಪಾರ್ಥ ಬಳಸಿದೆ ಕಲಿಜಯದ್ರಥನ ॥ ೧೭

ತೋರದಲಿ ಕುಲಗಿರಿಯ ಸತ್ವದ
ಸಾರದಲಿ ವಜ್ರವನು [1]ದನಿಯಲಿ
ಕಾರ ಬಱಸಿಡಿಲಂದವಿ[ದ]ನುಗಿ[ದೊಂ]ದುಮಾಡಿದನು[1] ।
ವಾರಿಜೋದ್ಭವನೆನಲು ಝಾಡಿಯ
ಭಾರಿ ಜೆಂಚೆಯ ಕೈಯ ಖಡ್ಗದ
ವಾರಣದ ಮಧ್ಯದಲಿಹನು ಭಗದತ್ತ ನೋಡೆಂದ ॥ ೧೮

ಹೊಗರೊಗುವ ಸೂನಿಗೆಯ ಸುಪತಾ
ಕೆಗಳ ಸಿಂಧದ ಹೊಳೆವ ಹೊಂಗಂ
ಬುಗೆಯ ಹೂಡಿದ ಹಯದ ಸೂತರ ಗಳದ ಗರ್ಜನೆಯ ।
ಅಗಿವ ಚೀತ್ಕಾರದ ಛಡಾಳದ
ವಿಗಡರಥಿಕರ ರಹಿಯ ರಥವಾ
ಜಿಗಳ ನೋಡೈ ಪಾರ್ಥ ಭೂರಿಶ್ರವನ ಸೈನ್ಯವಿದು ॥ ೧೯

---

[1] ದನಿಯಲಿ ಕಾರೆಬರಸಿಡಿಲಂದವಿದೆಯೆನೆ ಪೊಡೆದು ಮೂಡಿದನು (ಕ.) ನಿನದವಿಕಾರ ಮೇಘಧ್ವನಿಯನುಗಿದೇನೊಂದುಗೂಡಿದನು (ಚ.).

ಹಲಗೆ ಕಡಿತಲೆ ಹರಿಗೆ ಖಂಡೆಯ
ಹೊಳೆವ [1]ಮುಡ್ಡು[1] ಕಠಾರಿ ಡೊಂಕಣಿ
ಬಿಲು ಸರಳು ತೋಡಿಟ್ಟಿ ಮುದ್ಗರ [2]ಪಿಂಡಿವಾಳ ಚಯ[2] ।
ತಲೆಯ ನೇಣಿನ ಕೈಯ ಚೌರಿಯ
ಲುಳಿಯ ಜೋಡಿನ ಕಟಿಯ ಗಂಟೆಯ
ದಳವನೀಕ್ಷಿಸು ಪಾರ್ಥ ದುಶ್ಶಾಸನನ ಪಯದಳವ ॥ ೨೦

ವೀರನಭಿಮನ್ಯುವಿನವೊಲು ರಣ
ಧೀರನಾತನ ನೋಡು ಕರ್ಣಕು
ಮಾರಕರು ವೃಷಸೇನನಗ್ಗದ ಚಿತ್ರಸೇನಕರು ।
ಚಾರುಲಕ್ಷಣರವರು ನೂಱು ಕು
ಮಾರರದೆ ದುರ್ಯೋಧನಾತ್ಮಜ
ರಾರುವನು ಕೈಕೊಳ್ಳರವದಿರ್ ಸುಬಲ ನಂದನರು ॥ ೨೧

ರಾಯನಣುಗರ ಗಂಡ ಕೌರವ
ರಾಯದಳಶ್ರೃಂಗಾರ ಮಲೆವರಿ
ರಾಯಮರ್ದನನೆಂಬ ಬಿರುದಿನಲುಲಿವ ಕಹಳೆಗಳ ।
ಜೀಯ ಜಯಜಯಯೆಂಬ ಪಂಡಿತ
ಗಾಯಕರ ಮಧ್ಯದಲಿ ಬೆರಳಲಿ
ಸಾಯಕವ ತಿರುಹುವನು [ತಾ] ಕಲಿಕರ್ಣ ನೋಡೆಂದ ॥ ೨೨

ಕರಿಘಟೆಯ ಕುಱುವದಲಿ ಹಯವೋ
ಹರದ ತೆರೆಮಾಲೆಯಲಿ ಬಲುರ್ಝು
ಲ್ಲರಿಯ ಬುದ್ಬುದ ತತಿಯಲಸ್ತ್ರದ ಕಿಡಿಯ ವಡಬನಲಿ ।
ಬಿರುದರಾಯರ ರತುನರಾಜಿಯ
ಲರಿಬಲಾರ್ಣವ ಗಜಱು ಮಿಗಲ
ಬ್ಬಿಱಿಯುತದೆ ಬಹುವಿಧದ ವಾದ್ಯವಿಡಾಯ ರಭಸದಲಿ ॥ ೨೩

[1] ಮಂಡು (ಗ.), ಮುದ್ದು (ಟ.) [2] ಪರಶು ಕುಂತಗಳ (ಗ.ಚ.ಟ.)

ಆಳ ಮಯವಖಿಳೋರ್ವಿ ಪದಹತ
ಧೂಳಿಮಯವಾಕಾಶ ರಥತುರ
ಗಾಳಿಮಯ ದಿಗುಜಾಲವೇನೆಂಬೆನು ಮಹಾದ್ಭುತವ ।
ಕಾಳೆಗಕೆ ನೀನಲ್ಲದವನಿಯೊ
ಳಾಳ ಕಾಣೆನು ಪಾರ್ಥ ಸಾಕಿ
ನ್ನೇಳು ಬಾಣವ ತೂಗು ಮಾತಾಡಿಸು ಮಹಾಧನುವ ॥ ೨೪

ಎಲೆ ಧನಂಜಯ ಹಗೆಯ ಹೆಚ್ಚಿದ
ಹಳುವವಿದೆಲಾ ವಜ್ರಿಸುತ ನಿ
ನ್ನಳವಿಯಲಿ ತಱಬಿದೆ ಸುಯೋಧನಸೈನ್ಯ ಗಿರಿನಿಕರ ।
ಎಲೆ ಸಮೀರಜನನುಜ ರಿಪುಬಲ
ವಿಲಯ ಮೇಘನಿಕಾಯವಿದೆ ಭುಜ
ಬಲವ ತೋಱು ತಂದೆ ನೋಡುವೆನೆಂದನಸುರಾರಿ ॥ ೨೫

ಮೆಟ್ಟಿ ನೋಡಿದನಹಿತ ರಾಯರ
ಥಟ್ಟುಗಳ ತೆರಳಿಕೆಯನುತ್ಸಹ
ಗೆಟ್ಟು ಫಲುಗುಣ ಸೆಡೆದು ಮನದಲಿ ನೊಂದು ತಲೆವಾಗಿ ।
ಕೆಟ್ಟ ಕಾಯದ ಸುಖಕಳುಪಿ ಒಡ
ಹುಟ್ಟಿದರ ಕೈಯಾರ ಕೊಂದರೆ
ಮುಟ್ಟದೇ ಕಡುಪಾಪ ಘನಪರಿತಾಪ ತನಗೆಂದ ॥ ೨೬

ಕೆಲಬರೊಡಹುಟ್ಟಿದರು ಗುರುಗಳು
ಕೆಲರು ಕೆಲಬರು ಮಾವ ಮೈದುನ
ನಳಿಯ ಮಗ ಹಿರಿಯಯ್ಯ ಮುತ್ತಯ ಮೊಮ್ಮನೆನಿಸುವರು ।
ಕಳದೊಳಿನಿಬರಕೊಂದು ಶಿವಶಿವ
ಕೆಲವು ದಿವಸದ ಸಿರಿಗೆ ಸೋಲಿದು
ಮುಳುಗುವೆನೆ ಭವಸಿಂಧುವಿನೊಳಾನೆನುತ ಮನಮುರಿದ ॥ ೨೭

ಇದಿರುಗಾಣದೆ ಕೊಲೆಗೆ ನಿರ್ಬಂ
ಧದಲಿ ಬೆಸಸುವ ಕೃಷ್ಣನಕಟಾ
ಮದಮುಖನೊ ದುರ್ಬೋಧಕನೊ ವಂಚಕನೊ ಘಾತಕನೊ ।

ಯದುಗಳನ್ವಯದೊಳಗೆ ಕರುಣಾ
ಸ್ಪದರು ಜನಿಸಿರಲಾ ಮುರಾರಿಯ
ಹೃದಯ ಬೆಚ್ಚಿತೆನುತ್ತ ಫಲುಗುಣ ತೂಗಿದನು ಶಿರವ ॥ ೨೮

ನರಕಕರ್ಮವ ಮಾಡಿ ಇಹದೊಳು
ದುರಿತಭಾಜನನಾಗಿ ಕಡೆಯಲಿ
ಪರಕೆ ಬಾಹಿರನಾಗಿ ನಾನಾಯೋನಿಯೊಳು ಸುಳಿದು ।
ಹೊರಳುವನುವನು ಕೃಷ್ಣದೇವನು
ಕರುಣಿಸಿದನೇ ಹಿತವನೇ ಹರ
ಹರ ಮಹಾದೇವೊಂದು ಬೋಳಕೆ ಬದುಕಿದೆನು ಯೆಂದ ॥ ೨೯

*ಮುಳಿಯಲಾಗದು ಕೃಷ್ಣ ನಿಮ್ಮನು
ತಿಳುಹಲಾನು ಸಮರ್ಥನೇ ಕುಲ
ಕೊಲೆಗೆ ಕೊಕ್ಕರಿಸಿದೆನು ನನೆದೆನು ಕರುಣ ವಾರಿಯಲಿ।
ಬಲುಹನೀ ಮುಖದಲ್ಲಿ ತೋಱುವ
ಡಳುಕಿದೆನು ಸಾಮ್ರಾಜ್ಯಸಂಪ
ತ್ತಿಳೆಯ ಸಕಲಭ್ರಾಂತಿ ಬೀತುದು ದೇವ ಕೇಳೆಂದ॥* ೩೦

ಎಡಹಿದರೆ ರುಜೆಯಾಗಿ ಯಾವ
ತ್ತಡಸಿದರೆ ಮೋಣಾವ ತೆಱದಿಂ
ದೊಡಲುವಿಡಿದರೆ ಮರಣ ತಪ್ಪದು ಸುರರಿಗೊಳಗಾಗಿ ।
ಕೆಡುವ ಕಾಯುವ ನಚ್ಚಿ ಬಂಧುಗ
ಳೊಡನೆ ವೈರವ ಮಸೆದು ನರಕಕೆ
ಕೆಡೆವೆನೇ ತಾನೆನುತ ರಥದೊಳು ಬಿಲ್ಲನಿಳುಹಿದನು ॥ ೩೧

ಕರಗಲಂತಃಕರಣ ಚಿಂತಾ
ತುರನು ಸಂಗ್ರಾಮದ ವಿರಕ್ತಿಯೊ
ಳಿರಲು ಕಂಡನು ಕಮಲನಾಭನು ನಗುತ ಮನದೊಳಗೆ ।

* ಈ ಪದ್ಯವು (ಕ) ಪ್ರತಿಯಲ್ಲಿ ಮಾತ್ರ ಇಲ್ಲ.

ತರಳನಿವನದ್ವೈತಕಲೆಯುಲಿ
ಪರಿಣತನು ತಾನಲ್ಲ ನೆವದಿಂ
ನರನ ಬೋಧಿಸಬೇಕೆನುತ ನುಡಿಸಿದನು ಫಲುಗುಣನ ‖ ೩೨

ಏನು ಫಲುಗುಣ ಸಮರದಲಿ ದು
ಮ್ಮಾನವಾವುದು ಹದನು ಶೌರ್ಯಕೆ
ಹಾನಿಯಲ್ಲಾ ತ್ರಿಜಗಚೌಪಟಮಲ್ಲ ನೀನೆನಿಪ ।
ಮಾನಗರ್ವವು ಮುಱಿಯದೇ ರಿಪು
ಸೇನೆ ನಗದೇ ತತ್ತ ಸಮರವ
ನೀನುಪೇಕ್ಷಿಸಿ ನೋಡಲಹುದೇ ಬಿಲ್ಲ ಹಿಡಿಯೆಂದ ‖ ೩೩

ಆವ ನಿನ್ನಯ ಕ್ಷತ್ರಧರ್ಮವ
ಭಾವಿಸಿದೆ ಮೇಣಾವ ಶಶಿವಂ
ಶಾವಳಿಯು ನೆಮ್ಮುಗೆಯ ನೆಗಳಿದೆ ತತ್ತ ಕಾಳೆಗಕೆ ।
ಆವ ನಿನ್ನಗ್ಗಳಿಕೆಗುಚಿತವ
ತೀವಿ ಬಳಸಿದೆ ಕದನಮುಖದಲಿ
ಹೇವ ವೀರರೊಳಿಲ್ಲಲಾ ವಿಸ್ಮಯವಿದಕಟೆಂದ ‖ ೩೪

ಅಲಗಿನೊರಸೊರಸಿಲ್ಲ ಕೈಮೈ
ಗಳಲಿ ಮುಳುಗಿದ ಬಾಣವಿಲ್ಲ
ಗ್ಗಳಿಸಿ ನೊಸಲಲಿ ಮುಱಿದ [1]ಭಲ್ಲೆಯ[1]ವಿಲ್ಲ ನೋಡುವರೆ ।
ಕಲಹದಲಿ ಪಡಿಮುಖದ ಘಾಯದ
ಚಲರಕುತದೊಱವಿಲ್ಲ ನೀಮು
ನ್ನಳುಕಿ ಕೈದುವ ಹಾಯ್ಕಿದೈ ಸರಿಯಲ್ಲ ನಿನಗೆಂದ ‖ ೩೫

ತರುಣಿಯರ ಮುಂದಸ್ತ್ರಶಸ್ತ್ರವ
ತಿರುಹಬಹುದುಬ್ಬೇಳಬಹುದ
ಬ್ಬರಿಸಬಹುದೆನಗಾರು ಸರಿ ನಾ ಧೀರನೆನಬಹುದು ।
ಕರಿತುರಂಗದ ಬಹಳಶಸ್ತ್ರೋ
ತ್ಕರ ಕೃಪಾಣದ ಹರಹಿನಲಿ ಮೊಗ
ದಿರುಹದಿಹ ಕಲಿಯಾರು ಕುಂತೀಸೂನು ಕೇಳೆಂದ ‖ ೩೬

[1] ಖಂಡೆಯು (ಕ.ಗ.)

ಬಂಧುಹನನಕೆ ಮನದರಲು [1]ಭವ
ವಿಂಧ್ಯ[1] ದಲಿ [2]ಬೆಳ್ಳಾಗಿ[2] ರೌರವ
ಸಿಂಧುವಿನೊಳೋಲಾಡದಿಹನೇ ಪರಮಪಾತಕನು ।
ಸಂಧಿಯಲಿ ನಮ್ಮವನಿ ಋಣಸಂ
ಬಂಧವುಂಟೇ ಬರಲಿ ರಣದಭಿ
ಸಂಧಿ ಸಾಕಿನ್ನೆನುತ ಫಲುಗುಣ ಶಿರವ ಬಾಗಿದನು ॥　　೩೭

ಎಲವೊ ಫಲುಗುಣ ನುಡಿದ ಭಾಷೆಯ
ಸಲಿಸಿ ಕಾನನದೊಳಗೆ ತೊಟ್ಟನೆ
ತೊಳಲಿ ಹದಿಮೂಱುಬುದ ಬಂದಾಪತ್ತನನುಭವಿಸಿ ।
ನೆಲನ ಭಾಗವ ಬೇಡಿ ಸಂಧಿಗೆ
ಕಳುಹಿದರೆ ಕೌರವನು ನೂಕಿಸಿ
ಕಳೆದ ನಿಮಗಿನ್ನಾವ ಹೊಲ್ಲೆಹವೆಂದನಸುರಾರಿ ॥　　೩೮

ಎವಗೆ ನೀನುತ್ತರನ ಕಥೆವೇ
ಳುವೆ ನಗುವೆಯಾತನಿಗೆ ನೀನೀ
ಬವರದೊಳು ಗುರುವಾದೆ ಲೋಗರ ನಿಂದೆ ತನಗಹುದು ।
ಲವಲವಿಕೆಯಲಿ ಕಾದಬೇಕೆ
ಮ್ಮವನಿಯುನು ಕೈಕೊಳಲುಬೇಕೆಂ
ಬವಗಡೆಯತನವೆತ್ತಲಡಗಿತು ಪಾರ್ಥ ಹೇಳೆಂದ ॥　　೩೯

ಬಲುಹ ನೀ ನೋಡುವರೆ ಪರಮಂ
ಡಳಿಕರನು ತಂದೊಡ್ಡು ಬಳಿಕೆ
ನ್ನಳವನೀಕ್ಷಿಸು ಸೆಡೆದೆನಾದೊಡೆ ನಿಮ್ಮ ಮೈದುನನೆ ।
ಕೊಲುವೆನೆಂತೈ ಭೀಷ್ಮರನು ಮನ
ವಳುಕದೆಂತೈ ತಪ್ಪುವೆನು ಗುರು
ಗಳಿಗೆ ಕೃಪಗುರುಸುತರನಿಱುವುದಿದಾವ ನಯವೆಂದ ॥　　೪೦

---

[1] ಧವಬಂಧ (ಟ.)　　[2] ದೇಳಾಗಿ (ಟ.ತ.)

ಹೊಳೆದು ಹೋಹೈಶ್ವರ್ಯಕೋಸುಗ
ತಲೆಯ ಮಾಱಿಯಧರ್ಮಕೋಟಿಯ
ಫಳಿಸಿ ಬಳಿಕಾ ಫಲವನಲಸದೆ ಭವಭವಂಗಳಲಿ ।
ತೊಳಲಿ ಬಳಲುವ ಜೀವಭಾವದೊ
ಳುಳಿವುದಾವುದು ಲಾಗು ಮೂಢರ
ಬಳಕೆಗಾವಂಜುವೆವು ಸಮರಕೆ ಶರಣು ಶರಣೆಂದ ॥ ೪೧

ಲಾಲಿಸದೆ ಕುಲಛಲವ ನೀತಿಯ
ಪಾಲಿಸದೆ ಕೊಲೆಗಡುಕತನದೊಳು
ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ।
ಕೋಲ ಮೊನೆಯಲಿ ಕೊಂದು ನೆತ್ತರ
ಗೂಳನುಂಬವೊಲಖಿಳ ರಾಜ್ಯದ
ಮೇಲೆ ಸೊಗಸುವ ಸಿರಿಯನೊಲ್ಲೆನು ಕೊಲುವನಲ್ಲೆಂದ ॥ ೪೨

ಆರನ್ಯೆ ನೀ ಕೊಲುವೆ ನಿನ್ನಿಂ
ದಾರು ಸಾವರು ದೇಹವನೊ ನಿಜ
ಧೀರನಾತ್ಮನ ಕೊಲುವೆಯೋ ದಿಟ ನಿನ್ನ ಬಗೆಯೇನು ।
ಚಾರುದೇಹಕೆ [1]ಭೂತ[1]ನಿಕರಕೆ
ವೈರವಿಲ್ಲುಳಿದಂತೆ ವಿಗತವಿ
ಕಾರನಚಲನಗಮ್ಯನದ್ವಯನಾತ್ಮನೋಡೆಂದ ॥ ೪೩

ತನುವಳಿದ ಬಳಿಕಿನಲಿ ತನು ಸಂ
ಜನಿಸುಗೆಂಬುದು ಭವವ ಬಳಸುವ
ತನುವಿನಲಿ ಕೌಮಾರಯೌವನವಾರ್ಧಿಕಂಗಳಲಿ ।
ತನು ವಿಕಾರಿಸುವದು ಸುಕರ್ಮದ
ವಿನುತದುಷ್ಕೃತವೆನಿಪ ಹುಸಿ ಕ
ಲ್ಪನೆ ಶರೀರಕ್ಕಲ್ಲದಾತ್ಮಂಗಿಲ್ಲ ಕೇಳೆಂದ ॥ ೪೪

---

[1] ಯಾತ್ಮ (ಕ.ಪ.).

ಅಳಿವನಲ್ಲುದಯಿಸುವನಲ್ಲ
ಗ್ಗಳಿಸುವವನಲ್ಲಡಗುವವನ
ಲ್ಲಳಿವ ದೇಹದ ಬಗೆಗೆ ಹೊಣೆಯೇ ಸಚ್ಚಿದಾತ್ಮಕನು ।
[1]ಕಳಚಿದಡೆ ಕಳಚುವುದು ಕಾಯುವಿ
ದುಳಿದಡಳಿವುದು[1] ಚಿನುಮಯುಂಗೀ
ಕಳಕಳದ ಕಾಲಾಟ ಕೊಳ್ಳದು ಪಾರ್ಥ ಕೇಳೆಂದ ॥ ೪೫

ನಿನಗೆ ಸಾವವನಲ್ಲ ನಿನ್ನಂ
ಬಿನಲಿ ನೋವವನಲ್ಲ ದಿಟ ನೀ
ಮುನಿದು ಗಗನಕ್ಕಲಗನುಗಿದಡೆ ಗಗನವಳುಕುವುದೇ ।
ತನುವಿನೀ ಗುಣಧರ್ಮ ಕರ್ಮದ
ಹೊನಲು ಹೊಗುವುದೆ ನಿತ್ಯನಿರ್ಮಲ
ಚಿನುಮಯಾತ್ಮನನೆಲೆ ವೃಥಾಹಂಕಾರವೇಕೆಂದ ॥ ೪೬

ಆದಡೆಲೆ ಮುರವೈರಿ ಕೇಳಿದಿ
ರಾದ ಬಾಂಧವರನಿಬರನು ತಾ
ಕಾದಿ ಕೊಂದನು ಪಾರ್ಥ ಪಾತಕನೆನ್ನದೇ ಲೋಕ ।
ಈ ದುರಂತಕ್ಕೇನುಗತಿಯುಪ
ವಾದವಾವಂಗಾದ್ಯುದಾತ [2][ನ][2]
[3]ವೈದಿಕನು ಇಹಪರಕೆ[3] ಬಾಹಿರನೆಂದನಾ ಪಾರ್ಥ ॥ ೪೭

ಮರುಳೆ ಫಲುಗುಣ ಕೇಳು [4]ಸೂರ್ಯನ
ಕಿರಣ[4] ಹೊಲೆಯುನ [5]ಚರಿಸಿದರೆ[5] ಹೊಲೆ
ಹೊರೆವುದೇ ಸ್ನಾನದಲಿ ವಿಧಿಸಲು ಬಹುದೆ [6]ನೋಡಿದನ[6] ।
ಪರಮತತ್ವಜ್ಞಾನ ನಿಷ್ಠನ
ಚರಿತವೇ ಸುಚರಿತ್ರವಾತಂ
ಗಿರದು ಕೇಳು ಸುಕರ್ಮದುಷ್ಕರ್ಮಾದಿ ಗುಣಲೇಪ ॥ ೪೮

---

[1] ಕಳಚುವೆಡೆಯೊಳು ಕಾಯುವಳಿವುದು ಉಳಿವುದೈನಿಜ (ಕ.). [2] ನು (ಸ) [3] ವೈದಿಕದ ಪರಗತಿಗೆ (ಜ. ಟ.) [4] ಕಂಗಳುವೆರಸಿ (ಟ) [5] ನೋಡಿದಡೆ (ಟ.) [6] ಮಾಡಿದರ (ಕ.)

ಕೊಂದೆ ನಾನೆನಗಾಯ್ತು ಪಾತಕ
ವೆಂದು ಮನದಲಿ ಮಱುಗುವಾತನ
ಬಂದಿಯಲಿ ಹೊಣೆಗೊಂಬವಾಹಂಕಾರ ಮಮಕಾರ |
ಕಂದು ಕಲೆತನಗೆತ್ತಣದು ನಿ
ರ್ದ್ವಂದ್ವಕನು ಮೃತಜಾತತಾನ
ಲ್ಲೆಂದು ಕಂಡರವಂಗೆ ಪಾಪವಿಲೇಪವಿಲ್ಲೆಂದ || ೪೯

ಹರಿಯೆ ಚಿತ್ತಯಿಸೈಯಹಿಂಸಾ
ಪರಮಧರ್ಮವು ಎಂಬ ವಾಕ್ಯದ
ಸರಣಿ ಸಾರೋದ್ಧಾರವಲ್ಲಾ ಸಕಲದರುಶನಕೆ |
ನೆರವಿಯಿನಿಬರ ತನ್ನವರ ಕೊರ
ಳರಿತದಲಿ ಕೊಕ್ಕರಿಸದಿರ್ದಡೆ
ನರಕದೊಳು ನೂಱೊಂದು ಕುಲ ಮುಳುಗಾಡದಿರದೆಂದ || ೫೦

ನಿರುತವರ್ಜುನ ಕೇಳಹಿಂಸಾ
ಪರಮಧರ್ಮದ ತತ್ಸ್ವರೂಪವ
ನೊರೆವೆನಾಲಿಸು ಸಚ್ಚಿದಾನಂದೈಕಘನವೆನಿಪ |
ನಿರುಪಮಾತ್ಮನ ನಿಲವನಱಿಯದೆ
ನರಕಿ ಜಡನಾ ಜೀವವೆಂಬೀ
[1]ದುರುಳ[1] ತನವೇ ಹಿಂಸೆಯಱಿವಡಹಿಂಸೆ ಕೇಳೆಂದ || ೫೧

ನೆರವಿ ಬೇಱೊಂದಿಲ್ಲ ಭೂತದ
ಹರಹು ಕರಣೇಂದ್ರಿಯದ ಸಂದಣಿ
ಮರುತ ಪಂಚಕ ಬುದ್ಧಿಕರ್ಮೇಂದ್ರಿಯದ ಕಾಲೆಣಿಕೆ |
ನೆರೆಯಲೊಂದಾಗಿಹುದು ಕಲ್ಪನೆ
ಹರೆದು ಜೀವಭ್ರಾಂತಿ ಬೀತಡೆ
ಪರಮತಾನಿಹನಲ್ಲಿ ಕೊಲುವರೆ ಸಾವನಲ್ಲೆಂದ || ೫೨

---

[1] ತರಳ (ಚ.)

ಕರ್ಮವೇ ಹೂಡುವುದು ತನುವನು
ಕರ್ಮವೇ ಸಲಹುವುದು ಕಡೆಯಲಿ
ಕರ್ಮವೇ ಕಳಚುವುದು ಜೀವಭ್ರಮೆಯ ಬಾಹಿರರ ।
ಕರ್ಮ ತಾನೇನಾದಡಾಗಲಿ
ನಿರ್ಮಮತೆಯಲಿ ಮಾಡಿ ನಮ್ಮಲಿ
ನಿರ್ಮಿಸಲು ಕಲಿಪಾರ್ಥ ನೀ ನಿರ್ಲೇಪನಹೆಯೆಂದ ॥　೩೩

ಅಸುರರಿಪು ಕೇಳಾದಿಯಲಿ ಸಂ
ಚಿಸಿದ ಕರ್ಮವು ಜೀವರನು [1]ಸಂ
ಧಿಸಲು[1] ತದ್ಗುಣದೋಷ ಕರ್ತೃವನೇಕೆ ತಾಗುವುದು ।
ಪಸರಿಸಿತಲಾ [2]ಸ್ಮಾರ್ತ[2] ಮಾರ್ಗ
[3]ಪ್ರಸರ ಕೊಂದಡೆ ಪಾಪ ಪಾವನ
ವೆಸಗೆ ಪುಣ್ಯವೆನಿಪ್ಪ ವಿವರಕ್ಕೇನು ನೆಲೆಯೆಂದ[3] ।　೩೪

ಸುಕೃತ ದುಷ್ಕೃತವೆಂಬವೇ ಬಾ
ಧಕವು ಜೀವರಿಗೀಯಹಂಕೃತಿ
ವಿಕಳತೆಗೆ ತಾ ಬೀಜ ಜನ್ಮದ ಚುಟ್ಟುಮುರಿಗಳಿಗೆ ।
ಸಕಲಕರ್ತೃತ್ವಾದಿ ಭೋಕ್ತೃ
ತ್ವಕವಿದಾತ್ಮಂಗಿಲ್ಲ ಪಿತ್ರಾ
ಧಿಕನು ತಿರುಗುತ ಲೋಕ ತಿರುಗುವುದೆಂಬ ತೆಱನಂತೆ ॥　೩೫

ಮರುಳೆ ಫಲುಗುಣ ಕೇಳು ಸಚರಾ
ಚರವೆನಿಪ ಜಗವೆನ್ನ ಲೀಲಾ
ಚರಿತದಲಿ ತೋಱುವುದು ಹರೆವುದು ನನ್ನ ನೇಮದಲಿ ।
ನಿರುತ ನೀ ಕೇಳುವರೆ ತಿರ್ಯಙ್
ನರಸುರಾದಿಗಳೆಂಬ ಸಚರಾ
ಚರವಿದಾನಲ್ಲದೆ ವಿಚಾರಿಸಲನ್ಯವಿಲ್ಲೆಂದ ॥　೩೬

---

1 ಬಂಧಿಸಲು (ಚಿ.ಪ.)　2 ಶಾಸ್ತ್ರ (ಗ.)
3 ಪ್ರಸರಪಾವನನೆನಸಗುವುದು ಇದ
ಬೆಸಸು ಮುರಹರಯೆಂದು ನುಡಿದನು ವಿನಯದಲಿ ಪಾರ್ಥ॥ (ಕ.ಚಿ.)

ಜಗದೊಳಾನೇ ಚರಿಸುವೆನು ತ
ಜ್ಜಗವಿದೆಲ್ಲವು ನನ್ನ ಮಾಯೆಯೊ
ಳೊಗೆದು ತೋಱಿಸಿ ಸುಳಿಸೆ ಸುಳಿವುದು ಹಿಡಿಯಲಡಗುವುದು ।
ಮಗುವುತನದೊಳು ಕೂಡಿ ಮೆಱೆವುದು
ಜಗವದಲ್ಲದೆ ನಿಜವ ಬೆರಸುವ
ವಿಗಡರಿಗೆ ಪರತತ್ವ ಚಿನುಮಯರೂಪ ತಾನೆಂದ ॥ ೫೭

ಬೀಸಿದರೆ ಸಿಲುಕುವರು ಮಾಯಾ
ಪಾಶದೊಳಹಂಕಾರಿಗಳು ತ
ದ್ದೇಶಕಾಲಕ್ರಿಯೆಗಳಲಿ ನಿರ್ವಾಹವನು ಬೆದಕಿ ।
ಬೇಸಱುವರಂತಿರಲಿ ಮಾಯಾ
ವ್ಯಸಿಕದ ಸಮ್ಮೋಹನದ ಕಾ
ಳಾಸವಱಿವವರೆನ್ನನಱಿವರು ಪಾರ್ಥ ಕೇಳೆಂದ ॥ ೫೮

ಏಕನಾತ್ಮನನಂತನಚಲನ
ಶೋಕನದ್ವಯನಮಲನಭವನ
ಲೋಕನಿಸ್ಪೃಹನಮಿತನಕ್ರಿಯನಹತನಭ್ರಮನು ।
ಲೋಕಗತಿ ಮಾಯಾವಿಲಾಸ ವಿ
ವೇಕಿಗಳಿಗಿದು ಬಯಲು ಫಲಗುಣ
ಸಾಕು ಗರ್ವವ ಬೀಳುಕೊಡು ಸೆಳೆ ಶರವ ಹಿಡಿ ಧನುವ ॥ ೫೯

ಜಡನಲಾ ನರನೇಸ ತಿಳುಹಲು
ಬಿಡ ವಿಕಾರವನೆಂದು ಖಾತಿಯು
ಹಿಡಿಯಲಾಗದು ಸಲುಗೆಗಂಜಿಕೆಯೇಕೆ ಬಿನ್ನಹವು ।
ಬಿಡು [1]ಜಗೌಘಾನೀಕ[1] ನಿಮ್ಮಡಿ
ಯೊಡಲೊಳಗಣಿತ[2]ವಿಹವು[2] ಗಡ ಮಿಗೆ
ನುಡಿಯುಲಮ್ಮೆನು ತತ್ಸ್ವರೂಪವ ತೋಱಬೇಕೆಂದ ॥ ೬೦

[1] ಜಗವು ನೀ ಕಂಡ (ಕ.) [2] ಲೋಕ. (ಕ.)

ಈ ದಿವಿಜರೀ ಚಂದ್ರಸೂರಿಯ
ರೀ ದಿಶಾವಳಿ ಯೀಗಗನವೀ
ಮೇದಿನೀತಳವೀ ಸಮೀರಣನೀ ಜಲಾನಲರು ।
ಈ ದನುಜರೀ ಮನುಜರೀ ನೀ
ನಾದಿಯಾಗಿಹ ಹರಹು ನಿನ್ನ ವಿ
ನೋದರೂಪಿನ ನಿಱುಗೆ [1]ಬೇಱಿನ್ನಾವ ರೂಪೆಂದ[1] ॥ ೬೧

ಹರೆದು ಮೋಹಿಸುವೀ ಚರಾಚರ
ನೆರೆದು ನಿಮ್ಮಯ ರೋಮಕೂಪದ
ಹೊರೆಯೊಳಗೆ ಹೊಳೆದಾಡುತಿಹುದೆಂಬಗ್ಗಳಿಕೆಗಳಿಗೆ ।
ಹುರುಳೆನಿಪ ಹೇರಾಳದಂಗದ
ಸಿರಿಯ ತೋಱ್ಯೈ ಕೃಷ್ಣ ನಿರ್ಮಲ
ಪರಮತತ್ವವನೊಲ್ಲೆ ನಿಮ್ಮಯ ಭಕ್ತಿ ಸಾಕೆಂದ ॥ ೬೨

ದಾಸನಾನೆನಗಮಲಮೂರ್ತಿವಿ
ಲಾಸವನು ತೋಱುವುದು ಸಲಹುವು
[2]ದೈಸಱಿವನ್ನೈ ತಾನು ಸಮ್ಯಗ್ಜ್ಞಾನಭಾಜನಕೆ[2] ।
ಮೀಸಲಳಿಯದ ಮಿಕ್ಕ ಬಯಕೆಯ
[3]ಪಾಶ ತಾಗದ[3] ನಿನ್ನ ಲೀಲೆಯ
ಭಾಸುರ ಶ್ರೀಮೂರ್ತಿಯನು ಮೈದೋಱಬೇಕೆಂದ ॥ ೬೩

ಆದಡರ್ಜುನ ನೋಡೆನುತ ಕಮ
ಲೋದರನು ಕೈಕೊಂಡನಗ್ಗದ
ನಾದಿಪುರುಷ ಶ್ರೀನಿಜವ ವಿಶ್ವಾತ್ಮಕಾಕೃತಿಯ ।
ವಾದಿಸುವ ಷಟ್ತರ್ಕಗಿರ್ಕದ
ಭೇದ ಕೊಳ್ಳದ ಸಕಲ ಲೋಕದ
ಬೀದಿವಿಸಟಂಬರಿವ ವಿಮಲ ವಿರಾಟ ರೂಪವನು ॥ ೬೪

---

[1] ಯೆನು ನೀ ತೋಱಬೇಕೆಂದ (ಟ.) [2] ದೈಸರವನಾಬಳಿಕ ಕರ್ಮಜ್ಞಾನಭಾವನೆಗೆ (ಕ.) [3] ಬಾಸೆಯುಡುಗದ (ಟ.), ಬಾಸೆಹಳಿಯದ (ದ.)

* ಬಿಳಿದು ಕರಿದೆಂಬಾಱು ವರ್ಣದ
ಹೊಲಬು ಹೊದ್ದದ ಸೂರ್ಯಕೋಟಿಯ
ಹೊಳಹು ನಖದೀಧಿತಿಯ ಹೋಲದ ನಿಜದ ಹೊಸಪರಿಯ ।
ಅಳವಿನಳತೆಯ ಜಗದ ವಾರ್ತೆಯ
ಸುಳಿವು ಸೋಂಕದ ಸಕಲ ಲೋಕ
ಪ್ರಳಯಕಾರಣ ತೆಗೆದನಗ್ಗದ ವಿಶ್ವರೂಪವನು ॥* ೬೫

ಕಾಣರುಳಿದವರೀತನೊಬ್ಬನ
ಕಾಣಿಕೆಗೆ ಕೌತುಕವ ಕಱೆದನು
ಶೋಣಿತಾಮಲಬಹಳತೇಜದ ಹೊದಱ ಹೊಯಿಲಿನಲಿ ।
ಕಾಣಲಱಿಯವನಂತವೇದ
ಶ್ರೇಣಿ ಶಿವಶಿವ ರಾಯ ಪಾರ್ಥನ
ಜಾಣತನವೆಂತುಟೊ ವಿರೂಪನ ರೂಪ ಸೆಱೆವಿಡಿದ ॥ ೬೬

ಉಬ್ಬಿದನು ಹರುಷದಲಿ ಕಂಗಳ
ಗಬ್ಬ ಮುಱಿದುದು ಮನದ ನಿಗುರಿನ
ಹಬ್ಬುಗೆಯ ಹೊಲಬಳಿಯೆ ನಾಲಗೆಯುಡುಗೆ ಹೆಡತಲೆಗೆ ।
ಸಬ್ಬಗತನ್ನೆ ಶಿವಶಿವಾ ಬಲು
ಮಬ್ಬಿನಲಿ ಮುಂದಱಿಯ್ದುದೆನ್ನಯ
ಕೊಬ್ಬನೇವಣ್ಣಿಸುವೆನೆನುತಡಿಗಡಿಗೆ ಬೆಱಗಾದ ॥ ೬೭

ಇದೆ ನಿರಂಜನತತ್ವ ಸಾಮ್ರಾ
ಜ್ಯದ ಸಘಾಟಿಕೆ ನಾವು ಕಡು ಮೂ
ರ್ಖದಲಿ ಮೈಮಱೆದೆವು ಶರೀರದ ಬಂಧುಕೃತ್ಯದಲಿ ।
ಯದುಗಳನ್ವಯದಾತ ನಮಗೊ
ಳ್ಳಿದನು ಸೋದರಭಾವನೆಂದೇ
ಮದಮುಖದಿ ಕಡುಗೇಡ ಕೆಟ್ಟೆನು ಶಿವಶಿವಾಯೆಂದ ॥ ೬೮

* ಈ ಪದ್ಯವು (ಚ) ಪ್ರತಿಯಲ್ಲಿಲ್ಲ.

ಪರುಷ ಕಲ್ಲೆಂದಳುಕಿ ಸುರತರು
ಮರನು ತೆಗೆಯೆಂದಮರಧೇನುವ
ಪರರ ಮನೆಯಲಿ ಮಾಱಿ ಚಿಂತಾಮಣಿಗೆ ಕೈದುಡುಕಿ ।
ಹರಳು[1][ತೆ][1]ಕ್ಕೆಯಿದೆಂಬ ಪಾಪಿಗೆ
ಪರಮಗುರು ನಾನಾದೆನ್ಕೆ ಮುರ
ಹರನ ಮೈದುನನೆಂದು ಗರ್ವಿಸಿ ಕೆಟ್ಟೆನಕಟೆಂದ ॥ ೭೯

ನೊರಜು ತಾನೆತ್ತಲು ಮಹತ್ವದ
ಗಿರಿಯದೆತ್ತಲು ಮಿಂಚುಬುಳುವಿನ
ಕಿರಣವೆತ್ತಲು ಹೊಳಹಿದೆತ್ತಲು ಕೋಟಿಸೂರಿಯರ ।
ನರಮೃಗಾಧಮನೆತ್ತಲುನ್ನತ
ಪರಮತತ್ವವಿದೆತ್ತಲಕಟಾ
ಮರುಳು ನನ್ನವಗುಣವದಾವುದ ಕಡೆಗೆ ಹಲುಬುವೆನು ॥ ೭೦

ಮೇಳ ಗಡ ನಮಗೀತನಲಿ ಭೂ
ಪಾಲಕರು ಗಡ ನಾವು ಸಾರಥಿ
ಯಾಳು ಗಡ ಹರಿ ನಾವು ವೀರರು ಗಡ ವಿಚಿತ್ರವಲ ।
ಮೇಲುಗಾಣದ ಪಾರ್ಥನೆಂಬೀ
ಕಾಳುಮೂಳನ ವಿಧಿಯನೇಪರಿ
ವೇಳುವೆನು ಹರಯೆನುತ ಕಂಗಳನೆವೆಗಳಲಿ ಬಿಗಿದ ॥ ೭೧

ಅಡಿಗಡಿಗೆ ಕಣ್ದೆಱೆದು ಮುಚ್ಚುವ
ನಡಿಗಡಿಗೆ ಮೈಬೆದಱಿ ಬೆಱಗಹ
ನಡಿಗಡಿಗೆ ಮೆಯ್ಯೊಲೆವನುಬ್ಬಿದ ರೋಮ ಪುಳಕದಲಿ ।
ಅಡಿಗಡಿಗೆ ಮನನಲಿದು ಹೊಂಗುವ
ನಡಿಗಡಿಗೆ ಭಯಗೊಂಡು ಕರಗುವ
ನೊಡಲನವನಿಗೆ ಹರಹಿ ನಿಡುದೋಳುಗಳ ನೀಡಿದನು ॥ ೭೨

---

[1] ಟೆ (ಕ.ಗ.)

ಮುರಹರ ತ್ರಾಯಸ್ವ ಕರುಣಾ
ಕರ ಪರಿತ್ರಾಯಸ್ವ ಲಕ್ಷ್ಮೀ
ವರ ಪರಿತ್ರಾಯಸ್ವ ದನುಜಾಂತಕ ಪರಿತ್ರಾಹಿ ।
ಚರಣಭಜಕಕುಟುಂಬಕನೆ ಘನ
ದುರಿತವಿಪಿನಕೃಶಾನುವೇ ಭವ
ಹರ ನಿರೀಕ್ಷಿಸು ರಕ್ಷಿಸೆನ್ನನೆನುತ್ತ ಹೊರಳಿದನು ॥

ದೇವ ಭಕ್ತಜನಾರ್ತಪಾಲಕ
ದೇವ ಬಹಳಕೃಪಾಮಹಾರ್ಣವ
ದೇವ ಸರ್ವೇಶ್ವರ ಸದಾತ್ಮಕ ಸಕಲ ನಿಷ್ಕಳನೆ ।
ಸೇವಕರಲಾರೈವರೇ ಸುಗು
ಣಾವಗುಣವನು ನಿಮ್ಮ ಭೃತ್ಯನ
ಭಾವ ಬೆಚ್ಚಿತು ವಿಶ್ವರೂಪವ ಬೀಳುಕೊಡಿಯೆಂದ ॥

ಲೋಕವಱಿಯಲನಂತವೇದವು
ಮೂಕನಾದವು ಜೀಯ ಜಡನವಿ
ವೇಕಿ ಮಾನವ ಮಶಕವಿದು ನಿಮ್ಮಳತೆಗೈದುವುದೇ ।
ಸಾಕಿಕೊಳ್ಳೈ ಕೃಷ್ಣ ನೋಡಲು
ನೂಕದೆನ್ನೈವೆ ಸೀವುತಿವೆ ಕರು
ಣಾಕರನೆ ಕೈಗಾವುದೈ ಕೃಪೆಮಾಡಬೇಕೆಂದ ॥

ಎಳನಗೆಯು ಸಿರಿಮೊಗದ ಚೆಲುವಿನ
ಹೊಳೆಹೊಳೆವ ನಿಟ್ಟೆಸಳುಗಂಗಳ
ತೊಳಪ ಕದಪಿನ ಮಿಸುಪ ಕಾಂತಿಯ ಮಕರಕುಂಡಲದ ।
ಲಲಿತಕಂಠದ ಕೌಸ್ತುಭೋರ
ಸ್ಥಳದ ನಿಡುದೋಳುಗಳ ಕೋಮಲ
ತಳಿತ ಪೀತಾಂಬರದ ಮುನ್ನಿನ ರೂಪ ತೋಱೆಂದ ॥

ಅಳಕನಿಚಯದ ಕುಂಭಿನೊಸಲಿನ
ತಳಿತೆವೆಯ ನಿಡುಹುಬ್ಬುಗಳ ಕೋ
ಮಲಸುಮುಕ್ತಾಫಲಕೆ ಸೆಣಸುವ ದಂತಪಂಕ್ತಿಗಳ ।

ಲಲಿತಚುಬುಕದ ಚಾರುತರ ಕೆಂ
ದಳದ ಸುಳಿನಾಭಿಯು ಸವರ್ತುಳ
ವಿಳಸಿತೋರುದ್ವಯದ ಮುನ್ನಿನ ರೂಪ ತೋಱೆಂದ ‖ ೭೭

ಪರಮುಚಿನುಮಯು ನೀನು ಕರ್ಮದ
[1]ಸರಣಿಯೆನ್ನದು[1] ನೀ ಚರಾಚರ
ಭರಿತ ಭಾರಿಯ ವಿಶ್ವಮಯನವ್ಯಕ್ತನದ್ವಯನು ।
ನರನ ಮತಿಯಿದು ಮಂದಮತಿ ಗೋ
ಚರಿಸಲಱಿವುದೆ ದೇವ ಕರುಣಿಸು
ಕರುಣಿಸೈ ಮೈದೋಱು ತನ್ನೊಡನಾಡಿತನದನುವ ‖ ೭೮

ನಳಿನನಾಭ ಮುಕುಂದ ಮಂಗಳ
ನಿಳಯ ಭಕ್ತವ್ಯಸನಿ ದೈತ್ಯ
ಪ್ರಳಯಪಾವಕ ಭಕ್ತವತ್ಸಲ ಭಕ್ತಸುರಧೇನು ।
ಲಲಿತಮೇಘಶ್ಯಾಮ ಸೇವಕ
ಸುಲಭ ಶೌರಿ ಮುರಾರಿ ಭಕ್ತಾ
ವಳಿಕುಟುಂಬಕ ಕೃಷ್ಣ ಕೇಶವ ಕರುಣಿಸೆನಗೆಂದ ‖ ೭೯

ಪರಮ ಪುಣ್ಯಶ್ಲೋಕ ಪಾವನ
ಚರಿತ ಚಾರುವಿಲಾಸ ನಿರ್ಮಲ
ವರಕಥನಲೀಲಾಪ್ರಯುಕ್ತಪ್ರಕಟಭುವನಶತ ।
ನಿರವಯುವ ನಿರ್ದ್ವಂದ್ವ ನಿಸ್ಪೃಹ
ನಿರುಪಮಿತ ನಿರ್ಮ್ಮಾಯ ಕರುಣಾ
ಕರ ಮಹಾತ್ಮ ಮನೋಜವಿಗ್ರಹ ಕರುಣಿಸೆನಗೆಂದ ‖ ೮೦

ದೇವ ಲಕ್ಷ್ಮೀಕಾಂತ ವರರಾ
ಜೀವಲೋಚನ ಭೂತಭಾವನ
ರಾವಣಾಂತಕ ಗೋಪವೇಷ ವಿಲಾಸ ಜಯವಾಸ ।

---

[1] ಕರಣಿ ನಿನ್ನದು (ಕ.)

ದೇವಕೀನಂದನ ಯಶೋದಾ
ದೇವಿಯುನ್ನತಪುಣ್ಯಫಲ ತಲೆ
ಗಾವುದೈ ತರುವಲಿಗೆ ತೋಱೈ ಮುನ್ನಿನಾಕೃತಿಯ ॥ ೮೧

ನಿಗಮನಿಕರವ ಸೆಳೆವ ತಿರುಗುವ
ನಗಕೆ ಬೆನ್ನನು ಕೊಡುವ ಜಲನಿಧಿ
ಮಗುಚೆ ಮಹಿಯನು ಮೊಗೆವ ಮಗುವಿನ ನುಡಿಗೆ ಮೈಗೊಡುವ ।
ಗಗನಕಂಘ್ರಿಯನಿಡುವ ತಾಯ
ಕೈಗಳಿಗಕ್ಕೆಯ ತೋರ್ಪ ರಾಣಿಯ
ಸೊಗಸ ಸಲಿಸುವ ಕೃಪೆಯನೆನ್ನಲಿ ತೋಱಬೇಕೆಂದ ॥ ೮೨

ಮಱೆದು ನಾಲಗೆಗೊನೆಗೆ ನಾಮದ
ನಿಱುಗೆ ನೆಲೆಗೊಳೆ ನಿನ್ನನೇ ಸಲೆ
ತೆಱುವ ಬಿರುದನು ಬಲ್ಲೆನೊರಲಿದು ನಿನ್ನ ಹಲುಬಿದರೆ ।
ಉಱುವ ಹೆಂಗುಸಿನುನ್ನತಿಕೆಯಲಿ
ಸೆಱಗು ಬೆಳೆದುದ ಕಂಡೆನೈ ಸೈ
ಗಱೆವುದೈ ಕಾರುಣ್ಯವರುಷವನೆನ್ನ ಮೇಲೆಂದ ॥ ೮೩

ಹಸುಳೆಗಮರಾಚಲದ ಹೊಱೆ ಸೈ
ರಿಸುವುದೇ ಮಱಿಹುಲ್ಲೆ ಸಿಂಹದ
ಮಸಕಕಿದಿರೇ [1]ಲತೆಯ ಎಳಗುಡಿ[1] ಮಾಳಿಗೆಗೆ ತೊಲೆಯೆ ।
ಸಸಿದರಳೆ ಸಿಡಿಲೆಱಗಿದರೆ ಜೀ
ವಿಸುವುದೇ ನಿಮ್ಮಡಿಯ ವಿಶ್ವ
ಪ್ರಸರರೂಪಿಂಗಾನು ಲಕ್ಷ್ಯವೆ ಸಲಹಬೇಕೆಂದ ॥ ೮೪

ಅಣಲೊಳಷ್ಟಾದಶ ಮಹಾಕ್ಷೋ
ಹಿಣಿಗಳಡಗಿದವೆಂಬುದಿದು ಭೂ
ಷಣವೆ ಜೀಯ ಮುರಾರಿ ನಿನ್ನಯ ರೋಮಕೂಪದಲಿ ।

---

[1] ಎಳಲತೆಯ ಕುಡಿ (ಟ.)

ಗಣನೆಗೆಟ್ಟಜರುದ್ರಸುರಸಂ
ದಣಿಗಳಿವೆ ಜಠರದ ಜಗಂಗಳ
ನೆಣಿಸಬಲ್ಲವರಾರು ಸಾಕಿನ್ನೆನ್ನ ಸಲಹೆಂದ ॥ ೮೫

ವಿಶ್ವ ನಿನ್ನಯ ಮಾಯೆ ನಿರ್ಮಲ
ವಿಶ್ವರೂಪನು ನೀನು ಬಗೆವಡೆ
ವಿಶ್ವ ನಿನ್ನೊಳು ಸುಳಿವುದಳಿವುದು ಲಲಿತಲೀಲೆಯಲಿ ।
ವಿಶ್ವವಲ್ಲಭ ನೀನು [1]ನಿನ್ನದು
ವಿಶ್ವಪಾಲನೆ[1] ವಿಶ್ವಚೇಷ್ಟಕ
ವಿಶ್ವದಾಧಾರನೆ ಜಗಾತ್ಮನ ಸಲಹಬೇಕೆಂದ ॥ ೮೬

ವೀರ ದೈತ್ಯಕುಠಾರ ಗಳಿತವಿ
ಕಾರ ಗೋಪೀಜಾರ ಲಲಿತವಿ
ಹಾರ ನಿಗಮವಿದೂರ ಸುಖಸಾಕಾರ ಗತಪಾರ ।
ಧೀರ ಜಗದಾಧಾರ ಲಸದಾ
ಚಾರ ಕಮಲಾಗಾರ ಭುವನಾ
ಧಾರ ನಿರ್ಜಿತಮಾರ ಮುರಹರ ಸಲಹಬೇಕೆಂದ ॥ ೮೭

ಭಯದ ಬಿಗುಹಿನ ಭಾರ ಭಕುತಿಯ
ನಯದ ಬಿನ್ನಹದೋಜೆಯನು ಚಿನು
ಮಯನು ಕೇಳಿದು ಮೆಚ್ಚಿ ಡಿಂಗರಿಗಂಗೆ ನಗುತೆಂದ ।
ನಿಯತವೇ ನೀನಲ್ಲಲೇ ಸೇ
ನೆಯನು ಕೊಲುವನು ಕಾವವನು ನಿ
ಶ್ಚಯವ ನಿನ್ನೊಳು ತಿಳಿದು ಬಿನ್ನಹ ಮಾಡು ಸಾಕೆಂದ ॥ ೮೮

ಎನಿತು ಜಗವಡಗಿದವು ಕೌರವ
ರೆನಿಬರಡಗಿತು ನೋಡು ಧರ್ಮನ
ತನಯ ಭೀಮಾರ್ಜುನರು ಭೀಷ್ಮದ್ರೋಣ ಮೊದಲಾದ ।
ಎನಿಬರಡಗಿತು ನೋಡು ಬಾಂಧವ
ಹನನ ನಿನಗುಂಟಾದಡೀಗಳೆ
ನೆನೆದು ಬಿನ್ನಹಮಾಡೆನುತ ಪಾರ್ಥಂಗೆ ಹರಿ ನುಡಿದ ॥ ೮೯

[1] ನೀನೇ ವಿಶ್ವನಾಟಕ (ಟ.)

ಗುರುಗಳಿಗೆ ನಾ ತಪ್ಪೆನೆಂದೇ
ಮುರಿದಡೆನಗದು ಖಾತಿ ಭೀಷ್ಮನು
ವರಪಿತಾಮಹನೆಂದು ಹೊಳೆದರೆ ಬಳಿಕಸಹ್ಯವದು ।
ಅರಿಬಲವು ಮುನ್ನುಳಿವುದೋ ನೀ
ನರಿವೆಯೋ ಲೇಸಾಗಿ ಎನ್ನೊಳು
ನರ ನಿರೀಕ್ಷಿಸೆನುತ್ತ ನುಡಿದನು ದಾನವಧ್ವಂಸಿ ॥ ೬೦

ನೆನೆದಡಜಕೋಟಿಗಳು ನಿಮ್ಮಯ
ಮನದೊಳಗೆ ಜನಿಸುವರುಪೇಕ್ಷೆಯೊ
ಳನಿತು ಕಮಲಜರಳಿವರೆಂದರೆ ನಿಮ್ಮ ಮಹಿಮೆಯನು ।
ನೆನೆಯಲಳವೇ ಜೀಯ ಸಾಕಿ
ನ್ನನುವರದೊಳೆನಗೇನ ಬೆಸಸಿದ
ರನಿತ ತಾ ಮುಖದಿರುಹಿದರೆ ಡಿಂಗರಿಗನಲ್ಲೆಂದ ॥ ೬೧

ಮರಳಿ ಮುನ್ನಿನ ರೂಪನಂಗೀ
ಕರಿಸಿ ವಾಘೆಯ ಕೊಂಡು ತುರಗವ
ತಿರುಹಿ ಲುಳಿವಡೆಸುತ್ತ ಪಾರ್ಥಗೆ ಮಾಯೆಯನು ಬೀಸಿ ।
ಶರಧನುವ ಕೊಳ್ಳೇಳು ಕೈಕೋ
ಪರಬಲದ ತೋಟಿಯನು ತೋಱೈ
ಬಿರುದ ಘಾತಕತನವನೆಂದನು ನಗುತ ಮುರವೈರಿ ॥ ೬೨

ಮೋಹ ಮಿಗೆ ಪಾಂಡವ ಮಮ ಪ್ರಾ
ಣಾ ಹಿ ಯೆಂಬೀ ಬಿರುದ ಸಲಿಸಲು
ಗಾಹಿನಲಿ ಮೇದಿನಿಯು ತಿಣ್ಣವನಿಳುಹಲೋಸುಗರ ।
ಆಹವದೊಳರ್ಜುನನ ರಥದೊಳು
ವಾಹಕನು ತಾನಾಗಿ ಶರಣ
ಸ್ನೇಹ ಸಂಸಾರಾನುರಾಗನು ಸುಳಿಸಿದನು ರಥವ ॥ ೬೩

ಮೂರನೆಯ ಸಂಧಿ ಮುಗಿದುದು.

# ನಾಲ್ಕನೆಯ ಸಂಧಿ

**ಸೂಚನೆ** ‖ ಕವಿದು ಹೆಳಹಿದುದುಭಯಬಲ ಶಿವ
ಶಿವ ಮಹಾದೇವಮಮ ಪದರಜ
ರವಿಯ ತಿವಿದುದು ದಿವಸನಳಿದುದು [1]ನಳಿ[1]ದನಹಿರಾಯ ‖

ಅವಧರಿಸು ಧೃತರಾಷ್ಟ್ರ ಗಂಗಾ
ಭವನ ಸುಯಿಧಾನದಲಿ ಕುರುಬಲ
ನಿವಹ ಧೃಷ್ಟದ್ಯುಮ್ನನಾರೈಕೆಯಲಿ ರಿಪುಸೇನೆ ।
ತವಕ ಮಿಗೆ ಮೋಹರಿಸಿ ಕೈವೀ
ಸುವ ಮಹೀಶರನೀಕ್ಷಿಸುತಲಾ
ಹವಮಹೋದ್ಯೋಗಕ್ಕೆ ಬೆಱಗಾಯಿತ್ತು ಸುರಕಟಕ ‖ ೧

ಎರಡು ಬಲ ಕೈಲಾಗನೀಕ್ಷಿಸು
ತಿರೆ ಕೃತಾಂತಾಲಯಕೆ ವಾಹಿನಿ
ಸರಿವುದೆಂಬಂದದಲಿ ಕೈವೀಸಿದರು ಭೂಭುಜರು ।
ಅರರೆ ಮೂಡಣ ಶರಧಿ ಪಡುವಣ
ಶರಧಿಗಾಂತುದೊ ರಣಚಮತ್ಕೃತಿ
ಸುರರ ನಯನಾಂಗಣಕೆ ಕವಿಸಿತು ಕೌತುಕಾಂಬುಧಿಯ ‖ ೨

ಎಲೆಲೆ ಕವಿಕವಿ ಬೆರಸುಬೆರಸಿ
ಟ್ಟಳಿಸು ತಿವಿತಿವಿ ಭಲರೆ ಭಲರತಿ
ಬಲರೆ ಹಿಂಚದಿರಿನ್ನು ಹೊಯ್'ಹೊಯ್' ಚೂಣಿಗರನೆನುತ ।
ಬಲಜಲಧಿ ಮುಕ್ಕುಳಿಸಿ ಮಿಗೆ ಹೆ
ಕ್ಕಳಿಸಿ ಕವಿದುದು ಗಿರಿಯ ಬೈಸಿಕೆ
ಕಳಚಿತಹಿಪನ ಕೊರಳು ಕುಸಿದವು ಕಮಠನೆದೆಬಿರಿದ ‖ ೩

ಒದಱಿ [2]ಬಲನೊಡನೊಡನೆ ಹೆಳಹಿದೊ
ಡದಿರೆ ನೆಲನವ್ವಳಿಸಿ[2] ದಿಕ್ಕರಿ
ಮದವಡಗಿದವು ಕುಣಿದು ಮೆಟ್ಟಿದರಹಿಪನೊಡಲೊಳಗೆ ।

---

[1] ನಲ (ಕ.), ಕುನಿ (ಟ.), ಮಣಿ (ದ.)   [2] ಜಱಿದೊಡಹೆಳಹಿದರೆ ನೆಲನದಿ
ರಿತವ್ವಳಿಸಿ (ಕ.)

ಹೊದಱುದಲೆ ಹೊಕ್ಕಾಳೆ ಬೆರಳಿನ
ತುದಿಯ ತುಟಿಯಲಿ [1]ಬೊಬ್ಬಿಱಿದಡಿನ
ನದಿರೆ[1] ದಳವುಳಿಸಿದುದು ಕೌರವಪಾಂಡವರ ಸೇನೆ ॥ ೪

ರಣದೊಳಾದ್ಡುದು ಬೋನವಾರೋ
ಗಣೆಗೆ ಬಿಜಯಂಗೈವುದನುಚರ
ಗಣಸಹಿತವೆಂದತಿಬಲರು ಕಾಲಂಗೆ ದೂತರನು ।
ಅಣಿಯೊಳಟ್ಟಿದರೆನಲು ಪಡೆಯುರ
ವಣೆಯ ಪದಹತಧೂಳಿ ಗಗನಾಂ
ಗಣಕೆ ಕವಿದುದು ಬಳಿಕಲಬುಜಭವಾಂಡಮಂಡಲವ ॥ ೫

ಚಲನದಿಂದುದಯಿಸಿದ ಶೂದ್ರತೆ
ಗಲಸಿ ಸುರಗಂಗೆಯಲಿ ಮಿಂದು
ಚ್ಚಳಿಸಿ ರಜತಾದ್ರಿಯಲಿ ಶೂಲಿಯ ಪದಯುಗವ ಭಜಿಸಿ ।
ಬಳಿಕ ನಾಕವನೈದಿ ಸುಮನೋ
ಲಲನೆಯರ ಕುಂತಳಕೆ ಹಾಯ್ದುದು
ಬಲದ ಪದಹತಧೂಳಿ ಗೆಲಿದುದು ವಾಜಪೇಯಿಗಳ ॥ ೬

ಹರಿಗೆ ಕೆಂಪಿನ ಝುಗೆ ಸುರಾಂಗನೆ
ಯರಿಗೆ ಸುಭಟವ್ರಜಕೆ ಕುಂಟಣಿ
ವರದಿಗಂಗನೆಯರಿಗೆ ಬೈತಲೆಗೆಸೆವ ಸಿಂಧೂರ ।
ಸುರಪನನಿಮಿಷತನಕೆ ರಿಪುವೆನ
ಲುರವಣಿಸಿ ಕೆಂದೂಳಿ ನಭಕು
ಪ್ಪರಿಸೆ ಹೊಯ್ದಾಡಿದರುಭಯಚತುರಂಗಬಲ ಹಳಚಿ ॥ * ೭

[1] ಬೊಬ್ಬಿಡಲ:ದಿವವದಿರೆ (ಟ.)

* (ಚ.ಜ.ಟ.) ಪ್ರತಿಗಳಲ್ಲಿ ಮಾತ್ರ ಈ ಕೆಳಗಿನ ಪದ್ಯವು ೭ನೇ ಪದ್ಯವಾದ ಮೇಲೆ ಇದೆ.

ಝಡಿವ ಕೈದುಗಳುರಿಯ ಕೆಚ್ಚುವ
ನಡಸಿ ಕಾರಿದವಲಗು ಖಣಿಖಟಿ
ಪಿಡುವ ಪನಿ ಮಿಗೆ ತುಂಬಿತಂಬುಜಬಂಧುವಾಲಯದ ॥
ಕಡುಗಿ ಹೊಯಿದಾಡಿದರು ಡಾವಣಿ
ವಿಡಿದು ಜೋಲುವ ಕರುಳ ಹಿಣಿನೊಳು
ತೊಡಕಿ ತೋಟಿಯ ಭಟರು ತಱುಬಿದರಂತಕನ ಪುರಿಗೆ ॥

ಬಿಡದೆ ಕಡಿದಾಡಿದರು ಸೇನಾ
ಗಡಲು ರಕುತದ ಕಡಲನುಗುಳಿತು
ಬಿಡದೆ ಸುಂಟರುಗಾಳಿ ವಿಲಯದ ಮಳೆಯ ಪಸೆದಂತೆ ।
ಒಡೆದು ನಾನಾಘಟ್ಟುಗಳ ಮೈ
ವಿಡಿದು ವಾರಿಸುವರುಣಜಲದಲಿ
ಕಡಿಕುಗಳು ಬೆಂಡೇಳೆ ದಂತಿಗಳಟ್ಟೆ ಕೊಡೆನೆಗೆಯೆ ॥ ೮

ಲಗ್ಗೆ ಮಸಗಿತು ಸೂಳುವೊಯಿಲಿನ
ಬೊಗ್ಗಿನಲಿ ಮುಂಕೊಂಡು ಮೋಹರ
ವೊಗ್ಗೊಡೆದು ಹೆಣಗಿದುದು ಕೇಶಾಕೇಶಿ ಯುದ್ಧದಲಿ ।
ಮೊಗ್ಗರವ ಕೆದಱಿದರು ಹೊಯ್ದರೆ
ಮುಗ್ಗಿದರು ಕಡಲಿಡುವ ರಕುತದ
ಸುಗ್ಗಿ ಶಾಕಿನಿಯರಿಗೆ ಸೇರಿತು ಭೂಪ ಕೇಳೆಂದ ॥ ೯

ತೆಗೆದುದುಬ್ಬಿದ ಧೂಳಿ ಹೆಣಸಾ
ಲುಗಳು ಹರೆದವು ರಕುತದಱೆವೊನ
ಲುಗಳು ಹರಿದವು ಹೊರೆದನಂತಕನುರುಪರಿಗ್ರಹವ ।
ಅಗಿದು ಮುಗ್ಗಿತು ಚೂಣಿ ಬಲುಕಾ
ಳೆಗವ ನೊಯ್ಯಾರಿಸುತ ರಾಯರು
ತೆಗಸಿದರು ಸೇನೆಯನು ನೂಕಿದರಂದು ಬಿಲ್ಲವರ ॥ ೧೦

ಪುಲಿದೊಗಲ ಸೀಸಕದ ಕಿಗ್ಗ
ಟ್ಟೊಲೆವ ಸುರಗಿಯ ಕಾಂಚನದೊಳರೆ
ಬಲಿದ ಬಿಲ್ಲಂ ಬಿಗಿದ ತಿರುವಿನ ಬೆರಳ [1]ಕೋಲು[1]ಗಳ ।
ಬಲಿದ ಮುಂಗೈಹೊದೆಯ ಬಿರುದಿನೊ
ಳುಲಿವ ಘಂಟೆಯ ಬೆನ್ನಲೆವ ಬ
ತ್ತಳಿಕೆಗಳಲೈದಿತ್ತು ಬಿಲ್ಲಾಳುಭಯಸೇನೆಯಲಿ ॥ ೧೧

---

[1] ಹೊಯ್ಲು (ಕ.)

ಬೊಬ್ಬಿಱಿದು ಮೊಳಕಾಲನೂಱಿದ
ರುಬ್ಬಟೆಯುಲಿದಿರಾಂತು ಕಾಲನ
ಹೆಬ್ಬೆಳಸು ಹುಲಿಸಾಯ್ತು ಬರಹೇಳೆಂಬವೋಲೊದಱಿ ।
ಹಬ್ಬುಗೆಯು ಜೇವೊಡೆಯು ಝಾಡಿಯು
ತೆಬ್ಬುಗಳ ತೆಗೆವೆರಳುಗೋಲಿನ
ಕೊಬ್ಬಿನಾಳೆಚ್ಚಾಡಿತಿಕ್ಕಿದ ಮುಂಡಿ [1]ಚೆಂಡಿಸದೆ[1] ॥ ೧೨

ಬೆರಳ [2]ಶರಸಂಧಾನ[2] ದೃಷ್ಟಿಯ
[3]ಮುರಿದ ಮುಷ್ಟಿಯ ಕುಂಡಲಿತ ಕಿವಿ
ವರೆಯ ತೆಗಹಿನ ತೋಳ ವೀರರು[3] [4]ತೂಳಿದರು[4] ಕಣೆಯು ।
ಅರರೆ ಕವಿಕವಿದಂಬು ಕಡಿದವು
ಕೊರಳನುಗಿದವು ಜೋಡನೊಡಲೊಳು
ಹೊರಳಿದವು ಹೊಡೆಗೆಡಹಿದವು ಹೊಕ್ಕೆಸೆವ ಹೂಣಿಗರ ॥ ೧೩

ಕಣೆ ಕಣೆಯು ಹಳಚಿದವು ಮಾರ್ಗಣೆ
ಕಣೆಯು [5]ಕಡಿದವು[5] ಕವಿವ ಕಣೆ ಕಿಱು
ಗಣೆಯು ಮುಕ್ಕುಳಿಸಿದವು ಹೆಕ್ಕಳಿಸಿದವು ಹಂದೆಗರ ।
ಖಣಿಖಟಿಲು ನಿರಿನಿಳಿಲು ಘುರಿಘುರಿ
ಘಣಿಲು ದೊಪ್ಪನೆ ಕೊಯ್ವು ಸೀಳುವ
ಹೆಣಗೆಡಹುವಬ್ಬರಕೆ ಮಿಗಲೊದಗಿದರು ಬಿಲ್ಲವರು ॥ ೧೪

ಉರಗಬಲದುರವಣಿಯೊ ವಾರಿದ
ತರುಗಳುಪಶಾಖೆಗಳೊ ಕಾಲನ
ಹರವರಿಯೊ ಹೆಬ್ಬೆಸ ಮುತ್ತುವ ವಿಹಗಸಂತತಿಯೊ ।
ತರಣಿ ತಲ್ಲಣಿಸಿದನು ಹೊಗರಲ
ಗುರವಣಿಸಿ ಹೊದಱೆದ್ದು ಹಿಳುಕ
ಬ್ಬರಿಸಿ ಗಬ್ಬರಿಸಿದವು ದಿಗುತಟವನು ಶರವ್ರಾತ ॥ ೧೫

[1] ಸಂಚಿಸದೆ (ಚ.) [2] ಸಂಧಾನದಲಿ (ಟ.) [3] ಮುರಿದಲೆಯು ಕಿವಿವರೆಯು ತೆಗಹಿನ ಭರದ ಬಲುಹಿನ ತೋಟಿಕಾಱರು (ಟ.) [4] ತೂಱಿದರು (ಪ.) [5] ನಣಿದವು (ಟ.)

ಹೆಣಗಿ ಹಿಣಿಲಿಱಿದಭ್ರದಲಿ ಸಂ
ದಣಿಸಿ ಕಣೆ ಕೈಕೊಂಡವಂಬರ
ಮಣಿಗೆ ನಡೆದುದೊ ತಿಮಿರರಾಜನ ದಂಡು ಮಂಡಳಿಸಿ ।
ಮಣಿಮಕುಟದಿಳೆಗೊಯ್ಲ್ಲ ನೆಲದಾ
ವಣಿಯೊ ಗಗನಾರ್ಣವದ ವಾಡಬ
ಗಣವೊ ಕೌತುಕವೆನಿಸಲೆಚ್ಚಾಡಿದರು ಬಿಲ್ಲವರು ॥ ೧೬

ರೇಣು ಹತ್ತಿದ ರವಿಯ ಮಸೆಯಲು
ಸಾಣೆಗಿಕ್ಕಿತೊ ಭಗಣರತ್ನವ
ನಾಣೆಗಳೆಯಲು ಕಮಲಭವ ಸೃಜಿಸಿದ ಸಲಾಕೆಗಳೊ
ಕಾಣೆನಭ್ರವನವನು ದಿಕ್ಕುಗ
ಳೇಣು ಮುಱಿಯಲು ಹೊಕ್ಕೆಸುವ ಬಿಲು
ಜಾಣರುರವಣೆ [1]ಲಜ್ಜಿಸಿತು[1] ಲೋಕದ ಧನುರ್ಧರರ ॥ ೧೭

ವೀರ ಧಣುಧಣು ಪೂತುರೇ ಬಿಲು
ಗಾಱ ಮಝುರೇ ಚಾಪತಂತ್ರವಿ
ಶಾರದಾ ಎನುತೊಬ್ಬರೊಬ್ಬರ ಬಿರುದ ಮೂದಲಿಸಿ ।
ಓರಣದ ಕಣೆಗಳಲಿ ತಲೆಗಳ
ತೋರಣವ ಕಟ್ಟಿದರು ಸೇನಾ
ಮಾರಣಾಧ್ವರವೆಸೆದುದರುಣಜಲಾಜ್ಯಧಾರೆಯಲಿ ॥ ೧೮

ಪ್ರಳಯದಿವಸದ ಪಟುಪವನನೀ
ಹಿಳುಕು[2]ಗಱಿ[2]ಯೊಳುದಿಸಿದುದೋ ಮಿಗೆ
ಪೊಳಗಿ ಪೋದುವ ಸಿಡಿಲ್ಗಳಂಬಿನ ಮೊನೆಯೊಳುದಿಸಿದುದೊ ।
ಜಲಧಿಯಲಿ ಜಂಗುಳಿಸಿ ಕುಧರಕೆ
ಕುಲಿಶಭೀತಿಯ ಬೀಱ ಕಣೆ ಬಳಿ
ಸಲಿಸಿ ಹರಿದಾಡಿದವು ಸುಭಟರ ಗೋಣ ಗುಱಿಮಾಡಿ ॥ ೧೯

---

[1] ಯೋಂಜಿಸಿತು (ಟ.) [2] ಗಾಳಿ (ಕ. ಗ.)

ಕುಣಿದೆಸುವ ಕುಕಿಲಿಱುವ ಬಿರುದರ
ನಣಕಿಸುವ ಬಲುಬಿಲ್ಲನೊದಱಿಸಿ
[1]ಹಣ್ಗಿ[1] ಕಣು ನಟ್ಟಾಲಿಗೊಳೆ ತಳಮುಂಡಿ ಮರನಾಗೆ ।
ಹೊಣಕಿಗರು ರಣದವಕಿಗರು ಬಿಱು
ಗಣೆ ಸವೆಯಲೆಚ್ಚಾಡಿದರು ಮಿಗೆ
ಮಣಿಯದದಟರು ಸುರಗಿಗಳನುಗಿದೊಡನೆ ಹಳಚಿದರು ॥ ೨೦

ಅಹಿಯ ನಾಲಗೆ ಮೃತ್ಯುವಿನ ಹಲು
ಗುಹೆಗಳನು ಕಳೆದಂತೆ ಸಿಡಿಲಿನ
ಬಹಳ ಧೃತಿ [2]ತೆಗೆದಂತೆ[2] ಕುಲಿಶದ ತಿರುಳ ಮಸೆದಂತೆ ।
ಮಹಿಯದಿರಲದಿರಾಂತು ಸುರಗಿಯೊ
ಳಹಮಿನದಟರು ಬಿರುದುಗೆದಱು
ತ್ತಹಿತರಿಱಿದಾಡಿದರು ಪಡೆದರು ರೌದ್ರರಂಜನೆಯ ॥ ೨೧

ಮೀಱಿ ತಳಸಂಚದೊಳು ಮೊನೆಯನು
ತೋಱಿ ತಿರುಪಿನೊಳಣೆದು ಕಳಚುವ
ರೇಱುಗಾಣದೆ ಮಧ್ಯಸಂಚಕೆ ನಿಲುಕಿ ಕೈಮಾಡಿ ।
ಜಾಱಿ ಸುರಗಿಯೊಳಣೆವರಳುಕದೆ
ಮೀಱಿದುಪ್ಪರಸಂಚದಲಿ ಕೈ
ದೋಱಿ ದಂಡೆಯನೆತ್ತಿ ಕಾದಿತು ಸುರಗಿಯತಿಬಲರು ॥ ೨೨

ಅಣೆದರೌಕುವ ಸೋಂಕಿ ತಿವಿದರೆ
ಹೆಣನ ತೋಱುವ ಹಜ್ಜೆದೆಗೆದರೆ
ಜುಣುಗಲೀಯದೆ ಮೇಲೆ ಕವಿಸುವ ಮೀಱಿ ಕೈಮಾಡಿ ।
ಕೆಣಕಿದರೆ ಝುಂಕಿಸುವ ನಿಟ್ಟಿಸಿ
ಹಣುಗಿ ಮೊನೆಗೊಡೆ ದಂಡೆಯೊಳು ಖಣಿ
ಖಣಿಲು ರವವೆಸೆಯಲ್ಕೆ ಕಾದಿತು ಸುರಗಿಯತಿಬಲರು ॥ ೨೩

[1] ಧಣಿಯು (ಟ.) [2] ಗೆಡೆದಂತೆ (ಛ.), ನಿಂದಂತೆ (ಟ.)

ಬೀಯವಾದರು ಬಿಲ್ಲವರು ಖ
ಳ್ಗಾಯುಧರು ಕೈಕೊಳಲಿ ದಿವಿಜ
ಶ್ರೀಯು ತಪ್ಪದು ಸಮರಮುಖದಲಿ ಮಡಿದ ವೀರರಿಗೆ ।
ರಾಯ ಮೆಚ್ಚಲು ರಣದೊಳೊದಗುವ
ರಾಯತಿಕೆಯಂತೆನುತ ಸೇನಾ
ನಾಯಕರು ನೂಕಿದರು ಖಂಡೆಯಕಾಱ ಮೋಹರವ ॥ ೨೪

ತಾಟಿಸಿದರೊಡನೊಡನೆ ಕುಲಗಿರಿ
ದೂಟಿ ಬಿದ್ದವು ಚಿತ್ರದಲಿ ನಡೆ
ಗೋಟೆ[1]ಯೆನೆ ಮಂಡಳಿಸಿ[1]ಬಲಿದರು ತೆಕ್ಕೆವರಿಗೆಗಳ ।
ನೋಟದಮರರ ನಯನಗಳಿಗ
ಲ್ಲಾಟವೆನೆ ಪಯ[2]ಚಕ್ರ[2]ಗತಿಗಳ
ತೋಟಿಕಾಱರು ಹೊಕ್ಕು ತಾಗಿದರುಭಯ ಸೇನೆಯಲಿ ॥ ೨೫

ಬಲಸಮುದ್ರದ ಬುದ್ಬುದಂಗಳೊ
ತಿಳಿಯಲರಿದೆನೆ ಹರಿಗೆ ಮುಸುಕಿತು
ಬಿಳಿಯ ಚೌರಿಗಳುಲಿವ ಘಂಟೆಯ ಬಿರುದಿನುಬ್ಬಟೆಯ ।
ತಳಪಟದೊಳೌಕಿದರು ತೊಡೆಸಂ
ಕಲೆಯ ತೊಲಗದ ಕಂಭದಪ್ರತಿ
ಬಲರು ಹಾಣಾಹಾಣಿಯಲಿ ಹೊಯಿದಾಡಿದರು ಕಡುಗಿ ॥ ೨೬

ಸಿಡಿಲ [3]ಹೆತ್ತುದೊ[3] ಜಡಿವ ನಿಸ್ವನ
ಕಡುಹೊಗರು ಬೆಸಲಾಯ್ತೊ ನಭವನು
ಹೊಡೆಗೊಳಿಸಲುಚ್ಚಳಿಪ ಕಿಡಿ ವಡಬಂಗೆ ಪಿತನೆನಲು ।
ಕುಡಿವೊನೆಯೊಳಹಿಪತಿಯ ನಾಲಗೆ
ಗಡಣವುದಿಸಿದವೆನೆ ಕೃಪಾಣದ
ಕಡುಹು ಕೌತುಕವಾಯ್ತು ಖಂಡೆಯಕಾಱ ಮೋಹರದ ॥ ೨೭

---

1 ಗಾಱರು ಮುಂದೆ (ಟ). 2 ಚಿತ್ರ (ತ. ಟ.) 3 ಹೊತ್ತುದೊ (ಕ.)

ಕರೆಕರೆದು ಮೂದಲಿಸಿ [1]ಕಡುಹಿನ[1]
ದುರುಳರುಬ್ಬಿನ ಮೇಲೆ ಹೊಕ್ಕ
ಬ್ಬರಿಸಿ ಹೊಯಿದರು ಕಾದಿ ಕೊಂಡರು ಕಾಲನರಮನೆಯ |
ಕರುಳುಗಿಯೆ ತಲೆ ಸಿಡಿಯೆ ನಿಟ್ಟೆಲು
ಮುರಿಯೆ ಮೂಳೆಗಳುದಿರೆ ಶೋಣಿತ
ಸುರಿಯೆ ಕಾಳಿಜ ಕೆದಱೆ ತುಂಡಿಸಿ ಖಂಡ ಬೆಂಡೇಳೆ || ೨೮

ಅಡಸಿ ಕಿಡಿಗಳ ಕಾಱೆ ಲೋಹದ
ಕಡಿಕು ಸಿಡಿಲುಗ್ಗಡದಲಡ್ಡಣ
ವೊಡೆದು ಕೈಬಂದಿಗೆಯ[2]ನೆತ್ತಿದ[2]ಡಿಕ್ಕಲಿಸಿ ಬೀಳೆ |
ಘಡ ಸು[3]ಖಾ[3]ಯುವ ಬಿಡದಿರಿವ್ಮೊನೆ
ಗೊಡದಿರುಪ್ಪರದಲ್ಲಿ ಕೈಯನು
ಕೊಡದಿರಾ ಮಿಡುಕದಿರು ಮಂಡಿಯನೆನುತ ಹಳಚಿದರು || ೨೯

ಕಾಲು ಖಂಡಿಸಿ ಬೀಳೆ ಕರುಳಿನ
ಮಾಲೆಯೊಳು ತೊಡಕಿದವು ಹಣಿದದ
ಬಾಳೆಯಂದದೊಳುಡಿಯೆ ತೊಡೆ ನಡು ಮುಱಿಯೆ ಕಟಿ ಕೆದಱೆ |
ತೋಳ ಕೊಱೆದರು ನೆಲಕೆ ತಲೆಯನು
ಬೀಳಿಕಿದರೆರಡಾಗಿ ತನುವನು
ಸೀಳಹೊಯಿದರು ಬೈದು ತಾಗಿತು ಹರಿಗೆಯತಿಬಲರು || ೩೦

ನಿಲುಕಲಿಟ್ಟೆಡೆಯಾದ ಹೆಣನನು
ತುಳಿದು ರಣದಲಿ ಕುಣಿವ ಮುಂಡವ
ನೆಳೆದು ರುಧಿರದೊಳೌಕಿ ಮೆಟ್ಟುವ ಮುಂದೆ ನಡೆನಡೆದು |
ತಲೆಮಿದುಳ ಜೊಂಡಿನಲಿ ಜಾಱುವ
ಕಲಹಕಾತರರಿಪುಭಟರನ
ಪ್ಪಳಿಸಿ ಘಾಯಂಬಡೆದು ಮಗ್ಗಿದರುಭಯಸೇನೆಯಲಿ || ೩೧

---

[1] ಬಿರುದಿನ (ಗ. ಟ.) [2] ಕೆತ್ತಿದ (ಟ. ಪ.) [3] ಘಾ (ಗ. ಚ. ಪ.)

ಉರುಳಿ ಬೀಳುವ ತಮ್ಮ ತಲೆಗಳ
ತಿರುಹಿ ರಿಪುಗಳನಿಡುವ ಸಡಿಲಿದ
ಶಿರವನಱಿಯದೆ ಮುಂಡದಿದಿರಲಿ ಬೀದಿವರಿವರಿವ ।
ಹರಿಗೆ ಹೊಳ್ಳಿಸೆ ಖಡುಗ ಖಂಡಿಸೆ
ಕೊರಳರಿಯೆ ದೆಸೆದೆಸೆಯ ಸೇನೆಯೊ
ಳುರವಣಿಸಿ ತಿವಿದರು ಕಬಂಧದೊಳತುಳಭುಜಬಲರು ॥ ೩೨

ನೆಲಕೆ ನಿಗುರುವ ಗಂಗೆ'ದಾರದ[1]
ಬಿಳಿಯ ಚೌರಿಗಳುಲಿವ ಗಂಟೆಯ
ತೊಳಪ ಬದ್ದುಗೆ ದಾರ ಕಾಂಚನಮಯದ ಗೊಂಡೆಯದ ।
ಉಲಿವ ಗೆಜ್ಜೆಯ ಚೆಲ್ಲಣದ ಹೊಂ
ಬಳಿದ ಹರಿಗೆಯ ಹೊಳೆವ ಕಡಿತಲೆ
ಗಳ ವಿಲಾಸದೊಳಂದು ಹೊಕ್ಕುದು ತುಳುವ ಪಡೆ ಕಡುಗಿ ॥ ೩೩

ಉಱುಬಿದರೆ ವಡಬಾನಲನ ಮುಖ
ದಿರವು ಮೊನೆದೋಱಿದರೆ ಭುಜಗನ
ಬಿಱುಬು ನಾಲಗೆ ಹಲಗೆಯಣೆದರೆ ಸಿಡಿಲ ಸಡಗರಣೆ ।
ಮೆಱೆವ ಹಜ್ಜೆಯ ದಂಡೆವಲಗೆಯ
ಮಱೆಯ ಕೈದಂಡೆಗಳ ಜುಣುಗಿಸಿ
ತಱುಬಿ ನಿಂದರು ಸಂದ ಕಡಿತಲೆಗಾಱರುಭಯದಲಿ ॥ ೩೪

ಹಳಚಿದರು ತಗರಂತೆ ಗಜದಪ್ಪ
ಲೊಲೆದು ನಿಂದರು ಹಾವಿನಂತಿರೆ
ನಿಲುಕಿದರು ಸೂಕರನವೊಲು ಕೋಡೆತ್ತಿ ಹಾಯ್ಕುದರು ।
ಬಲಿದ ಚರಣಾಯುಧದವೊಲು ಪರ
ರಳವನೀಕ್ಷಿಸಿ ಕಪಿಯವೊಲು ಮ್ಯೊ
ವಳಿಯ ಹತ್ತಿದರಂದು ಕಡಿತಲೆಗಾಱರುಭಯದಲಿ ॥ ೩೫

1 ವಾಳದ (ಗ.)

ಕಡಿತಲೆಯ ಮಿಂಚುಗಳ ಹೊಯ್ಲಿನ
ಸಿಡಿಲುಗಳ ರಕ್ತಪ್ರವಾಹದ
ಕಡುವಳೆಯ ನೃತ್ಯತ್ಕಬಂಧದ ಸೋಗೆನವಿಲುಗಳ ।
ಬಿಡುಮಿದುಳ ಹೊರಳಿಗಳ ಹಂಸೆಯ
ನಡಹುಗಳ ನವಖಂಡದೊಳು ಹೆಣ
ನಡವಿ ತಳಿತಿರೆ ಮೆಱೆದುದೈ ಸಂಗ್ರಾಮಕಾರ್ಗಾಲ ॥ ೩೬

ಪಡಿತಳವ [1]ಬೀಸಿದರೆ[1] ಕಾಲಿ
ಕ್ಕಡಿ ನಡುವ ತಾಗಿದರೆ [2]ಮಂಡಲ
ವುಡಿದು[2] ಬಿದ್ದುದು ನಿಲುಕಿನುಪ್ಪರ ಶಿರವ ಮನ್ನಿಸದು ।
ಮಡವ [3]ಮಿಾಱುವ[3] [4]ಕಚ್ಚೆ[4]ಮಂಡಿಯ
ಪಡಿದೊಡೆಯ ತಲೆಮಱೆಯ ಹರಿಗೆಯ
ಕಡಿತಲೆಯ ಕಲಿತುಳುವಪಡೆ ಹೊಯ್ದಾಡಿತಿಳೆ ಹಿಳಿಯೆ ॥ ೩೭

ಖಡುಗ ತೋಮರಪರಶುಗಳ ಕ
ಕ್ಕಡೆಯ ಕುಂತದ ಪಿಂಡಿವಾಳದ
ಕಡುಗಲಿಗಳುಱೆ ಮುಗ್ಗಿದರು ತಗ್ಗಿದುದು ಯಮಲೋಕ ।
ಬಿಡದೆ ನಾಯಕವಾಡಿ ಚೂಣಿಯ
ಹಿಡಿದು ಕಾದಿತ್ತುಭಯರಾಯರು
ವಡಿಯುಕ್ಕೈಯುವರಿಂದ ಕವಿಸಿದರಂದು ಸಬಳಿಗರ ॥ ೩೮

ಕುಣಿವ ತೊಡರಿನ ಪೆಂಡೆಯದ ಡೊಂ
ಕಣಿಯ ಬಿರುದರ ನೂಕುನೂಕೆನೆ
ಪಿಣಿಲ ಬಾವುಲಿಗಾಱರಾವೆಡೆ ಭಾಷೆಯತಿಬಳರು ।
ಹೊಣಕೆಯಿದಲೇ ಹಿಂದ ಹಾರದಿ
ರಣಕಿಸುವ ಮಾತಲ್ಲ ದಿವಿಜರ
ಗಣಿಕೆಯರು ಬಯಸುವರು ನೂಕುವದೆಂದು ಸಾಱಿದರು ॥ ೩೯

[1] ಬಿಡಿಸಿದರೆ (ಟ.) [2] ಮಂಡಿಗಳುಡಿದು (ಟ.) [3] ಬೀಱುವ (ಗ.)
[4] ಹಚ್ಚೆ (ಜ. ಟ.), ಹಚ್ಚೆ (ಪ.)

* ತಲೆಯು ಖಡ್ಡಣಿಗೆಯು ಸುರಂಗದ
ಪಳಿಯು ಸೀರೆಯು ಭಾಳಭೂತಿಯು
ಬಿಳಿಯು ಚೌರಿಯು ಝುಗೆಯು ಸಬಳದ ಕಾಲ ತೊಡರುಗಳ ।
ಉಲಿವ ಬಿರುದಿನ ಕಹಳೆಗಳ ಕಳ
ಕಳಿಕೆ ಮಿಗೆ ನಿಶ್ಶಂಕಮಲ್ಲರು
ಕಳನೊಳಗೆ ತಲೆದೋಱಿದರು ಡೊಂಕಣಿಯ ಪಟುಭಟರು ॥ ೪೦

ನಡೆವಡವಿಯೋ ಬಲುಭುಜರ ಪಂ
ಗಡವೊ ಸಬಳವೊ ನಭದ ಕಾಲ್ಗಳೊ
ಬಡಬವಹ್ನಿಜ್ವಾಲೆಯೋ ಸೇನಾಮಹಾಂಬುಧಿಯೊ ।
ಪಡೆಯ ಪದಹತಧೂಳಿ ಸವೆಯಲು
ಪೊಡವಿಪಾತಾಳದ ಫಣಿವ್ರಜ
ವಡರಿದವೊ ರವಿಬಿಂಬಕೆನಲಾದುದು ಕುತೂಹಲಿಕೆ ॥ ೪೧

ಮಿಕ್ಕು ಚೂರಿಸಲಹಿಯ ನಾಲಗೆ
ಜಕ್ಕುಲಿಸಿದಂತಾಯ್ತು ಮೊನೆಗಳ
ತೆಕ್ಕೆಯಲಿ [1]ಕುದಿ[1]ಗೊಂಡು [2]ಸುರಿ[2]ದವು ರಕ್ತಧಾರೆಗಳು ।

[1] ಕುಣಿ (ಕ.) [2] ಸುಳಿ (ಕ.), ಸುಱಿ (ಪ.)

* ನೆಲನ ಗೆಲದಬ್ಬರಿಸಿ ಚಾಚಿದ
ತಲೆವರಿಗೆ ತೆರಳದೆ ಸುಘಾಯದ
ಬಲದ ಬೆಳೆಸಿರಿವಂತರನು ಕರೆಕರೆದು ಮೂದಲಿಸಿ ।
ಥಳಥಳಿಲು ಘಟಘಟಿಲು ಖಣಿಕಟೆ
ಲುಲುಹು ಮಿಗೆ ಧನಿ ಮೊರೆಯೆ ರಿಪುಗಳ
ಗೆಲುವೆವೆಂದುರವಣಿಸಿ ಹೊಯ್ದಾಡಿದರು ರಣದೊಳಗೆ ॥

ಹಲಗೆ ಸೀಸಕ ಸಹಿತಲಬ್ಬುಡಿ
ಗಳೆದರೊಡಲುಪ್ಪರದ ಘಾಯವ
ಕಳಚಿ ಕೈಮಾಡಿದರು ಕೊಂದರು ಮುಂದುವರಿವರಿದು ।
ಹೊಳೆದು ಹೊಯ್ದರು ಮಿಂಚಿನಂತಿರೆ
ಬಲುಹು ಮಿಗೆ ಜವನಂತೆ ಬವರಿಯ
ಲುಳಿಯ ಚಾಪಟ ಮಲ್ಲರೊದಗಿದರುಭಯಸೇನೆಯಲಿ ॥ *

* ಈ ಪದ್ಯಗಳು (ಕ. ತ. ಪ.) ಪ್ರತಿಗಳಲ್ಲಿಲ್ಲ.

ಹೊಕ್ಕವರು ಹೆಣಗಿದರೆ ನಿಱಿಗರು
ಳೊಕ್ಕವಡಗುದಿರಿದವು ಮೋಹರ
ಹಕ್ಕಲಾಗಲು ಹರಿದು ಸಬಳಿಗರಿಱಿದು ತೋಱಿದರು ॥ ೪೨

ಬವರಿಯಲ್ಲಿ ಪೈಸರಿಸಿ ಪರಘಾ
ಯವನು ವಂಚಿಸಿ ಭಟರ [1]ಕೊಱೆದೆ[1]
ತ್ತುವರು ಕೈಮಾಡಿದರೆ ತಿವಿವರು ಕೋಡಕೈಯವರು ।
ಕವಿಯಲಾಕುವರಾಕಿದರೆ ತ
ಗ್ಗುವರು ತಗ್ಗಿದರೊಡನೊಡನೆ ಜಾ
ಱುವರು ಜುಣುಗುವರ್ಯೆದೆ ತಿವಿದಾಡಿದರು ಸಬಳಿಗರು ॥ ೪೩

ಹೆಣನ ಹೋಳಿನ ಸಿಡಿದಡಗು ಡೊಂ
ಕಣಿಯೊಳೆಸೆದುವು ಕಾಲನಾರೋ
ಗಣೆಗೆ ಮಿಗೆ ಪಡಿಸಣವ ನೋಡದೆ ಮಾಣವೆಂಬಂತೆ ।
ಕುಣಿವ ಕುಂತಾಗ್ರದಲಿ ಜೋಲುವ
ಹಿಣಿಲುಗರುಳೊಪ್ಪಿದವು ಜವನೀ
ರಣಕೆ ಬರೆ ಕಟ್ಟಿದವು ಗುಡಿ ತೋರಣವನೆಂಬಂತೆ ॥ ೪೪

ದೆಸೆದೆಸೆಗೆ ಹರಿಹರಿದು ಮಾಮಸ
ಮಸಗಿ ಬಾದಣಗೊಱೆದು ಕೆಡಹುವ
ವಿಷಮವೀರರು ಘಾಡಿಸಿತು ಡೊಂಕಣಿಯ ತುದಿಗಳಲಿ ।
ಬಸಿವ ಹೊಸ ರುಧಿರಕ್ಕೆ ಜೋಲುವ
ಕುಸುರಿಗರುಳಿಂದುದಿರುವಡಗಿನ
ಬಸೆಗೆ ಬಂದೆಱಗಿದವುಲೂಕಧ್ವಾಂಕ್ಷಸಂದೋಹ ॥ ೪೫

ಧುರದೊಳಗೆ ಬಿಲುಗಾಱರೊಗ್ಗಿನ
ಹರಿಗೆಕಾಱರು ಹಲಗೆಯವರು
ಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯವ ।

[1] ಕೊಂಡೆ (ಕ.), ಕೋದೆ (ಗ.ಚ.)

ಥರಥರದಿ ತೀವಿದರು ರುಧಿರದ
ಹರಹು ಹೇರಾಳಿಸಿತು ಚೂಣಿಯೊ
ಳೆರಡು ಬಲದ ಪದಾತಿ ಸವೆದುದು ಕೇಳು ಧೃತರಾಷ್ಟ್ರ ॥ ೪೬

ಧುರವನವ [1]ಸಾಗಿಸದಿರೇಱಲಿ[1]
ತುರಗವಾವೆಡೆ ಪಟ್ಟಸಹಣದ
ಹಿರಿಯ ಸಹಣದ ವಿಮಲಸಹಣಿಗಳವರ ಕರೆಯೆನುತ ।
ಧುರಧುರಂಧರರೊಱಲಿದರು ಮೋ
ಹರವುಹಾಂಭೋನಿಧಿಯ ತೆರೆಯುಪ್ಪೇ
ಉುರವಣಿಸಿದವು ಕುದುರೆ ತಾರೆಗಳುದಿರೆ ನೆಲನದಿರೆ ॥ ೪೭

ಬಱಗಡಗ [2]ಕೀಳ್ಕಂಬ್ಬಿದುಕ್ಕುಡಿ[2]
ಯುಱುಗುಗಡಿಯಣ ಮೊಗವಡಂಗಳು
ತುರುಗವದನದಲೊಪ್ಪಿರಲು ತಾ ಪಣೆಯನಳವಡಿಸಿ ।
ಕೊರಳ ಕೊಡಕೆಯ ಪಾರ್ಶ್ವಪೇಚಕ
ದೆರಡು ಕಡೆಯಲಿ ಸುತ್ತು ಝಲ್ಲಿಯ
ಪರಿಪರಿಯ ಹಕ್ಕರಿಕೆಯಲಿ ಬೀಸಿದರು ಚೌರಿಗಳ ॥ ೪೮

ಹಳದಿ ಪಾರಿಯ ಪಚ್ಚೆ ಜೋನೆಗ
ಪಳಿ ಸುವರ್ಣಾವಳಿಯ ಸಂಧ್ಯಾ
ವಳಿಯುದಯರಾಗದಲಿ ರಚಿಸಿದ ಹಕ್ಕರಿಕ್ಕೆಗಳ ।
ಕೆಲಬಲದ ಕುಣಿಕೆಗಳ ರಚಿಸಿದ
ರುಲಿವ ಘಂಟೆಯ ಮೊಗದ ಕನ್ನಡಿ
ಗಳ ವಿಲಾಸದಲಂದಲಂಕರಿಸಿದರು ತೇಜಿಗಳ ॥ ೪೯

ಸವಗ ಮೊಚ್ಚೆಯ ಬಾಹುರಕ್ಕೆಯ
ವಿವಿಧವಜ್ರಾಂಗಿಗಳ ಸೀಸಕ
ಕವಚಗಳ ತೊಟ್ಟತುಳಬಲರೇಱದರು ತೇಜಿಗಳ ।

---

[1] ಸಾಧಿಸಲ ಸೇರಲಿ (ಟ.) (ಪ.)   [2] ಕೀಳ್ಮಬ್ಬದಿಕ್ಕಡಿ (ದ.)

ಹವಣಿಸಿದ ವಾಘೆಗಳ ರಾಘೆಯ
ಸವಸರಿಯ ಛಾರಾಂಕಲವುಡಿಯ
ಗವಿಯ ಗರುವರು ನೋಕಿದರು ತೇಜಿಗಳನೋಜೆಯಲಿ ॥ ೫೦

ತರುಣಿಯರ ನೊಸಲಂತೆ ತಿಲಕದ
ಸರಿಸವದು ವೈವಾಹಗೇಹದ
ಸಿರಿಯವೊಲು ಮಂಗಳಮಯವು ಮಲೆಯಾಳ ಜನಪದದ ।
ಅರಸಿನಂತಿರೆ ಚೇರಮಯವೆನ
ಲುರವಣಿಸಿ ನೋಕಿದರು ನಿಡುವ
ಕ್ಕರಿಕೆಗಳ ಗರುವಾಯಿಗಳ ಘನಮದದ ತೇಜಿಗಳ ॥ ೫೧

ನಿಲುಕಿ ಹೊಳೆದವು ನೇಣ ಸಡಿಲಿಸೆ
ಕುಲಗಿರಿಯ ಹೆಡತಲೆಯನಡರಿದ
ವಳುಕಿ ಪಯಸನ್ನೆಗಳೊಳಭ್ರದ ಕುಡಿಯನಡರಿಸುತ ।
ದಳವುಳಿಸಿದವು ತಾಟಿಸಿದರೊಡೆ
ದುಳಿದವಖಿಳಾವನಿಯನೆನೆ ಮ್ಯೊ
ಲುಳಿಯ ಮನವೇಗಾಯ್ಲ ವಾಜಿಯ ಥಟ್ಟ ನೋಕಿದರು ॥ ೫೨

ಖುರಪುಟದ ಕೆಂಧೂಳಿ ಬಂಧಿಸೆ
ತರಣಿಯನು ಪವಮಾನಮಾರ್ಗವ
ನರರೆ ಕಟ್ಟಿತು ತುಳಿದುದಿಂದ್ರನ ಸಾವಿರಾಲಿಗಳ ।
ಹರಿಸಬುದ ತನಗಿಲ್ಲದಿನ್ನೀ
ತರಣಿವಾಯುಸುರೇಂದ್ರರಿಗೆ ಸಂ
ಚರಿಸಲೇಕೆಂಬಂತೆ ನಡೆದವು ಘೋಟಕವ್ರಾತ ॥ ೫೩

ಖುರದ ಹೊಯಿಲಲಿ ನಡುಗಿತಿಳೆ ಫಣಿ
ವರನ ಹೆಡೆಗಳು ನೊಂದವಂಬುಧಿ
ಹೊರಳಿದವು ಹೋಗಾಡಿದವು ಕುಲಗಿರಿಗಳಚಲತೆಯ ।
ಅರರೆ ಸೂಟಿಯೊಳಟ್ಟಿದರೆ ದಿ
ಕ್ಕರಿಯ ಸೊಕ್ಕಡಗಿದವು ನಿಗುರುವ
ತುರಗದಳವೊಡವೆರಸಿದವು ಕುರುಪಾಂಡುಸೈನ್ಯದಲಿ ॥ ೫೪

ಹಿಡಿಯೆ ಜವನಿಕೆ ಸಮರ [1]ಮೋನದ[1]
ಬಿಡುದಲೆಯ ಬಿರುದಾವಳಿಯುಲು
ಗ್ಗಡಣೆಗಳ [2]ಸೋಲಿಸುತ[2] ತಮ್ಮನ್ವಯುವ ಪಾಲಿಸುತ ।
ಝಡಿವ ದೂಹತ್ತಿಗಳ ಹಾಯಿಕಿ
ಹಿಡಿವ ಲೌಡಿಯ [3]ಹತ್ತಳದ[3] ತನಿ
ಗಡಣಿಗರು ಮೂದಲಿಸಿ ಕವಿದುದು ರಾಯರಾವುತರು ॥ ೫೫

ನೂಲ ಹರಿಗೆಯ ಹೆಗಲ ಬಾರಿಯ
ತೋಳ ತೋರಿಯ ಲೌಡಿಗಳ ಕರ
ವಾಳತಳಪದ ಮಿಂಚುಗಳ ತನುಮನದ ಕೆಚ್ಚುಗಳ ।
ಸಾಲದಾವಣಿದಲೆಯ ಗಂಟಲ
ಗಾಳಗತ್ತರಿಗರಗಸದ ಬಿರು
ದಾಳಿಗಳ ಛಲದಂಕರಾವುತರೊತ್ತಿ ನೂಕಿದರು ॥ ೫೬

ಹೊಡೆದು ಚಮ್ಮಟಿಗೆಯೊಳು ದೊರೆಗಳ
ಹಿಡಿವ ಸಮ್ಮುಖದಲಿ ಕಠಾರಿಯ
ನಡಸಿ ತಿವಿವ ಕೃಪಾಣದಲಿ ಕಡಿನಾಲ್ಕ ತೋಱಿಸುವ ।
ಅಡತರದಲವನಿಪರ ಹಯಮುಂ
ಗುಡಿಯ ಮುಱಿದು ವಿಘಾತಿಯಲಿ ಥ
ಟ್ಟೊಡೆದು ಹಾಯ್ವುತಿಭಾಷೆಗಳ ಬಿರುದಂಕರೇಱಿದರು ॥ ೫೭

ಉಲಿವ ಕೈವಾರಿಗಳ ಲಗ್ಗೆಯ
ಬಲಿವ ತಂಬಟ ಕೋಟಿಗಳ ಭುಜ
ಬಲದ ಬಿರುದರ ಹೊಯ್ಲುಗಳ ನಿಸ್ಸಾಳನಿಸ್ವನದ ।
ಘುಳುಘುಳಿಪ ಬೊಗ್ಗುಗಳ ರಿಪುಗಳ
ಮುಳಿಯಿಸುವ ಕಹಳೆಗಳ ತುರಗಾ
ವಳಿಯ ಗಜಱಬ್ಬರಣೆ ಮಿಗೆ ಕೈಕೊಂಡರತಿಬಳರು ॥ ೫೮

---

[1] ಮುಖದಲಿ (ಗ.ಟ.) [2] ನಾಲಿಸುತ (ಟ.) [3] ಪಟ್ಟೆಯದ (ಟ.)

ಹೊಡೆವ ದೂಹತ್ತಿಗಳ ಘಾಯದ
ಲೊಡೆದು ಸಿಡಿದವು ಲೋಹ ಸೀಸಕ
ವಡಸಿ ಬಲ್ಲೆಹ ಬಗಿದು ನಟ್ಟುದು ಸರಪಣಿಯ ಝುಗೆಯು ।
ಹೊಡೆವ ಲೌಡಿಗಳೊತ್ತಿ ನೆತ್ತಿಯ
ಬಿಡುಮಿದುಳ ಕೆದಱಿದವು ರಕುತದ
ಕಡಲು ಕಡಲನು ಕೂಡೆ ಹೊಯ್ದಾಡಿದರು ರಾವುತರು ॥ ೫೯

ಜಱಿದು ಸರಿಸದಲೇಱಿದರೆ ಸಿಡಿ
ಲುಱುಬಿದಂತಾಯಿತ್ತು ಘಾಯವ
ನೞುಹಿದರೆ ದೂಹತ್ತಿ ರಾವ್ತರ ಮಸ್ತಕದೊಳಿಳಿದು ।
ಕೊಱೆದುದಿಳೆಯನು ಹಯವ ನೂಕಿದ
ಡೊಱಲಿದನು ತಳಕಮಠನೆನೆ ತ
ತ್ತಱದಱಿದು ಹೊಯ್ದಾಡಿದರು ಗುಜ್ಜರದ ರಾವುತರು ॥ ೬೦

ಎಡನ ಹೊಯಿದರು ಬಲದವರನಡ
ಗೆಡಹಿದರು ಸಮ್ಮುಖದ ನೃಪರನು
ಸಿಡಿಲ ಹತಿಯವೊಲೆಱಗಿದರು ಸೂಟಿಯಲಿ ಸ್ವೈವರಿದು ।
ಅಡಗುದುಳಿದರು ಮೋಹರವನೊ
ಗ್ಗೊಡೆದು ಚೂಣಿಯ ಗೋಣ ಬನದಲಿ
ಖಡುಗ ನರ್ತಿಸಲೊದಗಿದರು ಮಾಳವದ ರಾವುತರು ॥ ೬೧

ಬೀಸುನೇಣಿನ ಸೆಳೆವ ನೇಗಿಲ
ಸೂಸುಗಣೆಗಳ ಕಡಿವ ಕೊಡಲಿಯ
ಕೈಸುರಗಿ ಸೂನಗೆಯ ನಾನಾಯುಧದ ಗಡಣೆಗಳ ।
ಓಸರಣೆಗೊಡದತಿಬಳರು ದಿವ
ದಾಸೆಗಾಱರು ವೈರಿಬಲವನು
ಘಾಸಿಮಾಡಿದರೊಗ್ಗಿನಲಿ ಹಮ್ಮಿರರಾವುತರು ॥ ೬೨

ಅರರೆ ಕವಿದರು ಕದಳಿಯನು ಮದ
ಕರಿಯು ತೊತ್ತಳದುಳಿದವೊಲು ದಿಂ
ಡುರುಳಿಚಿದರಗಕೋಟಿಯನು ಶತಮನ್ಯುವಂದದಲಿ ।

ಶಿರವೊಡೆಯೆ ತೊಡೆಯುಡಿಯೆ ಕೈ ಕ
ತ್ತರಿಸೆ ಕೋಳಾಹಳಮಹಾಸಂ
ಗರದೊಳಗೆ ಹೊಯ್ದಾಡಿದರು ಕಾಶ್ಮೀರರಾವುತರು ‖ ೬೩

ಕವಿದು ಮುಂದಲೆವಿಡಿದು ರಾವ್ತರು
ತಿವಿದ [1]ತಿವಿಗಳ[1] ಕಳಚಿ ಕೆಲಬಲ
ದವರ ಕೆಡೆಹೊಯ್ದಹಿತಘಾಯವ ನೋಡದೊಡೆಹೊಯ್ದು ।
ಸವಗ ತುಂಡಿಸೆ ಜೋಡು ಖಂಡಿಸೆ
ನವರುಧಿರದೊಟವೇಳೆ ಮಹದಾ
ಹವದೊಳೋರಂತೊದಗಿದರು ಗೌಳವದ ರಾವುತರು ‖ ೬೪

ಅಳವನಱಿಯದೆ ಕೆಣಕಿ ತಹ ಮುಂ
ಕೊಳಿಸಿ ಕದನವ ಕೋಡ ಕೈಯುವ
ರಳವಿಗೊಟ್ಟರೆ ನೋಡಿ ಸಿಡಿಮಿಡಿಗೊಂಡು ಕೆಲಸಿಡಿವ ।
ಗೆಲಿದರುತ್ಸಾಹಿಸುವ ಸಿಲುಕಿದ
ರಳುವ ಕೆಟ್ಟೋಡಿದರೆ ಪುರದಲಿ
ನಿಲುವ ನಿರುಪಮವೀರರೊದಗಿತು ತಿಗುಳರಾವುತರು ‖ ೬೫

ಬವರ ಸವೆಯದೆ ತೇಜಿಗಳ ಬಲು
ಜವವು ಜಾಱದೆ ಬಿಡುವ ತಿವಿದರೆ
ಸವಗವುಚ್ಚಳಿಸುವವು ಕವಿದರೆ ಕಾಲಯಮನಂತೆ ।
ಕವಿವರವಗಡಿಸಿದರೆ ಹಿಮ್ಮೆ
ಟ್ಟುವರು ಭೂಮಾನದೊಳುಪಾಯದ
ಬವರದೋಜೆಯಲೊದಗಿದರು ಕರ್ಣಾಟರಾವುತರು ‖ ೬೬

ಉಱುಬಿ ಹೊಯಿದರು ಕೈದಣಿಯೆ ಹೊ
ಕ್ಕೆಱಗಿದರು ನಿಪ್ಪಸರದಲಿ ಮು
ಕ್ಕುಱಿಕಿದರು ತಲೆಮಿದುಳ ಜೊಂಡಿನ [2]ಜುಱಿತ[2] [3]ಜೋಡುಗಳ[3] ।

---

[1] ತಿವಿಗುಳ (ಪ.) [2] ತಱಿದ (ಕ) [3] ಜೋಱುಗಳ (ಕ.)

[1]ತಱಿದು ಬಿಸುಟರು[1] ಖಗನಿಕರಕಾ
ರ್ದಿಱಿದು ಕಾಲನ ಬನಕೆ ರಕುತದ
ಕೆಱೆಯ ತೂಬೆತ್ತಿದರು [2]ಸೇವಣ[2] ರಾಯ ರಾವುತರು ॥ ೭೭

ರಾವುತೋ ಮಝು ಭಾಪು ರಾವುತು
ದೇವು ರಾವುತು ಭಲರೆ ರಾವುತು
ರಾವುತೋ ನಿಶ್ಶಂಕರಾವುತು ರಾವುತೆಂದೆನುತ ।
ರಾವು ರಾವುತು ಪೂತುರಾವುತು
ಭಾಪು ರಾವುತು ರಾವುತೋ ಎಂ
ದೋವಿ ಹೊಯಿದಾಡಿದರು ರಣದಲಿ ಲಾಳ ರಾವುತರು ॥ ೭೮

ಗೌಳ [3]ಕೊಂಕ[3] ಕಳಿಂಗ ವರನೇ
ಪಾಳಕದ ರಾವುತರು ರಣಭೇ
ತಾಳ[4]ರಣದೊಳಗಡಗಿದರು[4] ಕುರುಪಾಂಡುಸೈನ್ಯದೊಳು ।
ಹೇಳಲಳವಲ್ಲುಭಯದಲಿ ಹೇ
ರಾಳ ಕಾಳೆಗ ಹಿರಿದು ಕಿಱಿದೆನೆ
ಹೇಳುವೆನು ಬವರಕ್ಕೆ ಬಂದುದು ಮತ್ತಗಜಸೇನೆ ॥ ೭೯

ಕನಕಗಿರಿಯಲಿ ವಿಂಧ್ಯಗಿರಿಯಂ
ಜನಗಿರಿಯ ಮಲಯಾದ್ರಿಯಲಿ ಸಂ
ಜನಿಸಿದಾನೆಯ ಸೇನೆಯಲಿ ಬೀಸಿದರು ಚೌರಿಗಳ ।
ಕನಕಘಂಟೆಗಳುಲಿಯೆ ಹೊರಜೆಯ
ತನತನಗೆ ಹಿಡಿದಡರಿ ಪೂರ್ವಾ
ಸನವ ವೆಂಠಣಿಸಿದರು ರಾಜಾರೋಹಕವ್ರಾತ ॥ ೮೦

ಬಾರ ಸಂಕಲೆ ಪಕ್ಕ ಘಂಟೆಯು
ಚಾರು ಚಮರದ ಕೊಡತಿಗಳ ಕೈ
ಹಾರೆ ಕೂರಂಕುಶದ ಬಿರುದರು ಹೊದ್ದಿದರು ಗಜವ ।

---

[1] ಗಱಿಯ ಬಿಟ್ಟರು (ಟ.) [2] ಸಿಂಹಳ (ಟ.), ಹಮ್ಮೀರ (ದ.) [3] ವಂಗ (ಗ.), ಕೊಂಗ (ಪ.) [4] ದುದರದೊಳಡಗಿದರು (ಟ.)

ಬಾರ ದೂಹತ್ತಿಗಳ ಗುಂಡನು
ತೋರ ಲೌಡಿಯು ತೊಟ್ಟು ಕೈಯಲಿ
ವಾರಣದ ಮೋಹರವ ನೂಕಿದರುಭಯಸೇನೆಯಲಿ ॥ ೭೧

ಕಾಲನುಬ್ಬೆಗೆ ಶೀತಳಂಗೊಡು
ವಾಲವಟ್ಟವೊ ವಿಲಯಕಾಲದ
ಗಾಳಿಯೋ ಮೇಣ್ ಕರ್ಣತಾಳವೊ ಕಿವಿಗೆ ಕೌತುಕವೊ ।
ಕಾಲುವೆರಸಿದ ನೀಲಗಿರಿಗಳ
ಧಾಳಿಯೋ ಮೇಣಂಜನಾದ್ರಿಯು
ಬೀಳಲೋ ಬರಿಕೈಗಳೋ ನಾವಱಿಯೆವಿದನೆಂದ ॥ ೭೨

ಪಡೆಯೊ ಹೀನೇಂದುವಿನಿರುಳ ಮುಂ
ಗುಡಿಯೊ ಮುಗಿಲೋ ಮದದ ತುಂಬಿಯೊ
ಬಿಡುಮದದ ವಾರಿಗಳೊ ಹೊಸ ವಾರಾಶಿಯೋ ಮೇಣು ।
ಅಡಸಿ ಪದಹತಧೂಳಿ ಮದವನು
ಕುಡಿದುದಾ ಮದಧಾರೆ ರೇಣುವ
ನಡಗಿಸಲು ಮದಧೂಳಿಗಳು ಹೆಣಗಿದವು ತಮ್ಮೊಳಗೆ ॥ ೭೩

ಕುಲಗಿರಿಗಳಗ್ರದೊಳು ಕೈಗಳ
ನಿಳುಹಿದನೊ ರವಿಯೆನಲು ಮಿಗೆ ಹೊಳೆ
ಹೊಳೆವ ಕೂರಂಕುಶವನಿಕ್ಕಿದರಿಭದ ಮಸ್ತಕಕೆ ।
ಉಲಿದವಿದಿರೊಳು ಡೌಡೆ ಬಿರುದಾ
ವಳಿಯ ಕಹಳೆಗಳೂದಿದವು ನೆಲ
ಮೊಳಗಿದಂತಿರಲೊದಱಿದವು ನಿಸ್ಸಾಳಕೋಟಿಗಳು ॥ ೭೪

ಹೊಕ್ಕವಾನೆಗಳೆರಡು [1]ಸೇನೆ[1]ಯೊ
ಳೊಕ್ಕಲಿಕ್ಕಿದವೆಸುವ ಜೋದರ
ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿದವು ದಿಗುತಟವ ।

---

[1] ಸನ್ನೆ (ಕ.)

ಉಕ್ಕಿನುರುಳಿಯೊಳಿಡುವ ಖಂಡೆಯ
ದಿಕ್ಕಡಿಯ ಘಾಯಗಳ ಪಟ್ಟೆಯ
ದಕ್ಕಜದ ಹೊಯಿಲೆಸೆಯೆ ಕಾದಿದವಾನೆಯಾನೆಯೊಳು ‖ ೭೫

ತಿವಿಯೆ ಕಳಚುವ ಕಳಚಲೊತ್ತುವ
ಕವಿದಡಾನುವ ನಿಂದಡೆತ್ತುವ
ಸವೆಯೆ ತುಡುಕುವ ತುಡುಕಿ ಮಿಗೆ ಕೈಕೈಯ ಜೋಡಿಸುವ ।
ಭುವನ ಭಯಗೊಳಲೊದಱುತುರವಣಿ
ಸುವ ವಿಘಾತಿಸಿ ತುಳಿವ ಸೀಳುವ
ನವಮದೇಭದ ಸಮರ ಸೋಲಿಸಿತಮರರಾಲಿಗಳ ‖ ೭೬

ತಿರುಹಿ ಬಿಸುಟವು ಕಾಲುಗಾಹಿನ
ತುರಗವನು ಮುಂಬಾರೆಕಾಱರ
ಶಿರವನೈದಾಱೇಳನಡಸಿದವಣಲ ಹೊಳಲಿನೊಳು ।
ಅರರೆ ಪಟ್ಟೆಯ ಲೌಡಿ ಖಂಡೆಯ
ದುರವಣೆಯ ಹೊಯಿಲಿನೊಳು ರಿಪುಗಜ
ವುರುಳಿದವು ತೆರಳಿದವು ಜೋದರ ಜೀವವಂಬರಕೆ ‖ ೭೭

ಮೆಟ್ಟಿ ಸೀಳಿದುಹಾಯ್ಕಿ ದಾಡೆಯ
ಕೊಟ್ಟು ವೋಱೆಯನೊಲೆದು ಹರಿದಱೆ
ಯಟ್ಟಿ ಹಿಡಿದಪ್ಪಳಿಸಿ ಜೋದರನಂಘ್ರಿಯಿಂದರೆದು ।
[1]ಇಟ್ಟು ಕೆಡಹಲು ಹೆಣನ ಲೊಟ್ಟಾ
ಲೊಟ್ಟಿ ಮಸಗಿತು[1] ತುರಗ ನರ ರಥ
ವಿಟ್ಟಣಿಸೆ ಸವಱಿದವು ದಂತಿವ್ರಾತವುಭಯದೊಳು ‖ ೭೮

ಕುತ್ತಿ ಹಿಂಗುವ ಭಟರ ದಾಡೆಯೊ
ಳೊತ್ತಿ ನೆಗಹಿದಡೊಗುವ ರಕುತಕೆ
ಮುತ್ತಿ ಬಾಯ್ಗಳನೊಡ್ಡಿ ಕುಡಿದುದು ಶಾಕಿನೀನಿವಹ ।

[1] ಹೊಟ್ಟುಗುಟ್ಟಿದ ಹೆಣಗಳಟ್ಟೆಗಳೊಟ್ಟಿಲೆಸೆಯಲು (ಟಿ.)

ಮಿತ್ತುವಿನ ಗಣವಿಭವದ ದಾಡೆಯು
ಸುತ್ತಿ ಜೋಲುವ ಕರುಳ ಹಿಣಿಲನು
ಕುತ್ತಿದವು ತಮ್ಮೊಳಗೆ ಹೆಣಗಿದವಸಮುಸಮರದಲಿ ॥ ೭೯

ಅರರೆ ಮೃತ್ಯುವಿನಟಿಕೆಗೌಷಧ
ವರೆವವೊಲು ರಿಪುಬಲವನಸಿಯಿ
ಟ್ಟರೆದವಿಭ ಬರಿಕೈಯ ಭಾರಿಯ ಲಾಳವುಂಡಿಗೆಯ ।
ಸರಿಸಗುಂಡಿನೊಳೊಂದನೊಂದಿ
ಟ್ಟೊರಸಿದವು ಕೊಡಹಿದವು ಸೀಳಿದು
ಹೊರಳಿಚಿದವೆಱಗಿದವು ನಾನಾವಿಧದ ಕೊಲೆಗಳಲಿ ॥ ೮೦

ವ್ರಣದ ಬಂಧದ ಜಿಗಿಯ ದಾಡೆಗೆ
ಕುಣಿದು ಕವಿವ ವಿಹಂಗತತಿಗ[ಳಿ]
ನಣಲೊಳಡಸಿದ ತಲೆಗೆ ಕೈಗುತ್ತುವ ನಿಶಾ[1][ಟ][1]ರಲಿ ।
ಹೆಣನ ಬೀಸುವ ಕೈಗಳಲಿ ಸಂ
ದಣಿಸುವಸುರರಿನುರುಕಪಾಲವ
ಕೆಣಕುವಳಿಯಿಂ ಚಂಡಿಯಾದವು ಸೊಕ್ಕಿದಾನೆಗಳು ॥ ೮೧

ಅಡಸಿ ತಲೆಗಳ ಕಿತ್ತು ಸೇನೆಯ
ನಿಡುವ ಬಸುಱನು ಬಗಿದು ಕರುಳನು
ಕೊಡಹಿ ಸೂಸುವ ಮಿದುಳ ಮೊಗೆದೆಣ್ದೆಸೆಗೆ ಸಾಲಿಡುವ ।
ಅಡಗನಾಯಿದು ಕೆದಱಿ ರಕುತವ
ತುಡುಕಿ ಚೆಲ್ಲುವ ಕರಿಯ ಬರಿಕೈ
ಬಿಡಿಸಿದವು ಹುಟ್ಟಾಗಿ ಯಮರಾಜನ ಪರಿಗ್ರಹಕೆ ॥ ೮೨

ಕಾಲುಗಳಲೊಡೆತುಳಿವ ಮೋಟೆಯ
ತೋಳಿನೊಳು ಬೀಸಿಡುವ ರದನದಿ
ಹೋಳಿಸುವ ಖಾತಿಯಲಿ ನಾನಾವಿಧದ ಕೊಲೆಗಳಲಿ ।

1 ಚ (ಕ.)

ಕಾಲನೊಗಡಿಸೆ ಕೊಲುವ ಮದಗಜ
ಜಾಲಗಳೊಳಾರೋಹಕರು ಕೆಂ
ಗೋಲ ಮಳೆಗಱೆದಾರಿದರು ನೃಪಸೇನೆಯೆರಡಱಲಿ ‖ ೮೩

ನೀಲ ಗಿರಿಗಳ ನೆಮ್ಮಿ ಘನಮೇ
ಘಾಳಿ ಸುರಿದವೊ ಮಳೆಯನೆನೆ ಬಿಱು
ಗೋಲ ಸೈವಳೆಗಱೆದರುಭಯದ ಜೋದರವಗಡಿಸಿ ।
ಮೇಲೆ ತೊಳಲುವ ಖಚರ ನಿಚಯುಗ
ಳಾಲಿಯೊಲೆದವು ಧರೆಗೆ ಗಗನಕೆ
ಕಾಳಿಕೆಯ ಪಸರಿಸಿತು ಜೋದರ ಕೋದ ಶರಜಾಲ ‖ ೮೪

ಎಲೆಲೆ ವಿಂಧ್ಯಾಚಲದ ಹರಿಬಕೆ
ಕಳನ ಹೊಕ್ಕವೊ ಕಣೆಗಳೆನುತಾ
ನಳಿನಸಖನಂಜಿದನು ಕೋಪಾಟೋಪಕಭ್ರದಲಿ ।
ಅಲಗುಗಣೆಗಳೊ ಮೇಘತರುವಿನ
ತಳಿತ ತುದಿಗೊಂಬುಗಳೊ ಬೀಳುವ
ತಲೆಗಳೋ ತತ್ಫಲಸಮೂಹವೊ ಚಿತ್ರವಾಯ್ತೆಂದ ‖ ೮೫

ಸರಳ ಸರಳೊಳು ಕಡಿವ ಕರಿಗಳ
ಕೊರಳ ಹಱಿಯೆಸುವ್ವೋರಣದ ಮೊಗ
ವರಿಗೆಗಳ ಖಂಡಿಸುವ ಮೋಱೆಯ ಕರವ ತುಂಡಿಸುವ ।
ಸರಳು ವದನವ ತಾಗಿ ಪೇಚಕ
ಕುರವಣಿಸೆ ತೆಗದೆಸುವ ಜೋದರ
ಧುರಚಮತ್ಕೃತಿ ಬೆಱಗನಿತ್ತುದು ದೇವಸಂತತಿಗೆ ‖ ೮೬

ಶೂರ ಜೋದರ ಮೇಲುವಾಯಿದು
ವೀರಸಿರಿ ಬಿಗಿಯಪ್ಪೆ ಮುತ್ತಿನ
ಹಾರ ಹಱಿಯಲು ಕೆದಱಿದವು ದೆಸೆದೆಸೆಗೆ ಮುತ್ತುಗಳು ।
ವಾರಣದ ಕುಂಭಸ್ಥಳಂಗಳ
ಚಾರುಮೌಕ್ತಿಕನಿಕರವೋ ಮೇಣ್
ಭಾರತಾಹವ ಕೌತುಕೋದ್ಧಯುರಸಕೆ ನೆಲೆಯಾಯ್ತೊ ‖ ೮೭

ಅರರೆ ಶರ[1]ಸಾಗರದ[1] ಜೋದರ
ಸರಳಹತಿಯಲಿ ಮಂದರಾಚಲ
ಕರಿಯ ಮಸ್ತಕವೊಡೆದು ಕೆದಱಿತು ಮೌಕ್ತಿಕವ್ರಾತ ।
ಹರೆದು ತಾರೆಗೆಯಾದವಭ್ರದೊ
ಳುರುಳೆ ರತ್ನಾಕರನೆನಿಪ್ಪಾ
ಬಿರುದು ಸಂದುದು ಶರನಿಧಿಗೆ ಭೂಪಾಲ ಕೇಳೆಂದ ॥ ೮೮

ಧುರದ ಜಯಸಿರಿ ವೀರ ಭಟರಿಗೆ
ಸುರಿವ ಲಾಜಾವರುಷದಂತಿರೆ
ಸುರಿದ ಮುತ್ತುಗಳೆಸೆದವಭ್ರವಿಮಾನ [2]ಭಾಗದಲಿ[2] ।
[3]ಕರಿಶಿರದ ಮುಕ್ತಾವಳಿಯೊಳೊಪ್ಪಿದ[3]
ವರ ವಿಜಯರೊಡಗೂಡಿ ಜಯವಧು
ವಿರದೆ ಪುಳಕಿತೆಯಾದಳೆನೆ ಚೆಲುವಾಯ್ತು ನಿಮಿಷದಲಿ ॥ ೮೯

ವಿಗ್ರಹದೊಳಿದಿರಾಂತ ಕರಿಗಳ
ವಿಗ್ರಹಂಗಳು ಕೆಡೆಯೆ ಕಾದಿ ಸ
ಮಗ್ರಬಲ ಜೋದಾಳಿ ಕೊಂಡುದು ಸುರರ ಕೋಟೆಗಳ ।
ಉಗ್ರದಾಹವಭೂತಗಣಕೆ ಸ
ಮಗ್ರಭೋಜನವಾಯ್ತು ಸಂಗರ
ದಗ್ರಿಯರು ಕೈವೀಸಿದರು ತೇರುಗಳ ತಿಂತಿಣಿಯ ॥ ೯೦

[4]ನೊಗನ[4] ಬಿಗುಹಿನ ಕಂಧದ`ರುವಾ
ಜಿಗಳು ಕುಣಿದವು ಪಲ್ಲವದ ಸೆಱ
ಗಗಿಯೆ ಚೆಕ್ಕೆಯವೆತ್ತಿದವು ಮುಮ್ಮೊನೆಯ ಸೂನಗೆಯ ।
ಹೊಗರುಗಳ ತೀಡಿದರು ಕೀಲ
ಚ್ಚುಗಳ ಮೇಳೈಸಿದರು ಬಲುನಂ
ಬುಗೆಯ ಬದ್ಧರದೊಳಗೆ [5]ತುಂಬಿ[5]ದರಸ್ತ್ರ ಶಸ್ತ್ರಗಳ ॥ ೯೧

---

[1] ಸಂಧಾನ (ಟಿ.) [2] ಬಾವದಲಿ (ಪ). [3] ಸುರಿದು ಪಸರಿಸಿ ಮೆಱೆವ ಮೌಕ್ತಿಕ. [4] ನೊಗದ (ಪ.) [5] ತೀವಿ (ಟಿ.)

ಹಯನಿಕರ ಖುರಕಡಿಯ ವಜ್ರಾಂ
ಗಿಯನು ಹೊತ್ತವು ಝುಡಿವ ಹೊಂಗಂ
ಟೆಯ ವಿಡಾಯ ವರೂಥವನು ಕರೆಸಿದವು ಚೀತ್ಕೃತಿಯ ।
ಜಯನಿನದವಳ್ಳಿಱಿಯೆ ಸೂತಾ
ಶ್ರಯದಲತಿರಥನಿಕರ ರಥಸಂ
ಚಯವ ವೆಂಠಣಿಸಿದರು ತುಳುಕಿದರತುಳ ತೋಮರವ ॥ ೯೨

ಪೂತು ಸಾರಥಿ ಭಾಪು ಮಝುರೇ
ಸೂತ ಧಿರುಧಿರು ಎನುತ ರಥಿಕ
ವ್ರಾತ ಮಿಗೆ ಬೋಳೈಸಿ ಕೊಂಡರು ಹಯದ ವಾಘೆಗಳ ।
ಆ ತುರಂಗದ ಖುರಪುಟದ ನವ
ಶಾತಕುಂಭದ ಗಾಲಿಯುಱುಬೆಯ
ನಾ ತತುಕ್ಷಣವಾಂಪರಾರೆನೆ ಕವಿದುದುಭಯದೊಳು ॥ ೯೩

ಹರಿವ ರಥದುರವಣಿಗೆ ನೆಱೆಯದು
ಧರಣಿಯೆಂದಂಭೋಜಭವನೀ
ಧರೆಯನಿಮ್ಮಡಿಸಿದನೊ ಎನಲಾ ಬಹಳ ಸಮರದೊಳು ।
ಹರಿವ ರಥಪದಧೂಳಿ ಮಕರಾ
ಕರವ ಕುಡಿದುದು ಚೀತ್ಕೃತಿಯ ಚ
ಪ್ಪರಣೆ ಮಿಗಲುಱುಬಿದರು ರಥಿಕರು ಸರಿಸ ವಾಘೆಯಲಿ ॥ ೯೪

ಘನರಥದ ಚೀತ್ಕಾರ ಗಜಱುವ
ಧನುವಿನಬ್ಬರ ಹಯದ ಹೇಷಾ
ನಿನದ ರಥಿಕರ ಬೊಬ್ಬೆ ಸೂತರ ಬಹಳ ಚಪ್ಪರಣೆ ।
ಅನುವರದೊಳೊದಗಿತ್ತು ವಿಲಯದ
ವಿನುತ ಮೇಘಧ್ವಾನವನು ಸಂ
ಜನಿಸಿತೆನೆ ಹಳಚಿದವು ರಥರಥವೆರಡು ಸೇನೆಯಲಿ ॥ ೯೫

ತೆಗೆತೆಗೆದು ತಲೆಮುಟ್ಟಿ ಕಱೆದರು
ಬಿಗಿದ ಬಿಲುಗಳಲತಿರಥರು ಕಂ
ಬುಗೆಯ ಮುಱಿದರು ಹಯುವ ತಱಿದರು ಸಾರಥಿಯ ಕೆಡಹಿ ।

ಹಗಲ ಹೂಳಿದರಮಮ ಬಾಣಾ
ಳಿಗಳಳಲಸವು ಮಹಾರಥರು ಕಾ
ಳಿಗದೊಳಹುದೆನಿಸಿದರು ರಣದೊಳು ಸುಳಿವ ಯಮನವರ ॥ ೯೬

ತಿರುಗೆ ತಿರುಗಿದರೆಚ್ಚರೆಚ್ಚರು
ಮರಳೆ ಮರಳಿದರೌಕಲೌಕಿದ
ರುರವಣಿಸಲುರವಣಿಸಿದರು ಮಾರ್ತಾಗೆ ತಾಗಿದರು ।
ಸರಳಿಗಂಬನು ಸೂತವಾಜಿಯು
ಶಿರಕೆ ಶಿರವನು ರಥಕೆ ರಥವನು
ಸರಿಗಡಿದು ಕಾದಿದರು ಸಮರಥರಾಹವಾಗ್ರದಲಿ ॥ ೯೭

ರಥವದೊಂದೆಸೆ ಹಯವದೊಂದೆಸೆ
ರಥಿಕರೊಂದೆಸೆ ಚಾಪಶರಸಾ
ರಥಿಗಳೊಂದೆಸೆಯಾಗೆ ಕೊಂದರು ಬಲದೊಳತಿರಥರು ।
ರಥಿಕರುರವಣೆಯುಭಯಬಲದಲಿ
ಕಥೆಯು ಕಡೆಯಾಯಿತ್ತು ಬಳಿಕತಿ
ರಥರು ಹೊಕ್ಕರು ಕೇಳು ಧೃತರಾಷ್ಟ್ರಾವನೀಪಾಲ ॥ ೯೮

ನಾಲ್ಕನೆಯ ಸಂಧಿ ಮುಗಿದುದು.

# ಐದನೆಯ ಸಂಧಿ

ಸೂಚನೆ॥ ಉಭಯಬಲದತಿರಥಮಹಾರಥ ।
ವಿಭುಗಳುಱೆ ಹಳಚಿದರು ರಣದಲಿ ।
ತ್ರಿಭುವನವು ರಂಜಿಸಿತು ಸವೆದುದು ಸಕಲ ಸನ್ನಾಹ ॥

ಅಳಿದುದೆರಡಱ ಚೂಣಿ ಮುಂಗುಡಿ
ಯೊಳಗೆ ಕಡಲಾಯ್ತರುಣಜಲದೊ
ಬ್ಬುಳಿಯ ಖಂಡದ ದೊಂಡೆಗಳು ಕೆಸಱಿಡುವ ಮಿದುಳುಗಳ ॥
ಕಳದ ಹೆಣನೊಟ್ಟಿಲಲಿ ಮೊಗಸುವೊ
ಡಳುಕಿದರು ಮನ್ನೆಯರು ಬಳಿಕ[1]ರೆ[1]
ನೆಲೆಗಳಲಿ ಸೂಳೈಸಿದವು ನಿಸ್ಸಾಳಕೋಟಿಗಳು ॥ ೧

ನರನ ರಥ ಕುಣಿದುದು ಯುಧಿಷ್ಠಿರ
ನುರು ವರೂಥಸಗಾಢದೊಳು ಚೀ
ತ್ಕರಿಸಿತನಿಲಾತ್ಮಜನ ಸ್ಯಂದನ ಮುಂದುವರಿಯುತಿರೆ ।
ಭರದಿ ಮಾದ್ರೀಸುತರ ತೇರುಗ
ಳುರವಣಿಸಲಭಿಮನ್ಯುಸಾತ್ಯಕಿ
ಯಿರದೆ ಕೈಕೊಳ [2]ಲಾಯಿತಿತ್ತಲು ಕದನಕುದ್ಯೋಗ[2] ॥ ೨

[3]ವಿನುತ ಭೀಷ್ಮನು ಗಜಱೆ[3] ದುರಿಯೋ
ಧನನು ಬಿಲುಗೊಳಲಾತನನುಜರು
ಧನುವ ತುಡುಕೆ ಸುಶರ್ಮಶಲ್ಯರು ಸರಳ ಹೊದೆಗೆದಱೆ ।
ಮೊನೆಗಣೆಯನಳವಡಿಸೆ ಗುರು ಗುರು
ತನುಜನಸ್ತ್ರವ ತಿರುಹೆ ಸೇನಾ
ವನಧಿ ಗರ್ಜಿಸಲಾಯ್ತು ಸಂಕುಲಸಮರ [4]ಸೌರಂಭ[4] ॥ ೩

---

[1] ರಿ. (ಕ.) [2] ಲಾದುದಿತ್ತಲು ಸಮರಕುದ್ಯೋಗ (ಗ.), ಲಿತ್ತಲಾಯಿತು ಕೌತುಕೋದ್ಯೋಗ (ಚ.) [3] ಧನುವ ಮಿಡಿಯಲು ಭೀಷ್ಮ (ಜ.) ಇನನ ಸುತ ನಳವಡಿಸೆ (ಟ.) [4] ಪುಥಯದಲಿ (ಕ.ಗ.)

ಶಕುನಿ ಸಹದೇವನೊಳು ಶಲ್ಯನು
ನಕುಲನೊಳು ದುಶ್ಶಾಸನನು ಸಾ
ತ್ಯಕಿಯೊಡನೆ ಸೈಂಧವನು ಕುಂತೀಭೋಜಭೂಪನೊಳು ।
ಸಕಲನಾಯುಕರಂದು ಯುದ್ಧೋ
ದ್ಯುಕುತರಾದರು ಕೇಳು ನೃಪ ತಾ
ವಕರ ಕೌಂತೇಯರ ಸಮಗ್ರಾಹವದ ವಿಸ್ತರವ ॥ ೪

ಕಣೆಗೆದಱು [1]ದ್ರುಪದಾಂಕ ಗುರುವನು[1]
ಕೆಣಕಿದನು ತತ್ತನುಜ ಭೀಷ್ಮನ
ಸೆಣಸಿದನು ಮೂದಲಿಸಿದನು ಲಕ್ಷಣನನಭಿಮನ್ಯು ।
ರಣಕೆ ಕರೆದನು ಕೌರವಾನುಜ
ಗಣವನನಿಲತನೂಜನಿತ್ತಲು
ಹೆಣಗಿದರು ಭಗದತ್ತಭೀಮಕುಮಾರರವಗಡಿಸಿ ॥ ೫

ಕಲಹದೊಳು ಕರಿಘಟೆಯ ಹೊಯ್'ಹೊ
ಯ್ದಲಸಿ ಕೌರವನನುಜನನು ಮುಂ
ಕೊಳಿಸಿ ಕೊಳ್ಳದೆ ಕಳುಹಿ ಬೇಸಱುತನಿಲಸುತ ಮಸಗಿ ।
ನೆಲನ ಲೋಭಿಯ ಬುದ್ಧಿ ಮರಣಕೆ
ಫಲಿಸಬೇಹುದು ಕರೆ ಸುಯೋಧನ
ನಿಲಲಿ ಬವರಕ್ಕೆನುತ ಗದೆಯನು ತೂಗಿದನು ಭೀಮ ॥ ೬

ಭುಜವನೊದಱಿಸಿ ಸಿಂಹರವದಲಿ
ಗಜಱಿ ಗದೆಯನು ತಿರುಹಿ ರಿಪುಭೂ
ಭುಜರನಱಿಸಿದನಳವಿಗಾಂತರೆ ಕೊಂದನತಿಬಳರ ।
ತ್ರಿಜಗ ಮಝುಭಾಪೆನಲು ಪವಮಾ
ನಜನು ತಿರುಗಿಟ್ಟಣಿಸೆ ಸೇನಾಂ
ಬುಜಕೆ ಕುಂಜರನಾದನೈ ಜನಮೇಜಯಕ್ಷಿತಿಪ ॥ ೭

---

[1] ಕಲಿ ದ್ರುಪದ ದ್ರೋಣನ (ಚ.)

ನಡೆದರಾಹವಕನಿಲನಂದನ
ನೊಡನೆ ಸಾತ್ಯಕಿ ನಕುಲದ್ರುಪದರು
ತುಡುಕಿದರು ಬಿಲುಗೋಲನೈದಿತು ಪವನಜನ ಚೋಣಿ |
ಗಡಣಿಸುವ ಮುಂಮೊಗದ ಕೌರವ
ಪಡೆಯು ಹೇರಡವಿಯನು ಸವರಿಲು
ಕಡಿತಕಾಱರು ಮುಂದೆ ಹೊಕ್ಕುದು ನಕುಲಪಾರ್ಥಜರು ‖ ೮

ಕಡಿದರರಿಭಟಪಾದಪವನಡ
ಗೆಡಹಿದರು ಗಜಗಿರಿಗಳನು ರಥ
ದೆಡೆದೆವರ [1]ಕೊಚ್ಚಿದರು[1] ತುರಗವ್ರಜದ ಬಲುಮೆಳೆಯು |
ಕಡಿದು ಹರಹಿದರನಿಲಸುತ ಕಾ
ಲಿಡಲು ತೆಱಹಾಯ್ತುಹಿತವಿಪಿನದ
ಕಡಿತ ತೀರಿತು ಹೊಕ್ಕನರೆನೆಲೆಗಾಗಿ ಕಲಿಭೀಮ ‖ ೯

ಎಲೆಲೆ ವಿಲಯಕೃತಾಂತನೋ ನ
ಮ್ಮಳವು ಕೊಳ್ಳದು ಬೆಂಗೊಡಲಿ ಮುಂ
ಕೊಳಿಸದಿರಿ ಮರುಳಾಗದಿರಿ ಹುರುಳಾಗಿ ಹೆಂಡಿರಿಗೆ |
ಕೊಲೆಗಡಿಗನೋ ಭೀಮನೋ ರಿಪು
ಬಲಜಲಧಿಬಡಬಾನಲನೊ ತೊಲ
ತೊಲಗೆನುತ ತೆಗೆದೋಡಿತರೆನೆಲೆ ಕೌರವನ ಹೊರೆಗೆ ‖ ೧೦

ಅದಟನಡ್ಡೈಸಿದನು ದುರುಳನ
ಮದವ [2]ನಳಿವೆನು[2] ಬಾಯ ಹೊಯ್ ಹೊಯ್
ಕದನದಲಿ ನಡುಗಿಸುವ ನಾಯಕವಾಡಿಗಳನೆನುತ |
ಬದಗನಿ[3]ದಿರಾದನು ಜಯಶ್ರೀ
ಮದನಕಾಯನು ಕಪಟದಾಯನು
ವಿದಿತಮಾಯನು ರಣದಜೇಯನು ಕೌರವರ ರಾಯ ‖ ೧೧

[1] ತೂರಿದರು (ಗ.), ಸವಱಿದರು (ಜ.) [2] ಮುಱಿವೆನು (ಟ.)
[3] ಹೊದಗನಿ (ಗ.), ಒದಗುತಿ (ಜ.), ಅದಿರದಿ (ಟ.)

ಎಲವೊ ಮಾರುತಿ ನಿಮ್ಮೊಳಗೆ ಕೋ
ಮಳೆಯ ಹುದುವನು ಮೆಚ್ಚಿ ನನ್ನೊಳ
ಗಿಳೆಯ ಹುದುವನು ಬಯಸಿದ್ಯೆ ಛಲದಂಕನೆಂದಱಿಯ ।
ನೆಲನ ಬೇಟವ ಬಿಸುಟು ಜೀವದ
ಲುಳಿದು ತೊಲಗೆನೆ ಪವನಸುತ ಕಳ
ಕಳಿಸಿ ನಗುತವೆ ಕೌರವೇಂದ್ರಂಗೆಂದನುತ್ತರವ । ೧೨

ಕೆಡಹಿ ದುಶ್ಶ್ಯಾಸನನ ರಕುತವ
ಕುಡಿದು ನಿನ್ನೂರುಗಳನೀಕ್ಷಣ
ವುಡಿದು ಕೊಂಬೆನು ಧರೆಯನಲ್ಲದೆ ಹುದುವ ಬಯಸುವೆನೆ ।
ಪೊಡವಿ ದ್ರುಪದಕುಮಾರಿಯೆಮ್ಮಯ
ಮಡದಿ[1]ಗನ್ಯರು ಮನವಿಡಲು ಬಳಿ
ಕ[1]ಡಗುದಱಿವೆನೆನುತ್ತ ಹೊಕ್ಕನು ಭೀಮನವಗಡಿಸಿ ॥ ೧೩

ಗಾಳಿಯುಱುಬೆಗೆ ಮಲೆತ ಮೇಘದ
ತೋಳುವಲ ನಗೆಗೆಡೆಯಲಾ ಕುರು
ಪಾಲನೆತ್ತಲು ಭೀಮನೆತ್ತಲು ಶಿವಶಿವಾ ಎನುತ ।
ಮೇಲಣಮರರ ಮಂದಿ ನಗೆ ನೃಪ
ವಾಳಿ ಜವಗೆಡೆ ಖಾತಿಯೊಳು ಕ
ಟ್ಟಾಳು ಹೊಕ್ಕುದು ಭೀಮಸೇನನ ರಥವ ಮುಱಿಯೆಸುತ ॥ ೧೪

ಬಿಲುದುಡುಕಿ ಕೈಕೊಂಡ ರಥಿಕಾ
ವಳಿಯು ಗೋಣಡವಿಯಲಿ ಭೀಮಾ
ನಲನ ವಿಲಸತ್ಕೇಳಿ ಕಾಣಿಸಲಾಯ್ತು ನಿಮಿಷದಲಿ ।
ಇಳೆಯೊಳೀ ಪವಮಾನನಂದನ
ನುಳಿಯೆ ಯಮರಾಜಂಗೆ ಬೆಸಕ್ಕೈ
ವಳವಿ ಹಲಬರಿಗಾಗದೆಂದುದು ಸಮರ ಭೂತಗಣ ॥ ೧೫

---

[1] ಯಲ್ಲವೆ ಠೋಗರಳುಪಿದರ (ಟ.)

ಪವನಜನ ಕೈಘಾಸಿಗಾನದ
ಬವರಿಗರನೀಕ್ಷಿಸುತ ರಥವನು
ಕವಿಸಿದನು ಕೈನೆಗಹಿ ಮೋಹರಕಭಯವನು ಕೊಡುತ ।
ಹವಣಿಸೈ ಹೇರಾಳದಾಟೋ
ಪವನು ಹಾರೈ ಜಯವ ರಣದಲಿ
ತವಕಿಸೈ ತೆಗೆದೋಟಕೆನುತುರವಣಿಸಿದನು ಭೀಷ್ಮ ॥ ೧೬

ಎಲೆ ಪಿತಾಮಹ ನೀವು ಕರುಣಿಸಿ
ದಳವ ನಿಮಗೊಪ್ಪಿಸುವೆ ಜಯುವೆಮ
ಗುಳಿವು ಬೇಱೆಂತೆನುತ ಕೊಂಡನು ಪವನಸುತ ಧನುವ ।
ಚಳಕದಲಿ ತೆಗೆದಚ್ಚಡಹಿತನ
ಹಿಳುಕ ಸೀಳಿದು ಬಿಸುಟು ಭೀಮನ
ಗೆಲಿದನೆಂಟಂಬಿನಲಿ ಗಂಗಾಸೂನು ಸಮರದಲಿ ॥ ೧೭

ಮೇಲೆ ಹೇಳಿಕೆಯಾಯ್ತು ವರಪಾಂ
ಚಾಲರಿಗೆ ಚೈದ್ಯರಿಗೆ ಮತ್ಸ್ಯನೃ
ಪಾಲ ಸೃಂಜಯುರಾದಿಯಾದಕ್ಷೋಹಿಣೀದಳಕೆ ।
ಸೂಳು ಮಿಗೆ ಗರ್ಜಿಸುವ ಘನನಿ
ಸ್ಸಾಳ ಕೋಟಿಯ ಗಡಣದೊಳು ಕೆಂ
ಗೋಲಮಳೆಗಱೆಯುತ್ತ ಗಂಗಾಸುತನ ಕೆಣಕಿದರು ॥ ೧೮

ಪೂತು ಮಝುರೇ ಪಾಂಡುಸೈನ್ಯ
ವ್ರಾತ ಕವಿದುದು ಕೇಳಿರೈ ಮು
ಯ್ಯಾಂತುದೇ ಬರಹೇಳಿ ವೈವಸ್ವತನ ಪರಿಜನವ ।
ಘಾತಿಸುವೆನದನೆನುತ [1]ತೊಡಚಿದ[1]
ನೂತನಾಸ್ತ್ರಂಗಳಲಿ ರಿಪುಸಂ
ಘಾತವನು ಕೆಡೆಯೆಚ್ಚು ಘಲ್ಲಟಿಸಿದನು ಕಡಿಕಡಿಯ ॥ ೧೯

[1] ಕೊಡಹಿದ (ಕ.ಗ.ಪ.)

ಕಾಳೆಗಕ್ಕಿದಿರೊಡ್ಡಿ ಭೀಷ್ಮನ
ಕೋಲ ಹತಿಯಲಿ ಮಡಿದ ರಿಪುಭೂ
ಪಾಳಿ ಹರಿದುದು ಸುರರ ಹೆಂಡಿರ ಮುರಿದ ಮುಂದಲೆ[1]ಯ[1] ||
ಮೇಲೆ ಮೇಲ್ವೈತಪ್ಪ ವೀರಭ
ಟಾಳಿಯೊಡನಲ್ಲಿಂದ ಸುಭಟರು
ಸೂಳೆಬಂಟಿಕೆಯಿಂದ [2]ಹೊಯ್ದಾಡಿದರು ನಾಕದಲಿ[2] || ೨೦

ಮುಡುಹುಗಳೊಳೊಡೆಹೊಯ್ವ ಕಾಲಲಿ
ಮಿಡಿಯ ಮೆಟ್ಟುವ ತಂಬುಲವ ತೆಗೆ
ದಿಡುವ ಕರೆಕರೆದೊರೆಯನುರ್ಚುವ ನಾಯ ಹೆಸರಿಡುವ |
ತೊಡರುಗಟ್ಟುವ ಬೈವ ಭಟ್ಟರ
ಬಿಡುವ ಕಾದುವ ವೀರಭಟರಿಂ
ದಿಡಿದುದಮರಾವತಿಯ ಸೊಂಪಿನ ಸೂಳೆಗೇರಿಗಳು ೨೧

ಸುರರಿಗತ್ತಣ ಗಜಬಜವ ಪರಿ
ಹರಿಸಲರಿಯದೆ ವೀರಭೀಷ್ಮನ
ಧುರವನೀಕ್ಷಿಸಲಿತ್ತಲಳವಡದೇನನುಸುರುವೆನು |
ಅರರೆ ಅಂಬರಸರಸಿ ರಿಪುಭಟ
ವರರ [3]ಮುಖಪಂಕರುಹವನವಿ
ಸ್ತರಣವಾದುದೆನ[3]ಲ್ಕೆ ಗಂಗಾಸೂನು [4]ಕೈಕೊಂಡ[4] ೨೨

ಕಡುಮನದ ಕೈಸೂಱೆಗಾಱರ
ನಡಗೆಡಹಿದನು ಧುರದ ಗೆಲವಿಗೆ
ಮಿಡುಕುವರನಸಿಯರೆದು ನೆಗ್ಗಿದನೇನನುಸುರುವೆನು |
ಗಡಣಿಗರನೊಂದೊಂದು ಶರದಲಿ
ತಡೆಗಡಿವ ಸಂರಂಭ ಭೀಷ್ಮನ
ಬಿಡುಧನುವಿನುಬ್ಬಟೆಗೆ ತೆರಳಿತು ಮಕುಟವರ್ಧನರು || ೨೩

---

[1] ಗೆ (ಪ.) [2] ಹೊಯ್ದಾಡಿದರು ನಾಯಕರು (ಕ.ಗ.) ಖಾಡಾಖಾಡಿ ಗೈದಿದರು (ಟ) [3] ಶಿರಃಪಂಕಜರಜನಿದಳಿತವಾದುದೆನಲು (ಪ.) [4] ತವೆ ಕೊಂದ (ಪ.)

ಬಳಸಿ ತಾರೆಗಳೆಸೆಯೆ ಚಂದ್ರರು
ಹಲಬರಾದರೊ ನಭದೊಳೆನೆ ಹೊಳೆ
ಹೊಳೆವ [1]ಮಣಿಮೌಳಿಗಳು[1] ಸಂದಣಿಸಿದವು ಗಗನದೊಳು ।
ಗೆಲಿದನಹಿತಾನೀಕವನು ರಿಪು
ಬಲ ದಿಶಾಪಟ ಭೀಷ್ಮನಿತ್ತಲು
ಕಲಿ ಯುಧಿಷ್ಠಿರನೃಪನ ವಿರಥನ ಮಾಡಿದನು ಶಲ್ಯ ೨೪

ಅರಸನನು ಹಿಂದಿಕ್ಕಿ ನಡೆದು
ತ್ತರನು ಶಲ್ಯನೊಳಾಂತು ನಿಂದನು
ಸರಳ ಸರಿವಳೆಗಱೆಯೆ ಕಡಿದನು ಶಲ್ಯಭೂಪಾಲ ।
ಧುರವಿಶಾರದನಹೆ ವಿರಾಟನ
ಹಿರಿಯಮಗ ನೀನೆಂದು ಗೋಕುಲ
ಹರಣದಲಿ ಕಲಿಯಾಗಿ ಕಾದಿದೆಯೆನುತ ತೆಗೆದೆಚ್ಚ ೨೫

ಎಸಲು ಶಲ್ಯನ ಸರಳ ಖಂಡಿಸಿ
ನಿಶಿತ ಬಾಣದಲುತ್ತರನು ತೆಗೆ
ದೆಸಲು ಖತಿಯಲಿ ಶಲ್ಯನಭಿಮಂತ್ರಿಸಿ ಮಹಾಶರವ ।
ಅಸಮಬಲನಾಕರ್ಣಪೂರದಿ
ನೆಸೆ ವಿರಾಟಕುಮಾರನಸು ಲಂ
ಘಿಸಿತು ಕಾಯವನೊದೆದು ಖಚರೀಜನದ ಕುಚಯುಗಕೆ । ೨೬

ವೀರ ಶಲ್ಯ ದ್ರೋಣ ಕೃಪ ಭಾ
ಗೀರಥಿಯ ನಂದನರು ಪಾಂಡುಕು
ಮಾರಕರ ಸೇನೆಯೊಳು ಗೆಲಿದರು ಮುಱಿದರತಿಬಲರ ।
ಧೀರ [2]ಸುಭಟರ[2] ರಕ್ತಧಾರಾ
ಸಾರ ಲೋಹಿತ ಬಿಂಬವನು ಘನ
ವಾರಿಯಲಿ ತೊಳೆದಂತೆ ಪಶ್ಚಿಮಜಲಧಿಗಿನನಿಳಿದ ॥ ೨೭

[1] ಮೌಳಿಗಳಣಿಗೆ (ಕ.ಚ.ಟ.) [2] ಭಟರ್ಗಳ (ಕ.ಗ.ಚ.)

ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ ಸೇನೆಯ ತೆಗೆಸಿದವು ಹೆ
ಗ್ಗಾಳೆ ಮೊಳಗಿದವಾನೆವಱೆ ಗಜಱಿದವು ಡೌಡೆಗಳು ।
ಪಾಳಯಕೆ [1]ತಿರುಗಿ[1] ದರಖಿಲ ಭೂ
ಪಾಲಕರು ಗಂಗಾಸುತನ ಪಾಂ
ಚಾಲಕನ ನೇಮದಲಿ ಕೌರವ [2]ಪಾಂಡುನಂದನರು[2] । ೨೮

ಇತ್ತಲೀ ಸಂಗ್ರಾಮ ಮಹಿಯೊಳು
ಮೃತ್ಯುವಿನ ಭಾಗ್ಯೋದಯ[3]ವು[3] ಕೈ
ವರ್ತಿಸಿತು ವೈವಸ್ವತಾಭಿಪ್ರಾಯ ಸಿದ್ಧಿಸಿತ ।
ಮುತ್ತಿಗೆಯ ಜಂಬುಕ[4]ಖಗಾ[4]ಳಿಯ
ಚಿತ್ತ ನಿಶ್ಚಲವಾಯ್ತು [5]ಸಲೆ ಮನ
ವು[5]ತ್ತರೋತ್ತರವಾಯ್ತು ಶಾಕಿನಿ ಡಾಕಿನೀ ಜನದ ॥ ೨೯

ಹೆಗಲ ಪಕ್ಕಲೆಗಳಲಿ ಕವಿದುದು
ವಿಗಡ ಪೂತನಿವೃಂದ ಜೀರ್ಕೊಳ
ವಿಗಳ ಕೈಱಾಟಳದೊಳೈದಿತು ಶಾಕಿನೀ ನಿಕರ ।
ತೊಗಲ ಕುನಿಕಿಲ ಬಂಡಿಗಳಲಾ
ರ್ದಗಿದು ಹೊಕ್ಕರು ರಕ್ಕಸರು ಬಾ
ಯ್ದೆಗೆದು ಬಂದುದುಲೂಕ ಜಂಬುಕ ಕಾಕ ಸಂದೋಹ ॥ ೩೦

ತಳಿತ ತಲೆಯೋಡಿನೊಳು ಶೋಣಿತ
ಜಲವ ಕಾಸಿದರೆಳೆಯ ಕರುಳನು
ಹಿಳಿದು ಹಿಂಡಿದರಿಕ್ಕಿದರು ಕುಸುರಿಗಳ ಮೂಳೆಗಳ ।
ತೆಳುದೊಗಲ ಚಕ್ಕಳದ ಕೈಚ
ಪ್ಪಳೆಯುವರು ಹಂತಿಯಲಿ ಕುಡಿದರು
ಕೆಳೆಯರಿಗೆ ಸವಿದೋಱಿ ಪೂತನಿ ನಿಕರ ಗಡಣದಲಿ ॥ ೩೧

[1] ತಿರಳಿ (ಕ.) [2] ಪಾಂಡುಸುತಸೇನೆ (ಜ.) [3] ಕೆ (ಕ.ಟ.) [4] ಬಕಾ (ಕ.ಚ.) [5] ಸಮರದೊಳು (ಟ.)

ಕರುಳನಣಲೊಳಗಡಸಿ ನಲಿದುದು
ಮರುಳ ಬಳಗ ಕಪಾಲ ಪಾತ್ರೆಯು
ನರೆನೆಗಹಿ ಕೊಂಕಿನಲಿ ಕುಡಿದರು ಮುಕ್ತಕೇಶಿಯರು ।
ಮೊರೆವೆಣನನೊಡೆ ಮೆಲುತ ಹಾಡಿತು
ದುರುಳ ದಾನವನಿಕರ ಪಾಂಡವ
ಕುರುನೃಪರ ಹರಸಿದುದು ಕೈಪಱೆಗುಟ್ಟಿ ಭೂತಗಣ ॥ ೩೨

ಸಿಡಿದ ಕಣ್ಣಾಲಿಗಳನಾಯಿದು
ಕುಡುಕುಗೊಂಡವು ಕಾಗೆಗಳು ಹಿ
ಮ್ಮಡಿಯ ಹೊರಳಿಯು ನರವ ಸೆಳೆದವು ಜಂಬುಕಾದಿಗಳು ।
ಅಡಗ ಕದುಕಿಱಿದೊಱಲಿ ಕರೆದವು
ಗಡಣವನು ಗೂಗೆಗಳು ರಕುತದ
ಕಡಲಲೋಕುಳಿಯಾಡಿದವು ಭೇತಾಳ ಕಾಳಿಯರು ॥ ೩೩

ತೆಳುದೊಗಲ ನಿಡುಸೋಗೆಯುಡುಗೆಯ
ನೆಳಗರುಳ ಸಿಂಗಾರದುಱುಬಿನ
ಕೆಳದಿಯರ ಕೈನೇಣ ಕಿಱಿದೊಟ್ಟಿಲಿನ ಬೊಂಬೆಗಳ ।
ಎಳಮಿದುಳ ಕಜ್ಜಾಯ ಮೂಳೆಯ
ಹಳುಕು ಕಾಳಿಜದಟ್ಟುಗುಳಿಗಳ
ಕೆಳೆಗಳೊಳು ಕೊಡಗೂಸು ಪೂತನಿನಿಕರವೊಪ್ಪಿದವು ॥ ೩೪

ತೂ[1]ಳ[1] ಬರೆ ಕುಣಿದುದು ಕಬಂಧದ
ಜಾಲದೊಡನೆ ಪಿಶಾಚಗಣ ಭೇ
ತಾಳಗಣ ಕೈಪಱೆಯ ಬಡಿದುದು ಶಾಕಿನೀ[2]ನಿವಹ[2] ।
ಸಾಲು ಮಿಗೆ ಸೊಗಸಿದುದು ರಣಭೂ
ತಾಳಿಯಲಿ ಮತ್ತಿತ್ತ [3]ಕೇಳ್ದುದು[3]
ಪಾಳಯಂಗಳೊಳೆರಡಱಲಿ ಸಂಗರ ಮಹೋ[4]ದ್ಯೋಗ[4] ॥ ೩೫

---

[1] ಳಿ (ಜ.) [2] ನಿಕರ (ಟ.) ಯರುಗಳು (ಕ.ತ.ಪ.) [3] ಲೇಳ್ದುದು (ಕ) ಕೇಳ್ವುದು (ಗ) [4] ತ್ಸಾಹ (ಟ.)

ಹಿಳಿದ ಲೋಹದ ಸೀಸಕಂಗಳ
ಬಲಿಸಿದರು ಹೋಳಾದ ಕವಚವ
ಹೊಲಿಸಿದರು ಬಾಹುರಕೆ ಸವಗದ ಬಿರುಕ ಬೆಸಸಿದರು ।
ಕಳಚಿದಾಯುಧದಾಯತದ ಕೀ
ಲ್ಗೊಳಿಸಿದರು ಖಡ್ಗಕ್ಕೆ ಕುಂತವ
ಕಳೆದು ಕಾವನು ತೊಡಿಸುತಿರ್ದುದು ಸೇನೆಯೆರಡಱಲಿ ।     ೩೬

ತಡಿಯ ಬಲಿಸುವ ಗುಳನ ಱೆಂಚೆಯ
ಗಡಣಿಸುವ ಹಕ್ಕರಿಕೆಗಳನಾ
ಯ್ದಡಸಿ ಹೊಲಿಸುವ ಕ[1]ಬ್ಬಿ[1]ಗಳ ಕೊಂಡಿಗಳ ಮಿಗೆ ಬಲಿವ ।
ಒಡೆದ ದೂಹತ್ತಿಗೆಗೆ ಕೀಲ್ಗಳ
ನಡಸಿ ಬೆಟ್ಟಿದ ಗಾಲಿಗಚ್ಚನು
ತೊಡಿಸುತಿರಲಾಯ್ತೆರಡು ಬಲದೊಳು ನಿದ್ರೆಗವಮಾನ ॥     ೩೭

ಅಸಿಯ ಮಸೆಸುವ ಮುಱಿದ ಲೌಡಿಯ
ಬೆಸುವ ಕುಂತದ ಧಾರೆಗಳ ಥಾ
ಳಿಸುವ ನೆಱೆಸೊಪ್ಪಾದ ಹಿಳುಕಿನ ಗಱಿಯ ಕೀಲಿಸುವ ।
ಹೊಸ ತಿರುವ ಕಟ್ಟುವ ಕಠಾರಿಯ
ಮಸೆವ ಹಲಗೆಯ ಬಲಿವ ಸುರಗಿಯ
ಬಸೆಯ ಬೆಳಸುವ ವೀರಭಟರೊಪ್ಪಿದರು ಕಟಕದಲಿ ॥     ೩೮

ಹಱಿದ [2]ಕೊರಳನು[2] ಬಿಗಿವ ಉರದೊಳು
ಮುಱಿದ ಬಾಣವ ಕೀಳ್ವ ಹೊಟ್ಟೆಯ
[3]ನಿ[3]ಱಿಗರುಳನೊಳಗಿಕ್ಕಿ ಹೊಲಿಸುವ ಮದ್ದುಗಳನಿಡಿವ ।
ಉಱುವ ಸೇಕದ ನಸ್ಯದೊಳು ಹದ
ನಱಿವ ತುರಗದ ವೈದ್ಯತತಿಯೆ
ಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ ।     ೩೯

---

[1] ಪ್ಪಿ (ಗ.)    [2] ಕರುಳನು (ಟ.)    [3] ಹ (ಗ.ಚ.ಟ.ಪ.)

ಒಡಲಿನೊಳು [1]ಮುಱಿದಿದ್ದ[1] ಸಬಳವ
ನುಡಿಯಲೀಯದೆ ಕೀಳ್ವ ಮದ್ದನು
ಗಿಡಿವ ಜೇವಣಿಗೆಯೊಳು ಸಪ್ರಾಣಿಸುವ ದುರ್ವ್ರಣವ ।
ತೊಡೆದು ಕಟ್ಟುವ ಹಸ್ತಿವೈದ್ಯರ
ಗಡಣವುಭಯದೊಳೆಸೆವವಂತ್ಯದ
ಕಡಲ ರಭಸಕೆ ತೊಡಕನಿಕ್ಕಿತು ಬಹಳ ಬಲಜಲಧಿ ॥ ೪೦

ಬಾದಣಿಸಿದೇಱುಗಳ ಬಾಯೊಳು
ಕಾದ ಬಾರಂಗಿಗಳನಳತೆಗೆ
ಕೋದು [2]ವಾಮದೊಳೆಯ್ದೆ ಹಿಡಿದರು ತೈಲಧಾರೆಗಳ ।
ಆದ ಮೈಗಂಡಿಯೊಳು ರಕುತವ
ಶೋಧಿಸುತ ಹಳದುಪ್ಪವನು ತೊಡೆ
ದಾದರಿಸಿದುದು ವೈದ್ಯಸಂತತಿ ವೀರಭಟರುಗಳ ॥ ೪೧

ಖಡುಗದಡವೊಯ್ಲುಗಳಲಡುಮ
ದ್ದಡಸಿದರು ಸೂಕರನ ತುಪ್ಪವ
ತೊಡೆದರಿಱಿವೇಱಿನೊಳು ಬಿಟ್ಟರು ತೈಲಧಾರೆಗಳ ।
ಕುಡಿಸಿದರು ಮಂತ್ರೋದಕವನೊಳ
ಗಡಸಿ ಕರುಳನು ಮುಚ್ಚಿ ಮಂತ್ರಿಸಿ
ತೊಡೆದರಖಿಳೌಷಧಿಗಳನು ನೃಪಸೇನೆಯೆರಡಱಲಿ ॥ ೪೨

ಐದನೆಯ ಸಂಧಿ ಮುಗಿದುದು

---

1. ಮುಱಿದಿಟ್ಟ (ಗ.ಜ.ತ.), ಹೊಕ್ಕಿಟ್ಟ (ಟ.) 2 ನೂಲುಗಳಲ್ಲಿ ಗ (ಟ.), ತಾವದೊಳೆಯ್ದೆ (ಚ.ಜ.ತ.ಪ.)

# ಆರನೆಯ ಸಂಧಿ

**ಸೂಚನೆ** ‖ ರಾಯ:ದನುಜಪುರಟ್ಟನಂಭೋ
ಜಾಯತಾಕ್ಷನ ಖ್ಯಾತಿಯನು ಗಾಂ
ಗೇಯ ಭಯಭಕ್ತಿಯಲಿ ಗೆಲಿದನು ಪರ ಸುದರ್ಶನವ ‖

ಕೇಳು ಜನಮೇಜಯ ಧರಿತ್ರೀ
ಪಾಲ ದಿನಕರನುದಯದಲಿ ಮುಂ
ಗಾಳೆಗದ ಗಾಢಾಭಿಲಾಷರು ಬಂದು ಕಣನೊಳಗೆ ।
ಮೇಲುನೆಲನಱಿದಖಿಲ ಕುರುಭೂ
ಪಾಲನವರೊಡ್ಡಿದರು ಲಕ್ಷ್ಮೀ
ಲೋಲನಾಜ್ಞೆಯಲಿವರು ಬಲಿದರು ತಮ್ಮ ಮೋಹರವ ‖ ೧

ದಳವೆರಡು ದಳಪತಿಗಳಬ್ಬರ
ತಳಿತ ಸನ್ನೆಯ ಚೌರಿಯಲಿ ಬಿಡೆ
ಹಳಚಿದುದು ಹೊಯ್ದಾಡಿ ಬಿದ್ದುದು ಪಾಯದಳವಂದು ।
ತುಳಿದು ಹೊಕ್ಕವು ದಂತಿಘಟೆ ದಳ
ವುಳಿಸಿ ಹರಿದವು ತೇರುಗಳು ತೋಳ್
ಬಳಲೆ ಹೊಯ್ದಾಡಿದರು [1]ರಾವುತರಸಮ ಸಮರದಲಿ[1] ‖ ೨

ಏನ ಹೇಳುವೆನುಭಯ ಬಲದಲಿ
ಲೂನ ನಿವಹದ ಹಯವನಡೆಗೆಡೆ ।
ವಾನೆಗಳ ಹೊದಱೆದ್ದು ಮುಗ್ಗಿದ ರಥದ ವಾಜಿಗಳ ।
ಮಾನವರ ಕಡಿಖಂಡದೊಂಡೆಯ
[2]ನೇನನೆಂಬೆನು ಹರಿವ[2] ರುಧಿರಾಂ
ಭೋನಿಧಿಯ ಹರಹುಗಳ [3]ಪೂರದ ವಿಗಡ ವಿಗ್ರಹವ[3] ‖ ೩

---

[1] ಕಣನಲಿ ರಾಯರಾವುತರು (ಟ.), ರಾವುತರುಭಯಸೇನೆಯಲಿ (ಚ.)
[2] ಲೂನ ಭುಜಜಂಘೆಗಳ (ಜ.) [3] ಹೊರದಲಖಿಲವಿಗ್ರಹವ (ಟ.), ಹೊರದ ಚಪಲ ವಿಗ್ರಹವ (ಚ.ಪ.)

ಅಳಿದುದೆರಡಱ ಚೂಣಿ ದೊರೆಗಳ
ಬಲಕೆ ಹೇಳಿಕೆಯಾಯ್ತು ಘನಸಂ
ಕುಲ ಸುವಿಗ್ರಹ ಸಾಧನರು ಕೈಮಾಡಿ ಕಡಿವಡೆಯೆ ।
ದಳವುಳಿಸಿದನು ಭೀಮ ಕೌರವ
ದಳವ ತಱುಬಿದರಡ್ಡಬಿದ್ದರಿ
ಬಲದ ಸುಭಟರಿಗಿತ್ತನಮರಾವತಿಯ ಸಂಪದವ ॥ ೯

ಮುಱಿದು ಬಹ ನಿಜಸೇನೆಗಭಯದ
ಸೆಱಗ ಬೀಸುತ ಭೀಮಸೇನನ
ತಱುಬಿ ನಿಂದನು ಭೀಷ್ಮ ಬಿಗಿದನು ಸರಳಲಂಬರವ ॥
ತೆಱಹುಗೊಡವಂಬುಗಳು ಭೀಮಗೆ
ಬೆಱಗು ಬಲಿದುದು ಹೊಕ್ಕು ಸಾತ್ಯಕಿ
ಯಿಱಿದು ಭೀಷ್ಮನ ಬಲದ[1]ಲೂಡಿ[1]ದನಖಿಳ ಖಗಕುಲವ ॥ ೧೦

ಬಳಿಕ ಸಾತ್ಯಕಿ ಭೀಷ್ಮರಿಗೆ ಬಲು
ಗಲಹ ಬಲಿದುದು ವಿಲಯ ರುದ್ರನ
ನಿಲವನೊಚ್ಚತಗೊಂಡ ಪರಬಲದೊಳಗೆ ಗಾಂಗೇಯ ।
ತಳಪಟವ ಮಾಡಿದನು ಭಾಷೆಯ
ಬಳಿಗೆ ಕೊಂದನು ಹತ್ತುಸಾವಿರ
ನೆಲನ ವಲ್ಲಭರನು ಯುಧಿಷ್ಠಿರರಾಯ ಸೇನೆಯಲಿ ॥ ೧೧

ಬೀಳಲವನೀಪತಿಗಳತಿಹೀ
ಹಾಳಿಯಲಿ ಸಾತ್ಯಕಿ ಮುಳಿದು [2]ಬ[2]ಲು
ಗೋಲಿನಲಿ ಗಂಗಾಕುಮಾರನ ಸಾರಥಿಯನೆಸಲು ।
ಮೇಲುಗಾಳೆಗದವರ ಸೇರಿತು
ಸೋಲ ಕುರುಪತಿಗಾಯ್ತು ಕಿರಣದ
ಗೊಳಯವು ಪಡುವಣ ಸಮುದ್ರಕೆ ತೆಗೆಯಲಿನನಿಳಿದ ॥ ೧೨

[1] ಲಕ್ಕಿ (ಕ.ಛ.) [2] ಬಿ (ಕ.ಛ.)

ದಿನವೆರಡು ಹಿಂದಾದುದಿದು ಮೂ
ಱನೆಯ ದಿವಸದ ಬಹಳ ವಿಗ್ರಹ
ದನುವನಾಲಿಸು ರಾಯ ಜನಮೇಜಯ ಮಹೀಪಾಲ ।
ದಿನಪನುದಯಾಚಲದ ಚಾವಡಿ
ವನೆಗೆ ಬರೆ ಬಲವೆರಡು ಗಳಗ
ರ್ಜನದಿ ಬಂದೊಡ್ಡಿದವು ಕಳನೊಳು ಖತಿಯ ಪಡಪಿನಲಿ ॥ ೮

ಸೂಳು ಮಿಗಲಳ್ಳಿಱಿವ ನಿಸ್ಸಾ
ಳೋಳಿಗಳ ತಂಬಟದ ಕೊಂಬಿನ
ಗಾಳುಗಜಱಿನ ಕಹಳೆಗಳ ಕಳಕಳದ ಬೊಗ್ಗುಗಳ ।
ಮೇಳವಣಿ ಭುಗಿಲಿಡಲು ಬೊಬ್ಬೆಯ
ಘೋಳ ಘೋಷದ ರಭಸ ದೆಸೆಗಳ
ಸೀಳೆ ಸಿಡಿಲೆದ್ದೆರಡು ಬಲ ಹೊಯ್ದಾಡಿತೊಡಗಲಸಿ ॥ ೯

ಜೋಳವಾಳಿಯೊಳುಂಡು ಮಾಡಿದ
ಸಾಲವನು ತಲೆಗಳಲಿ ತಿದ್ದಿದ
ರಾಳ ತಱುಬುವ ಪತಿಗೆ ಹರುಷವ ಮಾಡಿ ತಮತಮಗೆ ।
ಕಾಲನೂರ್ಕೈದದು ಸುರಸ್ತ್ರೀ
ಜಾಲ ನೆಱೆಯದು ಗಗನ ಸುಭಟರ
ಸಾಲೊಳಡಗಿತು ಚಿತ್ರವೆನೆ ಹೊಯ್ದಾಡಿತುಭಯಬಲ ॥ ೧೦

ಬರಲಿ ಸಮರಕೆ ಸಾತ್ಯಕಿಯ
ಕರೆಯೆನುತ ಬಿಲುದುಡುಕಿ ರಥದಲಿ
ಸರಿಸತಾಳಧ್ವಜವನೆತ್ತಿಸಿ ಸಮರಥರ ನೆರಹಿ ।
ಸರಳ ತೂಗುತ [1]ಮಾಱು[1]ಬಲವನು
ತಱುಬಿ ನಿಂದನು ಭೀಷ್ಮನಗ್ಗದ
ಬಿರುದ ಸಂಭಾವಿಸುತ ಪಾಠಕಕೋಟಿ ಗಡಬಡಿಸಿ ॥ ೧೧

---

[1] ಮುಱಿದ (ಗ)

ಕಾಲಯಮನೋ ಭೀಷ್ಮನೋ ಘಡ
ಮೇಳವೇ ಮಝು ಭಾಪು ಮಾರಿಯ
ತಾಳಿಗೆಗೆ ತುತ್ತಾದವೇ ತಡವೇಕೆ ತೆಗೆಯೆನುತ ।
ಆಳು ಮುಱಿದುದು ಮೋಹರದ ಭೂ
ಪಾಲಕರು ಹುರಿಯೊಡೆದು ದೊರೆಗಳ
ಮೇಲೆ ಬಿಸುಟರು ವೀರಗಂಗಾತನುಜನುಪಟಳವ ॥ ೧೨

ಸೋಲ ಮಿಗಲೊಳಸರಿವ ಬಿರುದರ
ಬೀಳಗೆಡಹಿಸಿ ಕಪಿಯ ಹಳವಿಗೆ
ಗೋಲನೆತ್ತಿಸಿ ಕೆಲಬಲದ ಮನ್ನೆಯರ [1]ಕೈವೀಸಿ[1] ।
ಆಲಿಯಲಿ ಕಿಡಿ ಸೂಸೆ ಮೀಸೆಯ
ಮೇಲುದಿರುಹುತಲೌಡುಗಚ್ಚಿ ಕ
ರಾಳರೋಷ ಮಹೋಗ್ರವೀರನು ಪಾರ್ಥನಿದಿರಾದ ॥ ೧೩

ತೊಲತೊಲಗು ಕಲಿ ಭೀಷ್ಮ ವೃದ್ಧರಿ
ಗೆಳಭಟರಕೂಡಾವುದಂತರ
ವಳಿಬಲರ ಹೆದಱಿಸಿದ ಹೆಕ್ಕಳವೇಕೆ ಸಾರೆನುತ ।
ತುಳುಕಿದನು ಕೆಂಗೋಲ ಜಲಧಿಯ
ನೆಲನದಾವುದು ದಿಕ್ಕದಾವುದು
ಸಲೆ ನಭೋಮಂಡಲವದಾವುದೆನಲ್ಕೆ [2]ಕಲಿ ಪಾರ್ಥ[2] ॥ ೧೪

ಪೂತುರೇ ಕಲಿ ಪಾರ್ಥ ವಿಶಿಖ
ವ್ರಾತಮಯವಾಯ್ತವನಿ ಕಾರ್ಮುಕ
ಭೂತನಾಥನ ಗರುಡಿಯಲ್ಲಾ ಕಲಿತ ಮನೆ ನಿನಗೆ ।
ಆತುಕೊಳ್ಳಾದಡೆಯೆನುತ ಕಪಿ
ಕೇತನನ ಶರಹತಿಯನಾಂತಾ
ಮಾತು ಹಿಂಚಿತು ಕಡಿದು ಬಿಸುಟನು ಕೃಷ್ಣ ಬೆಱಗಾಗೆ ॥ ೧೫

---

1 [illegible] 2 [illegible]

ಆ ಸಮಯದೊಳು ರಣದೊ[1]ಳೌಕಿದ[1]
[2]ರಾ[2]ಸುಯೋಧನ ಶಲ್ಯ ಸಲೆ ದು
ಶ್ಶಾಸನನು ಕೃಪ ಶಕುನಿ ಗುರುಸುತರಾದಿಯಾದವರು ।
ಸೂಸಿದರು ಸರಳುಗಳನರ್ಜುನ
ಘಾಸಿಯಾದನು ವಿಲಯ ಮೇಘದ
ಮೀಸಲಿನ ಮಳೆಗಾಲವೆನೆ ಮೋಹಿದುದು ಶರಜಾಲ ॥ ೧೬

ಕುದುರೆ ಕಂಗೆಟ್ಟವು ಮುರಾರಿಯ
ಹೃದಯ ಸಂಚಲವಾಯ್ತು ಗಾಲಿಗ
ಳದುರಿದವು ಗರುವಾಯಿಗೆಟ್ಟನು ಮೇಲೆ ಹನುಮಂತ ।
ಹೆದಱಿದರು ನಾಯಕರು ಪಾಂಡವ
ರದಟು ಮುಱಿದುದು ಸುರರು ಚಿಂತಿಸಿ
ಕುದಿದರರ್ಜುನಪಕ್ಷಪಾತ ವ್ಯರ್ಥವಾಯ್ತೆಂದು ॥ ೧೭

ತೆರಳುವನೆ ಬಿಲುಗಾಱರಿಗೆ ವರ
ಗುರುವಲಾ ಕಲಿ ಪಾರ್ಥನನಿಬರ
ಸರಳ ಕಡಿದನು ಕೃಪನನೆಚ್ಚನು ಗುರುಸುತನ ರಥವ ।
ಉರುಳೆಗಡಿದನು ಶಲ್ಯನನು ಹೇ
ವರಿಸಲೆಚ್ಚನು ಕೌರವನ ಹೇ
ರುರದಲಂಬನು ಹೂಳಿದನು ಸೀಳಿದನು ಸಮರಥರ ॥ ೧೮

ಏಱುವಡೆದನು ಶಲ್ಯ ರಕುತವ
ಕಾಱಿದನು ದುಶ್ಶಾಸನನು ಕೈ
ಮೀಱಿ ಕೈಕೊಂಡೆಚ್ಚು [3]ನೊಂದನು[3] ಮತ್ತೆ ಗುರುಸೂನು ।
ಹೇಱಿದರು ಹಿಳುಕುಗಳ ಷ್ಮೈಯಲಿ
ಜೋಱು ಮಸಗಲು ಭೀಷ್ಮ ಕಡುಗಾ
ಹೇಱಿದನು ರೋಷಾಗ್ನಿವಿಕಟಜ್ವಾಲೆಮುಖನಾದ ॥ ೧೯

---

[1] ಳೊದಗಿದ (ಗ.ಜ.ಪ.) [2] ನಾ (ಕ.ಪ.) [3] ನಿಂದನು (ಕ.) ಮುಱಿದನು (ಟ.),

ಮೊಗದ ಹೊಗರವಗಡಿಸೆ ಸುಯಿಲುರಿ
ಹೊಗೆಯ ಹೊದಱಂಕುರಿಸೆ ಬಿಡುಗ
ಣ್ಣುಗಳೊಳೊಕ್ಕುದು ಕೆಂಪು ಸೊಂಪಡಗಿತು [1]ಮುಖ[1]ಸ್ನೇಹ |
ತೆಗೆವೆನರ್ಜುನನಸುವನೆನುತಾ
ಳುಗಳ ದೇವನು ಭೀಷ್ಮನಡಿಗಡಿ
ಗೊಗುಮಿಗೆಯ ಕೋಪದಲಿ ಕೋದನು ಸರಳಿನಲಿ ನರನ ॥ ೨೦

ನೊಂದು ಸೈರಿಸಿ ಮತ್ತೆ ಸರಳಿನ
ಸಂದಣಿಯ ಸೈಗಱೆದನರ್ಜುನ
ನಿಂದುಧರ ಮಝು ಭಾಪುರೆನೆ ಪಸರಿಸಿದವಂಬುಗಳು |
ಮುಂದೆ ನಿಲಲಱಿಯದೆ ವಿತಾಳಿಸಿ
ಮಂದಗತಿಯೊಳು ಕೆಲಸಿಡಿದು ಹರಿ
ನಂದನನ ಬಿಡದೆಸುತ ಬಂದನು ಭೀಷ್ಮ ಮುಳಿಸಿನಲಿ ॥ ೨೧

ಎತ್ತಲೊಲೆದನದೆತ್ತ ಸರಿದನ
ದೆತ್ತ ಜಾಱಿದನೆತ್ತ ತಿರುಗಿದ
ನೆತ್ತ ಹಿಂಗಿದನೆತ್ತಲೌಕಿದನೆತ್ತಲುಱುಬಿದನು |
ಅತ್ತಲತ್ತಲು ರಥಹಯವ ಬಿಡ
ದೊತ್ತಿ ಬೀದಿಗೆ ನೂಕಿ ಪಾರ್ಥನ
ಮುತ್ತಯನ ಸಂಮುಖಕೆ ಬಿಡ[2]ದೌಕಿ[2]ದನು ಮುರವೈರಿ ॥ ೨೨

ಕೆರಳಿದನು ಕಲಿ ಭೀಷ್ಮನರ್ಜುನ
ನುರವಣೆಯ ಗೆಲುವರೆ ಮುರಾರಿಯು
ಭರವಸವ ತಗ್ಗಿಸಿದಡಲ್ಲದೆ ಕಾದಲರಿದೆನುತ |
ಹರಿಯ ಸಿರಿಯೊಡಲಿನಲಿ ಸರಳಿನ
ಸರಿವಳೆಯ ಸೈಗಱೆಯೆ ಜೋಡಿನ
ಸರಪಳಿಯಲಕ್ಕಾ[illegible]ವು ಕಲಿ ಭೀಷ್ಮನಂಬುಗಳು ॥ ೨೩

[1] ಮಹಾ[illegible] ಪ.ತ.)  [2] ದ್ವೈದಿ (ಗ.)

ಮತ್ತೆ ರಥವನು ಹರಿಸಿ ಭೀಷ್ಮನ
ಹತ್ತೆ ಬರೆ ಕಟ್ಟಳವಿಯಲಿ ಹಾ
ಮುತ್ತಯನು ಸಿಲುಕಿದನು ಶಿವಶಿವಯೆನುತ ಬಲ ಬೆದಱೆ ।
ಹತ್ತು ಶರದಲಿ ಕೃಷ್ಣರಾಯನ
ಮತ್ತೆ ಮುಸುಕಿದ ಬಹಳ ಭಾರ್ಗವ
ದತ್ತ ಬಾಣವ ತೊಡಚಿ ದೇವನ ನೊಸಲ ಕೀಲಿಸಿದ ॥ ೨೪

ಕೆಂಗಱಿಯ ಮಱಿದುಂಬಿ ತಾವರೆ
ಗಂಗವಿಸುವವೊಲಸುರರಿಪುವಿನ
ಮಂಗಳಾನನಕಮಲದಲಿ ಶರವಾಳೆ ಗಱಿಗಡಿಯೆ ।
ತುಂಗವಿಕ್ರಮನಂಬ ಕಿತ್ತು ತ
ದಂಗರಕ್ತವಿಷೇಕರೌದ್ರಾ
ಲಿಂಗಿತನು ಬಲುಖತಿಯ ಹಿಡಿದನು ಭೀಷ್ಮನುಪಟಳಕೆ ॥ ೨೫

ಕೆಂಪ ಕಾಱಿದವಾಲಿಗಳು ಮೈ
ಕಂಪಿಸಿದುದಡಿಗಡಿಗೆ ರೋಷದ
[1]ಬಿಂ[1]ಪಿನೊಳು ತಗ್ಗಿದನು ಗಂಟಿಕ್ಕಿದನು ಹುಬ್ಬುಗಳ ।
ಸೊಂಪುಗೆಟ್ಟುದು ಸಿರಿವದನ ಮನ
ದಿಂಪು ಬೀತುದು ಭಕ್ತಮೋಹದ
ಲಂಪು ಮಸುಳಿತು ಬಿಸುಟು ಕಳೆದನು ಹಯದ ವಾಘೆಗಳ ॥ ೨೬

ಕೆಂಡವಾಗಲಿ ಲೋಕ ದಿವಿಜರ
ಹೆಂಡಿರೋಲೆಯು ಕಳೆದು ಹೋಗಲಿ
ದಿಂಡುಗೆಡೆಯಲಿ ಮೇರು ಮೇದಿನಿ ನಿಲಲಿ ವಿತಳದಲಿ ।
ಗಂಡುಗೆಡಿಸಿದರಿಲ್ಲ ದಾನವ
ದಿಂಡೆಯರು ಹಲರೆಮ್ಮೊಡನೆ ಮಾ
ರ್ಕೊಂಡವರು ಮಾಮಾಪ್ರತಿಜ್ಞೆಯ ತೊಡಕು ಬೇಡೆಂದ ॥ ೨೭

ಸಕಲ ಜಗದಳಿವಿನಲಿ ರುದ್ರಾ
ತ್ಮಕನು ವಿಷ್ಣುವೆ ಎಂಬ ನುಡಿ ಸು
ವ್ಯಕುತವಾಗಲು ತೋಱಿದನು ಘನರೋಷತಾಮಸವ ।

---

[1] ಸಿಂ (ಪ.).

ಚಕಿತವದನದ ಕೆಂಪಿನಬುಜಾಂ
ಬಕಯುಗಳನೊಲೆದೊಲೆದು ರೋಷ
ಪ್ರಕಟಪಾವಕ ವಿಸ್ಫುಲಿಂಗಿತನಾದನಡಿಗಡಿಗೆ ‖ ೨೮

ಎಲೆಲಿದೆತ್ತಣ ಧರಣಿಯೆತ್ತಣ
ಕುಲಗಿರಿಗಳೆತ್ತಣ ದಿಶಾಗಜ
ಕುಲವಿದೆತ್ತಣ ಸುರರಿದೆತ್ತಣ ಹರಚತುರ್ಮುಖರು ।
ಸಲಹುವ್ಯೆಯನು ಮುಳಿದು ಲೋಕದ
ಕೊಲೆಗೆಲಸಕಂಗೈಸಿದನೆ ಹಾ
ಪ್ರಳಯವಾದುದಕಾಲದಲಿ ಯೆಂದಮರರೆದೆಯಾಱೆ ‖ ೨೯

ನಳಿನಪತ್ರೋದಕದವೊಲು ಮಾ
ಱೊಲೆದುದಬುಜಭವಾಂಡವಂಬುಧಿ
ಯಿಳಿದು ಗುಲ್ಫದ್ವಯಸವಾದುದು ಕಮಠನೆದೆಯೊಡೆಯೆ ।
ನೆಲನನಿದ ಹಿಂದಿಕ್ಕಿಕೊಂಬ
ಗ್ಗಳೆಯರಾರೋ ಶಿವಶಿವಾ ಜಗ
ದಳಿವು ಜೋಡಿಸಿತೆನುತ ನಡುಗಿದನಬುಜಭವನಂದು ‖ ೩೦

ಮುರಮಥನ ಕೆಲ್ಲೈಸಿ ನೋಡಿದ
ನುರುಭಯಂಕರ ಚಕ್ರವನು ದು
ರ್ಧರುಷಧಾರಾ ಲೂಯಮಾನ ನಿಶಾತಚಕ್ರವನು ।
ತರಳತರಣೀಚಕ್ರವನು ಸಂ
ಗರವಿನಿರ್ಜಿತ ಚಕ್ರವನು ಭಯ
ಭರವಿವರ್ಜಿತ ಚಕ್ರವನು ಕಡುಗೋಪ ಕುಡಿಯಿಡಲು ‖ ೩೧

ನಿಶಿತ ಧಾರೆಯ ಹೊಳಹು ಸೂರ್ಯನ
ಮುಸುಕಿದುದು ಪರಿಲೂನದೈತ್ಯ
ಪ್ರಸರಗಳ ನಾಳೀವಿನಿಸ್ಸೃತ ರುಧಿರ ಬಂಧಗಳ ।
ಮಿಸುಪ ಮೊಳೆಗಳ ಮುರಿವುಗಳ ನೆಣ
ವಸೆಯ ತೊರಳೆಯ ತೊಂಗಲಿನೊಳಂ
ದೆಸೆವ ಚಕ್ರವ ನೋಡಿದನು [1]ದೈತ್ಯಾರಿ ಕೋಪದಲಿ[1] ‖ ೩೨

[1] ದೈತೇಯ ವನದಹನ (ಚ.ಟ.ಪ.)

ಹರಿದು ಹಬ್ಬುವ ಬಳ್ಳಿವೆಳಗಿನ
ಮುರಿವು ಮಂಡಳಿಸಿದುದು ಶತಸಾ
ವಿರದಿವಾಕರ ಬಿಂಬವೆಸೆದುದು ಝಳದ ಹೊಯಿಲಿನಲಿ ।
ಸುರನರೋರಗ ಜಗದ ಕಂಗಳ
ತೆಱಹು ಕೆತ್ತವು ಬತ್ತಿದುದಧಿಯೊ
ಳುರಿಮಣಲು ಮಾಣಿಕವ ಹುರಿದುದು ಚಕ್ರದೂಷ್ಮೆಯಲಿ ॥ ೩೩

ನರನ ತೇರಿನ ಕುದುರೆಗಳು ಡಾ
ವರಿಸಿದವು ಡಗೆ ಹೊಯ್ದು ಮಿಗೆ ದ
ಳ್ಳುರಿಯು ಸಸಿಯಂತಾದನರ್ಜುನದೇವ ನಿಮಿಷದಲಿ ।
ಕರಗಿ ಕೊರಗಿತು ಲೋಕ ಕೌರವ
ಧರಣಿಪಾಲರಿದೆತ್ತಣುರಿಯೋ
ಹರನ ಕಣ್ಗಿಚ್ಚಲ್ಲಲೇ ಹಾಯೆನುತ ಹಲುಬಿದರು ॥ ೩೪

ತುಡುಕಿದನು ಚಕ್ರವನು ರಥದಿಂ
ಪೊಡವಿಯೊಳು ದುಮ್ಮಿಕ್ಕಿದನು ಹ
ತ್ತಡವ ಹಾಯಿಕಿ ಹರಿದನೊಡಬಿದ್ದವರನೊಡೆ ತುಳಿದು ।
ಸುಡುವೆನಹಿತಾನ್ವಯವ ಭೀಷ್ಮನ
ಕಡಿದು ಭೂತಗಣಕ್ಕೆ ಬೋನವ
ಬಡಿಸುವೆನು ನೋಡಿಲ್ಲಿ ಮೇಳವೆಯೆನುತ ಸೈವರಿದ ॥ ೩೫

ಶಿವಶಿವೆಂದುದು ನಿಖಿಳ ಜಗ ಕೌ
ರವರು ಕಂಪಿಸಿ ಘಟ್ಟುಗೆಡೆದರು
ಭುವನದಲಿ ಭಾರಿಸಿತು ಜಯಜಯಜಯಮಹಾಧ್ವಾನ ।
ತವತವಗೆ ತಳ್ಳಂಕದಲಿ ಪಾಂ
ಡವರು ನಡುಗಿತು ಫಾರ್ಥ ಬಲುಗರ
ವವಚಿದಂತಿರೆ ಮೂಕನಾದನು ಬೆರಳ ಮೂಗಿನಲಿ । ೩೬

ಹರಿ ಮುಕುಂದ ಮುಕುಂದ ಲಕ್ಷ್ಮೀ
ವರ ನೃಕೇಸರಿಯೆನುತ ಚಾಪವ
ಶರವನವನಿಗೆ ಬಿಸುಟು ಮೈಯಿಕ್ಕಿದನು ಕಲಿ ಭೀಷ್ಮ ।

ಕರಯುಗವ ಮುಗಿದೆದ್ದು ಮುರಹರ
ಸರಸಿಜಾಂಬಕ ರಾಮ ರಕ್ಷಿಸು
ತರಳನಲಿ ಗುಣದೋಷದಱಕೆಯೆ ದೇವ ಹೇಳೆಂದ ॥ ೩೭

ದೇವ ನಿಮ್ಮಯ ಖ್ಯಾತಿ ಪರಿಯಂ
ತಾವು ಲಕ್ಷ್ಯವೆ ಜೀಯ ನೊರಜಿನ
ದೇವಗಿರಿಯಂತರವೆ ಸಂಭಾವನೆಯೆ ನನ್ನೊಡನೆ ।
ದೇವ ಮುನಿಗಳ ನಗೆಯ ನೋಡದಿ
ದಾವುದುಚಿತವ ಮಾಡಿದಿರಿ ಮಹಿ
ಮಾವಲಂಬವ ಮಱೆದುದಕೆ ನಗೆ ಬಂದುದೆನಗೆಂದ ॥ ೩೮

ಅಲಸಿಕೆಯೊಳ್ಳೈನೂಱುಸಾವಿರ
ನಳಿನಭವರಡೆಗೆಡೆವರೆಂಬ
ಗ್ಗಳಿಕೆಯೆತ್ತಲು ಹುಲುಮನುಜ ನಾನೆತ್ತಲಿದಿರಾಗಿ ।
ಮುಳಿದು ಹರಿತಹುದೆತ್ತಲಿದು ನಿ
ನ್ನಳತೆಗೈದುವುದಲ್ಲ ಲಜ್ಜೆಗೆ
ನೆಲೆಯ ಮಾಡಿದೆ ಹೊಡಿದ್ಯೆ ದುರಿಯ ಶವನೆನಗೆಂದ ॥ ೩೯

ರೋಮರೋಮದೊಳಖಿಲ ಭುವನ
ಸ್ತೋಮ ನಲಿದಾಡುವುದು ಗಡ ನಿ
ಸ್ಸೀಮತನ ಗಡ ನಾವು ವೈರಿಗಳೆಂದು ಕೋಪಿಸುವ ।
ಈ ಮರುಳುತನವೆತ್ತಲೀ ರಣ
ತಾಮಸಿಕೆ ತಾನೆತ್ತಣದು ರಘು
ರಾಮ ರಕ್ಷಿಸು ಬಯಲಿನಾಡಂಬರವಿದೇನೆಂದ ॥ ೪೦

ನೀನು ಖತಿಯನು ಹಿಡಿಯೆ ನಿನ್ನ ಸ
ಘಾನತನವನು ಬಲ್ಲೆ ಯೋಗಿಗ
ಳೇನನೆಂಬರು ತಮ್ಮೊಳಗೆ ಕೈಹೊಯ್ದು ಮಿಗೆ ನಗುತ ।
ಮಾನವರು ಕಡುಮೂರ್ಖರೆಂದೇ
ಮಾನಗರ್ವವ ತಳೆದೆ ಸಾಕಿ
ನ್ನೇನ ಹೇಳುವೆ ನಿನ್ನ ಠಕ್ಕನು ಬಲ್ಲೆ ಹೋಗೆಂದ ॥ ೪೧

ಶತಪಿತಾಮಹರಡಗರೇ ನೀ
ಮತಿ ಮುರಿಯೆ ಮೇಣ್ ಭ್ರೂವಿಲಾಸ
ಸ್ಥಿತಿಯೊಳೇನುತ್ಪತ್ತಿಯಾಗದೆ ಬ್ರಹ್ಮಕೋಟಿಗಳು ।
ಅತಿಶಯದ ಮಹಿಮಾಸ್ಪದನು ನೀ
ನತಿಗಹನನೆಂಬ[1]ಗ್ಗಳಿಕೆಗಿದು[1]
ಕೃತಕವಲ್ಲಾ ದೇವ ಹೇಳೆನ್ನಾಣೆ ಹೇಳೆಂದ ॥ ೪೨

ದೇವ ನೀ ದಿಟ ಕೊಲುವಡೆಯು ನಾ
ಸಾವೆನೇ ತಾನಾವನೆಂಬುದ
ದೇವರಱಿಯಿರಲ್ಕೆ ವೃಥಾ [2]ಸಂಭಿನ್ನ[2] ರೋಷದಲಿ ।
ದೇವನಾಮದ ಜೋಡು ನಮ್ಮನು
ಕಾವುದೈ ನೀ ಮುನಿದಡೆಯು ನಿಮ
ಗಾವು ಹೆದಱೆವು ನಾಮಧಾರಿಗಳತುಳಬಲರೆಂದ ॥ ೪೩

ಭಂಗವಲ್ಲಿದು ನಿನ್ನ ಘನತೆಗೆ
ಡಿಂಗರಿಗರೇ ಮಿಗಿಲು ನಿನಗೆಯು
ಡಿಂಗರಿಗರೇ ಬಲ್ಲಿದರು ದಾಕ್ಷಿಣ್ಯವೇನಿದಕೆ ।
ಮಂಗಳಾತ್ಮಕ ಕೇಳು ನಿನ್ನಯ
ಹಂಗನೊಲ್ಲೆನು ಮುಕುತಿಪಥದೊಳ
ಭಂಗಪೆಂಡೆಯದಾಳಲ್ಕೆ ನಿಮ್ಮಡಿಯ ಸಿರಿನಾಮ ॥ ೪೪

ಕಳುಹಿ ಕಳೆದವು ಖಾತಿಯನು ನೀ
ನುಳುಹಿಕೊಂಬುದು ತೇಜವನು ದಿಟ
ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ।
ಅಳುಕಿ ಕೊದಲು ಹಱಿದುದಾದರೆ
ಬಳಿಕ ನಾ ಡಿಂಗರಿಗನಲ್ಲೇ
ಕಳಕಳಕೆ ನಾನಂಜುವವನೇ ದೇವ ಮರಳೆಂದ ॥ ೪೫

---

[1] ಳತೆಗಿಂತಿದು (ಕ.ಗ.ಟ.) [2] ಸಂಭಾವ (ಚ.ಟ.)

ನಚ್ಚಿ[1]ದಾ[1]ಳಿನ ಬಿನ್ನಹಕೆ ಹರಿ
ಮೆಚ್ಚಿ ಮನದಲಿ ನಾಚಿ ಚಕ್ರವ
ಮುಚ್ಚಿದನು ಮುರಿದನು ಕಿರೀಟಿಯ ರಥದ ಹೊರೆಗಾಗಿ ।
ಬೆಚ್ಚಿ ಬೆದಱುವ ಸೇನೆಗಭಯವ
ಹಚ್ಚಿಕೊಟ್ಟನು ವೀರ ಭೀಷ್ಮನ
ನಿಚ್ಚಟದ ಭಕ್ತಿಯನು ನೆನೆನೆನೆದೊಲೆದ ಹರಿ ಶಿರವ ॥ ೪೬

ಹೋದುದೊಂದಪಮೃತ್ಯು ಲೋಕಕೆ
ತೀದುದಿಲ್ಲಾಯುಷ್ಯ ಮಹದಪ
ವಾದ ದೇವಂಗಾಗಿ ತಪ್ಪಿತು ಮುಚ್ಚುಮಱೆಯೇಕೆ ।
ಕಾದುಕೊಂಡನು ಭೀಷ್ಮನೀ ಕಮ
ಲೋದರನ ಕೆರಳಿಚಿಯು ಭಕುತಿಯ
ಲಾದರಿಸಿದನು ಪುಣ್ಯವೆಂದನು ಕಮಲಭವ ನಗುತ ॥ ೪೭

ನಡುಗುವರ್ಜುನದೇವನನು ತೆಗೆ
ದಡಿಗಡಿಗೆ ತಕ್ಕೈಸಿ ಭೀತಿಯ
ಬಿಡಿಸಿ ವಾಘೆಯ ಕೊಂಡು ತುರಗವನೆಡಬಲಕೆ ತಿರುಹಿ ।
ನಡಸಿದನು [2]ಕಾಳೆಗಕೆ[2] ಬಳಿಕವ
ಗಡ ಮುರಾಂತಕ ಮರಳಿ ಚಕ್ರವ
ತುಡುಕದಿರನೆಂದಸ್ತಗಿರಿಯನು ಸೂರ್ಯ ಮಱೆಗೊಂಡ ॥ ೪೮

ಆಱನೆಯ ಸಂಧಿ ಮುಗಿದುದು.

---

[1] ನಾ (ಗ.ಜ.ಟ.ತ.) [2] ಪಾಳೆಯಕೆ (ಚ.ಪ.)

# ಏಳನೆಯ ಸಂಧಿ

ಸೂಚನೆ॥ ರಾಯಕಟಕದೊಳಿರುಳು ಭೀಷ್ಮರ
ಸಾಯಬೇಕೆಂದೊಡಬಡಿಸಿ ಕಮ
ಲಾಯುತಾಂಬಕ ಸಹಿತ ಪಾಳಯಕರಸನೈತಂದ ॥

ಕೇಳು ಜನಮೇಜಯ ಧರಿತ್ರೀ
ಪಾಲ ದಿನ ಮೂಱಾಯ್ತು ಭೀಷ್ಮನ
ಕಾಳೆಗದೊಳಲ್ಲಿಂದ ಮೇಲಣ ಕಥನಕೌತುಕವ ।
ಆಲಿಸುವದೈ ಮೂಡ [1][ಣ][1] ದ್ರಿಯ
ಮೇಲೆ ಕೆಂಪೆಸೆಯಿತ್ತು ಘನನಿ
ಸ್ಸಾಳ ವೊದಱಿದವೈ ನೃಪಾಲರ ಕಟಕವೆರಡಱಲಿ ॥ ೧

ಹಲ್ಲಣಿಸಿ ಹರಿತಂದು ವೋಹರ
ವಲ್ಲಿಗಲ್ಲಿಗೆ ನಿಂದುದೆರಡಱ
ಘಲ್ಲಣೆಯ ಘಾಯದ ಘಡಾವಣೆ ಮಿಾಱಿ ಘಾತಿಸಿತು ।
ಕೆಲ್ಲೆಗೆಡೆದವು ಕರಿಗಳಸುಗಳ
ಚೆಲ್ಲಿದವು ತೇಜಿಗಳು ರಥಕುಳ
ವೆಲ್ಲ ಹುಡಿಹುಡಿ ಪಾಯದಳ ನಿರ್ನಾಮವಾಯ್ತೆಂದ ॥ ೨

ಅಳಿದುದಾ ದಿವಸದಲಿ ಪಾಂಡವ
ಬಳದೊಳಗಣಿತಸೇನೆ ಭೀಷ್ಮನು
ಫಲುಗುಣನು ಕಾದಿದರು ದಿನಕರನಪರಜಲನಿಧಿಗೆ ।
ಇಳಿಯೆ ತೆಗೆದವು ಬಲವೆರಡು ಮೂ
ಡಲು ಮಗುಳೆ ಕೆಂಪೇಱೆ ಕದನಕೆ
ಕಳನ ತುಂಬಿತು ಮತ್ತೆ ಕೌರವ ಪಾಂಡವರ ಸೇನೆ ॥ ೩

---

[1] ಣಾ (ಕ.ಗ.ಟ.)

ಬಿದ್ದುದಗಣಿತ ಸೇನೆ ಪಡುವಲು
ಹೊದ್ದಿದನು ರವಿ ಮತ್ತೆ ಮೂಡಣ
ಗದ್ದುಗೆಯ ವೆಂತಣಿಸಿದನು ಕುಮುದಾಳಿ ಕಂಠಣಿಸೆ ।
ಎದ್ದುದದ್ಭುತರಣ ಕೃತಾಂತಗೆ
ಬಿದ್ದನಿಕ್ಕಿದನದಟನಬುಧಿಯೊ
ಳದ್ದ ಸೂರ್ಯನ ಬಿಂಬ ವೆದ್ದುದು[1] ಮೂಡಣದ್ರಿಯಲಿ ॥ ೪

ಏಳನೆಯ ದಿವಸದ ಮಹಾರಥ
ರೂಳಿಗವು ಹಿರಿದಾಯ್ತು ಕುರುಭೂ
ಪಾಲಕನ ತಮ್ಮಂದಿರಳಿದುದು ದಿವಸವೆಂಟಱಲಿ ।
ಕೋಲ ಮೊನೆಯಲಿ ಕೃಷ್ಣರಾಯನ
ನೋಲಗಿಸಿ ಮೆಚ್ಚಿಸಿದನಾ ಕ
ಟ್ಟಾಳು ಭೀಷ್ಮನ ದಿವಸವೊಂಬತ್ತಾಯ್ತು ಸಮರದಲಿ ॥ ೫

ಇರುಳು ಕೃಷ್ಣನ ಹೊರಗೆ ಬಂದನು
ಧರಣಿಪತಿ ದುಗುಡದಲಿ ನಿಜಸೋ
ದರರು ಸಹಿತ ಮುರಾರಿಯಂಘ್ರಿಗೆ ನಮಿಸಿ ಕೈಮುಗಿದು ॥
ಸುರನದೀಸುತ[2]ನಖಿಲ[2] ಸೇನೆಯ
ನೊರಸಿದನು ನಮ್ಮಲ್ಲಿ ಖಾತಿಯ
ಧರಿಸಿದನು ಜಯವಧುವ [3]ವರಿಸಿದ[3] ದೇವ ಕೇಳೆಂದ ॥ ೬

ನೆಱೆವಣಿಗೆಗುಂದಿತ್ತು ಬಲ ಕೈ
ಮಱೆದರದಟರು ಬಿರುದ ಭಟರಿಗೆ
ಬೆಱಗು ಬಲಿದುದು ಹೂಣಿಗರ ಹೋರಟೆಗಳಳುಕಿದವು ।
ನೆಱೆ ಸುಗಿದ ಹುಲಿಯಂತೆ ಬರಿಕೈ
ಮುಱಿದ ಮದಗಜದಂತೆ ಚಿತ್ರದ
ಲುಱುವ ಕೇಸರಿಯಂತೆ ಮೆಱೆದಿದೆ ನಮ್ಮ ಬಲವೆಂದ ॥ ೭

---

[1] ವೆಸೆದುದು (ಕ.ಟ.) [2] ತಮ್ಮ (ಗ.ಚ.ಟ.ಪ.) [3] ವರಸೇರಿತು (ಕ.)

ಹಾಱಿದವು ಹೆಸರುಗಳು ಭಂಗದ
ಸೂಱೆಗಳ ಕಟ್ಟಿದರು ಮಿಗೆ ತಲೆ
[1]ಮಾಱಿಗಳು[1] ಮರಳಿದರು ರಣಹೇಡಿಗಳ ಬಗೆಯಂತೆ ।
ದೂಱಲಱಿಯೆನು ಸುಭಟರಿಗೆ ಮನ
ಬೇಱೆ ನುಡಿ ಬೇಱಾಯ್ತು ಸಮರದೊ
ಳೇಱತಿಂಗುಱಿದಿಂದು ದಣಿದುದು ನಮ್ಮ ಬಲವೆಂದ ॥ ೮

ಚಳಶಿಲೀಮುಖರವಕೆ ಪಟುಭಟ
ರಳುಕಿದರು ವಿರಹಿಗಳವೊಲು ಸ
ಮ್ಮಿಳಿತ [2]ಶಾ[2]ಸ್ತ್ರಧ್ವನಿಗೆ ಸೆಡೆದರು ಮೂರ್ಖರಂದದಲಿ।
ಕಲಿತ ಬಲ ಶತಕೋಟಿಗಿದಿರಾ
ಗಳಿದವದ್ರಿಗಳಂತೆ ಹರಿಪದ
ವಳಯ [3]ವಿದಳಿತ[3]ವಾಯ್ತು ಮೇಘವ್ರಾತದಂದದಲಿ ॥ ೯

ರಣರಹಸ್ಯಜ್ಞಾನಿಗಳು ಮಿಗೆ
ಮಣಿದರಿಂದ್ರಿಯವಶಕೆ ರಿಪುಭಟ
ಗಣವಿದಾರಣತರ್ಕವಿದ್ಯಾವೀತರಾಗಿಗಳು ।
ಸೆಣಸಿನಲಿ ಸಮ[4]ದರ್ಶಿಗಳು[4] ಧಾ
ರುಣಿಯ ಪತಿಗಳು ರಾಜಸೇವಾ
ಪ್ರಣಯಮೀಮಾಂಸಾದಿಮೂಢರು ನಮ್ಮ ಭಟರೆಂದ ॥ ೧೦

ಹರಿದುದಿಂದಿನ ದಿನಕೆ ಶತಸಾ
ವಿರ ಮಹೀಶರು ಯಮನ ನಗರಿಗೆ
ಸರಿದುದುಳಿದರ ದಿಟ್ಟತನ ಗಾಂಗೇಯನುಪಟಳಕೆ ।
ಅರಿಪಯೋನಿಧಿಬಡಬನನು ಗೆಲ
ಲರಿದು ಜೀಯ ಮುಕುಂದ ನೀನೇ
ಕರುಣಿಸೈ ವನವಾಸವೋ ನಮಗೇನು ಗತಿಯೆಂದ ॥ ೧೧

---

[1] ಮಾಱಿದರು (ಕ), ಮಾಱಿಗಳ (ಚ.ಟ.ಪ.) [2] ಶ (ಕ.ಗ.ಚ.)
[3] ವಿಳಸಿತ (ಕ.) [4] ವರ್ತಿಗಳು (ಚ)

ಮುಗುಳುನಗೆ ನಸು[1]ಮೊ[1]ಳೆಯೆ ಭೀಮಾ
ದಿಗಳಿಗೆಂದನು ಕೃಷ್ಣನರಸಗೆ
ಸೊಗಸು ಬನದಲಿ ಬಱಿಯ ಮನವೀ ಕದನಕೇಳಿಯಲಿ ।
ವಿಗಡತನವಂತಿರಲಿ ಭೀಷ್ಮನ
ಬೆಗಡುಗೊಳಿಸಲು ಹರನ ಹವಣ
ಲ್ಲಗಣಿತನ ಸಾಮದಲಿ [2]ಮುಱಿಯಲು[2]ಬೇಕು ನಾವೆಂದ॥ ೧೨

ದಂಡನಯ ತಱುಬಿದರೆ ಗುಣದಲಿ
ಖಂಡಿಸುವುದಿದಿರಾದ ತರುಗಳು
ದಿಂಡುಗೆಡೆವವು ತೊಱೆಗೆ ಮಣಿದರೆ ಗೇಕು ಬದುಕುವುದು ।
ಚಂಡಬಲನೀ ಭೀಷ್ಮ ಮುಳಿದರೆ
ಖಂಡಪರಶುವ ಗಣಿಸನೆನೆ ಖರ
ದಂಡನಾಭನ ಮತಕೆ ನೃಪತಿ ಹಸಾದವೆನುತಿರ್ದ ॥ ೧೩

ಇರುಳು ಗುಪಿತದಲವನಿಪತಿ ಸೋ
ದರರು ಮುರರಿಪು ಸಹಿತ ಬಂದನು
ಸುರನದೀನಂದನನ ಮಂದಿರಕಾಗಿ ವಹಿಲದಲಿ ।
ಕರೆದು ಪಡಿಹಾಱರಿಗೆ ಬಂದುದ
ನಱುಹಲವದಿರು ಹೊಕ್ಕು ಸಮಯವ
ನಱಿದು ಭೀಷ್ಮಂಗೀ ಹದನ ಬಿನ್ನಹವ ಮಾಡಿದರು ॥ ೧೪

ಬಂದನೇ ಧರ್ಮಜನು ಮುರರಿಪು
ತಂದನೇ ಕೌರವರನಕಟಾ
ಕೊಂದನೇ ಶಿವಶಿವಯೆನುತ ಮೌನದಲಿ ಮುಳುಗಿರ್ದ ।
ಮಂದಿಯನು ಹೊಱಗಿರಿಸಿ ಬರಹೇ
ಳೆಂದರಾಗಲೆ ಕೃಷ್ಣ ಕೊಂತೀ
ನಂದನರು ಬರಲಿದಿರುವಂದನು ಭೀಷ್ಮ ವಿನಯದಲಿ ॥ ೧೫

---

[1] ಹೊ (ಕ.ಗ.ಟ.) [2] ಗೆಲ್ಲಲು (ಕ.ಟ.)

ಅಱಿಸಿ ಹೊಗಲಾಮ್ನಾಯನಿಕರಕೆ
ತೆಱಹುಗುಡದ ಪರಸ್ವರೂಪನು
ಕುಱುಹುಗೊಂಡರೆ ಮಂದಿವಾಳವೆ ದೇವ ನೀನೊಲಿದು ।
ಅಱಿಸಿಕೊಂಡೈತರಲು ತಾನೈ
ಸಱಿವನಾಗಲಿ ನಿನ್ನ ಭೃತ್ಯನ
ಹೊರೆವ ಪರಿಯಿದು ಕೃಷ್ಣ ಜಯಜಯಯೆನುತ ನಿಡುಗೆಡೆದ ॥ ೧೬

ನಗುತ ಹರಿ ಗಂಗಾಕುಮಾರನ
ನೆಗಹಿದನು ಬಳಿಕವರು ರತುನಾ
ಳಿಗಳ ಕಾಣಿಕೆಯಿತ್ತು ಮೈಯಿಕ್ಕಿದರು [1]ಭಕುತಿಯಲಿ[1] ।
ತೆಗೆದು ಬಿಗಿಯಪ್ಪಿದನು ಯಮಜಾ
ದಿಗಳ ಮನ್ನಿಸಿ ವೀಳೆಯವನಿ
ತ್ತೊಗುಮಿಗೆಯ ಹರುಷದಲಿ ಹೊಂಪುಳಿಯೋದನಾ ಭೀಷ್ಮ ॥ ೧೭

ಅರಿಯ ಬೀಡಿದು ರಾಯನನುಜರು
ದುರುಳರುಚಿತಾನುಚಿತಗೇಡಿಗ
ಳಿರುಳು ದೊರೆಗಳು [2]ನೀವನಾಲೋಚಿತದಲ್ಯೆತಹರೆ[3] ।
ಹರಿಯ ಬಲುಹುಂಟಾದಡೆಯು ಧಿ
ಕ್ಕರಿಸಬಾರದು ರಾಜಮಂತ್ರವ
ನರಸ ಸಾಕಿನ್ನೇನು ಬಂದುದು ಹೇಳು ನೀನೆಂದ ॥ ೧೮

ಅಱಿಯೆನುಚಿತವನೆಮ್ಮ ಭಾರದ
ಹೊಱಿಗೆ ನಿಮ್ಮದು ಕೃಷ್ಣನದು ನಾ
ವಱಿದರೆಯು ಮೇಣ್ ಮಱೆದರೆಯು ರಕ್ಷಕರು ನೀವೆಮಗೆ ।
ಅಱಿಯ ನೇನುವನೆಂದು ಸಲಹಲು
ಮಱೆವಳೇ ಬಾಲಕನ ತಾಯ್ ನೀ
ನುಱುವ ವಜ್ರದ ಜೋಡು ನಮಗಿರೆ ಭೀತಿಯೇಕೆಂದ॥ ೧೯

[1] ವಿನಯದಲಿ (ಗ.ಚ.ಪ.)    [2] ನೀವನಾಲೋಕನದಲ್ಯೆತಹರೆ (ಚ.), ನೀವಾಲೋಕನದಲ್ಯೆತಹರೆ (ಪ.)

ಎಮಗೆ ಜಯವೆಂತಹುದು ರಾಜ್ಯ
ಭ್ರಮೆಯ ರಾಜಸಬುದ್ಧಿಗಳು ವಿ
ಕ್ರಮವಿಹೀನರು ನಾವು ನೀವ್ ತ್ರೈಲೋಕ್ಯವಿಜಯಿಗಳು ।
ಸಮರ ಸೋತುದು ನಮ್ಮ ಸುಭಟರು
ಯಮನ ಸೇವಕರಾಯ್ತು ಕೃಪೆಯಿಂ
ದೆಮಗೆ ನಿಮ್ಮಭಿಮತವ ಬೆಸಸುವುದೆಂದನಾ ಭೂಪ ॥ ೨೦

ಆಕೆವಾಳರು ಭೀಮ[1]ಪಾರ್ಥರು[1]
ನೂಕದಾಹವವುಳಿದ ಸೇನಾ
ನೀಕವೇ ನಿಮ್ಮಿಂದ ಸವೆದುದು ಹಲವು ಮಾತೇನು ।
ಸಾಕುವರೆ ಮೇಣ್ ಮುನಿದು ಕೊಲುವರೆ
ಬೇಕು ಬೇಡೆಂಬವರ ಕಾಣೆನು
ಕಾಕನಾಡೆನು ಬೆಸಸಿ ನಿಮ್ಮಭಿಮತವನೆನಗೆಂದ ॥ ೨೧

ತೀದುದೆಮ್ಮಯ ಸೇನೆ ನಸುಸೊ
ಪ್ಪಾದುದಿಲ್ಲರಿಸೇನೆ ನಿಮ್ಮನು
ಕಾದಿ ಗೆಲುವರೆ ಮೊಲೆಯನೂಡಿದ ತಾಯಿ ಜಾಹ್ನವಿಯೆ ।
ಕಾದಿದೆವು ಕಟ್ಟಿದೆವು ಗೆಲಿದೆವು
ಮೇದಿನಿಯ ನಾವಿನ್ನು ಮುನ್ನಿನ
ತೀದ ವನವಾಸಕ್ಕೆ ನೇಮವ ಕೊಟ್ಟು ಕಳುಹೆಂದ ॥ ೨೨

ಮನ್ನಿಸುವಡೀಯುಭಯರಾಯರು
ನಿನ್ನ ಮೊಮ್ಮಂದಿರುಗಳದಟರೊಳು
ನಿನ್ನ ಕುಣಿಕೆಯೊಳಿಹುದು ಕುಂತೀಸುತರ ಜೀವನವು ।
ನಿನ್ನನೇ ನಂಬಿಹರು ನೀನೇ
ಮುನ್ನ ಶಿಶುತನದಲ್ಲಿ ಸಲಹಿದೆ
ಮನ್ನಣೆಯ ನೀ ಬಲ್ಲೆಯೆಂದನು ದಾನವಧ್ವಂಸಿ ॥ ೨೩

[1] ನರರಿಗೆ (ಚ.)

ಎನಲು ಮೊಮ್ಮಂದಿರುಗಳಳಲಿನ
ಘನತೆಯನು ಕಿವಿಗೊಟ್ಟು ಕೇಳಿದು
ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ ।
ಎನಗೆ ಕಾಲ ಸಮೀಪ ಮಗನೇ
ನಿನಗೆ ಭಯ ಬೇಡಿನ್ನು ಕುರುಪತಿ
ದನುಜವೈರಿಗೆ ತಪ್ಪಿದಾಗಳೆ ನಿಮಗೆ ಜಯವೆಂದ ॥ ೨೪

ಕೊಂದೆನಗಣಿತ ರಾಯರನು ತಾ
ಮಂದಿಯನು ನಿನಗಾನು ಮುನಿಯೆನು
ಬಂದು ಪಾರ್ಥನ ರಥವ ತಡೆದರೆ ನೀವು ಧೃತಿಗೆಡದೆ ।
ಇಂದಿನುದಯದಲಾ ಶಿಖಂಡಿಯ
ತಂದು ನಿಲಿಸಿದಡೆನ್ನ ತನುವನು
ಹಿಂದುಗಳೆಯದೆ ನಿಮಗೆ ತೆಱುವೆನು ಮಗನೆ ಕೇಳೆಂದ ॥ ೨೫

ಗಂಡುತನ ತಾ[1]ನೆರ[1]ವು ನಿಮ್ಮ ಶಿ
ಖಂಡಿಯನು ಮುಂದಿರಿಸಲಾತನ
ಕಂಡು ನಾವ್ ಕಾಳೆಗವ ಮಾಡೆವು ಕೈದುಗಳ ಬಿಸುಟು ।
ಚಂಡಿತನವನು ಮಾದು ಮಿಗೆ ಕೈ
ಕೊಂಡು ಫಲುಗುಣನೆಸಲಿ ತನುವನು
ದಿಂಡುಗೆಡಹಲಿ ಬಳಿಕ ಗೆಲುವಿರಿ ಕೌರವೇಶ್ವರನ ॥ ೨೬

ಎನಲು ಶಿವಶಿವಶಿವಮಹಾದೇ
ವೆನುತ ಕಿವಿಗಳ ಮುಚ್ಚಿದನು ಕಂ
ಬನಿಯನುಗುರಲಿ ಮಿಡಿದು ನೊಂದನು ಪಾರ್ಥ ಹೃದಯದಲಿ ।
ಎನಗೆ ಗೆಲವಾಯ್ತಾದು ಕೃತಾರ್ಥರು
ಜನದೊಳೆನ್ನವೊಲಾರು ಬಳಿಕೇ
ನೆನಗೆ ನಿಮ್ಮವೊಲಾರು ಹಗೆಗಳು ಜಗದೊಳುಂಟೆಂದ ॥ ೨೭

---

[1] ನಿರ (ಕ.ಗ.ಟ.)

[1]ಕಳಿದ[1]ನಡವಿಯೊಳಯ್ಯನಲ್ಲಿಂ
ಬಳಿಕ ಭೀಷ್ಮನ ತೋಳ ತೊಟ್ಟಿಲಿ
ನೊಳಗೆ ಬೆಳೆದೆವು ಸಲಹಿದನು ಧೂಳಾಟ ಮೊದಲಾಗಿ ।
ಬಲಿಯಲೆಱಕೆಗಳೆಮಗೆ ಭಾಗಿಸಿ
ನೆಲನ ಕೊಟ್ಟನು ಭೀಷ್ಮನೀತನ
ಕೊಲೆಗೆ [2]ಬಯ[2]ಸುವ ಮನವದೆಂತುಟೊ ಕೃಷ್ಣ ಹೇಳೆಂದ ॥ ೨೮

ಈತನನು ನಾವ್ ಕೊಲಲು ಭುವನ
ಖ್ಯಾತರಹೆವ್ಯೆ ಸುಡಲಿ ಬಯಸುವ
ಭೂತಳವನೀ ಬೊಡ್ಡಿಗೋಸುಗ [3]ಸುಟ್ಟು[3] ಸುಕೃತವನು ।
ಘಾತಕರು ಪಾತಕರು ತೆಗೆ ತೆಗೆ
ಏತಱವದಿರು ಪಾಂಡುತನಯರ
ಮಾತನಾಡದಿರೆಂಬ ಕೀರ್ತಿಗೆ ನೋತುದಿಲ್ಲೆಂದ ॥ ೨೯

ನಿಲ್ಲು ಫಲುಗುಣ ಕೇಳು ಹೊಲ್ಲೆಹ
ವಲ್ಲ ಸಕಲಕ್ಷತ್ರಧರ್ಮವ
ಬಲ್ಲೆ [4]ನೀನೆಮಗಹಿತ[4] ನೇ ನೃಪನೀತಿಬಾಹಿರನೆ ।
ಎಲ್ಲಿಯುಪಕೀರ್ತಿಗಳು ಕೀರ್ತಿಗ
ಳೆಲ್ಲ [5]ವಿಧಿಯವು[5] ನಿನ್ನ ಕಾರಣ
ವಲ್ಲ ನೀ ಕೊಲಲ್ಯೆಸಱವನ್ಯೆ ಪಾರ್ಥ ಹೇಳೆಂದ ॥ ೩೦

ಯಂತ್ರಿ ಮಿಡಿದರೆ ಕಾದಿ ಬೀಳ್ವವು
ಯಂತ್ರಮಯ ಹಾಹೆಗಳು ವಧೆಯಾ
ಯಂತ್ರಿಗೋ ಹಾಹೆಗಳಿಗೋ ಹೇಳಾರ ನೆಮ್ಮುವದು ।
ಯಂತ್ರಿ ಕೃಷ್ಣನು ನಾವು ನೀವೀ
ತಂತ್ರವಖಿಲಚರಾಚರಂಗಳು
ಯಂತ್ರರೂಪುಗಳೆಲ್ಲ ಕಾರಣವಿಲ್ಲ ನಿನಗೆಂದ ॥ ೩೧

---

[1] ಅಳಿದ (ಗ.ಚ.ಜ ಟ.ಪ.) [2] ಬೆಸ (ಕ.ಗ.ಟ.) [3] ಬಿಟ್ಟು (ಕ.)
[4] ನೀನೇನಜ್ಞ (ಗ.ಟ.) [5] ವಿಧಿಸಲು (ಪ.)

*ಒಂದು ಮುಖದಲಿ ಜಗವ ಹೊಡುವ
ನೊಂದು ಮುಖದಲಿ ಜಗವ ಸಲಹುವ
ನೊಂದು ಮುಖದಲಿ ಬೇಳುವನು ನಯನಾಗ್ನಿಯಲಿ ಜಗವ ।
ಕೊಂದು ಹಗೆಯಲ್ಲೀತ ಸಲಹಿದ
ನೆಂದು ಮೋಹಿತನಲ್ಲ ಪರಮಾ
ನಂದಮಯ ಹರಿಯಿದಕೆ ಕಾರಣವಿಲ್ಲ ನಿನಗೆಂದ ॥ ೩೨

ಕಾವುದೀತನ ಕರುಣ ಮುನಿದರೆ
ಸಾವೆನೀತನ ಕಯ್ಯ ಬಾಯಲಿ
ನೀವು ತಾವ್ ನೆಱೆ ಮತ್ತೆ ಕೆಲಬರು ಮುನಿದಡಂಜುವೆನೆ ।
ನಾವು ಬೆಸಸಿದ ಮಾಡಿ ಸಾಕಿ
ನ್ನಾವಭಯ ನಿಮಗಿಲ್ಲ ಚಿತ್ತದ
ಭಾವಶುದ್ಧಿಯಲೆಮ್ಮ ನಂಬಿರಿ ಹೋಗಿ ನೀವೆಂದ ॥ ೩೩

ಹರುಷ ಬಲಿದುದು ಮನದ ಸಂಶಯ
ಹರೆದುದಾಹವ ವಿಜಯವಾರ್ತೆಯ
ಹರಹಿನಲಿ ಹೊರೆಯೇಱಿ ಹೋಂಪುಳಿಯೋದರಡಿಗಡಿಗೆ ।
ಸುರನದೀನಂದನನ [2] ಹರಹಿನ [2]
ಹರಕೆಗಳ ಕೈಕೊಂಡು ಬೀಳ್ಕೊಂ
ಡರಸ ಮುರರಿಪು ಸಹಿತ ಬಂದನು ತನ್ನ ಪಾಳಯಕೆ ॥ ೩೪

ಏಳನೆಯ ಸಂಧಿ ಮುಗಿದುದು

---

* ಈ ಕೆಳಗಿನ ಪದ್ಯವು (ಟ) ಪ್ರತಿಯಲ್ಲಿ ಮಾತ್ರ ೩೧ನೆಯ ಪದ್ಯವಾದಮೇಲೆ ಇದೆ.—

ಹಳಚುವವು ಹಾಹೆಗಳು ಸೂತ್ರವ
ನಲುಗಿದರೆ ತತ್ಪುಣ್ಯಪಾಪಾವಳಿ
ಗಳಾಹಾಹೆಗಳಿಗುಂಟೇ ಸೂತ್ರಧರನಿರಲು ।
ಕೊಲುವನಿಬ್ಬರನೊಬ್ಬರಿಂದಲೆ
ಕೊಲಿಸುವನು ಕಮಲಾಕ್ಷನಲ್ಲದೆ
........ ದ ಜೀವಮಾತ್ರ ಕೀ ಸ್ವಾತಂತ್ರವಿಲ್ಲೆಂದ ॥

2 ಹರುಷದ (ಕ.ಟ.)

## ಎಂಟನೆಯ ಸಂಧಿ

ಸೂಚನೆ॥ ಬೆಗಡುಗೊಂಡುದು ದ್ರೋಣ ಶಲ್ಯಾ
ದಿಗಳು ಪಾರ್ಥನ ವಿಕ್ರಮಾನಲ
ವೊಗೆದು ಸುಱಿದುದು ಸಕಲ ಕೌರವಸೈನ್ಯ ಸಾಗರವ ॥

ಸೂಳು ಮಿಗಲಳ್ಳಿಱಿದವುರು ನಿ
ಸ್ಸಾಳತತಿ ಮುಂಜಾವದಲಿ ಹೆ
ಗ್ಗಾಳೆ ಮೊರೆದವು ಕುಣಿದು [1]ಗಜಱಿ[1]ದವಾನೆ ಕುದುರೆಗಳು ।
ತೂಳುವಱೆಗಳ [2]ಭಟರ[2] ಘೋೞಾ
ಘೋೞಿ ದೆಸೆಗಳ ಬಗಿಯೆ ಮೂಡಣ
ಶೈಲಮಂಚದಲುಪ್ಪವಡಿಸಿದನಬುಜಿನೀರಮಣ ॥ ೧

ಲಳಿ ಮಸಗಿ ಹನುಮಿಸುತ ಖುರದಲಿ
ನೆಲನ ಕೆರೆ[3]ದವು[3] ಕುದುರೆ ಬರಿಕ್ಕೈ
ಯೊಲೆದು ಕಂಭವ ಕೊಂಡು ಮಿಕ್ಕವು ಸೊಕ್ಕಿದಾನೆಗಳು ।
ಹೊಳೆಹೊಳೆದು ಹೊಂದೇರು ಹರಿದವು
ತಳಪಟಕೆ ಹೊದಱೆದ್ದು ಗಗನದ
ಹೊಲಿಗೆ ಬಿಡೆ ಬೊಬ್ಬಿಱಿದು ಕವಿದುದು ವಿಗಡ ಪಾಯದಳ ॥ ೨

ಲಲಿತ ಮಂಗಳಪಾಠಕರ ಕಳ
ಕಳಿಕೆಗುಪ್ಪವಡಿಸಿದನವನಿಪ
ತಿಲಕನನುಜರು ಸಹಿತ ವೈದಿಕ ಕ್ರಿಯೆಯನನುಕರಿಸಿ ।
ನಳಿನನಾಭನ ಮಧುರವಾಣೀ
ಲುಳಿತ ಪರಮಾಶೀರ್ವಚನ ಪರಿ
ಕಲಿತ ಕವಚಿತಕಾಯ ಪಾಂಡವರಾಯ ಹೊಱವಂಟ ॥ ೩

---

[1] ಮುಂಚಿ (ಚ.ಪ.) [2] ಭರದ (ಕ.) [3] ವುತ (ಕ.ಚ.ತ.)

ಗಗನ ಸರಸಿಯ ಪುಂಡರೀಕಾ
ಳಿಗಳೊ ಧವಳಚ್ಛತ್ರ ಪಂಕ್ತಿಯೊ
ಗಗನ ಗಂಗೆಯ ಬಹಳ ಕಾಲುವೆಗಳೊ ಪತಾಕೆಗಳೊ ।
ಗಗನ ಕುಂಭಿಯ ಗುಳದ ಕೆಲ ಚೌ
ರಿಗಳೊ ಸೀಗುರಿಗಳೊ ಕೃಪಾಣವೊ
ಗಗನ ಪೀವರ ತಾಳಪತ್ರಾವಳಿಯೊ ಹೊಸತಾಯ್ತು ॥ ೪

ಉಬ್ಬಿದವು ಬೊಬ್ಬೆಗಳು ಬಿಲುದನಿ
ಗಬ್ಬರಿಸಿದವು ನಭವ ಗಜಹಯ
ದಬ್ಬರಣೆ ಗರುವಾಯಿಗೆಡಿಸಿತು ಸಿಡಿಲ ಸಡಗರವ ।
ಕೊಬ್ಬಿ ಹರಿದುದು ವಿವಿಧವಾದ್ಯದ
ನಿಬ್ಬರದ ನಿಡುದನಿಯು ಜಲನಿಧಿ
ಗಬ್ಬವಿಕ್ಕಿತು ಸೈನ್ಯಜಲಧಿಯ ಬಹಳ ಗರ್ಜನೆಗೆ ॥ ೫

ಕುಣಿದು ಮುಂಚಿತು ಚೂಣಿ ಸಮರಾಂ
ಗಣದ ಕೇಳೀಬಾಲಕರು ಸಂ
ದಣಿಸಿ ಹೊಕ್ಕರು ಜಯವಧೂಟೀವಿರಹ ಕಾತರರು ।
ಗಣನೆಯಿಲ್ಲದ ಗಜಹಯದ ಭಾ
ರಣೆಯ ಭಾರಿಯ ಭಟರೊಡನೆ ಥ
ಟ್ಟಣೆಯ ಮೇಲೆ ಮಹೀಶ ಹೊಕ್ಕನು ಕಾಳೆಗದ ಕಳನ ॥ ೬

ಉದಯವಾಗದ ಮುನ್ನ ಕಳನೊಳು
ಹೊದಱುಗಟ್ಟಿದ ವೈರಿಸೇನೆಯ
ಹದನಿವರ ಪಾಳಯಕೆ ಬಂದುದು ದಳದ ಕಳಕಳಿಕೆ ।
ಸದೆದುದನಿಬರ ಕಿವಿಯನೊಡೆತುಂ
ಬಿದವು ನಿಸ್ಸಾಳೌಘ ದಿಕ್ಕಿನ
ತುದಿಯ ತಿವಿದವು ಮಿಾಱಿ ಗಳಹುವ ಗೌಱುಗಹಳೆಗಳು ॥ ೭

ಅರಸನುಪ್ಪವಡಿಸಿದನವನೀ
ಶ್ವರ ವಿಹಿತ ಸಂಧ್ಯಾಭಿವಂದನ
ವರಮಹೀಸುರವರ್ಗ ಸತ್ಕಾರವನು ನೆಱೆ ಮಾಡಿ ।

ಸುರನದೀಜನ ಮನೆಗೆ ಬರಲಂ
ದಿರುಳ ಕಡೆಯಲಿ ನೃಪತಿಗಾ ವಿ
ಸ್ತರವ ವಿರಚಿಸಿ ಜೋಡ ತೊಟ್ಟನು ರಥದಿ ಮಂಡಿಸಿದ ॥ ೮

ಇಂದಲೇ ಪಾಂಡವರ [1]ಚಿತ್ತಾ
ನಂದಚಿತ್ರಕೆ[1] ಧೂಮದರುಶನ
ವಿಂದಲೇ ಕೌಂತೇಯರಿಗೆ ಸುರಪುರದ ವೈಹಾಳಿ ।
ಇಂದಲೇ ಪವನಜನ ಪಾರ್ಥನ
ಸಂದ ವಿಕ್ರಮವಿಷಕೆ ಗಾರುಡ
ವೆಂದೆನುತ ಬೊಬ್ಬಿರಿದು ಕವಿದುದು ಸಕಲ ಕುರುಸೇನೆ ॥ ೯

ತರುಣ ರವಿಗಳ ತತ್ತಿಗಳ ಸಂ
ವರಿಸದಿರರೆನೆ ಮಾಣಿಕಂಗಳ
ತರತರದ ಕೀಲಣೆಯ ಹೊಂಗೆಲಸದ ಸುರೇಖೆಗಳ ।
ಕೊರಳ ಹೀರಾವಳಿಯ ರಶ್ಮಿಯ
ಹೊರಳಿಗಳ ಹೊದಕೆಗಳ ಕವಚದ
ಲರಿದಿಶಾಪಟಭೀಷ್ಮನೆಸೆದನು ರಥದ ಮಧ್ಯದಲಿ ॥ ೧೦

ವೀರ ಸೇನಾಪತಿಯ ಸನ್ನೆಗೆ
ಭೂರಿಬಲ [2]ಹಬ್ಬಿದುದು[2] ದಿಕ್ಕುಗ
ಳೋರೆ ಹಿಗ್ಗಿದವಮುಮ ತಗ್ಗಿದರಹಿಪ ಕೂರುಮರು ।
ಚಾರು ಚಾಮರ ಸಿಂಧ ಸತ್ತಿಗೆ
ಯೋರಣದ ಕಲ್ಪಾಂತ ಮೇಘದ
ಭಾರಣೆಯನೊಟ್ಟೈಸಿ [3]ಥಟ್ಟೈ[3]ಯಿಸಿತ್ತು ಕುರುಸೇನೆ ॥ ೧೧

ಭುವನಗರ್ಭಿತವಾದುದಾ ಮಾ
ಧವನ ಜಠರದವೋಲು ವರ ಭಾ
ಗವತನಂತಿರೆ ವಿಷ್ಣುಪದ [4]ಸಂಸಕ್ತ[4] ತನುವಾಯ್ತು ।
ರವಿಯವೊಲು ಶತಪತ್ರಸಂಘಾ
ತವನು ಪಾದದಲಣೆದು ಕೆಂಧೂ
ಳವಗಡಿಸೆ ಕುರುಸೇನೆ ಕೈಕೊಂಡುದು ರಣಾಂಗಣವ ॥ ೧೨

[1] ಪರಮಾನಂದಚಿತ್ತಕೆ (ಪ.) [2] ನೆಱೆನೆರೆದು (ಚ.ಪ.) [3] ಥ (ಗ.ಟ.ದ.)
[4] ಸಂತಪ್ತ (ಟ.)

ಹೊಗರೊಗುವ ಝುಳಪಿಸುವಡಾಯುಧ
ನೆಗಹಿ ತೂಗುವ ಲೌಡಿಗಳ ಮೊನೆ
ಝುಗಝುಗಿಸಿ ಝಾಡಿಸುವ ಸಬಳದ ತಿರುಹುವಂಕುಶದ ।
ಬಿಗಿದುಗಿವ ಬಿಲ್ಲುಗಳ [1]ಬೆರಳೊಳ
ಗೊಗೆವ[1] ಕೂರಂಬುಗಳ ಸುಭಟಾ
ಳಿಗಳೊಡನೆ ಗಾಂಗೇಯ ಹೊಕ್ಕನು ಕಾಳೆಗದ ಕಳನ ॥ ೧೩

ವಿತತ ವಾಜಿವ್ರಜದ ಘನಹೇ
ಷಿತದ ಘಲ್ಲಣೆ ಗಜದಳದ ಬೃಂ
ಹಿತದ ಬಹಳಿಕೆ ರಥಚಯದ ಚೀತ್ಕೃತಿಯ ಚಪ್ಪರಣೆ ।
ನುತ ಪದಾತಿಯ ಗರ್ಜನೆ [2]ಸಮು
ದ್ಧತ ಧನುಷ್ಟಂಕಾರ[2] ರೌದ್ರಾ
ಯತ ಭಡಾಳಿಸಲೊಡ್ಡಿದರು ಮಂಡಳಿಸಿ ಮೋಹರವ ॥ ೧೪

ಚೂಣಿ ತಲೆಯೊತ್ತಿದುದು ಹರಣದ
ವಾಣಿ ಕೇಣಿಯ ಕುಹಕವಿಲ್ಲದೆ
ಗೋಣುಮಾಱಿಗಳೋಲಗದ ಹಣರುಣವ ನೀಗಿದರು ।
ಹೂಣಿಗರು ಹುರಿಬಲಿದು ಹಾಣಾ
ಹಾಣಿಯಲಿ ಹೊಯ್ದಾಡಿದರು ಘನ
ಶೋಣಸಲಿಲದ ಹೊನಲು ಹೊಯ್ದುದು ಹೊಗುವ ಬವರಿಗರ ॥ ೧೫

ಕೋಡಕೈಗಳ ಭಟರಲಲಗೆಡೆ
ಯಾಡಿದವು ಹೆಗಲಡ್ಡವರಿಗೆಯ
ನೀಡಿ ಮೈಮಣಿದೌಕಿ ತಿವಿದಾಡಿದರು ಸಬಳಿಗರು ।
ಕೂಡೆ ತಲೆವರಿಗೆಗಳಲುಱೆ ಕೈ
ಮಾಡಿದರು ಖಡ್ಗಿಗಳು ಥಟ್ಟಿನ
ಜೋಡು ಜರಿಯಲು ಹೊಕ್ಕು ಬೆರಸಿದವಾನೆ ಕುದುರೆಗಳು ॥ ೧೬

[1] ಬೆರಳಿಂದುಗಿವ (ಚ.ಪ.) [2] ಲಾಲಿತ ಧನುಜ್ಯಾರವದ (ಚ), ಗಾಢತೆ ಧನುರ್ಧರರ ರವ (ಟ.)

ಪಿರಿದು ಮೊನೆಗುತ್ತಿನಲಿ ನೆತ್ತರು
[1]ಸುರಿದುದಡಹೊಯ್ಲಿನಲಿ[1] ಖಂಡದ
ಹೊರಳಿ ತಳಿತುದು ಕಾಯವಜಿಗಿಜಿಯಾಯ್ತು ಲೌಡಿಯಲಿ ।
ಸರಳ ಚೌಧಾರೆಯಲಿ ಹಾಯ್ದವು
ಕರುಳು ಕಬ್ಬಿನ ಕೋಲಿನಲಿ ಕ
ತ್ತರಿಸಿದವು ಕಾಲುಗಳು ಕೌತುಕವಾಯ್ತು [2]ಚತು[2]ರಂಗ ॥ ೧೭

ಕಡಿದು ಚಿಮ್ಮಿದ ಬೆರಳುಗಳ ಹಿ
ಮ್ಮಡಿಯ ಘಾಯದ ನಾಳ ಹಱಿದರೆ
ಮಡಿದ ಗೋಣಿನ ಬೆಸುಗೆ ಬಿರಿದ ಕಪಾಲದೋಡುಗಳ ।
ಉಡಿದ ತೊಡೆಗಳ ಹಱಿದ ಹೊಟ್ಟೆಯ
ಹೊಡೆ ಮರಳಿದಾಲಿಗಳ ತೋಳಿನ
ಕಡಿಕುಗಳ ರಣಮುಹಿ ಭಯಾನಕರಸಕೆ ಗುಱಿಯಾಯ್ತು ॥ ೧೮

ಕೊರಳ ತೆತ್ತುದು ಚೂಣಿ ದಳಮು
ಖ್ಯರಿಗೆ ಹೇಳಿಕೆಯಾಯ್ತು ಮೋಹರ
ವೆರಡಱಲಿ ಮೊನೆಯುಳ್ಳ ನಾಯಕವಾಡಿ ನಲವಿನಲಿ ।
ಕರಿ ತುರಗ ರಥ ಪಾಯದಳದಲಿ
ಹೊರಳಿ ತಗ್ಗಿತು ರಥದ ಲಗ್ಗೆಯ
ಧರಧುರದ ದೆಖ್ಖಾಳ ಮಿಗೆ ನೂಕಿದರು ಸಂಗರಕೆ ॥ ೧೯

ತಳಿತ ಸತ್ತಿಗೆಗಳ ಪತಾಕಾ
ವಳಿಯ ಪಡಪಿನ ಬಿರುದಿನುಬ್ಬಟೆ
ಗಳ ವಿಡಾಯಿಯ ಸಿಂಧ ಸೆಳೆ ಸೀಗುರಿಯ ಸುಳಿವುಗಳ ।
ಕಳಕಳಿಕೆ ಕಡುಹೇಱಿ ತಳಪಟ
ದೊಳಗೆ ತಲೆದೋಱಿದರು ಘಡಘಡ
ಫಲುಗುಣನ ಬರಹೇಳೆನುತ ದ್ರೋಣಾದಿನಾಯಕರು ॥ ೨೦

[1] ಸುರಿದುವೆಡೆಗೋಲಿನಲಿ (ಪ.) [2] ರಣ (ಕ.ಟ.), ಸಮ (ಗ.)

ದೊದ್ದೆ ತೆಗೆಯಲಿ ಪಾರ್ಥ ಪವನಜ
ರಿದ್ದರಾದರೆ ಬರಲಿ ಸಮರವ
ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ ।
ಇದ್ದರೆಯು ರಣವಿಜಯ ವನಿತೆಗೆ
[1]ಹೊದ್ದಿಗರು[1] ದ್ರುಪದಾದಿರಾಯರ
ಹೊದ್ದಿಸಲು ಬೇಡವರಿಗಂಜುವೆವೆನುತ ನೂಕಿದರು ॥　　೨೧

ಗುರುತನುಜ ವೃಷಸೇನ ಮಾದ್ರೇ
ಶ್ವರ ಜಯದ್ರಥ ಶಕುನಿ ದುಸ್ಸಹ
ಗುರು ಸುಶರ್ಮ ವಿಕರ್ಣ ಭೂರಿಶ್ರವ ಸುಲೋಚನರು ।
ಧರಣಿಪತಿ ಭಗದತ್ತ ಯವನೇ
ಶ್ವರ ಕಳಿಂಗ ಸುಕೇತು [2]ದುರ್ಜಯ[2]
ದುರುಳ ದುಶ್ಯಾಸನನಲಂಬುಸರೈದಿದರು ರಣವ ॥　　೨೨

ಗೆದ್ದರೆಯು ಗೆಲವಿಲ್ಲ ಹಾರುವ
ರುದ್ದುರುಟುತನಕೇನನೆಂಬೆನು
ಗದ್ದುಗೆಯ ಹೊರೆಗರಸ ಕರೆದರೆ ಭವವ ಮಱೆದಿರಲ ।
ಹದ್ದು ಕಾಗೆಯ ಮನೆಯ ಬಾಣಸ
ವಿದ್ಯೆಯೆಮ್ಮದು ಯಮನ ನಿಳಯಕೆ
ಬಿದ್ದಿನರು ನೀವೆಂದೆನುತ ಕಲಿ ಮತ್ಸ್ಯನಿದಿರಾದ ॥　　೨೩

ನಕುಲ ಕುಂತೀಭೋಜಸುತ ಸೋ
ಮಕ ಘಟೋತ್ಕಚ ದ್ರುಪದ ಪ್ರತಿವಿಂ
ಧ್ಯಕ ಶತಾನೀಕಾಭಿಮನ್ಯು ಯುಯುತ್ಸು ಸೃಂಜಯರು ।
ಸಕಲ ಸನ್ನಾಹದಲಿ ಯುಧ್ದೋ
ದ್ಯುಕುತರಾದರು ಚಕಿತ ಚಾಪ[3]ರು[3]
ಮುಕುತ ಶಸ್ತ್ರಾವಳಿಯ ಮಳೆಗಾಲವನು ನಿರ್ಮಿಸುತ ॥　　೨೪

---

1 ವದ್ದಿಗರು (ಕ.), ಬಿದ್ದಿನರು (ಚ.ಪ.) 2 ದುರ್ಮದ (ಪ.) 3 ಧಿ (ಛ.ತ.)

ಹಿಡಿದನಶ್ವತ್ಥಾಮ ದ್ರುಪದನ
ಪಡೆಯೊಡನೆ ಬವರವನು ಕೃಪ ಮುಂ
ಗುಡಿಯೊಡನೆ ಹೊಕ್ಕಿಱಿದು ತಡೆದನು ಸಾತ್ಯಕಿಯ ರಥವ ।
ಕಡುಹು ಮಿಗೆ ಕೈದೋಱಿ ಪವನಜ
ನೊಡನೆ ಗುರು ಕಾದಿದನು ರಾಯನ
ನುಡಿಸಿ ಕೌರವರಾಯ ತಾಗಿದನಾಹವಾಗ್ರದಲಿ ॥ ೨೫

ಸೆಣಸು ಮಿಗಲಭಿಮನ್ಯು ಭೀಷ್ಮನ
ಕೆಣಕಿದನು ದುಶ್ಶಾಸನನು ಫಲು
ಗುಣನ ತಱುಬಿದನಾ ಘಟೋತ್ಕಚನೊಡನೆ ಭಗದತ್ತ ।
ಕಣೆಗೆದಱಿ ಸಹದೇವ ನಾರಾ
ಯಣಬಲವ ಬೆರಸಿದನು ಮತ್ಸ್ಯನ
ಹೊಣಕೆಯಿಂದ ಸುಶರ್ಮ [1] ತಾಗಿದನರಸಕೇಳೆಂದ[1] ॥ ೨೬

ಬೆರಸಿ ಹೊಯ್ದರು ತಿವಿದರೆಚ್ಚರು
ಹರೆಗಡಿದರರೆಗಡಿದರೆತ್ತಿದ
ರರೆದರಿಟ್ಟೊರಸಿದರು ತಱಿದರು ತುಳುಕಿ ತೂಱಿದರು ॥
ಸರಳು ಸರಿಯಲು ಜೋಡು ಜರಿಯಲು
ತುರಗ ಧೂಪಿಸೆ ಸಾರಥಿಯ ಕೈ
ಹಱಿಯೆ ಕಾದಿತು ವೀರ ನಾಯಕವಾಡಿ ಧೈರ್ಯದಲಿ ॥ ೨೭

ಕೆಲಬರಾಯುಧ ಮುಱಿದು ಸಾರಥಿ
ಯಳಿದು ಕೆಲಬರು ರಥ ವಿಸಂಚಿಸಿ
ಕೆಲರು ಕೆಲಬರು ಬಳಲಿದರು ಪೂರಾಯ ಘಾಯದಲಿ ।
ಕೆಲರು ಜುಣುಗಿತು ಕಂಡ ಮುಖದಲಿ
ಕೆಲರು ಹರೆದರು ಕೈಮನದ ಕಡು
ಗಲಿಗಳಚ್ಚಾಳಾಗಿ ನಿಂದರು·ಕೆಲರು ಕಾಳೆಗಕೆ ॥ ೨೮

[1] ಕಾದಿದನಾ ವಿರಾಟನಲಿ (ಚ.ಪ.), ಕಾದಿದನಾಹವಾಗ್ರದಲಿ (ಟ.)

ಏಱಿ ಸೂಱೆಯ ಕಟ್ಟಿ ಹಿಂಗುವ
ಗಾಱುತನ ತಾನೇನು ಸುಡು ಮುಂ
ಮಾಱಿಗಳ ಮಾತೆತ್ತಲಡಸಿತು ಬಿರುದ ಸ್ವೈರಿಸುತ ।
ಆಱಿಹೋಯಿತೆ ವೀರರಸ ತಲೆ
ದೋಱಿಹೇಳಾ ರಣಕೆನುತ ಕೈ
ಮಿಱಿ ಕವಿದರು ದ್ರುಪದ ಕೈಕೆಯ ಮತ್ಸ್ಯ ಸೃಂಜಯರು ॥ ೨೯

ಕಡುಹು ಮುಱಿದುದು ಕೌರವೇಂದ್ರನ
ಪಡೆಯ ತರಹರ ದಿಕ್ಕುಗೆಟ್ಟುದು
ಮುಡಮುರಿಯಲಂಗೈಸಿದರು ದುಶ್ಶಾಸನಾದಿಗಳು ।
ಕಡಲು ಮೈದೆಗೆವಂತೆ ಬಹ ಬಹು
ಪಡೆಯ ಕಂಡನು ದ್ರೋಣ ಫಡಫಡ
ಪಡೆಯ ತೆಗೆದರೆ ರಾಯನಾಣೆಯೆನುತ್ತ ಮಾಱಾಂತ ॥ ೩೦

ಸಾಹಸಿಕರೈ ದ್ರುಪದರಿವದಿರ
ಚೋಹದೋಲೆಯಕಾಱತನ ಮನ
ಗಾಹಿನಲಿ ಹೆಮ್ಮಕ್ಕಳಿವದಿರು ಶಿವಶಿವಿವದಿರಿಗೆ ।
ಆಹವದೊಳೋಸರಿಸಿದರೆ ಭಟ
ಸಾಹಸಕೆ ಕಲೆ ಹೊದ್ದದೇ ಸುಡು
ದೇಹವೇತಕೆ ದೆಸೆಯೆ ಸಾಕೆನುತೈದಿದನು ದ್ರೋಣ । ೩೧

ಆವುದಂತರ ವನಕಳಭಕೈ
ರಾವತಕೆ ಮಝು ಭಾಪು ದ್ರೋಣನ
ಡಾವರಕೆ ಪಾಂಚಾಲನೈಸಱವನು ಮಹಾದೇವ ।
ನಾವು ದ್ರುಪದನ ಕಾಣೆವಾವೆಡೆ
ಗಾ ವಿರಾಟನು ಸರಿದನೆತ್ತಲು
ತೀವಿದರು ಸೃಂಜಯರು ನೃಪ ನಾವಱಿಯೆವಿದನೆಂದ ॥ ೩೨

ಒಗ್ಗೊಡೆದು ರಿಪುಸೇನೆ ಸರಿದುದು
ತಗ್ಗಿತುಬ್ಬಾಳುಗಳ ನುಡಿ ಮನ
ನೆಗ್ಗಿದವು ಮಂಡಳಿಕರಿಗೆ ತಲೆಮುಸುಕು ಪಸರಿಸಿತು ।
ಲಗ್ಗೆವಱೆಗಳಿಗಮಮ ಮೌನದ
ಸುಗ್ಗಿಯಾಯಿತು ಬಿರುದ ಬೈಚಿಡು
ತಗ್ಗಳೆಯರೊಳಸರಿಯೆ ಕಂಡನು ಪಾರ್ಥ ಖತಿಗೊಂಡ ॥ ೩೩

ರಣಕೆ ತವಕಿಸಿ ಬಳಿಕ ತಾಗುವ
ಕಣೆಯ ದಾಳಿಗೆ[1]ತಳ್ಳು[ವಾ]ಱುವ[1]
ಗುಣವಿದೆಂತುಟೊ ಭಂಡರಿವದಿರ ಹೋಗಹೇಳೆನುತ ।
ಕೆಣಕಿದನು ಬಿಲುದಿರುವನುರುಮಾ
ರ್ಗಣದ ಹೊದೆಗಳ ಕೆದಱಿ ಸಮರಾಂ
ಗಣಕೆ ಸಮ್ಮುಖನಾದನರ್ಜುನ ಸಿಂಹನಾದದಲಿ ॥ ೩೪

ಹೋರಬೇಕೇ ದ್ರುಪದನಾನ
ಲ್ಲಾರಯಿದು ಕಾದುವುದು ಚಾಪದ
ಚಾರುವಿದ್ಯೆಯ ನಿಮ್ಮೊಳಱಿದುದ ನಿಮಗೆ ತೋಱಿಸುವೆ ।
ಸೈರಿಸುವುದೀ ಬಾಲಭಾಷೆಗೆ
ವೈರಬಂಧವ ಬಿಡುವದೆನುತಾ
ಚಾರಿಯನ ರಥಹಯವ ಹೊದಿಸಿದನಸ್ತ್ರನಿಕರದಲಿ ॥ ೩೫

ಕವಿವ ಕಣೆಗಳ ದಡ್ಡಿಗಳನೊಡೆ
ತಿವಿದು ತುಳುಕಿದನಂಬಿನಬುಧಿಯ
ನವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ ।
ಅವನಿಯೋ ದಿಕ್ಕುಗಳೊ ಪಾರ್ಥನೊ
ರವಿಯ ಕಾಣೆನು ಭಾಪು ಕಲಶೋ
ದ್ಭವನ ಕೈಮೈಯೆನುತ ಬೆಱಗಿನೊಳಿರ್ದುದಮರಗಣ ॥ ೩೬

1 ತಳ್ಳುಬಾರುವ (ಕ.ಟ.ತ.ಪ.)

ಈತನಸ್ತ್ರವ ಕಡಿದು ಬಾಣ
ವ್ರಾತವನು ತೆರಳಿಚಿದನರ್ಜುನ
ಸೇತುವಾದವು ಸರಳು ವೈಹಾಯಸ ಮಹಾರ್ಣವಕೆ ।
ಕೇತುವಾದವು ರವಿರಥಕೆ ಪುರು
ಹೂತ[1]ನಾ[1]ದವು ಗಿರಿಕುಳಕೆ ಕೈ
ಸೋತವಿವ ತಱಿದೊಟ್ಟಿ ಬಳಲಿದು ನಿಂದನಾ ದ್ರೋಣ ॥ ೩೭

* ತ್ರಾಣ ಕೋಮಲವಾಯ್ತು ತೆಗೆಯಲಿ
ದ್ರೋಣನಾವೆಡೆ ಪಾಯದಳ ಬಿಡು
ಹೂಣಿಗರ ಬರಹೇಳು ಬಾಣದ ಬಂಡಿ ಸಾವಿರವ ।
ಶೋಣಿತದ ಸಾಗರದಿನವನಿಯು
ಕಾಣೆ ಹೂಳಲಿ ಪಾದರಜದಲಿ
ಕೇಣಿಗೊಂಡನು ವೈರಿಸೇನೆಯುನಮಮ ಕಲಿ ಪಾರ್ಥ ॥ ೩೮

ನರನೆ ಹೊಕ್ಕವನಾದಡಯ್ಯನ
ಹರಿಬವೆನ್ನದೆನುತ್ತ ಬಿಲುದಿರು
ಮೊರೆಯೆ ಮೋಹರಗಡಲ ಕವಿಸಿದನಂದು ಗುರುಸೂನು ।
ಗುರುಸುತನ ಬಳಿವಿಡಿದು ಕಡುಹಿನ
ಲುರವಣಿಸಿದರು ಶಕುನಿ ಯವನೇ
ಶ್ವರ ಕಳಿಂಗ ಸುಕೇತು ಭೂರಿಶ್ರವರು [2]ಬಿಲುದುಡುಕಿ[2] ॥ ೩೯

ಸಾಲ ಮಕುಟದ ಮಾಣಿಕದ ಮಣಿ
ಮಾಲಿಕೆಯ ರಶ್ಮಿಗಳು ಸೂರ್ಯನ
ಸೋಲಿಸಲು ಸಮರವನು ಹೊಕ್ಕರು ಕುಱುಹಿನತಿಬಳರು ।
ಕೋಲ ತೆಗಹಿನ ಕವಿಗಡಿಯ ಕ
ಣ್ಣಾಲಿಗಳ ಕೆಂಪುಗಳ ಹೊಗರು ಛ
ಡಾಳಿಸಲು ಬಲುಖತಿಯ ಸುಭಟರು ಹಳಚಿತರ್ಜುನನ ॥ ೪೦

---

[1] ವಾ (ಕ.ಗ.) * ಈ ಪದ್ಯವು (ಕ) ಪ್ರತಿಯಲ್ಲಿ ಬಿಟ್ಟುಹೋಗಿದೆ. [2] ಬಿಗುಹಿ
ನಲಿ (ಚ.ಪ.)

ಏನ ಹೇಳುವೆನವರ ಶರಸಂ
ಧಾನವನು ಕಲಿ ಪಾರ್ಥನನುಸಂ
ಧಾನವನು ಕೈಯೊಡನೆಯನಿಬರ ಕಣೆಯ ಖಂಡಿಸಿದ ।
ದಾನವಾಮರರೊಳಗೆ ಸುಭಟನಿ
ಧಾನವನು ಪಡಿಗಟ್ಟಬಾರದು
ಮಾನವರ ಮಾತೇತಕೆಂದನು ಸಂಜಯನು ನಗುತ ॥ ೪೧

ಹಿಳುಕುಹಿಳುಕುಗ[1]ಳಡಸಿ[1] ದೆಸೆ ಕ
ತ್ತಲಿಸಿ ಕೈಕೊಂಡವು ಪತತ್ರಾ
ವಳಿಯ ಪವನನ ಹೊಯ್ಲಿನಲಿ ಬಾಯ್ದೆರೆ ಕಿಡಿಯೇಳೆ ।
ಬಳಿಸರಳ ಬಿಲ್ಲಾಳ ದಡ್ಡಿಯ
ಬಲುಹು ತಱಬಿತು ಪಡಿಮುಖದ ಮಂ
ಡಳಿ [2]ಕರೆ[2]ಸುಗೆಯನಮಮ ಸಮತಳಿಸಿತ್ತು ರಣಕೇಳಿ ॥ ೪೨

ಎಸುವನೊಬ್ಬನೆ ಪಾರ್ಥನನಿತುವ
ಕುಸರಿದಱಿವರು ಗುರುಸುತಾದಿಗ
ಳೆಸುವರನಿಬರು ತಱಿವನೊಬ್ಬನೆ ಅಮರಪತಿಸೂನು ।
ಎಸುವರಿವರರ್ಜುನನ ಮೈಯ್ಯಲಿ
ಮಸೆಯ ಕಾಣೆನು ಪಾರ್ಥನನಿಬರ
ವಿಶಿಖವನು ನೆಱೆಗಡಿದು ಕೆತ್ತುವನನಿಬರೊಡಲುಗಳ । ೪೩

ಕೋಲ ಕೋಳಾಹಳಕೆ ಸೈರಿಸ
ದಾಳ ನಾಯಕವಾಡಿ ಹರಿಗೆಯ
ಹೇಳಿದರು ಚಾಚಿದರು ಬಲುಬದ್ಧರದ ಬಂಡಿಗಳ ।
ಹೂಳೆ ಬೀಸಿದ ಗುಳದ ಕರಿಗಳ
ಹೇಳಿದರು ಬಲ ಮುಱಿದಡಾಕೆಗೆ
ಮೇಲೆ ನಾವಿಹೆವೆಂದು ನಿಂದರು ಗುರುಸುತಾದಿಗಳು ॥ ೪೪

---

[1] ಕೊರಸಿ (ಗ) [2] ಗಳೆ (ಕ)

ಹರಿಬದಾಹವವೆಂಬರಾವೆಡೆ
ಹರೆದರೇ ರಣಗೇಡಿಗಳು ನುಡಿ
ಯುರಿಯು ಹೊಱುವುದು ಘಾಯವತಿಶೀತಳ ಮಹಾದೇವ ।
ಅರಮನೆಯ ಕಾಲಾಳು ಕರಿರಥ
ತುರಗವಳಿದರೆ ತಮಗೆ ನಷ್ಟಿಯೆ
ಗರುವನೈ ಗುರುತನುಜನೆನುತೈದಿದನು ಕಲಿ ಪಾರ್ಥ ॥ ೪೫

ಒಗ್ಗಿ ಕವಿತಹ ತುರಗಸೇನೆಯ
ನಗ್ಗಡಲೊಳಿಕ್ಕಿದನು ಕರಿಗಳ
ಮೊಗ್ಗರವ ಮೆದೆಗೆಡಹಿದನು ಹುಡಿಮಾಡಿದನು ರಥವ ।
ಮುಗ್ಗಿ ಬೀಳುವ ಪಾಯದಳವನು
ನುಗ್ಗುನುಸಿಮಾಡಿದನು ರಕುತದ
ಸುಗ್ಗಿಯಾದುದು ಶಾಕಿನಿಯರಿಗೆ ಕಳನ ಚೌಕದಲಿ ॥ ೪೬

ಜೋಡನೊಡೆಹಾಯ್ದಂಬು ಧರಣಿಯೊ
ಳಾಡಿದವು ಗುಳ ಸರಿದ ಕರಿಗಳ
ತೋಡಿ ನೆಟ್ಟವು ಬದ್ಧರಂಗಳ ಬಾದಣವ ಕೊಱೆದು ।
ಈಡಿಱಿದವರಿಸುಭಟರೊಡಲಿನ
ಜೋಡುಗಳ [1]ಜರಿಯೊಡೆದು[1] ತಳಪಟ
ಮಾಡಿದವು ಚತುರಂಗಬಲವನು ಪಾರ್ಥನಂಬುಗಳು ॥ ೪೭

ತಾಱು ಥಟ್ಟಿಗೆ ಕೆಡೆದವಾನೆಗ
ಳಾಱುಸಾವಿರ ತುರಗದಳದಸು
ಸೂಱೆ ಹೋದುದು ಸಮರದಲಿ ಹದಿನೆಂಟುಸಾವಿರ [2]ವ್ರ[2] ।
ಕಾಱಿದರು ಕರುಳನು ಪದಾತಿಗ
ಳಾಱುಲಕ್ಷವು ಮೊದಲ ಲಗ್ಗೆಗೆ
ಮೂಱುಸಾವಿರ ತೇರು ನೆಗ್ಗಿದವೊಂದು ನಿಮಿಷದಲಿ ॥ ೪೮

---

[1] ಜರುಹಿದವು (ಪ.) [2] ದ.

ಹೆಣನ ತುಳಿದೊತ್ತೊತ್ತೆಯಲಿ ಸಂ
ದಣಿಸಿ ಕವಿದುದು ಮತ್ತೆ ದಳ ಭಾ
ರಣೆಯ ಬಿಂಕವನೇನನೆಂಬೆನು ಬಲಿದ ಲಗ್ಗೆಯಲಿ ।
ಕೆಣಕಿದವು ಕರಿಘಟೆಗಳೊಂದೆಸೆ
ಯಣುಕಿದವು ಹಯರಥವದೊಂದೆಸೆ
ಕಣೆಗೆದಱಿ ಕಾಲಾಳದೊಂದೆಸೆ ಮುಸುಕಿತರ್ಜುನನ ॥ ೪೯

ಸವೆದು ಸವೆಯದು ಪೊತು ಮುಝ ಕೌ
ರವನ ಸೇನಾಜಲಧಿ ನಾಯಕ
ನಿವಹವನಿತುವ ನೂಕಿ ಸವೆಯರು ಗುರುಸುತಾದಿಗಳು ।
ಕವಿಯಲೀ ಬಲ ಮತ್ತೆ ಸಂದಣಿ
ತವಕಿಸಲಿ ತಾವನಿಬರುಱೆ ಮುಗು
ಳವಗಡಿಸಲಿ ವಿನೋದವ್ಯಸಲೆಯೆನುತ ನರನೆಚ್ಚ ॥ ೫೦

ಅಗಲದಲಿ ದಿಗುವಲಯವೀಯಂ
ಬುಗಳನೀದುದೊ ಮೇಣು ಬಾಣದ
ಮುಗಿಲ ಮೂಲೆಯ ಕೊಯಿದರೋ ಜರುಹಿದರೊ ಶರನಿಧಿಯ ।
ಝುಗಝುಗಿಸಿ ಹೊಳೆಹೊಳೆವ ಬಾಯ್ಧಾ
ರೆಗಳ ಬೆಳಗಿನ ದಾಳಿ ಧೀಂಕಿಡೆ
ಮೊಗೆದವರ್ಜುನನಂಬು ರಿಪುಚತುರಂಗ [1]ಜೀವನವ[1] ॥ ೫೧

ಮತ್ತೆ ಮುಱಿದನು ಹತ್ತುಸಾವಿರ
ಮತ್ತಗಜವನು ರಥಚಯವ ನು
ಗ್ಗೊತ್ತಿದನು ಹನ್ನೆರಡು ಸಾವಿರವನು ರಣಾಗ್ರದಲಿ ।
ಹೊತ್ತಿತಾತನ ವಿಕ್ರಮಾಗ್ನಿಗೆ
ಹತ್ತುಕೋಟಿ ಪದಾತಿರಾವ್ತರು
ತೆತ್ತರಸುವನು ಲಕ್ಷ ಕೌರವರಾಯ ಸೇನೆಯಲಿ ॥ ೫೨

[1] ಮೋಹರವ (ಕ.ಟ.), ಸಾಗರವ (ಚ.ಪ.)

ತೀರಿತಡವಿಯು ಕಡಿತ ಗಿರಿಗಳ
ಹೋರಟೆಗೆ ಹೊಗಬೇಕು ಸೇನೆಗೆ
ಪಾರುಖಾಣೆಯ ಕೊಟ್ಟೆವಾಗಳೆ ಗುರುಸುತಾದಿಗಳ ।
ಭಾರಣೆಗೆ ಕೊಡಬೇಕು ಸಮಯವ
ನಾರುಭಟೆಯಲಿ ಮಲೆವುದೈ ಕೈ
ವಾರವೇಕೀ ಕಾಯದಲಿ ಕಕ್ಕುಲತೆ ಬೇಡೆಂದ ॥ ೫೩

ಜೀನ ಹುಟ್ಟಿನ ಹುಳುವ ಬಡಿದ ಸ
ಗಾನತನ ತಾನೇನು ಚೋಣಿಯ
ಸೇನೆಗೀನೆಯ ಸವಡಿಲಾಯಿತೆ ಶೌರ್ಯಸಿರಿ ನಿನಗೆ ।
ನಾನದಾರೆಂದಱಿಯೆ ಫಡ ಗುರು
ಸೂನುವಲ್ಲಾ ವೈರಿತಿಮಿರಕೆ
ಭಾನು ಬಗೆಯ್ಯೆಯೆನುತ ಹೊಕ್ಕನು ದ್ರೋಣನಂದನನು ॥ ೫೪

ಬಳಿಯಲೊಡಗವಿಯಿತ್ತು ಚಾತು
ರ್ಬಲಸಹಿತ ದ್ರೋಣಾದಿಗಳು ತೋ
ಱಳವ ಹಿಡಿ ಹಿಡಿ ಧನುವ ಸುರಿ ಸುರಿ ಸರಳ ಸರಿವಳೆಯ ।
ಗಳಹದಿರು ಮೈದೋಱು ದಾನವ
ಕುಲದಿಶಾಪಟ ಸಹಿತ ನೀನೆಸು
ಕಳೆಯದಿರು ಕಾಲವನೆನುತ ಕವಿದೆಚ್ಚರತಿರಥರು ॥ ೫೫

* ಗುರು ಸುತನ ಕೂರಂಬು ದ್ರೋಣನ
ಸರಳಸಾಗರ ಶಲ್ಯನಂಬಿನ
ಹೊರಳಿ ಶಕುನಿಯ ಬಾಣಪಂಜರ ಕೃಪನ ಶರಮೇಘ ।
ಕುರುಪತಿಯ ನಾರಾಚ ವರದು
ರ್ಧರುಷ ಸೈಂಧವ ಶಕುನಿ (?) ಕೃತವ
ರ್ಮರ ಶರಾವಳಿ ಹೊಳಿದವು ದ್ಯಾವಾಮಹೀತಳವ ॥ ೫೬

* ಈ ಪದ್ಯವು (ಕ) ಪ್ರತಿಯಲ್ಲಿಲ್ಲ.

ಉರಿಯ ರಾಜ್ಯವ ಸೂಱೆಗೊಳಲೆನು
ತರಗು ಪರಿದವೊಲಾಯ್ತು ಮೇಘದ
ನೆರವಿ ಗಾಳಿಯ ಮನೆಗೆ ಬಿದ್ದಿನ ಬಂದ ತೆಱನಾಯ್ತು ।
ಗಿರಿಯ ಮಕ್ಕಳು ನಗುತ ವಜ್ರದ
ಕರವ ಹೊಯ್ದಂತಾಯ್ತು ಪಾರ್ಥನ
ಸರಳ ಸೀಮೆಯ ಬೆರಸಿದವು ರಿಪುಸುಭಟರಂಬುಗಳು ॥ ೫೭

ಸಹಜಕೀತನು ಚಾಪಧರಗುರು
ವಹುದು ಗುರುಗಳ ಮಗನೆ ಗುರುವೆಮ
ಗಹುದು ನೋಳ್ಪಡೆ ಶಿವಶಿವಾ ಕಲಿಶಲ್ಯ ಮಾವನಲೆ ।
ಮಹಿಮರಿವರೆಮ್ಮೊಡನೆಯೋದಿದ
ರಹರು ನಾವಿನ್ನಾರ ಕಳೆವೆವು
ಸಹಸ ಲೇಸೆಂದೆಚ್ಚನವರವರಸ್ತ್ರರಥಧನುವ ॥ ೫೮

ಮತ್ತೆ ಹೊಸ ರಥ ನೂತನಾಸ್ತ್ರದ
ಲುತ್ತಮ ಪ್ರತ್ಯಗ್ರ ಚಾಪದ
ಲೊತ್ತರಿಸಿ ಕವಿದುದು ಕಿರೀಟಿಯ ರಥವ ಮುರಿಯೆಸುತ ।
ಮತ್ತೆ ಕಡಿದನು ರಥವ ಚಾಪವ
ಮತ್ತೆ ಹೊಸ ಹೂಟೆಯೊಳು ಹೊಕ್ಕರು
ತೆತ್ತು ಸವೆಯರು ಶೌರ್ಯದಭಿಮಾನವನು ಪಟುಭಟರು ॥ ೫೯

ಸರಳ ಕವಿಸಿದರಿವರು ಮತ್ತದ
ಪರಿಹರಿಸಿದನು ಪಾರ್ಥನಾತನ
ಸರಳುಗಳ ಸಂವರಿಸಿ ಮುಸುಕಿದರರ್ಜುನನ ರಥವ ।
ಕೆರಳಿಗಡಿದನು ಮತ್ತೆ ದ್ರೋಣನ
ಗುರುಸುತನ ಸೈಂಧವನ ಮಾದ್ರೇ
ಶ್ವರನ ಚಾಪವ ಕಡಿದು ಹೂಳಿದನೊಡಲೊಳಂಬುಗಳ ॥ ೬೦

ಘಾಯವಡೆದರು ಸುರಿವ ಸರಳಿಗೆ
ನಾಯಕರು ಮರಳಿದರು ಪೌರುಷ
ಮಾಯವಾಯಿತು ತನು ನಡುಗಿತಡಿಗಡಿಗೆ ಡೆಂಡಣಿಸಿ ।

ಕಾಯಗಟ್ಟಿತು ಭೀತಿ ಬಿರುದಿನ
ಬಾಯೆಣಿಕೆ ಬಯಲಾಯ್ತು ಜೀವದ
ಬೀಯಕಿವರಂಜಿದರು ನೆನೆದರು ಮನೆಯ ರಾಣಿಯರ ‖ ೬೧

ಧಿಟ್ಟತನ ಪೊಳ್ಳಾಯ್ತು ಶೌರ್ಯದ
ಘುಟ್ಟಿ ಕರಗಿತು ಸುಭಟಧರ್ಮದ
ಬಟ್ಟೆಯನು ಹೊಳಿದರು [1]ಹಂಗಿಗರಾ[1]ದರಿಹಪರಕೆ ।
ಬೆಟ್ಟವಾಯಿತು ಭಂಗ ಭರದಲಿ
ಬಿಟ್ಟುಹೋಯಿತು ರಾಯದಳ ಜಗ
ಜಟ್ಟಿಗಳು ಭಗದತ್ತ ಸೈಂಧವ ಗುರುಸುತಾದಿಗಳು ‖ ೬೨

* ಉಲಿವ ಭಟ್ಟರ ಬಾಯ ಹೊಯ್ ರಥ
ದೊಳಗೆ ಕೆಡಹಲಿ ಧ್ವಜದ ಕಂಭವ
ನುಲುಕದಂತಿರೆ ರಥವ ಹರಿಸಲಿ ಸೂತಕುನ್ನಿಗಳು
ತಲೆಮುಸುಕನಿಡಿ ಛತ್ರ ಚಮರವ
ನೆಲಕೆ ಬಿಸುಡಲಿ ಹೆಸರುಗೊಂಡರ
ನುಳುಹಲಾಗದು ಬೀಳಗುತ್ತವದೆನುತ ತಿರುಗಿದರು ‖ ೬೩

ಒಟ್ಟಿದವು ಕೈದುಗಳು ಸತ್ತಿಗೆ
ಬೆಟ್ಟವಾದವು ಸಿಂಧಸೆಳೆಗಳು
ನಟ್ಟಡವಿ ಪವಡಿಸಿದ ತೆಱನಾದುದು ರಣಾಗ್ರದಲಿ ।
ಥಟ್ಟು ಮುರಿದುದು ಕೂಡೆ ತೆರೆ ಸಾ
ಲಿಟ್ಟ ಸಾಗರದಂತೆ ರಾಯಘ
ರಟ್ಟ ಕಂಡನು ಕೌರವೇಶ್ವರ ಸಕಲ ಮೋಹರವ ‖ ೬೪

ಹೊರಳಿಯೊಡೆದು ಮಹಾಪ್ರಧಾನರು
ಮರಳಿದರಲಾ ಘೂತು ಮಝು ಧರ
ಧುರವ ಮಾಡಿದರೇಕೆ ಕರೆಕರೆ ಬಿರುದ ಬೆಸಗೊಂಬ ।

---

[1] ಹೂಣಿಗರಾ (ಕ.)  * ಈ ಪದ್ಯವು (ಚ) ಪ್ರತಿಯಲ್ಲಿಲ್ಲ.

ಗುರುತನಯನೋ ಚಾಪವಿದ್ಯಾ
ಧರನೊ ಶಲ್ಯನೊ ಕೃಪನೊ ಶಕುನಿಯೊ
ವರಮಹಾರಥರಿದ್ದರೋಡುವರಲ್ಲ ದಿಟವೆಂದ ‖ ೬೫

ಹೊರೆದವನ ಕಾರ್ಯಾರ್ಥಲಾಭವ
ಸರಕುಮಾಡರು ಜಯುವಧುವನೆ
ದ್ದೆಱಗಿ ನೋಡರು ವಾರ್ತೆಗೆಯ್ಯರು ಮುಕ್ತಿವಧುವಿಂಗೆ ।
ಧರೆಯ ಪರಮಖ್ಯಾತಿ ಪೂಜೆಯ
[1]ಸರಕು[1] ಗಣಿಸರು ಶಿವಶಿವಾ ಸಂ
ಗರಕೆ ದ್ರೋಣಾದಿಗಳವೋಲು ವಿರಕ್ತರಾರೆಂದ ‖ ೬೬

ಆನೆಗಳು ಮರಳಿದರು ಸುಭಟ ನಿ
ಧಾನರೋಸರಿಸಿದರು ಘಡ ಸುರ
ಧೇನುಗಳಲಾ ಕಱೆಯರೇ ಪರಬಲಕೆ ವಾಂಛಿತವ ।
ಈ ನಪುಂಸಕರುಗಳ ನಂಬಿದ
ನಾನು ನೀತಿಜ್ಞನೆ ಮಹಾದೇ
ವೇನ ಹೇಳುವೆನೆನುತ ಭೀಷ್ಮನ ಹೊರೆಗೆ ನಡೆತಂದ ‖ ೬೭

ಎಂಟನೆಯ ಸಂಧಿ ಮುಗಿದುದು

---

[1] ಸಿರಿಯ (ಜ.)

# ಒಂಬತ್ತನೆಯ ಸಂಧಿ

ಸೂಚನೆ ॥ ವೀರ ಭಾಗೀರಥಿಯ ತನಯನೊ
ಳಾ ರಿಪುವ್ರಜವಿಜಯ ಫಲುಗುಣ
ಹೋರಿದನು ಸರಿಸಮರದಲಿ ತ್ರೈಜಗವು ಕೊಂಡಾಡೆ ॥ *

* ಜೀಯ ಚಿತ್ತೈಸಿದರೆ ಸೇನಾ
ನಾಯಕರ ಮೋಹರೆಗಳ ಮುಸುಕುಗ
ಳಾಯತವನೀ ಹೊತ್ತು ಮುನ್ನಿನ ಬಿರುದಿನುಬ್ಬಟೆಯ ।
ಕಾಯಿದಿರೆ ಧರ್ಮವನು ಜತರಪ
ರಾಯಣರ ಪರಿಣತೆಯಲಾದ ಪ
ಲಾಯನದ ಹೆಬ್ಬೆಳಸ ನೋಡೆನೆ ಭೀಷ್ಮನಿಂತೆಂದ ॥ ೧

ಅರಸ ಹೊಲ್ಲೆಹವೇನು ಪಾರ್ಥನ
ಸರಿಸದಲಿ ನಿಲುವೆದೆಯ ಬಲುಹು
ಳ್ಳರನು ದೇವಾಸುರರೊಳರಿಯೆನು ಮನುಜರೇನಹರು ।
ತಿರುಗಬೇಕವಗಡಿಸಿದರೆ ಸಂ
ಗರವ ಹೊಗುವುದು ಸರಿದರಿದಿರುವ
ನಱಿದು ಕಾದುವುದಿದಱಲಾವುದು ಕೊಱತೆ ಹೇಳೆಂದ ॥ ೨

ನುಡಿಯೆವಾವು ಸಮರ್ಥರೆಂದುದೆ
ಕಡು ನಿಧಾನವು ಸುಭಟರೋಟವೆ
ಕಡೆಗೆ ಪರವಹ ಧರ್ಮ ಪಾರ್ಥನು ಜಗದೊಳಗ್ಗಳನು ।

---

* ಕೇಳು ಧೃತರಾಷ್ಟ್ರಾವನೀಪತಿ
ಹೇಳಲೇನದ ನಿನ್ನವನ ಹೆ
ಚ್ಚಾಳುಗಳ ರಣಭಂಗವನು ಕಲಿ ಪಾರ್ಥನಿದಿರಿನಲಿ ।
ಮೇಳವಿಸಿ ಬಹುಸೂಳು ನೊಂದತಿ
ಕೀಳು ಮನದಲಿ ತಿರುಗಿ ಮುಸುಕಿನ
ಮೌಳಿಗಳು ಬರೆ ಕಂಡು ಕುರುಪತಿ ಭೀಷ್ಮಗಿಂತೆಂದ ॥

ಮೇಲಿನ ಪದ್ಯವು (ಟಿ.ಟಿ.ಪ.) ಪ್ರತಿಗಳಲ್ಲಿ ಮಾತ್ರ ಮೇಲೆ ಈ ಚಿಹ್ನೆ* ಇರುವ ಪದ್ಯಗಳ ಮಧ್ಯದಲ್ಲಿದೆ.

ಮಡ ಮುರಿದು ನುಗ್ಗಾಯ್ತು ರಥ ಬೆಳು
ಗೊಡೆ ಪತಾಕಾದಂಡ ಚಮರಿಗ
ಳುಡಿದು ಬಿದ್ದವು ಕೇಣವಿಲ್ಲದೆ ತಱಿದನರಿಬಲವ ॥ ೧೨

[1]ಮಂಡಿಸಿತು ನೊರೆರಕುತ ಕರುಳಿನ[1]
ಜೊಂಡು ಮಸಗಿತು ಕಡಿದ ಖಂಡದ
ದಿಂಡು ತಳಿತುದು [2]ಕೊರಡ[2] ಕೊಯ್ಲಿನ ಮುಱಿದ ಮೂಳೆಗಳ ।
[3]ಜೊಂಡೆ[3] ನರವಿನ ಜುಱಿತ ಮಿದುಳಿನ
ಹೊಂಡೆಯದ ತೊರಳಿಗಳ ಕೊರಳಿನ
ತುಂಡುಗಳ ಕಾಲಾಂತಕನ ಹೆಬ್ಬೆಳಸು ಹುಲುಸಾಯ್ತು ॥ ೧೩

ಆಗ ಹೂಡಿದನಾಗ ಬಾಣವ
ತೂಗಿ ಬರಸೆಳೆದೆಚ್ಚನಹಿತರ
ನಾಗ ತಾಗಿದವಂಬು ಬಲ್ಲವರಾರು ಕೈಲುಳಿಯ ।
ಬಾಗಿಹುದು ಬಲು ಬಿಲ್ಲು ಕಿವಿವರೆ
ಗಾಗಿ ರಿಪುಬಲ ನಿಮಿಷನಿಮಿಷಕೆ
ನೀಗಿಹುದು ನಿಟ್ಟುಸಿರನೆಲೆ ಭೂಪಾಲ ಕೇಳೆಂದ ॥ ೧೪

ಬೀಳುತಿರ್ದರು ಭಟರು ಮತ್ತೆ ಧ
ಡಾಳಿಸಿತು ತಲೆಮಾಱಿಗಳು ಹೆಣ
ಸಾಲನೆಡಹಿದರರುಣವಾರಿಯ ತೊಱೆಯನೀಸಿದರು ।
ಆಳು ಹೊಕ್ಕುದು ದಂತಿಘಟೆಗಳು
ತೂಳಿದವು ಕಡುಹೆದ್ದು ತುರಗದ
ಮೇಲೆ ರಾವುತರಳವಿಗೊಟ್ಟುದು ತೇರ ಬಾಹೆಯಲಿ ॥ ೧೫

ಆಳುಕುದುರೆಯ ಬೀಯಮಾಡಿ ನೃ
ಪಾಲ ಮಾಡುವುದೇನು ದೊರೆಗಳು
ಕಾಳೆಗಕೆ ಮೈದೋಱಬಾರದೆ ಭೀಮಫಲುಗುಣರು ।

[1] ಮಂಡಿ ಮುಳುಗಿತು ರಕುತ ಕುರುಳಿನ (ಜ.) [2] ತೊಗಲ (ಗ.ತ.ಪ).
[3] ದೊಂಡೆ (ಗ.ಚ.ಜ.ತ.ಪ.)

[1]ಚಾಳ[1]ನೂಕಿಸಿ ಹೊತ್ತುಗಳೆವರು
ಹೇಳಿ ಫಲವೇನಿನ್ನು ರಣಹೀ
ಹಾಳಿ ತಮಗಿಲ್ಲೆಂದು ಗಹಗಹಿಸಿದನು ಕಲಿ ಭೀಷ್ಮ ‖ ೧೬

ದಿವಿಜ ನಗರಿಯ ಸೂಳೆಗೇರಿಗೆ
ಕವಿವ ಮನವೇ ಮುಂದು ಹಜ್ಜೆಗೆ
ತವಕಿಸುವರಳುಕುವರೆ ಮೇಣ್ ಕೈತಪ್ಪ ಮಾಡಿಸೆನು ।
ಕವಿಯಿರೈ ಕಾಲಾಳು ರಾವುತ
ರವಗಡಿಸಿರೈ ಜೋದರೆಸಿರೈ
ನವಮಹಾರಥರೆಂಬ ಕಱೆಯಿರೆನುತ್ತ ಕವಿದೆಚ್ಚ ‖ ೧೭

ಕಡಿದು ಬಿಸುಟನು ತುರಗ ದಳವನು
ಕೆಡಹಿದನು ಹೇರಾನೆಗಳ ತಡೆ
ಗಡಿದನೊಗ್ಗಿನ ರಥವನುಱೆ ಕೊಚ್ಚಿದನು ಕಾಲಾಳ ।
ಹೊಡಕರಿಸಿ ಹೊದಱೆದ್ದು ಮುಂದಕೆ
ನಡೆನಡೆದು ಕೈಮಾಡಿ ಕಾಯದ
ತೊಡಕನೊಲ್ಲದೆ ತೆಕ್ಕೆಗಟ್ಟಿತು ಭಟರು ನಾಕದಲಿ ‖ ೧೮

ಆಳು ಮುಱಿದವು ಮೇಲೆ ಹೊಕ್ಕು ನೃ
ಪಾಲಕರು ಬೊಬ್ಬಿಱಿದು ಭೀಷ್ಮನ
ಕೋಲ ಕೊಳ್ಳದೆ ಕೊಂಡು ಹರಿದರು ರಥದ ಹೊರೆಗಾಗಿ ।
ಆಳುತನದಂಗವಣೆಯೊಳ್ಳಿತು
ಮೇಳವೇ ಬಳಿಕೇನು ಪೃಥ್ವೀ
ಪಾಲರಲ್ಲಾ ಪೂತು ಮಝು ಎನುತೆಚ್ಚನಾ ಭೀಷ್ಮ ‖ ೧೯

ಅಂಗವಿಸಿ ಮಱಿಹುಲ್ಲೆ ಖುರದಲಿ
ಸಿಂಗವನು ಹೊಯ್ವಂತೆ ನೃಪರು
ತುಂಗ ಸಹಸಿಯ ಮೇಲೆ ಕೈಮಾಡಿದರು ಖಡ್ಗದಲಿ ।

[1] ಜಾಳ (ತ.ಕ.)

ಅಂಗವಣೆಯನು ಹೊಗಳುತಾ ದಿವಿ
ಜಾಂಗನಾಕಾಮುಕರ ಮಾಡಿಯ
ಭಂಗಭೀಷ್ಮನು ಮೆಱೆದನುನ್ನತ ಬಾಹುವಿಕ್ರಮವ ॥ ೨೦

ಧರಣಿಪತಿಗಳು ಹತ್ತುಸಾವಿರ
ವುರುಳಿತಾ ದಿವಸದಲಿ ಹಿಂದಣ
ಕೊಱತೆಯುಳಿಲೆಕ್ಕಕ್ಕೆ ಕೊಂದನು ಹತ್ತುಸಾವಿರವ ।
ಮರಳಿ ಮೂಸಾವಿರವ ಮತ್ತಂ
ತೆರಡು ಸಾವಿರ ಮತ್ತೆಯೈಸಾ
ವಿರವ ಸವಱಿದನಹಿತಬಲದಲಿ ಭೂಪ ಕೇಳೆಂದ ॥ ೨೧

ಭುವನ ನೆಱೆ ಹೊಗೆವಂದು ಹೆಚ್ಚಿದ
ಶಿವನ ಖತಿ ವೆಗ್ಗಳಿಸಿದೋ ಱಿತೆನೆ ರಿಪು
ನಿವಹದಲಿ ನೆಲೆಗೊಂಡುದೀತನ ಖಾತಿ ಕೊಪ್ಪರಿಸಿ ।
ಜವನ ಪುರಿಗಿಂಬಿಲ್ಲ ಕೊಂಡೊ
ಯ್ವವರು ಕೈಗುಂದಿದರು ಗಂಗಾ
ಭವನು ಕೊಲುವುದ ಬಿಡನಿದೇನೆನುತಿರ್ದುದಮರಗಣ ॥ ೨೨

ಬಲವನದ ಹೊದಱೆಲ್ಲಿ ಸೇನಾ
ಜಲನಿಧಿಯ ಸುಳಿವೆಲ್ಲಿ ಸುಭಟರ
ಕಳಕಳದ ಕಡುಹೆಲ್ಲಿ ಖರೆಯದ ರಥಿಕರವರೆಲ್ಲಿ ।
ಹೊಳೆದು ಮೊಳಗಿದನಲ್ಲಿ ಬಾಣದ
ಬಲೆಯ ಬೀಸಿದನಲ್ಲಿ ರಕುತದ
ಹೊಳೆಯ ಹರಿಸಿದನಲ್ಲಿ ಗಂಗಾಸೂನು ಖಾತಿಯಲಿ ॥ ೨೩

ಕಡುಹು ಹಿರಿದೋ ಕಾಲರುದ್ರನ
ಪಡೆಯಲಾಡುವನೀತನೋ ಮೈ
ಗೊಡದಿರೋ ಬಲಹೊರಳಿಯೊಡೆಯಲಿ ಹೋಗಿ ದೆಸೆದೆಸೆಗೆ ।
ತಡೆಯಲರಿದೋ ತಡವುಮಾಡದಿ
ರೊಡಲ ಬದುಕಿಸಿಕೊಳ್ಳಿ ನೋಡುವ
ರೊಡೆಯರನು ಬಳಿಕೆನುತ ಮುಱಿದುದು ಪಾಂಡುಸುತಸೇನೆ ॥ ೨೪

ಜರಿದುದಲ್ಲಿಯದಲ್ಲಿ ಭರದಲಿ
ತೆರಳಿತಲ್ಲಿಯದಲ್ಲಿ ಹಿಂದಕೆ
ಮರಳಿತಲ್ಲಿಯದಲ್ಲಿ ರಾಯರ ಕಣ್ಣ ಸನ್ನೆಯಲಿ ।
ತಿರುಗಿತಲ್ಲಿಯದಲ್ಲಿ ಭಟರೆದೆ
ಬಿರಿದುದಲ್ಲಿಯದಲ್ಲಿ ಭೀಷ್ಮನ
ಸರಳ ಗಾಳಿಗೆ ಬೆಸುಗೆಯೊಡೆದುದು ವೈರಿಬಲಮೇಘ ॥ ೨೫

ಬಲವ ನಿಲಿಸಲು ನೂಕದನಿಲಜ
ನಳುಕಿದನು ಸಹದೇವ ಹಿಂದಣಿ
ಗೊಲೆದ ಧೃಷ್ಟದ್ಯುಮ್ನ ನಕುಲರು ನೆನೆದರನುಚಿತವ ।
ಕಲಿ ಘಟೋತ್ಕಚನಧಮ ಧರ್ಮವ
ಬಳಸಿದನು ಪಾಂಚಾಲ ಮತ್ಸ್ಯರು
ಹಲರು ನಡೆದುದೆ ಮಾರ್ಗವೆಂದೇ ಮುರುಹಿದರು ಮುಖವ ॥ ೨೬

ಹದುಳವಿಡುವವರಿಲ್ಲ ಸೇನೆಯ
ಮೊದಲಿಗರು ಮುನ್ನೋಟವಿಕ್ಕಿತು
ಕದನದಲಿ ಕೈಸೂಟಿಗೊಟ್ಟರು ಜಯವ ತಮತಮಗೆ ।
ಎದೆಯ ನೀವಿದನಹಿತನೃಪನ
ಭ್ಯುದಯುವೆರಡೆಲೆಯಾಯ್ತು ಸಾಹಸಿ
ಸದೆದನೋ ಕಲಿ ಭೀಷ್ಮನೆಂದುದು ಮೇಲೆ ಸುರಕಟಕ ॥ ೨೭

ಸಕಲ ದೆಸೆಯಲಿ ಮುಱಿದು ಬಹ ನಾ
ಯಕರ ಕಂಡನು ಪಾರ್ಥನಸುರಾಂ
ತಕಗೆ ತೋಱಿದನಕಟ ನೋಡಿದಿರೆಮ್ಮವರ ವಿಧಿಯ ।
ನಕುಲನಿಲ್ಲಾ ಭೀಮನೋ ಸಾ
ತ್ಯಕಿಯೊ ಸೇನಾಪತಿಯೊ ಕಟಕಟ
ವಿಕಳರೋಡಿದರೋಡಲಿದಿರಿಗೆ ರಥವ [1]ಹರಿಸೆಂದ[1] ॥ ೨೮

---

[1] ತಿರುಹೆಂದ (ಗ.ಟ.)

ಮಾತು ಹಿಂಚಿತು ತೇರು ಸೇನಾ
ವ್ರಾತವನು ಹಿಂದಿಕ್ಕಿ ಗಂಗಾ
ಜಾತನಿದಿರಲಿ ನಿಂದುದೇನೆಂಬೆನು ಮಹಾದ್ಭುತವ ।
ಸೋತು ಚೆಲ್ಲಿದ ಸೇನೆ ಹರ್ಷದೊ
ಳಾತು ನಿಂದುದು ಮತ್ತೆ ಭಂಗದ
ಮಾತದೇತಕೆ ಕೇಳು ಜನಮೇಜಯ ಮಹೀಪಾಲ ॥ ೨೯

ಬಲವನಾಯಕವೇ ವೃಥಾ ಹುಲು
ದಳದೊಳಗೆ ನಿಮ್ಮಗ್ಗಳಿಕೆ ಕೈ
ಯಳವ ಮನಗಲಿತನದಳವ ಬಿಲುಗಾಱತನದಳವ ।
ಬಲಿಯಿರೇ ನಮ್ಮೊಡನೆ ಮೆಚ್ಚಿಸಿ
ಬಳಿಕ ಹಡೆಯಿರೆ ಬಿರುದನೆನುತವೆ
ಫಲುಗುಣನು [1]ಕೈ[1]ಯಿಕ್ಕಿದನು ಗಂಗಾಕುಮಾರನಲಿ ॥ ೩೦

* ನಾವು ವೃದ್ಧರು ಬಿರುದುಗಿರುದಿನ
ಲಾವಣಿಗೆ ನಮಗೇಕೆ ಹೇಳೈ
ನೀವಲೈ ಜವ್ವನದ ಭಂಟರು ರಣದ ಧುರಭರಕೆ ।
ನೀವಿರಲು [2]ನಿರ್ನಾಯಕವೆ[2] ಸೇ
ನಾವಳಿ ಮಹಾದೇವ ಮೂದಲೆ
ಗಾವು ಲಕ್ಷ್ಯವೆ ಹೇಳು ಫಲುಗುಣ ಎಂದನಾ ಭೀಷ್ಮ ॥ ೩೧

* ಕಟಕಿಯೇಕಿದು ಪರಶುರಾಮನ
ಪಟುತನಕೆ ಮದ್ದರೆದೆನೆಂಬೀ
ನಿಟಿಲನೇತ್ರನ ಭುಜಬಲಕೆ ಸಮಜೋಳಿ ಗಡ ನೀವು ।
ಕುಟಿಲ ಭಣಿತೆಯನಱಿಯೆನಿದಱೊಳು
ಭಟರು ನೀವಹುದೆನ್ನ ಶರಸಂ
ಘಟನವನು ಚಿತ್ತಯಿಸಿಯೆಂದನು ಪಾರ್ಥ ನಸುನಗುತ ॥ ೩೨

---

[1] ಮ್ಯೆ (ಗ.) [2] ನಿರ್ನಾಮವೇ (ಜ.) * ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಅವರು ಪೂರ್ವರು ಪರಶುರಾಮು
ಪ್ರವರರನು ಮೆಚ್ಚಿಸಿದೆವೀಗಳಿ
ನವರು ಕಡುಜಾಣಾಯ್ಲರೆಂದು ಸುರೇಖರೆಂದಿಹರು ।
ಅವರ ಮೆಚ್ಚಿಸಬಹುದು ನೀವಾ
ಹವಸುವಿದ್ಯಾ ದುರ್ವಿದಗ್ಧರು
ನಿವಗೆ ನಾವಿದಿರಾಗಬಲ್ಲೆವೆಯೆಂದನಾ ಭೀಷ್ಮ ॥ ೩೩

ಬಱಿಯ ಮಾತೋ ಚಾಪವಿದ್ಯದೊ
ಳಱಿತವುಂಟೋ ಹೊತ್ತುಗಳೆಯದೆ
ಹೆಱಿಸಿರೇ ನಾರಿಯನು ನಿಮ್ಮಯ ಬಾಣಗರ್ಭಿಣಿಯ ।
ಅಱಿಯಬಹುದೆನಲಹುದಹುದು ಕೈ
ಮಱೆಯದಿರು ಕೈಕೊಳ್ಳೆನುತ ಬೊ
ಬ್ಬಿಱಿದು ಪಾರ್ಥನನದ್ದಿದನು ಬಾಣಾಂಬುರಾಶಿಯಲಿ ॥ ೩೪

ಒಳ್ಳಿತೈ ಕೈಚಳಕವಾವನ
ಲಿಲ್ಲ ಹರಹರ ಪರಶುರಾಮನ
ನಲ್ಲಿ ಮೆಚ್ಚಿಸಿದಂದವಿನಿತೋ ಮತ್ತೆ ಬೇಱುಂಟೊ ।
ಒಳ್ಳೆಗರನೋಡಿಸಿದ ಸಹಸವ
ನಿಲ್ಲಿ ತೋಱಲು ನೆನೆದಿರೇ ತ
ಪ್ಪಲ್ಲ ತಪ್ಪಲ್ಲೆನುತ ಕಣೆಗಳ ಕಡಿದನಾ ಪಾರ್ಥ ॥ ೩೫

ಖೋಡಿ ಮಾಡದಿರೆಲೆ ಕಿರೀಟಿ ವಿ
ಭಾಡಿಸುವುದರಿದೇ ದೊಠಾರಿಸಿ
ಯಾಡುವುದು ದೊರೆಗುಚಿತವೇ ಗರುವಾಯಿಗಂಗವಿದೇ ।
ನೋಡುನೋಡಾದರೆ ಕಪರ್ದಿಯ
ಕೂಡೆ ನೀ ಹೊಯಿದಾಡಿ ಬಿಲ್ಲ ಸ
ಘಾಡನಹೆ ದಿಟ [1]ಕಾದುಕೊಳ್ಳುನುತೆಚ್ಚನಾ ಭೀಷ್ಮ[1] ॥ ೩೬

[1] ಕೈಕೊಳ್ಳೆನುತ ತೆಗೆದಚ್ಚ (ಚ.ಪ.)

ಇದು ಹೊಸತು ಬಾಣಾಬ್ಧಿ ವೇಲೆಯ
ನೊದೆದು ಹಾಯ್ದುದೊ ಭುವನವಳಿವಂ
ದುದಯಿಸಿದ ಮಳೆಗಾಲವೋ ಮಾಮಾಶರಾವಳಿಯೋ ।
ಹೊದಱಡಸಿ ಕಿಡಿಯೆದ್ದು ದೆಸೆಗಳ
ಹೊದಿಸಿದವು ಹೊಳೆದರ್ಜುನನ ಮು
ತ್ತಿದವು ಕೆತ್ತಿದವರಿಯ ಸೀಸಕ ಜೋಡು[1]ಮೊಚ್ಚೆ[1]ಯವ ॥ ೩೭

ಹನುಮ ಮಸೆಗಂಡನು ಘುರಾಂತಕ
ಕನಲಿದನು ಕಡುನೊಂದು ಪಾರ್ಥನ
ತನುವಿನಲಿ ಹೆಬ್ಬಟ್ಟೆಯಾದುದು ಬಾಣಪಥಿಕರಿಗೆ ।
ಮೊನೆಯಲಗು ಮುಕ್ಕುಱುಕೆ ರಥವನು
ತನಿಗೊಡಹಿ ಮುಗ್ಗಿದವು ತೇಜಿಗ
ಳನುವರಕೆ ಮುಖದಿರುಹಿದವು ಕಲಿ ಭೀಷ್ಮನುಪಟಳಕೆ ॥ ೩೮

ಬಸಿವ ರಕುತವ ಬಳಿದು ಖಾತಿಯ
ಮಸಕದಲಿ ಕೈಮಱೆದು ಮಿಗೆ ದ
ಳ್ಳಿಸುತ ಹೊಗರಿಡುತೌಡುಗಚ್ಚುತ ಹುಬ್ಬುಗಳ ಬಲಿದು ।
ಹೊಸಮಸೆಯ ಬಾಯ್ಧಾರೆಗಳ ಶರ
ವಿಸರವನು ತೊಡಚಿದನು ಭೀಷ್ಮನ
ಮುಸುಕಿದನು ಮಗುಳೆಚ್ಚು ಪುನರಪಿ ಕಱೆದನಂಬುಗಳ ॥ ೩೯

ಮುತ್ತಿದವು ನರನಂಬು ಫಣಿಗಳು
ಹುತ್ತ ಹೊಗುವಂದದಲಿ ಕಂಡವ
ಕುತ್ತಿ ಹಾಯ್ದವು ಕೆತ್ತಿ ಹರಿದವು ಕಿಬ್ಬರಿಗಳೆಲುವ ।
ಮೆತ್ತಿದವು ಕೈಮೈಗಳಲಿ ತಲೆ
ಯೊತ್ತಿದವು ವಜ್ರಾಂಗಿಯಲಿ ಭಟ
ನತ್ತಲಿತ್ತಲೆನಲ್ಕೆ ಬಳಸಿದವಾ ನದೀಸುತನ ॥ ೪೦

[1] ಚೆಕ್ಕೆ (ಚೆ.ಪ)

ಜೋಡು ಹರಿದುದು ತಾಳ ಹಳವಿಗೆ
ನೀಡಿ ಕೆಡೆದುದು ಸಾರಥಿಗಳಸು
ಹೂಡಿತಂತಕಪುರಿಗೆ ತೇಜಿಗಳಸುವ ಕಾರಿದವು ।
ಗೂಡುಗೊಂಡುದು ವಿಕ್ರಮಾನಳ
ನಾಡಬಾರದು ಭೀಷ್ಮನನು ಕೈ
ಗೂಡಿ ಕವಿಯಲಿ ದ್ರೋಣ ಗುರುಸುತರೆಂದುದಖಿಲಜನ ॥ ೪೧

ಸಾರು ಫಡ ಕೆಲಬಲದ ಹಂಗಿನ
ವೀರನೇ ಕಲಿ ಭೀಷ್ಮ ಮುನಿದರೆ
ಹೋರಟೆಗೆ ಬರಹೇಳು ಭರ್ಗನನಿವನ ಪಾಡೇನು ।
ಮೇರೆಗಿದ್ದೆನು ಮಕ್ಕಳೆಂದೇ
ವೈರಬಂಧವ ಬಿಟ್ಟೆನಕಟ ವಿ
ಕಾರಿತನವೇ ನಮ್ಮೊಡನೆಯೆನುತೆಚ್ಚನಾ ಭೀಷ್ಮ ॥ ೪೨

ಎಸಲು ಕಡಿದನು ಪಾರ್ಥನೀತನ
ವಿಶಿಖವನು ತರಿದವನು ಕಿಡಿ ದ
ಳ್ಳಿಸುವ ಧಾರೆಯ ಭೂರಿಬಾಣದ ಬಲೆಯ ಬೀಸಿದನು ।
ಕುಸುರಿದರಿದನು ಮತ್ತೆ ಜೋಡಿಸಿ
ನಿಶಿತ ಶರದಲಿ ಬಳಿಕಲವನಿಗೆ
ಹಸುಗೆ ಮಾಡಿದನಿತ್ತ ಸವೆದವು ಸರಳು ಸಮರದಲಿ ॥ ೪೩

ಉರಗಬಾಣವನಿವರು ಕರೆದರು
ಗರುಡಶರದಲಿ ಪಾರ್ಥ ತಪಿಸಿದ
ನುರಿಯ ವಿಶಿಖವನಿವರು ನಂದಿಸಿದರು ಜಲಾಸ್ತ್ರದಲಿ ।
ಗಿರಿಶಿಲೀಮುಖಕಿವರು ವಜ್ರವ
ಹರಿಸಿದರು ತಿಮಿರಾಸ್ತ್ರವೆದ್ದರೆ
ತರಣಿಮಾರ್ಗಣದಿಂದ ತರಿದನು ಭೀಷ್ಮ ವಹಿಲದಲಿ ॥ ೪೪

ಆವ ವಿಧದಲಿ ಪಾರ್ಥನೆಸುವನ
ದಾವ ಬೇಗದಿ ಮುರಿವನೀತನ
ದಾವ ಚಾಪರಹಸ್ಯವಿದ್ಯೆಗಳೊಳಗೆ ಬಳಸಿದನೊ ।

ಆ ವಿಧದಲಾ ಪರಿಯಲಾ ಸಂ
ಭಾವನೆಯಲಾ ಉಳಿಯಲಾ ನಾ
ನಾ ವಿಧಾನದಲೊದಗಿ ಸರಿ ಮಿಗಿಲೆನಿಸಿದನು ಭೀಷ್ಮ ‖ ೪೫

ಎರಡು ಶರದಲಿ ನರನು ಭೀಷ್ಮನ
ಕರದ ಕಾರ್ಮುಕದಂಡವನು ಕ
ತ್ತರಿಸಿದನು ಕೈಯೊಡನೆ ಕೊಂಡನು ಭೀಷ್ಮ ಹೊಸಧನುವ ।
ಸರಳ ಸೂಟಿಯ ತೋಱಿಸಿದಡ
ಬ್ಬರಿಸಿ ಫಲುಗುಣನೈದು ಬಾಣದ
ಲರಿಭಟನ ಚಾಪವನು ಕಡಿ ಮೂಱಾಗಿ ಖಂಡಿಸಿದ ‖ ೪೬

ಮತ್ತೆ ಹೊಸ ಚಾಪದಲಿ ಭೀಷ್ಮನು
ಮಿತ್ತು ಖತಿಗೊಂಡಂತೆ ಶರದಲಿ
ಕೆತ್ತನಾಕಾಶವನು ಕಡಿದನು ಪಾರ್ಥ [1]ನಿಮಿಷದಲಿ[1]
ಮುತ್ತಯನ ಕರತಳದ ಧನುವನು
ಕತ್ತರಿಸಿದನು ಹಿಡಿಯಲೀಯದೆ
ಹತ್ತುಸಾವಿರ ಬಿಲ್ಲು ಸವೆದವು ಕುರುಪಿತಾಮಹನ ‖ ೪೭

ಉಲಿಯೆ ಕಿಱು ಘಂಟೆಗಳು ಹೊಳಹೊಳ
ಹೊಳೆವ ಶಕ್ತಿಯ ತುಡುಕಿ ಭೀಷ್ಮನು
ಫಲುಗುಣನನಿಡೆ ಕಡಿದು ಬಿಸುಟನು ನೂಱು ಬಾಣದಲಿ ।
ಸೆಳೆದು ಫಲುಗುಣ ತಿರುಹಿ ಭೀಷ್ಮನ
ತಲೆಯ [2]ಲಕ್ಷಿಸಿ[2] ಹೊನ್ನ ಘಂಟೆಗ
ಳುಲಿಯೆ ಬಿಟ್ಟೇಱಿಂದಲಿಡೆ ಖಂಡಿಸಿದನಾ ಭೀಷ್ಮ ‖ ೪೮

ಆವ ಚಾಪವ ತುಡುಕಿ ಕೆನ್ನೆಗೆ
ತೀವಿ ತೆಗೆಯದ ಮುನ್ನ ಫಲುಗುಣ
ನೋವದೆಸುವನು ಕಡಿದು ಬಿಸುಡುವನಿವರ ಬಿಲ್ಲುಗಳ ।

[1] ವಹಿಲದಲಿ. (ಟ.)    [2] ನೀಕ್ಷಿಸಿ. (ಗ.)

ಆವ ದಿವ್ಯಾಸ್ತ್ರವನು ಕುಂತಿಯ
ಮಾವ ತೊಡುವನು ತೊಡದ ಮುನ್ನ ಶ
ರಾವಳಿಯ ಮುಂಕೊಂಡು ಖಂಡಿಸಿ ಪಾರ್ಥನೆಸುತಿರ್ದ ॥ ೪೯

ಮೇಲೆ ಹೇಳಿಕೆಯಾಯ್ತು ಕೌರವ
ರಾಳಿನಲಿ ದುಶ್ಶಾಸನಂಗೆ ಕ
ರಾಳ ಭೂರಿಶ್ರವ ಜಯದ್ರಥ ಗುರು ಕೃಪಾದ್ಯರಿಗೆ ।
ಕೋಲ ಹೊದೆಗಳ ಬಂಡಿಯಲಿ ನಿ
ಸ್ಸಾಳ ಸೂಳಿನ ಲಗ್ಗೆಯಲಿ ಹೇ
ರಾಳ[1]ದೊಡ್ಡವಣೆಯಲಿ[1] ಪಡಿಬಲ ಕವಿದುದುರವಣಿಸಿ ॥ ೫೦

ನರನ ಬೆಂಬಲವಾಗಿ ಪಾಂಚಾ
ಲರನು ಮತ್ಸ್ಯನ ಭೀಮಸೇನನ
ವರನಕುಲ ಸಹದೇವ ಧೃಷ್ಟದ್ಯುಮ್ನ ಸಾತ್ಯಕಿಯ ।
ಅರಸನಟ್ಟಿದನಿತ್ತಲಂಬಿನ
ತಿರುಹುವೆರಳಿನ ಮೊರೆವ ಬಿಲ್ಲಿನ
ವರ ರಥದ ದುವ್ವಾಳಿ ಮೆಚೆಯೆ ಶಿಖಂಡಿ ನಡೆತಂದ ॥ ೫೧

ಒಂಬತ್ತನೆಯ ಸಂಧಿ ಮುಗಿದುದು

---

1 ದಾಟೋಪದಲಿ (ಜ.)

# ಹತ್ತನೆಯ ಸಂಧಿ

ಸೂಚನೆ ‖ [1]ಕುಲಕಮಲ ಖರಕಿರಣ ಪಾಂಡವ
ಬಲಕೆ ಶರಣಾಗತ ಜಲಧಿ ವರ
ನಿಲಯವೆನೆ ರಂಜಿಸಿತು ಗಂಗಾಸುತನ ಶರಶಯನ ‖ [1]

ಕಂಡನರ್ಜುನನೌಕಿ ಕವಿವ ಶಿ
ಖಂಡಿಯನು ಮಝು ಪೂತು ಪಾಯಕು
ಗಂಡುಗಲಿಯಹೆ ಚಾಗು ತೊಟ್ಟೆಸು ಭೀಷ್ಮನವಯವವ ‖
ಕೊಂಡು ನಡೆ ನೀನಂಜದಿರು ಕೈ
ಕೊಂಡು ನಿಲುವೆನೆನುತ್ತ ಫಲುಗುಣ
ಮಂಡಿಸಿದನಾಲಿದನು ಸೆಳೆದನು ಬೋಳೆಯಂಬುಗಳ ‖

ಒದಱ ಜೇವಡೆಗೈದು ಬಾಣವ
ಕೆದಱದನು ಥಟ್ಟೈಸಿ ಚಾಪವ
ನೊದೆದು ಹಾಯ್ದವು ಕೋದವಂಬುಗಳರಿಯ [2]ನೆತ್ತಿಯಲಿ[2] ।
ಇದಿರೊಳುಲಿದು ಶಿಖಂಡಿ ಶರಸಂ
ಘದಲಿ ಹೂಳಿದನಾಗ ಭೀಷ್ಮನ
ಹೃದಯದಲಿ ವೈರಾಗ್ಯ ಮನೆಗಟ್ಟಿತ್ತು ನಿಮಿಷದಲಿ ‖

ಎಲೆ ಮಹಾದೇವೀ ನಪುಂಸಕ
ನಲಿ ನಿರಂತರವೆಮಗೆ ಸಮರವೆ
ಗೆಲವಿದೊಳ್ಳಿತೆ ಸುಡು ಶಿಖಂಡಿಯ ಕೂಡೆ ಬಿಲುವಿಡಿದು ।

---

[1] ಗಂಡುಗಲಿ ಗಾಂಗೇಯ ರಣದು
ದ್ದಂಡ ಕ್ಷತ್ರಿಯಕುಲವನೆಲ್ಲವ
ದಿಂಡುದಱದು ಶಿಖಂಡಿಯಿದಿರಲಿ ಬಿಲ್ಲನಿಳುಹಿದನು । (ಕ.ಟ.)

[2] ನೆತ್ತರಲಿ (ಕ.) ರಕ್ತದಲಿ (ಗ.ತ.) ದೇಹದಲಿ (ಪ.)

ಅಳುಕದೆಚ್ಚನಲಾ ದುರಾತ್ಮನ
ನಿಲವ ತೆಗೆತೆಗೆಯೆನುತ ಚಾಪವ
ನಿಳುಹಿದನು ರಥದೊಳಗೆ ಗಂಗಾಸೂನು ವಹಿಲದಲಿ ‖ ೩

ನರನ ಸರಳಿಗೆ ಮೈಯ ಕೊಟ್ಟರೆ
ಮುರಿದು ರಥದಲಿ ನಿಂದು ನಿಜವೋ
ಹರವ ನೋಡುತ ಶಲ್ಯ ಗುರು ಕೃಪ ಕೌರವಾನುಜರ ‖
ಕರೆದು ನುಡಿದನು ಪಾರ್ಥನಂಬಿನ
ಹೊರಳಿ ಹೊಳ್ಳಿಸುತಿದೆ ಮದಂತಃ
ಕರಣ ಕುಂದಿತು ಕಾಯಲಾಪರೆ ಬನ್ನಿ ನೀವೆಂದ ‖ ४

ಇವು ಶಿಖಂಡಿಯ ಬಾಣವೇ ವಾ
ಸವನ ಮಗನಂಬುಗಳು ವಿಲಯದ
ಶಿವನ ಶೂಲದ ಗಾಯಕಿವು ಮಿಗಿಲೇನನುಸುರುವೆನು ।
ಇವನು ಸೈರಿಸಲಾಱೆನಿಂದ್ರನ
ಪವಿಯು ಹೊಯ್ಲ[1]ನು ಹೊಱುವೆ[1]ನಂತ್ಯದ
ಜವನ ದಂಡದ ಹತಿಗೆ ಹೆದಱೆನ್ ಕೇಳಿ ನೀವೆಂದ ‖ ೫

ಪರಶುರಾಮನ ಕೊಡಲಿಕಡಿತವ
ಧರಿಸಲಾಪೆನು ವಿಲಯಭೈರವ
ನಿಱಿದಡಂಜೆನು ಸಿಡಿಲು ಹೊಡೆದರೆ ರೋಮ ಕಂಪಿಸದು ।
ಹರನ ಪಾಶುಪತಾಸ್ತ್ರ ಬಾದಣ
ಗೊಱೆದರೆಯು ಲೆಕ್ಕಿಸೆನು ಪಾರ್ಥನ
ಸರಳ ಚೂಣಿಗೆ ಸಿಲುಕಿದೆನು ಪರಿಹರಿಸಿ ನೀವೆಂದ । ೬

ಹರಿಯ ಕೌಮೋದಕಿಯ ಹೊಯ್ಲನು
ಬೆರಳಲಾನುವೆನಖಿಲ ಕುಲಗಿರಿ
ಜರಿದು ಬೀಳುವಡಾನಲಾಪೆನು ನಖದ ಕೊನೆಗಳಲಿ ।

---

[1] ನಾನುವೆ (ಚ.)

ಛರದಲಾದಿವರಾಹ ದಾಡೆಯ
ಲಿಱಿದಡೆಯು ನರಸಿಂಹ [1]ನಖದಲಿ[1]
ಕೆರೆದಡೆಯು ಸೈರಿಸುವೆನಂಜುವೆನರ್ಜುನನ ಶರಕೆ ॥ ೭

ಒಡಲನೊಚ್ಚತಗೊಂಡವಂಬಿನ
ಕುಡಿಗೆ ನೆಱೆಯದು ರಕ್ತಜಲ ಬಳಿ
ವಿಡಿದು ಕವಿವಂಬುಗಳು ಬಂಬಲ್ಗರುಳ ಸೇದಿದವು ।
ಉಡಿದವೆಲು ಬಾಣಂಗಳೆಲುವಾ
ಗಡಸಿದವು ತನಿರಕುತ ಮಾಂಸವ
ನುಡುಗಿದವು ಶರವಿವು ಶಿಖಂಡಿಯ ಬಾಣವಲ್ಲೆಂದ ॥ ೮

ಚೇಳ ಬೆನ್ನಿನೊಳೊಡೆದು ಮೂಡುವ
ಬಾಲವೃಶ್ಚಿಕದಂತೆ [2]ಮಸೆದಿಹ[2]
ಬೋಳೆಯಂಬುಗಳೊಡೆದು [3]ಮೊನೆ[3]ದೋಱಿದವು ಬೆನ್ನಿನೊಳು ।
ಕೋಲು ಪಾರ್ಥನವಿವು ಶಿಖಂಡಿಯ
ಕೋಲುಗಳು ತಾನಲ್ಲ ನಿಂದುದು
ಕಾಳೆಗವು ನಮಗೆನುತ ಮೆಲ್ಲನೆ ಮಲಗಿದನು ಭೀಷ್ಮ ॥ ೯

ವೀರಭಟಭಾಳಾಕ್ಷ ಭೀಷ್ಮನು
ಸಾರಿದನು ಧಾರುಣಿಯನಕಟಾ
ಕೌರವನ ಸಿರಿ ಸೂಱೆಯೋದುದೆ ಹಗೆಗೆ ಗೆಲವಾಯ್ತೆ ।
ಆರನಾವಂಗದಲಿ ಬರಿಸದು
ಘೋರವಿಧಿ ಶಿವಶಿವ ಎನುತ್ತಾ
ಸಾರಥಿಯು ಕಡು ಖೇದದಲಿ ತುಂಬಿದನು ಕಂಬನಿಯ ॥ ೧೦

ಹೂಳಿ ಹೋಯಿತು ಬಾಣದಲಿ ಮೈ
ತೋಳು ತೊಡೆ ಜೊಂಡೆದ್ದು ರಕುತದ
ಸಾಲುಗೊಳಚೆಯ ಕರುಳ ಕುಸುರಿಯ ಬಸಿವ ನೆಣವಸೆಯ ।

---

[1] ಖುರದಲ (ಕ.) [2] ಮಸಗಿನ (ಜ.ಪ.) [3] ಗಱಿ (ಚ.ಜ.ಪ.)

ಮೂಳೆಯೊಟ್ಟಿಲ ನೆಲನ ಮುಟ್ಟದ
ಜಾಳಿಗೆಯ ಹೊಗರೊಗುವ ಕೆಂಗಣೆ
ಗೋಲ ಮಂಚದ ಮೇಲೆ ರಣದಲಿ ಭೀಷ್ಮ ಪವಡಿಸಿದ ॥ ೧೧

ಒರಲಿ ಕೆಡೆದರು ಹಡಪಿಗರು ಸೀ
ಗುರಿಯವರು ಸತ್ತಿಗೆಯವರು ತ
ನ್ನರಮನೆಯ ವಿಶ್ವಾಸಿಗಳು ಬಿಲುಸರಳ ನೀಡುವರು ।
ಗುರುವಲಾ ಮುತ್ತಯ್ಯ ನಮ್ಮನು
ಹೊರೆದ ತಂದೆಗೆ ತಪ್ಪಿದರು ಕಡು
ನರಕಿಗಳು ಪಾಂಡವರು ಸುಡುಸುಡೆನುತ್ತ ಹೊರಳಿದರು ॥ ೧೨

ಬೆದಱು ತವನಿಧಿಯಾಯ್ತು ಪಟುಭಟ
ರೆದೆಗಳಿಬ್ಬಗಿಯಾಯ್ತು ವೀರಾ
ಭ್ಯುದಯ ಕೈಸೆಱೆಯೋಯ್ತು ಸುಕೃತು ನೃಪರ ಸುಮ್ಮಾನ ।
ಪೊದಱೊಡೆದು ಕುರುಸೇನೆ ತೆಗೆದೋ
ಡಿದುದು ಭಯಜಲಧಿಯಲಿ ತೇಕಾ
ಡಿದರು ಕೌರವಜನಪರೀ ಭೀಷ್ಮಾವಸಾನದಲಿ ॥ ೧೩

ಭೀತಿ ಬೀತುದು ಹರುಷವಲ್ಲರಿ
ಹೂತುದವರಿಗೆ ವಿಜಯಕಾಮಿನಿ
ದೂತಿಯರ ಕಳುಹಿದಳು ತನಿ ಹೊಗರೇಱಿತುತ್ಸಾಹ ।
ಸೋತುದಾಹವ ಚಿಂತೆ ಜರಿದುದು
ಕಾತರತೆ ನುಡಿಗೆಡೆಗುಡದೆ ಭಾ
ವಾತಿಶಯವೊಂದಾಯ್ತು ಪಾಂಡವಬಲದ ಸುಭಟರಿಗೆ ॥ ೧೪

ಮಲಗಿದನು ಕಲಿ ಭೀಷ್ಮನೆನೆ ತ
ಲ್ಲಳಿಸಿದನು ಕುರುರಾಯನುದರದೊ
ಳಳಿದುದಾಯುಧವೆಂಬ ತೆಱದಲಿ ತಳ್ಳು[1]ವಾ[1]ಱಿದನು ।

[1] ಬಾ (ಕ.ಗ.ಚ.)

ಬಲಿದುಸುರ ಬಿಸುಸುಯಿಲ ಹಬ್ಬಿದ
ಕಳಕಳದ ಕಂಬನಿಯ ಕಿಬ್ಬೊನ
ಲಿಳಿವ ಕದಪಿನ ಹೊತ್ತ ದುಗುಡದ ಮುಖದೊಳೈತಂದ ॥ ೧೫

ಎಡೆಮುರಿದುದೈಶ್ವರ್ಯವಿನ್ನೇ
ನೊಡೆಯ ಭಿತ್ತಿಯ ಚಿತ್ರವಾದನು
ಕಡೆಗೆ ಬಂದುದೆ ಕೌರವಾನ್ವಯ ಶಿವಶಿವಾ ಯೆನುತ ।
ಹಿಡಿದ ದುಗುಡದ ಕವಿದ ಮುಸುಕಿನ
ಗಡಣದಲಿ ಗುರು ಕೃಪ ಜಯದ್ರಥ
ರೊಡನೊಡನೆ ಬರುತಿರ್ದುದಖಿಲ ಮಹೀಶಪರಿವಾರ ॥ ೧೬

ಕುದುರೆ ಕಂಬನಿಯಿಕ್ಕಿದವು ಮೈ
ಬಿದಿರಿದವು ದಂತಿಗಳು ಕಾಲಾ
ಳೊದಱಿ ಕೆಡೆದವು ಕುಂದಿದವು ಕೈಮನದ ಕಡುಹುಗಳು ।
ಬೆದಱಿ ಬಂದಿಗೆ ಸಿಲುಕಿತವನಿಪ
ನದಟು ವಿಕ್ರಮವಹ್ನಿ ತಂಪೇ
ಱಿದುದು ಕಡುದುಮ್ಮಾನ ಕೇಣಿಯ ಹಿಡಿದು[1]ದುಭಯಬಲ[1] ॥ ೧೭

ಬಂದು ಭೀಷ್ಮನ ಚರಣ ಸೀಮೆಯ
ಲಂದು ಕಾಯವ ಕೆಡಹಿ ವಿಗತಾ
ನಂದಭೂಪತಿ ಹೊರಳಿದನು ಹೇರಾಳ ಶೋಕದಲಿ ।
ಒಂದು ಮಗ್ಗುಲ ಕೆಲದೊಳಿವರೈ
ತಂದು ನಿಂದರು ಗುರುಕೃಪಾದಿಗ
ಳೊಂದು ಮಗ್ಗುಲ ಸಾರಿ ನಿಂದರು ಕೃಷ್ಣ ಪಾಂಡವರು ॥ ೧೮

ಕವಿದ ಮುಸುಕಿನ ಕಂದಿದಾನನ
ದವನಿಪತಿ ಯಮಸೂನು ಗಂಗಾ
ಭವನ ಮಗ್ಗುಲ ಸಾರಿದನು ಕೈಚಾಚಿ ಕದಪಿನಲಿ ।

[1] ದರಿಸೇನೆ (ಚ.ಜ.ಪ.)

ಪವನಸುತ ಸಹದೇವ ಸಾತ್ಯಕಿ
ದಿವಿಜಪತಿಸುತರಾದಿ ಯಾದವ
ರವಿರಳದ ಶೋಕಾಗ್ನಿತಪ್ತರು ಪಂತಿಗಟ್ಟಿದರು ॥ ೧೯

ಏನ ನೆನೆದಾವುದನೊಡರ್ಚಿದೆ
ನೇನ ಹೇಳುವೆನೆನ್ನ ಪುಣ್ಯದ
ಹಾನಿಯನು ಕೈತಪ್ಪ ನೆನೆದೆನು ನಿಮ್ಮ ಸಿರಿಪದಕೆ ।
ನಾನದಾವುದು ಧರ್ಮತತ್ವನಿ
ಧಾನವೆಂದಱಿಯದೆ ಕೃತಾಂತಂ
ಗಾನು ಹಂಗಿಗನಾದೆನೆಂದೊರಲಿದನು ಯಮಸೂನು ॥ ೨೦

ಖೇದವೇಕೆಲೆ ಮಗನೆ ನಿನ್ನೋ
ಪಾದಿಯಲಿ ಸುಚರಿತ್ರನಾವನು
ಮೇದಿನಿಯೊಳಾ ಮಾತು ಸಾಕ್ಕೆ ಕ್ಷತ್ರಧರ್ಮವನು ।
ಆದರಿಸುವುದೆ ಧರ್ಮ ನಿನಗಪ
ವಾದ ಪಾತಕವಿಲ್ಲ ಸುಕೃತ
ಕ್ಕೀ ದಯಾಂಬುಧಿ ಕೃಷ್ಣ ಹೊಣೆ ನಿನಗಂಜಲೇಕೆಂದ ॥ ೨೧

ಮಗನೆ ಕೇಳ್ಕೆ ಪಾರ್ಥ ಕೂರಂ
ಬುಗಳ ಹಾಸಿಕೆ ಚೆಂದವಾಯಿತು
ಹೊಗರಲಗ ತಲೆಗಿಂಬ ರಚಿಸೆನೆ ಪಾರ್ಥ ಕೈಕೊಂಡು ।
ಬಿಗಿದ ಬಿಲುಗೊಂಡೆದ್ದು ಮಂಡಿಸಿ
ಹೊಗರ ಕವಲಂಬೈದನೆಚ್ಚನು
ನೆಗಹಿದನು ಮಸ್ತಕವನಾ ಗಂಗಾಕುಮಾರಕನ ॥ ೨೨

ಹೊಳೆವ ಕಣೆಗಳ ಮಂಚ ತಲೆಗಿಂ
ಬಳವಡಿಕೆಯಲಿ ಭೀಷ್ಮ ಸುಖದಲಿ
ಮಲಗಿದನು ಬಹಿರಂಗಭುವನವ್ಯಾಪ್ತಿಗಳ ಮಱೆದು ।

ನಳಿನನಾಭನ ದಿವ್ಯ [1]ರೂಪನು[1]
ಬಲಿದು ಮನದಲಿ [2]ಹಿಡಿದು[2] ನೋವಿನ
ಕಳಕಳಕೆ ಧೃತಿಗೆಡದೆ ಮೆಱೆದನು ಬಾಣಶಯನದಲಿ ॥ ೨೩

ಒಡಲ ಜಡಿದವು ರೋಮರೋಮದೊ
ಳಡಸಿದಂಬುಗಳಂಗವೇದನೆ
ತೊಡಕಿತುಬ್ಬರಿಸಿದುದು ಢಗೆ ಗೋನಾಳಿ ನೀರ್ದೆಗೆಯೆ ।
ನುಡಿಯಲಾಱೆನು ಮಕ್ಕಳಿರ ನೀ
ರಡಸಿದೆನು ಹಿರಿದಾಗಿಯೆನೆ ನಡ
ನಡುಗಿ ದುರ್ಯೋಧನನು ದೂತರ ಕರೆದು ನೇಮಿಸಿದ ॥ ೨೪

ತರಿಸಿದನು ಹಿಮರುಚಿಯ ಹಿಂಡಿದ
ಪರಮ ಶೀತೋದಕವೊ ತಾನೆನೆ
ಸುರಭಿ ಪರಿಮಳ ಪಾನವನು ಪರಿಪರಿಯ ಕುಡಿನೀರ ।
ಸರಸ ಬಹುವಿಧ ಭಕ್ಷ್ಯಭೋಜ್ಯವ
ನೆರಹಿದನು ಕುಡಿನೀರ ಗಿಂಡಿಯು
ನರಸ ನೀಡಲು ಕಂಡು ನಕ್ಕನು ಭೀಷ್ಮನಿಂತೆಂದ ॥ ೨೫

ಏಱ ನೋವಿನೊಳಾದ ತೃಷ್ಣೆಯ
ನಾಱಿಸುವರಿವಱಳವೆ ಸಾಕಿವ
ತೋಱದಿರು ತೆಗೆ ತೊಲಗು ಮೂಢರ ಪರಮಗುರು ನೀನು ।
ಆಱುತೈ ಗೋನಾಳಿ ಫಲುಗುಣ
ತೋಱು ನಿನ್ನಱಿತವನು ಸಲಿಲವ
ಬೀಱು ಬೇಗದಿನೆನಲು ಬಿಲುಗೊಂಡೆದ್ದನಾ ಪಾರ್ಥ ॥ ೨೬

ಸಲಿಲ ಬಾಣದಲಮಲಗಂಗಾ
ಜಲವ ತೆಗೆದನು [3]ತಪ್ತ ಲೋಹದ
ಜಲದವೊಲು ತನಿ ಹೊಳೆವ ಸಲಿಲದ ಬಹಳ ಧಾರೆಗಳ[3] ।

---

[1] ಮೂರ್ತಿಯು (ಚ.ಪ.) [2] ಹಿಳಿದು (ಕ.ಗ.) [3] ತತ್ತ ಬಾಣದ ಜಳ ಹುಯಿಲು ತನಿಗುಂದೆ ಬಹಳದ ಸಲಿಲ ಧಾರೆಯನು (ಕ.) ತತ್ತಬಾಣದ ಝಳಹೊಯ್ಲು ತನಿಗುಂದೆ ಬಹಳದ ಸಲಿಲ ಧಾರೆಯಲಿ (ಪ.)

ಇಳುಹಿದನು ಸರಳಿಂದ ವದನದ
ಬಳಿಗೆ ಬಿಡೆ ಬಹಳಾರ್ತ ಭೀಷ್ಮನು
ಗೆಲಿದನಂತಸ್ತಾಪವನು ನರನಾಥ ಕೇಳೆಂದ ॥ ೨೭

ಸಾಕು ಸಾಕೈ ತಂದೆ ನನ್ನನು
ಸಾಕಿಕೊಂಡೈ ಪಾರ್ಥ ಘನ ತೃ
ಷ್ಣಾಕುಲತೆ ಬೀಳ್ಕೊಂಡುದತಿಶಯತೃಪ್ತಿ ನನಗಾಯ್ತು ।
ಸಾಕೆನುತ ಫಲುಗುಣನ ಪರಮ ವಿ
ವೇಕವನು ಪತಿಕರಿಸಿ ನೆಱೆ ಚಿಂ
ತಾಕುಳನ ಮಾಡಿದನು ಕೌರವರಾಯನನು ಭೀಷ್ಮ ॥ ೨೮

ತಂದೆ ಕಂಡೈ ಕೌರವೇಶ ಪು
ರಂದರಾತ್ಮಜನತಿಬಳವ ನೀ
ನಿಂದೆ ಕಾಣಲುಬೇಹುದೈ ಹಲವಂಗದಲಿ ನರನ ।
ಹಿಂದೆ ಬಲ್ಲರು ದ್ರೋಣ ಗುರು ಕೃಪ
ನಂದನಾದಿಗಳೆಲ್ಲ ಕೇಳೈ
ಮಂದಮತಿತನ [1]ಬೇಡವಿನ್ನು[1] ಕೃಪಾಳುವಾಗೆಂದ ॥ ೨೯

ಅಳಿದರೊಡಹುಟ್ಟಿದರು ಹಲಬರು
ನೆಲನ ರಾಯರು ಸವೆದರತಿಬಲ
ರಳುಕುವರು ನರನೆಂದಡೀ ದ್ರೋಣಾದಿನಾಯಕರು ।
ಅಲಗಿನಂಬಿನ ಹಕ್ಕೆ ನಮಗಾ
ಯ್ತೊಳಜಗಳ ಸಾಕಿನ್ನು ಸೋದರ
ರೊಳಗೆ ಸಂಪ್ರತಿಯಾಗಿ ಬದುಕುವದೆಂದನಾ ಭೀಷ್ಮ ॥ ೩೦

ನಿನಗರೋಚಕವೆಮ್ಮ ಮಾತುಗ
ಳನಿಬರಿಗೆ ಸೊಗಸುವುದು ಪಾಂಡವ
ರನುಮತವು ಬೇಱಿಲ್ಲ [2]ನಮ್ಮನುಮತದೊಳಡಗಿಹರು[2] ।

---

[1] ವಿಂದು ಬಿಡಲಿ (ಜ) [2] ನಿನ್ನನುಮತವ ಬಯಸುವರು (ಜ)

ತನುಜ ಕದನದ ಕಡ್ಡತನ ಬೇ
ಡೆನಗಿದುಪಕಾರವು ವೃಥಾ ಕುರು
ವನಕೆ ವಹ್ನಿಯು ಬಿತ್ತಬೇಡಕಟೆಂದನಾಭೀಷ್ಮ ೩೧

ಮಾತು ಕಿವಿಯೊಗದಾನು ಸಮರಂ
ಗಾತುರನು ಛಲದಂಕನೆಂಬೀ
ಖ್ಯಾತಿಯನು [1]ಮೆಱೆದಾತನಲ್ಲದೆ ರಾಜ್ಯಪದವಿಯಲಿ[1] ।
ಸೋತ ಮನದವನಲ್ಲ ಭುವನ
ಖ್ಯಾತನೆನಿಪೊಂದಾಶೆಯನು ದಿಟ
ನೀತಿಗಳೆದರೆ ಬಳಿಕ ನಿಮ್ಮಯ ಮೊಮ್ಮನಲ್ಲೆಂದ ॥ ೩೨

ಮೊದಲಲೆಂದಿರಿ ನೀವು ಬಳಿಕೀ
ಯದುಕುಲಾಧಿಪ ಕೃಷ್ಣ ನೆಱೆ ಹೇ
ಳಿದನು ಋಷಿಗಳು ಬೊಪ್ಪನವರೀ ಹದನ ಸಾಱಿದರು ।
ವಿದುರ ಹೇಳಿದನೆಲ್ಲರಿಗೆ ತಾ
ನಿದುವೆ ಮತವೆನಗೊಬ್ಬಗೆಯು ಬಲು
ಗದನವೇ ಮತವೆಂದು ಹೇಳಿದೆ ಹಿಂದು ನಿಮಗೆಂದ ॥ ೩೩

ಒಂದು ಮತವೆನಗೊಂದು ನುಡಿ ಮನ
ವೊಂದು ಮತ್ತೊಂದಿಲ್ಲ ಸಾಕಿದ
ನೆಂದು ಫಲವೇನಿನ್ನು ಸಂಧಿಯೆ ಪಾಂಡುತನಯರಲಿ ।
ಇಂದು ನಿಮಗೀ ಹದನ ನಾನೇ
ತಂದು ಬಳಿಕೆನ್ನೊಡಲ ಸಲಹುವ
ಚೆಂದವೊಳ್ಳಿತು ತಪ್ಪನಾಡಿದಿರೆಂದನವನೀಶ ॥ ೩೪

ಕಾಯದಲಿ ಕಕ್ಕುಲಿತೆಯೇಕಿದ
ಱಾಯುಸವು ತಾನೇಸು ದಿನ ಕ
ಲ್ಪಾಯುಗಳಿಗೊಳಗಾಗಿ ಕಾಲನ ರಾಜಕಾರಿಯವು ।

[1] ಮೆಱೆವೆನಲ್ಲದೆ ರಾಜ್ಯಾಭಿಲಾಷೆಯಲಿ (ಜ)

ಹೇಯವೀ ಸಿರಿಯಿದಱ ಮ್ಮೈವಶ
ದಾಯತಿಕೆ ನಮಗಿಲ್ಲ ಪಾಂಡವ
ರಾಯಮಸ್ತಕಶೂಲನೆಂಬೀ ಬಿರುದ ಬಿಡೆನೆಂದ ॥ ೩೫

ಎಲವೊ ಭೀಷ್ಮರ ಮಾತುಗಳ ನೀ 10
ನೊಲಿವರೆಯು ಸಂಧಾನದಲಿ ನೀ
ನಿಲುವರೆಯು ದೇಹಾಭಿಲಾಷೆಗೆ ಬಲಿವರೆಯು ಮನವ
ಒಲಿದ ಭೀಮನೆ ನಿನ್ನ ಸಂಧಿಯು
ಕಳಚಿ ನಿನ್ನೊಡಹುಟ್ಟಿದೀತನ
ತಿಳಿರಕುತವನು [1]ಸುಱಿವನಲ್ಲದೆ ಬಿಡುವನಲ್ಲೆಂದ[1] ॥ ೩೬

ಹಾ ನುಡಿಯದಿರು ನಿಲು ಪಿತಾಮಹ
ನೇನ ಬೆಸಸಿದುದಕೆ ಹಸಾದವು
ನೀನು ನಡೆ ಪಾಳಯಕೆ ಬಿಡುಗುಱಿ[2]ತನವ ಮಾಣೆಯಲ ।
ಮೌನಮುದ್ರೆಯ ಹಿಡಿಯೆನಲು ಪವ
ಮಾನನಂದನ ಖಾತಿಯಲಿ ಯಮ
ಸೂನುವನು ಬಿಡೆ ನೋಡಿ ಮೆಲ್ಲನೆ ಸರಿದನಲ್ಲಿಂದ ॥ ೩೭

ಬೀಳುಕೊಡಿರೇ ಸಾಕು ಭೀಮನು
ಬಾಲಭಾಷಿತನಾದನೀ ಭೂ
ಪಾಲ ಕೌರವನೆಂಬೆನೇ ಮೊದಲಿಗನು ಮೂರ್ಖರಿಗೆ ।
ಕಾಳೆಗದೊಳೊಡೆಹಾಯ್ದು ಸಾಯಲಿ
ಬಾಳಲೊಲಿದಂತಾಗಿ ಹೋಗಲಿ
ಹೇಳಿದಿರಿ ನಿಮ್ಮಿಂದ ತಪ್ಪಿಲ್ಲೆಂದನಸುರಾರಿ ॥ ೩೮

ಮುರಹರನ ಮಾತಹುದು ಸಾಕಿ
ನ್ನರಸ ಧರ್ಮಜ ಹೋಗು ದ್ರುಪದಾ
ದ್ಯರಿಗೆ ನೇಮವು ಪಾರ್ಥ ಮರಳ್ಳೈ ತಂದೆ ಪಾಳಯಕೆ ।

[1] ಕುಡಿದಡಲ್ಲದೆ ಬಱಿದೆಬಿಡನೆಂದ (ಗ.ಚ.ಜ.ಪ.) [2] ಮಿಡುಗುಱಿ (ಗ.ಜ.ಟ.ತ.) ಮಿಱುಗುಱಿ (ಚ.ಪ.)

ಧರೆಯ ಲೋಲುಪ್ತಿಯಲಿ ಸಲೆ ಕಾ
ತರಿಸಿ [1]ತಪ್ಪಿ[1]ದೆವೆಮ್ಮೊಳೆಂಬೀ
ಧರಧುರವ ನೆನೆಯದಿರಿ ವಿಜಯಿಗಳಾಗಿ ನೀವೆಂದ ॥ ೩೯

ಇವರು ಕಳುಹಿಸಿಕೊಂಡರಾ ಮಾ
ಧವನ ಮೆಲ್ಲಡಿಗಳನು ಹೃದಯದೊ
ಳವಚಿ ಕಂಗಳು ತುಂಬಿ ದೇವನ ಮೂರ್ತಿಯನು ಹಿಡಿದು ।
ಸವೆಯದಮಳಾನಂದ ಬಹಳಾ
ರ್ಣವದೊಳಗೆ ಮುಳುಗಾಡಿ ಲಕ್ಷ್ಮೀ
ಧವನ ಕಳುಹಿದನಿತ್ತ ಬೀಳ್ಕೊಟ್ಟನು ಸುಯೋಧನನ ॥ ೪೦

ಬವರದೊಳಗೌಚಿತ್ಯಪರಿಪಾ
ಕವನು ಬಲ್ಲಿರಿ ಕೌರವರ ಪಾಂ
ಡವರ ವೃತ್ತಾಂತದ ರಹಸ್ಯದ ನೆಲೆಯನಱಿದಿಹಿರಿ ।
ನಿವಗೆ ಬೇಱೊಂದಿಲ್ಲ ನಾವ್ ಹೇ
ಳುವುದು ಕೃಷ್ಣನ ನೇಮವನು ಮಾ
ಡುವುದೆನುತ ದ್ರೋಣಾದಿ ಸುಭಟರ ಕಳುಹಿದನು ಭೀಷ್ಮ ॥ ೪೧

ಬೀಳುಕೊಂಡರು ರಾಯರಿಬ್ಬರು
ಪಾಳಯಂಗಳಿಗಿತ್ತ ಪಡುವಣ
ಶೈಲ ವಿಪುಲ[2] ಸ್ತಂಭದೀಪಿಕೆಯಂತೆ ರವಿ ಮೆಱೆದ ।
ಮೇಲುಮುಸುಕಿನ ಮುಖದ ಚಿತ್ತದ
ಕಾಳಿಕೆಯ ದುಮ್ಮಾನಜಲಧಿಯ
ಕಾಲುವೆಗಳೆನೆ ಕೌರವರು ಹೊಕ್ಕರು ನಿಜಾಲಯವ ॥ ೪೨

ಇವರು ಭೀಷ್ಮನ ಬೀಳುಕೊಂಡು
ತ್ಸವದ ಹರುಷದಲೊಮ್ಮೆ ಗಂಗಾ
ಭವಗೆ ತಪ್ಪಿದ ದುಗುಡಭಾರದಲೊಮ್ಮೆ ಚಿಂತಿಸುತ ।

---

[1] ಮರಳಿ (ಕ. ಗ.)  [2] ವಿಪಿನ (ಕ.) ವಿಮಲ (ಟ.)

ಕವಲುಮನದಲಿ ಕಂಪಿಸುತ ಶಿಬಿ
ರವನು ಹೊಕ್ಕರು ನಿಖಿಲ ಸೇನಾ
ನಿವಹ ಸಹಿತವೆ ವೀರನಾರಾಯಣನ ಕರುಣದಲಿ ॥ ೪೯

ಹತ್ತನೆಯ ಸಂಧಿ ಮುಗಿದುದು.

ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ
ಮಕರಂದಮಧುಪಾನಪರಿಪುಷ್ಟಷಟ್ಪದೀಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತ
ಮಪ್ಪ ಕರ್ಣಾಟಭಾರತ ಕಥಾಮಂಜರಿ
ಯೊಳ್ ಭೀಷ್ಮಪರ್ವಂ
ಸಮಾಪ್ತಂ ಶ್ರೀ

# ಪರಿಶಿಷ್ಟ.

## ಐದನೆಯ ಸಂಧಿಯಲ್ಲಿ ಬಿಟ್ಟಿರತಕ್ಕ ಪದ್ಯಗಳು

[1] ಇಡುವ ಕುಂತದ ಹೊಯ್ವ ಬೀಸುವ
ಕೆಡೆಯೆಸುವ ಬಿಟ್ಟೇಱಿ ಸುರಗಿಯ
ಖಡುಗ ಗದೆ ಸರಳಾದಿಯಾದಾಯುಧದ ಧಾಳಿಯಲಿ ।
ಅಡಗೆಡೆವ ಮುಂಗಡೆವ ಕಡಿ
ಕಡಿದೊಡನೊಡನೆ ಬಹ ಮಡಿವ ಹಯಕರು
ಳಡಗಡಗನುಗುಳ್ದಾಹವ ಭಯಂಕರವಾಯಿತುಭಯಬಲ ॥ [1] ೧

[2] ಅರುಣ ಜಲಧಿಯ ನೊರೆಯೆನೆ
ಕರುಳು ಕುಪ್ಪರಿಸಿದವು ಬುದ್ಬುದ
ತರದ ನೆರವಿಗಳಿತ್ತವೆನೆ ಮಿದುಳೊಟ್ಟಿಲೊದಗಿದವು ।
ಥರಥರದಲಡೆಗೆಡದ ಬಿರುದರು
ತೆರೆವೊನಲೊಳಾಳುವ ತುರಂಗದ
ವಿರಳ ಜಲಚರ ನಿಕರವೆನಲಾದುದು ಕುತೂಹಲಿಕೆ ॥ [2] ೨

[3] ನಡೆದುದೆಡಬಲವಂಕದಲಿ ಮುಂ
ಕುಡಿಯವರು ಮೂದಲಿಸಿ ಕರೆದರು
ಬಿಡದೆ ಹಳಚಿತು ಕೂಡೆ ಕೈಯೆಡಬಲದ ರಾವುತರು ।
ಒಡೆಯನಿದಿರಲಿ ಕಾದಿ ಸುಭಟರು
ಮಡಿವುತಿರ್ದುದು ಕೌರವನು ಬಿಲು
ದುಡುಕಿ ಕೈಕೊಂಡನಿಲತನಯನ ರಥಕೆ ಮಾಱಾಂತ ॥ [3] ೩

[4] ಎಲೆಲೆ ಸಿಡಿಲಿನ ಸಮರಕಾಂತುದೊ
ಕೊಲುಮರುತ್ಸುತ ನೃಪನ ರಣವಂ
ದಳಲಿಗರು ಮುಂಕೊಂಡು ಹಿಂದಿಕ್ಕಿದರು ಭೂಪತಿಯ।
ಕಲಿವಿವಿಂಶತಿ ಚಿತ್ರಸೇನರು
ಬಿಲುದುಡಿಕಿ ನಡೆತಂದುದವದಿರ
ಬಲವೃಕೋದರನಿಂದಕಂಡರು ಕಾಲನರಮನೆಯ ॥ ೪

---

[1] ಇದು ಗ.ಚ.ಟ. ಪ್ರತಿಯಲ್ಲಿ ೫ನೆಯ ಪದ್ಯವಾದಮೇಲೆ ಇದೆ.

[2] ಈ ಪದ್ಯವು ಗ. ಪ್ರತಿಯಲ್ಲಿಲ್ಲ.

[3] ಇದು ಗ.ಚ.ಟ. ಪ್ರತಿಗಳಲ್ಲಿ ೧೧ನೆಯ ಪದ್ಯವಾದಮೇಲೆ ಇದೆ.

[4] ಇವು ಚ.ಟ. ಪ್ರತಿಗಳಲ್ಲಿ ಮಾತ್ರ ೧೪ನೆಯ ಪದ್ಯವಾದಮೇಲೆ ಇವೆ.

ಮೇಲೆ ಕವಿದುದು ಸಕಲರಿಪು ಕಾ
ಲಾಳು ಖಂಡೆಯದವರು ಹೊಣಿಸಿ
ಹೋಳುಗಳೆದರು ಭೀಮಸೇನನ ಬಳಿಯ ಪಟುಭಟರು ।
ಹೇಳಲೇನದ ಕವಿದವಾತುರ
ಗಾಳಿ ತೂಳಿದವಾನೆಗಳ ಸಮು
ರಾಳಿ ಜೀಮೂತದಲಿ ಕಾಣಿಸಲಾಯ್ತು ಶರವರುಷ ॥ ೫

ಅಳವಿ ಮಿಗೆ ಕೌರವ ಚತುರ್ಬಲ
ವೊಳಗೆ ರಿಂಗಣ ಕುಣಿವ ಖಾತಿಯ
ನಿಲಿಸಿ ಮಿಗೆ ತಾ ದಂಡಧರನಂತಿರೆ ಗದಾಯುಧವ ।
ಸಲೆವರಿಗೆಗೊಂಡುರವಣಿಪ ಪಾಯ್
ದಳವ ಹೊಯಿದನು ಕುದುರೆಕಾಜಿರ
ತಲೆಯ ಮಿದುಳೊಟ್ಟಿದವು ಕೊಂದನು ಮುಂದೆ ಗಜಬಲವ ॥ [4] ೬

[5] ಧುರದೊಳಗೆ ನಿಜಸೇನೆ ಮುಡಿಯಲು
ಕೆರಳಿದುದು ಕೌರವನ ಸೇನಾ
ಶರಧಿ ಬಡಬನ ತುಳಿದುದ್ಯೆ ದೆಸೆದೆಸೆಗೆ ತನಿ ಮಸಗಿ ।
ಧರೆಗೆ ಹೊಯಿದರು ರಾವುತರು ಜೋ
ಧರು ಗಜಂಗಳ ಬಿಸುಟರತಿರಥ
ರಿರದೆ ರಥಗಳ ಬಿಡಲು ಮುಖದುದು ಮುನ್ನ ಕಾಲಾಳು ॥ [5] ೭

[6] ವಿರಥನಾಗಿ ಸಮೀರ ನಂದನ
ಮುರಳಲಾಂತುದು ಸೇನೆ ಖತಿಯಲಿ
ಸುರನದೀನಂದನನ ಬಗೆ ಕೈಸಾರ್ದುದಿದಿರಾಗಿ ।
ಉರವಣಿಸಿ ಹಳಚಿದನು ಕೊಂದನು
ತುರಗ ಗಜರಥದರಿಗೆ ಕೊಟ್ಟನು
ಹರಿಪುರದ ತೋಲಿಕೆಯ ನಡೆಗೆಡಹಿದನು ಕಾಲಾಳ॥ [6] ೮

[7] ಇಂತು ಸಮರಶ್ರಮ ನಿವಾರಣ
ಕಂತರಂಗವ ಮಾಡಿಕೊಂಡು ದು
ರಂತಕದಿ ಹಯನಿಕರವನು ಕವಳದಲಿ ಬಾಣದಲಿ ।
ಸಂತವಿಸುತಾಯಿರುಳ ನಾರಣ
ಚಿಂತೆಯಲಿ ನೂಕಿದುದುಭಯಬಲ
ಕಂತುಪಿತನನು ನೆನೆವುತಿರ್ದರು ಪಾಂಡುನಂದನರು ॥ [7] ೯

---

[5] ಇದು ಚ.ಟ. ಪ್ರತಿಗಳಲ್ಲಿ ೧೫ನೆಯ ಪದ್ಯವಾದಮೇಲೆ ಇದೆ.

[6] ಇದು ಚ.ಟ. ಪ್ರತಿಗಳಲ್ಲಿ ೧೭ನೆಯ ಪದ್ಯವಾದಮೇಲೆ ಇದೆ.

[7] ಇದು ಗ. ಪ್ರತಿಯಲ್ಲಿ ಮಾತ್ರ ೪೨ನೆಯ ಪದ್ಯವಾದಮೇಲೆ ಇದೆ.

**University of Mysore**

Oriental Library Publications

KANNADA SERIES No. 21.

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

ಎಂಟನೆಯ ಸಂಪುಟ

# ದ್ರೋಣಪರ್ವ

THE

# KARNATAKA MAHABHARATA

BY

KUMARA VYASA

# DRONAPARVA

Vol. VIII

EDITED BY

M. S. BASAVALINGAYYA, M.A., B.L.,

*Acting Curator, Govt. Oriental Library, Mysore*

AND

N. ANANTARANGACHAR, M.A., B.T.,

*Pandit, Govt. Oriental Library, Mysore*

MYSORE

PRINTED BY THE ASST. SUPT., GOVT. BRANCH PRESS

1936

# ಮುನ್ನುಡಿ

ಮೈಸೂರು ಪ್ರಾಚ್ಯಕೋಶಾಗಾರದಿಂದ ಹಿಂದೆ ಪ್ರಕಟವಾದ ಭೀಷ್ಮಪರ್ವದಂತೆಯೇ ಈ ದ್ರೋಣಪರ್ವವೂ ಪ್ರಾಚ್ಯಕೋಶಾಗಾರದ ಕಾರ್ಯನಿರ್ವಾಹಕ ಸಮಿತಿಯಿಂದ ಭಾರತದ ಶೋಧನೆಗಾಗಿ ಏರ್ಪಡಿಸಿದ್ದ ಈ ಕೆಳಗೆ ಕಾಣುವ ಸದಸ್ಯರನ್ನುಳ್ಳ ಸಂಪಾದಕಮಂಡಲಿಯ ಸಹಾಯದಿಂದ ಶೋಧಿತವಾಗಿ ಮುದ್ರಿತವಾಗಿದೆ :—

ಸಂಪಾದಕಮಂಡಲಿಯ ಸದಸ್ಯರು.—

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.
,, ಟಿ. ಎಸ್. ವೆಂಕಣ್ಣಯ್ಯ, ಎಂ.ಎ.
,, ಡಿ. ಶ್ರೀನಿವಾಸಾಚಾರ್ಯ, ಎಂ.ಎ.
,, ಟಿ. ಎನ್. ಶ್ರೀಕಂಠಯ್ಯ, ಎಂ.ಎ.

ಈ ಪರ್ವವನ್ನು ಒಂಬತ್ತು ಕೈಬರಹದ ಪ್ರತಿಗಳ ಆಧಾರದಿಂದ ತಿದ್ದಿದೆ. ಇವುಗಳಲ್ಲಿ (ಚ.ತ.ನ.ಪ.ಬ.) ಪ್ರತಿಗಳನ್ನು ಬಿಟ್ಟು ಉಳಿದುವು ಕೋಶಾಗಾರದಲ್ಲಿರತಕ್ಕುವು. (ಚ.) ಎಂಬುದು ಅಳಿಲುಘಟ್ಟದ ಶ್ಯಾನುಭೋಗರು ಕೊಟ್ಟ ಪ್ರತಿ. (ತ.) ಎಂಬುದು ಶಾಸನದ ಇಲಾಖೆಯ ಅಸಿಸ್ಟೆಂಟರಾದ ಶ್ರೀಮಾನ್ ಆರ್. ರಾಮರಾಯರು, ಬಿ.ಎ., ಅವರ ಮೂಲಕ ಗೌಜುಗ್ರಾಮದ ಬ್ರ|| ಶ್ರೀ|| ಗಣೇಶಭಟ್ಟರಿಂದ ಬಂದ ಪ್ರತಿ ; ಸಾಮಾನ್ಯವಾಗಿ ಶುದ್ಧವಾಗಿದೆ. (ನ.) ಎಂಬುದು ಮಹಾರಾಜರವರ ಕಾಲೇಜಿನ ಕನ್ನಡ ಪಂಡಿತರಾದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಕೊಟ್ಟ ಪ್ರತಿ. (ಪ.) ಮತ್ತು (ಬ.) ಎಂಬುವು ಕ್ರಮವಾಗಿ ಮದ್ರಾಸ್ ಪ್ರಾಚ್ಯಕೋಶಾಗಾರದ ೧೬–೮–೧೦ ಮತ್ತು ೧೮–೧–೨೦ ನೆಯ ನಂಬರಿನ ಪ್ರತಿಗಳು. ಇವೆರಡೂ ಪ್ರಾಚೀನ ಪ್ರತಿಗಳಂತೆ ತೋರುತ್ತವೆ.

ಕೋಶಾಗಾರದ ಪ್ರತಿಗಳಲ್ಲಿ :—

ಕ. ಇದು ಕೈಬರಹದ ಕೆ. ೨೦೫ನೆಯ ನಂಬರಿನ ಪ್ರತಿ. ಕ್ರಿ ಶ. ೧೫೫೪ರಲ್ಲಿ ಪ್ರತಿಯಾದುದು. ಇದುವರೆಗೆ ನಮಗೆ ದೊರೆತಿರುವ ಕನ್ನಡ ಮಹಾಭಾರತದ ಕೈಬರಹದ ಪ್ರತಿಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದುದೆಂದು ಹೇಳಬಹುದು. ಸಾಮಾನ್ಯವಾಗಿ ಇದರ ಪಾಠವನ್ನೇ ಮೂಲಪಾಠವನ್ನಾಗಿ ಅಂಗೀಕರಿಸಿದೆ.

ಗ. ಇದು ಕೆ. ೭೦ನೆಯ ನಂಬರಿನ ಪ್ರತಿ. ಶಾ. ಶ. ೧೭೬೩ರಲ್ಲಿ ಪ್ರತಿಯಾದುದು.

ಟ. ಇದು ಕೆ. ೨೫೧ನೆಯ ನಂಬರಿನ ಪ್ರತಿ.

ಡ. ಇದು ಕೆ. ೧೬೩ನೆಯ ನಂಬರಿನ ಪ್ರತಿ. ಪಾಠವು ಶುದ್ಧವಾಗಿದೆ.

ಭೀಷ್ಮಪರ್ವದಂತೆಯೇ ಈ ಪರ್ವವನ್ನು ಶೋಧನೆ ಮಾಡುವುದರಲ್ಲಿಯೂ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪದ್ಯಗಳನ್ನೇ ಮೂಲಪಾಠವನ್ನಾಗಿಟ್ಟುಕೊಂಡು ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪದ್ಯಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿಯೂ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿ ಪರಿಶಿಷ್ಟವಾಗಿಯೂ ಕೊಟ್ಟಿದೆ.

ಪಾಠಗಳನ್ನು ಶೋಧಿಸುವುದಕ್ಕೆ ಪ್ರತಿಗಳನ್ನು ದಯವಿಟ್ಟು ಕೊಟ್ಟು ಸಹಾಯಮಾಡಿದ ಮಹನೀಯರೆಲ್ಲರಿಗೂ ಪ್ರಾಚ್ಯಕೋಶಾಗಾರವು ಋಣಿಯಾಗಿದೆ.

# ವಿಷಯಾನುಕ್ರಮಣಿಕೆ

# ಕನ್ನಡ ಮಹಾಭಾರತ

## ದ್ರೋಣಪರ್ವ

### ಒಂದನೆಯ ಸಂಧಿ

ಸೂ ॥ ರಾಯ ಕಟಕ ಪಿತಾಮಹನ ತಱು
ವಾಯಲಭಿಷೇಕವನು ಕೌರವ
ರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ ॥

ಸೋಲಿಸಿತೆ ಕರ್ಣಾವ್ಯತದ ಮಳೆ
ಗಾಲ ನಿನ್ನಯ ಕಿವಿಗಳನು ನೆಱೆ
ಕೇಳಿದೈ ಕೌರವನ ಕದನದ ಬಾಲಕೇಳಿಗಳ ।
ಹೇಳುವುದು ತಾನೇನು ಕೆಂಗಱಿ
ಗೋಲ ಮಂಚದ ಮಹಿಮನಿರವನು
ಮೇಲುಪೋಗಿನ ಕಥೆಯನವಧಾನದಲಿ ಕೇಳೆಂದ ॥ ೧

ಬತ್ತಿತಂಬುಧಿ ನಿನ್ನ ಮಗ ಹೊಗು
ವತ್ತ ಕಾದುದು ನೆಲನು ನೃಪ ತಲೆ
ಗುತ್ತಿ ಹೊಗಲೊಳಕೊಳ್ಳದಂಬರವೇನನುಸುರುವೆನು ।
ಮೃತ್ಯು ನಿನಗೊಲಿದಿಹಳು ಬಳಿಕಿ
ನ್ನುತ್ತರೋತ್ತರವೆಲ್ಲಿಯದು ನೆಱೆ
ಚಿತ್ತವಿಸುವುದು ಜೀಯ ದ್ರೋಣಂಗಾಯ್ತು[1]ಹಱಿ[1]ವೆಂದ ॥ ೨

ಐದು ದಿವಸದೊಳಹಿತ ಬಲವನು
ಹೊಯ್ದು ಹೊಡೆಕುಟ್ಟಾಡಿ ರಿಪುಗಳೊ
ಳೈದೆ ದೊರೆಗಳನಿಱಿದು ಮೆಱೆದನು ಭುಜ ಮಹೋನ್ನತಿಯ ।
ಕೈದುಕಾಱರ ಗುರು ಛಡಾಳಿಸಿ
ಮೈದೆಗೆದು ನಿರ್ಜರರ ನಗರಿಗೆ
ಹಾಯ್ದನೆನಲುರಿ ಜಠರದಲಿ ಮೋಹರಿಸಿತವನಿಪನ ॥ ೩

---

[1] ಹಱು (ಗ.ಚ.ತ).

ಶಿವಶಿವಾ ಭೀಷ್ಮಾವಸಾನ
ಶ್ರವಣ ವಿಷವಿದೆ ಮತ್ತೆ ಕಳಶೋ
ದ್ಭವನ ದೇಹವ್ಯಥೆಯ ಕೇಳ್ದೆನೆ ಪೂತು ವಿಧಿಯೆನುತ ।
ಅವನಿಪತಿ ದುಗುಡದಲಿ ಮೋಱೆಯ
ಲವುಚಿದನು ಕರತಳವ ಚಿತ್ತದ
ಬವಣಿಗೆಯ ಭಾರಣೆಯ ಕೆಡುಶೋಕದಲಿ ಮೈಮಱೆದ ॥ ೪

ಶೋಕವೇತಕೆ ಜೀಯ ನೀನವಿ
ವೇಕಿತನದಲಿ ಮಗನ ಹೆಚ್ಚಿಸಿ
ಸಾಕಿ ಕಲಿಸಿದೆ ಕುಟಿಲತನವನು [1]ಕುಹಕ[1]ವಿದ್ಯೆಗಳ ।
ಆಕೆವಾಳರು ಹೊಱಗೆಯುಳ್ಳ ವಿ
ವೇಕಿಗಳು ನಿಮ್ಮಲ್ಲಿ ಸಲ್ಲರು
ಸಾಕಿದೇತಕೆ ಸೈರಿಸೆಂದನು ಸಂಜಯನು ನೃಪನ ॥ ೫

ಆರು ಕುಹಕಿಗಳಾರು ದುರ್ಜನ
ರಾರು ಖುಲ್ಲರು ನೀತಿ ಬಾಹಿರ
ರಾರು ದುರ್ಬಲರವರು ನಿನ್ನರಮನೆಯ ಮಂತ್ರಿಗಳು ।
ಆರು ಹಿತವರು ನೀತಿ ಕೋವಿದ
ರಾರು ಸುಜನರು ಬಹುಪರಾಕ್ರಮ
ರಾರವರ ಹೊಱ[2]ಬೀಸಿ[2]ಕಾಬುದು ನಿನ್ನ ಮತವೆಂದ ॥ ೬

ಹಱಿದುದೈ ಕುರು ಸೇನೆ ಬತ್ತಿದ
ಕೆಱೆಯೊಳಗೆ ಬಲೆಯೇಕೆ ಹಗೆ ಹೊ
ಕ್ಕಱುವರಿನ್ನಾರಡ್ಡಬೀಳ್ವರು ನಿನ್ನ ಮಕ್ಕಳಿಗೆ ।
ಬಱಿದೆ ಮನ ನೋಯದಿರು ಸಾಕೆ
ಚ್ಚಱುವುದೆನೆ ತನ್ನೊಳಗೆ ಹದುಳಿಸಿ
ಸಱಿಹೃದಯನೀ ಮಾತನೆಂದನು ಮತ್ತೆ ಸಂಜಯಗೆ ॥ ೭

ಘಾಸಿಯಾದೆನು ಮಗನ ಮೇಲಿ
ನ್ನಾಸೆ ಬೀತುದು ಬೆಂದ ಹುಣ್ಣಲಿ
ಸಾಸಿವೆಯ ಬಳಿಯದಿರು ಸಂಜಯ ನಿನಗೆ ದಯವಿಲ್ಲ ।

---

[1] ಖುಲ್ಲ (ಪ). [2] ಗಿಕ್ಕಿ (ಬ).

ಏಸು ಬಲುಹುಂಟಾದರೆಯು ಹಗೆ
ವಾಸುದೇವನ ಹರಿಬವೆಂದಾ
ನೇಸನೊರಲಿದೆನೇನಮಾಡುವೆನೆಂದನಂಧನೃಪ ॥ ೮

ಬೇಡ ಮಗನೇ ಪಾಂಡುಸುತರಲಿ
ಮಾಡು ಸಂಧಿಯನಸುರ ರಿಪುವಿನ
ಕೂಡೆ ವಿಗ್ರಹವೊಳ್ಳಿತೇ ಹಗೆ ಹೊಲ್ಲ ದೈವದಲಿ ।
ಪಾಡು ತಪ್ಪಿದ ಬಳಿಕ ವಿನಯವ
ಮಾಡಿ ಮೆಱೆವುದು ಬಂಧು ವರ್ಗದ
ಕೂಡೆ ವಾಸಿಗಳೇತಕೆನ್ನೆನೆ ನಿನ್ನ ಮಾನವಱಿಯೆ ॥ ೯

ಹೋಗಲಿನ್ನಾ ಮಾತು ಖೂಳರು
ತಾಗಿ ಬಾಗರು ಸುಕೃತ ದುಷ್ಕೃತ
ಭೋಗವದು ಮಾಡಿದರಿಗಪ್ಪುದು ಖೇದ ನಮಗೇಕೆ ।
ಈಗಲೀ ಕದನದಲಿ ವಜ್ರಕೆ
ಬೇಗಡೆಯ ಮಾಡಿದನದಾವನು
ತಾಗಿ ದ್ರೋಣನ ಮುಱಿದ ಪರಿಯನು ರಚಿಸಿ ಹೇಳೆಂದ ॥ ೧೦

ಚಿತ್ತವಿಸು ಧೃತರಾಷ್ಟ್ರ ಮಲಗಿದ
ಮುತ್ತಯನ ಬೀಳ್ಕೊಂಡು ಕೌರವ
ರಿತ್ತ ಸರಿದರು ಪಾಂಡುನಂದನರತ್ತ ತಿರುಗಿದರು ।
ಹೊತ್ತ ಮೋನದ ವಿವಿಧ ವಾದ್ಯದ
ಕೆತ್ತ ಬಾಯ್ಗಳ ಪಾಠಕರ ಕೈ
ಹತ್ತೆಗೆಯ ಮೋಱೆಯ ಮಹೀಪತಿ ಹೊಕ್ಕನರಮನೆಯ ॥ ೧೧

ಗಾಹು ಕೊಳ್ಳದ ಭೀಮ ಪಾರ್ಥರ
ಸಾಹಸವನೆಣಿಸುತ ಕಠಾರಿಯ
ಮೋಹಳದ ಮೇಲಿಟ್ಟ ಗಲ್ಲದ ಮಕುಟದೊಲಹುಗಳ ।
ಊಹೆದೆಗಹಿನ ಕಂಬನಿಯ ತನಿ
ಮೋಹರದ ಘನ ಶೋಕ ವಹ್ನಿಯ
ಮೇಹುಗಾಡಿನ ಮನದ ಕೌರವನಿತ್ತನೋಲಗವ ॥ ೧೨

ಗುರುತನುಜ ವೃಷಸೇನ ಮಾದ್ರೇ
ಶ್ವರ ಕಳಿಂಗ ವಿಕರ್ಣ ದುಸ್ಸಹ
ದುರುಳ ಶಕುನಿ ಸುಕೇತು ಭೂರಿಶ್ರವ ಜಯದ್ರಥರು ।
ವರ ಸುಲೋಚನ ವಿಂದ್ಯ ಯವನೇ
ಶ್ವರರು ಕೃಪ ಕೃತವರ್ಮ ಭಗದ
ತ್ತರು ಮಹಾಮಂತ್ರಿಗಳು ಬಂದರು ರಾಯನೋಲಗಕೆ ॥ ೧೩

ತೊಡರ ಝಣಝಣ ರವದ ಹೆಗಲಲಿ
ಜಡಿವ ಹಿರಿಯುಬ್ಬಣದ ಹೆಚ್ಚಿದ
ಮುಡುಹುಗಳ ಮಿಗೆ ಹೊಳೆವ ಹೀರಾವಳಿಯ [1]ಕೊರಳುಗ[1]ಳ ।
ಕಡು ಮನದ ಕಲಿ ರಾಜಪುತ್ರರ
ನಡುವೆ ಮೈಪರಿಮಳದಿ ದೆಸೆ ಕಂ
ಪಿಡಲು ಭಾರವಣಿಯಲಿ ಬಂದನು ಕರ್ಣನೋಲಗಕೆ ॥ ೧೪

ಇತ್ತ ಬಾರೈ ಕರ್ಣ ಕುರುಕುಲ
ಮತ್ತವಾರಣ ಕುಳ್ಳಿರೈ ಬಾ
ಯಿತ್ತ ಬಾ ತನ್ನಾಣೆಯೆನುತವೆ ಸೆರಗ ಹಿಡಿದೆಳೆದು ।
ಹತ್ತಿರಾತನ ನಿಲಿಸಿ ಬಟ್ಟಲ
ಲಿತ್ತು ವೀಳೆಯವನು ಸುಯೋಧನ
ಕೆತ್ತುಕೊಂಡಿರೆ ನುಡಿಸಿದನು ಕಲಿಕರ್ಣನವನಿಪನ ॥ ೧೫

ಜೀಯ ದುಗುಡವಿದೇಕೆ ಬಿಡು ಗಾಂ
ಗೇಯನಳುಕಿದರೇನು ಕಾಣಿಯು
ಬೀಯದಲಿ ಬಡವಹುದೆ ಕನಕಾಚಲ ನಿಧಾನಿಸಲು ।
ರಾಯ ಜಗಜಟ್ಟಿಗಳು ರಣದೊಳ
ಜೇಯರಿದೆ ಪರಿವಾರವನು ನಿ
ರ್ದಾಯದಲಿ ದಣಿಸುವೆನು ರಿಪುಗಳ ಸಿರಿಯ ಸೂಜೆಯಲಿ ॥ ೧೬

ಕರ್ಣ ಕರ್ಣ ಕಠೋರ ಸಾಹಸ
ನಿರ್ಣಯಿಸು ಪರಸೈನ್ಯ ಸುಭಟ ಮ
ಹಾರ್ಣವಕೆ ಬಿಡು ನಿನ್ನ ವಿಕ್ರಮ ಬಾಡಬಾನಳನ ।

[1] ಪದಕ (ಗ.ಚ.ಪ).

ಪೂರ್ಣಕಾಮನು ನೀನು ಕುರುಬಲ
ಕರ್ಣಧಾರನು ನೀನು ವಿಶ್ವ ವಿ
ಕರ್ಣ ನೀನೇ ರಕ್ಷೆಸೆಂದುದು ನಿಖಿಳ ಪರಿವಾರ ॥ ೧೭

ಕಾದುವೆನು ರಿಪು ಭಟರ ಜೀವವ
ಸೇದುವೆನು ಸಮ ರಂಗ ಭೂಮಿಯ
ನಾದುವೆನು ನೆಣಗೊಬ್ಬಿನಹಿತರ ಗೋಣ ರಕುತದಲಿ ।
ಹೋದ ದಿವಸಂಗಳಲಿ ಕಾಳೆಗ
ಮಾದುದಂದಿನ ಭೀಷ್ಮರೊಡನೆ ವಿ
ವಾದ ಕಾರಣ ಬೇಡಿಕೊಳಬೇಹುದು ನದೀಸುತನ ॥ ೧೮

ಎಂದು ನೃಪತಿಯ ಬೀಳುಕೊಂಡಿನ
ನಂದನನು ಬೊಂಬಾಳ ದೀಪದ
ಸಂದಣಿಗಳಲಿ ಸೆಳೆದ[1]ಡಾಯ್ದ್ದದ[1] ಭಟರ [2]ಮುತ್ತಿಗೆಯ[2] ।
ಮಂದೆ ಪಾಯವಧಾರು ರಿಪು ನೃಪ
ಬಂದಿಕಾಱವಧಾರು ಧಿರುಪಯ
ವೆಂದು ಕಳಕಳ ಗಜಱು ಮಿಗೆ ಕುರು ಭೂಮಿಗೈತಂದ ॥ ೧೯

ಹಾಯಿದವು ನರಿ ನಾಯಿಗಳು ಕಟ
ವಾಯಲೆಳಲುವ ಕರುಳಿನಲಿ ಬಸಿ
ವಾಯ ರಕುತದಲೋಡಿದವು ರಣ ಭೂತ ದೆಸೆದೆಸೆಗೆ ।
ಆಯುಧದ ಹರಹುಗಳ ತಲೆಗಳ
[3]ಡೋಯಿಗೆಯ[3] ಕಡಿ ಖಂಡಮಯದ ಮ
ಹಾಯತದ ರಣದೊಳಗೆ ಬಂದನು ಭೀಷ್ಮನಿದ್ದೆಡೆಗೆ ॥ * ೨೦

---

[1] ಡಾಯುಧ (ಕ.ಗ.ಚ), [2] ಮುಂಗುಡಿಯ. (ಕ.ಟ.ತ.ದ.ಪ). [3] ದೋಯಿಗಳ (ದ), * ಈ ಕೆಳಗಿರುವ ಪದ್ಯವು (ಟ) ಪ್ರತಿಯಲ್ಲಿ ಮಾತ್ರ ೨೦ನೆಯ ಪದ್ಯವಾದಮೇಲೆ ಇದೆ.

ಬರುತ ಕಂಡನು ಭೀಷ್ಮನಿರವನು
ಮರಣವದು ತನ್ನಿಚ್ಛೆಯೊಂದಿರೆ
ಧುರಕೆ ತಲೆಗೊಡುವಂತೆ ಮಾಡಿತೆ ವಿಧಿ ಸಮರ್ಥನಲ ।
ವರವು ಬಾಹಿರವಹುದು ದೈವದ
ಕರುಣ ತಪ್ಪಿದ ಬಳಿಕ ಜನನವೆ
ಮರಣ ನಿಶ್ಚಯವೆನುತ ಭೀಷ್ಮನ ಕಂಡನಾ ಕರ್ಣ ॥

ಸರಳ ಮಂಚವ ಹೊದ್ದಿ ಭೀಷ್ಮನ
ಚರಣ ಕಮಲವ ಹಿಡಿದು ನೊಸಲಿನೊ
ಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ ।
ಕರುಣಿಸೈ ಗಾಂಗೇಯ ಕರುಣಾ
ಶರಧಿಯೈ ಖಳ ತಿಲಕ ಕರ್ಣನ
ದುರುಳತನವನು ಮಱೆದು ಮೆಱೆವುದು ನಿಮ್ಮ ಸದ್ಗುಣವ ॥ ೨೧

ಎನಲು ಹೃದಯಾಂಬುಜದ ಪೀಠದ
ವನಜನಾಭ ಧ್ಯಾನ ಸುಧೆಯಲಿ
ನನೆದು ಹೊಂಗಿದ [1]ಕರಣ[1] [2]ಹೊರೆಯೇಱಿತ್ತು[2] ನಿಮಿಷದಲಿ ।
ತನು ಪುಳಕ [3]ತಲೆದೋಱಿ[3] ರೋಮಾಂ
ಚನದ ಬಿಗುಹಡಗಿತ್ತು ಕಂಗಳ
ನನೆಗಳರಳಿದವಾಯ್ತು ಭೀಷ್ಮಂಗಿತ್ತಣವಧಾನ ॥ ೨೨

ಅಳಲದಿರು ಬಾ ಮಗನೆ ಕುರುಕುಲ
ತಿಲಕನವಸರದಾನೆ ರಿಪು ಮಂ
ಡಳಿಕ ಮಸ್ತಕ ಶೂಲ ಬಾರೈ ಕರ್ಣ ಬಾಯೆನುತ ।
ತುಳುಕಿದನು ಕಂಬನಿಯ ಕೋಮಳ
ತಳದಿ ಮೈದಡವಿದನು ಕೌರವ
ನುಳಿವು ನಿನ್ನದು ಕಂದ ಕದನವ ಜಯಿಸು ಹೋಗೆಂದ ॥ ೨೩

ಗಾಱುಗೆಡೆದೆನು ನಿಮ್ಮನೋಲೆಯು
ಕಾಱತನದುಬ್ಬಿನಲಿ ತನಿ ಮದ
ವೇಱಿ ನಿಮ್ಮಲಿ ಸೆಣಸಿದೆನು ಸೇನಾಧಿಪತ್ಯದಲಿ ।
ದೂಱ ಹೊತ್ತೆನು ರಣದ ಮಿಾಸಲಿ
ನೇಱು ತಪ್ಪಿತು ನೀಲ ಮಣಿ ತಲೆ
ಗೇಱಿಸಿದ ತೃಣವದಕೆ ಸರಿಯೇ ಭೀಷ್ಮ ಹೇಳೆಂದ ॥ * ೨೪

ತನುಜ ತಪ್ಪೇನದಕೆ ಕಾಳೆಗ
ವೆನಗೆ ತನಗೆನಬೇಕು ವೀರರು
ಮನದ ಕಲಿತನದುಬ್ಬುಗೊಬ್ಬಿನಲೆಂಬರಿದಕೇನು ।

---

[1] ಕರುಣ (ಕ)- [2] ಹೊಗರೇಱಿತ್ತು (ಕ), ಹೊಡೆದೋರಿದುದು (ಪ ಬ). [3] ವಡಗಿದವು (ಗ.ಪ), ವರಳಿದವು (ಚ), ವುಬ್ಬಿದುದು (ಟ.ತ). * ಈ ಪದ್ಯವು (ನ) ಪ್ರತಿಯಲ್ಲಿಲ್ಲ.

ಮನದೊಳಗೆ ಖತಿಯಿಲ್ಲ ದುರಿಯೋ
ಧನ ನೃಪತಿಯೋಪಾದಿ ನೀ ಬೇ
ಱೆನೆಗೆ ಲೋಗನೆ [1]ಕಂದ[1] [2]ಕದನವ ಜಯಿಸು[2] ಹೋಗೆಂದ ॥* ೨೫

ಆಳುತನದ ದೊರಾರತನ ಸರಿ
ಯಾಳಿನಲಿ ಸೆಣಸಾದೊಡೊಳ್ಳಿತು
ಮೇಳವೇ ಗುರು ದೈವದಲಿ ಕಟ್ಟುವರೆ ಬಿರುದುಗಳ ।
ಹಾಳಿ ಹಸುಗೆಯನಱಿಯದಾ ಹೀ
ಹಾಳಿಗೆಡಿಸಿದೆನಂದು ಸಭೆಯಲಿ
ಖೂಳನವಗುಣ ಶತವ ನೋಡದೆ [3]ನಿಮ್ಮ ಮೆಱೆ[3]ಯೆಂದ ॥　　೨೬

ನೋವು ಮನದೊಳಗುಳ್ಳಡಾ ರಾ
ಜೀವಲೋಚನನಾಣೆ ಮಗನೇ
ಜೀವ ಕೌರವನಲ್ಲಿ ಕರಗುವುದೇನ ಹೇಳುವೆನು ।
ಆವನಾತನ ಬಂಧುವಾತನೆ
ಜೀವವೆನ್ನಯ ದೆಸೆಯ ಭಯ ಬೇ
ಡಾವ ಪರಿಯಿಂದವನನುಳುಹುವ ಹದನ ಮಾಡೆಂದ ॥　　೨೭

ಎನ್ನ ಹವಣೇ ಹಗೆಯ ಗೆಲುವಡೆ
ನಿನ್ನ ವಂದಿಗರಿರಲು ನೂಕದು
ತನ್ನ ಸಾಹಸವೆಲ್ಲಿ ಪರಿಯಂತಹುದು ಕದನದಲಿ ।
ಗನ್ನಕಾಱನು ಕೃಷ್ಣನವರಿಗೆ
ತನ್ನನೊಚ್ಚತಗೊಟ್ಟನಹಿತರ
ನಿನ್ನು ಗೆಲುವವರಾರು ಜಯವೆಲ್ಲಿಯದು ನಮಗೆಂದ ॥　　೨೮

ಆಲವಟ್ಟದ ಗಾಳಿಯಲಿ ಮೇ
ಘಾಳಿ ಮುರಿವುದೆ ಮಿಂಚುಬುಳುವಿಗೆ
ಸೋಲುವುದೆ ಕತ್ತಲೆಯ ಕಟಕವು ಜೀಯ ಚಿತ್ತೈಸು ।
ಸೀಳಬಹುದೇ ಸೀಸದುಳಿಯಲಿ
ಶೈಲವನು ಹರಿಯೊಲಿದ ಮನುಜರ
ಮೇಲೆ ಮುನಿದೇಗುವರು ಕೆಲಬರು ಭೀಷ್ಮ ಹೇಳೆಂದ ॥　　೨೯

---

[1] ತಂದೆ (ದ). [2] ಚಿಂತಿಸಬೇಡ (ಗ.ಟ.ತ.ದ.ಬ). * ಈ ಪದ್ಯವು (ನ) ಪ್ರತಿಯಲ್ಲಿಲ್ಲ. [3] ನೀವು ಮಱೆ (ತ.ನ).

ಲೇಸನಾಡಿದೆ ಕರ್ಣ ದಿಟ ನೀ
ನೀಸು ಸಮ್ಯಜ್ಞಾನಿಯೆಂಬುದ
ನೀಸು ದಿನ ನಾವಱಿಯೆವೈ ನೀ ಸತ್ಕುಲೀನನಲಾ ।
ಆ ಸುಯೋಧನಗಱುಹಿ ಸಂಧಿಯ
ನೀ ಸಮಯದಲಿ ಘಟಿಸು ನೀನೆನ
ಲೈಸ ಮಾಱನು ಪಾಂಡವರ ಸಂಪ್ರತಿಯ ಮಾಡೆಂದ ॥ ೩೦

ಜೀಯ [1]ಮಂತ್ರದ[1] ಮಾತು ರಾಘತ
ಪಾಯಕರಿಗೊಪ್ಪುವುದೆ ಅವರವ
ರಾಯತದಲೋಲೈಸಬೇಹುದು ಮೇರೆ ಮಾರ್ಗದಲಿ ।
ರಾಯನೊಲಿದುದ ಹಿಡಿವೆನೊಲ್ಲದ
ದಾಯವನು ಬಿಡುವೆನು ನಿಜಾಭಿ
ಪ್ರಾಯವಿದು ಸಂಪ್ರತಿಯ ನುಡಿ ತನಗಂಗವಲ್ಲೆಂದ ॥ ೩೧

ಭಾನು[2]ಸನ್ನಿಭ[2] ಮರಳು ಭೂಪನ
ಹಾನಿ ವೃದ್ಧಿಗಳೆಲ್ಲ ನಿನ್ನದು
ನೀನು ಪಂಥದ ಜಾಣನಲ್ಲಾ ವಿಜಯನಾಗೆನಲು ।
ಆ ನದೀಸುತನಡಿಗೆಱಗಿ ರವಿ
ಸೂನು ಕಳುಹಿಸಿಕೊಂಡು ಬಹಳ ಮ
ನೋನುರಾಗದಲೈದಿದನು ಕುರುರಾಯನೋಲಗವ ॥ ೩೨

[3]ಭಾನುಸುತ[3] ಕುಳ್ಳಿರು ನದೀಸುತ
ನೇನನೆಂದನು ತನ್ನ ಚಿತ್ತ
ಗ್ಲಾನಿಯನು ಬಿಸುಟೇನ ನುಡಿದನು ಭಾವ ಶುದ್ಧಿಯಲಿ ।
ಏನನೆಂಬೆನು ಜೀಯ ಬಹಳ ಕೃ
ಪಾನಿಧಿಯಲಾ ಭೀಷ್ಮನನುಸಂ
ಧಾನವಿಲ್ಲದೆ ಬೆಸಸಿ ಕಳುಹಿದನೆಂದನಾ ಕರ್ಣ ॥ ೩೩

ಇನ್ನು [4]ಸೇನಾಪತಿಯದಾರೈ[4]
ನಿನ್ನ ಮತವೇನುದಯವಾಗದ
ಮುನ್ನ ಬವರವ ಹಿಡಿಯಬೇಹುದು ವೈರಿ ರಾಯರೊಳು ।

---

[1] ಸಂಧಿಯ (ಕ.ಜ.ತ.ಪ). [2] ನಂದನ (ಬ). [3] ಮಾನನಿಧಿ (ಟ).
[4] ದಳವಾಯ್ತನವದಾರಿಗೆ (ಕ.ತ.ನ).

ಎನ್ನ ನಿನ್ನಭಿಮತವನೆನೆ ಸಂ
ಪನ್ನ ಭುಜ ಬಲ ದ್ರೋಣನಿರಲಾ
ರಿನ್ನು ಸೇನಾಪತಿಗಳೆಂದನು ಭೂಪತಿಗೆ ಕರ್ಣ ॥ ೨೪

ಪ್ರಭೆಯದಾರಿಗೆ ಸೂರ್ಯನಿದಿರಿನೊ
ಳಭವನಿರೆ ತಾನಾರು ಭುವನಕೆ
ವಿಭುಗಳೈ ವೈಕುಂಠನಿದಿರಿನೊಳಾರು ದೇವತೆಯೈ ।
ವಿಭವ ನದಿಗಳಿಗುಂಟೆ ಜಲಧಿಯ
ರಭಸದಿದಿರಲಿ ನಮ್ಮ ಬಲದಲಿ
ಸುಭಟರಾರೈ ದ್ರೋಣನಿರುತಿರಲೆಂದನಾ ಕರ್ಣ ॥ ೨೫

ಜಾಗು ಜಾಗುರೆ ಕರ್ಣ ಪರರ ಗು
ಣಾಗಮವ ಪತಿಕರಿಸಿ ನುಡಿವವ
ನೀಗಳಿನ ಯುಗದಾತನೇ ಮಝು ಪೂತು ಭಾಪೆನುತ ।
ತೂಗು ವೆರಳಿನ ಮಕುಟದೊಲಹಿನೊ
ಳಾ ಗರುವ ಭಟರುಲಿಯೆ ಲಹರಿಯ
ಸಾಗರದ ಸೌರಂಭದಂತಿರೆ ಮಸಗಿತಾಸ್ಥಾನ ॥ ೨೬

ನುಡಿಸು ನಿಸ್ಸಾಳವನು ಕರೆ ಹೊಂ
ಗೊಡನ ಹಿಡಿದೈತರಲಿ ನಾರಿಯು
ರೆಡ ಬಲನು ತೆಱಹಾಗಲಿಕ್ಕಲಿ ಸಿಂಹ ವಿಷ್ಟರವ ।
ತಡವು ಬೇಡೆನೆ ಕೌರವೇಂದ್ರನ
ನುಡಿಗೆ ಮುನ್ನನುವಾಯ್ತು ವಿಪ್ರರ
ಗಡಣ ಬಂದುದು ರಚಿಸಿದರು ಮೂರ್ಧಾಭಿಷೇಚನವ ॥ * ೨೭

---

* ಈ ಕೆಳಗಿನ ಪದ್ಯವು (ಟ) ಪ್ರತಿಯಲ್ಲಿ ಮಾತ್ರ ೨೭ನೆಯ ದಾದಮೇಲೆ ಇದೆ :—

ಒಡನೊಡನೆ ಸುಮುಹೂರ್ತದಲಿ ಬಿರು
ನುಡಿಯು ನಿಸ್ಸಾಳದಲಿ ಮೋಹಿದ
ವುಡುಗೊರೆಯನೀಡಿದರು ಹಣೆಯಲಿ ವಿವಿಧ ಪಟ್ಟವನು ।
ಮೃಡನ ತೇಜದಲೊಲೆವ ದ್ರೋಣಗೆ
ಮಡದಿಯರು ಹರಿವಾಣದಾರತಿ
ಹಿಡಿದು ತಂದೆತ್ತಿದರು ಸಂತಸಬಡಲು ಸಕಲಜನ ॥

ಸಕಲ ಸಾವಂತರು ಮಹೀಪಾ
ಲಕರು ಬಂದುದು ಚರಣದಲಿ ಕಾ
ಣಿಕೆಯನಿಕ್ಕಿತು ಕೈಯ ಮುಗಿದುದು ನಿಖಿಳ ಪರಿವಾರ |
ಮಕುಟ ರತ್ನದ ಲಹರಿ ಖಡುಗದ
ವಿಕಟ ಧಾರಾರಶ್ಮಿ ದೀಪ
ಪ್ರಕರದಲಿ ಥಳಥಳಿಸೆ ರವಿಯವೊಲೆಸೆದನಾ ದ್ರೋಣ ‖ ೩೮

ಅರಸ ಬೇಡ್ಕೆ ವರವನೆನ್ನನು
ಕರೆದು ಮಿಗೆ ಪತಿಕರಿಸೆ ಬಳಿಕಾ
ಬಱಿದೆ ಹೋಹೆನೆ ಮೆಚ್ಚಿದುದ ನುಡಿ ಖೇಡತನವೇಕೆ |
ಹೊರೆ ಹೊಗದೆ ಹೇಳೆನಲು ನಗೆ ಮೊಗ
ವರಳಿ ಹೊಂಪುಳಿ[1][ವೊ][1]ಗಿ ಕೌರವ
ರರಸ ನುಡಿದನು ಕಟ್ಟಿಕೊಡಿ ಧರ್ಮಜನ ನನಗೆಂದು ‖ ೩೯

ಮರಣ ಮಂತ್ರಾನುಗ್ರಹವನವ
ಧರಿಸಬಹುದೇ ಮಗನೆ ಪಾರ್ಥನ
ಪರಿಯನಱಿಯಾ ಹಿಡಿಯಲೀವನೆ ಧರ್ಮನಂದನನ |
ಅರಿದ ಬೇಡಿದೆ ತನಗೆ ನೂಕದ
ವರವ ವಚನಿಸಿ ಮಾಡದಿಹ ಬಾ
ಹಿರರು ನಾವಲ್ಲೆನಲು ಕೌರವರಾಯನಿಂತೆಂದ ‖ ೪೦

ಕೊಡುವಡಿದು ವರವಲ್ಲದಿದ್ದರೆ
ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಯ
ತೊಡಕನೊಲುವವನಲ್ಲ ನೀವೇ ಬಲ್ಲಿರೆನೆ ನಗುತ |
ಹಿಡಿದು ಬಿಗಿವೆನು ಪಾರ್ಥನನು ಕೆಲ
ಕಡೆಗೆ ತಪ್ಪಿ[2]ಸಿ[2] ಧರ್ಮಪುತ್ರನ
ಬಿಡೆನು ನಿನ್ನಯ ಪುಣ್ಯದಳತೆಯನಱಿಯಬಹುದೆಂದ ‖ ೪೧

ಸಾಕಿದೊಳ್ಳಿತು ಚಾಪ ತಂತ್ರ ಪಿ
ನಾಕಿಯೇಱಿಸಿ ನುಡಿದ ನುಡಿಗಳು
ಕಾಕಹುದೆ ಕೈಕೊಂಡೆವೆನುತವನೀಶ ಹರುಷದಲಿ |

---

[1] ಯೋ (ನ). [2] ಸು (ಕ.ಚ.ತ).

ಆ ಕೃಪಾದಿ ಮಹಾಪ್ರಧಾನಾ
ನೀಕವನು ಕಳುಹಿದನು ಮನೆಗೆ ದಿ
ವಾಕರನು ಹೆಡತಲೆಗೆ ಹಗಱಿಕ್ಕಿದನು ಚಂದ್ರಮನ ॥ ೪೨

ಜಗವರಾಜಕವಾಯ್ತು ಕುಮುದಾ
ಳಿಗಳ ಬಾಗಿಲು ಹೂಡಿದವು ಸೂ
ಱೆಗರು ಕವಿದುದು ತುಂಬಿಗಳು ಸಿರಿವಂತರರಮನೆಯ ।
ಉಗಿದವಂಬರವನು ಮಯೂಖಾ
ಳಿಗಳು ಭುವನದ ಜನದ ಕಂಗಳ
ತಗಹು ತೆಗೆದುದು ಸೆಱೆಯ ಬಿಟ್ಟರು ಜಕ್ಕವಕ್ಕಿಗಳ ॥ * ೪೩

[1] ಸೂಳವಿಸಿ ಬೊಬ್ಬಿಱಿದ[1]ವುರು ನಿ
ಸ್ಸಾಳ ಚಯುವದ್ರಿಗಳ ಹೆಡತಲೆ
ಸೀಳೆ ಸಿಡಿಲೇಳಿಗೆಯಲೆದ್ದವು ವಿವಿಧ ವಾದ್ಯ ರವ ।

---

* ಈ ಪದ್ಯವಾದ ಮೇಲೆ (ಟ) ಪ್ರತಿಯಲ್ಲಿ ಕೆಳಗಿನ ಎರಡು ಪದ್ಯಗಳೂ, (ಚ.ನ.ಪ.) ಪ್ರತಿಗಳಲ್ಲಿ ಮೊದಲನೆಯ ಪದ್ಯಮಾತ್ರವೂ ಇವೆ.

ಬೆಳಗ ಬೆಸಲಾದುದು ನಭೋಮಂ
ಡಲವು ತಿಮಿರನ ಸತಿಯರೋಲೆಯು
ಕಳಚಿದರು ಕ್ರೈಯೊಡನೆ ಮುಗಿದವು ಕ್ಯೆರವಾದಿಗಳು ।
ಜಲಜ ನಗುತಿರ್ದುದು ಪಯೋನಿಧಿ
ಕಳಕಳವ ತುಂಬಿತು ರಥಾಂಗಾ
ವಳಿ ಮನೋರಥವಡೆಯೆ ರವಿಯುದಯಾಚಲಕೆ ಬಂದ ॥

ಮೂಡಣಾಚಲದೊಳಗೆ ಕೆಂಪಿನ
ಬೀಡು ಬಿಟ್ಟುದು ಕಮಲ ಪಂಗ್ತಿಯೊ
ಳಾಡಿದವು ತುಂಬಿಗಳು ಕೈರವದೆಸಳು ಮಸುಳಿಸಿತು ।
ಕೋಡಿದವು ಚಕ್ರಾಂಕಯುಗ ಥಗೆ
ಯೋಡಿ ನಲಿದು ಚಕೋರಿಗಳು ರವ
ಮಾಡಿದವು ಕೆದರಿದವು ಕಿರಣವನರುಣನಗಲದಲಿ ॥

ಅಲ್ಲದೆ ಈ ಪದ್ಯಗಳಾದಮೇಲೆ (ಕ.ಚ.ಟ.ನ.ಪ.ಬ.) ಪ್ರತಿಗಳಲ್ಲಿ ಮೊದಲನೆಯ ಸಂಧಿ ಮುಗಿದು ಕೆಳಗಿನ ಸೂಚನೆ ಇದೆ:—

ಸೂಚನೆ ॥ ಕಡಗಿ ಬರೆ ದ್ರುಪದಜನ ರಥವನು
ಕಡಿದು ಸಮರಥರುಗಳು ಕೆಡಹಿದು
ಕೊಡನ ಮಗ ಧರ್ಮಜನ ತುಡುಕಲು ತಡೆದನಾ ಪಾರ್ಥ ।

[1] ಕೇಳಿದ್ಯೆ ಧೃತರಾಷ್ಟ್ರ (ಗ), ಸೂಳವಿಸಿದವುಲಗ್ಗೆಯಲಿ (ಟ.ತ.ದ.ನ), ಸೂಳುಮಿಗಲಳ್ಳಿಱಿದ (ಚ.ಪ).

ಆಳು ನೆರೆದುದು ನೆಲ ಕುಸಿಯೆ ರಥ
ಜಾಲ ಜಡಿದುದು ಹಣ್ಣಿದಾನೆಯು
ಸಾಲು ಮೆಱೆದುವು ಕುಣಿವುತಿದ್ದುವು ಕೂಡೆ ವಾಜಿಗಳು ॥ ೪೪

ತಳಿತ ಝಲ್ಲರಿಗಳಿಗೆ ಗಗನದ
ವಳಯವೈದದು ನೆರೆದ ಸೇನೆಗೆ
ನೆಲನಗಲ ನೆಱೆಯದು ನಿರೂಢಿಯ ಭಟರ ವಿಕ್ರಮಕೆ ।
ಅಳವು ಕಿಱಿದರಿರಾಯರಿಗೆ ದಿಗು
ವಳಯವಿಟ್ಟೆಡೆಯಾಗೆ ರಥ ಹಯ
ದಳವುಳಕೆ ಕುರು ಸೇನೆ ನಡೆದುದು ದೊರೆಯ ನೇಮದಲಿ ॥ ೪೫

ಹರಿಗೆ ಹರಿದವು ಮುಂದೆ ಬಿಲ್ಲಾ
ಳುರವಣಿಸಿದರು [1]ಮೋಹರವ ಮಿ
ಕ್ಕು[1]ಱುಬಿದರು ಸಬಳಿಗರು ಮುಂಚಿತು ರಣಕೆ ಖಡ್ಗಿಗಳು ।
ತುರಗ ಕವಿದವು ದಂತಿ ಘಟೆಗಳು
ತುಱುಗಿದವು ರಥ ರಾಜಿ ಮುಂಗುಡಿ
ವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ ॥ ೪೬

ಸಿಡಿಲ ಕುಡುಹುಗಳಿಂದ ಕಮಲಜ
ಹೊಡೆಯಲಬುಜಭವಾಂಡ ಭೇರಿಯು
ಕಡು ದನಿಗಳೆನಲೊದಱಿದವು ನಿಸ್ಸಾಳ ಕೋಟಿಗಳು ।
ತುಡುಕಿದವು ತಂಬಟದ ದನಿ ಜಗ
ದಡಕಿಲನು ಘಡ ಕೌರವೇಂದ್ರನ
ತೊಡಕು ಬೇಡೆಂದೊದಱುತಿದ್ದುವು ಗೌರುಗಹಳೆಗಳು ॥ ೪೭

ಬಿಗಿದ ಝಲ್ಲರಿ ಮುಗಿಲ ಹೊಸ ಕೈ
ದುಗಳ ಮಿಂಚಿನ ಮಕುಟ ಮಣಿ ಕಾಂ
ತಿಗಳ ಸುರಧನುವಿನ ಚತುರ್ಬಲ ರವದ ಸಿಡಿಲುಗಳ ।
ವಿಗಡ ಕುಂಭಜ ಮೇಘ ಖುತು ತನಿ
ಹೊಗರಿಱಿದು ಪರ ಬಲದ ಕಡು ವೇ
ಸಗೆಗೆ ಕವಿದುದು ರಾಜ ಹಂಸ[2] ಪ್ರಕರವೋಸರಿಸೆ[2] ॥ ೪೮

---

[1] ಮೊರೆವ ಮುರಜದಿನು (ಕ.ಚ.ಪ.ಬ). [2] ಪ್ರಭೆಗಳೊಳಸರಿಯೆ (ಕ).

ಕಳನ ಗೆಲಿದುದು ಬಂದು ಕೌರವ
ಬಲ ಯುಧಿಷ್ಠಿರ ರಾಯ ದಳ ಮುಂ
ಕೊಳಿಸಿ ಹೊಕ್ಕುದು ಜಯದ ಸುಮ್ಮಾನದ ಸಘಾಡದಲಿ ।
ಬಲಿದರೊಡ್ಡನು ಮಂಡಳಾಕೃತಿ
ಗೊಳಿಸಿ ಕೌರವರಿವರು ಥಟ್ಟನು
ನಿಲಿಸಿದರು ಚಂದ್ರಾರ್ಧ ಸದೃಶದಲಖಿಳ ಮೋಹರವ ॥ ೪೯

ಚೌರಿಗಳು ಬಲವೆರಡಱೊಳಗೊ
ಯ್ಯಾರದಲಿ ತೂಗಿದವು ಚೂಣಿಯ
ವೀರರುರವಣಿ ಮಿಗಲು ಹೊಯ್ದರು ಹೊಕ್ಕು ಪರ ಬಲವ ।
ಮಾರಿ ಮೊಗವಡದೆಱೆದವೊಲು ಜ
ಜ್ಝಾರ ಮಾಸಾಳುಗಳು ನಿಜದಾ
ತಾರನವಸರಕೊದಗಿ ಹಣವಿನ ಋಣ[1]ನ[1] ನೀಗಿದರು ॥ * ೫೦

ಬಿಟ್ಟ ಸೂಠಿಯೊಳೇಱಿ ಕುದುರೆಗ
ಳಟ್ಟಿದವು ಕವಿಗೌಂಕಿದುಂಗುಟ
ವಿಟ್ಟ ಸನ್ನೆಯೊಳೊಲೆದು ಕವಿದವು ಸೊಕ್ಕಿದಾನೆಗಳು ।
ನಿಟ್ಟುವರಿಯಲು ಕೂಡೆ ರಥ ಸಾ
ಲಿಟ್ಟು ಹರಿದವು [2]ಬಿಡದೆ[2] ಸುಭಟರು
ಮುಟ್ಟಿ ಮೂದಲಿಸುತ್ತ ಹೊಯ್ದರು ಹೊಕ್ಕು ಪರ ಬಲವ ॥ ೫೧

ಏಱುವಡೆದರು ಹೊಕ್ಕವರು ಕೈ
ದೋಱಿ ಕಳಕಳಕಾಱರಸುಗಳ
ಕಾಱಿದರು ಕೈಮಾಡಿ [3]ಕೊಂಡರು ಸುರರ ಕೋಟೆಗಳ[3]

---

[1] ವ (ತ.ದ). * ಈ ಪದ್ಯವಾದಮೇಲೆ (ಟ.ಬ) ಪ್ರತಿಯಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ.

ತಿರುಗಿ ಚೂಣಿಗೆ ಮಲೆತು ನಿಜಮೋ
ಹರವ ಶಕಟವ್ಯೂಹದಲಿ ವಿ
ಸ್ತರಿಸಿ ಸಿಂಧವ ನೆಗಹಿ ನಿಂದನು ದ್ರೋಣನಿದಿರಾಗಿ ।
ಧುರಕೆ ಧೃಷ್ಟದ್ಯುಮ್ನ ಪಾಂಚಾ
ಲರು ಮಹಾಕೈಕೆಯರು ಮತ್ಸ್ಯರು
ಹರಿಬದಲಿ ತಾಗಿದರು ಪಾಂಡವ ಬಲದ ನಾಯಕರು ॥

[2] ತೇರು (ಕ). [3] ಕೊಂದರುಕವಿವದೊದ್ದೆಗರ (ಕ.ಚ.ಪ).

ತಾಱು ಥಟ್ಟಿನೊಳಟ್ಟಿ ಮ್ಸೈಮಸೆ
ಸೂಱೆಕಾಱರು ಮಿದುಳ ಜೊಂಡಿನ
ಜೋಱುಗಳ ಬೀಱಿದವು ಭೇತಾಳರಿಗೆ ಭಟ ನಿಕರ ॥ ೫೨

ತೆಗೆಸು ದೊದ್ದೆಯನುರವಣಿಸದಿರಿ
ವಿಗಡ ಸುಭಟರು ಸಾಹಸದ ತನಿ
ಹೊಗರಿನಾತಗಳೆಲ್ಲಿ ಭೀಮಾರ್ಜುನರ ಬರಹೇಳು ।
ಹೊಗುವ ಬಿನುಗನು ಹೊಯ್ಯದಿರಿ ತೆಗೆ
ತೆಗೆಯೆನುತ ಸಾವಿರ ಮಹಾರಥ
ರಗಲದಲಿ ಬರಲುಱುಬಿ ಹೊಕ್ಕನು ದ್ರೋಣ ಪರ ಬಲವ ॥ ೫೩

ಸಾರಿರೈ ಸಾಹಸಿಕರಿರ ಕೆಲ
ಸಾರಿರೈ ಪಾಂಚಾಲ ಮತ್ಸ್ಯರು
ವೀರರಹುದಲ್ಲೆಂಬೆವೇ ಶಿವ ಶಿವ ಮಹಾದೇವ ।
ಸಾರಿರೈ ನಮ್ಮೊಡನೆ ಕೈ ಮನ
ವಾರೆ ಕಾದುವ ಬಳಿಕ ಮೊದಲೊಳು
ದಾರ ಭೀಮಾರ್ಜುನರ ನೋಡುವೆನೆನುತ ಕೈಕೊಂಡ ॥ ೫೪

ಬಿನುಗು ಹಾರುವ ನಿನಗೆ ಭೀಮಾ
ರ್ಜುನರ ಪರಿಯಂತೇಕೆಯಂಬಿನ
ಮೊನೆಯಲುಣಲಿಕ್ಕುವೆನು ರಣ ಭೂತಕ್ಕೆ ನಿನ್ನೊಡಲ ।
ಎನುತ ಧೃಷ್ಟದ್ಯುಮ್ನನಿದಿರಾ
ದನು ಶರೌಘದ ಸೋನೆಯಲಿ ಮು
ಮ್ಮೊನೆಯ ರಥಿಕರ ಮುಱಿದು ದ್ರೋಣನ [1]ರಥಕೆ[1] ಮಾಱಾಂತ ॥೫೫

ಕಡಗಿದಡೆ ಕೋದಂಡ ರುದ್ರನ
ತೊಡಕಿ ಬದುಕುವರಾರು ಸಾರೆಂ
ದೊಡನೊಡನೆ ನಾರಾಚ ಜಾಲದಲರಿ ಭಟನ ಬಿಗಿದು ।
ಕಡಿದು ಬಿಸುಟನು ದ್ರುಪದ ತನಯನು
ಹಿಡಿದ ಬಿಲ್ಲನು ಸಾರಥಿಯ ನಡೆ
ಗೆಡಹಿದನು ಚಂದ್ರಾರ್ಧ ಶರದಲಿ ನೊಸಲನೊಡೆಯೆಚ್ಚ ॥ ೫೬

---

[1] ಮುಸುಕಿ (ಗ).

ಎಸಲು ಧೃಷ್ಟದ್ಯುಮ್ನ ದ್ರೋಣನ
ವಿಶಿಖ ಹತಿಯಲಿ ನೊಂದು ರಥದಲಿ
ಬಸವಳಿಯೆ ಬಳಿ ಸಲಿಸಿದರು ಪಾಂಚಾಲ ನಾಯಕರು ।
ಮುಸುಡ ಬಿಗುಹಿನ ಸೆಳೆದಡಾಯುಧ
ಹೊಸ ಪರಿಯ ಬಿರುದುಗಳ ಗಜ ರಥ
ವಿಸರ ಮಧ್ಯದಲೆಂಟು ಸಾವಿರ ರಥಿಕರೌಂಕಿದರು ॥ ೫೭

ರಾಯರೊಳು ಪಾಂಚಾಲರುಬ್ಬಟೆ
ಕಾಯಗಟ್ಟಿತು ಪೂತು ಮಝು ಕುರು
ರಾಯ [1]ನಾಡಿ [ತು] ದಿಟವೆನುತ ಹೊಗರಂಬ ಹೊದೆಗೆದಱಿ[1] ।
ನೋಯಿಸಿದನುರವಣಿಸಿ ಹರಿತಹ
ನಾಯಕರ[2]ನುಬ್ಬೆದ್ದ[2] ಬಿರುದರ
ಬೀಯಮಾಡಿದನಹಿತ ರಥಿಕರನೆಂಟು ಸಾವಿರವ ॥ ೫೮

ಆಳುತನವುಳ್ಳವರ ಕರೆ ಪಾಂ
ಚಾಲರೊಳ್ಗೆಗರವದಿರಂಬಿನ
ಕೋಲ ಕಾಣದ ಮುನ್ನ ಹಮ್ಮೈಸುವರು ಹುರಿಯೊಡೆದು ।
ಖೂಳರಿವರಂತಿರಲಿ ದೊರೆ ಕ
ಟ್ಟಾಳಹನು ಕರೆ ಧರ್ಮಪುತ್ರನ
ತೋಳ ಬಲುಹನು ನೋಡಬೇಕೆಂದುಱುಬಿದನು ದ್ರೋಣ ॥ ೫೯

ಸವಱಿ ಹೊಕ್ಕನು ಕೆಲ ಬಲದ ಪಾಂ
ಡವ ಮಹಾರಥರನು ವಿಭಾಡಿಸಿ
ಪವನಜನ ಮುಱಿಯೆಚ್ಚು ನಕುಲನ ರಥವ ಹುಡಿಮಾಡಿ ।
ಕವಲುಗೋಲಲಿ ದ್ರುಪದ ಮತ್ಸ್ಯರ
ನವಗಡಿಸಿ ಹೈಡಿಂಬನಭಿಮ
ನ್ಯುವನು ಮಸೆಗಾಣಿಸಿ ಮಹೀಶನ ರಥಕೆ ಮಾಱಾಂತ ೬೦

ಅರಸ ಫಡ ಹೋಗದಿರು ಸಾಮದ
ಸರಸ ಕೊಳ್ಳದು ಬಿಲ್ಲ ಹಿಡಿ ಹಿಡಿ
ಹರನ ಮಱೆ[3][ವೊ][3]ಗು ನಿನ್ನ ಹಿಡಿವೆನು ಹೋಗು ಹೋಗೆನುತ ।

---

[1] ನಾಡಿದು ದಿಟವೆನುತ ಹೊಗರಂಬ ಹೊದೆಗೆದಱಿ (ಕ), ನಾಣೆಯೆನುತ ತನಿ ಹೊಗರಂಬ ಹೊದೆಗೆದಱಿ (ಚ. ಪ.), ರೊಡತನವಿಂದಲೇ ದಿಟ ನೋಡು ನೋಡೆನುತ (ಬ). [2] ನುಬ್ಬಟೆಯ (ಗ), ನುಬ್ಬಾಳು (ಟ. ದ. ನ). [3] ಯೊ (ಸ).

ಸರಳ ಮುಷ್ಟಿಯ ಕೆನ್ನೆಯೋರೆಯ
ಗುರು ಛಡಾಳಿ[1][ಸೆ][1] ಧನುವನೊದಱಿಸಿ
ಧರಣಿಪತಿ ಹಳಚಿದನು ಹೂಳಿದನಂಬಿನಲಿ ರಥವ ‖ ೬೮

ಶಿವಶಿವಾ ಬೆಳುದಿಂಗಳಲಿ ಮೈ
ಬೆವರುವುದೆ ಕಲಿ ಧರ್ಮಪುತ್ರನ
ಬವರದಲಿ ಬೆಂಡಹರೆ ವೀರರು ಕಂಡೆವದುಭುತವ ।
ನಿವಗಿದೆತ್ತಣ ಕ್ಷೈಮೆ ಕೋಲ್ಗಳ
ಕವಿಸುವಂದವಿದೊಳ್ಳಿತಿದಲೇ
ನವಗಭೀಷ್ಟವೆನುತ್ತ ಕಟ್ಟಳವಿಯಲಿ ಕೈಕೊಂಡ ‖ ೬೨

ಎಲೆಲೆ ದೊರೆ ಸಿಕ್ಕಿದನು ಕರೆ ಪಡಿ
ತಳಿಸ ಹೇಳೋ ಸ್ವಾಮಿ ದ್ರೋಹರು
ದಳದಲಿದ್ದವರೆತ್ತ ಹೋದರು ನಾಯಕಿತ್ತಿಯರು ।
ಕಳವಳಿಸಿ ಸಾತ್ಯಕಿ ಘಟೋತ್ಕಚ
ರುಲಿದು ಹರಿತರೆ ಕೇಳಿದಾಕ್ಷಣ
ದಲಿ ಮುರಾಂತಕ ಸಹಿತ ವಹಿಲದಿ ಬಂದನಾ ಪಾರ್ಥ ‖ ೬೩

ಕಾಳಕೂಟದ ಬಹಳ ಧಾಳಿಗೆ
ಶೂಲಿಯೊಡ್ಡೈಸುವವೊಲವನೀ
ಪಾಲಕನ ಹಿಂದಿಕ್ಕಿ ತಡೆದನು ಕಳಶಜನ ರಥವ ।
ಆಲಿಯಳುಕಿತು ತಿರುಹಿದಂಬಿನ
ಕೋಲ ಝಳಪಿಸಿ ಪೂತು ಮಝು ಮೇ
ಲಾಳು ಬಂದುದೆ ಅಕಟೆನುತ ಹಲುಮೊರೆದನಾ ದ್ರೋಣ ‖ ೬೪

ಮಂದಭಾಗ್ಯನು ಕೌರವನು ನಾ
ವೆಂದು ಮಾಡುವುದೇನು ನಿಮಿಷವು
ನಿಂದನಾದರೆ ಹಿಡಿವೆನಾಗಳೆ ಧರ್ಮನಂದನನ ।
ಬಂದು ಫಲುಗುಣನಡ್ಡವಿಸಲಿ
ನ್ನಿಂದುಧರ ಮುಳಿದೇನ ಮಾಡುವ
ನೆಂದು ಖಾತಿಯ ಹಿಡಿದು ರಥವನು ತಿರುಹಿದನು ದ್ರೋಣ ‖ ೬೫

---

[1] ಸಿ (ಸ).

ಎರಡು ಬಲದಲಿ ವೀರ ನೀ ಮಡ
ಮುರಿಯಲಿವನೇಸಱವನಂಧಾ
ಸುರನೊ ತಾರಕನೋ ಹಿರಣ್ಯಾಸುರನೊ ಕೈಟಭನೊ ।
[1]ಗುರುಗಳಿದಿರಲಿ ವೀರವೇ[1] ಸಾ
ಕಿರಲಿ ಮೂದಲೆಯೆನುತಲಾ ಬಿಲು
ದಿರುವ ಮಿಡಿದ್ಯೆದಿದರು ನಾಸಾವಿರ ಮಹಾರಥರು ॥ ೬೬

ಫಡಫಡೆಲವೋ ಪಾರ್ಥ ಭೀಷ್ಮನ
ಕೆಡಹಿದುಬ್ಬಟೆ ನಮ್ಮ ಕೂಡಳ
ವಡದು ತೆಗೆ ತೆಗೆಯೆನುತ ತುಳುಕಿದನಂಬಿನಂಬುಧಿಯು ।
ಗಡಣವೊಳ್ಳಿತು ಗಾಢ ಮಿಗೆ ಬಿಲು
ವಿಡಿಯ ಬಲ್ಲಿರಿ ಸಮರ ಜಯುವಳ
ವಡುವುದಳವಡದಿಹುದು ತಪ್ಪೇನೆನುತ ನರನೆಚ್ಚ ॥ ೬೭

ಜೋಡು ಜರಿಯದೆ ಹುರುಳುಗೆಡದೆ
ಚ್ಚಾಡಿದರು ಫಲುಗುಣನ ರಥದಲಿ
ಹೂಡಿದರು ಹೊಗರಂಬುಗಳನುಬ್ಬೆದ್ದು ತಮತಮಗೆ ।
ನೋಡಿದನು ಸಾಕಿವದಿರನು ಕೊಂ
ಡಾಡಲೇಕೆನುತನಿಬರಸುಗಳ
ತೋಡಿದನು ಕೂರಂಬಿನಲಿ ಸಾವಿರ ಮಹಾರಥರ ॥ ೬೮

ಮಡಿದು ಕೆಲಬರು ಕೊರಳಲಸುಗಳ
ಹಿಡಿದು ಕೆಲಬರು ಘಾಯವಡೆದೆಲು
ವೊಡೆದು ಕೆಲಬರು ಕೈದು ರಥವನು ಬಿಸುಟು ಕೆಲಕೆಲರು ।
ಹೊಱೆವ ಬಿಱುಗಾಳಿಯಲಿ ಮುಗಿಲೊ
ಡ್ಡೊಡೆದವೊಲು ಮ್ಯೆಮಾಱಿಗಳು ಹಿಂ
ಡೊಡೆದುದ್ಯೆ ಹೇರಾಳದಲಿ ಹೊಕ್ಕೆಚ್ಚನಾ ಪಾರ್ಥ ॥ ೬೯

ನಿಮಗೆ ಸದರವೆ ಪಾರ್ಥನೆಲೆ ವಿ
ಕ್ರಮ ದರಿದ್ರರಿರಾ ವೃಥಾ ಸಂ
ಭ್ರಮಿತರಿರ ಭಂಡಾಟವೇತಕೆ ರಣಕೆ ಹೆಱತೆಗೆಯಿ ।

[1] ಗುರುಗಳರೆ ಸಾಹಸಿಗಳ್ಯೆ (ಚ)

ಸಮರ ವಿಜಯ ತ್ಯಾಗಿಯೇ ತಾ
ನಮರಪತಿ ನಂದನನು ಸಾಕೀ
ಕುಮತಿಗಳ ತಡೆಯದಿರಿ ಹೋಗಲಿ ಎಂದನಾ ದ್ರೋಣ ‖ ೭೦

ಸೋಲದಲಿ ಕೌರವನ ಸೇನಾ
ಜಾಲ ಚೆಲ್ಲಿತು ವೀರ ಪಾರ್ಥನ
ಕೋಲು ಕಾಲನ ದಣಿಸಿದವು ಚತುರಂಗ ಸೇನೆಯಲಿ ।
ಕೋಲು ಧರಿಸಿದವೆಟಕೆಗಳನೆನೆ
ಚಾಳಿಸಿತು ಪಡೆ ರವಿಯ ರಶ್ಮಿಯ
ಗೊಳೆಯವು ತೆಗೆಯಿತ್ತು ಪಡುವಣ ಕಡಲೊಳಿನನಿಳಿದ ‖ * ೭೧

ಮೊದಲನೆಯ ಸಂಧಿ ಮುಗಿದುದು.

---

* ಈ ಕೆಳಗಿನ ಪದ್ಯವು (ಗ) ಪ್ರತಿಯಲ್ಲಿ ಕೊನೆಯಪದ್ಯವಾಗಿ—೭೧ನೆಯ ಪದ್ಯವಾದಮೇಲೆ ಇದೆ :—

ಬಂದು ಬಿಡಿಸಿದ ಪಾರ್ಥ ದೊರೆಯನು
ಯೆಂದು ದ್ರೋಣನ ಮನದ ಬೆರಗಿನೊ
ಳಂದು ತಿರುಗಿದವೆರಡುಬಲ ನಿಜಪಾಳಯಂಗಳಿಗೆ ।
ಸಂದು ರವಿಯಪರಾಬ್ಧಿಗಿಳಿಯಲು
ಮಂದಭಾಗ್ಯನು ಕೌರವೇಂದ್ರನು
ಹಿಂದಿನಿರುಳೋಲಗವನಿತ್ತನು ಕೇಳು ಧೃತರಾಷ್ಟ್ರ ‖

ಇಲ್ಲಿಗೆ (ಕ.ಚ.ಟ.ನ.ಪ.ಬ) ಪ್ರತಿಗಳಲ್ಲಿ ಎರಡನೆಯ ಸಂಧಿ ಮುಗಿದಿದೆ.

# ಎರಡನೆಯ ಸಂಧಿ

ಸೂಚನೆ ॥ ಉಭಯ ಕಟಕಾಚಾರ್ಯ ಪಾಂಡವ
ವಿಭುವ ಹಿಡಿತಹೆನೆಂದು ಕೌರವ
ಸಭೆಗೆ ಭಾಷೆಯ ಕೊಟ್ಟು ಸಮರಕೆ ದ್ರೋಣನನುವಾದ ॥ *

ಕೇಳು ಜನಮೇಜಯ ಧರಿತ್ರೀ
ಪಾಲ ತೆಗೆದವು ಬಲವೆರಡು ನಿಜ
ಪಾಳಯಂಗಳಿಗಿರುಳು ಕೌರವನಿತ್ತನೋಲಗವ ।
ಹೇಳು ಕರ್ಣ ದ್ರೋಣ ರಿಪು ಭೂ
ಪಾಲಕನನಱೆಯಟ್ಟಿದನು ಗಡ
ಕಾಳೆಗದ ಹದನೇನೆನುತ ಕುರುರಾಯ ಬೆಸಗೊಂಡ ॥ ೧

ಏನು ಹೇಳಲುಬಹುದು ಜೀಯ ಕೃ
ಶಾನುವಡವಿಯಲಾಡಿದಂದದಿ
ನಾ ನಿರೂಢಿಯ ಭಟರ ಮುಱಿದನು ಮುಱಿದ ಮಾರ್ಗದಲಿ ।
ಸೇನೆ ಕಲಕಿತು ಬತ್ತಿದುದಧಿಯ
ಮೀನಿನಂತಿರೆ ಮಱುಗಿದರು ಭಟ
ರಾ ನರೇಂದ್ರನನಳವಿಯಲಿ ಬೆಂಬತ್ತಿದನು ದ್ರೋಣ ॥ ೨

ಅಳವಿಗೊಟ್ಟನು ನೃಪತಿ ಗುರು ಕೈ
ಚಳಕದಲಿ ತೆಗೆದೆಸುತ ನಡೆದಿ
ಟ್ಟಳಿಸಿ ಹಿಡಿಹಿಂಗೊಳಗುಮಾಡಿ ವಿಘಾತಿಯಲಿ ತಡೆಯೆ ।
ಎಲೆಲೆ ದೊರೆ ಸಿಕ್ಕಿದನು ಸಿಕ್ಕಿದ
ನಳಿದುದೋ ದ್ರೌಪದಿಯ ಸಿರಿಯೆಂ
ಬುಲುಹ ಕೇಳುತ ಪಾರ್ಥ ಬಂದನು ಬಿಟ್ಟ ಸೂಠಿಯಲಿ ॥ ೩

---

* (ಕ) ಪ್ರತಿಯಲ್ಲಿ ಮೇಲಿನ ಸೂಚನೆಗೆ ಬದಲಾಗಿ ಈ ಕೆಳಗಿನ ಸೂಚನೆ ಇದೆ:—

ಜಿತಮದನ ಸೌರಂಭಬಳನ
ಪ್ರತಿಮ ಕೌರವ ಮೋಹರದೊಳ
ದ್ಭುತ ಕಳಿಂಗನ ಕರಿಘಟೆಯ ಸೀಳಿದನು ಕಲಿ ಭೀಮ ॥

ವೀರರಿದ್ದೇಗುವರು ದೈವದ
ಕೂರುಮೆಯ ನೆಲೆ ಬೇಱೆ ನಮಗೊಲಿ
ದಾರು ಮಾಡುವುದೇನೆನುತ ಕಲಿ ಕರ್ಣ ಬಿಸುಸುಯ್ಯೆ |
ಭೂರಿ ಭೂಪರು ವಿಸ್ತರದ ಗಂ
ಭೀರ ಸಾಗರದಂತಿರಲು ರಣ
ಧೀರರೆದ್ದರು ವರ ತ್ರಿಗರ್ತರು ರಾಜ ಸಭೆಯೊಳಗೆ || ೫

ಕೇಳು ಸೇನಾನಾಥ ಕುರುಪತಿ
ಕೇಳು ಕೇಳೈ ಕರ್ಣ ಸುಭಟರು
ಕೇಳಿರೈ ದೇಶಾಧಿನಾಥರು ವೀರ ಪರಿವಾರ |
ನಾಳೆ ಮೊದಲಾಗರ್ಜುನನ ನಾವ್
ಕಾಳೆಗಕೆ ಬರಲೀಯೆವೆಂಮಯ
ಕಾಳೆಗದಲೇ ಸವೆಯಬೇಹುದು ಪಾರ್ಥನಂಬುಗಳು || ೬

ಹಿಂದೆ ಹಿಡಿ ನೀ ಮೇಣು ಬಿಡು ಯಮ
ನಂದನನನೊಲಿದಂತೆ ಮಾಡಿ
ಲ್ಲಿಂದ ಮೇಲರ್ಜುನನ ಭಯ ನಿಮಗಿಲ್ಲ ನಂಬುವುದು |
ಎಂದು ಶಪಥವ ತಮ್ಮನಿಬರೈ
ತಂದು ವಿಪ್ರರ ಕರಸಿ ವೈದಿಕ
ದಿಂದ ರಚಿಸಿದರಗ್ನಿಯನು ಮಾಡಿದರು ಭಾಷೆಗಳ || ೭

ನರನ ಬಿಡಲಾಗದು ಮಹಾಸಂ
ಗರದೊಳೊಬ್ಬರನೊಬ್ಬರೊಪ್ಪಿಸಿ
ತೆರಳಲಾಗದು ಮುರಿಯಲಾಗದು ಕೊಂಡ ಹೆಜ್ಜೆಗಳ |
ಹೊರಳಿ ವೆಣನನು ಮೆಟ್ಟಿ ಮುಂದಣಿ
ಗುರವಣಿಸುವುದು ತಪ್ಪಿದವರಿಗೆ
ನರಕವೀ ಪಾತಕರ ಗತಿ ನಮಗೆಂದು ಸಾಱಿದರು || ೮

ನುಡಿದ ನುಡಿಗೇಡುಗನ ವಿಪ್ರರ
ಮಡುಹಿದಾತನನಮಳ ಗುರುವಿನ
ಮಡದಿಯರಿಗಳುಪಿದನ ಸಾಕಿದ ಪತಿಗೆ ತಪ್ಪಿದನ |
ಹಿಡಿದ ಶರಣಾಗತರ ಕಾಯದೆ
[1]ಬಿಡುವವನ ನಾಸ್ತಿಕನ ವಿಪ್ರರ
ಜಡಿದು ನುಡಿದನ ಗತಿಗಳಾಗಲಿ ರಣದೊಳೋಡಿದರೆ || ೯

[1] ಮಡುಹು (ಕ.ಗ.ಚ.ದ).

ಎಂದು ಸಮಸಪ್ತಕರು ತಮ್ಮೊಳ
ಗಂದು ಶಪಥವ ಮಾಡಿ ವಿಪ್ರರ
ಮಂದಿಗಿತ್ತರು ಗೋ ಹಿರಣ್ಯ ಸಮಸ್ತ ವಸ್ತುಗಳ ।
ಇಂದು ರವಿ ಜಲ ವಹ್ನಿಯನಿಲ ಪು
ರಂದರಾದಿ ಸುರೌಘ ಸಾಕ್ಷಿಗ
ಳೆಂದು ಸೂಳೈಸಿದರು ಭುಜವನು ಸಿಡಿಲು ತನಿ ಹೆದಱೆ ॥ ೯

ಇವರ ಮೊದಲಿಗ ಸತ್ಯರಥನಿಂ
ತಿವನ ಬಳಿ ರಥ ಹತ್ತು ಸಾವಿರ
ವಿವನೊಡನೆ ಸೇರುವೆಯು ರಥ ಮೂವತ್ತು ಸಾವಿರದ ।
ಭುವನ ವೀರ ಸುಶರ್ಮ ಮಾಳವ
ಯವನರತಿರಥ ಹತ್ತು ಸಾವಿರ
ಬವರಕಿಂತ್ಯೈವತ್ತು ಸಾವಿರ ರಥಗಳೊಗ್ಗಾಯ್ತು ॥ ೧೦

ಸಭೆ ಬೆದಱೆ ಕಲ್ಪಾಂತ ಶರಧಿಯ
ರಭಸವಲ್ಲಿಯೆ ಕೇಳಲಾದುದು
ಸುಭಟರಹುದೋ ಜಾಗು ಜಾಗೆನುತೊಲೆದನಾ ದ್ರೋಣ ।
ಅಭವನಡಹಾಯ್ದಿರಲಿ ಪಾಂಡವ
ವಿಭುವ ಹಿಡಿವೆನು ಪಾರ್ಥನೊಬ್ಬನ
ಪ್ರಭೆಗೆ ಹೆದಱುವೆನುಳಿದ ವೀರರ ಬಗೆವನಲ್ಲೆಂದ ॥ ೧೧

ನಯವಿದನು ಹೊಂಬಟ್ಟಲಲಿ ವೀ
ಳೆಯವನನಿಬರಿಗಿತ್ತು ಕುರುಸೇ
ನೆಯಲಿ ಮಱುಮಾತೇಕೆ ನೀವೇ ವಿಜಯವುಳ್ಳವರು ।
ಜಯವನಿನ್ನಾಹವದೊಳಗೆ ನಿ
ರ್ಣಯಿಸಬಹುದೆಮಗೆನುತ ಗುರು ಪಾ
ಳಯಕೆ ನೇಮವ ಕೊಟ್ಟನೋಲಗ ಹರೆದುದಾಕ್ಷಣಕೆ ॥ * ೧೨

ಸಸಿ ವರುಣ ದಿಗುವಧುವನಾಲಿಂ
ಗಿಸಲು ಕುಮುದಿನಿ ಖತಿಯ ಹಿಡಿದಳು
ಮಸುಳಿದವು ತಾರೆಗಳು ರಜನೀ ನಾರಿ ಹಿಂಗಿದಳು ।

* ಇಲ್ಲಿಗೆ (ಗ) ಪ್ರತಿಯಲ್ಲಿ ೨ನೆಯ ಸಂಧಿ ಮುಗಿದು 'ಜಿತಸಮರ' ಎಂಬ ಸೂಚನೆಯ ಪದ್ಯವಿದೆ.

ಒಸೆದು ಕಮಲಿನಿ ನಗಲು ಮಿಗೆ ಹುರು
ಡಿಸುತ ಪೂರ್ವ ದಿಶಾ ನಿತಂಬಿನಿ
ನಿಶಿತ ಕೋಪದ ಕಿಡಿಯನುಗುಳಿದಳೆನಲು ರವಿ ಮೆಱೆದ ॥ * ೧೩

ಜೋಡು ಮಾಡಿತು ನೃಪರು ನಿಮಿಷಕೆ
ಹೂಡಿದವು ತೇರುಗಳು ಹಯ ತತಿ
ಕೂಡೆ ಹಲ್ಲಣಿಸಿದವು ಗುಳದಲಿ ಜಡಿದವಾನೆಗಳು ।
ಕೂಡೆ ಘುಮ್ಮಿಡೆ ದೆಸೆ ದೆಸೆಗಳ
ಲ್ಲಾಡಿದವು ಗಿರಿ ನಿಕರ ಬಿಱುದನಿ
ಮಾಡಿದವು ನಿಸ್ಸಾಳ ತತಿ ಸೇನಾ ಸಮುದ್ರದಲಿ ॥ ೧೪

ಉದಯವಾಗದ ಮುನ್ನ ಕಳನೊಳು
ಹೊದಱುಗಟ್ಟಿದರೀ ತ್ರಿಗರ್ತರು
ಕದನಕೆಮ್ಮೊಳಗಳವಿಗೊಡುವುದು ಬೇಗ ಬಹುದೆಂದು ।
ಮದವದರಿ ಭಟ ಭೈರವಂಗ
ಟ್ಟಿದರು ಭಟ್ಟರನವರು ಬಂದೊದ
ಱಿದರು ಪಾರ್ಥನ ಮುಂದೆ ಸಮಸಪ್ತಕರ ಬಿರುದುಗಳ ॥ ೧೫

ಏಳು ಫಲುಗುಣ ಕೃಷ್ಣನೇ ಗೋ
ಪಾಲನೇಸಱ ಮಾನಿಸನು ಬರ
ಹೇಳಲಾಪರೆ ಕರೆ ಸಹಾಯಕೆ ಭಾಳಲೋಚನನ ।
ಏಳು ಜಂಜಡ[1]ವೇನು ಜೊತ್ತಿನ
ಕಾಳೆಗಕೆ[1] ಕಲಿಯಾಗು ನಡೆಯೆನೆ
ಕೇಳುತರ್ಜುನನಿತ್ತನವರಿಗೆ ನಗುತ ವೀಳೆಯವ ॥ ೧೬

---

* (ಗ.ಟ.) ಪ್ರತಿಗಳಲ್ಲಿ ಮೇಲಿನ ಹದಿಮೂರನೆಯ ಪದ್ಯವಾದ ಮೇಲೆ ಈ ಕೆಳಗಿನ ಪದ್ಯವಿದೆ :—

ಇರುಳು ಸವೆದುದು ಚಕ್ರವಾಕದ
ವಿರಹ ಹಿಂಗಿತು ತುಂಬಿಗಳು ತಾ
ವರೆಯೊಳಗೆ ತಕ್ಕೈಸಿದವು ಕೇಸರವ ಮೊಗೆಮೊಗೆದು ।
ಹರಿಯ ಹೆಂಡಿರು ಭಾವನಿಧಿ ರವಿ
ಕರವ ಮುಗಿದರು ಚಂದ್ರಕಾಂತದ
ಹರಿವು ಬಲಿದುದು ಮೂಡಿದನು ರವಿ ಪೂರ್ವಶೈಲದಲಿ ॥

[1] ಕತ.ಶಾತಿಗೆ ಕಾಳಗನೆ (೧೧)

ನಡೆಯಿ ನೀವಾಹವಕೆ ಮೆಚ್ಚಿಸಿ
ಕೊಡುವೆನೀ ಬಹೆನೆಂದು ಮುರಹರ
ನೊಡನೆ ಮುದದಲಿ ರಥಕೆ ಬಂದನು ಬಿಲ್ಲನೊದಱಿಸುತ ।
ನುಡಿದನಂತಕ ಸೂನು ಕಳಶಜ
ಹಿಡಿಯಲೆಂದೇಱಿಸಿದ ನುಡಿ ತ
ನ್ನೊಡನೆ ನಿಂದಾವವನು ಕಾದುವ ಪಾರ್ಥ ಹೇಳೆಂದ ॥ ೧೭

ಕರಸಿದರೆ ಕಾಳೆಗದೊಳೆನಗೆಡೆ
ಮುರಿಯಬಾರದು ನಿಮ್ಮ ಕಾಹಿಂ
ಗಿರಲಿ [1]ನೀಲನು ಸತ್ಯಜಿತು ಕೌಶಲ ಶತಾನೀಕ[1] ।
ವರ ಘಟೋತ್ಕಚ ದ್ರುಪದ ಕೈಕೆಯ
ರಿರಲಿ ಪವನಜ ನಕುಲ ಸಹದೇ
ವರಿಗೆ ದ್ರೋಣನ ಬವರವಾಗಲಿ ಎಂದನಾ ಪಾರ್ಥ ॥ ೧೮

ಎಂದು ಸಮುಸಪ್ತಕರ ಮೋಹರ
ಕಂದು ತಿರುಗಿದ ಪಾರ್ಥನಿತ್ತಲು
ಸಂದಣಿಸಿತರಿ ರಾಯ ದಳ ಜಲ ರಾಸಿ ಜರಿವಂತೆ ।
ಮುಂದೆ ತವಕಿಗ ಭಟರ ತೆರಳಿಕೆ
ಯಿಂದ ಮೊರೆವ ಗಭೀರ ಭೇರಿಯ
ಮಂದರದ ಮುರಿಗಡಲ ಗಜಱನೊಲೊದಱಿತರಿ ಸೇನೆ ॥ ೧೯

ಬಳಿಯ ಸುಮಹಾರಥರ ರಾಜಾ
ವಳಿಯ ಚಮರ ಚ್ಛತ್ರ [2]ಪಾಳಿಯ[2]
ಸೆಳೆದಡಾಯುಧ ಹೆಗಲ ತೆಕ್ಕೆಯ ರಾಯ ರಾವುತರ ।
ಹೊಳೆವ ಹೇಮದ ರಥಕೆ ಹೂಡಿದ
ತಿಲಕ ಗುದುರೆಯ ನೆಗಹಿ ನಿಗುರುವ
ಕಳಶ ಸಿಂಧದ ದ್ರೋಣ ಹೊಕ್ಕನು ಕಾಳೆಗದ ಕಳನ ॥ ೨೦

ಗರುಡನಾಕಾರದಲಿ ಬಲವನು
ಸರಿಸ ಮಿಗೆ ಮೋಹಿದನು ವಿಹಗನ
ಶಿರಕೆ ಕೃಪ [3]ಕುರುರಾಯ[3] ದುಶ್ಶಾಸನನ ನಿಲಿಸಿದನು ।

---

1. ಸಾತ್ಯಕಿ ಮತ್ಸ್ಯ ಕೈಕೆಯ ವರ ಶತಾನೀಕ (ಗ.ಚ.ನ.ಪ).
2. ಪಂಗ್ತಿಯ (ಗ.ದ.ಬ). 3. ಗುರುಜಾದಿ (ಕ), ಕೃತವರ್ಮ (ಗ).

ಕರೆದು ಭೂರಿಶ್ರವನ ಮಾದ್ರೇ
ಶ್ವರನ ಭಗದತ್ತನ ಸುಬಾಹುವ
ನಿರಿಸಿದನು ಬಲದೆಡಕೆಯೊಳಗಕ್ಷೋಹಿಣೀ ಬಲವ ‖ ೨೧

ವಿಂಧ್ಯನಶ್ವತ್ಥಾಮ ಕರ್ಣನ
ನಂದನರು ಕಾಂಭೋಜ ಕೌಶಲ
ಸಿಂಧುನೃಪರಕ್ಷೋಹಿಣಿಯು ತಂದೆಡದ ಪಕ್ಕದಲಿ ।
ನಿಂದುದಾ ಮೋಹರದ ಜೋಕೆಯ
ಹಿಂದೆ ಲಕ್ಷ ಕಳಿಂಗ ಘಟೆಗಳು
ಸಂದಣಿಸಿದವು [1]ದ್ರೋಣ[1] ನಿಂದನು ಬಲದ ಕಾಹಿನಲಿ ‖ * ೨೨

ಆರಿ ಬೊಬ್ಬಿಱಿದಖಿಳ ಸೇನೆಯು
ಭೂರಿ ಭಟ[2]ರಗ್ರದಲಿ[2] ಕಟಕಾ
ಚಾರಿಯನು ಕೈವೀಸಿದನು ಬರಹೇಳು ಪವನಜನ ।
ವೀರನಾದಡೆ ದೊರೆಯ ಹೊಗಹೇ
ಳಾರು ತಡೆದರೆ ತಡೆಯಿ ಹಿಡಿವೆನು
[3]ಧೀರ ಕೌರವನಾಣೆನುತ ಬೊಬ್ಬಿಱಿದನಾ[3] ದ್ರೋಣ ‖ ೨೩

ಕರಸಿ ಧೃಷ್ಟದ್ಯುಮ್ನ ನಿಜ ಮೋ
ಹರವ ರಚಿಸಿದನರ್ಧ ಚಂದ್ರೋ
ತ್ಕರ ವಿಳಾಸದೊಳೆಳ್ಚಿಱಿವ ನಿಸ್ಸಾಳ ಕೋಟಿಗಳ ।

---

[1] ಕರ್ಣ (ಗ.ಚ.ಟ.ತ.ಬ).

* (ಗ.ಟ.ದ.ಬ). ಪ್ರತಿಗಳಲ್ಲಿ ಮೇಲಿನ ೨೨ನೆಯ ಪದ್ಯವಾದಮೇಲೆ ಈ ಕೆಳಗಿನ ಪದ್ಯವಿದೆ :—

ಬಳಸಿ ಮೂಱಕ್ಷೋಹಿಣಿಯಲಿ ವೆ
ಗ್ಗಳೆಯು ಕೌರವನೃಪತಿ ಖಳಸೌ
ಬಲ ವಿಕರ್ಣಸುಕೇತು ಲಕ್ಷಣನಾದಿಯಾದವರು ।
ಮಲೆತುದಿತ್ತಲು ತನ್ನ ರಥವನು
ನಿಲಿಸಿ ಗರುಡನ ಮುಖದ ಮುಂಬಿನೊ
ಳುಲಿದು ನಿಂದನು ರಾಯರಿಬ್ಬರ ಗರುಡಿಯಾಚಾರ್ಯ ‖

[2] ರೊಗ್ಗಿನಲಿ (ಗ.ಚ).
[3] ಕೌರವನ ಮೇಲಾಣೆಯೆನುತುರುಬಿದನು ಕಲಿ (ಗ.ಪ).

ಧುರಕೆ ನಿಗುರುವ ಭಟರ ತೂಳುವ
ಕರಿ ಘಟೆಯ ಕೆಲಬಲಕೆ ಸೂಸುವ
ತುರಗ ರಾಜಿಯ ತೇರ ಗಮನದ ಗಜಬು ಘಾಡಿಸಿತು ||* ೨೪

ಒದೆದುದಬುಧಿಯನಬುಧಿಯೆನೆ ಹೊ
ಕ್ಕುದು ಚತುರ್ಬಲ ಹೊಯ್ದು ತಲೆಯೊ
ತ್ತಿದುದು ಕೇಶಾಕೇಶಿ ಬಾಡಾಬಾಡಿಯಲಿ ಭಟರು |
ಕೆದಱಿತರಿ ಬಲ ಮತ್ತೆ ಹೊದಱೆ
ದ್ದುದು ವಿಘಾತಿಯಲಳಿದು ಹುರಿಗೊಂ
ಡೊದಗಿ ಹಾಣಾಹಾಣಿಯಲಿ ಹೊಯ್ದಾಡಿತುಭಯ ಬಲ || ೨೫

ಹಳಚುವಸಿಗಳ ಖಣಿಖಟಿಲು ಕಳ
ಕಳಕೆ ಮಿಗೆ ಹೊಯ್ದಾಡಿತುರುಳುವ
ತಲೆಯ ಬೀಳುವ ಹೆಣನ ಧಾರಿಡುವರುಣ ವಾರಿಗಳ |
ತಳಿತ ಖಂಡದ ಹಱಿದ ಕರುಳಿನ
ಕಳಚಿದೆಲುವಿನ ಕುಣಿವ ಮುಂಡದ
ಕೊಳಗುಳದ ಹೆಬ್ಬೆಳಸು ಹೆಚ್ಚಿಸಿತಂತಕನ ಪುರವ || ೨೬

ಉಲಿದು ಸೂಠಿಯೊಳೇಱಿದರು ವೆ
ಗ್ಗಳೆಯ ರಾವುತರು ಗಜ[1][ಱಿ] ಮಸ್ತಕ
ಹಿಳಿಯಲಂಕುಶವಿಕ್ಕಿ ಬಿಟ್ಟರು ಸೊಕ್ಕಿದಾನೆಗಳ |
ತಳಪಟವ ತುಂಬಿದವು ತೇರುಗ
ಳಿಳೆ ಜಡಿಯೆ ಕಾಲಾಳು ಹೊಕ್ಕೊಡೆ
ಗಲಿಸಿ ಹೊಯ್ದರು ಚೂಣಿಯರೆದುದು ಕಳನ ಚೌಕದಲಿ || ೨೭

ಇತ್ತಲರ್ಜುನನಾ ತ್ರಿಗರ್ತರಿ
ಗಿತ್ತನವಸರವನು ಕೃತಾಂತನ
ತೆತ್ತಿಗರಿಗೌತನವ ಹೇಳಿಸಿದನು ಶರೌಘದಲಿ |

---

* ಇಲ್ಲಿಗೆ (ಚ.ದ.ನ.ಪ) ಪ್ರತಿಗಳಲ್ಲಿ ಮೂರನೆಯ ಸಂಧಿ ಮುಗಿದು ಈ ಕೆಳಗಿನ ಸೂಚನೆಯಿದೆ :—

ಉಲಿದು ಸಮಸಪ್ತಕರು ಸೇನಾ
ಜಲಧಿ ವಡಬನ ಕೇಕೆ ಪಾಂಡವ
ಬಲವ ಬೆದರಿಸಿ ರಾಯನನು ಬೆಂಬತ್ತಿದನು ದ್ರೋಣ |

[1] ದ (ತ.ಗ.ಟ), ಱಿ (ಚ.ತ.ನ.ಪ).

ಕುತ್ತಿದವು ಕೂರಂಬು ಮೊರೆಗಳ
[1]ಮುತ್ತಿದವು ಕೆದಱಿದವು ನಿಮಿಷಕೆ[1]
ಬತ್ತಿಸಿದನಂದಹಿತ ಸುಭಟರ ವೀರ ಶರನಿಧಿಯ ‖ ೨೮

ಏನ ಹೇಳುವೆನಿತ್ತಲಾದುದು
ದಾನವಾಮರರದುಭುತಾಹವ
ವಾ ನಿರಂತರ ವಿಕ್ರಮೋನ್ನತ ಭಟರ ಬವರದಲಿ ।
ಆನಲಾರಿಗೆ ನೂಕುವುದು ತವ
ಸೂನುವಿನ ಸುಭಟರು ಪರಾಕ್ರಮ
ಹೀನರೇ ಧೃತರಾಷ್ಟ್ರ ಕೇಳೈ ದ್ರೋಣ ಸಂಗರವ ‖ ೨೯

ಬಿಲ್ಲನೊದಱಿಸಿ ಕೆಲ ಬಲದ ಭಟ
ರೆಲ್ಲರಿಗೆ ಕೈವೀಸಿ ಚೌವಟ
ಮಲ್ಲ ನುಡಿದನು ತನ್ನ ಸಾರಥಿಗಿತ್ತು ವೀಳೆಯವ ।
ಖುಲ್ಲ ರಿಪುಗಳ ಬಿಸುಟು ಹೊದಱಿನ
ಹೊಳ್ಳುಗರನೊಡೆಹಾಯ್ಸು ಧರ್ಮಜ
ನೆಲ್ಲಿ ಮೋಹರದೆಗೆವನತ್ತಲೆ ರಥವ ಹರಿಸೆಂದ ‖ ೩೦

ರಥವ ಬಿಟ್ಟನು ಸೂಠಿಯಲಿ ನಿ
ರ್ಮಥಿತ ರಿಪುಗಳನಟ್ಟಿದನು ಭುಜ
ಶಿಥಿಲ ಸಾಹಸರೇನ ನಿಲುವರು ದ್ರೋಣನುರವಣಿಗೆ ।
ಪೃಥಿವಿ ನೆಗ್ಗಿತು ಹೊತ್ತ ಕಮಠನ
ವ್ಯಥೆಯನಾರುಸುರುವರು ಸುಮಹಾ
ರಥರ ಹೊದಱಲಿ ಹೊಕ್ಕನುರಿ ಬಲು ಮೆಳೆಯ ಹೊಕ್ಕಂತೆ‖ * ೩೧

ಆಳ ಹೊಗಿಸೋ ದ್ರೋಣ ರಥ ದು
ವ್ವಾಳಿಯಲಿ ಬರುತದೆ ಕೃತಾಂತನ
ಧಾಳಿಗೆತ್ತಣ [2] ವೀರವೋ [2] ನೆಗ್ಗಿದವು ನೆನಹುಗಳು ।
ಕಾಳುಗೆಡೆದಿರಿ ಕೂಡೆ ಕೈಕೊಳ
ಹೇಳಿ ಕೈ ತಪ್ಪಾಗದಿರದು ನೃ
ಪಾಲಕಂಗೆಂದೊದಱಿದರು ಧರ್ಮಜನ ಮಂತ್ರಿಗಳು ‖ ೩೨

---

[1] ಕೆತ್ತಿದವು ನಿಮಿಷದಲಿ ರಿಪುಗಳ(ಕ), ಮೊತ್ತಕೆದಱಿದ ಪೂಂದು ನಿಮಿಷಕೆ (ಗ).
* ಇಲ್ಲಿಂದ ಮುಂದಕ್ಕೆ ೮ ಪದ್ಯಗಳು (ಬ) ಪ್ರತಿಯಲ್ಲಿ ನಷ್ಟವಾಗಿವೆ.
[2] ಧೀರತನ (ನ).

ಘಡಘಡಾನಿರುತಿರಲು ರಾಯನ
ಹಿಡಿವವನ ಹೆಸರೇನು ರಿಪು ಭಟ
ನೊಡಲ ಹೊಳ್ಳಿಸಿ ನೆಣನನುಣಲಿಕ್ಕುವೆನು ದೈತ್ಯರಿಗೆ ।
ಬಿಡು ರಥವನಾ ದ್ರೋಣನಿದಿರಲಿ
ತಡೆಯೆನುತ ಸಾರಥಿಗೆ ಸೂಚಿಸಿ
ತುಡುಕಿದನು ಬಲು ಬಿಲ್ಲ ಧೃಷ್ಟದ್ಯುಮ್ನನಿದಿರಾದ ॥ ೩೩

ಬಲ್ಲೆನೀತನ ಬಲುಹ ಸಾಕೀ
ಯೊಳ್ಳೆಗನನೆಡಕಿಕ್ಕಿ ಹಾಯಿಸು
ಕೆಲ್ಲೆಯಲಿ ಮುರಿನೂಕು ನಡೆ ಭೂಪತಿಯ ಸಮ್ಮುಖಕೆ ।
ನಿಲ್ಲದೊಡ್ಡೈಸೆನುತ ಸಾಹಸ
ಮಲ್ಲ ಸಾರಥಿಗಱುಹೆ ಬಲವ
ಲ್ಲಲ್ಲಿ ಭಯಗೊಳೆ ದ್ರೋಣ ಹೊಕ್ಕನು ರಾಯ ಮೋಹರವ ॥ ೩೪

ಶಿವಶಿವಾ ಸಿಕ್ಕಿದನು ಸಿಕ್ಕಿದ
ನವನಿಪತಿಯೆನಲೌಂಕಿದರು ಗಜ
ನಿವಹವಗಿದಬ್ಬರಿಸೆ ಮುಕ್ಕುಱುಕಿದವು ಕುದುರೆಗಳು ।
ತವಕದಲಿ ಬದ್ದರದ ಬಂಡಿಗ
ಳವುಚಿದವು ತಲೆವರಿಗೆಗಳಲಾ
ಹವವ ಹೊಕ್ಕುದು ಪಾಯ ದಳವಾಚಾರ್ಯನಿದಿರಿನಲಿ ॥ ೩೫

ಪಟುಗಳೋ ಮಝು ಪೂತು ಪಾಂಡವ
ಭಟರು ಖರೆಯುವಲಾ ಯುಧಿಷ್ಠಿರ
ನಟಮಟಿಸಿ ತಾ ಚುಕ್ಕಿಗಿಕ್ಕುವ ಲೆಕ್ಕ ಲೇಸಾಯ್ತು ।
ಕುಟಿಲತನದಲಿ ಗೆಲುವೆನೇ ಹುಲು
ಕುಟಿಗರಿವದಿರ ಹೊಯ್ದು ತನ್ನನು
ನಿಟಿಲಲೋಚನನಡ್ಡಹಾಯ್ಸರೆ ಹಿಡಿವೆನೆನುತೆಚ್ಚ ॥ ೩೬

ನೂಕಿ ಹರಿತಹ ತೇಜಿಗಳ ಖುರ
ನಾಕ ಖಂಡಿಸಿ ಕವಿವ ನಾಗಾ
ನೀಕವನು ನೆಱೆ ಕೆಡಹಿ ತೇರಿನ ಹೊದಱ ಹರೆಗಡಿದು ।
ಔಕಿ ತಲೆವರಿಗೆಯಲಿ ತೆರಳಿದ
ನೇಕ ಸುಭಟರ ಸೀಳಿ ಜಯ ರ
ತ್ನಾಕರನು ಕಲಕಿದನು ಪಾಂಡವ ಸೈನ್ಯ ಸಾಗರವ ॥ ೩೭

ಬಲವ ಬಱಿಕೈದೆವು ಯುಧಿಷ್ಠಿರ
ಬಿಲು ದುಡುಕು ಸಾಕೋಡಿ ಬದುಕುವ
ಹುಲು ಪಱೆಯತನ ಹೆಮ್ಮೆಯೇ ಕ್ಷತ್ರಿಯರ ಮಕ್ಕಳಿಗೆ ।
ಅಳಿದರಮುರರಿಗೊಡೆಯನಹೆ ಮೇ
ಱುಳಿದಡವನೀಪಾಲನಹೆ ಯೀ
ಕಲಹವಿಹಪರಕೊಳ್ಳಿತೆಂದುರವಣಿಸಿದನು ದ್ರೋಣ ॥ ೩೮

ಫಡಫಡುರವಣೆ ಬೇಡ ತೆಗೆ ಬಾ
ಯ್ಬಡಿಕತನವಿದು ಗರುವರಂಗವೆ
ಕಡುಹ ನಾಲಗೆಯಱುಹಲೇತಕೆ ಕೈಯ ಧನುವಿರಲು ।
ಒಡನೆ ತಾನಿರುತಿರಲು ರಾಯನ
ಹಿಡಿವ [1]ಭಟನೇ ನೀನೆನುತ[1] ಬಿಲು
ದುಡುಕಿ ಮುಂದೆ ಶಿಖಂಡಿ ದ್ರೋಣನ ರಥಕೆ ಮಾಱಾಂತ ॥ ೩೯

ಅಕಟ ಸಿಂಹಕೆ ಮಲೆತುದೋ ಜಂ
ಬುಕನು ನೋಡ್ಡೆ ಸೂತ ಭೀಷ್ಮನ
ಶಕುತಿಗಂಧಿದಿರಾದ ಮದದಲಿ ಮುಂದುಗಾಣನಿವ ।
ಚಕಿತ ಚಾಪ ಶಿಖಂಡಿ ನಿಲು ಸಾ
ಯಕದ ಮೊನೆಯಲಿ ಮಾತನಾಡುವು
ದುಕುತಿ ಚಾಪಳವೇಕೆನುತ ಕಣೆಗೆದಱಿದನು ದ್ರೋಣ ॥ ೪೦

ಗುರುವಿನಂಬಿನ ಬಂಬಲನು ಕ
ತ್ತರಿಸಿ ಕೈದೋಱಿದನು ದಿಗುತಟ
ಬಿರಿ[2]ಯೆ ದಿಙ್ಮಯವಾದವಂಬುಗಳೇನ[2]ನುಸುರುವೆನು ।
ಅರಿಶಿಖಂಡಿಯ ಕೈಚಳಕ ಕಾ
ಹುರವಲೇ ಲೇಸಾಯ್ತು ಬಿಲ್ಲಿನ
ಭರವಸಿಕೆಯುಹುದೆನುತ ಕೈಕೊಂಡೆಚ್ಚನಾ ದ್ರೋಣ ॥ ೪೧

ಸಾಕು ಷಂಡನ ಕೂಡೆ ಕಾದುವು
ದೇಕೆ ತಿದ್ದುವೆನೆನುತ ರಥವನು
ನಾಕು ಶರದಲಿ ಮುಱಿದು ಸೂತನ ತಲೆಯನೆರಡಱಲಿ ।

---

[1] ವನ ಹೆಸರೇನೆನುತ (ಗ.ಚ.ಪ.ಬ). [2] ಯಲದ್ಭುತವಾದವಂಬುಗಳೇನ (ಗ.ದ), ಯೆ ಶರಮಯವಾದುದಂಬರವೇನ (ಬ).

ನೂಕಿ ಧನುವನು ಮೂಱು ಬಾಣದ
ಲೌಕಿ ಖಂಡಿಸಿ ಹೋಗು ಹೋಗಿ
ನ್ನಾಕೆವಾಳರನಱಸಿ ತಾ ಎನುತೈದಿದನು ದ್ರೋಣ ॥ ೪೨

ಎಲೆ ಯುಧಿಷ್ಠಿರ ಬಿಲ್ಲ ಹಿಡಿ ನರ
ಹುಳುಗಳಿವದಿರ ಕವಿಸಿ ಕಾಲವ
ಕೊಲುವುದೇ ಸಾಕಿನ್ನು ಕೈವಶವಾದೆ ನಿಲ್ಲೆನುತ ।
ಅಳವಿಗಿಟ್ಟಣಿಸಲು ಶರಾಳಿಯು
ತುಳುಕಿ ಹೊಕ್ಕನು ಸತ್ಯಜಿತು ದಳ
ವುಳಿಸಿದರು ಚಿತ್ರಕ ಶತಾನೀಕಾದಿ ನಾಯಕರು ॥ ೪೩

ಬಱಿಯ ಕಾರ್ಪಣ್ಯದಲಿ ಮೇಘದ
ಮಱೆಯ ಹೊಕ್ಕರೆ ರಾಹು ಬಿಡುವನೆ
ಉಱುವ ರವಿಮಂಡಲವನೆಲೆ ಕೊಂತೀ ಕುಮಾರಕನೆ ।
ಇಱಿದು ಮೆಱೆವುದು ಮಹಿಮೆಯನು ಕೈ
ಮಱೆಯದಿರು ಮ್ಯೊಮಾಱಿಗಳ ಮು
ಕ್ಕಱುಕಿದಿವದಿರ ತಿದ್ದಿ ಬಹೆನಿದೆಯೆನುತ ತೆಗೆದೆಚ್ಚ ॥ ೪೪

ಏನು ತರಹರಿಸುವುದು ತಿಮಿರವು
ಭಾನು ರಶ್ಮಿಯ ಮುಂದೆ ದ್ರೋಣನ
ನೂನ ಶರ ವರ್ಷದಲಿ ನಾದವು ಸುಭಟರೊಡಲುಗಳು ।
ಆ ನಿರಂತರ ನಿಶಿತ ಶರ ಸಂ
ಧಾನಕಿವದಿರು ಲಕ್ಷ್ಯವೇ ನಿ
ನ್ನಾನೆಗಳಿಗಿದಿರಾವನೈ ಧೃತರಾಷ್ಟ್ರ ಕೇಳೆಂದ ॥ ೪೫

ಕೋಲಿಗೊಬ್ಬರ ಕೆಡಹಿದನು ಪಾಂ
ಚಾಲ ಬಲದಲಿ ಸತ್ಯಜಿತುವನು
ಮೇಲಣಾಹವದೊಳು ಶತಾನೀಕ ಕ್ಷಿತೀಶ್ವರನ ।
ಸೀಳಿದನು ಮಿಡುಕುವ ಮಹಾರಥ
ರೇಳು ನೂಱನು ತುರಗ ಗಜ ಕಾ
ಲಾಳನಳಿದುದನಾವನೆಣಿಸುವನಹಿತ ಸೇನೆಯಲಿ ॥ ೪೬

[1]ಹೊಳ್ಳು[1]ಗಳ ತೂಱಿದೆವು ಹಿಡಿ ಹಿಡಿ
ಬಿಲ್ಲ ಸುರಿ ಸುರಿ ಶರವನಕಟಿ
ನ್ನೆಲ್ಲಿ ಹೊಗುವೈ ಕಂದ ಕುಂತಿಯ ಜಠರವಲ್ಲವಲೆ ।
ನಿಲ್ಲು ನಿಲ್ಲೆನುತೈದಿ ಬರಲ
ಲ್ಲಲ್ಲಿ ಮಱುಗಿತು ಸೇನೆ ಸಾಹಸ
ಮಲ್ಲನಡಹಾಯಿದನು ದ್ರುಪದನು ಧನುವನೊದಱಿಸುತ ॥ ೪೭

ರಾಯನಾಪತ್ತಿಂದ ಮುನ್ನವೆ
ಸಾಯಬೇಹುದು ತನಗೆನುತಲಡ
ಹಾಯಿದನು ಕಲಿ ಮತ್ಸ್ಯನೃಪ ನಿಜ ಬಂಧುಗಳ ಸಹಿತ ।
ನೋಯಬೇಹುದು ಮುನ್ನ ತಾವೆನು
ತಾಯತಿಕೆಯಲಿ ಪಂಚ ಕೈಕೆಯ
ರಾಯುಧದ ಬೆಳಗಳ್ಳಿಱಿಯೆ ನೂಕಿದರು ತೇರುಗಳ ॥ ೪೮

ತಲೆಗೆ ಕೊಂಡೆವು ಹಣವನಿನ್ನಿದ
ನುಳುಹಿಕೊಂಡಿರಲಾಗದೆಂದಿ
ಟ್ಟಳಿಸಿ ಹೊಕ್ಕುದು ಯವನ [2]ಸಂವೀರರು ಸುಷೇಣಕರು[2] ।
ಅಳವಿಗಳುಕುವುದಾಳುತನದ
ಗ್ಗಳಿಕೆಯೇ ಸುಡಲೆನುತ ಮನ ಮುಂ
ಕೊಳಿಸಿ ಕೊಂತೀಭೋಜ ಹೊಕ್ಕನು ಸಕಲ ದಳ ಸಹಿತ ॥ ೪೯

ಹರೆದ ಬಲವೊಗ್ಗಾಯ್ತು ರಾಯನ
ನುರವಣಿಸಲೀಯದೆ ನೃಪಾಲಕ
ರುಱುಬಿದರು ತಱುಬಿದರು ಪರ ಬಲ ಕಾಲ ಭೈರವನ ।
ಹೊರಳಿಯೊಡೆಯದೆ ಧಾರಣೆಯಲೊ
ತ್ತರಿಸಿ ಕಲ್ಪದ ಕಡೆಯ ಕಡಲಿನ
ಗರುವಿಕೆಯ ಗಾಢದಲಿ ನಡೆದರು ತಡೆದರರಿ ಭಟರ ॥ ೫೦

ತೊಲಗು ವಿಪ್ರಾಧಮ ಸುಯೋಧನ
ಬಲದೊಳಗೆ ಬಹು ಭಾಷೆತನದಲಿ
ಗಳಹಿ ಬಂದರೆ ಹಿಡಿಯ ಬಲ್ಲೆವೆ ಧರ್ಮನಂದನನ ।

---

[1] ಜಳ್ಳು (ಗ), [2] ಸಂವೀರರುಗಳೊಂದಾಗಿ (ಗ.ಚ.ದ.ಪ).

ಗಳದ ಸತ್ವವನಱಿಯದದ್ರಿಗೆ
ತಲೆಯನೊಡ್ಡುವರೇ ವೃಥಾ ಕಳ
ಕಳಿಸಿ ನುಡಿವರೆ ಮಾನ್ಯರೆನುತಿದಿರಾದನಾ ದ್ರುಪದ ‖ ೫೧

ದಿಟ್ಟನಹೆಯೋ ದ್ರುಪದ ಹಾ ಜಗ
ಜಟ್ಟಿಗಳಿಗುಪಹಾಸ್ಯವೇ ಗಱಿ
ಗಟ್ಟಿದಿರಿ ನೀವ್ ಹಿಡಿಯಲೀವಿರೆ ಧರ್ಮನಂದನನ |
ತೊಟ್ಟ ಜೋಹಕೆ ತಕ್ಕ ನುಡಿಗಳ
[1]ಬಿಟ್ಟೆವ[1]ಲ್ಲದೆ ನಿಮ್ಮರಾಯನ
ಕಟ್ಟಲಾಪೆವೆ ಎನುತ ಕಱೆದನು ಸರಳ ಸರಿವಳೆಯ ‖ ೫೨

ದರ್ಪದಾಭರಣಕ್ಕೆ [2]ಸೂಸಿದ
ವೊ[2]ಪ್ಪಸಲಿಗೆಗಳೆನಲು ಗಱಿಗಳು
ಚಪ್ಪರಿಸಿ ತುಱುಗಿದವು ರಿಪು ಸೇನಾ ಸಮುದ್ರದಲಿ |
ಹಿಪ್ಪೆಗರ ಹರೆಗಡಿದು ಹೊಗರಲ
ಗೊಪ್ಪಿದವು ಕರುಳುಗಳ ನಿಮಿಷದೊ
ಳೊಪ್ಪಗೆಡಿಸಿದವರಿ ಕದಂಬವನೀತನಂಬುಗಳು ‖ ೫೩

ಮರುಳೆ ಮಂಜಿನ ಮಳೆಗೆ ಕುಲ ಗಿರಿ
ಕರಗುವುದೆ ನೀನೆಚ್ಚ ಶರ ಪಂ
ಜರಕೆ ಸಿಲುಕುವ ವೀರರೇ ಪಾಂಡವ ಮಹಾರಥರು |
ಕೊರಳ ರಕ್ಷಿಸಿಕೊಳ್ಳೆನುತ ಚ
ಪ್ಪರಿಸಿ ದ್ರುಪದ ವಿರಾಟರೆಚ್ಚರು
ಸರಳ ರಶ್ಮಿಯ ಮಾಲೆ ಮುಕ್ಕುಱುಕಿದವು ದಿಗುತಟವ ‖ ೫೪

ಗಿರಿಯ ಮಕ್ಕಳು ನೆರೆದು ವಜ್ರವ
ಸರಸವಾಡುವ ಕಾಲವಾಯಿತೆ
ಹರಹರತಿ ವಿಸ್ಮಯವೆನುತ ಹೊಗರೇಱಿ ಖತಿ ಮಸಗಿ |
ತಿರುವ ಕಾಱಿಸಿದನು ಕಠೋರದ
ಮೊರಹುಗಳ ಬಾಯ್ಧಾರೆಗಳ ಕಿಡಿ
ಹೊರಳಿಗಳ ಹೊಗರಂಬು ಹೊಕ್ಕವು ಪಾಂಡು ಸೈನ್ಯದಲಿ ‖ ೫೫

---

[1] ಕೊಟ್ಟರ (ತ.ನ). [2] ಸೂಚಿಸಿದೊ (ದ).

ನರರ ಕಡಿಯಾನೆಗಳ ಕಡಿಯಲಿ
ಬೆರಸಿದವು ತೇಜಿಗಳ ಕರುಳಲಿ
ಕರಿ ಘಟೆಯ ಕರುಳುಗಳು ತೊಡಕಿದವುಡಿದ ತೇರುಗಳು ।
ಜರಿದ ಜೋಡಿನೊಳೊಂದಿದವು ಕ
ತ್ತರಿಸಿದಾಯುಧ ಕಡಿದ ಸಿಂಧದ
ಹೊರಳಿಯಲಿ ಹೊಳಿದವು ನಿಮಿಷಕೆ ಪಾಂಡು ಸೇನೆಯಲಿ ॥ ೫೬

ನೊರೆ ರಕುತ ಸುಳಿ ಮಸಗಿ ಮಿದುಳಿನ
ಹೊರಳಿಗಳೆದುಬ್ಬಣದ ನೆಣ ವಸೆ
ದೊರಳೆಗಳ ಮೆದಕುಗಳ ಮೂಳೆಯ ಬಸಿವ ಬಲು ಜಿಗಿಯ ।
ಕರುಳ ಬಂಬಲು ಖಂಡದಿಂಡೆಯ
ತುಱುಗಿದೆಲುವಿನ ತಳಿತ ಚರ್ಮದ
ಶಿರದ ತಡಿಗಳಲಡಸಿ ಹರಿದುದು ವೈರಿ ಸೇನೆಯಲಿ ॥ ೫೭

ಕೂಡೆ ತಳಪಟವಾಯ್ತು ಸುಭಟರ
ಜೋಡಿ ಜರಿದುದು ಕೌರವೇಂದ್ರಗೆ
ಖೋಡಿಯುಂಟೇ ದ್ರೋಣ ಕೇಣವ ಬಿಟ್ಟು ಕಾದುವರೆ ।
ಝೇಡತನ ಬಿಗುಹಾಯ್ತು ಮೆಯ್ಯಲಿ
[1]ಮೂ[1]ಡಿದವು ಹೊಗರಂಬುಗಳು ತೆಗೆ
ದೋಡಿದವು ತೆಕ್ಕೆಯಲಿ ಪಾಂಡವ ನೃಪ ಮಹಾರಥರು ॥ ೫೮

ಘಾಯವಡೆದನು ದ್ರುಪದ ಮತ್ಸ್ಯನ
ಬಾಯೊಳೊಕ್ಕುದು ರಕುತ ಕೈಕೆಯ
ರಾಯುಧಂಗಳನೊಪ್ಪಿಸಿದರಿಳಿದೋಡಿದರು ರಥವ ।
ಸಾಯಲಾದನು ಧೃಷ್ಟಕೇತು ವಿ
ಡಾಯಿಗೆಟ್ಟನು ಭೋಜನಿತ್ತಲು
ರಾಯನಲ್ಲಿಗೆ ರಥವ ದುವ್ವಾಳಿಸಿದನಾ ದ್ರೋಣ ॥ ೫೯

ತೀರಿತಿನ್ನೇನರಿ ನೃಪನ ಸಂ
ಸಾರವಿನ್ನರೆ ಘಳಿಗೆಯಲಿ ಗಾಂ
ಧಾರಿ ನೆಱೆ ನೋಂಪಿಯಲಿ ಪಡೆದಳು ಕೌರವೇಶ್ವರನ ।

[1] ಹೊ (ಕ)

ಸಾರ ಹೇಳೋ ಸಾಹಸಿಕರೆಂ
ದಾರುತಿರೆ ಬಲವಿತ್ತಲಾಹವ
ಧೀರ ಸಾತ್ಯಕಿ ಭೀಮ ಪಾರ್ಥ ಕುಮಾರರರನುವಾಯ್ತು ॥ ೬೦

ಗೆಲಿದನ್ಕೆ ಮಝು ಪೂತು ದ್ರೋಣನ
ಬಲುಹು ಭರ್ಗನ ಸರಿ ಯುಧಿಷ್ಠಿರ
ಸಿಲುಕಿದನಲಾ ಶಿವ ಶಿವಾ ಕಲಿ ಕರ್ಣ ನೋಡೆನುತ ।
ಉಲಿವ ದುರಿಯೋಧನನನೀಕ್ಷಿಸು
ತಲಘು ಭುಜಬಲ ಭಾನು ನಂದನ
ನಳುಕದೀ ಮಾತುಗಳನೆಂದನು ನೀತಿ ಸಮ್ಮತವ ॥ ೬೧

ಗೆಲವು ನಮಗೆಲ್ಲಿಯದು ಧರ್ಮಜ
ಸಿಲುಕುವುದು ತಾನಿಲ್ಲ ಕೃಷ್ಣನ
[1]ನೆಳಲು[1] ದಿಟವುಂಟಾದೊಡೊಳಗಾಗರು ವಿರೋಧಿಗಳು ।
ನೆಲನ ತಿಣ್ಣವ ತಿದ್ದಲೋಸುಗ
ಸುಳಿದನಱಿಯಾ ಕೃಷ್ಣನೀತನ
ಬಲದವರಿಗೆಂತಹುದು ಬಾಧೆಗಳೆಂದನಾ ಕರ್ಣ ॥ ೬೨

ಗಿರಿಯ ಕೊರಳಿಗೆ ವಜ್ರ ಮಣಿಯಾ
ಭರಣವೇ ದಳ್ಳುರಿಯ ಜೋಡುಗ
ಳರಗಿನೋಲೆಯಕಾಱರಿಗೆ ಸುಯಿಧಾನವೇ ನೃಪತಿ ।
ವರ ತಿಮಿರ ರಾಜಂಗೆ ಮಂಗಳ
ಕರವೆ ಆ ರವಿ ಕೃಷ್ಣಭಕ್ತರ
ಪರಿಭವವು ಜೀವರಿಗೆ ಪಥ್ಯವೆ ಎಂದನಾ ಕರ್ಣ ॥ ೬೩

ಇರಲಿ ಮೇಣ್ ದೂರದಲಿ ಹತ್ತಿರೆ
ಯಿರಲಿ ತನ್ನವರೆಂದರತ್ತಲೆ
ಹರಹಿ ಕೊಂಬನು ಕೃಷ್ಣನದು ತನಗೇಱಿಸಿದ ಬಿರುದು ।
ಹರಿ ಸಮೀಪದೊಳಿಲ್ಲ ದ್ರೋಣಂ
ಗರಸ ಸಿಲುಕಿದನೆಂದು ಬಗೆದ್ಯೆ
ಮರುಳೆ ಮುರ ವೈರಿಯ ಕಟಾಕ್ಷದ ಕಾಹು [2]ಘನವೆಂ[2]ದ ॥ ೬೪

[1] ಒಲುಮೆ (ಚ), ಬಲುಹು (ಬ). [2] ಬಲುಹೆಂ (ಚ.ತ.ನ.ಪ.ಬ).

ಆ ಹದನದಂತಿರಲಿ ನಮ್ಮಾ
ಯಾಹವಕೆ ಕಲಿ ಭೀಮ ಸಾತ್ಯಕಿ
ರೂಹುದೋಱಿದರವೆ ಘಟೋತ್ಕಚ ಪಾರ್ಥಸುತರೊಡನೆ ।
ಸಾಹಸಿಕರೊಗ್ಗಾಯ್ತು ದ್ರೋಣಂ
ಗೀ ಹದನು ಭಾರಾಂಕವೀಗಳೆ
ಬೇಹ ಸುಭಟರ ಕಳುಹು ಕಾಳೆಗಕೆಂದನಾ ಕರ್ಣ ॥ ೬೫

ಎನಲು ನೂಕಿದನರಸ ದುಶ್ಶಾ
ಸನ ಜಯದ್ರಥನಿನತನುಜ ಗುರು
ತನುಜ ಕೃಪ ಮಾದ್ರೇಶ ಭಗದತ್ತಾದಿಗಳು ಸಹಿತ ।
ತನತನಗೆ ನಾಯಕರು ದ್ರೋಣನ
ಮೊನೆಯ ಬಲಿದರು ಹಿಡಿ ಯುಧಿಷ್ಠಿರ
ಜನಪತಿಯನೆನುತುಱುಬಿದರು ತಱುಬಿದರು ಪರ ಬಲವ ॥ ೬೬

ಘಡಘಡಾರೋ ಧರ್ಮಪುತ್ರನ
ಹಿಡಿವವರು ಬಾಯ್ಬಡಿಕರೈ ಕಾ
ಳ್ಗೆಡೆದಡೇನಹುದೆನುತ ಹೊಕ್ಕನು ಭೀಮನುರವಣಿಸಿ ।
ಕಡಲ [1]ಕಡುಹಿನ[1] ಬಹಳ ಲಹರಿಯು
ನೊಡೆ ಮುರಿವ ಮಂದರದವೋಲವ
ಗಡಿಸಿ ಹೊಕ್ಕನು ಗದೆಯ ಘಾಡದ ಹೊದಱ ಹೊಯ್ಲಿನಲಿ ॥ ೬೭

ಗದೆಯ ಘಾತಾಘಾತಿಕಾಱನ
ನಿದಿರುಗೊಂಡುದು ದೆಸೆ ದೆಸೆಗೆ ಹ
ಬ್ಬಿದುದು ಬಲನೆಡ ಜೋಡು ಬಲು ಭಾರಣೆಯ ಪಟು ಭಟರು ।
ಮದ ಗಜದ ನಿಡುವರಿಯ ತೇರಿನ
ಕುದುರೆಕಾಱರ ಕಾಹಿನಲಿ ಕೊ
ಬ್ಬಿದುದು ನಿಬ್ಬರವಾಗಿ ಬಹು ವಿಧ ವಾದ್ಯ [2]ನಿರ್ಘೋಷ[2] ॥ ೬೮

ತೆತ್ತಿಗರ ಬರಹೇಳು ಭೀಮಂ
ಗೆತ್ತಣದು ಜಯವೆನುತ ಸುಭಟರು
ಮುತ್ತಿಕೊಂಡರು ಮುಸುಕಿದರು ಮೆತ್ತಿದರು ಸರಳುಗಳ ।

---

[1] ಮೊರಹಿನ (ಚ.ಪ.ಬ). [2] ರಭಸದಲಿ (ತ.ದ.ನ).

ಕತ್ತಲೆಯು ಹೇರಾಸಿ ಸೂರ್ಯನ
ನೊತ್ತಿ ತಹ ದಿನವಾಯ್ತಲಾ ಎನು
ತತ್ತಲಿತ್ತಲು ಮುಱಿದು ತಳಪಟ ಮಾಡಿದನು ಭೀಮ ‖ ೬೯

ಒಂದು ಕಡೆಯಲಿ ಭೀಮ ಸವಱಿದ
ನೊಂದು ದೆಸೆಯಲಿ ಸಾತ್ಯಕಿಯ ಶರ
ವೊಂದು ಕಡೆಯಲಿ ಪಾರ್ಥ ನಂದನ ಭೀಮ ನಂದನರು ।
ಒಂದು ಕಡೆಯಲಿ ನಕುಲ ಪಾಂಡವ
ನಂದನರು ಮತ್ತೊಂದು ದೆಸೆಯಲಿ
ಮುಂದುವರಿದರು ಮುಱಿದರರಿಗಳ ಹೊದಱ ಹೊಸ ಮೆಳೆಯ ‖ ೭೦

ಥಟ್ಟು ನುಗ್ಗಾಯಿತು ವಿರೋಧಿಗ
ಳಿಟ್ಟಣಿಸುತಿದೆ ದ್ರೋಣನೊಬ್ಬನ
ಬಿಟ್ಟು ನೋಡುವುದುಚಿತವಲ್ಲೆನುತೆಡಬಲನ ನೋಡಿ ।
ಬಿಟ್ಟನಾಹವಕಹಿತ ಬಲ ಜಗ
ಜಟ್ಟಿ ಕೌರವ ನೃಪತಿ ರಥವನು
ಹೊಟ್ಟುಗರ ತೆಗೆ ಹೋಗ ಹೇಳೆಂದೆಚ್ಚನತಿರಥರ ‖ ೭೧

ಮಗನ ತೆಗೆಯೋ ಸಾತ್ಯಕಿಯ ಹೆಱ
ತೆಗೆಯ ಹೇಳೋ ಬೇಡ ನಕುಲಾ
ದಿಗಳ ನೂಕಭಿಮನ್ಯುವನು ಹಿಮ್ಮೆಟ್ಟ ಹೇಳೆನುತ ।
ಮೊಗದ ಹೊಗರಿನ ಕೆಂಪನುಗುಳ್ವಾ
ಲಿಗಳ ದಂತದಲೌಕಿದಧರದ
ಬಿಗಿದ ಹುಬ್ಬಿನ ಭೀಮ ಹೊಕ್ಕನು ಗದೆಯ ತಿರುಗಿಸುತ ‖ ೭೨

ಸಿಲುಕಿದನು ಶಿವಿ ಸ್ವಾಮಿ ದ್ರೋಹನ
ಗಳದ ರಕುತಕೆ ಬಾಯನೊಡ್ಡೆನು
ತಳವಿಯಲಿ ಹೊಕ್ಕೊಕ್ಕಲಿಕ್ಕಿದನಾನೆ ಕುದುರೆಗಳ ।
ಎಲೆ ದುರಾತ್ಮ ದ್ಯೂತ ಕೇಳೀ
ಕಲಹ ಲಂಪಟ ನಿಲ್ಲು ನಿಲ್ಲೆನು
ತೊಳಗುವರಿದಪ್ಪಳಿಸಿದನು ದುರ್ಯೋಧನನ ರಥವ ‖ ೭೩

ತೋಳನಳವಿಗೆ ಸಿಕ್ಕಿತೋ ಮೃಗ
ಜಾಲ ಶಿವಶಿವ ದಿವಿಜ ವಧುಗಳ
ತೋಳ ತೆಕ್ಕೆಗೆ ಒಡಲನಿತ್ತನು ರಾಯನಕಟೆನುತ ।

ಆಳು ಮಿಗೆ ಕಳವಳಿಸೆ ಕುರುಭೂ
ಪಾಲಕನ ಹಿಂದಿಕ್ಕಿ ಕಿವಿಗಡಿ
ಗೋಲ ತೆಗಹಿನೊಳೊದಗಿದರು ದುಶ್ಶಾಸನಾದಿಗಳು ॥ ೭೪

ವರ ವಿಕರ್ಣ ಸುಲೋಚನನು ದು
ರ್ಮರುಷಣನು ದುಶ್ಶಾಸನನು ಸಂ
ಗರವ ಕೆಣಕಿದರನಿಲ ಸುತನೊಳು ನೃಪನ ಹರಿಬದಲಿ ।
ನೆರೆದ ನುಸಿಗಳು ಗಿರಿಯ ಕಾಡುವ
ಪರಿಯ ನೋಡೈ ಪೂತುರೆನುತು
ಬ್ಬರಿಸಿ ಕೈದೋಱಿದನು ಕಲಿ ಪವಮಾನ ಸುತ ನಗುತ ॥ ೭೫

ಎಚ್ಚ ಶರವನು ಗದೆಯಲಣೆದಿಡು
[1]ಗಿಚ್ಚು ಹೊಕ್ಕಂದದಲಿ ರಥವನು
ಬಿಚ್ಚಿ[1] ಬಿಸುಟನು ಸಾರಥಿಯ[2]ನಾ[2] ಹಯವನಾ ಧನುವ ।
ಕೊಚ್ಚಿದನು ಕೊಲೆಗಡಿಗನಿದಿರಲಿ
ಕೆಚ್ಚುಮನದವರಾರು ಸೋಲವಿ
ದೊಚ್ಚತವಲೇ ನಿಮ್ಮ ಸೇನೆಗೆ ಭೂಪ ಕೇಳೆಂದ ॥ ೭೬

ಸರಿದರೀ ನಾಲುವರು ರಾಯನ
ಮರಳಲೀಯದೆ ಮತ್ತೆ ಮಾರುತಿ
ಹರಿಸಿದನು ನಿಜರಥವನತಿರಥರೊಡ್ಡು ಲಟಕಟಿಸೆ ।
ದೊರೆಯ ತೆಗೆಯೋ ನೂಕು ನೂಕಲಿ
ಕರಿ ಘಟೆಯನೆನೆ ಮುಗಿಲ ಮೋಹರ
[3]ಧರೆಗೆ ತಿರುಗಿದವೆನಲು ಜೋಡಿಸಿದರು ಗಜವ್ರಜವ[3] ॥ * ೭೭

---

[1] ಗಿಚ್ಚು ಹಾಯ್ವುದು ಕೋಪದಿಂದಲೆ ಕೊಚ್ಚಿ (ಟ), ಗಿಚ್ಚು ಹೊಕ್ಕನು ಹೊಯ್ದು ರಥವನು ಬಿಚ್ಚು (ಪ). [2] ರಥ (ಕ). [3] ಧರೆಗಿಳಿದವೆಂಬಂತೆ ಜೋಡಿಸಿದರು ಗಜವ್ರಜವ (ಗ), ಧರೆಗೆ ತಿರುಗಿದವೆನಲು ಜೋಡಿಸಿದರು ಗಜ ವ್ರಜವ (ಚ.ದ.ಪ), ಹರದೆಗೆಯೆ ಜೋಡಿಸಿದರಂದುಬ್ಬರದ ಮದಗಜವ (ಟ).

* ಇಲ್ಲಿಗೆ (ಚ.ದ.ನ.ಪ.ಬ) ಪ್ರತಿಗಳಲ್ಲಿ ನಾಲ್ಕನೆಯ ಸಂಧಿಯೂ (ತ) ಪ್ರತಿಯಲ್ಲಿ ಎರಡನೆಯ ಸಂಧಿಯೂ ಮುಗಿದು ಇಲ್ಲಿರುವ ಮುಂದಿನ ಸಂಧಿಯ ಸೂಚನೆಯೇ ಅವುಗಳಲ್ಲಿಯೂ ಸೂಚನೆಯಾಗಿದೆ.

ವಂಗನಂಬಷ್ಟನು ವರಾಳ ಕ
ಳಿಂಗ ಬರ್ಬರರಾನೆಗಳ ಥ
ಟ್ಟಿಂಗೆ ಕೈವೀಸಿದರು ಕೊಂಡರು ನಾಳಿವಿಲ್ಲುಗಳ |
ವಂಗಡದಲೆಂಬತ್ತು ಸಾವಿರ
ತುಂಗ ಗಜ ಘಟೆ ಕವಿದವಿದಕಿ
ನ್ನಂಗವಿಸುವವರಾರೆನುತ ಗಜಬಜಿಸಿತರಿ ಸೇನೆ ‖ ೭೮

ಆಳ ಹೆದರಿಸಿ ನುಡಿವ ನಾಯ್ಗಳ
ಬೀಳ ಬಡಿ ಬಡಬಾಗ್ನಿ [1]ನೊರಜಿನ[1]
ಧಾಳಿಗಳುಕುವುದುಂಟೆ ಫಡ ಫಡಯೆನುತ ಬೊಬ್ಬಿಱಿದ |
ಕಾಲ ದಂಡವ ತಿರುಹಿ ಭುವನದ
ಲೂಳಿಗವ ಮಾಡುವ ಕೃತಾಂತನ
ಹೋಲುವೆಯು ಹೊಸಬಿಗನು ಹೊಕ್ಕನು ಭೀಮನುರವಣಿಸಿ ‖ ೭೯

ಗದೆಯುಲಪ್ಪಳಿಸಿದನು ಕೋದಂ
ಡದಲಿ ಕಾದಿದ ಮುದ್ಗರದಲೊರ
ಸಿದನು ಲೌಡಿಯಲರೆದನುಱೆ ತಱಿದನು ಕೃಪಾಣದಲಿ |
ಒದೆದು ಕೆಲವನು ಮುಷ್ಟಿಯಲಿ ಮೋ
ದಿದನು ಕೆಲವನು ನಿಖಿಳ ಶಸ್ತ್ರಾ
ಸ್ತ್ರದಲಿ ಕಾದಿದನನಿಲಸುತ[2]ನಿಭಬಲವ ಬಱಿಕೈದು[2] ‖ ೮೦

ಗಿಳಿಯು ಹಿಂಡುಗಳೆತ್ತ ಗಿಡುಗನ
ದಳದುಳವು ತಾನೆತ್ತ ಭೀಮನ
ಸುಳಿವು ಗಡ ಕಾಲೂಱುವವೆ ಕರಿ ಘಟೆಗಳೊಗ್ಗಿನಲಿ |
ಕಳಿತ ಹೂವಿನ ತೊಡಬೆಗಳೊ ರಿಪು
ಬಲವೊ ಬಿಱುಗಾಳಿಯೊ ವೃಕೋದರ
ನಳವ ಬಲ್ಲವನಾವನೈ ಧೃತರಾಷ್ಟ್ರ ಕೇಳೆಂದ ‖ ೮೧

---

[1] ಮಂಜಿನ (ಡ.ನ).　　[2] ಗಜಬಲವ ಬೇಸರದೆ (ಚ.ಪ).
[3] ಡು (ಗ.ಟ.ದ).

ಹೋಯಿತಾ ಮಾತೇಕೆ ಗಜ ದಳ
ಮಾಯವಾದುದು ವಂಗ ಭೂಪನ
ಬಾಯೊಳಗೆ ಬೆಟ್ಟಿದನು ಗದೆಯನು ಮಿಕ್ಕ [1]ನಾಲ್ವ[1]ರನು ।
ಸಾಯ ಬಡಿದನು ಮುಂದೆ ಕೌರವ
ರಾಯನನು ತಾಗಿದನು ಭೀಮನ
ದಾಯ ಬಂದುದು ಸಕಲ ಕುರು ತಳತಂತ್ರ ತಲ್ಲಣಿಸೆ ॥ * ೮೨

ಎರಡನೆಯ ಸಂಧಿ ಮುಗಿದುದು.

---

[1] ಮೂವ (ಕ.ಗ.ದ.ಬ)

* (ಕ.ಗ.ತ.ಟ.) ಪ್ರತಿಗಳಲ್ಲಿ ಮೇಲಿನ ೮೨ನೆಯ ಪದ್ಯವಾದಮೇಲೆ ಕೆಳಗಿನ ಪದ್ಯವು ಅಧಿಕವಾಗಿದೆ :—

ರಾಯನನು ಹಿಡಿಯೆಂಬ ಕಳರವ
ರಾಯ ಭಂಗಿತನಾಗಿ ಮರಳಿದು
ಕಾಯ ನಡುಗಿತು ಭೀಮಸೇನನ ವೀರ ವಿತರಣಕೆ ।
ಕಾಯಬೇಕೆನುತಿತ್ತ ಕೃಷ್ಣನು
ರಾಯಪಾಂಡವರವರ ಕರುಣಾ
ಮಾಯೆ ಹಿರಿದಾದಂದು ಕಾಯ್ದನು ವೀರನಾರಯಣ ॥

# ಮೂರನೆಯ ಸಂಧಿ

ಸೂಚನೆ ॥ ಹನುಮನನುಜನ ಬಾಹು ಬಲ ರಿಪು
ವನಧಿಯನು ತುಳುಕಿದನು ಭಗದ
ತ್ತನನು ಮರ್ದಿಸಿ ಮುಱಿದನರ್ಜುನ ಸುಪ್ರತೀಕವನು ॥

ಗುರುಗಳಾಡಿದ ಭಾಷೆ ಪರ ಬಲ
ದರಸ ಕಟ್ಟುವದದು ನಿಲಲಿ ನ
ಮ್ಮರಸ ಸಿಲುಕಿದ ಭೀಮ ಗಜ ಕಟ್ಟಿದುದು ಬೀದಿಗಳ ।
ತಿರುಗಲಾಪರೆ ಸಮಯವಿದು ಸಂ
ಗರ ಸಮರ್ಥರು ಬರಲಿಯೆಂಬ
ಬ್ಬರದೊಳಗೆ ಭಗದತ್ತ ಮೇಳೈಸಿದನು ನಿಜ ಗಜವ ॥ ೧

ಬಲವೊರಜೆ ಎಡವೊರಜೆ ಬೆನ್ನಿನ
ಮಿಳಿಯ ಜಾಳಿಗೆವೊರಜೆ ತಳಸಂ
ಕಲೆಯ ತೊಡರಂಕಣಿಯ ಕೊಂಡೆಯ ಪಕ್ಕ ಗಂಟೆಗಳ ।
ತುಳುಕಿನುಗ್ಗಡಣೆಗಳ ಹಿಣಿಲಿನ
ಬಲು ವೊರಜೆಗಳ ಬಾರ ಸಂಕಲೆ
ಗಳನು ಬಿಗಿದರು ಜೋಡಿಸಿದರುಬ್ಬರದ ಮದ ಗಜವ ॥ ೨

ಬಿಗಿದು ಗಳವತ್ತಿಗೆಯನೆದೆವ
ತ್ತಿಗೆಯ ಘನಮುಂಡಿಗೆಯ ಲೌಡಿಯ
ಬಿಗಿದು ಗುಳ ಱೆಂಚೆಗಳ ಭಾರಿಯ ಕೈಯ ಪಟ್ಟೆಯ[1]ವ[1] ।
ಅಗಿವ ಬಡಿಗೆಯನಂಕುಶದ ಕ
ಟ್ಟಿಗೆಯ ಧಾರೆಯ ಕಮಳದಳ ಕೊಡ
ತಿಗಳ ಕೈಹಾರೆಗಳನಳವಡಿಸಿದರು ವಹಿಲದಲಿ ॥ ೩

ಮುಗಿಲ ಹೊದಱಿನೊಳೆಳೆಯ ರವಿ ರ
ಶ್ಮಿಗಳು ಪಸರಿಸುವಂತೆ ಸುತ್ತಲು
ಬಿಗಿದ ಗುಳದಲಿ ಹೊಳೆ[2]ಯೆ[2] ಹೊಂಗೆಲಸದ ಸುರೇಖೆಗ[3]ಳು[3] ।

---

[1] ದ (ಸ). [2] ವ (ಸ). [3] ಳ (ಸ).

ಗಗನ ಗಂಗಾನದಿಯ ಕಾಲುವೆ
ತೆಗೆದರೆನೆ ಠೆಕ್ಕೆಯದ ಪಲ್ಲವ
ವಗಿಯೆ ಮೆಱೆದುದು ಬಿಗಿದ ಮೊಗರಂಬದ ವಿಳಾಸದಲಿ ‖ ೪

ಗಗನ ತಳವನು [1]ಬಿಗಿದ[1] ಬಲುಱೆಂ
ಚೆಗಳ ತುಂಬಿದ ಹೊದೆಯ ಕಣೆಗಳ
ಬಿಗಿದ ನಾಳಿಯ ಬಿಲ್ಲುಗಳ ತೆತ್ತಿಸಿದ ಸೂನಿಗೆಯ ।
ಉಗಿವ ಸರಿನೇಣುಗಳ ಕೈ ಗುಂ
ಡುಗಳ ಕವಣೆಯ ಲೌಡಿ ಕರವಾ
ಳುಗಳ [2]ಜೋಡಿಸಿ ಜೋದರಡರಿದರಂದು ಬೊಬ್ಬಿಱಿದು[2] ‖ ೫

ಸುತ್ತ ಮೆಱೆದವು ಮೇಲೆ ಪಲ್ಲವ
ಸತ್ತಿಗೆಯ ಸಾಲುಗಳು ಬಿರುದಿನ
ಕತ್ತರಿಯ ಹೀಲಿಗಳ ಝಲ್ಲರಿ ಮುಸುಕಿದವು ಗಜವ ।
ಒತ್ತಿ ಕಿವಿಗಳನೊದೆದು ಶಿರದಲಿ
ತೆತ್ತಿಸಿದರಂಕುಶವನಾ ಭಗ
ದತ್ತ ದಂತಿಯನೇಱಿದನು ಜಯ ರವದ ರಭಸದಲಿ ‖ ೬

ಕಾಲುಗಾಹಿನ ಕುದುರೆಗಳ ಕಾ
ಲಾಳ ಕೈವಾರಿಗಳ ಸಬಳದ
ಸೂಲಿಗೆಯ ತೇರುಗಳ ಹರಹಿನ ಹೊಂತಕಾರಿಗಳ ।
ಆಳ ಬಲು ಬೊಬ್ಬೆಯಲಿ ಘನ ನಿ
ಸ್ಸಾಳ ತತಿ ಮೊಳಗಿದವು ಡೌಡೆಯ
ತೂಳುವಱೆಗಳು ಗಜಱಿದವು ತಂಬಟದ ಲಗ್ಗೆಯಲಿ ‖ ೭

[3]ಸುರಪ ಕಡಿಯಲು[3] ಕೆರಳಿ ಕುಲ ಗಿರಿ
ಯುರಿಯನುಗುಳುವುದೆನಲು ದಾಡೆಗ
ಳರುಣ ಮಯ ರಶ್ಮಿಗಳ ಪಸರದಲೆಸೆದುದಿಭ ಪತಿಯ ।
ಧರಣಿಯಳತೆಯ ಹರಿಯ ನೆಗಹಿನ
ಚರಣದಗ್ರದೊಳಿಳಿವ ಘನ ನಿ
ರ್ಝರದವೊಲು ಮದ ಧಾರೆ ಮೆಱೆದುದು ಕರಿ ಕಪೋಲದಲಿ ‖ ೮

---

[1] ಬಗಿವ (ಸ). [2] ಕಲಿಜೋದರಂದಡರಿದರು ಬೊಬ್ಬಿಡುತ (ಟ), ಜೋಡಿಸಿ ಜೋದರಡರಿದರಬ್ಬರದ ಮದಗಜವ (ಬ), ಮೋಹಿಸಿ ಜೋದರಡರಿದರಂದು ಬೊಬ್ಬಿಱಿದು. [3] ಸುರಪತಿಯೊಳು (ಕ).

ಜಗದ ನಿಡು ನಿದ್ರೆಯಲಿ ಮೋಹರ
ದೆಗೆದ ಮುಗಿಲೋ ಮೇಣಖಿಳ ಕುಲ
ದಿಗಿಭವೆಂಟೊಂದಾ[1]ಯ್ತೊ[1] ಕೈ ಕಾಲ್ ಮೂಡಿತೋ ನಭಕೆ ।
ಅಗಿದು ಮೆಟ್ಟಿದಡವನಿ ಪಡುವಲು
ನೆಗೆದುದಡರಿದು ಮುಂದೆ ಮೆಟ್ಟಲು
ಚಿಗಿದುದಿಳೆ ಮೂಡಲು ಮಹಾಗಜವೈದಿತಾಹವವ ॥ ೯

ಪವನ[2]ಬಲ ಪರಿದಳಿತ[2] ಕದಳೀ
ನಿವಹದಲಿ ನಭ ಧಾತುಗೆಟ್ಟುದು
ರವಿಗೆ ಕಾಪಥವಾಯ್ತು ಹೊಗಳುವೆನೇನನದ್ಭುತವ ।
ಭುವನ ಕೋಶದೊಳಾದ ವಿಪಿನೋ
ದ್ಭವವೊ ಭಾರಿಯ ದಂತಿ ಮಹದಾ
ಹವದೊಳಿಳಿದುದು ಕೃಷ್ಣನೊಲಿದರಿಗಾವುದರಿದೆಂದ ॥ ೧೦

ಹಿಡಿವ ಬಿಡುವೊಬ್ಬುಳಿಗೆ ತಹ ಬಲ
ನೆಡಕೆ ಹಾಯ್ಕುವ ಸುತ್ತಲೊತ್ತುವ
ತಡೆವ ನಡಸುವ ಸೆಳೆವ ತಿರುಹುವ ಹದಿರ ಜೋಕೆಯಲಿ ।
ಗಡಣಿಸಿದನವನಿಭಪತಿಯುನವ
ಗಡಿಸಿ ನೂಕಿದೊಡಮಮ ದಿಕ್ಕರಿ
ನಡುಗೆ ಚೌಕದ ಕಳನ [3]ತುಳಿದುದು[3] ಸುಪ್ರತೀಕ ಗಜ ॥ ೧೧

ಇದು ಗಜಾಸುರನೋ ಮಹಾದೇ
ವಿದುವೆ ಮಹಿಷಾಸುರನೊ ಮಾಯಾ
ರದನಿಯೋ ದಿಟವಿದನು ಗೆಲುವರೆ ಭೀಮ ಫಲುಗುಣರು ।
ತ್ರಿದಶ ರಿಪುಗಳ ಗಂಡನಿದು ಕಾ
ದಿದೆವು ನಾವಿಂದೆನುತ ಸುಭಟರು
ಕದಡಿ ಸರಿದುದು ಸೂಱೆಗೊಂಡುದು ಬಲ ಪಲಾಯನವ ॥ ೧೨

ಮೊಗದ ಜವನಿಕೆದೆಗೆದು ನೆತ್ತಿಯ
ಬಗಿದು ಕೂರಂಕುಶದಲಾನೆಯ
ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆಯೊಡೆಯೆ ।

---

[1] ಗಿ (ಸ). [2] ದಳಪರಿದಳಿತ (ಗ.ದ), ಜನಪಡಿತಳದ (ಕ), ಬಲಪರಿಲುಳಿತ (ಚ.ಪ), ಬಲಪರಿಚಲಿತ (ತ), ಬಲಪರಿತರಲು (ನ) [3] ಗೆಲಿದುದು (ಗ.ಚ.ತ.ದ.ಪ).

ಹಗೆಯ ಬಲದಲಿ ಹರಿದು ಸುಭಟರ
ಚಿಗುಳಿದುಳಿದುದು ತಲೆಗಳನು ಮುಗಿ
ಲಗಲದಲಿ ಹರಹಿದುದು ದಿಕ್ಕರಿ ಹೊಕ್ಕು ಮೋಹರವ ‖ ೧೩

ನೆಳಲು ಸುಳಿಯಲು ದಂತಿಯೆಂದ
ಪ್ಪಳಿಸೆ ವಾಸುಕಿ ನೊಂದನಂಬುಧಿ
ತುಳುಕಿದವು ಸತ್ವಾತಿಶಯವೆಂತುಟು ಮಹಾದೇವ ।
ತುಳಿದುದರಿ ಸುಭಟರನು ಸಾವಿರ
ತಲೆಯ ಸೆಳೆದುದು ಸೊಂಡಿಲಲಿ ವೆ
ಗ್ಗಳೆಯ ಮದ ಕರಿ ಕೇಣಿಗೊಂಡುದು ವೈರಿ ಮೋಹರವ ‖ ೧೪

ಸೀಳಿ ಹರಹಿತು ಕರಿಗಳನು ನೇ
ಪಾಳಗುದುರೆಯ ಥಟ್ಟುಗಳ ಹಿಂ
ಗಾಲಲಣೆದುದು ರಥವನೈದಾಱೇಳನೊಂದಾಗಿ ।
[1]ತೋಳೊಳಗೆ ನೆಗ್ಗೊತ್ತಿ[1] ಮಿಗೆ ಕಾ
ಲಾಳ ತೊತ್ತಳದುಳಿದು ಕಾಲನ
[2]ಗೂಳೆಯ[2]ಕ್ಕುಪಕಾರಿಯಾದುದು ಸುಪ್ರತೀಕ ಗಜ ‖ ೧೫

ದ್ವಿಗುಣ ತ್ರಿಗುಣದಲಣೆದು ಜೋಡಿಸಿ
ಚಿಗಿದು ಹಾಯ್ಕುವ ಮೆಟ್ಟಿ ಸೀಳುವ
ತೆಗೆದು ಕಟ್ಟುವ ತಿರುಹಿ ನೂಕುವ ಹೆಡತಲೆಯೊಳಡಸಿ ।
ಉಗುರೊಳೌಕುವ ನಿ[3][ಗ್ಗವ][3]ದೊಳಿ
ಬ್ಬಗಿಯ ಮಾಡುವ ಕಾಲುಗೊಲೆಯಲಿ
ವಿಗಡ ಕರಿ ತುಳಿದಾಡಿತಿದಿರಿದಿರಾದ ಪಟುಭಟರ ‖ ೧೬

ಅರೆದುದೋ ಪರ ಬಲವ ಕಾಲನ
ಹೊರೆದುದೋ ಮಾರಣದ ಮಂತ್ರವ
ಬರೆದುದೋ ಬವರಕ್ಕೆ ಬಲುಗೈಗಳನು ಕೈ ನೆಗಹಿ ।
ಕರೆದುದೋ ಬಲವೆಲ್ಲ ನೀರಲಿ
ನೆರೆದುದೋ ಮಾರ್ಬಲದ ವೀರರು
ಹರೆದುದೋ ಹವಣಿಲ್ಲ ದಂತಿಯ ಸಮರ ಸಂರಂಭ ‖ ೧೭

[1] ಕಾಲೊಳಗೆ ನುಗ್ಗೊತ್ತಿ (ಗ). [2] ಪಾಳಯ (ಗ.ನ.ಬ). [3] ಗರ್ವ.

ಮುರಿದು ಮಂದರ ಗಿರಿ ಪಯೋಧಿಯ
ತೆರೆಗಳನು ತುಳಿವಂತೆ ರಿಪು ಮೋ
ಹರವನರೆದುದು ನುಗ್ಗುನುಸಿಯಾಯ್ತಖಿಳ ತಳತಂತ್ರ ।
ತೆರಳಿದರು ರಾವುತರು ರಥಿಕರು
ಹೊರಳಿಯೊಡೆದುದು ಗಜದ ಗಾವಳಿ
ಜರಿದುದಳಿದುದನಾರು ಬಲ್ಲರು ಭೂಪ ಕೇಳೆಂದ ॥ ೧೮

ಮುಱಿದು ಕೊಟ್ಟುದು ದಂತಿ ಗುರುವಿ
ನ್ನುಱುಬಿ ರಾಯನ ಹಿಡಿಯದಿರನಿದ
ತಱುಬಲಾಪರೆ ಬರಲಿ ಸಾತ್ಯಕಿ ನಕುಲ ಪವನಜರು ।
ಇಱಿತಕಿವರಂಜಿದರೆ ಪಾರ್ಥಂ
ಗಱುಹಿ ಬೇಗದೊಳೆನುತ [1]ನಾಯಕ
ರೊಱಲು[1] ತಿರಲನುವಾದುದುದಿತ್ತಲು ದೊರೆಗಳೊಗ್ಗಿನಲಿ ॥ ೧೯

ಅಳ್ಳಿದೆಯ ಮನ್ನೆಯರನೊಗ್ಗಿನ
ಡೊಳ್ಳುಗರ ಕಟವಾಯ ಕೊಯ್ ತಲೆ
ಗಳ್ಳರಿವದಿರು ತಱಿಚುಗೆಡೆವರ ಹೋಗ ಹೇಳೆನುತ ।
ಬಿಲ್ಲ ಗೋಲೆಗೇಱಿಸುತ ಚೌಪಟ
ಮಲ್ಲ ಹೊಕ್ಕನು ಭೀಮ ಭಟರ
ಲ್ಲಲ್ಲಿ ಕವಿದುದು ದ್ರುಪದ ನಕುಲ ಯುಧಿಷ್ಠಿರಾದಿಗಳು ॥ ೨೦

ಕರಿ ಬಲುಹು ಕಲಿ ಭೀಮಸೇನನು
ದುರುಳನಿನ್ನೇನಹನೆನುತ ಮೋ
ಹರಿಸಿ ಕವಿದುದು ಮತ್ಸ್ಯ ಸೃಂಜಯ ಪಂಚ ಕೈಕೆಯರು ।
ತಿರುವಿಗಂಬನು [2]ತೊಡಚಿ[2] ಸಾತ್ಯಕಿ
ನರನ ಮಗ ಹೈಡಿಂಬ ಯವನೇ
ಶ್ವರರು ಧೃಷ್ಟದ್ಯುಮ್ನ ಮೊದಲಾಗೈದಿದರು ಗಜವ ॥ ೨೧

ಗಿರಿಯ ತಱಿವರೆ ಶಕ್ರನಲ್ಲದೆ
ನೆರೆದ ದಿವಿಜ ಸಮೂಹ ಮಾಡುವ
ಭರವಸಿಕೆ ತಾನೇನು [3]ಹೊದ್ದಿ[3]ದರಿವರು ದಿಗ್ಗಜವ ।
ಸರಳ ಬಲುವಳೆಗಾಲವಹಿತ
ದ್ವಿರದ ಗಿರಿಯಲಿ ಕಾಣಲಾದುದು
ಕೆರಳಿ ಕರಿ ಕೈಕೊಂಡುದಱೆಯುಟ್ಟಿತು ಮಹಾರಥರ ॥ ೨೨

---

[1] ಬಲಬೊಬ್ಬಿಱಿಯ (ಗ). [2] ಹೂಡಿ (ಗ.ಬ). [3] ಮುತ್ತಿ (ಕ.ಟ.ತ.ನ.ಬ).

ಚೆಲ್ಲಿತಿದು ದೆಸೆ ದೆಸೆಗೆ ಚೌಪಟ
ಮಲ್ಲಗಿಲ್ಲರ ಪಾಡೆ ನಮ್ಮದು
ಬಲ್ಲಿತಹುದುಸುರಿಲ್ಲದೊಡಲಿನ ಚೆಲುವು ಫಲವೇನು ।
ಅಲ್ಲಿ ದೈವದ ನೆನಹು ಘನ [1]ಜಯ[1]
ವೆಲ್ಲಿಯದು ನಮಗಿನ್ನು ಸಾಕಿ
ನ್ನೆಲ್ಲವೇತಕೆ ಚಿತ್ತವಿಸು ಚೌದಂತನಾಹವವ ॥ ೨೩

ಸೆಳೆವಿಡಿದು ತುಱುಗಾಹಿ ಪಶು ಸಂ
ಕುಲವ [2]ತೆವಱು[2]ವ ವೋಲು ವಾಯಸ
ಕುಲವನೊಂದೇ ಗೂಗೆ ಹೊಯ್ದುಱೆಯಟ್ಟುವಂದದಲಿ ।
ಬಲು ಕಣಿಗಳಿವದಿರನು ಕರಿ ಮುಂ
ಕೊಳಿಸಿ [3]ಕೆಡಹಿತು[3] ಯವನ ಕೌಸಲ
ಬಲವ ಕೈಕೆಯ ಮಗಧ ಭೂಪರ ಕೊಡಹಿ ಹಾಯಿಕಿತು ॥ ೨೪

ಹಿಡಿ ಹಿಡಿಯಲೋಡಿದನು ದ್ರುಪದನು
ಸಿಡಿದು ಕೆಲ ಸಾರಿದನು ಪವನಜ
ನೊಡಲುಸುರ ಸಂಬಂಧವಳಿದುದು ಸಿಲುಕಿದನಿಬರಿಗೆ ।
ಒಡೆಮುರಿದು ಸಾತ್ಯಕಿಯ ರಥವನು
ತುಡುಕಿ ಹಾಯ್ಕಿತು ಭೀಮ ತನಯನ
ಕೊಡಹಿ ಬಿಸುಟುದು ಕೊಂದುದಗಣಿತ ಕರಿ ತುರಂಗಮವ ॥ ೨೫

ಮರಳಿ ಮತ್ತೆ ಮಹಾರಥರು ಸಂ
ವರಿಸಿಕೊಂಡುದು ಸರಳ ಮಳೆಗಳ
ಸುರಿದರಾನೆಯ ಮೇಲೆ ಜೋದರ ಕೋಲ ಮನ್ನಿಸದೆ ।
ಗಿರಿಯ ಮುತ್ತಿದ ಮಿಂಚುಬುಳುವಿನ
ಹೊರಳಿಯಂತಿರೆ ಹೊನ್ನ [4]ಬರಹದ[4]
ಸರಳು ಮೆಱೆದವು ಕಱೆದರದುಭುತ ಕಣೆಯ ಸರಿವಳೆಯ ॥ ೨೬

ಬಾಲರೆಸುಗೆಯ [5]ಮಿಟ್ಟೆ[5]ಯಂಬಿಗೆ
ಸೋಲುವುದೆ ಗಿರಿ ವೈರಿ ಸುಭಟರ
ಕೋಲ ಕೊಂಬುದೆ ವೀರ ಕುಂಜರ ಮತ್ತೆ ಮೊಗ ನೆಗಹಿ ।

---

[1] ವುಳಿ (ಟ). [2] ಕೆದಱು (ಪ). [3] ಕೆದಱಿತು (ಚ.ಟ.ನ.ಪ), [4] ಬಣ್ಣದ (ಬ). [5] ಮಿಂಚೆ (ಕ.ಚ.ತ.ನ.ಪ).

ಆಳೊಳಗೆ ಬೆರಸಿತು ಮಹಾರಥ
ರೋಳಿ ಮುಱಿದುದು ಕುಱಿಯ ಹಿಂಡಿನ
ತೋಳನೈ ನಿನ್ನಾನೆ ಸವಱಿತು ಮತ್ತೆ ಮಾರ್ಬಲವ ‖ ೧೭

ಹಡಗು ಜಲಧಿಯೊಳೋಡಿ ಗಿರಿಗಳ
ನೆಡಹಿ ನುಗ್ಗಾದಂತೆ ಸುಭಟರ
ಗಡಣ ಗಜವನು ತಾಗಿ ತಾಗಿ ವಿಘಾತಿಯಲಿ ನೊಂದು ।
ಒಡಲ ಮೇಲೆಳ್ಳನಿತು ಮೋಹವ
ಹಿಡಿಯದಿವರೌಕಿದರು ಹಾವಿನ
ಕೊಡನು ದೋಷಿಗೆ ಸುಲಭವೇ ಧೃತರಾಷ್ಟ್ರ ಕೇಳೆಂದ ‖ ೧೮

ಮುರಿದು ಮೋದಿತು ಸಮ್ಮುಖದೊಳಿ
ಟ್ಟೊರಸಿತೆಡದಲಿ ಹೊಯ್ದು ಸೀಳಿತು
ಹರಹಿತಪಸವ್ಯದಲಿ ಮೆದೆಗೆಡಹಿತು ಮಹಾರಥರ ।
ಹೊರೆದ ರಕುತದ ಧಾರೆಗಳ ತುದಿ
ಕರದೊಳೆಳಲುವ [1]ತಲೆಗಳಂ[1] ಘ್ರಿಯೊ
ಳೊರೆದ ನೆಣನಡಗಿನ ಮಹಾಗಜ ಮೊಗೆದುದರಿ ಬಲವ ‖ ೧೯

ಹಿಂದೆ [2]ಹಿಡಿವರು ಮುರಿದ[2]ರೆಡದಲಿ
ಸಂದಣಿಸುವರು ತಿರುಗಿದರೆ ಬಲ
ದಿಂದ ಕೈ ಮಾಡುವರು ಕವಿದರೆ ಸಿಡಿವರೆಡಬಲಕೆ ।
ಮುಂದೆ ಕಟ್ಟುವರಟ್ಟಿದರೆ ಮುರಿ
ವಿಂದ ಜಾಱುವರಾ ಮಹಾರಥ
ವೃಂದ ಕಾದಿತು ಮದ ಕರಿಯ ಬೇಸಱದೆ ಬಳಿಸಲಿಸಿ ‖ ೨೦

ಕರಿಯ ಕೋಲಾಹಲವನಾ ಜೋ
ದರ ಶರೌಘವ ಸೈರಿಸುತ ಮು
ಕ್ಕುಱುಕಿ ಧರ್ಮಜ ನಕುಲ ಸಾತ್ಯಕಿ [3]ಭೀಮ ನಂದನರು[3] ।
ಸರಳ ಸಾರವ ಕಟ್ಟಿದರು ಮಿಗೆ
ಕೆರಳಿದನು ಭಗದತ್ತನನಿಬರ
ಹರೆಗಡಿದು ಹೊಗರಂಬ ಸುರಿದನು ಸರಿದರತಿರಥರು ‖ ೨೧

---

[1] ಕರುಳಲಂ (ಗ). [2] ಸೆಳೆದರೆ ಮುರಿವ (ಕ.ಗ.ಟ.ತ ನ). [3] ಪಂಚ ಕೈಕೆಯರು (ಟ).

ಹತ್ತು ಶರದಲಿ ಧರ್ಮಜನನಿ
ಪ್ಪತ್ತಱಿಂದಭಿಮನ್ಯುವನು ತೊಂ
ಬತ್ತು ಶರದಲಿ ನಕುಲ ಸಾತ್ಯಕಿ ದ್ರುಪದ ಕೈಕೆಯರ ।
ಕೆತ್ತಿದನು ಹದಿನೆಂಟು ಬಾಣದ
ಲಿತ್ತ ಭೀ[1]ಮನ ನಂದನನನೈ[1]
ವತ್ತು ಶರದಲಿ ಸಕಲ ರಥಿಕರನೆಚ್ಚು ಬೊಬ್ಬಿಱಿದ ॥ ೩೨

ಬಿನುಗುಗಳ ತೆಗೆ ಭೀಮಸೇನನ
ಮೊನೆಗೆ ಬಿಡು ಬಿಡು ಗಜವನೆಂದು
ಬ್ಬಿನಲಿ ತಿರುಹಿದನಾನೆಯನು ಪವನಜನ ಸಮ್ಮುಖಕೆ ।
ಧನುವ ಬಿಸುಟನು ಗದೆಯ ತುಡುಕಿದ
ನನುವರದೊಳಡ್ಡೈಸಿ ದಂತಿಯು
ಕನಲಿಸಿದನೊಳಹೊಕ್ಕು ಹೊಯ್ದನು ಸಿಂಹನಾದದಲಿ ॥ ೩೩

ಭುಜದ ಸಾಹಸ ಹತ್ತು ಸಾವಿರ
ಗಜದ ಘಾಡಿಕೆ ಸಿಂಹನಾದದ
ವಿಜಯ ವಿಗ್ರಹ ವೀರ ಹಳಚಿದನಮಮ ಮದಕರಿಯ ।
ತ್ರಿಜಗ ತಲೆ ಕೆಳಗಾಗೆ ದಿವಿಜ
ವ್ರಜ ಭಯಂಗೊಳೆ [2]ಮಿಕ್ಕು[2]ಸುರಪನ
ಗಜದ ಹೊಯ್‌ಕೈಯ್ಯಾನೆ ಹೆಣಗಿತು ಭೀಮಸೇನನಲಿ ॥ ೩೪

ಚಿಗಿದು ಹರಿಸುತ ಹಳಚಿದರೆ ಕುಲ
ದಿಗಿಭವೆದೆಯೊಡೆದವು ನಗಂಗಳ
ಬಿಗುಹು ಸಡಿಲಿತು ಧರಣಿ ನೆಗ್ಗಿತು ಚರಣ ಹತಿಗಳಲಿ ।
[3]ಜಿಗಿವ[3] ರಕುತದ ಗದೆಯ ಬಿಱುವೊ
ಯ್ಲುಗಳೊಳಗೆ ಕಿಡಿ ಮಸಗಿ ಕಬ್ಬೊಗೆ
ನೆಗೆಯೆ ಹೊಯ್ದನು ಭೀಮ ಲಂಘಿಸಿ ಗಜದ ಮಸ್ತಕವ ॥ ೩೫

ಹೊಯ್ದು ಹಿಂಗದ ಮುನ್ನ ಭೀಮನ
ಕೈದುಡುಕಿದರೆ ಮುರಿದು ಹಿಂದಕೆ
ಹಾಯ್ದಡೊಡೆಮುರಿಯಿತ್ತು ಕುಸಿದರೆ ಕಾಲೊಳೊಡೆಯುವುಚಿ ।

---

[1] ಮಾತ್ಮಜನ ನೂಱೈ (ಚ.ಟ.ತ.ನ.ಪ). [2] ಹೊಕ್ಕು (ದ). [3] ಯ(ನ), [3] ಒಗುವ (ಚ.ದ.ಪ).

ಮ್ಮೈದೆಗೆದರಿಟ್ಟಣಿಸಿ ಪೂತ್ಕೃತಿ
ಗೈದು ಸುಭಟನ ಸಿಂಹನಾದಕೆ
[1]ಮುಯ್ದು[1]ಗೆದು ಕರಿ ಕಾದುತಿರ್ದುದು ಭೀಮಸೇನನಲಿ ॥ ೩೬

ನೆಳಲುಗಂಡವ್ವಳಿಸುವುದು ಸುಂ
ಡಿಲನು ತೂಗಾಡುವುದು ಹೋರಿದು
ಬಳಲುವುದು ಮೊಗನೆಗಹಿ ಭೀಮನ ದನಿಯನಾಲಿಪುದು ।
ಅಳಿಯ ಮುತ್ತಿಗೆಗಳನು ಬೀಸದೆ
ನೆಲಕೆ ಕಿವಿಯನು ಜೋಲು ಬಿಡುವುದು
ಬಲು ಕಣಿಯ ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ ॥ ೩೭

ಭೀಮನಿನ್ನರೆಘಳಿಗೆಯಲಿ ನಿ
ರ್ನಾಮನೋ ತಡವಿಲ್ಲ ದಂತಿಯ
ತಾಮಸಿಕೆ ಘನ [2]ತೆಗೆಯಿ[2] ತಮ್ಮನನೆನುತ ಕಳವಳಿಸೆ ।
ಭೂಮಿ ಪತಿ ಕೈ ಕೊಂಡನೊಡನೆ ಸ
ನಾಮರೈದಿತು ನಕುಲ ಸಾತ್ಯಕಿ
ಭೀಮ ಸುತನಭಿಮನ್ಯು ದ್ರುಪದ ಶಿಖಂಡಿ [3]ಕೈಕೆಯರು[3] ॥ ೩೮

ಮತ್ತೆ ರಥವಱುವತ್ತು ಸಾವಿರ
ಮುತ್ತಿಕೊಂಡುದು ಗಜವನಾ ಭಗ
ದತ್ತ ಬಳಲಿದನವಧಿಯಿಲ್ಲದೆ ಶರವ ನೆಱೆ ತುಳುಕಿ ।
ಮೆತ್ತಿದವು ಶರವಿಭದ ಮೆಯ್ಯಲಿ
ಬೆತ್ತ ಬೆಳೆದದ್ರಿಯವೊಲಿದ್ದುದು
ಮತ್ತ ಗಜ [4]ನೊಂದ[4]ಱಿಯದನಿಬರ ಬಾಣ ಹತಿಗಳಲಿ ॥ ೩೯

ಕರಿ ವಿನೋದದಿ ಕುಡಿದ ಜಲವನು
ಕರಣಿಯಲಿ [5]ತೆಗೆತೆಗೆದು[5] ರಿಪು ಮೋ
ಹರಕೆ ಚೆಲ್ಲಿತು ಕಲ್ಪ ಮೇಘದ ಬಸುಱ ಬಗಿದಂತೆ ।
ಕರ ತುಷಾರದಲಿವರು ಮೋಱೆಯ
ತಿರುಹೆ ನನೆದವು ಬಾಹುರಕೆ ಹ
ಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು ॥ ೪೦

---

[1] ಕೈದೆ (ಸ.ಟ). [2] ತೆಗೆಸು (ಟ). [3] ಸೃಂಜಯರು (ಗ.ಟ.ದ), ಕೈಕೇಯ (ಕ.ತ.ನ). [4] ನೋವ (ಟ.ಪ). [5] ವೊಗೆವೊಗೆದು (ಗ).

ಸಾಕು ಬಳಲಿದಿರಕಟಕಟ ನಿಮ
ಗೇಕೆ ಸಂಗರವಾನೆಯೊಡನೆ ಪಿ
ನಾಕಿ [1]ಸಮರದೊಳಳುಕುವನು ಕರಿ[1] ನಿಮ್ಮ [2]ಪಾಡೇನು[2] |
ಆ ಕಿರೀಟಿಯ ಕರಸಿಕೊಳ್ಳಿ ವಿ
ವೇಕವುಳ್ಳರೆ ತೊಲಗಿಯೆನುತವೆ
ನೂಕಿದನು ಭಗದತ್ತನನಿಬರ ಮೇಲೆ ದಿಗ್ಗಜವ || ೪೧

ಮಿಗೆ ತಿಮಿಂಗಿಲನೊಡನೆ ಹುಲು ಮಿಾ
ನುಗಳು ಮಾಡುವುದೇನು ಹೊಱಿಕಾ
ಲುಗಳ ಹೋರಟೆ ಕಾಣಲಾದುದು ಪರರ ಥಟ್ಟಿನಲಿ |
ತೆಗೆಯೆ ರಿಪುಬಲ ಕೊಲುತ ಬಂದುದು
ದಿಗಿಭವಿದರೊಡನೈದಿ ದ್ರೋಣಾ
ದಿಗಳು ಹೊಕ್ಕುದು ಧರ್ಮಪುತ್ರನ ಹಿಡಿವ ತವಕದಲಿ || ೪೨

ತಿದ್ದಿತೋ ಕಲಿ ಪಾರ್ಥನಿದ್ದರೆ
ಹೊದ್ದಹೇಳೋ ರಾಯ ದಳವಡಿ
ಗದ್ದುದೋ ಬಿದ್ದುದು ಭಯಾಂಬುಧಿಯೊಳಗೆ ಭಟನಿಕರ |
ಹದ್ದು ಕಾಗೆಯು ಮನೆಗೆ ಬಾಣಸ
ವಿದ್ದುದೋ ಗಜವೆನುತ ಬೊಬ್ಬಿಡು
ತಿದ್ದುದರಿಬಲವಿತ್ತ ಹರಿ ಕೇಳಿದನು ಕಳಕಳವ || ೪೩

ಮರುಳು ಫಲುಗುಣ ಸುಪ್ರತೀಕದ
ಖುರ ಪುಟವ ನೋಡಿತ್ತಲಗ್ಗದ
ಪರಶುರಾಮನ ಖಾತಿಗಂಬುಧಿ ನೆಲನ ಬಿಡುವಂತೆ |
ತೆರಳುತಿದೆ ನಮ್ಮವರು ದಿಕ್ಕರಿ
ಹರಹಿ ಕೊಲುತಿದೆ ಮಾತಿಗಿಲ್ಲವ
ಸರವೆನುತ ಕರಿಯತ್ತ ತಿರುಹಿದನಸುರರಿಪು ರಥವ || ೪೪

ಹೆದಱದಿರು ನರ ಹೋಗದಿರು ಹೋ
ಗದಿರು ಕೊಡು ಕೊಡು ಕಾಳೆಗವನೆಂ
ದದಟರಟ್ಟಿತು ವೀರ ಸಮಸಪ್ತಕರು ಸೂಱಿಯಲಿ |

---

[1] ಕರಿಗಳುಕುವನು ರಣದಲಿ (ಗ). [2] ಪಾಡಿನದೆ (ಪ.ಬ).

ಇದಿರಲಿನಸುತ ಶಲ್ಯರಡಗ
ಟ್ಟಿದರು ಖತಿಯಲಿ ಪಾರ್ಥನನಿಬರ
ಸದೆದು ವಹಿಲದಲೈದಿದನು ದಿಕ್ಕರಿಯ ಸಮ್ಮುಖಕೆ ‖ ೪೫

ಬಲು ಬಿಸಿಲೊಳುಱೆ ನೊಂದ ನೈದಿಲೆ
ಗಳಿಗೆ ಚಂದ್ರಿಕೆ ದೈತ್ಯರುಱುಬೆಗೆ
ಸಿಲುಕಿದಮರರಿಗಸುರಹರನ ಕಟಾಕ್ಷ ವಿಕ್ಷೇಪ ।
ಬಲಿದ ತಾಪತ್ರಯ[1]ದ ಭವಗೋ[1]
ಟಲೆಯ ಜೀವಿಗೆ ಸುಪ್ರಬೋಧದ
ಸುಳಿವಿನಂತಿರೆ ಪಾರ್ಥ ಮೈದೋಱಿದನು ನಿಜ ಬಲಕೆ ‖ ೪೬

ಕೆದಱಿತೀ ಬಲ ಬೆರಳ ತುಟಿಗಳೊ
ಳೊದಱಿತಾ ಬಲ ತಾಪ ಶಿಖಿಯಲಿ
ಕುದಿದುದೀ ಬಲ ಭೀತಿ ಕಂಚುಕ[illegible]ಕಳೆದುದಾ ಬಲಕೆ ।
ಕದಡಿತೀ ಬಲ ರೋಮ ಪುಳಕವ
ಹೊದೆದುದಾ ಬಲ ಹಿಂಡೊಡೆದು ನೆಱೆ
ಕದುಬಿತೀ ಬಲ ನೆರೆದುದಾ ಬಲ ನರನ ರಥ ಸುಳಿಯೆ ‖ ೪೭

ಗಿರಿಯ ವಿಸಟಂಬರಿಯನಮರೇ
ಶ್ವರನು ತಡೆವವೊಲಳ್ಳಿಱಿವ ದಿ
ಕ್ಕರಿಯನಡಗಟ್ಟಿದನು ಕಾಯದೊಳೊಟ್ಟಿದನು ಶರವ ।
ಕೆರಳಿದನು ಭಗದತ್ತನಿವನೇ
ನರನು ಫಡ ಫಡ ನಿಲ್ಲು ನಿಲ್ಲೆನು
ತುರು ಶರೌಘವ ಕಱೆದು ಮುಸುಕಿದನರ್ಜನನ ರಥವ ‖ ೪೮

ಪೂತುರೇ ಭಗದತ್ತ ಬಿಲು ವಿ
ದ್ಯಾತಿಶಯ ಕಿಱಿದುಂಟಲಾ ಶರ
ಪಾತವಿನಿತಿಲ್ಲದಡೆ ಹೊಳ್ಳಿಸಬಹುದೆ ನೃಪ ಧನವ ।
ನೂತನ ದ್ವಿಪದಿಂದ ವೈರಿ
ವ್ರಾತವನು ಸೋಲಿಸಿದ ಗರ್ವದ
ರೀತಿಗಿದು ಠಾವಲ್ಲೆನುತ ತೆಗೆದೆಚ್ಚನಾ ಪಾರ್ಥ ‖ ೪೯

[1] ದೊಠೊಡಗೋ (ಕ.ನ.ಬ), ದೊಳೊಳಗೋ (ಗ.ತ), ದಲಳಿಗೋ (ಚ.ಪ).

ನರನ ಶರ ಜಾಲವನು ಖಂಡಿಸಿ
ಸುರಿದನಂಬನು ಕೃಷ್ಣರಾಯನ
ಸಿರಿಯೊಡಲ ಸೋಂಕಿದವು ನೂಕಿದವಂಬು ಗಱಿ ಸಹಿತ ।
ನರನ ಕುದುರೆಯ ಮೇಲೆ ಸಿಂಧದ
ಹರಿಯ ತನುವಿನ ಮೇಲೆ ತಳಿತವು
ಶರ ನಿಕರ ಬಿಡದೆಚ್ಚನಾ ಭಗದತ್ತನರ್ಜುನನ ॥ ೫೦

ಸೆಳೆದು ಬಾಣ ತ್ರಯದಲೆಚ್ಚನು
ಫಲುಗುಣನ ಮಕುಟವನು ಮುರಿದುದು
ಕೆಲಕೆ ಸಡಿಲುವ ಮಣಿಗಳಲಿ ವರ ಮೌಳಿಯೋಸರಿಸೆ ।
ಬಲಿದು ಸಸಿನವ ಮಾಡಿ ಖಾತಿಯ
ತಳೆದು [1]ಕೂರಂ[1]ಬಿನಲಿ ಹೂಳಿದ
ನಳವಿಯಲಿ ರಿಪು ಗಜವನಾ ಭಗದತ್ತನವಯವವ ॥ ೫೧

ಇಳುಹಿದನು ಬಲುಗುಳವ ಖಂಡಿಸಿ
ಕಳಚಿದನು ಮೊಗರಂಬವನು ಹೊ
ಮ್ಮಳಿಯ ಕುಣಿಕೆಯ ಮುಱಿದು ತಱಿದನು ಸುತ್ತ ಝೆಂಚೆಗಳ ।
ಹಳವಿಗೆಯನಾ ಛತ್ರ ಚಮರಾ
ವಳಿಯ ಸೀಳಿದು ಬಿಸುಟನಾ ಗಜ
ತಿಲಕ ಮುಂಡಾಸನದಲಿರ್ದುದು ಭೂಪ ಕೇಳೆಂದ ॥ ೫೨

ಮತ್ತೆ ಖಾತಿಯೊಳಂಕುಶದಿನೊಡೆ
ಯೊತ್ತಿಬಿಟ್ಟನು ಗಜವನರ್ಜುನ
ನತ್ತಲಿಭ ತೂಳಿದಡೆ ತಿರುಹಿದನಸುರ ರಿಪು ರಥವ ।
ಇತ್ತ ಬಲದಲಿ ಬಲಕೆ ಮೊಗವಿಡ
ಲತ್ತಲೆಡದಲಿ ಮರಳಲಲ್ಲಿಂ
ದತ್ತ ತಿರುಗಿಸಿ ಬಳಲಿಸಿದನಸುರಾರಿ [2]ದಿಗ್ಗಜವ[2] ॥ ೫೩

ಸಾರಥಿಯ ಕೊಂದಲ್ಲದರ್ಜುನ
ತೀರುವವನಲ್ಲೆನುತ ದಳ್ಳುರಿ
ಧಾರೆಯಂಬೈದಱಲಿ ದೇವನನೆಸಲು ಮಧ್ಯದಲಿ ।

---

[1] ನೂಱಂ (ಗ), ತೂಱಂ (ಚ.ಟ.ತ.ದ.ನ), ಮೂಱಂ (ಪ.ಬ). [2] ಮದ ಗಜವ (ಚ.ತ.ದ.ಪ.ಬ)

ಹಾರಿಸಿದನಾ ಪಾರ್ಥನಿವನೆಡೆ
ಗೋರಿದನಲಾ[1]ಯೆನುತ ಕೆಡೆಯೆನು[1]
ತಾರಿ ಸುರಿದನು ನೂಱು ಬಾಣವನರ್ಜುನನ ಮೇಲೆ ‖ ೫೪

ಅನಿತು ಶರವನು ಕಡಿದು ಭಗದ
ತ್ತನ ಧನುವನಿಕ್ಕಡಿಗಡಿಯೆ ಕಂ
ಗನೆ ಕನಲಿ ಗವಸಣಿಗೆಯಿಂದುಗಿದನು ನಿಜಾಯುಧವ ।
ದಿನಪ ಕೋಟಿಯ ರಶ್ಮಿಯನು ತುದಿ
ಮೊನೆಯೊಳುಗುಳುವ ಬಾಯಿಧಾರೆಯ
ತನಿಯುರಿಯ ತೆಕ್ಕೆಯಲಿ ಥಳಥಳಿಸುವ ಮಹಾಂಕುಶವ ‖ ೫೫

ತೈಲ ಲೇಪದ [2]ನಯದ[2] ಹೊಗರಿನ
ಜಾಳಿಗೆಯ ಗಹಗಹಿಕೆಗಳ ಹೂ
ಮಾಲೆಗಳ ಸಿಂಪಿಸಿದ ಗಂಧದ [3]ಬಂಧದ[3]ಕ್ಷತೆಯ ।
ಕೀಲಣೆಯ ಮಣಿವೆಳಗುಗಳ ಹರಿ
ಥಾಳಿಯಲಿ ಕಾಳೋರಗನ ಕುಡಿ
ನಾಲಗೆಯವೋಲೆಸೆದುದಂಕುಶ ಭಟನ ಮುಷ್ಟಿಯಲಿ ‖ ೫೬

ಕುಡಿ ಕಿರೀಟಿಯ ರಕುತವನು ಹಗೆ
ಕೆಡಲಿ ಕೌರವರಾಯನಾಳಲಿ
ಪೊಡವಿಯನು ಪರಿತೋಷವಾಗಲಿ ನೃಪನ ಮಿತ್ರರಿಗೆ ।
ತಡೆದು ಹಲಕಾಲದಲುಪಾಸಂ
ಬಡಿಸಿದೆನ್ನದು ದೋಷ ಖಾತಿಯ
ಹಿಡಿಯದಿರು ನೀನೆನುತ ತಿರುಹಿಟ್ಟನು ಮಹಾಂಕುಶವ ‖ ೫೭

ತೀರಿತಿನ್ನೇನಕಟ ಪಾಂಡವ
ವೀರರುಬ್ಬಟೆ ಹಾಱಿತೇ ತ್ರಿಪು
ರಾರಿಯುರಿಗಣ್ಣಿಂಗೆ ಸೋಲದ ಕೈದುಗೊಂಡನಲ ।
ಧಾರುಣಿಯನಿನ್ನಾಣಲಿ ಧರ್ಮಕು
ಮಾರನಕಟಿನ್ನಾರು ಕಾವವ
ರಾರೆನುತ ತಲ್ಲಣಿಸುತಿರ್ದುದು ಪಾಂಡುಸುತ ಸೇನೆ ‖ ೫೮

---

[1] ಕೆಡಹಿವನನೆನು (ಗ.ಚ.ಬ).　[2] ಜಿಗಿಯ (ಚ).　[3] ಕೆಂಪಿನ (ಟ.ದ).

ಹಾ ಯುಧಿಷ್ಠಿರ ರಾಯ ಶಿವ ಶಿವ
ವಾಯುಸುತ ಹಾ ಪಾರ್ಥ ಹಾ ಮಾ
ದ್ರೇಯರಿರ ಹಾಯೆನುತ ಹರೆದುದು ಸೇನೆ ದೆಸೆ ದೆಸೆಗೆ ।
ಬಾಯ ಬಿಟ್ಟುದು ದಿವಿಜ ಬಲ ನಿ
ರ್ದಾಯದಲಿ [1]ನೆಲನಾಯಿತಲ ಕುರು[1]
ರಾಯಗೆನುತಿರ್ದುದು ಜಗತ್ತ್ರಯವೊಂದು ನಿಮಿಷದಲಿ ॥ ೫೯

ಇದಱ ಪಾಡೇನೇಸಪಾಯವ
ನೊದೆದು ಕಳೆಯರು ಕೃಷ್ಣ ಭಕ್ತರು
ಸದರವೇ ಉರಿಗೆಂಡವೊಱಲೆಯ ಬಾಯ್ಗೆ [2]ಭಾವಿಸಲು[2] ।
ಹೊದಱುಗಿಡಿಗಳ ಹೊಗೆಯ ಹೇರಾ
ಳದಲಿ ಬಹ ದಿವ್ಯಾಯುಧಕೆ ಚಾ
ಚಿದನು ವಕ್ಷಸ್ಥಳವನಸುರಾರಾತಿಯಡಹಾಯ್ದು ॥ ೬೦

ಮೆಱೆದುದುರದಲಿ ಕೌಸ್ತುಭದ ಮಣಿ
ಮಱಿಯ[3]ನಿಳುಹಿದ ವೋಲು[3] ಬೆಳಗಿನ
ತುಱುಗಲಲಿ ತೂಗಾಡುತಿದ್ದುದು ಕೈದು ತೊಡವಾಗಿ ।
ಮುಱಿದುದಗ್ಗದ ಭೀತಿ ಹರುಷದ
ಸೆಱೆಗೆ ಬಿಡುಗಡೆಯಾಯ್ತು ಬಲು ಬೊ
ಬ್ಬಿಱಿವುತಿರ್ದುದು ವೈರಿ ಕಟಕದೊಳರಸ ಕೇಳೆಂದ ॥ ೬೧

ಕೌತುಕವನಿದ ಕಂಡು ಫಲುಗುಣ
ಕಾತರಿಸಿ ನುಡಿದನು ಮುರಾಂತಕ
ಸೂತತನಕಲಸಿದನೆ ಕಾದಲಿ ಕೌರವನ ಕೂಡೆ ।
ಸೂತತನವೇ ಸಾಕು ತನಗೆನು
ತಾ ತತುಕ್ಷಣ ಧನುವ ಬಿಸುಟು ವಿ
ಧೂತ ರಿಪು ಬಲ ಪಾರ್ಥನಿದ್ದನು ಹೊತ್ತು ದುಗುಡದಲಿ ॥ ೬೨

ತಿರುಗಿ ಕಂಡನು ಕೃಷ್ಣನೀತನ
ಪರಿಯನಱಿದನು ಮನದಲಿವನು
ತ್ತರವ ಕೇಳುವೆವೆಂದು ಪಾರ್ಥನ ನುಡಿಸಿದನು ನಗುತ ।

[1] ಗೆಲವಾಯ್ತು ಕೌರವ(ಬ). [2] ಬಾಣಸವೆ (ಟ). [3] ನೀದಂದದಲಿ(ಗ.ಚ).

ಉರವಣಿಸುತಿದೆ ಮತ್ತೆ ಕರಿ ನಿಜ
ಕರದೊಳಾಯುಧವಿಲ್ಲ ಘನ ಸಂ
ಗರಕೆ ಬೇಸಱು ತೋಱಿತೇ ತನ್ನಾಣೆ ಹೇಳೆಂದ ॥ ೬೩

ಕಾದುವಾತನು ನೀನು ವೈರಿಯ
ಕೈದುವನು ನೀ ಗೆಲಿದೆಯಿನ್ನುಱೆ
ಕಾದುವವರಾವಲ್ಲ ಸಾರಥಿತನವೆ ಸಾಕೆಮಗೆ ।
ಕೈದುವಿದೆಕೋ ಕೃಷ್ಣ ನೀನೇ
ಕಾದು ವಾಘೆಯ ತಾಯೆನಲು ಮರು
ಳಾದನೈ ನರನೆನುತ ನಗುತ ಮುರಾರಿಯಿಂತೆಂದ ॥ ೬೪

ಆಡಬಾರದು ತೋಱಿ ನುಡಿದರೆ
ಖೋಡಿ ನಿನಗಹುದೆಲೆ ಮರುಳೆ ನೀ
ನೋಡಲೆವೆ ಸೀವವು ಕಣಾ ನಿನ್ನಳವಿನಾಯುಧವೆ ।
ಹೂಡಲಾಪುದು ಜಗವನಂತಕ
ಗೂಡಲಾಪುದು ಮುನಿದರಿದ ಕೈ
[1]ಮಾ[1]ಡುವರೆ ನಿಲಬಾರದಜರುದ್ರಾಮರೇಂದ್ರರಿಗೆ ॥ ೬೫

ವಿಲಸ[2]ದುಪನಿಷದುರು[2]ರಹಸ್ಯವ
ತಿಳುಹಿದೆನು ನಿನಗೊಮ್ಮೆ ಮತ್ತೆಯು
ತಿಳಿದುದಿಲ್ಲಾ ಕ್ಷತ್ರ ತಾಮಸ ಬಿಡದು ಬುದ್ಧಿಯಲಿ ।
ಸುಲಭವಂತರ್ನಿಷ್ಠರಿಗೆ ನಿ
ಷ್ಕಳ ನಿರೂಪನನಂತ ನಿಜ ನಿ
ರ್ಮಳವೆನಿಪ ಪರಮಾತ್ಮ ಚಿನುಮಯ ರೂಪ ತಾನೆಂದ ॥ ೬೬

ಸಂಗಿಯಲ್ಲದ ವಿಮಳ ಪರಮಾ
ತ್ಮಂಗೆ ಲೀಲೆಯೊಳಾಯ್ತು ಮಾಯಾ
ಸಂಗವದಱಿಂದಾಯ್ತು ನಾಲುಕು ಮೂರ್ತಿಗಳು ತನಗೆ ।
ಅಂಗಿಯಂಗ ವಿಭಾಗವಿಲ್ಲದ
ಭಂಗಸನ್ಮಾತ್ರಂಗೆ ಭಾವಿಸ
ಲಂಗ ಕಲ್ಪನೆ ಮಿಥ್ಯವಲ್ಲಾ ಪಾರ್ಥ ಹೇಳೆಂದ ॥ ೬೭

---

[1] ಗೂ (ಕ). [2] ದುಪನಿಷವರ (ಚ.ಟ.ತ.ದ.ನ.ಪ).

ಇಂದು ಕಮಳಭವ ಪ್ರಜೇಶ್ವರ
ರೊಂದು ಮೂರುತಿ ವಿಷ್ಣು [1]ಮನು[1]ಗಳು
ಸಂದ ಪಾರ್ಥಿವ ಲೋಕಪಾಲಕರೊಂದು ಮೂರ್ತಿಯದು ।
ಇಂದುಶೇಖರನಗ್ನಿ ಯಮನರ
ವಿಂದ ಸಖ ಕಾಲಾಗ್ನಿ ಮೂರ್ತಿಯ
ರೊಂದು ಮೂರುತಿ ವಿಶ್ವದೊ[2]ಳು ನಿಸ್ಯೂತಚೈತನ್ಯ[2] ॥ ೬೮

ಇದುವೆ ಮತ ಕೆಲಬರಿಗೆ ಕೆಲಬರಿ
ಗಿದು ಮತವು ವಿವಿಧಾವತಾರದ
ಲುದಿಸುತೊಂದಿಹುದೊಂದು [3]ಮೂರ್ತಿ ತಪೋ[3] ವಿನೋದದಲಿ ।
ಉದಧಿಯೊಳು ವರ ಯೋಗ ನಿದ್ರಾ
ಸ್ಪದದಲೊಂದಿಹುದೊಂದಖಿಳ ವಿ
ಶ್ವದ ಸುಕೃತ ದುಷ್ಕೃತವನೀಕ್ಷಿಸುತಿಹುದು ಕೇಳೆಂದ ॥ ೬೯

ಕೆಲರು ಧರ್ಮಾರ್ಥಾದಿ ನಾಲುಕು
ಲಲಿತ ಮೂರ್ತಿಗಳೆಂಬರಿದಱೊಳು
ಕೆಲರು ಜಾಗರಣಾದ್ಯವಸ್ಥೆಗಳೆಂಬ ಮೂರ್ತಿಗಳು ।
ತಿಳಿಯಲೋತ ಪ್ರೋತದಲಿ ನಿ
ಷ್ಕಳವೆ ಸಕಳವೆಯಾಗಿ ವಿಶ್ವದೊ
ಳೊಳಗು ಹೊಱಗಾನಲ್ಲದಿಲ್ಲೆಲೆ ಪಾರ್ಥ ಕೇಳೆಂದ ॥ * ೭೦

ಉದಧಿ ಶಯನನ ಮೂರ್ತಿ ಕಲ್ಪಾಂ
ತದಲಿ ಕರಗಿದ ಧರೆಯನುದ್ಧರಿ
ಸಿದೆನು ಯಜ್ಞವರಾಹ ರೂಪಿನಲಂದು ಕರುಣದಲಿ ।
ಪದವ ಭಜಿಸಿಯೆ ಭೂಮಿ ತಾ ಬೇ
ಡಿದಳು ಪುತ್ರನನಾಕೆಯಲಿ ಜನಿ
ಸಿದನು ನರಕಾಸುರನವಧ್ಯನು ಸಕಲ [4]ದಿವಿಜರಿಗೆ[4] ॥ ೭೧

ಇದು ವರಾಹನ ದಾಡೆಯಿದನಾ
ತ್ರಿದಶ ವೈರಿಗೆ ಕೊಟ್ಟೆನವನಿಂ
ದಿದುವೆ ಭಗದತ್ತಂಗೆ ಬಂದುದು ವೈಷ್ಣವಾಸ್ತ್ರವಿದು ।

[1] ಮುನಿ (ಕ.ಚ.ಪ). [2] ಳನುಸ್ಯೂತಚೈತನ್ಯ (ಪ). [3] ಮೂರುತಿವರ (?.ಚ.ಪ). * ಈ ಪದ್ಯವು (ನ) ಪ್ರತಿಯಲ್ಲಿಲ್ಲ. [4] ಜೀವರಿಗೆ (ಚ.ಪ).

ಇದು ಹರ ಬ್ರಹ್ಮಾದಿಗಳ ಗೆಲು
ವುದು ಕಣಾ ನಿಮಿಷದಲಿ ತನಗ
ಲ್ಲದೆ ಮಹಾಂಕುಶವುಳಿದ ಭಟರಿಗೆ ಮಣಿವುದಲ್ಲೆಂದ ॥ ೭೨

ತೀರಿತಾತನ ಶಕ್ತಿ ಚಾಪದ
ನಾರಿ ಬೆಸಲಾಗಲಿ ಮಹಾಸ್ತ್ರವ
ನಾರುಭಟೆಯಲಿ ಗಜವ ಮುಱಿ ಕೆಡೆಯೆಸು ಮಹೀಸುತನ ।
ಹೋರದಿರು ಹೊಗು ಬವರಕೆನಲಸು
ರಾರಿಯಂಘ್ರಿಯೊಳೆಱಗಿ ಕರುಣಾ
ವಾರಿಧಿಯೊಳಭಯವನು ಪಡೆದನು ತುಡುಕಿದನು ಧನುವ ॥ ೭೩

ಎಲವೆಲವೊ ಭಗದತ್ತ ಕಲಿತನ
ದಳವ ತೋಱಿನ್ನೆನಗೆನುತ ಹೊಳೆ
ಹೊಳೆವ ಕೂರಂಬಿನಲಿ ಕೋದನು ಗಜದ ಮಸ್ತಕವ ।
ನಿಲುಕಿ ನೆತ್ತಿಯನೊಡೆದು ನಿಡು ಪ
ಚ್ಚಳಕೆ ಹಾಯ್ದುವು ಬಾಣ ದಿಕ್ಕರಿ
ನೆಲಕೆ ದಾಡೆಯನೂಱಿ ಕೆಡೆದುದು ಸುಪ್ರತೀಕ ಗಜ ॥ ೭೪

ಸುತ್ತಿದುರಗನ ಮಂದರಾಚಲ
ಕಿತ್ತು ಬೀಳ್ವಂದದಲಿ ಬರಿಕೈ
ಸುತ್ತಿ ಮಗ್ಗುಲನೂಱಿ ಕೆಡೆದುದು ಸುಪ್ರತೀಕ ಗಜ ।
ಇತ್ತಲರ್ಜುನ[1]ದೇವನುಗಿದನು[1]
ಬತ್ತಳಿಕೆಯಲಿ ದಿವ್ಯ ಶರವನು
ತೆತ್ತಿಸಿದನವನುರವನಿಬ್ಬಗಿಯಾದುದರಿ ದೇಹ ॥ ೭೫

ಗಿರಿಯ ಶಿರದಲಿ ಹೊತ ಕಕ್ಕೆಯು
ಮರ ಮುಱಿದು ಬೀಳ್ವಂತೆ ವಿಮಳಾ
ಭರಣ ಕಾಂತಿಯ ಕಡಲ ಕೋಮಲ ಕಾಯ ಭಗದತ್ತ ।
ಉರುಳಿದನು ಗಜದಿಂದ ಕುರು ಬಲ
ಸರಿಯೆ ಸುರ ಕುಲ ಕುಸುಮ ವೃಷ್ಟಿಯ
ಸುರಿಯೆ ರಿಪು ಸೇನೆಯಲಿ ಹರುಷದ ಹೊನಲು ಬಱುವರಿಯೆ ॥ ೭೬

[1] ಅಯ್ದು ಹೊಡಿದ (ಕ.ಟಿ.ತ).

ಹಱಿದುದಗ್ಗದ ಸುಪ್ರತೀಕ
ದ್ವಿರದ ಭಗದತ್ತಾಂಕನವನಿಯೊ
ಳುರುಳಿದನು ದಳ ಮುಱಿದುದಿನ್ನೇನೆನುತ ಬಲ ಬೆದಱೆ ।
ನರನ ತಡೆದರು ಸುಬಲ ಸುತರಿ
ಬ್ಬರು ನೃಪಾಲ ಕುಮಾರರೈನೂ
ಱುಱುಬಿದರು ಗಾಂಧಾರ ರಾಜರು ಶಕುನಿಯೊಡಗೂಡಿ ॥ ೭೭

ಕೊಂದನಿಬ್ಬರ ಸೌಬಲರ ನೃಪ
ನಂದನರ ಗಾಂಧಾರರೊಂದೆರ
ಡೆಂದು ಸಲುಗೆಗೆ ಸಲಿಸಿ ಬಂದೈನೂಱ ಬಱಿಕ್ಕೈದು ।
ಬಂದ ದ್ರೋಣನ ಹಳಚಿ ಭಂಗಕೆ
ತಂದನಹಿತ ವ್ರಜವನಿತ್ತಲು
ಸಂದಣಿಸಿದರು ಕೌರವರು ಪವಮಾನ ಸುತನೊಡನೆ ॥ ೭೮

ಗುರು ತನುಜ ರವಿ ಸೂನು ಮಾದ್ರೇ
ಶ್ವರ ಜಯದ್ರಥ ಕೌರವಾದಿಗ
ಳರಿ ಗದಾಘಾತದಲಿ ಕೈ ಮೈದಣಿದು ಮನದಣಿದು ।
ತೆರಳಿದರು ಬಳಿಕಪರ ಜಲಧಿಯೊ
ಳುರಿವ [1]ವಡಬನ ದೀಪ್ತ[1] ಶಿಖರದೊ
ಳೆಱಗುವಂತೆ ಪತಂಗ ಮಂಡಲವಿಳಿದುದಂಬರವ ॥ ೭೯

ತಿರುಗಿದರು ಕೌರವರು ದ್ರೋಣನ
ಬೆರಳ ಸನ್ನೆಗೆ ಸನ್ನೆಗಾಳೆಗ
ಳುರವಣಿಸಿತೆನೆ ತಂಬಟದ ನಿಸ್ಸಾಳ ರಭಸದಲಿ ।
ಮುರಿದರಿವರಳ್ಳಿಱಿವ ಬೊಬ್ಬೆಯ
ಧರಧುರದ ಕಹಳೆಗಳ ಭೇರಿಯ
ಭರಿತ ರವದಲಿ ವೀರ ನಾರಾಯಣನ ಕರುಣದಲಿ ॥ ೮೦

ಮೂಱನೆಯ ಸಂಧಿ ಮುಗಿದುದು.

---

[1] ವಡಬಾನಳನ (ಸ).

# ನಾಲ್ಕನೆಯ ಸಂಧಿ

ಸೂಚನೆ ‖ ರಾಯ ಕಟಕಾಚಾರ್ಯನಾ ಚಾ
ಪಾಯುಧಾಗ್ರಣಿ ಮೋಹಿದನು ಪ
ದ್ಮಾಯತ ವ್ಯೂಹವನು ಸೈನ್ಯದ ಜಾಣನಾ ದ್ರೋಣ ‖

ನೀನು ನೆರಹಿದ ಸುಕೃತ ಫಲವದ
ನೇನ ಹೇಳುವೆನಿತ್ತಲುಗ್ಗಡ
ದಾನೆ ಬಿದ್ದುದು ಕಾದಿ ನಸು ಸೊಪ್ಪಾದುದರಿ ಸೇನೆ ।
ಧ್ಯಾನವಿತ್ತಲು ರಾಗವತ್ತಲು
ಮೋನವಿತ್ತಲು ರಭಸವತ್ತಲು
ಹಾನಿಯಿತ್ತಲು ವೃದ್ಧಿಯತ್ತಲು ಭೂಪ ಕೇಳೆಂದ ‖ ೧

ಎತ್ತಲೊಲೆವುದು ಧರ್ಮ ಬಲ ತಾ
ನತ್ತಲೊಲೆವುದು ದೈವ ದೈವವ
ದೆತ್ತಲೊಲೆದಿಹುದತ್ತ ವಿಜಯ ಶ್ರೀಯ ಕುಡಿ ನೋಟ ।
ಹೆತ್ತ ನಿನ್ನೊಡಲಿಂಗೆ ತಂಪಿನ
ತೆತ್ತಿಗನೊ ಮೇಣ್ ಬಹಳ ತಾಪದ
ಮುತ್ತಯನೊ ಕುರು ರಾಯನೆಲೆ ಧೃತರಾಷ್ಟ್ರ ಕೇಳೆಂದ‖ ೨

ಸಾಕು ಸಂಜಯ ನುಡಿಯ ಖಡ್ಗದ
ಲೇಕೆ ಗಂಟಲ ಕೊಯ್ವೆ ತಾನವಿ
ವೇಕದಲುಪಾರ್ಜಿಸಿದ ದುಷ್ಕೃತ ಫಲವೆ ತನಗಾಯ್ತು ।
ಸಾಕದಂತಿರಲಿನ್ನದೇ ಹ[1][ರಿ][1]
ಶೋಕಿಸುವೆನಿಲ್ಲಿಂದ ಮೇಲು
ದ್ರೇಕಿ ಕೌರವನೇನ ನೆಗಳಿದ ಹದನ ಹೇಳೆಂದ ‖ ೩

ಚಿತ್ತವಿಸು ಧೃತರಾಷ್ಟ್ರ ಕೌರವ
ನಿತ್ತನಿರುಳೋಲಗವ ಮಂಜಿನ
ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ ।

---

[1] ಱ (ಕ.ಗ.ಚ.ತ.ದ.ನ.) ವಿ (ಪ.ಬ.)

ನೆತ್ತಿ ಮುಸುಕಿನ ಕೈಯ ಗಲ್ಲದ
ಕುತ್ತದಲೆ ನೆಟ್ಟಾಲಿಗಳ ಚಲ
ಚಿತ್ತರಿದ್ದುದು ಸಕಲ ನಾಯಕವಾಡಿ ದುಗುಡದಲಿ ॥ ೪

ದುಗುಡವೇಕೈ ನಿಮಗೆ ಕರ್ಣಾ
ದಿಗಳು ನೀವ[1]ಕ್ಕು[1]ಡರೆ ಬಲುಗಾ
ಳಿಗದೊಳಗೆ ಕೈಮಾಡಿ ನೊಂದಿರಿ ಕೊಂದಿರರಿ ಭಟರ ।
ಹಗೆಯ ಕಟ್ಟಲು ಕೊಟ್ಟ ಭಾಷೆಯ
ಬಿಗುಹು ಬೀತುದು ಗುರುಗಳಲಿ ನಂ
ಬುಗೆ ನಿರರ್ಥಕವಾಯ್ತೆನುತ ಕುರು ರಾಯ ಬಿಸುಸುಯ್ದ ॥ ೫

ದ್ರೋಣ ಮನಗೊಂಡಿಱಿವಡಂಬುಜ
ಪಾಣಿಯಿದಿರೇ ನಮ್ಮ ಭಾಗ್ಯದ
ಬಾಣಸಿಗ ವಿಧಿ ವಿಷವ ಬೆರಸಿದಡಾರು ಕಾವವರು ।
ಹೂಣಿ ಹೊಕ್ಕನು ಹಿಡಿದು ವೈರಿ
ಕ್ಷೋಣಿಪನ ತಱುಬಿದನು ನಾವ
ಕ್ಷೀಣ ದುರಿತರು ಹಲುಬಿ ಮಾಡುವುದಾವುದುಂಟೆಂದ ॥ ೬

ಬಲದೊಳಗೆ ಹೆಸರುಳ್ಳವರು [2]ಮು
ಮ್ಮ[2]ಳಿತವಾಯಿತ್ತಾನೆ ಕುದುರೆಗ
ಳಳಿದುದಕೆ ಕಡೆಯಿಲ್ಲ ಪವನಜ ಪಾರ್ಥರುಬ್ಬಟೆಯ ।
ನಿಲಿಸುವಾಪತ್ತಿಗರು ನಮಗಿ
ಲ್ಲಳಲಿ ಮಾಡುವುದೇನೆನುತ ನೃಪ
ತಿಲಕ ಬೇಸಱ ನುಡಿಯೆ ಬಳಿಕಿಂತೆಂದನಾ ದ್ರೋಣ ॥ ೭

ಪರಮ ಗರುಡೋದ್ಗಾರ ಮಣಿಯನು
ಗರಳ ಸುಡುವುದೆ ಕೃಷ್ಣರಾಯನ
ಕರುಣ ಕವಚವನೊಡೆಯಲಾಪವೆ ಎಮ್ಮ ಕೈದುಗಳು ।
ಅರಸ ಮರುಳೈ ಧರ್ಮಪುತ್ರನ
ಬೆರಸಿ ತುಡುಕಲು ತಡೆದನಱಿಯಾ
ಮುರಹರನ ಮೈದುನನು ಬಳಿಕೆಮ್ಮಳವೆ ಹೇಳೆಂದ ॥ ೮

---

[1] ಖ್ಖ (ಗ.ಟ.ತ.ದ.ನ.ಬ.) [2] ಮುಮ್ಮ (ದ.)

ನಾಳೆ ಫಲುಗುಣ ತಪ್ಪಿದರೆ ಭೂ
ಪಾಲಕನ ಕಟ್ಟುವೆನು ರಣದಲಿ
ಶೂಲಿಯಡ್ಡೈಸಿದರೆ ಹಿಡಿವೆನು ಚಿಂತೆ ಬೇಡಿದಕೆ ।
ಕೇಳು ಪದ್ಮವ್ಯೂಹದಲಿ ಹೊ
ಕ್ಕಾಳು ಮರಳಿದಡಸ್ತ್ರವಿದ್ಯಾ
ಭಾಳ ಲೋಚನನೆಂಬ ಬಿರುದನು ಬಿಟ್ಟೆ ನಾನೆಂದ ॥ ೯

ಒಳ್ಳಿತಿದು ಕಡು ಭಾಷೆ ನಾಳಿನ
ಗೆಲ್ಲವೇ ಗೆಲವರ್ಜುನನು ಹೊ
ಕ್ಕಲ್ಲಿ ಹೊಗುವೆವು ತಱುಬಿ ಕಾದುವೆವೆಮ್ಮ ಕಳನೊಳಗೆ ।
ಅಲ್ಲಿ ನೀನೊಲಿದಂತೆ ಮಾಡಿ
ನ್ನೆಲ್ಲವೇತಕೆ ಯೆನುತ ಸಾಹಸ
ಮಲ್ಲರೆದ್ದರು ವೀರ ಸಮಸಪ್ತಕರು ಗರ್ಜಿಸುತ ॥ ೧೦

ಪೂತು ಪಾಯಿಕು ತತ್ತ ಹೊತ್ತಿನೊ
ಳಾತುಕೊಂಬವರಾರು ಪಾರ್ಥಿವ
ಜಾತಿಯಲಿ ರಣ ದಿಟ್ಟರುಂಟೇ ನಿಮ್ಮ ಹೋಲಿಸಲು ।
ಸೋತುದರಿ ಬಲ ಹೋಗೆನುತ ಮು
ಯ್ಯಾಂತು ಮನ್ನಿಸಿ ಹೊನ್ನ ಬಟ್ಟಲೊ
ಳಾತಗಳಿಗೊಲಿದಿತ್ತನೈ ಕರ್ಪುರದ ವೀಳೆಯವ ॥ ೧೧

ಹರೆದುದೋಲಗವಿತ್ತ ಭುವನದೊ
ಳಿರುಳಡವಿಗಡಿತಕ್ಕೆ ಹರಿದವು
ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು ।
ಹರಿವ ಮಂಜಿನ ನದಿಯ ಹೊಳ್ದವು
ಸರಸವಾಯಿತು ಗಗನ ತಳ ತಾ
ವರೆಯ ಸಖ ನಿಜ ರಥವ ನೂಕಿದನುದಯ ಪರ್ವತಕೆ ॥ ೧೨ *

---

* (ಗ.ಟ.ನ.) ಪ್ರತಿಗಳಲ್ಲಿ ೧೨ನೆಯ ಪದ್ಯವಾದ ಮೇಲೆ ಈ ಕೆಳಗಿನ ಎರಡು ಪದ್ಯಗಳು ಹೆಚ್ಚಾಗಿವೆ :—

ಗರುಡಿಯೊಡೆಯನ ವೀರ ಪಟ್ಟದೊ
ಳೆರಡು ದಿನ ಸಲೆ ಸಂದುದಗ್ಗದ
ಕರಿಯು ಕಲಿ ಭಗದತ್ತ ಕಡಿವಡೆದನು ಮಹಾಜಿಯಲಿ ।
ತರಣಿ ವಂಠಣಿಸಿದನು ಮೂಡಣ
ಗಿರಿಯ ತುದಿಯಲಿ ಮೂಱನೆಯ ದಿನ
ಕಿರಡೆ ನಿಜಮೋಹರವ ನೆರಹಿದನಂದು ಕಲಿ ದ್ರೋಣ ॥ ೧॥

ಕೆದಱಿದವು ನಿಸ್ಸಾಳ ಬಱಿಸಿಡಿ
ಲದುಭುತ ಧ್ವನಿಯಲಿ ನಿರಂತರ
ವೊದಱಿ ಬಯ್ದವು ಕಹಳೆ ಬಿರುದಾವಳಿಯಲತಿರಥರ ।
ಕದುಬಿದವು ತಂಬಟದ ದನಿ ದಿಗು
ಸದನವನು ಬಲು ಬೊಬ್ಬೆಯಲಿ ನೆಲ
ನದಿರೆ ನಡೆದುದು ಸೇನೆ ಕಲಶೋದ್ಭವನ ನೇಮದಲಿ ॥ ೧೩

ಉಲಿದು ಸಮಸಪ್ತಕರು ತಮ್ಮಯ
ಕಳನ ಗೆಲಿದರು ಚಾತುರಂಗದ
ದಳದ ತೆರಳಿಕೆ ತೆಕ್ಕೆ ಮಿಗೆ [1]ಕುರು ಸೇನೆ ನಡೆತಂದು[1] ।
ಕಳನ ಪೆಂಠಣಿಸಿದವು ರಾಯನ
ಕೆಲ ಬಲದ ಸುಯಿಧಾನದಲಿ ರಿಪು
ವಳಯ ಧೂಳೀಪಟನು ಹೊಕ್ಕನು ರಣವನಾ ದ್ರೋಣ ॥ ೧೪

ನೆರೆದ ನಿಜ ಸೇನಾಧಿಪರ ಸಂ
ವರಣೆಗಳ ನೋಡಿದನು ನೀಡಿದ
ನರಿ ಬಿರುದ ಮಂಡಳಿಕರಿಗೆ ಕಾಳೆಗದ ವೀಳೆಯವ ।
ಹರಿಗೆ ಹಲಗೆ ಕೃಪಾಣ ತೋಮರ
ಪರಶು ಕಕ್ಕಡೆ ಕೊಂತ ಮುದ್ಗರ
ಸುರಗಿಯತಿಬಳ [2]ಪಾಯ್ದಳವ[2]ನಿರಿಸಿದನು ವಳಯದಲಿ ॥ ೧೫

ಎಸಳೆಸಳು ಮಿಗೆ ಸರಿಸದಲಿ ಜೋ
ಡಿಸಿದನವನೀಪಾಲರನು ತ
ದ್ವಿಸಜ ಕರ್ಣಿಕೆಯೊಡ್ಡಿನಲಿ ಬಲಿದನು ಸುಯೋಧನನ ।
ಪಸರಿಸಿತು ಕೌರವ ಕುಮಾರ
ಪ್ರಸರ ಕೇಸರವಾಯ್ತು ಮೃತ್ಯುವಿ
ನೊಸಗೆಗೆತ್ತಿದ ಗುಡಿಗಳೆನೆ ತಳಿತವು ಪತಾಕೆಗಳು ॥ ೧೬ *

---

ಇಂದಿನಾಹವದೊಳಗೆ ಮೋಹಿಸ್ ಯಮ
ನಂದನನ ಬಂಧಿಸುವೆನಹಿತರ
ಮಂದಿಯನು ಜವಗುಣಬಡಿಸುವೆನೆನುತ್ತ ನಾಯಕರು ।
ಮುಂದೆ ಮೇಳೈಸಿದನು ಪಾರ್ಥನ
ಹಿಂದೆ ಹತ್ತಲು ಕಲಿ ಸುಶರ್ಮಕ
ವೃಂದ ಸಮಸಪ್ತಕರ ಚೂಣಿಯ ನೆರಹಿ ಕಳುಹಿದನು ॥ ೨॥

[1] ಕುರುಭೂಮಿಗೈತಂದು (ಟ.ತ.ದ.ನ.) [2] ರಾವುತರ (ತ.ಟ.ಪ.)

* ಇಲ್ಲಿಂದ ಮುಂದಿರುವ ಪದ್ಯಗಳ ಕ್ರಮವು ಒಂದೊಂದು ಪ್ರತಿಯಲ್ಲಿ ಒಂದೊಂದು ತೆರನಾಗಿದೆ.

ನಿಲಿಸಿದನು ರಾವುತರನಾ ಹೊಱ
ವಳಯದಲಿ ರಾವುತರು ಮುಱಿದರೆ
ನಿಲುವುದೊಗ್ಗಿನ ದಂತಿ ಘಟೆ ಗಜಸೇನೆಗಡಹಾಗಿ ।
ತೊಳಗಿದವು ತೇರುಗಳು ತೇರಿನ
ದಳಕೆ ತಾನೊತ್ತಾಗಿ ರಣದ
ಗ್ಗಳೆಯರಿದ್ದುದು ರಾಯನೊಡಹುಟ್ಟಿದರು ಸಂದಣಿಸಿ ॥ ೧೭

ಅರನೆಲೆಯ ಸುಯಿಧಾನ ಬಾಹ್ಲಿಕ
ತರಣಿ ಸುತ ಗುರು ಸೂನು ಕೃತವ
ರ್ಮರಿಗೆ ಕೃಪ ದುಶ್ಶಾಸನಾದ್ಯರಿಗಿದಿರಿನಾರೈಕೆ ।
ಎರಡು ಕೆಲದಲಿ ಶಲ್ಯ ಶಕುನಿಗ
ಳಿರವು ಸೇನೆಯ ಸುತ್ತು ವಳಯದ
ಭರವ ಕೈಕೊಂಡೊಡ್ಡ ಮೆಱೆದನು ಗರುಡಿಯಾಚಾರ್ಯ ॥ ೧೮*

ಹಿಳುಕ ತಿರುಹುತ ಸಮ್ಮುಖದ ಬಲ
ದಳವಿಯಲಿ ಗಿರಿಯಂತೆ ಸೈಂಧವ
ಬಿಲುದುಡುಕೆ ಮೋಹರಿಸಿದರು ಭೂರಿಶ್ರವಾದಿಗಳು ।
ದಳದ ಕೆಲ ಬಲದೊಳಗೆ ನೃಪ ಸಂ
ಕುಲವ ನಿಲಿಸಿದನಮಮ ಕಾಲನ
ಬಳಗಕೌತಣವೆನಲು [1]ಪದ್ಮ[1]ವ್ಯೂಹ ರಂಜಿಸಿತು ॥ ೧೯

ಏನ ಹೇಳುವೆನದನು ನೃಪ ತವ
ಸೂನುವಿನ ಮೋಹರದೊಳಳ್ಳಿಱಿ
ವಾನೆಗಳನುಪ್ಪರಿಸಿ ಗಗನವ ಮೊಗೆವ ಕುದುರೆಗಳ ।

---

* ೧೮ನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ:

ಬಾಳರಚನೆಯ ಸುತ್ತ ಹೊದಿಸಿದ
ಸೂಲಗಿಯು ಕಡಿತಲೆಯನವನೀ
ಪಾಲಸುತರಗ್ರದಲಿ ನಿಲಿಸಿದನೂರ್ವರು ಕುಮಾರಕರ ।
ಮೇಳವಿಸಿ ನಿಲಿಸಿದನು ಮುಟ್ಟದಿ
ಯೇಳುಕೋಟಿ ಗಜಂಗಳನು ಭೂ
ಪಾಲ ಕೌರವನೃಪನ ನಿಲಿಸಿದನೆಸಳ ಮೊದಲನಲ ॥

[1] ಚಕ್ರ (ಕ.ಗ.ಟ.ದ.ಪ).

ಆ ನೃಪರ ರಥ ವಾಜಿಗಳ ಗಿರಿ
ಸಾನು ಸಡಿಲಲು ಜಡಿವ ಭೇರಿ
ಧ್ವಾನವನು ಪಯದಳದ ಸುಭಟರ ಸಿಂಹಗರ್ಜನೆಯು ‖ ೨೦

ಮೇಳವ[1]ದಲೆ[1]ನ್ನಾನೆಗಳ ಬರ
ಹೇಳು ಸುಭಟರೊಳಗ್ಗಳರ ಬರ
ಹೇಳು ಬಿಂಕಕೆ ಮೆಱೆವ ಭೀಮಾರ್ಜುನರ ಬರಹೇಳು ।
ಲೋಲುಪ[2][ತೆ][2]ಯವನಿಯಲಿಹರೆ ಬರ
ಹೇಳು ಯಮನಂದನನನಿಂದಿನ
ಕಾಳೆಗಕ್ಕೆಂದಿತ್ತು ಭಟ್ಟರನಟ್ಟಿದನು ದ್ರೋಣ ‖ ೨೧

ತುರಗ ಹಲ್ಲಣಿಸಿದವು ಸಮರ
ದ್ವಿರದ ಸಜ್ಜುಂಬಡೆದವೊಗ್ಗಿನ
ತುರಗದಲಿ ಹೂಡಿದವು ರಥ ಕಾಲಾಳು ಮುಂಕೊಳಿಸಿ ।
ಅರಸನನುಜರು ಸಹಿತ ಕೃಷ್ಣನ
ಬೆರಳ ಸನ್ನೆಯೊಳೈದೆ ಬಿಡೆ ಮೋ
ಹರಿಸಿ ನಿಂದುದು ಮುರಿದ ಮಕರ ವ್ಯೂಹ ರಚನೆಯಲಿ ‖ ೨೨

ಬಂದು ಸಮುಸಪ್ತಕರ ದೂತರು
ನಿಂದರರ್ಜುನನಿದಿರಲೇಳ್ಕೈ
ನಂದಗೋಪನ ಮಗನ ಬಿಡು ನೆರವಿಂಗೆ ಕರೆ ಹರನ ।
ಇಂದು ರಣದಲಿ ಬದುಕಿದರೆ ನೀ
ನೆಂದಿಗೆಯು ಬದುಕಿದನೆ ನಿಂದಿರು
ನಿಂದಿರೆಂದವಗಡಿಸಿ ಹಿಡಿದರು ಫಲುಗುಣನ ಸೆಱಗ ‖ ೨೩

ಖರೆಯುರಹಿರುಂಟುಂಟು ನೆರವನೆ
ಕರಸಿಕೊಂಡೇ ಬಹೆನೆನುತ ರಿಪು
ಚರರ ಕಳುಹಲು ದ್ರೋಣನಟ್ಟಿದ ದೂತರೈತಂದು ।
ಕರೆದರರ್ಜುನನನು ವೃಕೋದರ
ಧರಣಿಪತಿ ಮಾದ್ರೇಯ ಹೈಡಿಂ
ಬರಿಗೆ ನೂಕದು ಪಾರ್ಥ ಪದ್ಮ ವ್ಯೂಹವಿಂದಿನಲಿ ‖ ೨೪

---

[1] ಲ್ಲೆ (ಸ.ಗ.)  [2] ತಿ (ಸಿ)

ಶಿವನ ಬೇಡಿದ ಶರವ ತೆಗೆ ಗಾಂ
ಡಿವವ ಬಿಗಿ ನಿನ್ನಿಷ್ಟ ದೈವವ
ತವಕದಲಿ ನೀ ಬೇಡಿಕೊಂಬುದು ಪರಮ ಸದ್ಗತಿಯ ।
ಅವರಿವರ ಹವಣಲ್ಲ ಗುರು ಮುನಿ
ದವಗಡಿಸಿದರೆ ನಿಲುವನಾವನು
ಬವರಕೇಳೇಳೆಂದು ಜಱೆದರು ದೂತರರ್ಜುನನ ॥ ೨೫

ಚರರ ಕಳುಹಿದನಸುರ ವೈರಿಗೆ
ಕರವ ಮುಗಿದನು ಪಾರ್ಥನೀ ಸಂ
ಗರದೊಳಗೆ ನಿಮ್ಮಡಿಯ ಚಿತ್ತದೊಳಾವ ಘಟ್ಟಿನಲಿ ।
ಬೆರಸುವೆವು ನಾವಿಂದಿನೀ ಮೋ
ಹರದ ಮುರಿವಸದಳ ನಿಧಾನಿಸ
ಲರಿದೆನಲು ಮನದೊಳಗೆ ನಿಶ್ಚೈಸಿದನು ಮುರ ವೈರಿ ॥ ೨೬

ಅಳಿಯನೀ ಮೋಹರದೊಳಲ್ಲದೆ
ಫಲುಗುಣನ ಮಗನಿವನು ಬಲುಗೈ
ಯುಳುಹ ಬಾರದು ಕಾಯಿದರೆ ಕಲಿ ಯುಗಕೆ ಗತಿಯಿಲ್ಲ ।
ಫಲುಗುಣನ ನಾವಿತ್ತಲೊಯ್ದರೆ
ಬಳಿಕ ನಿರ್ಣಯವೆಂದು ಮನದಲಿ
ತಿಳಿದು ಪಾರ್ಥಂಗೆಂದನಸುರಾರಾತಿ ನಸು ನಗುತ ॥ ೨೭

ಗುಣಕೆ ಹುರುಡೇ ನಿನ್ನ ಮಗನೀ
ರಣವ ಬಗೆವನೆ ಸೂರ್ಯನಾರೋ
ಗಣೆಗೆ ಸೊಡರೇ ಸಾಕಿದೇತಕೆ ಬಯಲ ಭಂಡತನ ।
ಕೆಣಕು ನಡೆ ಸಮಸಪ್ತಕರನೀ
ಬಣಗುಗಳ ಕೊಂಬನೆ ಕುಮಾರಕ
ನಣಕವಲ್ಲೆಂದಸುರ ರಿಪು ತಿರುಹಿದನು ನಿಜ ರಥವ ॥ ೨೮*

---

* ೨೮ನೆಯ ಪದ್ಯವಾದಮೇಲೆ (ಗ.ಬ.) ಪ್ರತಿಯಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ:

ಕಳುಹಿದರು ಸಮಸಪ್ತಕರು ಮೂ
ದಲಿಸಿ ದೂತಾಳಿಗಳ ನಿತ್ತಲು
ಮಲೆತು ನಿಂದನು ದ್ರೋಣ ಯಮಜನ ಹಿಡಿವ ತವಕದಲಿ ।
ಬಲದೊಳಮ್ಮುವರಿಲ್ಲ ಭೂಪನ
ಕಳುಹದಿರು ಕಾಳೆಗಕೆ ನೀನೆಂ
ದಳವಿಯುಲಿ ಕಾದೆಂದು ಭೀಮಂಗರುಹಿ ನಡೆತಂದ ॥

ಹರಿ ಸಹಿತ ಕಲಿ ಪಾರ್ಥನತ್ತಲು
ತಿರುಗಿದನು ಬಳಿಕಿತ್ತಲೀ ಮೋ
ಹರ ಮಹಾಂಭೋನಿಧಿಗೆ ಮೊಗಸಿತು ಸರ್ವತೋಮುಖರು ।
ಮೊರೆವ ಪಟಹ ಮೃದಂಗ ಘನ ಜ
ರ್ಜರಿತವಹ ನಿಸ್ಸಾಳ ಚಯದ
ಬ್ಬರಣೆ ಗಬ್ಬರಿಸಿದುದು ಕಮಲಭವಾಂಡ ಖರ್ಪರವ ॥ ೨೯

ಉರವಣಿಸಿದರು ನಕುಲ ಸಾತ್ಯಕಿ
ವರ ವಿರಾಟ ದ್ರುಪದ ಕೈಕೆಯ
ಬಿರುದ ಧೃಷ್ಟದ್ಯುಮ್ನ ಕುಂತೀಭೋಜ ಮೊದಲಾಗಿ ।
ಧರಣಿಪರು ಥಟ್ಟೈಸಿ ರಿಪು ಮೋ
ಹರಕೆ ಕವಿದುದು ಕಾದಿ ದುರ್ಗವ
ಮುಱಿಯಲಱಿಯದೆ ಮಱಿವುತಿದ್ದುದು ಬಸಿವ ರಕ್ತದಲಿ ॥ ೩೦

ಸುಳಿದು ಹರಿ ಮೇಖಲೆಯ ಮೋಹರ
ದೊಳಗೆ ಮುಗ್ಗಿದಿರೈ ಮಹಾಮಂ
ಡಳಿಕರಿರ ಫಡ ಹೋಗಿರೈ ನೀವೆನುತ ಖಾತಿಯಲಿ ।
ಬಿಲುದುಡುಕಿ ಪವಮಾನ ನಂದನ
ನಳವಿಗೊಟ್ಟನು ಹೂಣೆ ಹೊಕ್ಕರಿ
ಬಲವನಿಱಿದನು ಘಾಯವಡೆದನು ಘೋರ ಸಮರದಲಿ ॥ ೩೧

ಕಾದಲೆನ್ನಳವಲ್ಲ ಬಲ ದು
ರ್ಭೇದವಿದು ಶಿವಶಿವ ಯೆನುತ್ತ ವೃ
ಕೋದರನು ಮರಳಿದನು ದುಗುಡಕೆ ತೆತ್ತು ನಿಜ ಮುಖವ ।
ಕೈದೆಗೆಯೆ ರಿಪು ಬಲದ ಸುಭಟರು
ಕಾದಿದನು ಕಲಿ ಭೀಮ ಗೆಲಿದನು
ಪೋದನೆಂದರು ಕೂಡೆ ಕೈಗಳ ಹೊಯ್ದು ತಮತಮಗೆ ॥ ೩೨

ಆ ಮಹಾಮೋಹರ[1]ವನೊಡೆಯಲು[1]
ಸೋಮ ಕುಲಜರು ಭೀತರಾದರು
ಹಾ ಮಹಾದೇವೆನುತ ಧರ್ಮಜ ನೋಡಿ ತಲೆದೂಗಿ ।
ರಾಮನಱಿವನು ಕೃಷ್ಣನಱಿವನು
ಸೀಮೆಯಲಿ ಕಲಿ ಪಾರ್ಥನಱಿವನು
ಭೂಮಿಪತಿಗಳೊಳುಳಿದ ಸುಭಟರಿಗಱಿವುದಿಲ್ಲೆಂದ ॥ ೩೩

[1] ಕೆಮಸಗಲು (ಗ) ವನೊಡ್ಡಲು (ಚ.ಪ.ಬ.)

ಹೊಗಲು ಬಲ್ಲನು ಹೊಕ್ಕವೊಲು ಹೆಱ
ದೆಗೆಯಲಱಿಯನು ವೀರ ಪಾರ್ಥನ
ಮಗನು ಮತ್ತಯ್ದನೆಯ ಸುಭಟರ ಕಾಣೆ ನಾನೆನುತ ।
ಅಗಿವ ಚಿಂತೆಯೊಳರಸ ಕದನದ
ದುಗುಡ ಭಾರದಲಿರಲು ಮುಂಗೈ
ನಿಗಳವನು ತಿರುಹುತ್ತ ನಸು ನಗುತೆದ್ದನಭಿಮನ್ಯು ॥ ೩೪

ಜನಪನಂಘ್ರಿಗೆ ಮಣಿದು ಕೈಮುಗಿ
ದೆನಗೆ ಬೆಸಸೈ ಬೊಪ್ಪ ತಾ ಬ
ಲ್ಲೆನು ಮಹಾಹವದೊಳಗೆ ಪದ್ಮವ್ಯೂಹ ಭೇದನವ ।
ಅನುವರವ ಗೆಲುವೆನು ಕೃತಾಂತನ
ಮನೆಗೆ ಕಳುಹುವೆನಹಿತರನು ನೀ
ನಿನಿತು ಚಿಂತಿಸಲೇಕೆ ಕಾಳೆಗಕೆನ್ನ ಕಳುಹೆಂದ ॥ ೩೫

ಹಸುಳೆಯದಟಿನ ನುಡಿಯ ಕೇಳಿದು
ನಸು ನಗುತ ಧರ್ಮಜನು ಘನ ಪೌ
ರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ ।
ಶಿಶುವು ನೀ[1]ನೆಲೆ ಮಗನೆ ಕಾದುವ
ರಸಮ ಬಲರು ಕರ್ಣಾ[1] ಮಹಾರಥ
ರೆಸುಗೆಯನು ನೀನೆಂತು ಸೈರಿಸಲಾಪೆ ಹೇಳೆಂದ ॥ ೩೬

ಸುಳಿಯಬಹುದಂಬುಧಿಯ ನಡುವಣ
ಸುಳಿಯೊಳಗೆ ಸಂವರ್ತಕನ ಕೊರ
ಳೊಳಗೆ ಕುಣಿಯಲುಬಹುದು ಮೃತ್ಯುವಿನಣಲ ಹೊಳಲೊಳಗೆ ।
ಹೊಳಕಬಹುದಹಿಪನ ಫಣಾ ಮಂ
ಡಳದೊಳಾಡಲುಬಹುದು ಕಾಣೆನು
ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯ ॥ ೩೭

ಬಿಡು ಮರೀಚಿಯ ತೊಱೆಗೆ ಹಱಗೋ
ಲಿಡುವ[2]ರುಂಟೇ ಲೆಪ್ಪ[2]ದುರಗನ
ಹಿಡಿವಡೇತಕೆ ಗರುಡ ಮಂತ್ರವು ಚಪಲನೆನ್ನದಿರು ।

---

[1] ನಭಿಮನ್ಯು ಕಾಳೆಗವನಡುವುದೇ ಕಂದ (ಕ), ನೆರೆ ಮಗನೆ ಕಾಳೆಗವನ ದಳವು ಕರ್ಣಾ (ಚ.ತ.ನ.ಪ.ಬ). [2] ದೇತಕೆ ಚಿತ್ರ (ಗ.ಬ).

ಧರಣಿಪತಿ ಕೇಳುಳಿದ ಪುಷ್ಪದ
ಪರಿಮಳವು ಪಥಿಸಿದರೆ ಸಂಪಗೆ
ಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ |
ಅರಿ ಭಟರು ಭೀಮಾದಿಗಳ ಗೆಲಿ
ದಿರಲಿ ಹೊಲ್ಲಹವೇನು ಘನ ಸಂ
ಗರದೊಳಗೆ ನನ್ನೊಡನೆ ತುಡುಕಿದಡಱಿಯಬಹುದೆಂದ || ೪೩

ಕೈದುಕಾಱರ ಬಿಗುಹು ಘನ ನೀ
ಹೊಯ್ದು ಮೊದಲಲಿ ಬಿಡಿಸು ಬಳಿಕಾ
ವೈದಿ ನಿನ್ನನು ಕೂಡಿಕೊಂಬೆವು ಹೊಕ್ಕು ಬಳಿಸಲಿಸಿ |
ಎಯ್ದೆ ಹಗೆಯಲಿ ಹೂಣಿ ಹೊಗದಿರು
ಮೈದೆಗೆದು ಕಾದುವುದು ಜಯ ಸಿರಿ
ಯೈದೆತನ ನಿನ್ನಿಂದ ಮೆಱೆವುದು ಕಂದ ಕೇಳೆಂದ || ೪೪

ಕೆತ್ತುಕೊಂಡಿರೆ ಬಿಡಿಸುವೆನು ರಥ
ವೆತ್ತಲುಱುಬಿದರತ್ತ ಕಣನೊಳು
ಮತ್ತ ಗಜ ಮುರಿದಂತೆ ಕದಡುವೆನಹಿತ ಮೋಹರವ |
ಹೊತ್ತಿ ಹೊಗೆವ ಪರಾಕ್ರಮಾಗ್ನಿಯ
ತುತ್ತು ಪದ್ಮವ್ಯೂಹ ದೇವರು
ಚಿತ್ತಯಿಸುವುದು ಹೊತ್ತುಗಳೆಯದೆ ಎನ್ನ ಕಳುಹೆಂದ || ೪೫

ಶರ ನಿಧಿಯ ವಡಬಾನಳನ ದ
ಳ್ಳುರಿಯ ವರ್ಮವ ತಿವಿವ ತುಂಬಿಗೆ
ಮರಳುದಲೆಯುಂಟಾದಡದು ಭವಭವದ ಪುಣ್ಯ ಫಲ |
ಅರಿ ಬಲವ ನೀ ಖಂಡಿಗಳೆ ಮೋ
ಹರ ಸಹಿತ ನಾ ಬಹೆನು ನಡೆಯೆಂ
ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ || ೪೬

ಶಿವ ಶಿವಾ ಶಿಶುವಿವನು ರಿಪುಗಳು
ಜವನ ಜೂ[1]ಜೆನಿಸುವ ಮಹಾರಥ
ನಿವಹಕೊಬ್ಬನೆ ಗಡ ಸಮಾಹಿತವಲ್ಲ ಸಮರಂಗ[1] |

---

[1] ಜು ಮಹಾಹವಕೆ ತಾನಿವನದೊಬ್ಬನೆ ನಿಲುವುದರಿದು ಸಮಗ್ರ ಸಂಗ್ರಾಮ (ಟ.ತ.ದ.ನ), ಜು ಮಹಾರಥರುಗ್ಗಡದ ನಿವಹಕಿವನೊಬ್ಬನೇ ಸಮಾಹಿತವಲ್ಲ ಸಂಗ್ರಾಮ (ಬ).

ಅವನಿಪತಿ ನಿರ್ದಯನಲಾ ಕಂ
ಡೆವು ಕುಮಾರನನಿಕ್ಕಿ ಬಹ ರಾ
ಜ್ಯವನು ಸುಡು ಸುಡಲೇತಕೆಂದುದು ನಿಖಿಳ ಪರಿವಾರ ॥ ೪೭

ಲಲಿತ ಚಂದ್ರಿಕೆಗೇಕೆ ದಾವಾ
ನಳನ ಖಾಡಾ ಖಾಡಿ ಸುರಲತೆ
ಯೆಳೆಯ ಕುಡಿ ಮುಱಿದೊತ್ತಲಾಪುದೆ ವಜ್ರಧಾರೆಗಳ ।
ನಳಿನ ನಾಳವು ಗಜದ ಕೈಯೊಡ
ನಳವಿಗೊಡಲಂತರವೆ ಪಾಪಿಗ
ಳೆ[1]ಳ[1] ಮಗನ ನೂಕಿದರು ಕಾಳೆಗಕೆಂದುದಮರಗಣ ॥ ೪೮

ಬಿಗಿದ ಗಂಡುಡಿಗೆಯಲಿ ಹೊನ್ನಾ
ಯುಗದ ಹೊಳೆವ ಕಠಾರಿಯನು ಮೊನೆ
ಮುಗುಚಿ ಸಾಧು ಜವಾಜಿ ಕಸ್ತುರಿ ಗಂಧ ಲೇಪದಲಿ ।
ಮಗಮಗಿಪ ಹೊಂದೊಡರ ಹಾರಾ
ದಿಗಳಲೊಪ್ಪಂಬಡೆದು ನಸು ನಗೆ
ಮೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು ॥ ೪೯

ಉಲಿವ ಘಂಟೆಯ ಕುಣಿವ ತುರಗಾ
ವಳಿಯ ಗಗನದೊಳಗಿವ ಬಿರುದಿನ
ಪಳಹರದ ತೆತ್ತಿಸಿದ [2]ಕನಕದ[2] ಚೌಕ ಸತ್ತಿಗೆಯ ।
ಘುಳುಘುಳಿಪ ಚೀತ್ಕಾರ ಕೋಳಾ
ಹಳದ ಸೂತನ ರೇಖೆಯಲಿ ಭಟ
ಕುಲ ಲಲಾಮನ ತೇರು ಬಂದುದು ತೀವಿದಸ್ತ್ರದಲಿ ॥ ೫೦

ತುರಗ ತತಿಗಭಿನಮಿಸಿ ರಥವನು
ತಿರುಗಿ ಬಲವಂದೆಱಗಿ ಚಾಪಕೆ
ಕರವ ನೊಸಲಲಿ ಚಾಚಿ ಭಾರಿಯ ಭುಜವನೊದಱಿಸುತ ।
ಅರಸಗಭಿವಂದಿಸುತ ಭೀಮನ
ಹರಕೆಗಳ ಕೈಕೊಳುತ ನಕುಳಾ
ದ್ಯರಿಗೆ ಪೊಡವಟ್ಟಡರಿದನು ನವ ರತುನಮಯ ರಥವ ॥ ೫೧

[1] ಮುತ್ತಿನ (ಟ.ತ.ನ.ಬ). [2] ಳೆ (ಪ).

ಸೂಳವಿಸಿದವು ಲಗ್ಗೆಯಲಿ ನಿ
ಸ್ಸಾಳ ತತಿ ಸಿಡಿಲೆಱಗಿತೆನಲು
ಬ್ಬಾಳು ಮಿಗೆ ಕೈನೆಗಹಿ ಕೈವಾರಿಸುವ ಗಮಕಿಗಳು ।
ಸಾಲ ಹೆಗ್ಗಹಳೆಗಳು ರಿಪು ಭೂ
ಪಾಲಕರ ಬೈಬೈದು ಗಜಱಿದ
ವಾಳುತನದಾಳಾಪ ಬೀಱಿತು ಬೆಱಗನಹಿತರಿಗೆ ॥ ೫೨ *

ಒಡನೆ ಕಳುಹುತ ಬಂದನಾ ನೆಲ
ದೊಡೆಯನನುಜರು ಸಹಿತ ನಯನದಿ
ಬಿಡುವನಿಯ ಸಾಲಿನಲಿ ನನೆದರು ಬಂದು ಕಿಱಿದೆಡೆಯ ।
ನಡೆ ವಿಜಯನಾಗೆಂದು ತನುವನು
ತಡವಿದರು ಕಡು ಮೋಹವೆಡೆಯಲಿ
ಘುಡುಘುಡಿಸೆ ಶಿಶು ಬೀಳುಕೊಂಡನು ಪಿತೃ ಚತುಷ್ಟಯವ ॥ ೫೩

ಎಲೆ ಕುಮಾರಕ ಹರ ಕುಮಾರಂ
ಗಳವಿಯಲಿ ನಿಲಲರಿದು ಕೊರಳಿನ
ಬಲುಹನಱಿಯದೆ ಗಿರಿಯ ಹೊಱಲಂಘೈಸುವರೆ ಭಟರು ।
ಬಲುಗಡಿಯನೀ ಕರ್ಣನೀ ಕೃಪ
ನಲಘು ಭುಜ ಬಲ ದ್ರೋಣನೀ ವೆ
ಗ್ಗಳೆಯ ಜಯದ್ರಥನೆಂದು ಸಾರಥಿ ತೂಗಿದನು ಶಿರವ ॥ ೫೪

ಮರುಳು ಸಾರಥಿ ನಮ್ಮ ನಾವ್ ಪತಿ
ಕರಿಸಿಕೊಳಲಾಗದು ಕಣಾ ನೀ
ನಱಿಯೆ ನಮ್ಮಂತರವ ನಾವಿನ್ನಾಡಿ ಫಲವೇನು ।
ಗುರು ತನುಜನೇ ಕೃಪನೆ ದ್ರೋಣನೆ
ತರಣಿ ತನಯನೆ ಸೈಂಧವನೆ ಹುಲು
ನರರು ಗಣ್ಯವೆ ಕೇಳು ಭಾಷೆಯನೆಂದನಭಿಮನ್ಯು ॥ ೫೫

* ಈ ಪದ್ಯವಾದಮೇಲೆ (ಟ.ತ.ದ) ಪ್ರತಿಗಳಲ್ಲಿ ವಿನಾ ಉಳಿದ ಪ್ರತಿಗಳಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ :—

ರಾಯ ಕುವರ ವಿಭಾಡ ಬಂದನು
ರಾಯ ಕಟಕಾಚಾರ್ಯ ಬಂದನು
ರಾಯ ಸೇನಾಂಬುಧಿಯ ವಡಬಾನಳನು ಬಂದ ।
ರಾಯನಣುಗರ ತುಳಿವ ಕೌರವ
ರಾಯ ಜೀವಘರಟ್ಟ ಬಂದನು
ಸಾಯದಿರಿ ಹೆಱಸಾರಿಯೆಂದವು ಗೌಱು ಗಹಳೆಗಳು ॥

ಬವರವಾದರೆ ಹರನ ವದನಕೆ
ಬೆವರ ತಹೆನವಗಡಿಸಿದರೆ ವಾ
ಸವನ ಸದೆವೆನು ಹೊಕ್ಕಡಹುದೆನಿಸುವೆನು ಭಾರ್ಗವನ ।
ಜವನ ಜವಗೆಡಿಸುವೆನು ಸಾಕಿ
ನ್ನಿವರವರಲೇನರ್ಜುನನು ಮಾ
ಧವನು [1]ಮುನಿದಡೆ[1] ಗೆಲುವೆನಂಜದೆ ರಥವ ಹರಿಸೆಂದ ॥ ೫೬

ಬಾಲನೆನ್ನದಿರೆನುತ ರಿಪು ಭಟ
ಭಾಳಲೋಚನನೆನಿಸುವರ್ಜುನ
ಬಾಳುಗೆನುತುದ್ದಂಡ ಕೋದಂಡವನು ಜೇವೊಡೆಯೆ ।
ಮೇಲು ಜಗವಲ್ಲಾಡಿದವು ಕೊರ
ಳೋಳಿ ಕೆದಱಿತು ಕುಸಿದನಹಿ ಪಾ
ತಾಳಗೊಳೆಯ ತೆಗೆಯಲಳ್ಳಿಱಿಯಿತ್ತು ಬಿಲು ರಭಸ ॥ ೫೭ *

ಸುರ ನದಿಗೆ ಶಿವನಾಯ್ತು ಮಕರಾ
ಕರಕೆ ಕಳಶಜನಾಯ್ತು ತರಣಿಗೆ
ಅರಿ ವಿಧುಂತುದನಾಯ್ತು ರಥಪದ ತಳಿತ ಧೂಳಿಯಲಿ ।
ಅರರೆ ಸತ್ವ ರಜಸ್ತಮಂಗಳೊ
ಳೆರಡು ಗುಣವಡಗಿತು ರಜೋಗುಣ
ದುರುಳಿಯಾದುದು ಲೋಕವೆನೆ ಘಾಡಿಸಿತು ಪದ ಧೂಳಿ ॥ ೫೮

---

[1] ಮಲೆತರೆ (ಗ.ಟ.ತ.ನ).

* ಈ ಪದ್ಯವಾದಮೇಲೆ (ಟ.ತ.ದ.ಬ) ಪ್ರತಿಗಳಲ್ಲಿ ಮುಂದಿನ ಎರಡು ಪದ್ಯಗಳು ಹೆಚ್ಚಾಗಿವೆ:—

ಬಿರಿದುದರಿ ಬಲ ಸುಭಟರೆದೆ ಜ
ರ್ಝರಿತವಾದವು ಮದಕರಿಗಳುರೆ
ತುರಗ ನಿಕರವರೂಥ ಕೆದಱಿತು ಬೆದಱಿ ಬಿಲುದನಿಗೆ
ಬಿರಿದುದಬುಜವ್ಯೂಹ ಕಾಲಾ
ಳಿರದೆ ತೆರಳಿತು ರಾಯ ಮೋಹರ
ಹೊರಳಿಯೊಡೆದುದು ಸಿಡಿಲು ಹೊಡೆದಂತಾಗೆ ನಡುನಡುಗಿ ॥

ಅರರೆ ಮಝುಭಾಪೆನುತ ಸಾರಥಿ
ತುರಗ ನಿಕರವ ಚಪ್ಪರಿಸಿ ಕುಡಿ
ವರಿವ ಚಮ್ಮಟಿಗೆಯಲಿ ಬೆದರಿಸಿ ರಿಪು ಬಲವ ತೋಱೆ ।
ವರರಥದ ಪದಧೂಳಿ ರಿಪು ಮೋ
ಹರಕೆ ಕವಿದುದು ಕಲ್ಪ ಮೇಘದ
ಹೊರಳಿಯಂತಿರೆ ತುಡುಕಿತಾಬ್ರಹ್ಮಾಂಡಮಂಡಲವ ॥

ಆರ ರಥವಿದು ಸೈನ್ಯ ಪಾರಾ
ವಾರಕಿದನಂಘೈಸುವನು ತ್ರಿಪು
ರಾರಿಯೋ ಮೇಣಾ ತ್ರಿವಿಕ್ರಮನೋ ಸುರೇಶ್ವರನೊ ।
ವೀರನಹನೋ ಪೂತು ರಣದ ತೊ
ರಾರನಿವನಾರೆನುತ [1] ತಱುಬಿಯೆ [1]
ತೋರಹತ್ತರು ತಾಗಿದರು ಸೌಬಲ ಜಯದ್ರಥರು ॥ ೫೯

ಫಡ ಜಯದ್ರಥ ಹೋಗು ಹೋಗಳ
ವಡಿಕೆಯಲ್ಲಿದು ಸಾರು ಸೌಬಲ
ಮಿಡುಕಿದಡೆ ಮರುಳಹಿರಿ ಲೇಸಲ್ಲೆಮ್ಮೊಳತಿ ಮಥನ ।
ತುಡುಕಿದರೆ ಕೈ ಬೇವುದೀ ಬಲು
ಗಡಿಯತನ ಬಯಲಹುದೆನುತ ತಡೆ
ಗಡಿದು ಬಿಸುಟನು ಭಟರ ಹಯ ರಥ ಧನುವ ಸಾರಥಿಯ ॥ ೭೦

ರಥ ಮುಱಿದು ಮನನೊಂದು ಸುಮಹಾ
ರಥರು ಹಿಮ್ಮೆಟ್ಟಿದರು ಬಳಿಕತಿ
ರಥ ಭಯಂಕರನೊಡೆದು ಹೊಕ್ಕನು ವೈರಿ ಮೋಹರವ ।
ಮಥನದಲಿ ಮುಱಿಯೊಡೆದ ಶೈಲ
ವ್ಯಥಿತ ಸಾಗರದಂತೆ ಬಿರಿದವು
ರಥ ನಿಕರ [2]ಕಾಲಾಳು ಕುದುರೆಗಳೊಂದು[2] ನಿಮಿಷದಲಿ ॥ ೭೧

ನಾಲ್ಕನೆಯ ಸಂಧಿ ಮುಗಿದುದು.

---

[1] ತುಱುಗಿದ (ಗ.ಚ.ನ.ಪ.ಬ). [2] ಕರಿ ತುರ ಗಪಾಯ್ದಳವೊಂದು (ಟ).

# ಐದನೆಯ ಸಂಧಿ

ಸೂಚನೆ ॥ ವೀರ ರಿಪು ಕದಳೀವನಕೆ ಮದ
ವಾರಣನು ಫಲುಗುಣನ ತನಯನು
ದಾರ ಪದ್ಮ ವ್ಯೂಹದಲಿ ಗೆಲಿದನು ಕುಮಾರಕರ ॥

ಅವಧರಿಸು ಧೃತರಾಷ್ಟ್ರ ನೃಪ ಸೈಂ
ಧವನ ಗೆಲಿದಾ ವ್ಯೂಹಭೇದಾ
ಹವ ವಿಜಯ ವಿಜಯಾತ್ಮಕನ ಕೌತುಕ ರಣೋದಯವ ।
ತಿವಿದನುಱುಬುವ ರಥ ಪದಾತಿಯ
ಕವಿವ ಗರುವ ತುರಂಗಗಳ ಬಲು
ಜವದ ರಥ ಕೋಟ್ಯಾನುಕೋಟಿಯ ಹೊದಱ ಹೊಸ ಮೆಳೆಯ ॥ ೧

ಹರಿಯ ಚಕ್ರ ವರೂಥ ಚಕ್ರದೊ
ಳುರವಣಿಪ ತೇಜಿಗಳ ಕಡುಹಿನ
ಖುರದ ಹೊಯ್ಲಲಿ ವಿಲಯ ಪವನನ ಗಱಿಯ ಗಾಳಿಯಲಿ ।
ಹರನ ನಯನ ಜ್ವಾಲೆ ಪಾರ್ಥಿಯ
ಸರಳ ಕಿಡಿಯಲಿ ಪಲ್ಲಟಿಸೆ ಸಂ
ಗರದೊಳಗೆ ಸೈವರಿದು ಸದೆದನು ಸಕಲ ಸೈನಿಕರ ॥ ೨

ಮಿಕ್ಕು ನೂಕುವ ಕುದುರೆ ಕಾಱರು
ತೆಕ್ಕೆಗೆಡೆದರು ಸಂದಣಿಸಿ ಕೈ
ಯಿಕ್ಕಿದಾನೆಯನೇನನೆಂಬೆನು ಕಾಣೆನಳವಿಯಲಿ ।
ಹೊಕ್ಕು ಹರಿಸುವ ರಥ ಪದಾತಿಯ
ನೊಕ್ಕಲಿಕ್ಕಿದನಮಮ ಮಗುವಿನ
ಮಕ್ಕಳಾಟಿಕೆ ಮಾರಿಯಾಯಿತು ವೈರಿ ರಾಯರಿಗೆ ॥ ೩

ಕದಳಿಯೊಳು ಮದದಾನೆ ಹೊಕ್ಕಂ
ದದಲಿ ಹೆಚ್ಚಿದ ಚಾತುರಂಗದ
ಮೆದೆಯನೊಟ್ಟಿದು ಹೂಣೆ ಹೊಕ್ಕನು ಘಟ್ಟನೊಡೆತುಳಿದು ।
ಇದಿರೊಳೆಚ್ಚನು ಕೆಲ ಬಲದೊಳಿಹ
ಕದನಗಲಿಗಳ ಸೀಳಿದನು ಕಾ
ದಿದನು ಕಾಲನ ಲೀಲೆಯಾದುದು ವಿಷಮ ಸಮರಂಗ ॥ ೪

ಜೋಡೊಡೆದು ಘಟ್ಟುಗಿದು ಬೆನ್ನಲಿ
ಮೂಡಲದಟರ ಸೀಳಿದನು ಖುರ
ಜೋಡು ಹುಡಿ ಹುಡಿಯಾಗೆ ತೇಜಿಯ ಘಟ್ಟ ಖಂಡಿಸಿದ।
ನೋಡಲಮ್ಮುವರಿಲ್ಲ ಮಿಗೆ ಕೈ
ಮಾಡಲಮ್ಮುವರಿಲ್ಲ ಬಲವ
ಲ್ಲಾಡಿತೊಬ್ಬನೆ ಹಸುಳೆ ಹೊಕ್ಕನು ವೈರಿ ವೋಹರವ ॥ ೫

ಆವ ವಹಿಲದೊಳಂಬ ತೊಡಚುವ
ನಾವ ವೇಗದೊಳಿದಿರಲೆಸುವನ
ದಾವ ನಿರುತದಲೊಡ್ಡುವನು ಕೊರಳಿಂಗೆ ಕೋಲುಗಳ ।
ಆವ ಧೃಡತೆಯೊ [1]ದೃಷ್ಟಿ[1]ವಾಳವಿ
ದಾವ ಗರುಡಿ ಶ್ರಮವೆನುತ ದಿವಿ
ಜಾವಳಿಗಳುಲಿಯಲು ವಿಭಾಡಿಸಿದನು ರಿಪು ವ್ರಜವ ॥ ೬

ಎಡದಲೌಕುವ ರಾವುತರ ವಂ
ಗಡವನೆಚ್ಚನು ಸಮ್ಮುಖದೊಳವ
ಗಡಿಸುವಿಭ ಕೋಟಿಗಳ ಕೊಂದನು ಸರಳ ಸಾರದಲಿ।
ಕಡುಗಿ ಬಲದಲಿ ಕವಿವ ರಥಿಕರ
ಕೆಡಹಿದನು ಕಾಲಾಳು [2]ತೇರಿನ
ಗಡಣ ಹುಡಿ ಹುಡಿಯಾಯ್ತೆನಲು ಸವಱಿದನು ಪರ ಬಲವ[2] ॥ ೭

ಉರವಣಿಸಿದರು ಮತ್ತೆ ಭಟರ
ಬ್ಬರವ ಖತಿಯಲಿ ನಿಖಿಳ ಮನ್ನಂ
ತರದ ಕಡೆಯಲಿ ನೆಲನನದ್ದುವ ಕಡಲ ಕಡುಹಿನಲಿ ।
ಸರಳು ಕಡಿದವು ಸಕುತಿ ಸೆಲ್ಲಹ
ಪರಶು ಕವಿದವು ಖಡ್ಗ ತೋಮರ
ಸುರಗಿ ಹೊಳೆದವು ಕೈದು ಹೇರಿದವಖಿಳ ದೆಸೆಗಳಲಿ ॥ ೮

ತೊಲಗಿರೈ ಕಾಲಾಳು ಮೇಲಾ
ಳಳವಿಗೊಡಲಿ ಮಹಾರಥರು ಮುಂ
ಕೊಳಲಿ ಜೋದರು ದಿಟ್ಟರಾದರೆ ಕವಿಸಿ ಕರಿ ಘಟೆಯ ।

---

[1] ಮುಷ್ಟಿ (ತ.ದ.ಬ). [2] ಕುದುರೆಯ ಅಡಗ ಸೂಱೆಯ ಬಿಟ್ಟನಂತಕ ಕಾಂಕ ಸಂತತಿಯ (ಕ), ತೇರಿನ ಗಡಣ ಹುಡಿಹುಡಿಯೆನಲು ಸವರಿದನಹಿತ ವೋಹರವ (ಚ.ಪ).

ಕೆಲದ ದೊರೆಗಳು ಬರಲಿ ಮಾಱಿದ
ತಲೆಯ ಭಂಡವ ಹೊತ್ತಿ[1]ರದೆ[1] ಕೈ
ಕೊಳಲಿ ಕರ್ಣಾದಿಗಳೆನುತ ಹೊಕ್ಕೆಚ್ಚನಭಿಮನ್ಯು ॥ ೯

ಕಾಱಗಲಿಸಿದನಮಮ ರಾಜ ಕು
ಮಾರ ಕಂಠೀರವನು ರಿಪು ಪರಿ
ವಾರವನು ನಡೆಗೊಳಿಸಿದನು ಯಮರಾಜನಾಲಯಕೆ ।
ಮಾರಿ ಮೊಗವಡದೆಱೆದಳೋ ಕೈ
ವಾರವೋ ತರುವಲಿಗಿದೆತ್ತಣ
ವೀರವೋ ಶಿವ ಎನುತ ಬೆಱಗಾಯಿತ್ತು ಸುರ ಕಟಕ ॥ ೧೦

ಕೊಡೆನೆಗೆದವಟ್ಟೆಗಳು ರಕುತದ
ಕಡಲೊಳರೆ ಜೀವದ ಭಟರು ಬಾ
ಯ್ಬಿಡುತ ತೇಕಾಡಿದರು ಮುಂಡದ ಹಿಂಡು ಮುಳುಗಾಡೆ ।
ಅಡಸಿ ನೆಗೆವಾನೆಗಳ ತಲೆಗಳ
ಗಡಣ ಮೆಱೆದವು ಮಿಕ್ಕ ತೇಜಿಯ
ಕಡಿಕುಗಳು ಕುಣಿದಾಡಿದವು ಕಿಗ್ಗಡಲ ರಕುತದಲಿ ॥ ೧೧

ಕರಿ ಘಟೆಯ ಕಲಕಿದನು ಹಯ ಮೋ
ಹರವ ಜರುಹಿದನೌಕಿ ಹರಿತಹ
ವರ ರಥವ ಹುಡಿ ಮಾಡಿದನು ಕೆಡಹಿದನು ಕಾಲಾಳ ।
ಹುರಿಯೊಡೆದು ಮೈದೆಗೆದು ಸಲೆ ಕೈ
ಮಱೆದು ಕೈದುವ ಹಾಯ್ಕಿ ಪಡೆ ಮೊಗ
ದಿರುಹಲೆಚ್ಚನು ಕೊಚ್ಚಿದನು ಕೌರವ ಚತುರ್ಬಲವ ॥ ೧೨

ತಳಿತ ಹೊಗರಿನ ಬಾಯಿ ಧಾರೆಯ
ಹೊಳಹುಗಳ ಹೊಸ ಮಸೆಯ ತಳಿಪದ
ಬೆಳಗುಗಳ ಬಲಿದಿಂಗಲೀಕ ಸುವರ್ಣ ರೇಖೆಗಳ ।
ಲುಳಿಯ ಹಂಗನ ಗಱಿಯ ಬಿಗುಹಿನ
ಹಿಳುಕುಗಳ ಹೊಗರಂಬು ಕವಿದವು
ತುಳುಕಿದವು ತೂಱಿದವು ಕೆದಱಿದವಹಿತ ಬಲದಸುವ ॥ ೧೩

---

[1] ಹರೆ (ಚ.ಪ).

ಅಳವಿಗೆಡೆ ಧುಮ್ಮಿಕ್ಕಿ ರಥದವ
ರಿಳಿಯ ಬಿದ್ದರು ಭಯದಿ ತೇಜಿಯ
ನಿಳಿದು ರಾವ್ತರು ಕರವ ಮುಗಿದರು ಕೊರಳ ಸಲಹೆನುತ ।
ಗುಳವ ಸಡಿಲಿಸಿ ಹಾಯ್ಕಿ ಜೋಧಾ
ವಳಿಗಳಿಳಿದುದು ಕೈಯ ಕೈದುವ
ನಿಳುಹಿ ಬಾಯಲಿ ಬೆರಳನಿಟ್ಟುದು ವೈರಿ ಪಾಯ ದಳ ॥ ೧೪

ಎಸಳ ಮೊನೆ ಮೋಹರದ ಸಂದಣಿ
ಯುಸಿರನುಳಿದುದು ಕೇಸರಾಕೃತಿ
ಯಸಮ ವೀರರು ಪಥಿಕರಾದರು ಗಗನ ಮಾರ್ಗದಲಿ ।
ನುಸುಳಿದರು ಕರ್ಣಿಕೆಯ ಕಾಹಿನ
ವಸುಮತೀಶರು ರಾಯನರನೆಲೆ
ಧೆಸೆಗೆಡಲು ಮೊಳಗಿದನು ಪಾರ್ಥಕುಮಾರನಳವಿಯಲಿ ॥ ೧೫

ಜರಿದುದಬ್ಜ ವ್ಯೂಹ ನೂಕಿದ
ಕರಿ ತುರಗ ಕಾಲಾಳು ತೇರಿನ
ಮರಳುದಲೆ ತಾನಿಲ್ಲ ನೆಱೆ ನುಗ್ಗಾಯ್ತು ಕುರು ಸೇನೆ ।
ದೊರೆಗಳಹ ದ್ರೋಣಾದಿಗಳು ಕೈ
ಮಱೆದು ಕಳೆದರು ಪಾರ್ಥತನಯನ
ಸರಿಯೊರೆಗೆ ಭಟನಾವನೆಂದನು ಕೌರವರ ರಾಯ ॥ ೧೬

ತಂದೆ ಹಡೆಯನೆ ಮಗನನಹುದೋ
ಕಂದ ಕಲ್ಪ ಸಹಸ್ರ ನೋಂತಳೊ
ಇಂದುಧರನನು ನಿನ್ನ ತಾಯಿ ಸುಭದ್ರೆಯಲ್ಲದಡೆ ।
ಇಂದಿನೀ ಬಲವೀ ಸಮರ ಜಯ
ದಂದವೀ ಸೌರಂಭವೀ ಸರ
ಳಂದವೀ ತೆರಳಿಕೆಯದಾವಂಗೆಂದನವನೀಶ ॥ ೧೭

ಹುರುಡ ಮಱೆದೆನು ಮಗನೆ ಸಾಲದೆ
ಭರತ ಕುಲದಲಿ ನಿನ್ನ ಬೆಳವಿಗೆ
ಯೆರಡು ಕವಲನ್ವಯಕೆ ಕೊಡದೇ ಸುಗತಿ ಸಂಪದವ ।
ಕರುಳು ಬೀಳವೆ ತನ್ನ ಬಸುಱಿಂ
ದುರುಳಿದವದಿರಲೇನು ಫಲ ಮ
ತ್ಸರವೆ ಪಾರ್ಥ ಕೃತಾರ್ಥನೆಂದನು ಕೌರವರ ರಾಯ ॥ ೧೮

ಎನುತ ಬಿಲುದುಡುಕಿದನು ಸೇನಾ
ವನಧಿಗಭಯವನಿತ್ತು ಮರಳುವ
ಜನಪರನು ಜಱೆದೆಡ ಬಲದ ಮನ್ನೆಯರ ಮೂದಲಿಸಿ |
ಮೊನೆಗಣೆಯ ತೂಗುತ್ತ ನರನಂ
ದನನ ರಥವನು ತಱುಬಿ ನಿನ್ನಯ
ತನಯನಡ್ಡೈಸಿದನು ಕೌರವರಾಯ ಖಾತಿಯಲಿ || ೧೯

ಮಗುವು ನೀ ಕೆಡಬೇಡ ಹೋಗೆನು
ತಗಣಿತಾಸ್ತ್ರವ ಸುರಿವುತೈತರೆ
ನಗುತ ನಿಂದಭಿಮನ್ಯು ನುಡಿದನು ಕೌರವೇಶ್ವರನ |
ಮಗುವು ತಾನಹೆ ತನ್ನ ಬಾಣಕೆ
ಮಗುವುತನ ಬೇಱಿಲ್ಲ [1]ನೋಡೆಂ
ದಗಲದಲಿ ಕೂರಂಬ ಸುರಿದನು ಪಾರ್ಥನಂದನನು[1] || ೨೦

ಎಸಲು ಕಣೆ ಮುಕ್ಕುಱುಕಿದವು ಹೊಸ
ಮಸೆಯ ಧಾರೆಯ ತೋರ ಕಿಡಿಯಲಿ
ಮುಸುಕಿತರಸನ ತೇರು ತಳಿತವು ಮೆಯ್ಯೊಳಂಬುಗಳು |
ಬಸಿವ ರಕುತದ ಜರಿವ ಜೋಡಿನ
ನಸಿದ ಗರ್ವದ ನೆಗ್ಗಿದಾಳ್ತನ
ದೆಸಕದೊಣಗಿಲ ಬಾಯ ಭೂಪನ ಕಂಡನಾ ದ್ರೋಣ || ೨೧

ರಾಯ ಸಿಲುಕಿದನಕಟಕಟ ರಾ
ಧೇಯ ನಡೆ ಕೃಪ ಹೋಗು ಮಗನೆ ನಿ
ಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ |
ರಾಯನನುಜರು ಕೈದುಗೊಳ್ಳಿ ರಣ
ದಾಯ ತಪ್ಪಿತು ನೃಪತಿ ಮಾರಿಯ
ಬಾಯ ತುತ್ತಾದನು ಶಿವಾ ಎಂದೊಱಲಿದನು ದ್ರೋಣ || ೨೨

ಮಾತು ಹಿಂಚಿತು ಮುಂಚಿ ಸುಭಟ
ವ್ರಾತ ಹೊಕ್ಕುದು ಸಿಕ್ಕಿದರಸನ
ಭೀತಿಯನು ಬಿಡಿಸಿದರು ಬೀಱಿದರಂಬುಗಳ ಮಳೆಯ |

[1] ಘಾಯದ ಸೊಗಸುಗಳ ನೀ ನೋಡಬೇಕೆನುತೆಚ್ಚನಭಿಮನ್ಯು (ಗ). ವರ ಹರಹುಗಳ ನಿಮಿಷವು ನಿಂದು ನೀ ನೋಡೆನುತ ತೆಗೆದೆಚ್ಚ (ಚ.ಪ.ಬ), ವರ ಹರಹುಗಳು ನಿಮಿಷವು ನಿಂದು ನೋಡೆನುತೆಚ್ಚನಭಿಮನ್ಯು (ತ.ದ.ನ).

ಸೋತೆವಾವ್ ನೀ ಗೆಲಿದೆ ಕರೆ ನಿ
ಮ್ಮಾತಗಳನೀ ಭ್ರೂಣ ಹತ್ಯಾ
ಪಾತಕಕ್ಕಂಜುವೆನೆನುತ ಕೈಕೊಂಡನಾ ದ್ರೋಣ ॥ ೨೩

ರಾಯನನು ತೊಲಗಿಸಿದರಾಕ
ರ್ಣಾಯತಾಸ್ತ್ರರು ರಾಹುವಿನ ಕಟ
ವಾಯ ಚಂದ್ರನ ಸೆಳೆವ ಪೋಲರಿದಾಯ್ತು ಸುಭಟರಿಗೆ ।
ಸಾಯಕವ ಸರಿ[1]ಗೊಳಿಸಿದರು[1] ವ
ಜ್ರಾಯುಧನ ಮೊಮ್ಮನ ರಥವ ನಿ
ರ್ದಾಯದಲಿ ಮುತ್ತಿದರು ಕುರು ಸೇನಾ ಮಹಾರಥರು ॥ ೨೪

ಹಸುಳೆತನದಲಿ ಹರನ ಮಗನಾ
ವಿಷಮ ದೈತ್ಯನ ಸೀಳಿ ಬಿಸುಡನೆ
ಶಿಶುವಲಾ ಪ್ರದ್ಯುಮ್ನ ಮುಱಿಯನೆ ಶಂಬರಾಸುರನ ।
ಶಿಶುವೆ ನೋಡಭಿಮನ್ಯು ಸುಭಟ
ಪ್ರಸರದಿನಿಬರನೊಂದು ಘಾಯದೊ
ಳುಸಿರ ತೆಗೆಬಗೆ ಮಾಡಿದನು ಧೃತರಾಷ್ಟ್ರ ಕೇಳೆಂದ ॥ ೨೫

ಗುರು ಸುತನನೊಟ್ಟೈಸಿ ಶಲ್ಯನ
ಭರವಸವ ನಿಲಿಸಿದನು ಕೃಪನು
ಬ್ಬರದ ಗರ್ವವ ಮುಱಿದು ಕೃತವರ್ಮಕನ [2]ನೋಯಿಸಿದ[2] ।
ಅರಸನನುಜರ ಸದೆದು ಬಾಹ್ಲಿಕ
ದುರುಳ ಸೌಬಲ ಸೋಮದತ್ತರ
ಹುರುಳುಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ ॥ ೨೬

ಮುಳುಗಿದಂಬಿನ ಮಱು ಮೊನೆಯ ಮೈ
ಗಳ ಮಹಾರಥ ರಾಜಿ ಕದನದ
ನೆಲನ ಬಿಡೆ ಖತಿಗೊಂಡು ಮುಱಿದೋಡುವರ ಮೂದಲಿಸಿ ।
ಬಿಲುದುಡುಕಿ ಸಾರಥಿಗೆ ಸೂಚಿಸಿ
ಮಲೆತ ನೋಡೈ ಮಗುವು ಘಡ ಘಡ
ತೊಲಗು ತೊಲಗೆಂದೆನುತ ರಿಪುವನು ತಱುಬಿದನು ಕರ್ಣ ॥ ೨೭

---

[1] ವಳೆಗಱೆದು (ತ.ದ.ನ). [2] ಕೆಡೆಯೆಚ್ಚು (ಕ).

ಗಾಱುಗೆಡೆದರೆ ಮೆಱೆಯದೋಲೆಯ
ಕಾಱತನವೆಮ್ಮೊಡನೆ ನೀ ಮೈ
ದೋಱು ಮಡಮುಱುವಿಲ್ಲದೆಚ್ಚಾಡಿದರೆ [1]ಸಫಲವಿದು[1] ।
ತೋಱುವೆನು ಕೈಗುಣವನೆನುತೈ
ದಾಱು ಶರದಲಿ ಕರ್ಣನೆದೆಯನು
ಡೋಱುಗಳೆಯಲು ಬಳಲಿದನು ಪೂರಾಯ ಘಾಯದಲಿ ॥ ೨೮

ಬೆದಱ ಭೂಕಂಪದಲಿ ಕುಲ ಗಿರಿ
ಯದಿರುವಂತಿರೆ ಚರಿಸಿ ಕಾಯವ
ಬಿದಿರಿ ಮರಳುವ ಕಂಗಳಲಿ ಕಲಿ ಕರ್ಣ ಮೈ ಮಱೆಯೆ ।
ಕೆದಱತೀ ಬಲವಕಟ ಕರ್ಣನ
ಸದೆದನೋ ಸಾಹಸಿಕ ಶಿಶು ಕಾ
ದಿದೆವು ನಾವಿನ್ನೆನುತಲಿರೆ ಕಲಿ ಶಲ್ಯನಿದಿರಾದ ॥ ೨೯

ಬಾಲಕನೆ ಹಿಮ್ಮೆಟ್ಟು ಹಿಮ್ಮೆ
ಟ್ಟಾಳುತನವೆಮ್ಮೊಡನೆಯೋ ಮರು
ಳೇಳಿಗೆಯಲುಬ್ಬೆದ್ದು ಕರ್ಣನ ಸದೆದ ಗರ್ವದಲಿ ।
ಮೇಲನಱಯಲ ಶಲ್ಯನೊಡನೆಯು
ಕಾಳೆಗವೆ ನಿಮ್ಮಯ್ಯನಿಂದಿನ
ಲೂಳಿಗವ ತಹುದೆನುತ ಸುರಿದನು ಸರಳ ಸರಿವಳೆಯ ॥ ೩೦

ಬಾಲತನವೇನೂಣಯುವೆ ಕ
ಟ್ಟಾಳುತನವಾಭರಣವವನೀ
ಪಾಲ ಸುತರಿಗೆ ವಿದ್ಯವೇ ವಿಪ್ರರಿಗಲಂಕಾರ ।
ಆಳಿನಂಗವನೆತ್ತ ಬಲ್ಲೆ ಶ
ರಾಳಿಯಲಿ ನಿನ್ನಂಘವಣೆಯ ಛ
ಡಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು ॥ ೩೧ *

ಸರಳ ಸರಳಲಿ ಕಡಿದು ಸಫೆಯದೆ
ಸರಿ ಮಿಗಿಲ ಕಾದಿದರೆ ಶಲ್ಯನ
ಧರಧುರದ ದೆಖ್ಖಾಳತನವನು ಕಂಡು ಖಾತಿಯಲಿ ।

[1] ಸಫಲವನು (ಕ). * ಈ ಪದ್ಯವು (ಕ.ಟ) ಪ್ರತಿಗಳಲ್ಲಿಲ್ಲ.

ಸರಳು ಹದಿನೈದಱಲಿ ಶಲ್ಯನ
ಬರಿಯ ಕೆತ್ತಿದನೈದು ಬಾಣದೊ
ಳುರವ ತೋಡಿದನೊಂದು ನಿಮಿಷಕೆ ಶಲ್ಯ ಸೈಗೆಡೆದ ॥ ೩೨

ತಲೆ ತಿರುಗಿ ತುಟಿಯೊಣಗಿ ಕಂಗಳ
ಬಳೆ ಮರಳಿ ಬಸವಳಿಯೆ ಸಾರಥಿ
ತೊಲಗಿಸಿದನಾ ರಥವನೊಡಹುಟ್ಟಿದನ ವೇದನೆಯ ।
ನಿಲುಕಿ ಕಂಡನು ಶಲ್ಯನನುಜನು
ಹಿಳುಕು ಹಿಳುಕಿನ ಮೇಲೆ ಸಂಧಿಸಿ
ಮುಳಿದೆಸುತ ತಾಗಿದನು ಖತಿಯಲಿ ಪಾರ್ಥ ನಂದನ[1][ನ][1] ॥ ೩೩

ಪೂತು ಶಲ್ಯನ ತಮ್ಮನೇ ಮಾ
ಱಾಂತನಣ್ಣನ ಹರಿಬವನು ದಿಟ
ಸೂತ ನೋಡೈ ಸಾಹಸಿಕನೈ ಲೇಸು ಲೇಸೆನುತ ।
ಆತನಂಬೈದಾಱ ಮನ್ನಿಸಿ
ಸೋತವೊಲು ಮನಗೆಲವ ಮಾಡಿ ನಿ
ಶಾತ ಶರದಿಂದಿಳುಹಿದನು ಶಲ್ಯಾನುಜನ ಶಿರವ ॥ ೩೪

ದೊರೆ ಮಡಿಯೆ ಮಾದ್ರಾ[2][ನುಜನ][2] ಬಲ
ತಿರುಗಿತಭಿಮನ್ಯುವಿನ ಹೊಯ್ಲಲಿ
ಹುರುಳುಗೆಟ್ಟುದು ಹೆಸರ ನಾಯಕವಾಡಿ ದುಗುಡದಲಿ ।
ತರಹರವ ನಾ ಕಾಣೆನೀ ವೋ
ಹರಕೆ ಗತಿಯೇನೆನುತ ಭ[3]ರ[3]ದಲಿ
ಕರೆದು ತೋಱಿದನಾ ಕೃಪಾಚಾರ್ಯಂಗೆ ಕಲಿ ದ್ರೋಣ ॥ ೩೫

ಮಗುಪೆ ನೋಡಭಿಮನ್ಯು ನಮಗಿದು
ಹೊಗುವಡಳವೇ ಕಾಲ ರುದ್ರನ
ತಗಹು ಬಿಟ್ಟಂತಿದೆ ಕುಮಾರನ ಕೋಪದಾಟೋಪ ।
ಮೊಗಸಲರಿದು ಭುಜ ಪ್ರತಾಪದ
ಹೊಗರು ಹೊಸ ಪರಿಯೆನುತ ರಿಪುಗಳ
ಹೊಗಳುತಿರೆ ಕೇಳಿದನು ಕೌರವ ರಾಯನೀ ನುಡಿಯ ॥ ೩೬

---

[1] ನು (ಸ). [2] ಧಿಪನ (ಸ). [3] ಯ (ಟ.ಚ.ತ.ದ.ನ.ಬ).

ಕೇಳುತಿರ್ದ್ದೆ ಕರ್ಣ ಸಲೆ ನ
ಮ್ಮಾಳ ಬೆದಱಿಸಿ ನುಡಿದು ರಿಪುಭಟ
ನಾಳನೇಱಿಸಿ ನುಡಿವ ಬಾಹಿರರೇನು ಹೇಳುವೆನು ।
ಋೂಳರೆಂಬೆವೆ ಗುರುಗಳಿಂದು ವಿ
ಶಾಲ ಮತಿಗಳು ತಮ್ಮ ಭಾಗ್ಯದ
ಮೇಲೆ ದೈವವನೆಂದು ಫಲವೇನೆನುತ ಬಿಸುಸುಯ್ದ ॥ ೩೭

ವೀರರಂಗವನೆತ್ತ ಬಲ್ಲರು
ಹಾರುವರು ಬೆಳದಿಂಗಳಿನ ಬಱು
ಸಾರ ಸುಡುವುದು ಕೈದು ಹಿಡಿದಿರೆ ಕಲಿಗಳೇ ದ್ವಿಜರು ।
ವೈರಿ ಭಟನಿವ ಮಗುವಲಾ ಮನ
ವಾರೆ ಕಾದಲು ಲಕ್ಷ್ಯವಿಲ್ಲೀ
ಯೂರುಗರ ಬೈದೇನು ಫಲವೆಂದರಸ ಹೊಱವಂಟ ॥ ೩೮

ಎನಲು ದುಶ್ಶಾಸನನು ರಾಯನ
ಕನಲಿದನು ಖತಿಯೇಕೆ ಜೀಯಿಂ
ದೆನೆಗೆ ಬೆಸಸಾ ಸಾಕು ಭಂಡರ ಬೈದು ಫಲವೇನು ।
ದಿನಪ ದೀವಿಗೆಯಾಗಲುಳಿದೀ
ಬಿನುಗು ಬೆಳಗಿನ ಹಂಗು ಬೇಹುದೆ
ದನುಜ ದಿವಿಜರ ದಳಕೆ ತನ್ನನು ಬಿಟ್ಟು ನೋಡೆಂದ ॥ ೩೯ *

ತಳಿತುದೆಡ ಬಲ ವಂಕದಲಿ ಹೆ
ಬ್ಬಲ ಛಡಾಳಿಸಿ ಮೊರೆವ ಭೇರಿಯ
ಘುಳುಘುಳುಧ್ವನಿ ಕೂಡೆ ಜಡಿದುದು ಕಮಲಜಾಂಡ ಘಟ ।
ಹಳವಿಗೆಯ ಸೀಗುರಿಯ ಚಮರಾ
ವಳಿಯ ವಿಮಳ ಚ್ಛತ್ರ ಪಙ್ಕ್ತಿಯ
ವಳಯದಲಿ ನಭ ಮುಳುಗೆ ಮುತ್ತಿತು ಸೇನೆ ರಿಪು ಭಟನ ॥ ೪೦

ತಿರುಹು ತೇಜಿಯನಿತ್ತಲಿವದಿರ
ನೊರಸಿ ದುಶ್ಶಾಸನನ ಬೆನ್ನಲಿ
ಕರುಳು ತೆಗೆವೆನು ನೋಡು ಸಾರಥಿ ಬೆಚ್ಚ ಬೇಡೆನುತ ।

---

* ಈ ಪದ್ಯವು (ಕ) ಪ್ರತಿಯಲ್ಲಿ ಮಾತ್ರ ಇಲ್ಲ.

ಅರಗಿನರಸನ ಬಾಗಿಲಲಿ ದ
ಳ್ಳುರಿಗೆ [1]ತಡವೇ ಹೊಕ್ಕು[1] ನಿಮಿಷದೊ
ಳೊರಸಿದನು ಚತುರಂಗ ಬಲವನು ಕೌರವಾನುಜನ ‖ ೪೧

ಎಲವೊ ಕೌರವ ಕೊಬ್ಬಿ ನರಿ ಹೆ
ಬ್ಬುಲಿಯ ಕೂಸನು ಬೇಡುವಂದದಿ
ಅಳವನಱಿಯದೆ ಅಧಮ ರಥಿಕರ ಕೂಡೆ ತೊಡಕುವರೆ ।
ಮಲೆತು ನೀನೆನ್ನೊಡನೆ ರಣದಲಿ
ಹಳಚಿ ನೀ ತಲೆವೆರಸಿ ಮರಳಿದ
ಡಿಳುಹುವೆನು ಕೈದುವನು ಶರ ಸನ್ಯಾಸ ನನಗೆಂದ ‖ ೪೨

ಸಾಕು ತರುವಲಿತನದ ಮಾತುಗ
ಳೇಕೆ ಗರುವರ ಮುಂದೆ ವೀರೋ
ದ್ರೇಕದಲಿ ಮೈಮಱೆದು ರಣದಲಿ ಹೊಯ್ದು ಹೊಟ್ಟುಗರ ।
ಆ ಕಿರೀಟಿ ವೃಕೋದರರು ಮೈ
ಸ್ಸೋಕಿದರೆ [2]ಸಂತೋಷ[2] ನೀನವಿ
ವೇಕಿ ಬಾಲಕನೇನ ಮಾಡುವೆನೆಂದನವ ನಗುತ ‖ ೪೩

ಕೊಳಚೆ ನೀರೊಳಗಾಳುತೇಳುತ
ಜಲಧಿ ಕಾಲ್ವೊಳೆಯೆಂಬ ಭಂಡರ
ಮುಳಿದು ಮಾಡುವುದೇನು ಮೊದಲಲಿ ನಮ್ಮ ನೀ ಗೆಲಿದು ।
ಬಳಿಕ ಭೀಮಾರ್ಜುನರ ಬಯಸುವು
ದೆಲೆ ಮರುಳೆ ನಿನ್ನೊಡಲ ಸೀಳಿಯೆ
ತ್ತಿಳಿ ರಕುತದಲಿ ತಾಯ ತುಱುಬನು ನಾದಿಸುವೆನೆಂದ ‖ ೪೪

ಕಾತರಿಸದಿರು ಬಾಲ ಭಾಷೆಗ
ಳೇತಕಿವು ನೀ ಕಲಿತ ಬಿಲು ವಿ
ದ್ಯಾತಿಶಯವುಂಟಾದಡೆಮ್ಮೊಳು ತೋಱು ಕೈಗುಣವ ।
ಭೀತ ಭಟರನು ಹೊಳ್ಳುಗಳೆದ ಮ
ದಾತಿರೇಕದ ಠಾವಿದಲ್ಲೆಂ
ದೀತನೆಚ್ಚನು ನೂಱು ಬಾಣದಲಿಂದ್ರ ಸುತ ಸುತನ ‖ ೪೫

[1] ಸ್ಮೆರಣೆಯುಂಟೆ (ಕ.ಟ.ತ.ದ). [2] ಗೆಲವಿಲ್ಲ (ಕ).

ಬಿಲ್ಲ ಹಿಡಿಯಲು ಕೌರವಾನುಜ
ಬಲ್ಲ ನೋಡ್ಯೆ ಸೂತ ಮಿಗೆ ತ
ಪ್ಪಲ್ಲ ತಪ್ಪಲ್ಲಂಬು ಬಿದ್ದವು ಗುಱಿಯ ಸರಿಸದಲಿ ।
ನಿಲ್ಲು ನಿಲ್ಲಾದರೆಯೆನುತ ಬಲು
ಬಿಲ್ಲನುಗುಳಿಸಿದನು ಶರೌಘವ
ನೆಲ್ಲಿ [1]ನಭ ದೆಸೆಯೆತ್ತಲೆನೆ[1] ಘಾಡಿಸಿದವಂಬುಗಳು ॥ ೪೬

ಅವನ ನೂಱಂಬುಗಳ ಕಡಿದವ
ನವಯವವ ಕೀಲಿಸಿದಡಾಕ್ಷಣ
ವವನಿಯಲಿ ಬಲುಗರುಳು ಬಿದ್ದವು ಭಟನ ಕಿಬ್ಬರಿಯ ।
ಅವಗಡಿಸಿ ಖಾತಿಯಲಿ ಖಳ ಶರ
ನಿವಹವನು ತುಡುಕಿದನು ಕೊಡಹಿದ
ವವ[ನು]ನಿಮಿಷದೊಳರ್ಜುನಾತ್ಮಕನಗಣಿತಾಸ್ತ್ರಗಳು ॥ ೪೭

ತಾಯ ತುಱುಬಿಗೆ [2][ಹಾ][2]ಯ್ದ ಪಾತಕಿ
ನಾಯ ಕೊಂಡಾಡುವರೆ ಕೊಬ್ಬಿದ
ಕಾಯವನು ಕದುಕಿಱಿದು ನೆತ್ತರ ನೊರೆಯ ಬಾಸಣಿಸಿ ।
ತಾಯ ಕರಸುವೆನೆನುತ ಕಮಳದ
ಳಾಯತಾಂಬಕನಳಿಯನನುಪಮ
ಸಾಯಕವ ಹೂಡಿದನು ನೋಡಿದನೊಂದು ಚಿತ್ತದಲಿ ॥ ೪೮

ಇವನ ಕೊಂದರೆ ತಂದೆ ಮಿಗೆ ಮ
ಚ್ಚುವನೊ ಮುನಿವನೊ ತನ್ನ ನುಡಿ ಸಂ
ಭವಿಸದೆಂಬನೊ ಭೀಮಸೇನನ ಭಾಷೆಗಂಜುವೆನು ।
ಇವನ ತಾನೇ ಕೊಲಲಿ ನಮಗಿ
ನ್ನಿವನ ತೊಡಕೇ ಬೇಡ ಕದನದೊ
ಳಿವನ ಭಂಗಿಸಿ ಬಿಡುವೆನೆಂದನು ತನ್ನ ಮನದೊಳಗೆ ॥ ೪೯

ಕಾಯ್ದುಕೊಳ್ಳೈ ಕೌರವಾನುಜ
ಹೊಯ್ದು ಹೋಗಲು ಬಹುದೆ ಹರನಡ
ಹಾಯ್ದಡೆಯು ಗೆಲುವೆನು ಕಣಾ ನಿಲ್ಲೆನುತ ತೆಗೆದೆಸಲು ।

[1] ನಭ ನೆಲವಾವುದೆನೆ (ಗ.ಚ.ಟ.ಪ), ದೆಸೆ ನಭವಾವುದೆನೆ (ನ). [2] ಹೊ (ಪ).

ಬಾಯ್ದೆಗೆದು ಕೇಸುರಿಯ ಕಾಱುತ
ಕೈದುವೆದೆಯಲಿ ಕೊಂಡು ಬೆನ್ನಲಿ
ಹಾಯ್ದುಡವನೋಗುರ್ಗಡಿಸಿದನು ಕುರು ಸೇನೆ ಕಳವಳಿಸೆ ‖ ೫೦

ಅಹಹ ಕೈತಪ್ಪಾಯ್ತು ರಾಯನ
ಸಹಭವನು ನೊಂದನು ಶಿವಾ ಎನು
ತಹಿತ ಸುಭಟರು ಸರಿಯೆ ಸಾರಥಿ ತಿರುಹಿದನು ರಥವ ।
ಬಹಳ ಬಲ ನುಗ್ಗಾಯ್ತು ಶಿಶುವಿನ
ಸಹಸ ಕುಂದದೆನುತ್ತ ಖತಿಯಲಿ
ಮಿಹಿರ ಸುತನಡಹಾಯ್ದು ತಡೆದನು ಮತ್ತೆ ಬಾಲಕನ ‖ ೫೧

ಸಾರು ಸಾರಭಿಮನ್ಯು ಫಡ ಇ
ನ್ನಾರ ಬಸುಱನು ಹೊಗುವೆ ನಿನ್ನವ
ರಾರ ಸಂತತಿ ಮಾಡಿಕೊಳಲಿ ಭವ[1]ತ್ ಪರೋಕ್ಷದಲಿ[1] ।
ಭೂರಿ ಬಲವನು ಸದೆವ ಗರ್ವವಿ
ದಾರ ಕೂಡೆ ಧನುರ್ಧರಾಗ್ರಣಿ
ವೀರ ಕರ್ಣ ಕರ್ಣಾ ಎನುತ ತೆಗೆದೆಚ್ಚನತಿರಥನ ‖ ೫೨

ಬಲ್ಲೆನುಂಟುಂಟಖಿಳ ವೀರರೊ
ಳಿಲ್ಲ ಸರಿ ದೊರೆ ನಿನಗೆ ಬಾಯಲಿ
ಬಲ್ಲಿದನು ನೀನಹೆ ಭಟಾಂಗದ ಮಾತದಂತಿರಲಿ ।
ಒಳ್ಳೆ ಗಡ ಹಾವುಡವ ವಾಸುಗಿ
ಯಲ್ಲಿಗಟ್ಟಿತು ಗಡ ಮಹಾಹವ
ಮಲ್ಲ ಮಡಮುಱಿಯದಿರೆನುತ ಹೊಕ್ಕೆಚ್ಚನಭಿಮನ್ಯು ‖ ೫೩

ಇರುಳು ರಾಯನ ಮನೆಗೆ ಕಪ್ಪವ
ತೆಱುವುದೋ ಹಗಲೆಲವೊ ಕೆಲಬರ
ನಿಱಿದ ದರ್ಪವದಾರೊಡನೆ [2]ಫಡ ಮರಳು ಮರಳೆನುತ[2] ।
ಕಿಱುವೊನೆಯ ಮುಗುಳಂಬುಗಳ ಸೈ
ಗಱೆದನಭಿಮನ್ಯುವಿನ ಮೆಯ್ಯಲಿ
ತುಱುಗಿದವು ಮಱಿದುಂಬಿ ಕೆಂದಾವರೆಗೆ ಕವಿವಂತೆ ‖ ೫೪

[1] ದ್ವಿಯೋಗದಲಿ (ಚ.ಪ). [2] ಮ್ಯೆದೋಱು ಕೈದೋಱು (ಕ).

ಸುರಪನಂಕುಶ[1]ವೌಕಿ[1]ದರೆ ಮೆ
ಯ್ಯುಱಿಯದೈರಾವತಕೆ ಕಬ್ಬಿನ
ಲಿಱಿದರಂಜಿಕೆಯುಂಟೆ ನಿನ್ನಯ ಕಣೆಗಳೌಕಿದರೆ ।
ತೆರಳುವನೆ ಅಭಿಮನ್ಯುವೆನುತ
ಬ್ಬರಿಸಿ ಕರ್ಣನ ಕಾಯವನು ಹುಗಿ
ಲಿಱಿದನೆಂಟಂಬಿನಲಿ ತೋದುದು ತೇರು ರಕ್ತದಲಿ ॥ ೫೫

ಮಳೆಗೆ ಮೊಗದಿರುಹುವುದೆ ಬಡಬಾ
ನಳನೆಲವೊ ನಿನ್ನಂಬು ತಾಕಿದ
ರಳುಕುವೆನೆ ತಾನೆನುತ ರವಿ ಸುತನೆಚ್ಚನತಿರಥನ ।
ಹಿಳುಕು ಕವಿದವು ಭಟನ ಕೈ ಮೈ
ಗಳಲಿ [2][ಮಿನುಗಿದ][2]ವಿರುಳು ಮರನಲಿ
ಹೊಳೆದು ಮುತ್ತಿದ ಮಿಂಚುಬುಳುವಿನ [3]ಮಿನುಗಿನಂದದಲಿ[3] ॥ ೫೬

ಹೂಣಿಗರು ಕೆಲರಿವರು ಇವದಿರ
ಗೋಣನರಿವರೆ ಇವರ ಜೀವದ
ಕೇಣಿಕಾಱರು ಖಾತಿಗೊಂಬರು ಭೀಮ ಫಲುಗುಣರು ।
ಮಾಣದಿವದಿರು ಮತ್ತೆ ರಣದಲಿ
ಕಾಣೆನಿದಕಿನ್ನನುವನೆನುತ
ಕ್ಷೀಣ ಭುಜಬಲನೆಚ್ಚು ಕಡಿದನು ಸೂತಜನ ಧನುವ ॥ ೫೭

ಕೈದು ಮುಱಿಯಲು ಮುಂದೆ ನೂಕದೆ
ಹಾಯ್ದನಾ ರವಿ ಸೂನು ಬಳಿಕಡ
ಹಾಯ್ದು ತಡೆದನು ಬವರವನು ಕರ್ಣಾತ್ಮಜನು ಕಡುಗಿ ।
ಐದು ಬಾಣದಲವನ ಕೊರಳನ
ಕೊಯ್ದನರ್ಜುನ ಸೂನುವಾತನ
ನೊಯ್ದರಂತಕ ದೂತರದ್ಭುತವಾಯ್ತು ಸಂಗ್ರಾಮ ॥ ೫೮

ಘಾಯವಡೆದನು ಶಲ್ಯ ರವಿ ಸುತ
ನಾಯುಧವ ಬಿಟ್ಟೋಡಿದನು ಕುರು
ರಾಯನನುಜನು ಬದುಕುವರೆ ಮೆಯ್ಯೆಲ್ಲ [4]ಬಾದಣವು[4] ।

---

[1] ವಿಕ್ಕಿ (ಚ.ಪ). [2] ಮುತ್ತಿದವಿ (ಕ), ಮುಳುಗಿದ (ಚ.ಟ.ತ.ದ.ನ). [3] ಬಳಗದಂದದಲಿ (ತ). [4] ಬಾಣಮಯ (ಕ), ಬಾರಣವು (ಗ.ತ).

ಸಾಯದುಳಿದವರಿಲ್ಲ ಮಿಕ್ಕಿನ
ನಾಯಕರೊಳಕಟಿನಲು ಕುರು ಬಲ
ಬಾಯ ಬಿಡೆ ಶಲ್ಯನ ಕುಮಾರಕ ಹೊಕ್ಕನಾಹವವ ‖　　೫೯

ಆ ಕುಮಾರನ ಸೇನೆ ಗಡಣಿಸಿ
ನೂಕಿತುರವಣಿಸಿದುದು ತುರಗಾ
ನೀಕವಿಭತತಿ ತೂಳಿದವು ತುಡುಕಿದವು ರಥ ನಿಕರ ।
ತೋಕಿದವು ಕೈದುಗಳ ಮಳೆ ರಣ
ದಾಕೆವಾಳರ ಸನ್ನೆಯಲಿ ಸವು
ರಾಕುಳರು ಕೆಣಕಿದರು ರಿಪು ಕಲ್ಪಾಂತ ಭೈರವನ ‖　　೬೦

ಭಟ ಛಡಾಳಿಸಿದನು ಘೃತಾಹುತಿ
ಘಟಿಸಿದಗ್ನಿಯ ಪೋಲ್ ರಣ ಚೌ
ಪಟ ಚತುರ್ಬಲದೊಳಗೆ ಹೊಕ್ಕನು ಸಿಂಹ ನಾದದಲಿ ।
ನಿಟಿಲ ನೇತ್ರನ ಕೋಪ ಶಿಖಿ ಲಟ
ಕಟಿಸುವಂತಿರೆ ಹೆಚ್ಚಿದತಿಬಲ
ದಟವಿಯನು ಸವಟಿ[1]ದುದು ಪಾರ್ಥ ಕುಮಾರ ಶರಜಾಲ[1] ‖　　೬೧

ಧರೆ ಬಿರಿಯೆ ಬೊಬ್ಬೆಯಲಿ ಬಲದ
ಬ್ಬರಣೆ ದೆಖ್ಖಾದೆಖ್ಖೆಯಾಗಲು
ಧರಣಿಪತಿ ಮಱುಗಿದನು ಮಗನೇನಾದನೋ ಎನುತ ।
ಕರೆದು ಭೀಮನ ನಕುಳನನು ಸಂ
ಗರಕೆ ಧೃಷ್ಟದ್ಯುಮ್ನ ದ್ರುಪದರ
ಪರುಠವಿಸಿ ಕಳುಹಿದನು ಸೌಭದ್ರಂಗೆ ಪಡಿಬಲವ ‖　　೬೨

ಗದೆಯ ತಿರುಹುತ ಸಿಂಹ ನಾದದ
ಲೊದಱಿ ಮಗನಾವೆಡೆಯೆನುತ ನೂ
ಕಿದನು ರಥವನು ತನ್ನ ಸೇನೆಗೆ ಸೀಗುರಿಯ [2]ಬೀಸಿ[2] ।
ಅದಟನೈತರೆ ಹೋಗಲೀಯದೆ
ಮೊದಲ ಬಾಗಿಲ ಕಟ್ಟಿಕೊಂಡ
ಗ್ಗದ ಜಯದ್ರಥ ಭೀಮನೊಳು ಬಲು ಗಾಳೆಗವ ಹಿಡಿದ ‖　　೬೩

---

[1] ದನು ಸುಱಿದವು ಸರಳು ಶೋಣಿತವ (ಕ.ಗ.ಟ.ತ.ದ). [2] ನಲುಗಿ (ಗ.ಚ.ಪ.ಬ).

ತೆಱಹುಗೊಡು ಘಡ ಘಡ ಜಯದ್ರಥ
ಹೆಱತೆಗೆದು ಸಾರೆನುತ ಹೂಣಿಗ
ನುಱುಬಿದರೆ ಮಾಱಾಂತು ಭೀಮನ ಕಡುಹ ನಿಲಿಸಿದನು |
ಮಱೆದು ಕಳೆಯಭಿಮನ್ಯುವನು ಮೈ
ಮಱೆಯದೆನ್ನಲಿ ಕಾದು ಮಾತಿನ
ಬಿಱುಬಿನಲಿ ಫಲವಿಲ್ಲೆನುತ ಕೆಂಗೋಲ [1]ತೊಡಚಿದನು[1] ‖ ೬೪

ಬವರದಲಿ ಕಲಿ ಪಾರ್ಥನಲ್ಲದೆ
ಪವನ ತನಯಾದಿಗಳ ಗೆಲುವರೆ
ಶಿವನ ಕೃಪೆಯೆನಗುಂಟು ಮುನ್ನೆನುತಾ ಜಯದ್ರಥನು |
ಕವಲುಗೋಲಲಿ ಭೀಮನನು ಪರಿ
ಭವಿಸಿದನು ಸಹದೇವ ನಕುಳರ
ತಿವಿದು ಧೃಷ್ಟದ್ಯುಮ್ನ ಮೊದಲಾದಗಣಿತರ ಗೆಲಿದ ‖ ೬೫ *

ಪಡಿಬಲವ ಬರಲೀಯದನಿಲಜ
ನೊಡನೆ ಸೈಂಧವ ಕಾದುತಿರಲಿ
ಮ್ಮಡಿಸಿತಾಹವವಿತ್ತ ಮೋಹರ ಮಧ್ಯ ರಂಗದಲಿ |
ಕಡುಗಿ ನೂಕುವ ಕದನ ರಾಗಿಗ
ಳೊಡನೆ ಕಾದುವ ಪಾರ್ಥ ತನಯನ
ಬಿಡಿ ಸರಳು ಬೀಱಿದವು ರಮಣರನಮರ ವಧುಗಳಿಗೆ ‖ ೬೬

---

[1] ತೆಗೆದೆಚ್ಚ (ಬ).

* ಈ ಪದ್ಯವಾದ ಮೇಲೆ (ಕ.ಗ.ಟ.ದ) ಪ್ರತಿಗಳಲ್ಲಿ ಮುಂದಿನ ಎರಡು ಪದ್ಯಗಳು ಹೆಚ್ಚಾಗಿವೆ:-

ಮರಳು ಮರಳೋ ಭೀಮ ಮುನಿದರೆ
ಕೊರಳ ಕೊಯ್ವೆನು ನಿನ್ನ ಹವಣೀ
ಹರನ ಕಾರುಣ್ಯಾವಲೋಕನವೆನಗೆ ಹಿರಿದೆನುತ |
ಸರಳ ಮಳೆಯನು ಕಱೆದು ಭೀಮನ
ತುರಗವನು ಸೀಳಿದನು ರಣದಲಿ
ವಿರಥರನು ಮಾಡಿದನು ಫಲುಗುಣನುಳಿಯೆ ಪಾಂಡವರ ‖

ಹೊಗುವ ಧೃಷ್ಟದ್ಯುಮ್ನನನು ಹೆಱ
ದೆಗೆಯಲೆಚ್ಚನು ದ್ರುಪದ ಮೊದಲಾ
ದಗಣಿತರನೋಡಿಸಿದ ಕೊಂದನು ಚಾತುರಂಗವನು |
ಹೊಗುವ ಭಟರಲಿ ಮತ್ತೆ ಬಿಲ್ಲನು
ತೆಗೆದು ಮುಷ್ಟಾಮುಷ್ಟಿಯಲಿ ಕೋ
ಲುಗಳ ಕವಿಸಿಯೆ ಭೀಮನೊಡನವಗಡಿಸಿ ಕಾದಿದನು ‖

ತಱಿದನಾನೆಯ ಥಟ್ಟುಗಳ ಮು
ಕ್ಕುಱುಕಿದನು ಕಾಂಭೋಜ ತೇಜಿಯ
ನುಱುಬಿ ಹೊಯ್ದನು ಸೂನಿಗೆಯ ತೇರುಗಳ ತಿಂತಿಣಿಯ ।
ಮುಱಿದನೊಗ್ಗಿನ ಪಾಯ್ದಳವನ
ಳ್ಳಿಱಿವ ಹೆಣ ಕುಣಿದಾಡೆ ಭಟ ಬೇ
ಸಱದೆ ಕೊಂದನು ವೈರಿಸೇನೆಯನರಸ ಕೇಳೆಂದ ॥ ೬೭

ಒರಸಿದನು ಹದಿನೆಂಟು ಸಾವಿರ
ಕರಿ ಘಟೆಯನೈವತ್ತು ಸಾವಿರ
ತುರಗವನು ಮೂವತ್ತು ಸಾವಿರ ವರ ಮಹಾರಥರ ।
ಧುರದಿ ಲಕ್ಷ ಪದಾತಿಯನು ಸಂ
ಹರಿಸಿ ಶಲ್ಯ ಕುಮಾರಕನ ಕ
ತ್ತರಿಸಿದನು ಗೋನಾಳಿಯನು ದಿವ್ಯಾಸ್ತ್ರ ಧಾರೆಯಲಿ ॥ ೬೮

ಮಡಿದನಕಟಾ ತಮ್ಮ ಸಖನೆಂ
ದಡಸಿದಳಲಿನೊಳೆದ್ದು ಕೋಪದ
ಕಡು ಝಳದ ಕಾಲಾಗ್ನಿ ರುದ್ರನ ಕಣ್ಣ ಹೋಲುವೆಯ ।
ಸಿಡಿದ ಮೀಸೆಯ ಬಿಗಿದ ಹುಬ್ಬಿನ
ಜಡಿವ ರೋಮಾಂಚನದ ಖಾತಿಯ
ಕಡುಹುಕಾಱರು ಮಸಗಿದರು ದುರ್ಯೋಧನಾತ್ಮಕರು ॥ ೬೯

ಚಂಡ ಭುಜ ಬಲನೊಡನೆ ಮಕ್ಕಳ
ತಂಡವೆದ್ದುದು ಬಿಗಿದ ಬಿಲ್ಲಿನ
ದಂಡವಲಗೆಯ ಮುಸುಡಿ ಮುದ್ಗ ಕಠಾರಿಯುಬ್ಬಣದ ।
ಗಂಡುಗಲಿಗಳು ಕವಿದರದಿರುವ
ಖಂಡಯುದ ಮುಡುಹುಗಳ ಗಂಧದ
ಮಂಡನದ ಮೈ ಸಿರಿಯ ಪರಿಮಳ ಪೂರರೊಗ್ಗಿನಲಿ ॥ ೭೦

ತಳಿತ ಸತ್ತಿಗೆಗಳ ವಿಡಾಯಿಯ
ಲೊಲೆವ ಚಮರಿಯ ವಜ್ರ ಮಕುಟದ
ಹೊಳಹುಗಳ ಹೊಗೆ ಮೀಸೆ[1]ಗೆದಱಿನ[1] ಬಿರುದಿನುಬ್ಬಟೆಯ ।

---

[1] ಗೌರಿನ (ಸ-ಕ).

ಕೆಲ ಬಲದ ವೇಲಾಯತರ ವೆ
ಗ್ಗಳದ ರಾವ್ತರ ಗಡಣ ನಾಲಗೆ
ದಳೆದುದೆನೆ ಹೊಳೆಹೊಳೆವಡಾಯುಧ ಭಟರು ನೂಕಿದರು ॥ ೭೧

ಭಾಪುರೇ ಕೌರವನ ಸುತರಾ
ಟೋಪವೊಳ್ಳಿತು ಬಂದ ಬರವಿನ
ಚಾಪಳದಲೊದಗಿದರೆ ಲೇಸಲ್ಲಿದರ ಫಲವೇನು ।
ಕಾಪುರುಷರೇ ಕಾಣಬಹುದೆಂ
ದಾ ಪುರಂದರ ಸುತನ ಸುತ ನಿಜ
ಚಾಪವನು ನೇವರಿಸುತಿದ್ದನು ಬಗೆಯದರಿ ಬಲವ ॥ ೭೨

ಮಗುಳದಿರು ಶಲ್ಯಾತ್ಮಕನನುಗು
ಳ್‍ಗಳು ನಿನ್ನಯ ಬಸಿಱ ಸೀಳಿಯೆ
ತೆಗೆವೆವೆಮ್ಮಯ ಸಖನನೆನುತಾ ಲಕ್ಷಣಾದಿಗಳು ।
ತೆಗೆದೆಸುತ ಮೇಲಿಕ್ಕಿದರು ತಾ
ರೆಗಳು ನೆಣಗೊಬ್ಬಿನಲಿ ರಾಹುವ
ತೆಗೆದು ಬದುಕಲು ಬಲ್ಲವೇ ಧೃತರಾಷ್ಟ್ರ ಕೇಳೆಂದ ॥ ೭೩

ದಿಟ್ಟರೋ ಲಕ್ಷಣನವರು ಜಗ
ಜಟ್ಟಿಗಳಲಾ ರಾಜ ಕುಲದಲಿ
ಹುಟ್ಟಿದರೆ ಕೆಲರೀಸು ಚಪಳತೆಯಾರಿಗುಂಟೆನುತ ।
ಕಟ್ಟಿದನು ಕಣೆಗಳಲಿ ಸುತ್ತಲು
ತಟ್ಟಿವಲೆಗಳ ಸೋಹಿನಲಿ ಜೆ
ನ್ನಟ್ಟಿ ಪಾರ್ಥ ಕುಮಾರ ಸದೆದನು ವೈರಿ ಮೃಗ ಕುಲವ ॥ ೭೪

ಆ ಸುಯೋಧನ ಸುತರ ಸರಳ ವಿ
ಳಾಸವನು ಖಂಡಿಸಿದನವದಿರ
ಬೀಸರಕೆ ಬಂದಡ್ಡಬೀಳುವ ಭಟರ ಕೆಡೆಯೆಚ್ಚ ।
ರೋಷ ವಹ್ನಿಯ ಕೆದಱೆ ಕವಿವ ಮ
ಹೀಶರನು ಮಾಣಿಸಿದನವನೀ
ವಾಸವನು ವಾಸವನ ಮೊಮ್ಮನುದಾರ ಸಮರದಲಿ ॥ ೭೫

ಘಡ ಕುಮಾರಕ ದೊದ್ದಗರ ಸದೆ
ಬಡಿದ ಗರ್ವಿತತನವಕಟ ನ
ಮ್ಮೊಡನೆಯೇ ನೋಡಿಲ್ಲಿ ಮೇಳವೆ ಸಾರು ಸಾರೆನುತ ।
ಒಡನೊಡನೆ ನಾರಾಚ ನಿಚಯವ
ಗಡಣಿಸಿದರೇನೆಂಬೆನವರು
ಗ್ಗಡದ ಬಿಲು ವಿದ್ಯಾತಿಶಯವನು ಸಮರ ಭೂಮಿಯಲಿ ॥ ೭೬

ಸರಳ ಮೊನೆಯಲಿ ವೈರಿ ಸುಭಟರ
ಕರುಳ ತೆಗೆದನು ರಣದೊಳಾಡುವ
ಮರುಳ ಬಳಗವ ತಣಿಸಿದನು ಕಡಲಾದುದರುಣಜಲ ।
ತರಳನಱೆಯಟ್ಟಿದನು ಧುರದಲಿ
ದುರುಳ ದುರಿಯೋಧನನ ಮಕ್ಕಳ
ಮರಳಲೀಯದೆ ಭಟರ ಕೇಣಿಯ ಕೊಂಡನಭಿಮನ್ಯು ॥ ೭೭

ಉರಗನಿಕ್ಕಡಿಗಾಱ ಹುಲ್ಲಿನ
ಸರವಿಗಂಜುವುದುಂಟೆ ಕರ್ಣಾ
ದ್ಯರನು ಕಡ್ಡಿಗೆ ಬಗೆಯನೀ ಹೂಹೆಗಳ ಗಣಿಸುವನೆ ।
ಎರಡು ಶರದಲಿ ಲಕ್ಷಣನ ಸಂ
ಹರಿಸಿದನು ಹದಿನೈದು ಬಾಣದ
ಲರಿದನುಳಿದ ಕುಮಾರಕರನಭಿಮನ್ಯು ನಿಮಿಷದಲಿ ॥ ೭೮

ತಳಿತ ಚೂತದ ಸಸಿಗಳವನಿಗೆ
ಮಲಗುವಂತಿರೆ ರಾಜ ಪುತ್ರರು
ಹೊಳೆವ ಪದಕದ ಕೊರಳ ತಲೆಗಿಂಬಾದ ತೋಳುಗಳ ।
ಬಳಿ ರಕುತದಲಿ ನನೆದ ಸೀರೆಯ
ತಳಿತ ಖಂಡದ ಬಿಗಿದ ಜುಬ್ಬಿನ
ದಳಿತ ದಂಷ್ಟ್ರಾನನದಲೆಸೆದರು ಸಾಲ ಶಯನದಲಿ ॥ ೭೯

ಇಕ್ಕಿದಿರಲಾ ರಾಜ ಪುತ್ರರ
ನಕ್ಕಟಕಟಾ ಸ್ವಾಮಿ ದ್ರೋಹರು
ಹೊಕ್ಕ ಮನೆ ಹಾಳಹುದಲಾ ದ್ರೋಣಾದಿನಾಯಕರು ।

ಹಕ್ಕಲಾದುದು ನಮ್ಮ ಬಲ ಶಿಶು
ಸಿಕ್ಕನಿನ್ನೂ ಪಾಂಡವರ ಪು
ಣ್ಯಕ್ಕೆ ಸರಿಯಿಲ್ಲೆನುತ ಕೌರವ ರಾಯ [1]ಗರ್ಜಿಸಿದ[1] ‖ ೮೦ *

ಕುಲವ ನೋಡಿದಡಿಲ್ಲ ತನ್ನಯ
ಬಲುಹ ನೋಡಿದಡಿಲ್ಲ ಕದನದೊ
ಳುಳಿವ ನೋಡಿದರಿಲ್ಲಲಾ ಪತಿಯೆಂಬ ಪಾತಕಿಯು ।
ಇಳೆಯೊಳೋಲೆಯ ಕಾಱರೆಂಬರ
ತಲೆಗೆ ತಂದನು ತೃಣವನೆಂದ
ಗ್ಗಳೆಯರನು ಮೊದಲಿಸಿ ಬಯ್ದನು ಸುಯ್ದು ಕುರು ರಾಯ ‖ ೮೧

ಕೇಳುತಿದ್ದರು ಪತಿಯ ಮೊದಲೆ
ಗಾಳಿಯಲಿ ಧಳ್ಳಿಸುವ ಶೌರ್ಯ
ಜ್ವಾಲೆ ಜಡಿದುದು ಖಾತಿಯಲಿ ಹೊಗರೇಱಿದಾನನದ ।
ಆಳುತನವುಬ್ಬೆದ್ದು ಕಡು ಹೀ
ಹಾಳಿಕಾಱರು ಕೈದು ಕೊಂಡರು
ಬಾಲಕನ ತಱುಬಿದರು ದೊರೆಗಳು ಕೇಳು ಧೃತರಾಷ್ಟ್ರ ‖ ೮೨

ಐದನೆಯ ಸಂಧಿ ಮುಗಿದುದು.

---

[1] ಖತಿಗೊಂಡ (ಸ-ಕ).

* ಈ ಪದ್ಯವಾದ ಮೇಲೆ (ಚ.ಟ.ದ.ಬ) ಪ್ರತಿಗಳಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ :—

ಕೊಯ್ಗೊರಳ ಕೋಳಾಹಳದ ಮುಂ
ಗೈಗಳೇಱಿನ ಬಾದಣಂಗಳ
ಮೈಗಳಱೆ ಮರಳಾಲಿಗಳ ಬಿಡುಮಿದಳ ಮೋರೆಗಳ ।
ಸುಯ್ಗಳಲಿ ಜೀವವ ಬಿಡುವ ಬಲು
ಗೈಗಳಾಹವ ಜವನ ಬೆಳಸಿನ
ಕೈಗಳುಱೆ ಹುಲಿಸಾಯ್ತೆನಲು ರಂಜಿಸಿತು ರಣಭೂಮಿ ‖

# ಆರನೆಯ ಸಂಧಿ

ಸೂಚನೆ ॥ ರಿಪು ಕುಮಾರ ಕುಠಾರ ಧೀರನು
ಚಪಳ ನೃಪ ಸಂಹಾರ ಕಾಲನು
ವಿಪುಳ ಸಂಗ್ರಾಮದಲಿ ಮಡಿದನು ಫಲುಗುಣನ ತನಯ ॥ *

ಮೇರೆದಪ್ಪಿತು ಕೌರವನ ಪರಿ
ವಾರದಲಿ ಬೇಹವರು ಮಕುಟದ
ಭಾರಿಯಾಳುಗಳಾಂತುಕೊಂಡರು ಪಾರ್ಥ ನಂದನನ ।
ಸೂರಿಯನ ಸುತ ಶಲ್ಯ ಗೌತಮ
ಕೌರವಾನುಜನುಭಯಕಟಕಾ
ಚಾರ್ಯನಶ್ವತ್ಥಾಮನಿವರೊಗ್ಗಾಯ್ತು ಷಡುರಥರು ॥ ೧

ಹೊಳೆವ ಸಿಂಧದ ಜಡಿವ ಕಹಳಾ
ವಳಿಯ ಲಗ್ಗೆಯ ವಿವಿಧ ವಾದ್ಯದ
ಕಳಕಳದ ಕಾಲಾಳ ಬೊಬ್ಬೆಯ ಬಹಳ ರಭಸದಲಿ ।
ಕಲಶ ಪಲ್ಲವ ಚೌಕದಲಿ ಮಂ
ಡಳಿಸಿದವು ಸತ್ತಿಗೆಗಳೊದಱುವ
ಕೆಲಬಲದ [ಶಂ]ಖಾಳಿಯಲಿ ಸಂದಣಿಸಿತತಿರಥರು ॥ ೨ †

---

* ಸೂಚನೆಯಾದಮೇಲೆ (ತ) ಪ್ರತಿಯಲ್ಲಿ ವಿನಾ ಉಳಿದುವುಗಳಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ :—

ಬಾಲಬಾಲರ ಕೊಂದ ದೊರೆಗಳ
ಮೇಲೆ ಬಿದ್ದುದು ಬವರ ಕೌರವ
ಗೋಳಿಡುತ ಸುಕುಮಾರಕರ ಸಾವಿಂಗೆ ಹಂಬಲಿಸೆ ।
ಆಳಿದನು ದುಮ್ಮಾನವನು ಕ
ಟ್ಟಾಳುಗಳ ಕಂಡುದು ಮಹಾರಥ
ರೋಳಿಯಲಿ ನೂಕಿದರು ಸರಿಸದ ರಥದ ಗಡಣದಲಿ ॥

† ಎರಡನೆಯ ಪದ್ಯವಾದಮೇಲೆ (ತ.ನ) ಪ್ರತಿಗಳಲ್ಲಿ ವಿನಾ ಉಳಿದುವುಗಳಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ :—

ಧೃತಿಗೆ ಚಿತ್ತವ ತೆತ್ತರೆನಲಾ
ದತಿಶಯದಿ ಮಝು ಭಾಪೆನುತ ಭಟ
ತತಿ ಪರಾಕ್ರಮವನು ಪಯೋಧಿಯ ಕಡೆಗೆ ಕಾಲಿಡುತ ।
ನುತ ಗಜಾರೋಹಕ ತುರಗ ಸಂ
ತತಿಗಳಲಿ ಪ್ರೌಢವರೂಥ ಪ್ರ
ತತಿ ಪರಿಣತವಳವಿಗೊಟ್ಟುದು ಮತ್ತೆ ಬಾಲಕನ ॥

ಅಳವಿಗೊಟ್ಟುದು ಮತ್ತೆ ಕೌರವ
ಬಲ ಪಯೋನಿಧಿ ವೈರಿ ಬಡಬನ
ಬಿಲು ಸರಳು ಬಿಱುಗಿಡಿಯಲೌಕಿತು ಚಾತುರಂಗದಲಿ ।
ಎಲೆಲೆ ಬೆಂಗಾಹಿನಲಿ ನೂಕುವ
ಬಲ ಸಮರ್ಥರ ಜೋಕೆಯಲಿ ಕುರು
ಬಲಕೆ ಕದನಾಳಾಪವಾಯ್ತೆನುತೆಚ್ಚನಭಿಮನ್ಯು ॥ ೩

ಎಸಲು ತಲೆವರಿಗೆಯಲಿ ಕವಿದುದು
ದೆಸೆಯ ಹಳುವಿಂಗೌಕುವತಿರಥ
ರುಸುರುಮಾಱುಗಳೇಱಿ ಹೊಯ್ದರು ರಾಯ ರಾವುತರು ।
ನುಸು[1]ಳಿದರು[1] ನಾಚಿಕೆಯಲಾತನ
ವಿಶಿಖ ಜಲದಲಿ ತೊಳೆದರತಿರಥ
ರಸಮ ಸಂಗರವಾಯ್ತು ಮತ್ತಭಿಮನ್ಯುವಿದಿರಿನಲಿ ॥ ೪

ಹಳಚಿ ಮುಱಿದುದು ವೀರ ಕರ್ಣನ
ಬಲ ಕೃಪಾಚಾರಿಯರ ಸೇನೆಗೆ
ತಲೆಯ ಋಣ ಸಂಬಂಧ ಸವೆದುದು ಕಾತರಿಸಿ ಕವಿವ ।
ಬಲದ ಬಿರುದರಿಗಮರ ನಾರಿಯ
ರೊಳಗೆ ಸೇರುವೆಯಾಯ್ತು ಶಲ್ಯನ
ಬಲದಡಗು ಸವಿಯಾಯ್ತು ಜಂಬುಕ ಕಾಕ ಸಂತತಿಗೆ ॥ ೫

ಕೆಡೆದ ರಥ ಸಲೆ ಕಾಂಚನಾದ್ರಿಯ
ನಡಸಿದವು ನಾಚಿಕೆಯನಭ್ರದೊ
ಳಿಡಿಯೆ ತಲೆ ಬೀಱಿದವು ಭಂಗವನನುಪಮಾಂಬರಕೆ ।
ಕಡಲುವರಿವರುಣಾಂಬು ಜಲಧಿಗೆ
ಬಿಡಿಸಿದವು ಬಿಂಕವನು ಶಿವ ಶಿವ
ನುಡಿವ ಕವಿಯಾರಿನ್ನು ಪಾರ್ಥ ಕುಮಾರನಾಹವವ ॥ ೬

ಪಡೆಯ ತೆಗೆ ತರುವಲಿಯ ಕೊಲ್ಲದೆ
ಹಿಡಿಯೆನುತ ಬಿಱು ಸರಳ [2]ತಿರುವಿನ
ಲಡಸಿ[2] ಸೂತರಿಗಱುಹಿ ಕೆಲ ಬಲದವರ ಕೈವೀಸಿ ।

---

[1] ಳುಗಳು (ಚ.ತ.ದ.ನ.ಪ.ಬ). [2] ಕೆನ್ನೆಗೆ ತೊಡಚಿ (ಕ).

ಕಡು ಮನದ ಕೈ ಚಳಕಿಗರು ಮುಂ
ಗುಡಿಯಲೈತರೆ ರವಿ ಸುತಾದಿಗ
ಳೊಡನೊಡನೆ ಕೈಕೊಂಡರಿಂದ್ರ ಕುಮಾರ ನಂದನನ ॥ ೭

ಶಿಶುತನದ ಸಾಮರ್ಥ್ಯ ಸಾಕಿ
ನ್ನೆಸದಿರೆಲವೋ ಮರಳು ಮರಳೆಂ
ದಸಮ ಬಲರೈದಿದರು ಷಡುರಥರೊಂದು ಮುಖವಾಗಿ ।
ಎಸುಗೆ ನಿಮಗೆಂದಾಯ್ತು ನಿದ್ರೆಯ
ಮುಸುಕಿನಲಿ ಗೋಗ್ರಹಣದಲಿ ಜೀ
ವಿಸಿದ ಜಾಣರು ನೀವೆನುತ್ತಿದಿರಾದನಭಿಮನ್ಯು ॥ ೮

ತರಳತನದಲಿ ನುಡಿಯದಿರು ಸಂ
ಗರಕೆ ಕರೆ ನಿಮ್ಮಯ್ಯನನು ಹೊಸ
ಸರಳು ನಾಚುವವಲ್ಲ ಶಿಶುವಧೆಯೆಂಬುದಪ[1]ವಾದ[1] ।
ಮರಳುವುದು ಲೇಸೆನುತ ಷಡುರಥ
ರುರವಣಿಸಿದರು ಬಿಗಿದ ಬಿಲ್ಲಿನ
ಗರುಡಿಕಾಱನ ಕೂಡೆ ನೂಕಿತು [2]ರವಿಸುತಾದಿಗಳು[2] ॥ ೯

ಪಾರ್ಥ ಪರಿಯಂತೇಕೆ ಸಮರ
ವ್ಯರ್ಥಜೀವರು ನೀವು ಕೌರವ
ನರ್ಥವನು ಸಲೆ ತಿಂಬುದಲ್ಲದೆ ಸಮರ ನಿಮಗೇಕೆ ।
ಸ್ವಾರ್ಥ ಲೋಲುಪ್ತಿಯಲಿ ನಿಲುವ ಸ
ಮರ್ಥರಾದರೆ ಬಾಣ ಧಾರಾ
ತೀರ್ಥದೊಳಗೋಲಾಡಿಸುವೆನೆಂದೆಚ್ಚನಭಿಮನ್ಯು ॥ ೧೦

ಮನದ ಕೆಚ್ಚುಳ್ಳದಟನಹೆ ಮಾ
ತಿನ ಸಘಾಡಿಕೆ ಲೇಸು ಪಾರ್ಥನ
ತನಯನಲ್ಲಾ ಪೂತು ಪಾಯಿಕು ಎನುತ ಷಡುರಥರು ।
ತನತನಗೆ ಕೆಂಗೋಲಿನಲಿ ಮು
ಮ್ಮೊನೆಯ ಬೋಳೆಯ ಸರಳಿನಲಿ ಸಾ
ಧನ ಸಮಗ್ರರು ಶಿಶುವನೆಚ್ಚರು ದೆಸೆ ದೆಸೆಗೆ ಕವಿದು ॥ ೧೧

---

[1] ಘಾತ (ಕ), ರಾಧ (ಚ.ದ.ಬ). ನಿನ್ನವಂದಿಗರು (ಕ), ಮಕುಟವರ್ಧ
ನರು (ಗ.ದ.ಬ).

ಮಸಗಿ ಮದದಾನೆಗಳು ಸಿಂಹದ
ಶಿಶುವ ಮುತ್ತುವವೊಲು ಕವಿ ಕವಿ
ದೆಸುತ ಬಂದರು ಮಕುಟವರ್ಧನರಸಮ ಬಾಲಕನ ।
ನುಸುಳದವರವರಸ್ತ್ರವನು ಖಂ
ಡಿಸುತ ಸನ್ನಾಹದಲಿ ಘನ ಪೌ
ರುಷದಲೆಚ್ಚಾಡಿದನು ಹಲಬರ ಕೂಡೆ ಸುಕುಮಾರ ॥ ೧೨

ಕೋಡಿದನೆ ಕೊಂಕಿದನೆ ನಾಯಕ
ವಾಡಿಗಳು ಹಲರೆಂದು ಬೆಂಗೊ
ಟ್ಟೋಡಿದನೆ ಕೈಗಾಯದೆಚ್ಚನು ನಚ್ಚಿದಂಬಿನಲಿ ।
[1]ತೋಡು ಬೀಡಿನ ಹವಣನಾತನ
ಮಾಡಿದಾತನೆ ಬಲ್ಲನೆನೆ[1] ಕೈ
ಮಾಡಿ ಸುರಿದನು ಸರಳ ಮಳೆಯ ಮಹಾರಥರ ಮೇಲೆ ॥ ೧೩*

ಪೂತು ಮಝು ಬಿಲ್ಲಾಳುತನವಿದು
ಭೂತನಾಥಂಗಿಲ್ಲ ಸುಭಟ
ವ್ರಾತವೀಕ್ಷಿಸಲರಿದೆನುತ ಕಣ್ಗೆದಱಿದನು ದ್ರೋಣ ।
ಏತಕಿದು ಹಿಮ್ಮೆಟ್ಟು ದಿಟ ನೀ
ಸೋತಡೆಯು ಜಯವಿಲ್ಲೆಮಗೆ ಮೃಗ
ಪೋತನನು ಹರಿ ಹೊಯ್ವುದುಚಿತವೆ ಮಗನೆ ಕೇಳೆಂದ ॥ ೧೪

ವಿನಯವೇಕಿದು ನಿಮ್ಮ ಭುಜ ಬಲ
ದನುವ ಬಲ್ಲೆನು ನಿಮ್ಮ [2]ಕೈ ಮೈ[2]
ತನದ ಹವಣನು ಕಾ[3][ಬೆ][3]ನೆನ್ನೊಳು [4]ಸೆಣಸಿ[4] ಜಯಿಸಿದರೆ ।
ಧನುವ ಹಿಡಿಯೆನು ಸಾಕು ಡೊಂಬನ
ಬಿನುಗು ನುಡಿಯಂತಿರಲಿ ಬಲ್ಲಡೆ
ಮೊನೆಗಣೆಯಲೇ ಮಾತನಾಡೆಂದೆಚ್ಚನಭಿಮನ್ಯು ॥ ೧೫

---

[1] ತೋಡಿತಹಿತನ ಗೋಣನಸುಗಳ ಹೂಡಿ ಕಳುಹಿತು ಯಮಪುರಕೆ (ಟ.ದ). [2]ಮೈಲಿಗೆ (ಕ), ಮೈಲಘು (ಚ.ಪ). [3] ವೆ (ಗ). [4] ತುಡುಕಿ (ಕ.ಚ.ಟ.ದ.ನ).

* ಈ ಪದ್ಯವು (ಗ.ಚ.ಟ.ದ) ಪ್ರತಿಗಳಲ್ಲಿ ಮಾತ್ರ ಇದೆ.

ಎಡದೊಳೌಕುವ ಕೃಪನನೆಚ್ಚನು
ತಡೆಯಲಶ್ವತ್ಥಾಮನನು ರಥ
ಕೆಡೆಯಲೆಚ್ಚನು ತೊಡಚಿ ಕೈಯಲಿ ಕೌರವಾನುಜನ ।
ಮಿಡುಕಲೆಚ್ಚನು ಹಿಂದು ಮುಂದವ
ಗಡಿಸಿದಾ ಮಾದ್ರೇಯ ರವಿ ಸುತ
ರೊಡಲೊಳಂಬನು ಹೂಳಿದನು ಸೀಳಿದನು ಸಮರಥರ ॥ ೧೬

ಅಡಸಿ ಹೊಕ್ಕರೆ ಕೃಪನ ರಥವನು
ಕಡಿದು ಬಿಸುಟನು ಗುರು ಸುತನನಡಿ
ಮಿಡುಕಲೀಯದೆ ಬಿಗಿದು ಕರ್ಣನ ಧನುವ ಖಂಡಿಸಿದ ।
ಕೊಡಹಿದನು ಕೌರವನ ರಥವನು
ತುಡುಕಲೀಯದೆ ದ್ರೋಣನನು ಜವ
ಗೆಡಿಸಿದನು ಜೋಡಿಸಿದ ಷಡುರಥರೊಗ್ಗನೊಡೆ ಹೊಯ್ದು ॥ ೧೭

ಮುರಿ ಮುರಿದು ಹಿಯ್ಯಾಳಿಯಲಿ ಮ
ತ್ತು ರವಣಿಸಿ ಗಱಿಗಟ್ಟಿ [1]ರಥಿಕರು[1]
ಹುರಿ ಬಿಡದೆ ಬಿಗುಹಿನಲಿ ಭಾಷೆಯ ಮಾಡಿ ತಮ್ಮೊಳಗೆ ।
ಸರಳ ಸೂಸಿದರೆಡ ಬಲದಲ
ಬ್ಬರವ ಮಾಡಿದರೋಡಿದರು ಹಗೆ
ಯರುಣ ಜಲದಲಿ ನಾದಿದರು ನಿಶಿತಾಸ್ತ್ರ ಸಂತತಿಯ ॥ ೧೮

ವಡಬಗೌತಣವಿಕ್ಕುವರೆ ಕಡ
ಲೊಡೆಯುಗಹುದು ಸಮರ್ಥನಲ್ಲಾ
ಬಿಡುಗಣೆಯ ಬೀಱುವರೆ ಕಟಕಾಚಾರ್ಯನೆಂದೆನುತ ।
ಕಡುಮೊನೆಯ ಕೂರಂಬುಗಳ ಮಿಗೆ
ಗಡಣಿಸಿದನೊಗ್ಗೊಡೆದ ಷಡುರಥ
ರೊಡಲೊಳಂಬನು ಹೂಳಿದನು ಕಾಱಿದರು ಶೋಣಿತವ ॥ ೧೯

ಹೊಸಕದ ಶೌರಿಯುದ ಬಾಳಿಕೆ
ಯೇಸು ದಿನವೈ ಕರ್ಣ ಕೃಪ ದು
ಶ್ಶಾಸನರ ಕೊಂಬನೆ ಕುಮಾರಕ ಸುರರಿ[2]ಗಲಗ[2]ಣಸು ।

---

[1] ಕವಿದುದು (ಗ.ಚ.ಟ.ತ.ನ). [2] ಗೆದೆಗೆ (ಕ.ಬ).

ಘಾಸಿಯಾದರು ಘಾಯವಡೆದು ವಿ
ಳಾಸವಳಿದುದು ರಿಪು ಭಟನ ಗೆಲು
ವಾಸೆ ಬೀತುದು ಧಾತುಗೆಟ್ಟುದು ಸರಳ ಸಾರದಲಿ ॥ ೨೦

ವಿರಥನಾದನು ಕರ್ಣನಂಬಿಗೆ
ತಿರುಹಿ ಬಿಲ್ಲನು ತೊಟ್ಟನಾ ಗುರು
ಗುರು ತನೂಜನು ತನ್ನ ಸೂತನ ಶಿರವ ಹಱಿಯೆಚ್ಚ ।
ಸುರಗಿಯನು ಬಿಸುಟೋಱೆಯ ತಿರುಹಿದ
ನರಸನನುಜನು ಕೃಪನು ಶಲ್ಯನು
ಕೊರಳಲಸುಗಳ ಹಿಡಿದು ಹಂಗಿಗರಾದರೊಡೆಯಂಗೆ ॥ ೨೧

ಗನ್ನದಲಿ ಗುರು ಜಾಱಿದನು ಕೃಪ
ಮುನ್ನವೇ ಹಿಂಗಿದನು ಕರ್ಣನ
ನಿನ್ನು ಕಂಡವರಾರು ಮೂರ್ಛೆಗೆ ಮೂಱು ಬಾರಿಯದು ।
ಬೆನ್ನ ತೆತ್ತರು ಬಿರುದರಾತಗೆ
ಕೆನ್ನೆ [1]ಯೆಡೆಗುಗಿ[1]ದಂಬು ಸಹಿತವೆ
ನಿನ್ನ ಮಗನರನೆಲೆಗೆ ಸರಿದನು ಭೂಪ ಕೇಳೆಂದ ॥ ೨೨

ಕೊಂಡು ಬರುತಿದೆ ಭಟರು ಮನ್ನೆಯ
ಗಂಡನಾಗ್ಯೆ ಜೀಯ ಎನೆ ಖತಿ
ಗೊಂಡು ಕುರುಪತಿ ನೋಡಿದನು ಮೂಗಿನಲಿ ಬೆರಳಿಟ್ಟು ।
ಭಂಡರೆಂಬೆವೆ ಜಗದ ಗುರುಗಳು
ಗಂಡುಗಲಿಗಳು ವೈರಿ ಭಟರಿಗೆ
ಹಂಡರಾಗಲು ಹೋಗಿರೈ ದಿಟ ಹೋಗಿ ನೀವೆಂದ ॥ ೨೩

ಕಾಲ ವಹಿಲವ [2]ಕಲಿಸ[2]ಲೋಸುಗ
ಕೋಲ ಗುರು ಜಾಱಿದನು ಶಲ್ಯನ
ಮೇಲು ಮುಸುಕನುವಾಯ್ತು ಬಿರುದೇನಾಯ್ತು ಗುರುಸುತನ ।
ಆಳುವಾಸಿಯು ಕಡುಹು ಕರ್ಣನ
ಬೀಳುಕೊಂಡುದು ಪೊತು ಮಝುರೇ
ಬಾಲ ಎಂದವನೀಶ ಮೂದಲಿಸಿದನು ತನ್ನವರ ॥ ೨೪

---

[1] ಗಡಿಗುದಿ (ನ.ಬ). [2] ತೋಱ (ಕ.ಚ.ಟ.ದ).

ಇದಿರೊಳೀಶನ ಭಾಳ ನಯನದ
ಕದಹು ತೆ[1]ಗೆ[1]ದಿದೆ ಹಿಂದೆ ಮರಳುವ
ಡಿದೆ ಕೃತಾಂತನ ಕೊಂತವರಸನ ಮೂದಲೆಯ ವಚನ ।
ಅದಟು ಕೊಳ್ಳದು ರಾಜ ಸೇವೆಯ
ಪದವಿ ಪಾತಕ ಫಲವೆನುತ ನೂ
ಕಿದರು ರಥವನು ಹಳಿವು ದರ್ಪದ ಹೇವ ಮಾರಿಗಳು ॥ ೨೫

ರಸದ ಬಂಧದ ಬಿಗುಹು ವಹ್ನಿಯ
ಮುಸುಕನುಗಿದುಳಿವುದೆ ಕುಮಾರನ
ಮುಸುಡ ಮುಂದಕೆ ಬಿದ್ದು ಬದುಕುವರೇ ಮಹಾದೇವ ।
ಎಸುತ ಹೊಗುವರು ಭಟನ ಘಾಯಕೆ
ಮುಸುಡ ತಿರುಹುವರಡಿಗಡಿಗೆ ಸಾ
ಹಸದ ಸುಂಕಿಗನೊಡನೆ ತಲೆಯೊತ್ತಿದರು ಷಡುರಥರು ॥ ೨೬

ಹಱಿದು ಬಿದ್ದವು ಜೋಡು ಮೆಯ್ಯಲಿ
ಮುಱಿದವಗಣಿತ ಬಾಣದೇಱಿನೊ
ಳೊಱೆದ ರಕುತದ ಧಾರೆ ನಾದಿತು ರಥದ ಹಲಗೆಗಳ ।
ಅಱಿವು ಮಱೆದಪಕೀರ್ತಿ ನಾರಿಯ
ಸೆಱಗ ಹಿಡಿದರು ಹೇಳಲೇನದ
ನಱಿಯೆನೇಕಾಂತದಲಿ ಕರ್ಣನ ಕರೆದನಾ ದ್ರೋಣ ॥ ೨೭

ಇದಿರೊಳಾನುವುದರಿದು ಹಸುಳೆಯ
ಕದನ ಹಂಗಿಗರಾದೆವಾಳ್ದನ
ವದನ ಕಮಲಕೆ ನಮ್ಮ ಪೌರುಷವಿಂದು ಹಿಮವಾಯ್ತು ।
ಇದಿರೊಳಾನಿಹೆ ಶಲ್ಯನೆಡ ವಂ
ಕದಲಿ ಬಲದಲಿ ಕೃಪನಪರ ಭಾ
ಗದಲಿ ನೀ ಬಂದೆಸು ಕುಮಾರನ ಕರದ ಕಾರ್ಮುಕವ ॥ ೨೮

ಚಾಪವೀತನ ಕೈಯಲಿರಲಿ
ನ್ನಾ ಪಿನಾಕಿಗೆ ಗೆಲವು ಘಟಿಸದು
ವೈಪರೀತ್ಯಕೆ ಬೆದಱಲಾಗದು ಸ್ವಾಮಿ ಕಾರ್ಯವಿದು ।

[1] ರೆ (ಗ).

ರೂಪುದೋಱದೆ ಬಂದು ಸುಭಟನ
ಚಾಪವನು ಖಂಡಿಸುವುದಿದು ಕುರು
ಭೂಪನುಳಿವೆಂದಿನಸುತನನೊಡಬಡಿಸಿದನು ದ್ರೋಣ ॥ ೨೯

ಹಿಂದಣಿಗೆ ತಿರುಗಿದನು ಭಾಸ್ಕರ
ನಂದನನು ಬಲ ವಂಕದಲಿ ಗುರು
ನಂದನನು ಕೃಪ ಶಲ್ಯ ವಾಮದೊಳಿದಿರಲಾ ದ್ರೋಣ ।
ನಿಂದು ಕದನವ ಕೆಣಕಿದರು ರಿಪು
ಬಂದಿಕಾಱನೊಳೇಱ ಸೂಱಗೆ
ಬಂದು ಬಸಿವುತ ಹೋದರನಿಬರು ಬೈದು ರವಿಸುತನ ॥ ೩೦ *

ದಳವು ದಳವುಳವಾಯ್ತು ಕೇಸರ
ದೊಳಗೆ ವಿಸಟಂಬರಿದು ಕರ್ಣಿಕೆ
ಯೊಳಗೆ ಱಂಗಣಗುಣಿದು ಸಂಗರ ಜಯದ ಮಡುವಿನಲಿ ।
ಸಲೆ ಸೊಗಸಿ ತನಿ ಸೊಕ್ಕಿ ದೆಸೆ ಪಟ
ದುಳಿದು ಸೌಭ[1]ದ್ರೇಯ ಭೃಂಗನ[1]
ಬಿಲು ದನಿಯ [2]ಭರವಂಜಿಸಿತು[2] ಜಯಯುವತಿ ವಿರಹಿಗಳ ॥ ೩೧ †

---

* ಈ ಪದ್ಯವಾದಮೇಲೆ (ಗ.ಚ.ಬ) ಪ್ರತಿಗಳಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ಮಗನೆ ಕೊಲಬಾರದು ಸುಯೋಧನ
ನಗಡು ರಾಜನು ಮೇಣು ರಣದಲಿ
ಮಗನೆನಲು ಹೆಱದೆಗೆಯಲಾಗದು ಸ್ವಾಮಿಕಾರ್ಯವಿದು ।
ಬಗೆಯನೀಜನದೊಳಗೆ ನಾಲ್ಕಡಿ
ಮಿಗುವರೀಯವಸರವೊಳೋಡುವ
ಸೊಗಣನಿಂದವೆ ಕಷ್ಟವೆಂದನು ಕರ್ಣ ಮನದೊಳಗೆ ॥

[1] ದ್ವಿದ್ವಿರೇಫದ (ಚ.ಪ), ದ್ರೇಯ ಮಧುಪನ (ಗ). [2] ಸಿಡಿಲಂತೆ ರಂಜಿಸಿತು (ಚ.ಪ.ಟ.ತ.ದ).

† ಈ ಪದ್ಯವಾದ ಮೇಲೆ (ಕ.ಗ) ಪ್ರತಿಗಳಲ್ಲಿ ಮುಂದಿನ ಎರಡು ಪದ್ಯಗಳು ಹೆಚ್ಚಾಗಿವೆ :—

ಬವರ ಹೆಗ್ಗಳವಾಯಿತೆನೆ ಕೌ
ರವನು ಕರ್ಣನ ಮುಖವ ನೋಡಿದ
ಡಿವನ ಪೌರುಷವುಳಿಯಲೀಯದು ಮರಳಲಿಲ್ಲೆನುತ ।
ಅವನಿಪತಿ ಸನ್ನೆಯನು ಮಾಡಲು
ಕವಿವ ನಯನಾಂಬುಗಳನೊರಸುತ
ರವಿ ಸುತನು ಬಲು ಬಿಲ್ಲ ಸೆಳೆದನು ತಿರುವನೇಱಸಿದ ॥

ಆರಯಿದು ಮಗನೆನಿಸುವೀ ಮಮ
ಕಾರವೆಮ್ಮೊಳು ಮೊಳೆತಡಾ ದಾ
ತಾರನುಳಿವೆನ್ನಿಂದ ತಪ್ಪುವುದೆನುತ ಮನದೊಳಗೆ ।
ಕೂರಲಗನಾ ಕರ್ಣ ಬರೆ ಸೆಳೆ
ದಾರಿ ಹಿಂದಣಿನೆಚ್ಚು ಪಾರ್ಥ ಕು
ಮಾರಕನ ಚಾಪವನು ಮುಕ್ಕಡಿಯಾಗಿ ಖಂಡಿಸಿದ ॥ ೩೨ *

ಉಱುವ ಜಯವಧುವೊಕ್ಕತನದಲಿ
ಮುಱಿದ ಕಡ್ಡಿಯಿದೆನಲು ಕರದಿಂ
ಮುಱಿದು ಬಿದ್ದುದು ಚಾಪವಿಂದ್ರ ಕುಮಾರ ನಂದನನ ।
ಬೆಱಗಡರಿ ಮುಖದಿರುಹಿ ಹಿಂದಣಿ
ನಿಱಿದ ಕರ್ಣನ ನೋಡಿ ಮುಖದಲಿ
ಕಿಱುನಗೆಯ ಕೇವಣಿಸಿ ನುಡಿದನು ಬೆರಳನೊಲೆದೊಲೆದು ॥ ೩೩

ಆವ ಶರ ಸಂಧಾನ ಲಾಘುವ
ದಾವ ಪರಿ ಮಝು ಪೂತು ಪಾಯಿಕು
ದೇವ ಬಿಲ್ಲಾಳೆಂತು ಕಡಿದೈ ಕರ್ಣ ನೀ ಧನುವ ।
ಈ ವಿವೇಕವಿದಾರ ಸೇರುವೆ
ಯಾವಗಹುದಿದು ಹಿಂದೆ ಬಂದೆಸು
ವೀ ವಿಗಡತನ ನಿನಗೆ ಮೆಱೆವುದು ಕರ್ಣ ಕೇಳೆಂದ ॥ ೩೪

ಎನಲು ಲಜ್ಜಿತನಾಗಿ ತಿರುಗಿದ
ನನುವರದಲೀ ಕರ್ಣನಾತನ
ಧನು ಮುಱಿಯೆ ಕೈಕೊಂಡರೀ ದ್ರೋಣಾದಿ ನಾಯಕರು ।
ಕನಕ ರಥವನು ದ್ರೋಣನಾ ಗುರು
ತನುಜ ಸಾರಥಿಯನು ಕೃಪಾಚಾ
ರ್ಯನು ತುರಗವನು ಶಲ್ಯ ಕಡಿದನು ಭಟನ ತೆಕ್ಕೆಯವ ॥ ೩೫

---

ಮನದೊಳಗೆ ಕಡುನೊಂದು ಕರ್ಣನು
ಅನುವರದೊಳೀಹದನ ಬೆಸಸಿದ
ನೆನುತ ದುಮ್ಮಾನದಲಿ ದುಗುಡದ ನಯನವಾರಿಯುಲಿ ।
ತನುವಿದೇಕೀ ಜಾತ್ಯ ಭೂಪರ
ಮನೆಯೊಳಿಹ ಬಡತನವ ಸುಡಲಿ
ನ್ನೆನುತಕಟ ಮನಗುಂದಿ ಬೈದನು ವಿಧಿಯು ರಾಧೇಯು ॥

* ಈ ಪದ್ಯವು (ಗ) ಪ್ರತಿಯಲ್ಲಿ ಮಾತ್ರ ಇದೆ.

ತುಡುಕುವರೆ ಧನುವಿಲ್ಲ ಮುಂದಡಿ
ಯಿಡಲು ಸಾರಥಿಯಿಲ್ಲ ರಥ ಕಡಿ
ವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ ।
ಪಡೆ ಬಿಡದೆ ಬೊಬ್ಬಿಱಿಯೆ ಬೆದಱದೆ
ಕಡುಗಿ ಖಡ್ಗವ ಕೊಂಡು ರಿಪುಗಳ
ಕಡಿದು ಹರಹುತ ಬೀದಿವರಿದನು ಕಣನ ಮಧ್ಯದಲಿ ॥ ೩೬

ಈತನಿರೆ ಕಲ್ಪಾಂತ ರುದ್ರನ
ಮಾತು ಜಗಕೇಕೆನಲು ವೈರಿ
ವ್ರಾತವನು ಮುಂಕೊಂಡು ಹೊಯ್ದನು ಹೊಳೆವ ಖಡುಗದಲಿ ।
ಸೋತನೇ ಶಿಶು ಷಡುರಥರ ಕರೆ
ಈತನಾರ್ಬೈ ಹೇಳಿ ಭಯವಿ
ನ್ನೇತಕೆಂದವನೀಶ ಮೂದಲಿಸಿದನು ತನ್ನವರ ॥ ೩೭

ಗೆಲಿದರಭಿಮನ್ಯುವನು ತನ್ನವ
ರೆಲವೊ ತಾ ವೀಳೆಯವನೆನುತವೆ
ಮೆಲು ನಗೆಯುಲತಿರಥರ ಜಱೆದನು ಕೌರವರ ರಾಯ ।
ಬಳಿಕ ಎಡ ಬಲ ವಂಕದಲಿ ಮಂ
ಡಳಿಸಿ ಮೋಹರಿಸಿತ್ತು ರಿಪು ಬಲ
ಜಲಧಿ ವಡಬನೊಳಾಂತು ತಾಗಿದರಂದು ಷಡುರಥರು ॥ ೩೮ *

ತುಡುಕಿದವು ತೇಜಿಗಳು ವಾಘೆಯ
ಗಡಣದಲಿ ತೂಳಿದವು ದಂತಿಗ
ಳೆಡ ಬಲದ ಬವರಿಯಲಿ ಮುತ್ತಿತು ಮತ್ತೆ ರಿಪು ನಿಕರ ।
ಕಡುಮನದ ಕಾಲಾಳು ಕಱೆದುದು
ಖಡುಗ ಧಾರೆಯನೀತನಳವಿಯ
ಕೆಡಿಸಿ ಮೇಲಿಕ್ಕಿದರು ಭೂಪನ ಮೊನೆಯ ನಾಯಕರು ॥ ೩೯

ವಿಷದ ಹುಟ್ಟಿಯೊಳೆಱಗಿ ನೊಣ ಜೀ
ವಿಸುವುದೇ ಶಿವ ಶಿವ ಕುಮಾರನ
ಮುಸುಡ ಮುಂದಕೆ ಬಿದ್ದು ಬದುಕುವುದುಂಟೆ ಭಟ ನಿಕರ ।

* ಈ ಪದ್ಯವು (ತ) ಪ್ರತಿಯಲ್ಲಿಲ್ಲ.

ಕುಸುರಿದಱಿದನು ಕರಿ ಘಟೆಯನಿ
ಪ್ಪಸರದಲಿ ಕಾಲಾಳು ಕುದುರೆಗ
ಳಸುವ ಸೂಱೆಯ ಬಿಟ್ಟನಂತಕ ದೂತ ಸಂತತಿಗೆ ‖ ೪೦

ಅರಿ ಭಟನ ಬೊಬ್ಬೆಗಳ ಮೊಳಗಿನೊ
ಳರುಣ ಜಲ ವರುಷದಲಿ ರಿಪುಗಳ
ಕೊರಳ ಬನದಲಿ ಕುಣಿದುವೀತನ [1]ಖಡ್ಗವನಕೇಕಿ[1] ।
ಸುರಿವ ಖಂಡದ ರಕುತ ಧಾರೆಗೆ
ತರ ತರದಿ ಬಾ[2]ಯ್ದ್ದೆಗೆದು[2] ಶಾಕಿನಿ
ಯರ ಸಮೂಹವು ಬಳಿಯಲೈದಿತು ಪಾರ್ಥ ನಂದನನ ‖ ೪೧

ಕರುಳ ಹೂ ಗೊಂಚಲಿನ ಮೂಳೆಯ
ಬಿರಿ ಮುಗುಳ ನವ ಖಂಡದಿಂಡೆಯ
ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ ।
ಬೆರಳ ಕಳಿಕೆಯ ತಲೆಯ ಫಲ ಬಂ
ಧುರದ ಘೂಕ ಧ್ವಾಂಕ್ಷ ನವ ಮಧು
ಕರದ ರಣವನವೆಸೆದುದೀತನ ಖಡ್ಗ ಚೈತ್ರದಲಿ ‖ ೪೨

ವೈರಿ ವೀರ ಪ್ರತತಿಗಮರೀ
ನಾರಿಯರಿಗೆ ವಿವಾಹವನು ವಿ
ಸ್ತಾರಿಸುವ ಸಮಯದೊಳಗಾಂತ ಸಿತಾಕ್ಷತಾವಳಿಯ ।
[3]ತಾರಕಿಗಳೆಸೆದಭ್ರವೆನೆ[3] ರಿಪು
ವಾರಣದ ಮಸ್ತಕದ ಮುತ್ತುಗ
ಳೋರಣಿಸಲೊಪ್ಪಿದುದು ಖಡ್ಗ ಸುರೇಂದ್ರ ಸುತ ಸುತನ ‖ ೪೩

ಶಾಕಿನಿಯರೋಕುಳಿಯ ಧಾರೆಯ
ಚೀಕೊಳುವೆಯೋ ಜವನ ಜಳ ಜಂ
ತ್ರಾಕರುಷಣವೊ [4]ರಕುತ ಲತೆಗಳ[4] ಕುಡಿಯ [5]ಕೊನರು[5]ಗಳೊ ।
ನೂಕಿ ಕೊಯ್ಗೊರಳುಗಳ ಮುಂಡದ
ಮೂಕಿನಲಿ ನೆಗೆದೊಗುವ ನೆತ್ತರು
ನಾಕವನು ನಾದಿದುದೆನಲು ಸವಱಿದನು ಪರ ಬಲವ ‖ ೪೪

---

[1] ಖಡ್ಗಕೇಣಿಯಲಿ (ಕ), ಖಡ್ಗದಾವಾಗ್ನಿ (ಗ), ವೀರಖಡ್ಗ ಶಿಖಿ (ದ). [2] ಯೊಡ್ಡಿ (ಬ). [3] ಧಾರುಣಿಯೊಳುದುರಿದವೆನಲು (ಕ), ತಾರಕಿತವಾದಭ್ರವೆನೆ (ಟ.ತ.ದ.ನ). [4] ಹೂತಲತೆಯೋ (ತ). [5] ಕೊಂಬು (ಕ.ತ.ದ.ನ), ಕೊಂಕು (ಚ.ಪ.ಬ).

ಅಟ್ಟಿ ಹೊಯ್ದನು ದಂತಿಗಳ ಹುಡಿ
ಗುಟ್ಟಿದನು ವಾಜಿಗಳ ತೇರಿನ
ಥಟ್ಟುಗಳ ಸೀಳಿದನು ಮಿಗೆ ಕಾಲಾಳನಸಿಯಱಿದ ।
ಕೆಟ್ಟು ಬಿಟ್ಟೋಡಿದುದು ಭಟನಱಿ
ಯಟ್ಟಿದನು ರಣದೊಳಗೆ [1]ರಾಯ[1] ಘು
ರಟ್ಟ ಪಾರ್ಥನ ತನಯ ಕೊಂದನು ಖಡ್ಗ [[2]ಮನ[2]]ದಣಿಯೆ ‖ ೪೫

ಸೀಳಿದನು ಸೌಬಲನೊಳಿಪ್ಪ
ತ್ತೇಳನಾ [3]ಮಾದ್ರೇಶ[3]ರೊಳು ಹದಿ
ನೇಳನಗ್ಗದ ರವಿ ಸುತನ ಮಂತ್ರಿಗಳೊಳೈವರನು ।
ಮೇಲೆ [4]ಕೇರಳರೊಳಗೆ[4] ಹತ್ತು ನೃ
ಪಾಲರನು ಕೌಸಲ ಯವನ ನೇ
ಪಾಳ ಬರ್ಬರರೊಳಗೆ ಕೊಂದನು ಹತ್ತು ಸಾವಿರವ ‖ ೪೬

ಹಸುಳೆಯೆನ ಬಹುದೇ ಮಹಾದೇ
ವಸವು ಬಲ ಬಾಲಕನೆನುತ ಚಾ
ಳಿಸಿತು ಪಡೆಯಲ್ಲಲ್ಲಿ ತಲ್ಲಣಿಸಿದರು ನಾಯಕರು ।
ಮುಸುಡ ತಿರುಹುತ ಮಕುಟ ವರ್ಧನ
ರುಸುರಲಮ್ಮದೆ ಸಿಕ್ಕಿ ಭೂಪನ
ನುಸುಳುಗಂಡಿಯ ನೋಡುತಿರ್ದರು ಕೂಡೆ ತಮತಮಗೆ ‖ ೪೭

ತುಡುಕಲಮ್ಮುವರಿಲ್ಲ ಬಲದಲಿ
ಮಿಡುಕಲಮ್ಮುವರಿಲ್ಲ ರಕುತದ
ಕಡಲೊಳಗೆ ಬೆಂಡೆದ್ದು ನೆಗೆದುದು ಕೋಟಿ ಪಾಯ ದಳ ।
ಸಿಡಿಲು ಜಂಗಮವಾಯ್ತೊ ಪ್ರಳಯದ
ಮೃಡನು ಬಾಲಕನಾದನೋ ಕೊಲೆ
ಗಡಿಕನಹುದೋ ಕಂದ ಎಂದನು ಕೌರವರ ರಾಯ ‖ ೪೮

ಧನು ಮುಱಿದ ಬಳಿಕಿಮ್ಮಡಿಸಿತೀ
ತನ ಪರಾಕ್ರಮವೆನುತ ಸೇನಾ
ವನಧಿ ಜಱಿದುದು ಭಟರು ಹರಿದರು ಬಿಟ್ಟ ಮಂಡೆಯಲಿ ।

---

[1] ವೈರಿ (ಚ.ನ.ಪ). [2] ಸಂ (ಕ), ಹಸಿ (ಗ.ತ.ಟ.ನ.ಬ), ಮಸೆ (ಚ.ಪ). [3] ಕೈಕೆಯ (ಗ.ಚ.ಪ). [4] ಮಾದ್ರೇಯರಲಿ (ಗ.ಚ.ಪ).

ಜನಪತಿಯ ಕಟ್ಟಳವಿಯಲಿ ರವಿ
ತನುಜನಡ್ಡೈಸಿದನು ಫಡ ಹೋ
ಗೆನುತ ನಾರಾಚದಲಿ ಮುಸುಕಿದನರ್ಜುನಾತ್ಮಜನ ॥ ೪೯

ಎಳೆಯ ರವಿ ರಶ್ಮಿಗಳು ರಕ್ತೋ
ತ್ಪಲದೊಳಗೆ [1]ಹೊಳೆವಂತೆ[1] ಹೊನ್ನರೆ
ಬಳಿದ ಹಿಳುಕನೆ ಕಾಣಲಾದುದು ಭಟನ ಕಾಯದಲಿ ।
ಒಲೆದು ಕೇಸರಿ ಹೊಯ್ವವೋಲ
ವ್ವಳಿಸಿ ಕರ್ಣನ ಹಯ ರಥವನ
ಪ್ಪಳಿಸಿ ಮರಳುವ ಲಾಗಿನಲಿ ಖಂಡೆಯವ ಖಂಡಿಸಿದ ॥ ೫೦

ಕರದ ಕರವಾಳುಡಿಯೆ ಬಿಡೆ ಹ
ಲ್ಮೊರೆದು ಭರದಲಿ ಗದೆಯ ಕೊಂಡ
ಬ್ಬರಿಸಿ ಕೋಪದಲಗಿದು ಹರಿಗೆಯ ಹಿಡಿದು ಮುಂದಣಿಗೆ ।
ಅರರೆ ಸಮ್ಮುಖವಾಗೆನುತ ಸಂ
ಗರದೊಳುರವಣಿಸಿದನು ಕರ್ಣನ
ತೆರಳಿಚಿದನೈನೂಱು ಹಜ್ಜೆಯಲಿಂದ್ರ ಸುತ ಸೂನು ॥ ೫೧

ಗದೆಯ ಹೊಯ್ಲಲಿ ನೊಂದು ಕೋಪದೊ
ಳದಿರೆನುತ ಸೈಗೆಡೆದ ರೋಮದ
ಹೊದಱುಗಳ ಬಿಡುಗಣ್ಣ ಕೆಂಪಿನ ಕುಣಿವ ಮೀಸೆಗಳ ।
ಕುದಿದ ಹೃದಯದ ಕಾದ ದೇಹದ
ಕದನಗಲಿ ರವಿ ಸೂನು ಮೇಲಿ
ಕ್ಕಿದನು ಫಡ ಹೋಗದಿರು ಹೋಗದಿರೆನುತ ತೆಗೆದೆಚ್ಚ ॥ ೫೨

ಶರಮಯವು ಸರ್ವಾಂಗವಿನ್ನೀ
ಸರಳು ನೆಡಲಿಂಬಿಲ್ಲ ಮೈಗಳೊ
ಳಱಿಯನದನಭಿಮನ್ಯು ಕರ್ಣನ ಮೇಲುವಾಯಿದನು ।
ತರಹರಿಸಿ ಕೆಲ ಸಿಡಿದು ರಿಪು ಭಟ
ನುರವನುದರವನೆಡ ಬಲನ ಕಿ
ಬ್ಬರಿಯನೆಚ್ಚನು ಕರ್ಣ [2]ನೂಱೈವತ್ತು[2] ಬಾಣದಲಿ ॥ ೫೩

---

[1] ಕವಿವಂತೆ (ಕ.ಗ.ಚ.ಪ). [2] ನಱುವತ್ತೈದು (ಚ.ದ.ನ.) ನಱುವತ್ತೊಂದು (ಟ.ತ).

ಸರಳು ನೆಡಲುಬ್ಬೆದ್ದು ಬೊಬ್ಬಿರಿ
ದುರವಣಿಸಿ ಬರೆ ದಿವ್ಯ ಶರದಲಿ
ಕರವೆರಡ ಹರಿಯೆಚ್ಚಡಾಗಳೆ ಕೆಡೆದವವನಿಯಲಿ ।
ಇರದೆ ಗಹಗಹಿಸಿದನು ಕೇಳೆಲೆ
ಮರುಳೆ ಸೂತಜ ಕೈಮುರಿಯೆ ಸಂ
ಗರದ ಸಿರಿ ಹಿಂಗುವಳೆ ತನ್ನನೆನುತ್ತ ಗರ್ಜಿಸಿದ ॥ ೫೪

ಸುರಿವ ರಕುತದ ಸರಿಯ ಸೆರಗಿನೊ
ಳೊರಸಿ ರಥದಚ್ಚುಗಳನೊದೆದನು
ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆ ನಡೆದು ।
ಅರಿ ಬಲವನಿಡೆ ಮುಗ್ಗಿ ಕೆಡೆದುದು
ತುರಗವಜಿಗಿಜಿಯಾದುದಿಭ ತತಿ
ಯುರುಳಿದವು ಹೊರಳಿದವು ಹೂಣಿಗರಟ್ಟೆ ಸಮರದಲಿ ॥ ೫೫

ಹರಿಯ ಚಕ್ರದ ಸತ್ವವೀತನ
ಧುರದೊಳಾಯ್ತೆನೆ ರಥದ ಚಕ್ರದೊ
ಳರಿ ಬಲವನಿಡೆ ಮುಗ್ಗಿ ಕೆಡೆದುದು ಬಹಳ ತಳತಂತ್ರ ।
ಬಿರುದರಾನುವರಿಲ್ಲ ಷಡುರಥ
ರುರುವಣೆಯು ಹಿಂದಾಯ್ತು ರಾಯರ
ಗುರುವ ಕಂಡವರಿಲ್ಲೆನುತ ಕುರುರಾಯ ಚಿಂತಿಸಿದ ॥ ೫೬

ಮನದ ಖತಿ ಹೊಗರೇರೆ ದುಶ್ಶಾ
ಸನನ ಮಗನಿದಿರಾಗಿ ಖಡುಗದ
ಮೊನೆಯ ಚೂರಿಸಿ ದಂಡವಲಗೆಯ ತೊಡೆಯೊಳೊದರಿಸುತ ।
ತನಗೆ ಮೃತ್ಯುವ ಕರೆವ ವೋಲ
ರ್ಜುನನ ಕುಮಾರನ ಕರೆದು ಹಳಚಿದ
ನನಿಮಿಷಾವಳಿ ಪೊತು ಪಾಯ್ಕೆನೆ ಹೆಣಗಿದರು ಭಟರು ॥ ೫೭

ಗಾಲಿ ತೀರಿದವೆಂದು ಬಂದನೆ
ಕಾಳೆಗಕೆ ತಪ್ಪೇನೆನುತ ಕರ
ವಾಳಿನಾತನ ಬಗೆಯದೊಳಹೊಕ್ಕೆರಗಿದನು ಶಿರವ ।
ಮೇಲುವಲಗೆಯಲಣೆದು ಹಾಯ್ದನು
ಬಾಲಕನ ಘಾಯವನು ನಸು ನಗು
ತೇಳಿಸುತ ದಂಡೆಯಲಿ ಕಳೆದನು ತಿವಿದನವನುರವ ॥ ೫೮

ಕರಹತಿಗೆ ಧಡಧಡಿಸಿ ತಿಱಿನೆ
ತಿರುಗಿ ಬೀಳುತ ಧೈರ್ಯದಲಿ ಹೊಡ
ಕರಿಸಿ ಹೊಱಬಿನೊಳೆದ್ದು ಹೊಯ್ದನು ಪಾರ್ಥನಂದನನ ।
ಅರಿ ಕೃಪಾಣದ ಘಾಯವನು ತರ
ಹರಿಸಲಱಿಯದೆ ಬೀಳುತಹಿತನ
ನೆಱಗಿದನು ಬಳಿಕವನಿಗೊಱಗಿದರಾ ಕುಮಾರಕರು ॥ ೫೯

ಕಾಳುಕಿಚ್ಚೆದ್ದಡವಿಯನು ಕುಡಿ
ನಾಲಗೆಯೊಳಳವಡಿಸಿ ದಳ್ಳುರಿ
ಜ್ವಾಲೆ ತಗ್ಗಿದವೋಲು ಗಗನದ ಮುಗಿಲ ಪೋಹರವ ।
ಧಾಳಿಯಲಿಯಱೆಯಟ್ಟಿ ಸುಂಟುರು
ಗಾಳಿಯುರವಣೆ ನಿಂದವೊಲು ಸುರ
ಪಾಲ ತನಯನ ತನಯನಸ್ತಮಿಸಿದನು ರಣದೊಳಗೆ ॥ ೬೦

ತೋಳ ತಲೆಗಿಂಬಿನಲಿ ಕೈದುಗ
ಳೋಳಿಗಳ ಹಾಸಿನಲಿ ತನ್ನಯ
ಕಾಲ ದೆಸೆಯಲಿ ಕೆಡೆದ ಕೌರವ ಸುತರು ನೂರ್ವರಲಿ ।
ಬಾಲಕನು ಬಳಲಿದನು ಸಮರದ
ಲೀಲೆಯಲಿ ಕುಣಿ ಕುಣಿದು ಬಸವಳಿ
ದಾಳುಗಳ ದೇವನು ಮಹಾಹವದೊಳಗೆ ಪವಡಿಸಿದ ॥ ೬೧ *

ಬಿಗಿದ ಹುಬ್ಬಿನ ಬಿಟ್ಟ ಕಂಗಳ
ಹೊಗರು ಮೋರೆಯ ಹಿಣಿಲ ಮಂಡೆಯ
ಜಿಗಿಯ ರಕುತದ ಜೋಱಿನೊಡಲಿನ ತುಱುಗಿದಂಬುಗಳ ।

---

* ಈ ಪದ್ಯವಾದಮೇಲೆ (ತ.ನ) ಪ್ರತಿಗಳಲ್ಲಿ ವಿನಾ ಉಳಿದ ಪ್ರತಿಗಳಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ಸಸಿಯ ಬಿಂಬವ ಬಗೆಯದದಟನ
ಮುಸುಡು ಕಂದದು ಮೆಯ್ಯಧೀಧಿತಿ
ಮಸುಳಿಸದು ಕಣ್ಣಾಲಿ ಕರಗದು ಕಾಯ ಜವಗೆಡದು ।
ಎಸಕ ಮಸುಳದು ಸಮರದಲಿ ಪೌ
ರುಷವು ಮಾಡಿ ವಿರೋಧಿರಾಯರ
ಕುಸುರಿದಱಿದನು ಕೆಡಹಿ ಪಾರ್ಥನ ಸೂನು ರಂಜಿಸಿದ ॥

ಹೆಗಲ ಕೊಯ್ಲಿನ ತಗ್ಗಿನಲಿ ಸ್ಥೈ
ನೆಗೆದ ರೋಮದ ವಿಕ್ರಮಾಗ್ನಿಯ
ತಗಹು ಬಿಡದಭಿಮನ್ಯು ಮೆಱೆದನು ಶಸ್ತ್ರ ಶಯನದಲಿ ‖ ೬೨ *

ಸಾವ ಹರಯವೆ ಎನುತ ಗಗನದ
ದೇವ ತತಿ ಮಱುಗಿತ್ತು ಶಕ್ರನ
ಸಾವಿರಾಲಿಯೊಳೊಱತೆ ಮಸಗಿತು ಪೌತ್ರ ಶೋಕದಲಿ ।
ತಾವು ಷಡುರಥರೊಬ್ಬ ಹಸುಳೆಯ
ಹೇವವಿಲ್ಲದೆ ಕೊಂದರೋ ಸುಡ
ಲಾವ ವೀರರು ಕೌರವಾದಿಗಳೆಂದುದಮರ ಗಣ ‖ ೬೩

ಮ[1][ಗುವು][1] ವೇಷವ ಧರಿಸಿ ದೂರದ
ಲಗಲಿ ಹೋಗಲು ತನ್ನ ಚಿತ್ತಕೆ
ಥಗೆಯ ಡಾವರವಾಯ್ತು ತನಗೊಳಗಾಯ್ತು ಪರಿತಾಪ ।
ಮಗನ ಮರಣದಲೆಂತು ಜೀವವ
ಬಗೆವಳಕಟ ಸುಭದ್ರೆಯೆನುತವೆ
ದೃಗುಜಲವ ಬೆರಳಿಂದ ಮಿಡಿದರು ಗೌರಿದೇವಿಯರು ‖ ೬೪

ಹಲವು ಗಜಗಳು[2] ಸಿಂಹ ಶಿಶುವನು
ಗೆಲಿದ ಪರಿಯಂತಾಯ್ತು[2] ಹಾವಿನ
ಬಳಗ ಗರುಡನ ಮಱಿಯ ಮುಱಿದವೊಲಾಯಿತಕಟೆನುತ ।
[3]ಅಳಲಿದುದು ಸುರ ಕಟಕವವನಿಯೊ[3]
ಳಿಳಿದರಪ್ಸರ ಗಣಿಕೆಯರು ಕೋ
ಮಳನ ತಂದರು ವಾಸವನ ಸಿಂಹಾಸನದ ಹೊರೆಗೆ ‖ ೬೫

---

* ಈ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಕೆಳಗಿನ ಪದ್ಯವು ಹೆಚ್ಚಾಗಿದೆ :—

ಆವನಿವನನು ಗೆಲುವ ಮತ್ತಿ
ನ್ನಾವ ವೀರನುಪ್ಪೋಲುವನು ಮ
ತ್ತಾವ ರಥಿಕನು ಸರಿಯಹನು ಫಲುಗುಣನ ನಂದನಗೆ ।
ಭಾವಿಸುತ ತಲೆದೂಗಿ ಮಱುಗುತ್ತ
ಮೂವರಾರಥ ಮುಱಿದರಲ್ಲದೆ
ಆವನೀ ಕೈಚಳಕಕೊದಗುವನೆಂದುದಮರಗಣ ‖

[1] ಗನು (ಸ), [2] ಪೊಂದಾಗಿ ಸಿಂಹದ ಮಱಿಯ ಕೊಂದಂತಾಯ್ತು (ಕ), ಪೊಂದಾಗಿ ಸಿಂಹವ ಗೆಲಿದ ಪರಿಯಂತಾಯ್ತು (ಚ.ದ.ನ.ಪ.ಬ), ಪೊಂದಾಗಿ ಸಿಂಹದ ಕಳಭವನು ಗೆಲಿದಂತೆ (ಟ). [3] ಹಲುಬಿದನು ಸುರನಾಥನವನಿಯೊ (ಪ.ಬ.)

ಧುರದ ಪ್ರಳಯ ಕೃತಾಂತನನು ಪರಿ
ಹರಿಸಿದೆವು ಮೃತ್ಯುವಿನ ಪಾಶದ
ಕೊರಳ ಬಳಚಿದೆವೆನುತ ಕೌರವ ಬಲದ ನಾಯಕರು ।
ಶಿರವ ತಡಹುತ ತಮ್ಮ ಶಿಬಿರಕೆ
ತಿರುಗಿದರು ಬಾಲಕನನೀಕ್ಷಿಸ
ಲರಿದು ತನಗೆಂಬಂತೆ ರವಿ ಜಾಱಿದನು ಪಶ್ಚಿಮಕೆ ॥ ೬೬

ಸೋಲವರಿಗಳಿಗೆಂದು ಹರುಷವ
ತಾಳದಿರು ಧೃತರಾಷ್ಟ್ರ ಕೃಷ್ಣನ
ಸೋಲವದು ಪಾಂಡವರು ಸೋತವರಲ್ಲ ನಂಬುವುದು ।
ಸೋಲವಿದು ನಾಳಿನಲಿ ಪ್ರಳಯದ
ಕಾಲ ಕೌರವ ಕುಲಕೆ ದಿಟವಿದು
ಸೋಲವುಂಟೇ ವೀರ ನಾರಾಯಣನ ಭಕ್ತರಿಗೆ ॥ ೬೭

ಆರನೆಯ ಸಂಧಿ ಮುಗಿದುದು.

## ಏಳನೆಯ ಸಂಧಿ

ಸೂಚನೆ ॥ ಅರಿ ಮಹೇಶ[1]ನುದಾರ ವೀರನು[1]
ವರ ಕಿರೀಟಿ ಕುಮಾರ ಧೀರನು
ಸುರರ ನಗರಿಗೆ ನಡೆಯೆ ಹಲುಬಿದನಂದು ಯಮ ಸೂನು ॥

ತೆಗೆದುದರಿ ಪರಿವಾರ ಕಹಳಾ
ದಿಗಳ ಸನ್ನೆಯಲುಭಯ ಬಲ ಕಾ
ಳೆಗವನುಳಿದುದು ಬಂದು ಹೊಕ್ಕರು ತಮ್ಮ ಪಾಳೆಯವ ।
ಮಗನು ರಣದಲಿ ಮಡಿದ ಹದ ಬೀ
ಡುಗಳೊಳಾದುದು ವಾರ್ತೆ ದೂತರು
ದುಗುಡ ಭರದಲಿ ಬಂದು ಹೊಕ್ಕರು ರಾಜ ಮಂದಿರವ ॥ ೧

ಅವನಿಪನ ಖಂಡೆಯವ ನಕುಲನ
ಪವನ ಸುತನ ಕಠಾರಿಯನು ನೃಪ
ನಿವಹದಾಯುಧ ತತಿಯನೊಯ್ಯನೆ ತೆಗೆದು ಬೈಚಿಟ್ಟು ।
ಬವರದಲಿ ಸುತನಳಿದನೋ ಕೌ
ರವರ ಕೈವಶವಾದನೋ ಸಂ
ಭವಿಪ ಹದನೇನೆಂಬ ನೃಪತಿಯ ಕಂಡರೈತಂದು ॥ ೨

ಅವನಿಪಾಲ ಕುಮಾರ ಕಂಠೀ
ರವನು ರಣದಲಿ ಬೀದಿವರಿದು
ತ್ರಿವದಲಹಿತರನಿಱಿದು ಕೌರವ [2]ರಾಯ ನಂದನರ[2] ।
ಜವನ ನಗರಿಗೆ ಕಳುಹಿ ತಾ ವಾ
ಸವನ ಸಿಂಹಾಸನವನಡರುವ
ತವಕದಲಿ ಜಾಱಿದನೆನಲು ಶಿವ ಎನುತ ಬಸವಳಿದ ॥ ೩

ಕುಲಿಶ ಹತಿಯಲಿ ಕುಲ ಶಿಲೋಚ್ಚಯ
ವಿಳೆಗೆ ಕೆಡೆವಂದದಲಿ ನಿಜ ಸುತ
ನಳಿದ ವಾರ್ತಾವಚನದುಪಟಳಕವನಿ ಪಾಲಕನು ।

---

[1] ಕುಠಾರಪೌರುಷ (ಗ), ರುಗಳವಿಭಾಡಿಸಿ (ಬ). [2] ಸುತರ ನೂರ್ವರನು (ಗ.ಚ.ಪ).

ಮಲಗಿದನು ಮೈಮಱೆದು ಮಹಿಮಂ
ಡಳಿಕರೊಳು ಗುಜುಗುಜಿನೊಳಿರೆ ಕಳ
ವಳಿಕೆ ಮೊಳೆತುದು ಕಟಕದಲಿ ದುಮ್ಮಾನಮಯವಾಯ್ತು ॥ ೪

ಅರಮನೆಯ ಗಜಬಜದ ಹದನಱಿ
ದರಸನಪಗತನೆಂದು ಪಾಳಯ
ದಿರುಳು ನಡುಗಿತು ತೊಡಗಿದವು ಕೈಸೂಱೆ ಕೆಲ ಕಡೆಯ ।
ನೆರವಿ ಮಸಗಿತು ಕೆತ್ತವಂಗಡಿ
ದುರುಳರಬ್ಬರಿಸಿದರು ಮುಸುಕಿನ
ಸುರಗಿ ಕೆತ್ತವು ಮಂದಿ ದಳವುಳವಾಯ್ತು ನಿಮಿಷದಲಿ ॥ ೫

ಹೊಳಲು ತಲೆಕೆಳಕಾಯ್ತು ಹುಯ್ಯಲು
ತಳಿತುದೊಳತೋಟಿಯಲಿ ಕೆತ್ತವು
ನಿಳಯ ನಿಳಯ ಕವಾಟವುದ್ರೇಕಿಗಳ ಮಯವಾಯ್ತು ।
ಎಲೆಲೆ ಕೆಟ್ಟುದು ಕಟಕವೆಂದು
ಮ್ಮಳಿಸಿದರು ಸಚಿವರು ಮಹೀಪತಿ
ಯುಳಿವನಱಿಯಲು ನಾಸಿಕದಲಾರೈದರುಸುರುಗಳ ॥ ೬

ಉರಿಯ ಚೂಣಿಯಲುಸುರು ಮೂಗಿನ
ಲುರವಣಿಸುತಿದೆ ಧರಣಿಪತಿ ಸು
ಸ್ಥಿರನು ಹೊಯ್ ಹೊಯ್ ಹೊಳಲ ಬೆದಱಿಸಿ ಸುಲಿವ ಬಣಗುಗಳ ।
ಹರಿಯೆನಲು ಹೊಱವಂಟು ಹೊಯ್ದರು
ತುರಗ ಗಜ ಘಟೆ ಬೀದಿವರಿದವು
ನೆರವಿದೊಳಸಿನ ಮನ್ನೆಯರ ಸೆಣಸಿದರು ಶೂಲದಲಿ ॥ ೭

ಹೊಳಲ ಗಜಬಜವಡಗಿತರಮನೆ
ಯೊಳಗೆ ಪಸರಿಸಿತತುಳ ಶೋಕದ
ಜಲಧಿ ಭೂಪಾಲಕನ ಸೈರಣೆಗಾಯ್ತು ಮಹನವಮಿ ।
ಒಳಗುರಿವ ಹಸಿಮರನ ತುದಿಯಲಿ
ಜಲವೊಗುವವೊಲು ಹೃದಯ ಶಿಖಿಯುಱೆ
ತಳಿತು ಲೋಚನ ವಾರಿ ತುಳುಕಿತು ಪವನಜಾದಿಗಳ ॥ ೮

ಮಱೆವುತೆಚ್ಚಱುತವನಿಪತಿ ಕರೆ
ತರುಣನಾವೆಡೆ ರಾಯ ಗಜ ಕೇ
ಸರಿಯದಾವೆಡೆ ಕಂದ ಬಾಯೆನುತಪ್ಪಿದನು ಬಯಲ ।

ಹೊರಳಿದನು ಹುಡಿಯೊಳಗೆ ಸಲೆ ಕಾ
ತರಿಸಿದನು ಮೋಹಾಂಧಕಾರಕೆ
ಕರಣವನು ಕೈಸೂಱೆಗೊಟ್ಟನು ನಿಜದೊಳೆಚ್ಚಱದೆ ॥ ೯

ಬಂದು ಫಲುಗುಣನೆನ್ನ ಮೋಹದ
ಕಂದನಾವೆಡೆಯೆಂದಡಾನೇ
ನೆಂದು ಮಾಱುತ್ತರವ ಕೊಡುವೆನು ವೈರಿ ನಾಯಕರು ।
ಕೊಂದರೆಂಬೆನೊ ಮೇಣು ನಾನೇ
ಕೊಂದೆನೆಂಬೆನೊ ಶಿವ ಮಹಾದೇ
ವೆಂದು ಪುತ್ರ ಸ್ನೇಹ ಸೌರಂಭದಲಿ ಹಲುಬಿದನು ॥ ೧೦ *

ಅರಮನೆಯ ಗಜಬಜವ ಕೇಳಿದು
ದೊರೆಯೊಳಾವವನಳಿದನಕಟೆಂ
ದರಸಿಯರು ಬೆಸಗೊಳಲು ದ್ರೌಪದಿಗಱುಹಿದರು ಹದನ ।
ಉರಿಯ ಡಾವರವೆಳೆಯ ಬಾಳೆಯ
ಬೆರಸುವಂತಿರೆ ರಾಯ ಕುವರನ
ಮರಣ ವಾರ್ತೆಯನಾ ಸುಭದ್ರಾ ದೇವಿ ಕೇಳಿದಳು ॥ ೧೧ †

---

* ಹತ್ತನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ಅಗಲಿದನು ಅಭಿಮನ್ಯು ಮೋಹದ
ಮಗನು ಶೋಕೋದ್ರೇಕದಲಿ ಕ
ಣ್ಣೊಗುವ ಜಲಧಾರೆಯಲಿ ಧಾರಾವರುಷವಾಗಿರಲು
ಮೊಗಕೆ ಸೀರೆಯನಿಕ್ಕಿ ಧರ್ಮಜ
ದುಗುಡದಲಿ ಭೀಮಾದಿಗಳು ನರೆ
ಬೆಗಡುಗೊಂಡುದು ಶೋಕದಾವಾನಳನವುರವಣಿಗೆ ॥

† ಹನ್ನೊಂದನೆಯ ಪದ್ಯವಾದಮೇಲೆ (ಗ.ಪ.) ಪ್ರತಿಗಳಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ಅಳಿದನಿಂದಭಿಮನ್ಯುವೆನೆ ಕೋ
ಮಳಿನಿವಾಯೆಂದೆನುತ ಎದೆ
ಯಲಗು ಕೊಂಡಂತಬಲೆಯುವನಿಯು ಹತ್ತಿ ಬಸವಳಿಯೆ ।
ಅಳಲ ಕಡಲೊಳು ಮೂಡಿ ಮುಳುಗಿದ
ಳುಲುಹಗೆಡೆ ಕಂಬನಿಯ ಸುರಿಯಲು
ಲಲನೆ ನೆನೆದಳು ಶೋಕ ಮಿಗೆ ಸಂತಾಪ ಸಮನಿಸಲು ॥

ತೆಳುವಸುಱ ಬಿಱುವ್ರೊಯ್ಲ ಮುರಜದ
ಬಳಲ ಮುಡಿಯುರಳುಗಳ ಮುತ್ತಿಗೆ
ಯಳಿರವದ ಭಾರಣಿಯ ಹಾಹಾರವದ ಕಾಯುದಲಿ ।
ಲಲನೆ ಬರೆ ಚೆಲುವಾಯ್ತು ಧರ್ಮಜ
ನಳಲು ಮಿಗೆ ಕೊಂಡಿರಲು ನಾಟ್ಯದ
ಕಳನ [1]ಗೆಲದಿರ[1]ಳೆನಲು ಬಂದಳು ದ್ರೌಪದಾ ದೇವಿ ॥ ೧೨

ಅಳಲ ಶಿಖಿಯಲಿ ಬಾಡಿದಾನನ
ಜಲರುಹದ ಕಡುವೇದನೆಯು ಕಳ
ಕಳದ ಹಾಹಾ ರವದ ರೌದ್ರೆ ಸುಭದ್ರೆ ನಡೆತಂದು ।
ನೆಲಕೆ ಧೊಪ್ಪನೆ ಕೆಡೆದು ಸಭೆಯಲಿ
ಹಲುಬಿದಳು ಕೊಳುಗುಳಕೆ ಕಂದನ
ಕಳುಹಿದವರಿಗೆ ಸಂದುದೇ ಪರಿಣಾಮವೆಂದೆನುತ ॥ ೧೩

ಎಲೆ ಯುಧಿಷ್ಠಿರ ದೇವ ಸಾಲದೆ
ಕೆಲನ ಮೆಚ್ಚಿಸುವಳಲು ಶೋಚನ
ಜಲವ ತೊಡೆಯ್ಯೆ ಭೀಮ ಬಲ್ಲೆನು ನಿಮ್ಮ ನೆನಹುಗಳ ।
ಅಳಲದಿರಿ ಸಹದೇವ ನಕುಳರು
ನಿಲಿಸಿರೈ ನಿಮ್ಮಿಷ್ಟ ಸಿದ್ಧಿಯ
ಬೆಳಸು ಫಲವಾಯ್ತೇಕೆ ನೋವಿನ್ನೆಂದಳಿಂದುಮುಖಿ ॥ ೧೪

ಮಗನು ಪಂಚ ದ್ರೌಪದೇಯರ
ಬಗೆಯುನೆನ್ನವನಿರಲು ರಾಜ್ಯವ
ಹೊಗಿಸಲನುವಿಲ್ಲೆಂದು ಕಂದನ ರಣಕೆ ನೂಕಿದಿರಿ ।
ಬಗೆಯೊಲವು ಫಲವಾಯ್ತಲಾ ಕಾ
ಳಗವ ಗೆಲಿದ್ಯೆವರು ಕುಮಾರರು
ಹೊಗಿಸಿರೈ ಗಜಪುರವನೆಂದು ಸುಭದ್ರೆ ಹಲುಬಿದಳು ॥ ೧೫

ಅಕಟ ಮಗನೇ ಬಹಳ ಪಾಪಾ
ತ್ಮಕರ ಬಸುಱಲಿ ಬಹುದಱಿಂದೀ
ನಕುಳನುದರದಲಾಗಲೀ ಧರ್ಮಜನ ಜಠರದಲಿ ।

---

[1] ಹೊಗಳಿದ, ಹೊಗದಿರ (ದ.ನ).

ಸುಕೃತಿ ನೀನುದಯಿಸಲು ಬಹು ಕಂ
ಟಕರು ಬಳಿಕಾರುಂಟು ಕಡು ಪಾ
ತಕಿಯಲಾ ನಿಮ್ಮಯ್ಯನೆಂದಳು ಫಲುಗುಣನ ರಾಣಿ ॥ ೧೬

ಧುರವ ಹೊಗತಕ್ಕವನೆ ಚಿಕ್ಕವ
ನಿಱಿಯಲಾಪನೆ ಬಹನೆ ಮರಳಿದು
ಧರೆಯ ವೈಭವಕಳುಪಿ ಕಳುಹಿದಿರೆನ್ನ [ಕಂ]ದನನು ।
ವರ ಯುಧಿಷ್ಠಿರ ಜನಪ ಲೋಕದ
ಕರುಣಿಯೆಂಬರು ಕುನ್ನಿಗಳು ಮಱೆ
ಗೊರಳುಗೊಯ್ಕನನಱಿಯರೆಂದಳು ಫಲುಗುಣನ ರಾಣಿ ॥ ೧೭

ಶೋಕವಿಮ್ಮಡಿಸಿತ್ತು ಚಿತ್ತ
ವ್ಯಾಕುಳತೆಯಾ ಸತಿಯ ನುಡಿಗಳ
ನೇಕ ಸಾಣೆಯ ಸರಳು ಮುಱಿದವು ನೃಪನ ಹೃದಯದಲಿ ।
ಆ ಕುಮಾರ ವಿಯೋಗ ವಹ್ನಿಗೆ
ಯಾಕೆಯುಳಲು ಸಮಾರನಾಯ್ತು ದಿ
ವೌಕಸರ ಸಮ್ಮೇಳವೇ ಪುರುಷಾರ್ಥ ತನಗೆಂದ ॥ ೧೮

ಎಲೆ ವೃಕೋದರ ನಕುಳ ಸಾತ್ಯಕಿ
ನಿಲಿಸಿರೈ ತಂಗಿಯನು ತನ್ನಯ
ಕೊಲೆಗೆ ಮಗನಳಿವೊಂದು ಸಾಲದೆ ತನ್ನ ನುಡಿಯೇಕೆ ।
ನಳಿನ ನಾಭನ ಕರುಣ[1]ದೊಱತೆಯು[1]
ಕಳಿದರಾರೇಗುವರು ಶಿವ ಶಿವ
ನೆಲನೊಳೆನ್ನವೊಲಾರು ಪಾಪಿಗಳೆಂದು ಬಿಸುಸುಯ್ದ ॥ ೧೯

ಧರಣಿಪನ ಶೋಕಾತಿಶಯವನು
ವರ ಸಮಾಧಿಯೊಳಱಿದು ಮುನಿಪತಿ
ಕರುಣದಲಿ ಕಡು ನೊಂದು ಸಕಲ ಜಗಕ್ಕನುಗ್ರಹವ ।
[2]ಕರುಣಿಸುವ ವೊಲು ಕರುಣಿತನವನು
ಮೆಱೆಯಲೋಸುಗವಿರದೆ ಗಗನೇ
ಚರದ ಗತಿಯಲಿ ಬಂದನೈ ದ್ವೈಪಾಯನ ವ್ರತಿಪ[2] ॥ ೨೦

---

[1] ದೊಣಗಿಲು (ಕ.ಚ.ಟ.ದ).

[2] ಪರರುಗಳ ಸುಖದುಃಖದಲಿ ಘನ
ಹರುಷಭಾವವ ಹಿಡಿವುದೆಂಬುದು
ಹಿರಿಯರಿಗೆ ಗುಣವಲ್ಲವೇ ಧೃತರಾಷ್ಟ್ರಕೇಳೆಂದ ॥ (ಕ.ಟ.ತ.ದ.ನ).

ಬಂದು ವೇದವ್ಯಾಸ ಮುನಿ ನೃಪ
ಮಂದಿರವ ಹೊಗಲೆದ್ದು ಪದದಲಿ
ಸಂದಣಿಸಿ ಚಾಚಿದನು ಮಕುಟವನವನಿಪಾಲಕನು ।
ನೊಂದವರು ಸತ್ಸಂಗತಿಯಲಾ
ನಂದವಡೆವುದೆನುತ್ತ ಮುನಿಪತಿ
ಕಂದು ಮೋಱೆಯ ಮಹಿಪತಿಯ ನೆಗಹಿದನು ಕರುಣದಲಿ ॥ ೨೧

ಎಲೆ ಯುಧಿಷ್ಠಿರ ನೃಪ ಕುಮಾರ
ಪ್ರಳಯದಾಪತ್ತಾಯ್ತು ಭೀಮನ
ನಲವಿಗೂಣೆಯವಾಯ್ತು [1]ದುಸ್ಥಿತಿಯಾಯ್ತು ನಕುಲಂಗೆ[1] ।
ಬಲು ದುಗುಡ ಸಹದೇವನಲಿ ಸಂ
ಗಳಿಸಿತೇ ದ್ರೌಪದಿ ಸುಭದ್ರಾ
ಲಲನೆಯರಿ [2]ಗನುಚಿತವು ಘಟಿಸಿತೆ[2] ಎಂದನಾ ಮುನಿಪ ॥ ೨೨

ಅಡಸಿದಾಪತ್ತಿನಲಿ ಧೈರ್ಯವ
ಹಿಡಿವುದೇ ಸುಪ್ರೌಢಿ ಸಾಕಿ
ನ್ನೊಡಲು ಕರಗಿದೊಡೇಳಲಱಿವನೆ ಹಿಂಗಿದಭಿಮನ್ಯು ।
ಒಡನೆ ಬಂದವು ಬಿಡವು ಭವದಲಿ
ತೊಡಕಿ ಸುಕೃತವು ದುಷ್ಕೃತಂಗಳು
ಕಡೆಗೆ ತಿಳಿವಿನೊಳಲ್ಲದಿಹ ಪರ ಸೌಖ್ಯವಿಲ್ಲೆಂದ ॥ ೨೩

ಎಲ್ಲರೋಪಾದಿಯ ಕುಮಾರಕ
ನಲ್ಲ ಕಾಣಿರೆ ವೀರ ವಿತರಣ
ದಲ್ಲಿ ಛಲದಲಿ ಶೀಲದಲಿ ನಾನಾ ಗುಣಂಗಳಲಿ ।
ಇಲ್ಲ ಸುಕುಮಾರಂಗೆ ಸರಿ ಮಗ.
ನಿಲ್ಲದೇಗುವೆನಕಟ ವಚನದ
ಸೆಲ್ಲಹದಲಱಿಯದಿರೆನುತ ಹಲುಬಿದನು ಭೂಪಾಲ ॥ ೨೪

ಜನನವೇ ಲಯ ಬೀಜ ಮರಣವೆ
ಜನನ ಬೀಜವು ತೋಱಿ ಕೆಡುವೀ
ತನುವಿನಭಿರಂಜನೆಯ ಸೌಖ್ಯಕೆ ಮಾಱದಿರು ಮನವ ।

---

[1] ನಕುಲಗೆ ವೈಮನಸ್ಯವಲಾ (ಕ.ಟ.ತ.ದ.ನ). [2] ಗೆಯು ' ಚಿಂತೆಯಾಯಿತೆ (ಕ).

ಘನ ಪರಂಜ್ಯೋತಿ ಸ್ವರೂಪದ
ನೆನಹ ಮಱದೀ ಮೋಹ ಮಯ ಬಂ
ಧನದೊಳಗೆ ಮರುಳಹರೆ ಮಗನೇ ನಿನ್ನನಱಯೆಂದ ‖ ೨೫

ಹರನೊಡನೆ ಹೊಯ್ದಾಡಿದಗ್ಗದ
ನರನು ತಂದೆ ಸಮಸ್ತ ಭುವನೇ
ಶ್ವರನಲಾ ಮುರ ವೈರಿ ಮಾವನು ನಿನ್ನ ತನಯನಿಗೆ ।
ಧುರದೊಳೀ ಹದನಾಯ್ತು [1]ಮಿಕ್ಕಿನ
ನೊರಜುಗಳ ಪಾಡೇನು[1] ಕಾಲನು
ಹರಿ ಹರ ಬ್ರಹ್ಮಾದಿಗಳ ಕೈಕೊಂಬನಲ್ಲೆಂದ ‖ ೨೬

ದೇಹ ತಾನಭಿಮನ್ಯುವೋ ದಿಟ
ದೇಹಿ ತಾನಭಿಮನ್ಯುವೋ ಜಡ
ದೇಹ ತಾನಭಿಮನ್ಯುವಲ್ಲದು ಕೆಟ್ಟರೇನಾಯ್ತು ।
ದೇಹವೆಂಬುದನಿತ್ಯ ನಿನ್ನವ
ರಾಹವದೊಳಳಿದವರ ಬಿಡು ಸಂ
ದೇಹವ[2]ನಹಮ್ಮಮತೆಗಳ ಬೀಳ್ಕೊಟ್ಟು ನೋಡೆಂದ[2] ‖ ೨೭

ಎನ್ನದಾನೆಂಬೆರಡಱಂದವೆ
ಬನ್ನ ಬಡುವನು ಜೀವನಲ್ಲದೆ
ಮುನ್ನವಿನ್ನೆಂದೆಂದಿಗಾತ್ಮಂಗಿಲ್ಲ ಭವ ಬಂಧ ।
ನಿನ್ನ ನೀನಱ ಸಾಕು ಮಾಯೆಯ
ಗನ್ನ ಗತಕವ ಗೆಲುವೆ ಕನಸಿನ
ಪೊನ್ನ ಕಾಣದೆ ದುಃಖಪಡುವರೆ ಭೂಪ ಕೇಳೆಂದ ‖ ೨೮

ಉರಗ ನರ ದಿವಿಜಾದಿಗಳಿಗಿದು
ಪರಿಹರಿಸಲಳವಲ್ಲ ದೈವದ
ಪರುಠವಣೆ ಮುನ್ನಾದಿಯಲಿ ನಿರ್ಮಿಸಿ[3][ತು][3] ಮೃತ್ಯುವನು ।
ಅರಸನಾಗಲಿ ಧನಿಕನಾಗಲಿ
ಹಿರಿಯನಾಗಲಿ ಬಡವನಾಗಲಿ
ಮರಣ ಜನಿಸಿದ ಬಳಿಕ ತಪ್ಪದು ಮಗನೆ ಕೇಳೆಂದ ‖ ೨೯

---

[1] ಕಾಲನನರಸ ಮೀರುವರಾರು (ಕ.ಗ.ಚ.ಪ). [2] ನು ನೆರೆಹಮ್ಮು ಮಮತೆಯ ಬಿಟ್ಟು ನೋಡೆಂದನು, ನೀ ಹಮ್ಮಮತೆಯನು ಬಿಟ್ಟುಕಳೆಯೆಂದ (ಬ).
[3] ದ (ಸ).

ಇರುಳು ಹಗಲಿನ ಬೀಜ ನೆರವಿಯೆ
ಹರೆವುದಕೆ ಮೊದಲುನ್ನತೋನ್ನತ
ಮರುಳೆ ಕೇಡಿನ ಕಾಳಕೂಟವೆ [1]ವೀರ [ನಿರ್ವಹಣ][1] ।
ಸಿರಿ ದರಿದ್ರತೆಗಡಹು ಜನನವೆ
ಮರಣ ಫಲವಿದನಱಿದು ಬುಧರಾ
ಚರಿಸುವುದು ಕೇಳೆಂದು ವೇದವ್ಯಾಸ ಮುನಿ ನುಡಿದ ॥ ೩೦

ತಿಳಿದು ಧರ್ಮಜ ಕೇಳು ಕೃತಯುಗ
ದೊಳಗೆ ಕಂಪನನೆಂಬ ಭೂಪನು
ಕುಲ ತಿಲಕ ಹರಿಯೆಂಬ ಮಗನಾತಂಗೆ ಜನಿಸಿದನು ।
ಬಳಿಕವನು ಯೌವನನಾಗಿ ಪರಮಂ
ಡಲಕೆ ನಡೆದನು ವೈರಿ ರಾಯರ
ವಳಿತವನು ತಾನೊತ್ತಿಕೊಂಡನು ರಿಪು ನೃಪರ ಕೆಡಹಿ ॥ ೩೧

ಮಗನೆ ಕಂಪನನೆಂಬ ಭೂಪನ
ಮಗನು ಮತ್ತೊಮ್ಮಿನಲಿ ಬಲು ಗಾ
ಳೆಗವ ಕಾದಿ ವಿರೋಧಿ ಸೇನೆಯೊಳಾನೆ ವರಿ ವರಿದು ।
ಬಗೆಯೆ ನಿನ್ನಭಿಮನ್ಯುವಿನವೋ
ಲಗಣಿತರನಸಿಯರೆದು ಸುರಪನ
ನಗರಿಗೈದಿದನೆಂದು ಕಂಪನು ಕೇಳಿ ಬಸವಳಿದ ॥ ೩೨

ನಿನಗೆ ಬಂದಾಪತ್ತಿನಂತಿರ
ಲನಿತು ಬಂದುದು ಕಂಪನೆಂಬಾ
ತನನು ಸಂತೈಸಲ್ಕೆ ನಾರದನವನಿಗೈತಂದು ।
ಜನಪತಿಯ ಹಿಡಿದೆತ್ತಿದನು ಕಾ
ಲನನು ಮಿಾಱುವರಾರು ಪೌರಾ
ತನ ಕೃತ ಧ್ರುವ ಮೃತ್ಯುವನು ಗೆಲುವಾತನಿಲ್ಲೆಂದ ॥ ೩೩

ಮೃತ್ಯುವಾರೆಂದವನಿಪತಿ ಮುನಿ
ಪೋತ್ತಮನ ಬೆಸಗೊಳಲು ಬ್ರಹ್ಮನ
ಕಿತ್ತಡದ ಕೋಪದಲಿ ಜನಿಸಿದ ರುದ್ರನಿಂ ಬಳಿಕ ।

[1] ವೀರ ನಿರ್ವಾಣ, ದ ವಿರಹನಿರ್ವಾಹ.

ಮೃತ್ಯುವೆಂದವಳಾದಳಾ ಸತಿ
ಯತ್ತ ಕಂಬನಿ ರುಜೆಗಳಾದವು
ತೆತ್ತಿಗರು ಷಡುವರ್ಗ ಕಾಮ ಕ್ರೋಧ ಮೊದಲಾಗಿ ॥ ೩೪

ಜನದ ಕೊಲೆ ಗೆಲಸದ ನಿರೂಪಕೆ
ಮನವ ತಂದಳು ಮೃತ್ಯು ನಿಜ ಸಾ
ಧನ ಸಹಿತ ಕೈಕೊಂಡ ಕೆಲಸವನಾಗುಮಾಡುವಳು ।
ಜನಪ ದೃ[1]ಷ್ಟ[1]ನ್ನಷ್ಟವೆಂಬುದ
ನನುಕರಿಸಿ ಮೂರ್ತಿತ್ರಯಂಗಳ
[2]ತನಗೆ ನೆಱೆ ವಶಮಾಡಿಕೊಂಡಿಹಳೆಂದು ಮುನಿ ನುಡಿದ[2] ॥ ೩೫

ಆ ಮಹಾಮೃತ್ಯುವನು ಹುಟ್ಟಿಸಿ
ದಾ ಮಹಾದೇವಾದಿ ದೇವರು
ಕಾಮಿನಿಯ ಕಳುಹಲ್ಕೆ ಬಾರದೆನುತ್ತ ಬೋಧಿಸ ಲು ।
ಭೂಮಿಪತಿ ನಿಜ ಸುತನ ಮೃತಿಯು
ದ್ದಾಮ ತಾಪವ ಕಳೆಯ ಬೇಕೆಂ
ದಾ ಮುನೀಶ್ವರ ಸಂತವಿಟ್ಟನು ಕಂಪ ಭೂಪತಿಯ ॥ ೩೬

ಆದರಾ ಮೃತ್ಯುವಿನ ಕೈವಶ
ವಾದವರನೆನಗೆಱುಹಬೇಹುದು
ಮೇದಿನೀಶರೊಳೆಂದು ಬಿನ್ನಹ ಮಾಡಿದನು ನೃಪತಿ ।
ಆ ದಯಾಳುಗಳರಸನಾ ಶೋ
ಕೋದಧಿಗೆ ವಡಬಾಗ್ನಿ ಸಮನೆನಿ
ಪಾದಿಯಲಿ ಷೋಡಶ ಮಹೀಶರ ಕಥೆಯ ವಿರಚಿಸಿದ ॥ ೩೭

ಭರತ ಪೃಥು ಪೌರವ ಭಗೀರಥ
ವರ ಯಯಾತಿ ಮರುತ್ತ ನಹುಷೇ
ಶ್ವರ ಪುರೂರವ ರಂತಿದೇವ ಗಯಾಂಬರೀಷಕರು ।

[1] ಶ್ಯ (ಕ.ಜ.ಟ.ತ.ಪ). [2] ನೆನ್ನವಶಮಾಡಿದಳು ಚಿತ್ತೈಸೆಂದನಾಮುನಿಪ (ಕ.ಗ.ಟ.ತ).

ಪರಶುರಾಮ ದಿಲೀಪ ಮಾಂಧಾ
ತರು ಹರಿಶ್ಚಂದ್ರಾದಿ ಪೃಥ್ವೀ
ಶ್ವರರನಂತರು ಮೃತ್ಯುವಶವರ್ತಿಗಳು ಕೇಳೆಂದ ॥ ೩೮*

ಎಂದು ಷೋಡಶ ರಾಯರಾ ಕಥೆ
ಯಿಂದ ನೃಪತಿಯು ಸಂತವಿಟ್ಟನು
ಬಂದು ಧರ್ಮಜನೆರಗಿದನು ಮುನಿರಾಯನಂಘ್ರಿಯಲಿ ।
ಅಂದು ವೇದವ್ಯಾಸ ಪಾಳಯ
ದಿಂದ ಕಳುಹಿಸಿಕೊಂಡನಿತ್ತ ಮು
ಕುಂದನಭಿಮನ್ಯುವಿನ ಮರಣವನರಿದ ಮನದೊಳಗೆ ॥ ೩೯

ಏಳನೆಯ ಸಂಧಿ ಮುಗಿದುದು.

---

* ಮೂವತ್ತೆಂಟನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ:—

ಅಂತನಾದಿ ಸುನೀ ಧನಹನೀ
ಭ್ರಾಂತವಲ್ಲದ ಮಿಾರಬಾರದು
ಚಿಂತೆ ನಿನಗೇಕೆಂದು ನಾರದ ತಿಳಿಹಿದನು ನೃಪನ ।
ಇಂತು ನೀ ಭಾವಿಸಲು ನಿನ್ನ ಮ
ಹಂತರಿಗೆ ಕಲೆಯುವುದೋ ಶು
ಕ್ರಾಂತನಾಗದಿರೆಂದು ಸಂತೈಸಿದನು ಧರ್ಮಜನ ॥

# ಎಂಟನೆಯ ಸಂಧಿ

ಸೂಚನೆ ॥ ಹಾ ಮಗನೆ ರಣರಂಗ ಧೀರನೆ
ಹಾ ಮದೀಯ ಕುಮಾರ ವೀರನೆ
ಬಾ ಮಗನೆ ಮೊಗದೋಱೆನುತ ಹಲುಬಿದನು ಕಲಿ ಪಾರ್ಥ ॥

ಕೇಳು ಜನಮೇಜಯ ಧರಿತ್ರೀ
ಪಾಲ ಸಮಸಪ್ತಕರ ಬಲ ನಿಜ
ಪಾಳಯಕೆ ತಿರುಗಿದುದು ತೀರಿತು ತರಣಿಯಾಟೋಪ ।
ಕಾಳೆಗವ ತೆಗೆಸಿದರು ಕೌರವ
ರೇಳು ಫಲುಗುಣ ಎನುತ ಲಕ್ಷ್ಮೀ
ಲೋಲ ವಾಘೆಯ ಮರಳಿ ಕೊಂಡನು ಹಯವ ಬೋಳೈಸಿ ॥ ೧

ಅಳಿಯನಳಿವನು ಹೇಳಬಾರದು
ತಿಳಿಯಲಿದನಿನ್ನೆನುತ ಚಿಂತಿಸಿ
ನಳಿನ ಲೋಚನ ಬರುತ ಕಂಡನು ವರ ಸರೋವರವ ।
ಇಳಿದು ರಥವನು ರಣ ಪರಿಶ್ರಮ
ಗಳೆವೆನೆನುತವೆ ಪಾರ್ಥ ಸಹಿತಾ
ಕೊಳನ ಹೊಕ್ಕನು [1]ಜಗದುದರ ಲೀಲಾವತಾರಕನು[1] ॥ ೨ *

ಧುರದ ಕೋಳಾಹಳದ ಢಗೆ ಡಾ
ವರಸಿ ಬಳಲಿ ಧನಂಜಯನು ವರ
ಸರಸಿಯಲಿ ಮುಳುಗಿರಲು ನಸು ನಗುತೊಂದುಪಾಯದಲಿ ।
ನರನೊಳಿನ್ನಱುಹುವೆನು ಘನ ಸಂ
ಗರದೊಳಡಗಿದ ರಾಜ ಕುವರನ
ಮರಣ ವಾರ್ತೆಯನೆಂದು ಮನದಲಿ ನೆನೆದನಸುರಾರಿ ॥ ೩ *

ಎಲೆ ಸುರೇಂದ್ರ ಕುಮಾರ ಕೇಳ್ ನಿ
ನ್ನೊಲುಮೆಯಣುಗನು ರಣದೊಳಗೆ ರಿಪು
ಬಲವ [2]ಕೋಳಾಹಳಿಸಿ[2] ಕೌರವ ಸುತರು ನೂರ್ವರನು ।

---

[1] ಕಾಳೆಗದ ಕೌತುಕವ ವಿವರಿಸುತ (ಟ.ತ).

* ಮೇಲೆ ಈ ಗುರುತಿರುವ ೨ರಿಂದ ೬ನೆಯ ಪದ್ಯದ ವರೆಗಿರುವ ಐದು ಪದ್ಯಗಳು (ಚ.ಪ.ಬ). ಪ್ರತಿಗಳಲ್ಲಿಲ್ಲ.

[2] ತೊತ್ತಳದುಳಿದು (ಗ).

ತಲೆಯನರಿದನು ಬಳಿಕ ತಾ ಸುರ
ಲಲನೆಯರ ಚೆಲುವಿಂಗೆ ಸೋತನು
[1]ಕಳಿದನೆನುತವೆ ನುಡಿದು[1] ಹರಿ ಮುಳುಗಿದನು ಜಲದೊಳಗೆ ॥ ೪ *

ಆ ಸುತನ ಶೋಕದ ಮರುಕವಾ
ಕಾಶ ವಚನದೊಳಾಯ್ತು ಶಿವ ಶಿವ
ವಾಸುದೇವ ಎನುತ್ತ ಫಲುಗುಣ ಜಲವ ಬಗಿದೆದ್ದು ।
ಘಾಸಿಯಾದನು ಮಗನಕಟ ಸಂ
ತೋಷವೆಲ್ಲಿಯದೆನುತ ಮಾಯಾ
ವೇಷಿಯನು ಕರೆದನು ವಿಲೋಚನ ವಾರಿ ಪೂರದಲಿ ॥ ೫ *

ಎನಲು ಧಿಮ್ಮನೆ ಕೊಳದೊಳಗೆ ನಿಂ
ದನು ಮುಕುಂದನು ಸುರಪ ಸುತನಾ
ನನವ ನೋಡುತದೇನದೇನೆನೆ ಬಿಕ್ಕಿ ಬಿರಿದಳುತ ।
ತನಯನಳಿಯದೆ ಮಾಣ ಗಗನ
ಧ್ವನಿಯೊಳಾದುದು ವಾರ್ತೆ ಚಿತ್ತಕೆ
ಮೊನೆಯ ಸರಳೆನೆ ಮರುಳೆ ಬಾ ಎಂದೇಱಿದನು ರಥವ ॥ ೬ *

ಹರಿ ಕಿರೀಟಿಗಳಿತ್ತ ಶಿಬಿರಕೆ
ತಿರುಗಿದರು ಸುತ ಶೋಕ ಸೂಚನೆ
ನರನ ಚಿತ್ತದೊಳಾಯ್ತು ವೆಂಠಣಿಸಿತ್ತು ಪರಿತಾಪ ।
ಕೊರಳ ಸೆರೆ ಹಿಗ್ಗಿದವು ಕಂಬನಿ
ದುಱುಗಿದವು ಕಡು ಶೋಕ ಜಠರದ
ಲು[2]ರವಣಿಸಲಾಕಸ್ಮಿಕದ[2] ಭಯವಾಯ್ತು ಪಾರ್ಥಂಗೆ ॥ ೭

ತರಣಿ ತೊಲಗಿದ ಗಗನವೋ ಪಂ
ಕರುಹವಿಲ್ಲದ ಸರಸಿಯೋ ಕೇ
ಸರಿಯ ಲೀಲಾಳಾಪವಿಲ್ಲದ ಬಹಳ ಕಾನನವೊ ।
ಪರಮ ತತ್ತ್ವ ನಿಧಾನವಱಿಯದ
ನರನ ವಿದ್ಯಾರಚನೆಯೋ [3]ನಿ
ರ್ಭರ[3] ಭಯಂಕರವಾಯ್ತು ಪಾಳಯವೆನುತ [4]ಬರುತಿರ್ದ[4] ॥ ೮

---

[1] ತಳರ್ದನಂಬರಕೆಂದು (ಗ.ಬ).　　[2] ೦ ಶಿರವನಾವರಿಸಿ ಕಡು (ಸ).
[3] ದುರ್ಧರ (ಗ.ಚ.ಪ).　[4] ನಡೆತಂದ (ಗ.ಚ.ಪ).

ದೆಸೆ ದೆಸೆಯ ನೋಡಿದರೆ ಕತ್ತಲೆ
ಮಸಗುವುದು ಪರಿತಾಪ ತನುವನು
ಮುಸುಕುವುದು ಮನ ಮಱುಗುವುದು ಕಳವಳಿಸುವುದು ಧೈರ್ಯ ।
ಮಸೆದ ಸರಳೊಡಲೊಳಗೆ ಮುಱಿದವೊ
ಉಸುರಿಗುಬ್ಬಸವಾಯ್ತು ಬಲ್ಲಡೆ
ಬೆಸಸು ಮುರಹರ ಹಿರಿದು [1]ಬಳಲಿಸ[1] ಬೇಡ ಹೇಳೆಂದ ॥ ೯

* ತಂದೆ ಧೃತಿಗೆಡಬೇಡ ನಡೆ ನಿಜ
ನಂದನನನಾರೈವೆವೆನುತ್ತೈ
ತಂದು ಕೋಟೆಯ ಕಳೆದು ಬಂದರು ರಾಜ ಬೀದಿಯಲಿ ।
ಕಂದನಿರವನು ಕಾಣಲಾಪೆನೊ
ಕೊಂದರೆಂಬುದ ಕೇಳುವೆನೊ ತನ
ಗಿಂದು ಗತಿಯೇನೆನುತ ಬಂದನು ರಾಜ ಮಂದಿರಕೆ ॥ ೧೦ †

---

[1] ನೋಯಿಸ (ಕ). * ಹತ್ತನೆಯ ಪದ್ಯಕ್ಕೆ ಹಿಂದೆ (ಗ.) ಪ್ರತಿಯಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ಅಳುವದಲಿ ಕಂಗೆಟ್ಟವೊಲು ಮನ
ವೊಲವುದಪ್ಪಿತು ರಾಜ ಭವನದ
ಕಳನದಾರದು ಕೌರವನ ಪಾಳಯ:ವೆ ಹೇಳೆನುತ ।
ತುಳುಕಿದನು ಕಂಬನಿಗಳನು ಕಳ
ವಳಿಸಿ ಫಲುಗುಣ ಪುತ್ರ ಮೋಹದ
ಬಳಕೆಗಳ ಕಂಡಡರಿದವು ಕಂಬನಿ ಮುರಾಂತಕನ ॥

† ಹತ್ತನೆಯ ಪದ್ಯವಾದ ಮೇಲೆ ಎಲ್ಲಾ ಪ್ರತಿಗಳಲ್ಲಿಯೂ ಈ ಕೆಳಗಿನ ಎರಡು ಪದ್ಯಗಳಿವೆ :—

ಹಗೆಯು ಪದ್ಮವ್ಯೂಹವೆನ್ನಯ
ಮಗನ [1]ಸುಳಿವಿಗೆ[1] ಬಾಧೆ ಮೋಹಿದ
ದುಗುಡವೇ ಸುತ ಶೋಕ ಸೂಚನೆ ತನ್ನ ಚಿತ್ತದಲಿ ।
ಹೊಗೆಯು ಹೊದಱಿನ ನಿಱಿಗೆಯಿದು ವ
ಹ್ನಿಗೆ ಸುನಿಶ್ಚಯವೆಂಬವೊಲು ಮೇ
ಲಗಿವ ಶೋಕ ಕೃಶಾನು ವಿನ್ನೀಮನದ [2]ಹೊಗೆಯೆಂ[2]ದ ॥
ತಲೆಯು ಮುಸುಕಿನ ವೀರ ಸುಭಟರು
ತೊಲಗಿದರು ಬೆಸಗೊಳಲು ನಂದನ
ನಳಿವು [3]ನಿಶ್ಚಯವೆಂಬವೊಲು ಮೌನದಲಿ ಕೆಲಸರಿಯೆ[3] ।
ಎಲೆ ಮುರಾಂತಕ ಕಾಣಲಾಪೆನೊ
ಹೊಳಲೊಳೆನ್ನಾನೆಯುವೆನುತ ದೃಗು
ಜಲಕೆ ಕಾಯುವ ತೆಱುತ ಬಂದನು ರಾಜಮಂದಿರಕೆ ॥

[1] ಕೊರಳಿಗೆ (ಗ), ಹಳುವಿನ (ಚ.ಪ). [2] ಹೊಗರೆಂ (ಕ.ಗ.ಪ). [3] ಹಲಬರ ಮನವ ಮೆಚ್ಚಿತು ಹೆಚ್ಚಿತತಿಮೋಹ (ಕ.ಟ.ತ.ದ.ನ).

ಸುರ ನಗರಿ ನಡುಗಿತ್ತು ಸುರಪತಿ
ಹರನ ನೆನೆದನು ಯಮನ ಪಟ್ಟಣ
ಸರಕುದೆಗೆಯಿತು ಮೃತ್ಯು ಮಱೆಹೊಕ್ಕಳು ಮಹೇಶ್ವರನ ।
ಬಿರುದರಂಜಿ[1]ತು ದೇಶ ದೇಶದ[1]
ಧರಣಿಪತಿಗಳಪಾಯವಾಯ್ತೆನೆ
ನರನ ಕಡು ದುಮ್ಮಾನ ನೆಱೆ ಹೆದಱಿಸಿತು ಮೂಜಗವ ॥ ೧೧

ವೀರರಿದಿರುಗ್ಗಡಣೆಗಳ ಕೈ
ವಾರಿಗಳ ಮಾಣಿಸುತಲೈತಹ
ನಾರಿಯರ ರತುನಾರತಿಯ ತಳಿಗೆಗಳ ನೂಕಿಸುತ ।
ಸಾರಿ ಕೈಗೊಡುವದಟರನು ಕಂ
ಣ್ಣೋರೆಯಲಿ ಕೋಪಿಸುತ ತನ್ನಯ
ತೇರನಿಳಿದನು ಪಾರ್ಥನಸುರಾರಿಯ ನಿರೂಪದಲಿ ॥ ೧೨ *

ಹರಿ ರಥವನಿಳಿದಂತೆ ಪಾರ್ಥನ
ಭರದ ಕೋಪವ ಕಂಡು ನಿಜ ಮಂ
ದಿರಕೆ ಮೆಲ್ಲನೆ [2]ಜುಣುಗಿ[2]ದನು ಯಾದವರ ಗಡಣದಲಿ ।
ವರ ಧನುವ [3]ಶಸ್ತ್ರಾಸ್ತ್ರ ಕವಚವ
ನಿರಿಸಿ[3] ಕೈಗೊಡುವವರ ಕನಲು
ತ್ತರಮನೆಯ ಹೊಕ್ಕನು ಯುಧಿಷ್ಠಿರ ರಾಯನೋಲಗವ ॥ ೧೩

ಧರಣಿಪನ ನಿಱಿಗೆಯಲಿ ಕಂದನ
ಮರಣವನು ನಿಶ್ಚಯಿಸಿ ಪ್ರಳಯದ
ಹರನ ಕೋಪವ ಕೇಣಿಗೊಂಡನು ತನ್ನ ಚಿತ್ತದಲಿ ।
ಸುರಿವ [4]ನಯನಾಂಬುಗಳ ಜಲನಿಧಿ
ಗುರವಣಿಸಿದನೊ[4] ವಡಬನೆನೆ ಮುರ
ಹರನ ಮೈದುನನೊಯ್ಯನೈದಿದನವನಿ ಪಾಲಕನ ॥ ೧೪

ಉಕ್ಕಿ ಶೋಕದ ಕಡಲು ಪಾರ್ಥನ
ಮುಕ್ಕುಳಿಸಿತಾ ಶೋಕ ಶರಧಿಯ
ಹೊಕ್ಕು ಬೆಳೆದುದು ಕೋಪ ಶಿಖಿ [5]ವಡಬಾಗ್ನಿ[5]ಯಂದದಲಿ ।

---

[1] ದರಿತ್ತ ಸೇನೆಯ (ಕ.ಟ.ತ), ಪರಾಪ್ತ ಸೇನಾ(ಪ). * ಈ ಪದ್ಯವು (ಕ.) ಪ್ರತಿಯಲ್ಲಿಲ್ಲ. [2] ಜಾಱಿ (ಗ.ಚ.ಬ). [3] ಬತ್ತಳಿಕೆಯನು ಕೆಲಕಿರಿಸಿ (ಗ). [4] ನಯನ ಜಲಾಬ್ಧಿಗಾದುದು ವರುಷದುರವಣಿ (ಕ.ಗ.ಟ.ತ.ದ). [5] ಕಾಲಾಗ್ನಿ (ಕ.ಗ.ಚ.ತ), ದಾವಾಗ್ನಿ (ಬ).

ಮಕ್ಕಳೊಳು ನೋಡಿದನು ಕಂದನ
ನಿಕ್ಕಿದಿರಲಾ ಲೇಸು ಮಾಡಿದಿ
ರೆಕ್ಕತುಳದಾಳುಗಳೆನುತ ಭೂಪತಿಗೆ ಪೊಡವಂಟ ‖ ೧೫

ತಲೆಯ ಮುಸುಕಿನ ಕಂಗಳೊಱತೆಯ
ಜಲದ ದುಗುಡದ ಮುಖದ ಜನಪತಿ
ಫಲುಗುಣನನೆತ್ತಿದನು ತಲೆಗುತ್ತಿದನು ಭೀತಿಯಲಿ ।
ಮಲಗಿ[1]ದನು [ವರ][1] ಭೀಮ ಸಭೆ ತ
ಲ್ಲಳಿಸಿತರ್ಜುನ ಬಂದನೆನೆ ಬಸ
ವಳಿದು ಬಂದು ಸುಭದ್ರೆ ಪತಿಯಂಘ್ರಿಯಲಿ ಹೊರಳಿದಳು ‖ ೧೬

ಕಂದನಾವೆಡೆ ತನ್ನ [2]ಮೋಹದ[2]
ಸಿಂಧುವಾವೆಡೆ ತನುಜ ವನ ಮಾ
ಕಂದನಾವೆಡೆ ಹೇಳೆನುತ ಫಲುಗುಣನು ತೊದಳಿಸುತ ।
[3]ನೊಂದು ಮನದಲಿ ಪಾರ್ಥನಾ ಸತಿ
ಯಂದವನು ಕಾಣುತ್ತ[3] ಬೆದೆ ಬೆದೆ
ಬೆಂದು ಯಮರಾಜನ ಕುಮಾರನ ಮೊಗವ ನೋಡಿದನು ‖ ೧೭ *

ಪತಿಯಳಿದ ಸತಿಯಿರವು ನಾಯಕ
ರತುನವಿಲ್ಲದ ಪದಕ ದೈವ
ಸ್ತುತಿಗಳಿಲ್ಲದ ಕಾವ್ಯ ರಚನಾ [4]ಭಾವದಂದದಲಿ[4] ।
ಕೃತಕ[5]ವ[5]ಲ್ಲಭಿಮನ್ಯುವಿಲ್ಲದೆ
ಕ್ಷಿತಿಪ ನಿನ್ನಾಸ್ಥಾನ ಮೆಱೆಯದು
ಸುತನ ಸುದ್ದಿಯ[6]ದೇನು[6] ಮಱುಗಿಸಬೇಡ ಹೇಳೆಂದ ‖ ೧೮

---

[1] ಎದ್ದನು (ಬ). [2] ಬಿರುದಿನ [3] ಕಂದಿದನು ಕಡು ಮೋಹದಲಿ ಮನ ನೊಂದು ಸುತ ಶೋಕದಲಿ (ಕ.ಗ.ಚ). [4] ನೀಕಮಾನದಲಿ (ಕ), ಸೇವ್ಯದಂದ ದಲಿ (ಗ.ಚ.ಪ). [5] ವಿ (ಚ.ತ.ದ.ಪ.ಬ) [6] ದೆಂತು (ಗ.ಟ.ತ.ದ.ನ).

* ಈ ಪದ್ಯವಾದ ಮೇಲೆ (ಬ) ಪ್ರತಿಯಲ್ಲಿ ಕೆಳಗಿನ ಪದ್ಯವು ಹೆಚ್ಚಾಗಿದೆ :—

ತಂದೆ ಧರ್ಮಜ ತನ್ನ ಬಿರುದಿನ
ಸಿಂಧುವೆಲ್ಲಿ ಸೋಮಕುಲ ಪನ್ನೀರ
ಸಿಂಧು ಚಂದಿರನೆಲ್ಲಿ ಹೇಳೆನುತಾಗಲರ್ಜುನನು ।
ಕಂದಿದನು ಕಡುಮೋಹದಲಿ ಮಿಗೆ
ನೊಂದು ಸುತ ಶೋಕದಲಿ ಗಱಗಱ
ಗಂದಿಯಣ್ಣನ ನೋಡುತಳಲುತಪಾರ್ಥನಿಂತೆಂದ ‖

ಬರಲು ಬಹನಿದಿರಾಗಿ ತನ್ನಯ
ವರ ರಥವ ಬಂದೇಱುವನು ನಿಜ
ಕರ ತಳದಿ ಮೈದಡವಿ ಘಾಯವ ನೋಡಿ ಮಱುಗುವನು ।
ತರುಣನಿದಿರ್ಕೈತರಲು ತನ್ನಯ
ಧುರದ ಬಳಲಿಕೆ [1]ಹಿಂಗು[1]ವುದು ಹೇ
ಳರಸ ಕಂದನ [2]ಸುಳಿವ[2] ಕಾಣೆನು ಕರಸಿ ತೋಱೆಂದ ॥ ೧೯

ಮಗನ ಮಣಿ ರಥವೆಲ್ಲಿ ಹೂಡಿದ
ವಿಗಡ ತೇಜಿಗಳೆಲ್ಲಿ ಮಣಿವೆಳ
ಗುಗಳ ಛತ್ರವದೆಲ್ಲಿ ಚಾಮರವೆಲ್ಲಿ ಧನುವೆಲ್ಲಿ ।
ಹಗೆಯರಲಿ ಹತವಾದನೇ ಹಾ
ಸುಗುಣನಿಲ್ಲಿಗೆ ಬಾರನೇ ತಾ
ವೊಗವ ಕಾಣದೆ ಹೋದನೇ ಎನಗೇನು ಗತಿಯೆಂದ ॥ ೨೦ *

ಕಂದ ಬಾರೋ ಎನ್ನ ಮನಕಾ
ನಂದ ಬಾರೋ ಬಾಲಕರ ಪೂ
ರ್ಣೇಂದು ಬಾರೋ ರಿಪು ಕುಲಾಂತಕ ನಿಪುಣ ಮುಖದೋಱೋ ।
ತಂದೆ ನಿನಗೆನ್ನಲ್ಲಿ ಋಣ ಸಂ
ಬಂಧ ಸವೆದುದೆ ಶಿವ ಶಿವಾ ತಾ
ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ ॥ ೨೧ *

ಅಸಮ ಪದ್ಮವ್ಯೂಹವನು ಭೇ
ದಿಸುವನಾವವನೆನಲು ಕೇಳಿದು
ಶಿಶುತನದಲಾಹವಕೆ ನಡೆದನು ನಾವು ಬೇಡೆನಲು ।
ಹೊಸ ಮದದ ವನ ದಂತಿ ಕದಳಿಯ
ಕುಸುರಿದಱಿದಂದದಲಿ ಘನ ಪೌ
ರುಷವ ಮಾಡಿದನೆಂದನವನೀಪಾಲನನುಜಂಗೆ ॥ ೨೨

ಅರಿ ನೃಪಾಲರ ನೂಱು ಮಕ್ಕಳ
ಶಿರವ[3][ನರಿ][3]ದನು ಷಡುರಥರ ಮಿಗೆ
ಪರಿಭವಿಸಿದನು ರಿಪು ಬಲವನಡಹಾಯ್ದಾನೆ ವರಿ ವರಿದು ।

---

[1] ತೊಲಗು (ಕ), ಯಡಗು (ಗ.ಬ), ಹಿಗ್ಗು (ಟ). [2] ಸುಳುಹ (ಕ.ಗ.ಟ).
* ಈ ಎರಡು ಪದ್ಯಗಳೂ ಮುದ್ರಿತ ಪ್ರತಿಯಲ್ಲಿ ಮಾತ್ರ ಸಿಕ್ಕುತ್ತವೆ. [3] ನೊದೆ (ಸ).

ಧುರಕೆ ಹೆಱತೆಗೆದೆವ್ಮ ಸಾಲ್ವರ
ಸರಿದುಹೋದಭಿಮಾನವನು ಕಾ
ಯ್ದುರವಣಿಸಿ ಮಗನೇಱಿದನು ವಾಸವನ ಗದ್ದುಗೆಯ ॥ ೨೩

ಈ ನಕುಳನೀ ಭೀಮನೀ ಪಾಂ
ಚಾಲನೀ ಸಹದೇವನೀ ಭೂ
ಪಾಲನೀ ಸಾತ್ಯಕಿ ಯುಧಾಮನ್ಯೂತ್ತಮೌಜಸರು ।
ಕಾಳೆಗದೊಳಂಗೈಸಲಮ್ಮದೆ
ಬಾಲಕನ ನೂಕಿದಿರಲಾ ನಿ
ಮ್ಮಾಳುತನವನು ತೋಱಿದಿರಲಾ ತನ್ನ ಮೇಲೆಂದ ॥ ೨೪

ವೀರರಿನಿಬರು ನೆರೆದು ರಿಪು ಪರಿ
ವಾರವನು ಹೊಗಲಂಜಿ ಹೊಱಗಣ
ಮಾರಿ ಹೊಱಹೊಱಗೆಂಬವೊಲು [1]ನಂದನನ[1] ನೂಕಿದಿರಿ ।
ಆರ ನಂಬಲು ಬಹುದು ನಿಮಿಷವು
ದೂರ ತಾ ತೊಲಗಿದರೆ ತನ್ನ ಕು
ಮಾರನಿದ್ದರೆ ಹಱಿವ ಕಂಡಿರಿ ಹೊಲ್ಲಹೇನೆಂದ ॥ ೨೫

ಕೆಡೆ ನುಡಿದು ಫಲವೇನು ಸಾಕಿ
ನ್ನೊಡೆಯರಿಲ್ಲದ ವಸ್ತುವಾದೆನು
ಕಡೆಗೆ ಧರ್ಮಜ ಹೇಳು ಕೊಂದವನಾರು ನಂದನನ ।
ಕಡುವಗೆಯದಾರವರ ಬಲದಲಿ
ನುಡಿ ನಿದಾನವನವನ ಜೀವಕೆ
ಹಿಡಿ ಮಹೀಪತಿ ಸಂಚಕಾರವನೆಂದನಾ ಪಾರ್ಥ ॥ ೨೬

ಹೇಳಿ ಫಲವೇನಿನ್ನು ಶೋಕ
ಜ್ವಾಲೆಗಿಂಧನವೆನ್ನ ನುಡಿ ರಿಪು
ಜಾಲವನು ನೀ ಖಂಡಿಗಳೆ ಬಹೆವಾವು ಬಳಿಸಲಿಸಿ ।
ಕಾಳೆಗವ ಜಯಿಸುವೆವು ನಡೆಯೆನೆ
ಬಾಲನುರವಣಿಸಿದನು ಮಸಗಿದ
ಕಾಲ ರುದ್ರನ ರೂಪ ತಾಳ್ದನು ವೈರಿ ಸೇನೆಯಲಿ ॥ ೨೭

---

[1] ತನ್ನವನ (ಕ.ಗ.ಟ.ತ).

ಅರಸು ಮಕ್ಕಳ ಕೊಂದನೈನೂ
ರ್ವರನು ಮೂಱಕ್ಷೋಣಿ ಸೈನ್ಯವ
ನೊರಸಿದನು ಮಸೆಗಾಣಿಸಿದನಗ್ಗದ ಮಹಾರಥರ ।
ಧುರವ ಗೆಲಿದನು ಪಡಿತಳಿಸಿ ನಾ
ವುರವಣಿಸಲಡಹಾಯ್ದು ನಮ್ಮನು
ಹರನ ವರವುಂಟೆಂದು ತಡೆದನು ಸಿಂಧು ಭೂಪಾಲ ॥ ೨೮

ವಿರಥನಾದನು ಭೀಮ ನಕುಳನು
ತಿರುಗಿದನು ಸಹದೇವ ಕೊರಳಿನ
ಹರಣದಲಿ ಹಿಮ್ಮೆಟ್ಟಿದನು ದ್ರುಪದಾದಿ ನಾಯಕರು ।
ಧುರದೊಳೋಸರಿಸಿದರು ಸೈಂಧವ
ಹರನ ವರದಲಿ ನಮ್ಮ ಗೆಲಿದನು
ಮರಣವನು ಕಂದಂಗೆ ತಂದವನವನು ಕೇಳೆಂದ ॥ ೨೯

ಇನ್ನು ಹೇಳುವುದೇನೆನುತ ಕೈ
ಸನ್ನೆಯಲಿ ಮಾತಾಡಿ ಭೂಪತಿ
ಬೆನ್ನ [1]ತೆ[1]ತ್ತನು ಭೀಮಸೇನನ ವಿಪುಲ ವಕ್ಷದಲಿ ।
ತನ್ನ ಮಱೆದನು ನಯನ ಧಾರಾ
ಭಿನ್ನ ಚಾರು ಕಪೋಲನಿರೆ ಸಂ
ಪನ್ನ ಶೋಕಾಗ್ನಿಯಲಿ ಬೆಂದುದು [2]ಸಕಲ ಜನ[2] ಹೃದಯ ॥ ೩೦

ಮುಚ್ಚಿದನು ಕಂಗಳನು ಧೈರ್ಯದ
ಕೆಚ್ಚಿನೆದೆ ಕರಗಿತ್ತು ಶೋಕದ
ಕಿಚ್ಚು ಕೊಂಡುದು ಮನವನಖಿಳೇಂದ್ರಿಯದ ಸುಳಿವಡಗೆ ।
ಎಚ್ಚಱಡಗಿತು ನೆಲಕೆ ಕೈಗಳ
ಬಿಚ್ಚಿ ಬಿದ್ದನು ಪುತ್ರ ವಿರಹದ
ಹೆಚ್ಚುಗೆಯ ತಾಪವನು ಹೆಸರಿಡಲಱಿಯೆನರ್ಜುನನ ॥ ೩೧

ಘನ ವಿ[3]ಕರ್ಮ[3]ದ ವಿಲಗದಲಿ ನಿಜ
ತನುಜ ಶೋಕದ ತಗ[4]ಹಿನೊಳಗ[4]
ರ್ಜುನನು ಧೈರ್ಯ ದರಿದ್ರನಾದನದೇನ ಹೇಳುವೆನು ।

---

1 ನಿ (ಕ.ಚ.ದ.ನ). 2 ಧರ್ಮಜನ (ಕ), ಫಲುಗುಣನ (ಗ.ಚ.ಪ).
3 ಕಾರ (ಗ). 4 ಹುಬರಲ (ಕ.ಗ).

ಮನ ಬಳಲಿ ಮೈ ಮಱೆದು ತಾಪದಿ
ಕನಸ ಕಂಡನು ಝಡಿಕೆ ಮಿಗೆ ಝೊ
ಮ್ಮನ ಸುಷುಪ್ತಿಯೊಳಿದ್ದು ನಿಮಿಷದೊಳೆದ್ದು ಕಣ್ದೆಱೆದ ॥ ೩೨

ಅಳಲ ಮುಕ್ಕುಳಿಸಿದನು ಮೋಹದ
ಬೆಳವಿಗೆಯ ಗವಸಣಿಸಿದನು ಕಳ
ಕಳಿಕೆ ಹಿಂಗಿದುದಶ್ರುಜಲವನು ಕಂಗಳಲಿ ಕುಡಿದು ।
ಪ್ರಳಯ ರುದ್ರನ ಕೋಪ ಶಿಖಿ ವೆ
ಗ್ಗಳಿಸಿತೆನೆ ಕಂಗಳಲಿ ಕಿಡಿಗಳು
ತುಳುಕಿದವು ರೌದ್ರಾನುಭಾವದ [1]ರಸದ ಭಂಗಿಯಲಿ[1] ॥ ೩೩

ಹೇಳು ಹೇಳಿನ್ನೇನು ಮಾಱಿಯ
ಮೇಳವಾಡಿದನೇ ಜಯದ್ರಥ
ನಾಳುತನವನು ಬವರದಲಿ ತನ್ನೊಡನೆ ತೋಱಿದನೆ ।
ನಾಳೆ ಬೈಗಿಂದೊಳಗೆ ರಿಪುವನು
ಸೀಳುವೆನು [2]ಸೀಳದಿರೆ[2] ಧರ್ಮಜ
ಕೇಳು ಭಾಷೆಯನೆಂದು ಮಿಗೆ ಗರ್ಜಿಸಿದನಾ ಪಾರ್ಥ ॥ ೩೪

ಹರನ ದುರ್ಗದಲಿರಲಿ ಮೇಣಾ
ಹರಿಯ ಕಡಲೊಳಗಿರಲಿ ಬ್ರಹ್ಮನ
ಕರ ಕಮಂಡಲದೊಳಗೆ ಹುದುಗಲಿ ರವಿಯ ಮಱೆಹೊಗಲಿ ।
ಉರಗ ಭುವನದೊಳಿರಲಿ ಮೇಣ್ ಸಾ
ಗರವ ಮುಳುಗಲಿ ನಾಳೆ ಪಡುವಣ
ತರಣಿ ತೊಲಗದ ಮುನ್ನ ಕೊಲುವೆನು ವೈರಿ ಸೈಂಧವನ ॥ ೩೫

ಕುರು ಬಲವ ಬಿಟ್ಟರೆ ಯುಧಿಷ್ಠಿರ
ನರಮನೆಯ ಹೊಕ್ಕರೆ ಮುರಾರಿಯ
ಶರಣುವೊಕ್ಕರೆ ಸರ್ವಥಾ ಕೊಲ್ವೆನು ಜಯದ್ರಥನ ।
ಧುರದೊಳುಳಿದಂತಿಂದ್ರ ಯಮ ಭಾ
ಸ್ಕರ ವಿರಂಚಿಗಳಡ್ಡವಿಸಿದರೆ
ಶಿರವ[3]ನರಿ[3]ವೆನು ನಾಳೆ ಬೈಗಿಂದೊಳಗೆ ಸೈಂಧವನ ॥ ೩೬ *

---

[1] ಕೋಪ ಕುಡಿಯಿಡಲು( ಕ.ಟ.ತ). [2] ಬವರದಲಿ. [3] ನೊದೆ (ಕ).
* ಈ ಪದ್ಯವು (ಚ) ಪ್ರತಿಯಲ್ಲಿಲ್ಲ.

ಗುರು ವಿಘಾತಿಯ ವೇದ ನಿಂದಾ
ಪರನ ಪರದಾರಾಭಿಗಾಮಿಯ
ಹರ ಮುರಾರಿಯ ಭೇದವಾದಿಯ ವಿಪ್ರ ನಿಂದಕನ ।
ಪರಗುಣಾಸೂಯಕನ ಹಿಂಸಾ
ಪರನ ಪಿಸುಣನ ಶಠನ ಕೃಪಣನ
ನರಕವಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ ॥ ೩೭

ಖಳನ ಧೂರ್ತನ ನಾಸ್ತಿಕನ ಚಂ
ಚಳನ ಪರ ನಿಕ್ಷೇಪ ಹಾರಿಯ
ದಳಿತ ಮರ್ಯಾದನ ಕೃತಘ್ನನ ಭರ್ತೃ ನಿಂದಕನ ।
ಸ್ಖಲಿತ ವಚನನ ಯೋಗಿ ನಿಂದಾ
ಕುಳನ ವಿಕಳ ವ್ರತನ ಲೋಕಾ
ವಳಿಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ ॥ ೩೮

ನಾಳೆ ಖಚರೀ ಜನದ ತೊಡವಿನ
ತೋಳನವನಸು ನೆಮ್ಮದಿದ್ದರೆ
ಕಾಳೆಗದೊಳೆನ್ನೊಡಲ ಬಿಸುಡುವೆನಗ್ನಿ ಕುಂಡದಲಿ ।
ಕೇಳು ಧರ್ಮಜ ಎಂಬ ನುಡಿಗಳು
ಕಾಳೆಗದ ಸೊಗಸಾಗೆ ಲಕ್ಷ್ಮೀ
ಲೋಲ ಕೇಳುತ ಬಂದು ಪಾರ್ಥನ ಬಿರುದ ಹೊಗಳಿದನು ॥ ೩೯

ತೀರಿತಿನ್ನೇನರಿ ನೃಪನ ಸಂ
ಸಾರ ನೀನೇಱಿಸಿದ ನುಡಿಗಳ
ನಾರು ಕಳಚಲು ಬಲ್ಲರಗ್ಗದ ದೇವ ದೈತ್ಯರಲಿ ।
ವೀರ ರಾಮನ ನುಡಿಗೆ ರಾಮನು
ದಾರ ಬಾಣಕೆ ನಿನ್ನ ನುಡಿಗಳು
ಕೂರಲಗು ಸಮಜೋಳಿ ಜಗದೊಳಗೆಂದನಸುರಾರಿ ॥ ೪೦

ನಳಿನ ನಾಭನು ಪಾಂಚಜನ್ಯವ
ಮೊಳಗಿದನು ನಿಜ ದೇವದತ್ತವ
ಸೆಳೆದು ಫಲುಗುಣನೂದಿದನು ಗಾಂಡಿವವನೊದಱಿಸುತ ।
ಪ್ರಳಯ ದಿನದಲಿ ತಿವಿವ ಸಿಡಿಲ
ವ್ವಳಿಸುವಂತಿರೆ ರೌದ್ರ ರವ ಘುಳು
ಘುಳಿಸಿ ತಲ್ಲಣಿಸಿತ್ತು ಕೌರವ ರಾಯ ಪರಿವಾರ ॥ ೪೧

ಏನಿದೆತ್ತಣ ರಭಸ ತ್ರೈಲೋ
ಕ್ಯಾನುಕಂಪನವಾಯ್ತು ಶಿವ ಎನು
ತಾ ನರೇಂದ್ರ ನಿಕಾಯ ನಡುಗಿತು ಕೌರವೇಶ್ವರನ ।
ಸೇನೆ ತಲೆಕೆಳಕಾಯ್ತು ಪಾರ್ಥನ
ಸೂನುವಿನ ಮರಣದಲಿ ಮಂತ್ರ
ಧ್ಯಾನ ನಮಗಾಯ್ತೆಂದು ತಲ್ಲಣಿಸಿತ್ತು ನೃಪ ಕಟಕ ॥ ೪೨

ಎಲೆಲೆ [1]ಕವಿ ಕಳ್ಳೇಱ ಹಾಯ್ದರು[1]
ಕೊಲೆಗಡಿಗರೋ ನೃಪರು ಮಗ ಮಡಿ
ದಳಲು ಮಿಗಲನ್ಯಾಯಕೆಳಸಿದನೇ ಯುಧಿಷ್ಠಿರನು ।
ಬಲವ ಕರೆ ಕರೆ ಎನುತ ಕಾಹಿನ
ತೊಳಲಿಕೆಯ ನಾಯಕರು ಗಜಱಲು
ಬೆಳಗಿದವು ಬೊಂಬಾಳ ದೀವಿಗೆ ನೆರೆದುದತಿರಥರು ॥ ೪೩

ಪಾಳಯವು ಗಜಬಜಿಸೆ ತೊಳಲಿಕೆ
ಯಾಳು ನೆರೆದುದು ಕೋರಡಿಯ ಮುಳು
ವೇಲಿಗಾಂತರು ಬೇಹ ಹರಿಸಿದರಖಿಳ ದೆಸೆದೆಸೆಗೆ ।
ಮೇಲುಗುದುರೆಗಳೊದಗಿದವು ಭೂ
ಪಾಲಕರು ತಲೆಗೆದಱ ಹುಯ್ಯಲ
ನಾಲಿಸುತ ಹೊಱವಂಟು ತಳಕೆಳಕಾಯ್ತು ನೃಪ ಕಟಕ ॥ ೪೪

ಕಡಿಯಣವನಾನೆಗಳ ಮೋಱೆಗೆ
ತೊಡಸಿದರು ದಂತಿಗಳ ಹೆಗಲಲಿ
ನಿಡು ನೊಗನ ಕಟ್ಟಿದರು ಕಿವಿಯಲಿ ಕೀಲುಗಳ ಸರಿಸಿ ।
ಜಡಿವ ಗುಳವನು ಹಾಯ್ಕಿ ಬೀಸಿದ
ರೊಡನೊಡನೆ ಹಕ್ಕರಿಕೆ ಜೋಡಿನ
ಲಡಸಿ ಗಾಲಿಯ ಬಿಗಿದು ಗಜಬಜಿಸಿತ್ತು ನೃಪ ಕಟಕ ॥ ೪೫

ಶಿರದೊಳಾಂತರು ಮೊಚ್ಚೆಯವನಾ
ಚರಣದಲಿ ಸೀಸಕವ ತೋಳಲಿ
ಬರಿಯ ಕವಚವ ಬೆನ್ನಿನಲಿ ಕಟ್ಟಿದರು ಕೈಹೊಡೆಯ ।

---

[1] ಕವಿ ಕಳರ ಹೊಯ್ದರು (ಗ).

ಸುರಗಿಗಳನೀಡಾಡಿ ತಿರುಹಿದ
ರೊಚೆಗಳನು ಬತ್ತಳಿಕೆಯನು ಬಿಲು
ದಿರುವಿನಲಿ ಪೋಹಿದರು ತಲ್ಲಣಿಸಿತ್ತು ತಮತಮಗೆ ॥ ೪೬

ಕರಿಗಳನು ರಾವುತರು ಜೋಧರು
ತುರಗವನು ಕಾಲಾಳು ರಥವನು
ವರ ಮಹಾರಥರಿಟ್ಟಿ ಸಬಳ ಕಠಾರಿಯುಬ್ಬಣವ ।
ಧುರದ ಭರ ಮಿಗೆ ಕೊಂಡು ಬೆದಱ
ಳ್ದಿಱಿಯೆ ಬೆಱಗಿನ ಬಳಿಯಲೊದಗಿ
ತ್ತರರೆ ಪಾಂಡವರೆನುತ ಹೊಯ್ದಾಡಿದರು ತಮ್ಮೊಳಗೆ ॥ ೪೭*

ಹರಿದು ಬೇಹಿನ ಚರರು ಪಾಂಡವ
ರರಮನೆಯ ಹೊಕ್ಕಱಿದು ಮರಳಿದು
ಬರುತ ಕಟಕದ ಗಜಬಜವನಲ್ಲಲ್ಲಿ ಮಾಣಿಸುತ ।
ನೆರವಿ ನಗೆಗೆಡೆಯಾಗೆ ಮುಸುಕಿನ
ಮುರುವಿನಲಿ ಪಾಳಯವ ಹೊಕ್ಕರು
ಗರುವ ಮನ್ನೆಯ ಮಂಡಳೀಕರು ಕೇಳ್ದರೀ ಹದನ ॥ ೪೮

ರವಿ ತನುಜ ಗುರು ಸೂನು ಭೂರಿ
ಶ್ರವ ಸುಲೋಚನ ಶಲ್ಯ ಕೃಪ ಸೈಂ
ಧವ ವಿವಿಂಶತಿ ಚಿತ್ರಸೇನರು ಕರ್ಣ ನಂದನರು ।
ತವತವಗೆ ಬೆದಱಿದರು ರಿಪು ಕೌ
ರವನ ಹೊರೆಗೈತಂದರಂದಿನ
ರವದ ರೌದ್ರದ ರಾಜ ಕಾರ್ಯವ ತಿಳಿವ ತವಕದಲಿ ॥ ೪೯

---

* ನಲವತ್ತೇಳನೆಯ ಪದ್ಯವಾದಮೇಲೆ (ಗ. ಚ. ತ. ನ. ಪ). ಪ್ರತಿಗಳಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ :—

ಪವನಸುತನಲ್ಲೀತನೀ ವಾ
ಸವನ ಸುತನೋ ಧರ್ಮಸುತನಂ
ತಿವನು ಸಾತ್ಯಕಿಯೀತ ನಕುಲ ವಿರಾಟನೃಪನೀತ ।
ಇವನು ಸಹದೇವಾಂಕನೀ ತೋ
ರ್ಪವನು ಪಾಂಚಾಲರು ಘಟೋತ್ಕಚ
ನಿವನೆನುತ್ತಱೆಯಟ್ಟಿ ಹೊಯ್ದಾಡಿದರು ತಮ್ಮೊಳಗೆ ॥

ಇರುಳು ಬೇಹಿನ ಚರರು ಪಾರ್ಥನ
ನಿರುಪಮಿತ ಗಾಢ ಪ್ರತಿಜ್ಞಾ
ಚರಿತವನು ಕೌರವನ ಸಭೆಯಲಿ ತಂದು ಹರಹಿದರು ।
ಮರಣ ಸೈಂಧವಗಲ್ಲದಿದ್ದರೆ
ಮರಣ ಪಾರ್ಥಂಗಲ್ಲದೆಡೆಯಲಿ
ಪರಿಹರಿಸುವುದ ಕಾಣೆವೆಂದರು [1]ಚರರು ಭೂಪತಿಗೆ[1] ॥ ೫೦*

ಲೇಸು ಲೇಸಭಿಮನ್ಯುವೀ ದು
ಶ್ಶಾಸನನ ಮಗನಿಂದ ರಣದಲಿ
ಘಾಸಿಯಾದನು ನಾವು ಮಾಡಿದುದೇನು ಪಾರ್ಥಂಗೆ ।
ಈಸನೇಱಿಸಿ ನುಡಿದ ಪಾರ್ಥನ
ಭಾಷೆ ಹೊಳ್ಳಾಗದು ಸುಯೋಧನ
ದೇಶವನು ಬಿಟ್ಟುಕೊಂಡೆನೆಂದನು ಸೈಂಧವನು ಸಭೆಗೆ ॥ ೫೧

ಆಳಲಿ ಮನೆಯಲಿ ಕಾಳುಗೆಡೆದಡೆ
ಫಲವಹುದೆ ನಿಜ ಸತಿಯು ಹಿಡಿದಾ
ನೆಳಸುವಂದಿನ ಭೀಮ ಮಾಡಿದ ಭಾಷೆಯೇನಾಯ್ತು ।
ಅಳುಕದಿರು ಪರಿವಾರವಿದೆ ಕೊಳು
ಗುಳಕೆ ವಜ್ರದ ಜೋಡು ದ್ರೋಣನು
ಬಲವಿಹೀನನೆ [2]ತಾನೆನುತ ಕುರು ರಾಯ ಗರ್ಜಿಸಿದ[2] ॥ ೫೨

---

[1] ನಾಳಿನದುಭುತವ (ತ.ದ.ನ). [2] ನಾನಿರಲು ಭಯಬೇಡ ನಿನಗೆಂದ (ಟ.ತ.ದ).

* ೫೦ ಮತ್ತು ೫೧ನೆಯ ಪದ್ಯಗಳಾದಮೇಲೆ (ಗ) ಪ್ರತಿಯಲ್ಲಿ ಕೆಳಗಿನ ಪದ್ಯಗಳು ಕ್ರಮವಾಗಿ ಹೆಚ್ಚಾಗಿವೆ.

ನವನ ಭಾಷೆಯ ಹದನ ಭೂಪನ
ವರ ಸಭೆಯೊಳಾ ಚರರು ಬಂದುರೆ
ವಿರಚಿಸಿದಡಾ ಹದನ ದುಶ್ಶಳೆ ಕೇಳಿ ಕಳವಳಿಸಿ ।
ಇರದೆ ಹರಿತಂದಳು ಜಯದ್ರಥ
ನರಸಿ ನೃಪತಿಯ ಹೊರಗೆ ನೀ ಪರಿ
ಹರಿಸಬೇಹುದು ಪತಿಯನೆಂದೆಱಗಿದಳು ಚರಣದಲಿ ॥

ಮೇಲಣನುವನು ಬಲ್ಲೆ ನೀ ತ
ನ್ನೋಲೆಭಾಗ್ಯವ ಕಾಯಬೇಹುದು
ಭೂಮಿಪತಿಯೆಂದೆನಲು ಬಾಲಕಿ ವೀರ ಭಟರುಗಳ ।
ಬಾಲಕಿಯು ಸಲಹುವುದೆನಲು ಭೂ
ಪಾಲ ನಸುನಗುತಹುದು ನಾವಾ
ಕೋಲ ಗುರುವನು ಕೇಳಬಹುದೆನುತ ನಿಂದಿರ್ದ ॥

ಆವನೋಲೆಯಕಾಱತನ ಗಾಂ
ಡೀವಿಯಿದಿರಲಿ ಫಲಿಸುವುದು ಮೇ
ಣಾವನದ್ಭುತ ಮಂತ್ರಶಕ್ತಿಗೆ ಮಣಿವನಸುರಾರಿ ।
ಕಾವರಿಲ್ಲರ್ಜುನನ ಕೈಯಲಿ
ಸಾವವರು ನಾವಲ್ಲೆನಲು ನರ
ದೇವ ಕುರುಪತಿ ಮತ್ತೆ ನುಡಿದನು ನಗುತ ಸೈಂಧವಗೆ ॥ ೫೩

ಗರುಡನೂರವರೆಱೆವರೇ ನಾ
ಗರಿಗೆ ತನಿಯನು ನಮ್ಮ ಬಲದಲಿ
ಗುರುವಲಾ ಪಾಲಕನು ಕೈಕೊಂಬನೆ ಧನಂಜಯನ ।
ನರನ ನುಡಿಯನು ಹೊಳ್ಳುಗಳೆವರೆ
ಚರಣದಲಿ ಬೀಳುವೆವು ನಡೆಯೆಂ
ದಿರುಳು ದ್ರೋಣನ ಮನೆಗೆ ಬಂದನು ಕೌರವರ ರಾಯ ॥ ೫೪

ನೆಗಹಿದವು ಕೈದೀವಿಗೆಯ ಸಾ
ಲುಗಳು ಹೊಂದಂಡಿಗೆಯ ದೂವಾ
ರಿಗಳು ವೆಂಠಣಿಸಿದರು ಸೀಗುರಿ ಮೊಗವ ಮೋಹಿದವು ।
ಉಗಿದ ಕಡಿತಲೆ ಮುಸುಕಿದವು ಚೌ
ರಿಗಳ ಡೊಂಕಣಿ ತುಱುಗಿದವು ಮೌ
ಳಿಗಳ ಮಸ್ತಕದವರು ನೆಲನುಗ್ಗಡಿಸಲೈತಂದ ॥ ೫೫

ಗರುಡಿಯೊಡೆಯನ ಪಾಳಯಕೆ ಕಡು
ಭರದಲೈತರೆ ಕೌರವೇಂದ್ರನ
ಬರವಿದೇನೆಂದಿದಿರು ಬಂದನು ದ್ರೋಣನಿದಿರಾಗಿ ।
ಧರಣಿಪನ ಸತ್ಕರಿಸಿ ನೆಲೆಯು
ಪ್ಪರಿಗೆಗೊಯ್ದನು ನುಸುಳು ಗಂಡಿಯೊ
ಳುರವಣಿಸಿದರು ಕರ್ಣ ಕೃಪ ಮೊದಲಾದ ಬೇಹವರು ॥ ೫೬

ವೀಳೆಯುವ ಕರ್ಪುರವನಿತ್ತು ನೃ
ಪಾಲರನು ಕರ್ಣಾದಿ ಸುಭಟರ
ಸಾಲ ಮನ್ನಿಸಿ ದ್ರೋಣ ಬೆಸಗೊಂಡನು ಸುಯೋಧನನ ।

ಕಾಳಿಕೆಯ ಕೈಕೊಂಡು ಸಿರಿವೊಗ
ಹೇಳುತಿದೆ ಭೀತಿಯನು ನಿ[1][ನ್ನಿನ][1]
ಕಾಳೆಗದ ಜಯ ನಮ್ಮದೀ ದುಮ್ಮಾನವೇನೆಂದ ॥ ೫೭

ಏನ ಹೇಳುವೆನರ್ಜುನನು ನಿಜ
ಸೂನು ಮಡಿಯೆ ದುರಾಭಿಮಾನದ
ಲೇನನೆಂದನು ಕೇಳಿರೈ ಕರ್ಣಾದಿ ಮಂತ್ರಿಗಳು ।
ತಾನು ಗಡ ಸೈಂಧವನ ತಲೆಯನು
ಭಾನುವಡಗದ ಮುನ್ನ ಕೊಂಬೆನು
ಹೀನನಾದರೆ ಹೊಗುವೆನೆಂದನು ಹವ್ಯವಾಹನನ ॥ ೫೮

ಕೊಂದವನು ದುಶ್ಶಾಸನನ ಮಗ
ಬಂದುದಪರಾಧವು ಜಯದ್ರಥ
ಗಿಂದಿವನ ಪತಿಕರಿಸಬೇಹುದು ರಣವೊಳರ್ಜುನನ ।
ಮುಂದುಗೆಡಿಸಲೆ ಬೇಕು ಭೀಷ್ಮರು
ಸಂದ ಬಳಿಕೆಮಗಾಪ್ತ ನೀನೇ
ತಂದೆ ನೀನೆಂದರಸನೆಱಗಿದ[2]ನವರ ಚರಣದಲಿ[2] ॥ ೫೯

ಮಕುಟವನು ನೆಗಹಿದನು ಭೂಪಾ
ಲಕ [3]ನಿದಾನಿಸಿ[3] ಕೇಳು ಶಶಿಕುಲ
ಮುಕುರವಿತ್ತಂಡದಲಿ ನೆನೆಯೆವು ಭೇದ ಬುದ್ಧಿಗಳ ।
ಯುಕುತಿಯಿನ್ನಿದಕಿಲ್ಲ ಪಾರ್ಥನ
ಶಕುತಿ ಘನವೀರಾಜಕಾರ್ಯಕೆ
ಚಕಿತರಾದೆವು ರಾಯ ಚಿತ್ತೈಸೆಂದನಾ ದ್ರೋಣ ॥ ೬೦

ಕಾವಡೆನ್ನಳವಲ್ಲ ಮೇಣ್ ಗಾಂ
ಡಿವಿಯ [4]ಕೊಲ[4]ಲಳವಲ್ಲ ಕೃಷ್ಣನು
ಕಾವರೆಯು ಕೊಲುವರೆ ಸಮರ್ಥನು ವೇದ ಸಿದ್ಧವಿದು ।
ಜೀವಜಾತಕ್ಕೊಡೆಯನಾ ರಾ
ಜೀವನಾಭನು ಬಱಿಯಹಂಕಾ
ರಾವಲಂಬನದಿಂದ ಕೆಡುತಿಹುದಖಿಳ ಜಗವೆಂದ ॥ ೬೧

---

[1] ನ್ನೀ (ಸ). [2] ಗುರುವಿನಂಘ್ರಿಯಲಿ (ಗ). [3] ವಿಚಾರಿಸಿ (ಕ), ಶಿರೋಮಣಿ (ಗ.ಚ.ಪ). [4] ಕೋ (ಸ.ಪ).

ಇದು ಮುರಾರಿಯ ಲೀಲೆಗೋಸುಗ
ಉದಯಿಸಿದ ಜಗವಿದಱೊಳೊಬ್ಬನ
ಸದೆವನೊಬ್ಬನ ಹಿಡಿದು ಸಲಹುವನೊಬ್ಬನೊಬ್ಬನಲಿ ।
ಇದಱೊಳಾತಂಗಿಲ್ಲ ಕರುಣಾ
ಸ್ಪದತೆ ನಿಷ್ಕಾರುಣ್ಯ ಭೂಯಂ
ತ್ರದ ವಿನೋದದ ಕ್ರೀಡೆ ಕೃಷ್ಣನದೆಂದನಾ ದ್ರೋಣ ॥ ೬೨

ನರನ ನುಡಿಯೆಂದಿರದಿರವು ಮುರ
ಹರನ ನುಡಿಗಳು ಕೇಳು ಗಿರಿ ಗ
ಹ್ವರದ ನುಡಿಯೋ ಜಂಗಮ ಧ್ವನಿಯೋ ವಿಚಾರಿಸಲು ।
ನರನ ನುಡಿ ಹೊಳ್ಳಾಗದಾ ಮುರ
ಹರನ ಬಲುಹುಳ್ಳನ್ನಬರವೆನ
ಲರಸನಾಲಿಸಿ ಕೇಳುತಿರ್ದನು ಕೈಯ ಗಲ್ಲದಲಿ ॥ ೬೩

ಕೇಳುತಿರ್ದ್ದ ಕರ್ಣ ಬೊಮ್ಮವ
ಕೇಳ ಬಂದೆವೆ ನಾವು ನಾಳಿನ
ಕಾಳೆಗದ ಜಯಮುಖವ ಬೆಸಗೊಳ ಬಂದೆವಿಂದೀಗ ।
ಹೇಳುತಿದ್ದರಸಂಗತವನಿದು
ಹೋಲುವುದಲೇ ಮುನಿ ಕುಮಾರರು
ಕಾಳೆಗವನೇಗುವರು ಬಳಿಕೇನೆಂದನಾ ಭೂಪ ॥ ೬೪

ಕಟಕಿಯೇಕಿದು ವಿಪ್ರರಹೆವು
ತ್ಕಟದ ಶೌರಿಯವಿಲ್ಲ ನಾವ್ ದಿಟ
ಪುಟವ ನುಡಿದರೆ ಖಾತಿಯಾದುದೆ ನಿಮ್ಮ ಚಿತ್ತದಲಿ ।
ನಿಟಿಲ ಲೋಚನ ನೋಡುವರೆ ದು
ರ್ಘಟವೆನಿಪ ಮೋಹರದ ಬಲು ಸಂ
ಘಟನೆಯನು ತೋಱುವೆನು ಚಿಂತಿಸಬೇಡ ನೀನೆಂದ ॥ ೬೫

ವ್ಯೂಹವನು ರಚಿಸುವೆನು ನಾಳಿನೊ
ಳಾಹವಕೆ ತಳತಂತ್ರವೊಂದೇ
ಮೋಹರಕೆ ನಡೆತರಲಿ ಷಡುರಥರಾದಿ ಯಾದವರು ।

ಸಾಹಸವನುದಯದಲಿ ತೋಱುವೆ
ಬಾಹು ಬಲವನು ಸೈಂಧವನ ಮೈ
ಗಾಹ ಬಲಿವೆನು [1]ಕಾಂಬೆ ಕೃಷ್ಣನ ನೆನಹ ಬಳಿಕೆಂದ[1] ॥ ೬೬

[2]ಸಾಕು ನೀ ಚಿಂತಿಸಲು ಬೇಡ[2] ಪಿ
ನಾಕಿಧರನಡಹಾಯ್ದಡೆಯು ನಾ
ವಾಕೆವಾಳರು ರಣಕೆ ಕೃಷ್ಣಾರ್ಜುನರ ಪಾಡೇನು ।
ನೂಕಿ ನೋಡಾ ಸೈಂಧವನನೇ
ಕೈಕವೀರರು ಕಾವೆವೆಂದು
ದ್ರೇಕ ಮಿಗೆ ಗರ್ಜಿಸಿತು ಕರ್ಣಾದಿಗಳು ತಮತಮಗೆ ॥ ೬೭

ಬೀಳುಕೊಂಡುದು ರಾಜ ಸಭೆ ತ
ಮ್ಮಾಲಯಕೆ ಸೈಂಧವನು ಚಿಂತಾ
ಲೋಲನಿರ್ದನು ಮರಣ ಜೀವನ ಜಾತ ಸಂಶಯನು ।
ಕೋಲ ಗುರುವಿನ ವಿವಿಧ ರಚನೆಯ
ಕೇಳಿದನು ನಸು ನಗುತ ಪಾರ್ಥಗೆ
ಹೇಳಿದನು ಕರುಣದಲಿ ಗದುಗಿನ ವೀರ ನಾರಯಣ ॥ ೬೮

ಎಂಟನೆಯ ಸಂಧಿ ಮುಗಿದುದು.

---

[1] ಬಳಿಕ ಕೃಷ್ಣನ ನೆನಹು ಘಟಿಸುವದೇ (ಕ).   [2] ಸಾಕು ನಿರ್ಬಂಧಿಸಲು ಬೇಡ (ಕ.ದ.ನ).

# ಒಂಬತ್ತನೆಯ ಸಂಧಿ

ಸೂಚನೆ॥ ಜಯಸಮರ ಸೌರಂಭನಾಹವ
ಭಯ ಬಹಿರ್ಮುಖನಸ್ತ್ರವಿದ್ಯಾ
ನಿಯತಮತಿ ಮೋಹರಿಸಿ ಸಮರಕೆ ದ್ರೋಣನನುವಾದ ॥

ಕೇಳು ಜನಮೇಜಯ ಧರಿತ್ರೀ
ಪಾಲ ಫಲುಗುಣ ಹೊಕ್ಕನಾಯುಧ
ಶಾಲೆಯನು ತೆಗೆಸಿದನು ಧನು ಮೊದಲಾದ ಕೈದುಗಳ ।
ಸಾಲಹಿಡಿದು ನಿಲಿಸಿದನು ನಿಶಿತ ಶ
ರಾಳಿ ಚಾಪ ಕೃಪಾಣ ಪರಶು ತ್ರಿ
ಶೂಲ ಮುದ್ಗರ ಚಕ್ರ ಸೆಲ್ಲಹ [1]ಶಕುತಿ[1] ತೋಮರವ ॥ ೧

ಸವೆಗ ಮೊಚ್ಚೆಯ ಜೋಡು ಸೀಸಕ
ಕವಚ ಬಾ[2]ಹುರಿಕೆಗಳ ನಿಲಿಸಿದ
ನ[2]ವಿರಳಾಕ್ಷತೆ ಗಂಧ ಪುಷ್ಪ ಸುಧೂಪ ದೀಪದಲಿ ।
ವಿವಿಧ ಸತ್ಕಾರದಲಿ ದುರ್ಗಾ
ಸ್ತವವ ಜಪಿಸಿದ ವರ ಘೃತೋದನ
ನವ ರುಧಿರ ಮಾಂಸೋಪಹಾರಂಗಳಲಿ ಪೂಜಿಸಿದ ॥ ೨

ಒಡನೆ ಗಜಬುವ ವಾದ್ಯದಲಿ ಕೆಂ
ಪಡರಿದೋಗರ ಸಹಿತ ಭೂತಕೆ
ಬಡಿಸಿದರು [3]ಮಾಂತ್ರಿಕರು[3] ಬಲಿಗೆದಱಿದರು ದೆಸೆದೆಸೆಗೆ ।
ತೊಡವು ವಸನಾದಿಗಳಲೊಪ್ಪಂ
ಬಡುವ ಬಲಿಯನು ಹರಿಯೊಳರ್ಪಿಸಿ
ನಡುವಿರುಳು ಕಲಿ ಪಾರ್ಥನರ್ಚಿಸಿದನು ನಿಜಾಯುಧವ ॥ ೩

ಇರುಳಿನದ್ಭುತ ರವವನಾಲಿಸಿ
ಮುರಮಥನನೀ ಫಲುಗುಣನ ಸಂ
ಗರ ಜಯೋದ್ಧತ ಮಂತ್ರವೆಂದನು ದಾರುಕನ ಕರೆದು ।

---

[1] ವಿಟ್ಟಿ (ಕ). [2] ಹುರರಕ್ಷೆಗಳನಂತ (ಕ.ಪ). [3] ಮಂತ್ರಿಗಳು (ಕ.ಗ.ಚ.ನ).

ಹರ ಮಹಾ[1]ಸೇನಾ[1]ದಿಗಳು ಗೆಲ
ಲರಿದು ನಾಳಿನ ಬವರವಿನ್ನೀ
ನರನ ಜಯವೆಂತೆನುತ ಚಿಂತಿಸುತಲ್ಲಿಗೈತಂದ ॥ ೪

ರಚನೆ ಚೆಲುವಿದು ನಾಳಿನಾಹವ
ಖಚರ ಕಿಂಪುರುಷರಿಗೆ ಅಸದಳ
ವಚಲಬಲ[2]ಗಾಂಡಿವಿಗೆ[2] ಹರಿಯದು ಸುಪ್ತಿಯೊಳಗವನ ।
ಉಚಿತದಲಿ ಕೊಂಡೊಯ್ದು ರುದ್ರನ
ವಚನದನುವನು ತಿಳಿವೆನೆಂದಾ
ಶಚಿಯ ಗಂಡನ ಮಗನನೀಶನ ಪದವ ಕಾಣಿಸಿದ ॥ ೫

ಶಿವನ ಕರುಣಾ ಲಾಭ ಪುಣ್ಯ
ಪ್ರವರ ಪಾರ್ಥನ ಮುನ್ನಿನಂದದ
ಲವನಿಗಿಳುಹಿದ ನಿಖಿಳ ದಿವ್ಯಾಯುಧದ ವೇದಿಕೆಗೆ ।
ಸವೆದುದಿರುಳಿಂದೂಪಲಂಗಳ
ನಿವಹ ಬಲಿದುದು ಚಕ್ರವಾಕದ
ತವಕ ತಗ್ಗಿತು ತರಣಿಯಡರಿದನುದಯ ಪರ್ವತವ ॥ ೬

ವಿಮಳ ಧರ್ಭಾಂಕುರದ ಶಯನದೊ
ಳಮರಪತಿ ಸುತ ಪವಡಿಸಿದನನು
ಪಮ ವಿಳಾಸನು ಕನಸ ಕಂಡೆನೆನುತ್ತ ಕಂದೆಱೆದ ।
ಸಮರ ವಿಜಯಕೆ ಶಿವನ ಕೃಪೆ ಸಂ
ಕ್ರಮಿಸಿತೆನಗೆನುತಿರಲು ಮುಂದಣ
ಕಮಲನಾಭನ ಕಂಡು ಬಿನ್ನಹ ಮಾಡಿದನು ನಗುತ ॥ ೭

ದೇವ ನಿಮ್ಮಡಿ ಸಹಿತ ಕಂಡೆನು
ದೇವದೇವನ ಚರಣವನು ಸಂ
ಭಾವಿಸಿದ ನಮ್ಮಿಬ್ಬರನು ದಕ್ಷಾಧ್ವರಧ್ವಂಸಿ ।
ನಾವು ಬಂದುದನಱಿದು ವರ ರಾ
ಜೀವ ಸರಸಿಗೆ ಕಳುಹಿದನು ಗಾಂ
ಡೀವ ನಿಜ ಚಾಪವನು ಕಂಡೆನು ಕೊಳನ ಮಧ್ಯದಲಿ ॥ ೮

---

[1] ಬ್ರಹ್ಮಾ (ಗ), ದೇವಾ (ಕ.ದ.ಪ). [2] ಪಾರ್ಥಂಗೆ (ಟ.ತ).

ಬಳಿಕ [1]ತಿರುವಿಟ್ಟಾಗಲ[1]ಸ್ತ್ರವ
ಸೆಳೆದು ಬಿಲುವಿದ್ಯಾ ಚಮತ್ಕೃತಿ
ಯಳವ ತೋಱಿದಡಾಗಳೀಶನ ಹೊರೆಗೆ ನಾನೈದಿ ।
ನಿಲೆ ತದೀಯಾಸ್ತ್ರಪ್ರಯೋಗದ
ಬಲುಹನೀಕ್ಷಿಸೆ ತೆಗೆವ ಬೆಡಗನು
ಕಲಿಸೆ ಪಾಶುಪತಾಸ್ತ್ರವೆನಗಾಯ್ತಲ್ಲಿ ವಶವರ್ತಿ ॥ ೯

ಕನಸನೀ ಹದನಾಗಿ ಕಂಡೆನು
ದನುಜಹರ ಬೆಸಸಿದಱ ಫಲವನು
ನನಗೆನಲು ನಸುನಗುತ ನುಡಿದನು ದಾನವಧ್ವಂಸಿ ।
ನಿನಗೆ ಶೂಲಿಯ ಕರುಣವಾಯ್ತಿಂ
ದಿನಲಿ ಪಾಶುಪತಾಸ್ತ್ರ ನಿನ್ನದು
ದಿನದೊಳರಿ ಸೈಂಧವ ವಧ ವ್ಯಾಪಾರವಹುದೆಂದ ॥ ೧೦

ಉಲಿವ ಮಂಗಳ ಪಾಠಕರ ಕಳ
ಕಳದೊಳುಪ್ಪವಡಿಸಿದನವನಿಪ
ತಿಲಕ ಮಾಡಿದನಮಲ ಸಂಧ್ಯಾವಂದನಾದಿಗಳ ।
ನಳಿನನಾಭನ ಪಾದ ಪದ್ಮವ
ನೊಲವಿನಿಂದಭಿನಮಿಸಿ ಸುಭಟಾ
ವಳಿಗೆ ನೇಮವ ಕೊಟ್ಟನಂತಕ ಸೂನು ಸಂಗರಕೆ ॥ ೧೧

ನಡೆದುದುರು ಸನ್ನಾಹದಲಿ ಸೂ
ಳಡಸಿ ಮೊಱೆವ ಗಭೀರ ಭೇರಿಯ
ಕಡು ರವದ [2]ರಿಪು ಭಟರ ಬೈಗುಳ ಗೌಱುಗಹಳೆಗಳ[2] ।
ಎಡಬಲಕೆ ತನಿಹೊಳೆವ ತೇಜಿಯ
ಕಡು ಮದದ ಕರಿ ಘಟೆಯ ತೇರಿನ
[3]ನಿಡುವರಿಯ[3]ಕಾಲಾಳ ಕಳಕಳವಾಯ್ತು ರಣದೊಳಗೆ ॥ ೧೨

ಎದ್ದುದೀ ಕಟಕದಲಿ ಬಲ ಮಿಂ
ಡೆದ್ದ ಸುಭಟರು ಸಮರ ಭೂಮಿಯ
ಹೊದ್ದಿದರು ಝಳಪಿಸುವಡಾಯ್ದದ ಹೊಗರ ಹೊಳಹುಗಳ ।

---

[1] ವರ ಪಟ್ಟಣದೊಳ (ಕ), ವರ ವಟುಕರಡಲ (ಟ.ತ.ದ.ನ). [2] ತಂಬಟದ ನಿಸ್ಸಾಳಗಳ ಕಹಳೆಗಳ (ಗ.ಚ.ಪ). [3] ಕಡುಹುಗಳ (ಕ).

ಅದ್ದುದತಳ[1]ಕೆ ಅ[1]ವನಿಯೆನೆ ಹೊದ
ಱೆದ್ದು ನಡೆದುದು ದಂತಿ ಘಟೆ ಬರು
ತಿದ್ದುದಗಣಿತ ರಥ ಪದಾತಿಗಳಾಹವಾಂಗಣಕೆ ॥ ೧೩

ವಿನುತ ಸಂಧ್ಯಾವಂದನಾದಿಯ
ನನುಕರಿಸಿ ಹರಿಪದ ಪಯೋಜವ
ನೆನೆದು ವಿರಚಿತ ದೇವ ವಿಪ್ರಾನಳ ಸಮಾರ್ಚನನು ।
ಕನಕ ಕವಚವ ತೊಟ್ಟು ಗಡ್ಡದ
ಘನತೆಯನು ಗಂಟಿಕ್ಕಿ ವರ ಕಾಂ
ಚನ ಮಯದ ಯಜ್ಞೋಪವೀತವನಿಳುಹಿದನು ದ್ರೋಣ ॥ ೧೪

ನಿಱಿಯುಡಿಗೆಯಲಿ ಮಲ್ಲ ಗಂಟಿನ
ಸೆಱಗ ಮೋಹಿಸಿ [2]ಬೆರಳ[2] ದರ್ಭೆಯ
ಹಱಿದು ಬಿಸುಟನು ಜೋಡು ಸೀಸಕ ಬಾಹುರಕ್ಷೆಗಳ ।
ಮುರುಹಿ ಬಿಗಿದನು ನಿಖಿಳ ಭೂಸುರ
ರುಱುವ ಮಂತ್ರಾಕ್ಷತೆಯ ಕೊಳುತ
ಳ್ಳಿಱಿವ ಜಯರವದೊಡನೆ ರಥವೇಱಿದನು ಕಲಿ ದ್ರೋಣ ॥ ೧೫

ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ ಕೋಟಿಗಳುರವಣಿಸಿ ಹೆ
ಗ್ಗಾಳೆಗಳು ಸಾಱಿದವು ಸುಭಟರ ವೀರ ವಿತರಣವ ।
ಸಾಲು ಝಲ್ಲರಿಗಳ ಪತಾಕಾ
ಜಾಲ [3]ಸಬಳದ ಹೊದಱ[3] ಗೋವಳಿ
ಗೋಲ ತೂಗಾಟದಲಿ ಸಮರಕೆ ದ್ರೋಣ ನಡೆತಂದ ॥ ೧೬

ನೆಗಹಿ ಬೀಸುವ ಚೌರಿಗಳ ಸ
ನ್ನೆಗೆ ಚತುರ್ಬಲವೆಲ್ಲ ದ್ರೋಣನ
ದೃಗುಪಥಕೆ ತೋಱಿದರು ತಂತಮ್ಮಾಳು ಕುದುರೆಗಳ ।
ತೆಗೆದು ಯೋಜನವಾಱಱಲಿ ಕಾ
ಳೆಗಕೆ ಶಕಟವ್ಯೂಹವನು ಹೊ
ಣಿಗರ ಬಲಿದನು ಕೌರವೇಂದ್ರಾನುಜರ ಗಡಣದಲಿ ॥ ೧೭

---

[1] ದೊಳ (ತ.ದ.ನ.ಪ). [2] ಬಿಗಿದ (ಕ). [3] ದೊಂಕಣಿಬಲದ (ಗ), ದಲಿಹೊದಱಿದ್ದ (ಚ.ಪ).

ಇದಿರೆ ಶಕಟ ವ್ಯೂಹವದರ
ಗ್ರದಲಿ ದುಶ್ಶಾಸನನು ಕೆಲಬಲ
ದೊದವಿನಲಿ ಬಾಹ್ಲಿಕನು ಸೌಬಲ ಸಿಂಧು ಮಾಗಧರು ।
ಇದಱ ಹಿಂದಣ ಮೈಯೊಳೈಗಾ
ವುದದ [1]ನೀಳ[1]ದೊಳೆರಡುವರೆ ಗಾ
ವುದದ ವಿಸ್ತಾರದಲಿ ಮಕರವ್ಯೂಹವನು ಬಲಿದ ॥ ೧೮

ಹಿಂದೆ ಯೋಜನ[2]ವೈದ[2]ಱಳವಿಯೊ
ಳಂದು ಚಕ್ರವ್ಯೂಹವನು ನಲ
ವಿಂದ ಬಲಿದನು ನಿಲಿಸಿದನು ಕಾಂಭೋಜ ಭೂಪತಿಯ ।
ವಿಂದನನುವಿಂದನನು ದಕ್ಷಿಣ
ವೃಂದ ಸಮಸಪ್ತಕರ ಬಲವನು
ಸಂದಣಿಸಿದರು ಹತ್ತು ಸಾವಿರ ನೃಪರ ಗಡಣದಲಿ ॥ ೧೯

ತುರಗವಱುವತ್ತಾಱು ಕೋಟಿಯ
ನುರು ಮದೇಭವನೆಂಟು ಲಕ್ಷವ
ವರ ರಥವನಱುವತ್ತು ಸಾವಿರವನು [3]ಸಗಾಢದಲಿ[3] ।
ಧುರದ ಕಾಲಾಳಗಣಿತವ ಮೋ
ಹರಿಸಿ ಹಂಸವ್ಯೂಹವನು ಸಡ
ಗರಿಸಿದನು ನಿಯುತಾಯು ಮೊದಲಾದವರ ಕಾಹಿನಲಿ ॥ ೨೦

ಕೆಲಬಲದ ಸಬಳಿಗರು ಸಬಳದ
ವಳಯದಲಿ ಹರಿಗೆಗಳು ಹರಿಗೆಗ
ಳೊಳಗೆ ಬಿಲ್ಲಾಳುಗಳ ಮಱೆಯಲಿ ವಾಜಿ ಗಜ ರಥವ ।
ನಿಲಿಸಿ ಗರ್ಭವ್ಯೂಹವನು ಮಂ
ಡಳಿಸಿದನು ಸಂವೀರರನು ಸಿಂ
ಹಳರ ನಿಲಿಸಿದ ಹತ್ತು ಸಾವಿರ ಮಂಡಳೇಶ್ವರರ ॥ ೨೧

ಅಪರ ಭಾಗದಲಳವಿಯಲಿ ಭೂ
ಮಿಪರ ಭೂರಿಶ್ರವನ ಶಲ್ಯನ
ಕೃಪನ ವೃಷಸೇನನ ಸುಲೋಚನ ದೀರ್ಘಬಾಹುಕರ ।

---

[1] ನಿಳಯ (ಕ.ಚ.ಪ). [2] ವಾಱ (ಕ). [3] ಸಗಾಢಿಕೆಯ (ಕ), ರಣಾಗ್ರದಲಿ (ಟ.ತ.ದ.ನ).

ನೃಪತಿಗಳನೆಂಬತ್ತು ಸಾವಿರ
ಚಪಳ ಗಜ ಹದಿನೆಂಟು ಕೋಟಿಯ
ನಪರಿಮಿತ ತೇಜಿಯಲಿ ಪದ್ಮವ್ಯೂಹವನು ಬಲಿದ ‖ ೨೨

ಆ ಮಹಾಮೋಹರದ ಬಳಿಯಲಿ
ಸೋಮದತ್ತನ ದಂಡಧರನನು
ತಾಮರಸ ಬಂಧುವಿನ ಮಗನನು ಕ್ಷೇಮಧೂರ್ತಕನ ।
ಆ ಮಹಾಬಾಹುಕನನಶ್ವ
ತ್ಥಾಮನನು ಕೃತವರ್ಮಕರೆನಿಪ ಸ
ನಾಮರನು ನಿಲಿಸಿದನು ಸೂಚಿವ್ಯೂಹ [1]ವಳಯದಲಿ[1] ‖ ೨೩

ಪದುಮ ಸೂಚಿವ್ಯೂಹ ಮಧ್ಯದೊ
ಳದಟರನು ನಿಲಿಸಿದನು ಸಮರಾ
ಗ್ರದಲಿ ಅವನಳಲಿಗರನಾಪ್ತರನವನ ಬಾಂಧವರ ।
ಕದನಗಲಿ ಸೈಂಧವನನಾ ಮ
ಧ್ಯದಲಿ ನಿಲಿಸಿದನಮಮ ಸಮರಕೆ
ಮದನ [2]ಮಥನನು[2] ಮೊಗಸಲಸದಳವೆನಿಸಿ ರಂಜಿಸಿತು ‖ ೨೪

ತಿವಿವ ಸಿಡಿಲೊಬ್ಬುಳಿಯೊ ಪ್ರಳಯದ
ಜವನ ನೆರವಿಯೊ ಕಾಳಕೂಟಾ
ರ್ಣವದ ಸೀಮಾಲಂಘನವೊ ಮೃತ್ಯುವಿನ ಪಾಳಯವೊ ।
ಅವನಿ ಕುಸಿದುದು ನೆರೆದ ಸೇನೆಯ
ಹವಣಿಗೀಶ್ವರ ಬಲ್ಲನೆನೆ ಸೈಂ
ಧವನ ಕಾಹಿನ ಮೋಹರಂಗಳು ಕಿಡಿಯುನುಗುಳಿದವು ‖ ೨೫

ಜಡಿವ ಮದದಾನೆಗಳ ಗಗನವ
ನಡರ್ವ ಕಡುಗುದುರೆಗಳ ಸೂಠಿಯೊ
ಳೆಡಬಲಕೆ ಬಿಜುವರಿವ ತೇರಿನ ಸೂತರೋಜೆಗಳ ।
ಖಡುಗ ಕೊಂತವ ನಭಕೆ ಹಾಯಿಕಿ
ಹಿಡಿವ ಸುಭಟರ ಭುಜದ ಹೊಯ್ಲಿನ
ಕಡುಮನದ ರಣದವಕಿಗರ ಸೌರಂಭ ರಂಜಿಸಿತು ‖ ೨೬

---

[1] ರಚನೆಯಲಿ (ಕ). [2] ಮದಹರ (ಗ.ಚ.ಪ).

ಮೊಳಗಿದವು ನಿಸ್ಸಾಳ ಕೋಳಾ
ಹಳಿಸಿದವು ಕಹಳೆಗಳು ಪರ್ವತ
ಹಿಳಿಯೆ ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ।
ಉಲಿ[1][ಯ][1] ತೇಜಿಯ ಹೇಷಿತದ ವೆ
ಗ್ಗಳೆಯ ಕರಿಗಳ ಬೃಂಹಿತದ ಗೊಂ
ದಳದ [2][ಕ]ಳಗರ್ಜಾಯ್ತು[2] ಕೌರವ ಸೈನ್ಯ ಶರಧಿಯಲಿ॥ ೨೭

ಮುಂದೆ ಶಕಟವ್ಯೂಹದಲಿ ನಡೆ
ತಂದು ನಿಂದನು ದ್ರೋಣ [3]ನಿಜ[3]ಬಲ
ದಂದವನು ನೆಱೆ ನೋಡಿ ನೋಡಿ ಕಿರೀಟವನು ತೂಗಿ।
ಇಂದು ಗೆಲಿದರೆ ಧರ್ಮಸುತನವ
ರಿಂದುಕುಲದಗ್ಗಳರು ಬರಹೇ
ಳೆಂದು ಭಟ್ಟರನಟ್ಟಿದನು ಪಾಂಡವರ ಪಾಳಯಕೆ॥ ೨೮*

ಕೇಳು ಧೃತರಾಷ್ಟ್ರಾವನಿಪ ಸಿರಿ
ಲೋಲ ಸಹಿತ ಯುಧಿಷ್ಠಿರಾದಿಗ
ಳಾಳ ಮೇಳಾಪದಲಿ ಹೊಕ್ಕರು ಕಾಳೆಗದ ಕಳನ।
ಸಾಲಱಿದು ನಿಜಸೇನೆಯನು ಪಾಂ
ಚಾಲಸುತ ಮೋಹರಿಸಿದನು ಕೆಂ
ಧೂಳಿ ಮಾಣಿಸಿತನಿಮಿಷತ್ವವನಮರ ಸಂತತಿಯ॥ ೨೯

ಅರಸನೆಡವಂಕದಲಿ ಮತ್ಸ್ಯರು
ಬಿರುದ ಕೈಕೆಯ ಚೈದ್ಯ [4]ಕೇರಳ[4]
[5]ಮರು[5] ಯವನ ಸಂವೀರ [6]ಕೌಸಲ[6] ಪಾಂಡ್ಯ ಮಾಗಧರು।
ಧರಣಿಪನ ಬಲವಂಕದಲಿ ಮೋ
ಹರಿಸಿ ಪಾಂಚಾಲಕರು ಚೂಣಿಯೊ
ಳುರವಣಿಸಿದರು ನಕುಲ ಸಾತ್ಯಕಿ ಭೀಮನಂದನರು॥ ೩೦

---

[1] ವ (ಸ). [2] ಗಳಗಚ್ಚ್ಯಾಯ್ತು (ಕ), ಗಳಘರ್ಜಿಸಿತು (ಗ.ಚ), ಗಳಗರ್ಜಾಯ್ತು (ಟ.ತ), ಗಳಗಜನೆಯ್ತು (ದ), ಗಳಲಿಗರ್ಜಾಯ್ತು (ಪ). [3] ನೀ (ಕ.ಗ.ಚ). * ಇಲ್ಲಿಗೆ (ಗ) ಪ್ರತಿಯಲ್ಲಿ ಸಂಧಿ ಮುಗಿದಿದೆ.
(ಗ) ಪ್ರತಿಯಲ್ಲಿರುವ ಸೂಚನೆ:—
ಆಳಲು ಮಿಗೆ ಕುರುರಾಯನನುಜನ
ಗೆಲಿದು ಮಾರುತ ಪಾರ್ಥ ಕಂಡನು
ಕಳನೊಳತಿರಥನನು ಧನುರ್ಧರ ಭಾಳಲೋಚನನ॥

[4] ಶೃಂಜಯ (ಗ). [5] ಮುರ (ಕ). [6] ಶೃಂಜಯ (ಟ.ತ.ನ).

ನರ ಮುರಾಂತಕರೊಂದು ಕಡೆಯಲಿ
ಮುರಿಯೆ ಕಂಡನು ನೃಪತಿ ಕೃಷ್ಣನು
ಹೊರೆಗೆ ಬಂದನು ನಮಿಸಿ ಬಿನ್ನಹ ಮಾಡಿದನು [1]ಬಳಿಕ[1] ।
ನರನಿವನು ಮಗನಿದಿರುಗಾಣದೆ
ಹಿರಿದನೇಱಿಸಿ ನುಡಿದನಿದ ಪ[2]ತಿ
ಕ[2]ರಿಸಬೇಹುದು ನಿನ್ನ ಕರುಣವೆ ಹರಣವೆಮಗೆಂದ॥ ೩೧

ಹಗೆಯು ತಲೆ ಹೋಗದಡೆ ವಹ್ನಿಯ
ಹೊಗುವ ನುಡಿ ತಮ್ಮನದು ಬಳಿಕಾ
ಸೆಗಳಿಕೆಯೊಳುಳಿದೆಮ್ಮ ನಾಲ್ವರ ದೇಹ [3]ನಿ[3]ಕ್ಷೇಪ।
ಬಗೆಯಲೈವರ ಜೀವನದ ವಿಲ
ಗಿಗನು ನೀನೆಂದರಸ ಕರುಣಾ
ಳುಗಳ ದೇವನ ಬೇಡಿಕೊಂಡನು ಕೇಳು ಧೃತರಾಷ್ಟ್ರ॥ ೩೨

ಪಡೆಗಡಲು ಕುಡಿನೀರು ನೆಱೆ ನೀ
ರಡ[4]ಸಿದುದು[4] ಪಾರ್ಥನ ಶರಾವಳಿ
ವಡಬನಿದಱೊಳು ಕೆಲಬಲದ ಹಂಗೇಕೆ ಕದನದಲಿ ।
ಕಡುಹಿನಲಿ ಸೈಂಧವನ ತಲೆಯನು
ಹೊಡೆದು ನಿನ್ನಯ ಕಾಲ [5]ಬಳಿ[5]ಯಲಿ
ಕೆಡಹುವನು ನಿಮಿಷದಲಿ ಫಲುಗುಣನೆಂದನಸುರಾರಿ ॥ ೩೩

ಕರೆದು ಸಾತ್ಯಕಿ ಭೀಮನನು ನೃಪ
ವರನ ಸುಯ್ಧಾನದಲಿ ನಿಲಿಸಿದ
ನರಿಬಲಕೆ ನೂಕಿದನು ಕೈಕೆಯ [6]ಚೈದ್ಯ[6] ಸೃಂಜಯರ ।
ಮುರಮಥನನೊಡಗೂಡಿ ನಿಜ ಮೋ
ಹರವ[7]ನಂದೈನೂಱು[7] ಬಿಲ್ಲಂ
ತರಕೆ ತೊಲಗಿ ಮಹಾಸ್ತ್ರಮಂತ್ರವ ಜಪಿಸಿದನು ಪಾರ್ಥ ॥ ೩೪

ಇಳಿದು ರಥವನು ಮುರಹರನ ಪದ
ತಳದ ಧೂಳಿಯ ಕೊಂಡನತಿ ನಿ
ರ್ಮಲ ಸಮಾಧಾನದಲಿ ಕೃಷ್ಣನ ಚರಣಕೆಱಗಿದನು ।

---

[1] ನಗುತ (ಕ.ಗ.ಚ). [2] ರಿಹ (ಕ). [3] ವಿ (ತ).
[4] ಸುವುದು (ಕ). [5] ಬಾ (ಕ.ಗ.ದ). [6] ಮತ್ಸ್ಯ (ಟ.ತ.ದ).
[7] ನುಳಿದಿನ್ನೂಱು (ಗ.ಚ.ಪ).

ತಲೆಯ ಹಿಡಿದೆತ್ತಿದನು ಹರಿ ಕೋ
ಮಳ ಕರಾಂಬುಜದಿಂದ ಪಾರ್ಥನ
ನೊಲಿದು ಮೈದಡವಿದನು ಗೆಲು[1]ಹೋಗೆಂ[1]ದು ಹರಸಿದನು ॥ ೩೫

ಖುರಕೆ ರತುನವ ಸುರಿದು ತೇರಿನ
ತುರಗವನು ವಂದಿಸಿದನಾ ಪಳ
ಹರದ ಹನುಮಂಗೆಱಗಿದನು ಸುರಕುಲಕೆ ಕೈಮುಗಿದು ।
ವರ ರಥವ ಬಲಗೊಂಡು ಕವಚವ
ಬರಿಗೆ ಬಿಗಿದನು ಕೈಗೆ ವಜ್ರದ
ತಿರುವೊಡೆಯನವಚಿದನು ರಥವೇಱಿದನು ಕಲಿ ಪಾರ್ಥ ॥ ೩೬

ದೇವದತ್ತವ ಮೊಳಗಿದನು ಗಾಂ
ಡೀವಿ ಚಾಪವ ಮಿಡಿ[2]ದ[2]ನಿಷ್ಠುರ
ರಾವ ತಿವಿದುದು ಜರಿದವಡಕಿಲು ಜಗದ ಜೋಡಿಗಳ ।
ರಾವು ಫಲುಗುಣಯೆನುತ ಪಾರ್ಥನ
ಭಾವ ಕುಡಿ ಚಮ್ಮಟಿಗೆಯಲಿ ತುರ
ಗಾವಳಿಯನದುಹಿದನು ಸುಳಿಸಿದನಾಹವಕೆ ರಥವ ॥ ೩೭

ವರ ಯುಧಾಮನ್ಯೂತ್ತಮೌಂಜಸ
ರೆರಡು ಕಡೆಯಲಿ ಬರೆ ಮುರಾರಿಯ
ಪರಮ ಸಾಹಾಯ್ಯದಲಿ ಸಾಹಸಮಲ್ಲನುರವಣಿಸೆ ।
ಅರಿ ಬಲವ ಕೆಣಕಿದನು ಪಾರ್ಥನ
ಬರವನೀಕ್ಷಿಸಿ ತನ್ನ ಸೇನೆಗೆ
ಬೆರಳ ಚೌರಿಯ ಬೀಸಿ ದುಶ್ಶಾಸನನು ಮಾಱಾಂತ ॥ ೩೮

ಇವನ ಕೊಂದರೆ ಮುನ್ನ ಮಾಡಿದ
ಪವನ ತನಯನ ಭಾಷೆಗೂಣೆಯು
ವಿವನ ಕೊಲ್ಲದೆ ಗೆಲುವ ಹದನೇನೆನುತ ನಿಮಿಷದಲಿ ।
ಕವಲುಗೋಲಿನಲರಿಭಟನ ಚಾ
ಪವನು ಸೂತನ [3]ರಥವ[3] ರಥವಾ
ಹವನು ಖಂಡಿಸಿ ಬಿಸುಡಲವ ಜಾಱಿದನು ದುಗುಡದಲಿ ॥ ೩೯

[1] ನೀನೆಂ (ಟ.ತ.ದ). [2] ಯೆ (ಚ.ಪ). [3] ಶಿರವ (ತ.ದ.ನ).

ಉರಿಯ ಬಂದಿಯ ಹಿಡಿದು ಹೆಚ್ಚುವ
ದೊರೆಯಲೇ ದಿಟ ಪಾದರಸವೆಲೆ
ಯರಸ ನಿನ್ನ ಕುಮಾರನೇಸಱ ಪಾಡು ಪಾರ್ಥಂಗೆ |
ತೆರಳಿದನು ನಿನ್ನಾತ ಸೂಱಿಯೊ
ೞುರವಣಿಸಿತಾ ತೇರು ನರನೈ
ತರಲು ಕಂಡನು ಶಸ್ತ್ರವಿದ್ಯಾ ಭಾಳಲೋಚನನ ‖ ೪೦

ಅರುಣಮಯ ರಥವಾಜಿಗಳ ವಿ
ಸ್ತರದ ಹೇಮದ ಕಳಶ ಸಿಂಧದ
ಸರಳು ತೀವಿದ ಬಂಡಿ ಬಳಿಯಲಿ ಲಕ್ಷಸಂಖ್ಯೆಗಳ |
ತರಣಿಯನು ಸೋಲಿಸುವ ರತ್ನಾ
ಭರಣ ಕಾಂತಿಯ ರಾಯ ಕಟಕದ
ಗುರುವ ಕಂಡನು ಪಾರ್ಥ ಶಕಟವ್ಯೂಹದಗ್ರದಲಿ ‖ ೪೧

ಆರಿವನು ಕಲಿ ಪಾರ್ಥನೇ ತ್ರಿಪು
ರಾರಿ ಹಿಡಿವಂಬಾಯಿತೆಂಬ ದೊ
ಠಾರನೇ ದೈತ್ಯಾರಿ ಸಾರಥಿಯೆಂಬ ಗರ್ವಿತನೆ |
ಹಾರುವರು ನಾವಸ್ತ್ರವಿದ್ಯಾ
ಪಾರಗರು ನಾವಲ್ಲ ರಣದೌ
ದಾರಿಯವ ತೋಱುವೆಮಗೆನುತ್ತಡಹಾಯ್ದನಾ ದ್ರೋಣ ‖ ೪೨

ನಾಳೆ ಹಗೆವನ ಹೊಯ್ವೆನೆಂಬು
ಬ್ಬಾಳುತನವಿನ್ನೊಮ್ಮೆ ಭೂಪತಿ
ಯೋಲಗಾತಿಯರಿದಿರಲಾಡಿದ ಭಾಷೆಯಿನ್ನೊಮ್ಮೆ |
ಆಳು ನೆರೆದಿದೆ ಚೂಣಿಯೊಳಗೊಂ
ದಾಳ ಹೊಯ್ದರೆ ಗೆಲವು ನಿನ್ನದು
ಕಾಳಕೂಟದ ಕವಲ ತುಂಬಿಗೆ ಪಥ್ಯವಲ್ಲೆಂದ ‖ ೪೩

ಎಂಬಡಿದಿರುತ್ತರವಲೇ ಗರ
ಳಾಂಬುಜದ ಪರಿಮಳಕೆ ಗರುಡನು
ತುಂಬಿಯಾದರೆ [1]ಸೇ[1]ರುವುದಲೇ ಸಾಕದಂತಿರಲಿ |

[1] ತೀ (ಗ.ಚ.ಪ).

ಅಂಬುಗಳಿಗೆಡೆದೆಱಹ [1]ಕು[1]ಡಿ ನೀ
ವೆಂಬ ನುಡಿಗಂಜುವೆನು ಸೈಂಧವ
ನೆಂಬವನ ತೋಱಿಸಿರೆಯೆಂದನು ನಗುತ ಕಲಿ ಪಾರ್ಥ ॥ ೪೪

ಎಲೆ ಮರುಳೆ ಮುಂದಿದ್ದ ನಮ್ಮಯ
ವಿಲಗವನು ಪರಿಹರಿಸಿ ಸೈಂಧವ
ನಳಿವುಪಾಯವ ಮಾಡು ಗರುವರು ನುಡಿದು ಕೆಡಿಸುವರೆ ।
ಅಳವಿಗೊಡು ಕೊಳ್ಳೆಂಬನೆನುತ
ಗ್ಗಳೆಯನೆಚ್ಚನು ನರನ ಮೆಯ್ಯಲಿ
ತಳಿತವಂಬುಗಳೇನನೆಂಬೆನು ವಿಗಡ ವಿಗ್ರಹವ ॥ ೪೫

ಅವರ ಪಾದಾಂಬುಜಕೆ ಫಲುಗುಣ
ಕವಿಸಿದನು ಸರಳುಗಳ ಲೆಕ್ಕಿಸ
ದವಗಡಿಸಿ ಗುರುವೆಚ್ಚು ಕಡಿದನು ಗಾಂಡಿವದ ತಿರುವ ।
ಸವತಳಿಸಿ ಮಾರ್ತಿರುವಿನಲಿ ಸಂ
ತವಿಸಿಕೊಂಡರ್ಜುನನು ದ್ರೋಣನ
ನವ ನಿಶಿತ ಬಾಣೌಘದಲಿ ಹೂಳಿದನು ನಿಮಿಷದಲಿ ॥ ೪೬

ಸರಳ ಸವಱಿ ಮಹಾಸ್ತ್ರಚಯದಲಿ
ನರನನೆಚ್ಚನು ನಮ್ಮ ಲಾಗಿನ
ಧುರವು ತಾನಿದು ದಿಟ್ಟನಹೆಯೋ ಪಾರ್ಥ ಲೇಸೆನುತ ।
ಸರಳು ಸುರಿಯಲು ಕೃಷ್ಣ ಪಾರ್ಥನ
ಕೆರಳಿದನು ಫಡ ಮರುಳೆ ಗುಣದಲಿ
ಗುರುವ ಗೆಲುವುದ ಮಾಡು ಗೆಲುವಾ ಕಾದಿ ನೀನೆಂದ ॥ ೪೭ *

ಇಳುಹಿದನು ಗಾಂಡಿವವನುರು ಬ
ತ್ತಳಿಕೆಯನು ಕಳಚಿದನು ರಥದಿಂ
ದಿಳಿದು ಮೈಯಿಕ್ಕಿದನು ದ್ರೋಣನ ಚರಣ ಕಮಲದಲಿ ।
ತಿಳಿಯಲೆಮ್ಮೈವರಿಗೆ ಜೀವನ
ದುಳಿವು ನಿನ್ನದು ನಿನ್ನ ಮಕ್ಕಳ
ಸಲಹು ಮೇ[2]ಣ್ ಕೊಲ್ಲೆನುತ ನುಡಿದನು ವಿನಯದಲಿ ಪಾರ್ಥ[2] ॥

---

[1] ಕೊ (ಟ). * ಇಲ್ಲಿಗೆ (ಗ) ಪ್ರತಿಯಲ್ಲಿ ಸಂಧಿ ಮುಗಿದಿದೆ. ಮುಂದಿನ ಸೂಚನೆ :— ನಿಜಗುರುವ ವಂದಿಸುತ ವೈರಿ
ವ್ರಜವ ನೆಱೆ ತಱಿವುತ್ತ ಬಂದನು
ವಿಜಯನಾ ರಿಪು ಸೈಂಧವನನರಸುತ್ತ ಕಣದೊಳಗೆ ॥

[2] ಣ್ಮಳಿಯೆಂದು ನುಡಿದನು ವಿನಯಪರನಾಗಿ (ಗ).

ಆ ಶಿಶುತ್ವದಲೆಮ್ಮ ಬೊಪ್ಪನು
ವಾಸವನ ಪುರಕ್ಕೈದಿದನು ನಿ
ಮ್ಮಾಸೆಯಲಿ [1]ಗಾಂಗೇಯರಿಂದವೆ ಹಿರಿದು[1] ಬದುಕಿದೆವು ।
ಘಾಸಿಯಾದೆವು ಜೂಜಿನಲಿ ವನ
ವಾಸವನು [2]ನೂಕಿ[2]ದೆವು ಮ್ಯೊ ಮಱೆ
ದೀಸನೇಱಿಸಿ ನುಡಿದ ನುಡಿಗಳ ಕಾಯಬೇಕೆಂದ ॥ ೪೯

ನೀವು ಹೂಣಿಗರಾಗಿ ರಿಪುವನು
ಕಾವ[3]ಡಿತ್ತಲೆ ತೊಲಗು[3]ವೆನು ಕರು
ಣಾವಲೋಕನವೆನ್ನ ಮೇಲುಂಟಾದಡಿದಿರಹೆನು ।
ಆವುದನು ನಮಗೇನು ಗತಿ ತಲೆ
ಗಾವ[4]ಮತವೇ[4] ನಿಮ್ಮ ಚಿತ್ತದೊ
ಳಾವ ಹದನೆನೆ ಮುಗುಳು ನಗೆಯಲಿ ದ್ರೋಣನಿಂತೆಂದ ॥ ೫೦

ಕಂದನಶ್ವತ್ಥಾಮ ಹುಸಿಯೆನ
ಗಿಂದು ಬೇಹ ಕುಮಾರ ನೀ ನಿ
ನ್ನಿಂದ ತನ್ನಯ ಕೀರ್ತಿ ಮೆಱೆವುದು ಮೂಱು ಲೋಕದಲಿ ।
ತಂದೆ ನಿನಗಾ ಮುನಿಯ[5]ಲಾಪೆನೆ[5]
ಸಂದುದಾಡಿದ ಭಾಷೆ ನೀ ಹೋ
ಗೆಂದು ಗುಣದಲಿ ಬೀಳುಕೊಟ್ಟನು ದ್ರೋಣನರ್ಜುನನ ॥ ೫೧

ಬಲದೊಳಧಿಕರು ಭಟರೊಳತಿ ವೆ
ಗ್ಗಳರು ಹೆಸರುಳ್ಳವರು ವಿದ್ಯಾ
ಕುಲ ತಪೋಧರ್ಮಾದಿಗುಣಿಗಳು ಧೈರ್ಯ ಸಂಯುತರು ।
ಹಲಬರಿಹುದುಸುರಿಲ್ಲದೊಡಲಿನ
ಚೆಲುವಿನಂತಿರೆ ನಮ್ಮ ಬಲ ಹರಿ
ಯೊಲವಿನವರಭ್ಯುದಯಪನು ಧೃತರಾಷ್ಟ್ರ ಕೇಳೆಂದ ॥ ೫೨

ಒಂಬತ್ತನೆಯ ಸಂಧಿ ಮುಗಿದುದು.

---

[1] ತಲೆಕಾದುಕೊಂಡೆವು ನಾವು (ಟ.ತ). [2] ಮಾಡಿ (ಕ). [3] ಡತ್ತಲೆ ತಿರುಗು (ಕ.ಚ). [4] ದುಂಟೇ (ಟ.ತ.ದ.ನ), ಮಾತೋ (ಕ). [5] ಲಱುವೆನೆ (ಕ), ಬಲ್ಲೆನೆ (ಟ.ತ.ದ.ನ).

# ಹತ್ತನೆಯ ಸಂಧಿ

ಸೂಚನೆ ॥ ನಡೆದು ಪರಬಲ ಮಧ್ಯದಲಿ ನೀ
ಗುರ್ಡಿಸಿ ಹರಿಯನು ಸಕಲ ಸುಭಟರ
ಮಡುಹಿ ಫಲುಗುಣ ಗೆಲಿದನಗ್ಗದ ಕೌರವೇಶ್ವರನ ॥

ನರನು ಕಳುಹಿಸಿ[1]ಕೊಳಲು ಗುರು[1] ವೋ
ಹರವನಪಸವ್ಯದಲಿ ವಂಚಿಸಿ
ಮುರುಹಿದನು ಮುರವೈರಿ ರಥವನು [2]ಮುಂ[2]ದಿ ಗೊತ್ತಿಂಗೆ ।
ಅರರೆ ನರನೋ ನೂಕು ನೂಕರಿ
ಬಿರುದರಾವೆಡೆ ಪೂತು ಮಝು ಎಂ
ದುರವಣಿಸಿದರು [3]ಮುರಿದು ಮಕರ[3]ವ್ಯೂಹದತಿರಥರು ॥ ೧

ನೂಕಿತರಿ ಚತುರಂಗ ಬಲ ನೆಲ
ನೋಕರಿಸಿತೋ ಪ್ರಳಯ ಜಲಧಿಯ
ನೂಕು ತೆರೆಗಳ ಲಹರಿಯೋ ನಿಲುವಾತನಾರಿದಕೆ ।
ನಾಕು ಕಡೆಯಲಿ ಕವಿದುದಳವಿಗೆ
ನೂಕು ನೂಕಾಯಿತ್ತು ನರನ
ವ್ಯಾಕುಳತೆಯಲಿ ಸವಟ ತೊಡಗಿದನಹಿತ ಬಲ ವನವ ॥ ೨

ಕುಸುರಿದಱಿದವು ಜೋಡು ವಜ್ರದ
ಬೆಸುಗೆಗಳ [4]ಬಾಹುರಿಕೆ[4]ಗಳ ಖಂ
ಡಿಸಿದನದಟರ ಕವಚ ಬಿರಿದವು ಕೋಲ ಘಾಯದಲಿ ।
ನೊಸಲ ಸೀಸಕ ನುಗ್ಗುನುಸಿ ಬಂ
ಧಿಸಿದ ಸರಪಣಿ ಹಿಳಿದವರಿಬಲ
ದೆಸಕ ನಿಂದುದು ಪಾರ್ಥನೆಚ್ಚನು ವೈರಿ ವೋಹರವ ॥ ೩

[5]ಕುಳುವೆಳಗು[5] ಕಿಡಿಗೆದಱೆ ಹೊಗರಿನ
ಹೊಳಹು ಗಗನವನುಗುಳೆ ಧಾರೆಯ
ಬಲುಗಿಡಿಗಳುರಿ ಮಸಗೆ [6]ತ[6]ಳಿಹದ ಬಣ್ಣ ಗಜಗಜಿಸೆ ।

---

[1] ಕೊಂಡುರಿಪು (ಗ.ಚ.ಪ). [2] ಹಿಂ (ಟ.ತ). [3] ಮಕರಚಕ್ರ (ಗ.ಚ.ಟ.ತ.ದ.ಪ). [4] ಬಾಹುರಕ್ಕೆ (ತ.ದ.ಪ), ಬಾಹಕ್ಕರಿಕೆ (ಗ). [5] ಕುಳುವೆಗಳು (ಕ), ಹೊಳೆವಲಗು (ಗ), ಕುಳಿವೆಳಗು (ಟ.ದ.ನ). [6] ಬ (ಕ), ತೊ (ಗ).

ಹಿಳುಕು ಬೊಬ್ಬಿಡೆ ಹೊದಱಡಸಿ [1]ಕಣ
ಗಿಲೆಯ[1] ಕೋಲುಳಿಯಂಬು ಕವಲಂ
ಬಲಗಿನಂಬೀಸಾಡಿದವು ಪರಸೈನ್ಯ ಸಾಗರವ ॥ ೪

ವ್ರಣದ ಬಲುವೊನಲೊಳಗೆ ತಲೆಗಳು
ಕುಣಿದವರ್ಜುನನಂಬಿನುಱುಬೆಗೆ
ಹೆಣನ ದಾವಣಿ ಹಾಸಿದವು ಸೂಸಿದವು ದೊಂಡೆಗಳು ।
ತಣಿದನಂತಕನಟ್ಟೆಗಳ ರಿಂ
ಗಣದ ನಾಟಕದೊಳಗೆ ಸಮರಾಂ
ಗಣದ ರೌರವ ರೌದ್ರವಾಯಿತು ಕಳನ ಚೌಕದಲಿ ॥ ೫

ಏಱುಗಳು ಬುದುಬುದಿಸಿ ರಕುತವ
ಕಾಱಿ ಕಾಣಿಜ ಖಂಡ ನೆಣ ಜಿಗಿ
ದೋಱಿ ಬೆಳುನೊರೆ ಮಸಗಿ ನಸುಬಿಸಿ ರಕುತ ಹೊನಲಿಡಲು ।
ಕೌಱಿಡಲು ಕಡಿದುಡಿದವೆಲು ಮೊಗ
ದೋಱುಗಳ ಪೂರಾಯ ಘಾಯದ
ತಾಱುಥಟ್ಟಿನ ಹೆಣನ ಮೆದೆ ಹೇರಾಳ ರಂಜಿಸಿತು ॥ ೬

ಎಲೆಲೆ ಪ್ರಳಯದ ರುದ್ರನನು ತಲೆ
ಬಳಿಚಿ ಬಿಟ್ಟನು ದ್ರೋಣನಕಟಾ
ನೆಲನೊಡೆಯ[2]ನಾಪ್ತಿಗರು[2] ಬಗೆದರು ಸ್ವಾಮಿದ್ರೋಹಿಕೆಯ ।
ಕೊಲುವವನು ಫಲುಗುಣನೊ ದ್ರೋಣನೊ
ಕೊಲೆಗಟಿಗನೋ ಕೊಂಬನೋ ಕುರು
ಕುಲತಿಲಕ ನೆಱೆ ಪಾಪಿಯೆಂದರು ನಿಖಿಳ ಪರಿವಾರ ॥ ೭

ಈತನರ್ಜುನನಿತ್ತಲಿದೆ ಪುರು
ಹೂತ ಸುತನ ವರೂಥವಿದೆ ಕಪಿ
ಕೇತನನ ಬೊಬ್ಬಾಟವಿದೆ ಫಲುಗುಣನ ಶರಜಾಲ ।
ಈತ ಪಾರ್ಥನು ಹೊಕ್ಕನಿತ್ತಲು
ಶ್ವೇತಹಯನಿತ್ತಲು ಧನಂಜಯ
ನೀತನೆನೆ ಫಲುಗುಣನ ಮಯವಾಯ್ತಖಿಳ ತಳತಂತ್ರ ॥ ೮

---

[1] ಕಣ್ಣಲಿಗೆ (ಕ.ಗ.ಚ). [2] ನಾಪತ್ತಿಗರು (ಕ), ನಾಪ್ತಿಜನ (ಚ.ಪ).

ಇದೆ ಕಿರೀಟಿಯ ಬಿಲ್ಲ ಜೇವಡೆ
ಯದೆ ಸಿತಾಶ್ವನ ಸಿಂಹಗರ್ಜನೆ
ಯಿದೆ ಮುರಾರಿಯ ಮನಕೆ ಮುಂಚುವ ಹಯದ ಖುರ ನಿನದ ।
ಅದೆ ವಿಜಯನಸೌತ್ರಘುವತ್ತಲು
ಕದನಕಾಲಾನಲನ ತೀವ್ರತೆ
ಯದೆಯೆನುತ ಹೆದಱಿದೆಯ ಸುಭಟರು ಬಿಸುಟರುತ್ಸಹವ ॥ ೯

ಉಡಿದು ಕುಪ್ಪಳಿಸಿದವು ರಥ ಕಡಿ
ವಡೆದುದಗ್ಗದ ಸಾರಥಿಗಳೆಡೆ
ಗೆಡೆದುದತಿರಥ ಸಮರಥಾರ್ಥಮಹಾರಥಾದಿಗಳು ।
ಹೊಡೆಗೆಡೆದ ದಂತಿಗಳು ರಕ್ತದ
ಕಡಲೊಳೀಸಾಡಿದವು ತೇಜಿಯ
ಕಡಿಕು ಹರಿದವು ಹೊರೆದನಂತಕನುರು ಪರಿಗ್ರಹವ ॥ ೧೦

ಸರಳು ಸೇನೆಯ ತಾಗಿ ರಿಪುಗಳ
ಕೊರಳ [1]ಕೊಯ್ಯದ[1] ಮುನ್ನವರಿ ಮೋ
ಹರವ ಹಿಂದಿಕ್ಕುವುದು ರಥವತಿ ಜವದ ಜೋ[2]ಕೆ[2]ಯಲಿ ।
ಹೊರಳಿದವು ಭಟರಟ್ಟೆ ಶೋಣಿತ
ಶರಧಿ ಮಸಗಿತು ಮಕುಟ ಬದ್ಧರ
ಹರಣದನಿಲ ಸಮೂಹ ಬೀಸಿತು ನಭಕೆ ಬಿಱುಬಿನಲಿ ॥ ೧೧

ಮುಱಿವಡೆದು ಚತುರಂಗವರ್ಜುನ
ನುಱುಬೆಗಾಱದೆ ನಿಲೆ ಶ್ರುತಾಯುಧ
ನಿಱಿಯಲುತ್ಸಾಹಿಸಿದನಿದಿರಾದನು ಧನಂಜಯನ ।
ಮುಱಿಯೆಸುತ ಮುಂಕೊಂಡು ಪಾರ್ಥನ
ತಱುಬಿದನು [3]ಬಳಿಕೀತನಾ[3]ತನ
ನೆಱೆವಣಿಗೆ ಲೇಸೆನುತ ತುಳುಕಿದನಂಬಿನಂಬುಧಿಯ ॥ ೧೨

ನರನ ಬಾಣಾನೀಕವನು ಕ
ತ್ತರಿಸಿದನು ನಿಜ ಗದೆಯಲಾತನ
ಧುರ ಚಮತ್ಕಾರವನು ನೋಡುತ ಪಾರ್ಥ ಬೆಱಗಾಗೆ ।

---

[1] ನರಿಯುದ (ಸ.ಕ.ಪ). [2] ಡಿ (ಚ.ಟ.ತ.ದ.ನ). [3] ಕಲಿಪಾರ್ಥ
ನೀ (ಗ.ಟ.ತ).

ಕೆರಳಿ ವಾಘೆಯ ಕೊಂಡು ರಥವನು
ಧುರಕೆ ದುವ್ವಾಳಿಸಲು ಮುರಹರ
ನುರವಣಿಗೆ ಕನಲುತ ಶ್ರುತಾಯುಧ ಹೊಯ್ದನಚ್ಯುತನ ॥ ೧೩

ವರುಣನಿತ್ತುಪದೇಶ ಬಱಿ[1]ದಿ
ದ್ದ[1]ರನು ಹೊಯ್ದರೆ ತನ್ನ ಕೊಲುವುದು
ನಿರುತವೆನಲದ ಮಱಿದು ಹೊಯ್ದನು ಹರಿಯ ಮಸ್ತಕವ ।
ಕೆರಳಿ ಗದೆ ಮುರಹರನ ಮುಟ್ಟದೆ
ಮರಳಿ ತನ್ನನೆ ಕೊಂದುದೇನ
ಚ್ಚರಿಯೊ ದೈವದ್ರೋಹಿಗೆತ್ತಣ ಲೇಸು ಬಹುದೆಂದ ॥ ೧೪

ಆ ಶ್ರುತಾಯುಧ ಮಡಿದನಲ್ಲಿ ಮ
ಹಾಸುರದ ರಣವಾಯ್ತು ಕಾಂಭೋ
ಜೇಶ ಕೈದುಡುಕಿದನು ಕದನವನಿಂದ್ರಸುತನೊಡನೆ ।
ಸೂಸಿದನು ಸರಳುಗಳನಾತನ
[2]ಸಾಸವನು[2] ಮನ್ನಿಸುತ ಫಲುಗುಣ
ಬೇಸಱದೆ ಕೊಂಡಾಡಿ ಕಾದಿದನೊಂದು ನಿಮಿಷದಲಿ ॥ ೧೫

ಸರಳು ಸವೆಯಲು ಶಕ್ತಿಯಲಿ ಕಾ
ತರಿಸಿ ಕವಿ[3]ದಿಡೆ[3] [4]ಶಕ್ತಿಯನು[4] ಕ
ತ್ತರಿಸಿದನು ಕಾಂಭೋಜ ಭೂಪನ ಮಕುಟ ಮಸ್ತಕವ ।
ಕೊರಳ ತೊಲಗಿಸಿ ಮುಂದೆ ನೂಕುವ
ವರ ಶ್ರುತಾಯುವಿನೊಡನೆ ಘನ ಸಂ
ಗರಕೆ ತಗೆದನು ಕಳುಹಿದನು ಕಾಂಭೋಜನೊಡನವರ ॥ ೧೬

ಹರಿಬದಯುತಾಯುವನು ಮಗುಳಿ
ಬ್ಬರು ಸುತರು ನಿಯುತಾಯು ಘನ ಸಂ
ಗರದ ದೀರ್ಘಾಯುವನು ಕಳುಹಿದನಮರ ಮಂದಿರಕೆ ।
ಧುರಕೆ ನೂಕಿದವಂಗರಾಜನ
ಕರಿ ಘಟೆಗಳಂಬಟ್ಟ ಮೊದಲಾ
ದರಿ ಸುಭಟ ಸಂದೋಹ ಮುತ್ತಿತು ಮತ್ತೆ ಫಲುಗುಣನ ॥ ೧೭

---

[1] ಗೆಯ್ಯ (ಜ). [2] ವಾಸಿಯನು (ಚ). [3] ದರೆ (ಕ). [4] ಕದಲಿಸಿದ.

ಕರಿ ಘಟೆಯನೆಂಬಟ್ಟಿ ಭೂಪನ
ಶಿರವನೆಚ್ಚನು ಪಾರಸೀಕರ
ತುರಗ ಕವಿಯಲು ಕುಸುರಿದಱಿದನು ಕೋಟಿ ಸಂಖ್ಯೆಗಳ ।
ಬಿರುದ ಹೊಗಳಿಸಿಕೊಂಡು ದಾತಾ
ರರ ಹಣವ ಸಲೆ ತಿಂದು [1]ಹೆಚ್ಚಿದ[1]
ಹಿರಿಯ ಡೊಳ್ಳಿನ ರಾವುತರ ಕೆಡಹಿದನು ನಿಮಿಷದಲಿ ॥ ೧೮

ಇಱಿದು ಚಕ್ರವ್ಯೂಹವನು ಕುಱಿ
ದಱಿಯ ಮಾಡಿ ಕಿರೀಟಿಯದಱಿಂ
ಹೊಱಗೆ ಹಂಸವ್ಯೂಹದಲಿ ಕೆಣಕಿದನು ಕಾಳೆಗವ ।
ತುಱುಗಿದವು ತೂಱಂಬು ತಲೆಗಳ
ತಱಿದು ಬಿಸುಟವು ಘುಮ್ಮ ಘುಲಿಲೆನೆ
ನಿಱಿನಿಳಿಲುಗರೆದೊಱಲಿದವು ಫಲುಗುಣನ ಶರಜಾಲ ॥ ೧೯ *

ಬಿಲು ರವದ ಮೊಳಗಿನಲಿ ಕೃಷ್ಣನ
ಫಲುಗುಣನ ಮೈ[2]ಕಾಂ[2]ತಿ ಮೇಘಾ
ವಳಿಗಳಲಿ ಹೊಂಗಱಿಯ ಗಾಳಿಯ ಸರಳ ಸೋನೆಯಲಿ ।
ನಿಲುವ ಹಂಸವ್ಯೂಹವೆಲ್ಲಿಯ
ದೆಲೆ ಮಹೀಪತಿ ಕೇಳು ನಿನ್ನ
ಗ್ಗಳೆಯ ಸುಭಟರ ವಿಧಿಯನೆಂದನು ಸಂಜಯನು ನಗುತ ॥ ೨೦

ಅಳಿದುದೈನೂಱರಸುಗಳು ಮು
ಮ್ಮಳಿತವಾಯ್ತೈವತ್ತು ಸಾವಿರ
ಬಲಗುದುರೆ ನುಗ್ಗಾದುದೊಂಬೈನೂಱು ಭದ್ರಗಜ ।
[3]ಅ[3]ಳಿದುದಕೆ ಕೊಲೆಕೊತ್ತುವಡೆದ
ಗ್ಗಳ ಪದಾತಿಗೆ ಗಣನೆಯಿಲ್ಲೇ
ಬಲದ ಮೈವಶವವರ ಕೈವಶವೇನು ಹೊಸತೆಂದ ॥ ೨೧

---

[1] ಕೊಬ್ಬಿದ (ಗ) ಸೊಕ್ಕಿದ (ಟ. ಕ.) * ಇಲ್ಲಿಗೆ (ಗ) ಪ್ರತಿಯಲ್ಲಿ ಸಂಧಿ ಮುಗಿದಿದೆ. ಮುಂದಿರುವ ಸೂಚನೆ :—

ಬಂಧಿಸಿದನಹಿತೌಘಸೇನೆಯ
ನಂದು ಗುರು ಕೌರವರ ಗೆಲಿದು ಪು
ರಂದರನ ಸುತ ಮತ್ತೆ ತಡೆದನು ರಾಯವೋಹರವ ॥

[2] ಘಾ (ಕ) [3] ಉ (ತ. ಗ. ಟ).

ಕೆಡಹಿದನು ವಿಂದಾನುವಿಂದರ
ನಡಗುದಱಿಯಾಯ್ತಖಿಳ ಬಲದು
ಗ್ಗಡದ ವೀರರು ಕಾದಿ ಬಿದ್ದುದು ಕಾಯಮಾಱಿಗಳು ।
ನಡುಹಗಲು ಪರಿಯಂತ ಕಾಳೆಗ
ಬಿಡದೆ ಬಲುಹಾಯ್ತು[1]ಖಿಳ[1] ವೇಗದ
ಕಡುಗುದುರೆ ಬಳಲಿದವು ಬಗೆಯದೆ ಹರಿಯ ಗರ್ಜನೆಯ ॥ ೨೨

ಭಾರಿಸಿತು [2]ಮೈ[2] ಮುಷ್ಟಿಯಲಿ ಲುಳಿ
ಸಾರತರಲಂಬಿಸಿತು ತಾಗಿದ
ಕೂರಲಗು ಗಱಿದೋಱಿದವು [3]ನಿಜ ಹಯದ[3] ಮೈಗಳಲಿ ।
ಹಾರಿದರ್ಜುನನಱಿದನಾ ದೈ
ತ್ಯಾರಿಗೆಂದನು ದೇವ ಬಿನ್ನಹ
ವಾರುವಂಗಳ ವಹಿಲತೆಯ ಚಿತ್ತೈಸಿದಿರೆಯೆಂದ ॥ ೨೩

ಕಡಿಯಣವ ಕಾಱಿದವು ಕಂದವ
ನಡಿಗಡಿಗೆ ಹಾಯ್ಕಿದವು ಸುತ್ತಿದ
ಕುಡಿನೊರೆಯ ಕಟವಾಯ ಲೋಳೆಯ ನಿಮಿರ್ದ ಮೈಲುಳಿಯ ।
ತಡಿ ನೆನೆದ ಬಲು ಬೆಮರ ಘುಡುಘುಡು
ಘುಡಿಪ ನಾಸಾಶ್ವಾಸಲಹರಿಯ
ಕಡು ಮನದ ರಥತುರಗ ಮಿಕ್ಕವು ಸರಳ ಸೂಠಿಯಲಿ ॥ ೨೪

ಗಮನ ತಟ್ಟೆಯವಾಯ್ತು ವೇಗ
ಭ್ರಮಣ ಜಡವಾಯ್ತಡಿಗಡಿಗೆ ನಿ
ಗ್ಗಮದೊಳಗೆ ರಥವದ್ದುದರಿ ಭಾರಣೆಯ ಭರವಸದ[4] ।
ಸಮತೆ ನಿಂದು[5]ದು[5] ಸಾಹಸೀಕರು
ಭ್ರಮಿಸುತಿದೆ ಭಟ ಜಲಧಿ ತುರಗ
ಶ್ರಮವ ನಾವ್ ಪರಿಹರಿಸಿದಲ್ಲದೆ ಕಾದಲರಿದೆಂದ ॥ ೨೫

ಉಂಟು ಹೊಲ್ಲೆಹವಲ್ಲ ರಣದೊಳ
ಗೆಂಟು ಮಡಿ ಬಳಲಿದವು ತೇಜಿಗ
ಳೀಂಟುವರೆ ನೀರಿಲ್ಲ ಮುರಿದರೆ ಬೆನ್ನ ಬಿಡರಿವರು ।

---

[1] ಧಿಕ (ಗ.ತ). [2] ಬಲು (ಕ). [3] ರಿಪುಭಟನ (ಕ.ಗ.ಚ), ಹಯತತಿಯು (ಪ), ಸಿತಹಯದ (ನ). [4] ಳೀತಡವಾದುದಗ್ಗದ ಭರದ ಭಾರವಣೆ (ಚ.ಪ). [5] ದ (ಕ.ಗ.ಚ).

[1]ಗೆಂಟಣಲಿ ನಮ್ಮೊಡ್ಡ[1] ಸುತ್ತಲು
ವೆಂಟಣಿಸಿ ರಿಪು ಸೇನೆಯಿದೆ ಏ
ನುಂಟು ಮಾಡುವುಪಾಯವೆಂದನು ನಗುತ ಮುರವೈರಿ ‖ ೨೬

ದೇವ ಕಾಳೆಗ ಬಲುಹು ಬಿಸಿಲಿನ
ಡಾವರಕೆ ರಥತುರಗವತಿ ನಿ
ರ್ಜೀವಿಯಾದವು ಹರಿಯ ಗಮನದ ಹದನನಱಿಯೆನಲು ।
ಆ ವಿನೋದಿಗಳರಸ ಶರಣರ
ಕಾವ ಭರದಲಿ ದನುಜ ಕುಲ ವಿ
ದ್ರಾವಣನು ನಸುನಗುತ ಬೋಳೈಸಿದನು ತೇಜಿಗಳ ‖ ೨೭

ದೇವ ವಾಘೆಯ ಹಿಡಿ ತುರಂಗಕೆ
ಜೀವನವನೀ ಕಳನೊಳಗೆ ಸಂ
ಭಾವಿಸುವೆ ನೋಡೆನುತ ಧುಮ್ಮಿಕ್ಕಿದನು ಧಾರುಣಿಗೆ ।
ತೀವಿ ತೆಗೆದನು ವಜ್ರ ಶರದಲಿ
ಡಾವರಿಸಿದನು [2]ಕಳನೊಳು[2]ದಕದ
ಸೈವಳೆಯ [3]ಸೆಲೆಯಱಿದು ಚೌಕಕೆ ಸೀಳಿದನು ನೆಲನ ‖ ೨೮

ನೋಡಿ ನರನುದ್ದಂಡತನವನು
ತೋಡುತೈದನೆ ತುರಗ ಲೀಲೆಗೆ
ಖೇಡಕುಳಿಯನು ಶೌರ್ಯ ಗರ್ವಿತನ್ಸೈ ಶಿವಾ ಎನುತ ।
ಕೂಡೆ ಮುಸಗಿತು ರಿಪು ಚತುರ್ಬಲ
ಜೋಡು ಮಾಡಿತು [4]ಕಡಹದ[4]ಮರರು
ಹೂಡಿದದ್ರಿಯನಂಬುಧಿಯ ತೆರೆಮಾಲೆ ಕವಿವಂತೆ ‖ ೨೯

ಒದಱಿ ಮೇಲಿಕ್ಕಿದರು ನಿಸ್ಸಾ
ಳದ ನಿರಂತರ ಸೂಳುವೊಯ್ಲಿನ
ಹೊದಱುಗಳ ಹೊಸಮುಸೆಯಡಾಯ್ದದ ಸಾಲ ಸಂದಣಿಯ ।
ಸದರವೀ ಹೊತ್ತೆನುತ ಗೆಲವಿನ
ಕುಮುಕುಳಿಗಳುರವಣಿಸೆ ಕಾಣುತ
ಗದಗದಿಸಿ ಮುರವೈರಿ ಚಾಚಿದನರ್ಜುನಗೆ ರಥವ ‖ ೩೦

---

[1] ಎಂಟು ದೆಸೆಯಲಿ ನಮ್ಮ ಸುತ್ತಲು (ಪ. ನ). [2] ನೆಲನನು (ಕ). [3] ನೆ (ಕ.ದ). [4] ಕದನಕ (ಕ).

ಅಲಿಕಲುಗಳ ಕಡಿವಡುಕ್ಕಿನ
ಚೀಲಣದ ಹಂಗೇಕೆ ನಿಮ್ಮಡಿ
ಮೇಲುನೋಟ[1]ವ ನೋಡೆ[1] ರಥ ಪರಿಯಂತ ಕಾಳೆಗವೆ ।
ಹೋಳುಗಳೆವೆನು ಹುಗ್ಗಿಗರನೆನು
ತಾಳೊಳಗೆ ಬೆರಸಿದನು ಬಱಿಗಾ
ಲಾಳುತನದಲಿ ಕಾದಿ ಕೊಂದನು ಕೋಟಿ ರಿಪು ಭಟರ ॥ ೩೧

ವರುಣ ಬಾಣದಲುದಕವನು ತ
ತ್ಸರಸಿಯಲಿ ತುಂಬಿದನು ತಮಗವ
ಸರವಿದೆಂದೌಕುವ ಮಹೀಶರ ಮತ್ತೆ [2]ಬಱಿಕೈದು[2] ।
ಕರಿ ರಥಾಶ್ವ ಪದಾತಿಯನು ಸಂ
ಗರದ ಮಧ್ಯದೊಳೊಬ್ಬನೇ ಸಂ
ಹರಿಸಿದನು ಶತಗುಣವನೊಂದೇ ಲೋಭ ಗೆಲುವಂತೆ ॥ ೩೨

ಕೊಳನ ತಡಿಯಲಿ ಹೂಡಿದನು ಶರ
ವಳಯದಲಿ ಚಪ್ಪರವನಾತನ
ಬಲುಹ ಕಂಡಸುರಾರಿ ಮೆಚ್ಚಿದನಡಿಗಡಿಗೆ ಹೊಗಳಿ ।
ಕಳಚಿ ನೊಗನನು[3]ತೆಗೆದು[3] ಕಬ್ಬಿಯ
ನಿಳುಹಿ ಪಡಿವಾಘೆಗಳ ಸರಿದನು
ಕೊಳಿಸಿ ಪಿಡಿಯಲು ಪಾಡಿಗೈದವು ಮರಳಿದೆಡಬಲಕೆ ॥ ೩೩

ಮುರುಹಿ ನಿಂದವು ಕೊಡಹಿದವು ಕೇ
ಸರವನಧ್ವಶ್ರಮದ ಢಗೆ ಪರಿ
ಹರಿಸೆ ನೀರೊಳು ಹೊಗಿಸಿದನು ಹರಿ ಹಯ ಚತುಷ್ಟಯವ ।
ಸರಸಿಯಲಿ ಮೊಗವಿಟ್ಟು ಮೊಗೆದವು
ವರ ಜಲವನೆರದಳ್ಳೆ ಹಿಗ್ಗಲು
ಮುರುಹಿದವು ಮುಖವನು ಮುರಾಂತಕ ತಡಿಯನಡರಿ[4]ಸಿ[4]ದ ॥ ೩೪

ಕರತಳದಿ ಮೈದಡವಿ ಗಾಯದ
ಸರಳ ಕಿತ್ತೌಷಧಿಯ ಲೇಪವ
ನೊರಸಿದನು ಕರುಣದಲಿ [5]ಚಪ್ಪರಿಸಿದನು ಕಂಧರವ[5] ।

---

[1] ದಲಿರಲು (ಟ. ತ. ದ).
[2] ಸವಱಿದನು (ಟ. ತ. ದ. ನ).
[3] ಹಾಯ್ಕಿ (ಕ).
[4] ಚಿ (ಕ).
[5] ಕಂಧವತಟ್ಟಿ ಬೋಳೈಸಿ(ಟ.ತ.ದ.ನ).

ಹರುಷ ಮಿಗೆ [1]ಕೊರಳೆತ್ತಿ[1] ನಯನವ
ತಿರುಹಿ ದೇವನ ನೋಡುತಿರ್ದುವು
ತುರಗ ನಾಲ್ಕರ ಪುಣ್ಯ ಸನಕಾದಿಗಳಿಗಿಲ್ಲೆಂದ ॥ ೩೫

ಮೊಗಕೆ [2]ಭಾ[2]ಣವ ಕಟ್ಟಿ ನೆಳಲಲಿ
ಬಿಗಿದು [3]ಫಲುಗುಣ[3] ಸಹಿತ ಕೊಳನನು
ನಗುತ ಹೊಕ್ಕನು ನೋಡುತಿದ್ದುದು ಕೂಡೆ ಕುರುಸೇನೆ ।
ಬಿಗಿದ ಕತ್ತಲೆ ದೂರದಲಿ ದೀ
ವಿಗೆಯ ಸುತ್ತಲು ಕಟ್ಟಿ ನಿಂದವೊ
ಲಗಣಿತ ಪ್ರತಿಸುಭಟರಿದ್ದುದು ನರನ ಬಳಸಿನಲಿ ॥ ೩೬

ಚರಣ ವದನವ ತೊಳೆದು ನಿರ್ಮಳ
ವರ ಜಲವನೀಂಟಿದರು ನಿರುಪಮ
ಪರಮ ಕರುಣಾರ್ಣವನು ಮೈದುನ ಸಹಿತ ಸರಸಿಯಲಿ ।
ಪರಿಹೃತ ಶ್ರಮನಾಗಿ ಹರುಷೋ
ತ್ಕರುಷದಲಿ ಹರಿ ಕಳೆದುಕೊಂಡನು
ನರಗೆ ಕೊಟ್ಟನು ಹೋಳಿಸಿದ ಕರ್ಪುರದ ವೀಳೆಯವ ॥ ೩೭

ರಾಗ ಮಿಗೆ ಬ್ರಹ್ಮಾಂಡ ಕೋಟಿಯ
ನಾಗುಮಾಡುವನಲಸಿದರೆ [4]ಮುನಿ[4]
ದಾಗ ನುಂಗುವುದೊಂದು ಲೀಲೆ ಮನುಷ್ಯ[5]ದೇಹದಲಿ[5] ।
ಲೋಗರೆಂದುದನೈದೆ ಮಾಡುವ
ನಾಗಿ ಜನಿಸಿಹುದೊಂದು ಲೀಲಾ
ಸಾಗರನು ಲಕ್ಷ್ಮೀಪತಿಗೆ ನಮೊ ಎಂದುದಮರಗಣ ॥ ೩೮

ಸೆಳೆದು ಪಡಿವಾಘೆಯಲಿ ತುರಗಾ
ವಳಿಯನನುಕೊಳಿಸಿದನು ಹರಿ ಕೈ
ಚಳಕದಲಿ ತುಡುಕಿದನು ಫಲುಗುಣನತುಳ ಗಾಂಡಿವವ ।
ಉಲಿದುದಾಹವ ಸೇನೆ ರಿಪು ಮಂ
ಡಳಿಕ[6]ರೋರಣ[6]ಗೆಡಲು ರಣ ಮಂ
ಡಲದ ಪದ್ಮವ್ಯೂಹದಲಿ ಕೆಣಕಿದ[7]ನು[7] ಕಾಳೆಗವ ॥ ೩೯

---

[1] ಮೊಗವೆತ್ತಿ (ಟ.ಚ.ತ.ದ.ನ.ಪ). [2] ಬಾ (ಟ). [3] ಮುರಹರ (ಗ).
[4] ನೆನೆ (ಟ.ತ.ದ.ನ). [5] ಲೀಲೆಯಲಿ (ಗ.ಟ.ತ.ನ), ವೇಷದಲಿ (ಚ.ಪ).
[6] ರುರವಣೆ (ತ.ದ.ನ). [7] ರು (ಕ.ಗ.ಚ).

ಇದು ಕೃತಾಂತನ ಸೀಮೆಗಳವ
ಟ್ಟುದು ಸುಯೋಧನ ನೃಪತಿ ವಿಗತಾ
ಭ್ಯುದಯನಾದನೆನುತ್ತ ಕರ್ಣಾದಿಗಳು ಕಳವಳಿಸೆ ।
ಹೆದಱಿದೆಯ ಹೇರಾಳ ವೀರರ
ಕದನದನುವನು ಕಂಡು ಕಡುಗೋ
ಪದಲಿ ಕೌರವರಾಯ ಸಮರೋದ್ಯೋಗ ಪರನಾದ ॥ ೪೦

ತಳಿತವಮಳಚ್ಛತ್ರ ಚಾಮರ
ವಲುಗಿದವು ನವ ಹೇಮ ದಂಡದ
ಹಳವಿಗೆಯ ತುದಿವಲಗೆಯಲಿ ಹಾಯ್ಕಿದರು ಪನ್ನಗನ ।
ಮೊಳಗಿದವು ನಿಸ್ಸಾಳ ಬಿರುದಾ
ವಳಿಯ ಕಹಳೆಗಳೂದಿದವು ನೆಲ
ವೊಳಗಿದಂತಿರೆ ಬಿರುದ ಹೊಗಳಿತು ಭಟ್ಟ ಸಂದೋಹ ॥ ೪೧

[1]ತಳಿತುದ[1]ರೆನೆಲೆ ರಾಯ ಘಟ್ಟಿನ
[2]ಕಳವಳಿಗರು[2]ರವಣಿಸಿದರು ಮುಱು
ದೊಳಸರಿವ ಮನ್ನೆಯರ ಹೊಯ್ದರು ಮುಂದೆ ಕಂಬಿ[3]ಯಲಿ[3]।
ಉಲಿವ ಪಾಠಕರೋದುಗಳ ಕಳ
ಕಳಿಕೆಯಲಿ ನೃಪ ಬಂದು ಗುರುವಿನ
ದಳವ ಹೊಕ್ಕನು ನಮಿಸಿ ಬಿನ್ನಹಮಾಡಿದನು ನಗುತ ॥ ೪೨

ನರನ ಬಲುಗೈತನವನೀ ಮೋ
ಹರದ ಹೆಂಗುಸುತನವ ನೀವವ
ಧರಿಸಿದಿರೆ ಜಗಭಂಡರಿವರಿಗೆ ಮತ್ತೆ ಬಿರುದುಗಳೆ ।
ತುರಗ ನೀರಡಸಿದರೆ ರಣದಲಿ
ಸರಸಿಯನು ತೋಡಿದನು ನಮ್ಮನು
ಸರಕುಮಾಡನು ಕಂಡು ಬಲ್ಲಿರೆ ಮುನ್ನ ನೀವೆಂದ ॥ ೪೩

ಅರಸ ಮೃತಸಂಜೀವಿನಿಯ ಬಲು
ಹಿರಲು ಬಹಳ ವ್ಯಾಧಿ ಮಾಡುವ
ದುರುಳತನ ತಾನೇನು ನರರಿಗೆ ದಿಟ ವಿಚಾರಿಸಲು ।

---

[1] ಚಲಿಸಿತ (ಗ.ಟ.ತ.ದ.ನ), ಕಲಕಿತ (ಚ). [2] ಬಲುಕಣಿಗಳು (ಗ.ತ.ದ.ನ.ಪ). [3] ಗರು (ಟ.ತ.ದ.ನ).

ಪರಮ ಪುರುಷೋತ್ತಮ ಮುಕುಂದನ
ಕರುಣ ಕವಚದ ಬಲದಿನಮರಾ
ಸುರರ ಬಗೆಯನು ಪಾರ್ಥನಿದು ನಮ್ಮಾರ ಹವಣೆಂದ ॥ ೪೪

ಹಗೆಯ ಪತಿಕರಿಸುವರೆ ನಾಲಗೆ
ನಿಗುರುವುದು ನೂಱು ಮಡಿಯಲಿ ಕಾ
ಳೆಗಕೆ ತನ್ನನು ಬಿಟ್ಟು ನೋಡಿರೆ ನುಡಿದು ಫಲವೇನು ।
ತೆಗೆಸುವೆನು ಫಲುಗುಣನನೆನೆ ನಸು
ನಗುತ ಗುರು ಕೌರವ ಮಹೀಶನ
ಮೊಗದ [1]ಸು[1]ಮ್ಮಾನಕ್ಕೆ ಹರುಷಿತನಾಗುತಿಂತೆಂದ ॥ ೪೫

ಆದಡೆಲೆ ಭೂಪಾಲ ನರನೊಳು
ಕಾದಲೀಶಂಗರಿದು ನೀನಿದಿ
ರಾದಡಪಜಯವಾಗದಿದ್ದರೆ ನಮ್ಮ ಪುಣ್ಯವದು ।
ಕಾದಲಾಪರೆ ಮಗನೆ ಪರರಿಗೆ
ಭೇದಿಸುವರಳವಲ್ಲ ಕವಚ[2]ವ
ನಾ[2]ದಿಯದು ಕೊಳ್ಳೆಂದು ಕೊಟ್ಟನು ಗವಸಣಿಗೆದೆಗೆದು ॥ ೪೬

ಇದು ಮಹಾದೇವರದು ವೃತ್ರನ
ಕದನದಲಿ ಕೈಸಾರ್ದುದೀಶಂ
ಗಿದು ಸುರೇಂದ್ರಂಗಾ ಸುರೇಶ್ವರನಾಂಗಿರಂಗಿತ್ತ ।
ಇದು ಬೃಹಸ್ಪತಿಗಾಂಗಿರನಿನಾ
ದುದು ಭರದ್ವಾಜಂಗೆ ಬಳಿಕಾ
ದುದು ಭರದ್ವಾಜಾಖ್ಯನಿತ್ತನು ತನಗೆ ಕರುಣದಲಿ ॥ ೪೭

[3]ನರ ಸುರಾಸುರರಿದನು[3] ಭೇದಿಸ
ಲರಿದು ಕೈಕೊಳ್ಳೆಂದು ಮಂತ್ರಿಸಿ
ಬರಿಗೆ ಕವಚವ ಕಟ್ಟಿದನು ಕೌರವ ಮಹೀಪತಿಗೆ ।
ಗುರುವಿನಂಘ್ರಿಯೊಳೆಱಗಿ ಮರಳಿದು
ಧುರವ ಹೊಕ್ಕನು ಶಕ್ರ ತನುಜನ
ಕರೆದು ಮೂದಲಿಸಿದನು ತುಳುಕಿದನಂಬಿನಂಬುಧಿಯ ॥ ೪೮

---

[1] ದು (ನ). [2] ವಿದಾ (ತ.ಟ). [3] ಸುರನರೋರಗರಿದನು (ತ.ಚ.ಟ.ತ.ನ).

ಎಲವೊ ಕೌರವ ಹಿಂದೆ ವಂಚಿಸಿ
ಕಳವಿನಲಿ ಜೂಜಾಡಿ ರಾಜ್ಯವ
ಗೆಲಿದ ಗರ್ವವನುಗುಳು ಸಮರದ್ಯೂತ ಕೇಳಿಯಲಿ ।
ಹಲಗೆಯ್ಯೆ ಕುರುಭೂಮಿ ಕೌರವ
ಕುಲದ ತಲೆ ಸಾರಿಗಳು ಸೆಱೆಯಲಿ
ಗೆಲಲು ಬಂದೆನು ಕೊಳ್ಳು ಹಾಸಂಗಿಗಳನೆನುತೆಚ್ಚ ॥ ೪೯

ಎಸಲು ಪಾರ್ಥನ ಬಾಣವನು ಖಂ
ಡಿಸಿದನೆಲವೋ ತಮ್ಮ ನಿಮಗಿಂ
ದಸುರರಿಪು ತೆತ್ತಿಗನಲೇ ತುಡುಕಲಿ ಸುದರ್ಶನವ ।
ನುಸಿಗಳೌಕಿದರಕಟ ದಿಗ್ಗಜ
ಘುಸಣಿಗೊಂಬುದೆ ನಿನ್ನ ಬಾಣ
ಪ್ರಸರಕಾನಂಜುವೆನೆ ಫಡ ಹೋಗೆನುತ ತೆಗೆದೆಚ್ಚ ॥ ೫೦

ಕಾಲುವೊಳೆಗೇಕವನಿಪತಿ ಹಱು
ಗೋಲು ನೀವಿನ್ನಱಿಯದಿದ್ದರೆ
ಹೇಳೆವಾತ್ಮಸ್ತುತಿಯ ಮಾಡೆವು ಸಾಕದಂತಿರಲಿ ।
ಮೇಲುಗವಚವ ನಂಬಿ ನಮ್ಮೊಳು
ಕಾಳೆಗವ [1]ನೀ ಬಯಸಿ[1] ಬಂದೆ ನೃ
ಪಾಲ ಜೋಡಿನ ಬಲದಿ ನಮ್ಮನು ಜಯಸುವೈ ಎಂದ ॥ ೫೧

ಆರ ದೀಪನ ಚೂರ್ಣ ಬಲದಲಿ
ವೀರ ರುದ್ರನು ಜಗವ ನುಂಗುವ
ನೋರೆಗೆಡೆಯದಿರಂಬ ಸುರಿ ಸುರಿ ಹೊಳ್ಳು ನುಡಿಯೇಕೆ ।
ಸಾರು ನೀ ಬರಹೇಳು ಕೀಚಕ
ವೈರಿಯನು ಪಡಿಸಣವ ನೋಡಲಿ
ಭೂರಿ ಬಾಣದ ಸವಿಯನೆಂದನು ಕೌರವರ ರಾಯ ॥ ೫೨

ಗರುಡನಾರೋಗಣೆಯ ಬೋನಕೆ
ಮರಳಿ ಪಡಿಸಣವೇಕೆ ಮಾತಿನ
ಮುರಿವುಗಳು [2][ಗೆಲ್ಲವಲೆ][2] ನೀ ನೆಱೆ ನೋಡು ಕೈಗುಣವ ।

---

[1] ನಿಶ್ಚಯಿಸಿ (ಟ.ತ.ದ.ನ.ಪ). [2] ಗೆಲಮಾ (ಸ).

ಅರಸ ನಿನ್ನಯ ಕೊರಳ ಕಡಿತಕೆ
ಸರಳು ಕುದಿತದಲೆನಗೆ ತನಗೆಂ
ದೊರಲುತಿವೆ ನಿನಗಿಂದಿನಲಿ ಸಾವಿಲ್ಲ ಹೋಗೆಂದ ॥ ೫೩

ಎನುತ ಕೂರಂಬಿನಲಿ ದುರ್ಯೋ
ಧನನೆಚ್ಚನು ವಜ್ರ ಕವಚದ
ಲನಿತು ಶರವಕ್ಕುಡಿದವು ಸೊಪ್ಪಾದವೇಣುಗಳು ।
ಅನಲಗಿರಿ ವಜ್ರಾಸ್ತ್ರದಲಿ ಫಲು
ಗುಣನು ಬೊಬ್ಬಿಱಿದೆಚ್ಚನೆಚ್ಚಂ
ಬನಿತು ಮುಱಿದವು ಮಸೆಯ ಕಾಣದು ಮೈ ಮಹೀಪತಿಯ ॥ ೫೪

ಹರಿಯನೆಚ್ಚನು ಫಲುಗುಣನ ತನು
ಬಿರಿ[1]ಯೆ ಬಿಗಿದನು[1] ಶರವನಾ ರಥ
ತುರಗದೊಡಲಲಿ ಹೂಳಿದನು ಹೇರಾಳದಂಬುಗಳ ।
ವರ ಕಪೀಂದ್ರನ ಘಾಸಿಮಾಡಿದ
ನುರವಣಿಸಿ ಕವಿದೆಸುವ ಭೂಪನ
ಭರದ ಬಲು ವೇಗಾಯ್ಲತನವನು ಹೊಗಳಿದನು ಪಾರ್ಥ ॥ ೫೫

ಕವಚವಿದೆ ಸರ್ವಾಂಗದಲಿ ನೃಪ
ನವಯವಕೆ ಕೇಡಿಲ್ಲ ಕೆಲಬಲ
ದವರು ನೆಱೆ ಕೈ[2]ಮಾಡು[2]ತಿದೆ ಕರ್ಣಾದಿ ನಾಯಕರು ।
ರವಿಯು ಕೈಗಳನಸ್ತಗಿರಿಯಾ
ನುವವೊಲಿದೆ ಮುನಿದಿವನ ಕೊಂದರೆ
ಪವನಜನ ಕೊಂದವನು ಹದನೇನೆಂದು ಚಿಂತಿಸಿದ ॥ ೫೬

ಎನುತ ಮೂಱಂಬಿನಲಿ ರಾಯನ
ಧನುವ ಖಂಡಿಸಿ ಮತ್ತೆ ಕೂರಂ
ಬಿನಲಿ ನೃಪನಂಗೈಯನೆಚ್ಚನು ಬಾಣ[3] ಘಟ್ಟುಗಿಯೆ[3] ।
ಜನಪ ನೊಂದನು ಬಳಿಕ ಕೃತವ
ರ್ಮನು ಕೃಪಾಚಾರಿಯನು ನಿನ್ನಯ
ತನುಜನನು ತೊಲಗಿಸಿದರೈ ಧೃತರಾಷ್ಟ್ರ ಕೇಳೆಂದ ॥ ೫೭

---

[1] ಯಲೆಚ್ಚನು (ಗ.ಚ.ಪ).  [2] ಗೈವು (ಟ.ತ.ದ.ನ).  [3] ಪುಚ್ಚಳಿಸೆ (ಕ).

ರಾಯ ನೊಂದನು ಹರಿಬಕಿಲ್ಲದ
ನಾಯಕರ ಸುಡು ಹೊಟ್ಟೆ ಹೊರೆಕೆ[1]ರ
ವಾಯಕಿ[1]ವದಿರ ಸಂತವಿಟ್ಟನು ಸ್ವಾಮಿ[2]ಕಂಟಕರ[2] |
ಆಯುಧವ ಹಿಡಿದಕಟ ರಣದಲಿ
ಸಾಯಲಮ್ಮರು ಬಿರುದ ಹೊಗಳುವ
ಬಾಯ ನೋಡೆನುತಿದ್ದುದಾ ದುಶ್ಶಾಸನಾದಿಗಳು || ೫೮

ಕದಡಿತೀ ಬಲಜಲಧಿ ಸುಭಟರು
ಹೊದಱುಗಟ್ಟಿತು ಹೊಳೆವಡಾಯುಧ
ಹೊದಕೆಗಳ [3]ಸತ್ತಿಗೆಯ ಸೂಸುವ ಚಮರ ಸೀಗುರಿಯ[3] |
ತುದಿವೆರಳ ಕಿರುದನಿಯ ಕೆಂಪಿನ
ಕದಡುಗಂಗಳ ಕುಣಿವ ಮೀಸೆಯ
ಕದನಗಲಿಗಳು ಕವಿದರೀ ಕರ್ಣಾದಿ[4]ನಾಯಕರು[4] || ೫೯

ಮುತ್ತಿದರು ಹಿಂದೆಡಬಲನ ಮುಂ
ದೆತ್ತಲೀಕ್ಷಿಸಲತ್ತ ರಾಯನ
ತೆತ್ತಿಗರ ಕೂರಂಬು ಕವಿದವು ನರನ ಹಯ ರಥವ |
ಎತ್ತ ನೋಡುವಡತ್ತ ಬಲದು
ವೃ‌ತ್ತ ಸುಭಟರ ಬಲ ಶರೌಘದ
ಕತ್ತಲೆಗೆ ಹದನೇನೆನುತ ದೈತ್ಯಾರಿ ಚಿಂತಿಸಿದ || ೬೦

ಅರಿಭಟರು ಕಟ್ಟಳವಿಯಲಿ ಮು
ಕ್ಕುಱುಕೆ ಮುರರಿಪು ಪಾಂಚಜನ್ಯವ
ನಿರದೆ ಮೊಳಗಿದ ಹನುಮ ಗರ್ಜಿಸಿದನು ಪತಾಕೆಯಲಿ |
ಸುರರ ದೈತ್ಯರ ಸಮರ ಸಿರಿ ವಿ
ಸ್ತರಿಸಿತತ್ತಲು ದ್ರೋಣನತ್ತಲು
ತೆರಳಿಚಿದನೈ ಪಾಂಡುಪುತ್ರರ ಸೈನ್ಯ ಸಾಗರವ || ೬೧

ನಕುಲನನು ಮಸೆಗಾಣಿಸಿ[5]ಯೆ[5] ಸಾ
ತ್ಯಕಿಯ ವಿರಥನ ಮಾಡಿ ಪಾಂಚಾ
ಲಕರನೋಡಿಸಿ ಮತ್ಸ್ಯ ಕೇಕಯ ಬಲವ ಬಱಿಕೈದು |

---

[1] ರುನಾಯ್ಗಳ (ಚ.ಪ). [2] ದ್ರೋಹಿಗಳ (ಚ.ಪ). [3] ಹೊಸಮಸೆಯ ಧಾರೆಯ ಸಾಲಸಂದಣಿಯ (ಚ.ಪ). [4] ಷಡುರಥರು (ಕ). [5] ದ (ಟ.ತ.ದ.ನ.ಪ).

ಸಕಲ ಸನ್ನಾಹದಲಿ [1]ಚೈದ್ಯ[1]
ಪ್ರಕರವನು ತವೆ ಕೊಂದು ಭೂಪಾ
ಲಕನ ಬೆಂಬತ್ತಿದನು ಭೀಮ ಘಟೋತ್ಕಚರ ಗೆಲಿದ ॥ ೬೬

ದಾನವರು ಬಲುಗೈಗಳಪ್ರತಿ
ಮಾನರಹುದಾದಡೆಯು ಸಮರದೊ
ಳಾನಲ[2]ಸದಳ[2]ವಸುರರಿಗೆ ಸುರರಿಗೆ ಜಯಾಭ್ಯುದಯ ।
ಏನ ಹೇಳು[3]ವುದಲ್ಲಿ[3] ಸುಭಟ ನಿ
ಧಾನರಿದ್ದುದು ಪಾಂಡವರೊಳವ
ಧಾನಗುಂದನು ರಾಯ ಗದುಗಿನ ವೀರ ನಾರಯಣ ॥ ೬೭

ಹತ್ತನೆಯ ಸಂಧಿ ಮುಗಿದುದು.

---

[1] ವೈರಿ (ಚ.ಪ). [2] ಪಜಯ (ತ.ದ). [3] ವನಿತ್ತ (ಟ.ತ.ದ.ನ).

# ಹನ್ನೊಂದನೆಯ ಸಂಧಿ

ಸೂಚನೆ ॥ ವಿಜಯ ವಿಗ್ರಹ ವೀರನಾ ಥ
ರ್ಮಜನ ನೇಮದಲಂದು ವೈರಿ
ವ್ರಜವ ತೊತ್ತಳದುಳಿದು ಸಾತ್ಯಕಿ [1]ಕಂಡನರ್ಜುನನ[1] ।

ಬವರದೊಳು ಹರಿ ಪಾಂಚಜನ್ಯದ
ರವ ಭಯಂಕರವಾಯ್ತು ಬಹಳಾ
ಹವದೊಳಗೆ ಪಾರ್ಥಂಗೆ ಬಿದ್ದುದು ಭಟರ ಭಾ[2]ರಾಂ[2]ಕ ।
ಅವನಿ ಬಿರಿದುದು ಧರ್ಮಪುತ್ರನ
ಕಿವಿಗೆ ಸೆಲ್ಲೆಹವಾಯ್ತು ರಣ ರೌ
ರವದೊಳರ್ಜುನದೇವನಳಿಯದೆ ಮಾಣ[3]ನಕಟೆಂ[3]ದ ॥ ೧

ತಂದೆ ಸಾತ್ಯಕಿ ಹೋಗು ಫಲುಗುಣ
ನೊಂದನೋ ಜೀವಿಸಿದನೋ ಸುರ
ವೃಂದವನು ಸೇರಿದನೊ ಮೇ[4]ಣೆಂಬೀ ನಿಧಾನವನು[4] ॥
ತಂದು ನೀನೆನಗಱುಹು ಪಾರ್ಥನ
ಹಿಂದೆ [5]ತಾನಿಹುದಿಲ್ಲ ಭೂಮಿಯೊ
ಳೆಂದು[5] ದುಗುಡವ ಹಿಡಿದು ಸಾತ್ಯಕಿಗರಸ ನೇಮಿಸಿದ ॥ ೨

ಮೋಲ[6]ನ[6] ಬಲೆಯಲಿ ವನದ ಮದಕರಿ
ಸಿಲುಕಲಱಿವುದೆ ಶಿವಶಿವಾ ನರ
ನಳವನಱಿಯಾ ಕೃಷ್ಣನಾರೆಂದರಸ ಮಱೆದೆಯಲಾ ।
ಕೊಳುಗುಳವನಾರೈದು ಬಾಯೆನೆ
ನಿಲುವುದನುಚಿತವರ್ಜುನನ ನೆಲೆ
ಗೊಳಿಸಿ ಬಹೆನೆಂದಾಯುಧವ ಕೊಂಡಡರಿದನು ರಥವ ॥ ೩

ದಾರುಕನು ನಿಜ ರಥವನೆಸಗಲು
ದಾರ ಸಾತ್ಯಕಿ ಭೀಮಸೇನಗ
ಧಾರುಣೀಶನ ಕೊಟ್ಟು ಭಾರಿಯ ಭಟರ ಗಡಣದಲಿ ।

---

[1] ಹೊಕ್ಕನಾಹವವ (ಟಿ.ತ.ನ). [2] ರಂ (ಕ.ತ.ದ.ನ). [3] ದಿಟವೆಂ (ಕ).
[4] ಣಾ ಶರಹತಿಗೆ ಬಳಲಿದನೊ (ಕ.ಗ.ಟಿ). [5] ಬದುಕಿಲ್ಲವನಿಯಲಿ ತನಗೆಂದು (ಪ).
[6] ದ (ಗ).

ಘಾರಣೆಯಲ್ಲೈತಪ್ಪ ನಿಜ ಪರಿ
ವಾರವನು [1]ಬೋಳೈಸಿ ನಿಸ್ಸಾ
ಳಾರವದ[1] ಘಟ್ಟಣೆಯುಲಿದಿರಾದನು ರಿಪು ವ್ರಜಕೆ ॥ ೪

ತಳಿತ ಬೆಳುಗೊಡೆಗಳಲಿ ದೆಸೆ ಕ
ತ್ತಲಿಸೆ ಕರಿ ರಥ ತುರಗ ಚರಣೋ
ಚ್ಚಲಿತ ಧೂಳಿಯು ದಂಡು ನಡೆದುದು ಸೂರ್ಯ ಮಂಡಲಕೆ ।
ಮೊಳಗಿದವು ಬಿಜಿ ಸಿಡಿಲ [2]ಕಣ್ಣಿಯ
ಕಳಚಿದಂತಿರೆ ವಾದ್ಯ ಚಯವರಿ[2]
ಬಲಕೆ ನಡೆದನು ವೀರ ಸಾತ್ಯಕಿ ಸಕಲ ಬಲ ಸಹಿತ ॥ ೫

ಬರಬರಲು ಮುಂದುಭಯ ರಾಯರ
ಗರುಡಿಯಧಿಪತಿ ಕಂಡನೆಲೆ ಸಂ
ಗರ [3]ಸಹಾಯ ಸಮಗ್ರ[3] ಸಾತ್ಯಕಿ ಗಮನವಾವೆಡೆಗೆ ।
ಧುರದ ಬಡವರನೆಮ್ಮ [4]ವಂದಿಸಿ[4]
ಮರಳು ಮೇಣ್ ನೀ ಸರಳ ಮೊನೆಯಲಿ
ಪರಿಹರಿಸಿ ಹೋಗೆನುತ ಗುರು ಚಾಚಿದನು ನಿಜ ರಥವ ॥ ೬

ನಿಂದು ಕಾದುವ ಮನವೊ ಮೇಣು ಪು
ರಂದರಾತ್ಮಜನಂತೆ [5]ಭಯದಲಿ[5]
ವಂದಿಸಿಯೆ ಬೀಳ್ಕೊಂಬ ಮನವೋ ಹೇಳು ನಿಶ್ಚಯವ ।
ಒಂದಡಾಲಿಸಿ ನಗುತ ಸಾತ್ಯಕಿ
ಯೆಂದನವಧರಿಸೈ ಗುರೋರಪಿ
ಯೆಂದು ನೀ ಗುರುವೆಂದು ತಲೆ ವಾಗಿದನು ವಿನಯದಲಿ ॥ ೭

ಇತ್ತಲೀತನ ಕೂಡೆ ಕಾದುವ
ಡತ್ತಲರ್ಜುನ[6]ನಿರ[6]ವನಱಿಯೆನು
ಚಿತ್ತದಲಿ ಖತಿಗೊಂಬನವನೀಪಾಲನೆಂದೆನುತ ।

[1] ಕೈವೀಸಿ ನಿಸ್ಸಾಳೋರಣದ (ಗ.ಪ). [2] ಬಳಗದ ಹೊಳಕೆಯೆನೆ ನಿಸ್ಸಾಳ ತತಿರಿಪು (ಟ.ತ.ನ). [3] ಸಮಗ್ರದಧೀರ (ಕ.ಗ.ಟ). [4] ಮನ್ನಿಸಿ (ಕ.ಗ). [5] ನಮ್ಮನು (ಟ.ತ.ದ.ನ). [6] ನುಳಿ (ಕ.ಗ.ನ).

ಮತ್ತೆ ಸಾತ್ಯಕಿ ಬಿಲ್ಲನಿಳುಹಿದ
ನುತ್ತಮಾಂಗಕೆ ಕರಯುಗವ ಚಾ
ಚುತ್ತ [1]ಬಿನ್ನೈಸಿದ ಧನುರ್ಧರ ಫಾಲನೇತ್ರಂಗೆ[1] ॥ ೮

ಕಳುಹಿದನು ಯಮಸೂನು ಪಾರ್ಥನ
ಬಳಿಗೆ ನೀ ಕೃಪೆಮಾಡಿ ತನ್ನನು
ಕಳುಹಬೇಹುದು ನಿಮ್ಮೊಳಿದಿರೇ ರಣಕೆ ತಾನೆನುತ ।
ಸೆಳೆದ ಬಾಣವನಿಳುಹಿ[2]ದರೆ[2] ಗುರು
ತೊಲಗಿ ಕೊಟ್ಟನು ಪದವನಹಿತಾ
ವಳಿಗೆ ಸಾತ್ಯಕಿ ಮೊಳಗಿದನು ಕಳಶಜನ ನೇಮದಲಿ ॥ ೯

ಪಾರಸಿಕ ನೇಪಾಳ ಸಿಂಹಳ
ವೀರ ಬಾಹ್ಲಿಕ ಯವನ ಕೌಸಲ
ಪಾರಿಯಾತ್ರರು ತುರುಕ ಬರ್ಬರ ವಂಗ ಮಾಗಧರು ।
ಕೌರವೇಂದ್ರನ ಮನ್ನಣೆಯ ಪರಿ
ವಾರವೀತನ ಕೆಣಕಿದರು ಸರ
ಳೋರಣವ ಸೈಗರೆದರದುಭುತವಾಯ್ತು ಸಂಗ್ರಾಮ ॥ ೧೦

ಚೀನ ಭೋಟ ವರಾಳ [3]ಕೇಶಿ ಸು[3]
[4]ದೀನ[4] ಖುರ[5]ಸಾ[5]ಣಾದಿ ದೇಶದ
ಮಾನನಿಧಿಗಳು ಕವಿದು ಮುತ್ತಿತು ಕೈಯ ಕೋಲ್ಗಳಲಿ ।
ಏನನೆಂಬೆನು ಸಮರದಲಿ ರಾ
ಜಾನು[6]ಮಿ[6]ತ ಮಂತ್ರಣವೆನಿಪ ಮುನಿ
ಪಾನುಮತವರಿದಾಯ್ತು ಸಾತ್ಯಕಿಗಾ ಮಹಾಕದನ ॥ ೧೧

ಕಡಿದನನಿಬರ ಕೈಯ ಕೋಲ್ಗಳ
ನಡಗು ದರಿದನನೇಕ ಭೂಪರ
ಗಡಣವನು ಘಾಡಿಸಿದನಂಬಿನ ಸರಿಯ[7]ನುರವಣಿಸಿ[7] ।
ಕಡಗಿ ಸಾತ್ಯಕಿಯೊಡನೆ ಬವರವ
[8]ಹಿಡಿದ ಭಟ[8]ರಮರರ ವಿಮಾನವ
ನಡರುತಿದ್ದರು ಕೊಂದನತಿಬಳನಹಿತ ಮೋಹರವ ॥ ೧೨

---

[1] ನಮಿತಾಜಾಡಣನಾದನು ಕಟಕಗುರುವಿನಲಿ (ಕ.ಗ.ಚ.ಪ). [2] ದನು (ತ.ನ). [3] ಖರ್ಪರ (ಚ.ಪ). [4] ಜೋನ (ಚ.ಪ). ಜೀನ (ತ.ನ). [5] ಸಹ (ನ). [6] ಮ (ಪ). [7] ನಂಬರಕೆ (ಚ.ಪ). [8] ತುಡುಕಿದವ (ಕ.ಗ.ದ).

ಎಡ ಬಲಕೆ ತೂಳುವ ಮದೇಭವ
ಕಡಿದು ಹರ[1]ಹಿದನೌಕಿ[1] [2]ಚೂ[2]ರಿಸಿ
ಗಡಣಿಸುವ ಭೂಪರಿಗೆ ಮಾಡಿ[3]ದನಮರ ಪದವಿಯನು[3] ।
ಕಡಿದು ಬಿಸುಟನು ಕೇಣವಿಲ್ಲದೆ
ಕಡುಗಲಿಗಳನು ವೈರಿ ಸೇನೆಯ
ನಡಗು ದಱಿದನು ಕೆಡಹಿದನು ಜಲಸಂಧ ಭೂಪತಿಯ ॥ ೧೩

ಒಂದು ದೆಸೆಯಲಿ ಪಾರ್ಥ ಸವಱಿದ
ನೊಂದು ದೆಸೆಯಲಿ ಸಾತ್ಯಕಿಯು ಸರ
ಳಿಂದ ನೊಂದುದು ಸೇನೆಯೆನೆ ಕೃತವರ್ಮಸಿದಿರಾಗಿ ।
ನಿಂದನೆಲವೋ ಮರುಳೆ ಮಾಱಿದ
ಡಿಂದುಧರ ತಲೆಗಾವಡೀಗಳೆ
ಕೊಂದಡಲ್ಲದೆ ಬಿಡೆನೆನುತ ಮೂದಲಿಸುತ್ತೈತಂದ ॥ ೧೪

ನರನ ಮೈಗಂಡೀತನಲಿ ಸಂ
ಗರವನಾದರಿಸುವೆನು ಬಳಿಕೆಂ
ದರಿದು ಕೃತವರ್ಮಕನ ರಥವನು [4]ಧನು[4]ವ ಸಾರಥಿಯ ।
ಸರಳು ಮೂಱಱಲೆಚ್ಚು ರಿಪುವನು
ಧುರ[5]ದಿ[5] ಹಿಂಗಿಸಿ ಹಂಸ ಮಯ ಮೋ
ಹರದೊಳಗೆ ಮೊಳಗಿದನು ತಾಗಿದನತಿರಥಾವಳಿಯ ॥ ೧೫

ಹೊಗಿಸದಿರಿ ಸಾತ್ಯಕಿಯ ಹಿಂದಕೆ
ತೆಗೆಸು ತೆಗೆಸೋ ಫಲುಗುಣನ ತೆ
ತ್ತಿಗನಿವನು ಹೊಯ್[6] ಹೊಯ್ಯೆನುತ ಹೊಱವಂಟರತಿರಥರು ।
ಬಿಗಿದ ಬಿಲುಗಳ ತಿರು[6]ವೆರಳ[6] ಬೊ
ಬ್ಬೆಗಳ ಕಿವಿಗಡಿಯಂಬುಗಳಿ[7]ನಾ[7]
ಳುಗಳ ದೇವನ ತಱುಬಿದರು ಕೌರವ ಸಹೋದರರು ॥ ೧೬

ಅವರ ಬಲನೆಡವಂಕದಲಿ ಸ್ಯಂ
ಧವನ ಮೊನೆಯವರೌಕಿದರು ಕೌ
ರವನ ಬಳಿಯಲಿ [8]ಸಂದಣಿಸಿದರು ಕರ್ಣ ನಂದನರು[8] ।

---

[1] ಹುತನೂಕಿ (ಕ). [2] ಭೂ (ಕ.ಗ.ಟ). [3] ಸಿ ಪರಮಸದ್ಗತಿಯ (ಕ).
[4] ಹಯ (ಗ). [5] ಕೆ (ಕ.ಗ.ಚ). [6] ಪುಗಳ (ತ). [7] ಗಾ (ಕ.ಗ.ಚ.ನ).
[8] ಕವಿದರಿನಗುರುಸುತರು ಸಾತ್ಯಕಿಯ (ಟ.ತ ನ).

ಬವರವಸದಳವಾಯ್ತು ರಿಪು ಭಟ
ನಿವಹ ಮಧ್ಯದೊಳೀತ ಸಿಲುಕಿದ
ನವಿರಳಾಸ್ತ್ರವ ಸುರಿದು ಕಾಣನು ಹಗೆಗೆ ಹಱಿವುಗಳ ॥ ೧೭

ಅತ್ತ ಸಾತ್ಯಕಿಗಾಯ್ತು ರಣದೊ
ತ್ತೊತ್ತೆ ಮೋಹರ ಮಧ್ಯ ರಂಗದೊ
ಳಿತ್ತಲರ್ಜುನನಾಹವವನೇನೆಂಬೆನದ್ಭುತವ ।
ಮತ್ತೆ ಕೃಷ್ಣನ ಶಂಖ ನಾದವ
ನಿತ್ತಲವನೀಪಾಲ ಕೇಳಿದು
ಚಿತ್ತ ಕವಡಿದುದಡಿಗಡಿಗೆ ಮನನೊಂದು ಬಿಸುಸುಯ್ದ ॥ ೧೮

ಹನ್ನೊಂದನೆಯ ಸಂಧಿ ಮುಗಿದುದು.

# ಹನ್ನೆರಡನೆಯ ಸಂಧಿ

ಸೂಚನೆ ॥ ರಾಯಸೇನಾ ಸೂಱೆಕಾಱನ
ಜೇಯ ಮಾರುತ ಸುತನು ಕೌರವ
ರಾಯನನುಜರ ಸೀಳಿದನು ಕಳಶಜನ [1]ಪರಿಹರಿ[1]ಸಿ ॥

ದೃಗುಯುಗಳ ನೀರೇಱಿದವು ಶರ
ಬಿಗಿದು ಹಲುಬಿದನಕಟ ಕಡು ವೇ
ಸಿಗನು ತಾ ತನ್ನೊಡನೆ ಫಲುಗುಣನೇಕೆ ಜನಿಸಿದನೊ ।
ಹಗೆಯ ಹಱಿವಿಂಗೊಪ್ಪುಗೊಟ್ಟನು
ಮಗನಳಲು ಮಿಗೆ ಹೂಣಿ ಹೊಕ್ಕನು
ಮಗುಳಲಱಿಯನು ತಮ್ಮನೆನುತವನೀಶ ಚಿಂತಿಸಿದ ॥ ೧

ಕಳುಹಲತ್ತ[2]ಲು ಹೋಗಿ[2] ಸಾತ್ಯಕಿ
ತಿಳಿದು ಮರಳಿದುದಿಲ್ಲ ಫಲುಗುಣ
ನಳಿದನೋ ಮೇಣುಳಿದನೋ ಶರ ಹತಿಗೆ ಬಳಲಿದನೊ ।
ತಿಳಿದು ಹೇಳುವರಾರು ಪಟು ಭಟ
ರೊಳಗೆ ಮಕುಟದ ಮಹಿಮರೆನುತಳ
ವಳಿದು ಭೀಮನ ವದನವನು ನೋಡಿದನು ಭೂಪಾಲ ॥ ೨

ಎಲೆ ವೃಕೋದರ ವೈರಿ ಮೋಹರ
ದೊಳಗೆ ಸಿಲುಕಿದನೋ ಕಿರೀಟಿಗೆ
ನೆಲದ ಋಣ ಸಂಬಂಧ ಸವೆದುದೊ ಮೇಣು ಸಮರದಲಿ ।
ತಿಳಿಯಲಟ್ಟಿದ ಸಾತ್ಯಕಿಗೆ ಕೊಳು
ಗುಳದ ಧಾರಣೆಯಾಯ್ತು ಫಲುಗುಣ
ನಳಬಳವನಱಿದಲ್ಲದೆನ್ನಸು ಸೈರಿಸದು ತನುವ ॥ ೩

ಮುರ ವಿರೋಧಿಯ ಪಾಂಚಜನ್ಯದ
ಪರಮ ರವ ಪಾರ್ಥನ ಪತಾಕೆಯ
ವರ ಕಪೀಂದ್ರನ ರಭಸವೇ ತುಂಬಿತು ಜಗ ತ್ರಯವ ।

---

[1] ಪರಿಭವಿ (ತ.ನ), ನವಘಟಿಸಿ (ಚ.ಪ). [2] ಲೈ ಹೋಧ (ಗ.ಟ.ತ.ನ).

ನರನ ಧನುವಿನ ದನಿಯ ಕೇಳಿನು
ಕರಗಿತಂತಃಕರಣವರ್ಜುನ
ನಿರವ ಕಾಣಿಸಿ ಬಾಯೆನಲು ಕೈಕೊಂಡನಾ ಭೀಮು ‖ ೪

ಅರನೆಲೆಯ ಸುಯ್ಧಾನ ಪಾಂಚಾ
ಲರಿಗೆ ನೇಮಿಸಿತನಿಲ ತನಯನ
ಬೆರಳ ಸನ್ನೆಗೆ ತೀವಿದಂಬಿನ ತೇರ ಚಾಚಿದರು ।
ಕರೆದು ತನ್ನ ವಿಶೋ[1]ಕ[1]ಗಖಿಳಾ
ಭರಣವನು ಕೊಟ್ಟನು ವರೂಥದ
ಹರಿಗೆ ಹೊಡವಂಟಡರಿದನು ನವ ರತುನ ಮಯ ರಥವ ‖ ೫

ಸೂಳು ಮಿಗಲಳ್ಳಿರಿದವುರು ನಿ
ಸ್ಸಾಳ ತತಿ ದಿಗುವಳೆಯದಲ ಕೈ
ಮೇಳವಿಸಿದವು ತಂಬಟ ಧ್ವನಿ ಜಡಿವ ಕಹಳೆಗಳು ।
ಕೀಳ ಬಗೆಯದೆ ಕೆರಳಿ ಹೊಯ್ದವು
ಕಾಲಲಿಳೆಯನು ಕುದುರೆ ಮೋಹಿಯ
ತೋಳಿನಲಿ ಮೋ[2]ದಿ[2]ದವು ಮಹಿಯನು ಸೊಕ್ಕಿದಾನೆಗಳು ‖ ೬

ಒದಗಿತೆಡ ಬಲವಂಕದೊಯ್ಯಾ
ರದಲಿ [3]ರಾವ್ತರು[3] ಮುಂದೆ ತಲೆದೋ
ಱಿದರು ಮುಂಗುಡಿಯವರು ಚೂಣಿಯ ಹೊಂತಕಾರಿಗಳು ।
[4]ಅ[4]ದಿರ್ವ ಖಡುಗದ ಕಾಂತಿ ಸೂರ್ಯನ
ಹೊದಿಸಿದುದು ಹೊದಱಿದ್ದು [5]ಕೊಂತದ[5]
ತುದಿಗಳಿತ್ತವು ರಾಹು ಭಯವನು ರವಿಯ ಮಂಡಲಕೆ ‖ ೭

[6]ಕೆಲಕೆ[6] ಹೊಳೆದವು ಕಡುಗುದುರೆ ನೆಲ
ನಳುಕೆ ನಡೆದವು ದಂತಿ ದೆಸೆಗಳ
ಹೊಲಿಗೆ ಹಱಿಯದೆ ಮಾಣವೆನೆ ಹೊಕ್ಕವು ರಥಾನೀಕ ।
ತಳಪಟವ ತುಂಬಿತ್ತು ಪಯ ದಳ
ವುಲಿವ ಕಹಳೆಯ ಚೆಂಬುಕನ ಕಳ
ಕಳಿಕೆ ಮಿಗೆ ಕೈಕೊಂಡುದನಿಲ ಕುಮಾರಕನ ಸೇನೆ ‖ ೮

---

[1] ಖಿ (ಕ). [2] ಹಿ (ಟಿ.ತ.ನ). [3] ರಾಯರು (ಚ.ತ.ನ). [4] ಬಿ (ಗ.ಟಿ.ತ.ನ). [5] ಸಿಂಧದ (ಪ). [6] ಕಲಕಿ (ಕ.ಗ.ಚ),

ಮುಸುಕಿದನು ರವಿ ಧೂಳಿಯಲಿ ಹೊಳೆ
ವಸಿ ಮುಸುಂಡಿ ತ್ರಿಶೂಲ ಕೊಂತ
ಪ್ರಸರ ಕಾಂತಿಗಳಿಳುಹಿದವು ಖದ್ಯೋತ[1]ದೀಧಿತಿಯ[1] ।
ಬಿಸಜ ಸಖನಡಗಿದರೆ ನಭದಲಿ
[2]ಮಸಗಿ[2]ದವು ತಾರೆಗಳೆನಲು ಶೋ
ಭಿಸಿದವವನೀ ಪಾಲ ಮೌಳಿ ಸುರತ್ನ ರಾಜಿಗಳು ॥ ೯

ಎಲೆಲೆ ರಿಪು[3]ಸಂವರ್ತನೊ[3]ಳು ಕೊಳು
ಗುಳಕೆ ವರ್ತಿಸಲರಿದೆನುತ ತ
ಲ್ಲಳಿಸಿ ತೆತ್ತುದು ಮನವನವನೀಪಾಲ ಸಂದೋಹ ।
ಹಳಿವಿನಬ್ಬರಕಂಜದಿರಿ ನಿಜ
[4]ಗಳದ ಹಸುಗೆಯ[4]ಹಾರದಿರಿಯೆಂ
ದಳಿ ಮನರು ಬೆಂಗೊಟ್ಟು ಹೊಕ್ಕುದು ಕಳಶಜನ ಮಱೆಯ ॥ ೧೦

[5]ಮಿಗೆ[5] ವಿರೋಧಿಯ ಬಸುಱನುಗಿ ಕು
ನ್ನಿಗಳ ಕೆಡೆ ಬಡಿ ಸೀಳು ಹೆಣ ನುಂ
ಗಿಗಳ ಹೊಯ್[6] ಹೊಯ್[6] ರಣಕೆ ಹೆದಱುವ ಕೌರವಾ[6]ನುಜರ[6] ।
ಹಗೆಯ ಶೋಣಿತ ಪಾನದಱವ
ಟ್ಟಿಗೆಗೆ ಕರೆ ಭೇತಾಳ ಭೂತಾ
ಳಿಗಳನೆನುತ ಸುಧೈರ್ಯ ನಡೆದನು ಗರುಡಿಯಾಚಾರ್ಯ ॥ ೧೧

ಏನಿದೆತ್ತಣ ರಭಸವೆಲೆ ಪವ
ಮಾನ ಸುತ ಘಡ ಮರಳು ನಿನ್ನನು
ಮಾನವಾವುದು ಗಮನವೆಲ್ಲಿಗೆ ಮಾಡು ಬಿನ್ನಹವ ।
ಆನಿರಲು ಕೈಕೊಳ್ಳದುಱುಬುವೆ
ದಾನವಾಮರರಿಲ್ಲ ನಿನ್ನಳ
ವೇನು ಸಾಕೊಮ್ಮಿಂಗೆ ಕಾವೆನು ಬೇಡ ಮರಳೆಂದ ॥ ೧೨

ಎಲೆ ಮರುಳೆ ಗುರುವೆಮಗೆ ನೀ ಹೆ
ಕ್ಕಳಿಸಿ ನುಡಿದರೆ ಮೊದಲಲಂಜುವೆ
ನುಳಿದ ಮಾತಿನಲೇನು ನಿಮ್ಮೊಡನೆನಗೆ ಸಂಗ್ರಾಮ ।

---

[1] ವೀಧಿಗಳ (ಕ.ನ). [2] ಮುಸುಕಿ (ಕ.ಗ). [3] ಸಮವರ್ತಿಯೊ (ಗ.ತ.ದ). [4] ದಳದ ವಿಜಯುವ (ಟ.ತ ನ). [5] ಬಗಿ (ಚ.ಟ.ತ ನ). [6] ಹನರ (ಕ.ಗ. ಟ.ತ.ನ).

[1]ಬಳಿಕವೀಗಳು ನಿಮ್ಮ[1] ಮೋಹರ
ದೊಳಗೆ ಕೊಡಿ ಬಟ್ಟೆಯನು ಸಿಲುಕಿದ
ಫಲುಗುಣನ ತಹೆನಣ್ಣದೇವನ ನೇಮ ತನಗೆಂದ ॥ ೧೩

ಆದರೆಲವೋ ಭೀಮ ಪಾರ್ಥನ
ಹಾದಿಯಲಿ ಗಮಿಸುವರೆ ಸಾತ್ಯಕಿ
ಹೋದವೋಲು ನೀನೆಮಗೆ ವಂದಿಸಿ ಮಾರ್ಗವನು ಪಡೆದು ।
ಹೋದಡೊಪ್ಪುವುದಲ್ಲದೇ ಬಿಱು
ಸಾದಡಹುದೇ ಬೀಳು ಚರಣಕೆ
ಕಾದುವರೆ ಹಿಡಿ ಧನುವನೆಂದನು ದ್ರೋಣನನಿಲಜನ ॥ ೧೪

ತರಳರರ್ಜುನ ಸಾತ್ಯಕಿಗಳವ
ದಿರಿಗೆ ಪಂಥವದೇಕೆ ನಿಮ್ಮನು
ಗರುಡಿಯಲಿ ವಂದಿಸುವ ವಂದನೆಯುಂಟೆ ಸಮರದಲಿ ।
ಮರುಳಲಾ ಮಱುಮಾತು ಕಡು ವೃ
ದ್ಧರಿಗದೇಕೆಂಬಂತೆ ಚಿತ್ತದ
ಹುರುಳ ಬಲ್ಲೆನು ಪಥವ ಬಿಡಿ ಕೆಲಸಾರಿ ಸಾಕೆಂದ ॥ ೧೫

ಫಡ ಫಡೆಲವೋ ಭೀಮ [2]ಬಣ[2]ಗುಗ
ಳೊಡನೆ ಸರಿಗಂಡೆನ್ನ ಬಗೆಯದೆ
ಕಡುಗುವ್ಯೆ ಕಾಳೆಗಕೆ ತಪ್ಪೇನಾದಡನುವಾಗು ।
ಒಡಲನೀವೆನು ವಿನಯದೆಡೆಗವ
ಗಡಿಸಿದರೆ ಕೊಲುವೆನು ರಿಪು ವ್ರಜ
ಮೃಡನನಱಿಯಾ ದ್ರೋಣ ತಾನೆನುತೆಚ್ಚನನಿಲಜನ ॥ ೧೬

ಈತನೊಡನಂಬಿನಲಿ ಕಾದಲು
ಭೂತನಾಥಂಗರಿದು ಸಾರಥಿ
ಪೂತುರೇ ಎನುತಿಳಿದು ರಥವನು ತುಡುಕಿದನು ಗದೆಯ ।
ಆತನಸ್ತ್ರಕೆ ದಂಡೆಯೊಡ್ಡಿ ಮ
ಹಾತಿಬಳ ಕವಿದನು ವಿರೋಧಿಯ
ಸೂತನನು ಕೆಡೆಹೊಯ್ದು ಕೊಂದನು ರಥದ ಕುದುರೆಗಳ ॥ ೧೭

[1] ಬಳಿಕ ನೋಡುವ ನಿಮ್ಮ (ಕ), ಬಳಿಯಲೀಗಳು ನಿನ್ನ (ಚ), ಕಲಿಗಳೇ ನಿಮ್ಮವರು (ಟ.ನ). [2] ಬಿನ (ಕ.ಚ.ಪ).

ಇದು ನಿಮಗೆ ವಂದನೆಯೆನುತ ನಿಜ
ಗದೆಯಲಾತನ ರಥವ ಹುಡಿಗು
ಟ್ಟಿದನು ಸುರಗಿಯನುಗಿಯಲಪ್ಪಳಿಸಿದನು ಮೋಹರವ ।
ಇದಿರಲಿರಲಳವಡದೆ ಗುರು ಹಿಂ
ಗಿದನು ಶಕಟ ವ್ಯೂಹವನು ಮ
ಧ್ಯದೊಳು ಥಟ್ಟುಗಿದುರವಣಿಸಿ ಪವಮಾನ ಸುತ ನಡೆದ ॥ ೧೮

ಹರಿಯ ಕುಲಿಶದ ಧಾಳಿಯಲಿ ಕುಲ
ಗಿರಿಗಳಿಬ್ಬಗಿಯಾದವೋಲು ಮಂ
ದರದ ಘಾರಾಘಾರಿಯಲಿ ಬಾಯ್ಬಿಡುವ ಕಡಲಂತೆ ।
ಅರಿ ವರೂಥಿನಿ ಕೆದಱಿ [1]ತಳಿತ[1]ವು
ತುರಗ ಕರಿ ರಥ ಪಾಯಿದಳ ಬಲ
ಜೊರಳಿಯೊಡೆದುದು [2]ಹೊದಱು ತಗ್ಗಿತು[2] ಹೋಣಿಗರ ಮನದ ॥೧೯

ಹೊಸ ರಥವ [3]ತಾ ಹೋದನೇ[3] ಸಂ
ಧಿಸುವೆನಿನ್ನನಿಲಜನು ಕುಂತಿಯ
ಬಸುಱ ಹೊಕ್ಕರೆ ಹೊಗುವೆನೆನುತಾ ದ್ರೋಣ ಗಜಬಜಿಸೆ ।
ಕುಸುರಿ ದಱಿದನು ಮುಂದೆ ವೈರಿ
ಪ್ರಸರವನು ಸಂವರ್ತ ರುದ್ರನೊ
ಹೊಸಬನಿವನಾರೆಂದು ತಲ್ಲಣಿಸಿತ್ತು ರಿಪು ಸೇನೆ ॥ ೨೦

ಎಚ್ಚನುಚ್ಚಳಿಸುವ ತುರಂಗವ
ನೊಚ್ಚತವೆ ಕೊಂದನು ರಥೌಘವ
ನಚ್ಚರಿಯರೊಡನಾಡಿಸಿದನುರವಣಿಪ ಕಾಲಾಳ ।
ಕಿಚ್ಚುಗಿಡಿ ಗೆದಱುವ ಸಿಳೀಮುಖ
ಕೊಚ್ಚಲಿಭದವಯವವನಮರರಿ
ಗಚ್ಚರಿಯ ತನಿ ಸೂಱೆ ಬಿಟ್ಟನು ಭೀಮ ಬವರದಲಿ ॥ ೨೧

ತನತನಗೆ ಮುಂಕೊಂಡು ಸಂಗರ
ವೆನಗೆ ತನಗೆಂಬಖಿಳ ವೀರಾ
ವನಿಪರಹಮಿಕೆಯಿಂದ ಹೊಯ್ದರು ಪವನ ನಂದನನ ।

[1] ತುಳಿದ (ಕ). [2] ಹೊದಱುದೆಗೆದುದು (ಗ.ದ.ಪ). [3] ಮೋಕ್ಳೈಸಿ ತಾ (ಜ.ಟ.ದ).

ಮೊನೆಯಲಗಿನಂಬುಗಳ ಬಿಱು ಸರಿ
ಗನಿಬರಂಗವ ತೆತ್ತು [1]ವಾತಾ
ಯನಿತ[1]ವಿಗ್ರಹವಾಯ್ತು ನಿಗ್ರಹದತಿ ಮಹಾರಥರು ‖ ೨೨

ಸಿಡಿದ ಕಣ್ಣಾಲಿಗಳ ಮಿಾಂಗಳ
ಕೆಡೆದ ಸತ್ತಿಗೆಯಬುಜ ಪಂಕ್ತಿಯ
ಬಿಡುಮಿದುಳ ರಾಸಿಗಳ ರಚನೆಯ ರಾಜ ಹಂಸೆಗಳ ।
ಬಿಡದೆ ಬೆಂಡೆದ್ದೇಳ್ವ ತಲೆಗಳ
ಗಡಣ ನೀರ್ವಕ್ಕಿಗಳ ಸರಸಿಯ
ನಡುವೆ ನಲಿ ನಲಿದಾಡುತಿರ್ದುದು ಭೀಮ ವನ ದಂತಿ ‖ ೨೩

ಮಕುಟ ಬದ್ಧ ಮಹೀಶ ವೇಣು
ಪ್ರಕರದಲಿ ಛಟಛಟಿಸಿ ತುರಗ
ಪ್ರಕರ ಪಲ್ಲವ ಭೂಜ ರಾಜಿಗಳೊಳಗೆ ಘುಳುಘುಳಿಸಿ ।
ಸಕಲ ಗಜ ರಥ ಭೂಧರಾಧಿ
ತ್ಯಕೆಯೊಳಗೆ ಭುಗಿಭುಗಿಸಿ ರಿಪು ವನ
ನಿಕರದಲಿ ಸಲೆ ಬೀದಿ ವರಿದುದು ಭೀಮ ದಾವಾಗ್ನಿ ‖ ೨೪

ಕಲಕೆ ಚಕ್ರ ವ್ಯೂಹ ಹಂಸಾ
ವಳಿಗೆ ಹಂಸ ವ್ಯೂಹ ಹಿಂದಣ
ಬಲದೊಳಾ ಮೋಹರಕೆ ತರಹರವಾಯ್ತು ಪದ್ಮದಲಿ ।
ಬಳಿಕ ಮಕರ ವ್ಯೂಹದಲಿ ಮಂ
ಡಳಿಕರಾಂತುದು ಭೀಮಸೇನನ
ಕೊಳುಗುಳಕೆ ಕೈಕೊಂಡರಾ ಕರ್ಣಾದಿ ಪಟು ಭಟರು ‖ ೨೫

ನಿಲಿಸಿದರು ರವಿ ಸುತನಸೀತನ
ತಲೆಯ ಮಿಾಸಲು ತಮ್ಮ ಸರಳದು
ಗೆಲವು ನಿಮಗಲ್ಲೆನುತ ಹೊಕ್ಕರು ಕೌರವಾನುಜರು ।
[2]ಚಲಿಸಿತ[2]ರನೆಲೆ ಕೋಡ ಕೈಯಲಿ
ಮೊಳಗಿದವು ನಿಸ್ಸಾಳ ಬಲು ಮಂ
ಡಳಿಕರೆಡ ಬಲ ಪಂಕದಲಿ ನೆರೆದುದು ಕುಮಾರಕರು ‖ ೨೬

[1] ನಾನಾತನಸು (ಕ), ನಾನಾವಿನುತ (ನ). [2] ತುಳುಕಿತ (ಕ), ತಳಿ
ತುದ (ಚ.ಪ).

ಸಾಲು ಗೋವಳಿ ಗಟ್ಟಿಗೆಯ ಕುಂ
ತಾಳಿಗಳ ತೂಗಾಟ ಮಿಗೆ ದು
ವ್ವಾಳಿಗಳ ದೆಖ್ಖಾಳ ಗಜ ರಥ ತುರಗ ಸೇನೆಯಲಿ ।
ಮೇಲೆ ಹೇಳಿಕೆಯಾಯ್ತು ಕವಿವ ನೃ
ಪಾಲಕರು ಭೀಮಂಗೆ ಹರಣದ
ಸಾಲಿಗರು ಸಂದಣಿಸಿತಬುಜ ವ್ಯೂಹ[1]ದಗ್ರ[1]ದಲಿ ॥ ೨೭

ದುರುಳರುರವಣಿಸಿದರು ಜವ್ವನ
ದುರು ಮದದ ಭರತಾನ್ವಯದ ದು
ರ್ಧರ ಮದದ ಘನ ಭುಜ ಮದದ ದಿವ್ಯಾಸ್ತ್ರದಙಕೆಗಳ ।
[2]ಭರ[2] ಮದದ ಮರ್ಕಟ ವಿಲಾಸರು
ಧುರ ರಚಿತ ಪರಿಹಾಸರಭಿಜನ
ಕುರುವಿ[3]ನಾಶ[3]ರು ತಾವಕರು ಧೃತರಾಷ್ಟ್ರ ಕೇಳೆಂದ ॥ ೨೮

ಎಳೆಯ ಬಾಳೆಯ ಸುಳಿಗೆ ಸೀಗೆಯ
ಮೆಳೆಯೊಡನೆ ಸರಸವೆ ಕುಮಾರರ
ಬಲುಹ ನೋಡು ವಿಶೋಕ ತೊಡಗಿದರೆಮ್ಮೊಡನೆ ರಣವ ।
ಕಲಹದಲಿ ಮೈದೋಱದಿವದಿರ
ತಲೆಗಳಿವು ವಾರಕದ[4]ವಿವನ[4]ರೆ
ಗಳಿಗೆಯಲಿ ತಾ ಕೊಂಬೆನೆಂದನು ನಗುತ ಕಲಿ ಭೀಮ ॥ ೨೯

ಬಿಲುದೆಗಹಿನಾಕರ್ಣಪೂರದ
ಹುಳುಕನನಿಲಜನಿರಲು ಸಿಂಹದ
ಹೊಲನ ಹೊಗುವಿಭದಂತೆ ಹೊಱಕಾಲ್ಗೊಳುತಲಿರೆ ಕಂಡು ।
ತೊಲಗದಿರಿ ತಮ್ಮಂದಿರಿರ ಕುರು
ಕುಲ ಲಲಾಮರು ಜಗದೊಳತಿ ವೆ
ಗ್ಗ[5]ಳೆಯ[5] ಸುಭಟರು ನೀವೆನುತ ತೆಗೆದೆಚ್ಚನಾ ಬೀಮ ॥ ೩೦

ಸರಳ ಸೊಂಪಿನ ಸೋಹಿನಲಿ ನಿಱಿ
ಗರುಳ [6]ದಾ[6]ವಣಿ ವಲೆಗಳಲಿ ಸಂ
ಗರ[7]ದ ಸುಭಟ ವ್ರಜದ ಮಧ್ಯದ[7] ಗೂಡು ವಲೆಗಳಲಿ ।

---

[1] ಮಧ್ಯ (ಚ.ಪ). [2] ಸಿರಿ (ಗ.ಚ.ಪ). [3] ಲಾಸ (ಕ.ಗ.ಚ). [4] ತಲೆಯು (ಕ.ದ), ನಿವನ (ಚ). [5] ಳರು (ಕ.ಚ.ತ). [6] ಡಾ (ಕ.ಗ.ಚ.ನ.ಪ).
[7] ಕಠೋರ ಧ್ವನಿಯ ವಾದ್ಯದ (ಗ.ಚ.ಪ).

ಉರುಗದೆಯ ದಡಿ ವಲೆಯುಲಿಸಿ ಮು
ದ್ಗರದ ಸಿಡಿ ವಲೆಗಳಲಿ ಸಮರದೊ
ಳರಿ ಮೃಗ ವ್ರಾತವನು ಭೀಮ ಕಿರಾತ [1]ಕೈಕೊಂಡ[1] ॥ ೩೧

ವಿಂದನನುವಿಂದನನು ಚಿತ್ರಕ
ನಂದನನ ಚಿತ್ರಾಂಗದನ ಸಾ
ನಂದ ದುಸ್ಸಹ ಶಂಕುಕರ್ಣ ಸುದೀರ್ಘಬಾಹುಕನ ।
ನಂದ ಚಿತ್ರಾಂಬಕನ ಕುಂತಿಯ
ನಂದನನು ಬಱಿಕೈದು ಭಾಸ್ಕಠ
ನಂದ[2]ನಾ[2]ಶ್ವತ್ಥಾಮರನು ಮೊದಲಿಸಿ ತಾಗಿದನು ॥ ೩೨

ಕೆಡೆದುದ[3]ನುಜರು[3] ಕೇಣವಿಲ್ಲದೆ
ತೊಡಗಿದಾಹವದೊಳಗೆ ಕೊಂದವ
ಕೊಡನ ಮಗನೋ ದೂಱು ಹೊತ್ತುದು ಬಱಿದೆ ಹಗೆಗಳಿಗೆ ।
ನುಡಿದು ಫಲವೇನಿನ್ನು ಭೀಮನ
ಬಿಡದೆ ಸುಭಟರು ನೂಕಿ ಯೆಂಬೀ
ನುಡಿಯ ಕೇ[4]ಳಿದು[4] ಖಾತಿಗೊಂಡನು ಮತ್ತೆ ಕಲಿ ದ್ರೋಣ ॥ ೩೩

ಹನ್ನೆರಡನೆಯ ಸಂಧಿ ಮುಗಿದುದು.

---

[1] ತವೆಕೊಂದ (ನ.ಟ.ತ.ದ), ಸವಱಿದನು (ಚ.ಪ). [2] ನ (ಸ.ತ).
[3] ...ರು (ಟ.ತ.ನ). [4] ಳುತ (ಕ.ಗ.ಚ).

# ಹದಿಮೂರನೆಯ ಸಂಧಿ

ಸೂಚನೆ ॥ ಗಂಡುಗಲಿ ಕೋದಂಡ ರುದ್ರನ
ಕಂಡು ವಿರಥನ ಮಾಡಿದನು ಮಾ
ರ್ತಾಂಡ ತನಯನ ಗೆಲಿದು ರಣದಲಿ ನೊಂದನಾ ಭೀಮ ॥ *

ಕೇಳು ಜನಮೇಜಯ ಧರಿತ್ರೀ
ಪಾಲ ಕಡುಗೋಪದಲಿ ಕಳಶಜ
ನಾಳ ಮೇಳೈಸಿದನು ನಿಜ ಮೋಹರವ ಹಿಂದಿಕ್ಕಿ ।
ಕಾಳೆಗದೊಳನಿಲಜನನಟಿಸುತ
ಲೋಲುಪತಿ ಮಿಗೆ ಬರುತ ಭೀಮನ
ಕೋಲ ಕೋಳಾಹಳವನೀಕ್ಷಿಸುತಲ್ಲಿಗೈತಂದ ॥ ೧

ಇದೆ ಗದಾ ದಂಡದ ಹತಿಗೆ ಮು
ಗ್ಗಿದ ಮತಂಗ ವರೂಥ ಚಯಪಿ
ಲ್ಲಿದೆ ಶರಾಳಿಯಲತಿರಥರ ಗೋನಾಳಿ ಗಡಿತಪಿಪ ।
ಇದೆ ರಥದ ಪದ ಘಾತದಲಿ ಹೆಣ
ಮೆದೆಯ ಪಾಯದಳೌಘ ಭೀಮನ
ಕದನ ಪಥವಿದೆಯೆನುತ ನಗುತೈತಂದನಾ ದ್ರೋಣ ॥ ೨

ಕಡಿದ ಖಡೆಯದ ಕುಸುರಿಗಳ ಚಿನ
ಕಡಿಯ ಹೀರಾವಳಿಯ ಮಕುಟದ
ಸಡಿಲಿದನುಪಮ ರತುನ ರಾಜಿಯ ಮುಱಿದ ಕಂಕಣದ ।
ಕಡಿಕು ಪಸರಿಸೆ ಕೌರವಾನುಜ
ರಡೆಗೆಡೆದ ರಣ ಕಾಂಚನಾದ್ರಿಯ
ಸಿಡಿಲ ಕಾಳೆಗದಂತೆ ಮೆಱೆದಿರೆ ಕಂಡನಾ ದ್ರೋಣ ॥ ೩

ಉಡಿದ ಬೆಳುಗೊಡೆಯಬುಜ ಪಂಕ್ತಿಯ
[1]ಸಿ[1]ಡಿದ ಚಮರಿಯ ಹಾವಸೆಯ ಕೆಸ
ಱಿಡುವ ರಕುತಾಂಬುಗಳ ನರವಿನ [2]ನಾಳದೇಳಿಗೆಯ[2] ।

---

* ಕ.ಚ.ಪ. ಪ್ರತಿಗಳಲ್ಲಿ ಈ ಸೂಚನೆಯು ಈ ಸಂಧಿಯ ೧೯ನೆಯ ಪದ್ಯವಾದ ಮೇಲೆ ಬರುತ್ತದೆ.

[1] ಹಿ (ಕ.ಗ), ಜ (ಚ). [2] ನಾಣದೇಳ್ಗೆಗಳ (ಕ.ಗ.ಚ).

ಕಡು ಮದದ ಕಾಡಾನೆ ಹೊಕ್ಕೊಡ
ನೊಡನೆ [1]ಕಲಕಿ[1]ದ ಕೊಳನವೋಲು ಭಯ
ವಡಸುತಿದೆ ಪವನಜನ ರಣ ಪಥವೆನುತ ಬರುತಿರ್ದ ‖ ೪

ಧುರದೊಳಗೆ ಗುರು ವಹಿಲ ಮಿಗಲ್ಕೆ
ತರಲು ದೂರಕೆ ಕೇಳಲಾದುದು
ಹರಿ ಸುತನ ಹರಿ ನಾದ [2]ತೇಜಿಯ ರಥದ ರೌದ್ರ ರವ[2] ।
ತಿರುವಿನಬ್ಬರವಂಬಿನುಬ್ಬರ
ಧುರ ರಭಸ ಕಲ್ಪಾಂತ ಘನ ಸಾ
ಗರದ ಮೊರೆವಾಳಾಪ ಭೀಮನ ಸಮರದಾಟೋಪ ‖ ೫

ಅತ್ತಲದೆ ಪವನಜನ ಕಳಕಳ
ದತ್ತ ಹರಿಸೈ ರಥವನೆನುತು
ದ್ವೃತ್ತ ಭೀಮನನೈದಿದನು ಚಾಪಾಗಮಾಚಾರ್ಯ ।
ಇತ್ತಲಿತ್ತಲು ಭೀಮ ಬಣಗುಗ
ಳತ್ತಲೇಕೈ ವೀರ ಶೌರ್ಯೋ
ನ್ಮತ್ತನಹೆ ಯಿದಿರಾಗೆನುತ ಕೆಣಕಿದನು ಪವನಜನ ‖ ೬

ತಿರುಗಿ ನೋಡಿದನಸ್ತ್ರ ಶಿಕ್ಷಾ
ಗುರುವ ಕಂಡನು ಮನದೊಳಾತನ
ಚರಣಕಭಿನಮಿಸಿದನು ನುಡಿದನು ವಿನಯ ಪರನಾಗಿ ।
ಗುರುವೆ ಬಿಜಯಂಗೈದ ಹದನನು
ಕರುಣಿಸೈ ಕಾಳೆಗದ ಭಾರಿಯ
ಭರವಸದಲಾನಿದ್ದೆನೆಂದನು ನಗುತ ಕಲಿ ಭೀಮ ‖ ೭

ಅನಿಲ ಸುತ ಫಡ ಮರಳು ಠಕ್ಕಿನ
ವಿನಯವೇ ನಮ್ಮೊಡನೆ ಕೌರವ
ನನುಜರನು ಕೆಡೆಹೊಯ್ದು ಗರ್ವದ ಗಿರಿಯುನಿಳಿಯೆನುತ ।
ಕನಲಿ ಕಿಡಿ ಸುರಿವಂಬ ತೆಗೆದು
ಬ್ಬಿನಲಿ ಕವಿದೆಸುತಿರೆ ವೃಕೋದರ
ನನಿತು ಶರವನು ಕಡಿದು ಬಿನ್ನಹ ಮಾಡಿದನು ನಗುತ ‖ ೮

---

[1] ಕದಡಿ (ಚ.ಟ.ತ.ದ.ಪ). [2] ತೇಜಿಯ ರಥದ ನಿಷ್ಠುರವ (ಕ.ಚ), ಜಿತಲಯ ರುದ್ರನಾಟೋಪ (ಗ), ಜಿತಲಯರುದ್ರ ನಿಷ್ಠುರದ (ಟ.ತ.ನ).

ಗುರುವೆಮಗೆ ನೀವ್ ನಿಮಗೆ ನಾವ್ ಡಿಂ
ಗರಿಗರೆಮ್ಮಿತ್ತಂಡವಿದಱಲಿ
ವರ ವಿನೀತರು ಕೆಲರು ಕೆಲಬರು ಧೂರ್ತರಾಗಿಹರು ।
ನರ ಯುಧಿಷ್ಠಿರ ನಕುಳ ಸಹದೇ
ವರವೊಲೆನಗಿಲ್ಲತಿ ಭಕುತಿ ಸಂ
ಗರದೊಳೆನ್ನಯ ದಂಡಿ ಹೊಸ ಪರಿ ಬೇಡ ಮಱಳೆಂದ ॥ ೯

ಎಲವೊ ದುಷ್ಟ ಗ್ರಹದ ಬಾಧೆಯ
ನಿಲಿಸಲಱಿಯರೆ ಮಂತ್ರವಾದಿಗ
ಳಳಿ ಬಲ[1]ವ[1]ನಂಜಿಸಿದ ಕೊಬ್ಬುಗಳಕಟ ನಮ್ಮೊಡನೆ ।
ಗೆಲುವ ಕೊಡುವೆನು ವಾಸಿಯೇ ಮ
ಕ್ಕಳುಗಳೊಡನೆಂದಿರ್ದಡತಿ ವೆ
ಗ್ಗಳನು ನೀನೆಂದಂಬ ಸುರಿದನು ಪವನಜನ ಮೇಲೆ ॥ ೧೦

ನಿಲ್ಲು ಕಳಶಜ ತಪ್ಪಿದವ ನಾ
ನಲ್ಲ ಫಲುಗುಣ ಸಾತ್ಯಕಿಯವೋ
ಲಿಲ್ಲ ತನ್ನಲಿ ವಿನಯ ಹಾರದಿರಿಲ್ಲಿ ಮನ್ನಣೆಯ ।
ಬಿಲ್ಲ ಗುರುವಿನ ಬಿಂಕ ಬಯಲಾ
ಯ್ತಿಲ್ಲಿಯೆಂಬಪಕೀರ್ತಿ ಹೊಱುವುದು
ಬಲ್ಲೆನೆನುತುರವಣಿಸಿದನು ಮುಂಗಯ್ಯ ಮಱಿ ಪಿಡಿದು ॥ ೧೧

ಮಳೆಗೆ ತೆರಳದೆ ಕೋಡ ಬಾಗಿಸಿ
ಕಲಿ ವೃಷಭ ಹೊಗುವಂತೆ ದ್ರೋಣನ
ಬಲು ಸರಳ ಸರಿ ವಳೆಗೆ ದಂಡೆಯನೊಡ್ಡಿ ದಳವುಳಿಸಿ ।
ಅಳವಿ ದಪ್ಪದೆ ಕೆಲದ ಖಡ್ಗವ
ಸೆಳೆದು ಗುರುವಪ್ಪಳಿಸಿ ಕೈಯಲಿ
ಕಳೆದು ಕಟ್ಟಳವಿಯಲಿ ಹೊಕ್ಕನು ಭೀಮ ಬೊಬ್ಬಿಱಿದು ॥ ೧೨

ಗಜಱಿನಲಿ ಗಿರಿ ಬಿರಿಯೆ ದಿವಿಜ
ವ್ರಜ ಭಯಂಗೊಳೆ ಹೂಣೆ ಹೊಕ್ಕರಿ
ವಿಜಯನಿಟ್ಟಣಿಸಿದ[2]ರೆ[2] ಹಿಮ್ಮೆಟ್ಟಿದರೆ ಬಳಿಸಲಿಸಿ ।

[1] ರ (ಟ.ತ). [2] ನು (ತ.ಟ).

ಸುಜನ ವಂದ್ಯನ ರಥವ ಹಿಡಿದನಿ
ಲಜನು ಮುಂಗೈಗೊಂಡು ಪಡೆ ಗಜ
ಬಜಿಸೆ ನಭಕೀಡಾಡಿದನು ಹಿಡಿ ಬುಗುರಿಯಂದದಲಿ ॥ ೧೩

ಗಗನದಲಿ ರಥ ಯೋಜನಾಂತಕೆ
ಚಿಗಿದು ಧರಣಿ[1]ಯ ಮೇಲೆ[1] ಬೀಳಲು
ನಗುತ ಕರಣವ ಹಾಯ್ಕಿ ಮಂಡಿಯೊಳಿರ್ದನಾ ದ್ರೋಣ ।
ಜಗದೊಳಾವಭ್ಯಾಸಿಯೋ ತಾ
ಳಿಗೆಯ ತಲ್ಲಣದೊಳಗೆ ನೆಗಹಿನ
ಸುಗಮ ಸಾಹಸನರರೆ ಮಝು ಭಾಪೆಂದುದುಭಯ ಬಲ ॥ ೧೪

ತೂಗಿ ಕೆಡೆದುದು ತೇರು ಹುಡಿ ಹುಡಿ
ಯಾಗಿ ಹೋದುದು ದ್ರೋಣ ಮನದನು
ರಾಗ ಮಿಗೆ ಮತ್ತೊಂದು ಹೊಸ ರಥದೊಳಗೆ ವೆಂಠಣಿಸಿ ।
ಹೋಗ ಬಿಡೆನಿನ್ನನಿಲಜನ ತಲೆ
[2]ವಾ[2]ಗಿಸುವೆನಿನ್ನೆನುತ ಶಕಟದ
ಬಾಗಿಲಲಿ ಗಿರಿಯಂತೆ ನಿಂದನು ಸಮರಕನುವಾಗಿ ॥ ೧೫

ಕೊಲುವುದನುಚಿತವೆಂದು ಗಗನ
ಸ್ಥಳಕೆ ರಥವನು ಬಿಸುಡೆ ಯೋಜನ
ದಳವಿಯಲಿ ಲಂಘಿಸಿತು ಹಯ ತತಿ ಸೂತಜರು ಸಹಿತ ।
ಎಲೆಲೆ ಕಟಕಾಚಾರ್ಯನಕಟಾ
ಕೊಳುಗುಳದೊಳಪದೆಸೆಯ ಕಂಡನೊ
ಗೆಲಿದನೋ ರಿಪುವೆಂದುಲಿಯೆ ನಿಜ ಪಾಯ ದಳವಂದು ॥ ೧೬

ನಿಜ ವರೂಥದಲಂದು ಕೌರವ
ವಿಜಯ ಮಾರುತಿ ಹೊಕ್ಕು ರಿಪು ಭೂ
ಭುಜರನಜೆಯಟ್ಟಿದನು ಬಹಳಿತ ಸಿಂಹ ನಾದದಲಿ ।
ತ್ರಿಜಗ ತಲ್ಲಣಿಸಿದುದು ವರ ವಾ
ರಿಜ ವಿಲೋಚನ ಕೇಳಿದನು ಪವ
ನಜನ ಪಡಿಬಲ ಬಂದುದೆಂದಱುಹಿದನು ಪಾರ್ಥಂಗೆ ॥ ೧೭

---

[1] ಗೆ ಕವಿದು (ಗ.ಟ.ದ.ನ). [2] ದೂ (ಕ.ಚ.ಪ).

ಭಕುತ ಮುಖ ದರ್ಪಣನು ಬಹ ಸಾ
ತ್ಯಕಿಯು ಕಂಡನು ಭೀಮಸೇನನ
ವಿಕಟ ಸಿಂಹ ಧ್ವನಿಯನಾಲಿಸಿ ಹಿಗ್ಗಿದನು ಪಾರ್ಥ |
ವಿಕಳತನವನು ಮಾದು ಧರ್ಮಜ
ಸುಕರ ಪರಿತೋಷದಲಿರಲು ರಿಪು
ನಿಕರ ಮುಱಿದುದು ಪವನ ಪುತ್ರನ ರಥದ ಖುರ ಪುಟಕೆ || ೧೮

ಅರಿ ಭಟರು ಪವನಜನನಾನುತ
ಮರಳುತುಬ್ಬರ ಬವರವನು ತಂ
ದರನೆಲೆಗೆ ಹಾಯ್ಕಿದರು ಕರ್ಣಾದಿಗಳ ಮುಂಚಿನಲಿ |
ಜರಿದುದತಿರಥ ರಾಜಿ ಬಾಯಲಿ
ಕರಿಷ ಹಾಯ್ದುದು ಭೂಮಿಪಾಲರ
ಬಿರುದು ಮುದ್ರಿಸಿದವು ಸಮೀರ ಕುಮಾರನುರವಣಿಗೆ || * ೧೯

ಓಡುವುದು ಗರುವಾಯಿಯೇ ಭಯ
ಬೇಡ ಭೂಮಿಪರೆನ್ನ ತೇರಿನ
ಕೂಡೆ ಗಡಣಿಸಿ ಸಾಕು ತಾರೆನು ನಿಮಗೆ ಕಾಳೆಗವ |
ನೋಡಿ ನಿಮಿಷಕೆ ಭೀಮನಡಗಿನ
ಲೂಡುವೆನು ರಣ ಭೂತವನು ಭಯ
ಬೇಡೆನುತ್ತನಿಲಜನ ರಥವನು ತಱುಬಿದನು ಕರ್ಣ || ೨೦

ಬಿಗಿದ ಹುಬ್ಬಿನ ಬಿಲ್ಲ ತೆಗಹಿನ
ಹೊಗರಲಗಿನುರವಣೆಯ ರಥದಲಿ
ಮಗುಳ್ದ ಮಂಡಿಯ ದೃಷ್ಟಿಯೋರೆಯ ಬಾಗಿದವಯವದ |
ಅಗಿದು ಕಡುಗೋಪವನು ಬೆಸಲಹ
[1]ನ[1]ಗೆಯ ನಿಱಿಗೆಯಲರಿಯ ನುಂಗುವ
ಬಗೆಯ ಬಲುಗೈ ಕರ್ಣ ಮೂದಲಿಸಿದನು ಪವನಜನ || ೨೧

ಸಾರೆಲವೊ ಸಾಯದೆ ವೃಥಾಹಂ
ಕಾರವೇತಕೆ ನುಗ್ಗ ಸದೆದ ಕ
ಠೋರ ಸಾಹಸವಿಲ್ಲಿ ಕೊಳ್ಳದು ಕರ್ಣ ತಾನೆನುತ |

* ಇಲ್ಲಿಗೆ (ಕ.ಚ.ಪ.) ಪ್ರತಿಗಳಲ್ಲಿ ಸಂಧಿ ಮುಗಿದಿದೆ. [1] ನಿ (ಕ ಗ.ಚ).

ಆರಿದ್ಯೆದಂಬಿನಲಿ ಪವನಕು
ಮಾರಕನನೆಸೆ ಮೇಘ ಘನ ಗಂ
ಭೀರ ರವದಲಿ ಭೀಮ ನುಡಿದನು ಭಾನುನಂದನನ ॥ ೨೨

ದೇವ ದಾನವ ಭಟರು ನುಗ್ಗಿಂ
ದಾವು ಬಗೆದಿಹೆವುಳಿದ ಮರ್ತ್ಯರು
ನೀವು ತಾವೇಸಱ ಸಮರ್ಥರು ಕರ್ಣ ಗಳಹದಿರು ।
ಡಾವರಿಗತನವಾರ ಕೂಡೆ ವೃ
ಥಾ ವಿಲಾಸಿಗಳೆಲವೊ ಸುಭಟರೆ
ನೀವೆನುತ ಹದಿನೈದು ಶರದಿಂದೆಚ್ಚನಿನಸುತನ ॥ ೨೩

ಎಸಲು ಭೀಮನ ಬಾಣವನು ಖಂ
ಡಿಸಿದ ಮೂಱಂಬಿನಲಿ ರವಿಸುತ
ನಸಮ ಸಾಹಸಿ ಯೆಚ್ಚಡೆಚ್ಚನು ಭೀಮ ಮಱು ಗಣೆಯ ।
ನಿಶಿತ ಶರವನು ಹತ್ತು ಶರದಲಿ
ಕುಸುರಿ ದಱಿದನು ಕರ್ಣನಿಬ್ಬರ
ದೆಸೆಗೆ ದೇವಾನೀಕ ಮೆಚ್ಚಿತು ಭೂಪ ಕೇಳೆಂದ ॥ ೨೪

ತೋ[1]ಳು ವ[1]ಲಕಿದಿರಿಲ್ಲ ಬಿನುಗು ನೃ
ಪಾಲನೆಲವೋ ಕರ್ಣ ಫಡ ಫಡ
ಮೇಳವಾದರೆ ಮೊಗೆವೆನರುಣಾಂಬುವನು ನಿನ್ನೊಡಲ ।
ಕೋಲ ಸುರಿ ಸುರಿ ಯೆನುತ ಕುರು ಭೂ
ಪಾಲಕನ ಮದದಾನೆಯನು ಹೀ
ಹಾಳಿಗೆಡಿಸಿ ತುರಂಗ ರಥ ಸಾರಥಿಯ ಖಂಡಿಸಿದ ॥ ೨೫

ಉಡಿದು ರಥ ಸಾರಥಿಗಳವನಿಗೆ
ಕೆಡೆಯ ಕಾಲಾಳಾಗಿ ಭೀಮನ
ಬಿಡದೆ ಥಟ್ಟೈಸಿದನು ಶರ ನಿಕರದಲಿ ರವಿಸೂನು ।
ಕಡಿದು ಬಿಸುಡದೆ ಕರುಣಿಸಿದಡವ
ಗಡಿಸಿದನೆ ತಪ್ಪೇನೆನುತ ಕೈ
ಗಡಿಯ ಪವನಜನೆಚ್ಚು ಕರ್ಣನ ಧನುವ ಖಂಡಿಸಿದ ॥ ೨೬

[1] ಳಬ (ದ).

ಕರದ ಬಿಲು ಕಳಚಿದರೆ ಖಾತಿಯೊ
ಳಿರದೆ ಹೊಸ ಹೊಂದೇರ ತರಿಸಲು
ತಿರುಗಿದನು ನಿಜ ಮೋಹರಕೆ ದುಗುಡದಲಿ ಕಲಿ ಕರ್ಣ ।
ತೆಱಹು ಕೊಡದಿರಿ ಸೋತ ಕರ್ಣನ
ಹರಿಬವೆಮ್ಮದು ನೂಕು ನೂಕೆಂ
ದುರವಣಿಸಿದರು ಮತ್ತೆ ಕೌರವನನುಜರವಗಡಿಸಿ ॥ ೨೭

ಎಲವೊ ಕರ್ಣನ ಗೆಲಿದ ಗರ್ವವ
ಕಲಕುವೆವು ಫಡ ನಿಲ್ಲೆನುತ ಕೈ
ಚಳಕಿಗರು ಪೂರಾಯ ಚಾಪದ ಬೆರಳ ಕಿವಿಗಡಿಯ ।
ಬಲುಸರಳ ಸರಿ ವಳೆಯ ಸಾಹಸಿ
ಗಳು[1]ರವಣಿಸಿ ಕವಿದೆಸುತ ಬರೆ ಕಂ
ಡೆಲೆ[1]ಮಿಡುಕನಾ ಭೀಮ ಮೂಗಿನ ಬೆರಳ ಬೆಱಗಿನಲಿ ॥ ೨೮

ರಾಯನೊಡಹುಟ್ಟಿದರಲಾ ಪೂ
ರಾಯವಿವದಿರ ಕೈ ಮಹಾದೇ
ವಾಯುಧದ ಮಳೆ ಗಱೆದರೈ ನಿಲಲರಿದು ನಮಗೆನುತ ।
ವಾಯುಸುತನಬ್ಬರಿಸೆ ಗಾಳಿಯ
ಘಾಯ ಮೇಘದ ಮೇಲೆ ಬಿದ್ದವೊ
ಲಾಯಿತೇನೆಂಬೆನು ಕುಮಾರರ ಹೊಯಿಲ ಬೆಳೆ ಸಿರಿಯ ॥ ೨೯

ಬಲ್ಲಡಗ್ನಿ ಸ್ತಂಭವನು ಸಿಡಿ
ಲಲ್ಲಿ ಮೇಳವೆ ಬಿನುಗುಗಳ ಗೆಲ
ಬಲ್ಲಡಿವರಿಗೆ ಭೀಮ ಸದರವೆ ಹೇಳಲೇನಿದನು ।
ಚೆಲ್ಲಿದರೆ ಬಳಿವರಿದು ಚೌಪಟ
ಮಲ್ಲ ಹೊಕ್ಕನು ಹೊಯ್ದು ಗದೆಯಲಿ
ಘಲ್ಲಿಸಿದನಸಿಯುರೆದು ಕೊಂದನು ಕೌರವಾನುಜರ ॥ ೩೦

ವರ ಸುಲೋಚನ ಚಿತ್ರರಥ ದು
ರ್ಮರುಷಣ ಶತಾನೀಕ ನೀಲಾಂ
ಬರ ವಿವಿಂಶತಿ [2]ಚಿತ್ರಸೇನರ ದೀರ್ಘಲೋಚನನ[2] ।

---

[1] ಲಿದು ಕವಿದೆಸುತ್ತೈದಿಬರೆ ಕಂಡೆವೆ (ಗ.ಛ.ನ.ಪ). [2] ಚಿತ್ರಲೋಚನ ದೀರ್ಘಬಾಹುಕನ (ಛ.ಪ).

ತಱಿದು ತಿರುಗಿ ಸುಯೋಧನನ ವೋ
ಹರಕೆ ವೊಳಗಲು ಮತ್ತೆ ಬಲ ಸಂ
ವರಣೆಯಲಿ ಕೈಗೈದು ಭೀಮನ ಹಳಚಿದನು ಕರ್ಣ ॥ ೩೧

ಫಡ ತೊಲಗು ಪವಮಾನಸುತ ನಿ
ನ್ನೊಡಲನೀ [1]ಶಾ[1]ಕಿನಿಯ ಬಳಗಕೆ
ಬಡಿಸುವೆನು ಬದುಕುವರೆ ಹಿಮ್ಮೆಟ್ಟೆನುತ ಬಳಿಸಲಿಸೆ ।
ಕಡು ನುಡಿಗೆ ಮೆಚ್ಚಿದನು ಹಿಂದಕೆ
ಮಿಡುಕುವವನೇ ಕರ್ಣನೀತನ
ಕಡುಹ ನೋಡು ವಿಶೋಕ ಎಂದನು ನಗುತ ಕಲಿ ಭೀಮ ॥ ೩೨

ತಗರು ತೊಲಗಿದಡೇನು ಬಲು ಗಾ
ಳಿಗದ ಗಾಢಿಕೆ ಮೇಲೆ ಶೌರ್ಯದ
ಸೊಗ[2]ಡ[2] ಸೈರಿಸಲಱಿಯೆ ಕಲಿತನದಂಗ ನಿನಗೇಕೆ ।
ಉಗಿ ಸರಳ ಬಿಲುಗಾಱನಾದರೆ
ತೆಗೆದು ಕೈದುವ ಕೊಳ್ಳೆನುತ ತನಿ
ಹೊಗರು ಗಣೆಗಳ ಸೂಸಿದನು ರವಿಸೂನು ಸಮರದಲಿ ॥ ೩೩

ಸರಳ ಸರಳಲಿ ಕಡಿದನೆಚ್ಚರೆ
ತರಹರಿಸಿ ಮಗುಳೆಚ್ಚನೌಕಿದ
ಡುರವಣಿಸಿದನು ಸಿಂಹ ಗರ್ಜನದೊಡನೆ ಗರ್ಜಿಸಿದ ।
ತಿರುಗೆ ತಿರುಗಿದನೊತ್ತಲಗಿದೊ
ತ್ತರಿಸಿದನು ಭುಜ ಬಲಕೆ ಭುಜ ಬಲ
ಸರಿಯೆನಿಸಿ ಸಮ ಬೆಸನನೆಚ್ಚಾಡಿದನು ಕಲಿ ಕರ್ಣ ॥ ೩೪

ಬಳಲಿದವು ತೇಜಿಗಳು ಸಾರಥಿ
ಯಳುಕಿದನು ಶರ ಹತಿಗೆ ಭೀಮನ
ಬಲು ಪತಾಕೆ ತನುತ್ರ ರಥ ಕರ್ಣಾಸ್ತ್ರ ಮಯವಾಯ್ತು ।
ಹಿಳುಕ ಹೊದಿಸಿದನಖಿಲ ದೆಸೆಗಳ
ನಿಲುಕಲರಿದೆನೆ ನಿಮಿಷ ಮಾತ್ರಕೆ
ಕಳಚಿ ಕಳೆದನು ಭೀಮ ತೊಟ್ಟನು ಮತ್ತೆ ಮಾರ್ಗಣವ ॥ ೩೫

[1] ಡಾ (ಕ.ಟ.ತ). [2] ಸ (ಕ.ಟ.ತ.ದ).

ತರಹರಿಸು ಬಿಲುಗಾಱನಾದರೆ
ಪರಿಹರಿಸಿಕೊಳ್ಳೆನುತ [1]ಪವನಜ
ಬಿಱು ಗಣೆಯಲಿರದೆ[1]ಚ್ಚನಹಿತನ ಧನುವ ಸಾರಥಿಯ ।
ತುರಗವನು ಸಿಂಧವನು ಮಾರ್ಗಣ
ವೆರಡಱಲಿ ನುಗ್ಗೊತ್ತೆ ರಥದಿಂ
ಧರಣಿಗಿಳಿದನು ಕರ್ಣ ಕೊಂಡನು ಹಲಗೆ ಖಂಡೆಯವ ॥ ೩೬

ಉಳಿಯಲೊಲೆದಿದಿರಾಗಿ ತಾಗಿದ
ಬಲು ಕಣಿಯ ಕರವಾಳನಿಕ್ಕಡಿ
ಗಳೆದು ಹಲಗೆಯನೆಂಟು ಕಡಿ ಮಾಡಿದನು ಕಲಿ ಭೀಮ ।
ತೊಲಗು ಬಾಹಿರ ಮತ್ತೆ ಸಾರಥಿ
ಬಿಲು ರಥವನನುಮಾಡು ಪಾ[2]ರ್ಥಗೆ
ಕಳೆ[2]ದ ಮಿಾಸಲು ಕೊಳ್ಳೆನೆಲವೋ ಕರ್ಣ ಹೋಗೆಂದ ॥ ೩೭

ತೇರ ಚಾಚಲಿ ಬೇಗ ಬಲುಗೈ
ಸಾರಥಿಯ ಬರ ಹೇಳು ಹಿಂದಣ
ಸಾರಥಿಯ ದೆಸೆಯಿಂದ ಬಂದುದು ಕರ್ಣ ಸೋಲುವನೆ ।
ವೀರನಾವೆಡೆ ಶೌರ್ಯ ಪಾರಾ
ವಾರನಾವೆಡೆ ಯೆನುತ ಕೌರವ
ಧಾರುಣೀ ಪತಿ ಬೆಸಸಿದನು ತನ್ನನುಜ ದುರ್ಜಯಗೆ ॥ ೩೮

ಬಿಲು ದುಡುಕಿ ರಿಪು ಭಟನೊಡನೆ ಮುಂ
ಕೊಳಿಸಿದನು ದುರ್ಜಯನು ಹಿಮ್ಮೆ
ಟ್ಟೆಲವೊ ಪವನಜ ನಿಂದಡರಿವೆನು ನಿನ್ನೊಡಲನೆನುತ ।
[3]ಒಲುಮೆಯೊಡ[3]ಹುಟ್ಟಿದರ ಬಯಕೆಯ
ಸಲಿಸುವರೆ [4]ನಾವಲ್ಲವೇ[4] ಕುರು
ಕುಲಲಲಾಮರು ತಪ್ಪಿ ನುಡಿಯರೆನುತ್ತ [5]ಮಂಡಿಸಿದ[5] ॥ ೩೯

ಕೀಲಿಸಿದನೆಂಟಂಬಿನಲಿ ತುರ
ಗಾಳಿಯನು ಸಾರಥಿಯನಾತನ
ಕೋಲ ಖಂಡಿಸಿ ಧನುವ ಕಡಿದನು ಮೂಱು ಬಾಣದಲಿ ।

---

[1] ದಳ್ಳುರಿದುರುಗಲಂಬಿನಲೆ (ಗ.ಜ.ಪ). [2] ರ್ಥನಂಗುಳಿ (ದ). [3] ಒಲವಿನೊಡ (ಗ.ಪ). [4] ನೀವಹುದೆಲವೊ (ಚ.ಪ), ಕೊಲುವೆನುಕ್ಷಣಾ (ದ). [5] ತೆಗೆದೆಚ್ಚ (ಗ.ಛ.ಪ).

ಹೋಳು ಗಳೆದನು ಸುಭಟ ನಿಚ್ಚೈಲು
ಮೂಳೆಯನು ಮುಂಕೊಂ[1]ಡ[1] ಬಿರುದರ
[2]ಸೀ[2]ಳಿದನು ಕರೆ ಮತ್ತೆ ಕರ್ಣನನೆನುತ ಬೊಬ್ಬಿಱಿದ ॥ * ೪೦

ರಥವ ಮೇಳೈಸಿದನು ಹೊಸ ಸಾ
ರಥಿಯ ಕರಸಿದನಾಹವದೊಳತಿ
ರಥ ಭಯಂಕರನೇಱಿದನು ಬಲು ಬಿಲ್ಲನೊದಱಿಸುತ ।
ಪೃಥುವಿ ನೆಗ್ಗಲು ಸುಭಟ ಸಾಗರ
ಮಥನ ಕರ್ಣನು ಭೀಮಸೇನನ
ರಥವನಱಸುತ ಬಂದು ಪುನರಪಿ ಕಾಳೆಗವ ಹಿಡಿದ ॥ ೪೧

ಗೆಲಿದು ಹೋಗದಿರಿನ್ನು ಕರುಳನು
ಕಲಕುವೆನು ನಿಲ್ಲೆನುತ ರವಿಸುತ
ಸೆಳೆದು ಮುಷ್ಟಿಯ ಕೆನ್ನೆಗಡಿಯಂಬಿನಲಿ ಬರೆ ಕಂಡು ।
ಎಲವೊ ಲೋಕದ ಭಂಡ ನಿನ್ನೊಡ
ನುಲಿವವರು ನಾವಲ್ಲ ಮಲೆತರೆ
ತಲೆಯ ಕಾಯಿದು ಬಿಡುವೆನಲ್ಲದೆ ಕೊಲುವನಲ್ಲೆಂದ ॥ ೪೨

ಸರಳ ಸರಿ ಸೋನೆಯನು ಪವನಜ
ಗಿರಿಗೆ ಕಱೆದುದು ಕರ್ಣ ಮೇಘದ
ಹೊರಳಿ ಯೇನೆಂಬೆನು ಮಹಾಸಂಗ್ರಾಮ ಸಂಭ್ರಮವ ।
ಸರಳಿನಲಿ ಧನುವಿನಲಿ ಗದೆಯಲಿ
ಕರಹತಿಯಲಹಿತಾಸ್ತ್ರವನು ಸಂ
ಹರಿಸಿ ಬೀಸಿತು ಭೀಮ ಮಾರುತ ಕರ್ಣ ಮೇಘದಲಿ ॥ † ೪೩

---

[1] ಬ (ಗ.ಚ.ಪ). [2] ಹೂ (ಗ.ಚ.ಪ).

* ೪೦ನೆಯ ಪದ್ಯವಾದಮೇಲೆ (ಗ.ದ.) ಪ್ರತಿಗಳಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ:—

ಅರಿವಿವಿಂಶತಿ ಸತ್ಯನಂದನ
ಧುರಧುರಂಧರ ದೀರ್ಘದತ್ತನು
ದುರುಳ ಜಯನಂದನು ಮಹೋದರ ಪುಂಡ್ರಜಾನುಕನು ।
ಉರುಭುಜವನಂದೋಪನಂದನ
ಪರಬಲಾಂತಕನೆನಲು ಕೌರವ
ರುರುಳಿದರು ಹೊರಳಿದರು ತನುಗಳು ತಲೆಯ ನೀಗಿದವು ॥

† ೪೩ನೆಯ ಪದ್ಯವಾದಮೇಲೆ (ಗ.ದ.) ಪ್ರತಿಗಳಲ್ಲಿ ೧೮೫ನೆಯ ಪುಟದ ಕೆಳಗಿರುವ ಪದ್ಯವು ಹೆಚ್ಚಾಗಿದೆ.

ಧನುವನಿಕ್ಕಡಿ ಗಳೆದು ರಿಪು ಸೂ
ತನ ಶಿರವ ಹಱಿಯೆಸಲು ಸಾರಥಿ
ತನವ ತಾನೇ ಮಾಡುತಿದಿರಾದನು ಕೃಪಾಣದಲಿ ।
ಕನಲಿ ಖಡ್ಗವ ಮುಱಿಯೆಸಲು ಮು
ಮ್ಮೊನೆಯ ಶೂಲದಲಿಟ್ಟನಂತದ
ನನಿಲಸುತ ಖಂಡಿಸಲು ಮುರಿದನು ಮೋನದಲಿ ಕರ್ಣ ॥ ೪೪

ಪವನಜನ ಬಡಿಹೋರಿ ಹೋದನೆ
ರವಿಸುತನು ಹೋಗಲಿ ವೃಕೋದರ
ನವಯುವವ ಕೇಣಿಯನು ಕೊಟ್ಟೆವು ಬಾಣ ತತಿಗೆನುತ ।
ತವ ಕುಮಾರರು ಮತ್ತೆ ಬಹಳಾ
ಹವವ ಹೊಕ್ಕರು ಹಕ್ಕಲಾದವ
ರವಗಡಿಸಿ ಕೆಣಕಿದರು ರಿಪು ಕಲ್ಪಾಂತ ಭೈರವನ ॥ ೪೫

ವೀರರೆಂದೆನಿಸುವರು ತೊಡೆಹದ
ಶೌರಿಯದ ಸಿರಿವಂತರರಸು ಕು
ಮಾರಕರು ನಿನ್ನವರು ಕೋಮಲ ಧೈರ್ಯರಾಹವಕೆ ।
ಮಾರಿ ಮುಖದವ ಕಠಿನ ಮನ ನಿ
ಸ್ಸಾರ ಹೃದಯನು ಭೀಮನವನೊಳು
ಹೋರಿದವರೇನಹರು ಕೇಳೈ ನಿನ್ನವರ ವಿಧಿಯ ॥ ೪೬

ಒಳಗೊಳಗೆ ತನ್ನಾಣೆ ಘೋಷಣೆ
ಸಲುವುದಲ್ಲದೆ ಸೊಡರು ಬೀದಿಗೆ
ಸುಳಿಯಲೆಲ್ಲಿಯ ಬೆಳಗು ತನ್ನುಳಿವಿಂಗೆ ಹೊಣೆಯಾರು ।
ಕೆಲ ಬಲದ ಮನ್ನೆಯರ ಹೊಯ್ವ
ಗ್ಗಳಿಕೆ ಕೊಂಬುದೆ ಭೀಮನಲಿ ಕೈ
ಹೊಲಸುಗಾಱನು ಹಿಂಡಿದನು ಕೌರವ ಸಹೋದರರ ॥ ೪೭

---

ಸರಳ ಕಡಿಕಡಿದಿಳುಹಿ ಸೂತನ
ಕೊರಳ ಹರಿಯೆಸಲಾಗ ಕರ್ಣನು
ಯಿರದೆ ಮತ್ತ್ಯೆದಿದನು ಹಲಗೆ ಕೃಪಾಣು ಸುರಿಗೆಯಲಿ ।
ಬರಸೆಳೆದು ಖಡುಗವನು ಮುಱಿಯೆಸ
ಲಿರದೆ ಹೊಗಲು ಕೃಪಾಣದಲಿ ಸಂ
ಗರದೊಳವಮುಱಿಯೆಸಲು ಮುರಿದನು ಮೌನದಲಿ ಕರ್ಣ ॥

ದ್ರುಮ ವಿಕರ್ಣ ಸುಷೇಣ ಚಾರು
ಕ್ರಮ ವಿವಿತ್ಸುಕ ವಜ್ರಬಾಹುಕ
ದಮನ ದೀರ್ಘೋದರ ಮಹೋದರ ಕುಂಡದಾರುಕನ ।
ಯಮನ ಕೈಯೆಡೆಗೊಟ್ಟು ಘನ ವಿ
ಕ್ರಮದ ಸಿರಿ ಹೊದಱೇಳೆ ಜಯ ವಿ
[1]ಕ್ರ[1]ಮದೊಳಬ್ಬರಿಸಿದನು ನಿಷ್ಠುರ ಸಿಂಹನಾದದಲಿ ॥ ೪೮

ಇದೆ ಸಮೀರ ಕುಮಾರಕನ ಜಯ
ಮದದ ಸಿಂಹ ಧ್ವನಿಯೆನುತ ಹಿ
ಗ್ಗಿದನು ಧರ್ಮಜನೊದಱಿದವು ಗಂಭೀರ ಭೇರಿಗಳು ।
ಕದನ ಲಗ್ಗೆಯ ಕಹಳೆ ಬಹು ವಾ
ದ್ಯದ ಮಹಾದ್ಭುತ ರಭಸ ಮಿಗೆ ಹೊ
ಡಿದನು ಸನ್ನಾಹದಲಿ ಹೊಕ್ಕನು ಮತ್ತೆ ಕಲಿ ಕರ್ಣ ॥ ೪೯

ನವ ವರೂಥ ತುರಂಗ ಸಾರಥಿ
[2]ಸವಗ ವೊಚ್ಚಯದಲ್ಲಿ[2] ಬಹಳಾ
ಹವದೊಳಗೆ ಮುಂಕೊಂಡು ಭೀಮನ ಹಳಚಿದನು ಕರ್ಣ ।
ತವಕ ಮಿಗಲೆಚ್ಚಾಡಿ ಪುನರಪಿ
ಪವನಜನ ಘಾಯದಲಿ ಸೋಲಿದು
ಬವರ ಮುಖದಲಿ ಹಿಂಗಿದನು ಹದಿನೆಂಟು ಸೂಳಿನಲಿ ॥ ೫೦

ಮುಳಿದು ಮೀಸೆಯ ಮುರಿದು ಹುಬ್ಬನು
ಬಲಿದು ದಳ್ಳುರಿ ದಿರುಳನಕ್ಷಿಗ
ಳೊಳಗೆ ಪಸರಿಸಿ ಘುಡುಘುಡಿಸಿ ರೋಮಾಳಿ ಸೈನಿಮಿರೆ ।
ಹಲು ಮೊರೆದು ಹೊಗರಿಡುವ ಮೋಱೆಯ
ಲಿಳಿವ ಬೆಮರನು ಬೆರಳ ಕೊನೆಯಲಿ
ಬಳಿದು ಭಾರ್ಗವ ದತ್ತ ಬಾಣಕೆ ನೀಡಿದನು ಕರವ ॥ ೫೧

ಎಲವೆಲವೊ ಕಲಿಯಾಗು ಮಾರುತಿ
ಗೆಲಿದನೆಂದಿರಬೇಡ ಸೋಲದ
ಗೆಲವಿನುದಯ ಮುಹೂರ್ತ ವಶ ಮೈಗುಡದೆ ಕಾದುವುದು ।

[1] ಭ್ರ (ಪ). [2] ಕವಚ ಬಾಹಕ್ಕರಿಕೆಯಲಿ (ಚ.ಪ).

ಛಲವದುಳ್ಳಡೆ ಸಾಕು ನೀನೀ
ಹಲಗೆಯಲಿ ಹೊಕ್ಕಾಡಿ [1]ಮರಳಿದು[1]
ತಲೆವೆರಸಿ ನೀ ಹೋದಡಸ್ತ್ರತ್ಯಾಗ ತನಗೆಂದ ॥ ೫೨

ಉಂಟು ಶಿವ ಶಿವ ಹುಸಿಯು ನುಡಿ ನಿನ
ಗುಂಟೆ ಗೆಲ್ಲದೆ ಮಾಣೆ ಶೌರ್ಯದ
ಗಂಟು ಬಲುಹದ ಕಂಡು ಬಲ್ಲೆನು ಹಲವು ಬಾರಿಯಲಿ ।
ಸುಂಟಿಗೆಯನಾಯ್ವೆನು ಕಣಾ ಬಲು
ಕಂಟಕವಲೇ ನರನ ನುಡಿ ನೀ
ನೆಂಟು ಮಡಿ ಗಳಹಿದರೆ ತಪ್ಪೇನೆಂದನಾ ಭೀಮ ॥ ೫೩

ಆದಡೆಲವೊ ದುರಾತ್ಮ ಮಾರುತಿ
ವಾದದಲಿ ಫಲವೇನು ಬಲ್ಲರೆ
ಕಾದುಕೊಳ್ಳಾ ಸಾಕು ಕಡು ಸಾಹಸಿಕ ಗಡ ನೀನು ।
ಹೋದೆ ಹೋಗಿನ್ನೆನುತ ಕಣೆ ಹದಿ
ನೈದಱಲಿ ಕೆಡಹಿದನು ತುರಗವ
ನೈದು ಬಾಣದಲೆಚ್ಚು ಕಡಿದೀಡಾಡಿದನು ರಥವ ॥ ೫೪

ಎರಡು ಶರದಲಿ ಸಾರಥಿಯು ಹೇ
ರುರವನೆಸೆಯಲು ಘಾಯದಲಿ [2] ತರ
ಹರಿಸ[2]ದವ ಹಾಯ್ದನು ಯುಧಾಮನ್ಯುವಿನ [3]ಹೊರೆಗಾಗಿ[3] ।
ಮರಳಿ ಹತ್ತಂಬಿನಲಿ ಭೀಮನ
ಕೆರಳಿಚಿದನಾಱಂಬಿನಲಿ ಹ
ನ್ನೆರಡಱಲಿ ಹದಿನೆಂಟಱಲಿ [4]ಮಗುಳೆ[4]ಚ್ಚು ಬೊಬ್ಬಿಱಿದ ॥ ೫೫

ಶರ ಹತಿಗೆ ಸೆಡೆಯದೆ ವೃಕೋದರ
ನೆರಡು ಕವಲಂಬಿನಲಿ ಕರ್ಣನ
ಶಿರವನೆಚ್ಚಡೆ ತಱಿದನೆಡೆಯಲಿ ಭಾನುಸುತ ನಗುತ ।
ತಿರುಹಿ ಶಕ್ತಿಯಲಿಟ್ಟರೆಡೆಯಲಿ
ತಱಿದು ಭೀಮನ ಕರದ ಚಾಪವ
ನೆರಡು ಕಡಿ ಮಾಡಿದನು ಬಳಿಯಲಿ ನೊಸಲನೊಡೆಯೆಚ್ಚ ॥ ೫೬

[1] ಬಳಿಕೀ (ಗ.ಚ.ಪ). [2] ನಿಲಲಱಿಯ (ಕ.ಗ.ಟ.ತ). [3] ರಥಕ್ಕಾಗಿ (ಗ.ದ).
[4] ಮುರಿಯೆ (ಗ.ಚ).

ವಾಯುಸುತ ಖಾತಿಯಲಿ ಹಲಗೆಯ
ಡಾಯುಧವ ಕೊಂಡರಿ ಭಟನ ಮೇ
ಲ್ವಾಯಿದಡೆ ಸಮ್ಮುಖವ ಬಿಟ್ಟನು ಧ್ವಜದ ಕಂಭದಲಿ |
ಆಯುಧವ ಕೊಂ[1]ಡ್ಯೈದಿದಡೆ[1] ಹಗೆ
ಮಾಯವಾದನು ಪೂತುರೆನುತ ಗ
ದಾಯುಧನು ಮರಳಿದರೆ ಕೈಯೊಡನೆದ್ದನಾ ಕರ್ಣ || ೫೭

ಅರಿ ಬೊಬ್ಬಿಱಿದೆಚ್ಚನನಿಲ ಕು
ಮಾರಕನ ಖಂಡೆಯವನೊಂದೇ
ಕೂರಲಗಿನಲಿ ಕಡಿದು ಬಿಸುಟನು [2]ಹಿಡಿದ ಹಲಗೆಯನು[2] |
ಆರುಭಟೆಯಲಿ ಭೀಮ ಕಾವವ
ರಾರು ಕರೆಯಾ ಕರ್ಣ ಕೊಲುವಡ
ದಾರು ಫಡ ಹಿಂದಿಕ್ಕಿ ಕೊಂಬವರೆನುತ ಗರ್ಜಿಸಿದ || ೫೮

ಮಡಿದ ಕರಿಗಳ ಕಾಯವನು ನಿ
ಟ್ಟೊಡಲ ತುರಗಂಗಳನು ಮುಗ್ಗಿದ
ಕೆಡೆದ ತೇರಿನ ಗಾಲಿಗಳ [3]ಕೊಂಡಿ[3]ಟ್ಟನಾ ಭೀಮ |
ಎಡೆಯಲಾ ಕರಿಯೊಡಲನಾ ಹಯ
ದೊಡಲನಾ ರಥ ಚಕ್ರವನು ಕಡಿ
ಕಡಿದು ಬಿಸುಟನು ಹೊದ್ದಿದನು ಕಟ್ಟಳವಿಯಲಿ ಕರ್ಣ || * ೫೯

---

[1] ಡಾಕಿದರೆ (ಗ.ಚ), ಡಡಱಿದರೆ (ನ). [2] ಹರಿಗೆ ಬದ್ದಿಗೆಯ (ಗ.ಚ).
[3] ಕಿರುಹಿ (ಗ.ಚ.ದ.ಪ).

* ೫೯ನೆಯ ಪದ್ಯವಾದಮೇಲೆ (ಗ.) ಪ್ರತಿಯಲ್ಲಿ ಮುಂದಿನ ಎರಡು ಪದ್ಯಗಳು ಹೆಚ್ಚಾಗಿವೆ :—

ತೇರು ಮುಱಿದವು ಕುದುರೆ ಬೀಳ್ವವು
ಸಾರಥಿಗಳೆಡೆಗೆಡೆದರೆಂತಾ
ಚಾರುಭಾರಿಯ ಬಿಲ್ಲು ನೋವವು ಭೀಮನುರವಣೆಗೆ |
ಸೂರಿಯನಸುತ ಮರಳೆ ಮರಳಿದು
ಸ್ಮೈರಣೆಯ ಸಮಕೊಳಿಸಿ ಪದಿನೆ
ಣ್ಬಾರಿ ಭೀಮನ ತಾಗಿದನು ಭಾಪೆಂದುದಮರಗಣ ||

ಒಡೆಯ ಹರನಂಬಿನಲಿ ಭೀಮನ
ಕಡುಹನಾನುತ ಕರ್ಣ ನಸುನಗು
ತೊಡನೊಡನೆ ಸನ್ನದ್ಧನಾದನು ತಾಗಿದನು ಮುನಿದು |
ಗಡಣಿಸಿದ ಬಾಣಾಬ್ಧಿಯನು ಗುಡು
ಗುಡಿಸುತನಿಲಜ ಕಾದುತಿರುತಿರೆ
ತೊಡೆಮುಱಿಯಲಳವಡವೆನಲು ಹೊಯ್ದನು ಚಾಪದಂಶದಲಿ ||

ಕೈದು ನೆಱೆ ತೀರಿದರೆ ಹೆಣನೇ
ಕೈದುವಾದವು ಪರ ಬಲಾಂತಕ
ಕೈದುಕಾಱರ ಕೈಯ ಬಾಯಲಿ ಭೀಮ ಸಿಲುಕಿದೆಲಾ |
ಕಾದುಕೊಳ್ಳನೆ ಕೃಷ್ಣ ನಿನ್ನಯ
ಮೈದುನನು ಗಡ ಮಱೆಯ ಹೊಗು ಹೋ
ಗೈದೆಯಹಳೋ ವಿಧವೆಯೋ ಪಾಂಚಾಲಿ ಹೇಳೆಂದ ‖ ೬೦

ಬಿಲ್ಲ ಕೊಪ್ಪಿನಲಿಱಿದು ಭೀಮನ
ಘಲ್ಲಿಸಿದನೆಲವೆಲವೊ ಮಾರುತಿ
ಯುಳ್ಳಿ ಗಡ್ಡದ ಹಱಿದಲೆಯ ರಣ ಮೂಢ ಸಿಲುಕಿದೆಲಾ |
ಎಲ್ಲಿ ನಿನ್ನಾಟೋಪ [1]ಹಿಂದಣ[1]
ಹೊಳ್ಳು ನುಡಿ ಹಾಱಿದವೆ ಕೌರವ
ರೆಲ್ಲರನು ಸವಱಿದೆಯೆಲಾ ಸಂದೇಹವೇನೆಂದ ‖ ೬೧

ಒಡೆಯ ದುರಿಯೋಧನನ ತೊಡೆಗಳ
ನುಡಿವೆ ದುಶ್ಶಾಸನನ ರಕುತವ
ಕುಡಿವೆನೆಂದುಬ್ಬಟೆಯ ಭಾಷೆಯಲಾ ಮಹಾದೇವ |
ನುಡಿದ ನುಡಿ[2]ವಳಿ ಸಂದುದೇ[2] ನಿ
ಮ್ಮಡಿಗಳಿಗೆ ಕಲಿ ಭೀಮ ದುಗುಡವ
ಬಿಡು ಮರುಳೆ ತಲೆಗುತ್ತಲೇತಕೆ ಯೆಂದನಾ ಕರ್ಣ ‖ ೬೨

ಎಲ್ಲಿ ಷಡು ರಸ ಮಯದ ಭೋಜನ
ವೆಲ್ಲಿ ಮಧುರ ಫಲೌಘದುಬ್ಬರ
ವೆಲ್ಲಿ ನಾನಾ ಭಕ್ಷ್ಯ ಗಿರಿಗಳು ಘೃತದ ಕಡಲುಗಳು |
ಅಲ್ಲಿ ನಿ[3]ನ್ನುರವಣೆಗಳೊ[3]ಪ್ಪುವ
ದಲ್ಲದೀ ಸಂಗ್ರಾಮ ಮುಖದಲಿ
ಬಿಲ್ಲ ಹಬ್ಬದ ತುಷ್ಟಿ ನಿನಗೇಕೆಂದನಾ ಕರ್ಣ ‖ ೬೩

ತಾಯ ಮಾತನು ಮೀಱಿ ನಿನ್ನನು
ನೋಯಿಸಿದೆನದೆ ಸಾಕು ಜೀವವ
ಕಾಯಿದೆನು ಬಿಟ್ಟೆನು ವೃಕೋದರ ಹೋಗು ಹೋಗೆನಲು |

---
[1] ವಂದಿನ (ಚ). [2] ಸಂಭವಿಸಿತೇ (ಕ.ಟ.ತ). [3] ನಿನ್ನಾಟೋಪವೊ (ಗ.ಚ).

ವಾಯುಸುತ ಸಿಲುಕಿದನಲಾ ಕಾ
ಳಾಯಿತೆನುತಸುರಾರಿ ರಥವನು
ಹಾಯಿಸಲು ಮುರಿಯೆಚ್ಚು ಕರ್ಣನ ತೆಗೆಸಿದನು ಪಾರ್ಥ ॥ * ೬೪

ಹದಿಮೂರನೆಯ ಸಂಧಿ ಮುಗಿದುದು.

---

* ೬೪ನೆಯ ಪದ್ಯವಾದಮೇಲೆ (ಕ.ಗ.) ಪ್ರತಿಗಳಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ಜನಪ ಕೇಳೈ ದೈವ ದೂರರು
ಮುನಿದು ಮಾಡುವುದೇನು ನಿನ್ನವ
ರೆನಿತು ಭವದಲಿ ಭಜಿಸಿದರೊ ನಿಷ್ಠೆಯಲಿ ಹರಿಪದವ ।
ಇನ ತನೂಜಗೆ ಸಿಕ್ಕಲನಿಲಜ
ದನುಜಹರನಡಹಾಯ್ವುನಿಲ್ಲಿಗೆ
ನೆನಹದೆಂತುಟೊ ರಾಯ ಗದುಗಿನ ವೀರ ನರಯಣನ ॥

# ಹದಿನಾಲ್ಕನೆಯ ಸಂಧಿ

**ಸೂಚನೆ** ॥ ಸಂಗರದೊಳಂದಹಿತ[1] ಭಟ[1] ಮಾ
ತಂಗ ಕಂಠೀರವನು ರಣದೊಳ
ಭಂಗ ಮುಱಿದನು ಫಲುಗುಣನು ರಿಪು ರಾಯ ಸೈಂಧವನ ॥

ಚಿತ್ತವಿಸು ಧೃತರಾಷ್ಟ್ರ ರವಿಸುತ
ನಿತ್ತ ಮುರಿದನು ಸಾತ್ಯಕಿಯ ರಥ
ದತ್ತ ತಿರುಗಿದನನಿಲಸುತ ಭಾರಣೆಯ ದುಗುಡದಲಿ ।
ಇತ್ತ ಭೂರಿಶ್ರವನು ಭಾರಿಯ
ಹತ್ತುಸಾವಿರ ರಥ ಸಹಿತ ಕೈ
ಗುತ್ತಿದನು ರಣ ವಿಜಯ ಲಕ್ಷ್ಮಿಯ ಲಲಿತ ಕಬರಿಯಲಿ ॥ ೧

ಒಂದು ಕಡೆಯಲಿ ಕರ್ಣ ಗುರುಸುತ
ರೊಂದು ದೆಸೆಯಲಿ ಶಲ್ಯ ಶಕುನಿಗ
ಳೊಂದು ದೆಸೆಯಲಿ ಭೂರಿ ಕೃತವರ್ಮಕ ಸುಯೋಧನರು ।
ಮುಂದುಗೆಡಿಸಿದರರ್ಜುನನನೀ
ಬಂದ ಭೂರಿಶ್ರವನ ನಿಲಿಸುವೆ
ನೆಂದು ಸಾತ್ಯಕಿ ಬಿಟ್ಟನಾತನ ಹೊರೆಗೆ ನಿಜ ರಥವ ॥ ೨

ಎಲವೆಲವೊ ಭೂರಿಶ್ರವನೆ ಫಡ
ಗೆಲಿದು ಹೋಗದಿರೆಲ್ಲಿ ಹೊಗುವಡೆ
ತಲೆವೆರಸಿ ಹೊಗಲೀಯೆನಿದಿರಾಗೆನುತ ಮೂದಲಿಸೆ ।
ಎಲವೊ ಸಾತ್ಯಕಿ ಸುಭಟ ಬಾಹಿರ
ಗಳಹದಿರು ದಿಟ ವೀರನೇ ಕೂ
ರಲಗಿನಲಿ ಮಾತಾಡು ಬಱಿನುಡಿ ಭಂಡತನವೆಂದ ॥ ೩

ಆದಡಿದ ಕೊಳ್ಳೆನುತ ಸಾತ್ಯಕಿ
ಕೋದನಭ್ರವನಂಬಿನಲಿ ಬಲು
ಹಾದನೈ ಮಝು ಎನುತ ಕಡಿದನು ಸೋಮದತ್ತಸುತ ।

---

[1] ಬಲ (ಕ), ಮದ (ಟ.ಪ).

ಕಾದುಕೊಳ್ಳೆನುತೆಚ್ಚ ನಂಬಿನ
ಬೀದಿವರಿ ಬಲುಹಾಯ್ತು ಖತಿಯಲಿ
ಕೈದುಕಾಱರು ಮೆಚ್ಚಿಸಿದರಮರಾಸುರಾವಳಿಯ ‖ ೪

ದೂರದಲಿ ನಿಂದೊಬ್ಬರೊಬ್ಬರ
ನಾರು ಮಾಡುವುದೇನು ಸಾತ್ಯಕಿ
ಕೂರಸಿಯನುಗಿ ಬಿಸುಟು ಕಳೆ ಕೋದಂಡ ಮಾರ್ಗಣವ ।
ವೀರನಹಡಿದಿರಾಗೆನುತ ಬಹು
ಭಾರಣದ ಚಮ್ಮಟದ ಖಡುಗದ
[1]ಪಾರಗ[1]ದ ಪರಿಣತರು ಹೆಣಗಿದರುಬ್ಬಣಾ[2]ಯುತರು[2] ‖ ೫

[3]ನೆಲನ[3] ತಗ್ಗಿನಲುಪ್ಪರದ ಮೆ
ಯ್ಯೊಲವಿನಲಿ [4]ಪಾರಗದ[4] ಬವರಿಯ
ಸುಳುಹಿನಲಿ ಚಮ್ಮಟದ ಪಯವಂಚನೆಯ[5]ಲುಜ್ಝುಟದ[5] ।
ಬಲಿದ ದಂಡೆಯ ಮಸೆಯ ಬಯಸಿಕೆ
ಲುಳಿಯ ಮೈಗಳ ಲವಣಿಸಾರರು
[6]ಕೊ[6]ಳುಗಿಡಿಯ ಖಂಡೆಯದ ಖಣಿಕಟಿಲೆಸೆಯೆ ಕಾದಿದರು ‖ ೬

ತಳಿತ ಮಿಂಚಿನ ಮುರಿವುಗಳೊ ತನಿ
ಹೊಳಹುಗಳೊ ಖಂಡೆಯದ ಧಾರೆಯ
[7]ಕೊ[7]ಳುಗಿಡಿಯೊ ಖದ್ಯೋತ ರಾಸಿಯೊ ಹೇಳ[8]ಲೇನ[8]ದನು ।
ಖಳಿಕಟಿಲ ಬಿಱುಪ್ಪೇಯಿಲೊ ಸಿಡಿಲಿನ
ಸುಳಿಯೊ ಮೈಮಸೆಯರುಣ ವಾರಿಯೊ
ಮಳೆಗಳಿಲ್ಲದ ಹೊನಲೊ ರಣದಲಿ ಚಿತ್ರವಾಯ್ತೆಂದ ‖ ೭

ಲುಳಿಯ ಪಯಪಾಡುಗಳ ಬವರಿಯ
ಸುಳಿವುಗಳ ಜಾಱುಗಳ ಘಾಯದ
ಕಳವುಗಳ ಕೈ[9]ಮೆಗಳ[9] ಮೋಡಾಮೋಡಿಯುಬ್ಬಣದ ।

---

[1] ಲೋರಣ (ಗ), ಪಾರಣ (ಚ.ಪ). [2] ಯುಧರು (ಗ). [3] ಕೆಲದ (ಚ.ಪ). [4] ಪಂಕಿಸಿದ (ಗ), ಬೋರಣದ (ಚ), ಯೋರಣದ (ಪ). [5] ಝುಡಿತೆಯಲಿ (ಗ), ಲುತ್ಕಟದ (ಪ), ಲುಬ್ಬಟದ (ನ). [6] ಕ (ನ.ಪ). [7] ತ (ಗ.ತ), ಕು (ಚ.ಟ.ತ), ಕ (ದ). [8] ಲರಿದ (ಕ.ಟ.ದ). [9] ಮೈಯ (ತ).

[1]ಲಲಿತ[1] ಚಿತ್ರದ ಚದುರ ಭಟರ
[2]ವ್ವಳಿಸಿ[2] ಹೊಯ್ದಾಡಿದರು ನೋಟಕ
ರುಲಿದುದಿಬ್ಬರ ಶ್ರಮದ ಶೌರ್ಯದ ವೆಗ್ಗ[3]ಳೆಯುತನಕೆ[3] ॥ ೮

ಮಸೆಯ ಮೈಗಳೊಳೊ[4]ಱೆವುತಿರ್ದವು[4]
ಬಿಸಿ ರಕುತ ಮೊನೆಗುತ್ತುಗಳ ಕಿ
ಬ್ಬಸುಱಿನಲಿ ಜೋಲಿದವು ಕರುಳುಗಳಾಹವದ ಭಟರ ।
[5]ಮ[5]ಸಕ ಮಸುಳದು ಮನದ ಖಾತಿಯು
ಮುಸು[6]ಡು[6] ಮುಱಿಯದು ಬಿಗಿದ ಹುಬ್ಬಿನ
ಬೆಸುಗೆ ಸಡಿಲದು ಭೂಪ ಭೂರಿಶ್ರವನ ಸಾತ್ಯಕಿಯ ॥ ೯

ಬರಬರಲು ರಿಪುಭಟನ ಹೊಯ್ಲುಗ್ಗಳ
ಧರಧುರಕೆ ಕಲಿ ಸಾತ್ಯಕಿಯ ತರ
ಹರಣೆ ತಗ್ಗಿತು ಮಹಿಮೆ ಮುಗ್ಗಿತು ಮುಱಿದುದಗ್ಗಳಿಕೆ ।
ಉರವಣಿಸಿ ಭೂರಿಶ್ರವನು ರಿಪು
ವರನ ಖಡುಗವ ಮುಱಿಯ ಹೊಯ್ದು
ಬ್ಬರಿಸಿ ಕಡೆಗಾಲಿಂದ ಹೊಯ್ದನು ಹಾಯ್ದು ಮುಂದಲೆಗೆ ॥ ೧೦

ಕೊಡಹಿ ಕುಸುಕಿಱಿ[7]ದಡ್ಡಬೀಳಿಕಿ[7]
ಮಡದಲುಱೆ ಘಟ್ಟಿಸಿ ಕೃಪಾಣವ
ಜಡಿದು ಗಂಟಲ ಬಳಿಗೆ ಹೂಡಿದನರಿ[8]ವುದಕೆ ಕೊರಳ[8] ।
[9]ಹಿಡಿ[9] ಮಹಾಸ್ತ್ರವ ನಿನ್ನ ಶಿಷ್ಯನ
ಕಡು ನಿರೋಧವ ನೋಡು ಫಲುಗುಣ
ನುಡಿಗೆ ತೆಱಹಿಲ್ಲೆಂದು ಮುರರಿಪು ಜಱೆದನರ್ಜುನನ ॥ ೧೧

ದೇವ ನಮ್ಮದು ಧರ್ಮ ಯುದ್ಧವಿ
ದಾವ ಹದನನು ಬೆಸಸಿದಿರಿ ತಲೆ
ಗಾವು[10]ದೇನರಿ[10]ದಲ್ಲ ಮೊದಲಲಿ ನುಡಿದ ಸಮಯವನು ।

---

[1] ಲುಳಿಯ (ಗ.ಚ.ದ.ಪ), ಲಳಿಯ (ನ). [2] ಪ್ಪಳಿಸಿ (ಚ). [3] ಳಾಯತಕೆ (ಚ.ಪ). [4] ಗುತಲಿರ್ದುದು (ಚ.ಪ). [5] ಲ (ದ). [6] ಕು (ಕ.ಗ). [7] ದಡ್ಡಬಳಿಕೀ (ಕ), ದಡ್ಡಬೀಳಿಸಿ (ಗ.ದ), ದಡಜಱಿಕೋಪದಿ (ಚ.ಪ). [8] ವಸಮಯದಲಿ (ತ.ನ). [9] ತೊಡು (ಪ). [10] ದೆನಗರಿ (ಗ.ನ).

ಭಾವಿಸುವುದೆನೆ ಮುಗುಳು ನಗೆಯಲಿ
ರಾವಣಾಂತಕನೆಂದನೆಲೆ ಮರು
ಳಾವ ನಿರುತದ ಧರ್ಮವಿದ್ದುದು ಕೌರವೇಂದ್ರನಲಿ ‖ ೧೨

ನೆರೆದ ಷಡುರಥರೊಬ್ಬ ಹಸುಳೆಯ
ಕೊರಳನರಿವಂದಾವ ಧರ್ಮದ
ನಿರುತವನು ನೀ ಕಂಡೆಯೆನಲುರಿ ಮಸಗಿತುದರದಲಿ ।
ಸರಳ ಕೆನ್ನಿಗೆ ಸೇದಿದನು ಸಂ
ಗರದ ಭೂರಿಶ್ರವನ ಖಡುಗದ
ಕರವ ಕತ್ತರಿಸಿದನು ತಲೆಗಾಯಿದನು ಸಾತ್ಯಕಿಯ ‖ ೧೩

ಭರದಲೆತ್ತಿದ ತೋಳು ಕಡಿವಡೆ
ದುರುಳಿತವನಿಗೆ ಸುರಿವ ರಕುತದ
ಸರಿವಿನಲಿ ನೆಱೆ ನನೆದು ಭೂರಿಶ್ರವನು ನಸು ನಗುತ ।
ಮುರಿದು ಪಾರ್ಥನ ನೋಡಿ ವಾಮದ
ಬೆರಳನೊಲೆದನು ಲೇಸು ಲೇಸ
ಬ್ಬರದ ಬಿರುದಿನ ಧರ್ಮನಿಷ್ಠರು ಪಾಂಡುಸುತರೆಂದ ‖ ೧೪

ಆರು ಕೊಟ್ಟರು ಶರವನಿದ ಮದ
ನಾರಿಯೋ ನಿಮ್ಮಯ್ಯನಹ ಜಂ
ಭಾರಿಯೋ ಮೇಣ್ ಕೃಷ್ಣ ದ್ರೋಣ[1]ರೊ[1] ಹೇಳು ಹುಸಿಯದಿರು ।
ವೀರನಹೆಯೋ ಪಾರ್ಥ ನಿನ್ನವೊ
ಲಾರು ಬಿಲುಗಾಱರು ಮಹಾಸ್ತ್ರವಿ
ದಾರು ಕಲಿಸಿದ ವಿ[2]ದ್ಯವು[2]ಪಯೋಗಿಸಿತು ನಿನಗೆಂದ ‖ ೧೫

ಅಱಿದೆನೀ ವಿದ್ಯವನು ಕೃಷ್ಣನೊ
ಳಱಿದೆಯಾಗಲು ಬೇಕು ಕಪಟದ
ನೆಱೆವಣಿಗೆಗಳನಱಿಯರಿಂದ್ರ ದ್ರೋಣ ಶಂಕರರು ।
ಮಱೆ ಮಱೆಯಲಿಱಿಗಾಱನಸುರರ
ಮುಱಿದನೆಂಬರು ಕುಹಕ ತಂತ್ರದ
ಹೊಱಿಗೆವಾಳನ ಸಂಗದಲಿ ನೀವ್ ಕೆಟ್ಟಿರಕಟೆಂದ ‖ ೧೬

[1] ನೊ (ಕ.ಗ.ಚ). [2] ದ್ಯೆಯು (ತ).

ಓಡಿ ಕೊಂದನು ಕಾಲಯವನನು
ಬೇಡಿ ಕೊಂದನು ಕೈಟಭನ ಕೈ
ಮಾಡಿ ಕೊಲಿಸಿದ ಮಾಗಧನನಭಿಮಾನ ಗೇಡುಗನ ।
ಕೂಡಿಕೊಂಡಿರಿ ಮೂಱು ಲೋಕದ
ಬೀಡಱಿಯೆ ಬಾಹಿರನನೀ ಹರಿ
ಯಾಡಿಸಿದವೋಲಾಡಿ ಕೆಟ್ಟಿರಿ ಖಳರು ನೀವೆಂದ ॥ ೧೭

ಪೊಡವಿಯೊಳು ಯಾದವರು ಕ್ಷತ್ರಿಯ
ಗೆಡುಕರದಱೊಳು ಹುಟ್ಟಿದನು ಕೊಲೆ
[1]ಗಡಿಗ[1] ಹಾವಿನ ಹುತ್ತದಲಿ ಹಾವ್ಮೆಕ್ಕೆ ಬೆಳೆದಂತೆ ।
ನಡೆವಳಿಯ ನೋಡಿದರೆ ಲೋಗರ
ಮಡದಿಯರು ತನ್ನವರು ಠಕ್ಕಿನ
ಕಡಲು ಕೃಷ್ಣನ ನಂಬಲಿಹ ಪರವಿಲ್ಲ ನಿಮಗೆಂದ ॥ ೧೮

ಎಂದಡೆಂದನು ಪಾರ್ಥನೆಲವೋ
ಮಂದಮತಿ ನೀನೆಂದರಹುದೆ ಮು
ಕುಂದನನು ನಂಬಿದರಿಗಿಹ ಪರ[2]ಸೌಖ್ಯ[2] ಭಯವಿಲ್ಲ ।
ಇಂದು ನಾವ್ ಮಾಡಿದುದು ಹೊಲ್ಲೆಹ
ವೆಂದೆ ನೀನದನಱಿಯೆ ಶಿಷ್ಯನ
ಕುಂದು ಹೆಚ್ಚುಗಳಾರದೆಂಬುದ [3]ಹೇಳು[3] ನೀನೆಂದ ॥ ೧೯

ಎನಗೆ ಸಾತ್ಯಕಿ ಕೋಲ ಮಗನಾ
ತನ ವಧೆಯನಾ ಕಾಣಲಾಗದು
ಮನಕೆ ಮತವೇ ನಮ್ಮ ಹರಿಬಕೆ ಬಂದು ಕಾದುವನ ।
ನಿನಗೆ ಕೊಡುವೆನೆ ನಮ್ಮ ಧರ್ಮವ
ಜನವಱಿಯದೇ ಹೋಗು ಹೋಗೆನೆ
ಮನದೊಳಗೆ ನಗುತಿರ್ದನಾ ಭೂರಿಶ್ರವ ಕ್ಷಿತಿಪ ॥ ೨೦

ಎಲವೋ ಸಾತ್ಯಕಿ ಬದುಕಿದೈ ನರ
ನುಳುಹಿಕೊಂಡನು ಹೋಗೆನುತ ಹೆಡ
ತಲೆಯನೊದೆದನು ನಿಂದು ಬರಿಕೈ ಮುಱಿದ ಗಜದಂತೆ ।

---

[1] ಗಡಿಯ (ತ), ಗಡುಕ (ದ). [2] ಕೆಲ್ಲ (ಕ), ಜನ್ಮ (ಗ.ಚ.ದ).
[3] ನೋಡು (ಕ.ಗ.ಚ).

ಒಲೆವುತ್ತೈತಂದೊಂದು ರಣಮಂ
ಡಲದೊಳಗೆ ಪದ್ಮಾಸನವನನು
ಕೊಳಿಸಿ ಯೋಗಾರೂಢನಾದನು ವರ ಸಮಾಧಿಯಲಿ ॥ ೨೧

ತರಣಿ ಮಂಡಲದಲ್ಲಿ ದೃಷ್ಟಿಯ
ನಿರಿಸಿ ಬಹಿ[ರಿ]ಂದ್ರಿಯದ ಬಳಕೆಯ
ಮುಱಿದು ವೇದಾಂತದ ರಹಸ್ಯದ [1]ವಸ್ತು[1] ತಾನಾಗಿ ।
ಇರಲು ಸಾತ್ಯಕಿ ಕಂಡು ಖತಿಯು
ಬ್ಬರಿಸಿ ಕಿತ್ತ ಕಠಾರಿಯಲಿ ಹೊ
ಕ್ಕುರವಣಿಸಿ ಭೂರಿಶ್ರವನ ತುಱುಬಿಂಗೆ ಲಾಗಿಸಿದ ॥ ೨೨

ಆಗದಾಗದು ಕಷ್ಟವಿದು ತೆಗೆ
ಬೇಗವೆನಲರ್ಜುನನ ಕೃಷ್ಣನ
ನಾಗಳವ ಕೈಕೊಳ್ಳದರಿದನು ಗೋಣನಾ ನೃಪನ ।
ಹೋಗು ಹೋಗೆಲೆ ಪಾಪಿ ಸುಕೃತವ
ನೀಗಿ ಹುಟ್ಟಿದೆ ರಾಜಋಷಿಯುವ
ನೇಗಿದನು ನಿನಗೆನುತ ಬೈದುದು ನಿಖಿಳ ಪರಿವಾರ ॥ ೨೩

ಒಡಲನೊಡೆದಾ ಜ್ಯೋತಿ ಗಗನಕೆ
ನಡೆದುದಿತ್ತಲು ಸುರರು ಮರ್ತ್ಯರು
[2]ಸುಡು ಸುಡೆಂದುದು[2] ಸಾತ್ಯಕಿಯ ದುಷ್ಕರ್ಮ ವಾಸನೆಗೆ ।
ಹಿಡಿದ ದುಗುಡದಲರ್ಜುನನು ಮನ
ಮಿಡುಕಿದನು ಕುರುನೃಪರು ಶೋಕದ
ಕಡ[3]ಲೊಳದ್ದರು[3] ಬೈವುತಿದ್ದರು ಕೃಷ್ಣ ಫಲುಗುಣರ ॥ ೨೪

ಇತ್ತ ರವಿ ರಶ್ಮಿಗಳು [4]ನೆಱೆ[4] ಕೆಂ
ಪೊತ್ತಿದವು ಸೈಂಧವನನೀಗೊ
ತ್ತೊತ್ತೆಯಲಿ ನೆ[5]ಲೆ[5] ಕಾಣಬಾರದು ಸಾಕು ದುಮ್ಮಾನ ।
ಇತ್ತ [6]ನಿಜ[6] ಭಾಷೆಗೆ ಪರಾಭವ
ಹತ್ತಿರಾಯಿತು ನರ ನಿದಾನಿಸೆ
ನುತ್ತ ಮುರರಿಪು ರಥವ ಬಿಟ್ಟನು ಕಡೆಯ ಮೋಹರಕೆ ॥ ೨೫

[1] ರೂಪು (ಕ.ಗ). [2] ಮಿಡುಕಿ ಬಯ್ದರು (ಕ). [3] ಲೊಳಿರ್ದುದು (ಕ.ಗ). [4] ನನು (ಗ.ಚ). [5] ಱೆ (ಕ.ಗ.ದ). [6] ಮುರಿ (ಕ.ಚ).

ಕಾದಿರ್ದೈ [1]ಷಡು[1]ರಥರು ನೃಪತಿಗೆ
ಕಾದು ಕೊಡಿರ್ದೈ ಸೈಂಧವನನಿದು
ಕೈದುಕಾಱರ ಠಾವು ಸಾಹಸಿಗರಿಗೆ ಸಮಯವಿದು ।
ಮೊದಲೆಗಳಿವು ಮುಟ್ಟು[2]ವಡೆ[2] ಮುನಿ
ಸಾದಡೊಳ್ಳಿ[3]ತು ನಿಪ್ಪಸರ[3]ದಲಿ
ಕಾದುವಿರಲೈ ಕಾಣಲಹುದೆಂದೊಱಲಿದನು ಪಾರ್ಥ ॥ ೨೭

ಜರಿದು[4]ದೀ[4] ಬಲ ರಾಸಿ ಗಾಳಿಯು
ಹೊರಳಿಗೊಡ್ಡಿದ ಹೊಟ್ಟು ಹಾಱುವು
ದರಿದೆ [5]ಗಿರಿಗಳು[5] ನೆಲನ ಬಿಟ್ಟುದನೇನ ಹೇಳುವೆನು ।
ಗುರುತನುಜ ಕೃಪ ಕರ್ಣ ಮಾದ್ರೇ
ಶ್ವರ ಸುಯೋಧನ ಚಿತ್ರಸೇನರು
ಮುರಿದು ತರಹರಿಸಿದರು ಸೂಚಿ ವ್ಯೂಹದಗ್ರದಲಿ ॥ ೨೭

ಹರಿಯ ಬೊಬ್ಬೆ ರಥಾಶ್ವದಬ್ಬರ
ನರನ ಬಿಲು ಟಂಕಾರ ತೇರಿನ
ಧರಧುರದ ಚೀತ್ಕಾರ ಹನುಮನ ಸಿಂಹ ನಿರ್ಘೋಷ ।
ಅರಿ ಬಲವ ತಿವಿದುದು ಚತುರ್ಬಲ
ಹೊರಳಿಯೊಡೆದುದು ಸುಭಟರೆದೆ ಜ
ರ್ಝರಿತವಾದುದು ಪಾರ್ಥ ಹೊಕ್ಕನು ಸೈಂಧವನ ಬಳವ ॥ ೨೮

ಅಳವಿಗೊಡಲಿ ಮಹಾರಥರು ಕೈ
ಕೊಳಲಿ [6]ಸೈಂಧವ ನೃಪನ[6] ನೊಂದರೆ
ಘಳಿಗೆ [7]ಕಾಯ್ದರೆ ನಾವು ನೆಱೆ[7] ಕೊಂದವರು ಫಲುಗುಣನ ।
ಹೊಳಹುಗಳಿದುದು ಕಾಲವಿನ್ನರೆ
ಘಳಿಗೆ ಸೈರಿಸಿ ಶಿವ ಶಿವಾ ಯೆಂ
ದೊಳಗೊಳಗೆ ಮೊದಲಿಸುತಿರ್ದರು ಭಟರು ತಮ್ಮೊಳಗೆ ॥ ೨೯

ಧನುವನೊದಱಿಸಿ ಸಕಲ ಸುಭಟರು
ಮನವ ಬಲಿದೊಗ್ಗಾಗಿ ಸರಳಿನ
ಜಿನುಗು ಮಳೆಯಲಿ ನಾದಿದರು ನಾರಾಯಣಾರ್ಜುನರ ।

---

[1] ಸಮ (ಕ.ಟ.ತ.ದ). [2] ಘಡ (ಕ.ಗ.ಚ.ಟ.ತ). [3] ತೆನುತ್ತ ಶರ (ಕ).
[4] ದರಿ (ತ.ಟ). [5] ಬಿರುದರು (ಗ.ಚ). [6] ಕೈಕೊಳಲಿವನ (ಕ.ಟ.ತ). [7] ತಡೆ
ದರೆ ಸಾಕು ನೀವ್ (ಕ.ಗ.ದ).

ಅನಿಬರಂಬನು ಕಡಿದು ಗುರುನಂ
ದನನ ಕರ್ಣನ ಕೃಪನ ದುರಿಯೋ
ಧನನ ಮೆಯ್ಯಲಿ ಮೆತ್ತಿದನು ಮುಮ್ಮೊನೆಯ ಬೋಳೆಗಳ ‖ ೩೦

ಘಡಘಡಱ್ಜುನ ಹೋಗು ಹೋಗಳ
ವಡದು ಸೈಂಧವ[1]ನಳಿವು[1] ಭಾಷೆಯ
ನಡಸ ಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ ।
ಕಡಲ ಮಧ್ಯದ ಗಿರಿಗೆ ಸುರಪತಿ
ಕಡುಗಿ ಮಾಡುವುದೇನೆನುತ [2]ಕೈ
ಗಡಿಯ[2] ಬಿಲ್ಲಾಳುಗಳು ಬಿಗಿದರು ಸರಳಲಂಬರವ ‖ ೩೧

ದ್ಯುಮಣಿಯೊ[3]ದೆ[3]ದರೆ ತರಹರಿಸುವುದೆ
ತಿಮಿರ ರಾಜನ ದೇಹವೀ ವಿ
ಕ್ರಮ ದರಿದ್ರರಿಗಳುಕಿದರೆ ಬಳಿಕವ ಧನಂಜಯನೆ ।
ಸಮತಳಿಸಿ ಶರವಳೆಯ ಕಱೆದು
[4]ಧ್ರ[4]ಮಿ ಮಹಾರಥ ಭಟರ ವಿಜಯದ
ಮಮತೆಗಳ ಮಾಣಿಸಿದನಂದಮಳಾಸ್ತ್ರ [5]ಬೋ[5]ಧೆಯಲಿ ‖ ೩೨

ನೊಂದು ಮರಳದೆ ಮಸಗಿ ಸೂರ್ಯನ
ನಂದನನು ತಾಗಿದನು ಗುರುಸುತ
ಮುಂದುವರಿದನು ತಲೆ ಹಱು[6]ದರೆನ್ನಟ್ಟೆ ಕಲಿಯೆನುತ[6] ।
ಇಂದಿನಲಿ ಮಹನವಮಿ ತಲೆಗಳಿ
ಗೆಂದು ಕವಿದರು ಸಕಲ ಭಟರರ
ವಿಂದ ಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ ‖ ೩೩

ಮೇಲೆ ಬಿದ್ದುದು ಸೇನೆ ಸವೆಯದು
ನಾಳೆ ಪರಿಯಂತರಘಳಿಗೆಗಿನ
ನಾಳುವನು ಜಲ[7]ಧಿಯಲಿ[7] ಕಾಣೆನು ವೈರಿ ಸೈಂಧವನ ।
ಹೇಳಿ ಫಲವೇನಿನ್ನು ವಹ್ನಿ
ಜ್ವಾಲೆ ಕೊಳ್ಳಲಿ ದೇಹವನು ಸಾ
ಕೇಳು ಮುರಹರ ತೇರ ತಿರುಹಿನ್ನೆಂದನಾ ಪಾರ್ಥ ‖ ೩೪

---

[1] ದಳದ (ಕ), ವಿಜಯ (ಗ.ಚ). [2] ಬಲುಕಡಿಯ (ಕ.ಗ.ಟ.ತ). [3] ಗೆ (ಕ). [4] ಭ್ರ (ನ). [5] ಬಾ (ಕ.ಗ.ದ). [6] ದರನ್ನಟ್ಟಿ ಬಲುಹೆನುತ (ಕ). [7] ದೊಳಗೆ (ಕ.ಗ).

ಸಲಿಸಬೇಹುದು ಭಕುತ ಮಾಡಿದ
ಛಲದ ಭಾಷೆಯನೆನುತ ರವಿ ಮಂ
ಡಲಕೆ ಮಱೆಯೊಡ್ಡಿದನು ಮುರ ರಿಪು ವರ ಸುದರ್ಶನವ ।
ಕಳನೊಳಗೆ ಕತ್ತಲಿಸಿತಹಿತನ
[1]ಕೊ[1]ಲೆಗೆ ಕಾವಳ ಕವಿದವೋಲರೆ
ಘಳಿಗೆಯಲಿ ಸುಮ್ಮಾನ ಮಸಗಿತು ಸಕಲ ಕುರು ಬಲಕೆ ॥ ೩೫

ಸೆಱಗ ಬೀಸಿದರಾರಿದರು ಬೊ
ಬ್ಬಿಱಿ[2]ದರುರು[2] ಗಂಭೀರ ಭೇರಿಯ
ಬಿಱುದನಿಗಳುಬ್ಬರಿಸಿದವು ಗಬ್ಬರಿಸಿದವು ನಭವ ।
ತೆಱಹ ಕೊಡು ಕೊಡು ಭಾಷೆಕಾಱನು
ಮೆಱೆದು ಹೋಗಲಿ ವಹ್ನಿಕುಂಡದೊ
ಳೊಱಗುವುದ ನೋಡುವೆವೆನುತ ತನಿಗೆದಱಿತರಿ ಸೇನೆ ॥ ೩೬

ಹೊಲಬು ದಪ್ಪಿದ ತಳಪಟದ ಹೆ
ಬ್ಬುಲಿಯವೊಲು ನಿನ್ನಾತ ಸಿಲುಕಿದ
ನಿಲುಕಿ ನೋಡಿದನೆಲ್ಲಿ ತೋಱರ್ಜುನನನೆನಗೆನುತ ।
ಉಲಿಯೆ ಸೈಂಧವನಿತ್ತ ಪಾರ್ಥನ
ಮುಳಿದು ಜಱೆದನು ಕೃಷ್ಣನಹಿತನ
ತಲೆಗೆ ಹರ ಹಿಡಿವಂಬ ತೊಡು ತೊಡು ಬೇಗ ಮಾಡೆಂದ ॥ ೩೭

ದೇವ ರವಿಯಸ್ತಮಿಸಿದನು ನೀ
ವಾವುದುಚಿತವ ಕಂಡಿರೆನೆ ನಿನ
ಗಾವ ಭಯ ಬೇಡಾಡಬಾರದು ತೊಡು ಮಹಾಶರವ ।
ಈ ವಿರೋಧಿಯ ಕೆಡಹು ಸೂರ್‍ಯನ
ನಾವು ತೋಱಿಸಿ ಕೊಡುವೆವೆನೆ ಗಾಂ
ಡೀವದಲಿ ಹೂಡಿದನು [3]ಫಲುಗುಣ[3] ಪಾಶುಪತ ಶರವ ॥ ೩೮

ತೆಗೆಯೆ ಜಗ ಕಂಪಿಸಿತು ತಾರೆ[4]ಗ
ಳೊ[4]ಗಡಿಸಿತು ನಭ ಜಲಧಿ ರತ್ನಾ
ಳಿಗಳನೋಕರಿಸಿತು ಕುಲಾದ್ರಿಗಳೊಲೆದವೆಡ ಬಲಕೆ ।

---

[1] ತ (ಕ.ಗ). [2] ದು ವರ (ಕ.ಗ). [3] ವಿಧಿಯುಲಿ (ಟ.ತ).
[4] ಯುನೊ (ತ.ದ.ನ).

ದಿಗಿಭ ತತಿ ನಡುನಡು[1]ಗೆ[1] ತಳವಾ
ಸುಗಿ ಫಣಾಳಿಯ ಸೆಳೆಯೆ ಬಲು ಸರ
ಳುಗಿದು ದಳ್ಳುರಿ ದಿರುಳ ಕಾಱಿತು ಬೆಸಸು ಬೆಸಸೆನುತ ॥ ೩೯

ಬಲಿದು ಮಂಡಿಯನೂಱಿ ಕೆನ್ನೆಗೆ
ಸೆಳೆದು ಮುಷ್ಟಿಯ ಪಾರ್ಥನಹಿತನ
ತಲೆಯನೆಚ್ಚನು ಗೋಣ ಕಡಿದುದು ಪಾಶುಪತ ಬಾಣ ।
ಹೊಳೆವ ಮಕುಟದ ವದನ ಗಗನಾಂ
ಗಳಕೆ ಚಿಮ್ಮಿತು ರಕುತ ಧಾರಾ
ವಳಿಯ ಝಿಂಗಣವಾಯ್ತು ಮುಂಡದ ತಲೆಯ ಮಧ್ಯದಲಿ ॥ ೪೦

ಬೀಳು ಬೀಳಭಿಮನ್ಯುವಿನ ವಧೆ
ಬಾಳಲೀವುದೆ ನಿನ್ನನೆನುತು
ಬ್ಬಾಳುತನದಲಿ ಪಾರ್ಥ ಬೊಬ್ಬಿಡೆ ಕೃಷ್ಣ ಖಾತಿಯಲಿ ।
ಖೂಳ ಕೇಳಿಳೆಗವನ ತಲೆಯನು
ಬೀಳಿ[2]ಕಿ[2]ದನ ಕಪಾಲ ಸಾವಿರ
ಹೋಳಹುದು ತೊಡು ಪಾಪಿ ಬೇಗದಲಂಬ ಕಳುಹೆಂದ ॥* ೪೧

ಇವನ ತಂದೆಯ ಶಾಪವಾವವ
ನಿವನ ತಲೆಯನು ನೆಲಕೆ ಕೆಡಹುವ
ನವನ ಮಸ್ತಕ ಬಿರಿದು ಬೀಳಲಿ ಯೆಂದನೀ ತಲೆಯ ।
ಇವನ ತಂದೆಯ ಕೈಯೊಳಗೆ ಬೀ
ಳುದವುಪಾಯವ ಮಾಡು ನೀನೆನೆ
ದಿವಿಜಪತಿಸುತನಾ ಮಹಾಸ್ತ್ರಕೆ ಬೆಸಸಿದನು ಹದನ ॥ ೪೨

---

[1] ಗಿ (ಕ.ಟ). [2] ಸಿ (ಗ), ಚಿ (ಚ).

* ೪೧ನೆಯ ಪದ್ಯವಾದಮೇಲೆ (ಗ.) ಪ್ರತಿಯಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ದೇವ ಬಿನ್ನಹವಿವನತಲೆಯನ
ದಾವ ದೇಶದೊಳಾವಗಿರಿಯಲ
ದಾವ ವೃಕ್ಷದಲಾವನದಿಯಲದಾರ ಕರದೊಳಗೆ ।
ಸ್ವೈವರಿಯ ಬೇಕದರ ನೇಮವ
ದೇವ ಬೆಸಸೆನೆ ಕೃಷ್ಣರಾಯನು
ಘೋವಿದನು ಮಾನಸದ ಬಡಗಣ ಕಡಲ ತೀರದಲಿ ॥

ತುಡುಕಿ ಖಂಡವ ಕಚ್ಚಿ [1]ನಭದಲಿ
ಗಿಡಿಗ ಹಾಯ್ವಂದದಲಿ ತಲೆಯನು
ಹಿಡಿದು[1] ಹಾಯ್ದುದು ಬಾಣ ವೃದ್ಧಕ್ಷತ್ರನಿದ್ದೆಡೆಗೆ ।
ಕುಡಿತೆಯೆರಡಱೊಳರ್ಘ್ಯಜಲವನು
ಹಿಡಿದು ಹಾಯ್ಕುವ ಸಮಯದಲಿ ತಲೆ
ನಡುವೆ ಬಿದ್ದುದು ಅರ್ಘ್ಯಜಲ ನವ ರಕ್ತ ಮಯವಾಗೆ ॥ ೪೩

ಏನಿದದ್ಭುತವೆನುತ ತಲೆಯನು
ತಾನೆ ಕೊಡಹಿದನಂಜಲಿಯನದ
ನೇನನೆಂಬೆನು ಕೃಷ್ಣರಾಯನ ಮಂತ್ರ ಶಕ್ತಿಯನು ।
ಆ ನರೇಂದ್ರನ ತಲೆ ಸಹಸ್ರ ವಿ
ಧಾನದಲಿ ಬಿರಿದುದು ಸುಯೋಧನ
ಸೇನೆ ಹರಿದುದು ಜರಿದುದರಿ ಭಟ ಧೈರ್ಯ ಗಿರಿ ನಿಕರ ॥ ೪೪

ನಡುಗಿ ಸಂಗರ ಭೀತಿಯಲಿ ಬೆಂ
ಗೊಡುವ ನಾಯಕವಾಡಿಗಳ ಪಂ
ಗಡವ ನೋಡುತ ಮಱೆಯ ಚಕ್ರವ ತೆಗೆದನಸುರಾರಿ ।
ಪಡುವಲಿಳಿಯದ ರವಿಯ ಬಯ್ವುತ
ನಡೆದನಾ ಕುರುರಾಯನಿತ್ತಲು
ಹಿಡಿದ ಚೌರಿಗಳಾಡಿದವು ಪಾಂಡವರ ಸೇನೆಯಲಿ ॥ ೪೫

ದೈವ ಪೌರುಷದೊಳಗೆ ಶಿವ ಶಿವ
ದೈವ ಬಲವೇ ಬಲವಲಾ ನಿ
ರ್ದೈವರಂಗೈತಳಕೆ ಬಂದರೆ ಪರುಷ ಪಾಷಾಣ ।
ದೈವ ದೂರರು ಧರ್ಮ ಹೀನರು
ನೆಯ್ವ ನೆಯ್ಗೆಗಳೆನುತ ಮಿಗೆ ಬಿಸು
ಸುಯ್ವುತಿರ್ದರು ಕರ್ಣ ಕೃಪ ಗುರುನಂದನಾದಿಗಳು ॥ ೪೬

ಕಡಲ ಮೊರಹಿನ ಲಹರಿ ಲಘುವೇ
ಪಡೆಯನೊಡೆಯಲು ಯುಗ ಸಹಸ್ರದೊ
ಳೊಡೆಯಬಹುದೇ ದ್ರೋಣ ರಚಿಸಿದ ವ್ಯೂಹ ಪರ್ವತವ ।

---

[1] ಹಾಱುವ ಗಿಡಿಗನಂತಿರೆ ಭಟನ ಗಂಟಲ ತುಡುಕಿ (ಕ).

ಒಡೆದು ಹೋಯಿತ್ತೊಡ್ಡು ಸೈಂಧವ
ನೊಡಲು ನೀಗಿತು ತಲೆಯನಕಟಾ
ತೊಡಗಿದೆವು ದೈವದಲಿ ಕಲಹವನೆಂದನಾ ಕರ್ಣ ‖ ೪೭

ಮುನಿದು ಮಾಡುವುದೇನು ಕೃಷ್ಣನ
ನೆನಹು ಘನ ನಮ್ಮಸುವ ನಾವೀ
ಜನಪತಿಗೆ ಮಾಱಿದೆವು ನಮಗೀ ಚಿಂತೆಯೇಕೆನುತ ।
ಇನಸುತಾದಿಗಳಿದ್ದರಿತ್ತಲು
ಮನದ ಹರುಷದ ಹರಹಿನಲಿ ಪಾ
ರ್ಥನ ರಥವ ತಿರುಹಿದನು ಗದುಗಿನ ವೀರ ನಾರಯಣ ‖ ೪೮

ಹದಿನಾಲ್ಕನೆಯ ಸಂಧಿ ಮುಗಿದುದು.

# ಹದಿನೈದನೆಯ ಸಂಧಿ

ಸೂಚನೆ ॥ ರಾಯ ಕಟಕಾಚಾರ್ಯನೊಡ್ಡಿದ
ರಾಯ ಥಟ್ಟನೊಳಿರುಳು ಕೊಂದನು
ವಾಯು ತನಯನ ತನುಜನಗ್ಗದ ದೈತ್ಯ ಕೋಟಿಗಳ ॥

ಕೇಳು ಜನಮೇಜಯ ಧರಿತ್ರೀ
ಪಾಲ ಕೃಷ್ಣಾರ್ಜುನರು ಬರೆ ಭೂ
ಪಾಲ[1]ನಂದಿ[1]ದಿರಾಗಿ ಬಂದನು ಸಕಲ ದಳ ಸಹಿತ ।
ಹೇಳಲಱಿಯೆನು ಹರುಷದುದಯುವ
ನಾಲಿ ಹೂಳಿದವಶ್ರು ಜಲದಲಿ
ಮೇಲುವಾಯ್ದಪ್ಪಿದನು ದೇವನ ಪಾದ ಪಂಕಜವ ॥ ೧

ಮಾತುದೋಱದು ಹೆಚ್ಚಿದಾನಂ
ದಾತಿರೇಕಕೆ ಚಿತ್ತ ನೆಱೆಯದು
ಹೂತು ಹಿಗ್ಗುವ ಪುಳಕ ರಾಜಿಗೆ ದೇಹ ಕಿಱಿದೆನುತ ।
ಕಾತರಿಸಿದನು[2] ಮೇಲೆ ಮೇಲೆ[2] ಮ
ಹೀತಳಾಧಿಪ ಮೈ ಮಱೆಯೆ ತೆಗೆ
ದಾತನನು ತಕ್ಕೈಸಿದನು ಕಾರುಣ್ಯನಿಧಿ ನಗುತ ॥ ೨

[3]ಫಲಿಸಿತರಸಾ[3] ನಿನ್ನ ಭಾಗ್ಯದ
ಬೆಳಸು ನಿನ್ನೊಡವುಟ್ಟಿದನ ನುಡಿ
ಕಳಸಗಂಡುದು ಕದನವಿದು ಭಾರಾಂಕವುಳಿದರಿಗೆ ।
ಕಳಿದುದೊಂದಪಮೃತ್ಯುವೆನೆ ನೃಪ
ತಿಲಕ ನುಡಿದನು ನಿನ್ನ ಭಾಷೆಯ
ಬಲಿದೆ ನಿನ್ನಯ ಬಿರುದ ಸಲಿಸಿದೆ ನಮಗಿದೇನೆಂದ ॥ ೩

ತೆಗೆಸು ದಳವನು ಸಾಕು ಬರಿದೇ
ಹೊಗಳುತಿಹೆ ನೀ ನಮ್ಮನೀ ಕಾ
ಳೆಗದೊಳಳಿದುದು ಹಗೆಯೊಳೇಳಕ್ಷೋಹಿಣೀ ಸೇನೆ ।

---

[1] ನೊಲಿ (ತ) ತಾನಿ (ದ). [2] ಮತ್ತೆ ಮತ್ತೆ (ಕ.ಗ.ಚ). [3] ಚೆಲುವ ನರಸಾ (ಕ.ಗ.ಟ), ಇಳೆಯುವಲ್ಲಭ (ದ).

ಬಗೆಯ[1]ದಿಱಿದರು[1] ಭೀಮ ಪಾರ್ಥರು
ಜಗದೊ[2]ಳದ್ಭುತ[2] ವೀರರಿವರೆಂ
ದಗಧರನು ಪತಿಕರಿಸಿದನು ಪವನಜನ ಫಲುಗುಣನ ‖ ೪

ಇತ್ತ ದುಗುಡುವ ಹಿಡಿದ ರಾಯನ
ಕೆತ್ತ ಮುಖವನು ಕಂಡು ಭಟರೆದೆ
ಹೊತ್ತಿದವು ಹೊ[3]ಗೆದೋ[3]ಱಿದವು ಮೋಱೆಗಳು ಪಟುಭಟರ ।
[4]ಇತ್ತ ನೋಡವನೀಶ[4] ಸೈಂಧವ
ನೆತ್ತಲಿಹನತ್ತಲು ಮುರಾರಿಯು
ತೆತ್ತಿಗರ ಕಳುಹಿಸುವೆನೆಂದನು ಖಾತಿಯಲಿ ಕರ್ಣ ‖ ೫

ಇನ್ನು ನೋಡಾದಡೆ ಕಿರೀಟಿಯು
ಬೆನ್ನಲುಗಿವೆನು ಕರುಳನರ್ಜುನ
ಗನ್ನಗತಕದಲರಿಯ ಹೊಯ್ದನು ಹಾಯ್ಕು ವೀಳೆಯವ ।
ನಿನ್ನ ಕಂಗಳ ಬೞಿನ ಕಳೆವೆನು
ಬೆನ್ನಲಿರು ನೃಪ ನೋಡು ಚಿತ್ರವ
ನಿನ್ನು [5]ತೋಱುವೆನೆನುತ ಭಾಷೆಯ ಕೊಟ್ಟನಾ ಕರ್ಣ[5] ‖ * ೬

ಉಂಟು ಗರುಡನನೊಳ್ಳೆ ತುಡುಕುವ
ದುಂಟಲೇ ಲೋಕದಲಿ ರಾಯನ
ನಂಟರಿಷ್ಟರೊಳಧಿಕನಲ್ಲಾ ಕರ್ಣ ಕಿಱುಕುಳನೆ ।
[6]ಕಂ[6]ಟಣಿಸಬೇಡಿನ್ನು ಭಾಷೆಗ
ಳುಂಟು ನಿನ್ನಲಿ [7]ನಗುವ[7]ರಾವ
ಲ್ಲೆಂಟು ಮಡಿಯನು ಸೊರಹು ಸಾಕೆಂದನು ಕೃಪಾಚಾರ್ಯ ‖ ೭

ಗರುವರನು ಮಾನ್ಯರನು ರಣಧೀ
ರರನು ದೂರದಲಿರಿಸುವರು ಹ
ತ್ತಿರಕೆ ಕರೆವರು ಬಾಯಿಬಡಿಕರ ಜಗದ ಭಂಡರನು ।
ಅರಸುಗಳು ದುಶ್ಶೀಲರೆಂಬುದ
ನಱಿಯದೇ ಜಗವಕಟ ಟೆಕ್ಕೆಯ
ಹರಳು ಗಡ ಕೌಸ್ತುಭಕೆ ಸರಿ[8]ಯೆಂದನು ಕೃಪಾಚಾರ್ಯ[8] ‖ ೮

---

[1] ದಗ್ಗದ (ಚ). [2] ಳಗ್ಗಳ (ಚ). [3] ಗರೇ (ಕ.ಗ.ಚ). [4] ಚಿತ್ತವಿಸು ಭೂಪಾಲ (ಟ.ತ.ನ). * ಈ ಪದ್ಯವು (ಟ) ಪ್ರತಿಯಲ್ಲಿಲ್ಲ. [5] ನೋಡಾ ಬೞಿಗ ತೋಱುವೆನೆಂದ ನಾಕರ್ಣ (ಕ). [6] ಟೆಂ (ಗ.ಟ.ತ.ನ). [7] ಗರುವ (ಚ) ನುಡಿವ (ತ). [8] ಯೇ ಶಿವಶಿವಾ ಎಂದ (ತ.ನ).

ನೀವು ಮಾಡುವುದೇನು ರಣದಲಿ
ಕಾವೆವೆಂದಿರಿ ಸೈಂಧವನ ನಾ
ನಾವಿಧದ ವ್ಯೂಹದಲಿ ನಿಮ್ಮೀ ದ್ರೋಣ[1]ನೇ[1]ಗಿದನು ।
ತಾವು ಭಟರಾದರೆ ವಿಭಾಡಿಸಿ
ಹೇವಗೆಡಿಸುವುದುಚಿತ ಭಂಡರು
ತಾವು ಲೋಗರ ಚುನ್ನವಾಡುವರೆಂದನಾ ಕರ್ಣ ॥ ೯

ಎಲವೊ ಫಡ ಮಾವನ [2]ವಿಭಾಡಿಸಿ[2]
ಗಳಹುವೀ ನಾಲಗೆಯ ಕೀಳುವೆ
ನೆಲೆ ಮಹಾದೇವಿಲ್ಲಿ ಮೇಳವೆನುತ್ತ ಖಂಡೆಯವ ।
ಸೆಳೆದು ಝೊಂಪಿಸಿ ಗುರು ತನುಜನ
ವ್ವಳಿಸಲುಗಿದನಡಾಯುಧವನ
ಗ್ಗಳೆಯ ರವಿಸುತ ಮೇಲು ವಾಯ್ದನು ದ್ರೋಣ ನಂದನನ ॥ ೧೦

ಬೆಂದುದೊಳ ತೋಟಿಯಲಿ ಕೌರವ
ವೃಂದವಕಟಕಟೆನಲು ಜನವೈ
ತಂದು ನಿಂದನು ನಡುವೆ ಕೌರವ ರಾಯ ಖಾತಿಯಲಿ ।
ಇಂದಿನಾಹವ ಲೇಸು ಲೇಸಿದು
ಮಂದ ಭಾಗ್ಯನು ತಾನು ಸಾಕಿ
ನ್ನೆಂದು ಮಾಡುವುದೇನು ನಿಮ್ಮೊಳು ಕದನ ಬೇಡೆಂದ ॥ ೧೧

ಹೇವವುಳ್ಳರೆ ಭೀಮ ಪಾರ್ಥರ
ನೀವು ಕೊಲುವುದು ಮೇಣು ರಣದಲಿ
ಸಾವುದಲ್ಲದೆ ಗರುವರೊಳ ತೋಟಿಯಲಿ ತೊಡಕುವರೆ ।
ಕಾವೆವೆಂದಿರಿ ಸೈಂಧವನ ಸುಭ
ಟಾವಳಿಯ ಮೂಗುಗಳನರ್ಜುನ
ದೇವ ಕೊಯ್ದನು ಸಾರಿ ನೀವೆಂದರಸ ಮಾಣಿಸಿದ ॥ ೧೨

ನೆಱೆವಣಿಗೆಯುಳ್ಳರೆ ವಿರೋಧಿಯ
ನಿಱಿವುದೋಲೆಯಕಾಱತನವನು
ಮೆಱೆವುದುಚಿತವಿದೇಕೆ ಡೊಂಬಿನ ಶೌರ್ಯವೊಳಗೊಳಗೆ ।

---

[1] ನೆಸ (ತ).   [2] ದೊಠಾರಿಸಿ (ಕ).

ಕಿಱುಕುಳರು ನೀವಲ್ಲ ನಿಮ್ಮಲಿ
ಕೊಱತೆಯಿಲ್ಲದು ನಮ್ಮ [1]ಪುಣ್ಯದ[1]
ಬಱ[2]ನ ದಿನ[2] ನೀವೇನ ಮಾಡುವಿರೆಂದು ಬಿಸುಸುಯ್ದ ॥ ೧೩

ಖಾತಿಯೇಕೈ ಸೈಂಧವನ [3]ಕಾ[3]
ವಾತನಾರೈ ತ್ರಿಪುರ ದಹನದ
ಭೂತನಾಥನ ಬಾಣ ಬಂದುದು ನರನ ಗಾಂಡಿವಕೆ ।
ಆತನೆಚ್ಚದು ಪಾಶುಪತವದ
ನಾತುಕೊಂಬವರಾರು ಬಱಿದೆ ಭ
ಟಾತಿಶಯವನು ಹುರುಳುಗೆಡಿಸುವಿರೆಂದನಾ ದ್ರೋಣ ॥ ೧೪

ಒಂದು ಹರ ಹಿಡಿವಂಬು ಶಕ್ರನ
ದೊಂದು ಕೌಬೇರಾಗ್ನಿ ವಾಯುವ
ದೊಂದು ಪಾರ್ಥನ ಬತ್ತಳಿಕೆ ದಿವ್ಯಾಸ್ತ್ರ ತುಂಬಿಹವು ।
ಕೊಂದಡಲ್ಲದೆ ಮಾಣವವು ನಾ
ವೊಂದಕೊಬ್ಬರು ಗುಱಿ ನಿದಾನಿಸ
ಲಿಂದು ನಮಗಳವಡದು ಜಯವಿಲ್ಲೆಂದನಾ ದ್ರೋಣ ॥ ೧೫

ಅರಸ ಮರುಳೈ ನೀನು ಸುರರನು
ಸರಕುಮಾಡನು ಸಕಲ ದೈವದ
ದೊರೆಯಲೇ ಹರನಾತನಸ್ತ್ರವನಾರು ತಱುಬುವರು ।
ಹರನ ಶರವಿಲ್ಲಿನ್ನು ಹಗೆಗಳ
ನಿರುಳು ರಣದಲಿ ಹಿಂಡುವೆನು ಸಂ
ವರಿಸು ಕೈದೀವಿಗೆಯನೆಂದನು ದ್ರೋಣನುಬ್ಬಿನಲಿ ॥ ೧೬

ಘಾಯವಡೆದಾನೆಗಳ ಕೈ ಮೈ
ನೋಯೆ ಕಾದಿದ ರಾಜಪುತ್ರರ
ನಾಯುಧದ ಮಳೆಗಳಲಿ [4]ನನೆದ[4] ಜವಾಯ್ಲ ತೇಜಿಗಳ ।
ಹಾಯಿದುರೆ ಸೊಪ್ಪಾದ ಶಕಟ ನಿ
ಕಾಯವನು ಪೂರಾಯದೇಱಿನ
ನಾಯಕರ ಕರೆಕರೆದು [5]ಬವರಕೆ[5] ಕಳುಹಿದನು ದ್ರೋಣ ॥ ೧೭

---

[1] ಭಾಗ್ಯದ (ಟ.ತ.ನ). [2] ತನದಿ (ಕ.ಗ.ಚ.ಟ.ತ). [3] ಕೊಲು (ಟ.ಚ.ತ). ಬಸಿವ (ಕ.ಗ.ಚ). [5] ಭವನಕೆ (ಕ.ಗ.ಚ.ತ.ಟ).

ಜರಿದ ಜೋಡನು ನೆಱೆ ಹಱಿದ ಹ
ಕ್ಕರಿಕೆಗಳ ನುಗ್ಗಾದ ಗುಳವನು
ಬಿರಿದ ಸೀಸಕ ಬಾಹುರಕ್ಕೆಯ ಮುಱಿದ ಬಲ್ಲೆಹದ ।
ಅರೆಗಡಿದ ಬಿಲ್ಲುಗಳ ನೆಗ್ಗಿದ
ಹರಿಗೆಯನು ಮುಕ್ಕಾದ ಕೈದುವ
ತರಿಸಿ ಕಳುಹಿಸುತಿರ್ದನತಿರಭಸದಲಿ ಕಲಿ ದ್ರೋಣ ॥ ೧೮

ಎಣಿಸಲಱಿಯೆನು ಬಂಡಿಗಳು ಸಂ
ದಣಿಸಿದವು ಹಕ್ಕರಿಕೆಗಳ ಹ
ಲ್ಲಣದ ಕವಚದ ಸೀಸಕದ ಜೋಡುಗಳ ಜೆಂಚೆಗಳ ।
ಮಣಿಮಯದ ಮೋಹಳದ ಹಿರಿಯು
ಬ್ಬಣದ ಸಬಳದ [1]ಶೂಲ ಸುರಗಿಯ[1]
ಕಣೆಯ ಹೊಱೆ ಚಾಚಿದವು ಕಟಕಾಚಾರ್ಯನಿದಿರಿನಲಿ ॥ ೧೯

ಕರೆಕರೆದು ರಥಿಕರಿಗೆ ಮಾವಂ
ತರಿಗೆ ಕಾಲಾಳಿಂಗೆ ರಾವು
ತ್ತರಿಗೆ ಕೊಡಿಸಿದನವರವರಿಗವರಂಗದಾಯುಧವ ।
ತರಿಸಿ ಸಾದು ಜವಾದಿಯನು ಕ
ರ್ಪುರದ ವೀಳೆಯವುಡುಗೊಱೆಗಳಲಿ
ಹಿರಿದು ಪತಿಕರಿಸಿದನು ಪರಿವಾರವನು ಕಲಿ ದ್ರೋಣ ॥ ೨೦

ಉರವಣಿಸುವುದು ಕೊಂಡ ಹಜ್ಜೆಗೆ
ಮುರಿಯಲಾಗದು ಶಸ್ತ್ರ ಧಾರಾ
ಪರಮ ತೀರ್ಥಸ್ನಾನ ತೊಳೆವುದು ಭವದ ಕಿಲ್ಬಿಷವ ।
ಹರಣದಲಿ ಕಕ್ಕುಲಿತೆ ಬೇಡು
ದ್ಧರಿಸುವುದು ಸತ್ಕುಲತೆಯನು ಸಂ
ವರಿಸುವುದು ಸದ್ಗತಿಯನೆಂದನು ದ್ರೋಣ ನಿಜ ಬಲಕೆ ॥ ೨೧

ಲಟಕಟಿಸಿತಾಹವಕೆ ರಾಯನ
ಕಟಕ ಸುಮ್ಮಾನದಲಿ ಮೊಳಗುವ
ಪಟಹ ಡಮರು ಮೃದಂಗ ಘನ ಗಂಭೀರ ಭೇರಿಗಳ ।
ಚಟುಳ ಕಹಳೆಯ ಗಜರು ಮಿಗಲು
ತ್ಕಟಿಸಿತಂಬುಜ ಭವನ ನಿರ್ಮಿತ
ಘಟ ಬಿರಿಯೆ ಬಿಗುಹಾಯ್ತು ದ್ರೋಣನ ಸಮರ ಸನ್ನಾಹ ॥ ೨೨

---

[1] ನೂಲ ಹರಿಗೆಯು (ಕ.ಚ.ದ).

ನರನ ಕರೆಕರೆ ಸಿಂಧುರಾಜನ
ಹರಿಬವೆಮ್ಮದು ತಮ್ಮದೆಂದ
ಬ್ಬರಿಸಿ ನೂಕಿತು ಕದನ ಲಂಪಟರಾಗಿ ಪಟುಭಟರು ।
ಸರಿಸದಲಿ ಲಟಕಟಿಸಿ ಮೋಹರ
ಮರಳಿ ನಿಂದುದು ರಣಕೆ ರಜನೀ
ಚರರ ಥಟ್ಟಣೆ ಧಾತುಗೆಡಿಸಿತು ದಿಟ್ಟರುಬ್ಬಟೆಯ ॥ ೨೩

ಹಿಂದೆ ಸೆಳೆದುದು ವೈರಿ ಬಲ ಭಟ
ವೃಂದ ನಿಲಲಿ ಕಿರೀಟಿ ಭೀಮರ
ಕುಂದುಗಾಬುದು ಲೋಕ ನಮ್ಮನು ತೆಗೆದು ಹಿಂಗಿದರೆ ।
ಬಂದ ಜಯವಕ್ಕುವುದು ರಜನಿಯ
ಕೊಂದೆವಾದರೆ ನಮಗೆ ಸರಿಯಿ
ಲ್ಲೆಂದು ಧೃಷ್ಟದ್ಯುಮ್ನ ಕರಸಿದನಖಿಳ ನಾಯಕರ ॥ ೨೪

ಸೋತ ಬಲ ಸಂವರಿಸಿಕೊಂಡುದು
ಪೂತುರೇ ರಣವೆಂಬುದೆಮ್ಮಯ
ಧಾತು ಕಲಿ ಮೊದಲಿಸಿ ಕರೆದರೆ ರಾಜ್ಯಸಿರಿಯೇಕೆ ।
ಭೀತಿ ಮನದಲಿ ಪೌರುಷಾಂಗದ
ಮಾತು ಮುಖದಲಿ ಮುರಿವು ಕಾಲಲಿ
ಬೂತುಗಳು ಕುರುವೀರರೆನುತಿದಿರಾದುದರಿ ಸೇನೆ ॥ ೨೫

ಇಳಿದುದೀ ಕಣನೊಳಗೆ ದಿಗು ಮಂ
ಡಲದ ಸಂಧ್ಯಾರಾಗವೆನೆ ಪರಿ
ದಳಿತ ಚತುರಂಗದಲಿ ಮಸಗಿದುದರುಣ ಜಲರಾಶಿ ।
ಕಲಿಗಳುಬ್ಬಿನ ರೋಷ ತಾಮಸ
ತುಳುಕಿತೆನೆ ದಿಗುವಳಯದಲಿ [1]ಕುಡಿ[1]
ವೆಳಗ ಕುಡಿ ಕುಡಿವಡರುತಿರ್ದುದು ತಿಮಿರ ಲತೆ ಜಗವ ॥ ೨೬

ಜಡಿವ ಖಡುಗದ ಕಿಡಿಗಳಲಿ ಬೇ
ಗಡೆ[2]ಯನಾಂತುದು[2] ಮಕುಟ ಬದ್ಧರ
ಮುಡಿಯ ರತ್ನ ಪ್ರಭೆಗಳಲಿ ಜರ್ಝರಿತ ತನುವಾಯ್ತು ।
ಗಡಣದಂಬಿನ ಮಸೆಯ ಬೆಳಗಿನೊ
ಳಡಸಿದಾಕ್ಷಣ ಮತ್ತೆ ನಿಮಿಷಕೆ
ಹೊಡಕರಿಸಿ ಹಬ್ಬಿದುದು ಮಬ್ಬಿನ ಧಾಳಿ ದೆಸೆದೆಸೆಗೆ ॥ ೨೭

---

[1] ತರು (ಕ). [2] ಗಳಾದುವು (ಕ.ಗ.ಚ.ದ).

ಖಳರ ಹೃದಯದ ಗರುಡಿ ಘೂಕಾ
ವಳಿಯ ನಯನಾಂಜನ ಧರಿತ್ರಿಯ
ನಳಿನಕೆಱಗಿದ ತುಂಬಿ ಸುಭಟಸ್ವಾಂತ ಶಶಿರಾಹು ।
ಪ್ರಳಯ ತಿಮಿರದ ಬೀಜ ನೀಲಾ
ಚಳದ ಸಾಯುಜ್ಯವೊ ನಭೋಮಂ
ಡಲದೊಳದನೇವೊಗಳುವೆನು ಮಸಗಿತು ತಮಸ್ತೋಮ ॥ ೨೮

ಡೆಳದ ಬೊಬ್ಬೆಯ ಸಿಡಿಲ ಬಲುಗ
ತ್ತಲೆಯ ಝಾಡಿಯ ಮುಗಿಲ ಮಿಗೆ ಹೊಳೆ
ಹೊಳೆವ ಮಹಿಪರ ಮಕುಟ ರತ್ನದ ಬಳ್ಳಿ ಮಿಂಚುಗಳ ।
ಬಲು ಸರಿಯ ನಾರಾಚ ಜಾಳದ
ಮಳೆಯ ನೆತ್ತರ ಹೊನಲುಗಳ ರೌ
ಕುಳದ ಮಳೆಗಾಲದಲಿ ಹೆಚ್ಚಿತು ಭಟರ ಶೌರ್ಯ [1]ಶಿಖಿ[1] ॥ ೨೯

ಹೆಣಗಿ ಮಿಗೆ ತಲೆಯೊತ್ತಿ ಹೊಯ್ದರು
ಹಣಿದ[2]ದಲಿ[2] ತಮ್ಮೊಳಗೊಳಗೆ ಸಂ
ದಣಿಗಳಲಿ ಸೈಗಱೆದರಂಬಿನ ಸಿರಿಯನುರವಣಿಸಿ ।
ರಣಮು[3]ಹೀಸಂತಮ ಸಶಾಂತೇ[3]
ಕ್ಷಣರು ದಿಗುಭ್ರಮೆಯಲಿ ಸ್ವಕೀಯ
ಕ್ಷಣನವನು ರಚಿಸಿದರು ರೌರವವಾಯ್ತು ರಾತ್ರಿಯಲಿ ॥ ೩೦

ಆರ ವಂಗಡದಾಳಿವನು ನೀ
ನಾರು ಹೆಸರೇನೆಂದು ಬಳಿಕ ವಿ
ಚಾರ ಮಿಗೆ ಹೊಯ್ದಾಡಿದರು ಕರೆ ಕರೆದು ಮೂದಲಿಸಿ ।
ಭಾರಿಸಿತು ಬಲು ತಿಮಿರ ಬಲ ಸಂ
ಹಾರವನು [4]ವಿವರಿ[4]ಸುವನಾವನು
ಭೂರಿ ಭಟರಂಘವಣೆ ಬೀತುದು ಭೂಪ ಕೇಳೆಂದ ॥ ೩೧

ತೆಗೆಸು ಚೂಣಿಯ ಬಲವ ದೀವ
[5]ಟ್ಟಿಗರ[5] ಕರೆ ಕರೆ ತೈಲ ಪೂರ್ಣದ
ತೊಗಲ ಕುನಿಕಿಲ ಬಂಡಿ [6]ಕವಿಯಲಿ[6] ಕೋಟಿ ಸಂಖ್ಯೆಯಲಿ ।

---

[1] ಸಿರಿ (ಕ), ಶಶಿ (ದ). [2] ವನು (ಕ.ಙ.ದ). [3] ಹೀಶಂತಯ ಶುಶುಪ್ತಿ (ಕ). ಹೀಸಮ್ಮತರುಶಾಂತೆ (ಟ). [4] ಹವಣಿ (ಕ.ಗ). [5] ಷ್ಟಿ (ಕ.ಗ). [6] ನೂಕಲಿ (ತ).

ಬಿಗಿದ ಮಳವೆ[1]ಯನೆ[1]ಣ್ಣೆಗೊಪ್ಪರಿ
ಗೆಗಳೊಳದ್ದಲಿ ಗಳೆಗಳಲಿ ಸೀ
ಕೆಗಳ ಸುತ್ತಲಿಯೆಂದು ಕೈವೀಸಿದೆನು ಕಲಿ ದ್ರೋಣ ‖ ೩೨

ಬೆಳಗಿದವು ಬೊಂಬಾಳ ದೀವಿಗೆ
ಬಲದೊಳಾನೆಗೆ ಹತ್ತು ರಥಿಕಾ
ವಳಿಗೆ ನಾಲುಕು ಹಯಕೆರಡು ಕಾಲಾಳಿಗೊಂದೊಂದು ।
ಬಲ ಸಮುದ್ರದೊಳೊಗೆದ ವಡಬಾ
ನಳನ ಝಳವೋ ಮೃತ್ಯುವಿನ ದೀ
ವಳಿಗೆಯಿರುಳೋ ತಿಳಿಯಲರಿದೆನೆ ಚಿತ್ರವಾಯ್ತೆಂದ ‖ ೩೩

ಬಗೆಯಲರಿದಿದು ಗರ್ಭ ಬಲಿಯದೆ
ಹಗಲನೀದುದೊ ರಾತ್ರಿ ಕುಡಿಕುಡಿ
ದುಗುಳುತಿರ್ದುವು ತಿಮಿರವನು ಕರದೀಪ್ತಿಕಾಳಿಗಳು ।
ಹೊಗರುಗೆಟ್ಟುದು ಕುಮುದ ಕಮಳದ
ಬಿಗುಹು [2]ಬಿಟ್ಟುದು[2] ಚಕ್ರವಾಕದ
ತಗಹು ಕೆಟ್ಟುದು [3]ಹೇ[3]ಳೆನಲು ರಂಜಿಸಿತು ದೀಪಾಳಿ ‖ ೩೪

ತಿಮಿರವಡಗಿತು ಮನದ ರೋಷದ
ತಿಮಿರವಡಗದ ಮುನ್ನ ಭುಜ ವಿ
ಕ್ರಮದ [4]ವಿತರಣೆ[4]ಯುಳ್ಳಡವಸರವಿದು ನೃಪಾಲರಿಗೆ ।
ನಿಮ ನಿಮಗೆ ಮುಂಕೊಂಡು ವಂ[5]ಶ
ಕ್ರ[5]ಮ ಸಮಾಗತ ಕೀರ್ತಿ ಸತಿಯಲಿ
ಮಮತೆಗಳ ನೆಱೆ ಮಾಡಿಯೆಂದನು ದ್ರೋಣ ನಿಜ ಬಲಕೆ ‖ ೩೫

ಮತ್ತೆ [6]ಹೊಕ್ಕುದು[6] ಭಟರಮಮ ದಿಗು
ಭಿತ್ತಿ [7]ಬಿ[7]ರಿಯಲು ಮೊರೆವ ಭೇರಿಯು
ಕಿತ್ತು ನೆಲ ಹೊಡೆ ಮರಳೆ ಮೊಳಗುವ ಪಟಹ ಡಿಂಡಿಮದ ।
ಹತ್ತು ಸಾವಿರ ನೃಪರು ರಿಪುಗಳ
ಮುತ್ತಿದರು ಮುಸುಕಿದರು ಮೆಯ್ಯಲಿ
ಮೆತ್ತಿದರು ಮೊನೆಗಣೆಗಳನು ಪಾಂಡವರ ಬಲದೊಳಗೆ ‖ ೩೬

---

[1] ಗಳೆ (ತ.ಟ). [2] ಬೀತುದು (ಗ.ದ). [3] ಕೇ (ತ). [4] ಮನ್ನಣೆ (ಕ.ಟ.ತ). [5] ಶೋತ್ತ (ಕ.ಚ). [6] ಕವಿದುದು (ಕ). [7] ಜ (ಗ.ಚ.ನ).

ಅಕಟ ಫಡ ಕುನ್ನಿಗಳಿಗಸುರಾಂ
ತಕನ ಕಪಟ[1]ದ[1] ಮಂತ್ರವೇ ಬಾ
ಧಕವಿದಲ್ಲದೆ ನಿಮಗೆ ಸೋಲುವುದುಂಟೆ ಕುರುಸೇನೆ ।
ಸಕಲ ಸನ್ನಾಹದಲಿ ಯಾದವ
ನಿಕರ ಸಹಿತೀ ಯಿರುಳು ರಣದಲಿ
ಚಕಿತರಾದರೆ ಜೋಡಿಸೆನುತಿದಿರಾದನಾ ದ್ರೋಣ ॥ ೩೭

ತವಕ ತಗ್ಗಿತು ಭಟರ ತಾಳಿಗೆ
[2]ಜವಳಿ[2]ದೆಗೆದುದು ಮನಕೆ ಭೀತಿಯು
ಗವಸಣಿಗೆ ಘಾಡಿಸಿತು ಜಾಳಿಸಿತದಟರಪಸರಣ ।
ಸವೆದ ಶೌರ್‍ಯದ ಘಾಯ ಘಲ್ಲಿಸಿ
ತವಯುವದ ಮಡಮುರಿವ ಮೋಹರ
ದವನಿಪತಿಗಳ ನಿಲವ ನೋಡಿದನಸುರ ರಿಪು ನಗುತ ॥ ೩೮

ನಿಲ್ಲಿ ಭಯ ಬೇಡಾವ ರಣವಿದು
ತಲ್ಲಣಕೆ ತಱುವಾಯೆ ದೀವಿಗೆ
[3]ಪಲ್ಲವಿಸಿದರೆ[3] ತಳಿತುದೇ ಭುಜ ಶೌರ್‍ಯ ಕುರುಬಲಕೆ ।
ಖುಲ್ಲರಾರೋ ಬಲವ ತಿರುಹಿದ
ರಿಲ್ಲಿ ನಿಲಲಂಜಿದರೆನುತ ಕರ
ಪಲ್ಲವವ ನೆಗಹಿದನು ಲಕ್ಷ್ಮೀಕಾಂತ ಕರುಣದಲಿ ॥ ೩೯

ಆವನೊಬ್ಬನ ಮಧುರ ವಚನ ಕೃ
ಪಾವಲೋಕನದಿಂದ ಶತ ಜ
ನ್ಮಾವಳಿಯ [4]ಘನ[4] ದುರಿತ ವಹ್ನಿಯ ಝಳಕೆ ಕಡೆಯಹುದು ।
ದೇವರೀತನ ಲಲಿತ ವಚನ ಸು
ಧಾವಸೇಚನದಿಂದ ಭಟರುರೆ
ಜೀವಿಸುವುದೇನರಿದೆ ಕೇಳ್ ಜನಮೇಜಯ ಕ್ಷಿತಿಪ ॥ * ೪೦

ಹಿಂಗಿದುದು ಭಯ ಕಂಠದ ಸುಸ
ರ್ವಾಂಗದಲಿ ಪಸರಿಸಿತು ಕಾಳೆಗ
ದಂಘವಣೆ ಹೊಗರೇಱಿದುದು ವಿಕ್ರಮ ಧಡಾಳಿಸಿತು ।

---

[1] ಕು (ಗ.ಚ.ತ). [2] ದ್ರವವ (ಗ). [3] ಕೆಲ್ಲೈಸಿದರೆ (ಚ.ಟ.ತ.ನ).
[4] ಭವ (ಗ.ಚ). * ಈ ಪದ್ಯವು (ನ) ಪ್ರತಿಯಲ್ಲಿಲ್ಲ.

ಹೊಂಗಿದರು ಹೊಂಪುಳಿಯ ಪುಳಕದ
ಮುಂಗುಡಿಯ ರೋಮಾಂಚನದ ರಣ
ಠಂಗ ಧೀರರು ತಱುಬಿ ನಿಂದರು ಮತ್ತೆ ಕಾಳೆಗವ ॥ ೪೧

ಭಟರು ಬಳಲಿದರಿಂದು ರಣವು
ತ್ಕಟವು ಧೀವಶಿಗಳು ಮಹಾರಥ
ರಟಕಟಿಸುತಿದೆ ಮತ್ತೆ ನಾವಿದನೇನ ಹೇಳುವೆವು ।
ಕುಟಿಲ ಭಾರದ್ವಾಜನಿವನು
ಬ್ಬಟೆಗೆ ಮದ್ದರೆವೆನು ನಿಶಾ ಪರಿ
ಯುಟನ ಪಟುಗಳು ಬರಲಿ ಕಾಳೆಗಕೆಂದನಸುರಾರಿ ॥ ೪೨

ಕರಸು ಧರ್ಮಜ ಕಲಿ ಘಟೋತ್ಕಚ
ನಿರುಳು ಬವರಕೆ ನಿಲಲಿ ಸಾತ್ಯಕಿ
ನರ ವೃಕೋದರ ನಕುಲ ಸಹದೇವಾದಿಗಳಿಗರಿದು ।
ಇರುಳು ರಣದಾಯತವನವನೇ
ಕಿರಿದು ಬಲ್ಲನು ಗೆಲುವನೆನೆ ಮುರ
ಹರನ ನೇಮದಲನಿಲ ತನಯನ ತನಯನೈತಂದ ॥ ೪೩

ಜಡಿವ ಕಿರಿಯುಬ್ಬಣದ ಹೆಚ್ಚಿದ
ಮುಡುಹುಗಳ ಮುರಿದಲೆಯ ಚರಣದ
ತೊಡರ [1]ಮೊ[1]ಳಗಿನ ಬಾವುಲಿ[2]ಗಳಲಿ ಘಣಘಣ ಧ್ವನಿಯ[2] ।
ನಿಡಿಯೊಡಲ ಮುರಿಮೀಸೆಗಳ ಕೆಂ
ಪಡರ್ದ ಕಂಗಳ ಹೊಳೆವ ದಾಡೆಯ
ದಡಿಗ ದಾನವನವನಿ ಹೆಜ್ಜೆಗೆ ನೆಗ್ಗಲೈತಂದ ॥ ೪೪

ಏನು ಧರ್ಮಜ ಕರಸಿದ್ಯೆ ಕುರು
ಸೇನೆ [3]ಮಲೆತುದೆ[3] ಬಿಡು ಬಿಡಾ ತಡ
ವೇನು ತಾ ವೀಳೆಯವನೆನುತೆಡಗಯ್ಯನರಳಿಚುತ ।
ದಾನವಾಮರರೊಳಗೆ ನಿನ್ನಯ
ಸೂನುವಿಗೆ ಸರಿಯಿಲ್ಲೆನಿಸಿ [4]ನಿ[4]ಲ
ಲಾನು ಬಲ್ಲೆನು ನೋಡೆನುತ ಬಿದಿರಿದನು ಖಂಡೆಯವ ॥ ೪೫

---

1 ಬೆ (ಕ). 2 ಯ ಝಣ ಝಣ ಝಣಸ್ವನದ (ಗ.ಚ). 3 ಯಾಂತುದೆ (ಕ.ಗ). 4 ಗೆ (ಗ.ಟ.ತ).

ಜಡಿದು ಝೊಂಪಿಸಿ ವೀಳೆಯವ ಕೊಂ
ಡೆಡದ ಕಯ್ಯಿಂದೆಱಗಿ ಮದ ಮುಖ
ನೆಡಬಲನ ನೋಡಿದರೆ ರಕ್ಕಸ ಕೋಟಿ ಜೀಯೆನುತ ।
ಸಿಡಿಲ ಸೆಱೆ ಬಿಟ್ಟಂತೆ ಭುಜವನು
ಹೊಡೆದು ಮುಂಚಿತು ದೈತ್ಯಬಲ ವುಲಿ
ದಡಿಯಿಡಲು ಮೇಲುಸುರು ಮಸಗಿತು ಫಣಿಪ ಕಮಠರಿಗೆ ॥ ೪೬

ಕಾಳರಾತ್ರಿಯ ಕಟಕವೋ ಮೇಣ್
ಕಾಲರುದ್ರನ ಪಡೆಯೊ ದಾನವ
ನಾಳಿನಗ್ಗಳಿಕೆಗಳ ಬಣ್ಣಿಸಬಲ್ಲ ಕವಿಯಾರು ।
ಆಳ ಬೋಳೈಸಿದನು ಕಪ್ಪುರ
ವೀಳೆಯವ ಹಾಯ್ಕಿದನು ಲೋಹದ
ಗಾಲಿ ಘೀಳಿಡೆ ರಥವನೇಱಿದನನಿಲ ಸುತ ಸೂನು ॥ ೪೭

ಸಾಲು ಮಿಗೆ ಮೋಹರದೊಳಗೆ ಬೊಂ
ಬಾಳ ದೀವಿಗೆ ಬೆಳಗಿದವು ಶರ
ಜಾಳ ದೀಧಿತಿ ತೊಳಗಿದವು ಧನುರ್ಧರರ ಕೈಗಳಲಿ ।
ಬಾಳ ಹೊಳಹನು ಜಱೆದು ದಾಡೆಯ
ಥಾಳ ಮಿಗೆ ಗಜಗಲಿಸೆ ದಾನವ
ಕಾಳೆಗಕ್ಕನುವಾಗಿ ನಿಂದನು ಬಿಗಿದ ಬಿಲುದೆಗೆದು ॥ ೪೮

ಹಯಕೆ ಹಯ ರಥ ರಥಕೆ ಪಯದಳ
ಪಯದಳಕೆ ಗಜಸೇನೆ ಗಜಸೇ
ನೆಯಲಿ ಭಾ[1]ಷೆ[1]ಯ ಭಟರು ಭಾ[2]ಷೆ[2]ಯ ಭಟರ ಗಡಣದಲಿ ।
ನಿಯುತ ಚಾತುರ್ಬಲವೆರಡು ನಿ
ರ್ಭಯದಲೊದಗಿತು ಮಕುಟ ಮಸ್ತಕ
ಮಯ ಮಹೀತಳವೆನಲು ಹಳಚಿದು ಹೊಯ್ದುದುಭಯಬಲ ॥* ೪೯

---

[1] ರಿ (ಗ.ಟ.ದ). [2] ರಿ (ಗ.ಟ.ದ).

* ೪೯ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ.

ಹರನು ನೆಟ್ಟನೆ ಮುನಿದು ತ್ರಿಪುರವ
ನುರುಹುವಂದಿನ ನೊಸಲಗಣ್ಣಿಂ
ದುರವಣಿಸಲಲ್ಲಿಂದ ಸಡಲಿದ ಕಿಡಿಗಳೆಲ್ಲವನು ।
ಪರಗಣಿಸೆ ಬೊಂಬಾಳ ದೀವಿಗೆ
ಯುರವಣಿಸಿದವು ಭೀಮಸೇನನ
ಕಿರಿಯಮಗ ಸಮರವನು ಹೊಕ್ಕನು ರಣಭಯಂಕರನು ॥

ಕೌರವನ ತಳತಂತ್ರ ಕಟಕಾ
ಚಾರಿಯನ ಕಾಹಿನಲಿ ರಿಪು ಪರಿ
ವಾರ ನಿಂದುದು ಭೀಮಸೇನನ ಸುತನ ಬಳಸಿನಲಿ ।
ಆರಿದನು ಜಗ ನಡುಗೆ ಬೊಬ್ಬೆಯ
ಭಾರದಲಿ ವೈರಿಗಳ ಬಲ ಸಂ
ಹಾರ ರುದ್ರನು ಕಲಿ ಘಟೋತ್ಕಚ ಹೊಕ್ಕನಾಹವವ ॥ ೫೦

ಬೆಳೆದವೋ ಕೈ ಕಾಲು ನೀಲಾ
ಚಲಕೆ ಹೇಳಿನೆ ಮುಗಿಲ ತುಡುಕುವ
ತಲೆಯ [1]ತೋಕೆ[1]ಯ ತೋರಹತ್ತನ ಕಂಡು ಕುರುಸೇನೆ ।
ಕಳವಳಿಸಿದರು ಕಾಯದಲಿ ಕ
ಕ್ಕುಲಿತೆಗಾಱರು ಕೈದೆಗೆದರ
ಗ್ಗಳೆಯನುಱುಬೆಗೆ ಬೀಳುಕೊಟ್ಟರು ಭಟರು ಸ್ವೈರಣೆಯ ॥ ೫೧

ಏನ ಹೇಳುವೆನವರ ರಣ ಸು
ಮ್ಮಾನವನು ನಮ್ಮವರ ಮೊಗದು
ಮ್ಮಾನವನು ಪ್ರಥಮ ಪ್ರವೇಶದೊಳಾದುದೀ ಹದನು ।
ದಾನವರ ಥಟ್ಟಣೆಗೆ ನಿಲುವರ
ನಾನು ಕಾಣೆನು ದಿಟ್ಟತನದಲಿ
ತಾನೆ ನಿಂದನು ಕೌರವೇಂದ್ರನು [2]ಸಕಲ ಬಲ[2] ಸಹಿತ ॥ ೫೨

ಫಡ ನಿಶಾಚರ ಹೋಗು [3]ಹೋಗಳ[3]
ವಡದು ಕರೆ ನಿಮ್ಮಯ್ಯನನು ಹೇ
ರೊಡಲ ತೋಱಿಸಿ ಬಲವ ಬೆದಱಿಸಲ[4]ಗ್ಗಳಿಕೆಯಹುದೇ[4] ।
ಮಿಡುಕುವರೆ ಕರೆ ನಿಮ್ಮ ತೆತ್ತಿಗ
[5]ನ[5]ಡಗಲೇತಕೆ ಕೃಷ್ಣ ನಿಮಗಿ
ನ್ನೊಡಲ ಬಳಿನೆಳಲವ ಸಹಿತ ಬಾಯೆಂದು ಗರ್ಜಿಸಿದ ॥ ೫೩

ಮರುಳು ಕೌರವ ಜಂಗಮ ಸ್ಥಾ
ವರದ ದೇಹಕೆ ನೆಳಲಹುದು ದಿನ
ಕರನ ದೇಹಕೆ ನೆಳಲು ಶ್ರುತವೋ ದೃಷ್ಟವೋ ನಿನಗೆ ।

---

[1] ತೆಕ್ಕೆ (ಕ), ಜೋಕೆ (ಟ). [2] ರಾಜದಳ (ಟ.ತ.ನ). [3] ನಿನಗಳ (ಟ.ತ.ನ).
[4] ಗ್ಗಳೆಯನಹುದೊ (ಚ). [5] ರ (ಗ).

ಸುರ ನಿಶಾಚರ ಮರ್ತ್ಯರೊಳು ತಾ
ನೆರವ ಬಯಸುವುದುಂಟೆ ಹರಿಯಂ
ತಿರಲಿ ಚೈತನ್ಯಾತ್ಮನಾತನ ಮಾ[1]ತದೇಕೆಂದ[1] ‖ ೫೪

ಹೆಣನನಱಸುತ ರಕುತ ಪಾನಕೆ
ಸೆಣಸಿ ಶಾಕಿನಿ ಢಾಕಿನಿಯರೊಳು
ಹೆಣಗಿ ಗೆಲುವುದೆಯಾಯ್ತು ದಾನವ ವಿದ್ಯೆ ಜಗವಱಿಯೆ ।
ರಣದೊಳಗ್ಗದ ಕೈದುಕಾಱರ
ಕೆಣಕಿ ಗೆಲುವುದ ಕೇಳಿದಱಿಯೆವು
ಹೆಣದಿನಿಹಿಗಳು ಹೇವ ಮಾರಿಗಳೆಂದನಾ ಭೂಪ ‖ ೫೫

ಬಯ್ಯಲಱಿವೆ ದುರುಕ್ತಿ ಶರದಲಿ
ಮೆಯ್ಯನೆಸುವೆಯೊ ಮೇಣು ಮಾರ್ಗಣೆ
ಕಯ್ಯಲುಂಟೇ ನಿನಗೆ ಸಂಬಳವೇನು ಸಮರದಲಿ ।
ಅಯ್ಯನನು ಕರೆಯೆಂಬ ಬಾಯನು
ಕೊಯ್ಯಬೇಡಾ ಸಿಂಹ ಕೇಸರ
ದುಯ್ಯಲಾಡುವ ಗಜವ ನೋಡೆಂದುಱುಬಿದನು ನೃಪನ ‖ ೫೬

ಎಸುತ ಹೊಕ್ಕನು ದಳ್ಳಿಸುವ ಹೊಸ
ಮಸೆಯ ಕಣೆ ಮುಕ್ಕುಱುಕಿದವು ನಿ
ಪ್ಪಸರದಲಿ ನೃಪನೆಚ್ಚು ಕಾಣನು ಹಱಿವನಾ ಕಣೆಗೆ ।
ಕುಸುರಿದಱಿದವು ಜೋಡು ಸೀಸಕ
ಬೆಸುಗೆಯೊಡೆದುದು ಘಾಯದಲಿ ಮೈ
ಬಸಿಯೆ ಬಿರಿದುದು ಶೌರ್ಯ [2]ಬಿಗಿ[2]ದುದು ಭೀತಿ ಭೂಪತಿಗೆ ‖ ೫೭

ಅಕಟ ದೊರೆ[3]ಯೋ ಸಿಕ್ಕಿದನು ಪಾ
ತಕರು ರಥಿಕರು ಶಿವ ಹಿಡಿಂಬಾ
ರ್ಭಕನಿಗೊಪ್ಪಿ[3]ಸಿಕೊಟ್ಟು ಕೊಂದರು ದ್ರೋಣ ಕೃಪರೆನುತ ।

---

[1] ತೆ ನಿನಗೆಂದ (ಕ.ಗ.ಚ). [2] ಬಲಿ (ಗ.ಚ). [3] ಸಿಕ್ಕಿದನು ಕಟಕಟ ಪಾತಕರು ರಥಿಕರು ನಾಯಕಿತ್ತಿಯ ನೃಪನ ನೊಪ್ಪಿಸಿ (ಕ), ಯೋ ಸಿಕ್ಕಿದನು ನಾಯಕರು ಮಡಿದರೆ ಶಿವಮಹಾಪಾತಕನ ನೊಪ್ಪಿಸಿ (ಗ), ರಿಪುನಿಕರ ವೀಗಳೆಕೊಲುವ ರಿಂತರ್ಭಕನ ನಿಂತೊಪ್ಪಿಸಿ (ಚ), ಸಿಕ್ಕಿದನು ಕರೆ ನಾಯಕರು ಸರಿದರೆ ಶಿವಮಹಾಪಾತಕನನೊಪ್ಪಿಸಿ (ಟ), ಸಿಲುಕಿದನಲಾ ಪಾತಕಕೆ ಸಲ್ಲರೆ ಪಾಪಿಗಳು ಬಲುವಿಕಟ ರಾಕ್ಷಸಗೊಪ್ಪುಗೊಟ್ಟರೆ (ದ).

[1]ಸಕಲ ಪರಿಚಾರಕರು ಮಂತ್ರಿ
ಪ್ರ[1]ಕರವೊರಲಲು ಕೇಳಿ ಬದ್ಧ
ಭ್ರುಕುಟಿ ಭೀಷಣ ಮುಖರು ಮಸಗಿತು ದೈತ್ಯ ಬಲ ಜಲಧಿ ॥ ೫೮

ಬಕನ ಮಕ್ಕಳು ಜಟನ ಕಿಮ್ಮಿ
ರಕನ ಸುತರು ಹಿಡಿಂಬ ತನುಜರು
ವೃಕ ಜರಾಸಂಧಾತ್ಮಜರು ಶಿಶುಪಾಲ ನಂದನರು ।
ಸಕಲ ಸನ್ನಾಹದಲಿ ದೈತ್ಯ
ಪ್ರಕರ ಹೊಕ್ಕುದು ರಾಯ ರಥ ಪಾ
ಳಕರು [2]ಕವಿದರು[2] ತುಡುಕಿದರು ರಣವನು ಘಟೋತ್ಕಚನ ॥ ೫೯

ಕೆಣಕಿದರಲಾ ರಣವ ರಕ್ಕಸ
ಬಣಗುಗಳು ಮಝು ಪೂತು ಸಮರಾಂ
ಗಣದೊಳಗೆ ನಾವಾವ ಸದರವೊ ನೋಡಿರೈ ಭಟರು ।
ಸೆಣಸು ಗಡ ನಮ್ಮೊಡನೆ ಸಲೆ [3]ಟೆಂ[3]
ಠಣಿಸುವರು ಗಡ ಬವರಕೋಸುಗ
ಹೊಣಕೆ ಗಡ ನಮ್ಮೊಡನೆನುತ ಸಾರಥಿಯ ಕೈವೊಯ್ದ ॥ ೬೦

ಹೆಸರುಗೊಂಡರೆ ಕಿವಿಗಳಿಗೆ ಕ
ರ್ಕಶರು ರಕ್ಕಸರೆಂಬ ಹೆಸರಿ[4]ದು[4]
ನುಸಿಗಳೊಳಗಾತ್ರಯಿಸಿ [5]ಕೆಟ್ಟುದು[5] ಶಿವ ಶಿವಾಯೆನುತ ।
ಹೊಸ ಮಸೆಯ ಹೊಗರಂಬುಗಳನೆ
ಬ್ಬಿಸಿದನುಬ್ಬಿಸಿದನು ವಿರೋಧಿಗ
ಳಸು ಸಮೀರಣನಿಂದ ನಿಜ ಭುಜ ವಿಕ್ರಮಾನಳನ ॥ ೬೧

ಓಡಲೀಯದೆ ಸದರಗೊಡುತ ವಿ
ಭಾಡಿಸುತ [6]ಮೇಲಿ[6]ಕ್ಕಿದರೆ ಕೈ
ಮಾಡಿದರೆ ಶರಹತಿಗೆ ದೇಹವ ಕೊಟ್ಟು [7]ಸ್ವೈರಿ[7]ಸುತ ।
ಖೇಡತನವನು ಬಿಡಿಸಿ ಸಲೆ ಕೊಂ
ಡಾಡಿ ಕಾದಿದನಸುರ ಜಾತಿಯೊ
ಳೋಡೆ ಪರಿಭವ ತನ್ನದೆಂಬ [8]ಪದಸ್ತತನದಿಂದ[8] ॥ * ೬೨

---

[1] ಚಕಿತ ತನುಗಳು ನೃಪನ ಸಾರಥಿ ನಿ (ಕ.ಚ.ದ). [2] ತಱುಬಿತು (ಕ.ಗ). [3] ವೆಂ (ಗ.ಚ). [4] ನ (ಕ.ಗ.ಟ). [5] ಕೆಟ್ಟರು (ದ). [6] ವ್ಯೊಯಿ (ಕ). [7] ಮನ್ನಿ (ಚ.ತ.ನ). [8] ಕೀರ್ತಿಭಯದಿಂದ (ದ). * ಈ ಪದ್ಯವು (ಟ) ಪ್ರತಿಯಲ್ಲಿಲ್ಲ.

ಎಸುಗೆಯೊಳ್ಳಿತಲಾಯುಧನ ಲಂ
[1]ಬು[1]ಸನ ಪರಿ ತಪ್ಪಲ್ಲ ತಪ್ಪ
ಲ್ಲಸುರನಹೆಯೋ ಜಾಗು ಕಿಮ್ಮೀರಾತ್ಮಜಾ ಯೆನುತ ।
ಅಸಿ ಪರಶು ಪಟ್ಟಿಸ ಮುಸುಂಡಿ
ಪ್ರಸರ ಧಾರಾ[2]ಪಾತ[2]ದಲಿ ಮೈ
ಬಸಿಯೆ ರಕುತದ [3]ಸಾರ ಸಾಲಿಡೆ ಬಲದೊಳೊಳಹೊಕ್ಕು[3] ॥ ೬೩

ಉರು ತಿಮಿಂಗಿಳನಬುಧಿಯಲಿ ಡಾ
ವರಿಸುವುದು ಹುಲುಮೀ[4]ನಿನಂತಿರ
ಲರಸ ಹೇಳುವುದೇನು ಮೊಗೆದನು ದೈತ್ಯ ಜಲನಿಧಿಯ[4] ।
ಅರಿದ ಕೊರಳಿನ ಬಸಿವ ಬಂಬಲು
ಗರುಳ ಜರಿವ ಕಪಾಲದೊಗುನೆ
ತ್ತರ [5]ರಣಾವನಿ[5] ಕಱೆವುತಿರ್ದುದು ರೌದ್ರಮಯ ರಸವ ॥ ೬೪

ಜಾಗು ದೈತ್ಯರ ರಭಸದಲಿ ಲೇ
ಸಾಗಿ ಕಾದಿದಿರೀಸು ನಮ್ಮಲಿ
ತಾಗಿ ನಿಂದವರಾರು ಕೆಚ್ಚುಳ್ಳವರು ಕಲಿತನದ ।
ಆಗಲಿನ್ನಾವುದು ನಮಗೆ ಕೈ
ಲಾಗು ನಿಮ್ಮಸುಗಳು ಶರೀರವ
ನೀಗಿ ಕಳೆಯಲಿ ಎಂದು ಬೊಬ್ಬಿಱಿದೆಚ್ಚನತಿರಥರ ॥ ೬೫

ಸಿಡಿಲು ಮೊರೆದರೆ ಸರ್ಪನಂಜುವು
ದಡಗುವನೆ ಗರುಡನು ವೃಥಾ ಕೆಡೆ
ನುಡಿಯು ನುಡಿದರೆ ಧಿಟ್ಟನೆಂಬರೆ [6]ವೀರ[6]ರಾದವರು ।
ಫಡ ಫಡೆನುತ ಬಕಾಸುರನ ಮಗ
ನಡಸಿದನು ಕೂರಂಬನಾತನ
ಕಡುಹ ಹೊಗಳುತ ಹೊಕ್ಕು ಹಿಡಿದನು [7]ಸೀಳಿದನು[7] ಖಳನ ॥ ೬೬

ರಥಚಯವ ನುಗ್ಗೊತ್ತಿದನು ಸಾ
ರಥಿಗಳನು ಸೀಳಿದನು ಸುಮಹಾ
ರಥರ ಬಿಂಕದ ಬಿಗುಹ ಮುಱಿದನು ಹೊಕ್ಕು ಬೀದಿಯಲಿ ।

---

[1] ಬ (ಕ.ಗ.ಚ). [2] ಸಾರ (ಕ.ಗ.ಚ). [3] ಧಾರೆಯಲಿ ರಣದೊಳಗೆ ನಡೆತಂದ (ದ). [4] ನದಂತರವರಿಸದಂಗೈಸಿದನು ಮೊಗೆದನು ದೈತ್ಯ ಬಲ ನಿಧಿಯ (ಕ). [5] ಸರಿಯಸಾರಥಿ (ಕ). [6] ಗರುವ (ಕ.ಗ.ಟ). [7] ಬೀಸಿದನು (ಕ), ಬಿಗಿದನಾ (ಗ).

ಶಿಥಿಲವಾಯಿತು ವೈರಿ ಬಲವತಿ
ಮಥನವಾಯಿತು ದೈತ್ಯನೂಳಿಗ
ಪೃಥುವಿ ಲಘುತರವಾಯ್ತು ಫಣಿಪನ ಕೊರಳು ಸೈನಿಮಿರೆ ‖ ೬೭

ಬರಸಿದನು ರಣದಲಿ ಹಿಡಿಂಬಾ
ಸುರನ ಮಕ್ಕಳ ಚೈದ್ಯ ಮಾಗಧ
ನರಕ ಕಿಮ್ಮೀರಕ ಜಟಾಸುರ ಸೂನು ಸಂತತಿಯ ।
ಬರಲಿ ಕರ್ಣ ದ್ರೋಣರುಳಿದೀ
ಜರಡ ಜೋಡಿಸಬೇಡ ಭೀಮನ
ನರನ ಬಯಸುವರೆನ್ನೊಡನೆ ಕೈಮಾಡ [1]ಹೇಳೆಂದ[1] ‖ ೬೮

ಎನಲು ಕವಿದುದು ಸೇನೆ ಕಂಗನೆ
ಗನಲಿ ಕರ್ಣ ದ್ರೋಣರಿಗೆ ನೀ
ನೆನಿತಱವ ಘಡ ಬಾಯಿಬಡಿಕನು ಭೀಮ ಸುತನೆನುತ ।
ತನತನಗೆ ಕಾಲಾಳು ಮೇಲಾ
ಳನುಪಮಿತರೌಕಿದರು ಚಾಪ
ಧ್ವನಿಯೊಳಗೆ ನೆಱೆ ಮುಳುಗೆ ಬಹುವಿಧ ವಾದ್ಯ ನಿರ್ಘೋಷ ‖ ೬೯

ಆಳಹಿರಿ ನಿಮಗಂಜುವೆನು ಕಾ
ಲಾಳ ಹೊಯ್ಯೆನು ಕುದುರೆಕಾಱರು
ಮೇಲುವಾಯಲಿ ರಥಿಕರೊಡೆಹಾಯಿಸಲಿ ತೇರುಗಳ ।
ತೂಳಿಸಲಿ ಗಜದಳವನವರಿಗೆ
ಕೋಲ ತೊಡಚುವನಲ್ಲ ನೆಱೆ ಹೀ
ಹಾಳಿಯುಳ್ಳರೆ ಬರಲಿ ಕರ್ಣ ದ್ರೋಣ ಕೃಪರೆನುತ ‖ ೭೦

ಹಲಬರಸುರರು ಮಡಿದರಿವನ
ಗ್ಗಳಿಯನಿರುಳಿನ ಬವರದಾಯತ
ತಿಳಿವುದೀತಂಗೆನುತ[2]ಲಾ ದ್ರೋಣಾದಿ ನಾಯಕರು[2] ।
ಅಳುಕಿದರು ಬಳಿಕೇನು ಭಕುತಿಯ
ಲೊಲಿಸಿದರಲೈ ಪಾಂಡವರು ಯದು
ಕುಲ ಲಲಾಮನನಮಳ ಗದುಗಿನ ವೀರ ನರಯಣನ ‖ ೭೧

ಹದಿನೈದನೆಯ ಸಂಧಿ ಮುಗಿದುದು

---

[1] ಲರಿದೆಂದ (ತ), ಬೇಕೆಂದ (ಗ.ಚ), ಡಿ ನೀವೆಂದ (ದ). [2] ಲರಲಾಗು ರುಕೃಪಾದಿಗಳು (ಕ.ಗ).

# ಹದಿನಾರನೆಯ ಸಂಧಿ

ಸೂಚನೆ॥ ಚಂಡಬಲ ಕುರುಪತಿಗೆ ಮಲೆವರ
ಗಂಡನಿರುಳಿನ ಕಾಳೆಗದೊಳು
ದ್ದಂಡ ಭಟಕಲಿ ಕರ್ಣ [1] ಕೊಂದನು [1] ಭೀಮ ನಂದನನ ॥

ಕೇಳು ಧೃತರಾಷ್ಟ್ರಾವನಿಪ ದೊರೆ
ಯಾಳನಟಸುತ [2] ಹೊಕ್ಕು [2] ಸೂಠಿಯೊ
ಳಾಳು ಕುದುರೆಯ ಥಟ್ಟನಿಬ್ಬಗಿ[3]ಮಾಡಿ[3] ದಳವುಳಿಸಿ ।
ಕೋಲ ತೊಡಚ್ಕೈ ಕರ್ಣ ಕುರುಭೂ
ಪಾಲ ಕೈದುವ ಹಿಡಿ ಕೃಪಾದಿಗ
ಳೇಳಿ ಸಮ್ಮುಖವಾಗೆನುತ [4]ಕೈಮಾಡಿ[4] ಬೊಬ್ಬಿಱಿದ ॥ ೧

ಚೆಲ್ಲಿತರಿ ಬಲ ಜಲಧಿ ಭಟರ
ಲ್ಲಲ್ಲಿ ಮುಕ್ಕುಱುಕಿದರು ಸಬಳದ
ಸೆಲ್ಲಹದ ತೋಮರದ ಚಕ್ರದ ಸರಿಯ ಸೈಗಱೆದು ।
ಘಲ್ಲಿಸಿದವಾನೆಗಳು ತೇರಿನ
ಬಿಲ್ಲವರು ತುಡುಕಿದರು ಕಂಬುಗೆ
ಯಲ್ಲಿ ಖುರ ಕುಣಿದಾಡೆ ಹೊಕ್ಕರು ರಾಯ ರಾವುತರು ॥ ೨

ಎಡಬಲದಿ ಹಿಂದಿದಿರಿನಲಿ ಕೆಲ
ಕಡೆಯ ದಿಕ್ಕಿನೊಳೌಕಿದರು ಬಲು
ಗಡಲ ಕಡೆಹದ ಗಿರಿಯನಬುಧಿಯ ತೆರೆಗಳೊದೆವಂತೆ ।
ಕೊಡಹಿದರೆ ಕಟ್ಟಿಱುಹೆಗಳು ಬೆಂ
ಬಿಡದೆ ಭುಜಗನನಳಲಿಸುವವೋ
ಲಡಸಿ ತಲೆ[5]ಯೊತ್ತಿ[5]ದರು ಬೀಳುವ ಹೆಣನನೊಡಮೆಟ್ಟಿ ॥ ೩

ಹೊಕ್ಕ ಸುಭಟರು ಮರಳದಿರಿ ಖಳ
ಸಿಕ್ಕಿದನು ಸಿಕ್ಕಿದನು ಚಲಿಸುವ
ಚುಕ್ಕಿಗರ ಹೊಯ್[6] ಬೀಳಗುತ್ತೆನುತರಸನುಬ್ಬರಿಸೆ ।

---

[1] ಮುಱಿದನು (ಕ), ಗೆಲಿದನು (ದ). [2] ಬಿಟ್ಟ (ಕ.ಟ). [3] ಗಳೆದು (ಕ.ನ). [4] ಹೊಕ್ಕೆಚ್ಚು (ಕ.ನ). [5] ಯಿಕ್ಕಿ (ಕ.ಗ).

ಹೊಕ್ಕು ತಿವಿದರು ನೀಡಿ ಹರಿಗೆಯ
ನಿಕ್ಕಿ ನಿಂದರು ತಮತಮಗೆ ಮೇ
ಲಿಕ್ಕಿದರು ತೆರೆ ಮುಂಚಿಯೆ ಬಳಿದೆರೆ ಮಸಗಿ ಕವಿವಂತೆ ॥ ೪

ಅಗಡು ದಾನವನಿವನು ಕಡ್ಡಿಗೆ
ಬಗೆವನೇ ಸಾಗರವನಟ[1]ವ
ಟ್ಟಿ[1]ಗೆಯನಿಟ್ಟರೆ ವಡಬನಲ್ಲಾ ನೀರ ಕುಡಿವವನು ।
ಹೊಗೆದುದ್ಯೈ ಹೆಚ್ಚಾಳುಗಳ ನಗೆ
ಮೊಗವು ಮೋಡಾಮೋಡಿಯಲಿ ಕೈ
ಮಗುಚಿ ಕಳೆದನು ನಿಮಿಷದಲಿ ಹೇರಾಳ ರಾಶಿಗಳ ॥ ೫

ಕೆಲರ ನುಂಗಿದನೊದೆದು ಕೊಂದನು
ಕೆಲ[2]ಬರನು[2] ಹೊಅಕ್ಕೈಯ್ಯ ಹೊಯಿಲಲಿ
ಕೆಲಬರನು ಧನುವಿನಲಿ ಗದೆಯಲಿ ಹೊಯ್ದು ಕೆಲಕೆಲರ ।
ಕಲಕಿದನು ಬಲ ಜಲಧಿಯನು ಮೇ
ಲುಲಿದು ಕವಿದುದು ಮತ್ತೆ ಹೆಣನನು
ತುಳಿದು ಮು[3]ಗ್ಗಿ[3]ತು ಮೇಲೆ ಬಿದ್ದುದು ಮುಸುಕಿತರಿ ಭಟನ ॥ ೬

ಪೂತುರೇ ಕುರು ಸೈ[4]ನಿ[4]ಕವಸಂ
ಖ್ಯಾತವೆಂದಿಗೆ ಸವೆವುದೋ ಕೈ
ಸೋತವೇ ಹರ ಕೊಲುವೆನೆನುತಮುರಾರಿ ಚಿಂತಿಸಿದ ।
ಈತಗಳಿಗಿದು ಮದ್ದೆನುತ ಮಾ
ಯಾತಿಶಯ ಯುದ್ಧದಲಿ ಬಲಸಂ
ಘಾತವನು ಬೆದಱಿಸಿದನದನೇವಣ್ಣಿಸುವೆನೆಂದ ॥ ೭

ಮಾಯದಲಿ ಹುಲಿಯಾಗಿ ಗರ್ಜಿಸಿ
ಹಾಯಿದನು ಕಲಿ ಸಿಂಹವಾಗಿ ಗ
ದಾಯುಧದಲಪ್ಪಳಿಸಿದನು ಭೈರವನ ರೂಪಾಗಿ ।
ಬಾಯಲಡಸಿದನಹಿತರನು ದಂ
ಡಾಯುಧದ ನಿಲವಿನಲಿ ಸುಭಟರ
ದಾಯಗೆಡಿಸಿದನೊಂದು ನಿಮಿಷದೊಳೊರಸಿದನು ಬಲವ ॥ ೮

---

1 ವಂಟಿ (ಕ.ಗ). 2 ಬಲನ (ಕ.ಗ), ಕೆಲರ (ದ). 3 ತ್ತಿ (ಕ.ಗ).
(ಕ).

ಬೀಳಹೊಯ್ದನು ಬಿರುದರನು ಬಿಱು
ಗಾಳಿಯಾಗಿ ವರೂಥ ಚಯವನು
ಕಾಳುಕಿಚ್ಚಾಗುರುಹಿದನು ಫಣಿಯಾಗಿ ತುಡುಕಿದನು ।
ಮೇಲುಗವಿದನು ಜಲಧಿಯಾಗಿ ನೃ
ಪಾಲ ನಿಕರದೊಳುರುಳಿದನು ಗಿರಿ
ಜಾಳವಾಗಿ ಘಟೋತ್ಕಚನು ಘಲ್ಲಿಸಿದ[1]ನತಿರಥರ[1] ॥ ೯

ಎಱಗಿದನು ಸಿಡಿಲಾಗಿ ಕಂಗ[2]ಳೊ
ಳ[2]ಱುಕಿದನು ಮಿಂಚಾಗಿ ಮಳೆಯನು
ಕಱೆದು ನಾದಿದನಾತಪತ್ರ ತನುತ್ರ ಸೀಸಕವ ।
ತುಱುಕಿದನು ಹೊಗೆಯಾಗಿ ಮಿಗೆ ಬೊ
ಬ್ಬಿಱಿದನೊಂದೆಡೆಯಲ್ಲಿ ಸುಭಟರ
ನೊಱಲಿಸಿದನೊಂದೆಡೆಯಲೇನೆಂಬೆನು ಮಹಾ ರಣವ ॥ ೧೦

ಸುರಿದ ಕರುಳ್ಗಳ ಸಿಡಿದ ಹಲುಗಳ
ಜರಿದ ತಲೆಗಳ ಹಾಯ್ದ ಮೂಳೆಯ
ಹಱಿದ ನರವಿನ ಬಿಗಿದ ಹುಬ್ಬಿನ ಬಿಟ್ಟ ಕಣ್ಣುಗಳ ।
ಮುಱಿದ ಗೋಣಿನ ಬಸಿವ ತೊರಳೆಯ
ಹರಿವ ರಕುತದ ತಳಿತ ಖಂಡದ
ಬಿರಿದ ಬಸುಱಿನ ರೌರವದ ರಣಭೂಮಿ ರಂಜಿಸಿತು ॥ ೧೧

ಗರುಡನುಬ್ಬಟೆಗಹಿ ನಿಕರ ಜ
ಜ್ಝರಿತವಾದವೊಲಿವನ ಕಡು ನಿ
ಬ್ಬರದ ಧಾಳಿಗೆ [3]ಧೈರ್ಯ[3]ಗೆಟ್ಟುದು ಕೂಡೆ ಕುರುಸೇನೆ ।
ಹೊರಳಿಯೊಡೆದರು ಭಟರು ಸಿಡಿದರು
ಜರುಗಿದರು ಜವಗುಂದಿದರು ಮಡ
ಮುರಿ[4]ದು[4] ಬಿರುದರು ತಣಿದುದ್ಯೆ ಪರಿಭವದ ಸೂಱೆಯಲಿ ॥ ೧೨

ಧಾತುಗೆಟ್ಟುದು ದೊಪ್ಪೆಯೊಂದೇ
ಭೂತಳಾಧಿಪ ಬಗೆಯುದಿರು ತೆಗೆ
ಮಾತು ಹುಸಿ ಮರಳಿದರು ನಿನ್ನಯ ಪಟ್ಟದಾನೆಗಳು ।

---

[1] ನರಿಬಲವ (ಕ.ಗ.ಚ.), ನಾರಥವ (ದ). [2] ಳನಿ (ಗ.ಚ.ತ.ದ). [3] ಗಾತು (ಗ.ಚ). [4] ಲು (ಕ.ಗ.ಚ).

ಭೀತಿಗೊಂಡನು ದ್ರೋಣ ಸೋಲಕೆ
[1]ಕೇ[1]ತುವಾದನು ಶಲ್ಯನಪಜಯ
ವೊತ್ತಕಾಕ್ಷರನಾದನಶ್ವತ್ಥಾಮನಿಂದಿನಲಿ ॥ ೧೩

ಇವನ ಧಾಳಿಯುನಿವನ ಧೈರ್ಯವ
ನಿವನ ಹೂಣಿಗತನವನಿವನಾ
ಹವದ [2]ಹೊಱಗೆ[2]ಯನಿವನ ಭಾರಿಯ ವೆಗ್ಗಳೆಯತನವ ।
ದಿವಿಜರಾನಲು ನೂಕದಿದು [3]ನ
ಮ್ಮ[3]ವರ ಪಾಡೇನ್ಸೈ ಪಲಾಯನ
ತವನಿಧಿಯಲೇ ನಿಮ್ಮ ಬಲ ಧೃತರಾಷ್ಟ್ರ ಕೇಳೆಂದ ॥ ೧೪

ಹಾಯಿಕಲಿ ಟೆಕ್ಕೆಯವ [4]ಭಟ್ಟರ[4]
ಬಾಯ ಹೊಯ್[6] [5]ಗಡಬಡೆಯ ಹೊತ್ತ
ಲ್ಲಾ[5]ಯುಧವನೀಡಾಡು ಕೊಯ್[6] ಕೊಯ್[6] ಜೋಡು ಹೊಲಿಗೆಗಳ ।
ರಾಯ ಕೊಂದರೆ ಕೊಲಲಿ ಸುಕೃತವು
ಬೀಯವಾಗಲಿ ನಾವು ರಕ್ಕಸ
ನಾಯ ಕಯ್ಯಲಿ ಸಾಯೆವೆನುತೊಡೆಮುರಿದರತಿರಥರು ॥ ೧೫

ಇಳಿದ ಕುದುರೆಗೆ ಬಿಸುಟ ರಥ ಸಂ
ಕುಳಕೆ ಹಾಯ್ಕಿದ ಟೆಕ್ಕೆಯಕೆ ಕೈ
ಬಳಿಚಿದಾಯುಧ ತತಿಗೆ ನೂಕಿದ ಜೋಡು ಸೀಸಕಕೆ ।
ಕಳಚಿದಾಭರಣಾತಪತ್ರಾ
ವಳಿಗೆ ಕಾಣೆನು ಕಡೆಯನೀ ಪರಿ
ಕೊಲೆಗೆ ಭಂಗಕೆ [6]ನಿನ್ನ ಬಿರುದರು ಬಂದುದಿಲ್ಲೆಂದ[6] ॥ ೧೬

ಸಿಡಿವ ತಲೆಗಳ ಬಳಿವಿಡಿದು [7]ಧಾ
ರಿ[7]ಡುವ ರಕುತದಲೆರಡು ಬಲದಲಿ
ಹಿಡಿದ ದೀವಿಗೆ ನಂದಿದವು ಕುಂದಿದುದು ಚತುರಂಗ ।
ಮಡಮುರಿಯ ಮಯವಾಯ್ತು ಸುಭಟರ
ನಿಡು ಮುಸುಕು ಮೋಹಿಸಿತು ಮುರುಹಿನ
ಕಡುಹುಕಾಱರು ಕೇಣಿಗೊಂಡರು ಬಹಳ ದುಷ್ಕೃತವ ॥ ೧೭

---

[1] ಸೇ (ಗ.ಚ.ದ.ನ). [2] ಲಾಘವ (ಗ.ಚ.ದ). [3] ಮಾನ (ಚ). [4] ಸುಭಟರ (ಕ.ಗ.ಚ). [5] ಗಡಬಡಿಸುತಿದೆ ಆ (ಕ). [6] ಸುಭಟಗು ಸಂದರ್ಶೈಯೆಂದ (ಗ.ತ). [7] ಸಾಲಿ (ಕ).

ದ್ರೋಣನೆಂಬರೆ ಮುನ್ನವೇ ನಿ
ರ್ವ್ಯಾಣದೀಕ್ಷಿತನಾದನಾತನ
ಕಾಣೆವೈ ಗುರು ಸುತನದೃಶ್ಯಾಂಜನವೆ ಸಿದ್ಧಿಸಿತು ।
ಹೂಣಿಗರು ಮತ್ತಾರು ಶಲ್ಯ
ಕ್ಷೋಣಿಪತಿ ಕೃತವರ್ಮ ಕೃಪನತಿ
ಜಾಣರೋಟದ ವಿದ್ಯೆಗೆನುತಿರ್ದುದು ಭಟಸ್ತೋಮ ॥　೧೮

ಏನ ಹೇಳುವೆನಮಮ ಬಹಳಾಂ
ಭೋನಿಧಿಯ [1]ವಿಷದುರಿಯ[1] ಧಾಳಿಗೆ
ದಾನವಾಮರರಿಂದುಮೌಳಿಯ ಮಱೆಯ ಹೊಗುವಂತೆ ।
ದಾನವಾಚಳಮಥಿತ ಸೇನಾಂ
ಭೋನಿಧಿಯ ಪರಿಭವದ ವಿಷದುರಿ
ಗಾ ನರೇಂದ್ರ ನಿಕಾಯ ಹೊಕ್ಕುದು ರವಿಸುತನ ಮಱೆಯ ॥ ೧೯

ಶರಣು ಹೊಕ್ಕುದು ಬಂದು ಮಕುಟದ
ಗರುವರವನೀಪಾಲಕರು ಮೋ
ಹರಕೆ ತೋರ್ಪಟ್ಟವರು ಭಾರಿಯ ಬಿರುದಿನತಿಬಳರು ।
ದುರುಳ ದೈತ್ಯನ ಬಾಧೆ ಘನ ಪರಿ
ಹರಿಸಲಱಿಯೆವು ಕರ್ಣ ನೀನೇ
ಮರಳಿ ಸೇನೆಯ ರಕ್ಷಿಸೆಂದುದು ನಿಖಿಳ ಪರಿವಾರ ॥　೨೦

[2]ತಳಿತ [2]ಮುಸುಕಿನ ಬೆರಳ ಮೂಗಿನ
ನೆಲನ ನೋಟದ ಮೆಯ್ಯ ತೂಕದ
ಝಳದ ಸುಯ್ಲಿನ ಮುಖದ ಮೋನದ ನಸಿದ ನೆನಹುಗಳ ।
ಕಳಿದ ಕಡುಹಿನ ಬೀತ ಬಿರುದಿನ
ಬಲಿದ ಭಂಗದ ನೃಪತಿಗಳನ
ಗ್ಗಳೆಯ ರವಿಸುತ ಕಂಡು ಹೊಗಳಿದನಾ ಘಟೋತ್ಕಚನ ॥　೨೧

ಶಿವ ಶಿವಾ ಕೌರವನ ಸುಭಟರು
ದಿವಿಜರಿಗೆ ವೆಗ್ಗಳರು ನಿನಗಿಂ
ದಿವರು ಸೋತರು ಪೂತು ದಾನವ ನೀ ಕೃತಾರ್ಥನಲ ।

---

[1] ಲೆದ್ದುರಿಯ (ಕ.ಗ.ಚ).　[2] ತಲೆಯ (ಗ.ಚ).

ಇವನ ಪಾಡಿನ ಸುಭಟರೇ ನ
ಮ್ಮವರು ಗೆಲವೇನಿವನದೇ ಮಾ
ಧವನ ಸೂತ್ರದ [1]ಯಂತ್ರವಿದು ಲಯಕಾಲ ನಮಗೆಂದ[1] ॥ ೨೨

ಸಾಕು ದೈತ್ಯನ ಕೆಡಹು ಸೇನೆಯ
ಸಾಕು ಸುಭಟರು [2]ಬಾಯ ಬಿಡುತಿದೆ[2]
ನೂಕು ನೂಕಮುರಾರಿಯನು [3]ತಡೆ[3] ತಡವು ಮಾಡದಿರು ।
ಆಕೆವಾಳರು ವಿಗಡ ವೀರಾ
ನೀಕವಿದೆ ತಲ್ಲಣದ ತಗಹಿನ
ಲೇಕೆ ಕಾಲಕ್ಷೇಪವೆಂದನು ಕೌರರ ರಾಯ ॥ ೨೩

ದುಗುಡವೋ ಮೇಣ್ ವಿಕ್ರಮಾಗ್ನಿಯ
ತಗಹುಗಳ ತನಿಹೊಗೆಯೊ ರಾಯರ
ಮೊಗವ ನೋಡೈ ಕೀರ್ತಿ ಕೌಮುದಿ ಕಳಿದ ಕತ್ತಲೆಯೊ ।
ಬಿಗಿದ ಭೀತಿಯ ಸೂಱೆಗಳೊ ಮೋ
ಱೆಗಳೊ ಸವಿವಾತುಗಳ ಸೋನೆಯ
ಸೊಗಸುಕಾಱರು ನಿಂದ ನಿಲವನು ಕರ್ಣ ನೋಡೆಂದ ॥ ೨೪

ವಿಗಡತನವನು ವಹಿಲದಲಿ ಕೈ
ಮಗುಚಿ ಕಳೆದರು ಹೂಸಿಕದ ಹೂ
ಣಿಗತನವ ಸೊನ್ನಾರವಿದ್ಯೆಯ ಸಾಹಸೋನ್ನತಿಯ ।
ಸೊಗಸ ಹುಟ್ಟಿಸಿ ಸುಲಿವ ರಸವಾ
ದಿಗಳನಿವರ ವಿಡಾಯಿಗಳ ನಂ
ಬುಗೆಯ ಕೇವಣ ಪಾಡುಕಾಱರ ಕರ್ಣ ನೋಡೆಂದ ॥ ೨೫

ನಡೆವುತೆಡಹಿದ ಪಟ್ಟದಾನೆಯ
ಮಿಡಿಯ ಹೊಯ್ವರೆ ಜೀಯ ರಣವವ
ಗಡವು ನಮಗಿದು ರಾತ್ರಿ ದೈತ್ಯರಿಗಿದುವೆ ನಡುಹಗಲು ।
ಮೃಡನನೊಂದವಸರಕೆ ಬಗೆಯದ
ಕಡುಹುಕಾಱರು ನಿನ್ನವರು ಕೆಡೆ
ನುಡಿದು ನೋಯಿಸಲೇತಕೆಂದನು ಕರ್ಣನರಸಂಗೆ ॥ ೨೬

---

[1] ತಂತ್ರವಿದು ಜಯವಾತನದೆಯೆಂ (ಕ.ಗ.ಚ). [2] ಭೀತಿ ಪಡುತಿದೆ (ಟ.ತ).
[3] ತರಿ (ಟ.ಕ), ಕಡಿ (ಚ).

ತಾಗಿ ವಜ್ರವ ಮುಕ್ಕುಗಳೆವಡೆ
ಸಾಗರವ ಹೊಗಲೇಕೆ ಗಿರಿಗಳು
ಹೋಗಲಿನ್ನಾ ಮಾತು ಮೀಱಿದ ದೈತ್ಯನುಪಟಳವ ।
ಈಗ ಮಾಣಿಸು ನಮ್ಮ ಸುಭಟರು
ಯೋಗಿಗಳವೊಲು [1]ದಂಡಹೀನರು[1]
ಬೇಗ ಮಾಡಿನ್ನಮರವೈರಿಯ ತಱಿದು ಬಿಸುಡೆಂದ ॥ ೨೭

ಕಳೆ[2]ದ[2] ವಾಸವ ಶಕ್ತಿ ಪಾರ್ಥನ
ತಲೆಗೆ ಬೈಚಿಟ್ಟಿಹುದನೀಗಳು
ಸೆಳೆದೆನಾದರೆ ಮುಂದೆ ಫಲುಗುಣನೆನ್ನ ಲೆಕ್ಕಿಸನು ।
ಉಳಿದ ಬಾಣಂಗಳಲಿ ದೈತ್ಯನ
ಗೆಲುವುದರಿದಿದಕಾವ ಹದನೋ
ತಿಳಿಯಲಱಿಯೆನು ಜೀಯಯೆಂದನು ಕುರುಪತಿಗೆ ಕರ್ಣ ॥ ೨೮

ಈಗಳೀ ದಾನವನ ಬಲೆಯುಲಿ
ತಾಗಿ ಸಿಲುಕಿತು ನಮ್ಮ ಮೋಹರ
ಮೇಲೆ ಫಲುಗುಣನಾರ ಕೊಲುವನು ಮರಣ ನಮಗಾಗೆ ।
ನೀಗಿ ಕಳೆ ಕೊಲೆಗಡಿಗನನು ಜಯ
ವಾಗಲೀಗಳೆ ಮುಂದೆ ನರನು
ದ್ಯೋಗಕಾರ್ಯವೆವು ಚಿಕಿತ್ಸೆಯನೆಂದನಾ ಭೂಪ ॥ ೨೯

ಆದಡಮರ ವಿರೋಧಿಯಸುವನು
ಸೇದುವೆನು [3]ಸರಿಸದಲಿ ನಿಂದರೆ[3]
ನಾದುವೆನು ನಿಟ್ಟೊಡಲ ರಕುತದಲಖಿಳ ದಿಗುತಟವ ।
ಕಾದುವೆನು ನಮ್ಮವರು ಕಳಚಿದ
ಕೈದುವನು ಕೈವಶವ ಮಾಡಿ ವಿ
ನೋದವನು ನೀವ್ ನೋಡಿ ಎಂದನು ಕರ್ಣನರಸಂಗೆ ॥ ೩೦

ಇತ್ತಲೈ ದನುಜೇಂದ್ರ ಕದನವ
ದಿತ್ತಲಿತ್ತಲು ಗಮನ ಸುಭಟರ
ಕತ್ತಲೆಯೊಳೋಡಿಸಿದ ಕಡುಹನು ತೋಱು ನಮ್ಮೊಡನೆ ।

[1] ದ್ವಂದ್ವರಹಿತರು (ದ). [2] ದು (ತ). [3] ರಣರಂಗಭೂಮಿಯು (ಕ).

ಮೃತ್ಯು ನಿನಗಾನೆನ್ನೊಡನೆ ತಲೆ
ಯೊತ್ತಿ ನೋಡೆಂದೆನುತ ಬೊಬ್ಬಿಱಿ
ವುತ್ತ ದೈತ್ಯನ ತಱುಬಿದನು ಬಲವೆಲ್ಲ ಬೆಱಗಾಗೆ ॥ ೩೧

ಎಲವೊ ನೆಱೆ ಗಂಡಹೆ ಕರ್ಣಾ ನೀ
ಮಲೆತು ನಿಂದುದು ಸಾಲದೇ ಸುರ
ರೊಳಗೆ ಸಿತಗರ ಸೀಳುವೆನು ಮಾನವರ ಪಾಡೇನು ।
ಕಲಿತನಕೆ ಮೆಚ್ಚಿದೆನು ಸತ್ತರೆ
ಮೊಳೆಯದಿಹುದೇ ಕೀರ್ತಿ [1]ರಿಪುಬಲ[1]
ದೊಳಗೆ ದಿಟ್ಟನು ಕರ್ಣ ನೀನೆನುತಸುರ ಮಾಱಾಂತ ॥ ೩೨

ತಾನೆ ತನ್ನನೆ ಹೊಗಳಿಕೊಂಬರೆ
ಮಾನನಿಧಿಯಾದವರು ಸಾಕೀ
ದಾನವರ ಗರುವಾಯಿ ಭಾರಿಯ ಭಂಡ ವಿದ್ಯೆಗಳು ।
ಏನು ಹೊಸತೆಂತೆಂತು ಶರಸಂ
ಧಾನವುಳಿದಗ್ಗಳಿಕೆಗಳ [2]ಮಾ
ತೇನು ಬಲ್ಲರೆ[2] ಬಿಲ್ಲ ಹಿಡಿ ಹಿಡಿ ಕಾಣಲಹುದೆಂದ ॥ ೩೩

ಘಡ ದೊಠಾರಿಸಿ ನುಡಿದ ಜಿಹ್ವೆಯ
ಹೆಡತಲೆಯಲುಗಿವೆನು ಕರ್ಣಾ ಕೇಳ್
ತೊಡಕಿ ತನ್ನಲಿ ಬದುಕುವವರಾರಿಂದ್ರ ಯಮರೊಳಗೆ ।
ಕಡುಹುಕಾಱರ ಗರ್ವ ವಿಷಗಾ
ರುಡವನೆನ್ನಲಿ ನೋಡು ನೋಡೆನು
ತೊಡನೊಡನೆ ಶರವಳೆಯ ಕಱೆದನು ಪವನಸುತ ಸೂನು ॥ ೩೪

ದಾನವರು ದಕ್ಕಡರು ಧೈರ್ಯೋ
ದ್ಧಾನ ಶೀಲರು ಘಾಯವನು ಗಿರಿ
ಯಾನಬಾರದು ಮುಷ್ಟಿಬಲ ವೆಗ್ಗಳರು ಸತ್ವದಲಿ ।
ಈ ನಿರಂತರ ಬಾಣ ರಚ[3]ನಾ
ನೂನ ಧನುರಭ್ಯಾಸದನುವನ
ದೇನ[3] ಹೇಳುವೆ ಲೇಸೆನುತ ಕಲಿ ಕರ್ಣ ತೆಗೆದೆಚ್ಚ ॥ ೩೫

---

[1] ಯಸದಳ (ಕ), ಕುರುಬಲ (ಗ). [2] ನೀನಾನಲಾಪರೆ (ಕ). [3] ನೆಯ ನೀನುನೋಡಭ್ಯಾಸದನುವನು (ಕ)..

ಹಾಱಿದವು ಗಱಿ ಸಹಿತ ದೇಹವ
ಡೋಱುಗಳೆದಂಬುಗಳು ನೆತ್ತರ
ಜೋಱು ಮಸಗಿತು ಕೂಡೆ ಜಾಜಿನ ಗಿರಿಯ ರೌಕುಳದ ।
ಏಱು ಬಾಯ್ಗಳ ತಳಿತ ಖಂಡದ
ಸೂಱೆ ಗೊಂಡವು [1]ಹಿಂದಣಂ[1]ಬುಗ
ಳಾಱನಭಿವರ್ಣಿಸಲು ಕರ್ಣ ಘಟೋತ್ಕಚಾಹವವ ॥ ೩೬

ತಾರಕನ ಕೈಟಭನ ಮಹಿಷನ
ವೀರ ಜಂಭನ ಕಾಲನೇಮಿಯ
ತಾರಕಾಕ್ಷನ ಕುಂಭಕರ್ಣನ ಮುರ ಗುಹಾಸುರನ ।
ಆರುಭಟೆ ರಣದುಬ್ಬಟೆಯ ಜ
ಜ್ಝಾರತನವಿವನೊಬ್ಬನಲಿ ಕೈ
ವಾರವೇ ನೆಱೆ ಕಾಣಲಾಯ್ತೆಂದುದು ಸುರಸ್ತೋಮ ॥ ೩೭

ನಿಲುವಡಸುರನ ಮುಂದೆ ಕರ್ಣನೆ
ನಿಲಲು ಬೇಹುದು ಕರ್ಣನುಱುಬೆಗೆ
[2]ನಿಲು[2]ವಡೀಯಮರಾರಿಗೊಪ್ಪುವುದೈ ಮಹಾದೇವ ।
ಉಳಿದ ಭೂರಿಯ ಬಣಗುಗಳು ವೆ
ಗ್ಗಳೆಯ[3]ವೆಸರಿಗೆ ನೋಂತರೇ[3] ಕುರು
ಬಲದೊಳರಿಬಲದೊಳಗೆ ಸರಿಯಿನ್ನಿವರಿಗಿಲ್ಲೆಂದ ॥ ೩೮

ಎರಡು ಬಲವಿವರಿಬ್ಬರಾಹವ
ದುರವಣೆಯನೇ ನೋಡುತಿರ್ದುದು
ಸರಿಮಿಗಿಲ ಕಾದಿದರು ಶಿವಶಿವ ಭಾರಿಯಂಕದಲಿ ।
ಸರಳು ತೀರಲು ತೀರದಸುರನ
[4]ಕೆರಳಿದುರಿ[4] ಕುಡಿಯಿಟ್ಟುದಿವನ
ಬ್ಬರಣೆ ಕೆಡೆಬೀಳೆನುತ ಶೂಲದಲಿಟ್ಟನಿನಸುತನ ॥ ೩೯

ಹೊಗರುಗಿಡಿಗಳ [5]ಬಾಯಿ[5]ಧಾರೆಯ
ಲೊಗೆವ ಹೊಗೆಗಳ ಹೊದಱಿನುರಿ ಜಾ
ಳಿಗೆಯ ಭೋಂಕಾರದ ಭಯಂಕರ ಶೂಲವೈತರಲು ।

---

[1] ಕರ್ಣನಂ (ಗ.ಚ). [2] ಮಲೆ (ಟ.ತ). [3] ರನಲಹುದೆನೃಪತಿಯ (ಟ.ತ.ನ.ಪ). [4] ದುರುಳತನ (ಕ.ಗ.ಚ). [5] ಭೂರಿ (ತ.ಟ.ಪ).

ನಗುತ ಮೂಱಂಬಿನಲಿ ಕೈದುವ
ತೆಗೆಸಿದನು ನೆಱೆ ಹತ್ತು ಶರವನು
ಹಗೆಯ ಹೇರುರದೊಳಗೆ ಹೂಳಿದು ಕರ್ಣ ಬೊಬ್ಬಿಱಿದ ॥ ೪೦

ದರಿಗಳೊಳು ದರ್ವೀಕರಾವಳಿ
ಯುರವಣಿಸಿದರೆ ಬಲ್ಲುದೇ ಕುಲ
ಗಿರಿ ಮಹಾದೇವಾವ ಸತ್ವವೊ ದಾನವೇಶ್ವರಗೆ ।
ಅರಿಯ ಶರಹತಿಗೊಡಲು ನೆಱೆ ಜ
ರ್ಝರಿತವಾಗಲು ನೊಂದುದಿಲ್ಲ
ಬ್ಬರಿಸಿ ಪರಿಘದಲಿಟ್ಟನಂಬುಜ ಬಂಧು ನಂದನನ ॥ ೪೧

ತಿರುಗುತ್ತೈತಹ ಪರಿಘ[1]ಕಾಂತರೆ[1]
ಗಿರಿಗಳಡಿ ಮೇಲಹವು ನಾವಿ
ನ್ನರಸ ಹೇಳುವುದೇನು ಕರ್ಣನ ಬಾಹು ವಿಕ್ರಮವ ।
ಪರಿಘವದು ಪರಮಾಣುಮಯವಾ
ಯ್ತೆರಡು ಶರದಲಿ ಸಾರಥಿಯನಿ
ಟ್ಟೊರಸಿದನು ಹದಿನೈದು ಶರದಲಿ ರಥದ ಕುದುರೆಗಳ ॥ ೪೨

ಸಮರ ಸಾಧನ ಸವೆಯೆ ಕೋಪದ
ತಿಮಿರ ಗಱಿಗಟ್ಟಿತು ಮಹಾ ವಿ
ಕ್ರಮನ ಚಳಕವನೇನ ಹೇಳುವೆ ರಥದ ಬಳಸಿನಲಿ ।
ಸಮತಳಿಸಿ ಕೈದುಗಳ ಮಳೆಯನು
ದ್ಯುಮಣಿ ತನಯನ ಮೇಲೆ ಕಱೆದನು
ನಿಮಿಷಕದ ಪರಿಹರಿಸಿ ದೈತ್ಯನನೆಚ್ಚನಾ ಕರ್ಣ ॥ ೪೩

ತೂಱಿದರೆ ತನಿಹೊಟ್ಟು ಗಾಳಿಗೆ
ಹಾಱುವುದು ಕುಲಗಿರಿಯ ಬೈಸಿಕೆ
ಜಾಱುವುದೆ ಮಝು ಪೂತು ನಮ್ಮಾಯುಭಯ ಕಟಕದಲಿ ।
ತೋಱಲಿಲ್ಲೆಣೆ ಜಗದೊಳೋಲೆಯ
ಕಾಱ ನೀನಹೆಯೆನುತ ಸುರರಿಱ
ಗಾಱ ಕವಿದನು ಕರ್ಣನಳವಿಗೆ ಜಡಿವಡಾಯುಧದಿ ॥ ೪೪

---

[1] ವೈತರೆ (ಕ).

ಫಡ ದೊರಾರಿಸಿ ನಿಂದರೆರಡೇ
ಕಡಿಯ ಮಾಡುವೆನೆಲವೊ ನಿನ್ನಯ
ಗಡಣಿಗರ ಕರೆ ಕಾಯ್ದುಕೊಳಲಿ ಸುಯೋಧನಾದಿಗಳು ।
ಮಡಮುರಿಯದಿದಿರಾಗು ರಕುತವ
ಕುಡಿಸುವೆನು [1]ಕೂರಸಿಗೆ[1]ನುತ ಕೋಲೆ
ಗಡಿಗನೌಕಿದಡಿದಿರ ಬಿಟ್ಟನು ಕರ್ಣ ಕೆಲ ಸಿಡಿದ ॥ ೪೫

ಅಹಹ ಶಿವಶಿವ ದೈತ್ಯ ರಾಹು
ಗ್ರಹಣವಾಯಿತು ಕರ್ಣ ಸೂರ್ಯನ
ಮಹಿಮೆ ಮಸುಳಿತು ಕಟಕಟಾ ಯೆನುತಖಿಳ ಬಲ ಬೆದಱೆ ।
ಅಹಿತನಿ[2]ಟ್ಟಳ[2]ಕಳುಕಿ ಕೆಲದಲಿ
ಮಿಹಿರ ನಂದನನೆಚ್ಚಡಂಬಿನ
ಲಹರಿ ಮಸಗಿತು ಖಳನ ಖಡುಗವ ಕಾಣೆನಾಕ್ಷಣಕೆ ॥ ೪೬

ಚಾರಿವರಿದನು ದನುಜ ಮಡ್ಡು ಕ
ಠಾರಿಯಲಿ ಕರ್ಣಾಸ್ತ್ರ ಧಾರಾ
ಸಾರದಲಿ ಮೈ ನನೆದು ಹೊನಲಿಡುವರುಣ ವಾರಿಯಲಿ ।
ಆರಿ[3]ವ[3]ನು ಹೈಡಿಂಬನೀಚೆಯ
ಲಾರು ಭೀಮಜನಿತ್ತಲಾರು ಬ
ಕಾರಿ ನಂದನನೆನಲು ಬಲ[4]ವಿರುಳ[4]ಸುರ ಮಯವಾಯ್ತು ॥ ೪೭

ಅಣೆದನಶ್ವತ್ಥಾಮನನು ತ
ಕ್ಷಣದೊಳರಸನ ತಾಗಿ ದ್ರೋಣನ
ಕೆಣಕಿ ದುಶ್ಶಾಸನನ ಮಸೆಗಾಣಿಸಿ ಕೃಪಾದಿಗಳ ।
ರಣದೊಳೋಡಿಸಿ ಮುರಿದು ಕರ್ಣನ
ಸೆಣಸಿ ನಿಂದನು ಮತ್ತೆ ಸಮರಾಂ
ಗಣದ ಚೌಪಟಮಲ್ಲನಿತ್ತನು ಪಡೆಗೆ ತಲ್ಲಣವ ॥ ೪೮

ಬಱಿಯ ಕಕ್ಕುಲಿತೆಯಲಿ ಕರ್ಣನ
ಮಱೆಯ ಹೊಕ್ಕವು ಕರ್ಣನೀತನ
ತಱುಬಿದನಲಾ ಶಕ್ತಿಯಾವೆಡೆಯೆಂದು ಕೆಲಕೆಲರು ।

---

[1] ಖಂಡೆಯಕೆ (ಕ). [2] ನುಪಟಳ (ಗ). [3] ದ (ಕ). [4] ವೆಲ್ಲ (ಗ) ದೊಳಗ (ದ).

ಕಱುಬತನವೇಕಕಟ ಪುಣ್ಯದ
ಕೊಱತೆ ನಮ್ಮದು ಕರ್ಣನೇಗುವ
ನಿಱಿತಕಂಜಿದ ನಾವೆ ಬಾಹಿರರೆಂದರುಳಿದವರು ॥ ೪೯

ಕಾಱಿಸುವೆನಿವನಸುವನಿವ ಮೈ
ದೋಱಿ ನಿಂದರೆ ನಿಮಿಷದಲಿ ಬಾ
ಯಾಱಿದಿರಿ ಕಳ್ಳೇಱುಕಾಱನ ಕರುಳ ಹರಹುವೆನು ।
ಜಾಱಿದಿರಿಯೆನುತಭಯಹಸ್ತವ
ತೋಱಿ ತುಡುಕಿದನುಗ್ರ ಧಾರೆಯ
ತೂಱುಗಿಡಿಗಳ ತುಱುಗಿದುರಿಯ ಮಹಾಸ್ತ್ರವನು ಕರ್ಣ ॥ ೫೦

ತಳಿತ ಕಿಡಿಗಳ ಕೈದುವಿನ ಮೈ
ಝಳದ ಝಾಡಿಯೊಳುಭಯ ಬಲದ
ಗಳದ ಹರುಷ ವಿಷಾದ ವಾರಿಧಿ ಕಾಲುಹೊಳೆಯಾಯ್ತು ।
[1]ಬಿ[1]ಳಿಯ ಚೌರಿಗಳೆಸೆಯೆ ಘಂಟಾ
ವಳಿಗಳಣಸಿನ ಹೊಗರನುಗುಳುವ
ಹೊಳೆವ ಧಾರೆಯ [2]ಭಾರಿ ಶಕ್ತಿಯ[2] ತೂಗಿದನು ಕರ್ಣ ॥ ೫೧

ಕಾಯಲಾಪರೆ ದನುಜ ಕರೆ ಕಮ
ಲಾಯತಾಕ್ಷನನಿಂದು ಬದುಕುವು
ಪಾಯವುಳ್ಳಡೆ ಬೇಗ ಬೆಸಗೊಳು ಭೀಮ ಫಲುಗುಣರ ।
ಆಯುಧಕೆ ತೆಱವಿಟ್ಟೆನೈ ನಿ
ನ್ನಾಯುಷವ ಹಿಂದಿಕ್ಕಿ ಕೊಂಬನ
ತಾಯೆನುತ ಬೊಬ್ಬಿಱಿದು ಶಕ್ತಿಯಲಿಟ್ಟನಾ ಕರ್ಣ ॥ ೫೨

ಆರಿದನು ಪರಿಹರಿಸುವರು ಜಂ
ಭಾರಿ ಕೊಟ್ಟನು ಕಮಲಭವ ಕಾ
ಮಾರಿಗಳಿಗುಬ್ಬಸದ ಕೈದುವಜೇಯವೆಂದಿದನು ।
ಧಾರೆಯಲಿ ದಳ್ಳಿಸುವ ಕಿಡಿಗಳ
[3]ಭಾ[3]ರಿಯಾಯುಧವಸುರ[4]ನುರವನು[4]
[5]ಡೋ[5]ಱುಗಳೆದುದು ಹಾಯ್ದು ಹೋದುದು ವಾಸವನ ಹೊರೆಗೆ ॥ ೫೩

---

[1] ಬ (ಕ). [2] ಭೂರಿಯಸ್ತ್ರವ (ಕ. ಗ. ಚ. ಟ). [3] ಭೂ (ಕ. ಗ. ಚ). [4] ನೆದೆಯನು (ಕ. ಗ. ಚ). [5] ಹೋ (ಕ).

ಆರಿ ಬೊಬ್ಬಿಱಿವುತ್ತ ಕಂಡುದು
ಪಾರುಖಾಣೆಯನಸುರನಸು ಬಲು
ಭಾರಿಯೊಡಲೊರ್ಗುಡಿಸಿ ಕೆಡೆದುದು ಬಿರಿದ ಗಿರಿಯಂತೆ ।
ತೇರು ತುರಗ ಪದಾತಿ ಕರಿಘಟೆ
ವೈರಿ ಬಲದಲಿ ನಮ್ಮ ಬಲದಲಿ
ತೀರಿತೊಂದಕ್ಷೋಣಿ ಸುರರಿಪು ಬಿದ್ದ ಭಾರದಲಿ ॥ ೫೪*

ಕುರುಬಲದ ಕಳಕಳದ ಹವಣ
ಲ್ಲರಿಬಲದ ಸಂತೋಷವಿದುಮುರ
ಹರನ ಮಂತ್ರವು ಜೀಯ ಹರಿ ಸೂಳೈಸಿದನು ಭುಜವ ।
ಗರಳವಿಲ್ಲದ ಕುಪಿತ ಫಣಿ ಹಲು
ಮೊರೆದು ಮಾಡುವುದೇನು ಕರ್ಣನ
[1]ನೊರಸಿದೆವು ಹೋಗೆಂದು[1] ಸಂತೈಸಿದನು ಪಾಂಡವರ ॥ ೫೫

ಸಾರಿದನು ಶರಮಂಚವನು ಭಾ
ಗೀರಥೀನಂದನನು ಕರ್ಣನು
ಬೇರು ಹಱಿದಾ ದ್ರುಮದವೊಲು ಗತ ಶೌರ್ಯನಿನ್ನೇನು ।
ಭಾರಿಯಾಳ್ಕೆ ದ್ರೋಣನಾತನು
ತೀರಿದನು ಹಾ ಪಾಂಡುಸುತರಿ
ನ್ನಾರ ಮುಱಿಯರು ವೀರನಾರಾಯಣನ ಕರುಣದಲಿ ॥ ೫೬†

ಹದಿನಾಱನೆಯ ಸಂಧಿ ಮುಗಿದುದು

---

* ೫೪ನೆಯ ಪದ್ಯವಾದ ಮೇಲೆ ಕ. ಗ. ಚ. ಪ್ರತಿಗಳಲ್ಲಿ ಕೆಳಗಿನ ಪದ್ಯವು ಹೆಚ್ಚಾಗಿದೆ :—

ತರಣಿಯೌರಸಪುತ್ರನೀತನ
ಕರಿಯರಳು ಮಯಿಣಾಮುದೆಱಕದ
ಕರುವಿನಂದದಲಸುರನಿದಿರೊಳುದಾರಿಗಪಮಾನ ।
ಅರಸ ಚಿತ್ತೈಸೇನ ಹೇಳುವೆನುರು
ಧುರದ ವಿಜಯಾರ್ಥ ಜಯ ಮಿಗೆ
ಮೊರೆದುದಿದು ಕಲ್ಪಾಂತ ಸಾಗರದಂತೆ ಕುರುಸೇನೆ ॥

[1] ನೊರಸದಿರಿ ನೀವೆಂದು (ಗ), ನೊರೆ ಸಿದೆವುನಾವೆಂದು (ಚ).

† ಈ ಪದ್ಯವು (ನ) ಪ್ರತಿಯಲ್ಲಿಲ್ಲ.

# ಹದಿನೇಳನೆಯ ಸಂಧಿ

ಸೂಚನೆ॥ ಇರುಳು ಸಮರದಲುಭಯ ರಾಯರ
ಗುರು ವಿರೋಧಿ ಮಹೀಶ ಸೇನಾ
ಶರಧಿಯನು ಕಲಕಿದನು ಗೆಲಿದನು ಮಕುಟವರ್ಧನರ ॥

ಕೇಳು ಧೃತರಾಷ್ಟ್ರಾವನಿಪ ನಿ
ಮ್ಮಾಳನವರಾಳನು ವಿಭಾಡಿಸಿ
ನೀಲಗಿರಿಯೆಡೆವೊಕ್ಕುದೆನೆ ಖಳನೊಡಲು ನಿಡುಗೆಡೆಯೆ ।
ಕಾಳೆಗದ ಕೈಚಳಕದವನು
ಬ್ಬಾಳುತನವಕ್ಕುಡಿಸೆ ಯಿಕ್ಕೆಲ
ದಾಳು ತೆಗೆದುದು ಬಿಗಿದ ಕತ್ತಲೆ ಮೊಗೆದುದಂಬರವ ॥ ೧

ಇನ್ನು ಬದುಕಿದೆವಮಮ ರಕ್ಕಸ
ಕುನ್ನಿಯೂಳಿಗ ವಡಗಿತೆಂದೇ
ನಿನ್ನವರ ಸುಮ್ಮಾನವುಕ್ಕಿತು ಸುಕ್ಕಿತತಿ ಭೀತಿ ।
ಇನ್ನು ಘಡಘಡ ಸೂತ ತನುಜನ
ಬೆನ್ನಲುಗಿವೆವು ಕರುಳನಾಹವ
ಕೆನ್ನ ಬಿಡು ಬಿಡು ಎನುತ ಗರ್ಜಿಸಿ ಹೊಕ್ಕುದರಿ ಸೇನೆ ॥ ೨

ಅಂಗವಣೆ ಮನದಲ್ಲಿ ಪದದಲಿ
ಮುಂಗುಡಿಯ ದುವ್ವಾಳಿ ಕಯ್ಯಲಿ
ಸಿಂಗದಾಯತ ಸವೆಯದೆರಡೊಡ್ಡಿನಲಿ ಸುಭಟರಿಗೆ ।
ಕಂಗಳನು ಕಾರಿರುಳ ರಕ್ಕಸಿ
ನುಂಗಿದಳು ನಾನೇನನುಸುರುವೆ
ನಂಗವಿಸಿ ಕಡುಗಲಿಗಳಿಱಿದಾಡಿದರು ತಮ್ಮೊಳಗೆ ॥ ೩

ಒಳಗೊಳಗೆ ಹೊಯಿದಾಡಿ ಹೊರಳುವ
ಬಲು ಭಟರನಗಿದೊಗುವ [1]ಬಲುಗ[1]
ತ್ತಲೆಯ ಕೋಳಾಹಳವನುಭಯದ ಚಾತುರಂಗದಲಿ ।

---

[1] ಕಗ್ಗ (ಕ.ಗ).

ಬಲಿದ ತೂಕಡಿಕೆಗಳ ನಸು ಬೆದ
ಋೊಲಹುಗಳ ಜವವೆದ್ದ ಝೊಮ್ಮಿನ
ಬಲೆಗೆ ಸಿಲುಕಿದ ಬಲವನರ್ಜುನ ದೇವನೀಕ್ಷಿಸಿದ ‖　　೪

ಶಿವಶಿವಾ [1]ಬಳಲಿದುದು ಬಲವಗಿ
ದವಗಡಿಸಿದುದು[1] ನಿದ್ದೆ ನೂಕದು
ಬವರವುಬ್ಬಿದ ತಿಮಿರವಳಿಯಲಿ ಸಾಕು ರಣವೆನುತ ।
ದಿವಿಜಪತಿ ಸುತನೆದ್ದು ಸೇನಾ
ನಿವಹದಲಿ ಸಾಱಿದನು ಲಗ್ಗೆಯ
ರವವ ನಿಲಿಸಿದನಖಿಳ ಘನ ಗಂಭೀರ ನಾದದಲಿ ‖　　೫

ಬಳಲಿದಿರಿ ಹಗಲಿರುಳ ಕಾಳೆಗ
ದೊಳಗೆ ಕೈಮಾಡಿದಿರಿ ಕಗ್ಗತ್ತಲೆಯ
ಬಲು [2]ಬಂದಿ[2]ಯಲಿ ಸಿಲುಕಿತು ಕಂಗಳಂಗವಣೆ ।
ನಳಿನರಿಪುವುದಯಿಸಲಿ ಬೆಳುದಿಂ
ಗಳಲಿ ಕೈದುವ ಕೊಳ್ಳಿ ನಿದ್ರೆಯ
ನಿಳಿಯ ಬಿಡಬೇಡೆಂದು ಸೇನೆಗೆ ಸಾಱಿದನು ಪಾರ್ಥ ‖　　೬

ನರನ ಮಾತಿಂ ಮುನ್ನ ನಿದ್ರಾ
ಭರದ ಭಾರಿಯ ಹೊಱೆಯ ಭಟರಿ
ತ್ತರದಲೊಲೆದರು ಸಡಿಲಿದವು ಕೈದುಗಳು ಕರಗಳಲಿ ।
ನೆರೆದುಸುರ ವೈಹಾಳಿಗಳ ನಿ
ಬ್ಬರದ ವೊರಹಿನ ಮುರಿದ ಗೋಣಿನ
ಕರದ ತಲೆಗಿಂಬುಗಳ ಕಾಲಾಳೊಱಗಿತವನಿಯಲಿ ‖　　೭

ಒಲೆದ ಒಡಲನು ಮುರಿದು ಬರಿಕೈ
ಗಳನು ದಾಡೆಯೊಳಿಟ್ಟು ಪೂತ್ಕೃತಿ
ಬಲಿದ ನಾಸಾಪುಟದ ಜೋಲಿದ ಕರ್ಣಪಲ್ಲವದ ।
ತಳಿತ ನಿದ್ರಾರಸವನರೆ ಮು
ಕ್ಕುಳಿಸಿದಕ್ಷಿಯೊಳೆರಡು [3]ಗಲ್ಲದ
ಲು[3]ಲಿವ ತುಂಬಿಯ ರವದ ದಂತಿಗಳೆಸೆದವೊಗ್ಗಿನಲಿ ‖　　೮

[1] ಬಲಬಳಲಿ ತಿಂದಾಹವದೊಳಗೆ ಕಡು (ಕ.ಗ).　[2] ಗಂಡಿ (ದ).　[3] ಕಡೆಯಿಂದ (ಕ).

ಬಾಯ ಲೋಳೆಗಳಿಳಿಯೆ ಮೈಹಳು
ವಾಯಿ ಮಿಗೆ ತುದಿ ಖುರವನೂರಿ ನ
ವಾಯಿ ಮಿಗಲರೆನೋಟದಾಲಿಯ ಮಿಡುಕದವಿಲಣದ ।
ಲಾಯದಲಿ ಲಂಬಿಸಿದವೊಲು ವಾ
ನಾಯುಜದ ಸಾಲೆಸೆದುದೊರಗಿದ
ರಾಯ ರಾವುತರ ಮಣಿಮಕುಟ ಮರಗೋಡನೋಲೈಸೆ ॥ ೯

ಒಲಿದ ಕಾಂತೆಯ ಕೂಡೆ ಮನುಮಥ
ಕಲಹದಲಿ ಬೆಂಡಾದ ಕಾಂತನು
ಕಳಶಕುಚ ಮಧ್ಯದಲಿ ಮಲಗುವ ವೋಲು ರಜನಿಯಲಿ ।
ಒಲಿದ ಸಮರಶ್ರಮದಲತಿ ವೆ
ಗ್ಗಳ ಗಜಾರೋಹಕರು ಕುಂಭ
ಸ್ಥಳದ ಮೇಲೊರಗಿದರು ನಿದ್ರಾ[1]ಮುದ್ರಿತೇಕ್ಷಣರು[1] ॥ ೧೦

ಕಲಹವನು ಕನಸಿನಲಿ ಕಂಡ
ವ್ವಳಿಸಿ ಹಳುಹಳು ಪೂತು ಸಾರಥಿ
ಭಲರೆ ಸಾರಥಿ ಜಾಗುರೆನುತಿರ್ದುದು ಮಹಾರಥರು ।
ತೊಲಗದಿರಿ ತಿನ್ನಡಗನಹಿತನ
ತಿಳಿ ರಕುತವನು ಸುಱಿಯೆನುತ ಕಳ
[2]ವಳಿಸುತಿರ್ದರು ವೀರರೆರಡೊಡ್ಡಿನಲಿ ರಭಸದಲಿ[2] ॥ ೧೧

ಎಲೆ ಮಿಡುಕದೆರಡೊಡ್ಡು [3]ಲೆಪ್ಪದ[3]
ಬಲದ ವೊಲು ನಿದ್ರಾಸಮುದ್ರವ
ಮುಳುಗಿ ಝೊಮ್ಮಿನ ಝಾಡಿಯಲಿ ಝೊಂಪಿಸಿದುದರೆ ಜಾವ ।
ತಳಿತ ಮಱವೆಯ [4]ಪಾಳೆಯದ[4] ಕ
ಗ್ಗೊಲೆಗೆ ಕವಿವ ಗುರೂಪದೇಶಾ
ವಳಿಯವೊಲು ಮೈದೋಱಿದವು ಹಿಮರುಚಿಯ ರಶ್ಮಿಗಳು ॥ ೧೨

ತಣಿದುದಂತಃಕರಣ ನಿದ್ರಾ
ಗಣಿಕೆಯರ ರತಿಯಲ್ಲಿ ಱಂಗಣ
ಗುಣಿವ ಮನ ಹದುಳಿಸಿತು ತಿಳಿದುದು [5]ಝೊಮ್ಮಿನು[ವ್ಮೋ]ಹ[5] ।

---

[1] ಉಳಿಯಲೋಚನರು (ಕ.ಗ.ದ). [2] ವಳಿಸಿತೆರಡೊಡ್ಡಿನಲಿ ಸುಭಟರು ಭೂಪ ಕೇಳೆಂದ (ಕ.ಗ.ಚ.ದ). [3] ಲೇಪದ (ಕ.ಗ). [4] ಕಾಳೆಗದ (ತ). [5] ಝೊಮ್ಮು ದುಮ್ಮಾನ (ದ), ಮ್ಮಾ (ಕ.ಗ.ಚ.ತ).

ರಣವ[1]ನೀಗಳೆ[1] ಕಾಣಬಹುದೆಂ
ಬಣಕಿಗರನೆಬ್ಬಿಸುವ ವೋಲು ಸುಳಿ
ದಣೆದು ಹೊದಱೆದ್ದುದು [2]ಸುಧಾ ದೀಧಿತಿಯ ಕರ ನಿಕರ [2] ॥ ೧೩

ಬಾಡಿದವು ತಾವರೆಗಳುಱೆ ಝಳ
ಪೋಡಿದವು ನೈದಿಲುಗಳಂಬುಧಿ
ಝಾಡಿ ಮಾಡಲು ಬೆರಸಿದವು ಝಷ ಮಕರ ಕರ್ಕಟಕ ।
ತೋಡಿದವು ಮುಖದಲ್ಲಿ ತುಂಡದ
ಲೀಡಿಱಿದು ಕುಡಿಕುಡಿದು ಬೊಬ್ಬಿ
ಟ್ಟಾಡುತಿರ್ದವು ಸಾಂದ್ರ ಚಂದ್ರಿಕೆಯಲಿ ಚಕೋರಿಗಳು ॥ ೧೪

ನಳಿನದಳದೊಳಗಡಗಿದವು ನೈ
ದಿಲುಗಳಲಿ ತನಿ ಮೊರೆವ ತುಂಬಿಯು
[3]ಕ[3]ಳರವಕೆ [4]ಬೆ[4]ಚ್ಚಿದವು [5]ಹೊಕ್ಕವು ಬಗಿದು ತಿಳಿಗೊಳನ[5] ।
ಝಳಕೆ ಸೈರಿಸದೆಳಲತೆಯ ನೆಳ
ಲೊಳಗೆ ನಿಂದವು ಬೇಗೆ ಬಲುಹಿಂ
ದಳುಕಿ ಮಮ್ಮಲು ಮಱುಗುತಿರ್ದವು ಜಕ್ಕವಕ್ಕಿಗಳು ॥ ೧೫

ವಿನುತ ಸುಕವಿಯ ಸೂಕ್ತಿ ತಾಗಿದ
ಮುನಿಗಳಂತಃಕರಣದಂತಿರೆ
ಹೊನಲುವರಿದವು ಚಂದ್ರಕಾಂತದ ಸಾಲ ಶಿಲೆ ಕರಗಿ ।
ಮನದ ಕತ್ತಲೆ ಗುರುವರನ ವಾ
ಕ್ಕಿನಲಿ ತೊಲಗುವ ವೋಲು ತುಂಬಿಯ
ತನತನಗೆ ನೂಕಿದವು ವಿಕಸಿತ ಕೈರವಾದಿಗಳು ॥ ೧೬

ವಿರಹಿಜನದೆದೆಗಿಚ್ಚು ಮನುಮಥ
ನರಸುತನದಭಿಷೇಕ ಘಟ ತಾ
ವರೆಯ ಕಗ್ಗೊಲೆಕಾಱನುತ್ಪಳವನ ವಿದೂಷಕನು ।
ಹರನ ಹಗೆಯಡ್ಡಣ ವಿಳಾಸಿನಿ
ಯರ ಮನೋರಥ ಫಲವೆನಲು ಮಿಗೆ
ಮೆಱೆದನುದಯಾಚಲದ ಚಾವಡಿಯಲಿ ಸುಧಾಸೂತಿ ॥ ೧೭

---

[1] ನಾಗಳು (ಕ.ಚ). [2] ಸಷಾಢದಲುಭಯ ಪಾಯದಳ (ಕ). [3] ಗ (ಕ). [4] ವೆ (ಕ). [5] ಬಿಗಿದವು ವೊಗೆದು (ಕ), ಹೊಗೆದವು ಬಗೆದು (ಗ), ಹೊಕ್ಕಪು ಬಿಗಿದು (ಪ).

ತಳಿತ ತಂಪಿನ ತಂಗದಿರ ತೊಱೆ
ಯೊಳಗೆ ತೇಕಾಡಿದುದು ಬಲವ
ಗ್ಗಳದ ಬಳಲಿಕೆ ಬೀಳುಕೊಂಡುದು ಬಲಿದುದಂಗವಣೆ ।
ಒಲೆದು ಬರಿಕೈ ತೂಗಿ ಕಿವಿಗಳ
ನಲುಗಿದವು ಕರಿ ನಿಕರವವಿಲಣ
ಘಲಿಲೆನಲು ಕೊಡಹಿದವು ವಳಯವನಖಿಳ ಹಯ ನಿಕರ ॥ ೧೮

ತುಱುಬ ಬಲಿದೊಳಗೌಕಿ ವೊನೆ ಮುಂ
ಜೆಱಗನಳವಡೆ ಸೆಕ್ಕಿ ಸುತ್ತಿನೊ
ಳಿಱುಕಿ ಬಿಗಿದ ಕಠಾರಿ ದಾರದ ಗೊಂಡೆಯವ ಕೆದಱಿ ।
ಒಱಗಿದೆಡಬಲದವರನೆಬ್ಬಿಸಿ
ಜಱೆದು ವೀಳೆಯಗೊಂಡು ಕೈದುವ
ತಿರುಹುತಾಯತವಾಯ್ತು ಪಡೆಯೆರಡಱಲಿ ಪಾಯದಳ ॥ ೧೯

ಬಿಗುಹನೇಱಿಸಿ ಮತ್ತೆ ತುರಗಾ
ಳಿಗಳ ಬಿಗಿದರು ರಾವುತರು ಹೊರ
ಜಿಗಳ ಜೋಡಿಸಿ ಜೋದರಾಯತವಾಯ್ತು ಕರಿಗಳಲಿ ।
ಬಿಗಿದು ಕೀಲಚ್ಚುಗಳ ರಥಿಕಾ
ಳಿಗಳು ಮೇಳೈಸಿದರು ಕೈದುವ
ನುಗಿದು ಕಾಲಾಳೆದ್ದು ನಿಂದುದು ಕದನಕನುವಾಗಿ ॥ ೨೦

ಕದಡಿದವು ಬಲವೆರಡು ಕಲ್ಪದೊ
ಳುದಧಿಯುದಧಿಯನೊದೆವವೊಲು ತಾ
ಗಿದರು ನೀಗಿದರಸುವ ನಸೆಮಸೆಗಕ್ಕುಡಿಸಿದವರು ।
ಬಿದಿರಿದರು ಕೊಯ್ದಲೆಗಳನು ಕಾ
ಱಿದರು ಕರುಳನು ಕುಸುರಿ ಖಂಡದ
ಕದಳಿ ಮೈಗಳ ಚೂಣಿ [1]ಮಲಗಿತು[1] ತಾಱು ಥಟ್ಟಿನಲಿ ॥ ೨೧

ಚೂಣಿ ತೆಗೆಯಲಿ ಮಿಸುಕಿದರೆ ನೃಪ
ನಾಣೆ ಬಱಿದೇಕಾಳು ಕುದುರೆಯ
ಗೋಣನವರಿಗೆ ಮಾಱುವಿರಿ ಕೌರವನ ಥಟ್ಟಿನಲಿ ।

---

1 ಯುರೆದುದು (ಕ). ಮುಸಗಿತು (ಚ.ದ)

ದ್ರೋಣನಲ್ಲಾ ರಕ್ಷಕನು ರಣ
ಹೂಣಿಗರು ನಿಲಿ ಭೀಮ ಪಾರ್ಥರ
ಕಾಣಬಹುದೋ ಕರೆಯೆನುತ ಗರ್ಜಿಸಿದನಾಚಾರ್ಯ ‖　　೨೨

ರಥವ ಸಂವರಿಸಿದನು ನಿಜ ಸಾ
ರಥಿಯ ಬೋಳೈಸಿದನು ಬಳಿಕತಿ
ರಥ ಮಹಾರಥ ರಾಜಿಗಿತ್ತನು ರಣಕೆ ವೀಳೆಯವ ।
ಪೃಥೆಯ ಮಕ್ಕಳ ಕರೆ ಮಹೀಸಂ
ಪ್ರಥಿತ ಬಲರನು ಕರೆಯೆನುತ ನಿ
ರ್ಮಥಿತ ರಿಪು ಪರ ಬಲವ ಹೊಕ್ಕನು ಬಿಟ್ಟ ಸೂಟಿಯಲಿ ‖　　೨೩

ರಾಹುವೆತ್ತಲು ಲಲಿತ ತಾರಾ
ವ್ಯೂಹವೆತ್ತಲು ದಳ್ಳಿಸುವ ದವ
ದಾಹವೆತ್ತಲು ನೀರಸದ ತೃಣ ರಾಶಿ ತಾನೆತ್ತ ।
ಗಾಹು ಗತಕವನುಳಿದು ಕಾದುವ
ಡಾಹವಕೆ ಗುರು ಭೀಷ್ಮರಿಗೆ ಸರಿ
ಸಾಹಸಿಕರಾರುಂಟು ಮುಱಿದುದು ಪಾಂಡುಸುತ ಸೇನೆ ‖　　೨೪

ಉದಧಿಯುದರದೊಳಿಳಿದು ತೆರೆಗಳ
ನೊದೆವ ಮಂದರದಂತೆ ಮದಕರಿ
ಕದಳಿಯಲಿ ಕೈಮಾಡುವಂತಿದೆ ಪರರ ಥಟ್ಟಿನಲಿ ।
ಹೊದಱ ಹರೆಗಡಿದೌಕಿದನು ತೋ
ಕಿದನು ಸುಭಟರ ಜೀವವನು ಹಳೆ
ವಿದಿರ ಮೆಳೆಯಲಿ ಮೊಳಗಿದುರಿಯವ್ರೋ[1]ಲುರುಹಿದನು[1] ದ್ರೋಣ ‖

ಹೊಕ್ಕ ಸಾಲರುಣಾಂಬುಮಯ ಕೈ
ಯಿಕ್ಕಿದತ್ತಲು ಖಂಡಮಯ ಮೊಗ
ವಿಕ್ಕಿದತ್ತಲು ಮೊರೆವ ಹೆಣಮಯವೇನನುಸುರುವೆನು ।
ಇಕ್ಕಡಿಯ ಬಸುಱುಚ್ಚುಗಳ ನರ
ಸೊಕ್ಕು ಡೊಳ್ಳಾಸದ ಮಹಾಭಯ
ವೆಕ್ಕ[2]ಸರ[2]ದಲಿ ಕಾಣಲಾದುದು ವೈರಿ ಬಲದೊಳಗೆ ‖　　೨೬

---

[1] ಉಗುಳಿದನು (ಕ)　　[2] ತಾಳ (ಗ)

ಹಸಿದ ಹೆಬ್ಬುಲಿ ಮಸಗಿದರೆ ಮೃಗ
ವಿಸರವೇನಹುದರಸ ಕೇಳ್ ನಿ
ಪ್ಪಸರದಲಿ ಪಾಳಿಸಿದನಹಿತರನುಗಿದನುಸುರುಗಳ ।
ಕುಶಲರೇ ಭೀಮಾರ್ಜುನರು ಪಾ
ಲಿಸುವ ಬಿರುದೇ ಕೃಷ್ಣನದು ಹರಿ
ಹುಸಿಕನೋ ಬೆಸಗೊಂಬೆವೆನುತಱೆಯಟ್ಟಿದನು ದ್ರೋಣ ॥ ೨೭

ಆಱು ಸಾವಿರ ಕುದುರೆಯೊಂಬೈ
ನೂಱು ಗಜಘಟೆ ಸಾವಿರದ ಮೂ
ನೂಱು ರಥವೊಗ್ಗಾಗಿ ಬಿದ್ದುದು ಲಕ್ಷ ಪಾಯದಳ ।
ಏಱುವಡೆದವರನು ಪಲಾಯನ
ಸೂಱೆಕಾಱರನವರ ದಳದಲಿ
ತೋಱಿ ಹೇಳುವರೆನ್ನ ಹವಣೇ ಭೂಪ ಕೇಳೆಂದ ॥ ೨೮

ಎಲೆಲೆ ದೊದ್ದೆಗರೇಕೆ ಕೊಬ್ಬಿದ
ರಳವನಱಿಯದೆ ನುಗ್ಗು ಮುಱಿದರೆ
ದಳದ ದೊರೆಗದು ಭಂಗವೇ ಬಾಹಿರನ ಹೊಯ್ಯೆನುತ ।
ಒಳಸರಿವ ನಾಯಕರ ನೆಱೆ ಮೂ
ದಲಿಸಿ ಲಗ್ಗೆಯ ಲಹರಿಯಲಿ ಪಡಿ
ತಳಿಸಿದರು ಪಾಂಚಾಲ ಸೃಂಜಯ ಮತ್ಸ್ಯ ಕೇಕೆಯರು ॥ ೨೯

ಬಲವ [1]ಕಲಿ[1]ಯೇಱಿಸಿ ಛಡಾಳದೊ
ಳುಲಿವ ಪಟಹ ಮೃದಂಗ ಕಹಳಾ
ವಳಿಯ ಬೊಗ್ಗಿನ ಬೊಬ್ಬಿಱಿವ ನಿಸ್ಸಾಳ ಕೋಟಿಗಳ ।
ತಳಿತ ಝಲ್ಲರಿಗಳ ಪತಾಕಾ
ವಳಿಯ ಬಲಿದು ಪವಾಡಿಗಳ ಕಳ
ಕಳದ ಕೈವಾರದಲಿ ಕವಿದರು ದ್ರೋಣನಿದಿರಿನಲಿ ॥ ೩೦

ಅರಿ ಬಲದ ಥಟ್ಟಣೆಯ ಬಿಱು[2]ಬಿ[2]ನ
ಬರವನೀಕ್ಷಿಸಿ ಪೂತು ಪಾಂಚಾ
ಲರ ಸಘಾಡಿಕೆ ಸಾಹಸಿಕರೈ [3]ಹಾ ಮಹಾದೇವ[3] ।

---

[1] ಹುರಿ (ತ). [2] ಸಿ (ಟ.ಚ.ದ.ನ.ಪ). [3] ಲೇಸು ಲೇಸೆನುತ (ಟ.ತ.

ದೊರೆಯಲೇ ಬಳಿಕೇನು ಪಾಂಡವ
ರರಸಿಯಯ್ಯನು ದ್ರುಪದನಲ್ಲಾ
ಹರಯೆನುತ ಗಹಗಹಿಸಿ ತಲೆದೂಗಿದನು ಕಲಿ ದ್ರೋಣ ॥ ೩೧

ಇರುಳುಗಳ್ಳನ ಕೂಡೆ ಸೇರಿದ
ಮರುಳಿನಂತಿರೆ ನೀವು ರಣದಲಿ
ತಱಿಸಿಕೊಂಬಿರಿ ಹಾಯ್ದು ರವದಿರು ನಿಮ್ಮ ನೆಡೆಯೊಡ್ಡಿ ।
ಮರಳಿರೈ ಕೈಕೆಯರು ಮತ್ಸ್ಯರು
ಬಿರುದ ಸೃಂಜಯರಕಟಕಟ ಖೂ
ಳರು ವೃಥಾ ನಿಮಗೇಕೆ ಸಾವೆನುತಿರ್ದನಾ ದ್ರೋಣ ॥ ೩೨

ಬಿಲ್ಲ ಕೊಪ್ಪಿನ ಮೇಲೆ ಚಾಚಿದ
ಗಲ್ಲದುಪಹಾಸದ ನುಡಿಯ ಮೈ
ಘುಲ್ಲಣೆಯ ರೋಮಾಂಚನದ ಚಡ್ಡಣೆಯ ಚೇತನದ ।
ಗೆಲ್ಲದಲಿ ಘಾಡಿಸಿದ ಚಿತ್ತದ
ಕೆಲ್ಲೆಗಂಗಳ ನಗೆಯ ಚೌಪಟ
ಮಲ್ಲನಿದ್ದನು ರಿಪು ಬಲವ ಲೆಕ್ಕಿಸದೆ ಕಲಿ ದ್ರೋಣ ॥ ೩೩

ಕೆಣಕಿದರು ಪಾಂಚಾಲ ನಾಯಕ
ರಣಕಿಗನ ಕೈಕೊಳ್ಳದುರೆ ಸಂ
ದಣಿಸಿದರು ಸಮರಥರು ಕವಿದರು ರಾಯ ರಾವುತರು ।
ಕಣೆ[1]ಗೆದಱಿ[1] ಹೊದ್ದಿದರು ಜೋದರು
ಕುಣಿದು ಕಾಲಾಳೌಕಿತೊಂದೇ
ಕ್ಷಣದೊಳನಿಬರನೊರಸಿದನು ಬೆರಸಿದನು ದೊರೆಗಳಲಿ ॥ ೩೪

ಅಡಸಿದರು ಚತುರಂಗ ಬಲವನು
ಕಡಿದು ಹರಹಿ ವಿರಾಟನನು ಜವ
ಗಿಡಿಸಿ ದ್ರುಪದನನೆಚ್ಚು ವಿರಥರ ಮಾಡಿ ಕೈಕೆಯರ ।
ನಡೆದು ಬರೆ ನಿಮಿಷದಲಿ ಬಲವವ
ಗಡಿಸಿ ಹೊಕ್ಕುದು ಮಸಗಿದಂಬುಧಿ
ವಡಬನನು [2]ಮೊಗೆದಂತೆ[2] ಮುತ್ತಿತು ಕಳಶ ಸಂಭವನ ॥ ೩೫

---

[1] ಗಱೆದು (ಟ.ತ.ದ.ನ.ಪ). [2] ಹೊಗುವಂತೆ (ಟ.ಪ).

ಮತ್ತೆ ಮುಱಿದನು ವೈರಿ ಬಲದಲಿ
ಹತ್ತು ಸಾವಿರ ಕರಿ ಘಟೆಯನೈ
ವತ್ತು ಸಾವಿರ ಹಯವನಿರ್ಛಾಸಿರ ಮಹಾರಥರ ।
ಹತ್ತು ಕೋಟಿ ಪದಾತಿಯನು ಕೈ
ವರ್ತಿಸಿದನಂತಕನವರಿಗಿವ
ರತ್ತ ಬಿಟ್ಟನು ರಥವನಾ ದ್ರುಪದಾದಿ ನಾಯಕರ ॥ ೩೬

ಆಳನೊಪ್ಪಿಸಿ ಜಾಱಿದಿರು ಪಾಂ
ಚಾಲಪತಿ ಫಡ ನಿಲ್ಲೆನುತ ಶರ
ಜಾಲದಲಿ ಹೂಳಿದನು ದ್ರುಪದನ ಕೆಲದ ಬಲದವರ ।
ಖೂಳ ಫಡ ಹಾರುವರು ಬಱಿ ಮಾ
ತಾಳಿಗಳು ತಾ[1]ವೇಕೆ[1] ನಾವೇ
ಕಾಳುತನ ತನಗೆತ್ತಲೆನುತಿದಿರಾದನಾ ದ್ರುಪದ ॥ ೩೭

ಹಿಂದ ನೆನೆಯಾ ಖೂಳ ನಾವಾ
ರೆಂದು ಮಱೆದಾ ಸಾಕದಂತಿರ
ಲೊಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ।
ಇಂದು ನಿನ್ನಯ ಬಾಯ ತಂಬುಲ
ತಿಂದವನು ನೋಡೆನುತ ಹೆಱೆಯಂ
ಬಿಂದ ಕಡಿದಿಳುಹಿದನು ಪಾಂಚಾಲಾಧಿಪನ ಶಿರವ ॥ ೩೮

ದೊರೆಯಳಿದನೇ ಸ್ವಾಮಿ ದ್ರೋಹರು
ತಿರುಗಿಯೆನೆ ಪಾಂಚಾಲರಲಿ ಹ
ನ್ನೆರಡು ಸಾವಿರ ರಾಜಪುತ್ರರು ಜಱೆದು ಜೋಡಿಸಿತು ।
ಹರಿಬವೆಮ್ಮದು ಸಾರಿ ನೀವೆಂ
ದರಸು ಮಕ್ಕಳ ನಿಲಿಸಿ ಬಿಲುಗೊಂ
ಡುರವಣಿಸಿ ತಡೆದನು ವಿರಾಟನು ಕಳಶ ಸಂಭವನ ॥ ೩೯*

ಅಡಸಿ ಗಿರಿಗಳ ನುಂಗುವನ ಬಾಯ್
ಹಿಡಿಯದಿಹುದೇ ಹಣ್ಣು ಹಂಪಲ
ಬಡ ವಿರಾಟನನಾರು ಬಲ್ಲರು ದ್ರೋಣನಿದಿರಿನಲಿ ।

[1] ವೆತ್ತ (ತ.ನ). * ಈ ಪದ್ಯವು (ಟ) ಪ್ರತಿಯಲ್ಲಿಲ್ಲ.

ನಡೆದು ಬಹುದನು ಕಂಡೆವಾ[1]ಗಲೆ[1]
ಮಡಿದನೆಂಬುದ[2]ನಱಿಯೆವೈ[2] ಬಿಲು
ಡುಡುಕಿ ಕುಂತೀಭೋಜ ಹೊಕ್ಕನು ಮಿಕ್ಕನವರುಗಳ ‖ ೪೦

ಅವರ ಹರಿಬವ ಬೇಡಿ ಸೃಂಜಯು
ರವಗಡಿಸಿದರು ಕೈಕೆಯರು ನೃಪ
ನಿವಹದಗಣಿತ ಚೈದ್ಯ ಯಾದವ ಮಗಧ ಮಾಳವರು |
ವಿವಿಧ ವಾದ್ಯ ನಿನಾದ ಗಜ ಹಯ
ರವ ರಥ ಧ್ವನಿ ಜಗದ ಜಂತ್ರವ
ತಿವಿದು ಕೆದಱೆ ವಿರೋಧಿ ಬಲ ಕೆಣಕಿದುದು ಕಳಶಜನ ‖ ೪೧

ಕೇಳಿದೆನು ರಭಸವನು ಬಲು ಕೆಂ
ಧೂಳಿಯನು ಕಂಡೆನು ವಿರೋಧಿಗ
ಳಾಳ ಕಂಡೆನು ಕಾಣೆನಿತ್ತಲು ಕಳಶ ಸಂಭವನ |
ಕೇಳಿದೀ ನಿಮಿಷಾರ್ಧದಲಿ ಕೆಂ
ಧೂಳ ಕಾಣೆನು ಕಾಣೆನರಿಭೂ
ಪಾಲರನು ಕೇಳರಸ ಕಂಡೆನು ಚಾಪ ಧೂರ್ಜಟಿಯ ‖ ೪೨

ಅರಸು ಮಕ್ಕಳು ಮತ್ಸ್ಯ ಪಾಂಚಾ
ಲರಲಿ ಕೈಕೆಯ ಚೈದ್ಯ [3]ಯಾದವ
ತುರುಕ ಬರ್ಬರ ಗೌಳ ಮಾಗಧ ಪಾರಿಯಾತ್ರರಲಿ[3] |
ಉರುಳಿತೊಂದೇ [4]ಲಕ್ಷವು[4]ಳಿದೀ
ಕರಿ ವರೂಥ ಪದಾತಿ ತುರಗವ
ನರಸ ಲೆಕ್ಕಿಸಲಾರು ಬಲ್ಲರು ವೈರಿ ಸೇನೆಯಲಿ ‖ ೪೩

ಮುಱಿದುದಾ ಬಲವಿಳೆಯೊಡೆಯ ಬೊ
ಬ್ಬಿಱಿದುದೀ ಬಲವಪಜಯದ ಮಳೆ
ಗಱೆದುದವರಿಗೆ ಹಱಿದುದಿವರಿಗೆ ಸರ್ಪರಜ್ಜುಭಯ |
ತೆರಳಿತಾಚೆಯ ಥಟ್ಟು ಮುಂದಣಿ
ಗುರವಣಿಸಿತೀ ಯೊಡ್ಡು ಕೌರವ
ರರಸನುತ್ಸಾಹವನು ಬಣ್ಣಿಸಲಱಿಯೆ ನಾನೆಂದ ‖ ೪೪

---

[1] ವಗ (ಕ). [2] ಕಾಣೆವೈ (ತ). [3] ಮಾಗಧ ತುರಕ ಖರ್ಪರ ಸಿಂಹಳರು ನರಪಾರಿಯಾತ್ರಕರು (ಕ), ತುರುಕ ಬರ್ಬರ ಚೀನಮಾಳವ ಪಾರಿಯಾತ್ರರಲಿ (ಟ.ದ). [4] ಕೋಟಿಯು (ತ.ನ).

ಭೂರಿ ವಿರಹಾಗ್ನಿಯಲಿ ಲೋಚನ
ವಾರಿಯಾಜ್ಯಾಹುತಿಗಳಲಿ ರಿಪು
ಮಾರಣಾಧ್ವರವೆಸೆದುದಿರುಳು ರಥಾಂಗ ದೀಕ್ಷಿತನ ।
ತಾರಕೆಯ ಮುರಿವುಗಳು ಕುಣಿವ ಸ
ಮೀರಣನ ಶಶಿಯೆಡೆಗೆ ರಜನೀ
ನಾರಿ ತೋಳೆಡೆಗೊಟ್ಟಳಂಬುಜಬಂಧು ಹೊರವಂಟ ॥ ೪೫

ಹದಿನೇಳನೆಯ ಸಂಧಿ ಮುಗಿದುದು

# ಹದಿನೆಂಟನೆಯ ಸಂಧಿ

ಸೂಚನೆ ॥ ರಿಪು ಬಲವ ಗ[1]ಲುವ[1]ಲ್ಲಿ ಶಾಪಾ
ದಪಿ ಶರಾದಪಿಯೆಂಬ ಜಯಲೋ
ಲುಪನು ಸಂಗ್ರಾಮದಲಿ ಮಡಿದನು ಪುತ್ರ [2]ಮೋಹ[2]ದಲಿ ॥

ಸಾಲದೇ ಸಮರಂಗವಿರುಳಿನ
ಕಾಳೆಗದ ಜಯ ನಮ್ಮ ದರಿ ಭೂ
ಪಾಲಕನ ಘಟ್ಟಿನಲಿ ಮಡಿದುದು ಬೇಹ ಬೇಹವರು ।
ಮೇಲುಗಾಳೆಗ ನಮ್ಮ ದೀಸಱ
ಮೇಲೆ ತೆಗೆಸುವುದತಿ ಮಥನದಲಿ
ಕಾಳಹುದು ಬಳಿಕೆನಲು ನೃಪತಿಗೆ ನುಡಿದನಾಚಾರ್ಯ ॥ ೧

ಅವನಿಪಾಲರು ಕಂಗಳಿಂದವೆ
ಕಿವಿಗೆ ಕರವೊಳ್ಳಿದರು ಕಂಡುದ
ನವರು ನಂಬರು ಕೊಂಡೆಯರ ನುಡಿಗೇಳ್ದು ನಂಬುವರು ।
ನಿವಗೆ ಹೇಳುವುದಲ್ಲ ಲೋಕದ
ಹವಣನೆಂದೆವು ನಾವು ಪಾಂಡವ
ರವರು ನಿನ್ನವರೆಂಬುದನು ನೀನಿಂದು ನೋಡೆಂದ ॥ ೨

ಬಿಲ್ಲನೊದಱಿಸಿ ವೈರಿ ಭಟರಿಗೆ
ಚೆಲ್ಲಿದನು ಭೀತಿಯನು ಬಱಸಿಡಿ
ಲೆಲ್ಲಿ ತುಡುಕುವುದಾರು ಬಲ್ಲರು ದ್ರೋಣನುರವಣೆಯ ।
ಘಲ್ಲಣೆಯ ಖುರಪುಟದ ತುರಗದ
ಹಲ್ಲಣೆಯ ಹೇಷಿತಕೆ ಹಗೆಯೆದೆ
ಝಲ್ಲೆನಲು ಕಣೆ ಜಾಡಿ ಕವಿದುದು ಕಟಕದಗಲದಲಿ ॥ ೩

ಇಳೆಯೊಳದುಭುತವಿದು ಕೃತಾಂತನ
ಫಲಿತ ಶಾಳೀವನವ ಮುತ್ತಿದ
ಗಿಳಿಗಳೋ [3]ಆಚಾರ್ಯ[3]ನಂಬುಗಳೋ ಮಹಾದೇವ ।

---

[1] ಲಿದ (ಕ.ಗ.ಚ), ಲುತ (ದ). [2] ಶೋಕ (ಟ.ದ). [3] ಮೋಣ್
ದ್ರೋಣ (ಟ.ದ), ಗಾಢಾಯ್ಲ (ಚ.ತ.ನ.ಪ).

[1]ನಿಳಿನಿಳಿಲು ಛುಗಿಲೆಂಬ ಛಿಳಿಛಿಳಿ
ಛಿಳಿಛಿಟಿಲು ಛೋರೆಂಬ ಖಣಿಖಟಿ
ಖಳಿಲುಖಳಿಲೆಂಬಂಬುಗಳ ದನಿ ತುಂಬಿತಂಬರವ[1] ॥ ೪

ಕಡಿದು ಬೀಳುವ ಕೈದುಗಳನರೆ
ಗಡಿದು ಜೋಲುವ ಜೋಡುಗಳ ನೆಱೆ
ಸಿಡಿದು ಹಾಱುವ ಸೀಸಕದ ನುಗ್ಗಾದ ಹಲಗೆಗಳ ।
ಉಡಿದ ಸಿಂಧದ ನೆಲಕೆ ಹರಹಿದ
ಕೊಡೆಯ ಚಮರದ ತಾಱು ಥಟ್ಟಿಗೆ
ಕೆಡೆದ ಚಾತುರ್ಬಲವನಭಿವರ್ಣಿಸುವನಾರೆಂದ ॥ ೫

ಅಳಿದವೈನೂಱಾನೆ ಮುಗ್ಗುಲ
ನೆಲಕೆ ಕೀಲಿಸಿ ಪಾಡಿಗೈದವು
ಬಲುಗುದುರೆ ಹದಿನೈದು ಸಾವಿರವೇಳು ನೂಱು ರಥ ।
ಮಲಗಿದವು ಕಾಲಾಳು ಲೆಕ್ಕದ
ಕಲೆಯ ತೊಡಸಿತು ರಾಜಪುತ್ರರು
ಹಲಬರವರಲಿ ಹೊಯ್ದು ಹೊಕ್ಕರು ಸುರರ ಪಟ್ಟಣವ ॥ ೬

ಸಾಲ ಮೇಘದ ಮನೆಗಳಿಗೆ ಬಿಱು
ಗಾಳಿ ಬಿದ್ದಿನನಾಗಿ ಬರಲವ
ರಾಲಯದ ಸಿರಿ ಮೆಱೆವುದೇ ಧೃತರಾಷ್ಟ್ರ ಚಿತ್ತಯಿಸು ।
[2]ಬೀಳ[2]ಹೊಯ್ದರು ಹೊಕ್ಕು ಭೂಮಿಾ
ಪಾಲನೆಯನಿವರೊಲ್ಲೆವೆಂಬವೊ
ಲೂಳಿಗವ ಮಾಡಿದನು ಪರಬಲದೊಳಗೆ ಕಲಿ ದ್ರೋಣ ॥ ೭

ಮುಱಿದು ಬರುತಿದೆ ಸೇನೆ ಸಾಕೀ
ಪರಿಯ ಸ್ಥೈರಣೆ ನಿಮ್ಮ ಮಾವನ
ಕುಱಿದಱಿಗೆ ಖತಿಗೊಂಡು ಕಾದಿ ವಿರಾಟ ಕೈಕೆಯರು ।
ತುಱುಗಿದರು ತೆತ್ತೀಸರಲಿ ತೆಗೆ
ಮಱೆಯ ಮಾತೇ ವಿಜಯ ಲಕ್ಷ್ಮಿಯ
ಸೆಱಗ ಹಿಡಿದನು ದ್ರೋಣನೆಂದರು ಚರರು ಭೂಪತಿಗೆ ॥ ೮

---

[1] ನಿಳಿನಿಟಿಲು ನಿಟಿಲೆಂಬ ಛಳಿಛಳಿ
ಛಳಿಛಿಟಿಲು ಛುಗಿಲೆಂಬ ಸಂಗರ
ದೊಳದ್ಭುತರಸದ ಧ್ವನಿಗಳು ತುಂಬಿತಂಬರವ ॥ (ಚ) [2] ಸಾಲ (ಕ.ಗ.ಟ).

ಹೊಳೆ ಹೊಳೆದು ತಂಬುಲದ ರಸದಲಿ
ಮುಳುಗಿ ಮೂಡುವ ಢಗೆಯ ತೊಡೆಹದ
ಮೆಲುನಗೆಯ ಕಳವಳವನರೆ ಮುಕ್ಕುಳಿಸಿದಾಲಿಗಳ।
ಹಿಳಿದ ಛಲದ ವಿಡಾಯಿ ಧೈರ್ಯದ
ತಳಿತ ಭೀತಿಗೆ ಕಾಲುವ್ರೇಳೆಯಾ
ದಳಿಮನದ ಭೂಪಾಲನಿರವನು ಕಂಡನಾ ಪಾರ್ಥ ॥ ೯

ನಾಯಿಗಳ ಹೊಯ್' ನೂಕು ರಣದಲಿ
ಸಾಯಬೇಡಾ ಕ್ಷತ್ರಿಯರು ತಾ
ವಾಯುಧಂಗಳ ಹಿಡಿದರೋ ವೋಣೋಕದಂಡಿಗಳೊ ।
ಜೀಯ ಖಾತಿಯಿದೇಕೆ ಬೀಳಲಿ
ನಾಯಕರು ನಿನಗೇನು ಹರನಡ
ಹಾಯಲಿಂದರಿ ಬಲವನುರುಹುವೆನೆಂದನಾ ಪಾರ್ಥ ॥ ೧೦

ನಿಲ್ಲು ಫಲುಗುಣ ನಿನ್ನ ಪರಿಯಂ
ತೆಲ್ಲಿಯದು ರಣವಕಟ ಹಾರುವ
ನಲ್ಲಿ ಕೆಲಬರ ಹೊಯ್ದು ಕೊಂದನು ಬಿನುಗು ಬಿಚ್ಚಟೆಯ ।
ಬಲ್ಲೆನಾತನ ಬಲುಹನೀಶ್ವರ
ನಲ್ಲಿ ಹರಿಮೇಖಳೆಯೆ ಸಾಕಿ
ನ್ನೆಲ್ಲವೇತಕೆ ಯೆನುತ ಧೃಷ್ಟದ್ಯುಮ್ನನನುವಾದ ॥ ೧೧

ನೇಮವಾಯಿತು ಸಾತ್ಯಕಿಗೆ ಶ್ರುತ
ಸೋಮಕಾದಿ ಕುಮಾರರಿಗೆ ಸಂ
ಗ್ರಾಮ ವೀರ ಶಿಖಂಡಿ ಸೃಂಜಯ ಚೇಕಿತಾನರಿಗೆ ।
ಆ ಮಹಾರಥರೈದಿದರು ಘನ
ತೋಮರ[1]ದಿ ತುಱುಗಿದ ವರೂಥ[1]
ಸ್ತೋಮದಲಿ ಬಹುವಿಧದ ವಾದ್ಯ ವಿಡಾಯಿ ರಭಸದಲಿ ॥ ೧೨

ಸರಕಟಿಸಿ ನೂಕಿತು ಚತುರ್ಬಲ
ವರರೆ ಹಾರುವನೆಲ್ಲಿ ಯಾವೆಡೆ
ದೊರೆ ಸುಯೋಧನನೆಲ್ಲಿ ರಾಧೆಯ ಮಗನ ಬರಹೇಳು ।

---

[1] ದಲಿವರೂಥ ನಿಚಯ (ಕ), ದಲಿ ತುರುಗಿನಮಹಾನೃಪ (ಗ), ದಲಿ ತುರು ಗದ ಪದಾತಿ (ಟ.ದ), ವತುರುಗಿತು ವರೂಥ (ಚ), ದಲಿ ತುರುಗಿದ ಪದಾತಿ (ತ.ಪ).

ಗುರು ಸುತನ ಕರೆ ಕಾದ ಹೇಳೋ
ದುರುಳ ದುಶ್ಶಾಸನನನೆನುತ
ಬ್ಬರಿಸಿ ಕವಿದುದು ವೈರಿ ಬಲವಾಚಾರ್ಯನಿದಿರಿನಲಿ ॥ ೧೩

ಅಂಗವಣೆಯೊಳ್ಳಿತು ಮಹಾದೇ
ವಂಗೆ ಮೊಗಸುವಡರಿದು ಮೊದಲಲಿ
ಸಿಂಗದಾಯತದಂಬು ಸುಳಿದರೆ ಮೊಲನ ಮುಂಚುವಿರಿ ।
ಭಂಗವಿಲ್ಲದೆ ಬಿದ್ದ ನಿಮ್ಮ
ಯ್ಯಂಗೆ ಹಳಿವನು ಹೊಱಿಸದಿಹ ಮನ
ದಂಗವಣೆಯುಂಟಾಗೆ ಮೆಚ್ಚುವೆನೆಂದನಾ ದ್ರೋಣ ॥ ೧೪

ಗಳಹತನ ನಿಮ್ಮಲ್ಲಿ ನೆಲೆ ನೀವ್
ಕಲಿತ ವಿದ್ಯ[1]ವು[1] ಮಾತಿನಲಿ ನೀವ್
[2]ಗೆಲುವುದಿದು[2] ತಪ್ಪಲ್ಲ ಮುಖದಿಂ ದ್ವಿಜರು ಜನಿಸಿದಿರಿ ।
ಗೆಲವು ತೋಳಿಂದೆಮಗೆ ಜನ್ಮ
ಸ್ಥಳವಲೇ ಭುಜವರಸುಗಳಿಗಿ
ನ್ನಳುಕದಿದಿರಲಿ ನಿಂದಿರಾದಡೆ ಗೆಲವು ನಿಮಗೆಂದ ॥ ೧೫

ಎನ್ನ ಮತ್ತೊಮ್ಮೆನ್ನ ತನ್ನಾ
ಣೆನ್ನ ಗೆಲವೇ ನಮಗೆ ನಿಂದರೆ
ನಿನ್ನ ಸಮ್ಮುಖದಲಿ ಮಹಾದೇವಹುದು ಬಳಿಕೇನು ।
ತನ್ನಲುಂಟೇ ಖರೆಯತನ ಬಱಿ
ದೆನ್ನನಿವನಿದ ಹಲವು ಬಾರಿಯ
ಮುನ್ನ ಬಲ್ಲೈ ನೀನೆನುತ ಸಾರಥಿಯ ಕೈವೊಯ್ದ ॥ ೧೬

ಈತ ಸೇನಾಪತಿ ಕಣಾ ತಾ
ನೀತನೈವರ ಮೈದುನನು ವಿ
ಖ್ಯಾತನಿವ ಪಾಂಚಾಲ ಕುಲದಲಿ ದ್ರುಪದ ತನುಜನಿವ ।
ಈತ ಸಾತ್ಯಕಿ ಯಾದವರ ಕುಲ
ದಾತನೀತ ಶಿಖಂಡಿ ಮೊದಲಾ
ದೀತಗಳು ನೆಱಿ [3]ಖರೆಯ[3]ರೆಂದನು ನಗುತ ಸಾರಥಿಗೆ ॥ ೧೭

---

[1] ವೆ (ಗ). [2] ಗೆಲದರಿದು (ಕ), ಗೆಲುವಿರಿದು (ಚ.ನ). [3] ವೀರ (ಟ.ದ).

ಮುಟ್ಟಿ ಬಂದುದು ಸೇನೆ ಕವಿದುದು
ಕಟ್ಟಳವಿಯಲಿ ಕಲಿಗಳೆದು ಬಳಿ
ಕಟ್ಟಿ ತಿಂಬ ಮಹಾಂತಕಂಗೌತಣವ ಹೇಳ್ವಂತೆ
ಕಟ್ಟೆಯೊಡೆದಂಬುಧಿಯೊ ಮೇಣ್‌ ಜಗ
ಜಟ್ಟಿ ಸುರಿದಂಬುಗಳೊ ನಿಮಿಷಕೆ
ಕೆಟ್ಟುದಾಚೆಯ ಬಲದ ತರಹರವರಸ ಕೇಳೆಂದ ‖　　　　೧೮

ನುಡಿಗೆ ಮುಂಚುವ ಬಾಣ ಮಾರುತ
[1]ನಡಸಿ ಬೀಸುವ ಲಾಗು[1] ತಲೆಗಳ
ತೊಡ[2]ಬೆ[2]ಗಳಚುವ [3]ಬೇಗವನು ಬಣ್ಣಿಸು[3]ವರೆನ್ನಳವೆ ।
ಕಡಲ ಕಡಹದಲುರಿವ ಗರಳವ
ನುಡುಗಿದವರಿವರೋ ಶಿವಾಯೆಂ
ದೊಡನೊಡನೆ ಪಡೆ ನಡುಗಲೊರಸಿದನಾ ಮಹಾರಥರ ‖　　　　೧೯

ಕರಿಗಳೈಸಾವಿರ ತುರಂಗಮ
ವೆರಡು ಸಾವಿರ[4]ವೆಂಟು[4] ಸಾವಿರ
ವರ [5]ವರೂಥದ[5] ಥಟ್ಟು ಮುಱಿದುದು ಲಕ್ಷ ಪಾಯದಳ ।
ಅರಸುಗಳು ಮೂನೂಱು ಪುನರಪಿ
ಕರಿ ತುರಗ ರಥ ಮತ್ತೆ ಮೂವ
ತ್ತೆರಡು ಸಾವಿರವಳಿದು[6]ದರಿ ಪಾಂಚಾಲ[6] ಸೇನೆಯಲಿ ‖　　　　೨೦

ಮತ್ತೆ ಕವಿದುದು ಹೆಣನ ತುಳಿದೊ
ತ್ತೊತ್ತೆಯಲಿ ರಿಪುಸೇನೆ ಮಂಜಿನ
ಮುತ್ತಿಗೆಯ ರವಿಯಂತೆ ಕಾಣೆನು ಕಳಶ ಸಂಭವನ ।
ಮತ್ತೆ ನಿಮಿಷಾರ್ಧದಲಿ ಕಾಲನ
ತುತ್ತು ಜೋಡಿಸಿತೇನನೆಂಬೆನು
ಹತ್ತು ಕೋಟಿಯನಿಳುಹಿದನು ರಿಪು ಚಾತುರಂಗದಲಿ ‖　　　　೨೧

ಘಾಸಿಯಾದುದು ಸೇನೆ ಸುಡಲೆನು
ತಾ ಸುಭಟರಿದಿರಾಗಿ ಕಾದಿದ
ರೈಸೆ ಬಳಿಕೇನವರ ಸತ್ವ ತ್ರಾಣವೇನಲ್ಲಿ ।

---

[1] ನಡೆಸುವ ಬಾಗು (ಟ).　[2] ಚಿ (ಗ.ಚ.ನ.ಪ).　[3] ಲೆಕ್ಕಗಳ ಗಡಣಿಸುವ (ಟ.ದ).　[4] ವೆರಡು (ಚ.ದ), ನಾಲ್ಕು (ಟ).　[5] ಮಹಾರಥ (ಕ.ಗ.ಟ).　[6] ದಾಪಾಂಡವರ (ಚ).

ಸೂಸುಗಣೆಗಳ ಸೊಗಡು ಹೊಯ್ದುಪ
ಹಾಸಕೊಳಗಾದರು ಮಹಾರಥ
ರೀಸು ಭಂಗಕೆ ಬಂದುದಿಲ್ಲ ನೃಪಾಲ ಕೇಳೆಂದ ॥ ೨೨

ಕಂಡುದಿವರನು ರಾಯ ಮೋಹರ
ವಂಡುಗೊಂ[1]ಡುದು[1] ದೊರೆಗಳಿದು ಕೋ
ದಂಡರುದ್ರನ ರಣ ಕಣಾ ತಾವೇನನೊದಗುವರು ।
ಉಂಡ ಬಾಸಣದೇಱು ಮದ್ದಿನ
ಗಂಡನೋ ದ್ರೋಣಾಸ್ತ್ರವನು ಸವಿ
ಗಂಡನೋ ಸಾತ್ಯಕಿಯೆನುತ ಗರ್ಜಿಸಿದ[2]ನಾ ಭೀಮ[2] ॥ ೨೩

ನುಡಿದು ಭಂಗಿಸಲೇಕೆ ಸದರವ
ಕೊಡುವುದಾಹವವೊಮ್ಮೆ ಮಗುಳವ
ಗಡಿಸುವುದು ವಿಕ್ರಮಕೆ ಕುಂದೇನಿದು ಮುಹೂರ್ತವಶ ।
ಪಡೆ ಸವೆದುದಿನ್ನೇನೆನುತ ಬಿಲ್
ದುಡುಕಿ ಹೊಕ್ಕನು ಪಾರ್ಥನನಿಲಜ
ನೊಡನೆ ಬಳಿಸಂಧಿಸಿತು [3]ಸನ್ನಾಹ[3]ದಲಿ ಪರಿವಾರ ॥ ೨೪

ಭೀತಿ ಮಾಣಲಿ ಭೀಮ ಫಲುಗುಣ
ರಾತುಕೊಂಡರು ಬವರವನು ನೆಱೆ
ಸೋತವರು ಸಂವರಿಸಿ ಕೊಂಬುದೆನುತ್ತ ಚರರುಲಿಯೆ ।
ಚಾತುರಂಗದ ಚರಣಹತಿ ನಿ
ರ್ಧೂತ ಧೂಳೀಮಯವಖಿಳ ದಿಗು
ಜಾತವೆನೆ ಥಟ್ಟಣೆಯಲೇಱಿತು ಪಾಂಡುಸುತ ಸೇನೆ ॥ ೨೫

ಆಳಿಯೋ ನಿಮಗೆನ್ನ ಸರಳಿಂ
ದಾಳು ಕುದುರೆಯ ಕೊಲಿಸುವುದು ನಿಮ
ಗಾಳುತನವುಂಟೆಂಬ ಗರ್ವವನಿಲ್ಲಿ ತೋಱಿಸಿರೆ ।
ಆಳು ನೋಡುತ್ತಿರಲಿ ನಮ್ಮೀ
ಕಾಳೆಗವನೆಲೆ ಪಾರ್ಥ ಪವನಜ
ಹೇಳೆನುತ ಕೈವರ್ತಿಸಿದನಂಬುಗಳಿಗಿವರೊಡಲ ॥ ೨೬

---

[1] ಡರೆ (ಕ.ಚ.ನ). [2] ನಾಚಾರ್ಯ (ಕ.ಟ.ನ). [3] ಸಂಗ್ರಾಮ (ಟ).

ನರನನೆಚ್ಚನು ಪವನಜನ ತನು
ಬಿರಿಯಲೆಚ್ಚನು ಸಾರಥಿಗಳಿ
ಬ್ಬರಲಿ ಹೂಳಿದನಂಬ ನೆಱೆ ನೋಯಿಸಿದ ರಥ ಹಯವ ।
ನರನ ಕಣೆಯನು ಭೀಮನಂಬನು
ಹರೆಗಡಿದು ಮಗುಳೆಚ್ಚನವರನು
ಸರಳ ಪುನರಪಿ ಸವಱಿ ಸೆಕ್ಕಿದನೊಡಲೊಳಂಬುಗಳ ॥ ೨೭

ದಿಟ್ಟಿ ಮುಷ್ಟಿಯ ಸರಿಸದಲಿ ತಲೆ
ಮಟ್ಟ [1]ಕವಿದರು[1] ಭೀಮ ಫಲುಗುಣ
ರಿಟ್ಟ ತೊಡರಿನೊಳಾರು ಸಿಲುಕರು ದಿವಿಜ ದನುಜರಲಿ ।
ನೆಟ್ಟನೈದುವ ಹಿಳುಕುಗಳ ತಱಿ
ದೊಟ್ಟಿದನು ದೆಖ್ಬಾಯಿಯಲಿ ಗಱಿ
ಗಟ್ಟಿತೀತನ ಖಾತಿ ಮೆಱೆದುದು ಕೇಣವಿಲ್ಲೆನಿಸಿ ॥ ೨೮

ರಾಯನನು ಬರಹೇಳು ನಾವ್ ಕೈ
ಗಾಯೆವೋ ಕಾಯಿದೆವೊ ಕಾಣಲಿ
ಬಾಯಿ ಬಡಿಕರು ಬಂದು ನೋಡಲಿ ಕರ್ಣ ಶಕುನಿಗಳು ।
ಆಯುಧವ ಹಿಡಿದವರು ಮೋಣಿವ
ರಾಯತದೊಳೊಡವೆರಸಿ ನೋಡಲಿ
ರಾಯನಾಣೆಯೆನುತ್ತ ಮೂದಲಿಸಿದನು ತನ್ನವರ ॥ ೨೯

ಬಾಲ ಸೂರ್ಯನ ಪೋಲ್ ಪ್ರತಿಕ್ಷಣ
ದೇಳಿಗೆಯ ತೇಜದ ವಿ[2]ಕಾ[2]ರ ಚ
ಡಾಳಿಸಿತು ವಿಕ್ರಮದ ಝಳ ಜಗವಳುಕೆ ಝೊಂಪಿಸಿತು ।
ಹೇಳಲೇನರ್ಜುನನ ಭೀಮನ
ಸೋಲವದು ತಾ ಮೃತ್ಯುವೀ ಪರಿ
ಕಾಳೆಗವ ನಾನಱಿಯೆನಮರಾಸುರರ ಘಟ್ಟಿನಲಿ ॥ ೩೦

ಸಾಕು ನಿಮಗಾಗದು ವೃಥಾ ನೀ
ವೇಕಹಂಕರಿಸುವಿರಿ ಸೇನಾ
ನೀಕ ಹೊದ್ದಲಿ ಹೊಗಲಿ ಧೃಷ್ಟದ್ಯುಮ್ನ ಮೊದಲಾಗಿ ।

---

[1] ಕರೆದನು (ಗ.ಚ.ದ.ನ). [2] ಹಾ (ತ.ಪ).

ಆಕೆವಾಳರು ನಿಲಲಿ ಕುಪಿತ ಪಿ
ನಾಕಿಯಱಿಯಾ ದ್ರೋಣನೆನುತ ನ
ರಾಕೃತಿಯ ಪರಬೊಮ್ಮ ರೂಪನು ತಿರುಹಿದನು ರಥವ ‖ ೨೧

ಮೇಲೆ ಬಿದ್ದುದು ಮುಳಿಸಿನಲಿ ಪಾಂ
ಚಾಲರಾಯನ ಥಟ್ಟು ನಿಶಿತ ಶ
ರಾಳಿಯಲಿ ಹೂಳಿದನು ಧೃಷ್ಟದ್ಯುಮ್ನನಂಬರವ ।
ಬಾಲಕರಲೇ ಖಡ್ಗಧಾರೆಯ
ಮೇಲೆ ಮೋಹಿದ ಮಧುವ ಸವಿಯಲಿ
ನಾಲಗೆಯಲಿವರೊಲ್ಲರೆಂದನು ನಗುತ ಕಲಿ ದ್ರೋಣ ‖ ೨೨

ತೆಱಹ ಕೊಟ್ಟೊಳಹೊಗಿಸಿ ಸದೆದನು
ಬಱಸಿಡಿಲು ಜಡಿವಂತೆ ರಿಪು ಬಲ
ವೊಱಲಿ ಕೆಡೆದುದು ಘಾಯವಡೆದುದು ಬೇಹ ನಾಯಕರು ।
ದುಱುದುಱಿಪ ತಲೆಮಿದುಳ ದಂಡೆಯ
ಹಱಿಗರುಳ ನೆಣವಸೆಯ ಮೂಳೆಯ
ಮುಱಿಕುಗಳ ಕಡಿಖಂಡ ಮಯವಾಯ್ತಖಿಳ ಚತುರಂಗ ‖ ೨೩

ಬೆರಳ ಬಾಯ್ಗಳ ಬಿಸುಟ ಕೈದುಗ
ಳರೆಗಿರಿದ ಹಲ್ಲುಗಳ ಕೂಡಿದ
ಕರಪುಟದ ಬಿಡುದಲೆಯ ಬಸಿವೇಱುಗಳ ಶೋಣಿತದ ।
ನರಳುವಾರೋಹಕರ ರಾವ್ತರ
ವರ ಮಹಾರಥ ಪಾಯದಳದು
ಬ್ಬರದ ಭಂಗವನೇನನೆಂಬೆನು ವೈರಿ ಸೇನೆಯಲಿ ‖ ೨೪

ಮುಂದೆ ಹೊಗುವತಿಬಳರು ಹಾರಿತು
ಹಿಂದಣವರನು ಹಿಂದೆ ನಿಲುವರು
ಮುಂದಣವರಾಸೆಯಲಿ ನಿಂದುದು ಪಾರ್ಥ ಪರಿಯಂತ ।
ಅಂದು ಪಾರ್ಥನು ಕೃಷ್ಣ ಬಲದಲಿ
ನಿಂದನೇವೇಳುವೆನು ನಿನ್ನವ
ರೆಂದು ಗೆಲ್ಲರು [1]ಗಾಹು[1] ಗತಕವನುಳಿದು ಕಾದುವರೆ ‖ ೨೫

---

[1] ದ್ರೋಣ (ನ).

ಆಱು ಸಾವಿರ ತೇರು ಗಜ ಹದಿ
ನಾಱು ಸಾವಿರ ಲಕ್ಷ ಕುದುರೆಗ
ಳಾಱು ಕೋಟಿ ಪದಾತಿ ಮುಗ್ಗಿತು ಮತ್ತೆ ಸಂದಣಿಸಿ ।
ಆಱು ಲಕ್ಷ ತುರಂಗ ನೃಪರ್ಕ್ಕೆ
ನೂಱು ಗಜ ಘಟೆ ಲಕ್ಷ ರಥ ಹದಿ
[1]ಮೂ[1]ಱು ಸಾವಿರವಳಿದುದರಿ ಪಾಂಚಾಲ ಸೇನೆಯಲಿ ॥　　೩೬

ಅಂಗವಿಸುವವರಿಲ್ಲ ಭಟರಿಗೆ
ಭಂಗವಿಕ್ಕಿತು ಕೌರವೇಂದ್ರಗೆ
ಸಂಗರದ ಸಿರಿ ಸೊಗಸಿನಲಿ ಕಡೆಗಣ್ಣ ಸೂಸಿದಳು ।
ಮುಂಗುಡಿಯಲಿನ್ನಾರು ನಮಗಾ
ವಂಗದಲಿ ಜಯ[2]ವೇನು ಹದನ[2]ರ
ಸಂಗೆ ಬಿನ್ನಹ ಮಾಡಿಯೆಂದರು ನಿಖಿಳ ಮಂತ್ರಿಗಳ ॥　　೩೭

ಕರಸಿದನು ಹರಿ ಧರ್ಮಪುತ್ರನ
ನರಸ ಕೇಳಿಂದಿನಲಿ ಗುರುವನು
ಸರಳ ಮೊನೆಯಲಿ ಗೆಲಲು ನೂಕದು ಭೂತನಾಥಂಗೆ ।
ತೆರಳಿ ಬರುತಿದೆ ನಮ್ಮ ಬಲ ಸಂ
ಗರದ ಜಯವಹುದೆಂತು ಹೇಳ್ಕೈ
ಧರಣಿ ಪತಿ ನೀನೆನಲು ನೀವೇ ಬಲ್ಲಿರಿದನೆಂದ ॥　　೩೮

ಧುರದ ಜಯವಹುದೊಂದು ಪರಿಯಲಿ
ನಿರುತವಲ್ಲದ ನುಡಿಯ ನುಡಿದರೆ
ಪರಿಹರಿಸ ಬಹುದೆಂದನಸುರಾರಾತಿ ನಸುನಗುತ ।
ನರನದೆಂತೆನೆ ಗುರುತನುಜ ಸಂ
ಗರದೊಳೊಱಗಿದನೆಂದು ದ್ರೋಣಂ
ಗಱುಹು ಫಲುಗುಣ ಮನದೊಳಳುಕದೆ ಬೇಗ ಮಾಡೆಂದ ॥　　೩೯

ಕಿವಿಯ ಮುಚ್ಚಿದನರ್ಜುನನು ಹರಿ
ಯುವಗಡಿಸೆ ಕೈಕೊಂಡನರಸನು
ಪವನಸುತನಾ ಮಾತ ಕೊಂಡನು ಹೊಕ್ಕನಾಹವವ ।

---

[1] ನಾ (ಗ.ಟ).　　[2] ವೆಂದನುತಲ (ಟ).

ತವಕದಲಿ ತೆಗೆದೆಸುತ ರಿಪು ಶರ
ನಿವಹವನು ಖಂಡಿಸುತಲಿಂದಿನ
ಬವರದಲಿ [1]ಕಡಿವಡೆದುದಶ್ವತ್ಥಾಮ ಕೇಳೆಂದ[1] ॥ ೪೦

ಶಿವ ಶಿವಾ ಕರ್ಣಜ್ವರಾಯತ
ರವವಿದೆತ್ತಣದೋ ಕುಮಾರನ
ತಿವಿದರಾರೋ ಕಾನಿದದುಭುತವೆನುತ ತನ್ನೊಳಗೆ ।
ತವಕಿಸುತ ತಿಳಿದನು ವೃಕೋದರ
ನಿವ ದುರಾತ್ಮನು ತನ್ನ ಮಗ[2]ನಾ[2]
ಶಿವನೊಡನೆ ಸಮಜೋಳಿ ಹುಸಿ ಹೋಗೆಂದನಾ ದ್ರೋಣ ॥ ೪೧

ಮತ್ತೆ ಮಸೆದುದು ಖಾತಿ ಕರ್ಬೊಗೆ
ಸುತ್ತಿದುಸು[3]ರಲಿ[3] ಮಿಾಸೆಗಡಿದೌ
ಡೊತ್ತಿ ಸೆಳೆದನು ಶರವನೆಚ್ಚನು ಪವನ ನಂದನನ ।
ಹತ್ತೆಗಡಿದನು ಭೀಮ [4]ಮುಗುಳಿವ[4]
ನೊತ್ತಿ ಹೊಕ್ಕರೆ ಕೈ ನೆರವ ಹಾ
ರುತ್ತ ಮುರಿದನು ಬಳಿಕ ಧೃಷ್ಟದ್ಯುಮ್ನನಿದಿರಾದ ॥ ೪೨

[5]ಏ[5]ನಿತು ಬಾರಿ ಪಲಾಯನದ ಸಿರಿ
ನಿನಗೆ ಸೇರಿತು ವೀರ ಭಂಡನೊ
ಳೆನಗೆ ನೂಕದು ಸಾ[6]ಕು[6] ಧೃಷ್ಟದ್ಯುಮ್ನ ನಿಲ್ಲೆನುತ ।
ಅನಿಲ ಜವದಲಿ ರಥವ ಬಿಟ್ಟನು
ಜನಪತಿಯ ಮೋಹರಕೆ ಕವಿದುದು
ತನತನಗೆ ರಾಯನ ವಿಪತ್ತಿನೊಳಖಿಳ ಭಟನಿಕರ ॥ ೪೩

ಒಲೆದು ಗಜವಿಟ್ಟಣಿಸಿದವು ತಲೆ
ವಲಗೆಯಲಿ ಕಲಿ ಪಾಯದಳ ಪಡಿ
ತಳಿಸಿತೊಳಹೊಕ್ಕಾಕಿದವು ಬದ್ಧರದ ಬಂಡಿಗಳು ।
ಸೆಳೆದಡಾಯ್ದದ ರಾವುತರು ಕೈ
ನಿಲುಕಿದರು ಮುತ್ತಿದರು ಪರಿಮುಂ
ಡಳಿಸಿ ಬೊಬ್ಬಿಱಿದಾರಿದರು ಸಿಕ್ಕಿದನು ಹಗೆಯೆನುತ ॥ ೪೪

---

[1] ಬಸವಳಿದುದಶ್ವತ್ಥಾಮಗಜವೆಂದ (ಕ). [2] ನೇ (ಶ.ಗ.ಟ.ಚ). [3] ರಿನ (ಕ.ತ). [4] ನಿವಮು (ಕ), ಮುಗುಳವ (ಚ.ನ). [5] ಇ (ಕ.ಗ.ಚ). [6] ರ್ರಿ (ತ), ಕೈ (ಚ).

ಸಾರಥಿಯ ತುಡುಕಿದರು ತಿವಿದರು
ತೇರ ಕುದುರೆಯನಿಭದ ಬರಿಕೈ
ತೇರ ಹಿಡಿದವು ಘಲ್ಲಿಸಿದವನುಕರುಷ ಕೂಬರವ ।
[1]ಭಾರಿ ಯಾಚಿನ ಮೇಲೆ ಬಿದ್ದವು[1]
ವಾರುವಂಗಳ ಖುರ ನಿಕರವಸಿ
ಧಾರೆ ಮೊಗದಲಿ [2]ಮಿಂಚಿ[2]ದವು ಮುತ್ತಿದವು ಕಳಶಜನ ॥ ೪೫

[3] ದ್ರೋಹಿ ಸಿಲುಕಿದನೆನುತೆ ಜೀವ
ಗ್ರಾಹವ್ರೋ[3] ಸಾಹಸ ವಿಚಾರಿಸು
ಬೇಹವರನೆನುತೊಱಲಿ ಧೃಷ್ಟದ್ಯುಮ್ನನಿದಿರಾಗೆ ।
ಸಾಹಸಿಕರಳುಕಿದರು ಕೌರವ
ಮೋಹರದ ಮೊನೆಯಾಳುಗಳು ಸ
ನ್ನಾಹದಲಿ ಪಡಿತಳಿಸಿ ಕರ್ಣ ಕೃಪಾದಿ ನಾಯಕರು ॥ ೪೬

ಗಾಳ ಗಂಟಲಲಿಳಿವುದೇ ಮ
ತ್ಸ್ಯಾಳಿಗ[4]ಕಟೀ[4] ದೊದ್ದೆ ಕವಿದರೆ
ಕೋಲ ಗುರು ಕಳವಳಿಸುವನೆ [5]ಬಯಸುವನೆ[5] ಕೆಲಬಲನ ।
ಮೇಲುಗಾಣದೆ ಕವಿದಡಿದಿರೇ
ಬಾಲ ಹರಿಣನ ಹಿಂಡು ಹೆಬ್ಬುಲಿ
ಗಾಳ ತತ್ತರಿದಱಿದು ತಳಪಟ ಮಾಡಿದನು ದ್ರೋಣ ॥ ೪೭

ಆರ ನೆರವಿಯೊಳಂಧಕಾರದ
ಭಾರವನು ರವಿ ಗೆಲುವನಿನ್ನೀ
ವೈರಿ ಬಲ ಭಂಜನಕೆ ಗುರು [6]ಹಂಗಹನೆ[6] ಕೆಲಬಲಕೆ ।
ಭೂರಿ ರಿಪು ಚತುರಂಗ ಬಲ ಸಂ
ಹಾರದಲಿ ಒಱವೆದ್ದ ರಕುತದ
ಪೂರದಲಿ ಮುಳುಗಿದರು [7]ಪಾಂಚಾಲಾದಿ[7] ನಾಯಕರು ॥ ೪೮

[1] ಭಾರವಿಸಿ ಮೇಲೆ ಬಿದ್ದವು (ಕ), ಭಾರಣೆಯ ಬಲ ಮೇಲೆ ಬಿದ್ದುದು, (ಗ.ಚ), ಭಾರವಿಸಿ ಮೇಲಿಕ್ಕಿ ಬಿದ್ದುದು (ಟ). [2] ಚಿಮ್ಮಿ (ಕ). [3] ದ್ರೋಹಿ ಸಿಲುಕಿದನಿನ್ನು ಜೀವಗ್ರಹಣವೊ (ಗ) ದ್ರೋಹಿಸಿಲುಕಿದನೆಲವೊ ಜೀವಗ್ರಾಹಿಯೋ (ಟ.ದ). [4] ಳಬಲು (ಸ.ಕ). [5] ಹಾರವನೆ (ಗ.). [6] ಹಂಗಿಗನೆ (ಚ) ಹಾರುವನೆ (ಟ.ದ). [7] ಕರ್ಣಕೃಪಾದಿ (ಕ) ಧರ್ಮಸುತಾದಿ (ಚ.ಪ)

ಘಾಯವಾಯ್ತರ್ಜುನಗೆ ಮಿಗೆ ಪೊ
ರಾಯದೇಱಿನೊಳೊದೆದು ಕೊಂಡರು
ವಾಯುತನುಜ ಶಿಖಂಡಿ ಸಾತ್ಯಕಿ ದ್ರುಪದ ನಂದನರು ।
ಬಾಯ ಬಿಟ್ಟುದು ಭೀತಿಯಲಿ ಕೌಂ
ತೇಯಸುತರಿನ್ನುಳಿದ ಸುಭಟರ
ನಾಯಕರ ಪಾಡೇನು [1]ನ[1]ಸಿದುದು ಪಾಂಡುಸುತ ಸೇನೆ ॥ ೪೯

ಮೊದಲಲೌಕಿದ ಚಾತುರಂಗವ
ಸದೆದನೊಂದೇ ಲಕ್ಷವನು ಮಿಾ
ಱಿದರೆ ಪೋದಿದನೆಂಟು ಲಕ್ಷವನೊಂದು ನಿಮಿಷದಲಿ ।
ಕದನದಲಿ [2]ದಿಗ್ದೇವಿಯರಿಗಿ
ಕ್ಕಿದನು ಲಕ್ಷವನೇಳು[2] ಲಕ್ಷವ
ನೊದಗಿಸಿದನಂತಕನ ಪುರಿಗವನೀಶ ಕೇಳೆಂದ ॥ ೫೦

ಧಾರುಣೀಶರು ಮಡಿದರೊಂದೇ
ಸಾರಿಗೆಯಲೈನೂಱು ಮತ್ತೆ ಮ
ಹಾರಥರು ಮೂನೂಱು ಪುನರಪಿ [3]ನೂಱು ನಾನೂಱು[3] ।
ಮಾರಿ ಬಿಱುದೇಗಿದಳು ಯಮನವ
ರಾಱಿದೊಯ್ಯಲು ನಾಕದಲಿ ಹೊರ
ಕೇರಿಗಟ್ಟಿದುದೆನಲು ಕೊಂದನು ರಿಪು ಚತುರ್ಬಲವ ॥ ೫೧

ಇಳಿದರಿತ್ತಲು ಗಗನದಿಂ ಹೊಳೆ
ಹೊಳೆವ ಧಾಳದ ಝೂಡಿಯಲಿ ಜಗ
ಮುಳುಗೆ ಭಸ್ಮವಿಭೂಷಿತಾಂಗದ ಜಡಿವ ಕೆಂಜೆಡೆಯ ।
ಪುಲಿದೊಗಲ ಸುಲಿಪಲ್ಲ ಮುಕ್ತಾ
ವಳಿಯ ಮಣಿ ಜಪಮಾಲಿಕೆಯ ನಿ
ರ್ಮಳ ತಪೋಧನರೈದಿದರು ಸಂಗ್ರಾಮ ಭೂಮಿಯನು ॥ ೫೨

ಅತ್ರಿ ಭಾರದ್ವಾಜ ವಿಶ್ವಾ
ಮಿತ್ರ ಗೌತಮ ಕಣ್ವ ಕಶ್ಯಪ
ಮಿತ್ರಸೂನು ವಸಿಷ್ಠ ಗಾರ್ಗ್ಯಾಂಗಿರಸ ಭಾರ್ಗವರು ।

---

[1] ನು (ಕ). [2] ನೆಱೆ ದಿಗ್ಬಲಿಯನಿಕ್ಕಿದನು ಲಕ್ಷವನೇಳು (ಟ).
[3] ನೂಱು ಮುನ್ನೂಱು (ಗ.ಚ) ನೂಱು ನೂಱಾಗಿ (ಟ) ನೂಱು ನೂಱಾಱು (ತ).

[1]ಅತ್ರಿಸುತ ವರ ವಾಲಖಿಲ್ಯರು[1]
ಚಿತ್ರಚರಿತರು ಬಂದರಲ್ಲಿಗೆ
ಮಿತ್ರಭಾವದಲವರನಭಿವಂದಿಸಿದನಾಚಾರ್ಯ ‖ ೫೩

ವರ ಮುನೀಶ್ವರರವನಿಯಲಿ ಮೂ
ವರಿಗೆ ಗೋಚರವಾದರಿತ್ತಲು
ಮುರ ವಿರೋಧಿಗೆ ನರಗೆ ಕುರುಸೇನಾಧಿನಾಥಂಗೆ ।
ಅಱಿಯರುಳಿದವರೀತನಿಂ ಸ
ತ್ಕರಿಸಿಕೊಂಡರು ನುಡಿದರಾ ಮುನಿ
ವರರು ಕಡಿದರು ಕೌರವಾನ್ವಯ ಕಲ್ಪಭೂರುಹವ ‖ ೫೪

ಪಾತಕವಲಾ ದ್ರೋಣ ನಿನಗೀ
ಭೂತ ಹಿಂಸೆಯದೇಕೆ ಪಾರ್ಥಿವ
ಜಾತಿಯಲಿ [2]ಜನಿಸಿದವರೀ ನಿನ್ನಂತೆ ನಿರ್ದಯರೆ[2] ।
ಸೋತರೇನದು ಖುಷಿತನಕಪ
ಖ್ಯಾತಿಯೇ ಶಸ್ತ್ರೋಪಜೀವನ
ವೇತಕಿದು [3]ನಿನ[3]ಗೆಂದು ಭಾರಧ್ವಾಜ ಮುನಿ ನುಡಿದ ‖ ೫೫

ಲೋಕವೆಂಬುದು ವರ್ಣ ಧರ್ಮವ
ನೌಕಿ ನಡೆವುದು ವೈದಿಕಕೆ ನಾ
ವಾಕೆವಾಳರು ತಪ್ಪಿ ನಡೆದರೆ ಭ್ರಮಿಸುವರು ಬುಧರು ।
ಲೋಕ ನಮ್ಮನುದಾಹರಿಸುವುದು
ಕಾಕನೇ ಬಳಸುವುದು ದುರ್ಯಶ
ವೇಕೆ ನಿಮಗಿದು ವಿಹಿತಕರ್ಮಶ್ರುತಿ ಪರಿತ್ಯಾಗ ‖ ೫೬

ಶ್ರುತಿ ಪಠಣವೋ ತರ್ಪಣವೊ ಮೇ
ಣತಿಥಿ ಪೂಜೆಯೊ ಭೂತಯಜ್ಞವೊ
ಹುತವಹಾರಾಧನೆಯೊ ರಣವೀ ಯ್ಯೆಯ್ದರೊಳಗೇನು ।
ಶ್ರುತಿ ತದರ್ಥಸ್ಮೃತಿಗಳಲಿ ಪಂ
ಡಿತರು ನಡೆವುದ ಮಾದು ಮೂರ್ಖರ
ಗತಿಯನನುಕರಿಸಿದರೆ ಬಳಿಕ ವಿಶೇಷವೇನೆಂದ ‖ ೫೭

---

[1] ಮೈತ್ರ್ಯತ್ರಿಖುಷಿವರಪಾಲಮಿಾಕಿಂಯುು (ಕ.), ಸತ್ರಿಗಳು ವರವಾಲಖಿಲ್ಯರು (ಚ.), ಸತ್ರಿಗಳು ಸನ್ಮಾರ್ಗಶೀಲರು (ಟ.ದ). [2] ನಿನ್ನಂತೆ ನಿರ್ದಯರಿಲ್ಲ ಜನಿಸಿದರು (ಕ). [3] ನಮ (ಸ-ತ).

ಆದುದವಿವೇಕದಲಿ [1]ಸತ್ಪಥ[1]
ವೈದಿಕಾತಿಕ್ರಮಣವಿನ್ನು ಗ
ತೋದಕದಲುಱೆ [2]ಸೇತು ಸಂಬಂಧದಲಿ[2] ಫಲವೇನು ।
ಈ ದುರಾಗ್ರಹ ನಿಲಲಿ ಹಾಯಿಕು
ಕೈದುವನು [3]ಸುಸಮಾಧಿ[3]ಯೋಗದ
ಲೈದು ನಿಜವನು ದೇಹ ನಿಸ್ಪೃಹನಾಗು ನೀನೆಂದ ॥ ೫೮

ದೇಹವಿದು ಭೂತೇಂದ್ರಿಯಾದಿಯು
ಗೇಹವುಪಚಿತ ಕರ್ಮಫಲ ಸಂ
ದೋಹದಲಿ ತಿರುಗುವುವು ಸುರ ನರ ತಿರ್ಯಗಾದಿಯಲಿ ।
ದೇಹ ಕರಣಾದಿ ಪ್ರಪಂಚವು
[4]ನಾ[4]ಹಮೆನಲಳಿದುಳಿದ ನಿತ್ಯನಿ
[5]ರೀಹ ವಿಮಳ[5]ಜ್ಞಾನ ರೂಪನು ನಿನ್ನ ನೋಡೆಂದ ॥ ೫೯

ನನೆದುದಂತಃಕರಣ ರೋಮಾಂ
ಚನದಲಾನಂದಾಶ್ರುಜಲದಲಿ
ನನೆದು ಹೊಂಪುಳಿಯೋಗಿ ಕಣ್ಣೆವೆ ಮುಚ್ಚಿ ಹೊರೆಹೆಚ್ಚಿ ।
ನೆನೆದೆನೆನ್ನನು ನಿಮ್ಮ ಪದ ದರು
ಶನದಿ ಧನ್ಯನು ಬಿಜಯ ಮಾಡುವು
ದೆನುತ ಕಂದೆಱೆದೀಕ್ಷಿಸಿದನಂದುಭಯ ಸೈನಿಕವ ॥ ೬೦

ತಿರುಗಿದುದು ಮುನಿ ನಿಕರವತ್ತಲು
[6]ಮರಳಿತೀತ[6]ನ ಬುದ್ಧಿಯಿತ್ತಲು
ತೆರೆಯ ಹಿಡಿದುದು ಮಱವೆ ಸಮ್ಯಜ್ಞಾನ ದೀ[7]ಧಿತಿ[7]ಗೆ ।
ಅರಸನನು ಬೆಸಗೊಂಬ ತನುಜನ
ಮರಣ ಹುಸಿಯೋ ದಿಟವೊ ಭೀಮನ
ಸೊರಹ ನಂಬೆನೆನುತ್ತ ರಾಯನನಱಸುತೈತಂದ ॥ ೬೧

ಎಲೆ ಯುಧಿಷ್ಠಿರ ನನ್ನ ಸುತನೇ
ನಳಿದನೇ ಹುಸಿಯಲ್ಲಲೇ ನಿ
ರ್ಮಳ ವಚೋನಿಧಿ ನೀನು ಹೇಳೆನಲಸುರಹರ ನಗುತ ।

---

[1] ದುಷ್ಪಥ (ತ.ಪ). [2] ಸೇತುಸಂದರ್ಭದಲಿ (ಜ.ಟ.ದ), ಸೇತುಸಂತರ್ಪಣದಲಿ (ನ). [3] ಸುಷಮ್ನಾದಿ (ಕ.ಗ). [4] ಸೋ (ಕ), ಗಾ (ಚ.ಟ.ದ). [5] ರೂಹನಿರ್ಮಳಜ್ಞಾನ (ಟ.ದ). [6] ತಿರುಗಿತಾತನ (ಕ), ಮುರಿದುದೀತನ(ತ). [7] ಪ್ತಿಕೆ (ಕ.ಗ).

ಎಲೆಲೆ ನುಡಿಯಾ ಪಾಪಿ ಕದನದೊ
ಳಳಿದುದಶ್ವತ್ಥಾಮನೆಂಬ
ಗ್ಗಳೆಯ ಕರಿ ಮಾಳವರ ಥಟ್ಟಿನೊಳಂಜ ಬೇಡೆಂದ ‖ ೬೨

ಆದರಶ್ವತ್ಥಾಮ ಗಜವಿದಿ
ರಾದುದಳಿದುದು ದಿಟವೆನಲು ಬಿಸು
ಸುಯ್ದು ನರಸನ ನುಡಿಗೆ ನಂಬಿದನಕಟ ಮಗನೆನುತ ।
ಕೈದು ಕಯ್ಯಲಿ ಜಾಱೆ ಝೊಂಪಿಸಿ
ಖೇದದಲಿ ಕಾತರಿಸಿ ಚಿತ್ತವಿ
ಭೇದದಲಿ ಕಳವಳಿಸಿ ಕ[1]ರೆ[1]ದನು ರೋಷ [2]ತಾಮಸವ[2] ‖ ೬೩

ಬಿಲುದುಡುಕಿ ಬಲು ಸರಳ ತಿರುವಾಯ್‌
ಗೊಳಿಸಿ ಮಲೆತನು ಮಾರ್ಬಲಕೆ ಬಲೆ
ಕಳಚಿದರೆ [3]ವ್ಮೃಗ ಬಿದ್ದು[3]ದಿಱುಬಿನ ಕುಳಿಯೊಳೆಂಬಂತೆ ।
ತಿಳುಹಿ ಹೋದರು ಮುನಿಗಳೀತನ
ತಿಳಿವು ತೊಟ್ಟುದು ಮಱವೆಯನು ಮುಂ
ಕೊಳಿಸಿ ಮೊಗೆದನು ಮತ್ತೆ ಪಾಂಡವ ಸೈನ್ಯ ಸಾಗರವ ‖ ೬೪

ತಿರುಗಿ ಭೀಮನನೆಚ್ಚನಿತ್ತಲು
ನರನ ಮಸೆಗಾಣಿಸಿದನರಸನ
ಹೊರೆಯ ಬಿರುದರ [4]ಬಸಿಯು[4]ಲೆಚ್ಚನು ವಾಮ ದಕ್ಷಿಣವ ।
ಮರಳಿ ಧೃಷ್ಟದ್ಯುಮ್ನ ಸಾತ್ಯಕಿ
ವರ ಯುಧಾಮನ್ಯೂತ್ತಮೌಂಜಸ
ರರಸು ಮಕ್ಕಳ ಹಲಬರನು ಮುಱಿಯೆಚ್ಚು ಬೊಬ್ಬಿಱಿದ ‖ ೬೫

ಈಸು ಭರದಲಿ ಭೂತ ಹಿಂಸಾ
ದೋಷವನು ನೆಱೆ ಮಾಡಿ ಮಕ್ಕಳಿ
ಗೋಸುಗವಲೇ ಹಣವ ಗಳಿಸುವುದಾತ ತಾನಳಿಯೆ ।
[5]ಆಸೆಯಿದಱೊಳಗೇಕೆ ಧುರದಾ
ವೇಶವಳಿಯದು[5] ಶಿವ ಶಿವಾ ಸುತ
ನಾಶವನು ಬಗೆಗೊಳ್ಳನೆಂದನು ಪವನಸುತ ನಗುತ ‖ ೬೬

---

[1] ಳೆ (ಕ.ಗ.ಟ) [2] ಪಾವಕನ (ಕ) [3] ಕಾಲುದ್ದ (ಕ.ಗ) [4] ಬೀಳ (ಟ).
[5] ಆಶೆಯಿದರೊಳಗೆಂದು ರಣದೊಳಗಾಶೆಯಾದುದು(ಕ), ಆಶೆಯೇನಿದರೊಳಗೆ ಮಱೆ ದಾವೇಶವಳಿಯದು (ಟ.ದ), ಆಶೆಯೇನಿದರೊಳಗೆ ನಿಮಗೆ ದುರಾಶೆಯಳಿಯದು (ನ)

ಕೇಳಿದನು ಕಡು ನೊಂದನಡಿಗಡಿ
ಗಾಲಿ ನೀರೇಱಿದವು ಕೈಯಲಿ
ಕೋಲು ಬಿಲು ಸಡಲಿದವು [1]ಸಾಕೀ ದೇಹವೇಕೆನುತ[1] ।
ಮೇಲು ದುಗುಡದ [2]ಮೊಗದಲವನೀ[2]
ಪಾಲ ಕರ್ಣ ಕೃಪಾದಿ ಭಟರಿಗೆ
ಹೇಳಿದನು ಮಗನಳಿದನಸ್ತ್ರತ್ಯಾಗ ತನಗೆಂದು ॥ ೬೭

ಎನುತ ರಥದೊಳು ರಚಿಸಿ ಪದ್ಮಾ
ಸನವನಿಂದ್ರಿಯ ಕರಣ ವೃತ್ತಿಯ
ನನಿತುವನು ತಡೆದೆತ್ತಿ ಮೂಲಾಧಾರ ಮಾರುತನ ।
ಇನ ಶಶಿಗಳೊಂದಾಗೆ [3]ನಾಡಿಗ
ಳನಿಲ ನಿಕರವನುಗಿದು ಬಿಂದು
ಧ್ವನಿ ಕಳಾಪರಿ[3]ಲುಳಿತನೆಸೆದನು ವರ ಸಮಾಧಿಯಲಿ ॥ ೬೮

ನಾಸಿಕಾಗ್ರದಲಿಟ್ಟ ಕಂಗಳ
ಸೂಸದುಸುರಿನ ಶಶಿ ಕಿರಣ ಪೀ
ಯೂಷ ಪಾನದ ರೋಮ ಪುಳಕದ ಗುಡಿಯ [4]ಬೀಡುಗಳ[4] ।
ಆ ಸುಷುಮ್ನಾನಾಡಿಯಲಿ ಕಾ
ಳಾಶಿಸಿದ ಪವನನ ಸಮಾಧಿ ವಿ
ಳಾಸನೆಸೆದನು ಸೌಖ್ಯ [5]ಭಾವದ[5] ಜಡಿವ ಝೊಮ್ಮಿನಲಿ ॥ ೬೯

ತನ್ನೊಳಿತರವನಿತರದೊಳು ನೆಱೆ
ತನ್ನನೀಕ್ಷಿಸಿ ತಾನು ತನ್ನಿಂ
ದನ್ಯವೆರಡಱೊಳೈಕ್ಯವೆಂಬುಪಚರಿತ ಭಾವವನು ।
ತನ್ನೊಳಗೆ ಹುಸಿಯೆಂದು ನಿತ್ಯ[6]ನ[6]
ನನ್ಯ[7]ನ[7]ಮಳಜ್ಞಾನರೂಪವೆ
ತನ್ನ ನಿಜವೆಂದಱಿದು ತಾನಾಗಿರ್ದನಾ ದ್ರೋಣ ॥ ೭೦

---

[1] ಸಾಹಸವಿನ್ನಿದೇಕೆನುತ (ಟ). [2] ಮನದಿನವನೀ (ಕ), ಮೊಗದಿನವನೀ (ತ) [3] ನುಡಿಗಳವನಜಕರ ವನುಬಿಗಿದು ಬಿಂದು ಧ್ವನಿಕಳಾಪರಿ (ಕ), ನಾಡಿಗಳೂತುವನು ತಡೆದೆತ್ತಿನಾದ ಬಿಂಧು ಧ್ವನಿಕಳಾಪರಿ (ನ). [4] ಬಿಡುಹುಗಳ (ಕ.ಗ) [5] ಭರದಲಿ (ಟ.ದ) [6] ವ (ಕ.ಗ.ಟ) [7] ವಿ (ಕ.ಗ.ಟ)

ಒಡೆದು ನಡು ನೆತ್ತಿಯನು ಝುಳಪಿಸಿ
ಕಡುವೆಳಗು ಥಳಥಳಿಸಿ ತರಣಿಯ
ತುಡುಕಿ ಹಾಯ್ದುದು ರಶ್ಮಿ ರಂಜಿಸಿತಖಿಳ ದಿಗುತಟವ ।
[1]ಕು[1]ಡಿವೆಳಗನಸುರಾರಿ ಮುನಿಗಳ
ಗಡಣವರ್ಜುನ ಕೃಪರು ಕಂಡರು
ಪಡೆಯೊಳಗೆ ತಾನುಳಿಯೆ ಕಂಡವರಿಲ್ಲ ಕೇಳೆಂದ ॥ ೭೧

ತೀರಿತೇ ಮಗನುಬ್ಬಟೆಯು ಜ
ಜ್ಝಾರತನವಾಚಾರ್ಯನಳಿದನ
ದಾರು [2]ನಮಗಾಪ್ತಿಗರು[2] ದೊರೆಯಿನ್ನಾರು ಸಂಗರಕೆ ।
ಆರು ನಿಮಗಿದ್ದೇಗುವರು ರಣ
ವೀರರಗ್ಗದ ದೈವವೇ ಮನ
ವಾರೆ ಮೆಚ್ಚಿ[3]ಹುದವರನಿನ್ನೇನರಸ ಕೇಳೆಂದ[3] ॥ ೭೨

ಹದಿನೆಂಟನೆಯ ಸಂಧಿ ಮುಗಿದುದು

---

[1] ಇ (ಕ.ಗ.ಚ.ಟ) [2] ನಿನಗಾಪತ್ತಿಗರು (ಕ.ಗ.ಟ.ಚ) [3] ಹನವರ ಗದು
ಗಿನ ವೀರನಾರಯಣ (ಗ.ತ.ಪ)

# ಹತ್ತೊಂಬತ್ತನೆಯ ಸಂಧಿ

ಸೂಚನೆ॥ ರಾಯಕಟಕವ ಬೆದಱಿಸಿದ ನಾ
ರಾಯಣಾಸ್ತ್ರದ ಬಾಧೆಯನು ಕಮ
ರಾಯತಾಂಬಕ ನಿಲಿಸಿ ಸಂತೈಸಿದನು ಪಾಂಡವರ ॥

ಕೇಳು ಧೃತರಾಷ್ಟ್ರಾವನಿಪ ಗುರು
ಬೀಳುಕೊಟ್ಟನು ದೇಹವನು ನ
ಮ್ಮಾಳ ವಿಧಿಯೇನಪಜಯದ ತವನಿಧಿಯಲೇ ನಮಗೆ ।
ಮೇಲೆ ಬಂದುದು ಕಷ್ಟವರಿ ಭೂ
ಪಾಲರಿಗೆ ಕೇಳಿದನು ಖಳ ಪಾಂ
ಚಾಲಸುತನೈತಂದನಲ್ಲಿಗೆ ಜಡಿ[1]ವಡಾಯುಧದಿ[1] ॥ ೧

ಐದಿ ಮುಂದಲೆವಿಡಿದು ಬಾಗಿಸಿ
ಕೊಯ್ದನಾತನ ಕೊರಳನೆಡದಲಿ
ಹೊಯ್ದು ಮುಱಿದನು ಬರಿಯಲಪ್ಪಳಿಸಿದನು [2]ಬೆನ್ನೆ[2]ಲುವ ।
ಕೈದಣಿಯೆ ಕಡಿ ಖಂಡ ಮಯವೆನೆ
ಹೊಯ್ದು ರಥದಲಿ ಕೆದಱಿ ಜಡಿದನ
ಡಾಯ್ದವನು ಕಡುಗೋಪದಲಿ ನೋಡಿದನು ರಿಪು ಶಿರವ ॥ ೨

ಎಲೆಲೆ ಪಾತಕಿ ಹೆಣನ ಹೊಯ್ದರೆ
ಬಲುಗಡಿಯ ನೀನೆಂಬರೇ ಸುಡು
ಹೊಲೆಯರಿದಕಂಗೈಸುವರೆ ತಾ ರಾಜ[3]ಸೂನು[3]ಗಡ ।
ಅಳಿದನಾದರೆ ನಿನ್ನ ಭಾಗ್ಯವು
ಉಳಿದಡೀತನ ಮಗನು ನಿನ್ನಯ
ಕುಲದ ತಲೆ ಚೆಂಡಾಡಿದಲ್ಲದೆ ಬಱಿದೆ ಬಿಡನೆಂದ ॥ ೩

ಎಂದ ಸೂತನ ಬಾಯ ಹೊಱಕ
ಯ್ಯಿಂದ ಹೊಯ್ದನು ಹಡಪದವರನು
ಹಿಂದಣಾಪ್ತರನಖಿಳ ಚಮರಚ್ಛತ್ರ ಧಾರಿಗಳ ।

---

[1] ದ ಖಡುಗದಲಿ (ಗ. ಟ. ದ. ನ). [2] ಬದಿಯೆ (ಕ). [3] ಪುತ್ರ (ಕ).

ಮುಂದುವರಿದೊಡೆ ತಿವಿದು ಮುಱಿದನು
ಮಂದಮತಿ ಬಳಿಕವನ ಸುಡು ಸುಡ
ಲೆಂದು ಧೃಷ್ಟದ್ಯುಮ್ನನನು ನೆಱೆ ಬೈದುದಖಿಳ ಜನ ॥ ೪

ಕಡಿಕುಗಳನಾಯ್ದುಱಿಸಿ ರಥದೊಳು
ಗುಡಿಸಿ ಸಿಂಧವನೆತ್ತಿ ಸಾರಥಿ
ತುಡುಕಿ [1]ವಾಘೆಯ ಮುರುಹಿ ಮರಳಿಚಿ ರಥದ ಕುದುರೆಗಳ[1] ।
ತಡೆಯದಶ್ವತ್ಥಾಮನಲ್ಲಿಗೆ
ನಡೆದು ಬರುತಿರೆ ಕಂಡು ಮನದಲಿ
ಕಡು ನಿರೋಧವ ಹಿಡಿದು ಚಿಂತಿಸುತಿರ್ದನಾ ದ್ರೌಣಿ ॥ ೫

ಏನಿದಚ್ಚರಿ ಕೌರವೇಂದ್ರನ
ಸೇನೆ ತಲೆಕೆಳಗಾಗುತಿದೆ ರಿಪು
ಸೇನೆ ಬೊಬ್ಬಿಱಿದಾರುತಿದೆ ಮಡಿದಾತನಾವವನೊ ।
ಸೇನೆಗೊಡೆಯನು ಬೊಪ್ಪನಿದು ತಾ
ನೇನು ರಥವೇ ಬಱಿದೆ ಬರುತಿದೆ
ಹಾನಿ ಜನಕಂಗಾಯ್ತೊ ಶಿವ ಶಿವ ಎಂದನಾ ದ್ರೌಣಿ ॥ ೬

ತಂದು ಸಾರಥಿ ರಥವನೀತನ
ಮುಂದೆ [2]ನಿಲಿಸಿದ[2] ಬಿದ್ದನಂಘ್ರಿಯೊ
ಳಂದು [3]ಗೋಳಿಟ್ಟೊಱಲಿದುದು ಕಳಶಜನ ಪರಿವಾರ[3] ।
ತಂದೆಯ್ಯೆದನೆ ಚಾಪ[4]ವೇದ[4] ಮು
ಕುಂದನೈದನೆ ನಿನ್ನ ಕಾಣಲು
ಬಂದನಯ್ಯನನಪ್ಪಿಕೊಳು ಮಾತಾಡಿ ನೋಡೆಂದ ॥ ೭

ಕೂಡೆ ಹಱಿಹಂಚಾದ ತಂದೆಯ
ಗೂಡ ನೋಡದ ಮುನ್ನ ಕಂಬನಿ
ಮೂಡಿ ಮುಳುಗಿದವಾಲಿ ಕಾಣವು ಪಿತೃ ಕಳೇವರವ ।

---

[1] ವಾಘೆಯು ಮರಳಿಚಿದನಾರಥದ ಕುದುರೆಗಳ (ಟಿ. ದ. ನ). [2] ಬಿಟ್ಟನು (ಕ), ಬಿಸುಟನು (ಟಿ. ದ. ನ). [3] ಗೋಳಿಟ್ಟಳುತ ಕಳಶಜನಾಪ್ತಪರಿವಾರ (ಕ. ಗ), ಗೋಳಿಟ್ಟಳುತ ಕಳಶಜನಾಪ್ತಜನಸಹಿತ (ಟಿ.ದ). [4] ವಿದ್ಯ (ಸ. ಕ).

ನೋಡಲೆಳಸದ ಮುನ್ನ ಕಿಡಿಗಳ
ಝಾಡಿಯನು ಕಣ್ಣುಗುಳಿದವು ಮಿಗೆ
ನೋ[1]ಡಿದ[1]ಶ್ವತ್ಥಾಮ [2]ಕಾಣನು ಮುಂದೆ ಪರ[2]ಬಲವ ‖ ೮

ಅದ್ದನಳಲಿನ ಜಲಧಿಯೊಳು ಮುರಿ
ದೆದ್ದು ಕೋಪಾನಳನ ಝಳದಲಿ
ಬಿದ್ದು ನನೆದನು ನೀರಿನಲಿ ಕಾಹೇಱಿ ಕಿಚ್ಚಿನಲಿ ।
ಗೆದ್ದುದುದಕವನನಲನನಲನ
ನದ್ದಿತುದಕವದೊಂದನೊಂದನು
ಕದ್ದುವೆರಡಱ ಹೋರಟೆಗೆ ಗುರು ಸೂನು ಬೆಂಡಾದ ‖ ೯

ಕೆದಱಿ ಹೊರಳುವ ಸಾರಥಿಯನೆ
ತ್ತಿದನು ರಣ ವೃತ್ತಾಂತವನು ಕೇ
ಳಿದನು [3]ಶ[3]ಮೆ ಸ್ಥೈರಣೆ ವಿವೇಕವ ನೂಕಿದನು [4]ಸೆಱಗೆ[4] ।
ಒದೆದನಳಲನು ರೋಮ [5]ಹರುಷವ[5]
ಹೊದೆದು ಹೊರೆ ಹೆಚ್ಚಿದನು ಕಾಹೇ
ಱಿದನು [6]ಕಲಿ ಮನವಳುಕಿ ತಗ್ಗಿತು ರೋಷ ಭಾವದಲಿ[6] ‖ ೧೦

ಚಟುಳ ಕೋಪಾಗ್ನಿಯಲಿ ನಾಸಾ
ಪುಟದ ಸುಯ್ಲ[7]ಲಿ ವಿಸ್ಫುಲಿಂಗೋ
ತ್ಕಟ[7] ಸಮಾಧಿಗಳಿದ್ದಿಲಲಿ [8]ನಿ[8]ಗ್ರಹ ಕಟಾ[9]ಹ[9]ದಲಿ ।
ಪಟು[10]ತರದ[10]ಬಾಹು ಪ್ರತಾಪದ
[11]ಪು[11]ಟವನೆತ್ತದೆ ಮಾಣನೆನ[12]ಲು
ತ್ಕಟಿಸು[12]ತಿರ್ದುದು ರೌದ್ರ ವೀರಾ[13]ಭ್ಯುದಯ ಸನ್ನಾಹ[13] ‖ ೧೧

ನೊಂದ ಜವನೋ ಜಗವನುರುಹಲು
ಬಂದ ಶಿವನೋ ಕಂಬದಿಂದೊಗೆ
ತಂದ ರೌದ್ರಾಟೋಪ ಮಾನವ ರೂಪ ಕೇಸರಿಯೊ ।

---

[1] ಡುತ (ಟ). [2] ಕಂಡನುಮುಂದೆರಿಪು (ಟ). [3] ಕ್ಷ (ಟ. ದ. ನ). [4] ಕೆಲಕೆ (ತ), ಕಡೆಗೆ (ನ). [5] ಪುಳಕವ (ತ. ನ. ಪ). [6] ಕೋಪ ದಲಮುಮ ತಗ್ಗಿದ ಶೌರ್ಯಭಾರದಲಿ (ತ. ಪ). [7] ನು ತೀವಿ ಚಾಪಸ್ಫುಟ. [8] ವಿ (ಕ. ಗ. ಚ). [9] ಕ್ಷ (ಸ. ಟ). [10] ಕಠಿಣ (ಕ. ಗ. ಚ. ನ). [11] ಘು (ಕ. ಗ. ಚ). [12] ತೂಕಡಿಸು (ಕ. ಗ). [13] ದ್ಭುತದ ರಸ ಲಹರಿ (ಕ. ಗ. ಟ).

ತಂದೆಯಳಲಿಗನಿರವು ವಿಶ್ವವ
ನೊಂದು ನಿಮಿಷಕೆ ಸುಡುವುದೋ ಹಾ
ಯೆಂದುದಮರಾನೀಕವೆಲೆ ಭೂಪಾಲ ಕೇಳೆಂದ ‖ ೧೨

[1]ಮುರುಹಿದನು ಮೀಸೆಯನು[1] ಕಣ್ಣುಗ
ಳರಳಿದವು ಹೊಗೆ ಸುತ್ತಿ ಸುಯ್ಲಲಿ
ಸುರಿದುದುರಿ ಹುಬ್ಬುಗಳನುಡಿ ಬಿಗಿದೌಡನೊಡೆಯೊತ್ತಿ ।
ಬೆರಳ ತುದಿಯಲಿ ಬೊಬ್ಬಿಡಿದು ಹರಿ
ಶರಕೆ ಕೈ ನೀಡಿದನು ಕಲ್ಪದ
ಹರನ ವೋಲು ಹರ ರೂಪ ಹೊಂ[2]ಗಿ[2]ದನಧಿಕ ರೋಷದಲಿ ‖ ೧೩

ದನುಜಹರ ಮಂತ್ರವನು ಮನದಲಿ
ನೆನೆದು ಕೈ ನೀಡಿದನು ತುದಿಯಂ
ಬಿನಲಿ ತುಡುಗಿದ ಕಿಡಿಯ ಬಿಡು ಕೇಸುರಿಯ [3]ಧಾಳಿ[3]ಗಳ ।
ತನಿವೊಗರ ಬಲುವೊಗೆಯ ಹೊರಳಿಯ
ಕನಕರಸ ರೇಖಾವಳಿಯ ಮೈ
ಮಿನುಗುಗಳ ಹೊಂಗಱಿಯ ನಾರಾಯಣ ಮಹಾಶರಕೆ ‖ ೧೪

ಪ್ರಳಯ ಮೇಘವನೊ[4]ಡೆವ ರವಿ ಮಂ
ಡಲ ಸಹಸ್ರದ[4]ರಶ್ಮಿಯೋ ಜಗ
ದಳವಿನಲಿ ಝೊಂಪಿಸುವ ಹರನುರಿಗಣ್ಣ [5]ದೀಧಿತಿಯೊ[5] ।
ಮುಳಿದ ನರಕೇಸರಿಯ ದಾಡೆಯು
ಥಳಥಳತ್ಕಾರವೊ ಮಹಾಸ್ತ್ರದ
ಬೆಳ[6]ಗೊ[6] ಹೆಸರಿಡಲಾರು ಬಲ್ಲರು ಭೂಪ ಕೇಳೆಂದ ‖ ೧೫

ಸರಳ ಚೂಣಿಯ ಝಳದೊಳಗೆ ಸಾ
ವಿರ ನಿದಾಘದ ಸೂರ್ಯರುಬ್ಬಟೆ
ಕರಗಿ ಹೋಯಿತು ಬಾಯಿಧಾರೆಯ ಕಿಡಿಯ [7]ಧಾಳಿ[7]ಯಲಿ ।
ಬಱಸಿಡಿಲ ಶತಕೋಟಿ ಸೀದವು
[8]ನಿಱುವೊಗರ ಕಬ್ಬೊಗೆಯ ಕಿಡಿಯಲಿ
ನೆರೆದ[8]ವಂತ್ಯದ ಮೇಘವೆನೆ ಝುಗಝುಗಿಸಿತಮಳಾಸ್ತ್ರ ‖ ೧೬

---

[1] ಉರಿಯಮುಕ್ಕುಳಿಸುತ್ತ (ಟ. ದ). [2] ದಿ (ಚ. ಟ. ದ. ನ).
[3] ದಾಡೆ (ಟ. ದ). [4] ದೆದ ಕಲ್ಪದಲುಲಿದಧಾರಾ (ಕ). [5]ಬಲುವೆಳಗೊ (ಕ). [6] ಗ (ಟ). [7] ಚೂಣಿ (ಕ. ಗ. ಚ). [8] ಗಿರಿಯೊಗೆಯಲುರವಣಿಸುವುರಿಯಲಿ ಬಱತ (ಟ. ದ), ನಿಱುವೊಗರಲುರವಣಿಸುವುರಿಯಲಿ ಬಱತ (ತ).

ಒಳಗೆ ಜಲಚರವೊ[1]ದಱ[1] ಕುದಿದುದು
ಜಲಧಿ ಕಾದುದು ಧರಣಿ [2]ಸೀ[2]ದುದು
ಕುಲಗಿರಿಗಳುಱೆ ಸಿಡಿದು ಸೀಕರಿವೋಯ್ತು ವನ[3]ನಿಕರ[3] |
ನೆಲಕೆ ದಾಡೆಯ ಕೊಟ್ಟು ಕುಂಭ
ಸ್ಥಳವ ತೆಗೆದವು ದಿಗಿಭ ತತಿ [4]ಹೆಡೆ
ನಳಿಯೆ[4] ಮಣಿಗಳಲಾಂತನವನಿಯನುರಗಪತಿಯಂದು || ೧೭

ಗುಳವ ಕೊಯ್ದಿಳುಹಿದರು ಕರಿ ಸಂ
ಕುಳದಲಾರೋಹಕರು ಜೋಡನು
ಕಳಚಿ ಬಿಸುಟರು ರಾವುತರು [5]ಹಕ್ಕರಿಕೆಗಳು ಸಹಿತ[5] |
ಝುಳದ ಝಾಡಿಗೆ ಬೆವರಿ ವಸನಾಂ
ಚಲದ ಗಾಳಿಗೆ ಮೊಗವನೆತ್ತಿದ
ರಳುಕಿ ಕಣ್ ಕೋರೈಸಿ ಮಮ್ಮಲ ಮಱುಗಿತುಭಯಬಲ || ೧೮

ಮೇಲು ಜಗವೇಳೋಡಿದವು ಧ್ರುವ
ನಾಲಯಕೆ ನೆಲೆದಪ್ಪಿದುದು ಗ್ರಹ
ಮಾಲೆ ತಾರಾರಾಸಿ [6]ಜೋಯಿಸ[6]ರೋದು ಹುಸಿಯಾಯ್ತು |
[7]ಧಾಳಿಡುವ ಸೆಗಳಿಯಲಿ[7] ತಳ ಪಾ
ತಾಳಕದ್ದುದು ಕಮಲಜಾಂಡದ
ಮೇಲಣಾವರಣಾಂಬು ಕುದಿದುದು ಹೇಳಲೇನೆಂದ || ೧೯

ಒಡೆಯರಿಲ್ಲಾ ಜಗಕೆ ಲೋಗರ
ಸುಡುವರೊಪ್ಪಿಸಿಕೊಡುವರೇ ನಾ
ನೊಡೆಯ ಫಡ ತಾನೊಡೆಯರೆಂಬರು ಮೂವರೀ ಜಗಕೆ |
ನುಡಿಯರೀ ಹೊತ್ತಿನಲಿ ನಮಗಿ
ನ್ನೊಡೆಯರಾರಿನ್ನಾರ ಬಸುಱೊಳ
ಗಡಗುವೆವು ಶಿವ ಶಿವ ಎನುತ ತಲ್ಲಣಿಸಿತಮರಗಣ || ೨೦

---

[1] ಱಲಿ (ಕ). [2] ಸಿಡಿ (ಟಿ. ತ. ಪ). [3] ಚಯ (ಟಿ. ದ).
[4] ಹೆಡೆನೆಗೆಯೆ (ಕ), ಹೆಡೆಮುಳಿಯೆ (ಗ), ಹೆಡೆಹಿಳಿಯೆ (ಟಿ. ದ). [5] ಇಳಿದೋಡಿದರು ಹಯವ (ಕ). [6] ಜೋತಿಷ (ಕ. ಗ. ದ). [7] ಜಾಳಿಸಿದ ಸೆಳ್ಳಿಯಲಿ (ಕ. ಗ).

ಕವಿದ ಕೌರವ ಬಲದ ಸುಮ್ಮಾ
ನವನು ತಮ್ಮಂಜಿಕೆಯನಾ ಭೈ
ರವನ ಭಾರಿಯ ಸರಳ ಸೊಗಡಿಗೆ [1]ಬೇವ[1] ಮೂಜಗವ ।
ಅವರು ಕಂಡರು ಖಾತಿಯಲಿ ಪಾಂ
ಡವರು ಧೃಷ್ಟದ್ಯುಮ್ನನನು ತವ
ತವಗೆ ಬೈದರು ಪಾಪಿ ಲೋಕವ ಕೊಂದೆ ನೀನೆನುತ ॥ ೨೧

ಅಕಟ ಗುರುಹತ್ಯಾಮಹಾಪಾ
ತಕವನೇ ನೆಱೆ ಮಾಡಿತಲ್ಲದೆ
ಸಕಲ ಲೋಕದ ಬೇರುಗೊಲೆಗೆಲೆ ಪಾಪಿ ನೀನಾದೈ ।
[2]ವಿಕಟ ವಿಕ್ರಮ[2] ವಿಸ್ಫುಲಿಂಗ
ಪ್ರಕರದಲಿ ಧಗಧಗಿಸುತಿದೆ ಸಾ
ಯಕವ ನಿಲಿಸಾ ನೀನೆನುತ ಭಂಗಿಸಿತು ಪರಿವಾರ ॥ ೨೨

ಅವನ ಗುರುತನವೇನು ವಿಪ್ರಾ
ಧಮನಲಾ ಶಸ್ತ್ರೋಪಜೀವ[3]ನ
ನಿ[3]ವನು ಋಷಿಯೇ ದ್ರೋಣವಧೆಯನ್ಯಾಯವೇ ತನಗೆ ।
ಇವನು ತಮ್ಮಯ್ಯನನು ನೆಱೆ ಪರಿ
ಭವಿಸನೇ ಚಿಕ್ಕಂದು ನಿಮಗೇ
ಕಿವನನಿಱಿದರೆ ಖಾತಿಯೆಂದನು ದ್ರುಪದಸುತ ಮುಳಿದು ॥ ೨೩

ಅವಗಡಿಸಲೇಕಗ್ರಜನ್ಮ
ಬ್ರುವನೆ ಕಟಕಾಚಾರ್ಯನೆಲೆ ನೀ
ನವರಿವರ[4]ನೆಂಬಂತೆ[4] ನುಡಿವರೆ ಗುರುವಲಾ ನಿನಗೆ ।
ಇವರಿಗೀ ನುಡಿ[5]ಯುಱಿಸಿತೇನಿದು
ಶಿವ ಶಿವಾ ಗುರುನಿಂದೆಯನು ಕೇ
ಳುವರು ನಾವಲ್ಲೆನುತ ಸಾತ್ಯಕಿ ಮುಚ್ಚಿದನು ಕಿವಿಯ ॥ ೨೪

ಗುರುವಿಘಾತಕರಾವು ತಾನತಿ
ಗುರುಪದೋಪಾಸಕನು ತನ್ನನು
ಕರೆದರಾರಿದಕೆಂದು ಧೃಷ್ಟದ್ಯುಮ್ನನುರಿದೇಳೆ ।

---

[1] ಸಿಡಿವ (ಚ). [2] ವಿಕಟವಿಷಮ (ಟ. ದ), ಪ್ರಕಟವಿಶ್ರಮ (ನ). [3] ಕನ (ಗ), ಕವಿ (ಟ. ದ), ವಿತ (ನ). [4] ನುಡಿವಂತೆ (ಕ. ಚ). [5] ಸೊಗ (ಟ. ತ).

ದುರುಳತನವಾರೊಡನೆಯೋ ಬಾ
ಹಿರ ಮಹಾಪಾತಕಿಯನೊದೆದಿ
ಟ್ಟೊರಸುವೆನು ತಾನೆನುತ ಸಾತ್ಯಕಿ ಖಂಡೆಯವ[1]ನುಗಿದ[1] ॥ ೨೫

ಎಲೆಲೆ ಹಿಡಿಹಿಡಿ ಸಾತ್ಯಕಿಯನೊಳ
ಗೊಳಗೆ ತೋಟಿಯೆ ಜಾಗು ಕೌರವ
ಬಲದವರ ಬೂತಾಟವಾಯಿತೆ ನಮ್ಮ ಥಟ್ಟಿನಲಿ ।
ನಿಲಿಸೆನುತ ನೃಪನೊಱಲೆ ಕವಿದೆಡೆ
ಗಲಿಸಿ ಹಿಡಿದನು ಭೀಮನೀತನ
ಬಲುಭುಜವನೌಚಿದನು ಕೊಂಡನು ಕಯ್ಯ ಖಂಡೆಯವ ॥ ೨೬

ಸೆಳೆದನೊಱೆಯುಲಡಾಯುಧವನ
ವ್ವಳಿಸಿದನು ಪಾಂಚಾಲಸುತನೀ
ಗಳಹನನು ಬಿಡು ಭೀಮ ಕೊಡು ಸಾತ್ಯಕಿಯ ಖಂಡೆಯವ ।
ಎಲವೊ ಸಾತ್ಯಕಿ ಕೃಷ್ಣದೇವರಿ
ಗಳುಕಿ ಸೈರಿಸಿದರೆ ದೊರಾರಿಸಿ
ಗೆಲನುಡಿವೆ ಹೆಡತಲೆಯಲುಗಿವೆನು ನಿನ್ನ ನಾಲಗೆಯ ॥ ೨೭

ತನ್ನೊಳಿದ್ದವಗುಣವ ನೋಡದೆ
ಚುನ್ನವಾಡುವನಿದಿರನೆಲವೋ
ನಿನ್ನ ಹೋಲುವರಾರು [2]ಬಾಹಿರ[2] ಭಂಡರವನಿಯಲಿ ।
ನಿನ್ನೆ ಶಸ್ತ್ರವ ಬಿಸುಟ ಯೋಗವಿ
ಪನ್ನನನು ನೀನೇನ ಮಾಡಿದೆ
ನಿನ್ನ ಶೋಧಿಸಿ ಬಳಿಕ ಪರರನು ಹಳಿವುದೇನೆಂದ ॥ ೨೮

ಮಿಡುಕಿದನು ಸಾತ್ಯಕಿ ವೃಕೋದರ
ನೊಡೆಯವಚಿದನು ಮತ್ತೆ ಪವನಜ
ಬಿಡು ನಿನಗೆ ನೃಪನಾಣೆ ಕುಡಿವೆನು ಖಳನ ಶೋಣಿತವ ।
ಬಿಡು ಬಿಡಕಟಾ ಭೀಮ ಸಾತ್ಯಕಿ
ಹಿಡಿ ಹಿಡಿಯ ಹಮ್ಮೈಸುವನು ಬಿಡು
ತೊಡಕಿ ನೋಡಲಿಯೆನುತ ಧೃಷ್ಟದ್ಯುಮ್ನನಳ್ಳಿಱಿದ ॥ ೨೯

---

[1] ಜಡಿದ (ಕ). [2] ಭಾರಿಯ (ಗ. ಟ. ತ. ಪ), ಭೂರಿಯ (ಚ).

ಮುಳಿದು ಯಾದವ ಸೇನೆ ಕೈದುವ
ಸೆಳೆದುದಾ ಪಾಂಚಾಲನಾಯಕ
ರುಲಿದು ನಿಂದುದು ಕಂಡನಸು[1]ರಧ್ವಂಸಿ[1] ನಸುನಗುತ ।
ಎಲೆಲೆ ಪಾಪಿಗಳಿರ ವೃಥಾ ತ
ಮ್ಮೊಳಗೆ ತೋಟಿ ಶರಾಗ್ನಿಯಿತ್ತಲು
ಮೊಳಗುತದೆ ಕೆಡೆಬೀಳಹೊಯ್[6] ಹೊಯ್[6] ಕುನ್ನಿಗಳನೆಂದ ॥ ೩೦

ಬೇಟೆ ತಮಗೊಂದಾಳುತನವುರಿ
ಸೂಟೆಗೊಳುತಿದೆ ಜಗವನಿತ್ತಲು
ಕೌಟುಡುವ ಕಾಲಾಗ್ನಿಯಿದೆ ಕಬ್ಬೊಗೆಯ [2]ಕವಚ[2]ದಲಿ ।
ತೋಟಿಲಾಪರೆ ಬಾಹು ಸತ್ವವ
ತೋಟರೈ ದಿಟ ಪಂಥದೋಲೆಯ
ಕಾಟಿರಹಿರೆನುತಸುರರಿಪು ಗಜಬಜವ ನಿಲಿಸಿದನು ॥ ೩೧

ಇತ್ತ ಲೋಕದ ಕಂಗಳೆವೆಗಳು
ಕೆತ್ತವಳ್ಳಿಟಿವುರಿಯ [3]ಜಾ[3]ಳಿಗೆ
[4]ತೆತ್ತಿಸಿತು[4] ಹರಿದಶ್ವ [5]ಶತ[5]ವನು ಶಿವ ಮಹಾದೇವ ।
ಕಿತ್ತು ಶರವನು ತೂಗಿ ಬಿಲ್ಲಿಗೆ
ತೆತ್ತಿಸಿದನುಟೆ ಸೇದಿ [6]ತೋಟಿಹ[6]
ತುತ್ತು ನಿನಗರಿ ಸೇನೆ ಹೋಗೆನುತೆಚ್ಚು ಬೊಬ್ಬಿಟಿದ ॥ ೩೨

[7]ಜಗದ ಹುಯ್ಯಲು[7] ಜಡಿಯಲಭ್ರದ
ಲಗಿದು ಕೌರವ ಸೇನೆ ಹರುಷದ
ಸೊಗಸಿನಲಿ ಮೈಮಟಿಯೆ ಕೃಷ್ಣಾದಿಗಳು ಕೈಮಟಿಯೆ ।
ಹೊಗೆಯ ಹೊರಳಿಯ ಕಿಡಿಯ ಛಟ್ಟಿನ
ತಗೆದುರಿಯ ತೆಕ್ಕೆಯಲಿ ಧಗಧಗ
ಧಗಿಸಿ ಧಾಳಿಟ್ಟುದು ಮಹಾಶರವಹಿತ ಮೋಹರಕೆ ॥ ೩೩

ಹಾ ಮುರಾಂತಕ ಹಾ ಯುಧಿಷ್ಠಿರ
ಹಾ ಮರುತ್ಸುತ ಹಾ ಧನಂಜಯ
ಹಾ ಮಗನೆ ಹಾ ತಂದೆ ಹಾ ಒಡವುಟ್ಟಿದನೆ ಯೆನುತ ।

---

[1] ರಾರಾತಿ (ಟ. ದ). [2] ತವಕ (ಗ.ಟ.ದ). [3] ಧಾ (ಕ). [4] ಮುತ್ತಿದವು (ಕ. ಗ. ಟ. ಚ). [5] ಶನು (ತ). [6] ತೋಠಿಯು (ಕ. ಚ). [7] ಝುಗೆಯುಹೊಯ್ಲಲಿ (ನ).

ಭೂಮಿ ತೆಱೆಯಳೆ ಬಾಯನಕಟಕ
ಟಾ ಮಹೋದಧಿ ದೂರವಿನ್ನೀ
ನೀ ಮಹಾಸ್ತ್ರಕೆ ಸಿಕ್ಕಿದೆವೆಯೆಂದೊಱಲಿತರಿ ಸೇನೆ ॥ ೩೪

ಕಳವಳಿಸಿತರಿ ಸೇನೆ ಚೂಣಿಯ
ಕೊಳುಗಿಡಿಯ ಸೆಖೆ ತಾಗಿ ಸುಭಟಾ
ವಳಿಯ ಮೀಸೆಗಳುರಿಯೆ ನೆಱೆ ಕಂದಿದವು ಮೋಱೆಗಳು ।
ಬಲದ ಸುತ್ತಲು ಕಟ್ಟಿತುರಿ ಕೆಂ
ಬೆಳಗು ಕುಡಿದವು ಕರ್ಬೊಗೆಗಳ
ಗ್ಗಳದ ಬಾಣದ ಬಂದಿಯಲಿ ಸಿಲುಕಿತ್ತು ರಿಪು ಸೇನೆ ॥ ೩೫

ಝಳಕೆ ಘೀಳಿಟ್ಟೊಱಲಿದವು ಕರಿ
ಕುಳ ತುರಂಗದ ಥಟ್ಟು ಖುರದಲಿ
ನೆಲನ ಹೊಯ್ದುವ್ವಳಿಸಿದವು ರಾವುತರನೀಡಾಡಿ ।
ಬಲು [1]ರಥವನಸಬಡಿದು[1] ಸೂತನ
ನಿಳುಹಿ ಹಯವೋಡಿದವು [2]ಮು
ಮ್ಮುಳಿಸಿ ತನಿಗುದಿಗುದಿದು ಕೋ[2]ಟಲೆಗೊಂಡುದರಿ ಸೇನೆ ॥ ೩೬

ವಾಯುಕಂಜದಿರಂಜದಿರಿ ಘಡ
ಬಾಯ ಬಿಟ್ಟರೆ ಹೋಹುದೇ ನಿ
ಮ್ಮಾಯುಷಕೆ ಹೊಣೆ ತಾನು ಹೇಳಿತ ಮಾಡಿ ಬೇಗದಲಿ ।
ಆಯುಧಂಗಳ ಬಿಸು[3]ಟು ಕರಿ ರಥ
ಜಾಯಿಲಂ[3]ಗಳನಿಳಿದು ಬದುಕುವು
ಪಾಯವೆಂದಸುರಾರಿ ಸಾಱಿದನಂದು [4]ಕೈ ನೆಗಹಿ[4] ॥ ೩೭

ಕಳಿದ ಹೂವಿನ ತೊಡಬೆಯೋ ಕುಸಿ
ದಲೆಯ ಬಿಟ್ಟಿಯ ಭಾರವೋ ನಿ
ರ್ಮಳನ ಚಿತ್ತದ ಖತಿಯೊ ದಾನವ್ಯಸನಿಯೊಡವೆಗಳೊ ।
ನಳಿನ ನಾಭನ ಮಾತು ಹಿಂಚಿತು
ಕಳಚಿದವು ಕೈದುಗಳು ಕೈಗಳ
ಲುಳಿವುಪಾಯದ ಜೋಡ ತೊಟ್ಟುದು ಪಾಂಡುಸುತ ಸೇನೆ ॥ ೩೮

---

[1] ಭುಜರನೊಡೆದುಳಿದು (ಗ. ಟ. ದ. ನ). [2] ಕಾಲಾಳಳವಿ ಮುಮ್ಮುಳಿಮು ಸುಗಿಕೊಳ್ಳದಿ (ಗ), ಮುಮ್ಮುಳಿತವಾದುದು ಮುಸಗಿಕೊಳ್ಳದಿ (ತ. ಪ).
[3] ರಥವಾಯಜಂ (ಟ. ದ. ನ), ವಾನಾಯಜಂ (ತ). [4] ನಿಜಬಲಕೆ (ಕ).

ಬೀತ ಕೈದುಗಳಖಿಳ ದಳಸಂ
ಘಾತವನು ಬಾಣಾಗ್ನಿ ಬೆರಸಿತು
ಪೂತು ಭಂಡರಿರೆನುತ ಬಿಟ್ಟುದು ಬಾಣವರಿ ಭಟರ ।
ಆತನಾವೆಡೆ ಧರ್ಮಜನು ವಿ
ಖ್ಯಾತನರ್ಜುನನನಿಲಸುತ ಮಾ
ದ್ರೀತನುಜರೆಂದೆನುತ ಹೊಕ್ಕುದು ರಾಜ ಮೋಹರವ ॥ ೩೯

ಹರಿಯ ಬಯ್ಗುಳು ಬೆದಱಿಸಲು ನೃಪ
ನಿರೆ ನಿರಾಯುಧನಾಗಿ ಮಾದ್ರೀ
ಯರು ಶಿಖಂಡಿ [1]ಯುಯುತ್ಸು ಸಾತ್ಯಕಿ ಸೃಂಜಯಾದಿಗಳು[1] ।
ಕರದ ಕದಪಿನ ತಳಿತ ಮುಸುಕಿನ
[2]ಮುರಿದ ಮೋರೆಯ[2] ಮುಂದೆ [3]ಹರಹಿದ[3]
ತರತರದ ಕೈದುಗಳ ಸುಭಟರ ಕಂಡುದಮಳಾಸ್ತ್ರ ॥ ೪೦

ಏಕೆ ನಾಚಿಕೆ ಧರ್ಮಹಾನಿ
ವ್ಯಾಕುಳತೆಯಿನ್ನೇಕೆ ವೈದಿಕ
ಲೌಕಿಕವದೇಗುವುವು [4]ಜೀವವ್ರಯಕೆ ಕುಲವುಂಟೆ[4] ।
ಏಕೆ ಭಯ ನಮಗಿನ್ನು ಕೈದುವ
ನೂಕಿದವರನು ಹೆಂಗುಸನು ತಾ
ಸೋಕಿದರೆ ಮುರಹರನ ಪದದಾಣೆಂದುದಮಳಾಸ್ತ್ರ ॥ ೪೧

ಇವರೊಳುಂಟೇ ಕೈದುಪೊತ್ತವ
ರವರನಱುಸುವೆನೆನುತ ಬರಲಾ
ಪವನಸುತನನು ಥಟ್ಟಿಸಿದನಾ ದನುಜರಿಪು ಮುಳಿದು ।
ಅವನಿಗಿಳಿದೀಡಾಡಿ ಕಳೆ ಕೈ
ದುವನು ತಾ ಮೊದಲಾಗಿ ನಿಂದಂ
ದವನು ನೋಡೆನಲನಿಲಸುತ ನಸುನಗುತಲಿಂತೆಂದ ॥ ೪೨

ದೇಹ ಕೀರ್ತಿಗಳೊಳಗೆ ನಿಲುವುದು
ದೇಹವೋ ಕೀರ್ತಿಯೊ ಮುರಾಂತಕ
ಬೇಹುದನು ಬೆಸಸಿದಡೆ [5]ಮಾಡೆನು ಬಲ್ಲಿರೆ[5]ನ್ನನುವ ।

---

[1] ಕುಮಾರಕರು ಪಾಂಚಾಲನಂದನರು (ಸ.ಕ). [2] ಹುದಿದವೋನದ (ಸ. ಕ). [3] ಹಸರದ (ಕ). [4] ಜೀವವ್ರಯಕೆ ಕಲಿಯುಂಟೆ (ಕ), ಜೀವನ್ಯಾಯ ಕೊಲಲುಂಟೆ (ಟ.ದ), ಜೀವವ್ಯಯಕೆ ಫಲವುಂಟೆ (ತ.ಪ). [5] ನಾನೇಬಲ್ಲೆನೆ (ಕ).

ಗಾಹು ಗತಕದಲುಳಿವ ಧರ್ಮ
ದ್ರೋಹಿ ತಾನಲ್ಲಿನ್ನು ನೋಡಾ
ಸಾಹಸವನೆನುತಿತ್ತ ಮುರಿದನು ಸರಳ ಸಮ್ಮುಖಕೆ ॥ ೪೩

ಪೂತು ಪಾಯಿಕು ಭೀಮ [1]ನೆರದೀ[1]
ಬೂತು ಬಲದಲಿ ವೀರ ನೀನಹೆ
ಯೇತಕಿವದಿರು ಗಂಡು ಜೋಹದ ಗರುವ ಸೂಳೆಯರು ।
ಸೋತಡೆಯು ಜಯ ನಿನ್ನದೆನುತ ವಿ
ಧೂತಧೂಮದಿ ಕಿಡಿಯ ಝಾಡಿಗ
ಳೀತನನು ಮುಸುಕಿದವು ಚುಂಬಿಸಿತಂಬು ಪವನಜನ ॥ ೪೪

ಗಿರಿಯ ಮುತ್ತಿದ ಮುಗಿಲವೊಲು ಹೊಗೆ
ಹೊರಳಿಗಟ್ಟಿತು ಮೇಲೆ ದಳ್ಳುರಿ
ಧರಧುರದಲೊಳಬೀಳುತಿದ್ದವು ಕಿಡಿಯ [2]ಚೂಣಿಯಲಿ[2] ।
ಉರಿಯೊಳದ್ದ್ರೆ ತಮ್ಮ ಹಾಯೆಂ
ದರಸ ಮೊದಲಾದಖಿಳ ಭೂಪರು
ಕರದ [3]ಬಿಡುವೊಯ್ಲುಗಳ ಬಾಯವರೊಡಲಿ ಹೊರಳಿದರು[3] ॥ ೪೫

ವಾಯುಸುತ ಹಾ ಯೆನುತ ಫಲುಗುಣ
ಬಾಯಬಿಡೆ ಹರಿ ಜಡಿದನಳುವನ
ಬಾಯ ನೋಡಾ ಬೇಗ ತೊಡು ತೊಡು ವರುಣ ಮಾರ್ಗಣವ ।
ಸಾಯಲಡಿಯನು ಭೀಮನೆನೆ ನಾ
ರಾಯಣನ ನುಡಿಯಿಂದ ಮುನ್ನ ಜ
ಲಾಯತಾಸ್ತ್ರವನರ್ಜುನನು ಗಾಂಡಿವದಲುಗುಳಿಸಿದ ॥ ೪೬

ಹೊಗೆಯನೊದೆದೊಳಬಿದ್ದು ಕಿಡಿಗಳ
ನುಗಿದು ದಳ್ಳುರಿದುಡುಗಲನು ತನಿ
ಬಿಗಿದು ಭೀಮನ ರಥದ ಸುತ್ತಲು ಸೂಸಿ ತೆರೆ ಮಸಗೆ ।
ಹಗೆಯನೆನಗಿದಿರೊಡ್ಡಿ ಜುಣುಗಲು
ಬಗೆದರೇ ಖಂಡೆಯದ ಮೊನೆಯಲಿ
ಮಗುಳಿಚುವರೇ ತನ್ನನೆನುತುರವಣಿಸಿತಮಳಾಸ್ತ್ರ ॥ ೪೭

---

[1] ನಿಂದೀ (ಟ. ದ). [2] ಗಡಣದಲಿ (ಟ. ದ). [3] ಬಾಯ್ಹೊಯ್ಲುಗಳಲಿ ಹೊರಳಿದುದಖಿಳಪರಿವಾರ (ಟ. ದ).

ಉಱುಬಿದವು ಕೇಸುರಿಗಳುದಕವ
ಸುಱಿದುವೊಣಗಿಲುಗಿಡಿಯ ಹಬ್ಬುಗೆ
ಹೊಱಗೆ ಮಸಗಿತು ಮುಸುಕಿತುದಕದ ಬಾಣವಕ್ಕುಡಿಸೆ ।
ಒಱತೆಯಾಱಿತು ವರುಣ ಶರ ಬಾ
ಯೞತು ನೀರಡಿಸಿದುದು ಭೀಮನ
ಸೆಱಗ ಹಿಡಿದಳು ಮೃತ್ಯುವವನೀಪಾಲ ಕೇಳೆಂದ ॥ ೪೮

ಆವ ಶರವಿದ್ದೇಗುವುದು ಮೈ
ಗಾವನಸುರಾಂತಕನಲೈ ತಾ
ನಾವ ವಹಿಲದೊಳುರಿಯೊ[1]ಳೆಡೆಹಾಯ್ದು[1]ನಿಲಜನ ತೆಗೆದ ।
ನಾವಱಿಯೆವಾ ಪವನಜನ ಶ
ಸ್ತ್ರಾವಳಿಯನಾ ಫಲುಗುಣನ ಗಾಂ
ಡೀವವನು ಹರಿ ಸೆಳೆದುಕೊಂಡನು ಬಿಸುಟನವನಿಯಲಿ ॥ ೪೯

ಮುರಿಮುರಿದು ಕಬ್ಬೊಗೆಯ ಹೊದಱಿನ
ಹೊರಳಿ ಹರೆದುದು ಸೂಸುಗಿಡಿಗಳ
ನೆರವಿ ನಸಿದುದು ನಿಮಿರ್ದ ಹೊಂಗಱಿಯಂಬು ಹೊಳೆಹೊಳೆದು ।
ಮುರಹರನ ಪಾದಾರವಿಂದದ
ಹೊರೆಯೊಳಡಗಿತು ಹೋಯ್ತು ಭಯವು
ಬ್ಬರದೊಳಗೆ ಬೊಬ್ಬಿಱಿದವುರು ನಿಸ್ಸಾಳ ಕೋಟಿಗಳು ॥ ೫೦

ಜಗದುಸುರು ಪಸರಿಸಿತು ಹರುಷದ
ಹೊಗರು ಮಸಗಿತು ರಿಪು ನೃಪರ ನಿ
ನ್ನಗಡು ಮಗನುತ್ಸಾಹವದ್ದುದು ಖೇದ ಪಂಕದಲಿ ।
ಹೊಗೆವ ಮೋಱೆಯ ಕಯ್ಯ ಗಲ್ಲದ
ಬಿಗಿದ ಬೆಱಗಿನ ಖತಿಯೊಳುಸುರುವ
ನಗೆಯೊಳಶ್ವತ್ಥಾಮನಿದ್ದನು ಮೊಗದ ಮೋನದಲಿ ॥ ೫೧

ಏನು ಮಾಡುವೆನಿನ್ನು ಭಾಗ್ಯವಿ
ಹೀನನಕಟಾ ಕೌರವನು ಸುರ
ಧೇನು ನೆಱೆ ಗೊಡ್ಡಾಯ್ತು ಸುರತರು ಕಾಡ ಮರನಾಯ್ತು ।

---

[1] ಳೆಡೆಬಿದ (ಕ.ಚ.ಟ).

ಹಾನಿಯಿವದಿರಿಗೊಲಿದುದಾರಿ
ದ್ದೇನಹುದು ಪರದೈವದನುಸಂ
ಧಾನವತ್ತಲು ಸುಡಲೆನುತ ತಿರುಗಿದನು ಪಾಳೆಯಕೆ ॥ ೫೨

ಬಂದು ವೇದವ್ಯಾಸಮುನಿ ಗುರು
ನಂದ[1]ನಂಗಱುಹಿ[1]ದನು ಪಾರ್ಥ ಮು
ಕುಂದರನು ಪೂರ್ವದಲಿ ನರನಾರಾಯಣಾಹ್ವಯದ ।
ಸಂದ ಋಷಿಗಳು ಭೂಮಿ ಭಾರವ
ನೊಂದುಪಾಯದಲಪಹರಿಸಲೈ
ತಂದ ಹದನನು ತಿಳುಹಿ ಬಂದನು ಫಲುಗುಣನ ಹೊರೆಗೆ ॥ ೫೩

ನರನ ಚಿತ್ತಗ್ಲಾನಿಯನು ಪರಿ
ಹರಿಸಿದನು ಶೂಲದಲಿ ಮುಂಕೊಂ
ಡರಿ ಬಲವನಿಱಿದಾತನಾರೆನಲಿಂದುಧರನೆಂದು ।
ಹರನ ಕರುಣದ ಹದನನೀತಂ
ಗೊರೆದು ಶತರುದ್ರೀಯವನು ವಿ
ಸ್ತರಿಸಿ ಬಿಜಯಂಗೈದನಾ ಮುನಿಪತಿ ನಿಜಾಶ್ರಮಕೆ ॥ ೫೪

ಬಿಸುಟ ಕೈದುಗಳೆಲ್ಲವನು ಕೈ
ವಶವ ಮಾಡಿತು ಸೇನೆ ಲಜ್ಜಾ
ರಸಕೆ ಗುಱಿಯಾಯ್ತೊಮ್ಮೆ ಮರಳಿದು ಹರುಷಮಯ ರಸಕೆ ।
ಮುಸುಕುದಲೆಯಲಿ ಮುರಿದುದದು ಭಯ
ರಸದ ರಹಿಯಲಿ ತಿರುಗಿತಿದು ರವಿ
ಮುಸುಡ ತಿರುಹಿ ವಿರಾಗದಲಿ ಬೀಳ್ಕೊಟ್ಟನಂಬರವ ॥ ೫೫*

---

[1] ನನಸಂತೈಸಿ (ಪ.ತ). * ೫೫ನೆಯ ಪದ್ಯವಾದಮೇಲೆ ಈ ಕೆಳಗಿನ ಪದ್ಯವು (ಗ) ಪ್ರತಿಯಲ್ಲಿ ಮಾತ್ರ ಇದೆ :—

ಜರಿದುದೈ ಕುರುಸೇನೆ ಕಂಗನೆ
ಕರಗಿ ಕೌರವ ನಮ್ಮ ದಳವನು
ತೆರಸು ಭಾಸ್ಕರ ನಂದನಾನೆಂಬ ಸಮಯದಲಿ ।
ತರಣಿ ಪಶ್ಚಿಮಕಿಳಿದನಾಬಲ
ವೆರಡು ತೆಗೆದವು ಸನ್ನೆಯಲಿ ಬಳಿ
ಕರಸ ಪಾಂಡವರೊಸಗೆಯನು ಬಣ್ಣಿಸುವರಾರೆಂದ ॥

ಆವ ಶರದಲಿ ಕೊಟಿತೆ ನಿನ್ನವ
ರಾವ ಬಲದಲಿ ಕುಂದು ಭುವನದೊ
ಳಾವನ್ಯೆ ಸಮಜೋಳಿ ನಿನ್ನರಮನೆಯ ಸುಭಟರಿಗೆ ।
ಆವನಿದ್ದೇನಹುದು ಜಗದಧಿ
ದೈವದಲಿ ಸೆಣಸಿದಿರಿ ಪಾಂಡವ
ಜೀವಿಯೆಂದಟಿದಟಿದು ಗದುಗಿನ ವೀರ ನಾರಯಣ ॥ ೫೬*

ಹತ್ತೊಂಬತ್ತನೆಯ ಸಂಧಿ ಮುಗಿದುದು.

ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ ಮಕರಂದ
ಮಧುಪಾನ ಪರಿಪುಷ್ಟ ವಚಷ್ಷಟ್ಪದೀನಿಕಾಯ ಶ್ರೀಮತ್ಕುಮಾರ
ವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ ಭಾರತ
ಕಥಾಮಂಜರಿಯೊಳ್ ದ್ರೋಣಪರ್ವಂ ಸಮಾಪ್ತಂ.

---

* ೫೬ನೆಯ ಪದ್ಯವಾದಮೇಲೆ (ಕ) ಪ್ರತಿಯಲ್ಲಿ ಮಾತ್ರ ಈ ಕೆಳಗಿನ ಪದ್ಯವು ಹೆಚ್ಚಾಗಿದೆ :—

ವಿಪ್ರರೀ ಕಥೆಗೇಳೆ ವೇದಪ
ವಿತ್ರರಹರು ಮಹಾವಿಭೂತಿಯು
ಕ್ಷತ್ರಿಯರು ಕೇಳಿದರೆ ಶೌರ್ಯಸಮರ್ಥರೆನಿಸುವರು ।
ಅರ್ಥಪತಿಯೆನಿಸುವರು ವೈಶ್ಯ ಚ
ತುರ್ಥಕರು ಧನ ಧಾನ್ಯದಿಂ ಸಾ
ಮುದ್ರಿಯೆನಿಸುಗು ವೊಲಿದು ಭಾರತ ಕಥೆಯ ಕೇಳ್ದರಿಗೆ ॥

# ಪರಿಶಿಷ್ಟ

ದ್ರೋಣಪರ್ವವನ್ನು ಶೋಧಿಸುವುದಕ್ಕೆ ಉಪಯೋಗಿಸಿಕೊಂಡಿರುವ ಎಲ್ಲ ಮಾತೃಕೆಗಳಲ್ಲೂ ಇಲ್ಲದೆ ಕೆಲವು ಮಾತೃಕೆಗಳಲ್ಲಿ ಮಾತ್ರ ಇರುವ, ಮೂಲಗ್ರಂಥಕ್ಕೆ ಸೇರಿರಲಾರವೆಂದು ತೋರಿಬಂದಿರುವ ಪದ್ಯಗಳನ್ನು ಈ ಕೆಳಗೆ ಕೊಟ್ಟಿದೆ.*

ನಾಲ್ಕನೆಯ ಸಂಧಿಯಲ್ಲಿ ೧೭ನೆಯ ಪದ್ಯವಾದಮೇಲೆ (ಕ.ಗ). ಪ್ರತಿಗಳಲ್ಲಿ ಮಾತ್ರ ಈ ಕೆಳಗಿನ ನಾಲ್ಕು ಪದ್ಯಗಳು ಹೆಚ್ಚಾಗಿವೆ.—

ತೊಡರನೈರಾವತಕೆ ಬಾಪುರೆ
ಗಡಣದಲಿ ಬಂಧಿಸಿದ ವಾಮನ
ಪಡಿದೊಗಲ ಹಾಹೆಗಳ ವಾಮನ ಕುಮುದ ಮೊದಲಾಗಿ
ಪೊಡವಿಯೋ ತಾನೆಗಳಿಗಿಕ್ಕುವ
ಖಡುಗ ಲೌಡಿಯ ಬೀಸು ಕೈಗಳ
ನಡಸಿ ನಿರಿಸಿದನಿಬ್ಬಗಿಯ ಕಾಯುವನಬುಜ ವಳಯದಲಿ ॥

ಇಡಿದ ತಳಪಟವರಿಗೆ ಹೊಱಸು
ತ್ತಡಸಿ ಕವಿವಾ ಬಿಲ್ಲು ಬಿಲ್ಲಿನ
ಬಿಡೆಯೊಳೌಕಿದ ಮುಸುಂಡಿ ಸಬ್ಬಳ ಶಕುತಿ ಸಬಳದಲಿ ।
ಅಡಸಿ ಚಾಚಿದ ಶೂಲಿಗೆಯ ರಥ
ಗಡಣೆಯಲಿ ಕರಿಘಟೆಗೆ ಜೋದರು
ಕಡಿದು ನೂಕಿದರಮಮ ತೇಜಿಯ ನಿಲಿಸಿ ಮೋಹಿಸಿದ ॥

ಮೊಗಕೆ ಮೋಹುವ ಚೌರಿಗಳ ಸಾ
ಲುಗಿವ ಪಲ್ಲವ ಸತ್ತಿಗೆಯ ಝಾ
ಡಿಗಳೊಳಗೆ ಕೈಗಾಯ್ದು ನಿಂದನು ಕರ್ಣ ಬಿಲುವೆಗೆದು ।
ಜಗದ ಜಾಣರು ಸೀಮೆಯಲಿ ಹಳ
ವಿಗೆಯ ನೆಟ್ಟರು ನೃಪ ಮಹಾರಥ
ರೊಗೆದು ನಿಂದುದು ಶಲ್ಯ ಕೃತವರ್ಮಾದಿ ಪಟುಭಟರು ॥

ಕುರುಳ ಕೊಂತದ ಡೆಂಕಣಿಯ ಸೀ
ಗುರಿಯ ಸೌರಂಭದಲಿ ಸಮರಕೆ
ಹರನ ಹೋಲುವೆಯಾತ ನಿಂದನು ಮೊದಲ ಬಾಗಿಲಲಿ
ಬರಿಗೆ ಕವಚವ ಬಿಗಿದು ಬಿಲ್ಲಿನ
ತಿರುವ ನೇವರಿಸುತ್ತ ಜೂಜಿನ
ದುರುಳ ನಿಂದನು ಶಕುನಿ ಚಕ್ರದ ಮೊದಲ ಬಾಗಿಲಲಿ ॥

---

* ಈ ಪದ್ಯಗಳಿಗೆ ಹೆಚ್ಚು ಮಾತೃಕೆಗಳ ಸಹಾಯ ದೊರೆಯದೇ ಇದ್ದುದರಿಂದ ಇವುಗಳನ್ನು ಶೋಧಿಸದೆ ಮಾತೃಕೆಗಳಲ್ಲಿ ಇರುವಹಾಗೆಯೇ ಕೊಟ್ಟಿದೆ.

೨೦ನೆಯ ಪದ್ಯವಾದಮೇಲೆ (ಕ.ಗ). ಪ್ರತಿಗಳಲ್ಲಿ ಮಾತ್ರ ಕೆಳಗಿನ ನಾಲ್ಕು ಪದ್ಯಗಳು ಹೆಚ್ಚಾಗಿವೆ.—

ಭಟರ ಬಿಲು ಝೇಂಕಾರ ಹೊಯ್ಲಿನ
ಪಟಹದಬ್ಬರ ಲಗ್ಗೆ ಸೂಳಿನ
ಪಟುಭಟರ ಬೊಬ್ಬೆಗಳ ಘನ ತಂಬಟದ ಬಿಱು ದನಿಯ ।
ಪಟುಭಟರ ಬೊಬ್ಬೆಗಳಲುಬ್ಬುವ
ಕಟಕದುರವಣೆ ತಡೆಯಲಾದುದು
ನಿಟಿಲನಯನನ ದಿನದಲೊದಗುವ ಕಡಲ ನಡುಗಿಸಿತು ॥

ಜವನಣಲು ಮೃತ್ಯುವಿನ ತಾಳಿಗೆ
ಬವರ ಭೈರವನದಟು ಕಂಠೀ
ರವನ ದಾಡೆಗಳಿಱುಬು ಭುಜಗನ ನಾಲಗೆಯ ಬಿಱುಬ
ಹವಣೆ ಪೊಗಳುವಡರಿದು ಬಱಿಸಿಡಿ
ಲವನಿಗಿಳಿದುದೊ ವಡಬವಹ್ನಿಯೊ
ಳವನಿಯಲಿ ಹೊಸತೆನಲು ಚಕ್ರವ್ಯೂಹ ರಂಜಿಸಿತು ॥

ಕಾಲರುದ್ರನ ಕೈಯ ಶೂಲವೊ
ಕಾಲಭೈರವ ಹಿಡಿವ ಬಿಱು ಕರ
ವಾಳೊ ಪ್ರಳಯಾಂತಕನ ಕೋಣದ ಕೋಡ ಹೊಯ್ಲುಗಳೊ ।
ಹೋಲಿಸುವಡಿದು ಮೃತ್ಯುವಿನ ಗೋ
ನಾಳಿ ಹೊಗುವಡೆ ಕಡಲ ನಡುಸುಳಿ
ಕಾಳಮೇಘದ ವೊತ್ತವೆನೆ ರಂಜಿಸಿದುದಾ ವ್ಯೂಹ ॥

ಮೊಳಗಿದವು ನಿಸ್ಸಾಳ ಕಡಲ
ವ್ವಳಿಸುವಂತಿರೆ ಮೊಱೆವ ಭೇರಿಯ
ಘುಳುಘುಳುಧ್ವನಿ ಕೂಡೆ ಬಂದುದು ಕಮಠಜಾಂಡಪುಟ ।
ಉಲಿವ ತೇಜಿಯ ಝಂಕೆಗಳ ಗೊಂ
ದಳದ ಕರಿ ಘಟೆ ಗಜಱುಗಳ ವೆ
ಗ್ಗಳದ ದಂತಿಯ ಬೃಂಹಿತದ ಕೌರವಸೈನ್ಯ ಶರಧಿಯಲಿ ॥

೩೬ ನೆಯ ಪದ್ಯವಾದಮೇಲೆ ಈ ಕೆಳಗಿನ ಎರಡು ಪದ್ಯಗಳಲ್ಲಿ ಮೊದಲ ನೆಯದು (ಗ) ಪ್ರತಿಯಲ್ಲಿಯೂ ಎರಡನೆಯದು (ಕ.ಗ.ನ-ಬ) ಪ್ರತಿಗಳಲ್ಲಿಯೂ ಹೆಚ್ಚಾಗಿವೆ.—

ಕುಸುರಿದಱಿವೆನು ಸಮರ ಮಧ್ಯದೊ
ಳಸುರ ತೆಗೆಬಗೆ ಮಾಡುವೆನು ಮ
ತ್ತಸುವನಿಳುಹುವೆನೆನ್ನೊಡನೆ ತೊಡಕಿದ ಮಹಾರಥರ ।
ಹೊಸ ಪರಿಯ ತೋಱುವೆನು ಲೋಕ
ಕ್ಕಸದಳನು ತಾನೆಸಗಿ ಕೊಂಬೆನು
ವಸುಮತೀಶ್ವರ ಕೇಳು ಭಾಷೆಯನೆಂದನಭಿಮನ್ಯು ॥

ಜವನ ಜಕ್ಕುಲಿಸುವರನೇಕರು
ಶಿವನ ಮಾರ್ಗದ ವೀರರಿಹರದು
ನವಗೆ ಸಹಿತಳವಲ್ಲ ನೀನೆಂತಲ್ಲಿ ಪಟುಭಟರ ।
ತಿವಿದು ಹೊಗುವೈ ಮಗನೆ ನಿನ್ನತಿ
ಶಯ (?) ದ ನುಡಿಯಂತಿರಲೆನುತ ತ
ಕ್ಕವಿಸಿ ಮೋಹದ ಕಡಲೊಳವನಿಪ ಮೂಡಿ ಮುಳುಗಿದನು ॥

೪೧ ನೆಯ ಪದ್ಯವಾದ ಮೇಲೆ ಕೆಳಗಿನ ಪದ್ಯಗಳು (ಕ.ಗ.ಟ.ದ) ಪ್ರತಿಗಳಲ್ಲಿ ಹೆಚ್ಚಾಗಿವೆ.—

ಮಗನೆ ರಾಯರ ದಳಕೆ ನಿನ್ನನು
ಮಗುವನಱಿದಱಿದೆಂತು ಕಳುಹುವೆ
ನಗೆಯು ತಹರೇ ಭೀಮ ಹೇಳೈ ಶಿಶುಗೆ ಬುದ್ಧಿಯನು ।
ಅಗಣಿತದ ಶಿಶುವಿವನು ಕೋಟಿಯು
ವಿಗಡರಿದಿರಿಗೆ ನೂಕಲಾಱೆನು
ಹಗೆಯು ಗೆಲವನು ಸುಡಲಿ ಧರಣಿಯನೊಲ್ಲೆ ನಾನೆಂದ ॥

ಏಕೆ ನಿಮಗೀ ಚಿಂತೆ ವೈರಿಯ
ತಾಕುವೆನು ಕೊಡು ವೀಳೆಯವ ಬಿಡು
ಕಾಕ ಬಳಸುವ ಹಿರಿದ ಗಳಹುವ ಮಗನೆ ತಾ ನಿಮಗೆ ।
ನೂಕಿ ನೋಡಾ ತನ್ನ ಕರಿ ಕಮ
ಲಾಕರವ ಕಲಕುವ ವೈರಿಗಳ
ಜೋಕೆಯನು ಜರುಹುವೆನು ಭಾಷೆಯ ಬರಿಸಿ ಕಳುಹೆಂದ ॥

ಬೇಡ ಮಗನೇ ವೈರಿ ನಾಯಕ
ವಾದಿಗಳು ವೆಗ್ಗಳರು ನಿನ್ನನು
ಬೇಡಿಕೊಂಬೆನು ತನಗೆ ನೂಕದು ನಿನಗೆಯುಸಪಳಪು ।
ನೋಡ ನೋಡಲು ಕೊಲುವ ಮಾರಿಯು
ಕೇಡನಿದ ನಾ ನೋಡಲಾಱೆನು
ಕಾಡದಿಹುದೈ ಕಂದ ನೀನೆನುತಿದ್ದನಾ ಭೀಮ ॥

ತುಡುಕಿ ವಜ್ರವ ವಾಸವನು ತ
ನ್ನೊಡನೆ ಸಮರಕೆ ಬರಲಿ ಮೆಣ್ಕಂ
ಜೆಡೆಯು ಕೊಡಲಿಯು ರಾಮನಿಂದಿದಿರಾಗಿ ನಡೆತರಲಿ ।
ಕಡೆಗೆ ಮುರರಿಪು ಸಹಿತಲರ್ಜುನ
ತಡೆಯದೊಮ್ಮಿಗೆ ಬರಲಿ ಗೆಲವನು
ಪಡೆಯದಿದ್ದರೆ ನಿನ್ನ ಮಗನಲ್ಲೆನ್ನ ಕಳುಹೆಂದ ॥

೪೩ನೆಯ ಪದ್ಯವಾದ ಮೇಲೆ (ಕ.ಗ.ಚ.ನ) ಪ್ರತಿಗಳಲ್ಲಿ ಈ ಕೆಳಗಿನ ಪದ್ಯಗಳು ಹೆಚ್ಚಾಗಿವೆ.—

ಎಂದು ಹರಸಿಯೆ ಕಳುಹುವುದು ಬೇ
ಡೆಂದಡೆಯು ಕುರು ಬಲದ ಸುಭಟರ
ಕೊಂದೆನಲ್ಲದೆ ಮಾಣೆ ಮಾಣ್ಡಡೆ ನಿಮ್ಮ ಮೇಲಾಣೆ ।

ಎಂದು ಪಾದವ ಮುಟ್ಟಿ ಭೀಮಗೆ
ವಂದಿಸುತ ಸಹದೇವ ನಕುಲರಿ
ಗಂದು ಶಿಶುವಡಿಗೆಱಗಿ ನೇಮವ ಕೊಂಡನಾಹವಕೆ ॥

ಮುಡಿಯ ಸಂವರಿಸುತ್ತ ಪಾರ್ಥನ
ಮಡದಿ ಹರಿತಂದಳು ಕುಮಾರನ
ಬಿಡದೆ ಬಿಗಿಯಪ್ಪಿದಳು ಮರಣವ ನೆನೆವರೇ ಮಗನೆ ।
ಮಿಡುಕಲಮ್ಮರು ಹಿರಿಯ ತಂದೆಗ
ಳೊಡಬಡರು ಮೋಹರವ ಬಯಸುವ
ಕಡುಮನದ ಕಾತರಿಗತನ ಬೇಡೆಂದಳಿಂದುಮುಖಿ ॥

ನಲಿವು ಹಿಂಗಿದ ತಾಯ ಕಂಗಳ
ಜಲವ ಸೆಱಗಿನೊಳೊರಸಿದನು ಪದ
ತಳವ ನೆತ್ತಿಯೊಳಾಂತು ಕಡುಹಿನ ಮನದ ಖತಿಯೇಱೆ ॥
ಸೆಳೆದು ಖಡುಗವ ಜಡಿದು ರಣದ
ಗ್ಗಳೆಯ ಪರಿವಾರಕ್ಕೆ ಕೈ ಮುಗಿ
ದಳಲ ಕಡಲೊಳು ಕೆಡಹಿದನು ನಿಜಗೋತ್ರ ಬಾಂಧವರ ॥

ಸೇಸೆಗಳ ತುಂಬಿದರು ನಯನ ಜ
ಲಾಸುರದಲೋಲಾಡಿದರು ಸಂ
ತೋಷಿಗಳು ಮಱುಗಿದರು ಉತ್ತರೇ ರಮಣನನು ಪರಸಿ ॥
ಈ ಸಮಯದಲಿ ವೈರಿಮಕುಟ ವಿ
ಳಾಸರತ್ನವ ತಂದು ಕೊಡುವುದು
ಭಾಷೆಯನು ಸಲಿಸರಸ ಗೆಲು ಹೋಗೆಂದಳಿಂದುಮುಖಿ ॥

೫ನೆಯ ಪದ್ಯವಾದ ಮೇಲೆ (ಕ) ಪ್ರತಿಯಲ್ಲಿ ಕೆಳಗಿನ ಮೂಱು ಪದ್ಯಗಳು ಹೆಚ್ಚಾಗಿವೆ.—

ತೆತ್ತಿಸಿದ ನವರತುನದಿಂದಲಿ
ಮುತ್ತಿನುಂಡೆಯ ಜೂಳೆಯಂಗಳ
ಸುತ್ತಿ ಪಚ್ಚೆಯ ಹಲಗೆ ಪವಳದ ಕಚೆದ ಬೋದಿಗೆಯ ।
ಎತ್ತ ನೋಡಿದಡತ್ತ ಹೇಮದ
ಪುತ್ಥಳಿಯ ಸಾಲುಗಳ ಚಿತ್ರದ
ಪತ್ರದಲೆಸೆವ ರಥಕಳಶ ಮೇಲೆಸೆಯೆ (?) ॥

ಮಿಳಿರ್ವ ಹಳವಿಗೆ ಬಿಳಿಯ ಚಾಮರ
ಹೊಳೆವ ಸಿಂಧದ ದಿಗುವಳೆಯದಲಿ
ಮೆಱೆ (?) ದ ವಾಕಾಶದಲಿ ಮಿಂಚುವ ಧ್ವಜಪತಾಕಿಗಳ ।
ಬಳಿಯಲೈತಂದರು ಕುಮಾರನ
ರಣ (?) ವಿಜಯನಾಗೆಂದು ಬಿರುದಾ
ವಳಿಯನಂಗವಿಸುತ್ತ ಮಂಗಳ ರಭಸ ಮೊಳಗುತಿರೆ ॥

ಬಾಲನೀ ಬಂದನು ಕುಮಾರ
ವ್ಯಾಳ ಅಹಿತ ಪಂಬಾಲನೀ
........ಬಂದನ್ಕೆ ಎಂದೊದಱುದವು ಕಹಳೆಗಳು ।
........ಗೆಯ ಕೊಂಬಿನಹಿತ
ಹೇಳುವರೆ ಹದಿನಾಲ್ಕು ಲೋಕದ
ಬಾಲನೈದಿದನಮಮ ಚಕ್ರವ್ಯೂಹ ಭೇದವನು ॥

ತಡೆಯಲಹುದೇ ತಾಯೆ ರಿಪುಗಳ
ತಡೆಗಡಿದು ಸುಖಿಯಾಗು ರಣದ
ಗ್ಗಳೆಯ ಸುಭಟರ ಜಯಿಸು ಧುರಕೋಳಾಹಳಿಗನೆನಿಸು ।
ಹಿಡಿದ ಛಲ ಗೆಲು ಹಗೆಯ ಜಯಸಿರಿ
ಗೊಡೆಯನಾಗೆಂದೆನ್ನ ಹರಸದೆ
ಎಡೆವುಗುವರೇ ತಾಯೆ ನೀನೆನುತಿದ್ದನಭಿಮನ್ಯು ॥

ಕಲಕುವೆನು ರಿಪು ಸಾಗರವನಂ
ಡಲೆವೆನಹಿತ ಕುಮಾರ ಶತಕವ
ತಲೆಯನರಿವೆನು ಸುರರುಘೋಯೆನೆ ಬೀದಿವರಿವರಿದು ।
ಗೆಲವ ಸೂಱೆಯ ಕೊಂಬೆನಿಂದಿನ
ಛಲವ ಮನ್ನಿಸದಿದ್ದೆನಾದರೆ
ಫಲುಗುಣಗೆ ನಿಮಗೆಂತು ಜನಿಸಿದೆ ತಾಯೆ ಹೇಳೆಂದ ॥

೫೦ನೆಯ ಪದ್ಯವಾದಮೇಲೆ (ಚ) ಪ್ರತಿಯಲ್ಲಿ [1] ಮುಡಿಯ ಸಂವರಿಸುತ್ತ [1] ಎಂದು ಮೊದಲಾದ ಮೂಱು ಪದ್ಯಗಳಿವೆ. (ಕ.ಗ) ಪ್ರತಿಗಳಲ್ಲಿ ಈ ಕೆಳಗಿನ ಪದ್ಯಗಳಿವೆ.—

ತರಿಸಿ ಮೆಱೆವ ಸುವರ್ಣ ರಥವೊಳು
ತುರಗವನು ಹೂಡಿದನು ಜಯ ಸಂ
ಗರದ ನಿಕರದ ಶಸ್ತ್ರತತಿಗಳ ಹೊದಱ ಹೊದೆಮಗುೞಿ ।
ಬರಿಗೆ ಕವಚವ ಬಿಗಿದು ಬಿಲ್ಲಿನ
ಶಿರುವನೇವರಿಸಿದನು ಕಡು ಬಲು
ಸರಳ ಸೆಳೆದನು ಬಾಲಕನು ಸಮರಂಗಕನುವಾದ ॥

ತಾಯಿಗೆಱಗಿಯೆ ಹರಸಿ ಸೇಸೆಯ
ತಾಯೆನಲು ಕಂಬನಿಯ ಕಡಲಿನೊ
ಳಾ ಯುವತಿ ನನೆದಳು ಕುಮಾರನ ನಿಲಿಸಲಳವಡದೆ ।
ಸಾಯ ಬಯಸಿದೆ ಮಗನೆ ವಿಧಿ ನಿನ
ಗಾಯುಷವ ಕಿಱಿದಾಗಿ ಕೊಟ್ಟನು
ಕಾಯಲಾಱೆನು ತನ್ನ ಜೀವವನೆಂದಳಿಂದುಮುಖಿ ॥

---

[1] ೨೭೮ ನೆಯ ಪುಟವನ್ನು ನೋಡಿ.

ಅಯ್ದನೆಯ ಸಂಧಿಯಲ್ಲಿ ೧ನೆಯ ಪದ್ಯವಾದಮೇಲೆ (ಕ.ಗ). ಪ್ರತಿಗಳಲ್ಲಿ ಈ ಕೆಳಗಿನ ಪದ್ಯಗಳು ಹೆಚ್ಚಾಗಿವೆ.—

ಒಡೆದುದೀ ಬ್ರಹ್ಮಾಂಡಮಂಡಲ
ಗಡಗಡನೆ ನಡುಗಿದುದು ಧನು ಜೇ
ವೊಡೆಯೆ ಮಾರ್ಬಲದವರು ಕೆಡೆದರು ತಾಱು ಥಟ್ಟಿನಲಿ |
ಅಡಸಿ ಕಣೆಗಳು ಮುಕ್ಕುಱುಕಿ ಮುಂ
ಗುಡಿಯಲ್ಕೈತರೆ ಅರಿ ಸಮೂಹವ
ಕಡಿದು ಹರಹುತ ಹೊಕ್ಕ ಪದ್ಮದ ಮೊದಲ ಬಾಗಿಲನು ||

ಬಾಗಿಲಲಿ ಸೈಂಧವನ ಸೇನಾ
ಸಾಗರವ ಮುಕ್ಕುಳಿಸಿದನು ಕೈ
ಲಾಗು ಮಿಗೆ ಸರಳ್ವೈದಱಿಂದೆಚ್ಚನು ಜಯದ್ರಥನ |
ತೂಗಿ ಕಡೆದೆಗೆದೆಚ್ಚು ಗರುಡಿಯ
ಲಾಗುಕಾಱನ ರಥವ ಮುಱಿದನು
ಮೇಗಣಮರರು ಪೂತು ಪಾಯ್ಕನೆ ಕೆಣಕಿದನು ಬಲವ ||

ಬಾಲಕನನೊಳಿಗವ ಮಾಡಿವ
ನೊಳಿಗವ ನಿಲಿಸೆಂದು ರಿಪುಗಳು
ಮೇಲುಗಾಳೆಗಕಳುಕಿ ನಿಂದರು ಬವರವನೆ ಕಂಡು |
ಆಳಿನಲಿ ತಾಗಿದರು ವಿಂಥ ನೃ
ಪಾಲಕಾದಿಗಳೆಂಬರಿಗೆ ಕೆಂ
ಗೋಲ ಮಳೆಯನು ಕಱೆದರಾಯುಧ ಸಮರ ಸಾಹಸರು ||

ಕೆಣಕಿ ತಾಗಿದ ಸಿಂಧುರಾಯನ
ಮಣಿರಥವ ಮುಱಿಯೆಚ್ಚು ಮಗಧನ
ಹೆಣನ ದಾವಣಿಗೆಡೆಹಿದನು ಸಮರಂಗ ಭೂಮಿಯಲಿ |
ರಣವ ಸಾಕೆನಿಸಿದನು ಕಂಡುದ
ನೆಣಿಸಲತಿರಥರೊಂದು ಮುಂಚುವ
ಅಣಕಿಗರ ಮುಱಿಯೆಚ್ಚು ಹೊಕ್ಕನು ಶಕ್ರಸುತ ಸೂನು ||

ಹೆಱೆತೆಗೆದು ಹೆಣಗಿದರು ರಿಪುಭಟ
ನುಱುಬೆಗಣೆಗಳ ಖಾತಿಯಲಿ ಮುಂ
ಕೊಱಿಸಿ ತಲೆವರಿಗೆಯಲಿ ಅಂತುದು ಖಂಡೆಯದ ಪಟುಭಟರು |
ತಱಿದ ತಲೆಗಳನಡಸಿತಾ ರಥ
ಹರಿಸಬಹುದೇ ಯೆನಲು ಮೋಹರ
ದುಱುಬ ಹೊಕ್ಕನು ತಱುಬಿ ನಿಂದನು ಶಕ್ರಸುತ ಸೂನು ||

ಆಱನೆಯ ಸಂಧಿಯಲ್ಲಿ ೫೧ನೆಯ ಪದ್ಯವಾದಮೇಲೆ (ಕ.ಗ). ಪ್ರತಿಗಳಲ್ಲಿ ಈ ಕೆಳಗಿನ ಎಲ್ಲಾ ಪದ್ಯಗಳೂ (ಟ.ಚ.ಧ.ನ.ಪ). ಪ್ರತಿಗಳಲ್ಲಿ ಮೊದಲ ಎರಡು ಪದ್ಯಗಳೂ ಹೆಚ್ಚಾಗಿವೆ.—

ಸೇನೆ ಮುರಿದುದು ಮಕುಟವರ್ಧನ
ರಾನಲಮ್ಮುವರಿಲ್ಲ ಪಾರ್ಥನ
ಸೂನು ರಣದಲಿ ಬೀದಿವರಿದನು ಗದೆಯ ತಿರುಹಿಸುತ ।
ಮಾನನಿಧಿಗಳು ಮುಂದುಗೆಟ್ಟಿರಿ
ದೇನು ಸಾಹಸ ಶಿಶುವಿಗೆನೆ ಮದ
ದಾನೆಗಳ ಹದಿನೆಂಟು ಸಾವಿರ ಘಟೆಯ ನೂಕಿದರು ॥

ಮದಕರಿಗಳುರವಣೆಗೆ ಮೇದಿನಿ
ಯದಿರಿತೆನೆ ನಡೆದುದು ಮಹಾದೇ
ವದಟರುರವಣಿಸಿದರು ಬಲು ಗಜಘಟೆಯ ನಾಯಕರು ।
ಪದಹತಿಯ ಕೆಂಧೂಳಿಯುಮರರ
ಬೆದಱಿಸಿತು ಪರಬಲದ ಜೋಧರು
ಕದನದಲಿ ಬಿಱುಸರಳ ಮಳೆಗಱೆದೌಕಿದರು ಭಟನ ॥

ಈಡಿಱಿದವವನಿಯಲಿ ವಿತಳದೊ
ಳಾಡಿದವು ಕಾಂಬೋಜರೊಳು ಕಡಿ
ದಾಡಿದವು ಕೈಲಾಸಪರ್ವತ ಮಂದರಾದ್ರಿಗಳು ।
ಕೋಡಿನೊಳು ಹೊತ್ತೆತ್ತಿ ಕೆಡಹುವ
ಝಾಡಿಯುರವಣಿಸಿತ್ತು ಕಿಡಿಗಳ
ಕೂಡೆ ಸುರಿಯುತ ಬರಲು ನಸು ನಗುತಿದ್ದನಭಿಮನ್ಯು ॥

ಭುಜವ ಹೊಯ್ದನು ಮೇಲಣಮರ
ವ್ರಜವುಘೇ ಯೆನೆ ನಡೆದು ಬಿಱುಬಿದ
ನಿಜ ಗದೆಯಲೊಳಹೊಕ್ಕು ಹೊಯ್ದನು ಗಜದ ಮಸ್ತಕವ ।
ಗಜದ ಗಾವಳಿ ಕೋಡನೂಱಿಯೆ
ವಜಿತ ದಂತವ್ರಾತವನು ಗಜ
ಬಜಿಸಿ ತಿವಿದನು ಕರಿಘಟೆಯ ಹದಿನೆಂಟು ಸಾವಿರವ ॥

ಹೊಡೆದನಮುಮು ಕುಮಾರ ಬಱ
ಸಿಡಿಲಡಸಿದಂತಾಯ್ತು ಕರಿಗಳ
ಗಡಣ ಕೆಡೆದವು ಮಸ್ತಕದ ಬಳೆ ಹಱಿದು ಕಳಚಿದವು ।
ಸಿಡಿದು ಕುಲಗಿರಿ ಬಿದ್ದುದೆನೆ
ಕಡಿಫೂಡೆದು ಕೊಗ್ಗಸಱಾಯ್ತು
ಬಗೆ(?)ದುದು ಕವಿ ಕುಮಾರವ್ಯಾಸ ಹೊಗಳುವಡಱಿಯೆ ನಾನೆಂದ ॥

ಹಿಂದೆ ಪಡಿಬಲವಿಲ್ಲ ಧನು (?)
ವೊಂದಿಲ್ಲ ರಥವಿಲ್ಲಹಿತ ರಾಯರ
ಮಂದಿಯನು ಗದೆಯಿಂದ ಸದೆದನಿದೇನು ಸಾಹಸವೊ ।
ಎಂದು ದಿವಿಜರ ಕೈಯ ಗಲ್ಲದ
ಲಂದು ಬೆಱಗಾಗಿರಲು ಹೇಸದೆ
ಕೊಂದನಕ್ಷೋಣಿಯನು ಆ ಗದೆಯಿಂದ ಹೊಯ್‌ಹೊಯ್ದು ॥

ಗುರುಸುತನ ಸಾರಥಿಯ ಮಾದ್ರೇ
ಶ್ವರನ ರಥವನು ಕೃಪನ ತೇರಿನ
ತುರಗವನು ಕೆಡೆಯೊಯ್ದು ದ್ರೋಣನ ರಥವ ಹುಡಿಮಾಡಿ ।
ಅರಸನೇಱಿದ ಕರಿಗೆ ಹೊಯ್ದನು
ಮರಳಿ ದುಶ್ಶಾಸನನ ಮುಖವನು
ಚರಣ ತಳದಿಂದೊದ್ದು ಹೊಯ್ದನು ಮತ್ತೆ ರವಿಸುತನ ॥

ಆಱನೆಯ ಸಂಧಿಯಲ್ಲಿ ೫೫ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಈ ಕೆಳಗಿನ ಪದ್ಯಗಳು ಹೆಚ್ಚಾಗಿವೆ.—

ಕರವೆರಡ ಕಡಿವಡೆದಡಿವನೋ
ಸರಿಸದರೆಯಟ್ಟಿದನು ಗಾಲಿಯ
ಭರದಿ ತಿರುಹಿಟ್ಟಿ ಕೊಂದನತುಳ ಭುಜ ಬಲರ (?) ।
ಹರಿಯು ಚೌಪಳ ಚಕ್ರವಸುರರ
ಶಿರವನರಿವಂದದಲಿ ರಿಪು ಮೋ
ಹರದ ತಲೆಗಳ ಹರಹಿದನು ಚತುರಂಗ ಚೌಪಟನು ॥

ಅಸಮ ಪದ್ಮವ್ಯೂಹವನು ದಂ
ಡಿಸಿಯೆ ಧೂಳೀಪಟವ ಮಾಡಿದು
ಹೆಸರುವಡೆದತಿಖಳರ ನಡೆಗೆಡಹಿದನು ರಣದೊಳಗೆ ।
ಕುಸರಿದಱಿದನು ವಿಷಮ ವೀರರ
ವಸದಳದ ಕರಿಘಟೆಯ ಕೊಂದನು
ಬಸಿಯ ನೆತ್ತರು ಕಡಲುವರಿದುದು ಕೂಡೆ ಕಣನೊಳಗೆ ॥

ಮುರಹರನು ತನ್ನಳಿಯನಿಂದಿನ
ಧುರದೊಳಗೆ ಕರವಱಿದನೆಂಬುದ
ನಱಿದು ಚಕ್ರಕೆ ಬೆಸಸೆ ಬಂದುದೊ ಎನುತ ಬಲಬೆದಱೆ ।
ಹರಿಹರಿದು ಹರಿ ಚಕ್ರದಿಂದಿಡ
ಲಱಿದುದರಿಭಟರಥಟರನು
ಕರಿ ತುರಗ ರಥ ಕಾಲಾಳ ನಿಮಿಷದಲರಸ ಕೇಳೆಂದ ॥

ಏಳನೆಯ ಸಂಧಿಯಲ್ಲಿ ೪ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಈ ಕೆಳಗಿನ ಪದ್ಯಗಳು ಹೆಚ್ಚಾಗಿವೆ.—

ಅಲಗನೊಡಲೊಳು ತೊಳಸಿದಂತಿರೆ
ಬಳಲಿದನು ಭೂಪಾಲ ಭೀಮನು
ಮಲಗಿದನು ಮೋಹಾತಿರೇಕದ ಬೀಜವಂಕುರಿಸೆ ।
ಅಳಲ ಕಡಲಲಿ ಮುಳುಗಿದರು ಕಳ
ಕಳಿಸಿದರು ತಮತಮಗೆ ರಾಯನ
ಬಳಿಗೆ ಬಂದುದು ದುಗುಡ ಭರದಲಿ ನಿಖಿಳ ಪರಿವಾರ ॥

ಶಿಶುವಲಾ ಹದಿನಾಲ್ಕು ವರ್ಷದ
ಹಸುಳೆಯನು ರಿಪುಬಲದ ಮುಂದಿ (?)
ರಿಸಿಯಲಗು ಧಾರೆಯ ಮೊನೆಗೆ ನೂಕಿಯ ತಾನೆ ಕೊಲಿಸಿದೆನು ।
ವಸುಮತಿಯನಿನ್ನೊರ್ಲ್ಲೆ ನಾ ಪರ
ವಶವಹೆನಿನ್ನೆನುತ ಶೋಕಿಸಿ (?)
ಬಸವಳಿದು ಮಗ ಭಾವ ಹೃದಯವನು ನುಗಿದಡಾವರಿಸೆ ॥

ಅರಸ ಕಂಬನಿಗಳನು ಸೆರಗಿನೊ
ಳೊರಸಿದನು ಕಾಳೆಗಕೆ ನೂಕಿಯೆ
ತರುಣನನು ಕೊಲಿಸಿದೆನಲಾ ನನ್ನಂತೆ ಲೋಕದಲಿ ।
ಪರಮ ಪಾತಕರಿಲ್ಲ ನರರಲಿ
ಧರೆಯ ಲೋಲುಪ್ತಿಯಲಿ ಕಂದನ
ಮರಣವನು ಕಾಣಿಸಿದೆನೆನುತವನೀಶ ಬಿಸುಸುಯ್ದ ॥

ಏಳನೆಯ ಸಂಧಿಯಾದಮೇಲೆ (ಕ.ಗ.ಪ.ಬ) ಪ್ರತಿಗಳಲ್ಲಿ ಈ ಕೆಳಗಿನ ರಗಳೆಯು ಹೆಚ್ಚಾಗಿದೆ.—

ಹಾ ಮಗನೆ ಅಭಿಮನ್ಯು ಕುಮಾರಾ । ಹಾ ಮಹಿಮೋದಾರ ಗಂಭೀರಾ ॥
ರಣದಲಿ ಕಾದುವ ಹರಯವೆ ಕಂದ । ಸೆಣಸುವ ವೈರಿಗೆ ವಡಬ ನಿವ್ಯಂದ ॥
ಗಲ್ಲವ ಪಿಡಿದರೆ ಬಜೆ ಹಾಯ್ದಪುದೊ । ಎಲ್ಲಿಯು ಕಾಳೆಗ ನಿನಗಾದಪುದೊ ॥
ಚಕ್ರವ್ಯೂಹವಿದೆತ್ತಣ ಮಾರಿ । ವಿಕ್ರಮದಲಿ ನೀ ಮಡಿದೆ ಉದಾರಿ ॥
ಶಶಿವಂಶದ ಸಂತತಿಗಿನ್ನಾರೋ । ವಸುಧಾತಳಕಿನ್ನೊಡೆಯರದಾರೊ ॥
ಶಿಶು ನೀನಱಿವೈ ಕಾಳೆಗದನುವ । ಅಸದಳ ಕೌರವ ಭೂಪನ ಮನವ ॥
ಸಿಂಹದ ಮಱಿ ಶರಭನ ಹಿಂಡಿನಲಿ । ಅಂಗೈಸಿದರುಳಿವುದೆ ತೊಂಡಿನಲಿ ॥
ನೀನಿಲ್ಲದೆ ಅರಮನೆಯೊಪ್ಪುವುದೆ । ನೀನಿಲ್ಲದೆ ಪಾಳೆಯುಷೋಪ್ಪುವುದೇ ॥

. . . . . . . . . . .

ನೀನಿಲ್ಲದೆ ಪಾರ್ಥಗೆ ಗೆಲವಹುದೇ । ನೀನಿಲ್ಲದೆ ಚೌಕಿಗೆಯೊಪ್ಪುವುದೆ ॥

. . . . . . . . . . .

ಮುಖವನು ತೋಱಭಿಮನ್ಯು ಕುಮಾರ । ಅಖಿಳಾವನಿಯೊಳು ರಿಪುಸಂಹಾರ ॥
ಬಾಲಕ್ರೀಡೆಯೊಳಾಡುವುದೆತ್ತ । ಕಾಳೆಗದೊಳು ಮಡಿವುದಿದೆತ್ತ ॥
ಶಿಶು ನಿನಗೆಲ್ಲಿಯ ಧೀರಾಳಾಪ । . . . . . . . . .
. . . . . . ಕೊಲಿಸಿದರು । ಕಂದನನಿದು ಕಾರಣ ಸಾಕಿದರು ॥
ದೇವ ನಿಮ್ಮ ಮಾವನು ಅಸುರಾರಿ । ಭಾವನ ಕಂಡರೆ ಶಂಬರ ವೈರಿ ॥
ಹಡೆದಾತನು ಮೂಲೋಕದ ಗಂಡ । ಮಡಿದುದು ವಿಧಿಯೋ ರಣದುದ್ದಂಡ ॥
ಹಿರಿಯಯ್ಯನು ಭೀಷ್ಮಾದಿಗಳಿರಲು । ಇಱಿದವೆ ಮಗನೆ ಹಗೆಗಳ ಸರಳು ॥
ಏಕೊಬ್ಬನೆ ನೀ ರಣದಲಿ ನಿಂದೆ । ನಾಕದ ರಾಯರ ನಗರಿಗೆ ಸಂದೆ ॥
ದ್ರುಪದ ವಿರಾಟಾದಿಗಳಿವರೆಲ್ಲ । ತರಳನನೊಪ್ಪಿಸಿ ಕೊಲಿಸಿದರೆಲ್ಲ ॥
ವಿಪರೀತವಲಾ ನಿನ್ನಯ ಮರಣ । ರಿಪುಭಟರದಟರು ನಿನ್ನಯ ಹವಣಿ ॥
ಈ ಸಾತ್ಯಕಿ ನಕುಲಾದಿಗಳಿರಲು । ಸೋಮಕುಲದ ದ್ರುಪದಾದಿಗಳಿರಲು ॥

ಮಗನನು ಮುಂದಿಟ್ಟುರೆ ಕೊಲಿಸಿದರು|ಹಗೆಯಲ್ಲಿಗೆ ಮಗನನು ನೂಕಿದರು ॥
ಅತಿ ಮೋಹವಲಾ ಪುತ್ರನ ಶೋಕ । ಮತಿವಂತನೆ ತೋಱಾ ನಿಜ ರೂಪ ॥
ಹದಿನಾಲ್ಕನೆ ವರುಷದ ಬಾಲಕನೆ । ವಿಧಿಯೇ ರಣದಲಿ ಮಡಿವುದು ನಿನಗೆ ॥
ದಳ್ಳುರಿಯೊಡ್ಡಿನಲೊಂದು ಪತಂಗ । ನಿಲ್ಲದೆ ಮಡಿವುದು ರಣದಲಿ ಭಂಗ ॥
ಕಾಲನ ಜಂಗುಳಿಯುಸದಳವದಕೆ । ಕಾಲನನಂಗೈಸುವುದೇ ಧುರಕೆ ॥
ಎಲೆ ಧರ್ಮಜ ನೀನೇ ಕೈಕೊಟ್ಟು । ಕಂದನ ಕಳುಹಿದಿರೈ ಮನಗೊಟ್ಟು ॥
ನರ ನಡೆದನಲಾ ಕಾಳೆಗಕಂದು । ಬಾಲನ ಕೊಳುಗುಳಕಿಕ್ಕಿದರಿಂದು ॥
ಪರಿವಾರವನಾರೈ ನಂಬುವರು । ಧುರದೊಳದಾರೈ ನಿನ್ನನು ನಂಬುವರು ॥
ಹಲವರು ಮಂದಿಗಳೊಬ್ಬನೆ ಶಿಶುವ । ಕಳುಹಿ ಕೊಲಿಸಿದಿರಲ್ಲಾ ಮಗನಸುವ ॥
ಎನುತಂಗನೆ ಭೂಮಿಗೆ ಹೊಡೆವಡೆದು|ವನಿತೆ ಹೊರಳಿದಳು ಶೋಕವ ತಾಳ್ದು ॥
ಮುಡಿ ಹುಡಿಯಾಯ್ತು ಮೇಲುದು ಸಡಲಿ|ಉಡುಪತಿಯಂದದ ಮುಖ ನಸು ಮಸುಳಿ
ನಳಿತೋಳನು ಕೆದಱುದಳವನಿಯಲಿ । ಹಲುಬಿದಳಭಿಮನ್ಯುವಿನಳಲಿನಲಿ ॥
ಹಾ ಶಶಿಕುಲದರಸುಗಳ ಲಲಾಮ । ಹಾ ಸಮರಂಗಕೆ ಪ್ರಳಯದ ಭೀಮ ॥
ಎಂದಭಿಮನ್ಯು ಕುಮಾರನ ನೆನೆನೆನೆದು । ಸಂದಣಿಸುವ ಕಂಬನಿಯೊಳು ನನೆದು ॥
ಅಳಲಿದಳಾ ದ್ರೌಪದಿ ಬಂದು । ದ್ರುಪದ ವಿರಾಟನ ಸತಿಯರು ಬಂದು ॥
ತರುಣಿಯ ಬಹು ದಃಖವ ನಿಲಿಸಿದರು । ತನಯನ ತಾವೆಲ್ಲರು ನೆನೆನೆನೆದು ॥
ಎಳೆವಾಳೆಯ ಸಸಿಯನು ಕಡಿದಂತೆ । ಸಲೆ ಕುಂದಿದಳಾ ಕುವರನ ಕಾಂತೆ ॥
ನಯನ ಜಲಸಾಗರದೊಳು ನನೆದು । ಭಯ ಮಿಗೆ ಕಂದನ ಹಲುಬಿದಳಂದು ॥
ಅರಮನೆಯೊಳು ಕೋಳಾಹಳಮಾಗೆ । ಪರಿವಾರವು ಘನ ಶೋಕಿತಮಾಗೆ ॥
ಅವರವರಳಲನು ಸಂತಯಿಸುತ್ತ । ಯಮರಾಜನ ಮಗ ಹಂಬಲಿಸುತ್ತ ॥
ಮುಸುಕನಿಕ್ಕಿ ಬಲುದುಗುಡವ ತಾಳ್ದು । ವಸುಧಾಪತಿ ನೆಱೆ ಚಿಂತೆಯ ತಾಳ್ದು ॥
ಮನದೊಳು ಧೈರ್ಯವ ಮುಪ್ಪುರಿಗೊಂಡು|ಮುನಿಯ ಮತವ ಮನದೊಳಗಿಂಬಿಟ್ಟು
ತರುಣಿಯ ಸಂತೈಸಿ ಕಳುಹಿದನು । . . . . . . . . . . .
ಗುರು ಹಿರಿಯರು ಭೀಷ್ಮಾದಿಗಳೆಲ್ಲಾ । ತನಯನ ಬಹು ದುಃಖವ ತಾಳಿದರು ॥
ಸಮಸಪ್ತಕರಿರುಳಿನ ಕಾಳೆಗದಿ । ಸಹದೇವ ಪಾರ್ಥರು ಸಮರವ ಗೆಲಿದು ॥
ಸಿರಿಯರಸನ ಶ್ರೀ ಚರಣವ ನೆನೆದು । ಕರುಣಿಸಿ ರೂಪವ ತಾ ಕೈಕೊಂಡು ॥
ತೇರು ತುರಗ ಗಜ ಕಾಲಾಳುಗಳ । ತೇಜನ ಮನ್ನೆಯ ಮಂಡಲೇಶ್ವರರ ॥
ಮನ್ನಿಸುತಸುರಾರಿಯ ಕರುಣದಲಿ । ತಿರುಗಿದರೈ ತಮ್ಮಯ ಪಾಳೆಯಕೆ ॥
ಬರುತಿರೆ ಬಂದವು ಫಲುಗುಣಗಾಗ । ಅವಶಕುನವು ಅಲಸಿರೆಯಡಿಯಿಡಲು ॥
ಮುಪ್ಪುರಿಗೊಂಡಿತು ಮನದೊಳು ಶೋಕ|ತನುವಿಲಿ ಮುಱಿದವು ತನಯನ ಸರಳು॥
ನಯನ ಜಲಧಾರೆಗಳುಕ್ಕತಲಿ । ಬೆಸಸೆಂದನು ಅಸುರಾರಿಯ ಕಲಿ ಪಾರ್ಥ ॥

ರಗಳೆ ಮುಗಿದುದು.

ಎಂಟನೆಯ ಸಂಧಿಯಲ್ಲಿ ೩೮ನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಈ ಕೆಳಗಿನ ಪದ್ಯಗಳು ಹೆಚ್ಚಾಗಿವೆ.—

ಅಳುವಿದನ ಪರಸತಿಗೆ ದ್ವಿಜ ಸಂ
ಕುಳವ ದೂಷಿಸಿದವನ ಕೋದೊಡ
ಗಲಿಸಿದನು ಗುರುನಿಂದಕನನನಾಚಾರವಂತಕನ ।

ಬಳಸಿ ಖಳರೊಳನಾಡಿದನ ದು
ಷ್ಕುಲಜನನು ಕರಸಿದನ ಬಡ
ಕಲಿಸಿದಾತನ ಕೊಲ್ಲದಿರ್ದಡ ನಾಳೆ ಸೈಂಧವನ ॥

ಶೀತಕಂಜುವ ದ್ವಿಜನ ರಣವಿ (?)
ಘಾತಿಗಂಜುವ ಕ್ಷತ್ರಿಯನ ತಾ
ಸೋತುಮೃಷ್ಟಾನ್ನವನು ಸಾಕ್ಷಿಯಲುಂಬ ಪಾತಕಿಯ ।
ಪ್ರೀತಿಯಲಿ ಪೆಣ್ಣಿತ್ತ ಮಾವನೊ
ಳಾತು ನೆಱೆ ಜೀವಿಸುವ ಮನುಜನ
ಪಾತಕವು ತನಗಾಗಲಾ ಸೈಂಧವನ ಕೊಲ್ಲದಡೆ ॥

ಹಲವು ಮಾತೇನಿನ್ನು ಹಗೆವನ
ತಲೆಯನರಿವೆನು ನಾಳೆ ತರಣಿಯ
ಸುಳಿವು ಹಿಂಗದ ಮುನ್ನ ಕೊಲುವೆನು ಕಲಿ ಜಯದ್ರಥನ ।
ಉಳಿದನಾದರೆ ಬಳಿಕ ವಹ್ನಿಯ
ಕಳೆಗೆ ಜೀವವನೊಪ್ಪಿಸುವೆನೆಂ
ದಲಘುಭುಜಬಲ ಪಾರ್ಥ ನುಡಿದನು ನೃಪತಿಯಿದಿರಿನಲಿ ॥

ಒಂಬತ್ತನೆಯ ಸಂಧಿಯಲ್ಲಿ ೩ನೆಯ ಪದ್ಯವಾದ ಮೇಲೆ (ಟ) ಪ್ರತಿಯಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ.—

ಕುಱಿಯ ಮಾಂಸದ ಕೋಳಿ ಕೋಣನ
ಮುಱಿದಲೆಯ ಮಿಾಸಲಿನ ರಕುತದ
ಜುಱುಜುಱಿನ ದೊಂಡೆಯಲಿ ಕಲಸಿದ ಕೂಳ ಮುದ್ದೆಗಳ ।
ಅರಿ ನೃಪಾಲರ ಪಾಳೆಯದೊಳಾ
ಯಿತ್ತರುಳು ಮನೆಮನೆಗಳಲಿ ಶಸ್ತ್ರೋ
ತ್ಕರಸಮಾರಾಧನೆಯೊಳಿದ್ದುದು ಕೂಡೆ ನೃಪ ಕಟಕ ॥

೩ನೆಯ ಪದ್ಯವಾದ ಮೇಲೆ (ದ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯಗಳು.

ಅರಿ ಮಹೀಶರನಟ್ಟಿ ನುಂಗುವ
ಗರಳದೊಬ್ಬುಳಿಕೆಗಳೊ ಭಯಂ
ಕರದ ಕಾಲನ ತೋಮರಪ್ರೊ ಭೈರವನ ಶಕ್ತಿಗಳೊ ।
ಧರಧುರದಿ ಹೊಳೆ ಹೊಳೆವ ಶಸ್ತ್ರದ
ಕೆರಳಿಕೆಗಳೊದವಿದವು ತರಣಿಗ
ಳುರವಣೆಯನುಗುಳಿದವೆನಲು ರಂಜಿಸಿತು ರಜನಿಯಲಿ ॥

ಉಚಿತದಲಿ ಕೊಂಡೊಯ್ದು ಶೂಲಿಯ
ವಚನದಲಿ ಕಳುಹಿಸುವೆನೆಂದಾ
ಶಚಿಯ ಗಂಡನ ಮಗನನೀಶನ ಪದವ ಕಾಣಿಸಿದ ।

ಹಿರಿಯ ಬವರವನುಚಿತದಲಿ ಶಂ
ಕರನು ತಿಳಿದರ್ಜುನಗೆ ಶಸ್ತ್ರೋ
ತ್ಕರದ ಪರಿವಿಡಿಗಳನು ಸಾಂಗೋಪಾಂಗವೆನೆ ತಿಳುಹಿ ||

೧೦ನೆಯ ಪದ್ಯವಾದ ಮೇಲೆ (ಟ.ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ

ಎನೆ ಹಸಾದವೆನುತ್ತ ನಿಜಕರ
ವನಜಕಳುಕಿದನಾದ ಸೇನಾ
ವನಧಿ ಮಿಗೆ ಗರ್ಜಿಸಿದವೆನೆ ಶೋದಯದ ಸಮಯದಲಿ |
ವನರುಹಾಕ್ಷ ವಿಶೇಷದಲಿ ಸಂ
ಜನಿಸಿ ಶಯ್ಯನಿನಾದ ಭೂಪರ
ವನಜಲಧಿ ದೆಖ್ಖಾಳದಲಿ ಜಯ ಘಂಟೆಯೊದಱಿದವು ||

೧೧ನೆಯ ಪದ್ಯವಾದ ಮೇಲೆ ಮೇಲಿನ (ಟ.ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯಗಳು.—

ವಾರುವನು ಹಲ್ಲಣಿಸಿ ಗುಳವನು
ವಾರಣಕೆ ಬೀಸಿದರು ತೇಜಿಯ
ತೇರ ನೊಗನನು ಹಾಯ್ಕಿ ಕೈದುವ ಕೊಳಲಿ ಕಾಲಾಳು |
ವೀರರನು ಬರಹೇಳು ನೆರೆಯಲಿ
ಬಾರದಾಹವವೆಂದೆನುತ ಕೈ
ವಾರವೆನೆ ನೆಱೆ ಕಾಂಬೆನೆಂಬಬ್ಬರಣೆ ರಂಜಿಸಿತು ||

ಎಲೆಲೆ ಹೋಗಲಿ ಹೋಗಲಿದಿರಲಿ
ಸುಳಿಯಬೇಡಾ ಸಾರು ಸಾರೆಂಬ
ಉಲಿಗಳು ಮದದಾನೆ ತುಳಿದಾಡಿದವು ಬೀದಿಯಲಿ |
ಮುಳಿದು ತುರಗದ ವಾಸನೆಯಲ
ವ್ವಳಿಸಿ ಗಗನವನಡರೆ ಹಾಯ್ದವು
ಖಳಿಖಟಿಲ ಶಬ್ದವ ಖುರದಲಿ ಚಟುಳ ತೇಜಿಗಳು ||

ಪ್ರಳಯ ಜಲನಿಧಿ ರಭಸಗೊಟ್ಟಿದ
ಹೊಳಕೆಯೆನೆ ನಿಸ್ಸಾಳ ತತಿಗಳು
ಮೊಳಗಿದವು ಪಟುಭಟರ ಬೈದವು ಕೊಂಬು ಕಹಳೆಗಳು |
ಗುಳವ ಹೊಯ್ದಾನೆಗಳು ನೆರೆದವು
ತಳಪಟಕೆ ಮೋಹರಿಸಿ ತುರಗದ
ದಳದ ದುವ್ವಾಳಿಗಳು ಮಂದಿಯ ಬೆಱಗ ಕೂಡಿದವು ||

ಹೊಳೆವ ಸೂರ್ಯಗೆ ರಥದ ಘನಸಂ
ಕುಳದ ಸಂದಣಿಯಾಯ್ತು ಭೂಪರ
ವಿಳಯದಲ ಸಂಬಾಳಿ ಪಾಯವಧಾರುಗಳ ರಭಸ |

ತುಳುಕಿದವು ರತ್ನಾರತಿಯ ಬೆಳಕು
ಗಳು ಭೂಪರ ಕಟಕವೆರಡಱ
ಕಳಕಳಿಕೆ ಕಲ್ಪಾಂತರುದ್ರನ ಗಜಬು ಗಾಢಿಸಿತು ||

೧೫ನೆಯ ಪದ್ಯವಾದಮೇಲೆ (ಟ.ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ತುರಗ ನಾಗ ವರೂಥದಲಿ ನೃಪ
ವರರಲಂಕೃತರಾಗಿ ದ್ರೋಣನ
ಬಿರುದ ಧೃಷ್ಟದ್ಯುಮ್ನನಿಳಯುದ ಮುಂದೆ ಸಂದಣಿಸಿ |
ಎರಡು ಬಲದಲಿ ನಾಯಕರು ಸಂ
ವರಣೆಯುವರನು ಕಂಡು ಕಣಕರು
ವೆರಸಿ ನೋಡಿದರಿತ್ತರವರಾಕ್ಷೇಪದುಡುಗೊರೆಯ ||

೨೧ನೆಯ ಪದ್ಯವಾದಮೇಲೆ (ಟ.ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ —

ಪಳಹರದ ಪಲ್ಲವದ ಸತ್ತಿಗೆಯ
ಗಳವಿಡಾಯಿಯುಲರಿಬಿರುದ ಡೆಂ
ಕಳಿಯ ಸೀಗುರಿ ಘೋದರುಗಳ ತೋಮರದ ಸಂದಣಿಯ |
ಬಲ ತುರಂಗದ ಗಜಘಟೆಯ ಸಂ
ಕುಳದ ರಾಜಕುಮಾರಕರ ಮಂ
ಡಳಿಯೊಳಗೆ ಗರ್ಭಾಕೃತಿಯ ಮೋಹರಿಸಿದನು ಕಲಿ ದ್ರೋಣ ||

೨೫ನೆಯ ಪದ್ಯವಾದಮೇಲೆ ಮೇಲಿನ ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಬಲದಿ ತಳಿತ ಪತಾಕೆಯಂಬ್ಬರ
ದೊಳಗ ಮೆಱೆದವು ಗಗನ ಗಂಗೆಯ
ಹಲವು ಕಾಲುವೆದೆಗೆದವೆನೆ ಝಾಡಿಸಿದ ಝಲ್ಲರಿಯ |
ಬಳಗವತ್ತೆಸೆದವು ಜಯದ್ರಥ
ನಳವಿಗೊಂಡಾ ನಿಶಾಂಧಕಾರದ (?)
ಸುಳಿವು ತಾನೆನೆ ಮೆಱೆದುದಖಿಳವ್ಯೂಹ ರಚನೆಯಲಿ ||

೩೭ನೆಯ ಪದ್ಯವಾದಮೇಲೆ (ಗ.ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯಗಳು.

ಸುರರಿಗಸದಳವೀ ಮಹಾಮೋ
ಹರದ ತೋಱಿಕೆ ತನ್ನ ಬಗೆಯದೆ
ತರಳನಿದಿರಲಿ ತಿರುಗುವುದೆ ಆಚಾರ್ಯನೊಡ್ಡವಣೆ |
ಧರಣಿ ನೆಱೆಯದು ಪದಹತಿಗೆ ಹರ
ಹರ ಇದೆತ್ತಣ ದಳವು ಮಾರಿಯ
ತೆರಳಿಕೆಯೊ ಮರು ಭಾಪೆನುತ ಹೊಗಳಿದನು ಕಲಿ ಪಾರ್ಥ ||

ಕುರುಬಲದ ಬೆಳವಿಗೆಯ ಬೆಳಸಿನ
ಹರಹನೀಕ್ಷಿಸಿ ಸರಳ ಬಿಡಲಾ
ಗರಸವ್ರೈದಿತು ಸುರಪ ಯಮ ಪರಿವಾರವಂದಿನಲಿ |

ಸುರ ನಗರಿಯಲಿ ಯಮನ ಪುರಿಯಲಿ
ಥರಥರದ ಕೇರಿಗಳ ಸಲೆ ಸಿಂ
ಗರಿಸಿದರು ಸಂಗರಕೆ ಸಮ್ಮುಖವಾದನಾ ಪಾರ್ಥ ||

೩೮ನೆಯ ಪದ್ಯವಾದಮೇಲೆ (ಟಿ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯಗಳು

ಮರಳು ಫಲುಗುಣ ನಿನ್ನ ಕಂದನ
ಮರಣದೊಡನೊಡನಳಿಯದಿರು ಕಾ
ತರಿಸೆ ಫಲವಿನ್ನಿಲ್ಲ ಸೈಂಧವ ನಿನಗಗೋಚರನು |
ಧರೆಯ ಲಂಪಟದಿಂದ ಬಾಣಕೆ
ಕೊರಳ ತೆಱದಿರು ತೊಲಗು ತೊಲಗೆಂ
ದರಿ ರಥನ ಕೆಣಕಿದನಲೈ ಧೃತರಾಷ್ಟ್ರ ಕೇಳೆಂದ ||

ಫಡ ತೊಲಗು ಕೌರವ ಕೃತಾಂತನ
ಪಡೆಗೆ ಪಾರಣೆಯಾಗಳೀಗಳೆ
ನಡೆಸುವೆನು ನಾಕಕ್ಕೆ ನೆಱೆದ ಮಹಾರಥಾವಳಿಯ |
ಬಿಡು ಮನವನಿದಿರಾಗು ಸೋತಡೆ
ತೊಡು ಪಥವ ನಿನ್ನುದರ ರಕ್ತವ
ಕುಡಿವ ಭಟ ಬೇಱೆನ್ನ ಕಾಡದಿರೆನುತ ತೆಗೆದೆಚ್ಚ ||

ತರಹರಿಸಿ ಸರಳೈದಱಲಿ ರಿಪು
ನರನನೆಚ್ಚನು ಕೌರವಾನುಜ
ನೆರಡು ಶರದಲಿ ಪಾರ್ಥನೆಚ್ಚನು ವೈರಿಯಂಬುಗಳ |
ಸರಳುತೀರಲು ಕಿತ್ತು ಸುರಗಿಯ
ಲುರವಣಿಸೆ ಕೂರಂಬಿನಲಿ ವೊನೆ
ಸುರಗಿಯನು ಖಂಡಿಸಿದನರ್ಜುನನ ಸಮರದಲಿ ||

೪೬ನೆಯ ಪದ್ಯವಾದಮೇಲೆ (ಟಿ.ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯಗಳು

ಸರಳ ತೆಗೆತೆಗೆದೆಸುತ ದ್ರೋಣನ
ಚರಣ ಕಮಲಕೆ ಕವಿದವ್ಪೊಗ್ಗಿನ
ಸರಳು ತಾವ್ಪೊದಗಿದವು ಕವಿದವು ಅರಳ ಮಳೆಯಂತೆ |
ಗುರು ಕಿರೀಟಿಯನೆಸಲು ಪಾರ್ಥನೆ
ಹೊರೆಗೆ ಹೋದರೆ ಹಿಂಗುವುವು ಸಂ
ಗರದ ಸೌರಂಭದಲಿ ಬಳಲಿದರುಭಯನಾಯಕರು ||

ಧುರದೊಳಾಂತಡೆ ಕಲ್ಪಶತವನು
ಮರಳಲೀಯನು ದ್ರೋಣನಿಂದಿನ
ಸರಸಿಜಾಕ್ಷನ ಸಾಕ್ಷಿಯಲಿ ಸೈಂಧವನ ಸಾಧಿಸುವ |
ಬರವು ತನಗಲ್ಲದಡೆ ತಪ್ಪದು
ಸುರರ ಪದವೆಲೆ ಕೃಷ್ಣವಾಘೆಯು
ತಿರುಹಿಕೊಳ್ಳಡಹಯವನೆಂದನು ನಗುತ ಕಲಿ ಪಾರ್ಥ ||

ತುರಗವನು ಚಪ್ಪರಿಸಿ ವಾಘೆಯ
ತಿರುಹಿ ಯೆಡ ವಾಘೆಯಲಿ ಸೂಚಿಸಿ
ಹರಿ ರಥವ ದೂವ್ವಾಳಿಸಿದನಾ ಬಾಹು ಪಾಶದಲಿ ।
ಅರರೆ ನರ ಜಾಱಿದನು ಘೋಂಕನೆ
ತರಳನಿವನೇ ಪೂತು ಸಾರಥಿ
ತುರಿತವೆಂತೆನೆ ನೋಕಿದನು ಫಲುಗುಣನ ಸಮ್ಮುಖಕೆ ॥

ಅಸುರಹರನೋಜೆಯಲಿ ಮೆಲ್ಲನೆ
ನುಸುಳಿದರೆ ಕೈಕೊಂಬ ದ್ರೋಣನ
ಹೆಸರನಱಿಯಾ ಪಾರ್ಥ ಧೂರ್ತನ ರಣಕೆ ಧೂರ್ಜಟಿಯು ।
ಎಸುಗೆಯೆಂತೆಮ್ಮೊಡನೆ ತೋಱಿಸು
ಸಹಸಮುಳ್ಳರೆ ಬಳಿಕೆನಲು ಬಾಣವ
ಮುಸುಕಿದರೆ ಮರುಳಹಿರೆನುತ ಕೈಕೊಂಡನಾ ದ್ರೋಣ ॥

ಕಳನನತ್ತಲು ಹೋಗಲೀಯ್ಯದೆ
ಕಲಶಜನ ಕಾಲಾಟದಾಹವ
ದೊಳಗೆ ವಿಗಡಿಸಿ ಹೋಗಲೀಯನು ಗುರು ಸಮಗ್ರಬಲ ।
ತಿಳಿಯಲಿದು ತಪ್ಪಲ್ಲ ಗರ್ವಕೆ
ಕಳಲುವರು ವಿನಯಕ್ಕೆ ಕೊಡವರು
ತಲೆಯನಿದು ಹಿರಿಯರಿಗೆ ಗುಣವೆನುತೆಚ್ಚನಾ ಪಾರ್ಥ ॥

ಹತ್ತನೆಯ ಸಂಧಿಯಲ್ಲಿ ೧೭ನೆಯ ಪದ್ಯವಾದಮೇಲೆ (ಟ.ನ) ಪ್ರತಿಗಳಲ್ಲಿ ಈ ಕೆಳಗಿನ ಪದ್ಯಗಳು ಹೆಚ್ಚಾಗಿವೆ.—

ತೂಳಿದವು ಬರಿಕೈಗಳಲಿ ಕರ
ವಾಳ ಪಟ್ಟೆಯ ಲೌಡೆಯಲಿ ನೆಲ
ನೇಳೆ ನಡೆದವು ತಡೆದರರ್ಜುನನುರವಣೆಯ ರಥವ ।
ಮೇಲೆ ಕವಿ ಕವಿದೆನುವ ಜೋದಾ
ಳಾಳಿ ವಿಲು ಕೆದಱಿದವು ಬೀಸರಿ
ಗೋಲನದ್ಭುತ ಸಮರವಾಯಿತು ಮತ್ತೆ ಪಾರ್ಥಂಗೆ ॥

ಅಳವಿದಪ್ಪದೆ ದಂತಿ ಘಟೆಗಳ
ನಳುಕದೆಚ್ಚನು ಶಿರವ ತಾಗಿದ
ಹಿಳುಕು ಪಂಚಕದಿಂದ ಬಿದ್ದುವು ಕರಿಗಳೆಡೆಗೆಡೆಯೆ ।
ತುಳುಕುವರಿಗೆಯೆ ಗುಳವ ವಜ್ರದ
ನಲಗ ಮುಱಿಯೊಡೆಯೆಚ್ಚು ಜೋದರ
ತಲೆಗಳನು ತುಂಡಿಸಿದನಿಭವನು ಹೊಕ್ಕು ಬೀದಿಯಲಿ ॥

೧೯ನೆಯ ಪದ್ಯವಾದಮೇಲೆ (ಟ.ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯಗಳು.—

ಇತ್ತಲರ್ಜುನನಹಿತ ಬಲದೊ
ತ್ತೊತ್ತೆಯನು ಸವಱುತ್ತಲಿರೆ ಬಳಿ
ಕಿತ್ತಲೀ ದ್ರೋಣನು ವಿರೋಧಿ ಮಹೀಶರನು ಕೆಣಕಿ ।

ಮುತ್ತಿದನು ಪಾಂಡವರ ಬಲ ಕ್ಕೆ
ವರ್ತಿಸಿದನಂತಕನ ನಗರಿಗೆ
ತತ್ತಸಮರಕೆ ಹೊಕ್ಕರಾ ದ್ರುಪದಾದಿ ನಾಯಕರು ||

ಕೇಳು ಜನಮೇಜಯ ಧರಿತ್ರೀ
ಪಾಲ ದ್ರೋಣನು ಹೊಕ್ಕುರಿಪಿ ಪಾಂ
ಚಾಲರನು ಭಯಗೊಳಿಸಿದನು ಸಾತ್ಯಕಿ ವಿರಾಟರನು |
ಕಾಳೆಗಕೆ ಮೋಹರಿಸಿದವರವ
ರೂಳಿಗಕೆ ರಿಪು ಬಲ ಶರಧಿ ಕ
ಲ್ಲೋಲ ಮಸಗಿತು ಭೀಮಸೇನಾದಿಗಳು ತಾಗಿದರು ||

ನಕುಲ ಧೃಷ್ಟದ್ಯುಮ್ನ ವರ ಸಾ
ತ್ಯಕಿ ವಿರಾಟ ದ್ರುಪದಸುತ ಮ
ತ್ಸ್ಯಕನಸುತ ಸಹದೇವ ಪಾಂಚಜಸ ಭೀಮನಂದನರು |
ಸಕಲ ಮೋಹರ ಸಹಿತ ಸಮರೋ
ದ್ಯುಕುತ ಕಲಶಾತ್ಮಜನ ಮೊನೆಯುಲಿ
ಚಕಿತ ಚಾಪ ಶಿಳೀಮುಖರು ಮಾಟಾಂತರೊಗ್ಗಿನಲಿ ||

ಇವರೊಡನೆ ಗುರು ಕೆರಳಿ ಮಹದಾ
ಹವವ ಮಾಡಿದನಿತ್ತಲಿತ್ತಲು
ಕವಿದನರ್ಜುನನಸಮ ಗರ್ಭವ್ಯೂಹ ಮೋಹರವ |
ವಿವಿಧ ವಿವಧಾಂಕುರದ ನಾರಾ
ಚವನು ಕಾಣಿಸಿ ಕರ್ಣ ಮೊದಲಾ
ದವರ ಮುಂದಿರುಹಿಸಿದು ಗರ್ಭವ್ಯೂಹವನು ಮುಱಿದ ||

೨೮ನೆಯ ಪದ್ಯವಾದಮೇಲೆ (ಟ.ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ನೋಡುತಿರ್ದುದು ವೈರಿಬಲ ಮಾ
ತಾಡಲಿಮ್ಮಡಿ ಪಾರ್ಥನುಬ್ಬಟೆ
ಘಾಡತನವೇನೆಂಬೆನ್ಮ್ರ ಕುರುರಾಯ ಚಿತ್ತವಿಸು |
ನೋಡಲಚ್ಚರಿಯಾಗೆ ಧರಣಿಯ
ನೀಡಿಱಿದು ನಿಜ ತುರಗದಳವಿಗೆ
ಖೇಡ ಕುಳಿಯನು ತೆಗೆದನರ್ಜುನನಸಮ ಸಮರದಲಿ ||

೩೨ನೆಯ ಪದ್ಯವಾದಮೇಲೆ ಮೇಲಿನ ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಸೀಸಕವನಿಳುಹಿದನು ಕವಚವ
ನೋಸರಿಸಿ ಪೊಚ್ಚೆಯುವ ತೆಗೆ
ದಾಸುರಾರಿ ತುರಗಾವಳಿಯ ಸಂಕಲೆಗಳನು ಕಳಚಿದನು (?) |
ಆ ಸಮರ್ಥರು ನೋಡುತಿರೆ ರಣ
ದಾಸಱಿನ ತುರಗವನು ಉದಕ ನಿ
ವೇಶದಲಿ ಹೊಗಸಿದನು ನಿಮಿಷದಲವರ ಮನ ದಣಿಯೆ ||

೩೮ನೆಯ ಪದ್ಯವಾದಮೇಲೆ (ಗ.ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಚಟುಳ ಹಯ ಖುರಪುಟದಿ ತೋರ್ಪ
ನಿಟಿಲ ನಿರ್ಗಮ ಧಾಳಧೂಳೀ
ಪಟಲ ದೂಸರ ಸಕಲ ಜನವಸುರಾರಿ ನಲವಿನಲಿ ।
ಪಟುಗತಿಯು ಗರುವಾಹಿಯಲಿ ಸಂ
ಘಟಿಸಿ ಹಯವನು ಸುಳಿಸಿದನು ಚೌ
ಪಟದಲೊಯ್ಯಾರಿಸುತ ಮಿಗೆ ಬೋಳೈಸಿದನು ರಥವ ॥

೪೪ನೆಯ ಪದ್ಯವಾದಮೇಲೆ (ಟ. ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಉಳಿವಲಮ್ಮುವರಿಲ್ಲ ಬವರಕೆ
ನಿಲುವ ಚೂಣಿಗರಿಲ್ಲ ಮುಂಬಿಗೆ
ಹೊಳಕಬಲ್ಲವರಿಲ್ಲ ನಮ್ಮಯ ಬಲದ ನಾಯಕರು ।
ಜೆಲಿಸಿದರ್ಜುನನಾವ ತಪದಲಿ
ಬಳಲಿ ಕರುಣಾಳುಗಳ ದೇವನ
ನೊಲಿಸಿಕೊಂಡನೊ ಶಿವ ಶಿವೆಂದನು ದ್ರೋಣ ಕುರುಪತಿಗೆ ॥

೭೦ನೆಯ ಪದ್ಯವಾದಮೇಲೆ (ಟ. ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯಗಳು.—

ಸುರಪನಡವಿಯ ಸುಟ್ಟ ಗರ್ವದ
ಧುರಕೆ ಬಿಡುವುದು ಮಂಡಲೀಕರ
ಶಿರವ ಶೀಳಿದ ಗೆಲವ ತೆಗೆ ಗೋಗ್ರಹಣದಲಿ ಕೆಲರಾ ।
ಮರಳು ಮಾಡಿದ ಮಹಿಮೆಯನು ಮರ
ಮರಳು ಮರಳೆಲೆ ಪಾರ್ಥ ಹುತವಹ
ನರಮನೆಗೆ ನಡೆಯೆನುತ ತೆಗೆದೆಚ್ಚರು ಮಹಾರಥರು ॥

ಪೂತುರೇ ಕಲಿ ಪಾರ್ಥ ದೇವ
ವ್ರತಕ್ಕಚ್ಚರಿ ನಿನ್ನ ಬಲುಮೆ ಮ
ಹೀತಳಕೆ ಪೊಸತಹುದೆ ಬಿಲುವಿದ್ಯಾತಿಶಯತನಕೆ ।
ಆತುಕೊಳ್ಳೆನ್ನ ಕೋಲುಗಳ ಕ್ಕೆ
ಯಾತವದಕಣೆಗಳಿಗೆವುಗ್ರಭ
ಟಾತಿಶಯರಾರೆನುತ ತೆಗೆದೆಚ್ಚರು ಮಹಾರಥರು ॥

೭೧ನೆಯ ಪದ್ಯವಾದಮೇಲೆ (ಟ. ನ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ವಿರಥನಾದನು ಧರ್ಮಜನು ಸಂ
ಗರಕೆ ಮೊಖದಿರುಹಿದನು ನಕುಲನು
ತಿರುಗಿದನು ಸಹದೇವನಟ್ಟೈಸಿದನು ದ್ರುಪದಾಂಕ ।
ಸರಿದನಾ ಹೈಡಿಂಬಿ ಸಾತ್ಯಕಿ
ಬಿರುದ ಧೃಷ್ಟದ್ಯುಮ್ನನೆಂಬಿನಿ
ಬರಿಗೆ ಪಲಾಯನವಾಯ್ತು ಕಳಶಜನಾಹವಾಗ್ರದಲಿ ॥

೭೨ನೆಯ ಪದ್ಯವಾದಮೇಲೆ (ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಗುರು ಯುಧಿಷ್ಠಿರರಿಗೆ ಮಹಾಸಂ
ಗರವು ಗಾಢಿಸೆ ಕಂಡು ಫಲುಗುಣ
ನುರವಣಿಸಿ ತಾಗಿದನು ಮೇಣ್ ಕಲಶಜನ ರಥವ ।
ಹರಿಸುತನ ಕೈಗುಣವನೀಕ್ಷಿಸಿ
ಮರಳಿ ಪಾಳೆಯ ಕೊಂಡು ರಥವನು
ತಿರುಹಿದನು ಕಲಿ ದ್ರೋಣನೆಲೆ ಧೃತರಾಷ್ಟ್ರ ಕೇಳೆಂದ ॥

ಹನ್ನೊಂದನೆಯ ಸಂಧಿಯಲ್ಲಿ ೧೦ನೆಯ ಪದ್ಯವಾದಮೇಲೆ (ಟ. ತ. ದ) ಪ್ರತಿಗಳಲ್ಲಿ ಈ ಕೆಳಗಿನ ಪದ್ಯವು ಹೆಚ್ಚಾಗಿದೆ.—

ಅಸಮ ಸಮರದಲಖಿಳ ಭೂಭುಜ
ರಸುವ ಬಿಡಿಸಿದ ತೇರು ಕರಿಗಳ
ಕುಸುರಿದಱಿದನು ಹಯವ ಕೊಂದನು ಸರಳ ಸಾರದಲಿ ।
ನುಸುಳಲನಿಲಂಗರಿದೆನಲು
ಪಸರಿಸಿದನಹಿತರ ತಲೆಯನಭ್ರದೊ
ಳಸಮಬಲ ಕಾದಿದನು ಕಟ್ಟಾಳುಗಳು ಕೈಗೆಡಲು ॥

೧೨ನೆಯ ಪದ್ಯವಾದಮೇಲೆ (ಜ. ಟ. ತ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಹರಿದವರುಣ ಜಲೌಘವಭ್ರಕೆ
ಸಿರದ ಸಂದಣಿಯಾಯ್ತು ಸಾತ್ಯಕಿ
ನರ ವೃಕೋದರರಿಂದವಗ್ಗಳನನುತ ಬಲ ಬೆದಱೆ ।
ಉರವಣಿಸೆ ಜಲಸಿಂಧನೆಂಬರಿ
ಬಿರುದನಿಭಸೇನೆಯನು ನೂಕಿಸಿ
ಸರಳ ಮಳೆಗರೆವುತ್ತ ತಡೆದನು ಸಾತ್ಯಕಿಯ ರಥವ ॥

೧೪ನೆಯ ಪದ್ಯವಾದಮೇಲೆ (ತ.ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಉರವಣಿಸಿ ಕೃತವರ್ಮನಂಬಿನ
ಸರಳ ಸುರಿವುತ ಕೆಣಕಿ ಕೈಕೊಂ
ಡರಿ ಭಟಾಗ್ರಣಿ ಮೆಚ್ಚಲೆಚ್ಚನು ಗೊಂಚಿನಂಬಿನಲಿ ।
ಅರರೆ ಕವಿದುದು ಶಕ್ರತನುಜನ
ಗರುಡಿಯುಹುದೋ ಬಲ್ಲೆನೆನುತಹೆ
ಶೌರ್ಯವದ್ಭುತವಾಯ್ತು ಸಾತ್ಯಕಿಯಂಬನೊಡೆಯೆಚ್ಚ ॥

೧೭ನೆಯ ಪದ್ಯವಾದಮೇಲೆ (ಚ.ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಕವಿದವಾನೆಗಳಲ್ಲಿ ರಾವುತರು
ರವಣಿಸಿದರು (?) ತಿವಿದರಂಬಿನ
ಸವಿಯು ಸಾರದಲವಘಟಿಸಿದರು ಸಬಳಿಗರು ।

ಸೆವಗ ಖಂಡಿಸಲೊಱಗಿದರು ಬಿ
ಲ್ಲವರು ಬಿಟ್ಟಿಱುಗಾಱರಾತನ
ಜವಗೆಡಿಸಿದರು ನಾಲ್ಕು ಕಡೆಯಲಿ ಮುಸುಕಿತರಿ ಸೇನೆ ||

ಹನ್ನೆರಡನೆಯ ಸಂಧಿಯಲ್ಲಿ ೪ನೆಯ ಪದ್ಯವಾದಮೇಲೆ (ಟ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯ.—

ವಿದಿತವರ್ಜುನನಿರಲು ನಮ್ಮ
ಭ್ಯುದಯುವಾತನ ಮರಣವವರ
ಭ್ಯುದಯ ವಿದಕೇನಾಯ್ತೆಂಬುದನರುಹು ತನಗೆನಲು |
ಮದವದರಿಭಟ ಭೈರವಂಗಾ
ಕದನದುತ್ಸವವಾಯ್ತು ಭೂಪನ
ಪದಕೆಱಗಿ ಕೈಕೊಂಡನಣ್ಣನ ನಿರುಪಮಾಜ್ಞೆಯನು ||

೫ನೆಯ ಪದ್ಯವಾದಮೇಲೆ (ಟ.ತ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ದೇವ ಕೌರವ ರಾಯ ಕಾನನ
ದಾವ ಶಿಖಿ ನಿಶ್ಶಂಕ ಘನ ಸಮ
ರಾವನೀಚೌಪಟ ವಿರೋಧಿ ಮನೋಜ ಜಯರುದ್ರ |
ದೇವಕುಲ ಸಂಭಾವ ಭೂಭುಜ
ರಾವು ರಾಜಘರಟ್ಟ ಸುಸ್ಥಿರ
ಜೀವಿ ಭಾಪೆಂದೊದಱುತಿರ್ದುದು ಭಟ್ಟ ಸಂದೋಹ ||

೬ನೆಯ ಪದ್ಯವಾದಮೇಲೆ (ತ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯ.—

ಮಾರಿ ಬಾಯ್ದೆಱೆದಳೋ ಮಹಾದೇ
ವಾರದೀ ಬಲವೆನುತ ಕೌರವ
ವೀರರೊಳು ಗುಜುಗುಜಿಸಿ ತಲ್ಲಣಿಸಿತ್ತು ರಿಪು ಸೇನೆ |
ಮಾರುತನ ರಿಪು ಮೇಘ ಪಟಲದ
ಸಾರಥನೊ ಪವನಜನ ಧುರ ಪರಿ
ವಾರಕುಳಿವಿಲ್ಲೆನುತ ಗಜಬಜಿಸಿತು ರಿಪುವ್ರಾತ ||

೨೧ನೆಯ ಪದ್ಯವಾದಮೇಲೆ (ಟ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯ.—

ಕಡಿದನಾನೆಯ ಕೊರಳುಗಳನರೆ
ಗಡಿದನಾರೋಹಕರ ಕಾಯುವ
ನಡಗುದಱಿದನು ಸಮರದೊಳಗಿದಿರಾದ ಪಟುಭಟರ |
ಗಿಡಿಗನಿದಿರಾದಹಿಯ ಪೊಲು ವಂ
ಗಡದ ಮೋಹರವಳಿದುದನಿಲಜ
ನೊಡನೆ ಸಮ್ಮುಖವಾದವರಿಗೀ ಯಮನ ನಗರಿಯಲಿ ||

ಹದಿಮೂರನೆಯ ಸಂಧಿಯಲ್ಲಿ ೨ನೆಯ ಪದ್ಯವಾದಮೇಲೆ (ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ಅಹುದಹುದು ಕಲಿ ಭೀಮ ಸಮರದ
ಸಹಸಿಗಳ ಲೆಕ್ಕಿಸೆನು ನೀನತಿ
ಸಹಸಿಗಸುವನು ತೆಱುವೆಯೆಂಬುದನಱಿಯಲಾ ಕೇಳ್ದು ।
ಜಹಿ ಮನದಲೆಸೆವಸ್ತ್ರ ತತಿಯನು
ವಹಿಲದಲಿ ಕೈಕೊಳಿಸೆ ಮುದದಲಿ
ಗಹಗಹಿಸಿ ಗರುವಾಯಿಯನುಪಮ ಪವನಜನ ಮೇಲೆ ॥

೯ನೆಯ ಪದ್ಯವಾದಮೇಲೆ (ಟ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯ.—

ಇಲ್ಲಿ ಕುಱಿದಱಿಯಾಯ್ತು ಹಯತತಿ
ಯಲ್ಲಿ ಪಲ್ಲಟವಾಯ್ತು ದಂತಿಗ
ಳಿಲ್ಲಿ ಕಿಗ್ಗಡಲಿಟ್ಟು ಹರಿದುದು ಶೋಣಿತಾಂಬು ನಿಧಿ ।
ಇಲ್ಲಿ ರಥ ಕಾಲಾಳು ಕರುಳಿನ
ಬಳ್ಳಿಯಿರುಬಿನೊಳಿಂದು ಕಾಲಿಡ
ಲಿಲ್ಲ ತಾನಿದು ಪವನಜನ ಪಥವೆನುತ ನಡೆತಂದ ॥

೧೯ನೆಯ ಪದ್ಯವಾದಮೇಲೆ (ಟ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯ.—

ಮುಱಿದು ಸೇನಾನಾಯಕರು ಕು
ಕ್ಕುರಿಸಿದರು ಕಲಿ ಭೀಮಸೇನನ
ಬಿಱುಬನಾನುವರಿಲ್ಲೆನಲು ಕಲಿ ಕರ್ಣನಿದಿರಾಗಿ ।
ತಱುಬಿದನು ದಿವ್ಯಾಸ್ತ್ರವನು ನಿ
ನ್ನುಱುಬು ಬೇಡೆಲೆ ಬಿಲುಗರುವವನು
ಮಱೆಯದಿರು ಫಡ ತೊಲಗು ತೊಲಗೆಂದೆನುತ ಮಾಱಾಂತ ॥

೨೦ನೆಯ ಪದ್ಯವಾದಮೇಲೆ (ಟ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯ.—

ಹೊಳೆವ ಕೆಂಗೆಂಪುಗಳ ಮೌಳಿಯ
ಲಲಿತ ರತ್ನದ ರೋಚಿಗಳ ಗಜ
ಗಲಿಸುವಂಬಿನ ವಾಯಿಧಾರೆಯ ಕಿಡಿಯ ಕಾಂತಿಗಳ ।
ಥಳಥಳಿಸೆ ಮುಂಕೊಂಡು ಕರ್ಣನ
ಕೊಳುಗುಳದನಪಹತ್ಯ ದಾವಾ
ನಳನುರುಜ್ವಾಲೆಗಳೆನಲು ಹೊಕ್ಕನು ಮಹಾಹವವ ॥

೨೧ನೆಯ ಪದ್ಯವಾದಮೇಲೆ (ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ರಾಯನೊಡಹುಟ್ಟಿಯ ಸವಿಸವಿದುವುಂ
ಬಾಯ್ತುತಿಕೆ ನಿನಗಹುದು ಸಭೆಯಲಿ
ಬಾಯ್ಬಿಯ ಬನ್ನಣೆಯಧಿಕ ವೀರಾಳಾಪ ನಿನಗಹುದು ।

ಗಾಯಕರು ಪಾತಕರಿಗೊಡವೆಯ
ಬೀಯಮಾಡಿದು ಭಳಿರೆ ಭಾಪೆಂ
ದಾಯತಿಕೆ ರಾವಣನ್ನುತುಱುಬಿದನು ಕಲಿ ಭೀಮ ॥

೩೯ನೆಯ ಪದ್ಯವಾದಮೇಲೆ (ಟ.ದ) ಪ್ರತಿಗಳಲ್ಲಿ ಹೆಚ್ಚಾಗಿರುವ ಪದ್ಯ.—

ತೂಗಿ ತೆಗೆದೆಚ್ಚನು ಕೃತಾಂತನ
ರಾಗವುಬ್ಬರಿಸುವ ಮೇಲರುಣಜ
ಲೌಘವನೇನನೆಂಬೆನ್ಮೈ ಹೊನಲಿಟ್ಟುದುದರದಲಿ ।
ತೂಗಿ ಥಟ್ಟುಗಿದಹಿತ ಸೇನೆಯ
ರೋಗರವರಸುಗಳು ಕುಡಿ ಬಿರು
ದೇಗಿದವು ಬಾಣೌಘವನೆ ರಿಪು ಗಾಲಿ ಮಸಗಿದವು ॥

ಹದಿನಾಲ್ಕನೆಯ ಸಂಧಿಯಲ್ಲಿ ೩೨ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯಗಳು.—

ಹರನ ಧಾರಣೆಯುದಟರಂಧಾ
ಸುರನ ಸುವ್ರತೆ ಹಿರಣ್ಯಕನ ದಿ
ಕ್ಕರಣೆ ತಾರಕನುಗ್ರ ತೀವ್ರತೆ ರಾವಣನ ಮುನಿಸು ।
ವರ ರಘುಜ ಶರ ನಿರುತ ಲಕ್ಷ್ಮಣ
ನುರುವ ಶರಸಂಧಾನ ದಿವಿಜೇ
ಶ್ವರನ ಧಾರಣೆ ವಿವಿಧ ಶರವಳವಟ್ಟುದರ್ಜುನಗೆ ॥

ಎಂದು ಮುರಹರ ಹೊಗಳುತಿರೆ ಕವಿ
ತಂದೆಸುವ ಸುಭಟರುಗಳಾ ಗುರು
ನಂದನಾದಿ ಮಹಾರಥರು ಸರಳೊಂದನೊಂದುಗಿದು ।
ಸಂದಣಿಸೆ ಬಾಣಗಳ ಕ್ಕೆಯುಲಿ
ಮುಂದೆ ಹಿಂದೆಡಬಲದ ಶ್ಕೆಲದ
ಬೃಂದ ಮೇರುವಿನಂತೆ ಮೆಱೆದರಿ ಬಲವ ತಱಿದನು ನರನು ನಿಮಿಷದಲಿ? ॥

ನೊಂದನಾ ಕೃಪನಖಿಳ ಮೋಹರ
ದಂದವಳಿದುದು ಬಿಲ್ಲ ಗುರುವಿನ
ನಂದನನು ಮಸೆಗಂಡ ದುಶ್ಶಾಸನನು ಮೈಮಱೆದ ।
ಸಿಂಧುರಾಜನ ಬಳಿಗೆ ಸರಿಯಲು
ನಿಂದು ಕರ್ಣನನೆರಡು ಬಾಣದಿ
ದಂದುಗಕೆ ನಿಲಿಸಿದನು ಪಾರ್ಥನು ನಿಮಿಷ ಮಾತ್ರದಲಿ ॥

೩೬ನೆಯ ಪದ್ಯವಾದಮೇಲೆ (ದ) ಪ್ರತಿಯಲ್ಲಿ ಹೆಚ್ಚಾಗಿರುವ ಪದ್ಯಗಳು.—

ಮುರಮಥನ ಬಿನ್ನಹವು ರವಿ ತಾ
ನಿರದೆ ಪಡುವಲು ಸಾರ್ದ ಸೈಂಧವ
ನಿರವು ನೆಲೆಯಾಗದು ಮಹಾದೇವೆನುತ ರಥವಿಳಿದು ।

ಹರಿಯು ನೀನೋಡೆನುತ ವಜ್ರದ
ಸರಳ ಕಿವಿವರೆಗುಗಿದು ಚಪುಕಕೆ
ಧರಣಿಯನು ಸೀಳಿದನು ನಿಮಿಷಾರ್ಧದಲಿ ಕಲಿ ಪಾರ್ಥ ||

ಉರಿಯು ಬಾಣವ ತೊಡಚಿ ಕುಂಡದ
ಉರಿಯುನನುಮಾಡಿಸಿತು . . ನಯು
ಹಿರಿಯು ಧರ್ಮಜ ಭೀಮರಿಗೆ ನಮಿಸಿದನು ಮನದೊಳಗೆ |
ಸುರಪತಿಗೆ ಕೈಮುಗಿದು ದಿಕ್ಪಾ
ಲರಿಗೆ ವಂದಿಸಿ ಕೃಷ್ಣದೇವನ
ಚರಣ ಧೂಳಿಯು ಶಿರದೊಳಗೆ ಧರಿಸಿದನು ಕಲಿ ಪಾರ್ಥ ||

ಮರಣ ಕಾಲದಿ ನಿನ್ನ ನಾಮ
ಸ್ಮರಣ ಮಾತ್ರದಿ ಸಕಲ ದುರಿತವು
ಹರದು ವೀರಸ್ವರ್ಗವಹುದಿದು ವೇದ ಸಿದ್ಧವಲೆ |
ಹರಿಯೆ ನೀನೋಡೆನುತ ಕುಂಡವ
ನೆರಡು ಬಳಸನುವಂದು ದೇವನ
ಪರಮ ಮೂರ್ತಿಯ ಮನದೊಳಗೆ ಧರಿಸಿದನು ಕಲಿ ಪಾರ್ಥ ||

ಮುರಮಥನ ಬೆಱಗಾಗೆ ಸುರಪತಿ
ನರನ ಕೇಡನು ಕಂಡು ಮನದಲಿ
ಮಱುಗಿದನು ಕಪಿ ಕುಲ ಲಲಾಮನು ಶಿರವನಾಗೊಲಿದು |
ಹರಹರಾ ಸುತಶೋಕವಾವನ
ಹುರಳು ಗೆಡಿಸದು ಪೊತುರೇ ಯೆಂ
ದರೆಗಳಿಗೆ ಕಂಬನಿಯು ಕಡಲೊಳಗಾಳ್ದನಾ ಹನುಮ ||

**University of Mysore**

Oriental Library Publications
KANNADA SERIES No. 23

GENERAL EDITOR
M. S. BASAVALINGAYYA, M.A., B.L.,
*Curator, Govt. Oriental Library, Mysore*

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

ಒಂಬತ್ತನೆಯ ಸಂಪುಟ

## ಕರ್ಣಪರ್ವ

# THE KARNĀTAKA MAHĀBHĀRATA

BY

KUMĀRA VYĀSA

Vol. IX

## KARNA PARVA

EDITED BY
THE KANNADA MAHABHARATA
EDITORIAL COMMITTEE

ASSISTED BY
N. ANANTHARANGACHAR, M.A., B.T.,
*Kannada Pandit, Govt. Oriental Library, Mysore*

MYSORE
PRINTED BY THE ASST. SUPDT., GOVT. BRANCH PRESS
1940

# ಮುನ್ನುಡಿ

ಮೈಸೂರು ಪ್ರಾಚ್ಯಕೋಶಾಗಾರದಿಂದ ಹಿಂದೆ ಪ್ರಕಟವಾದ ಭೀಷ್ಮ ದ್ರೋಣಪರ್ವಗಳಂತೆ ಈ ಕರ್ಣಪರ್ವವೂ ಪ್ರಾಚ್ಯಕೋಶಾಗಾರದ ಕಾರ್ಯ ನಿರ್ವಾಹಕ ಸಮಿತಿಯಿಂದ ಮಹಾಭಾರತದ ಶೋಧನೆಗೆ ನಿಯಮಿತವಾದ ಸಂಪಾದಕ ಮಂಡಲಿಯಿಂದ ಶೋಧಿತವಾಗಿ ಮುದ್ರಿಸಲ್ಪಟ್ಟಿದೆ. ಈ ಮಂಡಲಿಯ ಸದಸ್ಯರಲ್ಲಿ ಈ ಪರ್ವದ ಶೋಧನೆಯು ಪ್ರಾರಂಭವಾದಮೇಲೆ ಶ್ರೀಮಾನ್ ಡಿ. ಶ್ರೀನಿವಾಸಾಚಾರ್ಯ, ಎಂ.ಎ., ಅವರು ವಿಶ್ರಾಂತಿಯನ್ನು ಪಡೆದುದರಿಂದಲೂ, ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯ, ಎಂ.ಎ., ಅವರು ಪರಂಧಾಮವನ್ನೈದಿದುದರಿಂದಲೂ ಸಮಿತಿಯನ್ನು ಕೆಳಗೆ ಕಂಡಂತೆ ಮಾರ್ಪಡಿಸಲಾಯಿತು :

೧. ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

೨. ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು. ಎಂ.ಎ.

೩. ಶ್ರೀಮಾನ್ ಎಂ. ಎಸ್. ಬಸವಲಿಂಗಯ್ಯನವರು, ಎಂ.ಎ., ಬಿ.ಎಲ್.

೪. ಶ್ರೀಮಾನ್ ಆಸ್ಥಾನ ಧರ್ಮಾಧಿಕಾರಿ ತಿರುವಳ್ಳೂರು ಶ್ರೀನಿವಾಸರಾಘವಾಚಾರ್ಯರು.

೫. ಶ್ರೀಮಾನ್ ತಿ. ನಂ. ಶ್ರೀಕಂಠಯ್ಯನವರು, ಎಂ.ಎ.

ಈ ಪರ್ವವನ್ನು ಹನ್ನೊಂದು ಕೈಬರಹದ ಪ್ರತಿಗಳ ಸಹಾಯದಿಂದ ತಿದ್ದಿದೆ. ಇವುಗಳಲ್ಲಿ (ಘ. ಚ. ತ. ನ. ಪ. ಬ.) ಪ್ರತಿಗಳನ್ನು ಬಿಟ್ಟು ಉಳಿದುವು ಕೋಶಾಗಾರದಲ್ಲಿರತಕ್ಕುವು. (ಘ) ಎಂಬುದು ಶಾಸನದ ಇಲಾಖೆಯ ಪಂಡಿತರಾದ ಶ್ರೀಮಾನ್ ಆರ್. ರಾಮಾನುಜ ಚಕ್ರವರ್ತಿಗಳು ಕೊಟ್ಟುದು. (ಚ) ಎಂಬುದು ಅಳಿಲುಘಟ್ಟದ ಶಾನುಭೋಗರು ಕೊಟ್ಟ ಪ್ರತಿ. (ತ) ಎಂಬುದು ಶಾಸನದ ಇಲಾಖೆಯ ಅಸಿಸ್ಟೆಂಟರಾದ ಶ್ರೀಮಾನ್ ಆರ್. ರಾಮರಾಯರ ಮೂಲಕ ಗೌಜುಗ್ರಾಮದ ಗಣೇಶಭಟ್ಟರಿಂದ ಬಂದ ಪ್ರತಿ. ಈಗಿರುವ ಪ್ರತಿಗಳಲ್ಲಿ ಇದೇ ಉತ್ತಮವಾದುದು. (ನ) ಎಂಬುದು ಮೈಸೂರು ಇಂಟರ್‌ಮೀಡಿಯೇಟ್ ಕಾಲೇಜಿನ ಕನ್ನಡ ಅಧ್ಯಾಪಕರಾದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಕೊಟ್ಟ ಪ್ರತಿ.

(ಪ) ಮತ್ತು (ಬ) ಎಂಬುವು ಕ್ರಮವಾಗಿ ಮದ್ರಾಸ್ ಪ್ರಾಚ್ಯಕೋಶಾಗಾರದ ೧೬-೮-೧೦ ಮತ್ತು ೧೮-೧-೨೦ನೆಯ ನಂಬರಿನ ಪ್ರತಿಗಳು.

ಕೋಶಾಗಾರದ ಪ್ರತಿಗಳಲ್ಲಿ—

(ಕ) ಇದು ಕೈಬರಹದ ಕೆ. ೨೦೫ನೆಯ ನಂಬರಿನ ಪ್ರತಿ. ಕ್ರಿ. ಶ. ೧೫೫೪ರಲ್ಲಿ ಪ್ರತಿಯಾದುದು. ಇದುವರೆಗೆ ನಮಗೆ ದೊರೆತಿರುವ ಕನ್ನಡ ಮಹಾಭಾರತದ ಕೈಬರಹದ ಪ್ರತಿಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದುದು.

(ಖ) ಇದು ಕೆ. ೫೪೧ನೆಯ ನಂಬರಿನ ಪ್ರತಿ. ಸಾಮಾನ್ಯವಾಗಿ ಶುದ್ಧವಾಗಿದೆ.

(ಗ) ಇದು ಕೆ. ೭೦ನೆಯ ನಂಬರಿನ ಪ್ರತಿ. ಶಾ. ಶ. ೧೭೬೩ರಲ್ಲಿ ಪ್ರತಿಯಾದುದು.

(ಟ) ಇದು ಕೆ. ೨೫೧ನೆಯ ನಂಬರಿನ ಪ್ರತಿ.

(ದ) ಇದು ಕೆ. ೧೬೩ನೆಯ ನಂಬರಿನ ಪ್ರತಿ.

ಹಿಂದಿನ ಪರ್ವಗಳಂತೆ ಈ ಪರ್ವವನ್ನು ಶೋಧನೆಮಾಡುವುದರಲ್ಲಿಯೂ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪದ್ಯಗಳನ್ನೇ ಮೂಲಪಾಠವನ್ನಾಗಿಟ್ಟುಕೊಂಡು ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪದ್ಯಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿಯೂ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿ ಪರಿಶಿಷ್ಟವಾಗಿಯೂ ಕೊಟ್ಟಿದೆ.

ಪಾಠಗಳನ್ನು ಶೋಧಿಸುವುದಕ್ಕೆ ಪ್ರತಿಗಳನ್ನು ದಯವಿಟ್ಟು ಕೊಟ್ಟು ಸಹಾಯಮಾಡಿದ ಎಲ್ಲ ಮಹನೀಯರಿಗೂ ಪ್ರಾಚ್ಯಕೋಶಾಗಾರವು ಋಣಿಯಾಗಿದೆ.

———

# ವಿಷಯಾನುಕ್ರಮಣಿಕೆ

# ಕನ್ನಡ ಮಹಾಭಾರತ

## ಕರ್ಣ ಪರ್ವ

### ಮೊದಲನೆಯ ಸಂಧಿ

ಸೂಚನೆ ॥ ರಾಯಕಟಕಾ[1]ಚಾರ್ಯನಾ[1] ತಳು
ವಾಯು ಸೇನಾಪಟ್ಟವನು ರಾ
ಧೇಯನಲಿ ರಚಿಸಿದನು ಮುದದಲಿ ಕೌರವರ ರಾಯ ॥

ಕೇಳು ಜನಮೇಜಯ ಧರಿತ್ರೀ
ಪಾಲ ತೆಗೆದವು ಬಲವೆರಡು ನಿಜ
ಪಾಳಯಕೆ ಪರಿತೋಷಖೇದಸ್ತಿಮಿತ[2]ವಿಕ್ರಮರು[2] ।
ಕೋಲಗುರುವಿನ ಮರಣವಾರ್ತಾ
ಕಾಲಸರ್ಪನ ತಂದು ಸಂಜಯ
ಹೇಳಿಗೆಯನೀಡಾಡಿದನು ಧೃತರಾಷ್ಟ್ರನಿದಿರಿನಲಿ ॥ ೧

ಬೆದಱಿತಾಯಾಸ್ಥಾನ ಧಿಗಿಲೆಂ
ದುದು ಧರಾಧೀಶ್ವರನ ತಂದೆಯ
ಹೃದಯದಲಿ ಹುರು[3]ಳೇನು[3] ಬಳಿಕುಳಿದವರ ಮೋಱೆಗಳ ।
ಕದಡಿತಂತಃಕರಣವರಸನ
ಕದಪು ಕೈಯಲಿ ಕೀಲಿಸಿತು ಹೇ
ಳಿದನು ಸಂಜಯ ಮತ್ತೆ ಮೇಲಣ ರಣದ ವಾರ್ತೆಯನು ॥ ೨

ಗುಡಿಯ ಕಟ್ಟಿಸು ಜೀಯ ಬಱಿತುದು
ಕಡಲು ಮುಱಿದುದು ಮೇರು [4]ತಿರುಗಿತು[4]
ಪೊಡವಿ ಬಿದ್ದುದು ಭಾನುಮಂಡಲವ[5]ಹಹ[5] ವಿತಳದಲಿ ।
ಮಡಿದುದೈ ನಿನ್ನಾನೆ ನಿನ್ನು
ಗ್ಗಡದ ಭಟ ಬೀಳ್ಕೊಂಡನೈ ಕಡಿ
ವಡೆದನೈ ಕಲಿಕರ್ಣನೊಸಗೆಯ ಮಾಡಹೇಳೆಂದ ॥ ೩

---

[1] ಚಾರಿಯನ (ಪ). [2] ವಿಗ್ರಹರು (ಕ). [3] ಳಿಲ್ಲ (ಕ). [4] ತಗ್ಗಿತು (ಟ), ಕರಗಿತು (ತ.ಪ). [5] ಮಮ (ಗ.ಟ).

ಮೊದಲಲಿದ್ದುದು ಜೀವಕಳೆ ಹೃದ
ಯದಲಿ ಹೃದಯವನೊಡೆದು ಮಿಗೆ ಕಂ
ಠದಲಿ ಕವಿದುದು ಮಂಚದಲಿ ಮೈಮುಱಿದು ಮಲಗಿದನು।
ಕೆದಱಿತಲ್ಲಿಯದಲ್ಲಿ ರಾಯನ
ಹದನನಱಿದೊಳಗೊಳಗೆ [1]ರಾ[1]ಣಿಯ
ತೊದಱಿಲಂತಃಪುರದಲುಕ್ಕಿತು ಶೋಕರಸಜಲಧಿ ॥ ೪

ಬಾಯ ಬಸುಱಿನ ನೊಸಲ ಹೊಯ್ಲಿನ
ರಾಯನರಸಿಯರ[2]ರಸನಿದಿರಲಿ[2]
ಹಾಯಿದರು ಭಿತ್ತಿಗಳನೊದಱಿದರೊಡನೆ ದೆಸೆಯೊದಱೆ।
ರಾಯನಾವೆಡೆ [3]ಜೀಯ[3] ಕಲಿರಾ
ಧೇಯನಾವೆಡೆ ನೂಱು ಮಕ್ಕಳು
ಬೀಯವಾದರೆ ಮಾವ ಎಂದರು ಸೊಸೆಯರಡಗೆಡೆದು ॥ ೫

ರವಕುಳವ ನಾನೇನ ಹೇಳುವೆ
ನವನಿಪತಿಯಾ ಕರ್ಣ ಮೊದಲಾ
ದವರ ರಾಣೀವಾಸ ಬಹಳಾಕ್ರಂದನ ಧ್ವನಿಯ।
ಕವಿದುದೊಳಸೂಱೆಗರು ಕೋಟೆಯ
ತವಕಿಗರು ಗುಜುಗುಜಿಸೆ ಬಿಗಿದವು
ಭವನಭವನಕವಾಟ [4]ತ[4]ತಿಗಾಳಾಯ್ತು ಗಜನಗರ ॥ ೬

ನೆರೆದುದಲ್ಲಿಯದಲ್ಲಿ ಸೂಱೆಗೆ
ಹರಿದುದಲ್ಲಿಯದಲ್ಲಿ ಮನ ಮ
ತ್ಸರದ[5]ಜಗಳಕೆ[5] [6]ಸೂಳುಬಂಟರು[6] ಹೊಯ್ದರೊಳಗೊಳಗೆ।
ಅರಮನೆಯುಲಿ ಜೊಬ್ಬೆ ಹಸ್ತಿನ
ಪುರದಲೀ ಜೊಬ್ಬಾಟವಿನ್ನಾಳಿ
ದರಸುಗಳ ಪಾಡಾವುದೆಂದನು ಮುನಿ ನೃಪಾಲಂಗೆ ॥ ೭

ಸೂಱೆ[7]ಹೋದುದು[7] ನಗರಿ ಐಳರಿಗೆ
ಮಾಱಿದರು ಪಟ್ಟಣವನಕಟಾ
ಕಾಱುಮಾದ್ರಿಗೆ ಹೋಹುದೇ ಕ್ಕೈಮಸಕ[8]ವವನಿಪನ।

[1] ರಮ (ಕ). [2] ರತ್ತೈಱಿದಿರಲಿ (ನ.ಪ.ಬ). [3] ಮಾವ (ಕ). [4] ವ (ತ). [5] ಬಳಿವಿಗ (ಕ), ದೆಳವಿಗೆ (ನ). [6] ಸೂಳೆಬಂಟಿಕೆ (ಕ). [7] ಯೋದುದು (ನ), ಪೋಯಿತು (ತ). [8] ನವಾಯ್ತಲಾ ಕ್ಕೈಮಸಕಿದ (ಕ.ಗ).

ನೂಱು ಮಕ್ಕಳನಿಕ್ಕಿ ಸಾಧಿಸ
ಲಾಱನೇ ಜಯಸಿರಿಯನೆಂದುಱೆ
[1]ಮಿಾ[1]ಱಿ ನುಡಿ[2]ದುದು[2] ಮಂತ್ರಿಗಳು ಧೃತರಾಷ್ಟ್ರನಿದಿರಿನಲಿ ‖ ೮

ಎರಡು ಗಲ್ಲದ ನಯನವಾರಿಯ
ಹರಿಕುಣಿಯ [3]ನಿಲಿ[3]ಸಿದನು ಸಂಜಯ
ನರಸನನು ಕುಳ್ಳಿರಿಸಿ ಬೆನ್ನಿಗೆ ಚಾಚಿದನು ಮಲಗ ।
ಅರಸ ಹದುಳಿಸು ನಿನ್ನ ಸೊಸೆಯರ
ಕರೆದು ಸಂತೈಸಕಟ ಹಸ್ತಿನ
ಪುರದ ಗಾವಳಿ ಗಜಬಜಕೆ ಡಂಗುರವ ಹೊಯ್ಸೆಂದ ‖ ೯

ಬೀದಿಬೀದಿಗಳೊಳಗೆ ಡಂಗುರ
ನಾದವೆಸೆ[4]ದವು[4] ಕೇರಿಕೇರಿಗೆ
ಕೈದುಕಾಱರು ನೆರೆದು ನಿಂದರು ಸೂಱೆಗರ ಕೆಡಹಿ ।
ಸುಯ್ದು ನಡಿಗಡಿಗೊಲೆದೊಲೆದು ಪರಿ
ಖೇದ ಶೋಕ ಜ್ವಲನ ಜನಿತ
ಸ್ವೇದ ಸಲಿಲ ಸ್ತಿಮಿತ ಕಾಯನು ರಾಯನಿಂತೆಂದ ‖ ೧೦

ಹೇಳು ಸಂಜಯ ನಮ್ಮ ಭಾಗ್ಯದ
ಶಾಳಿ ವನ ಫಲವಾಯ್ತಲಾ ಕೈ
ಮೇಳವಿಸಿದನೆ ಕರ್ಣನಮರಸ್ತ್ರೀ ಕದಂಬದಲಿ ।
ಹೇಳು ಹೇಳೆನ್ನಾಣೆ ಮಾತಿನ
ಜಾಳಿಗೆಯ ಮಱೆ ಬೇಡ ಕುರುಪತಿ
ಕಾಳೆಗದೊಳಸ್ತಮಿಸಿದನೆ ನುಡಿಯಂಜಬೇಡೆಂದ ‖ ೧೧

ಸಾವೆನಾನೆಂದಂಜದಿರು ಕ
ರ್ಣಾವಸಾನವ ಕೇಳಿ ತನ್ನಯ
ಜೀವವಿದಲಾ ದೇಹದಲಿ ಬೇಱಿನ್ನು ಕೆಲ[5]ಬರಲಿ[5] ।
[6]ಸಾವನೇ[6] [7]ತಾ[7]ನಕಟ ಕೌರವ
ಜೀವಿಸಲಿ ಮೇಣಳಿಯಲೆಮಗಿ
ನ್ನಾವ ತೊಡ[8]ಕಿಲ್ಲಿನ್ನು[8] ವಜ್ರಶರೀರ ತಾನೆಂದ ‖ ೧೨

---

[1] ದೂ (ಕ). [2] ದರು (ಭ). [3] ಕೆಡಿ (ಕ). [4] ದುದು (ತ).
[5] ವುದಿನ (ಕ). [6] ಸಾವವನೆ (ತ). [7] ನಾ (ತ). [8] ಕುಗಳಿಲ್ಲ (ಕ).

ಘಾಯವಡೆದನು ಭೀಷ್ಮ ಬಳಿಕಿನೊ
ಳಾಯುಧದ ಗುರು ತೊಡಬೆಗಳಚಿದ
ನೀಯವಸ್ಥೆಗೆ ನಮ್ಮ ತಂದನು [1]ಭಾನುನಂದನನು[1] |
ಸಾಯನೇ ಮಗನಿನ್ನು ಸಾಕಾ
ನಾಯ ನುಡಿಯಂತಿರಲಿ ಕರ್ಣಂ
ಗಾಯಿತೇ ಕಡೆ ಶೋಕವನು ವಿಸ್ತರಿಸಿ ಹೇಳೆಂದ || ೧೩

ಸರಳ ಕೊರತೆಯೊ ಸಾರಥಿಯ ಮ
ತ್ಸರವೊ ರಥದ ವಿಘಾತಿಯೋ ದು
ರ್ಧರ ಧನುರ್ಭಂಗವೊ ಮಹಾಸ್ತ್ರವ್ಯಥೆಯೊ ರವಿಸುತನ |
ಹುರುಳುಗೆಡಿಸಿದರೆಂತು ರಿಪುರಾ
ಯರಿಗೆ ನಾವ್ ಗೋಚರವೆ ದುರಿತೋ
ತ್ಕರುಷವೈಸಲೆ ನಮ್ಮ ಕೆಡಿಸಿತು ಶಿವಶಿವಾ ಎಂದ || ೧೪

ಹರುಹುಗೆಟ್ಟುದು ತೇರು ಸಾರಥಿ
ಹುರುಳುಗೆಡಿಸಿಯೆ ನುಡಿದನಂಬಿನ
ಕೊರತೆ ತಾ ಮುನ್ನಾಯ್ತು ದೈವದ್ರೋಹಿಗಳು [2]ನಿ[2]ಮಗೆ |
ಅರಿವಿಜಯವೆಲ್ಲಿಯದು ನೀವ್ ಮನ
ಬರಡರೈ ನಿಮ್ಮನ್ವಯವ ಸಂ
[3]ಹರಿಸಿ[3]ದಿರಿ ಸಾಕೆಂದು ಸಂಜಯ ತೂಗಿದನು ಶಿರವ || ೧೫

ಸುರನರೋರಗರರಿಯೆ ನಾವ್ ಬಾ
ಹಿರರು ಭಂಗಿಸಬೇಡ ಸಾಕಂ
ತಿರಲಿ ಕರ್ಣಾಹವದ ಕರ್ಣಾಮೃತವ ಸುರಿ ಸಾಕು |
ಅರಿಗಳಭ್ಯುದಯವನು ನಮ್ಮಪ
ಸರಣವನು ಕಿವಿಯಾರೆ ಕೇಳುವ
ಪರಮ ಸುಕೃತಿಗಳಾವು ನೀ ಹೇಳಂಜಬೇಡೆಂದ || ೧೬

ಹೇಳಿದನು ಬಳಿಕೆರಡು ಘಟ್ಟಿನೊ
ಳಾಳು ಕುದುರೆಯ ಗಜರಥವ ಭೂ
ಪಾಲರಳಿದುಳಿದವರ ಲೆಕ್ಕವನೈದೆ ವಿಸ್ತರಿಸಿ |

---

[1] ಕೌರವರರಾಯ (ಕ). [2] ತ (ಕ). [3] ವರಿಸ (ಕ.ಗ.ಚ).

ಕೇಳು ನಿನ್ನಾತನ ವಿನೋದದ
ಖೂಳ ಬೋಳೆಯತನದಲೊದಗಿದ
ಬಾಳಿಕೆಯ ಬೀಸರವನೆಂದನು ಸಂಜಯನು [1]ನಗುತ[1] ॥ ೧೭

ತೊಡರ ತೆಗೆದರು ಕೈಯಡಾಯ್ದವ
[2]ಜಡಿಯಲಮ್ಮರು[2] ಹೊತ್ತ ದುಗುಡದ
ನಿಡುಮುಸುಕುಗಳ ಬಿಗಿದ ಬೆಱಗಿನ ಬಿಟ್ಟ ಕಣ್ಣುಗಳ ।
ಒಡೆಯನಿದಿರಲಿ ಕುಳ್ಳಿರದೆ ಕೆಲ
ಕಡೆಯ ಕೈದೀವಿಗೆಯ ಮಱೆಯಲಿ
ಮಿಡುಕ[3]ದಿರ್ದುದು[3] ರಾಯನೋಲಗದೊಳಗೆ ಪರಿವಾರ ॥ ೧೮

ಸಾಲ ಸಾವಿರ ದೀವಿಗೆಯ ಹರಿ
ದಾಳಿಗಳುಕದೆ ನೃಪರ ಮೋಱೆಗ
ಳೋಳಿಗಳ ನೆಱೆ ಹೊದ್ದಿ ಕತ್ತಲೆ ನಿಂದುದಲ್ಲಲ್ಲಿ ।
ಹೇಳಲೇನದ ಬಹಳ ದುಗುಡದ
ಪಾಳೆಯವೊ ನಿನ್ನಾತನೋಲಗ
ಶಾಲೆಯೋ ನಾವಱಿಯೆವೆಂದನು ಸಂಜಯನು [4]ನೃಪಗೆ[4] ॥ ೧೯

ಎಲೆ ಮಿಡುಕದಾಸ್ಥಾನ ವೀಳೆಯ
ದೆಲೆಯ ಮಡಿಸುವ ರಭಸವಿಲ್ಲೊಳ
ಗೊಳಗೆ ಸನ್ನೆಗಳೋರೆಗೊರಳುಗಳೌಡುಗಚ್ಚುಗಳ ।
ಹಳ[5]ಸಿ[5]ದಗ್ಗಳಿಕೆಗಳ ಮಾಸಲು
ಗಳೆದ ಬಿರುದಿನ ಮಾನಭಂಗದ
ಕಳವಳದ ಕನಸುಗಳಲಿದ್ದುದು ರಾಯನಾಸ್ಥಾನ ॥ ೨೦

ಕೆತ್ತುಕೊಂಡಿರಲೇಕೆ ನೀವಿ
ನ್ನುತ್ತರಾಯಿಗಳೆಮ್ಮ ಭಾಗ್ಯದ
ಬಿತ್ತು ಹುರಿದರೆ ಬಿರುದ ಭಟರಿದ್ದೇನಮಾಡುವರು ।
ಮೆತ್ತಿದಂಬಿನ ಮೆಯ್ಯ ಭೀಷ್ಮನು
ಹೊತ್ತ ಕೈದುವ ಬಿಸುಟ ಕಳಶಜ
ನುತ್ತಮಿಕೆಗಳ ಮೆಱೆದರೆಂದನು ಕೌರವರ ರಾಯ ॥ ೨೧

---

[1] ನೃಪಗೆ (ಬ.ನ). [2] ನೊಡನೆ ಬಿಸಟರು (ಕ). [3] ದಿರ್ದರು (ಚ.ಟ.ತ).
[4] ನಗುತ (ಕ). [5] ಚಿ (ಕ).

ಬಿಗಿದ ತಿಮಿರದ ಕೆಚ್ಚು ಸೂರ್ಯನ
ಸೊಗಡು ಹೊಯ್ದರೆ ಮುರಿಯದೇ ಕಾ
ಳೆಗಕೆ ಕರ್ಣನ ಕೈದು ಭಂಡಾರಿಸಿದುದಿನ್ನಬರ ।
ತೆಗೆಸುವೆವು ನಾಳಿನಲಿ ನಿಮ್ಮಯ
ಮೊಗದ ದುಗುಡದ ದಡ್ಡಿಯನು ಮೈ
ದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ ॥ ೧೨

ಜೀಯ ಸಂಶಯ[1]ವಿಲ್ಲ[1] ಗುರು ಗಾಂ
ಗೇಯರಳುಕಿದ[2]ರೇನು[2] ಕಲಿ ರಾ
ಧೇಯನೇ ವಜ್ರಾಂಗಿ[3]ಯಲ್ಲಾ[3] ನಮ್ಮ ಮೋಹರಕೆ ।
ರಾಯ ನೀ ಪತಿಕರಿಸಿದರೆ ಚ
ಕ್ರಾಯುಧನ ಚಾತುರ್ಯ ಕೊಳ್ಳದು
ಜೀಯ ಕರ್ಣನ ಮುಂದೆಯೆಂದುದು ನಿಖಿಳ ಪರಿವಾರ ॥ ೧೩

ಬೇಱೆ [4]ತನ[4]ಗಗ್ಗಳಿಕೆಯೋಲೆಯ
ಕಾಱತನವೇ ರಾಯ ಮನವೊಲಿ
ದೇಱಿಸಿದರೇಱುವುದು ದೊರೆ ಮನಮುರಿಯೆ ಕುಂದುವುದು ।
ತೋಱಿ ನುಡಿದರೆ ಭೀಷ್ಮದ್ರೋಣರು
ಜಾಱಿಸಿದ ರಣವೆಮಗೆ ಸದರವೆ
ದೂಱುವವರಾವಲ್ಲವೆಂದನು ಭಾನುಸುತ ನಗುತ ॥ ೧೪

ಸಾಕದಂತಿರಲಿನ್ನು ಘಟ್ಟಿಂ
ಗಾಕೆವಾಳರ ಮಾಡು [5]ಸಾಕಾ[5]
ಸ್ತೋಕಪುಣ್ಯರ ಮಾತದೇತಕೆ ಗುರುನದೀಸುತರ ।
ಸಾಕಿ ಸಲಹಿದೆ ಕರ್ಣನನು ಹುರು
ಡೇಕೆ [6]ಗುಣದೊಳಗೀತ[6] ಸೇನಾ
ನೀಕಭಾರದ ಹೊಱಿಗೆಗಹನೆಂದನು ಕೃಪಾಚಾರ್ಯ ॥ ೧೫

ಎಮ್ಮ ತೋ[7]ಱಿಸ[7]ಬೇಡ ಸುಖದಲಿ
ನಿಮ್ಮ ಚಿತ್ತಕೆ ಬಹುದ ಮಾಡುವು
ದೆಮ್ಮ ಹೃದಯವ್ಯಥೆಯ ಸಾಪಿನ್ನಾಡಿ ಫಲವೇನು ।

---

[1] ವೇನು (ಕ). [2] ರಿಂದು (ಕ), [3] ಯಹುದಲೆ. [4] ನಮ (ತ.ಬ).
[5] ಘಾಪ (ಕ), ಸಾಕೀ (ತ.ಪ.ಬ). [6] ಗುಣದಲಿ ಕರ್ಣ (ದ.ಪ). [7] ಱಲು (ತ).

ಎಮ್ಮ ಪುಣ್ಯದ ಬೆಳೆಗಳೊಣಗಿದ
ಡಮ್ಮಿ ಮಾಡುವುದೇನು ಕರ್ಣನು
ನಮ್ಮ ದಳವಾಯೆಂದನಶ್ವತ್ಥಾಮನರಸಂಗೆ ‖ ೨೬

ಆ ಮಹಾರಥ ಭೀಷ್ಮನೇ ಸ್ವೇ
ಚ್ಛಾಮರಣಿಯಾಚಾರ್ಯಚಾಪ
ವ್ಯೋಮಕೇಶನು ಹೊಕ್ಕು ಕಾಣರು ಹಗೆಗೆ ಹಱಿವುಗಳ ।
ಆ ಮಹಾನಾರಾಯಣಾಸ್ತ್ರದ
ಸೀಮೆ [1]ಸೀದುದು[1] ಮಿಕ್ಕ ಭಟರು
ದ್ದಾಮರೇ ಸಾಕಿನ್ನು ಸೇನಾಪತಿಯ ಮಾಡೆಂದ ‖ ೨೭

ಕರಸಿದನು ಭೂಸುರರನೌದುಂ
ಬರದ ಮಣಿ ಮಡಿವರ್ಗ ದೂರ್ವಾಂ
ಕುರ ಸಿತಾಕ್ಷತ ಧವಳಸರ್ಷಪ ವರಫಲಾವಳಿಯು ।
ತರಿಸಿದನು ಹೊಂಗಳ[2]ಶ[2] ತತಿಯಲಿ
ವರ[3]ನದೀವಾರಿಗಳ[3]ನಾಡಂ
ಬರದ ಲಗ್ಗೆಯಲೊದಱಿದವು ನಿಸ್ಸಾಳ ಕೋಟಿಗಳು ‖ ೨೮

ವಿರಚಿಸಿತು ಪಟ್ಟಾಭಿಷೇಕೋ
ತ್ಕರುಷ ಮಂತ್ರಾಕ್ಷತೆಯ ಮಳೆಗಳ
ಕರೆದರವನೀಸುರರು ಜಯರವ[4]ಮೇಘ[4]ಘೋಷದಲಿ ।
ಗುರುಸುತಾದಿ ಮಹಾಪ್ರಧಾನರು
ದರುಶನವ ನೀಡಿದರು ಕರ್ಣನ
ಬಿರುದಿನುಬ್ಬಟೆ ಲಹರಿ ಮಸಗಿತು ವಂದಿ ಜಲಧಿಯಲಿ ‖ ೨೯

ಅರಳಿತರಸನ ವದನ ಶಕುನಿ[5]ಯ[5]
ಹರುಷ ಮಿಗೆ ದುಶ್ಶಾಸನಂಗು
ಬ್ಬರಿಸೆ ರೋಮಾವಳಿ ವಿಕರ್ಣಾದಿಗಳ ಮನ ನಲಿಯೆ ‖

---

[1] ಬಿದ್ದುದು (ಕ). [2] ಸ (ತ) [3] ಜಲವದೀಪಗಳ (ಕ).
[4] ವೇದ. [5] ಗೆ (ತ).

ಗುರುಜ ಕೃಪ ಕೃತವರ್ಮ ಶಲ್ಯಾ
ದ್ಯರಿಗೆ ಹೊಸಕದೊಲಹು ಮಿಗಿಲಾ
ಯ್ತಿರುಳು ಕರ್ಣಗೆ ಪಟ್ಟವಾ[1]ಯಿತು[1] ಭೂಪ ಕೇಳೆಂದ ||* ೩೦

ಮೊದಲನೆಯ ಸಂಧಿ ಮುಗಿದುದು.

---

[1] ದುದು (ತ).

* ಈ ಪದ್ಯವಾದಮೇಲೆ (ಟ.ತ.ಪ.ಬ) ಪ್ರತಿಗಳಲ್ಲಿ ಕೆಳಗಿನ ಪದ್ಯ ಹೆಚ್ಚಾಗಿವೆ :—

ನಾರಿಯರು ಮಣಿರತ್ನದೊಡಿಗೆಯು
ಭಾರಿಯರು ಕಂದರ್ಪವನಸಹ
ಕಾರಿಯರು ನೆರೆದಡಿಸಿ ಕ್ಕೆಕ್ಕೆ ಮುಂಚಿ ತಮತಮಗ |
ವೀರಸೇಸೆಯನಳವಡಿಸಿ ವಿಮ
ಳಾರತಿಯ ಸುಳಿಸಿದರು ನಿಜಪರಿ
ವಾರವೋಲಾಡಿತ್ತು ಬಹಳಾನಂದ ಜಲಧಿಯಲಿ ||

# ಎರಡನೆಯ ಸಂಧಿ

ಸೂಚನೆ ॥ ಭೀಮವಿಕ್ರಮ ಕುರುಬಲದೊಳು
ದ್ದಾಮ ಕರ್ಣಾಹವದೊಳಗ್ಗದ
ಕ್ಷೇಮಧೂರ್ತಿ ನೃಪಾಲಕನ ಕೆಡಹಿದನು ಕಲಿಭೀಮ ॥ *

ಮಗನು ದಳಪತಿಯಾದ ಗಡ ಕಾ
ಳೆಗವ ನೋಡುವೆನೆಂಬವೊಲು ಜಗ
ದಗಲದಲಿ ನೆಱೆ ಕಡಿತವಿಕ್ಕಿತು ತಿಮಿರವನದೊಳಗೆ ।
ಹೊಗರು ಕುವಳಯಕಳಿಯೆ ಸೊಂಪಿನ
ನಗೆ ಸರೋರುಹಕೊಗೆಯೆ ವಿರಹದ
ಢಗೆ ರಥಾಂಗ[1]ದೊಳ[1]ಳಿಯೆ ರವಿಯುದಯಾಚಳಕೆ ಬಂದ ॥ ೧

ಸೂಳು ಮಿಗಲಳ್ಳಿಱಿದವುರು ನಿ
ಸ್ಸಾಳಕೋಟಿಗಳು[2]ದ[2]ಯದಲ ದಿಗು
ಜಾಲ ಜರಿಯಲು ಝಾಡಿಗೆದಱುವ ಗೌಱುಗಹಳೆಗಳ ।
ತೂಳುವಱೆಗಳ ರಾಯಗಿಡಿಗನ
[3]ಘೋಳ[3] ಘೋರದ ಘೋಷವವನಿಯ
ಸೀಳೆ ನಡೆದುದು ಸೇನೆ ರವಿನಂದನನ ನೇಮದಲಿ ॥ ೨

ಮೋಹರಿಸಿತಿದು ನಡೆದು ಮಕರ
ವ್ಯೂಹದಲಿ ಬಳಿಕರ್ಧಚಂದ್ರ
ವ್ಯೂಹದಲಿ ಬಂದೊಡ್ಡಿ ನಿಂದುದು ಪಾಂಡುಸುತಸೇನೆ ।

---

* ಇದರ ಮುಂದೆ (ಗ.ದ.) ಪ್ರತಿಗಳಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ :—

ಕೇಳು ಜನಮೇಜಯಧರಿತ್ರೀ
ಪಾಲ ಕರ್ಣನ ವೀರಪಟ್ಟದ
ಮೇಲೆಯಿರುಳಿನ ಜಾವಗಳು ಕ್ಷಣವಾಗಿ ತೋಱಿದವು ।
ಹೇಳಲೇನದ ಕುರುಪತಿಯ ಹೇ
ರಾಳದುಬ್ಬಿನ ಗಂಡನಾಗಲೆ
ಸೋಲಿದನಲೈ ಪಾಂಡುಸುತಸೇನೆಯುನುದಯದೊಳಗೆ ॥

[1] ಕ್ಕ (ಪ). [2] ಥ (ಕ). [3] ಸಾಲ (ಕ).

ಮೋಹರಿ[1]ಸಲೊ[1]ಡವೆರಸಿ ಹೊಯ್ದರು
ಗಾಹುಗತಕವನುಳಿದು ಚೂಣಿಯ
ಸಾಹಸಿಗರು ಸನಾಮ[2]ರೊದಗಿ[2]ದರೆರಡು ಥಟ್ಟಿನಲಿ ॥ ೩

ಹೊಯ್ದು ಮುಗ್ಗಿತು ಭಟರು ವೆಗ್ಗಳ
ಕೈದುಕಾಱರು [3]ತ[3]ಲೆಗೆ ಸಂದರು
[4]ಮೈದೆಗೆಯದೊಡವೆರಸಿ[4] ಹೊಕ್ಕರು ಬೇಹಬೇಹವರು ।
ಕೊಯ್ದು ಕೊರಳಿನ ಕೊಱೆದ ತೋಳಿನ
ಹಾಯ್ದು ಮೂಳೆಯ ಸುರಿ[5]ವ[5] ಕರುಳಿನ
ಲೆಯ್ದೆ ಪಡೆ[6]ಗೇಱಾಯ್ತು[6] ಚೂಣಿಯ ಚಾತುರಂಗದಲಿ ॥ ೪

ಇಂದು ಬರಹೇಳರ್ಜುನನ ರಣ
ದಿಂದಲೇ ಭೀಮಂಗೆ ಮನದಲಿ
ಕಂದುಕಸರಿಕೆ ಬೇಡ ಕಾದಲಿ ಧರ್ಮನಂದನನು ।
ಹಿಂದೆ ನಂಬಿಸಿ ಭೀಷ್ಮಗುರು[7]ವನು[7]
ಕೊಂದ ಗೆಲುವಿನಲುಬ್ಬಬೇಡೆಮ
ಗಿಂದು ದಳ[8]ವಾಯ್[8] ಕರ್ಣನೆಂ[9]ದುದು[9] ಭಟರು ಬೊಬ್ಬಿಱಿದು ॥ ೫

ತೇರು ಬಿಟ್ಟವು ಸೂಠಿಯಲಿ ಜ
ಝ್ಝರ ರಾವುತರು ವಾಘೆಸರಿಸದ
ಲೇಱಿದರು ಕಾರ್ಮುಗಿಲ ಬಲವೆನೆ ಕವಿದವಾನೆಗಳು ।
ಆರಿದರೆ ನೆಲ ಬಿರಿಯೆ ಬೆರಸಿತು
ಪೌರಕರು ಸಬಳಿಗರು ಬಿಲ್ಲಿನ
ಘೂರಿಭಟರಳ್ಳಿಱಿದು ಕೆಣಕಿತು ಕೆದಱಿ ರಿಪುಬಲವ ॥ ೬

ಮುಱಿಯ[10]ದ[10]ಹಿತರ ಥಟ್ಟು ನಮ್ಮದು
ತೆಱಹುಗೊಡ[11]ದೌಂಕಿತ್ತು[11] ಮೊರೆಗಳು
ಹೊಱಗೆ ಲಗ್ಗೆಯ ಮಾಡಿ ತೋಱಿದರೊಡನೆ ಪಡಿಬಲವ ।
ಉಱುಬಿದರು ವೃಷಸೇನ ಸೌಬಲ
ಗುರುಜ ಕೃಪ ಕೃತವರ್ಮ ದುರ್ಮುಖ
ವರವಿಕರ್ಣ ಕ್ಷೇಮಧೂರ್ತಿ ಬೃಹದ್ರಥಾದಿಗಳು ॥ ೭

---

1 ಸಿತೊ (ಕ). 2 ರ್ಕೈದಿ (ತ). 3 ಕ (ಕ), ಕೊ (ದ). 4 ಬೈದು ಮುಂದಲಿಸಿದರು (ಕ). 5 ದ (ಕ). 6 ಜಾರಿತ್ತು (ಗ), ನುಗ್ಗಾಯ್ತು (ಟ.ನ), ಗಾರಾಯ್ತು (ತ.ಪ). 7 ಗಳ (ತ). 8 ಪತಿ (ತ.ದ). 9 ದರು (ತ). 10 ಲ (ತ). 11 ವಾಕಿದರೆ (ತ.ನ.ಪ).

ಸೂತಸುತ ದಳಪತಿಯೆ ಘಡ ಮು
ಯ್ಯಾಂತರೇ [1]ಮುಂಬಿಗರು[1] ಬಿರುದಿನ
ಬೂತುಗಳ ಬೊಬ್ಬಾಟ ಬಿಡದೇ ಕಂಡು [2]ಕಾಣರಲ[2] ।
ಸೋತ ಸಮರದ ಕೇಣಿಕಾಱರು
[3]ಕೂತರೋ ಜಯಸಿರಿಗೆ[3] ಹೊಯ್ ಹೊ
ಯ್ಯಾತಗಳನೆನುತೇಱಿದರು ಪಾಂಡವ ಮಹಾರಥರು ॥ ೮

ನೂಕಿತೊಂದೇ ವಾಘೆಯಲಿ ರಥ
ನಾಕುಸಾವಿರ ಬಲುಗುದುರೆ ಹದಿ
ನಾಕುಸಾವಿರ ನೂಱು ಕರಿಘಟೆ ಲಕ್ಕ ಪಾಯದಳ ।
ಜೋಕೆ ಜವಗೆಡೆ ಮುಱಿವಡೆದು ಬಲ
ದಾಕೆವಾಳರು ಸರಿಯೆ ಸೋಲ[4]ದ[4]
ನೂಕು ನೂಕಾಯಿತ್ತು ಕೌರವರಾಯ ಸೇನೆಯಲಿ ॥ ೯

[6]ಘಡ[5]ಘಡೆತ್ತಲು ಸ್ವಾಮಿದ್ರೋಹರು
ಸಿಡಿದರೋ ನಿಜಕುಲದ ಬೇರ್ಗಳ
ಕಡಿದರೋ ಕುರುಬಲದ ಕಾಹಿನ ಪಟ್ಟದಾನೆಗಳು ।
ಕೊಡನ ಫಣಿಯಿದು ಪಾಂಡವರ ಬಲ
ತುಡುಕಬಹುದೇಎನುತ ಸೇನೆಯು
ತಡೆದು ನಿಂದನು ಕ್ಷೇಮಧೂರ್ತಿ ಸಹಸ್ರಗಜಸಹಿತ ॥ ೧೦

ತರಿಸಿ ಲೋಹದ [6]ಜತ್ತರಟ್ಟವ[6]
ಹರಹಿದರು ಸೂಲಿಗೆಯ ಬಂಡಿಯು
ನಿರಿಸಿದರು ಕೆಲಬಲದ ಕಡೆಯಲಿ ಸಬಳಿಗರ ನಿಲಿಸಿ ।
ತುರಗ ರಥ ಬಿಲ್ಲಾಳನೊತ್ತಾ
ಗಿರಿಸಿ ಲಗ್ಗೆಯ ಲಹರಿಯಲಿ ಮೋ
ಹರಿಸಿದರು ಪಾಂಚಾಲ ಕೈಕೆಯರವರ ಘಟ್ಟಿನಲಿ ॥ ೧೧

ನೀಡಿ ಬರಿಕೈಗಳಲಿ ಸೆಳೆದೀ
ಡಾಡಿದವು ಬಂಡಿಗಳನೌಕಿದ
ಕೋಡ ಕೈಯಲಿ ಸಬಳಿಗರ ಸೀಳಿದವು ದೆಸೆದೆಸೆಗೆ ।

---

[1] ಮುಗ್ಗಿದಿರೆ (ಕ). [2] ಕಾಳೆಗವ (ಕ). [3] ಕಾತರಿಸುತಿದೆ ಶಿರಕೆ (ನ).
[4] ವು (ತ.ಬ). [5] ಸಡಿ (ಟ.ತ.ಬ). [6] ಜಂತ್ರರಾಟವ (ಗ.ದ), ಜತ್ತಗಂಟವ (ಬ).

ಹೂಡು ಜಂತ್ರದ ಜತ್ತರಟ್ಟವ
ನಾಡಲೇತಕೆ ಹಿಂದಣೊಡ್ಡನು
ಝಾಡಿಸಿದವೀ ಕ್ಷೇಮಧೂರ್ತಿನೃಪಾಲನಾನೆಗಳು ‖ ೧೨

ರಾಯದಳ [1]ಕಳವಳಿಸೆ[1] ಗಜಘಟೆ
ಘಾಯಘಾಯಕೆ ನೆಲನ ಕೊಂಡವು
ಹಾಯಿದವು [2]ರಥ ಹಯವ[2] ಸೆಳೆದವು ಹೊದಱ ಹರೆಗಡಿದು ।
ನಾಯಕರ ಕೆಡೆನುಡಿವ ಬೈಗುಳ
ಬಾಯ ಬೊಬ್ಬೆಯ ಕೈಯ ಹೊಯ್ಲುಗಳ
ದಾಯಿಗರಲೇ ಎನುತ ಮೂದಲಿಸಿದನು ತಮ್ಮೊಳಗೆ ‖ ೧೩

[3]ಕೌದಱಿತರೆನೆರೆ ರಾಯ ಘಟ್ಟನು
ಕೆದಱಿಸಿದವಾನೆಗಳು ಹಗೆಗಳ
ಮದಮುಖಕೆ ಮಾಱೊಡ್ಡ ಮೆಱೆದರೆ ಪ್ರೂತು[4]ರೇ[4] ಎನುತ ।
ತುದಿವೆರಳ ತುಟಿಯುಬ್ಬರಕೆ ಗಜ
ಬೆದಱೆ [5]ಗಜರೋಹಕರ[5] ಗರ್ಜಿಸಿ
ಗದೆಯ ತಿರುಹುತ ಹೊಕ್ಕನಿವರೊಡ್ಡಿನಲಿ ಕಲಿ ಭೀಮ ‖ ೧೪

ಗರುಡನೂರವರೆಱೆವರೇ ನಾ
ಗರಿಗೆ ತನಿಯನು ಭೀಮಸೇನನ
ಬಿರುದಿನೋಲೆಯಕಾಱರೇನಂಜುವರೆ ಮಾರ್ಬಲಕೆ ।
ಕರಿಘಟೆಯ ಕೆದಱಿದರು ಕೇಣದ
ಧುರವ ಬಲ್ಲರೆ ಗಜದ ಕರುಳಲಿ
ಕರುಳ ತೊಡಕ[6]ಲು[6] [7]ಬಿದ್ದುದೈ[7]ಸಾವಿರ ಮಹಾರಥರು ‖ * ೧೫

ಮುಂಗುಡಿಯ ಮುಱಿದೌಕಿ ಭೀಮಂ
ಗಂಘವಿಸಿದನು ಕ್ಷೇಮಧೂರ್ತಿ ಮ
ತಂಗಜದ ಮೇಲೆಸು[8]ತ[8] ಬಲುನಾರಾಚಸೋನೆಯಲಿ ।
ಅಂಘವಣೆಯಹುದೋ ಮಹಾದೇ
ವಂಗೆ ನೂಕದು ಪ್ರೂತು ಮಝುರೆಯ
ಭಂಗನೋ ನೀನೆನುತ [9]ಮೂದಲಿಸಿದನು ಕಲಿ[9]ಭೀಮ ‖ ೧೬

[1] ಗಜಬಜಿಸೆ (ತ). [2] ಹಿಂಡೊಡೆದು (ಕ). [3] ಬೆ (ಗ.ಬ), ಹೆ (ಚ.ತ).
[4] ಮಝು (ಕ). [5] ನಿಜನಾಯಕರ (ಗ). ನಿಜಪಾಠಕರು (ಟ.ಚ.ತ.ದ.ಪ.ಬ.ನ).
[6] ಲಿ (ಕ). [7] ಕಡೆದರೈ (ನ). * ಈ ಪದ್ಯ (ತ) ಪ್ರತಿಯಲ್ಲಿಲ್ಲ.
[8] ವ (ಕ). [9] ಹೊಯ್ದಾಡವರಸಿದನು (ಟ.ತ.ನ.ಪ.ಬ).

ಕುಣಿದು ಪುಟನೆಗೆದರಿಗಜವ ಹೊ
ಯ್ದಣಿದು ಹಿಂಗಿದ ಮುನ್ನ ತಲೆ ಮೇ
[1]ಲೆ[1]ಣಿಗೆ ಟಗಿದುದು ಮುಂಡ ನಡೆದುದು ನೂಱು ಹಜ್ಜೆಯನು ।
ಒಣಗು ಸೀನಕಟಕಟ ಭೀಮನ
ಕೆಣಕಿ [2]ಬದುಕಿದೆ[2]ಯೆನುತಲಪ್ಸರ
ಗಣಿಕೆಯರು ನಗುತವನ ಕೊಂಡೊಯ್ದರು ವಿಮಾನದಲಿ ॥ ೨೧

ಎರಡನೆಯ ಸಂಧಿ ಮುಗಿದುದು.

---

[1] ಗ (ಚ). [2] ನೊಂದ್ಯೆ (ತ.ಪ).

# ಮೂರನೆಯ ಸಂಧಿ

ಸೂಚನೆ ‖ ರಣಭಯಂಕರನಹಿತಸುಭಟರ
ಹಣಿದ[1]ವನು[1] ಹೊಯ್ದಾಡಿ [2]ಸಾತ್ಯಕಿ[2]
ಕೆಣಕಿದನು ಕಲಕಿದನು [3]ಕುರುಸೇನಾ ಮಹಾರ್ಣವವ[3] ‖*

ಬೀಳಲಗ್ಗದ ಕ್ಷೇಮಧೂರ್ತಿನೃ
ಪಾಲಕನ ಪರಿವಾರ ರೋಷಕ
ರಾಳ ಶಿಖಿ ಪರಿ[4]ತಪ್ತ[4]ಕಂಪಿತ ಖಡ್ಗ[5]ದೊ[5]ಗ್ಗಿನಲಿ ।
ಆಳಿದನ ಮರಣದಲಿ ಹಿಂದಣ
ಕೂಳಿನಾಸೆಯ ಕುನ್ನಿಗಳಿರೆನು
ತಾಳು ಕವಿದುದು ಭೀಮ ಘಡ [6]ಘಡ ನಿಲ್ಲು[6] ನಿಲ್ಲೆನುತ ‖ ೧

ಕರೆದು ಮೂದಲಿಸಿದರೆ ಹುಲ್ಲೆಯ
ಮಱಿಗಳಿಗೆ ಖತಿಗೊಂಬುದೇ ಮದ
ಕರಿ [7]ಕರೂಷದ ಕೊಬ್ಬಿನ[7]ವದಿರು ಹಿಂದೆ ಹತ್ತಿದರೆ ।
[8]ಮರಳ ಬಲ್ಲನೆ[8] ಭೀಮನಿವರ
ಬ್ಬರಿಸಿ ಕವಿದರು ಹತ್ತು ಸಾವಿರ
ತುರಗ ಸರಿಸದಲೇಱಿದವು ಪಡಿಮುಖದ ಬಲ ಬೆದಱೆ ‖ ೨

ರಾವುತೋ ಎನಿತೊಂದು ಹಂತಿಯು
ಸಾವಿನಾತಗಳೇಱಿದರು ಪರಿ
ಧಾವನೋದ್ಗತ ಧೂಳಿ ಮುಸುಕಿತು ತರಣಿಮಂಡಲವ ।
ಆ ವೃಕೋದರ ಗತಿಯ ಕಂಡನು
ರಾವುತರ ದೃಢವಾಘೆ ವಾಘೆಯ
ಲಾವಣಿಗೆ ಲೇಸೆನುತ ಸಾತ್ಯಕಿ [9]ತುಡುಕಿ[9]ದನು ಧನುವ ‖ ೩

---

[1] ದಲಿ (ಪ). [2] ಫಲುಗುಣ (ಕ). [3] ಸಮಸಪ್ತಕಚತುರ್ಬಲವ (ಕ).

* ಇಲ್ಲಿರುವ ಸೂಚನೆಗೆ ಬದಲಾಗಿ (ದ) ಪ್ರತಿಯಲ್ಲಿ ಈ ಕೆಳಗಿನ ಸೂಚನೆಯಿದೆ :—

ಧುರದೊಳಗೆ ವಿಂದಾನುವಿಂದರ
ನೊರಸಿದನು ಸಾತ್ಯಕಿ ವೃಕೋದರ
ಗುರುಸುತರು ಬಲುಘಾಯದಲಿ ಬಸವಳಿದು ಮರಳಿದರು ‖

[4] ಕಂಪ (ತ). [5] ರೊ (ತ). [6] ಹೋಗದಿರು (ಕ). [7] ಮಹಾರಥರೊಗ್ಗಿನ (ಚ.ಟಿ.ತ.ಪ.ಬ). [8] ತೆರಳಲಱುವನೆ (ಕ). [9] ನುಡಿಸಿ (ಕ.ದ).

* ಅರರೆ ರಾವುತು ಜಾಗು ಸ್ವಾಮಿಯ
ತಳಿಬಕೋಲುಗ ಹಗೆಯ ಹೊಯ್ದಿರಿ
ಬಿರುದರ[1]ಹುದೋ[1] ಎನುತ ಮಾಱುವ ಹಯವ ಮುಱಿಯೆಸುತ ।
ಸರಳನೊಂದನೆ ತೊಡಚಿ ತುರಗದ
ಕೊರಳ ವಾಘೆಯ [2]ಕರವ[2] ರಾವುತ
ಶಿರವನೆಚ್ಚನು ಕೊಂದನೀ ಪರಿ ಹತ್ತುಸಾವಿರವ ॥ ೪

ಬಿದ್ದವ[3]ಗಣಿತ ತುರಗದಳ ಕೈ
ಮುದ್ದೆಗೊಂಡನು ಕಾಲನಸು[4]ವಿಡಿ[4]
ದಿದ್ದವರ ನಾ ಕಾಣೆ [5]ತೊಡಕಿದ ವೈರಿಬಲದೊಳಗೆ[5] ।
ಹದ್ದು ಕಾಗೆಗೆ ನಿನ್ನವರು ನಾ
ಲಿದ್ದು ಬೋನವ ಸವಸಿದರು ಬಲ
ವಿದ್ದು ಮಾಡುವುದೇನು ನಿಮಗಿನ್ನರಸ ಕೇಳೆಂದ ॥ ೫

ಥಟ್ಟು ಮುಱಿದುದು ಕೊಂಡ ನೆಲನನು
ಬಿಟ್ಟು ಹಿಂಗಿತು ನಮ್ಮ ಬಲ ಮೈ
ಬಿಟ್ಟು ತಲೆದೋಱಿದನು ಸಾತ್ಯಕಿ ದೊರೆಗಳಿದಿರಿನಲಿ ।
ಬಿಟ್ಟನಾರಿವನೀಸು ಮುಷ್ಟಾ
ಮುಷ್ಟಿಯಲಿ [6]ಬಂ[6]ದವನೆನುತ ಜಗ
ಜಟ್ಟಿಗಳು ಬಂದಾನುವಿಂದರು [7]ನಿಂದರಿದಿರಿನಲಿ[7] ॥ ೬

ಕವಿದು[8]ದಿವದಿರ[8] ಸೇನೆ ಸಾತ್ಯಕಿ
ಝವಣನಱಿಯದೆ ಹೊಕ್ಕು ಸಿಕ್ಕಿದ
ನವರೊಳಗೆ [9]ಕಟ್ಟಿದವು[9] ಸುತ್ತಲು ಸಾವಿರಾನೆಗಳು ।

---

* ಈ ಪದ್ಯಕ್ಕೆ ಮೊದಲು (ಗ.ಚ.) ಪ್ರತಿಗಳಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ :—
ಹೊಯ್ದು ಮುಗ್ಗಿತು ಭಟರು ವಗ್ಗಳ
ಕೈದುಕಾಱರು ತೆರೆಗೆ ಸಂದರು
ಮೆಯ್ದೆಗೆಯದೊಡವೆರಸಿ ಹೊಕ್ಕರು ಬೇಹಬೇಹವರು ।
ಕೊಯ್ದು ಕೊರಳಿನ ಕೊರೆದ ತೋಳಿನ
ಸಾಯದ ಮೂಳೆಯ ಸುರಿದ ಕರುಳಿನ
ಲೈದೆ ಪಡೆ ಬೆಱಗಾಯ್ತು ಚೂಣಿಯ ಚಾತುರಂಗದಲಿ ॥

[1] ಹಿರಿಯೋ (ತ). [2] ಕಡಿದು (ಗ). [3] ದ್ದುದ (ತ). [4] ವುಳಿ (ಕ). [5] ನವನೊಳು ತೊಡಕಿದವರೊಳಗೆ (ಚ.ಟ.ದ.ನ.ಬ). [6] ಮುನಿ (ಕ). [7] ಬಂದರಿದಿರಾಗಿ (ದ.ನ.ಪ.ಬ). [8] ದಿಲ್ಲಿಯ (ಕ). [9] ಕುಟಿಲದವು (ಕ)

ನವಸಹಸ್ರ ತುರಂಗ ಕಾಲಾ
ಳವಗಡಿಸಿತ್ತೈವತ್ತು ಸಾವಿರ
ವವನಿತಳ ನುಗ್ಗಾಯ್ತು ಪದಘಟ್ಟಣೆಯ ಘಲ್ಲಣೆಗೆ ॥ ೭

ಕೆಣಕಿದರೆ ಛುಗಿಲೆಂದುದೀತನ
ರಣ ಪರಾಕ್ರಮ ವಹ್ನಿ ಕರಡದ
ಬಣಬೆ ಸಿಕ್ಕಿತು ಕಾಳುಗಿಚ್ಚಿನ ಬಾಯ ಬಗರಗೆಗೆ ।
ಕಣೆಯ ಕಾಣೆನು ಸುತ್ತಲೊಟ್ಟುವ
ಹೆಣನ ಕಂಡೆನಿದಾವ ಬಾಳೆಯ
ಹಣಿದವೋ ನಿನ್ನಾಳು ಕುದುರೆಯನಱಿಯೆ ನಾನೆಂದ ॥ ೮

ದೊರೆಗಳವದಿರು ತಮ್ಮ ಬಲಸಂ
ವರಣೆ ನೆಗ್ಗಿದ ಹೇವದಲಿ ಹೊಡ
ಕರಿಸಿ ಹೊಕ್ಕರು ಹೂಳಿದರು ಸಾತ್ಯಕಿಯನಂಬಿನಲಿ ।
ಸರಳ ಬರವೊಳ್ಳಿತು ಮಹಾದೇ
ವರಸುಮಕ್ಕಳಲೇ ವಿರೋಧವೆ
ಹರಹರಗತಿಸಾಹಸಿಕರಹುದಹುದೆನುತ ತೆಗೆದೆಚ್ಚ ॥ ೯

ಏನನೆಂಬೆನು ಮೊದಲ ಲಗ್ಗೆಯ
ಲಾ ನಿಶಿತಶರ ದೈತ್ಯಭಟ ಏಿಂ
ದಾನುವಿಂದರ ಜೀವ ಧುಮ್ಮಿಕ್ಕಿದುದು ಜವಪು[1]ರಿಗೆ[1] ।
ಚೀನ ಭೋಟ ಕರೂಷ ಖರ್ಪರ
ಸೂನು [2]ಜೋನೆಗ ತುರಕ ಬರ್ಬರ[2]
ಸೇನೆ ತಾಗಿತು ತಾಗಿದಾಗಳೆ ನೀಗಿದುದು ತಲೆಯ ॥ ೧೦

ಮುಱಿದುದಿದು ನಮ್ಮವರು ಸಾತ್ಯಕಿ
ಯುಱುಬೆಗಾನುವರಿಲ್ಲ ದೊರೆ ಕೈ
ಮಱೆದನೋ ಕಾಳಾಯ್ತೆನುತ ಕುರುಸೇನೆ ಕಳವಳಿಸೆ ।
ಜಱೆದು ಮೂದಲಿಸಿದನು ಮಾದ್ರೇ
ಶ್ವರನ ದುಶ್ಶಾಸನನ ಸೌಬಲ
ಗುರುಜ ಕೃತವರ್ಮಾದಿಪರಿವಾರವನು ಕಲಿಕರ್ಣ ॥ ೧೧

---

[1] ರಕೆ (ತ). [2] ಜಾವಗವಂಗಮಾಳವ (ಕ.ಗ).

ಪೋತು ಮಝು ದಳಪತಿಯ ಚಿತ್ತದ
ಖಾತಿ ಕೊಬ್ಬಿತು ನಮ್ಮ ಭುಜಬಲ
ವೇತಕಿದು [1]ಬಳಿಕೇನು[1] ಸಾತ್ಯಕಿ ಸರಸವೇ ತಮಗೆ ।
ಭೂತನಾಥನ ಕಡುಹ ತಡೆವಭಿ
ಜಾತರಲ್ಲಾ ತಾವೆನು[2]ತ ನಿಜ
ಸೂತರನು[2] ಬೋಳೈಸಿ ನೂಕಿತು ಗುರುಸುತಾದಿಗಳು ॥ ೧೨

ಮುಱಿದ ಬಲ ಗಱಿಗಟ್ಟಿತೊಗ್ಗಿನ
ಲೊದಲಿದವು ನಿಸ್ಸಾಳಕಹಳೆಯ
ಬಿಱುಸರದ ಬಹುವಿಧದ ವಾದ್ಯಧ್ವನಿಯ ಕಳಕಳದ ।
ತುಱುಗಿ ತೂ[3]ಳು[3]ವ ಸಿಂಧ ಸೆಳೆ ಮಡ
ಲಿಱಿವ ಝಲ್ಲರಿ ಪಲ್ಲವದ ನಿಡು
ದೆಱೆಯ ಧವಳಚ್ಛತ್ರ ಚಮರದೊಳೊದಗಿತತಿರಥರು ॥ ೧೩

ಮುಂಕಣಿಯಲಿಟ್ಟಣಿಸಿದರು ಭಾ
ರಂಕದಾಳುಗಳೆಂಟುಸಾವಿರ
ಬಿಂಕದತಿರಥರೆಂಟುಕೋಟಿ ತುರಂಗ ಪಾಯದಳ ।
ಶಂಕಿಸುವನೇ ಬಳಿಕ ಯದುಕುಲ
ದಂಕಕಾಱನು ನಿಂದನನಿಬರಿ
ಗಂಕ ಝುಂಕೆಯನೇನನೆಂಬೆನು ಸಾತ್ಯಕಿಯ ಮನದ ॥ ೧೪

ಭಾರಿಯಾಹವವಾಯ್ತು ಪಿಳದಳ
ಭಾರ ಬಿದ್ದುದು ಸಾತ್ಯಕಿಯ ಸುರ
ನಾರಿಯರ ತೋಳಿನಲಿ ಕಾಬುದು ನೆಲನ ಋಣ ಹಱಿದು ।
ಹೋರಿದರೆ ಹುರುಳಿಲ್ಲೆನುತ ಪರಿ
ವಾರವೊಱಲಿತು ಪಾಂಡ್ಯ ಕೈಕೆಯ
ಕೇರಳರ ಹಿಂದಿಕ್ಕಿ ಪಡಿಬಲವಾದನಾ ಭೀಮ॥ * ೧೫

ಮುಂ[4]ದೆ ಪ[4]ರಿದರು ಪಾಂಡುತನಯರ
ನಂದನರು ತಾವ್ಪೈವರೀತನ
ಹಿಂದುಳುಹಿ ಹಿಂಡಿದರು ಹೇರಾಳದ ಚತುರ್ಬಲವ ।

---

[1] ನಮಗೆನುತ (ಕ.ಗ.ಚ). [2] ತ್ರತಿಭೀತರನು (ಕ). [3] ಗು (ತ).
* (ತ.ಪ.) ಪ್ರತಿಗಳಲ್ಲಿ ಈ ಪದ್ಯವಿಲ್ಲ. [4] ದುವ (ತ.ಪ).

ಕೊಂದರಗ್ಗದ ಚಿತ್ರಸೇನನ
ಬಂದ ಹರಿಬದ ಚಿತ್ರನನು ಗುರು
ನಂದನನು ಬಳಿಕವರ ಬೆದಱಿಸಿ ನೂಕಿದನು ರಥವ ॥ ೧೬

ಹೆಱತೆಗೆದು ಕೆಲಸಾರಿ ಮಕ್ಕಳು
ಮಱಗಳಿಗೆ ರಣವೇಕೆ ಪಾಂಡವ
ರುಱುವ ಸಂತತಿ ನೀವಕಟ ಎನುತವರನೊಡಹಾಯ್ಸಿ ।
ಇಱುವ ಭಟನಹೆ ಯಾದವರ ಬಡ
ಕಱುವೆ ಬಾ ಬಾ ಎಂದು ಚಿಟಿಕಿಸಿ
ಕರೆದು ಗುರುಸುತ ಸಾತ್ಯಕಿಯ [1]ತಾಗಿ[1]ದನು ನಗೆವಾಡಿ ॥ ೧೭

ಸಾರು ನೀ ಸಾರೆಲವೊ ಭೀಮನ
ತೋರಗರುಳಿನ ದಂಡೆಯನು ಕೈ
ಯಾರೆ ಮಾರಿಗೆ ಮುಡಿಸುವೆನು ಫಡ ಭೀಮ ನಿಲ್ಲೆನುತ ।
ಆರಿದನು ಜಗ ನಡು[2]ಗಲಾ[2] ಜಂ
ಭಾರಿ ಜವಗೆಡೆ [3]ಬೊಬ್ಬಿಱಿದನಾ
ಭಾರತದ ಭಾರಣೆಯಲೈದಿದನನಿಲನಂದನನ[3] ॥ ೧೮

ಗುರುತನೂಜ ಕಣಾ ವಿರೋಧಿ
ಸ್ಮರಕಪರ್ದಿ ಕಣಾ ವೃಕೋದರ
ಕರಿಮೃಗೇಂದ್ರ ಕಣಾ ಕಣಾಳಿಯ ಕಾಯ್ದುಕೊಳ್ಳೆನುತ ।
ಸರಳನೆಚ್ಚನು ಸರಳನಾ ಬಳಿ
ಸರಳು [4]ಮುಂಚಿದುದಾ ಸರಳ ಬಳಿ
ಸರಳು ಮುಂಚಿದುದಾವ ಕೈಚಳಕವೊ ಶಿವಾ ಎಂದ[4] ॥ ೧೯

ತಿರುಗಿ ನಿಂದನು ಪವನಸುತನೆಲೆ
ಗುರುಜ ನಿನ್ನಗ್ಗಳಿಕೆಗಳ ಜಗ
ವಱಿಯದೇ ಫಡ [5]ಭಟ್ಟನಾದ್ಯೆ[5] ನಿನಗೆ ನೀನೆನುತ ।

[1] ಕಾದಿ (ಚ.ತ.ಪ.ನ), [2] ಗೆ ಘನ (ಕ). [3] ಜೋಡಿಸಿದನಾಭಾರದಲಿ ಭಾರವಣೆಯುಂಬನು ಭೀಮಸೇನಂಗೆ (ಚ.ಟ.ತ.ನ.ಪ.ಬ). [4] ಮುಂಚಿತು ಗುರುಸುತನ ಕೈಚಳಕದನುಸಂಧಾನವಾವುದೊ ಶಿವಶಿವಾಯೆಂದ (ಕ), ಮುಂಚಿದುದಾವ ಚಳಕವೋ ಗುರುತನೂಭವನೆಚ್ಚು ಮುಂಗೆಡಿಸಿದನು ಪವನಜನ (ದ.ಬ), ಮುಂಚಿದುದಾ ಸರಳಬಳಿಸರಳು ಮುಂಚಿದುದಾವ ಚಳಕವನಱಿಯೆನಾನೆಂದ (ನ). [5] ಭಂಟನಾರೇ (ಕ).

ಸರಳ ಬಳಿಸರಳುಗಳನಾ ಲಘು
ತರದ ಲೆಕ್ಕದಲೆಸೆವ ವಿವರದ
ಪರಿವಿಡಿಯ ವೇಗಾಯ್ಲತನವನು ತೋಱಿದನು ಭೀಮ ॥ ೨೧

ಜಾಗು ಮಝುರೇ ಭೀಮ ಬಲುಗೈ
ಲಾಗು ಮಱೆಯದಲಾ ಶರೌಘ
ತ್ಯಾಗದಸ್ತ್ರ ಪ್ರ[1]ವರ[1]ಬಂಧವ ಮತ್ತೆ ನೋಡೆನುತ ।
ಆ ಗಗನವಿದು ಧರಣಿಯಿದು ದಿ
ಗ್ಭಾಗ[2]ವೆಲ್ಲಿಯದೆಂಬ[2] ವಿವರವ
ನಾಗಳಱಿಯೆನು ದ್ರೋಣನಂದನನೆಚ್ಚನನಿಲಜನ ॥ ೨೧

ಎಲೆಲೆ ಹಾರುವನೇಕೆ ಹರಿಮೇ
ಖಳೆಯ ಕೇಳಿಕೆಯೇಕೆ [3]ಪಡಿ[3]ಮು
ದ್ದಳೆಯ ಬಡಿಕರ ಬಿಂಕ ಮೇಳವವಿಲ್ಲಲಾ ನಿನಗೆ ।
ಹೊಲಬುಗೆಡುವನೆ ಭೀಮನೀ ಸರ
ಳೊಳಗೆ ಹುಸಿ[4]ಯೇಕೆ[4]ನುತ ಬಾಣಾ
ವಳಿಯ ನಿಮಿಷಕೆ ಕಡಿದು ಗುರುಜನನೆಚ್ಚನಾ ಭೀಮ ॥ ೨೨

ರಥದಮೇಲಂಬುಗಳು ರಿಪುಸಾ
ರಥಿಯ ಮೈಯಲಿ ಘಾಯ ತುರಗ
ವ್ಯಥೆಯನೇವೇಳುವೆನು ಚೆಕ್ಕೆಯವೈದೆ ಬಾಣಮಯ ।
ಶಿಥಿಲವಾದವು ಗಾಲಿಗಳು ಬಳಿ
ರಥಿಕರೀತನ [5]ಬಿಟ್ಟು[5] ಹಾಯ್ದರು
ಪೃಥುಳಬಲನೈ ಭೀಮನೆಚ್ಚನು ಗುರುತನೂಭವನ ॥ ೨೩

ನೊಗನನೀಡಾಡಿದವು ಕುದುರೆಗ
ಳೊಗಡಿಸಲು ರಕುತವನು ಸಾರಥಿ
ಬಿಗಿದ ಹಿಳುಕುಗಳೌಕಿದವು ತೇರಿನಲಿ ಸಿಂಧದಲಿ ।
ಒಗುವ ನೆತ್ತರ ಸುಱಿವ ಬಾಣದ
ನುಗು[6]ತೆ[6]ಗಂಡಿಯ ಮೆಯ್ಯ ಭೀಮನ
ಬೆಗಡು ಮೊಳೆತುದು ಗುರುತನೂಭವನೆಚ್ಚನನಿಲಜನ ॥ ೨೪

---

[1] ಸ (ಕ). [2] ವಿದುತಾನೆಂಬ (ತ.ದ.ನ.ಬ). [3] ಫಡ (ಗ.ಟ), ಒಡಿ (ಚ). [4] ಹೋಗೆ (ತ). [5] ಬಿಸುಟು (ತ). [6] ಳು (ಗ.ತ.ದ.ಪ.ದ).

ಈತನೆಚ್ಚನು ಮತ್ತೆ ಶರಸಂ
ಘಾತವೋ ಗುರುಸುತನ ತನುವೋ
ಪೋತ ಮುತ್ತವೋ ತಳಿತೆಸೆವ ಕೆಂದಾವರೆಯ ಬನವೋ ।
ಭೀತಿ ಬಿಗಿದುದು ದಿಟ್ಟತನದನು
ಧಾತುಗೆಟ್ಟುದು ನೋಡಿ ಕಂಗಳು
ಸೋತು ಮರಳಿದನಿತ್ತಲಶ್ವತ್ಥಾಮ ಮೈಮಱೆದ ॥ ೨೫

ನನೆದ ಜಾಜಿನ ಗಿರಿಯೊ ಭೀಮನ
ತನುವೊ ಖಂಡಿತ ರಕ್ತಚಂದನ
ಬನವೊ ರಥವೋ ತಳಿತಶೋಕೆಯ ಮರನೊ ಸಾರಥಿಯೊ ।
ಮನ ಹಣುಗಿ ತುಟಿಯೊಣಗಿ ನೋಟದ
ಮೊನೆ ಮುಱಿದು ಝೊಂಪಿಸುತ ಮುಂದಣಿ
ಗೊನೆದು ಬಿದ್ದನು ಭೀಮ ಪಾಂಡವಸೇನೆ ಕಳವಳಿಸೆ ॥ ೨೬

ಅಹಹ ವೈರಿಗೆ ಧರೆಗೆ ಪಾಣಿ
ಗ್ರಹಣವಾಯಿ[1]ತೆ[1] ಪಾಂಡುಸುತರಿಗೆ
ಬಹ ವಿಪತ್ತುಗಳೊಳಗಿದೊಂದೇ ಕಳ[2]ಶ[2]ವಾದುದಲ ।
ಅಹಿತರಿಗೆ [3]ಗೆಲು[3]ವಾಯ್ತು ನಮಗಿ
[4]ಲ್ಲಿ[4]ಹುದು ಮತವಲ್ಲೆನುತ ಸಾರಥಿ
ಸಹಸಿಗನ ಸಂತೈಸಿ [5]ತಂದನು[5] ರಾಜಮಂದಿರಕೆ ॥ ೨೭

ತಂದೆಯುಳಿದಾ ಹೊತ್ತು ಹಗೆಯನು
ಕೊಂದು ಸಾಯ[6]ದೆ[6] ದೇಹವೋಹಕೆ
ನಿಂದು ನೀ ನಿಶ್ಶಂಕನಾದ್ಯೆ ವೈರಿಶರಹತಿಗೆ ।
ಎಂದು ಸಾರಥಿ ಶೋಕಿಸುತ ಗುರು
ನಂದನನ ಕೊಂಡೊಯ್ದನಿತ್ತಲು
ಸಂದಣಿಸಿತತಿರಥರು ಸೌಬಲ ಶಲ್ಯಮೊದಲಾಗಿ ॥* ೨೮

ದೊರೆಗಳಿಬ್ಬರ ಸೋಲವನು ವಿ
ಸ್ತರಿಸಿ ಹೊಕ್ಕರು ಮತ್ತೆ ಮಾದ್ರೇ
ಶ್ವರ ಶಕುನಿ [7]ಕೃತವರ್ಮ ಕೃಪ ದುಶ್ಶಾಸನಾದಿಗಳು[7] ।

---

[1] ತು (ಕ). [2] ಸ (ತ). [3] ಜಯು (ತ). [4] ನ್ನಿ (ತ). [5] ನಡೆದನು (ಕ). [6] ದ (ತ). * ಇಲ್ಲಿಗೆ (ಟ) ಪ್ರತಿಯಲ್ಲಿ ಮೂರನೆಯ ಸಂಧಿ ಮುಗಿದಿದೆ. [7] ಕೃಪಕೃತವರ್ಮ ಸಮಸಪ್ತಕಾದಿಗಳು (ಕ).

ಅರಿಬಲದಲಾ ದ್ರೌಪದೇಯರು
ಹರಿಯನುಜ ಮಾದ್ರೇಯ ಕೈಕೆಯ
[1]ವರಯುಧಾಮನ್ಯುತ್ತಮೌಂಜಸ ಪಾಂಡ್ಯ ಶೃಂಜಯರು[1] ॥ ೨೯

ಬಲಿದುದಾಹವ ಮತ್ತೆ ಚಾತು
ರ್ಬಲ [2]ಧಡಾಳಿಸಿ[2] ಕಾದುತಿರ್ದುದು
ಮುಳಿದು ಶಲ್ಯನ ಕೂಡೆ ಪಂಚದ್ರೌಪದೀಸುತರು ।
ಅಳವಿಗೊಟ್ಟರಿಯಕಟಕಟ ಮ
ಕ್ಕಳಿರ [3]ನಿಮಗೇಕಿದು[3] ಯುಧಿಷ್ಠಿರ
ಫಲುಗುಣರ ಬರಹೇಳೆನುತಲೆಚ್ಚನು ಮಹಾಸ್ತ್ರದಲಿ ॥ ೩೦

ಎಚ್ಚನಿವನಿವನೊಡನೆ ಬಾಣವ
ಕೊಚ್ಚಿದರು ಕೊಡಹಿದರು ಶರದಲಿ
ಚುಚ್ಚಿದನು [4]ಜೀಕುಳಿಯ[4] ಬಿಟ್ಟನು ನೆತ್ತರನು ನೆಲಕೆ ।
ಬೆಚ್ಚಿದವು ರಥವಾಜಿ [5]ಹತ್ತಿಗೆ[5]
ಬಿಚ್ಚಿ ರಥ ನುಗ್ಗಾಯ್ತು ಶೌರ್ಯದ
ಕೆಚ್ಚು ಮುಱಿದುದು ಹಿಂಗಿದರು ಪಾಂಡವ ಕುಮಾರಕರು ೩೧

ಮೂಱನೆಯ ಸಂಧಿ ಮುಗಿದುದು.

---

[1] ಮರುಳಧೃಷ್ಟದ್ಯುಮ್ನ ಶೃಂಜಯಸೋಮಕಾದಿಗಳು (ಗ), ವರಯುಧಾಮನ್ಯುತ್ತಮೌಂಜಸಶೃಂಜಯಾದಿಗಳು (ನ). [2] ವಿಭಾಡಿಸಿ (ಕ). [3] ನೀವೇಕ್ಕೆ (ಕ) [4] ಬೆಮ್ಮಡಿಯೆ (ಕ), ಜಗುಳೆಯನು (ಟ.ಪ), ಜೀರ್ಕೊಳವೆ (ಚ.ಬ), [5] ಹತ್ತುಗೆ (ನ).

# ನಾಲ್ಕನೆಯ ಸಂಧಿ

ಸೂಚನೆ ॥ ರಾಯದಳ ಮುಝು ಪೊತುರೆನೆ ರಿಪು
ರಾಯಸೇನೆಯ ಮುಱಿದು ಪಾಂಡವ
ರಾಯ ಧರ್ಮಕುಮಾರ ಗೆಲಿದನು ಕೌರವೇಶ್ವರನ ॥

ಘಡಘಡೆಲವೋ ಶಲ್ಯ ಮಕ್ಕಳ
ಬಡಿದು ಬೆಱೆದ್ದೈ ಬಾಹುಬಲದಲಿ
ತೊಡರು ನಿನಗೆಡಗಾಲಲಿದೆಯೆನುತೊದೆದು ನಿಜರಥವ ।
ಘುಡುಘುಡಿಸಿ ರೋಮಾಂಚನದ ಹೊಱ
ಗುಡಿಯ ಸೊಂಪಿನ ಮೆಯ್ಯ ಕಡುಗಲಿ
ತಡೆದನೇಕಾಂಗದಲಿ ಸಾತ್ಯಕಿ ಶಲ್ಯಭೂಪತಿಯ ॥ * ೧

ಬಾಯಿಬಡಿಕರು ಯಾದವರು ಗರು
ವಾಯಿ ನಿನಗೆಲ್ಲಿಯದು ಸುಭಟರಿ
ಗಾಯುಧ[1]ದ ಸಿಂಗಾರವೋ[1] ಮೇಣ್ ಕಾಲ ನೇವುರವೊ ।
ಸಾಯಕವ ಹಿಡಿ ಸಾಕು ಸೋಲದ
ತಾಯಿಮನೆ ನಿನಗಿದಿರಲಿದೆ ನಿ
[2]ನ್ನಾ[2]ಯತವ ತಾನಱಿಯೆನೆನುತೋರಂತೆ ತೆಗೆದೆಚ್ಚ ॥ ೨

ಎಲವೊ ಮಾದ್ರಾ ಬಾಹಿರನೆ ಬಿಡು
ಗಳಹತನವೇ ನಮ್ಮೊಡನೆ ತೊ
[3]ಟ್ಟ[3]ಳುಕೆ ಗ[4]ಱು[4]ನಾಲಗೆಯ [5]ಕೊಯ್ವೆನು[5] [6]ವಾ[6]ಣು ಮಾಣೆನುತ ।
ಬಿಲುದಿರುವನುಗುಳಿಸಿದನಂಬಿನ
ಬೆಳಸನಾ[7]ರಳವಡಿಸುವರು[7] ದಿಗು
ವಳೆಯ ನೆಱೆಯದಿದೆತ್ತಣದು ಬಿಲುಗಾಱತನವೆಂದ ॥ ೩

---

* ಈ ಪದ್ಯವು (ಕ) ಪ್ರತಿಯಲ್ಲಿ ಹಿಂದಿನ ಸಂಧಿಯ ಕೊನೆಯ ಪದ್ಯವಾಗಿದೆ.
[1] ವೆ ಶೃಂಗಾರವೋ (ಸ). [2] ಮ್ಮಾ (ಕ). [3] ಟ್ಟಿ (ಕ), ಟ್ಟು (ಟ.ದ). [4] ಡಿ (ಕ). [5] ನುಗಿವೆನು (ಗ.ಚ.ನ.ಪ). [6] ಮೋ (ಕ). [7] ರೆಣಿಸುವರ ಕಟ (ಕ).

ಬಾಯಿ ಬಡಿಕರು ನಾವು ನೀ ಗರು
ವಾಯಿಕಾಱನು ಬಯ್ವ ಬಿರುದಿನ
ಬಾಯ [1]ನೋಡಾಯೆನುತ[1] ತೋೞಿಗೆ ತೆಱಿಹುಗೊಡದೆಸಲು ।
ಸಾಯಕದ ಹೊದೆ ಹಲವು ಶಲ್ಯಗೆ
ಬೀಯವಾದುವು ಬೞಿಕ ಕೌರವ
ರಾಯನನುಜನು ತಱುಬಿ ನಿಂದನು ಸಾತ್ಯಕಿಯ ರಥವ ॥ ೪

ಹಳಚಿದವು [2]ರಥ[2]ವೆರಡು ಬಲುಗೈ
ಗಳಿಗೆ ಬಲಿದುದು ಬವರ [3]ಕೌರವ
ಬಲದ ಭಟರಲಿ[3] ಹತ್ತುಸಾವಿರ ರಥಿಕ[4]ರನುವಾಯ್ತು[4] ।
ಒಳಹೊಗಿಸಿ ಸಾತ್ಯಕಿಯ ಸಿಕ್ಕಿಸಿ
ಗೆಲುವ ತವಕವ [5]ಕಂಡು[5] ಕೆಣಕಿದ
ರಳವಿಯಲಿ ಸಹದೇವನಕುಳರು ಕೌರವಾನುಜನ ॥ ೫

ತೆಗಸಿದನು ಸಾತ್ಯಕಿಯನೀತನ
[6]ಬಿಗಿ[6]ದನಂಬಿನಲವನ ಬಾಣಾ
ಳಿಗಳ ಕಡಿದನು ಘಾಸಿಮಾಡಿದನವನ ರಥ ಹಯವ ।
ಜಗುಳಿದನು ಕಲಿ ನಕುಲ ರಥವಾ
ಜಿಗಳ ಜೋಡಣೆ [7]ಬಿಚ್ಚಿ[7] ರಕುತವ
ನೊಗಡಿಸಲು ಸಹದೇವನೆಚ್ಚನು ನಿನ್ನ ನಂದನನ ॥ ೬

ಸರಳ ಸ್ಟೈರಿಸಿ ನಿನ್ನ ಮಗನ
ಬ್ಬರಿಸಿ ಮಾದ್ರೀಸುತನನೆಚ್ಚನು
ತರಹರಿಸಿ ಮಗುಳೆಚ್ಚನಾತನು ಕೌರವಾನುಜನ ।
ಮರುಳೆ ನೀನೇನಹೆ ಮಹಾಸಂ
ಗರಕೆ ಕಳು[8]ಹಾ[8] ನಿನ್ನವರನೆನು
ತುರವನೆಚ್ಚನು ಜರಿಯೆ ಜೋಡಿನ ಚಿಪ್ಪ [9]ದೆಸೆದೆಸೆಗೆ[9] ॥ ೭

ನೋವನೇ ನೊಣವುಱಿದರೆ ಸಹ
ದೇವನೆಲವೋ ನಿನ್ನ ಕೊಂದಡೆ
ಪಾವಮಾಸಿಗೆ ಪಂಥ ತಪ್ಪುವುದೆನುತ ಖಾತಿಯಲಿ ।

---

[1] ನೋಡೆಹೊಯ್ಯೆನುತ (ಕ.ಗ). [2] ಬಲ (ಕ). [3] ರಣದಗ್ಗಳೆಯ ರೈದಿತು (ಕ). [4] ರೊಗ್ಗಿನಲಿ (ಕ). [5] ನಱಿದು (ಕ). [6] ಬಲಿ (ಕ). [7] ಬೆಚ್ಚಿ (ಕ). [8] ಹಿಸು (ಚ). [9] ಶರಹತಿಗೆ (ಸ).

[1]ತಾವಕನ[1] ಸಾರಥಿಯ ರಥ ತುರ
ಗಾವಳಿಯುನಾಯುಧವ ಖಂಡಿಸೆ ,
ಜೀವಗಳ್ಳರದೇವ [2]ಪಸರಿ[2]ಸಿದನು ಪಲಾಯನವ ॥ ೮

ರಾಯನನುಜನ ಹರಿಬದಲಿ ರಾ
ಧೇಯ ಹೊಕ್ಕನು ಸ್ವಾಮಿದ್ರೋಹರ
ಕಾಯಿದರೆ ಕೈಕೊಳ್ಳದೌಷಧವಾವುದಿವದಿರಿಗೆ ।
ನೋಯಿಸುವನೊಮ್ಮೆನುತ [3]ತಿರುವಿನ[3]
ಸಾಯಕದ ಕಿವಿಗಡಿಯ ತೆಱಹಿನ
ರಾಯದಳಪತಿ ತಱುಬಿದನು ಮಾದ್ರೀ[4]ಸುತನ ರಥವ[4] ॥ ೯

ಸಾರು ನೀ ಸಹದೇವ ಜಗದ ವಿ
ಕಾರಿಯಿವನೀ ಕರ್ಣನಿವನ ದೊ
ಠಾರಿಸುವ ನಾಲಗೆಯ [5]ಕೊಯ್ಲಿಗೆ[5] ಶಸ್ತ್ರವಿವೆಯೆನುತ ।
ಸಾರಥಿಯ ಬೋಳೈಸಿ ಚೌಪದ
ನಾರಿಯನು ದನಿಮಾಡಿ ನಕುಲನು
ದಾರ ಕರ್ಣನ ಮುಟ್ಟಿ ಬಂದನು ಚಾಚಿದನು ರಥವ ॥ ೧೦

ಆರಿವರು ನಕುಳಾಂಕರೇ ಜು
ಜ್ಝಾರತನವೇ ನಮ್ಮೊಡನೆ ನೀ
ವಾರು [6]ಪಾಂಡುಕುಮಾರರೋ[6] ಮಾದ್ರೀಕುಮಾರಕರೊ ।
ಭಾರಿಯಾಹವದೆಡೆಗೆ ನಿಮ್ಮನಿ
ದಾರು ಬಿಟ್ಟರುಪಾಯದಲಿ ನಿಮ
ಗಾರು ಮುನಿದರು ಶಿವ [7]ಶಿವೆಂದನು ಕರ್ಣ ನಸುನಗುತ[7] ॥ ೧೧

ತೊಲತೊಲಗು ತರುವಲಿಗೆ ರಣವಿದು
ಸುಲಭವೇ ಲೋಕೈಕವೀರರು
ಹಲಬರಿದಱೊಳು ಹೊಕ್ಕು ಹೊದಕುಳಿಗೊಂಡು ಹೋದರಲೆ ।
[8]ಗೆ[8]ಲುವ ನಂಬುಗೆ ನಿನ್ನ ತಂದುದು
ಕೊಲೆಗೆ ನೋಡಾದರೆಯೆನುತ ಕೈ
ಚಳಕದಲಿ ಮುಸುಕಿದನು ಮೊನೆಗಣೆಯಿಂದ ರಿಪುಭಟನ ॥ ೧೨

---

[1] ಲಾವಕನ (ಟ), ಲಾವತರ (ದ), ಲಾವಕದ (ಖ). [2] ಜೋಡಿಸಿ (ಚ.ತ.ಪ.ಬ). [3] ಬೆರಳಿನ (ಟ.ಚ.ಬ). [4] ಕುಮಾರಕರ (ಗ.ಟ.ದ). [5] ಶೂಲಿಗೆ (ಕ). [6] ಕುಂತಿಯುತನಯರೋ (ಟ.ದ). [7] ವಾಯೆನುತ ಕಲಿಕರ್ಣ (ಕ). [8] ನಿ (ಕ).

ಬಿಗಿದ ಬಾಣದ ದಡ್ಡಿಯನು ತಳ
ಮಗುಚಿದನು [1]ನೂ[1]ಱಂಬಿನಲಿ ಹೇ
ಳಿಗೆಯ ಮುಚ್ಚುಳ ತೆಗೆದ ಹಾವಿನವೋಲು ಝೊಂಪಿಸುತ ।
ಹೊಗರನುಗುಳುವ ಹೊಸಮಸೆಯ ಕೋ
ಲುಗಳ ಕವಿಸಿದನಾತನಂಬಿನ
ಝುಗೆಯ ಝುಳದಲಿ ಮುಳುಗಿ ಮೋನದೊಳಿರ್ದನಾ ಕರ್ಣ ॥ ೧೩

ಆಳು ನೀನಹುದೆಲವೋ ಕರ್ಣ ವಿ
ಶಾಲಮತಿ ನೀ ಲೇಸು ಮಾಡಿದೆ
ಬಾಲರಾದಡೆ ಭಂಗವೇ ಬಾವಳನೆ ಅಭಿಮನ್ಯು ।
ಕೋಲ ಸೈರಿಸು ಸೈರಿಸಾದಡೆ
ಛಾಳಲಿಪಿ ಸಂ[2]ಕರುಷ[2]ವಿಪುಳ ಶ
ರಾಳಿಯಿವೆ ಕೊಳ್ಳೆನುತ ನಕುಳನನೆಚ್ಚನಾ ಕರ್ಣ ॥ ೧೪

ತಾಗಿದವು ನಾಲ್ಕಂಬು ದೇಹದ
ಬೇಗಡೆಯಲೆಂಟಂಬು ನುಸುಳಿದ
ವಾಗ ಹದಿನಾಱಂಬು ಹರಿದವು ಮತ್ತೆ ಬಳಿ[3]ಸಲಿಸಿ[3] ।
ಸೂಗುರಿಸಿ ಝೊಮ್ಮಿನಲಿ ಮುಂದಕೆ
ಬಾಗಿ ಬಿದ್ದನು ಸಾರಥಿಯ ಕೈ
ಲಾಗಿನಲಿ [4]ತಿರುಗಿ[4]ದನು ನಕುಳನು ರಾಜಮೋಹರಕೆ ॥ ೧೫

ಪರಿಬಿದಾಹವವೆನಗೆ ತನಗೆಂ
ದುರವಣಿಸಿದರು ಚೇಕಿತಾನಕ
ದುರುಳ ಧೃಷ್ಟದ್ಯುಮ್ನ ಪಾಂಡ್ಯ ಶಿಖಂಡಿ ಶೃಂಜಯರು
ಬರಲಿ ಬರಲೀ ಹೊಟ್ಟ ತೂಱುವ
ಡರಸುವೋಹರವೇಕೆ ಸಾಕೆಂ
ದರಿಘಟರು ತಱುಬಿದರು ಕೃಪ ಕೃತವರ್ಮ [5]ಸೌಬಲರು[5] ॥ ೧೬

ದಳಪತಿಯು ಹಿಂದಿಕ್ಕಿ ಪಾಂಡವ
ಬಲಮಹಾರಥರುರವಣಿಸಿ ಮೂ
ದಲಿಸಿ ನಿಂದರು ಕೊಂದರಿದಿ[6]ರೇಱುವ[6] ಚತುರ್ಬಲವ ।

---

[1] ಕೂ (ಚ.ಪ.ಬ). [2] ಹರಣ (स). [3] ಕವನ (क). [4] ತೊಲಗಿ (क), ಮುರಳಿ (द). [5] ಗೌತಮರು (क). [6] ರೊಡ್ಡಿದ (ग).

ಕೊಲೆಗೆ ಬೇಸಱರಿವರು [1]ಸಾವುದ
ಕ[1]ಳುಕದವದಿರು ಹೇಳುವಡೆ [2]ನಾ
ವಲಸಿದೆವು[2] ಧೃತರಾಷ್ಟ್ರ ಎಂದನು ಸಂಜಯನು ನೃಪನ ‖ ೧೭

ವಿರಥರಾದ ಶಿಖಂಡಿ ಮೊದಲಾ
ದರಿಭಟರು ಜಾಱಿದರು ಸುಭಟರ
ನೊರಸಿ ಕೊಂ[3]ದೇ[3]ಱಿದರು ಕೆದಱಿದರವರು ರಿಪುಬಲವ ।
ದೊರೆಗೆ ಹತ್ತಿರೆಯಾಯ್ತು ಕಾಳೆಗ
ವರಿದೆನಲು ನಿಸ್ಸಾಳಕೋಟಿಯ
ಧರದುರದ ದೆಖ್ಖಾಳದಲಿ ತಲೆದೋಱಿದನು ಪಾರ್ಥ ‖ ೧೮

ಭಟರ ತೆಗೆತೆಗೆ ಪಾರ್ಥನೋ ರಿಪು
ಕಟಕ ಭೈರವನೋ ವೃಥಾ ಸಂ
ಕಟದ ಸನ್ನಾಹದಲಿ ಸುಭಟರ ಮಾಱಬೇಡೆನುತ ।
ಲಟಕಟಿಸಿ ಬಲವೊದಱಲಪ್ರತಿ
ಭಟರು ಬಳಿಕನುವಾಯ್ತು ವಿಜಯೋ
ತ್ಕಟದಲಿಪ್ಪತ್ತೈದುಸಾವಿರ ವರಮಹಾರಥರ ‖ ೧೯

ನೂಕಿದರು ಸಂಶಪ್ತಕರು ಬಲ
ದಾಕೆವಾಳ[4]ರ[4] ತೆಗೆಸಿ [5]ಬಹಳೋ
ದ್ರೇಕಸಾಹಸರೊದಗಿದರು ಕಂಪಿತ[5]ಕುಳಾಚಳರು ।
ತೋಕಿದರು [6]ಶರವಳೆಯ[6]ಲರ್ಜುನ
ನಾಕು ಸಾರೈ ನಿನ್ನ ಜೊತ್ತಿನ
ಜೋಕೆಯಾಹವವಲ್ಲೆನುತ ತೆಗೆದೆಚ್ಚರಿದಿರಾಗಿ ‖ ೨೦

ಆರಿದಿಪ್ಪತ್ತೈದು ಸಾವಿರ
ತೇರು [7]ಸರಿಸದಲೊಂದು[7] ವಾಘೆಯ
ಲೇಱಿದವು ನಿಪ್ಪಸರದಲಿ ನಿಲುವಾತನಾರಿದಕೆ ।
ಸಾರಿಗೆಗೆ ಸಾರಿಗೆಗೆ ಬಾಣಾ
ಸಾರವಿಪ್ಪತ್ತೈದು ಸಾವಿರ
ವಾರು ಸೈರಿಸಿ ನಿಲುವರೆನುತಿದ್ದುದು ಸುರಸ್ತೋಮ[8] ‖ ೨೧

---

[1] ಸಾವಿಂಗ (ತ.ದ.ಪ). [2] ನಾನಲಸಿದೆನು (ಗ.ಚ.ನ). [3] ಥೇ (ತ.ದ.ನ.ಪ). [4] ರು (ಕ). [5] ದರು ಬಹಳಾಕಠೋರ ಕರಾಳಕಂಪಿತಕರ (ಕ), ಬಹಳ ಕಠೋರ ಬಾಹಾಸ್ಫಾಳಕಂಪಿತ (ಧ). [6] ಸರಳುಗಳ (ಕ.ಗ.ಚ), [7] ಸರಿದವುವೊಂದು (ಕ). [8] ವ್ರಾತ (ಚ.ತ.ನ.ಪ.ಬ).

ಸುರಿದುದತಿವಳೆಯೆಂದು ಕುಲಗಿರಿ
ಕರಗುವುದೆ ಮೇಗಱೆಯ ಶಿಲೆಯಿ
ಬೈರಳು ನೆನೆವುದೆ [1]ನಾಡ ಹಂತಿಯಲಳುಕುವರ್ಜುನನೆ[1] |
ಅರಿಮಹಾರಥರನಿಬರೈಸಱ
ನರಳು ಸಂಖ್ಯಾತೀತವದಱೊಂ
ದುರವಣಿಗೆ ಪೈಸರಿಸಿತಿಲ್ಲವನೀಶ ಕೇಳೆಂದ ‖ ೨೨

ಅವರ ಶರ ಸಂಘಾತವನು ಕಡಿ
ದವರ ಸಾರಥಿಗಳನು ರಥ ವಾ
ಹವನು ಧನುವನು ಸಿಂಧವನು ಸೀಗುರಿಯ ಝಲ್ಲರಿಯ |
ಅವರ ಪದಕ ಕಿರೀಟ ಕಂಕಣ
ವಿವಿಧ ಕರ್ಣಾಭರಣ ಕೇಯೂ
ರವನು ಕಡಿಕಡಿದೊಟ್ಟಿದನು ಕಲಿ ಪಾರ್ಥ ನಿಮಿಷದಲಿ ‖ ೨೩

ಘಾಯವಡೆದರು ಘಾಸಿಯಾದರು
ಬಾಯಲೊಕ್ಕು[2]ದು[2] [3]ಕರುಳು[3] ಮಕ್ಕಳು
ತಾಯಿಗಾಗದೆ ಕೆಟ್ಟರೆಂಬುದ [4]ಕಾಣಲಾಯಿತ್ತಿಲ್ಲ[4] |
ನಾಯಕರು [5]ಹ[5]ಲರುಳಿದುದಧಿಕರು
ಹಾಯಿದರು ಹೊಣೆಗರು ಹಱಿಹಂ
ಚಾಯಿತಿಪ್ಪತ್ತೈದು ಸಾವಿರ ವರ ಮಹಾರಥರು ‖ ೨೪

ಎಲೆಲೆ ಸಂಶಪ್ತಕರ ಭಾರಿಯ
ಬಲ ಮುಱಿದು ಬರುತಿದೆ ವಿಘಾತಿಗೆ
ನಿಲುವರಿಲ್ಲಾ ಸೂರೆವೋ[6]ಯಿತು[6] ರಾಯನಭಿಮಾನ |
ಜಲಧಿ ಬಱಿತುದು ರಾಜಕಾರ್ಯಕೆ
ನಿಲುವಡಿದು ಹೊತ್ತೆನುತ ಮಂತ್ರಿಗ
ಳುಲಿಯೆ ಕೌರವರಾಯ ಕಂಡನು ಪಾರ್ಥನುರವಣೆಯ ‖ ೨೫

ಕರವ ನೆಗಹಿದನಕಟ ಹೋಹೋ
ಬಿರುದರಂಜದಿರಂಜದಿರಿ ನಿ
ಮ್ಮರಿಭಟಗೆ ನಾಲ್ಕಿಲ್ಲ ಕೈ ಕಣ್ಣಿಲ್ಲ ನೊಸಲಿನಲಿ |

---

[1] ಯಿವರ ಶರಹತಿಗಳುಕುವರ್ಜುನನೆ (ಚ.ತ.ನ.ಪ.ಬ), ಯಾಡಲೇನದನಳುಕುವರ್ಜುನನೆ (ದ). [2] ಪು (ಕ). [3] ರುಧಿರ (ಜ). [4] ತಪ್ಪದಾಯಿತ್ತಿಲ್ಲ (ಚ.ತ.ದ.ನ.ಪ.ಬ). [5] ಕೆ (ಕ.ಗ). [6] ದುದು (ಚ.ದ.ನ).

ದೊರೆಯು ಕೈಯನು ಕಂಡ ಬಳಿಕೋ
ಸರಿಸಿರೈ ಪರಿವಾರ ದೂರದ
ಲಿರಿ ವೃಥಾಭಯವೇಕೆನುತ ಕುರುರಾಯನನುವಾದ ॥ * ೨೬

ಕೂಡೆ ಗಱಿಗಟ್ಟಿತು ಚತುರ್ಬಲ
ಜೋಡುಮಾಡಿತು ರಾಯನಿದಿರಲಿ
ಹೇಡಿ ಕಲಿಯಹರೆಂಬರಿವದಿರು ಹೇವಮಾರಿಗ[1]ಳ[1] ।
[2]ಜಾಡಿಸುವ[2] ಝಲ್ಲರಿಯ ವೋಱ[3]ಗೆ[3]
ನೀಡಿ ಮರಳುವ ಸೀಗುರಿಯ ದಳ
[4]ವೇ[4]ಡಿಸಿತು ಕಲ್ಪಾಂತ[5]ರಂಜಿತ[5]ಮೇಘಡಂಬರವ ॥ ೨೭

ಸರಕಟಿಸಿ ದಳ ಸರ್ವಲಗ್ಗೆಯ
ಲುರವಣಿಸೆ [6]ಯಮಸೂನು[6] ಕಂಡನು
ನರನ ತೆಗೆತೆಗೆ ಇಂದಿನಾಹವ ನಮ್ಮ ಮೇಲೆನುತ ।
ಅರಸ [7]ನ[7]ಡೆದನು ರಾಜಮೋಹರ
ಹೊರಳಿಗಟ್ಟಿತು ಪ್ರಳಯಸಮರ
ಸ್ಫುರಿತ ಬಹಳಾರ್ಣವದ ಲಹರಿಯ ಲಳಿಯ [8]ಲಗ್ಗೆಯಲಿ[8] ॥ ೨೮

ಎರಡು ದಳ ಗಂಟಿಕ್ಕಿದುದು ನೆಲ
ಬಿರಿಯೆ ಬೆರಸಿತು [9]ಹೊಯ್ದುರುರುಳುವ[9]
ಶಿರದ ಬೀಳುವ ಭಟರ ಮೆದೆಗಡೆವಾನೆ ಕುದುರೆಗಳ ।
ಪರಿವಿಡಿಯದಂತಿರಲಿ ದೊರೆದೊರೆ
ಯುರವಣಿಸಿ ಹಳಚಿದರು ಪಾಂಡವ
ರರಸ ಕೌರವರರಸರೆಚ್ಚಾಡಿದರು ಮೊದಲಿಸಿ ॥ ೨೯

ಅರಸರಿವರೇ ಶಿವಶಿವಾ ನಿ
ಷ್ಕರುಣರೈ ನೀವೆಮ್ಮ ವೊಲು ಮೊನೆ
ಸರಳು ಮಾನ್ಯರನಱಿವವೇ ನೀವೇಕೆ ರಣವೇಕೆ ।

---

* ಇಲ್ಲಿಗೆ (ಗ) ಪ್ರತಿಯಲ್ಲಿ ಮೂಱನೆಯ ಸಂಧಿ ಮುಗಿದಿದೆ ; ಇಲ್ಲಿಯು ನಾಲ್ಕನೆಯ ಸಂಧಿಯು ಸೂಚನೆಯೋ ಅಲ್ಲಿಯೂ ಸೂಚನೆಯಾಗಿದೆ. [1] ಳು (ಕ), ಳೋ (ಚ.ದ). [2] ಜೋಡಿಸಿದ (ಕ). [3] ಯ (ಕ). [4] ಪ್ರೋ (ಕ). [5] ಚುಂಬಿತ (ಕ.ಗ). [6] ಲರಿರಾಯ (ಚ.ಟ.ತ.ದ.ಪ.ಬ). [7] ತ (ಕ). [8] ಲಂಘಿಸುತ (ಗ.ಚ.ಟ.ತ.ಪ). [9] ಹೊಕ್ಕಡಾಗುಳುವ (ಕ.ಟ).

ಒರಟರರ್ಜುನ ಭೀಮರತಿ ನಿ
ಷ್ಠುರರು ನಾವಡಿಮೇಲಹೆವು ನೀವ್
ಮರಳಿ ಬಿಜಯಂಗೈವುದೆಂದನು ಕೌರವರ ರಾಯ ‖ ೩೦

ಕೋಲ ಬಲುಹುಂಟಾಗೆ ನಾಲಗೆ
[1]ಹೋಲ ನುಡಿಯದು[1] ಹೊಲ್ಲದೇನಿದು
ಖೂಳ ಕಟಕಿಯ ಮಾತು ಬೇಡಂಬಿನಲಿ ಮಾತಾಡು ।
ಆಳುತನಕಾಭರಣವೇ ಮಾ
ತಾಳಿತನ ಕೈದೋಱ[2]ದ[2]ಹಿತನ
ಮೇಲಣೇಱಿನ [3]ಬಾಯ[3] ಸುಭಟರ ಹೊಗಳ[4]ಬೇಡೆಂ[4]ದ ‖ ೩೧

ಖರೆಯರಲ್ಲಾ ನೀವು ಕೊಂತಿಯ
ವರಕುಮಾರರು ನಿಮ್ಮೊಡನೆ ಸಂ
ಗರಕೆ ಸರಿಸರೆ ನಾವು ಸಂತೈಸಾದಡೆಂದೆಸಲು ।
ಸರಳು ಗಗನವ [5]ಹೊದಿಸಿ[5]ದವು
ಝೊಂಕರಿಸಿದವು ಹರೆಗಡಿದವರಿವೋ
ಹರವ ಮುಱಿದವು ಮುಸುಕಿದವು ವೋದಿದವು ರಿಪು[6]ಭಟರ[6] ‖ ೩೨

ಎಚ್ಚನೆಂಟಂಬಿನಲಿ ಕೌರವ
ನೆಚ್ಚ ಬಾಣವ ಕಡಿದು ನೂಱಱ
ಲೆಚ್ಚನೀತನ ರಥವನದ ಪರಿಹರಿಸಿ ಕುರುರಾಯ ।
ಎಚ್ಚನರಸನನಾ ಶರವ ಕಡಿ
ದೆಚ್ಚನವನೀಪನುಭಯರಾಯ[7]ರ[7]
ನಿಚ್ಚಟಿಕೆ[8] ಮಝ ಪೂತುರೆಂದುದು ಮೇಲೆ ಸುರಕಟಕ ‖ ೩೩

ದ್ಯುಮಣಿ ಪಡುವಣ ಕಡಲ ಸಾರುವ
ಸಮಯವಾಯಿ[9]ತ್ತುಭಯ ರಾಯರ[9]
ಸಮರಸೌರಂಭಾತಿಶಯವಿಮ್ಮಡಿಸಿತಡಿಗಡಿಗೆ ।
ಅಮಿತ ರೋಷ ವಿಧೂತ ಪಾಣಿ
ಭ್ರಮಿತ ಶರತತಿ ವಿಸ್ಫುಲಿಂಗ
ಭ್ರಮಿತ ಭುವನ[10]ತ್ರಯರು[10] ಕಾದಿದರರಸ ಕೇಳೆಂದ ‖ ೩೪

---

[1] ಹೋಲಲುಱುವುದು (ಕ), ಹೋಲನುಡಿವುದು (ಗ.ಚ.ಟ.ನ.ಪ). [2] ಲ (ಕ). [3] ಕೈಯ (ತ). [4] ರೇಕೆಂ (ತ). [5] ಹೂಳಿ (ಚ.ತ). [6] ರಥವ (ಚ.ಟ.ತ.ಬ.ನ). [7] ರು (ಕ). [8] ರು (ಕ). [9] ತು ರಾಯರಿಬ್ಬರ [10] ಕ್ಷಯರು (ಕ).

ಗೆಲವು ನಮಗಾಯ್ತೆಂದು ಕೌರವ
ರುಲಿದರೆಮಗಗ್ಗಳಿಕೆಯೆಂದವ
ರುಲಿವುತಿರ್ದರು [1]ಕಾದಿದರು[1] ಸಮಜೋಳಿ ಜೋಕೆಯಲಿ ।
ಬಳಿಕ ಯಮನಂದನನ ಕೈವೆ
ಗ್ಗಳಿಸಿ ತಾಗಿತು ನಿನ್ನ ತನುಜನ
[2]ಬಿಲು ಸರಳು ರಥ[2] ಸೂತ ವಾಜಿಗಳೊಱಗಿದುವು ಧರೆಗೆ ॥ ೩೫

ಸೆಳೆದು ಹಿರಿಯುಬ್ಬಣವನವನಿಪ
ಕೆಲಕೆ ಚಿಗಿದನು ಹಾ ಮಹಾದೇ
ವೆಲೆಲೆ ದೊರೆದೊರೆ ಹಗೆಗೆ ಸಿಕ್ಕಿದನೆನುತ ಬಲ ಬೆದಱೆ ।
ಬಿಲುದುಡುಕಿ ಕೃತವರ್ಮ ಕೃಪ ಸೌ
ಬಲ ಕೃಪಾನುಜ ಶಲ್ಯ ಗುರುಸುತ
ದಳಪತಿಗಳೇಱಿದರು ರಾಯನ [3]ಸುತ್ತುವಳಯದಲಿ[3] ॥ ೩೬

ದೊರೆಗೆ ಬಿದ್ದುದು ಭಾರಿಯಾಹವ
ವರರೆ ಬರಹೇಳೆನುತ ಕವಿದುದು
ಸರಳ ಹೊದೆಗಳ ಕೆದಱಿ ಸಾತ್ಯಕಿ ಭೀಮ ಕೈಕೆಯರು ।
ಬಿರುದ ಧೃಷ್ಟದ್ಯುಮ್ನ ಮಾದ್ರೀ
ಯರು ಶಿಖಂಡಿ ಯುಯುತ್ಸು ಶೃಂಜಯ
[4]ತರಳ ಪಂಚ[4]ದ್ರೌಪದೇಯರು ಮುತ್ತಿದರು ನೃಪನ ॥ ೩೭

ಬಳಿಕ ಸಂಕುಳ ಸಮರವತಿವೆ
ಗ್ಗಳಿಸಿತದನೇನೆಂಬೆನಂಬುಧಿ
ಗಿಳಿದನಂಬುಜಮಿತ್ರ ಬೆನ್ನಲಿ ತಿಮಿರ ಬಳಿಸಲಿಸೆ ।
ಗೆಲಿದು ಹೋಗದಿರೆಂದು ಕೌರವ
ನಳವಿಗೊಟ್ಟನು ಮತ್ತೆ ಧರ್ಮಜ
ಬಿಲುದಿರುವ ನೇವರಿಸಿ ನಿಂದನು ಸಮರಕನುವಾಗಿ ॥ ೩೮

ರಾಯರಿಬ್ಬರ [5]ಮನದ[5] ತಿಮಿರದ
ತಾಯಿಮನೆಯೆಂಬವೊಲು ತಾ [6]ಪೂ
ರಾಯ[6]ದಲಿ ನುಂಗಿದುದು ಕತ್ತಲೆ ನಿಮಿಷದಲಿ ಜಗವ ।

---

[1] ವುಭಯಬಲ (ಕ). [2] ಸರಳಿನೆಸುಗೆಗೆ (ಕ). [3] ಸುತ್ತಮುತ್ತಿದರು (ಕ). [4] ರೋಱಲಿದರು ಮಿಗೆ (ಕ), ದುರುಳಪಂಚ (ಪ.ಬ). [5] ಮಸಕ (ಕ). [6] ನಿದಾಘಯ (ಚ.ಟ.ತ.ದ.ಪ.ಬ).

ರಾಯಮೋಹರ ತೆಗೆದವೆರಡು ವಿ
ಡಾಯಿಯಲಿ ಬಹುವಿಧದ ವಾದ್ಯ ನ
ವಾಯಿ ಮಿಗೆ ನಲವಿನಲಿ ಬಂದರು ಪಾಳೆಯಂಗಳಿಗೆ ॥ ೩೯

ನಾಲ್ಕನೆಯ ಸಂಧಿ ಮುಗಿದುದು

---

# ಐದನೆಯ ಸಂಧಿ

ಸೂಚನೆ॥ ವೈರಿ ವಿಜಯಕೆ ತ್ರಿಪುರ ದಹನದ
ಚಾರು ಕಥನವನಱುಹಿ ಶಲ್ಯನ
ಸಾರಥಿಯ ಮಾಡಿದನು ಕರ್ಣಗೆ ಕೌರವರ ರಾಯ ॥

ಕೇಳು ಜನಮೇಜಯ ಧರಿತ್ರೀ
ಪಾಲ ದಿನವೊಂದಾಯ್ತು ಕರ್ಣನ
ಕಾಳೆಗದೊಳಲ್ಲಿಂದಮೇಲಣ [1]ವರ ಕಥಾಮೃತವ[1] ।
ಕೇಳಲಿಚ್ಛೈಸಿದ ಗತಾಕ್ಷ ನೃ
ಪಾಲಕಗೆ ವಿಸ್ತರಿಸಿ ಸಂಜಯ
ಹೇಳಿದನು ಬಳಿಕೆರಡನೆಯ ದಿವಸದ [2]ರಣೋತ್ಸವವ[2] ॥ ೧

ಹೊಗಳಿ ಕೆಲವರ ಹೊಳ್ಳುಗಳೆವುತ
ನಗುತ ಕೆಲವರ[3]ನ[3]ವರ ಮೋಹರ
ತೆಗೆದು ಹೋಯಿತು ಬಂದುದಿದು ತಂತಮ್ಮ ಪಾಳೆಯಕೆ ।
ಹೊಗಳುಭಟ್ಟರ ಸಾಲ ಕೈದೀ
ವಿಗೆಯ ಕಹಳಾರವದ ಲಗ್ಗೆಯ
ಬಿಗುಹಿನಲಿ ಕುರುರಾಯ ಬಂದನು ರಾಜಮಂದಿರಕೆ ॥ ೨

ಗುಳವನಿಳುಹಿದವಾನೆಗಳು ಹ
ಲ್ಲಳವ ಬಿಡೆ ಘುಲ್ಲೈಸಿದವು ಹಯ
ಕುಳ ವರೂಥವನಿಳಿದು ಸೂತರು ನಿಲಿಸಿದರು ರಥವ ।
ಕಳಚಿ ಸೀಸಕ ಜೋಡು ಕೈದುವ
ನಿಳುಹಿ ಸಮರಶ್ರಮವ ನಿಮಿಷಕೆ
ನಿಳಯವೇದಿಯಲಿದ್ದು ಕಳೆದುದು ಕೂಡೆ ಪರಿವಾರ ॥ ೩

---

[1] ರಣಕಥಾಮೃತವ (ಚ.ಟ), ಕದನ ಕೌತುಕವ (ಗ.ದ). [2] ಮಹಾರಣವ (ಗ.ಟ.ತ.ದ.ಪ.ಬ), ಮಹಾಹವವ (ಚ). [3] ವಿ (ಕ).

ಘಾಯವಡೆದಾನೆಗಳು ಗುಳವನು
ಹಾಯಿಕಲು ನೆಲಕುರುಳಿದವು [1]ವಾ
ನಾಯುಜಂಗಳು ಬಿಗುಹ ಬಿಡೆ[1] ದೊಪ್ಪೆಂದವಾಚೆಯಲಿ ।
ಘಾಯದಲಿ ಮುಱಿದಂಬನುಗುಳಿದು
ಸಾಯದಿಹರೇ ಭಟರು ಗಜಹಯ
ಲಾಯ ಹತ್ತೊಂದಾಗಿ ಹೆಚ್ಚಿತು ಕೌರವೇಶ್ವರನ ॥ ೪

ಬಂದುದಿರುಳೋಲಗಕೆ ರಾಯನ
ಮಂದಿ ದಳಪತಿ ಶಕುನಿ ಕೃಪ ಗುರು
ನಂದನಾದಿ[2]ಪ್ರತತಿ ಸಚಿವ ಪಸಾಯಿತರು ಸಹಿತ[2] ।
ಇಂದಿನಾಹವದೊಳಗೆ ಕುಂತೀ
ನಂದನರ ಬೊಬ್ಬಾಟ ಬಲುಹಾ
ಯ್ತೆಂದು ಮೆಲ್ಲನೆ ಮಾತ ತೆಗೆದನು ಕೌರವರ ರಾಯ ॥ ೫

ಬಲುಹಲೇ ಬಳಿಕೇನು ಹಗೆಯ
ಗ್ಗಳಿಕೆ ಮೆಱೆಯದೆ ಮುರವಿರೋಧಿಯ
ಬಲುಹ ಹೇಳಾ ಪಾರ್ಥನೆಂಬವನಾವ ಮಾನಿಸನು ।
ಬಲುಹು ಸಾರಥಿಯಿಂದ ರಿಪುಗಳ
ಗೆಲವು ಸಾರಥಿಯಿಂದ ಸಾರಥಿ
ಯೊಲಿದಡೇನೇನಾಗದೆಂದನು ಭೂಪತಿಗೆ ಕರ್ಣ ॥ ೬

ಭಾರಿ ಧನುವಿದ್ದೇನು ತೋಳಿನ
ತೋರದಲಿ ಫಲವೇನು ಕೈದುಗ
ಳಾರನಂಜಿಸಲಾಪವಾಹವರಂಗ[3]ಮಧ್ಯದಲಿ[3] ।
ಸಾರಥಿಯ ಬಲುಹಿಲ್ಲದಿರ್ದಡೆ
ಭೂರಿಸಾಧನವಿವು ನಿರರ್ಥಕ
ವಾರಿಗುಸುರುವೆ [4]ತ[4]ನ್ನ ಕೊಱತೆಯುನೆಂದನಾ ಕರ್ಣ ॥ ೭

ತೃಣಕೆ ಕೊಂಬೆನೆ ಫಲುಗುಣನ ಕಣಿ
ಗಿಣಿಯನಾ ಸಾರಥಿಯ ಕೈ ಮೈ
ಗುಣವಲೇ ಗರುವಾಯಿಗೆಡಿಸಿತು ನಮ್ಮ ಮೋಹರವ ।

---

[1] ಹಯದಾಯತದ ಬಿಗುಹಡಗಿದಡೆ (ತ). [2] ಮಹಾಪ್ರಧಾನಪಸಾಯ್ತ ಗುರುಸಹಿತ (ಸ). [3] ಭೂಮಿಯಲಿ (ಚ.ಟ.ತ.ಬ). [4] ನೆ (ಚ.ತ.ದ).

[1]ರ[1]ಣದೊಳೆನಗತಿಶಯ[2]ದ[2] ಸಾರಥಿ
ಮಣಿದನಾದಡೆ ನಾಳೆ ಹೆಣದೌ
ತಣದಲುಣಬಡಿಸುವೆನು ಜಂಬುಕ ಕಾಕಸಂತತಿಗೆ ॥ ೮

ಲೇಸನಾಡಿದೆ ಕರ್ಣ ನಿನಗಿ
ನ್ನೈಸಲೇ ಸಾರಥಿಯ ಕೊಱತೆ ಸು
ರಾಸುರರ ಥಟ್ಟಿನಲಿ ತೊಡಕುವರಾರು ನಿನ್ನೊಡನೆ ।
ಈ ಸಮಸ್ತ ನೃಪಾಲ ವರ್ಗದೊ
ಳಾಸೆಯಾರಲಿ ಸೂತ ಕರ್ಮಾ
ಭ್ಯಾಸಿಯನು ಜೋಡಿಸುವೆನೆಂದನು ಕೌರವರ ರಾಯ ॥ ೯

ಹಲವು ಮಾತೇನರಸ ನುಡಿದುದು
ಫಲಿಸಲರಿಯದು ದೈವಗತಿಯಲಿ
ಫಲಿಸಿತಾದಡೆ ರಾಜ್ಯಲಕ್ಷ್ಮಿಗೆ ಸೂಳೆತನವಹು[3]ದೇ[3] ।
ಸುಲಭವಾದಡೆ ಮಾದ್ರರಾಜನ
ತಿಳುಹಿ ಸೈರಿಸು ರಿಪುಗಳೈವರ
ತಲೆಗೆ ಹಾಯಿಕು ಸಂಚಕಾರವನೆಂದನಾ ಕರ್ಣ ॥ ೧೦

ಉಬ್ಬಿ[4]ದನು[4] ರೋಮಾಂಚ ಮೆಯ್ಯಲಿ
ಹಬ್ಬಿದುದು [5]ಹೊರೆಯೇಱು[5] [6]ಮಱವೆಯು[6]
ಮಬ್ಬು ಕವಿದುದು ಕರ್ಣನಾಡಿದಮಾತ [7]ಸವಿಸವಿದು[7] ।
[8]ಚ[8]ಬ್ಬರಿಸುವಿಂದ್ರಿಯತುರಂಗದ
ಕಬ್ಬಿ ಕಳಚಿತು ಕೌರವೇಂದ್ರನು
ಸರ್ಬಲಗ್ಗಯ ಹರುಷದಲಿ ಹೊಱವಂಟನರಮನೆಯ ॥ ೧೧

ಹರಿದರರಸಾಳುಗಳು ರಾಯನ
ಬರವನೀತಂಗಱುಹಿದರು ಕಡು
ಹರುಷದಲಿ ಕಲಿ ಶಲ್ಯ ಹೊಱವಂಟನು ನಿಜಾಲಯವ ।
ಅರಸುಮಕ್ಕಳ [9]ವಜ್ರ[9]ಮಣಿಯಾ
ಭರಣ ಕಿರಣ ಸ್ತೋಮ ದೀಪ
ಸ್ಫುರಿತ ಜನಮಧ್ಯದಲಿ ಕಂಡನು ಕೌರವೇಶ್ವರನ ॥ ೧೨

---

[1] ಕ್ಷ (ಕ). [2] ವು (ಕ). [3] ದು (ಕ). [4] ದುದು (ಕ), ದುವು (ದ). [5] ನೆಱೆಮೆಚ್ಚಿ (ಕ), ಹೊರೆಹೆಚ್ಚಿ (ಗ). [6] ಮಱವಿನ (ಕ). [7] ನೆನೆನೆನೆದ. (ಚ.ತ.ಪ.ಬ). [8] ಅ (ಕ), ಉ (ಬ). [9] ಮೌಳಿ (ಗ.ದ.ನ).

ಅಂದಣವನಿಳಿದರಸನಾತಗೆ
ವಂದಿಸಿದನಾ ಮಾದ್ರಪತಿ ಸಾ
ನಂದದಲಿ ತೆಗೆದಪ್ಪಿ ತಂದನು ರಾಜಮಂದಿರಕೆ ।
[1]ಇಂದಿದೇನಿದ್ದಿದ್ದು ನೀನೇ[1]
ಬಂದ ಕಾರ್ಯವಿಶೇಷವೇನುಂ
ಟೆಂದು ಕೌರವರಾಯನನು ಬೆಸಗೊಂಡನಾ ಶಲ್ಯ ॥ ೧೩

ಏನ ಹೇಳುವೆ ನಮ್ಮ ಪುಣ್ಯದ
ಹಾನಿಯನು ನುಗ್ಗಾಯ್ತು ಬಲ ಸು
ಮ್ಮಾನ ಬೀತುದು ಬಿರುದರಿಗೆ ಕಾಲೂಱಿತಪಮಾನ ।
ಧ್ಯಾನದೀಕ್ಷೆಯ ಹಿಡಿದುದೆನ್ನ [2]ಸ
ಮಾನ ಸುಭಟರು ಜಯಸಿರಿಯ ಸಂ
ಧಾನ ಮುಱಿದುದು[2] ಮಾವ ನಿಮಗಜ್ಞಾತವೇನೆಂದ ॥ ೧೪

ಸಮರ ಜಯ ಸಾಧಕರು ಮಂತ್ರ
ಭ್ರಮಿತರಾ[3]ಯ್ತು ಪಜಯ ವಧೂ ವಿ[3]
ಭ್ರಮ ಕಟಾಕ್ಷದ ಛಾಯದಲಿ ಕಳವಳಿಸದವರಾರು ।
ಸಮತೆಯಾಯಿತು ತವಕಿಗಳಿಗುದ್
ಭ್ರಮಿಗಳಿಗೆ ತಿಳಿವಾಯ್ತು ವಾಸಿಯ
ಮಮತೆಯವರು ವಿರಕ್ತರಾದರು ಮಾವ ಕೇಳೆಂದ ॥ ೧೫

ಮುಱಿವಡೆದು ಕಲಿ ಭೀಷ್ಮನೇ ಕು
ಕ್ಕುಱಿಸಿದನು ದ್ರೋಣಂಗೆ ಬಂದುದ
ನೞಿಹಲೇತಕೆ ಬಳಿಕ ಕರ್ಣನ ವೀರಪಟ್ಟದಲಿ ।
ನೆಱವಣಿಗೆಯುಂಟಾದಡೊಂದೇ
ಕೊಱತೆಯಿದು ನಿಮ್ಮಿಂದ ಕಡೆಯಲಿ
ನೆಱತೆಯಹುದಿನ್ನುತ್ತರೋತ್ತರ ಸಿದ್ಧಿ ಬಳಿಕೆಂದ ॥ ೧೬

ದ್ರೋಣ ಭೀಷ್ಮರಪೋಲು ನೆಟ್ಟನೆ
ಹೂಣಿಗರು ರಾಧೇಯ ಮಾದ್ರ
ಕ್ಷೋಣಿಪತಿಯೆಂದೆಂಬ ನುಡಿಯುಂಟೆರಡು [4]ಘಟ್ಟಿನ[4]ಲಿ ।

---

[1] ಇಂದಿದೇನಿದ್ದಿರುಳು (ಟ.ತ), ಇಂದಿನೀ ಯಿರುಳಿನಲಿ ನಟ್ಟಿರುಳು (ಪ.ಬ).
[2] ಯಮಾನ ಮುಱಿದುದು ಅಱಿಯಬಾರದೆ ಹಾನಿಯನು ಎಲೆ (ಕ). [3] ದರು ಜಯುವಧುವಿನು (ಕ). [4] ಕಟಕದ (ತ).

ಕೇಣವಿಲ್ಲದ ರಥ ಗತಿಯ ಬಿ
ನ್ನಾಣವನು ತೋಱಿದಡೆ ತನ್ನಯ
ಗೋಣಿಗೊಡ್ಡಿದ ಕೈದುವನು ನೀ ತೆಗಸಿದವನೆಂದ ॥ ೧೭

ಬಱಿದೆ ಬೋಳೈಸದಿರು ಕಾರ್ಯದ
ಹೊಱಗೆಯೇನದ ಹೇಳು [1]ಮೇಗಡೆ[1]
[2]ಮೆ[2]ಱೆವವರು ನಾವಲ್ಲ ನುಡಿ[3]ಯಾ ಬಯಲಡೊಂಬೇಕೆ[3] ।
ಅಱುಹು ಕೇಳುವೆನೆನಲು ಶಲ್ಯನ
ಬಿಱುನುಡಿಗೆ ಬೆಚ್ಚದೆ ಮಹೀಪತಿ
[4][ಯಱಿವು][4]ತಪ್ಪದೆ ಬಿನ್ನವಿಸಿದನು ಮಾದ್ರರಾಜಂಗೆ ॥ ೧೮

ಮಾವ ಸಾರಥಿಯಾಗಿ ಕರ್ಣನ
ನೀವು ಕೊಂಡಾಡಿದಡೆ ಫಲುಗುಣ
ನಾವ[5]ಪಾಡು[5] ಸುರಾಸುರರ ಕೈಕೊಂಬನೇ ಬಳಿಕ ।
ಆವುದೆಮಗಭ್ಯುದಯವದನೀ
ನಾವ ಪರಿಯಲಿ ಮನ್ನಿಸಿದಡರೆ
ಜೀವ ಕೌರವವಂಶವೇ ಸಪ್ರಾಣಿಸುವುದೆಂದ ॥ ೧೯

ಕೇಳಿದನು ಕುರುಪತಿಯ ಮಾತಿನ
ಗಾಳಿ ತುಡುಕಿತು ಮನದ ರೋಷ
ಜ್ವಾಲೆಯ[6]ನು[6] ಮೀಸೆಗಳು ಕುಣಿದವು ಕಾಯ ಕಂಪಿಸಿತು ।
ಮೇಲು ಮೂಗಿನ ಬೆರಳ ಕಡುಗಾ
ದಾಲಿಗಳ ಮಣಿಮಕುಟದೊಲಹಿನ
ನಾಲಗೆಯ ನಿರ್ದ್ರವದ ಮಾದ್ರಾಧೀಶ[7]ನಿಂತೆಂದ[7] ॥ ೨೦

[8]ಖೂಳನೆಂಬೆನೆ ನೀ ಸಮಸ್ತ ಕ
ಳಾಳಿ ನಿಪುಣನು ಬಾಲನೆಂಬೆನೆ
ಮೇಲೆ ಪಲಿತದ ಬೀಡು ಬಿಟ್ಟಿದೆ ತಳಿತ ತನುವಿನಲಿ[8] ।
ಹೇಳು ಹೇಳಿನ್ನೊಮ್ಮೆ ನುಡಿ ನುಡಿ
ಕೇಳುವೆನು ಕಿವಿಯಾರೆ ಕರ್ಣನ
ಕಾಳೆಗಕೆ ನಾವ್ ಸಾರಥಿಗಳೇ ಶಿವಶಿವಾ ಎಂದ ॥ ೨೧

---

[1] ಹೇಳೈ (ಕ). [2] ಮ (ಕ). [3] ಗಳಬಯಲಡೊಂಬಿನಲಿ (ತ.ಬ). [4] ಯಱುಹು (ಕ), ಯೊಱವು (ತ.ಪ). [5] ಹಿಂದು (ಕ). [6] ಲಿ (ಕ). [7] ಬೆಱಗಾದ (ಸ). [8] ಖೂಳನಿವನೆಂಬೆನೇ ಸಮಸ್ತ । ಕಳಾನಿಪುಣನಿವಬಾಲನೆಂಬೆನೆ । ಮೇಲೆಪಳಿಕದ ಬೀಡುಬಿಟ್ಟುದೆ ಹಾಮಹಾದೇವ (ಕ).

ತಾ[1]ರ[1]ತಮತೆಯ ಬಲ್ಲೆ ಪುರುಷರ
ಚಾರು ಚರಿತವನಱಿವೆ ಸುಭಟರ
ವೀರವೃತ್ತಿಯ [2]ಬ[2]ಲ್ಲೆ ಮಾನ್ಯರ ಮೈಸಿರಿಯ [3]ತಿಳಿವೆ[3] ।
ಆರವನು ರಾಧೇಯ ದಿಟ [4]ನಾ
ವಾರವರು[4] [5]ನ[5]ಮ್ಮಂತರವ ನೀ
ನಾರ ಕೈಯಲಿ ಕೇಳಿದಱಿಯಾ ಶಿವಶಿವಾ ಎಂದ ॥ ೨೨

ಖೂಳನನು ಹಿಡಿತಂದು ಧರಣೀ
ಪಾಲ[6]ರಲಿ ಸರಿಮಾಡಿ[6] ರಾಜ್ಯದ
ಮೇಲೆ ನಿಲಿಸಿದೆ ಬಳಿಕ [7]ಬಂದುದು[7] ಖೂಳತನ ನಿನಗೆ ।
[8]ಕೀಳುಮೇಲಿನ ಸೀಮೆ ನಿನ್ನಲಿ
ಬೀಳುಕೊಂಡುದು[8] ಸಾಕು ನಮಗಿ
ನ್ನಾಳುತನವೇಕೆನುತ ಧಿಮ್ಮನೆ ನಿಂದನಾ ಶಲ್ಯ ॥ ೨೩

ಒಡನೆ ನಿಂದನು ಸೆಱಗ ಹಿಡಿದವ
[9]ಗಡಿಸಲೇಕಿನ್ನೆನುತ[9] ಗುಣದಲಿ
ನುಡಿದು ಕುಳ್ಳಿರಿಸಿದನು ಸಂತೈಸಿದನು ವಿನಯದಲಿ ।
ನುಡಿಗೆ ಕೋಪಿಸಲೇಕೆ ಮನವೊಡ
ಬಡುವುದೇ ಕೈಕೊಂಬುದಲ್ಲದ
ಡೊಡೆಯರುಂಟೇ ನಿಮಗೆ ಎಂದನು ಕೌರವರ ರಾಯ ॥ ೨೪

ಅರುಣ ಸಾರಥಿ ಭುವನಕಾರ್ಯದ
ಧುರವ [10]ಹೊಱನೇ[10] ಕೃಷ್ಣನಲ್ಲಾ
ನರನ ಸಾರಥಿಯಾಗನೇ [11]ಪರಕಾರ್ಯದನುವಱಿದು[11] ।
ಹರನ ಸಾರಥಿ ಕಮಲಸಂಭವ
ಸುರರ ಕಾರ್ಯಕ್ಕೊದಗನೇ ಸ
ತ್ಪುರುಷ[12]ರೇ ಪರಕಾರ್ಯನಿಷ್ಠರು[12] ಕೋಪವೇಕೆಂದ ॥ ೨೫

---

[1] ರು (ಕ). [2] ನೊ (ಕ). [3] ಮಱಿವೆ (ಕ), ನಱಿವೆ (ತ). [4] ತಾನಾರವನುः (ಕ). [5] ತ (ಕ). [6] ರನುಮಾಡಿದಡೆ (ಚ.ಟ.ತ.ಪ.ಬ). [7] ಬಹುದ್ರೈ (ಕ). [8] ಹೇಳಿಫಲವೇನಿನ್ನು ನಾವೇ ಖೂಳರೈಸಲೆ (ಸ). [9] ಗಡವಿದೇಕಿನ್ನೆನುತ (ಚ.ದ), ಗಡವಿದೇಕೀಸೆನುತ (ತ.ನ.ಪ.ಬ). [10] ಹೊರುವವನೆ (ಗ). [11] ಸ್ವರಕಾರ್ಯಪರಗುಣವ (ಕ). [12] ರಿಗೆ ಪರಕಾರ್ಯನಿಷ್ಠತೆ (ಚ.ತ.ದ.ನ.ಪ.ಬ).

ಸವೆಱಿದರು ಕುರುವಂಶವನು ಪಾಂ
ಡವ[1]ರು ಸಕಲ[1] ಮಹಾರಥರು ಸಲೆ
ಸವೆದುದಿಲ್ಲಿ ನದೀಸುತ ದ್ರೋಣಾದಿ[2]ಗಳು ಸಹಿತ[2] ।
ಅವರೊಳಳಿದವರಿಬ್ಬರೇ ನೀ
ವವಸರಕೆ [3]ಸಾರಥ್ಯವನು[3] ನಿ
ಮ್ಮವರ ಮೇಲನುರಾಗವುಳ್ಳಡೆ ಮಾಡು ಮಾಣೆಂದ ॥ ೨೬

ನಿನ್ನ ಕೈಯಲಿ ಬರಲಿ ಸತ್ತಿಗೆ
ಯೆನ್ನಕೈಯಲಿ ಹೊಡೆಸು ಬಂಡಿಯ
ನಿನ್ನ ತಮ್ಮನ ಹೆಗಲಲಾತನ ಹಡಪ ಹಾಯ್ಕಿರಲಿ ।
ನಿನ್ನ ಬಂಧುಗಳವನ ಬೇಂಟೆಯ
ಕುನ್ನಿಗಳ ಹಿಡಿಯಲಿ ಸುಯೋಧನ
ನಿನ್ನ ಭಾಗ್ಯವನೊದೆದು ಕಳೆ ಕೇಡಾವುದೆಮಗೆಂದ ॥ ೨೭

ಗೆಲುವೆನವದಿರನೆಂಬ ಬಱಿಕ
ಕ್ಕುಲಿತೆಯಲ್ಲದೆ ದ್ರೋಣ[4]ಭೀಷ್ಮರಿ
ಗಳುಕದರಿಭಟ[4]ರಿವನ ಕೊಂಬರೆ ಕಂಡು ಮರುಳಾದೈ ।
ಬಲುಬಿದಿರನುಚ್ಚಳಿಸುವಳಿಮುಖ
ಕೆಳೆಯ ಕಬ್ಬಾನುವುದೆ ಕೌರವ
ಕುಲವನದ್ದಿದೆ ಪಾಪಿ ಕಷ್ಟವ ನೆನೆವೆ ಹೋಗೆಂದ ॥ ೨೮

ಅರಿಶಿರವ ಸೆಂಡಾಡಿ ಎನ್ನೀ
ಕರವು ವಂದಿವ್ರಾತದೆಡರನು
ಪರಿಹರಿಸಿತೀ ಹದನು ನಾವ್ ಹಿಂದೀಸು ಕಾಲದಲಿ ।
ಧರಣಿಪತಿ ನಿನ್ನಿಂದ ಕರ್ಣನ
ತುರಗವಾಘೆಯ ಚಮ್ಮಟಿಗೆಗೀ
ಕರವು [5]ಹೊಡುವುದಾಯ್ತು[5] ಹರಹರ ಧನ್ಯರಾವೆಂದ ॥ ೨೯

ಜಾತಿಹೀನರ ಕರ್ಮವುತ್ತಮ
ಜಾತಿಗಳ ಕರ್ತವ್ಯ ತಿರ್ಯ
ಗ್ಜಾತಿಗಳ ಗತಿ [6]ಧರ್ಮವೃತ್ತಿಯ[6] ಸೇರುವೆಯನಱಿದು ।

---

[1] ರತಿಲಕ (ಕ). [2] ನಾಯಕರು (ಕ.ದ.ನ). [3] ಸಾಹಸಿಕರ್ತೆ (ಕ.ಗ.ದ.ನ). [4] ಭೀಷ್ಮಾದಿಗಳುಕಲಿಭಟ (ಕ). [5] ಹೊದ್ದುವುದಾಯ್ತು (ಚ.ತ.ದ.ನ.ಪ.ಬ). [6] ಕರ್ಮಯುಕ್ತಿಯ (ಕ).

ಆತನಳವಡಿಸಿದನು ವಿಧಿ [1]ನಿಮ
ಗಾತಮಾಡಿದ[1]ನಳಿವ ಸಾಮ
ರ್ಥ್ಯಾತಿಶಯವುಂಟೈಸಲೇ ಶಿವಯೆನುತ ಖತಿಗೊಂಡ ‖ ೩೦

ಆಸುರದ ಬೆಬಗೇಕೆ ನಮ್ಮೊಡ
ನೀಸು ಮಾತೇಕೆಮ್ಮ ರಕ್ಷಿಸು
ವಾಸೆಯುಂಟೇ [2]ಮಾಡಿ ಮೊಬ್ಬುದು[2] ಕರುಣವಿಲ್ಲದಡೆ ।
ವಾಸಿವಟ್ಟವ ನೋಡಿದನೆ ಲ
ಕ್ಷ್ಮೀಶನವರಲಿ ಸೂತಕರ್ಮಾ
ಭ್ಯಾಸಿಯೇ ಮುರವೈರಿ ಮುನ್ನೆಂದನು ಸುಯೋಧನನು ‖ ೩೧

ಮುರಹರನ ಸಮಜೋಳಿ ನೀವಾ
ನರನ ಸಮಗ್ಗೆ ಕರ್ಣನಿಂತಿ
ಬ್ಬರನು ನೀವಿಬ್ಬರು ವಿಭಾಡಿಸಿ ಗೆಲುವುದೇನರಿದು ।
ಸುರರ ಕಾರ್ಯದಲಂದು ಸಾರಥಿ
ಸರಸಿಜೋದ್ಭವನಾಗನೇ ಎ
ನ್ನರಸುತನವಿಂದಳಿದುದಿದನೀನುಳುಹಬೇಕೆಂದ ‖ ೩೨

ಒಣಗು[3]ತಿ[3]ದೆ ಕುರುವಂಶ[4]ಲತೆ[4] ಫಲು
ಗುಣನ ಕೋಪಾನಳನ ನಾಲಗೆ
ಕೆಣಕುತಿದೆ ಕಕ್ಕುಲಿತೆಬಟ್ಟರೆ ಕಾಣೆ ಕಾವವರ ।
ಅಣಕಿಸದೆ ಕಾರುಣ್ಯವರ್ಷವ
ನೊಣ[5]ಗಲಲಿ[5] ಸುರಿ ಪಾಪಿ ಮಕ್ಕಳ
ಹೆಣನ ಕಾಣುತ ದುಃಖವಿಲ್ಲ [6]ದುರಾತ್ಮನೀನೆಂದ[6] ‖ ೩೩

ದೇವಕೀಸುತನೇನು ಬಂಡಿಯ
ಬೋವಗುಲದಲಿ ಜನಿಸಿದನೆ ಮೇ
ಣಾ ವಿರಿಂಚಿಯದಾವ ಸಾರಥಿಕುಲದ ಪೀಳಿಗೆಯೊ ।
ಕಾವುದೊಬ್ಬರನೊಬ್ಬರಿದಱೊಳ
ಗಾವ ಹಾನಿ ಪರಪ್ರಯೋಜನ
[7]ಭಾವಕರು[7] [8]ಸತ್ಪುರುಷರಿದಕೆ ವಿಚಾರವೇನೆಂದ[8] ‖ ೩೪

[1] ತಾನಾತಹೊಡಿದ (ಕ). [2] ಮಾವಮಾಣ್ಮೆ (ಕ). [3] ತ (ಕ). [4] ವಾ (ಕ). [5] ಗಿಸದೆ (ಗ). [6] ವಮಾವನಿಮಗೆಂದ (ದ.ನ). [7] ಜೀವಿಗಳು (ಗ.ಚ.ದ.ನ). [8] ಸದ್ಗುಣಕೆ ಮತ್ಸರವೇಕೆ ಹೇಳೆಂದ (ಕ).

ಗುರು ಪಿತಾಮಹರಿಂದ ಮೋಹರೆಯು
ಮುರಿದ ವಿಜಯ[1]ವಧೂ ಕಟಾಕ್ಷವ[1]
ತಿರುಹಿ ಹಾಯ್ಕುವ ಗಂಡನಾವನು ನೀವು ತಪ್ಪಿದಡೆ ।
ಕುರುಕು[2]ಲೋದ್ಧಾರ[2]ಕನು ಮಾದ್ರೇ
ಶ್ವರನೆನಿಪ ವಿಖ್ಯಾತಿ ಬಂದುದು
ಪರಿಹರಿಸದಿರು ಮಾವ ಎಂದೆಱಗಿದನು ಚರಣದಲಿ ॥ ೩೫

ಶಿವಶಿವಾ ನಿರ್ಬಂಧವಿದು ಕೌ
ರವನಲಾಯಿತೆ ಮದ್ಯಮಯ ಗಂ
ಧವನು ಕುಡಿಸುವ ಪರಿಯಲಾ ತುಂಬಿಗಳ ಸೆಱೆವಿಡಿದು ।
ಅವನಿಪತಿಗಳ ಸೇವೆ[3]ಯಿದು ಕ
ಷ್ಟವಲೆ ಮೊದಲಲಿ ಬಳಿಕ ನಾವಿ
ನ್ನವಗಡಿಸಲೇನಹುದು[3] ಸಾರಥಿಯಾದೆವೇಳೆಂದ ॥ ೩೬

ಆಯಿತೇ ಸಂತೋಷ ಕಮಲದ
ಳಾಯತೇಕ್ಷಣನೊಡನೆ ಬಂಡಿಯು
ಬೋಯಿಕೆಗೆ ವೀಳೆಯವ ಹಿಡಿದೆವು ಹಲವು ಮಾತೇನು ।
[4]ದಾಯ ಬಂದುದೆ ನಿನಗೆ ಬೊಮ್ಮಂ
ಗಾಯಿತೇ ಸೂತತ್ವವಾದಡೆ[4]
ರಾಯ ಹೇಳ್ಕೈ ತ್ರಿಪುರದಹನದ ಕಥೆಯು ನೀನೆಂದ ॥ ೩೭

ಐದನೆಯ ಸಂಧಿ ಮುಗಿದುದು.

---

[1] ಕಟಾಕ್ಷದೃಷ್ಟಿಯ (ಕ). [2] ಲಾಧಾರ (ಕ). [3] ಯೆಂಬುದು ಹವಣಿಸದ ಕಡುಕಷ್ಟ ಮೊದಲಲಿ ಶಿವಶಿವಾ ನುಡಿಯೇಕೆ (ಕ.ಗ.ಬ). [4] ದಾಯವಲ್ಲದೆ ದಿಟ ವಿಧಾತ್ರಂಗಾಯಿತೇ ಸಾರಥ್ಯವಾದರೆ (ಚ.ತ.ದ.ಪ).

# ಆರನೆಯ ಸಂಧಿ

ಸೂಚನೆ ॥ ನಗರ ಮೂಱಱ ದೂಱುಕಾಱರ
ದುಗುಡವನು ಪರಿಹರಿಸಿ ಕರುಣಾ
ಳುಗಳ[1]ರಸ ಶಿವ[1] ಸಂತವಿಟ್ಟನು ಸುರಕದಂಬ[2]ಕವ[2] ॥

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವನೃಪತಿ ಶಲ್ಯಗೆ
ಹೇಳಿದನು ಸಾರಥ್ಯ ಸಂಯೋಜನ ಸಮಾಹಿತವ ।
ಲೋಲನಾಪರಿಕರ್ಮತರು ನಿ
ರ್ಮೂಲನೈಕಕ್ಷಮ ಸುಧಾಕರ
ಮೌಳಿ ಕೇಳೀ ಕಲಿತ ವಿಸ್ತರ ವರ ಕಥಾಂತರವ ॥ ೧

ತಾರಕನ ಮಕ್ಕಳುಗಳೆನಿಸುವ
ತಾರಕಾಕ್ಷನು ಕಮಳಲೋಚನ
ವೀರ ವಿದ್ಯುನ್ಮಾಲಿಯೆಂಬೀ ಮೂವರತಿಬಳರು ।
ಘೋರತರ ಸುತಪಃಪ್ರಭಾವಿ
ಸ್ತಾರಿಗಳಸಂಖ್ಯಾತಯುಗದಲಿ
ವಾರಿಜೋದ್ಭವನನು [3]ವಶೀಕರಿಸಿದರು[3] ಭಕುತಿಯಲಿ ॥ ೨

ಬಂದು ಕಮಲಜನಿವದಿರಿದಿರಲಿ
ನಿಂದನೆಲೆ ಋಷಿಗಳಿರ ಸಾಕಿ
ನ್ನೆಂದುಪರಿಯಂ[4]ತೀ[4] ತಪೋನುಷ್ಠಾನದಾಯಾಸ ।
ನಿಂದು ಬೇಡುವುದೊಲಿದುದನು ನಾ
ವಿಂದು ಸಲಿಸುವೆವೆನಲು ನಿಮಿಷಕೆ
ಕಂದೆಱೆದು ಕಮಳಾ[5]ಸನಂಗೆಱಗಿದರು ಭಕ್ತಿಯಲಿ[5] ॥ ೩

ಎನಿತನೊಲಿದಡೆ ಏನಹುದು ದು
ರ್ಜನರು ಪುರುಷಾರ್ಥಿಗಳೆ ಹಾವಿಂ
ಗನಿಲನೇ ಆಹಾರವಾದಡೆ ಬಿಟ್ಟುದೇ ವಿಷವ ।

---

[1] ದೇವನು (ಚ.ತ). [2] ವನು (ಕ). [3] ಭಜಿಸಿ ತುತಿಸಿದರು (ಕ).
[4] ತರ (ಕ). [5] ಸನನ ಭಜಿಸಿದರು ವಿನಯದಲಿ (ಕ.ಗ).

ದನುಜರದ್ಭುತ ತಪವಮಾಡಿದ
ರನಿಮಿ[1]ಷಾವಳಿ[1]ಬೇಂಟೆಯಾಡಲು
ನೆನೆದು ಬಿನ್ನೈಸಿದರು ಕಮಲಭವಂಗೆ ನಿಜಮತವ ॥ ೪

ರಚಿಸುವೆವು ಪುರಮೂಱ[2]ನಗ್ಗದ[2]
ಖಚರ ಕಿನ್ನರ [3]ಸಿದ್ಧ[3] ನಿರ್ಜರ
ನಿಚಯವೆಮಗೋಲೈಸಿ ಹೋಗಲಿ ಹಲವು ಮಾತೇನು।
ಉಚಿತದಲಿ ನಿಮ್ಮಡಿಗಳನು ಪರಿ
ರಚಿಸಲಾವೋಲೈಸುವೆವು [4]ವರ[4]
ವಚನ ನಿಮ್ಮದು ಕರುಣಿಸುವುದಮರತ್ವವನು ನಮಗೆ ॥ ೫

ಹಾ ಮಹಾದೇವೀ ಕುಠಾರರ
ತಾಮಸದ ನೆನಹಿದ್ದ ಪರಿಯಿಂ
ತೀ ಮಹಾನುಷ್ಠಾನ[5]ವಿದಱಲಿ[5] ಶಾಂತಿ ಲವವಿಲ್ಲ।
ಕಾಮಿತವನಿವದಿರಿಗೆ ಕೊಟ್ಟರೆ
ಕಾಮಹರ ಕಮಳಾಕ್ಷರಿಗೆ ಸಂ
ಗ್ರಾಮದಲಿ ಜಯವಾಗದೆಂದಡಿಗಡಿಗೆ ಬೆಱಗಾದ ॥ ೬

ಹುಲಿಗೆ ಧೈರ್ಯವನೆಱಕೆಗಳನಹಿ
ಗಳಿಗೆ ಖಳರಿಗೆ ಲಕ್ಷ್ಮಿಯನು ಕ
ತ್ತಲೆಗೆ ಕಾಠಿಣ್ಯವನು ಚೈತನ್ಯವನು ಗಿರಿಗಳಿಗೆ।
ಕೊಲೆಗಡಿಕರಿಗೆ ನಿತ್ಯದೇಹವ
ನೊಲಿದು ಕೊಟ್ಟರೆ ಲೇಸು ಬಳಿಕೇ
ನೆಲೆ ಮಹಾದೇವೇನ ನೆನೆದರೊ ಶಿವಶಿವಾ ಎಂದ ॥ ೭

ಪುರವ ವಿರಚಿಸಿ ದಿವ್ಯ ಸಾಸಿರ
ವರುಷ ಕೈಗೂಡಿದರೆ ಒಂದೇ
ಸರಳಲಾವವನೆಚ್ಚಡಾಗಳೆ ನಿಮಗೆ [6]ಕಡೆಗಾಲ[6]।
ಬರಲಿ ಬಳಿಕಿಂದ್ರಾದಿ ನಿರ್ಜರ
ನೊರಜುಗಳ ನೀವ್ ಸದೆಯಿ [7]ಹೋಗೆಂ[7]
ದರಸ ಕೇಳ್ಕೈ ಕೊಟ್ಟನವರಿಗೆ ಕಮಲಭವ ವರವ॥ ೮

---

[1] ಷಾಳಿಯ (ನ). [2] ನಗರದ (ಕ). [3] ಯಕ್ಷ (ಚ.ತ). [4] ಗುರು (ಕ).
[5] ಫಲದಲಿ (ಕ). [6] ಕೇಡಹುದು (ಚ.), ಕಡೆಯಹುದು (ಬ). [7] ಸಾಕೆಂ (ಕ).

ಕರುಣವಿನಿತೇ ಸಾಕು ನಮ[1]ಗೇ
ನುರದಲೊಗೆದವೆ ಮೊಲೆಗಳೆಮ್ಮಯ[1]
ಪುರವನೊಂದಂಬಿನಲಿ ಗೆಲುವನ ತಾಯಿ ಹುಸಿಯೆನುತ।
ದುರುಳರೀತನ ಬೀಳುಕೊಂಡು
ಬ್ಬರದ ಹರುಷದಿ ಹೆಚ್ಚಿ ಮಯನನು
ಕರಸಿ ಮಾಡಿಸಿದರು ಮಹಾವಿಭವದಲಿ ನಗರಗಳ ॥ ೯

ಕನಕದಲಿ ರಜತದಲಿ ಬಲುಗ
ಬ್ಬುನದಲೊಂದೊಂದಕ್ಕೆ ಶತಯೋ
ಜನದ [2]ತೆಱಹುಗಳೆಡೆಗೆ ಹಬ್ಬಿಸುವಮಳ[2] ತೋರಣದ।
ವಿನುತ ನಗರಿಗಳಾದುವಲ್ಲಿಯ
ದನುಜರೆರೆಗಳ ಹಾಯ್ಕಿ ಗಾಣದ
[3]ಲನಿಮಿಷರನೀಡಾಡಿ[3] ಕೊಂಡರು ದುರ್ಗವನು ಸುರರ॥ ೧೦

ಸೂಱ[4]ವೋಯಿತು[4] ಸುರಪತಿಯ ಭಂ
ಡಾರ ಹೆಂಡಿರು ಸಹಿತ ನಿರ್ಜರ
ನಾರಿಯರು ತೊತ್ತಾದರಮರಾರಿಗಳ ಮನೆಗಳಿಗೆ।
ಮೂಱುಭುವನದೊಳಿವದಿರಾಣೆಯ
ಮೀಱಿ ಬದುಕುವರಿಲ್ಲ ಕಡೆಯಲಿ
ತಾರಕನ ಮಕ್ಕಳಿಗೆ ಕೈವರ್ತಿಸಿತು ಜಗವೆಂದ ॥ ೧೧

ನೆರೆದುದಮರರು ಹಾಳು ಹಱಿ ಸಾ
ಗರದ ಕಡೆಯಲಿ ರೂಹುಗಳೆದು
ಟ್ಟಱುವೆಗಳ ಕಾಳಿಕೆಯ ಮೋಱೆಯ ತಾಱಿದೊಡಲುಗಳ ।
ಹುರಿದ ಧೈರ್ಯದ ತಳ್ಳವಾಱುವ
ತರಳ ಹೃದಯದ ದೇವರಿಂದ್ರನ
ನಱಸಿ [5]ಕಂ[5]ಡರು ತಮ್ಮೊಳಾಳೋಚನೆಯ ಮಾಡಿದರು॥ ೧೨

ತಾರಕನ ಮಕ್ಕಳುಗಳೇ ಹಿಂ
ದಾರ ಗೆಲಿದರು ತಪವ ಮಾಡಿ ವಿ
ಕಾರಿಗಳು ಬ್ರಹ್ಮಂಗೆ ಬಂದಿಯನಿಕ್ಕಿದರು ಬಳಿಕ।

---

[1] ಗೀಧುರದಲೊದಗುವ ವೀರನೆಮ್ಮಯ (ಕ). [2] ಗಲನೀಳಪ್ರಮಾಣವು ಮಕರ (ಟ.ತ.ನ.ಪ.ಬ). [3] ಲನಿಮಿಷಾಳಿಯತೆಗೆದು (ಚ.ತ.ನ.ಪ.ಬ). [4] ಯೋದುದು (ಚ.ತ), ಹೋದುದು (ಟ.ನ.ಪ.ಬ). [5] ಕೊಂ (ತ).

ವಾರಿಜೋದ್ಭವ ಮೇಲನಱಿಯ ಕು
ಠಾ[1]ರನಾಯ್ಗಳ[1] ಹೆಚ್ಚಿಸಿದನಿದ
ನಾರಿ[2]ಗಱುಪುವೆವೆಂದು[2] ಸುಯ್ದರು ಬಯ್ದು ಕಮಲಜನ ॥ ೧೩

ಆದರೆಯು ನಮಗಾತನೇ ಗತಿ
ಯಿಾ ದುರಾತ್ಮರಿಗೆಂದು ಹಱಿವೆಂ
ದಾದರಿಸಿ ಕೇಳುವೆವೆನುತ ಕಮಲಜನ ಹೊರೆಗೈ[3]ದಿ[3] ।
ಖೇದವನು ಸುರಿದರು ಪಿತಾಮಹ
ನಾ ದಿವಿಜಗಣಸಹಿತ ಬಂದನು
ವೇದಸಿದ್ಧವಿಶುದ್ಧ ದೈವವ ಕಾಬ ತವಕದಲಿ ॥ ೧೪

ಬಂದು ಕೈಲಾಸಾದ್ರಿಯಲಿ ಗಿರಿ
ನಂದನಾ ವಕ್ಷೋಜ ಘುಸೃಣ
ಸ್ಕಂಧತನು ಚಿನ್ಮಯ ನಿರಂಜನ ಭೂರಿ ಪಂಜರನ ।
ವಂದ್ಯಮಾನ ಸುರಾಸುರೋರಗ
ವೃಂದ ಮಣಿಮುಕುಟ ಪ್ರಭಾ ನಿ
ಷ್ಯಂದ ಭೂಯಸ್ತಿಮಿತ ಕಾಯನ ಕಂಡನಬುಜಭವ ॥ ೧೫

ಕೊರಳ ಕಪ್ಪಿನ ಚಾರು ಚಂದ್ರಾ
ಭರಣ ಮೂರ್ಧದ ಭಾಳನಯನದ
ಭರಿತ ಪರಿಮಳದಂಗವಟ್ಟದ ಜಡಿದ ಕೆಂಜಡೆಯ ।
ಕರಗಿ ಕಾಸಿದವಿದ್ಯೆಯನು ಬೇ
ಱಿರಿಸಿ ಶುದ್ಧಬ್ರಹ್ಮವನು ಕಂ
ಡರಿಸಿದಂತಿರಲೆಸೆವ ಶಿವನನು ಕಂಡನಬುಜಭವ ॥ ೧೬

ವೇದವಱಿಯದ ತರ್ಕವಿದ್ಯಾ
ವಾದ ನಿಲುಕದ ಬುಧರ ಮತಿ ಸಂ
ಪಾದನೆಗೆ ಮುಖಗೊಡದ ವಾಚ್ಯಾಯನರ ಚೇತನಕೆ ।
ಹೋದ ಹೊಲಬಳವಡದ ಬ್ರಹ್ಮೇಂ
ದ್ರಾದಿ ಸುರರುಬ್ಬಟೆಗೆ [4]ಸೋಲದ[4]
ನಾದಿದೇವರದೇವ ಶಿವನನು ಕಂಡನಬುಜಭವ ॥ ೧೭

---

[1] ರಿಗಳಿಗಾಯುಗಳ (ಕ).　　[2] ಗುಸುರುವೆವೆನುತ (ಚ.ತ.ನ.ಪ.ಬ).
[3] ದೆ (ಕ).　　[4] ಸಾಲದ (ಕ).

ಕಂತುಹರನನು ವಿಮಳನನು ವೇ
ದಾಂತವೇದ್ಯನನದ್ವಿತೀಯನನ
ಚಿಂತ್ಯಮಹಿಮನ ಸಚ್ಚಿದಾನಂದೈಕರಸಮಯನ ।
ಅಂತ್ಯರಹಿತನನಪ್ರಮೇಯನ
ನಂತರೂಪನನಂಘ್ರಿಭಜಕ ಭ
ವಾಂತಕನನುದ್ದಂಡದೈವವ ಕಂಡನಬುಜಭವ ॥ ೧೮

ಇದ್ದುದಗಣಿತ ರುದ್ರಕೋಟಿಗ
ಳಿದ್ದುದನುಪಮ ವಿಷ್ಣುಕೋಟಿಗ
ಳಿದ್ದುದಂಬುಜಭವ ಸುರೇಂದ್ರಾದಿಗಳು ಶತಕೋಟಿ ।
ಇದ್ದುದಮಳಾಮ್ನಾಯಕೋಟಿಗ
ಳಿದ್ದುದಗಣಿತ ಮಂತ್ರಮಧ್ಯದೊ
ಳಿದ್ದನಿರ್ಮಳ ಖಂಡಪರಶುವ ಕಂಡನಬುಜಭವ ॥ ೧೯

ಪುಳಕಜಲವುಬ್ಬರಿಸೆ ಕುಸುಮಾಂ
ಜಳಿಯನಂಘ್ರಿದ್ವಯಕೆ ಹಾಯಿಕಿ
ನಳಿನಭವ ಮೆಯ್ಯಿಕ್ಕಿದನು ಭಯಭರಿತ ಭಕ್ತಿಯಲಿ ।
ಬಳಿಯಲಮರೇಂದ್ರಾದಿ ದಿವಿಜಾ
ವಳಿಗಳವನಿಗೆ ಮೆಯ್ಯ ಚಾಚಿದ
ರುಲಿವುತಿರ್ದುದು ಜಯಜಯಧ್ವಾನದಲಿ ಸುರಕಟಕ ॥ ೨೦

ಪರಮ ಕರುಣಕಟಾಕ್ಷ ರಸದಲಿ
ಹೊರೆದು ಕಮಳಾಸನನ ಹತ್ತಿರೆ
ಕರೆದು ಮನ್ನಿಸಿ ನಿಖಿಳ ನಿರ್ಜರಜನವ ಸಂತೈಸಿ ।
ಬರ[1]ವಿ[1]ದೇನಿದ್ದಂತೆ ವಿಶ್ವಾ
ಮರಕದಂಬಕಸಹಿತ ಎಂದಂ
ಬುರುಹಭವನನು ನಸುನಗುತ ನುಡಿಸಿದನು ಶಶಿಮೌಳಿ ॥ ೨೧

ತಾರಕನ ಮಕ್ಕಳುಗಳಿಗೆ ನೆಱೆ
ಸೂಱೆವೋದುದು ಸುರರ ಸಿರಿ ಮು
ಮ್ಮಾಱುವೋದುದು ಸುರರ ಸತಿಯರು ಖಳರ ಮನೆಗಳಿಗೆ ।

---

[1] ಲಿ (ಕ).

ಚಾರುವೈದಿಕ ಹವ್ಯಕವ್ಯ ವಿ
ಹಾರವೃತ್ತಿಗ[1]ಳಳಿದ[1]ವಿದನವ
ಧಾರಿಸೆಂದಬುಜಾಸನನು ಮಾಡಿದನು ಬಿನ್ನಹವ ‖ ೨೨

[2]ನಗೆಯ ಮೊಳೆ[2] ನಸುಹೊಳೆಯೆ ಬೊಮ್ಮನ
ಮೊಗವ ನೋಡಿದನಭವನೀಶನ
ಬಗೆಯ ಭಾವವನಱಿದ ತಲೆಗುತ್ತಿದನು ಕಮಲಭವ ।
ದುಗುಡವನು ಬಿಡಿ ನಿಖಿಳ ದಿವಿಜಾ
ಳಿಗಳು ಪಶುಗಳಲಾ ವಿರಿಂ[3]ಚನ[3]
ವಿಗಡತನದಲಿ ಕೆಟ್ಟ[4]ರಕಟ[4]ನ್ನಂಜಬೇಡೆಂದ ‖ ೨೩

ಪಶುಪತಿತ್ವವ ನಮಗೆ ಕೊಡಿ ನೀವ್
ಪಶುಗಳಾಗಿರಿ ಪಾಶುಪತ ವರ
ನಿಶಿತಶರದಲಿ ದೈತ್ಯದುರ್ಗವನುರುಹಿ ತೋಱುವೆವು ।
ದೆಸೆದೆಸೆಗೆ ಹರೆದಖಿಳದೇವ
ಪ್ರಸರವನು ನೀವ್ ನೆರಹಿ [5]ಮೇಲಿ[5]
ನ್ನಸಮಸೆಗೆ ಹೆದಱದಿರಿ ಎಂದನು ನಗುತ ಮದನಾರಿ ‖ ೨೪

ಜಾಱಿದುಬ್ಬಿನ ಹೊತ್ತ ದುಗುಡದ
ಮೋಱೆಗಳ ಮೋನದ [6]ನಿ[6]ಹಾರದ
ದೂಱುಗಂಗಳ ದೇವನಿಕರವ ಕಂಡು ಕರುಣದಲಿ ।
ಏಱುವಡೆದುದು ಮನವವಿದ್ಯೆಗೆ
ಮಾಱುವೋದಿರಲಾ ಎನುತ ಶಿವ
ತೋಱಿ ನುಡಿದನು [7]ಪಾಶುಪತ್ಯದ ಸಾರ[7] ಸಂಗತಿಯ ‖ ೨೫

ಕರ್ಮಕಿಂಕರರಾಗಿ ಕೃತದು
ಷ್ಕರ್ಮವಾಸನೆವಿಡಿದು ತಾನೇ
ಕರ್ಮಕರ್ತನು ಭೋಗಿ ತಾನೇ ದುಃಖಿಸುಖಿಯೆಂದು ।
ನಿರ್ಮಳಾತ್ಮನೊಳೀಯಹಂಕೃತಿ
ಧರ್ಮವನೆ ನೇವರಿಸಿ ಮಱುಗುವ
ದುರ್ಮತಿಗಳನು ಪಶುಗಳೆಂದರೆ ಖೇದವೇಕೆಂದ ‖ ೨೬

---

[1] ಳಿಲ್ಲ (ಕ). [2] ಮುಗುಳುನಗೆ (ಚ.ತ.ನ.ಪ.ಬ). [3] ಚಿಯ (ಚ.ತ.ನ.ಪ.ಬ). [4] ರಿದಕಿ (ಟ.ಪ.ಬ). [5] ಸಾಕಿ (ಪ.ಬ). [6] ದು (ಕ). [7] ಪಶುಪತಿತ್ವವ್ಯಾಪ್ತಿ (ಚ.ಟ.ತ.ದ.ಪ.ಬ).

ಪಂಚವಿಂಶತಿ ತತ್ವರೂಪದ
ಸಂಚವಱಿಯದೆ ನೀತಿಮುಖದಲಿ
ರಂಜೆಗಾಣದೆ ಸಗುಣಮಯ ನೀಹಾರದಲಿ ಮುಳುಗಿ ।
ಮಿಂಚುವೆಳಗಿನ ಬಳಕೆಯಲಿ ಮನ
ಮುಂಚಿ ಮೈಗೊಂಡಳಲುವಾತುಮ
ವಂಚಕರು ನೀವ್ ಪಶುಗಳೆಂದರೆ ಖೇದವೇಕೆಂದ ॥ ೧೭

ತೋಱುವೀ ಜಗವೆಲ್ಲ [1]ಬೊಮ್ಮವೆ
ತೋಱುತಿದೆಯೆನಿಪರ್ಥದಲಿ[1] ಸಲೆ
ತೋಱುವೀ ಜಗಕೆಲ್ಲ ಪರತತ್ವದಲಿ ಪರಿಣಾಮ ।
ತೋಱುವೀ ತೋಱಿಕೆಯೊಳಗೆ ಸಲೆ
ಮಾಱಿ ತೋಱುವ [2]ನಿಜವ[2]ನಱಿಯದ
ಗಾಱುಗಳು ನೀವ್ ಪಶುಗಳೆಂದರೆ ಖೇದವೇಕೆಂದ ॥ ೧೮

ಆದಿಭೌತಿಕದಿಂದ ನೊಂದು ವಿ
ರೋಧಿ ಷಡ್ವರ್ಗದ ವಿಕಾರದ
ವ್ಯಾಧಿಯಲಿ ಬೆಂಡಾಗಿ ಭವಪಾಶದಲಿ ಬಿಗಿವಡೆದು ।
ವಾದರಚನೆಯ ಬಲೆಗೆ ಸಿಲುಕಿ ವಿ
ರೋಧಗೊಂಬೀ ಮೋಹವಿದ್ಯಾ
ಸಾಧಕರು ನೀವ್ ಪಶುಗಳೆಂದರೆ ಖೇದವೇಕೆಂದ ॥ ೧೯

ಪಶುಪತಿಯೆ ಪರಮಾತ್ಮ ಜೀವರು
ಪಶುಗಳೀ ಪರಿ ಜೀವಭಾವದೊ
ಳೆಸಗುವರು ನೀವ್ ಪಶುಗಳೀಗಳು ನಿಮ್ಮ ರಕ್ಷಣವ ।
ಪಸರಿಸುವ ಪರಮಾತ್ಮ ತಾ[3]ನೀ[3]
ಘಸಣಿ ನಿಮಗೇಕೆಂದು ದೇವ
ಪ್ರಸರವನು ತಿಳುಹಿದನು ಕಾರುಣ್ಯದಲಿ ಕಾಮಾರಿ ॥ ೨೦

[4]ತುಬ್ಬಿ[4]ಕೊಟ್ಟುದವಿದ್ಯೆಯನು ಸುಧೆ
ಗೊಬ್ಬುಗಳ ಗಂಡಿಗರ ಗಾಢದ
ಗರ್ಭವನು [5]ಹೊಳ್ಳಿಸಿತು[5] ಗರಳಗ್ರೀವನುಪದೇಶ ।

---

[1] ಬೊಮ್ಮರೆತೋಱುತೆನಿತೆನಿತರ್ಥದಲಿ (ಕ), ಬ್ರಹ್ಮದತೋಱಿಕೆಯೊಳು ವಿವರ್ತದಲಿ (ಗ), ಬೊಮ್ಮವೆ ತೊಱುತಿವೆ ನಿವೃತ್ತಿಯಲಿ (ಟ). [2] ಜಗವ (ಕ). [3] ನಿರೆ (ಚ.ತ.ದ.ಬ). [4] ಉಬ್ಬಿ (ನ), ತುಂಬಿ (ಬ). [5] ಗಾಢಿಸಿತು (ಸ.ಕ.ನ), ಹಿಂಗಿಸಿತು (ನ).

ಹುಬ್ಬಿನಲಿ ಮಾತಾಡಿ ತಮ್ಮೊಳ
ಗೊಬ್ಬರೊಬ್ಬರು ತಿಳಿದು ಸಕಳ ಸು
ಪರ್ಬಜನವೆಱಗಿದುದು ಜಯಜಯ ಎನುತ ಪಶುಪತಿಗೆ ॥ ೩೧

ಜಗವುಘೋ ಎಂದುದು ಜಯಧ್ವನಿ
ಜಗವ ಝೊಂಪಿಸಿತೊಗ್ಗಿನಂಜುಳಿ
ಗಗನದಗಲಕೆ ಕುಣಿವುತಿದ್ದುದು ಸುರರ ಭಾಳದಲಿ ।
ಬೆಗಡು ಬೀತುದು ಬೇಸಱಿನ ಬಲು
ದಗಹು ಸೋತುದು ಶಿವಗೆ ದೈತ್ಯಾ
ರಿಗಳು ಮುದದಲಿ ಮಾಡಿದರು ಮೂರ್ಧಾಭಿಷೇಚನವ ॥ ೩೨

ಪಾಶುಪತ್ಯದ ಪಟ್ಟವಾಯ್ತು ಮ
ಹೇಶನಲಿ ಬ್ರಹ್ಮಾದಿದೇವರು
ವಾಸಿವಟ್ಟವ ಬಿಟ್ಟರೋಲೈಸಿದರು ಪಶುಪತಿಯ ।
ಪಾಶುಪತ ಸುವ್ರತವ ಧರಿಸಿದು
ದಾ ಸುಪರ್ವಸ್ತೋಮ ವಿಶ್ವಾ
ಧೀಶನೆಸೆದನು ಕೋಟಿಶತಸೂರ್ಯಪ್ರಕಾಶದಲಿ ॥ ೩೩

ಆಱನೆಯ ಸಂಧಿ ಮುಗಿದುದು.

---

# ಏಳನೆಯ ಸಂಧಿ

ಸೂಚನೆ॥ ಕಾಮಕೋಳಾಹಳನು ದಕ್ಷನ
ಹೋಮದಳವುಳಕಾಱ ಹರ ನಿ
ಸ್ಸೀಮದಲಿ ಪುರ ಮೂಱ ಗೆಲಿದನು ಸಲಹಿದನು ಸುರರ ॥

ರಚಿಸಿ ರಥವನು ಭೀತಿ ಬೇಡಿ
ನ್ನುಚಿತವೇನದ ಮಾಡಿ ದೈತ್ಯ
ಪ್ರಚಯವನು ಪರಿಹರಿಸಿಕೊಡುವುದು ಪಾಶುಪತ ಬಾಣ ।
ಕುಚಿತರಿನ್ನೇಗುವರು ಖಳರಿ
ನ್ನುಚಳಿತವಲೇ [1]ನಿಮ್ಮ ಪದವೆನೆ[1]
[2]ನಿ[2]ಚಿತಹರುಷ[3]ರು[3] ವಿಶ್ವಕರ್ಮಂಗಱುಹಿದರು ಹದನ ॥ ೧

ಮಾವ ಕೇಳದುಭುತವನೀ ವಿ
ಶ್ವಾವನೀತಳವಾಯ್ತು ರಥ ತಾ
ರಾವಳಿಗಳ[4]ಸಾ[4]ಯ್ತು ಸತ್ತಿಗೆಯಾಯ್ತು ಕನಕಾದ್ರಿ ।
ಆವುದಯ[5]ಘನ[5]ಶೈಲವಸ್ತ್ರ
ಗ್ರಾವ ಕೂಬರ ರಥ[6]ದಧಿಷ್ಠಾ[6]
ನಾವಲಂಬನವಾಗೆ ರಚಿಸಿದನಾತ ನಿಮಿಷದಲಿ ॥ ೨

ಆಸುರವಲೇ ವಿಂಧ್ಯ ಹಿಮಗಿರಿ
ಹಾಸುಹಲಗೆಗಳಾದವಚ್ಚು ಮ
ಹಾಸಮುದ್ರವೆ ಆಯ್ತು ಗಾಲಿಗೆ ಬೇಱೆ ತರಲೇಕೆ ।
ಆ ಸಸಿಯ ಸೂರಿಯನ ಮಂಡಲ
ವೈಸಲೇ ಗಂಗಾದಿ ಸಕಲ ಮ
ಹಾಸರಿತ್ಕುಲವಾಯ್ತು ಚಮರಗ್ರಾಹಿಣಿಯರಲ್ಲಿ ॥ ೩

ರಾಯ ಕೇಳ್ಳೈ ಮತ್ತೆಯಾಹವ
ನೀಯ ಗಾರುಹಪತ್ಯ ದಕ್ಷಿಣ
ವಾಯುಸಖರಾದರು ತ್ರಿವೇಣುಕವಾ ರಥಾಗ್ರದಲಿ ।

---

[1] ನಮ್ಮ ಶರಪಸೆ (ಕ), ನಿಮ್ಮ ಪಥವನೆ (ದ.ಬ). [2] ರ (ಕ).
[3] ದಿ (ಗ.ಚ.ನ). [4] ಜಾ (ಕ). [5] ಸುರ (ಕ). [6] ವೆನಿಪ್ಪಾ (ಕ).

ಆಯಿತಲ್ಲಿ ವರೂಥ ನಕ್ಷ
ತ್ರಾಯತವು ಬಳೆಯನುಕರುಷವೊಂ
ದಾಯಿ[1]ತಾಗ್ರಹ[1]ರಾಜಿಯಾದವು ಮಾವ ಕೇಳೆಂದ ‖ ೪

ಆ ರಥಾ[2]ಗ್ರಕೆ[2] ವೇದ ನಾಲುಕು
ವಾರುವಂಗಳ ಹೂಡಿದರು ನೊಗ
ನಾ ರಜನಿ ದಿನ ಮಾಸವುತ್ತರದಕ್ಷಿಣಾಯನವು ।
ಸಾರ [3]ಧೃತಿವೇದಪ್ರತತಿ ವಿ
ಸ್ತಾರ[3]ವಾದವು ನೊಗನ ಕೀಲ್ಗಳು
ಚಾರು [4]ಕುಲಫಣಿ[4]ನಿಕರ ಹಯಬಂಧನದ ನೇಣುಗಳು ‖ ೫

ಮಿ[5]ಳಿ[5]ಗಳಾದವು ಕುಹು ಸುತಾರಾ
ವಳಿಗಳಮಳಪ್ರಣವವಾದುದು
ಮೊಳೆಯ ಬಲುಚಮ್ಮಟಿಗೆ ಹಗ್ಗಕೆ ವರ ಷಡಂಗಮವು ।
ನಿಲಿಸಲಖಿಳ ಕ್ರತು ರಥಾಂಗಾ
ವಳಿಗಳಾದವು ವಿವಿಧ ವರ್ಣದ
ಜಲದ ಪಟಲ ಪತಾಕೆಯಾದವು [6]ರಥದ ಬಳಸಿನಲಿ[6] ‖ ೬

ಕಾಲದಂಡದ ರೌದ್ರದಂಡ ಕ
ರಾಳರಥಸೀಮಾಗ್ರದಂಡ ವಿ
ಶಾಲ ವಿಮಳ ಬ್ರಹ್ಮದಂಡದ ಸಾಲು ಚೆಲುವಾಯ್ತು ।
[7]ಮೇಲು[7]ವಲಗೆಯ ಸುತ್ತ ಚಮರೀ
ಜಾಳ ಕನಕಧ್ವಜದ ತುದಿಯಲಿ
ಮೇಳವಿಸಿದನು ವಿಶ್ವಕರ್ಮನು ವಿಪುಳ [8]ಶಾಕ್ವರವ[8] ‖ ೭

ಅರಸ ಕೇಳ್ ಋತು ಚರಿತ ಸಂವ
ತ್ಸರವೆ ಧನು [9]ತತ್ಕಾ[9]ಳರಾತ್ರಿಯೆ
ತಿರುವಿದೇನಾಶ್ಚರ್ಯವೈ ಶಿವ ಕಾಲರೂಪಿನಲಿ ।
ಸರಳ ರಚನೆಗೆ ವಿಷ್ಣುವನೆ ಸಂ
ಸ್ಮರಿಸಿದರು ವೈಕುಂಠತೇಜ
ಸ್ಫುರಿತ ಮಾರ್ಗಣ ಮೆಱೆದುದಗ್ನಿಷ್ಟೋಮ ಮುಖವಾಗಿ ‖ ೮

---

[1] ತಗ್ಗದ (ಕ.ಚ.ದ.ಪ). [2] ದಿಗ (ಕ). [3] ಶ್ರುತಿವೇದಪ್ರತತಿವಿಸ್ತಾರ (ಕ), ಧೃತಿವೇದೋಪನಿಷತುವಿಚಾರ (ಟ). [4] ಫಣಿಕುಲ (ಗ.ಚ.ಟ.ತ.ಬ). [5] ಣಿ. (ಕ). [6] ಮಾವ ಕೇಳೆಂದ (ಕ). [7] ಮೂಲೆ (ಕ). [8] ಸಾಕ್ಷಕವ (ಕ.ಗ.ಪ.ನ). [9] ತತಃಕಾ (ಕ).

ಶ್ರುತವೆ ನಿಮಗಿದು ಮಾವ ಬಹಳಾ
ದ್ಭುತದ ರಥನಿರ್ಮಾಣ ದೇವ
ಪ್ರತತಿ ನೆರೆದುದು ನೆಱೆ ಚತುರ್ದಶ ಭುವನವಾಸಿಗಳ ।
ಶತಮಖಬ್ರಹ್ಮಾದಿಗಳು ತ
ಮ್ಮತಿಶಯದ ತೇಜೋರ್ಧವನು ಪಶು
ಪತಿಯ ಪದ[1]ಕೋಲ್ಕೈ[1]ಸಿದರು ಮಾದ್ರೇಶ ಕೇಳೆಂದ ॥ ೯

ಆ ಮಹಾಶಾಂಭವ ಸುತೇಜ
ಸ್ತೋಮ[2]ಕೇ[2]ನದು ಕೊಱತೆಯೇ ಮ
ತ್ತೀ[3] ಮಹೇಂದ್ರ ಬ್ರಹ್ಮಮುಖ ತೇಜಸ್ವಿಗಳ ಶಕ್ತಿ[3]।
ಆ ಮಹಾದೇವನಲಿ ಸೇರಿದು
ದೀ ಮಹಾರಥಕಾಗಿ ವಿಮಳ
ವ್ಯೋಮಕೇಶನು ನಗುತ ಬಿಜಯಂಗೆಯ್ಯಲನುವಾದ ॥ ೧೦

ಕಳಚಿ ತಲೆಮಾಲೆಯನು ಕೊಟ್ಟನು
ಕೆಲದವರ ಕೈಯಲಿ ವಿಭೂತಿಯ
ಗುಳಿಗೆಯನು ನೆಗ್ಗೊತ್ತಿ ಸರ್ವಾಂಗದಲಿ [4]ಧೂಳಿಸಿದ[4] ।
ಹೊಳೆಹೊಳೆವ ಕೆಂಜೆಡೆಯನಹಿಪತಿ
ಯಳುಕೆ ಬಿಗಿದನು ದಂತಿಚರ್ಮವ
ನೆಲಕೆ ಮುಂಜೆಱಗೆಳೆಯಲುಟ್ಟನು ದೇಸಿ ಪರಿ ಮೆಱೆಯೆ ॥ ೧೧

ಏಡೆಯ ಸರಪಣಿ ತೋಳಬಂದಿಗೆ
ಪೆಡೆವಣಿಯ ಮಱಿವಾವುಗಳನಳ
ವಡಿಸಿದನು ಜೋಡಿಸಿದ ಶೇಷನ ಜಳವಟಿಗೆ ಮೆಱೆಯೆ ।
ಪಡಿವ ಕಿಱುಗೆಜ್ಜೆಗಳ ಬಿಗುಹಿನ
[5]ಲುಡೆಯ[5] ಬದ್ದುಗೆದಾರ ಉರಗನ
ಪೆಡೆವಣಿಯ ಗೊಂಡೆಯದ ಕಿಗ್ಗಟ್ಟೆಸೆಯೆ ಪಶುಪತಿ[6]ಯ[6] ॥ ೧೨

ನೆರೆದುದಭವನ ಕೆಲಬಲದಲು
ಬ್ಬರದ ಜೊಬ್ಬೆಯ ಜಡಿವ ಖಡ್ಗದ
ಬೆರಳ ಚಕ್ರದ ಭವಣಿಗಳ [7]ಥವಣಿಸುವ[7] ಥಾಣೆಗಳ ।

[1] ಕೇಱಿಸಿ (ಕ). [2] ವೇ (ಕ). [3] ಮಹೇಂದ್ರ ಬ್ರಹ್ಮಮುಖತೇಜಸ್ವಿಜನಶಕ್ತಿ (ಕ), ಮಹೇಂದ್ರ ಬ್ರಹ್ಮಾದಿಗಳ ತೇಜಸ್ವಿಗಳಶಕ್ತಿ (ಗ.ಜ). [4] ಲೇಪಿಸಿದ (ಕ.ನ.ಬ). [5] ತೊಡರ (ಕ), ಲುಡಿಯ (ಚ.ಟ.ದ.ಪ). [6] ಗೆ (ಚ.ದ). [7] ಡಾವರಿಪ (ತ).

ಪರಿಪರಿಯ ಕೈದುಗಳ ಕರ್ಕಶ
ತರದ ಚರಿತದ [1]ರೌ[1]ದ್ರವೇಷದ
ವರ ಮಹಾಗಣನಿಕರವೊದಗಿತು ಮಾವ ಕೇಳೆಂದ ॥ ೧೩

ಸುರಬಲದ ನಿಸ್ಸಾಳ ಕೋಟಿಯು
ಮೊರಹು ಮೊಳಗಿತು ಬಿಲುದಿರುವಿನ
ಬ್ಬರದಲಾ ದನಿಯಡಗಿತಗಣಿತ ವಂದಿಘೋಷದಲಿ ।
ಅರರೆ ವಂದಿಧ್ವನಿಯ ಗರ್ಭೀ
ಕರಿಸಿ ಹೆಚ್ಚಿತು ಜಯಜಯಧ್ವನಿ
ನೆಱೆ ಚತುರ್ದಶ ಜಗವ ಜಡಿದುದು [2]ಮಾವ ಕೇಳೆಂದ[2] ॥ ೧೪

ಮುರಿಯೆ ಬಲವಂಕದಲುಘೋ ಎಂ
ದೆಱಗಿದವು ಶ್ರುತಿಕೋಟಿ ವಾಮದ
ಕೊರಳ ಕೊಂಕಿನಲುಪನಿಷತ್ತುಗಳೆಱಗಿದವು ಕೋಟಿ ।
ತಿರುಗೆ ಬೆನ್ನಲಿ ನೆರೆದ ಸಚರಾ
ಚರವುಘೋ ಎಂದುದು ಕಪರ್ದಿಯ
ಸರಿಸದಲಿ ಸಿಡಿಲಂತೆ ಮೊಳಗಿತು ವೀರ[3]ಗಣನಿಕರ[3] ॥ ೧೫

ನಡೆದು ರಥದಲಿ ವಾಮಚರಣವ
ನಿಡುತ ಧೂರ್ಜಟಿ ದೇವನಿಕರಕೆ
ನುಡಿದನಾವ[4]ನನೀ ರಥಕೆ ಸಾರಥಿಯ ಮಾಡಿದಿರಿ[4] ।
ಕಡೆಗೆ ಸಾರಥಿಯಿಲ್ಲದೀ ರಥ
ನಡೆವುದೇ ದಾನವರ ಥಟ್ಟಣೆ
ತೊಡೆವುದೇ ಲೇಸಾಯ್ತೆನುತ ನೋಡಿದನು ಸುರಪತಿಯ ॥ ೧೬

ಮಾವ ಕೇಳೈ ಬಳಿಕ ಹರಿದುದು
ದೇವ[5]ಕುಲ[5] ಪರಮೇಷ್ಠಿಯಲ್ಲಿಗೆ
ಭಾವವನು ಬಿನ್ನೈಸಿದರು ನಿಜ ರಾಜಕಾರಿಯದ ।
ಆ ವಿಭುವನೊಡಬಡಿಸಿದರು ದಿವಿ
ಜಾವಳಿಗಳಿಂದಿನಲಿ ಕರ್ಣಗೆ
ನೀವು ಸಾರಥಿಯಾದಡಭಿಮತಸಿದ್ಧಿ ತನಗೆಂದ ॥ ೧೭

---

[1] ರು (ಕ). [2] ಹೇಳಲೇನೆಂದ (ಗ.ಚ.ಟ.ತ್ಥ.ದ). [3] ಭದ್ರಗಣ (ದ).
[4] ವನಿಗಿಲ್ಲ ಸಾರಥಿ ಮಾಡಿದಿರಿ ರಥಕೆ (ಕ). [5] ತತ (ಚ.ಟ.ದ).

ಕೋಗಿರೆಯು [1]ಶಾಯುಕ್ಕೆ[1] ಬಂದು[2]ದು[2]
ಕಾಗೆಗಳ ಧುರಪಥವದಂತಿರ
[3]ಲಾಗಳಬುಜಾಸನನ ಸಾರಥಿತನವದೇನಾಯ್ತೊ[3] ।
ಹೋಗಲದು ಸಾರಥ್ಯಕಾಯತ
ವಾಗಿ ಬಂದು ವಿರಿಂಚ ಮಕುಟವ
ತೂಗಿದನು ಹೊಗಳಿದನು ತ್ರಿಪುರನಿವಾಸಿಗಳ ಬಲುಹ ॥ ೧೮

ಹುಸಿಯೆ ಬಳಿಕದು ಸಕಲ ಜಗವೊಂ
ದೆಸೆ ಪುರತ್ರಯದೈತ್ಯಭಟರೊಂ
ದೆಸೆ ಮಹಾದೇವೆನುತ ಕಮಲಜನೇಱಿದನು ರಥವ ।
ಸಸಿನೆ ವಾಘೆಯ ತಿದ್ದಿ ತುರಗ
ಪ್ರಸರವನು ಬೋಳೈಸಿ ರಥವನು
ದೆಸೆದೆಸೆಗೆ [4]ಹೊಳ[4]ಸಿದನು ಉಳಿ[5]ವಡಿಸಿದ ಮಹಾರಥವ[5] ॥ ೧೯

ದೇವ ಬಿಜಯಂಗೈವುದೆನೆ ದಿವಿ
ಜಾವಳಿಗಳುಬ್ಬರದ ಬೊಬ್ಬೆಯ
ಡಾವರದಲೇಱಿದನು ಧೂರ್ಜಟಿ ವೇದಮಯರಥವ ।
ಮಾವ ಕೇಳದುಭುತವನೀ ವಿ
ಶ್ವಾವನೀತಳ ರಥ ರಥಾಂಗ
ಗ್ರಾವತತಿ ನುಗ್ಗಾಯ್ತು ಮುಗ್ಗಿತು ತೇರು ನಿಮಿಷದಲಿ ॥ ೨೦

ಕುದುರೆ ತಲೆಕೆಳಗಾದುದಿಳೆಯೆ
ದ್ದುದು ರಸಾತಳಕವರ ಭಾರಕೆ
ಕೆದಱಿದವು ಕುಲಗಿರಿಯ ಹೊಟದ ಸಂಚ ದೆಸೆದೆಸೆಗೆ ।
ಕುದಿದುದಮರವ್ರಾತ [6]ಸಂತಾ
ಪ[6]ದಲಿ ವಿತಳಕೆ ಹಾಯ್ದು ನಿಮಿಷಾ
ರ್ಧದಲಿ ಹೆಗಲಿಂದೆತ್ತಿದನು ಹರಿ ವೃಷಭರೂಪಿನಲಿ ॥ ೨೧

ಅದ್ದ ರಥ ಹರಿಯುರವಣೆಗೆ ಚಿಗಿ
ದೆದ್ದು ಸಮವಾಯ್ತು ಭಯ ಪುಟ ನೆಗೆ
ದೆದ್ದು ವಳಯುವ ಕೊಡಹಿ ನಿಂದವು ವೇದವಾಜಿಗಳು ।

---

[1] ಸಾಮ್ಯಕ್ಕೆ (ಗ), ಶಾಣಕ್ಕೆ (ಟ), ರಾಯತಕೆ (ಪ). [2] ದೆ (ತ). [3] ಲಾಗ ಕಮಳಾಸನನಸಾರಥಿ ಬಳಿಕದೇನಾಯ್ತು (ಕ). [4] ಹರಿ (ಪ). [5] ಯಡಗಿದನು ನಿಮಿಷದಲಿ (ಗ). [6] ಸನ್ನಾಹ (ಕ).

ಎದ್ದುದೋ ರಥ ಖಳ ಮನೋರಥ
ವೆದ್ದುದೋ ಮುಝು ಪೂತುರೆನುತು
ಬ್ಬೆದ್ದುದಮರಕದಂಬ ಭಾರಿಯ ಭುಜದ [1]ಬೊಬ್ಬೆಯಲಿ[1] ॥ ೨೨

ಪ್ರಣವನಾದಾಹತಿಗೆ ಗತಿಯಲಿ
ಕುಣಿದವಗ್ಗದ [2]ವೇದ[2]ಹಯ ಹ
ಲ್ಲಣೆಯ ಹೇಷಿತ ರವಕೆ ಹೆದರಿತು ರಾಕ್ಷಸವ್ರಾತ ।
ಗಣಸಮೂಹದ ಚೂಣಿಯಲಿ ಸುರ
ಗಣ ಸುರಾರಿಗಳೂರ ಮುತ್ತಿತು
ಕೆಣಕಿದರು ಕಾಳೆಗವನಸುರ[3]ರ ಥಟ್ಟು ಕಳವಳಿಸೆ[3] ॥ ೨೩

ಭಟರು ವಿದ್ಯುನ್ಮಾಲಿಯದು [4]ಲಟ[4]
ಕಟಿಸಿ ನೂಕಿತು ತಾರಕಾಕ್ಷನ
ಚಟುಳ ಹಯ [5]ಬಲ[5] ಹೊಕ್ಕು ಹೊಯ್ದುದು ಬಿಟ್ಟಸೂಠಿಯಲಿ ।
ಲಟಕಟಿಸೆ ಸುರಸೇನೆ ಬಲುಗಜ
ಘಟೆಗಳೌಕಿತು ದೈತ್ಯಸುರಸಂ
ಘಟಿತ ಸಮರವನೇನನೆಂಬೆನು ಮಾವ ಕೇಳೆಂದ ॥ ೨೪

ಹೊಯ್ದುದಮರರನಸುರ[6]ರಗ್ಗದ[6]
ಕೈದುಕಾಱರು ಮತ್ತೆ ನೂಕಿತು
ಮೈದೆಗೆಯಲೊಡವೆರಸಿ ನೂಕಿತು ಬೇಹಬೇಹವರು ।
ಬೈದರಿಂದ್ರನನಿಂದುಮೌಳಿಗೆ
ನೆಯ್ದ ರಥ ನುಗ್ಗಾಯ್ತು ನಾಳವ
ಕೊಯ್ದರೋ [7]ಹುಗ್ಗಿಗರೆನುತೊಱಲಿದುದು[7] ಸುರಸ್ತೋಮ ॥ ೨೫

ಹೊಗಲಿ ಸಮರಕೆ ಸ್ವಾಮಿದ್ರೋಹರು
[8]ತೆಗೆಯಬೇಡೋ[8] ಬೆನ್ನ [9]ಲಾಂಕೆಗೆ[9]
ಜಗದೊಡೆಯನೋ ಘಡಘಡಂಜದಿ[10]ರೆನ್ನಲು ಸುರರಾಜ[10] ।

---

[1] ಹೊಯ್ಲಿನಲಿ (ಚ.ತ.ಪ.ಬ). [2] ಮಂತ್ರ (ಕ). [3] ರುಸುರರ ಥಟ್ಟಿನಲಿ (ಪ). [4] ಸರ (ಟ.ತ.ದ.ಪ). [5] ವ್ರೂಳ (ಕ). [6] ರಾಗಳೆ (ಚ.ತ.ಪ). [7] ನುಗ್ಗುಗಳನೆನುತಿರ್ದುದು (ಕ). [8] ಹೊಗಲಿಬೇಡಾ (ಚ.ತ.ಪ). [9] ನಾಂಕೆಗೆ (ಗ), ಲೈದನೆ (ಟ.ದ). [10] ರಂಜದಿರಿಯೆನುತ (ಕ), ರೆನುತ ಸುರನಾಥ (ಗ.ಟ.ದ).

ಉಗಿದ ಖಡುಗದ [1]ತಿರುವಿನಂ[1]ಬಿನ
ಬಿಗಿದ ಬಿಲ್ಲಿನ ಸುರಪನಿದಿರಿನೊ
ಳಗಣಿತಾಮರಭಟರು ಹೊಕ್ಕರು ದೈತ್ಯಬಲದೊಳಗೆ ॥ ೨೬

ಮೊಲನ ಮಱ ಕೈವೊಯ್ದು ನಕ್ಕರು
ಹುಲಿಯೊಡನೆ ಗಡ ಶಿವಶಿವಾ ವೆ
ಗ್ಗಳೆಯರನು ವಿಗ್ರಹದಲಱವೆವು ಕಂಡು ಕೈಗುಣವ ।
ಹುಲುಪ[2]ಱ[2]ಯ ದೇವಾಳಿ ತ್ರಿಪುರದ
ನೆಲನ ಮೆಟ್ಟಿತು ನಾಯ್ಗಳಿರ ಮುಂ
ದಲೆಯ ಕೊಯ್ ಕಡಿ ಬೆರಳನೆಂದರು ಖಳರು ತಮ್ಮೊಳಗೆ ॥ ೨೭

ಕಾದ ಲೋಹದ ಹಳಿಯುವೊಲು ಕೆಂ
ಪಾದವಸುರರ ಮೋಱೆಗಳು ತಿದಿ
ಯೂದುಗಿಚ್ಚಿನ ಹೊದಱನಂತಿರೆ ಬಿಡದೆ ಭುಗಿಲಿಡುತ ।
ಸೇದುವೆರಳಿನ ತಿರುವಿನಂಬಿನ
ವಾದಿನೆಸುಗೆಯ ಬಿರುದರಗ್ಗದ
ಕೈದುಕಾಱರು ಕೆಣಕಿದಮರರ ಹೊಟ್ಟ ತೂಱದರು ॥ ೨೮

ಮುಱದುದಿದು ಕಲ್ಪಾಂತವಹ್ನಿಯ
ಸೆಱೆಯ ಬಿಟ್ಟರೊ ಶಿವಶಿವಾ ಖಳ
ರುಱುಬೆ ಘನ ನಾವೇಕೆ ರಣವೇಕಿವರ ಕೂಡೆನುತ ।
ಒಱಲುವಮರರ ಬಾಯಿ ಕೈಗಳ
ಮೊಱೆಯ ತೆಗಸಿ ಮಹಾಗಣಂಗಳೊ
ಳುಱುವ ನಂದೀಶ್ವರನು ಹೊಕ್ಕನು ಹೊಯ್ದು ದಾನವರ ॥ ೨೯

ದಿಂಡುದಱದನು ದಾನವರ ಕಡಿ
ಖಂಡಮಯಮಾಯ್ತವನಿ ರಕುತದ
ದೊಂಡೆಗೆಸಱನೊಳದ್ದುದಗಣಿತ ರಥಗಜಾಶ್ವಚಯ ।
ಹಿಂಡೊಡೆದು ಹೇರಾಳ ರಕ್ಕಸ
ದಿಂಡೆಯರು ಧಿಮ್ಮೆನಲು ಹೊಯ್ದರು
ಖಂಡಪರಶುವಿನಾಳು ಹೊಯ್ದನು ಸಾಲ ಹೆಣ ಹರೆಯೆ ॥ ೩೦

---

[1] ಬೆರಳಲಂ (ಚ.ತ.ಬ), ಬೆರಳಿನಂ (ಪ). [2] ತಿ (ದ).

ಅರೆನೆಲೆಯ ಮುಱಿದಿಟ್ಟಣಿಸಿ ತಲೆ
ವರಿಗೆಯಲಿ ಹೊಕ್ಕೌಕಿ ದುರ್ಗದ
ಹಿರಿಯ ಹುಲಿಮುಖದೊಳಗೆ ಹೊಯ್ದರು ಬೇಹಬೇಹವರ ।
ಅರಸ ಕೇಳೈ ದೈತ್ಯ[1]ಭಟರ[1]
ಚ್ಚರಿಯ ಮಾಡಿದರಳಿದವರನೆ
ಚ್ಚಱಿಸಿದರು ಮಯವಿರಚಿತಾಮೃತಸಲಿಲಕೂಪದಲಿ ॥ ೩೧

ಮಯನ ಬಿನ್ನಾಣವನು ದೇವ
ತ್ರಯವಱಿದುದಿದು ತೀರಲಸುರರ
ಲಯವೆನುತ ಹರಿ ಧೇನುವಬ್ಜಾಸನನು ಕಱುವಾಗಿ ।
ಭಯವಿಹೀನರು ಹೊಕ್ಕರಾ ಬಾ
ವಿಯನು ಬತ್ತಿಸಿ ಬಳಿಕ ದೈತ್ಯರ
ಜಯವ ಮುಱಿದರು ಮೋಹನದ ಬೌದ್ಧಾವತಾರದಲಿ ॥ ೩೨

ಭವನ ಭಕುತಿಯ ಬಿಡಿಸಿದರು ಶಾಂ
ಭವಸುಸಿದ್ಧಾಂತವನು ಬೌದ್ಧ
ವ್ಯವಹರಣೆಗಳ ಮಾಯೆಯಲಿ ಕೆಡಹಿದರು ಕಪಟದಲಿ ।
ಯುವತಿಯರು ಪರಪುರುಷಯೋಗ
ಪ್ರವರದೀಕ್ಷಿತರಾಯ್ತು ಬೌದ್ಧನ
ವಿವಿಧ ಮಾಯೆಗೆ ಮಾಱುವೋದುದು ಮನ [2]ಸುರಾರಿಗಳ[2] ॥ ೩೩

ಹರಿ ಸರೋಜಾಸನರು ಶೂಲಿಯ
ಹೊರೆಗೆ ಬಂದರು ದೇವದೈತ್ಯರ
ಪುರವಧರ್ಮದ [3]ಹೇಟೆ[3]ಯಾದುದು ನಯನಪಾವಕನ ।
ಕರೆದು ಬೆಸಸುವಡಿದು ಸಮಯವೀ
ಸುರರ [4]ಸಲಹುವ ಚಿತ್ತ[4]ವುಳ್ಳರೆ
ಕರುಣಿ ಬಿಜಯಂಗೈವುದೆಂದರು ಪಾರ್ವತೀಪತಿಗೆ ॥ ೩೪

ಬಿಲ್ಲ ತುಡುಕಿದನಭವನೆಡಬಲ
ದಲ್ಲಿ ಜಯಜಯಜಯಜಯಧ್ವನಿ
ಘಲ್ಲಿಸಿತ್ತೀರೇಳುಭುವನಶ್ರವಣವೀಧಿಗಳ ।

---

[1] ರೊಂದ ಚ.ತ.ದ.ಪ.ಬ). [2] ಮಹಾಸುರರ (ಕ). [3] ಮೇರೆ (ಕ), ಪೀತೆ (ಟ.ಪ.ಚ.ತ), ವೇಢೆ (ದ), ಪೇಠೆ (ಬ). [4] ಸಾಕುವ ಸಮಯ (ಕ).

ಛಲ್ಲವಿಸಿ ಹಯ ಪದಸಮೂಹವ
ಚೆಲ್ಲಿದವು ಸಕ್ರಮದ ಪಾಳಿಯ
ಪಲ್ಲವಿಕೆ ಪರಿವಡೆದುದಮಳಪ್ರಣವಮಯವಾಗಿ ॥ ೩೫

ಅಡಿಗಡಿಗೆ ಚಮ್ಮಟಿಗೆಯಳ್ಳೆಯ
ತುಡುಕೆ ಕುಣಿದವು ವೇದಹಯ ಬಲ
ನೆಡಪುರಃಪಶ್ಚಿಮದ[1]ಲೆಟಿಗುವ[1] ಮಂತ್ರಕೋಟಿಗಳ ।
ನುಡಿಯಲರಿದಾಕಾಶ[2]ಸರಸಿ[2]ಯೊ
ಳಿಡಿದ ತಾವರೆಮುಗುಳುಗಳೊ ಸುರ
ಪಡೆಯೊಳೆತ್ತಿದ ಮುಗಿದ ಕೈಗಳೊ ಚಿತ್ರವಾಯ್ತೆಂದ ॥ ೩೬

ಪರಮ ಶ್ರುತಿ ವೇದಾಂ[3]ಗ[3] ಮಂತ್ರೋ
ತ್ಕರ ಧರಿತ್ರಿ ಕುಲಾದ್ರಿ ಸಸಿ ಭಾ
ಸ್ಕರ ಸುರೋರಗ ಜಲಧಿ ನದಿ ನಕ್ಷತ್ರರಾಶಿಗಳು ।
ಸರಸಿರುಹಭವ ವಿಷ್ಣು ವಿವಿಧಾ
ಧ್ವರ ಮುನೀಂದ್ರ ಗ್ರಹವು ಸಚರಾ
ಚರವುಘೇ ಎಂ[4]ದೆಱಗು[4]ತಿರ್ದುದು ಶಿವನ ಬಳಸಿನಲಿ ॥ ೩೭

ಒದಗಿತೀ ಹೇಳಿದ ಸಮಸ್ತ
ತ್ರಿದಶ ಸಚರಾಚರವು ತಮ್ಮಂ
ಗದಲಿ ರಚಿಸಿದ ವಿಶ್ವಕರ್ಮನ ಕೃತನಿಯೋಗದಲಿ ।
ಅದುಬಳಿಕ ನಿರ್ಜರಸಮೂಹಾ
ಭ್ಯುದಯವೈಸಲೆ ಧನುವ ಕೊಂಡನು
ಮದನರಿಪು ತಿರುಹಿದನು ಬೆರಳಲಿ ಪಾಶುಪತಶರವ ॥ ೩೮

ಕೃತಕಪ್ಪೋ ದಿಟಪ್ಪೋ [5]ದು[5]ರಂತರ
ಶ್ರುತಿಗಳಱಿಯವು ನಮ್ಮ ಮಿಡುಕುವ
ಮತಿಯ ಪಾಡೇ ನಿಮಿಷಕಬುಜಭವಾಂಡ ಕೋಟಿಗಳ ।
ಸ್ಥಿತಿಗತಿಯನಗ್ಗಳದ ನಯನಾ
ಹುತಿಯ ಮಾಡುವ ತ್ರಿಪುರಹರ ಸಂ
ಗತಿಯ ಸಮಯುವ ಹಾರಿದನು ಸುರವರುಷ ಸಾವಿರವ ॥ ೩೯

---

[1] ಮಣಿವಿನ (ಕ). [2] ಶರಧಿ (ಕ.ಗ.ಟ). [3] ತ (ಕ.ಗ.ಚ.ಟ) ದೊಱಲು (ಕ). [5] ನಿ (ಕ.ಚ).

ಕೂಡಿದವು ಪುರ ಮೂಱು ನಿಮಿಷದೊ
ಳೀಡಿಱಿದುದುರಿ ನಯನವಹ್ನಿಯು
ಕೂಡಿ ಹುರಿಗೊಂಡೌಕಿ ಹರಿದುದು ಪಾಶುಪತಬಾಣ ।
ಝೂಡಿ ಹೊರಳಿಯ ಹೊಗೆಯ ಜೋಡಿಯು
ನೀಡುನಾಲಗೆ ಪುರದ ಸುತ್ತಲು
ಕೂಡೆ [1]ವೇಢಯವಾಯ್ತು[1] ಹರಹಿನ ಕಿಡಿಯು ಗಡಣದಲಿ ॥ ೪೦

ಕಟ್ಟಿತುರಿ ದೆಸೆ ನಾಲ್ಕಱಲಿ ಬೆ
ನ್ನಟ್ಟಿ ಹೊಯ್ದುದು ಬಿನುಗುಗಳ ಜಗ
ಜಟ್ಟಿಗಳನೊಱಗಿಸಿತು ಮಱುಗಿಸಿತಸುರನಾರಿಯರ ।
ದಿಟ್ಟರುರಿದುದು ವೀರರಸುಗಳ
ಬಿಟ್ಟರಭವದ್ರೋಹಿಗಳು ನೆಱೆ
ಕೆಟ್ಟ ಕೇಡಿಂಗಾರು ಮಱುಗುವರರಸ ಕೇಳೆಂದ ॥ ೪೧

ಸರಳ ಮೊನೆಯಲಿ ಸಿಡಿದ ಕಿಡಿಯೊಂ
ದೆರಡಱಲಿ ಬೆಂದುದು ಪುರತ್ರಯ
ವರಸ ಕೇಳ್ಳೈ ಬಳಿಕ ಬಾಣದ ಬಾಯಿಧಾರೆಗಳ ।
ಹರನ ನಯನದ ಕಿಚ್ಚು ಕಾಣದು
ಪುರವನಾ ಖಾತಿಯಲಿ ಭೇದಿಸಿ
ಮುರಿಮುರಿದು ಸುಡತೊಡಗಿತಬುಜಭವಾಂಡಮಂಡಲವ ॥ ೪೨

ಎಲೆ ಚತುರ್ದಶಜಗವನುರಿಯು
ಪ್ಪಳಿಸಿತೇ ಬೆಂದುದು ಸುರೌಘದ
ಗೆಲವು ಕರೆಯಾ ಕಲ್ಪಮೇಘವನುರಿಯ ಮಾಣಿಸಲಿ ।
ಬಲುಕಣಿಗಳಲ್ಲಾ ಜನಾರ್ದನ
ನಳಿನಭವರಾವೆಡೆಯೆನುತ ಕಳ
ವಳಿಸಿದುದು ಮೊಱೆಯಿಟ್ಟುದಭವನ ಮುಂದೆ ಭುವನಜನ ॥ ೪೩

ಅರಿಪುರತ್ರಯದಹನಕರ್ಮ
ಸ್ಫುರಣವಸ್ಮತ್ಕಾರ್ಯವದು ಗೋ
ಚರಿಸಿತಲ್ಲಿಂ ಮೇಲಣುಚಿತಾನುಚಿತಕೃತ್ಯವನು ।

---

[1] ಮೊಳೆಯಾಯಿತ್ತು (ಕ), ವಿಂಡಯವಾಯ್ತು (ಗ).

ಕರುಣಿ ನೀನೇ ಬಲ್ಲೆ ಜನಸಂ
ಹರಣಕಾಲವೊ ಮೇಣು [1]ರಕ್ಷಾ
ಕರಣ[1] ಕಾಲವೊ ದೇವ [2]ಎಂದೊಱಲಿದುದು[2] ಭುವನಜನ ‖ ೪೪

ತ್ರಾಹಿ ಮದನಾಂತಕ ಪುರತ್ರಯ
ದಾಹ ಹರ ಶಂಕರ [3]ಮಹೇಶ[3]
ತ್ರಾಹಿ ಮೃತ್ಯುಂಜಯ ಪಿನಾಕಿ ತ್ರಾಹಿ ಲೋಕೇಶ ।
ದ್ರೋಹಿಗಳು [4]ಧೂಳಾಯ್ತು[4] ಬಳಿಕಿನೊ
ಳೀ ಹದನು ಬಂದಿದೆ ಜಗತ್ರ[illegible]
ರೂಹುಗೆಡುತಿದೆ [5]ದೇವ ಎಂದುದು ಸಕಲ ಭುವನಜನ[5] ‖ ೪೫

ಕರುಣರಸದಲಿ ನನೆದು ನಗೆಯಂ
ಕುರಿಸಲಾಜ್ಞಾಹಸ್ತದಲಿ ಶಂ
ಕರನ ಹೂಂಕರಣೆಯಲಿ ತಳಿತುರಿ ತಗ್ಗಿತಲ್ಲಲ್ಲಿ ।
ಶಿರವ ತಡಹುತ ದೇವತತಿ ಪುರ
ಹರನ ಬೀಳ್ಕೊಂಡರು ಮಹಾರಥ
ಹರಿದು ನಿಜಸಂಸ್ಥಾನಸಂಗತವಾಯ್ತು ನಿಮಿಷದಲಿ ‖ * ೪೬

ಏಳನೆಯ ಸಂಧಿ ಮುಗಿದುದು.

---

[1] ದಕ್ಷಾಧ್ವರಣ (ಕ), ರಕ್ಷಾಧರಣ (ದ). [2] ಯೆಂದುದು ಸಕಲ (ಕ), ಯೆಂದೆಱಗಿದುದು (ಪ). [3] ಮಹೇಶ್ವರ (ಕ). [4] ಬಯಲಾಯ್ತು. [5] ಜಯ ಜಯೆಂದೊಱಲಿತ್ತು ಭುವನಜನ (ಕ).

* ಐದನೆಯ ಪದ್ಯದಿಂದ ಇಲ್ಲಿಯುವರೆಗೆ (ನ) ಪ್ರತಿಯಲ್ಲಿ ಗ್ರಂಥಪಾತವಿದೆ.

# ಎಂಟನೆಯ ಸಂಧಿ

ಸೂಚನೆ ॥ ಪೃಥಿವಿಪತಿ ಮಾದ್ರೇಶನನು ಸಾ
ರಥಿಯ ಮಾಡಿದನೊಲವು ಮಿಗಲತಿ
ರಥ ಭಯಂಕರ ಭಾನುಸುತ[1]ನಾಹವಕೆ ನಡೆತಂದ[1] ॥

ಹರನ ಬಿಲ್ಗೊಂಡಖಿಳ ದಿವಿಜರು
ಹರೆದುದೀ ಪರಿ ಕಮಲಭವನೀ
ಶ್ವರನ ಸಾರಥಿಯಾಗೆ ಸಾರಿದುದಮರರಭ್ಯುದಯ ।
ಹರಿಯ ಸಾರಥಿತನದಿ ಜಯವಂ
ಕುರಿಸಿತವರಿಗೆ ನಿಮ್ಮ ಕೃಪೆಯಲಿ
ಕುರುಬಲಕೆ ಗೆಲವಾದಡೊಳ್ಳಿತು ಮಾವ ಕೇಳೆಂದ ॥ ೧

ಹರನು ಬಿಲುವಿದ್ಯವನು ಕೊಡುತವೆ
ಪರಶುರಾಮಂಗೆಂದನಧಮರಿ
ಗೊರೆಯದಿರು ಸತ್ಪಾತ್ರ[2]ಕಿದನಾ[2]ದರಿಸಿ ಕಲಿ[3]ಸೆಂದ[3] ।
ಸುರರ ಮೆಚ್ಚದ ರಾಮನೀತನ
ಕರೆದು ಗರುಡಿಯ ಹೊಗಿಸಿದನು [4]ಕಡು[4]
ಗರುವನೀ ರಾಧೇಯನಧಮನೆ ಮಾವ ಕೇಳೆಂದ ॥ ೨

ಸೂತಕುಲಸಂಭವನೆ ಭುವನ
ಖ್ಯಾತ ಕರ್ಣನು ಸಾಕಿದಾತನು
ಸೂತನಾದಡೆ ಮಾವ ಕೇಳನ್ವಯಕೆ ಹಳಿವುಂಟೆ ।
ಸ್ವಾತಿಯುದಕದೊಳಾದ ಮೌಕ್ತಿಕ
ವ್ರಾತಕಯ್ಯನೆ ಚಿಪ್ಪು ನಿಮಗಿ
ನ್ನೇತಕೀ ಸಂದೇಹ [5]ರವಿಸುತ ಸೂತನಲ್ಲೆಂದ[5] ॥ ೩

ಈ ದುರಾಗ್ರಹ ನಿ[6]ನ್ನ[6] ಚಿತ್ತದೊ
ಳಾದುದೇ ತಪ್ಪೇನು ಕೋಗಿಲೆ
ಯಾದರಿಸಿದಡೆ ಬೇವು ಮಾವಹುದಾದಡೆಮಗೇನು ।

---

[1] ಹೊಱವಂಟನಾಹವಕೆ (ಕ). [2] ವಱದಾ (ಟ.ಪ). [3] ಸೆನಲು (ಕ.ಗ). [4] ಖರ (ಕ). [5] ಸಾರಥಿಯಾಗು ಸಾಕೆಂದ (ಗ.ದ). [6] ಮ್ಮ (ಕ).

ಕಾದಿ ಗೆಲು[1]ವುದು ಭಾರಿ ಗುರು[1] ಭೀ
ಷ್ಮಾದಿಭಟರೇನಾದರೈ ತಾ
ನಾದುದಾಗಲಿ ನಾವು ಸಾರಥಿಯಾದೆವೇಳೆಂದ ॥ ೪

ನಿಮ್ಮ ವಿಜಯಶ್ರೀಯ ಕಡೆಗ
[2]ಣ್ಣಮ್ಮ ಮುಖದಲಿ[2] ಮುರಿದುದಾದಡೆ
ನಮ್ಮ ಕೊರತೆಯದೇಕೆ ಕರಸ್ಯೆ ಸೂತನಂದನನ ।
[3]ನ[3]ಮ್ಮ ಹೇಳಿಕೆಯಾವುದದನೀ
ತಮ್ಮ ಪಿ[4]ಱದು[4] ನಡೆದನಾದಡೆ
ನಮ್ಮ[5]ವಾಘೆಯ ಬೀಳುಕೊಡುವೆವು[5] ರಾಯ ಕೇಳೆಂದ ॥ ೫

ಹೊತ್ತ ದುಗುಡವ ಹಾಯ್ಕಿ ಕೈವಿಡಿ
ದೆತ್ತಿ ಕರ್ಣನ ಕೊಟ್ಟು ಮೈಗಳ
ಲೆತ್ತುಗುಡಿಗಳ ರೋಮ ಪುಳಕದ ಪೂರ್ಣಹರುಷದಲಿ ।
ಬತ್ತತಂತಸ್ತಾಪಜಲನಿಧಿ
ಚಿತ್ತದುರುಸಂದೇಹತರುವಿನ
ಬಿತ್ತು ಕರಿಮೊಳೆವೋಯ್ತು ನಿನ್ನ ಮಗಂಗೆ [6]ನಿಮಿಷದಲಿ[6] ॥ ೬

ಬೀಳುಕೊಂಡನು ಶಲ್ಯನನು ಭೂ
ಪಾಲನಿತ್ತಲು ಕರ್ಣನಾಯುಧ
ಶಾಲೆಯಲಿ ಶುಚಿಯಾಗಿ ಶಸ್ತ್ರಾಸ್ತ್ರ[7]ವನು ಪೂಜಿಸಿದ[7] ।
ಸಾಲದೀವಿಗೆಗಳನು ಶಸ್ತ್ರ
ಜ್ವಾಲೆ ಮಿಕ್ಕವು ತೀಕ್ಷ್ಣಧಾರಾ
ಫೀಳವಿಕ್ರಮ ವಿಸ್ಫುಲಿಂಗಿತವಾದವಡಿಗಡಿಗೆ ॥ ೭

ಕುಱಿಯ ಹಣಿದದ ಕೋಳಿಕೋಣನ
ಮುಱಿದಲೆಯ ಮಾಸಲಿನ ರಕುತದ
ದುಱುದುಱಿಪ ದಂಡೆಯಲಿ ಕಲಸಿದ ಕೂಳ ಮುದ್ದೆಗಳ ।
ಹೊಱಿಗೆ ಬಡಿ[8]ಸಿದ[8] ಭೂತಬಲಿ ಬೊ
ಬ್ಬಿಱಿತದೊಡನುಬ್ಬೇಳ್ವ ಲಗ್ಗೆಯ
ಹಱೆಗಳಬ್ಬರವಾಯ್ತು ಕರ್ಣನ ಶಸ್ತ್ರಪೂಜೆಯಲಿ ॥ ೮

[1] ವರಭಾರವಿದು (ಗ). [2] ಣ್ಣೊಮ್ಮೆ ನಮ್ಮಲಿ (ಕ). [3] ಎ (ಕ). [4] ಱದೆ (ಕ), ಱಯೆ (ಚ.ಪ.ತ). [5] ವಾಸೆಯ ಬೀಳುಕೊಟ್ಟೆವು. [6] ಹರುಷದಲಿ (ನ). [7] ಗಳನರ್ಚಿಸಿದ. [8] ಸುವ.

ವಿರಚಿಸಿತು ಶಸ್ತ್ರಾಸ್ತ್ರಪೂಜಾ
ಪರಿ[1]ಸರಣ[1] ರವಿಸೂನು ದರ್ಭಾಗಂ
ಕುರದ ಶಯನಸ್ಥಾನದಲಿ ಮಾಡಿದನು ಜಾಗರವ।
ಕುರುನೃಪಾಲನ ಪಾಳೆಯದೊಳಾ
ಯಿತ್ತ್ತರುಳು ಮನೆಮನೆಗಳಲಿ ಶಸ್ತ್ರೋ
ತ್ಕರ ಸಮಾರಾಧನೆಯೊಳಿರ್ದುದು [2]ಕೂಡೆ ನೃಪಕಟಕ[2] ॥ ೯

ಸವೆದುದಿರುಳರುಣೋದಯದಲಾ
ಹವದ ಸಂಭ್ರಮರಭಸವೆದ್ದುದು
ವಿವಿಧ ಬಲಭಾರಣೆಯ ಭುಲ್ಲವಣೆಯ ಛಡಾಳದಲಿ ।
ತವಕಿಸುತ ಬಿಗಿ ವಾರುವನ ತಾ
ಸವಗವನು ಬಲ್ಲೆಹವ ಸೀಸಕ
ಕವಚಗಳನೆಂಬಬ್ಬರಣೆ ರಂಜಿಸಿತು ರಾವ್ತರಲಿ ॥ ೧೦

ಬಿಡು ಗಜವ ಬಿಗಿ [3]ಝೊಂಚೆ[3]ಗಳ ತೆಗೆ
[4]ದಡಿ[4]ಯ ಹಾಯಿಕು ಗುಳವ ತಾ ಮೊಗ
ವಡವ ಕೊಡು ಪಟ್ಟೆಯವ ಕೈಯಲಿ ಬೀಸು [5]ಚೌರಿ[5]ಗಳ ।
ತಡವಿದೇನೋ ಸಾಯಿ ಸಡಿಘಡ
ಕೆಡೆಯೆನುತ ತಮ್ಮೊಬ್ಬರೊಬ್ಬರ
ಜಡಿಯಲಬ್ಬರವಾ[6]ದುದಾ[6]ರೋಹಕರ ಕೇರಿಯಲಿ ॥ ೧೧

ಕೀಲ ತೆಗೆಯಚ್ಚುಗಳ ಹೆರೆ ಬಲು
ಗಾಲಿಗಳ ಜೋಡಿಸು ಪತಾಕಾ
ಜಾಲವನು ನಿಲಿಸೀಸ ಬಲಿ ಬಲುಮಿಣಿಯ ಬಿಗಿಯೆನುತ ।
ಮೇಲೆಮೇಲಬ್ಬರದ ಘೋಳಾ
ಘೋಳಿ ಘಲ್ಲಿಸೆ ದೆಸೆಯಲತಿರಥ
ಜಾಲ [7]ಕವಿದುದು[7] ಕದನಕೌತೂಹಲರ [8]ಕೇರಿಯಲಿ[8] ॥ ೧೨

ನೀಡು ಬಿಲುಬತ್ತಳಿಕೆಯನು ನಡೆ
ಜೋಡ ತೆಗೆ ತಾ ಸವಳವನು ರಣ
[9]ಖೇಡನೇ[9] ಘಡ ಘಾಯವನು [10]ಬಿಗಿ ಮದ್ದನರೆಯೆನುತ[10] ।

---

[1] ಚರಿಯ (ಕ), ಕರಣ (ದ). [2] ವರಮಹಾಕಟಕ (ಗ.ದ), ಸಕಲಬಲ ವೆಂದ (ಟ.ತ). [3] ಗಂಟೆ (ಬ). [4] ತಡೆ (ಕ). [5] ಚಮರಿ (ಕ). [6] ಯಿತಾ (ಕ.ಗ.ಚ). [7] ವೆದ್ದುದು (ಕ.ಗ.ನ). [8] ಕಡುಹಿನಲಿ (ಕ.ಗ.ಡ.ನ). [9] ಹೇಡಿಯೋ (ಕ.ಗ), ಬೀಡನೇ (ಪ). [10] ತೊಳೆಮದ್ದನಿಕ್ಕೆನುತ (ಕ).

ಕೂಡೆ ತಮತಮಗಾಹವದ ಖಯ
ಖೋಡಿಯಿಲ್ಲದೆ [1]ಸುಭಟ[1]ರಬ್ಬರ
ಝಾಡಿ [2]ಮಸಗಿತು ಕದನಗಲಿ[2] ಕಾಲಾಳ ಕೇರಿಯಲಿ ‖ ೧೩

ಬಿರಿದುದಬುಜಭವಾಂಡವೆನೆ ಘೋಂ
ಕರಿಸಿದವು ನಿಸ್ಸಾಳತತಿ ನಿ
ಬ್ಬರದ ಬಿರುದನು ಬೀರುತಿರ್ದವು ಗೌಳುಗಹಳೆಗಳು ।
ಎರಲು ಸುಳಿದುದು ದೀಪಶಿಖಿ ಪರಿ
ಹರಿಸಿದತಿಬಲದಬ್ಬರದ ನಿ
ಷ್ಠುರತೆಗಂಜದೆ ಮಾಣದೆನೆ ಹೆಬಿಹಿಂಗಿತಾ ರಜನಿ ‖ ೧೪

ಅರಸ ಕೇಳಭ್ಯುದಿತವಾ[3]ದುದು[3]
ಸರಸಕ್ಕೈರವರಾಜಿ ಕೋಮಲ
ಸರಸಿರುಹವನವಾದುದಾಕ್ಷಣ [4]ಸುರಭಿ[4]ನಿರ್ಮುಕ್ತ ।
ಕಿರಣ ತೋಮರ ದಕ್ಷಿಣೋರು
ಸ್ಫುರಣ ತಿಮಿರ ಮೃಗೀಕದಂಬಕ
ತರಣಿ ನೂಕಿದನುದಯ[5]ಶ್ಯೆಲಕೆ[5] ರತುನಮಯ ರಥವ ‖ ೧೫

ಉಲಿವ ಮಂಗಳಪಾಠಕರ ಕಳ
ಕಳಿಕೆ ಮೊಳೆಯಲು ಹೊಳೆವ ಹೊಂಬ
ಟ್ಟಲಲಿ ಸೂಸಿದನರ್ಘ್ಯ ಜಲವನು ಜನಕನಿದಿರಿನಲಿ ।
ಲಲಿತ ಮಂತ್ರಾಕ್ಷತೆಗಳನು ಕರ
ತಳದೊಳಾಂತು ಮಹೀಸುರರಿಗ
ಗ್ಗಳೆಯನಿತ್ತನು ಧೇನುಮಣಿಕನಕಾದಿ ವಸ್ತುಗಳ ‖ ೧೬

ವರ ನಿಭಾರಿಯ ಬಳಿವಿನಲಿ ಬಲ
ಮುರಿಯ ಬಿಗಿದನು ಪದಮುಖಕೆ ಮುಂ
ಜೆಱಗ ಬಿಟ್ಟನು ಬಿಗಿದ ಬದ್ದುಗೆ ದಾರ ಗೊಂಡೆಯವ ।
ಕಿರಣ ಲಹರಿಯ ವಜ್ರಮಾಣಿಕ
ಪರಿರಚಿತ ಭುಜಕಂಠಕರ್ಣಾ
ಭರಣ ಚರಣದ ಖಡೆಯದಲಿ ರಂಜಿಸಿದನಾ ಕರ್ಣ ‖ ೧೭

---

[1] ಬರೆಯ (ಕ). [2] ಕವಿದುದು ದೆಸೆದೆಸೆಗೆ (ಕ.ಗ.ಧ.ನ). [3] ಯಿತು (ಕ). [4] ವನಧಿ (ತ.ದ). [5] ಗಿರಿಯಲಿ (ಕ.ಗ.ಚ.ಟ.ನ.ಪ).

ದಿನಗಣನೆ ಹದಿನೆಂಟು ಕೋಟಿಯ
ಕನಕವಂದಿ[1]ನ ದಿನದಿ ಚೆಲ್ಲಿದ[1]
ನನುಪಮಿತ [2]ಧನರತುನ ಭಂಡಾರವನು ತೆಗೆತೆಗಸಿ[2] |
[3]ಮನದಣಿಯೆ[3] ಯಾಚಕ[4]ರಿಗಿತ್ತುದ[4]
ನೆನಗೆ ಬಣ್ಣಿಸಲಳವೆ ಕೇಳ್ಳೈ
ಜನಪ ಕರ್ಣನದೇನ ನಿಶ್ಚಯಿಸಿದನೊ ಮನದೊಳಗೆ || ೧೮

ಹೊಳೆಹೊಳೆದವಾಭರಣ ತಾರಾ
ವಳಿಗಳಂತಿರೆ ಪೂರ್ಣಶಶಿಮಂ
ಡಲದವೊಲು ತನುಕಾಂತಿ ತಿವಿದತ್ತಿದು ನಿಖಿಳ ದಿಗುತಟವ |
ತಳಿತ ವಿಕ್ರಮ ಸುಪ್ರತಾಪೋ
ಜ್ವಲಿತ ಸೂರ್ಯಪ್ರಭೆ ಜಗತ್ರಯ
ದೊಳಗೆ ಝಳಪಿಸೆ ಕರ್ಣನೆಸೆದನು [5]ದಿವ್ಯ[5]ತೇಜದಲಿ || ೧೯

ದೇವ ಗುರು ವಿಪ್ರರಿಗೆ ಬಹು ಸಂ
ಭಾವನೆಯ ಮಾಡಿದನು [6]ಶಸ್ತ್ರಾ[6]
ಸ್ತ್ರಾವಳಿಯ [7]ತರಿಸಿ[7]ದನು ತುಂಬಿಸಿದನು ವರೂಥದಲಿ |
ರಾವುತರಿಗಾರೋಹಕರಿಗೆ ಭ
ಟಾವಳಿಗೆ ರಥಿಕರಿಗೆ ಚೆಲ್ಲಿದ
ನಾ ವಿವಿಧ ಸೌಗಂಧಭಾವಿತ ಯಕ್ಷಕರ್ದಮವ || ೨೦

ನಡೆದು ಬಂದನು ರಥಕೆ ದೆಸೆ ಕಂ
ಪಿ[8]ಡುತ[8] ನೆರೆದ ಮಹಾಪ್ರಧಾನರ
ನಡುವೆ ಚಲಿಸುವ ಚಾತುರಂಗದ ಸುಳಿಯ ಸಂದಣಿಯ |
ಒ[9]ಡನೆ[9] ನೆಲನಳ್ಳಿಱಿ[10]ಯೆ[10] ವಾದ್ಯದ
ಗಡಣ [11]ಮೊರೆದುದು[11] ಪಾಠಕರ ಗಡ
ಬಡಿ[12]ಯ ಕಳರವ[12] ಬಗಿದುದಬುಜಭವಾಂಡಮಂಡಲವ || ೨೧

---

[1] ಜನಕ್ಕೆ ಸೂಸಿದ (ಕ.ಗ.ಚ). [2] ನಾ ಧನವನು ಭಂಡಾರವನು ತೆಗಸಿ (ಕ), ಭಂಡಾರವನು ಧನರತುನ ಮಣಿಗಣವ (ಗ), ನಾ ಧನಭಾರ ಭಂಡಾರವನು ತೆಗಸಿ (ತ), ಧನವನು ಸುಭಂಡಾರದಲಿ ತೆಗತೆಗಸಿ (ದ.ನ). [3] ಕನಕವನು (ಕ). [4] ರುಹೊತ್ತುದ (ಗ). [5] ನಿಖಿಳ (ಕ.ಗ.ಟ). [6] ಶರಶ (ಕ.ಗ). [7] ತೆಗೆಸಿ (ಪ.ತ.ದ). [8] ಡಲು (ದ). [9] ಡೆಯ (ಕ). [10] ವ (ಕ). [11] ಮೊರೆದುದು (ದ.ಪ.ಬ.ನ), ಮೊರೆದುವು (ತ), ರಭಸದ (ಕ). [12] ಕೆ ಗಳರವ (ಕ), ಯ ಕಳೆ ಕಳೆ (ಪ).

ಅತಿರಥಸದಿಂದಾಯ್ತು ಸೇನಾ
ಪತಿಯ ಪಯಣವಲಾ ಎನುತ ಗುರು
ಸುತ ಶಕುನಿ ಕೃತವರ್ಮ ಕೃಪ ದುಶ್ಶ್ಯಾಸನಾದಿಗಳು ।
ವಿತತ ಸನ್ನಾಹದಲಿ ಕುರುಭೂ
ಪತಿ ಸಹಿತ ಹೊಱವಂಟು ಭಾಸ್ಕರ
ಸುತನ ಸನ್ನೆಯ ಮೇಲೆ ನಡೆ[1]ದರು ಮುಂದೆ ಸಂದಣಿಸಿ[1] ॥ ೨೨

ಬಳಿಯ ನೆಲನುಗ್ಗಡಣೆ[2]ಗಳ[2] ವೆ
ಗ್ಗಳೆಯ ಸುಭಟರ ಮೇಳದಲಿ ಬಂ
ದಿಳಿದು ದಂಡಿಗೆಯಿಂದ ನಸುನಗುತೇಱಿದನು ರಥವ ।
ಚಳಹಯಂಗಳು ಹುರಿಯ [3]ವಾಘೆಯ[3]
ನಳವಡಿಸೆ ಬಲನೆಡಕೆ ವಾಜಿಯ
ಸುಳಿಸಿ ಸಾರಥಿತನವ ತೋಱಿದನಂದು ಕಲಿ ಶಲ್ಯ ॥ ೨೩

ಬಳಿಯ ಪಾಯವಧಾರುಗಳ ಕಳ
ಕಳದೊಳಗೆ ರಥವೇಱಿದನು ನೆಲ
ಹಿಳಿಯೆ ಹೇರಾಳಿಸಿತು ಬಹುವಿಧ ವಾದ್ಯನಿರ್ಘೋಷ ।
ತಳಿತವಮಳಚ್ಛತ್ರ ಚಮರಾ
ವಳಿಯ ಝಲ್ಲಿಯ ಪಟ್ಟಿಗಳ ನವ
ಪಳಹರಧ್ವಜದಂಡವೆತ್ತಿತು ವರ ರಥಾಗ್ರದಲಿ ॥ ೨೪

ಇಕ್ಕೆಲದ ರಾವುತರ ತೇರಿನ
ತೆಕ್ಕೆಗಳ ಗಜಘಟೆಯ ಕಾಲಾ
ಳಕ್ಕಜದ ನಿಸ್ಸಾಳ ಸೂಳಿನ ಲಗ್ಗೆ[4]ದಂ[4]ಬಟದ ।
ಉಕ್ಕಿತೋ ಏಲಯಾಬ್ಧಿಯೆನೆ ಸಾ
ಲಿಕ್ಕಿ ನಡೆದುದು ಸೇನೆ ರಾಯನ
ಸಿಕ್ಕನವಸರದಾನೆ ನಿಜಪಾಳೆಯವ [5]ಬೀಳ್ಕೊಂಡ[5] ॥ ೨೫

ರಾಯ ಕೇಳ್ಳೈ ಬಳಿಕ ಕಲಿ ರಾ
ಧೇಯ ಬರುತಿರೆ ತೋಱಿದುತ್ಪಾ
ತಾಯುತವನೇನೆಂಬೆನೈ ಶಿವಶಿವ ಮಹಾದೇವ ।

---

[1] ದುದು ನಿಖಿಳ ಪರಿವಾರ (ಕ). [2] ಯಲಿ (ಗ). [3] ಹಗ್ಗವ (ಕ). [4] ತಂ (ದ). [5] ಹೊಱವಂಟ (ಕ.ಗ.ದ).

ವಾಯಸದ ತಡೆ ಭೂಮಿಕಂಪ ನಿ
ಜಾಯುಧಂಗಳ ಕಿಡಿ ಗಜಾಶ್ವನಿ
ಕಾಯ[1]ರಥವಾಜಿಗಳ[1] ಕಂಬನಿ ಕಾಣಲಾಯ್ತೆಂದ ॥ ೧೬

ಒದಱಿದವು ನರಿ ಮುಂದೆ ಕರ್ಣನ
ಕುದುರೆಗಳು ಮುಗ್ಗಿದವು ಪರಿವೇ
ಷದಲಿ ಸಪ್ತಗ್ರಹದ ವಕ್ರತೆ ಸೂರ್ಯ[2]ಮಂಡಲಕೆ[2] ।
ಇದಿರಿನಲಿ [3]ಬಿಱು[3]ಗಾಳಿ ಧೂಳಿಯು
ಕೆದಱಿ ಬೀಸಿತು ನಿಖಿಳ ಬಲ ಮು
ಚ್ಚಿದುದು ಕಂಗಳನವನಿಪತಿ ಕಂಡನು ಮಹಾದ್ಭುತವ ॥ ೧೭

ತೃಣಕೆ [4]ಕೊಂಬನೆ[4] ಕರ್ಣನಿದನಾ
ರೆಣಿಸುವರು ದುಷ್ಕರ್ಮಶೇಷದ
ಋಣನಿಬದ್ಧರು ಕಂಡು ಮಾಡುವುದೇನು ಕೌರವರು ।
ರಣಮನೋರಾಗದಲಿ ದಳಸಂ
ದಣಿಯ ನಿಲಿಸಿದನತಿರಥರ ಲಾ
ವಣಿಗೆಗೊಂಡನು ಕರ್ಣ ಪರಿವಾರಕ್ಕೆ ಕೈಮುಗಿದು ॥ ೧೮

ನೊಂದವರು ನಿಲಿ ಸ್ವಾಮಿಕಾರ್ಯಕೆ
ಹಿಂದುಗಳೆವರು ಮರಳಿ ಮನೆಗಳ
ಹಿಂದಣಾಸೆಯು ಹೇವ ಹಱುಕರಿಗಿಂದು ಮಹನವಮಿ ।
ನಿಂದರೊಳ್ಳಿತು ನೃಪನ [5]ದೆಸೆಯಲಿ[5]
ಕಂದು ಕಲೆಯುಳ್ಳವರು ಕಾಳೆಗ
ವಿಂದು ಬೆಟ್ಟಿತು ಬೀಳುಕೊಂಬುದು ಭೀತಿ ಬೇಡೆಂದ ॥ ೧೯

ಓಡಿ ನಾಚಿಸುವವರು ನಿಲಿ ರಣ
ಖೇಡರೀಗಳೆ ಮರಳಿ ಮನವ
ಲ್ಲಾಡಿ ಮಱು[6]ಗುವರೇಳಿ[6] ಮರಣದಲಾವ ಫಲಸಿದ್ಧಿ ।
ಕೂಡುಗಲಕರು ನಿಲ್ಲಿಯಿಹಪರ
ಗೇಡಿಗರು ಹೆಱಸಾರಿ ಗುಣದಲಿ
ಬೇಡಿಕೊಂಬೆನು ಖಾತಿಗೊಳ್ಳೆನು ಹೋಗಿ ನೀವೆಂದ ॥ ೨೦

---

[1] ಗಳ ಬಲುತರದ (ಕ). [2] ಬಿಂಬದಲಿ (ಕ), ಮಂಡಲದ (ತ), ಮಂಡಲವ (ಬ:ನ). [3] ಬಲು (ಕ). [4] ಕೊಳ್ಳನು (ಕ). [5] ಕಾರ್ಯಕೆ (ಕ). [6] ಗಲದೇಕೆ (ಕ).

ಸಂದ ಸುಭಟರು ಬನ್ನಿ ಸ್ವರ್ಗದ
ಬಂದಿಕಾಱರು ಬನ್ನಿ ಮನದಿಂ
ದುಂದೆ ಹೆಜ್ಜೆಯ ತವಕಿಗರು ಬಹುದೆನ್ನ ಸಂಗಾತ।
ನೊಂದಡು[1]ಬ್ಬುವರಿತ್ತ[1] ಬನ್ನಿ ಪು
ರಂದರನ [2]ಸರಿ[2]ಗದ್ದುಗೆಗೆ ಮನ
[3]ಸಂ[3]ದವರು ಹೊಗಿ ರಣವನೆಂದನು [4]ಕರ್ಣ ನಿಜಬಲಕೆ[4] ‖ ೩೧

ವೀರಭಟರಾಹವವ ಹೊಗಿ ಜ
ಝ್ಝಾರರಿತ್ತಲು [5]ನಡೆಯಿ[5] ಕದನವಿ
ಚಾರ[6]ಶೀಲರು[6] ಮುಂದೆ ಹೋಗಿ ಮಹಾರಥಾದಿಗಳು ।
ಆರು ಬಲ್ಲರು ಸಮರಯಜ್ಞದ
ಸಾರವನು ಪಾಪಿಗಳಿರಕಟ ಶ
ರೀರವನು [7]ಕೊಡಿ ಪಡೆಯಿ ಮುಕ್ತಿಯನೆಂದನಾ ಕರ್ಣ[7] ‖ ೩೨

ರಾಯ ಕೇಳೈ ಕರ್ಪುರದ ತವ
ಲಾಯಿಗಳನೊಡೆದೊಡೆದು ಭಟರಿಗೆ
ಹಾಯಿಕಿದನಂಜುಳಿ[8]ಗಳಲ[8] ಮೊಗೆಮೊಗೆದು ಬೇಸಱದೆ ।
ಸಾಯದಿಹರೇ ರಣದೊಳಗೆ ರಾ
ಧೇಯನೀ ಮನ್ನಣೆಗೆ [9]ಬದುಕುವ[9]
ನಾಯಿಗಿಹಪರವುಂಟೆ ಎಂದುದು ನಿಖಿಳ ಪರಿವಾರ ‖ ೩೩

ಕೇಳಿರೈ ಪರಿವಾರವಿಂದಿನ
ಕಾಳೆಗವಲೇ ನಮಗೆ ಭೀಷ್ಮರ
ಕೋಲ ಗುರುವಿನ ಹರಿಬವನು ಮನವಾರೆ ಹೊತ್ತವಲ।
ಸೋಲವೋ ಕೌರವನ ಭಾಗ್ಯದ
ಕಾಲವೋ ವಿಧಿ ಬಲ್ಲದೆನ್ನಯ
ತೋಳ ಬಲುಹನು ಹಗೆಗೆ ತೋಱುವೆನೆಂದನಾ ಕರ್ಣ ‖ ೩೪

---

[1] ಬ್ಬರಿಸುವರು (ಕ). [2] ಸವು (ತ). [3] ಬಂ (ಕ). [4] ದಳಕೆ ಕಲಿ ಕರ್ಣ (ಗ), ದಳಕೆ ಕೈಮುಗಿದು (ಕ). [5] ಹೋಗಿ (ಕ), ಮರಳಿ (ಗ). [6] ವೀರರು (ಕ). [7] ಕೆಡೆನೂಕಿ ಮುಕ್ತಿಯು ಹಡೆಯಿ ನೀವೆಂದ (ಕ). [8] ಯಲೇ. [9] ಸಾಯದ (ಗ), ಬದುಕಿದ (ತ).

ಆವ ತೋಱಿಸಲಾಪನರ್ಜುನ
ದೇವನನು ರಿಪುಬಲದೊಳಾತಂ
ಗೀವೆನೀ ಪದಕವನು ಖಡೆಯುವ ವಜ್ರಮಾಣಿಕದ ।
ಆವನೀ ಫಲುಗುಣನ ತೇರಿನ
ಠಾವಿದೇ ಎಂದವಗೆ ಇದೆ ಮು
ಕ್ತಾವಳಿಯಲಂಕಾರವೆಂದನು ಕರ್ಣ ನಿಜಬಲಕೆ ॥ ೩೫

ನರನ [1]ತೋಱಿಸದವಗೆ ಶತ[1]ಸಾ
ವಿರದ ಪಟ್ಟಣವರ್ಜುನನ ಮೋ
ಹರವಿದೇ ಎಂದವಗೆ ಕೊಡುವೆನು ಹತ್ತು ಸಾವಿರವ ।
ನರನ ತೆರಳಿಚಿ ತಂದು ತನ್ನೊಡ
ನಱುಹಿದಗೆ ನೂಱಾನೆ ಹಯ ಸಾ
ವಿರದ ವಳಿತವ ಬರಸಿ ಕೊಡುವೆನು ರಾಯನಾಣೆಂದ ॥ ೩೬

ತೋಱಿರೈ ಫಲುಗುಣನನಿದಿರಲಿ
ತೋಱಿರೈ ಸಿತ[2]ಹಯ[2]ನನಕಟಾ
ತೋಱಿರೈ ವಿಜಯನನು ನಿಮ[3]ಗೆಯು[3] ಸ್ವಾಮಿಕಾರ್ಯವಲ ।
ತೋಱಿ ಪಾರ್ಥನನವನ ನೆತ್ತರ
ಸೂಱೆ ಶಾಕಿನಿಯರಿಗೆ ನಿಮಗುಱೆ
ಸೂಱೆಯೋ ಭಂಡಾರ ಕೌರವರಾಯನಾಣೆಂದ ॥ ೩೭

ನರನ ಶರಹತಿಗೆನ್ನ ತನು ಜ
ರ್ಝರಿತವಾಗಲಿ ನನ್ನ ಕಣೆಯಲಿ
ಬಿರಿಯಲಾತನ ದೇಹ ಖಾಡಾಖಾಡಿ ಯುದ್ಧದಲಿ ।
ಕರುಳು ಕರುಳಲಿ ತೊಡಕಿ ನೊರೆನೆ
ತ್ತರಲಿ ನೆತ್ತರು ಕೂಡಿ ಕಡಿ[4]ಯಲಿ[4]
ಬೆರಸಿ ಕಡಿ ಪಲ್ಲಟಿಸೆ ಕಾದುವೆನಿಂದು ಹಗೆಯೊಡನೆ ॥ ೩೮

ಸರಳು ಸರಳಿಂಗೊಮ್ಮೆ ರೋಮಾಂ
ಕುರದ ಗುಡಿಯಲಿ ರಕ್ತಜಲದಲಿ
ಕರುಳ ಹೂಮಾಲೆಯಲಿ ವೀರರಣಾಭಿಷೇ[5]ಕವನು[5] ।

[1] ನೆರೆಗಾಣಿಸದವಗೆ (ಕ). [2] ವಹ (ಕ.ಗ.ಚ). [3] ಗಿದು (ಕ).
[4] ಯುಲು (ಕ). [5] ಚನವಾ (ಕ).

ಧರಿಸಿ ವೈರಿಯ ಘಾಯಘಾಯದ
ಧರಧುರಕೆ ತನಿಹೆಚ್ಚಿ ಮನದು
ಬ್ಬರದಲಿಱಿದಾಡಿದರೆ ದಿಟ ಕೃತಕೃತ್ಯ ತಾನೆಂದ ‖ ೩೯

ಅವನ ಮುಂದಲೆ ತನ್ನ ಕೈಯಲಿ
ಅವನ ಕೈಯಲಿ ತನ್ನ ಮುಂದಲೆ
ಅವನ ದೇಹದ ಘಾಯವೆನ್ನಯ ಘಾಯ ಚುಂಬಿಸುತ |
ಅವನ ಖಡುಗದಲೆನ್ನ ಮೈ ನಾ
ತಿವಿದ ಖಡ್ಗಕೆ ನರನ ಮೈ ಲವ
ಲವಿಸಲಡಿಮೇಲಾಗಿ ಹೊರಳ್ದರೆ*ಧನ್ಯ ತಾನೆಂದ ‖ ೪೦

ಕೈದಣಿಯೆ ಹೊಯ್ದರಿಯ ಸೀಳಿದು
ಬಾಯ್ದಣಿಯೆ ಮೂದಲಿಸಿ ಹೆಚ್ಚಿದ
ಮೈದಣಿಯೆ ರಿಪುಭಟನ ಹೊಯ್ಲಲಿ ಘಾಯವನು ಪಡೆದು |
ಹಾಯ್ದ ಕರುಳಿನ ಮಿದುಳ ಜೋರಿನ
ತೊಯ್ದ ರಕ್ತಾಂಬರದಿ ತಾನಿರ
ಲೈದಿ ಕುರುಪತಿ ಕಂಡನಾದರೆ ಧನ್ಯ ತಾನೆಂದ ‖ ೪೧

ನರನ ರಕುತದ ಮದ್ಯಪಾನವ
ನೆಱೆದು ಶಾಕಿನಿಯರಿಗೆ ಪಾರ್ಥನ
ಕರುಳ ದೊಂಡೆಯ ಕೂಳ ಮುದ್ದೆಯ ಬಡಿಸಿ ದೈತ್ಯರಿಗೆ
ಅರಿಯ ಖಂಡದಿ ಹಸಿಯ ಸುಂಟಿಗೆ
ವೆರಸಿ ಭೂತಾವಳಿಯ ದಣಿಸಿದ
ಡರಸು ಕೌರವನೆನ್ನ ಸಾಕಿ[1]ತಕಿಂದು[1] ಫಲವೆಂದ ‖* ೪೨

ಎಂಟನೆಯ ಸಂಧಿ ಮುಗಿದುದು.

---

[1] ದುದಕ್ಕೆ (ಕ). * (ಕ) ಮೊದಲಾದ ಕೆಲವು ಪ್ರತಿಗಳಲ್ಲಿ ೪೧–೪೨ನೆಯ ಪದ್ಯಗಳ ಕ್ರಮವು ವ್ಯತ್ಯಾಸವಾಗಿದೆ

## ಒಂಬತ್ತನೆಯ ಸಂಧಿ

---

ಸೂಚನೆ ॥ ಸೆಣಸು ಮಿಗಲೊಳಗೊಳಗೆ ಖತಿಯಲಿ
ಕೆಣಕಿ ಬೈದಾಡಿದರು ಸಮರಾಂ
ಗಣಭಯಂಕರ ಶಲ್ಯಭಾಸ್ಕರಸುತರು [1]ರಥದೊಳಗೆ[1] ॥

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳ ಖರೆಯದ ನುಡಿಯನಾಲಿಸಿ
ಕೇ[2]ಳಿದನು ಕಲಿ[2] ಶಲ್ಯ ಬೆರಳಲಿ ಮೀಸೆಗಳ ಮುರಿದು ।
ಹೇಳು ಹೇಳಿನ್ನೊಮ್ಮೆ ಪಾರ್ಥನ
ಹೇಳಿ ತೋಱಿಸಲೇನ ಕೊಡುವೆ ನೃ
ಪಾಲಕನ ಪದದಾಣೆ ನುಡಿ ನುಡಿ ಕರ್ಣ ನುಡಿಯೆಂದ ॥ ೧

[3]ಹಾರ ಖಡೆಯವ ಬೇಹ[3] ಗಜಹಯ
ನಾರಿಯರ ಕೊಡಬೇಡ ಪಾರ್ಥನ
ತೋಱಿ ಕೊಡುವೆನು ತನಗೆ ಹೇಳದೆ ಬಱಿದೆ ಹಲುಗಿರಿದೈ ।
ಸ್ವೈರಿಸೀಗಳೆ ನಿನ್ನ ಕರುಳಿನ
ತೋರಣದ ಬಾಗಿಲಲಿ ವಿಜಯ
ಶ್ರೀರಮಣಿಯನು ತಹ ಕಿರೀಟಿಯ ತೋಱಿಸುವೆನೆಂದ ॥ ೨

ಮೊಲನ ಕಾ[4]ಹಿ[4]ನ [5]ಕಾಡಿ[5]ನಲಿ ಹೆ
ಬ್ಬುಲಿ ವಿಭಾಡಿಸುವಂತೆ ನರಿಗಳು
ಬಲಿದ ಬೇಲಿಯ ಕದಳಿಯನು ಕಾಡಾನೆ ಹೊಗುವಂತೆ ।
ದಳವ ಬಗಿದು ಮಹಾರಥರನೊಡೆ
ದುಳಿದು ನಿನ್ನಯ ನಾಲಗೆಯ ಹೆಡ
ತಲೆಯಲುಗಿವರ್ಜುನನನೀಗಳೆ ತೋಱಿಸುವೆನೆಂದ ॥ ೩

---

[1] ತಮ್ಮೊಳಗೆ (ಗ.ಚ.ದ), ಕಳದೊಳಗೆ (ಟ). [2] ಳುತಿದ್ದನು (ಕ).
[3] ಊರುಗಳ ಕೊಡಬೇಡ (ಗ. ಟ. ಚ. ತ. ದ. ಪ. ಬ. ನ). [4] ಪಿ (ಕ. ಗ. ಚ).
[5] ತೋಹಿ (ಬ).

[1]ಹೊ[1]ಱಗೆ ಕೊಡುವುದನಿತ್ತು ತಾ ನಾ
ನಱಿಸಿ ತಹೆನರ್ಜುನನನೇತಕೆ
ಬಱಿದೆ ಭಟರಿಗೆ ಬಾಯ ಬಿಡುತಿಹೆ [2]ಕರ್ಣ[2] ಖೂಳನಲಾ ।
ಆಱಿಸಲೇತಕೆ ಕಾಲಮೃತ್ಯುವ
ನಱಿಸುವರೆ ಕಾಲಾಗ್ನಿಯನು [3]ನೀ
ನ[3]ಱಿಸಲೇಕರ್ಜುನನನೀಗಳೆ ತೋಱಿಸುವೆನೆಂದ ॥ ೪

ಆವನೊಬ್ಬನ ಬಿಲ್ಲ ಬೊಬ್ಬೆಯ
ಡಾವರದಲೆದೆ [4]ಬಿ[4]ರಿವುದಹಿತರಿ
ಗಾವನೊಬ್ಬನ ದನಿಗೆ ಬಿರಿವುದು ಧೈರ್ಯಗಿರಿಶಿಖರ ।
ಆವನೊಬ್ಬನ ಕಂಡರರಿಗಳ
ಜೀವ ತಲೆಕೆಳಕಹುದು ಸುಭಟರ
ದೇವನಾತನು ಪಾರ್ಥ [5]ಬೇಕೇ[5] ತೋಱಿಸುವೆನೆಂದ ॥ ೫

[6]ಹಸುಳೆ[6] ನಿದ್ದೆಯ ಹಾವ ಹೊಯ್ದೆ
ಬ್ಬಿಸುವರೇ ಮೈಮಱೆದ ಮಾರಿಯ
ಮುಸುಕನುಗಿವುದು ಬುದ್ಧಿಯೇ ಜೀವಾಭಿಲಾಷರಿಗೆ ।
ನುಸಿಗಳುರಿಜಾಳಿಗೆಯೊಡನೆ ಝೊಂ
ಪಿಸುವು[7]ದುಚಿತವೆ[7] ಕರ್ಣ ಪಾರ್ಥನ
ಘಸಣಿಯೇಕೈ ನಿನಗೆ ಬೇ[8]ಕೇ[8] ತೋಱಿಸುವೆನೆಂದ ॥* ೬

ಗರುಡನೆತ್ತಲು ಕೊಬ್ಬಿದೊಳ್ಳೆಯ
ಮಱಿಯದೆತ್ತಲು ಸಿಂಹವೆತ್ತಲು
ನರಿಗಳೆತ್ತಲು ದಿಗಿಭವೆತ್ತಲು ನಾಯ ಮಱಿಯೆತ್ತ ।
ನರನೊಡನೆ ಸಮ[9]ದಂಡಿಯೇ[9] ಜಗ
ವಱಿಯದೇ [10]ನಿನ್ನಾತನ[10]ಭ್ಯಂ
ತರವ[11]ನಕಟಾ[11] ಕರ್ಣ ಸುಡು [12]ನೀ[12] ಕಷ್ಟ [13]ಹೋಗೆಂದ[13] ॥ ೭

---

[1] ಷ್ಟೆ (ಕ). [2] ಸಾರು (ಕ.ಗ.ಬ). [3] ದಿಟವ (ಕ.ಚ.).
[4] ಜ (ಗ.ಚ.ತ.ಪ). [5] ನೀಗಳೆ (ಕ.ಗ). [6] ಹಸಿದ (ಗ.ಟ.ತ.ದ.ಪ.ಬ.ನ).
[7] ದೇಕೈ (ಕ.ಗ.ಚ). [8] ಕೈ (ಕ.ಗ.ಚ). * ಈ ಪದ್ಯ (ದ) ಪ್ರತಿಯಲ್ಲಿಲ್ಲ.
[9] ಜೋಳಿಯೇ (ಬ). [10] ನಿಮ್ಮಿಬ್ಬರ (ಕ). [11] ನಱಿಯಾ (ಕ.ಗ). [12] ಸುಡು (ಕ). [13] ನಿನಗೆಂದ (ಬ).

ದಿಟಕೆ ಪಾರ್ಥನ ತೋಱಿದರೆ ಸಂ
ಕಟವ ಮಾಡದೆ ಮಾಣಲಾ ಕಟ
ಕಟ ಧನಂಜಯನೆಂದು ಸೋತ[1]ನು ಹಿಂದೆ[1] ನಿನ್ನೊಡನೆ ।
ಕುಟಿಲಮತಿ ಗೋಗ್ರಹಣದಲಿ ಲಟ
ಕಟಿಸಿದನಲಾ ಮದುವೆ[2]ಯೊಳಗು[2]
ಬ್ಬಟೆಯ ಬಿಲ್ಲಿನೊಳೊದಸಿಕೊಂಡವ ಪಾರ್ಥನಹುದೆಂದ ॥ ೮

ನರನ ತೋಱಿಸಿದವಗೆ ಶತಸಾ
[3]ಸಿ[3]ರವ ಸೂಸುವೆನೆಂದಲಾ ನಿ
ನ್ನರಸನನು ಗಂಧರ್ವರೆಳೆದೊಯ್ದಂದು ಗಗನದಲಿ ।
ಅರಸಿಯರು ಸ[4]ಚಿ[4]ವರು ಕುಮಾರರು
ಮೊಱೆಯಿಡಲು [5]ಫಲುಗುಣನ ಬಿಡಿಸಿದ
ಪರಿಯ ನೀ ನೆಱ ಕಂಡು ಮಱೆವರೆ ಕರ್ಣ ಹೋಗೆಂದ[5] ॥ ೯

ಕಂಡು ಮಾಡುವುದೇನು ಭೀಷ್ಮರು
ಕಂ[6]ಡುದಿ[6]ಲ್ಲಾ ಚಾಪವಿದ್ಯಾ
ಖಂಡಪರಶು ದ್ರೋಣನರ್ಜುನನನು ರಣಾಗ್ರದಲಿ ।
ಕಂಡು ನೀನೇಗುವೆ ಸುಯೋಧನ
ಭಂಡನೋ ಸಾರಥಿತನದ ನಾ
ಭಂಡನೋ ನೀ ಭಂಡನೋ ನಾವಱಿಯೆವಿದನೆಂದ ॥ ೧೦

ಕಡುಪರಾಕ್ರಮಪಿತ್ತ ನೆತ್ತಿಯ
ಹಿಡಿದು ನೀ ಗಳಹಿದರೆ ನಿನ್ನೀ
ಹಡಪದವರೀ ಚಮರದವರೀ ಛತ್ರಧಾರಿಗಳು ।
ಒಡೆಯ ನೀನೆಂದಂಜಿ ನಿರುತವ
ನುಡಿಯಲಮ್ಮರು ತಮ್ಮ ಮನದೊಳ
ಗೊಡಬಡುವರೇ ಕದನಬಾಹಿರ ಕರ್ಣ ಹೋಗೆಂದ ॥ ೧೧

ಕೇಳುತಿರ್ದನು ಕರ್ಣ[7]ನಿವನಾ
ಭೀಳವಚನವನಧಿಕ[7]ರೋಷ
ಜ್ವಾಲೆ ಝಳಪಿಸೆ ಮೀಸೆಗಡಿದನು ತೂಗಿದನು ಶಿರವ ।

---

[1] ನೋ ಮುನ್ನ (ಕ.ಗ). [2] ಯಲಿವು (ಕ.ಗ). [3] ವಿ (ತ.ದ). [4] ತಿ (ಕ). [5] ಫಲುಗುಣನನೊ ಖೇಚರನನೋ ನೀನಾರ ಬಿಡಿಸಿದೆ ಕರ್ಣ ಹೇಳೆಂದ (ಕ), ಫಲುಗುಣನೊ ನೀನೋ ಕುರುಪತಿಯ ಬಿಡಿಸಿದವ ಹೇಳೈ ಕರ್ಣ ನೀನೆಂದ (ಬ). [6] ಡನ (ಕ). [7] ನಾತನಬೀಳವಚನವನಧಿಕ (ಕ), ಕುಣಿದವು ಕಾಯ ಕಂಪಿಸಿತು (ಗ.ಟ), ಕುಣಿದುವು ತೂಗಿದವು ಶಿರವ (ಬ), ನೀತನ ಕೀಳು ವಚನವನಧಿಕ (ಚ).

ರಣದೊಳೊಡೆಯನ ಜಱೆದು ಜಾಱುವ
ಗುಣಸಮುದ್ರರು ಮಾದ್ರದೇಶದ
ಭಣಿತೆ ತಾನದು ಬೇಱೆ ನಡೆವಳಿಯಂ[1]ಗವದು[1] ಬೇಱೆ ।
ಗಣಿಕೆಯರ ಮಧ್ಯದಲಿ ಮದ್ಯದ
ತಣಿವಿನಲಿ ತನಿಸೊಕ್ಕಿ ಬತ್ತಲೆ
ಕುಣಿವ ಭಂಗಿಯ ಭಂಡರೆಲವೋ ಶಲ್ಯ ಕೇಳೆಂದ ॥ ೨೧

ಕುಟಿಲ ಸೃಷ್ಟಿಗೆ ನೀವರಸು ಚಾ
ವಟೆಯರಿಗೆ ಮನೆ ದುರ್ವ್ಯಸನ ಲಂ
ಪಟರಿಗಾಚಾರಿಯರು ಖಳರಿಗೆ ನಿಮ್ಮೊಳುಪದೇಶ ।
ಅಟಮಟದ ಘನ ದೇಹ[2]ಸಿದ್ಧಿಯ[2]
ಘುಟಿಕೆ ನಿಮ್ಮಲಿ ರಣಪಲಾಯನ
ಪಟುಭಟ[3]ರಲಾ ಗುಣ[3]ವಿಹೀನರು ಶಲ್ಯ ನೀವೆಂದ ॥ ೨೨

ಗರುಡ ಮತದಲಿ ಸರ್ಪವಿಷ ಪರಿ
ಹರಿಸುವುದು ದುರ್ಜನ ವಚೋನಿ
ಷ್ಠುರ ಮಹಾವಿಷಕಾವ ಗಾರುಡವಾವ ಮಂತ್ರ[4]ಮುಖ[4] ।
ದುರುಳ ನೀ ದುಱುದುಂಬಿತನದಲಿ
ಹುರುಳುಗೆಡಿಸಿದಡೇಸಱಲಿ ನೀ
ಗರುವನೇ ಬಾಹಿರನು ನಾನೇ ಶಲ್ಯ ಕೇಳೆಂದ ॥ ೨೩

[5]ಏ[5]ಸು ಪರಿಯಲಿ [6]ನುಡಿದು[6] ನಮ್ಮಯ
ದೇಶವನು ನೀ ಹಳಿದಡೆಯು ನೀ
ನೇಸು ಪರಿಯಲಿ ಬಯ್ದು ಭಂಗಿಸಿ ನಮ್ಮ ದೂಱಿದಡೆ ।
ಆ ಸಿತಾಶ್ವನ ಬಿಲ್ಲನೊದೆದಾ
ಕಾಶಕವ್ವಳಿಸುವ ಶರೌಘಕೆ
ಮೀಸಲಱಿಯಾ ಕರ್ಣ ನಿನ್ನೊಡಲೆಂದನಾ ಶಲ್ಯ ॥ ೨೪

ಅರಳಿದಂಬುಜದೆಸಳನಲಿ ಕಡ
ದುಱುವ ಕಂಡಡೆ ಕೂಡುವುದೆ ಮಧು
ಕರನ ಲಾಯದೊಳೆಲವೋ ಕರ್ಣ ದುರಾತ್ಮ ನಿನ್ನೊಡನೆ ।

---

[1] ಘವಣೆ (ದ.ನ). [2] ಶುದ್ಧಿಯ (ಟ.ದ). [3] ರುಸದ್ಗುಣ (ಕ).
[4] ಜಯ (ಕ). [5] ಈ (ಕ). [6] ಜಱೆದು (ಕ).

ನರನ ಸರಿದೂಗುವರೆ ತೋಱಿದ
ಪರಿಯಲೆಮ್ಮನು ಹೊಳ್ಳುಗಳೆ ಸಾ
ವಿರವನಿದಱಲಿ ಖಾತಿಗೊಂಡಡೆ ಪಾರ್ಥನಾಣೆಂದ॥ ೨೫

ಕ್ಷಣದೊಳೀಗಳೆ ಭೀಮ ಪಾರ್ಥರ
ರಣದೊಳಗೆ ತೋಱುವೆನು ಕದಳಿಯು
ಹಣ್ದವೋ ನಿನ್ನಾಳು ಕುದುರೆಯು ಕಾಣ[1]ಲಹುದೀಗ[1] ।
ಬಣಗು ನೀ ಭಾರಂಕ ಭಟನೊಳ
ಗಣಕಿಸುವೆ ಫಡ ಪಾಡನಱಿಯದೆ
ಸೆಣಸಿದರೆ ನೀ ಶೂರನೆಂಬರೆ ಕರ್ಣ ಕೇಳೆಂದ ॥ ೨೬

ಜಲಧಿ ಗಹನವೆ [2]ನಿ[2]ನ್ನೊಡನೆ ಹೊ
ಕ್ಕಳವಿಗೊದಗುವೆನೆಂದು ವಾಯಸ
[3]ಕಳಿ[3]ನುಡಿದು ಹಾಱಿತ್ತು ಹಂಸೆಯ ಕೂಡೆ ಗಗನದಲಿ ।
ಬಳಿಕ ತಲೆಕೆಳಗಾಗಿ ಸಾಗರ
ದೊಳಗೆ ಬಿದ್ದುದು ಹಂಸೆ [4]ತಂದಿಳೆ[4]
ಗಿಳುಹಿತಾ ಪರಿ ಕಾಕಪೌರುಷ ಕರ್ಣ ನೀನೆಂದ ॥ ೨೭

ಆಡಲಱಿಯದೆ ಬಱಿದೆ ಸೈನ್ಯವ
ಹೂಡಿ ಹಲಬರ ಕೊಲಿಸಿ ಬಲವ
ಕ್ಕಾಡೆ ಕುರುಪತಿ ಕಟ್ಟುವಡೆಯನೆ [5]ಕಳನ ಮಧ್ಯದಲ[5] ।
ಆಡಿದಾತನು ಗೆಲವ[6]ನರಸಿಗೆ[6]
ಮಾಡಿದಾತನು ಸಾಕು ಪಾರ್ಥನ
ಕೂಡೆ ವಿಗ್ರಹ ಬೇಡ ತೆಗೆ ಮರಳೆಂದನಾ ಶಲ್ಯ ॥ ೨೮

ಬಱಿಯ ಪಕ್ಷಭ್ರಮೆಯಲಾಡಿದ
ಡುಱುವ ನುಡಿಯೇ ಶಲ್ಯ ಪಾರ್ಥನ
ನಱಿವೆ ನಾನೆನ್ನಂಘವಣೆಯನು ಬಲ್ಲನಾ ಪಾರ್ಥ ।
ಸಱಿ ಹೃದಯ ನೀ ನಿನ್ನೊಡನೆ ಸರಿ
ಗೊಱಲಲಾಱೆನು ಭೀಮ ಪಾರ್ಥರ
ನೊಱಲಿಸುವೆನೀ ಬಾಣದಲಿ ಮಾದ್ರೇಶ ಕೇಳೆಂದ ॥ ೨೯

---

[1] ಬಹುದಿನ್ನು (ಕ). [2] ಸಿ (ಕ). [3] ಕುಳ (ಕ.ಗ.ಚ). [4] ಕಂಡಿಳೆ (ಕ.ಗ). [5] ಮಧ್ಯಚೌಕದಲಿ (ಕ). [6] ನರಸಗೆ (ಚ.), ನಾತಗೆ (ಪ).

ಝಳದ ಝಾಡಿಗೆ ಹೆದಱು ಸೂರ್ಯನ
ನುಳುಹುವನೆ ಕಲಿರಾಹು ದಾವಾ
ನಳನ ದಳ್ಳುರಿ[1]ಗಳುಕುವುದೆ[1] ಜೀಮೂತಸಂದೋಹ ।
ಫಲುಗುಣನ ಕಣ್ ಗಿಣಿಯ ಪವನಜ
ನಳಬಳವ ಕೈಕೊಂಬ ಕರ್ಣನೆ
ತಿಳಿಯಲಾ ಮಾದ್ರೇಶ [2]ನನ್ನಯ ವ್ಯಥೆಯ[2] ಕೇಳೆಂದ ॥ ೩೦

ಪರಶುರಾಮನ ಕಂಡು ಹೊಕ್ಕೆನು
ಗರುಡಿಯನು ದ್ವಿಜನೆಂದು ಕಲಿತೆನು
ವರ ಧನುರ್ವೇದವನು ಪಡೆದೆನು ದಿವ್ಯಮಾರ್ಗಣವ ।
ಸುರಪತಿಯ ಬೇಳಂಬವನು ವಿ
ಸ್ತರಿಸಲೇತಕೆ ವಜ್ರಕೀಟೋ
ತ್ಕರವ ಕಳುಹಿದ[3]ರೆ[3]ನ್ನ ತೊಡೆಗಳನುಗಿದವವು ಬಳಿಕ ॥ ೩೧

ಅರುಣಜಲ ಹೊನಲೆದ್ದು ಮಗ್ಗುಲ
ಉರವಣಿಸಲಾ ರಾಮ ನಿದ್ರಾ
ಭರದಲಿದ್ದವನೆದ್ದು ನೋಡಿದನೆನಗೆ ಕಡುಮುಳಿದು ।
ಧರಣಿಸುರನೆಂದೆನ್ನ ಠಕ್ಕಿಸಿ
ಶರವ ಬೇಡಿದೆ ಕಾಳೆಗದೊಳೀ
ಶರ ನಿರರ್ಥಕವಾಗಲೆಂದನು ಶಾಪಹಸ್ತದಲಿ ॥ ೩೨

ಅದಱನೀ ದಿವ್ಯಾಸ್ತ್ರ ಕಾಳೆಗ
ಕೊದಗಲಱಿಯವು ಶಲ್ಯ ಪಾರ್ಥನ
ಸದೆವುದೇನರಿದಲ್ಲ ಕುರುಪತಿ ಹೀನಪುಣ್ಯನಲೆ ।
ಇದು ನಿದಾನವು ಬಾಣ ಮತ್ತೆ ನ
ಗೊದಗುವುವು ಬೇಱುಂಟು ನೃಪನ
ಭ್ಯುದಯವುಳ್ಳಡೆ ಗೆಲುವೆನಹಿತರನೆಂದನಾ ಕರ್ಣ ॥ ೩೩

ಅರಸನಭ್ಯುದಯವನು ನೀ[4]ನಧಿ[4]
ಕರಿಸಿ ಗೆಲುವಡೆ ನಿನ್ನ ಹಂಗೇ
ಕರಿಗಳನು ಜಯಿಸುವರು [5]ನವಿನ್ನಾ ಛತ್ರಧಾರಕರು[5] ।

---

[1] ಗಂಜುವನೆ (ಗ.ದ). [2] ತನ್ನಯ ವಿಧಿಯ (ದ). [3] ನೆ (ಕ).
[4] ಪತಿ (ಕ). [5] ನಮ್ಮಯಚಮರಧಾರಿಗಳು (ಕ).

ಸೊರಹದಿರು [1]ಸಾರತ್ತು ತಾಗಿತು[1]
ಪರಶುರಾಮನ ಶಾಪ ಗಡ ಮರು
ಳರಸು ಕೌರವ ನಿನ್ನ ಸಾಕಿದನೆಂದನಾ ಶಲ್ಯ ॥ ೩೪

ಕುಲಕೆ ಸೇರುವ ಮಾತು ಮಾತಿನ
ಬಳಿಗೆ ಸೇರುವ ಬಾಹುಬಲ ಭುಜ
ಬಲದ ತೂಕದ ಕೀರ್ತಿ ಕೀರ್ತಿಯ ಪರಿಯ ಪರಲೋಕ।
ಇಳೆಯೊಳಗೆ ನಿನಗಲ್ಲದಾರಿಗೆ
[2]ಸಲುವುದೆಲವೋ[2] ಸೂತಸುತ [3]ನಿ
ರ್ಮಳಪುರುಷ[3] ನಿನ್ನಂಗದೇಶದ ವಿಧಿಯ ಕೇಳೆಂದ ॥ ೩೫

ವೇದ[4]ಕರ್ಮ[4]ವಿರೋಧಿಗಳು ಪ[5]ರಿ[5]
ವಾದಶೀಲರು ವರ್ಣಜಾತಿ ವಿ
ಭೇದಹೀನರು ಸಾರ[6]ಸಪ್ತ[6]ವ್ಯಸನಸಂಗತರು।
ಕಾದುವರು ಬೆನ್ನಿನಲಿ ಗೆಲುವರು
ಪಾದದಲಿ ಪರಬಲವನಿಱಿವರು
ಬೀದಿಯಲಿ ನಿನ್ನಂಗದೇಶದ ಸಿರಿಯ ಕೇಳೆಂದ ॥ ೩೬

ನಿನಗೆ ಸಾರಥಿಯಾದ ಬಾಹಿರ
ತನವೆ ತಾನದು ಸಾಲದೇ ಬೇ
ಱೆನಗೆ [7]ತಲೆಗುತ್ತಾ[7]ವುದೆನುತವೆ ಬಿಸುಟು ವಾಘೆಯವ।
ಮನಕತದ ಮೋಱೆಯಲಿ ತತ್ಸ್ಯಂ
ದನವನಿಳಿಯಲು ಭಂಡ ಫಡ ಹೋ
ಗೆನುತ ಖಡುಗವ ಜಡಿದು ನುಡಿದನು ಭಾನುಸುತ ಮುಳಿದು ॥ ೩೭

ಹೊಡೆದು ತಲೆಯನು ನಿನ್ನ ರಕುತವ
ಕುಡಿಸುವೆನು ಕೂರಸಿಗೆ ಪವನಜ
ನೊಡಲನೆತ್ತರ ತುಂಬುವೆನು ಪಾರ್ಥನ ಕಪಾಲದಲಿ।
ಮಿಡುಕಬಾರದಲೇ ಸುಯೋಧನ
ತೊಡಗಿದಗ್ಗದ ರಾಜಕಾ[8]ರಿಯ[8]
ಕೆಡುವುದೆಂದೇ ನಿನ್ನನುಳಿಹಿದೆನೆಂದನಾ ಕರ್ಣ ॥ ೩೮

---

[1] ಸಾಮರ್ಥ್ಯ ತಾನಿದು (ಕ). [2] ಸುಲಭವೆಲವೋ (ಕ). [3] ನೀಕಲು ಹೃದಯ (ಟ.ಚ.ತ.ದ.ಪ.ಬ.ನ). [4] ಸಂಗ (ಕ). [5] ರ (ಕ). [6] ಮಾರ್ಗ (ಗ), ಧರ್ಮ (ಟ.ಚ.ತ.ದ.ನ). [7] ಕುಲಕುಂ (ತ), ತಲೆಗುಂ (ಗ.ಚ.ತ.ದ). [8] ರ್ಯವು (ನ).

ಒಳಗೆ ಗಜಬಜವಾಯ್ತು ಶಲ್ಯನ
[1]ಬಲುಭಟರು[1] ಮುಕ್ಕುಳಿಕಿದರು ಕುರು
ಬಲದ ಮೆಳೆಯಲ್ಲಾಡಿತಲ್ಲಿಯದಲ್ಲಿ ಗುಜುಗುಜಿಸಿ।
ಬಳಿಕ ಕೌರವರಾಯ ಹರಿತಂ
ದಿಳಿದು ದಂಡಿಗೆಯಿಂದ ಗುಣದಲಿ
ತಿಳುಹಿ ಶಲ್ಯನ ಬೇಡಿಕೊಂಡನು ರಥಕೆ ಮರಳಿಚಿದ ॥ ೩೯

ನುಡಿದು ಕರ್ಣನ ತಿಳುಹಿ ಶಲ್ಯನ
ನೊಡಬಡಿಸಿ ರವಿಸುತನನಂಘ್ರಿಗೆ
ಕೆಡಹಿ ಮಾದ್ರೇಶನ ಮನಸ್ತಾಪವನು ನೆಱೆ ಬಿಡಿಸೆ।
ಕ[2]ಡಹ[2]ದಂಬುಧಿಯಂತೆ ವಾದ್ಯದ
ಗಡಣ [3]ಮೊರೆ[3]ದವು ಪ್ರಳಯ ಸಮಯದ
ಸಿಡಿಲವೊಲು ಸೂಳೈಸಿದವು ನಿಸ್ಸಾಳಕೋಟಿಗಳು ॥ ೪೦

ಒಂಬತ್ತನೆಯ ಸಂಧಿ ಮುಗಿದುದು.

---

[1] ದಳದವರು (ಕ). [2] ದಡಿ (ಕ). [3] ಮೊಱೆ (ಕ.ಗ.ಚ.ಪ.ನ).

# ಹತ್ತನೆಯ ಸಂಧಿ

ಸೂಚನೆ || ರಾಯದಳ ಹಳಚಿದುದು ಕಲಿ ರಾ
ಧೇಯನಲಿ ಸಂಕುಳದೊಳೊದಗಿದ
ವಾಯುಸುತ ಸಮರದಲಿ ಕೊಂದನು ಕರ್ಣನಂದನ[1]ನ[1] ||

ಕೇಳು ಧೃತರಾಷ್ಟ್ರಾವನಿಪ ತ
ಮ್ಮಾಳ ಮೇಳಾಪದಲಿ ಪಾಂಡುನೃ
ಪಾಲಕರ ದಳ [2]ನಡೆದು[2] ಬಂದುದು ಭೂರಿ ರಭಸದಲಿ |
ಆಳೊಳಗ್ಗಳೆಯರಿಗೆ ಕೊಟ್ಟನು
ವೀಳೆಯವನಾ ಕರ್ಣನತಿರಥ
ಜಾಳವನು [3]ಪರುಠವಿಸಿ[3] ನಿಲಿಸಿದ[4]ನೆರಡು[4] ಪಕ್ಕದಲಿ || ೧

ರಾಯಘಟ್ಟಿನ ಬಲದ ಬಾಹೆಯ
ನಾಯಕರು ಸಂಶಪ್ತಕರು ವಿವಿ
ಧಾಯುಧದ ಕಾಂಭೋಜ [5]ಬರ್ಬರ ಚೀನ[5] ಭೋಟಕರು |
ಸಾಯಕದ ಕಿವಿ[6]ವರೆ[6]ಯ ತೆಗಹಿನ
ಘಾಯ ತವಕಿಗ[7]ರೆಡಬಲದ ಕುರು[7]
ರಾಯನನುಜರು ರಂಜಿಸಿತು ದುಶ್ಶಾಸನಾದಿಗಳು || ೨

ಗುರುಸುತನ ಕೂಡೆಂಟು ಸಾವಿರ
ವರ ಮಹಾರಥರೈದು ಸಾವಿರ
ಕರಿಘಟೆಗಳಿಪ್ಪತ್ತು ಸಾವಿರ [8]ರಾವುತರೊಗ್ಗಿನಲಿ[8] |
ಧರಣಿಪತಿ ಕೃತವರ್ಮ ಕೃಪ ಹ
ನ್ನೆರಡು ಸಾವಿರ ರಥಸಹಿತ ವೋ
ಹರಿಸಿದರು ಬಲವಂಕದಲಿ ದಳಪತಿಯ ನೇಮದಲಿ || ೩

---

[1] ರ (ಕ.ಚ.ತ). [2] ಕೂಡಿ (ಕ). [3] ಕರೆಕರೆದು (ಗ.ಟ.ಚ.ತ.ದ.ಪ.ನ). [4] ನೆಡದ (ಚ.ಟ.ದ). [5] ಖರ್ಪರ ಯವನ (ಕ). [6] ಗಡಿ (ಗ). [7] ಳೆರಡು ಬಾಹೆಯ (ಗ.ದ). [8] ರಾವುತೊಗ್ಗಿನಲಿ (ಕ), ರಾಯರಾವುತರು (ಗ), ರಾವುತರರೊಗ್ಗಿನಲಿ (ನ), ರಥಿಕರೊಗ್ಗಿನಲಿ (ಪ).

ಘಟ್ಟಿನೆಡವಂಕದಲಿ ಹಗೆಗೊರೆ
ಗಟ್ಟಿ ನಿಂದರು ಕುರುಬಲದ ಜಗ
ಜಟ್ಟಿ ವೃಷಸೇನನು ಸುಷೇಣನು ಶಕುನಿ ಬಲಸಹಿತ ।
ಬೆಟ್ಟ [1]ಬೀಳಲು[1] [2]ವರಿದವೆನೆ[2] ಕೈ
ಮುಟ್ಟಿ ಮಹಿಯನು ದಂತಿಘಟೆ ಸಾ
ಲಿಟ್ಟುದೆತ್ತಣ ಸೇನೆಯೋ ನಾವರಿಯೆವಿದನೆಂದ ॥ ೪

ಆ ನದೀನಂದನನ ಸಮರದಿ
ಸೇನೆ [3]ಸವೆದುದನಂತ[3] ಬಳಿಕಿನ
ಸೇನೆ [4]ಗಣಿ ಸೋಂಕಿಲ್ಲ[4] ಕಂಡೆನು ದ್ರೋಣ[5]ಪರ್ವದಲಿ[5] ।
ಏನನೆಂಬೆನು ಜೀಯ ಮತ್ತೀ
ಭಾನು ತನಯನ ಕದನಕೊದಗಿದ
ಸೇನೆ ಸಂಖ್ಯಾತೀತವೆಂದನು ಸಂಜಯನು [6]ನೃಪಗೆ[6] ॥ ೫

ಒಡ್ಡಿತೀ ಬಲ ರಿಪುಭಟರು ಮಾ
ರೊಡ್ಡ ಮೆರೆದರು ತಮ್ಮ [7]ನೆಱತೆ[7]ಯೊ
ಳೊಡ್ಡಿಗೊಬ್ಬರ ಕರೆದು ಪರುಠವಿಸಿದನು ಮುರವೈರಿ ।
ಒಡ್ಡಿನೆಡದಲಿ ಭೀಮನಾ ಬಲ
ದೊಡ್ಡಿನಲಿ ಕಲಿ ಪಾರ್ಥ ದಳಪತಿ
ಯೊಡ್ಡಿನಲಿ ನಿಂದನು ಯುಧಿಷ್ಠಿರರಾಯ ದಳ ಸಹಿತ ॥ ೬

ಈ ಮಹಾಮೋಹರವನತಿನಿ
ಸ್ಸೀಮರಾಂತರು ಮೂವರೇ ಬಳಿ
ಕಾ ಮಹಾರಥರಾಜಿಯುಡಗಿದುದವರ ರಶ್ಮಿಯಲಿ ।
ಸೋಮಸೂರ್ಯಾ[8]ಗ್ನಿ[8]ಗಳಿದಿರೊಳು
ದ್ದಾಮತೇಜಸ್ವಿಗಳೆ ದಿಟ ಕುರು
ಭೂಮಿಪತಿ ಕೇಳೆಂದು ನುಡಿದನು ಸಂಜಯನು ನಗುತ ॥ ೭

ಎರಡು ಬಲವುಬ್ಬೆದ್ದುದಿದಱೊಳು
ಮೊರೆವ ಭೇರಿಯ ಭಟರ ಬೊಬ್ಬೆಯ
[9]ಕರಿಯ ಗಜಱನ[9] ಹಯದ ಹೇ[10]ಷಾ[10]ರವದ [11]ಹ[11]ಲ್ಲಣೆಯ ।

---

[1] ಬೇರ್ಗಳು (ಚ.ತ). [2] ಬಿದ್ದುವೆನೆ (ದ). [3] ಸಂಖ್ಯಾತೀತ (ಗ.ಟ.ಚ.ತ.ವ.ಛ.ಸ). [4] ಯೊಳುತಪ್ಪಲ್ಲ (ಟ.ದ), ಗಣಿಸೊಂಪಿಲ್ಲ (ಪ.ನ). [5] ನಾಜಿಯಲಿ (ಗ), ಕದನದಲಿ (ವ). [6] ನಗುತ (ಕ). [7] ಸೇನೆ (ಟ). [8] ದಿ (ಕ). [9] ಮುರಿವ ಗಜರಥ (ಕ). [10] ಷಿತ (ಕ). [11] ಘ (ದ).

ಜಱಿವ ಕಹಳೆಯ ಝಾಡಿಸುವ ಜ
ರ್ಝ್ಝರದ ಡಿಂಡಿಮ ಡಮರು ಪಟಹದ
ಧರಧುರದ ದನಿ ಧೈರ್ಯಗೆಡಿಸಿತು [1]ಸಕಲ[1] ಸಾಗರವ ॥ ೮

ಬೆರಸಿದವು ಬಲವೆರಡು ಹೊಕ್ಕವು
ಕರಿಘಟೆಗಳೇಱಿದವು ಕುದುರೆಗ
ಳುರವಣಿಸಿದವು [2]ತೇರ ತಿವಿದರು[2] ಹೊಂತಕಾರಿಗಳು ।
ಉರುಳ್ವ ತಲೆಗಳ ಬಸಿವ ಮಿದುಳಿನ
ಸುರಿವ ಕರುಳಿನ ಸೂಸುವೆಲುವಿನ
ಹೊರಳ್ವ ಮುಂಡದ ರೌದ್ರರಣ ರಂಜಿಸಿತು ಚೂಣಿಯಲಿ ॥ ೯

ಜೋಡನೊಡೆದವಯವದ ರಕುತವ
ತೋಡಿದವು ಕೂರಂಬು ಸಬಳದ
ನೀಡು[3]ಮೊ[3]ನೆ ನಿಱಿಗರುಳನೆಂಜಲಿಸಿದವು ಪಟುಭಟರ ।
ಖೇಡರಸು ಬೆ[4]ನ್ನೀಯೆ[4] ನೆತ್ತಿಯ
[5]ಬೀಡೆ ಬಿರಿ[5]ಯಲು ಬಿದ್ದ ಲೌಡೆಗ
ಳೀಡಿಱಿದವರಿಚಾತುರಂಗದ [6]ಚಪಳ[6] ಚೂಣಿಯಲಿ ॥ ೧೦

ತೆಗೆಯ ಹೇಳೋ ಚೂಣಿಯಲಿ ಕಾ
ಳೆಗದ ಕೌತುಕ[7]ವೆತ್ತ[7] ದೊರೆಗಳು
ಹೊಗಲಿ ದಳನಾಯಕರು ನುಗ್ಗಿನ ಬೀಯಕಳುಕರಲ ।
ವಿಗಡ ಭೀಮಾರ್ಜುನರ [8]ಬಸುಱ
ಲ್ಲುಗಿ[8] ಕರುಳನೆನುತಬ್ಬರದ ಬೊ
ಬ್ಬೆಗಳ ಬಿರುದರು ಕೆಣಕಿದರು ಸಮಸಪ್ತಕರು ನರನ ॥ ೧೧

ರಾಯನಾವೆಡೆ ಕೌರವೇಂದ್ರನ
ದಾಯಿಗನ ಬರಹೇಳು [9]ಹಿಂದಣು[9]
ಪಾಯ ಕೊಳ್ಳದು ನಿಮ್ಮ ಭೀಷ್ಮದ್ರೋಣರಾವಲ್ಲ ।
ಕಾಯಿ[10]ದೆವು[10] ಕೈಮುಗಿದನಾದರೆ
ಸಾಯಬಲ್ಲರೆ ತಿರುವನೊದೆಯಲಿ
ಸಾಯಕದ ಹಿಳುಕೆನುತ ಬಿಟ್ಟನು [11]ಸೂಱಿಯಲಿ ರಥವ[11] ॥ ೧೨

---

[1] ಸಪ್ತ (ದ.ಪ). [2] ತರುಬಿ ನಿಂತರು (ದ). [3] ಕೊ (ಕ). [4] ನ್ನಟ್ಟಿ (ಕ). [5] ಬೀಡಿನಲಿ (ದ). [6] ಭಟರ (ಕ.ಗ). [7] ಮತ್ತ (ಕ). [8] ಬೆನ್ನೊಳುಗಿ (ಚ.ಟ.ತ-ಪ.ಬ.ನ), ನೆತ್ತಿಯಲುಗಿ (ಗ.ದ). [9] ಭೇದೋ (ಚ.ಟ.ತ.ದ.ನ.ಪ). [10] ವೆನು (ಕ). [11] ರಾಜಮೋಹರವ (ಕ.ಗ).

[1]ಬಿಟ್ಟ ಸೂಠಿಯೊಳುಗಿವ[1] ಕರ್ಣನ
ಥಟ್ಟಣೆಯ ಕಂಡನಿಲಸುತನೆಡ
ಗಟ್ಟಿದನು ಹದಿನೆಂಟು ಸಾವಿರ ರಥಿಕರೊಗ್ಗಿನಲಿ |
ಇಟ್ಟಣಿಸಿ ಬರೆ ರವಿಸುತನ ಕೈ
ಮುಟ್ಟಲೀಯದೆ ಕೌರವೇಂದ್ರನ
ಥಟ್ಟಿನಲಿ ಮೂವತ್ತು ಸಾವಿರ ಕರಿಗಳೌಕಿದವು ॥ ೧೩

ಕರಿಘಟೆಯಲಾ ನಮ್ಮ ಪುಣ್ಯದ
ಪರಿಣತೆಯಲಾ ನಮ್ಮ ರಥಿಕರು
ಸರಳ ತೊಡದಿರಿ ಸೈರಿಸುವುದರೆಗಳಿಗೆ ಮಾತ್ರದಲಿ |
ಅರಿಹಿರಣ್ಯಕಬಲ[2]ಕೆ[2] ನರಕೇ
ಸರಿಯ ಪಾಡೆನಿಸುವೆನು [3]ಕಣ್ಣಿವೆ[3]
[4]ಮಱೆಗೆ ಮುಂಚುವೆನೆನುತ[4] ಹೊಕ್ಕನು ಭೀಮ ಗಜಬಲವ ॥ ೧೪

ಬಿರಿದುವೀತನ ಸಿಂಹನಾದಕೆ
ಕರಿಗಳೆದೆಮುಱಿ ಗದೆಯ ಹೊಯ್ಲಲಿ
ತಿರುಗಿ [5]ಕೋಡಡಿ[5]ಯಾಗಿ ಕೆಡೆದವು ಮಡಿದವಾಕ್ಷಣಕೆ |
ಉರು[6]ಳಿದವು[6] ಪರ್ವತದ ವಜ್ರದ
ಸರಿಸ ಹೋರಟೆ ಕಾಣಲಾದುದು
ಕರಿಘಟೆಯ ಪವನಜನ ರಣ[7]ದಲಿ ರಾಯ ಕೇಳೆಂದ[7] ॥ ೧೫

ನೀಲಗಿರಿಗಳ ನೆಮ್ಮಿ ಘನಮೇ
ಘಾಳಿ ಸುರಿದವು ಮಳೆಯನೆನೆ ಶರ
ಜಾಳ ಕವಿದುದು ಗಜದ ಜೋಧರ [8]ಝಾಡಿಯೆಸುಗೆಯಲಿ[8] |
ಕೋಲ ಕೊಂಬನೆ ಭೀಮ ಸಿಡಿಲುರಿ
ನಾಲಗೆಗೆ ನೀರೇ[9]ಗು[9]ವುದು ಮೇ
ಲಾಳ ಮುಱಿದನು ವಿವಿಧ ಶಸ್ತ್ರಾಸ್ತ್ರ[10]ಪ್ರಹಾರ[10]ದಲಿ ॥ ೧೬

---

[1] ದಿಟ್ಟತನದಿಂದುಲಿವ (ದ). [2] ದ (ಕ). [3] ಕೆಣಕಿದ (ಕ). [4] ದುರುಳ ಸುಭಟರೆನುತ್ತ (ಕ). ಮರಳೆ ಮುರಿವೆನೆನುತ್ತ (ಗ), ಮುರಿಗೆ ಮುರಿವೆನೆನುತ್ತ (ದ). [5] ಕೊರಳಡಿ (ಕ.ಗ). [6] ಳಿಕರಿ (ಕ). [7] ವದನರಸ ಕೇಳೆಂದ (ಕ). [8] ಜಡಿವ ಜೋಕೆಯಲಿ (ಚ.ಟ.ತ.ದ.ಪ.ಬ). [9] ಉ (ಚ.ತ). [10] ಪ್ರಯೋಗ (ಗ), ಪ್ರಸಾದ (ನ).

ಕರಿಯ [1]ಬ[1]ರಿಕೈಯೆಸುವ ಜೋಧರ
ಕರ ಮಹಾಂಕುಶದವನ ಕೈ ಕ
ತ್ತರಿಸಲೊಂದೇ ಶರದಲೆಚ್ಚನು [2]ಮತ್ತೆ ಗವೆಗೊಂಡು[2] ।
ತಿರುಗಿ ಹೊಯ್ದನು ಜೋಡು ಜೋಧರು
ಕರಿಯೊಡಲು ಸಮಸೀಳ ಸೀ[3]ಳಲು
ಅ[3]ರಸ ಬಣ್ಣಿಸಲಾರು ಬಲ್ಲರು ಭೀಮಸಾಹಸವ ॥ ೧೭

ಹಿಂಡೊಡೆದು ಗಜಸೇನೆ ಮುಮ್ಮಳಿ
ಗೊಂಡು ಮುಱಿದುದು ಮುಳಿದು ಭೀಮನ
ಗಂಡುಗೆಡಿಸುವರಿಲ್ಲ ಕೌರವದಳದ [4]ಸುಭಟ[4]ರಲಿ ।
ಅಂಡುಗೊಂ[5]ಡುದು[5] [6]ಬಿರುದುಗಿರುದಿನ[6]
ಗಂಡರಕಟಕಟೆನುತ ನಿಜ ಕೋ
ದಂಡವನು ದನಿಮಾಡುತಶ್ವತ್ಥಾಮನಿದಿರಾದ ॥ ೧೮

ಎಲೆಲೆ ರಾಯನ ತಮ್ಮನೋ ಗಜ
ಬಲದೊಡನೆ ಬಳಲಿದನು ಗುರುಸುತ
ನಳವು ಕಿಱಿದೇ ಸ್ವಾಮಿದ್ರೋಹರ ನೂಕು ನೂಕೆನುತ ।
ಉಲಿದು ಧೃಷ್ಟದ್ಯುಮ್ನ ಬಲವಿ
ಟ್ಟಳಿಸಿ ನೂಕಿತು ಭೀಮಸೇನನ
ನೆಲನ ಕೊಂಡರು ಕಡುಹಿನಲಿ ಪಾಂಚಾಲ ನಾಯಕರು ॥ ೧೯

ಮಱುಗದಿರಿ ಪಾಂಚಾಲರಾಯನ
ಮಱಿಗಳಿರ ಭೀಮಂಗೆ ತಪ್ಪೇ
ನುಱುವ ದೊರೆ ಸೊಪ್ಪಾಗದಂ[7]ತಿರೆ[7] ನೀವು ಕಾದುವಿರೆ ।
ಅಱಿವೆ[8]ನಾ[8]ದರೆಯೆನುತ ಬಾಣವ
ತಿರುಹಲಾ ನಿಮಿಷದಲಿ ನಿಂದನು
ಗುರುಸುತನ ಹಿಂದಿಕ್ಕಿ ಪಾಂಚಾಲರಿಗೆ [9]ಕಲಿ ಕರ್ಣ[9] ॥ ೨೦

ಕ್ಷಮಿ[10]ಸುವುದು ಗುರುಸೂನು ರಣವನು
ನಿಮಿಷ ಚಿತ್ತೈಸುವುದು[10] ಶೌರ್ಯ
ಭ್ರಮಿತರೀ ಪಾಂಚಾಲರನು ಬಱಿಕೈದು ತೋಱುವೆನು ।

---

[1] ಥ (ಸ). [2] ಭೀಮ ವಹಿಲದಲಿ (ಟಿ.ಚ.ತ.ನ.ಪ). [3] ಳಿದನ (ಚ.ಟ). [4] ರಥಿಕ (ಕ). [5] ಡರು (ಬ). [6] ಬೀಗಿ ಬಿರುದಿನ (ಚ.ಟಿ.ತ.ನ.ಪ.ಬ). [7] ದದಿ (ದ). [8] ವಾ (ಕ). [9] ಕರ್ಣನಿದಿರಾಧ (ಕ,ದ). [10] ಸಿ ರಣದೊಳಗಿವರ ಕೆಡಹುವೆ ನಿಮಿಷ ಚಿತ್ತೈಸಿ (ಕ).

ದ್ಯುಮಣಿ ಪರಿಯಂತೇಕೆ ರಶ್ಮಿಗೆ
ತಿಮಿರವಿದಿರೇ ನೀವು ನೋಟಕ
ರೆಮಗೆ ರಣದೆಖ್ಖಾಳವೆಂದನು ಕರ್ಣ ಗುರುಸುತಗೆ ‖ ೨೧

ಬಳಿಕ ಹೇಳುವುದೇನು ರಣದ
ಗ್ಗಳೆಯರವದಿರು ಮುತ್ತಿದರು ಕೈ
ಚಳ[1]ಕಿಗರು ಕವಿದೆ[1]ಚ್ಚರೀತನನೆಂಟು ದೆಸೆ[2]ಗಳಲಿ[2] |
[3]ಲುಳಿತ ಜಲಧರ[3]ಪಟಲ ಜಠರದೊ
ಳಿಳಿದ ರವಿಮಂಡಲದವೋಲರೆ
ಘಳಿಗೆ ಕರ್ಣನ ಕಾಣೆನೈ ನರನಾಥ ಕೇಳೆಂದ ‖ ೨೨

ಗಾಳಿಯೆತ್ತಲು ಘಾಡಿಸುವ ಮೇ
ಘಾಳಿಯೆತ್ತಲು ವೈರಿಸೇನೆಯ
ನಾ[4]ಳಿ[4]ಗಡಿತದ ನೊರೆಯ [5]ರಕುತದ ನೂಕು[5]ಧಾರೆಗಳ |
ಏಳಿಗೆಯಲಾ ಛತ್ರಚಮರೀ
ಜಾಳ ನನೆದವು [6]ಕರ್ಣನಂ[6]ಬಿನ
ಕೋಲ ಕಡಿದೊಢನೊಡನೆ ಕೊಂದನು ಕೋಟಿ ಸಂಖ್ಯೆಗಳ ‖ ೨೩

ಮೇಲೆ ಬಿದ್ದುದು [7]ಮತ್ತೆ[7] ರಿಪುಪಾಂ
ಚಾಲಬಲ ಸಾವುದಕೆ ಕಡೆಯಿ
ಲ್ಲಾಳ ಬರವಿಂಗಱಿಯೆ ನಾನವಸಾನವನು ಮರಳಿ |
ಕೋಲುಗಳ ತೆಗೆದೆಸುವನೋ ಶರ
ಜಾಳವನು ವಿರಚಿಸುವನೋ ಹಗೆ
ಯಾಳಿ ಮುಱಿದುದ ಕಾಬೆನೆಸುಗೆಯ ಕಾಣೆ ನಾನೆಂದ ‖ ೨೪

ವೈರಿಪಾಂಚಾಲಕರೊಳೈವರು
ಧಾರುಣೀಶ್ವರರಸುವ ಬಿಟ್ಟರು
ಚಾರು [8]ಚಾಪಳ[8] ಚಾತುರಂಗದ [9]ನಿಧನ[9]ನಿರ್ಣಯವ |
ಆರು ಬಲ್ಲರು ಖಾತಿಯಲಿ ಜ
ಝ್ಝಾರರೆದ್ದುದು ಮತ್ತೆ ಸಕಲ ಮ
ಹಾರಥರು ನೂಕಿದರು ಲಗ್ಗೆಯ ಲಳಿಯ ಲಹರಿಯಲಿ ‖ ೨೫

---

[1] ಕದಲಿ ತೆಗೆದ (ಸ.ಕ.ಗ). [2] ದೆಸೆಗೆ (ಕ.ಗ.ಚ). [3] ಹೊಳೆವ ಕಣೆಗಳ (ಕ). [4] ಳ (ತ). [5] ನೆತ್ತರ ನಾಲ್ಕು (ಚ.ಟ.ತ.ಪ). [6] ಸುಭಟರಂ (ಕ). [7] ಬವರ (ಕ). [8] ಸಮರದ (ಟ). [9] ಚಪಳ (ಕ).

ನಕುಲ ಧೃಷ್ಟದ್ಯುಮ್ನ ಸುತಸೋ
ಮಕ ಶಿಖಂಡಿ ಯುಯುತ್ಸು ವರ ಸಾ
ತ್ಯಕಿ ಶತಾನೀಕಾಖ್ಯ ಪ್ರತಿವಿಂಧ್ಯಕರು ಶ್ರುತಕೀರ್ತಿ ।
ಸಕಲ ಕೈಕೆಯ ಪಾಂಡ್ಯ ಶಿಶುಪಾ
ಲಕಸುತ ಯುಧಾಮು[1]ನ್ಯು ಸಹದೇ
ವಕರು[1] ಸನ್ನಾಹದಲಿ ಕವಿದುದು ವರ ಮಹಾರಥರು ॥　　೨೬

ಭೀಮ ಫಲುಗುಣ ಕೃಷ್ಣ ಧರ್ಮಜ
ರೀ ಮಹಾರಥರಲ್ಲದಿತರ
ಸ್ತೋಮವವಳವಿಯ ಮೀಱಿ ಕವಿದುದು ಕರ್ಣನಿದಿರಿನಲಿ ।
ಹಾ ಮಹಾದೇವಾ ಸಮಸ್ತ ಸ
ನಾಮರಥಿಕರು ಕರ್ಣನೊಬ್ಬನ
ಕಾಮಿಸಿದರೈ ಕದನಕವನೀಪಾಲ ಕೇಳೆಂದ ॥　　೨೭

ಉರಿಯ ಪೇಟೆಗಳಲಿ ಪತಂಗದ
ಸರಕು ಮಾಱದೆ [2]ಮರಳು[2]ವುದೆ ನಿ
ಬ್ಬರದ ಬಿರುದಿನೊಳೀ ಮಹಾರಥರಾಜಿ ರವಿಸುತನ ।
ಕೆರಳಿಚಿದರೈ ಕೇಣವಿಲ್ಲದೆ
ಬೆರಸಿದರು ಬೇಸಱಿಸಿದರು ಹೊಡ
ಕರಿಸಿದರು ಹೊಯ್ದರು ವಿಭಾಡಿಸಿದರು ವಿಘಾತಿಯಲಿ ॥　　೨೮

ತಮ್ಮ ಸತ್ತ್ವೋದಧಿಯ ತೋಱಿದ
ರೊಮ್ಮೆ ಮೊಗೆದನು ಬಳಿಕ ರಾಯನ
ಸೊಮ್ಮಿನವರಲಿ ಸೀಳಿದನು ಹದಿನೆಂಟು ಸಾವಿರವ ।
ಹಮ್ಮುಗೆಯ ಕೈಮನದ ಹೊ[3]ಣ[3]ಕೆಯ
ಹಮ್ಮಿನುಬ್ಬಟೆಯವರ ಪಾರ್ಥನ
ತಮ್ಮದಿರ ಸಾಹಸಕೆ ಸೇರಿಸಿದನು ಪಲಾಯನವ ॥　　೨೯

ರಥ ಮುಱಿದು ಬಲು ಘಾಯದಲಿ ಸು
ವ್ಯಥಿತ ಸಾತ್ಯಕಿ ಹಿಂಗಿದನು ಸಾ
ರಥಿಗಳಳಿವಿನಲೋಡಿದರು ಸುತಸೋಮಕಾದಿಗಳು ।

---

[1] ನ್ಯೂತ್ತಮಾಶಂಜಸನಿಕರ (ಗ).　　[2] ತಿರುಗು (ಕ).　　[3] ದ (ಕ)

ಪೃಥುವಿಗೊಱಗಿತು ನಾಲ್ಕು ಸಾವಿರ
ರಥಿಗಳುಳಿದ ಪದಾತಿ ಗಜ ಹಯ
ರಥವ ಕೆಡಹಿದನೆನಿತನೆಂಬುದನಱಿಯೆ ನಾನೆಂದ ‖ ೩೦

ಮುರಿದು ಮತ್ತೆ ಮಹಾರಥರು ಸಂ
ವರಿಸಿಕೊಂಡು ಶಿಖಂಡಿ ಸಾತ್ಯಕಿ
ವರ ನಕುಲ ಸಹದೇವ ಧೃಷ್ಟದ್ಯುಮ್ನ ಶೃಂಜಯರು ।
ಸರಳ ಬಿಱು[1]ಬಿ[1]ನ ಬಾಯ ಬೈಗುಳ
ಬಿರುದುಗಹಳೆಯ ಬಿಂಕದವರು
ಬ್ಬರಿಸಿ ಕವಿದರು ಕರ್ಣನಾವೆಡೆ ತೋಱು ತೋಱೆನುತ ‖ ೩೧

ನುಸಿಗಳಿರ ನಿಮಗೇಕೆ ಕರ್ಣನ
ಘಸಣಿ ನಾವೇ ನಿಮ್ಮ ನೆತ್ತಿಯ
ಮುಸಲವಲ್ಲಾ ಫಡ ನಕುಲ ಸಹದೇವ ನಿಲ್ಲೆನುತ ।
ಮುಸುಡ ಹೊಗರಿನ ಕಣ್ಣ ಕೆಂಪಿನ
ವಿಷಮರಗ್ಗದ ಕರ್ಣತನುಜರು
ಮಸಗಿ ಮುಂಚುವ [2]ಪೋಹರವ[2]ನಡಹಾಯ್ದು ತಱುಬಿದರು ‖ ೩೨

ಏನ ಹೇಳುವೆನ[3]ವರ[3] ಶರಸಂ
ಧಾನ ಸೌರಂಭವನು ಕಲಿ ವೃಷ
ಸೇನ ವೀರ ಸುಷೇಣ[4]ರೇಱಿದರೆಚ್ಚರತಿ[4]ಬಳರ ।
ಭಾನುಸುತನಿಂದೆಂಟುಮಡಿಯು ಸ
ಘಾನರಹಿರೋ ಪೂತು ಮಝು ಎನು
ತಾ ನಿಖಿಳ ರಥನಿಕರ ಕವಿದುದು ಮತ್ತೆ ಸಂದಣಿಸಿ ‖ ೩೩

ಕಡಿದು ಬಿಸುಟರು ತೇರುಗಳನಡ
ಗೆಡಹಿದರು ಹೇರಾನೆಗಳ ಕೆಲ
ಕಡೆಯಲೌ[5]ಕುವ ಕುದುರೆ ನನೆದವು ಬಸಿವ ನೆತ್ತರಲಿ[5] ।
[6]ತುಡುಕಿ[6]ದರೆ ಕಾಲಾಳನಟ್ಟೆಯ
ನುಡಿಯಲಱಿಯೆನು ಕರ್ಣತನುಜರ
ಕಡುಹು ನಕುಲಾದಿಗಳ ಬೆದಱಿಸಿತರಸ ಕೇಳೆಂದ ‖ ೩೪

---

[1] ಸಿ (ಕ), ಧಿ (ದ). [2] ಪರಬಲವ (ಚ.ಟ.ತ.ಪ). [3] ರಸ (ಕ.ಗ.ಚ).
[4] ರೆಚ್ಚರು ಮೀರಿದತಿ (ಗ.ಚ.ಟ.ತ.ದ ಪ). [5] ಕಿದ ತೇಜಿಗಳ ರಚಿಸಿದರು ರಕುತದಲಿ (ಚ.ಟ.ತ.ದ), ಕಿದ ರಾವುತರನದ್ದಿದರು ರಕುತದಲಿ (ಪ). [6] ಕಡಗಿ (ಕ), ಮಿಡುಕಿ (ಬ).

ತಿರುಗಿ ಕಂಡನು ಭೀಮ[1]ನೆಲೆ ತರು
ವಲಿಗಳಿರ[1] ಕೊಂಡಾಡಿ ಕಾದುವ
ದೊರೆಗಳೇ ನಕುಲಾಂಕ ತೆಗೆ ಸಹದೇವ [2]ಸಾರೆ[2]ನುತ ।
ಸರಳ ಕೆನ್ನೆಯ ಬಿಗಿದ ಹುಬ್ಬಿನ
[3]ವು[3]ರಿದ ಮೀಸೆ[4]ಯಲ[4]ಡುಗಚ್ಚಿನ
ಕುರುಕುಲಾಂತಕ ಭೀಮ ಬಿಟ್ಟನು ಸೂಠಿಯಲಿ ರಥವ ॥ ೩೫

ರಾಯದಳದಲಿ ಸೆಣಸಲಿದು ಕ
ಜ್ಜಾಯವೇ ಮಕ್ಕಳಿರ [5]ಮನ್ನಿಸಿ[5]
ಕಾಯಿದೆನು ಬಳಿಕೇನು ನಿಮ್ಮಂಘವಣಿ ಲೇಸಾಯ್ತು ।
ಸಾಯ[6]ಲೇತಕೆ[6] ಹಿಂಗಿ ನಿಮ್ಮನು
ನೋಯಿಸುವುದನುಚಿತವು ಸೇನಾ
ನಾಯಕನು ನಿಮ್ಮಯ್ಯನಾತನ ಕಳುಹಿ ನೀವೆಂದ ॥ ೩೬

ಮರುಳಲಾ ಪವಮಾನಸುತ ನಿ
ನ್ನೊರೆಗೆ [7]ಪಡಿಯೊರೆ[7] ತೂಕ ತೂಕಕೆ
ಸರಿಸರಾವಿರೆ [8]ಕನಕಗಿರಿಪರಿಯಂತ ಮಾತೇಕೆ[8] ।
ತರಣಿ ಬಿಂಬದ ತತ್ತಿಗಳನು
ತ್ತರಿಸಿ ತೋಱುವ ತಿಮಿರವುಂಟೇ
ತರಹರಿಸಿ ತೋಱಾ ಎನುತ ಕವಿದೆಚ್ಚರಸಿಲಜನ ॥ ೩೭

ಗಳಹತನವಿದು ನಿಮ್ಮ ತಂದೆಯು
ಗಳಿಸಿದರ್ಥವು ನಿಮ್ಮ ಬೀಯಕೆ
ಬಳಸುವಿರಿ ತಪ್ಪಾವುದೆನುತೆಚ್ಚಂಬ ಹರೆಗಡಿದು ।
ಹಿಳುಕ ಕವಿಸಿದನೀತನೀತನ
ಹಿಳುಕ ಮುಱಿದೊಡನೆಚ್ಚು ಭೀಮನ
[9]ಕೆಳರಿಚಿದರೈ[9] ಕರ್ಣನಂದನರರಸ ಕೇಳೆಂದ ॥ ೩೮

ಬಾಲರೆಂದೇ ಮನ್ನಿಸಿದರೆ ಛ
ಡಾಳಿಸಿತೆ ಚಪಳತ್ವವಾಗಲಿ
ಖೂಳರಾವ್ಹೈ ಸಲೆಯೆನುತ ನಾರಾಚಶತಕದಲಿ ।

---

[1] ನೀ ನೆಱೆ ತರಳರನು (ಚ.ಟ.ತ.ನ.ಪ). [2] ಮರಳೆ (ಕ). [3] ಹ (ಕ). [4] ಗಳಿಪ (ತ.ಟ). [5] ಕಾಮಿಸಿ (ಕ.ಗ). [6] ಬೇಡಾ (ಚ.ಟ.ತ.ಪ.), ಲೆಳಸಿದೆ (ದ). [7] ಒರೆಸರಿ (ಚ.ಟ.ದ.ಪ). [8] ಕರ್ಣಪರಿಯಂತೇಕೆ ಕಾಳೆಗವು (ದ). [9] ಕೆರಳಿಚಿದರೈ (ಕ), ಬಳಲಿಸಿದನ್ಹೈ (ಗ).

ಬೀಳಲೆಚ್ಚನು ರಥವ ಗಜ ಹಯ
ಜಾಳವನು ಸಾರಥಿಗಳನು ಬಲು
ಗೋ[1]ಲೊಳಿಬ್ಬರೊಳೊಬ್ಬನನು[1] ಕೆಡೆಯೆಚ್ಚು ಬೊಬ್ಬಿರಿದ ॥ ೩೯

* ಶಿವಶಿವಾ ಕರ್ಣಾತ್ಮಜನೆ ಮಡಿ
ದವ[2]ನು[2] ದಳಪತಿ ಮಡಿದನೋ ಕೌ
ರವನ ಕೇಡೋ ಹಾಯೆನುತ ಕುರುಸೇನೆ ಕಳವಳಿಸೆ ।
ಕವಿದರಶ್ವತ್ಥಾಮ ಕೃಪ ಕೌ
ರವ ಶಕುನಿ ದುಶ್ಶಾಸನಾದಿಗ
ಳವಗಡಿಸಲನಿಬರನು ತೊಲಗಿಸಿ ಕರ್ಣನಿದಿರಾದ ॥ ೪೦

ಆತುಕೊಳ್ಳೆ ಭ್ರೂಣಹತ್ಯಾ
ಪಾತಕಿಯೆ [3]ಪಡಿತಳಿಸು[3] ವಿಶಿಖ
ವ್ರಾತವಿವೆಯೆನುತೆಚ್ಚನಿನಸುತನನಿಲನಂದನನ ।
ಆತುಕೊಂಬರೆ ಸರಿಸ[4]ನ[4]ಲ್ಲ ವಿ
ಜಾತಿ[5]ಯಲಿ ಸಂಭವಿಸಿದನೆ[5] ಫಡ
ಸೂತನಂದನ ಎನುತ ಕರ್ಣನನೆಚ್ಚನಾ ಭೀಮ ॥ ೪೧

ಎಚ್ಚ[6]ರೊಡನೊಡನೆಚ್ಚ ಬಾಣವ[6]
ಕೊಚ್ಚಿದನು ಕಲಿ ಕರ್ಣನಾತನ
ನೆಚ್ಚನಂಬಿನಮೇಲೆ ನೂಕಿದವಂಬು ವಹಿಲದಲಿ ।
ಎಚ್ಚು ಕಪಿಸಿದಡವನು ಪವನಜ
ನೆಚ್ಚಡವ ಪರಿಹರಿಸಿ ರವಿಸುತ
ನೆಚ್ಚಡಿಬ್ಬರು ಕಾದಿದರು [7]ಕೈ[7]ಮೈಯ ಮನ್ನಿಸದೆ ॥ ೪೨

---

[1] ಲಿನಲಿ ಕರ್ಣಾತ್ಮಜರ (ತ). * ಈ ಪದ್ಯಕ್ಕೆ ಹಿಂದೆ (ಗ) ಪ್ರತಿಯಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ :—

ಕಡೆದ ವೀರಸುಷೇಣನವನಿಗೆ
ಮಡಮುರಿದ ವೃಷಸೇನ ಸೇನೆಯು
ಗಡಣ ಬಿದುದು ಕಿರಿದು ಕಿರಿದೊಡೆಮುರಿದುದಗಲದಲಿ ।
ಘುಡಿಪಿಪನ ಮುಂದೊಜಲಿತೀ ವಂ
ಗಡದಲ್ಕೆದಿತು ವೀರಭಟರು
ಗಡದ ಕಹಳಾರವದ ಲಗ್ಗೆಯು ಲಹರಿ ತನಿಮಸಗೆ ॥

[2] ನೇ (ಕ). [3] ಪರಿಪುವಿಸು (ಕ), ಪರಿಹರಿಸು (ಗ). [4] ವ (ಟ). [5] ನೀ ಪಡಿಪುವಿಸುವನೆ (ಕ), ನೀ ಪಡಿತಳಿಸುವರೆ (ಗ). [6] ನೀತನು ಭೀಮನಾಳಿಗ (ಕ), ರೊಡನೊಡನೆಚ್ಚನೆಡೆಯಲಿ (ಗ,ದ). [7] ಮೈ (ಕ).

ಭಾರಿಯಂಕವು ದಳಪತಿಗೆ ಪಡಿ
ಸಾರಿ[1]ಕೆ[1]ಯ ಭಟರಿಲ್ಲಲಾ ಪರಿ
ವಾರಕಿದು ಪಂಥವೆ ಎನುತ ಕುರುರಾಯ ಮೂದಲಿಸೆ ।
ಕೂರಲಗಿನಂಬುಗಿದು ಬಳಿಯ ಮ
ಹಾರಥರ ಕೈವೀಸಿ ರವಿಸುತ
ಸಾರೆನುತ ಕೆಣಕಿದನು ದುಶ್ಶಾಸನನು ಪವನಜನ ॥ ೪೩

ಎಲವೊ ಕರ್ಣಾತ್ಮಜನ ಹೊಯ್ದ
ಗ್ಗಳಿಕೆಯಲಿ ಹೊರೆಯೇಱದಿರು ಪಡಿ
ಬಲಕೆ ಕರಸಾ ಕೃಷ್ಣಪಾರ್ಥರ ನಿನ್ನಲೇನಹದು ।
[2]ಬಳಿಯ ಬಿಗುಹಿನ[2] ಬಿಂಕ ನಿನ್ನಯ
ತಲೆಗೆ ಬಹುದಾವಱಿಯೆವೆನುತತಿ
ಬಳನನೆಚ್ಚನು ನಿನ್ನ ನಂದನನರಸ ಕೇಳೆಂದ ॥ ೪೪

ತಗರು ಮು[3]ಳಿದಾರಿದರೆ[3] ತೋಳನು
ತೆಗೆದು ಜೀವಿಸಲಱಿವುದೇ ನಾ
ಲಗೆಯ [4]ನೀಱ[4]ರು ನೀವು ಮೂಢರು ನಾವು ನುಡಿಗಳಲಿ ।
ಉಗಿದಡಾಯ್ದದ ಮೊನೆಯ ತುದಿನಾ
ಲಗೆಗಳಲಿ ಮಾತಾಡ ಬಲ್ಲರೆ
ಸೊಗಸುವೆವು ನಾವೆನುತ ಪವನಜನೆಚ್ಚನರಿಭಟನ ॥ ೪೫

ಪವನಸುತನೆಚ್ಚಂಬ ಹರೆಗಡಿ
ದವಿರಳಾಸ್ತ್ರವನೀತ ಕವಿಸಿದ
ನಿವನ ಬಳಿಯ ಮಹಾರಥರು ಸೂಸಿದರು ಶರವಳೆಯ ।
ರವಿಯ ಕೈ[5]ಕತ್ತಲೆಯ ಹೊರಳಿಯ[5]
ತಿವಿಗುಳಿಗೆ ತೆರಳುವುದೆ ರಿಪುಶರ
ನಿವಹವನು ಕಡಿಯೆಚ್ಚು ಕೆಡಹಿದನಾ ಮಹಾರಥರ ॥ ೪೬

ಸಿಕ್ಕಿದರೆ ಬಳಿಕೇನು ತಾಯಿಗೆ
ಮಕ್ಕಳಾಗ[6]ರು[6] ನಿನ್ನ ತನಯನ
ನಿಕ್ಕಿ ಹಾಯ್ದರು ಹಿಂಡೊಡೆದು ನೀ ಸಾಕಿದವರೆಲ್ಲ ।

---

[1] ಗೆ (ತ.ದ.ಟ). [2] ಬಳಿಕ ಬಿನುಗಿನ (ಕ), ಬಳಿಯ ಬಿರುದಿನ (ಧ. ಪ). [3] ನಿದಾಕಿದರೆ (ಚ.ಟ.ದ). [4] ವೀರ (ಗ). [5] ಮಂಜಿನ ತುಷಾರದ (ಗ.ಟ.ಚ, ದ.ಪ.ನ). [6] ರೆ (ಕ).

ಹೊಕ್ಕು ಬಳಿಕೊಂದೆರಡು [1]ಪಸರದ[1]
ಲುಕ್ಕುಡಿಯಲೊದಗಿದನು ನಿನ್ನವ
ನೆಕ್ಕತುಳದಲಿ ಸರಿಮಿಗಿಲ ಕಾದಿದನು ಹಗೆಯೊಡನೆ ‖ ೪೭

ತೇರು ಹುಡಿಹುಡಿಯಾ[2]ಗಿ[2] ರಣದಲಿ
ಸಾರಥಿಯ ತಲೆ ಹೋ[3]ಗಿ[3] ಕಾಲಿನ
ಲಾರುಭಟೆಯಲಿ ನಿನ್ನ ಮಗನೆಸುತಿರ್ದನನಿಲಜನ ।
ಸಾರು ನೀ ಸಾರೆನುತ ಕರ್ಣಕು
ಮಾರನಡಹಾಯಿದನು ಭೀಮನ
ಭೂರಿ ಬಾಣದ ಪಂಜರವ [4]ಭಂಜಿ[4] [5]ಸುತ ವಹಿಲದಲಿ[5] ‖ ೪೮

ಎಲೆಲೆ ಕರ್ಣ ಕುಮಾರನೋ ಪಡಿ
ಬಲವ [6]ಕರೆಯೋ[6] ಬಾಲನೊಬ್ಬನೆ
ನಿಲುವುದರಿದೋ ಸ್ವಾಮಿದ್ರೋಹರ ಹಿಡಿದು ನೂಕೆನುತ ।
ಉಲಿಯೆ ಕೌರವರಾಯನುಬ್ಬಿದ
ಕಳಕಳದ ಬಹುವಿಧದ ವಾದ್ಯದ
ದಳದ ದೆಖ್ಖಾದೆಖ್ಖಿಯಲಿ ಕಲಿಕರ್ಣ ನಡೆತಂದ ‖ ೪೯

ಹತ್ತನೆಯ ಸಂಧಿ ಮುಗಿದುದು.

[1] ಸರಳಿನ (ಚ.ಟ.ತ.ನ). [2] ಗೆ (ಟ.ತ.ದ). [3] ಗಂ (ತ.ದ.ಪ).
[4] ಖಂಡಿ (ತ.ಪ.ನ). [5] ಸಿದ ನಿಮಿಷದಲಿ (ಸ–ಕ). [6] ಹೇಳೋ (ಕ.ಗ.ದ).

# ಹನ್ನೊಂದನೆಯ ಸಂಧಿ

ಸೂಚನೆ ‖ ರಾಯರಿಪುರವಿರಾಹು ಪಾಂಡವ
ರಾಯ ಸೇನಾಜಲಧಿವಡಬನ
ಜೇಯ [1]ರವಿನಂದನನು[1] ಗೆಲಿದನು ಧರ್ಮನಂದನನ ‖

ಮಗನ [2]ತೊಲಗಿಸಿ[2] [3]ಮಿ[3]ಗುವ ಚೂಣಿಯ
ತೆಗಸಿ ಬಲವಂಕದ ಭಟಾಳಿಗೆ
ಮೊಗದ ಸನ್ನೆಯ ಮಾಡುತೆಡವಂಕದ ಕಟಾಕ್ಷದಲಿ ।
ತೆಗೆದು [4]ತೂಱಂ[4]ಬಿನಲಿ ಭೀಮನ
ಬಿಗಿದನಾವೆಡೆ ಧರಣಿಯಾವೆಡೆ
ಗಗನವಾವೆಡೆ ದೆಸೆಗಳೆನೆ [5]ತುಱುಗಿ[5]ದವು ಶರಜಾಳ ‖ ೧

ಭೀಮನೋ ನಿಮಿಷಾರ್ಧದಲಿ ನಿ
ರ್ನಾಮನೋ [6]ತಡವೇಕೆ ರಿಪುವೇ[6]
ಕಾಮನೋ [7]ಕರ್ಣನೆ ಕಪರ್ದಿ[7] ವಿಚಾರವೇಕೆನುತ ।
[8]ತಾಮಸದ[8] ಭುಲ್ಲವಣೆಯಲಿ ಕುರು
ಭೂಮಿಪನ ಬಲವೊದಱೆ ವೈರಿ
ಸ್ತೋಮ ಕಂಡುದು ಪವನತನಯನ ರಣದ ಭಾರಣೆಯ ‖ ೨

ಉಲಿವುತಿದೆ ಕೌರವನ ಸೇನಾ
ಜಲಧಿ ಹರುಷದಲಿತ್ತಲನಿಲಜ
ನಳುಕದೊಬ್ಬನೆ ಕಾದುತೈದನೆ ಕರ್ಣನೊಡನೆನುತ ।
ತಳಿತ [9]ಧವ[9]ಳಚ್ಛತ್ರ ಚಮರಾ
ವಳಿಯ ಮಧ್ಯದಲವನಿಪತಿ ನಿಜ
ಬಲಸಹಿತ ನೂಕಿದನು ಬಹುವಿಧವಾದ್ಯ ರಭಸದಲಿ ‖ ೩

---

[1] ನೋ ರವಿಸೂನು (ಕ.ಚ.ತ.ದ). [2] ತೆಗೆಯಿಸಿ (ದ). [3] ಹೊ (ಗ.ಚ.ದ). [4] ಮೂಱಂ (ಗ.), ನೂಱಂ (ಚ.ದ.), ಕೂರಂ (ಪ). [5] ತಱುಬಿ (ಚ). [6] ಕರ್ಣನೊ ಕಪರ್ದಿಯೊ (ಸ–ಕ.ದ). [7] ರಿಪುಸುಭಟನಿದಕೆ (ಸ–ಕ.ದ). [8] ಆ ವೊನೆಯ (ಕ.), ಕಾಮಿಸುವ (ಗ). [9] ವಮ (ಕ).

ಒಂದು ಕಡೆಯಲಿ ಭೀಮ ಸಾತ್ಯಕಿ
ಯೊಂದು ಕಡೆಯಲಿ ನಕುಳ[1]ದ್ರುಪದ
ರೊಂ[1]ದು ಕಡೆಯಲಿ ಚೇಕಿತಾನ ಶಿಖಂಡಿ ಶೃಂಜಯರು ।
ಒಂದುಕಡೆ ಸಹದೇವನೀ ಪರಿ
ಹಿಂದೆ ಮುಂ[2]ದಿಕ್ಕೆಲ[2]ದೊಳೀತನ
ಸಂದಣಿಸಿ ಮುತ್ತಿದರು ಮುಕ್ಕುಳಿಕಿ[3]ತ್ತು ರಿಪುಸೇನೆ[3] ॥ ೪

ರಾಯದಳ[4]ವುಬ್ಬೆದ್ದು[4]ದೋ ಪಡಿ
ನಾಯಕರನಪ್ಪಳಿಸುವೆನು ರಿಪು
ವಾಯುಜನ [5]ಗಾಢಣೆ[5]ಯ ಗರ್ವಗ್ರಹವ ಕಳಚುವೆನು ।
ರಾಯ ಕೌರವಸಹಿತ ನೀವ್ ನಿ
ರ್ಮ್ಮಾಯತದಲ[6]ರಿಯೆನು[6]ತ ಸಾರದ
ಸಾಯಕದ ಸರಿವಳೆಯ ಸುರಿದನು ಭಾನುಸುತ ಮುಳಿದು ॥ * ೫

ಧನುವಿನಲಿ ಸಾತ್ಯಕಿಯ ಮಾದ್ರೀ
ತನುಜರನು ತೇರಿನಲಿ ದ್ರುಪದನ
ತನಯನನು ಸಾರಥಿಗಳಲಿ ಜೋಡಿನಲಿ ಪವನಜನ ।
ಜಿನುಗ[7]ರ[7]ವರವ ಸಂಗದಲಿ ಕೈ
ಮನವ ಖಂಡಿಸಿ ಸಕಲ ರಿಪುಸಾ
ಧನವನೊಬ್ಬನೆ ಕರ್ಣ ಗೆಲಿದನು ನೃಪತಿ ಕೇಳೆಂದ ॥ ೬

ಮುಂದುಗೆಟ್ಟುದು ದೊರೆಗ[8]ಳೆನೆ[8] ರವಿ
ನಂದನನ ರಥಕಾಗಿ ಸೇನಾ
ವೃಂದ ಕವಿದುದು [9]ಚೈದ್ಯ ಶೃಂಜಯ ಮತ್ಸ್ಯ ಕೈಕೆಯರು[9] ।
ಸಂದಣಿಸಿ ಪಾಂಚಾಲ ಕೇರಳ
[10]ವಿಂದ[10] ಮಗಧ ದ್ರವಿಡ ವಂಗ ಪು
ಳಿಂದ ಬಲಬಹಳಾಬ್ಧಿ ಮುತ್ತಿತು ಮತ್ತೆ [11]ಮೂದಲಿಸಿ[11] ॥ ೭

---

[1] ಧರ್ಮಜರೊಂ (ಗ), ನಬ್ಬರಪ್ಪೊಂ (ಕ.ದ). [2] ದೆಡಬಲ (ಚ.ಟ.ತ.ಪ.ಪ). [3] ದರು ಏಪ್ರಘಟನ (ಟ.ತ), ದರು ಸಕಲದಳ (ಚ.ನ.ಬ), ದರು ಪಟುಭಟರು (ಪ). [4] ಳಿಳಿಯೆದ್ದು. [5] ಪ್ರೌಢತ್ವಣೆ (ಕ). [6] ಲಿಹಾದೆ (ಕ). * (ಟ.ತ.ಪ.) ಪ್ರತಿಗಳಲ್ಲಿ ಈನೆಯ ಪದ್ಯವಾದಮೇಲೆ ೪ನೆಯ ಪದ್ಯ ಬರುತ್ತದೆ. [7] ನ (ಕ.ಗ). [8] ಳಲಿ (ಕ). [9] ಚೇಕಿತಾನಕ ಮತ್ಸ್ಯ ಶೃಂಜಯರು (ಚ.ತ.ಪ.ಬ). [10] ಮಂಡ (ಚ.ತ.ಪ.ಬ). [11] ರವಿಸುತನ (ಗ).

ಒಡೆವ ಮಂದರವನು ತರಂಗದ
ಲುದಧಿ ಹೊಯ್ವಂದದಲಿ [1]ಹೊಕ್ಕವು[1]
ಕುದುರೆ ತೂಳಿದವಾನೆ [2]ಕವಿದರು ರಥಿಕರೊಳಬಿದ್ದು[2] ।
ಒದಱಿ ವಿವಿಧಾಯುಧದ ಕಾಲಾ
ಳೊದಗಿ ಕೈದೋಱಿಸಿದರಿನಿಬರ
ಸದೆದನೊಬ್ಬನೆ ಕರ್ಣ ಕೆದಱಿದ[3]ನಾ ಮಹಾಬಲವ[3] ॥ ೮

ಬೀಳುವಂಬಿನ ಹೊಯ್ಲ ಖಡ್ಗದ
ತೂಳುವಾನೆಯ [4]ತೂ[4]ಕಿ ತಾಗುವ
ಶೂಲಿಗೆಯ ತುಂಡಿಸುವ ವಂಕಿಯ [5]ನೆ[5]ಡುವ ಬಲ್ಲೆಹದ ।
ಸೀಳುವಿಟ್ಟಿಯ ಮುಱಿವ ಪರಿಘದ
ಪಾಳಿಸುವ ಪರಶುವಿನ ಧಾಳಾ
ಧೂಳಿ ಮಸಗಿತು ಮತ್ತೆ ಕರ್ಣನ ರಥದ ಬಳಸಿನಲಿ ॥ ೯

ತುರಗ ರಾವ್ತ[6]ರಿಗ[6]ವರ ಖಡ್ಗಕೆ
ಕರಿಗೆ ಜೋಧರಿಗವರ ಶಸ್ತ್ರಕೆ
ವರ ರಥಕೆ ಸಾರಥಿಗೆ ರಥಿಕರ ಚಾಪಮಾರ್ಗಣಕೆ ।
ಸರ[7]ಳನೊಂದೊಂದೆಚ್ಚು[7] ನೆಱೆ ಕ
ತ್ತರಿಸಿದನು ಕಾಲಾಳನೊಂದೇ
ಸರಳಲೈನೂಱಳಿಯೆ ಕೊಂದನು ಕರ್ಣ ಪರಬಲವ ॥ ೧೦

ನಕುಳನನು ಹದಿ[8]ನೆಂಟ[8]ಱಲಿ ಸಾ
ತ್ಯಕಿಯನೈದಂಬಿನಲಿ ಸಹದೇ
ವಕನನೊಂಬತ್ತಱಲಿ ಭೀಮನನೆಂಟು [9]ಕೋಲಿನಲಿ[9] ।
ಸಕಲ ರಥಿಕರನೆಲ್ಲ ಶತ ಸಾ
ಯಕದಲೊಱ[10]ಗಿ[10]ಸಿ ಚೈದ್ಯ ಪಾಂಚಾ
ಲಕರ ಥಟ್ಟಿನೊಳೊಕ್ಕಲಿಕ್ಕಿದನರಸ ಕೇಳೆಂದ ॥ ೧೧

---

[1] ಬಿಟ್ಟವು (ಕ). [2] ಹೊಕ್ಕವು ರಥದೊಳೊಗ್ಗಿನಲಿ (ಕ), ಹೊಕ್ಕವು ರಥಗಳೊಳಬಿದ್ದು (ಗ.ಟ). [3] ನುಮಹಾಬಲವ (ಕ). [4] ನೂ (ಚ.ತ.ಪ.ಬ). [5] ನಿ (ಕ). [6] ರನ (ಸ). [7] ಳಿಗೊಂದೊಂದಱಲಿ (ಕ), ಳನೊಂದೊಂದಾಗಿ (ಚ.ಟ.ತ.ಬ), ಳದೊಂದೊಂದಾಗಿ (ಪ). [8] ನೈದ (ನ.ಪ). [9] ಬಾಣದಲಿ (ಚ ತ.ದ.ಪ.ಬ). [10] ಲಿ (ಚ.ತ.ದ).

ಅದು ಬಳಿಕ ಹೇರಾಳದಳ[1]ವಾಂ
ತುದು[1] ಮಹಾರಥರೆಸುಗೆಯಲಿ ಹೂ
[2]ಳಿದುದು[2] ನಭ ಸುಗ್ಗಾಯ್ತು ನೆಲ ಚತುರಂಗ ಪದಹತಿಗೆ ।
ಕುದುರೆ ಕರಿ ತೇ[3]ರಾಳ[3] ತೆಕ್ಕೆಯ
ಹೊದಬಿನಲಿ ಮುಳುಗಿದನು ನಿನ್ನವ
ನದುಭುತವನೇನೆಂಬೆನೈ ಧೃತರಾಷ್ಟ್ರ ಕೇಳೆಂದ ॥ ೧೨

ತಾರಕನ ಘಟ್ಟಿನಲಿ ಹರನ ಕು
ಮಾರ ಹೊಕ್ಕಂದದಲಿ ವೃತ್ರನ
ತಾರಕಾಕ್ಷನ [4]ಜೋಡಿಯನು[4] ಜಂಭಾರಿ [5]ತ[5]ಱಿವಂತೆ ।
ಆರಿದೆಚ್ಚನು [6]ಶಿವಶಿವಾ[6] ಕಾ
ಮಾರಿಯೋ ಪಾಂಡವ ಬಲ[7]ದ[7]ಹೆ
ಮ್ಮಾರಿಯೋ ನಿನ್ನಾನೆ ಸವಱಿತು ವೈರಿಭಟವನವ ॥ ೧೩

ವಾಘೆ ಸರಿಸದ ರಾವುತೋ ದ್ಭಘ
ವಾಘೆಯೆನುತೇಱಿದ ಹಯೌಘದ
ಮೇಘಪಟಲದ ಪಾಡೆ ಘಡಯೆನೆ ಹೊಕ್ಕ ಗಜದಳ[8][ದ][8] ।
ಲಾಘವದ ಲುಳಿಸಾರತನದ ಶ
ರೌಘರಚನೆಯ ರಥಿಕಯೂಥ
ಶ್ಲಾಘೆಗಳ ನಾ ಕಾಣೆನೊಂದು ವಿಘಳಿಗೆ ಮಾತ್ರದಲಿ ॥ ೧೪

ಜೇಱಿ ಲಗ್ಗೆಯ ಮಾಡಿ ಘೋಯೆಂ
ದೇಱಿ [9]ಹಳಚುವ[9] ರಭಸ ಕಿವಿಗಳ
ಕೀಱಿದುದು ಬಳಿಕ[10]ವರು[10] ಕರ್ಣನ ತಾಗಿದಾಕ್ಷಣಕೆ ।
ತಾಱು ಘಟ್ಟಿಗೆ [11]ಹರೆದು[11] ರೌದ್ರವ
ತಾಱಿದವು ಕಣ್ಣುಗಳು ರಿಪುಬಲ
ದೇಱ ನಾಲಗೆ ಹೊಗಳಲಮ್ಮದು ನೃಪತಿ ಕೇಳೆಂದ ॥ ೧೫

ಆಳ ಕೊಂದನು ಲಕ್ಕವನು ತುರ
ಗಾಳಿಯನು ನಾಲ್ಕಾಮಿರವ ಶುಂ
ಡಾಲಘಟೆಗಳ ತುಂಡಿಸಿದನೊಂದೆರಡು ಸಾವಿರವ ।

---

[1] ಕವಿದುದು (ಚ.ತ.ದ.ನ.ಪ). [2] ಳಿದರು (ಗ.ಟ.ದ.ನ.ಬ). [3] ರುಗಳ (ಕ).
[4] ಜೋಡಣೆಯ (ಕ.ಗ.ದ). [5] ಜ (ದ). [6] ರಿಪುಮದನ (ಚ.ಟ.ತ.ಪ.ಬ.ಸ).
[7] ಕ (ಟ.ತ). [8] ವ (ಸ). [9] ಕೊಚ್ಚುವ (ಕ), ಯೊಱಚುವ (ದ). [10] ಮಮ (ಕ).
[11] ಕೆಡೆದ (ಕ.ನ).

ಮೌಳಿ ಮಣಿಯಲಿ ಹೊಳೆಹೊಳೆವ ನರ
ಪಾಲರನು ನಾನೂಱಱೋಲೆಯ
ಸೀಳಿದನಲೈ ಚೈದ್ಯ ಪಾಂಚಾಲರಲಿ ಕಲಿ ಕರ್ಣ ॥ ೧೬

ತೆರಳಿದನು ಸಹದೇವ [1]ನಸು[1] ಪೈ
ಸರಿಸಿದನು ನಕುಳನು ಶಿಖಂಡಿಯ
[2][ಕ]ರಣ ತಲೆಕೆಳಕಾಯ್ತು[2] ಕಾಣೆನು ಸಾತ್ಯಕಿಯ ರಥವ ।
ಮುರಿವ ಕಂಡೆನು ಭೀಮ ದುಗುಡದ
ಭರದಲಿದ್ದನು ಮಿಕ್ಕ ಬಲ ನಾ
ಲ್ಕೆರ[3]ಡೊ ನಾಲ್ಕೊಂದೋ ನಿಧಾನಿಸಲ[3]ಱಿಯೆ ನಾನೆಂದ ॥ ೧೭

ಇಟ್ಟಣಿಸಿ ಕೊಂಡೊತ್ತಿ ರಾಯನ
ಥಟ್ಟ ಹೊಕ್ಕನು ಜರುಹಿದ[4]ನು[4] ಜಗ
ಜಟ್ಟಿ ಜೋಡಿಸಿದಂಗಸುಯ್ಯಾನದ ಮಹಾರಥರ ।
ಕೆಟ್ಟ [5]ದಳವನಘಾಟದವರೊಳ
ಗಿ[5]ಟ್ಟುಕೊಳ್ಳರದೇನು ರಾಯನ
ಮುಟ್ಟುತಿದಲಾ ರೌದ್ರರಣವೆನುತೆಚ್ಚನಾ ಕರ್ಣ ॥ ೧೮

ಕುರುಬಲದ ಸುಮ್ಮಾನ ಕಹಳೆಯ
ಬಿರಿವ ನಿಸ್ಸಾಳದ ನೃಪಾಲರ
ಹರುಷ ಪುಳುಕದ ಭುಜದ ಹೊಯ್ಲಿನ [6]ಬೊಬ್ಬೆಯಬ್ಬರದ[6] ।
ಅರಿಬಲದೊಳಕಟಕಟ ವಿಧಿ ನಿ
ಷ್ಕರುಣಿ ಹಾಹಾಯೆಂಬ ರವದ
ಬ್ಬರದ ನಿಬ್ಬರ ಕೇಳಲಾದುದು ನೃಪತಿ ಕೇಳೆಂದ ॥ ೧೯

ಎಲೆಲೆ ರಾಯನ ಮೇಲೆ ಬಿದ್ದುದು
ಕಲಹವಕಟಾ ಹೋಗಬೇಡಿ
ಟ್ಟಳಿಸಿದವ ಹಗೆ ನಮ್ಮ ಭೀಷ್ಮದ್ರೋಣನಿವನಲ್ಲ ।

---

[1] ಮಿಗೆ (ತ.ಬ). [2] ಮರಣ ತಲೆಕೆಳಕಾಯ್ತು (ಕ), ವರರಥವ ನಾನಲ್ಲಿ (ಟ.ತ.ದ.ಪ.ಬ). [3] ಡು ನಾಲ್ಕೊಂದಾದುದೈ ನಾವ (ಕ), ಡು ನಾಲ್ಕೊಂದಾಗಿ ಸವೆದುದನ (ದ). [4] ನೊ (ಚ). [5] ಸೇನೆಯು ಕೂಟದಲಿ ಹಿಂದಿ (ಕ), ದಳವನ ಘಾತದೊಳಗಾರಿ (ದ), ದವನ ಸಘಾಟದವರೊಳಗಿ (ನ.ಬ). [6] ಬಲದ ಬೊಬ್ಬೆಗಳ (ತ.ಬ), ಬಾಯ್ಬೊಬ್ಬೆಗಳ (ದ), ಭಟರ ಬೊಬ್ಬೆಗಳ (ಪ).

ಅಳುಕದಿರಿ ಕವಿಕವಿಯೆನುತ ಹೆ
ಬ್ಬಲ ಸಘಾಡದಲೌಕಿ ಕರ್ಣನ
ಹೊಲಬುಗೆಡಿಸಿ[1]ದುದಂ[1]ಬುಗಳ ಸಾರಾಯ ಸೋನೆಯಲಿ ॥ ೨೦

ಕೊಂಬನೇ ಬಳಿಕೀ ಮಹಾರಥ
ರಂಬುಗಿಂಬನು ನಿಮ್ಮ ಹಿರಿಯರ
ಡೊಂಬಿನಾಹವವ[2]ಲ್ಲಲೇ[2] ತಮತಮಗೆ ತುಡುಕುವಡೆ ।
ಅಂಬುನಿಧಿ ಮಕರಂದವಾದರೆ
ತುಂಬಿಯಾಗನೆ ವಡಬನೀತನ
ನೆಂಬ ಖುಲ್ಲರು ಸು[3]ಭಟ[3]ರೇ ಧೃತರಾಷ್ಟ್ರ ಕೇಳೆಂದ ॥ ೨೧

ರಾಯದಳದೊಳು ಮಡಿವ [4]ಕರಿ ವಾ
ನಾಯುಜಕೆ[4] ಕಡೆಯಿಲ್ಲ ರಥಿಕರು
ಪಾಯದಳವೆನಿತಳಿದುದೋ ನಾನಱಿಯೆನ[5]ದ[5]ಱೊಳಗೆ ।
ಬಾಯಬಿಟ್ಟುದು ಸೇನೆ ಕಡಿಖಂ
ಡಾಯತದ ಹೆಣ[6]ನೊ[6]ಟ್ಟಲಿನ ಮುಱಿ
ದಾಯುಧದ ಸಂದಣಿಯೆ ನಿಲಿಸಿತು [7]ಬಳಿಕ ರವಿಸುತನ[7] ॥ ೨೨

ತಱಿದ ಹೊಸಕುಮ್ಮರಿಯೊಳಗೆ ರಥ
ಹರಿಯಬಲ್ಲುದೆ ಕರ್ಣ ನಾವಿಂ
ದಱಿದೆವ್ಯೆ ನೀ ನೆಟ್ಟನೋಲೆಯುಕಾಱನೆಂಬುದನು ।
ಇಱಿತಕಿವರಾರಿದಿರಹರು ನಿ
ನ್ನುರವಣೆಯನಾರಾನುವರು ಮು
ತ್ಸರವ ಬಿಸುಟೆನು ಪೂತು ರವಿಸುತ ಎಂದನಾ ಶಲ್ಯ ॥ ೨೩

[8]ಕಾಲಿಡುವಡಿದು ದುರ್ಗವೆನು[8]ತಾ
ಸಾಲ ಬಿಟ್ಟನು ದಕ್ಷಿಣಕೆ ದು
ವ್ವಾಳಿಸಿದನಾ ರಥವನವನೀಪತಿಯ ಮೋಹರಕೆ ।
ಏಳು ಕಲಿಯಾಗಿನ್ನು ಕೆಲಬಲ
ದಾಳ ಹಾರದಿರೆನುತ ರಾಯನ
ಮೇಲೆ ಕಱೆದನು ಕರ್ಣ ಖತಿಯಲಿ [9]ಕಣೆಯ[9] ಬಿಱುವಳೆಯ ॥ ೨೪

---

[1] ದರಂ (ಕ.ಚ.ದ.ನ). [2] ಲ್ಲೆನುತ (ಕ.ಗ.ಚ). [3] ಜನ (ಕ). [4] ಕಲಿ ವಾಹಾಯುರಕೆ (ಕ). [5] ವ (ಕ). [6] ಲೊ (ಕ), ದೊ (ಗ). [7] ರವಿಸುತನ ಬವರ (ಚ.ತ.ಪ.ಬ). [8] ಕಾಲಿಡಲು ದುರ್ಘಟವಿದೆನು (ಚ.ತ.ಪ). [9] ಸರಳ (ಗ.ಚ.ದ).

ಗಳಹದಿರು ಕೆಲಬಲದ ಹಂಗಿನ
[1]ಬಳಕೆಯೋ[1] ಫಡ ಸೂತಸುತ ಬಾ
ಳ್ಗೊಲೆಯ ಬಾಹಿರ ಬಿನುಗ [2]ಬೆದಱಿಸಿ[2] ಬಱಿದೆ ಬೆಱತೆಯಲ |
ಉಲುಕಿದರೆ ನಾಲಗೆಯ ತೊಡಬೆಯ
ಕಳಚುವೆನು ನಿಲ್ಲೆನುತಲಾ ಕುಂ
ಡಳಿತ ಕಾರ್ಮುಕನೆಚ್ಚು ಕಡಿದನು ಕರ್ಣನಂಬುಗಳ ‖ ೨೫

ಅಲಿಕಲುಗಳು ಸಿಡಿಲ ಮಱಿಗಳ
ಮೇಲುವಾಯ್ದವು ಗಡ ಯುಧಿಷ್ಠಿರ
ನಾಳುತನದಲಿ ನಮ್ಮ ಜಱೆದನು ಶಲ್ಯ ನೋಡೆನುತ |
ಬೋಳೆಯಂಬೈದಱಲಿ ರಾಯನ
ತೋಳನೆಚ್ಚನು ಜಡಿವ ಜೋಡಿನ
ಮೇಲೆ ಮುಱಿದವು ಬಾಣ ನೃಪ ಮಗುಳೆಚ್ಚನಿನಸುತನ ‖ ೨೬

ಬಲುಹು ಕೈಗಳಲುಂಟೆ ತೋಱುವು
ದುಲಿವ ಹೊತ್ತದು ಬೇಱೆನುತ ಮುಂ
ಕೊಳಿಸಿ ಕರ್ಣನ [3]ಶರವ[3] ಕಡದೀರೇಳು ಬಾಣದಲಿ |
ಅಳುಕದೆಚ್ಚನು ತೇರು ತುರಗಾ
ವಳಿಯ ಧವಳಚ್ಛತ್ರ ಚಮರಿಯ
ನಿಳುಹಿದನು ಧ್ವಜದಂಡ ಸಹಿತ್ತೈವತ್ತು ಬಾಣದಲಿ ‖ ೨೭

ಬೇಗೆವರಿ ಬೆಳುದಿಂಗಳಲಿ ನಮ
ಗೀಗ ತೋಱಿತಲಾ ಎನುತ ಮುಱಿ
ದಾಗಳೇ ಸಂಧಿಸಿದ [4]ತನ್ನಯ ಹಯ ರಥಾದಿಗಳ[4] |
ಈಗಲಱಿಯಾದರೆಯೆನುತ ಕಿವಿ
ಗಾಗಿ ತೆಗೆದನು ನಿಶಿತ ಬಾಣವ
ತೂಗಿ ಬಿಟ್ಟನು ಬೀಳೆನುತ ಕಲಿ ಕರ್ಣ ಬೊಬ್ಬಿಱಿದ ‖ ೨೮

ಅರಸ ಕೇಳಾಶ್ಚರಿಯವನು ರಿಪು
ಶರವನೆಡೆಯಲಿ ಕಡಿದು ರವಿಸುತ
ನುರವನೆಚ್ಚನು ಧರ್ಮನಂದನನೆಂಟು ಬಾಣದಲಿ |

---

1. ಬಲುಮೆಯೋ (क). 2 ಬಡಿದೀ (ङ.ಟ.त.प). 3 ತೋಳ (प).
4 ನಾ ರಥ ಛತ್ರ ಚಮರಿಗಳ (क), ಸಾರಥಿ ರಥ ಹಯಾವಳಿಯ (ग).

ಬಿರಿಯೆ ಬಲುವಜ್ರಾಂಗಿ ಹಾಯ್ದುವು
ಗರಿಸಹಿತಲುಚ್ಚಳಿಸಿ ನೆಲದಲಿ
ಸರಳು ನೆಟ್ಟುವು [1]ಕರ್ಣ ನನೆದನು ರುಧಿರ ಧಾರೆಯಲಿ[1] ‖ ೧೯

ತೂ[2]ಗುವ್ರೊ[2]ಡಲರೆಮುಚ್ಚುಗಂಗಳ
ಸೂಗುರಿಸುವಂಗದ[3]ಲಿ ತಾಳದ[3]
ಮೂಗಿನುಸುರಿನ ಮೂರ್ಛೆಯಲಿ ರವಿಸೂನು ಮೈಮರ[4]ದ[4] ।
ಆಗಳಂತಿರೆ ಹೊರೆಯವರ ಕೈ
ಲಾಗುಮದ್ದಿನ ಕಮಳಜಲ ಮಂ
ತ್ರಾಗಮದಲೆಚ್ಚತ್ತನೊಂದೇ ನಿಮಿಷದಲಿ ಕರ್ಣ ‖ ೨೦

ಬಸಿವ ರಕುತವ ತೊಳೆತೊಳೆದು ಮಂ
ತ್ರಿಸಿದ ಸಲಿಲವ ಮುಕ್ಕುಳಿಸಿಯುಗು
ಳ್ದಸಮಸಾಹಿಸಿ ಕೊಂಡ[5]ವರ[5] ಕರ್ಪುರದ ವೀಳೆಯವ ।
ಮುಸುಡ ದುಗುಡದ ತನ್ನ ಸೇನಾ
ಪ್ರಸರಕಭಯವ[6]ನಿತ್ತು[6] ಮಾರಿಯ
ಮುಸುಕನುಗಿದನ ತೋರುನೆನುತ ತಾಗಿದನು ಭೂಪತಿಯ ‖ ೨೧

ಮಂದಿ ಕವಿಯಲಿ ಘಾಯ ತಾಗಿದ
ಹಂದಿ[7]ಯೋ[7] ರಾಧೇಯನರಸನ
ಮುಂದುಗೆಡಿಸದೆ ಮಾಣನೋ ತೆಗೆ ನೂಕು ನೂಕೆನುತ ।
ಸಂದಣಿಸಿತತಿರಥರು ರಾಯನ
ಮುಂದೆ ತಲೆವರಿಗೆಯಲಿ ಸೇನಾ
ವೃಂದ ತುಡುಕಿತು ಕುಪಿತ ಕಾಳೋರಗನ ನಾಲಗೆಯ ‖ ೨೨

ರಾಯನಳಲಿಗರಿವರಘಾಟದ
ನಾಯಕರು ಕಾಣಿರೆ ಸಮೀರನ
ಲಾಯದಲಿ ಲಂಬಿಸಿದವಕಟ ತುಷಾರವಾಜಿಗಳು ।
ಆಯಿತಿದು ತಪ್ಪೇನೆನುತ ಕ
ರ್ಣಾಯತಾಸ್ತ್ರದಿ ಹರೆಗಡಿದು ರಿಪು
ರಾಯನಲ್ಲಿಗೆ ರಥವ ಬಿಟ್ಟನು ಸೂಠಿಯಲಿ ಕರ್ಣ ‖ ೨೩

---

[1] ನನೆದುದಾ ಸರ್ವಾಂಗ ರುಧಿರದಲಿ (ಕ). [2] ಗಿದೊ (ಟ.ತ.ದ), ಗಿತೊ (ಚ). [3] ಲಿಕಾರದ (ಕ.), ಪಿಟಾಳದ (ಗ). [4] ಯೆ (ಗ.ಚ.ಟ.ತ.ದ.ಪ.ಬ). [5] ನುರು (ಪ). [6] ಕೊಡುತ (ಚ.ತ.ಪ). [7] ಯೊಲು (ದ).

ಹೊಟ್ಟ ನೂಕಿ [1]ವೃಥಾಹವದ[1] ಜಗ
ಜಟ್ಟಿ ನೀ ಹೊಱಕಾಲುಗೊಂಡರೆ
ಬಿಟ್ಟನೇ ತಾ ಕರ್ಣನಱಿಯಾ ಕಾಯ್ದುಕೊಳ್ಳೆನುತ ।
ಕಟ್ಟಳವಿಯಲಿ ವೈರಿರಾಯನ
ನಿಟ್ಟಳಿಸಿ ಮುಱಿಯೆಸುತ ಬರಲಡ
ಗಟ್ಟಿ ತಡೆದರು ಮತ್ತೆ ಸಕಲ ಮಹಾರಥರು ಭಟನ ॥ ೩೪

ನಿಲ್ಲು ಸೈರಿಸು ಸೂತಸುತ ಜವ
ನಲ್ಲಿ ಮೇಳವೆ ಜೀವರಿಗೆ ಭೂ
ವಲ್ಲಭನ ಸಮಜೋಳಿಯೇ ನೀ ಸಾರು ಸಾರೆನುತ ।
ಚೆಲ್ಲಿದರು ಕೂರಂಬುಗಳನೆಡ
ದಲ್ಲಿ ಬಲದಲಿ ಹಿಂದೆ ಮುಂದೆಸೆ
ಝಲ್ಲರಿಯ ಶರಜಾಳ ಝೊಂಪಿ[2]ಸಿತ[2]ಬುಜಸಖಸುತನ ॥ ೩೫

ತುರಗದಳವೊಂದೆಸೆಯಲೌಕಿತು
ಕರಿಘಟೆಗಳೊಂದೆಸೆಯಲತಿರಥ
ರುರವಣೆಯ ಪದಹತಿಯ ಧೂಳಿಯ ಮಬ್ಬಿನುಬ್ಬರದ ।
ಧರಧುರವದೊಂದೆಸೆ ಪದಾತಿಯ
ಹೊರಳಿಗಳದೊಂದೆಸೆ ವಿಘಾತಿಸಿ
ತರಿಭಟನನೇನೆಂಬೆನೈ ಧೃತರಾಷ್ಟ್ರ ಕೇಳೆಂದ ॥ ೩೬

ಮುಸುಕುವುದು ಮುಗಿಲೊಮ್ಮೆ ಸೂರ್ಯನ
ಮಸಕ ಮಿಗಿಲಹುದೊಮ್ಮೆ ಮೇಘ
ಪ್ರಸರ[3]ಕೊಳಗ[3]ಹನೊಮ್ಮೆ ರವಿ ತೋಱುವನು [4]ಮತ್ತೊ[4]ಮ್ಮೆ ।
ಅಸಮ ಸಮರದೊಳೀತನಾ ಪರಿ
[5]ಮುಸುಳು[5]ವನು ತೋಱುವನು [6]ತೊಡೆ[6]ವನು
ದೆಸೆಗೆಡಿಸುವನು ಬಳಿಕ ಮುಳಿಸಿನೊಳಾ ಮಹಾರಥರ ॥ ೩೭

ಬಿದ್ದುದೈನೂಱಾನೆ ರುಧಿರದೊ
ಳದ್ದರಿನ್ನೂಱರಸುಮಕ್ಕಳು
ಕದ್ದನಂತಕನಾಱುಸಾವಿರ ಕುದುರೆಯುಸುರುಗಳ ।

---

[1] ಮಹಾಹವಕೆ (ಚ.ಟ.ತ.ಪ). [2] ಸೆಯ (ಕ). [3] ದೊಳಗಿ (ದ.ಪ.ಬ).
[4] ಮಗಳೊ (ಟ.ತ.ದ.ನ.ಪ.ಬ). [5] ಮುಸುಕು (ಕ). [6] ಬಲ (ಕ).

ಬಿದ್ದವರನೊಡೆತುಳಿದು ಮೇಲು
ಬ್ಬೆದ್ದು ಕವಿಕವಿದಾಳು ಕುದುರೆಯು
ಬಿದ್ದಿನಲಿ ಬೇಸರಿಸಿದನು [1]ಪಿತೃಪತಿಯು[1] ಪರಿಜನವ ॥ ೩೮

ಆಳ ನೋಯಿಸಿ ನೋಡುತಿಹ ಹೀ
ಹಾಳಿ [2]ತಾನೇ[2]ಕಕಟಕಟ ದೊರೆ
ಯಾಳ ಧೀವಶವೆನುತ ಸಹದೇವಾದಿಗಳು ಜಱೆದು ।
ತೋಳು [3]ಬಳಲದೆ[3] ತೆಗೆದೆಸುತ ಸಮ
ಜೋಳಿಯಲಿ ನೂಕಿದರು ಕರ್ಣನ
ಮೇಲೆ ಸಾತ್ಯಕಿ ಭೀಮರವನೀಪಾಲನಿದಿರಿನಲಿ ॥ ೩೯

ಫೂತು ಮಝುರೇ ಭೀಮ ಸಾತ್ಯಕಿ
ಯಾತರೋ ತಮ್ಮೊಡೆಯನಿದಿರಲಿ
ಘಾತಕರ ಘಟ್ಟಿಸುವೆನೀಗಳೆ ಶಲ್ಯ ನೋಡೆನುತ ।
ಭೂತನಾಥನ ಭಾಳನಯನೋ
[4]ದ್ಧೂ[4]ತ ಧೂಮಧ್ವಜ ಶಿಖಾಸಂ
ಘಾತವಿವೆಯೆನೆ ಕೆದಱಿದನು ಮಾರ್ಗಣಮಹೋದಧಿಯ ॥ ೪೦

ಪವನಸುತ ಮುಖದಿರುಹಿದನು ಯಾ
ದವನ ಕಂಡವರಾರು ಸೇನಾ
ನಿವಹಗಿವಹದ ಪಾಡೆ ಕರ್ಣನ ಖಾತಿ ಖೊಪ್ಪರಿಸೆ ।
ಬವರ ಮುಱಿದುದು ವಿಜಯಲಕ್ಷ್ಮಿಯು
ಸವತಿ ಸೇರಿತು ಸುಭಟರಿಗೆ ಬಳಿ
ಕವನಿಪತಿಯೇ ತಱುಬಿ ನಿಂದನು ಭಾನುನಂದನನ ॥ ೪೧

ಅಂಜುವೆವು ನಿಮಗರಸರೇ [5]ಬಲ[5]
ಪಂಜರದ ಗಿಣಿ ನೀವು ನಿಮಗೀ
ಮಂಜರನ ಪಡಿಮುಖಕೆ ನಿಲುವುದು ನೀತಿಯೇ ನಿಮಗೆ ।
ಭಂಜನೆಗೆ ಬಲುಹುಳ್ಳಡೆಯು ನಿಮ
ಗಂಜುವರು ಗುರುಭೀಷ್ಮರಾ ಪರಿ
ರಂಜಕರು ನಾವಲ್ಲೆನುತ ತಾಗಿದನು ಭೂಪತಿಯು ॥ ೪೨

[1] ಕುರುಕುಲದ (ದ). [2] ತನವೇ (ಚ.ತ.ಪ). [3] ಬಲದಲಿ (ಗ.ಟ).
[4] ದ್ಧೂ (ಕ). [5] ಭಟ (ದ).

ಕಲಿತನವೆ ಹೃದಯದಲಿ ಕಾರ್ಯದ
ಬಳಕೆ ಕೈಯಲಿ ನೆಡುವೆ ನಾಲಗೆ
ಯುಲಿದಡೇನಗ್ಗಳಿಕೆಯಹುದೋ ವೀರ ಸಿರಿಯಹುದೊ ।
[1]ಕಲಿತನದ ಕೆಚ್ಚುಳ್ಳಡೆಸುಗೆಯ[1]
ಸುಳಿವ ತೋಱಾದರೆಯೆನುತ ನೃಪ
ತಿಲಕ ಬತ್ತಳಿಕೆಯಲಿ ಸೆಳೆದನು ಹೂಡಿದನು ಶರವ॥ ೪೩

ರೂ[2]ಪಿದೊ[2]ಳ್ಳಿತು ರೇಖೆಯುಚಿತ ಕ
ಳಾಪವತಿ ಹಸನಾಯ್ತು ಬಾಣ
ಸ್ಥಾಪನಕೆ ಮೆಚ್ಚಿದೆನು ಮೇಲಣ ತೂಕದಾಳವನು ।
ಈ ಪರಿಯ[3]ಲೆಂ[3]ಗಱಿಯೆನಹುದೈ
ಚಾಪವಿದ್ಯಾ[4]ಪಾತ್ರ[4]ವಿಂದವ
ನೀಪತಿಯಲಾ ಪೂತು ಮಝು ಎಂದೆಚ್ಚನಾ ಕರ್ಣ ॥ ೪೪

ಗಂಡು ಗರ್ವವನೆವ್ವೊಡನೆ ಕೋ
ದಂಡದಲಿ ಮೆಱೆ ಸಾಕು ನಿನ್ನಯ
ಭಂಡವಿದ್ಯವ ಮೆಱೆವಡದಲಾ ಕೌರವಾಸ್ಥಾನ ।
ದಿಂಡುದಱಿವೆನು ಸೈರಿಸೆನುತವ
ಖಂಡಶರನಿಕರದಲಿ ರಿಪುಮಾ
ರ್ತಾಂಡತನಯನನೆಚ್ಚು ಬೊಬ್ಬಿಱಿದನು ಮಹೀಪಾಲ ॥ ೪೫

ಇಱಿತ ಮುನ್ನವೊ ಸುಭಟರಿಗೆ ಬೊ
ಬ್ಬಿಱಿತ ಮುನ್ನವೊ ನಿಮ್ಮ ನುಡಿಯಲಿ
ಮುಱಿವಡೆದಿರೈ ನೀವೆನುತ ನೃಪನಂಬ ಹರೆಗಡಿದು ।
ತೆಱಹುಗೊಡದೆಚ್ಚನು ನೃಪಾಸ್ತ್ರವ
ತಱಿದು ಮಗುಳೆಚ್ಚನು ಶರಾವಳಿ
ಯೆಱಗಿದವು ತುಱುಗಿದವು ತೆತ್ತಿಸಿದವು ರ[5]ಥಾಂಗ[5]ದಲಿ ॥ ೪೬

ಕಾಯಲಾಪರೆ ಕರೆದುಕೊ[6]ಳ್ಳಾ[6]
ವಾಯುಜನನರ್ಜುನನ ನಕುಲನ
ನಾಯಕರೊಳುಬ್ಬಾಳುಗಳನತಿರಥ ಮಹಾರಥರ ।

---

[1] ಕಲಿಮನದ ಕೈಚಳಕದೆಸುಗೆಯ (ಗ.ಚ.ಟ.ತ.ದ), ಬಲುಗಡಿಯ ಕೈಚಳಕ ದೆಸುಗೆಯ (ನ.ಬ). [2] ಪುಪೊ (ಕ). [3] ದೆಂ (ತ.ದ.ಪ). [4] ಶಾಸ್ತ್ರ (ನ.ಬ). [5] ಥಾಗ್ರ (ದ). [6] ಳ್ಳಿ (ಛ).

ಸಾಯಲಂಜುವಡಿಳುಹು ಧನುವನು
ನೋಯಿಸೆನು ನುಡಿಸಿದಡೆ ಕೌರವ
ರಾಯನಾಣೆ ನೃಪಾಲ ಕೇಳೆನುತೆಚ್ಚನಾ ಕರ್ಣ ॥ ೪೭

ಅರಸನೆಚ್ಚನು ಕರ್ಣ ಶರವನು
ಪರಿಹರಿಸಿ ಮಗುಳೆಚ್ಚನೀತನು
ಧರಣಿಪನ[1]ನವನೀಶ[1]ನೆಚ್ಚನು ಹಗೆಯ ರಥ ಹಯವ ।
ಮರಳಿ ಶಲ್ಯನನೆಚ್ಚಡೀತನ
ಹೊರೆಯವರನೆಚ್ಚನು ರಥಾಂಗವ
ಹುರುಳುಗೆಡಿಸಿ ಮಹೀಶನೆಚ್ಚನು ಭಾನುನಂದನನ ॥ ೪೮

ಅಕಟ ಚಂದ್ರಿಕೆ [2]ಗೆ[2]ದ್ದುದೋ ಪಾ
ವಕನ ಝುೞ್[3]ವೀ[3] ಧರ್ಮಪುತ್ರನ
ವಿಕಳ ಶರದಲಿ ಕರ್ಣ ನೊಂದನಲಾ ಮಹಾದೇವ ।
ಅಕುಟಿಲರು ನೀವೆಮ್ಮವೊಲು ಬಾ
ಧಕರೆ ಪರರಿಗೆ [4]ಪರಶುಧರ[4]ಸಾ
ಯಕದ ಸವಿನೋಡಾದಡೆನುತೆಚ್ಚನು ಮಹೀಪತಿಯ ॥ ೪೯

ಏನ ಹೇಳುವೆನವನಿಪತಿ ನಿ
ನ್ನಾನೆಯಗ್ಗಳಿಕೆಯನು ಪಾಂಡವ
ಸೇನೆ ಮಗುಳೆ[5]ಡ್ಡವಿ[5]ಸಿತವನೀಶನ ರಥಾಗ್ರದಲಿ ।
ಆನೆ ಹೊಕ್ಕವು ಬದ್ದರದ ಬಲು
ವಾನಿಸದ ಬಂಡಿಗಳ[6]ನೊಡ್ಡಿದ[6]
ರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ ॥ ೫೦

ಕಡಿದು ಬಿಸುಟನು ತೆಕ್ಕೆವರಿಗೆಯ
ಗಡಣವನು ಬದ್ದರದ ಬಂಡಿಗ
ಳಡಗಿದವು ನಿಜಸೇನೆ ಸಹಿತರುಣಾಂಬು ಪೂರದಲಿ ।
ಅಡಿಗಡಿಗೆ ಮುಕ್ಕುಱಿಕಿ ತನ್ನನು
ತಡೆವ ರಿಪುಚತುರಂಗ ವಿಪಿನದ
ಕಡಿತ ತೀರಿತು ಮತ್ತೆ ರಾಯನ ಕೆಣಕಿದನು ಕರ್ಣ ॥ ೫೧

---

[1] ನಿನಸೂನು (ಕ). [2] ಯೆ (ಕ). [3] ದಲಿ (ಕ). [4] ಪುರುಷರಸ (ಚ), ಪರುಷತರ (ತ.ದ.ಬ). [5] ಡ್ಡೈತ್ರಿ (ತ.ಪ.ಬ). [6] ಚಾಚಿದ (ಚ.ತ.ಪ.ಬ).

ಕಾವನಾರೈ ಕರ್ಣ ಮುನಿದರೆ
ಜೀವದಲಿ ಕಕ್ಕುಲಿತೆಯೇಕೆ ಶ
ರಾವಳಿಗ[1]ಳಿವಲಾ[1] ಕರಾಗ್ರದಲುಗ್ರಧನುವಿದಲಾ ।
ನಾವು ಸೂತನ ಮಕ್ಕ[2]ಳುಗಳೈ[2]
ನೀವ[3]ಲೇ[3] ಕ್ಷತ್ರಿಯರು ನಿಮಗೆವು
ಗಾವುದಂತರವತಿಬಳರು ನೀವೆನುತ ತೆಗೆದೆಚ್ಚ ॥ ೫೨

ಅರಿಯ ಶರಹತಿ[4]ಗಡ್ಡವರಿಗೆಯ[4]
ನರಸನಭಿಮುಖಕೊಡ್ಡಿದರು ರಥ
ತುರಗವನು ಚಪ್ಪರಿಸಿ ಸಾರಥಿ ನೂಕಿದನು ರಥವ ।
ಧರಣಿಪತಿ ಕೇಳೈದು ಶರದಲಿ
ಹರಿಗೆಯನು ಮುಱಿಯೆಚ್ಚು ಸೂತನ
ಶಿರವನಿಳುಹಿದಡೊದೆದುಕೊಂಡುದು ಮುಂಡ ಸಾರಥಿಯ ॥ ೫೩

ಕೆದಱಿದನು [5]ಮಾ[5]ರ್ಗಣೆಯೊಳರಸನ
ಹೊದಸಿದನು ಹುಸಿಯೇಕೆ ರಾಯನ
[6]ಹುದಿದ[6] ಕವಚವ ಭೇದಿಸಿ[7]ದಪ್ಪೊ[7]ಳಬಿದ್ದವಂಬುಗಳು ।
ಎದೆಯಲೌಕಿದ ಬಾಣ ಬೆನ್ನಲಿ
ತುದಿವೊನೆಯ ತೋಱಿದವು ಪೂರಾ
ಯದ ವಿಘಾತಿಯಲರಸ ಕಳವಳಿಸಿದನು ಕಂಪಿಸುತ ॥ ೫೪

ಅರೆಮುರಳುವಾಲಿಗಳ ಹೆಗ[8]ಲಲಿ[8]
ಮುರಿದ ಗೋಣಿನ ದುಱುದುಱಿಪ ನೆ
ತ್ತರ [9]ನಿ[9]ಹಾರದ ಮೈಯ ಸಡಲಿದ ಕೈಯ ಬಿಲುಸರಳ ।
ಅರಸನನು ಕಂಡಳಲಿದರು ಚಾ
ಮರದ ಛತ್ರದ ಹಡಪದವರಾ
ಪ್ತರು ವಿಘಾ[10]ತಿಯಲಂ[10]ಬ ಕಿತ್ತರು ಬಹಳ ಶೋಕದಲಿ ॥ ೫೫

ಮಂತ್ರಜಲದಲಿ ತೊಳೆದು ಘಾಯವ
ಮಂತ್ರಿಸುತ ಕರ್ಪುರದ ಕವಳ[11]ದ[11]
ಯಂತ್ರರಕ್ಷೆಯಲವನಿಪನ ಸಂತೈಸಿ ಮಲಗಿಸುತ ।

---

[1] ಳವಲಾ (ತ). [2] ಳೀಗಳು (ಸ-ಕ). [3] ಲಾ (ತ.ದ.ನ). [4] ಗಳುಕಿ ಹರಿಗೆಯ (ಚ.ಟ.ನ.ಪ.ಬ), ಗಿರದೆ ಪರಿಘವ (ದ). [5] ಕೂ (ತ). [6] ಹೊದೆದ. (ದ.ಪ), ಪುದಿದ (ನ). [7] ಯೆವ್ಪೊ (ಕ). [8] ಲನ (ತ). [9] ವಿ (ಟ) [10] ತದೊಳಂ (ಕ). [11] ವ (ಕ).

ತಂತ್ರ ತಲ್ಲಣಿಸದಿರಿ ಜಿತಶ[1]ತ[1]
ತಂತ್ರನೋ ಭೂಪತಿ ವಿರೋಧಿಭ
ಟಾಂತ್ರಭಂಜನನೀಗಳೆಂದುದು ರಾಯನಾಪ್ತಜನ ॥ ೫೬

ಸಿಕ್ಕಿದೆಯಲಾ ಸ್ವಾಮಿದ್ರೋಹಿಗ
ಳಿಕ್ಕಿ ಹೋದರೆ ಭೀಮ ಫಲುಗುಣ
ರೆಕ್ಕತುಳದಲಿ ತೊಡಕಿ ನೀಗಿದಲಾ ನಿಜೋನ್ನತಿಯ ।
ಚುಕ್ಕಿಗಳು ನಿನ್ನವರ ಮಡುವಿನ
ಲಿಕ್ಕಿ ಕೌರವರಾಯನನು ಮಱೆ
[2]ಪೊ[2]ಕ್ಕು ಬದುಕಾ ಧರ್ಮಸುತ ಬಾ ಎಂದನಾ ಕರ್ಣ ॥ ೫೭

ಸಾಳುವನ ಕೊಡರಗಳಿಗೆ ಸಮ
[3]ಮೇಳವೇ[3] ಶಸ್ತ್ರಜ್ಞನಾದಡೆ
ಸೋಲುವನೆ ವರ ಶಸ್ತ್ರವಿದ್ಯಾಪ್ರೌಢಿಯದು ಬೇಱೆ ।
ಆಳುತನದಭಿಮಾನವದು ಕರ
ವಾಳಧಾರಾಗಮನ[4]ವರ[4]ಸರೆ
ಖೂಳರಾದಿರಿ ನೀವೆನುತ ಭಂಗಿಸಿದನಾ ಕರ್ಣ ॥ ೫೮

ಶ್ರುತಿರಹಸ್ಯವನಱಿವ ಧರ್ಮ
ಸ್ಥಿತಿಗತಿಯನಾರೈವ ಶಾಸ್ತ್ರ
ಪ್ರತತಿಯರ್ಥವಿಚಾರವಾ[5]ಚರಣಾ[5]ದಿ ಕರ್ಮದಲಿ ।
ಚತುರರಹ ದರುಶನದ ತರ್ಕದ
ಮತನಿಧಾನವನಱಿವ ವರ ಪಂ
ಡಿತರು ನಿಮಗೀ ಕದನಕರ್ಕಶವಿ[6]ದ್ಯೆಯೇಕೆಂದ[6] ॥ ೫೯

ವರ ನದಿಗಳಲಿ ಮುಳುಗಿ ಮೂಗಿನ
ಬೆರಳಲೂರ್ಧ್ವಶ್ವಾಸಪವನನ
ಧರಿಸಿ ಕಾಲತ್ರಯ ಜಪಾನುಷ್ಠಾನ ಹೋಮದಲಿ ।
ಪರಮಋಷಿ ಮಧ್ಯದಲಿ ನೀವಾ
ಚರಿಸುವುದು [7]ಬಿಸುಟುಗಿವಡಾಯ್ದದ[7]
[8]ಹೊರಳಿಗಿಡಿಗಳ ಹೊದಱೊಳಾಚರಿಸುವರೆ[8] ನೀವೆಂದ ॥ ೬೦

---

[1] ರ (ಸ–ಕ). [2] ಯೊ (ಚ.ಟ.ತ.ದ). [3] ಜೋಳಿಯೇ (ಚ.ಟ.ತ.ದ.ಪ).
[4] ವಿದ (ಪ). [5] ಭರತಾ (ಕ). [6] ದ್ಯವಲ್ಲೆಂದ (ಗ), ದ್ಯವೇಕೆಂದ (ಚ.ದ.ನ.ಬ).
[7] ಮಾಡಕಟ ಕರ್ಕಶ (ಕ), ಬಿಟ್ಟೀಗಳಾಯುಧದ (ಗ) ಬಿಟ್ಟೀ ಮಹಾಸ್ತ್ರದ (ದ).
[8] ತರದ ಕದನದ ಹೊದಱಿನಲಿ ಬೆರಸುವರೆ (ಕ).

ಕೊಲುವಡವ್ವೆಗೆ ಕೊಟ್ಟ ಮಾತಿಂ
ಗಳುಕುವೆನು ನೀ ಹೋಗು ಹರಿಬಕೆ
ಮಲೆವರಾದರೆ ಕಳುಹು ಭೀಮಾರ್ಜುನರನಾಹವಕೆ ।
[1]ಉಲು[1]ಕಿದರೆ ನಿನ್ನಾಣೆಯೆನುತ
ಗ್ಗಳಿಸಿ ನೃಪತಿಯು ಕೆಡೆನುಡಿದು ಪರ
ಬಲವ ಬರಹೇಳೆನುತ ನಿಂದನು ನುಡಿಸಿ ನಿಜಧನುವ ॥ ೬೧

ಹನ್ನೊಂದನೆಯ ಸಂಧಿ ಮುಗಿದುದು.

---

1 ಅಳು.

# ಹನ್ನೆರಡನೆಯ ಸಂಧಿ

ಸೂಚನೆ ॥ ರಾಯದಳ[1]ದು[1]ಳಕಾಜಿ ಕೌರವ
ರಾಯಸೇನಾಸೂಚಿಕಾಜನ
ಜೇಯ[2]ನೋ ಕಲಿ[2] ಭೀಮ ಗೆಲಿದನು ಭಾನುನಂದನನ ॥

ಏನ ಹೇಳುವೆನರಸ ಪಾಂಡವ
ಸೇನೆಗಾದ ವಿಪತ್ತ[3]ನರಸನ[3] ಹಾನಿ
ಯನು ನಿನ್ನವರ ಸುಮ್ಮಾನದ ಸಘಾಡಿಕೆಯ ।
ಭಾನುಸುತನೋ ಕೌರವನ ಮದ
ದಾನೆಯೋ ಕುರುಸೈನ್ಯನಳಿನೀ
ಭಾನು ಮಝು ಭಾಪೆಂದು ಹೊಗಳಿತು ಕೂಡೆ ಪರಿವಾರ ॥ ೧

ಇವರ ಹರುಷದ ನಗೆಯನಾ ಬಲ
ದವರ ಮೋಚೆಯ ಹೊಗೆಯನೀ ಬಲ
ದವರ ಭುಜದುಚೆವ್ವೋಯ್ಲನಾ ಬಲದವರ ಬಿಸುಸುಯ್ಲ ।
ಇವರೊಸಗೆ ಕೈಗುಡಿಯನಾ ಬಲ
ದವರ ಗೆಲವಿನ ಗಡಿಯ ನೀ ಚಿ
ತ್ತವಿಸಿದ್ಯೆ ಧೃತರಾಷ್ಟ್ರ ಎಂದನು ಸಂಜಯನು ನಗುತ ॥ ೨

ಅಳುವವರ ನಗಿಸುವುದು ನಗುವರ
ನಳಿಸುವುದು ಗೆಲಿದವರ ಸೋಲಿಸಿ
ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ ।
ಅಳಲದಿರು ಸುಮ್ಮಾನದಲಿ ವೆ
ಗ್ಗಳಿಸದಿರು ನಿನ್ನವರು ನಿಮಿಷದೊ
ಳಳಲುದೊಚೆಯಲಿ ಮುಳು[4]ಗುವಂ[4]ದವನಿನ್ನು ಕೇಳೆಂದ ॥ ೩

ಲಳಿಯ ಲಹರಿಯಲಬ್ಬರದ ಕಳ
ಕಳದ ವಾದ್ಯದ ಲಗ್ಗೆಯಲಿ ಪರ
ಬಲವ ಹೊಕ್ಕನು ಮತ್ತೆ ಮೂದಲಿಸುತ್ತ ಮಹಿಪತಿಯ ।

[1] ವು (ಕ). [2] ಘಟನೋ. [3] ಧೂಪನ (ಕ). [4] ಗಿದಂ (ಕ.ಗ.ಚ.ನ).

ಎಲೆಲೆ ರಾಯನ ರಣಕೆ ಮಾಱಿದ
ತಲೆಯು [1]ಕದ್ದಿರೆ[1] ಕುನ್ನಿಗಳಿರೆನು
ತೊಳಗೊಳಗೆ ಬಿಡೆ ಜಱೆದು ಜೋಡಿಸಿ ನೂಕಿತರಿಸೇನೆ ‖ ೪

ಅಕಟ ರಾಯನ ಹರಿಬದಲಿ [2]ಸೇ
ವಕರಿಗಾದುದು ಸೂಱೆ ವೃಂದಾ
ರಕ ವಧೂವರ್ಗದಲಿ ಚಾಳಿಸಬೇಡ ವಿಗ್ರಹಕೆ[2] ।
ವಿಕಳ[3]ಬಲನಿವನೇನು[3] ಭಾಳಾಂ
ಬಕನೊ ಬಲಿಬಂಧಕನೊ ಸುರಪಾ
ಲಕನೊ ಫಡಫಡ ಎನುತ ಕವಿದುದು ಕರ್ಣನಿದಿರಿನಲಿ ‖ ೫

ಅರಸ ಕೇಳಾಕ್ಷಣಕೆ ರುಧಿರದ
[4]ಬಿಱು[4]ವೊನಲ [5]ಬಲುಗೆಸಱ[5]ನೆಣವಸೆ
ಯಱಿಲ ನೆಲದಲಿ ಧೂಳಿಯೆದ್ದುದು ದಳದ ಪದಹತಿಗೆ ।
ಸರಕಟಿಸಿ ರಿಪು ಸರ್ವದಳ [6]ಸಂ
ವರಿಸಿ[6] ನೂಕಿತು ಕಲ್ಪಮೇಘದ
ಸರಿವಳೆಗೆ ಸಿಗುರೆದ್ದು ಕೊಬ್ಬಿದ ಕಡಲಿನಂದದಲಿ ‖ ೬

ನೊಂದ[7]ನೇ[7] ಧರ್ಮಜನು ಭಂಗಕೆ
[8]ತಂದನೇ ರಾಧೇಯ[8]ನಕಟಕ
ಟಿಂದು ಮಡಿದರೆ ಭೀಮ ಪಾರ್ಥರು ಭೀತಿಯೇಕಿದಕೆ ।
[9]ನೊಂ[9]ದನೀ ಪರಿ ತನ್ನ ಕಂಗಳ
ಮುಂದೆ [10]ನರಪತಿ[10] ಪಾರ್ಥನಿನ್ನೇ
ನೆಂದು [11]ಮುನಿವನೊ ಶಿವ[11]ಶಿವಾ ಎಂದಳಲಿದನು ಭೀಮ ‖ ೭

ಅರಸ ಮುಱಿವಡೆ[12]ದ[12]ಲ್ಲಿ ದಿಕ್ಕನೆ
ಬೆರಸಿದನೆ ಬವರವನೆನುತ [13]ನ
ಮ್ಮರಸಿ ನಗಳೇ ಭಂಡವೀರನ ಮಾತ ತೆಗೆಯೆನುತ[13] ।

---

[1] ಕೊಡಿರೋ (ದ). [2] ಸೇವಕರು ನಮ್ಮೊಳು ತೊಡಕಿ ವಿಜಯಪ್ರಕಟಿಕೆಳಸಿತು ಶಲ್ಯ ನೋಡೈ ಶಿವಶಿವಾಯೆನುತ (ಕ) [3] ತನ ಬೇಡೆಲವೂ (ಕ). [4] ನೊರೆ (ಕ). [5] ಕೆಸಱೋಳೆ (ಕ.ಗ.ಚ). [6] ಮೋಹರಿಸಿ (ಚ.ಟ.ತ.ಬ). [7] ನೋ (ಕ). [8] ಬಂದನೋ ರಾಜೇಂದ್ರ (ಕ.ದ.ನ). [9] ಕೊಂ (ತ.ಪ). [10] ರವಿಸುತ (ಪ). [11] ಮಱುಗುವನೋ (ಕ). [12] ವ (ಕ). [13] ಪುರಪರಿಜನಂಗಳು ಹಾಸ್ಯವಾಡಲೆ ನಮ್ಮನಿಂದೀಗ (ಚ.ಟ.ತ.ದ.ಪ).

ಅರಸ ತಾನಿನ್ನಾವ ಪರಿ ಹೇ
ವರಿಸುವನೊ ತಾ ಮುನ್ನ ಕರ್ಣನ
ಶರಹತಿಯಲೇಕಳಿದುದಿಲ್ಲಾ ಎನುತ ಚಿಂತಿಸಿದ ॥ ೮

ನರನ ಖಾತಿಗೆ ದ್ರೌಪದಿಯ ತೊ
ತ್ತಿರುಗಳುಪಹಾಸ್ಯಕ್ಕೆ ನೃಪತಿಯ
ಮರಣಸಾದೃಶ್ಯಪ್ರಹಾರವ್ಯಥೆಯ ಕಾಣಿಕೆಗೆ ।
ಅರರೆ ಭಾಜನವಾದೆನ್ಯೆ ಹರ
ಹರ ಮಹಾದೇವಾ ಎನುತ ತುದಿ
ವೆರಳಲಾಲಿಯ ನೀರ ಮಿಡಿದಳಲಿದನು ಕಲಿ ಭೀಮ ॥ ೯

ಅರಸ ಕೇಳ್ಳೈ ಶೋಕರಸ ಸಾ
ಗರದೊಳದ್ದಿದೊ ವಡಬನೆನೆ ಕ
ಣ್ಣರಳಿದವು ಕುಡಿಮೀಸೆ ಕುಣಿದವು ಸುಯ್ಲ ಹೊಗೆ ಮಸಗೆ ।
ಕರ ನಡುಗೆ ಮೈ ಬಲಿಯೆ ಹುಬ್ಬುಗ
ಳುಜಿ ಬಿಗಿಯೆ ಕಂಗಳಲಿ ಕೆಂಗಿಡಿ
ಸುರಿಯೆ ವೀರಾವೇಶದಲಿ ಮಸಗಿದನು ಕಲಿ ಭೀಮ ॥ ೧೦

ಧರಣಿಪನ [1]ಸಂ[1]ರಕ್ಷೆಗೈಸಾ
ವಿರ ರಥವನಿಪ್ಪತ್ತು ಸಾವಿರ
ತುರಗವನು ಹದಿನಾಜು ಸಾವಿರ ಮತ್ತಗಜಘಟೆಯ ।
ದೊರೆಗಳನು ಸಹದೇವ ಸಾತ್ಯಕಿ
ವರ ನಕುಳ ಸುತಸೋಮ ಪಾಂಚಾ
ಲರ ಕುಮಾರಾನೀಕವನು ಕರೆಕರೆದು ನೇಮಿಸಿದ ॥ ೧೧

ವೈರಿ ಕರ್ಣನ ಕಾಂತೆಯರ ದೃಗು
ವಾರಿಧಾರೆಯಲೆನ್ನ ಭಾರಿಯ
ಭೂರಿ ಕೋಪಾನಳನ ಲಳಿಯನು ತಗ್ಗಿಸುವೆನೆನುತ ।
ಧಾರುಣೀಪತಿಗೆಜಗಿ ನಿಜಪರಿ
ವಾರವನು ಸುಯ್ಧಾನವರಸೆನು
ತಾರುಭಟೆಯಲಿ ಭೀಮ ಹೊಳಗಿದ[2]ನಹಿತ[2] ಮೋಹರಕೆ ॥ ೧೨

---

[1] ರಥ. [2] ನಿತ್ತ (ಕ.ಗ.ದ).

ಬೀಳ ಹೊಯ್[1]ಹೊಯ್[1] ಬಿಡೆಯುದಲಿ ಹೊ
ಕ್ಕಾಳು ತೆಗೆಯಲಿ ಧರ್ಮಪುತ್ರನ
ಮೇಲುನೋಟದಲಿರಲಿ ನೋಡಲಿ ನಮ್ಮ ನಾಟಕವ ।
ಆಳ ನಿಲಿಸೋ ನಿಲಿಸೆನುತ [1]ಸಂ
ಸ್ಫಾಳಿತೋದ್ಧತ ಚಪಳ ಚಾಪ[1] ಕ
ರಾಳ ಮೌರ್ವೀನಾದ ಭೀಷಣನಾದನಾ ಭೀಮ ‖ ೧೩

ಪವನಸುತನಿಂಗಿತವ ಮನದಂ
ಘವಣೆಯನು ಮಾದ್ರೇಶ ಕಂಡನು
ರವಿಸುತನ ನೋಡಿದನು ಮುಖದಲಿ ಮುರಿದು ತೋಱಿದನು ।
ಇವನ ಬಲ್ಲೈ ಭೀಮನೋ ಭೈ
ರವನೊ ಭರ್ಗನೊ ಮನುಜಕಂಠೀ
ರವನೊ ಕಾಲಾಂತಕನೊ ಕೋಳಾಹಳವಿದೇನೆಂದ ‖ ೧೪

ಉರಿಯ ಚೂಣಿಯಲುಸುರ ಹೊಗೆಯು
ಬ್ಬರಿಸುತದೆ ಕೆಂಪೇಱಿದಕ್ಷಿಯ
ಲೆರಡ ಕೋಡಿಯಲೊಗುತಲದೆ ಕಿಡಿಗಳ ತುಷಾರಚಯು ।
ಸ್ಫುರದಹಂಕಾರಪ್ರತಾ[2]ಪ
ಜ್ವ[2]ರದಿ ಮೈ ಕಾಹೇಱುತದೆ ನಿ
ಬ್ಬರದ ಬರವಿಂದೀತನದು ಕಲಿ ಕರ್ಣ ನೋಡೆಂದ ‖ ೧೫

ಕಾಯಲಳವೇ ಕರ್ಣ ಬಱಿಯ ನ
ವಾಯಿಯಲಿ ಫಲವಿಲ್ಲ ದೇಹದ
ಬೀಯಕಿದು ಹೊತ್ತಲ್ಲ ಸಾಧಕವಿದಕೆ ಬೇಱುಂಟು ।
ಸಾಯಲಡಸಿದ ಬಡತನಕ್ಕೆ ಪ
ಲಾಯನವೆ ನಿಕ್ಷೇಪವಿದೆ ಬಯ
ಲಾಯಸವು ನಮಗೇತಕೆಂದನು ಮಾದ್ರಪತಿ ನಗುತ ‖ ೧೬

ನೀ ಮರುಳಲಾ ಶಲ್ಯ ಘಡ ಸು
ತ್ರಾಮನೇ ಸಮವರ್ತಿಯೇ ಜಿತ
ಕಾಮನೇ [3]ಒಡ[3]ಭೀಮನುಱುಬೆಗೆ [4]ಖೇ[4]ಡನಾದೆಯಲ ।

---

[1] ಶರಜಾಳವನು ತನಿಗೆದಱು ಚಪಳ (ಕ.ಗ). [2] ಪ್ರೋತ್ಕ (ಚ.ಟ.ತ.ಬ).
[3] ಬಿಡು (ಕ). [4] ಭೇ (ಕ.ಗ).

ತಾಮಸನ ತಡೆಗಡಿದು ಭೂತ
ಸ್ತೋಮಕುಣಬಡಿಸುವೆನು ಜಯಸಂ
ಗ್ರಾಮರುದ್ರನು ಕರ್ಣನಾರೆಂದಱಿಯೆ ನೀನೆಂದ ॥ ೧೭

ಅಕಟ ಬಲುಗೈಯಹೆ ಕಣಾ ಸಾ
ಧಕನು ನಾನದಕೆನ್ನೆನಿಂದಿನ
ವಿಕಟ ಕೋಪಾಟೋಪ ಭೀಮನ ದಂಡಿಯದು ಬೇಱೆ ।
ತ್ರಿಕಟುಕದ ಕಷ್ಟಾಯವಿದು ಬಾ
ಲಕರ ಸೊಗಸೇ ಕರ್ಣ ಹೇಳ್ ಕೌ
[1]ತು[1]ಕದ ಮಾತೇ ನಿನ್ನ ಮೇಲಾಣೆಂದನಾ ಶಲ್ಯ ॥ ೧೮

ನುಡಿನುಡಿಗೆ ಭಂಗಿಸುವೆ ನೀ ನಿ
ನ್ನಡಿಗಡಿಗೆ ತಲೆಯೊತ್ತುವೆನೊ ನಿ
ನ್ನೊಡನೆ ಬಂದರಿಯೊಡನೆ ತಲೆಯೊತ್ತುವೆನೊ ತವಕದಲಿ ।
ಪಡಿಮುಖದೊಳೌಕುವ ವಿರೋಧಿಯ
ಕಡುಹ ತಗ್ಗಿಸಿ ನಿನ್ನ ಮೆಚ್ಚಿಸಿ
ಕೊಡುವೆನಿನ್ನರೆಗಳಿಗೆ ಸೈರಿಸು ಮಾದ್ರಪತಿಯೆಂದ ॥ ೧೯

ಇತ್ತಲೀ ಮಾತಿಂಗೆ ಮುನ್ನ ವಿ
ಯತ್ತಳವನಳ್ಳಿಱಿವ ಸಿಂಧದ
ಸುತ್ತುಝಲ್ಲರಿ ಚೌರಿಗಳ ಘಲ್ಲಣೆಯ ಘಂಟೆಗಳ ।
ಹೊತ್ತ ಕೋಪದ [2]ಹೊಗೆವ ಮುಖದೌ
ಡೊತ್ತುವಧರದ[2] ವೈರಿಸೇನೆಯ
ಕುತ್ತಿ ತೇಗುವ ಮನದ ಮಾರುತಿ ವೊಳಗಿದನು ಮುಂದೆ ॥ ೨೦

ಎಲೆಲೆ ಭೀಮನು ಶಿವಶಿವಾ ದಳ
ದುಳವ ಹಾಯ್ದನೊ ದಿಟ್ಟರಾವೆಡೆ
[3]ನಿ[3]ಲಿಸಲಾಪವರಿಲ್ಲಲಾ ಕುರುರಾಯನಾನೆಗಳು ।
ಕಳಕಳದ ಕಾಲಾಟ ರಾಯನ
ದಳಕೆ ದುರ್ಲಭವೆನುತ [4]ಮಿಗೆ[4] ಮುಂ
ಕೊಳಿಸಿ ಭೀಮನ [5]ತುಡುಕಿದರು[5] ರವಿಸುತನ ಪರಿವಾರ ॥ ೨೧

---

[1] ಳಿ (ಕ.ಗ.ಚ). [2] ಹೊಗೆಮುಖದಲೌಡೊತ್ತಿದಧರದ (ಸ–ಕ.ಪ).
[3] ಸ (ಟ). [4] ಮನ (ಚ.ಟ.ತ.ದ.ನ). [5] ಮುತ್ತಿದರು (ಕ).

ಕವಿದವಾನೆಗಳಟ್ಟಿ ರಾವ್ತರು
ತಿವಿದರಂಬಿನ ಸರಿಯ ಸಾರದೊ
ಳವಘಟಿಸಿದರು ರಥಿಕರುರವಣಿಸಿದರು ಸಬಳಿಗರು।
ಸವಗ ಖಂಡಿಸಲೊದಗಿದರು ಬಿ
ಲ್ಲವರು ಕಟ್ಟಿಱಿಕಾಱರಾತನ
ಜವಗೆಡಿಸಿದರು ಕಡಲುವಡಬನ ತಡೆದು ನಿಲುವಂತೆ॥ * ೨೨

ನುಸಿಗಳಳವಿಯು [1]ಥಟ್ಟಣೆಯು[1] ತೋ
ಱಿಸಿದರೋ [2]ಬಲುಹಾಯ್ತು[2] ರಾಯನ
ಘುಸಣಿಗಕಟ ವಿಶೋಕ ನೋಡ್ಯೆ ಪೂತು ವಿಧಿಯೆನುತ ।
ಮಸಗಿ ವೊಗೆದನು ಹೊಗುವ ಸೇನಾ
ಪ್ರಸರವನು ಕುಡಿತೆಯಲಿ ಚೆಲ್ಲಿದ
ನಸಮಬಲ[3]ನಡ[3]ಹಾಯ್ಸಿ ಕೊಂಡನು ನೆಲನನಳವಿಯಲಿ ॥ ೨೩

ಎಲವೊ ಸೂತನ ಮಗನೆ ರಾಯನ
ನಳಲಿಸಿದೆಲಾ ನಿನ್ನ ರಕುತವ
ತುಳುಕುವೆನು ಹಿಂದಿಕ್ಕಿಕೊಂಬನ ತೋಱು ತೋಱೆನುತ।
ಬಲುಸರಿಯ ನಾರಾಚದಲಿ ಕ
ತ್ತಲಿಸೆ ದೆಸೆ ಕೈಮಾಡಿದನು ಕೈ
ಚಳಕದೆಸುಗೆಯ ಕೇಣದಳತೆಯನಱಿಯೆ ನಾನೆಂದ ॥ ೨೪

ಏನ ಹೇಳುವೆನಿತ್ತಲೀ ರವಿ
ಸೂನುವೇ ದುರ್ಬಲನೆ ಭೀಮನ
ನೂನ ಶರಸಂ[4]ಘಾತ[4]ವನು ಖಂಡಿಸಿದನಾಕ್ಷಣಕೆ ।
ದೀನನೇ ಶರನಿಕರದಲಿ [5]ಪವ
ಮಾನಜನೊ ಪಾತಾಳಿಯೋ[5] ಕಲಿ
ವೈನತೇಯನೊ ಕರ್ಣನೋ ನಾವಱಿಯೆವಿದನೆಂದ ॥ ೨೫

ಅರಸ ಕೇಳಾಶ್ಚರಿಯವನು ಚೆ
ಬ್ಬರಿಸುವನೆ ಕಲಿ ಭೀಮನುಬ್ಬಟೆ
ಯರಿಗಳಾಹವ[6]ಧೀರರಾ[6]ದರೆ ಧಾತುಗೆಡುವವನೆ ।

---

* ಈ ಪದ್ಯ (ಕ ದ) ಪ್ರತಿಗಳಲ್ಲಿಲ್ಲ. [1] ಪೌರುಷವ (ಚ.ಟ.ತ.ನ.ಪ.ಬ). [2] ಲೇಸಾಯ್ತು (ಚ.ಟ.ತ). [3] ನೊಡೆ (ಕ). [4] ಧಾ[illegible] (ತ). [5] ಪವಮಾನ
ತನ.ಜನೊ ಪಾವಕನೊ (ಕ), ಪವಮಾನಜನೋ ಪಾತಾಳಫಣಿಯೋ ಕಲಿ (ದ), ಪವಮಾನಜನೋ ಫಣಿವಲ್ಲಭನೋ ಕಲಿ (ಪ). [6] ವ[illegible] (ಚ.ತ.ಫ.ಬ ನ).

ಶರ ಧನುವ ಹಾಯ್ಕಿದನು ಥೊಪ್ಪನೆ
ಧರೆಗೆ ಧುಮ್ಮಿಕ್ಕಿದನು ಖಡುಗವ
ತಿರುಹಿ ಬೆರಸಿದನಳವಿಯಲಿ ಕುರುಸೇನೆ ಕಳವಳಿಸೆ ॥ ೨೬

ಹೊಡೆದು ತಲೆಯನು [1]ಹಗೆಯ[1]ರಕುತವ
ಕುಡಿವೆನಲ್ಲದೊಡವನಿಪಾಲನ
ಕೆಡೆನುಡಿದ ನಾಲಗೆಯ ಕೀಳುವೆನೆನುತ ಕೋಪದಲಿ ।
ಸಿಡಿವ ಕಿಡಿಗಳ ಕೋಪಶಿಖಿಯು
ಗ್ಗಡದ ಮಾರುತಿ ಹೊಯ್ದು ಕರ್ಣನ
ಕೆಡಹಿದನು ಮುಖಿಯೊದೆದನೆದೆಯನು ಹಾಯ್ದು ಮುಂದಲೆಗೆ ॥ ೨೭

ಬಾಯ ಬಿಟ್ಟುದು ಸೇನೆ ಕೌರವ
ರಾಯನಾವೆಡೆ ದಳಕೆ ಬಲುಗೈ
ನಾಯಕರು ಕೃಪ ಗುರುಸುತರು ಕೈಗೊಟ್ಟರೇ ಹಗೆಗೆ ।
ವಾಯುಜನ ಕೈದೊಳಸಿನಲಿ ಕುರು
ರಾಯರಾಜ್ಯಶ್ರೀಯ ಮುಂದಲೆ
ಹೋಯಿತೋ ಹಾ ಎನುತ ಮಱುಗಿತು ಕೂಡೆ ಕುರುಸೇನೆ ॥ ೨೮

ಥಟ್ಟುಗೆಡಹಿದ ಕರ್ಣನನು ಕೈ
ಮುಟ್ಟದಿರು ಹೆಱಸಾರು ಪಾರ್ಥನು
ಕೊಟ್ಟ ಭಾಷೆಯ ಮಱೆದೆಲಾ ಕೈತಪ್ಪ ಮಾಡದಿರು ।
ಬಿಟ್ಟು ಹಿಂಗೆಲೆ ಭೀಮ ಭೀತಿಯ
ಬಿಟ್ಟು ಬೆರಸಿದೆ ಸಾಕು ಹರಿಬಕೆ
ಮುಟ್ಟಿಸಿದ ಗೆಲವಾಯ್ತು ಮರಳಿನ್ನೆಂದನಾ ಶಲ್ಯ ॥ ೨೯

ದುರು[2]ಳತನದಿಂದಣ್ಣ[2]ದೇವನ
ಹುರುಳುಗೆಡೆ ನುಡಿದನು ವಿರೋಧಿಯ
ಶರಹತಿಗೆ ಬೆಂಡಾಗನಿವನ ದುರುಕ್ತಿಶರಹತಿಗೆ ।
ಅರಸ ಬಳಲಿದನೇನ ಮಾಡುವೆ
ದುರುಳ ನುಡಿದನ ನಾಲಗೆಯ [3]ನಿಡು
ಸೆರೆಯ[3] ಬಿಡಿಸುವೆ ಮಾವ ಸೈರಿಸಿ[4]ಯೆಂದನಾ ಭೀಮ[4] ॥ ೩೦

---

[1] ನಿನ್ನ (ಚ.ಟ.ತ.ಪ.ಬ.ನ). [2] ಳನಿವನೆಮ್ಮಣ್ಣ (ಸ–ಕ). [3] ಮಂದಿರವ (ಚ.ಟ.ತ.ನ.ಪ). [4] ತಡೆಯುಬೇಡೆಂದ (ಚ.ಟ.ತ.ಪ).

ಸಾಕು ಹೆಱತೆಗೆ ಘಾಯವಡೆದವಿ
ವೇಕಿ ಮ್ಮೆ ಮಱೆದಿದ್ದ ಹೊತ್ತಿದು
ನೀ ಕುಠಾರನಲಾ ಕಿರೀಟಿಯ ಭಾ[1]ಷಿತದ್ರುಮಕೆ[1] ।
ಲೋಕಮಾನ್ಯನು ಕರ್ಣ ಕುರುಬಲ
ದಾಕೆವಾಳನು ಭಂಗವಡೆದುದೆ
ಸಾಕು ನೀ ಸಾರೆಂದು ಭೀಮನ ನೂಕಿದನು ಶಲ್ಯ ॥ ೩೧

ರಥಕೆ ಮರಳಿದನಾತನೀತನ
ವ್ಯಥೆಯನೇ[2]ನೆಂಬೆ[2]ನು ಸುಯೋಧನ
ರಥಿಗಳುಬ್ಬಟೆ ಗರ್ಭವಿಕ್ಕಿತು ನಿಮಿಷಮಾತ್ರದಲಿ ।
ರಥದೊಳಗೆ ಮಾದ್ರೇಶನೀ ಸಮ
ರಥನ ಸಂತೈಸಿದನು ಕವಳ
ಪ್ರ[3]ಥಿತ[3] ಮಂತ್ರೌಷಧಿಗಳಲಿ ಹದುಳಿಸಿದನಾ ಕರ್ಣ ॥ ೩೨

ಆರಿತದು ಬೊಬ್ಬೆಯಲಿ ದುಗುಡದ
ಭಾರದಲಿ ತಲೆಗುತ್ತಿತವರು
ಬ್ಬಾರದಲಿ ಘುಲ್ಲವಿಸಿತವರು ವಿಘಾತಿಯಿಂದಿವರು ।
[4]ಪೂ[4]ರವಿಸಿದುದು ಪುಳಕದಲಿ ದೃಗು
ವಾರಿ ಪೂರದಲಿವರಖಿಳ ಪರಿ
ವಾರವಿದ್ದುದು ಕೇಳು ಜನಮೇಜಯ ಮಹೀಪಾಲ ॥ ೩೩

ಹನ್ನೆರಡನೆಯ ಸಂಧಿ ಮುಗಿದುದು.

---

[1] ಷೆಯಧ್ರುವವೆ (ಗ), ಶಸ್ತ್ರಕಾಹಾರ (ದ). [2] ವೇಳುವೆ (ಚ.ಟ.ಫ.ಬ).
[3] ತತಿ (ಕ.ಗ.ದ). [4] ಹಾ (ಕ).

# ಹದಿಮೂರನೆಯ ಸಂಧಿ

ಸೂಚನೆ ॥ ಮಡಿದರಾಹವದೊಳಗೆ ಕೌರವ
ನೊಡನೆ ಹುಟ್ಟಿದರನಿಲಸುತನಿಂ
ದಡಿಗಡಿಗೆ ಹಳಚಿದನು ಯಮನಂದನನನಾ ಕರ್ಣ ॥

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳನಗ್ಗಳಿಕೆಯ ವಿಘಾತಿ[1]ಯು[1]
ಗಾಳಿ ತಾಗಿತು ತಿರುಗಿದುದು ಬಳಿಕೀ ಸಮಸ್ತಬಲ ।
ಕೋಲು ತಪ್ಪಿದ ಫಣಿಯವೊಲು ಲಯ
ಕಾಲಕೊದಱುವ ಸಿಡಿಲವೋಲು ಹೀ
ಹಾಳಿಸುತ ತಮತಮಗೆ ಬಯ್ದುದು ಕೂಡೆ ಪರಿವಾರ ॥ ೧

ರಣದೊ[2]ಳೊಪ್ಪಿಸಿಕೊಟ್ಟು[2] ಕರ್ಣನ
ಹಣವ ಹೊಳ್ಳಿಸಿ ಮಱೆದೆವೇ ಮ
ನ್ನಣೆಯ ಮೋಹವ ತೊಱೆದೆವೇ ಕರ್ಪೂರದ ವೀಳೆಯವ ।
ಗುಣಪಸಾಯದ ಕಾಣಿಕೆಯ ಹರಿ
ಯಣದ ಹಂತಿಯ ದಾಯದೂಟಕೆ
ಋಣಿಗಳಾದೆವೆ ಶಿವಶಿವಾ [3]ಎಂ[ದೊ]ಳ[3]ಱಿತಖಿಳ ಬಲ ॥ ೨

ಮೀಸೆಯೇಕಿವ ಸುಡಲಿ ಸುಭಟರ
ವೇಷವೇಕಿವು [4]ತಮ್ಮ[4] ವಧುಗಳು
ಹೇಸಿ ನಮ್ಮನು ಬಿಸುಟು ಹೋಗಳೆ ಚಂಡಿಕಾದೇವಿ ।
ಭಾಷೆ ಬಾಯಲ್ಲಿ ಕೈದು ಕೈಯಲಿ
ವಾಸಿಯನು ಬಿಸುಟಕಟ ಜೀವದ
ಲಾಸೆ ಮಾಡಿದೆವೆನುತ ಮಱುಗಿತು ಕೂಡೆ ಪರಿವಾರ ॥ ೩

ಬಯ್ವ ಹೆಂಡಿರ ಚಿಂತೆಯಿಲ್ಲದೆ
ಹೊಯ್ವ ಕೀರ್ತಿಯ ಹಂಬಲಿಲ್ಲದೆ
ಒಯ್ವ ನರಕದ ನೆನಹ[5]ದಿ[5]ಲ್ಲದೆ ಪತಿಯ ಸಮ[6]ಯ[6]ದಲಿ ।

[1] ಗೆ (ಪ.ನ). [2] ಳಿಂದೇನಾಯ್ತು (ಕ). [3] ದ (ಸ). [4] ಧರ್ಮ (ಕ.ಗ.ಚ.ಟ). [5] ವಿ (ಕ.ಗ.ಟ.ದ). [6] ರ (ತ.ದ.ನ).

[1]ಕಾ[1]ಯ್ವರಾವಲ್ಲೆಂದು ಕೆಲದಲಿ
ಬಯ್ವರಿಗೆ ಮೈಗೊಟ್ಟು ಬದುಕುವ
ದೈವದೂರರು ನಾವೆನುತ ಮಱುಗಿತ್ತು ಪರಿವಾರ ‖ ೪

ನುಡಿಯ ಭಂಡರು ಕೆಲರು ಸಿಂಧದ
ಗುಡಿಯ ಭಂಡರು ಕೆಲರು ಹಾಹೆಯ
ತೊಡರ ಭಂಡರು ಕೆಲರು [2]ಕೆಲರು ಕುಲಕ್ರಮಾಗತದ[2] ।
ಗಡಬಡೆಯ ಭಂಡರು ವಿಪತ್ತಿನೊ
ಳೊಡೆಯನಿರೆ ಕೈದುಗಳ ಹೊಱತಲೆ
ಯೊಡನೆ ಬಿಟ್ಟಿಯ ಭಂಡರಾವೆಂದುದು ಭಟವ್ರಾತ ‖ ೫

ಮಿಾಸೆ ಸೀದವು ಭಟರ ಸುಯ್ಲಿನ
ಲಾಸೆ ಬೀತುದು ದೇಹದಲಿ ಬಲು
ವಾಸಿಯಲಿ ಮನ ಮುಳುಗಿತನಿಬರಿಗೇಕಮುಖವಾಗಿ ।
ಬೀಸಿದರು ಚೌರಿಗಳ ಬಲವಾ
ರಾಶಿ ಮಸಗಿತು ರಿಪುಗಳಸುವಿನ
ಮಿಾಸಲನು ತುಡುಕಿದುದು [3]ಮನ ಕೌರವ ಮಹಾರಥರ[3] ‖ ೬

ಕುದುರೆ ಕುದುರೆಯ ಮುಂಚಿದವು ಕರಿ
ಮದಕರಿಯ ಹಿಂದಿಕ್ಕಿದವು ನೂ
ಕಿದವು ರಥ ರಥದಿಂದ ಮುನ್ನ ಮಹಾರಥಾದಿಗಳು ।
ಇದಿರೊಳೊಬ್ಬನನೊಬ್ಬನೊದಗುವ
ಕದನ ಭರದ ಪದಾತಿ ಪೂರಾ
ಯದಲಿ ಕವಿದುದು ಜಡಿವ ಬಹುವಿಧ ವಾದ್ಯ ರಭಸದಲಿ ‖ ೭

ಪೂತು ಮಝು ದಳಪತಿಯ ಹರಿಬ[4]ವ
ನಾ[4]ತುದೇ ಕುರುಸೇನೆ ಸುಭಟ
ವ್ರಾತವಳವಿಗೆ ಬರಲಿ ಬರಲಿ ವಿಶೋಕ ನೋಡೆನುತ ।
ಹೂತ ಸಂಪಗೆವನವನಳಿಸಂ
ಘಾತ ಮುತ್ತಿದಡೇನೆನುತ ನಿ
ರ್ಭೀತನಿದ್ದನು ಭೀಮ ಸುಮ್ಮಾನದ ಸಘಾಡದಲಿ ‖ ೮

---

[1] ಹೊ (ಕ.ಗ). [2] ಬಿರುದಿನ ದೊಱುಗಹಳೆಗಳ (ಕ). [3] ಕೌರವ ನೃಪನ ಪರಿವಾರ (ಟ.ಚ.ತ.ಪ.ನ.ಬ). [4] ದೊಳಾ (ಕ.ಗ.ದ).

ಕವಿದುದಿದು ಗಱುಗಟ್ಟಿ ಕೌರವ
ನಿವಹ ಮೋಡಾಮೋಡಿಯಲಿ ರಣ
ದವಕಿ ಕರ್ಣದ್ರೋಹಿಯಾವೆಡೆ ತೋಱು ತೋಱೆನುತ ।
ತಿವಿವ ಬಲ್ಲೆಹ[1]ಬಿ[1]ಡುವ ಚಕ್ರದ
ಕವಿವ ಬಾಣದ ಹೊಯ್ವ ಖಡ್ಗದ
ವಿವಿಧಬಲ ಬಿಡದೌಕಿ ಮುತ್ತಿತು ಪವನನಂದನನ ॥ ೯

ಸಿಕ್ಕಿದನು ರಿಪು ಸ್ವಾಮಿದ್ರೋಹನು
ಚುಕ್ಕಿ[2]ಯೋ ತ[2]ಡೆ ಹೋಗಬಿಡದಿರಿ
ಹೊಕ್ಕುಳಲಿ ಮಗವುಂಟೆ ಹಣೆಯಲಿ ನೋಟವೇ ಹಗೆಗೆ ।
ಹೊಕ್ಕ ಹೊಯ್ ಹೊಯ್ ನೆತ್ತರೊಬ್ಬರಿ
ಗೊಕ್ಕುಡಿತೆಯೇ ಸಾಕೆನುತ ಬಲ
ಮುಕ್ಕುಱುಕಿತನಿಲಜನ ಕಾಣೆನು ನಿಮಿಷಮಾತ್ರದಲಿ ॥ ೧೦

ಹರಿಬದೋಲೆಯಕಾಱರೋ ಮು
ಕ್ಕುಱುಕಿದರೊ ಪವನಜನು ಸಿಕ್ಕಿದ
ದೊರೆಯ ಬಿಡಿಸೋ ನೂಕೆನುತ ಪಾಂಚಾಲ ಕೈಕೆಯರು ।
ವರ ನಕುಳ ಸಹದೇವ ಸಾತ್ಯಕಿ
ತುರುಕ [3]ಬರ್ಬರ ಭೋಟ ಮಾಗಧ
ಮರು[3] ಪುಳಿಂದಾದಿಗಳು ಕವಿದುದು ನೃಪನ [4]ಸನ್ನೆಯಲಿ[4] ॥ ೧೧

ಸರಕಟಿಸಿ ರಿಪುರಾಯ ದಳ ಸಂ
ವರಿಸಿಕೊಂಡುದು ಸಿಕ್ಕಿದಹಿತನ
ಸೆಱೆಯ ಬಿಡದಿರಿ ಬಿಡದಿರಂಜದಿರಂಜದಿರಿ ಎನುತ ।
ಗುರುಜ ಕೃಪ ಕೃತವರ್ಮ ಯವನೇ
ಶ್ವರ ಕಳಿಂಗ ಕರೂಷ ಕೌರವ
ರರಸ ಮೊದಲಾದಖಿಳಬಲ ಜೋಡಿಸಿತು ಝಡಿತೆಯಲಿ ॥ ೧೨

ಏನ ಹೇಳುವೆನರಸ ಕರ್ಣನ
ಹಾನಿ ಹರಿಬದ ಬವರವನು ಪವ
ಮಾನನಂದನ ನಿಮಿಷದಲಿ ಮುಸುಕಿದನು ಬಾಣದಲಿ ।

[1] ವಿ (ಕ.ಗ.ಚ,ತ), ನಿ (ದ). [2] ಯಾವೆ (ಕ.ಗ.ನ). [3] ಖರ್ಪರ ಚೈದ್ಯ ಮಾಗಧ ಮರ (ಕ.ಗ.ದ.ನ). [4] ನೇಮದಲಿ (ಗ.ಟ.ಚ.ತ.ದ.ಬ.ನ).

ದಾನವರ ಥಟ್ಟಣೆಯ ಕೀಲಣ
ದಾ ನಗರಿಯನು [1]ನೆಗ್ಗಿದಂ[1]ತಿರ
ಲೀ ನಿಘಾತದ ಸೇನೆ ಮುಱಿದುದು ಭಟನ ಭಾರಣೆಗೆ ‖ ೧೩

ಸಿಲುಕುವುವು ಮೃಗಪಕ್ಷಿ ಹೊಡಿದ
ಬಲೆಗಳಲಿ ಕಾಡಾನೆ ಬೀಸಿದ
ಬಲೆಯ ಕೊಂಬುದೆ ನಿನ್ನ ದಳ ಥಟ್ಟೈಸಿ ಮುತ್ತಿದರೆ ।
ಅಳುಕುವನೆ ಕಲಿ ಭೀಮನೆಡದಲಿ
ಕಲಕಿದನು ಬಲವಂಕದಲಿ [2]ಕೈ
ವಳಸಿ ಕೊಂದನು ವರ[2] ಪುರೋಭಾಗವ ವಿಭಾಡಿಸಿದ ‖ ೧೪

ಆಳ ಮೇಳೆಯ ಮುಱಿದುದೀ [3]ಸಾ[3]
ಯಾಳು ಸತ್ತುದು ಹಲವು ಪಡಿಬಲ
ದಾಳು ಕೂಡದ ಮುನ್ನ ಕೊಂದನು ಕೋಟಿ ಸಂಖ್ಯೆಗಳ ।
ಮೇಲೆ ಮೇಲೊಡಗವಿವ ಸಮರಥ
ಜಾಲವನು ಮುಱಿಯೆಚ್ಚು ನಿಮಿಷಕೆ
ಧೂಳಿಪಟ ಮಾಡಿದನು ಕರ್ಣನ ಮನ್ನಣೆಯ ಭಟರ ‖ ೧೫

ಮತ್ತೆ ಕವಿದುದು ಮೇಲೆ ಪಡಿಬಲ
ವೊತ್ತಿ ಹೊಕ್ಕುದು ಹೆಣದ ಬೆಟ್ಟವ
ಹತ್ತಿ [4]ಹುಡಿಹುಡಿಮಾಡಿ ಹಿಡಿದರು[4] ರಥದ ಕುದುರೆಗಳ ।
ಕುತ್ತಿದರು ಸಾರಥಿಯನಾತನ
ತೆತ್ತಿಸಿದರಿಟ್ಟಿಯಲಿ ಭೀಮನ
ಮುತ್ತಿ ಕೈಮಾಡಿದರು ರವಿಸುತ ಸಾಕಿದತಿಬಳರು ‖ ೧೬

ಇಳಿದು ರಥವನು ಗದೆಯ ಕೊಂಡ
ಪ್ಪಳಿಸಿದನು ಹೊಱಕೈಯಲರೆದಿ
ಟ್ಟಳಿಸಿದರನೆಡಗಾಲಲೊದೆದನು ಹೊಯ್ದು ಮುಡುಹಿನಲಿ ।
ಕಲಕಿದನು ಕೌರವಮಹಾಬಲ
ಜಲಧಿಯನು ಸರ್ವಾಂಗಶೋಣಿತ
ಜಲದಲೆಸೆದನು ನನೆದ ಜಾಜಿನ ಗಿರಿಯವೊಲು ಭೀಮ ‖ ೧೭

---

[1] ನುಂಗಿದಂ (ಕ.ಗ.ಚ.ಟ.ದ) [2] ಕುಪ್ಪಳಿಸಿದನು ಬವರದ (ಶ).
[3] ಸರಿ (ಗ), [4] ಹುಡಿ ಮಾಡಿದರು ಹೊಡಿದ (ಕ).

ಸವಱಿದನು ರವಿಸುತನ ಪರಿವಾ
ರವನು ಮಗುಳುಬ್ಬೆದ್ದ ಕೌರವ
ನಿವಹದಲಿ ಕಾದಿದನು ದುರ್‍ಯೋಧನ ಸಹೋದರರ ।
ತಿವಿದು ನಾಲ್ವರ ಕೊಂದನುಬ್ಬರಿ
ಸುಪರ ಗರ್‍ವವ ಮುಱಿದು ಪ್ರಳಯದ
ಭವನ ರೌದ್ರದವೋಲು ಭುಲ್ಲಯಿಸಿದನು ಕಲಿ ಭೀಮ ॥ * ೧೮

ಶಿವಶಿವಾ ಕೌರವನ ತಮ್ಮಂದಿ
ರವಗಡಿಸಿದರು [1]ನಂದೋಪನಂದರು[1]
ಜವಗೆ ಜೀವಣಿಯಾದರೇ ಕಲಿ ಭೀಮನಿದಿರಿನಲಿ ।
ತಿವಿವರಿನ್ನಾರೆನುತ ಗುರುಸಂ
ಭವ ಕೃಪಾದಿಗಳೊತ್ತಿ ನಡೆತಹ
ರವವ ಕೇ[2]ಳಿದು[2] ಕುದಿದನವಮಾನದಲಿ ಕಲಿ ಕರ್ಣ ॥ ೧೯

ಪೂತು ದೈವವೆ ಭೀಮಸೇನನ
ಘಾತಿಯಲಿ ಸೊಪ್ಪಾದೆನ್ನೈ ಸುಡ
ಲೇತಕೀ ಧನುವೇತಕೀ ದಿವ್ಯಾಸ್ತ್ರ ನಿಕರಗಳು ।
ಜಾತಿ ನಾನೆಂದೆನ್ನನಗ್ಗಿಸಿ
ಭೂತಳಾಧಿಪ ಸಾಕಿದನು ತಾ
ನೇತಱಿಂದುಪಕಾರಿ ಎಂದನು ಸುಯ್ದು ಕಲಿ ಕರ್ಣ ॥ ೨೦

ಎಲೆ ಮರುಳೆ ರಾಧೇಯ ಫಡ ಮನ
ವಿಳುಹದಿರು ತಪ್ಪೇನು ಸೋಲವು
ಗೆಲವು ದೈವಾಧೀನ ನಿನ್ನಾಳ್ತನಕೆ ಕುಂದೇನು ।
ಹಲಬರಮರಾಸುರರೊಳಗೆ ಹೆ
ಬ್ಬಲವೆ ದುರ್ಬಲ[3]ವಾಯ್ತು[3] ನೀ ಮನ
ವಳುಕದಿರು ಹಿಡಿ ಧನುವನನುವಾಗೆಂದನಾ ಶಲ್ಯ ॥ ೨೧

ಖಾತಿ ಮೊಳೆತುದು ಮತ್ತೆ ಬಲಸಂ
ಘಾತಕಭಯವನಿತ್ತು ಬಾಣ
ವ್ರಾತವನು ಹೊದೆಗೆದಱಿ ಹೊಸ ಹೊಗರೆದ್ದನಡಿಗಡಿಗೆ ।

* ಈ ಪದ್ಯ(ದ) ಪ್ರತಿಯಲ್ಲಿಲ್ಲ. [1] ಸಂತೋಪಸಂದರು (ಕ). [2] ಳುತ (ಸ-ತ). [3] ವಹುದು (ಚ.ತ.ಪ.ಬ).

ಭೂತನಾಥನ ಮಱೆಯ ಹೊಗಲಿ ಮ
ಹೀತಳೇಶನ ಹಿಡಿವೆನೆನುತ ವಿ
ಧೂತರಿಪುಬಲ ರಥವ ಬಿಟ್ಟನು ಧರ್ಮಜನ ಹೊರೆಗೆ ॥ ೨೨

ಕಾಲಯಮನೋ ಕರ್ಣನೋ ಭೂ
ಪಾಲಕನ ಬೆಂಬತ್ತಿದನು ಪಾಂ
ಚಾಲೆಯೋಲೆಯ ಕಾವರಿಲ್ಲಾ ಎನುತ ಬಲನೊದಱೆ ।
ಕೇಳಿದನು ಕಳವಳವನೀ ರಿಪು
ಜಾಲವನು ಜಱೆದಡ್ಡ[1]ಹಾಯ್ದನು
ಗಾಳಿಗುದಿಸಿದ ವೀರನದ್ಭುತ[1]ಸಿಂಹನಾದದಲಿ ॥ ೨೩

ಮತ್ತೆ ಕರ್ಣನ ಭೀಮನಾಹವ
ಹೊ[2]ತ್ತಿದುದು[2] ಹಿಂದಾದ ಹೆಕ್ಕಳ
ಹತ್ತು ಸಾವಿರ ಹಡೆಯದೇ ಘಡ ನೂಕು ನೂಕೆನುತ ।
ಮತ್ತೆ ಗಜಘಟೆಯಾಱು ಸಾವಿರ
ಮುತ್ತಿದವು ಸೌಬಲನ ಥಟ್ಟಿನೊ
ಳೊತ್ತಿಬಿಟ್ಟವು ನಾಲ್ಕು ಸಾವಿರ ಕುದುರೆ ರಥಸಹಿತ ॥ ೨೪

ಸಂದಣಿಸಿ ದಳ ನೂಕಿಕೊಂಡೈ
ತಂದುದಿದು ರವಿಸುತನ ತೊಲಗಿಸಿ
ಮುಂದೆ ಮೋಹರದೆಗೆದು ಮೂದಲಿಸಿತು ಮರುತ್ಸುತನ ।
ಬಂದುದೇ ಕರ್ಣಂಗೆ ಪಡಿಬಲ
ತಂದುದೇ ನಮಗೊಸಗೆಯನು ಲೇ
ಸೆಂದು ಸುಭಟರದೇವ ಸುಮ್ಮಾನದಲಿ [3]ಲಾಗಿಸಿದ[3] ॥ ೨೫

ದಳದೊಳಗೆ ದಳವುಳಿಸಿದನು
ಕೆಲಬಲನನೆಚ್ಚನು ಕೇಣವಿಲ್ಲದೆ
ನಿಲುಕಿದರಿಗಳು ಚಿಗಿದರಮರೀಜನದ ತೋಳಿನಲಿ ।
ತಲೆಗಳೊಟ್ಟಿಲ ತೋಳ ಕಡಿಗಳ
ತಳಿದ ಖಂಡದ ಕುಣಿವ ಮುಂಡದ
ಸುಳಿ[4]ಯು[4] ರಕುತದ ಕಡಲ ರೌಕುಳವಾಯ್ತು ನಿಮಿಷದಲಿ ॥ ೨೬

---

[1] ಯ್ದುವುಡಾಳದಲಿ ವಾಯುಜನು ತಡೆದನು (ಟ.ತ.ನ.ಪ.ಬ).
[2] ತ್ತು ತದೆ (ತ.ದ). [3] ಬೊಬ್ಬಿಱಿದ (ದ). [4] ವ (ಚ.ತ.ದ).

ಬಿಟ್ಟ ಸೂಠಿಯೊಳೊಗ್ಗು ಮುಱಿಯ[1]ದೆ
ಬಿ[1]ಟ್ಟ ಕುದುರೆಯ ದಳವ ಕೊಂದನು
ಬೆಟ್ಟವನು ಬಲಪ್ಪೈರಿ ತಱಿಪವೊಲಿಭದ ಮೋಹರವ ।
ಥಟ್ಟುಗೆಡಹಿದನರವಣಿಸಿ ಸಾ
ಲಿಟ್ಟ ರಥವಾಜಿಗಳ ನೆಱೆ ಹುಡಿ
ಗುಟ್ಟಿದನು ಕಾಲಾಳ [2]ಘಾಸಿಯ[2]ನಱಿಯೆ ನಾನೆಂದ ॥ ೨೭

ಮುಱಿಯೆ ಪಡಿಬಲವಾ[3]ಕೆ[3]ಯಲಿ ಬಿಡೆ
ಜಱೆದು ಬಿಟ್ಟನು ರಥವ ಭೀಮನ
ಬಿಱುಬ ಕೊಳ್ಳದೆ ನೂಕಿದನು ಧರ್ಮಜನ ಸಮ್ಮುಖಕೆ ।
ಇಱಿತಕಂಜದಿರಂಜದಿರು [4]ಕ್ಕೈ[4]
ಮಱೆಯದಿರು [5]ಕಲಿಯಾಗೆ[5]ನುತ ಬೊ
ಬ್ಬಿಱಿದು ಧಾಳಾಧೂಳಿಯಲಿ ತಾಗಿದನು ಕಲಿ ಕರ್ಣ ॥ ೨೮

ಎಚ್ಚನರಸನ ಭುಜವ ಕೆಲಸಾ
ರ್ದೆಚ್ಚನಾತನ ಸಾರಥಿಯ ರಥ
ದಚ್ಚನಾತನ ಹಯವನವನೀಶ್ಶತಿಯ ಟಕ್ಕೆಯವ ।
ಎಚ್ಚು ಮೂದಲಿಸಿದನು ಪುನರಪಿ
ಯೆಚ್ಚು ಭಂಗಿಸಿ ನೃಪನ ಮರ್ಮವ
ಚುಚ್ಚಿ ನುಡಿದನು ಘಾಸಿಮಾಡಿದನಾ ನೃಪಾಲಕನ ॥ ೨೯

ಚೆಲ್ಲಿತವನೀಪತಿಯ ಮೋಹರ
ವೆಲ್ಲ ನೆಱೆ ನುಗ್ಗಾಯ್ತು ರಾಯನ
ಘಲ್ಲಿಸಿದನೇಳೆಂಟು ಬಾಣದಲೀತನಡಿಗಡಿಗೆ ।
ಅಲ್ಲಿಯದುಭುತರಣವನಪ್ರತಿ
ಮಲ್ಲ ಮಾರುತಿ ಕೇಳಿದನು ಮಗು
ಳಲ್ಲಿಯೇ ಮೊಳಗಿದನು ನಿಮಿಷಕೆ ಕರ್ಣನಿದಿರಿನಲಿ ॥ ೩೦

ಅಳಲಿಸಿದನೇ ಧರ್ಮಪುತ್ರನ
[6]ಬಳಿಚಿ[6] ಬಿಟ್ಟನು ನಾಯ ಕೊಲ್ಲದೆ
ಕಳುಹಿದರೆ ಬೆಂಬಿಡನಲಾ ಮಱುಕೊಳಿಸಿ ಮಱುಕೊಳಿಸಿ ।

---

[1] ದದಿ (ದ). [2] ನಷ್ಟವ (ಚ.ತ.ದ.ಪ.ಬ). [3] ಚೆ (ತ.ನ.ಪ).
[4] ಕೈಮಾಡೆ (ಟ.ಚ.ತ.ನ.ಪ.ಬ). [5] ವ್ಯೊ (ಟ.ತ.ಪ). [6] ನುಳುಹಿ (ಕ.ಗ).

ತಲೆ ಕೊರಳ ಸಂಪ್ರತಿಗೆ ಭೇದವ
ಬಳಸಿದರೆ ಸಾಕೈಸಲೇ ಎನು
ತುಲಿದು ಕಣೆಗಳ ಕೆದಱ ಕರ್ಣನ ತಱುಬಿದನು ಭೀಮ ‖ ೩೧

ಭೀಮಸೇನನ ದಳಪತಿಯು ಸಂ
ಗ್ರಾಮ ಮಸೆದುದು ಮತ್ತೆ ಕೈಕೊಳ
ಲೀ ಮಹಾರಥರೆನುತ ಕೈಬೀಸಿದನು ಕುರುರಾಯ ।
ಸೋಮದತ್ತನ ಸೂನು ಕೃಪನು
ದ್ಧಾಮ ಶಕುನಿ ಸುಯೋಧನಾನುಜ
ನಾ ಮಹಾಹವಕೊದಗಿದರು ಕೃತವರ್ಮ ಗುರುಸುತರು ‖ ೩೨

ಅಖಿಳ ಬಲಭಾರಣೆಯಲೊಂದೇ
ಮುಖದಲೊಡ್ಡಿತು ಪವನಜನ ಸಂ
ಮುಖದೊಳನಿಬರು ಕೆಣಕಿದರು ಕಲ್ಪಾಂತಭೈರವನ ।
ಸುಖಿಗಳಕಟಾ ನೀವು ಸಮರೋ
ನ್ಮುಖರಹರೆ ಕರ್ಣಂಗೆ ಸಾವಿನ
ಸಖಿಗಳೇ ಲೇಸೆನುತ ಕೈಕೊಂಡೆಚ್ಚನಾ ಭೀಮ ‖ ೩೩

ಗುರುಸುತನನೈವತ್ತು ಬಾಣದ
ಲರಸನನುಜರ ಕೃಪನ ಕೃತ
ವರ್ಮಕನ ಮೂನೂಱಂಬಿನಲಿ ವೃಷಸೇನ ಸೌಬಲರ ।
ಸರಳು ಮೂವತ್ತಱಲಿ ಪುನರಪಿ
ಗುರುಸುತಾದಿ ಮಹಾರಥರನೆರ
ಡೆರಡಱಲಿ ಮುಱಿಯೆಚ್ಚು ವಿಮುಖರ ಮಾಡಿದನು ಭೀಮ ‖ ೩೪

ಮತ್ತೆ ಜೋಡಿಸಿ ಕೌರವೇಂದ್ರನ
ನೊತ್ತಲಿಕ್ಕಿ ಮಹಾರಥರು ರಿಪು
ಮತ್ತದಂತಿಯ ಕೆಣಕಿದರು ಕೆದಱಿದರು ಮಾರ್ಗಣವ ।
ಎತ್ತಲವನೀಪತಿಯು ಮೋಹರ
ವತ್ತ ಮೆಲ್ಲನೆ ರಥವ ಬಿಟ್ಟನು
ಮತ್ತೆ ಮೂದಲಿಸಿದನು ಯಮಸೂನುವನು ಕಲಿ ಕರ್ಣ ‖ ೩೫

ದ್ರೋಣ ಬರಸಿದ ಭಾಷೆಯೊಂದೇ
ಕ್ಷೋಣಿಪತಿ ಬಗೆಯದಿರು ತನ್ನನು
ವಾಣಿಯುದ ವಿವರದಲಿ ಸಲಹನು ಕೌರವರಾಯ ‖

ಪ್ರಾಣದಾಸೆಯ ಮಱೆದು ತನ್ನೊಳು
ಕೇಣವಿಲ್ಲದೆ ಕಾದೆನುತ ನಿ
ತ್ರಾಣನನು ನಿಬ್ಬರದ ನುಡಿಗಳಲಿಱಿದನಾ ಕರ್ಣ ॥ ೩೬

ಬಿಡನು ರಾಯನ ಬೆನ್ನನೀತನ
ಕೆಡಹಿ ರಕುತವ ಕುಡಿಯೆನುತ ಬಲ
ನೆಡನೊಳಿಟ್ಟಣಿಸಿದರು ಸಾತ್ಯಕಿ ನಕುಳ ಸಹದೇವ ।
ತುಡುಕಿದರು ಪಾಂಚಾಲ ಮತ್ಸ್ಯರ
ಗಡಣ ಕೈಕೆಯ ಪಂಚಪಾಂಡವ
ರಡಸಿದರು ಹೊದಿಸಿದರು ಕಣೆಯಲಿ ರವಿಸುತನ ರಥವ ॥ ೩೭

ಇನಿಬರೊಂದೇ ಸೂಠಿಯಲಿ ಮುಂ
ಮೊನೆಯ [1]ಬೋಳೆಯು[1] ಸುರಿದರಡಿಗಡಿ
ಗಿನಿಬರಂಬನು ಮುಱಿದು ತಱಿದನು ಸೂತವಾಜಿಗಳ ।
ತನತನಗೆ ಹೊಸರಥದೊಳೊಂದೊ
ಗ್ಗಿನಲಿ ಕವಿದೆಚ್ಚರು ಮಹಾಹವ
ವೆನಗೆ ಬಣ್ಣಿಸಲರಿದು ಧರಣೀಪಾಲ ಕೇಳೆಂದ ॥ ೩೮

ಭಟರು ಮುತ್ತಿದರಿನಸುತನ ಲಟ
ಕಟಿಸಲೆಚ್ಚರು ಶಿವಶಿವಾ ನಿ
ಚ್ಚಟದ ನಿಬ್ಬರದಂಘವಣೆ ಮಝು ಪೂತು ಲೇಸೆನುತ ।
ನಿಟಿಲನೇತ್ರನ ನಯನಶಿಖಿಯು
ಬ್ಬಟೆಗೆ ಸಮು[2]ಜೋಡಿಸಿತು[2] ಕರ್ಣನ
ಚಟುಳವಿಕ್ರಮಪವನಪರಿಗತ ಬಾಣಶಿಖಿನಿಕರ ॥ ೩೯

ನಕುಳನನು ನೋಯಿಸಿದ ಸಹದೇ
ವಕನ ಘಾಯಂಬಡಿಸಿದನು ಸಾ
ತ್ಯಕಿಯು [3]ಮುಸೆ[3]ಗಾಣಿಸಿದನಾ ಪಾಂಚಾಲ ಕೈಕೆಯರ ।
ವಿಕಳಗೊಳಿಸಿದನಾ ಮಹಾರಥ
ನಿಕರ ಸೈರಿಸಿ ಮತ್ತೆ ಮೇಳಾ
ಪಕದಲಂಘೈಸಿದರು ತಡೆದದು ಭಾನುನಂದನನ ॥ ೪೦

---

[1] ಕಣೆಗಳ (ಚ.ಟ.ತ.ಪ.ಬ). [2] ಗೊಳಿಸಿತ್ತು (ಚ.ಟ.ತ.ಪ.ಬ).
[3] ಮೈ (ತ.ನ.ಬ).

ಹೇಳಲಱಿಯೆನು ನಿನ್ನವನ ಕ
ಟ್ಟಾಳುತನವನು ದೇವದೈತ್ಯರ
ಕಾಳೆಗದಲಿವನಂತೆ ಬಲ್ಲಿದರಿಲ್ಲ ಬಿಲ್ಲಿನಲಿ ।
ಆಳ ಮುಱಿದನು ಹೂಣೆ ಹೊಗುವು
ಬ್ಬಾಳುಗಳ ಬಲುದೇಹದಂಬಿನ
ಕೀಲಣದ ಕಾಳಾಸದಿಱಿತವ ಮೆಱೆದನಾ ಕರ್ಣ ॥ ೪೧

ಸರಳ ಹತಿಯಲಿ ನಕುಲ ಸಾತ್ಯಕಿ
ಬಿರುದ ಸಹದೇವಾದಿ ವೀರರು
ಪಿರಿದು ನೊಂದರು ಮತ್ತೆ ತಱುಬಿದನವನಿಪಾಲಕನ ।
ಅರಸ ಹಿಡಿಹಿಡಿ ಧನುವ[1]ನಿನ್ನೆರ
ಡರಸನಾನದು[1] ಧರಣಿಯೊಬ್ಬನ
ಶಿರದ ಬರಹವ ತೊಡೆವೆ[2]ನಿದೆಯೆಂದೆನುತ ತೆಗೆದೆಚ್ಚ[2] ॥ ೪೨

ಅಕಟಕಟ ರಾಧೇಯ ಕೇಳೀ
ನಕುಳನೀ ಸಹದೇವನೀ ಸಾ
ತ್ಯಕಿ ನರೇಶ್ವರರೆನಿಸುವೀ ಕುಂತೀಕುಮಾರಕರು ।
ಅಕುಟಿಲರು ನಯಕೋವಿದರು ಧಾ
ರ್ಮಿಕ[3]ರ[3] ಕೊಲಬೇಡಿವರನತಿಬಾ
ಧಕರು ಭೀಮಾರ್ಜುನರ ಸಂಹರಿಸೆಂದನಾ ಶಲ್ಯ ॥ ೪೩

ಮುಳಿದು ಕಬ್ಬಿನ ತೋಟದಲಿ ನರಿ
ಹುಲಿ[4]ಯುವೋಲ[4] ಗರ್ಜಿಸಿತು ಗಡ ಹೆ
ಕ್ಕಳದ ಹೇರಾಳದಲಿ ಹೆಣಗಿದೆ ಬಾಲವೃದ್ಧರಲಿ ।
ಬಲುಹು ನಿನಗುಂಟಾದಡಿತ್ತಲು
ಫಲುಗುಣನ ಕೂಡಾಡು ನಡೆ ಮಱು
ವಲಗೆಯನು ಭೀಮನಲಿ ಬೇ[5]ಡಿನ್ನೆಂ[5]ದನಾ ಶಲ್ಯ ॥ ೪೪

ಎನಲು ಕಿಡಿಕಿಡಿವೋಗಿ ಭೀಮಾ
ರ್ಜುನರ ತೋಱಾದರೆ ಎನುತ ನಿಜ
ಧನುವ ಮಿಡಿದಬ್ಬರಿಸಲಿತ್ತಲು ರಾಯದಳದೊಳಗೆ ।

---

[1] ನಿನ್ನೆರಡರಸರಾಗದು (ತ), ನಿನ್ನೆರಡರಸರಾದುದು (ದ). [2] ನಿಂದೆನು ತೆಚ್ಚನಾ ಕರ್ಣ (ಖ.ತ). [3] ರು (ಖ.ತ). [4] ಯೊಡನೆ (ಕ), ಯುವೊಲು (ತ). [5] ಡುವುದೆಂ (ಸ–ಕ.ಗ).

ಅನಿಲಜನ ಕಾಲಾಟ ಕದಳೀ
ವನದ ಕಾಡಾನೆಯ ಮೃಗಾಳಿಯ
ವನಚರರ ದೆಖ್ಖಾಳದಬ್ಬರ [1]ಕಾಣ[1]ಲಾಯ್ತೆಂದ ॥ ೪೫

[2]ಮಂಡಳಿಸಿ[2] ಬಲಜಲಧಿ ಸುಳಿಸುಳಿ
ಗೊಂಡು ಸಿಕ್ಕಿದ ಕೌರವೇಂದ್ರನ
ಕೊಂಡು ಹಿಂಗುವ ಜೋಕೆ ನೂಕದೆ [3]ಡಗೆಯ ಡಾವರದ[3] ।
ಗಂಡುಗುಂದಿನ [4]ಬೀತ ಬಿರುದಿನ[4]
[ತೊ]ಂಡುಗೇಡಿನ ಜಯದ ಜಾರಿನ
ಖಂಡಶೌರ್ಯದ ಧೀರರಿದ್ದುದು ನೃಪನ ಬಳಸಿನಲಿ ॥ ೪೬

[5]ವಾಯು[5]ದಲಿ ಕೌರವನ [6]ವಿಜಯ[6]
ಶ್ರೀಯ [7]ಸೆಜ್ಜೆವೋಯಿತ್ತು[7] ಶಿವ
ಕಾಯಲಾಪವರಿಲ್ಲಲಾ ಗುರುಸೂನು ಮೊದಲಾದ ।
ನಾಯಕರು ದುಷ್ಕೀರ್ತಿನಾರಿಯ
ನಾಯಕರು ಸುಪಲಾಯನದ ನಿ
ರ್ಣಾಯಕರು ಮಝು ಪೂತುರೆಂದುದು ನಿಖಿಳ ಪರಿವಾರ ॥ ೪೭

ಕೇಳಿದನು ಕಳವಳವ ಕಿವಿಗೊ
ಟ್ಟಾಲಿಸಿದನೆಲೆ ಕರ್ಣ ಕರ್ಣಾ
ಡಾಳರವವೇನದು ಸುಯೋಧನ ಸೈನ್ಯಮಧ್ಯದಲಿ ।
ಖೂಳ ಬಿಡಿಸಾ ಭೀಮಸೇನನ
ತೋಳುವಲೆಯಲಿ ಸಿಕ್ಕಿದನು ಭೂ
ಪಾಲನಕಟಕಟೆನುತ ತೇಜಿಯ ತಿರುಹಿದನು ಶಲ್ಯ ॥ ೪೮

ಹದಿಮೂಱನೆಯ ಸಂಧಿ ಮುಗಿದುದು.

---

[1] ಕೇಳ (ಖ.ಚ.ಟ.ತ.ದ). [2] ಅಂಡಲೆದು (ಚ.ದ.ಪ.ಬ). [3] ಭೀತಿಗರ ಹೊಡೆದು (ದ). [4] ಭೀತಿ ಬಿರುದಿನ (ದ.ಪ.ಬ). [5] ಘಾಕ (ಕ), ದಾ (ನ). [6] ರಾಜ್ಯ (ತ.ನ.ಬ). [7] ಮುಂದಲೆಯೋಯ್ತು (ದ).

# ಹದಿನಾಲ್ಕನೆಯ ಸಂಧಿ

**ಸೂಚನೆ** ‖ ಮರಳಿದನು ಪಾಳೆಯಕೆ ಪಾಂಡವ
ರರಸನಿತ್ತಲು ಪಾರ್ಥ ಕೇಳಿದು
ಬರುತ ಗೆಲಿದನು ಸಕಲ ಕೌರವರಾಯ ಮೋಹರವ ‖

ದೂಱುವರಲೇ ಕರ್ಣನೋಲೆಯ
ಕಾಱತನವನು ಹಿಂದೆ ಕೆಲಬರು
[1]ದೂಱಿದರೆ ಫಲವೇನು ಕದನದಲವಗೆ ಸರಿಯುಹರೆ[1] ।
ಹಾಱಲೂದಿದನಹಿತರಾಯನ
ನೀಱತನವನು ತನ್ನ ರಾಯನ
ಸೂಱೆಗಡಹಾಯ್ದರಿಯ ತಡೆದನು ಭೂಪ ಕೇಳೆಂದ ‖ ೧

ಅರರೆ ಸಿಂಹದ ತೋಳ ತೆಕ್ಕೆಯ
ಕರಿಯ ಸೆಳೆವಂದದಲಿ ಗರುಡನ
ಕೊರಳ[2]ಬಿ[2]ಲದಲಿ ಬಿಳ್ದ ಸರ್ಪನ ಸೇದುವಂದದಲಿ ।
ಧರಣಿಪಾಲನ ತೆಗೆದು ಭೀಮನ
ಬರಿಯನೆಚ್ಚನು ಜೋಡ [3]ಜೋಕೆಯ[3]
ಜರುಹಿದನು ಜವಗೆಡಿಸಿದನು ನಿನ್ನಾತನನಿಲಜನ ‖ ೨

ಅರಸ ಕೇಳ್ಕೈ ಕರ್ಣಭೀಮರ
ಧರಧುರದ ದೆಖ್ಖಾಯ್ಲತನ ಗ
ಬ್ಬರಿಸಿತಾಹವಗರ್ವಿತರ ಗಾಢಾಯ್ಲಚೇತನವ ।
ಧರಣಿಪಾಲನನತ್ತಲವರಾ
ದರಿಸಿದರು ಸಹದೇವ ನಕುಳರು
ಸರಳ ಕಿತ್ತರು ಘಾಯವನು ತೊಳೆತೊಳೆದು ಮಂತ್ರಿಸುತ ‖ ೩

ದುಱುದುಱಿಪ ಬಿಸಿರಕ್ತವೇಱಿನೊ
ಳೊಱತೆ ಮಸಗಿತು ಬಹಳ ಧೈರ್ಯದ
ಹೊಱಗೆ ಮುಱಿದುದು ಮೂಗಿನುಸಿರುಬ್ಬೆದ್ದು ದಡಿಗಡಿಗೆ ।

---

[1] ದೂಱಬಲ್ಲರೆ ದೊರೆಯ ದಕ್ಕಡತನಕೆ ಸರಿಯಾರು (ದ). [2] ಬ (ಕ).
[3] ಝಾಡಿಯ (ಟ.ತ.ದ.ನ.ಬ).

ಅಱುವು ಮಱವೆಗಳೊಂದನೊಂದನು
ಮುಱಿದು ನೂಕಿದವವನಿಪತಿ ಕಡು
ವೆಱಗ ಕೇಣಿಯ ಕೊಂಡವೋಲಿದ್ದನು ವಿಚೇಷ್ಟೆಯಲಿ ॥ ೪

ಜಯಸಮರ [1]ಜಾಱಾಯ್ತು[1] ತೆಗೆ ಪಾ
ಳೆಯಕೆ ಮರಳಿಚು ರಥವನಿನ್ನೆ
ಲ್ಲಿಯದು ನೆಲ ನೆಱೆ ಕುದಿವ ಕುರುಡನ ಮಕ್ಕಳೇ ಕೊಳಲಿ ।
ನಿಯತವೆಮ್ಮಿಬ್ಬರಿಗೆ ರಾಯನ
ಲಯವೆ ಲಯವಿನ್ನೆನುತಲಾ ಮಾ
ದ್ರಿಯ ಕುಮಾರರು ದೊರೆ ಸಹಿತ ತಿರುಗಿದರು ಪಾಳೆಯಕೆ ॥ ೫

ರಾಯರಥ ಮಡಮುಱಿಯೆ ಮುರಿದುದು
ನಾಯಕರು ಪಾಂಚಾಲಕರು ವಾ
ನಾಯುಜರು ಮತ್ಸ್ಯ ಪ್ರಬುದ್ಧಕ ಸೋಮಕಾದಿಗಳು ।
ವಾಯುಹತಿಯಲಿ ಮೇಘದೊಡ್ಡಿಂ
ಗಾಯಸವು ಕರ್ಣಾಸ್ತ್ರಹತಿಯಲ
ಪಾಯವರಿರಾಯರಿಗಪೂರ್ವವೆ ಭೂಪ ಕೇಳೆಂದ ॥ ೬

ಮುಱಿದುದೈ ರಿಪುರಾಯದಳ ಹಗೆ
ಹಱಿದುದೈ ಕುರುಪತಿಗೆ ಹರುಷವ
ಕಱೆದುದೈ ಕರ್ಣಪ್ರತಾಪಾಟೋಪಜೀಮೂತ ।
ಇಱಿತ ಮೆಱೆದುದು ನಿನ್ನವರ ಬೊ
ಬ್ಬಿಱಿತ ಜಱೆದುದು ವಿಜಯಲಕ್ಷ್ಮಿಯ
ಸೆಱಗು ಸೋಂಕಿತು ಕೌರ[2]ವೇಶ್ವರಗರಸ[2] ಕೇಳೆಂದ ॥ ೭

ಅರಿಬಲದ ಲಗ್ಗೆಯನು ನಿಜ ಮೋ
ಹರದ ಮುರಿವಿನ ಸುಗ್ಗಿಯನು
ಧರಧುರದ ಪರಬಲದೊಸಗೆಯನು ನಿಜಬಲದ ಹಸುಗೆಯನು ।
ಮುರಮಥನ ನೋಡಿದನು ಮೂಗಿನ
ಬೆರಳ ತೂಗುವ ಮಕುಟ[3]ದೊಲಹಿನ[3]
ಬೆರಳ ಕುಡಿಚಮ್ಮಟಿಗೆಯಲಿ ಸೂಚಿಸಿದನರ್ಜುನಗೆ ॥ ೮

---

[1] ಕಾಳಾಯ್ತು (ಚ.ಟ.ತ.ನ.ಪ.ಬ). [2] ವೇಂದ ನ ಭೂಪ (ಕ.ಗ.ಚ.ಟ).
[3] ವೆತ್ತಿದ (ಕ).

ಆರ ರಥವಾ ಹೋಹು[1]ದದು[1] ಹಿಂ
ದಾರವರು ಬಳಿವಳಿಯಲೊಗ್ಗಿನ
ಲೋರಣಿಸಿ ಮುಂಚುವರು ಚೆಕ್ಕೆಯವಾರ ತೇರಿನದು ।
ಆರ ದಳವದು ಧುರಪಲಾಯನ
ಚಾರುದೀಕ್ಷಿತರಾಯ್ತು ಫಲುಗುಣ
ಧಾರುಣೀಪತಿ[2]ಯಾಣೆ ಹೇಳೆಂ[2]ದಸುರರಿಪು ನುಡಿದ ॥ ೯

ನೋಡಿ ನೋಡಿ ಕಿರೀಟವನು ತೂ
ಗಾಡಿದನು ಕಂಬನಿಗಳಾಲಿಯೊ
ಳೀಡಿಱಿದು [3]ಸೋರಿ[3]ದವು ಸೊಂಪಡಗಿತು ಮುಖಾಂಬುಜದ ।
ಹೂಡಿದಂಬಿನ ತೋಳ ತೆಗಹಿನ
ಬಾಡಿದುತ್ಸಾಹದ ವಿತಾಳದ
ಬೀಡಿಕೆಯ ಬೇಳುವೆಗೆ ಬೆಬ್ಬಳೆವೋದನಾ ಪಾರ್ಥ ॥ ೧೦

ಸೇನೆ ಮುಱಿಯಲಿ ಕೌರವನ ದು
ಮ್ಮಾನ ಹಱಿಯಲಿ ನನಗೆ ಚಿತ್ತ
ಗ್ಲಾನಿಯೆಳ್ಳನಿತಿಲ್ಲ ಕಟ್ಟಲಿ ಗುಡಿಯು ಗಜನಗರ ।
ಆ ನರೇಂದ್ರನ ಸಿರಿಮೊಗಕೆ ದು
ಮ್ಮಾನವೋ ಮೇಣ್ ಸುರಪುರಕೆ ಸಂ
ಧಾನವೋ ನಾನಱಿಯೆನಳ್ಳೆದೆಯಾದುದೆನಗೆಂದ ॥ ೧೧

ಧರಣಿಪತಿ ಸಪ್ರಾಣನೇ ಗಜ
ಪುರದ ರಾಜ್ಯಕೆ ಸಿಲಿಸುವೆನು ಮೇಣ್
ಸುರರೊಳಗೆ ಸಮ್ಮೇಳವೇ ಕುಂತೀ ಕುಮಾರಂಗೆ ।
ಅರೆಘಳಿಗೆ ಧರ್ಮಜನ ಬಿಟ್ಟಾ
ನಿರೆನು ಮುರಹರ ರಥವ ಮರಳಿಚು
ಮರಳಿಚೈ ರಥ ಮುಂಚುವುದೊ ವ:ನ ಮುಂಚುವುದೊ ಎಂದ ॥ ೧೨

ತಿರುಹಿ ವಾಘೆಯ ಹಿಡಿದು ಹರಿ ಹೂಂ
ಕರಿಸಿಬಿಟ್ಟನು ರಥವನಾತನ
ಮುರಿವ ಕಂಡುದು ಉಳಿ ಮಸಗಿ ಸಮಸಪ್ತಕರ ಸೇನೆ ।

---

[1] ರಥ (ಚ.ಟ.ತ.ಪ.ಬ). [2] ಯಲ್ಲಲೇ ಎಂ (ಖ್ಣ.ನ.ಪ.ಬ). [3] ಸೂಸಿ (ಖ.ಟ.ತ.ನ.ಬ).

ಆರರೆ ನರ ಪೈಸರಿಸಿದನೊ ಪೈ
ಸರಿಸಿದನೊ ಘಡ ಹೋಗಬಿಡದಿರಿ
ಕುರುನೃಪಾಲನ ಪುಣ್ಯವೆನುತಟ್ಟಿದರು ಸೂಠಿಯಲಿ ‖ ೧೩

ಕವಿದುದದುಭುತ ಬಲ ಮುರಾರಿಯ
ತಿವಿದರಡಗಟ್ಟಿದರು ತೇಜಿಯ
ಜವಗೆಡಿಸಿ ತಲೆಯಾರ ತಡೆದರು ತುಡುಕಿದರು ನೊಗನ ।
ಅವರನೊಂದೇ ನಿಮಿಷದಲಿ ಪರಿ
ಭವಿಸಿ ನಡೆತರೆ ಮುಂದೆ ಗುರುಸಂ
ಭವನ ರಥವಡಹಾಯ್ದುದವನೀಪಾಲ ಕೇಳೆಂದ ‖ ೧೪

ಇತ್ತಲಿತ್ತಲು ಪಾರ್ಥ ಹೋಗದಿ
ರಿತ್ತಲಶ್ವತ್ಥಾಮನಾಣೆ ಮ
ಹೋತ್ತಮರು ಗುರು ಭೀಷ್ಮರಲಿ ಮೆಱೆ ನಿನ್ನ ಸಾಹಸವ ।
ಕಿತ್ತು ಬಿಸುಡುವೆನಸುವನಿದಿರಾ
ಗಿತ್ತಲೆಲವೋ ನಿನ್ನ ಜೋಕೆಯ
ಜೊತ್ತಿನಾಹವವಲ್ಲೆನುತ ತಱುಬಿದನು ಗುರುಸೂನು ‖ ೧೫

ಆವುದಿಲ್ಲಿಗುಪಾಯವೀತನ
ಭಾವ ಬೆಟ್ಟಿತು ತೆಱಹುಗೊಡ[1]ನಿಂ
ದೀ ವಿಸಂಧಿಯೊಳ[1]ಱಿಯೆನವನಿಪನಾಗುಹೋಗುಗಳ ।
ದೇವ ಹದನೇನೆನುತ ವರ ಗಾಂ
ಡೀವಿ ಮುಕ್ತ ಕಳಂಬಕಾಂಡ
ಪ್ರಾವರಣದಲಿ ಮುಸುಕಿದನು ಗುರುನಂದನನ ರಥವ ‖ ೧೬

ಖೂಳ ತೆಗೆ ಹೆಱಸಾರು ಠಕ್ಕಿನ
ಠೌಳಿಯಾಟವೆ ಕದನ ಕುಟಿಲದ
ಬೇಳುವೆಯ ಡೊಳ್ಳಾಸ ಮದ್ದಿನ ಮಾಯೆ ನಮ್ಮೊಡನೆ ।
ಆಳುತನವುಳ್ಳೊಡೆ ಮಹಾಸ್ತ್ರದ
ಜಾಳಿಗೆಯನುಗಿಯೆನುತ ಪಾರ್ಥನ
ಕೋಲುಗಳ ನೆಱೆ ತಱಿದು ತೀವಿದನಂಬಿನಲಿ ನಭವ ‖ ೧೭

[1] ಹಱಿವಗೊಡನಿನ್ನಾವ ತೆಱನೆಂದ (ಕ), ಹಱಿವುಗೊಡನಿಂದೀ ವಿಸಂಧಿಯೊಳ (ಖ).

ಸರಳ ಹರಿಮೇಖಳೆಗೆ ನೀವೇ
ಗುರುಗಳಲ್ಲಾ ನಿಮ್ಮ [1]ವಿದ್ಯೆಯು[1]
ಹುರುಳುಗೆಡಿಸುವಿರೆನುತ ಗುರುಸುತನಂಬ ಹರೆಗಡಿದು ।
ತುರಗದಲಿ ರಥಚಕ್ರದಲಿ ಕೂ
ಬರದೊ[2]ಳೀಸಿನಲಚ್ಚಿನಲಿ ದು
ರ್ಧರ[2] ಶಿಳೀಮುಖ ಜಾಳವನು ಜೋಡಿಸಿದನಾ ಪಾರ್ಥ ॥ ೧೮

ತಳಿವ ನಿನ್ನಂಬಿನ ಮಳೆಗೆ ಮನ
ನಲಿವ ಚಾತಕಿಯುಱಿಯೆಲಾ ಕಳ
ವಳಿಸದಿರು ಕೊಳ್ಳಾವಡೆನುತೆಚ್ಚನು ಧನಂಜಯನ ।
ಹೊಳೆವ ಕಣೆ ಹೊಕ್ಕುಱಿದ ದಾರಿಯೊ
ಳುಳಿದ ಕಣೆ ದಾಂಟಿದವು ಗುರುಸುತ
ತುಳುಕಿದನು ಫಲುಗುಣನ ಮೈಯಲಿ ರಕುತಜಾಳವ ॥ ೧೯

ಕಡುಗಿದರೆ ಕಾಲಾಗ್ನಿರುದ್ರನ
[3]ಕಡುಹ[3]ನಾನುವ[4]ರೀತನೇ[4] ಸೈ
ಗೆಡೆವ ರೋಮದ [5]ಧೂಮ್ರವಕ್ತ್ರದ ಸ್ವೇದಬಿಂದುಗಳ[5] ।
ಜಡಿವ ರೋಷದ ಭರದಲಡಿಗಡಿ
ಗೊಡಲನೊಲೆದು ಮಹಾಸ್ತ್ರದಲಿ ಕಡಿ
ಕಡಿದು ಬಿಸುಟನು ಗುರುಸುತನ ಸಾರಥಿಯು ರಥ ಹಯವ ॥ ೨೦

ಧನುವನುರು ಬತ್ತಳಿಕೆಗಳನಂ
[6]ಬಿನ ಹೊದೆಯನುರು ಟೆಕ್ಕೆಯವ ಜೋ
ಡಿನ ಬನವ ಕಡಿದಿಕ್ಕಿದನು ಸೆಕ್ಕಿದನು ಸರಳುಗಳ[6] ।
ಧನು ವರೂಥವ ಹಾನಿ ಗುರುನಂ
ದನನ ಗರ್ವವಿನಾಶಿಯೇ ಫಡ
ಎನುತ ಪಾರ್ಥನ [7]ತಱುಬಿ ನಿಂದನು[7] ಸೆಳೆದಡಾಯುಧದಿ ॥ ೨೧

ದಿಟ್ಟನೈ ಗೂರುಸೂನು ಶಿವ ಜಗ
ಜಟ್ಟಿಯಲ್ಲಾ ಕೌರವೇಂದ್ರನ
ಥಟ್ಟಿನಲಿ ಭಟರಾರೆನುತ ತಲೆದೂಗಿದನು ಪಾರ್ಥ ।

---

[1] ನೀವೇ (ಕ). [2] ಳಚ್ಚಿನೊಳೀಸಿನೊಳೂರ್ಧ್ವರ (ಕ). [3] ಪಡೆಯು (ಕ.ಗ.ದ). [4] ನೀತನೆನೆ. [5] ಕದಱುಂಗಳೊಳುಗಿವ ಕೆಂಪುಗಳ (ಕ). [6] ಬಿನ ಹೊದೆಯು ರಥಚಕ್ಕೆಯುವ ಜೋಡಿನಬನದ ಕಡಿತವನಿಕ್ಕಿದನು ಬಾಣದಲಿ ಕಲಿಪಾರ್ಥ (ಕ.ಗ). [7] ರಥವ ತಡೆದನು (ಕ.ಚ).

ಇಟ್ಟಣಿಸಿದನು ಹಿಂದೆ ಕೃಪನಡ
ಗಟ್ಟಿದನು ಸಮಸಪ್ತಕರು ಸಲೆ
ಮುಟ್ಟಿ ಬಂದರು ಕೌರವೇಶ್ವರ ಸಕಲ ಬಲಸಹಿತ ॥ ೨೨

ತಡೆಯಿ ಪಾರ್ಥನನಿವನ ರಾಯನ
ಕೆಡಹಿದನು ಕಲಿಕರ್ಣನೀಗಳೆ
ಮುಡುಹು[1]ವನು[1] ಪವನಜನನೊಂ[2]ದರೆ[2] ಘಳಿಗೆ ಮಾತ್ರದಲಿ ।
ಬಿಡಿದಿರೀತನನೆನುತ ಕುರುಪತಿ
ಯೊಡನೆ ದುಶ್ಶಾಸನ [3]ಕೃಪಾದಿಗ[3]
ಳಡಸಿದರು ಕೆಂಗೋಲ ಮಳೆಯಲಿ ನಾದಿದರು ನರನ ॥ ೨೩

ಅವನಿಪನ ಕಾಣಿಕೆಗೆ ಬಹು ವಿ
ಘ್ನವನು [4]ಬಲಿದುದ[4] ದೈವಯಂತ್ರವ
ನವಗಡಿಸಿ ನೂಕುವರೆ ನಮ್ಮಳವೇ ಶಿವಾ ಎನುತ ।
ಕವಲುಗೋಲ್ಕೈದಳಿಲಿ [5]ಕೃಪ[5] ಕೌ
ರವನ [6]ತಮ್ಮಂದಿರ ಸು[6]ಸನ್ನಾ
ಹವ [7]ವಿ[7]ಸಂಚಿಸಿ ಬಗಿದು ಸಮಸಪ್ತಕರನೊಡೆಹಾಯ್ಸಿ ॥ ೨೪

ಹೋಗಹೋಗಲು ಮತ್ತೆ ಕುರುಬಲ
ಸಾಗರದ ಭಟಲಹರಿ ಲಳಿಯಲಿ
ತಾಗಿದರು ತುಡುಕಿದರು ತಡೆದರು ನಾಲ್ಕು ದೆಸೆಗಳಲಿ ।
ನೀಗಿದರು ಶಸ್ತ್ರಾಸ್ತ್ರವನು ಕೈ
ಲಾಗಿನಲಿ ಮರಳಿದರು ಪುನರಪಿ
ತಾಗಿದರು ಗುರುಸೂನು ಕೃತವರ್ಮಾದಿ ನಾಯಕರು ॥ ೨೫

ಮೇಲೆ ಬಿದ್ದುದು ಮತ್ತೆ ಬಲಮೇ
ಘಾಳಿ [8]ನೂಕಿತು[8] ನರನ ರಥ ಸುಳಿ
ಗಾಳಿಯಂತಿರೆ ತಿರು[9]ತಿರುಗಿ[9]ದುದು ವಿಶ್ವತೋಮುಖದಿ ।
ಹೇಳಲೇನವನೀಶ ಚಪಳಭ
ಡಾಳ ಪಾರ್ಥನ ವಿಕ್ರಮಾಗ್ನಿ
ಜ್ವಾಲೆಯಲಿ ನೆಱೆ ಸೀದು ಸೀಕರಿಹೋಯ್ತು ಕುರುಸೇನೆ ॥ ೨೬

---

[1] ವೆ (ಕ). [2] ದುವಿ (ಕ.ಗ.ಚ). [3] ಭಟಾದಿಗ (ಕ). [4] ತಂದುದು (ಕ.ಗ.ನ). [5] ಮಿಗೆ (ಪ.ಬ.ನ). [6] ತಮ್ಮದಿರೆಸುವ (ಟ.ತ.ನ.ಪ). [7] ನು (ಕ.ಗ.ಚ). [8] ಯಂದದಿ (ಕ). [9] ಗಿತಿವಿ (ತ.ನ.ಪ.ಬ).

ಗುರುಸುತನ ಮುಱಿಯೆಚ್ಚು ಶಕುನಿಯ
ಪರಿಭವಿಸಿ ಕೃತವರ್ಮಕನ ವಿ
ಸ್ತರಿಸಲೀಯದೆ ಕೇರಳ ದ್ರವಿಡಾಂಧ್ರ ಕೌಸಲರ ।
ಹುರುಳುಗೆಡಿಸಿ ಸುಯೋಧನನ ಮೊಗ
ಮುರಿಯಲೆಚ್ಚು ಸುಷೇಣ ಗೌತಮ
ರುರವಣಿಯ ನೆಗ್ಗೊತ್ತಿ ಹಾಯ್ದನು ಮತ್ತೆ [1]ಸ್ತೈವರಿದು[1] ॥　　೨೭

ಆವರಿಸಿದುದು ಮತ್ತೆ ಹೊಸ ಮೇ
ಳಾವದಲಿ ಕುರುಸೇನೆ ಘನ ಗಾಂ
ಡೀವವಿಗಳಿತ ವಿಶಿಖ ವಿಸರದ ವಹಿಗೆ ವಂಚಿಸದೆ ।
ರಾವಣಿಗೆಗೊಳಲಲಸಿ ಯಮನನು
ಜೀವಿಗಳು ಜಡರಾಯ್ತು ಫಲುಗುಣ
ನಾವ ವಹಿಲದಲೆಸುವನೆಂಬುದನಱಿಯೆ ನಾನೆಂದ ॥　　೨೮

ಜಾಳಿಸಿತು ರಥ ಜಡಿವ ಕೌರವ
ನಾಳ ಝೋಂಪಿಸಿ ಡೊಂಬು ಮಾಡುವ
ಜಾಳ ಝಾಡಿಸಿ ಬೈದು ಹೊಕ್ಕನು ಮತ್ತೆ ಗುರುಸೂನು
ಖೂಳ ಫಡಫಡ ಜಾಱದಿರು ತೋ
ಱಾಳ ತೂಱಿದ ಡೊಂಬು ಬೇಡ ವಿ
ಡಾಳವಿದ್ಯೆಗಳೆಮ್ಮೊಡನೆಯೆನುತೆಚ್ಚನರ್ಜುನನ ॥　　೨೯

ಗುರುಸುತನನೊಟ್ಟೈಸಿ ಫಲುಗುಣ
ತಿರುಗಿ ಹಾಯ್ದನು ಮುಂದೆ ಶರಪಂ
ಜರವ ಹೂಡಿದನೀತನಾತನ ಬಯ್ದು ಬೆಂಬತ್ತಿ ।
ಸರಳ ಹರಹಿನ ಹೂಟವನು ಕಾ
ಹುರದ [2]ಕಡುಹಿ[2]ನಲೊದೆದು ಬೊಬ್ಬಿಱಿ
ದುರವಣಿಸಿದನು ಪಾರ್ಥನೀತನ ಧನುವ ಖಂಡಿಸಿದ ॥　　೩೦

ಧನು ಮುಱಿಯೆ ದಿಟ್ಟಾಯ್ಲ ತನವೀ
ತನಲಿ ಸಾಕಿನ್ನೆನುತ ಗುರುನಂ
ದನನು ಮುರಿದನು [3]ಹೊಗರು[3]ವೋಱೆಯ ಹೊತ್ತ ದುಗುಡದಲಿ ।

---

[1] ಹರಿಸಹಿತ (ಚ.ಟ). [2] ತಳವಿ (ಕ.ಗ.ಚ.ಟ.ತ.ದ.ಪ.ಬ). [3] ಬಿಗಿದ (ಚ.ಟ.ತ).

ಅನಿಲಸೂನುವ ಹಳಚಿದರು ಮು
ಮ್ಮೊನೆಯ ಬೋಳೆಯ ಮ್ಮೆಯ ಕೊಳುಕೊಡೆ
ಯೆನಗೆ ತನಗೆಂಬಗ್ಗಳಿಕೆಗಳ ಮೆಖೆ[1]ದರಿಚ್ಛೆಯ[1]ಲಿ ‖ ೩೧

ತರಣಿತನಯನ ತೆಗೆದು ಭೀಮನೊ
ಳುರವಣಿಸಿ ಗುರುಸೂನು ಕಾದು
ತ್ತಿರೆ ಧನಂಜಯ ತೆರಳಿದನು ಪಾಳೆಯದ ಪಥವಿಡಿದು ।
ಅರತೆ ಫಲುಗುಣನೋಟವನು ಸಂ
ಗರಸಮರ್ಥರ ನೋಟವನು ನ
ಮ್ಮರಸ ಕಂಡನಲಾ ಎನುತ ನೂಕಿದನು ಕಲಿ ಕರ್ಣ ‖ ೩೨

ನೆರೆದುದಲ್ಲಿಯದಲ್ಲಿ ಕಹಳೆಯ
ಧರಧುರದ ನಿಸ್ಸಾಳ ಸೂಳಿನ
ಮೊರೆವ ಭೇರಿಯ ರಾಯಗಿಡಿಗನ ಜಡಿವ ಚಂಬಕನ ।
ತುರಗ ಕರಿ ರಥ ಪಾಯದಳ ಚಾ
ಮರದ ದವಳಚ್ಛತ್ರ ಪಟಪಳ
ಹರದ ಪಡಪಿನಲೌಕಿ ನಡೆದುದು ಮುಂದೆ ಪಾಯದಳ ‖ ೩೩

ಕವಿದು ಕೆಂಧೂಳಿಡುವ ಸೇನಾ
ಟವಿಯ ನೋಡುತ ಹಿಂದೆ ಕರ್ಣನ
ಲವಲವಿಕೆಯಾಯತವ ಕಂಡನು ಕದನಕೇಳಿಯಲಿ ।
ಅವನಿಪನ ದರುಶನವೆನಗೆ ಸಂ
ಭವಿಸಲಱಿಯದು ಭಾಪುರೇ ಕೌ
ರವಮಹಾರ್ಣವವೆನುತ ಮಕುಟವ ತೂಗಿದನು ಪಾರ್ಥ ‖ ೩೪

ಬಳಿಕ ಸೇನಾಸ್ತಂಭ ಶರದಲಿ
ನಿಲಿಸಿದನು ಪಾರ್ಬಲವನಿತ್ತಲು
ಚಳೆಯುದಲಿ ಹಿಮ್ಮೆಟ್ಟುತಿರೆ ಕಂಡನು ಧನಂಜಯನ ।

[1] ದ.ದೀಚೆಯ (ಕ), ದನಿದಿರಿನ (ಟ).

ಹೊಳಹು ದೂವಾಳಿಯಲಿ ಪಾರ್ಥನ
ಕೆಲಕೆ ಬಿಟ್ಟನು ರಥವ ನಿಲು ನಿ
ಲ್ಲೆಲವೋ ಹೋಗದಿರೆನುತ ಬೆಂಬತ್ತಿದನು ಕಲಿ ಕರ್ಣ ॥ ೩೫*

ಕಂಡನರ್ಜುನನಿದಿರೊಳಿವನು
ದ್ದಂಡತನವನು ನೃಪತಿ ಚಿಂತಾ
ಖಂಡಧೈರ್ಯಘು ನಾವಲಾ ಹೊತ್ತಲ್ಲ ಕಾದುವರೆ ।
ಕಂಡಿರೇ ಮುರವೈರಿ ದಳಪತಿ
ಚಂಡಬಳನಹ ನಡುಹಗಲ ಮಾ
ರ್ತಾಂಡನಂತಿರೆ ತೋಱುತ್ತೈದನೆ ರಥವ ತಿರುಹೆಂದ ॥ ೩೬

ಜೀವಿಸಿರಲಾವಾವ ಲೇಸಿನ
ಠಾವ ಕಾಣೆವು ಜೀಯ ಕರ್ಣನ
ನಾವು ತೊಡಚುವರಲ್ಲ ತೆರಳಿಚು ಪಾಳೆಯಕೆ ರಥವ ।
ಈ ವಿಗಡನಂತಿರಲೆನುತ ಗಾಂ
ಡೀವಿ ಚಾಪವನಿಳುಹೆ ರಥವನು
ದೇವಕೀಸುತ ನೂಕಿದನು ಪವಮಾನ ವೇಗದಲಿ ॥ ೩೭

ಬರುತ ಭೀಮನ ಕಂಡರಾತನ
ಹೊರೆಗೆ ಬಿಟ್ಟರು ರಥವನರ್ಜುನ
ಕರೆದು ಬೆಸಗೊಂಡನು ನೃಪಾಲನ ಕ್ಷೇಮಕೌಶಲವ ।
ಅರಸನಿಂದು ಸಜೀವಿಯೋ ಸುರ
ಪುರನಿವಾಸಿಯೊ ಹದನನೇನೆಂ
ದಱಿಯೆನೀ ಸಂಗ್ರಾಮ[1]ಘು[1]ರವೆನಗೆಂದನಾ ಭೀಮ ॥ ೩೮

ಆದಡೆಲೆ ಪವಮಾನಸುತ ನೀ
ನಾದರಿಸು ನಡೆ ನೃಪತಿಯನು ನಾ
ಕಾದುವೆನು ಕೌರವರ ಸಕಲ [2]ಬಲಪ್ರಘಾಟದಲಿ[2] ।

---

* ಈ ಪದ್ಯವಾದಮೇಲೆ (ತ.ದ.ನ.) ಪ್ರತಿಗಳಲ್ಲಿ ಮುಂದಿನಪದ್ಯ ಹೆಚ್ಚಾಗಿದೆ.—
ಉಂಟು ಖರೆಯನು ನೀನೆನುತ ಹದಿ
ನೆಂಟು ಶರದಲಿ ಭಟನ ಗರ್ವದ
ಗಂಟ ಮುಱಿದರೆ ಮುನಿದು ಖತಿಯಲಿ ಕೆದಱಿ ಕಂಪಿಸುತ ।
ಕಂಠಣಿಸೆ ಸುರನಿಕರವರಿಗಳ
ಗಂಟಲಿಱುತದಲರುಣಸಲಿಲವ
ನೀಂಟುವನು ಮಾಣೆನುತ ಕಿಡಿಕಿಡಿಯೋದನಾ ಕರ್ಣ ॥

[1] ಥ (ಚ.ನ.ಪ). [2] ಮಹಾರಥಾದಿಯಲಿ (ಚ.ಟ.ತ.ನ.ಪ.ಬ).

ಕೈದುಕಾಱರು ನಿಖಿಳ ದೆಸೆಗಳ
ಲೈದಿ ಬರುತಿದೆ ನೀ ಮರಳು ನಾ
ಛೇದಿಸುವೆನರೆಘಳಿಗೆಮಾತ್ರದಲೆಂದನಾ ಪಾರ್ಥ ॥ ೩೯

ಎಲೆ ಧನಂಜಯ ನೀನೆ ಬಲುಗೈ
ಯುಳಿದವರು ರಣಖೇಡರೇ ಕುರು
ಬಲವನೊಬ್ಬನೆ ಕೇಣಿಗೊಂಡೆನು ಕರ್ಣ ಮೊದಲಾಗಿ ।
ಅ[1]ಳ[1]ಕಿಸುವೆನೀಕ್ಷಣಕೆ ತನ್ನ
ಗ್ಗಳಿಕೆಯನು ನೋಡವನಿಪಾಲನ
ಬಳಲಿಕೆಯ ಸಂತೈಸು ನಡೆ ನೀನೆಂದನಾ ಭೀಮ ॥ ೪೦

ಹದಿನಾಲ್ಕನೆಯ ಸಂಧಿ ಮುಗಿದುದು

---

[1] ಳು (ಟ).

# ಹದಿನೈದನೆಯ ಸಂಧಿ.

ಸೂಚನೆ ॥ ರಾಯ ರಿಪುಬಲ ವಿಪಿನ ದಹನನ
ಜೇಯನೇಕಾಂಗದಲಿ ಕೌರವ
ರಾಯ ಬಲಬಹಳಾಂಬುಧಿಯ ಕಲಕಿದನು ಕಲಿ ಭೀಮ ॥

ಕೇಳು ಧೃತರಾಷ್ಟ್ರಾವನಿಪ ದು
ವ್ವಾಳಿಯಲಿ ಕೃಷ್ಣಾರ್ಜುನರು ನಿಜ
ಪಾಳೆಯಕೆ ತಿರುಗಿದರು ಬಳಿಕಿತ್ತಲು ವೃಕೋದರನ ।
ಆಳುತನದ ಸಘಾಡಿಕೆಯ ನಾ
ಹೇಳಲರಿಯೆನು ಸಕಲ ಕುರುಬಲ
ಜಾಲವೊಂದೆಸೆ ಭೀಮನೊಂದೆಸೆ ಕೇಳು ಕೌತುಕವ ॥ ೧

ಸೆಱಗ ಬೀಸಿತು ನಿನ್ನವರು ಬೊ
ಬ್ಬಿಱಿದರರ್ಜುನನಿತ್ತ ಬೆನ್ನಿನ
ತೆಱಗೆ[1]ಯುತ್ಸವ[1]ಧನವ ತೆಗೆ ಭಂಡಾರದೊಳಗೆನುತ ।
ತುಱುಗಿತಲ್ಲಿಯದಲ್ಲಿ ಲಗ್ಗೆಯ
ಬಿಱುದನಿಯ ನಿಸ್ಸಾಳ ಕಹಳೆಯ
ಜಱಹು ಜೋಡಿಸಿ ಜರುಹಿತಡಕಿಲು ಜಗದ ಜೋಡಿಗಳ ॥ ೨

ಆಱು ಸಾವಿರ ಕುದುರೆ ಕರಿಘಟೆ
ಮೂಱು ಸಾವಿರ ಸಾವಿರದ ನಾ
ನೂಱು ರಥ ಪರಿಗಣನೆಗೊಂದೇ ಲಕ್ಕ ಪಾಯದಳ ।
ನೂಱು ರಥದಲಿ ಸರಳ ಹೊದೆ ಮೂ
ನೂಱು ಪರಿಚಾರರು ಸಹಿತ ಮೈ
ದೋಱಿ ನಿಂದನು ಭೀಮನೊಬ್ಬನೆ ತಱುಬಿ ಕುರುಬಲವ ॥ ೩

ಅರಸ ಕೇಳೈ ನಿಮ್ಮ ದಳದೊಳು
ಗುರುತನುಜ ಕೃತವರ್ಮ ಕೃಪ ನಿ
ನ್ನರಸುಮಗ ರಾಧೇಯ ಶಕುನಿ ಸುಶರ್ಮ ವೃಷಸೇನ ।

---

[1] ಯುಚ್ಚೈಹ (ಕ).

ಮರು ಯವನ [1]ಹಮ್ಮಿರ[1] ಕೇರಳ
ತುರುಕ ಬಾಹ್ಲಿಕ ಮಗಧ ನೇಪಾ
[2]ಳ[ರು] ಕುರೂಷಾದಿಗ[ಳು] ಸಂಖ್ಯಾತೀತಬಲವೆಂದ[2] ॥ ೪

ಮಾಳವಾಂಧ್ರ ಪುಳಿಂದ ಬರ್ಬರ
ಗೌಳ ವಂಗ ದ್ರವಿಡ ಸಿಂಹಳ
ಲಾಳ ಗುರ್ಜರ ಚೀನ ಭೋಟ ಕರಾಳ ಖರ್ಪರರು ।
ಚೋಳ ಸಿಂಧು ಕಳಿಂಗ ಸಗರ ವ
ರಾಳ ಪಾರ್‍ಯಾತ್ರಪ್ರಮುಖ ಭೂ
ಪಾಲರಿವರೊಡ್ಡಿನಲಿ ಸಂಖ್ಯಾರಹಿತದಳವೆಂದ ॥ ೫

ಇದ್ದುದಾ ಸಮಸಪ್ತಕರು ಜಗ
ವದ್ದ ಜಲಧಿಯ ತೆರೆಯವೋಲು [3]ಮುಳಿ[3]
ದೆದ್ದ ಹರಿಬಲದಂತೆ ದುಶ್ಶಾಸನನ ಪಾಯದಳ ।
ದೊದ್ದೆಯಲ್ಲದೆ ದೊರೆಗಳೇ ಜಱು
ದೆದ್ದುದೆರಡಕ್ಷೋಹಿಣಿಯನಿಬರಿ
ಗಿದ್ದನೊಬ್ಬನೆ ಭೀಮನವನೀಪಾಲ ಕೇಳೆಂದ ॥ ೬

ಹೇಳು ಸಂಜಯ ವಿಸ್ತರಿಸಿ ಕಾ
ಲಾಳು ಮೇಲಾಳಿನಲಿ ಭೀಮನ
ಕಾಳೆಗದ ಕೌತುಕವನೀ ಹೆಬ್ಬಲದ ದುರ್ಬಲವ ।
ಆಳು ಹಿರಿದಿದ್ದೇನು ಫಲ ಹೀ
ಹಾಳಿ ದೈವಕೆ ಬೇಱೆ [4]ಪರಿಯ
ವಿತಾಳ[4]ವಿಲ್ಲ ವಿಪಕ್ಷಪಾತದೊಳೆಂದನಂಧನೃಪ ॥ ೭

ಅರಸ ಕೇಳಾದಡೆ ಮಹಾಸಾ
ಗರಕೆ ಮುನಿ ಮುಂಡಿಸಿದವೋಲು ಸಂ
ಹರಣ ದಿನದಲಿ ಜಗಕೆ ಮುಳಿವ ಮಹೇಶನಂದದಲ ।
ಅರಿ ಹಿರಣ್ಯಾಕ್ಷನ ಬಲಕೆ ಕೋ
ಡೆಱಗಿ ನಿಂದ ವರಾಹನಂತಿರೆ
ಪರಬಲಾಂತಕ ಭೀಮ ನಿಂದನು ತಱುಬಿ ಪರಬಲವ ॥ ೮

---

[1] ಸೌವೀರ (ತ.ದ.ನ.ಬ). [2] ಕರೂಷಾದಿಗಳ ಸಂಖ್ಯಾತೀತ ಬಲವೆಂದ (ಟ.ತ.ದ), ಕರುಗಳದರೊಳಗಿಹುದು ಸಂಖ್ಯಾರಹಿತಬಲವೆಂದ (ಬ.ದ). [3] ಮುರಿ (ಚ.ಟ.ದ.ನ). [4] ಪರಿಪರಿಕಾಲ (ಟ.ತ.ದ), ವಿವರವ ಕೇಳ್ವೆ (ಟ.ದ).

ಆತನಿಂದಂಘವಣೆಯನು ನಿ
ನ್ನಾತ ಕಂಡನು ಮೆಚ್ಚಿದನು ಮಝು
ಪೂತು ಭೀಮ ಸುಧೀರನ್ಯೆ ಸದ್ಗುಣಕೆ ಮತ್ಸರವೆ ।
ಈತನೊಬ್ಬನೆ ಕೌರವರಸಂ
ಖ್ಯಾತವೆಂಬುದು ಲೋಕ ಸಾಕಿ
ನ್ನೀತ ಮರಳಲಿ ಎಂದು ಭಟ್ಟರನಟ್ಟಿದನು ಭೂಪ ॥ ೯

ಬಂದು ಭಟ್ಟರು ಭೀಮಸೇನಂ
ಗೆಂದರೆಲೆ ಕೌಂತೇಯ ನೀ ನಿ
ನ್ನಂದಿನಗ್ಗದ ದುಂದುಮಾರನ ಕಾರ್ತವೀರ್ಯಕನ ।
ಸಂದ ಭರತ ಭಗೀರಥಾದಿಗ
ಳಿಂದ ಮಿಗಿಲು ಮಹಾಪ್ರಚಂಡರೊ
ಳಿಂದು ನಿನಗೆಣೆಯಾರು ದನುಜಾಮರರ ಥಟ್ಟಿನಲಿ ॥ ೧೦

ರಾಯಜಗಜಟ್ಟಿಗಳು ರಿಪುಕುರು
ರಾಯಥಟ್ಟಿನೊಳಿನಿಬರಿಗೆ ನಿ
ನ್ನಾಯತದಿ ನಿಲುವಂಘವಣೆಗಾವೇನ ಹೇಳುವೆವು ।
ರಾಯನನು ಸಂತೈಸುವುದು ಮಾ
ದ್ರೇಯ ಫಲುಗುಣ ಸಹಿತ ನಿಲು ನಿ
ನ್ನಾಯತದಿ ನಮ್ಮರಸನೊಲ್ಲನು ನಿನ್ನೊಡನೆ ರಣವ ॥ ೧೧

ಆಗಲದು ತಪ್ಪೇನು ಧರ್ಮಜ
ನಾಗುಹೋಗರ್ಜುನನ ಮೇಲೆ ವಿ
ಭಾಗದಲಿ ಬಂದುದು ಸುಯೋಧನ ಸೈನ್ಯಧುರವೆಮಗೆ ।
ಈಗಳೊಬ್ಬನೆ ವಿಷಮವಿಗ್ರಹ
ಯಾಗದಲಿ ರಿಪು ಸುಭಟ ಪಶುಹಿಂ
ಸಾಗಮವ ತೋಱುವೆನು ಸೈರಿಸಿಯೆಂದನಾ ಭೀಮ ॥ ೧೨

ವಿವಿಧ ಮಣಿ ಕನಕಾದಿ ವಸ್ತುವ
ನವರಿಗಿತ್ತನು ತನ್ನ ಪಾಠಕ
ನಿವಹವನು ಕಳುಹಿದನು ಕೌರವಬಲದ ಸುಭಟರಿಗೆ ।
ಅವರು ಬಂದರು ಕರ್ಣ ಗುರುಸಂ
ಭವ ಸುಶರ್ಮಕ ಶಕುನಿ ಕೃಪ ಕೌ
ರವ ನೃಪಾದಿಗಳಿದಿರಲೊದಱಿದರನಿಲಜನ ಮತವ ॥ ೧೩

ಮುಱಿದು ಲೋಕವ ನುಂಗಿದರೆ ಕ
ಟ್ಟಿಱುವೆಯೇ ಕಾಲಂಗೆ ಕತ್ತಲೆ
ಯಿಱಿತದಲಿ ಕೈದೀವಿಗೆಯ ಹಂಗೇಕೆ ದಿನಮಣಿಗೆ ।
ಮಱೆದೆಲಾ ರಾಧೇಯ ಕೃಪ ನಿಲು
ಹೊಱಗೆ ಗುರುಸುತ ನಿನ್ನ ಗರ್ವವ
[1]ಹೆ[1]ಱಿಸುವವು ಭೀಮಾಸ್ತ್ರವೆಂದುದು ವಂದಿಸಂದೋಹ ॥ ೧೪

ಆಸೆಯೇ ಜೀವದಲಿ ಕುರುಧರ
ಣೀಶ ಬಿಡು ರಾಜ್ಯವನು ಮಾತಿನ
ವಾಸಿಯೇ ಕೊಡು ಕದನವನು ಸಾಕುಳಿದ ಮಾತೇನು ।
ಈ ಸುಶರ್ಮಕ ಶಕುನಿ ಸಲೆ ದು
ಶ್ಶಾಸನಾದಿ ಪಿಪೀಲಕರು ತಮ
ಗೇಸು ಬಲುಹುಂಟೈಸನೊದಗಲಿ ಎಂದರವರಂದು ॥ ೧೫

ಇವರು ಕಳುಹಿದರುಚಿತದಲಿ ನಿ
ನ್ನವರು ಮಸಗಿದ ಕಡಲವೋಲು ಬಲು
ದವಕಿಗರು ಕೋಲಳವಿಗೊಂಡರು ಕೋಡಕೈಗಳಲಿ ।
ತವತವಗೆ [2]ದೆಖ್ಖಾಯ ಮಿಗೆಯು
ತ್ಸವದಲುಱುಬಿದ[2]ರವನಿಪಾಲನ
ಗವಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ ॥ ೧೬

ಇನ್ನಱಿಯಬಹುದೆನುತ ರಾಯನ
ಮನ್ನಣೆಯ ಮದಸೊಕ್ಕಿದಾನೆಗ
ಳೆನ್ನ ಬಿಡು ಬಿಡು ತನ್ನ ಬಿಡು ಬಿಡು ಎನುತ ಖಾತಿಯಲಿ ।
ತಿನ್ನಡಗನೊಡೆಹೊಯ್ದು ಭೀಮನ
ಬೆನ್ನಲುಗಿ ತನಿಗರುಳನಕಟಾ
ಕುನ್ನಿಗಳಿರೆನುತೊದಗಿದರು ದುಶ್ಶಾಸನಾದಿಗಳು ॥ ೧೭

ಈತನೇ ನಮಗರ್ಜುನನು ಕೊ
ಳ್ಳೀತನನು [3]ಹೊಯ್‌ಹೊಯ್ಯೆನುತ[3]ಗತ
ಭೀತರಿಟ್ಟಣಿಸಿದರು ಸಮಸಪ್ತಕರು [4]ವಂಗಡಿಸಿ[4] ।

[1] ಮು (ಚ), ಹ (ತ.ದ.ನ.ಬ). [2] ತಕ್ಕಾಯತದಲುರವಣಿಸಿ ತಾಗಿದ (ಕ.ಚ.ಟ). [3] ಹಾಯುವನೆನುತ (ಕ.ಟ), ಫೂರಾಯುವೆನುತ (ದ). [4] ಸೂಠಿಯಲಿ (ಟ.ದ.ಪ).

ಪೂತು ಮಝುರೇ ಭೀಮ ಎನುತವೆ
ಸೂತಸುತನೌಕಿದನು ಕೃಪ ಗುರು
ಜಾತ ಕೃತವರ್ಮಾದಿ ರಥಿಕರು [1]ಹೊಕ್ಕರುರವಣಿಸಿ[1] ॥ ೧೮

ಒಂದು ದೆಸೆಯಲಿ ರಾಯನಿಪ್ಪ
ತ್ತೊಂದು ಸಾವಿರ ರಥ ಸಹಿ[2]ತುಘೋ[2]
ಯೆಂದು ಬಿಟ್ಟನು ಭೀಮಸೇನನ ರಥದ ಸಮ್ಮುಖಕೆ ।
ಅಂದು ಗೋಗ್ರಹಣದಲಿ ಫಲುಗುಣ
ನಿಂದನನಿಬರಿಗರಸ ಚಿತ್ತೈ
[ಸಿ]ಂದು [3]ಸೈರಿಸಿ ನಿಂದನನಿಬರಿಗೊಬ್ಬನೇ ಭೀಮ[3] ॥ ೧೯

ಕೀಱಿ ಕಾಲಿಡೆ ದಿಕ್ಕರಿಗಳೆದೆ
ಡೋಱುವೋಗಲು ಸರ್ವಲಗ್ಗೆಯ
ಲೇಱಿತೀ [4]ದಳ ದಳವುಳಿಸಿ ದಳಪತಿಯ ನೇಮದಲಿ[4] ।
ಏ[5]ಱು[5]ಸೂ[6]ಱೆಗೆ ಹಾರಿ[6] ಮಾಸಲಿ
ನೇಱು ನಮ್ಮದು ತಮ್ಮದೆನುತು
ಬ್ಬೇಱಿ ಭೀಮನ ಮುತ್ತಿದರು ಮೆತ್ತಿದರು ಸರಳಿನಲಿ ॥ ೨೦

ಅರಸ ಕೇಳೈ ನಿಮ್ಮ ಭೀಮನ
ಪರಿಯನೀ ಸರ್ವಾಸ್ತ್ರಘಾತ
ಸ್ಫುರಣ ಮದಕರಿ ಮಕ್ಷಿಕಾಸಂಘಾತದಂದದಲಿ ।
ಕೆರಳಿ ಕವಿದನು ಕೆದಱಿದುರಿ ಕ
ರ್ಪೂರಕೆ ಕವಿವಂದದಲಿ ಕರ್ಣನ
ಗುರುಸುತನ ಕುರುಪತಿಯ ದುಶ್ಶಾಸನನ ರಥಕಾಗಿ ॥ ೨೧

ಎಚ್ಚನವರವರೆಚ್ಚ ಬಾಣವ
ಕೊಚ್ಚಿದನು ಕೋಲಳವಿಗೊಡ್ಡಿದ
ನಿಚ್ಚಟರ ನೀಗಿದನು ತಾಗಿದನರಸುಮೋಹರವ ।
ಹೆಚ್ಚಿ ವೀರಾವೇಶದಲಿ ಬಹ
ಬಿಚ್ಚುರಥಿಕರನಾಯ್ದು ಧೈರ್ಯದ
ಕೆಚ್ಚ ಮುಱಿದನು ಕದಡಿದನು ರಿಪುಸುಭಟ ಸಾಗರವ ॥ ೨೨

---

[1] ವೀರರು ಹೊಕ್ಕರವಗಡಿಸಿ (ಕ.ಗ). [2] ತಘೋ (ಗ.ಚ.ಟ,ತ.ದ.ನ.ಪ ಬ). [3] ತಱುಬಿದ ಭೀಮನೀ ಕುರುರಾಯಮೋಹರವ (ಟ.ದ). [4] ಇದು ಅಚ್ಚಿನಪ್ರತಿಯ ಪಾಠ ; ದಳವುಳಿಸಿದ.ದು ದಳಪತಿಯ ನೇಮದಲಿ (ಕ.ಚ.ತ.ಬ), ದಳ ಬೊಬ್ಬೆಯಲಿ ದಳಪತಿಯ ಸನ್ನೆಯಲಿ (ಟ.ದ.ನ). [5] ಱ (ದ). [6] ಱೆಯ ಹೊಯ್ದು (ಟ.ದ ನ.ಬ).

ತುಡುಕುವಾನೆಯನೀಸಿನಲಿ ಖುರ
ವಿಡುವ ಕುದುರೆಯನೊತ್ತಿ ಹಾಯ್ಸುವ
ಬಿಡುರಥವ ತಲೆವರಿಗೆಯಲಿ ತವಕಿಸುವ ಕಾಲಾಳ ।
ಕಡಿದನಂಬಿನೊಳಾ ಗಜವನಾ
ಕಡುಹಯವನಾ ರಥವನಾ ವಂ
ಗಡದ ಕಾಲಾಳುಗಳನೊಂದು ವಿಘಳಿಗೆ ಮಾತ್ರದಲಿ ॥ ೨೩

ಮುಂದೆ ಸಬಳಿಗರೆಡಬಲದಲೋ
ರಂದದಲಿ ಬಿಲ್ಲಾಳು ದೊರೆಗಳ
ಮುಂದೆ ಹರಿಗೆಗಳೆರಡು ಬಾಹೆಯಲಾನೆ ಕುದುರೆಗಳು ।
ಸಂದಣಿಸಿದುದು ಮತ್ತೆ ಬೀಳುವ
ಮಂದಿಗದು ನೆರವಾಯ್ತು ನೆಗ್ಗಿದ
ನೊಂದು [1]ಹಲಗೆ[1]ಯಲೇಱಿದವರನು ಭೂಪ ಕೇಳೆಂದ ॥ ೨೪

ಮುಱಿದು ನೆಗ್ಗಿದ ರಥವ ಬರಿಕೈ
ಹಱಿದು ಬೀಳುವ ಗಜವ ಘಾಯದ
ನೆಱವಣಿಗೆಯಲಿ ನೆಗ್ಗಿ ಮುಗ್ಗಿದ ಕುದುರೆ ಕಾಲಾಳ ।
ಅಱಿಯೆನಭಿವರ್ಣಿಸಲು ಬಲ ಮು
ಕ್ಕುಱುಕಿ ಕೊಂಡುದು ಮೇಲೆ ಮೇಲ
ಳ್ಳಿಱಿವ ಕಹಳೆಯ ಬಹಳ ಬಹುವಿಧ ವಾದ್ಯರಭಸದಲಿ ॥ ೨೫

ಸಿಕ್ಕಿದನು ಹಗೆ ಸ್ವಾಮಿದ್ರೋಹಿಯ
ಸೆಕ್ಕಿ ಸುರಗಿಯೊಳವನ ಖಂಡವ
ನಿಕ್ಕುಳಿನೊಳೊಡೆಯಮಟಿ ಕೊಯ್ದು ಸುಂಟಿಗೆಯ ತಿನ್ನೆನುತ ।
ಹೊಕ್ಕು ಹೊಯ್ದರು ರಥವನಳವಿಗೆ
ಮಿಕ್ಕು ಕೈಮಾಡಿದರು ಕಾಲ್ದುಳಿ
ಯೊಕ್ಕಲಲಿ ಬೇಸಱಿಸಿದರು ಪವಮಾನನಂದನನ ॥ ೨೬

ನೆಲಕೆ ದೊಪ್ಪನೆ ಹಾಯ್ದು ಕೊಂಡನು
ಹಲಗೆ ಗವೆಯನು ಮೇಲುವಾಯ್ದ
ಪ್ಪಳಿಸಿದರೆ ಕುಪ್ಪಳಿಸಿತರಿಬಲ ಘಾಯಘಾಯದಲಿ ।

---

[1] ಲಗ್ಗೆ (ಗ.ಟ.ಪ).

ತಲೆಗಳೊಟ್ಟಿಲ ಕರಿಗಳಟ್ಟೆಯ
ನೆಳೆವ ರಕುತದ ಹೊನಲ ಮುಂಡದ
ಲಳಿಯು ನಾಟ್ಯದಲೆಸೆದುದ್ಯೆ ಭೀಭತ್ಸರೌದ್ರದಲಿ ‖ ೨೭

ಕರಿ ಕೆಡೆಯೆ ಕಾಲನಲಿ ಜೋದರು
ತೆರಳದೆಚ್ಚಾಡಿದರು [1]ರಥಚಯ
ಮುರಿಯೆ ಕಾಲಿನಲೊದ[1]ಗಿದರು ಸಮರಥ ಮಹಾರಥರು ।
ಹರಿಯೆ ಹಯ ರೂಢಿಯಲಿ ನಿಂದ
ಬ್ಬರಿಸಿದರು ರಾವುತರು ಭೀಮನ
ಬಿರುಗದೆಯ ಘಲ್ಲಣೆಗೆ ಚೆಲ್ಲಿತು ನಿಮ್ಮ ಪರಿವಾರ ‖ ೨೮

ರಾವುತರು ಕಡಿವಡೆಯೆ ಕಾಂಭೋ
ಜಾವಳಿಗಳೋಡಿದವು ಜೋದರ
ಜೀವ ಜಾಳಿಸೆ ಬೀದಿವರಿದವು ಗಜಘಟಾಳಿಗಳು ।
ತಾವು ನಿಬ್ಬರಗತಿಯ ರಥ ತುರ
ಗಾವಳಿಗಳೆಳೆದವು ರಥಂಗಳ
ನಾ ವಿಗಡವಿಗ್ರಹ ಮಹಾದ್ಭುತವರಸ ಕೇಳೆಂದ ‖ ೨೯

ಕೆಡೆದ ಝಲ್ಲರಿಗಳ ರಥಾಗ್ರದೊ
ಳುಡಿದ ಸಿಂಧದ ಮಕುಟ ಪದಕದ
ಖಡೆಯ ಸರಪಣಿ ತೋಳಬಂದಿಯ ವಜ್ರಮಾಣಿಕದ ।
ಕಡುಕು ಹೀರಾವಳಿಯ ಹಾರದ
ಕಡಿಯ ರಚನೆಯ ರಾಶಿ ಯಮುನಂ
ಗಡಿಯ ಪಸರವಿದೆನಲು ಮೆರೆದುದು ಕೂಡೆ ರಣಭೂಮಿ ‖ ೩೦

ಕಡಿದ ಹಕ್ಕರಿಕೆಗಳ ಸೀಳಿದ
ದಡಿಯ ನೆಗ್ಗಿದ ಗುಳದ ಜೆಂಚೆಯ
ಸಿಡಿದ ಸೀಸಕ ಬಾಹುರಕ್ಷೆಯ ಜೋಡು ಮೊಚ್ಚೆಯದ ।
ಉಡಿದ ಮಿಣಿ ಮೊಗರಂಬ ಗದ್ದುಗೆ
[2]ಬಡಿಗೆಗಳ ಸೂತ್ರಿಕೆಯ[2] ಕಬ್ಬಿಯ
ಕಡಿಯಣದ ಕುಸುರಿಗಳಲೆಸೆದುದು ಕೂಡೆ ರಣಭೂಮಿ ‖ ೩೧

---

[1] ಸಮರದಿ ರಥಮುರಿಯೆ ನಿಂದೊದ (ಕ). [2] ಜಡಿಯ ಗೆಜ್ಜೆಯ ಸೂಠಿ (ಟ.ದ).

ಮುಱಿದ ದೂಹತ್ತಿಗಳ ನೆಗ್ಗಿದ
ಸುರಗಿಗಳ ಚಿನಕಡಿಯ ತೋಮರ
ಪರಶು ಸೆಲ್ಲೆಹ ಚಕ್ರ ಸಬಳ ಮುಸುಂಡಿ ಲೌಡೆಗಳ ।
ಹಱಿದ ಹೊದೆಯಂಬುಡಿದ ಬಿಲ್ಲಿನ
ಬಿರಿದ ಬತ್ತಳಿಕೆಗಳ ಸೀಳಿದ
ಹರಿಗೆಗಳ ಹೇರಾಳದಲಿ ರಂಜಿಸಿತು ರಣಭೂಮಿ ॥ ೩೨

ಉರುಳ್ವ ತಲೆಗಳ ಕುಣಿವ ಮುಂಡದ
ಹೊರಳ್ವ ಕರಿಗಳ ಗದೆಯ ಹೊಯ್ಲಲಿ
ನರಳ್ವ ವೀರರ ಮಿದುಳ ಜೋಱುನ [1]ಜೊಂಡೆ ಜೋಡಣೆ[1]ಯ ।
ಅರಳ್ವ ಕಡಿನಾಳಿಕೆಯ ರಕುತಕೆ
ಮರಳ್ವ ಭೂತವ್ರಜದ ಝೋಂಪಿಸಿ
ಕೆರಳ್ವ ಭಟರಟ್ಟೆಗಳಲೆಸೆದುದು ಕೂಡೆ ರಣಭೂಮಿ ॥ ೩೩

ಅಲ್ಲಿ ಕರ್ಣನ ರಥದ ತೇಜಿಯ
ಘಲ್ಲಿಸಿದನಾಕ್ಷಣದೊಳಿಚ್ಚೆಯ
ಕೆಲ್ಲೆಯಲಿ ಕಾದಿದನು ಚಿಗಿದನು ಕೌರವನ ಹೊರೆಗೆ ।
ಅಲ್ಲಿ ಹೊಯ್ದು ಸುಶರ್ಮನವದಿರ
ಚೆಲ್ಲಬಡಿದನು ದಳದ ನಾಯಕ
ರೆಲ್ಲರಿಗೆ ಸವಿದೋಱಿದನು ಬಲುಗದೆಯ ಹೊಯ್ಲುಗಳ ॥ ೩೪

ಇತ್ತಲತ್ತಲು ಭೀಮನೆಂದುಱೆ
ಮುತ್ತಿ ಮುಸುಕಿತು ಸೇನೆ ಚಿಮ್ಮಿದ
ನತ್ತಲಾಚೆಯಲಲ್ಲಿ ದಳ ಘಾಡಿಸಿತು ವೇಢೆಯಲಿ ।
ಇತ್ತ ಹಾಯ್ದನು ಕೌರವನ ರಥ
ದತ್ತ ಚಿಗಿದನು ಗುರುಸುತಾದಿಗ
ಳತ್ತಲಲ್ಲಿಗೆ ಮೊಳಗಿದನು [2]ಮೋವಿದನು ಪಟುಭಟರ[2] ॥ ೩೫

ಕರಿಘಟೆಯ ಮಱೆವೊಕ್ಕು ನಿಂದರು
ನರರು ತೇಜಿಗಳೋಡಿ ತೇರಿನ
ಮಱೆಯ ಸಾರ್ದವು ತೇರು ಹಾಯ್ದವು ದೊರೆಯ [3]ಹಿನ್ನೆಲೆಗೆ[3] ।

[1] ರಕುತದೊಂಡೆಗಳ (ಕ). [2] ಕಲಿಭೀಮನಿಮಿಷದಲಿ (ಚ.ದ). [3] ಹಿಂದಿಕ್ಕಿ (ಕ.ಗ.ಚ.ತ.ನ.ಪ).

[1]ಕರಿ ಮುರಿದು ಕಾಲಾಳು ಕಾಲಾ
ಳ್ತೆರಳಿ ದೊರೆಗಳ ಹಿಂದೆ ದೊರೆ ಪಯಿ
ಸರಿಸಿತಲ್ಲಿಯದಲ್ಲಿ ಭೀಮನ ಹೊಯ್ಲ ಹೋರಟೆಗೆ[1] ‖* ೩೬

ಪೂತು ಮಝು ರಿಪುರಾಯಮನ್ಮಥ
ಭೂತನಾಥ ವಿರೋಧಿಬಲಪುರು
ಹೂತ ರಾಯಘರಟ್ಟ ವೈರಿನಿಕಾಯಗಿರಿವಜ್ರ ।
ಏತಕೀ ಸೂಳೆಯರು ಕ್ಷತ್ರಿಯ
ಜಾತಿಯಲಿ ಜನಿಸಿದರು ಶಿವಶಿವ
ಪೂತು ಗಂಡಿಗನೆಂದು ಗರ್ಜಿಸಿತಖಿಳ ವಂದಿಜನ ‖ ೩೭

ಹದಿನೈದನೆಯ ಸಂಧಿ ಮುಗಿದುದು.

---

[1] ತೆರಳಿದವು ತೇರುಗಳು ರಥಿಕರು
ಹೊರಳಿಯೊಡೆದುದು ಕುರುಚತುರ್ಬಲ
ಹುರುಳುಗೆಟ್ಟುದು ಪವನತನಯನ ಗದೆಯ ಗಾಢಣೆಗೆ ‖ (ಟ.ದ).

* ಈ ಪದ್ಯವಾದಮೇಲೆ (ಟ.ದ). ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ :—
ಮುರಿದು ದೊರೆಗಳನರಸಿ ಜಾಱಿದ
ಕುರುಬಲವು ದೆಸೆಗೆಟ್ಟು ಹೋಗುತ
ಕರಿ ಮುರಿಯು ಹಯರಥದ ಹಿಂದನು ಹೊಗುತ ದೆಸೆಗೆಡುತ ।
ಕರಿ ಮುಱಿಯೆ ಕಾಲಾಳು ತೇರಿನ
ದೊರೆಗಳೇ ಹಿಂದಾಯ್ತು ದೊರೆ ಪೈ
ಸರಿಸಲಲ್ಲಿಯದಲ್ಲಿ ಭೀಮನ ಗದೆಯ ಹೋರಟೆಗೆ ‖

# ಹದಿನಾರನೆಯ ಸಂಧಿ

ಸೂಚನೆ॥ ರಾಯರಿಪುಭಟಗಿರಿನಿವಹವ
ಜ್ರಾಯುಧನು ಕಲಿ ಪಾರ್ಥನಂಘ್ರಿಯೋ
ಜಾಯತಾಂಬಕಸಹಿತ ಕಂಡನು ಧರ್ಮನಂದನನ ॥

ಕೇಳು ಧೃತರಾಷ್ಟ್ರಾವನಿಪ ಬಲು
ಗಾಳಿಗವ ಭೀಮಂಗೆ ಸೇರಿಸಿ
ಪಾಳೆಯಕೆ ತಿರುಗಿದರು ಕೃಷ್ಣಾರ್ಜುನರು ದುಗುಡದಲಿ।
ಹೇಳು ಮುರಹರ ಬುದ್ಧಿ ಕದಡಿ ಧ
ಡಾಳಿಸಿತು ಪರಿಭೇದವ್ಯಸನಗೆಯ
ಕೇಳಲಟುಯೆನು ರಾಜವಾರ್ತೆಯನೆಂದನಾ ಪಾರ್ಥ ॥ ೧

ನೋಡುವೆವು ನಡೆ ಧರ್ಮಪುತ್ರನ
ಕೇಡು ಕಲಿಯುಗಬೀಜವೀ ಪರಿ
ಕೂಡದೀ ಹೊತ್ತಿನಲಿ ಧರ್ಮಸ್ಥಿತಿಗೆ ಲಯವಿಲ್ಲ।
ಖೇಡನಾಗದಿರಿವಕೆ ಚಿಂತಿಸ
ಬೇಡೆನುತ ಫಲುಗುಣನ ಚಿತ್ತದ
ಪಾಡಱಿದು ನುಡಿವುತ್ತ ತಂದನು ಪಾಳೆಯಕೆ ರಥವ ॥ ೨

ಬರಲು ಪಾರ್ಥನ ಕಂಡು ಪುರಜನ
ಹರೆದುದಲ್ಲಿಯದಲ್ಲಿ ದುಗುಡದ
ಭರದ ಗುಜಗುಜು ಗೋಷ್ಠಿಗಳ ಜನಜನದ ಮುಸುಕುಗಳ।
ಮುರಿದ ನೀಹಾರದ [1]ವಿ[1]ಹಾರದ
ಸರಸಿರುಹವನದಂತೆ ಪಾಳೆಯ
ದಿರವು ಲೇಸಲ್ಲೆನುತ ಬಂದನು ರಾಜಮಂದಿರಕೆ ॥ ೩

ಕಳಚಿದನು ಸೀಸಕವ ಬೆಂಬ
ತ್ತಳಿಕೆಯನು ವಜ್ರಾಂಗಿ ಮೊಚ್ಚೆಯ
ಬಿಲುಸರಳನಿಳುಹಿದನು ರಥದಲಿ ದೈತ್ಯರಿಪು ಸಹಿತ।

[1] ನಿ (ಚ.ತ.ಪ.ಬ.), ಲಿ (ಕ).

ಇಳಿದು ರಥವನು ರಣದ ಭಾರಿಯ
ಬಳಲಿಕೆಯ ಕೈಕೊಳ್ಳದರಸನ
ನಿಳಯವನು ಹೊಕ್ಕನು ಧನಂಜಯ ಕಂಡನವನಿಪನ ॥ ೪

ಝೊಂಪಿಸುವ ಸಿರಿಮೊಗದ ನೋಟದ
ಸೊಂಪಡಗಿದಾಲಿಗಳ ಧೈರ್ಯದ
ಗುಂಪಳಿದ ನಿಜರಾಜತೇಜದ ವಿಪುಳ ವೇದನೆಯ ।
ಬಿಂಪಗಿವ ಬೇಸಱಿನ ತುಱುಗಿದ
ತಂಪಿನಗ್ಗಳಿಕೆಯ ವಿಘಾತಿಯ
ಝೊಂಪಿನಲಿ ಹುದುಗಿದ ಮಹೀಶನ ಕಂಡನಾ ಪಾರ್ಥ ॥ ೫

ಬಿಗಿದು ಕಟ್ಟಿದ ಘಾಯ ಮದ್ದಿನ
ಜಿಗಿಯ ತೈಲದ ತಳಿತ ಲೇಪದ
ಉಗಿದ ಬಾಣವ್ಯಥೆಯ ಕರ್ಣಧ್ಯಾನಚೇತನದ ।
ಸೊಗಸು ಮಿಗೆ ದ್ರೌಪದಿಯ ತುದಿವೆರ
ಳುಗುರುವೆರಸಿದ ಸಿರಿಮುಡಿಯ ಬಲು
ದುಗುಡಭರದಲಿ ಕುಸಿದ ಭೂಪನ ಕಂಡನಾ ಪಾರ್ಥ ॥ ೬

ನಕುಳ ಧೃಷ್ಟದ್ಯುಮ್ನ ಸಹದೇ
ವಕ ಯುಧಾಮನ್ಯುಕನು ಸುತಸೋ
ಮಕ ಶತಾನೀಕ ಪ್ರಬುದ್ಧಕ ಚೇಕಿತಾನಕರು ।
ಸಕಲ ಕೈಕೆಯ ಮತ್ಸ್ಯಸುತ ಸಾ
ತ್ಯಕಿ ಯುಯುತ್ಸು ಶಿಖಂಡಿ ಪ್ರತಿವಿಂ
ದ್ಯಕರು ಪಾರ್ಥನನುಪಚರಿಸಿ ಕುಳ್ಳಿರ್ದರಲ್ಲಲ್ಲಿ ॥ ೭

ಕರಗಿತಂತಃಕರಣವಾಲಿಗ
ಳೊಱತೆಯೆನೆ ಕಣ್ಣಾಲಿಯಲಿ ಕಾ
ತರಿಸಿದವು ಜಲಬಿಂದುಗಳು ಪುರುಹೂತನಂದನನ ।
ಅರಸನಿರ[1]ವಿದೆಯೆ[1]ನುತ ನೊಸಲನು
ಚರಣದಲಿ ಚಾಚಿದನು ಚೇಷ್ಟಾ
ಪರಿಗತಿಯನಾರೈವುತಭಿಮುಖನಾಗಿ ಕುಳ್ಳಿರ್ದ ॥ ೮

[1] ವಿಂತೆ (ಚ.ತ.ಪ.ಬ).

ನೊಂದೆಲಾ ನರನಾಥ ವಿಧಿಯೇ
ನೆಂದು ಮುನಿದುದೊ ನಿನಗೆನುತ್ತ ಮು
ಕುಂದನತಿಕಾರುಣ್ಯದೃಷ್ಟಿಯಲವನಿಪನ ನೋಡಿ।
ಮಂದಮಂದದಿ ಪಾಣಿಪಲ್ಲವ
ದಿಂದ ತಡವಿದನೇಟನಾಗಳೆ
ಕಂದೆಱೆದು ನೋಡಿದನು ಭೂಪತಿ ಕೃಷ್ಣ ಫಲುಗುಣರ ॥ ೯

ಹರಿಕರಾಬ್ಜಸ್ಪರ್ಶಮಾತ್ರ
ಸ್ಫುರಣದಿಂದಾಪ್ಯಾಯಿತಾಂತಃ
ಕರಣನಾದನು[1] ನನೆದನುದ್ಗತಬಾಷ್ಪವಾರಿಯಲಿ[1]।
ಮುರಿಯದೇಱಿನ ಮೈವಳಿಗೆ ಲಘು
ತರದ ಉಳಿಯಲಿ ಮೈಯ ಬಲಿದಾ
ದರಿಸಿ ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ ॥ ೧೦

ಹದುಳವೇ ಪಾರ್ಥಂಗೆ ಹೇರಾ
ಳದಲಿ ಕಾದಿದನಾ ಸುಶರ್ಮನ
ಕದನ ಬೆಟ್ಟಿತು ಶಪಥವಲ್ಲಾ ತಮ್ಮೊಳನಿಬರಿಗೆ ।
ಕೆದಱಿದನು ಕೊಲ್ಲಣಿಗೆಯಲಿ ಬಂ
ದೊದಗಿ ನೀವವದಿರಲಿ ಸುಯ್ದಾ
ನದಲಿ ಬಂದುದೆ ಲಕ್ಷವೆಂದನು ನೃಪತಿ ಕೃಷ್ಣಂಗೆ ॥ ೧೧

ಆಯಿತಿದು ನೀ ಬಂದ ಪರಿ ರಿಪು
ರಾಯ ಘಟ್ಟಿನೊಳೊಕ್ಕಲಿಕ್ಕಿದ
ದಾಯವೊಳ್ಳಿತು ದಿಟ್ಟನಾವನು ನಿನ್ನ ಹೋಲಿಸಲು ।
ಕಾಯಿದರಿ ಕಳುಹಿದನೊ ಮೇಣಡ
ಹಾಯಿದನೊ ಕರ್ಣಂಗೆ ಮಾಡಿದು
ಪಾಯವಾವುದು ಪಾರ್ಥ ಹೇಳೆಂದವನಿಪತಿ ನುಡಿದ ॥ ೧೨

ಬೇಱೆ ಸಮಸಪ್ತಕರೊಳಿಕ್ಕಟಿ
ತೋಱಿಸಿದೆ ನೀ ತೊಂಡಿನೋಲೆಯ
ಕಾಱತನವನು ಸೂತಸುತನಿಲ್ಲವರ ಘಟ್ಟಿನಲಿ ।

[1] ನೃಪತಿ ದುಗುಡದ ಬಾಷ್ಪವಾರಿಗಳ (ಕ), ನಾದಿದನು ಘನಬಾಷ್ಪವಾರಿ ಯಲಿ (ಚ).

ಹಾಱಲೂದಿ ಸುಶರ್ಮನವದಿರ
ತೂಱ ತಿರುಗಿದ ಬಳಿಕ ಕೈ ಮ್ಯೆ
ತೋಱದನೆ ಕಲಿ ಕರ್ಣ ನಿನ್ನೊಡನೆಂದನಾ ಭೂಪ ॥ ೧೩

ಎಲೆ ಧನಂಜಯ ಸೂತತನಯನ
ಗೆಲಿದು ಬಂದೆಯೊ ದಿವಿಜನಗರಿಗೆ
ಕಳುಹಿ ಬಂದೆಯೊ ಕಂಡು ಕೆಣಕದೆ ಬಂದೆಯೋ ಮೇಣು ।
ಉಳುಹಿ ಬಿಡುವನೆ ಸಮರಮುಖದಲಿ
ಮಲೆತನಾದರೆ ಕರ್ಣನೇನ
ಗ್ಗಳಿಕೆವಡೆದನೊ ಶಿವಶಿವಾ ಎಂದರಸ ಬಿಸುಸುಯ್ದ ॥ ೧೪

ಜೀಯ ಖಾತಿಯಿದೇಕೆ ಕರ್ಣನ
ಕಾಯಿದುಳುಹಿದೆನೊಂದು ಬಾರಿ ವಿ
ಘಾಯದಲಿ ಘಟ್ಟಿಸುವೆನೀಗಳೆ ಹಾಯ್ಕು ವೀಳೆಯವ ।
ರಾಯದಳಗಳವೆನ್ನ ಕೂಡೆ ನ
ವಾಯಿಯೋ ಕಲಿ ಕರ್ಣನಾಯುಷ
ಹೋಯಿತಿದೆಯೆಂದೊರಸಿದನು ವಾಮಾಂಘ್ರಿಯಲಿ ನೆಲನ ॥ ೧೫

ಈಸು ಪರಿಯಲಿ ನಿಮ್ಮ ಚಿತ್ತದೊ
ಳಾಸಱಾಯಿತೆ ನಮ್ಮ ದುಷ್ಕೃತ
ವಾಸನಾಫಲವೈಸಲೇ ತಾನಿದ್ದು ಫಲವೇನು ।
ಆ ಸುಯೋಧನವಿಗಡಭ[1]ಟ[1]ವಾ
ರಾಸಿಯನು ಮುಕ್ಕುಳಿಸುವೆನು ಧರ
ಣೀಶ ನಿಮ್ಮಡಿಯಾಣೆ ನೇಮವ ಕೊಂಡೆ ನಾನೆಂದ ॥ ೧೬

ನಾಲಗೆಯ ನೆಣಗೊಬ್ಬು ಮಿಕ್ಕು ಛ
ಢಾಳಿಸಿದರೇನಹುದು ಕರ್ಣನ
ಕೋಲ ಗಱ ಸೋಂಕಿದರೆ ಸೀಯದೆ ಸಿತಗತನ ನಿನಗೆ ।
ವೀಳೆಯವ ತಾ ಕರ್ಣನಾಯುಷ
ಕೋಳುವೋಯಿತ್ತೆಂಬ ಗರ್ವನ
ಗಾಳುತನವನು ನಂಬಲಱವೆನೆ ಪಾರ್ಥ ಹೇಳೆಂದ ॥ ೧೭

[1] ಲ (ತ.ದ.ನ).

ನಿನಗೆ ಮಣಿವವನಲ್ಲ ರಾಧಾ
ತನಯನವ ಹೆಬ್ಬಾಳು ಕಡ್ಡಿಯ
ಮೊನೆಗೆ ಕೊಂಬನೆ ನಿನ್ನ[1]ನೀ ಹೆಮ್ಮಕ್ಕಳಿದಿರಿನಲಿ[1] |
ಕನಲಿ ಕಳವಳಿಸಿದರೆ ನೀನಾ
ತನ ವಿಭಾಡಿಸಲಾಪ ಸತ್ವದ
ಮನವ ಬಲ್ಲೆನು ಪಾರ್ಥ ನುಡಿಯದಿರೆಂದನಾ ಭೂಪ || ೧೮

ಬಲನ ಜಂಭನ ಕೈಟಭನ ದಶ
ಗಳನ ನಮುಚಿಯ ಕಾಲನೇಮಿಯ
[2]ಬಲ ನಿಶುಂಭ[2] ಹಿರಣ್ಯಕಾದಿಯ ಖಳರ ಸಂದೋಹ |
ಅಳವಿಗೊಡುವರೆ ಪಾಡಹುದು ನೀ
[3]ನಿಲುಕಲಳವೇ ಕರ್ಣ[3]ಜಯುವತಿ
ಸುಲಭವೇ ನಿನ್ನಂದದವರಿಗೆ ಪಾರ್ಥ ಹೇಳೆಂದ || ೧೯

ಜಾಣತನದಲಿ ಕಾದಿ ಹಿಂಗುವ
ದ್ರೋಣನಲ್ಲಳವಿಯಲಿ ಕಳವಿನ
ಕೇಣದಲಿ ಕೊಂಡಾಡುವರೆ ಗಾಂಗೇಯನಿವನಲ್ಲ |
ಸಾಣೆಗಂಡಲಗಿವನು ಸಮರಕೆ
ಹೂಣಿಗನು ರಿಪುಬಲದ ಹಾಣಾ
ಹಾಣಿಕಾಱನು ಕರ್ಣನಳುಕುವನಲ್ಲ ನಿನಗೆಂದ || ೨೦

[4]ಜಾಳ ಜಱೆದು[4] ಜಡಾತ್ಮರಿಗೆ ಜಂ
ಘಾಳತನವನು ಮೆಱೆದು ಮೋಡಿಯ
ಖೂಳರನು ಜೊಪ್ಪರಿಸಿ ಚಟುಣಿಯ ಚರರ ಚಪ್ಪರಿಸಿ |
ಆಳುತನದಲಿ ಬೆಱೆವ ನಿನಗವ
ಸೋಲಲಱಿಯನು ನಿನ್ನ ಗಂಟಲ
ಗಾಳ ನಿನಗಳುಕುವನೆ ಕರ್ಣನು ಪಾರ್ಥ ಹೇಳೆಂದ || ೨೧

ಏನ ಹೇಳುವೆನೆನ್ನ ದಳದಲಿ
ತಾನು ಭೀಮನ[5] ಘಟ್ಟಿನಲಿ ಬಳಿ
ಕೀ ನಕುಲ ಸಹದೇವ ಸಾತ್ಯಕಿ ದ್ರುಪದರೊಡ್ಡಿನಲಿ |

---

[1] ನಿನ್ನ ವೀರವ ಹೆಂಗಳದಿರಿನಲಿ (ಕ.ಗ). [2] ಬಲಿ ನಿಕುಂಭ (ಖ.ಫ). [3] ನಿಲುವಳವೆ ಕರ್ಣನ (ಕ.ಚ.ಟ.ನ). [4] ಜಾಳು ಜರಡು (ಖ.ಫ). [5] ಪವಮಾನ ತನಯನ (ಕ.ಗ).

ಮಾನನಿಧಿ ರಾಧೇಯನತ್ತಲು
ತಾನೆ ತನುಮಯವಾಯ್ತು ಪಾಂಡವ
ಸೇನೆ ಬಡಸಾಹಸಿಕ[1]ರೆಣೆಯೇ[1] ಸೂತತನಯಂಗೆ ‖ ೨೨

ಎಲ್ಲಿ ಕರ್ಣನು ತಿರುಗಿ ನೋಡಿದ
ಡಲ್ಲಿ [2]ತಾನೆಡವಂಕ ಬಲಮುಖ
ದಲ್ಲಿ[2] ಸೂತಜನೆಂಟುದೆಸೆಗಳ ನೋಡೆ ಕರ್ಣಮಯ ।
ಎಲ್ಲಿ ನೋಡಿದಡಲ್ಲಿ ಕರ್ಣನ
ಬಿಲ್ಲ ಬೊಬ್ಬೆ ರಥಾಶ್ವರವವೆದೆ
ದಲ್ಲಣದ ದೆಖ್ಖಾಳ ರಚನಾರಸಿಕನವನೆಂದ ‖ ೨೩

ಮುಱಿದು ಹಱಿಹಂಚಾದ ನಿಜಮೋ
ಹರವ ನೆಱೆ ಸಂತೈಸಿ ಜೋಡಿಸಿ
ಜಱೆದು ಗಱಿಗಟ್ಟಿದ ವಿರೋಧಿವ್ರಜದ ಥಟ್ಟಣೆಯ ।
ಮುಱಿದು ಕುಱಿದಱಿಮಾಡಿ ದೊರೆಗಳ
ನರಸಿ ಕಾದಿ ವಿಭಾಡಿಸುವ ರಣ
ದುಱುಬೆಕಾಱನನೆಂತು ಸೈರಿಸಿ ಗೆಲುವೆ ನೀನೆಂದ ‖ ೨೪

ಕಾದಿ ನೊಂದೆನು ತಾನು ಬಳಿಕ ವೃ
ಕೋದರನೆಯ್ದಡಹಾಯ್ದನಾತನ
ಕಾದಿ ನಿಲಿಸಿ ಮದೀಯ ರಥವನು ಮತ್ತೆ ಕೆಣಕಿದನು ।
ಮೊದಲಿಸಿ ಸಹದೇವ ನಕುಲರು
ಕಾದಲವದಿರ ಮುಱಿದನಗ್ಗದ
ಕೈದುಕಾಱರ ದೇವ [3]ಕರ್ಣನ[3] ಗೆಲುವರಾರೆಂದ ‖ ೨೫*

ಮಲೆತು ಧಾಳಾಧೂಳಿಯಲಿ ಬಲ
ಸುಳಿ ಮಸಗಿಯೆನ್ನೊಬ್ಬನ[4]ನು[4] ಮೈ
ಬಳಸಿ ಕಾದಿತು ವೀರ ಕರ್ಣನ ಕೂಡೆ ತಲೆಯೊತ್ತಿ ।
ಒಲವರವು ನಿನಗುಳ್ಳರಾಗಳೆ
ನಿಲಿಸಿದಾ ನೀ ಬಂದು ಬಯಲ
ಗ್ಗಳಿಕೆ[5]ಯನೆ ಬಿಡೆ ಕೆದಱುತಿಹೆ ಮಾಣೆಂದು ನೃಪ ನುಡಿ[5]ದ ‖ ೨೬

[1] ರಿದಿರೇ (ಕ.ಖ.ಗ). [2] ರವಿಸುತನೆಡಬಲಂಗಳೊಳೆಲ್ಲ (ಕ). [3] ನಾತನ (ಟ.ತ.ನ.ಬ). * ಈ ಪದ್ಯವು (ಚ.ಪ). ಪ್ರತಿಗಳಲ್ಲಿಲ್ಲ. [4] ನೆ (ಕ.ದ.ನ). [5] ಗಳ ಬಿಡು ಬೆರೆವುತಿಹೆ ನೀನೆಂದನಾ ಭೂಪ (ಟ.ದ).

ಉಕ್ಕಿದುದು ತನಿವೀರರಸ ಕುದಿ
ದುಕ್ಕಿ ಹರಿದುದು ರೌದ್ರರಸವವ
ಟಕ್ಕಜವ ನಥಕೊತ್ತಿ ಪರಿದುದು [1]ಶಾಂತಿ[1]ರಸ ಲಹರಿ |
ಮಿಕ್ಕು ಬಹಳಕ್ರೋಧವೊಡಲೊಳ
ಗುಕ್ಕಿತಮಳೋತ್ಸಾಹ ಚಾಪಳ
ಸುಕ್ಕಿತೊಂದೇ ನಿಮಿಷ ಮೋನದೊಳಿರ್ದನಾ ಪಾರ್ಥ ॥ ೨೭

ಹೇಳಲಂಜುವೆನಾ ಸುಶರ್ಮಕ
ನಾಳು ತಾಯಿಗೆ ಮಕ್ಕಳಾಗದೆ
ಬೀಳಹೊಯ್ದು ನಿಹಾರದಲಿ ತಿರುಗಿದೆನು ಹರಿಸಹಿತ |
ಕೋಲ ಗುರುವಿನ ಮಗನಲೇ ಹರಿ
ಧಾಳಿಹರಿದಡಗಟ್ಟಿ ತಡೆದನು
ಹೇಳಿ ಫಲವಿನ್ನೇನೆನುತ ಬಿಸುಸುಯ್ದನಾ ಪಾರ್ಥ ॥ ೨೮

ಇಟ್ಟಣಿಸಿಕೊಂಡೆನ್ನೊಡನೆ ಸರಿ
ಗಟ್ಟಿ ಕಾದಿದ ರವಿಸುತನ ಹುಡಿ
ಗುಟ್ಟಿದೆನು ರಥವಾಜಿ ಸೂತ ಶರಾಸನಾದಿಗಳ |
ಮುಟ್ಟೆ ಬಂದನು ಖಡುಗದಲಿ ಮ್ಯೊ
ಮುಟ್ಟಿ ಹೆಣಗಿದೆನಾಕ್ಷಣಕೆ ಸಾ
ಲಿಟ್ಟು ಸರಿದುದು ಸಕಲ ಕೌರವಸೇನೆ ಸರಿಸದಲಿ ॥ ೨೯*

---

[1] ಶೌರ್ಯ (ಟ.ದ). * ಈ ಪದ್ಯವಾದಮೇಲೆ (ಕ) ಪ್ರತಿಯಲ್ಲಿ ಮುಂದಿನೆರಡು ಪದ್ಯಗಳು ಹೆಚ್ಚಾಗಿವೆ :—

ಬಂದ ಕೌರವಬಲವ ನಿಮಿಷಕೆ
ಹಿಂದು ಮುಂದನೆ ಮಾಡಿದೆನು ಬಳಿ
ಸಂದು ಬರುತಿರೆ ಕೃಷ್ಣ ಕಂಡನು ಪವನನಂದನನ |
ನಿಂದು ನಿಮ್ಮಯ ಕ್ಷೇಮಕೌಶಲ
ದಂದವನು ಬೆಸಗೊಳಲು ಸೇನಾ
ವೃಂದ ಕವಿದುದು ಮತ್ತೆ ಕೌರವರಾಯ ಮೊದಲಾಗಿ ॥ ೧

ಕಡುಹು ಮಿಗಲೀ ಕೌರವನ ಬಲ
ನಡೆದು ಬರುತಿರೆ ಧಾರಣಿಯ ಮಿಗೆ
ನಡುಗೆ ತೆರಪಿಲ್ಲೆನಲು ಪವನಜನೆಂದನೆನ್ನೊಡನೆ |
ತಡವೆಸಿನಿತು ಮನೀಕ್ಷಣಕೆ ನೀ
ನೊಡೆಯನಿರವನು ನೋಡಿ ಬಾಯೆನೆ
ತಡವು ತೋರಿತು ನಿಮ್ಮ ಚಿತ್ತದೊಳೆನಲು ನೃಪ ನುಡಿದ ॥ ೨

ತೊಡಕಿದನು ಗಡ ಗರುಡ ಹಾವಿನ
ತಡಿಕೆವಲೆಯಲಿ ನಿನ್ನ ಗಮನವ
ತಡೆದರೈ ತಪ್ಪೇನು ಕೌರವ ದಳದ ನಾಯಕರು ।
[1]ಕಡುಹಿನಲಿ ತಡವಾದುದುಳಿದಂ
ತೆಡೆಯಲುಳಿವರ್ಜುನನೆ ನಮ್ಮವ
ಗಡವ[1] ಕೇಳಿದು ನಿಲ್ಲನೆಂದನು ನಗುತ ಯಮಸೂನು ॥ ೩೦

ಏನನೆಂಬೆನು ನಮ್ಮ ಪುಣ್ಯದ
ಹಾನಿ ತಲೆದೋಱದರೆ ಭೀಮನ
ಸೂನುವಿರಲಭಿಮನ್ಯುವಿರಲೆಮಗೀ ವಿಪತ್ತಹುದೆ ।
ಆ ನದೀಜ ದ್ರೋಣರಲ[2] ತಾ
ಹಾನಿಯನು ಮಿಗೆ ಕಂಡೆನೇ ನೆಱೆ
ಹೀನನನು[2] ಕಂಡಾದಡೆಯು ಬದುಕುವುದು ಲೇಸೆಂದ ॥ ೩೧

ಅರಳಿಚದೆ ಮಧುಮಾಸ ಮಾಣಲಿ
ವರುಷಋತುವೇ ಸಾಕು ಜಾತಿಗೆ
ಜರಡರೆಮಗಿನ್ನೇನು ಪೂರ್ವಪ್ರಕೃತಿವನವಾಸ ।
ಸಿರಿಗೆ ಕಕ್ಕುಲಿತೆಯೆ ವಿಪಕ್ಷವ
ಬೆರಸಿ ಬದುಕುವೆವೈಸಲೇ ವರ
ಗುರುವಲಾ ಧೃತರಾಷ್ಟ್ರನೂಣೆಯವೇನು ಹೇಳೆಂದ ॥ ೩೨

ಬಱದೆ ಬಯಸಿದಡಹುದೆ ರಾಜ್ಯದ
ಹೊಱಗೆಯನು ನಿಶ್ಶಂಕೆಯಲಿ ಹೊ
ಕ್ಕಱದು [3]ಬಹ ಸತ್ವಾತಿಶಯ[3] ಬೇಹುದು ರಣಾಗ್ರದಲಿ ।
ಇಱದು ಮೇಣ್ ರಿಪುರಾಯರನು ಕು
ಕ್ಕಱಸುವರೆ ರಾಧೇಯನಂತಿರ
ಲುಱುವನೊಬ್ಬನೆ ಬೇಹುದಲ್ಲದಡಿಲ್ಲ ಜಯವೆಂದ ॥ ೩೩

---

[1] ತಡವಿನಲಿ ತಡ ವಾಯ್ತುತ್ಥಳಿದಂ। ತೆಡೆಯಲುಳಿದರ್ಜುನಗೆ ನಮ್ಮವ।ಗಡವ (ಕ.ದ). [2] ವೇಣೀ ನಿರೋಧವ ಕಂಡೆವೇ ಕಾನೀನನು (ಟ.ತ.ಪ.ಬ). [3] ಮರಳುವ ಸತ್ವ (ಕ.ಗ).

ಎವಗೆ ವಿಕ್ರಮವೆಂಬಡೀ ರೌ
ರವವ ಕಂಡೆನು ಕರ್ಣನಂತಿರ
ಲವಗೆ ಧೀವಸಿಯಾಗಿ ಕಾದುವರೆಂಬರವರಿಲ್ಲ ।
ಬವರ ಗೆಲುವರೆ ಹರಿಗೆ ಕೊಡು ಗಾಂ
ಡಿವವ ಸಾರಥಿಯಾಗು ನೀನೆಂ
ದವಗಡಿಸಿದನು ವೀರನಾರಾಯಣನ ಮೈದುನನ ॥ ೩೪

ಹದಿನಾಜನೆಯ ಸಂಧಿ ಮುಗಿದುದು.

# ಹದಿನೇಳನೆಯ ಸಂಧಿ

ಸೂಚನೆ॥ ರಾಯನನು ಕೆಡೆನುಡಿದನಾ ವ
ಜ್ರಾಯುಧನ ನಂದನನು ಬಳಿಕಬು
ಜಾಯತಾಂಬಕ ಸಂತವಿಟ್ಟನು ಧರ್ಮಜಾರ್ಜುನರ ॥

ಕೇಳು ಧೃತರಾಷ್ಟ್ರಾವನಿಪ ಭೂ
ಪಾಲನಾಡಿದ [1]ನುಡಿಯನಾಲಿಸಿ
ಕೇಳಿದನು ಕೆದಱಿದನು ಜಡಿದವು ರೋಮರಾಜಿಗ[1]ಳು ।
ಮೇಲುಮೇಲುಬ್ಬೇಳ್ವ ರೋಷ
ಜ್ವಾಲೆ ಹೊದಸಿತು ವದನವನು ಕ
ಣ್ಣಾಲಿ ಕಾಹೇಱಿದವು ಪಾರ್ಥಂಗೊಂದು ನಿಮಿಷದಲಿ ॥ ೧

ಆಯುಧವ ಹಿಡಿದೊಱೆಯನುಗಿದನ
ಡಾಯುಧವ ಝಳಪಿಸುತ ರೌದ್ರ
ಸ್ಥಾಯಿಭಾವದ ಭಾರದಲಿ ಭುಲ್ಲಯಿಸಿ ಭಯವಡಗಿ ।
ರಾಯನಲ್ಲಿಗೆ ಮೆಲ್ಲಮೆಲ್ಲನು
ಪಾಯಗತಿ ಪಲ್ಲವಿಸಲುಪ್ಪರ
ಘಾಯದಲಿ ಲಾಗಿಸುವ ಪಾರ್ಥನ ಕಂಡುದಖಿಳಜನ ॥ ೨

ಅಹಹ ಕೈತಪ್ಪಾಯ್ತು ಹಾ ಹಾ
ರಹವಿದೇನೇನೆನುತ ರಾಯನ
ಮಹಿಳೆ ಬಿದ್ದಳು ಮೇಲುಖಡ್ಗಕೆ ತನ್ನ[2]ನಡೆ[2]ಯೊಡ್ಡಿ ।
ಬಹಳ ಶೋಕದಲಖಿಳ ಜನವು
ಮ್ಮಹವ ಬಿಸುಟರು ದೈವಗತಿ ದು
ಸ್ಸಹವಲಾ ಎನುತಸುರರಿಪು ಹಿಡಿದನು ಧನಂಜಯನ ॥ ೩

ಹಿಡಿಯದಿರು ಮುರವೈರಿ ಪಾರ್ಥನ
ಬಿಡು ಬಿಡೀತನ ಖಡ್ಗಕಿದೆಯೆ
ನ್ನೊಡಲು ತನ್ನನೆ ಧಾರೆಯೆಱೆದೆನು ನಯನವಾರಿಯಲಿ ।

---

[1] ವಾಗ್ವಿರಾಸವನಾಲಿಸಿಯು ಕಲಿಪಾರ್ಥ ಕುದಿದನು ಕೋಪ ತಾಪದಲ (ಟ.ದ). [2] ನೆಡೆ (ಗ.ಟ.ದ), ವ್ಯೆ (ಪ.ಬ).

ತೊಡಗಿದೀತನ ರಾಜಕಾರ್ಯವ
ಕೆಡಿಸದಿರು ನಿರ್ವಹಿಸಲಿ ನೀ
ಬಿಡು ಬಿಡೆನೆ ಜಱೆದನು ಮುರಾಂತಕನಿಂದ್ರನಂದನನ॥ ೪

ಅಕಟ ಗುರುಹತ್ಯಾಮಹಾಪಾ
ತಕಕೆ ತಂದ್ಯೆ ಮನವ ಭರತ
ಪ್ರಕಟಕುಲನಿರ್ಮೂಲಕನೆ ನೀನೊಬ್ಬನುದಿಸಿದಲ ।
ವಿಕಳ ಕುರುನೃಪರೊಳಗೆ ದುರಿತಾ
ತ್ಮಕರ ಕಾಣೆನು ನಿನ್ನ ಸರಿಹೋ
ಲಿಕೆಗೆ ಹರಹರದೇನ ನೆನೆದನೆನುತ್ತ ಗರ್ಜಿಸಿದ ॥ ೫

ಧರಣಿಪನ ಕೊಲಲೆಂದೊ ಮೇಣೀ
ತರುಣಿಯರಿಗೋ ನಕುಲ ಸಹದೇ
ವರಿಗೆಯೋ ಮೇಣೆನಗೆಯೋ ನೀನುಗಿದಡಾಯುಧದ ।
ಪರಿಯ ಹೇಳ್ವೈ ಪಾರ್ಥ ಮೋನದೊ
ಳಿರದಿರೆನ್ನಾಣೆನಲು ಬೆಱಗಿನ
ಗರದ [1]ಗಾಹಿನಲದ್ದು[1] ಮೋನದೊಳಿದ್ದನಾ ಪಾರ್ಥ ॥ ೬

ಬೆದಱಿಸದಿರ್ರೈ ಕೃಷ್ಣ ದುಷ್ಕ
ರ್ಮದಲಿ ಸುಳಿಯೆನು ಭೂಪತಿಯು ಗ
ದ್ಗದವಚೋವಿನ್ಯಾಸವನ್ಯಾಯಪ್ರಪಂಚವಿದು ।
ಅದಱನೀತನ ಪ್ರೇಯ್ದು ಕೊಂದ
ಲ್ಲದೆ ಸುನಿಷ್ಕೃತಿಯಿಲ್ಲ ಸತ್ಯಾ
ಭ್ಯುದಯವೇ ತನ್ನುದಯವದಱಳಿವೆನ್ನ ಲಯವೆಂದ ॥ ೭

ದೇವ ಪೂರ್ವದಲೆನ್ನ ನುಡಿ ಗಾಂ
ಡೀವವೇತಕೆ ನಿನಗೆ ನಿನಗೀ
ದೇವಧನು ಸಾದೃಶ್ಯವೇ ತೆಗೆಯೆಂದು ರೋಷದಲಿ ।
ಆವನೊಬ್ಬನು ನುಡಿದನಾತನ
ಜೀವನವ ಜಕ್ಕುಲಿಸಿಯೆನ್ನ ವ
ಚೋವಿಳಾಸವ ಕಾಯ್ವೆನೆಂದೆನು ಕೃಷ್ಣ ಕೇಳೆಂದ ॥ ೮

---

[1] ಘಾಡದಲದ್ದು (ಕ).

ಸಾರು ತೆಗೆ ಗಾಂಡಿವವ ನಿನಗನು
ಸಾರಿಯೇ ಬಿಸುಡೆಂದು ನುಡಿಯನೆ
ಧಾರುಣೀಪತಿ ಕೇಳಿರೇ ನೀವಿನಿಬರೀ ನುಡಿಯ ।
ಆರದನ್ಯಾಯವು ವಿಚಾರವಿ
ಶಾರದನು ನೀನೆಲೆ ಮುಕುಂದ ವಿ
ಕಾರಿಯೇ ತಾನೆಂದು ಬಿನ್ನಹಮಾಡಿದನು ಪಾರ್ಥ ॥ ೯

ಲೇಸು ಲೇಸಿದು ತಮ್ಮನಾಡಿದ
ಭಾಷೆ ಬಾಹಿರವಾಗಬೇಡ ವಿ
ನಾಶಕಾನಂಜೆನು ಮುರಾಂತಕ ಬಿಡು ಧನಂಜಯನ ।
ಆಸೆಯೆನಗೀ ರಾಜ್ಯದಲಿ ಮೇ
ಣೀ ಶರೀರದಲಿಲ್ಲ ಪಾರ್ಥನ
ಭಾಷೆ ಸಂದರೆ ಸಾಕು ನೀ ಸಾರೆಂದನಾ ಭೂಪ ॥ ೧೦

ಮರುಳೆ ಮೋನದೊಳಿರು ಯುಧಿಷ್ಠಿರ
ನರನ ನೀ ಮುಂದಿಟ್ಟು ಯಮದೂ
ತರಿಗೆ ಕೈವರ್ತಿಸುವ ಪರಿಯೇ ಕೋಟಿನರಕದಲಿ ।
ಹುರುಳನಱಿಯದೆ ಧರ್ಮಶಾಸ್ತ್ರದ
ಪರಮತತ್ತ್ವವದಾವ ಮುಖವೆಂ
ದಱಿಯೆ ವಿಷಮಕ್ಷತ್ರತಾಮಸ ನಿನ್ನ ಬಿಡದೆಂದ ॥ ೧೧

ಎಲೆ ಧನಂಜಯ ಧರ್ಮಪುತ್ರನ
ಕೊಲುವೆನುಳುಹುವದಿಲ್ಲವೆಂಬ
ಗ್ಗಳಿಕೆಯಿದು ನಗೆಯಲ್ಲವೇ ನಿಶ್ಚಯವೆ ಹಿಂಸೆಯಲಿ ।
ಕಲು[1]ಮನವ[1]ಲಾ ನಿನಗಕಟ ನಿ
ರ್ಮಳದ ಧರ್ಮಸ್ಥಿತಿರಹಸ್ಯವ
ತಿಳುಪಿದವರಾರೆನುತ ತಲೆದೂಗಿದನು ಮುರವೈರಿ ॥ ೧೨

ನುಡಿ[2]ದ ಮಾತ್ರ[2]ದಲಿರದು ಧರ್ಮದ
ಬೆಡಗು ತಾನದು ಬೇಱೆ ಸತ್ಯವ
ನುಡಿದು ಕೆಟ್ಟವರುಂಟು ಹಿಂಸಾಧರ್ಮವೃತ್ತಿಯಲಿ ।

---

[1] ಮರನ (ಕ.ಗ). [2] ಯಧರ್ಮ (ಟ.ಕ.ಬ), ಯಮಾರ್ಗ (ದ.ನ).

ನಡೆದು ಯಾವಜ್ಜೀವದಲಿ ಗತಿ
ಪಡೆದರುಂಟೆಲೆ ಪಾರ್ಥ ನಿನ್ನು
ಗ್ಗಡದ ವೀರಾವೇಶ ಮಾಣಲಿ ಮಾತ ಕೇಳೆಂದ ॥ ೧೩

ವನದೊಳೊಬ್ಬನು ಕೌಶಿಕಾ[1]ಹ್ವ[1]ಯ
ಮುನಿ ತಪಶ್ಚರಿಯದಲಿ ಸತ್ಯವೆ
ತನಗೆ ಸುವ್ರತವೆಂದು ಬಟ್ಟೆಯೊಳಿದ್ದನೊಂದು ದಿನ ।
ವನಚರರು ಬೇಹಿನಲಿ ಭೂಸುರ
ಜನವ ಬೆಂಬತ್ತಿದರು ಕೌಶಿಕ
ಮುನಿಯ ಬೆಸಗೊಂಡರು ಮಹೀಸುರವಾರ್ಗಸಂಗತಿಯ ॥ ೧೪

ವಿತತ ಸತ್ಯದ ವಿಷಯಭೇದ
ಸ್ಥಿತಿಯನಱಿಯದೆ ಮುನಿಪ ವನಚರ
ತತಿಗೆ ಭೂಸುರ ಜನದ ಮಾರ್ಗವನಱುಹಿದನು ಬಳಿಕ ।
ಅತಿದುರಾತ್ಮಕರವದಿರನಿಬರು
ಕ್ಷಿತಿಸುರರ ಕೊಂದಮಳಭೂಷ
ಪ್ರತತಿಯನು ಕೊಂಡೊಯ್ದರೆಲೆ ಕೌಂತೇಯ ಕೇಳೆಂದ ॥ ೧೫

ಕಾಲವಶದಲಿ ಕೌಶಿಕನನಾ
ಕಾಲದೂತರು ತಂದರಾತನ
ಮೇಲುಪೋಗಿನ ಸುಕೃತದುಷ್ಕೃತವನು ವಿಚಾರಿಸಲು ।
ಮೇಲನಱಿಯದೆ ಸತ್ಯದಲಿ ವಿಪ್ರಾ
ವಳಿಯ ವಧೆಯಾತಂಗೆ ಬಂದುದು
ಹೇಳಲದು ಭೋಕ್ತವ್ಯವತಿಪಾತಕದ ಫಲವೆಂದ ॥ ೧೬

ನರಕಕಾತನ ನೂಕಿದರು ವಿ
ಸ್ತರಣವೆಂತೈ ಪಾರ್ಥ ಸತ್ಯದ
ಹುರುಳನಱಿಯದೆ ಕಾಳುಗೆಡೆದರೆ ಕಾರ್ಯವೆಂತಹುದು ।
ಮರುಳೆ ಕೇಳದ್ಭುತವ ಹಿಂಸಾ
ಪರನಹರ್ನಿಶವಾ ದುರಾತ್ಮನ
ಪರಿಸಿದರು ದೇವಾಂಗನೆಯರೀ ಕಥೆಯು ಕೇಳೆಂದ ॥ ೧೭

[1] ನ್ನ (ಕ.ಚ.ನ).

ಬನದೊಳೊಬ್ಬ ಬಳಾಕನೆಂಬವ
ವನಚರನು ತನ್ನಯ ಕುಟುಂಬವ
ನನುದಿನವು ಮೃಗವಧೆಯಲೇ ಸಲಹಿದನು ಬೇಸಱವೆ ।
ತನಗೆ ಕಡೆಪರಿಯಂತ ಮತ್ತೊಂ
ದನುವನಱಿಯನು ರಾಗಲೋಭವ
ನೆನೆಯನದಱಿಂ ಹಿಂಸೆ ಸಂದುದು ವೃತ್ತಿರೂಪದಲಿ ॥ ೧೮

ವರವವಂಗೆ ಕುಟುಂಬರಕ್ಷಾ
ಕರಣಕಾರಣವಾದ ಹಿಂಸಾ
ಚರಣೆಯೆಂದೇ ಬರಹ ಧರ್ಮನ ಸೇನಬೋವನಲಿ ।
ಮರಣವಾತಂಗಾಗೆ ಕೊಂಡೊ
ಯ್ದರು ಸುರಾಂಗನೆಯರು ಧನಂಜಯ
ಪರಮಧರ್ಮರಹಸ್ಯವಾವಂಗಱಿಯಬಹುದೆಂದ ॥ ೧೯

ಪಿತೃಸಮೋಭ್ರಾತಾ ಎನಿಪ್ಪುದು
ಶ್ರುತಿವಚನವರಸಂಗೆ ನೀನುಪ
ಹತಿಯಮಾಡಲು ನೆನೆದೆ ಮಾತಿನವಾಸಿ ಬೇಕೆಂದು ।
ಕ್ಷಿತಿಯೊಳಬುಜಮೃಣಾಳಕೋಸುಗ
ಕೃತತಟಾಕವನೊಡೆದವೊಲು ಭೂ
ಪತಿವಧವ್ಯಾಪಾರ ನಿರ್ಮಳಧರ್ಮವಹುದೆಂದ ॥ ೨೦

ಗುರುಹತಿಯೆ ಕರ್ತವ್ಯ ತಾನಾ
[1]ದ[1]ರಿಸಿ ಮಾಡಿದ ಮಾತನೇ ಪತಿ
ಕರಿಸುವುದು ಶ್ರುತಿವಿಹಿತಧರ್ಮವಿದೆಂಬುದೀ ಲೋಕ ।
ಎರಡರಭ್ಯಂತರವ ನೀನೇ
ನಱಿಯದವನೇ ವೇದಶಾಸ್ತ್ರದ
ವರನಿಧಾನಜ್ಞಾತೃವಲ್ಲಾ ಪಾರ್ಥ ನೀನೆಂದ ॥ ೨೧

ಈಸು ನಿರ್ದಯನೆಂಬುದನು ನಾ
ವೀಸುದಿನವಱಿಯೆವು ಮಹಾದೇ
ವೇಸುಪರಿಯಂತಿದ್ದುದೋ ನಿನ್ನಂತರಂಗದಲಿ ।

---

[1] ಚ (ಗ.ತ).

ಏಸನೋದಿದಡೇನು ಪಾಪವಿ
ಳಾಸರಚನಾರೌರವಾತ್ಮರ
ವಾಸನೆಗಳ[1]ವು ಬೇಱೆ[1] ಹರಹರ ಎಂದನಸುರಾರಿ ॥ ೨೨

ನೆನೆದುದಂತಃಕರಣ ಮಧುಸೂ
ದನನ ಸೂಕ್ತಿಸುಧಾರಸದಿ ನೆಱೆ
ನೆನೆದುದಾತನ ಮೈ ವಿಲೋಚನ ವಾರಿಪೂರದಲಿ ।
[2]ಘ[2]ನದ ಪರಿತಾಪವ್ಯಥಾದು
ರ್ಮನನು ಖಡ್ಗವನೊಱೆಯೊಳೌಕುತ
ವಿನಯದಲಿ ಕೃಷ್ಣಂಗೆ ಬಿನ್ನಹ ಮಾಡಿದನು ಪಾರ್ಥ ॥ ೨೩

ನಾವು ನೆಱೆ ಸರ್ವಾಪರಾಧಿಗ
ಳಾವ ಗುಣದೋಷವನು ನಮ್ಮಲಿ
ಭಾವಿಸುವೆ ನಾವೆತ್ತ ಬಲ್ಲೆವು ಧರ್ಮನಿರ್ಣಯವ ।
ಆವ ಪರಿಯಲಿ ತನ್ನ ಸತ್ಯದ
ಠಾವು ನಿಲುವುದು ರಾಯನುಪಹತಿ
ಯಾವ ಪರಿಯಿಂದಾಗದಿಹುದದನಱಿದು ಬೆಸಸೆಂದ[3] ॥ ೨೪

ಭರತವಂಶದೊಳುದಿಸಿದೆಮ್ಮ ತ್ರಿ
ವರಿಗೆ[4] ಇಹಲೋಕದ[4] ನಿವಾಸಕೆ
ಪರದ ಸೌಖ್ಯಸ್ಥಿತಿಗೆ ಹೊಣೆ ನೀನಲ್ಲದೆಮಗಾರು ।
ದುರುಳರಾವನ್ವಯದಮದದ ದು
ರ್ಧರಪರಾಕ್ರಮದಮದದ ಘನ ಮ
ತ್ತರಿಗೆ ಕೃಪೆಮಾಡೆಂದು ಬಿನ್ನಹಮಾಡಿದನು ಪಾರ್ಥ ॥ ೨೫

ಕೊಲುವುದೇನೊಂದರಿವೆ ಟಿಕ್ಕರಿ
ಗಳೆವುದೇ ಪರಹಿಂಸೆ ಲೋಗರ
ಹಳಿವುದೇ ವಧೆ ಶಸ್ತ್ರವಧೆ ವಧೆಯಲ್ಲ ನೋಡುವರೆ ।
ಖಳರ ದುಸ್ಸಹ ದುಷ್ಟವಚನದ
ಹಿಳುಕು ಹೃದಯವ ಕೊಂಡು ಮಱುಮೊನೆ
ಮೊಳೆತ ಬಳಿಕವ ಬದುಕಿದವನೇ ಪಾರ್ಥ ಹೇಳೆಂದ ॥ ೨೬

---

[1] ಧ್ರುವವೆ (ಕ.ಗ.ಚ.ತ.ನ). [2] ಘ (ನ.ಬ). [3] ಯೆಂದೆನಿಸುವುದು ನೀ ದೆಸಸಬೇಕೆಂದ (ಕ.ಗ.ಚ.ಟ ನ). [4] ಲೋಕದ ನಿಜ (ಕ.ಗ.ಟ.ತ.ನ).

ಅರಸಗುಪಹತಿಯೆನಿಸದೇ ನಿ
ಷ್ಠುರದುರುಕ್ತಿಕೃಪಾಣದಲಿ ಸಂ
ಹರಿಸಿದರೆ ನಿರ್ವಾಹವಾಗದೆ ನಿನ್ನ ನುಡಿಗಳಿಗೆ ।
ಪರಮಋಷಿಮತವೆನೆ ಮುರಾರಿಯು
ಸಿರಿವಚನಕೆ ಹಸಾದವೆಂದು
ಬ್ಬರದ ಗರ್ವೋಕ್ತಿಯಲಿ ಗರುವಿಕೆಗೆಡಿಸಿದನು ನೃಪನ ॥ ೨೭

ಎಲೆ ಯುಧಿಷ್ಠಿರ ಜನಿಸಿದ್ಯೆ ಶಶಿ
ಕುಲದ ವೀರಕ್ಷತ್ರಪಂಕ್ತಿಯೊ
ಳೆಳಮನದ ಕಾಳಿಕೆಯ ತೊಡಹದ ಗಂಡುರೂಪಿನಲಿ ।
[1]ನೆಲನ ಕೊಂಡರು ನಿನ್ನ ಮೋಹರೆಯ
ಬಲುಹ ಕಂಡೇ ಕೌರವರು ನಿ
ನ್ನೊಳಗೆ ಬಲ್ಲಿದನೆನ್ನ ಭಂಗಿಸಲೇಕೆ ನೀನೆಂದ[1] ॥ ೨೮

ನಿನ್ನ ಜೂಜಿನ ವಿಲಗದಲಿ ಸಂ
ಪನ್ನರಾಜ್ಯವ ಬಿಸುಟು ನಿನ್ನಯ
ಬೆನ್ನಲಡವಿಯಲಾಡಿದೆವು [2]ಹನ್ನೆರಡು[2] ವರ್ಷದಲಿ ।
ಮನ್ನಿಸಿದೆ ಲೇಸಾಗಿ ಕೌರವ
ರಿನ್ನು ಕೊಡುವರೆ ನಿನಗೆ ರಾಜ್ಯವ
ನಿನ್ನ ಹಿಡಿದೇ ಭೀಮ ಬದುಕಲಿ ಎಂದನಾ ಪಾರ್ಥ ॥ ೨೯

ರಣದ ಘಾರಾಘಾರಿಯಾರೋ
ಗಣೆಯ ಮನೆಯಲ್ಲರಸ ಶಿರದಲಿ
ಕುಣಿವಡಾಯ್ದಕೆ ಸುಳಿವ ಸುರಗಿಗೆ ತಿವಿವ ಬಲ್ಲೆಹಕೆ ।
ಹಣಿವ ಲೌಡಿಗೆ ಪಾಯ್ದು ಬೀಳುವ
ಕಣೆಗೆ ಖಂಡದ ರುಧಿರರಣದೌ
ತಣವ ರಚಿಸದೆ [3]ಬಱಿದೆ ರಾಜ್ಯವ ಕೊಂಬೆ ನೀನೆಂದ[3] ॥ ೩೦

ಕರುಳ ಕಂಕಣದಾರ ಮಿದುಳಿನ
ಶಿರದ ಬಾಸಿಗ ಭುಜದ ವಕ್ಷದ
ಕರದ ಘಾಯದ ತೋಳ ಬಂದಿಯ ಪದಕ ಸರಪಣಿಯ ।

---

[1] ನೆಲನ ಕೊಡುವರು ನಿನ್ನ ಮೋಹರೆಯ । ಬಲುಹ ಕಂಡರು ಕೌರವರು ನಿ। ನ್ನೊಳಗೆ ಬಲ್ಲಿದರೆಮ್ಮ ಭಂಗಿಸಲೆಂದನಾ ಪಾರ್ಥ (ಕ). [2] ಹದಿಮೂಱು (ಚ.ತ.ಪ.ಬ). [3] ರಾಜ್ಯಸಿರಿ ನಿನಗೊಲಿವಳಲ್ಲೆಂದ (ಟ.ದ).

ಅರುಣಜಲಲುಳಿತಾಂಬರದ ಸಂ
ಗರವಿವಾಹದ ಭೂಷಣದ ಸೌಂ
ದರ್ಯವಿಲ್ಲದೆ ರಾಜ್ಯಸಿರಿ [1]ನಿನಗೊಲಿವಳಲ್ಲೆಂದ[1] ‖ ೩೧

ಇಂದಿನಲಿ ಹದಿನೇಳು ದಿನವಿ
ಲ್ಲಿಂದ ಹಿಂದಣ ಬವರದಲಿ ನೀ
ನೊಂದುದುಂಟೇ ದ್ರೋಣಭೀಷ್ಮರ ಕೋಲ ತೋಹಿನಲಿ ।
ಒಂದು ತೂಱಂಬಿನಲಿ ಗಡ ನೀ
ನಿಂದು ಜೀವವ ಜಾಱಿಸುವೆ ಸುಡ
ಲಿಂದುಕುಲಕಂಟಕರನಿಱಿದರೆ ದೋಷವೇನೆಂದ ‖ ೩೨

ಎನುತ[2]ಡಾಯ್ದ[2]ವನೊಱೆಯೊಳುಗಿದ
ರ್ಜನನು ತನ್ನಯ ಕೊರಳ ಸಂದಿಗೆ
ಮನದೊಳಗೆ ಖಯಖೋಡಿಯಿಲ್ಲದೆ ಚಾಚಿದನು ಬಳಿಕ ।
ದನುಜರಿಪುವಡಹಾಯ್ದು ಪಿಡಿದೀ
ತನ ಕೃಪಾಣವ ಕೊಂಡು ನಿನ್ನಯ
ನೆನಹಿದೇನೈ ಪಾರ್ಥ ಹೇಳೆನ್ನಾಣೆ ಹೇಳೆಂದ ‖ ೩೩

ಏನ ಹೇಳುವೆನಡ್ಡಹಾಯಿದು
ನೀನೆ ಕೆಡಿಸಿದೆಯೆಮ್ಮನಲ್ಲದ
ಡೇನ ಮಾಡೆನು ಸತ್ಯಶೌರ್ಯದ ಹಾನಿಹರಿಬದಲಿ ।
ಈ ನರೇಂದ್ರನ ಕೊಂದ ನನಗಿ
ನ್ನೇನು ದೇಹಕೆ ತಲೆಯೊಡನೆ ಸಂ
ಧಾನವೇ ಸಾಕೆನ್ನ ಕೈದುವನೆನಗೆ ನೀಡೆಂದ ‖ ೩೪

ಎಲವೊ ಖೂಳ ಕಿರೀಟಿ ಮತ್ತೆಯು
ತಿಳಿಯೆಲಾ ನೀನಾವ ಪರಿಯಲಿ
ಮುಳಿದು ರಾಯನನಿಱಿದೆ ನಿನಗೆಯು ತದ್ವಿಧಾನದಲಿ ।
ಅಳಿವ ನೆನೆಯಾ ಸಾಕು ದೇಹ[3]ವ
ನಳಿವುದೇ ಕೊಲೆಯಲ್ಲ[3] ನಿನ್ನ
ಗ್ಗಳಿಕೆಗಳ ನೀನಾಡಿ ನಿನ್ನನೆ ಕೊಂದುಕೊಳ್ಳೆಂದ ‖ ೩೫

---

[1] ಬಱಿದೊಲವಳಲ್ಲೆಂದ (ಚ.ತ.ನ.ಪ). [2] ಖಡ್ಗ (ಚ.ಟ.ತ.ಪ.ಬ).
[3] ದಗಳನವೇ ಕೊಲೆಯಲ್ಲ (ಕ), ಮನಿಳುಹುವುದೆ ಕೊಲೆಯಲ್ಲ (ದ).

ಸಂದ ಪರಿಯಿದು ಜಗಕೆ ಲೋಗರ
ನಿಂದಿಸುವುದೇ ಹಿಂಸೆ ತನ್ನನೆ
ಕೊಂದವನು ತನ್ನಾಳುತನವನು ತಾನೆ ಹೊಗಳುವರೆ ।
ಎಂದಡರ್ಜುನನವನಿಪಾಲಂ
ಗೆಂದನೆನಗಿದಿರಾಗಿ ರಣದಲಿ
ನಿಂದು ಕಾದುವನಾರು ದನುಜಾಮರರ ಘಟ್ಟಿನಲಿ ॥ ೩೬

ನಾನಲಾ ದ್ರೌಪದಿಯ ಮದುವೆಯೊ
ಳಾ ನರೇಂದ್ರರ ಗೆಲಿದವನು ಬಳಿ
ಕಾ ನಿಳಿಂಪವ್ರಜವ ಮುಱಿದುರುಹಿದೆನು ಖಾಂಡವವ ।
ಏನನೆಂಬೆನು ಸಕಲ ಕೌರವ
ಸೇನೆಯನು ಗೋಗ್ರಹಣದಲಿ [1]ನಿ
ನಾನಲೇ ರಥವೊಂದಱಿಂದವೆ ಗೆಲಿದೆ ದಿಟವೆಂದ[1] ॥ ೩೭

ಬಳಿಕ ಭೀಷ್ಮನನಾರು ರಣದಲಿ
ಗೆಲಿದವನು ದ್ರೋಣಪ್ರತಾಪಾ
ನಳನ ನಂದಿಸಿದಾತನಾರು ಮಹಾಹವಾಗ್ರದಲಿ ।
ಮಲೆತು ನಿಂದರೆ ಸೂತತನಯನ
ಕೊಲುವನಾವನು ಎನ್ನ ಟಿಕ್ಕರಿ
ಗಳೆವೆ ನೀನೆನ್ನೊಡನೆ ಸೆಣಸುವ ಭಟನ ತೋಱೆಂದ ॥ ೩೮

ಉಂಟು ಫಲುಗುಣ ನಿನ್ನ ಹೋಲಿಸ
ಲುಂಟೆ ಸುಭಟರು ದೇವದೈತ್ಯರೊ
ಳೆಂಟು ಮಡಿ ನಾವಱಿಯವೇ ಕೈವಾರವೇನದಕೆ ।
[2]ಕಂ[2]ಟಣಿಸದಿರು ಕೃಷ್ಣನಿಕ್ಕಿದ
ಗಂಟಿನಲಿ ಸಿಲುಕದಿರು ತನ್ನಯ
ಗಂಟಲಿದೆ ಶಸ್ತ್ರೌಘವಿದೆ ನೀ ಬೇಗ ಮಾಡೆಂದ ॥ ೩೯

ಭರತಕುಲದಲಿ ಭಾಗಧೇಯ
ಸ್ಫುರಣಹೀನರನೆಮ್ಮನುಱೆ ಧಿ
ಕ್ಕರಿಸಿದಾದಡೆ ಮುನಿದು ಮಾಡುವದೇನು ವಿಧಿಯೊಡನೆ ।

---

[1] ನಿದ್ರಾನುಭಂಗದಲದ್ದಿ ಭಂಗಿಸಿದಾತನಾರೆಂದ (ದ). [2] ಟೆಂ (ಪ.ಬ).

ಅರಿನೃಪಾಲರ [1]ಗೆಲಿದು[1] ವಿಶ್ವಂ
ಭರೆಯ ಕೊಂಡರೆ ಭೀಮಸೇನನ
ನರಸುತನದಲಿ ನಿಲಿಸು ಸುಖದಲಿ ಬದುಕಿ ನೀವೆಂದ ॥ ೪೦

ಇಱಿದು ಮೆಱೆವ ವಿನೋದವಿಗ್ರಹ
ದಿಱಿತವೇ ಹಿಂದಾಯ್ತು ಹರಹಿನೊ
ಳುಱುವ [2]ಫಲಿತದ ಬೀಡು ಬಿಟ್ಟುದು ನಮ್ಮ[2] ತನುವಿನಲಿ ।
ಇಱಿದ ಕರ್ಣನೆ ಸಾಲದೇ ಪೆಣ
ನಿಱಿದು ಪಗೆಯೇಕೆಂಬ ಮಾತನು
ಮಱೆದು ಕಳೆದ್ಯೆ ತಮ್ಮ ಎಂದವನೀಶ ಬಿಸುಸುಯ್ದ ॥ ೪೧

ನಿನ್ನ ಜನನಿಯ ಜಠರದಲಿ ತಾ
ಮುನ್ನ ಜನಿಸಿದೆನೀ ಗುರುತ್ವಕೆ
ಮನ್ನಿಸಿದೆ ಸಾಕೈಸಲೇ ಸರ್ವಾಪರಾಧವನು ।
ಎನ್ನನೊಬ್ಬನನುಳಿಯಲುಳಿದರ
ಭಿನ್ನಸಾಹೋದರ್ಯಸಂಪ್ರತಿ
ಪನ್ನಗುಣರವರೊಡನೆ ಸುಖದಲಿ ರಾಜ್ಯ [3]ಮಾಡೆಂ[3]ದ ॥ ೪೨

ಸೇರುವುದು ಭೀಮನಲಿ ಸಾಹಂ
ಕಾರನಾತನ ಕೊಂಡು ನಡೆವುದು
ಕಾರಣಿಕ ನೀನಾದಡೀ ಸಹದೇವ ನಕುಲರನು ।
ಆರಯಿದು ಸಲಹುವುದು ದ್ರುಪದ ಕು
ಮಾರಿಯನು ಬೇಸಱಿಸದೀ ಪರಿ
ವಾರವನು ಮನ್ನಿಸುವುದರ್ಜುನದೇವ ಕೇಳೆಂದ ॥ ೪೩

ಎನುತ ನಯನೋದಕದ ಸರಿಯಲಿ
ನನೆದ[4]ವಲ್ಲಿಯ[4] ಬಾಹುಮೂಲದ
ಕನಕದೊಱೆಯ ಕಠಾರಿಯವನಿಪನೆದ್ದು ಸಂವರಿಸಿ ।
ಮನದ ದುಗುಡದ [5]ದಡಿಯ[5] ಮೋಱೆಯ
ತನಿಹೊಗರ [6]ಬಿಸುಸುಯ್ಲ[6] ತವಕದ
ಬನದ ಪಯಣದ ಧರ್ಮಸುತ ಹೊಱವಂಟನರಮನೆಯ ॥ ೪೪

---

[1] ನಿಱಿದು (ಕ.ಗ.ಪ). [2] ಹಳಿವಿನ ಬೀಡು ಬಿಟ್ಟಿದೆ ತಳಿರ (ಕ). [3] ವಾಳೆಂ (ಟ.ದ.ಪ.ಬ). [4] ವಸನದ (ಟ.ದ.ನ.ಬ). [5] ಧೈರ್ಯ (ಕ), ತಡಿಯ (ಪ). [6] ಚಾವಡಿಯ (ಕ.ಗ).

ರಾಯನಪರೋಕ್ಷದಲಿ ರಾಜ್ಯ
ಶ್ರೀಯ ಬೇಟವೆ ಶಿವಶಿವಾದಡೆ
ತಾಯ ನುಡಿ ತೊದಳಾಯ್ತೆ ತಮತಮ್ಮಂತರಂಗದಲಿ।
ಆಯಿತಿದು ಲೇಸೆನುತ [1]ತಮತ
ಮ್ಮಾ[1]ಯುಧಂಗಳ ಕೊಂಡು ವರ ಮಾ
ದ್ರೇಯರರಸನ ಕೂಡೆ ಹೊಱವಂಟರು ನೃಪಾಲಯವ ॥ ೪೫

ಕೊರಳನೊಲೆದಳು ಬಾಪು ದೈವದ
ಪರುಠವಣೆ ದುಶ್ಶಾಸನನ ನೆ
ತ್ತರಿನ ವೇಣೀಬಂಧಕಘಟಿತವಾಯ್ತು ಸಂಬಂಧ ।
ತರಣಿ ಬಿಜಯಂಗೈದರಬುಜದ
ಸಿರಿಗೆ ಸುಮ್ಮಾನವೆ ಎನುತ ಪಂ
ಕರುಹಮುಖಿ ಸಖಿಯರು ಸಹಿತ ಹೊಱವಂಟಳರಮನೆಯ ॥ ೪೬

ಸದನವನು ತಮತಮಗೆ ಹೊಱವಂ
ಟುದು ನೃಪಾಲಸ್ತೋಮ ದುಮ್ಮಾ
ನದಲಿ ಧೃಷ್ಟದ್ಯುಮ್ನ ಸಾತ್ಯಕಿ [2]ಚೇಕಿತಾನಕರು[2] ।
ಕದಡಿತಾ ಪರಿವಾರವಾರಿಧಿ
ಕೆದಱಿ ಹೊಱವಂಟುದು ಕಿರೀಟಿಯ
ಹೃದಯ ಹೊಗೆದುದು ಹೊತ್ತಿದನುಪಮ ಶೋಕವಹ್ನಿಯಲ ॥ ೪೭

ಮೂಗನಾದನು ಪಾರ್ಥ ನೃಪ ಚಿಂ
ತಾಗಮದೊಳಳ್ಳಿಱಿವ ಶೋಕದ
ಸಾಗರವನೀಸಾಡಿ ತೆರೆಗಳ ಹೊಯ್ಲ ಹೊದಱಿನಲಿ।
ಆ ಗರುವನಡಿಗದ್ದು ಮೂಡಿದ
ನಾಗಳೇ [3]ತಡಿಗಡರಿ[3] ಬಳಲಿದು
ತಾಗಿದನು ನೆಱೆ ತಳ್ಳವಾಱುತ ಪಾರ್ಥ ಹೊಱವಂಟ ॥ ೪೮

ಹರಿದು ಬೀದಿಯೊಳವನಿಪಾಲನ
ಚರಣದಗ್ರದೊಳೊಡಲ ಹಾಯಿಕಿ
ಹೊರಳಿದನು ಹೊನಲಿಡುವ ಲೋಚನವಾರಿಪೂರದಲಿ ।

---

[1] ತಮ್ಮ ನಿಜಾ (ಗ.ಟ.ತ.ಪ.ಬ). [2] ಚೈದ್ಯ ಕೇಕೆಯರು. [3] ನಡುನಡುಗಿ (ಚ.ತ.ಬ).

ಧರಣಿಪತಿಯೆ ದುರಾತ್ಮಕನನು
ದ್ಧರಿಸಬೇಹುದು ಜೀಯ ಕರುಣಾ
ಕರನಲಾ ನೀನೆನುತ ಪಿಡಿದನು ಭೂಪನಂಘ್ರಿಗಳ ॥ ೪೯

ಮಾಡಿದೆನ್ನಪರಾಧ ಶತವನು
ನೋಡಲಾಗದು ಕರುಣದಲಿ ನೀ
ಝೋಡಿಯನು ಬಿಡು ಚಿತ್ತಗೊಡದಿರು ಖತಿಯ ಘಲ್ಲಣೆಗೆ ।
ನೋಡುವುದು ಕಾರುಣ್ಯದೃಷ್ಟಿಯೊ
ಳೀಡಿಱುವ ಘನಶೋಕ[1]ವಹ್ನಿ[1]ಗೆ
ಜೇಡ[2]ನಾದೆನು ಜೀಯೆನುತ ಹಲುಬಿದನು[2] ಕಲಿ ಪಾರ್ಥ ॥ ೫೦

ಏಳು ತಂದೆ ಕಿರೀಟಿ ತನ್ನಾ
ಣೇಳು ಸಾಕೀ ಹವಣಿನಲಿ ಮು
ನ್ನಾಳಿಕೆಯ ಕಾಂತಾರ ರಾಜ್ಯದ ಸಿರಿಯೆ ಸಾಕೆಮಗೆ ।
ಬಾಲಕರು ನೀವ್ ಮೇಲಣದು ದು
ಷ್ಕಾಲವೀ ಸಾಮ್ರಾಜ್ಯ ಭೋಗ
ವ್ಯಾಳವಿಷಕಂಜುವೆನು ಪಾಂಡುವಿನಾಣೆ ಸಾರೆಂದ ॥ ೫೧

ಹಿಂಗದಿನ್ನೂ ದ್ವಾಪರದ ಸ
ರ್ವಾಂಗವೀ ದ್ವಾಪರದ ಸೀಮಾ
ಸಂಗದಲಿ ಸಿಗುರೆದ್ದ ಕಲಿಕೆಯ ಸೊಗಡ ಸೋಹಿನಲಿ ।
[3]ಸಂ[3]ಗಡಿಸಿತಧರೋತ್ತರದ ಸಮ
ರಂಗವೀ ಹದನಱಿದು ರಾಜ್ಯಾ
ಸಂಗಸುಗತಿವ್ಯರ್ಥನಹೆನೀ ಪಾರ್ಥ ಹೇಳೆಂದ ॥ ೫೨

ಸಾಕು ಪಾರ್ಥನ ಬಿನ್ನಹವ ಕೆಡೆ
ನೂಕದಿರು ನೆಳಲಿಂಗೆ ಬೇಱೆ ವಿ
ವೇಕಚೇಷ್ಟೆಗಳೇ ಸಹೋದರರೀ ಚತುಷ್ಟಯಕೆ ।
ಈ ಕಮಲಮುಖಿಯರಿಗೆ ನಿನ್ನಾ
ಲೋಕವಲ್ಲವೆ ಬೇಱೆ ಕಾರ್ಯ
ವ್ಯಾಕುಳತೆ ಬೇಡೆಂದು ಮುರರಿಪು ತಿರುಹಿದನು ನೃಪನ ॥ ೫೩

ಹದಿನೇಳನೆಯ ಸಂಧಿ ಮುಗಿದುದು.

---

[1] ಲಹರಿ (ಕ). [2] ತನವನು ಮಾಣಿಸೆಂದೊಱಲಿದನು (ಟ.ದ),
[3] ಲಂ (ಕ.ಗ.ಟ.ಚ).

# ಹದಿನೆಂಟನೆಯ ಸಂಧಿ

ಸೂಚನೆ ॥ ಗಂಡುಗಲಿ ಯಮತನುಜನಲಿ ಮಾ
ರ್ತಾಂಡ ತನಯನ ವಧೆಗೆ ನೇಮವ
ಕೊಂಡು ಕದನೋ[1]ದ್ದಾಮ[1]ದಲಿ ಹೊಱವಂಟನಾ ಪಾರ್ಥ ॥

ಕೇಳು ಧೃತರಾಷ್ಟ್ರಾವನಿಪ ಭೂ
ಪಾಲನನು ಸಾಮದಲಿ ಮುರರಿಪು
ಬೋಳವಿಸಿ ಭಾವಜ್ಞನಂದಿಸಿದನು ಮನೋವ್ಯಥೆಯ ।
ಮೇಲುಸುರ ಬಿಕ್ಕುಳಿನ ಬಿಗುಹಿನ
ತಾಳಿಗೆಯ [2]ನೀರುಗಳ ಮುಕ್ಕುಳಿ
ನಾ[2]ಲಿಗಳ ನರನಾಥ ತೆಗೆದಪ್ಪಿದನು ಫಲುಗುಣನ ॥ ೧

ಒಱಲುತರಸನ ಮುರುಚಿಕೊಂಡಡಿ
ಗೆಱಗೆ ಕೈಯೊಡನವನಿಪತಿ ಮುರಿ
ದೆಱಗಿ ಪಾರ್ಥನ [3]ಸೇರಿ[3] ತಕ್ಕೈಸಿದನು ಗೋಳಿಡುತ ।
ಮಱುಗಿದಳು ದ್ರೌಪದಿ ದೃಗಂಬುಗ
ಳೊಱತೆಯಲಿ ಸಹದೇವ ನಕುಳರ
ಲಱಿಯೆನುಪಮಿಸಲವರ ಬಹುಳಾಕ್ರಂದನ ಧ್ವನಿಯ ॥ ೨

ಮುರಹರನ ಮಂತ್ರದಲಿ ಶೋಕ
ಜ್ವರಕೆ ಬಿಡುಗಡೆಯಾಯ್ತು ಬಳಿಕಿನೊ
ಳರಸ ಸಿರಿಮೊಗದೊಳೆದು ವಸನಾಂಚಲದೊಳಾನನವ ।
ಒರಸಿ ಪಾರ್ಥನ ಸಂತವಿಸಿ ಮಂ
ದಿರಕೆ ಬಿಜಯಂಗೈದು ಮುದದಲಿ
ಕರಸಿ ಕಾಣಿಕೆಗೊಂಡು ಪರಿವಾರವನು ಮನ್ನಿಸಿದ ॥ ೩

ಇಟ್ಟಣಿಸುವರಿಸೈನ್ಯಜಲಧಿಗೆ
ಕಟ್ಟೆಯಾದನು ಭೀಮನೊಬ್ಬನ
ಬಿಟ್ಟು ನೋಡುವುದುಚಿತವೇ ಪರಿವಾರ ಪಂಥದಲಿ ।

---

[1] ತ್ಸಾಹ (ಟ.ನ).  [2] ನಿದ್ರ್ರವದ ನೀರೊಗುವಾ (ಕ. ತ. ನ. ಪ. ಬ)
[3] ಸೆಳೆದು (ನ.ಪ.ಬ).

ಕೊಟ್ಟ ನೇಮವ ಯಮಳರಿಗೆ ಜಗ
ಜಟ್ಟಿ ಸಾತ್ಯಕಿ ಕಮಲಮುಖಿಯೊಡ
ಹುಟ್ಟಿದನು ಮೊದಲಾಗಿ ನೃಪಜನವೇಳಿ ನೀವೆಂದ ॥ ೪

ದೇವ ಪರಿವಾರಕ್ಕೆ ನೇಮವ
ನೀವ ಸಮಯದಲಿಂದು ನಿಮ್ಮ ಕೃ
ಪಾವಲೋಕನವಾದುದೆನ್ನ ಪರಾಕ್ರಮಾನಳಕೆ ।
ಜೀವಸಖನಲ್ಲಾ ಸುಯೋಧನ
ನಾವ ಪಾಡು ವಿರೋಧಿಕುಲವಿ
ದ್ರಾವಣಕೆ ಕೊಡು ತನಗೆ ನೇಮವನೆಂದನಾ ಪಾರ್ಥ ॥ ೫

ಬರಸು ಭಾಷೆಯನಿಂದು ಕರ್ಣನ
ಶಿರವುಳಿದು ತಾವರೆಯ ನಗೆ ಪೈ
ಸರಿಸಿದರೆ ಮ್ಲೊ ಬೆಸುಗೆಬಿಟ್ಟರೆ ಜಕ್ಕವಕ್ಕಿಗಳ ।
ಇರುಳ ಬೀಜವನಿಂದು ನಭದಲಿ
ಹರಹಿದರೆ ಕಲಿ ಭೀಮನಯ್ಯನ
ಹರಹು ನಿಂದರೆ ಬಳಿಕ ನಿಮ್ಮಯ ತಮ್ಮನಲ್ಲೆಂದ ॥ ೬

ಖಳನ ಹಿಂಸಾಪರನ ಡಂಬನ
ಚಳಮತಿಯ ನಾಸ್ತಿಕನ ನಿಂದಾ
ಕುಳನ ಪರಧನಬಾಧಕನ ದತ್ತಾಪಹಾರಕನ ।
ಜ್ವಲನದನ ಶಿಶುಘಾತಕನ ಪರಿ
ದಳಿತ ಧರ್ಮನ ಗತಿಗಳಲಿ ತಾ
ನಿಳಿವೆನಿಂದೇ ಕೊಲ್ಲದಿರ್ದರೆ ಸೂತನಂದನನ ॥ ೭

ನೀನಿನಿತ ನೆಜಿ ನುಡಿವರೇ ತ
ನ್ನಾಣೆ ಬಾರೈ ತಂದೆ ಬಾ ಎನು
ತಾ ನರೇಶ್ವರ ತೆಗೆದು ಬಿಗಿಯಪ್ಪಿದನು ಫಲುಗುಣನ ।
ದಾನವಾಮರರೊಳಗೆ ನಿನಗೆ ಸ
ಮಾನಭಟರಿಲ್ಲೆಂಬುದೀ ಸ್ನೇ
ಹಾನುಗುಣವೇ ಲೋಕವಱಿಯದೆ ಪಾರ್ಥ ಹೇಳೆಂದ ॥ ೮

ತಾಯೆನುತ ಘನಸಾರದುರು ತವ
ಲಾಯಿಗಳ ನೂಕಿದನು ಮುದದಲಿ
ಬಾಯ ತಂಬುಲವಿತ್ತು ತಮ್ಮನ ಮತ್ತೆ ತಕ್ಕೈಸಿ ।

ರಾಯ ಕೇಳ್ಕೈ ಬಳಿಕಖಿಳ ದಳ
ನಾಯಕರ ಕರೆಕರೆದು ಕದನಪ
ಸಾಯತರಿಗಿತ್ತನು ನೃಪತಿ ಕರ್ಪೂರದ ವೀಳೆಯವ ॥ ೯

ನೇಮವಾಯಿತು ಮತ್ತೆ ನೃಪತಿ
ಸ್ತೋಮವರ್ಜುನನೊಡನೆ ಕದನೋ
ದ್ದಾಮರುಬ್ಬರಿಸಿದರು ಪತಿಕರಣೆಗೆ ಮಹೀಪತಿಯ ।
ಸೋಮಕರು ನಕುಲಾದಿಗಳು ಸುತ
ಸೋಮಕಾದಿ ಕುಮಾರರಖಿಳ ಸ
ನಾಮರೆದ್ದುದು ತೊಡರ ಝಣಝಣರವದ [1]ಖಡೆಯ[1]ದಲಿ॥ ೧೦

ನುಡಿವ ವಾದ್ಯದ ಜಡಿವ ಕಹಳೆಯ
ಹೊಡೆವ ಭೇರಿಯ [2]ರವದ[2] ರಭಸದೊ
ಳೊಡೆದುದಾ ದಿಗುಭಿತ್ತಿಯೆನೆ ಚಲಿಸುವ ಚತುರ್ಬಲದ ।
ತುಡುಕು ಚಮರಿಯ ಝಾಡಿಗೆದಱಿನ
ಗಡಣಿಸುವ ಝಲ್ಲರಿಯ ದಳ ಬಱಿ
ಸಿಡಿಲ ಮೇಳವದಂತೆ ನೆರೆದುದು ನೃಪತಿಯಿದಿರಿನಲಿ ॥ ೧೧

ವೀರಸೇಸೆಯನಿಕ್ಕಿ ರಾಯನ
ನಾರಿ ಪರಸಿದಳಖಿಳ ವಿಪ್ರರ
ಚಾರು ಚಾತುರ್ವೇದಮಂಗಳಸೂಕ್ತ ಘೋಷದಲಿ ।
ತೇರನೇಱಿದನಸುರರಿಪು ಸಹಿ
ತಾರುಭಟೆಯಲಿ ನೂಕಿದವು ರತು
ನಾರತಿಯ ತಳಿಗೆಗಳು ವರ ಕಾಂತಾಕದಂಬದಲಿ ॥ ೧೨

ಕೂಡೆ [3]ಗಱಿ[3]ಗಟ್ಟಿದವು ರಥದಲಿ
ಹೂಡಿದಶ್ವವ್ರಾತವಾನೆಗ
ಳೀಡಿಱಿದು ಬರಿಕಯ್ಯನೆತ್ತಿದವೊಲೆದವಡಿಗಡಿಗೆ ।
ಜೋಡಿಸಿತು ಜಯಜಯಜಯಧ್ವನಿ
ಕೂಡೆ ಜಗದಗಲದಲಿ ಬಿರುದು ಪ
ವಾಡಗಳ ವೊಗನೆಗಹಿ ಹೊಗಳಿತು ವಂದಿಸಂದೋಹ ॥ ೧೩

---

[1] ರಭಸ (ಚ.ಟ.ತ.ಪ.ಬ), [2] ಬಹಳ (ಚ.ತ.ನ.ಪ). [3] ಗುಡಿ (ಗ.ಚ.ತ.ದ.ಬ).

ನಿಳಯುವನು ಹೊಱವಂಟು ಬೀದಿಗ
ಳೊಳಗೆ ಬರೆಬರೆ ಮುಂದೆ ಮೋಹಿದ
ತಳಿಗೆದಂಬುಲ ವೀಳಸೇಸೆಯ ಮಂಗಳಾರತಿಯ ।
ಫಲಸಮೂಹದ ಕಾಣಿಕೆಯ ಕೋ
ಮಲೆಯರುಪ್ವಾರತಿಯ ಮನೆಮನೆ
ಗಳಲಿ ಮನ್ನಿಸಿಕೊಳುತ ಪಾಳೆಯದಿಂದ ಹೊಱವಂಟ ॥ ೧೪

ಮೇಲೆ ಮೊಳಗುವ ದೇವದುಂದುಭಿ
ಜಾಲದೊಸಗೆಯ ಪಕ್ಷಿಮೃಗದನು
ಕೂಲಶಕುನದ ಸೌಮನಸ್ಯದ ಸಾಧುವಾದದಲಿ ।
ಲಾಲನೆಯ ಮೈವಳಿಯ ಲಳಿಯ ವಿ
ಶಾಲ [1]ಮಂದಾ[1]ನಿಲನಖಿಳಭೂ
ತಾಳಿ ಸಂತೋಷದಲಿ ಪತಿಕರಿಸಿತು ಧನಂಜಯನ ॥ ೧೫

ನಡೆದು ಬಂದುದು ರಾಯದಳ ಮುಂ
ಗಡಿಯ ವಾದ್ಯಧ್ವನಿಯ ಥಟ್ಟಣೆ
ತುಡುಕಿತರಿಚತುರಂಗ ಚಪಳರ ಕರ್ಣಕೋಟರವ ।
ನಡುಗಿದವು ಕೈದುಗಳು ಜೋಧರ
ಕೊಡಹಿದವು ಗಜರಾಜಿ ವಾಜಿಯು
ಗಡಣವೀಡಾಡಿದವು ರಾವ್ತರನಿವರ ಥಟ್ಟಿನಲಿ ॥ ೧೬

ಅರಸ ಕೇಳ್ಳೆ ಸಮರಭೂಮಿಗೆ
ಪರಿದರರಸಾಳುಗಳು ರಾಯನ
ಸಿರಿಮುಡಿಗೆ ಸುಕ್ಷೇಮ ಮುಟ್ಟಿದವೇಱುಮದ್ದಿನಲಿ ।
ಮುರಳಿ ನೇಮವ ಕೊಂಡು ಫಲುಗುಣ
ಬರುತಲೈದನೆ ಜೀಯ ನಿಮ್ಮಯ
ಚರಣ ಸರಸಿಜದಾಣೆಯೆಂದರು ಭೀಮಸೇನಂಗೆ ॥ ೧೭

ಜೋಡು ಬಿರಿದುದು ಹರುಷ[2]ಜಲ[2] ಕಡೆ
ಗೋಡಿವರಿದುದು ರೋಮಪುಳಕದ
ಬೀಡು ಬಿಟ್ಟುದು ಮೈಯನುಬ್ಬಿದನೊಲೆದನಡಿಗಡಿಗೆ ।

---

[1] ಗಂಧಾ (ಗ.ಚ.ಟ.ನ.ಪ.ಬ). [2] ರಸ (ಗ.ಚ.ಟ.ತ.ದ.ನ.ಪ).

ನೀಡುವರೆ ತೆ[1]ಳು[1]ವೆನುತ ತೆಗೆದೀ
ಡಾಡಿದನು ದೂತರಿಗೆ ರತುನದ
ಜೋಡಣೆಯ ಭುಜಕಂಠ [2]ಕರ್ಣಾಂಘ್ರಿಗಳ ಭೂಷಣವ[2] ॥ ೧೮

ರಾಯ ಹದುಳಿಸಿದನೆ ಮಹಾದೇ
ವಾ ಯಿದೆತ್ತಣ ಪುಣ್ಯವೋ ರಣ
ದಾಯಸವ ಸೈರಿಸಿದ ತನಗಿದು ಸಫಲವಾಯಿತಲ ।
ದಾಯ ಬಂದುದು ನಮಗೆ ಹೋ ಲೇ
ಸಾಯಿತೇಳು ವಿಶೋಕ ಸಾಕುಳಿ
ದಾಯುಧದ ಪರಿಗ[3]ಣಿತವ[3]ನು ಹೇಳೆಂದನಾ ಭೀಮ ॥ ೧೯

ಉಳಿದ ಕೈದುಗಳೇಸು ಬಂಡಿಯ
ಲುಳಿದ ಸರಳಿನ ಹೊದೆಯ ಲೆಕ್ಕವ
ತಿಳಿದು ಹೇಳೈ ತಂದೆ ಸಾರಥಿ ನೋಡಲಹುದಿನ್ನು ।
ಅಳಲಿಸಿದ ಕೌರವನ ರಕ್ತದ
ಮಳೆಯೊಳಲ್ಲದೆ ತನ್ನ ಕೋಪಾ
ನಳನ ಝಳವಡಗದು ಯುಧಿಷ್ಠಿರರಾಯನಾಣೆಂದ ॥ ೨೦

ಅರಸ ಚಿತ್ತವಿಸುಳಿದ ಧನು ಹ
ನ್ನೆರಡು ಸಾವಿರ ಬಲುಸರಳು ಹ
ನ್ನೆರಡು ಸಾವಿರ ಬೋಳೆಯೈನೂರರ್ಧ ಚಂದ್ರಶರ ।
ಪರಿಗಳಿತ ಲುಳಿಯಂಬು ಕಣಗಿಲ
ಸರಳುಗೂಡಿಪ್ಪತ್ತು ಸಾವಿರ
ವೆರಡು ಸಾವಿರವುಳಿದವೀ ನಾರಾಚನಿಕರದಲಿ ॥ ೨೧

ಅಲಸ್ಯೆ ಮುಗುಳಂಬು ಸಾವಿರ
ವೇಳು [4]ಬಳಿಕೊಂ[4]ಬತ್ತು ಸಾವಿರ
ಕೋಲು ಮೀಂಟೆಯ ಕವಲುಗಣೆ ಹನ್ನೆರಡು ಸಾವಿರವು ।
ಮೇಲೆ ಸಾವಿರ ನಾಲ್ಕು ಮುಮ್ಮೊನೆ
ಬೋಳೆಯಂಬೀರೈದು ಸಾವಿರ
[5]ನಾಳಿಯಂಬುಗಳಾಱುಬಂಡಿಯ ಲೆಕ್ಕವಿದೆಯೆಂದ[5] ॥ ೨೨

---

[1] ಡ (ಗ.ಚ.ತ.ದ ಬ). [2] ಕರ್ಣಾಭರಣ ಮುದ್ರಿಕೆಯ (ಕ.ಗ). [3] ಣನೆಯ (ಗ.ತ.ನ.ಪ ಬ). [4] ಮಗುಳೊಂ (ಕ.ಗ.ಚ.ದ). [5] ಕೋಲೆಣಿಕೆಗಾಱು ಹೊಡಿದ ಬಂಡಿಯಿವೆಯೆಂದ (ಕ).

ಪರಶು ಮುಸಲ ಮುಸುಂಡಿ ಸೆಲ್ಲೆಹ
ಪರಿಘ ತೋಮರ ಚಕ್ರವಸಿ ಮು
ದ್ಗರ ತ್ರಿಶೂಲ ಕಠಾರಿ ಖೇಟಕ ಪಿಂಡಿವಾಳ ಚಯ ।
ಸುರಗಿ ಮೊದಲಾದಖಿಳ ಶಸ್ತ್ರೋ
ತ್ಕರವನೊಂದೇ ಬಂಡಿಯಲಿ ಸಂ
ವರಿಸಿದೆನು ರಿಪುರಾಯರೊಡಲಲಿ ಬೀಯಮಾಡೆಂದ ॥ ೨೩

ಪೂತು ಸಾರಥಿ ಈಸು ಬಾಣ
ವ್ರಾತವುಳಿದುದೆ ತನ್ನ ಕರಕಂ
ಡೂತಿಯನು ಕಳೆಚುವೆನಲಾ ಕೌರವನ ನೆತ್ತಿಯಲಿ ।
ಆತನೇನಾದನು ಯುಧಿಷ್ಠಿರ
ಸೋತು ಹಿಂಗಿದನೆಂಬ ಹಂಬಲು
ಬೀತುದಿನ್ನೇನೆನ್ನ ನೋಡಾ ಎನುತ ಗರ್ಜಿಸಿದ ॥ ೨೪

ಚಳೆ[1]ಯು[1]ದಲಿ ಫಲುಗುಣನ ಮೋಹರ
ಕಳನ ಪೊಕ್ಕುದು ಹಲವು ಮೊನೆಯಲಿ
ತಳಿತು ನಿಂದುದು ಜಡಿವ ಬಹುವಿಧ ವಾದ್ಯರಭಸದಲಿ ।
ಅಳುಕಿತೀ ನಮ್ಮವರು ಭೀಮನ
ಸುಳಿವಿನಲಿ ಸೊಪ್ಪಾ[2]ದೆವ[2]ರ್ಜುನ
ನೆಳತಟಕೆ ನಿಲವೆಂತೆನುತ ನೆಗ್ಗಿದುದು ದುಗುಡದಲಿ ॥ ೨೫

ದಳದ ಮಧ್ಯದೊಳೊಂದು ರಥದಲಿ
ಹೊಳೆದು ದುವ್ವಾಳಿಸಿ ಧನಂಜಯ
ನಿಲಿಸಿದನು ನಿಜರಥವ ಭೀಮನ ರಥದ [3]ಮುಂಬಿನಲಿ[3] ।
ಬಳಿಕ ತನ್ನಿಂದಾದ ಕೋಳಾ
ಹಳವನಾ ತಱುವಾಯಲವ್ವಾ
ಕುಳ ಸಮಾಧಾನವನು ಬಿನ್ನಹಮಾಡಿದನು ಪಾರ್ಥ ॥ ೨೬

ಜನಪ ಕೇಳ್ಕೈ ಬಳಿಕ ಭೀಮಾ
ರ್ಜುನರ ಮೋಹರಕ್ಕೈದು ಸಾವಿರ
ಕನಕಮಯ ರಥಸಹಿತ ಬಿಟ್ಟನು ಶಕುನಿ ಸೂಠಿಯಲಿ ।

---

[1] ಕ (ಟ.ದ). [2] ದುದ (ಕ.ಗ.ಚ). [3] ಬಳಸಿನಲಿ (ಕ), ಸಮುಖದಿ (ಛ.ಟ.ತ.ಪ), ಮುಮ್ಮಿನಲಿ (ಬ).

ಅನಿಲಸುತನರ್ಜುನನ ನೀ ಸಾ
ರೆನುತ [1]ಕೆದಱು[1]ದನಹಿತನಂಬಿನ
ಮೊನೆಯೊಳಳ್ಳಿಱಿದೌಕಿ ತುಡುಕುವ ತೇರ ತೆಕ್ಕೆಯಲಿ ॥ ೨೭

ಒಂದು ಶರಸಂಧಾನದಲಿ ಕವಿ
ತಂದವೈಸಾವಿರ ರಥಾವಳಿ
ಯೊಂದು ಧನುವಿನೊಳೀತ ಮೊಗೆದನು ಸರಳಸಾಗರವ ।
ಸಂದಣಿಸಿತಾ ರಥಿಕರಾ ಹಯ
ವೃಂದವಾ ಸಾರಥಿಗಳಾ ರಥ
ಕೊಂದುಹತ್ತಱ ಲೆಕ್ಕದಲಿ ಮಿಕ್ಕವು ಶರವ್ರಾತ ॥ ೨೮

ಒಗ್ಗಿನೈಸಾವಿರ ರಥಾವಳಿ
ಮುಗ್ಗಿದವು ಕಣಿ ತಾಗಿ ರಥಿಕರು
ನೆಗ್ಗಿದರು [2]ಮೇಲಂಬು ಸುಳಿದೊಯ್ದವು ಸಜೀವಿಗಳ[2] ।
ಒಗ್ಗೊಡೆದು ಕಲಿ ಶಕುನಿ ಘಾಯದ
ಸುಗ್ಗಿಯಲಿ ಲಘುವಾಗಿ ಹರುಷದ
ಮುಗ್ಗಲೊಣಗಿಲ ಮೋಹಡೆಯಲಿ ತಿರುಗಿದನು ಮೋಹರಕೆ ॥ ೨೯

ಶಕುನಿ ಮುರಿದನು ಬೇಹ ದಳನಾ
ಯಕರು ತಿರುಗಿತು ಭೀಮಸೇನನ
ವಿಕಟಸಿಂಹಧ್ವನಿಗೆ [3]ಜರಿದುದು[3] ಭಟರ ಬಲುಹೃದಯ ।
ಅಕಟಕಟ ಕುರುಸೇನೆ ನಿನ್ನಾ
ಯಕವಲಾ ಹಾ ಎನುತ ಮಂತ್ರಿ
ಪ್ರಕರ ಮಱುಗಿತು [4]ತುಱು[4]ಗಿತಲ್ಲಿಯದಲ್ಲಿ ಕಳವಳಿಸಿ ॥ ೩೦

ಹದಿನೆಂಟನೆಯ ಸಂಧಿ ಮುಗಿದುದು.

---

[1] ಕೆಣಕಿ (ಟ), ˚ತಱುಬಿ (ನ.ಪ.ಬ). [2] ಹಯರಾಜಿ ಬಿದ್ದವು ಮಿದುಳ ಜೊಂಡೆಯಲಿ (ಟ.ದ). [3] ಬಿರಿದುವು (ಚ.ಟ.ತ.ನ). [4] ತಿರು (ನ.ಪ.ಬ).

# ಹತ್ತೊಂಬತ್ತನೆಯ ಸಂಧಿ

ಸೂಚನೆ ॥ ರಾಯ ಚೌಪಟಮಲ್ಲ ಮಲೆವರಿ
ರಾಯ ಧೂಳೀಪಟ್ಟ ಗರ್ವಿತ
ರಾಯ ಭೀಕರ ಭೀಮ ಕೊಂದನು ಕೌರವಾನುಜನ ॥

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳು ತಲೆಕೆಳಗಾಯ್ತು ಭೀಮನ
ಧಾಳಿ ಹೆಚ್ಚಿತು ಹೊಸತು ದಶಕದ ಮಸಕ ಮಿಗಿಲಾಯ್ತು ।
ಮೇಲೆಮೇಲುಪ್ಪೇಳ್ವ ರಿಪುಶರ
ಜಾಲಧಾರಾಧೂಮವಹ್ನಿ
ಜ್ವಾಲೆಗುಱಿ ತೇರೈಸಿ ಕೋರೈಸಿತು ಕುರುಸ್ತೋಮ ॥ ೧

ಉಲುಕಲಮ್ಮುವರಿಲ್ಲಲಾ ಭಟ
ರಳುಕಿದರೆ ಭಾರಂಕಗವರ
ಗ್ಗಳೆಯ ಬಿರುದರು ಬೀತರೇ ಸೋತರೆ ಪಲಾಯನಕೆ ।
ಹಲವು ಮಾತೇನೆಮ್ಮ ಮಾವನ
ಕಳನ ಹರಿಬಕೆ ನಾವೆ ಇನ್ನೈ
ಸಲೆ ಎನುತ ನೆರಹಿದನು ನಿನ್ನ ಕುಮಾರಕನು ದಳವ ॥ ೨

ಆ ವಿಗಡ ಪರಿವಾರದಲಿ ರಥ
ಸಾವಿರವ ಮೇಳೈಸಿದರು ದಂ
ತ್ಯಾವಳಿಯ ಛೇರೆಣಿಸಿ ನಿಲಿಸಿದರೈದು ಸಾವಿರವ ।
ರಾವುತರೊಳಗ್ಗಳೆಯರನು ದಶ
ಸಾವಿರವ ಜೋಡಿಸಿದರಿನಿಬರು
ಸಾವನೇ ನಿಶ್ಚೈಸಿ ಬಿಗಿದರು ವೀರಕಂಕಣವ ॥ ೩

ಕುಡಿತೆಯಲಿ ಕರ್ಪುರವ ಸುರಿಸುರಿ
ದೊಡನೆ ಸಾಧು ಜವಾಜಿ ಲೇಪವ
ಮುಡಿವ ಹೊಸ ಹೂಗಳನು ವರ ಗಂಧಾನುಲೇಪನದ ।

ಉಡುಗೊಱೆಯ ವೀಳೆಯದ ರತ್ನದ
ತೊಡಿಗೆಗಳಲಾ ಪಟುಭಟರ ವಂ
ಗಡವ ಮನ್ನಿಸಿ ನಿನ್ನ ಮಗನೆನುವಾದನಾಹವಕೆ ॥ ೪

ಬಲದೊಳಗೆ ಹೆಸರುಳ್ಳವರು ನೃಪ
ತಿಲಕ ನೀ ಸಾಕಿದ ಕುಮಾರರು
ಹಳೆ[1]ಯರ[1]ಲಿ ಮಿಕ್ಕವರು ಮಕ್ಕಳ ತಂಡದಲಿ ಕೆಲರು ।
ಅಳಲಿಗರು ದುಶ್ಶಾಸನನ ಬಲ
ದೊಳಗೆ ನಿಂದುದು ಸಾಲಸಿಡಿಲಿನ
ಬಳಗವೋ ನಿನ್ನವರ ಬಣ್ಣಿಸಲಱಿಯೆ ನಾನೆಂದ ॥ ೫

ಸಾಲ ಸಿಂಧದ ಮಣಿವ ಗೋವಳಿ
ಗೋಲ ತೂಕದ ತಳಿತ ಚೌರಿಯ
[2]ಜಾಲ ಮೋಹಿದ[2] ಮೇಘಘಟೆಯೆನೆ ಜಡಿವ ಝಲ್ಲರಿಯ ।
ಜಾಳಿಗೆಯ ಹೊಗರೊಗುವ ವಹ್ನಿ
ಜ್ವಾಲೆಯೆನೆ ಝಳಪಿಸುವ ಕೈದುಗ
ಳೋಳಿ ಹೊಳೆದುದು ಸೆಳೆದುದೀತನ ಗರ್ವವಿಭ್ರಮವ ॥ ೬

ಹರೆದ ಬಲ ಹುರಿಗಟ್ಟಿ ಖತಿಯಲಿ
ದೊರೆಯ ಕೂಡೊದಗಿದುದು ಬೀಱುವ
[3]ಬಿರುದು[3]ಗಹಳೆಯ ದನಿಯ ಘಾಯದ ಭೂರಿ ಭೇರಿಗಳ ।
ಮೊರೆವ ಬಹುವಿಧ ವಾದ್ಯರಭಸದ
ಧರಧುರದ ಕೆಂಧೂಳಿಯಲಿ ಮೋ
ಹರಿಸಿ [4]ಮುಸುಕಿತು[4] ಭೀಮಸೇನನ ರಥದ [5]ಬಳಸಿನಲಿ[5] ॥ ೭

ಸಾರಹೇಳೋ ರಾಯಕುವರಮು
ರಾರಿ ದುಶ್ಶಾಸನ ಕಣಾ ಘಡ
ವೈರಿಭೀಮದ್ವಿರದ ಕುಂಭಸ್ಥಳಕೆ ಪಂಚಮುಖ ।
ವೀರಮನ್ಮಥತ್ರಿಪುರಹರ ಜು
ಜ್ಝಾರ ಭಟ ಜಗಜಟ್ಟಿಗಿದಿರೆ ವಿ
ಕಾರಿಯೋ ಘಡ ಭೀಮನೆನುತ್ತೈದಿತು ಭಟಸ್ತೋಮ ॥ ೮

---

[1] ಮೆಯ (ಚ.ತ.ಪ). [2] ಸಾಲಸತ್ತಿಗೆ (ಪ). [3] ಬಿರುಬು( ಕ.ಗ.ಚ.ನ). [4] ನಡೆದುದು (ತ). [5] ಸಮ್ಮುಖಕೆ (ಚ.ತ.ನ.ಪ.ಬ).

ದಾಯವಿದು ಮಝು ಘೂತು ರಣದ ವಿ
ಡಾಯಿಯಹುದೋ ಕಲಿ ಯುಧಿಷ್ಠಿರ
ರಾಯನಾಣೆ ಸುಯೋಧನಾನುಜನೋಜೆ ಲೇಸೆನುತ।
ವಾಯುಸುತನಾಕರ್ಣಕರುಷಿತ
ಸಾಯಕನು ರಿಪುಸುಭಟಕುಲ
ಲಯದಾಯಕನು ದಳದುಳವ ಹಾಯ್ದನು ವೈರಿಮೋಹರವ ॥ ೯

ನುಸಿಗಳೆನ್ನೆವು ನೀವು ಜಗಸಾ
ಹಸಿಕರೈ ಕಾಲಾಳು ಜೋಧಪ್ರಸರ
ದೆಸುಗೆಗೆ ಹೆದಱುವೆವು ಹೇರಾಳದಂಬುಗಳ।
[1]ದಶಕ[1]ವುಳ್ಳವರಹಿರಿ ಸಮರಥ
ವಿಷಮರಾವುತರು ನೋಡುತಿರಿ [2]ಸರ
ಳಿಸಲಿ[2] ನಿಮ್ಮಯ ದೊರೆಗಳೆನುತುರವಣಿಸಿದನು ಭೀಮ ॥ ೧೦

ಸಾರಿರೈ ಕಾಲಾಳು ರಥಿಕರು
ಸಾರಿರೈ ರಾವುತರು ಜೋದರು
ಭಾರಣೆಯುಲಿರಿ ದೊರೆಯನಱಸುವ ಬಯಲ ಬೊಬ್ಬೆಗಳ।
ಆರುಭಟೆಗಾರಳುಕುವರು ಪರಿ
ವಾರ ಕೈಮಾಡದಿರೆನುತ ಕುರು
ವೀರನನುಜ[3]ರು[3] ತಱುಬಿದ[4]ರು[4] ಪವಮಾನನಂದನನ ॥ ೧೧

ಸಡಿಫಡೇನಿದು ತಮ್ಮ ತಲೆಗಳಿ
ಗೊಡೆಯ[5]ರ[5]ಲ್ಲದೆ ಕೌರವಾನುಜ
[6]ರೊ[6]ಡೆಯ[7]ರೇ[7] ಪರಿವಾರದಭಿಮಾನಾಪಮಾನದಲಿ।
ಬಿಡುವವರು ನಾವಲ್ಲ ಭೀಮನ
ಕಡಿಯೊಳಗೆ ಕಡಿವೆರಸಿ [8]ನೆತ್ತರು
ಗುಡಿಯೆವೇ ತಾವೆನುತ[8] ದಳ ಮುಕ್ಕುಱುಕಿತನಿಲಜನ ॥ ೧೨

ಏನ ಹೇಳುವೆನರಸ ತೂಳಿದ
ವಾನೆಗಳು ನಾರಾಚನಿಚಯದ
ಸೋನೆ ಸುರಿದುದು ಭೀಮಸೇನನ ರಥದ ಶಿಖರದಲಿ।

---

[1] ಎಸಕ (ಗ), ಎಸುಗೆ (ಚ), ಮಸಕ (ಟ.ದ). [2] ಜೋಡಿಸಿರಿ (ಕ). [3] ನು (ತ.ನ). [4] ನು (ತ.ನ). [5] ನ (ತ.ತ). [6] ನೊ (ತ.ನ). [7] ನೇ (ತ.ನ). [8] ನೆತ್ತರಕುಡಿವೆವ್ಯೆ ನಾವೆನುತ (ಚ.ತ.ನ.ಪ), ರಕುತವ ಕುಡಿಸುವೆವು ಕೂರಸಿಗೆ (ಟ).

ಭಾನುಬಿಂಬವ ಮೊಗೆವ [1]ಲಾಡೆಯ
ಮಾನಸದ ಧಕ್ಕಡರು[1] ಕಲಿ ಪವ
ಮಾನ ತನಯನ ಮುತ್ತಿಕೊಂಡರು ರಾಯರಾವುತರು ॥ ೧೩

ಬಳಸಿನಲಿ ಚಾಚಿದವು ರಥಸಂ
ಕುಳ ಪದಾತಿಯು ಕೈದು ಮಿಗಿಲಿದ
ವೆಳವಿಯಲಿ ಮೊನೆಗಾಣಿಸಿದ[2]ರ[2]ರಿಸೂತವಾಜಿಗಳ ।
ಸಿಲುಕಿದನು ಘಡ ಸ್ವಾಮಿದ್ರೋಹಿಗೆ
ಬಲೆಯ ಹಾಯಿಕೊ ಗಂಡುಮಿಗನ
ಗ್ಗಳೆಯ ಗಾಣವ ಕೊಳ್ಳವೆನುತೌಕಿದರು ಬಳಸಿನಲಿ ॥ ೧೪

ಧೂಳು ಮುಸುಕಿತು ಸುತ್ತುವಳಯದ
ಲಾಳು ಹೊಕ್ಕುದು ಹೊಯ್ಲ ಹೊದಱಿನ
ಬಾಳುಗಿಡಿಗಳ ಖಣಿಖಟಿಲ ಘಲ್ಲಣೆಯ [3]ಗರ್ಗರದ[3] ।
ಮೇಲುಮೇಲುಬ್ಬೇಳ್ವ ಬೊಬ್ಬೆಯ
ತೂಳುವಱೆ ಕಹಳೆಗಳ ಘೋಳಾ
ಘೋಳಿ ಮಸಗಿತು ಭೀಮಸೇನನ ರಥದ ಬಳಸಿನಲಿ ॥ ೧೫

ಅಳಲಿಗರಲೇ ಕೌರವಾನುಜ
ರಳುಕ[4]ದಿಱಿದರಲೈ[4] ವಿಘಾತಿಗೆ
ಸಿಲುಕದಿರನೋ ಭೀಮನೆನು[5]ತುಬ್ಬಿದರು ನಿನ್ನವರು[5] ।
ಜಲನಿಧಿಯೊಳುಬ್ಬೆದ್ದ ತೆರೆಯುಲಿ
ಮುಳುಗುವುದೆ ಮಂದರವೆನುತ ಕಳ
ವಳಿ[6]ಸಿದ[6]ವರೇನಱಿಯರೇ ತಮ್ಮವನ ಕೈಗುಣವ ॥ ೧೬

ತೆಗಸಬೇಹು[7]ದು[7] ಪವನಜನ ಮು
ತ್ತಿಗೆಯನೆನುತುರವಣಿಪ ನಕುಲಾ
ದಿಗಳ ಕಂಡನು ಕರೆದು ಮರುಳಾಡಿದನು ಕಲಿ ಪಾರ್ಥ ।
ತೆಗಸಬೇಹುದು ತರಣಿಬಿಂಬವ
ತಗುಳ್ವ ತಿಮಿರವ ನಿಮ್ಮ ಹಂಗಿನ
ನುಗುಳುಗಂಡಿಯ ನುಸುಳುದಲೆಗನೆ ಮರಳಿ ನೀವೆಂದ॥ ೧೭

---

[1] ತಿಮಿರವನೇನ ಹೇಳುವೆನಧಟರನು (ಟ.ದ). [2] ವ (ತ.ದ ನ). [3] ಗರ್ಜನೆಯ (ಕ.ಗ.ಟ.ನ). [4] ದೇಱಿದರೈ (ಕ). [5] ತಬ್ಬರಿಸಿ ನಿಂದವರು (ಕ.ಗ ಪ). [6] ಸಲ (ಘ). [7] ದೆ (ಚ.ನ).

ಮಾತು ಹಿಂಚಿತ್ತಿದು ವಿಲಂಬಿಸ
ದಾತ ಮುಱಿದನು ಮುತ್ತಿದಿಭಸಂ
ಘಾತವನು ಪಲ್ಲಟಿಸಿ ಕಡಿ[1]ಕೊಚ್ಚಿ[1]ದನು ತೇರುಗಳ ।
ಆತು ತಾಗಿದ ರಾವುತರ ಸುರ
ಜಾತಿಯಲಿ ಕಂಡೆನು ಪದಾತಿ
ವ್ರಾತ ಪಾಣಿಗ್ರಹಣವನು ಗೀರ್ವಾಣವಧುಗಳಲಿ ॥ ೧

ಬಲನೆಡನ ಗದೆ ಖಡುಗದಲಿ ರಿಪು
ಜಲನಿಧಿಯನೀಸಾಡಿದನು [2]ಹೆ
ಬ್ಬಲದ[2] ಹೆಬ್ಬೆಳೆ ಸಾಲಕೊಯ್ಲಿನ ಮೆದೆಗಳೊಟ್ಟಿಲಲಿ ।
[3]ತಳಕುಗಳ ವರ[3] ರಥ ಹಯದ ಹೊಸ
ಮೆಳೆಯ ಕಡಿತದ ಕರಿಘಟಾಳಿಯ
ಬಲುವೊರಡಿಗಳ ಸವಱಿ ತಳಪಟಮಾಡಿದನು ಭೀಮ ॥ ೧೯

ಅಸಿಯಲಿಟ್ಟರೆದಂತೆ ಬಲ ನಿ
ಪ್ಪಸರದಲಿ ನುಗ್ಗಾಯ್ತು ನೀಗಿದ
ರಸುವನೀ ದುಶ್ಶಾಸನನ ನಂಬುಗೆಯ ಪರಿವಾರ ।
ಬಸಿವ ನೆತ್ತರ ಮೆಯ್ಯ ಕರುಳಿನ
ಕುಸುರಿಗಳ ತಲೆಮಿದುಳ ಮೆತ್ತಿಗೆ
ವಸೆಯ ತೊರಳೆಯ ತೊಂಗಲಲಿ ರಂಜಿಸಿತು ರಣಭೂಮಿ ॥ * ೨೦

ಹೋರಿ ಹಂಗಿಗರಾದೆವೇ ಪರಿ
ವಾರ ನೆರೆದುದು ನಾಕದಲಿ ತೆಗೆ
ವೀರಕಂಕಣವೇಕೆನುತ ದುರಿಯೋಧನಾನುಜರು ।
ತೇರ ಸೂತನ ಸೂಚನೆಯ ಚೀ
ತ್ಕಾರ ಪರಿಧಾವನೆಯ ಧೂಳಿಯ
ಲೋರಣದ ಭಾರಣೆಯಲೈದಿದರನಿಲನಂದನನ ॥ ೨೧

ಇಂದಲೇ ನೀವ್ ಗದೆಯ ಹಬ್ಬಕೆ
ಬಂದಿರೈ ಲೇಸಾಯ್ತು ನೀವೇ
ನೆಂದಿರೈ ನಿಮ್ಮಣ್ಣದೇವನ ಮುಂದೆ ಭಾಷೆಗಳ ।

---

[1] ದೊಟ್ಟಿ (ತ.ನ ಪ.ಬ). [2] ಹೊಲಬೆಳೆಯ (ಕ). [3] ತುಳುಕಿತೂಳುವ (ಚ).
* ಈ ಪದ್ಯ (ಚ.) ಪ್ರತಿಯಲ್ಲಿಲ್ಲ.

ತಂದಿರ್ದೈ ತಳ್ಳಂಕವನು ನಮ
ಗೆಂದು ಕೊಡುವಿರಿ ಕೌರವನ ತ
ಮ್ಮಂದಿರ್ದೈ ನೀವೆನುತ ಸುಳಿದನು ಸಿಂಹನಾದದಲಿ ॥ ೨೨

ಗಿಡಿಗನೆತ್ತಲು ಗಿಣಿಯು ಮಱಿಗಳ
ಗಡಣವೆತ್ತಲು ತೋಳನೆತ್ತಲು
ತೊಡಕುವರೆ ತಗರೆತ್ತಲಿವರಿಗೆ ಗೆಲವು ಸೋಲವನು ।
ನುಡಿಯು[1]ಲಮ್ಮೆನು[1] ನಿನ್ನ ಮಕ್ಕಳ
ಮಿಡುಕಿನಂತರವೇನು ಪ್ರಳಯದ
ಸಿಡಿಲ ಬಲುಹೋ ಭೀಮನೋ ನಾವಱಿಯೆವಿದನೆಂದ ॥ ೨೩

ಘಟ್ಟುಗೆಡಹಿ ಕುಮಾರಕರನಱೆ
ಯಟ್ಟಿ ಹೊಯ್ದನು ಕೆಲಬಲದಲಡ
ಗಟ್ಟಿದರನಪ್ಪಳಿಸಿದನು ಚಿಗಿದಾನೆವರಿವರಿದು ।
ಇಟ್ಟಣಿಸಿ ಹೊಕ್ಕೆಸುವವರ ಹುಡಿ
ಗುಟ್ಟಿದನು [2]ಹೆಣಸಾಲಿನಲಿ[2] ಮಡು
ಗಟ್ಟಿ ನಿಂದುದು ರಕ್ತಜಲ ನರನಾಥ ಕೇಳೆಂದ ॥ ೨೪

ಒಂದು [3]ಹಲಗೆ[3]ಯಲ್ಲೈದು ಹರಿಬಕೆ
ಬಂದು ಹೊಕ್ಕವರೈದು ಖತಿಯಲಿ
ಹಿಂದ ಕೆಣಕಿದರೆಂಟು ಮಗುಳಿಬ್ಬರನು ಕದನದಲಿ ।
ಕೊಂದನಿಂತಿಪ್ಪತ್ತು ನಿನ್ನಯ
ನಂದನರು ನೀಗಿದರು ನೆಲನನು
ನಿಂದು ಕರೆದನು ಬಳಿಕ ದುಶ್ಶಾಸನನ ಕಲಿ ಭೀಮ ॥ ೨೫

ಧಾರುಣೀಪತಿ ಕೇಳು ನಿನ್ನ ಕು
ಮಾರರಲಿ ತೊಂಬತ್ತಯೆಂಟಱ
ಪಾರುಖಾಣೆಯ ಲೆಕ್ಕ ಸಂದುದು ನಿ[4]ಮ್ಮ ಚಿತ್ತದಲಿ[4] ।
ಸಾರಭೂತರಲೇ ಸಮಸ್ತ ವಿ
ಕಾರಿಗಳೊಳೀ ವಿಶ್ವನೃಪ ಸಂ
ಹಾರರಿಬ್ಬರ ಬೀಯವನು ಮೇಲಿನ್ನು ಕೇಳೆಂದ ॥ ೨೬

---

[1] ಲಱಿಯೆನು (ಚ.ಟ.ತ.ಪ.ಬ). [2] ತಲೆವರಿಗೆಯಲಿ (ಟ). [3] ಲಗ್ಗೆ (ಗ.ಟ.ಚ.ತ.ಪ). [4]ನ್ನ ಮಕ್ಕಳಿಗೆ (ಟ.ದ).

ಮುಱಿದುದಚ್ಚಾಳೆಚ್ಚುಕುದುರೆಗ
ಳುಱುಕುಗೊಂಡುದು ನಿನ್ನವರು ಹೊ
ಕ್ಕಱಿದು ಹೋಗಾಡಿದರು ತನ್ನ ಸಹೋದರ ವ್ರಜವ ।
ಹೊಱಗೆ ಕರ್ಣಕೃಪಾದಿಗಳು [1]ಮ್ರೈ[1]
ಮಱೆವ ಹೊತ್ತಾಯಿತ್ತವನ ನೆತ್ತರ
ಸುಱಿಯದೆಡೆಯಲಿ ಬಿಡೆನೆನುತ ಪವನಜನು ಗರ್ಜಿಸಿದ ॥ ೨೭

ದೊರೆಯ ತಮ್ಮನ ತವಕತೋಱಿಗೆ
ತಿರುಗುತದೆ ತಡವೇನು ನೂಕೆನು
ತರಸ ಕೇಳ್ಳೈ ತನತನಗೆ ದುಶ್ಶಾಸನನ ರಥವ ।
[2]ಪರಿಹರಿಸಿ[2]ಕೊಂಡೇಱಿತೀ ದಳ
[3]ದುರವಣೆಯ[3] ಸ್ಮೈರಿಸಿದಡವನೀ
ಶ್ವರನಲೇ ಕಲಿ ಭೀಮನಲ್ಲವೆ ಧೀರನಾರೆಂದ ॥ ೨೮

ನೂಕದಿರಿ ಸಂಘಟಿಸಿ ಹೋಹೋ
ಸಾಕು ಸಾಕಾ ಮೆಚ್ಚಿದೆನು ತಳು
ವೇಕೆ ದುಶ್ಶಾಸನ ವೃಥಾ ನೀ ಹೊತ್ತುಗಳೆವೆಯಲಾ ।
ನೀ ಕಳೆದುಕೊಳು ಧನುವ ನಮ್ಮ ವಿ
ವೇಕವನು ದಳ ನೋಡುತಿರಲಿ ನಿ
ರಾಕುಳದಲೆಚ್ಚಾಡುವೆವು ನಿಲ್ಲೆಂದನಾ ಭೀಮ ॥ ೨೯

[4]ರೂ[4]ಡಿಸಿದ ಭಟ ನೀನು ಹರಿಬವ
ಬೇಡಿ ತೊಡಕಿದೆ ನಾನು ಖಾಡಾ
ಖಾಡಿಯಲಿ ಸಿಗುಱಿಲ್ಲ ತೆಗೆ ಹಂಗೇಕೆ ತೆತ್ತಿಗರ ।
ನೋಡುತಿರಲೀ ಬಲವೆರಡು ಹೋ
ಗಾಡು ನಮ್ಮನು ಮೇಣು ನಿನ್ನನು
[5]ಸೂ[ಡು]ದಱಿವೆನು[5] ಸತ್ವದಳತೆಯ ಕಾಣಲಹುದೆಂದ ॥ ೩೦

ತೊಲಗಿರ್ಕೆ ಪರಿವಾರ ಬಾಳೆಯು
ತಳಿಯ ಮುಱಿವತಿ ಸಹಸಿ ಗಡ ಮಱಿ
ಮೊಲನ ಬೇಟೆಯ ವೀರ ಗಡ ಬಾಣಪ್ರಯೋಗದಲಿ ।

---

[1] ಕ್ರೈ (ಗ.ಟ.ತ.ಪ). [2] ಪರುಠವಿಸಿ (ಕ.ಗ) [3] ಕುರುಬಲಕೆ (ಟ).
[4] ಝಾ (ಟ.ಪ). [5] ಸೂಡಿಗಿಱಿವೆನು (ಘ.ತ.ಪ.ಬ).

ಸಲೆ ಮೃಗದ ಸಾಹಸಿಕ ಗಡ ಕು
ಟ್ಮಳಿತ ಕೇತಕಿ [1]ತೀಕ್ಷ್ಣ[1] ಗಡ ನೀ
ವಳವಿಗೊಡದಿರಿ ಎನುತ ನಿನ್ನ ಕುಮಾರನನುವಾದ॥ ೩೧

ಪೂತು ಸುಭಟ ಸುಯೋಧನನ ಸಹ
ಜಾತನಲ್ಲಾ ಮತ್ತೆ ಕೆಲಬರಿ
ಗೀ ತವಕವೀ ಶೌರ್ಯವೀ ಬಲುಹೀಸು ದಿಟ್ಟತನ ।
ಸೋತುದುಂಟೇ ಹೊಳ್ಳುವಾತಿನ
ಹೂ ತೊಡಬೆ ನಿನಗಿಲ್ಲ [2]ಧೈ[2]ರ್ಯದ
ಧಾತುವೊಳ್ಳಿತು ಕೊಳ್ಳೆನುತ ತೆಗೆದೆಚ್ಚನಾ ಭೀಮ ॥ ೩೨

ಫಡ ಎನುತ ಪವನಜನ ಬಾಣವ
ಕಡಿದು ಕೂರಂಬಿನಲಿ ಭೀಮನ
ಕೆಡೆಯೆಸುತ ಮುಖಿಯೆಚ್ಚು ಮಗುಳೆಚ್ಚಂಬ ಹರೆಗಡಿದು ।
ಎಡೆಯಲೆಚ್ಚಂಬುಗಳನಿಬ್ಬರು
ಕಡಿದರಂಬಂಬುಗಳ ಹೋರಟೆ
ಕಿಡಿಗೆದಱೆ ನಿಬ್ಬರದ ಕದನವ ಕಂಡೆನಿಬ್ಬರಲಿ ॥* ೩೩

ಸವೆಯೆ ಸರಳೆಚ್ಚಾಡಿದರು ಕಲಿ
ಪವನಸುತ ದುಶ್ಶಾಸನರು ರಣ
ದವಕಿಗರ ಕೋಪಾಗ್ನಿ ಭುಗಿಭುಗಿಲೆಂದುದಡಿಗಡಿಗೆ ।
ಅವನಿಗಿಳಿಬಿಡು ಧನುವ ತೆಗೆ ಖಡು
ಗವನೆನುತ ರಥದಿಂದ ಹಾಯ್ದರು
[3]ಬವರಿಗರು ಬಿನ್ನಣದಿ[3] ಹೊಯ್ದಾಡಿದರಡಾಯುಧದಿ ॥ ೩೪

---

[1] ತಿಕ್ಷ (ಕ), ತೀಕ್ಷ (ಘ), ರಿಕ್ಷ (ತ), ವೃಕ್ಷ (ದ). [2] ಕಾ (ಕ.ಗ.ಚ)

* ಈ ಪದ್ಯವಾದ ಮೇಲೆ (ಗ.ಟ.ದ.ನ.ಬ.) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ :—

ಅಂಬಿಗಂಬುಧಿ ಜರೆದುದೋ ಮೇ
ಣಂಬುಗಳನಂಬರವೆ ಕಾರಿ
ತ್ತಂಬುರುಹ ಭವನಂಬುಗಳ ಸೃಜಿಸಿದನೊ ಬಳಿಕ ।
ಅಂಬುಗಳಿಗಂಬರದೊಳಿಂಬಿ
ಲ್ಲೆಂಬವೋಲಂಬಂಬ ನೀಡಿಱೆ
ದಂಬು ಹಾಯ್ದರುಣಾಂಬುಗಳ ಚುಂಬಿಸಿತು ವಹಿಲದಲಿ ॥

[3] ಬ್ಬಣವ ಕೊಂಡನು ಭೀಮ (ಕ).

[1]ಚಾ[1]ರಣದ ಚಮ್ಮಟದ ಖಡುಗದ
[2]ಪಾರಗದಲುಚ್ಚಟದ[2] ಲುಳಿಯು
ಚ್ಚಾರದೊಡ್ಡಿನ ಹೊಯ್ಲ ಹೋರಟೆಗಳ ಸುರೇಖೆಗಳ ।
ಸಾರತರಶ್ರಮ[3]ರೊದಗಿದರು[3] ಜ
ಜ್ಝಾರರುಬ್ಬಣ ಮುಱಿಯೆ ಕಾದಿ ಕ
ಠಾರಿಗಳಲೇ ತಱುಬಿ ನಿಂದರು ದಂಡೆ[4]ಮಂಡಿ[4]ಯಲಿ ॥ ೩೫

ಲುಳಿಯ ಪಯಪಾಡುಗಳ ದಂಡೆಯ
[5]ಬಳಿ[5]ಯ ಲೋಹದ [6]ಲವಣಿಗಳ ಮನ
ಲಳಿಯ[6] ಲಾಗಿನ ದೃಷ್ಟಿಯೋರೆಯ ಕೊಂಕಿದವಯವದ ।
ಬಲಿದ ದಂಡೆಯ ಮುಱಿಯ ದೇಹದ
ತಳಿತ ಠಾಣದ ಹಜ್ಜೆಹಜ್ಜೆಯ
ನೆಲನ ಪಲ್ಲಟದರಿಭಟರು ಕಾದಿದರು ಖಾತಿಯಲಿ ॥ ೩೬

ಬಿಡಿಸಿದರೆ ಕುತ್ತುವ ವಿಘಾತಿಯ
ಮಡಮುರಿಯಲೇ ಕಳೆವ ದಂಡೆಯ
ತುಡುಕಿದಡೆ ನೋಡುವ ನಿವಾರಿಸಿ ಜಡಿದು ಝಳಪಿಸುವ ।
ಪಡಿಮುಖದೊಳಂಘೈಸಿ ಬವರಿಯ
ಲೊಡಲನೊಲೆವ ಕಠಾರಿಕಾಱರ
ಬಿಡುಶ್ರಮದ ಬಿನ್ನಣಕೆ ಮಝು ಭಾಪೆಂದುದುಭಯಬಲ ॥ ೩೭

ಕಣೆಯ ಕಾಲಾಟದಲಿ ಹಿರಿಯು
ಬ್ಬಣದ ಹೋರಟೆಯಲಿ ಕಠಾರಿಯ
ಕುಣಿಹದಲಿ ಮಸೆಗಾಣದಿದ್ದುದು ನಿನ್ನ ದೇಹದಲಿ ।
ರಣಮುಖದೊಳಿದು ನಮ್ಮ ಪುಣ್ಯದ
ರಿಣವಿಶೇಷ ಕಣಾ ಎನುತ ರಿಪು
ಗಣ[7]ಭಯಂಕರ[7] ಭೀಮ ನುಡಿದನು ಕೌರವಾನುಜನ ॥ ೩೮

ಸಾಕಿದೇತಕೆ ಮಲ್ಲಶ್ರಮದಲಿ
ನೂಕಿನೋಡುವೆವಿನ್ನು ಕೈದುಗ
ಳೇಕೆ ದೃಢಮುಷ್ಟಿಪ್ರಹಾರಪ್ರಕಟಸತ್ವರಿಗೆ ।

---

[1] ಭಾ (ಕ.ಗ.ಚ.ತ.ನ). [2] ಪೋರಣದಲುಬ್ಬಟೆಯ (ಕ). [3] ದೊದಗಿನಲಿ (ಕ). [4] ದಂಡೆ (ಕ.ಗ.ಚ.ಟ). [5] ಲಳಿ (ಕ.ಗ.ಟ). [6] ಲಹರಿಗಳ ಪ್ರಾವಳಿಯ (ಗ.ಟ), ಲವಣಿಗಳ ಮನಮುರಿಯ (ಕ). [7] ದಿಶಾಪಟ (ಚ.ತ.ನ.ಬ).

ಈ ಕುಮಾರಕರೊಳಗೆ ನೀನೇ
ಜೋಕೆಯುಳ್ಳವನಹೆ ನಿಯುದ್ಧ
ವ್ಯಾಕರಣಪಾಂಡಿತ್ಯವೆಮಗುಂಟೆಂದನಾ ಭೀಮ ॥ ೩೯

ಏಸನಗ್ಗಿಸಿಕೊಂಬೆ ನಿನಗಿ
ನ್ನೈಸು ಕೈದುಗಳಲ್ಲಿ ಕೃತವ
ಭ್ಯಾಸವಾ ಕೈದುಗಳ ಬಾಯಿಗೆ ನಿನ್ನ ಬೀಱುವೆನು ।
ಏಸು ಬೇಹುದು ಮಲ್ಲತನ ನಿನ
ಗೈಸು ಬಿನ್ನಾಣದಲಿ ನಿನ್ನಯ
ಸೀಸವಾ[1]ಳವ[1] ಹೊಯ್ವೆನೆಂದನು ನಿನ್ನ ಮಗ ನಗುತ ॥ ೪೦

ತರಿಸಿ ಬಿಗಿದರು ಚಲ್ಲಣವ ಠ
ಪ್ಪರವನಳವಡೆಗಟ್ಟಿದರು ಕ
ಸ್ತುರಿಯ ತಿಲಕವನೊಟ್ಟಿದರು ನೊಸಲಿನಲಿ ಮುಡುಹಿನಲಿ ।
ಕರತಳವ ಮಾಱುದ್ದಿ ಭುಜದಲಿ
ಶಿರದಲಂದಕ್ಕಡದ ಮಣ್ಣನು
ಬೆರಳಲುದುರಿಚಿ ಬಾಳುಗೆಂದರು ನೆನೆದು ನಿಂಬಜೆಯ ॥ ೪೧

ಸೂಳವಿಸಿದರು ಭುಜಶಿಖರ ನಿ
ಸ್ಸಾಳವನು ನೆಲಕು[2]ಣಿ[2]ಯೆ ದಿಕ್ಕಿನ
ಮೂಲೆ ಬಿರಿಯೆ ಪಯೋಧಿ[3]ಗಳಲಿ ಪಯೋಧಿ ಪಲ್ಲಟಿಸೆ[3] ।
ಘೀಳಿಡಲು ಕಿವಿಗಳಲಿ ಸೇನಾ
ಜಾಳವೆರಡಱೊಳುಭಯದಿಗುಶುಂ
ಡಾಲ ಕೈಯಿಕ್ಕುವವೊಲಿವರೊತ್ತಿದರು ತೋಳ್ಗಳಲಿ ॥ ೪೨

ತೆಗೆದು ಗಳಹತ್ತದಲಿ ಕೊರಳನು
ಬಿಗಿಯೆ ಬಿಡಿಸುವ ತೋರಹತ್ತದ
ಹೊ[4]ಗು[4]ತೆಯನು ವಂಚಿಸುವ ತಳಹತ್ತದಲಿ ತವಕಿಸುವ ।
ಲಗಡಿಯಲಿ ಲಟಕಟಿಸುವಂತರ
ಲಗಡಿಯಲಿ ಲಾಗಿಸುವ ಡೊಕ್ಕರ
ಣೆಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹೆಣಗಿದರು ॥ ೪೩

---

[1] ಳಿಗೆ (ನ). [2] ಸಿ (ಕ.ಗ). [3] ಕದಡಲು ದಿಗಿಭ ತಲ್ಲಣಿಸೆ (ಟ.ದ).
[4] ಗಿ (ಕ).

ಘಾಯವೇ ಜಗಜಟ್ಟಿ ಮಲ್ಲರಿ
ಗಾಯ[1]ಸವು ಜೊಕ್ಕೆಯ*ವ* ಬಿಡುವಡು[1]
ಪಾಯ ಕೇಳಿಂದೊದೆದು ದಂಡೆಯನೊಡ್ಡಿದನು ಭೀಮ ।
ರಾಯ ಕೇಳ್ಕೈ ಸಿಡಿಲ ತಿವಿಗುಳ
ತಾಯಿಮನೆಯೋ ಪವನಜನ ಬಲು
ಘಾಯವೋ ಘನ ತೋರಹತ್ತರು ತಿವಿದರುರವಣಿಸಿ ॥ ೪೪

ಮೈಗೆ ಮೇಣದ ಹಾಹೆ ಸರಿ ಮುಂ
ಗೈಗೆ ಮೇರುವಿನಿರವು ದೊರೆ ಹೊಱ
ಕೈಗೆ ವಜ್ರದ ಹೊಯ್ಲು ಪಡಿಘಟ್ಟಣೆ ಮಹಾದೇವ ॥
ಕೈಗಡಿಯ ಪಟುಭಟರೊಳಗೆ ಬಲು
ಗೈಗಳೆಂದಮರಾಳಿ ಹೊಗಳಲು
ಹೊಯ್ಗುಳಿನ ಹೊಸನಾಟಕವನಭಿನಯಿಸಿ ಕಾದಿದರು ॥ ೪೫

ಒಂದು ಭೀಮನ ಮೇಲೆ ನಿನ್ನಯ
ನಂದನನ ಮೇಲೆರಡು ಕೊಂತೀ
ನಂದನಗೆ ನಾಲ್ಕೆಂಟು ನಿನ್ನ ಕುಮಾರನಂಗದಲಿ ।
ಸಂದಣಿಸಿದವು ಘಾಯ ಘಾಯದ
ಮುಂದೆ ಹೊದಱೆದ್ದವು [2]ಸುಘಾಯದ[2]
ಬಂದಿಯಲಿ ಸಿಲುಕಿತ್ತು ನಿನ್ನ ಕುಮಾರನಂಘವಣೆ ॥ ೪೬

ತ್ರಾಣವೆಳದಾಯ್ತಖಿಳ ಶೌರ್ಯದ
ಚೂಣಿ ಮುಱಿದುದು ಘರ್ಮಜಲವು
ಗ್ರಾಣಿಸಿತು ಭುಜಬಲವನಂಕುರಿಸಿತ್ತು ರಣಭೀತಿ ।
ಪ್ರಾಣಪವನನ ಬೀಡು ಬಿಟ್ಟುದು
ಗೋಣಿನಲಿ ಗರುವಾಯಿಗೆಡೆ ರಣ
ಹೂಣಿಗನು ಜವಗುಂದಿದನು ದುಶ್ಶಾಸನನು ಬಳಿಕ ॥ ೪೭

ಹೊಯ್ದು ತುರುಬನು ಹಿಡಿದು ತಡೆಗಾ
ಲ್ವೊಯ್ದು ಕೆಡಹಿದನಸಬಡಿದು ಹೊಯ್
ಹೊಯ್ದು ಬಿಡೆ ಖೊಪ್ಪರಿಸಿ ಡೊಕ್ಕರವಿಕ್ಕಿ ರಾಘೆಯಲಿ ।

---

[1] ವನು ಜೋಕೆಯುಲಿದೆ ಕಡು (ಕ). * ವು (ಚ.ತ.ನ). [2] ವಿಘಾತಿಯ (ಕ.ಗ.ಟ

ಹಾಯ್ದವಾಲಿಗಳುಸುರಪಾಳೆಯ
ವೆಯ್ದೆ ಬಿಟ್ಟುದು ಮೂಗಿನಲಿ ಕೈ
ಗೆಯ್ದು ತುಡುಕಿದ ಶೋಣಿತಕೆ ಲಟಕಟಿಸಿದನು ಭೀಮ ॥ ೪೮

ಹರಿ ಮದೋತ್ಕಟದಂತಿಯನು ಡೊ
ಕ್ಕರಿಸಿ ಡಾವರಿಸುವವೋಲಾ ನರ
ಹರಿ ಹಿರಣ್ಯಕಶಿಪುವನಂಕದ ಮೇಲೆ ತೆಗೆವಂತೆ ।
ಅರಸ ನಿನ್ನ ಕುಮಾರಕನ ನಡು
ತರದೊಳಗೆ ಕೆಡಹಿದನು ಕೊಬ್ಬಿದ
ಮರುಷ ಹರುಷ ನಿಯುದ್ಧದಕ್ಕಡನಾದನಾ ಭೀಮ ॥ ೪೯

ಸಿಕ್ಕಿದೆಯಲಾ ಸ್ವಾಮಿ ದ್ರೋಹಿಯೆ
ಸೊಕ್ಕಿದೆಯಲಾ ಹಿಂದೆ ಜೂಜಿನ
ಲಕ್ಕಜವ ಮಾಡಿದೆಯಲಾ ಮಾನಿನಿಯ ಮುಡಿವಿಡಿದು ।
ಚುಕ್ಕಿಗಳಲಾ ನಿನ್ನವರು ಕೈ
ಯಿಕ್ಕ ಹೇಳಾ ನಿನ್ನನೊಬ್ಬನ
ನಿಕ್ಕಿ ನೋಡಿದರಕಟೆನುತ ಮೂದಲಿಸಿದನು ಭೀಮ ॥ ೫೦

ಉಕ್ಕಿದುದು ತನಿಹರುಷ ಮೈಯೊಳ
ಗೊಕ್ಕವಾ ಪುಳಕಾಂಬು ಕಂಗಳು
ಮುಕ್ಕುಳಿಸಿದುವು ಮುನ್ನ ದುಶ್ಶಾಸನನ ಶೋಣಿತವ ।
ಬಿಕ್ಕುವಹಿತನನಡಿಗಡಿಗೆ ಎವೆ
ಯಿಕ್ಕದೀಕ್ಷಿಸಿ ತಣಿಯದಿನ್ನಕ
ಸಿಕ್ಕಿ ಸಿಡಿಮಿಡಿಗೊಂಬ ರೋಷವೆ ರಾಜ್ಯಮಾಡೆಂದ ॥ ೫೧

ಎತ್ತ ಕಳೆದಿರಿ ವನಕೆ ನಾವ್ ನಿ
ಮ್ಮೆತ್ತುಗಳಲಾ ಬೀದಿಯಲಿ ಬೆಂ
ಬತ್ತಿ ಕೊಂಕಿನ ಬೆರಳಲೇಡಿಸಿ ಬಯ್ದು ಭಂಗಿಸಿದೈ ।
ತೊತ್ತಲಾ ಪಾಂಚಾಲೆ ನಾವ್ ನಿ
ಮ್ಮೆತ್ತುಗಳಲಾ ಹಿಂದೆ ಕಿಚ್ಚಿನ
ತುತ್ತು ವಿಷದುಬ್ಬಟೆಗಳನು ನೆನೆಯೆಂದನಾ ಭೀಮ ॥ ೫೨

ಎಱಗಿದನು ಕಟವಾಯ ಹಲುಗಳ
ಮುಱಿಯಲುಗುರಲಿ ಹೊಯ್ದು ಹೃದಯವ
ನುಱೆ ಬಗಿದು ಮೊಗೆಮೊಗೆದು ರಕ್ತವ ಕುಡಿತೆ[1]ಕುಡಿತೆಯಲಿ[1] ।

---

[1] ಯಲಿಕುಡಿದು (ಕ.ಚ.ಟ).

ಸುಱುಸುಱಿದು ಸುಱಿದಡಿಗಡಿಗೆ ಚ
ಪ್ಪಿಱಿದು ಚಪ್ಪಿಱಿದಿದಱ ಮಧುರಕೆ
ನೆಱೆವವೇ ಸುಧೆಯಿಕ್ಷುರಸಗಿಸವೆಂದನಾ ಭೀಮ ‖ ೫೩

ಆಡಿದುದು ಹುಸಿಯಲ್ಲ ನೀ ಸವಿ
ನೋಡು ಕರ್ಣನರೇಂದ್ರ ಕೌರವ
ನೋಡು ಸವಿಯನು ಶಕುನಿ ಕೃಪ ಕೃತವರ್ಮ ಗುರುಸುತರು ।
ನೋಡಿರೈ ಹೇವರಿಸುವರೆ ಕೈ
ಮಾಡಿರೈ ನಿಮ್ಮಾತನಳಿವನು
ನೋಡುತಿಹು[1]ದೇ[1] ನಿಮಗೆ ನೀತಿಯೆ ಎಂದನಾ ಭೀಮ ‖ ೫೪

ಬಿಡಿಸಲಾಗದೆ ಕೈದುಕಾತಿಯ
ರಡಬಳವನೀ ಹುಲಿಯ ಬಾಯಲಿ
ಕೆಡವಿ ಕಳೆದಿರಲಾ ಸುಯೋಧನ ಕರ್ಣ ಗುರುಸುತರು ।
ಸುಡಲಿ ನಿಮ್ಮನು ಮೊಲೆಗಳಿಲ್ಲದ
ಕಡುಮುಹುಳಿ ನಿಮಗೇಕೆ ನಿಮ್ಮನು
ನುಡಿಸುವವರಾವಲ್ಲೆನುತ ಮದವೇಱಿದನು ಭೀಮ ‖ * ೫೫

ಎಲೆಲೆ ಕೌರವಮೋಹರದ ಮಂ
ಡಳಿಕರಿರ ದುಶ್ಶಾಸನನ ತೊ
ಟ್ಟುಳಿಕೆಗಾಂತಿದೆ ಹರಣವಕಟಾ ಕಾಯಲೆಳಸಿರಲಾ ।
ಸಲಹಿದವನೊಡಹುಟ್ಟಿದೀತನ
ಕೊಲುವೆಡೆಗೆ ಮತವೇ ಮಹೀಶರ
ಕುಲಕೆ ಪಂಥವಿದೇ ಎನುತ ಮೂದಲಿಸಿದನು ಭೀಮ ‖ ೫೬

ಏನ ಹೇಳುವೆನರಸ ಕೌರವ
ಸೇನೆ ಗರಹೊಡೆದಂತೆ ಬಹಳಾಂ
ಭೋನಿಧಿಯುಲಿದ್ದಂತೆ ಬೆಗಡಿನ ಸೊಗಡ ಸೆಱೆವಿಡಿದು ।
ಮೋನದಲಿ ಮನವಳುಕಿ ಯೋಗ
ಧ್ಯಾನಪರರಾದಂತೆ ಚಿತ್ತ
ಗ್ಲಾನಿಯೊಳಗೆಲೆಮಿಡುಕದಿದ್ದುದು ನಿನ್ನ ಪರಿವಾರ ‖ † ೫೭

---

[1] ದಿದು (ತ). * ಈ ಪದ್ಯ (ಕ.ಪ.) ಪ್ರತಿಗಳಲ್ಲಿಲ್ಲ. ಇಲ್ಲಿಂದ ಮುಂದಕ್ಕೆ ( ) ಪ್ರತಿಗಳಲ್ಲಿ ಓಲೆಗಳಿಲ್ಲ. † ೫೭–೫೯ನೆಯ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಅಡಿಗಡಿಗೆ ಕದುಕಿಱಿದು ರಕುತವ
ಕುಡಿತೆಯಲಿ ಕುಡಿಕುಡಿದು ಬೆರಳಲಿ
ಮಿಡಿದು ಕದನಸ್ಥಾನದೇವತೆಯರಿಗೆ ಕೈಕೊಳಿಸಿ ।
ಕುಡಿದು ಮಿಕ್ಕುದನಖಿಳ ಭೂತಕೆ
ಬಡಿಸಿ ಚಪ್ಪಿಱಿದಾರಿ ಬೊಬ್ಬಿಱಿ
ದೊಡನೊಡನೆ ನೊರೆನೆತ್ತರೋಕುಳಿಯಾಡಿದನು ಭೀಮ ॥ ೫೮

ಎಲವೆಲವೊ ಗುರುಸೂನು ಭೂಮಂ
ಡಲದೊಳಗೆ ನಿಮ್ಮಯ್ಯನೂ ನೀ
ನುಳಿಯೆ ಭಟರಿಲ್ಲೆಂಬ ಗರ್ವದಗಿರಿಯನೇಱಿಹಿರಿ ।
ನಿಲುಕಲಾಗದೆ ಕೌರವಾನುಜ
ನುಳಿವು ಸೊಗಸದೆ ನಿನಗೆ ಬಿಲುವಿಡಿ
[1]ದುಳುಹಿರೈ ಲೇಸಹುದೆನುತ[1] ಮೂದಲಿಸಿದನು ಭೀಮ ॥ ೫೯

ಎಲೆ ಕೃಪಾಚಾರಿಯ ಸುಯೋಧನ
ನೊಳಗೆ ಸೇರುವೆ ಹಿರಿದು ನಿಮಗೀ
ಖಳನ ಕೊಲೆಯನು ನೀವು ಮನಗೊಟ್ಟೊಲಿದು ನೋಡುವರೆ ।
ಎಲೆ ಶಕುನಿಯೆಲೆ ಶಲ್ಯ ಎಲೆ ಬಾ
ಹಿಲಿಕ ಕೃತವರ್ಮಾದಿ ವೀರರು
ಸೆಳೆದುಕೊಳಿ ದುಶ್ಶಾಸನನನೆನುತೊಱಲಿದನು ಭೀಮ ॥ ೬೦

ಪತಿಗೆ ಮಲೆವರಗಂಡನಾಳ್ದಗೆ
ಹಿತವ ಕೌರವಕುಲಕೆ ಕಣು ಗತಿ
ಮತಿಯೆನಿಸಿ ನೀ ಕರ್ಣನೆಂಬುದು ಸಕಲಜನಜನಿತ ।
ಪತಿಯ ಸಹಸಂಭವನ ಮರಣ
ವ್ಯತಿಕರವ [2]ನೋಡಿದಡೆ ದುಷ್ಕೀ
ರಿತಿಯ ಮೊಳೆ ಹೊಮ್ಮುವವಲೇ ರವಿಸುತನೆ ಕೇಳೆಂದ[2] ॥ ೬೧

ಕರೆದು ಮೂದಲಿಸಿದರೆ ರಣಭೀ
ಕರರು ಮರಳುವರವರಿಗೆತ್ತಿದ
ಬಿರುದಿನಗ್ಗದವೀರ ನೋಡುತ್ತಿಹರೆ ಕಲಿ ಕರ್ಣ ।

---

[1] ದಳುಕಿದಿರಲಾ ನೀವೆನುತ (ದ.ಪ.ಬ). [2] ಬಿಡಿಸದಿರೆ ಯಪಕೀರಿತಿಯಱ ನಿನಗಹುದೆಂದು ಮೂದಲಿಸಿದನು ರವಿಸುತನ (ಪು.ತ.ದ).

[1]ಹರಣವಿದೆ ದುಶ್ಶಾಸನನ *ತೆಗೆ
ಬರ*ಸೆಳೆವ ಬಲುಹುಳ್ಳಡೆನುತು
ಬ್ಬರಿಸಿ ಗಜಬಿನ ಗರುವನೊಬಲಿದನಹಿತವೀರರಿಗೆ[1] ‖ ೬೨

[2]ಆಕೆವಾಳರು ಕರ್ಣಗುರುಸುತ
ರೀ ಕೃಪಾಚಾರಿಯರು[2] ತಾವೇ
ಕೈಕವೀರರು ನಿನ್ನನೊಬ್ಬನನೊಪ್ಪುಗೊಟ್ಟರಲಾ ।
ಏಕೆ ತಬಬಿದಿರಿವರನಾಹವ
ಭೀಕರರ[3]ನವಿವೇಕಿ[3]ಗಳು ಇವ
ರೇಕೆ ನೀವೇಕೆಂದು ದುಶ್ಶಾಸನನ ನೋಡಿದನು ‖ ೬೩

ಮರಣ ಹೊರೆಹೊರೆಯಾಯ್ತು ನಿನ್ನಯ
ಹರಣವೆನ್ನಂಗಯ್ಯಲಿದೆ ನಿ
ಮ್ಮರಸನನ ಕರಸೆಲವೊ ಕಾದಿಸು ನಿನ್ನ ರಕ್ಷಿಸಲಿ ।
ಅರಿಬಲದೊಳಿದಿರಿಲ್ಲ ನಿಜವೋ
ಹರದೊಳಗೆ ಮಿಡುಕುಳ್ಳ ವೀರರು
ಮರಳಿಚಲಿ ನಿನ್ನುವನೆನುತ ನೋಡಿದನು ತನ್ನವರ ‖ † ೬೪

ಎಲವೊ ಧೃಷ್ಟದ್ಯುಮ್ನ ಸಾತ್ಯಕಿ
ಎಲೆ ಶಿಖಂಡಿ[4]ಪ್ರಮುಖನಾಯಕ
ರಳು[4]ಕದಿಹ ಮನವುಳ್ಳಡಿದಿರಾಗಿವನ ಸಲಹುವುದು ।

---

[1] ಧುರದೊಳಪ್ರತಿವೀರನೀ ಸಂ
ಗರಕೆ ಸಾಹಸಮಲ್ಲ ಈ ವ್ರತಿ
ಕರವ ನೀ ಬಿಡಿಸೆಂದು ಮೂದಲಿಸಿದನು ಕಲಿಭೀಮ ‖ (ದ).

* ನನಿಬರು (ತ). [2] ಈ ಕೃಪನನೀಕರ್ಣನೀ ಮತ್ತೀಕುಮತಿಗಳು ಗುರುಸು ತನು (ಕ.ಗ.ನ). [3] ಸೇವಕರು (ತ.ನ.ಪ). † ಈ ಪದ್ಯವಾದಮೇಲೆ (ಗ.) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ :—

ಇವರ ಬಲದಲಿ ನಿಂದುದೀ ನ
ಮ್ಮವರಲೇ ಮುರಹರ ಧನಂಜಯು
ನಿಮಗೆ ಬಲುಹುಯಾದರಿವನನು ಬಿಡಿಸಿ ಬಲ್ಲಿದರು ।
ಹವಣಬುದೆವಾವೆಂಬ ಲಯಭೈ
ರವಭಯಂಕರ ಭೀಮನಾಟೋ
ಪವನು ಕಂಡೆವೆಯಿಕ್ಕದಿರ್ದುದು ಭಟರು ಭೀತಿಯಲಿ ‖

[4] ಯುಧಿಷ್ಠಿರಾದಿಗಳಳು (ಪ.ನ).

ಹಲಬರಲಿ ಫಲವೇನು ದಾನವ
ಕುಲದಿಶಾಪಟಕೃಷ್ಣ ಮುನಿದಡೆ
ಕಳೆದುಕೊಳು ಕೌವೋದಕಿಯನೆಂದೊದಱಿದನು ಭೀಮ ॥ ೬೫

ಕೇಳು ಫಲುಗುಣ ಲೋಕಮೂಱಱೊ
ಳಾಳು ನೀನೆಂದೆಂಬ ಗರ್ವವ
ಪಾಲಿಸುವೊಡಿದಿರಾಗು ತೊಡು ಗಾಂಡಿವದಲಂಬುಗಳ ।
[1]ಆಳುತನ ನಿನಗುಳ್ಳೊಡಹಿತನ
ಪಾಲಿಸುವೊಡೇಳೆಂದೆನಲು[1] ಜಯ
ಲೋಲ ಸುಗತಿಯೊಳಿಳಿದನರ್ಜುನನಮಳ ಮಣಿರಥವ ॥ ೬೬

ಅಹುದಹುದು ತಪ್ಪೇನು ತಪ್ಪೇ
ನಹಿತದುಶ್ಶಾಸನನ ಸಲಹುವೆ
ನಹಿತ[2]ಬಲವೆನಗ[2]ನಿಲಸುತನೆನುತ್ತೈದೆ ಬರೆ ಕಂಡು ।
ಬಹಳ ಭೀತಿಯೊಳಸುರರಿಪು ಸ
ನ್ನಿಹಿತ ಚಾಪವ ಹಿಡಿದು ಮನದು
ಮ್ಮಹವ ಕೆಡಿಸಿ ಕಿರೀಟಿಯನು ನಿಲಿಸಿದನು ರಥದೊಳಗೆ ॥ ೬೭

ಅಹುದು ಭೀಮನ ಗೆಲುವ ಭಟನೀ
ನಹೆಯಲೇ ನಾವಂಜುವೆವು ನಿ
ರ್ವಹಿಸಬಹುದೇ ಕಾಲರುದ್ರನ ಕೆಣಕಿ ಕದನದಲಿ ।
ಸಹಜವಿದು ಸಾಕ್ಷಾದುಮಾಪತಿ
ಯಹ ಕಣಾ ಪವನಜನ ನೋಡಲು
ಬಹಡೆ ನೋಡೆಂದಸುರರಿಪು ನುಡಿದನು ಧನಂಜಯಗೆ ॥ ೬೮

ಕಂಡನರ್ಜುನ ತ್ರಿಪುರದಹನದ
ಖಂಡಪರಶುವೊಲಿರ್ದ ಭೀಮನ
ದಂಡಿಯನು ಥಟ್ಟೈಸಿ ಭೂತಗಳೆಡಬಲದೊಳಿರಲು ।
ಚಂಡಬಲನಹನ್ಯೆ ವೃಕೋದರ
ಗಂಡುಗಲಿಗಿದಿರಾವನೆನುತಾ
ಖಂಡಲಾತ್ಮಜನೆಱಗಿದನು ಮುರವೈರಿಯಂಘ್ರಿಯಲಿ ॥* ೬೯

---

[1] ಆಳುತನಕಿಳೆ ಮೆಚ್ಚೆ ಭೀತರ ಪಾಲಿಸೀತನ ಕಾವುದೆನೆ (ಕ). [2] ನೆನಗಿನ್ನ (ತ.ನ). * ಈ ಪದ್ಯ (ಕ.ಗ.ನ.) ಪ್ರತಿಗಳಲ್ಲಿಲ್ಲ.

ಉಭಯ ವೀರರ ನೋಡಿ ಸಂಗರ
ರಭಸದಲಿ ಮೂದಲಿಸಿ ಚಾಪ
ಪ್ರಭವಚಪಲರ ಚದುರುಗೆಡಿಸಿದ [1]ಭುಜಬಲೋನ್ನತಿಯ ।
ಸಭೆಯೊಳಾದವಮಾನದಹನ
ಪ್ರಭೆಯ ನಂದಿಸಲಾಯ್ತಲಾ ರಿಪು
ಸುಭಟ[2]ನುರವೆಂಬಭ್ರಸಂಭವರುಧಿರಜಲವೆಂದ[2] ॥ ೭೮

ಕೆಡೆದ ಹಗೆಯೊ[3][ರ][3]ಲಿನಲಿ ಕಿವಿ ಎಡೆ
ಯುಡುಗದೀಕ್ಷಿಸಿ ಕಂಗಳಾ ಖಳ
ನೊಡಲ ಕಡಿಗೆಡಹಿನಲಿ ಮೈ ರಿಪುಮಾಂಸಗಂಧದಲಿ ।
ಬಿಡದೆ ನಾಸಿಕ ಖಳನ ರಕುತವ
ಕುಡಿದು ನಾಲಗೆ ಸೊಗಸೆ ಸೊಕ್ಕಿದ
ನೊಡನೊಡನೆ ಪಂಚೇಂದ್ರಿಯ ಪ್ರೀತಿಯಲಿ ಕಲಿ ಭೀಮ ॥ ೭೯

ಘನ ಪರಾಕ್ರಮಿ ಭೀಮಸೇನಗೆ
ವಿನುತ ಭುಜಗೇಂದ್ರಂಗೆ ದುಶ್ಶಾ
ಸನನ ಜೀವಾನಿಳನ ಪಾರಣೆ ಸಮರಭೂಮಿಯಲಿ ।
ಮುನಿವನಾರಿವನೊಳಗೆ ಕರುಳಿನ
ಘನ ನಿಶಾಕರಬಿಂಬದುದಯದೊ
ಳನಿಲಜನ ಮುಖಕುಮುದನಸುನಗೆಯೊಸಳು ಪಸರಿಸಿತು ॥ ೮೦

[4]ಉಕ್ಕಿ[4]ದುದು ಕಡುಗೋಪ ರಕುತದ
[5]ಸೊಕ್ಕಿ[5]ನಲಿ ಸೊಗಡೇಱ ಕಂ[6]ಗಳ
ಲುಕ್ಕಿ[6]ದುದು ಕಡುಗೆಂಪು ತೊದಳಿನ ಗಜಱು ಘಾಡಿಸಿತು ।
[7]ಮಿಕ್ಕ[7] ರಕುತವ ಮೊಗೆದು [8]ಬದಿಗಳೊ
ಳೊಕ್ಕ ಕರುಳ್ಗಳನಾಯ್ದು ಮೂಲೆಗ
ಳೊಕ್ಕಿನಲಿ ಕೈಯಿಕ್ಕಿ ಱಂಗಣಗುಣಿದನಾ[8] ಭೀಮ ॥ ೮೧

ಬಳಿಕ ಪರಿತೋಷದಲಿ ಮಾರುತಿ
ಲಲನೆಯಲ್ಲಿಗೆ ಕಳುಹಿದನು ತ
ನ್ನೊಲವಿನಾಹವವಾದುದ್ಯೈತಹುದೆನಲು ಬೇಗದಲಿ ।

---

[1] ನಂದು ಕಲಿ ಭೀಮ (ಕ). [2] ಸಂಭವರಕುತಜಲವೆನಗೆಂದನಾ ಭೀಮ (ಕ.ನ.ಪ). [3] ಡ (ಸ). [4] ಔಕಿ (ಕ). [5] ಸೋಕಿ (ಕ). [6] ಗಳೊಳೌಕಿ (ಕ). [7] ನೂಕಿ (ಕ). [8] ಕರುಳನು ತೋಕಿ ಮೂಳೆಗಳೊಕ್ಕಿಲಲಿ ಕೈನೂಕಿ ಱಂಗಣ ಗುಣಿದು ಭೀಕರನಾದನಾ (ಕ).

ನಳಿನಮುಖಿ ನಲವೇಱಿ ಮೇಳದ
ಕೆಳದಿಯರು ಕೈಗೊಡಲು ನೇವುರ
ದೆಳವೊಳಗು ಮೋಹಿಸಲು ಮಾನಿನಿ ಬಂದಳಾಯೆಡೆಗೆ ॥ ೭೪

ಮನಸಿಜನ ಮದದಾನೆ [1]ಮೊಗಸಿ[1]ದ
ಳನುವರಕೆ ಮಝು ಮಾಯೆ ಮೆಚ್ಚಿನ
ಮನದ ಕಡುಹಿನ ಖಾತಿಯೆಂತುಟೊ ಕೌರವನ ಮೇಲೆ ।
ಎನಲು ದಿವಿಜರು ಝುಣಝುಣಾಯಿತ
ನಿನದದುರವಣೆ [2]ಮಿಗಲು ಘನಸಂ
ಜನಿತ ಪದತಳ ಚಲನಕೃತಿಯಿಂದೈ[2]ದಿದಳು ರಣವ ॥ ೭೫

ಅರರೆ ಭೀಮನ ವಿಜಯಲಕ್ಷ್ಮಿಯು
ಬರವೊ ಕೌರವನೃಪನ ಮರಣಾಂ
[3]ಕುರವ ಸೂಚಿಸುವಾತುರಶ್ರೀಸತಿಯ[3] ಸಂಭ್ರಮವೊ ।
ಅರಿಭಟರಿಗದ್ಭುತವೆನಲು ಭೀ
ಕರರು ದುರ್ಧರವೆಂದೆನಲು ಪಂ
ಕರುಹಮುಖಿ ನಡೆತಂದಳಾ [4]ಪವಮಾನಜನಹೊರೆಗೆ[4] ॥ ೭೬

ಬರುತ ಕಂಡಳು ಭೀಮಸೇನನ
ಧುರಪರಾಕ್ರಮವಹ್ನಿ ಭುಗಿಲೆಂ
ದರಿಭಯಂಕರರೌದ್ರರೂಪಿನೊಳಿರಲು ಬರಲಂಜಿ ।
ತಿರುಗೆ ಕಂಡನು ಪವನಸುತ ಪಂ
ಕರುಹಮುಖಿಯನು ಕರೆದು ನಿನ್ನಯ
ಭರದ ಬಯಕೆಯಿದಾಯ್ತು ದಿಟ ನೋಡೆಂದು ತೋಱಿಸಿದ ॥ ೭೭

ಆರಿವನು ನೀ ಕೊಟ್ಟ ಭಾಷೆಯು
ಕಾರಣಿಕ ಖಳರೊಳಗಿದಾವನು
ವೀರ ದುಶ್ಶಾಸನ ಕಣಾ [5]ಅಂತಾದಡಾಯ್ತೆನುತ[5] ।
ಸಾರಿದಳು ಸರಸಿಜವದನೆ ಭ
ರ್ತಾರನನು ನಸುನಗುತ ಚರಣದ
ಚಾರು ನೇವುರವುಲಿಯಲೊದೆದಳು ಖಳನ ಮಸ್ತಕವ ॥ ೭೮

---

[1] ಮೋಹಿ (ಕ). [2] ಮೇಲೆ ಕರಸಂಜನಿತಕರಕಮಳದ ಚಮತ್ಕೃತಿಯ್ಕೆ (ಕ). [3] ಕುರವಿವರ್ಧನವಾತುರ ಶ್ರೀಸತಿಯು (ಕ.), ತರವ ಸೂಚಿಸುವಾದಿಶಕ್ತಿಯ ಗತಿಯು (ಪ.), ಕುರವ ಸೂಚಿಸುವಪಜಯಸ್ತ್ರೀಸತಿಯು (ಬ.ನ). [4] ಪವನಜನಸಮ್ಮುಖಕೆ (ಟ.ದ). [5] ಅಂತಾದಡಹುದೆನುತ (ಕ.), ನೋಡೆನಲು ಹರುಷದಲಿ (ಗ.ಟ.ದ.ನ.ಬ).

ನುಡಿವುದರಿದೇ ನುಡಿದ ಭಾಷೆಯ
ಕಡೆತನಕ ಪೂರೈಸಿ ಮಾಡುವ
ಕಡುಗಲಿಗಳಾರುಂಟು ಜಗದೊಳು ನಿನ್ನ ಹೋಲುವರು |
*ಮೃಡಪರಾಕ್ರಮಿ ನಿನ್ನ ಹೋಲುವ
ಮಡದಿಯರು ನಿನ್ನಂದದೊಡೆಯರ
ಪಡೆವುದೇ ಪರಮೈಕಸೌಖ್ಯವಿವೆಂದಳಿಂದುಮುಖಿ* ‖ † ೭೯

ತರುಣಿ ಕುಳ್ಳಿರು ಸ್ವಾಮಿದ್ರೋಹಿಯ
ಕರುಳ ಮುಡಿ [1]ಬಾ ನಿನ್ನ ಖಾತಿಯ
ಪರಿಹರಿಸುವೆನು ಖಳನ ರುಧಿರ[1]ಸ್ನಾನಕೆಳಸುವರೆ |
ಸರಸಿಜಾನನೆ ಕೊಳ್ಳೆನುತ ಖಳ
ನುರವನಿಬ್ಬಗಿಮಾಡಿ ಕುಡಿತೆಯ
ಲರುಣಜಲವನು ಮೊಗೆದು ಮಾನಿನಿಗಿತ್ತನಾ ಭೀಮ ‖ ೮೦

ಶೋಣಿತಾಂಬುವಿನಿಂದ ತರುಣಿಯ
ವೇಣಿಯನು ನಾದಿದನು ದಂತ
ಶ್ರೇಣಿಯಲಿ ಬಾಚಿದನು ಕೈತಲೆವೆಗೆದು ಚೆಲುವಿನಲಿ |
ರಾಣಿ ಹುಸಿಯದೆ ಹೇಳು ಹೇಳೆ
ನ್ನಾಣೆ ಸೊಗಸೇ ಖಳನ ದಂತ
ಶ್ರೇಣಿ [2]ತವೆ ಪಾವನವೆ[2]ಯೆಂದನು ಪವನಸುತ ನಗುತ ‖ ೮೧

ಮುಡಿಗೆ ಹಾಯ್ದವನುದರ ರಕ್ತವ
[3]ತೊಡೆದು[3] ಕಬರಿಯ ಕ[4]ಟ್ಟೆ[4] ಕಟ್ಟುವೆ
ನುಡಿಗೆಯುಳಿದನ ಚರ್ಮವನು ನೀನುಡಿಸಲುಟ್ಟಪೆನು ‖
ಎಡೆಯಲೊಯ್ಯಾರದಲಿ ಕಟ್ಟೆನು
ಮುಡಿಯ ಮುಡಿಯುಡೆನೆಂಬ [5]ತೇಜದ[5]
ನುಡಿದ ನುಡಿ ಸಲೆ ಸಂದುದೇ ತನ್ನಾಣೆ ಹೇಳೆಂದ ‖ ೮೨

---

* ಕಡುಬಳಲಿದೆನ್ನಾಸರಡಗಿತು
ಪೊಡವಿ ಕೈಸಾರಿತು ವೃಕೋದರ
ಪಡೆದೆನತಿಸಂತೋಷವನು ಕೇಳೆಂದಳಿಂದುಮುಖಿ ‖ (ಪ).

† ಈ ಪದ್ಯ (ಕ.) ಪ್ರತಿಯಲ್ಲಿ ಮಾತ್ರ ಇಲ್ಲ. [1] ವರೆ ಧುರದ ಖಾತಿಯ ಧರದುರದ ವಿರಕ್ತವಾರಿಯ (ಕ). [2] ಯಿಹೆ ಬಾಚಣಿಗೆ (ಕ.ದ), ಮಯುಬಾಚಣಿಗೆ (ಘ.ಪ). [3] ಕುಡಿದು (ಕ). [4] ಟ್ಟ (ಕ.ನ.ಪ.ಬ). [5] ಭಾಷೆಯಿ (ಟ.ದ.ನ).

ಖಳನ ತೆಳುದೊಗಲುಗಿದು ವಾಸ
ಚ್ಛಲವ ಸಲಿಸಿದನವನ ಜಠರದೊ
ಳೊಳಗರುಳನುಗಿದಬುಜವದನೆಯ ಮುಡಿಗೆ ಮುಡಿಸಿದನು |
*ತಳುಕಿದನು ಖಳನುರದ ರಕ್ತದ
ತಿಳಕವನು ರಚಿಸಿದನು ಹರುಷದೊ
ಳುಲಿದು ಕೀಚಕವೈರಿ ನೋಡಿದನೊಲಿದು ನಿಜಸತಿಯ ||* ೮೩

ಪಸರಿಸಿದ ಪರಿವಾರಶರಧಿಯ
ಮಸಕ ಮಸುಳಿತು ತೊಡೆಯಲಡಗೆಡೆ
ದಸುಹೃದನ ದರುಶನದೊಳಗೆ ಮಸಗಿದವು ಮುಡುಹುಗಳು |
ಶಶಿವದನೆಯುತ್ಸಾಹವತಿ [1]ಥಾ
ಳಿಸಿತು[1] ಭೀಮನ ಹರುಷಜಲನಿಧಿ
ವಿಸಟವರಿದುದು ಕೇಳು ಜನಮೇಜಯ ಮಹೀಪಾಲ || ೮೪

ಎಡದ ತೊಡೆಯಲಿ ಮಡದಿ ಬಲುವಗೆ
ಯೊಡಲು ಬಲವಂಕದಲಿ ನೆಗಹಿದ
ಕುಡಿವೆರಳ ನಿಡುಗರುಳ ಮಾಲೆಯ ರೌದ್ರ ರಚನೆಯಲಿ |
ಕಡುಮುನದ ಖತಿಗಾಣ ಭೀಮನ
ಕಡುಹು ಹೋಲುವೆಯಾಯ್ತು ಕಂಭದೊ
ಳೊಡೆದು ಮೂಡಿದ ಮೃಗದ ಮೊಗದ ಮಹಾಸುರಾಂತಕನ || ೮೫

ಕೆಲದ ತಲೆ[2]ಯದ್ರಿಗಳ[2] ಮೂಳೆಯ
ಹೊಳೆವ ಸಾಲಿನ ಸುಂಟಗೆಯ [3]ತೊಂ
ಗಲಿನ ತೋರಣದೊ[3]ಟ್ಟಿಲಟ್ಟೆಯ ಕರುಳ ಮಾಲೆಗಳ |
[4]ತಿಳಿದ ರಕುತದ ಕೊಳನ ಘನ ಕೊಳು
ಗುಳದ ತೋಪಿನ ನಡುವೆ ಮಾರುತಿ
ಲಲನೆಸಹಿತಾಡಿದನು ಶೋಣಿತವಾರಿಯೋಕುಳಿಯ[4] || ೮೬

---

* ತಳುಕು ರಕುತವ ಕಳೆದು ರುಧಿರಾ | ವಳಿಯಲಿಟ್ಟನು ಬೊಟ್ಟನಂಗನೆ | ಯಳಕವನು ತುದಿವೆರಳಲೊರಸುತ ನಡಿದನಾಭೀಮ (ಕ).

[1] ರಾಣಿಸಿದ (ಕ). [2] ಯಂಬುಜದ (ಪ.ದ.ನ.), ಯಟ್ಟೆಗಳ (ಗ). [3] ತೋರಣದೊಳೊಡಗುಗಳೊ (ಕ). [4] ತಿಳಿದ ರಕುತದ ಕೊಳನ ಘನ | ತೋಳುಗಳ ತೋಪಿನ ನಡುವೆ ಮಾರುತಿ | ಲಲನೆ ಸಹಿತಾಡಿದನು ಶೋಣಿತ ವಾರಿ ಕೇಳಿಗಳ (ಕ), ತಳಿತ ರಕುತದ ತೋಳ ಘನ ಕೊಳು | ಗುಳದ ತೋಪಿನ ನಡುವೆ . . . . . (ಪ.ಬ.)

ಕೊಳುಗುಳದ ಜಯಲಕ್ಷ್ಮಿಗಾಯಿತು
ಚಲನಸುತನಲಿ ಮದುವೆಯೆನೆ ಮಂ
ಗಳಮುಹೂರ್ತ[1]ಕದೊಳಗೆ[1] ಮುಳುಗಿದ ಘಳಿಗೆವಟ್ಟಲೆನೆ ।
ತಲೆಕಪಾಲದ ಸಾಲಶೋಣಿತ
ಜಲದಲಂದೊಪ್ಪಿದವು [2]ರಣದೊಳು
ಕಳದೊಳದ್ಭುತ ರಚನೆ ಮಿಗೆ[2] ಸೌರಂಭ ರಂಜಿಸಿತು ॥ ೮೭

ಉಡಿದು ಕೆಡೆದ ಸಿತಾತಪತ್ರದ
ನಡುವೆ ಹರಿಸಾಲಿನ ಕಪಾಲದ
ಗಡಣವಿರೆ ಚೆಲುವಾಯ್ತು ಜನಮೇಜಯ ಮಹೀಪಾಲ ।
ಅಡಗನಂತಕ[3]ಗಗಲ ತಂ[3]ದುಣ
ಬಡಿಸಲಿಕ್ಕಿದ ತಳಿಗೆಯೊಳು ಸಂ
ಗಡಿಸಿದವು ಕೆಲವಟ್ಟಲೆನೆ ರಂಜಿಸಿತು ರಣಭೂಮಿ ॥ ೮೮

ಸರಳ ತುದಿಹಿಳುಕಿನಲಿ ಸಬಳದ
ಸುರಗಿಗಳ ಸೂನಗಿಯ ಬಂಡಿಯು
ಶರಗಳಲಿ ಸಿಲುಕಿರ್ದ ಸುಭಟರ ಕಡಿಕು ಮೆಱೆದಿರಲು ।
ಅರರೆ ಜವನಂಗಡಿಯೊಳಿಕ್ಕಿದ
ತರತರದೊಳಿಹ ಪಸರವೆನೆ ಸಿಂ
ಗರಿಸಿತ್ತೈ ರಣಭೂಮಿ ಜನಮೇಜಯ ಮಹೀಪಾಲ ॥ ೮೯

ಸಿಡಿದ ಕಣ್ಣಾಲಿಗಳು ಜವನಂ
ಗಡಿಯ ನೀಲದ ಹಸರದಂತಿರ
ಲಡಗು ಮೆಱೆದುದು ಸೂನೆಗಾಱರ ಹಸರದಂದದಲಿ ।
ಹೊಡೆಗೆಡೆದ ಗಜದಟ್ಟೆ ರಕುತದ
ಕಡಲೊ[4]ಳದ್ದವು ಬೀತರಸುಗಳ
ಪಡಗು ಜವಲೋಕಕ್ಕೆ ಜಂಗುಳಿಸಿರ್ದು[4]ವೆಂಬಂತೆ ॥ ೯೦

ಏನ ಹೇಳುವೆನರಸ ಕೌರವ
ಸೇನೆ ಗರಹೊಡೆದಂತೆ ಬಹಳಾಂ
ಭೋನಿಧಿಯೊಳದ್ದಂತೆ ಬೆಗಡಿನ ಸೊಗಡ ಸಱಿಹಿಡಿದು ।

[1] ದೊಳಂದು (ಕ). [2] ಬಾಣದ ತಲೆ ಶಯನದಲಿ ಮೆಱೆವ ರಣಸಂ (ಷ.ಟ.ತ.ದ.ನ.ಪ.ಬ). [3] ನಗಲನಂ (ಗ.ಟ.ತ.ದ.ಪ.ಬ). [4] ಳೆಸೆದವು ದನುಜ ಲೋಕದ ಹಡಗು ಭೂಲೋಕಕ್ಕೆ ಬಂದಳವಿಳಿದ (ಕ).

ಮೋನದಲಿ ಮನಮುಳುಗಿ ಯೋಗ
ಧ್ಯಾನಪರರಾದಂತೆ ಚಿತ್ತ
ಗ್ಲಾನಿಗಳಲೆಲೆಮಿಡುಕದಿರ್ದುದು ನಿನ್ನ ಪರಿವಾರ ||* ೯೧

ಅಡಿಗಡಿಗೆ ಕದುಕಿಱಿದು ರಕ್ತವ
ಕುಡಿತೆಯಲಿ ಮೊಗೆಮೊಗೆದು ಬೆರಳಲಿ
ಮಿಡಿದು ಕದನಸ್ಥಾನದೇವತೆಯರಿಗೆ ಕೈಗೊಳಿಸಿ |
ಕುಡಿದು ಮಿಕ್ಕುದನಖಿಳ ಭೂತಕೆ
ಬಡಿಸಿ ಬೊಬ್ಬಿಱಿದಾಱಿ ಚಪ್ಪಿಱಿ
ದೊಡನೊಡನೆ ನೊರೆನೆತ್ತರೋಕುಳಿಯಾಡಿದನು ಭೀಮ ||* ೯೨

†ಬಂದ ತೊಱೆಗಳ ಕುಡಿದೆನತಿ ಢಗೆ
ಯಿಂದ ಸಕಲ ಸರೋರುಹಾಂಬುವ
ನೊಂದೆ ಶ್ವಾಸದಲೀಂಟಿದೆನು [1]ಶಂಕಿಸದು[1] ಕೋಪಾಗ್ನಿ |
ಇಂದು ದುಶ್ಶಾಸನನ ಶೋಣಿತ
ದೊಂದು ಕುಡಿತೆಯಲಾ ಮಹಾಶಿಖಿ
ನಂದಿತೇನಿದು ಚಿತ್ರವಲ್ಲಾ ಸೂತ ಹೇಳೆಂದ || ೯೩

ಇವನ ನೆತ್ತರ ಕುಡಿವ ರಿಪುಕೌ
ರವರ ನೂರ್ವರ ಕಡಿವ ಭಾಷೆಗ
ಳೆವಗೆ ಪೂರಾಯವು ಸುಯೋಧನ ಹರಣವೊಂದುಳಿಯೆ |
ಅವನಿ ಜಳ ಶಿಖಿ ಪವನ ಪುಷ್ಕರ
ದಿವಿಜ ದನುಜೋರಗ ಮುಖಾಖಿಳ
ಭುವನಜನ ನೀವ್ ಕೇಳಿಯೆಂದನು ಭೀಮ ಮೊಗನೆಗಹಿ || ೯೪

ಮಡದಿಯನು ಕಳುಹಿದನು ಕೆಳದಿಯ
ರೊಡನೆ ನಡೆತರೆ ನಾಕು ಕಡೆಯಲಿ
ಹಿಡಿದ ಜವನಿಕೆಗಳಲಿ ಜಲರುಹವದನೆ ಗಮಿಸಿದಳು |

* ಈ ಪದ್ಯಗಳು (ಘ.ಟ.ತ.ದ.ನ.) ಪ್ರತಿಗಳಲ್ಲಿಲ್ಲ. † ಇಲ್ಲಿಂದ ಮುಂದಿನ ನಾಲ್ಕು ಪದ್ಯಗಳ ಕ್ರಮವು (ತ) ಪ್ರತಿಯಲ್ಲಿ ವ್ಯತ್ಯಾಸವಾಗಿದೆ. [1] ನಂದಿಸದು (ಟ.ದ.ಪ).

ತುಡುಕಿ [1]ವಾಮಾಂಘ್ರಿಯಲಿ ಹಗೆಯನು
ಮಡದಲೊದೆದನು ಬಳಿಕ ಕೌರವ
ಪಡೆಯ ಪವನಜ ಕೊಟ್ಟನಂತಕಪುರವನಾಂತರಕೆ[1] ‖ ೯೫

ಅರಿಯ ಹೆಣನನು ಹಾಯ್ಕಿ ನೊರೆ ನೆ
ತ್ತರಲಿ ಬೊಟ್ಟಿಟ್ಟನು ವರೂಥದ
ಹೊರಗೆ ಬಂದನು ಕಳಶಜಲದಲಿ [2]ತೊಳೆದು ಕರಪದವ[2] ।
[3]ಪರಿಹೃತಶ್ರಮನಾಗಿ[3] ವರ ಕ
ರ್ಪುರದ ಕಸ್ತುರಿಗಂಧಲೇಪವ
ನೊರಸಿ ಹೊಸಮಡಿವರ್ಗದಲಿ ರಂಜಿಸಿದನಾ ಭೀಮ ‖ ೯೬

ವೀಳೆಯವ ಕೊಂಡನು ವರೂಥದ
ಮೇಲು[4]ವಲಗೆಯ[4] ಗದ್ದುಗೆಗೆ ರಿಪು
ಕಾಲಭೈರವನಡರಿದನು ತುಡುಕಿದನು ನಿಜಧನುವ ।
ಕಾಳೆಗಕೆ ಕಡೆಹಾರವೇ ತೆಗೆ
ಯಾಳನಾಗಲಿ ಬಂದು ಕುರುಭೂ
ಪಾಲ ಬೀಳಲಿ ಧರ್ಮರಾಯನ ಚರಣಕಮಲದಲಿ ‖ ೯೭

ಎನುತ ಬಿಟ್ಟನು ರಥವ ದುರಿಯೋ
ಧನನ ಮೋಹರಕಾಗಿ ಬಂಡಿಯ
ಬಿನುಗುಗಳು ಕೈದೋರಲಿ ಪುನ್ನಾಮನಾರಿಯರು ।
ಅನುಜರಾವೆಡೆ ಕರಸು ಕೌರವ
ಜನಪ ಕರ್ಣಾದಿಗಳ ಬಿಂಕವ
ನೆನಗೆ ತೋರಾಯೆನುತ ಮೊಳಗಿದನರಸನಿದಿರಿನಲಿ ‖ ೯೮

ನಿಯತ ಜಯಲುಬ್ಧಕನು ರಣಭೂ
ಮಿಯಲಿ ಹರಿಸಲು ಜಯದ ಸಿರಿಯನು
ಭಯವಿಹೀನರು ಬೆರಗುಗೊಂಡರು ಭೀಮನುರವಣೆಗೆ ।
ಹಯದ ವಾಘೆಯನಿಳುಹಿದರು ಮ
ನ್ನೆಯರು ಮನಗುಂದಿದರು ಕುರುಸೇ
ನೆಯಲಿ ಕಾಣಿಸಲಾದುದಪಜಯಸಿರಿಯ ಸಂಭ್ರಮವು ‖ ೯೯

[1] ದನು ಕೋದಂಡವನು ಕೈಗಡಿಯ ಮಾರುತಿ ಕೌರವೇಂದ್ರನ ಪಡೆಗೆ ನಡೆದನು ಸಕಲದಳ ಕುರುತಂತ್ರ ತಲ್ಲಣಿಸೆ (ಕ). [2] ಪದಯುಗವ ತೊಳೆದು (ಟ.ತ.ದ.ಪ). [3] ಕರವದನ ಶುದ್ಧಿಯಲಿ (ಟ.ತ.ದ.ನ.ಪ). [4] ಮಲಗಿನ (ತ.ನ).

ಬೆಟ್ಟವಾದವು ಬಿಸುಟ ಕೈದುಗ
ಳೊಟ್ಟಿಲಾದುವು [1]ಸಿಂಧ ಸೆಳೆರಥ
ವಿಟ್ಟೆಡೆಗಳಲಿ ಮಿಸುಕಲಸದಳವಾದುದನಲಂಗೆ[1] ।
ಘಟ್ಟು ಮುಱಿದುದು ಪಟುಭಟರು ಧೃತಿ
ಗೆಟ್ಟು ದೆಸೆದೆಸೆಗಳಲಿ ಮಿಗೆ ಸಾ
ಲಿಟ್ಟು [2]ಸರಿದುದು ಕೇಳು ಜನಮೇಜಯ ಮಹೀಪಾಲ[2] ॥ ೧೦೦

ಬಿಸುಟರಮಲಚ್ಛತ್ರವನು ಕೂ
ರಸಿಯನೀಡಾಡಿದರು ರಾಯರು
ಮುಸುಡ ತಿರುಹುತ ಮಕುಟವರ್ಧನಕೋಟಿ [3]ಸಮರದಲಿ[3] ।
ಜಸವ ಮಾಱಿದರಾಯುಧಂಗಳ
ಹೆಸರ ವೀರರು ಬಾಹುಬಲಸಾ
ಹಸರು ಕಂಗೆಟ್ಟೋಡಿದರು ಪವನಜನ ಸಮರದಲಿ ॥ ೧೦೧

ಬಲ ಮುರಿದು ಬರುತಿರ್ದುದೈ ಕಡೆ
ಜಲಧಿಯಲಿ ತೆರೆ ತಿರುಗಿದಂತಿರೆ
[4]ತಲೆಮುಸುಕಿನಲಿ ನೋಡುರವಣಿಕಾಱ ನಾಯಕರು[4] ।
ನೆಲೆದೆಗೆದು ನಮ್ಮವರು ನೃಪನರ
ನೆಲೆಗೆ ಸೇರದೆ ಸರಿಯೆ ಕಂಡನು
ನಳಿನಮಿತ್ರನ ಮೊಮ್ಮ ತಡೆದನು [5]ಭೀಮನುರವಣೆಯ[5] ॥ ೧೦೨

ಹತ್ತೊಂಬತ್ತನೆಯ ಸಂಧಿ ಮುಗಿದುದು.

---

[1] ಸಿಂಧುರದ ಸೆಳೆದಿಟ್ಟೆಡೆಯು ಚಾಮಿಕವು ಅಸದಳವಾದುದನಿಬರಿಗೆ (ಕ).
[2] ಮೆಱೆದುದು ಕೇಳು ಧೃತರಾಷ್ಟ್ರಾವನೀಪಾಲ (ಕ). [3] ಜನ ಜರಿಧು (ಖ.ತ.ನ).
[4] ತಲೆಯ ತಡಹುತಲೋಡಿದರು ಕುರುನೃಪನ ಪರಿವಾರ (ಕ). [5] ವೀರ ವೃಷಸೇನ
(ತ.ಪ.ಬ).

# ಇಪ್ಪತ್ತನೆಯ ಸಂಧಿ

ಸೂಚನೆ ॥ ಚಂಡಬಲ ಪವಮಾನಜನ ಮುಂ
ಕೊಂಡು ವಿರಥನಮಾಡಿ ಕದನೋ
ದ್ದಂಡ ನರನೊಳು ಕಾದಿ ಮಡಿದನು ವೀರ ವೃಷಸೇನ ॥

ಅವಧರಿಸು ಧೃತರಾಷ್ಟ್ರನೃಪ ನಿ
ನ್ನವಗೆ ತಿಳಿದುದು ಸೊಕ್ಕು ಚಿತ್ತದ
ಬವಣಿ ಬೀತುದು ಮನದ [1]ಜೊಂಪಿ[1]ಳಿದುದು ಥಡಾಳಿಸಿದ ।
ಡವರಿಸಿದ ಡೊಳ್ಳಾಸ ರಣಬೀ
ಳುವೆಯ ಬಿಗುಹಡಗಿದವೊಲನಿಬರು
ತವತವಗೆ ನಾಚಿದರು ಕೋಳಾಹಳಕೆ ಪವನಜನ ॥ ೧

ಮುಟ್ಟಿ ಬಂದುದು ಕೇಡು ನೃಪನೊಡ
ಹುಟ್ಟಿದನ ಹೊಯ್ದುರುಣಜಲದಲಿ
ಚಟ್ಟಿಜಿದು ರಿಪು ಚಾರಿವರಿದನು ಕಳನ ಚೌಕದಲಿ ।
ಇಟ್ಟಣಿಸುವೀ ರಣಮದಾಂಧನ
ತೊಟ್ಟುಳಿಕೆಯನು ಕೀಳ್ವ ರಾಯುಘ
ರಟ್ಟನಿಲ್ಲಾ ಎನುತ ತನಿಮಸಗಿತು ಭಟಸ್ತೋಮ ॥ ೨

ಮೊರೆಯೊಡನೆ ತಲೆಯೊತ್ತಿ ಮುರಿದ
ಬ್ಬರಿಗನುಬ್ಬಿದ ಸಮರದಲಿ ನಿ
ಬ್ಬರದ ಬೆಱಗಿನೊಳಿದ್ದರೈ ಬಳಿಕೀ[2]ಗಲಱುತಿರಲಾ[2] ।
ಅರಸನನುಜನ ಕುಡಿದನೆತ್ತರ
ಬರಿಸುವೆನು ಮೂಗಿನಲಿ [3]ಮೋಣಿ[3]ನು
ತರಿಯು ರಥದುರವಣೆಗೆ ಕರ್ಣನಸೂನುವಿದಿರಾದ ॥ ೩

---

[1] ಜೊಮ್ಮಿ (ತ.ಪ.ಬ). [2] ಮಹಾರಥರು (ಚ.ತ.ದ.ನ.ಬ). [3] ನೋಷೆ (ಟ.ತ.ದ.ಬ).

ಘಡ ವಿಕಾರವೆ ನೋಡು ನೆತ್ತರು
ಗುಡುಹಿತನವೇ ನಮ್ಮೊಡನೆ ಮೊಲೆ
ಮುಡಿಯ ಮೂಪರೆಗರುಹರೇ ಕರ್ಣಾದಿನಾಯಕರು ।
ಕುಡಿದ ರಕುತದ ಜಿಗುಳೆ ನೀ ನಿ
ನ್ನೊಡಲ ನಿಗುಚುವೆ ನಿಲ್ಲೆನುತ ಬಲ
ನೆಡನ ಬಿರುದರ ಮೇಳದಲಿ ತೂಗಿದನು ವೃಷಸೇನ ॥ ೪

ವೀರ ಮಝು ಸೇನಾಧಿಪತಿಯ ಕು
ಮಾರ ನೂಕಿದನೆನುತಖಿಳ ಪರಿ
ವಾರ ಕವಿದುದು ಕರಿ ರಥಾಶ್ವಪದಾತಿಯೊಡ್ಡಿನಲಿ ।
ಆರು ಪೊಗಳುವರನಿಲಸುತನ ಸ
ಧಾರತನವನು ಮೇಲೆ ಬೀಳ್ವ ಕ
ಠೋರ ಶಸ್ತ್ರವ್ರಜವ ನೂಕಿದನಡ್ಡವರಿಗೆಯಲಿ ॥ ೫

ಅಕಟ ಮಗವಿನ ಕೂಡೆ ಬಲುನಾ
ಯಕರು ಬಯಸಿದರಳಿವನಿವು ಸೇ
ವಕರ ಪಂಥವಲಾ ವಿರೋಧವೆ ಎನುತ ಮುರಿವೆದ್ದು ।
ಲಕುಟಹತನಿರ್ಭಿನ್ನಭಾಂಡ
ಪ್ರಕರವೋ ನಿನ್ನಾಳುಕುದುರೆಯೊ
ಸಕಲಸುಭಟರನೊಕ್ಕಲಿಕ್ಕಿದನೊಂದು ನಿಮಿಷದಲಿ ॥ ೬

ನುಗ್ಗು ಬಡಿದಂಜಿಸಿದ ಗೆಲವಿನ
ಸುಗ್ಗಿಗಿದೆ ಮಳೆಗಾಲವೆನುತ ನಿ
ರರ್ಗಳಿತ ಭುಜಶೌರ್ಯ ಸುರಿದನು ಸರಳ ಸರಿವಳೆಯ ।
ಬಗ್ಗಿ ಕಪಿವಂಬುಗಳ ಗಜುಗಳ
ಲಗ್ಗಗರಿನಾಯಕರ ಕಿವಿಗಳು
ನೆಗ್ಗಿದವು ಮುಗ್ಗಿದವು ಮನ ಮಾರಂಕದತಿರಥರ ॥ ೭

ಭಲುಹು ಮಗವಿನ ಶೌರ್ಯವೀಸ
ಗ್ಗಳೆಯನ್ಯೈ ಶಿವಯೆನುತ ಚಿತ್ತದೊ
ಳಳುಕಿ ಹೂಡಿದನಂಬನವಧಾನದಲಿ ಬಿಡೆಯುಬಿದು ।
ಪಿಳುಕುಹಿಳುಕುಗಳೊರಸೊರಸು ಮುಂ
ಕೊಳಿಸೆ ಹಿಂದಣಿನಂಬನಂಬು
ಚ್ಚಳಿಸಲೆಚ್ಚನು ಭೀಮ ರವಿನಂದನನ ನಂದನನ ॥ ೮

ಕೆಣಕಿದುರಿಯಂದದಲಿ ದಂಡೆಯೊ
ಳಣೆದ ಕಾಳೋರಗನವೋಲು ಚ
ಡ್ಡಣೆಯ ಚಪಳಕ್ರೋಧಶಿಖಿ ಮೋಹಿದುದು ಮೋಱೆಯಲಿ ।
ಕಣೆಗಳೋ ಕಲ್ಪಾಂತವಹ್ನಿಯ
[1]ಡೊ[1]ಣೆಗಳೋ ಹಾಳಾಹಳದ ಡಾ
ವಣಿಗಳೋ ನಾವಱಿಯೆವೆಚ್ಚನು ವೀರ ವೃಷಸೇನ ॥ ೯

ಫಲಿತ ಶಾಳಿವನವ ಮುತ್ತಿದ
ಗಿಳಿಗಳೋ ತಾವರೆಯ ತೆಕ್ಕೆಯೊ
ಳಿಳಿದ ಮಱಿದುಂಬಿಗಳೊ ವೃಷಸೇನನ ಶರಾವಳಿಯೊ ।
ಹಿಳುಕು [2]ಹೇ[2]ಱಿದವಾತನಶ್ವಾ
ವಳಿಯಲಾತನ ಸೂತನೊಡಲಲಿ
ಹಲವು ಮಾತೇನಾತನಂಗೋಪಾಂಗ ನಿಕರದಲಿ ॥ ೧೦

ಕೂಡೆ ಹಾಹಾಧ್ವನಿಯ ರವವ
ಲ್ಲಾಡಿಸಿತು ಪರಬಲವನೀತನ
ತೋಡು ಬೀಡಿನ ಸಂಚ ಸೆಳೆದುದು ಹಗೆಯ ಸಾಹಸವ ।
ಓಡಲಱಿಯದೆ ಭೀಮನಂಬಿನ
ರೂಢಿ ನಿಗುಚದೆ ಕಾದುವರೆ ಜಯ
ಜೋಡಿಸದೆ [3]ಜೋ[3]ವಳಿಸಿ ಜವಗುಂದಿದನು ಕಲಿ ಭೀಮ ॥ ೧೧

ಅರಸ ಕೇಳೈ ಬಳಿಕ ಭೀಮನ
ತರಹರವನಱಿದಾಚೆಯಲಿ ಸಂ
ವರಿಸಿಕೊಂಡನು ನಕುಳ ಬಿಟ್ಟನು ಸೂಠಿಯಲಿ ರಥವ ।
ತರುವಲಿಯೆ ನೀನಿದಿರಹುದೆ ಘಡ
ಸರಿಸವೇ ಭೀಮಂಗೆ ನೀನೆನು
ತರಿಭಟನ ಕೆಣಕಿದನು ಕೆದಱಿದನಸ್ತ್ರಸಂತತಿಯ ॥ ೧೨

ಆರಿವರು ನಕುಲಾಂಕರೇ ಜು
ಜ್ಝಾರರೇ ನಿಮ್ಮಣ್ಣನಾಡಿ ದು
ಹಾರದಲಿ ಸೆಱೆಯೋದನಾತನ ಹರಿಬವೇ ನಿಮಗೆ ।

---

[1] ಹೊ (ಕ). [2] ದೋ (ಗ.ಟ.ತ.ಧ.ನ.ಬ). [3] ಜಾ (ಖ.ಘ.ಟ).

ತೀರದೇ ನಿಮ್ಮಲಿ ವೃಥಾಹಂ
ಕಾರವೇಕಿದು ಪಾರ್ಥನೆಂಬನ
ತೋಱಿರೇ ನೀ ಸಾರೆನುತ ತೆಗೆದೆಚ್ಚು ಬೊಬ್ಬಿಱಿದ ‖ ೧೩

ಮಗವು ನಿನ್ನೊಡನೇನು ಸರಿಯೋ
ಮಿಗಿಲೊ ಶರವಿಪ ಹೇಳೆನುತ ಕೈ
ಮಗುಚಿದನು ಹೊದೆಯಂಬನೀತನಮೇಲೆ ನಿಮಿಷದಲಿ ।
ಮುಗಿಲ ಹರಿಗೆಗೆ ಮಾರುತನ ಬಂ
ದಿಗೆಯು ಹೊಯ್ಲೆನೆ ನಕುಳನೆಚ್ಚಂ
ಬುಗಳು ಕಿಡಿಸೂಸಿದವು ಕಂಡನು ರಥದ ಬಳಸಿನಲಿ ‖ ೧೪

ಮರಳಿ ನಕುಲನನೆಚ್ಚನಾತನ
ತುರಗವನು ಮುಱಿಯೆಚ್ಚನಾತನ
ವರ ರಥವ ಸಾರಥಿಯನಾತನ ಚೆಕ್ಕೆಯವ ಧನುವ ।
ಉರುಳೆಗಡಿದನು ಮತ್ತೆ ಜೋಡಿಸಿ
ಪರಿತರಲು ಮುಱಿಯೆಚ್ಚು ಪುನರಪಿ
ಹುರುಳುಗೆಡಿಸಿದನಱಿಸಿ [1]ಹರಿ[1]ದನು ಮತ್ತೆ ಪವನಜನ ‖ ೧೫

ನಕುಲ ಮುಱಿದನು ಭೀಮ ನಿಲು ಕಾ
ರ್ಮುಕವ ಹಿಡಿ ಬಿಡು ಸರಳನಳುಕುವ
ಡಕಟ ಕೊಲ್ಲೆನು ನಿನ್ನ ತಮ್ಮನ ಕರಸು ಫಲುಗುಣನ ।
ವಿಕಳರುಳಿದಿರಲಾಗದೀ ಸಾ
ಯಕದ ಸೃಷ್ಟಿವಿರಿಂಚ ಸುಭಟ
ಪ್ರಕರದೊಳು ತಾ[2]ನೆನುತ ತೆಗೆದೆ[2]ಚ್ಚನು ವೃಕೋದರನ ‖ ೧೬

ಮುಱಿದು ನಕುಲನ ಭೀಮಸೇನನ
ನಱಿಸಿ ಹಿಡಿದನು ಬವರವನು ಭಟ
ನುಱುಬೆ ಬಲುಹೋ ದಿಟ್ಟನಿವ ಕೌರವರ ಥಟ್ಟಿನಲಿ ।
ತೆಱಹುಗೊಡದಿರಿ ನೂಕುನೂಕೆನು
ತುಱುಬಿದನು ಸಹದೇವನೀತನ
ತಱುಬಿ ಮೂದಲಿಸಿದನು ಮುಸುಕಿದನಂಬಿನಲಿ ರಥವ ‖ ೧೭

---

[1] ಘಡಿ (ಟ.ತ.ಧ.ನ.ಬ). [2] ನಜ್ಜಿಯೆನೆನುತೆ (ಟ.ತ.ದ).

ಮೊದಲ ಬಲುಹನು ಕಂಡೆನಿನ್ನೀ
ತುದಿವರನ ತನಿಗೆಚ್ಚು ನಮ್ಮನು
ಬೆದಱಿಸುವುದೋ ಶಿವಶಿವಾ ತಪ್ಪೇನು ತಪ್ಪೇನು ।
ಸದೆಗರಿವದಿರ ಗೆಲುವುದಾವಂ
ಗದಲಿ ಬಹುದೋ ಎನುತ ಪರಿಹಾ
ಸದಲಿ ರಿಪುಭಟನಂಬುಗಳ ಕೆದಱಿದನು ಕಣೆಗಳಲಿ ॥ ೧೮

ಆತನೊಡನೆಯೆ ತೇರು ತುರಗ
ವ್ರಾತವನು ಹುಡಿಮಾಡಿ ರಥಹಯ
ಸೂತ ಧನು ಶಸ್ತ್ರೌಘ ಕವಚ ಧ್ವಜ ಪತಾಕೆಗಳ ।
ಘಾತಿಸಿದನೈದಂಬಿನಲಿ ಮಗು
ಳಾತನುರವನು ತೋಡಿ ತೊಲಗಿಸಿ
ವಾತಜನನಱಸಿದನು ಮೂದಲಿಸಿದನು ಸರಳಿನಲಿ ॥ ೧೯

ಶಿವಶಿವಾ ಸಹದೇವ ನಕುಲರ
ಬವರ ಮುಱಿದುದು ಬಿಡದೆ ಬಳಿಯಲಿ
ಪವನಜನ ತುಡುಕಿದನು ನೂಕಲಿ ಸರ್ವದಳವೆನುತ ।
ತವತವಗೆ ಸುತಸೋಮಕಾದಿಗ
ಳವಗಡಿಸಿದರು ಮತ್ಸ್ಯಕೈಕೆಯ
ನಿವಹ ಸಾತ್ಯಕಿ ಚೇಕಿತಾನರು ಕವಿದರುರವಣಿಸಿ ॥ ೨೦

ಎಲೆಲೆ ಪಾಂಡವಸರ್ವದಳವಿ
ಟ್ಟಳಿಸಿತೋ ಸುಕುಮಾರನೊಬ್ಬನೆ
ನಿಲುವುದರಿದೋ ನೂಕೆನುತ ಕುರುಸೇನೆ ಸಂವರಿಸೆ ।
ಉಲುಕದಿರಿ ಧಾರಣಿಯ ಭಟರ
ಗ್ಗಳೆಯರೆನ್ನೀ ಮಕ್ಕಳಾಟಿಕೆ
ಯುಳವನೀಕ್ಷಿಸಿ ಸಾಕೆನುತ ತಱುಬಿದನು ಪರಬಲವ ॥ ೨೧

ತೇರನೆಚ್ಚನು ಕುದುರೆಕಾಱರ
ದೂರದಲಿ ಖಂಡಿಸಿದನೊಗ್ಗಿನ
ವಾರಣೌಘವ ಸೀಳಿದನು ಹೂಳಿದನು ರಕುತದಲಿ ।
ಆರು ಬಲ್ಲರು ಪಯದಳವನಾ
ವೀರ ಸುತಸೋಮಾದಿ ನಿಖಿಳ ಕು
ಮಾರರಂಘವಣೆಗಳ ಷೆಳೆದುದು ಭೀತಿರಸಜಲಧಿ ॥ ೨೨

ಉಗುಳುಗುಳು ದುಶ್ಶಾಸನನ ನೀ
ನುಗುಳು ಮಗುಳಿನ್ನಾರ ಬಸುಱನು
ಹೊಗುವೆ ಮೊಲೆಮುಡಿಯಾರಿಗಿವು ಘಡ ನಿಲ್ಲು ನಿಲ್ಲೆನುತ ।
ಹೊಗರೊಗುವ ಹೊಸಮಸೆಯ ಬಾಯ್ಧಾ
ರೆಗಳ ಬಂಬಲುಗಿಡಿಯ ಬಾಣಾ
ಳಿಗಳಲೀತನ ಹೂಳಿದನು ಕಾಣೆನು ವೃಕೋದರನ ॥* ೨೩

ಕಳವಳಿಸಿತರಿಸೇನೆ ಬೊಬ್ಬೆಯೊ
ಳುಲಿದುದೀ ನಮ್ಮವರು ಕಂಡನು
ಬಳಿಕ ಮುರರಿಪು ತೋಱಿದನು ಪಾರ್ಥಂಗೆ ಪವನಜನ ।
ಎಲೆ ಧನಂಜಯ ಭೀಮಲಯ ನಿ
ಮ್ಮಳಿವು ನಿಮ್ಮ ಪರೋಕ್ಷದಲಿ ನಾ
ವುಳಿವರಲ್ಲೀ ಹವಣ ಕಂಡೆವು ಕರ್ಣತನಯನಲಿ ॥ ೨೪

ಈಸು ಘನವೇ ಕೃಷ್ಣ ಮಗವಿವ
ನ್ಹೈಸಱವನೆಂದಿದ್ದೆನಾದರೆ
ಹಾಯ್ಸು ರಥವನು ಭೀಮಸೇನನ ರಥದ ಮುಂಗುಡಿಗೆ ।
ವಾಸಿಯೇಕಿವನಲಿ ವಚೋವಿ
ನ್ಯಾಸದಿಂ ರಥ ಮುಂಚಿತಹಿತನ
ಘಾಸಿಯಿಂದನಿಲಜನನುಗಿದನು ಬಗಿದು ರಿಪುಶರವ ॥ ೨೫

ಎಸುಗೆ[1]ಚೆ[1]ಲುವನು ಹಾಲುಗಲ್ಲದ
ಹಸುಳೆಯಂಗವಿದಲ್ಲ ತುಂಬಿಯು
ಡೆಸೆಗೆ ಕೆಂದಾವರೆಯ ಬನವೇ ವನದವಾನಳನು ।

---

* ಈ ಪದ್ಯವಾದಮೇಲೆ (ಗ.ತ.ಪ.) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ :—

ಅಂಬಿನಂಬುಧಿ ಜರಿದುದೋ ಮೇ
ಣಂಬುಗಳನಂಬರವೆ ಕಾರಿತೊ
ಅಂಬುರುಹಭವನಂಬುಗಳನೇ ಸೃಜಿಸಿದನೊ ಮೇಣು ।
ಅಂಬುಗಳಿಗಂಬರದೊಳಿಂಬಿ
ಲ್ಲೆಂಬ್ರುವ್ರೊಲ್ಲಂಬಂಬನೀಡಿಱು
ದೆಂಬುಹಾಯ್ದು ರಣ್ಣಾಂಬುಗಳ ಚುಂಬಿಸಲು ಝೊಂಪಿಸಿದ ॥

[1] ಗೆ (ಕ).

ಉಸುರದೀ ಜಯದೊಪ್ಪದಲಿ ಜಾ
ಳಿಸುವರೊಳ್ಳಿತು ತೊಲಗೆನುತ ನಿ
ಪ್ಪಸರದಲಿ ತೆಗೆದೆಚ್ಚನರ್ಜುನನಿನಸುತನಸುತನ ॥ ೨೬

ಚಾರುಪೌರುಷ ಸಮರವಿಹ್ವಳ
ತಾರಕರು ನೀವ್ ನಮ್ಮದಿದು ಕೌ
ಮಾರದೆಸೆ ತಾಮಸವಲೇ ನಿಮಗಾನು ಸಮಬಳನೆ ।
ಕೂರಲಗು ತೊಲೆಗೋಲಿನಲಿ ನಿ
ಮ್ಮಾರುಭಟೆಯನು ನಮ್ಮ ಬಾಹುವಿ
ಕಾರಬಲವನು ತೂಗಿಯೆನುತೆಚ್ಚನು ಧನಂಜಯನ ॥ ೨೭

ಮುರಮಥನ ಚಿತ್ತೈಸಿದೈ[1]ತರು
ವರಿಯ[1] ಸಾಭಿಪ್ರಾಯವಾಕ್ಯ
ಸ್ಫುರಣವನು ಸಭ್ಯಾಂಗಭಾಷಿತಭಾವನಿಷ್ಠುರವ ।
ಪರಿಹೃತಿಯೆ ಕರ್ತವ್ಯವೆನುತು
ಚ್ಚರಿಸಿದನು ಮೌರ್ವೀನಿನಾದ
ಸ್ಫುರಿತವಿಮಳಪ್ರಣವಮುಖಶರ ಸೂಕ್ತಸಂತತಿಯ ॥ ೨೮

ಅದು ಬಳಿಕ ಲೋಕಾಯತಾಂಗ
ಚ್ಛದನ ಪರನಾರಾಚ[2]ನಿರ್ಮಾ
ಣ[2]ದಲಿ ಭಂಗಿತವಾಯ್ತು ಪಾರ್ಥನ ಬಾಣದೊಡ್ಡವಣಿ ।
ಬಿದಿರ ಮೊಳೆಯಲಿ ಹರಿವುದೇ ಬೆ
ಟ್ಟದಲಿ ಹರಿಯದ ವಸ್ತು ಹರಸಿಂ
ದೊದಗಿದಂಬಿನ ಹವಣ ತೋಜೆಂದೆಚ್ಚನರ್ಜುನನ ॥ ೨೯

ದನುಜರಿಪು ಹುಸಿ[3]ಯಲ್ಲ ನಮ್ಮೊ
ಡ್ಡಿನಲಿ[3] ಭಟನಭಿಮನ್ಯು ಪರರೊ
ಡ್ಡಿನಲಿ ಭಟನಿವನಲ್ಲದಿಲ್ಲ ಕುಮಾರವರ್ಗದಲಿ ।
ತನಗೆ ದೇವತ್ರಿತಯವಲ್ಲದೆ
ದನುಜ ದಿವಿಜಾದಿ ತ್ರಿಲೋ[4]ಕದ[1]
ಜನವಿದಿರೆ ಮೆಚ್ಚಿಸಿತು ಮಗವಿನ ದಿಟ್ಟತನವೆಂದ ॥ ೩೦

---

[1] ತರುವಲಯ (ಕ), ಶಿಶುವರನ (ಖ.ತ.ನ.ಪ.ಬ) - [2] ನಿರ್ಮೂಲ (ಕ), [3] ಯಾವುದೀಥಟ್ಟಿನಲಿ (ಕ). [4] ಕೀ (ಖ.ಟ.ದ.ನ.ಪ)

ಪೊತುರೇ ವೃಷಸೇನ ಶರಸಂ
ಘಾತವಿದೆಕೋ ಸೈರಿಸಾದಡೆ
ಪಾತಕಕ್ಕೋಸರಿಸಿದೆವಲೇ ಭ್ರೂಣಹತಿಯೆಂಬ ।
ಮಾತು ಹಲವಱಲೇನು ಪಾರ್ಥಿವ
ಜಾತಿಗೆನುತ ಮಹಾಸ್ತ್ರ ನಿಕರದೊ
ಳೀತನನು ಮುಸುಕಿದನು ಶರಮಯವಾಯ್ತು ರಣಭೂಮಿ ॥ ೩೧

ಆವ ವಹಿಲದೊಳರ್ಜುನನ ಬಾ
ಣಾವಳಿಯು ತಱದೊಟ್ಟಿ ಮಗುಳೆ ತ
ರಾವಳಿಯ ಕೊನೆಗಳಲಿ ಮುದ್ರಿಸಿದನು ಧನಂಜಯನ ।
ನಾವಱಯೆವೀಸದುಭುತವನಿವ
ನಾವನೇ ಮಿಕ್ಕವರನರ್ಜುನ
ದೇವನಲಿ ಸರಿಮಿಗಿಲ ಕಾದಿದನರಸ ಕೇಳೆಂದ ॥ ೩೨

ನರನ ಮಾಱಂಕದ ಮಹೇಂದ್ರಗೆ
ಚರಣಯುಗ ಬೆನ್ನಿನಲಿ ಬವರದೊ
[1]ಳರಿ[1]ದಲ್ಲೈ ಭೀಷ್ಮಾದಿಗಳಿ[2]ಗೀ ರಣದ ಮೇಳಾಪ[2] ।
ಜರಡನ್ಸೈ ಭಾರಂಕದಾಳಿವ
ತರಳನೇ ಸುರಗಿರಿಯನಾನುವ
ಕೊರಳ ಸತ್ವ[3]ವೆ[3] ಶಿವಶಿವೆಂದುದು [4]ಮೇಲೆ ಸುರಕಟಕ[4] ॥ ೩೩

ಎಸಲು ಕಡಿದನು ಝಾಡಿಯಲಿ ಝೊಂ
ಪಿಸಲು ಜಡಿದನು ಚಳಕದಲಿ ಜಾ
ಳಿಸಿದರೊಂದಕ್ಕೆರಡು ನಾಲ್ಕಕ್ಕೆಂಟು ತೋಱಸಿದ ।
ಮುಸುಕಿದರೆ ಮಂತ್ರಾಸ್ತ್ರದಲಿ ಮೋ
ಹಿಸಿದ ಸರಿಸಕೆ ಸರಿಸ ವಿಷಮಕೆ
ವಿಷಮಗತಿ ಶರಸಾರ ಸಾಳಂಗದಲಿ ರಂಜಿಸಿದ ॥ ೩೪

ಆಯಿತಿದು ಸಮರದಲಿ ಗುರು ಗಾಂ
ಗೇಯು ಕರ್ಣ[5]ದ್ರೋಣ[5]ಗಳ ತಱು
ವಾಯ ಲೆಕ್ಕಕೆ ಸಂದನ್ಸೈ ಮಝು ಪೊತು ಪಾಯ್ಕೆನುತ ।

---

[1] ಳಿರ (ಖ.ಟ.ತ). [2] ಗವಸಾನದಾಳಾಪ (ಗ.ಟ.ದ.ಪ), ಗವಧಾನದಾಳಾಪ (ತ.ನ.ಬ). [3] ಕೆ (ತ.ದ.ನ). [4] ಕೂಡೆಕುರುಸೇನೆ (ಕ). [5] ಕೃಪಾದಿ (ಕ)..

ಸಾಯಕವನೆಭಿಮಂತ್ರಿಸುತ ವೈ
ನಾಯ[1]ಕಾಸ್ತ್ರವ ಹೂಡಿದನು[1] ಬಲ
ಬಾಯಬಿಡೆ ಚಿಗಿದಂಬು ಕಡಿದುದು ಕರ್ಣನಂದನನ ॥ ೩೫

ಚಿಗಿದ ತಲೆ ಬೊಬ್ಬಿಱಿಯೆ ಬಳಿಕಾ
ಳುಗಳ ದೇವನು [2]ಮುಷ್ಟಿ[2]ಬಳಿಗೋ
ಲುಗಳನೈದಾರೇಳ ಹಳುಹಳುವಾಯಿಯೆಸುಗೆಯಲಿ ।
ತೆಗೆದು ನಿಂದುದು ಭಯರಸದ ಹ
ಬ್ಬುಗೆಯಲುಬ್ಬಿದ ಶೋಕದೊಡ್ಡಿನ
ಮುಗಿಲು ಕಱೆದುದು ಕುರುಬಲದ ಕಂಬನಿಯ ಬಿಱುವಳೆಯ ॥ ೩೬

ಕದಡಿತೀ ಬಲಜಲಧಿ ಕಲ್ಪಾಂ
ತದ ಸಮುದ್ರದವೊಲು ಮಹಾಧ್ವನಿ
ಗದಗದಿಸೆ ಹಾ ಕರ್ಣಸುತ ಹಾ ಕರ್ಣಸುತ ಎನುತ ।
ಕೆದಱಿತೀಶನ ಭಾಳದುರಿನೇ
ತ್ರದವೊಲುರಿದುದು ಸೂತಸುತ ಸಾ
ಕಿದ ಕುಮಾರ[3]ನ[3] ಮೇಳವದ ಮನ್ನಣೆಯ ಪರಿವಾರ ॥ ೩೭

ನೂಕಿತೀ ಬಲದಳದ ಪದಹತಿ
ಗೇಕೆ ಬಿರಿಯದು ಧರಣಿ ದಿಕ್ಕರಿ
ಯೋಕರಿಸದೇ ಮದವನಾದರೆ ಪುಣ್ಯನಬುಜಭವ ।
ಈ ಕಡುಹಿನಾತಗಳನಾನುವ
ಡೀ ಕಪರ್ದಿಯೆ ಸಾಕು ಕೆಲನವ
ರಾಕೆವಾಳರೆ ಎನುತಲಿರ್ದುದು ಮೇಲೆ ಸುರಕಟಕ ॥ ೩೮

ಉರಿಯ [4]ಸರಿಗೇಱಿದ[4] ಪತಂಗಕೆ
ಮರಳುದಲೆಯೇ ಮತ್ತೆ ರಣದಲಿ
ನರನೊಡನೆ ಕಳನೇಱಿದಾತನ ಸತಿ ಸುವಾಸಿನಿಯೆ ।
ಅರಳ ಹೊಸ ಸಂಪಗೆಯ ಮಧುವನು
ಮಱಿಗೆ ತಹವೇ ತುಂಬಿಗಳು ಕೇ
ಳರಸ ಹರಿಬಕೆ ಹೊಕ್ಕ ಸುಭಟರ ಕಾಣೆ ನಾನೆಂದ ॥ ೩೯

---

[1] ಕವಹೂಡಿದನು ಕುರು (ತ). [2] ಮುಂಡ (ತ.ದ.ನ.ಬ). [3] ರು (ಕ).
[4] ಸಿರಿಗೆಱಿಗಿದ (ನ.ಬ).

ಕೇಣವಿಲ್ಲದೆ ಹೊಕ್ಕ ಕುದುರೆಗ
ಘಾಣತಿಯ ತುಂಬಿಯ ಕಪೋಲ
[1]ದ್ರೋ[1]ಣಿಯೊಱತೆಯ ಮದದ ಕರಿಗಳ ಕಡು[2]ಹ ನಿಜ[2]ರಥದ |
ಸಾಣೆಯಲಗಿನ ಸರಿಯ ಸೋನೆಯ
ಜಾಣತನವೋ ಜಯದ ಸುಭಟರ
ಕಾಣೆನೈ ಕಣೆಯೆರಡರಲಿ ಸಂವರಿಸಿದನು ಪಾರ್ಥ ‖ ೪೦

ವೀರ ದುಶ್ಶಾಸನನು ಕರ್ಣಕು
ಮಾರ[3]ಕರು ನೀ[3] ಸಾಕಿದಗ್ಗಳ
ವೀರದಳ ಕೌರವಸಹೋದರ[4]ಸೇನೆ ಮೊದಲಾಗಿ[4] |
ತೀರಿತಾಹವದಲಿ ಕುರು[5]ವ್ರಜ[5]
ವಾರುಧಿಗೆ ಸರಿಯಾಯ್ತು ನಿನ್ನ ಕು
ಮಾರನಿಂಗಿತವಱಿದು ಸಮರಕೆ ಕರ್ಣನನುವಾದ ‖ ೪೧

ಇಪ್ಪತ್ತನೆಯ ಸಂಧಿ ಮುಗಿದುದು.

---

[1] ಶ್ರೀ (ಕ.ಗ.ಟ.ದ). [2] ಹಿಕೆಯ (ತ.ಬ). [3] ನಾತನು (ಟ.ತ.ದ.ನ.ಬ). [4] ಶೇಷಮೊದಲಾದ (ಕ). [5] ಬಲಜ (ಕ).

# ಇಪ್ಪತ್ತೊಂದನೆಯ ಸಂಧಿ

ಸೂಚನೆ ॥ ವೈರಿಗಜಪಂಚಾನನನು ರಣ
ಧೀರನಪ್ರತಿಮಲ್ಲ ಕರ್ಣನು
ದಾರದಲಿ ಹಳಚಿದನು ಹನುಮನ ಹಳವಿಗೆಯ ರಥವ ॥

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳ ಸುಮ್ಮಾನವನು ತನುರೋ
ಮಾಳಿ ಪಲ್ಲವಿಸಿದುದು ಪರಿತೋಷಪ್ರವಾಹದಲಿ ।
ಕಾಳೆಗಕೆ ಕೈವೊಯ್ದು ಹಗೆವನ
ಮೇಳ[1]ಯದ[1] ಕಳನೇಱಿದನು ತ
ನ್ನಾಳುತನವನು ತೋಱಲಾಯ್ತೆನುತುಬ್ಬಿದನು ಕರ್ಣ ॥ ೧

ಆಳ ಹೊಯ್‌ಹೊಯ್ ನಾಯಕರ ನಿಲ
ಹೇಳು ಕೃಪ ಗುರುನಂದನಾದಿಗ
ಳಾಲಿಗಳಿಗೌತಣವ ರಚಿಸುವೆ ನಿಮಿಷ ಸೈರಿಸಲಿ ।
ಕಾಳೆಗದಲಿಂದಹಿತರಾಯರ
ಭಾಳಲಿಪಿಗಳನೊರಸುವೆನು ಭೂ
ಪಾಲಕನ ಮೊಗವಡದ ದುಗುಡವನುಗಿ[2]ವೆನಾನೆಂದ[2] ॥ ೨

ತರಿಸಿ ಸಾದು ಜವಾಜಿಗಳ ಹೊಂ
ಭರಣಿಯಲಿ ಮೊಗೆಮೊಗೆದು ಶಲ್ಯಗೆ
ಸುರಿದು ಹಡಪಿಗ ಚಮರ ಬಾಹೆಯ ಬಾಣ[3]ದಾಯಕರ[3] ।
ಕರೆದು ಮನ್ನಿಸಿ ತನ್ನನತಿ ವಿ
ಸ್ತರಿಸಿ ಹೊಸಮುಡಿವರ್ಗದಲಿ ಮಿಗೆ
ಮೆಱೆದು ರಣಸುಮ್ಮಾನದಲಿ ಹೊಗರೇಱಿದನು ಕರ್ಣ ॥ ೩

ತೊಳಗಿ ಬೆಳಗುವ ಶಿರದ ಪಚ್ಚೆಯ
ಹಳುಕು ಬೆರಸಿದ ವೀಳೆಯವನಿ
ಕ್ಕೆಲದ ಶಲ್ಯಾದಿಗಳಿಗಿತ್ತನು ವರ ರಥಾಗ್ರದಲಿ ।

[1] ದಲಿ (ಟ.ದ). [2] ಯುಹೇಳೆಂದ (ತ.ದ.ನ.ಪ.ಬ). [3] ಧಾರಿಗಳ (ಕ).

ಕಳಚಿ ತೆಗೆದನು ಜೋಡ ಮೈವೆ
ಗ್ಗಳಿಸಿ ದಳವೇಱಿದುದು ಮನ ವೊಗ
ಥಳಥಳಿಸೆ [1]ಬಹಳಪ್ರತಾಪದಲಿರ್ದನಾ ಕರ್ಣ[1] ‖ ೪

ತಳಿತು ಮುತ್ತುವ ಮುಗಿಲ ಝಾಡಿಸಿ
ಝಳಪಿಸುವ ರವಿಯಂತೆ ಭುವನವ
ಬೆಳಗಲುದ್ರೇಕಿಸುವ ಭಾರ್ಗವಭಾಳಶಿಖಿಯಂತೆ ।
ಹೊಳೆಹೊಳೆವ ಕರ್ಣಪ್ರತಾಪಾ
ನಳನ ನಾಟ್ಯವ ಕಂಡು ಕೌರವ
ಬಲದೊಳೊಸಗೆಯ ಲಗ್ಗೆ ಮಸಗಿತು ಭೂಪ ಕೇಳೆಂದ ‖ ೫

ರಾಯನನುಜ[2]ನ[2] ರುಧಿರ ಜೀವದ
ಬೀಯದಲಿ ಕರ್ಣಾತ್ಮಜನ ಕುಲಿ
ಶಾಯುಧನ ಸಾಲೋಕ್ಯದಲಿ ಕಣ್ದೆಱೆದ ವೇದನೆಯ ।
ಆಯಸವ ನೆಱೆ ಮಱೆದು ಕೌರವ
ರಾಯ ಭುಲ್ಲವಿಸಿದನು [3]ಲಹರಿಯ[3]
ಘಾಯದಲಿ [4]ಸೂಳೈಸಿ[4]ದವು ನಿಸ್ಸಾಳಕೋಟಿಗಳು ‖ ೬

ಸಾಱಿ ಸುಭಟರ ಜಱೆವ ಕಹಳೆಯ
ಗೌಱುಗಳ ತಿತ್ತಿರಿಯ ಚಿನ್ನದ
ಚೀಱುಗಳ ನಿಡುಗೊಂಬುಗಳ [5]ಚೆಂಬಕನ[5] ನಿರ್ಘೋಷ ।
ಡೋಱುಗಳೆದುವು ನೆಲನನುದಧಿಯ
ಕಾಱಿಸಿದವಡಿಮಳಲನೆನೆ ಹುರಿ
ಯೇಱಿತಬ್ಬರವಿವರ ಬಲದಲಿ ಭೂಪ ಕೇಳೆಂದ ‖ ೭

ರಥವಿಳಿದು ಬಲವಂದು ನಿಜ ಸಾ
ರಥಿಗೆ ಕೈಮುಗಿದಶ್ವಚಯಕತಿ
ರಥಭಯಂಕರನೆಱಗಿ ಕಂದವ ತಟ್ಟಿ ಬೋಳೈಸಿ ।
ರಥವನಡಱಿದು ನೋಡಿ ಗಗನದ
ರಥಿಗೆ ತಲೆವಾಗಿದನು ಲೋಕ
ಪ್ರಥಿತಸಾಹಸಮಲ್ಲ ಮುದದಲಿ ತುಡುಕಿದನು ಧನುವ ‖ ೮

---

[1] ಬಿಗುಹೇಱಿದನು ಬಹಳಪ್ರತಾಪದಲಿ (ತ). [2] ನು (ಟ.ದ.ನ). [3] ಲಗ್ಗೆಯ (ಟ.ತ.ದ ಪ). [4] ಗಜಬಜಿಸಿ (ಕ). [5] ನಾರಾಚ (ಕ).

ಸರಳ ಹೊದೆಗಳ ತುಂಬಿ ಬಂಡಿಯು
ನರಸ ಕಳುಹಿದನೆಂಟುನೂಱನು
ಚರರು ಪರಿವೇಷ್ಟಿಸಿತು ಪರಿಚಾರಕರ ವಿಗ್ರಹದ ।
ಸರಿಸ ಸಿಂಧವನೆತ್ತಿಸುತ ಬೊ
ಬ್ಬಿಱಿದು ಜವನಿಕೆವಿಡಿದು ಭೀಮನೊ
ನರನೊ ನಿಲುವವರಾರು ಬರಹೇಳೆಂದನಾ ಕರ್ಣ ॥ ೯

ಮಾತು ತಪ್ಪಿತು ರಿಪುಗಳ್ವೈವರಿ
ಗೌತಣಿಸಿದೆವು ನೆರವಿನಲಿ ಪುರು
ಹೂತ ಶಿಖಿ ಯಮ ನಿರುತಿ ವರುಣ ಸಮೀರ ಹರಸಖರು ।
ಆತುಕೊಳಲಿಂದೀ ಸುಯೋಧನ
ಜಾತಪುಣ್ಯನೊ ಧರ್ಮಪುತ್ರನೆ
ಭೂತಭಾಗ್ಯನೊ ಕಾಣಲಹುದ್ಯೆ ಶಲ್ಯ ಕೇಳೆಂದ ॥ ೧೦

ಸರಳೊಳಾಯ್ದು ಮಹಾಸ್ತ್ರವನು ಸಂ
ವರಿಸಿದನು ಬತ್ತಳಿಕೆಯಲಿ ಮಾ
ರ್ತಿರುವ ಬೆರಳಲಿ ತೀಡಿ ರೊಪ್ಪಿನ ಬಲುಹನಾರೈದು ।
ತಿರುವನೇಱಿಸಿ ಮಿಡಿಮಿಡಿದು ಪೊಂ
ಬರಹದವನಿನ್ನೂಱು ಚಾಪವ
ನಿರಿಸಿದನು ಕೆಲದವರ ತೊಲಗಿಸಿ ವಾಮಭಾಗದಲಿ ॥ ೧೧

ತಿರುವ ಬೆರಳಲಿ ಮಿಡಿದು ಕೆನ್ನೆಗೆ
ಬರಸೆಳೆದು ಉಳಿವಡೆದು ಹೂಡಿದ
ಸರಳ ಕಿವಿವರೆಗುಗಿದು ಬ್ಯೆಸಿಗೆದೆಗೆದು ಠಾಣದಲಿ ।
ಪರಿವಿಡಿಯುನಾರೈದು ಗರುಡಿಯ
ಗುರುವ ನೆನೆದನು ವ್ಯೆರಿಸೇನೆಯ
ತಱುಬಿ ನಿಂದನು ಕಾದುವಣ್ಣನ ಬೇಗ ಕರೆಯೆನುತ ॥ ೧೨

ಭೀತಿಗೊಳುತದೆ ಮಾಱುಬಲ ಮಝು
ಪೊತು ದಕ್ಕಡ ದಿಟ್ಟರಿಪು ಸಂ
ಘಾತವಾರಿಧಿ[1]ಬಾಡಬಾನಲ[1] ಕೀರ್ತಿಜಗಝುಂಪ ।

---

[1] ಮೇರೆವಾಯ್ದತಿ (ಕ). ಕುಂಭಸಂಭವ (ನ.ಬ).

ಜಾತರಿಪುನಿರ್ಮಥನವೈರಿ
ವ್ರಾತ[1]ಕಾನನ[1]ಧೂಮಕೇತುವ
ರಾತಿಹರ ಜಯ ಜೀಯ ಎಂದುದು ವಂದಿಸಂದೋಹ ॥ ೧೩

ಒಳಗೆ ಸುಳಿಸುಳಿಗೊಂಡು ಪಾಂಡವ
ಬಲಪಯೋಧಿ ಪರಿಭ್ರಮಿಸೆ ಕ
ಕ್ಕುಳಿಸಿದಗ್ಗಳಿಕೆಗಳ ಸುಕ್ಕಿದ ಸಾಹಸೋನ್ನತಿಯ ।
ಕಳಕಳವ ಕಣ್ದೆಱವೆಗಳ ಮನ
ಗಲಿತನದ ಮುಳುಮೆಟ್ಟುಗಳ ವೆ
ಗ್ಗಳೆಯುರಿದ್ದುದು ಭೀಮಸಾತ್ಯಕಿ ಸೃಂಜಯಾದಿಗಳು ॥ ೧೪

ಮುಸುಕಿತೋ ಕರ್ಣಪ್ರತಾಪದ
ಬಿಸಿಲು ಪಾಂಡವಕುಮುದಕಾನನ
ವಿಸರವನು ವಿಗ್ರಹದ ಮುಖ ಲೇಸೆನುತ ಕುರುಸೇನೆ ।
ಮಸಗಿದಂಬುಧಿಯಂತೆ ಮಿಗೆ ಗ
ರ್ಜಿಸಲು ಗರುವರ ಗಾಢ ಶೌರ್ಯದ
ಬೆಸುಗೆ ಬಿಡೆ ಗಾಂಡಿವವ ದನಿಮಾಡಿದನು ಕಲಿ ಪಾರ್ಥ ॥ ೧೫

ಅರಸ ಕೇಳೈ ಧೂರ್ಜಟಿಯ ಡಾ
ವರದ ಡಮರುಧ್ವನಿಯೊ ಪ್ರಿಲಯದ
ಬಱಸಿಡಿಲ ಬೊಬ್ಬಾಟವೋ ಕಲ್ಪಾಂತಸಾಗರದ ।
ತೆರೆಗಳಬ್ಬರವೋ ಧನಂಜಯ
ಕರನಿಹಿತಗಾಂಡಿವದ ಮೌರ್ವೀ
ಸ್ಫುರಿತ ಕಳಕಳವೊದೆದುದಬುಜಭವಾಂಡಮಂಡಲವ ॥ ೧೬

ಘೀಳಿಡಲು ಕಪಿಗಳಲಿ ಕುರುಬಲ
ಜಾಲ ಜರಿದುದು ಜಾತಭುವನಾ
ಸ್ಫಾಳಪುನರಾಗತಮಹಾಧ್ವನಿ ಕದಡಿತಂಬುಧಿಯ ।
ಮೇಲುಮೊಳಗಿನ ದನಿಯನಾಲಿಸಿ
[2]ಹೀಲಿಗೆ[2]ದಱುವ ನವಿಲವೊಲು ನಿ
ನ್ನಾಳು ಬಾಹಪ್ಪಳಿಸಿ ಹಿಗ್ಗಿದನರಸ ಕೇಳೆಂದ ॥ ೧೭

---

[1] ದಾನವ (ಕ). [2] ಕೇಳಿಕೆ (ಕ).

ಸಂತವಿಸಿತಾ ಸೇನೆ ಕುರುಬಲ
ಕಂತುಹರನುದ್ಯೋಗವಾಗೆ ನಿ
ರಂತರದ ನಿಸ್ಸಾಳಸೂಳಿನ ಲಗ್ಗೆದಂಬಟದ ।
ಅಂತರಿಕ್ಷ[1]ದೊಳುಲಿವ[1] ಸುಮನಸ
ಸಂತತಿಯ ಘನಸಾಧುವಾದಶ
ಕುಂತಸೂಚಿತ ಭದ್ರಭಾಷಣವೆಸೆದುದಾಚೆಯಲಿ ॥ ೧೮

ಹರಿಗೆ ಕೈಮುಗಿದೆಱಗಿ ತೇರಿನ
ಹರಿಗಳಿಗೆ ವಂದಿಸಿ ಪತಾಕೆಯ
ಹರಿಗೆ ನಮಿಸಿ ನಿಜಾಯುಧಕೆ ಕೈಮುಗಿದು ಜೋಡೆದು ।
ಹರಿ ಧನಂಜಯ ಧರ್ಮ ನೈರುತಿ
ವರುಣ ಮಾರುತ ವೈಶ್ರವಣ ಶಂ
ಕರ ವಿರಿಂಚಾದಿಗಳಿಗಭಿವಂದಿಸಿದನಾ ಪಾರ್ಥ ॥ ೧೯

ಭರತಕುಲಸಂಭಾ[2]ಳು[2] ಜಯ ಹಿಮ
ಕರ ಪುರೂರವ ನಹುಷ ನಳ ನೃಗ
ವರ ಯಯಾತಿಪ್ರಕಟ ವಿಮಳಾನ್ವಯದೊಳವತರಿಸಿ ।
ಧುರಕೆ ಮನವಳುಕಿದರೆ ಹಜ್ಜೆಯ
ತಿರುಪಿದಡೆ ಕುಲಕೋಟಿಕೋಟಿಗೆ
ನರಕವೆಂದೆಚ್ಚರಿಸಿದರು ಭಟ್ಟರು ನಿಜಾನ್ವಯವ ॥ ೨೦

ಹಿಡಿಯೆ ಜವನಿಕೆ ಸಕಲಬಲ ಸಂ
ಗಡಿಸಿತೊಂದೇ ಮುಖದಲೀ ದಳ
ಗಡಣಿಸಿತು ಮುಂದಿಕ್ಕಿ ಕರ್ಣನನೇಕಮುಖವಾಗಿ ।
ಪಡಿಬಲಕೆ ಭೀಮಾದಿಭಟರಂ
ಕಡೆಯಲನುವಾಯ್ತೀಚೆಯಲಿ ನೆಲ
ನೊಡೆಯ ಕೃಪ ಗುರುಜಾದಿಗಳು ಕೈಗೈದರೊಗ್ಗಿನಲಿ ॥ ೨೧

ದಳವೆರಡ ಹಿಂದಿಕ್ಕಿ ರಥರಥ
ಹೊಳೆದು ಸುಳಿದೌಕಿದವು ಕುಲಗಿರಿ
ಕುಲಗಿರಿಗೆ ದಿಕ್ಕರಿಗೆ ದಿಕ್ಕರಿ ಜೋಳಿದೆಗೆದಂತೆ ।

---

[1] ದೆಲಗಿವ (ಟ.ದ.ನ). [2] ಳಿ (ಕ).

ಬಲನ ವಜ್ರನ ಕಾಲನೇಮಿಯ
ಜಲರುಹಾಕ್ಷನ ರಾವಣನ ರಘು
ಕುಲನ ದೆಖ್ಖಾದೆಖ್ಖಿ ಜೋಡಿಸಿತಾತನೀತನಲಿ ॥ ೨೨

ನೆಲನ ರಾಜ್ಯಶ್ರೀಯ ತುರುಬಿಂ
ಗೆಳಸಿದಂಘ್ರಿಸಿದ ವಿರೋಧಿಯ
ಬಲನೆಯರ ಶ್ರುತಿಪತ್ರ ಸೀಳಲಿ ಸಾಲ ಹಿಂಗಿತಲ ।
ಅಳಿದ ವೃಷಸೇನಕನ ತಾಯ್ಗಳು
ಮೆಲಲಿ ವೀಳೆಯವನು ಕಿರೀಟಿಯ
ತಲೆಯ ತೆಱಿಗೆಗೆ ತಾವೆ ಹೊಣೆಯೆಂದುದು ಭಟಸ್ತೋಮ ॥ ೨೩

ಇಟ್ಟಣಿಸುತಡೆ ಧುರಕೆ ರಾಯಘ
ರಟ್ಟ ಪಾರ್ಥನ ತೇರು ತೇಜವ
ದಿಟ್ಟಿಸುವಡೆವೆ ಸೀಯ್ಯವೇ ಘಡ ಸೂತಸುತನಳವೆ ।
ಕೆಟ್ಟುದಿನ್ನೇನಹಿತಬಲ ಜಗ
ಜಟ್ಟಿ ಗೆಲಿದನು ಧರ್ಮಪುತ್ರನ
ಪಟ್ಟದಾನೆಯೆನುತ್ತಲಿರ್ದುದು ಪಾಂಡುಸುತಸೇನೆ ॥ ೨೪

ಉಲಿದುದೀ ಬಲ ಸೂತಸುತನ
ಗ್ಗಳಿಕೆಯನು ಕೊಂಡಾಡಿ ಪಾರ್ಥನ
ಬಲುಹ ಬಹುವಿಧದಿಂದ ಬಣ್ಣಿಸುತಿದ್ದುದಾ ಸೇನೆ ।
ಲಳಿಯ ಲಗ್ಗೆಯ ನಿಖಿಳ ವಾದ್ಯದ
ಕಳಕಳವನಡಿಗಿಕ್ಕಿ ಮಲೆತುದು
ಬಲದೊಳಿಬ್ಬರ ಬಿರುದ ಪಾಡುಪವಾಡುಗಳ ರಭಸ ॥ ೨೫

ಭಾರಿಯಂಕದ ಭಟರಿವರು ಜು
ಜ್ಝಾರರೈ ತಮ್ಮಾಯತವ ತ
ಮ್ಮಾರುಭಟೆಯನು ಲಕ್ಷ್ಯ ಲಕ್ಷಣ ಭೇದ ಭಂಗಿಗಳ ।
ಸಾರತರ ಕೋದಂಡಪಂಡಿತ
ರಾರಯಿಕೆಯಲಿ ತಱುಬಿ ನಿಂದರು
ಭಾರತದೊಳಿಂದೊಂದು ಚಿತ್ರವ ಕಂಡೆ ನಾನೆಂದ ॥ ೨೬

ಇಪ್ಪತ್ತೊಂದನೆಯ ಸಂಧಿ ಮುಗಿದುದು.

# ಇಪ್ಪತ್ತೆರಡನೆಯ ಸಂಧಿ

ಸೂಚನೆ ॥ ಸಕಲ ದನುಜ ಭುಜಂಗ ವೃಂದಾ
ರಕಮಹಾಭೂತಾದಿಲೋಕ
ಪ್ರಕರವೆರಡೊಡ್ಡಾಯ್ತು ಕರ್ಣಾರ್ಜುನರ ಕದನದಲಿ ॥

ಹೇಳು ಸಂಜಯ ಕರ್ಣಪಾರ್ಥರ
ಕಾಳೆಗದೊಳೇನಾಯ್ತು ಚಿತ್ರವ
ಕೇಳುವೆನು ಕರ್ಣಾಮೃತವೊ ಕರ್ಣವ್ಯಥಾಹವವೊ ।
ಹೇಳು ನೀನಂಜದಿರು ಕುರುಕುಲ
ಕಾಲಸರ್ಪನ ತಾಯುದರ ಸೀ
ತಾಳಮಳಿಗೆಯಲೇ ಮಹಾದ್ಭುತವೇನು ಹೇಳೆಂದ ॥ ೧

ಅರಸ ಕೇಳಾದರೆ ಮಹಾವಿ
ಸ್ತರವನಾ ಕರ್ಣಾರ್ಜುನರ ರಥ
ಸರಿಸದಲಿ ಚಾಚಿದುವು ನೋಟಕರಾದುದುಭಯಬಲ ।
ಹರಿ ವಿರಿಂಚ ಸುರೇಂದ್ರ ದಿಗುಪಾ
ಲರು ಚತುರ್ದಶ ಮನುಗಳಾದಿ
ತ್ಯರು ಭುಜಂಗಮ ವಿಶ್ವವಸುಗಳು ನೆರೆದುದಭ್ರದಲಿ ॥ ೨

ಏನ ಹೇಳುವೆನವನಿಪತಿ ವೈ
ಮಾನಿಕರ ಹಂತಿಗಳ ಹರ ಚತು
ರಾನನರವೊಡ್ಡೋಲಗದ [1]ವಾಗ್ಗಣಿತ ವಿಗ್ರಹವ[1] ।
ಭಾನುಜನ ಭಾರಣೆಯನರ್ಜುನ
ನಾನಲಳವೇ ಫಲುಗುಣಗೆ ರವಿ
ಸೂನುವೇ ಘಡಪಾಡೆ ಎಂದುದು ಮೇಲೆ ಸುರಕಟಕ ॥ ೩

[1] ಗಜಭಜದ ವಿಸ್ತರವ (ಕ.ಟ.ನ.ಬ).

ರಾಸಿ ತಾರಾಗಣಸಹಿತವಾ
ಕಾಶ ಕರ್ಣನ ಕಡೆ ಸಮೀರ ಹು
ತಾಶನಾಂಬುಧಿ ಗಿರಿಸಹಿತಲೀ ಧರಣಿ ಪಾರ್ಥನಲಿ ।
ಆ ಸುರಾರಿಪ್ರಮುಖ ಯಕ್ಷರಿ
ಗಾಸೆ ಕರ್ಣನ ಮೇಲೆ ನಾಕನಿ
ವಾಸಿ ನಿರ್ಜರನಿಕರವಾದುದು ನರನ ಕೈವಾರ ॥ ೪

ವಿತತ ಮಂತ್ರಾಖ್ಯಾನ ವೇದ
ಸ್ಮೃತಿ ಪುರಾಣ ಷಡಂಗವಿಂದ್ರನ
ಸುತನ ದೆಸೆಯುಚ್ಚಾಟನಸ್ತಂಭಾದಿ ವಿದ್ಯೆಗಳು ।
ಕ್ಷಿತಿಪ ಕೇಳ್ಕೆ ಕರ್ಣನತ್ತಲು
ಕ್ರತುಗಳಾ ದೆಸೆಯಾ[1]ಭಿಚಾರ[1]
ಕ್ರತುಗಳೀ ದೆಸೆಯಾಗಿ ನಿಂದವು ನೃಪತಿ ಕೇಳೆಂದ ॥ ೫

ವಿವಿಧ ರತ್ನಾವಳಿ ಮಹಾನಿಧಿ
ಯವರ ದೆಸೆ ರಜತಾದಿ ಲೋಹ
ಪ್ರವರ ಧಾತುಗಳಿತ್ತಲತ್ತಲು ನಿಮ್ಮ ಥಟ್ಟಿನಲಿ ।
ರವಿ ಶನೈಶ್ಚರ ರಾಹು ಬುಧ ಭಾ
ರ್ಗವರು ಕರ್ಣನ ದೆಸೆಯಲಾ ಮಿ
ಕ್ಕವರು ಪಾರ್ಥನ ದೆಸೆಯಲಾಯಿತು ರಾಯ ಕೇಳೆಂದ ॥ ೬

ಶೇಷ ಕಾರ್ಕೋಟಕನು ತಕ್ಷಕ
ವಾಸುಕಿ ಪ್ರಮುಖರಿಗೆ ವಿಜಯದ
ವಾಸಿ ಪಾರ್ಥನ ಮೇಲೆಯುಳಿದೀ ಕ್ರೂರಫಣಿಗಳಿಗೆ ।
ಆಸೆ ಕರ್ಣನ ಮೇಲೆ ಖಗಮೃಗ
ಕೇಸರಿಗಳಾಚೆಯಲಿ ಜಂಬುಕ
ಕಾಸರ ವ್ಯಾಳಾದಿ ಖಗಮೃಗವಿತ್ತಲಾಯ್ತೆಂದ ॥ ೭

ಯಾತುಧಾನ ಕುಬೇರ ಕಿನ್ನರ
ಮಾತೃಗಣ ಕರ್ಣನಲಿ ಸುಮನೋ
ಜಾತ ಚಿತ್ರರಥಾದಿ ಗಂಧರ್ವರು ವಿಪಕ್ಷದಲಿ ।

---

[1] ಗೆ ಘಾಥ (ಕ.ಟ.ನ).

ಭೂತಗಣವೀಚೆಯಲಿ ದೆಸೆ ದಿಗು
ಜಾತ ಮನು ವಸು ನಾರದಾದಿ ಮ
ಹಾತಪಸ್ವಿಗಳತ್ತಲಾಯಿತು ರಾಯ ಕೇಳೆಂದ ॥ ೮

ಭರತ ನಳ ನಹುಷಾದಿ ಭೂಮೀ
ಶ್ವರರು ಪಾರ್ಥನ ದೆಸೆಗೆ ಮಹಿಷಾ
ಸುರ ದಶಾನನ ತಾರಕಾದಿಗಳಾದುದೀಚೆಯಲಿ ।
ಸುರಮುನಿಗಳಿಂದ್ರಾನಲಾಂತಕ
ವರುಣ ವಾಯು ಮಹೇಶ ವಿದ್ಯಾ
ಧರರು ಪಾರ್ಥನ ದೆಸೆಯಲೈದಿತು ಭೂಪ ಕೇಳೆಂದ ॥ ೯

ಖ್ಯಾತಿ ತೇಜಸ್ತೋಮ ವೀರ
ಪ್ರೀತಿ ವಿಕ್ರಮ ಸತ್ಯ ಸಿದ್ಧಿ ವಿ
ಭೂತಿ ಶೌರ್ಯ ತಪಃಕ್ಷಮಾದಿಗಳಾದುದಾಚೆಯಲಿ ।
ಭೀತಿ ಕಾಮ ಕ್ರೋಧ ಕಲಿ ದು
ರ್ನೀತಿ ಮದವಖ್ಯಾತಿ [1]ಮಾನವಿ
ಘಾತಿ[1] ವಿಭ್ರಮ ಕೈತವಾದಿಗಳಾದುದೀಚೆಯಲಿ ॥ ೧೦

ಭೃಗು ವಸಿಷ್ಠಾಂಗಿರಸ ದಕ್ಷಾ
ದಿಗಳು ಪಾರ್ಥನ ಪಕ್ಷವಾಯ್ತೀ
ಚೆಗೆ ಪುಲಸ್ತ್ಯ[2]ಮರೀಚಿ[2] ವಿಶ್ವಾಮಿತ್ರ ಗೌತಮರು ।
ಜಗದ ಜೀವ[3]ರು[3] ಧಾತುಮೂಲಾ
ದಿಗಳೊಳಿಕ್ಕಟ್ಟಾದುದೀ ಕಾ
ಳೆಗ ಚತುರ್ದಶಭುವನಜನಸಂಕ್ಷೋಭವಾಯ್ತೆಂದ ॥ ೧೧

ಲೋಕಪವಿವರಲಿ ಪಕ್ಷಪಾತವಿ
ದೇಕೆ ನೋಡೈ ನಿಮ್ಮ ಕರ್ಣನು
ಲೋಕವಿಖ್ಯಾತಪ್ರತಾಪನಲಾ ಮಹಾದೇವ ।
ಆ ಕೃತ ತ್ರೇತೆಯಲಿ ಕಾದಿದ
ನೇಕ ದಿವಿಜಕ್ಷತ್ರದನುಜಾ
ನೀಕವೀ ಪರಿ ಚಿತ್ರವಿಲ್ಲವನೀಶ ಕೇಳೆಂದ ॥ ೧೨

---

[1] ಮನ್ಮಥಭೂತ (ಕ). [2] ದಧೀಚಿ (ಕ). [3] ರ (ಖ.ಫ).

ಅರಸ ಕೇಳ್ಕೆ ಶಕ್ರ ಸೂರ್ಯರ
ಮರುಳುತನವೋ ಮೇಣು ಪುತ್ರಾರ್ಗ
ಚರಣೆಗಳ ನಾಟಕವೊ ಮೇಣ್ ಸಾಂಸಾರಿಕ ಭ್ರಮೆಯೋ ।
ನರನಲೇ ಲೋಕೈಕವೀರನು
ಧಿರುರೆ ಮರ್ಝು ಭಾಪೆಂಬ ಸಡಿಘಡ
ಸರಿಯೆ ಕರ್ಣಂಗೆಂಬ ಕಳಕಳ ಕೇಳಲಾಯ್ತೆಂದ ॥　　　　೧೩

ಈ ಪರಿಯಲೆರಡಿಟ್ಟ ಜಗದಾ
ಳಾಪವನು ಕರ್ಣಾರ್ಜುನರ ಪ
ಕ್ಷೋಪಚಾರಪ್ರಕಟಕಲಹಕಠೋರಕಳಕಳ[1]ಪ[1] ।
ಆ ಪುರಂದರ ಕಮಲಸಖರಾ
ಟೋಪವನು ಭುವನಾಪಘಾತವ
ನಾ ಪಿತಾಮಹನಱಿದು ಸಂತೈಸಿದನು ಸಾಮದಲಿ ॥　　　　೧೪

ಅರಸ ಚಿತ್ತೈಸುಭಯಬಲದು
ಬ್ಬರದ ಬಹುವಿಧವಾದ್ಯರವದು
ಬ್ಬರವ ಮುಕ್ಕುಳಿಸಿತ್ತು ಪಾಠಕನಿಕರನಿರ್ಘೋಷ ।
ಸುರರ ಕಳಕಳವೀ ಧ್ವನಿಯನು
ತ್ತರಿಸಿತೀ ಬಲುಗಜಬಜವ ನಡ
ತರದೊಳಿಕ್ಕಿತು ಕರ್ಣಪಾರ್ಥರ ಚಾಪಟಂಕಾರ ॥　　　　೧೫

ಅಳವಿಯಂಕೆಯ ಮೀಱಿ ರಥರಥ
ಹಳಚಿದವು [2]ಬಹು[2]ಮಾನದಲಿ ಪೆ
ಗ್ಗಳಿಸಿದವು ವೇಗಾಯ್ಲವಾಜಿಯ ಲಳಿಯ ಲಹರಿಯಲಿ ।
ಹೊಳೆದವೆಡಬಲವಾಘೆ ಸನ್ನೆಯ
[3]ಸುಳಿವ[3] ಸುಭಟರ ಬವರಿ ಭಂಗಿಯ
ಲುಳಿಯ ಸೂತರ ರೇಖೆ ಸೆಳೆದುದು [4]ಜನದ[4] ಕಣ್ಮನವ ॥　　　　೧೬

ಉಪ್ಪರಿಸಿ ಲಳಿಯೆದ್ದು ಸೂತರ
ಚಪ್ಪರಣೆಗಳ ಮೀಱಿ ಖುರದಲಿ
ಖೊಪ್ಪರಿಸಿ ಹೊಯ್ದಾಡಿದವು ಹೇಷಿತದ ಹಲ್ಲಣಿಯ ।

---

[1] ದ (ಟ.ದ.ನ).　[2] ಭ್ರೂ (ಖ), ಭೂ (ಟ.ತ.ಪ).　[3] ತಳಿಯ (ಕ).
[4] ಜವನ (ಘ.ತ), ಳಯ (ಟ.ತ).

ದರ್ಪದಲಿ ತೇಜಿಗಳು ತೇಜಿಯು
ತಪ್ಪಡಿ[1]ಗೆಲಟಕಟಿಸಿ[1]ದವು ರಣ
ಪ್ರೇಪ್ಸಿತೈ ಕರ್ಣಾರ್ಜುನರ ರಥವಾಜಿ ವಾಜಿಗಳ ॥ ೧೭

ಅರಸ ಕೇಳೇನೆಂಬೆನೈ ಕಪಿ
ವರನ ಕೋಳಾಹಳದ ಕದನವ
[2]ಕರೆದು[2] ನಖದಲಿ ಹೊಯ್ದು ಕರದಲಿ ಕಾದುವಂದದಲಿ ।
ಮುರಿದು ಬಾಲದಲಡಿಗಡಿಗೆ ಬೊ
ಬ್ಬಿಱಿದು ಹೆಣಗಿದನಿನಸುತನ
ವರರಥದ ಹೇಮಧ್ವಜದ ಹಲಗೆಯ ಹಸ್ತಿಕಕ್ಷದಲಿ ॥ ೧೮

ಏನ ಹೇಳುವೆ ಸೂತತನದಭಿ
ಮಾನವೇಱಿದ ಪರಿಯನಾ ವೇ
ಷಾನುರೂಪವಿಚೇಷ್ಟೆಯನು ಲೋಕೈಕ ಚೇಷ್ಟಕನ ।
ನೀನೆನಗೆ ಸಾರಥಿತನದಲಿ ಸ
ಮಾನನೇ ಘಡ ತುರಗಹೃದಯ
ಜ್ಞಾನ ನಿನಗೇಕೆನುತ ಶಲ್ಯನ ಜಱಿದನಸುರಾರಿ ॥ ೧೯

ಅಕಟ ಗೋರಕ್ಷಕನೆ ಪಶುಪಾ
ಲಕರ ಮಕ್ಕಳೊಳಶ್ವಹೃದಯ
ಪ್ರಕಟವಿಜ್ಞಾನಂಗಳುದಿಸಿದವೇ ವಿಶೇಷವಲಾ ।
ವಿಕಳರಾವಿದನೆತ್ತಬಲ್ಲೆವು
ಸಕಲಗುಣಸರ್ವಜ್ಞ ನಿನಗೀ
ಬಕವಿಡಂಬನವೇಕೆನುತ ಮೂದಲಿಸಿದನು ಶಲ್ಯ ॥ ೨೦

ಧಾರಿಣೀಪತಿ ಕೇಳು ಬಿಲುಟಂ
ಕಾರ ಕದನೋಪಕ್ರಮದೊಳೋಂ
ಕಾರವಾಯಿತು ಕಾರ್ಮುಕಸ್ವಾಧ್ಯಾಯವಿಸ್ತರಕೆ ।
ಭೂರಿ ಬಹುವಿಧ ಬಾಣವರ್ಗವಿ
ಹಾರವೆಸೆದುದು ಕರ್ಣಪಾರ್ಥರು
ದಾರ ಸಮರಾರಂಭವ[3]ಳ್ಳಿಱಿದುದು ಜಗತ್ರಯವ[3] ॥ ೨೧

---

[1] ಗಳಲಿ ನುಸುಳಿ (ಕ). [2] ನೆರದು (ಕ), ಕೆರೆದು (ತ,ಪ). [3] ಳ್ಳಾಡಿಸಿತು ಮೂಜಗವ (ಗ.ಟ.ತ.ಧ,ನ,ಪ.ಬ).

ಸೂತಜಾತಿಯೊಳೀ ಧನುರ್ವೇ
ದಾತಿಶಯವೆಂತಾಯ್ತು ಪಾರ್ಥಿವ
ಜಾತಿಯಧ್ಯಾಪನವಿಧಾನನಿಯೋಗವಾವನದು ।
ಪೂತು ಮಝುರೇ ಸ್ವೈರಿಸಾದಡೆ
ಸೂತನಂದನ ಎನುತ ಬಾಣ
ವ್ರಾತದಲಿ ಹೊದಿಸಿದನು ಕರ್ಣನ ರಥವನಾ ಪಾರ್ಥ ॥ ೨೨

ಹರೆಗಡಿದನಾ ಕ್ಷಣದೊಳಾತನ
ಶರವನೆಲವೋ ಪಾರ್ಥ ನಿಮ್ಮ ತ್ರಿ
ವರಿಗೆ ಜನಕ[1]ನು[1] ಪಾಂಡು ನೀವಧ್ಯಯನಯೋಗ್ಯರಲಾ ।
ಧರೆಯೊಳಗ್ಗದ ರಾಜಸೂಯಾ
ಧ್ವರಕೆ [2]ಪತ್ನಿಯೊ ಯೋಗ್ಯೆ ಯಜಮಾ
ನರುಗಳ್ಳೆ ನೀ[2]ವೇನಹೇಳುವೆವೆನುತ ತೆಗೆದೆಚ್ಚ ॥ ೨೩

ಸೂಳೆಯರು ಗಡ ಸಾಮಗಾನವ
ನಾಳಿಗೊಂಬರು ಗಡ ದಿನೇಶನ
ಮೇಳವನು ಮುದುಗೂಗೆ ಮೆಚ್ಚದು ಹಾನಿಯೇನದಕೆ ।
ಆಳುತನದಂಘವಣೆಯುಂಟೇ
ಬೋಳೆಯಂಬಿನಲಾಡಿಕೊಳು ಬಿಡು
ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ ॥ ೨೪

ಆತನೆಚ್ಚ ಶರೌಘವನು ಕಡಿ
ದೀತ ನುಡಿದನು ಹೊಳ್ಳುವಾತಿನ
ಹೋತುದಱಿಹಿಗಳಿವರುಪಾಧ್ಯರು ನಾವು ಸೂಳೆಯರು ।
ಏತಕೀ ಬಳೆಗೈಗೆ ಬಿಲು ಹಿಣಿ
ಲೇತಕೀ [3]ಜೊಲ್ಲೆಹ[3]ಕೆಚಲ್ಲಣ
ವೇತಕೀ ಹೆಣ್ಣುಡಿಗೆಗೆನುತೆಚ್ಚನು ಧನಂಜಯನ ॥ ೨೫

ಕಾಣಿಸಿದನ್ಯೆ ಕೌರವನ ಹರಿ
ವಾಣದಾಯದ ಹಂತಿಕಾಱನು
[4]ಕಾಣಿಕೊಂಕನು[4] ನಮ್ಮ ಚರಿತಕೆ ಹಾ ಮಹಾದೇವ ।

---

[1] ನೆ (ತ.ನ.ಬ). [2] ಪತಿಯೋ ಯಾಗಯಜಮಾನರುಗಳ್ಗೆ ನಾ (ಕ). [3] ಜೊಲ್ಲೆಯ (ಕ). [4] ಕೇಣಿಗೊಂಡನು (ಖ.ಗ.ದ.ಬ).

ಜಾಣ[1]ತನ[1]ವೋಳ್ಗೆಯದು ಧರ್ಮಜ
ನಾಣೆ ಬಲ್ಲೆನು ದಿಟವೆನುತ ಬಲು
ಸಾಣೆಯಲಗಿನ ಸರಿಯ ಸುರಿದನು ಸವಘ ರಿಪುಶರವ ॥ ೨೬

ರಾಯತನದಲಿ ಬೆಳೆತು ರಾಜ್ಯ
ಶ್ರೀಯ ನೆಱೆ ಹೋಗಾಡಿ ಪರರಿಗೆ
ಜೀಯ ಬೆಸಸುವುದೆಂದು ಜೀವಿಸುವವರು ನಾವಲ್ಲ ।
ರಾಯತನವೆಮಗಿಲ್ಲ ಕೌರವ
ರಾಯನೋಲೆಯಕಾಱರಹೆವೆ
ವ್ಯಾಯತವು ತಾ ಬೇಱೆನುತ ಕವಿದೆಚ್ಚನಾ ಕರ್ಣ ॥ ೨೭

ಆವ ಹಂಜರಕೂಳಿ ಮೊಗವಲೆ
ಯಾವಗಾಣವು ಬೀಸುವಲೆಯುಱೆ
ತೀವಿದುದಕದ ಮಡುವೆಯಿದು ಸಂಗ್ರಾಮಭೂಮಿ ಕಣಾ ।
*ಹೇವವಿಲ್ಲದೆ ಕಾದಬೇಹುದು
ಧೀವರರವೋಲ್ ತಡಿಕೆವಲೆಯಲಿ
ಲಾವುಗೆಯ ಹೊಯ್ದಂದವಲ್ಲೆನುತೆಚ್ಚನಾ ಪಾರ್ಥ ॥ ೨೮

ನೀವು ನುಡಿದುದು ಹುಸಿಯೆ ಕೂಳಿಯ
ತೀವಿ ತೀವೆವು ಕೊಳಚೆಗಳ ಬಾ
ಣಾವಳಿಯ ತಡಿಕೆಯಲಿ ಹೊಯ್ವೆವು ನಕುಲ ಜಾತಿಯನು ।*
ನಾವು ನಿಮ್ಮಯ ಹೃದಯಸರಸಿಯ
ಜೀವಮತ್ಸ್ಯಕೆ ಗಾಣವಿಕ್ಕುವ
ಧೀವರರು ನೋಡೆನುತ [2]ಪಾರ್ಥನನೆಚ್ಚನಾ ಕರ್ಣ[2] ॥† ೨೯

ಬೇಱೆ ಕೆಲವಂಬುಗಳು ಗಡ [3]ವ್ಯೋ
ದೋ[3]ಱಿದವು ನಿನಗೆಂಬರವ ನೀ
ತೋಱಿಸಾ ನಿನಗಾಯ್ತು ಗಡ ಶಶಿವೌಳಿಯುಪದೇಶ ।

---

[1] ಪಣ (ಘ.ತ).

* (ಕ.ಗ ಟ.ತ.ದ) ಪ್ರತಿಗಳಲ್ಲಿ ನಕ್ಷತ್ರ ಚಿಹ್ನವಿರುವ ಭಾಗವು ಬಿಟ್ಟುಹೋಗಿ ೨೮ ನೆಯ ಪದ್ಯದ ಪೂರ್ವಾರ್ಧವೂ ೨೯ ನೆಯ ಪದ್ಯದ ಉತ್ತರಾರ್ಧವೂ ಸೇರಿ ಒಂದು ಪದ್ಯವಾಗಿದೆ.

[2] ಕರ್ಣನನೆಚ್ಚನಾಪಾರ್ಥ (ತ.ದ.ಬ), ಪಾರ್ಥನನೆಚ್ಚು ಬೊಬ್ಬಿಱಿದ (ಟ).

† ಈ ಪದ್ಯವಾದಮೇಲೆ ಅರ್ಜುನನು ಮೊದಲಿಸಿದ್ದ ಇನ್ನೊಂದು ಪದ್ಯವಿದ್ದು ಬಿಟ್ಟುಹೋಗಿರಬಹುದೆಂಬ ಸಂದೇಹ ಬರುತ್ತದೆ.

[3] ಕ್ಕೆಸಾ (ಟ.ದ).

ಹಾಱುಗಣೆಗಳ ಹರಹಿ ಹೆಮ್ಮೆಯ
ಬೀಱು ಚದುರಿಗತನವ ಮೆಱೆದರೆ
[1]ನೀ[1]ರನೆಂಬರೆ ನಿನ್ನ ನೆನುತೆಚ್ಚನು ಧನಂಜಯನ ॥ ೩೦

ಮೊಲನ ಬೇಂಟೆಗೆ ತಿವಿದು ಹಾಸವ
ಕಳಚುವರೆ ಕೇಸರಿಯನಕಟಾ
ಕೊಳಚೆಯುದಕಕೆ ಕೊಂಬುದೇ ಹರುಗೋಲ ಬಾಡಗೆಯ ।
ಗಳಹತನವೇ ಹರನ ಬಾಣಾ
ವಳಿಗೆ ಗುಱಿಯೇ ನೀನೆನುತ ಕೈ
ಚಳಕದಲಿ ರಿಪುಶರವ ಖಂಡಿಸಿ ತುಳುಕಿದನು [2]ಪಾರ್ಥ[2] ॥ ೩೧

ಡೊಂಬಿಯೇಕೈ ಪಾರ್ಥ ಬಯಲಾ
ಡಂಬರವ ನಾವಱಿಯೆವೇ ತ್ರಿ
ಯಂಬಕಾಸ್ತ್ರದ ತೊಡಹವಲ್ಲಾ ನಿನ್ನ ವಿಕ್ರಮಕೆ ।
ಶಂಬರಾರಿಯ ಕಣೆಯುವೊಲು ನಿ
ನ್ನಂಬು ಬಲ್ಲಿಹವೆಂದು ಕೆಲದವ
ರೆಂಬರೈ ಹುಸಿಯಲ್ಲೆನುತ ರಿಪುಶರವ ಖಂಡಿಸಿದ ॥ ೩೨

ಲೇಸನಾಡಿದೆ ಕರ್ಣ ನೀನೇ
ನೈಸುಖೂಳನೆ ನಿನ್ನವಂದಿಗ
ವೇಷವಧುಗಳ [3]ಗೆಲು[3]ವಡಿವು ಮದನಾಸ್ತ್ರವೇಕಲ್ಲ ।
ಈ ಶರಾವಳಿ ಕುಸುಮಮಯ ನೀ
[4]ನೈಸೆ[4] ವನಿತಾಮಯನು ಪುಷ್ಪಶ
ರಾಸನನು ತಾನೆನುತ ಕಣೆಗೆದಱಿದನು ಕಲಿ ಪಾರ್ಥ ॥ ೩೩

ಗಂಡುಗಲಿ ನೀ ಕಾಮನೈ ಕೈ
ಕೊಂಡವೈ ತಪ್ಪೇನು ನಾವೇ
ಖಂಡಪರಶುಗಳಾಗೆವೇ ಭವದೀಯ ವಿಗ್ರಹಕೆ ।
ಕಂಡೆ ನಿನ್ನನು ಸುಭಟವೇಷದ
ಭಂಡನೋ ಫಡ ಹೋಗೆನುತ ಪರಿ
ಮಂಡಳಿತಕೋದಂಡನೆಚ್ಚನು ಕರ್ಣನರ್ಜುನನ ॥ ೩೪

---

[1] ವೀ (ಗ), ಧೀ (ಟ). [2] ಕಣೆಯ (ಟ.ತ.ದ.ನ.ಬ). [3] ನುಗಿ (ಕ).
[4] ವೇಷ (ಟ.ತ.ನ.ಬ).

ನಿಮಿಷನಿಮಿಷಕೆ ಹೆಚ್ಚಿತಿಬ್ಬರ
ತಿಮಿರಮಯಘನರೋಷವಿಬ್ಬರ
ಸಮರಸಾಹಸಶೌರ್ಯವಿಬ್ಬರ ಕಣೆಯ ಕೈಚಳಕ ।
ಶ್ರಮವಿಧಾನವ್ಯಾಪ್ತಿಯಿಬ್ಬರ
ಗಮಕವಿಬ್ಬರ ಗಾಢವಿಬ್ಬರ
ಸಮತೆಯಿಬ್ಬರ ಗರ್ವವಿಬ್ಬರ ತೀವ್ರತರತೇಜ ॥ ೩೫

ಜನಪ ಕೇಳ್ಳೆ ಬಳಿಕ ಕರ್ಣಾ
ರ್ಜುನರ ಸಮಸಂಗ್ರಾಮವನು ಗುರು
ತನುಜ ಕಂಡನು ಕೌರವೇಂದ್ರನ ಬಳಿಗೆ ನಡೆ[1]ತಂದು[1] ।
ತನತನಗೆ ತೊಲಗಿತು ಮಹೀಶರ
ಮೊನೆಯ ಸಮರಥರಾಜಿ ಗುರು ನಂ
ದನನಲಾ ಎನುತಿದಿರುವಂದನು ನಿನ್ನ ಮಗ ನಗುತ ॥ ೩೬

ಏನು ಬಂದಿರಿ ಕಾಳೆಗದ ಹದ
ನೇನು ಪಾಂಡವರಾಜತಿಮಿರಕೆ
ಭಾನುವಿನ ಭಾರಣೆಯ ಬಲುಹೇ [2]ನಿ[2]ಮ್ಮ ದಳಪತಿಯ ।
ಆನಲಳವೇ ಪಾರ್ಥನೀತನ
ನೇನು ಹದನ್ಯೆ ರಾಜಕಾರ್ಯನಿ
ಧಾನವೇನೆಂದರಸ ನುಡಿದನು ದ್ರೋಣನಂದನನ ॥ ೩೭

ಏನನೆಂಬೆನು ಜೀಯ ಕರ್ಣನ
ನಾನುವಡೆ ಫಲುಗುಣನ ಪಾಡೆ ಕೃ
ಶಾನುನೇತ್ರನೊ ಕೈಟಭಾರಿಯೊ ಕಮಲಸಂಭವನೊ ।
ಆ ನಿರೂಢಿಯ ದೊರೆಗಳಿವನ ಸ
ಮಾನರೇ ಗುಣವಲಿ ಸಮತ್ಸರ
ಮಾನಿಸನೆ ನಿನ್ನಾಣೆ ಭಾರದ್ವಾಜನಾಣೆಂದ ॥ ೩೮

ಹರಿ ಮಹೇಶ್ವರರಾಳುತನಕಿ
ಬ್ಬರಳು ಮಿಗಿಲರ್ಜುನನ ಬಲುಹೀ
ಧರೆಯಖಿಯಲೀ ಹೊತ್ತಿನಲಿ ನಿನ್ನಾತನಗ್ಗಳಿಕೆ ।

---

[1] ತರಲು (ತ.ದ.ನ). [2] ನ (ತ).

ಸರಿಗೆ [1]ಸಂದುದೆ[1] ಸಾಕು ತೂಗಿದ
ಡರಸ ರವೆ ಕುಂದದು ಪರಸ್ಪರ
ವರಸುಕಾರ್ಯದ ವಾಸಿ ಬಂದುದು ರಾಯ ಕೇಳೆಂದ ‖ ೩೯

ಒಮ್ಮೆ ಮುಱಿವುದು ವೈರಿದಳ ಮ
ತ್ತೊಮ್ಮೆ ಮುಱಿವುದು ನಮ್ಮದಳ ಬಳಿ
ಕೊಮ್ಮೆ ಮಕ್ಕಳತಂಡವವರಲಿ ನಮ್ಮ ಥಟ್ಟಿನಲಿ ।
ನಮ್ಮ ದೆಸೆ ಬಲುದೊರೆಗಳಳಿವಿನೊ
ಳೊಮ್ಮೆ ಹೋಯಿತು ಹೊತ್ತು ರಣದಲಿ
ನಮ್ಮ ವಿಳಸಕೆ ಮೇಲುವಾಸಿ ನೃಪಾಲ ಕೇಳೆಂದ ‖ ೪೦

ಸರಿಗಳೆವೆನೆರಡಂಕವನು ನಾ
ಕರಸಿ ಕೊಡುವೆನು ಧರ್ಮಜನನೆರ
ಡರಸುಗಳು ಸರಿಯಾಗಿ ಭೋಗಿಸುವುದು ಮಹೀತಳವ ।
ಅರಸ ಕರ್ಣನ ಕೆಡಿಸದಿರು ನಿ
ಷ್ಠುರದ ನುಡಿಯಿದು ಕೆಂಡದಲಿ ಕ
ರ್ಪೂರವ ಹಾಯ್ಕದಿರೆಂದು ರಾಯನ ಗಲ್ಲವನು ಪಿಡಿದ ‖ ೪೧

ಆಗಲಿದು ತಪ್ಪೇನು ಸಂಪ್ರತಿ
ಯಾಗಬೇಡೆಂದೆನೆ ಮಹಾಹವ
ವೀಗ ಸರಿಬರಿಯಾಯ್ತು ಬಂದುದು ವಾಸಿಯೆಂದಿರಲೆ ।
ಈಗಲಭಿಮನ್ಯುವಿಗೆ ಲಕ್ಷಣ
ಹೋಗಲಾ ಸೈಂಧವಗೆ ದ್ರುಪದನ
ನೀಗಲದು ಸರಿಯಾಗಲೆಂದನು ಕೌರವರರಾಯ ‖ ೪೨

ಗುರುನದೀಸುತರಳಿವುಭಯರಾ
ಯರಿಗೆ ಸರಿ ದುಶ್ಶಾಸನನ ನೆ
ತ್ತ[2]ರದಿ[2] ಪಾನಕ್ರೀಡನಾ ಸೌಭಾಗ್ಯಸಂಪದಕೆ ।
ಸರಿಯುದಾವದು ಕರ್ಣತನಯನ
ಮರಣಕಾವುದು ಸರಿಸ ಭೀಮನ
ಕರುಳ[3]ಲೆನ್ನಯ ಕರುಳು ತೊಡಕಲು[3] ಮೇಲೆ ಸಂಧಾನ ‖ ೪೩

---

[1] ಬಂದುದು (ಟ.ದ.ಬ). [2] ರಿನ (ದ). [3] ತನ್ನಯ ಕುರುಳು ಮುಡಿದಡೆ (ಕ.ಖ.ಟ.ದ).

ಈ ದಿವಿಜರೀ ಸೇನೆಯೀ ಕ
ರ್ಣಾದಿಸುಭಟರು ನಾವು ನೀವೀ
ಮೇದಿನೀಶ್ವರರಖಿಳನಾಯಕರವರ ಘಟ್ಟಿನಲಿ ।
ಈ ದುರಾಗ್ರಹವುಚಿತವಲ್ಲೆನೆ
ಸೋದರನ ತನುಗೆಡಹಿ ರಕುತವ
ಸೇದಿ ಸೊಕ್ಕಿದ ಭೀಮನೊಡನೆಮಗೆಂತು ಸಂಧಾನ ॥ ೪೪

ನಿಱಿಗರುಳ[1]ನುಗಿದುಗಿ[1]ದು ನೆತ್ತರಿ
ನೊಱವಿನಲಿ ಮೊಗೆಮೊಗೆದು ಬಾಯೊಳ
ಗೆಱೆದು ಸವಿನೋಡೆಂದು ನಿಮಗೆಲ್ಲರಿಗೆ ಕೈನೀಡಿ ।
ಇಱಿದಿಱಿದು ಮೂದಲಿಸಿ ಮಿಗೆ ಚ
ಪ್ಪಱಿದು ಚಪ್ಪಱಿದಾಡಿ ರಕುತವ
ಸುಱಿದು ಸೊಕ್ಕಿದ ಭೀಮನೊಡನೆಮಗೆಂತು ಸಂಧಾನ ॥ ೪೫

ಆಡಲೇಕಿವನಿನ್ನು ಹಿಂದಣ
ಕೇಡನೆಣಿಸಿದಡೇನು ಫಲ ತಾ
ಗೂಡಿ ಹಲಬರು ಜೀವಪುರುಷರು ಹೆಂಗಳಾದೆವಲೆ ।
ನೋಡದಿರು ಹಿಂದಾದ ಭಂಗವ
ನಾಡದಿರು ಬಹುಬಂಧುವರ್ಗದ
ಕೇಡದೆಲ್ಲವನೊಬ್ಬ ಕರ್ಣನ ನೋಡಿ ಮಱೆಯೆಂದ ॥ ೪೬

ಅನುಜರಳಿದುದು ನೂಱು ಬವರದಿ
ತನುಜರಳಿದುದು ನೂಱು ಬಾಂಧವ
[2]ಜನರು ಸಂಖ್ಯಾರಹಿತ ಬಿದ್ದೀನವದಿರಿದ್ದೇನು[2] ।
ಎನಗೆ ಕರ್ಣನ ಜೀವವೇ ಜೀ
ವನವಿದೆಂಬೆಯಲಾ ಸಹೋದರ
ತನುಜರೆಲ್ಲರನೊಬ್ಬ ಕರ್ಣನ ನೋಡಿ ಮಱೆಯೆಂದ ॥ ೪೭

ರಣದೊಳಳಿದೀ ಸಕಲ ಬಾಂಧವ
ಗಣವಿದೆಲ್ಲವನೊಬ್ಬ ಕರ್ಣನ
ಗುಣವ ಕಂಡೇ ಮಱೆದೆಯ ಕಟೀ ಕರ್ಣನಳಿವಿನಲಿ ।

---

[1] ಬಿಗಿಬಿಗಿ (ಟಿ.ಪ.ಬ). ಬಗಿಬಗಿ (ಘ.ತ). [2] ಜನವಸಂಖ್ಯಾತ ಕ್ಷಿತೀಶ್ವರರಳಿದರಿನ್ನೇನು (ಕ), ಜನವಸಂಖ್ಯಾತೀತಕಳಿದುದು ಹೇಳಲೇನದನು (ಘ), ಜನವಸಂಖ್ಯಾರಹಿತವಿದ್ದೇನೀಗಫಲವಿನ್ನು (ಬ), ಜನವಸಂಖ್ಯಾರಹಿತ ಬಿದ್ದುದು ಬೀದಿವರಿವರಿದು (ಟಿ.ದ.ಬ).

ಎಣೆ[1]ಯಗಲಿ[1] ನೀ ಬದುಕುವೈ ಧಾ
ರುಣಿಯ. ಪತಿಯೇ ಪಾರ್ಥವಹ್ನಿಯು
ನಣೆದು ಕರ್ಣನನುಳುಹಿಕೊಳು ಸಂಪ್ರತಿಯ ಮಾಡೆಂದ ॥ ೪೮

ಗುರುತನುಜ ನೀವಾಡಿದುದ ಧಿ
ಕ್ಕರಿಸುವವರಾವಲ್ಲ ಕರ್ಣನ
ಹಿರಿಯ ಮಗನನು ಪಾರ್ಥನುದರದೊಳಾ ಸಹೋದರನ ।
ದುರುಳ ಭೀಮನ [2]ಬಸಿರ ಬಗಿದು[2]
ತ್ತರಿಸುವೆನು ಭಾಷೆಯನು ನೀವ್ ಹಿರಿ
ಯರಸರಲಿ ಯಮಳರಲಿ ಸಂಧಿಯ ಮಾಡಿಕೊಡಿಯೆಂದ ॥ ೪೯

ಇಪ್ಪತ್ತೆರಡನೆಯ ಸಂಧಿ ಮುಗಿದುದು.

---

[1] ಯುಗಟಿ (ಕ). [2] ರುಳನುಗಿ...ು (ಕ).

ಜಡಿದ ಶೌರ್ಯದ ಮೈಗಳುಬ್ಬಿನ
ಗುಡಿಯಿಡಿದ ರೋಮಾಳಿ ರಿಪುಗಳ
ಕುಡಿದ ಕಂಗಳ ಸುಭಟರೆಚ್ಚಾಡಿದರು ಚಳಕದಲಿ ‖　　　　೪

ಬಿರಿದುವಿಬ್ಬರ ಜೋಡು ಮೈಯು
ಬ್ಬರಿಸೆ ಹಳಹಳಿಕೆಯ ಸುತೇಜದ
ಸುರಿದುವಿಬ್ಬರ ಮೋಜೆ ಗಂಟಿಕ್ಕಿದುವು ಹುಬ್ಬುಗಳು ।
ಅರಳ್ವ ನಿಡುಗಂಗಳ ನಿಹಾರದ
ಕರದ ಚಳಕದ ಕಾದ ನಾಸಿಕ
ದೆರಲ ಕೆತ್ತುವ ಮೀಸೆಗಳ ಭಟರೆಸೆದರುರವಣಿಸಿ ‖ *　　　　೫

ವಹಿಲವನು [1]ವೇಢೈಸು[1]ವಡೆ ನರ
ರಹಿಪತಿಗಳೇ ಭಟರ ಪಡಿಯಿಡ
ಬಹುದೆ ಪಲ್ಲವ ಪಂಡಿತರ ಸತ್ಕಲಾನಿಗಳ ಗತಿಯು ।
[2]ಅ[2]ಹಿಯ [3]ಶ[3]ರಮಾನದ ಸುತಾಳ
ಗ್ರಹಮುಖದ [4]ಸರ[4]ವಾದಿಗ[5]ಳು[5] ಸರ
ವಹಿಯ ನಾಯಕವಾಡಿಗಳೆ ನರನಾಥ ಕೇಳೆಂದ ‖　　　　೬

ಕಣೆ ಕಣೆಯುನಿಟ್ಟೊರಸಿದುವು [6]ಕೂ[6]
ರ್ಗಣೆಗೆ ಮಾರ್ಗಣೆ ಚಾಚಿದುವು ಕಣೆ
ಕಣೆಗೆ ಮಲೆತುವು ತಜುಬಿದವು ಕಣೆ ಕಣೆಯ ಪಡಿಮುಖದ ।
ಕಣೆ ಕಣೆಗೆ ತೆರಳಿದವು ಕಣೆ ಕಾ
ರ್ಗಣೆಯನಣೆದವು ಹಿಂಡುಗಣೆ ಸಂ
ದಣಿಗಣೆಯಲಕ್ಕಾಡಿದವು ರಣಧೀರರಿಸುಗಗಳ ‖　　　　೭

ಎಸುವ ಗತಿಗೊಮ್ಮೊಮ್ಮೆ ಜಗ ಗ
ರ್ಜಿಸಿದುದಾಯೆಂದೆರಡು ಘಟ್ಟಿಸೊ
ಳೊಸಗೆಯಲಿ ಮೋಳಗಿದವು [7]ಕೋ[7]ಹಿನ ಕೋಟಿ ನಿಸ್ಸಾಳ ।

* ಇಲ್ಲಿಂದ ಮುಂದಕ್ಕೆ ಪದ್ಯಗಳ ಅನುಕ್ರಮವು ಬೇರೆಬೇರೆ ಪ್ರತಿಗಳಲ್ಲಿ ಬೇರೆ ಬೇರೆ ರೀತಿಯಲ್ಲಿದೆ.

[1] ವಾಡಾಯಿಸು (ಕ), ವ್ರೋಢೈಸು (ಕ), ಪಾಡೆಸು (ಪ) ಪ್ರೌಢ್ಯೈಸು (ನ.ಬ). [2] ರ (ಕ.ತ). [3] ಸ (ತ.ಫ). [4] ಶರ (ತ). [5] ... (ತ). [6] ಮಾ (ಗ.ತ). [7] ತೋ (ತ.ನ.ಬ).

ನಿಶಿತ ಶರವೋ ಪ್ರಳಯ ಸೂರ್ಯರ
ಮಸಕವೋ ಹರನೇತ್ರವಹ್ನಿಯ
ಹಸರವೋ ಹೆಸರಿಡುವನಾವನು ಭೂಪ ಕೇಳೆಂದ ॥ ೮

ಇವರ ಬಿಲುದನಿ ತುರಗ ಹೇಷಾ
ರವದ ಘಲ್ಲಣಿ ಸೂತರಬ್ಬರ
ವಿವಿಧವಾದ್ಯನಿನಾದ ದಳವೆರಡರ ಮಹಾರಭಸ ।
ಅವಿರಳಾಸ್ತ್ರಧ್ವಾನವಭ್ರದ
ದಿವಿಜನಿಕರದ ಸಾಧುವಾದದಿ
ಭುವನ ಶಬ್ದಬ್ರಹ್ಮಮಯವಾಯ್ತೊಂದು ನಿಮಿಷದಲಿ ॥ ೯

ಮುಂಚುವುದು ಕೈ ಮನವ ಕೈಮೆಯ
ಸಂಚವನು ಮನ ಮುಂಚುವುದು ಮಿಗೆ
ವಂಚಿಸುವುದಂಬುಗಳ ಗತಿ ಕೈಮನದ ಕಲುಹೆಗಳ ।
[1]ಮುಂ[1]ಚಿದಂಬುಗಳಾಙನೇಳನು
[2]ಹಿಂ[2]ಚಿದವು ಹೊಂಬರಹದಂಬಿನ
ಮಿಂಚುಗಳಲೆವೆ ಹಳಚಿದವು ಹರಿಹರ ಪುರಂದರರ ॥ ೧೦

ಮನದೊಳಗೆ ಮೊಗೆದಿಂಟಿದರು ಕ
ಣ್ಣಿನಲಿ ಕಾಙಿದರಡಿಗಡಿಗೆ ಕಿವಿ
[3]ಗೊನೆಗಳಲಿ[3] ಕುಡಿಕುಡಿದುಗುಳಿದರು ಮೂದಲೆಯ ಮಾತುಗಳ ।
ಮನದಲಂಕುರವಾಗಿ ಕಡೆಗ
ಣ್ಣಿನಲಿ ಪಲ್ಲವವಾಗಿ ರಣವಾ
ತಿನಲಿ ಹೂತುದು ಕರ್ಣಪಾರ್ಥರ ರೋಷಮಯ[4]ಚೂತ[4] ॥ ೧೧

ಅರಸ ಕೇಳ್ಕೈ ಬೊಬ್ಬಿಙಿದು ಚ
ಪ್ಪರಿಸಿ ತೇಜಿಯ ನೂಕಿದನು ಮುರ
ಹರನು ಸೂಠಾಸೂಠಿಯಲಿ ಕೈದೋಙಿದನು ಪಾರ್ಥ ।
ಖುರಪುಟದಲಾಕಾಶವನು ಕ
ತ್ತರಿಸುವವ್ಪೊಲು[5]ಬ್ಬರದಲತ್ರಿ[5]ನಿ
ಬ್ಬರದ ಗತಿಯಲಿ ನಿಗುರಿದವು ರಥವಾಜಿಗಳು ನರನ ॥ ೧೨

---

[1] ಹಿಂ (ಗ.ಟ.ತ.ದ.ನ.ಪ). [2] ಮುಂ (ಗ.ಟ.ತ,ದ.ನ.ಪ). [3] ಕರ್ಣದಲಿ (ಕ). [4] ಬೀಜ (ಟ.ದ), ಭೂಜ (ಬ). [5] ಪ್ಪಾರದಲಿ (ಘ.ಟ.ಬ).

ಕುಬುಬೆನುತ ಬೊಬ್ಬಿಱಿದನುಗ್ರ
ಪ್ರಬಲವಾನರರಾಜನಿದಿರಲಿ
ಕಬಳಿಸಿದವರ್ಜುನನ ಶರ [1]ಕರ್ಣನ[1] ಪತಾಕಿನಿಯ |
ಶಬರರೂಪ ವರಾಹದೈತ್ಯನ
ನಿಬಿಡದರ್ಪವ [2]ಮುಱಿವ[2]ವೋಲು ವರ
ವಿಬುಧತತಿ ಕೊಂಡಾಡೆ ಕಳೆಯೇಱಿದನು ಕಲಿಪಾರ್ಥ ‖ ೧೩

ಏನ ಹೇಳುವೆನರಸ ಕೇಳ್ ನಿ
ನ್ನಾನೆಯಗ್ಗಳಿಕೆಯನು ಮುಂದಣ
ದಾನವಾಂತಕನುರವನೆಚ್ಚನು ಜೋಡನೊಡೆಬಗಿದು |
ಆ ನಿರೂಢಿಯ ಹಯದ ಘಾಯವ
ನೇನನೆಂಬೆನು ಜೀಯ [3]ಸಿಂಧವ[3]
ವಾನರನ ವೇದನೆಯ ಗಣನೆಯನಱಿಯೆ ನಾನೆಂದ ‖ ೧೪

ಬರಸೆಳೆದ ಬಿಲುಗೋಲಿನಲಿ ನಿ
ಷ್ಠುರದ ಶರಸಂಧಾನದಲಿ ರಥ
ತುರಗವನು ಕೆಡೆಯೆಚ್ಚನರ್ಜುನನಸಮ[4]ಬಾಣದಲಿ[4] |
ಸುರಪನಾಯುಧಹತಿಗೆ ಕುಲಗಿರಿ
ಯುಳುಕುವಂದದಿನೊಂದು ಯೋಜನ
ವರೆಗೆ ತಿಱ್ರನೆ ತಿರುಗಿ ತೊಲಗಿತು ಕರ್ಣರಥವಂದು ‖ ೧೫

ಔಕಿ ವಾಘೆಯ ಕೊಂಡು ಶಲ್ಯನು
ನೂಕಿದನು ತೇಜಿಯನು ಸಮರ-
ವ್ಯಾಕುಳದಿನಾ ಕರ್ಣ ಸೆಳೆದನು ದಿವ್ಯಮಾರ್ಗಣವ |
ನಾಕನಿಳಯರು ನಡು[5]ಗೆ ಶರಕ
ರ್ಣಾರ್ಕರುಷಣಪ್ರೌಢಿಯಲಿ ನಿಂ
ದಾ[5] ಕಿರೀಟಿಯ ರಥವನೆಚ್ಚನು ಭಾನುಸುತ ಮುಳಿದು ‖ ೧೬

ಅರಿಯ ಶರಹತಿ[6]ಗಳುಕಿ ತಿಱ್ರನೆ
ತಿರುಗಿ ಪಾರ್ಥನ ತೇರು ಬಿಲ್ಲಂ
ತರಕೆ ಹಿಂಲಕೆ ತೊಲಗೆ ಕಂಡು ಮುರಾರಿ[6] ಬೆಱಗಾದ |

[1] ಕೌರವ (ಕ.ಚ.ಟ). [2] ಜಡಿವ (ಟ), ಜಱೆವ (ತ.ನ.ಪ.ಬ). [3] ಬಿಂಕದ (ಟ.ತ.ದ.ನ.ಬ). [4] ಸಮರದಲಿ (ತ.ದ.ನ.ಪ.ಬ). [5] ಗಿದರು ಭೂಲೋಕ ಕರ್ಣ ಪ್ರೌಢಿ ಮಿಗುತಿರಲಾ (ಕ), ಗಲಸುರಾನೀಕ ನಲಿಯಲು ತರಹಲು ನಿಂದಾ (ಟ.ದ). [6] ಗರ್ಜುನನ ರಥ ತಿರುಗಿ ಹಿಂದಕ್ಕೊಂದು ಬಿಲ್ಲಂತರಕೆ ತೊಲಗಲು ನೋಡಿ ಕಂಡ ಸುರಾರಿ (ಕ).

ಅರರೆ ಧಣುಧಣು ಪೊತು ಪಾಯಿಕು
ಸರಿಯ ಕಾಣೆನು ಭಾಪೆನುತ ವಿ
ಸ್ತರಿಸಿ ದಾನವವೈರಿ ಕರ್ಣನ ಹಿರಿದು ಹೊಗಳಿದನು ‖ ೧೭

ನಲವು ನಿಲೆ ಫಲುಗುಣನು ಹೂಡಿದ
ಹಿಳುಕನೀಡಾಡಿದನು [1]ಲೋಕ[1]ದ
ಬಳಕೆ ಕೌತುಕವೆನುತ ತೂಗಿದನಮಳ [2]ಮಕುಟವನು[2] ।
[3]ಒಲವರವಲಾ ಮುರಹರಂಗೀ
ಬಲದೊಳಗೆ ಸಾಹಸವ ಸುಡಸು
ಡಲೆನುತ ದುಗುಡವ ಹಿಡಿದು [3]ಫಲುಗುಣನಿಳುಹಿದನು ಧನುವ ‖ ೧೮

ಏನು ಫಲುಗುಣ ಧರ್ಮಜನೆ ಮದ
ದಾನೆ ದುಗುಡವಿದೇನು ಹೇಳೈ
ನೀನು ಧನುವನು ತೊಱೆದ ಕಾರಣವೇನು ಪೊಸತೀಗ ।
ಏನು ಹದ ಹೇಳೆನಲು ಕೇಳಿಲಿ
ದಾನವಾಂತಕ ನುಡಿಯಲಾವುದು
ಹಾನಿಯೆಮಗಿಲ್ಲೆನುತ ಮೇಗರೆನುಡಿದನಾ ಪಾರ್ಥ ‖ ೧೯

ಹೇಳು ಹೇಳೆನ್ನಾಣೆ [4]ಚಿತ್ತದೊ
ಳಾಳುವುದ[4] ಮಱೆಮಾಡದಿರು [5]ನಿಜ[5]
ಲೋಲ ಧರ್ಮಜನಾಣೆ ನಿನಗೆನೆ ಪಾರ್ಥ ನಸುನಗುತ ।
ಕಾಲಗುಣವೆಂದಱಿಯೆ ಮೇಣ್ ತ
ನ್ನಾಳುತನ ಪುಸಿಯಾಯ್ತು ರಿಪುಭಟ
ನಾಳುತನ ದಿಟವಾಯ್ತು ಕೌತುಕವೆಂದನಾ ಪಾರ್ಥ ‖ ೨೦

ಒಂದು ಯೋಜನವರೆಗೆ ತಿರುಗಿತು
ಹಿಂದಕಹಿತನ ತೇರು ತಾನೆಸ
ಲೊಂದು ಬಿಲ್ಲಂತರಕೆ ತೊಲಗಿತು ನಮ್ಮ ರಥವಿಂದು ।
ಇಂದು ಕರ್ಣನ ಸಾಹಸಕೆ ಮನ
ಸಂದು ಪತಿಕರಿಸಿದಿರಿ ಕೌತುಕ
ವೆಂದು ಕಾಲಪ ಬೈದೆನೆಂದನು ಪಾರ್ಥನಾ ಹರಿಗೆ ‖ ೨೧

---

[1] ಕಾಲ (ಗ.ಟ.ದ.ನ). [2] ಮಣಿಶಿರವ (ಕ.ಚ.ಟ). [3] ಒಲವರವೊ ಮೋಹ ರವೊ ವಾಹಿಗಳೊಳಗೆ ಸಾಹಸವಿಲ್ಲೆನುತ ಮನದೊಳಗೆ ದುಗುಡವ ಹಿಡಿದು (ಟ.ದ), ಒಲವರವು ಮೋಹನವಲಾ ಜಗದೊಳಗೆ ಸಾಹಸವಹುದೆನುತ ಮನದೊಳಗೆ ದುಗುಡವ ಹಿಡಿದು (ಚ.ತ). [4] ಚಿತ್ತಕೆ ತಾಳಿದುದ (ಕ). [5] ಜಯ (ಕ.ಗ.ದ.ನ).

ಆಳುತನದಲಿ ವೀರ ಕರ್ಣನ
ಹೋಲುವರ ನಾ ಕಾಣೆನ್ಸೈ ಸುರ
ಪಾಲಕರು ತಾವಾನಬಹುದೇ ಕರ್ಣನುರವಣೆಯ |
[1]ಕೋಲು[1] ಯೋಜನವರೆಗೆ ತೊಲಗಿಸಿ
ಜಾಳಿಸಿತ ನೀ ನುಡಿವೆ ನಿಜ ಬಿ
ಲ್ಲಾಳತನವನು ನಿನ್ನ ಮನದಲಿ ತಿಳಿದು ನೋಡೆಂದ ॥ ೨೨

ಬಸುಱೊಳಗೆ ಬ್ರಹ್ಮಾಂಡಕೋಟಿಯ
ಮುಸುಕಿಕೊಂಡಿಹ ನಾ ಸಹಿತ ಮೇ
ಲೆಸೆವ ಸಿಂಧದ ಹನುಮಸಹಿತೀ ದಿವ್ಯಹಯಸಹಿತ |
ಎಸುಗೆಯಲಿ ತೊಲಗಿ[2]ಸುವ ಕರ್ಣನ
ಅಸಮ ಸಾಹಸ ಪಿರಿದೊ ಹುಲುರಥ
ಪೆಸುಗೆ ನಿನ್ನಗ್ಗಳಿಕೆ[2] ಪಿರಿದೋ ಪಾರ್ಥ ಹೇಳೆಂದ ॥ ೨೩

ಎನಲು ತಳವೆಳಗಾಗಿ ಫಲುಗುಣ
ಧನುವ ಕೊಂಡನು ದನುಜವೈರಿಗೆ
ಮನದ ಗರ್ವವನುಸುರಲಱಿಯದೆ ಬಾಗಿದನು ಶಿರವ |
ಮೊನೆಯಲಗಿನಂಬಿನಲಿ ಕರ್ಣನ
ಧನುವನಿಕ್ಕಡಿಗಳೆದು ಫಲುಗುಣ
ನನವರತ ಬಹುಸತ್ವದಲಿ ಮತ್ಸರಿಸಿ ಕಾದಿದನು ॥ ೨೪

ಎಚ್ಚನೀತನ ಸಾರಥಿಯ ಮಗು
ಳೆಚ್ಚನೀತನ ರಥವ ವಾಜಿಯ
ನೆಚ್ಚನೀತನ ಧನುವನೀತನ ಸಿಂಧ ಸೀಗುರಿಯ |
ಎಚ್ಚನೀತನ ನಿಶಿತಶಸ್ತ್ರವ
ಕೊಚ್ಚಿದನು ಮಗುಳೆಚ್ಚು ಪುನರಪಿ
ಯೆಚ್ಚು ಕರ್ಣನ ಹೊಳ್ಳುಗಳೆದನು ಪಾರ್ಥ ನಿಮಿಷದಲಿ ॥ ೨೫

ಬೊಬ್ಬಿಱಿದುದಾ ಸೇನೆ [3]ಸೋಲದ[3]
ಮಬ್ಬು ಮುಸುಕಿದುದೀ ಬಲವ[4]ನೀ
ಯು[4]ಬ್ಬೆಯನು [5]ಸೈರಿಸುತ[5] ಸಾಹಸಮಲ್ಲ ತನಿಗೆದಱಿ |

---

[1] ಪೇಳು (ಕ). [2] ಸಿದವನ ಸಾಹಸ ಹಿರಿದೊ ಹುಲುರಥವ ತೊಲಗಿಸಿದವನ ಸಾಹಸ (ತ.ದ.ಪ). [3] ಘಳಿಗೆಗೆ (ಕ). [4] ಬಲದು (ಕ.ಗ.ಚ.ಟ.ದ). [5] ನಿಲಿಸುತ್ತ (ಕ.ಚ.ಟ.ದ).

ಇಬ್ಬರಿಗೆ ಘಡ ಹುಬ್ಬನಿಕ್ಕುವ
ಳೊಬ್ಬಳೇ ಜಯಲಕ್ಷ್ಮಿ ಬೊಡ್ಡಿಯ
ಕೊಬ್ಬ ನಿಲಿಸುವೆನೆನುತ ಖತಿಯಲಿ ಮಸಗಿದನು ಕರ್ಣ ॥ ೨೬

ಹನುಮನನು ಮತ್ತೊಮ್ಮೆ ಪುನರಪಿ
ದನುಜರಿಪುವನು ಮತ್ತೆ ಹಯವನು
ಧನುವನರ್ಜುನನಂಬುಗಳನಾ ಛತ್ರ ಚಾಮರವ ।
ಮೊನೆಗಣೆಯಲೇ ಮುಸುಕಿದನು ಮು
ಮ್ಮೊನೆಯ ಬೋಳೆಯ ತೊಡಚಿ ಕೌರವ
ಜನಪನಾವೆಡೆ ನೋಡಹೇಳೆನುತುಬ್ಬಿದನು ಕರ್ಣ ॥ ೨೭

ಮೊದಲಲಾ ಭೀಷ್ಮನ ಶರಾಘಾ
ತದಲಿ ನೊಂದೆನು ಬಳಿಕ ಕರ್ಣನ
ಕದನದಲಿ ತಪ್ಪಲ್ಲತಪ್ಪಲ್ಲೆನುತ ಮುರವೈರಿ ।
ಗದಗದಿಸುತಶ್ವವನು ಬೋಳೈ
ಸಿದನು ಹನುಮನ ನೋಡಿ ತಲೆದೂ
ಗಿದನು ಮಂದಸ್ಮಿತಮಧುರಮುಖಕಮಳನೊಲವಿನಲಿ ॥ ೨೮

ಶರಹತಿಯಲುಱೆ ನೊಂದು ಧೂಪಿಸಿ
ತರಹರಿಸುವಶ್ವಾಳಿ ಕೃಷ್ಣನ
ಕರುಣವಚನಾಮೃತರಸದಿನಾಪ್ಯಾಯನಂಬಡೆದು ।
ಖುರದಲವನಿಯ ಪೊಯ್ದು ಲಳಿ ಮಿಗ
ಲುರವಣಿಸಿದವು ಹನುಮನಂತಃ
ಕರಣ ಹದುಳಿಸಿ ಹಿಗ್ಗಿದನು ನರನಾಥ ಕೇಳೆಂದ ॥ ೨೯

ಬಳಿಕ ಹೇಳುವುದೇನು ಪಾರ್ಥನ
ಮುಳಿಸಿನಲಿ ಕಾಲಾಗ್ನಿ ಜಿಹ್ವಾ
ವಳಿಯ ಲಳಿಯಲಿ ಕುಪಿತ ಕಾಳೋರಗನ ವದನದಲಿ ।
ಸುಳಿವವನ ಸಾಹಸವನಾತನ
ಬಲುಹನಾತನ ಜಯವನಾತನ
ನಿಲವ ಕಂಡವರಾರು ಸುರ ನರ ನಾಗಲೋಕದಲಿ ॥ ೩೦

ರಾಯ ಕೇಳಭಿಮಂತ್ರಿಸಿದನಾ
ಗ್ನೇಯವನು ಹೂಡಿದನು ಸುರಕುಲ
ಬಾಯಬಿಡಲಂಬುಗಿದು ಹಾಯ್ದುದು ಬಿಲುದಿರುವನೊದೆದು ।

ವಾಯು ಪಡಿಬಲವಾಗೆ ಕಿಡಿಗಳ
ಬಾಯಿಧಾರೆಯ ಹೊದಱ ಕರ್ಬೊಗೆ
[1]ಲಾಯದಲಿ ಲವಣಿಸುವ ದಳ್ಳುರಿವಿರಾಳ[1] ಚೂಣಿಯಲಿ ॥ ೩೧

ಅಹಹ ಬೆಂದುದು ಲೋಕವಿನ್ನಾ
ರತಿಮುಖವ ಚುಂಬಿಸುವರೋ ವಿ
ಗ್ರಹದ ಫಲನಿಗ್ರಹವಲಾ ಶಿವ ಎನುತ ಸುರರುಲಿಯೆ ।
ವಹಿಲ ಮಿಗೆ ವರುಣಾಸ್ತ್ರದಲಿ ಹುತ
ವಹನ ಬಿಂಕವ ಬಿಡಿಸಿದನು ಜಯ
ವಹುದೆ ಪರರಿಗೆ ಪಾರ್ಥನಿರೆ ಜನನಾಥ ಕೇಳೆಂದ ॥ ೩೨

ಸರಳ ಝಳ ಝಾಡಿಸಿತು ಕಬ್ಬೊಗೆ
ಪರೆದುದಲ್ಲಿಯದಲ್ಲಿ ತಂಪಿನ
ಸರಳ ಮೊನೆಯಲಿ [2]ಸಿಂ[2]ಪಿಸುವ ತುಂತುಱ ತುಷಾರದಲಿ ।
ಅರಿಬಲದ ಬೊಬ್ಬಾಟದಲಿ ಧರೆ
ಬಿರಿಯಲರ್ಜುನ ಹೂಡಿದನು ಹೂಂ
ಕರಣಮಾನಿತಮಂತ್ರಮಂಡಿತಮೇಘಮಾರ್ಗಣವ ॥ ೩೩

ಹೊಗೆಯ ಹೊರಳಿಯು ವಿವಿಧ ವರ್ಣದ
ಮುಗಿಲ ಪಾಳೆಯವೆತ್ತಿ ಬಿಟ್ಟುದು
ಗಗನದಗಲದಲೌಕಿದವು ದೆಸೆದೆಸೆಯ ಮೂಲೆಗಳ ।
ಹಗಲುಗತ್ತಲೆಕಟ್ಟಿತೇನಿದು
ಯುಗದ ಕಡೆಯೋ ಶಿವಶಿವಾ ಎನೆ
ಜಗಜಗತ್ಪ್ರಾಣಾಸ್ತ್ರವನು ಹೂಡಿದನು ಕಲಿ ಕರ್ಣ ॥ ೩೪

[3]ಅಟ್ಟಿ[3] ಹೊಯ್ದುದು ನಿಱಿಮುಗಿಲನಱೆ
ಯಟ್ಟಿ ಕೊಡಹಿತು ತಳಿತ ಮೇಘದ
ಥಟ್ಟು ಮುಱಿದುದು ಬೀಸಿದವು ಬಿಱುಗಾಳಿ ಬಲ ಬೆದಱೆ ।
ಇಟ್ಟಣಿಸಿ ಕೈಯೊಡನೆ ಕೊಂಡನು
ಬೆಟ್ಟವುರುಳುವ ಬಾಣವನು ಜಗ
ಜಟ್ಟಿ ಕೌರವರಾಯ ಬಾಳೆನುತೆಚ್ಚ[4]ನಾ ಕರ್ಣ[4] ॥ ೩೫

---

[1] ರಾಯದಳದಲಿ ಮೋಹಿಸಿತು ದಳ್ಳುರಿಯು (ಟಿ.ದ).　[2] ತಂ (ಕ).
[3] ಬಿಟ್ಟು (ಕ).　[4] ನರ್ಜುನನ (ಕ).

ಗಿರಿಯ ಡೆಂಕಣಿಜಂತ್ರವನು ತರ
ಹರಿಸುವವರಾರರಸ [1]ಧಾವಣಿ[1]
ಗಿರಿಯ ಧಾಳಿಗೆ ಧಾತುಗೆಟ್ಟುದು ಪಾಂಡುಸುತಸೇನೆ ।
ಅರರೆ ಕೆಡೆಕೆಡೆಯೆನುತ ವಜ್ರದ
ಸರಳನುಗಿದನದಾವ ವಹಿಲದೊ
ಳುರುಳೆಗಡಿದನು ಪರ್ವತಾಸ್ತ್ರವನಿಂದ್ರಸುತ ನಗುತ ॥ ೩೬

ಆವ ಚಳಕದೊಳರ್ಜುನನು ತಿಮಿ
ರಾವಲಂಬದ ಸರಳಲೆಚ್ಚನು
ನಾವಱಿಯೆ[2]ವಿರುಳಂ[2]ಧತಮ ಮುದ್ರಿಸಿತು ದೃಷ್ಟಿಗಳ ।
ಆವನಾವನನಱಿವನೋ ತಾ
ನಾವನಿದಿರಾರೆಂಬ [3]ಭೇದವ
ನಾವು[3] ತೋಱದು ತಮದೊಳದ್ದುದು ಕೂಡೆ ಕುರುಸೇನೆ ॥ ೩೭

ವೈರಿಶರಕೇನಱಿಯನೇ ಪ್ರತಿ
ಕಾರವನು ನಿನ್ನಾತನಗ್ಗದ
ಸೌರಮಯಮಂತ್ರಾಭಿಮಂತ್ರಿತ ಭಾನುಮಾರ್ಗಣವ ।
ಆರು ಕಂಡರು ತಿಮಿರಜನಿತವಿ
ಕಾರವನು ಹೇಳಿಗೆಯ ಮುಚ್ಚುಳ
ಜಾಱಿಸಿದ ಫಣಿಯಂತೆ ಘುಲ್ಲವಿಸಿತ್ತು ಕುರುಸೇನೆ ॥ ೩೮

ಆಗಳೇ ತೆಗೆದುರಗಬಾಣವ
ತೂಗಿ ಬಿಟ್ಟನು ನಿನ್ನ ಕರ್ಣನ
ಲಾಗುವೇಗವನೇನನೆಂಬೆನು ಚಾಪತಂತ್ರದಲಿ ।
ಸೀಗುರಿಸುವುರಿವಿಷದ ಲೋಳೆಯ
ಲಾಗಿಸುವ ನಾಲಗೆಯ ಸುಯ್ಲಿನ
ಬೇಗುದಿಯ ತೊಡಬೆಗಳ ಹಾವ್ ತುಡುಕಿದವು ಥಟ್ಟಿನಲಿ ॥ ೩೯

ಎಲೆಲೆ ಹಾವ್ಯೇ ಹಾವು ಕೆಂಡದ
ಮಳೆಯು [4]ತಡೆ[4]ವವೆ ಕೊಡೆಯೆನುತ ಕಳ
ವಳಿಸಿತಲ್ಲಿಯದಲ್ಲಿ ಹರೆದುದು [5]ಹುದುಗಿ ಹೊದರೊಡೆದು[5] ।

---

[1] ಧಾರುಣಿ (ಕ). [2] ವುಮಹಾಂ (ಪ.ಬ.ನ). [3] ರೂಪಿನಭಾವ (ಗ.ಟ.ತ.ಪ). [4] ಕಾ (ಟ.ತ.ದ.ನ.ಪ.ಬ). [5] ಕೂಡಿ ಹುರಿಯೊಡೆದು (ಟ.ತ.ದ.ನ.ಪ).

[1]ಬಲು[1]ವಿಷದ ಕಿಱುವನಿಯ ಹಾವಿನ
ಮಳೆಗೆ ಗರುಡಾಸ್ತ್ರದಲಿ ತನ್ನಯ
ದಳಕೆ ಹಿಡಿದನು ಕೊಡೆಯನರೆಘಳಿಗೆಯಲಿ ಕಲಿ ಪಾರ್ಥ ॥ ೪೦

ಏಸು ಹಾವುದುರಿದವು ರಣದೊಳ
ಗ್ಯೈಸು ಹದ್ದೆಱಗಿದವು ತುಂಡಿಸಿ
ಬೀಸಿ ಬಿಸುಟವು ಕಡಿಗಳನು ಕೌರವನ ಘಟ್ಟಿನಲಿ ।
ಏಸು ಪರಿಯಲಿ ನರನ ಬಿನ್ನಣ
ವೈಸುಪರಿ ಕರ್ಣನಲಿ ಕರ್ಣನ
ಕೌಶಲವದೆನಿತನಿತು ಪರಿಯನು ಕಂಡೆನಾತನಲಿ ॥ ೪೧

ಬಲುಹು ಭೀಷ್ಮದ್ರೋಣರಿಂದ
ಗ್ಗಳವಲಾ ಕರ್ಣಂಗೆನುತ ಪಡಿ
ಬಲಕೆ ಬಂದರು ಭೀಮ ಸಾತ್ಯಕಿ ನಕುಲ ಸಹದೇವ ।
ದಳದೊಳದಟುಳ್ಳವರು ಪಾರ್ಥನ
ಕೆಲಬಲದಲುರವಣಿಸಿದರು ವೆ
ಗ್ಗಳೆಯನೈ ನಿನ್ನಾತನಿಂದಿನಲೆರಡು ಘಟ್ಟಿನಲಿ ॥ ೪೨

ಎಲೆ ಧನಂಜಯ ಸಾಲದೇ ಹೆ
ಬ್ಬುಲಿಯ ಕಾಲಾಟದಲಿ ಮೃಗಶಿಶು
ಮಲೆತಡೇನಗ್ಗಳೆಯನೇ ಮೂಲೋಕವಱಿವುದಲೇ ।
ಅಳವಿಗೊಡದಿರು ಸೂತತನಯನ
ತಲೆಯ ಬೆಸುಗೆಯ ಬಿಡಿಸುವಂಬಿನ
ಹಿಳುಕನುಗಿಯಾ ಹೊಳ್ಳುಗಣೆಯೇಕೆಂದನಾ ಭೀಮ ॥ ೪೩

ಪುಸಿಯೆ ಭೀಮನ ಮಾತು ಹೂಸುಕ
ದೆಸುಗೆ ತಾನೇಕಿನ್ನು ರಿಪು ನಿ
ಪ್ಪಸರದಲಿ ಕಲಿಯೇಱಿದರೆ ಕೈಕೊಳ್ಳನೀಶ್ವರನ ।
[2]ಹು[2]ಸಿಕಣೆಯಲೇನಹುದು ತೆಗೆ ಹರ
ವಿಶಿಖವನು ತೊಡು ಬೇಗಮಾಡೆಂ
ದಸುರರಿಪುವರ್ಜುನನ ಜಱೆದನು ಭೂಪ ಕೇಳೆಂದ ॥ ೪೪

---

[1] ತುಳು (ಕ). [2] ನು (ಟ.ತ.ದ.ಪ).

ಕ್ರೋಧಶಿಖಿ ಭುಲ್ಲವಿಸೆ ಮುಳಿದು ವಿ
ರೋಧಿಯನು ನೋಡಿದನು ಮುಳುಗಲಿ
ರಾಧೆ ಕಂಬನಿಗಳಲಿ ಕುದಿಯಲಿ ಪುತ್ರಶೋಕದಲಿ ।
ಆಧಿ ತೀರಲಿ ನಮ್ಮ ಸೇನಾ
ವ್ಯಾಧಿಗಿದೆ ಮದ್ದೆನುತ ಪರಬಲ
ಸಾಧಕನು ಬ್ರಹ್ಮಾಸ್ತ್ರವನು ತೊಟ್ಟೆಚ್ಚನಾ ಪಾರ್ಥ ॥ ೪೫

ಶಿವಶಿವಾ ಬ್ರಹ್ಮಾಸ್ತ್ರವಿದಲಾ
ಭುವನಜನ ಸಂಹಾರಶರ ಸಂ
ಭವಿಸಿತೋ ಹಾ ಎನುತ ಹರೆದುದು ಮೇಲೆ ದಿವಿಜಗಣ ।
ತವಕದಲಿ ತತ್ಪ್ರತಿಮಹಾಸ್ತ್ರವ
ಜವಳಿವೆರಳಿಂದುಗಿದು ಬಿಡೆ ತಿವಿ
ತಿವಿದು ತಮ್ಮೊಳಗಡಗಿದವು ದಿವ್ಯಾಸ್ತ್ರವಭ್ರದಲಿ ॥ ೪೬

ಆ ಮಹಾಸ್ತ್ರದ ಹಾನಿ ರೋಷದ
ತಾಮಸಾಗ್ನಿಯ [1]ನೋಡಿ[1] ಬಿಡ[2]ಲು
ದ್ದಾಮನರ್ಜುನನ ಕೊಂಡ[2]ನಗ್ಗದ ಜಾತಮನ್ಯುವನು ।
ಆ ಮಹಾಬಾಣಾಭಿಮುಖದಲಿ
ಸೋಮಧರಮಾರ್ಗಣವನಿಂತೀ
ಭೀಮವಿಕ್ರಮ ಕರ್ಣನೆಚ್ಚನು ರಾಯ ಕೇಳೆಂದ ॥ ೪೭

ಆತನಲಿ ಕೌಬೇರಮಾರ್ಗಣ
ವೀತನಲಿ ವಾಯವ್ಯಶರ ಬಳಿ
ಕಾತನಲಿ ನೈರುತ್ಯವಿತ್ತಲು ಸೋಮವರ್ತಿಶರ ।
ಆತನಲಿ ಸಾಮುದ್ರ ರೋಷಣ
ವೀತನಲಿ ವಡಬಾಸ್ತ್ರವಿಂತಿರ
ಲಾತನೀತನ ಸಮರ ಸರಿ ನರನಾಥ ಕೇಳೆಂದ ॥ ೪೮

ಇಪ್ಪತ್ತಮೂರನೆಯ ಸಂಧಿ ಮುಗಿದುದು.

---

[1] ನೊದೆದು (ಚ), ಉರಿದು (ತ.ದ.ಪ). [2] ದುದ್ದಾಮನರ್ಜುನನೆಚ್ಚ (ತ).

# ಇಪ್ಪತ್ತನಾಲ್ಕನೆಯ ಸಂಧಿ

ಸೂಚನೆ || ರಾಯಸಾಹಸಮಲ್ಲ ವೆಗ್ಗಳ
ರಾಯ ಸುಭಟಶಿರೋರತುನ ರಾ
ಧೇಯ ಪಾರ್ಥರ ವಿಷಮರಣ ರಂಜಿಸಿತು ಮೂಜಗವ ||

ರಾಯ ಕೇಳೈ ಮತ್ತೆ ಕರ್ಣರ
ಸಾಯನವ ಕಟ್ಟಾಳು ರಣದಲಿ
ಸಾಯಲಾಗದೆ ಶಿವಶಿವಾ ಸಾಯರೆ ಸುರಾಸುರರು |
ಬಾಯಬಿಡೆ ಪರಸೇನೆ ಭೀತಿಯ
ಲಾಯದಲಿ ಕಟ್ಟಿದನು ಪಾರ್ಥನ
ವಾಯುಜನ ಕರಣೇಂದ್ರಿ[1]ಯಾ[1]ಶ್ವಂಗಳನು ಕಲಿ ಕರ್ಣ || ೧

ಎಲೆ ಮುರಾಂತಕ ಸಾಕು ರಥದಿಂ
ದಿಳಿ ಸುದರ್ಶನವೆಲ್ಲಿ ಚಾಪವ
ಕಳೆದುಕೊಳು ಕೌಮೋದಕಿಯ ಹಿಡಿ ಹಾಯ್ಕು ವಾಘೆಯವ |
ಉಳುಹುವವರಾವಲ್ಲ ಕೊಳ್ಳೆನು
ತಳವಿಯಲಿ ಕೈಕೊಂಡು ಕೃಷ್ಣನ
ನಳುಕದೆಚ್ಚನು ನೂಱು ಶರದಲಿ ಕರ್ಣ ಬೊಬ್ಬಿಱಿದು || ೨

ಜೋಡಿನಲಿ ಸೀಸಕದ ಮೇಲ
ಕ್ಕಾಡಿದವು ಕವಲಂಬು ಕವಚವ
ತೋಡಿ ನಟ್ಟವು ನೂಕಿದವು ನಾರಾಚ ಗಱಿಸಹಿತ |
ನೋಡಲೀ ವ್ಯಥೆಯುಂಟೆ ಭುವನದ
ಗೂಡು ಕೃಷ್ಣನ ದೇಹವಿದು ನಾ
ಡಾಡಿಗಳ ನಾಟಕವಲ್ಲೈ ನರನಾಥ ಕೇಳೆಂದ || ೩

ಏನ [2]ಹೇಳುವೆ[2] ಹೂಡಿದಾ ಸಂ
ಧಾನವನು ರಥಹಯದ ವಾಘೆಯ
ಜೀನಗೆಲಸದ ಹಕ್ಕರಿಕೆಗಳ ನೊಗನ ಜೊತ್ತಗೆಯ |

---

1 ಯ (ಸ-ಫ). 2 ಹೇಳ್ವೆನು (ಕ).

ಭಾನುಸುತ ಮುಱಿಯೆಚ್ಚು ನಿನಗಿ
ನ್ನೇನು ಹದನ್ನೈ ಹನುಮ ಲೆಂಕೆಯ
ದಾನವರು ನಾವಲ್ಲೆನುತ ಕೈಮಾಡಿ ಬೊಬ್ಬಿಱಿದ ॥ ೮

ಸೈರಿಸರ್ಜುನ ಶಿವನೊಡನೆ ನೀ
ಹೋರಿದಾತನು ನಿನ್ನ ಕೊಲುವಡೆ
ತೀರದೇ ತಪ್ಪೇನು ತಳುವಿತು ಹೇಳಲೇಕೆನುತ ।
ಕೂರಲಗಿನಂಬುಗಳ ಹಿಳುಕಿನ
ಸಾರದಲಿ ಮುದ್ರಿಸಿದನುದಯದ
ಲಾರನಿದಿರಲಿ ಕಂಡನೋ ಕಡುನೊಂದನಾ ಪಾರ್ಥ ॥ ೬

ಹಱಿದುದಿಮ್ಮೈಜೋಡು ನೆತ್ತರಿ
ನೊಱತೆ ನೂಕಿತು ಭದ್ರ ಪೀಠದ
ಹೊಱಗು ನನೆದುದು ಝೊಮ್ಮಿನಲಿ ಜೋಲಿದನು ಮಲಗಿನಲಿ ।
ಉಱುಕುಗೊಂಡುದು ಕರಣಚಯವರೆ
ದೆಱದ ಕಂಗಳು ರೋಮಕಂಪದೊ
ಳೆಱಿದುದಿಲ್ಲರೆಘಳಿಗೆ ಕೋಳಾಹಳವನಾ ಪಾರ್ಥ ॥ ೭

ಮತ್ತೆ ಕೇಳವನೀಶ ಭೀಮನ
ನೆತ್ತಿ ಬಿಸುಟವು ಬಾಣ ನಕುಲನ
ಕುತ್ತಿದವು ಸಹದೇವನೊಡಲಲಿ ಮಾಡಿದವು ಪಥವ ।
ಇತ್ತ ಸಾತ್ಯಕಿ ಚೇಕಿತಾನಕ
ನುತ್ತಮೌಂಜ ಶಿಖಂಡಿ ದಳಪತಿ
ಕೆತ್ತಿದೊಡಲಿನ ಜೋಡಿನಲಿ ಹೊರಳಿದರು ಹುಡಿ ನನೆಯೆ ॥ ೮

ಒಸಗೆಯಾದುದು ನೆಲನ ದಿಕ್ಕಿನ
ಬೆಸುಗೆ ಬಿಡೆ ನಿಸ್ಸಾಳತತಿ ಗ
ರ್ಜಿಸಿದವುಬ್ಬಿದ ಬೊಬ್ಬೆ ಬಿಡಿಸಿತು ಧ್ರುವನ ಮಂಡಲವ ।
ಅಸಮ ಭುಜಬಲ ಪ್ರೌತುರೇ ಸಾ
ಹಸಿಕ ಮಝುರೇ ಭಾಪು ಧಣುಧಣು
ವಿಷಮರಣನರಸಿಂಹ ಜಾಗೆಂದುದು ಭಟಸ್ತೋಮ ॥ ೯

ಜನಪ ಕೇಳೈ ಮತ್ತೆ ಸುತಸೋ
ಮನ ಶತಾನೀಕಾದಿ ರಿಪುನಂ
ದನರನೈವರನೆಚ್ಚು ಬೆರಸಿದನವರ ಸೀಮೆಯಲಿ ।

ಅನಿಲಜನ ಮರಳೆಚ್ಚು ಪಾಂಚಾ
ಳನ ವಿಘಾಡಿಸಿ ಘಟ್ಟಿನೊಳು ಮು
ಮ್ಮೊನೆಯ ಬೋಳೆಯ ಸರಿಯ ಸುರಿದುದು ಕರ್ಣನಪಮೋಘ ॥ ೯

ಸಾಲ ಝಲ್ಲರಿಗಳ ಪತಾಕಾ
ಜಾಲವನು ಚಾಮರವ ಗೋವಳಿ
ಗೋಲ ಡೊಂಕಣಿಯೊಡ್ಡನೆತ್ತಿದ ಸಿಂಧ ಸೀಗುರಿಯ ।
ಧೂಳಿಪಟಮಾಡಿದನು ಮಿಡುಕು
ಳ್ಳಾಳ ಕೊಂದನು ಗಜರಥಾಶ್ವದ
ಮಾಲೆಯನು ಮುತ್ತಿದುದು ಕರ್ಣನ ಶಿಳಿಮುಖವ್ರಾತ ॥ ೧೦

ಅರಸ ಕೇಳಾ ನರನನಾ ವಾ
ನರನನಾ ಮುರಹರನನಾ ರಥ
ತುರಗ ನಿಚಯವನಾ ರಥವನಾ ಶರವನಾ ಧನುವ ।
ಹುರುಳುಗೆಡಿಸಿ[1]ದು[1] ಭುಜಪರಾಕ್ರಮ
ದುರಿಯೊಳಗೆ ಬಿಡೆಕಾಸಿ ಹಗೆನೆ
ತ್ತರಲಿ ನೀರೂಡಿದನು ನಿಜ ಶರ ನಿಕರವನು ಕರ್ಣ ॥ ೧೧

ಹೇಳಲಱಿಯೆನು ವಿಕ್ರಮಾಗ್ನಿ ಥ
ಡಾಳಿಸಿದುದಡಿಗಡಿಗೆ ಸೇನಾ
ಜಾಳವನು ಬೇಳಿದನು ಕೂರಂಬುಗಳ ಕೊಂಡದಲಿ ।
ಆಲಿಗಳು ಸವಿನೋಡಲಿಂದಿನ
ಕಾಳೆಗವ ಬರಹೇಳು ಕುರುಭೂ
ಪಾಲಕನ ಬರಹೇಳು ಬರಹೇಳೆನುತ ಬೊಬ್ಬಿಱಿದ ॥ ೧೨

ಶರಹತಿಗೆ ಮುಖದಿರುಹಿ ಕಾಲಾಳ್
ತುರಗಸೇನೆಯ ಮಱೆಯ ಸಾರಿತು
ತುರಗದಳ ಬಗಿದಂಡುಗೊಂಡುದು ಗಜಘಟಾವಳಿಯ ।
ಕರಿಘಟಾವಳಿ ಕೋಲಿನುರುಬೆಗೆ
ತೆರಳಿದವು ತೇರುಗಳ ಮಱೆಯಲಿ
ಹೊರಳಿಯೊಡೆದುದು ತೇರ ಥಟ್ಟು ನಿಹಾರವೆಸುಗೆಯಲಿ ॥ ೧೩

---

[1] ದ (ಕ), ಯೆ (ಘ.ತ.ದ).

ಕೋಲ ಕೋಲಾಹಳಕೆ ತೇರಿನ
ಗಾಲಿಗಳನೊಡ್ಡಿದರು ಹರಿಗೆಯ
[1]ಹೇಳಿದರು[1] ಹಮ್ಮುಗೆಯ ಕೊಯ್ದೊಡ್ಡಿದರು ಜುಂಚೆಗಳ ।
ಮೇಳೆಯುವ ಮೋಹಿದರು ಕಂಬುಗೆ
ನೂಲು ಹರಿಗೆ ತನುತ್ರ ಸೀಸಕ
[2]ಜಾಲ[2] ಗುಳ ಹಕ್ಕರಿಕೆ ಹಲ್ಲಣ ಬಾಹುರಕ್ಷೆಗಳ ॥ ೧೪

ಉರಿಯ ಮಳೆಗಾಲದಲಿ ದಡ್ಡಿಯ
ನರಗಿನಲಿ ಮಾಡಿದರೊ ಗಡ ಕಾ
ರಿರುಳ ಕೋಟೆಯ ರಚಿಸಿದರು ಗಡ ರವಿಯ ಮುತ್ತಿಗೆಗೆ ।
ಹರಿಗೆ ಸೀಸಕ ಜೋಡು ಕಾವವೆ
ಕೆರಳಿದಡೆ ಕರ್ಣಾಸ್ತ್ರವನು ನಿ
ಬ್ಬರದ ರಣದುಬ್ಬಟೆಯ ಕಂಡುಬ್ಬಿದನು ಕುರುರಾಯ ॥ ೧೫

ನೋಡಿರೈ ನಿಮ್ಮವರ ದಳ ಕೈ
ಮಾಡುತದೆ ನಮ್ಮಾತನನು ನೀವ್
ಖೋಡಿಗಾಬರಿ ನಿಮ್ಮ ಫಲುಗುಣ ಭೀಮರುಬ್ಬಟೆಯ ।
ನೋಡಿರೈ ಲೇಸಾಗಿ ನೀವ್ ಮಾ
ತಾಡಲಾಗದೆ ನಿಮ್ಮ ನಾಲಗೆ
ಗೂಡುಗೊಂ[3]ಡವೆ[3]ಯೆಂದನವನಿಪ ಕೃಪನ ಗುರುಸುತನ ॥ ೧೬

ನರನ ಬಿಗಿದುದು ಮೂರ್ಛೆ ಭೀಮನ
ಹರಣ ಕೊರಳಲಿ ಮಿಡುಕುತದೆ ಮುರ
ಹರನು ಸುರ ವೈಹಾಳಿಯುದೆ ಮೂಗಿನಲಿ ಮೋಹರಿಸಿ ।
ಬಿರುದ ಸಾತ್ಯಕಿ ನಕುಲ ಸಹದೇ
ವರಿಗದಾವದು ಹದನು ನಾವಿ
ನ್ನಳಿಯೆವೈ ನೀವ್ ನೋಡಿಯೆಂದನು ನಗುತ ಕುರುರಾಯ ॥ ೧೭

[4]ನೋಡಿ[4] ಮಕ್ಕಳ[5]ನಿಕ್ಕಿ[5] ತಂದೆಗ
ಳೋಡುತದೆ ಸರಳಿಂಗೆ ತಮ್ಮನ
ನೀಡಿ ತೋಟಿಸಿ ಜಾಟುತದೆಯಣ್ಣಂದಿರಾದವರು ।

---

[1] ಹೇಳಿಗೆಯ (ಕ). [2] ಜಾಳು (ಕ.ಫ), ಜಾಲಿ (ಖ). [3] ಡುದೆ (ಖ.ಫ.ಟ.ತ). [4] ಕೂಡೆ (ಕ). [5] ನೊಡ್ಡಿ (ಕ).

ಓಡುತಿದೆ ಆಳೊಡೆಯನನು ಬೀ
ಸಾಡಿ ತಾಯಿಗೆ ಮಕ್ಕಳಾಗದೆ
ಕೂಡೆ ಮು[1]ಮ್ಮ[1]ಳಿಮಸಗುತಿದೆ ಗುರುತನುಜ ನೋಡೆಂದ ‖ ೧೮

ಅರಿಬಲದ ಕಡುಗೇಡು ಹಬ್ಬಿತು
ಸುರಬಲದೊಳಕಟಕಟ ನೋಡೈ
ಸುರಪತಿಗೆ ದುಮ್ಮಾನವಡಸಿತಲಾ ಮಹಾದೇವ ।
ಸುರನದೀಜದ್ರೋಣರೀ ಪರಿ
ಪರಮ ಶೌರ್ಯದಲೊದಗಿದರೆ ನಿ
ಷ್ಠುರದ ನುಡಿಯೆನ್ನದಿರಿ ಕಂಡುದನಾಡಬೇಕೆಂದ ‖ ೧೯

ಉಂಟು ಜೀಯ ವಿರೋಧಿಬಲಪತಿ
ಕಂಟಣಿಸುತಿದೆ ಪಾಂಡು ತನಯರ
ನಂಟರಿಷ್ಟರಿಗಾದುದೈ ದುಮ್ಮಾನ ಪುಸಿಯೇಕೆ ।
ಎಂಟುಮಡಿ ನಿಮಗಾದ ಜಯ ಹದಿ
ನೆಂಟುಮಡಿಯಾಚೆಯಲಿ ಸೇರುವು
ದುಂಟು ಪುಸಿದರೆ ಕೊಯ್ಸಿಕೊಟ್ಟೆವು ನಮ್ಮ ನಾಲಗೆಯ ‖ ೨೦

ಮುಗುಳುನಗೆಯೊಬ್ಬರಲಿ ಸವಿವಾ
ತುಗಳ ರಸವೊಬ್ಬರಲಿ ಕಡೆಗ
ಣ್ಣುಗಳ ಮಿಂಚೊಬ್ಬರಲಿ ನೇವುರದೆಳವೊಳಗು ಸಹಿತ ।
ಸೊಗಸು ಬೇಱೊಬ್ಬರಲಿ ನೇಹದ
ತಗಹು ಬೇಱೊಬ್ಬರಲಿ ಸತಿಯರ
ವಿಗಡತನವಿದು ಸಹಜ ಜಯವಧು[2] ಪಾರೆ[2] ನೋಡೆಂದ ‖ ೨೧

ಒಂದು ಕಡೆಗಣ್ಣಿನಲಿ ಕೌರವ
ನೃಂದವನು ನೋಡುವಳು ಕಯ್ಯೊಡ
ನೊಂದು ಕಡೆಗಣ್ಣಿನಲಿ ಮಾತಾಡಿಸುವಳರಿಬಲವ ।
ಇಂದು ಜಯವಧು [3]ದೃಢ[3]ಪತಿವ್ರತೆ
ಯೆಂದು ಬಗೆದೈ ಭೂಪ ಹುಸಿ ಹೋ
ಗೆಂದು ಗುರುಸುತ ನಗುತ [4]ಹೋದನು ತನ್ನ ಮೋಹರಕೆ[4] ‖ ೨೨

---

[1] ಮ್ಮು (ಕ.ಖ). [2] ಪಾರು (ಕ). [3] ದಿಟ (ಕ). [4] ಹೊಕ್ಕನು ತನ್ನ ಪಾಳೆಯವ (ಟ.ದ.ನ.ಪ).

ಅರಸ ಕೇಳೈ ಮಾತು ಹಿಂಚಿತು
ನರನ ರಥ ಜೋಡಿಸಿತು ಕರ್ಣನ
ಸರಿಸದಲಿ ಜೀವಿಸಿತು ಪಾಂಡವಸೇನೆ [1]ನಿಮಿಷ[1]ದಲಿ ॥ ೨೭

ಎಲೆಲೆ ಕರ್ಣ ಕಿರೀಟಿಯುಱುಬೆಗೆ
ನಿಲುವುದರಿದೈ ಹಾವನರೆಗಡಿ
ದುಳುಹಿ ಕೆಡಿಸಿದೆ ಪಾಪಿ ರಾಯನ ರಾಜಕಾರಿಯವ ।
ತೊಲಗಿಸುವೆನೇ ರಥವನೆನೆ ಹೆ
ಕ್ಕಳಿಸಿ ಜಱೆದನು ಕರ್ಣ ಶಲ್ಯನ
ನೆಲವೊ ಫಡ ನೋಡೆನುತ ತೆಗೆದೆಚ್ಚನು ಧನಂಜಯನ ॥ ೨೮

ಎಡೆಯಲೀತನ ಸರಳ ಸಾರವ
ಕಡಿದು ಕಯ್ದೊಡನೆಚ್ಚು ಮುಗುಳೆ
ಚ್ಚಡಿಗಡಿಗೆ ಬಿಡದೆಚ್ಚು ಪುನರಪಿ ಮತ್ತೆ ಮುಗುಳೆಚ್ಚು ।
ಪಡಿಬಲಕೆ ರೋಷಾಗ್ನಿಯುದನಿ
ಮ್ಮಡಿಸಿ ಬೀಸುವ ಖೇದಪವನನು
ಸುಡದೆ ಬಿಡುವನೆ ಕಲಿ ಧನಂಜಯನಹಿತ ತೃಣವನವ ॥ ೨೯

ಒದೆದು ಕವಚವನೊಡೆದು ಗಱಿದೋ
ಱಿದವು [2]ಚೌಕದ[2] ಮೇಲೆ ಮೊನೆಮೂ
ಡಿದವು ಬೆನ್ನಲಿ ಕರ್ಣ ನನೆದನು ರುಧಿರ ಧಾರೆಯಲಿ ।
ಉದುರಿದವು ಕಯ್ಯಂಬು ಬಲು ಕಾ
ಱಿದನು ರಕುತವ ಕಳವಳದ ಕಂ
ಪದಲಿ ಝೊಂಪಿಸಿ ಮಲಗಿದನು ಮಣಿಮಯದ ಗದ್ದುಗೆಯ ॥ ೩೦

ತೋಱಿಸಾ ನಿನ್ನೊಡೆಯನೋಲೆಯ
ಕಾಱತನವನು ನಮ್ಮ ಬಲವನು
ಮೂಱು ಮೂಲೆಯ ಹೊಗಿಸಿ [3]ಬೆಚ್ಚನೆ ಬೆಱತ[3] ಗರುವನಲೆ ।
ಜಾಱಿದ[4]ವೆ ಕಯ್ಯಂಬು ಬಲು ರಣ
ವೀರಸಿರಿ ಹಾಱಿದುದೆ ಶೌರ್ಯದ
ಮೋಱೆಗೇಕೈ ಮಱುಕವೆಂದನು ನಗುತ ಕಲಿ ಪಾರ್ಥ[4] ॥ ೩೧.

[1] ಪುಣ್ಯ (ಗ.ಪ.ನ). [2] ವಕ್ಷದ (ಟ.ದ). [3] ಬೆಚ್ಚಿಸಿಗೆಲಿದ (ಖ.ಘ.ಟ), ಮೆಚ್ಚಿಸಿಗೆಲಿದ (ತ.ದ). [4] ವು ಬಿಲ್ಲಂಬು ರಣದಲಿ ಹಾಱಿಹೋಯಿತೆ ನಿನ್ನ ಜಯ ಜಯ ಸಿರಿಯ ಕೊಂಡೆನು ಮಱುಕವೇಕೆಲೆ ಕರ್ಣ ನಿನಗೆಂದ (ಕ).

ಹಿಡಿ ಮಹಾಸ್ತ್ರವನಿನ್ನು ಮುಂಧಡಿ
ಮಿಡುಕಿದಡೆ ತಮ್ಮಾಣೆಯೆನುತವ
ಗಡಿಸಿ ನೂಕಿತು ನಿನ್ನವನ ಮನ್ನಣೆಯ ಪರಿವಾರ ‖ ೩೬

ಜನಪ ಕೇಳ್ಕೈ ರಕುತಜಲದಲಿ
ನನೆದ ನೆಲ ಪುಡಿಮಸಗೆ ಕೆಂಧೂ
ಳಿನಲಿ ಕತ್ತಲಿಸಿತ್ತು ದಿಗ್ಭ್ರಮೆಯಾದುದಡಿಗಡಿಗೆ ।
ಇನಿಬರಾವೆಡೆ ಕರ್ಣನೋ ಫಲು
ಗುಣನೊ ಪಾಂಡವಬಲವೊ ನಿನ್ನಾ
ತನೊ ನಿಧಾನಿಸಲಱಿಯೆನೊಂದರೆಗಳಿಗೆ ಮಾತ್ರದಲಿ ‖ ೩೭

ಮಳೆಗೆ ಹೆಚ್ಚಿದ ಧೂಳಿನಬ್ಬರ
ವಳಿವವೊಲು ವಿಜಯಾಸ್ತ್ರಹತಿಯಲಿ
ಹಿಳಿದ ಕರಿ ನರ ತುರಗದೊಡಲರುಣಾಂಬುಧಾರೆಯಲಿ ।
ಕಳಚಿತೀ ಕೆಂಧೂಳಿ ಬಾಣಾ
ವಳಿಯ ಕತ್ತಲೆಯೊಳಗೆ ಕಾಣೆನು
ದಳದೊಳಾರಾರೆಂದು ಮತ್ತರೆಘಳಿಗೆ ಮಾತ್ರದಲಿ ‖ ೩೮

ಬೆರಸಿ ಹೊಯ್ದರು ರಾವುತರು ರಥ
ತುರಗ ನಿಕರದ ಬೆಸುಗೆ ಬಿಡೆ ಮದ
ಕರಿಗಳಂಘವಿಸಿದವು ರಥ ಚಾಚಿದವು ಮುಂ[1]ದ[1]ಣಿಗೆ ।
ಹರಿಗೆಗಳ ತಲೆಗೊಡ್ಡಿ ಕಕ್ಕಡ
ಪರಶು ಖಂಡೆಯದವರು ಮುಂಡಿಯ
ತೆರಳದಾಂತರು ಫಲುಗುಣನ ರಥಪೆರಡು ಪಕ್ಕದಲಿ ‖ ೩೯

ಅರಸ ಕೇಳು ಜಯದ್ರಥನ ಮೋ
ಹರದ ಮಧ್ಯದೊಳಂದು ಸಿಲುಕದ
ನರನ ರಥವೀ ಹೊಳ್ಳುಗರ ಹೋರಟಗೆ ಹೆದಱುವುದೇ ।
ಕರಿಘಟಾವಳಿಗೊಂದು ಶರವಾ
ತುರಗದಳಕೊಂದಂಬು ಬಳಿಕೆರ
ಡೆರಡು ಶರದಲಿ ಕೆಡಹಿದನು ಕಾಲಾಳು ತೇರುಗಳ ‖ ೪೦

---

[1] ಕ (ಘ.ತ).

ಆಳು ಮುರಿದುದಲ್ಲೈ ಮಹಾರಥ
ರೇಳಿರೈ ನೀವಾಱು ಸಾವಿರ
ಮೇಲುದಳದವರಾಕೆವಾಳರು ನಿಮ್ಮ ಥಟ್ಟಿನಲಿ ।
ಮೇಳವದ ಪರಿ ಲೇಸು ಕರ್ಣನ
ಸೋಲದಲಿ ಸೀವರಿಸಿದರೆ ಭೂ
ಪಾಲನಾಣೆ ದೊಠಾರರಹಿರೆನುತೆಚ್ಚನಾ ಪಾರ್ಥ ॥ ೪೧

ಬಾಣಹತಿಗಕ್ಕುಡಿಸಿ ರಾಜ್ಯ
ಶ್ರೇಣಿ [1]ಜಱುಗಿತು[1] ಶೌರ್ಯನಗರದ
ವಾಣಿಯರು [2]ಹೊಕ್ಕಿಱಿದು[2] ಹೋಗಾಡಿದರು ಪತಿರಿಣವ ।
ಗೋಣಕೊಯ್ಲ್ಲನ [3]ಕಾ[3]ವಣಕೆ ಮುಂ
ಗೇಣಿಕಾಱನು ಮೊಳಗಿದನು ಘಡ
ಕೇಣವಿನ್ನೇಕೆನುತ ಕೈದೋಱಿತು ಭಟಸ್ತೋಮ ॥ ೪೨

ಸೀಳಿದನು ಸಮರಥರ ಸುಳಿಗೊಂ
ಡಾಳ ಸದೆದನು ಸವಱಿದನು ಭೂ
ಪಾಲಪುತ್ರರನಖಿಳದೇಶದ [4]ರಾಜಸಂತತಿಯ[4] ।
ಆಳು ಮುಱಿದುದು ಮಾನಹಾನಿಯ
ಹೇಳುವಡೆ ನಗೆ[5]ಯುದನು[5] ಕುರುಬಲ
ಜಾಲದಲಿ ಜಳ್ಳುಗರು ಬಿದ್ದುದು ಭಂಗ ಶರಧಿಯಲಿ ॥ ೪೩

ಬಿಡುದಲೆಯಲೋಡಿದರು ಬಿರುದಿನ
ತೊಡರ ಬಿಸುಟರು ವಾಹನಂಗಳ
ತೊಡಕ ಬಿಟ್ಟರು ನೆಲಕೆ ಕೈಲೆಡೆಗೊಟ್ಟು ಕೈದುಗಳ ।
ಅಡಸಿ [6]ಕಾವ ನರಪ್ರ[6]ತಾಪದ
ಕಡುವಿಸಿಲ ಬೇಗೆಯಲಿ ವೀರದ
ಮಡುಗಳುಱೆ ಬತ್ತಿದವು ಮೋಱೆಗಳೊಣಗಿ ಪಟುಭಟರ ॥ ೪೪

ಹೋಗದಿರಿ ಹೋಗದಿರಿ ದಳಪತಿ
ಯಾಗುಹೋಗಱಿಯದೆ ನೃಪಾಲನ
ಮೂಗನಾರಿಗೆ ಮಾಱಿದಿರಿ ಕೊಂಬವರು ನಾವಲ್ಲ ।

---

[1] ಹೆದಱಿತು (ಕ). [2] ಹೊಕ್ಕಚ್ಚು (ಕ). [3] ಕೇ (ಕ.ಗ.ಚ). [4] ದ್ವೀಪ ಸಂಭವರ (ಘ.ತ.ದ.ಪ), ದೇಶಾಧಿ ಭೂಭುಜರ (ನ). [5] ಯೆಂದು (ಕ), ಯಂದು (ಖ). [6] ಧೀತನ ಸತ್ವ (ತ).

ಈ ಗರುವರೀ ಪರಿ ಪಲಾಯನ
ಯೋಗಸಿದ್ಧರೆ[1]ಸಾಹಸಿಕರೈ[1]
ಜಾಗೆನುತ ಬೆಂಬತ್ತಿ ಹುಡಿಗುಟ್ಟಿದ ಮಹಾರಥರ ॥ ೪೫

ಇವರ ಹದನಿದು [2]ಕರ್ಣ[2]ನಾಡಿದ
ಕವಡಿಕೆಯ ಬೆಸಗೊಳ್ಳಿರೈ ಕೌ
ರವನ ಸರ್ವಗ್ರಾಸಕಿವೆ ರಾಹುಗಳು ಲಟಕಟಿಸಿ ।
ನಿವಗೆ ಹರಿಬದೊಳೊಂದು ಮುಟ್ಟಿಗೆ
ರವಣವುಂಟೇ ಹಾಯ್ಕಿ ನಿವ್ಮಾ
ಟವನು ನೋಡುವೆನೆಂದು ಕರೆದನು ಕೃಪನ ಗುರುಸುತನ ॥ ೪೬

ಅರಸ ಕೇಳಾಕ್ಷಣಕೆ ಮುಗ್ಗಿತು
ಮಱವೆ ನೆಗ್ಗಿತು ಭೀತಿ ಧೈರ್ಯದ
ತಿರುಳು ಬಲಿದುದು ಕೋಪ ತಳಿದುದು ಖೋಡಿ ನೀ[3]ರೊಱೆಯೆ[3] ।
ಕರಣಪಲ್ಲಟಪಾಡಿನಲಿ ಸಂ
ವರಿಸಿಕೊಂಡುದು ವೀರರಸವು
ಬ್ಬರಿಸಿ ಸರ್ವೇಂದ್ರಿಯವ ಮುಸುಕಿತು ನಿಮ್ಮ ದಳಪತಿಯ ॥ ೪೭

ನೋಡಿದನು ಕೆಲಬಲನನುಗಿದೀ
ಡಾಡಿದನು ನಟ್ಟಂಬುಗಳ ಹಱಿ
ಜೋಡಬಿಟ್ಟನು ತೊಳೆದನಂಗೋಪಾಂಗಶೋಣಿತವ ।
ಕೂಡೆ ಕಸ್ತುರಿಗಂಧದಲಿ ಮುಳು
ಗಾಡಿ ದಿವ್ಯದುಕೂಲದಲಿ ಮೈ
ಗೂಡಿ ಮೆಱೆದನು ಕರ್ಣನನುಪಮ ತೀವ್ರತೇಜದಲಿ ॥ ೪೮

ಬೋಳವಿಸಿದನು ಶಲ್ಯನನು ಮಿಗೆ
ಸೂಳವಿಸಿದನು ಭುಜವನುಬ್ಬಿನೊ
ಳಾಳವಿಸಿದನು ಚಾಪಗಾನ[4]ಸ್ವಾ[4]ನಕವನಱಿದು ।
ಮೇಳವಿಸಿ ನಿಜರಥವ ಕೆಲದಲಿ
ಜೋಳವಿಸಿ ಹೊದೆಯಂಬನಹಿತನ
ಪಾಳಿಸುವಡಂಬಿದೆಯೆನುತ ತೂಗಿದನು ಮಾರ್ಗಣೆಯ ॥ ೪೯

---

[1] ಪೊತು ಮರುಃರೇ (ಕ). [2] ಪಾರ್ಥ (ಕ). [3] ರೇಱೆ (ಗ.ಘ.ತ).
[4] ಸ್ವಾ (ಕ).

ಘಡಘಡೆಲವೋ ಪಾರ್ಥ ಜೂಜಿಂ
ಗೊಡಬಡಿಕೆ ನಿಮಗೆಮಗೆ ಹಾರುವ
ರೊಡನೆ ಹೆಕ್ಕಳವೇಕೆ [1]ಹೋಗದಿರಿತ್ತಲಿದಿರಾಗು[1] ।
ಹಿಡಿದ ಮುಷ್ಟಿಗೆ ಸರ್ವರವಣವ
ಕೊಡಹಿ ನಿನ್ನ[2]ದೆ [ವೆ]ರ[2]ಳಕೊಳ್ಳದೆ
ಬಿಡುವೆನೇ ಬಾ ಎನುತ ಕರೆದನು ಕರ್ಣನರ್ಜುನನ ॥ ೫೦

ಅರಸ ಕೇಳ್ಕೈ ಸಿಡಿಲಗರ್ಜನೆ
ಗುರವಣಿಪ ಕೇಸರಿಯವೊಲು ಕೃಪ
ಗುರುಸುತರ ಬಿಸುಟಿತ್ತ ಹಾಯ್ದನು ಹಗೆಯ ಸಮ್ಮುಖಕೆ ।
ತಿರುಪು ಸದರವು ನಿನಗೆ ಗತಿಕಾ
ಹುರ ಕಣಾವಳಿ ಕಂಠಗತ ಬಾ
ಹಿರನು ನೀನೆಲೆ ಕರ್ಣ ಫಡ ಹೋಗೆನುತ ತೆಗೆದೆಚ್ಚ ॥ ೫೧

ಭರತಭಾಷೆಯಲಾ ವಿಧಾವಂ
ತರು ವಿರಾಟನ ಮನೆಯಲಿದ್ದುದ
ನಱಿಯೆವೇ ನಾವೆತ್ತ ಬಲ್ಲೆವು ನಿಮ್ಮ ವಿದ್ಯೆಗಳ ।
ಸರಸವಾತಂತಿರಲಿ ಚಾಪ
ಸ್ಫುರಣದಭಿನಯದಂಗಹಾರದ
ಪರಿಯ ತೋಱಾ ಎನುತ ತೆಗೆದೆಚ್ಚನು ಧನಂಜಯನ ॥ ೫೨

ಝುಳಪಿಸಿದುದೆರಡಂಕದಲಿ ನಿ
ಷ್ಕಲಿತ ತೇಜಃಪುಂಜವಿಬ್ಬರ
ಹಳಹಳಿಕೆ ಹಬ್ಬಿದುದು ಗಬ್ಬರಿಸಿದುದು ಗಗನದಲಿ ।
ಹಿಳುಕನೀದಪ್ಪೊ ಹಿಳುಕು ಮೊನೆಯಲ
ಗಲಗನುಗುಳ್ದವೊ ಕಣೆಗಳಲಿ ಕಣೆ
ತಳಿತವೋ ತ್ರೈಲೋಕ್ಯಬಾಣಾದ್ವೈತವಾಯ್ತೆಂದ ॥ ೫೩

ಪರಶುರಾಮನ ಕಾರ್ತವೀರ್ಯನ
ವರ ದಿಳೀಪನ ದುಂದುಮಾರನ
ಭರತ ದಶರಥ ನಹುಷ ನಳ ರಾಘವನ ಲಕ್ಷ್ಮಣನ ।

---

[1] ಹಾರದಿರಿತ್ತಲನುವಾಗು ಕ). [2] ಡೆಬೆರ (ಕ.ನ), ದೆದಿರು (ಗ), ದೆಬೆರ (ತ.ದ.ನ).

ಸರಿಮಿಗಿಲು ಕಲಿ ಪಾರ್ಥನೀ ಮಿ
ಕ್ಕರಸುಗಳ ಪಾಡೇ ಕಿರೀಟಿಯ
[1]ದೊರೆಯದಾವವನೆನುತ ಕೊಂಡಾಡಿತು ಸುರಸ್ತೋಮ[1] ॥ ೫೪

ತಾರಕನ ಜಂಭನ ನಿಕುಂಭನ
ತಾರಕಾಕ್ಷನ ಕಾಲನೇಮಿಯ
ವೀರ ಮಹಿಷಾಸುರನ ಬಾಣಾಸುರನ ರಾವಣನ ।
ಘೋರಹತ್ತರ ಬಾಹು ಬಲವನು
ಸಾರಿಯಾ ಕರ್ಣಂಗೆ ಮಿಕ್ಕಿನ
[2]ಸಾರಿಹೃದಯರು ನಿನಗೆ ಸರಿಯಿಲ್ಲೆಂದು[2]ದಮರಗಣ ॥ ೫೫

ಪೂತು ಮಝುರೇ ಕರ್ಣ ವಿಶಿಖ
ವ್ರಾತವೊಂದಿನಿತಿಲ್ಲ ಲಂಕೆಯ
ಘಾತಕರ ಚಾಪಳವ ಕಂಡೆನು ಚಾಪತಂತ್ರದಲಿ ।
ಈತನತಿಶಯಬಾಣರಚನಾ
ಜಾತಿಯಿದು ಭೀಷ್ಮಾದಿಸುಭಟ
ವ್ರಾತಕೆಲ್ಲಿಯದೆಂದು ತಲೆದೂಗಿದನು ಹನುಮಂತ ॥ ೫೬

ಅದ್ದು ದುಮ್ಮಾನದಲಿ ಹೊಡೆಮುಗು
ಳೆದ್ದುದೀ ಕುರುಸೇನೆ ತಡೆಯಲಿ
ಬಿದ್ದುದತಿಸಂತೋಷ ಸಾರಕ್ಷೀರಜಲಧಿಯಲಿ ।
ಗೆದ್ದನೈ ನಿನ್ನಾತನೊಸಗೆಯ
ಬಿದ್ದಿನರಲೈ ನಾವು ಪರರಿಗೆ
ಬಿದ್ದುದೊಂದು ವಿಘಾತಿಯೆಂದನು ಸಂಜಯನು ನಗುತ ॥ ೫೭

ಇಪ್ಪತ್ತನಾಲ್ಕನೆಯ ಸಂಧಿ ಮುಗಿದುದು.

---

[1] ದೊರೆಗೆನುತ ಕೊಂಡಾಡಿತಮರಸ್ತೋಮವರ್ಜುನನ (ಕ.ಗ.ಚ). [2] ಸಾರಥಿಯ ಸಜೀವಿಸರಿಯಿಲ್ಲೆಂದು (ಕ), ಭೂರಿರಥಿಕರು ಪಾಡೆ ಕರ್ಣಂಗೆಂದು (ಕ.ಫ).

# ಇಪ್ಪತ್ತ್ರೈದನೆಯ ಸಂಧಿ

---

ಸೂಚನೆ ॥ ರಾಯಪರಬಲಮಥನ ಕೌರವ
ರಾಯಧರಣಿವರಾಹ ಕಲಿರಾ
ಧೇಯನೆಚ್ಚನು ರೌದ್ರದರ್ಪದ ಸರ್ಪಬಾಣದಲಿ ॥

ಹೇಳು ಸಂಜಯ ಹಗೆಗೆ ಬಿದ್ದ ವಿ
ತಾಳವಾವುದು ಕಿವಿಗಳೈದವು
ನಾಲಗೆಯನೊಡ್ಡುವೆನು ವಚನಾಮೃತದ ಸವಿ ಹಿರಿದೆ ।
ಜಾಳಿಸಿತೆ ಹಗೆ ಕರ್ಣ ಗೆಲಿದನೆ
ಕಾಳೆಗವನೀ ಮಾತುಗಳನೇ
ಹೇಳುತಿರು ಸಾಕೆಂದು ನುಡಿದನು ನಗುತ ಜನನಾಥ ॥ ೧

ಅವನಿಪತಿ ಕೇಳುವಡೆ ಸಾವಿರ
ಕಿವಿಗಳೈದವು ನಿಮ್ಮ ಕರ್ಣನ
ಬವರದಲಿ [1]ರೂ[1]ಢಿಸಿದ ರೌದ್ರದ ರಾಜಕಾರಿಯವ ।
ಸವಡಿವೆರಳಿನ ಸೇದುವಂಬಿನ
ತವಕಿಗನ ತಗ್ಗಿಸುವೆ ನಿಲ್ಲೆನು
ತವಗಡದ ಕೋಪದಲಿ ಕಿಡಿಕಿಡಿವೋದನಾ ಕರ್ಣ ॥ ೨

ಮೀಱಿತುರಿ ಸುಯ್ಲಿನಲಿ ಕಂಗಳು
ಹೇಱಿದವು ಕಡುಗೆಂಪನೊಗಡಿಸಿ
ಕಾಱಿದವು ರೋಮಾಳಿ ರೋಷಸ್ವೇದಬಿಂದುಗಳ ।
ಕೌಱಿದವು ಕುಡಿಮೀಸೆ ಕಾಡುದು
ಮೋಱೆ ಬದ್ಧಭ್ರುಕುಟಿಯಲಿ ಹುರಿ
ಯೇಱಿತಧಿಕಕ್ರೋಧತಾಮಸ ನಿಮ್ಮ ದಳಪತಿಯ ॥ ೩

ಉಗಿದನುರಗಾಸ್ತ್ರವನು ಹೊಮ್ಮೊ
ಡಿಗೆಯೊಳಗೆ ಹೊರಕಯ್ಯ ಗಾಳಿಗೆ
ಹೊಗೆಯ ಹೊದರಿನ ಹೊರಳಿ ಹಬ್ಬಿತು ಕೂಪೆ ಕಿಡಿಯಿಡುತ ।

---

[1] ಝಾ (ಖ.ಘ.ಟ.ತ.ದ), ಜೋ (ಬ).

ಗಗನ ಗಮನದ ನಿಖಿಳ ವಿಹಗಾ
ಳಿಗಳು ಬೆಂದವು ಗಾಢ ಗರಳದ
ಸೊಗಡ ಸೋಹಿಗೆ ಕಂಠಣಿಸಿತೆರಡೊಡ್ಡು ಕಳವಳಿಸಿ ॥ ೪

ಬೆರಳಳಲಂಬನು ತೂಗಲುರಿ ಫೂ
ತ್ಕರಣೆಯಲಿ [1]ಪಂಠಿಸಿ[1]ತು ಸುಯ್ಲಿನ
ಧರಧುರದ ಬೆಳುನೊರೆಯ ಲಹರಿಯ ವಿಷದ ಲೋಳೆ[2]ಗಳ[2] ।
ಉರವಣಿಸಿದವು ಗರಳ ರಸದ
ಬ್ಬರದ ಬೊಬ್ಬುಳಿಕೆಗಳು ಮುಸುಕಿತು
ಹೊರಳಿಗಿಡಿಗಳ ಛಟಛಟಧ್ವನಿ ಮಸಗಿತಡಿಗಡಿಗೆ ॥ ೫

ಹೊರೆಯವರು ಮರನಾದರಾ ರಥ
ತುರಗತತಿ ಲಟಕಟಿಸಿದವು ನಿ
ಬ್ಬರದ ಬೆಟಗಿನೊಳದ್ದು ಹೋದನು ಶಲ್ಯ ನಿಮಿಷದಲಿ ।
ಉರಿ ಛಡಾಳಿಸಿ ಫೂತ್ಕೃತಿಯ ಪಂ
ಜರದೊಳಗೆ ಪಲ್ಲವಿಸಿತುಬ್ಬಿದ
ಹೊರಳಿಹೊಗೆಯಂಬರವ ತುಂಬಿತು ಭೂಪ ಕೇಳೆಂದ ॥ ೬

ಆವರಿಸಿದವು ಪುಷ್ಕಳಾವ
ರ್ತಾವಳಿಗಳೆನೆ ಬಹಳವಿಷಧೂ
ಮಾವಳಿಯಲೇ ಧಾತುಗೆಟ್ಟುದು ಸಕಳ ಭುವನಜನ ।
ದೇವತತಿ ಬೆಂಡಾಯ್ತು ಮೊದಲಿನ
ದೇವರುಬ್ಬಿದರುರಗಪತಿಯು ಫ
ಣಾವಳಿಯ ಗುಡಿಯೆತ್ತಿದವು ಪಾತಾಳಲೋಕದಲಿ ॥ ೭

ಭುಜವ ಹೊಯ್ದರು ಸೂರ್ಯ ತಕ್ಷಕ
ರಜನ ಸಭೆಯಲಿ ಭಯದಿ ಸುರಪತಿ
ಭಜಿಸಿದನು ಗರುಡನನು ನಿರ್ವಿಷಮಸ್ತು ನರಗೆನುತ ।
ಗಜಬಿದವು ನಿಸ್ಸಾಳವಾದ್ಯ
ವ್ರಜದ ಕಹಳೆಯು [3]ಭಟರ ಬೊಬ್ಬೆಯು[3]
ಗಜಬಜಿಕೆ ಘಾಡಿಸಿತು ಕೌರವಸೈನ್ಯಶರಧಿಯಲಿ ॥ ೮

---

[1] ಪಸರಿಸಿ (ಟ.ದ). [2] ಯಲಿ (ತ.ದ). [3] ಜರೆವ ಸುಭಟರ (ಕ).

ಹಣುಗಿದರು ಭೀಮಾದಿಗಳು ಕ
ಟ್ಟೊಣಗಿಲಾದವು ಭಟರ ಮೋಱೆಗ
ಳೆಣಿಸುತಿರ್ದರು ಜಪವನರ್ಜುನ ಕೃಷ್ಣನೆಂಬವರು ।
ಸೆಣಸುವನು ಗಡ ಕೌರವನೊಳಿ
ನ್ನಣಲಿ ಧರೆಯನು ಧರ್ಮಸುತನೆಂ
ದಣಕವಾಡಿತು ನಿನ್ನ ದುಷ್ಪರಿವಾರ ಹರುಷದಲಿ ॥ ೯

ಮೂಡಿಗೆಯೊಳಂಬುಗಿದು ತಿರುವಿಗೆ
ಹೂಡಲೀ ಹದನಾಯ್ತು ಚಾಪದೊ
ಳೋಡಿಸಿದಡೇನಹುದು ಹರಹರ ಹರ ಮಹಾಸ್ತ್ರವಲೆ ।
ನೋಡಿರೈ ಗುರುಸುತಕೃಪಾದಿಗ
ಳೋಡದಿರಿ ನೀವೆನುತ ಪುಳಕದ
ಬೀಡಿನಲಿ ಮೈಮುಳುಗಿ ತೂಗಾಡಿದನು ಕುರುರಾಯ ॥ ೧೦

ಉರಿಯ ಜೀರ್ಕೊಳವಿಗಳವೊಲು ಪೂ
ತ್ಕರಿಸಿದವು ಫಣಿ ವದನದಲಿ ದ
ಳ್ಳುರಿಯ ಸಿಮಿಸಿಮಿಗಳ ತುಷಾರದ ಕಿಡಿಯ ತುಂತುಱಿನ ।
ಹೊರಳಿಗಿಡಿಗಳ ಕರ್ಬೊಗೆಯ ಕಾ
ಹುರದ ಸುಯ್ಲಿನ ಝಳದ ಗರಳಾ
ಕ್ಷರದ ಜಿಗಿಯಲಿ ಮಾತು ತೋಱಿತು ಬೆಸಸು ಬೆಸಸೆನುತ ॥ ೧೧

ಹೂಡಿದನು ತಿರುವಿನಲಿ ಬಾಣದ
ಝಾಡಿಯುರಿನಾಲಗೆ'ಯ[1] ನಿರುತವ
ನೋಡಿ ಪಾರ್ಥನ ಗಳಕೆ ಸಂಧಾನವ ನಿಧಾನಿಸುತ ।
ನೋಡಿದನು ಶಲ್ಯನನು ಮಿಗೆ ತೂ
ಗಾಡಿದನು ಕೌರವನ ಪುಣ್ಯದ
ಬೀಡು ಬಿಡುವಡೆ ಕಾಣಲಹುದಿಂದೆಂದನಾ ಕರ್ಣ ॥ ೧೨

ಏನು ಸಾರಥಿ ಸರಳು ಪಾಂಡವ
ಸೇನೆಯನು ಗೆಲಲಹುದೆ ಪಾರ್ಥನ
ಮಾನಿನಿಗೆ ವೈಧವ್ಯದೀಕ್ಷಾವಿಧಿಯ ಕೊಡಲಹುದೆ ।

---

[1] ಗೆ (ಘ.ತ).

ಆನಲಮ್ಮುವರುಂಟೆ ನಿನಗಿದು
ಸಾನುರಾಗವೆ ಹೇಳೆನಲು ರವಿ
ಸೂನುವಿನ ರೌದ್ರಾಸ್ತ್ರವನು ಹೊಗಳಿದನು ಮಾದ್ರೇಶ ॥　　　　೧೩

ಲೇಸುಮಾಡಿದೆ ಕರ್ಣ ಕೌರವ
ನೀಸುದಿನ ಸಾಕಿದ ಫಲವ ನೀ
ನೈಸಲೇ ತೋಱಿದವ[1]ನೀ ನೃಪಸೈನ್ಯಶರಧಿಯಲಿ[1] ।
ಈಸು ಕಾಳೆಗವಾದುದೀ ಕ
ಟ್ವಾಸುರದ ಸರಳೆಲ್ಲಿ [2]ಗು[2]ಪ್ತಾ
ವಾಸವಾದುದು ಪೊತುರೆಂದನು ಶಲ್ಯನಿನಸುತನ ॥　　　　೧೪

ಆಯಿತಿದು ಸರಳೊಳ್ಳಿತ್ತೈ ಕುರು
ರಾಯನಭ್ಯುದಯ ಪ್ರಪಂಚವಿ
ದಾಯಿತೌ ಸಂಧಾನವೊಡಬಡದೆನ್ನ ಚಿತ್ತದಲಿ ।
ಸಾಯಕವ ನೀ ತಿರುಗಿ ತೊಡು ನಿ
ರ್ದಾಯದಲಿ ನೆಲನಹುದಲಾ ರಾ
ಧೇಯ ಎಂದನು ಶಲ್ಯನವನೀಪಾಲ ಕೇಳೆಂದ ॥　　　　೧೫

ಕೊರಳಿಗೊಡ್ಡಲು ಹೊಳ್ಳುವಾಱಿದ
ಸರಳು ಮಕುಟವ ತಾಗುವುದು ಮೇ
ಣುರಕೆ ತೊಟ್ಟರೆ ಕೊಯ್ವುದೀಗಳೆ ಕೊರಳನರ್ಜುನನ ।
ಮರಳಿ ತೊಡು ತೊಡು ಬೇಗ ಕೌರವ
ನರಸುತನವುಳಿವುದು ಕಣಾ ಹೇ
ವರಿಸದಿರು ಹೇಳುವುದು ಪಥ್ಯವಿದೆಂದನಾ ಶಲ್ಯ ॥　　　　೧೬

ಒಂದು ಶರಸಂಧಾನ ನಾಲಗೆ
ಯೊಂದು ನಮ್ಮಲಿ ಕುಟಿಲವಿದ್ಯವ
ನೆಂದು ಕಂಡೈ ಶಲ್ಯನಾವಡಿಯಿಡೆವಧರ್ಮದಲಿ ।
ಇಂದು ಹೂಡಿದ ಶರವನಿಳುಹುವ
ದಂದವೇ ನೀನಱಿಯೆ ಹೆಱಸಾ
ರೆಂದು ತಿರುವಿನೊಳಂಬನೊದೆದನು ಕರ್ಣ ಬೊಬ್ಬಿಡುತ ॥　　　　೧೭

---

[1] ನು ಶಿವಶಿವಾ ಮಹಾದೇವ (ಕ.ಖ.ಚ.ನ).　　[2] ಸು (ಕ.ಗ.ಪ).

ಏನಹೇಳುವೆ ಬಳಿಕ ಭುವನ
ಗ್ಲಾನಿಯನು ತೆಗೆದೋಡಿದರು ವೈ
ಮಾನಿಕರು ವೆಂಠಣಿಸಿತುರಿಯಪ್ಪಳಿಸಿತಂಬರವ ।
ಕಾನಿಡುವ ಕಬ್ಬೊಗೆಯ ಚೂರಿಸು
ವಾನನದ ಕಟವಾಯ ಲೋಳೆಯ
ಜೇನಹುಟ್ಟಿಯ [1]ಬಸಿವ ವಿಷದಲಿ[1] ಬಂದುದುರಗಾಸ್ತ್ರ ॥ ೧೮

ಕಾದಲೆಳಸಿದ ಪಾಂಡವರ ಸಂ
ವಾದ ತೀರಿತು ಕೌರವೇಂದ್ರನು
ಸಾಧಿಸಿದ ಹಗೆ ಸಫಲವಾದುದುಸಮರಭೂಮಿಯಲ ।
ಹೋದನರ್ಜುನನೀಮಹಾಸ್ತ್ರದ
ಬಾಧೆಗಿದಿರಿಲ್ಲೆನುತ ಘನ ಚಿಂ
ತೋದಧಿಯಲುಱೆ ಮುಳುಗಿ ಮಱುಗಿತು ಮೇಲೆ ಸುರಕಟಕ ॥ ೧೯

ಹಾ ವೃಕೋದರ ನಕುಲ ಹಾ ಸಹ
ದೇವ ಹಾ ಧರ್ಮಜ ಧನಂಜಯ
ಹಾವಿನಗ್ನಿಗೆ ಹವಿಗಳಾದಿರೆ ಹಾ ಮಹಾದೇವ ।
ಸಾವಡೆಯು ಶಸ್ತ್ರಪ್ರಹಾರದ
ಸಾವು ಕ್ಷತ್ರಿಯಕುಲಕೆ [2]ಭಂಗವೆ[2]
ಹಾ ವಿಧಿಯೆ ಎಂದೊದಱಿ ಮಱುಗಿತು ಪಾಂಡುಸುತಸೇನೆ ॥ ೨೦

ತುರಗತತಿ ತಲೆಗುತ್ತಿದವು ಮದ
ಕರಿಗಳೊವಱಿದವಸ[3]ವಳಿದು[3] ರಥ
ತುರಗವೆಳೆದವು ರಥವನಾಗಳೆ ವಿಷದ ಝಳಹೊಯ್ದು ।
ಸುರಿವ ಗರಳದ ಗಾಳಿ ಸೋಂಕಿದ
ನರಗೆ ನಂಜೇಱಿತು ಭಯಂಕರ
ತರದ ಭಾರಿಯ ವಿಷಕೆ ಕೊಳ್ಗುದಿಗೊಂಡುದರಿಸೇನೆ ॥ ೨೧

ಗರುಡಪಂಚಾಕ್ಷರಿಯ ಮಂತ್ರೋ
ಚ್ಚರಣೆಯಲಿ ಭೂನಾಗಸತ್ವದ
ಬೆರಳ ಮುದ್ರಿಕೆಗಳಲಿ ರಕ್ಷಾಯಂತ್ರಮಂತ್ರದಲಿ ।

---

[1] ವಿಷದ ಲುಳಿಯಲಿ (ಕ.ಟ.ದ). [2] ವಿಹಿತವು (ಘ.ತ.ಪ). [3] ಬಡಿದು (ಕ.ಖ).

ಮರಕತದ ಘುಟಿಕೆಯಲಿ ವಿಷಸಂ
ಹರಣ ವಿವಿಧೋಪಾಯದಲಿ ನೃಪ
ವರರು ನಿಂದುದು ಭೀಮಸೇನಾದಿಗಳು ದುಗುಡದಲಿ ॥ ೨೨

ಹಿಂದೆ ಭಗದ[1]ತ್ತಾಯುಧದಿ ನೆಱೆ[1]
ಬೆಂದು ಬದುಕಿತು ಬಳಿಕಲೀ ಗುರು
ನಂದನನ ನಾರಾಯಣಾಸ್ತ್ರದಿನಾದುದಪಘಾತ ।
ಅಂದುಪಾಯದಲುಳಿದೆವೀ ಗೋ
ವಿಂದನಿಂದಪಮೃತ್ಯುವಿದನು ಮು
ಕುಂದ ತಾನೇ ಬಲ್ಲನೆನುತಿರ್ದುದು ಭಟಸ್ತೋಮ ॥ ೨೩

ಜನಪ ಕೇಳೈ ಬಳಿಕ ಭೀಮಾ
ರ್ಜುನ ನಕುಲ ಸಹದೇವ ಸಾತ್ಯಕಿ
ತನತನಗೆ ದಿವ್ಯಾಸ್ತ್ರನಿಕರದಲೆಚ್ಚರಹಿತರವ ।
ಅನಿತು ಶರವನು ನುಂಗಿ ಮಗುಳೆ
ಚ್ಚನಿತನೊಳುಕೊಳುತಾಜ್ಯಧಾರೆಗೆ
ನನೆದ ಹುತವಹನಂತೆ ಹೆಚ್ಚಿತು ತೀವ್ರಫಣಿಬಾಣ ॥ ೨೪

ಆರು ನಿಲಿಸುವರಕಟ ದುಷ್ಕೃತಿ
ಕಾರ ಶರವಿದು ಭೀಮಪಾರ್ಥರ
ಕೂರಲಗುಗಳು ಶಿವಶಿವಾ ಕೆಚ್ಚಾಯ್ತು ಕದಳಿಗಳ ।
ಕೌರವನ ಜಯವಧುವಿನೊಡ[2]ನೆಯು[2]
ಸೇರುಗೆಯ ಕೂಟಣೆಯೊ ಶರವಿ
ನ್ನಾರಿಗೊಱಲವೆವಕಟೆನುತ ತಲ್ಲಣಿಸಿತರಿಸೇನೆ ॥ ೨೫

ನಾಲಗೆಯ ಚೂರಣದ ದಳ್ಳುರಿ
ಜಾಳಿಗೆಯ ಚಮ್ಮಟದ [3]ಗರಳದ
ಲೋಳೆಗಳ ಚಾರಣದ ಕಿಡಿಗಳ ಖಡುಗ ಪೂರಯದ[3] ।

---

[1] ತ್ತಾಂಕುಶದಲುರೆ (ಗ.ಟ.ತ.ದ.ನ). [2] ಗಯಿ (ಕ). [3] ಗರಳಜ್ವಾಲೆಗಳ ಚಾರಣದ ಕಿಡಿಗಳ ಗಡಣ ಕುಡಿಯಿಡಲು (ಕ), ಗರಳದ ಚಾರಣದ ಸಂಭ್ರಮದ ಕೋಳಾಹಳದ ಕಿಡಿಗಳಲಿ (ಖ), ಗರಳಜ್ವಾಲೆಗಳ ಭಾರಣೆಯ ಕಿಡಿಗಳ ಕಡಹ ಸಾಗರದ (ದ).

ಧೂಳಿ[1]ಯುಗೆಯಬ್ಬರದ ಬಲುಗೈ
ಯಾಳವೊಲು ಭುಗಿಲೆಂಬ ರವದಲಿ[1]
ಮೇಲುವಾಯ್ದುದು ಕೊರಳ ಸರಿಸಕೆ ಕಲಿ ಧನಂಜಯನಾ ॥ ೨೬

ಅರಸ ಕೇಳೇಸೇಸು ಬಾರಿಯ
ಕೊರಳೆಡಾಯುಧ ಕಳಚದೇಸು
ಬ್ಬರದ ಮಾರಿಯ ಬಿಂಕ ಮುಱಿಯದು ಪಾಂಡುತನಯರಿಗೆ ।
ಹರಿಯ ಹರಹಿನ ವಜ್ರಪಂಜರ
ದರಗಿಣಿಯಲೇ ಪಾರ್ಥನಹಿಮಂ
ಜರನ ಮುಱುಕವ ಕೊಂಬುದೇ ಧೃತರಾಷ್ಟ್ರ ಕೇಳೆಂದ ॥* ೨೭

ನಡುಗುತಿರ್ದುದು ಸುರಕಟಕ ಬೊ
ಬ್ಬಿಡುತಲಿರ್ದುದು ನಮ್ಮ ಬಲ ಮೊಱೆ
ಯಿಡುತಲಿರ್ದುದು ಪಾರ್ಥನಳವಿಗೆ ಪಾಂಡುಸುತಸೇನೆ ।
ತಡೆಯದ್ವೈದಂಗುಲಕೆ ರಥವನು
ನೆಡಿಸಿದನು ಹರಿ ಧರೆಗೆ ಪಾರ್ಥನ
ಮುಡಿಯ ಸರಿಸಕೆ ಬಾಣ ಬಂದುದು ಕೊಲುವ ತವಕದಲಿ ॥ ೨೮

ಅಣೆದುದಹಿ ಮಕುಟವನು ತಾರಾ
ಗಣದ ಮಧ್ಯದ ಚಂದ್ರಮನ ಹೊ
ಯ್ದಣಲೊಳಡಸಿದ ರಾಹುವಿನ ರಹಿಯಾಯ್ತು ನಿಮಿಷದಲಿ ।
ಕುಣಿಕೆ ಮುಱಿದುದು ಮೌಕ್ತಿಕದ ಕೀ
ಲಣದ ವಜ್ರದ ಮಾಣಿಕದ ವರ
ಮಣಿಗಳೊಕ್ಕವು ರಕುತ ಮಿದುಳೊಡಸೂಸಿದಂದದಲಿ ॥ ೨೯

---

[1] ಧೂಳಿವೊಗೆಯಬ್ಬರದ ಬಲುಗಯ್ಯಾಳವೊಲು ಭುಗಿಭುಗಿಲ ರೌದ್ರದಿ (ಖ), ಯೊಗೆಯುಪ್ಪರದ ಬಲುಗೈಯಾಳುವೊಲು ಭುಗಿಭುಗಿಲ ಹಡೆಯಲಿ (ತ.ದ).

* ಈ ಪದ್ಯವಾದಮೇಲೆ (ಕ.ಖ) ಪ್ರತಿಗಳಲ್ಲಿ ವಿನಾ ಉಳಿದ ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ :—

ಸಾಹಸವು ಬಲುಹರ್ಜುನನ ಬಿಲು
ಗಾಹು ಕೊಳ್ಳದು ಬಿರುಬಿನಲಿ ಬಾ
ಣಾಹಿ ಬರುತಿದೆ ಕಾಳಕೂಟದ ಕಡಲ ಚೂಣಿಯಲಿ ।
ಆಹವಕೆ ಪಾಂಡವ ಮಮಪ್ರಾ
ಣಾಹಿಯೆಂಬೀ ಬಿರುದ ಸಲಿಸುವ
ಕಾಹು ತನ್ನದೆನುತ್ತ ದಾನವವೈರಿ ಚಿಂತಿಸಿದ ॥

ಬಿದ್ದುದೇ ಫಲುಗುಣನ ತಲೆಯಿಂದಿ
ಗದ್ದುದೇ ನಮ್ಮಾಟ ಜಯವಧು
ಕದ್ದಳೇ ರಣದೊಸಗೆ[1]ಗೇಳ್ವಳೆ[1] ದ್ರೌಪದಾದೇವಿ ।
[2]ಇ[2]ದ್ದುದೇ ಧರ್ಮಜನ ಸಿರಿ ತಳ
ಕದ್ದುದೇ ನಮ್ಮೊಡಲನಸು ಬಿಡ
ದಿದ್ದುದೇ ಹಾ ಎನುತ ಭೀಮಾದಿಗಳು ಹೊರಳಿದರು ॥ ೩೦

ವಿಷವ ತೆಗೆದಳು ದ್ರುಪದಸುತೆ ಕೈ
ಮುಸುಕಿನಲಿ ಚೀಲಾಯ[3]ವು[3]ಗಿದನು
ವಸುಮತೀಶ್ವರನಾ ಮುಹೂರ್ತಕೆ ದೂತರೈತಂದು ।
ಒಸಗೆ ಜೀಯರ್ಜುನನ ಮಕುಟದ
ಬೆಸುಗೆ ಮುಱಿದುದು ಹರಿ ವರೂಥವ
ಕುಸಿಯಲೊತ್ತಿದನಿಂದು ತಪ್ಪಿತು ತೀವ್ರ ಫಣಿಬಾಣ ॥ ೩೧

ಎನಲು ಸಂತೈಸಿತ್ತು ರಾಯನ
ಮನೆಯವರು ಪಾಂಡವರ ಸೇನಾ
ವನಧಿ ಬಿಡೆ ಗರ್ಜಿಸಿತು ಬಹುವಿಧ ವಾದ್ಯರಭಸದಲಿ ।
ವಿನುತ ಮಕುಟವ ಕಡಿದು ಕಂಗನೆ
ಕನಲಿತಹಿ [4]ತಲೆ ಬದುಕಿತೇ[4] ಹಾ
ಎನುತ ಹಲುಮೊರೆಯುತ್ತ ಹರಿದದು ಕರ್ಣನಿದ್ದೆಡೆಗೆ ॥ ೩೨

ತೊಡು ತೊಡಿನ್ನೊಮ್ಮೆನ್ನನಕಟಾ
ಕೆಡಿಸಿದೆಯಲಾ ರಾಜಕಾರ್ಯವ
ನುಡಿದು ಹೇಳನೆ ನಿನ್ನ ಸಾರಥಿ ಲಕ್ಷ್ಯಭೇದನವಾ ।
ಅಡಗಲಿನ್ನೀರೇಳು ಭುವನವೊ
ಳಡಗಿ ತಿಂಬೆನು ನರನನೆಂದವ
ಗಡಿಸಿ ಕರ್ಣನ ಬೆಸನ ಬೇಡಿತು ಮತ್ತೆ ಫಣಿಬಾಣ ॥ ೩೩

ಶಿವನ ಮಱೆಯನು ಹೊಗಲಿ ಮೇಣ್ ವಾ
ಸವನ ಸೀಮೆಯೊಳಿರಲಿ ಪಾತಾ
ಳವನು ಹೊಗಲಂಬುಧಿಯ ಮುಳುಗಲಿ ಜವನ ಕೆಳೆಗೊಳಲಿ ।

---

[1] ಗಳ್ವಳೆ (ಕ). [2] ಅ (ಟ). [3] ನು (ಕ). [4] ತನ ತಲೆ ಬದುಕೆ (ಘ.ಟ.ತ).

[1]ಭುವನಕತಿಶಯವಾಗಿ ರಣದಲಿ
ತಿವಿವೆ ಪಾರ್ಥನನೆನಲು ಕೇಳಿದು
ರವಿಯ ಮಗ ಬೆಱಗಾಗಿ ಬೆಸಗೊಂಡನು ಶಿಳೀಮುಖವ[1] ‖* ೩೪

ಎಸಲು ಸರಳುಗಳತ್ತಲೇ ಕೀ
ಲಿಸುವವಲ್ಲದೆ ಮತ್ತೆ ಮರಳಿದು
ಬೆಸನ ಬೇಡುವ ಬಾಣವೆಂಬುದನಱಿಯೆ ನಾ ಕೇಳ್ದು ।
ವಿಶಿಖ ನೀನಾರೆನಲು ಕಿಡಿಗಳ
ಕುಸುರಿಗಳನುದ್ಗರಿಸಿ ನುಡಿದುದು
ವಿಷಮನಱಿಯಾ ಕಾಳಕೂಟ ಕರಂಡ ಕಾನನದ ‖ ೩೫

ಉರಗಪತಿ ತಾನಶ್ವಸೇನನು
ಸುರಪತಿಯ ಖಾಂಡವದೊಳಿಹೆನದ
ನುರುಹುವಂದಿನೊಳೆನ್ನನರೆಗಡಿದೀ ದುರಾತ್ಮಕನ ।
ಶಿರವನರಿವೆನು ಬೇಗ ತೊಡು ತೊಡು
ಬೆ[2]ರ[2]ಗ ಹಾರದಿರೆನಲು ಸತ್ಯದ
ಪರಮಸೀಮೆಗೆ ತಪ್ಪಲಮ್ಮದೆ ಕರ್ಣನಿಂತೆಂದ ‖ ೩೬

ಅಱಿಯೆ ನಾ ನೀನೆಂದು ಲೋಗರ
ಮಱೆಯಲರಿಗಳ ಗೆಲುವ ಕರ್ಣನೆ
[3]ಯ[3]ಱಿಯಲಾ ನೀನೆನ್ನ ಹವಣನು ತೊಡುವುದಿಲ್ಲೆನಲು ।
ಮೊಱಗಿದನು ಶಲ್ಯನು ನೃಪಾಲನ
ನಿಱಿದೆಯೋ ರಾಧೇಯ ನೀನೆಂ
ದುಱುಬೆ[4]ಯಲಿ ಕೋಪಿಸುತ ಕರ್ಣನ ಬಯ್ದು ಗಜಱಿದನು[4] ‖ ೩೭

---

[1] ತಿವಿದು ಕೆಡುಹುವೆನಹಿತನನು ಪಂ । ಥವನು ಹಾರದಿರೆನಲು ಕೇಳಿದು । ರವಿಯ ಮಗ ಬೆಱಗಾಗಿ ನೋಡಿದನಂದು ಫಣಿಶಿರವ (ಕ).

* ಈ ಪದ್ಯವಾದಮೇಲೆ (ಕ.ಫು.ತ.ದ.ನ) ಪ್ರತಿಗಳಲ್ಲಿ ಮಾತ್ರ ಕೆಳಗಣ ಪದ್ಯವು ಹೆಚ್ಚಾಗಿದೆ :—

ತಿರುಗಿ ತೊಡು ಸಂಧಾನವಿದು ನ
ಮ್ಮರಸರಿಗೆ ಹಿತವಹುದಲೇ ಧಿ
ಕ್ಕರಿಸಿ ನಮ್ಮನು ನೂಕಿ ಕಳೆದೆ ಮಹಾಹಿಮಾರ್ಗಣವ ।
ನರನ ತಲೆ ಬದುಕಿದುದು ಸಾಕಂ
ತಿರಲಿ ಶರವೇ ತನ್ನ ಕಳುಹೆಂ
ದೊಱಲುತದೆ ತೊಡು ಪಾಪಿಯೆಂದನು ಶಲ್ಯನಿನಸುತನ ‖

[2] ಱ (ಕ.ತ). [3] ನ (ಕ). [4] ಮಿಗೆ ಖತಿಗೊಂಡು ಬಯ್ದನು ಸೂತನಂದನನ (ಫು.ತ.ಪ).

ತೊಡು ತೊಡೆಲವೋ ಶರವು ರಿಪುವನು
ತಡೆಗಡಿವೆನೆಂದೊದಱುತದೆ ನೃಪ
ನೊಡೆತನಕೆ ನೀ ಬಯಸಿದಾ ಮತವುಂಟೆ ರಿಪುಗಳಲಿ ।
ನುಡಿದ ಭಾಷೆಗೆ ನಾವು ಹೇಳಿತ
ನೊಡಬಡುವ ನೀನಲ್ಲ ಕುರುಪತಿ
ಬಿಡದೆ ನಿನ್ನನು ಸಲಹಿತಕ್ಕುಪಕಾರಿ ನೀನೆಂದ ॥ ೩೮

ಎಲವೊ ನಿನ್ನನು ಜಗವಱಿಯೆ ಕ
ಬ್ಬಿಲನ ಮಗನನು ಮಱಿಸಿ ಕುರುಪತಿ
ಕುಲಜನನು ಮಾಡಿದನಲಾ ಒಡನುಂಡು ಪತಿಕರಿಸಿ ।
ನೆಲನು ಹೇಸದೆ ನಿನ್ನ ಕೀರ್ತಿಯು
ಬೆಳಗು ಮಾಸದೆ ಬಿಡವೆ ಸಾಕಿದ
ಹೊಲೆಯನವಸರಕೊದಗುವನು ನೀ ಕಷ್ಟ ಹೋಗೆಂದ ॥ ೩೯

ನಂಬಿ ಹಿಡಿದರೆ ನದಿಯ ಮಗ ಹಗೆ
ಯಂಬಿಗಿತ್ತನು ಕಾಯವನು ಮಗ
ನೆಂಬ ನೆವದಲಿ ತನುವ ಬಿಸುಟನು ಗರುಡಿಯಾಚಾರ್ಯ ।
ಅಂಬು ಬೆಸನನು ಬೇಡಿದಡೆ [1]ನೀ
ನೆಂಬನೀ ವಿಧಿಯಾದೆ[1] ಮೂವರ
ನಂಬಿ ಕೌರವ ಕೆಟ್ಟನಕಟಕಟೆಂದನಾ ಶಲ್ಯ ॥ ೪೦

ಮಾತೆಗಿತ್ತನು ಭಾಷೆಯನು ನಿ
ನ್ನಾತಗಳೊಳೈವರೊಳಗಾರಿದಿ
ರಾತಡೆಯು ತಲೆಗಾ[2]ದು ಬಿಡುವೆನು[2] ಕೊಲುವುದಿಲ್ಲೆಂದು ।
ಮಾತುಗಳು ಕವಲಾದ ಬಳಿಕಿ
ನ್ನೇತಕೀ ತನುವಿದನು ಪಾರ್ಥನ
ಖಾತಿಗೊಪ್ಪಿಸಿ ಕಳೆವೆನೆಂದನು ತನ್ನ ಮನದೊಳಗೆ ॥ ೪೧

ಮರುಳಲಾ ಮಾದ್ರೇಶ ಮರಳಿದ
ಶರವ ತೊಡುವೆನೆ ಸ್ಮೈರಿಸೆನೆ ಕಾ
ತರಿಸಿ ವಾಘೆಯ ಬಿಸುಟು ಕಿಡಿಕಿಡಿವೋಗಿ ಖಾತಿಯಲಿ ।

---

[1] ತೊಟ್ಟಂಬ ತೊಡಲೊಲ್ಲೆಂಬ (ಟ), ಮರಳಂಬ ತೊಡಚದೆ ಕರ್ಣ (ಫ.ದ), ಮರಳಂಬ ತೊಡದಾ ಕರ್ಣ (ಬ). [2] ಯ್ವೆನಲ್ಲದೆ (ಗ.ಫ.ತ.ದ).

ಅರಸನೊಲಿದಂತಾಗಲೆನ್ನದು
ಮರುಳುತನ ಕುಲಹೀನನಲಿ ಗುಣ
ವಱಸಲೇಕೆಂದೆನುತ ಧುಮ್ಮಿಕ್ಕಿದನು ಧಾರುಣಿಗೆ ॥ ೪೨

ಕಂಡುದೀ ವ್ಯತಿಕರವನೀತನ
ನೆಂಡಲೆದು ಫಲವಿಲ್ಲಲಾ ಕೈ
ಕೊಂಡು ನೋಡುವೆನೆನ್ನ ಸಾಮರ್ಥ್ಯದ ಸಘಾಡದಲಿ ।
ಚಂಡಿಯಾದೆನು ತಾನೆನುತ ಖತಿ
ಗೊಂಡು ಮರಳಿತು ಸರ್ಪಶರವಾ
ಖಂಡಳಾತ್ಮಜನತ್ತ ಹಾಳಾಹಳದ ಚೂಣಿಯಲಿ ॥ ೪೩

ಇವನ ಬಲ್ಲೈ ಪಾರ್ಥ ಚಕ್ಷು
ಶ್ರವನಿವನು ತಕ್ಷಕನ ಮಗ ಖಾಂ
ಡವದ ಬೇಳಂಬದಲಿ ಬದುಕಿದ ತಲೆಯೊಳಡಹಾಯ್ದು ।
ಇವನ ಮೂಡಿಗೆಯೊಳಗೆ ಶರವಾ
ಯ್ತಿವನು ತಾನೇ ಮರಳಿದನು ನೀ
ನವಧರಿಸಿಕೊಳ್ಳೆನುತ ನುಡಿದನು ದೈತ್ಯರಿಪು ನಗುತ ॥ ೪೪

ಅರಸ ಕೇಳೈ ಕರ್ಣಶಕ್ತಿ
ಸ್ಫುರಣಸಹಿತೀ ಬಾಣವತಿ ದು
ರ್ಧರವದಲ್ಲದೆ ಬಱಿಯ ವಿಷಮುಬ್ಬರದ ಸಾಹಸವ ।
ನರನಲೇ ಕೈಕೊಳ್ಳದೀ ಬಹ
ಸರಳನೈದಂಬುಗಳಲೆಡೆಯಲಿ
ತಱಿದು ಬಿಸುಟನು ವೀರನಾರಾಯಣನ ನೇಮದಲಿ ॥ ೪೫

ಇಪ್ಪತ್ತೈದನೆಯ ಸಂಧಿ ಮುಗಿದುದು.

# ಇಪ್ಪತ್ತಾರನೆಯ ಸಂಧಿ

ಸೂಚನೆ ॥ ಚಂಡ ಭುಜಬಲ ವಿಕ್ರಮನ ಮಾ
ರ್ತಂಡತನಯನ ವಿಜಯಸಿರಿ ಮುಂ
ಕೊಂಡು ಮನ್ನಿಸಿ ಭುಜಕೆ ಬಂ[1]ದಳು[1] ಕಲಿ ಧನಂಜಯನ ॥

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳ ಜಯಸಿರಿ ಸರ್ಪಬಾಣದ
ಮೇಳೆಯದ ಸೀಮೆಯಲಿ ನಿಂದುದು ಹಲವು ಮಾತೇನು ।
ಹೇಳಿ ಫಲವೇನಿನ್ನು ಮುಂದಣ
ಕಾಳೆಗದ ಕರ್ಣಾಮೃತದ ಮಳೆ
ಗಾಲ ಮಾದು ವಿಲೋಚನದ ಮಳೆಗಾಲವಾಯ್ತೆಂದ ॥ ೧

ಕಳಿದ ಹೂವಿನ ಪರಿಮಳವೊ ಧರೆ
ಗಿಳಿದ ಸೂರ್ಯಪ್ರಭೆಯೊ ಶರದದ
ಹೊಳೆಯೊ ಮೇಘಸ್ಥಿತಿಯೊ ಸುರಪತಿ ಚಾಪ ವಿಭ್ರಮವೋ ।
ಇಳಿದ ಜವ್ವನದೊಲುಮೆಯೋ ಕುರು
ಬಲವ ಕಂಡೆನು ಜೀಯ ಜಯದ
ಗ್ಗಳಿಕೆಗಳ ಪಾಱುಗಳ ನಿನ್ನ ಕುಮಾರನೊಡ್ಡಿನಲಿ ॥ ೨

ಆಗಳಳಿದುದು ಸರ್ಪಶರ ತಾ
ನಾಗಳೇ ಕುರುರಾಯ ಭುಜವನು
ನೀಗಿದಳು ಜಯವಧು ಧರಾವಧು ಭಾಗ್ಯವಧು ಸಹಿತ ।
ಆಗಳೇ ಬಿನ್ನೈಸೆನೇ ರಣ
ದಾಗುಹೋಗಿನ ಹೊಱಿಗೆಯನು ತಾ
ನೀಗಿ ಬಿಸುಟನು ತನ್ನ ಸತ್ಯಸ್ಥಿತಿಗೆ ಕಲಿ ಕರ್ಣ ॥ ೩

ಆದ[2]ರೇನದು[2] ಮತ್ತೆ ಕರ್ಣನ
ಕೈದುಕಾಱತನಕ್ಕೆ ಸುಭಟರು
ಮೇದಿನಿಯೊಳಾರುಂಟು ಪಡಿ ದೈವಾಭಿಮುಖವುಳಿಯೆ ।

[1] ದುದು (ಕ). [2] ಡೇನ್ನೈ (ಕ).

ಹೋದೆ ಹೋಗಿನ್ನೆನುತ ಕಣೆಗಳ
ಸಾದುಗಳ ತನಿವೀರರಸದಲಿ
ತೇದು ಚಿತ್ರವ ಬರೆದನರ್ಜುನನಂಗಭಿತ್ತಿಯಲಿ ||* ४

ಮತ್ತೆ ಕೃಷ್ಣನನೆಚ್ಚು ಹನುಮನ
ತೆತ್ತಿಸಿದ ಕೂರಂಬಿನಲಿ ಕೈ
ವರ್ತಿಸಿದನೀರೆಂಟು ಶರವನು ತುರಗದೇಹದಲಿ |
ಹೊ[1]ತ್ತಿದುದು[1] ಕಡುಗೋಪ ವಹ್ನಿಯೊ
ಳಿತ್ತಲಿದೆ ನಿಲ್ಲೆನುತ ಪಾರ್ಥನ
ಮೆತ್ತಿ ನೂಱಂಬಿನಲಿ ಪುನರಪಿ ಕಪಿಯನೊಡೆಯೆಚ್ಚ || ೫

ನೆಲನ ಬೇಟದ ಬೇಗೆಗೋಸುಗ
ರಳಿವರಿವದಿರು ಪಾಂಡುನಂದನ
ರಳಿಯಲವದಿರ ಬಳಿಯ ವೇಳಾಯಿತನು ಕೃಷ್ಣ ಗಡ |
ಅಳಿಯಲಥವಾ ನಿಲಲಿ ಹಣುಹಂ
ಪಲು ಮೆಲಿದು ನೀನಿವರ ಬಲೆಯಲಿ
ಸಿಲುಕಿ ನೊಂದ್ಯೆ ತಂದೆ ಪವನಜ ಎಂದನಾ ಕರ್ಣ || ೬

ಬಾಯಿಬಡಿಕನಲಾ ವೃಥಾ ರಾ
ಧೇಯ ಮದವೇಕಿನ್ನು ನಿನಗಹಿ
ಸಾಯಕದ ಸಾವಿನಲಿ ನೀರಿಳಿಸುವೆನು ನೆತ್ತರಲಿ |

---

* ಈ ಪದ್ಯವಾದಮೇಲೆ (ಗ.ನ.ಬ) ಪ್ರತಿಗಳಲ್ಲಿ ಕೆಳಗಿನ ಪದ್ಯಗಳು ಹೆಚ್ಚಾಗಿವೆ :—

ಇಳಿದು ಹೋದಡೆ ಶಲ್ಯನೊಡನ
ಗ್ಗಳಿಕೆ ಹೋಯಿತೆ ತನ್ನ ಭುಜಬಲ
ತೊಲಗಿತೇಯಸಹಾಯಶೂರಗೆ ಪರರ ಹಂಗೇಕೆ |
ಗೆಲುವೆನಹಿತನನೆಂದು ತಾವರೆ
ಗೆಳೆಯನಣುಗನು ಧೃತಿಮಿಗಲು ಕೈ
ಚಳಕದಲಿ ತೆಗೆದೆಸಲು ಬೆಱಗಾಯಿತ್ತು ಸುರಕಟಕ || ೧

ಚಳಕದಲಿ ತೆಗೆದೆಸುವ ಚಾಪವ
ನಿಳುಹುವನು ರಥದೊಳಗೆ ವಾಘೆಯ
ಸೆಳೆದು ತುರಗವನದುಹಿ ಸುಳಿಸುವನೆಡಬಲಕೆ ರಥವ |
ಬಲುಹು ತನ್ನದು ಸಾರಥಿತ್ವದ
ಕಲುಹೆ ತನ್ನದು ರಣದ ಕೌತೂ
ಹಳದ ಕರ್ಣನೊಳಾರು ಸರಿಯೆನುತಿರ್ದುದಮರಗಣ || ೨

[1] ತ್ತಿಕೀ (ಖ), ತ್ತುತಿದೆ (ಘ.ತ).

ತಾಯ ಬಸುಱಿಂಬಿಲ್ಲ ನೀನುಳಿ
ವಾಯತಿಕೆಯಿನ್ನೆಂತು ಕೌರವ
ರಾಯ ನೋಡಲಿ ಕರೆಯೆನುತ ತೆಗೆದೆಚ್ಚನಾ ಪಾರ್ಥ ॥ ೭

ಆಱು ಶರದಿಂದೆಚ್ಚು ಮಗುಳೀ
ರಾಱು ಬಾಣದಲೌಕಿ ಮೂವ
ತ್ತಾಱು ಮಾರ್ಗಣದಿಂದ ಮುಕ್ಕುಱುಕಿದನು ರಿಪುಭಟನ ।
ಮೂಱು ಬಾಣದಲರಿಯ ದೇಹವ
ಕೀಱಿದನು ಮತ್ತೆರಡು ಶರದಲಿ
ಜಾಱಲೆಚ್ಚನು ಜಱಿದು ಕರ್ಣನ ಕರ್ಣಕುಂಡಲವ ॥ ೮

ಜೋಡ ಕಡಿದನು ಸೀಸಕವನೀ
ಡಾಡಿದನು ಕೆಲಬಲದ ಕಣೆಗಳ
ನೀಡುಕಾಱರನಿಕ್ಕಿದನು ಗಱಿಸಹಿತ ಸರಳುಗಿಯೆ ।
ಹೂಡಿದಂಬಿನ ಹೊದೆಯ ಬಂಡಿಯ
ತೋಡ ಕಡಿದನು ಛತ್ರ ಚಮರದ
ಝಾಡಿಗಳ ತಱಿದೊಟ್ಟಿದನು ಕಲಿ ಪಾರ್ಥ ನಿಮಿಷದಲಿ ॥ ೯

ಈತನಖ್ಖುಡಿಸುವನೆ ಬಳಿಕಿನೊ
ಳಾ ತತುಕ್ಷಣವರ್ಜುನನ ಚಮು
ರಾತಪತ್ರವ್ಯೂಹವನು ಕೈದುಗಳ ಬಂಡಿಗಳ ।
ಘಾತಿಸಿದನೆಡಬಲದ ಸುಭಟ
ವ್ರಾತವನು ಕೆದಱಿದನು ಸರಳ ವಿ
ಘಾತಿಯಲಿ ಬಲುಘಾಯವಡೆದನು ಪಾರ್ಥನಡಿಗಡಿಗೆ ॥ ೧೦

ಅರಸ ಹೇಳುವುದೇನು ರಾಯನ
ಸಿರಿಯ ಪೈಸರವನು ಸುಯೋಧನ
ನರಸುತನದಾಧಾರ ಮೂಲಸ್ತಂಭ ಭಂಜನವ ।
ನರನ [1]ಜಯುವೆಲ್ಲಿಯದು[1] ದೈವವ
ಮರುಳುಮಾಡಿದರವರು ನಿಮ್ಮಯ
ಧರಣಿ ನಿಮಗನುಚಿತವ ನೆನೆದಳು ಹೇಳಲೇನೆಂದ ॥ ೧೧

---

[1] ಗೆಲವಿನಿತಿಲ್ಲ (ಕ).

ಧರೆ ನೆನೆದ ದುಷ್ಕೃತವದೇನಂ
ದರಸ ಬೆಸಗೊಂಬ್ಬೆ ನಿರಂತರ
ಸುರಿವ ರುಧಿರಾಸಾರದಲಿ ಕೆಸಱೆದ್ದು ಕಳನೊಳಗೆ ।
ಹರಿವ ಬಿಂಕದ ರಥದ ಗಾಲಿಯು
ಗರುವತನ ಗಾಳಾಯ್ತಲೇ ಖೊ
ಪ್ಪರಿಸಿ ತಗ್ಗಿತು ತೇರು ತಡೆದುದು ಭಟನ ಸಾಹಸವ ॥* ೧೨

ಗಾಲಿಯದ್ದವು ಕೂಡೆ ಯಂತ್ರದ
ಕೀಲುಗಳು ಕಳಚಿದವು ಹಯತತಿ
ತೂಳಿ ಸತ್ವದಲೌಕಿ ಸೆಳೆದವು ಕುಸಿದು ನಿಜಮುಖವ ।
ಮೇಲು ಮಿಡುಕದು ತೇರು ಕುರುಬಲ
ಜಾಲ ಜರಿದುದು ವೈರಿಬಲದಲಿ
ಸೂಳವಿಸಿದರು ಭುಜವನೊದಱಿತು ಬೆರಳ ಬಾಯ್ಗಳಲಿ ॥ ೧೩

ಮೂಗಿನಲಿ ಬೆರಳಿಟ್ಟು ಮಕುಟವ
ತೂಗಿ ತೊನೆದನು ಪೂತು ಮಝು ನಿ
ರ್ಭಾಗಧೇಯನು ರಾಯನಕಟಾ ಶಿವ ಮಹಾದೇವ ।
ಈಗಳಿದು ತಾನೇನು ವಿಧಿ ಬರೆ
ದೋಗಡೆಯೊ ಕುರುವಂಶ ವಜ್ರದ
ಬೇಗಡೆಯೊ ಮಾವಮಾ ಎನುತ ಮಱುಗಿದನು ಕಲಿ ಕರ್ಣ ॥ ೧೪

ಶಿವನ ಬಲುಹುಂಟೆಂಬೆನೇ ಶಿವ
ನವರ ಕಡೆ ಹರಿಯೆಂಬೆನೇ ಪಾಂ
ಡವರ ಬಂಡಿಯ ಬೋವನಿಂದ್ರಾದ್ಯರು ಸಹಾಯಿಗಳು ।
ಅವರು ಸಾಕ್ಷಾತರ್ಜುನರು ನ
ಮ್ಮವನಿ ನಮಗುಂಟೆಂಬೆನೇ ಕೌ
ರವನ ಪುಣ್ಯವನಱಿಯೆನಿದು ಹದನೆಂದನಾ ಕರ್ಣ ॥ ೧೫

---

* ಈ ಪದ್ಯವಾದಮೇಲೆ (ಕ.ಫ.ಟಿ.ದ.ಪ) ಪ್ರತಿಗಳಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ :—

ದುರುಳ ದುರಿಯೋಧನನ ರಾಜ್ಯೈ
ಶ್ವರಿಯುವಡಗಿದ್ದಂತೆ ಕರ್ಣನ
ತುರಗ ಸಹಿತವನಿಯೊಳಗದ್ದುದು ತೇರು ಕುಕ್ಕಿಱಿಸಿ ।
ತೆರಳಿ ವಾಘೆಯ ಸೆಳದು ಕಬ್ಬಿಯ
ತಿರುಹಿ ಚಪ್ಪರಿಸಿದರೆ ಸತ್ವದ
ಲುರವಣಿಸಿ ಜವಗುಂದಿ ತಲೆವಾಗಿದವು ತೇಜಿಗಳು ॥

ಇಳುಹಿದನು ರಥದೊಳಗೆ ಚಾಪವ
ನಳವಡಿಸಿದನು ಸೆಣಿಗನಲ್ಲಿಂ
ದಿಳಿದು ಗಾಲಿಯನಲುಗಿ ಪಾರ್ಥನ ನೋಡಿ ನಸುನಗುತ ।
ಎಲೆ ಧನಂಜಯ ಸೈರಿಸುವುದರೆ
ಗಳಿಗೆಯನು ರಥವೆತ್ತಿ ನಿನಗಾ
ನಳವಿಗೊಡುವೆನು ತನ್ನ ಪರಿಯನು ಬಳಿಕ ನೋಡೆಂದ ॥ ೧೬

*ರೂಡಿಸಿದ ಭಟ ನೀನು ಪಂಥದ
ಪಾಡುಗಳ ಬಲ್ಲವನು ಶಾಸ್ತ್ರವ
ಖೋಡಿಗಳೆವವನಲ್ಲ ಲೌಕಿಕ ವೈದಿಕ ಸ್ಥಿತಿಯ ।
[1]ನಾಡೆ[1] ಬಲ್ಲಿರಿ ಶಸ್ತ್ರಹೀನರ
ಕೂಡೆ ವಾಹನಹೀನರಲಿ ಕೈ
ಮಾಡಲನುಚಿತವೆಂಬ [2]ಮಾರ್ಗ[2]ವನೆಂದನಾ ಕರ್ಣ ॥ ೧೭

ಎನುತ ಗಾಲಿಯನಲುಗಿ ಕೀಲ
ಚ್ಚಿನಲಿ ಮುಂಗೈಗೊಟ್ಟು ಮೊಳಕಾ
ಲಿನಲಿ ಧರಣಿಯನೌಕಿ ತಗ್ಗಿದ ರಥವ ನೆಗಹುತಿರೆ ।
ದನುಜರಿಪು ಚಮ್ಮಟಿಗೆಯಲಿ ಫಲು
ಗುಣನ ತಿವಿದನು ನೋಡು ರಾಧಾ
ತನುಜನಿರವನು ಬೇಗಮಾಡೆಂದರ್ಜುನನ ಜಱೆದ ॥ ೧೮

ಎಸು ಮರುಳೆ ಗಾಂಡೀವಿಯಾಪ
ತ್ತೆಸಗಿದಾಗಳೆ ಹಗೆಯ ಗೆಲುವುದು
ವಸುಮತೀಶರ ನೀತಿ ತೊಡು ತೊಡು ದಿವ್ಯಮಾರ್ಗಣವ
ವಿಷಮವೀರನು ರಥವ ಮೇಳಾ
ಪಿಸದ ಮುನ್ನವೆ ಹ[3]ಱೆ[3]ವ ನೆನೆ ಸೈ
ರಿಸಿದ ಬಳಿಕೀ ಕರ್ಣ ಕೈಕೊಂಬನೆ ತ್ರಿಯಂಬಕನ ॥ ೧೯

ಏನನೆಂಬೆನು ಜೀಯ ಕರ್ಣಂ
ಗೇನಹನೊ ಫಲುಗುಣನು ಬಳಿಕಾ
ದಾನವಾರಿಯ ನುಡಿಯ ಕೇಳಿದು ಕೇಳಿದಾಕ್ಷಣಕೆ ।

---

* 'ರೂಢಿಸಿದ' ಎಂಬ ಶಬ್ದವು ಪದ್ಯದ ಆದಿಯಲ್ಲಿ ಬರುವೆಡೆಯಲ್ಲೆಲ್ಲಾ ಓಲೆ ಪ್ರತಿಗಳಲ್ಲಿ ಆದಿ ರಕಾರವು ಶಕಟರೇಫವಾಗಿಯೇ ಬರೆದಿರುತ್ತದೆ.

[1] ನಾಡ (ಕ.ಖ.ತ), ಆಡ (ಫ). [2] ಶಾಸ್ತ್ರ (ಕ.ಗ). [3] ಱು (ಕ.ಖ.ತ).

ಗ್ಲಾನಿಯಲಿ ಮುಳುಗಿದನು ಮನದಭಿ
ಮಾನ ಸರ್ಪನ ಕೆಡಹಿ ಧೈರ‍್ಯನಿ
ಧಾನವನು [1]ಕೈ[1]ಸೂರೆಗೊಂಡುದು ಶೋಕವರ್ಜುನನ ॥ ೨೦

ಮುಕ್ಕಿದನು ಮಹಿಮೆಯನು ಕಂಗಳು
ಮುಕ್ಕುಳಿಸಿದವು ನೀರನಹಿತನೊ
ಳುಕ್ಕುವನುರಾಗದಲಿ ಕೊಂಡನು ಬಳಿಕ ವೀಳೆಯವ ।
ಸಿಕ್ಕಿದನು ಕರುಣಾಲತಾಂಗಿಯ
ತೆಕ್ಕೆಯಲಿ ನಾನೇನ ಹೇಳುವೆ
ನೊಕ್ಕಲಿಕ್ಕಿತು ಶೋಕವರ್ಜುನನಂತರಂಗದಲಿ ॥* ೨೧

ತೇರಿನಲಿ ಚಾಚಿದನು ಮೆಲ್ಲನೆ
ಭಾರಿ ಧನುವನು ಕಯ್ಯ ಕಣೆಗಳ
ನೋರೆಯಲಿ [2]ಸೈತಿರಿಸೆ[2] ಕಂಡನು ಮತ್ತೆ ಮುರವೈರಿ ।
ಹಾರವೇಕೈ ಕಂಗಳಲಿ ಕ
ಸ್ತೂರಿಯೇಕೈ ಕದಪಿನಲಿ ಶೃಂ
ಗಾರವಿದು ವಿಪರೀತವೇನೈ ಪಾರ್ಥ ಹೇಳೆಂದ ॥† ೨೨

ದೇವ ಹಗೆಯಾಗಿರನು ಕರ್ಣನಿ
ದಾವ ಹದನೆಂದಱಿಯೆ ಮನದಲಿ
ನೋವು ಮಿಗುವುದು ಕೈಗಳೇಳವು ತುಡುಕುವಡೆ ಧನುವ ।
ಜೀವವೀತನಮೇಲೆ ಕರಗುವು
ದಾವ ಸಖನೋ ಶತ್ರುವೆಂಬೀ
ಭಾವನೆಯ ಬಗೆ ಬೀಳುಕೊಂಡುದು ಕರ್ಣನಾರೆಂದ ॥ ೨೩

ಕೌರವನ ಮೇಲಿಲ್ಲದಗ್ಗದ
ವೈರವೀತನಮೇಲೆ ನಮಗಪ
ಕಾರಿಯಾತನು ಮರಣದನುಸಂಧಾನವಿನ್ನೆಬರ ।
ವೈರವುಪಶಮಿಸಿತು ಯುಧಿಷ್ಠಿರ
ವೀರನಿಂದಿಮ್ಮಡಿಯ ನೇಹದ
ಭಾರವಣೆ ತೋಱುವುದಿದೇನೈ ಕರ್ಣನಾರೆಂದ ॥ ೨೪

---

[1] ಸಲೆ (ಕ ಖ.ಘ.ಚ.ದ). * ಈ ಪದ್ಯ (ದ) ಪ್ರತಿಯಲ್ಲಿಲ್ಲ. [2] ಸಸಿನೆಯಲಿ (ತ). † ಇಲ್ಲಿಂದ ಮುಂದಕ್ಕೆ ಬೇರೆಬೇರೆ ಪ್ರತಿಗಳಲ್ಲಿ ಪದ್ಯಗಳ ಕ್ರಮವು ಬೇರೆ ಬೇರೆ ರೀತಿಯಾಗಿದೆ.

ಆಸುರದ ವ್ಯಾಮೋಹವಿದು ಡೊ
ಳ್ಳಾಸವೋ ಕೌರವರ ಘಟ್ಟಿನ
ವ್ಯಸಿಕವೊ ನಿಮ್ಮಡಿಯ ಮಾಯಾಮಯದ ಮಾಲೆಗಳೊ ।
ವಾಸಿ ಬೀತುದು ಛಲಗಿಲದ ಕಾ
ಳಾಸ ಸೋತುದು ಕರ್ಣನಲಿ ಹಿರಿ
ದಾಸೆಯಾಯಿತು ಕೃಷ್ಣ ಕರುಣಿಸು ಕರ್ಣನಾರೆಂದ ॥ ೨೫

ಕಾಲಯವನನುಪಾಯದಿಂದವೆ
ಬೀಳಿಸಿದೆ ಮಾಗಧನನಾ ಪರಿ
ಸೀಳಿಸಿದೆ ಭೀಷ್ಮಾದಿಗಳ ಸೋಲಿಸಿದೆ ಸಾಮದಲಿ ।
ಡಾಳನತಿ ಡೊಂಕಣಿಯ ಠಕ್ಕಿನ
ಠೌಳಿಕಾಱನು ನಿನ್ನ ಮಾಯೆಯ
ಹೇಳಲಮ್ಮೆನು ಕೃಷ್ಣ ಕರುಣಿಸು ಕರ್ಣನಾರೆಂದ ॥ ೨೬

ಋಷಿಗಳನುಮತದಿಂದ ಕುಂತಿಯ
ಬಸುಱಲೇನುದಯಿಸನಲೇ ನೀ
ನಸುರರಿಪು ಬಹುಕಪಟ ನಾಟಕ ಸೂತ್ರಧಾರನಲೆ ।
ವಸುಮತಿಯ ಭಾರವನು ಸಲೆ ಹಿಂ
ಗಿಸುವ ಕೃತ್ಯವು ನಿನ್ನದೆನಗು
ಬ್ಬಸವಿದೇನೆಂದಱಿಯೆನಕಟಾ ಕರ್ಣನಾರೆಂದ ॥ ೨೭

ಧರೆಯ [1]ಬಿಡುವೆವು[1] ಕುರುಪತಿಗೆ ನಾ
ವಱುವರೊಡವುಟ್ಟಿದರು ವಿಪಿನಾಂ
ತರದೊಳಗೆ ಭಜಿಸುವೆವು ನಿನ್ನನು ಭಾವಶುದ್ಧಿಯಲಿ ।
ತೆರಳುವೀ ಸಿರಿಗೋಸುಗರ ಸೋ
ದರನ ಕೊಲುವೆನೆ ಕೃಷ್ಣ ಕರುಣಿಸು
ಕರುಣಿಸಕಟಾ ಕೃಷ್ಣ ಕರುಣಿಸು ಕರ್ಣನಾರೆಂದ ॥ ೨೮

ದೂಱುವವರಾವಲ್ಲ ಕರುಣವ
ತೋಱು ಬಿನ್ನಹಮಾಡಿದೆನು ಹಗೆ
ಯೇಱದಿವನಲಿ ಸೇರುವುದು ಸೋದರರದ ಸಂಬಂಧ ।

---

[1] ಬಿಟ್ಟೆವು (ಕ.ಗ).

ಆಱನೀತನ ಕೊಲೆಗೆ ಹೃದಯವ
ಸೂಱೆಗೊಂಡನು ಕರ್ಣನಕಟಾ
ತೋಱಿ ನುಡಿಯಾ ಕೃಷ್ಣ ಕರುಣಿಸು ಕರ್ಣನಾರೆಂದ ॥ ೨೯

ಅರಸ ಕೇಳೈ ಬಳಿಕ ಪಾರ್ಥನ
ಕರುಣರಸದಾಳಾಪ ವಾಗ್ವಿ
ಸ್ತರಕೆ ಮನದಲಿ ಮಱುಗಿದನು ಮುರವೈರಿ ನಸುನಗುತ ।
ಕೆರಳಿದನು ಮಾತಿನಲಿ ಸುಡು ಬಾ
ಹಿರನಲಾ ನೀ ನಿನ್ನ ವಂಶಕೆ
ಸರಿಯೆ ಸೂತನ ಮಗನಿದೇನೆಂದಸುರರಿಪು ಜಱೆದ ॥ ೩೦

ವಾಸಿಗಾದುದೆ ಜಾತಿಸಂಕರ
ಬೇಸಱಾಯಿತೆ ಧೃತಿಗೆ ಕಲಿತನ
ಕೀಸು ಮೊಲೆಗಳು ಮೂಡಿದವಲಾ ಪಾರ್ಥ ಸಮರದಲಿ ।
[1]ಹೂಸಕದ ಛಲವೀಯಹಂ[1]ಕೃತಿ
ಮೀಸಲಳಿದುದೆ ಶಿವಶಿವಾ ನಿ
ರ್ದೋಷದಲಿ ಬಹುದೋಷವಿದು ವಿಪರೀತವಾಯ್ತೆಂದ ॥ ೩೧

ಕ್ಷಿತಿಯೊಳೀ ಕ್ಷತ್ರಿಯರ ಧರ್ಮ
ಸ್ಥಿತಿಯನಱಿಯಾ ಕೃಷ್ಣ ಚಾಪ
ಚ್ಯುತರನಪಗತ ವಾಹನರ ಪರಿಮುಕ್ತ ಕೇಶಿಗಳ ।
ಗತಿವಿಹೀನರ ದೈನ್ಯವಾಚಾ
ಯುತರ ತರು ವಲ್ಮೀಕ ಜಲ ಸಂ
ಗತರನಿಱಿವುದು ಧರ್ಮವೇ ನಾವಱಿಯೆವಿದನೆಂದ ॥ ೩೨

ಹೇಳು ಹೇಳನ್ನೊಮ್ಮೆ ಧರ್ಮವ
ಕೇಳಿದಱಿಯೆವು ನಿಮ್ಮ ಕಯ್ಯಲಿ
ಕೇಳಲಾಗದೆ ರಾಜಧರ್ಮ ಪುರಾಣ ಸಂಗತಿಯ ।
ಆಳವನಘಾಟವೆ ದೊಠಾರಿಸಿ
ಸೋಲಿಸುವುದೇನರಿದೆ ಬಲುಗೈ
ಯಾಳಲಾ ನೀ ರಣಕೆ ದಿಟ ವಸುದೇವನಾಣೆಂದ ॥ ೩೩

---

[1] ದೂಸಕದ ಛಲಛಲವಹಂ (ಘ), ದೂಸಕದ ಫಲವೀಯಹಂ (ತ). ದೂಸ
ಕನ ಛಲವೀಯಹಂ (ಪ).

ಈಗಲೀ ಧರ್ಮಶ್ರವಣ ನೀ
ನಾಗಳೇಱಸಿ ನುಡಿದ ಭಾಷೆಗೆ
ಮೂಗುಹೋದುದೆ ಮಱೆದಲಾ ಮಾತುಗಳು ಹಳಸುವವೆ ।
ಹೋಗಲೆಲೆ ಮರುಳೇ ವಿಭಾಡಿಸು
ಬೇಗದಲಿ ಬಹುರಾಜಕಾರ್ಯವ
ನೀಗಳೇ ತಿದ್ದುವೆನು ತೊಲಗಿಸು ಸೂತಜನ ಶಿರವ ॥ ೩೪

ಅಕಟ ನಿಷ್ಕರುಣಿಯೆ ವೃಥಾ ಪಾ
ತಕವಿದೇಕೈ ಹೇಳು ಜಯಕಾ
ಮುಕರು ನಾವೊಲ್ಲದಡೆ ನಿಮಗೇಕೀಸು ನಿರ್ಬಂಧ ।
ಪ್ರಕಟ ಕುರುವಂಶದಲಿ ಯದುರಾ
ಜಕರೊಡನೆ ಹಗೆಯಿಲ್ಲಲೇ ಮತಿ
ವಿಕಳನಾದೆನು ಕೃಷ್ಣ ಕರ್ಣನ ಕೊಲುವನಲ್ಲೆಂದ ॥ ೩೫

ಬಿಸುಟು ಹೋದನು ರಥವ ಸಾರಥಿ
ವಸುಧೆಯಲಿ ರಥವದ್ದು ಕೆಡೆದುದು
ನಿಶಿತಮಾರ್ಗಣವಿಲ್ಲ ಕಯ್ಯಲಿ ದಿವ್ಯಧನುವಿಲ್ಲ ।
ಎಸುವಡೆಂತೇಳುವುವು ಕಯ್ ನೀ
ಬೆಸಸುವಡೆ ಮನವೆಂತು ಬಂದುದು
ಬಸುಱ ಶಿಖಿ ಬಲುಹಾಯ್ತು ಕರ್ಣನ ಕೊಲುವನಲ್ಲೆಂದ ॥ ೩೬

ಗುರುವನೆಸುವಡೆ ಮೇಣು ಭೀಷ್ಮನ
ಸರಳ ತಡಿಕೆಗೆ ಚಾಚುವಡೆ ಧಿ
ಕ್ಕರಿಸುವಡೆ ಕೃಪ ಶಲ್ಯ ಸೈಂಧವ ಮುಖ್ಯ ಬಾಂಧವರ ।
ತೆರಳಿದನೆ ತೇರೈಸಿದನೆ ಹೇ
ವರಿಸಿದೆನೆ ಹೋರಿದೆನೆ ಕಲಿತನ
ಕರಗಿತೇನೆಂದಱಿಯೆ ಕರ್ಣನ ಕೊಲುವನಲ್ಲೆಂದ ॥ ೩೭

ಬಳಿಕ ಭೀಮಾದಿಗಳ ಮನದಲಿ
ಸುಳಿದುದೈ ಸಂದೇಹವೀತನ
ಕೊಲುವುದೇನನುಚಿತವೊ ಮೇಣುಚಿತವೊ ಶಿವಾ ಎನುತ ।
ಅಳುಕಿದರು ದ್ರೌಪದಿ ಯುಧಿಷ್ಠಿರ
ರೊಳಗೊಳಗೆ ಸಂತಾಪಶಿಖಿಯಲಿ
[1]ತಳಿತ ದುಗುಡದ[1] ಬಗಿದ ಬೆಱಗಿನೊಳದ್ದುದಾಚೆಯಲಿ ॥ ೩೮

[1] ಗಳಿತಧೈರ್ಯದ (ಘ.ಟ.ತ.ದ.ಬ).

ಮೊದಲಲೆರಡೊಡ್ಡಿನಲಿ ಸುಷ್ಮಾ
ನದ ಸಘಾಡವ ಕಂಡೆನೀಗಳು
ತುದಿಗೆ ಬರೆವರೆ ಕಂಡೆನಿವರವರೆರಡು ಥಟ್ಟಿನಲಿ ।
ತುದಿವೆರಳ ಕಂಬನಿಯ ಬಳಸಿದ
ಬೆದಱುಗಳ ಕುಕ್ಕುಳಿಸಿದುತ್ಸಾ
ಹದ [1]ವಿಘಾತಿಯ[1] ನಟ್ಟ ಚಿಂತೆಯನರಸ ಕೇಳೆಂದ ॥ ೩೯

ಮತ್ತೆ ಜಱೆದನು ದನುಜರಿಪು ತಲೆ
ಗುತ್ತಿದನು ಕಲಿ ಪಾರ್ಥನಾತನ
ಕುತ್ತಿ ಬರಸೆಳೆದಂತೆ ಭಂಗಿಸಿದನು ಮುರಧ್ವಂಸಿ ।
ಒತ್ತುವವು ಫಲುಗುಣನ ನುಡಿ ಮಿಗೆ
ಕೆತ್ತುವವು ಹರಿವಚನವಾತನ
ಚಿತ್ತವನು ಸಂತೈಸಿ ಹರಿ ತಿಳುಹಿದನು ಸಾಮದಲಿ ॥ ೪೦

ಎಲೆ ಧನಂಜಯ [2]ನೀನು[2] ಹಿಮಕರ
ಕುಲದ ಸುಕುಮಾರಕನು ಲೋಕದ
ಕುಲವಿಹೀನನು ಕರ್ಣನಿವ ನಿನಗೆಂತು ಸರಿಯಹನು ।
ತಲೆಯ ಮಾಱಿ ಶರೀರವನು ಸಲೆ
ಸಲಹಲೋಸುಗ ಕೌರವನ ತಂ
ಬುಲಕೆ ಕಯ್ಯಾಂತವನು ಬಂಧುವೆ ಪಾರ್ಥ ಹೇಳೆಂದ ॥* ೪೧

---

[1] ನಿಹಾರದ (ಖ.ಘ.ತ). [2] ವಿಮಳ (ಕ.ಟ.ದ). * ಈ ಪದ್ಯವಾದ ಮೇಲೆ (ಕ.ಗ.ಟ.ದ) ಪ್ರತಿಗಳಲ್ಲಿ ಮುಂದಿನೆರಡು ಪದ್ಯಗಳು ಹೆಚ್ಚಾಗಿವೆ :—

ಮರುಳೆ ವೀರಭಟಂಗೆ ರಣದಲಿ
ಕರಗುವುದೆ ಶೂರತ್ವವು ನಗುವರ
ನಱಿಯಲಾ ನೀನಾರು ದುಷ್ಕುಲ ಕರ್ಣನಿವನಾರು ।
ಸರಳ ಸೆಳೆ ನೀನಹಿತಕರ್ಣನ
ಕೊರಳ ಬಳೆಯನು ಬಳಸು ಬಯಲನು
ಕರುಣಿ ಬೇಡೆಂದಸುರರಿಪು ಥಟ್ಟಿಸಿದನರ್ಜುನನ ॥ ೧

ಬೊಲೆಯು ಮೇಲಿಱಿದವನನಗ್ಗಿಸಿ
ಸಲಹುವರು ಪುರುಷಾರ್ಥಜೀವಿಯ
ನಿಳಿಕೆ ಗಾಬರು ಸ್ವಾಮಿದ್ರೋಹರನೊಲಿದು ನಂಬುವರು ।
ತಿಳಿಯಲಿದು ಕ್ಷತ್ರಿಯರ ಸಹಜದ
ಬಳಿಕೆ ನೀನರಸಾಗಿ ನಿನ್ನನು
ಕೊಲುವ ಕರ್ಣಂಗೊಲಿದೆ ನೀತಿಯು ವಚನ ದಿಟವೆಂದ ॥ ೨

ಕೇಡ ಹೊತ್ತಿಸಿ ನಿಮ್ಮ ಬೇಂಟೆಯ
ನಾಡಿಸಿ[1]ದನಿವ[1] ಜೂಜನಾಡಿಸಿ
ನಾಡ ಕೊಳಿಸಿದ ಪಿಸುಣನಿವ ನಿಮ್ಮೆಲ್ಲರನು ಕೆಡಿಸಿ ।
ನಾಡ ಸಂಧಾನವನು ನಾವ್ ಮಾ
ತಾಡಲೆಮ್ಮನು ಬಿಗಿಯಲನುವನು
ಮಾಡಿ[2]ಸಿದ[2]ನೀ ಕರ್ಣ ನಿಮಗತಿಹಿತವನಹನೆಂದ ॥ ೪೨

ಕೊಲ್ಲನೇ ಅಭಿಮನ್ಯುವನು ಹಗೆ
ಯಲ್ಲವೇ ಮಾರುತಿಯ ಕೊರಳನು
ಬಿಲ್ಲ ಕೊಪ್ಪಿನೊಳೆಳೆಯನೇ ಕೆಡೆಯೆಸನೆ ಧರ್ಮಜನ ।
[3]ಖುಲ್ಲ[3]ನೀತಿಯ ನೆನೆಯದಿರು ನೀ
ನೆಲ್ಲಿಯವನೀ ವೈರಿ ಕರ್ಣನ
ದೆಲ್ಲಿಯವನೆಸು ಮರುಳೆ ಎಂದನು [4]ನಿಜವ ತೋಱಿಸದೆ[4] ॥ ೪೩

ಬೀಸಿದನು ನಿಜ ಮಾಯೆಯನು ಡೊ
ಳ್ಳಾಸದಲಿ ಹರಹಿದನು ತಮವನು
ರೋಷವನು ಬಿತ್ತಿದನು ಮನದಲಿ ನರನ ಕಲಿ ಮಾಡಿ ।
ಐಸೆ ಬಳಿಕೇನೆನ್ನ ಖಳ ಗುಣ
ದೋಷ ನಿನ್ನದು ಪುಣ್ಯ ಪಾಪದ
ವಾಸಿ ನಮಗೇಕೆನುತ ಕೊಂಡನು ಧನುವನಾ ಪಾರ್ಥ ॥ ೪೪

ಹಿಡಿ ಧನುವನನುವಾಗು ಸಾಕಿ
ನ್ನೆಡಬಲನ ಹಾರದಿರೆನುತ ಕಯ್
ಗಡಿಯನೆಚ್ಚನು ನೂಱು ಶರದಲಿ ಸೂತನಂದನನ ।
ತೊಡಗಿತೇ ಕಕ್ಕುಲಿತೆ ಮನದಲಿ
ಫಡ ಎನುತ ನೂಱಂಬನೆಡೆಯಲಿ
ಕಡಿದು ಬಿಸುಟನು ಸೆಳೆದ ಕಿಗ್ಗಟ್ಟಿನ ಕಠಾರಿಯಲಿ ॥ ೪೫

ರಥವ ಸಂತೈಸಿದನು ಬಳಿಕತಿ
ರಥ ಭಯಂಕರನೇಱಿದನು [5]ನಿಜ
ರಥವನತಿಹರುಷದಲಿ[5] ತೊಳೆದನು ಚರಣ ಕರತಳವ ।
ಪೃಥಿವಿ ನೆನೆದಪಕಾರ ಲೋಕ
ಪ್ರಥಿತವಾಯಿತು ಸಾಕು ಬದುಕಲಿ
ಪೃಥೆಯ ಮಕ್ಕಳೆನುತ್ತ ಕೊಂಡನು ನಗುತ ವೀಳೆಯವ ॥ ೪೬

---

[1] ದವನಿ (ಖ.ಟ). [2] ದವ (ಘ.ತ.ದ.ಪ). [3] ಇಲ್ಲಿ (ತ.ಪ). [4] ನಿಜವ ತೋಱಿಸಿದ (ಕ), ಜಱೆದು ಮುರವೈರಿ (ಘ.ತ). [5] ಹಯತತಿಯ ಚಪ್ಪರಿಸಿದನು (ತ).

ಧನುವ ಕೊಂಡನು ಹಯವ ಜಱೆದ
ರ್ಜುನನ ತಱುಬಿದನಖಿಳ ಕುರುಬಲ
ವನಧಿಗಭಯವನಿತ್ತು ಮುಸುಕಿದನಂಬಿನಲಿ ನರನ ।
ಕನಲಿದವು ನಿಸ್ಸಾಳ ರಿಪುನೃಪ
ಜನವ ಬಯ್ದವು ಕಹಳೆ ಬಹುವಿಧ
ನಿನದದಲಿ ಗರ್ಜಿಸಿದವೆರಡೊಡ್ಡಿನಲಿ ಘನವಾದ್ಯ ॥ ೪೭

ಅಳುಕಿದನೆ ರಥ ಮುಗ್ಗಿದರೆ ಕಳೆ
ವಳಸಿದನೆ ಶಲ್ಯಾಪಸರಣಕೆ
ಕೆಲಬಲನ ಹಾರಿದನೆ ನರನವಗಡಿಸಿ ಕಾದಿದಡೆ ।
ಬಲಿಮಥನ ಮಝು ಭಾಪು ಪಾಂಡವ
ಬಲ ದಿಶಾಪಟ ರಾಯಮದನ
ಪ್ರಳಯಹರ ಭಾಪೆಂದು ಹೊಗಳಿತು ವಂದಿ ಸಂದೋಹ ॥ ೪೮

ಅರಸ ಕೇಳೈ ಜೂಜುಗಾಱರ
ಸಿರಿಯು ಸಡಗರ ಕಳಿವಗಲ ತಾ
ವರೆಯು ನಗೆ ಸಜ್ಜನರ ಖ್ಯಾತಿ ನಿತಂಬಿನೀ ಸ್ನೇಹ ।
ಪರಮಯೋಗಿಯ ಲೀಲೆ ಕೌರವ
ರರಸನೊಡ್ಡಿನ ಜಯವಿದೀಸಱ
ಗರುಡಿಯೊಂದೇ ಶ್ರಮವ ಕೊಡುವುದು ಶಕ್ರಧನುವೆಂದ ॥ ೪೯

*ಉಬ್ಬಿದನು ನಿನ್ನಾತನಾತನ
ತುಬ್ಬಿನಲಿ ಕುರುಬಲದ ಹರುಷದ
ಜಬ್ಬುರಿಯ ಹುರಿಗೂಡಿ ತೋಱಿತು ಚಾರು ಚತುರಂಗ ।
[1]ತೆಬ್ಬಿ[1] ತುಳುಕುವ ಕಣೆಯು ಕಣೆಯಲಿ
ಹಬ್ಬಿ ಹರೆದುದು ತೋಱದಲಿ ಬಲಿ
ದುಬ್ಬುಗವಳದ ಕಣ್ಣುಗಳು [2]ಕರ್ಣಾವಸಾನದಲಿ[2] ? ॥* ೫೦

---

*ಉಬ್ಬಿದನು ನಿನ್ನಾತನೀತನ
ತಬ್ಬಿದನು ಕುರುಬಲದ ಹರುಷದ
ಜಬ್ಬುರಿಯ ಹುರಿಗೂಡಿತೊದಱಿತು ಚತುರ ಚತುರಂಗ ।
ತಬ್ಬಿತುಳ ಕಣೆಯು ಕಣಗಿಲೆ ಹಬ್ಬಿ
ಹರೆದುದು ಶೋಕದಲಿ ಬಲ
ದುಬ್ಬುಗವಳವ ಕೊಂಡವೊಲು ಕರ್ಣಾವಸಾನದಲಿ ॥ (ಕ).

[1] ತುಬ್ಬಿ (ಗ.ಟ.ತ.ದ.ಪ). [2] ಕರ್ಣನ ಸಘಾಡದಲಿ (ದ), ಕರ್ಣಾಪಹಾಸದಲಿ (ಪ).

ಹತ್ತು ಶರದಲಿ ತುರಗವನು ಮೂ
ವತ್ತಱಲಿ ಮುರವೈರಿಯನು ತೊಂ
ಬತ್ತಱಲಿ ಫಲುಗುಣನನೈವತ್ತಂಬಿನಲಿ ಕಪಿಯ ।
ಮತ್ತೆ ಮೂವತ್ತಱಲಿ ಮಗುಳೆಱು
ವತ್ತಱಲಿ ನರರಥವ ನೂಱೈ
ವತ್ತು ಶರದಲಿ ಘಾಯಗಾಣಿಸಿದನು ಚತುರ್ಬಲವ ॥ ೫೧

ಬಲಜಲಧಿ ಸುಳಿಗೊಂಡು ಪಾರ್ಥನ
ಬಳಿಗೆ ತೆಗೆದುದು ತೆಗೆದುದೀತನ
ಕಲಿತನದ ವಿಕ್ರಮ ಧನಂಜಯನಾ ಧನಂಜಯನ ।
ಅಳುಕಿದರು ಭೀಮಾದಿಗಳು ತ
ಲ್ಲಳಿಸಿತಾಚೆಯ ಥಟ್ಟು ಕೌರವ
ದಳದ ಕಳಕಳ ಕೆಟ್ಟುದೊಂದರೆಗಳಿಗೆ ಮಾತ್ರದಲಿ ॥ ೫೨

ಇಪ್ಪತ್ತಾಱನೆಯ ಸಂಧಿ ಮುಗಿದುದು.

---

# ಇಪ್ಪತ್ತೇಳನೆಯ ಸಂಧಿ

ಸೂಚನೆ ॥ ಸಮರ ಸಾಹಸ[1]ವೀರನನುಪಮ[1]
ಕಮಲಸಖನ ಕುಮಾರನದಟಿಂ
ದಮರನಗರಿಗೆ ನಡೆಯೆ ಹಲುಬಿದ ಕೌರವರ ರಾಯ ॥

ಸಾಲದೇ ಕಥೆಯಿನ್ನು ಮೇಲಣ
ಕಾಳೆಗದ ಮಾತುಗಳನಕಟಾ
ಕೇಳಿ ಜೀವವ [2]ಹಿಡಿ[2]ಯಲಾಪ್ಪೆ ತಂದೆ ಧೃತರಾಷ್ಟ್ರ ।
ಹೇಳುವಡೆ ಕರ್ಣವ್ಯಥೆಯ ಸಂ
ಭಾಳಿಸುವಡೆನಗರಿದು ನುಡಿಗಳ
ಕಾಳಕೂಟವ ಬಡಿಸುವೆನು ಕಿವಿಯಾರೆ ಸವಿಯೆಂದ ॥ ೧

ತೂಳಿದನು ಕಲಿ ಪಾರ್ಥನೀತನ
ಮೇಲೆ ಶಿವಶಿವ ಕಣೆಯ ಕಡೆವಳೆ
ಗಾಲ ತಪ್ಪಲ್ಲೆನುತ ಕಡಿದನು ಕರ್ಣನಂಬುಗಳ ।
ಮೇಲೆಮೇಲೆಚ್ಚಂಬುಗಳ ಸಲೆ
ಸೀಳಿ ಕರ್ಣಧ್ವಜದ ಕಂಭದ
ಕೂಲ ಮುಱಿಯೆಸಲುಡಿದು ಬಿದ್ದುದು ವರ ರಥಾಗ್ರದಲಿ ॥ ೨

ಆ ಮಹಾಧ್ವಜ ದಂಡ ಪಾತದ
[3]ಡಾವುರದ ದಳವುಳಕೆ ಹೆದಱಿತು[3]
ಹಾ ಮಹಾದೇವೇನ ಹೇಳುವೆನೈ ಮಹೀಪತಿಯೆ ।
ಧೂಮ ಚುಂಬಿತ ಚಿತ್ರದಂತೆ ಸ
ನಾಮರಿದ್ದುದು ಸೌಬಲಾಶ್ವ
ತ್ಥಾಮ ಕೃಪ ಕೃತವರ್ಮಕಾದಿಗಳೊಂದು ನಿಮಿಷದಲಿ ॥ ೩

---

[1] ಶೌರ್ಯವೀರನು (ಕ), ಧೀರನನುಪಮ (ಟ.ದ), ವೀರಭುಜಬಲ (ತ.ನ.ಪ.ಬ).
[2] ತಡೆ (ಟ.ತ.ದ). [3] ಡಾವುರಕೆ ಪೈಸರಿಸಿತಾಗಳೆ (ಟ.ದ), ಡಾವುರದಲಿಳ್ಳಿಱುವ ರವವನು (ತ.ಪ).

ಮತ್ತೆ ಕೇಳರಿವಿಕ್ರಮವ ನಭ
ಕೊತ್ತಿತೀತನ ಶೌರ್ಯವಾತನ
ನೆತ್ತರಲಿ ನಾದಿದನು ನಾನಾವಿಧ ಶರಾವಳಿಯ ।
ಹತ್ತು ಶರದಲಿ ಕರ್ಣ ಚಾಪವ
ಕತ್ತರಿಸಿದನು ಪಾರ್ಥನೀತನ
ಚಿತ್ತದಲಿ ಕರುಣಾರಸಕೆ ಕಾಲಾಟವಾಯ್ತಂದ ॥ ೪

ದ್ರೋಣ ಭೀಷ್ಮರ ನಚ್ಚಿದರೆ ಮುಂ
ಗಾಣಿಕೆಯಲೇ ಮಡಿದರೆನ್ನಯ
ಗೋಣ ಕೊಯ್ದನು ಕೃಷ್ಣ ಮುನ್ನಿನ ಕುಲವನೆಚ್ಚರಿಸಿ ।
ಪ್ರಾಣ ಪಾಂಡವರೆಂಬ [1]ನುಡಿಯನು[1]
ಜಾಣಿನಲಿ ಹರಿ ಬಲಿದನೊಡೆಯಗೆ
ಕಾಣೆನಾಪ್ತರನೆಂದು ಮನದಲಿ ಮಱುಗಿದನು ಕರ್ಣ ॥ ೫

ಕುಲಕೆ ಕೀಳಿವನೆಂದು ಚಿಕ್ಕರಿ
ಗಳೆದಡಾ ಬಹುಬಂಧುವರ್ಗವ
ನುಳಿದು ಸಿಂಹಾಸನದಲೆನಗಭಿಷೇಕವನು ಮಾಡಿ ।
ಕುಲದ ಮಲಿನವ ತೊಳೆದು ಕೌರವ
ಕುಲದೊಳೊಡಬಟ್ಟವನಿಪಾಲಕ
ತಿಲಕ ಕುರುಪತಿಗಾಪ್ತರಿಲ್ಲೆಂದಳಲಿದನು ಕರ್ಣ ॥ ೬

ನೋಡಿ ದಣಿಯನು ನಿಚ್ಚಲುಚಿತವ
ಮಾಡಿ ದಣಿಯನು ಖೇಳಮೇಳದ
ಲಾಡಿ ದಣಿಯನು ಶಿವಶಿವಾ ತನ್ನೊಡನೆ ಕುರುರಾಯ ।
ಓಡಲಱಿಯದೆ ದ್ರೋಣ ಭೀಷ್ಮರು
ಗೂಡ ತಲೆಗೊಟ್ಟೈಸಱಲಿ ತಾ
ಮಾಡಿತೇನರಸಂಗೆನುತ ಮಱುಗಿದನು ಕಲಿ ಕರ್ಣ ॥ ೭

ಮೊದಲಲಾತ್ಮಜರಳಿವನೊಡವು
ಟ್ಟಿದರ [2]ಮೆಯ್ಯಲಿ[2] ಮಱೆದನೊಡವು
ಟ್ಟಿದರು ನೂರ್ವರು ಮಡಿಯೆ ಮಱೆದನು ತನ್ನ ಸುಳಿವಿನಲಿ ।

[1] ಬಿರುದನು (ಚ.ತ.ದ.ಪ). [2] ಮರೆಯಲಿ (ಚ.ನ.ಬ).

ಕದನವೆನ್ನಯ ಸುಳಿವನೊಳಕೊಂ
ಡುದು ಸುಯೋಧನನೃಪತಿಗಿನ್ನಾ
ಸ್ಪದರ ಕಾಣೆನು ಶಿವಶಿವಾ ಎಂದಳಲಿದನು ಕರ್ಣ ॥ ೮

ಸಲಹಿದೊಡೆಯನ ಜೋಳವಾಳಿಗೆ
ತಲೆಯ ಮಾಱುವುದೊಂದು ಪುಣ್ಯದ
[1]ಫಲವು[1] ಮರಣದ ಹೊತ್ತು ಕೃಷ್ಣನ ಕಾಬ ಸುಕೃತಫಲ ।
ಇಳೆಯಮೇಲೆನಗಲ್ಲದಾರಿಗೆ
ಫಲಿಸುವುದು ತಾ ಧನ್ಯನೆನುತವೆ
ಹಳಚದಸುರಾಂತಕನನೀಕ್ಷಿಸುತಿರ್ದನಾ ಕರ್ಣ ॥ ೯

ಒಳಗೆ ಹೃದಯಾಂಬುಜದ ಮಧ್ಯ
ಸ್ಥಳದೊಳಗೆ ಮುರವೈರಿಯನು ಹೊಱ
ವಳಯದಲಿ ಫಲುಗುಣನ ಮಣಿರಥದಗ್ರಭಾಗದಲಿ ।
ಹೊಳೆವ ಹರಿಯನು ಕಂಡನಿದು ಹೊಱ[2]
ಗೊಳಗೆ ಹರಿ ತಾನೆಂಬ[2]ಭೇದವ
ತಿಳಿದು ನಿಜದೆಚ್ಚಱ ಸಮಾಧಿಯೊಳಿರ್ದನಾ ಕರ್ಣ ॥ ೧೦

ಅರಸ ಚಿತ್ತೈಸಾಚೆಯಲಿ ಮುರ
ಹರನಲೇ ನಿಮ್ಮನ್ವಯವ ಸಂ
ಹರಿಸಿದಾತನು ಭೀಮಸೇನನೊ ಮೇಣ್ ಧನಂಜಯನೊ ।
ಸರಳ ತೊಡು ತೊಡು ಪಾರ್ಥ ಕರ್ಣನ
ಶಿರವನಿಳುಹಾ ಹಾರದಿರು ಹೇ
ವರಿಸದಿರು ತೆಗೆ ದಿವ್ಯಶರವನು ಬೇಗಮಾಡೆಂದ ॥ ೧೧

ಕರಗುವರೆ ನೀ ಸಾರು ಭೀಮನ
ಕರೆದು ಕೊಲಿಸುವೆನೀತನನು ನಿ
ಷ್ಠುರನಲಾ ನೀನೆನ್ನದಿರು ತೆಗೆ ನಿನ್ನ ತನ್ನಿಂದ ।
ಹಱಿಯದೇ ಹಗೆ ನಮ್ಮ ಚಕ್ರದ
ಲರಿಭಟನ ಮುಱಿವೆನು ಯುಧಿಷ್ಠಿರ
ನರಸುತನವದು ನಿಲಲಿ ನೀನಂಜುವರೆ ಸಾರೆಂದ ॥ ೧೨

---

[1] ಬೆಳಸು (ಖ.ತ.ನ). [2] ತಾವೊಳಗು ಹೊಱಗೆಂದೆಂಬ (ಟ.ದ).

ಈಸು ಕರ್ಣನ ಮೇಲೆ ಬಹಳ
ದ್ವೇಷವೇನೋ ಎನುತ ಮನದಲಿ
ಘಾಸಿಯಾದನು ಪಾರ್ಥ ಕರುಣಕ್ರೋಧಮುಪಟಳಕೆ ।
ಆಸೆಯಿನ್ನೇಕೆನುತ ಸೆಳೆದನು
ಸೂಸುಗಿಡಿಗಳ ಹೊಗೆಯ ಹೊದಜಿನ
ವಿಾಸಲಳಿದಾರೆಂಜಲಿಸದಂಜ[1]ಳಿ [ಕ][1] ಮಾರ್ಗಣವ ॥ ೧೩

ಉರಿಯನುಗುಳುವ ಬಾಣದಲಿ ಕ
ತ್ತರಿಸಿ ಕರ್ಣನನೆಸಲು ಸಮರದ
ಲುರವ ಕೀಲಿಸಿತಂಬು ಗಜೆಗಡಿಯಾಗಿ ಗಾಢದಲಿ ।
ಹರಣ ತೊಲಗದ ಮರ್ಮವನು ಮುರ
ಹರನು ಕಂಡನು ರಥದ ವಾಘೆಯ
ನಿರಿಸಿ ಕರ್ಣನ ಹೊರೆಗೆ ಬಂದನು ವಿಪ್ರವೇಷದಲಿ ॥ ೧೪

ತ್ಯಾಗಿ ಜಗದೊಳಗೆಂಬ ಕೀರ್ತಿಯ
ಲೋಗರಿಂದವೆ [2]ಕೇಳ್ದು ಬಂದೆನು[2]
[3]ಮೇಗಳತಿಶಯ ಪದವನೊಲುವಡೆ ಮನದ ಬಯಕೆಗಳ[3] ।
ಈಗಳೀವುದು ನಮ್ಮಭೀಷ್ಟ
ಶ್ರೀಗೆ ಮಂಗಳವೆಂದು ಹರಸಿದ
ಡಾಗಳಖಿದಾ ಕರ್ಣ ನಸುನಗುತಿರ್ದ ಮನದೊಳಗೆ ॥ ೧೫

ತ್ಯಾಗಿ ಸಿಂಹಾಸನದ ಮೇಲಿ
ದ್ದಾಗ ಬೇಡಿತನೀಯಬೇಹುದು
[4]ಈಗಳೀವುದ ಪೆಸಸಿಯೆನೆ ನಗುತೆಂದನಾ ವಿಪ್ರ[4] ।
ತೂಗುವೀ ಕುಂಡಲವನೀವುದು
ಬೇಗ ಧಾರೆಯನೆಱೆದು ಕೊಡೆ[5]ಯೆನ
ಲಾಗಳುದಕವನಱಸಿ ಕಾಣದೆ ನೋಡಿದನು ಕೆಲನ[5] ॥ ೧೬

ಉದಕವನು ಹೊಱಗಱಸುತಿರಲಾ
ಪದುಮನಾಭನು ನಗುತ ನಿನ್ನಯ
ಹೃದಯದೊಳಗಿರ್ದಮಲಗಂಗಾಜಲವ ತೆಗೆದೆನಗೆ ।

---

[1] ಳಿಯ (ತ.ಪ) ಳಿತ (ಕ) ನೆಯ(ನ). [2] ಕೇಳಿ ಬಲ್ಲೆನು (ಕ). [3] ಮೇಗಣತಿಶಯ ಗತಿಯನೊಲುವಡೆ ಮನದಭೀಷ್ಟವನು (ಕ). [4] ಈಗಲೇನುಂಟೆನುತ ಕಂಬನಿದುಂಬಿ ಮರುಗುತಿರೆ (ಖ.ಪ.ನ). [5] ನೀವೆನಲೀಪಾರ್ವರಣದಲಿ ಬಂದು ಬೇಡುವುದುಂಟೆ ಹೇಳೆನಲು (ತ).

ಹದುಳದಿಂದೆಱೆ ಧಾರೆಯನು ಸಂ
ಪದದ ಮುಕುತಿಯ ಪದವನೊಲುವಡೆ
ಇದು ಶುಭೋದಯವೆಂದು ಮಾಯಾವಿಪ್ರನಱುಹಿದನು ॥ ೧೭

ಸರಳ ತೆಗೆದನು[1] ಸರಸಿಜಪ್ರಿಯ
ವರ ಸುತನು ತನ್ನುರವ ಬಗಿದನು
ಘುರಿಘುರಿಲು ಘುರಿಲೆನಲು ತೆಗೆದನು ನಿರ್ಮಲೋದಕವ[1] ।
ಪರಮ ಸಂತೋಷದಲಿ ಧಾರೆಯ
ನೆಱೆದು [2]ಕುಂಡಲವೀಯೆ ಮಿಗೆ ಪು
ಷ್ಕರದ ಜನ ಜಯಯೆನಲು ಮುರರಿಪುವೊಲಿದು ಕೈಕೊಂಡ[2] ॥ ೧೮

ಪರಮ ಕರುಣಾಸಿಂಧು ಕರ್ಣಂ
ಗಿರದೆ ನಿಜಮೂರ್ತಿಯನು ತೋಱಿದ
ನುರುತರ ಪ್ರೇಮದಲಿ ಮುಕುತಿಯ ಪದವ ನೇಮಿಸಿದ ।
ನರನನೆಚ್ಚಱಿಸಿದನು ಕರುಣಿಗೆ
ಕರುಣದನುಸಂಧಾನ ಮಾಣದು
ಧರೆಯೊಳಚ್ಚರಿಯೆನುತ ಬೆಱಗಿನೊಳಿದ್ದುದಮರಗಣ ॥ ೧೯

ಹಿಂದೆ ಪಾಶುಪತಕ್ಕೆ ಬಳುವಳಿ
ಬಂದುದಂಜನ ಬಾಣವದಱೆಣೆ
ಯಿಂದ ತೆಗೆದನು ಗಿರಿಜೆಯಂಘ್ರಿಯ ನೆನೆದು ಮಂತ್ರಿಸುತ ।
ಮಂದರಾಚಲ ನಡುಗೆ ಕಿಡಿಗಳ
ಸಂದಣಿಯ ಸುರಿವಂಬನಾ ರವಿ
ನಂದನನ ಕೊರಳೆಡೆಯೊಳೆಚ್ಚನು ವಾಸವನ ಸೂನು ॥ ೨೦

ಅರಸ ಕೇಳೈ ಕರ್ಣನೊಡಲಲಿ
ಪರಮ ತೇಜಃಪುಂಜವೊದೆದು
ಪ್ಪರಿಸಿ ಹಾಯ್ದುದು ಹೊಳೆದುದಿನಮಂಡಲದ ಮಧ್ಯದಲಿ ।
ಅರರೆ ಭಾಪುರೆ ಕರ್ಣ ಮಝು ಭಾ
ಪುರೆ ಭಟಾಗ್ರಣಿ ನಿನ್ನ ಸರಿದೊರೆ
ಯೆರಡು ಯುಗದಲಿ ಕಾಣೆನೆಂದಳಲಿದನು ಹನುಮಂತ ॥ ೨೧

---

[1] ತನ್ನ ಹೃದಯವ ನರಿದು ಘುರಿಘುರಿದೆನಲು ನಿರ್ಮಳತರವೆನಿಪ ಅಮೃತೋದಕವ ದಕ್ಷಿಣಕರದಿ ಪಿಡಿದು (ತ). [2] ದಾನವನಿರದೆ ಮಾಡುತ್ತಿರಲು ಮೇಲಣ ಸುರರುಘೋಯೆನಲು ಪುಷ್ಪಕವಿಳಿದುದಂಬರದಿ (ತ.ಪ.ಬ).

ಕೊಟ್ಟ ಭಾಷೆಗೆ ಮರಳಿ ಬಾಣವ
ತೊಟ್ಟನೇ ತಾನೊಡೆಯನೆಂದ[1]ಜಿ
ಯಟ್ಟಿದನೆ[1] ಪಾಂಡವರೊಳನುಸಂಧಾನವನು [2]ಬಿಸುಟು[2] |
ನಟ್ಟ ಕಣೆಗಳುಕಿದನೆ ಕೌರವ
ಕೆಟ್ಟನಕಟಕಟೆಂದು ಕಾಯುವ
ಬಿಟ್ಟ ಕರ್ಣನೊಳಾರು ಸರಿಯೆನುತಿರ್ದುದಮರಗಣ ||　　೨೨

ಬಲುವಿಡಿಯ ಬಿಲು ವಾಮದಲಿ ಬೆರ
ಳೊಳಗೆ ಸವಡಿಸಿ ತೆಗೆವ ತಿರುವಿನ
ಹಿಳುಕು ನಿಮಿರಿದ ತೋಳ ತೋಳಿಕೆ ಬಲದ ಭಾಗದಲಿ |
ಬಲಿದ ಮಂಡಿಯ ಬಾಗಿದೊಡಲಿನ
ಹೊಳೆವ ತನುಕಾಂತಿಯ ಮಹೀಪತಿ
ತಿಲಕ ಕೇಳ್ಕೆ ಕರ್ಣನೆಸೆದನು ರಥದ ಮಧ್ಯದಲಿ ||　　೨೩

ಕಳಚಿ ದುರಿಯೋಧನನ ಬೆಳುಗೊಡೆ
ನೆಲಕೆ ಬೀಳ್ವಂದದಲಿ ಕೌರವ
ಕುಲದ ನಿಖಿಳೈಶ್ವರ್ಯವಿಳೆಗೊರ್ಗುಡಿಸಿ ಕೆಡೆವಂತೆ |
ಥಳಥಳಿಪ ನಗೆಮೊಗದ ಗಂ[3]ಟು[3]
ಬಲಿದ ಹುಬ್ಬಿನ ಬಿಟ್ಟ ಕಂಗಳ
ಹೊಳೆವ ಹಲುಗಳ ಕರ್ಣಶಿರ ಕೆಡೆದುದು ಧರಿತ್ರಿಯಲಿ ||　　೨೪

ಕರ್ಣ ಹಾ ಹಾ ಸೂತಸುತ ಹಾ
ಕರ್ಣ ಹಾ ರಾಧಾತನುಜ ಹಾ
ಕರ್ಣ ಹಾ ಎನ್ನಾನೆ ಹಾ ಬಹಿರಂಗ ಜೀವನವೆ
ನಿರ್ಣಯವು ಕುರುಕುಲಕೆ ಹಾ ಹಾ
ಕರ್ಣ ಮಡಿದ್ಯೆ ತಂದೆಯೆನುತವೆ
ನಿನ್ನ ಮಗ [4]ರಥದಿಂದ[4] ಧೊಪ್ಪನೆ ಕೆಡೆದನವನಿಯಲಿ ||　　೨೫

ರಾಯ ಹಮ್ಮೈಸಿದನು ಹಾ ರಾ
ಧೇಯ ಹಾ ರಾಧೇಯ ಹಾ ರಾ
ಧೇಯ ಹಾ ಎನ್ನಾನೆ ಬಾರೈ ನಿನ್ನ ತೋಳೆನುತ |

---

[1] ಜಿದಟ್ಟಿದರೆ (ಕ).　[2] ಮಾಡಿ (ತ).　[3] ಟಂ (ಟ.ದ).　[4] ಹಾರೈಸಿ (ಕ.ಗ.ಟ.ದ).

ದ್ಯುಮಣಿ ಕರ್ಣದ್ಯುಮಣಿಸಹಿತ
ಸ್ತಮಿಸೆ ಕಮಲಿನಿ ಕೌರವನ ಮುಖ
ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ ।
ಅಮಳ ಚಕ್ರಾಂಗಕ್ಕೆ ಭೂಪೇ
ತ್ತಮನ ವಿಜಯಾಂಗನೆಗೆಯಗಲಿಕೆ
ಸಮನಿಸಿತು ಕೇಳಯ್ಯ ಜನಮೇಜಯ ಮಹೀಪಾಲ ॥ ೩೧

ಇಪ್ಪತ್ತೇಳನೆಯ ಸಂಧಿ ಮುಗಿದುದು.

ಇತಿ ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ
ಮಕರಂದ ಮಧುಪಾನಪರಿಪುಷ್ಟ ವಚಷ್ಟಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತ
ಮಪ್ಪ ಕರ್ಣಾಟಭಾರತ ಕಥಾಮಂಜರಿ
ಯೊಳ್ ಕರ್ಣಪರ್ವಂ ಸಮಾಪ್ತಂ.

# ಪರಿಶಿಷ್ಟ

ಈ ಕರ್ಣಪರ್ವವನ್ನು ಶೋಧಿಸುವುದಕ್ಕೆ ಉಪಯೋಗಿಸಿಕೊಂಡಿರುವ ಎಲ್ಲ ಮಾತೃಕೆಗಳಲ್ಲೂ ಇಲ್ಲದೆ ಕೆಲವು ಮಾತೃಕೆಗಳಲ್ಲಿ ಮಾತ್ರವಿರುವ ಮೂಲಗ್ರಂಥಕ್ಕೆ ಸೇರಿರಲಾರವೆಂದು ತೋರಿಬಂದಿರುವ ಪದ್ಯಗಳನ್ನು ಈ ಕೆಳಗೆ ಕೊಟ್ಟಿದೆ. *

ಮುಂದಿನ ಪದ್ಯಗಳು (ಗ) ಪ್ರತಿಯಲ್ಲಿ ೨೦ನೆಯ ಸಂಧಿಯ ಅಂತ್ಯದಲ್ಲಿಯೂ (ದ) ಪ್ರತಿಯಲ್ಲಿ ೨೧ನೆಯ ಸಂಧಿಯ ೩, ೪, ೫, ೬ನೆಯ ಪದ್ಯಗಳಾಗಿಯೂ ಹೆಚ್ಚಾಗಿವೆ.

ಸೇನೆ ಮುರಿದುದು ಸಮರದಲಿ ವೃಷ
ಸೇನ ಮಡಿದನು ಕುರುಬಲಕೆ ಕಡು
ಹಾನಿ ಹಬ್ಬುಗೆಯಾಯ್ತು ಪಾಂಡವ ವೀರರುಪಟಳಕೆ ।
ಆನಲಮ್ಮುವರಿಲ್ಲೆನುತ ದು
ಮ್ಮಾನದಲಿ ದಾತಾರನಿರಲಾ
ಭಾನುನಂದನನಾಹವಕೆ ಮುಂಕೊಂಡು ನಡೆತಂದ ॥ ೧

ಮೊಗ ನೆಗಹಿ ತಮ್ಮಯ್ಯನಂಘ್ರಿಗೆ
ಮುಗಿದ ಕರಗಳ ಲೆರಗಿದನು ದೃಗು
ಯುಗವನೆವೆಯಲಿ ಬಲಿದು ಮುನಿಪತಿಗೆಱಗಿ ಭಜಿಸಿದನು ।
ಬಗಿದ ಬಿಲ್ಲಿಂಗೆಱಗಿ ಬಾಣವ
ನುಗಿದು ತಿರುಹುತ ಕೌರವೇಂದ್ರನ
ದುಗುಡವನು ಪರಿಹರಿಸಿ ಸಮರಕೆ ಕರ್ಣನನುವಾದ ॥ ೨

ಇಂದು ದುರಿಯೋಧನನ ರಿಣವನು
ಬಂದುದೆನಿಸುವೆನಿಂದು ಕೊಂತಿಯ
ನಂದನನ ನಿಶಿತಾಸ್ತ್ರ ಸಂತತಿಗೆನ್ನ ಕಾಯವನು ।
ಇಂದು ದಾರೆಯನೆಱೆದು ಕೊಡುವೆನು
ಹಿಂದುಗಳೆವುದು ಪಂಥವಲ್ಲೆನ
ಗೆಂದು ಭಾರತಮಲ್ಲನೆಱಗಿದ ಶಲ್ಯನಂಘ್ರಿಯಲಿ ॥ ೩

* ಈ ಪದ್ಯಗಳಿಗೆ ಹೆಚ್ಚು ಮಾತೃಕೆಗಳ ಸಹಾಯವಿಲ್ಲದುದರಿಂದ ಇವುಗಳನ್ನು ಶೋಧಿಸದೆ ಮಾತೃಕೆಗಳಲ್ಲಿ ಇರುವಹಾಗೆಯೇ ಕೊಟ್ಟಿದೆ.

ಸುರಪ ಮೊದಲಾದವರಿಗಾನ
ಚ್ಚರಿಯಮಾಡುವೆನಾಳಿದನ ಸ
ತ್ಕರಣೆಗಿಂತಿದು ಪಂಥವೆನಿಸುವೆನಖಿಳಜನ ಹೊಗಳೆ ।
ಧುರದಲಹುದೆನಿಸುವೆನು ಪಾರ್ಥನ
ಹರಣಕೆಳತಟಮಾಡಿ ರಣದಲಿ
ಮರಣವೇ ಮಹನವಮಿಯಲ್ಲದೆ ಬಱಿದೆ ಬಿಡೆನೆಂದ ॥ ೪

ಇಪ್ಪತ್ತೊಂದನೆಯ ಸಂಧಿಯಲ್ಲಿ ೬ನೆಯ ಪದ್ಯವಾದಮೇಲೆ (ಗ.ಬ.ನ). ಪ್ರತಿಗಳಲ್ಲಿ ಕೆಳಗಿನೆರಡು ಪದ್ಯಗಳು ಹೆಚ್ಚಾಗಿವೆ.

ಎಡಬಲದ ನಿಸ್ಸಾಳತತಿಯಲಿ
ಕಡುಹು ಕವಿದವು ಲಗ್ಗವರಿಯಲಿ
ಬಿಡದೆ ಸೂಳೈಸಿದವು ಬಯ್ದವು ಗೌಱುಗಹಳೆಗಳು ।
ತುಡುಕಿದವು ಝಲ್ಲರಿಗಳಭ್ರದೊ
ಳಡಗಿದವು ಸೀಗುರಿಗಳಾಹವ
ದೆಡೆಗೆ ಬಾಣವ ಕೊಂಡು ಕರ್ಣನು ಹೊಳಸಿದನು ರಥವ ॥ ೧

ಕರೆಸಿ ದುರ್ಯೋಧನನು ಮಿಗೆ ಸರ
ಸಿರುಹಮುಖಿಯರ ಮೋಹರಕೆ ವಿ
ಸ್ತರಿಸಿ ಕರ್ಣಗೆ ಸೇಸೆದಳಿಯಲು ಕಲಶ ಕನ್ನಡಿಯ ।
ವರ ಸತಿಯರ್ಕೈತಂದು ಬಂದಾ
ದರಿಸಿದರು ರವಿಜಂಗೆ ಸಲೆ ವಿ
ಸ್ತರಿಸಿದನಲ್ಲೈ ರಾಯ ಜನಮೇಜಯ ಮಹೀಪಾಲ ॥ ೨

ಎಂಟನೆಯ ಪದ್ಯವಾದ ಮೇಲೆ (ಗ.ಟ.ದ.ಬ.ನ) ಪ್ರತಿಗಳಲ್ಲಿ ಮುಂದಿನ ಪದ್ಯ ಹಚ್ಚಾಗಿದೆ.

ಸಾಕಿದೊಡೆಯನ ರಿಣವನಿಂದೇ
ನೂಕುವೆನು ಕೈವಾರವೇತಕೆ
ತೋಕುವೆನು ರಿಪುಜಲಧಿ ಕಟಕವನಿಂದು ರಣದೊಳಗೆ ।
ಜೋಕೆಯನು ನೋಡುವುದು ನಿಮ್ಮ ಪ
ದಾಕರುಣದವ ನಾನು ಎಂದೇ
ಲೋಕಲೋಚನಸೂನು ಪರಿವಾರಕ್ಕೆ ಕೈಮುಗಿದ ॥

ಹದಿಮೂರನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಕೆಳಗಿನೆರಡು ಪದ್ಯ ಗಳು ಹೆಚ್ಚಾಗಿವೆ.

ಹೊಗಳದಿರಿ ನಾಗಾದಿಗಳ ತಾ
ಳಿಗೆಗೆ ನಿರಸನವಾಯ್ತು ಬಿರುದಾ
ವನಿಯನಿವನವ್ವಳಿಸಿ ಕರ್ಣನ ವೀರವಿತರಣವ ।
ನೆಗಹಲೀ ಧೂಮಾಂಧಕಾರವ
ಜಗವ ಜಕ್ಕುಲಿಸುವ ಮಹಾಸ್ತ್ರವ
ನುಗಿದು ಪಾರ್ಥನ ಕರೆಯೆನುತ ಕಲಿಕರ್ಣನಿದಿರಾದ ॥ ೧

ತಳಿತರಣ್ಯದ ಮಧ್ಯದಿಂದ
ವ್ವಳಿಪ ಕೇಸರಿ ಮಿಕ್ಕು ದಂತಿಯು
ತಳಿತ ಸೇನಾರಣ್ಯದಿಂ ರವಿಸುತನ ರಥ ಬರಲು ।
ಉಲುಕಲಮ್ಮದೆ ಪಟುಭಟರು ಜವ
ವಿಳುಹಿದರು ಹೂಣಿಗರು ಸಲೆ ತ
ಲ್ಲಳಿಸಿ ಧೃತಿಗೆಟ್ಟೋಡಿ ಹೋಯಿತು ಪಾಂಡವರ ಸೇನೆ ॥ ೨

೧೯ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಗರುಡಿಯಧಿಪತಿಯಂಘ್ರಿಯುಗಳ
ಕ್ಕೆರಗಿದನು ಮನದೊಳಗೆ ಗಗನಪೊ
ಳಿರುವ ಸೂರ್ಯಗೆ ನಮಿಸಿಕೊಂಡನು ಅತುಳ ಗಾಂಡಿವವ ।
ತಿರುಗಿ ಚೌರಿಗೆಗೆದರಿ ನಚ್ಚಿನ
ಸರಳ ಸೆಳೆದನು ಪಾರ್ಥನರಿಭಟ
ನುರವಣೆಗೆ ಮುಯ್ಯಾಂತು ನಿಂದನು ಸಿಂಹನಾದದಲಿ ॥

೧೪ನೆಯ ಪದ್ಯವಾದ ಮೇಲೆ (ಗ.ದ) ಪ್ರತಿಯಲ್ಲಿ ಕೆಳಗಿನ ನಾಲ್ಕು ಪದ್ಯಗಳು ಹೆಚ್ಚಾಗಿವೆ.

ದೇವಕುಲ ಸಂಭಾಳು ಜಯಜಯ
ದೇವರಾಯಘರಟ್ಟ ರಿಪುವನ
ದೇವರಾಯ ಮುರಾರಿ ರಾಯವಿಭಾಡ ನಿಶ್ಶಂಕ ।
ರಾವುತೋ ಛಲದಂಕ ಹೊವಿತಾ
ವೀವಾರತ್ಯಾಗಸುಭಟಯೆಂ
ದೋವಿತಾ ನಾಗಾದಿಗಳು ಕೈವಾರಿಸಿತು ಕರ್ಣನನು ॥ ೧

ಧೀರ ಬಂದನು ಅಹಿತಕುಲಸಂ
ಹಾರ ಬಂದನು ವೈರಿವಿಜಯಕು
ಠಾರನಿದೆ ಬಂದನು ಮಹಾನಿಧಿರಾಯಭಂಜನನು ।
ವೀರನಿದೆ ಬಂದನು ಕಿರೀಟಿವಿ
ದಾರನಿದೆ ಬಂದನು ಜಯಜಯ ಸೋ
ದಾರಭಾರತಮಲ್ಲನೆಂದೊದರಿದವು ಕಹಳೆಗಳು ॥ ೨

ರಾಯರಾಜನ ತೋಟಿ ಬೇಡರಿ
ರಾಯಮಥನನ ತೋಟಿ ಬೇಡಸ
ಹಾಯಶೂರನ ತೋಟಿ ಬೇಡ ವಿರೋಧಿಭಂಜನನ ।
ಜೀಯಮದನನ ತೋಟಿ ಬೇಡರಿ
ರಾಯವಿಜಯನ ತೋಟಿ ಬೇಡರಿ
ರಾಯ ಕರ್ಣನ ತೋಟಿ ಬೇಡೆಂದೊದರಿದವು ಕಹಳೆ ॥ ೩

ರಣದೊಳಂಧಾಸುರನ ಖಾತಿಗೆ
ತ್ರಿಣಯ ಸ್ಮರಿಸುವಂತೆ ರಿಂಗಣ
ಗುಣಿವ ರಥದಲಿ ಪಾರ್ಥನಿದ್ದನು ಕರ್ಣನುರವಣಿಗೆ ।
ಮಣಿದನಸುರವಿರೋಧಿಯಂಘ್ರಿಗೆ
ರಣಚಮತ್ಕೃತಿ ಚಟುಲತರಮಾ
ರ್ಗಣವ ಹೊದೆಗೆದಱಿದನು ಗಾಂಡೀವವನು ಜೇವಡೆದು ॥ ೪

೨ನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ.

ಎಡಬಲಕೆ ತೋರಿದನು ವಾಘೆಯ
ತುಡುಕಿ ಚಮ್ಮಟಿಗೆಯಲಿ ತುರಗವ
ಜಡಿದು ಪಕ್ಕೆಯದೊಳಗೆ ಲವಣಿಯ ಹೊಳಹಿನಲಿ ಕುಣಿಸಿ ।
ಪೊಡವಿ ಖುರಪುಟದೊಳಗೆ ನಡನಡ
ನಡೆಸಿ ದೂವ್ವಾಳಿಸುತ ರಥವನು
ನಡೆಸಿ ಸಾರಥಿತನವ ತೋಱಿದನಂದು ಕಲಿ ಶಲ್ಯ ॥

೨೨ನೆಯ ಪದ್ಯವಾದ ಮೇಲೆ (ಗ.ದ.ಬ) ಪ್ರತಿಗಳಲ್ಲಿ ಕೆಳಗಣ ಮೂರು ಪದ್ಯಗಳು ಹೆಚ್ಚಾಗಿವೆ.

ಹೊಳೆಹೊಳೆವ ಕುಡಿಮಿಂಚಿನಂತಿರೆ
ಉಳಿವಡೆದು ತುರಗಾಳಿಸಹಿತೆಡ
ಬಲಕೆ ಉಳಿಯುಪ್ಪರಿಸಿತಳಸರಿ ಬೀದಿ ಲವಣಿಯಲಿ ।

ಹೊಳೆದು ದೂರ್ವಾಳಿಸುತ ರಥವನು
ಬಳಚಿ ವಾಹಕನಾಗಿ ಕೌತೂ
ಹಲವೆನಿಸಿ ಸಾರಥಿತನವ ತೋರಿದನು ಮುರವೈರಿ ॥ ೧

ಸಮಬಲರು ಸಾಧಕರು ಸಮರಸ
ಸಮರು ರಥಿಕರು ವೀರವಿತರಣ
ಸಮಸಮಗ್ರರು ಸಮಪರಾಕ್ರಮ ಸಮಸಹೋದರರು ।
ಸಮಸುಶೇಖರು ಸಮಮಯೂಖರು
ಸಮವಿಳಾಸರು ನಡೆದರಾಹವ
ಕಮಮ ಹಳಚಿದರಂದು ಕರ್ಣಾರ್ಜುನರು ಕೈಮಿಾರಿ ॥ ೨

ಖುರಪುಟದ ಕೆಂಧೂಳಿ ಸೂರ್ಯನ
ಕಿರಣವನು ಗವಸಣಿಸಿದುದು ರಥ
ದುರವಣೆಗೆ ತಲೆಗೊಡಹಿದವು ದಿಗುವಳೆಯದಂತಿಗಳು ।
ಕೊರಳು ಸಾವಿರವಳುಕಿ ವಾಸುಕಿ
ಗರಳವನು ಕಾರಿದನು ಕಮಠನ
ಹರಣಕೆಳತಟವಾಯ್ತು ನಲು ಹೊಗಿದರು ಪಟುಭಟರು ॥ ೩

ಇಪ್ಪತ್ತೆರಡನೆಯ ಸಂಧಿಯಲ್ಲಿ ಮೂರನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಕೆಳಗಣ ಪದ್ಯ ಹೆಚ್ಚಾಗಿದೆ.

ಮಡಿವನೀಗಳೆ ಕರ್ಣ ಎಂಬರು
ಕಡೆಗೆ ಪಾಂಡವಸೇನೆಯನು ಮಿಗೆ
ಕಡಿದು ದಿಗುಬಲಿಗೊಡುವೆನೆಂಬರು ಕರ್ಣಗೊಲಿದವರು ।
ಪೊಡವಿ ಪಾರ್ಥನ ಪಕ್ಷವಾಯಿತು
ಕಡಲು ಕರ್ಣನ ಗುಣವ ಹೊಗಳಿತು
ಒಡನೊಡನೆ ತ್ರೈಲೋಕ್ಯವೆರಡಾಯ್ತರಸ ಕೇಳೆಂದ ॥

ನಾಲ್ಕನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಕೆಳಗಣ ಪದ್ಯ ಹೆಚ್ಚಾಗಿದೆ.

ತಳೆದ ವಾಸುಕಿ ಕರ್ಣನತ್ತಲು
ನೆಲಸಿತಾ ಕಮಠಂಗೆ ಹೇಳಿಕೆ
ಫಲುಗುಣನ ವೆಸೆಯಾಯ್ತು ದಿಗುದಂತಿಗಳು ಕರ್ಣನಲಿ ।
ನೆಲನೊಳಿರ್ದ ಮಹಾಮಹೀಧರ
ರೊಲಿದರಾ ಪಾರ್ಥಂಗೆ ಲೋಕದ
ಹುಲುಮೊರಡಿಗಳು ಕರ್ಣಗೊಲಿದವು ನೃಪತಿ ಕೇಳೆಂದ ॥

೫ನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಕೆಳಗಿನ ಮೂರು ಪದ್ಯಗಳು ಹೆಚ್ಚಾಗಿವೆ.

ಶರಭ ತತಿ ಭೇರುಂಡ ಮೃಗಗಣ
ವರ ನಿಕಾಯವು ಪಾರ್ಥನನು ಕೈ
ವರಿಸಿದವು ನಾಗಾದಿಗಳವೊಲು ಕೂಡೆ ದೆಸೆದೆಸೆಗೆ ।
ನರನ ಹಿಡಿದವು ಕುಮುದ ತತಿ ತಾ
ವರೆಗಳಾ ಕರ್ಣನನು ಹೊಗಳಿದ
ವೆರಡು ದೆಸೆಯಾಯ್ತು ಸ್ವಯಂಭುವ ಸೃಷ್ಟಿಯಾ ಕ್ಷಣಕೆ ॥ ೧

ಸುರರು ಪಾರ್ಥನ ಕಡೆಗೆ ರಾಕ್ಷಸ
ವರರು ಕರ್ಣನ ಕೂರ್ಮೆ ಗಂಧ
ರ್ವರಿಗೆ ಫಲುಗುಣನೊಲುಮೆ ಕಿನ್ನರರಬ್ಜಸಖಸುತಗೆ ।
ಗುರುವರರ್ಜುನನತ್ತ ಲುಬ್ಧಕ
ರಿರವು ಕರ್ಣನ ಕೂಡೆಯಿಂತಿ
ಬ್ಬರಿಗೆ ಬೆಂಬಲವಾಗಿ ಪಕ್ಷಾದ್ಯಖಿಲ ಲೋಕಗಳು ॥ ೨

ಪರಮ ವಸುಗಳು ನಿಖಿಲ ಮುನಿಗಳು
ವರಸುಧಾಕರ ಬುಧರು ಪಾರ್ಥನ
ಧುರಕೆ ಪಕ್ಷೀಕರಿಸಿದರು ಸಂಗ್ರಾಮ ಚೆಲುವಾಯ್ತು ।
ಧರಣಿತನಯನು ರಾಹು ರವಿ ಭೃಗು
ವರರು ಕರ್ಣನ ದೆಸೆಯಲಾ ಶನಿ
ಗುರುಗಳುಪಕರಿಸಿದರು ಪಾರ್ಥನನರಸ ಕೇಳೆಂದ ॥ ೩

೬ನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಹಗಲು ಕರ್ಣನ ಪಕ್ಷವಾದುದು
ಬಗೆವಡೆಯು ಇರುಳರ್ಜುನಗೆ ಭೋ
ಗಿಗಳು ಕರ್ಣನ ಕೂಡೆ ಧನಲೋಭಿಗಳು ನರನೊಡನೆ ।
ಮಿಗೆ ಯಮನು ನೈರುತಿ ಕುಬೇರಾ
ದಿಗಳು ಪಾರ್ಥನ ಪಕ್ಷ ಭೂತಾ
ದಿಗಳು ಕರ್ಣನವೊಗಳಿದವು ಸಂಗ್ರಾಮಭೂಮಿಯಲಿ ॥

೧೩ನೆಯ ಪದ್ಯವಾದ ಮೇಲೆ (ಗ.ಚ.ನ) ಪ್ರತಿಗಳಲ್ಲಿ ಮುಂದಿನ ಮೂರು ಪದ್ಯಗಳು ಹೆಚ್ಚಾಗಿವೆ. (ಕ) ಪ್ರತಿಯಲ್ಲಿ ಈ ಸ್ಥಳದಲ್ಲಿ ಅವಕಾಶವನ್ನು ಸೂಚಿಸಿದೆ.

ಎನ್ನ ಮಗನನು ರಣದೊಳಗೆ ಗೆಲ
ಲಿನ್ನದಾರಿಗೆ ನೂಕುವುದು ಸುರ
ಪನ್ನಗರ ಕಿನ್ನರರ ಹವಣೇ ಮಗನ ಬಾಹುಬಲ ।
ತನ್ನ ಮೆಯ್ಯಲಿ ವೀರನೆನ್ನವು
ಕರ್ಣನೀಗಳೆ ರಣದಿ ಪಾರ್ಥನ
ಬೆನ್ನಡಗ ಬಿಡಿಸುವನು ನೋಡೆನೆ ಸುರಪನಿಂತೆಂದ ॥ ೧

ಮೀಸೆಗಳ ಬೆರಳಿನಲಿ ಮುರಿದು ಸು
ರೇಶ ನುಡಿದನದೇಕೆ ರವಿ ನಿಮ
ಗಾಸೆ ಕರ್ಣನ ಮೇಲೆ ಫಲುಗುಣನಂಬುಗಳು ಕವಿಯೆ ।
ಈ ಸಮರದಲಿ ನಿನ್ನ ಕಂದನ
ಮೀಸಲಡಗನು ಪದ್ದು ಕಾಗೆಗೆ
ಸೂಸುವದ ತೋಱಿಸುವನೊಂದೇ ನಿಮಿಷ ನಿಲ್ಲೆಂದ ॥ ೨

ಎಲವೊ ಭೂಸುರನಾಗಿ ಕರ್ಣನ
ಬಲದ ಕವಚವ ಕೊಂಡು ಪಾರ್ಥನ
ಗೆಲುವ ಹೊಗಳುವೆ ಕರ್ಣಗಿದಿರಾರುಂಟು ರಣದೊಳಗೆ ।
ಗೆಲುವನಱಿಯಲುಬಹುದು ನಿನ್ನೀ
ಫಲುಗುಣನನಿನ್ನೊಂದು ನಿಮಿಷಕೆ
ತಲೆಯ ಕೊಯ್ದೀಡಾಡಿ ಬಿಸುಡವನೆನ್ನ ಮಗನೆಂದ ॥ ೩

ಇವಲ್ಲದೆ (ಗ) ಪ್ರತಿಯಲ್ಲಿ ಮುಂದಿನ ಎಂಟು ಪದ್ಯಗಳು ಹೆಚ್ಚಾಗಿವೆ.

ತ್ರಿಜಗಲೋಚನ ಜಗವ ತಗುಳಲು
ಗಜವ ತಿರುಹಿದ ಸುರಪನಾಗಂ
ಬುಜಜ ಸಂತೈಸಿದನು ಸಕಳಾಮರರ ಕಳಕಳವ ।
ವಿಜಯಸಹಸರು ಸಮರದಲಿ ಗಜ
ಬಜದ ಕೋಂಟೆಯು ತೆಗೆದನಮಳ
ಪ್ರಜೆ ಬೆದಱೆ ಹಳಚಿದರು ಕರ್ಣಾರ್ಜುನರು ಕೈಮೀಱೆ ॥ ೧

ಖರೆಯಪ್ಪೈ ನೀನೆಂದ ನುಡಿಯ್ಯೈ
ಸರಲಿ ನಿನ್ನೀ ನಿನ್ನ ಕಂದನ
ಶಿರವನರಿಯದೆ ಬರಿದೆ ಬಿಡುವನೆ ತೋರಿಸುವೆ ನಿಮಗೆ ।

ಮರುಳುತನ ನಿಮಗಾಗೆ ನುಡಿದರೆ
ಗರುವತನ ಕೆಟ್ಟೀತು ನಿನ್ನೀ
ತರರನಾವುದು ಕೇಳ್ವೆ ನೋಡರ್ಜುನನ ಸಾಹಸವ ॥ ೨

ಗರುವನಹೆನಾವರಿಯವೇ ಹಾ
ದರದಲಾಯಿತ್ತೈ ನಿಮಗಲಾ ಸಾ
ವಿರದ ಮೈಗಣ್ಣುಗಳು ಸಾಕದನೆಂದು ಫಲವೇನು ।
ಮರಳುತನ ಬೇಡುನಿರದಿಹುದೆನೆ
ಸುರಪ ಗಹಗಹಿಸುತ್ತ ನುಡಿದನು
ಹಿರಿಯರೆಮಗೆಂದೊಂದು ಮರ್ಮವ ಕಾಣೆನಿದಿರೆಂದ ॥ ೩

ನಿಮ್ಮ ಹೊದ್ದಲು ನಿಮ್ಮ ಮುಟ್ಟಲು
ನಿಮ್ಮಗನ ಗರ್ವವನು ಕೆಡಿಸಲು
ನಮ್ಮ ಹವಣೇ ರಾಹುವಲ್ಲದೆ ನಮಗೆ ತಕ್ಕವರೇ ।
ನಿಮ್ಮ ಹವಣೇಕೊಂದು ವಾಘೆಯೊ
ಳೊಮ್ಮೆ ನಿಲ್ಲದೆ ತೊಳಲದಿಹುದೆನೆ
ಮರ್ಮವಿಲ್ಲದ ದಿವಿಜ ನೀನೆನೆ ಜಾಣ ಕೇಳೆಂದ ॥ ೪

ರಕ್ಕಸರ ಬಡಿಹೋರಿ ನಿನಗೀ
ಸೊಕ್ಕಿದೇತಕೆ ನಿನ್ನ ಕಂದನ
ಸಿಕ್ಕಿ ತೋರುವನೀಗ ನೋಡಾ ಮಗನ ಸಾಹಸವ ।
ಮಿಕ್ಕ ನಾರಾಯಣನ ಮರೆಯನು
ಹೊಕ್ಕು ಪಾಂಡವರುಳಿವ ಬಯಸುವ
ಚುಕ್ಕಿಗಳು ಕರ್ಣಂಗೆ ಸರಿಯೇ ಸಾರು ನೀನೆಂದ ॥ ೫

ಎನಲು ಗುಡುಗುಡಿಸಿದನು ಸುರಪತಿ
ಮನದೊಳಗೆ ಕಡುನೊಂದು ಚೌದಂತಿ
ಯನು ಸನ್ನೆಯೊಳೌಂಕಿ ಕರದಲಿ ವಜ್ರವನು ತುಡುಕಿ ।
ಎನಗೆ ನಿನಗೆಯುುಯ್ಯಾಗ ಕಾಳೆಗ
ವನುಕರಿಸಬೇಕೆಂದ್ದು ಹಾಯಿಸೆ
ವನಧಿ ಕದಡಿದ ಪರಿಯಲಾದುದು ಮೇಲೆ ಸುರಕಟಕ ॥ ೬

ಮೇಲೆ ಗಜಬಜವಾಯ್ತು ಪರ ದಿಗು
ಪಾಲಕರ ಬರಸಿದನು ಸುರಪತಿ
ಯಾಳು ಕವಿದುದು ಕರಿಯು ನೂಕಿದ ರವಿಯು ರಥಕಾಗಿ ।
ಕಾಲು ಕೈಯುಡಗಿರ್ದ ಸಾರಥಿ
ಮೇಳವಿಸಿದನು ರಥದ ಕುದುರೆಗ
ಳೇಳೆ ಚಮ್ಮಟಿಗೆಯನು ತುಡುಕಲು ಸೂರ್ಯನನುವಾದ ॥ ೯

ರವಿ ಸಹಸ್ರಕರಂಗಳಲಿ ಚ
ಕ್ರವನು ತುಡುಕಿದನಿತ್ತ ಸುರಪನು
ಕವಿಸಿದನು ತನ್ನಾನೆಯನು ದಿನಮಣಿಯ ಸಮ್ಮುಖಕೆ ।
ದಿವಿಜರಿರದೋಡಿದರು ಪಾರ್ವತಿ
ಶಿವನ ತಕ್ಕೈಸಿದಳು ಜಲರುಹ
ಭವನು ಬಂದಡೆಯೊಡ್ಡಿ ನಿಂದನು ಸೂರ್ಯ ಸುರಪತಿಯ ॥ ೮

೧೭ನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಮರುಳುಗಳಲಾ ನೀವು ನಿಮ್ಮೊಳು
ಹುರುಳಿದೇತಕೆ ನಿಮ್ಮ ತಮ್ಮಿ
ಬ್ಬರ ಕುಮಾರರು ಕಾದುತ್ತೈದರೆ ಗೆಲವು ಸೋಲವನು ।
ಹರನು ಮೊದಲಾಗೆಲ್ಲ ಕಾಬರು
ಧುರಕೆ ಹೆರದೆಗೆಯೆನುತ ಸುರಪನ
ಕರಿಯ ನೂಕಿದ ರವಿಯ ಬಂಡಿಯನತ್ತ ತೆರಳಿಚಿದ ॥

೩೨ನೆಯ ಪದ್ಯವಾದಮೇಲೆ (ಗ.ದ.ನ.ಬ) ಪ್ರತಿಗಳಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ.

ಅಂಬಿಗನು ನೀನಾದರಹಿತಗೆ
ನಂಬಿದೊಡೆಯನ ಘೋಷಯಾತ್ರೆಯ
ಲಂಬುಕೇಳಿಯಲಾದ ಕದನವೊಳೊಪ್ಪಗೊಡದಿಹೆಯ ।
ಶಂಬರಾರಿಯ ಸರಳಪೋಲ್ ನಿ
ನ್ನಂಬು ಬಲ್ಲಿದವೆಂದು ಖೇಚರ
ರೆಂಬರದು ಹುಸಿಯಲ್ಲೆನುತ ತೆಗೆದೆಚ್ಚನಾ ಪಾರ್ಥ ॥

ಇಪ್ಪತ್ತು ಮೂರನೆಯ ಸಂಧಿಯಲ್ಲಿ ೧೩ನೆಯ ಪದ್ಯವಾದ ಮೇಲೆ (ಗ ಟ.ದ) ಪ್ರತಿಗಳಲ್ಲಿ ಮುಂದಿನ ಪದ್ಯಗಳು ಹೆಚ್ಚಾಗಿವೆ.

ನಿನಗೆ ಗುರುವಹ ಪರಶುರಾಮನ
ನನುವರದಲೋಡಿಸಿದ ಗಾಂಗೇ
ಯನನು ಗೆಲಿದೀ ಗಾಂಡಿವಕೆ ನಿನ್ನೊಡಲಾವ ಗಹನವಿದು ।
ಮನದ ಫಲವನು ನಿಲುವ ಹೂಣಿಗ
ತನವ ಬಿಡಿಸುವೆನೆನುತ ಶಕ್ರನ
ತನಯನಂಬುಜಸಖಸುತನ ಕೆಡೆಯೆಚ್ಚು ಬೊಬ್ಬಿಱಿದ ॥ ೧

ತಳಿರವನೆಯಲಿ ಕಂದಮೂಲದ
ಗೆಳಸುಗಳ ಮೆಲಮೆಲಿದು ಕಾಲವ
ಕಳೆದು ಸಮರವ ಬಯಸಿದಿರಿ ರಾಜ್ಯಾಭಿಲಾಷೆಯಲಿ ।
ಅಳಲಿದರೆ ನಿಮಗಿನ್ನು ಮರಣವೆ
ಫಲಿಸುವುದು ಕೌರವನ ರಾಜ್ಯದ
ಸಲುಗೆಯನು ಹೊಗಲೀಯೆ ಎಂದನು ಭಾನುಸುತ ಮುಳಿದು ॥ ೨

ಪ್ರತಿಸುಭಟ ಕಾನನಕೆ ಕೇತ
ಪ್ರತತಿ ಪಾವಕದಾನವಾದಿಗ
ಳತುಳ ಬಲರಿದ್ದರೊಳಗೆ ನೀನೆಂಬ ಹುಲುನರನ ।
ಹುತವ ಮಾಡುವದಾವಘನವಿ
ನ್ನತಿಬಹಳ ಬಾಣದಲಿ ವೈವ
ಸ್ವತನ ನಗರಿಗೆ ನಿನ್ನ ಕಳುಹುವೆನೆಂದನಾ ಕರ್ಣ ॥ ೩

೨ಳನೆಯ ಪದ್ಯವಾದಮೇಲೆ (ಗ.ದ) ಪ್ರತಿಯಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ.

ಪ್ರತಿಸುಭಟಕೋದಂಡದಂಡಾ
ಯುತಶಿಳೀಮುಖಮುಖಪಟಿಂಡ
ಪ್ರತಿಮಹಾಮಂತ್ರಾಸ್ತ್ರವನು ಹೂಡಿದನು ಧನುವಿನಲಿ ।
ಕ್ಷಿತಿ ಬೆದಱೆಯಿನತನುಜನೆಸುಗೆಗೆ
ಪ್ರತಿಸಹಸ್ರವನುಗುಳೆ ಸಮರ
ವ್ಯತಿತರೊಡಲೊಳು ಭಂಗಿಸಿತು ತಾ ಮೂರು ಲೋಕದಲಿ ॥

ಇಪ್ಪತ್ತನಾಲ್ಕನೆಯ ಸಂಧಿಯಲ್ಲಿ ೨೦ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ.—

ಎನಲು ಬಿಗುಹೇರಿದನು ಕೌರವ
ಜನಪ ಭಾರದ್ವಾಜತನುಜನ
ತನಯನನು ಕೋಪಿಸುತ ಕರ್ಣನ ಬರವ ಹೊಗಳುತಿರೆ ।

ಮನದೊಳಗೆ ಗುರುಸೂನು ರಾಯನ
ಮನದ ಕೋಪವನಱಿದು ಪಕ್ಷವ
ನೆನೆಹು ನಮಗಿಲ್ಲರಸ ಜಯವಧುವಿರವ ಕೇಳೆಂದ ॥

೨೧ನೆಯ ಪದ್ಯವಾದಮೇಲೆ (ಗ.ಟ.ದ, ಪ್ರತಿಯಲ್ಲಿ ಮುಂದಿನೆರಡು ಪದ್ಯ ಗಳು ಹೆಚ್ಚಾಗಿವೆ.—

ಹರುಷವೊಬ್ಬರಿಗೆ ಸ್ನೇಹದ ಪರ
ಮರಸವೊಬ್ಬರಿಗೆ ತನುವಿನ
ಕರುಣರಸವೊಬ್ಬಂಗೆ ಕೂಟದ ಭಾವವೊಬ್ಬಂಗೆ ।
ಎರಡುಮನೆಯೆರಡೊಲವು ಚಿತ್ತದ
ಪರಿಯೆರಡು ಮೈಯೆರಡು ನಾರಿಯ
ರೆರಡನಲ್ಲದೆ ಬಗೆಯರವನೀಪಾಲ ಕೇಳೆಂದ ॥ ೧

ಕೇಳು ನೀ ರಾಜೇಂದ್ರ ಚಿತ್ತದೊ
ಳಾಲಿಸಾದರೆ ಹೇಳ್ವೆ ನಾರಿಯ
ರಾಳಿಗೊಂಬರುಜನವ ಚಿತ್ತದ ಬಯಕೆಯದು ಬೇರೆ ।
ಸೋಲುವರು ತಾವಲ್ಲ ಪರರನು
ಸೋಲಿಸಿಯೆ ಹಿಗುವರು ಮನದೊಳ
ಗೇಳು ಕವಲಾಗಿಹರಲೈ ಭೂಪಾಲ ಕೇಳೆಂದ ॥ ೨

೩೨ನೆಯ ಪದ್ಯವಾದಮೇಲೆ (ಬ.ನ) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಎಸೆದುದಿನಿಬರ ನಿರುಪಮದ ಪೌ
ರುಷದ ಪಂಥಪ್ರೌಢಿ ಸಲೆ ಸೋ
ಲಿಸಿತು ಸುರರಾಲಿಗಳನಿಬ್ಬರ ಸಮರಸಂರಂಭ ।
ಎಸುಗೆಗಳು ಕೈಮೀರಿದವು ಮುಂ
ಡಿಸಿದ ಮಹಿಮರ ಬಿಲ್ಲ ಮಹಿಮೆಗೆ
ಪಶುಪತಿಯ ಪರಿವಾರ ಬಿದ್ದುದು ಕಯ್ಯ ಗಲ್ಲದಲಿ ॥

ಇಪ್ಪತ್ತೆರಡನೆಯ ಸಂಧಿಯಲ್ಲಿ ೧೫ನೆಯ ಪದ್ಯವಾದಮೇಲೆ (ಬ.ನ) ಪ್ರತಿಗ ಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.—

ತೊಡೆಗೆ ತೊಡೆ ನಡುನಡುಗೆ ತೊಟ್ಟರೆ
ಬಿಡದೆ ತಾಗುವುದುರವ ನಡುಕೊರ
ಲೆಡೆಗೆ ತೊಟ್ಟರೆ ಕೊಯ್ವುದುರವಣಿಯಿಂದ ಮಕುಟವನು ।

ಒಡೆಯ ದುರ್ಯೋಧನನ ಕಾರ್ಯವ
ಪಡೆವೆಯಾದರೆ ತೊಡು ನರನುರ
ದೆಡೆಗೆ ಬಾಣಪ್ರಯೋಗವನೆಂದನಾ ಶಲ್ಯ ॥

೩೦ನೆಯ ಪದ್ಯವಾದಮೇಲೆ (ಗ.ನ.ಬ) ಪ್ರತಿಗಳಲ್ಲಿ ಮುಂದಿನೆರಡು ಪದ್ಯಗಳು ಹೆಚ್ಚಾಗಿವೆ.—

ಹೊಗೆಯ ಹೊರಳಿಗಳೊಳಗೆ ಕ
ಬ್ಬೊಗೆದೆಗೆದುದುರವಣಿಯಿಂದ
ಗಗನವನುಗುಳಿ ಪುಟಗೊಳಿಸಿದವು ರಿಪುಮಾರ್ಗಣದ ಬರವಿನಲಿ ।
ಭುಗಿಭುಗಿಲು ಧಗಧಗಿಲು ಧಿಗಿಧಿಗಿ
ಧಿಗಿಲು ಝೋಯೆಂದೆನುತ ಬರುತಿದೆ
ನಗವ ನೆಗಹಿದ ದೇವ ಕಂಡನು ಪ್ರಳಯವಾಯ್ತೆನುತ ॥ ೧

ಕಾದಲೆಳಸಿದ ಪಾಂಡವರ ಸಂ
ವಾದ ತೀರಿತು ಕೌರವೇಂದ್ರನು
ಸಾಧಿಸಿದ ಫಲ ಸಫಲವಾಯಿತು ಸಮರಮುಖ ಮೊಳಗೆ ।
ಹೋದನರ್ಜುನನೀ ಮಹಾಸ್ತ್ರದ
ಬಾಧೆಗಿದಿರಿಲ್ಲೆನುತ ಘನ ಪರಿ
ವಾದದಲಿ ನೆರೆ ಕುದಿಯುತಿದ್ದುದು ದೇವಸಂದೋಹ ॥ ೨

೪೦ನೆಯ ಪದ್ಯವಾದಮೇಲೆ (ಖ.ಗ.ನ.ಬ) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.—

ಕೌರವನ ಮನ್ನಣೆಯಲಾವುದು
ದೂರವಾದುದು ನಿನಗೆ ನಿಜದಾ
ತಾರನಲಿ ವಂಚಿಸಿದೆ ನಿನಗಿನ್ನಾವ ಗತಿಯಹುದು ।
ಭಾರವಿದು ವಿಶ್ವಾಸಘಾತಕ
ರೌರವಾಕರ್ಷಣವು ಸ್ವರ್ಗಕೆ
ದೂರವಹರೇ ಕರ್ಣ ಕೆಡಸಿದೆಯಿಹಪರವನೆಂದ ॥

೪೧ನೆಯ ಪದ್ಯವಾದಮೇಲೆ (ಗ.ಟ.ದ) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.—

ನಚ್ಚಿದೆಮ್ಮಯ ಕೋಣನೀದುದ
ನಚ್ಚರಿಯ ನಿನ್ನಲ್ಲಿ ಕಂಡೆನು
ನಚ್ಚಲಾಗದು ನರರನಕಟಾ ಪಾಪಿ ಕೌರವನು ।

ನಚ್ಚಿದವನಿನ್ನಾಣಲಿ ಮಾನವ
ರಿಚ್ಚೆಕಾಱರು ನುಡು ನುಡಿತೆಲಪ್ಪೋ
ಕೆಚ್ಚುಹೃದಯನು ನೀನೆನುತ ಭಂಗಿಸಿದನಾ ಶಲ್ಯ ॥

ಇಪ್ಪತ್ತಾರನೆಯ ಸಂಧಿಯಲ್ಲಿ ೧೩ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.—

ಮುರಳಿ ಕೃಷ್ಣನನೆಚ್ಚ ಬಾಪುರ
ನರನ ಮುಖವನು ಮುರಿದನಾತನ
ತುರಗದೊಡಲಲಿ ಹೂಳಿದನು ಹೇರಾಳದಂಬುಗಳ ।
ವರ ನಕುಲ ಸಹದೇವ ಸಾತ್ಯಕಿ
ಮರುತತನಯ ಶಿಖಂಡಿ ಪಾಂಚಾ
ಲರನು ಧೃಷ್ಟದ್ಯುಮ್ನರನು ಕೆಡೆಯೆಚ್ಚು ಬೊಬ್ಬಿರಿದ ॥

೧೯ನೆಯ ಪದ್ಯವಾದಮೇಲೆ (ಗ.ನ.ಬ) ಪ್ರತಿಗಳಲ್ಲಿ ಮುಂದಿನ ಎರಡು ಪದ್ಯಗಳು ಹೆಚ್ಚಾಗಿವೆ.—

ಬಲುಹು ಫಲಿಸುವುದುಂಟೆ ದೈವದ
ವೊಲವು ತಪ್ಪಿದ ಮುನ್ನ ಕೌರವ
ನುಳಿವು ಹುಸಿ ಮುರವೈರಿ ಪಾಂಡವರತ್ತಲಾದಂದು ।
ಗೆಲವಗೋಚರವೆನುತ ಚಾಪವ
ನಿಳುಹಿದನು ಬತ್ತಳಿಕೆ ಕವಚವ
ಕಳೆದು ನೀತಿಯ ಸೆರಗನೋಸರಿಸಿದನು ಕಲಿ ಕರ್ಣ ॥ ೧

ಕೇಳು ಫಲುಗುಣ ನಿಜವರೂಥದ
ಗಾಲಿಯೋಸರಿಸಿದವು ರಥತುರ
ಗಾಳಿಗಳು ಪೈಸರದಲೊಲೆದವು ನೆಗಹುವೆನು ರಥವ ।
ಆಳುತನದಲಿ ಪ್ರೌಢಿ ನಿನಗುಂ
ಟೇಳಿಸದಿರಿದಿರಾಗದಿರು ಕೆಂ
ಗೋಲ ತೊಡಚದಿರೆನುತ ಪಾರ್ಥಂಗೆ ನುಡಿದನಾ ಕರ್ಣ ॥ ೨

೨೦ನೆಯ ಪದ್ಯವಾದಮೇಲೆ (ಗ.ನ.ಬ) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.—

ನೆಗಹುವೆನು ನಿಜರಥವ ತುರಗಾ
ಳಿಗಳ ಸಂತೈಸುವೆನು ಕೀಲ
ಚ್ಚುಗಳ ಮೇಳೈಸುವೆನು ಸೈರಿಸು ನಿಮಿಷಮಾತ್ರದಲಿ ।

ಬಿಗಿದ ಬಿಲ್ಲನು ತೆಗೆದು ಬಾಣವ
ನುಗಿದು ನೆಱೆ ಸಾಹಸದ ಕೋಟಿಯ
ತೆಗೆವ ಪರಿಯನು ಮಾಳ್ಪೆನೆಂದನು ಶಕ್ರತನಯಂಗೆ ‖

೪೧ನೆಯ ಪದ್ಯವಾದಮೇಲೆ (ಬ.ನ) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಆದ ಕಾಳೆಗ ಕರ್ಣನದು ದು
ಯೋ೯ಧನನ ಮನಖಾತಿ ಕರ್ಣನ
ಭೇದ ಭೀಷ್ಮಾದಿಗಳ ಮರಣವ ಕರ್ಣಗೋಸುಗರ ।
ಈ ದುರಾತ್ಮನು ನಿನ್ನ ಕೊಲವಿಯೆ
ಸಾಧಸಿದನವ ನಿನಗೆ ಮೋಹವ
ನಾದರಿಸದಿರು ಕೊಲಲು ಗುಣವಹುದೆಂದನಸುರಾರಿ ‖

೪೨ನೆಯ ಪದ್ಯವಾದಮೇಲೆ (ನ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಬಱಿಯ ಬಯಕೆಯ ಮಾಡಿ ಕರ್ಣನ
ನಿಱಿಯಲೀಯದೆ ವೈರವೃತ್ತಿಯ
ಮೆಱೆದು ಮಾಯಾನಟನಸೂತ್ರನು ನಿನ್ನರಚನೆಯನು ।
ಅಱಿಯಲೆನ್ನಳವಲ್ಲ ಕರ್ಣನೊ
ಳೆಱಗುವುದು ಕಡುಮೋಹವೇನೆಂ
ದಱೆಯೆನಂತಃಕರಣ ಕರಗುವುದೆಂದನಾ ಕರ್ಣ ‖

ಇಪ್ಪತ್ತೇಳನೆಯ ಸಂಧಿಯಲ್ಲಿ ೧೩ನೆಯ ಪದ್ಯವಾದಮೇಲೆ (ಕ.ದ.ನ) ಪ್ರತಿಗಳಲ್ಲಿ ಮುಂದಿನೆರಡು ಪದ್ಯಗಳು ಹೆಚ್ಚಾಗಿವೆ.—

ಗಿರಿಜೆಯಂಘ್ರಿಯ ನೆನೆದು ತಿರುವಿಗೆ
ಭರದಿ ಹೂಡಿದನಂಜನಾಸ್ತ್ರವ
ಪರಮ ಮಂತ್ರೋಚ್ಚರಣೆಯಿಂ ಬೊಬ್ಬಿಱಿದು ನರನೆಸಲು ।
ಕರಕಿರಣ ಸಾವಿರದ ತೇಜವ
ನಿರದೆ ಮಸುಳಿಸಿ ಸರಳು ಕರ್ಣನ
ಶಿರದ ಹೊರಗೈದಿದುದಲೇ ಧೃತರಾಷ್ಟ್ರ ಕೇಳೆಂದ ‖ ೧

ಶಿವಶಿವಾ ಎನುತಿರ್ದುದೈ ತ್ರೈ
ಭುವನಜನ ಗಾಂಡಿವವನೊದೆದುದು
ಹಾಯು ದೆ ದಿನಮಣಿಯ ತೇಜದ ಬಹಳ ರಶಿ ಗಳ ।

೧೬ನೆಯ ಪದ್ಯವಾದಮೇಲೆ ಆದೇ ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಬಳಲಿದನು ಬಸವಳಿದು ಮೆಲ್ಲನೆ
ಹಳವಿಗೆಯ ಮಲಗಿದನು ಲಕ್ಷ್ಮೀ
ನಿಳಯನನು ನೋಡುತ್ತ ರವಿಸುತನಿರಲು ಕಂಡಾಗ ।
ಹೊಳೆವ ಕೊಂಡಲವಿರಲು ಹರಣವು
ತೊಲಗದೀತಂಗೆನುತ ಕೃಷ್ಣನು
ತಿಳಿದು ವಿಪ್ರನ ರೂಪ ತಾಳ್ದವನಲ್ಲಿಗೈತಂದ ॥

೧೯ನೆಯ ಪದ್ಯವಾದಮೇಲೆ (ಐ.ಪು.ತ.ಪ) ಪ್ರತಿಗಳು ಬಿಟ್ಟು ಉಳಿದ ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.—

ಬೇಡಿದಡೆ ಕೊಂಡಲವ ತೆಗೆದೀ
ಡಾಡಿದನು ಲೋಕೈಕನಾಥನ
ನೋಡಿ ಪರಮಪ್ರೀತಿಭಕ್ತಿಯಲಿರ್ದನಾ ಕರ್ಣ ।
ಊಢಿಯೊಳಗೆನ್ನಿಂದ ಸುಕೃತವ
ಮಾಡಿದವರುಂಟೇ ಮುರಾರಿಯು
ನೋಡೆ ಕಂಡೆನೆನುತ್ತ ಎವೆಯಿಕ್ಕದೆ ನಿರೀಕ್ಷಿಸಿದ ॥

೨೩ನೆಯ ಪದ್ಯವಾದಮೇಲೆ (ಗ.ಟಿ.ದ ನ.ಬ) ಪ್ರತಿಗಳಲ್ಲಿ ಮುಂದಿನ ಪದ್ಯಗಳು ಹೆಚ್ಚಾಗಿವೆ.—

ಅರಸ ಕೇಳಾದಿಯಲಿ ಕರ್ಣಗೆ
ಕುರುಹನಱಿದುದದಲ್ಲದೀ ಸಂ
ಗರದ ಮಧ್ಯದಿ ಕೊರಳ ಕೊಯ್ದುದ ಕೇಳ್ದಲೈ ನೀನು ।
ನರನನೆಚ್ಚರಿಸಿದನು ತರಣಿಗೆ
ಕರುಣದನುಸಂಧಾನವಾದುದು
ಧರೆಯೊಳಚ್ಚರಿಯೆನಲು ಬೆರಗಿನೊಳಿದ್ದುದಮರಗಣ ॥ ೧

ಇತ್ತಲರ್ಜುನ ಕರುಣದಲಿ ಕರ
ಗುತ್ತ ಗಾಂಡೀವದಲಿ ತೊಡಚಿದ
ನೆತ್ತಿಗೇಱಿದು ಬಸುರ ಶಿಖಿ ಮುರವೈರಿಯುಪಟಳಕೆ ।
ಬತ್ತಳಿಕೆಯಲಿ ದಿವ್ಯ ಶರವನು
ಕಿತ್ತು ಶರಸಂಧಾನದಲಿ ಕೈ
ವರ್ತಿಸುತ ಕಿವಿಗಡಿಯ ತೆಗೆದನು ನಿಶಿತಮಾರ್ಗಣವ ॥ ೨

ಬಿಗಿದ ಬಿಲ್ಲನು ತೆಗೆದು ಬಾಣವ
ನುಗಿದು ನೆಱೆ ಸಾಹಸದ ಕೋಟಿಯ
ತೆಗೆವ ಪರಿಯನು ಮಾಳ್ಪೆನೆಂದನು ಶಕ್ರತನಯಂಗೆ ||

೪೧ನೆಯ ಪದ್ಯವಾದಮೇಲೆ (ಬ.ನ) ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಆದ ಕಾಳೆಗ ಕರ್ಣನದು ದು
ರ್ಯೋಧನನ ಮನಖಾತಿ ಕರ್ಣನ
ಭೇದ ಭೀಷ್ಮಾದಿಗಳ ಮರಣವ ಕರ್ಣಗೋಸುಗರ |
ಈ ದುರಾತ್ಮನು ನಿನ್ನ ಕೊಲವಿಯೆ
ಸಾಧಸಿದನವ ನಿನಗೆ ಮೋಹವ
ನಾದರಿಸದಿರು ಕೊಲಲು ಗುಣವಹುದೆಂದನಸುರಾರಿ ||

೪೨ನೆಯ ಪದ್ಯವಾದಮೇಲೆ (ನ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಬಱಿಯ ಬಯಕೆಯ ಮಾಡಿ ಕರ್ಣನ
ನಿಱಿಯಲೀಯದೆ ವೈರವೃತ್ತಿಯ
ಮೆಱೆದು ಮಾಯಾನಟನಸೂತ್ರನು ನಿನ್ನರಚನೆಯನು |
ಅಱಿಯಲೆನ್ನಳವಲ್ಲ ಕರ್ಣನೊ
ಳೆಱಗುವುದು ಕಡುಮೋಹವೇನೆಂ
ದಱೆಯೆನಂತಃಕರಣ ಕರಗುವುದೆಂದನಾ ಕರ್ಣ ||

ಇಪ್ಪತ್ತೇಳನೆಯ ಸಂಧಿಯಲ್ಲಿ ೧೩ನೆಯ ಪದ್ಯವಾದಮೇಲೆ (ಕ.ದ.ನ) ಪ್ರತಿಗಳಲ್ಲಿ ಮುಂದಿನೆರಡು ಪದ್ಯಗಳು ಹೆಚ್ಚಾಗಿವೆ.—

ಗಿರಿಜೆಯಂಘ್ರಿಯ ನೆನೆದು ತಿರುವಿಗೆ
ಭರದಿ ಹೂಡಿದನಂಜನಾಸ್ತ್ರವ
ಪರಮ ಮಂತ್ರೋಚ್ಚರಣೆಯಿಂ ಬೊಬ್ಬಿಱಿದು ನರನೆಸಲು |
ಕರಕಿರಣ ಸಾವಿರದ ತೇಜವ
ನಿರದೆ ಮುಸುಳಿಸಿ ಸರಳು ಕರ್ಣನ
ಶಿರದ ಹೊರಗೈದಿದುದಲೇ ಧೃತರಾಷ್ಟ್ರ ಕೇಳೆಂದ || ೧

ಶಿವಶಿವಾ ಎನುತಿರ್ದುದೈ ತ್ರೈ
ಭುವನಜನ ಗಾಂಡಿವವನೊದೆದುದು
ಹಾಯ್ದುದೈ ದಿನಮಣಿಯ ತೇಜದ ಬಹಳ ರಶ್ಮಿಯಲಿ |
ಅವಗಡಿಸಿತೀಯುಭಯಬಲ ದೃಗು
ನಿವಹವನು ಧಾರಾಳಿವಹ್ನೀ
ವಿವಱ ಬಹಳಜ್ವಾಲೆಯಲಿ ಜಡಿದೈದಿತರಿಭಟನ || ೨

೧೬ನೆಯ ಪದ್ಯವಾದಮೇಲೆ ಅದೇ ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.

ಬಳಲಿದನು ಬಸವಳಿದು ಮೆಲ್ಲನೆ
ಹಳವಿಗೆಯ ಮಲಗಿದನು ಲಕ್ಷ್ಮೀ
ನಿಳಯನನು ನೋಡುತ್ತ ರವಿಸುತನಿರಲು ಕಂಡಾಗ ।
ಹೊಳೆವ ಕೊಂಡಲವಿರಲು ಹರಣವು
ತೊಲಗದೀತಂಗೆನುತ ಕೃಷ್ಣನು
ತಿಳಿದು ವಿಪ್ರನ ರೂಪ ತಾಳ್ದವನಲ್ಲಿಗೈತಂದ ॥

೧೯ನೆಯ ಪದ್ಯವಾದಮೇಲೆ (ಬ.ಪು.ತ.ಪ) ಪ್ರತಿಗಳು ಬಿಟ್ಟು ಉಳಿದ ಪ್ರತಿಗಳಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ.—

ಬೇಡಿದಡೆ ಕೊಂಡಲವ ತೆಗೆದೀ
ಡಾಡಿದನು ಲೋಕೈಕನಾಥನ
ನೋಡಿ ಪರಮಪ್ರೀತಿಭಕ್ತಿಯಲಿರ್ದನಾ ಕರ್ಣ ।
ಊಧಿಯೊಳಗೆನ್ನಿಂದ ಸುಕೃತವ
ಮಾಡಿದವರುಂಟೇ ಮುರಾರಿಯು
ನೋಡೆ ಕಂಡೆನೆನುತ್ತ ಎವೆಯಿಕ್ಕದೆ ನಿರೀಕ್ಷಿಸಿದ ॥

೨೩ನೆಯ ಪದ್ಯವಾದಮೇಲೆ (ಗ.ಟ.ವ ನ.ಬ) ಪ್ರತಿಗಳಲ್ಲಿ ಮುಂದಿನ ಪದ್ಯಗಳು ಹೆಚ್ಚಾಗಿವೆ.—

ಅರಸ ಕೇಳಾದಿಯಲಿ ಕರ್ಣಗೆ
ಕುರುಹನಱಿದುದದಲ್ಲದೀ ಸಂ
ಗರದ ಮಧ್ಯದಿ ಕೊರಳ ಕೊಯ್ವುದ ಕೇಳ್ದಲ್ಲೈ ನೀನು ।
ನರನನೆಚ್ಚರಿಸಿದನು ತರಣಿಗೆ
ಕರುಣದನುಸಂಧಾನವಾದುದು
ಧರೆಯೊಳಚ್ಚರಿಯೆನಲು ಪೆರಗಿನೊಳಿದ್ದ ದಮರಗಣ ॥ ೧

ಇತ್ತಲರ್ಜುನ ಕರುಣದಲಿ ಕರ
ಗುತ್ತ ಗಾಂಡೀವದಲಿ ತೊಡಚಿದ
ನೆತ್ತಿಗೇಱಿದು ಬಸುರ ಶಿಖಿ ಮುರವೈರಿಯುಪಟಳಕೆ ।
ಒತ್ತಳಿಕೆಯಲಿ ದಿವ್ಯ ಶರವನು
ಕಿತ್ತು ಶರಸಂಧಾನದಲಿ ಕೈ
ವರ್ತಿಸುತ ಕಿವಿಗಡಿಯ ತೆಗೆದನು ನಿಶಿತಮಾರ್ಗಣವ ॥ ೨

ಕಿಡಿಯು ಕಾರುವ ವಡಬವಹ್ನಿಯು
ಕಡುಹನೇರಿತು ಬಿಱುಬುಗಣೆಗಳ
ಗಡಣೆ ಕಲಿಯಲು ಗರಿಯ ಗಾಳಿಯು ಲಳಿಯನೆಬ್ಬಿಸುತ ।
ನಡೆತರಲು ರವಿಸುತನ ಕಲಿಮನ
ಗುಡಿಯು ಕಟ್ಟಿತು ನಟ್ಟ ಕಣೆಯಲಿ
ತಡೆಗಡಿದು ಶಿರವುಡಿಯೆ ಕರ್ಣನ ಕೊರಳ ಬಳೆ ಹರಿದು ॥ ೩

ಧೀರನೋ ನೀನೆನುತ ತಲೆ ಕೈ
ವಾರಿಸುತ ಪುಟನೆಗೆಯೆ ರಕುತದ
ಧಾರೆಗಳು ನೂಕಿದವು ಗಗನದ ತಲೆಯ ಬಳಿವಿಡಿದ. ।
ವೀರ ಕರ್ಣನು ವಿಜಯಲಕ್ಷ್ಮಿಯು
ಸಾರಿದನು ಎನೆ ಛತ್ರನಿಚಯವ
ಸೇರಿಸಿದನೆನೆ ರಚನೆ ಮಿಗೆ ಚೆಲುವಾಯ್ತು ಗಗನದಲಿ ॥ ೪

ಲಾಗಿನಲಿ ತಲೆ ಹರಿದುಊಣೆಯು
ವಾಗಲೆಂದಱಿಯದೆ ನಿರಂತರ
ವೋಗಬಿಡದೆಸುತಿರ್ದುದೀತನ ಮುಂಡವರ್ಜುನನ ।
ಬೇಗ ಮಿಗಿಲು ಕುಲಾಲಚಕ್ರವ
ತೂಗಿಬಿಟ್ಟರೆ ತಿರುಗಿ ನಿಲುವವೊ
ಲಾಗಲೋಸರಿಸಿತ್ತು ಕರ್ಣನ ಬಾಹುಬಲವಿಂದು ॥ ೫

೨೯ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮುಂದಿನ ಮೂರು ಪದ್ಯಗಳು ಹೆಚ್ಚಾಗಿವೆ.—

ಉರಗಬಾಣವನೆಚ್ಚು ಪಾರ್ಥನ
ಶಿರವನರಿಯದೆ ಮರಳಿ ತೊಡು ತೊಡು
ಧುರದಿ ನೀನೆಂದೆನಲು ಪ್ರತಿಮಾರ್ಗಣೆಯ ತುಡುಕದರೆ ।
ಧುರದೊಳಹಿತರು ಸಿಕ್ಕಿದಾಗಳೆ
ಕರುಳನುಗಿಯದೆ ಕಾಯ್ವರೇನೈ
ಮರುಳಲಾ ಕಲಿ ಕರ್ಣ ಹಾಯೆಂದರಸ ಬಿಸುಸುಯ್ದ ॥ ೧

ದ್ರೋಣಭೀಷ್ಮರು ಮಡಿಯಲನಿತ
ಕ್ಷೋಣಿ ಚಾತುರ್ಬಲವು ಕೆಡೆಯಲು
ಪ್ರಾಣದಾತ್ಮಸಹೋದರರು ಕಡಿವಡೆದು ಬಿದ್ದಿರಲು ।

ತ್ರಾಣಗುಂದಿದುದಿಲ್ಲ ನಿನ್ನಯ
ಗೋಣೊಡೆಯಲೆನಗಾದುದಪಜಯ
ಕಾಣೆನಾರ ಸಹಾಯವನು ಕಲಿಕರ್ಣ ಹಾಯೆಂದ ‖ ೨

ಬಂದು ಸಂಜೆಯ ರಣದ ವಾರ್ತೆಯ
ನಂದು ನೃಪರಿಗೆಯರುಹಿದರೆ ಕಡು
ನೊಂದು ಹಮ್ಮೈಸಿದನು ಹಾ ಹಾ ಕರ್ಣ ಹಾಯೆನುತ ।
ಕಂದಿದನು ಕಡುಶೋಕ ಶಿಖಿಯಲಿ
ಬೆಂದು ಮಿಗೆ ಜವಗುಂದಿ ಯೆಚ್ಚಟು
ತಂದು ಮೇಲಣ ಕಥೆಯ ವಿಸ್ತರಿಸೆಂದನಂಧನೃಪ ‖ ೩

೩೩ನೆಯ ಪದ್ಯವಾದಮೇಲೆ (ಗ.ಟ.ದ) ಪ್ರತಿಗಳಲ್ಲಿ ಮುಂದಿನ ಪದ್ಯಗಳು ಹೆಚ್ಚಾಗಿವೆ.—

ಕೊಂತವೊಡಲೊಳಗೆದ್ದ ತೆರದಲಿ
ಕೊಂತಿ ಕರ್ಣನ ಸಾವ ಕೇಳಿದು
ಚಿಂತೆ ಮಿಗಿಲೊಳಗೊಗೆ ನೆನೆದಳು ನಯನವಾರಿಗಳ ।
ಭ್ರಾಂತಿ ಕವಿದುದು ಮನಕೆ ಕರುಣವ
ಸಂತವಿಡಳಡವಡದೆ ಕರ್ಣನ
ನೆಂತು ಕೊಂದರೆನುತ್ತ ಧರ್ಮಜ ಬಳಿಕ ಮರುಗಿದನು ‖ ೧

ಕರುಳು ಕಂಟಣಿಸಿದವು ಚಿತ್ತಕೆ
ಹಿರಿದು ಶೋಕದ ಬೀಡು ಬಿಟ್ಟುದು
ಕರುಣದಲಿ ಕಡು ಮೋಹವಾಯಿತು ಕರ್ಣ ಮಡಿದನೆನೆ ।
ಪರಮಬಂಧುಗಳಳಿದರಾ ದಿನ
ಪರಿಯ ಥಗೆಯವಗಡಿಸಿತಿಂದೇ
ನರಿಯನರಸಂಗೆನುತ ಖಿನ್ನಹಮಾಡಿದನು ಭೀಮ ‖ ೨

ತೆಗೆದು ಹೋದುದು ಸೇನೆ ಬಲುಗಾ
ಳಗವ ಗೆಲಿದನು ಪಾರ್ಥ ಚಿತ್ತದ
ದುಗುಡದಲಿ ಬಂದೆರಗಿದನು ಧರ್ಮಜನ ಚರಣದಲಿ ।
ಮಗುಟವನು ನೆಗಹಿದನು ತಮ್ಮನ
ಮೊಗವ ನೋಡುತ ಕರ್ಣನನು
ನೀಗಿದನುಚಿತವೆನುತ ಮರುಗಿದನಂದು ಯಮಸೂನು ‖ ೩

ಹಗೆಗೆ ಹರುವಾಯ್ತೆನಲು ಚಿತ್ತಕೆ
ದುಗುಡ ಬಿಡುವುದು ಮಾತು ಬೀಗಳು
ನೆಗೆದುದುರಿಯುದರದಲಿ ಮನ ಶಂಕಿಸುವುದಡಿಗಡಿಗೆ ।
ಮಗನೆನಿಸಿದಭಿಮನ್ಯು ಮಡಿದಾ
ಬಗೆಯೊಳೀವ್ಯಥೆ ತೋರದೆನುತವೆ
ದೃಗುಜಲವನೊರಸುತ್ತ ನಕುಲ ತಂಬುಲವನುಗುಳ್ದ ॥ ೪

ನುಡಿಯಬಾರದು ಕೃಷ್ಣನಾಜ್ಞೆಯು
ಮಿಡುಕಲಮ್ಮದೆ ತನ್ನ ನಿಳೆಯುಕೆ
ನಡೆದು ಕಡುದುಃಖದಲಿ ಧರಣಿಗೆ ತನುವನೀಡಾಡಿ ।
ಒಡನೆ ಹುಟ್ಟಿದ ಹಿರಿಯನಳಿವಿನ
ಕಡು ನಿರೋಧವ ಕಂಡೆನೆನಗಿದು
ನುಡಿಯಬಾರದೆನುತ್ತ ಹೊರಳಿದನೊದರಿ ಸಹದೇವ ॥ ೫

ಬೆದಕಲಮ್ಮಳು ಕರ್ಣನಾರೆಂ
ಬುದ ವಚನಿಸಳಮ್ಮಲತಿಶೋ
ಕದಲಿ ತಾ ತನ್ನೊಳಗೆ ದ್ರೌಪದಿ ಕಂದಿ ಕರಗಿದಳು ।
ಕದಲಿ ಕರ್ಣಂಗೆ ಹರುವಾದುದು
ನಿದಾನವು ಜೀಯಯೆನೆ ಬಳ
ಲಿದನು ಕೌರವರಾಯ ನಸು ನಡುನೆತ್ತಿಗೇರುತಿರೆ ॥ ೬

೩೫ನೆಯ ಪದ್ಯವಾದಮೇಲೆ (ಕ) ಪ್ರತಿಯಲ್ಲಿ ಮುಂದಿನ ಪದ್ಯವು ಹೆಚ್ಚಾಗಿದೆ.

ಕುದಿದು ಕೃಷ್ಣನು ಕರ್ಣನಳಿವನು
ವಿದಿತದಿಂದವೆ ಮಾಡಿಸಿದನತಿ
ಮುದದಿ ಹೆಚ್ಚಿದ ಹರುಷದಲಿ ಭೂಭಾರ ಹೋಯ್ತೆನುತ ।
ಸದನವನು ಹೊಕ್ಕನು ನಿರಂತರ
ಕದಡು ದುರಿಯೋಧನನ ಮೇಲಿರೆ
ಕದನದಲಿ ಪಾಂಡವರ ಸಲಹಿದ ವೀರನಾರಯಣ ॥

**Government Oriental Library Series.**

EDITED BY PANDITS UNDER THE SUPERVISION OF THE CURATOR, GOVT. ORIENTAL LIBRARY, MYSORE.

**KANNADA SECTION—No. III.**

# THE
# MAHABHARATA
## The PAULOMA and ASTIKA Parvas

BY

**SADANANDA-YOGINDRA**

# ಮಹಾಭಾರತಂ

ಸದಾನಂದ ಯೋಗೀಂದ್ರ ವಿರಚಿತ

ಪೌಲೋಮ ಆಸ್ತೀಕ ಪರ್ವಗಳು

EDITED BY

V. SYAMACHARYA,

*Pandit, Govt. Oriental Library, Mysore.*

PUBLISHED UNDER THE AUTHORITY OF THE GOVERNMENT OF HIS HIGHNESS THE MAHARÁJA OF MYSORE

MYSORE:
PRINTED AT THE GOVERNMENT BRANCH PRESS
1911

# ಅವತರಣಿಕೆ.

ಈ ಪುಸ್ತಕದಲ್ಲಿ ಶ್ರೀಮನ್ಮಹಾಭಾರತದಲ್ಲಿರುವ ಪೌಲೋಮಪರ್ವ ಆಸ್ತೀಕಪರ್ವಗಳ ಕಥಾವಿವರಣರೂಪವಾದ ಕನ್ನಡಪದ್ಯಕಾವ್ಯವು ಅಡಗಿದೆ. ಈಕಾವ್ಯವು ಶ್ರೀಕುಮಾರವ್ಯಾಸಕವಿಯಿಂದ ರಚಿತವಾಗಿ ಪ್ರಸಿದ್ಧಿಹೊಂದಿರುವ ಕರ್ಣಾಟಕ ಮಹಾಭಾರತಮಂಜರಿಯಲ್ಲಿ ವಿಶದವಾಗದೇ ಇರುವ ಭಾಗವನ್ನು ವಿಶದಪಡಿಸುವುದಕ್ಕೋಸ್ಕರ ಭಾಮಿನೀಷಟ್ಪದಿಯಲ್ಲಿ ರಚಿಸಲ್ಪಟ್ಟಂತೆ ಕಾಣುತ್ತಿದೆ. ಆದುದರಿಂದೇ ಪುಸ್ತಕಲೇಖಕರಿಂದ ಬಹುಪುಸ್ತಕಗಳಲ್ಲಿ ಕುಮಾರವ್ಯಾಸಕವಿಯ ಭಾರತದೊಡನೆ ವಿಭಾಗವು ತಿಳಿಯದಂತೆ ಸೇರಿಸಲ್ಪಟ್ಟಿದೆ. ಆದಾಗ್ಯೂ ಕೆಳಗೆ ವಿವರಿಸುವ ಕಾರಣಗಳಿಂದ ಈಗ್ರಂಥವು ಕುಮಾರವ್ಯಾಸಕಪಿಕೃತವಲ್ಲವೆಂತ ನಿಶ್ಚಯಿಸಿ, ಗ್ರಂಥಭೇದಜ್ಞಾನಕ್ಕಾಗಿಯೇ ಬೇರೇ ಪುಸ್ತಕವನ್ನಾಗಿ ಮಾಡಿ ಮುಂದೆ ಪ್ರಚುರಮಾಡಲ್ಪಡುವ ಕುಮಾರವ್ಯಾಸಕವಿಕೃತಿಗೆ ಇದೊಂದು ಉಪೋದ್ಘಾತವಾಗಿರಬಹುದೆಂದು ಪ್ರಚುರಪಡಿಸಿರುವೆವು.

ಈಗ ಈ ಗ್ರಂಥವು ಯಾವ ಕವಿಯಿಂದ ಯಾವ ಕಾಲದೇಶಗಳಲ್ಲಿ ಎಂತಹ ಭಾಷೆಯಲ್ಲಿ ರಚಿತವಾಗಿದೆ ಯೆಂಬುದು ವಿಚಾರಕ್ಕೆ ತಕ್ಕ ವಿಷಯವಾಗಿದೆ. ಅದರಲ್ಲಿ ಈ ಕವಿಯ ಕಾಲದೇಶಗಳನ್ನು ಕುರಿತು ಒಂದು ನಿಷ್ಕೃಷ್ಟಾಭಿಪ್ರಾಯವನ್ನು ಪಡೆಯಲು ಸರಿಯಾದ ಸಾಧನಗಳಾವವೂ ದೊರೆಯುವದಿಲ್ಲ. ಆದರೂ ಈಗ್ರಂಥದ ಪ್ರತಿಸಂಧಿಯ ಕೊನೆಯಲ್ಲಿ 'ನಿತ್ಯಾತ್ಮ' 'ನಿತ್ಯಾತ್ಮನಾರಾಯಣ' 'ನಿತ್ಯಾತ್ಮಪದುಮದೃಶ' ಈರೀತಿಯಾಗಿ ಅಂಕನವು ಇರುವಂತೆಯೆ, ಕರ್ಣಾಟಕ ಭಾಗವತದಲ್ಲಿಯೂ ಸಂಧ್ಯಂತ್ಯಪದ್ಯಗಳಲ್ಲಿ 'ನಿತ್ಯಾತ್ಮನಾರಾಯಣ' 'ನಿತ್ಯಾತ್ಮ' 'ನಿತ್ಯಾತ್ಮಪದುಮದೃಶ' 'ನಿತ್ಯಾತ್ಮಕೃಷ್ಣ' 'ನಿತ್ಯಾತ್ಮಗೋಪೀನಾಥ' ಇವು ಮೊದಲಾದ ಅಂಕನಗಳಿರುವುದರಿಂದ, ಈ ಗ್ರಂಥಕರ್ತನಾದ ಕವಿಯು ಭಾಗವತಪ್ರಣೇ

ತ್ರವಾದ ಕವಿಯೂ ಒಬ್ಬನೇ ಎಂದು ಹೇಳಬಹುದಾಗಿದೆ. ಮತ್ತು ಅಲ್ಲಲ್ಲಿ ಲಕ್ಷಣಶಾಸ್ತ್ರಗಳಿಗೆ ವಿರುದ್ಧವಾದ ಒಂದೇವಿಧವಾದ ಪ್ರಾಸ, ಸಂಧಿ, ಅಪ್ರಯುಕ್ತಶಬ್ದಗಳೂ ಇವೇ ಮೊದಲಾದವುಗಳು ಉಭಯಗ್ರಂಥಗಳಲ್ಲಿಯೂ ದೊರೆಯುತ್ತವೆ. ಈ ಕಾರಣಗಳಿಂದಲೂ ಮೇಲೆ ಹೇಳಿದ ಎರಡು ಗ್ರಂಥಗಳ ಕರ್ತರೂ ಒಂದೇ ಎಂದು ಊಹಿಸಬಹುದು. ಭಾಗವತಪ್ರಣೇತೃ ಕವಿಯು ಜೀವಿತಕಾಲವು ಕ್ರೈಸ್ತವಸಂವತ್ಸರಗಳ ಹದಿನಾರನೆಯ ಶತಕದ ಅಂತ್ಯಭಾಗವೆಂದು ಕೆಲವರು ಶೋಧಕರು ಊಹಿಸಿರುವರು. ಅಂತಹ ಊಹೆಗೂ ತಕ್ಕ ಸಾಧಕಗಳು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ.

ಈ ಕವಿಯು ಉಪಯೋಗಿಸಿರುವ ಭಾಷೆಯ ಸ್ಥಿತಿಯನ್ನು ನೋಡಲಾಗಿ ಮೈಸೂರಿಗೆ ಕೇವಲ ಸಮೀಪದೇಶದವನಲ್ಲವೆಂದುಮಾತ್ರ ಹೇಳಬಹುದು. ಈಕವಿಯು ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿರುವುದಿಲ್ಲ. ಆದರೆ ಕೆಲವರು ಗ್ರಂಥಾಂತಪದ್ಯಗಳ ಆಧಾರದಿಂದ "ಚಾಟು ವಿಠಲನಾಥ" ನೆಂದು ಈಕವಿಯ ಹೆಸರನ್ನು ಹೇಳುವರು. ಆದರೆ ಅದೂ ಒಂದು ಬಿರುದು ಎಂದು ನಮಗೆ ತೋರುತ್ತದೆ. ಆದರೆ ಭಾಗವತದಶಮಸ್ಕಂಧದ ಉಪಾಂತ್ಯ ಪದ್ಯದಲ್ಲಿ

> ". . . . ಯೋಗೀಂದ್ರನಖಿಳೋದಿತಸದಾನಂದ
> ಮುದದಲಭಿವರ್ಣಿಸಿದಂ"

ಎಂದು ಹೇಳಿರುವುದರಿಂದ 'ಸದಾನಂದಯೋಗೀಂದ್ರ' ನೆಂದು ಈತನ ಹೆಸರು ಹೇಳುವುದು ಯುಕ್ತವು. ಇದರಿಂದಲೇ ಈತನು ಬ್ರಾಹ್ಮಣನೆಂದೂ ಭಾಗವತಸಂಪ್ರದಾಯಕ್ಕೆ ಸೇರಿದವನೆಂದೂ ನಿರ್ಣಯಿಸಬಹುದಾಗಿದೆ. ಇಂತಹ ಹೆಸರುಗಳು ಭಾಗವತಸಂಪ್ರದಾಯದ ಗುರುಪರಂಪರೆಯಲ್ಲಿ ಕೆಲವರಿಗೆ ಇರುವುದೆಂಬುದು B78 ನೆಯ ನಂಬರುಳ್ಳ 'ಭಾಗವತಾಹ್ನಿಕ' ವೆಂಬ ಈ ಕೋಶಾಗಾರದ ಲಿಖಿತಪುಸ್ತಕದಿಂದ ವ್ಯಕ್ತವಾಗುತ್ತದೆ. ಮತ್ತು ಯೋಗೀಂದ್ರನೆಂದು ಹೇಳಿಕೊಂಡಿರುವುದರಿಂದ ತನ್ನ ಗುರುವಿನ ಹೆಸರನ್ನು 'ಅಚ್ಯುತಾರಣ್ಯಾಖ್ಯ ಯತಿರಾಯ' ಎಂದು ಹೇಳಿರುವುದರಿಂದೂ ಈತನು ಸಂನ್ಯಾಸಿ ಎಂದು ತಿಳಿದು ಬರುತ್ತದೆ.

ಈ ಕವಿಯು ಭಾರತದಲ್ಲಿ ಕೆಲವು ಪರ್ವಗಳನ್ನು ಮತ್ತು ಸಮಗ್ರ ಭಾಗವತವನ್ನೂ ಕನ್ನಡಿಸಿರುವುದಲ್ಲದೆ 'ವಿದಗ್ಧಚೂಡಾಮಣಿ' ಎಂಬ ಗ್ರಂಥವನ್ನು ಕೂಡ ರಚಿಸಿದಂತೆ ಹೇಳುತ್ತಾರೆ. ಆದರೆ ಕೊನೆಗೆ ಹೇಳಿದ ಗ್ರಂಥವು ದೊರೆತಿರುವುದಿಲ್ಲ.

ಈಗ ಈಕವಿಯು ಉಪಯೋಗಿಸಿರುವ ಭಾಷೆಯನ್ನು ಕುರಿತು ವಿಚಾರಮಾಡುವುದಕ್ಕಾಗಿ ಕರ್ಣಾಟಕಭಾಷೆಯ ಸಾಮಾನ್ಯವಿಷಯವನ್ನು ಸ್ವಲ್ಪವಾಗಿ ನಿರೂಪಿಸುವೆವು. ಪ್ರತಿಯೊಂದು ಭಾಷೆಯು ಆಯಾ ದೇಶದ ಸಾಮಾನ್ಯಜನಗಳ ಮೂಲದಿಂದ ವ್ಯವಹಾರನಿರ್ವಾಹಾರ್ಥವಾಗಿ ಬಳಕೆಯಲ್ಲಿ ಬಂದು, ಆಯಾ ಕಾಲಗಳಲ್ಲಿದ್ದ ದೇಶಾಭಿಮಾನಿಗಳಾದ ರಾಜರ ಪ್ರೋತ್ಸಾಹನಕ್ಕೆ ವಶರಾದ ಸಂಸ್ಕೃತಪಂಡಿತರುಗಳು ಆಯಾ ಭಾಷೆಗಳಲ್ಲಿ ವ್ಯಾಕರಣ, ಛಂದಸ್ಸು, ನಿಘಂಟು, ಅಲಂಕಾರಶಾಸ್ತ್ರ, ಇವೇಮೊದಲಾದವುಗಳನ್ನು ಸಂಸ್ಕೃತಭಾಷೆಯಲ್ಲಿರುವಂತೆ ರಚನೆಯನ್ನು ಮಾಡಿ ಕೆಲವು ನಿಯಮಗಳನ್ನು ಉಂಟುಮಾಡಿದ ಬಳಿಕ ದೇಶಭಾಷೆಗಳಲ್ಲಿ ಸುಶಬ್ದಾಪಶಬ್ದವಿವೇಕವೂ ಕಾವ್ಯಗುಣದೋಷವ್ಯವಸ್ಥೆಯೂ ಉಂಟಾಗಿರುವುದು ಸರ್ವರಿಗೂ ತಿಳಿದ ವಿಷಯವಷ್ಟೆ? ಈರೀತಿಯಿಂದ ಉಂಟಾದ ವ್ಯವಸ್ಥೆಯ ಕಾಲಕ್ಕೆ ಪೂರ್ವದಲ್ಲಿದ್ದ ಬಹುಪ್ರಾಚೀನ ಶಾಸನಾದಿಗಳಲ್ಲಿ ಈಗಲೂ ಕಂಡುಬರುವ, ಈಗ ನಮಗೆ ದೊರೆಯುವ ವ್ಯಾಕರಣಾದಿಗಳ ಸಹಾಯಗಳಿಂದ ನಿಷ್ಪಾದಿಸಲು ಅಶಕ್ಯವಾದ ಶಬ್ದಗಳುಳ್ಳ ಭಾಷೆಗೆ "ಪೂರ್ವದ ಹಳಗನ್ನಡ" ವೆಂದು ಹೆಸರನ್ನು ಹೇಳಬಹುದು. ನೃಪತುಂಗ ನಾಗವರ್ಮ ಕೇಶಿರಾಜ ಭಟ್ಟಾಕಳಂಕ ಮೊದಲಾದವರ ಗ್ರಂಥಗಳಿಂದ ಸಿದ್ಧಿಸುವುದಾಗಿ ಜೈನವೈಷ್ಣವಶೈವಕವಿಗಳಿಂದ ಗ್ರಂಥಗಳಲ್ಲಿ ಉಪಯೋಗಿಸಲ್ಪಟ್ಟಿರುವ ಶಬ್ದಗಳುಳ್ಳ ಭಾಷೆಗೆ "ಹಳಗನ್ನಡ" ವೆಂದು ಹೆಸರು. ಅಲ್ಲಿಂದೀಚೆಗೆ ಕಾಲಕ್ರಮದಿಂದೂ ಮತ್ತು ನಾನಾದೇಶದ ಜನಗಳ ಸಮಾವೇಶದಿಂದೂ ಆಯಾಯಾ ದೇಶಾಭಿಮಾನಿಗಳಾದ ಮುಖ್ಯಪುರುಷರ ಸ್ವವಂಶದೇಶಭಾಷಾಭಿಮಾನಮೂಲಕಸಹಾಯದಿಂದೂ ಮೇಲೆ ಹೇಳಿದ ವ್ಯಾಕರಣಾದಿನಿಯಮಗಳಿಗೆ ಒಳಪಡದ ಶಬ್ದಗಳಿಂದ ಪ್ರಚುರವಾಗಿ

ರಚಿಸಲ್ಪಡುತ್ತಾ ಬಂದ ಗ್ರಂಥಗಳ ಭಾಷೆಯು "ಹೊಸಕನ್ನಡ" ವೆಂದು ಕರೆಯಲ್ಪಡುವುದು.

ಪ್ರಕೃತ ಈ ಕವಿಯು ತನ್ನ ಗ್ರಂಥದಲ್ಲಿ ಉಪಯೋಗಿಸಿರುವ ಭಾಷೆಯನ್ನು ಹೊಸಕನ್ನಡವೆಂದು ಹೇಳಬೇಕಾಗಿದೆ. ಈಹೊಸಕನ್ನಡ ಭಾಷೆಯು ಅನೇಕ ಮತದ ಪಂಡಿತರಿಂದ ಆಯಾಮತಗಳ ರಹಸ್ಯವನ್ನು ಬೆಳ್ನುಡಿ (ಸ್ಫುಟಾರ್ಥಕಶಬ್ದ) ಗಳಿಂದ ಸಾಧಾರಣಜನಗಳಿಗೂ ತಿಳಿಯು ವಂತೆ ಷಟ್ಪದಿಗಳಲ್ಲಿಯೂ ರಗಳೆಮೊದಲಾದವುಗಳಲ್ಲಿಯೂ ಬಳಕೆಯಲ್ಲಿ ತರಲ್ಪಟ್ಟಿದೆ. ಈ ಭಾಷೆಗೆ ಹಳಗನ್ನಡದ ವ್ಯಾಕರಣಾದಿಲಕ್ಷಣಗ್ರಂಥ ಗಳ ವಿರೋಧವು ದೂಷಣವಲ್ಲವೆಂದು ಆದಿತ್ಯಪುರಾಣವೆಂಬ ಗ್ರಂಥದ 1ನೆಯ ಸಂಧಿಯ 36ನೆಯ ಪದ್ಯದಿಂದ ವಿಶದವಾಗುವುದು.

ಶಬ್ದಮಣಿಮೊದಲಾದ ಶಾಸ್ತ್ರದ ।
ಹೊದ್ದಿಕೆಯು ಸಾಹಿತ್ಯಕಲ್ಲದೆ ।
ಹೃದ್ಯಷಟ್ಪದಿಹಾಡುಗಬ್ಬಳಿಂಗೆ ಬೇಡೆಂದು ॥
ಸಿದ್ಧನೂತನಕವಿಗಳುಸುರಿದ ।
ಪದ್ಧತಿಯೊಳೆಡಹಿ ಬೀಳುತ ।
ಬುದ್ಧಿಯಱಿವೆಂತೊರೆವೆಸಿದ ಬೆಳ್ನುಡಿಯ ಬೆರಕೆಯಲಿ ॥

ಹೀಗೆಂಬುವುದರಿಂದ ಈ ಭಾಷೆಯಲ್ಲಿ ಸುಶಬ್ದಾಪಶಬ್ದವಿವೇಕವಿ ಲ್ಲದೇ ಕವಿಗಳು ಪ್ರಯೋಗಿಸಿದಾರೆಂದು ಭಾವಿಸಕೂಡದು. ಹಳಗನ್ನಡ ವ್ಯಾಕರಣದಿಂದ ಯಥಾಶ್ರುತ ಕ್ರಮದಿಂದ ನಿಷ್ಪನ್ನವಾಗದೇ ಯಿದ್ದಾಗ್ಯೂ ಅಲ್ಲಿ ಹೇಳಿರುವ ನ್ಯಾಯಗಳ ಸಾಮ್ಯದಿಂದ ಹೇಗೋ ಒಂದು ವಿಧದಲ್ಲಿ ನಿರ್ವಹಿಸಬಹುವಾದ ರೂಪಸಿದ್ಧಿಯುಳ್ಳ ಗ್ರಾಮ್ಯರಲ್ಲದ ಜನಗಳು ಉಪ ಯೋಗಿಸುವ ಶಬ್ದಗಳನ್ನು ಮಿಶ್ರಮಾಡಿ ಗ್ರಂಥವನ್ನು ಬರೆದಿದಾರೆಂದು ಹೇಳುವುದು ಯುಕ್ತವು. ಈ ವಿಷಯಕ್ಕೆ ಉದಾಹರಣರೂಪವಾಗಿ ಈ ಕವಿಯು ಉಪಯೋಗಿಸಿರುವ ಕೆಲವು ಪದಗಳ ಸಿದ್ಧಿಯನ್ನು ಕುರಿತು ವಿಚಾರವನ್ನು ಮಾಡಿ ತೋರಿಸುವೆವು.

ಈ ಗ್ರಂಥದ 11ನೆಯ ಸಂಧಿಯ 20ನೆಯ ಪದ್ಯದ ಉತ್ತರಾ ರ್ಧವು ಈಕೆಳಗೆ ಬರೆಯಲ್ಪಟ್ಟಿದೆ.

ಅಷ್ಟಮೂರುತಿ ಕಡೆಗೆ ಹಣೆಗಣ್ಣ ।
ದೃಷ್ಟಿಯಲಿ ಹೋವಿಸುವೆನಿದನು ।
ತ್ಕೃಷ್ಟಮತಿ ವಿಹಾಉವೆನವಾವನು ತಂದೆಗಳಿರೆಂದ ॥

'ಹಣೆಗಣ್ಣ' ಎಂಬ ಪದವು ದೃಷ್ಟಿಗೆ ವಿಶೇಷಣವಾಗಿ ಪ್ರಯೋಗಿಸಲ್ಪಟ್ಟಿರುವಂತೆ ಕಾಣುತ್ತದೆ. ಇದನ್ನು ವಿಶೇಷಣವಾಗಿ ನಿಷ್ಪಾದನಮಾಡಬೇಕಾದರೆ ಸಪ್ತಮೀಸಮರ್ಥವಾದ ಹಣೆ ಎಂಬ ಶಬ್ದದ ಮೇಲೆ 'ದಿಕ್ಶಬ್ದಾದಣಃ' ಎಂಬ (ಪುಟ 201 ಸೂತ್ರ 421) ಶಬ್ದಾನುಶಾಸನಪ್ರಕಾರ ಅಣ ಪ್ರತ್ಯಯವನ್ನು ಮಾಡಬೇಕಷ್ಟೆ? ಹಾಗೆ ಮಾಡುವುದಕ್ಕೆ ಎರಡು ಅನುಪಪತ್ತಿಗಳಿವೆ. ಒಂದನೆಯದು—'ಹಣೆ' ಎಂಬ ಶಬ್ದವು ಮೂಡ, ತೆಂಕ, ಇವೇ ಮೊದಲಾದ ಶಬ್ದಗಳಂತೆ ದಿಗ್ವಾಚಕವಲ್ಲದೆ ಇರುವುದು. 2 ನೆಯದು—ಸಪ್ತಮೀಸಮರ್ಥವಾದ 'ಹಣೆ' ಶಬ್ದದ ಮೇಲೆ ಅಣ ಪ್ರತ್ಯಯವನ್ನು ಮಾಡಿದರೆ 'ಹಣೆಯಣ' ಎಂತಲೇ ರೂಪವು ಸಿದ್ಧಸಬೇಕೆಂಬುದು. ಇದರಲ್ಲಿ 1ನೆಯ ಅನುಪಪತ್ತಿಯನ್ನು ಹಣೆಯ ಪ್ರದೇಶವು ನೇತ್ರದ ನಿಜಸ್ಥಳದಕಿಂತಲೂ ಊರ್ಧ್ವಪ್ರದೇಶವಾದಕಾರಣ ವೈವಕ್ಷಿಕದಿಕ್ಶಬ್ದತ್ವವನ್ನು ಸಂಪಾದಿಸಿಕೊಂಡು ಏನೋ ಒಂದು ಬಗೆಯಿಂದ ಸಮಾಧಾನ ಮಾಡಬಹುದು. ಈ ಸಮಾಧಾನಗಳನ್ನು ವ್ಯಾಖ್ಯಾನಕಾರರು ಒಪ್ಪಿರುವುದಿಲ್ಲ. ನ್ಯಾಯಸಾಮ್ಯದಿಂದ ಮಾತ್ರ ಹೇಳಬೇಕಾಗಿರುವುದು. 2ನೆಯ ಅನುಪಪತ್ತಿಗೆ 'ಹಣೆಯಣ' ಎಂದೇ ಆಗಲಿ 'ಹಣಿಗಣ' ಎಂದಾಗಲಿ ಪಾಠಶೋಧನ ಮಾಡುವುದು ಪರಿಹಾರವು. 'ಹಣಿಗಣ' ಎಂದು ಶೋಧನ ಮಾಡುವಪಕ್ಷದಲ್ಲಿ 'ಫಣಿಕಾ' ಎಂಬ ಸಂಸ್ಕೃತಶಬ್ದದಿಂದ 'ಹಣಿಗೆ' ಎಂಬ ಅಪಭ್ರಂಶವು ಸಿದ್ಧಿಸುವುದರಿಂದ ಸಪ್ತಮೀಸಮರ್ಥವಾದ ಆ ಶಬ್ದದ ಮೇಲೆ ಅಣಪ್ರತ್ಯಯ ಮಾಡಿದರೆ ಈ ರೂಪವು ಸಿದ್ಧವಾಗುತ್ತದೆ.

ಈ ಗ್ರಂಥದಲ್ಲಿ ಅಲ್ಲಲ್ಲಿ 'ಒಂದಿನ' ಎಂಬ ಪದವು ಪ್ರಯುಕ್ತವಾಗಿದೆ. ಉದಾಹರಣೆಗಾಗಿ 13 ನೇ ಸಂಧಿಯ 33 ನೆಯ ಪದ್ಯವನ್ನು ತೋರಿಸಿದೇವೆ.

ಇರೆ ವರಜರತ್ಕಾರು ವೊಂದಿನ ।
ಭರದಲೈದಿದರಣ್ಯವ ಗಿರಿಶಿ ।
ಖರವಲಿ ಮುಂದದಿ ನಿಂದು ಪಿಜನವಿದೆಂದು ನಿಶ್ಚಯಿಸಿ ॥

ನಿತ್ಯಾ ಸಮಾಸೇ ವಾಕ್ಯೇ ತು ಸಾ ವಿವಕ್ಷಾಮಪೇಕ್ಷತೇ ”
ಎಂದು ವಾಕ್ಯಸಂಧಿಯು ಕವಿಯ ವಿವಕ್ಷೆಯನ್ನು ಅನುಸರಿಸಿದ್ದಾಗಿರುತ್ತದೆ, ಎಂದು ತಿಳಿದು ಬರುವುದರಿಂದ ಅದೂ ದೋಷವಲ್ಲ.

ಇನ್ನು ಮುಂದೆ ಈ ಕವಿಯು ಈ ಗ್ರಂಥವಲ್ಲಿ ಉಪಯೋಗಿಸಿರುವ ವೃತ್ತವನ್ನು ಕುರಿತು ವಿಚಾರಮಾಡಬೇಕಾಗಿದೆ. ಈ ಗ್ರಂಥವೆಲ್ಲವೂ ಭಾಮಿನೀಷಟ್ಪದೀ ವೃತ್ತರೂಪವಾಗಿರುತ್ತದೆ. ಇದು ಮೂರು ಮೂರು ಪಾದಗಳುಳ್ಳ ಎರಡು ಅರ್ಧಗಳುಳ್ಳದ್ದಾಗಿರುವುದರಿಂದ 'ಷಟ್ಪದಿ' ಯೆಂದು ಕರೆಯಲ್ಪಡುವುದು. ಇದರಲ್ಲಿ ಮೊದಲೆರಡು ಪಾದಗಳು ಸಮವಾಗಿಯೂ ಮೂರು ಆರನೆಯ ಪಾದಗಳು ಹೊಂದೆರಡರಕಿಂತ ವಿಷಮವಾಗಿಯೂ ಇರುತ್ತದೆ ಈ ವೃತ್ತದಲ್ಲಿ ಮಾತ್ರಾತ್ರಯಾತ್ಮಕವಾದ ಗಣವು ವಿಷಮಸ್ಥಾನದಲ್ಲಿಯೂ ಮಾತ್ರಾಚತುಷ್ಟಯಾತ್ಮಕವಾದ ಗಣವು ಸಮಸ್ಥಾನದಲ್ಲಿಯೂ ಇರಬೇಕು. ಪ್ರಥಮ ದ್ವಿತೀಯ ಪಾದಗಳಿಗೆ ಮೇಲೆ ಹೇಳಿದ ಪ್ರಕಾರ ನಾಲ್ಕು ಗಣಗಳು ಅಂದರೆ ಹದಿನಾಲ್ಕು ಮಾತ್ರೆಗಳು, ತೃತೀಯ ಪಾದಗಳಿಗೆ ಆರು ಗಣಗಳು ಒಂದು ಗುರು ಅಂತು ಇಪ್ಪತ್ತು ಮೂರು ಮಾತ್ರೆಗಳು ಇರುತ್ತವೆ. ಸಮಸ್ಥಾನದಲ್ಲಿ ಬರುವ ಮಾತ್ರಾಚತುಷ್ಟಯಾತ್ಮಕವಾದ ಗಣವು ಜಗಣಭಿನ್ನವಾಗಿಯೇ ಇರಬೇಕು. ಮಾತ್ರಾತ್ರಯಾತ್ಮಕಗಣವು ಗುರುಯುಕ್ತವಾಗಿದ್ದ ಪಕ್ಷದಲ್ಲಿ ಗುರ್ವಕ್ಷರಾದಿಯಾಗಿರಬೇಕು. ಈ ನಿಯಮವನ್ನು ಚನ್ನಾಗಿ ದೃಷ್ಟಿಕೊಟ್ಟು ರಚಿಸಿದರೇನೇ ಈ ವೃತ್ತವು ಶ್ರಾವ್ಯವಾಗಿ ಇರುತ್ತದೆ. ಇದನ್ನು ಉಲ್ಲಂಘಿಸಿ ಕೇವಲ ಮಾತ್ರಾಸಂಖ್ಯಾದೃಷ್ಟಿಮಾತ್ರದಿಂದಲೇ ಗಣನಿಯಮವನ್ನು ಉಲ್ಲಂಘಿಸಿ ಕೆಲವರು ರಚಿಸಿರುವ ಈ ವೃತ್ತದ ಪದ್ಯಗಳು ಶ್ಲಾಘ್ಯವಲ್ಲವೆಂದು ತಿಳಿಯತಕ್ಕದ್ದು. ಮುದ್ರಣಾರಂಭಕಾಲದಲ್ಲಿ ದೊರೆಕಿದ ಕೆಲವು ಪುಸ್ತಕಗಳಲ್ಲಿ ಪೂರ್ವೋಕ್ತ ವೃತ್ತಲಕ್ಷಣಕ್ಕೆ ವಿರುದ್ಧವಾಗಿ ಕೆಲವು ಪಾಠಗಳು ಇದ್ದದ್ದರಿಂದ ಅದನ್ನು ಕವಿಯೇ ಹಾಗೆ ರಚಿಸಿರಬಹುದೆಂದು ಕೆಲವು ಸ್ಥಳಗಳಲ್ಲಿ ಮುದ್ರಿಸಿದ್ದೆವು. ಆದರೆ ಕೆಲವುದೂರ ಮುದ್ರಿಸಿದ ಬಳಿಕ ದೊರೆತ ಪುಸ್ತಕಾಂತರಗಳನ್ನು ನೋಡಲಾಗಿ ಲಕ್ಷಣವಿರುದ

ವಲ್ಲದ ಪಾಠಗಳು ಕಂಡು ಬಂದುದರಿಂದ ಆ ಶೋಧನಗಳನ್ನು ಶೋಧನ ಪತ್ರಿಕೆಯಲ್ಲಿ ಕಾಣಿಸಿರುತ್ತೇವೆ.

ಈ ಕವಿಯು ಛಂದೋಲಕ್ಷಣದ ಮುಖ್ಯಾಂಶವಾದ 'ಪ್ರಾಸ' ಅಂದರೆ ದ್ವಿತೀಯಾಕ್ಷರ ನಿಯಮ, ಅದರ ವಿಷಯದಲ್ಲಿ ಕೆಲವು ಸ್ಥಳಗಳಲ್ಲಿ ಲಕ್ಷಣಗ್ರಂಥಗಳಿಗೆ ವಿರುದ್ಧವಾಗಿ ರಚಿಸಿರುವನು. ಅದು ಹೇಗೆಂದರೆ, ಆದಿ ಪಾದದ ದ್ವಿತೀಯಾಕ್ಷರವೇ ಆಗಲಿ ಆದಿಪಾದದ ದ್ವಿತೀಯಾಕ್ಷರಕ್ಕೆ ಕ್ರಮ ದಿಂದ ಬರುವ ವರ್ಗಾಕ್ಷರವಾಗಲಿ ಪ್ರಾಸಾಕ್ಷರವೆನಿಸುವುದಲ್ಲವೆ? ಹೀಗಿ ರುವಾಗ ಈಕವಿಯು ಕೆಲವು ಪದ್ಯಗಳಲ್ಲಿ ಸಂಯುಕ್ತಾಕ್ಷರವು ದ್ವಿತೀಯ ವಾದಾಗ ಈನಿಯಮವನ್ನು ಸಂಪೂರ್ಣವಾಗಿ ಅನುಸರಿಸದೆ ಸಂಯುಕ್ತಾ ಕ್ಷರದಲ್ಲಿ ಸೇರಿರುವ ಯಾವದಾದರೊಂದು ವ್ಯಂಜನಾಕ್ಷರದ ಸಂಬಂಧಮಾ ತ್ರದಿಂದಲೇ ಪ್ರಾಸಪೂರ್ತಿಯಾದಂತೆ ಭಾವಿಸಿರುವನು. ಹೀಗೆ ಮಾಡಿರು ವುದು ಈ ಕವಿಯು ಒಬ್ಬನೇ ಅಲ್ಲ. ಇನ್ನೂ ಷಟ್ಪದಿಯಲ್ಲಿ ಗ್ರಂಥಗ ಳನ್ನು ರಚಿಸಿದ ಕವಿಗಳೆಲ್ಲರೂ ಇದೇ ರೀತಿಯಾಗಿ ಏಕೈಕವರ್ಣಾನು ಗಮದಿಂದ ಪ್ರಾಸವನ್ನು ಒಪ್ಪಿರುವುದಾಗಿ ಕೆಳಗೆ ತೋರಿಸುವ ಅವರ ಪ್ರಯೋಗಗಳಿಂದ ಸ್ಪಷ್ಟವಾಗುತ್ತದೆ.

ರಾಘವಾಂಕಕವಿಯು ತನ್ನ ಹರಿಶ್ಚಂದ್ರಕಾವ್ಯದಲ್ಲಿ (13—4)

> ಇನ್ನೇನ ಕಾಣಲಿರ್ದಪೆ ನರಸ ಕೇಳದೊಡೆ ।
> ನಿನ್ನ ಮಗನಂ ಕೊಂದ ಪಾಪಿಯಾನೆಂದಾಡಿ ।
> ಯನ್ಯಾಯದಿಂ ಸಾವನೆನುತ ಬರಲೋಲಗದ ಕಳಕಳವ
> [ನೇನೆಂಬೆನು ॥

ಅದೇ ಗ್ರಂಥದಲ್ಲಿ (6—29)

> ಮೃತ್ಯುರೂಪಿನ ಪಂದಿ ಕಾನನದೊಳೂಕ್ಕಲಿ ।
> ಕ್ಕಿತ್ತು ನೆಯ ಸುತ್ತಿ ಬೆಂಬತ್ತಿ ತಲೆಯೆತ್ತಿ ಮನ !
> ವೆತ್ತಿ ಯುರಿಯುತ್ತ ತಿರುಗುತ್ತ ಹಿರಿಯುತ್ತ ಬೆದರು
> [ತ್ತೆಯ್ದಿ ಬಲವೆಲ್ಲವ ॥

ಭಾಸ್ಕರಕವಿಯು ತನ್ನ ಜೀವಂಧರ ಚರಿತೆಯಲ್ಲಿ (3—23)

> ಭ್ರಷ್ಟನೋ ತಾನಾಗಿ ಪುರುಷರ

ಮುಟ್ಟುವುದು ಸತಿಯರಿಗೆ ಹೀನವೆ
ನಿಷ್ಟವೆನಗಾಯ್ತೆಂದು ಬೆರಗಾದಳು ಸರೋಜಾಕ್ಷಿ ॥

ಅದೇ ಗ್ರಂಥದಲ್ಲಿ (3—24)

ಮುಗ್ಧೆಯರೊಳತಿ ಹೀನವಹುದೆಂ
ದೆದ್ದು ನೋಡುವೆ ಮರೆದು ಮಲಗಿರೆ
ಮಧ್ಯರಾತ್ರಿಯೊಳದ್ದು ಕಾಷ್ಠಾಂಗಾರಸ್ಯೆವರಿದ ॥ "

ಈರೀತಿಯಾಗಿ ಸರ್ವಕವಿಸಾಧಾರಣಗಳಾದ ರೀತಿಯಿಂದಲೇ ಈಗ್ರಂಥವು ರಚಿತವಾಗಿರುತ್ತದೆ. ಆದುದರಿಂದ ಈ ಗ್ರಂಥವು ಇತರಗ್ರಂಥಗಳಂತೆ ಉಪಾದೇಯುವೆಂದು ಪ್ರಕಟಿಸಲ್ಪಟ್ಟಿದೆ.

ಈಗ್ರಂಥದ ಶೋಧನವು ನಾಲ್ಕುಪ್ರತಿಗಳ ಆಧಾರದಿಂದ ನಡೆದಿದೆ. ಅದರಲ್ಲಿ ಮೂರು ಪ್ರತಿಗಳು ತಾಳಪತ್ರಾತ್ಮಕಗಳು, ಒಂದುಮಾತ್ರ ಕಾಗದದ್ದು. ತಾಳಪತ್ರದ ಪ್ರತಿಒಂದು, ಕಾಗದದ ಪ್ರತಿ ಒಂದು ಸಹ ಒಂದೇ ಮೂಲಪ್ರತಿಯಿಂದ ಬರೆಯಲ್ಪಟ್ಟದ್ದಾಗಿ ಕಾಣುತ್ತಿವೆ. ಉಳಿದ ಪ್ರತಿಗಳೆಲ್ಲವೂ ಭಿನ್ನಭಿನ್ನ ಪಾಠಾದಿಯುಕ್ತವಾಗಿ ಇರುವುವು. ಅದರಲ್ಲಿ ಎರಡುಪ್ರತಿಗಳ ಆಧಾರದಿಂದ ಮುದ್ರಣ ಆರಂಭಿಸಿ ಕೆಲವು ದೂರ ಸಾಗಿದ ಮೇಲೆ ಮತ್ತೆರಡು ಪ್ರತಿಗಳು ದೊರೆತದ್ದರಿಂದ ಮುಂದಿನ ಭಾಗವು ಚನ್ನಾಗಿ ಶೋಧಿತವಾಗಲವಕಾಶ ಸಿಕ್ಕಿತು. ತತ್ಪೂರ್ವಭಾಗವನ್ನು ಈ ಎರಡು ಪ್ರತಿಗಳ ಸಹಾಯದಿಂದೂ ಶೋಧಿಸಿ ಶೋಧನಪತ್ರಿಕೆಯಲ್ಲಿ ವ್ಯಕ್ತ ಪಡಿಸಿರುವೆವು. ಆದುದರಿಂದಲೇ ಶೋಧನಪತ್ರಿಕೆಯು ಸ್ವಲ್ಪಹೆಚ್ಚಿರುವುದು. ಅಲ್ಲಲ್ಲಿ ಪುಸ್ತಕಭೇದದಿಂದ ಕಂಡು ಬಂದ ಪಾಠಭೇದಗಳನ್ನು ಆಯಾ ಪುಟಗಳ ಅಡಿಯಲ್ಲಿ ತೋರಿಸಿರುವೆವು. ಅಯುಕ್ತವಾದ ಪಾಠಭೇದಗಳನ್ನು ಬಿಟ್ಟಿರುವೆವು. ಕೆಲವು ಸ್ಥಳಗಳಲ್ಲಿ ಮಾತ್ರ ಸ್ವತಂತ್ರಶೋಧನೆಯೂ ಆವಶ್ಯಕವಾಗಿ ಮಾಡಬೇಕಾಯಿತು.

ಈ ವಿಷಯಗಳನ್ನು ಅಭಿಜ್ಞರೂ ಮತ್ತು ಗುಣಗ್ರಾಹಿಗಳೂ ಆದವರೆಲ್ಲರೂ ಮನಸ್ಸಿಗೆ ತಂದು ಆನಂದಿಸುವರೆಂದು ನಂಬಿರುತ್ತೇವೆ.

# ವಿಷಯಾನುಕ್ರಮಣಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | 20 | ಬಿಡುಬಿಡು | ಬಿಡು |
| 20 | 13 | ಚರಿತ್ರವ | ಚರಿತವ |
| 21 | 6 | ಳಲೆತಂದೆನೀ | ಳಲ್ಲೈತಂದೆ |
| 22 | 5 | ರಾಜ್ಯೆ | ರಾಜ್ಯ |
| 23 | 16 | ನುಚಿತ್ತದಿ | ನುಚಿತದಿ |
| 25 | 5 | ಸಿದಂದವದಾಯ್ತಂ | ಯಿಸುವುದಾಯಿತದೆಂ |
| ,, | ,, | ಸಹಿತಪೂ | ಸಹಿತಪ |
| ,, | ,, | ಛಲಿಛಾಯೆಶಕಿಯು | ದುಛಾಯೆಶಕಿಯುನು |
| 26 | 17 | ಗಡೆದಳು | ಗೆಡೆದಳು |
| ,, | 21 | ಹುವ್ವಿನ | ಹೂವಿನ |
| ,, | ,, | ಜಂಗೆನೆ | ಜಗ್ಗನೆ |
| 27 | 9 | ದರ್ಥಕ್ಕ | ದರ್ಥಕೆ |
| 28 | 12 | ನಾವೆಯು | ನಾವೆಯ |
| ,, | 14 | ಪೊಡವಂಟು | ಪೊಡವಟ್ಟು |
| 29 | 4 | ಕೂರವಿುಗಸಾಧ್ಯ | ಕೂರವೆುಗಳಿಗಸಾಧ್ಯ |
| 30 | 17 | ವೆಂದೆನಿಸುವ | ವೆಂಬುದ |
| ,, | ,, | ಆಉರೆಶ್ವಾ | ಆಉರೇ |
| 31 | 1 | ತನ್ನ | ತನ್ನಯ |
| ,, | ,, | ನೊಂದಳತೆ | ನೊಳಗೊಂದಳತೆ |
| ,, | 24 | ವನೀ | ವನ್ನು |
| 32 | 18 | ತನ್ನಾಯುಷಾರ್ಥವನು | ತನ್ನಾಯುಷ್ಯದರ್ಥ |
| ,, | 25 | ವೆಗ್ರತ | ವೇಗವ |
| 33 | 22 | ತಿರ್ದುದಾ | ತಿರ್ದುದಂದಾ |
| 34 | 9 | ಗೃಹಕ್ಕ | ಗೃಹಕೆ |
| ,, | 18 | ತೊರದ | ತೊರೆದ |
| ,, | 19 | ಹೊರವ | ಹೊರೆವ |
| ,, | 21 | ದಲ್ಲಿ | ದಲಾ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 35 | 5 | ಕೊಯ್ಯುವೆನಲ್ಲ | ಕೊಯ್ಯದಿರನ್ನ |
| 37 | 3 | ಸಾಹಸ್ರ | ಸಹಸ್ರ |
| ,, | 21 | ಸಾಸ್ರವಗೈದ | ಸಾಸ್ರಮಾಡಿದ |
| ,, | 22 | ಜನ್ಮ | ಜನನ |
| 38 | 7 | ನಿಂದನೀಕ್ಷೆ | ನಿಂದಿರಲೀಕ್ಷೆ |
| ,, | 11 | ಯುನ್ನೊಡನೆ | ಯೆನ್ನೊಡನೆ |
| ,, | 17 | ದಲೆನ್ನ | ದೆನ್ನನು |
| ,, | 20 | ಕಾರುಣೀಕನೆ | ಕಾರುಣಿಕನೇ |
| 39 | 11 | ನೆನೆಜು | ನೇನೆಜು |
| ,, | 16 | ದಾತನನು | ದೆಂದಾತನನು |
| 40 | 8 | ಧರಾ | ಭೂವ್ಯ |
| ,, | 23 | ನನಿಯುನು | ನವನಿಯುನು |
| 41 | 5 | ಮಾಡೆ | ಮಾಡಿ |
| 41 | 6 | ಕೊಲ್ಲು | ಕೊಲು |
| 42 | 10 | ದಲ್ಲಿ | ದಲಿತ್ರಿ |
| ,, | 15 | ನೆಕೇಳಿ | ನೆಜುಕೇಳಿ |
| 47 | 8 | ಕೆಡದ | ಕೆಡೆದ |
| ,, | 18 | ತಾನಂಜದಿರುದುದಕಳ | ನಂಜದಿರುಬಂದುದಕಳಲಬೇಡೆಂದ |
| ,, | 24 | ವೀರನು | ವೀರನಹ |
| ,, | ,, | ವಿಲ್ಲಂ | ದಲಂ |
| 48 | 20 | ಲರುಣ | ಲುವರುಣ |
| 49 | 15 | ತುರಗವಿದು | ರತುನವು |
| ,, | ,, | ಗೆವಿನತೆ | ಗಾವಿನತೆ |
| ,, | 19 | ನಗುತವಳು | ನಗುವವಳ |
| 50 | 3 | ಬಜುದೆ | ಬಜುದೇ |
| 51 | 15 | ವಿದೆಂ | ವೀದಿಂ |
| 52 | 14 | ಮಾಡುವ | ಮಾಡುವು |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | 25 | ಕದು | ಕದ್ರು |
| 53 | 1 | ಇಂತ | ಇಂತು |
| ,, | 12 | ವುತ್ಸವ | ದುಸ್ಸಹ |
| ,, | 20 | ಯುಡೆ | ಯೊಡೆ |
| 54 | 17 | ಮುನ್ನಡವಿಯುಲಿರಿಸಿದಗರ್ಭವ | ಮುನ್ನಿರಿಸಿದಡವಿಯುಗರ್ಭವನು |
| 55 | 5 | ದವೆ | ದವೇ |
| ,, | ,, | ನುತ್ತ | ನುತ |
| ,, | 6 | ಬಾಯು | ಬಾಯು |
| ,, | ,, | ಧರೆ | ಧರೆಗೆ |
| ,, | 11 | ನಿನಿಚುವ | ನಿಮಿಚುವ |
| ,, | 15 | ಗಗಣ್ಯ | ಗಣ್ಣ |
| ,, | ,, | ಪೂರ್ವಾರ್ಜಿತ | ಪೂರ್ವಾರ್ಜಿತದ |
| ,, | 22 | ಯಿಂದು | ಲಿಂದು |
| 56 | 1 | ಕಾಣುತ್ತ | ಕಾಣುತ |
| ,, | 10 | ತಾನೆನುತ | ತಾನೇನೆನುತ |
| ,, | 11 | ತಾಶನ | ತಾಶ |
| ,, | ,, | ಹೊಯಿಲನು | ಹೊಯಿಲುಗಳ |
| ,, | 16 | ಕೇಡಿನಂದಿನವ್ರೊಲುನೀಘಾಸಿ | ಕೇಡಿನಂದದದಿನದವ್ರೊಲುನೀ |
| ,, | 17 | ಮಾಡಿದೆ | ರೂಡಿಮಾಡಿದೆ |
| ,, | ,, | ಕಳುಹೆ | ಕಳುಹಿ |
| ,, | 18 | ವ್ರೋಡು | ಓಡು |
| 56 | 20 | ಕವಿವುತಿದೆ | ಕವಿವುತ್ತಿದೆ |
| ,, | 24 | ಯೊಗುವದು | ಯೊಗುವುದು |
| 57 | 8 | ದನದಲಿಸಂಸ್ತುತೆಯುನು | ದನದಿಸಂಸ್ತುತೆಯುನ್ನು |
| 59 | 4 | ಕಂಕುಳಲಿ | ಕೊಂಕುಳಲಿ |
| ,, | 8 | ಛಾಟಕೆ | ಛಾಟಕ್ಕೆ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | 21 | ತೊತ್ತು | ಹೆತ್ತು |
| 62 | 20 | ಮಹೇಂದ್ರ | ಮಾಹೇಂದ್ರ |
| ,, | ,, | ಸ್ತುತಿಸಿ | ನುತಿಸಿ |
| ,, | 23 | ತಟಕಿಟಿ | ತನಿಟಿ |
| ,, | ,, | ಸೂರಿಯುನಿಟಿವಂತೆ | ಸೂರ್ಯನೀಟಿವಂದದಲಿ |
| 63 | 19 | ನಾಕಾನನಕ್ಕೈದಿ | ನಾನದಲ್ಯೈದಿದ |
| 64 | 12 | ಸಲ್ಲಲಿತ | ಲಲಿತದ |
| ,, | 17 | ಇೞ್ತಿದುದು | ಇೞಿದು |
| ,, | ,, | ಮತ್ತೆ | ಮತ್ತಾ |
| ,, | 18 | ಖಿಳ | ಖಳ |
| ,, | ,, | ವುವುದೆಲ | ಕರೆದೆಲ |
| ,, | 20 | ಜಲನಿಧಿಯುತಾನಲ್ಲಿ | ಜಲನಿಧಿಗೆತಾನಂದು |
| 65 | 3 | ವನಿತೆ | ವಿನುತೆ |
| ,, | 6 | ತುರಗವನಾವು | ತುರಗವನುನೆಱೆ |
| ,, | 9 | ವಗಡಿಸಿಕೇಳೆ | ವಗಡಿಸುತಕೇಳಿವರೆ |
| ,, | ,, | ಹೇೞಿದೆನುನಾ | ಹೇೞಿದೆ |
| 66 | 1 | ವಿಧಿಯುತನ್ನ | ವಿಧಿಯುನ್ನ |
| 67 | 24 | ಜ್ಜೀವಿಸಿ | ಜ್ಜೀವಿಸಿದೆ |
| ,, | ,, | ಮುರಳುವುದೇ | ಮುರಳುವುದೆ |
| 68 | 9 | ಹರಿಸಿ | ಹರಸಿ |
| ,, | 19 | ವೆನುನೀನು | ವೆನೀನೇ |
| 69 | 2 | ಯೆಂದನೆ | ನೀನೆನೆ |
| ,, | 11 | ನಱೆಯು | ನಱಿಯೆ |
| 70 | 9 | ದೆಲ್ಲವೆ | ದಲ್ಲವೆ |
| ,, | 10 | ಪೊಡೆ | ಪಡೆ |
| ,, | 15 | ವಡೆಯು | ವಡೆದ |
| ,, | ,, | ಯುವಳೊರ್ವಳನೆಡೆ | ಯುಳೊರ್ವಳನಧೆಡೆ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 71 | 6 | ದೀಕೆಯುನು | ದೀಕೆಯು |
| ,, | ,, | ಕಾವುದೆನೆ | ಕಾವುದೆನಲು |
| 72 | 6 | ಯೋಜನದನೀಳದಿಹನು | ಯೋಜನನೀಳದಿರುವನು |
| 73 | 5 | ಮಾತಿನಿಂದೇ | ಮಾತಿಂದಮೋ |
| 74 | 21 | ಟ್ಟನ್ನುವುದು | ಟ್ಟನ್ನವದು |
| 75 | 12 | ಶಶಿ | ಜಕಂಪ್ರ |
| 76 | 19 | ಧಿಕ್ಕರಿಸಿಕರೆದಸುಪ್ಪ | ದಿಕ್ಕರಿಸಿಕರದಸುಪ್ಪೈ |
| 77 | 12 | ನಿಲ್ಲದಲಂಬಿಮೆಂಬಿ | ನಿಲ್ಲದಲ್ಲಂಬಾಳ್ವ |
| ,, | 21 | ಗಿದವು | ಗಿದುವು |
| ,, | 22 | ಣಗಿದವ | ಣಗಿದುವ |
| 78 | 17 | ವೇಣು | ಮೇಣು |
| 79 | 7 | ಮುಱದು | ಮುಱಿದುದದು |
| ,, | 19 | ಶಾಖೆಯುತಾಬ | ಶಾಖೆಯನುತಾ |
| ,, | 20 | ಚಿಕ್ಕರಿಸಿದೊಡೆಶಾಪವುತನ್ನ | ನಿಕ್ಕಿದೊಡೆಶಾಪಾಗ್ನಿಯೆನ್ನನ |
| 80 | 14 | ಗದೆಯು | ಗಱಿಯು |
| ,, | 17 | ಕಳೇವರವುನಕ | ಕಳವರವನಿಕ್ಕ |
| 82 | 14 | ಕೈಗಾಯ್ವ | ಕೈಗಾಯ್ವ |
| ,, | 17 | ದೋಷವನೀವು | ದೋಷವನುನೀವ |
| 84 | 16 | ಹೆಮ್ಮರದಕೋಟೆವುಡೆಯು | ಹೆಮ್ಮರಕಡೆಯೊಲುಡಿಯುಲು |
| 85 | 9 | ಮಲವುದೆ | ಮಲೆವುದೇ |
| ,, | ,, | ವಳಿಗೆ | ವಳಿ |
| ,, | 10 | ಯೊಂದೆ | ಗೆಂದೆ |
| 86 | 12 | ಹೊಯ್ದು | ಹಾಯ್ದು |
| ,, | 13 | ಆಪ | ಅಪ |
| 87 | 3 | ಸುರಪ | ಸುರಪವಸು |
| ,, | ,, | ಗಣದ | ಗಳ |
| 88 | 5 | ಭಾಹ | ಭಾರ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ,, | 15 | ನುನವ | ಘನ |
| ,, | ,, | ವೀರವುಹಾ | ವೀರ್ಯಾವಿಕ್ರವು |
| ,, | 17 | ಯಾದವಹ | ಯಾಹವದೆದಿ |
| 89 | 3 | ಕನಬಲವುಂಟೆನಗೆ | ಕನದಬಲದಿಂದವೆ |
| 91 | 7 | ನೋಡುವೆವ್ವೈ | ನೋಡುವೆವು |
| ,, | ,, | ಯೆನು | ಯೆನುತಿರ |
| ,, | 8 | ತತ್ತ | ಉತ್ತ |
| 93 | 4 | ನವೊಂದೇ | ನದೊಂದೇ |
| ,, | 21 | ರೊಬ್ಬರು | ರೊಬ್ಬರೊ |
| ,, | 22 | ಅದಟ | ಳದಟ |
| 95 | 9 | ವೊಂದೆ | ನೊಂದೆ |
| ,, | ,, | ತೆಱೆಯು | ಕೆಱೆಯು |
| 100 | 13 | ಕೊಂಡೊ | ಕೊಂಡ |
| ,, | 18 | ರುಯೆ | ರಿದೆ |
| 101 | 9 | ನನಗದು | ನೆನಗದು |
| 102 | 14 | ಲಯುದಿ | ಲಯುಕೆ |
| 103 | 6 | ಲಕ್ಷ್ಮೀ | ಲಕ್ಷ್ಮಿಯು |
| ,, | 7 | ಲೋಚನ | ಲೋಚನೆ |
| ,, | ,, | ಭವರೇ | ಭವಭವ |
| ,, | 8 | ಸವು | ಸುಪೌ |
| ,, | 9 | ಸುರರಲಿ | ಸುರರೀ |
| ,, | 24 | ವೈರಿ | ವೈರಿ |
| 105 | 20 | ತೋಱಿಸು | ತೋರಿಸಿ |
| 101 | 13 | ಕೆಯೆಂದ | ಕೆಂದ |
| 112 | 3 | ಲ್ಲವೆಯುಲ್ಲ | ಲ್ಲವೇಯಿ |
| ,, | 4 | ಅಲ್ಲ | ನ್ನಲ್ಲ |
| ,, | 5 | ರಹ | ರಹೆ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 114 | 18 | ತತ್ರು | ತುತ್ತು |
| 115 | 18 | ವಿಡಿಯೆನುಡಿ | ವಿಡಿಯೆ |
| ,, | 19 | ದರು | ನುಡಿದರು |
| ,, | ,, | ಕೊವ್ಮೆ | ಕೊವ್ಮೊವ್ಮೆ |
| 119 | 12 | ತಪೋ | ತಪೋಗ್ನಿ |
| ,, | 14 | ಸುರಿದನೆ | ಸರಿದನೇ |
| ,, | 15 | ಗಾಲ | ಗಾಲಿ |
| 125 | 11 | ದುರಿತಾಘ | ದುರಿತೌಘ |
| 134 | 6 | ಹೆವ್ಮ್ರಗಂಡೆನು | ಹೆವ್ಮ್ರಗೊಳ್ಳನು |
| 145 | 22 | ವೆಸಗಿ | ನೆಸಗಿ |
| 146 | 7 | ಬೆಱಸಿತು | ಬೆರಸಿತು |
| 148 | 3 | ವೆತ್ತಣ | ಲೆತ್ತಣ |
| ,, | 23 | ವದ | ವುದ |
| 150 | 8 | ಬಳ | ಬಳೆ |
| ,, | 9 | ಬಳ | ಬಳೆ |
| 160 | 13 | ಭೂಪನನು | ಭೂಪನದ |
| ,, | 14 | ಬಂದನು | ನಿಂದನು |
| 158 | 23 | ರೂಪಕ | ರೂಪಕನೆ |
| 192 | 18 | ಮುನಿಸು | ಮುನಿಯು |
| 193 | 6 | ವಯೋಧ | ಪಯೋಧ |
| 211 | 20 | ಸುವ | ಸುವೆ |
| 224 | 23 | ಪದ | ಪರಿ |
| ,, | 24 | ದಿಂದ | ಯಿಂದ |

ಗ. ಪುಸ್ತಕಪಾಠ

| ಪೇಜು | ಪದ್ಯಸಂಖ್ಯೆ | ಪಾದ |
|---|---|---|
| 137 | 3 | 3 |

ವೆಂದೆನಿಸಿ ನಿಲಿಪಿದನು ಕಾಣದೆ ಘೋರತರಭಯವ ॥

ಶ್ರೀ

ಶುಭಮಸ್ತು

---

# ಮಹಾಭಾರತ

## ಆದಿಪರ್ವ.

### ಮೊದಲನೆಯ ಸಂಧಿ.

ಸೂಚನೆ.

ಸೂತನಭಿವರ್ಣಿಸಿದನಮಲ
ಖ್ಯಾತಪಾಲೋಮವನು ತತ್ಕುಲ
ಜಾತಶೌನಕಮುಖ್ಯಮುನಿಸಭೆ ಮೆಚ್ಚಲೊಲವಿನಲಿ ||

ಇಷ್ಟಪ್ರಾರ್ಥನೆ.

ಶ್ರೀಮದಮರಪ್ರವರಮಕುಟ
ಸ್ತೋಮಮಣಿಗಣಕಿರಣಕೀರ್ಣೋ
ದ್ದಾಮನವ್ಯಪದಾಬ್ಜಪೀಠನನಂತಗುಣನಿಳಯ |
ಭೂಮಿಭೂಸುರಗೋಸುಧರ್ಮ
ಸ್ತೋಮಕಾರಣಮೂರ್ತಿಯುಹ ಲ
ಕ್ಷ್ಮೀಮನೋರಮ ನೀಗೆ ಯೆಮಗಿಷ್ಟಾರ್ಥ[1]ಸಂಪದವ ||

ಪ್ರಸ್ತಾವನೆ.

ನೈಮಿಶದಲೊಂದಾಯ್ತು ಸುಜನ
ಸ್ತೋಮ ಶೌನಕಮುಖ್ಯರೆನೆ ಸು

---

1 'ನೀಯೆಮಗೆ ಯಿಷ್ಟಾರ್ಥ' ಕ. ಖ.

ಪುಣ್ಯವೀಯಾಶ್ರಮವು ಮಖವಿದು
ಪುಣ್ಯವಲ್ಲಿಂಮೇಲೆ ಪುಣ್ಯಕೆ
ಪುಣ್ಯದಂತಿರೆ ಬಂದೆ ಭಾಗ್ಯಾಧಿಕನೆ ಮನವೊಲಿದು ।
ಪುಣ್ಯಕಥೆಯನು ಕೇಳುವೀಬಹು
ಪುಣ್ಯವೊಡಗೂಡಿದರೆ ಜಗದಲಿ
ಪುಣ್ಯವಂತರದಾರು ತಮ್ಮಂತೆಂದನಾಮುನಿಪ ॥　　೬

ಎನಲು ನುಡಿದನು ಸೂತನಾಮುನಿ
ಜನಕೆ ನಿಮಗಿದ ವರ್ಣಿಸುವೆನೆನು
ತನುಪವಿತ್ರರುತ್ತಮಭೃಗೂದ್ವಹರಮಳರನ್ವಯವ ।
ಅನುಸರದಲಿಂತೆಂದನಾವರ
ಮುನಿಪತಿ ಪರಿಕಿಸಲು ಕಣ್ದೆಱೆದು
ವನಜನಾಭನ [1]ನೆನೆದು ನುಡಿದನು ಶೌನಕಾದ್ಯರಿಗೆ ॥　　೭

ಮುನ್ನ ವೇದವ್ಯಾಸಮುನಿ ಕರು
ಣಾರ್ಣವನು ಕೃಪೆಮಾಡಿದನಲೈ
ತನ್ನ ಪಿತೃಮುಖದಲ್ಲಿ ತನಗಧ್ಯಯನವಾಯ್ತೆಂದ ।
ಮಾನ್ಯರಿರ ನಿಮಗದನು ತಾನಭಿ
ವರ್ಣಿಸುವೆನುತ್ತಮಭೃಗೂದ್ವಹ
ರನ್ವಯವ ಚಿತ್ತಾನುಸಾರದಲೆಂದನಾಮುನಿಪ ॥　　೮

ಭೃಗುವಂಶ.

ನಿಗಮನಿಷ್ಠನೆ ಕೇಳು ಶೌನಕ
ಜಗದಧೀಶ್ವರನಿಕರಪೂಜಿತ
ಭೃಗುಕುಲಾಮಲಚರಿತವನು ಬಹುಪುಣ್ಯಫಲದವನು ।
ಜಗದುದರನುದರೋದ್ಭವನಲಾ

---

1 'ನನುಪಮವನಜನಾಭನ ಚರಣಕಮಲವ' ಕ. ಖ.

ಸಿಗಮಗರ್ಭನ ತನುಜತನುಜನು
ಭೃಗು ತದಾತ್ಮಜನಾಚ್ಯವನಸಂಜ್ಞಿತನು ಕೇಳೆಂದ ॥ ೯

ಚ್ಯವನನಿಂದಾಪ್ರಮತಿ ಕೇಳುದು
ಭವಿಸಿದನು ಬಳಿಕಾಪ್ರಮತಿಸಂ
ಭವನು ರುರು ರುರುವಿಂಗೆ ಶುನಕನು ಶುನಕನೆಂಬವಗೆ ।
ಭುವನನುತ ಶೌನಕನು ನೀನುದು
ಭವಿಸಿದೆಯಲಾ ತಂದೆ ಭೃಗುವಂ
ಶವಿದ ಸಂಕ್ಷೇಪದಲಿ ನಿನಗಿಂತೊರೆದೆ ತಾನೆಂದ ॥ ೧೦

ಭೃಗುಚರಿತ್ರೆ.

ಹವಣಿಸಿದಿರೆಲೆ ಸೂತ ಹೇಳೈ
ಚ್ಯವನನೆಂದೆಂತಾಯ್ತು ಹೆಸರೆಂ
ಮವರ ಕುಲಪಾವನಮಹಾಭೃಗುಮುನಿಯ ತನಯಂಗೆ ।
ವಿವರಿಸೈ ಪುಣ್ಯಾತ್ಮ ಪುಣ್ಯ
ಶ್ರವಣವಲ್ಲೈ ಕಥನವಿದು ದುರಿ
ತವನು ದುವ್ವಾಳಿಸುವುದೇನುಂಟೆನ್ನು ಹೇಳೆಂದ ॥ ೧೧

ಆದೊಡವಧರಿಸೆಲೆ ಮುನಿಪ ಭಾ
ಗ್ಯೋದಧಿಯಲಾ ನೀನು ನಿನ್ನಂ
ತಾದರಿಸುವವರಾರು ಪುಣ್ಯಾಖ್ಯಾನಕಥೆಗಳನು ।
ಮೇದಿನೀಪಾವನರು [1]ಮೊದಲಲಿ
ಭೂದಿವಿಜರವರೊಳಗೆ ವೈಷ್ಣವ
ರಾವ ನಿನ್ನಂತವರ[2] ರಲಿಕಿನ್ನಾವುದರಿದೆಂದ ॥ ೧೨

ಭೃಗುಪತ್ನಿ ಪುಲೋಮೆಯ ಗರ್ಭಧಾರಣೆ.

ಕೇಳು ಶೌನಕ ಸಕಲಮುನಿಗಳು
ಕೇಳಿರೈ ಭೃಗುಮುನಿವರನ ವಧು

---

1 ಪಾಲಕರು, ಕ. ಖ.  2 ನಿನ್ನಂದದಲಿ, ಕ. ಖ.

ನಿಗಮಗರ್ಭನ ತನುಜತನುಜನು
ಭೃಗು ತದಾತ್ಮಜನಾಚ್ಯವನಸಂಜ್ಞಿತನು ಕೇಳೆಂದ ॥ ೯
ಚ್ಯವನನಿಂದಾಪ್ರಮತಿ ಕೇಳುದು
ಭವಿಸಿದನು ಬಳಿಕಾಪ್ರಮತಿಸಂ
ಭವನು ರುರು ರುರುವಿಂಗೆ ಶುನಕನು ಶುನಕನೆಂಬವಗೆ ।
ಭುವನನುತ ಶೌನಕನು ನೀನುದು
ಭವಿಸಿದೆಯಲಾ ತಂದೆ ಭೃಗುವಂ
ಶವಿದ ಸಂಕ್ಷೇಪದಲಿ ನಿನಗಿಂತೊರೆದೆ ತಾನೆಂದ ॥ ೧೦

ಭೃಗುಚರಿತ್ರೆ.

ಪವಣಿಸಿದಿರೆಲೆ ಸೂತ ಹೇಳೈ
ಚ್ಯವನನೆಂದೆಂತಾಯ್ತು ಹೆಸರೆಂ
ದವರ ಕುಲಪಾವನಮಹಾಭೃಗುಮುನಿಯ ತನಯಂಗೆ ।
ವಿವರಿಸೈ ಪುಣ್ಯಾತ್ಮ ಪುಣ್ಯ
ಶ್ರವಣವಲ್ಲೈ ಕಥನವಿದು ದುರಿ
ತವನು ದುವ್ವಾಳಿಸುವುದೇನುಂಟಿನ್ನು ಹೇಳೆಂದ ॥ ೧೧

ಆದೊಡವಧರಿಸೆಲೆ ಮುನಿಪ ಭಾ
ಗ್ಯೋದಧಿಯಲಾ ನೀನು ನಿನ್ನಂ
ತಾದರಿಸುವವರಾರು ಪುಣ್ಯಾಖ್ಯಾನಕಥೆಗಳನು ।
ಮೇದಿನೀಪಾವನರು [1]ಮೊದಲಲಿ
ಭೂದಿವಿಜರವರೊಳಗೆ ವೈಷ್ಣವ
ರಾವ ನಿನ್ನಂತವರ[2] ರಲಿಕಿನ್ನಾವುದರಿದೆಂದ ॥ ೧೨

ಭೃಗುಪತ್ನಿ ಪುಲೋಮೆಯ ಗರ್ಭಧಾರಣೆ.

ಕೇಳು ಶೌನಕ ಸಕಲಮುನಿಗಳು
ಕೇಳಿರೈ ಭೃಗುಮುನಿವರನ ವಧು

---

1 ಪಾಲಕರು, ಕ. ಖ.    2 ನಿನ್ನಂದದಲಿ, ಕ. ಖ.

ಲೋಲಲೋಚನೆ ರೂಪಗುಣಸೌಭಾಗ್ಯವರವನಧಿ |
ಶೀಲವಂತೆ ಪುಲೋಮೆ ಯೆಂಬಳು
ಹೋಲಿಸುವಡಾಲಕ್ಷ್ಮಿಯೆಂಬಳ
ಗೇಳುಮಡಿ ಪತಿಭಕ್ತಿಭಾವಿತಚಿತ್ತ ಸುಚರಿತ್ರೆ || ೧೩

ಧರಿಸಿದಳು ಗರ್ಭವನು ಮುನಿಪನ
ವರತಪಸ್ಸಾಮರ್ಥ್ಯ ಸಿದ್ಧಿಯು
ಧರಿಸುವಂತಿರೆ ಧರ್ಮರತೆ ವರವನಿತೆ ನಿಜವನಿತೆ |
ತರುಣಿ ತರುಣಮೃಗಾಕ್ಷಿಯಂತೆಸೆ
ದಿರಲು ತನ್ನಯ ಗೃಹಕೆ ಪರಮಾ
ಭರಣದಂತಿರಲಾದ ಹದನನು ವಿವರಿಸುವೆನೆಂದ || ೧೪

ರಾಕ್ಷಸ ಪುಲೋಮಾಗಮನ.

ಬಂದುದಿನ ಮುನಿನಾಥನಾನಿಜ
ಮಂದಿರವ ಹೊರವಂಟು ಮನೆಯೊಳ
ಗಿಂದುಮುಖಿ ಯಿರಲೊಬ್ಬಳ್ ಸ್ನಾನವನು ರಚಿಸುವೊಡೆ |
ಸಂದನತ್ತಲು ಸಲಿಲಸನ್ನಿಧಿ
ಗೆಂದು ರಾಕ್ಷಸನೊಬ್ಬನಿತ್ತಲು
ಬಂದನಾಕ್ಷಣದೊಳಗೆ ಬಾಲಮೃಗಾಕ್ಷಿಯಿದ್ದೆಡೆಗೆ || ೧೫

ಮರೆಸಿ ನಿಜವೇಷವನು ದುರ್ಮತಿ
ಬರಲವನು ಕಾಣುತ್ತ ದೂರದ
ಲಿರದೆ ಕಮಲದಳಾಕ್ಷಿ ವಿಪ್ರನೆನುತ್ತ ಸತ್ಕರಿಸಿ |
ಬರವಿದೆತ್ತಣದೆನು ಕುಳ್ಳಿರು
ಧರಣಿಯುಮರ ಯೆನುತ್ತ ಸತಿಯುಪ
ಚರಿಸಿದಳು ಚಪಲನನು ಚಾರುಮೃದುಸ್ಮಿತೋಕ್ತಿಯಲಿ || ೧೬

ಕೇಳುತಲೆ ನುಡಿಗಳನು ಕಿವಿಗಳು
ಕೊಳುವೋದವು ಕಂಗಳಬಲೆಯು

ಮೇಲೆ ಬಿದ್ದವು ಬಿಗಿದುದಂತಃಕರಣವಂಗನೆಯ ।
ತೋಳ ಕೈ ಕೊಂಡುದು ಮನೋಗತಿ
ಹೇಳಲೇಕಂಗಜನ ಹೊಂಗರಿ
ಗೋಲು ಮರುವೊನೆಗಂಡುದಾಖಳನೊಡಲು ಕಂಪಿಸಿತು ॥ ೧೭

ನಟ್ಟ ದಿಟ್ಟಿಯ ದೃಢತೆಯಲಿ ಮರ
ವಿಟ್ಟುದೊಡಲು ದುರಾತ್ಮ ನಿರ್ದನು
ನಟ್ಟ ಕಂಬದವೋಲು ನಯನಪ್ರೀತಿರಸ ಮಿಗಲು ।
ನಟ್ಟ ಮೂರ್ಛೆಯನೆರಡುಘಳಿಗೆಗೆ
ಬಿಟ್ಟ [1]ಧೃತಿಯನು ಮನ್ಮಥನ ಸರ
ಳಟ್ಟ ಸುಡುತಿರೆ ನೋಡಿದನು ಕೆಲಬಲನನಮರಾರಿ ॥ ೧೮

ತಿರುಗಿ ಕಂಡನು ವಿಜನದೊಳಗಾ
ತರುಣಿ ಯೊಬ್ಬಳ ಯಿಹುದನೆನಗವ
ಸರವಿದಹುದಬಲೆಯನು ಕೊಂಡೊಯ್ವೆನು ನಿಜಾಲಯಕೆ ।
ನಿರುತವಿವಳಾರಂಗನೆಯೊ ಹರ
ಹರ ಮಹಾಸತಿ ತಾನು ಮುನ್ನವೆ
ವರಿಸಿದವಳಿವಳಾಗಬೇಕೆಂದನು ಖಳೋತ್ತಮನು ॥ ೧೯

ಇತ್ತು ತನಗೀಕೆಯನು ಪೂರ್ವದ
ಲಿತ್ತನಾಭೃಗುವಿಂಗೆ ಕಾಂತೆಯ
ಹೆತ್ತವನು ತನ್ನವನು ನಂಬಿಸಿ ಹುಸಿದ ನಾದ್ವಿಜನು ।
ಸತ್ಯವಿದು ಸಂದೇಹವಲ್ಲಿದು
ಮತ್ತಕಾಶಿಸಿ ತನ್ನ ವನಿತೆ ಭೃ
ಗೂತ್ತಮನ ಸತಿಯುಹಳ ಯೆಂದನು ರಾಕ್ಷಸನು ನೋಡಿ ॥ ೨೦

---

1 ಕೊಟ್ಟು, ಕ. ಖ.

### ಅಗ್ನಿ ಪುಲೋಮರ ಸಂವಾದ.

ಎನುತ ಕಂಡನು ತಿರುಗಿ ಭೃಗುವಿನ
ಮನೆಯ ಯಜಮಾನನ ವೊಲುಜ್ವಲ
ನೆನಿಪ ಪಾವಕನೊಡನೆ ನಿಶಾಚರನು ಯಿಂತೆಂದ |
ತನಗೆ ಹೇಳೈ ನೀನು ಭೃಗುವಿನ
ವನಿತೆ ಯಹಳೇ ಯೀಮಹಿಳೆ ಯಿವ
ಳನಘ ಯೆನುಳ್ಳುವನೇ ಮಹಾತ್ಮ ಹೇಳು ನೀನೆಂದ || ೨೧

ನೀನಲಾ ಸಕಲಾತ್ಮಕನು ಪವ
ಮಾನಸಖನೆಂದೆನಿಸಲೇ ವೈ
ಶ್ವಾನರಾಖ್ಯೆಯಲಿ ನೀನಖಿಳ ಜಠರಸ್ಥನೆಂದೆನಿಪ |
ನೀನು ಜೀವಾಧಾರನಲ್ಲೆ
ನೀನುಳಿಯಲಳಿವುದು ಜಗತ್ತ್ರಯ
ಭಾನುವಂತನೆ ಹೇಳು ಸತ್ಯವನೆಂದನಾದನುಜ || ೨೨

ತನ್ನ ಸತಿ ಪೂರ್ವದಲಿ ತಾನದ
ನಿನ್ನ ವರ್ಣಿಸಲೇಕೆ ಕೊಟ್ಟನು
ತನ್ನ ವಂಚಿಸಿ ಬಾಲಿಕೆಯನೀಬಾಲಿಕೆಯ ಪಿತನು |
ಬನ್ನವನು ಹೇಳುವೊಡೆ ನಾಚಿಕೆ
ತನ್ನ ಮನದೊಳಗಾಗುತದೆ ನೀ
ನನ್ನಿಯುಳ್ಳವನುಳ್ಳುದನು ಹೇಳಾರ ವಧುವೆಂದ || ೨೩

ಸತ್ಯಸಂಧನೆ ಹೇಳು ಭೃಗುವಿನ
ಚಿತ್ತವಲ್ಲಭೆ ಯಾದಡೀಕೆಯ
ಹೊತ್ತುಕೊಂಡೊಯ್ವೆನು ನಿಜಾಲಯಕೆಂಬ ಮನವೆನಗೆ |
ಹತ್ತಿದಕೆ ಮುನಿದವನೆ ಹೇಳು ವು
ಹೋತ್ತಮನೆ ಹೇಳೆನುತ ಪಾವಕ
ನತ್ತಲಭಿಮುಖವಾಗಿ ನಿಂದನು ಕರಗಳನು ಮುಗಿದು || ೨೪

ಇರಲು ಖಳನುಕ್ತಿಯನು ವೈಶ್ವಾ
ನರನು ಕೇಳುತ ಭೀತಿವಿಹ್ವಲ
ಕರಣನಾಗುತ ಧರ್ಮಸಂಕಟವಾಯ್ತಲಾ ಯೆನುತ ।
ನಿರುತವನು ಹೇಳಿದರೆ ಮುನಿಪತಿ
ಕೆರಳಿ ಶಾಪವ ನೀವನನೃತವ
ನೊರವನೆಂತೆನುತಲಾಕ್ಷಣ ಚಿಂತಿಸಿದನಳವಳಿವು ॥ ೨೫

ಶಾಪವಾಗಲಿ ವರವೆ ಯಾಗಲಿ
ಕೋಪಿಸಲಿ ಮುನಿ ಮೇಣು ಸತ್ಯಕೆ
ಲೋಪವನು ತಾ ಮಾಡಲಂಜುವೆನೆಂದು ಭೃಗುಮುನಿಗೆ ।
ಓಪಳೆಂದಱುಹುವೆನು ಬಳಿಕಂ
ದಾಪುಲೋಮೆಯನೆಂದ ಖಳಗಾ
ದೀಪಶಿಖೆಯನು ಶಲಭನುಪಭೋಗಿಸಲು ಹಿಡಿವಂತೆ ॥ ೨೬

### ಪುಲೋಮೆಯ ಹರಣ.

ಸಿಕ್ಕಿದೆಯಲಾ ಯೆನುತ ಹಿಡಿದನು
ರಕ್ಕಸನು ಮುಂದಲೆಯನಂಗನೆ
ಬಿಕ್ಕಿ ಬಿರಿವಳುತಿರಲು ಮಿಗೆ ಕರೆಕರೆದು ಕಾದಲನ ।
ಅಕ್ಕಟಾರೋ ಗತಿ ಮಹಾಸತಿ
ಸೊಕ್ಕಿದಸುರನ ಕಂಕುಳೊಳಡಗ[1]
ಲಕ್ಕಳಿಸಿ ಕುಱಿಯುವಮೆಯುವ್ರೊಲಿರೆ ಬೆದಱು ಮೃಗನಯನೆ ॥ ೨೭

ಹಾ ಪತಿಯೆ ಹಾ ಗತಿಯೆ ಹಾ ಹಾ
ರೂಪ ದೋಱೆ ಯದೇಕೆ ತನ್ನನು
ಕಾಪಟಿಗನೆಳದೊಯ್ದ ನಿರದಬಲೆಯನನಾಥೆಯನು ।
ಗೋಪರಿಲ್ಲದ ಪಶುವ ಹೆಬ್ಬುಲಿ

---

1 ಳೊಳಗಡ ಕ. ಖ.

ಕೋಪಿನಲಿ ಹಿಡಿದಂದವಾಯ್ತಿ
ನ್ನಾಪಥವನಾರಱಿವರೆಂದೊಱಲಿದಳು ಲಲಿತಾಂಗಿ ॥ ೭೮

ಒಡೆಯರಿಲ್ಲದ ಮನೆಯೊಳಗೆ ನಾಯ್
ತುಡುಕಿ ಹವಿಯನು ತಿಂದ ತೆಱನಾ
ಯ್ತಡವಿಯಲಿ ಪತಿಯಿಲ್ಲದೆಡೆ ಹೊತ್ತೆನ್ನ ನೀಕುನ್ನಿ ।
ಹಿಡಿದಿವನೆಯ್ದೆ [1]ಹಂದಿಯಾದನು
ಕೊಡಹಿ ವಿಪ್ರಾಕೃತಿಯ ಸಿಪೆನನು
ತಡೆಯಲಾರಿರೆ ತರುಗಳಿರ ನೀವೆಂದಳಬುಜಾಕ್ಷಿ ॥ ೭೯

ಗರ್ಭಚ್ಯವನದಿಂದ ಪುಲೋಮನ ನಾಶ.

ಕೊಡಹಿ ಕೈಕಾಲ್ಗಳನು ತನುಬಲ
ವುಡುಗಿ ಬಸವಳಿದಬಲೆ ಕಂಬನಿ
ಗಡಲ ವೊಪ್ಪದವೋಲು ತನಿಗೆಡದಸುರನಂಗವಲಿ ।
ಮಿಡುಕುತಿರಲಾಕ್ಷಣಕೆ ಸಲೆ ಬಸು
ಱೊಡೆದು ಬಿದ್ದುದು ಗರ್ಭವವನಿಗೆ
ವ್ಯಡನಪರರೂಪನಲು ದುರ್ಧರತೀವ್ರತೇಜದಲಿ ॥ ೮೦

ಬಿದ್ದ ಗರ್ಭದ ತೇಜದಲಿ ಖಳ
ನೆದ್ದು ಭಸ್ಮೀಭೂತನಾದನು
ಬಿದ್ದು ತತ್[2]ಕ್ಷಣದೊಳಗೆ ಬಿಟ್ಟು ಮಹಾಪತಿವ್ರತೆಯು ।
ಬಿದ್ದು ಹೋಗರೆ ಬಲ್ಲಿರೇ ನಿರ
ವದ್ಯರನು ಬಾಧಿಸುವ ಖಳರೆನು
ತಿರ್ವದಂಬರದೊಳಗೆ ಸುರಮುನಿನಿಕರ ಹರುಷದಲಿ ॥ ೮೧

ಅಲ್ಲಿ ಬ್ರಹ್ಮನ ಅಭಯೋಕ್ತಿ.

ಮಲ್ಲಿಗೆಯ ಮಳೆಗಱೆದರಂದು
ತ್ಫುಲ್ಲಮುಖಿಯಂಗದಲಿ ಕಮಲಜ

[1] ಹಿಡಿದೆಯ್ದೆ ಯಿವ, ಕ. ಖ. [2] ಬಿದ್ದನಾ, ಕ. ಖ.

ನಲ್ಲಿಗೆಯ್ದಂ[1]ದನಖಿಳಸುಮನಸರ ಮುನೀಶ್ವರರ |
ಸಲ್ಲಲಿತಸಂಸ್ತುತಿಗಳಸೆಯಲು
ಸೊಲ್ಲಸೊಸಿದನಂಗನೆಗೆ ಬಲು
ಪುಳ್ಳವಳು ಪತಿಭಕ್ತಿಯಲಿ ನೀನೆಂದನಬುಜಭವ || ೩೦

ಎತ್ತಿಕೊಳ್ಳಾಶಿಶುವನಂಗದ
ಮುತ್ತ ನಮ್ಮನ್ವಯದ ತೇಜದ
ಬಿತ್ತುವನೆ ನೀಂ ತಳಸು [2]ಹಾ ಹಾ ವನಿತೆ ಶುಭಚರಿತೆ |
ಮೃತ್ಯುಮೃತ್ಯುವೆ ಕಂಡಡಂಜದಿ
ರುತ್ತಮಾಂಗನೆ ಭೀತಿ ಬೇಡೆನು
ತೆತ್ತಿದನು ಪದಕಮಲಸನ್ನತೆಯನು ಸರಾಗದಲಿ || ೩೩

ತೊಡೆದನಬಲೆಯ ಕಂಬನಿಯುನೆಲೆ
ಯೊಡತಿ ತಾಯೆ ಮಹಾಸತಿಯೆ ಸಾ
ಕೊಡಲ ಕಂಪವ ಬಿಡು ನಿರಾಮಯುವಿನ್ನು ನಿನಗೆನುತ |
ಸುಡಿವನೀಕಂಬನಿಯು ಹೆಗ್ಗಡ
ಲಡವಿಯುಲಿ ನದಿಯಾಗಿ ಹರಿಯುಲಿ
ಪ್ರೊಢಪಾವನವಾಗಲಿಂತಿದು ತೀರ್ಥವಹುದೆಂದ || ೩೪

ಕಂಬನಿಯು ಕಡಲಿದು ವಧೂಸರ
ವೆಂಬ ಹೆಸರಲಿ ಸಕಲಭುವನಕ
ದಂಬವಲಿ ಪೆಸರಾಗಿ ಹರಿಯುಲಿ ಸಾಗರಪ್ರಾಂತ[3] |
ಕೆಂಬುವೆ ಜನರಿದಱಲಿ [4]ಮಿಾವುದು |
ನಂಬಿಹುದು ಬಹುಪುಣ್ಯವೆಂದೆಂ
ದಂಬುಜಾಸನದೇವನಾಘೋಷಿಸಿದನಭಿಜನಕೆ || ೩೫

[1] ಗಿಳಿತಂದ, ಕ. ಖ. [2] ವೆನೆತಳಿಸುವೆ, ಕ. ಖ. [3] ಸಾಗರಾಂತವೆನೆ, ಕ. ಖ.
[4] ಗೊಂಬುಪಿದನಿದರೊಳಗೆ, ಕ. ಖ.

ಬ್ರಹ್ಮನ ಅಪ್ಪಣೆಯಂತೆ ಚ್ಯವನನೊಡನೆ ಆಶ್ರಮಕ್ಕೆ ಹೋಗುವಿಕೆ.

ತಾಯೆ ನಡೆ ಸುಖಿಯಾಗೆನುತ್ತವೆ
ಮಾಯೆಯನು ಕೈಕೊಂಡನತ್ತಲು
ಜೇಯ ಭಾವು ಕೃಪಾಂಬುನಿಧಿ ಯೆಂದಖಿಳಜನ ಹೊಗಳೆ ।
ಹಾ ಯೆನುತ ಹರುಷದಲಿ ಕಮಲದ
ಳಾಯತಾಕ್ಷಿ ನಿಜಾತ್ಮಭವನನು
ಬಾಯಬಿಡುತಿರಲೆತ್ತಿಕೊಂಡಳು ಬಂದಳಾಶ್ರಮಕೆ ।　　೩೬

ಚ್ಯವನನೆಂಬಭಿಧಾನವಾಯ್ತುದು
ಭವಿಸಿದಾಶಿಶುವಿಂಗೆ ಗರ್ಭ
ಚ್ಯವನದಿಂದಲೆ ಮುನಿಪ ಬಳಿಕಾಶಿಶುವನೊಡಗೊಂಡು ।
ಭುವನಪೂಜಿತೆ ಬಂದಳಾನಿಜ
ಭವನದಲ್ಲಿಗೆ ಕೋಪಮೂರ್ಛಿತ
ಭವನಪರಮೂರ್ತಿಯವೊಲಿರ್ದಾ ತನ್ನ ಪತಿಯೆಡೆಗೆ ॥　　೩೭

ಭೃಗು ಪುಲೋಮೆಯರ ಸಂವಾದ.

ಹೋದೆಯೆಲ್ಲಿಗೆ ಕಾಂತೆ ಮಸಣಕೆ
ಹೋದೆ ಯೆನ್ನಯಮಾತದೇಕೆಂ
ಬಾದಿ[1]ಯನು ಬೆಸಗೊಂಬರಾರೇನಾದಳೆಂಬುದನು ।
ಆದರಿಸುವೊಡನಾಥೆಯಾದೆನು
ಪಾದಸೇವಕೆಯಾದಕಾರಣ
ಕಾದುದಿದು ನಿಮ್ಮೊಲುಮೆ ಯೆನುತಳವಟಿದಳಾಕಾಂತೆ ॥　　೩೮

ಹತ್ತಹದನನು ಹೇಟಿಲೆಲ್ಲವೆ
ಚಿತ್ತವಿಸುತಿಂತೆಂದನೆನ್ನಯ
ಮತ್ತಕಾಶಿನಿಯೆಂದು ನಿನ್ನನದಾರು ಹೇಟಿದರು ।

1 ಬೋಧೆ, ಕ. ಖ.

ವೃತ್ತವಿರಹಿತೆ ಹೇಳೆನಲು ದು
ರ್ವ್ಯತ್ತಿಯಲ್ಲದನಱಿಯಿರೆನ್ನಯ
ವೃತ್ತವೆನು ನೀವೆನುತ ಕಂಬನಿದುಂಬಿದಳು ತರಳೆ ॥ ೩೯

ಬಱಿದೆ ನಿಂದೆನ್ನಬಳೆ ಯೆಂಬುದ
ನೊರೆದರನು ತಾ ಹೇಳು ಕೋಪದ
ಹೊಱಿಯುನಿಳುಹುವೆನಾತನಲಿ ಹೇಳುವೊಡೆ ಮನೆಯೊಳಗೆ ॥
ಹೊಱಗಣವರಾರೊಬ್ಬರಲ್ಲದೆ
ಬಱಿದೆ ಬಳಲಿಸಬೇಡೆನಲು ಮುನಿ
ಗುಱುವ ಮಾನಿನಿ ತೋಱಿದಳು ಕೈನೀಡಿ ಪಾವಕನ ॥ ೪೦

ಅಗ್ನಿಗೆ ಭೃಗುಶಾಪ.

ಹೋ ಹೊ ಬದುಕಿದೆ ಕಾಂತೆ ಕಂಗಳು
ಕಾಪು ಕಾಸಿದುವೆಂಗವಟ್ಟವು
ಮೋಹುಗೊಂಡುದು ಮಾಣುಮಾಣಿನ್ನಂಜಬೇಡೆನುತ ।
ದೇಹದೊಳಗಿರ್ದಲವೊ ಹವಿಗಳ
ವಾಹನನೆ ವಿಪರೀತಕರ್ಮವೆ
ನೂಹಿಸಿದೆ ದುಷ್ಟಾತ್ಮಯೆಂದನು ಭೃಗು ಹುತಾಶನಗೆ ॥ ೪೧

ಕನಲುತಿತ್ತನು ಸರ್ವಭಕ್ಷಕ
ನೆನಿಸು ಹೋಗೆಂದೆನುತ ಶಾಪವ
ನೆನಲದನಾಲಿಸುತ್ತ ಹೋ ಹೋ ನಿರಪರಾಧಿಯನು ।
ಮುನಿಪತಿಯೆ ಶಪಿಸಿದೆಯಲಾ ನಾ
ನನೃತಭಾಷಿತನಲ್ಲ ನಿನ್ನನು
ಮುನಿದು ಶಪಿಸಲು ಬಲ್ಲೆನೊಮ್ಮೆಗೆ ಸೈರಿಸಿದೆನೆಂದ ॥ ೪೨

ಮಾನ್ಯರಲ್ಲಾ ವಿಪ್ರರದಱಿಂ
ಮನ್ನಿಸಿದೆನೆಂದುದನು ಸಾಕ್ಷಿಗೆ

ವಹ್ನಿಯನು ಹೇಳುವುದು ಧರ್ಮವೆಲಾ ವಿಚಾರಿಸಲು ||
ನಿನ್ನಿಯನು ಹೇಳದಿರೆ ನರಕವ
ಹಾರ್ಣವದಲಾಳುವರೆ ನಿನಗಾ
ನೆನ್ನೆ ನೀ ಸರ್ವಜ್ಞನೆಂದನು ಪಾವಕನು ಮುನಿಗೆ || ೪೨

ಕಂಡುದನು ಕೇಳ್ದುದನು ಮುಂಬಿಸ
ಗೊಂಡುದನು ವುಸುರದ ಮಹಾತ್ಮರು
ದಿಂಡುಗೆಡವರು ನರಕದಲಿ ಬಲ್ಲುದನು ವಂಚಿಸಲು |
ಪಂಡಿತನೆ ನೀನೆಂದುದಕೆ ಕೈ
ಕೊಂಡು ನಾನಾನಾಮರೂಪದಿ
ನುಂಡುದಕೆ ಸರ್ವವನು ಪಾತಕವಿಲ್ಲ ತನಗೆಂದ || ೪೪

ಎನಲು ಲೇಸಫವಿಲ್ಲ ಕೇಳಂ
ದನುಪಮನು ಮನ್ನಿಸಿದನಗ್ನಿಯು
ಮುನಿಪನನಿಲನು ಪುತ್ರನನು ಮನ್ನಿಸಿದೆನೆಂದೆನಲು |
ವನಿತೆಯನು ತನಯನನು ಕರುಣಾ
ವನಧಿ ತೆಗೆದಪ್ಪಿದನು ನಿಂದನು
ಮನದೊಳಗೆ ನಿತ್ಯಾತ್ಮನಾರಾಯಣನ ಭಾವಿಸುತ || ೪೫

ಮೊದಲನೆಯ ಸಂಧಿ ಮುಗಿದುದು.

## ಎರಡನೆಯ ಸಂಧಿ.

ಸೂಚಕನೆ.

ಹೇಳಿದನು ಭಾರ್ಗವನೆನಿಪ ಸುವಿ
ಶಾಲನಪ ರುರುನಿಜಚರಿತ್ರವ
ಶೀಲನಿಧಿಶೌನಕಗೆ ಸೂತನು ಸಾಮನಸ್ಯದಲಿ ॥

ಶೌನಕಪ್ರಶ್ನ.

ಸೂತ ಹೇಳೈ ಸಕಲಭುವನ
ಖ್ಯಾತನಪ ಪಾವಕಗೆ ಬಂದುದು
ಪಾತಕವಲಾ ಶಾಪವಾವಂದದಲಿ ತತ್ಫಲವ ।
ಘಾತಿಸಿದನವನೊರೆವುದೆಮಗಾ
ಜಾತಭೃಗುಕುಲಮುಖ್ಯಚರಿತವ
ನೋತು ವಿವರಿಸಬೇಹುದೆನಲಿಂತೆಂದನಾಸೂತ ॥ ೧

ಅಗ್ನಿ ಅಡಗಿದುದಱಿಂದ ಆದ ಬಾಧೆ.

ಕೇಳು ಶಾಪವನಿತ್ತ ಮುನಿಯುದ
ಮೌಳಿಯಲಿ ಧರಿಸುತ್ತ ಸಂಶಯ
ಲೋಲನಾದನು ದೇವಪಿತೃತುಷ್ಟಿಯಲಿ ತನಗಿನ್ನು ।
ಪಾಲಿಸುವಪರಿಯೆಂತು ಸುಡು ಸುಡು
ಹೇಳಲಾಗದು ಸತ್ಯವನು ತಾ
ಹೇಳಿ ಕೆಟ್ಟೆನಲಾಯೆನುತ ಚಿಂತಿಸಿದನಳವಳಿದು ॥ ೨

ತನ್ನ ಮುಖದಲಿ ಹವ್ಯಕವ್ಯವ
ರಾನ್ನವೆನು ಭೋಗಿಸುವರಲ್ಲೈ
ಮನ್ನಣೆಯ ಸುರವರರು ಪಿತೃಗಳು ಸಹಿತ ಮಖಗಳಲಿ ।
ಉನ್ನತ ಶ್ರಾದ್ಧಾದಿಕದಲಾ
ನಿನ್ನ ಸಲುವೆನ ಸರ್ವಭಕ್ಷಕ
ನೆನ್ನ ಹೋಲುವೆಘಾತ್ಮರಾರೆಂದಳಲಿ ಬಿಸುಸುಯ್ದ ॥　　೩

ಏನಿದಕೆ ಕರ್ತವ್ಯವೆಂಬುದ
ನಾನಱಿಯೆನೆಂದೆನುತದೃಶ್ಯ
ಸ್ಥಾನವನು ಗಮಿಸಿದನು ಪಾವಕನಡಗಿ ನಿಜತನುವ ।
ಏನಿದೆಂಬೆನು ಜಗವಿದಗ್ನಿವಿ
ಹೀನವಾದುದು ತೀರ್ದುವವೊಳವಿ
ಧಾನಯಜ್ಞಕ್ರಿಯೆಗಳಿದ್ದಲಿಯಾಯ್ತು ಕೆಂಡಗಳು[1] ॥　　೪

ಊದಿನೋಡಿದರೊಲೆಯೊಳಗೆ ಬಱಿ
ಬೂದಿಯುಳಿದುದು ಯಜ್ಞವಾಟದ
ವೇದಿಗಳು ಬಿಸಿಯಾಱಿದವು ಬೀಸಿದರೆ ಕದಱಿದವೆ ।
ಹೋದುದುದರಕೃಶಾನು ಜೀರ್ಣಿಸ
ದಾದುದುಂಡುದ ಲೋಕ ಶೋಕವು
ಹೋದದಧಿಯ ಬಲುಗಡಲೊಳಿದ್ದುದು ನಿಮಿಷಮಾತ್ರದಲಿ ॥　　೫

ಹಸಿಯ ಫಲವನು ಮೆದ್ದಡದು ಜೀ
ರ್ಣಿಸದೆ ಬಿದ್ದುದು ಹೊಟ್ಟೆಯನು ಹೊಸೆ
ಹೊಸೆದು ಕಾಱಿದರಖಿಳಧರಣೀ [2]ಭುಜನಿವಾಸಿಗಳು ।
ಮಸಗಿ ಕಾಷ್ಠಂಗಳಲಿ ಕಾಣರು
ಬಿಸಿಯನಾಯ್ತು ಚರಾಚರಕೆ ಬಂ
ಣಿಸಲದೇತಕವಸಾನವಾಪವಮಾನಸಖನಡಗೆ ॥　　೬

---

[1] ನಿಮಿಷದಲಿ, ಕ. ಖ.　　[2] ಜನಭೂ, ಕ. ಖ.

ಋಷಿಸಹಿತ ದೇವತೆಗಳು ಬ್ರಹ್ಮನನ್ನು ಪ್ರಾರ್ಥನೆಮಾಡಿದುದು.

ಸುಯ್ದು ಚಿಂತಿಸಿ ಕ್ರತುವಿಹೀನರು
ಬಯ್ದರಾ ಭೃಗುಮುನಿಯನೀತನೆ
ಕೊಯ್ದನೆಲ್ಲರ ಕೊರಳನಕಟಕಟಿತ್ತು ಶಾಪವನು ।
ಮೆಯ್ದಗದನದಱಿಂದನಲನೆನು
ತೆಯ್ದ ನೆರೆದುದು ಋಷಿನಿವಹ ನಭ
ವೆಯ್ದದೆನೆ ನಡದಮರರಿಗೆ ಹೇಳಿದರು ಬೇಗಡೆಯು ॥ ೭

ಅಮರರಮರಾಧಿಪಸಹಿತರಾ
ಕ್ರಮವಿದೇನೆಂದೆನುತ ಹೋದರು
ಕಮಲಸಂಭವನಲ್ಲಿಗಾಋಷಿನಿವಹದೊಡಗೂಡಿ ।
ನಮಿಸಲವರನು ನೋಡಿದನು ಸಂ
ಭ್ರಮಿಸುವಿರಿ ನೀವೇಕೆ ಶೀಘ್ರದಿ
ಗಮನಕಾರಣವೇನೆನುತ ಬೆಸಗೊಂಡನಬುಜಭವ ॥ ೮

ಭೃಗು ಮುನಿದು ಶಾಪವನು ಕೊಟ್ಟೊಡೆ
ತೆಗದು ನಿಂದನು ವಹ್ನಿ ಕೆಟ್ಟುದು
ಬಗೆಯೆ [1]ಜೀವವ್ರಾತವೆಂದೀ ಋಷಿಗಳೆಮ್ಮೊಡನೆ ।
ನಿಗಮಗರ್ಭಗೆ ಹೇಳಿದೆಮ್ಮಲಿ
ಮುಗಿವುದಲ್ಲೆಂದೆನುತ ಬಂದೆವು
ಬಗೆವುದೊಡೆಯರು ಮೇಲೆಕಾರ್ಯವನೆಂದುದಮರಗಣ ॥ ೯

ಧಾರುಣಿಯ ಮೇಲೆಲ್ಲ ಹಾ ಹಾ
ಕಾರವಬ್ರಹ್ಮಣ್ಯವಾದುದು
ಭೂರಿಜಗವಿದು ಯಜ್ಞಭಾಗವಿಹೀನವೆಂದೆನಿಸ ।
ವಾರಿಜಾಸನ ಹೇಳು ಕೆಟ್ಟೆವು

---

1 ಜಗದ, ಕ. ಖ.

ಬೇಱೆ ಗತಿ ತಮಗಾವುದೆಂದಾ
ಕಾರವನು ತೋಱೆನುತ ಬಿನ್ನಹಮಾಡಿದರು ಸುರರು ॥ ೧೦

ಬ್ರಹ್ಮನು ಸುರರಿಗೆ ಅಭಯುವಂ ಕೊಟ್ಟು ಅಗ್ನಿಯಂ
ಸಮಾಧಾನಮಾಡುವಿಕೆ.

ಅಂಜದಿರಿ ಸುರವರರೆ ಮುನಿವರ
ರಂಜದಿರಿ ಶಾಪಕ್ಕೆ ತಡೆದು ಧ
ನಂಜಯನು ಜಾಱಿದನು ಕೈವಿಡಿಱಿದನೆ ಸುರವರರ ।
ಸಂಜನಿಸಿತೇ ಪ್ರಳಯ ಲೋಕಕೆ
ಕಂಜನಾಭನ ಪದವಲಾ ಪವಿ
ಪಂಜರವು ನಮಗೆನುತ ಕರೆದನು ಹವ್ಯವಾಹನನ ॥ ೧೧

ಎಲೆ ಹುತಾಶನ ಭೂತಭಾವನ
ಎಲೆ ಸಮಸ್ತಪ್ರಾಣಿಜೀವನ
ಎಲೆ ಚರಾಚರಜಠರವಾಸಿ ಪವಿತ್ರಗುಣರಾಶಿ ।
ಎಲೆ ನವೀನನೆ ಲೋಕಪಾಲನೆ
ಹೊಳಹುದೋಱು ಮಹಾತ್ಮಯೆನುತಾ
ನಳಿನಭವನಭ್ಯರ್ಥಿಸಲು ಮೈದೋಱಿದನು ವಹ್ನಿ ॥ ೧೨

ಬಂದು ಚರಣದಲೆಱಗಲಂಬುಜ
ನಂದನನು ಮೈದಡವಿ ಕರುಣದ
ಲೆಂದನೇನೆಲೆ ಮಗನೆ ಮಾಡಿದೆ ಲೋಕ ನಿಷ್ಫಲವ ।
ತಂದೆ ನೀನಿಲ್ಲದಿರೆ ಜೀವಿಸು
ವಂದವೆಂತಿದು ಜಗಕೆ ದೇವಮು
ಕುಂದನಾಜ್ಞಾವರ್ತಿಗಳು ನಾವೆಂದನಬುಜಭವ ॥ ೧೩

ದೇವಪಿತೃಮರ್ತ್ಯರಿಗೆ ನೀನೇ
ಜೀವನವಲಾ ಸಕಲಜೀವದ
ಜೀವಭೂತನು ನೀನಲಾ ಜಠರಸ್ಥನೆಂದೆನಿಸಿ ।

ಕಾಯ್ವೆ ಜಗವನು ಮಗುಪೆ ಕಡೆಯಲಿ
ಸೋಽವೆ ಸಂವರ್ತನನ ರೂಪದ
ಲಾವನೈ ನಿನ್ನುವೆನು ಪರಿಭವಿಸುವೆನು ಹೇಽಡೆಂದ ॥ ೧೪

ಅಂಜಬೇಡೆಲೆ ಮಗನೆ ಪಾಪದ
ಪುಂಜ ನಿನ್ನನು ಹೊದ್ದಲರಿಯದು
ಮಂಜು ಮುಸುಕಲು ಬಲ್ಲುದೇ ಮಾರ್ತಾಂಡವಮಂಡಲವ ।
ಕಂಜನಾಭನ ಕರುಣವುಳ್ಳವ
ರಂಜುವರೆ ಬಂದುದಕೆ ಬೆದಱದಿ
ರಂಜಲಿಸದಪಕೀರ್ತಿ ನಿನ್ನನು ಚಿಂತೆ ಬೇಡೆಂದ ॥ ೧೫

ರವಿಕರಂಗಳು ಶುದ್ಧವಹ ವ
ಸ್ತುವನು ಮೇಣ ಚಂಡಾಲಗ್ರಹವನು
ಕವಿದು ಬೆರಸವೆ ಬಂದಭಂಗವದೇನು ಭಾನುವಿಗೆ ।
ಜವವೆಟಿಯದಿರು ಜರುಗದಿರು ಮಾ
ಧವನ ಮನದೊಲವಿನ ಕಟಾಕ್ಷದ
ಕವಚರಕ್ಷಿತರಾವು ನಮಗಿನ್ನಾವ ಭಯವೆಂದ ॥ ೧೬

ವಾಯು ಬೆರಸದೆ ಜಗದಮೇಧ್ಯನಿ
ಕಾಯುವನು ಚಂಡಾಲಗ್ರಹವನು
ಬಾಯುಬಿಟ್ಟನೆ ನಿನ್ನವೋಲ್ ದೈವದಲಿ ಬಂದುದಕೆ ।
ಆಯುವಂತನೆ ನಾವೆಲಾ ನಾ
ರಾಯಣಾಜ್ಞಾವರ್ತಿಗಳು ತ
ತ್ಕಾಯುಪೀತೋಽಬುವ ಜಗತ್ತ್ರಯುವೆಂದನಬುಜಭವ ॥ ೧೭

ಅಪ್ಪುಗಳು ಲೋಕದ ಸಮಸ್ತವ
ನೊಪ್ಪುಗೊಳವೇ ನೆಱೆ ಪವಿತ್ರತೆ
ತಪ್ಪಿಹೋದುದೆ ಮಿಂದು ಪಾವನವಾಗದೇ ಲೋಕ ।

ಸರ್ಪರಾಜಮಹಾಶಯನನೊಲಿ
ದೊಪ್ಪುಗೊಂಡ ಮಹಾತ್ಮರೊಲಿದಂ
ತಿಪ್ಪರೆಂದಱಿ ತದ್ವಿಧಾಪಿತವೃತ್ತರಾವೆಂದ ॥ ೧೮

ಹೇಸಿದಳ್ ಧರೆ ಸಲೆ ಶುಭಾಶುಭ
ವಾಸನೆಗಳಿಗೆ ನಿನ್ನವೋಲಿಲೆ
ಭೂಸುರಾಂಗನೆ ಮಿಾಱುವಡೆ ಮೇಣ್ನಿನ್ನ ತನ್ನಳವೆ ।
ವಾಸುದೇವನ ಸೂತ್ರ ನೀ ನಿ
ದ್ದೋಸ ನಿಜಮುಖದಿಂದ ಸುರರು ಹು
ತಾಸನವ ಕೈಕೊಳಲಿ ಪಿತೃಗಳು ಸಹಿತ ಕೇಳೆಂದ ॥ ೧೯

ನಿನ್ನ ಮುಖವೇ ಮುಖವೆನಗೆ ಕೇ
ಳ್ನಿನ್ನ ಮುಖವೇ ಮುಖವು ಸುರರಿಗೆ
ನಿನ್ನ ಮುಖವೇ ಸಕಲಪಿತೃಮುಖ್ಯರಿಗೆ ಮುಖವೆಂದ ।
ನಿನ್ನ ಮುಖವೇ ಭಾವಿಸುವೊಡೆ ಜ
ಗನ್ನಿವಾಸನ ಮುಖವು ಹವಿಯುನು
ಮುನ್ನ ನೀ ಕೊಳಲಧ್ವರಂಗಳವೆಂದನ [1]ಬುಜಭವ ॥ ೨೦

ಸೋಕೆ ನಿನ್ನನು ರವಿಯು ರಶ್ಮಿಯು
ಪಾಕಕರ್ತೃವೆ ಜಲವನವನಿಯು
ಲೋಕಪಾವನವಾಗಲಶುಚಿದ್ರವ್ಯಚಯಸಹಿತ ।
ಏಕೆ ನಿನಗ [2]ಶುಚಿತ್ವವೆಂಬೀ
ಶೋಕ ಬಿಡುಬಿಡು ಸಂಶಯವನೆಂದಾ
ಲೋಕಕಾರಣಮೂರ್ತಿ ಸಂತಯಿಸಿದನು ಪಾವಕನ ॥ ೨೧

ಬ್ರಹ್ಮನ ಅಪ್ಪಣೆಯಂತೆ ಅಗ್ನಿಯ ಪೂರ್ವಸ್ಥಿತಿ.

ಎನೆ ಹಸಾದವೆನುತ್ತ ಪಾವಕ
ನನುನಯವ ಕೈಕೊಂಡು ನಿರ್ಮಳ

1 ಗಳಯೊಂದ, ಕ. ಖ. 2 ನಿನಗೆಯು, ಕ. ಖ.

ಮನದಲಬುಜಭವಂಗೆ ಕರಗಳ ಮುಗಿದು ತಲೆವಾಗಿ ।
ಅನಿಮಿಷದೆ ಸುರವರರು ಸಹಿತಂ
ದನಲನೈದಿದ ನಾಕವಾಸವ
ನನುಪಮನೆ ಕೇಳಾಯ್ತು ಮಂಗಳವೀ ಜಗಂಗಳಲಿ ॥ ೨೦

ಸಂತವಾದುದು ಸುರರಿಗಾಋಷಿ
ಸಂತತಿಗೆ ಪರಿತೋಷವಾದುದು
ಚಿಂತೆ ಬಿಟ್ಟುದು ಸಕಲಲೋಕ ಪ್ರಾಣಿಜೀವನವ ।
ಅಂತರಾಯುವಪಾಯುಗಂಡುದು
ತಂತಮಗೆ ಜನ ಸಕಲಸಪ್ತಸು
ತಂತುಗಳ ಸಾಗಿಸಿತು ಭೋಗಿಸಿ ಶಿಷ್ಟವಹ ಸುಖವ ॥ ೨೩

ಚ್ಯವನಸಂತತಿಯಲ್ಲಿ ರುರುವಿನ ಜನನ.

ಅವಧರಿಸಿದ್ದೈ ಮುನಿಪ ಶೌನಕ
ಪವನಸಖನ ವಿಚಿತ್ರಚರಿತ್ರವ
ನವನಿಪಾವನವೆನಿಪ ಪುಣ್ಯಾಖ್ಯಾನಸಂಗತಿಯ ।
ಅವಧರಿಸು ಮೇಲಾದಮುನಿಭಾ
ರ್ಗವಚರಿತ್ರವ ನಾನೊರೆವೆ[1] ನೈ
ಚ್ಯವನನವನತರಕ್ಷಕನು ತಾನೆನಿಸೆ ಧರಣಿಯಲಿ ॥ ೨೪

ಭುವನನುತನು ಮಹಾತ್ಮನೆನಿಪಾ
ಚ್ಯವನಮುನಿಗೆ ಸುಕನ್ಯೆಯಲಿ ಸಂ
ಭವಿಸಿದನಲಾ ಪ್ರಮತಿ ಬಳಿಕಾಪ್ರಮತಿಯೆಂಬವಗೆ ।
ದಿವಿಜವನಿತೆ ಘೃತಾಚಿಯಲಿ ಸಂ
ಭವಿಸಿದನು ರುರುವೆಂಬವನು ತ
ದ್ಭವನು ಶುನಕನಲಾ ಪ್ರಮದ್ವರೆ ಯಾತ್ಮಭವನೆಂದ ॥ ೨೫

1 ನೂಹಿಸಿದೆ, ಕ, ಖ.

ನೀನಲಾ ಮುನಿನಾಥ ಶುನಕನ
ಸೂನು ನಿನ್ನ ಪಿತಾಮಹನು ತಾ
ನೇನ ಮಾಡಿದನೆಂಬುದನು ಕೇಳದ್ಭುತದ ಕಥೆಯ ।
ಮೇನಕೆಯ ಮಗಳಾಪ್ರಮದ್ವರೆ
ತಾನು ಮರಣವನೈದಿ ಮಗುಳಾ
ಸ್ಥಾನದಲಿ ಜೀವಿಸಿದಳೆಲೆ ತಂದೆ ನೀ ಕೇಳೆಂದ[1] ॥　　೨೬

ಮೇನಕೆಯಿಂ ಪ್ರಮದ್ವರೆಯ ಜನನ.

ಒಂದುದಿನ ಗಂಧರ್ವರಾಜನು
ಬಂದು ಕಂಡನು ಮೇನಕೆಯನವ
ಳಂದೆ ಸಲೆ ವಿಶ್ವಾವಸುಸಮಾಹ್ವಯನು ಕಡುನೊಂದು ।
ಇಂದುಮುಖಿಯನು ಕೂಡಿದನು ಬಳಿ
ಕಂದು ಗರ್ಭವ ತಳೆದು ಬಿಸುಟಳು
ಸಂದ ವಿಪಿನಾಂತರದಲೆಲೆ ಮುನಿನಾಥ ಕೇಳೆಂದ ॥　　೨೭

ಸ್ಥೂಲಕೇಶಾಹ್ವಯಮಹಾಮುನಿ
ಯಾಲಯದ ವೆಳೆಯದಲಿ ಬಿದ್ದುದು
ಲೋಲಲೋಚನೆ ಬಿಸುಟ ಗರ್ಭವದೊಂದು ವರನದಿಯ ।
ಕೂಲದಲಿ ಜನಿಸಿದಳು ಕನ್ನಿಕೆ
ಭಾಳನೇತ್ರನ ವಧುವೊ ಲಕ್ಷ್ಮಿಯೊ
ಪೇಳೆನಲು ತೊಳತೊಳಗಿ ಬೆಳಗಿದಳಖಿಳದಿಕ್ತಟವ ॥　　೨೮

ಕಂಡನಾ ಮುನಿನಾಥನೀ ಭೂ
ಮಂಡಲಕೆ ತೊಡವೆನಿಪ ಕನ್ಯಾ
ಮಂಡಲಮಹಾರತ್ನವನು ತನ್ನಾಶ್ರಮಕ್ಕೊಲಿದು ।
ಕೊಂಡುಹೋದನು ಸಲಹಿದನು ತನು

1 ಲೈತಂದೆಕೇಳೆಂದ, ಕ. ಖ.

ಗೊಂಡಲಾವಣ್ಯದವೊಲೆಲ್ಲಾ
ಪುಂಡರೀಕಾಕ್ಷಿಯರಿಗಧಿಕೆಯೆನಿಪ್ಪ ಬಾಲಿಕೆಯು ॥ ೨೯

ಪ್ರಮದೆ ತಾನೆಲ್ಲರಿಗೆ ತಾನು
ತ್ತಮೆಯೆನಿಸುವದಱಿಂದ ಮುನಿಪತಿ
ಕಮಲಮುಖಿಗೆ ಪ್ರಮದ್ವರಾಖ್ಯೆಯನಧಿಕವೋಹದಲಿ ।
ಸುಮತಿ ರಚಿಸಿದನಿಂತು ಬಳೆದಳು
ವಿಮಲಪಕ್ಷದ ವಿಧುವಿನಂತಿರೆ
ರಮಣಿ ರಕ್ಷಾಮಣಿಯೊಳಿರ್ದಳು ವರಮನೋಭವನ ॥ ೩೦

ರುರುವಿಗೆ ಪ್ರಮದ್ವರೆಯಲ್ಲಿ ಅಭಿಲಾಷೆ.

ಮುನಿಪ ಕೇಳೊಂದುದಿನ ಕಂಡನು
ಮನುಮಥನ ಮಸೆದಲಗನಾರುರು
ವನದೊಳಬ್ಬಳೆಯಾಡುತಿರಲಾಲೋಲನೇತ್ರೆಯನು ।
ಮನವನಾವರಿಸಿತ್ತು ತತ್ಕೃತ
ಘನತರಜ್ವರ ಕಂಗಳಬಲೆಯು
ತನುವಿನೊಳಗಱಿಸಿದವು ತತ್ಪ್ರತಿಕಾರದೌಷಧವ ॥ ೩೧

ತನಗೆ ಸಾಧ್ಯವೆನುತ್ತ ಮನದಲಿ
ವನಿತೆಯನು ನೆನೆವುತ್ತ ದುಗುಡದ
ಲನುಪಮನು ನಡೆತಂದು ಹೊಕ್ಕನು ರುರು ನಿಜಾಲಯವ ।
ಜನಿಸದಾದುದು ನಿದ್ರೆ ವಿಗತಾ
ಶನನು ಕೃಶತರಗಾತ್ರನಾಗಿರೆ
ತನಯನನು ಬೆಸಗೊಂಡನಂದಾಪ್ರಮತಿ ಶಂಕಿಸುತ ॥ ೩೨

ಪ್ರಮತಿರುರುಗಳ ಸಂವಾದ.

ಏನಿದೇನೈ ಮಗನೆ ಚಿತ್ತ
ಗ್ಲಾನಿ ನಿನಗೆಲೆ ತಂದೆ ಹೇಳೆನೆ

ತಾನು ಹೋದೆನು ತಂದೆ ಕಂಡೆನು ಕಮಲಲೋಚನೆಯ |
ಕಾನನದ ಲಕ್ಷ್ಮಿಯೊ ಧರಿತ್ರಿಗೆ
ತಾನು ಸುಳಿದಾಗಿರಿಜೆಯೋ ಮಿಗೆ
ಮಾನವಾಂಗನೆಯಲ್ಲ ಸೋತುದು ತನ್ನ ಮನವೆಂದ ॥ ೩೩

ಮಱೆಯದೆನ್ನೀ ಮನವಿದ[1] ಬಲೆಯ
ಸೆಱಗು ಸೋಂಕುವೊಡಂಜಿ ಬಂದೆನು
ಬಱಿಮನದ ಬಾಹಿರನ ಬೆಸಗೊಳಲೇಕೆ ಮುನಿನಾಥ |
ಸೆಱಗೆ ನೂಕಿದಳೆನ್ನವಿಂತೆನೆ
ಅಱಿವೆನದನಾನೆನುತ ಹೋದನು
ಮಱುಗಿಸುವ ಮಾನಿನಿಯದಾರೆನುತಾಶ್ರಮಕೆ ಬಂದ ॥ ೩೪

ಪ್ರಮತಿಯು ಪ್ರಮದ್ವರೆಯಂ ರುರುವಿಗೆ ಘಟನೆಮಾಡಿದುದು.

ಕಂಡನಾಮುನಿ ಯಾಶ್ರಮದಲಾ
ಪುಂಡರೀಕಾಕ್ಷಿಯನು ಕಾಮನ
ಖಂಡೆಯದ ನೊರೆಗಳದು ಹೊಗರಿಟ್ಟಂತೆರಂಜಿಸಲು |
ದಂಡದಂತಿರೆ ನಮಿಸಲಾ ಮುನಿ
ಕಂಡನೀತನನು ಚಿತ್ತದಿನಿದಿ
ರ್ಗೊಂಡು ತೆಗದಪ್ಪಿದನು ಕುಶಲೋಕ್ತಿಯಲಿ ಬೆಸಗೊಂಡ ॥ ೩೫

ಹೇಳಿದೇನೈ ಬಂದೆ ನೀನೆ
ಮ್ಮಾಲಯಕೆ ಕಾರ್ಯವೆನು ಹೇಳೆನೆ
ಹೇಳಿದನು ಬಾಲಿಕೆಯ ಬಲೆಯಲಿ ಬಿದ್ದಸುತನಿರವ |
ಮೇಲೆ ನೀನೇ ಬಲ್ಲೆಯೆನೆ ಸಮ
ಶೀಲನಾದನೆನುತ್ತ ಕೊಟ್ಟನು
ಲೋಲಲೋಚನೆಯನು ಮಹಾಮುನಿ ವರಮುಹೂರ್ತದಲಿ ॥ ೩೬

1 ದೀಮನವೆನಗೆನ, ಕ. ಖ.

ವಿವಾಹವಾಗುವಿಕೆ.

ಆದುದಾತನ ಮದುವೆ ಮನದ ವಿ
ಷಾದವೆಡಗಿತು ಕಾಮನಲಗನು
ಕೋದ ನೆರೆಯಲಿ ಮರೆಯುಮಾತೇಕಿನ್ನು ಮಂಗಳದ |
ವಾದವಭಿನವವಾಯ್ತು ಹರುಷಮ
ಹೋದಧಿಗೆ ಪೂರೆಂದು ವಾಯ್ತು ತ
ಳೋದರಿಯ ವೈವಾಹರಚನಾರಂಭಸಂರಂಭ ॥ ೩೭

ಒಸಗೆ ಮಿಗಲಂದಾಮಹಾಸತಿ
ಶಶಿಮುಖಿಯ ಸಂಮೇಳದಲಿ ರಂ
ಜಿಸಿದನಭಿಜನಸಮ್ಮತಾಮಳಪುಣ್ಯಕೃತ್ಯದಲಿ |
ವಸುಧೆ ಪಾವನವಾಗಲಮರರ
ಬಸುಱು ದಣಿದುದು ಹವ್ಯಕವ್ಯ
ಪ್ರಸರದಲಿ ಪಿತೃನಿಕರವಧಿಕಾನಂದದಲಿ ಮುಳುಗೆ ॥ ೩೮

ಹೇೞಿದನು ಮುನಿನಾಥ ಪಾವಕ
ನೋೞಿಗವನುಪಶಮಿಸಿದಂದವ
ನಾಲತಾಂಗಿ ಪ್ರಮದ್ವರೆಯ ವಿವಾಹಸಂಗತಿಯ |
ಹೇೞುವರಿಗಿಷ್ಟಾರ್ಥಸಿದ್ಧಿಯ
ಮೂಲವಿದು ಕೇಳುವ ಮಹಾತ್ಮರ
ಪಾಲಿಸುವನುರುಮಹಿಮ ನಿತ್ಯಾತುಮನು ಮುರವೈರಿ ॥ ೩೯

ಎರಡನೆಯ ಸಂಧಿ ಮುಗಿದುದು.

# ಮೂರನೆಯ ಸಂಧಿ.

## ಸೂಚನೆ.

ಚಿತ್ತವಿಸು ಶೌನಕ ಪ್ರಮದ್ವರೆ
ಮೃತ್ಯುಮುಖದಲಿ ಬಿದ್ದು ಮಗುಟೆ ಸು
ವೃತ್ತೆ ತಾ ಜನಿಸಿದಂದವದಾಯ್ತೆಂದ [1] ನಾ ಸೂತ ॥

ರುರುಪ್ರಮದ್ವರೆಯರ ಗಾರ್ಹಸ್ಥ್ಯವರ್ಣನೆ.

ಕೇಳು ಶೌನಕ ರುರು ಸಮಗ್ರಗು
ಣಾಲಯನು ತಾನೆನಿಸಿ ಪುಣ್ಯವ
ಮೇಳವಿಸಿದನು ಯಜ್ಞದಾನತಪೋವ್ರತಂಗಳಲಿ ॥
ಶೀಲನಿಧಿ ಗುಣನಿಧಿ ದಯಾನಿಧಿ
ಬಾಲಿಕೆ ಪ್ರಮದ್ವರೆ ಸಹಿತ ಪ್ರಾ
ಣಾಲಯದೊಳೆಸೆದಿರ್ದನುತ್ತಮಕರ್ಮಸಿದ್ಧಿಯಲಿ ॥ ೧

ಹರಿಪದಾಂಬುಜಭಕ್ತನುನ್ನತ
ಗುರುಪದೋಪಾಸಕನುಪಾಶ್ರಿತ
ಸುರಪಿತೃದ್ವಿಜಚರಣ ಭೃಗುಕುಲಕುಮುದಹಿಮಕಿರಣ ।
ಶರಣಜನರಕ್ಷಕನಹಿಂಸಾ
ಪರನನಾರತಧರ್ಮಪರತ
ತ್ಪರನೆನಿಸಿ ಗಾರ್ಹಸ್ಥ್ಯದಲಿ ಪರಿತುಷ್ಟನಾಗಿರ್ದ ॥ ೨

1 ಜನಿಸಿದಂದವನೆಂದ, ಕ. ಖ

ವರಪತಿವ್ರತೆ ಸತ್ಯರತೆ ಸ
ಚ್ಚರಿತೆ ಸೌಭಾಗ್ಯಯುತೆ [1] ಶೀಲಾ
ಭರಣೆ ವಂಶೋದ್ಧರಣೆ ಯಘಕುಲನಿಕರಸಂಹರಣೆ ।
ಪರಮಪಾವನೆ ಪುಣ್ಯಭಾವನೆ
ಸುರಪಿತೃದ್ವಿಜಭಕ್ತೆ ಭುವನೋ
ತ್ತರಮಹಾಗುಣಯುಕ್ತೆ ಯೆಸೆದಳು ಸತಿ ಭೃಗೂದ್ವಹನ ॥ ೩

ಕಾಡಿನಲ್ಲಿ ಸರ್ಪದಂಶನದಿಂದ ಪ್ರಮದ್ವರೆಯ ಮೃತಿ.

ಒಂದುದಿನ ವರವನಿತೆ ಕೆಳದಿಯ
ರೆಂದು ಪರಮುನಿಗಳ [2] ವಧೂಜನ
ವೃಂದಸಹಿತಾಡುತ್ತ ತದ್ವಿಪಿನಾಂತರದಲೊಲಿದು ।
ಮುಂದೆ ಕಾಳೋರಗನು ಬಿದ್ದಿರ
ಲಿಂದುಮುಖಿ ನೋಡದೆ ಮಹಾವಿಷ
ದಿಂದ ಸಂಪನ್ನನನು ಮೆಟ್ಟಿದಳಗ್ರಪಾದದಲಿ ॥ ೪

ಮೆಟ್ಟಿದಾಗಳ ಕೆರಳಿ ಕೋಪಾ
ವಿಷ್ಟಕಾಯನು ಕಾಂತೆಯನು ನಸು
ಮುಟ್ಟಿದನು ವಿಷವೀರ್ಯದುರ್ಧರ ದಂಷ್ಟ್ರ [3] ಯುಗ್ರದಲಿ ।
ಕೆಟ್ಟುದೊಡಲ ಛವಿ ಛಾಯೆ ಶಶಿಯು [4]
ಮುಟ್ಟದಂತಿರೆ ಜೀವಧರಣವ [5]
ಬಿಟ್ಟಳಲ್ಲಿಯೆ ಬಾಲೆ ಬದಱಿದುದಾ ವಧೂನಿವಹ ॥ ೫

ಪ್ರಮದ್ವರೆಯಂ ನೋಡಿ ಋಷಿಗಳು ಶೋಕಿಸಿದುದು.

ದಿಂಡುಗೆಡೆದಳು ಧರೆಗೆ ಹುವ್ವಿನ
ಪಂಡೆಯನು ಬಿಸುಟಂತೆ ಕೆದಱಿದ
ಮಂಡೆಯಲಿ ಬಿಡುಮುಡಿಯ ಮಲ್ಲಿಗೆ ಸೂಸಲವನಿಯಲಿ ।

---

1 ಭಾಗ್ಯದ ಭರಿತೆ, 2 ಮುನಿವಧೂಜನ, ಖ. 3 ದಾಡೆ, ಖ.
4 ಛವಿಶಶಾಂಕನ, ಕ. ಖ. 5 ಹರಣವ, ಖ.

ಕಂಡು ಕೆಳದಿಯರೊಱಲಿದರು ಋಷಿ
ಮಂಡಲವದೇನೆನುತ ಕೇಳುತ
ಪುಂಡರೀಕದಳಾಕ್ಷಿಯಲ್ಲಿಗೆ ಬಂದರಾಕ್ಷಣಕೆ ॥ ೬

ಕೇಳುತಲೆ ಹರಿತಂದನಂದಾ
ಸ್ಥೂಲಕೇಶನು ಮಗಳ ಮರಣ
ಜ್ವಾಲೆಯಲಿ ಮುಳುಗಿದನು ರುರುವಿನ ಮನವ ದುಸ್ಥಿತಿಯು |
ಹೇಳಲೇಕಾಪ್ರಮತಿ ಯೊಡಲಲಿ
ಬಾಳಕೊರದಂತಾಯ್ತು ವರಮುನಿ
ಜಾಲ ಜಂಗೆನೆ ಜರಿದುದಂಗನೆಯಿರವನೀಕ್ಷಿಸುತ ॥ ೭

ಬಂದನಾತ್ರೇಯನು ಮಹಾಸತಿ
ಹೊಂದಿದಳ ಹಾ ಯೆನುತ ಕುಳಿತನು
ಬಂವನಬಿಲಿದನಾಷ್ಟಿಷೇಣನು ದೀರ್ಘಜಾನುಕನು |
ಬಂದನಲ್ಲಿಗೆ ಕೋಣಕುತ್ಸನು
ಬಂದನಾಗೌತಮನು ಕೇಳ
ಯ್ತಂದನಿರದಾಶಂಖಮೇಖಲನಾಭರದ್ವಾಜ ॥ ೮

ಬಂದುದಾಮುನಿನಿವಹವವರಿವ
ರೆಂದು ಬಣ್ಣಿಸಲೇಕೆ ಕಾಣು
ತ್ತಿಂದುಮುಖಿಯನು ರಾಹುವಿಂ ಸದ್ಧರ್ಮ ಮುಗಿವಂತೆ[1] |
ಅಂದು ಘೋರೋರಗದ ವಿಷದಲಿ
ಹೊಂದಿದಬಲೆಯನೀಕ್ಷಿಸುತ ಘೋ
ಡೆಂದು ಬಾಯನು ಬಿಟ್ಟುದಿಳೆ ಬಿರಿವಂತೆ ದುಃಖದಲಿ ॥ ೯

ರುರುವಿನ ಪ್ರಳಾಪ.

ಪದುಮಮುಖಿಯನು ಪರಿಹರಿಸಿ ದುಗು
ಡದಲಿ ಮುನಿಸಭೆ ಕುಳ್ಳಿರಲು ನಿಜ

---

1 ರಾಹು ಸದ್ಧರ್ಮಕ್ಕೆ ಮುನಿದಂತೆ, ಕ. ಖ.

ಸುದತಿಯನು ಕಾಣುತ್ತ ರುರು ರೋದನಕೆ ಲಜ್ಜಿಸುತ |
ಸದನವನು ಪೋಱಮೆಂಟು ಕಡು ವಿಜ
ನದಲಿ ಘೋರಾರಣ್ಯವನು ಹೊ
ಕ್ಕೊದಱಿದನು ಕೆದಱಿದನು ತದ್ವನವಾಸಿಖಗಮೃಗವ ‖ ೧೦

ಏಕೆ ಕಂಡೆನು ಪೂರ್ವದಲಿ ಭುವ
ನೈಕರತ್ನವೆನಿಪ್ಪ ಸತಿಯನು
ಸೋಕಿ ಕಂಗಳು ಕೋಳುವೋಗದದೇಕೆ ಭಾಮಿನಿಗೆ |
ಲೋಕದಲಿ ಹೋಲುವಳದಾರೆ
ನ್ನಾಕೆಯನುಪಮರೂಪಗುಣಶೀ
ಲಾಕೃತಿಯನಾನೆಂತು ಮಱೆಯುವೆ[1]ನೆಂದು ಹಲುಬಿಸಿದ ‖ ೧೧

ಎಲೆ ವಿಧಾತ್ರ ವೃಥಾವಿಯೋಗದ
ಬಲೆಯ ಬೀಸಿದೆ ಕಾಯದರ್ಧಕ್ಕೆ
ತಳುವಿದೇಕೀಯ[2]ರ್ಧವನು ನಿನಗೈದೆ ಸಾಧಿಸಲು |
ಹೊಳೆಯ ನಡುಗಡಲೊಳಗೆ ನಾವೆಯು
ಮುಳುಗಿಸಿದೆ ಮುಂದಱಿಯದವರನು
ಮಲವರಪಿದೇಕೆಮ್ಮ ದೇಹದಲೆಂದು ಹಲುಬಿಸಿದ ‖ ೧೨

ಕೊಂಡುಹೋಗೆನ್ನುವನು ಬಿಡು ಮೇ
ಣ್ಪುಂಡರೀಕಾಕ್ಷಿಯನು ಕಾಯುವ
ಖಂಡಿತವೆ ಕೈಗಾದುದೇನುಂಟಯ್ಯ ಫಲವಿದಕೆ |
ಉಂಡುಹೋಗಲಿ ಕರ್ಮವೆಂಬೊಡೆ
ಪಂಡಿತನು ತಾನಲ್ಲ ಪಿತೃಋಣ
ಕೊಂಡು ಮುಳುಗಿತು ನರಕಕೂಪದಲೆನ್ನನಕಟೆಂದ ‖ ೧೩

ಅಷ್ಟದಿಗುಪಾಲರಿರ ವಿರಚಿಸಿ
ದಿಷ್ಟವುಳ್ಳೊಡೆ ಪೂರ್ತವುಳ್ಳೊಡೆ

---

1 ದಪೆ, ಕ. ಖ    2 ದ್ವೈದೇಕ, ಕ.

ಶಿಷ್ಟಜನಸಮ್ಮತನು ತಾನೆಂದೆನಿಸುವೊಡೆ ತನ್ನಾ |
ದೃಷ್ಟಿಮೋಹನಮೂರ್ತಿಯನು ಪರಿ
ಶಿಷ್ಟೆಯನು ಮಾಡುವುದು ಕರುಣಾ
ವೃಷ್ಟಿಯಲಿ ನೀವೆನುತ ಕೈಗಳ ಮುಗಿದು ಪೊಡವಂಟ ‖ ೧೪

ಉತ್ತಮರ ವಂಶದಲಿ ಜನಿಸಿದ
ವೃತ್ತವಂತನು ತಾನಹೊಡೆ ನಿಜ
ಮತ್ತಕಾಶಿನಿ ತನ್ನ ಮಱುಗಿಸದಂತೆ ಮಾಡುವುದು |
ವೃತ್ರರಿಪುಮುಖ್ಯರಿಗೆ ತಾ ಕೈ
ಯೆತ್ತಿದೆನು ಪೊಡವಟ್ಟು ಪಿತೃಗಳ
ವೊತ್ತವನು ಮೞೆಹೊಕ್ಕೆನೆಂದನು ವಿಪ್ರನಭಿನಮಿಸಿ ‖ ೧೫

ಶ್ರೀನಿವಾಸಪದಾಬ್ಜಯುಗಳವ
ತಾನು ನಂಬಿದ ಭಕ್ತನಾದೊಡೆ
ಮಾನಿನಿಯು ಮರಣವನು ಮಾಣಿಸಿ ಕೊಡುವುದೆಮಗೊಲಿದು |
ನೀನಲಾ ಜಗದುದುಭವಸ್ಥಿತಿ
ಹಾನಿಸಮ್ಮತಕರ್ಮ ನಿನಗಿ
ನ್ನೇನಸಾಧ್ಯವು ದೇವ ಕೃಪೆಮಾಡೆಂದನಾ ವಿಪ್ರ ‖ ೧೬

ರುರುವಿನ ಬಳಿಗೆ ದೇವತೆಗಳ ದೂತಪ್ರೇಷಣ.

ಎಂದು ತಲೆವಾಗಿರಲು ಸುರಪಿತೃ
ವೃಂದವವನಾಲಿಸುತ ಕರುಣಾ
ಕಂದಳಿತಕಮನೀಯಹೃದಯರು ತಮ್ಮೊಳೊಂದಾಗಿ |
ಎಂದರಾದ್ವಿಜವರನ ಹುಯ್ಯಲು
ಬಂದುದಿದಕಿನ್ನೇನು ಗತಿ ಮತಿ
ಯಿಂದುಮುಖಿಯನು ಮಗುೞೆ ಬದುಕಿಸಬಲ್ಲರಾರೆನುತ ‖ ೧೭

ಇಲ್ಲ ಸತಿಗಾಯುಷ್ಯ ಜೀವಿಸ
ಬಲ್ಲರಾರಬಲೆಯನು ಲಕ್ಷ್ಮೀ

ವಲ್ಲಭನು ಪೊರಗಾಗಿಮಾರ್ಕಂಡೇಯಗಂತಕನ |
ಪಲ್ಲನೊದೆಯನೆ ಹಲವುಯುಗ ತರಿ
ಸಲ್ಲದೇ ತತ್ಪಾದಭಕ್ತರು
ಬಲ್ಲಿದರು ನೋಡುವೆವುಪಾಯವನೆಂದುದಮರಗಣ || ೧೮

ತಿಳಿಹಿ ನೋಡುವೆವೆನುತ ದೂತನ
ಕಳುಹಿದರು ವಿಪ್ರೋತ್ತಮನ ಹೊರೆ
ಗಿಳಿವನಾತನು ಕಂಡನಾದ್ವಿಜವರನನಟವಿಯಲಿ |
ಅಳಲಬೇಡೆಲೆ ವಿಪ್ರವರ ನಿಜ
ಲಲನೆಗಿಲ್ಲಾಯುಷ್ಯವಾರಿಗೆ
ಪಲುಬಿದೊಡೆ ಫಲವೇನು ಯೋಚಿಸುವೆಂ [1] ದನಾದೂತ || ೧೯

ರುರು ದೇವದೂತರ ಸಂವಾದ.

ಆರು ಹೇಳೆಲೆ ತಂದೆ ಕಳುಹಿದ
ರಾರು ನಿನ್ನನು ತನ್ನ ಜಠರದ
ಕೂರಲಗಿನುಪಟಳವನುಪಶಮಿಸುವರದಾರಿನ್ನು |
ನಾರಿಗಿಲ್ಲಾಯುಷ್ಯ ಗಡ ನೀ
ನಾರು ಹೇಳುವುದೊಡದನು ದೈವದ
ಕೂರಮಿಗಸಾಧ್ಯವೆಂದಿನಿಸುವದಾವುದುಂಟೆಂದ || ೨೦

ಭೂವಿಬುಧವರ ಕೇಳು ದೂತನು
ದೇವಸಂತತಿಗಾನು ಕಳುಹಿದ
ರೀವಿಲಾಪವ ಕೇಳಿ ನಿನ್ನಲಿ ಕರುಣವನು ಮಾಡಿ |
ಬೂವಿಗಿಷ್ಟಾಪೂರ್ತಚೇತರು
ದೈವವಶವಾಕರ್ಮವಿದು ತಾ
ನಾವವೆನು ಮಾಡಿಬು ಸಮರ್ಥನು ವಿಪ್ರ ಕೇಳೆಂದ || ೨೧

---

[1] ಸಾಧ್ಯವೆಯೆಂ, ಕ. ಖ.

ಆಱರೆ ತಾವ್ ಸುರವರರು ತನ್ನ
ನಾರಿಯನು ಬದುಕಿಸದೊ [1] ಡಕಟಾ
ತೋಱಲೇತಕೆ ಕರುಣವನು ತಾನವರಿಗಪರೆಸಗೆ ।
ಬೇಱೆ ದೂತನ ಕಳುಹಲೇತಕೆ
ದೂಱುವನು ತಾನಲ್ಲ ತನಗೀ
ಡೇಱದಿರ್ದಾರೆ ಬಂದಪಥದಲಿ ಹೋಗು ನೀನೆಂದ ॥ ೬೦

ಎಂದೊಡೆಂದನು ದೇವದೂತನು
ತಂದೆ ತಪ್ಪಿಸಲರಿದು ವಿಹಿತವ
ದಿಂದುಮೌಳಿಗೆ ಬಱಿವೆ ಜರಿಯದಿರಮರಪತಿಗಳನು ।
ಬಂದು [2] ಪಾಯವ ಹೇೞುವೆನು ಸುರ
ರೆಂದುದು ನಿಜಮತಕೆ ಬಹೊಡೆ ನಡೆ
ಯೆಂದನಾದ್ವಿಜಮುಖ್ಯಗಧಿಕಮನೋನುರಾಗದಲಿ ॥ ೬೩

ಹೇೞು ಹೇೞೆಲೆ ತಂದೆ ಹೇೞೆ
ನ್ನಾಳಿಯನು ನೆನೆಯದಿರೆ ತನ್ನಯ
ಲೋಲಲೋಚನೆ ಜೀವಿಸುವ ಪರಿ ಯಂತುಪಾಯವನು ।
ಹೇೞು ಬಲ್ಲರೆ ಬಾಂಧವನೆ ಕರು
ಣಾಳುಗಳಲಾ ದೇವರವರೆನೆ
ಹೇೞಿದನುಪಾಯವನು ಪಾವನಕೀರ್ತಿಗೊಲವಿನಲಿ ॥ ೬೪

ಬುದ್ಧಿವಂತನೆ ನಿಜಮನೋರಥ
ಸಿದ್ಧಿಯನು ಬಯಸುವೊಡೆ ಮನದಲಿ
ಕ್ರುದ್ಧನಾಗದಿರಾಯುವಂತನೆ ಕೊಡು ನಿಜಾಯುಷದ ।
ಅರ್ದ್ಧವನು ಸತಿ ಜೀವಿಸುವಳು ನಿ
ಬದ್ಧವೆದು ತನಗಿಷ್ಟವಾಯ್ತೆನೆ
ಲುದ್ಧವಾದನು ಮುನ್ನಿನೊಂದಳ [3] ತೆ ಮುನಿನಾಥ ॥ ೬೫

1 ಸಾವೊ, ಕ. ಖ. 2 ಅಂದು, ಕ. 3 ನೊಂವುಳ, ಕ. ಖ.

ಹೇಳು ಹೇಳೆನ್ನೊಮ್ಮೆ ತಡೆಯದೆ
ಬಾಲೆಯು ಬದುಕಿಸಿದೊಡೆ ನಿನ್ನಯ
ಕಾಲಿಗೆಱಗುವೆನಿತ್ತ ಬಾ ಹತ್ತಿರಕೆ ಬಾ ತನ್ನ ।
ಬಾಲೆ ಬದುಕುವುಪಾಯವೆನು ನೀ
ಹೇಳಿದಾವೆಂದದಲಿ ಕೊಡುವೆನು
ಮೇಲಣಾಯುಷದರ್ಧವೆನು ವಿಧಿಕೋವಿದನೆ ಯೆಂದ ॥ ೭೬

ಎಲ್ಲವನು ತಾನೀವೆನೆನ್ನಯ
ವಲ್ಲಭೆಗೆ ಮೇಣರ್ಧವೆಂದೆನ
ಗಲ್ಲಿ ಸಂಶಯವಿಲ್ಲ ಕೊಟ್ಟೆನು ಕೊಟ್ಟೆನೆಂದೆನಲು ।
ಬಲ್ಲಿದನು ನೀನಹೆ ಸಮಂತ್ರಕ
ವಲ್ಲದಾಗದು ತವಕವುಳ್ಳರ
ಬಲ್ಲಹನೆ ಬಱಿಮಾತಿನಲಿ ಫಲವೇನು ಕೇಳೆಂದ ॥ ೭೭

ಮುನ್ನ ಮಾರ್ಕಂಡೇಯಮುನಿ ದು
ಗ್ಧಾರ್ಣವಾಲಯನೊಲವಿನಲಿ ಸಂ
ಪನ್ನಮೃತ್ಯುವ ಗೆಲಿದವೋಲು ತದೀಯಕರುಣದಲಿ ।
ನನ್ನಿ ನೀ ಮೃತ್ಯುವನು ಗೆಲ್ಲಿಂ
ದುನ್ನತಾಯುಷ್ಯಾರ್ಧದಲಿ ತಾ
ಮನ್ನಿಸಿದೆನೆನುತ ಸಜಲಾರ್ಪಣವ ನೀ ಮಾಡೆಂದ ॥ ೭೮

ರುರು ತನ್ನ ಆರ್ಧಾಯುವನ್ನು ಸತಿಗೆ ಕೊಡುವಿಕೆ.

ಶ್ರುತಿವಿಹಿತವೆಲೆ ತಂದೆ ಕೊಡುವುದು
ಸತಿಗೆ ಪತಿಯಾ ಪತಿಗೆ ಸತಿ[1] ಮೋ
ಕ್ಷಾತಿಗೆ ಕೊಡಿಸುವುದಾಯುಷಾರ್ಧವೆನುತ್ತ ಮಂತ್ರದಲಿ ।
ಹಿತವಿದನೆ ನೀ ಬೇಗ ಮಾಡೆನೆ
ಮತಿಯುತನು ಮಂತ್ರದಲಿ ಕೊಟ್ಟನು
ಸತಿಗೆ ತನ್ನಾಯುಷಾರ್ಧವನು ಸಹೋದ[2] ಕವನೆನಲು ॥ ೭೯

1 ಸತಿಯಾ ಪತಿಗೆ ಪತಿ, ಕ. ಖ. 2 ವಸೋದ, ಕ.

ದೇವತೆಗಳ ಪ್ರಾರ್ಥನೆಯಿಂದ ಯಮನು ಬದುಕಿಸುವಿಕೆ.

ಪಡಿಳ್ಳೆತಕೆ ಯೆನ್ನ ಸತಿ ಯೆನೆ
ಹೇೞುವೆನು ತಾನೆನುತ ಪೋದನು
ಕಾಲನಲ್ಲಿಗೆ ದೂತನಾಗಂಧರ್ವಪತಿಸಹಿತ ।
ಹೇೞಿದರು ಕಾಲಂಗೆ ಪರಮೆಕ್ರ
ಪಾಲಯಂಗೆ ಬಿನ್ನಹದ ಪದನನು
ಕೇಳಿ ಕಾರುಣ್ಯವೆನು ಮಾಱ್ಪುದು ತಮ್ಮ ಮೇಲೆನುತ ॥ ೩೦

ಅವಧರಿಸು ರುರುವೆಂಬ ವಿಪ್ರನ
ಯುವತಿ ಮಡಿದಳು ಹೊಕ್ಕನಾತನು
ದಿವಿಜಪತಿಗಳ ಮಱೆಯನಾ ನಿಜಸುಕೃತವನು ತೋಱಿ ।
ಅವಿತಥವಲಾ ವಿಪ್ರವಚನವ
ದೆವಗಸಾಧ್ಯವದೆಂದುಪಾಯುವ
ಹವಣಿಸಿದೆವಾಯುಷ್ಯದರ್ಧವನಿತ್ತೊಡಹುದೆಂಧು ॥ ೩೧

ಇತ್ತನಾ ದ್ವಿಜವರನು ಕೇಳದು
ಚಿತ್ತವಲ್ಲಭೆಗರ್ಧಜೀವವ
ನೆತ್ತಿ ಕೊಡು ಬಾಲೆಯನು ಸುರರಭ್ಯರ್ಥಿಸಿದರೆನಲು ।
ಇತ್ತೆನಾನೆನಗೇನು ಗಂಧ
ರ್ವೋತ್ತಮನೆ ಹೇೞಿನ್ನನೇ ವಿಬು
ಧೋತ್ತಮರಿಗಾನೆನುತ [1] ಕೊಟ್ಟನು ಸತಿಯ ಜೀವನವ ॥ ೩೨

ಬಳಿಕ ಋಷಿಗಳು ಸಂತೋಸಿದುದು.

ಕೊಟ್ಟನೆನ್ನದ ಮುನ್ನ ಜೀವವ
ತೊಟ್ಟಳಂಗನೆ ವಿಷದ ವೆಗ್ರತೆ
ಮುಟ್ಟೆ ನೆಱೆ ನಿದ್ರಾವಸಾನದಲೇೞುವೆಂದದಲಿ ।

---

1 ವಿಬುಧೋತ್ತಮರಿಗಾವೆನುತ, ಕ. ಖ.

ಬಿಟ್ಟ ಮೂರ್ಛೆಯಲೆದ್ದಳರಳಿತು
ದೃಷ್ಟಿ ಚೇತರಿಸಿತ್ತು ತನು ಗುಡಿ
ಕಟ್ಟಿ ಕುಣಿದುದು ಮನದ ಸುಜನಸ್ತೋಮವೊಲವಿನಲಿ ॥ ೩೩

ಎದ್ದಳಾ ಸತಿ ರುರುವಿನಳಲನು
ಕದ್ದಳೋ ಕಾಲನ ಭಯವ ನೆಱೆ
ಗೆದ್ದಳೋ ಗುಣವುಳ್ಳವರಲಾ ಸುರಪತಿಗಳೆನುತ ।
ಹೊದ್ದಿದರು ಬಾಲಿಕೆಯನವನಿಯ
ಲಿದ್ದ ವಿಧಿಯಂತಾದಳಂಗನೆ
ಛದ್ದ[1] ವಾಯ್ತು ನುತಿರ್ದುದಾ ಸಕಲಮುನಿನಿವಹ ॥ ೩೪

ಮಾಡಿದರು ವೈವಾಹಿಕವನೊಡ
ಗೂಡಿ ಕನ್ಯಾವರರ ಪಿತೃಗಳು
ನೋಡಿ ಸುಮುಹೂರ್ತದಲಿ ಪುನರಪಿ ಪುಣ್ಯಕಾಲದಲಿ ।
ನೋಡಿ ಸಂತಸಬಟ್ಟುದಭಿಜನ
ಪಾಡಿದರು ಮಂಗಳವನಾದುದು
ಕೂಡದಲೆ ಮುನಿನಾಥ ದೈವಸುಸಿಷ್ಟತರಿಗೆಂದ ॥ ೩೫

ವರತಪಸ್ವಿಗಳಿಂಗೆ ದುರ್ಲಭ
ತರವಿದಾವುದು ದೇವಋಷಿಪಿತೃ
ವಿರಚಿತಾನುಗ್ರಹಕ್ಕೆ ಬಾಧಕವುಂಟೆ ಪರಿಕಿಸಲು ।
ತೊರೆದ ವಸು ದೊರಕಿದಡೆ ಪ್ರೋಲಾ
ಪರಮಪಾವನಚರಿತವನು ನೆಱೆ
ಪೊರವನಾನಿತ್ಯಾತ್ಮನಾರಾಯಣನು ಕರುಣದಲಿ ॥ ೩೬

ಮೂರನೆಯ ಸಂಧಿ ಮುಗಿದುದು.

---

1 ಭದ್ರ, ಕ. ಖ.

# ನಾಲ್ಕನೆಯ ಸಂಧಿ.

---

**ಸೂಚನೆ.**

ಡುಂಡುಭನ ರುರುವಿನ ಚರಿತ್ರವ
ಪಂಡಿತೋತ್ತಮನೊರೆದನಾ ಮುನಿ
ಮಂಡಲದಲ್ಲಿ [1] ಶೌನಕಂಗಾ ಸೂತನೊಲವಿನಲಿ ||

ಪ್ರಮದ್ವರೆಯು ಪತಿಗೃಹದಲ್ಲಿ ಸಂತೋಷದಿಂದ ಇರುವಿಕೆ.

ಕೇಳು ಶೌನಕಮುನಿಪ ರುರುವಿನ
ಲೋಲಲೋಚನೆಯಾ ಪ್ರಮದ್ವರೆ
ಕಾಲನನು ಕಡೆಗೊದೆದು ಪಾತಿವ್ರತ್ಯಶಕ್ತಿಯಲಿ |
ಮೇಲೆ ಮುನಿಪನ ವರತಪೋಜಂ
ಘಾಳಸಾಮರ್ಥ್ಯದಲಿ ಬದುಕಿ ನಿ
ಜಾಲಯದಲೆಸೆದಿರ್ದಳಧಿಕಮನೋನುರಾಗದಲಿ || ೧

ರುರು ಡುಂಡುಭನನ್ನು ನೋಡಿ ಸಂಹರಿಸಲು ಯತ್ನಿಸಿದುದು.

ಅಂದು ಮೊದಲಾ ರುರು ಮಹೋರಗ
ವೃಂದವನು ತನ್ನಬಲೆಯುನು ನೆಱೆ
ಕೊಂದವೈರವ ನೆನೆಯುತವೆ ಬಂದನು ಸರಾಗದಲಿ |
ಸಂದ ವಿಪಿನಾಂತರಗಳಲಿ ಬರು
ತೊಂದುದಿನ ಮುನಿವರನು ಕಂಡನು
ಮುಂದೆ ಭೀಕರರೂಪದಲಿ ಕೆಡದಿರ್ದ ಡುಂಡುಭನ || ೨

---

1. ಮಂಡಲದ, ಕ. ಖ.

ಕಾಣುತಲು ಕಿಡಿಗೊಂಡನುರಗ
ಶ್ರೇಣಿ ಹಗೆ ತನಗೆನುತ ವಿಗತ
ಪ್ರಾಣನನು ಮಾಡುವೆನು ತಾನೀ ವಿಷಧರನನೆನುತ ।
ಹೂಣಿಗನು ಹರಿತರಲು ಭೋಗೀ
ರ್ವಾಣನನು ಕಾಣುತ್ತ ಸಲೆ ಸಂ
ಕ್ಷೀಣಧೈರ್ಯನು ಬೆದಱಿ ನುಡಿದನು ವಿಪ್ರವರನೊಡನೆ ॥ ೩

ರುರುವನ್ನು ನೋಡಿ ಡುಂಡುಭನು ಹೇಳಿದ ಮಾತುಗಳು.

ಕೊಲ್ಲದಿರು ಕೊಲ್ಲದಿರು ಕೊಲ್ಲದಿ
ರಲ್ಲ ತಾನಪರಾಧಿ ಬಱಿದೇಂ
ಬಿಲ್ಲನೇಱಿಸಲೇಕೆ ಹಸುವಿಗೆ ಹಾರುವನೆ ನಿನ್ನ ।
ವಲ್ಲಭೆಗೆ ವಿಪ್ರೋ[1] ಮುನಿದವನು ತಾ
ನಲ್ಲ ಸತ್ಕುಲಸಂಭವನು ಮೇ
ಣಲ್ಲ ತನ್ನನು ಕೊಂದಡೇನು ಹಿತಾರ್ಥ ನಿನಗೆಂದ ॥ ೪

ಪಾವನನೆ ಭೂಸುರನೆ ಹಿಂಸೆಯು
ತಾವು ಶಾಸ್ತ್ರೋದಿತವೆ ಹೇಳೈ
ಈವಿಧಾನದ ವಿದ್ಯೆ[2] ನಿನಗಿದನಾರು ಕಲಿಸಿದರು ।
ಕೋವಿದನೆ ಹೇಳುವೊಡೆ ಬುದ್ಧಿಯು
ನಾವು ಶಾಸಕರಲ್ಲ ನೃಪತಿಗೆ
ಭಾವಿತವಲಾ ಧರ್ಮವಿದು ನಿನಗುಚಿತವಲ್ಲೆಂದ ॥ ೫

ದುಷ್ಟನಿಗ್ರಹ ಶಿಷ್ಟರಕ್ಷೆಗ
ಳಿಷ್ಟವಾಭೂಪರಿಗೆ ನೃಪತಿಗೆ
ಹುಟ್ಟಿದವನೇ ನೀನು ಭೃಗುಮುನಿವರನ ಕುಲಜನಲ ।
ಇಷ್ಟವೇ ತಾ ಹಿಂಸೆ ಯಿದು ವನು[3]

1 ವಲ್ಲಭೆಗೆ, ಕ. 2 ನೀವಿಧಾನದವಿದ್ಯೆ, ಕ. ಖ. 3 ಭುವನವಿ, ಖ.

ಶಿಷ್ಟವಲ್ಲ ಭೃಗುವಿನ ವಂಶಕೆ
ಕಷ್ಟದನು ನೀನೇಕೆ ಜನಿಸಿದೆ ಯೆಂದುದಾ ಸರ್ಪ ॥ ೬

ಮುನಿಪ ಕೊಯ್ವವನಲ್ಲ ಕೊರಳನು
ತನಗೆ ವಿಷವಿನಿತಿಲ್ಲ ತತ್ಕುಲ
ಜನಿತನಲ್ಲದೆ ಗಂಧಮಾತ್ರವದಿಲ್ಲ ತತ್ಕುಲದ ।
ತನಗೆ ಮುನಿಯಲಿದೇಕೆ ಹೇಳೆನೆ
ಮುನಿಪನದ ಲಾಲಿಸುತ ತನ್ನಗು
ಮನದೊಳಗೆ ಸಂಶಯವಿಲೋಲನು ನುಡಿದನದಱೊಡನೆ ॥ ೭

ರುರುವು ಡುಂಡುಭನನ್ನು ನೀನಾರೆಂದು ಕೇಳಿದುದು.

ಆರು ನೀನೆಲೆ ಸರ್ಪ ಹೇಳು ಮ
ಹೋರಗನೊ ಗಂಧರ್ವನೋ ಸುವಿ
ಚಾರಿ ದೈತ್ಯನೊ ದೇವನೋ ದಿಟ ಸರ್ಪ ನೀನಲ್ಲ ।
ಕಾರಣವ ಹೇಳೆನಲು ಮುನಿಪನ
ಚಾರುಸೂಕ್ತಿಯ ಕೇಳಿ ತನ್ನಯ
ಪೂರುವದ ಸಂಗತಿಯ ನೆನವುತ್ತುರಗನಿಂತೆಂದ ॥ ೮

ಡುಂಡುಭನು ತನ್ನ ಪೂರ್ವ ವೃತ್ತಾಂತವನ್ನು ಹೇಳುವಿಕೆ.

ವಿಶ್ರುತದ್ವಿಜವರನೆ ಕೇಳ್
ನ್ನ ಶ್ರುತಾಖ್ಯಾನವನು ತಾನು ಸಾ
ಹಸ್ರಪಾದಾಹ್ವಯನು ನೋಂಪ್ರತಿತಭವದೊಳಗೆ ।
ಹಿಂಸ್ರಭಾವ [1] ದಲೊಬ್ಬ ಸಖನನು [2]
ಸಾಸ್ರನ ಗೈದ [3] ವಿಪ್ರಯದಲ
ಕ್ಷಿಶ್ರವಜನ್ಮವಾಯ್ತು ನಿನಗಿದನೊರೆವೆ ತಾನೆಂದ ॥ ೯

ಖಗಗಮನನೆಂಬದ್ವಿಜೋತ್ತಮ
ನೊಗುಮಿಗೆಯ ಸೌಖ್ಯವನು ತನ್ನಲಿ

1 ದುಸ್ಸ್ವಭಾವ, ಕ. ಖ. 2 ಸಖಿಪ್ತಿ ಕ. ಖ. 3 ಪ್ರಶ್ರಮಾಡಿದ, ಕ. ಖ.

ನೆಗಟೆ ಸ್ವಾನಂದದಲಿ ಹಿತಕರನಾಗಿ ನೆಱೆ ಯಿರಲು |
ಬಗೆಯಲಾನೊಂದುದಿನ ಮಾಡಿದ
ಮುಗುದತನವೆನು ಕೇಳು ಕಟ್ಟೋ
ರಗನ ನಿರ್ಮಿಸಿ ಹಾಕಿದೆನು ಸಖಿವಿಪ್ರನಿದಿರಿನಲಿ || ೧೦

ಬೆಚ್ಚಿ ಬೆದಱಿದ ನಾದ್ವಿಜೋತ್ತಮ
ಕಚ್ಚಿತೆನ್ನನು ಹಾವೆನುತ ತೆಗ
ವಚ್ಚು ತನೆ ಗತಿ ಯೆಂದು ನಿಂದನೀಕ್ಷಿಸುತವಿಚಿದು |
ಹೆಚ್ಚಿದುದು ಕಡು ರೋಷ ಕಂಗಳು
ಕಿಚ್ಚಿನಂದದಲಾದವೆವುಡನು
ಕಚ್ಚಿ ಶಾಪವ ಕೊಟ್ಟನು ತನಗೆ ಮುನಿಪ ಕೇಳೆಂದ || ೧೧

ದರ್ಪವೇ ಯ [1] ನ್ನೊಡನೆ ಘಡಘಡ
ಸರ್ಪನಾಗು ದುರಾತ್ಮ ನೀನೆನು
ತುಪ್ಪರದ ಕೋಪದಲಿ ಶಾಪವನಿತ್ತೊಡಾನಂಜಿ |
ತಪ್ಪಿದೆನನುಗ್ರಹವ ಮಾಳ್ಪುದು
ವಿಪ್ರವರ ಯೆನೆ ವಿಷರಹಿತವಾ
ಗಿಪ್ಪುರಗನಾಗೆಂದು ತನ್ನಲಿ ಮಾಡಿದನು ಕೃಪೆಯ ೧೨

ದಾರುಮಾಯದಾಸರ್ಪದಲೆನ್ನ [2]
ಭೀರುವೆನು ಮಾಡಿದ ನಿಮಿತ್ತದಿ
ನಾರುವೆನು ಬಾಧಿಸದ ಡುಂಡುಭನಾಗು ನೀನೆಂದು |
ಕಾರುಣೀಕನೆ ಶಾಪಮೋಕ್ಷವ
ದಾರಕಯ್ಯಲಿ ಹೇಳೆನುತ ವಿ
ಚಾರಿಸಲು ರುರುಸಂಗದಲಿ ನಿನಗಹುದು ಹೋಗೆಂದ || ೧೩

ಅದು ಘಟಿಸಿತೆನಗೆಂದು ತನ್ನ
ಭ್ಯುದಯವೇ ತನುಗೊಂಡವೋಲೆಲೆ

---

1 ಸರ್ಪನೆತೆ. ಕ. ಖ. 2 ನಲಿತನ್ನ. ಕ. ಖ.

ಸದಮಳಾಮಳಚರಿತ ನೀವ್ಮೈದೋಱದಿರೆಲೆ ತನಗೆ |
ಒದೆದೆನಾಶಾಪವನು ಕರುಣಾ
ಸ್ಪದನೆ ಹೇೞುವೆ ನೀನು ನಿಜದೇ
ಹದಲಿ ಮಾತನು ಬಳಿಕ ಕೇಳುವುದೆಂದನಾಸರ್ಪ || ೧೪

ಡುಂಡುಭನು ಮನುಷ್ಯನಾಗಿ ಸರ್ಪಾಧ್ವರವನ್ನು ಸೂಚಿಸಿದುದು.

ಎಂದು ಸರ್ಪಾಕೃತಿಯನುೞಿದುರ
ಗೇಂದ್ರ ನೆಱೆ ನಿಜಪೂರ್ವರೂಪಿನ
ಲಂದು ಮಾತಾಡಿದನು ರುರು ಕೇಳೆಂದುಮೊದಲಾಗಿ |
ತಂದೆ ಹಿಂಸಿಸದಿರು ಮಹೋರಗ
ವೃಂದವನು ಜನಮೇಜಯಾಖ್ಯನ
ರೇಂದ್ರನೆ ನೆಱೆ ಕೊಲುವವನು ಸರ್ಪಾಧ್ವರದಲೆಂದ || ೧೫

ಸರ್ಪಾಧ್ವರಕ್ಕೆ ಕಾರಣವನ್ನು ಹೇಳದೆ ಅದೃಶ್ಯನಾಗುವಿಕೆ.

ಎನಲದಾರಕುಮಾರನಾತನು
ತನಗೆ ಹೇೞಾಸರ್ಪಯಾಗವ
ನನುಪಮನು ಮಾಡುವೊಡೆ ಕಾರಣವೇನು ನೀನದನು |
ಮುನಿವರನೆ ಕರುಣಿಸುವುದಾತ
ನನು ರುರು ಬೆಸಗೊಳಲು ವಿಪ್ರ
ನನದಿನದನೆಲ್ಲವನು ಕೇಳಲುಬಹುದು ಹೋಗೆಂದ || ೧೬

ಎಂದು ರುರುವನು ನಿಲಿಸಿ ಮುನಿಪತಿ
ನಿಂದನಂತರ್ಧಾನಗತಿ ನೆಱೆ
ಹೊಂದಿದನು ತಾ ಹೇೞದಾದನು ಸೂಚಿಸಿದ ಕಥೆಯು |

ರುರು ತಂದೆಯುನ್ನು ಸರ್ಪಾಧ್ವರದ ವೃತ್ತಾಂತವನ್ನು ಹೇಳೆಂದು ಕೇಳಿದುದು.

ಎಂದು ಮನದಲಿ ಚಿಂತಿಸುತ ನಿಜ
ಮಂದಿರಕ್ಕೈತಂದು ತನ್ನಯ
ತಂದೆಯನು ಬೆಸಗೊಂಡನಾವೃತ್ತಾಂತಸಂಗತಿಯ || ೧೭

ಕೊಂಡನೋ, ಕ. ಖ.

ಅಷ್ಟ ಕೇಳಾನಿಂದು ವನದಲಿ
ಸರ್ಪರೂಪಿನಲಿರ್ದ ಕೋವಿದ
ವಿಪ್ರನನು ತಾ ಕಂಡೆನದನುಚಿದಾತನೆನ್ನೊಡನೆ ।
ಸರ್ಪನಿಕರವ ಕೊಲ್ಲದಿರು ನಿನ
ಗೊಪ್ಪದಿದು ಜನಮೇಜಯಾಖ್ಯನು
ಸರ್ಪಯಾಗವನವನಿಪತಿ ಮಾಡುವನು ಕೇಳೆಂದ ॥ ೧೮

ಅದರ ವೃತ್ತಾಂತವನು ತಾ ಹೇ
ಳಿದಲೆ ಧರಾಮರರಲಿ ಕೇಳುವೆ
ನುದಮಲನೆ ಹೋಗೆಂದು ನಂದನದ್ರೃಶ್ಯಸಂಸ್ಥಿತಿಗೆ ।
ವಿದಿತವಹೊಡಭಿವರ್ಣಿಸುವುದೆನ
ಗದರ ಪೂರ್ವಾಪರವನೆನಲ
ಭ್ಯುದಿತಸಂತೋಷದಲಿ ಮುನಿ ವರ್ಣಿಸಿದನಾ ಕಥೆಯ ॥ ೧೯

ಸರ್ಪಾಧ್ವರದ ಕಥೆಯ ಉಪೋದ್ಘಾತ.

ಸೋಮವಂಶಸರೋಜಸೂರ್ಯನು
ಭೂಮಿಪಾಲಕಪಾಂಡುನಾಮನ
ಹಾಮಹೀಶನ ಪುತ್ರರಲಿ ಹಿರಿಯನು ಯುಧಿಷ್ಠಿರನು ।
ಭೀಮನರ್ಜುನನಕುಲಸಹದೇ
ವಾಮಲಾಹ್ವಯಯುತರನುಜರು ಮ [1]
ಹಾಮಹಿಮರೆನಿಸಿದರು ಧರೆಗೆ ಪುಣ್ಯಾತ್ಮರೆಂದೆನಿಸಿ ॥ ೨೦

ಕೇಳು ಮಧ್ಯಮಪಾಂಡವನ ಸುತ
ನಾಲಿಸುವುದಭಿಮನ್ಯು ಸಮರಕ
ರಾಳವಿಕ್ರಮನಾತ್ಮಭವನು ಪರೀಕ್ಷಿತಾಹ್ವಯನು ।
ಪಾಲಿಸುವನ ನಿಯನು ಮೃಗಯಾ

1 ವಾಮಲಾಖ್ಯರೆಂಬರನುಜರುಮ, ಕ. ಖ.

ಕೇಳಿ ಶಾಪದಿ ಋಷಿಯ ಮಗನಲಿ
ಬೀಡೆ ತಕ್ಷಕಮುಖದಲಳಿವನು ಮಗನೆ ಕೇಳೆಂದ ॥ ೨೧

ಅವನ ಮಗನದಕೇಳಿ ಕಡುಕೋ
ಪವನು ತಳೆದು ಮಹೋರಗೇಂದ್ರರ
ನಿವಹವನು ಜನಮೇಜಯನು ಸರ್ಪಾಧ್ವರವ ಮಾಡೆ ।
ಸವೆಯ ಕೊಲ್ಲುವನು ತಕ್ಷಕನು ಬೀ
ಋವದನೀಕ್ಷಿಸಿ ಬಹಳಕರುಣಾ
[illegible] ॥ ೨೨

ಅದುನಿಮಿತ್ತದಲೆ ಮಗನೇ ಕೊ
ಲ್ಲದಿರು ಕಾರಣಸರ್ಪವೆರನೆಂ
ದುದು ದೃಢೋಕ್ತಿಯಲಿದನು ಮಾಡ್ಬೊಡೆ ಹಿಂಸೆ ಹಿತವಲ್ಲ ।
ಸದಮಳನೆ ಕೇಳೆಂದು ಸಂಶಯ
ಹೃದಯನನು ತಿಳಿಹಿದನು ಬಳಿಕಾ
ಸುವತಿಸಹಿತಾಶ್ರಮದಲೆಸೆದನು ಧರ್ಮಪರನೆನಿಸಿ ॥ ೨೩

ಪೌಲೋಮಪರ್ವದ ಫಲಕಥನ.

ರುರುವಿನಮಳಚರಿತ್ರವನು ವಿ
ಸ್ತರಿಸಿದೆನು ಪೌಲೋಮಪರ್ವವು [1]
ಪರಿಸಮಾಪ್ತವಘೌಘಹರ ವಿಷ್ಟಾರ್ಥಸಿದ್ಧಿಕರ ।
ಧರೆಗೆ ಪಾವನವಾದ ಭೃಗುಕುಲ
ಚರಿತವಿದನಾದರದಲೋದುವ
ನಿರತ ಕೇಳುವ ಪುಣ್ಯಪುರುಷರೆ ಧನ್ಯರವರೆಂದ ॥ ೨೪

ಇದು ಸದಾಯುಃಕೀರ್ತಿವರ್ಧನ
ವಿದು ಪರಮಮಂಗಳವಿವರ್ಧನ

1 ವಲ್ಲಿ, ಕ.

ಹಿನು ಮನೋರಥಸಿದ್ಧಿದ ವಿಹಪರದ ಸಮೃದ್ಧಿಕರ ।
ಇವನು ಪಠಿಸುವ ಪುಣ್ಯಪುರುಷರ
ಹೃದಯದಲಿ ಮನೆಮಾಡುವನು ಕರು
ಣಾವಲಿ ಸಲೆ ನಿತ್ಯಾತ್ಮನಾರಾಯಣನು ಮನವೊಲಿದು ॥ ೬೩

ನಾಲ್ಕನೆಯ ಸಂಧಿ ಮುಗಿದುದು.

ಇಂತು ಪೌಲೋಮಪರ್ವಂ.

## ಐದನೆಯ ಸಂಧಿ.

ಸೂಚನೆ.

ವರ್ಣಿಸಿದನಾಸೂತನಾದ್ವಿಜ
ರುನ್ನತಸಭಾಗ್ರದಲ್ಲಿ ಭುವನ
ವರ್ಣನೀಯಚರಿತ್ರೆದ [1] ಪುಣ್ಯಾಖ್ಯಾನಸಂಗತಿಯ ॥

ಶೌನಕಪ್ರಶ್ನೆ.

ಸೂತನನು ಬೆಸಗೊಂಡನಾಮುನಿ
ಜಾತ ಕೇಳಲು ಶೌನಕನು ಸಂ
ಜಾತಸಂತೋಷದಲಿ ಪೌಲೋಮವನು ನೆ ' ಕೇಳಿ ।
ಕೌತುಕಿ [2] ಕಥಾಶ್ರವಣ ಪೀಯೂ
ಷಾತಿಶಯಲಾಭೈಕಲೋಲುಪ
ಶೀತಹೃದಯನು ಸದಯನಖಿಳಪ್ರಾಣಿನಿಕರದಲಿ ॥ ೧

ಹೇಳು ತನಗೆಲೆ ತಂದೆ ಭಾರತ
ಮೂಲವೆನಿಪಾಸ್ತೀಕಚರಿತವ

1 ಶ್ರೀಕರ, ಕ. ಖ,
2 ಕೌತುಕದ, ಖ.

ನಾಲಿಸುವ್ರೊಡಾರಾತ್ಮಭವನಾಸ್ತೀಕನೆಂಬುವನು।
ಮೇಲೆ ಸರ್ಪಾಧ್ವರಕೆ ತಾ ಪ್ರತಿ
ಕೂಲನಾದನ [1] ದೇಕೆ ಪನ್ನಗ
ಜಾಲಸಂಭವವೆಂತು ಹೇಳೆನಗೆಲ್ಲವನು ತನಗೆ ॥ ೭

ಕೇಳಬಹುದ್ಕೆ [2] ಪುಣ್ಯಕಥನವ
ಹೇಳಲೊಲ್ಲದ ಪಾಪಿ ಮರ್ತ್ಯರ
ಬಾಳಿಕೆಗೆ ಫಲವೇನು ಮರನಂದದಲಿ ಬದುಕಿದರೆ ।
ಹೂಳುವನು ನರಕದಲಿ ಕುಲವನು
ಹೇಳು ನೀನಿದರಿಂದ ಸಚ್ಛ್ರ
ದ್ಧಾಳುವಹ ತನಗೆಂದು ನುಡಿವನು ಶೌನಕವ್ರತಿಪ ॥ ೩

ಬಲ್ಲೆ ನಾನೆಲೆ ಸೂತ ಧರ್ಮವ
ನೆಲ್ಲವನು ಶ್ರದ್ಧೆಯಲಿ ಬೆಸಗೊಳ
ಬಲ್ಲವರು ತಾವಿಲ್ಲ ಬೆಸಗೊಂಬೊಡೆ ಹಿತಾರ್ಥವನು ।
ಸೊಲ್ಲಿಸುವರಿಲ್ಲಱಿಯದವರಿಗೆ
ಬಲ್ಲತನವನು ಕೊಟ್ಟಸುಕೃತ
ಕ್ಕಿಲ್ಲಲಾ ಪಡಿಯಾದ ಸುಕೃತ ಮಹಾತ್ಮ ಕೇಳಂದ ॥ ೪

ಸೂತನು ಆಸ್ತೀಕಸಂಭವವ ಹೇಳಲಾರಂಭಿಸುವಿಕೆ.

ಎಂದೊಡಾ ಶೌನಕಮುನಿ ದ್ವಿಜ
ವೃಂದದಲಿ ನುಡಿದನು ಸರಾಗದ
ಲಂದು ಸರ್ಪದ [3] ಸತ್ರವನುಮಾಸ್ತೀಕಸಂಭವವ ।
ಸಂದ ಪೌರಾಣಿಕಶಿರೋಮಣಿ
ವಂದಿಸುತಲಾವ್ಯಾಸಸುತನನು
ಕಣ್ದೆಱೆದು ಕಾರುಣ್ಯನಿಧಿ ಹೇಳಿದನು ಸತ್ಕಥೆಯ ॥ ೫

---

1 ಪ್ರತಿಕೂಲವಾದ, ಕ　2 ಕೇಳಬಹುದು, ಕ　3 ಸರ್ಪ. ಕ. ಖ.

ಲೇಸನಾಡಿದೆ ವಿನುತಪರಹಿತ
ಭಾಷಿತವ ಹರಿಚರಣಕಮಲೋ
ಪಾಸಕರ ಬಲ್ಲಹನೆ ಭಾಗ್ಯೋದಧಿಯೆ ಗುಣನಿಧಿಯೆ ।
ಏಸು ಧನ್ಯನೊ ನಿಮ್ಮೊಡನೆ ಸಂ
ಭಾಷಣೆಯು ಪುಣ್ಯವೆದು ತನಗಾ
ವಾಸುದೇವನ ಕರುಣದಲಿ ದೊರೆಕೊಂಡುದಕಟೆಂದ ॥ ೬

ಕದ್ರುವಿನತೆಯರಿಗೆ ಕಶ್ಯಪರಿಂದ ವರದಾನ

ಜಲಜಭವಸುತತನಯಕಶ್ಯಪ
ಲಲಿತಪತ್ನಿಯರೆನಿಪ ಸನ್ನುತ
ಜಲಜನೇತ್ರೆಯರೆಸೆದರಂದಾಕದ್ರುವಿನತೆಯರು ।
ಒಲುವೆವರ ಸದ್ಭಾವಭಕ್ತಿಯ
ನಿಲವನದನಾಲಿಸುತ ಮೆಚ್ಚಿದೆ
ನಲರುಗಂಗಳ ಮಂಗಳಾಸ್ಯನೆಯರಿರ ನಿಮಗೆಂದ ॥ ೭

ವರವನೀವೆನು ಬೇಡಿಕೊಂಬುದು
ಪರಮಮಾನಿನಿಯರಿರ ನೀವೆನೆ
ಕರವ ಮುಗಿದಳು ಕದ್ರು ಕೊಡು ಸಾವಿರ ಮಹೋರಗರು ।
ವರತನಯರೆನಗಾಗಬೇಕೆನೆ
ತಿರುಗಿ ವಿನತೆಯು ಮೊಗವ ನೋಡಲು
ಚರಣದಲಿ ತಲೆವಾಗಿ ನುಡಿದಳು ನಿಜಮನೋರಥವ ॥ ೮

ಬೇಡುವೆನು ಸುತರಿಬ್ಬರನು ತಾ
ನಾಡೊಳತಿಶಯವೀರ್ಯವಂತರ
ನಾಡಿ ತೋಚಿಸಲೇಕೆ ಸವತಿಯ ಮಕ್ಕಳನು ಮಿಗುವ ।
ರೂಢಿಗತಿಶಯಪುಣ್ಯವಂತರ
ನೋಡದೀವುದು ತನ್ನೊಳಗೆ ಕೃಪೆ
ಮಾಡುವೊಡೆ ನಿಮ್ಮಡಿಯೆನಲು ನಗುತೆಂದನಾ ಮುನಿಪ ॥ ೧೦

ಸುರನರೋರಗವೀರರೊಳು ದು
ರ್ಧರಪರಾಕ್ರಮವೀರ್ಯಶೌರ್ಯೋ
ತ್ಕರುಷಬಲಸಂಪನ್ನರನು ನಿನಗೀವುದೆಂದೆಯೊಲೆ ।
ಪರಮಪಾವನಕೀರ್ತಿ ಕೇಳು
ವರಕುಮಾರರನಿತ್ತೆನೆನೆ ಪಂ
ಕರುಹಮುಖಿ ಪರಿತುಷ್ಟೆಯಾದಳು ಪತಿಯ ನುಡಿಗಳಲಿ ॥ ೧೧

ಸುದತಿ ಗರ್ಭವನೆರಡು ಸುಯತ್ನ
ನದಲಿ ರಕ್ಷಿಸೆನುತ್ತ ಮುನಿಪತಿ
ಪದುಳದಲಿ ಸತಿಗೊರೆದು ತೆರಳಿದನಾ ತಪೋವನಕೆ ।

ಕದ್ರುವಿನಲ್ಲಿ ಸರ್ಪೋತ್ಪತ್ತಿ.

ಮೊದಲಲಂದಾಕದ್ರು ಪುತ್ರರ
ಪದೆದು ಪಡೆದಳು ಸಾವಿರವನ
ಗ್ಗದ ಮಹೋರಗನಿಕರವನು ಮುನಿವೀರ್ಯಸಂಭವರ ॥ ೧೨

ವಿನತೆಗೆ ಪುತ್ರಜನನವಿಲಂಬದ ಅನುತಾಪ.

ವಿನತೆ ಧರಿಸಿದಳಂಡವೆರಡನು
ವಿನುತಮುನಿವೀರ್ಯದಲಿ ಕಾಲದೊ
ಳನುಪಮಮಹಾಂಡಗಳ ತಾ ಬೆಸಲಾಗಿ ವನದೊಳಗೆ ।
ಜನಿಸಿದಂಡಗಳನ್ನು ಮಾನಿನಿ
ದಿನ ಹಲವನೀಕ್ಷಿಸಿದಳೊಡೆಯುವು
ಜನಿಸಿದರು ಕದ್ರುವಿಗೆ ಸುತರೆಂದಳಲಿದಳು ತರಳೆ ॥ ೧೩

ವರುಷವೈನೂಱಱಲಿ ಸವತಿಗೆ
ಬಿರಿದುವಂಡಗಳಾಸಭಾಗ್ಯೆಗೆ
ವರಕುಮಾರರು ಜನಿಸಿದರು ವಿಕ್ರಮಸಮನ್ವಿತರು ।

ಧರಿಸಿದೆನು ತಾನೆರಡ ಮತ್ತದ
ನೊರೆಯಲೇತಕೆ ಭಾಗ್ಯಹೀನೆಗೆ
ದೊರಕದಾತ್ಮಜವದನದರ್ಶನವೆಂದಳಬುಜಾಕ್ಷಿ ॥ ೧೪

ವೈಪರೀತ್ಯವಿದೇನು ಪತಿಯೊ
ಳಾಪವೇನಾಯ್ತಿತ್ತ ವರವಿದು
ರೂಪುದೋಱದು ಶಿವ ಶಿವಾ ಯೆಂದೆನುತ ಮನದೊಳಗೆ ।

ಜನಿಸಿದ ಮಗನ ಅಂಗವೈಕಲ್ಯದಿಂದ ವಿನತೆಗೆ ಚಿಂತೆ.

ತಾಪವನು ನೆಱೆ ತಳೆದು ಲಜ್ಜಾ
ಕೋಪವೇಗಪರೀತೆ ಯೊಡೆದಳು
ದೀಪದಂತಿರೆ ಬೆಳಗುವಂಡವನೊಂದನದಱೊಳಗೆ ॥ ೧೫

ಒಡೆದು ನೋಡಲಿಕಬಲೆ ಕಂಡಳು
ತೊಡೆಗಳಿಲ್ಲದ ಪುತ್ರವರನನು
ಕೆಡಿಸಿದುದಲಾ ಭಾಪು ಭಾಗ್ಯವು ಪಾಪಿ ತಾನೆನುತ ।
ಮಿಡದಿ ಮಱುಗುತ್ತಿರಲು ಕನಲ್ದಿರೆ
ನುಡಿದನಾತನು ತಾಯೆ ಯೆನ್ನನು
ವೊಡೆದು ಕೆಡಿಸಿದೆ ನೀನು ವಿಧಿಯನು ದೂರಲೇಕೆಂದ ೧೬

ಕಂಡೆಯಲ್ಲಾ ಪುತ್ರವದನವ
ಖಂಡಲಕ್ಷ್ಮಿಯನದನು ಸೇರಿಸ
ದಂಡವನು ನೀನೊಡೆದು ಮತ್ಸರಲೋಭವೇಗದಲಿ ।
ತುಂಡಿಸಿದೆ ತೊಡೆಗಳನು ತನ್ನನು
ಗಂಡುಗೆಡಿಸಿದೆ ಸವತಿಕದ್ರುಗೆ
ಮಿಂಡೆಯಲಿ ಪುಳ್ಳಿಯನು ಹೊಱು ತೊತ್ತಾಗು ಹೋಗೆಂದ ॥ ೧೭

ಮಾಱುವೋಗೆ ಸವತಿಗೆ ನೀನೈ
ನೂಱುವರುಷ ಕೃತಾನುಫಲವನು
ನೀಱೆ ಭೋಗಿಸು ಹೋಗೆನಲು ತನು ನಡುಗಿ ಬಸವೞಿದು ।
ಹೇಱಿದಳು ಹೇರಾಳಭಯವನು
ತೋಱಿದಳು ತನಯಂಗೆ ಕರುಣವ
ನೋಱುಗುಡಿಸಿದಳಬೞಿ ಕಂಬನಿದುಂಬಿ ಬಿಸುಸುಯ್ದು ॥ ೧೮

ಪೊಡಮಡಲು ಹಾ ಮೇಲೆ ದೇಗುಲ
ಕೆಡದವೊಲಾಯ್ತುತ್ಕಟ ಮರವನು
ಪಡೆದವಾತೆಲ್ಲಿಯದು ಹರ ಹರ ಮಗನನಾಶ್ರಯಿಸಿ ।
ಹಿಡಿದು ಬದುಕುವೆನೆಂಬ ತನ್ನನು
ಕಡಲೊಳದ್ದಿದೆ ಮಗನೆ ದುಃಖವ
ಕಡೆಗೆ ಚಾಚುವರಾರು ಕೆಟ್ಟೆನೆನುತ್ತ ಹಲುಬಿದಳು ॥ ೧೯

ಹೋ ಹೊ ಅಂಜದಿರಂಜದಿರು ನಿ
ರ್ವಾಹವನು ಹೇಳುವೆನು ಲೋಭವಿ
ಮೋಹದಲಿ ನೀನೊಡೆಯದಿರು ತನ್ನವರಜುಂಡವನು ।
ಬೇಹ ಮಗನಹನವರದೈತ್ಯರ
ಮೋಹರಕೆ ಬಲುಗೈ ವಿಲಾಪವ
ನೂಹಿಸುವೆ ತಾನಂಜದಿರಂದುದಕಳಬೇಡೆಂದ ॥ ೨೦

ಆರು ಮಾಡುವದೇನು ದೈವ
ಪ್ರೇರಿತವ ಗೆಲಲರಿದು ಕರ್ಮವ
ಕಾರಣವು ನೀನಲ್ಲ ತಾನಲ್ಲಾರು ವಾದೊಡದ [1] ।
ಸೈರಿಸುವುದಾಕದ್ರುತನಯರ
ಬೇಱುಗೊಲೆಯನು ಮಾಡಲುಳ್ಳಹ
ವೀರನು ಸಂಶಯವಿಲ್ಲಂಜದಿರಿನ್ನು ಹೋಗೆಂದ ॥ ೨೧

1 ಪೂರುವದ, ಕ. ಖ.

ಎಂದೊಡಾಸತಿ ಸುತನ ನುಡಿಗಾ
ನಂದಪುಳಕಿತೆಯಾಗಿ ಜೀವಿಸು
ವೆಂದವೆಂತೆಲೆ ಮಗನೆ ಮಾಡಿದೆನನುಚಿತವನೆನಲು |

ಸೂರ್ಯನು ಅರುಣನನ್ನು ಸಾರಥಿಯಾಗಿ ಸ್ವೀಕರಿಸುವಿಕೆ.

ಬಂದನಲ್ಲಿಗೆ ಸೂರ್ಯನೇತಕೆ
ಯಿಂದುಮುಖಿ ಮಱುಗುವೆ ವೃಥಾ ಯಿಾ
ಕಂದನನು ಕೊಡು ಯೆಂದು [1] ಬೇಡಿದನಳಲುವಂಗನೆಯ || ೨೨

ವಾರಿಜಾನನೆ ತನಗೆ ಮಾಱ್ಪನು
ಸಾರಥಿತ್ವವನಂಜಬೇಡೀ
ವೀರನಚಿಪ್ರಚಿವೆನ್ನದೆನುತರವಿಂದಸಖನೊಲಿದು |
ಆರುಷಿಗಳನುಮತದಲೊಯ್ದನು
ವೀರನನು ನಿಜರಥಕೆ ತುರಗ
ಪ್ರೇರಕನು ತಾನಾಗಿ ನಿಂದನು ವರರಥಾಗ್ರದಲಿ || ೨೩

ಅರುಣನೆಂದಭಿಧಾನವಡೆದನು
ತರುಣನಂದಿಂದಿತ್ತ ಸೂರ್ಯನ
ಕಿರಣದಿಂದಲೆ ಮುನ್ನ ಕದಱುವನುದಯದಲಿ ತನುವ |
ಚರಣವೆರಡುಂಟಾದೊಡಾ ಹರಿ
ಹರವಿರಿಂಚ್ಯಾದ್ಯರನು ಕೊಂಬನೆ
ವರಕುಮಾರಕನೆಂದು ಕೊಂಡಾಡಿದುದು ಸುರನಿಕರ || ೨೪

ನಿಂದನತ್ತಲರುಣ ತ್ರಿಭುವನ
ವಂದ್ಯ ಸಮ [2] ನಂತರದಲಿತ್ತಲು
ಬಂದಳಂದಾವಿನತೆ ಮನದಲಿ ಚಿಂತಿಸುತ ಮನೆಗೆ |
ಇಂದುವದನೆಯರಂದು ಮತ್ಸರ

---

1 ತನಗೆಂದು, ಕ. ಖ.  2 ವಂದ್ಯನು ಅ, ಕ. ಖ.

ದಂದವೆನು ತೋಱಸದೆ ತಮ್ಮೊಳ
ಗೊಂದೆನಿಸಿ ವೊಡಹುಟ್ಟಿದವರಿದ್ದರು ಸರಾಗದಲಿ ॥ ೨೫

ಉಚ್ಚೈಃಶ್ರವವಂ ಕಂಡು ಕದ್ರುವಿನತೆಯರ ವಿವಾದ.

ಅವರು ಬಱಿಕೊಂದುದಿನ ಲವಣಾ
ರ್ಣವಸಮೀಪದಲಂದು ಉಚ್ಚೈ
ಶ್ರವಸಮಾಹ್ವಯಹಯವದವ [1] ಕಾಣುತ್ತ ಮನದೊಳಗೆ ।
ಧವಳವರ್ಣವೊ ಕೃಷ್ಣವರ್ಣವೊ
ಯುವತಿ ತುರಗದ ಬಾಲ ನೀ ಹೇ
ಳುವುದು ತನಗೆಂದೆನುತ ನುಡಿದಳು ಕದ್ರು ವಿನಯದಲಿ ॥ ೨೬

ಆರಱಿವರೆಲೆಯಕ್ಕ ಕಂಗಳು
ತೋಱುವಿಸುತಿದೆ ಮುಂದೆ ಧವಳಾ
ಕಾರವಿದೆಲಾ ಕಾಣಬಾರದೆ ತುರಗಬಾಲವನು ।
ದೂರವೇ ಭಾವಿಸಲಿಕಧಿಕ
ಕ್ಷೀರಸಾಗರಜನಿತತುರಗನು
ದಾರತುರಗವಿದು ಧವಳವೆಂದಳು ಕದ್ರುಗೆ ವಿನತೆ ॥ ೨೭

ಅಲ್ಲ ಹುಸಿ ನಿನ್ನಂತೆ ತಾಕ
ಣ್ಣಿಲ್ಲದವಳೆ ಕಱಿಯುಹ [2] ಬಾಲದ
ಬಳ್ಳಿಯಂದದ ತುರಗವಿದೆಲಾ ಕಾಣದೇ ಲೋಕ ।
ಅಲ್ಲಿ ನೋಡಾ ನಗುವವಳು ತಾ
ನುಳ್ಳುದನು ಹೇಳಿದರೆ ನಿಂದಿಸ
ಬಲ್ಲೆ ಘಡ ಬಾಯ್ಬಡಿಕೆಯೆಂದಳು ಕದ್ರು ಖಾತಿಯಲಿ ॥ ೨೮

ಎನಿತೆನಿತ ನೀನೆಂದೊಡನಿತನಿ
ತನುಱಿ [3] ವರ್ಣಿಸಲಱಿಯಲೇತಕೆ

---

1 ಸಮಾಹ್ವಯ ಹಯವನು, ಕ. ಖ. 2 ಕಱಿಯ, ಕ. ಖ. 3 ತನು, ಕ. ಖ.

ಕನಲಿ ಕಣ್ಣನು ಕೆಂಪಮಾಡುವೆ ಕಾಣದೇ ಲೋಕ |
ವನಿತೆ ಕಣ್ಣ ನಿನಗಿಲ್ಲ ನಿನಗುಂ
ಟನುಚಿತವನೀಕ್ಷಿಪ್ಪೊಡೆ ಬಱಿದೆ
ಮನದ ಗರ್ವವಿದೇಕೆ ವಿಫಲವಿದೆಂದಳಾವಿನತೆ ‖ ೨೯

ಹೇೞು ಪಣವೇನಿದಕೆ ನಿನಗೆನೆ [1] |
ಕೇಳ ದಿಟವೆಲ್ಲಶ್ವರಾಜನ
ಬಾಲ ಕಱಿದಾಗಿರ್ದೊಡಾಳಹೆ ನಾನು ನಿನಗೆಂದು |
ಆಳು ನೀನಾಗೆನಗೆ ತುರಗದ
ಬಾಲ ಬಿಳಿದಾಗಿರ್ದೊಡೆನಲಾ
ಬಾಲೆ ಬೇಹುದನೆಂದೆ ಯೆಂದಳು ಹೊಯ್ದು ಕರತಳವ ‖ ೩೦

ಏೞು ನೋಡುವೆವೆನಲು ನೋಟ್ಪೆವು
ನಾಳೆ ತಾವೆಂದೆನುತ ತಮತ
ಮ್ಮಾಲಯಕೆ ನಡೆತಂದು ಹೊಕ್ಕರು ಮಾಡಿ ಸತ್ಯವನು |

ಅಶ್ವದ ಬಾಲವು ಕಪ್ಪಾಗಿ ಕಾಣಲು ಉಪಾಯಚಿಂತನ

ಹೇೞಿದಳು ನಿಜಪುತ್ರರಿಂಗಾ
ಲೋಲಲೋಚನೆ ಕದ್ರು ಭಾಷೆಯು
ಪಾಲಿಸುವರಾರುಂಟು ಮಕ್ಕಳಿರೆಂದು ದುಗುಡದಲಿ ‖ ೩೧

ಭಾಷೆಯೇನ್ ತಾಯೆ ಚಿತ್ತವ
ಬೇಸರವಿದೇನಾನನದ ಸಿರಿ
ಮಾಸಿದಂತಿದೆ ಪೇೞು ಹೇಚೇನಾಯಿತೆನುತಿರಲು |
ಸೂಸಿದಳು ಬಿಸುಸುಯಿಲ ತಂಗಿಗೆ
ದಾಸಿಯುಪವಿಧಿಯಾಯ್ತು ಮಕ್ಕಳ
ದೇಸು ನೀವಿದ್ದೇನು ಫಲ ಪೇೞೆಂದಳಾಕದ್ರು ‖ ೩೨

[1] ನಿನಗೆ, ಕ. ಖ.

ಏನ ಮಾಡುವೆ ಹೋದೆ ತಾನಂ
ಭೋಗಿಸಿಧಿಯು ಸನ್ನಿಧಿಗೆ ಕಂಡೆವು
ಭಾನುಮಂಡಲದಂತೆ ಬೆಳಗುವ ತುರಗರಾಜನನು ।
ತಾನದಱ ಬಾಲವನು ಕಱದೆಂ
ದೂನವಚನವನಾಡಿ ತಪ್ಪಿದೆ
ನೇನು ಗತಿ ಬಿಳಿದೆಂದಳುಳ್ಳುದ ಸವತಿ ತನ್ನೊಡನೆ ॥ ೩:

ನಾಳೆ ನೋಡುವೆವೆಂದು ಬಂದೆವು
ಕೋಟುವೋದೆನೆಲಾ ಮಹಾಸತಿ
ಹೇಳಿದಳು ಸತ್ಯವನು ಮಿಥ್ಯೆಯುದಾಯ್ತು ನುಡಿ ತನ್ನ ।
ಹೇಳಿ ನೀವೇನುಂಟು ನಿಮ್ಮಲಿ
ಮೇಲೆ ಮಾಡುವುಪಾಯವೇನೆನೆ
ಹೇಳು ಕೇಳುವೆವವ್ವ ಯೆನಲಿಂತೆಂದಳಾಕದ್ರು ॥ ೩೬

ಸುತ್ತಿಕೊಂಬುದು ನೀವದನು ಕ
ಪ್ಪೊತ್ತಲಶ್ವದ ಬಾಲವನು ಸತಿ
ತೊತ್ತಹಳು ತನಗುಚಿತವಿದೆಂದೆಂನದೆಲ್ಲವನು ।
ಪುತ್ರರಿರ ಬೆಸಗೈವುದೆನೆ ಕೇ
ಳುತ್ತ ಕೆಲರದಱೊಳಗೆ ಸಂಶಯ
ಚಿತ್ತರಾದರು ಪಾಪಕರ್ಮವಿಲೇಪವೆಹುದೆಂದು ॥ ೩೭

ಆ ಉಪಾಯವನ್ನು ನಡಿಸಲೊಪ್ಪದವರಿಗೆ ಶಾಪ.

ಮಾಡೆವನ್ಯಾಯವವ ಸತ್ಯವ
ಮಾಡಿಗೆ ಯುಲೌ ತಾಯೆ ತತ್ಫಲ
ಕೇಡು ತಪ್ಪದು ಕುಲಕೆ ಮಾಡುವುದೇನು ನಾವಿನ್ನು ।
ಬೇಡ ತಮಗಾಕರ್ಮವೆನೆ ಘಡ
ಹೇಡರಾದಿರೆ ಸರ್ಪಯಾಗವ
ಮಾಡಿ ಜನಮೇಜಯನು ಕೊಲಲೆಂದಬಲೆ ಶಪಿಸಿದಳು ॥ ೩೮

ಆ ಉಪಾಯವನ್ನು ಒಪ್ಪಿ ಆಚರಿಸಲು ವಿನತೆಯು ದಾಸಿಯಾಗುವಿಕೆ.

ಕೆಲರದನು ಕೈಕೊಂಡರೆಂದುರ
ತಲೆಯಲಾಂತೆವೆನುತ್ತ ಬಳಿಕಾ
ಲಲನೆ ಕರೆದಳು ವಿನತೆಯನು ವಿಶ್ವಾಸಘಾತಕದ |
ಲಲಿತಮತಿ ತಾನೆತ್ತ ಬಲ್ಲಳು
ನಳಿನಲೋಚನೆಯೊಡನೆ ಹೋದಳು
ಜಲಧಿತೀರದ ತುರಗವನು ನೋಡುವೆವು ತಾವೆನುತ ॥ ೩೭

ಕಂಡರಾತುರಗವನು ವೇಷ್ಟಿಸಿ
ಕೊಂಡಿರಲು ಕಪ್ಪಾಗಿ ಫಣಿಗಳು
ಕೆಂಡ ನೀರಲಿ ಬಿದ್ದವೋಲಿರೆ ಕಾಣುತವೆ ಕಾಂತೆ |
ಮಂಡೆಯನು ತುರಿಸಿದಳು ಹರ ಹರ
ಕಂಡವೋಲಿರದೇಕೆ ನುಡಿಯನು
ಭಂಡುಮಾಡಿತು ದೈವಗತಿ ಯೆಂದಳಲಿದಳು ತರಳೆ ॥ ೩೮

ಅಳಲಿ ಮಾಡುವದೇನು ತಾ ಮು
ನ್ನೊಲಿದು ಮಾಡಿದ ಪಾಪಕರ್ಮದ
ಫಲವಲಾ ಬೆಂಬಿಡ್ದೊಡಹುದೇ ಮೇಣು ಬಂದುದಕೆ |
ಕೆಲಸ ಲೇಸಾಯ್ತೆನುತ ದಾಸ್ಯವ
ನೊಲಿದು ಕೈಕೊಂಡಳು ಮಹಾಸತಿ
ಚಲಿಸದಂತಃಕರಣದಲಿ ಕಾತರಿಸದಬುಜಾಕ್ಷಿ ॥ ೩೯

ಅಡಿಗಳನು ತೊಳವುತ್ತ ಕಾಂತೆಗೆ
ಪಡಿಗವನು ನೀಡುತ್ತ ತಲೆಯನು
ಕೊಡಹಿ ನೇವರಿಸುತ್ತ ತುರುಬನು ಕಟ್ಟಿ ಹೂಮುಡಿಸಿ |
ನುಡಿಗಳನು ಸೈರಿಸುತ ಸವತಿಯ
ಬಡಿಗಳನು ತಾಳುತ್ತ ಸೇವೆಯ
ನಡೆಸುತಿದ್ದಳು ವಿನತೆ ಲಜ್ಜಾವಿನತೆ ಕದ್ರುವಿಗೆ ॥ ೪೦

ಇಂತವೆನು ನೆನೆಯುತ್ತ ವಿನತಾ
ಕಾಂತೆ ಕಡುಗುವ ಮನದ ಶೋಕವ
ನಂತರಂಗದೊಳಡಗಿಸುತಲಿದ್ದಳು ಬಳಿಕ ಬಳಲುತ್ತ ।
ಸಂತತಿಯ ಜನನವನು ಮೌನಿನಿ
ಚಿಂತಿಸುತ ಮಱೆವೊಕ್ಕಳಾಶ್ರೀ
ಕಾಂತನಿತ್ಯಾತುಮಮುಕುಂದಪದಾಬ್ಜವನು ವಿನತೆ ॥　　೪೧

ಐದನೆಯ ಸಂಧಿ ಮುಗಿದುದು.

## ಆರನೆಯ ಸಂಧಿ.

ಸೂಚನೆ.

ಜನಿಸಿದನು ಜಗದೇಕವೀರನು ।
ದನುಜಮನುಜಭುಜಂಗನಿರ್ಜರ
ಜನಕೆ ವುತ್ಸವವೆನಿಸೆ ವಿನತಾನಂದನನು ಧರೆಗೆ ॥

ತನ್ನ ದಾಸೀತ್ವವನ್ನು ಕಳೆಯುವ ಮಗನುದಯಿಸದ ಅನುತಾಪ.

ತಂದೆ ಶೌನಕ ಕೇಳು ವಿನತಾ
ನಂದನನ ಸಂಭವವನಘಕುಲ
ಕಂದ [1] ವಿಚ್ಛೇದನವನಿಷ್ಟಫಲಾಪ್ತಿಸಾಧನವ ॥
ಸಂದುದಾಪರಿ ಕೆಲವುದಿನ ಪೂ
ರ್ಣೇಂದುಮುಖಿ ಹಾಱುತ್ತ ಮನದಲಿ
ನೊಂದು ಚಿಂತಿಸುತಿರಲು ನಿಜಪುತ್ರೋದಯವನಬಲೆ ॥　　೧

ನೋಡಿ ಸುಯ್ದಳು ನಳಿನಮುಖಿ ಯಡೆ
ಯಾಡಿ ವಿಪಿನಾಂತರಕೆ ಬಱಿದೇ
ಕಾಡೊಳಗೆ ತಾ ಕರುಳ ಬಿಸುಟೆನು ಕದ್ರುವಿನ ಮನವ ।

---

1 ವೃಂದ, ಕ. ಖ.

ಬೇಡಿದಿಷ್ಟಾರ್ಥದ ಫಲವು ಕೈ
ಗೂಡಿತಿನ್ನೇನೆನುತ ಬೆಂಬಲ
ಬಾಡಿದುದು ಕುಳ್ಳಿರ್ದಳಂಗನೆ ದಾಸ್ಯಕರ್ಮದಲಿ ॥ ೨

ಹಾರಯಿಸುತಿರಲಿಂತು ಸತಿಯು ಮ
ನೋರಥಾಂಕುರ ಫಲಿತವಾಯ್ತೆನೆ
ವೀರನಂದುದುಭವಿಸಿದನು ವರಪುಣ್ಯಕಾಲದಲಿ ।
ವಾರಿಜಾಸನಮುಖ್ಯಸುಮನೋ
ನಾರಿಯರು ಹೆರುಪಿಸಿದರಿತ್ತಲು
ನಾರಿಗಾಯ್ತುಟಿ [1] ಶಕುನಸೂಚಕನೆ ಮುನಿಪ ಕೇಳೆಂದ ॥ ೩

ವಿನತೆಗೆ ಆದ ಶುಭಸೂಚನೆ.

ಎಡದ ಬದಿ ತೋಳ್ಕಣ್ಣು ಹುಬ್ಬುಗ
ಳಡಿಗಡಿಗೆ ಕೆತ್ತಿದವು ವಿನತೆಯು
ಕಡು ನಿರೋಧಸ್ಥಿತಿಗೆ ಕಡೆ ಯಿಂದಿನಲಿ ಯೆಂಬಂತೆ ।
ಕಡುಗಿದುದು ಕದ್ರುವಿನೊಡಲು ಬಲ
ದೆಡೆಗುಲಂಗಸ್ಪಂದವಾದವು
ತುಡುಕಿದುದು ದುಮ್ಮಾನ ನಭವನು ಕದ್ರುನಂದನರ ॥ ೪

ಹರ್ಷದಿಂದಡವಿಗೆ ಬಂದು ಗರ್ಭವಂ ಕಾಣದೆ ಚಿಂತಿಸುವಿಕೆ.

ಏನಿದಕೆ ಫಲವೆನುತ ಕಡುದು
ಮ್ಮಾನದಲಿ ಬಂದಳು ಮಹಾಸತಿ
ಕಾನನಕೆ ಮುನ್ನಡವಿಯಲಿರಿಸಿದ ಗರ್ಭವ ನೋಡಿ ।
ಏಸಿದೇಕೊಡೆಯಿತ್ತು ಕಾಣೆನಿ
ದೇಸುವನು ಹಾ ವಿಧಿಯೆ ಪುಣ್ಯವಿ
ಹೀನೆ ನಾನೆಂದಳಲಿದಳು ಕಾಣದೆ ಕುಮಾರಕನ ॥ ೫

---

1 ನಾರಿಗಾಯ್ತು, ಕ. ಮ.

ಒಡೆದು ಕೆಡಿಸಿದೆನೊಬ್ಬನನು ತಾ
ನೊಡೆಯದಾಗದೆನಲ್ಕೆ ಕಂದನ
ನುಡಿಯ ಮನ್ನಿಸಿ ನೂಕಿದೆನು ಹಲಕಾಲಪರ್ಯಂತ ।
ಹಿಡಿದು ಮೆಟ್ಟಿದ ಕೊಂಬುಗಳು ಭಾ
ಪುಡಿದವೆ ಹಾ ಯೆನುತ್ತ ಹೊಱಳಿದ
ಳಡವಿಯಲಿ ಬಾಯ ಬಿಡುತ ಕಂಬನಿ ಧರೆ ಕೆಸಱಿಡಲು ॥ ೬

ತನ್ನ ಸೆಱೆಯನು ಬಿಡಿಸುವನು ಸಂ
ಪನ್ನಬಲನೆಂದೆನಿಸಿ ಸುತನು
ತ್ಪನ್ನನೆಂದೆಂಬಾಶೆ ಮೋಸವದಾಯ್ತು ತನಗೆಂದು ।
ದುರ್ನಿರೂಪವದಾಯ್ತು ಬಾಗಿದ
ಬೆನ್ನ ನಿನಿಚುವವರನು ಕಾಣೆನು
ಮುನ್ನ ಮಾಡಿದ ದುಷ್ಕೃತದ ಫಲವೆಂದಳಾವಿನತೆ ॥ ೭

ದೋಷ ದುಷ್ಕೃತಫಲವಿದಲ್ಲದೊ
ಡೀಸು ದುಸ್ಥಿತಿಯುಹುದೆ ಸವತಿಗೆ
ಸೂಸಿದುದು ಕಡೆಗಗಣ್ಯಪೂರ್ವಾರ್ಜಿತಪುಣ್ಯಫಲ ।
ದೇಶಗತನಿನ್ನಾರು ಗತಿ ಪತಿ
ಭಾಷಿತವಿದೇಕಫಲವಾಯ್ತೆನು
ತಾಸರೋರುಹನೇತ್ರೆ ಹೊಸೆದಳು ಬಸುಱನಡಿಗಡಿಗೆ ॥ ೮

ಆಗ ಉದಯಿಸಿದ್ದ ಗರುಡದರ್ಶನ.

ಎಂದು ದುಃಖಿಸುವಬಲೆಗಂಗ
ಸ್ಪಂದವಾಯ್ತೆಡದಲ್ಲಿ ಕಾಣುತ
ಯಿಂದುಮುಖಿ ಕಂಬನಿಯ ತೊಡೆದಳು ಶಕುನ ಶುಭವೆನುತ ।
ದುಂದುಭಿಯದೇನೆನುತ ಗಗನವ
ನಂದು ನೋಡಿದಳುರಿವ ಪಾವಕ
ನಂದದುತ್ಕಟವಿಹಗನನು ತಾ ಕಂಡಳಾವಿನತೆ ॥ ೯

ಮುಚ್ಚಿದಳು ಕಂಗಳನು ಕಾಣುತ್ತ
ಸಚ್ಚರಿತೆ ನೆಱೆಯದೆ ಕುಮಾರನ
ಹೆಚ್ಚಿ ದೊಡಲ ಮಹಾಪ್ರಭೆಯನೀಕ್ಷಿಸುವೊಡದಕಂಜಿ ।
ಅಚ್ಚರಿಯಿದೇನೆನುತಿರಲು ಸುರ
ರೊಚ್ಚ ತುಳಿದರು ನಭದಿನಾರವಿ
ಮುಚ್ಚಿ ಕೊಂಡನು ರಥವನೇಳೆಂಬನು ದಿಗಂತರಕೆ ॥ ೧೦

ಸುರರು ಗರುಡನ ತೇಜೋರಾಶಿಯಿಂ ಘಾಸಿಪಟ್ಟು ಅಗ್ನಿಯನ್ನು ಮರೆಹೊಕ್ಕದ್ದು.

ಘಾಸಿಯಾದರು ಸುರರು ತೇಜೋ
ರಾಶಿ ತಾನೆನುತ ಹೋಗಿ ಹು
ತಾಶನನಲ್ಲಿಗೆ ಹೊಯಿಲನು ಹಾಕಿದರು ಭೀತಿಯಲಿ ।
ವಾಸುದೇವಾಂಶೋದ್ಭವನೆ ದರ
ಹಾಸವಿಶದಮಹಾಪ್ರಭನೆ ಕರು
ಣಾಸಮುದ್ರನೆ ಕಾವುದೆಮ್ಮನೆನುತ್ತ ಕರುಣದಲಿ ॥ ೧೧

ಊಡಲಮ್ಮವು ದೇವ ಕಲ್ಪದ
ಕೇಡಿನಂದಿನವೊಲು ಸೀ ಘಾಸಿ
ಮಾಡಿದೆ ಯಿಂದು ಬಹಳಜ್ವಾಲೆಯನು ಕಳುಹಿ ।
ವೋಡುವೊಡೆ ದೆಸೆಯಿಲ್ಲ ಗಗನದ
ಗೂಡು ನೆಱೆಯುವು ಕಮಲಜಾಂಡವ
ಕೂಡೆ ಕವಿವುತಿದೆ ಯೆನುತ ಘೋಳಿಟ್ಟುದಮರಗಣ ॥ ೧೨

ಅಗ್ನಿಯ ಅಭಯಪ್ರಧಾನ.

ಹೋ ಹೊ ಅಂಜದಿರಂಜದಿರಿವಾ
ದಾಹಿಸುವ ಕಿಚ್ಚಲ್ಲ ವಿನತೆಯ
ದೇಹಸಂಭವನೈದೆ ಮಱೆಯೊಗುವದು ತದಂಘ್ರಿಗಳ ।
ಕಾಹು ತೆಗಸುವನಾತನಲ್ಲದೆ

ಬಾಹಿರರ ಕೈಯಿಂದ ಹೋಗದು
ದಾಹವಿದು ನಿಮಗೆನುತ ನುಡಿದನು ಪಾವಕನು ನಗುತ ॥ ೧೩

ಎನಲು ನೆರೆದರು[1] ಸುರರು ಸಂಕ್ರಂ
ದನ ಹುತಾಶನ ಯಮ ನಿರುತಿ ವರು
ಣನು ಪವನಸೋಮೇಶರೆಂಬ ದಿಗೀಶ್ವರರು ಸಹಿತ ।
ತನತನಗೆ ಪ್ರೌಢವೆಂಟು ತೇಜೋ
ವನಧಿಯತ್ತಲು ಮುಗಿದು ಕರವ ವ
ದನದಲಿ ಸಂಸ್ತುತಿಯನು[2] ಮಾಡಿದರಧಿಕಹರುಷದಲಿ ॥ ೧೪

ಸುರರ ಸ್ತುತಿಗೆ ಮೆಚ್ಚಿ ಗರುಡನು ಅಭಯವಂ ಹೇಳುವಿಕೆ.

ಜಯ ನಮೋ ವಿಹಗೇಂದ್ರ ಜಯ ಜಯ
ಜಯ ನಮೋ ವಿಬುಧೇಂದ್ರವಂದಿತ
ಜಯ ನಮೋ ಲೋಕೈಕರಕ್ಷಕ ದುರಿತಭಕ್ಷಕನೆ ।
ಜಯ ನಮೋ ಜಗದೇಕವೀರನೆ
ಜಯ ನಮೋ ಬಲವೀರ್ಯಸಾರನೆ
ಜಯ ನಮೋನಂತೋರುತೇಜನೆ ಭುವನಭಾವನನೆ ॥ ೧೫

*ಜಯ ನಮೋ ಪಕ್ಷೀಂದ್ರಸುಜನಾ
ಶ್ರಯ ಸುಧರ್ಮರತೇ[3] ಪ್ರಭಯಹರ
ಜಯ ನಮೋಸ್ತು ನಮೋಸ್ತುಎಂದಡಿಗಡದುರ್ದಮರಗಣ ॥ ೧೬

ನೀನೆ ರವಿ ಶಶಿ ಪವನ ಪಾವಕ
ನೀನೆ ಕಮಲಜ ರುದ್ರ ಗಣಪತಿ[4]
ನೀನೆ ವಿದ್ಯಾಧರ ಸುರೇಶ್ವರ ನಿಖಿಳಸಂಪೂಜ್ಯ ॥
ನೀನೆ ಸಾಕ್ಷಾದ್ವಿಷ್ಣು ಭುವನ

---

1 ನೆರೆದುದು, ಕ.
2 ಸ್ತುತಿಯು, ಕ. ಖ.
3 ಸುಧಾರ್ಮಿಕೇ, ಕ. ಖ.
4 ಗುಣಗಣ, ಕ. ಖ.
* 16 ನೇ ಪದ್ಯದಲ್ಲಿ ಪೂರ್ವಾರ್ಧವು ಹೋಗಿರುತ್ತದೆ.

ಸ್ಥಾನಸಂಭವಹೇತು ನೀನೇ
ನೀನೆ ಸಚರಾಚರವಿದೆಂದರು ಸುರರು ಕೈಮುಗಿದು ॥ ೧೭

ನಾವು ಮಱಿಹೊಕ್ಕೆವು ಮಹಾತ್ಮನೆ
ಬೇವುತಿದೆ ಯೆಮ್ಮೊಡಲು[1] ನಿನ್ನ ಮ
ಹಾವಿವೃದ್ಧ ತನೂತ್ಥ ಬಹಳ ಜ್ವಾಲೆಯಲಿ ಮುಳುಗಿ ।
ಕಾವುದೆಮ್ಮನು ವೀರ ಕಾರು
ಣ್ಯಾವಲೋಕನದಿಂದ ನಿನ್ನೀ
ಪಾವನಾಂಘ್ರಿಸಮಾಶ್ರಿತರನೆಂದುದು ಸುರಸ್ತೋಮ ॥ ೧೮

ಸುರಮುನೀಶ್ವರರಿಂತು ತನ್ನನು
ಶರಣುವೊಗಲೀಕ್ಷಿಸುತ ಖಗಪತಿ
ಕರತಳವ ನೆಗಹಿದನು ಹೋ ಹೋ ಭೀತಿ ಬೇಡೆನುತ ।
ಭರಿತತನುರಶ್ಮಿಗಳನುಪಸಂ
ಹರಿಸಿದನು ಬಳಿಕಾತ್ಮಜನನಿಯ
ಚರಣದಲಿ ತಲೆವಾಗಿ ನಿಂದನು ಮುಂದೆ ಕೈಮುಗಿದು ॥ ೧೯

ವಿನತೆಗೆ ನಮಿಸಿ ತಾನು ಮಗನೆಂದು ತಿಳಿಸಿ ಕದ್ರುವಿನ
ಮನೆಗೆ ಸೇರುವಿಕೆ.

ಹೇಳೆನಗೆ ಬೆಸವೇ[2] ನೆನುತಲಿರೆ
ಲೋಲಲೋಚನೆ ನಡುಗಿ ನಿಜವನು
ಹೇಳು ನಿನಗಾನಾರು ನಿನ್ನನು ಹೆತ್ತವಳ ದಿಟಕೆ ।
ಕಾಲಿಗೆಱಗುವಿ ನೀನದೇತಕೆ
ನೀಲಲೋಹಿತನೋ ವಿರಿಂಚಿಯೊ
ಪಾಲುಕಡಲ ಮಹಾತ್ಮನೋ ನೀನೆಂದಳಂಬುಜಾಕ್ಷಿ ॥ ೨೦

ಶಂಕೆ ಬೇಡೆಲೆ ತಾಯೆ ನಿನ್ನುದ
ರಾಂಕ ಸಂಭವ ನಾನು ಕಮಲಜ

1 ನಿನ್ನೊಡಲು, ಕ. ಖ. 2 ಬೆಸಸೇ, ಕ.

ಶಂಕರಾಚ್ಯುತರೆಂಬವರು ತಾನಲ್ಲ ನಿನ್ನೊಡಲ ।
ಶಂಕೆಯುನು ತಾ ಕಳೆವೆ ನಂಜದಿ
ರಂಕುಶವದಾರೆನಗೆ ಜಗವನು
ಕಂಕುಳಲಿ ಧರಿಸುವೆ[1] ನಡೆವೆನಂಬರವಲೆಂತೆಂದ ॥ ೭೧

ಸಿಕ್ಕಿದೆನೆಲಾ ಮಗನೆ ಸವತಿಯು
ತೆಕ್ಕೆಯಲಿ ಬಱಿಮಾತುಗಳ ಬಲೆ
ಯಿಕ್ಕಿ ಹಿಡಿದಳು ಕಪಟದಲಿ ತಾ ದಾಸಿ ಯೆಂದೆನಲು ।
ಮಕ್ಕಳಾಟಿಕೆ ಬೇಡ ಸವತಿಯು
ಮಕ್ಕಳನು ನುಂಗುವೆನು ತಾ ಬಡ
ಹಕ್ಕಿ ಯೆನ್ನದಿರವ್ವ ಸಂಶಯುವಿಲ್ಲ ಹೋಗೆಂದ ॥ ೭೨

ಎನಲು ಹರಸಿದಳಬಲೆ ಬಲುಗೈ
ಯೆನಿಸಿ ಬದುಕೆಂದೆನುತ ಪುಳಕಕೆ
ತನು ನೆರೆಯದೆನೆ ಹಿಗ್ಗಿದಳು ಹರುಷಾಂಬುಪೂರದಲಿ ।
ನೆನೆದು ಹೊಂದಿದಳಂಗವನು ನಿಜ
ತನಯುನಂಗದಲಮರಿ ಬಿಟ್ಟಳು
ಮನದ ಸಂತಾಪವನು ತಾರ್ಕ್ಷ್ಯಸುತ್ತ ನಿಜಸುತನ ॥ ೭೩

ತೊತ್ತುಗೆಲಸಕೆ ತಡೆಯದೇಚೆಲಿ
ಪುತ್ರ ಕಾಲಕ್ಷೇಪ ವಾಯ್ತೆನೆ
ಹೊತ್ತುಕೊಂಡನು ತಾಯಿ ತೋಱಮನೆಯು ತನಗೆನುತ ।

ಕದ್ರುವಿನತೆಯುರ ಸಂವಾದ.

ತೊತ್ತತಾಯನು ಸವತಿಯಿದಿರಲಿ
ಹೊತ್ತು ತಂದಿೞುಹಿದನು ಕಾಣುತ
ಮತ್ತಿದೇನಾರಾತನೆಂದಳು ವಿನತೆಯೊಳು ಕದ್ರು ॥ ೭೪

---

1 ಧರಿಸುವೆನು, ಕ. ಖ.

ಅಱಿಯೆನಾರೆಂದಕ್ಕ ಮಗನೆಂ
ದೆಱಗಿದನು ಕಾಲಿಂಗೆ ತನ್ನವು
ಬಱಿಯುದಿದ್ದುದು ಕಂಡೆನಂಡವನಿಲಿಸಿದಂತಿರಲು ।
ಮಱುಗದಿರು ನೀನೆಂದನೆನಗೆನೆ
ಮಱೆಯು ಮಾತಿದು ಸಾರು ಕೆಲಸವ
ನೊಱಗಿಸದದಾರಾದೊಡಾಗಲಿ ಯೆಂದಳಾಕದ್ರು ॥ ೬೫

ಕದ್ರುವಿನ ಅಪ್ಪಣೆಯಂತೆ ಹೊತ್ತು ತಾಯಿಮಕ್ಕಳನ್ನು
ಅಂತರಿಕ್ಷದಲ್ಲಿ ಒಯ್ಯುವಿಕೆ.

ತೊತ್ತೆ ನೀ ಪೋಱು ನನ್ನನೆನ್ನಯ
ಪುತ್ರರನು ಮಗ ಹೊಱಲಿ ಸಾಗರ
ವತ್ತಲದೆಲಾ ರಮ್ಯತರವಹ ವನಮದಾತ್ಮಜರ ।
ಚಿತ್ತದಲಿ ಲೋಲುಪ್ತಿಯಾಯಿತು
ಪುತ್ರಸಂದರುಶನದಲೆನಲಾ
ಮತ್ತಕಾಶಿನಿ ಯಾವಿನತೆ ಪೊತ್ತಳು ಸರಾಗದಲಿ ॥ ೬೬

ಹೊಱು ಮಗನೆ ನೀನೆನಲು ಕುಳ್ಳಿರಿ
ಗಱಿಯ ಕಡೆಸೆಱಗಿನಲಿ ನೀವೆನು
ತೆಱಗಿ ಪಕ್ಕವನೊಡ್ಡಿ ತಾ ಹತ್ತಿದುದು ಫಣಿನಿಕರ ।
ಹೊಱಗುಟಿಯದಂತೈದೆ ಜಲಧಿಯ
ಕುಱುವದೆಲ್ಲಿಗೆ ಹೋಗು ನಾವಿಹ
ಮಿಱುಪುವೆಡೆ ಫಣಿನಿಕರವೆನೆ ಬೆಳಗುತ್ತ ದಿಗುತಟವ ॥ ೬೭

ಸೂರ್ಯನ ತಾಪದಿಂದ ಕದ್ರುಪುತ್ರರ ಕೆಂಗೆಡುವಿಕೆ.

ಮುಗುಧೆ ನಡೆದಳು ಹೊತ್ತುಕೊಂಡಾ
ಹೊಗೆಮುಖದ ಕದ್ರುವೆನು ಜಲಧಿಗೆ
ನೆಗೆದನಿತ್ತಲು ಪಕ್ಷಿರಾಜನು ಪವನವೇಗದಲಿ ।
ಗಗನಮಣಿಮಂಡಲದ ಸಮ್ಮುಖ

ಕೊಗುಮಿಗೆಯು ರೋಷದಲಿ ಸುಮಹೋ[1]
ರಗನಿಕರ ಮುಮ್ಮೆಳಗೊಳಲು ಬಲುಬಿಸಿಲ ತಾಪದಲಿ ॥ ೧೮

ಹಾಱಿದನು ಖಗನಂಬರಾಗ್ರಕೆ
ತೋಱಿದನು ಬಿಸಿಲಿಂಗೆ ಬೆನ್ನನು
ಮೀಱಿದನು ಖೇಚರರ ಪಥವನು ಪನ್ನಗೇಶ್ವರರ ।
ಮಾಱಿದನು ಬಲುಮೂರ್ಛೆಗಳಲನು
ಹೋಱಿದನು ಕದ್ರುವಿನ ಗಂಟಲ
ನೂಱಿದನು ಹಾ ಯೆನಲು ಸುೞಿದಾಡಿದನು ಗಗನದಲಿ ॥ ೧೯

ಅದನ್ನು ಖೇಚರರ ವಚನದಿಂ ತಿಳಿದು ಕದ್ರು ಮಹೇಂದ್ರನಂ
ಮರೆ ಹೋಗುವಿಕೆ.

ಸತ್ತುದೋ ಉರಗಾಳಿ ಹರ ಹರ
ಕಿತ್ತುದೋ ನಾಗಾಲಯದ ಕವ
ಮೆತ್ತಿತೋ ಕದ್ರುವಿನ ಕುಲಕಲ್ಪದ್ರುಮವ ಬೇಱು ।
ಹೊತ್ತಿತೋ ಹೊಗುಮದ[2] ಮಹಾಖಗ
ಮೃತ್ಯುವಾದುದೆನುತ್ತ ಖೇಚರ
ರತ್ತರೊಱಲಲು ಕೇಳಿದಳು ಕೊಳುಗುಳವನಾಕದ್ರು ॥ ೨೦

ಭಯದಲಂದಾಕಂಪಿಸಿದಳ
ನ್ವಯವ ಕೆಡಿಸಿದಳಕಟೆನುತ ಹರಿ
ಹಯನನಭ್ಯರ್ಥಿಸಿದಳಂದಮರೇಂದ್ರಸೂಕ್ತದಲಿ ।
ಜಯ ನಮೋ ದೇವೇಂದ್ರ ಜಯ ಜಯ
ಜಯ ನಮೋ ಮಾಹೇಂದ್ರ ಜಯ ಜಯ
ಜಯ ನಮೋ ಸುಖಸಾಂದ್ರ ಭಕ್ತಚಕೋರಕುಲಚಂದ್ರ ॥ ೨೧

ನೀನೆ ರವಿ ಶಶಿ ನೀನೆ ಪಾವಕ
ನೀನು ನೀನೇ ವರುಣ ಪವನನು

---

1 ಮಹೋ, ಕ, ಖ.　2 ಹೊಗದುದೊ, ಕ, ಖ.

ನೀನೆ ಯಮ ವಿತ್ತೇಶನೀಶಾನನು ಸರೋಜಭವ ।
ನೀನೆ ನಾರಾಯಣನು ಭುವನ
ಸ್ಥಾನರಕ್ಷಕ ನಾಶಕಾರಣ
ನೀನೆ ಸಚರಾಚರಜಗನ್ಮಯನೆಂದಳಬುಜಾಕ್ಷಿ ॥ ೩೦

ಸ್ತುತಿಗೆ ತೆರಹಿಲ್ಲಕಟ ಕೆಟ್ಟೆನು
ಗತಿಯ ಕಾಣೆನು ಬೇಗ ಕರುಣಿಸು
ಶತಮುಖನೆ ಮಱೆಗೆಱೆ ಮಹೋರಗರೊಣಗಲಿನ ಮೇಲೆ ।
ಗತಿ ಯೆನಗೆ ಮತಿ ಯೆನಗೆ ನೀನೆನು
ತತುಳಮತಿಯಿಂ ಭಾವಿಸುತ್ತಿರೆ
ಶತಮುಖನು ಕಡಿ ಮೇಘನಿಕರದ ಸಂಕಲೆಯನೆಂದ ॥ ೩೩

ಇಂದ್ರನ ಪ್ರಸಾದದಿಂ ವೃಷ್ಟಿಯಾಗಲು ಕದ್ರುಪುತ್ರರ ದುಃಖನಾಶ.

ಕಡಿವುದೇ ತಡವಾಯ್ತು ಮೇಘದ
ಗಡಣವಾವರಿಸಿತ್ತು ನಭವನು
ಸಿಡಿಲು ಸಡಿಲಿದವಾಡಿದವು ಮಿಂಚುಗಳು ಚಂಚುಗಳ ।
ಕುಡಿಗಳಂತಿರೆ ಪಕ್ಷಿಪತಿಯಾ
ಯೊಡಲು ನೆನೆಯಲು ಗಗನಮಂಡಲ [1]
ವೊಡೆಮುಸುಱಿವಂದದಲಿ ಸುಱಿದುದು ವೃಷ್ಟಿಯವನಿಯಲಿ ॥ ೩೪

ಚೇತರಿಸಿದುದು ಹೊತ್ತಿದುರಗ
ವ್ರಾತ ಸಪ್ರಾಣಿಸಿದಳವದಿರ
ಮಾತೆ ಮಹೇಂದ್ರನನು ಸ್ತುತಿಸಿದಳಧಿಕ ಹ [2] ರುಷದಲಿ ।
ಪ್ರಾತು ಮಝು ಸುರನಾಥ ಕಾರು
ಣ್ಯಾತಿಶಯಕಿದಿರುಂಟಲಾ ಯೆನ
ಲಾತಟಕಿಱಿದನು ಸೂರಿಯನಿಱಿವಂತೆ ಸಾಗರಕೆ ॥ ೩೫

---

[1] ಗಗನ, ಕ. ಖ.

[2] ಸ್ತುತಿಸಿದಳುಹ, ಕ. ಖ.

ಇಱುಹಿದನು ಪನ್ನಗರ ನಿವಹವ
ನಿಱುಹಿದನು ನಿಜಜನನಿಯೊಲವನು
ಸಲಹಿದನು ಪನ್ನಗರನಾಪ್ತರನೊಲಿದು ಕರುಣದಲಿ ।
ಹೊಳಹಿದನು ಕದ್ರುವಿನ ಖ್ಯಾತಿಯ
ಕಳುಹಿದನು ಖಗಕುಲಶಿರೋಮಣಿ
ತಿಳುಹಿದನು ತಾಯಿಗಳನಧಿಕಮನೋನುರಾಗದಲಿ ॥ ೩೬

ಫಲಕಥನ.

ಇದು ಸಕಲಮಂಗಳಮಹೋದಧಿ
ಯಿದು ಸಕಲಪುರುಷಾರ್ಥಸನ್ನಿಧಿ
ಯಿದು ಸದಾಯುಃಕೀರ್ತಿಸಂಪತ್ಕರವಘೌಘಹರ ।
ಇದನು ಹೇಳುವ ಕೇಳುವಾ ಸದು
ಹೃದಯರನು ರಕ್ಷಿಸುವನೊಲಿದಾ
ಪದುಮದೃಶ ನಿತ್ಯಾತ್ಮನಾರಾಯಣನು ಕರುಣದಲಿ ॥ ೩೭

ಆರನೆಯ ಸಂಧಿ ಮುಗಿದುದು.

## ಏಳನೆಯ ಸಂಧಿ.

ಸೂಚನೆ.

ಪಕ್ಷಿರಾಜಮಹೇಶ್ವರನು ನೆ ಟಿ
ಭಕ್ಷಿಸಿದ ನಾಕಾರಿ ಖಳರನು
ರಕ್ಷಿಸಿದನಾಕಾನನಕ್ಕೈದಿ ಭೂಸುರಾಧಮನ ॥

### ಗರುಡನು ಕದ್ರುಪುತ್ರರಿಂಗೂಡಿ ನಾಗಾಲಯಕೆ ಬಂದು ಸಂತೋಷಪಡುವಿಕೆ.

ಕೇಳು ಶೌನಕ ಬಂದನಾನಾ
ಗಾಲಯಕೆ ನಾಗಾಂತಕನು ಸುವಿ
ಶಾಲಕಲ್ಪದ್ರುಮಲಲಿತವೇಷ್ಟಿತವನಾಂತರಕೆ ।
ಲೋಲತರಸಾರಂಗಶೃಂಗೋ
ತ್ತಾಲವಲ್ಲೀ ವಿಹಗಕಿನ್ನರ
ಜಾಲಸೇವಿತರಮ್ಯರತ್ನಸ್ಥಳಮನೋಹರಕೆ ॥ ೧

ಫಲಿತಕುಸುಮಿತಪಲ್ಲವಿತತರು
ಗಳಲಿ ಪುಷ್ಪಾಮೋದರಮ್ಯಾ
ನಿಲನಿರಂತರವಿಚರಿತೋದ್ಯಾನದಲಿ ಸಾಗರದ ।
ಸಲ್ಲಲಿತವೀಚೀತತಿಮೃದೂ
ಚ್ಚಲಿತಜಲಚರಸಿಕರಪರಿಮಂ
ಡಲಿತಪಾವನಭವನ ತಲೆದೂಗಿಸಿತು ಖಗಪತಿಯ ॥ ೨

### ಕದ್ರುಪುತ್ರರ ಅಧಿಕ್ಷೇಪದಿಂ ಗರುಡನು ತಾಯಿಯಿಂದ ದಾಸ್ಯ ಕಾರಣವನ್ನು ಅರಿಯುವಿಕೆ.

ಇಱೆದುದು ನಿಜಭವನದಲಿ ಮತ್ತಾ
ಖಿಳಮಹೋರಗನಿಕರವ್ರಮದೆಲ
ವೆಲವೊ ದಾಸಿಯುಮಗನೆ ಬಲ್ಲಿದನಾದೆ ಸತ್ವದಲಿ ।
ಜಲನಿಧಿಯು ತಾನಲ್ಲಿ ರಮ್ಯ
ಸ್ಥಳಕೆ ನೀ ಹೊತ್ತೊಯ್ದು ನಮ್ಮನು
ಹೊಳಹುದೋಱಡೆ ಹೋದೆಯೆಂದರು ಕದ್ರುನಂದನರು ॥ ೩

ಎಂದೊಡದನಾಲಿಸುತ ಮನದಲಿ
ನೊಂದು ನುಡಿದನು ತಾಯೆ ತೊತ್ತಾ
ದೆಂದುಮೊದಲಾಗೀ ಮಹೋರಗ ಸಂತತಿಗೆ ನೀನು ।

ಎಂದುಪರಿಯಂತೇನು ಕಾರಣ
ವೆಂದೆನಲು ಕೇಳುತ್ತ ತನ್ನಯ
ನಂದನಂಗಿದನೆಂದಳಾಗಲೆ ವಿನತೆ ಸುರವನಿತೆ ॥ ೪

ಮಗನೆ ನೀನದನೇನು ಕೇಳುವೆ
ಹೊಗಿಸಿ ಬಡಿದಳು ಕದ್ರು ತನ್ನನು
ಮುಗುಧೆ ತಾ ಸುರತುರಗವ ನಾವು ಕಂಡೆವಬುಧಿಯಲಿ ।
ಭಗಿನಿ ಹೇಟೇ[1] ತುರಗವಾಲದ
ಬಗೆಯು ಬಿಳಿದೋ ಕಱಿದೊ ಯೆಂತಿದ[2]
ವಗಡಿಸಿ ಕೇಳ ಹೇಟಿದೆನು ನಾನದನು[3] ಬಿಳಿದೆಂದು ॥ ೫

ಅಲ್ಲ ಹುಸಿ ಕಱಿದೆಂದು ಹೇೞಿದ
ಳಲ್ಲದುದನಾ ಕದ್ರು ಪಣವೇ
ನಿಲ್ಲಿ ಸೋತರೆ ತೊತ್ತು ನಾವೊಬ್ಬೊಬ್ಬರಿಂಗೆನುತ ।
ಅಲ್ಲಿ ಭಾಷೆಯ ಮಾಡಿ ಬಂಗೆವು
ಕಳ್ಳಮಕ್ಕಳ ಕರೆದು ಹೇಟಿದ
ಳೆಲ್ಲರಿಗೆ ನಿಜಮತವ ಕಱಿದನು ಮಾಡಿ ನೀವೆಂದು ॥ ೬

ಬೇಡ ತಮಗನ್ಯಾಯವೆನೆ ಕುಲ
ಗೇಡಿ ಕೊಟ್ಟಳು ಸರ್ಪಯಾಗವ
ಮಾಡಿ ಜನಮೇಜಯನು ಕೊಲ್ಲಲಿ ನಿಮ್ಮನೆಂದೆನುತ ।
ಆಡಿ ಶಾಪವನಲ್ಲಿ ಕೆಲರವ
ಲಾಡಿದುದಕೆ ಹಸಾದವೆಂದರು
ಕೂಡೆ ಹೊಕ್ಕರು ತುರಗಬಾಲವ ಕಾಮರೂಪಿಗಳು ॥ ೭

ಹೋಗಿ ಕಂಡೆವು ಮಱುದಿವಸ ಕಱಿ
ದಾಗಿ ತೋಱುವ ಬಾಲವನು ತಲೆ

---

1 ಕೇಳೀ, ಕ. ಖ. 2 ಹೇಟೆಂ, ಕ. 3 ಹೇಟಿದೆನದನು, ಕ. ಖ

ವಾಗಿಸಿತು ವಿಧಿಯು ತನ್ನನನ್ಯವಿಧ[1] ಪ್ರವೃತ್ತಿಯುಲಿ ।
ಹೋಗಲದಕೇನೆಲೆ ಮಗನೆ ಹೋಋ
ಭೋಗಿನಿಕರವನೆನ್ನ ಬಸುಱಲಿ
ಭಾಗಧೇಯವಿಹೀನ ಜನಿಸಿದೆ ಯೆಂದಳಾತ್ಮಜಗೆ ॥ ೮

ಬಳಿಕ ಕುಪಿತನಾದ ಗರುಡನಿಗೆ ದಾಸ್ಯವನ್ನು ಕಳೆಯುವ
ಉಪಾಯವನ್ನು ಹೇಳುವಿಕೆ.

ಎಂದೊಡೆಂದನು ಸಾಕುಸಾಕಿ
ಲ್ಲಿಂದ ಮೇಲಲೆ ತಾಯೆ ಘಡ ತೊ
ತ್ತೆಂದರಾವೆಡೆ ತೊಡವೆನವದಿರ ಬಾಜಿನಕ್ಕರವ ।
ಕೊಂದಳನ್ಯಾಯದಲಿ ಹರಹರ
ಹಿಂದಿನಿತುದಿನ ಸಾಧ್ವಿಯನು ತಾ
ನಿಂದು ಮಱುಗಿದೊಡೇನು ಫಲವಿನ್ನೆಂದು ಬಿಸುಸುಯಿದ ॥ ೯

ಶೋಕವನು ಬಿಡು ತಾಯೆ ತಾನಿರ
ಲೇಕೆ ಭಯ ನಿನಗುರಗಗಿರಗರ
ಲೋಕವನು ನುಂಗುವೆನು ಮುನಿದರೆ ಪನ್ನಗೇಶ್ವರರ ।
ಸಾಕು ನಡೆ ಮನೆಗೆನಲು ಸತ್ಯವ
ನೇಕೆ ಕೆಡಿಸುವೆ ಮಗನೆ ಕೊಡು ಜಗ
ದೇಕವೀರನೆ ಕದ್ರು ಬೇಡಿದುದೆಂದಳಾ ವಿನತೆ ॥ ೧೦

ತಾಯೆ ನೀ ಬೆಸಸಾ ಮನೋಭಿ
ಪ್ರಾಯವೇನೆಂಬುದನು ಭುವನನಿ
ಕಾಯದೊಳಗೆನಗಿಲ್ಲ ದುರ್ಲಭವಾದ ಪುರುಷಾರ್ಥ ।
ಈಯಲಾಪೆನು ಕಾಯಲಾಪೆನು
ವಾಯುಭೋಜನರವ್ವೆಯೆಂದುದ
ನಾಲಿತಿಕೆಯಲಿ ತಿಳಿದು ಹೇಳೆನಗೆಂದನಾಗರುಡ ॥ ೧೧

1 ಅನನ್ಯ, ಕ.

ಎನಲು ಹೋದಳು ಕದ್ರುವಿನ ಮನೆ
ಗನುಪಮಮಹಾವಿನತೆ ತನ್ನಯ
ತನಯನೆಂದುದನೆಂದವಳವಳಾಳೋಚನೆಯ ಹದನ ।
ಮನದೊಳಗೆ ನಿಶ್ಚಯಿಸಿ ದುರ್ಲಭ
ವೆನಿಪದನು ಬೇಡುವೆನು ತರಲಿ
ಯನು ವಿಹಂಗಮನೆನುತ ನುಡಿದಳು ಕದ್ರು ಮಿಗೆ ನಗುತ ॥ ೧೨

ಅಮೃತವನು ತಂದೀವುದುರುವಿ
ಕ್ರಮಪರಾಕ್ರಮಶಕ್ತಿಯುಳ್ಳೊಡೆ
ಸುಮತಿ ಸೆಱೆಯನು ಬಿಡುವೆನೆನ್ನಲಿ ಮಾತು ಹಲವಿಲ್ಲ ।
ಭ್ರಮಿತೆ ಹೋಗೆನೆ ಬಂದಳಾಸತಿ
ತಮವ ತಗುಳುತ ತೀವ್ರತೇಜದ
ಕಮಲಮಿತ್ರನ ವೋಲು ಮೆಱೆವಾತ್ಮಜನ ಸನ್ನಿಧಿಗೆ ॥ ೧೩

ಚಕ್ಕುಲತೆ ಬೇಡೆಲೆ ಮಗನೆ ಗಂ
ಟಿಕ್ಕಿದೆನು ತಾ ಬಿಡಿಸಹೋದವ
ಳಕ್ಕನನು ಗೆಲಲರಿದು ಬೇಡಿದಳಮೃತವನು ತನಗೆ ।
ಎಕ್ಕತುಳದಲಿ ಹೋಗಿ ನೀ ತರ
ತಕ್ಕವನೆ ಸುಧೆಯನು ಸುರಾಲಯ
ಹೊಕ್ಕು ಹೊಱವಡುವೊಡದು ಸದರವಲ್ಲೆಂದಳಾವಿನತೆ ॥ ೧೪

ದೇವದಾನವಮಥಿತಸಾಗರ
ದೇವನಲಿ ಸಂಭವಿಸಿತದಕಾ[1]
ದೇವರಿಪುಗಳು ಕಾದಿ ಸತ್ತರು ಪಡೆಯದಮೃತವನು ।
ಆವನೈ ನೀನದನು ತರಲು ವಿ[2]
ಭಾವಸುವಿನುರಿ ಹೊಕ್ಕು ಹೊಱಗು
ಜ್ಜೀವಿಸಿ ಮರಳುವುದೇ ಮೋಹೆಂದಳು ಸರೋಜಮುಖಿ ॥ ೧೫

1 ತದನಾ. ಕ. 2 ನೀನದತಾಪೊಷೆ, ಕ. ಖ.

ಕದ್ರು ಬೇಡಿದ ಅಮೃತವನ್ನು ತರಲು ಗರುಡನು ಒಪ್ಪಿಕೊಳ್ಳುವಿಕೆ.

ಸಾಕು ಭಯಬೇಡವ್ವೆ ತನಗಾ
ಪಾಕಶಾಸನನಲ್ಲ ಮೇಣು ಪಿ
ನಾಕಿ ವಿಷ್ಣು ವಿರಿಂಚಿ ಯಿದಿರೇ ಕೊಡದೊಡಾಸುರರ ।
ಲೋಕವನು ನುಂಗುವೆನು ಸುಧೆ ಸಹಿ
ತೇಕೆ ಕಳವಳ ತಾಯೆ ತನ್ನನು
ನೂಕಿ ನೋಡದುಭುತವ ತೋಱುವೆನೆಂದನಾ ಗರುಡ ॥ ೧೬

ಗರುಡನಿಗೆ ವಿನತೆಯ ಶುಭಾಶಾಸನ.

ಎನಲು ಹರಿಸಿದಳಬಲೆ ಬಲ್ಲಿದ
ನೆನಿಸಿ ಬದುಕೆಂದಾಕೆ ರಕ್ಷೆಯ
ನನುಪಮಗೆ ಕಟ್ಟಿದಳು ಪಕ್ಷಂಗಳನು ರಕ್ಷಿಸಲಿ ।
ಅನಿಲನಪರಾಂಗವನು ಚಂದ್ರಮ
ನನಲಸೀಶಿರವನು ಶರೀರವ
ದನುಜರಿಪು ರಕ್ಷಿಸಲಿ ಸರ್ವವನೆಂದಳಾ ವನಿತೆ ॥ ೧೭

ಮಗನೆ ತಾನನ್ನವರ ಕೃಛ್ರಾ
ದಿಗಳನಾಚರಿಸುತ್ತ ಶಕ್ರಾ
ದಿಗಳನಾ ಋಷಿಗಳನು ಪಿತೃಗಳನಖಿಳದೇವರನು ।
ಮುಗಿದ ಕೈಯಲಿ ಭಜಿಸುವೆನು ಶಾಂ
ತಿಗಳನಭ್ಯರ್ಚಿಸುವೆನು ನೀನು
ಮಿಗಿಲು[1] ಸಾಹಸಿಯಾಗು ಹರಸಿದೆನೆಂದಳಾತ್ಮಜಗೆ ॥ ೧೮

ಆಗ ವಿನತೆಯನ್ನು ಆಹಾರ ಬೇಡುವಿಕೆ.

ಸಸಿನವಿರು ಸಂತವಿರು ಘಡ ಚಿಂ
ತಿಸದಿರೇನರಿದೆಂಬ ಸುರರನು
ಹೊಸೆದು ತಹೆನಮೃತವನು ಸಾಕಿನ್ನದಱ ಮಾತುಗಳ ।

---

[1] ನೀನೆನಗೆ, ಕ. ಖ.

ಹಸಿದೆನಾವುದು ಹೇಱು ನೀ ತನ[1]
ಗಶನ ಕಲ್ಪಿಸು ತೋಱು ಯೆಂದೆನೆ
ನಸುನಗುತ ನುಡಿವಳು ಲತಾಂಗಿ ನಿಜಾತ್ಮಸಂಭವಗೆ ‖ ೧೯

ಸಮುದ್ರಮಧ್ಯದಲ್ಲಿರುವ ಬೇಡರನ್ನು ಭಕ್ಷಿಸೆಂದು
ವಿನತೆಯು ಹೇಳುವಿಕೆ.

ಅದೆ ಸಮುದ್ರದ ಮಧ್ಯದಲಿ ತೋ
ರ್ಪುದು ನಿಶಿಚರರ ಕೇರಿ ನೀ ಹೋ
ಗಿ ದರಲದೆ ಅದೆ ಮಗನೆ ಖಳತದ್ಭವರಸಂಖ್ಯಾತ ।
ರುದರಪೋಷಣಕಹರು[2] ಧರಣೀ
ತ್ರಿದಶರನು ತಿನ್ನದಿರು ಹೋಗೆನ
ಲದನು ಕೇಳುತ ವಿಪ್ರರನು ತಾನಱಿಯನೆಂತೆಂದ ‖ ೨೦

ಅಱಿವೆ ನಾನೆಂತೆನಲು ಕೆಂಡದ
ತೆಱನಹುದು ಗಂಟಲಲಿ ನೀಬಾ
ಯ್ದೆಱೆದು ನುಂಗುತ್ತಿರಲು ಬಂದೊಡೆ ವಿಪ್ರನದಱೊಳಗೆ ।
ಕುಱುಹು ಹೋಗೆಂದೆನಲು ಚರಣದ
ಲೆಱಗಿದನು ಬಲವೆಂದು ಮನದಲಿ
ಮೆಱುಗಬೇಕೆಂದತ್ತಲಂಬರತಳಕೆ ಲಂಘಿಸಿದ ‖ ೨೧

ಹೊರಟು ಬೇಡರನ್ನು ತಿನ್ನುವಿಕೆ.

ರೂಡಿಯುಲ್ಲಾಡಿತ್ತು ಪದಹತಿ
ಗೋಡಿದರು ಖೇಚರರು ಪಕ್ಷವ
ನೀಡಲಿಲ್ಲಂಬರವದೆನಲ್ಕೈದಿದನು ಖಳವರರ ।
ಬೀಡ ಮುತ್ತಿದನೊತ್ತಿದನು ಕಡೆ
ವೀಡ ಕಲಕಲು ಪದರಜವು[3] ತಮ
ಗೂಡೆ ಕವಿದುದು ಕಂಗಳಿದಿರನು ಕಾಣಲರಿದೆನಲು ‖ ೨೨

---

1 ಹೇಱುತನ, ಕ. ಖ.　　2 ಉದರಪೋಷಣಕಹದು, ಕ.　　3 ರಜದ, ಕ.

ಹಾಸಿದನು ತುಟಿಯೊಂದನಿಳೆಗಾ
ಕಾಶಕೊಂಡನು ನೆಗಹಿದನು ಸಲೆ
ಸಾಸಿಗನು ಬಹುಮಾರ್ಗದಿದಿರಲಿ ನಿಂದು ಖಗರಾಜ ।
ಆ ಸುರಾರಿಗಳೇನಿದೇನೋ
ದೇಶವಿಪ್ಲವವೆನುತ ಕವಿದರು
ನಾಶಕಾಲವಿದೆಂದು[1] ಕೈದುವ ಸೆಳೆದು ತವೆತವೆಗೆ ॥ ೨೩

* ಕೆಡಸಿದುದು ಕಂಗಳನು ಕತ್ತಲೆ
ಕಡಿಕಡಿಯುವೀಪಕ್ಷಿತುಂಡವ
ನಡಸಿ ಹೊಕ್ಕದು ಬಾಯದೆಲ್ಲವೆ ಮಾರ್ಗವೆಂದೆನುತ ॥ ೨೪

ಪ್ರೊಡೆ ನಿಷಾದಾಧಿಪರ ಸಹಿತರ
ನೊಡನೊಡನೆ ನುಂಗಿದನು ಹಸಿವಿಗೆ
ಕಡೆಯ ಕಾಣೆನೆನುತ್ತಲವೆಸಾನವನು ಖಳಕುಲದ ।

ಆಗ ವಿನತೆ ಹೇಳಿದಂತೆ ಬ್ರಾಹ್ಮಣನು ಗಂಟಲಲ್ಲಿ ಬಂದು ಸುಡುವಿಕೆ.

ನಡುವೆ ಭೂಸುರನೊರ್ವನಂತಳ
ವಡೆಯೆ ದಾಸಿಯುವೆಳೂರ್ವಳನೆಡೆ
ಬಿಡದೆ ವಿಷಯಾಸಕ್ತನನು ನುಂಗಿದನು ಕಂಡೊಡನೆ ॥ ೨೫

ಕಟ್ಟಿಯೊಡೆದಂದದಲಿ ಬಾಯನು
ದುಷ್ಟಮನದ ನಿಷಾದಬಲ ಕಂ
ಗೆಟ್ಟು ಹೊಕ್ಕದು ಹೊಟಗೆ ಖಳನಿನ್ನೊಬ್ಬನುಟಿಯನೆನೆ ।
ಸುಟ್ಟನೊಬ್ಬನು ಗಂಟಲನು ಹಾ
ಕೆಟ್ಟೆನಾರೋ ವಿಪ್ರನೆನುತವೆ
ದುಷ್ಟಮರ್ದನನಾತನನು ನುಡಿಸಿದನು ತವಕದಲಿ ॥ ೨೬

---

[1] ಕಾರಿಗಳೈದೆ, ಕ. ಖ. * 24ನೇ ಪದ್ಯದಲ್ಲಿ ಪೂರ್ವಾರ್ಧ ಹೋಗಿರುತ್ತದೆ.

ಅವನನ್ನು ವಿಚಾರಿಸಿ ದಾಸಿಯೊಡನೆ ಬಿಡುವಿಕೆ.

ಆರು ಹಾರುವನೈಯು ನಿನಗೀ
ವ್ರೂರಲಿರಲೇತಕೆ ನಿಷಾದಕು
ಮಾರಿ ಹೆಂಡತಿ ತನಗೆ ಲೇಸಾಯ್ತಣ್ಣ ಹೊಱವಡೆನೆ ।
ನಾರಿಸಹಿತಲ್ಲದೆ ವಿನಿರ್ಗಮ
ನೇರದೀಕೆಯನು ಕಾವುದೆನೆ ವಿ[1]
ಚಾರವೇಕಧಿದೈವವಲ್ಲಾ ವಿಪ್ರವರರೆಂದ ॥ ೧೭

ಹೊಱವಡೆನೆ ಹೊಱವಂಟನತ್ತಲು
ನೆಱಗ ಹಿಡಿದಂಗನೆಯನಾ ದ್ವಿಜ
ಪ್ರೊಱಮಡಿಸಿ ಹರಸಿದನು ನೆಱೆ ಬಲವಂತನಾಗೆಂದ ।
ತೆಱದ ಬಾಯನು ಮುಚಿದನು ಬಱೆ
ಕೆಱಗಿ ಭಟನಾ ವಿಪ್ರನಂಘ್ರಿಗೆ
ಕೋಱತೆಯಾಯ್ತಾಹಾರವೆಂದೆನುತ ಪಸರಿಸಿ ಗಱಿಯ ॥ ೧೮

ಆಹಾರಸಾಲದೆ ಕಶ್ಯಪನನ್ನು ಯಾಚಿಸುವಿಕೆ.

ಮತ್ತೆ ಖಗನಲ್ಲಿಂದ ಹಾಯ್ದನು
ತುತ್ತ ತೋಱೆನಗೆನುತ ತಂದೆಯ
ಹತ್ತಿರಕೆ ಹೊಱವಂಟು ನಿಂದಿರೆ ಕಶ್ಯಪನು ನಗುತ ।
ಪುತ್ರ ಬಂದೆ ಯಿದೇನು ಹೇೞು ಮ
ಹೋತ್ತಮನೆ ಹೇಳೆನುತ ನುಡಿಸಿದ
ನುತ್ತಮಾಂಗವ ತಡವಿ ಕಡುಮೋಹದಲಿ ನಂದನನ ॥ ೧೯

ತಾಯಿ ತನಗಾಹಾರವನು ಕೊಡ
ಲಾಯಿತುಪರಾರ್ಧಕ್ಕೆ ಕುಡು ತರು
ವಾಯದೆನಗೆನಲದನು ಕೇಳುತ ಕಶ್ಯಪನು ನಗುತ ।

---

[1] ನೇರದೈಕೈಗಾಯ್ತುದೇಕನೆ ವಿ, ಕ.

ಸಮುದ್ರ ತೀರದಲ್ಲಿರುವ ಗಜಗಚ್ಛಪರನ್ನು ತಿನ್ನಲು ಕಶ್ಯಪನಾಜ್ಞೆ

ಆಯುವಂತನೆ ಕೊಟ್ಟನದಕೋ
ದಾಯುವೆನು ಗಜಕಚ್ಛಪಂಗಳ
ಕಾಯದಾಹಾರವನು ಸಾಗರತಡಿಯಲಿದೆಯೆಂದ ॥ ೩೦

ಆರುಯೋಜನದುದ್ದ ಗಜವೀ
ರಾರುಯೋಜನದ ನೀಳದಿಹನು
ಕೂರುಮನು ಯೋಜನಸಮುದ್ರದ ಶತಗುಣಾಯತವು ।
ಕಾರಣದಲುತ್ಪನ್ನವಾದವು
ವೀರ ನೀನಾ ಪ್ರಾಣಿಗಳನಾ
ಹಾರವನು ಮಾಡೆನಲು ನುಡಿದನು ತಂದೆಗಾ ಗರುಡ ॥ ೩೧

### ಗಜಕಚ್ಛಪಜನ್ಮಕ್ಕೆ ಕಾರಣ.

ತಂದೆ ಹೇಳೆನಗೇನು ಕಾರಣ
ದಿಂದ ಗಜಕಚ್ಛಪರು ಜನಿಸಿದ
ರೆಂದದನು ವಿವರಿಸುವುದೆನೆ ವೃತ್ತಾಂತಸಂಗತಿಯ ।
ಕಂದ ಕೇಳುಪಕಥೆಯನೆಸೆದರು
ಮಂದಮತಿಗಳು ವಿಪ್ರರಿಬ್ಬರು
ಬಂದ ಭವಣೆಗೆಯನ್ನು ವಿಸ್ತರವಾಗಿ ಕೇಳೆಂದ ॥ ೩೨

ಧರೆಯೊಳೊಡಹುಟ್ಟಿದವರಿಬ್ಬರು
ವರವಿಭಾವಸುಸುಪ್ರತೀಕಾ
ಖ್ಯರು ವಿಭಾಗವ ಬೇಡೆ ಹಿರಿಯನನಾ ವಿಭಾವಸುವ ।
ಗುರುನಿರೋಧ ವ್ಯಸನ ಖತಿ ಮ
ತ್ಸರ ಮಮತೆ ಲೋಭಂಗಳೆಂಬಿವ
ತರಳ ನೀನಱಿಯೆ ಯೆಂದನು ತಮ್ಮನನುನೇಱೆ[1] ಜಱಿದು ॥ ೩೩

---

[1] ನೀನದನಱಿಯೆ ಯೆಂದನು ತಮ್ಮನನು, ಕ. ಖ.

ತೊಗಲು ಹರಿದರೆ ವೈಯ್ಯಲಾನೂಣ
ಹೊಗುವವೊಲು ಬೇಹಾವೊಡಾ ದಾ
ಯಿಗರ ಮನವನು ಕೆಡಿಸುವರು ಕುಹಕಿಗಳು ಭೇದದಲಿ ।
ಬಗೆಯೆ ಬಾಂಧವಸಖ್ಯ ಕೆಡುವುದು
ಮುಗುಧ ಯಿಾಮಾತಿಸಿಂದೇನೆನೆ
ಮೊಗದಿಱುಹಿದನು ಸುಪ್ರತೀಕನು ಕೇಳದನು ನಯುದೆ ॥　　೩೪

ಹುರಿಯು ಬಿಡಿಸಿದೊಡಹುದೆ ಬಲುಹೆದೆ
ಮರುಳ ವೊಡಹುಟ್ಟಿದವರೊಂದಾ
ಗಿರದೆ ಬೇಱಾಗಿರ್ದೊಡಹುದು ಮಹಾಘಸಂದೋಹ ।
ಗುರುವಿರೋಧ ವ್ಯಸನಱತಿ ಮ
ತ್ಸರ ಮಮತೆ ಲೋಭಂಗಳಂಬಿವ
ತರಳ ನೀನಱಿತಱಿತು ನಡೆ ಕೂಡಿಹುದು ಲೇಸೆಂದ ॥　　೩೫

ಮದಮುಖನೆ ಗಜವಾಗಿ ಬೀಟೆಂ
ದೊದಱಿ ಶಾಪವನಿತ್ತೊಡಾತನು
ಹದುಳ ಹಾಗಹುದೆನುತ [1] ಕೊಟ್ಟನು ಶಾಪವನು ಮಗುಡೆ ।
ಹ್ರದದ ಕಪನಾಚ್ಛಗೆನುತಲೊಂ
ದುದರದಲಿ ಜನಿಸಿದವರೀಪರಿ
ಯೆದೆಯ ಕಿಚ್ಚನು ಕಳದುಕೊಂಡರು ಮಗನೆ ಕೇಳಂದ ॥　　೩೬

ಅರ್ಥಲೋಭದಲವರು ವಿಗತ
ಸ್ವಾರ್ಥರೆನಿಸಿದರದುನಿಮಿತ್ತದೆ
ಯರ್ಥಲೋಭವನುೞಿವುದಱಿವುಳ್ಳಾ ಮಹಾತ್ಮಕರು ।
ಅರ್ಥಿಸುವೊಡೆಲೆ ಮಗನೆ ಕೇಳದ
ನರ್ಥಕೇ ಕಾರಣವೆದಲ್ಲೈ
ವ್ಯರ್ಥವನು ಮಾಡುವುದು ಬಹಳ ತಪೋವ್ರತವನೆಂದ ॥　　೩೭

1 ನೀನಹುದೆನುತ, ಕ. ಖ.

ಜನಿಸಿದರು ಬಳಿಕವರು ಕೇಳಲೆ
ತನಯ ಘನಗಜಕಚ್ಛಪಾಂಗದ
ಲನುಪಮನೆ ತಾವೊಂದೆಡೆಯಲಾಪೂರ್ವವೈರದಲಿ ।
ವನವ ಹೊಱವಂಟಾಮಹಾಗಜ
ವನಜಕಚ್ಛಪನಿರ್ದ ಮಡುವಿಗೆ
ಕನಲುತ್ತೈತಂದಱಸುವುದು ತಾ ಬೃಂಹಣವ ರಚಿಸಿ ॥ ೩೮

ಕೇಳುತವೆ ಗಜಬೃಂಹಣವ ನಾ
ಕೀಳು ಕಚ್ಛಪವಾ ಹ್ರದದಲೋ
ಲಾಳಸುತ ಕರಚರಣಹತಿಯಲಿ ಜಲಚರವ್ರಜವ ।
ಬೀಳುಹೊಯಿವುತ ಕಮಲವನು ತಾ
ಕೂಳುಗೈವುತ ಕುಮುದನಿಕರವ
ಕಾಲವನು ಕಾಣಿಸುತ ಹೊಱವಡುತಿಹುದು [1] ತತ್ಕ್ಷಣಕೆ ॥ ೩೯

ಮತ್ತಗಜವಾ ಕೂರ್ಮನನು ಕಾ
ಣುತ್ತ ಸೊಂಡಿಲ ಸುತ್ತಿ ದಂತದ
ಲೆತ್ತಿ ಕಾಲಲಿ ತುಳಿದು ಲಾಂಗೂಲಾಗ್ರದಲಿ ಹೊಡೆದು ।
ಮಿತ್ತುವನು ಕಾಣಿಸಲು ನೆರೆಯದೆ
ಕಿತ್ತೊಡದ ಕೋಪದಲಿ ಬಿಡೆ ಹಳ
ಚುತ್ತ ಬೃಂಹಣರವವ ಮಾಡುತ್ತಿಹುದು ಕೇಳಂದ ॥ ೪೦

ಗರುಡನು ಕಶ್ಯಪರು ಕೇಳಲು ತನ್ನ ಕಾರ್ಯವನ್ನು ಹೇಳುವಿಕೆ.

ತಿನ್ನು ಪೋಗವನೆರಡ ನಾಕೊ
ಟ್ಟೆನ್ನುವುದು ಮೇಲುಳ್ಳ ಕಾರ್ಯವ
ನಿನ್ನು ಹೇಳ್ವೆ ಬಂದ [2] ಕಾರಣ ತೀವ್ರ ವೇಗದಲಿ ।
ತನ್ನ ಸಿಂಗವ ಹೇಳು ನೀನೆನೆ

---

[1] ಹೊಱಡುವುದು, ಕ ಖ.   [2] ಬಂದೆಯಿದೇನು, ಕ. ಖ.

ಪನ್ನಗರು ಪೀಯೂಷಕಾಂಕ್ಷೆಯ
ಲೆನ್ನನಟ್ಟಿದರಂಬೆಯನು ಬಿಡಹೇಳಿಸಿದರೆಂದ ‖　　೪೧

ಅಮೃತವನು ತಹೆನಪ್ಪ ನಿಮ್ಮಡಿ
ಮಮತೆಯುಂಟೆಲೆ ತಾಯ ಸೇಟೆ ನಿ
ರ್ಗಮಿತವಾಗಲಿ ತಲೆಯಲಿಡು ಕರತಳವ ನೀನೆನಲು |

**ಕಶ್ಯಪರ ಶುಭಾಶಾಸನ.**

ಅಮಲಹೃದಯನೆ ಜಯಿಸು ಹೋಗಾ
ಅಮರರನು ಸುಖಿಯಾಗು ಹೋಗೆನು
ತಮರಿದನು ಕರತಳವನಂಗದಲಧಿಕಕರುಣದಲಿ ‖　　೪೨

ರಕ್ಷಿಸಲಿ ನಿನ್ನನು ಧರಾಶ್ರೀ
ರಕ್ಷಕನಿಳೆಯು [1] ಜಲನಭಂಗಳು
ರಕ್ಷಿಸಲಿ ರವಿಶಶಿತಾರಾಗ್ರಹನಿಕರವೊಲಿದು |
ರಕ್ಷಿಸಲಿ ಕಮಲಜನು ಮತ್ತಾ
ದಕ್ಷಮುಖವಿಧ್ವಂಸಿ ಗಡ ಸೇಟೆ
ರಕ್ಷಿಸಲಿ ನಿತ್ಯಾತ್ಮನಾರಾಯಣನ ಕರುಣದಲಿ ‖　　೪೩

ಏಳನೆಯ ಸಂಧಿ ಮುಗಿದುದು.

---

1 ರಕ್ಷಕನಿಳೆ, ಕ. ಖ.

# ಎಂಟನೆಯ ಸಂಧಿ.

ಸೂಚನೆ.

ಗಂಡುಗಲಿ ಗಜಕಚ್ಛಪಂಗಳ
ಕೊಂಡು ಹಾಯ್ದನು ವಾಲಖಿಲ್ಯರ
ಮಂಡಲವ ಕೈಗಾಯ್ದು ಖಗಪತಿ ಗಂಧಮಾದನಕೆ ||

ಸರೋವರಕ್ಕೆ ಬಂದ ಗರುಡನಿಗೆ ಗಜಕಚ್ಛಪರ ದರ್ಶನ.

ಕೇಳು ಶೌನಕಮುನಿಪ ಖಗಕುಲ
ಮೌಳಿ ತಾ ನಿಜಜನಕನಂಘ್ರಿಯ
ಬೀಳುಕೊಂಡಭಿನಮಿಸಿ ಹಾಯ್ದನು ತತ್ಸರೋವರಕೆ |
ಶೈಲರಾಜನ ತೆಱದಿ ಮೆಱೆವಾ
ಕೀಟಿ ಗಜಕಚ್ಛಪರನಾಸುವಿ
ಶಾಲತೆಯನೀಕ್ಷಿಸುತ ಮೆಱೆದನು ಹಸಿವೆನಾಗರುಡ || ೧

ಅವುಗಳನ್ನು ಧರಿಸಿ ಅಂತರಿಕ್ಷಮಾರ್ಗದಿಂ ಅಂಬಾತೀರ್ಥಕ್ಕೆ ಖರುವಿಕೆ.

ಎರಡು ಕೈಯ್ಯಲಿ ನೆಗಹಿ ಕೊಂಡನು
ಕರಿಯುನಾಕಚ್ಛಪನನಂಬರ
ಚರರು ಭಾಪೆನೆ ಬೊಬ್ಬಿಱಿದು ಪುಟನೆಗೆದನಂಬರಕೆ |
ಪರಹಿದನು ಪಕ್ಕವನು ದೆಸೆಗಳ
ಜಱಿದು ಧಿಕ್ಕರಿಸಿ ಕರೆದ ಸುಪ್ಪ
ಸರಿಸೆ ಪಕ್ಷಪುಟಪ್ರಭೂತೋದ್ಧಂಡಪವನನಲಿ || ೨

ಕಾಲುಗುರ ಕೊನೆದಾಗಿನಲಿ ಗಿರಿ
ಸೀಳದುದು ಧರೆ ಕುಸಿದುದಾಪಾ
ತಾಳದತ್ತಲು ಕದಡಿದವು ಪದಹತಿಗೆ ಶರಧಿಗಳು ।
ಬೀಱುಕೊಂಡನು ತರಣಿ ತಾರಾ
ಮಾಲೆಗಳ ಕೆದಱಿದನು ಜ್ಯೋತಿಷ
ಡಾಳಿಸಿತು ಜಗದೇಕದೇವರ ವೀರನುರವಣೆಗೆ ॥ ೩

ಎಲ್ಲಿರಿಸಿ ತಾ ತಿಂಬೆನೀಗಜ
ವಲ್ಲಕಚ್ಛಪಗಳನೆನುತ ಖಗ
ವಲ್ಲನಂಬರಮಾರ್ಗದಲಿ ಸಾಗರಸಮೀಪದಲಿ ।
ಸಲ್ಲಲಿತತರುಗಳನು ನೋಡು
ತ್ತಲ್ಲಿ ತನಗೀಡೇನಿದೆನುತವೆ
ನಿಲ್ಲದಲಂಬವೆಂಬ ತೀರ್ಥಕೆ ಬಂದನಾಗರುಣ ॥ ೪

ಆಗ ತದ್ವನಾಂತರದಲ್ಲಿರುವ ಒಂದು ದೊಡ್ಡಮರದ ಧ್ವನಿಕೇಳ
ಬರುವಿಕೆ.

ದೇವವೃಕ್ಷಂಗಳ ಸುಬಹುಪು
ಷ್ಪಾವಳಿಯು ಫಲಗಳಲಿ ಧರಣೀ
ದೇವಸಂತುಷ್ಟಿಯುನು ಮಾಡುತಲದಱೊಳಸೆದಿರಲು ।
ಈ ವಿಪಿನವತಿರಮ್ಯವಿದಱೊಳು
ಜೀವಭಕ್ಷಣೆ ಗೈವೆನೆನುತವೆ
ಪಾವಕಪ್ರತಿಮಾನನೈತಂದನು ವನಾಂತರಕೆ ॥ ೫

ನಡುಗಿದವು ಫಲನಿಕರವವನಿಗೆ
ಕಡಿದೊಣಗಿದವೆವಂಕುರಂಗಳು
ತುಡಿಕೆಗೊಂಡುದು [1] ಪತ್ರಚಯ ಬಾಡಿದವು ತಳಿರುಗಳು ।
ಕಡುಗಿ ಖಗನೈತರಲು ತರುಗಳು

---

1 ತುಡಿಕೆಗೊಂಡವು, ಕ. ಖ.

ನುಡಿದವೆಲೆ ಪುಣ್ಯಾತ್ಮ ನೀನಡಿ
ಯಿಡದಿರೆಮ್ಮಗೆ ಶಕ್ತಿಯಿನಿತಿಲ್ಲೆಂವು ತಮತಮಗೆ ‖ ೬

ಕೇಳು ಹುಯ್ಯಲನತ್ತಲೇ ಖಗ
ಬೀಳುಕೊಂಡನು ಹಲವುವಿಧತರು
ಶೈಲನಿಕರಂಗಳನು ಕಳಕಳದತ್ತಲಂಬುಧಿಯು ।
ಕೂಲವನಗಳನೀಕ್ಷಿಸುತ ಬರೆ
ಕೇಳಬಂದುದು ಮತ್ತೆ ಹೆಮ್ಮರ
ನಾಲಪಿತವಾವೀರವಿಹಗೇಶ್ವರಗೆ ದೂರದಲಿ ‖ ೭

ಆಮರವು ತನಗೆ ಸ್ವಾಗತವನ್ನು ನುಡಿದು ಪ್ರಾರ್ಥಿಸಲಾಗಿ
ಕೂಡುವಿಕೆ.

ತಂದೆ ಬಾರೈ ತನ್ನ ಶಾಖೆಯು
ದೊಂದಿಹುದು ಶತಯೋಜನವು ನೀ
ಬಂದು ಕುಳ್ಳಿಹುದದರ ಮೇಲೆ ನಿರಾಮಯವು ತನಗೆ ।
ಹಿಂದುಗಳಯದಿದನು ಮಹಾಮತಿ
ತಿಂದು ಗಜಕಚ್ಛಪರನಿದರೊಳು
ಮುಂದೆ ನಡೆ ನಿಜಕಾರ್ಯಸಂಗತಿಗೆಂದುದಾ ವೃಕ್ಷ ‖ ೮

ಧರಿಸಲುತ್ತಿಯುಲಿ ಮೇಣ್ ಚರಣ
ಸ್ಪರಶವಾಗಲಿ ಸಾಕು ಘನತರ
ದುರಿತವನು ಪರಿಹರಿಸುವೆನು [1] ತರುಜನ್ಮಸಂಭವದ ।
ಪರಮಪಾವನಮೂರ್ತಿ ಬಾ ಯೆಂ
ದಿರದೆ ಕರೆಯುಲು ಕೇಳುತವೆ ಖಗ
ವರನು ತನಗೊಂದಾಶ್ರಯುವದಾಯ್ತೆನುತ [2] ನಡೆತಂದ ‖ ೯

ಕಂಡನದರ ಚಿತ್ತಾಯೆಯುಲಿ ಕೆಳ
ಗೊಂಡು ಸುಖದಲಿ ವಿಶ್ರಮಿಸಿ ನೆಲೆ

---

1 ಪರಿಹರಿಸುವೆ, ಕ. ಖ. 2 ವಾಯ್ತೆನುತ, ಕ. ಖ.

ಗೊಂಡ ಖಗಮೃಗದೇವಕಿನ್ನರಮರ್ತ್ಯನಿಕರದಲಿ ।
ಅಂತಹೇಂದ್ರನು ನಗುತ ಗಗನದ
ಮಂಡಲದಿ ನಿಱತಂದು ಶಾಖೆಗೆ
ಗಂಡುಗಲಿ ಕುಳ್ಳಿರ್ದನಾ ಕಾಲೂರಿ ಸಾಂಗದಲಿ ॥ ೧೦

ಆಗ ತಾನು ಕುಳಿತ ಶಾಖೆಯು ಮುಱಿಯಲು ಅದರಲ್ಲಿರುವ
ವಾಲಖಿಲ್ಯರನ್ನು ನೋಡಿ ಚಿಂತಿಸುವಿಕೆ.

ಮುಱಿದು ಭೋಂಕೆನಲು ಪ್ರಳಯದ
ಬಱಸಿಡಿಲು ಹೊಡೆದಂತೆ ಚರಣದ
ಸೆಱಗು ಸೋಂಕಲು ಶಾಖೆ ವೀರವಿಹಂಗಮೋತ್ತಮನ ।
ತಿಱುಗಿ ಕಂಡನು ವಾಲಖಿಲ್ಯರು
ತುಱುಗಿ ತಲೆ ಕೆಳಗಾಗಿ ಹೊಸನೇ
ಸಱಿನ ಮಱಿಗಳವೋಲು ಜೋಲುತ್ತಿರಲು ಶಾಖೆಯಲಿ ॥ ೧೧

ಕಿಚ್ಚಿನಲಿ ಬಿದ್ದಂತೆ ಖಗಪತಿ
ಬೆಚ್ಚಿದನು ಬೆದಱಿದನು ಕಾಣುತ
ಸಚ್ಚರಿತರಿವರಾರೊ ಮಾರಿಯದಾಯ್ತಲಾ ತನಗೆ ।
ಕೊಚ್ಚಿದೆನು ತರುಕೊರಳನೆನುತವೆ
ಹೆಚ್ಚಿ ಹಲುಬುತ ಬೀೞಲೀಸದೆ
ಕಚ್ಚಿಕೊಂಡನು ಶಾಖೆಯನು ತುಂಡಾಗ್ರದಲಿ ಗರುಡ ೧೨

ಅಕ್ಕಟಾ ತರುಶಾಖೆಯ [1] ತಾ ಬ
ಚಿಕ್ಕರಿಸಿದೊಡೆ ಶಾಪವು ತನ್ನ [2]
ಮುಕ್ಕುವದಲಾಪರಮಋಷಿಸಾಮರ್ಥ್ಯದಲ್ಲಿದಱ ।
ಇಕ್ಕಿ ಹಕ್ಕೆಯ ಮಾಡಿ ನೆೞಲಲಿ
ಸೊಕ್ಕಿ ಸುಖದಿಂದಿರ್ದವರ ಕೊಲೆ
ಯಕ್ಕು ತನಗೆಂದು ಗರುಡನು [3] ಬಿಸುಸುಯ್ದು ಮನದೊಳಗೆ ॥

1 ಶಾಖೆಯನು, ಕ. ಖ. 2 ಶಾಪಾಗ್ನಿ ತನ್ನನು, ಕ. ಖ. 3 ತನಗೆಂದನು, ಖ. ಕ.

ತಪ್ಪಿಸಿದೆನಡಗಿರ್ದವೆರನೀ
ವಿಪ್ರಕುಲಕಿನ್ನೇನು ಗತಿ ಮತಿ
ತಪ್ಪಿತಾದುದು ಸಾಧಿಸುವರಾರೋ ಶಿವಾ ಯೆನುತ ।

ಏನೂ ತೋರದೆ ಶಾಖೆಯನ್ನು ಕಚ್ಚಿಕೊಂಡು ಅಂತರಿಕ್ಷದಲ್ಲಿ ತಿರಗುವಿಕೆ.

ಉಪ್ಪರಿಸಿದನು ನಭಕೆ ರವಿರಥ
ತಪ್ಪೆ ಗಡೆಯಾಲು ಪಕ್ಷಪುಟದಲಿ
ಸರ್ಪಕುಲಕಾನನಕುಠಾರನು ಸುರರು ಭಾಪೆನಲು ॥ ೧೪

ಇರಿಸುವೆನು ತಾನೆಲ್ಲಿ ತಾಪಸ
ವರರನಿವರನೆನುತ್ತ ಗಗನೇ
ಚರನು ಚಿಂತಿಸಿ ಸುಯ್ದು ತೊಳಲಿದನಖಿಳದಿಕ್ತಟವ ।
ಗಿರಿಗಳೊಡೆದವು ಜಗಗಳಡಕಿಲು
ಜಱಿದು ಬೀಱಲು ಬಗೆದವೆಮರರ
ಗಿರಿ ಗದೆಯು ಹೊತ್ತಂತೆ ತೊಳಲುತ್ತಿರ್ದನಭ್ರದಲಿ ॥ ೧೫

ಇೞುಹಿದೊಡೆ ಕೋಪಿಸುವದೀ ಮುನಿ
ಕುಲವೆನುತ ಗಜಕಚ್ಛಪಂಗಳ
ಕಳೇವರವನು ಕಯ್ಯನಖಮುಖದಗ್ರದಲಿ [1] ಕೋದು ।
ಪ್ರಳಯಮೇಘವ್ರ ಪೈಸರಿಸದಂ
ತಲುಕಲೀಯದೆ ಶಾಖೆಯನು ಖಗ
ಕುಲಶಿರೋಮಣಿ ಕಚ್ಚಿಕೊಂಡೇ ತಿಱುಗಿದನು ಧರೆಯ ॥ ೧೬

ಆಗ ಸುರವುನಿಗಳ ಸ್ತುತಿಯನಂಗೀಕರಿಸಿ ಗಂಧಮಾದನಕ್ಕೆ ಬರುವಿಕೆ.

ಭಾಪು ಭುವನಾಲಂಬ್ಯಪಿಕ್ರಮ
ಭಾಪು ದುಸ್ಸಹಬಲಪರಾಕ್ರಮ

---

[1] ನಖಮುಖಾಗ್ರದಲಿ ಕೊಯ್ದು, ಕ. ಖ.

ಭಾಪು ಪೃಥ್ವೀದೀಪ ಭದ್ರಾಪಚಿತಿಚಿತತೋಷ |
ಭಾಪು ವಿಹಗಾಕಾರ ವಿಶ್ವಾಕ
ಳಾಪ ಜಯ ಜಯ ಜಯತು ಭಳಿರೇ
ಭಾಪೆನುತ ಹೊಗಳುತ್ತಲಿರ್ದುದು [1] ಸಕಲಮುನಿನಿಕರ ‖ ೧೭

ತರುಗಳನು ಮುರಿಯುತ್ತ ಗಿರಿಗಳ
ಶಿರಗಳನು ಕೆಡವುತ್ತ ಗಗನೇ
ಚರರ ಗತಿಗೆಡಿಸುತ್ತ ರವಿಮಂಡಲವನಲೆಯುತ್ತ |
ಇರದೆ ಭುವನಾವಳಿಗಳನು ಮಂ
ದರದ ವೋಲು ಮಥಿಸುತ ಬಂದನು
ಗರುಡದೇವನು ಗಗನಗತಿಯಲಿ ಗಂಧಮಾದನಕೆ ‖ ೧೮

ಕಶ್ಯಪರು ಅದಂ ಕಂಡು ಶಾಖೆಯುಂ ಬಿಡಬೇಡವೆಂದು ಹೇಳುವಿಕೆ.

ಕಂಡನಾಗಿರಿವಿಪಿನದಲಿ ಮಾ
ರ್ತಾಂಡಮಂಡಲದಂತೆ ಬೆಳಗುವ
ಖಂಡತೇಜೋಸಿದ್ಧಿಯು ನಾಕಶ್ಯಪಮಹಾಮುನಿಯ |
ಕಂಡನೀತನನಾತನಂತವ
ದಂಡಧರನಂತಿರೆ ಕರಿಕಮಠ
ತುಂಡನಖಮುಖದೀಪ್ತದಿವ್ಯಶರೀರಿಯನು ಮುನಿಪ ‖ ೧೯

ಏನಿದೇನೈ ತಂದೆ ಮಾಡಿದೆ
ಯೇನನಕಟಕಟಾಯ್ತಲಾ ಕಡು
ಹಾನಿ ಹರಹರ ಮಗನೆ ಕುಲಸಂಕ್ಷಯವ ತಂದುದಲ |
ಭಾನುಸನ್ನಿಭಋಷಿಗಳ ಸ್ಥಿತಿ
ಗೇನು ಕಂಡೆ ಮಹಾತ್ಮ ಬಿಡದಿರು
ಮಾನಸಿಧ ಸುವಿಧಾನದಲಿ ಶಾಖೆಯನು ಹಿಡಿಯೆಂದ ‖ ೨೦

---

1 ಹೊಗಳುತ್ತಿರ್ದನು, ಕ. ಖ.

ಬಿಟ್ಟೋಡುರುಹುವರಿವರು ನಿನ್ನನು
ಸೃಷ್ಟಿವ್ರಜಿಪುದು ಮಗನೆ ಕೋಪಿಸಿ
ದೃಷ್ಟಿಯಲಿ ನೋಡಿದರೆ ಕಮಲಜರುದ್ರರೆಂಬುವರು ।
ಕೆಟ್ಟರದಟಿಂ ಬಿಡದಿರಲೆ ಜಗ
ಜಟ್ಟಿವೀರನೆ ನಿಲ್ಲು ನಿಲ್ಲೆನು
ತುಟ್ಟಿಯುಪ [1] ಸಂಹರಿಸುತಿದ್ದನು ನೋಡಿ ಋಷಿಕುಲವ ॥ ೭೧

ಬಾಲನ ಅಪರಾಧವನ್ನು ಕ್ಷಮಿಸಿ ರಕ್ಷಿಸಬೇಕೆಂದು
ಕಶ್ಯಪರ ಪ್ರಾರ್ಥನೆ

ಮುಗಿದ ಕೈಯಲಿ ನಿಂದು ಮುನಿಪತಿ
ಮಗನ ಜೀವವ ಕಾಯಲೋಸುಗ
ಜಗದಧೀಶಾರಾಧಿತಾಂಘ್ರಿಗಳಿಂಗೆ ತಲೆವಾಗಿ ।
ಬಗೆಯಲಾಗದು ತಂದೆತಾಯ್ಗಳು
ಮಿಗೆಯೆ ಬಾಲಕೃತಾಪರಾಧವ
ಮುಗುಧನನು ಕೈಗಾಯ್ವುದೋಪಿನಲೆಂದನಾಮುನಿಪ ॥ ೭೨

ದೇವ ದೀನರನಾದರಿಸರೆಲೆ
ದೇವ ದೀನದಯಾಪರರಲಾ
ಸೇವಕನ ಗುಣದೋಷವ ನೀವು ಕಾಯಬೇಕೆನುತ ।
ಭಾವಿಸಲಿ ನಿಮ್ಮಂಘ್ರಿಗಳಿಗೆ ಸು
ಭಾವನೆಯನಾಚರಿಸಿ ಬದುಕುವ
ದೇವ ದೀನಗೆ ದಯವ ಮಾಳ್ಪುದು ತಂದೆಗಳಿರೆಂದ ॥ ೭೩

ತಾಯ ಸೆಜೆಯನು ಬಿಡಿಸಲೋಸುಗ
ದಾಯಿಗರ ಮಾತಿನಲಿ ಬಂದನು
ಪೇಯುವಪ ಪೀಯೂಷವನು ತಹಮನದ ಕಡುಹಿನಲಿ ।
ಕಾಯಬೇಹುದು ಸಕಲಜೀವನಿ

---

1 ನಿಲ್ಲನು ತುಟ್ಟಿಪನು, ಕ, ಖ.

ಕಾಯುಸಹಿತವ್ರತಿಗಳಿರೆನುತ [1] ಮ
ಹಾಯಶೋನಿಧಿ ಬೇಡಿಕೊಂಡನು ಬಹಳ ಮುನಿಕುಲವ ॥ ೨೪

ಆಗ ಅವರು ಅಭಯುವಂ ಕೊಡುವಿಕೆ.

ಎಂದೊಡದನಾಲಿಸುತ ಮುನಿಕುಲ
ಕಂದೆ ಬಿದು ಕೈನೆಗಹಿ ಭಯುಬೇ
ಡೆಂದು ಕಾರುಣ್ಯದಲವರು ಶಾಖಾಗ್ರದಿಂದಿಳಿದು ।
ಮುಂದಿರವ ಮಾಡಿದರು ಹಿಮಗಿರಿ
ಕಂದರವನತ್ತಲು ಖಗಾಧಿಪ
ನೊಂದು ಮೃತ್ಯುವ ಗೆಲಿದೆನೆಂದನು ತನ್ನ ಮನದೊಳಗೆ ॥ ೨೫

ಕಶ್ಯಪರಿಂದ ಶಾಖೆಯನ್ನು ಬಿಡುವ ಸ್ಥಳವನ್ನು ತಿಳಿಯುವಿಕೆ.

ಬಿಡುವೆನೀಶಾಖೆಯನು ತಾನಾ
ವೆಡೆಯುಲಿದಿರೊಳು ಬಿಡಲು ವಿಪ್ರರು
ಮಡಿವರೆನುತಾಬಾಲ ಶಾಖೆಯನೊಯ್ಯನೋಸರಿಸಿ ।
ನುಡಿದನಾವೆಡೆ ಕೊಂಬನಿಡುಕುವೆ
ನಡೆಯು ಹೇಳೆನೆ ಮಗನ ಮಾತನು
ಕಡುಕರುಣಿ ಕೇಳುತ್ತ ಮಗುಳಿಂತೆಂದನೊಲವಿನಲಿ ॥ ೨೬

ಪ್ರಾಣಬಾಧೆಗಳಾಗದೆಡೆಯುನು
ಕಾಣೆ ನಾನೆಲೆ ಮಗನೆ ತುಹಿನ
ಕ್ಷೋಣಿಧರದಿಂದಾಚೆಯುಲಿ ಹಿಮಸುರಿವ ಬಾಧೆಯುಲಿ ।
ಪ್ರಾಣಿಮಾತ್ರವನುಳುಹ ಗಿರಿತಟ
ಹೂಣಿಗನೆ ಹೋಗಲರಿದು ವಂಶ
ಕ್ಷೋಣಿವೇತ್ರಪರೀತವದು ತಾವೆಹುದು ಕೇಳೆಂದ ॥ ೨೭

---

1 ಸಹಿತ ವರ್ತಿಗಳೆನುತ, ಖ, ಕ.

ಆಪ್ರಕಾರ ಹಿಮಗಿರಿಯ ಪಾರ್ಶ್ವದ ಗಿರಿಯಲ್ಲಿ ಶಾಖೆಯಂ ಬಿಸುಟು
ಗಜಕಚ್ಛಪಂಗಳನ್ನು ಭಕ್ಷಿಸುವಿಕೆ.

ತಿನ್ನು ನೀನದಱೊಳಗೆ ಹಿಡಿದುದ
ನೆನ್ನ ರಸ ಹೋಗೆನಲು ಕಶ್ಯಪ
ನುನ್ನತಾಂಘ್ರಿಗೆ ನಮಿಸಿ ನೀ ಗತಿಯೆನುತ ಬೀಳ್ಕೊಂಡ ।
ಹೊನ್ನಬಣ್ಣದ ಶಾಖೆ ಕಚ್ಛಪ
ಮನ್ನಣೆಯ ಗಜ ಸಹಿತ ಹಾಯ್ದನು
ದುನ್ನಿರೀಕ್ಷಣವೆನಿಪ ಗಿರಿಗೆ ಮನೋನುರಾಗದಲಿ ॥ ೬೮

ಗಂಡುಗಲಿ ಗಗನಾಂಗಣಕೆ ಬ್ರ
ಹ್ಮಾಂಡ ಗಱಿ ಹೊತ್ತಂತೆ ಹಾಯ್ದು
ದ್ದಂಡಪಕ್ಷಪುಟಪ್ರಹರದೆತಪನನ [1] ರಥವೊಡೆಯೆ ।
ಚಂಡವಿಕ್ರಮ ನೈದಿದನು ಕಡಿ
ಖಂಡವನು ಮಾಡುತ್ತ ತರುಗಳ
ತಂಡವನು ಸುಕ್ಷಿಪ್ರ [2] ಹಿಮಗಿರಿಪಾರ್ಶ್ವದಾಗಿರಿಗೆ ॥ ೬೯

ಬಿಸುಟನದಱೊಳು ಶಾಖೆಯನು ಧರೆ
ಕುಸಿಯೆ ಹೆಮ್ಮರದ ಕೋಟಿ ಮುಡಿಯೆ
ಮಸಗಿ ಬಱಸಿಡಿಲೆಱಗಿದಂತಾಯ್ತು ಮಹಾರಭಸ ।
ಬಸುಱ ಬಿಚ್ಚಿ ದನೆರಡಱಂಗದ
ಬಿಸಿರಕುತ ವನದೊಳಗೆ ಕಡಲಿಡೆ
ಮುಸುಡನೂಱಿದನಾ ಮಹಾಗಜಕಚ್ಛಪಂಗಳಿಗೆ ॥ ೭೦

ಪಳ್ಳಿಸಿದನಂಗವನು ರಕುತದ
ಪಳ್ಳವನು ಸೇದಿದನು ಬಾಯ್ದೆಱೆ
ದಳ್ಳಿ ಹಿಗ್ಗಲು ಮಾಂಸರಾಶಿಯನಗಿದನದ ಬಗಿದು ।

[1] ಪ್ರಹರದಲಿನನ, ಕ. ಖ. [2] ತಂಡವನು ಕ್ಷಿಪ್ರದೆ, ಕ. ಖ.

ಬಲ್ಲಹನು ತೇಗಿದನು ತಾನದ
ನೆಲ್ಲನಿತು ಹೊಙಗುಙಯುದಂತಿರೆ
ಯೆಲ್ಲವನು ಜಠರೀಕರಿಸಿ ನಸು ಮಲಗಿದನು ಗರುಡ ॥ ೩೧

ಆಹಾರದಿಂದ ಕರ್ತವ್ಯಕಾರ್ಯದಲ್ಲಿ ಉತ್ಸಾಹಪಡುವಿಕೆ.

ತಂದೆನಾಗಳ ಸುಧೆಯನಮರರ
ವೃಂದವನು ತಾ ಗೆಲಿದೆನಿನ್ನೇ
ನಿಂದುಧರನಡ್ಡೈಸಿದರೆ ಬಿಡುವೆನೆ ಜಗತ್ತ್ರಯವ ।
ಒಂದು ನಿಮಿಷದೊಳರಸುವೆನು ಘಡ
ಮಂದರ ಮಲವೃದೆ ಝುಷಾವಳಿಗೆ
ಯೆಂದೆನುಙ ದಾಟವನು ಬಹಳಮನೋರಥಾಂಬುಧಿಯ ॥ ೩೨

ಗೆಲಿದೆನೆಂದುಪರಿಶ್ರಮವನೊಡ
ಲೊಳಗಣುರಿಯನು ನಂದಿಸಿದೆನೆಂ
ದೊಲಿದು ತನುವನು ಹೊಳ್ಳಿಸಿದನನುಭವಿಸಿದಾಯಸವ ।
ಹಲವುಮಾತೇಕಾ ಮಹಾಮುನಿ
ಕುಲದ ಕೋಪಾಗ್ನಿಯುಲಿ ತಪ್ಪಿಸಿ
ಸಲಹಿದನು ಪಿತನೆನುತ ಪೊಂಪುಳಿಯಾದನಾ ಗರುಡ ॥ ೩೩

ಫಲಕಥನ

ಇದು ಸಕಲಲೋಕೈಕಪಾವನ
ವಿದು ಸಕಲಪುರುಷಾರ್ಥಸಾಧನ
ವಿದು ಸದಾಯುಃಕೀರ್ತಿಬಲವಿಕ್ರಮವಿವರ್ಧನವು ।
ಇದನೊಲಿದು ಕೀರ್ತಿಸುವ ಕೇಳುವ
ಸದುಹೃದಯರನು ರಕ್ಷಿಸುವನಾ
ಪದುಮವೃಶ ನಿತ್ಯಾತ್ಮನೀವನಭೀಷ್ಟಸಂಪದವ ॥ ೩೪

ಎಂಟನೆಯ ಸಂಧಿ ಮುಗಿದುದು.

# ಒಂಬತ್ತನೆಯ ಸಂಧಿ.

ಸೂಚನೆ.

ರಾಯ ಮುನಿಕುಲಮಂಡನನು ರಿಪು
ರಾಯಖಂಡನನಮೃತವನು ಸುರ
ರಾಯ ರಾಯರ ಸದೆದು ಕೊಂಡನಖಂಡಬಲವೆನಧಿ ||

ಅಮೃತಾಹರಣಾರ್ಥವಾಗಿ ಗರುಡನು ಹಾರುವಿಕೆ.

ಕೇಳು ಶೌನಕ ಗರುಡನಾವರ
ಶೈಲದಲಿ ಗಜಕಚ್ಛಪಂಗಳ
ಮೂಲಶಾಪಪ್ರಾಪ್ತಜನ್ಮವೆನದನು [1] ಪರಿಹರಿಸಿ |
ಬೀಳುಕೊಟ್ಟನು ಸದ್ಗತಿಗೆ ಸುರ
ಪಾಲಲೋಕವನೆಯ್ದಲೆಂದು
ಬ್ಬಾಳತನದಲಿ ಹೊಯ್ದು ಬೊಬ್ಬಿಱಿದಭ್ರಮಂಡಲಕೆ || ೧

ಆಗ ಸುರಲೋಕದಲ್ಲಿ ಚಿಂತಾಕರವಾದ ಅಪಶಕುನಗಳು.

ಬರುತಿರಲು ಸುರಲೋಕದಲಿ ಮೋ
ಹರಿಸಿದುದಪಶಕುನವ್ರಜ ದಿಕ್ಪಾ
ಲರ ಮಹಾಮಂದಿರಗಳಲಿ ಸುರಪತಿಯ ಸದನದಲಿ
ಬಿರಿದುವಿಳ ಶಸ್ತ್ರಾಸ್ತ್ರನಿಕರದ
ಲುರಿ ನೆಗೆದುದೆಡದಲ್ಲಿ ಗಾತ್ರ
ಸ್ಫುರಣವಾದುದು ಕಾದುವಾನಾಕಾಸಿಧಾರೆಗಳು || ೨

[1] ಜನ್ಮವದನು, ಕ. ಖ.

ಹಳಚಿದವು ದಿವ್ಯಾಸ್ತ್ರತತಿ ತ
ಪ್ಪಿಳಗವಾವರುಣಯುಮಪವನ
ಜ್ವಲನಧನದೇಶಾನಸುರಪಮರುದಶ್ವಿಗಣಪ ।
ಜ್ವಲಿತಬಹಳಜ್ವಾಲೆಯುಲಿ ದಿ
ಗ್ವಳಯಧೂಮೋದ್ಧತಘನಮಂ
ಡಲಸಮೂಹ್ಯತವಾಯ್ತಲಾ ನಿಮಿಷಾರ್ಧಮಾತ್ರದಲಿ ॥ ೩

ಬಣಗಿದವು ತಾರಕೆಗಳುದಕದ
ಡೊಣೆಗಳಾರಿದವರಿಕದಂಬರ
ಮಣಿಗೆ ಮೈಲಿಗೆ ಯಾಯ್ತು ಬಿದ್ದುದು ಪೀಠವವನಿಯುಲಿ ।
ಮಣಿಮಕುಟ ಜಾಱಿದುದು ತನು ಭೂ
ಷಣಗಳುಡುಗಿದುವಾರಿ ತೀರದ
ತೃಣಗಳೂಣಗಿದವೇನನೆಂಬೆನು ಸುರರ ದುಸ್ಸ್ಥಿತಿಯ ॥ ೪

ನೆತ್ತರಿನ ಮಳೆಗಱೆದುದಂಬರ
ಮತ್ತೆ ಮೇಘವ ಕಾಣದಗಲಕೆ
ಕೆತ್ತುದಂಧತಮಿಸ್ರವಿದಿರಿಕ್ಕೆಯುಲಿ ಸುರರೊಡಲ ।
ಹೊತ್ತಿದುದು ದೆಸೆದೆಸೆಗೆ ಮೊಱೆದುದು
ಮೊತ್ತದುಲ್ಕಾಪಾತವದಿತಿಯ
ಚಿತ್ತ ಚಂಚಲವಾಯ್ತು ಕಂಡನು ಶಕ್ರನಾಹದನ ॥ ೫

ಇಂದ್ರನು ಬೃಹಸ್ಪತ್ಯಾಚಾರ್ಯ್ಯರಂ ಕರೆಸಿ ಯೋಚಿಸುವಿಕೆ.

ನಡುಸದನದೇನೇನು ಕಾರಣ
ಗಡಣದವೆಶಕುನಂಗಳಾರಿಗೆ
ತೊಡಕಹುದೊ ಕಲ್ಪಾಂತಕಾಲಪ್ರಳಯದಂತಿದೆಲ ।
ಕಡುಗಿ ಕಾದುವರಿಲ್ಲ ದೈತ್ಯರ
ನುಡಿಯುನಱಿಯೆನೆನುತ್ತ ಸುರಸಭೆ
ಯೊಡನೆ ಬರಲೈತಂದು ಬೆಸಗೊಂಡನು ಬೃಹಸ್ಪತಿಯ ॥ ೬

ಏನಿದೇನ್ಯೈ ತಂದೆ ಬಂದುದು
ಹಾನಿ ಯಾರಿಗೆ ನಿಮ್ಮಡಿಗಳದ
ನೇನ ಕಾಣಿರೆ ಕಡುಗುವೃತ್ಪಾತಂಗಳುರವಣೆಯು ।
ಏನು ಕಾರಣ ವಿದಕೆ ಕಾಣೆನು
ದಾನವರದಾಹವಕೆ ಬಾಹರಿ
ದೇನೆನಲು ಮನದೊಳಗೆ ನಿಶ್ಚಯಿಸುತ್ತ ಗುರು ನುಡಿದ ॥ ೭

ಅಱಿತೆನಾನೆಲೆ ಮಗನೆ ಹಾನಿಯು
ಹೊರಿಗೆ ನಿಮ್ಮಲಿ ನೀನು ಮಾಡಿದ
ದುರಿತಫಲವಿದು ವಾಲಖಿಲ್ಯಮಹಾಮುನೀಶ್ವರರ ।
ಅಱಿಯದಂದಾಕ್ರಮಿಸಿದಫವಿದು
ಬಱಿದೆ ಹೋಹುದೆ ಕಂದ ಬಂದುದು
ಬಱಿಯು ಮಾತೇಕಟಿವು ನಿಮಗೆಂದನು ಸುರಾಚಾರ್ಯ ॥ ೮

ತನುಜ ಕೇಳಾ ಕಶ್ಯಪನ ವರ
ತನಯು ತಾ ಬಂದಿರ್ಪ್ಪನು [1] ಗರುಡ
ನು ನವಮಹಾಬಲವೀರಮಹಾಗುಣಸಮನ್ವಿತನು [2] ।
ದನುಜಮನುಜಭುಜಂಗವೀರರ
ನೆನೆಯುನಱಿ ಯಾಹವದ ಕೊಂಡೊ
ಯ್ವನು ಮಹಾಮೃತಭಾಂಡವನು ಸಂದೇಹವಿಲ್ಲೆಂದ ॥ ೯

ಪರಿಹರಿಸುವೊಡೆ ಭಾಳನೇತ್ರಂ
ಗರಿದು ಜನನಿಯು ಸೆಱೆಯು ಬಿಡಿಸಲು
ನಿರುತ ಮಾಡಿದ ಭಾಷೆ ತಹೆನಮೃತವನು ತಾನೆಂದು ।
ಉರಗಪತಿಗಳನದಟಿನಲಿ ಗೆ
ಲ್ದರೆ ಪರಾಕ್ರಮವಲ್ಲ ತಾನದ
ಭರಿತವಾಗಿಯೆ ಮಾಡುವನು ಗೆಲೆ ಮಗನೆ ಹೋಗೆಂದ ॥ ೧೦

---

1 ಬಂದಿಹನು, ಕ. ಖ. 2 ವಿಕ್ರಮಗುಣಮಹಾನ್ವಿತನು, ಕ. ಖ.

ಗರುಡನು ಅಜೇಯನೆಂದು ತಿಳಿದು ದಿಕ್ಪಾಲರನ್ನು ಬೆಸಸುವಿಕೆ.

ಎನೆ ಹಸಾದ ಭವತ್ಕೃಪಾಲೋ
ಕನಬಲವುಂಟೆನಗೆ ಗರುಡಗಿರು
ಡನನು ತಾ ಕಾಣೆನು ಫಡಫಡ ಯೆನುತ್ತ ಬೀಟ್ಕೊಂಡು ।
ಅನಿಲ ಯಮ ನೈಋತ್ಯ ವರುಣನು
ಧನಪವಾಯುಮಹೇಶರೆಂಬವ
ರನು ಕರೆದು ಬೆಸಸಿದನು ದೆಸೆದೆಸೆಗಿರದೆ ದಿಗಧಿಪರ ॥ ೧೧

ಬೆಸಸಿದನು ಬಲವೀರ್ಯಯುಕ್ತರ
ವಸುಗಳನು ರುದ್ರರನು ಸೂರ್ಯರ
ನಸಮಬಲವಿಕ್ರಮರ ವೀರವಮರುತರನಶ್ವಿಗಳ ।
ಹೆಸರ ವಿವರವನಾಮರುದ್ಗಣ
ವಿಸರವನು ಮುಂಕೊಂಡು ಘನಪಾ
ರುಷಪರಾಕ್ರಮಯುಕ್ತರನು ವಿಶ್ವಾಮರೋತ್ತಮರ ॥ ೧೭

ಬಲ್ಲಿದನು ಗಡ ಗರುಡನೆಂಬವ
ನೆಲ್ಲರಿಗೆ ಬಲವೀರ್ಯವಿತರಣ
ವುಳ್ಳವನು ಗಡ ಗೆಲಿದು ನಮ್ಮನು ವಿಹಗನಮೃತವನು ।
ಕೊಳ್ಳದಿರನೇಳದವ [1] ಮಾಡದೆ
ಕಳ್ಳನಯ್ತರುವೆಲ್ಲವನು [2] ಕೈ
ಕೊಳ್ಳಿ ಹೊಗಲೀಸದೆ ಮಹಾಮೃತಮಂದಿರವನೆಂದ ॥ ೧೩

ಹೊಕ್ಕು ಹೊಱವಡುವಾತನಾರಿದ
ನೆಕ್ಕತುಳದಲಿ ದೈತ್ಯದಾನವ
ರೊಕ್ಕಲಿಸುವರು ಪಡೆಯಲಮೃತವನಾಪವಾಗ್ರನಲಿ ।
ಲೆಕ್ಕಿಸುವರೇ ವಿಹಗಗಿಹಗನ
ವಿಕ್ಕಡಿಯ ಮಾಡುವೆನು ವಜ್ರದ
ಲಿಕ್ಕಿ ನೀವಿದಕಂಜಬೇಡಾನಿಹೆನು ಹೋಗೆಂದ ॥ ೧೪

1 ನೇಳಿಲವ, ಕ. 2 ನೈತರನೆಲ್ಲವನು, ಕ. ಖ.

ಮಸೆಸು ಮಸೆಸಾಯುಧವನಸ್ತ್ರ
ಪ್ರಸರಗಳ ಬೀಯ್ಯಗವ ತೆಗೆಸಾ
ಯುಸವಮುಸಲಮುಸುಂಡಿಮುದ್ಗರತೋಮರಂಗಳನು ।
ಎಸೆವ ಶೂಲಕೃಪಾಣಪಟ್ಟಿಶ
ವಿಸರವನು ದಿವ್ಯಾಸ್ತ್ರಧಾರಾ
ಪ್ರಸರವನು ಪರಿಭಾವಿಸೆಂದನು ಸಾರಥಿಗೆ ಶಕ್ರ ॥ ೧೫

ಮಾಡಿ ಸುವಿಧಾನವನು ಸುಧೆಯನು
ಕೂಡೆ ಕಾದಿಪುದಸ್ತ್ರಶಸ್ತ್ರದ
ಗೂಡುಬಲೆಗಳ ನೋಡಿ ಸಬಳಕಠಾರಿಕಕ್ಕಡಿಯ ।
ಮೂಡಿಗೆಯ ತಲೆವೊನೆಯ ನೀಡಿ ವಿ
ಭಾಡಿಸಹಿತನ ಶಿರವನೆಸಕಲಿ
ಮಾಡಿ ಕೆಲಬಲವಾಗಿ ತೊಲಗಿಸಿ ಯೆಂದನಾ ಯಿಂದ್ರ ॥ ೧೬

ಯುದ್ಧಕ್ಕೋಸ್ಕರ ಸನ್ನದ್ಧರಾಗುವಿಕೆ.

ಎಂದು ಕಾಹನು ಹೇಳಿ ತಾನೇ
ನಿಂದ ಸುರರಲಿ [1] ತುಡುಕಿ ವಜ್ರವ
ನಿಂದ್ರನಮರರು ಭಾಪೆನಲು ಮಂಡಿಸಿ ಮದೇಭದಲಿ ।
ವಂದಿಗಳ ಮಾಗಧರ ಕಳಕಳ
ವಂದವಡೆದ ಮಹಾಮೃದಂಗದ
ದುಂದುಭಿಯ ಕಹಳೆಗಳ ರವವಾವರಿಸೆ ದಿಕ್ತಟವ ॥ ೧೭

ಆಗ ಗರುಡಾಗಮನವನ್ನು ನಿರೀಕ್ಷಿಸುತ್ತಿರಲು ಗರುಡನ ಬರುವಿಕೆ.

ಬಂದೊಡಪುದಾಹವಕೆ ಖಗಪತಿ
ನಿಂದನಾದೊಡೆ ಬಲ್ಲಿದನು ಗಡ
ಚಂದ್ರಮೌಳಿವಿರಿಂಚಿವಿಷ್ಣುಗಳೆಂಬವರು ಮೋಣ್ಣೇ ।

1 ನಿಂದ ದಿವಿಜರಲಿ, ಕ. ಖ.

ಣ್ಬಂದು [1] ನೋಡಲಿ ಬರಲಿ ಶಿಖಿಯನು
ಕಂದೆಱೆದು ಹೋಗುವದೆ ಶಲಭವ
ದೆಂದೆನುತ ಗರ್ಜಿಸುತಲಿರ್ದುದು ಕೂಡೆ ಸುರನಿವಹ ॥ ೧೮

ಮಿತ್ತುವಿಗೆ ಹೊಗಲಱಿದು ಹೊಗುವೊಡೆ
ಯೆತ್ತಣದು ತಾ ವಿಹಗನರಗಿನ
ಪುತ್ತಳಿಯು ಪರಿಭವಿಸಲಳವೇ ಪಾವಕನ ಹೊಳಲ ।
ಮತ್ತೆ ನೋಡುವೆವೈ ಸಲೆ ಯೆನು
ತ್ತಿತ್ತ ಕೆಂಪೊತ್ತಿದುದು ನಭವನು
ಕೆತ್ತವೊಲು ತಾ ಕಾಣಬಂದುದು ಖಗನ ತನುಕಾಂತಿ ॥ ೧೯

ಬೀಸಿದುದು ಬಿಱುಗಾಳಿ *ತೆಗೆದಾ
ಕಾಶಚಾರಿಗಳೊಡಲಿನುರಿಯುರ
ಗಾಶನನ ಪಕ್ಷಪ್ರಭೂತೋದ್ದಂಡಪವನನಲಿ ॥
ಸೂಸಿದುದು ಕೆಂದೂಳಿ ದೆಸೆಗಳ
ಮೂಸಿದುದು ಸುರರೆದೆಯ ಧೈರ್ಯವ
ಕೀಸಿದುದು ತಡಪಿಡುತ ಕಂಡುದು ಖಗಪತಿಯ ಬರವ ॥ ೨೦

ಮಂದರದ ಮಹಗಿರಿಗ ಗಱಿಗಳು
ಬಂದವೊಲು ಕೃತಪೂರ್ವಕಾಲದ
ಲಿಂದ್ರನುಱೆ ಧಾಳಿಯಿಟ್ಟನೊ ಶೈಲಗಳ ರಾಜಿಗೆನೆ ।
ಬಂದನಮರಾವತಿಗೆ ವಿನತಾ
ನಂದನನು ನತಜನರ ಹೃದಯಾ
ನಂದನನು ರಿಪುಕುಲಭಯಂಕರಮೂರ್ತಿಯುರವಣಿಸಿ ॥ ೨೧

ಇಂದ್ರನ ಬರುವಿಕೆ.

ರೂಢಿಗತಿಯಾಯ್ತಮರರಿಗೆ ನೆಱೆ
ಗಾಢವಿಕ್ರಮದಾರುಬಟೆಗಳ

[1] ವೇಣ್ ಬಂದು, ಕ. ಖ.

ಪಾರ್ಥಿಯನು ನೋಡಿ ತೊಳತೊಳಗುವಲೋಕಪಾಲಕರ ।
ಗಾಢವಾಯ್ತಿನ್ನೇನು ನಿಮ್ಮನಿ
ರೂಢಿಯಿದು ತಗೆ ಮತ್ತೆ ಹಸ್ತಾ
ರೂಢಸಿಪೆನಾರನುತ ಬಂದನು ಹೊಱಗೆ ಸುರಪತಿಯು ॥ ೨೦

ಇಂದ್ರನ ಸ್ಪರ್ಧಾವಚನವು, ಉಭಯರ ಪರಾಕ್ರಮವು.

ಕಂಡನೀತನನಾತನೇನ್ನೈ
ಚಂಡವಿಕ್ರಮ ಬಂದೆ ಸುಧೆಯನು
ಕೊಂಡು ಹೋಹಭಿಲಾಷೆಯಲಿ ಕೈಯದೆಯಲಿರಿಸಿದೆಲ ।
ಪುಂಡರೀಕಾಸನನ ಸೃಷ್ಟಿಗೆ
ಗಂಡುಗಲಿ ನೀನೊಡೆಯನೊಬ್ಬನೆ
ಕೊಂಡು ಹೋಗಾ ಪಡೆ ನಿರೀಕ್ಷಿಸು ನಿಲ್ಲು ನೀನೆಂದ ॥ ೨೧

ನಿಂದಸಿದೆ ಕೊಳ್ಳೆನುತ ಬಾಣದ
ವೃಂದವೆನು ಸೈಗಱೆವನಂದು ಪು
ರಂದರನು ಸಂಪೂರ್ಣಕೋಪಾಟೋಪದಲಿ ಜಱಿದು ।
ಮುಂದು ಗೆಡಿಸಿದನಕಟಕಟ ತಾ
ನಿಂದ್ರನಲ್ಲಾ ಯೆನುತ ಬಹ ಶರ
ವೃಂದವನು ತೂಱಿದನು ಪಕ್ಷಪುಟಾಗ್ರದಲಿ ಗರುಡ ॥ ೨೨

ತೋಱು ತೋಱುನ್ನೊಮ್ಮೆ ತೋಱಿನು
ತೇಱಿಸಿದ ರೋಷದಲಿ ಕಡು ಕಾ
ಹೇಱಿ ಕಂಗಳಸಮರಪತಿ ದಿವ್ಯಾಸ್ತ್ರಸಂತತಿಯ ।
ತೋಱಿದನು ಖಗಪತಿಗೆ ಬಱು ಬಿಱು
ಕಾಱಸಹೆಯೋ ಯೆನುತ ಗಗನಕೆ
ನಾಱಿಸಿದನಿನಿತುವನು ಬಾಯಲಿ ಕಚ್ಚಿ ಮುಱಿಮುಱಿದು ॥ ೨೩

ಘಡ ತೊಲಗು ತೊಲಗಸ್ತ್ರಶಸ್ತ್ರದ
ತೊಡಕು ತನಗೇಕ ತೆಗೆ ತಗೆಯೆನು

ತಡಸಿ ಪಕ್ಷಾಗ್ರದಲಿ ಬೀಸಿದನು ಸಲೆ ಸುರಪತಿಯ ||
ಕೆಡಹಿ ಪ್ರಾಕಾರವನು ಬಾಗಿಲ
ನೊಡೆದು ಪೊಕ್ಕನು ಲೋಕಪಾಲರ
ನೊಡೆತುಳಿದು ಕಲಕಿದನು ವೊಂದೇನಿಮಿಷಮಾತ್ರದಲಿ || ೭೬

ಹೊಕ್ಕನೋ ಖಗನಕಟದಟರನು
ಮಿಕ್ಕನೋ ಕೈಕೊಳ್ಳು ಕೊಳ್ಳನು
ತೆಕ್ಕಟಿಗನನು ಬೀಳುಹೊಯ್ಸುಬಳದಲಿ ಹೊಯ್ಯೆನುತ |
ಕಕ್ಕಡೆಯು ಕಡಿ ತಲೆಯು ಸಬಳದ
ಚಕ್ರಮುಸಲಮುಸುಂಡಿಮುದ್ಗರ
ದುಕ್ಕುಹಿಡಿಗಳ ಗಡಣದಲಿ ಮುಸುಕಿದುದು ಸುರನಿಕರ || ೭೭

ಕೈದುವಿನ ಮಟೆಗಳನು ಪಕ್ಷದ
ಲೈದೆ ಹೊಯಬೀಸಿದನು ನಖದಲಿ
ಕೊಯ್ದು ಬೀಸಾಡಿದನು ಗಜರಥತುರಗಪಜ್ಜೆಗಳ |
ಭೇದಿಸಿದನತಿಬಲರ ತುಂಡಪ
ಲೂದಿದನು ಕೆಲಬಲದ ಸುಭಟರ
ಹಾದಿಯಲಿ ಹರಹಿದನು ನೆರಹಿದನಂತಕನ ಪುರದಿ || ೭೮

ಕೆದಱಿದನು ಕೆಂದೂಳಿಯನು ಪ
ಕ್ಷದಲಿ ಕಾಲಲಿ ಕಾಣಲರಿದಾ
ಕದನದಂಗವನೆನಲು ಕತ್ತಲೆ ಕೆತ್ತು ದಂಬಿಂದ |
ಕದನಗಲಿಗಳು ಖಗನೆನುತ ಕಾ
ದಿದರು ತಮ್ಮೊಳಗೊಬ್ಬರೊಬ್ಬರು
ಅದಟರಿಱಿದರು ಕಾಣದಾಖಗಪತಿಯ ವಿಗ್ರಹವ || ೭೯

ಇಂದ್ರನ ರಥವನ್ನು ಆವರಿಸಿದ ಧೂಳಿಯನ್ನು ವಾಯು ತೊಲಗಿಸುವಿಕೆ.

ಕಂಡನದನಾಕೊಳುಗುಳವನಾ
ಖಂಡಲನು ತನ್ನಯ ರಥಾಗ್ರದ
ಮಂಡಲಕೆ ಕೆಂದೂಳಿ ಕವಿದುದು ಕೆಟ್ಟೆನಾಹವವ |

ಕಂಡು ಕಾದುವರಿಲ್ಲ ಕಲಿಗಳು
ಕೊಂಡನೋ ಖಗನಮೃತವೆನು ತರೆ
ಚಂಡಮಾರುತನಾದನೆಂದನು ಮೋಹರವ ನೋಡಿ ॥ ೩೦

ಜೇಯು ಬೆಸನೇನೆನುತ ಬಂದನು
ವಾಯು ತೆಗಸಾಕತ್ತಲೆಯು ಪೂ
ರಾಯವಾದೀರಜದ ರಾಶಿಯು ಬೇಗ ಮಾಡೆನಲು ।
ಬಾಯು ಮುಚ್ಚುವ ಮುನ್ನ ಮೋಹರ
ವಾಯೆನಲು ಧೂಳೀಪಟಲವನು
ಬೀಯ ಮಾಡಿದನೆಲ್ಲವನು ಬೀಸಾಡಿ ದೆಸೆದೆಸೆಗೆ ॥ ೩೧

ಬಳಿಕ ಯುದ್ಧಾರಂಭ.

ಮತ್ತೆ ಮೋಹರಿಸಿತ್ತು ಸುರಬಲ
ವೆತ್ತ ವೆಣ್ದೆಸೆ [1] ಯೆತ್ತಲುರುಬುವ
ದೆತ್ತಲುಂ ವಿಹಗಪತಿ ತಾನೆತ್ತಣದದಿಂತೆನಲು [2] ।
ಮುತ್ತಿ ಮುಸುಕಿದರಸ್ತ್ರಶಸ್ತ್ರವ
ಮತ್ತಿದರು ಮೈನೆರೆಯದೆನೆ ಪೊಟ
ಗುತ್ತ ಮೇಘವ್ರಾತ ಗಿರಿಯನು ಮುಸುಕುವಂದದಲಿ ॥ ೩೨

ಹಾಯಿಸಿದನನಿತಸ್ತ್ರಶಸ್ತ್ರವ
ನೇಯಿಸಿದನಂಬರಕೆ ಧರಣಿಗೆ
ಮಾಯಿದನು ತೂಯಿದನು ಮಿಗೆ ತನ್ನೆರಡು ಪಕ್ಕದಲಿ ।
ತೋಯಿದನು ವಿಕ್ರಮದ ಕಡುಹನು
ಬೀಯಿದನು ಭಯರಸದ ಲಹರಿಯ
ಸಾಯಿಸಿದನಂತಕಗೆ ಬಿಸಿರಕುತದ ಮಹಾಧನವ ॥ ೩೩

ಒಡ್ಡಿ ಹರಿಗೆಯಲಿಜಿ ಕಠಾರದ
ಲಡ್ಡಪಿಸು ಪೊಯ್ ಶೂಲದಿಂದಿಡು

1 ವೆಳ್ದೆಸೆ, ಕ. ಖ. 2 ವಿಹಗಪತಿಯು ತಾನೆತ್ತಲಿಂದೆನಲು, ಕ, ಖ.

ವೊಡ್ಡಿಯಲಿ ವಧಿಯಿಸವನನು ಚಕ್ರದಲಿ ಕಡಿಯೆನುತ ।
ಗಡ್ಡವನು ಗಂಟಿಕ್ಕಿ ಕವಚದ
ದೊಡ್ಡದೇಹದಲಮರಿ ದಿಗಧಿಪ
ರಡ್ಡವಿಸಿದರು ಹೋ ಹೊ ನೀ ನಿಲ್ಲೆನುತ [1] ಖಗಪತಿಯ ॥ ೨೪

ಬಂದಿರೈ ಲೇಸಾಯ್ತು ತಪ್ಪೇ
ನೆಂದೆನುತ ಮೋಹರವನೊಡೆತುಳಿ
ದೊಂದುಗಲಿಸಿದನೊರಸಿದನು ಪಕ್ಷದಲಿ ಕೈದುಗಳ ।
ಮುಂದುವರಿವಾ ದೆಸೆಯ ಪತಿಗಳ
ವೊಂದೆರಡು ಮೂಱೊಂದು ನಾಲ್ಕೈ
ದೆಂದು ನಖಮುಖಗಳಲಿ ಹೊಯ್ದಾಡಿದನು ದೆಸೆದೆಸೆಗೆ ॥ ೨೫

ತೆಱೆಯ ಹೊಕ್ಕಿಭದಂತೆ ಹೞುವನು
ಬಱಸಿಡಿಲು ಬಗೆವಂತೆ ಕಡುಗುವ
ಕುಱಿಯ ಹಿಂಡನು ಹೊಕ್ಕ ಹೆಬ್ಬುಲಿಯಂತೆ ಸುರಬಲವ ।
ಮುಱಿವನೊತ್ತಿದ ನೆತ್ತಿದನು ಮು
ಕ್ಕುಱುಕಿ ಮೊಗದನು ಮೋದಿದನು ಹೊ
ಕ್ಕುಱಿದನೊರಸಿದ ನಟನದಿಂದನಹಿತಕುಲಾರಾತಿ ॥ ೨೬

ಕಡಲು ಹರಿದುದು ಸೈನಿಕರ ಗಿರಿ
ಯೊಡೆದು ಹರಿವಂದದಲಿ ರಕುತದ
ಮಡು ಸುದುಸ್ತರವಾಯ್ತು ರಥಕರಿತುರಗಸಂತತಿಗೆ ।
ಕೆಡೆದುದಿಭಘಟೆ ನೆಗ್ಗಿದುದು ರಥ
ನೊಡಲನುೞಿದುದು ತುರಗ ಕಾಲಾ
ಳಡೆಗುಣವ ನೋಡಿದುದು ಕಾಲನ ಪುರಕೆ ಕಡಿವಡೆದು ॥ ೨೭

### ದೇವತೆಗಳ ಪಲಾಯನ.

ಓಡಿದರು ಗಂಧರ್ವಸಾಧ್ಯರು
ಕೂಡೆ ಮೂಡಣದೆಸೆಗೆ ರುದ್ರರು

---

1 ನಿಲ್ಲುನಿಲ್ಲೆನುತ, ಕ. ಖ.

ಕೂಡೆ ವಸುಗಳು ಸಹಿತಲಾದಕ್ಷಿಣದಿಶಾವರರವ ।
ನೋಡಲದಿತಿಯ ಸುತರು ಪಡುವಣ
ಕಾಡ ಹೊಕ್ಕರು ಬಡಗದೆಸೆಯಲಿ
ಬೀಡ ಬಿಡಿಸಿದರಶ್ವಿನೀದೇವರುಗಳಳವೞಿದು ॥ ೩೮

ಅನಲನಡುಗಿದನಂತಕನು ಕಾ
ನನವ ಹೊಕ್ಕನು ನಿರುತಿ ವರುಣನ
ಮನೆಗೆ ಬಾ ನೀನೆಂವನನಿಲಕುಬೇರರೆಂಬವರು ।
ತನುವ ಮಱೆದರು ಮಿಕ್ಕವರ ಮೊ
ತೆನಗೆ ಬಾರದು ಪೇೞುವರು ವಾ
ಹನವನಿೞಿದಾಯುಧವನುೞಿದಾಲೇಂಕರಾವೆನುತ ॥ ೩೯

ಅಮೃತಸ್ಥಾನಕ್ಕೆ ಗರುಡನು ಬಂದಾಗ ಯುದ್ಧಕ್ಕೆ ಬಂದ
ಭೌಮುನನನ್ನು ಸೋಲಿಸುವಿಕೆ.

ಬಂದನಮೃತಾವಾಸಕೆಲ್ಲರ
ಹಿಂದುಳುಹಿ ಕಾಹಿನ ದುರಾತ್ಮರ
ಕೊಂದು ಹೊಕ್ಕನು ಮಿಕ್ಕನಾಸುರಕುಲದ ಪೋಹರವ ।
ಮುಂದುವರಿವದಟನನು ಕಾಣು
ತ್ತೊಂದು ಕಾಹಿನ ನಾಯಕರ ನಿ
ಲ್ಲೆಂದು ಭೌಮನನೆಂಬವನು [1] ತಾಗಿದನು ಖಗಪತಿಯ ॥ ೪೦

ಎಱಕನಾತನು ಖಗನೊಡಲು ಧ
ಟ್ಟಱಕಲಮುಳಾಸ್ತ್ರದಲಿ ಹೋಹೋ
ಮುಱಿದನು ಮತ್ತೇನು ವೀರರ ದೇವ ನೀನೆನುತ ।
ಬೆಱಕನೊಡಲಲಿ ತುಂಡದಗ್ರದೆ
ನೊಱಕ್ಕ ತುೞಿದನು ಜೀವಕಾಯುವ
ನುಱಿದನು ಬೞಿಕಮೃತದಲ್ಲಿಗೆ ಬಂದನಾಗರುಡ ॥ ೪೧

---

1 ಜೌವ್ವನನೆಂಬವನು, ಕ. ಖ.

ಅಲ್ಲಿ ಉಜ್ವಲನಾದ ಅಗ್ನಿಯಂ ಕಂಡು ಮಾರ್ಗವಂ ಪ್ರಾರ್ಥಿಸ ಇಕೆ.

ಕಂಡನದಱೊಳಗಾತನಾಬ್ರ
ಹ್ಮಾಂಡಪರಿಯಂತವನು ವೇಷ್ಟಿಸಿ
ಕೊಂಡು ಪಾವಕನುಜ್ವಲಜ್ವಾಲಾವಳಿಗಳಿಂದ [1] ।
ಕೆಂಡಗೆದಱಲು ನೂಱುಯೋಜನ
ಮಂಡಲಾಕಾರದಲಿ ಕವಿದಿರೆ
ಕೊಂಡ ಹೆಜ್ಜೆಯ ತೆಗೆದು ಸಿಂದಸಿದೇಸಿದೇನೆನುತ ॥ ೪೭

ಬಟ್ಟೆಗೊಡು ಹುತವಹನೆ ಲೋಕಾ
ಧಿಷ್ಠಿತನೆ ಸುರಪಿತೃಗಳಿಗೆ ನೀ
ನಿಷ್ಟನೆನಿಸುವೆ ನೋಡಲಾಭುವನೈಕಪಾವನನೆ ।
ಬಟ್ಟೆಗೊಡು ಸುಜನೈಕವಂದ್ಯಾ
ಭೀಷ್ಟಮೂರ್ತಿಯೆ ಪುಣ್ಯಕೀರ್ತಿಯೆ
ಬಟ್ಟೆಗೊಟ್ಟುಳುಹೆನುತ ಖಗನಭ್ಯರ್ಥಿಸಿದನೊಲಿದು ॥ ೪೩

ಬಗೆವನೇ ಸಾಮವನು ಧಗಧಗ
ಭುಗಿಭುಗಿಲು ಭೋರೆಂದು ಕುಡಿನಾ
ಲಗೆಗಳಂಡಕಟಾಹವನು ಕಾಸಿದುದು ಕುಣಿಕುಣಿದು ।
ಹೊಗೆಯು ಹೊರಳಿಯು ಕೆಂಗಿಡಿಯು ನೆಗ
ೞಿಗೆಯು ಸಂವರ್ತಾಗ್ನಿಯಂತಿರೆ
ಹೊಗುವ ಮಾತೇಸಿೀಕ್ಷಿಸುವೊಡರಿದಾಯ್ತು ಖಗಪತಿಗೆ ॥ ೪೪

ಅಗ್ನಿಯು ಪ್ರಾರ್ಥನೆಗೆ ಒಲಿಯದಿರಲು ನದೀತಟಾಕಾದಿಗಳ
ನೀರನ್ನು ಕುಡಿದು ಕಾರಲಾಗಿ ಅಗ್ನಿಶಮನ.

ಕೆಟ್ಟೆನಿದು ವಿಪರೀತವಾಯ್ತೆನು
ತಟ್ಟಹಾಸವ ಮಾಡಿ ಖಗಪತಿ
ತೊಟ್ಟು ಸಾವಿರಮುಖಗಳನು ನಿಜಯೋಗಶಕ್ತಿಯಲಿ ।

1 ನುಜ್ವಲಾವಳಿಗಳಿಂದ, ಕ. ಖ.

ಕಟ್ಟುಗೆಱೆ ಧುಸಿನಿವಹಗಳ ಮುಖ
ವಿಟ್ಟು ಕಂಡಿವನು ಕಾಱಿದನು ಜಗ
ಜಟ್ಟಿ ಪಾವಕನೊಳಗೆ ಸಂವರ್ತಾಭ್ರದಂದದಲಿ ॥ ೪೫

ಏನನೆಂಬೆನು ತೀರ್ದುದಾಪವ
ಮಾನಸಖನುಬ್ಬಟೆಯು ಕಬ್ಬೊಗೆ
ಹಾಸಿಗೊಂಡುದು ಕಿಡಿಗಳಡಗಿದವಡಗಿತಾ ಜ್ವಾಲೆ ।

**ಮುಂದೆ ಹೋಗಲಾಗಿ ಶಸ್ತ್ರ ದುರ್ಗದ ನಿವಾರಣೆ.**

ಸ್ಥಾನ ಬಿಸಿಯಾರಿದುದು ಹೊಕ್ಕನು
ವೈನತೇಯನು ಮುಂದೆ ಕಂಡನು
ಭಾನುತೇಜದ ಶಸ್ತ್ರದುರ್ಗವ ನೋಡಲರಿದೆನಲು ॥ ೪೬

ಇದು ಪ್ರಳಯವಾಯ್ತಾವನೆಲೆ ಹೊ
ಕ್ಕಿದನು ಹೊಱವಡುವಧಿಕಬಲನೆನು
ತೊಡೆದನಸ್ತ್ರದ ದುರ್ಗವನು ಪಕ್ಷದಲಿ ತುಂಡದಲಿ ।

**ಚಕ್ರವಂ ಕಂಡು ಅಣುರೂಪದಿಂದ ಅದರ ನಾಭಿಯಲ್ಲಿ ಪ್ರವೇಶ ಮಾಡುವಿಕೆ.**

ಕೆದಱಿ ಹೊಕ್ಕನು ಮುಂದೆ ಕಂಡನು
ಕುದಿವ ಸಾಹಸ್ರಾರಘನಯಂ
ತ್ರದ ಮಹಾಚಕ್ರವನು ತಿಱುಗುತ್ತಿರಲು ತೀವ್ರದಲಿ ॥ ೪೭

ಕಂಡು ತಲೆದೂಗಿದನು ಖಗನು
ದ್ದಂಡಚಕ್ರವ ಗೆಲುವುಪಾಯವ
ಪುಂಡರೀಕಾಸನನೆ ಬಲ್ಲನೆನುತ್ತ ಬಿಸುಸುಯ್ದು ।
ಚಂಡಬಲನಣುರೂಪವನು ಕೈ
ಕೊಂಡು ಚಕ್ರದ ನಾಭಿಯೊಳಗಿರ
ಲಂಡಜೇಂದ್ರನು ಕಂಡನಮೃತವನದಱ ಕೆಳಗಿರಲು ॥ ೪೮

---

1 ಪ್ರಳಯವಾಯ್ತಾವನೊ, ಕ. ಖ.

ಅದರ ಕೆಳಗಿರುವ ಸರ್ಪಗಳಂ ಕಂಡು ಜಾಗರೂಕತೆಯಿಂದ
ಅಮೃತಕಲಶವನ್ನು ಹರಿಸುವಿಕೆ.

ಮತ್ತೆ ಕಂಡನು ಕೆಳಗಿರ್ದು ಬಲು
ಮೃತ್ಯು ಬಾಯ್ದೆರೆದೆರಡು ರೂಪವ
ಹೊತ್ತ ತೆಱದಲಿ ರೌದ್ರಮುಖದ ಭಯಂಕರಾನನದ ।
ಎತ್ತುದಲೆಗಳ ಕುಪಿತನಯನದ
ತತ್ತುಮಿಂಚನು ಜಱಿವ ಜಿಹ್ವೆಯ
ಪೊತ್ತುವುಸುರಿನ ಹೊಗುವ ದಾಡೆಯ ದಡಿಗಫಣಿವೆರಡ ॥ ೪೯

ಘಾತುಕರು ನೋಡಿದರೆ ಭಸ್ಮೀ
ಭೂತರಹರಾರಾಗೊಡಾಗಲಿ
ಭೂತನಾಥಗೆ ಪುಗಲರಿದವರೊಡನೆ ಕಾದುವರೆ ।
ವೀತನಿದ್ರರು ವಿವೃತನೇತ್ರರು
ಮಾತು ಹಲವೇನಮೃತಕಲಶದ
ಮಾತು ಬೇಡೆಂಬಂತೆ ಕಾದಿಹರೆರಡು ದಿಕ್ಕಿನಲಿ ॥ ೫೦

ನೆಗಹಿ ಕೊಂಡನು ಸುರರ ಸಿರಿಯನು
ನೆಗಹಿ ಕೊಂಬಂದದಲಿ ಚಕ್ರವ
ನುಗಿದು ಬಗಿದೋಡಿದನು ಹೊಱವಂಟನು ನಭೋಗತಿಗೆ ।
ಖಗವರನು ಕೈಕೊಂಡು ಮುನ್ನಿನ
ಜಗದಗಲವಾಕಾರವಮರರ
ತಗುಳದನು ಸತ್ಯಾತ್ಮನಾರಾಯಣನ ಸನ್ನಿಧಿಗೆ ॥ ೫೧

ಒಂಬತ್ತನೆಯ ಸಂಧಿ ಮುಗಿದುದು.

# ಹತ್ತನೆಯ ಸಂಧಿ.

**ಸೂಚನೆ.**

ಚಂಡವಿಕ್ರಮನಮರರನು ಬೆಂ
ಕೊಂಡು ತಂದನು ಸುಧೆಯನವನಿಗೆ
ಕಂಡು ನಾರಾಯಣನ ಕರುಣವ ಪಡೆದನಾ ಗರುಡ ||

ಅಮೃತಹರಣದಿಂದಾದ ದುರ್ಗತಿಯನ್ನು ಸುರರು
ಹರಿಗೆ ಸೂಚಿಸುವಿಕೆ.

ಕೇಳು ಶೌನಕಮುನಿಪ ಸದೆದು ಸು
ರಾಳಿಯನು ಪೀಯೂಷದುರ್ಗವ
ಬೀೞುಹೊಯ್ದನು ಕೆಡಹಿದನು ಪೀಯೂಷಪಾಲಕರ |
ಕೋೞು ವಿಡಿದಮೃತವನು ಹಾಯ್ದನು
ಹಾೞು ಮೋಱೆಯ ತ್ರಿದಶಪುರವನು
ಬೀೞುಕೊಂಡೊಲೆವಂತೆ ಮೊಱಿದುದು ಸುರಪತಿಯ ವಿಭವ || ೧

ಕೆಟ್ಟುದೋ ಸುರಲೋಕ ಭಂಗವ
ತೊಟ್ಟುದೋ ನೆಱೆ ತೊಡೆದುದೋ ತ್ರೈ[1]
ವಿಷ್ಟಪಾಧೀಶ್ವರರ ಹೆಸರನು ಹೇೞಲೇಕಿನ್ನು |
ದುಷ್ಟಖಗನೆೞದೊಯ್ದನಮೃತವ
ನಷ್ಟಪಡಿಯಾಯ್ತೂರು ಯೆನುತವೆ
ಬಿಟ್ಟು ಕೊಂಡರು ಬಾಯ ಬಿಡುತ ಕ್ಷೀರವಾರಿಧಿಗೆ || ೨

1 ತೊಡೆದುದೊಮಹಾತ್ರಿ, ಕ. ಖ.

ಹುಯ್ಯಲಿಡುತವೆ ಹೋದರಮರರು
ಕೈಯ್ಯ ಸೊಪ್ಪನು ನೆಗಹಿ ಮನ್ಮಥ
ನಯ್ಯನಲ್ಲಿಗೆ ಭಕ್ತಿಯಲಿ ದುಗ್ಧಾಬ್ಧಿಯಭಿಮುಖಕೆ ।
ಮೆಯ್ಯನೀಡಾಡಿದರು ಸಂಸ್ತುತಿ
ಗೆಯ್ಯಲದನಾಲಿಸುತ ಪನ್ನಗ
ಶಯ್ಯನಂದು ನೆಗಹಿದನಬ್ಜಸಮಾಸ್ಯದಲಿ ನಗುತ ॥ ೩

ಹರಿ ಅಭಯುವಂ ಕೊಟ್ಟು ಅಮರಾವತಿಗೆ ಬರುವಿಕೆ.

ಹೋಹೊ ಅಂಜದಿರಂಜದಿರಿ ನಿ
ಮ್ಮೊಹವವ ನಾನಱಿದೆನನಗದು
ಸಾಹಸದ ಸಂರಂಭವಾಗಂಭೀರವಿಕ್ರಮನ ।
ಬಾಹುಬಲವವನೊಡನೆ ಸಲ್ಲದು
ಸೋಹಿನಲಿ ತಾ ತೆಗೆವೆ ನಿಲ್ಲೆನು
ತಾ ಹರಿಯು ನೆಱೆ [1] ಬಂದನಮರಾವತಿಗೆ ಗೆಲವಿನಲಿ ॥ ೪

ನಡೆಯೆನುತ ನಯನಾಭಿರಾಮನು
ಪಡೆಗೆ ಕೈಬೀಸಿದನು ಬಂದನು
ಜಡಿವ ಘನಗಂಭೀರಭೇರೀಪಟಹಶಂಖರವದಲಿ ।
ಒಡೆದುದಬುಜಭವಾಂಡವೆನೆ ಬೆಳು
ಗೊಡೆಯು ಚಾಮರಸಿಕರ ದೆಸೆಗು
ಗ್ಗಡದ ಪರಮೈಶ್ವರ್ಯದಲಿ ಖಗರಾಜನಿದ್ದೆಡೆಗೆ ॥ ೫

ನೀಲಮೇಘನಿಭಾಂಗಕಾಂತಿಯ
ಲೋಲಮಣಿಕುಂಡಲದ ವಿಮಲಕ
ಪೋಲಮಂಡಲದೆಸೆವ ಕಮಲದಳಾಯತೇಕ್ಷಣದ ।
ಶ್ರೀಲಲಾಟದ ಮೌಳಿಮಕುಟದ

1 ಮಹಾಹರಿ, ಕ, ಖ.

ಕೀಲಣದ ನವರತ್ನಕಾಂತಿಯು
ಜಾಲದಲಿ ಜಗದೇಕನಾಥನು ಬಂದನಾಹವಕೆ ॥ ೬

ಕೊರಳ ಹಾರದ ಕೌಸ್ತುಭದ ಪೇ
ರುರದ ವರಸಿರಿವತ್ಸನಾಭಿಯು
ಕರಕಮಲಕಂಕಣದ ಕೇಯೂರದ ಚತುರ್ಭುಜದ ।
ಅರಿಗದಾಶಾಙ್ಗದ ಭುಜಂಗಳ
ಭರಿತತೇಜದ ದಿವ್ಯಪೀತಾಂ
ಬರದ ಮಂಗಳಮೂರ್ತಿ ಬಂದನು ಗರುಡನಭಿಮುಖಕೆ ॥ ೭

ವಂದಿಗಳ ಕಳಕಳದ ಮಾಗಧ
ವೃಂದದೊತ್ತೊತ್ತುಗಳ ಸೂತರ
ಸಂದಣಿಯು ಗಂಧರ್ವಕಿನ್ನರಗೀತಸಂಸ್ತುತದ ।
ದುಂದುಭಿಯು ಕಳಕಳದ ಬಹುವಿಧ
ದಿಂದೆಸೆವ ಬಹುಭದ್ರವಾದ್ಯದ
ಸಂದ ಸುರರೈ [1] ಶ್ವರ್ಯದಲಿ ಬಂದನು ಸುರಾಲಯದಿ ॥ ೮

ಸುಱಿವ ಸುಮನೋವೃಷ್ಟಿಯಲಿ ಮಿಗೆ
ಮೊಱೆವ ವೀಣಾವೇಣುಮುರಜದ
ಕರಪುಟದ ಮೌಳಿಗಳಲೊಪ್ಪುವ ಲೋಕಪಾಲಕರ ।
ಸರಸಿಜಾಸನರುದ್ರವಿಬುಧೇ
ಶ್ವರನಿಷೇವಿತಪಾದಪೀಠದ
ಕರುಣಿಗಳ ದಾತಾರ ವೈದೊಱಿದನು ಖಗಪತಿಗೆ ॥ ೯

ಆಗ ಗರುಡನು ಹರಿಯಂ ಕಂಡು ನೀನಾರೆಂದು ಕೇಳಲು
ಹರಿಯ ಉತ್ತರ.

ಗಂಡುಗಲಿ ಯಮೃತದ ಕಲಶವನು
ಕೊಂಡು ಹಾಯ್ದುಯ್ತುರಲು ನಭದಲಿ

[1] ಸಾಮನ್ಯೆ, ಕ. ಖ.

ಕಂಡನಾಕಮನೀಯಕೀರ್ತಿಯ ದಿವ್ಯಮೂರ್ತಿಯನು |
ಅಂಡಜೇಂದ್ರನು ನಗುತ ನಿಂದನು
ಪುಂಡರೀಕದಳಾಕ್ಷನಿದಿರಲಿ
ಪಂಡಿತನೆ ನೀನಾರು ಹೇಳೆನಗೆಂದು ಬೆಸಗೊಂಡ ‖ ೧೦

ಹೇಳು ಹೇಳ್ಬೆ ಯೆನಲು ಖಗಪತಿ
ಪಾಲುಗಡಲ ಮಹಾತ್ಮ ಲಕ್ಷ್ಮೀ
ಲೋಲಲೋಚನ ಕಮಲಭವರೇ ಮುಖ್ಯರಿವರೆನಗೆ |
ಕೇಳು ಪುತ್ರ ಸಪುತ್ರರ್ಕೈ ಕೀ
ಡಾಳುಗಳು ಸುರರಲಿ ಚರಾಚರ
ಜಾಲ ವೆನ್ನಯ ಲೀಲೆ ನಾರಾಯಣನು ತಾನೆಂದ | ೧೧

ಹರಿಯು ವರವಂ ಕೇಳೆನಲು ಗರುಡನ ಅನಾದರಕ್ಕೆ ಹರಿಯ
ಅಪಹಾಸ.

ಮೆಚ್ಚಿದೆನು ಖಗಮಣಿಯೆ ನಿನ್ನಯ
ನಿಚ್ಚಟದ ಬಲವೀರ್ಯಶೌರ್ಯದ
ಹೆಚ್ಚುಗೆಯ ವಿಕ್ರಮಪರಾಕ್ರಮಶಕ್ತಿಯನು ಕಂಡು |
ಮೆಚ್ಚಿದೆನು ನೀ ಬೇಡಿಕೊಳ್ಳೆನ
ಲಚ್ಯುತನ ನುಡಿಗಳಿಗೆ ನಕ್ಕನು
ಮುಚ್ಚುಮರೆಯಾಕಿವನು ತಾ ಸಾಮರ್ಥ್ಯದಿಪನೆಂದ[1] ‖ ೧೨

ನಕ್ಕನಸುರಾರಾತಿ ನೋಡಿದ
ನಿಕ್ಕಲದ ಕಮಲಜಭವಾದ್ಯರ
ನೆಕ್ಕಟಿಗನುಬ್ಬಾಳಿಯನು ಕಂಡಿರೆ ಖಗಾಧಿಪನ |
ಸಿಕ್ಕುಸುವೆನತಿಬಲನನೆನುತವೆ
ಜಕ್ಕುಳಿಸಿ ಕಡೆಗಣ್ಣನೀಕ್ಷಿಸಿ
ರಕ್ಕಸರ ಕುಲವೈರಿ ನುಡಿದನು ನಗುತ ಖಗಪತಿಗೆ ‖ ೧೩

[1] ಸಾಮರ್ಥ್ಯನಹನೆಂದ, ಕ. ಖ.

ತಿರುಗಿ ಉಭಯರ ಸಂವಾದದಲ್ಲಿ ವಾಹನನಾಗೆಂದು ಕೇಳುವಿಕೆ.

ಈವೆ ನೀನೆನಗೇನನಿಲ್ಲದೊ
ಡಾವದಡಿಯಲಿ ಬಿದ್ದ ನಿನ್ನನು
ಕಾವ ದಾತರ [1] ಗಂಡನೆಂಬ ಮಹಾತ್ಮ ಮರುಳನಲ ।
ದೇವರೆಂಬವರ್ಕೈದೆ ತನಗನು
ಜೀವಿಗಳು ತಾವೇನು ಕಾಣದೆ
ಗಾವಿಲನೆ ತಾನೀವೆ ನೆಲ್ಲವ ಬೇಡಿಕೊಳ್ಳೆಂದ ॥ ೧೪

ಆಗಲದಕೇನಾಯ್ತು ತಪ್ಪೇ
ನೀಗಳೆಂದನು ವರತಪೋವ್ರತ
ಯೋಗನಿಷ್ಠ ದ್ವಿಜರು ತನಗಧಿದೈವರವರಿತ್ತು ।
ಭಾಗಧೇಯವಿದೆನಗೆ ವಾಹನ
ವಾಗು ನನಗೆಂದರ್ಥಿಸಿದನಾ
ಯೋಗಮಾಯಾಧೀಶ್ವರನು ನಗುತಾ ಖಗೇಶ್ವರನ ॥ ೧೫

ಅದಕ್ಕೊಪ್ಪಲು ಹರಿಯು ನೀನು ವರವಂ ಬೇಡೆನಲು
ರಕ್ಷಣೆಯನ್ನು ಕೇಳುವಿಕೆ.

ಕೇಳಿ ತಲೆದೂಗಿದನು ಹೋಹೋ
ಕೋಳುವಿಡಿದೈ ತನ್ನನಾರಿಗೆ
ಹೇಳುವೆನು ತಾನಾಗಿ [2] ವರವನು ಕೆಡಿಸಿದಕಟಕಟ ।
ಕಾಲನಿಡು ಮಸ್ತಕದಲೆಲೆ ಕರು
ಣಾಳುಗಳ ದಾತಾರ ಅಹಿಕುಲ
ಕಾಲನೊಡನಿಂತೆಂದನಧಿಕಮನೋನುರಾಗದಲಿ ॥ ೧೬

ಬೇಡಿಕೊಂಡೆನು ವರವ ನೀನುಂ
ಬೇಡಿಕೊಳ್ಳಲೆ ವೀರ ತನ್ನನು
ಜೋಡು ಮಾಡದಿರೆನ್ನ ದರುಶನ ವಲ್ಲವಲ್ಲಿಳಗೆ ।

---

1 ಮಾನವದಾರಶ, ಕ. ಖ.    2 ವಾಹಂತೆ, ಕ, ಖ.

ಬೇಡು ಮೆಚ್ಚಿದೆನೆನಲು ಖಗನೀ
ಡಾಡಿದನು ಪದದಲಿ ತನುವನಾ
ಬೇಡುವೆನು ತನಗೊಡೆಯರಾಜಾಜ್ಞಾ ಪಿಸುವುದದನೆಂದ ॥ ೧೭

ಮತ್ತೆ ದುರ್ಲಭವೇನು ನಿನ್ನನು
ಹೊತ್ತು ನಡೆವಂಗೆನಗೆ ತನ್ನಯ
ತೊತ್ತಲಾ ವರಮುಕ್ತಿ ನಿನ್ನಪದಾಬ್ಜಸೇವಕಗೆ ।
ಮೃತ್ಯು ಜರೆ ಯೆರಡಿಲ್ಲದಂತೊಲಿ
ದಿತ್ತು ರಕ್ಷಿಸನಾಥ ನಾನೆನ
ಲುತ್ತಮಾಂಗವ ತಡಪಿ ಸೂಸಿದನಂಜಪೇಡೆಂದ ॥ ೧೮

ಅಮೃತವನ್ನು ಇಲ್ಲೀ ಬಿಡೆಂದು ಹೇಳಲು ತಾಯಿ ಸರೆಯನ್ನು ಬಿಡಿಸಲು ಬಯ್ಯಬೇಕೆಂದು ಹೇಳುವಿಕೆ.

ಕಂದ ಕೇಳ್ಳ ಕಾಡುತಿದೆ ಸುರ
ವೃಂದ ತನ್ನನು ಸುಧೆಗೆ ಕೇಳಿ
ನ್ನೊಂದು ಮಾತನು ಕೊಂಡು ಪೋಹುದಯೋಗ್ಯವಮೃತವನು ।
ಬಂದುನಿಮಿಷವಿದಿಲ್ಲದಿರೆ ನೇಹಿ
ಹೊಂದುವುದು ಸುರಕುಲವೆನಲು ಗೋ
ವಿಂದನಂಘ್ರಿಗೆ ನಮಿಸಿ ಬಿನ್ನಹಮಾಡಿದನು ಗರುಡ ॥ ೧೯

ತಾಯ ಸೆಱೆಯಲಿ ಹಿಡಿದು ಪನ್ನಗ
ದಾಯಿಗರು ನಾಚಿಸಿದರೆನ್ನನು[1]
ಪಾಯುವ ಬಿಡಿಸುವವರೆ ಗಡ ತೋಱಿಸು ದುರಾತ್ಮರಿಗೆ ।
ಬಾಯ ಹೊಗಲೀಸನೆ ನಿಜಾಭಿ
ಪ್ರಾಯವನು ನಾ ಬಲ್ಲೆನೆನೆ ನಾ
ರಾಯಣನು ನಸುನಗುತ ಮನ್ನಿಸಿ ಕಳುಹಿದನು ಖಗನ ॥ ೨೦

1 ನಾಚಿಸಿದರೆ ನಗೆವು, ಕ. ಖ.

ಹರಿಯು ಶುಭಾಶಾಸನವಮಾಡಿ ಕಳುಹಿಸಲು ಮಾರ್ಗದಲ್ಲಿ ಇಂದ್ರ
ನೊಡನೆ ಸಂವಾದ.

ನೆನೆದ ಹೊತ್ತೊಳಿತಹುದು [1] ಸುಖಿಯಾ
ಗೆನುತ ವೈದಡವಿದನು ಕರುಣಾ
ವನಧಿ ವಿಹಗೋತ್ತಮನನನುರಾಗದಲಿ ಬೀಳ್ಕೊಟ್ಟು ।
ನೆನೆದನಂತರ್ಧಾನವನು ಬಳಿ
ಕನುಪಮನು ಗಗನದಲಿ ಬರುತಿರ
ಲನಿಮಿಷೇಂದ್ರನು ತಾಗಿದನು ಬೆಂಬತ್ತಿ ಮಾರ್ಗಧಲಿ ॥ ೭೧

ಕೊಳಚೆನೀರ ಹುಳು ಕುಡಿವುದು ಸರಿ [2]
ಪ್ರಳಯಕಲ್ಪಾಂತದ [3] ಸಮುದ್ರ
ಕ್ಕೆಣೆವೆನೆಂಬುದು ಬಾಲ ನೀ ನೆನೆದುದು ಸುದುಸ್ತರವು [4] ।
ಗಳಹು ಬಳಿಕೆಲ್ಲವೆನು ಬಿಡು ಬಿಡು
ಕುಲಿಶವೆನು ತನ್ನಾಣೆ ತನ್ನಲಿ
ಬಳಿಕ ಚಿಂತಿಸಬೇಡ ಮಾತಿನ್ನಿಲ್ಲ ತೆರಹೆಂದ ॥ ೭೨

ಆಗ ಇಂದ್ರನ ವಜ್ರಪ್ರಯೋಗ.

ಆದೊಡಿದೆ ಕಲ್ಪಾಂತಜಲಧಿಯು
ಸೇದುವೊಡೆ ಬಡಬಾಗ್ನಿ ತಾನಾ
ರಾದೊಡೇನಿದಕೊಳ್ಳನುತ ಕೋಪಾಗ್ನಿಯಲಿ ಬೆಂದು ।
ಕಾದ ಕಂಗಳಲುರಿಯನುಗುಳುತ
ಹೋದೆ ಯಿನ್ನೇನೆನುತ ದುರ್ಧರ
ನಾದದಲಿ ತೆಗದಿಟ್ಟನಾವಜ್ರದಲಿ ಖಗಪತಿಯು ॥ ೭೩

ಅದು ವ್ಯರ್ಥವಾಗಲು ಗರುಡನ ಅಪಹಾಸ.

ಇಟ್ಟನೋ ವಜ್ರದಲಿ ಸುರಪತಿ
ಕೆಟ್ಟನೋ ಖಗಪತಿ ನಿರರ್ಥಕ

---

[1] ಹೊತ್ತೈಪದ, ಕ. ಖ.
[2] ಕುಡಿವುದದುಸರಿಯುಲಾ, ಕ. ಖ.
[3] ಕಲ್ಪದ, ಕ. ಖ.
[4] ದಂತೆ ದುಸ್ತರವಲಾಲಾಭ್ಯ, ಕ. ಖ.

ಮುಟ್ಟಿ ಬದುಕುವರುಂಟೆ ಹರ ಹರ ಯೆನುತ ಜನ ಬೆದಱೆ ।
ಬೆಟ್ಟವನು ಕಡಿಗಳೆವ ವಜ್ರವು
ಬಟ್ಟೆದೆಗೆದುದು ಖಗನ ಸಮ್ಮುಖ
ಕೊಟ್ಟದ ಜ್ವಾಲೆಯಲಿ ನಿಂದಂತಾಯ್ತು ಮೂಲೋಕ ॥ ೨೪

ಕಂಡನಂದಾ ವಿಹಗಪತಿ ಕೈ
ಕೊಂಡನಿಂದ್ರನ [1] ವಜ್ರವನುಮಾ
ಖಂಡಲಂಗಿದನೆಂದನೊಯ್ಯನೆ ನಗುತ ಲೀಲೆಯಲಿ ।
ಗಂಡುಗೆಡಿಸಿದೆ ಬಱಿದೆ ವಜ್ರವೆ
ಕೊಂಡು ಹೋಗದೆ ನೀನು ಬಿಸುಟರಿ
ಭಂಡನನೆ ಹೋಗಿನ್ನು ಸುಖದಲಿ ನೀನು ಪೋಗೆಂದ ॥ ೨೫

ಅಲ್ಲದೊಡೆ ತಾ ನಾಚಿಸುವನ
ಲ್ಲಲ್ಲ ನಿನ್ನನು ಮೇಣಪೋಹವಿ
ದಲ್ಲ ತಾಪಸವರ [2] ದಧೀಚಿಯ ಕಾಯದಸ್ಥಿಯನು ॥
ಬಲ್ಲಿದನೆ ನಿರ್ಮಿಸಿದೆ ಯೆಂಬುದ
ಬಲ್ಲೆ ನಿತ್ತನು ಗಱಿಯನೊಂದನು
ಹೊಳ್ಳು ಗಳೆಯಲಿ ವಜ್ರಕೆಂದನು ಸುರಪತಿಗೆ ಗರುಡ ॥ ೨೬

ಎಂದೆನುತ ಗಗನದಲಿ ಮೊಱಗುತ
ಮುಂದುವರಿದೈತಹಮಹಾಸ್ತ್ರ
ಕೊಂದು ಗಱಿಯನು ಕೊಳ್ಳನುತ ಖಗರಾಜನೊಲವಿನಲಿ ।
ಎಂದೊಡದನೇನೆಂಬೆನಮರರ
ವೃಂದವುಘೆಯೆನೆ ಬಿದ್ದುದಾಗಱಿ
ಸಂದೊಡೆಯೆ [3] ಗಿರಿಯಂತೆ ವಜ್ರದ ಹತಿಯಲವನಿಯಲಿ ॥ ೨೭

ಉಱುವ ದಿವ್ಯಮಹಾಯುಧಕ್ಕೆ ಕಿ
ಗ್ಗಱಿಯನಿತ್ತೆನೆನುತ್ತ ಮನದಲಿ

---

1 ನೆನ್ನದು, ಕ. ಖ. 2 ತಾಪಸ, ಕ. ಖ. 3 ಸಂದುಡಿದ, ಕ. ಖ.

ಮಱುಗದಿರು ನೀನಾಂಪುದೊಂ[1]ದೇ ಗಱಿಯ ಕಡೆಸೆಱಗ |
ಬಱಿದೆ ನಾಚಲದೇಕೆನಲು ಶಚಿ
ಯೊಱೆಯನವನಾಲಿಸುತ ಕಾಣದೆ
ಗಱಿಯ ಕಡೆಯನು ಮೇಣು ನೆಗಹಲು ನೆರೆಯೆನಿಂತೆಂದ || ೨೮

ಮೃದೂಕ್ತಿಪೂರ್ವಕ ಗರುಡನೊಂದಿಗೆ ಇಂದ್ರನ ಸ್ನೇಹ

ಆರು ನೀನೆಲೆ ವೀರ ನಿನ್ನಾ
ಕಾರವದುಭುತ ನಿಜಪರಾಕ್ರಮ
ವಾರಿಧಿಯ ನೆಲೆಗಾಣ್ಬವರಿ[2]ದಾಯ್ತೆಲೆ ಸಖಿಯೆ ನಿನ್ನ |
ಸಾರಬಲವಿನಿತೆಂದು ತಿಳಿಯೆ ಮ
ನೋರಥವು ಸೌಖ್ಯವನು ತನ್ನಲಿ
ಸೇರಿಸೆಂದನು ವಿನಯದಲಿ ಖಗಪತಿಗೆ ಸುರನಾಥ || ೨೯

ಸೇರುತಿದೆಲಾ ಸಖ್ಯ ನಿನ್ನಲಿ
ವೈರವೆನಗಿನಿತಿಲ್ಲ ವೆನ್ನ ಶ
ರೀರದಲಿ ಹೇಳುವೊಡೆ ಯೋಗ್ಯವೆ ಆತ್ಮಸಂಸ್ತುತಿಯು |
ಸೂರಿಗಳು ಮಾಡುವರೆ ಹೇಳಾ
ವೀರ ಸಖಿ ನೀನೆಂದೆ ಯದಱಿಂ
ದಾರು ಸಖಿಯರ್ಥಿಸುತಿರದನಾ[3]ಚರಿಸದಿಹರೆಂದ || ೩೦

ಗರುಡನು ತನ್ನ ಸಾಮರ್ಥ್ಯವನ್ನು ಇಂದ್ರನಿಗೆ ತಿಳಿಸುವಿಕೆ.

ಸುರವರನೆ ಕೇಳಖಿಳಗಿರಿವನ
ವರವನಧಿ ಕಾನನ ಮಹಾಸಾ
ಗರವೆ ಸಪ್ತದ್ವೀಪ ಧರೆ ಸಹಿತಖಿಳಭುವನವನು |
ಧರಿಸುವೆನು ತಾನೊಂದುಪಕ್ಕದ
ಲೊರವಡೆನಿತುಂಟನಿತರಧಿಕವೆ
ನೊರೆಪಲಱಿಯೆನಜಾಂಡಮಂಡಲ ತೃಣವಿದೆನಗೆಂದ || ೩೧

---

1 ವೆಗಾಪಡೊಂದೇ, ಕ. ಖ. 2 ಗಾಣಾದ, ಕ. ಖ. 3 ಸಿಕರವ, ಕ. ಖ.

ಇಂದ್ರನ ಅಪೇಕ್ಷೆಯಂತೆ ಗರುಡನು ಸ್ವಾಕಾರವನ್ನು ತೋರಿಸುವಿಕೆ

ಎಂದೊಡಾ ಸುರವರನು ಮಗುಳಿಂ
ತೆಂದ ನಹುದೋ ವೀರ ಬಲ್ಲಿದ
ನೆಂದಱಿವೆ ನಾಕಾರದಳತೆಯ ತೋಱಬೇಹುದಲೆ ।
ತಂದೆ ಸಖಿ ಯಾನಾದೊಡೆನೆ ವಿಹ
ಗೇಂದ್ರನಿಂದ್ರನ ಮಾತ ಕೇಳುತ
ಮಂದಹಾಸದಲಮರಪತಿಗಿಂತೆಂದ ನೊಲವಿನಲಿ ॥ ೩೦

ನೋಡ ಬಹುದೇ ಪಕ್ಷದಗಲವ
ನೀಡುವೊಡೆ ತೆರಹಿಲ್ಲ ಕಮಲಜ
ನಾಡಲೇತಕೆ ಕೃಪಣನಾವನು ಗಗನಸೃಷ್ಟಿಯಲಿ ।
ನೋಡುವರೆ ನನಗೊಂದು ಗಱಿಯನು
ನೀಡಲಿಂಬಿಲ್ಲಂಬರವ ಕಡೆ
ಮಾಡಿ ತೋಱಿಸುವೊಡಿಂದಿವನು ನಗುತ ಸುರಪತಿಗೆ ॥ ೩೩

ವೀರ ಕಂಡೇಗೈವೆ ವಜ್ರವ
ನಾರಿಸಿದ ತನ್ನೊಂದು ಪಕ್ಷದ
ಸಾರವನು ಮತಿಯುತನೆ ಮತ್ತಿನ್ನೇನ ಬೆಸಗೊಂಬೆ ।
ಭೂರಿಭಯರಸಸಬುದ್ಧಿದು ನಿ
ಸ್ಸಾರರಣ ನೋಡಾದೊಡೆನುತ ಮ
ಹೋರಗಾಂತಕನಮರರುಘೋಯೆನೆ ತೋಱಿದನು ನಿಜವ ॥ ೩೪

ಮುಱುಗಿದವು ದೆಸೆಯೆಂಟು ಪಕ್ಷದ
ವಳಯವೇಕಾಂಗದಲಿ ಧ್ರುವಮಂ
ಡಲಕೆ ಸಂಕಟವಾಯ್ತು ಶಿರವನು ನೆಗಹಿದನು ಮೇಲೆ ।
ಇಳೆ ರಸಾತಳಕಿಳಿದುದಂಘ್ರಿಯ
ನೆಲೆಯ ಕಂಡವರಾರು ಭುವನಾ
ವಳಿ ತದಾತ್ಮಕವಾದುದೊಂದೇ ನಿಮಿಷಮಾತ್ರದಲಿ ॥ ೩೫

ಘಾಸಿಯೊದನು ತರಣಿ ತೇಜೋ
ರಾಸಿಯಂಗಚ್ಛವಿಯ ನೀಕ್ಷಿಸಿ
ವಾಸವನು ನಡುಗಿದನು ಜಯ ಜಯ ಯೆಂದುದಮರಗಣ ।
ಸೂಸಿದರು ಪೂಮಳೆಯ ನಾಕಮ
ಲಾಸನಾದ್ಯರು ಮೇಗೆ ಶಿರದಲಿ [1]
ಭಾಸುರಾಂಗಪ್ರಭೆಯಿನೆಸೆದನು ತೀವ್ರತೇಜದಲಿ ॥ ೩೬

ವಿಸ್ಮಿತನಾದ ಇಂದ್ರನನ್ನು ಮನೆಗೆ ಹೋಗೆಂದು ಬೆಸಸುವಿಕೆ.

ಸಾಕು ಸಖಿಯೇ ಕಂಡೆನೆಂಬೊಡೆ
ನೂಕವಾಲಿಗಳಂಗವಟ್ಟದ
ಲೇಕದೇಶವ ನೀಕ್ಷಿಸುವೊಡಾನಾವನೆಂದೆನುತ ।
ಪಾಕಶಾಸನನೀಕ್ಷಿಸಲು ಸಾ
ಕ್ಷಾತ್ಕೃತಿಯ ಕೈಕೊಂಡು ನುಡಿದನು
ಲೋಕಪಾಲನೆ ಹೋಗು ನಿಳಯಕೆ ಯೆಂದನಾ ಗರುಡ ॥ ೩೭

ಬಳಿಕ ಅಮೃತವು ದುಷ್ಟರಿಗೆ ಭೋಗ್ಯವಾಗದಂತೆ ಆಲೋಚನೆ

ಎಂದೊಡೆಂದನು ಸಖಿತನಕೆ ತಾ
ಸಂದೆನಲ್ಲೈ ತಂದೆ ನೀ ನಿದ
ನೊಂದ ಸಲಿಸಲು ಬೇಹುದೀವುದು ಸುಧೆಯನೆನಗೆನಲು ।
ತಂದೆ ನಿನಗದಱಿಂದ ಫಲವೇ
ನಿಂದಿದನು ಸೇವಿಸಿದೊಡುರಗರು
ಕೊಂದರೆಂದಱಿ ತನ್ನನನುಚಿತಮಾಡಬೇಡೆಂದ ॥ ೩೮

ಕೊಟ್ಟು ಅಮೃತವನೆನ್ನ ಕಾರ್ಯವ
ನೆಟ್ಟನಾಗಿಸಿ ತಾಯ ಸೆಱೆಯನು
ಬಿಟ್ಟನೆನಿಸುವೆನೊಯ್ದು ಸುಧೆಯನುಮಾವೆನುರಗರಿಗೆ ।

---

1 ಶಿರವನು, ಕ. ಖ

ಮುಟ್ಟತೆನಿಸಿದ ಬೞಕದನು ನೀ
ನಿಷ್ಟವಾದರೆ ಕೊಂಡು ಬಹುದೆನೆ
ಕೊಟ್ಟು ಕಳುಹುವೆನೊಂದು ವರವನು ಬೇಡಿಕೊಳ್ಳೆಂದ ॥ ೩೯

ಇಂದ್ರನಿಂದ ಸರ್ಪಗಳು ತನಗಾಹಾರವಾಗುವ ವರವಂ ಪಡೆದು
ತಾಯು ಬಳಿಗೆ ಬಂದು ಹೇಳುವಿಕೆ.

ಅಶನವಾಗಲಿ ಕದ್ರುತನಯರ
ವಿಸರವೆನಗೆಲೆ ದೇವ ಕಾಂಕ್ಷಿಸಿ
ದೆಸೆವ ವರವಿದೆನಲ್ಕೆ ಕೊಟ್ಟೆನು ಜಯಿಸು ಹೋಗೆನಲು ।
ವಸುಧೆಗೈತಂದನು ಸುರೇಂದ್ರನ
ನೊಸಲು ಬೆಂಬಲು ಜನನಿಯಂಘ್ರಿಯು
ವಿಸರುಹಕೆ ತಲೆವಾಗಿ ನಿಂದನು ವಿನಯದಲಿ ಗರುಡ ॥ ೪೦

ತಾಯು ಅಪ್ಪಣೆಯಂತೆ ಸರ್ಪಗಳಿಗೆ ಅಮೃತವನ್ನು ಸ್ವೀಕರಿಸಲು
ಸ್ನಾನಮಾಡಿ ಬನ್ನಿರೆನ್ನುವಿಕೆ.

ತಂದೆನಮೃತವನವ್ವೆ ತಂದೆನು
ತಂದೆ ಯಿದೆ ಯಿದೆ ಯೆನಲು ಬದುಕಿದೆ
ಕಂದ ಕಲ್ಪಸಹಸ್ರವನು ದೀರ್ಘಾಯುವಾಗೆನಲು ।
ನಿಂದು ಪರಸಿದಳ್ಬಳಿ ಕದ್ರುವ
ನಂದನರಿಗೀಯೆನಲು ಕರೆದನು
ಬಂದು ಕದ್ರುಕುಮಾರಕರ ಪೀಯೂಷವಿದೆ ಯೆನುತ ॥ ೪೧

ಕೊಟ್ಟೆನಮೃತವ ನಿದೆ ಯಿದನು ದಿಟ
ಕೊಟ್ಟೆನೊಲಿದಂತಿದನು ಕೊಂಬುದು
ದುಷ್ಟರಿರ ಹಾಸುವದು ದರ್ಭೆಯನವನಿಯಲಿ ಸುಧೆಯು ।
ನೆಟ್ಟನಿರಿಸುವೆಯಿಲ್ಲಿ ಯಿದೆ [1] ಯಿದ
ಮುಟ್ಟದಿರಿ ಶುಚಿ ಯಿಲ್ಲದವರಿದು
ಶಿಷ್ಟವಿಹಿತಸ್ನಾನರಾಗಿಯೆ ಕೊಂಬುದಿದನೆಂದ ॥ ೪೨

1 ನೆಟ್ಟನಿರಿಸಿದೆ, ಕ ಖ.

ಆಗ ಉತ್ಸಾಹದಿಂದ ಸ್ನಾನಕ್ಕೆ ಹೋಗಲು ದರ್ಭೆಯಲ್ಲಿಟ್ಟ ಸುಧೆಯನ್ನು
ಇಂದ್ರನು ಅಪಹರಿಸುವಿಕೆ.

ಅಲ್ಲವೇ ತೊತ್ತಲ್ಲವೆ ಯಲ್ಲ
ಅಲ್ಲ ಬಿಡಿ ತೊತ್ತಲ್ಲ ಪನ್ನಗ
ರೆಲ್ಲವರು ಸುಸ್ನಾನರಹವೆಂದೆನುತ ತಮತಮಗೆ ।
ನಿಲ್ಲದೈದಿದರುರುನದಿಯ [1] ಜಲ
ದಲ್ಲಿ ಗಾರ್ಕ್ಷ್ಯಬಂದನಮರರ
ಬಲ್ಲಹನು ಕೊಂಡೊಯ್ದನಮೃತವನಖಿಯದಂದದಲಿ ॥ ४३

ತಿರುಗಿ ಅಮೃತಸ್ಥಳಕ್ಕೆ ಬರಲು ಅಮೃತವಂ ಕಾಣದೆ ಸರ್ಪಗಳ ದುಃಖ.

ಬಂದು ಮಡಿಗಳನುಟ್ಟು ಕುಂಕುಮ
ಚಂದನಾಗರುಭೂಷಣಂಗಳ
ನಂದದಲಿ ಧರಿಸಿದರು ತಮ್ಮೊಳಗೊಬ್ಬರೊಬ್ಬರನು ।
ಹಿಂದುಬಿಹಿ ನಾ ಮುನ್ನ ತಾ ಮು
ನ್ನೆಂದು ತಿವಿದಾಡುತ್ತ ಪನ್ನಗ
ವೃಂದವೆಡರಿನೊಳುಂ [2] ಮುಟಿಗಲೈತಂದುದಾರ್ಕ್ಷಣಕೆ [3] ॥ ४४

ಕುಡಿಯಲಮೃತವನಖಿಳಲೋಕ
ಕ್ಕೊಡೆಯರಹೆವಜರಾಮರತ್ವವ
ಪಡೆದು ಬಚಿಕಿದಿರಾರು ಕಾಂಬೆವೆ ಗರುಡಗಿಂದರನು ।
ಮೃಡವಿರಿಂಚಿಸುರೇಂದ್ರರೆಂಬರ
ನೆಡಹಿ ಕಾಂಬೆವೆ ನೂಕು ನೂಕೆನು
ತಡಸಿ ಕಪಿತಂದರು ಮಹೋರಗಸಿಕರ ಬೊಬ್ಬಿಜಿದು ॥ ४५

ತಂದನಾಯಾಸವನು ನೋಡದೆ
ವೃಂದದಮರರ ಸದೆದು ತನುಗುಣ
ಸಂದುದಲ್ಲಮೃತವದು ಭಾಗ್ಯಾಧಿಕರು ನಾವೆನುತ ।

[1] ರುಚಿರವನದಜಲ, ಕ. ಖ. [2] ವಂಬರ, ಕ. ಖ [3] ದುದಾತ ತೀಕ್ಷ್ಣಣಕೆ, ಕ. ಖ.

ಮುಂದಣವರನು ಕೆಡೆತುಳಿದು ಸಾ
ರೆಂದೆನುತಧಿಕ ಸಂಭ್ರಮದಲಿ
ಬ್ಬಂದರೇನೆಂಬೆನು ಮಹೋರಗನಿಕರದುತ್ಸಹವ ॥ ೪೬

ಬೇಡ ಬೇಡೆಲೆ ಬಲ್ಲೆನೆಲ್ಲರು
ಕೂಡಿಕೊಂಡೇ ಕುಡಿವುದಮೃತವ
ನೋಡಲಾಗದು ಸಾಹಸ ಕ್ಷಮಿಸೆನುತ ಕೆಲಕೆಲರು ।
ಕೂಡೆ ಹುಲುಗೈಗಳನು ನೆಗಹಿದ
ರೋಡಿದರೆ ಕೇಳುವವರಾರಿದ
ನೀಡಿಬಿದು ತಾವೊಬ್ಬರೊಬ್ಬರು ಪರಿದರಾ ಸ್ಥಳಕೆ ॥ ೪೭

ಕಾಣಲೇನಾಯ್ತಿರಿಸಿದೆಡೆಯಲಿ
ಮಾಣದಮೃತವ ಕದ್ದರಾರೋ
ಪ್ರಾಣವನು ನೆಱೆ ಕೊಂಡರಕಟಾ ಕೆಟ್ಟೆವೆಂದೆನುತ ।
ಹೂಣಿಗರು ನೆಕ್ಕಿದರು ದರ್ಭೆಯ
ತ್ರಾಣವಿದು ಸುಧೆಗೆನುತ ಜಿಹ್ವಾ
ಶ್ರೇಣಿ ಸೀಳಿದುದೊಂದೆರಡು ಸೀಳಾಗಲಹಿಕುಲದ ॥ ೪೮

ಇದುವೆ ಲಾಭವೆನುತ್ತ ದುರ್ಮ್ಮಾ
ನದಲಿ ಹಿಂಗಿದುವಹಿನಿಕರವಾ
ಪದುಮಮುಖಿಯುನು ಬಿಟ್ಟು ವಿನತೆಯುನಧಿಕತಾಪದಲಿ ।
ಕುದಿಯುತಿರ್ದುದನು ನೋಡಿ ಖಗಪತಿ
ಯುಧಿಕಬಲಪೌರುಷಪರಾಕ್ರಮ
ಮುದಯವನು ಶುಭವೆಸುದೆ ಹೇಳುವ್ಯಾಯುನಿಷ್ಠರಿಗೆ ॥ ೪೯

ಗರುಡನು ತಂದ ಅಮೃತವು ಸರ್ಪಗಳಿಗೆ ಏಕೆ ಸೇರಲಿಲ್ಲವೆಂಬ
ಶೌನಕಪ್ರಶ್ನೆಗೆ ಉತ್ತರ.

ಸೂತ ಹೇಳ್ಳೈ ಗರುಡ ತಂದನು
ಪೂತವಾದಮೃತವನು ಸೇವಿಸ

ಲಾತುರದಿ ನಡೆತಂದು ಕಾಣದುದೇನು ಹೊಸತೆನಲು |
ಮಾತ ಕೇಳುತಲುಸುರಿದನು ಸಂ
ಪ್ರೀತಿಯುಲಿ ಋಷಿನಿವಹಕಂದಾ
ಖ್ಯಾತನಹ ಪೌರಾಣಿಕನು ಸುಧೆಯುಡಗಿದಂದವನು || ೫೦

ಗರುಡ ಹೇಳ್ದನು ಮೊದಲು ಸಖ್ಯವ
ಬೆರಸುವಾಗಲು ಶಕ್ರನೊಡನೆಲೆ
ಸುರಪಗಹಿಂಗಳಿಗೆ ಸುಧೆಯನು ತೋಱಿ ಮುಂದಿರಿಸಿ |
ಭರದಿ ತೊಲಗುವೆನದನು ಮುಟ್ಟೆನು
ಮರಳಿ ನೀನೊಲಿದಂತೆ ಮಾಡೆನೆ
ಧರೆಗಿೞಿದು ದೇವೇಂದ್ರ ಬಂದನದೃಶ್ಯರೂಪದಲಿ || ೫೧

ಗರುಡನಹಿಂಗಳಿಗಿತ್ತು ಸುಧೆಯನು
ತೆರಳಿದನು ನಿಜಜನನಿ ಸಹಿತಾ
ದುರುಳರೆಲ್ಲರು ಪೋಗಿ ನದಿಗೆ ಸ್ನಾನವನು ರಚಿಸಿ |
ಧರಿಸಿ ವಸನವಿಭೂಷಣಂಗಳ
ನುರುತರದ ಸೌಗಂಧ್ಯಮಾಲ್ಯಾಂ
ಬರದಿನುರಗರು ಬರುತಲಿರೆ ಯಿಂದ್ರನದನೊಲಿದೊಯ್ದ || ೫೨

ಮತ್ತೆ ಬಂದರು ಕದ್ರುತನಯರು
ತತ್ತುಗೊಂಬೆವೆನುತ್ತ ಸುಧೆಯನು
ಸುತ್ತಿ ಕಾಣದೆ ಸತ್ತವೊಲು ಹಂಬಲಿಸಿ ಹಳವಿಸುತ |
ಮೃತ್ಯುಮುಖರಳಲುತ್ತಲವರಿಗೆ
ವಿಸ್ತರದಿ ನಿಧಿಸುವುದ ಸುಧೆಯು[1]
ಚಿತ್ತವಿಸಿ ಮುನಿಗಳಿರ ದೈವಪ್ರೇರಿತವನೆಂದ || ೫೩

ವಿನತೆಯು ದಾಸ್ಯವನ್ನು ಬಿಡಿಸುವಿಕೆ.

ಆತಗುವಿಕೆ ಕೇಳೆಂದನಿಂದಿರ
ನಾಥ[2] ಗೆಱಗಿ ಸಿರಿಗರುಡದೇವರ

[1] ಸುಧೆಯುನೀವು, ಕ. ಖ. [2] ಅಹಗಲಿಕೆಕೇಳೆಂದು ಇಂದ್ರನು ಯುಡು, ಕ. ಖ.

ಝುಡಿತೆಯಲಿ ತಾ ಕಳುಹೆ ಬಂದನು ಕದ್ರುವಿನ ಮನೆಗೆ ।
ತಡೆಯದ್ಯೆದಿದ ಸುಧೆಯ ತೋಱಸಿ
ಯಡಿಗೆಱಗಿ ತನ್ನಾತ್ಮಜನನಿಯು
ಬಿಡಿಸಿದನು ತಾ ಸೆಱೆಯನಾಕ್ಷಣ ಮುನಿಪ ಕೇಳೆಂದ ॥ ೫೪

ಗರುಡನು ವಿತಳಕ್ಕೆ ಹೋಗಿ ಸರ್ಪಗಳನ್ನು ನುಂಗುವಿಕೆ.

ಇನ್ನು ಹೇಳ್ವೆ ವ್ಯಾಳಜಾತಿಯು
ಕುನ್ನಿಗಳಗಿನ್ನೆಂತು ಯೆನುತಲಿ
ಪನ್ನಗಾರಿಯು ವಿತಳಕೆಱದನು ನಿಮಿಷಮಾತ್ರದಲಿ ।
ಪನ್ನಗರ ಮೋಹರವ ನೆಲ್ಲವ
ಮನ್ನಿಸದೆ ಲೇಸಾಗಿ ನುಂಗಿದ
ತನ್ನ ಜನನಿಯು ಹುಸಿದು ತೊತ್ತನು ಮಾಡಿ ಕೊಟ್ಟುದಕೆ ॥ ೫೫

ಆಗ ಸರ್ಪಮುಖ್ಯರು ಗರುಡನಿಗೆ ವರ್ಷಕ್ಕೊಮ್ಮೆ ಕಪ್ಪವಂ ಕೊಡಲೊಪ್ಪಲು ಕೊಲೆ ಬಿಡುವಿಕೆ.

ಉರಗಜಾತಿಯನ್ನೆದೆ ನುಂಗಲು
ನೆರೆದು ನಾಲ್ವರು ಬಂದು ನಮಗಿ
ನ್ನರಿದು ಬದುಕಲು ನಿನ್ನ ಕಯ್ಯೊಲದೆಂದು ಬಿನ್ನವಿಸೆ ।
ಗರುಡದೇವರು ಭಟಿಕ ನಾಗರ
ಹಿರಿಯರೊಳು ಪರಿವಿಡಿಯೆ ನುಡಿ
ದರು ಸುರರ ದಿನಕೊಂಮ್ಮೆ ಕೊಡುವುದು ನಮಗೆ[1] ಕಪ್ಪವನು ॥

ಎನಲು ಶ್ರಾವಣಶುದ್ಧ ಪಂಚಮಿ
ದಿನದಿ ಕೊಡುವೆವು ನಿಮಗೆ ಕಪ್ಪವ
ನೆನಲು ಬಿಟ್ಟನು ಕೊಲೆಯನಾಕ್ಷಣ ಗರುಡನಹಿಕುಲದ ।
ಮನವೊಲಿದು ಕರ್ಕೋಟಕನ ತಾ
ವಿನತೆಯಾತ್ಮಜ ಕರೆದು ನುಡಿದನು
ಅನುಜ ಕೇಳ್ಳೆ ನಿನ್ನ ನೆನೆವರು ಧನ್ಯರಹರೆಂದು ॥ ೫೭

1 ಕೊಡುವೆವು ನಿಮಗೆ, ಕ. ಖ.

ತಾಯು ಬಳಿಗೆ ಹೋಗಿ ಇನ್ನೇನಪ್ಪಣೆಯೆನ್ನಲು ನನ್ನ ಮನೋರಥ
ಸಂಪೂರ್ಣವಾಯಿತೆಂದು ಹೇಳುವಿಕೆ.

ಇತ್ತಲಾಜನನಿಯು ಹೊರೆಗೆ ವಿಪ
ಗೋತ್ತಮನು ನಡೆತಂದವನೆಱಗಿದ
ನುತ್ತಮಾಂಘ್ರಿಗಳಿಂಗೆ ಬೆಸಸಿನ್ನಾವುದೆನಗೆನುತ |
ಪುತ್ರವಚನವನಾಲಿಸುತ ಪುಳ
ಕೋತ್ತರದ ಸುಪ್ರೇಮಜಲಸಂ
ವೃತ್ತಲೋಚನೆ ಯುಪ್ಪಿದಳು ಸಂಪೂರ್ಣವಾಯ್ತೆನುತ ॥ ೫೮

ಎಸೆವನೀಪರಿ ಗರುಡದೇವನು
ದೆಸೆ ಪೊಗಳೆ ಯಶ್ರಮದಲತಿವಾ
ನುಷಪರಾಕ್ರಮಸತ್ವಬಲಸಂಯುಕ್ತನೆಂದೆನಿಸೆ |
ಶಶಿವದನೆ ವಿನತೆಯು ಮನೋರಥ
ದೆಸಕ ಫಲವಾದಂತೆ ರಮಿಸುತ
ಋಷಿಕುಲದ ಧರ್ಮದಲಿ ಸುಸ್ಥಿರವಾಗಿ ಯೆಸೆದಿರ್ದ ॥ ೫೯

ಆವನಿದನೋದುವನು ಕೇಳುವ
ನಾವನಿದನುತ್ತಮಪಿಪಂಗಮ
ದೇವನುದಯವನಮಳಚಾರಿತ್ರವನು ಮನವೊಲಿದು |
ಕಾವನವರನು ಪರಮಕಾರು
ಣ್ಯಾವಲೋಕನದಿಂದ ಸೌಖ್ಯವ
ನೀವ ಸಿರಿಸಿತ್ಯಾತ್ಮನಾರಾಯಣನು ಕರುಣದಲಿ ॥ ೬೦

ಹತ್ತನೆಯ ಸಂಧಿ ಮುಗಿದುದು.

# ಹನ್ನೊಂದನೆಯ ಸಂಧಿ.

———:o:———

ಸೂಚನೆ.

ಹೇಳಿದನು ಗರುಡಪ್ರಭಾವದ
ಮೂಲಕಾರಣಸಂಗತಿಯಿನಾ
ವಾಲಖಿಲ್ಯರ ಚರಿತವನು ಸಂಕ್ಷೇಪದಲಿ ಸೂತ ‖

ಗರುಡನ ಪರಾಕ್ರಮಾದ್ಯತಿಶಯಕ್ಕೆ ಕಾರಣ ಪ್ರಶ್ನೆ.

ಕೇಳಿದೆನೆಲೈ [1] ಸೂತ ತ್ರಿಭುವನ
ಪಾಲಕರನೆಲ್ಲರನು ಖಗಪತಿ
ಸೋಲಿಸಿದನು ಸಮಗ್ರಬಲತೇಜಃಪ್ರತಾಪದಲಿ ।
ಪೇಳಿಗೆಯು ವಿಕ್ರಮದ ಲಕ್ಷ್ಮಿಯು
ಮೂಲಕಾರಣವಾವುದುತ್ತಮ
ಶೀಲಗುಣಸಂಪನ್ನ ಹೇಳೆನಗೆಂದನಾ ಮುನಿಪ ‖ ೧

ಉತ್ತರದಲ್ಲಿ—ಕಶ್ಯಪರ ಯಾಗಾರ್ಥವಾಗಿ ಸಮಿತ್ಕು
ಶಾದಿಗಳನ್ನು ತರಲು ಆಜ್ಞಾಪಿಸುವಿಕೆ.

ಎಂದೊಡೆಂದನು ಸೂತನಧಿಕಾ
ನಂದದಲಿ ಶೌನಕಗೆ ಭೃಗುಕುಲ
ನಂದನನೆ ಕೇಳಾದೊಡಾ ವಿಹಗೋತ್ತಮೋದ್ಭವವ ।
ಅಂದವನು ಹೇಳುವೆನು ಕಶ್ಯಪ
ನೊಂದುದಿನ ವರಯಾಗಕರ್ಮವ
ನಿಂದುಮಾಡ್ಪೆನೆನುತ್ತ ಬೆಸಸಿದನಾತ್ಮಜರಿಗೊಲಿದು ‖ ೨

1 ಕೇಳಿದೆನ್ನೈ, ಕ. ಖ.

ವರಸಮಿತ್ಕುಶಗಳನು ತಹುದ
ಧ್ವರಕೆ ನೀವೆಂದೆನುತ ನಿಜಪು
ತ್ರರಿಗೆ ವಾಸವಮುಖ್ಯರಿಗೆ ವರವಾಲಖಿಲ್ಯರಿಗೆ ।

ಅಪ್ಪಣೆ ಪಡೆದು ಮಕ್ಕಳೆಲ್ಲರು ಸಮಿತ್ಕುಶಾದಿಗಳನ್ನು ತರುವಿಕೆ.

ಕರೆದು ಬೆಸಸಿದರಿವರು ವಿಪಿನಾಂ
ತರಕೆ ಹೋಗಿ ಸಮಿತ್ಕುಶಾದ್ಯ
ತ್ತರಮಹಾಧ್ವರಸಾಧನವ ಸಾಧಿಸಿದರೊಲವಿನಲಿ ॥ ೩

ಸಂದ ಮಖಸಾಧನಸಮಿತ್ಕುಶ
ವೃಂದವನು ವಿಪಿನಾಂತರದ ವರ
ಕಂದಮೂಲಫಲಂಗಳನು ಸಂವರಿಸಿ ತಮತಮಗೆ ।
ತಂದು ಹೊಱೆಗಳ ಕಟ್ಟಿ ವರಮುನಿ
ವೃಂದವಾಸವಮುಖ್ಯರಮರರು
ಬಂದರೆಲ್ಲರು ಹೊತ್ತುಕೊಂಡರು ಮರಳಿದರು ಮನೆಗೆ ॥ ೪

ಆಗ ಇಂದ್ರನು ಮಾರ್ಗದಲ್ಲಿ ಬರುತ್ತಿರುವ ವಾಲಖಿಲ್ಯರಂ ಕಂಡು
ಪರಿಹಾಸಮಾಡಿ ದಾಟ ನಡೆಯುವಿಕೆ.

ಕಂಡನಾಖಂಡಲನು ಬರುತು
ದ್ದಂಡತೇಜದ ವಾಲಖಿಲ್ಯರ
ಮಂಡಲವನಂಗುಷ್ಠಮಾತ್ರಶರೀರರೆಂದೆನಿಸಿ ।
ಮಂಡೆಗಳಬೊಂದೊಂದು ಸಮಿಧೆಯ
ಕೊಂಡು ಕೃಶತರಗಾತ್ರರೆನೆ ಮುಂ
ಕೊಂಡು ಹೋಗುತ್ತಿರಲು ಮುಮ್ಮಾರ್ಗದಲಿ ಮುನಿನಿಕರ ॥ ೫

ಬಳೆಯುತವೆ ಕೃಶಸೂಕ್ಷ್ಮಕಾಯರು
ಕೊಳಚಿನೀರಲಿ ಮುಳುಗುತೇಳುತ
ಬಳಲುತೈತರೆ ಮುಂದೆ ಹೋಹ ಮಹಾಮುನೀಶ್ವರರ ।
ಬಳಗವನು ಕಾಣುತ್ತ ನಕ್ಕನ

ತುಳಬಲಾನ್ವಿತನಧಿಕಗರ್ವದ
ಬಲಘುಭಾರವ ಹೊತ್ತುಕೊಂಡೈತರುತ ಮಾರ್ಗದಲಿ ॥ ೬

ಅಕಟಕಟ ಕೃಶಗಾತ್ರರತಿ ಬಾ
ಲಕರು ಭಾರಾಕ್ರಾಂತನಿಜಮ
ಸ್ತಕರೆನಿಸಿ ಕುಳಿಗಳಲಿ ಬೀಳುತ್ತೇಳುತಳಲುತ್ತಾ ।
ಶಕುತಿಹೀನರು ಹೋಹುದನು ಮತಿ
ವಿಕಳನೀಕ್ಷಿಸಿ ಗರ್ವದಲಿ ಪಾ
ಮಕನವೋಲಿರೆ ದಾಂಟಿ ನಡೆದನು ಮರತಪಸ್ವಿಗಳ ॥ ೭

ಆಗ ಇಂದ್ರನ ಮೇಲೆ ವಾಲಖಿಲ್ಯರ ಕೋಪ.

ಕೇಳು ಶೌನಕ ಕಂಡುದಾಮುನಿ
ಜಾಲವಮರೇಶ್ವರನ ನಿಜಕೃತ
ಹೇಳನವನುರುತರತಪೋಜ್ವಾಲೆ ಕೋಪದಲಿ ।
ಮೇಳವಡೆದುದು ನೋಡಿ ಮೇಲೆ ಕ
ರಾಳನಯನರುಸುರಿದನೆ ಯೆಡ
ಗಾಲನದಕೇನಾಯ್ತುನುತ ಕನಲಿದರು ಸುರಪತಿಗೆ ॥ ೮

ಹೋ ಹೊ ಕಂಡಿರೆ ಗರ್ವವನು ಘನ
ವಾಹನನಸಮರೂಪ [1] ವಿಕ್ರಮ
ಬಾಹುಬಲಸಂಪನ್ನ ತಾನೆಂದಧಿಕತರಮೆಸೆವ ।
ಸಾಹಸಿಕತನವವನು ದುರ್ಬಲ [2]
ದೇಹಿಗಳ ಸಾಮರ್ಥ್ಯಬಲವನು
ಹೂಹೆ ನೋಡಲಿ ಯೆನುತ ಗರ್ಜಿಸಿದುದು ಮುನಿಸ್ತೋಮ ॥ ೯

ಬೇರೆ ಇಂದ್ರನನ್ನು ಮಾಡಬೇಕೆಂತ ಯಾಗವನ್ನು ಆರಂಭಿಸುವಿಕೆ.

ಇಂದ್ರತನದೈಶ್ವರ್ಯಮದದಲಿ
ಮುಂದುಗಾಣನು ಮಾಡ್ಪೆವಿನ್ನೊ

1 ವಾಹನಮುವಾರೂಪ್ಯ, ಕ. ಖ. 2 ನಹನಾಹನುದುರ್ಲಭ, ಕ. ಖ.

ಬ್ಬಿಂದ್ರನನು ತೆಗದೀತನಿಂದ್ರತ್ವವನು ಬೇರೊರಿಸಿ ।
ಕೊಂದೊಡಹುದಪಕೀರ್ತಿ ತಮಗದು
ಹೊಂದುವದು ಬೇಡೆನುತ ತಮ್ಮೊಳ
ಗೊಂದು ಮತವನು ಮಾಡಿದರು ತೊಡಗಿದರು ತಾವದಕೆ ॥ [1] ೧೦

ಮೊದಲುಗೊಂಡರು ಬೇಱೆ ಮಖವನು
ಮದಮುಖನನೆಬ್ಬಟ್ಟಿ ಸುರಪನ
ಪದವನೇಱುವ ವೀರ್ಯಶೌರ್ಯಬಲೋಪಪನ್ನನನು ।
ತ್ರಿದಶಪತಿಯನು ಪಡವೆವಾವಂ
ದುದಿತದಿವ್ಯಮನೋರಥದಲ
ಗ್ಗದ ಮಹಾಮುನಿವರರು ನೆಗೞಿದರಧ್ವರಕ್ರಿಯುವ ॥ ೧೧

ಸರ್ವವಿಷಯದಲ್ಲಿ ಇಂದ್ರನಿಗಿಂತ ಅಧಿಕನಾದವನು ಜನಿಸಬೇಕೆಂದು
ಆಹುತಿಕೊಟ್ಟು ಪ್ರಾರ್ಥಿಸುವಿಕೆ.

ಶೌರ್ಯದಲಿ ಶಕ್ರಂಗೆ ನೂರ್ಮಡಿ
ವೀರ್ಯದಲಿ ಸಾಸಿರ್ಮ್ಮಡಿ ಬಲ
ಸ್ಥೈರ್ಯವಿಕ್ರಮನಿಜಪರಾಕ್ರಮಗುಣಸಮೃದ್ಧಿ ಯೊಳುಂ [2] ।
ಧೈರ್ಯದಲಿ ಹದಿನಾಲ್ಕುಜಗಕನಿ
ವಾರ್ಯನೆನಿಸಿ ಮಹಾಬಲಾಧಿಕ
ನಾರ್ಯನೊಬ್ಬನು ಜನಿಸಲೆಂಬಾಹುತಿಯ ನೀಡಿದರು ॥ ೧೨

ಕಾಮವೀರ್ಯನು ಕಾಮರೂಪನು
ಕಾಮಗಮನನು ಕಾಮತೇಜೋ
ಧಾಮ ಕಾಮಬಲಾನ್ವಿತನು ಕಾಮಪ್ರದನು ಧರೆಗೆ ।
ಕಾಮಹರನಿಂದಧಿಕನೆನೆ ಸು
ತ್ರಾಮಲೋಕಭಯಂಕರನು ವರ
ಧೂಮಕೇತುವೆ ಜನಿಸಬೇಕೆಂದರು ಹುತಾಶನಗೆ ॥ ೧೩

---

[1] ತಾಪಸರ, ಕ. ಖ. [2] ವಿಕ್ರಮಪರಾಕ್ರಮಬಲೈಶ್ವರ್ಯದ ಸಮೃದ್ಧಿಯಲಿ, ಕ. ಖ.

ಯಾಗ ಕಾರಣವೇನೆಂದು ಕಶ್ಯಪರ ಪ್ರಶ್ನೆ.

ಕಂಡನದ ಕಶ್ಯಪನು ಮಿಗೆ ಬೆಸ
ಗೊಂಡನೇನನು ಬಯಸಿದಿರಿ ಕೈ
ಕೊಂಡಿರೇತಕೆ ಯಾಗಕರ್ಮವನೆಲೆ ಮುನೀಂದ್ರರಿರ ।
ಚಂಡತೇಜೋನಿಧಿಗಳಿರ ಬ್ರ
ಹ್ಮಾಂಡಸುಖನಿಸ್ಪೃಹರಿದೇನೆನೆ
ಮಂಡಲದ ಮುನಿವರರು ಪಿತಗೆಂದರು ಮನೋರಥವ ॥ ೧೪

ಇಂದ್ರಗೆ ಶತ್ರುವಂ ಪಡೆಯಲೆನ್ನಲು ಇಂದ್ರನಪರಾಧವೇನೆಂದು ಕೇಳುವಿಕೆ.

ತಂದೆ ಕೇಳಾದೊಡೆ ಸುರೇಂದ್ರನ
ಕೊಂದು ಕೂಗುವ ವೀರನೊಬ್ಬನ
ಸಿಂದು ತಾವಭ್ಯರ್ಥಿಸಿದೆವೀ ಹವ್ಯವಾಹನನ ।
ಎಂದೊಡೇನನ್ಯಾಯವನು ನಿಮ
ಗಿಂದ್ರನಾಚರಿಸಿದನು [1] ಕೊಲುವಿರಿ
ನಂದನರೆ ನೀವೇಕೆನಲು ಹೇಳಿದರು ಮುನಿವರರು ॥ ೧೫

ಐಶ್ವರ್ಯಮದದಿಂದ ನಮ್ಮನ್ನು ದಾಟಿ ಹೋದುದೇ ಎಂದ ಉತ್ತರ.

ಮಱೆಯ ಮಾತೇಕಿಂದ್ರ ನಮ್ಮನು
ಕುಱಿತು ತನ್ನೈಶ್ವರ್ಯಮದದಲಿ
ನೆಱೆ ಕುರುಡುಗಣ್ಣಾಗಿ ನಮ್ಮನು ದಾಂಟಿ ಹೋದನಲ್ಲೈ ।
ಕೊಱತೆ ಯೆಮಗಲ್ಲಾದೊಡೇನಾ
ಚರಿಸಬೇಹುದು ಮೂಢಮತಿಯನು
ಹಱಿದು ಕಂಗಳ ಪಟಲವನು ಕೇಳಂದರಾಮುನಿಗೆ ॥ ೧೬

ವರಪರಾಭವವಂಜನವಲಾ
ಸಿರಿಯ ಮದದಲಿ ಕಾಣದವರಿಗೆ
ಪರಮಶಾಂತಿಪ್ರದವದೇ ಸಾಧನವದಱಪರಕೆ ॥

1 ಚರಿಸಿದಿರಿ, ಕ. ಖ.

ಉರಿಯ ಹೋಲುವ ವೀರನನು ತಾ
ಹರಿಯನಭ್ಯರ್ಥಿಸುವೆವದರಿಂ
ದುರಿವುದಿಂದ್ರನ ಮದವದೆಂದರು ಪರಮಋಷಿವರರು ॥ ೧೭

ಅಂತಹ ಯಜ್ಞವು ಬೇಡೆಂದು ಕಶ್ಯಪರ ವಚನ.

ಸಾಕು ಸಾಕನುಚಿತದ ಮಖವನ
ದೇಕೆ ಮಾಡುವಿರುಪಶಮಿಸುವುದು
ಪಾಕಶಾಸನನಿದಿರೆ ನಿಮಗೆ ಮಹಾಮುನೀಂದ್ರರಿರ ।
ಲೋಕಪೂಜ್ಯರು ನೀವು ವಿಗತವಿ
ವೇಕನೊಡನೆ ವಿರೋಧ ನಿಮಗೇ
ಕಾಕುಳವ ಮಾಡದಿರಿ ಭುವನವನೆಂದನಾಮುನಿಪ । ೧೮

ಪ್ರಳಯಮಾರುತಗೇಕೆ ನೂಕುವಿ
ರೆಳಮುಗಿಲ ಮೋಹರವನಿಂದ್ರನ
ಕೊಲೆಗೆ ಮೋಹವಿದೇಕೆ ನೋಡಿದೊಡಾಗದೇ ಮುನಿದು ।
ನಳಿನನಾಭನ ನೀವು ನಾವಿರ
ಲಳವೊಡುಡುವವರಾರು ನಿಮಗಾ
ನೆಲೆಯು ತೋರುವರಲ್ಲ ಮೂಲವ ಬಲ್ಲವರಿಗೆಂದ ॥ ೧೯

ಸೃಷ್ಟಿಯನು ಮಾಡುವನು ಕಮಲಜ
ನಷ್ಟದಿಕ್ಪಾಲಕರು ಕಾಯ್ವರು
ದುಷ್ಟನಿಗ್ರಹಮುಖದಲಿ ತ್ರೈಲೋಕ್ಯಸಂಸ್ಥಿತಿಯು[1] ।
ಅಷ್ಟಮೂರುತಿ ಕಡೆಗೆ ಹಣೆಗಣ್
ದೃಷ್ಟಿಯಲಿ ಹೋಮಿಸುವನಿದನು
ತ್ಕೃಷ್ಟಮತಿ ಮಾಡುವನದಾವನು ತಂದೆಗಳಿರೆಂದ ॥ ೨೦

ಯತಿಗಳಿರ ಕೇಳಿಂ ಜಗತ್ಸಂ
ಸ್ತುತಿಗೆ ಕಾರಣವನುಪಮತಪೋ

1 ಸ್ಥಿತಿಯು, ಕ. ಖ.

ವ್ರತಗಳಿವು ವಿಪರೀತಹೇತುಗಳಾದರಾರಿವಕೆ ।
ಗತಿ ವೃಥಾಶ್ರಮವಾಗದೇ ಸುರ
ಪತಿಯುದಾರೊಳಗಾರು ಲಕ್ಷ್ಮೀ
ಪತಿಯು ಪರುಠವವೀಜಗತ್ತ್ರಯವೆಂದನಾ ಮುನಿಪ ॥ ೨೧

ಬೇಡ ಮಖವಿದು ಪರಮಪುರುಷನ
ಜೋಡುಯಂತ್ರದ ಹಾಹೆ ಯೀಜಗ
ಮಾಡಬಾರದು ಮನಗೆ ಮಾಡಿದ ಕರ್ಮವಿದನಾರು ।
ಕೋಡಗಕೆ ಕಲ್ಪದ್ರುಮವ ನೀ
ಡಾಡುವರೆ ಕಡಿದೀತಪಸ್ಸಿನ
ಕೇಡ ನೋಡಿರಿ [1] ತಂದೆಗಳಿರೆಂದನು ಮುನಿವ್ರಜಕೆ ॥ ೨೨

ಅದಕ್ಕೆ ನಮ್ಮ ಸಂಕಲ್ಪದಂತೆ ನಿಮ್ಮ ವರದಲ್ಲಿಯೇ ಮಗನು
ಜನಿಸಲೆಂದು ಋಷಿಗಳ ಪ್ರಾರ್ಥನೆ.

ಆದೊಡಾಗಲಿ ನಿಮ್ಮ ವಚನವ
ನಾದರಿಸಿದೆವು ತಮ್ಮ ಸಂಕ
ಲ್ಪೋದಯಬಲದೆ [2] ಸುರಪತಿಯು ಗರ್ವವನು ಖಂಡಿಸುವ ।
ಆದವನು ನಿಮಗೊಬ್ಬ ಮಗನಲಿ [3]
ಭೇದನೈಕಸಮರ್ಥನಿದಕನು
ವಾದ [4] ಮಾತ್ರವನೀವುದೆಂದರು ವರಮುನೀಶ್ವರರು ॥ ೨೩

ಶಿಖಿಯುಪಾಸನದಿಂದ ಜನಿಸಿದ
ಸುಖಿಯು ಬಲವಂತನಹನೀ [5] ಶತ
ಮಖನನಭಿಗಮಿಸಿ ಬಳಿಕಾವೀರನಿಂದ್ರನಲಿ ।
ಸಖಿತನವನಾಗಿಸಲಿ ಪಾಲಿಪು
ದಖಿಳಲೋಕಹಿತಾರ್ಥ ತಿರ್ಮ
ಜ್ಮುಖವ ಧರಿಸಲಿ ಬೇಡಿಕೊಂಡೆನು ನಿಮ್ಮನಾನೆಂದ ॥ ೨೪

---

1 ನೋಡದಿರೆ, ಕ. ಖ. 2 ದಯವದೆ, ಕ. ಖ 3 ನಲಿ, ಕ. ಖ.
4 ವಾಧ, ಕ. ಖ. 5 ಸುಖಿಮುಖನು ಬಲವಂತನೀತನು, ಕ. ಖ.

ಆಗ ಬ್ರಾಹ್ಮಣಾತಿಕ್ರಮ ಮಾಡಬೇಡವೆಂದು ಇಂದ್ರನಿಗೆ
ತಂದೆಯ ಬುದ್ಧಿವಾದ.

ಎಂದು ಮುನಿಗಳ ಕೈಯ್ಯಲಿತ್ತು ಪು
ರಂದರನ ಕೈವಿಡಿದು ತಂದೆರ
ವಿಂದನಯನನ ಮೊಮ್ಮನುಂ ಮಹವಿಂದು ತನಗೆನುತ ।
ಕುಂದಬಿಡಿಸಿದೆನವರ ಚಿತ್ತದ
ಮಂದಮತಿಯಾಗದಿರು ವಿಪ್ರರು
ವಂದ್ಯರಲ್ಲವೆ ಮಗನೆ ಯೆಂದನು ಸುರಪತಿಗೆ ಮುನಿಪ ॥ ೨೫

ಶ್ರೀ ಕೆಡುವುದಾಯುಷ್ಯ ಕೆಡುವುದು
ಲೋಕವೆರಡಱ ಸೌಖ್ಯ ಕೆಡುವುದು
ಬೇಕೆಲಹುದೈಶ್ವರ್ಯ ಕೆಡುವುದು ವಿಜಯವಿಕ್ರಮವು ।
ಲೋಕಪೂಜ್ಯದ್ವಿಜರವಜ್ಞೆ ಯ
ನೇಕಸುಕೃತವ ಕೆಡಿಸುವುದು ನರ
ಕೈಕಹೇತುವದೆಂದು ತಿಳಿ ನೀನೆಂದನಾಮುನಿಪ ॥ ೨೬

ಆಗ ಋಷಿಪ್ರಸಾದದಿಂ ಜನನವೇ ಗರುಡನ ಪರಾಕ್ರಮಕ್ಕೆ
ಕಾರಣವೆಂದು ಹೇಳುವಿಕೆ

ಎಂದು ಮರಳಿದನತ್ತಲಾ ಮುನಿ
ವಂದ್ಯಕಶ್ಯಪನಿತ್ತಲೀ ಮುನಿ
ವೃಂದವಮಾಡಿದುದವಭೃಥವನೈದಿದನು ಸುರನಾಥ ।
ಇಂದುಮುಖಿ ವಿನತೆಯಲಿ ಮುನಿಕುಲ
ವಂದ್ಯನಾಕಶ್ಯಪನ ಬಸುಱಲಿ
ನಂದನನು ಜನಿಸಿದನು ವೀರವಿಹಂಗಕುಲನಾಥ ॥ ೨೭

ಭುವನವಂದ್ಯನೆ ಕೇಳು ಬೞಿಕಾ
ಹವಮುಹಾವೀರಂಗೆ ಮುನಿಪ
ಟ್ಟವನು ಕಟ್ಟಿಸಿದನಭಿಷೇಕಾನೀಕವನು ರಚಿಸಿ ।

ಭುವನದಲಿ ಪಕ್ಷೀಂದ್ರನೀತನು
ದಿವಿಜರಿಂದ್ರನುಮಾಮಹೇಂದ್ರನು [1]
ಸವನಿಸಲಿ ವರಸಖ್ಯವಿಬ್ಬರಿಗೆಂದು ಪತಿಕರಿಸಿ ॥ ೭೮

ಆರು ಸರಿ ಖಗಪತಿಗೆ ಭುವನಾ
ಧಾರ ವಿಷ್ಣು ವನೊಲಿದು ಧರಿಸುವ
ಭೂರಿಬಲಸಾಮರ್ಥ್ಯವಿನ್ನೀಧರೆಗೆ ಗುಣನಿಧಿಗೆ ।
ಸಾರತಾಪಸವೀರತಪಕಾ
ಕಾರವಾಯ್ತೆನೆ ಗರುಡದೇವನ
ಭೂರಿಸುಮಹತ್ವ [2] ವನು ಬಣ್ಣಿಸಲರಿದು ತನಗೆಂದ ॥ ೭೯

ಫಲಕಥನ.

ಇದು ಮಹಾದುರಿತಾಘಹರ ಮಿಂ
ತಿದು ಮನೋರಥಸಿದ್ಧಿಗಾಗರ
ವಿದು ವಿನಾಶನಶತ್ರುಬಾಧಾಪರಣಸಾಖ್ಯಕರ ।
ಇದನು ಹೇಳುವ ಕೇಳುವಾಸದು
ಹೃದಯರನು ರಕ್ಷಿಸುವ ನೊಲಿದು
ಪದುಮದ್ರಶನಿತ್ಯಾತ್ಮನಾರಾಯಣನು ಕರುಣದಲಿ ॥ ೩೦

ಹನ್ನೊಂದನೆಯ ಸಂಧಿ ಮುಗಿದುದು.

---

1 ಮತೀಂದ್ರನಿಂದ್ರನು, ಕ. ಖ.  2 ಭೂರಿಮಹತ್ವ, ಕ. ಖ.

# ಹನ್ನೆರಡನೆಯ ಸಂಧಿ.

### ಸೂಚನೆ.

ಶೇಷನರ್ಥಿಸಿ ಪರಮಸೌಖ್ಯವಿ
ಶೇಷವನು ಚರಿಸಿದನು ತಪವನ
ಶೇಷವಿಷಯವ ತೊರೆದು ಪಡೆದನಶೇಷಸಂಪದವ ||

### ಶೌನಕಪ್ರಶ್ನೆ.

ಸೂತ ಹೇಳೇನಾಯ್ತು ಬಳಿಕಾ
ಮಾತೆ ಯಿತ್ತಾ ಶಾಪವುರಗ
ವ್ರಾತ ಪತಿಗಳಿಗೇನ ಮಾಡಿದರವರು ಪ್ರತಿಕ್ರಿಯವ |
ಆತೆರವ [1] ಹೇಳೆನಗೆ ಭುವನ
ಖ್ಯಾತರಲ್ಲವೆ ಕಾದ್ರವೇಯರು
ತಾತ ಹೇಳೆನಗೆನಲು ಮಗುಳಿಂತೆಂದನಾಸೂತ || ೧

### ಉತ್ತರದಲ್ಲಿ—ತಾಯ ಶಾಪದಿಂ ಸರ್ಪಗಳು ಚಿಂತಿಸುವಿಕೆ.

ಕೇಳು ಶೌನಕ ತಾಯ ಶಾಪವ
ಕೇಳುತವೆ ಮರುಗಿದರು ಬಹಳ
ಜ್ವಾಲೆಯಲಿ ಮುಳುಗಿದರು ಮರಣಭಯಾತುರರು ಬಳಿಕ |
ಹೇಳಿ ಫಲವೇಸಿನ್ನು ಮಾತೆಯ
ಕೀಳಶಾಪವ ಪರರಿಗುಸುರಿದೊ
ಡಾಳಿಗೊಂಬರು ಗತಿಯುದಿದ [2] ಕಿನ್ನಾವುದಕಟೆನುತ || ೨

---

1 ಆತುರರು, ಕ. ಖ.    2 ಖತಿಯುವಿದ, ಕ. ಖ.

ಈತೆಱದಿ ಕಾಕೋದರಾವಳಿ
ಭೀತಿ ಗೊಳುತವೆ ತಮ್ಮೊಳೊಂದ
ಖ್ಯಾತಿಯುಲಿ ತಾವೇಱುವ ತೆಱನಾಯ್ತೆನುತಲಳುಕುತಿರೆ ।

ಅವರಲ್ಲಿ ಶೇಷದೇವರು ವಿಶೇಷವಾಗಿ ದುಷ್ಟ ಸರ್ಪಗಳ
ಸಂಗವಂಬಿಟ್ಟು ತಪಸ್ಸನ್ನು ಮಾಡುವಿಕೆ.

ಜಾತಕಶ್ಯಪತನುಜರೊಳು ವಿ
ಖ್ಯಾತಮಹಿಮನು ಶೇಷನೆಂಬವ
ನಾತತುಕ್ಷಣ ಭೀತಿಗೊಂಡನು ತನ್ನ ಮನದೊಳಗೆ ॥ ೨

ಘೋರರೂಪರು ಘೋರಕರ್ಮರು
ಘೋರರೋಷವಿಶಿಷ್ಟಹೃದಯರು
ಘೋರತರವಿಷವೀರ್ಯದೂಷಿತಮುಖರು ಮೂಜಗಕೆ ।
ಘೋರತರಭಯದುಃಖಕಾರಿಗ
ಳಾರುವನು ಸೈರಿಸದ ಪಾಪಿ
ಚಾರರುರಗರೆನುತ್ತ ಬಿಸುಟನು ಸಂಗವನು ಖಳರ ॥ ೪

ದುರ್ವಿಸೀತರು ಸೈರಿಸರು ಕಿಱಿ
ಯುವ್ವೆಯನು ತತ್ಪುತ್ರವೆಯ- ನು [1]
ಸರ್ವವೀರರ ದೇವನಲ್ಲಾ ಗರುಡನಾತನಲಿ ।
ನಿರ್ವಹಿಸುವರೆ ವೈರವನು ವಿಷ
ಗರ್ವಿತರು ಮುಪ್ಪುತ್ರರವರನು
ಸರ್ವಥಾ ಬಿಡಳವ್ವೆ ತನಗಿನ್ನಾರು ಗತಿಯೆಂದ ॥ ೫

ವೈರವತಿಬಲನೊಡನೆ ಜನನಿಯು
ಘೋರತರವೆಹ ಶಾಪವಿಂತೆರ
ಡಾಱು ಮಾಣಿಸಬಹುದು ಬಂದುದು ಕೇಡು ತನಗಿನ್ನು ।

---

1 ರಿವರನು, ಕ. ಖ.

ಆರು ಗತಿ ಕಾಣರು ದುರಾತ್ಮರು
ಬೇರುಗೊಲೆಯುನೆನುತ್ತ ಬಿಸುಟನು
ದಾರಮತಿ ಜನನಿಯುನು ಸಹಜನಿಜಾಪ್ತಬಾಂಧವರ ‖ ೬

ಸಂಗವೇ ಸುಡು ಕಷ್ಟದುರ್ಜನ
ಸಂಗವದಱಿಂ ಕಷ್ಟ ಮೊಪ್ಪೆನು
ಸಂಗವನು ಸಜ್ಜನರಲತಿಶಯಪುಣ್ಯವಂತರಲಿ ।
ಸಂಗ ಸಕಲಸ್ವಾರ್ಥಸಾಧನ
ಸಂಗವಾತ್ಮಸುಖೈಕಬಾಧನ
ಸಂಗಹೀನರ ಸಂಗ ಗತಿಯೆನುತ ಹೊಱವಂಟ ‖ ೭

ಇರದೆ ಹೊಕ್ಕನು ಗಂಧಮಾದನ
ಗಿರಿಯ ಪುಣ್ಯಗ್ರಾಮವೊಪ್ಪುವ
ಪರಮಪಾವನವೆನಿಸಿ ಮೆಱೆವಾಬದರಿಕಾಶ್ರಮವ ।
ಚರಿಸಿ ತಪವನು ದೇಶದೇಶಾಂ
ತರದೊಳಗೆ ತೊಳಗುತ್ತ ಗಮಿಸಿದ
ನಿರದೆ ಗೋಕರ್ಣಾದಿಪುಣ್ಯಕ್ಷೇತ್ರವಿದ್ದೆಡೆಗೆ ‖ ೮

ಬಂದನಾಪುಷ್ಕರಕೆ ಮಗುೞೆ
ಲ್ಲಿಂದ ಹಿಮಗಿರಿಪಾರ್ಶ್ವದಾಶ್ರಮ
ವೃಂದವನು ಸಾರಿದನು ಸೇರಿದನುರುತಪೋಧನರ ।
ವೃಂದ [1] ವನು ಸಚ್ಚರಿತಗುಣಗಣ
ಕಂದವನು ಬಹುಕಾಲ ತಪದಲಿ
ನಿಂದು ನಿರ್ಮಲಹೃದಯನಿದ್ದನು ನಿಯಮನಿಷ್ಠೆಯಲಿ ‖ ೯

ಧರೆಯ ತೀರ್ಥಕ್ಷೇತ್ರನಿಕರವ
ನಿರದೆ ಸೇವಿಸುತಾತ್ಮನಿಷ್ಠೆಯ
ಲರಿಷಜಯನಿಂದ್ರಿಯವನಡಗಿಸಿ ಮೌನಿಯೆಂದೆನಿಸಿ ।

---

1 ವಂದ, ಕ. ಖ.

ಪರಮಪಾವನಕೀರ್ತಿಸುಶ್ರವಾ
ವಿರಚಿತಾಮಳತಪವ ತಾನಾ
ಚರಿಸುತಿರ್ದನು ಶೇಷನಪಗತದೋಷನೆಂದೆನಿಸಿ ॥ ೧೦

ಭಾಸುರಾಮಲವೃಮಶರೀರನು
ಶೇಷನಾಚರಿಸಿದನು ತಪವನು
ಭೂಶಯನನಿರಶನಮಹಾಕ್ಲೇಶಂಗಳನು ಧರಿಸಿ ।
ಪೈಸರಿಸಿ ನಡುಬಾನೊಳಡಗುವ [1]
ನೇಸಱಿನ ತಾಪದಲಿ ಮೃದುಲಿ [2]
ಶೇಷಕುಸುಮದ ತೆಱದಿ ಬಾಡಿದನಧಿಕತಾಪದಲಿ ॥ ೧೧

ಈರೀತಿ ತಪಸ್ಸಿನಲ್ಲಿರುವ ಶೇಷದೇವರ ಬಳಿಗೆ ಬ್ರಹ್ಮನ ಆಗಮನ.

ಇನಿತು ತೀವ್ರತಪಃಪ್ರಭಾವದ
ನೆನಿಸಿ ಕೃಶತರಗಾತ್ರನನಶನ [3]
ಮುನಿಜನರ ಜಾಲದಲಧಿಷ್ಠಿತಿಮಂತ [4] ನೆಂದೆನಿಸಿ ।
ಅನಘ [5] ನಿರಲಾಪ್ರಷ್ಠಲವನದಿ [6]
ನೆನೆಯುತಿರಲ್ಕೈತಂದ [7] ಪದುಮಭ
ವನು ನೋಡಿಯುತ್ತಲಿಸಿ [8] ಸುರೇಶ್ವರಮುನಿವರರು ಸಹಿತ ॥ ೧೨

ಮೊಳಗಿವ ದುಂದುಭಿಶಂಖವೀಣಾ
ಮುರಜಪಟಹಪಟುಸ್ವನದಿನಂ
ಬರದಿಸೆಡೆದನು ಸಿದ್ಧವಿದ್ಯಾಧರರ ಕಿನ್ನರರ ।
ಭರಿತಜಯರವಸಂಸ್ತುತಿಯುಳ
ಪ್ಸರಸಿಯರ ಸಂಗೀತನೃತ್ಯದ
ಪರಮವಿಭವದಲಂದು ವೈದೋಱಿದನು ಕಮಲಭವ ॥ ೧೩

---

1 ಮರ.ದೇಹಕರಗುವ, ಕ. ಖ.
2 ನೇಸರಂನೀತೊಪ್ಪಿ, ಕ. ಖ.
3 ಕೃಶಗಾತ್ರನಪ್ರಾಂಗದಾ, ಕ. ಖ.
4 ಜನಜಾಲದಲಧಿಷ್ಠಿಗಂತ, ಕ. ಖ.
5 ಅನಟ. ಕ. ಖ.
6 ಲಾವಣ್ಯವಲಿ, ಕ. ಖ.
7 ನೆನೆದೈತಂದನಲ್ಲಿಗೆ, ಕ. ಖ.
8 ವನಪಿಳಾ, ಕ. ಖ.

ಬ್ರಹ್ಮನಂ ಕಂಡು ಶೇಷಕೃತಸ್ತುತಿ.

ಕಂಡನಿದಿರಲಿ ಹೊಳೆದು ತೋಱುವ
ಪುಂಡರೀಕಾಸನನ ಪದದಲಿ
ದಿಂಡುಗೆಡಹಿದನೊಡಲನವನಿಗೆ ಜಯ ನಮೋ ಯೆನುತ |
ಗಂಡುಗಲಿ ತಾಪಸರ ದೇವನು
ಮಂಡೆಯಲಿ ಮುಕುಳಿತಕರಾಂಜಲಿ
ಪುಂಡರೀಕವ ಹೊತ್ತು ಕುಣಿದನು ಭಕ್ತಿಭಾವದಲಿ ‖ ೧೪

ಜಯ ನಮೋ ಜಗದೇಕಕರ್ತೃವೆ
ಜಯ ಜಯತು ಜಗದೀಶ್ವರೇಶ್ವರ
ಜಯ ನಮೋ ಜಗದೇಕಭರ್ತೃವೆ ಜಯ ಮಹೇಶ್ವರನೆ |
ಜಯ ನಮೋ ಜಗದುದ್ಭವಸ್ಥಿತಿ
ಲಯವಿಹಾರನೆ ನಿಗಮಸಾರನೆ
ಜಯ ವರೇಣ್ಯ ಶರಣ್ಯ ಘನಕಾರುಣ್ಯವಿಗ್ರಹನೆ ‖ ೧೫

ರಕ್ಷಿಸೆಂದು ಪ್ರಾರ್ಥಿಸಲು ಬ್ರಹ್ಮನು ತಪಸ್ಸಿಗೆ ಕಾರಣವೇನೆಂದು
ಕೇಳಲು ಉತ್ತರ.

ತಂದೆ ರಕ್ಷಿಸೆನುತ್ತ ಚರಣ
ದ್ವಂದ್ವದಲಿ ಮಯ್ಯಿಕ್ಕಿ ಬಿದ್ದಿರ
ಲಿಂದಿರಾರಮಣಾತ್ಮಜನು ಕಾರುಣ್ಯದಲಿ ನೋಡಿ |
ಕಂದ ಬಾರೈ ಹೇಳದೇತಕೆ
ಬಂದೆ ತಪದಲಿ ಕಾರಣವ ಹೇ
ಳೆಂದು ಮೈದಡವಿದನು ನಸುನಗುತಹಿಕುಲೇಶ್ವರನ ‖ ೧೬

ಕಾರಣವ ಬೆಸಗೊಂಬೆ ಜೀವ
ಪ್ರೇರಕನೆ ಚೈತನ್ಯರೂಪನೆ
ಬೇಱೆ ಬೆಸಗೊಳಲೆಂತು ಬೇಡನು ತಾಪಿಗಳ ತಿಳಿವ |
ಕಾರಣಜ್ಞನೆ ಕದ್ರುಪುತ್ರರು

ಮೋರೆಯನು ಮಾಡುವರು ಪಾಪಾ
ಚಾರರೊಡನಿರಲಾರದಿತ್ತಲು ಬಂದೆ ನಾನೆಂದ ॥ ೧೭

ಮಂದಮತಿಗಳು ವಿನತೆಯನು ನೆಱೆ
ನಿಂದಿಸುವರಾವಿನತೆಯಾತ್ಮಜ
ನೆಂದೊಡವನನುವಿಂಗೆ ಮುನಿವರು ಪಾಪಕರ್ಮಿಗಳು ।
ಬಂದುದವರಿಂದಳಿವು ವಂಶಕೆ
ತಂದೆ ಬಳ್ಳಿ ವೈರವೇ ಸಲೆ
ಸಂದೊಡೆನ್ನನು ಜಱಿದು ಕಳೆವರು ಜಾತಿಯಲಿ ಖಳರು ॥ ೧೮

ಓವನೆನಗಿನ್ನೇನು ಗತಿ ಯೆನು
ತೀವಿಪಿನವನಗಿರಿನದೀಜಲ
ಸೇವೆಯಲಿ ಸಲೆ ಪಾಪಕರ್ಮವ ಜಱಿದು ಸದ್ಗತಿಗೆ ।
ದೇವ ಪದಸೇವೆಯನು [1] ಮಾಳ್ಪೆನು
ನಾವೆನೆಂದೇ ನೆನೆದು ತಪದಲಿ
ಭಾವವನು ಮಾಡುವೆನು ಮನದಲಿ ನಿಮ್ಮ ಶ್ರೀಪದದ ॥ ೧೯

ಕಂಡೆನಿನ್ನಗೆ ದೇವ ನಿಜಪದ
ಪುಂಡರೀಕವನಿವನು ಬಹುಳೋ
ದ್ದಂಡಪುಣ್ಯದ ಫಲದಪೂರಾಯದ ಸಮೃದ್ಧಿಯಲಿ ।
ಹಿಂಡಿದೆನು ಮನದಳಲನಾರ್ತಿಯ
ಖಂಡಿಸಿದೆನಿನ್ನೊಂದು ಬಿನ್ನಹ
ಪುಂಡರೀಕೋದ್ಭವನೆ ಚಿತ್ತವ ಕರುಣಿಸುವುದೆಂದ ॥ ೨೦

ತಾಯ ಶಾಪಕ್ಕೆ ಸಹೋದರರ ದುಶ್ಚೇಷ್ಟೆಗೆ ಭೀತಿಪಟ್ಟು ತಪವಂ ಮಾಡುವೆನೆನಲು ಬ್ರಹ್ಮನ ಅಭಯವಚನವು ವರಪ್ರದಾನವೂ.

ಎಂದು ತಪವನು ನೂಕಿ ಚರಣ
ದ್ವಂದ್ವದಲಿ ಹೊರಳುತ್ತ ರಕ್ಷಿಸು

---

1 ಸಂಬಳವ, ಕ. ಖ.

ತಂದೆ ತನ್ನ ಸನಾಥನನು ಕಾರುಣ್ಯದಿಂದೆನಲು ।
ಮಂದಹಾಸವಲೆತ್ತಿದನು ಬಾ
ಕಂದ ಬಾರೆಲೆ ಕೊಡುವೆ ನೀ ಗೋ
ವಿಂದನಂಘ್ರಿಯ ಪ್ರಿಯನೆ ಬಾ ಯೆನುತಪ್ಪಿದನು ತೆಗೆದು ॥ ೨೧

ಭುವನವಂದ್ಯನೆ ಕೇಳು ಮೇಲೊರೆ
ವೆ ವರವೀವುದು ತನಗೆ ಮತಿ ಸಂ
ಭವಿಸಲಾಗವಸಂಗತದ ವರ್ಜಿಸಲಿ ಪಾಪಗಳು ।
ಸವೆಸಿಸಲಿ ಸತ್ಸಂಗ ಸದ್ಧ
ರ್ಮವನು ಮಾಡುವ ಪುಣ್ಯಮತಿ ಬೇ
ಡುವೆನು ಪುಣ್ಯಕೃಪಾಕರನೆ ಕರುಣಿಸುವುದೆಮಗೆಂದ ॥ ೨೨

ತಾಯ ಶಾಪವು ಖಳರ ಜೀವವ
ಬೀಯ ಮಾಡುವುದು ಬಿಡುಬೆದರು ಪಾ
ಪಿಗಳು ಬದುಕುವರೆ ಭೂತದ್ರೋಹಿಗಳು ದಿಟಕೆ ।
ಆಯುವಂತನೆ ನೀನು ಮನದಲಿ
ಬೇಯದಿರು ಬಾಧಿಸದು ನಿನ್ನನು
ತಾಯ ಶಾಪವಮಳಚರಿತನನೆಂದನಬುಜಭವ ॥ ೨೩

ಬೇಡು ವರವನು ಮಗನೆ ಸಂಶಯ
ಬೇಡ ಬಿಡು ಭೀತಿಯನು ಮನದಲಿ
ನಾಡೆ ಮೆಚ್ಚಿದೆನಮಳಚರಿತನೆ ಬೇಡಿಕೊಳ್ಳೆನಲು ।
ಕೂಡಿ ಕರಮುಕುಳವನು ಶಿರದಲಿ
ಬೇಡುವೆನು ಧರ್ಮವನು ಧರೆಯಲಿ
ಕೂಡೆ ಮತಿಯನು ಕರುಣಿಸುವುದೆಂದೆರಗಿದನು ಪದಕೆ ॥ ೨೪

ಎಂದೊಡಹುದೈ ವೀರ ತನ್ನನು
ಬಂದಿ ಪಿಡಿದ್ಯ ಮಗನೆ ಮೆಚ್ಚಿದೆ
ನಿಂದುಧರನಾಯುಷ್ಯವಾಗಲಿ ನಿನಗೆನುತ ಹರಸಿ ।

ನಿಂದು ತೆಗದಪ್ಪಿವನು ಕೊಟ್ಟನು
ಕಂದ ಕಾಂಕ್ಷಿತವರವನಾನಿ
ನ್ನೊಂದ ಹೇಳುವೆನದನು ಸುಸ್ಥಿರವಾಗಿ ಕೇಳೆಂದ ॥ ೨೫

ಭೂತಭೌತಿಕನಿಕರಸಹಿತೀ
ಭೂತಳವನಿದನೆಲ್ಲವನು ನೀ
ನೋತು ಧರಿಸೆಲೆ ಮಗನೆ ಚಲಿಸದ ವೋಲು ಸಂಗ್ರಹಿಸಿ ।
ಆತು ನಿಲ್ಲೆನಗಿಷ್ಟವದು ಸಲೆ
ಭೂತಹಿತವಾಪರಮಪುರುಷ
ಪ್ರೀತಿಕರವಿದಱಿಂದಧಿಕವಿಲ್ಲೆಂದನಬುಜಭವ ॥ ೨೬

ಇತ್ತೆನಜರಾಮರತೆಯನು ನಿನ
ಗುತ್ತಮೋತ್ತಮವೀರ್ಯಶೌರ್ಯಗು
ಣೋತ್ತರದ ಸಂಸಿದ್ಧಿಸಾನ್ನಿಧ್ಯವನು ನಿನಗನುತ ।
ಸತ್ವಸಿಧ್ಧಿ ಬೊಳ್ಳಸುತಿರಲಿ
ಗೋತ್ತಮನು ತಂದಿರಿಸು ಶಿರದಿ
ಹೊತ್ತುಕೊಂಬ ಚರಾಚರದ ಧೃತ್ಯ ನಿಮಗಾ[1] ನೆಂದ ॥ ೨೭

ವರದಾನವನ್ನನುಸರಿಸಿ ಭೂಮಿಯನ್ನು ಹೊರೆಯಲು ಪಾತಾಳಕ್ಕೆ
ಹೋಗೆಂದು ಬ್ರಹ್ಮನಾಜ್ಞೆ.

ಇತ್ತ ಮಗನೆ ಪಾತಾಳಲೋಕಕೆ.
ತಲೆಯಲಿರಿಸುವುದಲ್ಲಿ ಬಿಡಹೋಜಿ
ಸಲೆ ಸಮಸ್ತದ್ವೀಪಸಾಗರಶೈಲವನಸಹಿತ ।
ನಿಳಸದಂಡಕಟಾಹವಿದು ತಾ
ತಲೆಯಲಿರಿಸಿದ ಭಾರವಲಸದಿ
ರಿಳೆ ನಿನಗೆ ಮಾರ್ಗವನು ಕೊಡುವಳು ತಂದೆ ಹೋಗೆಂದ ॥ ೨೮

1 ನಿಮ್ಮಡಿಭೃತ್ಯನಾ, ಕ. ಖ

ಕಾರ್ಯವು ಸುಲಭವಾಗುವಂತೆ ಅನುಗ್ರಹಿಸಬೇಕೆಂದುಬೇಡಲು ಅನುಗ್ರಹಿಸುವಿಕೆ.

ನಿಮ್ಮಡಿಯ ಕೃಪೆಯುಂಟು ಹೋಗುವೆನು
ಹಮ್ಮ ನುಡಿವವನಲ್ಲ ಸಾಹಸ
ಸಮ್ಮತಬ್ರಹ್ಮಾಂಡವೆಲ್ಲಾ ನಿನ್ನ ಕಿಂಕರಗೆ ।
ಹೆಮ್ಮ ಗಂಡೆನು ಶಿರದಲಿಡು ನಿಜ
ರಮ್ಯ ಹಸ್ತಾಂಬುಜವನೆನುತಾ
ಬೊಮ್ಮನಂಘ್ರಿಯ ಬೀಳುಕೊಂಡನು ಶೇಷನಭಿನಮಿಸಿ ॥ ೧೯

ಹೋಗು ಸುಖಿಯಾಗೆನುತ ತಲೆಯನು
ತೂಗಿ ಶಿರದಲಿ ಕಯ್ಯನಿಟ್ಟನು
ರಾಗದಲಿ ಸಖ ನಿನಗೆ ಗರುಡನೆನುತ್ತ ಕೈವಿಡಿದು ।
ನಾಗವೈರಿಯು ಕರೆದು ಸಖ್ಯವ
ಭೋಗಿರಾಜನಲಾಚರಿಸಿ ಗುಣ
ಸಾಗರನ ಕಳುಹಿದನನಂತನನಧಿಕಕರುಣದಲಿ ॥ ೨೦

ಬ್ರಹ್ಮಗಮನಾನಂತರ ಶೇಷನ ಭೂಭಾರವಹನವರ್ಣನೆ.

ಇತ್ತಲಜನಡರಿದನು ನಭವನು
ಮೊತ್ತದಮರರು ಸಹಿತನಾಗಲು
ಲೋತ್ತಮನು ರಸೆಗಿಳಿದನಂದು ಮನೋನುರಾಗದಲಿ ।
ಹೊತ್ತು ನಿಂದನು ಧರೆಯ ನೊಂದೇ
ವೃತ್ತಫಣಿಮಂಡಲದಲರಳನು
ಮತ್ತಗಜ ಹೊಳುವಂತೆ ಶೇಷನಶೇಷಜನ ಹೊಗಳೆ ॥ ೨೧

ಸೃಷ್ಟಿಯನು ನೆಱೆ ಧರಿಸಲೆಂದಜ
ನಟ್ಟಕಂಬವೊ ಮೇಣು ಬೆಳ್ಳಿಯ
ಬೆಟ್ಟವೋ ಭವಗಿರಿಯೊ ಹೇಳೆನಲಧಿಕತೇಜದಲಿ ।
ವಿಷ್ಟಪಾಧೀಶ್ವರನ ಹೊಗಳಲು

ದೃಷ್ಟಿ ಮೋಹನಮೂರ್ತಿ ನಿಂದನು
ವಿಷ್ಣುರಶ್ರವಣಾಜ್ಞೆಯಲಿ ನಿಜಯೋಗಲೀಲೆಯಲಿ ‖ ೩೨

ಓಲಗಿಸಿದುದು ಸಕಲಪನ್ನಗ
ಜಾಲವಾತನ ಪದವನವನತ
ಮೌಳಿಯಲಿ ಸುರಸಿದ್ಧಕಿನ್ನರದೈತ್ಯದಾನವರು ।
ಹೇಳಿದುದನಾಚರಿಸುವೆರು ತಾ
ಹೇಲಿಲಖಿಯೆನು ಯೋಗಸಿದ್ಧಿಗೆ
ಮೂಲಭವನದ ತೆಱದಿ ರಂಜಿಸಿದನು ಜಗತ್ತ್ರಯವ ‖ ೩೩

ಇಂತು ಧರಿಸಿದನೊಂದು ಮುಖವಲ
ನಂತಭೂಮಿಯ ನಾಥನಾಜಗ
ದಂತರಂಗನಿವಾಸವಿಷ್ಣುವನೊಂದು ರೂಪದಲಿ ।
ಕಂತುಹರಭೂಷಣನೆನಿಸಿದನ
ನಂತಗುಣನಿಧಿ ಯೊಂದುರೂಪಿನ
ಲೆಂತು ಬಣ್ಣಿಸಲಳವೆ ನಾ ನಿಜಯೋಗಸುಖಸಿಧಿಯ ‖ ೩೪

ಎಸೆವನಿಂತು ಸಹಸ್ರಗುಣಗಣ
ವಿಸರನೆನಿಸಿ ಸಮಸ್ತಲೋಕಕೆ
ಶಶಿನಿಭಾಂಗನು ಮಂಗಳಪ್ರದನಾಗ ನೆಱೆ ಧರೆಸಿ ।
ವಸುಧೆಯನು ಲೀಲೆಯಲಿ ಭುವನ
ಪ್ರಸರಪಾವನನೆನಿಸಿ ಕರುಣಾ
ರಸಮಹೋದಧಿ ಯೋಗಸಾಂಖ್ಯಜ್ಞಾನಸಿಧಿಯೆನಿಸಿ ‖ ೩೫

ಫಲಕಥನ.

ಆವನಿದನೋದುವನು ಕೇಳುವ
ನಾವನಿದನೊಲಿದೀ ಮಹೋರಗ
ದೇವನಮಳಚರಿತವನು ಪಾವನಚರಿತ್ರನನು ।

1 ಭುಜಭವನ, ಕ. ಖ.

ಈವಿಮಳಪುಣ್ಯಾತ್ಮರನು ಕರು
ಣಾವಲೋಕನದಿಂದ ಸಂತತ
ಕಾವನಾಸಿತ್ಯಾತ್ಮನಾರಾಯಣನು ಮನವೊಲಿದು ॥ ೩

ಹನ್ನೆರಡನೆಯ ಸಂಧಿ ಮುಗಿದುದು.

# ಹದಿಮೂರನೆಯ ಸಂಧಿ.

ಸೂಚನೆ.

ವಾಸುಕಿಯ ತಂಗಿಯಲಿ ತೇಜೋ
ರಾಶಿಯೆನಲಾಸ್ತೀಕನೆಂಬ ಮ
ಹೀಸುರೋತ್ತಮನುದಿಸಿದನು ಸಂಪನ್ನಗುಣವನಧಿ ॥

ಇತರ ಸರ್ಪಗಳು ತಾಯ ಶಾಪಭಯದಿಂದ ಚಿಂತಿಸುವಿಕೆ.

ಕೇಳು ಶೌನಕ ವರಮಹೋರಗ
ಜಾಲವಾಸಿಜನನಿಯಿತ್ತಾ
ಕೀಳ ಭೀಕರಶಾಪದಲಿ ನೆಱೆ ಬೆಂದು ತಮ್ಮೊಳಗೆ ।
ಬಾಳುವಂದವದೆಂತೆನುತ ಸುಪಿ
ಶಾಲಮತಿಗಳು ಸುಯ್ದು ಚಿಂತಿಸಿ
ಕೋಳುವೋದರು ಮರಣಭಯದಲಿ ಬಹಳದುಸ್ಥಿತಿಗೆ ॥ ೧

ಈಸಮಸ್ತಮಹೋರಗರ ಕುಲ
ಭೂಷಣನು ಭುವನೈಕವಂದ್ಯನು
ವಾಸುಕಿಯೆನಿಪ್ಪುರಗಪತಿ ನೆರಹಿದನು ಮಂತ್ರಿಯುತರ ।

ಭೂಸುರೋರಗಮಂತ್ರಿಗಳನವಿ
ನಾಶವಂತಪುದೆನುತಿದಕೆ ಮು
ತ್ತೋಸರಿಸಬಾಳೋಚನೆಯ ಮಾಡಿದರು ತಮ್ಮೊಳಗೆ ॥ ೨

ಬಂದುದಲ್ಲಾ ಶಾಪವೆಲ್ಲರಿ
ಗಿಂದು ಸುಕುಲಕ್ಷಯಕೆ ಕಾರಣ
ತಂದುವಲ್ಲಾ ನಮ್ಮ ಮನದಲಿ *ಘೋರತರಭಯವ ।
ನೊಂದವಮತಿಗಳು ನಾವು ತಪ್ಪಿಸ
ವೆಂದವನು ಶಿಕ್ಷಿಯಿಸದೀಪರಿ
ತಂದೆಗಳಿರಿಪುದನುಚಿತವು ಸೀಮೆಯುಳಿದರೇ ಎಂದ ॥ ೩

ಹುಟ್ಟಿ ಜನಮೇಜಯನು ತಂದೆಯ
ಮುಟ್ಟಿದನು ತಕ್ಷಕನೆನುತ್ತವೆ
ಸುಟ್ಟು ಬೂದಿಯ ಮಾಳ್ಪ ನೆಱೆ ನಮ್ಮೆಲ್ಲರನು [2] ದಟಿಕೆ ।
ಇಟ್ಟ ಕಿಚ್ಚಿಮು ಜನಸಿ ನಮ್ಮನು
ಬಿಟ್ಟು ಹೋಪುದ ಕಾಣೆನೇತಕ
ದೃಷ್ಟಿವಿರಹಿತರಾಗಿ ನೀವಿಪಿರೆಂದನುರಗೇಂದ್ರ ॥ ೪

ಹೇಳಿ ಬುದ್ಧಿಯನಿಲ್ಲಿ ಶಾಪವ
ಸೋಲಿಸುವ ಪರಿಯುಂತು ಬಂದುದು
ನಾಳೆ ಶಿಕ್ಷೆಯುವೆಲ್ಲರಿಗೆ ಕಡು ಗೇಡು ನಾವಿನ್ನು ।
ಬಾಳುವುದು ಹುಸಿ ಬಱಿದೆ ಚಿಂತಾ
ಲೋಲಮತಿ ಮಱುಗಿದೊಡೆ ಫಲ ಕೃ
ಮೇಳವಿಸುವುದೆ ಭಾಗ್ಯಹೀನರಿಗೆಂದು ಬಿಸುಸುಯ್ದ ॥ ೫

ಸುಯ್ದು ಸಭೆಯಲಿ ನೊಂದು ವಿಧಿಯನು
ಬಯ್ದು ಬಸವೞಿದಳಲಿ ಕೊರಗನು

---

1 ತಡುದನುನೆಯುಕೆ. ಕ. ಖ. 2 ನಿಮ್ಮನೆಲ್ಲರನು, ಕ. ಖ.

* ಮೂಲದಲ್ಲಿ ಇಲ್ಲದ್ದರಿಂದ ಊಹೆಯಂತೆ ಪಾದಪೂರ್ತಿಮಾಡಿದೆ.

ಕೊಯ್ದುದೋ ವಿಧಿ ಕೆಟ್ಟುದೋ ಕುಲವೆನುತ ಚಿಂತಿಸಲು ।
ನೆಯ್ದನೆಯ್ಗೆಯ ಬಿಡಿಸಲಱಿಯೆನು
ಗೆಯ್ದುದಿದು ಸಂಭ್ರಾಂತಿ ಚಿಂತೆಯ[1]
ನಯ್ದಿತಿರಲೇ ಯೆಂದನೇಲಾಪುತ್ರನವರೊಡನೆ[2] ॥ ೬

ಶಾಪಪರಿಹಾರೋಪಾಯವನ್ನು ಒಬ್ಬರೊಬ್ಬರು ಹೇಳುವಿಕೆ.

ಸಾಸಿಗರಿರಬಲದಿರಿ ತನ್ನಭಿ
ಲಾಷೆಯನು ಕೇಳುವುದು ಪಾಂಡುವು
ಹೀಶನಂದನನಂದನನ ಸುಕುಮಾರಕನ ಸುತನಾ ।
ವಾಸವನು ನಾವೈದಿ ವಿಪ್ರನ
ವೇಷವಲಿ ಬೋಧಿಸಲು ಸರ್ವಾಪ
ನಾಶಕರವಾ ಮಾತನಾಡದಿರೆಂದು ಭೂಮಿಪನ ॥ ೭

ಸತ್ಯಸಂಧನು ವಿಪ್ರವಚನವ
ನುತ್ತರಿಸಲಱಿಯನು ಮಹಾಮತಿ
ಮೃತ್ಯುವಱಿಂದುರಗರಿಗೆ ತಪ್ಪುವುದು ನಮಗೆನಲು ।
ಮತ್ತದೇತಕೆ ದೈನ್ಯವಾನೃಪ
ಸತ್ತಮಗೆ ಮಂತ್ರಿಗಳಹೆವವನ[3]
ಚಿತ್ತವನು ವಶಮಾಪ್ಪೆವೆಂದರು ಪನ್ನಗರು ಕೆಲರು ॥ ೮

ಚಂಡಮಖಕರ್ಮವನು ನೃಪ ಬೆಸ
ಗೊಂಡೊಡಲ್ಲೆಂದೆಂಬವಘವನು
ಪಾಂಡುನಂದನ ಮಾಡಲಾಗದು ನಾಶವಿಜಪರಕ್ಕೆ ।
ಕೊಂಡೆಱವುದಘವಡಿಗೆ ನರಕದ
ಕೊಂಡದೊಳಗಾಡುವರೆನುತ್ತು
ದ್ದಂಡಮತಿಯನು ಬೋಧಿಸುವೆವೆಂದರು ನಯಾನ್ವಿತರು ॥ ೯

---

1 ಗೆಯ್ದ ವಾಸಂಭ್ರಾಂತಚಿತ್ತವ, ಕ ಖ  2 ಪುತ್ರರವರೊಡನೆ, ಕ. ಖ
3 ಮಂತ್ರಿಗಳವರ, ಕ. ಖ

ಅಲ್ಲಿ ತೆಗೆ ಯಜ್ಞಾಂಗಕರ್ಮವ
ಬಲ್ಲನೆಂದೈತಂದ ವಿಪ್ರರ
ನೆಲ್ಲರನು ಕಚ್ಚುವುದು ಹೋಗದು ವೇಷವನು ಮರೆಸಿ |
ಇಲ್ಲಿ ಬಟುಕಾ ಯಜ್ಞ ಗಿಜ್ಞದ
ತಲ್ಲಣದ ತನಿಜೋಗೆ ನಮಗೇನು
ತಲ್ಲಿ ಕೆಲರು ಕುಮಂತ್ರಿಗಳು ಪೇಳಿದರು ನಿಜಮತದ ‖ ೧೦

ಆಗದಾಗದು ವಿಪ್ರವಧೆ ನಿ
ರ್ಭಾಗಧೇಯರೆ ಹಸಿವರಾದಡೆ
ಭೋಗಿಸುವರೆ ವಿಷವನು ನಿಮ್ಮೊಡಿ ಕೇಡ ತಂದಿರೆಲೈ |
ಭೋಗರಾದಿರಿ ನಿಮಗೆ ನೀವೆನು
ತಾಗಮಜ್ಞರು ಜಟಿದರವರನು
ಭೋಗ ಗುಣದ ಕೇಳೆಂದರವರೊಳು ಮತ್ತೆ ಕೆಲಕೆಲರು ‖ ೧೧

ಕೊಲಲದೇತಕೆ ವಿಪ್ರರನು ನೆಱೆ
ಕೊಲುವುದಾ ಯಜಮಾನಿಯರ್ಗಳ
ಬಲನೆ ಯಿಲ್ಲದೆ ಮಾಡಲಾಗದು ಯಜ್ಞ ಕರ್ಮವನು |
ಕೊಲೆಗೆ ನಾವಳುಕಿದರೆ ಶಾಪವ
ಗೆಲುವ ಪರಿಯೆಂತೆಂದವರೊಳು
ಕೆಲರು ಜಲವನು ರೂಷಿಸುವೆವೆಂದರು ದುರಾತ್ಮಕರು ‖ ೧೨

ಕೆಲರು ಋತ್ವಿಜರದವು ಜೋಡುವ
ವೆಲಘುಮತಿಯನು ದಕ್ಷಿಣೆಯನಿದ
ನುಡಿವುದಧ್ವರಕರ್ಮವನು ನೀವೆಂದು ನಾವದನು |
ಗೆಲುವೆವೆಂದರು ಕೆಲರು ಕೆಲರಾ
ಚಲನಸಖನಲಿ ಮೂರ್ತಿಸುವೆವು ಜೊ
ಗಳುವ ನಾಯಿಗಳಾಗಿ ಯೆಂದರು ಮಂತ್ರಕೋವಿದರು ‖ ೧೩

ಗಳಹಲಖಿಯೆವು ಹಲವು ಮಾತನು
ಕೊಲುವೆವಾವವನಿಪನ ಶಾಖಾ

ಹೇಳಿಯು ಸವೆರಲದೇಕೆ ಬಳಿದಿ ಬಣಗುವತಳಿರುತ್ತಿದಾ ।
ಕೊಲೆ ನಿರರ್ಥಕ ಮೇಣು ಮುನಿದರೆ
ಕುಲವನುರುಹುವಭೂಮಿಪಾಲನ
ಛಲ ನಮಗೆ ದುಸ್ಸಹವೆ [1] ತಮಗೆಂದೊದರಿದರು ಕೆಲರು ॥ ೧೪

ವಿರುದ್ಧಪಕ್ಷಗಳನ್ನು ವಾಸುಕಿಯು ನಿವಾರಣೆವ ಮಾಡುವಿಕೆ.

ಸಾಕು ಸಾಕೆಲವೆಲವೊ ಹೋಹೋ
ವ್ಯಾಕುಲತೆ ಫಲವೇನು ಮಂತ್ರವ
ನೇಕಮುಖವಾಯ್ತಾಗಲಾಗದು ನಿಮ್ಮ ಮತವಿನ್ನು ।
ಲೋಕನೀತಿಗೆ ಬಾದೊಂದೇ
ಸಾಕು ಪೂರ್ವಕೃತಾಘವೃತ್ತರ
ವೇಕೆ ನೆರವಿರಿ ಖೂಳರಿರ ನೀವೆಂದನುರಗೇಂದ್ರ ॥ ೧೫

ಮೃತ್ಯು ವಿಹಿತ ಪರಾಘದಿಂದೊ
ತ್ಪತ್ತಿಯಲಿ ಸಾಯ್ವರನು [2] ಪಾತಕ
ಚಿತ್ತರಿರ ಪರಿಹಾರವೆಂತಹುದಘಕೆ ಮೋಘಕೆ ।
ಮತ್ತುಪಾಯುವ ಬಲ್ಲವೆಂಬುದೆ
ಚಿತ್ತನಿರ್ಮಳವಾದವರು ತನ
ಗುತ್ತಮರಹರು ನುಡಿದನೇಲಾಪುತ್ರನಗ್ರಜಗೆ ॥ ೧೬

ಇದಕ್ಕೆ ಉಪಾಯವನ್ನು ನೀನೇ ಚಿಂತಿಸಿನಲು ದೈವಾನುಗ್ರಹ ಸಾಧ್ಯವೆಂದು
ಪೂರ್ವಕಥೆಯನ್ನು ಹೇಳುವಿಕೆ.

ಅಣ್ಣ ಚಿತ್ತ್ರ್ಯಸದಕೆ ನಿಷ್ಕೃತಿ
ಪುಣ್ಯಕರ್ಮವಲ್ಲದಾಗದು
ಕಣ್ಣ ಹುಡಿ ಯಿರೆ ಕಯ್ಯ ಲೇತಕೆ ಕೊಡುವೆ ದರ್ಪಣವ ।
ಪುಣ್ಯಹೀನರ ಮಾತ ಕೇಳ್ದೊಡೆ

---

1 ದುರ್ಲಭವೆ, ಕ. ಖ. 2 ಸ್ವಾಮಿಯನು, ಕ. ಕ.

ಮಣ್ಣ ಹೊಯ್ಯುವರು ಕಡೆಗೆ ಬಾಯಲಿ
ತಿಣ್ಣವಹುದೀರಾಜಕಾರ್ಯಭಾರ ನಿನಗೆಂದ ॥ ೧೭

ಮೆಚ್ಚಿಪುಗುವೆದಾಪತ್ತು ಬಂದರೆ
ಮೆಚ್ಚಿಯುಪಧಿದ್ಯೈನವನು ವಿಪ್ರರ
ನಚ್ಚಿತು ತಮಗುಳ್ಳವರು ನಾವವರಿಗೆ ವಿರೋಧವನು ।
ನೆಚ್ಚಿ ರಚಿಸೆ ಬಂದೀವಿಪತ್ತನು
ಹೊಚ್ಚಿಗಳವ ಪರಿಯೆಂತು ಬಾಹಿರ
ರಚ್ಚಿಸಿದರೆ ಬಲ್ಲವರು ಕೊಂಬರೆ ಪಾತಕವನೆಂದ ॥ ೧೮

ಹೇಳುವೆನು ತಾನೊಂದುಪಾಯವ
ಕೇಳಿದೆನು ಪೂರ್ವದಲಿ ವಿಬುಧರ
ಜಾಲ ಜಗದ ಪಿತಾಮಹನ ಸನ್ನಿಧಿಗೆ ನಡೆತಂದು ।
ಹೇಳಿದರು ಜಗವಿದು ಮಹೋರಗ
ದೂಳಿಗದಲುಳಿವುದನು ಕಾಣೆವು
ಪೋಳಿದರು ಪನ್ನಗರು ಧರಣಿಯನೆಂದು ಭೀತಿಯಲಿ ॥ ೧೯

ಅಂಜದಿರಿ ಸುರವರರೆ ಭೂಪತಿ
ಸಂಜನಿಸುವನು ಪಾಂಡುಕುಲದಲಿ
ಭಂಜಿಸುವ ಭುವನದಲಿ ನಿಜಜನಕನನು ತಕ್ಷಕನು ।
ಅಂಜಲಿಸಲದ ಕೇಳಿ ರಿಪುಕುಲ
ಭಂಜನನು ಹೋಮಿಸುವನುರಗರ
ಪುಂಜವನು ನಿಮಗೇಕೆ ಭಯವೆಂದನು ಸರೋಜಭವ ॥ ೨೦

ದುಷ್ಟರನು ಹೋಮಿಸುವನೆಲ್ಲರ
ನಿಷ್ಠೆಯುಳಿ ಕೆಲಕೆಲರು ಧರ್ಮದಿ
ಶಿಷ್ಟರುಳಿವರು ಲೋಕಹಿತಕಾರಿಗಳು ಸಾಧುಗಳು ।
ನಷ್ಟವದರಿಂದಾಗದೀಜಗ
ಕಿಷ್ಟರಹ ನಿಮಗೇಕೆ ಚಿಂತಾ
ವಿಷ್ಟರಾಗಲದೇಕೆ ನೀವಿನ್ನೆಂದನಬುಜಭವ ॥ ೨೧

ನಿರುತವನು ಕೇಳ್ಪೊಡೆ ಯಯಾವರ
ವರಕುಲೋದ್ಭವನೆನಿಪ ಭೂಸುರ
ವರಜರತ್ಕಾರುವಿಗೆ ಮಗನಾಸ್ತೀಕನೆಂಬುವನು ।
ಪರಮಧಾರ್ಮಿಕನುದಿಸುವನು ತ
ದ್ಧರಣಿಪಾಧ್ವರಕರ್ಮವಿದು ಪರಿ
ಹರಿಸುವುದು ಬಿಚ್ಚಿಕಾತನಿಂದವೆ ಯಂಜ ಬೇಡೆಂದ ॥ ೨೦

ಪಂಕಜಾಸನನಿಂತುಸುರಲಾ
ತಂಕವನು ಮೋಹಿಸಿದನಾ ತಾ
ಯಂಕದಲಿ ಕುಳ್ಳಿರ್ದು ಕೇಳಿದೆ ನಾನು ಬಾಲ್ಯದಲಿ ।
ಸಂಕಟವ ತಾಳದಿರು ಮನವನು
ಮುಂಕೊಳಿಸು ಧರ್ಮದಲಿ ಮತಿಯನು
ಶಂಕೆ ಬೇಡೞಿವಿಲ್ಲ ಧರ್ಮಪರಾಯಣರಿಗೆಂದ ॥ ೨೩

ಸಾಧುಗಳಿಗೆ ಹಾನಿಯಾಗಲಾರದೆಂಬುದಂ ಕೇಳಿ ಆಸ್ತೀಕಜನನಪ್ರಶ್ನೆ.

ಎನಲು ತಪ್ಪದು ತಮ್ಮ ತನ್ನಯ
ಮನಕೆ ಘನಪರಿತೋಷವಾಯ್ತೆ
ನ್ನನುಜ ಬಾ ಯೆನ್ನರಸ ಬಾ ಯೆನ್ನಯ್ಯ ಬಾ ಯೆನುತ ।
ತನುವ ತೆಗೆದಪ್ಪಿದನು ಬಳಿಕ್ಕೊಡೆ
ತನಗೆ ಹೇಳಾ ವಿಪ್ರನಾವೆಡೆ
ಜನಿಯಿಪ ಜರತ್ಕಾರುನೆಂಬನ ತಮ್ಮ ಹೇಳೆಂದ ॥ ೨೪

ಉತ್ತರದಲ್ಲಿ— ಜರತ್ಕಾರುವು ಭಾವಿಯಲ್ಲಿ ಜೋಲಾಡುತ್ತಿದ್ದ ಪಿತೃಗಳಂ
ಕಂಡು ಹೀಗಿರಲು ಕಾರಣಪ್ರಶ್ನೆ.

ಬಳಿಕ ನದನಂಭೋಜಸಂಭವ
ನೊಲ್ಲಿಸಿದನಮರರಿಗೆ ಮದುವೆಯ
ನೊಲ್ಲದಾ ದ್ವಿಜನಡವಿಯಲಿ ಸಂಚರಿಸುತಿರಲೊಮ್ಮೆ ।
ಬಳ್ಳಿಯನು ಹಿಡಿದೊಂದು ಭಾವಿಯು

ಲ್ಲ ತಲೆಕೆಳಗಾಗಿ ಪಿತೃಗಳು
ತಲ್ಲಣಿಸುತಿರೆ ಕಂಡು ನೀವಾರೆಂದನಾ ವಿಪ್ರ ॥ ೨೫

ಇಲಿಯು ಕಡಿದಾಬಳ್ಳಿಯನು ಹಿಡಿ
ದಲಘುಮಹಿಮರು ಜೋಲುವಿರಿ ಕೈ
ಗಳನು ನೀಡುವುದೆತ್ತಿಕೊಂಬೆನು ನಿಮ್ಮನಾನೆನಲು ।
ಸಲುವುದಿದ ನೀನಾರು ಕರುಣವ
ನಲಘುಮತಿ ನಮ್ಮಲ್ಲಿ ಮಾಡಿದೆ
ತಿಳುಹೆನೆ ಯಯಾವರಕುಲೋದ್ಭವನಹುದು ತಾನೆಂದ ॥ ೨೬

ನಿನ್ನ ವಿರಕ್ತಿಯಿಂದ ಸಂತತಿಯಿಲ್ಲದೆ ನಮಗೀಯವಸ್ಥೆಯೆಂದು
ಪಿತೃಗಳ ಉತ್ತರ.

ನಿರುತ ತಪವೆ ಲೇಸಾಯ್ತು ಯಾಯಾ
ವರರು ನಾವೆಲೆ ತಂದೆ ನೀನೀ
ವಿರತಿಯನು ಕೈಕೊಂಡಕಾರಣ ದುಃಸ್ಥಿತಿ ಯಿದೆಮಗ ॥
ದೊರಕದುದು ಸಂತಾನವಿಲ್ಲದೆ
ಪೂರ್ವರಾರಿನ್ನೆಮ್ಮ ನೇತಕೆ
ಮರುಳು ಮಗನೆ ವಿರೋಧಿಸುವ ಪೇಕ್ಷೆಂದರವರಂದು ॥ ೨೭

ತನ್ನ ಹೆಸರಿನ ಕನ್ಯೆಯು ದೊರಕಿದರೆ ವಿವಾಹವಾಗಿಕೊಳ್ಳುವೆನೆಂದು
ದೇಶಸಂಚಾರ ಮಾಡುವಿಕೆ.

ಬಳಿಯ ಕನ್ಯೆಯನು ನೀಡಿದರೆ ಬಹ
ಪರಿಯ ಕಾಣೆವೆನಲ್ಕೆ ಮಾಣಲೆ
ವಿರತಿಯನು ಸತಿ ತನ್ನ ಹೆಸರುಳ್ಳಾದೊಡಹುದೆನಗೆ ।
ಬರೆವೆ ನಾನಿನ್ನೊಂದನಪ್ರಿಯ
ಕರವ ಮಾಡಿದೊಡಾಕೆಯೊಡನಾ
ನಿರೆನು ಸಂಶಯವಿಲ್ಲೆನುತ್ತವರಿಂದ ಬೀಳ್ಕೊಂಡ ॥ ೨೮

ತಿರುಗುತಿರ್ಪನು [1] ಧರೆಯುಲಾದ್ವಿಜ
ವರನು ತನ್ನಯ ಹೆಸರ ಸತಿಯನು
ನಿರುತ ಕಾಣದೆ ದೇಶದೇಶಾಂತರಗಳಲಿ ತೊಳಲಿ ।

ಆಗ ಆ ಜರತ್ಕಾರುಋಷಿಗೆ ಅದೇ ಹೆಸರ ಕನ್ಯೆಯನ್ನು ಕೊಡಲು
ಸರ್ಪಗಳು ನಿಶ್ಚಯಿಸಿ ವನದಲ್ಲಿ ಅದೃಶ್ಯರಾಗಿರುಪಿಕೆ

ಉರಗರಾಜನೆ ಕೇಳು ಕೊಡುವುದು
ನಿರುತ ತಂಗಿಯ ಮುಸಿಗೆ [2] ನಿನ್ನಯ
ವರ ಪರಮಕ್ಷೇಮವನು ನೀ ಬಯಸುವೊಡೆ ಕೇಳೆಂದ ॥ ೨೯

ಲೇಸನಾಡಿದೆ ತಮ್ಮ ತನ್ನೊಡ
ಲಾಸಬಡಗಿತು ತಮ್ಮ ನಿನ್ನಯ
ಭಾಷಿತವನಿದ ಕೇಳಿ ಕಳದೆವು ಶಾಪದುರುಭಯವ ।
ಭೂಸುರೋತ್ತಮನನು ವಿಚಾರಿಸು
ಮೀಸಲಳಿಯದ ತಂಗಿ ಕರೆದಾ
ದೇಸಿಗನನೀಕ್ಷಣವೆ ಮದುವೆಯ ಮಾಡಬೇಕೆಂದ ॥ ೩೦

ಆಮುನೀಶ್ವರನೊಂದು ಸಮಯವ
ನಾಮಹಾಪಿತೃಗಳಿಗೆ ಮಾಡಿದ
ನಾಮುನಿಪ ಬೇಡಿದ ಮುಹೂರ್ತಕೆ ಕೊಟ್ಟೊಡವನೊಲಿದು ।
ಕಾಮದಲಿ ತಾ ಮದುವೆಯಪ್ಪೆನು
ರಾಮಣೀಯಕವನಿಸಿ ಬೇಡಿದೊ
ಡಾ ಮುಹೂರ್ತಕೆ ದೊರಕದಿರೆ ಬಿಡಕೆಲ್ಲಪರಿಣಾಮ ॥ ೩೧

ಅದರಿನೆಲೆ ಕೇಳಣ್ಣ ನಾಪೀ
ಪದುಮಮುಖಿ ಸಹ ತೊಳಲಬೇ
ಡದು ಸದಮಳನ ಬಿಡಪಿಡಿಯಬೇಕೇಕೆಂದು ತವಕದಲಿ ॥
ಪದುಳದಲಿವರು ಕಾಮರೂಪಿಗ

[1] ತಿರುಗುತೈದನೆ, ಕ. ಖ. [2] ನನ್ವಯಕೆ, ಕ. ಖ.

ಳದು ಮೊದಲು ತನ್ನ ಮನಿಯನು ಬಿಡುವು
ದದ್ಭುತವೆನೆ ತೊಳಲಿದರು ವನಕದ್ರುಪ್ಯರೂಪದಲಿ ॥ ೩೨

ಆಗ ಜರತ್ಕಾರು ತಾನು ಕನ್ಯಾರ್ಥಿಯಾಗಿರುವೆನೆಂದೊದರುವಿಕೆ.

ಇರೆ ಮರಜರತ್ಕಾರು ಪೊಂದಿನ
ಭರದಲ್ಲೈದಿದರಣ್ಯವ ಗಿರಿಶಿ
ಖರದಲಿ ಮೊದಲಿ ನಿಂದು ವಿಜನವಿದೆಂದು ನಿಕ್ಷಯಿಸಿ ।
ವರಜರತ್ಕಾರುವಿಗೆ ಕನ್ನಿಕೆ
ವರಜರತ್ಕಾರುವೆನು ಪಡೆದತಿ
ಭರದಲಿರಲುಂಟೆ ತನಗೆಂದೊಯ್ಯನವ ನೆಜಿ ನುಡಿದ ॥ ೩೩

ಪರಮಋುಷಿ ತನಗನೃತ ಹೊದ್ದದ
ತೆಐದಿ ಕರೆದನು ಗಿರಿಶಿಖರದಲಿ
ನಿರುತವಚನವಿದೆಂದು ಕಟ್ಟೇಕಾಂತದಲಿ ನುಡಿದ ।

ಅದನ್ನು ಕೇಳಿ ಸರ್ಪಗಳು ಅಕ್ಷಣವೇ ಇದೋ ಕನ್ಯೆ ಯೆಂದೊಪ್ಪಿಸಲು
ಜರತ್ಕಾರುವಿನ ವಚನ

ಸ್ವರಹೊಂದುವುದೆ ತಪವಿದಾಗಲು
ತರಳಲೋಚನೆ ಯಿಂತ ನಿನ್ನವ
ಸರಿನ ಸತಿ ಯಿಪಳಿದ ಕೊ [1] ಯೆಂದರು ಪನ್ನಗೇಶ್ವರರು ॥ ೩೪

ಅಕಟ ವಿಜನವಿದೆಂದು ನುಡಿದರೆ
ಪ್ರಕಟಿಸಿತು ವಿಧಿ ಯಿದಕೆ ತಕ್ಕಂ
ತಕುಟಿಲವ ನೆನೆಯುತ್ತ ನುಡಿದನು ಕುಂಡಲಿಗಳೊಡನೆ ।
ವಿಕಲೆ ಯೆನ್ನಯ ಮನವನಱಿಯದೆ
ಸುಕರವಲ್ಲದ ಕ್ರಿಯೆಯ ಪೆಸಗಿದೊ
ಸುಕೃತಿಪೂರ್ವಕದಿಂದ ತೆಜಿಸುವೆನಿ ಮಹಾಸತಿಯ ॥ ೩೫

1 ಪೆಸರನವಳಿದ ಕೊ, ಕ. ಖ.

ನನಗೆ ಅಪ್ರಿಯವನ್ನು ಮಾಡಿದರೆ ಇವಳನ್ನು ತ್ಯಜಿಸುವೆನೆಂಬುದಂ ಕೇಳಿ
ಅದಕ್ಕೊಪ್ಪುವಿಕೆ.

ಎಂದು ಸಮಯವ ನುಡಿಯಲವರಹು
ದೆಂದು ನಿಶ್ಚಯವನು ಬಳಿಕ್ಕವ
ರೊಂದಿದರು ಸಂತೋಷಸಾಗರದೊಳಗೆ ಮನಮುಳುಗೆ |
ಕುಂದನುಳಿದರು ತಮ್ಮ ಕುಲದೊಳ
ಗಿಂದು ಜನಿಸಿತು ಯಾಯವರಸಂ
ಬಂಧವೆಂದತಿಮುದವ ತಾಳ್ದರು ಪನ್ನಗೋತ್ತಮರು || ೩೬

ಅವರಿಗೆ ವಿವಾಹವಾಗಿ ಗರ್ಭಧಾರಣ.

ತಂದರಾತನ ನೊಲಿದು ಮಾಡಿದ
ರಂದು ವೈವಾಹವನು ಸಾರಾ
ನಂದದಲಿ ಬಳಿಕಾ ಜರತ್ಕಾರುಗೆ ಜರತ್ಕಾರು |
ಇಂದುಮುಖಿಯಾಗಿರಲು ವಧು ತಾ
ನೆಂದು ಸುಖಿಯಾಗಿರಲು ಧರಿಸಿದ
ಳಂದು ಗರ್ಭವನಾಮಹಾಸತಿ ಸಕಲಗುಣವಸತಿ || ೩೭

ಸತಿಯ ತೊಡೆಯ ಮೇಲೆ ಜರತ್ಕಾರು ಮಲಗಿರಲು ಸಂಧ್ಯಾತಿಕ್ರಮ
ಭಯದಿಂದ ಸತಿ ಎಬ್ಬಿಸುವಿಕೆ

ಮುನಿಪ ಕೇಳೊಂದುದಿನ ತನ್ನಯ
ವನಿತೆಯಂಕದ ಮೇಲೆ ತಲೆಯಿ
ಟ್ಟನುಪಮಮುನಿ ಮಲಗಿರ್ದ ನುಱೆ ನಿದಿರ್ಗಣ್ಣಿನಿಂದೆಸೆಸಿ |
ಇನನಿಳಿವನಸ್ತನಗ ಮಹಾಟವಿಯ
ಮನೆಗೆ ಮುನಿ ನಿದ್ರೆಯಲಿ ಮುಳುಗಿರ
ಲನುಪಮಾಂಗನೆ ತಾನೆ ತನ್ನೊಳಗೆಂದಳೀಪರಿಯ || ೩೮

ಸಲಿಸನಂಬುಧಿಗೆ ಸಂಧ್ಯಾ
ವಂದನೆಯ ಮಹತ್ತ್ವಯು ಮುನಿಸಾತ್ರಿ

ಕಂದೆ ಜರಿವುನಿನ್ನನೆಬ್ಬಿಸದೊಡೆ ಪಾಪಾತ್ಮಕನು ।
ಇಂದು ಮುನಿವನೊ ಕೋಪಯುಕ್ತನು
ಮಂದಮತಿಯೆಬ್ಬಿಸಿದೆ ತನ್ನನು
ಕೊಂದೆನೆಂಬನೊ ಪೂಜ್ಯದೇನೆಂದಳಬಲೆ ತರಳೆ ॥ ೩೯

ಕೋಪವನು ಮಾಡಿದರೆ ಮಾಡಲಿ
ತಾಪವೆನಗದಕಿಲ್ಲ ಧರ್ಮದ
ಲೋಪವನು ಕಾಣುತ್ತ ತಾನಿರುವುಚಿತವಲ್ಲೆನುತ ।
ಓಪನನು ತರಳಾಕ್ಷಿ ಮಧುರಾ
ಲಾಪದಲಿ ಬೋಧಿಸಿದಳಂತೀ
ರೂಪಗುಣಸಂಪನ್ನೆ ಧರ್ಮಸಾರಕಾರ್ಯಜ್ಞೆ [1] ॥ ೪೦

ಎದ್ದು ಕೋಪದಿಂದ ನಿನ್ನ ತ್ಯಜಿಸುವೆನೆಂದು ಹೇಳುವಿಕೆ.

ಎದ್ದನಾಮುನಿ ಕೋಪ ತನುಗೊಂ
ಡೆದ್ದವೋಲಂಗನೆಯನೀಕ್ಷಿಸಿ
ನಿದ್ರೆಯನು ನೀ ಕೆಡಿಸಿದೆ ಯುಕ್ತಾ ತನಗೆ ವಿಪ್ರಿಯವ ।
ಹೊದ್ದಿಸಿದೆ ನಿನ್ನೊಡನೆ ತಾನಿರೆ
ಗೆದ್ದಿಸಿದೆ ಇದೆ ಹೋಗುಪಾದ
ನೊದ್ದನೆಂದವನು ಮುನಿಸನಾವಾಸಿನಿಗೆ ಮುನಿದಂತೆ ॥ ೪೧

ಸಂತಾನವಿಲ್ಲದೆ ನನ್ನನ್ನು ತ್ಯಾಗಮಾಡುವರೆ ತಮ್ಮ ಪಿತೃಗಳ ಮನೋರಥ
ಪೂರ್ಣವಾಗಲಾರದೆಂದು ಪ್ರಾರ್ಥಿಸಲು ಪುತ್ರನಾಗುವನೆಂದು
ಹೇಳುವಿಕೆ.

ಕೆಟ್ಟೆನಾನೇನೆನುತ ತನ್ನನು
ಬಿಟ್ಟುಹೋಪ ಮಹಾತಿಸಿಷ್ಟ್ಯಯು
ಬಿಟ್ಟು ಶೀಲಾನ್ವಿತೆಯನಂಘ್ರಿ [2] ಸರೋಜಸಂಶ್ರಿತೆಯು ।
ಮುಟ್ಟಲಾಗದೆ ಧರ್ಮಲೋಪದ

---

1 ಕರಪಿಜ್ಞೆ, ಕ. ಖ

2 ಬಿಟ್ಟಲಾ ತನ್ನಂಘ್ರಿ, ಕ. ಖ.

ಕೆಟ್ಟದೆಶೆಯಿಂದೆಚ್ಚರಿಸಿದೆನು
ಬಟ್ಟೆದಪ್ಪುವೆಳಲ್ಲ ನೆಱೆ ತಾನೆಂದಳಿಂದುಮುಖಿ ॥ ೪೧

ಸುಮ್ಮನಿರು ಸಾರೆತ್ತ ಪೆತ್ತಣ
ಧರ್ಮಗಿರ್ಮೂಪ ಲೋಪ ತನ್ನನು
ನೆಮ್ಮುವುಗೆ ಫಡ ತಾನದಾರೆಂದಱಿಯೆ ಧರ್ಮವನು ।
ನಿರ್ಮಿಸಿದವರದಾರು ತನ್ನವಿ
ಕರ್ಮಕಂಜುವೆ ನೀನಿದೇತ
ಕ್ಕಮ್ಮಳಿಸದಿರು ಕಾಂತೆ ಸುಖಿಯಾಗೆಂದನಾ ವಿಪ್ರ ॥ ೪೨

ಆವ ಗತಿಯುನು ಕಂಡೆ ತನಗೆಲೆ
ದೇವವರವಂದಿತನೆ ತನ್ನಯ
ಜೀವವುಳಿವುದೆ ಬಿಸುಟ್ಹೊಡೆನ್ನನನಾಥೆಯನು ದಿಟಕೆ ।
ಆವ ಮನದಭಿಸಂಧಿಯುಲಿ ಭೂ
ದೇವವರ ನಿನಗಿತ್ತರೆನ್ನನು
ಜೀವದೊಡೆಯನೆ ವಿಫಲವಾಯ್ತೆಂತೆನುತ ಹಲುಬಿದಳು ॥ ೪೪

ತಂಗಿ ಮಗನನು ಪಡೆದಳಾದರೆ
ಹಿಂಗುವುದು ಮೃತ್ಯುವಿನ ಭಯುವೆಂ
ದಂಗವಣೆಯುನು ಮಾಡಿ ಕೊಟ್ಟರು ತನ್ನ ನಿನಗೆಂದು ।
ಭಂಗವಾಯ್ತು ಮನೋರಥಕೆ ಮುನಿ
ಪುಂಗವನೆ ಹೇಟೆಂತು ಗತಿ ತ
ನ್ನಂಗಿಯುನು ನಡುನೀರೊಳದ್ದಿದೆ ಯೆಂದಳಿಂದುಮುಖಿ ॥ ೪೫

ನನಗೆ ಗತಿ ಮತಿ ನೀನೆ ಕೆಟ್ಟೆನು
ಹಾನಿಗೊಳಗಾಯ್ತುರಗಕುಲ ಕರು
ಣಾನಿಧಿಯೆ ಕಾರುಣ್ಯವನು ಮಾಡುವದನಾಥೆಯುಲಿ ।
ಜ್ಞಾನವಂತನೆ ಯೆನುತ ಕಂಬನಿ
ಯಾನನದಲುಕ್ಕಾಡಲತ್ತು ಮ
ಹಾನಿತಂಬಿನಿ ಹೊರಳಿದಳು ಪತಿಯುಂಘ್ರಿಕಮಲದಲಿ ॥ ೪೬

ಏಱು ಮಗನಪನಂಜಬೇಡೆಲೆ
ಬಾಲೆ ಜೆದಱದಿರರ್ಕವಹ್ನಿ
ಜ್ವಾಲೆಗಳ ಬೆಂಬೆಯು ಪೊಲುರುತರತೇಜನೆಂದೆನಿಸಿ ।
ಪಾಲಿಸುವನುರಗರನೆಲೆ ಬಱಿದೆ
ತಾಳದಿರು ಶೋಕವನೆನುತ್ತವೆ
ಬೀಱುಕೊಟ್ಟು ಮುನೀಂದ್ರನೈದಿದ ವರತಪೋವನಕೆ ॥ ೪೭

ಪತಿಯುಗಲಲು ವಾಸುಕಿಯು ಮನೆಗೆ ಹೋಗಿ ನಡೆದ ವೃತ್ತಾಂತವನ್ನು ಹೇಳುವಿಕೆ.

ಬೞಿಕ ಗರ್ಭಿಣಿ ಪೋದಳಗ್ರಜ
ನಲಘುಮಂದಿರದಲ್ಲಿಗಾತನು
ಲಲನೆಯನು ಬೆಸಗೊಂಡನೇನ[2] ತಂಗಿ ದುಮ್ಮಾನ ।
ಇೞಿವುತದೆ ಕಂಬನಿ ಮುಖಾಬ್ಜದ
ಲುೞಿಸದುಳ್ಳುದ ಹೇಪೆನಲು ಕಾ
ವಲನ ಕಳುಹಿಯೆ ಬಂದೆನೆಂದಳು ಕಾನನಕೆ ತರಳೆ ॥ ೪೮

ಹದನನೆಲ್ಲವ ಕೇಳಿ ವಾಸುಕಿ
ಬೆದಱಿ ನುಡಿದನು ತಂಗಿ ನೀಂ ಕಡಿ
ಸಿದೆ ಮನೋರಥವನು ಗತಪ್ರಾಣದ ಮಹೋರಗರ ।
ಉದರವಾಸನದಾರು ಪುತ್ರನೊ
ಇದು ಸುಪುತ್ರಿಯೊ ಕೊಂದೆ ತನ್ನನು
ಕುದಿದು ಫಲವೇನೆಮಗೆ ಪುಣ್ಯವಿಹೀನರಾವೆಂದ [1] ॥ ೪೯

ಅಣ್ಣ ಚಿಂತಿಸ ಬೇಡ ನೀವೇ
ಪುಣ್ಯವಂತರು ತಾಪಸಾಗ್ರಿಮ
ಗಣ್ಯನಪ ಗಂಡಳಿಯುನನೃತವದಲ್ಲ ಮುನಿವಚನ ।
ತಿಣ್ಣದಿನ್ನಂತೇಕೆ ಪಾಪವ

1 ಫಲವೇನು ಪುಣ್ಯಹೀನರು ತಾವೆಲೆಯೆಂದ, ಕ. ಖ. 2 ಕುಲವನೇತಕೆ, ಕ. ಖ

ಸಣ್ಣ ಉರಗರ ಕುಲಕದೇತಕೆ [2]
ಬಣ್ಣಿಸುವೆ ಭಂಗವೆನು ನೀನೆಂದಳು ಸರೋಜಮುಖಿ ॥ ೫೦

ಆಗ ವಾಸುಕಿಯು ಸಂತೋಷಪಡಲು ಅದರಂತೆ ಪುತ್ರಜನನ.

ಎನಲು ತಂಗಿಯ ನುಡಿಗೆ ವಾಸುಕಿ
ಮನದ ಸಂತಾಪವನು ಬಿಟ್ಟನು
ವನಿತೆ ಪಡೆದಳು ಪುತ್ರನನು ಕಾಲದಲಿ ಕಮನೀಯ ।
ಸನಲಸನ್ನಿಭತೇಜನನು ಬಳಿ
ಕನುಪಮನು ತಾ ಬಳೆವುತಿರ್ದನು
ಮನೆಯೊಳಗೆ ವಾಸುಕಿಯ ಮನದುತ್ಸಾಹ ಬಳವಂತೆ ॥ ೫೧

ಆಸ್ತೀಕನೆಂಬ ಹೆಸರುಳ್ಳ ಬಾಲಕನ ವಿದ್ಯಾಭ್ಯಾಸ.

ಚ್ಯವನನಲಿ ಬಳಿಕಾತನಭ್ಯಾ
ಸವನು ಮಾಡಿದನಖಿಳವಿದ್ಯಾ
ನಿವಹವನು ಸೇರಿಸಿದನಾಸ್ತೀಕಾಖ್ಯೆಯಲಿ ಮುನ್ನ ।
ಯುವತಿಗಸ್ತಿಯೆನುತ್ತ ಮುನಿ ಗ
ರ್ಭವನು ಮುಟ್ಟಿದನಾಗಿ ಕೇಳಾ
ಭುವನಪಾವನಮೂರ್ತಿಯಿರ್ದನು ನಾಗವಾಸದಲಿ ॥ ೫೨

ಹೇಳಿದೆನು ಮುನಿನಾಥ ದುರಿತ
ವ್ಯಾಳವಿಷಹರವೆನಿಪ ಮುನಿಕುಲ
ಮೌಳಿಚಾರಿತ್ರವನು ಭುವನಪವಿತ್ರವನು ನಿನಗೆ ।
ಪೇಳುವೆನು ತಾನೇನನಿನ್ನು ಗು
ಣಾಲಯನೆ ಹೇಳೆನುತ ಸೂತನು
ಪೇಳಿದನು ನಿತ್ಯಾತ್ಮನಾರಾಯಣಪರಾಯಣಗೆ ॥ ೫೩

ಹದಿಮೂರನೆಯ ಸಂಧಿ ಮುಗಿದುದು.

# ಹದಿನಾಲ್ಕನೆಯ ಸಂಧಿ.

ಸೂಚನೆ.

ಹೇಳಿದರು ಜನಮೇಜಯಗೆ ಸುವಿ
ಶಾಲಮತಿಗಳು ಮಂತ್ರಿಗಳು ಮಿಟು
ಮೂಲಕಾರಣವದ ಪರೀಕ್ಷಿತನೃಪನ ಸಂಗತಿಯ ||

ಸರ್ಪಯಾಗಕಾರಣವನ್ನು ಕುರಿತು ಶೌನಕಪ್ರಶ್ನೆ.

ಸೂತ ಹೇಳ್ಕೆ ಸರ್ಪಯಾಗ
ಖ್ಯಾತಮುಷ್ಕರಕರ್ಮವೆನಿಸಿಪ್ಪುಗೆ
ಹೇತುವಾವುದ ಹೇಳು ತನಗಾಪಾಂಡುನಂದನರು |
ಧೂತಪಾತಕನಿಕರರಲ್ಲಿ
ಘಾತಿಸಿದರಿಂತುರಗಕುಲವನು
ಭೂತಳಾಧಿಪನೇನು ಮಗುಳ್ದನೆಂದನಾಸೂತ || ೧

ಉತ್ತರವಲ್ಲಿ—ಪರೀಕ್ಷಿತನ ಆಖ್ಯಾನಪ್ರಾರಂಭ.

ಕೇಳು ಶೌನಕ ಪರಮೋತ್ಸುಕನೆ
ಕಾಲಸಂಪನ್ನಧಿಯ ಯಾಗಕೆ
ಮೂಲವೆನಿಪ ಪರೀಕ್ಷಿದಾಖ್ಯಾನವನು ಮನವೊಲಿದು |
ಹೇಳುವೆನು ಜನಮೇಜಯಕ್ಷಿತಿ
ಪಾಲ ನೊಂದಿನನಖಿಳಮಂತ್ರಿಗ
ಳೋಲಗದೊಳೊಪ್ಪಿದನು ಕುಳ್ಳಿರ್ದಂದಿನವರೊಡನೆ || ೨

ಏನು ಹದನದ್ಭುತನು ತಕ್ಷಕ
ಕಾನನದೊಳೇಕುರುಹಿತೆಂಬುದ

ಕೇನು ಕಾರಣ ಹಗೆಗೆ ಹರ ಹರ ಪನ್ನಗಾಧಿಪಗೆ |
ದಾನವಾಂತಕನೊಲವಿನವರಿಗೆ
ಹಾನಿಯೆಂತೋ ಹೇಳಿ ನೀವೆನ
ಲಾನೃಪೋತ್ತಮನೊಡನೆ ಬಿನ್ನೈಸಿದರು ಮಂತ್ರಿಗಳು || ೩

ಪರೀಕ್ಷಿತನಲ್ಲಿ ತಕ್ಷಕನಿಗೆ ಏಕೆ ವಿರೋಧವೆಂದು ಜನಮೇಜಯಪ್ರಶ್ನೆಗೆ ಮಂತ್ರಿಗಳುತ್ತರಾರಂಭ.

ಉಂಟು ಕೃಷ್ಣನ ಕರುಣ ನಿಮ್ಮೊಳ
ಗೆಂಟುಮಡಿ ನೃಪನಳಿಯಲಱಿವನೆ
ಗಂಟಲೊಳಗಾತಕ್ಷಕನ ಹಗೆಯಿಲ್ಲ ತಾತನಲಿ |
ವೆಂಟಣಿಸಿದುದು ವಿಪ್ರತನಯನ
ಕುಂಟಣಿಯು ಬಲು ಶಾಪ ತಂದೆಯ
ಕಂಠವನು ಕೊಯ್ದುದನು ಚಿತ್ತೈಸೆಂದರವನಿಪಗೆ || ೪

ಹೇಳಿದೇತಕೆ ತನಗೆ ತನ್ನಯ
ಬಾಲತನದಲಿ ಮಡಿದನಯ್ಯನು
ಹೇಳನವದೇಕಾರ್ಯರಲ್ಲಾ ವಿಪ್ರವರರೆಮಗೆ |
ಹೇಳಿರಿ ದ್ವಿಜಸುತನ ಕೋಪಕೆ
ಮೂಲವೇನಾರಾತನಾರೆನೆ
ಹೇಳಿದರು ಮಂತ್ರಿಗಳು ತದ್ವೃತ್ತಾಂತಸಂಗತಿಯ || ೫

ಪರೀಕ್ಷಿತನು ಬೇಟೆಗೆ ಹೋದಾಗ ಆಶ್ರಮದಲ್ಲಿ ಉಪೇಕ್ಷಿತನಾಗಿ ಅವರ ಕೊರಳಲ್ಲಿ ಮೃತಸರ್ಪವನ್ನು ಹಾಕುವಿಕೆ.

ಆದೊಡವಧರಿಸಾ ಪರೀಕ್ಷಿತ
ಮೇದಿನೀಪತಿ ಧರ್ಮರಕ್ಷಾ
ಪಾವನೈಕಪರಾಯಣನು ಸುರವಿಪ್ರಪೂಜಿತನು |
ಹೋದನವನಿಪನೊಂದುದಿನ ಮೃಗ

ಭೇದಿಗಳ ಸಹಿತೊಂದುವಿಪಿನವಿ
ಭೇದದಲಿ ಮುನಿವರಶಮೀಕಸನಾಖ್ಯನಾಶ್ರಮಕ ‖ ೬

ವಸುಮತೀಪತಿ ಕಂಡ ವರತಾ
ಪಸನನಾಮೃಗ ಹೋದ ಮಾರ್ಗವ
ಬೆಸಗೊಳಲು ಬೇಱೊಂದನಱಿಯದೆ ಯೋಗನಿಷ್ಠೆಯಲಿ ।
ಉಸುರದಿರಲುರಗನನು ಕೊಂದಾ
ಹಸಿವುತೃಷೆಯಲಿ ನೃಪನು ತನು ತು
ಟ್ಟಿಸಲು ಕೊರಳಲಿ ಸುತ್ತಿ ಬಂದನು ಮರಳಿ ನಿಜಪುರಕೆ ‖ ೭

ಅದನ್ನು ಕಂಡು ಋಷಿಪುತ್ರನು ಏಳುದಿನದೊಳಗೆ ತಕ್ಷಕನಿಂದ ನೃಪಗೆ
ಮರಣವಾಗಲಿ ಎಂದು ಶಪಿಸುವಿಕೆ.

ಅದನಱಿತು ತತ್ಪುತ್ರನಾಡುತ
ವಿದಿತಶೃಂಗಿಯೆನಿಪ್ಪನತಿಕೋ
ಪದಲಿ ಕೊಟ್ಟನು ಶಾಪವನು ಬಾಲಕನು ಭೂಪತಿಗೆ ।
ಮದಮುಖನನವನಿಪನನೇಳ್ದಿವ
ಸದೊಳಗುರುಪಲಿ ತಕ್ಷಕನು ತ
ಪ್ಪದು ಮಮುಕ್ತಿಯೆನುತ ಬಂದನು ತಂದೆಯಿದ್ದೆಡೆಗೆ ‖ ೮

ತಂದೆಯು ಬಳಿಗೆ ಹೋಗಿ ಕೊಟ್ಟ ಶಾಪವನ್ನು ಹೇಳಲು ಅಯುಕ್ತ
ಮಾಡಿದೆ ಯೆಂದು ಶಮೀಕರು ನೃಪನ ಬಳಿಗೆ
ಗೌರಮುಖನನ್ನು ಕಳುಹುವಿಕೆ.

ತಂದೆಯನು ಕಾಣುತ್ತ ವರಮುನಿ
ನಂದನನು ಬಾಯ್ವಿಡಲು ಕೇಳುತ
ಕಂದಱಿದು ಗಳದುರಗನನು ತೆಗೆದಿಟ್ಟು ಮಗನೊಡನೆ ।
ಎಂದನೇತಕ್ಕಳುವೆ ನೀನೆಲೆ
ತಂದೆ ಯೆನುತವೆ ಕೇಳಿದನು ಮುನಿ
ನಂದ ವೃತ್ತಾಂತವನು ಮಱುಗಿದನೆಂದು ಮನದೊಳಗೆ ‖ ೯

ಸುಯ್ದು ಚಿಂತಿಸಿ ನೃಪನ ಕೊರಳನು
ಕೊಯ್ದು ಪಾತಕಿ ಯೆನುತ ಮಗನನು
ಬಯ್ದು ಬಹಳಕೃಪಾವನಧಿ ಭೂಪೋತ್ತಮನ ಹೊರೆಗೆ ।
ವೈದೆಗೆಯುದಟ್ಟಿದನು ಶಿಷ್ಯನ
ನೈದಿದನು ತಾ ಗಿರಿಮುಖನೊಳಿ
ದೈದಿ ಬಿಸುಟನು ವಾರ್ತೆಯನು ಬೆದಱಿದುದು ಸಭೆ ನೃಪನ ॥ ೧೦

ಮಂತ್ರಿಗಳೊಡನೆ ಪರೀಕ್ಷಿತನ ಆಲೋಚನೆ.

ಮುನ್ನವೇ ತಾ ನೆನೆವುತಿರ್ದನು
ತನ್ನ ಮಾಡಿದ ಕರ್ಮವಿದು ನೆಱೆ
ಬನ್ನಬಡಿಸದೆ ಹೋಹುದಲ್ಲೆಂದದುವೆ ಬಂದುದಲ ।
ಇನ್ನು ಮಾಡುವದೇನೆನುತ ನೃಪ
ಖಿನ್ನನಾದಂತಿರಲು ನೆನೆದೆವು
ಪನ್ನಗೇಂದ್ರನ ಭಯವನಪಹರಿಸುವ ಮನೋರಥವ ॥ ೧೧

ಒಂದು ಕಂಭದಲೊಂದು ಮನೆಯನು
ತಂದೆ ಮಾಡಿದೆವಮರನದಿಯಲಿ
ಬಂದು ತಕ್ಷಕನೇಱದಂತಿರೆ ರಚಿಸಿ ರಕ್ಷೆಯನು ।
ಸಂದ ಸಚಿವರು ಸಹಿತ ನೃಪನಾ
ಮಂದಿರದಲಿರಲೇೞನೆಯ ದಿನ
ಬಂದೊಡಾರಿದ ಸಾಧ್ಯಕೆ ತರುವರೆಂದರವನಿಪಗೆ ॥ ೧೨

ಏೞನೆಯ ದಿನದೊಳಗೆ ಪನ್ನಗ
ಪಾಲತಕ್ಷಕನುರುಹುವನು ಭೂ
ಪಾಲನನು ಗಡ ನೋಪ್ಪೆನೆನುತವೆ ಕಾಶ್ಯಪಾಹ್ವಯನು ।
ಕೇಳಿ ಧನಕಾಂಕ್ಷೆಯಲಿ ಬರುತಿರೆ
ಖೂಳತಕ್ಷಕನವನ ಕಂಡನು
ಹೇೞದೆಲ್ಲಿಗೆ ವಿಪ್ರ ಪಯಣವದೆನುತ ಬೆಸಗೊಂಡ ॥ ೧೩

ಪರೀಕ್ಷಿತನನ್ನು ತಕ್ಷಕನು ಕಚ್ಚಿದಾಗ ಬದುಕಿಸಲು
ಹೋಗುವೆನೆಂದು ಬ್ರಾಹ್ಮಣವಚನ.

ತಕ್ಷಕನು ತಾ ಮುನಿವೆನು ಗಡ ಪ
ರೀಕ್ಷಿದವನೀಶ್ವರನ ಮೇಲೆ ತ
ತುಕ್ಷಣದಲೆತ್ತುವೆನು ವಿಷಯೋಗವನು ಕೆಡೆಯೊದೆದು ।
ರಕ್ಷಿಸುವೆನುರುಮಂತ್ರಜಲದಿಂ
ದಾಕ್ಷಣವೆ ತಾ ಬಂದೆನದಕದ [1]
ಪೇಕ್ಷಿತವೆಲಾ ಸಕಲಲೋಕಕ್ಕೆಂದನಾ ವಿಪ್ರ ॥ ೧೪

ಅದು ನಿನಗೆಸಾಧ್ಯವಾದಕಾರಣ ಹಿಂದಿರುಗಿ ಹೋಗೆಂದು
ತಕ್ಷಕನೆನಲಾಗಿ ಆ ಉಭಯರ ಸಂವಾದ.

ಉಂಟು ಸಂಶಯವಿಲ್ಲ ನೃಪತಿಗೆ
ಕಂಟಕನು ತಕ್ಷಕನು ನಿನಗದು
ಗಂಟಲೊಳಯಿಂಕೆದವ ತುತ್ತೇ ವಿಪ್ರ ಮರುಳನಲ ।
ನಂಟ ಪರಿಹರಿಸಿದರೆ ನಿನಗೇ
ನುಂಟು ಬಱಿದೆ ಮನೋರಥಕೆ ಕಡೆ
ಯುಂಟೆ ಬೞಲದೆ ಭಂಗವಡೆಯದೆ ಮನೆಗೆ ತಿರುಗೆಂದ ॥ ೧೫

ಗಱಹದಿರು ನಡೆ ತನ್ನ ಮಂತ್ರದ
ಬಲುಹನದನೀನಱಿಯೆ ಟೊೀಕಳಿ
ಗಳೆಯುದಿರು ನೃಪವರನು ಭಸ್ಮೀಭೂತನಾಗಿರಲುಂ ।
ತೆಳದು ಮಂತ್ರದ ಜಲದಲೆತ್ತುವೆ
ನಲಘುಧರ್ಮಾತ್ಮನನು ಪಾಂಡವ
ಕುಲಜನನು ನೀನೇಕೆ ತನ್ನನು ಬೆದಱಿಸುವೆ ಯೆಂದ ॥ ೧೬

ವೃದ್ಧವಿಪ್ರನ ಹೇೞು ಕಡೆಯು ವಿ
ರುದ್ಧವನೆ ದಿನನಾಥನಿೞದಪ
ವೃದ್ಧಿಗೆರಡೇ ಘೞಗೆ ವಿಘ್ನವ ಮಾಪ್ಪೆ ನೀನೇಕೆ ।

1 ಬಂದೆನ ಕ. ಖ.

ಪ್ರದ್ಧಿಯುಂಟೈ ಬರುವ ಭಂಗದ
ಸುದ್ದಿಯನು ನೀ ಹೇಳಬೇಡೆನೆ
ಸಿದ್ಧಿಯೇನೆಲೆ ವಿಪ್ರ ತಕ್ಷಕನಾನು ಹೇಳೆಂದ ॥ ೧೭

ಎನ್ನ ವಿಷವನು ಪರಿಹರಿಸುವೊಡೆ
ಪನ್ನಗಾಭರಣಾದ್ಯರಿಂಗರಿ
ದುನ್ನತರಲಾ ವಿಪ್ರ ಪರಿಹರಿಸುವ ಸಮರ್ಥರೆನೆ ।
ಅನ್ಯ ನಾನಲ್ಲೀಶ್ವರನ ಕೃಪೆ
ತನ್ನದೈ ಸಲೆ ಸರ್ಪ ತಾನದ
ನೆನ್ನಲೀ ಹೊತ್ತೇನು ಫಲ ಕಂಡಱಿಯಬಹುದೆಂದ ॥ ೧೮

ಕಂಡಱಿವೆನೀ ಕ್ಷಣದಲಾನೆಲೆ
ಪಂಡಿತನೆ ತೋಱುವುದು ನಿನ್ನ
ಪ್ರ್ಪಂಡಮಂತ್ರದ ಗಿಂತ್ರದಳವನು ನೋಳ್ಪೆನೀಮರನ ।
ಕೊಂಡು ಮುಗಿಸುವೆ ನೆತ್ತು ನೆಱೆ ನೀ
ಗಂಡುತನವುಂಟಾದೊಡೆನೆ ಕ್ರೈ
ಕೊಂಡೆನಾನದ ಬಣಗುಸರ್ಪನೆ ಬೇಗ ಮಾಡೆಂದ ॥ ೧೯

ನನ್ನ ವಿಷದಿಂದ ಸುಟ್ಟು ಬೀಳುವ ಈ ಮರವನ್ನು ಬದುಕಿ
ಸೆನಲು ಅದೇನಿಶಿಯಾಗಿ ಬದುಕಿಸುವಿಕೆ.

ಆತುರಿಸಬೇಡಾದೊಡಿದ ಕೋ
ಕೌತುಕವ ನೋಡೆನುತ [1] ಕ್ರೋಧಾ
ಘಾತಯುತತಾ [2] ವ್ರಾಕ್ಷನೊಂದಾಲದ ಮಹಾಮರನ ।
ಘಾತುಕನು ಮುಟ್ಟಿದೊಡೆ ಭಸ್ಮೀ
ಭೂತವಾದುದು ಬಿದ್ದುದವನಿಗೆ
ಚೇತರಿಸು ನೀನಾಪ್ಪೊಡಿದ ಕೊಳ್ಳೆಂದನಾ ದ್ವಿಜಗೆ ॥ ೨೦

1 ಮುಳುಗುವ ಕ. ಖ. 2 ಗ್ನಿಯುಲಿ ತಾ ಕ. ಖ.

ಮುಟ್ಟಿ ಮಂತ್ರಿಸಿದರೆ ಮಹಾದ್ವಿಜ
ಸೃಷ್ಟಿಗದುವೇ ಭಂಗ ನೋಡಾ
ದುಷ್ಟಪನ್ನಗ ಮಂತ್ರಜಲವನು ನೋಡು ನೋಡೆನುತ ।
ದೃಷ್ಟಿಯಲಿ ಮಂತ್ರಜಲ್ಲನೀಕ್ಷಿಸೆ
ಕೊಟ್ಟದಸುವನು ಭಸ್ಮಭಾವವ
ಬಿಟ್ಟುದಂಕುರಿಸಿತ್ತು ಪಲ್ಲವಿಸಿತ್ತು ಮರನಾಯ್ತು ॥　　೨೧

ಹೊನ್ನಬಣ್ಣ ವದಾಯ್ತು ಮರವದು
ಹೊನ್ನಶಾಖೆಗಳಿಂದ ಮೆಱೆದುದು
ಮುನ್ನಿನಿಂದತಿಶಯಸಮಗ್ರತರಾಗ್ರಪರ್ಣಾವಲಿ ।

ಅದನ್ನು ಕಂಡು ತಕ್ಷಕನು ಕೇಳಿದಷ್ಟು ಧನವನ್ನು ಕೊಟ್ಟು
ಬ್ರಾಹ್ಮಣನನ್ನು ಹಿಂತಿರುಗಿಸುವಿಕೆ.

ಪನ್ನಗೇಂದ್ರನು ಕಂಡನದನತಿ
ಖಿನ್ನನಾದನು ವಿಫಲವಾದುದು
ತನ್ನ ಮನದಂಗವೆ ತಿಯೇನೆಂತೆಂದನಾ ದ್ವಿಜಗೆ ॥　　೨೨

ಏನನಭ್ಯರ್ಥಿಸುವೆ ಹೋಹೆ ಯ
ದೇನು ಕಾರಣ ಮೊಬ್ಬುದೇನಾ
ಮಾನವೇಶ್ವರನಾವುದದು ಕರ್ತವ್ಯ ನಿನಗೆಣಲು ।
ಹಾನಿಯಿಂ ವಿರಹಿತರ ಮಾಡಿ ಮ
ಹಾನುಭಾವರ ಕೆಡುವರೇ ಧನ
ಹೀನಗೆನಗವನೀವನಿಷ್ಟಾರ್ಥವನು ಕೇಳೆಂದ ॥　　೨೩

ಐಸಲೇ ತಾನೀವೆನರ್ಥವ
ನೇಸನಭ್ಯರ್ಥಿಸುವ ಹೇಳೆನೆ
ಲೇಸನಾಡಿದೆ ಬಱಿದೆ ಧನವನು ಕೊಂಡು ಫಲವೇನು ।
ನಾಶವಲ್ಲೈ ಪರರ ಜೀವವ

ಸಾಸಿಗನು ರಕ್ಷಿಸಿದ ಫಲವವಿ
ನಾಶಪದವೆಂದೆಂಬರುಭಯಾರ್ಥವದು ತನಗೆಂದ ॥ ೨೪

ವಿಪ್ರಶಾಪದಲಟಿವ ನೃಪನನು
ತಪ್ಪಿಸುವೆನೆಂತೆಂಬೆ ವಿಧಿಕೃತ
ತಪ್ಪಲಱಿವುದೆ ಕಾವರಾರಾಯುಷ್ಯವಿಲ್ಲದನ ।
ತಪ್ಪಿದಲ್ಲಿ ಲಘುತ್ವ ನಿನಗೆಲೆ
ವಿಪ್ರ ಭಾವಿಸಿ ನೋಡು ಧನವನು
ಕೊಪ್ಪರಿಗೆಯಲಿ ತುಂಬಿ ಕೊಡುವೆನು ಹೋಗು ನೀನೆಂದ ॥ ೨೫

ಏಕೆ ನಿನಗೀ ವೈರ ತಕ್ಷಕ
ಸಾಕು ನಾ ರಕ್ಷಿಸುವೆನೆನೆ ಹಿಂ
ದೇಕೆ ಖಾಂಡವದಹನದಲಿ ಫಲುಗುಣನು ಸಲೆಮುಳಿದು ।
ನೋಕಿದನು ತನ್ನವನು ಬಱಿದೇ
ಕಾಕುಳವ ಮಾಡಿದನು ಹಗೆಯನು
ಸಾಕುವೆನು ಬಲು ವಿಪ್ರಶಾಪ ಸಹಾಯವಾಯ್ತೆಂದ ॥ ೨೬

ಎಂದೊಡಾಲಿಸಿ ನೋಡಿ ತನ್ನೊಳ
ಗಂದು ತಿಳಿದನು ವಿಗತಜೀವನ
ನಿಂದು ಬಱಿದೆ ಚಿಕಿತ್ಸೆ ಮಾಡಲದೇನು [1] ಫಲವೆನುತ ।
ಎಂದವನನಿತು ಧನವನುಂ ಕೊಡ
ಲಂದು ಮರಳಿದನಾದ್ವಿಜೋತ್ತಮ
ನೊಂದುಪಾಯವ ಗೆಲಿದೆನೆಂದನು ತನ್ನ ಮನದೊಳಗೆ ॥ ೨೭

ತಾನು ರಾಜನನ್ನು ಸೇರುವುದಕ್ಕಾಗಿ ತನ್ನ ಸಂಗಡ ಇರುವವರನ್ನು ಬ್ರಾಹ್ಮಣವೇಷದಿಂದ ಫಲಪಾಣಿಗಳಾಗಿ ಹೋಗೆಂದು ಹೇಳುವಿಕೆ.

ಇಂತು ತಪ್ಪಿಸಿ ಬರುತ ತನ್ನಲಿ
ಚಿಂತಿಸಿದನಾ ತಕ್ಷಕನು ನೃಪ

1 ಕಿತ್ಸೆಯಲೇನು ಕ. ಖ.

ನೆಂತು ಗೋಚರವಹನು ಕೊಲುವೆನದೆಂತು ತಾನವನ |
ಮಂತ್ರಿಗಳ ಬಲುಮಂತ್ರವಾದಿಗ
ಳಂತರಾಳದಲಿರ್ದವನನಂ
ದಿಂತು ತನ್ನೊಡನಿರ್ದವರಿಗಿದನೆಂದನುರಗೇಂದ್ರ || ೧೮

ಭೂಸುರರು ನೀವಾಗಿ ಹೋಗಿ ಮ
ಹೀಶನಲ್ಲಿಗೆ ಮರೆಸಿ ಕೊಂಡೀ
ವೇಷದಲಿ ಕೊಡುವುದು ಸುಪುಷ್ಪಫಲಾವಳಿಯನೆನುತ |
ಸಾಸಿಗನು ಕಳುಹಿದರೆ ಬಂದರು
ಭೂಸುರಾಕಾರದಲಿ ಕೊಟ್ಟರು
ಲೇಸೆನಿಪ ಫಲಪುಷ್ಪನಿಕರಂಗಳನು ಭೂಪತಿಗೆ || ೧೯

ಅವರೊಪ್ಪಿಸಿದ ಒಂದು ಫಲದಲ್ಲಿ ತಕ್ಷಕನು ಹುಳವಾಗಿದ್ದು
ಹೊರಟು ರಾಜನನ್ನು ಕಚ್ಚುವಿಕೆ.

ಅದರೊಳಗೆ ತಾನೊಂದು ಫಲದ
ಲ್ಲೊದಗಿ ಬಂದನು ಕುಹಕತಕ್ಷಕ
ಹೃದಯಹರವೆಂದೆನಿಪಬಹಳಾಮೋದ ಮಘಮಘಿಸೆ |
ಅದರೊಳುತ್ತಮವಾದ ಫಲವನು
ಮೊದಲಲವನಿಪ ತಾನೆ ಕೊಂಡುಳಿ
ದುದನು ಕೊಟ್ಟನು ಮಂತ್ರಿಗಳಿಗಿವ ಮೆಲ್ಲಿ ನೀವೆನುತ || ೨೦

ಇಳಿದನಪರಾಂಬುಧಿಗೆ ರವಿಯುರ
ಘಳಿಗೆಗಂಜುವೆನಲ್ಲ ತಾನಿ
ನ್ನೆಲವೊ ತಕ್ಷಕಗಿಕ್ಷಕನಿನಿನ್ನೇನೆಂದು ಹರುಷದಲಿ |
ಫಲವ ಕಯ್ಯಲಿ ಹಿಡಿದು ಮಂತ್ರಿಗ
ಳೊಲಿಯೆ ಸುಗಿಸುತ ಕಂಡನೊಂದನು [1]
ಹುಳುವನದರೊಳು ಕೃಷ್ಣವರ್ಣದ ಸೂಕ್ಷ್ಮರೂಪದಲಿ || ೨೧

1 ಕಂಡನು ಕ ಖ.

ಬಾರನೇತಕೆ ತಕ್ಷಕಾಖ್ಯನು
ಹೋರಗನು ವಿಪ್ರಾತ್ಮಜನ ನುಡಿ
ಘೋರಶಾಪವಿದೆಂತು ತಪ್ಪಿಸಬಲ್ಲರಾರದನು ।
ಸಾರವಿದೆಲೇ ಹುಳುವಿದೆನ್ನಿಸು
ಹಾರಿ ತಕ್ಷಕನಾಗಿ ಸುಡಲಿ ಶ
ರೀರವೆನು ಭೂಸುರನ ಶಾಪವ ಸಲಿಸಬೇಕೆಂದ ॥ ೩೦

ನಕ್ಕು ಸರಸವ ಮಾಡಿ ಮುದದಲಿ
ಸೊಕ್ಕಿ ಕೊರಳನು ಹೊಡೆಯೆ ಫಲದಲಿ
ಡೊಕ್ಕರಿಸಿದನು ನಾಗರಾಜನು ಕೊರಳನವನಿಪನ ।
ಧಿಕ್ಕೆನಲು ಚಲಿಸಿದುದು ಸಭೆ ನೃಪ
ಚಕ್ರವರ್ತಿಯನುರಗ ವೇಷ್ಟಿಸ
ಲಿಕ್ಕಲದ ಮಂತ್ರಜ್ಞರೋಡಿದರಂಜಿ ದೆಸೆದೆಸೆಗೆ ॥ ೩೩

ಭೂಪನನುನೀಕ್ಷಿಸುತ ಸಂವಿ
ದ್ರೂಪಪರಮಾತ್ಮನಲಿ ಬಂದನು
ಕಾಪಟಿಗನುರುಹಿದನು ಕಾಯುವನುರುವಿಷಾಗ್ನಿಯಲಿ ।
ತಾಪಗೊಂಡುದು ಸಕಲಜನವಾ
ಭೂಪನಟವನು ಕಂಡು ಮನದಲು
ತಾಪವುದಿಸೆ ವಿಷಾಗ್ನಿಮಾತ್ರದಲೊಂದು ನಿಮಿಷದಲಿ ॥ ೩೪

ಹಳಚಿ ಹೋದನು ಮಿಂಚಿನಂತಿರೆ
ಥಳಥಳಿಸಿ ಗಗನದಲಿ ಸೂರ್ಯನ
ಹೊಳಹು ಹುರಿಗೊಂಡಂತೆ ತಕ್ಷಕನಾ ನಿಜಾಲಯಕೆ ।
ಬಳಿಕ ನಿಜಸಂಸಾರಕರ್ಮವ
ನೊಲಿದು ಮಾಡಿದುದಾಪ್ತಜನವೆಲ
ವೆಲವೊ ವಿಪ್ರನ ಹದನಿದೆಂದರು ಮಂತ್ರಿಗಳು ನೃಪಗೆ ॥ ೩೫

ನೋಡಿದೆವು ಬಾಲ್ಯದಲಿ ನಿನ್ನನು
ರೂಢಿಗಾಶ್ರಯುವಾಗಿ ನಿನ್ನಯ
ಪಾರ್ಥ ಮಗನೇ ಕಲ್ಪತರುವಿನ ಬೀಜದಂಕುರವು ।
ಬೇಡಿಕೊಂಬೆವು ದೇವ ಸಂಶಯು
ಬೇಡ ನಿನ್ನಲಿ ಕರುಣವನು ನೆಱೆ
ಮಾಡುವನು ನಿತ್ಯಾತ್ಮನಾರಾಯಣನು ಮನವೊಲಿದು ॥ ೩೬

ಹದಿನಾಲ್ಕನೆಯ ಸಂಧಿ ಮುಗಿದುದು.

## ಹದಿನೈದನೆಯ ಸಂಧಿ.

ಸೂಚನೆ.

ಗುರುಚರಣಸೇವೆಯಲಿ ಪಡೆದರು
ಪರಮಪಾವನವಾದ ಕೀರ್ತಿಯು
ಧರೆಯೊಳುದ್ದಾಲಕನು ಮುನಿಕುಲತಿಲಕನುಪಮನ್ಯು ॥

ಶೌನಕ ಪ್ರಶ್ನೆ.

ಸೂತ ಹೇಳ್ಪೈ ಪೂರ್ವದಲಿ ವಿ
ಖ್ಯಾತನೆನಿಸುವುದಂಕಮುನಿಯೊಡ
ನಾತಪೋನಿಧಿಯೆನಿಸುವುದ್ದಾಲಕನುನುಪಮನ್ಯು ।
ಭೀತಿಯನು ನೆಱೆ ತೊಱೆದು ಸಹಜ
ಪ್ರೀತಿಯಲಿ ಗುರುವಿನ ನಿರೂಪವ
ನೋತು ಶಿರದಲಿ ಧರಿಸಿ ನಡೆದುದನಱುಹು ನಮಗೀಗ ॥ ೧

ಉತ್ತರದಲ್ಲಿ—ಉದ್ದಾಲಕನೂ ಉಪಮನ್ಯುವೂ ಧೌಮ್ಯರಿಗೆ
ಶಿಷ್ಯರಾಗುವವೆನಲು ಸಂವಾದ.

ಎನಲು ಹೇಳ್ದನು ಸೂತನಾವರ
ಮುನಿಗಳಿಗೆ ಭೃಗುವರಕುಲಜನಿತ
ರೆನಿಸುವೆನುಪಮಚರಿತನುದ್ದಾಲಕನುನುಪಮನ್ಯು ।
ಘನತಪೋನಿಧಿಯೆನಿಪುದಂಕನು
ಮನದ ಧೃತಿಯಿಂದಾವರಪಲಂ
ಪನುನಯದಲಾಯೋಧಧೌಮ್ಯನ ಕಂಡು ನಮಿಸಿದರು ॥ ೧

ಮುನಿವರೇಣ್ಯ ಮಹಾಮಹಿಮ ನೀ
ನನಘನೆಂಬುದ ಕೇಳ್ದು ಬಂದೆವು
ಮನವೊಲಿದು ವೇದಾದಿವಿದ್ಯವ ಕಲಿಸಿ ಸಲಹೆಮ್ಮ ।
ನಿನಗೆ ಶಿಷ್ಯರು ನಾವು ನಮ್ಮಯ
ಮನವಚನಕಾಯದಲಿ ತವ ಪದ
ವನಜಸೇವೆಯುನೆಮಗೆ ತಾರಣವಾಗಿ ಚರಿಸುವೆವು ॥ ೨

ಎನಲು ನಗುತಾ ಮುನಿಪ ನುಡಿದನು
ಘನವಲಾಗುರುಭಜನೆ ಲೋಕಕೆ
ಮನವೊಡಲು ತಾ ಸಕಲ ಸಾರ್ಥವು ತಪ್ಪಿದರೆ ಘನದುರಿತ ।
ನೆನೆಯಬಾರದ ತೆರದಲಪ್ಪವು
ದನುನಯವು ನೀವ್ ನೆನೆದು ನಿಶ್ಚಯ
ವನು ತಿಳಿದು ಪೇಳುವುದು ನೀವೆನೆ ನುಡಿದರವರಂದು ॥ ೪

ಎಲೆ ಮುನೀಶ್ವರ ನಿಮ್ಮ ಚರಣದ
ಲಲಿತಸೇವೆಯೆ ಗತಿಗೆ ಸಾಧನ
ವೆಲಸದೆಮ್ಮ ವಿಧಾನ ತ್ರಿಕರಣ ಶುದ್ಧಿ ನಿಮ್ಮಡಿಯ ।
ಸುಲಭದಲಿ ಭಜಿಸುವೆವು ವಿದ್ಯೆಯ

ಕಲಿಸುವುದು ಕರುಣದಲಿ ನೀವೆಯೆ
ನಲು ಸುಶಿಷ್ಯರನೆಂದು ಪತಿಕರಿಸಿದನು ಮುನಿ ನಗುತ ॥ ೫

ಎಲೆ ಮುನಿಗಳಿರ ಮೇಲೆ ಪೇಳ್ವೆನು
ಸಲೆ ವುದಂಕಚರಿತ್ರವನು ಮು
ತ್ತೊಲಿದು ವುದ್ದಾಲಕನ ಯುಪಮನ್ಯುವ ಮಹಾಕಥೆಯು ।
ಸುಲಭದಲಿ ನಾನೊರೆವೆ ನೀವಿದ
ನೊಲಿದು ಕೇಳುವುದೆನುತ ಮತ್ತಾ
ಲಲಿತಸನ್ಮತಿ [1] ಸೂತ ಹೇಳಿದನಾ ಮಹಾಕಥೆಯ ॥ ೬

ತನ್ನ ಭೂಮಿಗೆ ಹರಿಯುವ ನೀರನ್ನು ಹೊರಗೆ ಹೋಗದಂತೆ ಮಾಡೆಂದು
ಗುರುವಿನಾಜ್ಞೆಯಂತೆ ಉದ್ದಾಲಕನು ನಡೆಯುವಿಕೆ.

ಗುರುವಿನಾಜ್ಞೆಯ ತಲೆಯಲಾನುತ
ಪರಮವೇದಾಧ್ಯಯನಪರರಾ
ಗಿರಲು ಸಂತೋಷದಲಿ ಮಿಗೆ ಮತ್ತೊಂದುದಿವಸದಲಿ ।
ಗುರು ಕರೆದನುದ್ದಾಲಕನನೆಲೆ
ತರುಣ ನಮ್ಮಯ ಮಾನ್ಯವೃತ್ತಿಯ
ಲುರುತರಧರಣಿಯಲ್ಲಿ ಬೆಳದಿಹುದಲ್ಲಿ ಘನಶಾಲಿ ॥ ೭

ಹರಿವ ಜಲವನು ನಮ್ಮ ಧರಣಿಯ
ಹೊರಗರಿಸಲನ್ಯರು ಕೊಂಡು ಹೋ
ಹರು ಘನದುರಾತ್ಮಕರವರ ನೀಮೊಗೆ ಪೋಗದಂದದಲಿ ।
ಭರದಿನುದಕವ ತಿರುಹು ನಮ್ಮಯ
ಧರೆಗೆ ನೀನೆನೆ ಶಿರದಲಾನುತ
ಭರವಸದಿ ತಾ ಬಂದು ಕಂಡನು ಹರಿವ ಶಂಬರವ ॥ ೮

ಪರರ ಭೂಮಿಗೆ ಪೋಪುದಕಟಾ
ಭರದೆ ಜಲವನು ತಾನು ತಿರುಹಲು

1 ಲಲಿತಮಹಾಮತಿ, ಕ. ಖ.

ತರಳೆ ಗುದ್ದಲಿಯೆಂದು ಪೋದರೆ ತಪವಲಾ ಯೆನುತ ।
ಭರದಿ ಪೋಪೀಯುದಕವನು ತಾ
ತಿರುಹಿಸುವೆನೆಂದೆನುತಲಲ್ಲಿಯೆ
ಕರದ ತಳೆದಿಂಬಿನಲಿ ಪವಡಿಸಿದನು ನಿಜೇಚ್ಛೆಯಲಿ ॥ ೯

ಸಂದಿಯಲಿ ಜಲ ಪೋಗಲೀಯದೆ
ತಂದು ಮೃತ್ತಿಕೆಯಿಂದ ಕಟ್ಟಿಯೆ
ಬಂದ ಜಲವೆಲ್ಲವನು ತಿರುಹಿದನಾತ್ಮಧಾರುಣಿಗೆ ।

ಆ ಸ್ಥಿತಿಯಲ್ಲಿರುವಾಗ ಗುರುವು ಬಂದು ಕಂಡು ಸಂತೋಷಿಸಿ ನಿನಗೆ ಸಕಲವಿದ್ಯಾಪ್ರಾಪ್ತಿಯಾಗಲಿಯೆಂದು ಮನೆಗೆ ಕಳುಹಿಸುವಿಕೆ.

ಸಂದುದೀಪರಿ ಹಲವು ದಿನವದ
ಕಂದು ಗುರು ತಾ ನೆನೆದನಾಗಳ
ಕಂದನಾವೆಡೆ ಯೆನುತ ಬಂದನು ಕಂಡನೀಹವನ ॥ ೧೦

ಅಕಟ ಮಗನ ನಿರರ್ಥದಲಿ ತಾ
ನಕುಟಿಲನ ಕಳುಹಿದರೆ ನಮ್ಮಯ
ಬಕುತಿಯಲಿ ತನ್ನೊಡಲ ಮೋಹವ ತೊಱೆದು ವೃಥತೆಯಲಿ ।
ಪ್ರಕಟದಲಿ ತಾನಡ್ಡಬಿದ್ದೀ
ಸಕಲಜಲವನು ನಮ್ಮ ಭೂಮಿಗೆ
ಸುಕರದಲಿ ತಿರುಹಿದನು ಹರ ಹರ ಯೆನುತ ಹರುಷಿಸಿದ ೧೧

ಬಂದು ಕೈವಿಡಿದೆತ್ತಿ ಕೇಳಲೆ
ಕಂದ ಮೆಚ್ಚಿದೆನೆಂದು ಬಹಳಾ
ನಂದದಲಿ ಹರಸಿದನು ಮಸ್ತಕಕಿರಿಸಿ ಹಸ್ತವನು ।
ಸಂದ ಸಕಲಸುವಿದ್ಯೆಗಳು ನಿನ
ಗಿಂದು ಫಲಿಸಲಿ ಗಾರುಹಸ್ತ್ಯಕೆ
ಛಂದವಲಿ ನಡೆ ಯೆಂದು ಕಳುಹಿದರಾತ ಬೀಳ್ಕೊಂಡ ॥ ೧೨

ಬಳಿಕ ಉಪಮನ್ಯುವನ್ನು ಪುನಃಪರೀಕ್ಷಾರ್ಥವಾಗಿ ಗೋರಕ್ಷಣೆ ಮಾಡೆಂದು ವನಕೆ ಕಳುಹಿಸುವಿಕೆ.

ಬಳಿಕಲಂದುಪಮನ್ಯುವಿರುತಿರೆ
ಕಳೆದು ಪೋದುದು ಕೆಲವು ದಿನ ಮ
ತ್ತುಳುಕದವನಧ್ಯಯನಪಾಠದ ಕಾಂಕ್ಷೆಯಿಂದಿರಲು ।
ತಿಳಿಯಲೆಂದೀತನ ಮನವನಾ
ಕಳನು ಕಾವುದು ಹೋಗು ನೀನೆಂ
ದಳುಹದಟ್ಟಲು ಕಾದನವ ಗೋವುಗಳ ಮನವೊಲಿದು ॥ ೧೩

ಆಗ ಬಂದು ಮಧ್ಯಾಹ್ನ ಹಸಿವಿನಿಂದ ಗೋವನ್ನು ಮನೆಗೆ ತರಲು ಗುರುವು ಕೋಪಿಸಿ ಅರಣ್ಯದಲ್ಲಿಯೇ ಅರ್ಕಪತ್ರಗಳನ್ನು ತಿಂದು ಸಾಯಂಕಾಲಕ್ಕೆ ಗೋಸಹಿತ ಬಾಯೆಂದು ಹೇಳುವಿಕೆ.

ಒಂದುದಿನ ಗೋವೃಂದವನು ಸಾ
ನಂದದಲಿ ಮಧ್ಯಾಹ್ನಸಮಯದ
ಲಂದು ತರಲಾಶ್ರಮಕೆ ಗುರು ಕಂಡಧಿಕಕೋಪದಲಿ ।
ಬಂದೆಯೇತಕೆ ಪಶುಗಳನು ನೀ
ನಿಂದು ಮಧ್ಯಾಹ್ನದಲಿ ತಂದರೆ
ನೊಂದವುಪವಾಸದಲಿ ಕೆಡಿಸಿದೆ ಯೆಂದು ಗರ್ಜಿಸಿದ ॥ ೧೪

ಎಲೆ ಗುರುವೆ ನಿರ್ವ್ಯಾಜದಲಿ ತಾ
ನೊಲಿದು ಬಂದವನಲ್ಲ ನನಗಿಂ
ದಲವಕ್ಷುಧೆಯನು ತಾಳಲಾರದೆ ಬಂದೆನೆಂದೆನಲು ।
ಘಟಿಲನಾಮುನಿ ನುಡಿದನಡವಿಯ
ಲಲಿತಕೋಮಲದರ್ಕಪತ್ರವ
ಸುಲಭದಲಿ ನೀ ಭುಜಿಸಿ ಕಾವುದು ದಿನವ ಕಡೆಗಣಿಸಿ ॥ ೧೫

ಎನೆ ಹಸಾದವೆನುತ್ತ ಹೋದನು
ಮನದೊಳನುಮಾನಿಸದೆ ಗೋವುಗ
ಳನು ಗೊಳಿಸಿ ಘನದರ್ಕಪತ್ರವ ಭುಜಿಸಿ ಹಲಕಾಲ ।

ಅನುನಯದೆ ಸಾಯಾಹ್ನ ಸಮಯಕೆ
ಮನೆಗೆ ಬಹನೀ ತೆಱದಲಿರುತಿರೆ
ಘನತರೋಷ್ಣವದಡರಿ ಕೆಟ್ಟವು ನಯನವಾಮುನಿಗೆ ॥ ೧೬

ಹೀಗೆ ಬಹುಕಾಲ ನಡೆಯಲು ಶಿಷ್ಯನಿಗೆ ದೇಹತ್ರಾಣ ಕಡಿಮೆ ಯಾದುದಂ ಕಂಡು ಗುರುವುಪದೇಶಿಸಿದ ಮಂತ್ರಜಪದಿಂದ ಸೂರ್ಯ್ಯಸರೋಕ್ಷವಂ ಹೊಂದಿ ರೋಗನಿವೃತ್ತಿಯಾಗುವಿಕೆ.

ಇರಲಿರಲು ಪಥ ಕಾಣಬಾರದೆ
ಕರದ ಸನ್ನೆಯ ಸೋಹೆವಿಡಿದಾ
ಚರಿಸುತಿರೆ ಗುರುವಱಿದನಕಟಾ ಶಿಷ್ಯನಾಯುಸವ ।
ಪರಿಹರಿಪೆನೀ ಕ್ಷಣದಲೆನುತವೆ
ಕರೆದು ಮನದೆರಕದಲಿ ಪೇೞ್ದನು
ತರಣಿ ಮೆಚ್ಚುವ ಮಂತ್ರಗಳನತಿಸಾಧ್ಯತರವಿಧಿಯ ॥ ೧೭

ಒರೆದು ಘನಮಂತ್ರೋಪದೇಶವ
ನಿರದೆ ಕಳುಹಲು ಬಂದು ವಿಂದಾ
ಸುರನದಿಯ ತೀರದಲಿ ನಿಂದಾವಶ್ಯಕವ ರಚಿಸಿ ।
ವರಮುನೀಶ್ವರನಿತ್ತ ಮಂತ್ರವ
ಸ್ಮರಿಸಿ ಕರಗಳನೆತ್ತಿ ರವಿಯ
ನುಜಿ ಮನದಿನಿರೀಕ್ಷಿಸಿ ಸುರುಚಿರಧ್ಯಾನಪರನಾದ ॥ ೧೮

ಜನನರಹಿತನೆ ಲೋಕಭಾವನ
ನೆನಿಖಿಳಾತ್ಮಕನೆಯಜರವರೇ
ಣ್ಯನೆ ಯನುಪಮಾನಘಶುಭದಧರ್ಮ[1] ಸ್ವರೂಪಕನೆ ।
ಘನಮಹಿಮ ಸೃಷ್ಟಿಸ್ಥಿತಿನಿಧಾ
ನನೆ ಪ್ರಳಯರೂಪಕಸೂರ್ಯನೆ
ಯನುಪಮಾರ್ಣವ ಕಾರುಣಿಕ ರವಿ ನಿನಗೆ ಶರಣೆಂಬ ॥ ೧೯

1 ನನುಪಮಧರ್ಮ, ಕ. ಖ.

ಘನವಿವಸ್ವಾನುವೆ ಮಹಾಜಗ
ವನು ಧರಿಸಿಯಿರ್ದಂತರಾತ್ಮನೆ
ಜನವಬೆಳಗುವ ದೀಪರೂಪನೆ ಲೋಕಹಿತಕಾರ ।
ಅನುದಿನವು ನೀನಾದಿ ನಿನ್ನನು
ನೆನೆವೊಡರಿದು ಸಹಸ್ರಲೋಚನ
ಗನುಪಮಿತತೇಜನೆ ಸುರರೊಳುತ್ತಮ ನಮೋಯೆಂಬ ॥ ೨೦

ನಮಿಸುವೆನು ಸವಿತೃಸ್ವರೂಪನೆ
ನಮಿಸುವೆನು ಜಗದೇಕಚಕ್ಷುವೆ
ನಮಿಸುವೆನು ಜಗದುದಯರಕ್ಷಾಪ್ರಳಯಕಾರಣನೆ ।
ನಮಿಸುವೆನು ವೇದಸ್ವರೂಪನೆ
ನಮಿಸುವೆನು ತ್ರಿಗುಣಾತ್ಮಕಾರಣ
ನಮಿಸುವೆನು ಬ್ರಹ್ಮೇಶ ನಾರಾಯಣ ನಮೋ ಯೆಂಬ ॥ ೨೧

ಎಂದು ಬಹುವಿಧವಾದ ತುತಿಗಳ
ಬಂದು ಹೊಗಳೆ ಮಹಾಮಹಿಮನಹ
ಛಂದದಲಿ ವೇದಾತ್ಮನನು [1] ಮೆಚ್ಚಿಸಲು ರವಿ ಬಂದು ।
ಕುಂದದಾನಂದದಲಿ ದೃಷ್ಟಿಗ
ಳೊಂದೆ ಕಾಣಿಸಿ ಬೇಗನಾ ರವಿ
ನಂದನಂದಾಕಾಶಕತ್ತಲು ಮುಸಿಕ ಹರುಷಿಸಿದ ॥ ೨೨

ಅದನ್ನು ಗುರುವು ಕೇಳಿ ಸಂತೋಷದಿಂದ ವರವನ್ನು ಕೊಟ್ಟು
ಉಪಮನ್ಯುವಂ ಕಳುಹಿಸುವಿಕೆ

ಬಂದು ಗುರುಚರಣಾರವಿಂದಕೆ
ವಂದಿಸಲು ಮಿಗೆ ಕೇಳ್ದನಧಿಕಾ
ನಂದದಲಿ ಪರಿಣಮಿಸೆ ಮೆಚ್ಚಿದನಾತ ಶಿಷ್ಯನಿಗೆ ।
ತಂದೆ ನಿನಗೆ ಸಮಸ್ತವೇದಗ

[1] ಛಂದವೇದೋರೂಪನನು, ಕ. ಖ.

ಳಂದು ಫಲಿಸಲಿ ಹೋಗು ನೀನೆಂ
ದಂದು ಮಸ್ತಕಕಿರಿಸಿ ಕರವನು ಕಳುಹಿದನು ನಲಿದು ॥ ೭೩

ಬಂದನಂದುಪಮನ್ಯು ಬಹಳಾ
ನಂದದಲಿ ಲೋಕದಲಿ ಕೀರ್ತಿಯು
ನಂದು ಪಡೆದನು ಗುರುಪ್ರಸಾದ ಕರುಣದ ಬಲದಿಂದ ।
ಇಂತಿದನು ಹೇಳಿದೆನು ನಿಮಗಿ
ನ್ನೊಂದಿತೇ ಘನಹರುಷವೆನೆ ಮನ
ದಂದು ನಿತ್ಯಾತುಮನ ನೆನೆದರು ಭಾವಶುದ್ಧಿಯಲಿ ॥ ೭೪

ಹದಿನೈದನೆಯ ಸಂಧಿ ಮುಗಿದುದು.

## ಹದಿನಾರನೆಯ ಸಂಧಿ.

ಸೂಚನೆ.

ಬಂದು ಕಂಡನುದಂಕನವನಾ [1]
ಕಂದಜನಮೇಜಯಮಹೀಪತಿ
ಗಂದು ಕಥನವನರುಹಿ ಸರ್ಪಾಧ್ವರಕೆ ತೊಡಗಿಸಿದ ॥

ಸಶಿಷ್ಯರಾದ ಉದಂಕರು ಬರಲು ಅವರನ್ನು ಪೂಜಿಸಿ ಆಗಮನಕಾರಣ ಪ್ರಶ್ನಕ್ಕೆ ಉತ್ತರರಾರಂಭ.

ಹೇಳಿದರು ಮಂತ್ರಿಗಳು ಭೂಮೀ
ಪಾಲಜನಮೇಜಯಗೆ ಬಳಿಕಾ
ವೇಳೆಯಲಿ ಶಿಷ್ಯಪ್ರಶಿಷ್ಯರು ಸಹಿತುದಂಕಮುನಿ ।

1 ರಾಜವನನವಾ, ಕ. ಖ.

ಜಾಳಿಸಿದ ಶಾಂತಿಯುಲಿ ಪೂರ್ವದ
ಕಾಲದಲಿ ತಕ್ಷಕನು ಮಾಡಿದ
ಖೂಳತನವನು ನೆನೆದು ಬಂದನು ನೃಪನ ಹೊರೆಗಾಗಿ ॥ ೧

ಬರಲು ಮುನಿಗಿದಿರೆದ್ದು ಭಕ್ತಿಯ
ಭರದಿ ವಂದಿಸಿ ಸತ್ಕೃತಿಯುನಂ
ದರಸ ವಿರಚಿಸಿ ಬಟಿಕ ಬರವೇನೆಂದು ಬೆಸಗೊಳಲು ।
ಹಿರಿದು ಸಲ್ಲಾಪಗಳ ಮಾಡುತ
ಪರಮತತ್ತ್ವವನೊರೆದು ಮೆಲ್ಲನೆ
ದುರುಳತಕ್ಷಕಗುಪಹತಿಯು ನೆನೆದಾಗಳಿಂತೆಂದ ॥ ೨

ರಾಜ್ಯಪಾಲನವೂ ಶತ್ರುಸಂಹಾರವೂ ರಾಜಧರ್ಮವು.

ಆದೊಡೇನೆಲೆ ಭೂಪ ರಾಜರು
ಮೇದಿನಿಯು ನಾಳ್ವವರೆಗೊಂದೇ
ಕಾದ ಕರಣ ಪದುಳದಿ ರಾಜ್ಯವನಾಳಿ ಧರ್ಮವಲಿ ।
ಕಾದಿದರೆ ಪ್ರತಿಭಟನ ನಿಖಿವುದು
ಭೇದದಲಿ ನೆಱೆ ಕೊಂದವರ ಮಿಗೆ
ಭೇದಿಸಿಯೆ ಕೊಲಬೇಕು ಹಿಂಸೆ ಯದಲ್ಲ ಶಾಸ್ತ್ರವಲಿ ॥ ೩

ಪೂರ್ವದಲ್ಲಿ ಪಾಂಡವರು ನಾರದೋಪದೇಶದಿಂದ ರಾಜಸೂಯ ಮಾಡಿದ ಕಥೆಯನ್ನು ಹೇಳುವಿಕೆ.

ಎನುತ ಯತಿವರನೆಂದ ಕೇಳ್ಳ
ಜನಪ ನಿನ್ನಯ ಪಾಂಡುಪುತ್ರರ
ವಿನುತಶೌರ್ಯವನಱಿಯುಲುಶ್ರೀಸೋಮಕುಲದವರ ।
ಜನಪತಿಲಕರ ಕುಂತಿಪುತ್ರರ
ಮನೆಗೆ ನಾರದ ಬಂದ ಪಾಂಡುವಿ
ಗನಿತು ದುರ್ಧರವೃತ್ತಿಯೆಂಬುದ ಹೇಟಿಯಾಕ್ಷಣದಿ ॥ ೪

ಜನಪತಿಯು ಬಲ ಬಹಳವಿರಲಿಕೆ
ವಿನುತಭಂಡಾರವನು ತರಿಸಿದ
ಜನಪ ಮಾಡಿದ ರಾಜಸೂಯವನಂದು ಪಾಂಡುವಿಗೆ ।
ಎನಿತೊ ಫಲ ಮೇಳವಿಸೆ ಯಿಂದ್ರನ
ವನಿತೆಯರು ಬಚ್ಚಿಕಾತನೋಲಗ
ದನುವ ಕಾಣರು ಪಾಂಡುನೃಪತಿಯು ಭೂಪ ಕೇಳೆಂದ ॥ ೫

ತಾಯಿತಂದೆಗಳಿಗೆ ವಿರೋಧಿಗಳನ್ನು ವ್ಯಥೆಪಡಿಸ ವುದು ಪುತ್ರನ ಕರ್ತವ್ಯ
ವಾದ ಕಾರಣ ಸರ್ಪಾಧ್ವರವ ಮಾಡೆಂದು ಹೇಳುವಿಕೆ.

ಮಾತೃಪಿತೃಗಳ ಹಗೆಯು ತೆಗೆಯದ
ನೇತಕಾ ಸುತ ಜನಿಸಿ ಫಲವೇ
* ಭೂತನಿಕರದುದರದಲಿ ಜನಿಸಿದರೆ ಜಗತ್ತುಗಳು ।
ಓತು ಕೇಳ್ಕೆ ಸಗಣಿಯೊಳು ತಾವ್
ನೇತು ಸಾವಿರಹುಳುಗಳೆಂಬೀ
ಮಾತು ಪೊದಗುಗು ಜನದ ವೆಚನದಿ ರಾಯ ಕೇಳೆಂದ ॥ ೬

ಆ ಮಹಾಪಾಂಡವರ ಕುಲದಲಿ
ಭೂಮಿಪತಿ ನೀ ಜನಿಸಿ ತಂದೆಯೊ
ಳಾ ಮಹಾಪಗೆ ವುರಗತಕ್ಷಕನಿರಲು ಕೈಗಾದೆ ।
ಭೂಮಿಯೊಳಗಹಿವಂಶವಾದ

---

ಗ. ಪುಸ್ತಕಪಾಠ—

* ನಾತಗನಿತ್ತೈಶ್ವರ್ಯಸಂಪದವಿದ್ದು ಫಲವೇನು ।
ಖ್ಯಾತಿಯನಿತಿದ್ದೇನು ಸುಜನ
ಪ್ರೀತಿಕರವನೆ ತಂದೆಗಧಿಕನು
ಖ್ಯಾತಿಯುವನು ದೊರೆಯಿಸು ವುದೇ ಧರ್ಮವುತವೆಂದ ॥ ೬
ಕಾವುವಾಗಲಿಕಾವುವಾಗಲಿ
ಭೂಮಿಗಧಿಕದ್ವೇಷಿಗಳ ನಿ
ಸ್ಸೀಮತನದಿಂ ಕೊಲುವುವೇ ಸಜ್ಜನರ ಧರ್ಮವದು ॥

ಸ್ತೋಮವೆನು ನೀ ಕೆಡಿಸಬೇಕೆನೆ
ಭೂಮಿಪತಿ ಬೆಚ್ಚಿಕೆಂದನಾಮುನಿಗಧಿಕಹರುಷದಲಿ ॥ ೭

ಅದು ಹೇಗೆ ಸಾಧ್ಯವೆಂದು ರಾಜನೆನ್ನಲು ವಿಪ್ರಾನುಗ್ರಹದಿಂದ ಸರ್ವವೂ ಸಾಧ್ಯವಾಗುವುದೆಂದು ಉತ್ತರ.

ಹುದುಗಿಹೆನು ತಾನೆಂಬ ಭೇದದ
ಹದನನರಿಯೆನದೆಂದೊಡಾಯತಿ
ಯಿದು ಬೆಚ್ಚಿಕ ತಾನೊಂದು ಗಹನವೆ ದ್ವಿಜರ ಭಜಿಸಿದೊಡೆ ।
ಹದನ ಕಾಂಬರು ಭೂಸುರೋತ್ತಮ
ರದಕೆ ತತ್ಕ್ಷಣ ಹೋಮದಲಿ ತಾವ್
ಸದೆದು ಕೊಡುವರು ನಿನಗೆ ವಿಪ್ರರು ಭೂಪ ಕೇಳೆಂದ ॥ ೮

ಅನಿಮಿಷರ ಮುಖರೂಪನಪ್ಪ[1] ನ
ಲನ ಕರೆದು ಸರ್ಪಗ್ರಸನವಹು
ದೆನೆ ವನಧಿಯು ಗಭೀರತನವನು ನಿಮಿಷಮಾತ್ರದಲಿ ।
ಮುನಿಪನೊಬ್ಬನು ಕುಡಿದು ಕಳೆಯನೆ
ಜನಪ ನಿನ್ನಯ ಪೂರ್ವಪುರುಷನ
ತನುವಿನ ಕ್ಷಯ ತಳೆಯಲಾಕ್ಷಣ ಹೀನಕರ್ಮಗಳನು ॥ ೯

ಕೂಡಿ ತಳಯರೆ ಶಶಿಯನೆಂದರೆ
ರ್ಛಾಧಿಯುಹ ಹದಿನಾಲ್ಕು ಲೋಕವ
ಮಾಡನೇ ಕಮಲಜನು ಭೂಮಿಗೆ ತಾನು ಗೋಹಲನ ।
ನೋಡಿ ಕಳೆಯರೆ ಯಾ ಸುರೇಶನ
ಗಾಢದೈಶ್ವರ್ಯವನು ರೋಷಿಸಿ
ರೋಷಿಯಲಿ ಭಿಕ್ಷುಕನ ಮಾಡರೆ ತೀರ್ಥಮೌಳಿಯನು ॥ ೧೦

ತಾಮಸಕ್ಕಧಿಕಾರಿ ಮಾಡರೆ
ಭೂಮಿಯೊಳ್ ದ್ವಿಜರಿಂಗೆ ತಾನದು

---

1 ಮುಖನಪ್ಪನ, ಕ. ಖ. ಮುಖನಪ್ಪೊಡನ, ಗ.

ನೇಮಿಸಲು ನಿಲಲುಂಟೆ ಯೆಂದರೆ ಭೂಪನಿಂತೆಂದ ।

ರುದ್ರಾದಿಗಳನ್ನು ಶಪಿಸಿದವರ ಹೆಸರುಗಳ ಪ್ರಶ್ನೆ.

ಸೋಮಶೇಖರಮುಖ್ಯನಾಕಿ
ಸ್ತೋಮವನು ಶಪಿಸಿರ್ದವರ್ಗಳ
ನಾಮವನು ತನಗರುಹಿ ಯೆಂದರೆ ಮುನಿಪನಿಂತೆಂದ ॥ ೧೧

ಉತ್ತರದಲ್ಲಿ—ಸುರರು ಸರ್ವೋತ್ತಮದೇವತೆಯನ್ನು ತಿಳಿಯಲು ಭೃಗು ರುಷಿಯನ್ನು ಕಳುಹಿಸುವಿಕೆ.

ಮೊದಲು ಮನ್ವಂತರದ ಕೃತಯುಗ
ವಿದಿತವಲಿ ತೆತ್ತೀಸಕೋಟಿಯ
ತ್ರಿದಶರೆಲ್ಲರು ನೆರೆದು ಪದ್ಮಜವಿಷ್ಣುರುದ್ರರಲಿ ।
ಆದಟುದೈವವದಾರು ನಂಬಲು
ವಿದಿತವನು ತಾವರಿಯೆವೆಂದಾ
ತ್ರಿದಶಗಂಗೆಯ ತಡಿಯ ನೆರೆಯಲಿ ಕೂಗಿ ಭೃಗುಋಷಿಯ ॥ ೧೨

ಆಗ ಭೃಗುವು ಈಶ್ವರನ ಸ್ಥಾನಕ್ಕೆ ಹೋಗಿ ಕೋಪದಿಂದಿರುವುದಂ ಕಂಡು ಶಪಿಸುವಿಕೆ.

ನೆರೆದು ಕಳುಹಿದರವರ ಗ್ರಾಮಕೆ
ವರಮಹಾಋಷಿ ಮೊದಲು ಹರಿದನು
ಹರನ ಗ್ರಾಮಕೆ ಹೋಗಿ ಶೂಲಿಯ ಸಮಯವೇನೆನಲು ।
ಹರನು ಕೇಳುತ ಕೋಪದಿಂದವೆ
ಬರೆ ಮಹಾಋಷಿ ಕಂಡು ಶಾಪವ
ನೊರೆದ ಗಂಗಾಧರಗೆ ತಾಮಸಜನಕೆ ಗುರು ನೀನು ॥ ೧೩

ಬಳಿಕ ಬ್ರಹ್ಮನ ಬಳಿಗೆ ಬರಲು ಆತನು ತನಗೆ ಮನ್ನಣೆಮಾಡದೆ ಇದ್ದುದ್ದ ರಿಂದ ಬ್ರಹ್ಮನಿಗೆ ಶಾಪವಂ ಕೊಡುವಿಕೆ.

ಎಂದು ಬೇಗದಿ ಕಮಳಭವನನ
ಮಂದಿರಕೆ ಬರ ಪದ್ಮಸಂಭವ

ಬಂದ ಮುನಿಗಾಸನವನೀಯದೆ ಯಿರಲಿಕಾ ಮುನಿಪ |
ಅಂದು ಶಾಪವ ಕಮಲಜಂಗಿಂ
ತೆಂದನೀಜಗದಲ್ಲಿ ಮೇಣೊಂ
ದೊಂದು ಗ್ರಾಮದ್ವಾರಬಂಧದ ಮುಂದೆ ಗೋಹಲನ ‖ ೧೪

ಛಂದದಿಂದಿರುತಿಹುದದಗಸೆಯೊ
ಳೆಂದು ತಾ ಶೀತೋಷ್ಣವಾತಕೆ
ನೊಂದು ಸದ್ದ್ವಿಜರಿಂಗಮವಸರವೀಯದನ ಗತಿಯು |
ಲೆಂದುವೀ ಪರಿಯುಹುದು ಧರೆಯಲಿ
ಸಂದ ಜನರ ವಿವಾಹದಾದಿಯ
ಲೊಂದು ರಾತ್ರಿಯು ನಾಲ್ಕು ಕಗಲಿ ಬಂದು ಗೋಪಲನ ‖ ೧೫

ವೇದಿಸಿದ ನೈವೇದ್ಯಗಿಂದವೆ
ಯಾದರಿಸಿ ತಾ ಮಿಥುನವರ್ಗಕೆ
ಸಾಧಿಸಿದ ಪರಮಾರ್ಥಭೋಗವ ಭೂಪ ಕೇಳೆಂದ |
ಆದುರಾಗ್ರಹಿಮಿಥುನಕೆಯು ಬಹು
ಬಾಧೆ ತಾನಹುದೆಂದು ಭೃಗುಋಷಿ
ಮೋದಿಸಿಯಲದನಱಿಹಿ ಬಂದನು ಕ್ಷೀರಸಾಗರಕೆ ‖ ೧೬

ಕ್ಷೀರಸಾಗರಕ್ಕೆ ಬಂದು ಮಲಗಿದ್ದ ವಿಷ್ಣುವಿನ ಎದೆಗೆ ಒದೆಯಲು ಕೋಪಿ
ಸದೆ ಪರಮಾದರದಿಂದ ತನ್ನನ್ನು ಪೂಜಿಸಿದ್ದರಿಂದ ವಿಷ್ಣುವೇ ಸರ್ವೋ
ತ್ತಮನೆಂದು ತಿಳಿಸುವಿಕೆ.

ಬೇಗದಲಿ ಬಂದುರಗವಾಸಿಯ
ಯೋಗನಿದ್ರಾಂಗನೆಯ ಭೇದದ
ರಾಗದಲಿ ಪವಡಿಸಿದ ಮಧುಮರ್ದನನ ಬಂದೊದೆದ |
ಆಗಳಾತನ ವಕ್ಷಭಾಗವ
ತಾಗಿಸಿದ ತಾನಗ್ರಪಾದದಿ
ಮೇಗಳಱಿತಾದೇವನೆದ್ದನು ಮುನಿಯ ಚರಣವನು ‖ ೧೭

ಹಿಡಿಕಿಸುತ ಕುಳ್ಳಿರ್ದು ಮುನಿಪಗೆ
ನುಡಿದನೈ ಶ್ರೀವಿಷ್ಣು ನಿನ್ನಯ
ಯಡಿಗಳಿವು ಭರದೊದ್ದ ವೀಗಳು ತನ್ನ ಹೇರುರವ ।
ಅಡಿಗಡಿಗಮಾ ಸರ್ವದೈತ್ಯರ
ಹೊಡೆಗಳಿಂದವೆ ಕಠಿಣವಾದುದ
ನೆಡಹಿ ನೊಂದವವೆನುತಲಿದಿರಾಗೆದ್ದನಸುರಾರಿ ॥ ೧೮

ಎನಲು ಹರುಷದಿ ಮುನಿಪನಾಕ್ಷಣ
ವನಿಮಿಷರು ಮುಂತಾಗಿ ಹೊಗಳಲು
ಜನಜನಿತ ತಾನೊಬ್ಬ ತಾಮಸನೊಬ್ಬ ರಾಜಸನು ।
ವಿನಯದಲಿ ತಾನೊಬ್ಬ ಸಾತ್ವಿಕ
ವನಜಲೋಚನದೇವ ತಾನೇ
ಜನಜನಿತ ಸರ್ವೋತ್ತಮೋತ್ತಮನೆಂದು ಹೊಗಳಿದನು ॥ ೧೯

ಹೊಗಳಲಾತನ ಪದದ ಹೆಜ್ಜೆಯು
ಬಗೆಯಲಾ ಶ್ರೀವತ್ಸಲಾಂಛನ
ಜಗಕೆ ಶ್ರೀವತ್ಸಾಂಕನಾದನು ಭೂಪ ಕೇಳೆಂದ ।
ನಿಗಮಗೋಚರದೇವನನು ತಾ
ಜಗವರಿಯಲೊದೆದಾಮಹಾಮುನಿ
ವಿಗಡದೇವೋತ್ತಮನ ಕಂಡನು ದ್ವಾಪರಾಂತ್ಯದಲಿ ॥ ೨೦

ಹಿರಿಯರನು ತಮ್ಮಂಘ್ರಿ ಸೋಂಕಿದ
ವರಮುನಿಪಗಾಮ್ಲೇಚ್ಛಜನ್ಮವು
ಭರವಸವು ತಾನೆಂದು ಮುಂದಣಕಥೆಯ ಕೇಳೆಂದ ।
ಸುರಪತಿಯು ಸಕಲಾನುಭವವನ
ನುಭವಿಸಿ ಮುನಿ ದೂರ್ವಾಸನಾಕ್ಷಣ
ಶರಧಿಯೊಳು ತಾ ಮುಳುಗಿಸಿದನಾಸುರೇಶ್ವರನ ॥ ೨೧

1 ಪಾವು, ಕ, ಗ.

ಅಗಸ್ತ್ಯರ ಕಥೆಯಲ್ಲಿ ಸುರರು ಬ್ರಹ್ಮನ ಬಳಿಗೆ ಬಂದು ವಾತಾಪೀಲ್ವರ ಬಾಧೆಗಳನ್ನು ಹೇಳುವಿಕೆ.

ಮತ್ತೆ ಕೇಳ್ಳೆ ನೃಪಶಿರೋಮಣಿ
ಚಿತ್ತವಿಸು ಮತ್ತಾಯಗಸ್ತ್ಯನ
ಸತ್ತ್ವದುನ್ನತಿಯನು ಮಹಾಂರಾಶಿಯನು ಕುಡಿದವನು।
ಬಿತ್ತರದಿ ತಿರುಗುವನು ಲೋಕಕೆ
ಹತ್ತಿದವು ನಾಲ್ಕೈದುವೆಸ್ತಿಗ
ಳೊತ್ತಿ ಯಿತ್ತ್ರೈಲೋಕ್ಯಜೀವನ ಕ್ಕಾದುತಿರೆ ಬಳಿಕ ॥ ೬೦

ಸಕಲಸುರಗಣ ನೆರೆದು ಬಂದಾ
ಬಕುತಿಯಲಿ ಬ್ರಹ್ಮಂಗೆ ಲೋಕವ
ವಿಕಳಗೊಳಿಸುವ ಹದನ ಬಿನ್ನಹ ಮಾಡಿದುದು ಬಳಿಕ।
ವಿಕಳವಾಗಲು ವಾತಪೀಲ್ವಲ
ರಕಟ [1] ಭೂಸುರನಿಕರ ವೆಲ್ಲವ
ಪ್ರಕಟದಲಿ ಭಕ್ಷಿಸುತಲಿರ್ಪರು ವಿಂಧ್ಯಪರ್ವತದಿ ॥ ೬೩

ನಿಂದಿರದೆ ತಾವಂದವಾಗಿಯೆ
ಮುಂದೆ ಸೂರ್ಯನ ರಥದ ಮೇಲಕೆ
ನಿಂದು ಲಕ್ಷದ ಮೇಲೆ ಯಿಪ್ಪತ್ತ್ಯದು ಸಾಪಿರಕೆ।
ಇಂದಿಳೆಯ ಪೊಡೆಗೆಡುವುತ್ತೈದಳ
ತಂದ ರಾಕ್ಷಸರೆಲ್ಲ ತೆಂಕಣ
ಸಿಂಧುವಿನೊಳಡಗಿದ್ದು [3] ತಂಮನು ಕೊಂದು ಕೂಗುವರು॥ ೬೪

ಅವರಿಗವದಿರು ನೆರವುಗೊಡುತಿವ
ರವನಿಯಲಿ ಲಂಕಾಧಿಪತಿಸಹ
ಶಿವಶಿವಾಅಯ್ದೈದುಬಾಧೆಗೆ ಯೇನು ಹದನೆನಲು।
ಅವರಿಗೆಂದನು ಕಮಲಸಂಭವ

---

1 ಸಕಲ, ಕ. ಗ. 2 ವಾದುದು, ಕ. ಗ. 3 ದುಂದುಭಿಯಲಡಬಿದ್ದು, ಕ. ಗ.

ದಿವಕೆ ನಿಂದಿರಲಾಪ ದೈವ
ಪ್ರವರವಿಲ್ಲದೆ ಸಕಲಋಷಿಕುಲಕಾಗಿ ಯರಿದೆಂದ ‖ ೨೪

ಆವನೊಬ್ಬನು ರಾಜರಾಜರ
ತಾವನೈದಿಯೆ ರಾಜದರುಶನ
ಸೋವನವನಾ ರಾಜದ್ರವ್ಯವ ಕೊಂಬ ರಾಜರಲಿ ।
ಆವ ಮನ್ನಿಸಿಕೊಂಬನಾತನೆ
ಯೀವಿಷಯವ ಗೆಲಲರಿದೆಂದರೆ
ದೇವಗಣ ತಮಗಱಿಯನಲ್ಕೀಬ್ರಹ್ಮನಿಂತೆಂದ ‖ ೨೫

ಆವ ರಾಜರ ದರುಶನಂಗಳು
ಭಾವಿಸಲು ತಮಗಿಲ್ಲವಾದರೆ
ದೇವಕುಲಕಿನ್ನಾರು ಗತಿ ಹೇಳೆಂದರಾಸುರರು ।

ಅಗಸ್ತ್ಯರ ಬಳಿಗೆ ಹೋದರೆ ನಿಮ್ಮ ಇಷ್ಟಸಿದ್ಧಿಯಾಗುವುದೆಂದು ಬ್ರಹ್ಮನ ಉತ್ತರ.

ನೀವು ಹೇಳಿದುದೈದು ತಾವಿನ
ದೇವವಿಗ್ರಹಕೊಬ್ಬ ಪರಿಭವ
ಭಾವಿಸಲು ನೀವೀಸು ಜಠರವನಗಸ್ತ್ಯಮುನಿರಾಯ ‖ ೨೬

ಆತನಲ್ಲಿಗೆ ಹೋಗಿ ನುಡಿವುದು
ವೀತರಾಗದಲಿದು ಸಮಸ್ತ
ಪ್ರೀತಿಯುವ ನೆಱೆ ಮಾಡಬೇಕೆಂದಾತಗುಸುರುವುದು ।
ಆತ ಹೇಳಿದ ತೆಱದೆ ಯಮರರು
ಯಾತತುಕ್ಷಣದಲ್ಲಿ ಬಂದರು
ವ್ರಾತು ಹರವರವಮುನಿಪಕುಂಭಜನಾಶ್ರಮಕ್ಕೊಲಿದು ‖ ೨೭

ದೇವತೆಗಳು ಅಗಸ್ತ್ಯರಲ್ಲಿ ಬಂದು ತಮ್ಮ ಅಭಿಪ್ರಾಯವನ್ನು ತಿಳಿಸುವಿಕೆ.

ಬಂದು ಸಾಷ್ಟಾಂಗದಲಿ ಮುನಿಪಗೆ
ವಂದಿಸಿದುವಾದೇವನಿಕರವು

ಹಿಂದುಗಳೆಯದೆ ತಮ್ಮಭೀಷ್ಟವ ನುಡಿದರಾಮುನಿಗೆ ।
ತಂದೆ ಕೇಳ್ಕೆ ತಮ್ಮವಸ್ಥೆಯ
ನಿಂದು ವಿಧಿಪನ ಬಳಿಗೆ ಹೋದರೆ
ಯಿಂದು ನಿಮ್ಮಯ ಬಳಿಗೆ ಕಳುಹಿದನೆಂದರವರಂದು ॥ ೨೯

ದಿನಕರನ ರಥಕಡ್ಡಲಾಗಿಯೆ
ತನು ಬಳೆದುದಾವಿಂಧ್ಯಪರ್ವತ
ಕನಿತುವಾಗಿಯೆ ಭೂಮಿ ತಗ್ಗಿತು ಬಡಗದಿಕ್ಕಿನಲಿ ।
ಮುನಿನಿಕರವೊಂದೆಸೆಗೆ ಸಾರಲು
ವನಧಿಯೊಳಗಡಗಿದ್ದ ರಾಕ್ಷಸ
ರನಿತು ತಾವ್ಯೆನೂರುಕೋಟಿಯಲೆಂಮ ಕಾಡುವರು ॥ ೩೦

ನಿಮ್ಮವಸ್ಥೆಯನೇನು ಕಾರಣ
ನಮ್ಮ ಮುಂದಱುಹುವಿರಿ ನೀವೆನೆ [1]
ಘಮ್ಮನಾಕ್ಷಣ ಮುನಿಗೆ ಬಿನ್ನಹ ಮಾಡಿದರು ಸುರರು ।
ನರ್ಮದಾತೀರದಲದಿಬ್ಬರು
ಕರ್ಮಿಗಳು ವಾತಾಪಿ ಯಿಲ್ವಲ
ರೆಮ್ಮ ಕಾಡುವ ಕಥೆಯ ನೀ ಕೇಳೆಂದರಾಮುನಿಗ ॥ ೩೧

ಮುನ್ನ ನಮ್ಮೆಲ್ಲರನು ಕೃತಕದಿ
ಮನ್ನಿಸಿಯೆ ತಾವ್ ಕರೆದು ರಾಕ್ಷಸ
ರಿನ್ನು ತಮಗರಿದೆನುತ ಬಂದೊಳ ಹೊಕ್ಕರಂಬುಧಿಯ ।
ಭಿನ್ನವಿಲ್ಲದೆ ತಮ್ಮು ತನಿಬರ
ವುನ್ನತಿಯ ಕಾಡುತಿವರವರಿಗೆ
ಕುನ್ನಿಗಳ ಕಾಡುವರು ಬಪ್ಪರು ಲಂಕೆಯುತಿಬಳರು. ॥ ೩೨

1 ಪ್ರೇಂಬಱಿಪವುದುಯೆನಲಿಕೆ, ಕ. ಖ.

ಅವರ ಪ್ರಾರ್ಥನೆಯಂತೆ ಬಂದು ಗ್ರಾಸವಂ ಬೇಡಲು ಪದ್ಧತಿಯಂತೆ ವಾತಾಪಿಯನ್ನು ಕೊಂದು ಅಗಸ್ತ್ಯರಿಗೆ ಆಹಾರ ಕೊಡುವಿಕೆ.

ಆವನಾನೊಬ್ಬನನು ಕಾಣೆವು
ದೇವಮುನಿ ಯೆನೆ ಮುನಿಪನಾಗಳು
ದೇವಸಿಕರಕೆ ನುಡಿದ ತಾಪವನೀಗ ನೀಗಿಸುವೆ ।
ತಾವೆನುತ ಪರಿತಂದನಾಕ್ಷಣ
ದೇವಮುನಿ ವಾತಾಪಿಯಿಲ್ವಲ
ದಾವಸಥಕ್ಕೈದಿ [1] ವರ ಗ್ರಾಸವನಾಗ ಬೇಡಿದನು ॥ ೩೩

ಬೇಡಲಿಕೆ ಹರಿತಂದು ಯಿಲ್ವಲ
ಕೇಡ ನೆನೆ ವಾತಪಿಯು ಕರೆದುಜೆ
ನೋಡಿ ಭಿಕ್ಷವ ಕೊಡುತ ಕಟ್ಟನು ಕೊಂದ ಪಾತಕದಿ ।
ರೂಢಿ ಮಿಕ್ಕಲು ಬ್ಬತಿಕ ವಿಪ್ರನ
ಘಾಡದಲಿ ಕಾಲ್ತೊಳೆದು ಭೋಜನ
ಮಾಡಿಸಿದ ತಾನಧಿಕಹರುಷದೊಳರಸ ಕೇಳಂದ ॥ ೩೪

ಪೂರ್ವದಂತೆ ವಾತಾಪಿಯನ್ನು ಕರೆಯಲು ವಾತಾಪಿ ನನ್ನುದರದಲ್ಲಿ ಜೀರ್ಣನಾದನೆಂದು ಹೇಳಿ ಹೊರಡುವಿಕೆ.

ಅನ್ನವಿಕ್ಕಿದೊಡುಂಡ ಮುನಿಪನು
ತನ್ನ ಮನದೊಳು ನೆನೆದು ಮಂತ್ರವ
ಮುನ್ನಲಾವಾತಾಪಿಯೆಂದಜೆ ನೆನೆದು ತಾ ಕರೆಯೆ ।
ಸನ್ನುತದಿ ಮುನಿ ಕೇಳ್ದು ಮೌನದಿ
ನನ್ನಲಿಯ ವಾತಾಪಿ ಜೀರ್ಣವು
ಮುನ್ನೆನುತ ಮುನಿ ನಂದ ವಿಪ್ರರ ಹಾನಿಯೆಲ್ಲವೆನು ॥ ೩೫

---

1 ತಾಸಿಗೈದಿದನ, ಕ. ಗ.

ಅಗಸ್ತ್ಯರು ಮಾರ್ಗವ ಕೇಳಲು ಉಪೇಕ್ಷಿಸಿದ ವಿಂಧ್ಯಾಚಲವನ್ನು ಭೂಮಿಯಲ್ಲಿ ಒತ್ತುವಿಕೆ.

ಪರಿಹರಿಸಿ ವಿಂಧ್ಯಾಚಲೇಂದ್ರಕೆ
ಹರಿದು ಬಂದಾ ಮುನಿಪ ಶಿಷ್ಯನ
ಕರೆದು ನುಡಿದನು ಶಿರವ ಕೊಡು ಶೂಲಿಯು ನಿರೀಕ್ಷಿಸುವೆ ।
ಅರಸ ಕೇಳ್ಳೈ ಮುನಿಯು ಮಾತನು
ಸರಕುಗೊಳ್ಳದಲಿರಲಿಕಾಕ್ಷಣ
ವುರವಣಿಸಿ ಶಿರವೇರಿ ಮೊತ್ತಿದ ವಾಮಪಾದದಲಿ ॥ ೩೬

ಒತ್ತಲಿಕೆ ವಿಂಧ್ಯಾಚಲೇಂದ್ರನು
ವೆತ್ತ ಸರಿದನು ಭೂಮಿಯೊಳಗಾ
ವಿಸ್ತರಿತ ತಾ ಲಕ್ಷಯೋಜನದುದ್ದದಳತೆಯನು ।
ಇತ್ತಲಾವಿಂಧ್ಯಾಚಲೇಂದ್ರನು
ಮತ್ತೆ ಭೂತಳದಿಂದ ಕೇಳ್ಳೈ
ಚಿತ್ತರದಿ ನೋವುತ್ತ ಬಂದನು ಮನದಿ ಯೋಚಿಸುತ ॥ ೩೭

ಅಳವು ನಮಗಿಲ್ಲೆನುತ ವಿಂಧ್ಯನು
ನೆಲೆಯ ಕಾಣದೆ ತನ್ನ ಮನದಲಿ
ತಿಳಿದು ನೋಡುತ ಹಮ್ಮನುಳಿದಾಪಾದಘಾತದಲಿ ।
ಇಳಿದ ವಿಂಧ್ಯನ ತನ್ನನುಜ್ಞೆಯ
ಬಳಿಕ ಸಲಿಸುವುದೆನುತ ಹೇಳಿದ
ಮುಳಿದು ದಕ್ಷಿಣಕಡಲಿನತ್ತಲೆ ಯಜ್ಞಪುರುಷನನು ॥ ೩೮

ಅಗ್ನಿಯು ಮರ್ಯಾದೆಯಿಂದ ಮಕ್ಕಳಾದ ನಳನೀಲರನ್ನೊಪ್ಪಿಸುವಿಕೆ.

ಕಾಣುತವೆ ಬರೆ ಯಾತನೆದ್ದನು
ಗೋಣ ಮಣಿದು ನುಡಿದನು ತನ್ನಯ
ಜಾಣರಪ್ಪ ಪುತ್ರರನು ನಿಮಗೀವೆ ಕೇಳುವುದು ।

ಕ್ಷೀಣಮತಿಯಪ್ಪೆನ್ನ ಪುತ್ರರ
ಕ್ಷೋಣಿಯೊಳಗಾದ್ಯರನು ಮಾಡೆನು
ತಾಣೆಯಲಿ ತಾ ಕೊಟ್ಟ ಮುನಿಪತಿಗಗ್ನಿ ಯಾತ್ಮಜರ ‖ ೩೯

ಅವರೊಡನೆ ಸಂಚರಿಸುತ ಸಮುದ್ರತೀರದಲ್ಲಿ ಮುನಿಯು ಶೌಚಕಮಾಡಿ ಬರುವುದರೊಳಗೆ ಶಿಷ್ಯರಲ್ಲಿದ್ದ ಪೂಜೋಪಕರಣಗಳು ಸಮುದ್ರ ಸೇರುವಿಕೆ.

ಕೊಂಡನಾ ನಳನೀಲರಿಬ್ಬರ
ಚಂಡಮುನಿ ತಾ ಬರುತಲವನಿಯ
ಮಂಡಲದಿ ಬೆಸಗೊಂಡ [1] ಶಿಷ್ಯರ ದೇವಪೂಜನಕೆ ।
ಕಂಡು ಮಕರಾಕರವನೀ ಋಷಿ
ಪಂಡಿತನು ತಾ ಶೌಚಕೆಂದಾ
ದಂಡೆಯಲಿ ತಿರುಗಿದನು ಮುನಿ ವೃತ್ತಾಂತವ ಕೇಳೆಂದ ‖ ೪೦

ಶಿಷ್ಯರಿಬ್ಬರು ದೇವಪೂಜೆಯ
ವಶ್ಯದುಪಕರಣಗಳ ಬೆಳಗುತ
ಹಾಸ್ಯದಲಿ ಕೈಯಿಂದಲೊಂದಾ ಗಿಂಡಿಯುದಕವನು ।
ದೃಶ್ಯದಲಿ ಬುಡುಬುಡನೆ ಬಿಡುತವೆ [2]
ಹಾಸ್ಯದಲಿ ತಮ್ಮರ್ಥಿಯಿಂತಿರೆ [3]
ಮೃಶ್ಯವೀಚಿಗಳಳದವೆಲ್ಲವಬಿಸುಟುದಬ್ಧಿಯಲಿ [4] ‖ ೪೧

ಗುರುವು ಬಂದ ಬಳಿಕ ಸಮುದ್ರನ ಅಪರಾಧವನ್ನು ತಿಳಿಸಲು ಕೋಪದಿಂದ ಸಮುದ್ರಪಾನಮಾಡುವಿಕೆ.

ವರಮುನಿಯು ತಾ ಬರವ ಕಾಣುತ
ಪರಮದೇವರ ಪೂಜೆ ಯೆಲ್ಲವ
ಶರಧಿಯೊಳು ಬಿಟ್ಟಾಗ ವಹ್ನಿತನಯರು ಚಿರಕಾಲ [5] ।

---

1 ಕಂಡಾಗ, ಕ. ಗ. 2 ಗಳವೃತ್ತ, ಕ. ಗ. 3 ಯಾಗಲು, ಕ. ಗ.
4 ಸುಸ್ಯನೀಕ್ಷಿಸಿದಲ್ಲಿ ಯೆಲ್ಲವಬಿಸುಡೆ ಶರಧಿಯಲಿ, ಕ, ಗ.
5 ಜರಿರಲುಬಿರುಘಾಯು, ಕ. ಗ

ಇರುತ ನೆನೆದರು ತಮ್ಮ ಗುರುವಿನ
ನಿರುತಕೋಪಾಟೋಪವೆಲ್ಲವ
ನಱಿದುತತ್ಕ್ಷಣ ಶರಧಿಯುದಕವ ತೋಡಿ ಹಾಕುತಿರೆ ‖　೪೨

ಚಲ್ಲಿತಾಕ್ಷಣ ದೇವಪೂಜನ
ಕೆಲ್ಲ ಹರಿದುದು ಬರುತಿರಲು ಬೞಿ
ಕೆಲ್ಲ ತರುಮರಗಳನು ಗಿರಿಗಳ ಕಿತ್ತು ಮೊಱೆಯುತವೆ ।
ಕಲ್ಲುವರೆಗಾ ವಾಹಿನಿಯು ಬರೆ
ನಿಲ್ಲದಾನಳನೀಲರಿಬ್ಬರು
ಮಲ್ಲಿ ಪೊಂದಾಲದೊಳು ವೃಕ್ಷದ ಮೇಲೆ ಕುಳ್ಳಿದರು ‖　೪೩

ಇರುತಿರಲಿಕೊಂದೆರಡು ಜಾವದ
ನಿರುತದಲಿ ಶೌಚಾಚಮನಗಳ
ನಿರದೆ ಮಾಡಿಯೆ ದೇವಪೂಜೆಯು ಮಾಳ್ಪ ಭರದಿಂದ ।
ಬರಲಿಕಲ್ಲಿಯು ತರುಗಿರಿಗಳಾ
ಧರಣಿಯುಲಿ ಕೆಡೆದಿರಲು ವಿಸ್ಮಯ
ಭರದಿ ಚಿರ ಸಿಂದಿರಲು ಬಂದರು ಶಿಷ್ಯರಾಕ್ಷಣಕೆ ‖　೪೪

ವಂದಿಸಿದರತಿಭಯದಿ ಚಾಚಿದ
ರಂದು ಶಿರಗಳನಾಗಳಂತ ತಾ
ವೆಂದರಾಗುರುವಿಂಗೆ ವಿನಯದೆ ಬಾಗಿ ಭಾವದಲಿ ।
ಇಂದು ನದಿಯಧಿಪತಿಯು ನುಂಗಿದ
ತಂದೆ ಯಾಲದ ಮರನ ಹತ್ತಿಯೆ
ಕುಂದದುೞಿದೆವು ನಾವೆನಲು ಮುನಿಯಧಿಕರೋಷದಲಿ ‖　೪೫

ಕೋಪಿಸಿದನಾಕದಲುವಾಗಳು
ವಾಪುರಂದರಮುಖ್ಯನಾಕಿಗ
ಳಾಪಸತ್ವಾಧಿಕವಮಹಾಬ್ಧಿಯ ತಡಿಯ ಸಾರುತಿರೆ[1] ।

---

1 ಹಿಡಿದು ಸಾಗರವ, ಕ. ಗ.

ತಾಪದೀಕ್ಷಿಸಿ ಮುನಿಪ ತನ್ನಯ
ರೂಪವನು ತೋಱಿಸುವೆನೆನುತಿರೆ
ಕೋಪದಿಂದೀತನ ಮಹತ್ತ್ವವ ಸಮುದ್ರ ಬಗೆಯದಿರೆ ‖ ೪೬

ನುಂಗಿದನು ತಾನೊಂದು ಲಕ್ಷತ
ರಂಗದಗಲಸಮುದ್ರದೇವರ
ನುಂಗೆ ನುಣ್ಣಗೆ ಯಿರಲಿಕಾತನ ಪಾತ್ರ ಬಯಲಾಯ್ತು ।
ಅಂಗವಿಸಿ ಬೞಿಕಿತ್ತ ಮುಂದಣ
ತುಂಗಶರಧಿಯದೆರಡು ಲಕ್ಷವ
ನುಂಗಿ ಸುಮ್ಮನೆ ಯಿರದೆ ಮುಂದಣಬುಧಿಗನುವಾದ ‖ ೪೭

ಬಂದುಲಕ್ಷದ ಘಾತಪದಱೊಳು
ಕುಂಪದಿರುತಿಪ್ಪಜೀವ [1] ಕೋಟಿಯ
ಲೊಂದನೞಿಯದೆ ನುಂಗಿದನು ಬೞಿಕಂದಗಸ್ತ್ಯಮುನಿ ।

ಆಗ ಖಿನ್ನನಾಗಿ ಬೇಡಿಕೊಂಡ ಸಮುದ್ರನನ್ನು ಮೂತ್ರರೂಪವಾಗಿ ಬಿಡಲು ಅಲ್ಲಿ ಪರ್ವಕಾಲದಲ್ಲಿ ಸ್ನಾನಮಾಡಿದವರಿಗೆ ಮಾಸಸ್ನಾನ ಫಲದ ವರವಂ ಕೊಡುವಿಕೆ.

ಅಂದು ನಾನಾ ಪರಿಯ ಸತ್ವವು
ಛಂದದಲಿ ನೆಱೆ ಕೋಳು ಪೋಗಲಿ
ಕಂದು ಗಂಗಾಪತಿಗೆ ಸಂಕಟವಾಗೆ ಮುನಿಸತಿಯು ‖ ೪೮

ಪೋಗೞಿದರೆ ತಾನಾಗ ಮುನಿಪನು
ವೃಗುಳಲಿಕೆ ಮನದಿಚ್ಛೆ ಮಾಡಲು
ಜಗದ ನದಿನದವಾಗಳಾಯಿತು ಮುನಿಯ ಕರುಣದಲಿ ।
ಉಗುಳುಗಳದಾಬಳಿಕಲಂಬುಧಿ
ಯುಗುಳ ತಾನುಚ್ಛಿಷ್ಟವೇ ಯುಹು
ದುಗುಳಬೇಡೈ ಯೆನಲು ಮೂತ್ರಿಸಿ ಕಳದನಾಕಡಲ ‖ ೪೯

1 ಪ್ರತ್ತೇಳು, ಕ. ಗ.

ಕಡಲ ಮೊತ್ತ್ರಿಸಿ ತುಂಬಿ ಮುನ್ನಿನ
ತಡಿಯನೆಲ್ಲವನಾಗ ಶರನಿಧಿ
ನುಡಿಯುತ್ತೈ ತಾನಾಗಗಸ್ತ್ಯಗೆ ಭೂಪ ಕೇಳೆಂದ ।
ಪೊಡವಿಯಲಿ ತಾನಶುಚಿಯಾದೆನು [1]
ಮಡುಹುವಾದೆನದೊಬ್ಬರಾವರು [2]
ಬಿಡದೆ ಮಾನಸ್ನಾನವಾಡುವರಿಲ್ಲ ತನ್ನೊಳಗೆ ॥ ೫೦

ಎನಲು ಕುಂಭಜನಾ ಸಮುದ್ರಗೆ
ವಿನಯದಿಂದುಸುರಿದನು ಚಂದ್ರಮ
ದಿನಪತಿಯು ತಾನೊಂದು ರಾಸಿಗೆ ಬಂದ ದಿನಗಳಲಿ ।
ಮನವೊಲಿದು ತಾ ಮಿಂದ ಮನುಜಗ
ದೆನಿತು ಫಲ ತಾನಹುದದೆಂದೊಡೆ [3]
ಘನತರಶ್ರೀಮಾಸವಾಸದ ಫಲವನೈದುವರು ॥ ೫೧

ಎಂದು ತನ್ನಯ ದೇವಪೂಜೆಯ
ನಂದು ಕಂಡನಗಸ್ತ್ಯ ಕಡಲಿಂ
ಗಂದು ತನ್ನಾಜ್ಞೆಯನು ಕೊಟ್ಟನು ಭೂಪ ಕೇಳಂದ ।
ಇಂದು ಮೊದಲಾಗೆನ್ನ ಶಿಷ್ಯರು
ಛಂದದಲಿ ಮುಟ್ಟಿದುದ ನುಂಗಿದ
ರೆಂದು ವೀಪರಿಯೆನಲಿಕೆಂದನು ಜಲಧಿ ಮುನಿವರಗೆ ॥ ೫೨

ನಿಮ್ಮ ಶಿಷ್ಯರು ಮುಟ್ಟಿದೊಂದುವ
ನುಮ್ಮನಾನುಂಗಿದರೆ ಲೋಕದ
ಧರ್ಮ್ಮವೈದುವೆವೆಂದು ಮುನಿಪನ ಮರುಣ ಬೀಳ್ಕೊಟ್ಟ ।
ಬೊಮ್ಮರಕ್ಕಸಕೋಟಿ ನೆರೆದಿಹ

---

[1] ತಾನಾವೆಯಾದುದು, ಕ. ಗ. [2] ಮುಡುಗಪೋದೆನು ವೊಬ್ಬರಾಗಿಯೆ, ಕ. ಗ.
[3] ತಾನಹುದುವಂದಿಸಿ, ಕ. ಗ.

ಗವ್ಯದಾಸಸ್ಥನಕ್ಕೆ ಮಾಡಿದ
ರವ್ಯನವತಾರಕ್ಕೆ ಪೂರ್ವದೊಳಂಟು ಚೌಕಡಿಗೆ ॥ ೫೩

ಆಯಿತ್ತೈ ತಾ ಕೇಡು ಲಂಕೆಗೆ
ನ್ಯಾಯಗತಿಯಲಿ ನೀಲನಳರಿಂ
ದಾಯಿತ್ತೈ ತೆತ್ತೀಸಕೋಟಿಗೆ ಹರುಷದುಬ್ಬುಗಳು ।
ರಾಯ ಕೇಳ್ಳೈ ಬಳಿಕಗಸ್ತ್ಯನು
ವಾಯುದಲಿ ದಕ್ಷಿಣಕೆ ನಿಲಲಿಕೆ
ಯಾಯಿತ್ತೈ ತಾ ರೂಢಿ ಸಮತಳ ನಿಮಿಷಮಾತ್ರದಲಿ ॥ ೫೪

ದೇವರೆಂದಾಯ್ಕೆದು ಕಾರ್ಯವ
ನೋವಿ ಮಹಮುನಿ ನಿಮಿಷಮಾತ್ರಕೆ
ತಾವು ಮಾಡಿಯೆ ಮೆಱೆದರುನ್ನತತೇಜದಳತೆಯಲಿ ।
ಆವುದೈ ಕೌಂಡಿನ್ಯಋಷಿಪರ
ತಾವಿನಲಿ ತಾ ಕಾಣಬಪ್ಪುದು
ಬೂವಿಯಿಂ [1] ಹದಿನೆಂಟು ಲಕ್ಷಕೆ ಭೂಪ ಕೇಳೆಂದ ॥ ೫೫

ಆಯಿತ್ತೈ ತಾನಾಗಗಸ್ತ್ಯನು
ನ್ಯಾಯುವಲ್ಲೆಂದಱಿದು [2] ಶಿಷ್ಯರ
ಮಾಯು [3] ಶಪಿಸಿದ ನೀವು ಮರ್ಕಟರೂಪು [4] ಗೊಂಡಿಹುದು ।
ಮಾಯುದೀಸಾಗರನ ಮೇಲೆಯು
ದೇವಪೂಜೆಯು ಕೊಂಡೆನೆಂಬೀ
ನ್ಯಾಯುವಱಿಯದಪರಾಧವಿಟ್ಟರೆ ಯೆಂದು ಕಳುಹಿದನು ॥ ೫೬

ಚಂದ್ರನು ದಕ್ಷಪುತ್ರಿಯರಾದ ಅಶ್ವಿನ್ಯಾದಿಗಳಂ ವಿವಾಹಮಾಡಿಕೊಂಡು
ಸಮವಾಗಿ ವರ್ತಿಸದೆ ಇರಲು ಕ್ಷಯಪ್ರಾಪ್ತಿಯಾಗಲೆಂದು ದಕ್ಷನ ಶಾಪ.

ಈಮಹಾಚಂದ್ರಮಗೆ ದಕ್ಷನು
ನೇಮಿಸನೆ ತನ್ನ ಮಗಳ ಪುತ್ರಿಯ

---

[1] ಭೂವರದಿ, ಕ ಗ. [2] ನ್ಯಾಯವಲ್ಲಯೆಂದೆನಲು, ಕ ಗ.
[3] ತಾಯಿ, ಕ. ಗ. [4] ವರವಾನರಾಹ, ಕ. ಗ.

ಕಾಮಸಂಗವ ವರ್ಜಿಸಲು ಕ್ಷಯವೆಂದು ಶಾಪವನು ।
ಭೂಮಿಪತಿ ಕೇಳ್ಸಪ್ತವಿಂಶತಿ
ಯೀ ಮಹಾತಾರೆಗಳು ದಕ್ಷನ
ಪ್ರೇಮಪುತ್ರಿಯರಾದರಿಪ್ಪತ್ತೇಳು ನಾಮದಲಿ ॥ ೫೭

ವರಸತಿಯರವರೊಳಗೆ ಮೋಹದ
ಪರಮಪುತ್ರಿಯರಿರಲಿಕೆಲ್ಲರ
ಧರೆಯು ಪೊಗಳಲು [1] ಕರ್ಮಕಾರಿಯರೆಂದು ಮನ್ನಿಸುತ ।
ನಿರುತದಿವರಿಂ ಹಿರಿದು ರೋಹಿಣಿ
ವರಸುತೆಯು ಮೇಲಧಿಕಮೋಹದಿ
ಹರಿಯ ಜನ್ಮದ ತಾರೆಯೆಂದೇ ಹಿರಿದು ಮನ್ನಿಸುವ ॥ ೫೮

ಆಸುತೆಗೆ ಮೊದಲಲ್ಲಿ ಜನಿಸಿದ
ವಾಸುದೇವನ ಹಿರಿಯ ಕಂದನು
ಭೂಸುರರ ಮೊದಲಿಗನು ಕಮಲಜನೆಂದು ಮನ್ನಿಸುವ ।
ಈಸು ಧನ್ಯರದಾರು ಮಕ್ಕಳ
ಕೋಶದಲು ರೋಹಿಣಿಯನೆಂದಾ
ಭೂಸುರೋತ್ತಮ ದಕ್ಷ ಕೊಂಡಾಡಿದನು ರೋಹಿಣಿಯ ॥ ೫೯

ಆಕೆಮೊದಲಾಗಮಳಸತಿಯರ
ನೇಕಲಗ್ನದಿ ಮದುವೆಮಾಡಿದ
ಲೋಕದಲು ಚಂದ್ರಮಗೆ ದಕ್ಷನು ಪರಮಪ್ರೀತಿಯಲಿ ।
ಆಕುವರಿ ರೋಹಿಣಿಯು [2] ಮೋಹವ
ನೇಕವಿಧದಲಿ ಚಂದ್ರ ತಾಳ್ದು ಜಿ [3]
ನಾಕಜರ ಹನ್ನೆರಡು ವರುಷವಿರಲದ [4] ಸ್ಮರಿಸದೆ ॥ ೬೦

ಪುರುಷಸಂಗಮ ವಿಲ್ಲವೆಂದಾ
ಹಿರಿದು ಖ್ಯಾತಿಯ ತಾಳ್ದು ತಂದೆಗೆ

---

1 ಷೋಡಶ, ಕ, ಗ. 2 ಆಕೆ ಕೃತ್ತಿಕೆಯೊಳಗೆ, ಕ. ಗ.
3 ಇರಲಿ ರೋಹಿಣಿ, ಕ. ಗ. 4 ವದೆಂದು, ಕ. ಗ.

ಪರಿಯನರುಹಲು ದಕ್ಷ ಕೋಪಿಸಿ ಶಾಪವಿರಿಸಿದನು |
ಪಿರಿದು ಸತಿಯರ ಸಂಗ ನಿನಗದು
ಹರಿದು ಹೋಗುವುದೆನಲು ತಾರಾ
ವರಸನನಿಬರು ಬಿನ್ನವಿಸಿ ತಾತನುಱೆ ಬೇಡಿದರು ॥ ೬೧

ಬೇಡಲಿಕೆ ಪೂರ್ಣಿಮೆಯಲೊಂದಿನ
ಕೂಡಲೀತನ ಕಳೆಯು ಷೋಡಶ
ರೂಢಿಪತಿ ಕೇಳೆಂದು ಕ್ಷಯಕಳೆಯಾದ ವಿವರವನು ॥
ಮಾಡಿದಂತಪ ಹೇಳಿ ಪುನರಪಿ
ರೂಢಿಪತಿ ಬೆಸಗೊಂಡನಗ್ನಿಯ
ನೋಡಿ ಶಾಪವೆನಿತ್ತನಾವನದೆಂಬುದನು ತಿಳುಪಿ ॥ ೬೨

ಇಂದ್ರನು ವೃತ್ರಾಸುರನ ಸಂಹಾರಕ್ಕಾಗಿ ದಧೀಚಿಯು ಬೆನ್ನೆಲುವನ್ನು ತೆಗೆದುಕೊಂಡು ಹೋಗುವಿಕೆ.

ಎನಲಿಕೆಂದನು ಪೂರ್ವಕಾಲದಿ
ವಿನುತಮುನಿಪ ದಧೀಚಿ ಯೊಂದಿನ
ಮನೆಯಲಗ್ನಿಷ್ಟೋಮಯಾಗವ ಮಾಡುತಿರಲಂದು |
ಅನಿಮಿಷಾಧಿಪ ಬಂದನಗ್ರದ
ಘನತೆಯಿಂದಾ [1] ತಿಥ್ಯಕಾಲದಿ
ವಿನುತವಿಜ್ಞಾಪನೆಯ ಮಾಡಲಿಕಾತ ಬೆಸಗೊಂಡ ॥ ೬೩

ಏನು ಪರಿಣತಿ ನಿನಗದೇನೆ ಪರಿ
ಯಾನತದಿ ಮುನಿಗೆಂದ ನಿಮ್ಮಯ
ಸ್ಥಾನದಲಿ ಪೃಷ್ಠಾಸ್ಥಿಯನು ಕೊಡಿ ಯಿೀಗ ತನಗೆಂದು |
ಮೌನದಲಿ ಕ್ಷಣವಿದ್ದು ಯಾತ್ಮ
ಜ್ಞಾನದಲಿ ಭಾವಿಸಲು ತನುವಿಗೆ
ಹಾನಿಯಹುದೆಂದಿರ್ದೊಡೊಮ್ಮೆಗೆ ವಿಧಿ ವಿಧಾತ್ರನಲಿ ॥ ೬೪

[1] ಘನತರದಯಾ, ಕ. ಗ.

ಎಂದು ನಿಶ್ಚಯಗೆಯ್ದು ನಾಕ್ಷಣ [1]
ವೆಂದನಿಂದ್ರಗೆ ತನ್ನ ಯಸ್ಥಿಯ
ನಿಂದು ತಾ ತೆಗೆದೀವೆನಾದೊಡಮಾತ್ಮಘಾತವಲಿ ।
ಒಂದು ಹತ್ಯವು ಸಮೆನಿಸುವುದೆನು
ತೊಂದು ತೆಗೆವೊಡೆ ನಿನಗೆ ಹತ್ಯವ
ವಂದುಗವು ದೊಡ್ಡಿಯಿದು ಸಮೆನಿಸುವುದೆನುತಲುಭಯರಿಗೆ ॥ ೬೫

ಪಾಪವಿಲ್ಲದ ಲೆಕ್ಕ ನೀನೇ
ಕೋಪವಿಲ್ಲದೆ ತನ್ನ ಯಸ್ಥಿಯ
ರೂಪವನು ತೆಗೆ ಯೆನಲಿಕಿಂದ್ರನ ಕಾವುಧೇನುವನು ।
ಆಪುರಂದರ ತರಿಸಿ ಮುನಿಪತಿ
ಯಾಪವಿತ್ರಾಂಗವನು ನೆಕ್ಕಿಸೆ
ಪಾಪರಹಿತಳ ಜಿಹ್ವೆಮಧ್ಯಕೆ ಯಿಂದ್ರವಜ್ರವನು ॥ ೬೬

ತೀದು ಕೊಡದನು ಬಟಿಕ ಮುನಿಪನೊ
ಳಾದ ತನುವಿನ ಮಜ್ಜೆ ಮಾಂಸವ
ನಾದಯಾಂಬುಧಿ ನೆಕ್ಕಿ ಹೋಯಿತು ಚರ್ಮರುಧಿರಗಳ ।
ತೀದು ಹೋಗಲಿಕುಳಿದವಾತನ
ಶೋಧಿಸಿದ ಸರ್ವಾಂಗದೆಲುಗಳೂ
ಳಾವಧೀಚಿಯು ಬೆನ್ನ ಬೆಳಗಿನ ಯೆಲುವನವುರೇಂದ್ರ ॥ ೬೭

ಆಗ ದಧೀಚಿಯು ಪತ್ನಿ ತನ್ನ ಪತಿಯ ಸ್ಥಿತಿಯನ್ನು ಕುರಿತು ಅಗ್ನಿಯನ್ನು ಕೇಳಲು ಉತ್ತರಹೇಳದೇ ಇರಲು ಸರ್ವಭಕ್ಷಕನಾಗೆಂದು ಶಪಿಸುವಿಕೆ

ಕೊಂಡು ಹೋಗಲಿಕಾತನಂಗನೆ
ಕಂಡಳಾಗ ದಧೀಚಿಯಂಗದ
ದಂಡಿಯನು ಪರದೆಲುವಿನಿರವನು ಪರಯಶೋನ್ನತಿಯ ।
ಕುಂಡಮಧ್ಯದೊಳಿರ್ದ ಸ್ವಾಹೆಯ

---

1 ನಿಶ್ಚಯಿಸಿದನು ಯಾಕ್ಷಣ, ಕ, ಗ.

ಗಂಡನನು ಕೇಳಿದಳು ತನ್ನಯ
ಗಂಡನೇನಾದಪನೊ ಯೆನಲಾಗನಲನುಸುರದಿರೆ ॥ ೬೮

ಕೋಪಿಸಿಯೆ ಶಪಿಸಿದಳು ನಾಕಜ
ಪಾಪರಹಿತರ ಮುನಿಸನಾಗಳು
ವೀಪತಿವ್ರತೆ ಸರ್ವಭಕ್ಷಕನಾಗು ಹೋಗೆನಲು ।
ಭೂಪ ಕೇಳ್ಕೈ ಮುನ್ನವನಲನು
ತಾ ಪುರೋಡಾಶನವನುಂಬನು
ತಾಪಸನ ಕೈಯಿಂದ ಮತ್ತೇನಾದ ವಸ್ತುವನು ॥ ೬೯

ಅನಲನಾಹುತಿಗೊಳ್ಳದಿರುತಿರೆ
ವನಿತೆ ಶಪಿಸಿದಳಂದುಮೊದಲಾ
ಗನಲನಾದನು ಸರ್ವಭಕ್ಷಕನಾದನವಱಿಂದ ।

ಆ ಎಲುವಿನಿಂದ ವೃತ್ರಸಂಹಾರವಾಯಿತೆನಲು ವಜ್ರಪಿರಲು ಅಸ್ಥಿಯನ್ನು ಯಾಚಿಸಿದ ಕಾರಣಪ್ರಶ್ನೋತ್ತರದಲ್ಲಿ ಮಧುಕೈಟಭರಿಂದ ಬಾಧಿತರಾದ ದೇವತೆಗಳ ಆಯುಧಗಳನ್ನು ನುಂಗಿದುದರಿಂ ದಧೀಚಿಯ ಅಸ್ಥಿಯು ಬಲಿಷ್ಠವೆಂದುತ್ತರ.

ಅನಿಮಿಷಾಧಿಪನಾದಧೀಚಿಯು
ಘನತರತೆ ಯೆಲುವಿಂದ ವೃತ್ರನ
ತನುವನು ಕೆಡಹಿದನುರುಮಾರ್ಗಣದಂತೆ ಬೆಳಗುತಿರಲ್ [1]॥ ೭೦

ಮೊದಲು ವಜ್ರವೆ ನುಂಗೆ ತ್ವಷ್ಟನ
ಯುವಟಪುತ್ರನ ಜಯಿಸಲಿಚ್ಛೆಯು [2]
ಹದನ ಕೇಳನ್ನಿಂದ್ರನೇತಕೆ ಮುನಿಯುಲಸ್ಥಿಯನು ।
ಹದನ ಹೇಪೆನಲೊರೆದ ಜೇಡಿದ
ವಿಧಿಯು ಪೂರ್ವದ ಕದನದನಿಮಿಷ
ತುದರು [3] ಮಧುಕೈಟಭರು ರಾಕ್ಷಸರಿಬ್ಬರಿರಲಿಕ್ಕೆ ॥ ೭೧

---

1 ಬೆಳವ ದಿನ ದಿನದ, ಕ. ಗ. 2 ಯೆನಲು ಭೂತಿಲ, ಕ. ಗ.
3 ಷದವರು, ಕ. ಗ.

ದೇವರೆಲ್ಲರು ನೆರೆದು ತಮ್ಮಯ
ದೇವಕರ್ಮದ ಕೈದುವೆಲ್ಲವ
ನೋವಿ ಕೊಟ್ಟರು ಜತನ ಮಾಡಲು ಮುನಿಯು ಕರಗಳಲಿ ।
ದೇವದೈತ್ಯರಿಗೀಯದಿರಿ ಯೆಂ
ದಾವಿಬುಧಸಂತತಿಗಳಾಗಲು
ದೇವಲೋಕಕ್ಕೇಱಲಿತ್ತಲವರ್ಗಳ ಕೈದುವನು ॥ ೨೦

ಆದಧೀಚಿಯು ಕಾದುಕೊಂಡಿರ
ಲಾದವೈ ಹದಿನಾಱು ಸಾವಿರ
ಮೇದಿನಿಯು ವತ್ಸರವು ಮುಸಿ ಬೞಕಂದು ಚಿಂತಿಸಿದ ।
ಈ ದುರಾಗ್ರಹದಿಂದ ಕಾಯಲು
ಮಾದವೈ ತಮ್ಮಂಗಮಂತ್ರವು
ವೇದ ವೈದಿಕಜಾಪ್ಯಪೂಜಾಯಜ್ಞ ಮೊದಲಾಗಿ । ೨೧

ಎಂದು ತಾನಾಕೈದುಗಳ ವರ
ವೃಂದವನು ನುಂಗಿರಲವಸ್ಥಿಯೊ
ಳಂದು ಕೂಡಿರಲಸ್ಥಿ ಗತವಾಗಿರಲು ಹಲಕಾಲ ।
ಮೂರುತಲೆಯುಳ್ಳ ವಿಶ್ವರೂಪನ ತಲೆಗಳನು ಇಂದ್ರ ಕಡಿಯಲು ಇಂದ್ರ
ಸಂಹಾರಾರ್ಥತ್ವಷ್ಟೃ ವೃತ್ರನನ್ನು ಪಡೆಯುವಿಕೆ
ಸಂದಿರಲಕೀನಾಲ್ಕು ಯುಗಗಳು
ಕುಂದದೈವತ್ತಾಱು ಸಾವಿರ
ವೃಂದ ತಿರುಗಲು ತ್ವಾಷ್ಟ್ರನಿಂದ್ರನ ವರಪುರೋಹಿತನು ॥ ೨೪

ಆತನಲಿ ಶಿರ ಮೂಱು[1] ತಾವಿರ
ಲೋತು ವೊಂದಱಲಮೃತಪಾನವು
ಕಾತರಿಸದೊಂದಱಲಿ ಸುರೆ ತಾ ನೊಂದಱಲಿಸೋಮ[2] ।
ಈತೆಱದಿ ವರಋಷಿಯ ಸುತನಿಂ

1 ವರಡು, ಕ. ಗ, 2 ಸೋಮಪಾನದಲಿ, ಕ. ಗ.

ತಾ ತರುಣಲತೆಯಂತೆ ಕಡಿದನ
ದಾ ತತುಕ್ಷಣ ವರಪುರೋಹಿತಶಿರವಮೂಱಱನು [1] ॥ ೭೫

ಒಂದು ವರ್ಷವು ಕಳೆಯುತಿರೆ ಮ [2]
ತ್ತಂದು ಹೊಱಗಣ ಹೊಲಸು ಹಾದ
ತ್ತಂದು ವಿಪ್ರರ ಮುಖದಿ ಯಾಗವ ಮಾಡಿ ದೇವಪನ ।
ಇಂದು ಕೊಲುವುವೆನುತ್ತ ತೊಡಗಿದ
ನಂದು ತನ್ನಯ ಕಯ್ಯ ಸಾಗದ
ಕಿಂದು ಯಜ್ಞವ ಮಾಡೆ ಭೇದಿಸಿ ಬಂದ ಕೊಲುವುದಕೆ ॥ ೭೬

ಅಂದು ಹುಟ್ಟಿದ ವೃತ್ರದೈತ್ಯನ
ಯುಂವವನು ಕೊಲಲೆನುತಲಿಂದ್ರನು
ಬಂದು ಬೇಡಿದನಾದಧೀಚಿಯನೆಲುವಿನುಬ್ಬಟೆಯು ।
ಬಂದು ಬೇಡಲಿಕಾದಧೀಚಿಯು
ನೊಂದು ಕೊಟ್ಟನು ತನ್ನ ದೇಹವ
ನಂದು ನೋಡದೆ ಪರರ ಕಾರ್ಯವ ಮಾಡಿ ಯಿಹಪರವ ॥ ೭೭

ಸಾದಿಸಿದ ಕೈವಲ್ಯವಾಸವ
ಮೇದಿನಿಯಲತಿದಾನಶೂರರು
ವಾದಿವಾಕರತನಯನೊಬ್ಬನು ತಿದಿಯು ಸುಲಿದಿತ್ತ ।
ಮೇದಿನೀಪತಿ ಶಿಬಿಯು ಖಂಡವ
ಶೋಧಿಸಿಯೆ ತೆಗದಿತ್ತ ಕೀರ್ತಿಯು
ಸಾಧಿಸಿದ ತನ್ನೆಲುವನಿತ್ತು ದಧೀಚಿ ಕೇಳಂದ ॥ ೭೮

ಜೀವನವನೊಲಿದಿತ್ತ ಯಕ್ಷನು
ಭಾವಿಸಲು ಸತ್ಕೀರ್ತಿಕಾಮಿನಿ
ಯಾವಿರಿಂಚಿಯು ಲೋಕಪರಿಯಂತಾಗಿ ಬಳೆದಿರಲು ।
ಆವಿಧುವಿಗೊಂದಮಳವಸ್ತ್ರವ

1 ನೆರಡುಶಿರಗಳನು, ಕ. ಗ. ೨ ಕೋಟೆಯುವುಬ್ಬಿದೈವ, ಕ. ಗ.

ಭೂವಧೂವಲ್ಲಭನು ಕೊಡಲಿಕೆ
ದೇವ ನಿನ್ನಯ ಪಿತನನಿತ್ತನು [1] ದ್ವಾಪರಾಂತ್ಯದಲಿ ॥ ೭೯

ಪರೀಕ್ಷಿತನ ಬೇಂಟೆಯ ಕಥೆ ತಕ್ಷಕನಿಂದ ಮೃತಿಹೊಂದುವ ಪರ್ಯಂತ.

ಅದು ನಿಮಿತ್ತವೆ ಭೂಪ ನಿಮ್ಮಯ
ಸದಮಲಾನ್ವಯಚಂದ್ರಮನು ತಾ
ನದಟು ಮಿಗೆ ನಿಮ್ಮಯ್ಯ ರಾಜ್ಯವನಾಳುತೊಂದುದಿನ ।
ವಿದಿತವೆನಲೈದಿದನು ಬೇಂಟೆಗೆ
ಹೃದಯದಲಿ ನೀರಡಿಸಿ ಬಂದನು
ಸದನವೊಂದಱಲೊರ್ವ ಸಂಯಮಿ ಯೋಗದಿಂದಿರಲು ॥ ೮೦

ನೃಪತಿ ಬಂದಿರೆ ಯೋಗದಿಂದಾ
ತಪದಿ ಮುನಿ ಯಿರೆ ಲೆಕ್ಕಿಸನಲಾ
ತಪಸಿ ಯೆಂದೆನುತಾಗ ಖಾತಿಯ ಧರಿಸಿ ಮೃತವಾದ ।
ಕುಪಿತಕಾಳೋರಗನ ನೊಂದನು
ತಪವ ಗೆಡಿಸುವೆನೆನುತ ಕೊರಳಿಂ
ಗಪಯುಶವದೆಂದಱಿಯದಾತಗೆ ಸುತ್ತಿ ಮರಳಿದನು ॥ ೮೧

ಇತ್ತಲಾಮುನಿಸೂನು ಶೃಂಗಿಯು
ಹತ್ತೆ ಬಂದಾ ಪಿತನ ಕಾಣುತ
ಲತ್ತು ತನ್ನಯ ಜನಕನೊಡಲಲಿ ಕ್ರೂರಸರ್ಪವಿದ ।
ಸುತ್ತಿದವಗಿಂದೇಱುದಿನದಲಿ
ಮತ್ತೆ ಬಂದಾತಕ್ಷಕನು ಮಿಗೆ
ಮೃತ್ಯುವಾಗಲೆನುತ್ತ ಶಪಿಸಿದನಾಂತ ರೋಷದಲಿ ॥ ೮೨

ಅರಸ ವಿಪ್ರೋತ್ತಮರ ಶಾಪವ
ಪರಿಹರಿಸಲಾರಳವು ಹೋಗಲಿ
ಬರುತ ತಕ್ಷಕ ಕಂಡನಾ ಕಶ್ಯಪನ ವಂಶಜನ ।
ತಿರುಗಿಸುವೆ ತಕ್ಷಕನ ವಿಷವನು

---

[1] ರರಿಯುರಿತನಲಿಕಿತ್ತನು, ಕ, ಗ.

ಕರುಣದಲಿ ಸಲಹುವೆನು ಭೂಪನ
ಪರಮಪುಣ್ಯಾತ್ಮಕನನೆನುತಿರೆ ಕಂಡನುರಗೇಂದ್ರ ॥ ೮೩

ಬಂದ ವಿಪ್ರಗೆ ಧನವ ತಾ ಮುದ
ದಿಂದಲಿತ್ತಾತನನು ಕಳುಹಿಯೆ
ಸಂದ ವಿಪ್ರಾಕಾರದಲಿ ನಾಗವರರನು ಕಳುಹಿ ।
ಅಂದು ಫಲರೂಪದಲಿ ತಾನೇ
ಬಂದು ನೃಪತಿಯು ಕಚ್ಚಿ ಪೋದುದ
ರಿಂದ ಮೃತಿ ಪರುತವಿಸಿದುದು ನಿಮ್ಮ ಪಿತಗಕಟೆಂದ ॥ ೮೪

ಅಕಟ ಹರಿಯದ ರಾಜನಾತನ
ನಕುಟಿಲನನಿವ ಕೊಂದು ಪೋದನು
ಪ್ರಕಟದಿಂದಾವಿಪ್ರನನು ಮರಳಿಸಲು ತನಗೇಕೆ ।
ಸುಕರದಲಿ ನಾಗರುಗಳೆಲ್ಲರ
ವಿಕಳರನು ನೆಱೆ ಮಾಡಿ ತಕ್ಷಕಗಿ
ಕ್ಷಕನುಱುವ ತೆಱ ನೆನೆವುದೆನೆ ಕೈಕೊಳಲು ಪೊಱವಂಟ ॥ ೮೫

ಉದಂಕಮುನಿಗೆ ತಕ್ಷಕನಲ್ಲಿ ವೈರಕ್ಕೆ ಕಾರಣವೇನೆಂದು ಶೌನಕಪ್ರಶ್ನೆ.

ಎನಲು ಕೇಳ್ದರು ಶೌನಕಾದಿಗ
ಳನಘಸೂತನಿಗೆಂದರೇತಕೆ
ಮುನಿಸುದಂಕಗೆ ವೈರ ತಕ್ಷಕನೊಡನೆ ತನಗಿನಿತು ।
ಘನಮಹಿಮನಹ ವ್ಯಾಸಮುನಿಪತಿ
ನಿನಗೆ ಪೇಳ್ದಂದವನು ನೀನೆಮ
ಗನುವಿನಲಿ ಪೇಳೊಲಿದು ತತ್ಕಾರಣವನೆಲ್ಲವನು ॥ ೮೬

ಉದಂಕಮುನಿಯು ಆಯೋಧಧೌಮ್ಯರಲ್ಲಿ ವಿದ್ಯಾಭ್ಯಾಸಮಾಡಿ ಗುರುದ
ಕ್ಷಿಣಾರ್ಥವಾಗಿ ಪೌಲಸ್ತ್ಯನ ಪಟ್ಟಣಕ್ಕೆ ಹೋಗುವಿಕೆ.

ಎನಲು ನುಡಿದನು ಸೂತನೆಲೆ ಎಲೆ
ಮುನಿಗಳಿರ ಕೇಳೀವುದಂಕನ

ಮನವಮುನಿಸು ತಕ್ಷಕನೊಳೇತಕೆ ಬಂದುದೆಂಬುದನು ।
ಘನತಪೋನಿಧಿ ಭೃಗುವುುನಿಕುಲಜ
ನನುಪಮನು ತಾಳ್ದು ದ್ವಿಜತ್ವವ
ನನುವು ಮಿಗೆ ವೇದಾಧ್ಯಯನಪರನಾಗಿ ಪ್ರೂಅವೆಂಟ ॥ ೮೭

ಬಂದು ಕಂಡನದೊರ್ವಮುನಿಸಂ
ಕ್ರಂದನನೆನಿಸಿವಯೋಧಧೌಮ್ಯನ
ನಂದು ವಂದಿಸಿ ಯಧ್ಯಯನಕಾಂಕ್ಷೆಯುಲಿ ತಾ ನೆಸೆದ ।
ಸಂದ ವೃತ್ತಾಂತವನು ಪೇೞಲಿ
ಕಂದು ಹರುಷದಲಾತನೀತಂ
ಗಂದು ಮೊದಲಾಗೆ ಕಲಿಸಿದ ವೇದಾದಿವಿದ್ಯೆಗಳ ॥ ೮೮

ಹಲವು ಶಾಸ್ತ್ರವ ಕಲಿತುದಂಕನು
ಕೆಲವು ದಿನ ಗುರುವರರ ಸೇವೆಯು
ಸಲೆ ರಚಿಸುತಿರಲಾತ ಕರೆದು ಮನೋನುರಾಗದಲಿ ।
ಬಲುವಿಡಿದು ಶುಶ್ರೂಷೆಯುನು ನೀ
ಸಲೆ ರಚಿಯಿಸೆಂದೆನಲು ಪೋದುದು
ಪಲವು ವತ್ಸರ ಪೋಗಿ ಗಾರ್ಹಸ್ಥ್ಯವನು ಧರಿಸೆಂದ ॥ ೮೯

ಬಂದುದೆವುಗೆಲೆ ಮಗನೆ ಸೀ ಕೊಡು
ವಂದವೆನಿಸಿದ ದಕ್ಷಿಣಾರ್ಥವಿ
ದಿಂದು ಪರಿಯುಂತರವು ನೀ ಶುಶ್ರೂಷೆ ಯಿಂದೆಮ್ಮ ।
ಛಂದದಲಿ ಮೆಚ್ಚಿಸಿದೆ ಬೇಡೆನ
ಲೊಂದಿದರೆ ಭಕ್ತಿಯುಲಿ ಮತ್ತಿಂ
ತೆಂದ ದಕ್ಷಿಣೆ ಯಿತ್ತರಲ್ಲದೆ ಪೋಪೆನಲ್ಲೆಂದ ॥ ೯೦

ಎಂದು ನುಡಿಯುಲು ಕೇಳುತಾ ಗುರು
ವೆಂದು ಮನಕದು ಸೊಗಸದಿರೆ ಮ
ತ್ತಿಂದುಮುಖಿಯುಹ ತನ್ನ ಸತಿಯು ಸಿರೂಪವನು ಕೇಳೆ ।

ತಂದು ಕೊಡು ತತ್ಕಾಂತೆ ಬೇಡಿದ
ಛಂದವಹ ವಸ್ತುವನು ನೀನೆನ
ಲೊಂದಿದತಿಹರುಷದಲಿ ಸತಿಯಿದ್ದೆಡೆಗೆ ನಡೆತಂದ ॥ ೯೧

ಬಂದು ವಂದಿಸಿ ಗುರುನಿರೂಪದಿ
ಛಂದವನು ಪೇಳೆನಲಿಕಾಸತಿ
ಯೆಂದು ನುಡಿದಳು ತನಗೆ ವಾಂಛಿತವೆನಿಸಿದಂದವನು ।
ಸಂದ ಪೌಲಸ್ತ್ಯನೃಪತಿಯ ವಧು
ವಿಂದು ಧರಿಸಿದಳಲೆ ಮಗನೆ ನೀ
ತಂದುಕೊಡು ಕುಂಡಲವನಮರಾವಳಿಗೆ ದುರ್ಲಭವ ॥ ೯೨

ಎಂದಿಗಾದರು ತಂದು ಕೊಡುವೊಡೆ
ಮಂದಮತಿ ತರಬೇಡ ಕೇಳದ
ರಿಂದ ಫಲವೆನಗಿಲ್ಲ ವಿಂದಿಗೆ ಮೂಱು ದಿವಸದಲಿ ।
ಸಂದ ಪತಿ ಮನವೊಲಿದು ಕೊಟ್ಟನು
ಛಂದವಹ ಪಿತೃಯಜ್ಞವನು ನೀ
ನಂದಿಗಪ್ಪಂದದಲಿ ತಹುದೆನಲಾತ ಕೈಕೊಂಡ ॥ ೯೩

ಬರುತ ಗಂಗಾಧುನಿಯ ಕಂಡನು
ಭರದಿ ಕಾಲ್ಕ್ರಗದೊಳಡು ಶುದ್ಧಾ
ಚರಣವಿರಚಿತನಾಗಿ ಗುರುಪಾದಾಬ್ಜಕಭಿನಮಿಸಿ ।
ಹರುಷದಲಿ ತಾ ನಿತ್ಯ ಸೇವಿಪ
ಸುರುಚಿರಾಗ್ನಿಯ ತುತಿಸಿ ಹರುಷದ
ಭರವಸದಿ ತಾ ಬರುತ ತಪಕಿಸುತಿರ್ದನಡಿಗಡಿಗೆ ॥ ೯೪

ಧರಣಿಯೊಳು ಪೌಲಸ್ತ್ಯರಾಯನ
ಪುರವು ತಾನಿನ್ನೆಸಿತು ದೂರವೊ
ಹರ ಹರಾ ಗುರುಪತ್ನಿಯಭಿಮತವೆಂತು ಸಿದ್ಧಿಪುದೋ ।

ಪರದ ಸುಖವೀಧರೆಯೊಳಗೆ ತಾ
ಗುರುಭಜಕರಾದವರಿಗಲ್ಲದೆ
ದೊರಕಲರಿಯದೆನುತ್ತ ಬರುತಿರ್ದನು ಸರಾಗದಲಿ ॥　　೯೫

ಬರಲು ಪೌಲಸ್ತ್ಯನ ಪುರವರವು
ಸುರನಗರಕೆಣೆಯೆನಲು ಮತ್ತಾ
ಪುರದ ಬಹಿರುದ್ಯಾನವೆಸೆದುದು ಚೈತ್ರರಥದಂತೆ ।
ಪರಿವ ನದಿ ಕಣ್ಗೆಸೆದುದುತ್ತಮ
ತರದ ಗಂಗೆಯು ತೆಱದಲಲ್ಲಿಯ
ಪರಿಜನರು ಕಾಣಿಸಿದರವರರ ತೆಱದಿ ಸಾಖ್ಯದಲಿ ॥　　೯೬

ಬರಬರಲು ಮುನಿವರನ ಸನ್ನಿಧಿ
ಗುರುತರಶ್ವೇತಾಂಗದಲಿ ಬಂ
ಧುರಮನೋಹರರೂಪದಲಿ ದೇವೇಂದ್ರ ಮನವೊಲಿದು ।
ಗುರುಚರಣಸೇವಕಗೆ ಹರುಷಿಸಿ
ನಿರುತ ವೃಷಭಾಕಾರದಲಿ ತಾ
ನಿರಲು ಬಂದನು ವತ್ಸಲತೆಯುಳ್ಳುದಂಕಗಿಂತೆಂದ ॥　　೯೭

ಎಲೆ ಮುನಿಪ ನೀ ಬಂದ ಕಾರ್ಯಕೆ
ಹಲವು ಲೇಸಾದಹುದು ಬೇಗವ
ಲಲಸದೆನ್ನಯ ಗೋಮಯವ ನೀ ಭುಜಿಪುದೆಂದೆನುತ ।
ಸಲೆ ಸುಧೆಯನಾ ತೆಱದಿನೀಯಲು
ಲಲಿತಮತಿ ಕೈಕೊಂಡು ಬಂದನು
ವಿಲಸದಭಿನವರಾಜಮಂದಿರಕಾಗಿ ಶೀಘ್ರದಲಿ ॥　　೯೮

ಬಂದು ರಾಜಮಂದಿರದಲ್ಲಿ ಪೋಗಿ ರಾಜನ ಅಪ್ಪಣೆಯು ಪ್ರಕಾರ ಆತನ
　ಸತಿಯು ಬಳಿ ರತ್ನ ಕುಂಡಲಗಳನ್ನು ಪಡೆಯುವಿಕೆ.

ಬಂದು ದ್ವಾಸ್ಥರ ಕರೆದುದಂಕನು
ನಂದ ವಿಪ್ರನು ಬಂದನೆಂದೆನ

ಲಂದು ತನ್ನೃಪಗಖಹಲಾತನ ಕರೆಸಿ ಭೂವರನು ।
ಛಂದವಹ ಸತ್ಕೃತಿಯು ನೀವುತ
ಲಂದು ತತ್ಕಾರಣವ ಮನದೊಳ
ಗಂದು ತಾ ತಿಳಿವುತ್ತ ಬೆಸಗೊಂಡನು ಮುನೀಶ್ವರನ ॥ ೯೯

ಏನು ಬೇಹುದು ನಮ್ಮೆಡೆ ಯೆಲೆಲೆ
ಭೂನುತನೆ ಹೇಳೆನಲುದಂಕನು
ಮಾನಿಸದೆ ಸಂದೇಹವೆಲ್ಲವನುೞಿದು ನೃಪನೊಡನೆ ।
ನಾನು ಗುರುಸೇವಾರ್ಥವಾಗಿಯೆ
ಮಾನವೇಶ್ವರ ಬಂದೆ ನಿನ್ನಯ
ಮಾನಿನಿಯ ಘನರತ್ನಕುಂಡಲಕಾಂಕ್ಷೆಯಿಂದೆಂದ ॥ ೧೦೦

ಎನಲು ನಕ್ಕನು ನೃಪತಿ ನಿನ್ನಯ
ಮನದಭೀಷ್ಟವನೀವಳನ್ನಯ
ವನಿತೆಯಲ್ಲಿಗೆ ಹೋಗು ಬೇಡಿದೊಡೀವಳೆಂದೆನಲು ।
ಘನಮಹಿಮನೈತಂದು ಕಾಣದೆ
ವನಜಮುಖಿಯುನಿದೇನು ವಿಸ್ಮಯ
ವೆನುತ ತನ್ನೃಪನೆಡೆಗೆ ಬಂದಿಂತೆಂದನಾಮುನಿಪ ॥ ೧೦೧

ಪೋಗೆನಂತಃಪುರಕೆ ಕಾಣೆನು
ಮೇದಿನೀಶ್ವರ ನಿನ್ನ ಸತಿಯುನಿ
ದಾದ ಕಾರಣವೇನು ಬೆಸಗೊಳಲಾತ ನಸುನಗುತ ।
ಭೂದಿವಿಜ ನೀನಶುಚಿ ಯೆನಿಸುವೆ
ಪಾದಕರಪ್ರಕ್ಷಾಲನಾಚಮ
ನಾದಿಪರಿಶುದ್ಧಿಯುಳಿ ಪೋದರೆ ಕಾಂಬೆ ನೀನೆಂದ ॥ ೧೦೨

ಮುನಿಪನಾರೀತಿಯುಳಿ ಪೋದನು
ಘನಪತಿವ್ರತೆಯೆಡೆಗೆ ಮತ್ತಾ
ವನಿತೆ ಯಿದಿರೆದ್ದರ್ಘ್ಯಸತ್ಕಾರಂಗಳನು ರಚಿಸಿ ।

ಮನದಭೀಷ್ಟವನಱಿದೆನೆನ್ನಯ
ಮನುಜನಾಯಕನೊಲಿದ ಕಾರ್ಯವು
ತನಗೆ ಬೇಕದಱಿಂದಲೀವೆನು ಕುಂಡಲವ ನಿನಗೆ ॥ ೧೦೩

ಎಡೆಯಲತಿವಿಘ್ನಗಳು ಬಹವವ
ಕೊಡನೆ ತಕ್ಕುದನೆನೆವುದೆಲೆ ಮುನಿ
ಬಿಡು ಮನದ ಸಂದೇಹವೆನು ಕೊ ಯೆನುತ ಹರುಷದಲಿ ।
ಮಡಗಿ ಧಾರೆಯ ನೆಱೆದು ಕೊಟ್ಟಳು
ಪ್ರೊಡವಿಗತಿಶಯಕುಂಡಲಂಗಳ
ನಡಱಿದುದು ಸಂತೋಷಸಾಗರವಾ ಮುನೀಶ್ವರನ ॥ ೧೦೪

ಬೀಱುಕೊಂಡನು ನೃಪಸತಿಯ ಭೂ
ಪಾಲನನು ಹರಸಿದನು ಬಂದನು
ಮೇಲು ಮದದುಬ್ಬಾಳುತನದಲಿ ಪಥದ ಬಱಿವಿಡಿದು ।
ಮೇಲೆ ಮಾಧ್ಯಾಹ್ನಿಕಕ್ರಿಯೆಯನಾ
ಲಾಲಿಸುವೆನೆಂದೆನುತಲಾಗಳು
ಲೋಲಕುಂಡಲಗಳನು ಶಿರದಲ್ಲಿರಿಸಿ ನದಿಗಿೞಿದ ॥ ೧೦೫

ಎಲೆ ಮುನಿಗಳಿರ ಲೇಸ ಕಾಂಬರೆ
ಪಲವು ವಿಘ್ನಗಳಹವು ನೋಡಲು
ಸುಲಭವಲ್ಲದು ನಿಯಮನಿಷ್ಠರಿಗದುವೆ ಪುಸಿಯಲ್ಲ ।

ಆಗ ದಕ್ಷನು ಅದೃಶ್ಯನಾಗಿ ಕುಂಡಲವನಪರಿಹರಿಸಲು ಅದನ್ನು ಜ್ಞಾನ ದೃಷ್ಟಿಯಿಂದ ತಿಳಿಯುವಿಕೆ.

ಸಲೆಯುದಂಕನು ನಿತ್ಯಕರ್ಮಾ
ವಳಿಯ ವಿರಚಿಸುತಿರಲು ತಕ್ಷಕ
ನೊಲಿದದೃಶ್ಯದಿ ಬಂದು ಕುಂಡಲಗಳನು ಕೊಂಡೊಯ್ದ ॥ ೧೦೬

ಮಾಯವಾದನು ತಕ್ಷಕನು ಬಱಿ
ಕಾಯುವಂತನುದಂಕ ತಂನ ವಿ

ಧೇಯುನಿಯುಮವೆನಿಪ್ಪ [1] ನಿತ್ಯಕ್ರಿಯೆಯ ನೆಱೆ ರಚಿಸಿ ।
ಆಯಿತಿಲ್ಲಿಯೆ ತಡವು ಹೋಹೆನು
ವಾಯುವೇಗದಲೆನುತ ನೋಡಿದ
ನಾಯುವತಿ ತನಗಿತ್ತ ನಿರುಪಮದಿವ್ಯಕುಂಡಲವ ॥ ೧೦೭

ಕಾಣದಾಕ್ಷಣ ಮುನಿಪ ತನ್ನಯ
ಪ್ರಾಣ ಹೋದಂದದಲಿ ಚಿಂತಿಸಿ
ಸ್ಥಾಣುವನು ನೆನೆದಱಿದ ದಿವ್ಯಜ್ಞಾನದೃಷ್ಟಿಯಲಿ ।

ತಕ್ಷಕನಿರುವ ನಾಗಲೋಕಕ್ಕೆ ಹೋಗಲು ಭೂಮಿಯಂ ಅಗಿಯುವಿಕೆ.

ಕ್ಷೋಣಿಯಲಿ ತಕ್ಷಕನು ನೆನೆಹಿದ
ನೂಣೆಯವನಕಟಕಟೆನುತಲಿನ್ನೀ
ಕ್ಷೀಣವಾಗಿರ್ದವೆಗುಪಾಯವ ಕಾಣಬೇಕೆಂದ ॥ ೧೦೮

ನಾಗಲೋಕದಲಿಹ ನೆಲೆಯು ತಾ
ನಾಗಲದಕೇನೆನುತ ಕಾಂಬೆನ
ದೀಗ ತಡವಲ್ಲೆನುತ ಕಾಷ್ಠವ ತಾನು ಕೈಕೊಂಡ ।
ಬೇಗ ಪೋಪೆನು ಬಿಲನಿವಾಸ
ಕ್ಕಾಗಳವ ಕೊಡದಿರ್ದೊಡವನನು
ನೀಗಿಸುವೆನೆಂದೆನುತ ಧಾರುಣಿಯಗಿದನಾಮುನಿಪ ॥ ೧೦೯

ಎಲೆ ಮುನಿಗಳಿರ ಹೋದ ಕಾರ್ಯದೊ
ಳಲಘುಧೈರ್ಯವೆ ಮುಖ್ಯ ಮತ್ತಾ
ಲಲಿತಗುರುಭಕ್ತಿಯ ಮಹಾಬಲವಲವಿಕೆ ಯಿನ್ನೆಂತೊ ।
ಬಲಿದು ಭೂಮಿಯನಗಿದು ಪಥವನು
ಸುಲಭದಿಂದಾಗಿಸುವೆನೆಂದಾ
ಸಲೆ ಮರದ ಕಾಷ್ಠದಲಿ ಖನನವನೆಸಗಿದನು ಮುಳಿದು ॥ ೧೧೦

---

1 ತಂನಯ ಮಾನನೀಯವೆನಿಪ್ಪ, ಕ. ಗ.

ಅಲ್ಲಿಗೆ ಇಂದ್ರನು ವಿಪ್ರವೇಷದಿಂದ ಬಂದು ವೃತ್ತಾಂತವನ್ನು ವಿಚಾರಿಸಿ
ಗುರುಭಕ್ತಿಗೆ ಮೆಚ್ಚಿ ವಜ್ರವಂ ಕೊಡುವಿಕೆ.

ಇದನು ಕಂಡನು ಶಕ್ರನೀತನ
ಮದಮುಖವೆ ಗುರುಭಕ್ತಿಯೆಡೆಯಲಿ
ಸದಮಳನಲಾ ಯೆನುತ ವಿಪ್ರಾಕಾರದಲಿ ಬಂದು ।
ಅದಱ ವೃತ್ತಾಂತವನು ಬೆಸಗೊಳ
ಲುದಿತಧೈರ್ಯದಲೆಂದನಂವತಿ
ಮೃದುನುಡಿಯ ನೀಕೇಳು ಭೂಸುರ ನೆನಹಸಿಂತೆಂದ [1] ॥ ೧೧೧

ನಾನಯೋಧನ ಧೌಮ್ಯ ಮುನಿಪಗೆ
ಮಾನಸೀಯಸುಶಿಷ್ಯನಾತನ
ಮಾನಿನಿಯು ಪ್ರೀತಿಯಲಿ ಪೌಲಸ್ತ್ಯವಸೀಶ್ವರನ ।
ಸೂನೃತೆಯು ಕುಂಡಲವೆ ತಹುದೆನ
ಲಾನುಡಿಗೆ ತಾ ಪೋಗಿ ತಂದೆನು
ಮಾನಹಾನಿಯನೆಸಗಿ ತಕ್ಷಕ ಚೌರ್ಯದಿಂದೊಯ್ದ ॥ ೧೧೨

ಅದಕೆ ತಕ್ಕುದನೆಸಗಿ ತಕ್ಷಕ
ನದಟ ಮುಖದಿಂದಿನಲಿ ಗುರುವಿನ
ಪದರಜವ ತಾ ಕಾಣಬೇಹುದು ತನ್ನ ಚಿತ್ತದಲಿ ।
ಒದಗಿದೀಕಾಷ್ಠದಲಿ ಭೂಮಿಯು
ನಿದನಗುಚ ಪಾತಾಳಕ್ಕೈದಿಯೆ
ಮದಮುಖನ ನಿಗ್ರಹಿಸಿ ಕುಂಡಲಗಳನು ತಹೆನೀಗ ॥ ೧೧೩

ಎನಲು ನಕ್ರನು ಕಪಟಭೂಸುರ
ನಲಘುವಿಪ್ರೋತ್ತಮನೆ ಕಾಷ್ಠದ
ಲೊನೆದು ನೆನೆಹಿನಲಿರ್ದ ಕಾರ್ಯವನೆಸಗಿ ಕಡೆಗಂಡು ।
ಮನವೊಲಿದು ತಿರುಗುವುದು ತಾ ಸಂ

1 ಮೃದುನುಡಿಯು ಭೂಸುರಕೇಳೆ ತನ್ನಯ ನೆನಹಿಸೆಂದ, ಕ. ಗ.

ಜನಿಸುವೆಚ್ಚರಿಯೆನಲು ಮತ್ತಾ
ಘನಮಹಿಮನೆನಿಸಿಪೀವುದಂಕನು ನಗುತಲಿಂತೆಂದ । ೧೧೪

ಎನಗೆ ಗುರು ಕರುಣದಲಿ ಸಾಧ್ಯವ
ದೆನಿಸದಿಹುದೇ ಯೋನದಚ್ಚರಿ
ಯೆನಲುತಾನದ [1] ಕಾಗ ಹರುಷಿಸಿ ವಾಸವನು ಬೞಕ ।
ಘನತರದ ವಜ್ರವನು ಕೊಟ್ಟದ
ನನುವಿನಿಂದಾ ವಹಿಸಿ ನೆನೆದಂ
ತನುನಯದೆ ಫಲ ಸಿದ್ಧಿಸಲಿ ನಿನಗೆನುತಲಡಗಿದನು ॥ ೧೧೫

ಭೂಮಿಯನ್ನಗಿದು ಹೋಗಲಾಗಿ ಅಗ್ನಿಯು ಸಹಾಯು ದೊರೆಕುವಿಕೆ.

ಬೞಿಕಲಗಿದನು ಧರೆಯನಾಕ್ಷಣ
ವಿೞಿದು ಪೋದನು ಬಿಲದ ವಿವರದ
ಲೊಳಗೆ ಕಾಣಿಸಿ ಕೊಂಡು ಬಾಡಬ ದಿವ್ಯತೇಜದಲಿ ।
ಹಳಹಳಿಸಿ ನೋಡಿದನುವಲ್ಲಿಯು
ಘೞಿಲನೆಲ್ಲಿಗೆ ಪೋಪೆ ಯೆನಲಾ
ಗಳು ಮನೋಮುದದಿಂದಲೆಂದನುದಂಕಗಿಂತೆಂದ ॥ ೧೧೬

ನೀನು ರಚಿಪುದ್ಯೋಗದೆನ್ನಯ
ಮಾನಸಕೆ ಪರಿತೋಷವಾದುದು
ನಾನು ವೈಶ್ವಾನರನು ನೀ ಭಜಿಸಿದ ಮನೋರಥವು ।
ಹಾನಿಹೊಗದಂದದಿ ಸಹಾಯುವ
ನ್ನ್ಯೂನವಿಲ್ಲದೆ ಮಾಡುವೆನು ಘನ
ಮಾನಸೀಯುಮಹಾತ್ಮ ನಡೆ ತಕ್ಷಕನ ಸ್ಥಳಕೆಂದ ॥ ೧೧೭

ನಾಗಲೋಕಕ್ಕೆ ಬರಲು ಅಗ್ನಿಯು ತನ್ನ ಜ್ವಾಲೆಯಿಂದ ಪಾತಾಳ ಲೋಕ ವನ್ನು ದಹಿಸಲು ವಾಸುಕಿ ಮೊದಲಾದವರು ತಕ್ಷಕನಿಂದ ಕುಂಡಲಗಳನ್ನು ತಂದು ಕೊಟ್ಟು ಸ್ತುತಿಸುವಿಕೆ.

ಎಂದೊಡಾಕ್ಷಣ ನಡೆದು ಬಂದನು
ನಿಂದು ಕಂಡನು ನಾಗಲೋಕವ

1 ನೋಡನೀನಚ್ಚರಿಯ ನೆನಲದ, ಕ. ಗ.

ನಿಂದಿದನು ದಹಿಸುವೆನೆನುತಲಾವೆಡಬನನು ಕರೆದು |
ನಿಂದು ಪರಭಾಗದಲಿ ಪೃಷ್ಠವೆ
ನಂದವೆನಲೂದಿದನು ಹುತವಹ
ನಂದು ಪ್ರಜ್ವಲಿಸಿದನು ಶಿಖಿಯಾವರಿಸಿತಾಸ್ಥಳವ ‖ ೧೧೮

ನಾಗಲೋಕವನ್ನೆದೆ ತುಂಬಿದು
ದಾಗ ಪ್ರಳಯಾನಳನವೋಲು ಮಿಗೆ
ಬೇಗೆಗಾಱದೆ ವಾಸುಕಿಪ್ರಭೃತಿಗಳು ತಾವಾಗ |
ಆಗಲವರ್ಗಳು ತಕ್ಷಕನ ಕರೆ
ದೀಗ ತಾ ಕುಂಡಲವನೆಂದು ಮು
ಹಾಗಮಜ್ಞಗೆ ಕೊಟ್ಟು ಸಂಸ್ತುತಿಸಿದರು ಭಕ್ತಿಯಲಿ ‖ ೧೧೯

ಲೇಸು ಲೇಸುವುದಂಕ ಕರುಣಾ
ರಾಶಿ ಗುರುಚರಣಾರವಿಂದೋ
ಪಾಸಕನೆ ಸರ್ವಾಂಗವೇದಾಂಗ್ಯೆಕಶರಣಸಿಧ |
ಯೇಸು ದುರ್ವೃತ್ತಿಯುತರಾದೊಡ [1]
ದ್ವೆಸುವನು ನೀ ಕ್ಷಮಿಸು ನಮ್ಮನು
ಸಾಸಿಗನೆ ನೀ ಸಲಹಬೇಕೆಂದರು ಮಹೋರಗರು ‖ ೧೨೦

ದುರುಳನೀತಕ್ಷಕನದೀತನ
ಭರದ ತಪ್ಪನು ನೋಡಲಾಗದು
ಕರುಣದಲಿ ನೀನೆಮ್ಮ ಸಲಹೆನೆ ನಗುತುದಂಕಮುನಿ |
ಗರುವರಿರ ನಿಮ್ಮಿಂದಲನುಚಿತ
ಬೆರಸುವರೆ ಸಾಕೆನುತಲವರನು
ಕರೆದು ಕಳುಹುತಲಗ್ನಿಯನು ಸಂಸ್ತುತಿಸಿ ಬೀಳ್ಕೊಟ್ಟು ‖ ೧೨೧

ಪರಮಹರುಷದಲಂದು ಬಂದನು
ಗುರುಚರಣಗಳಿಗೊಲಿದು ವಂದಿಸಿ

1 ದುರ್ವೃತ್ತರಾಗಳಾದೊಡ, ಕ. ಗ.

ನಿರುಪಮಿತಭಕ್ತಿಯೊಳ್ ಯಾತನ ವನಿತೆಯೆಡೆಗೈದಿ |
ಪರಮವೊತೆ ಮಹಾತ್ಮೆ ತಂದೆನು
ವರಪತಿವ್ರತೆ ಕುಂಡಲಗಳನು
ಸುರರು ಬಯಸುವರಿದನು ದೊರಕಿತು ನಿಮ್ಮ ಕರುಣದಲಿ || ೧೨೦

ಎಂದು ಮುಂದಿರಿಸಿದನು ಕಂಡಳು
ಮಂದಗಮನೆ ಮನೋನುರಾಗದ
ಲಂದು ಕೈಕೊಂಡಧಿಕಹರುಷೋದ್ರೇಕದಲಿ ಹರಸಿ |
ಕಂದ ನೀ ಸುಖಿಯಾಗು ನಿನಗೆ ಮು
ಕುಂದ ತೋಱಲಿ ವಿಶ್ವರೂಪದ
ಛಂದವನು ನಿನಗೊಲಿದು ಮೆಚ್ಚಲಿ ಶಕ್ರವಿಧಿಶಿವರು || ೧೨೩

ಗುರುವಿನ ಆಪ್ಪಣೆಯಂತೆ ಗಾರ್ಹಸ್ಥ್ಯವಂ ಪಡೆದಿರುವಾಗ ಜನಮೇಜಯಗೆ ಮಂತ್ರಿಗಳು ತಕ್ಷಕನ ಅಪರಾಧವಂ ತಿಳಿಸಿದುದಂ ಜ್ಞಾನದೃಷ್ಟಿಯಿಂ ತಿಳಿದು ನೃಪನ ಬಳಿಗೆ ಬರುವಿಕೆ.

ಅಂದು ಕಳುಹಿಸಿ ಕೊಂಡುದಂಕನು
ಬಂದು ಗುರುವಿಂಗೆಱಗಿ ಪೇೞ್ದವ
ರಿಂದನುಜ್ಞೆಯ ಕೊಂಡು ಬಂದು ನಿಜೇಚ್ಛೆಯಿಂದೀಗ |
ಸಂದ ಗಾರ್ಹಸ್ಥ್ಯದ ಸುಧರ್ಮದ
ಲೊಂದಿ ನಡೆದು ಮಹಾನುಭಾವತೆ
ಯಿಂದಿರುತಲಾ ತಕ್ಷಕನ ನೆನೆವನು ಸರೋಷದಲಿ || ೧೨೪

ಧರಣಿಪತಿ ಜನಮೇಜಯಂಗಾ
ಸುರುಚಿರದ ಮಂತ್ರಿಗಳು ಪೇೞ್ದುದ
ಪರಮದಿವ್ಯಜ್ಞಾನದಿಂದಱಿದಧಿಕಹರುಷದಲಿ |
ಧರೆಯೊಳಗೆ ತಾನಾಗ ಬಂದಾ
ಭರದ ವೈರದಲಂದು ನೃಪತಿಗೆ
ಪರುಷಕಾರ್ಯಗಳಿಂದಱುಪಲಂದಾತನೊಡಬಟ್ಟ || ೧೨೫

ಮನದೊಳಗೆ ಪಿರಿದಾಗಿ ಹುಟ್ಟಿದು
ದನಘಜನಮೇಜಯಗೆ ಖತಿ ಯೆಲೆ
ಮುನಿಗಳಿರ ನೀವ್ ಕೇಳ್ದ ಮಾತಿಂಗುತ್ತರವಿದೆಂದ |

ಜನಮೇಜಯನು ಉದಂಕರ ಉಪದೇಶಾನುಸಾರ ಯಾಗಪ್ರಯತ್ನವಂ ನಡೆಸುವಿಕೆ.

ಘನಮಹಿಮನೆಂತೆನಿಪ್ಪುದಂಕನ [1]
ವಿನಯದಿಂ ಸತ್ಕರಿಸಿ ಬಿಟ್ಟಿಕಾ [2]
ಜನಪ ಸರ್ಪಾಧ್ವರಕೆ ನೀವೆನುನಯದಿ ಬಹುದೆಂದ [3] ‖ ೧೬

ಮೊದಲು ತನ್ನಯ ಮಂತ್ರಿಗಳು ತನ
ಗೊದವಿದಗ್ಗದ ಕೋಪಪುಟ್ಟುವ
ವಿದಿತದಲಿ ಬಿನ್ನೈಸೆ ಬಿಟ್ಟಿಕಲುದಂಕಮುನಿ ಬಂದು |
ಪದುಳದಲಿ ತನಗೊರೆಯಲಾಕ್ಷಣ
ವೊದವಿದುರುಕೋಪದಲಿ ಸದಮಲ
ಹೃದಯ ನಿತ್ಯಾತುಮನ ನೆನೆದು ಮಖಗೆಯ್ಯಲನುವಾದ ‖ ೧೭

ಹದಿನಾರನೆಯ ಸಂಧಿ ಮುಗಿದುದು.

---

1 ಘನವೆನಿಪುದಂಕನನುಮಿಗೆಸತ್ಕರಿಸಿ, ಕ. ಗ.
2 ವಿನಯವಮಾಡಿಸರ್ಪಾಧ್ವರಕೆನೀ, ಕ. ಗ.
3 ವನುನಯದಿಬಹುದೆಂದವರ ಬೀಳ್ಕೊಟ್ಟ, ಕ. ಗ.

# ಹದಿನೇಳನೆಯ ಸಂಧಿ.

**ಸೂಚನೆ.**

ಸರ್ಪಯಾಗವ ಮಾಡಿದನು ರಿಪು
ದರ್ಪಖಂಡನ ಪಾಂಡುಕುಲಮುಖ
ದರ್ಪಣನು ಜನಮೇಜಯಕ್ಷಿತಿಪಾಲನೊಲವಿನಲಿ ‖

ತಕ್ಷಕನ ದ್ರೋಹವಂ ನೆನೆದು ರಾಜನು ಪರಿತಪಿಸುವಿಕೆ.

ಕರವ ಕರದಲಿ ಹಿಡಿದು ಮುಖಿದನು
ಜರಳನಕಟಾ ಪಾಪಿ ತಕ್ಷಕ
ಮರಳಿಚಿದನೇ ವಿಪ್ರನನು ಭೈಷಜ್ಯಕೋವಿದನ |
ಉರುಮಹಾಧನದಾನದಲಿ ಹಗೆ
ಧರಣಿಸುರಸುತನಲ್ಲ ಕೊಯ್ದನು
ಕೊರಳನುರಗನೆನುತ್ತ ಕಿಡಿ ಕಿಡಿ ಯಾದನವನೀಶ ‖ ೧

ಅವನಿಸುರಸುತ ಶಾಪದಲಿ ಕೊಂ
ದವನು ತಕ್ಷಕನಹುದೆ ನೆಱೆ ಭ
ಸ್ಮವನು ಮಾಡುವೆ ಹಾನಿಯಿಂದಲಿದೇನು ಬದುಕುವೊಡೆ |
ಅವಗೆ ಹಗೆ ಹರಹರ ಮಹಾಪಾ
ಪವನು ಮಾಡಿದೆನೆನುತ ಕಂಬನಿ
ಯವನಿಗಿಳಿಯಲು ಶೋಕಮೂರ್ಛಿತನಾದನವನೀಶ ‖ ೨

ಹೊಳ್ಳುವಾತಿನಲೇನಹುದು ಕೊಲು
ಬಲ್ಲಿರೇ ನೀವವನ ಜೀವವ
ಕೊಳ್ಳದೀಪರಿ ಜೀವಿಸುವ ನಾನಲ್ಲ ದುರ್ಮತಿಯ |

ಹಲ್ಲ ಬಲುಹನು ನೋಡುವೆನು ನೆಱೆ
ಬಲ್ಲ ಮಾಂತ್ರಿಕರುಳ್ಳರೆನುತಲಿ
ಮಲ್ಲಮರ್ದನನೆಂಬಲದ ಮಂತ್ರಿಗಳ ನೀಕ್ಷಿಸಿದ ‖ ೩

ಪುರೋಹಿತರನ್ನು ಕರೆಸಿ ಸರ್ಪಾಧ್ವರ ಮಾಡಿಸಬಲ್ಲಿರಾ ಯೆಂದು ಕೇಳುವಿಕೆ.

ಕರೆಸಿದನು ಭೂಪತಿ ಪುರೋಹಿತ
ವರರನಾಪ್ತರಿಗೆಂದನೀಪರಿ
ನಿರುತ ಸರ್ಪಾಧ್ವರವ ಮಾಪ್ಪೆನು ನಿಮ್ಮನುಜ್ಞೆಯಲಿ ।
ವರವಿಧಾನವ ಬಲ್ಲಿರಾದೊಡೆ
ವಿರಚಿಸುವುದು ಮಹಾಗ್ನಿಕರ್ಮವ
ನುರಗರಾಜನ ಕುಲವನುಱುಹುವೆನೆಂದನವನೀಶ ‖ ೪

ತಾತ ನೋಡು ವಿಷಾಗ್ನಿಯಿಂದುರಿ
ದಾತುರದಲಧ್ವರಮಹಾಗ್ನಿಯ
ಲಾತತಾಯಿಗಳುರಿದು ಹೋಗಲಿ ಧರ್ಮಕಂಟಕರು ।
ಭೂತಳದ ಮೇಲುರಗರೆಂಬರ
ಮಾತನಾಡದವೋಲು ಮಾಪ್ಪೆನು
ಕೌತುಕಾಧ್ವರವಿಧಿಯದಾವುದು ಬೆಸಸಬೇಕೆಂದ ‖ ೫

ನಾವು ಮಾಡಿಸಬಲ್ಲೆವೆಂದು ಹೇಳಿ ಸಂಭಾರವನ್ನು ಸಿದ್ಧಪಡಿಸುವುದೆಂದು ಹೇಳುವಿಕೆ.

ಎನಲು ನುಡಿದರು ಮುನ್ನ ಕಮಲಾ
ಸನನೆ ವಿಧಿಸಿದನಮರರಿಗೆ ಕೇ
ಳನುಪಮನೆ ವರಸರ್ಪಯಾಗಕೆ ಕರ್ತೃ ನೀನೆಂದು ।
ಮನುಜಲೋಕದಲನ್ಯರಿಲ್ಲದ
ನನುಗೊಳಿಸಿ ನಡೆಸುವ ಸಮರ್ಥರು
ಜನಪ ಬಲ್ಲೆವು ತದ್ವಿಧಾನವನೆಂದರಾದ್ವಿಜರು ‖ ೬

ಬೇಗ ಮಾಡೆಲೆ ತಂದೆ ಕರೆಸು ಮ
ಹಾಗಮಜ್ಞರನಮಲಮಂತ್ರವಿ

ದಾಗತೋದಯವಿಪ್ರರನು ಋತ್ವಿಕುಸದಸ್ಯರನು ।
ಈಗ ಸಂಭಾರವನು ತರಿಸು ಸ
ರಾಗವುಳ್ಳೊಡೆ ತಡವದೇತಕೆ
ತೂಗಿ ನೋಡದಿರೆಂಮನೆಂದರು ನೃಪಪುರೋಹಿತರು ॥ ೭

ನೃಪನು ಉತ್ಸಾಹದಿಂದ ಮಂತ್ರಿಗಳಿಗೆ ಬೆಸಸಲು ಸಂಭಾರವನ್ನು ಸಿದ್ಧಪಡಿಸುವಿಕೆ.

ಬಂದನಾಗಳೆ ತಕ್ಷಕನ ಹೋ
ಕೊಂದೆನುರಗರ ಕುಲವನೆನ್ನಯ
ತಂದೆಗಾಂ ಮಗನಾದೆ ನಿಂದಿನಲೆನುತ ನೃಪನೆದ್ದು ।
ನಿಂದು ಬೆಸಸಿದನೆಲವೊ ಮಾಡುವೆ
ನಿಂದು ತನ್ಮಖಸಾಧನಂಗಳ
ವೃಂದವನು ತಹುದೆಂದು ಮಂತ್ರಿಗಳಿಂಗೆ ಪರಿಜನಕೆ ॥ ೮

ಬೆಸಸಲಿಕೆ ತಾ ಮುನ್ನ ಬಂದುದು
ವಿಷಧರಾಧ್ವರಕರ್ಮಸಾಧನ
ವಿಸರವಿದ್ವದ್ದೀಪ್ಯವರಭೂವರದಿಶಾವರರು ।
ಮುಸುಕಿದುದು ವರಯಾಗಭೂಮಿಯ
ನೆಸಗಿದರು ಶಾಸ್ತ್ರೋಕ್ತದಂದದಿ
ಋಷಿವರರು ಮಾಡಿಸಿದರಗಲಕೆ ಕೊಂಡವನು ಶಿಖಿಗೆ ॥ ೯

ಸ್ಥಪತಿಮುಖ್ಯರು ಯಾಗಶಾಲೆಯ
ವಿಪುಳವೆನೆ ನಿರ್ಮಿಸಿದರದಱೊಳು
ನಿಪುಣಮತಿಯೊರ್ವನು ನಿಮಿತ್ತವ ಕಂಡು ಭಯಗೊಂಡು ।

ಈಯಾಗಕ್ಕೆ ಬ್ರಾಹ್ಮಣನಿಂದ ವಿಘ್ನ ಬರುವುದೆಂದು ಬಡಿಗನು ಹೇಳುವಿಕೆ.

ನೃಪತಿಯಧ್ವರಕರ್ಮವಿದು ಕೆ
ಟ್ಟಪುದು ಕಡೆಗೀಡೇಱದೆಂದಾ
ನೃಪನ ಸಭೆಯೊಳು ಸೂಚಿಸಿದನತಿಬಹಳರಭಸದಲಿ ॥ ೧೦

ಹೇಳು ಹೇಳಿದಕಾರು ವಿಘ್ನವ
ನೇಳಿಸುವರ್ಕೈ ಯೆನಲು ಭೂಸುರ
ಮೌಳಿಮಣಿವಿಪ್ರೋತ್ತಮನದೆಸೆಯಿಂದ ವಿಘ್ನವಿದು |

ಒಳಗೆ ಬ್ರಾಹ್ಮಣರನ್ನು ಬಿಡಬೇಡವೆಂದು ರಾಜನ ಅಪ್ಪಣೆ.

ಕೇಳೆನಲು ಕೇಳುತ್ತ ಪೃಥ್ವೀ
ಪಾಲ ದ್ವಾಸ್ಥನ ಕರೆದು ನೀನೀ
ಕೋಲ ತೆಗೆಯದಿರಱಿಕೆ ಯಿಲ್ಲದೆ ವಿಪ್ರರಿಂಗೆಂದ || ೧೧

ಅರಿದೆನಿಸಿದ ಗೃಹವಿತರ್ದಿಕೆಯುಂ
ಹೊಱುವುದೇ ಕೇಳ್ ಭೂಮಿಲಂಬದ
ನೆರವಿಯುಂ ಋತ್ವಿಕ್ಸಭಾಸದವರ್ಗದುತ್ಸವದ |
ಭರಿತಲಕ್ಷ್ಮಿಯನೇನನೆಂಬೆನು
ಪರಮಋಷಿಮುಖ್ಯರಲಿ ಋತ್ವಿ
ಗ್ವರಮಹಾಕರ್ಮಕ್ಕೆ ವಿನಿಯೋಗವನು ಕೇಳೆಂದ || ೧೨

ಚಂಡಕೌಶಿಕನೆಂಬವನು ಕೈ
ಕೊಂಡನಾಹೋತೃತ್ವವನು ಕೈ
ಕೊಂಡನುದ್ಗಾತೃತ್ವವನು ವರಜೈಮಿನಿಸಿವ್ರತಿಪ |
ಮಂಡಿಸಿದನಾಬ್ರಹ್ಮಪದದಲಿ
ಪಂಡಿತನು ಭಾರ್ಗವನು ನೆಱೆ ಕೈ
ಕೊಂಡನಾಧ್ವರ್ಯವನು ಪಿಂಗಲಮುನಿಯು ಕೇಳೆಂದ || ೧೩

ತಿಳಿಯೆ ವೇದವ್ಯಾಸ ಮುದ್ಗಲ
ನಲಘುಮುನಿ ನಾರದನು ಕಶ್ಯಪ
ಕುಲಯುತನು ವರದೇವಲಚ್ಯವನಕಣ್ವಪಟುಭಟರು |
ಅಲಘುಮತಿ ಗಾಲವನು ಕೋಮಲ[1]

1 ಗಾಲವನುಕೋ, ಕ. ಗ.

ಲಲಿತನನುಪಮ [1] ದೇವಶರ್ಮನು
ಜ್ವಲಿತಜಠರಶ್ವೇತಕೇತು ಸದಸ್ಯರಿವರೆಂದ ॥ ೧೪

ಇವರು ಶಿಷ್ಯಜನಪ್ರಶಿಷ್ಯ
ಪ್ರವರಜನಸಹಿತಾಮಹಾಧ್ವರ
ಭವನದಲಿ ಕುಳ್ಳಿರಲು ವಿಮಲಸದಸ್ಯರೆಂದೆನಿಸಿ ।

ಶ್ರೇಷ್ಠರಾದ ಋತ್ವಿಕ್ಸಭಾಸದರಿಂದ ಕೂಡಿ ರಾಜನು ಯಾಗವಂ ಮಾಡಿಸಿದ.

ಅವನಿಪತಿ ಕೈಕೊಂಡನಂತಾ
ಸವನ ದೀಕ್ಷೆಯನತುಳಪನ್ನಗ
ನಿವಹ ಬೆದರಲು ಹೋಮವನು ತೊಡಗಿದರು ಋತ್ವಿಜರು ॥ ೧೫

ಕರಿಯ ವಸ್ತ್ರವ ಧರಿಸಿ ನೊಸಲಲಿ
ಕರಿಯ ತಿಲಕವನಿಟ್ಟು ರೌದ್ರದೆ
ವರಭಯಂಕರನಯನಬದ್ಧಭ್ರುಕುಟಿಭೂನಿಕರ ।
ಕರೆದರುರಗವ್ರಾತವನು ಮೋ
ಹರಿಸಿ ವಹ್ನಿಜ್ವಾಲೆ ಗಗನಕೆ
ಥರವಿಡಿದು ಕುಳ್ಳಿರ್ದ ವಿಪ್ರರು ಘೋರಮಂತ್ರದಲಿ ॥ ೧೬

ಆಗ ಉದಂಕಮುನಿಯು ಬರುವಿಕೆ.

ಬಂದನಾಸಮಯದಲುದಂಕನು
ನೊಂದ ಮೃಗಪತಿಯಂತಕರುಣದೆ
ಕಂದು ಬಿಡುವುದ್ದಂಡತಕ್ಷಕ ಮಡಿವ ತೆರನೆಂತೋ ।
ಇಂದು ನಾವದ ನೋಳ್ಪೆವೆಂದಾ
ಸಂದಶಿಷ್ಯವ್ರಜಸಹಿತಲಾ
ನಂದ ಮಿಗೆ ತಾನಯ್ದಿ ಮಖಕನುಕೂಲನೆನಿಸಿದನು ॥ ೧೭

1 ಮುಳನೆಸಿತನಾ, ಕ. ಗ.

ನಾನಾರೀತಿಯಿಂದ ಸರ್ಪಗಳು ಅಗ್ನಿಕುಂಡದಲಿ ಬೀಳುವಿಕೆ.

ಏನನೆಂಬೆನು ಮುನಿಪ ಮಂತ್ರಾ
ಧೀನವೆಲ್ಲಾ ಲೋಕ ವಿಪ್ರಮ
ಹಾನುಭಾವವನಱವರಾರಾಕ್ಷಣದಲಹಿನಿಕರ ।
ಸ್ಥಾನಕಂಪಿತವಾಯ್ತು ಗತಿಯಿ
ನ್ನೇನು ಕೆಟ್ಟೆವೆನುತ್ತ ಶೋಕದೆ
ಹಾನಿಮುಖರೊರಲುತ್ತ ಬಂದರು ಗಗನಮಂಡಲಕೆ ॥ ೧೮

ಹಲವು ಸುತ್ತನು ಸುತ್ತಿ ತೆಕ್ಕೆಯು
ವಳಯದಲಿ ತಲೆಸುತ್ತಿ ಕೊಳ್ಳು೦
ದಲೆದು ತಲೆಕೆಳಗಾಗಿ ಬೀಳುತಲಿರ್ದುದಗ್ನಿಯಲಿ ।
ಕೆಲರು ಕೆಲವರ ಹಿಡಿದು ಹೊಕ್ಕರು
ಕೆಲಕೆಲರು ಮಕ್ಕಳನು ಕರೆಯುತ
ಳಲುತ ಸಂಕುಳವಾಯ್ತು ಸರ್ಪವ್ರಾತವಭ್ರದಲಿ ॥ ೧೯

ಕೆಲರು ವಿಷ್ಣಿಸುತಭ್ರದಲಿ ಕೆಲ
ಕೆಲರು ಮೂತ್ರಿಸುತೊಡಲು ಕಂಪಿಸೆ
ಕೆಲರು ಕಾಱುತ ರಕುತವನು ವೀರ್ಯವನು ಕೆಲಕೆಲರು ।
ಕೆಲರು ಬಾಲವನೂಱ ಮತ್ತಾ
ಕೆಲರು ತಲೆಗಳನೂಱ ತೆಕ್ಕೆಯು
ವಳಯುವನು ಕೆಲರೂಱ ಬೀಳುತ್ತಿರ್ದರುರಿಯೊಳಗೆ ॥ ೨೦

ಹೆಡೆಗಳುರಿದವು ವರಫಣಾಮಣಿ
ಸಿಡಿದು ಹಾಱಿದುದುರಿಯ ಹೊಯ್ಲಲಿ
* ಕಿಡಿಗಳಂತಿರೆ ರಣರಣತ್ಕಾರಗಳು ರಂಜಿಸಲು ।
ಅಡಸಿ ಬೆಂದುದು ಭೋಗಿಭೋಗದ
ಗಡಣದಭ್ರದಲೆಂಟುದೆಸೆಯಲಿ
ತಡವಿಡುತ ಸೀಕರಿಸಿದುದು ಧೂಮೋಳಿಧೂಳಿಡಲು ॥ ೨೧

* ಕಿಡಿಗಳಂತಿರ ರಕ್ತ ಸೀದವು ಗಱಹರಿದು ಕೆಡೆದು, ಗ.

ಬಸೆಯು ನದಿಗಳು ಜೀದಿವರಿದವು
ದೆಸೆದೆಸೆಗೆ ನಿಲಲಱಿಯದಾಯ್ತಾ
ವಸುಧೆ ಸುತ್ತಲು ಮಸಗಿಮುದು ದುರ್ಗಂಧ ವೃತಿಯಿಂದ ।
ಬೆಸನಿಗಳು ಬೇಳದರು ಬೇಸರ
ದುಸುರಲರಿದೆನೆ ಪನ್ನಗರ ಕುಲ
ವಿಸರವೆನು ವಿಧಿಕೋವಿದರು ಕೆಂಗೆಡಿಸಿದರು ಜಗವ ॥ ೬೦

ಅತ್ತಲನ್ನಗ ಪನ್ನಗನ ತನು
ಹೊತ್ತಿದುದು ಸಂತಾಪವಹ್ನಿಯು
ನುತ್ತರಿಸುವೆನದೆಂತೊ ನರಪತಿ ಮಾಡಿದನು ಮುಖವ ।

ತಕ್ಷಕನು ಇಂದ್ರನನ್ನು ಮರೆಹೊಗುವಿಕೆ.

ಮೃತ್ಯುವಿದು ಹಾ ಯೆನುತ ಹೋದನು
ವೃತ್ರವೈರಿಯು ಪೊರೆಗೆ ರಕ್ಷಿಸು
ಭೃತ್ಯನನು ಮಱೆಹೊಕ್ಕೆನೆಂದನು ನಡುಗಿ ಸುರಪತಿಯು ॥ ೬೩

ಅಂಜಬೇಡೆಲೆ ಮಗನೆ ತಾ ಪವಿ
ಪಂಜರವು ನಿನಗಿನ್ನು ಯಾಗಧ
ನಂಜಯನು ಸುಡುವನೆ ನಿಜಾಂಘ್ರಿಸಮಾಶ್ರಿತರನಕಟ ।
ಅಂಜಲಿಸಬೇಡೆನುತ ದಾನವ
ಭಂಜನನು ಮಸ್ತಕದಲಭಯುಕ
ರಾಂಜಲಿಯನಿರಿಸಿದನು ಸುಖದಿಂದಿರ್ದನುರಗೇಂದ್ರ ॥ ೬೪

ವಾಸುಕಿಯು ಅಪ್ಪಣೆಯಂತೆ ಜರತ್ಕಾರುವು ಆಸ್ತೀಕನನ್ನು ಯಾಗವಿಘ್ನ ಕ್ಕಾಗಿ ಕಳುಹುವಿಕೆ.

ಹೋದವರಸೀಕ್ಷಿಸುತ ವಾಸುಕಿ
ಗಾಮುವಂತಸ್ತಾಪ ಮನದಲಿ
ತೀಮದಿನ್ನೇನುರಗಕುಲ ನೆಱೆ ಬಂದುದವಸಿಪನ ।
ಜೀದಿಗಿಜೆ ನಲುರಿದು ಪೋದಂ

ತಾದುದೆಮಗಿನ್ನೇನು ಗತಿ ಕರೆ
ವೈದುನನ ಮಗನೆಲ್ಲಿ ಯೆಂದನು ತಂಗಿಯನು ಕರೆದು ॥ ೨೫

ಕಳುಹು ಕಳುಹೆಲೆ ತಂಗಿ ಮಗನನು
ಕಳುಹು ತಡೆಯದೆ ಕಳುಹು ತನ್ನಸು
ವುಳಿವುದಾತನ ಕಯ್ಯಲದಲೇ ತಾಯೆ ಕಳುಹೆನಲು ।
ನಳಿನಲೋಚನೆ ಯೆಲ್ಲವನು ನೆಱೆ
ತಿಳಿಹಿ ಪೂರ್ವಾಪರವನವನಿಪ
ನಲಘುಮಖಭಂಗವನು ಮಾಡೆಂದಳು ನಿಜಾರ್ಭಕಗೆ ॥ ೨೬

ಇದು ನಿಮಿತ್ತವೆ ನಿನ್ನ ತಂದೆಗೆ
ಮದುವೆಯನು ಮಾಡಿದರು ತನ್ನನು
ಬದುಕುವಭಿಲಾಷೆಯಲಿ ಮಾವಂದಿರು ಮಹಾಮುನಿಗೆ ।
ಪದುಮಭವನಾಜ್ಞಾಪಿಸಿದ ಗಡ
ತ್ರಿದಶಂಗೆ ನಿನ್ನಿಂದ ಕುಲವಿದು
ಬದುಕುವುದು ಗಡಬೇಗ ಮಾಡೆಂದಳು ಸರೋಜಮುಖಿ ॥ ೨೭

ಬೇಗಲೆಂದೇನೆಂಬೆ ನಿಲಿಸುವೆ
ನೀಗಳಂತಿರೆ ಭೂಮಿಪಾಲನ
ಯಾಗವನು ನೀನೇತಕಂಜುವೆ ತಾಯೆ ತನ್ನಳವ ।
ತೂಗಿ ನೋಡಿದರಡವಿಯಲ್ಲಾ
ಭೋಗಿಭೂಷಣನೊಂದುಬಾರಿಗೆ
ಭೋಗಿಕುಲವನು ರಕ್ಷಿಸುವನೆಂದೆನುತ ಪೊಱಮಂಟ ॥ ೨೮

ಕಾಲಿಗೆಱಗಲು ಪರಸಿ ಪನ್ನಗ
ಪಾಲನಪ್ಪಿದನಳಿಯನನು ಕ
ಣ್ಣಾಲಿಗಳು ನೀರೇಱಲಧಿಕಾನಂದಭಾವದಲಿ ।
ಪಾಲಿಸೆನ್ನನು ಪರಮಧಾರ್ಮಿಕ

ಮೌಳಿರತ್ನವೆ ನಿನ್ನ ಕೈಲೆಡೆ
ಹೂಳಿದರ್ಥವಿದೆಮ್ಮ ಜೀವನವೆಂದನುರಗೇಂದ್ರ ॥ ೬೯

ಏತಕಂಜುವೆ ಮಾವ ಬಱಿದೇ
ಕಾತರಿಸದಿರು ತನ್ನ ಮೇಲಾ
ಭೂತನಾಥನ ಕರುಣವುಂಟಂಜದಿರು ನೀನೆನುತ ।
ಮಾತೆ ಮಾತುಳರಂಘ್ರಿಗೆಱಗಿಯು
ಭೀತನೆದ್ದನು ಬೀೞುಕೊಂಡಾ
ಭೂತಳಾಧಿಪನಧ್ವರಕೆ ನಡೆತಂದನೊಲವಿನಲಿ ॥ ೭೦

ಆಸ್ತೀಕನು ಯಾಗಮಂದಿರದ ಬಾಗಿಲಗೆ ಬರಲು ಒಳಗೆ ಬಿಡದಿರಲು ನಾನಾ ರೀತಿಯಾಗಿ ಯಾಗವನ್ನೂ ರಾಜನನ್ನೂ ಸ್ತುತಿಸುವಿಕೆ.

ಬಂದನಾಸ್ತೀಕಾಖ್ಯನಧ್ವರ
ಮಂದಿರದ ಬಾಗಿಲಿಗೆ ಹೋ ನಿ
ಲ್ಲೆಂದು ಪಡಿವಳನಡ್ಡವಿಸಲಿದು ಮಾರಿಯಾಯ್ತೆನುತ ।
ನಿಂದನಲ್ಲಿಯೆ ಯಾಗಶಾಲೆಯ
ಮುಂದೆ ನೃಪನಾ ಯಜ್ಞವನು ಮುನಿ
ವೃಂದವನು ಹೊಗೞಿದನು ವಿನಯೋಪೇತನೆಂದೆನಿಸಿ ॥ ೭೧

ಯಮನ ವರುಣನ ವೈಶ್ರವಣನಾ
ಕಮಲತನಯನ ರಂತಿದೇವನ
ಹಿಮಕರನ ಗಯನೃಪನ ನೃಗನಜಮೀಢಲೋಹಿತನ ।
ವಿಮಲದಶರಥನಂದನನ ಭೂ
ರಮಣಧರ್ಮಾತ್ಮಜನ ಭರತನ
ಸಮಮಹಾಯಜ್ಞಂಗಳೀನೃಪಯಜ್ಞಕೊರೆ ಯೆಂದ ॥ ೭೨

ಈಸಮಾಹಿತಮಖಕೆ ತೇಜೋ
ರಾಶಿ ಮುನಿಕುಲವರ್ಯ ವೇದ
ವ್ಯಾಸನಲ್ಲಾ ವರಸದಸ್ಯನು ಭುವನಭೂಸುರರು ।

ಈ ಸಕಲಋುತ್ವಿಜರು ಮುಖ್ಯರು
ಲೇಸನೊಡವಿಟ್ಟಂತೆ ನೆರೆದಿರೆ
ಯೇಸು ಧನ್ಯನೊ ಭೂಪವರ ಯಜಮಾನನಕಟೆಂದ ॥ ೩೩

ಏನನೆಂಬೆನು ಸಕಲದಿವಿಜರಿ
ಗಾನನವಲಾ ಪಾವಕನು ಪವ
ಮಾನಸಖನಾ ದಕ್ಷಿಣಾಮೂರ್ತಿಯಿವನೆಂದೆನಿಸಿ ।
ಮಾನವೇಂದ್ರನ ವರಮನೋರಥ
ದಾನಿಯಲ್ಲಾ ಕೃಷ್ಣವರ್ತ್ಮಕೃ
ಶಾನುಮುಖ್ಯಾನಲಸುನಾಮನನಂತಗುಣನೆಂದ ॥ ೩೪

ಆರು ನೀನೆಲೆ ಭೂಪ ಸಾಕ್ಷಾ
ದ್ವಾರಿಜಾಸನನೋ ಮಹೇಂದ್ರನೊ
ಘೋರನಯನನೊ ಮೇಣು ವಿಷ್ಣುವಿನಂಶಸಂಭವನೋ ।
ಆರು ನೆನೆವರು ಮಖವನಿದವೇ
ಣಾರು ಮಾಳ್ಪರು ಸಮಿಧೆಯಾಯುತ್ತ ಮ
ಹೋರಗರ ಕುಲ ನಿನ್ನ ಹೋಲುವ ನೃಪನದಾರೆಂದ ॥ ೩೫

ಭೂಪವರ ಖಟ್ವಾಂಗ ನಹುಷದಿ
ಳೀಪ ಮಾಂಧಾತೃಪ್ರಮುಖಮಹಿಪ
ರೀಪರಿಯ ಮಖವರವ ಮಾಡಿದರುಂಟೆ ಪೂರ್ವದಲಿ ।
ಭೂಪ ತೇಜೋನಿಧಿಯೆ ವರಧೃತಿ
ರೂಪಗುಣಸುಂದರನೆ ತನ್ನಾ
ಳಾಪವನು ಚಿತ್ತೈಸು ವಿಕ್ರಮಶೌರ್ಯವಾರಿಧಿಯೆ ॥ ೩೬

ರವಿಯ ಪೊಲು ತೇಜೋಭರದಲಿಹು
ತವಹಗೆಣೆ [1] ದುರ್ದರ್ಶತೆಯುಲಿಂ
ದುವಿನ ಪೊಲು ಸೌಖ್ಯದಲಿ ಶಕ್ರನ ಪೊಲು ಪ್ರಭುತ್ವದಲಿ ।

---

[1] ಪಾವಕನಪೊಲು, ಕ. ಖ.

ಭವನ ಪ್ರೋಲ್ಲಾಸುಪ್ರಸಾದದ
ಲವನಿಯ ಪ್ರೋಲು ಕ್ಷಮೆಯಲಿ ಹುತ್ತಶಿ
ಶುವಿನ [1] ಪ್ರೋಲ್ಕಾಯತಿಯಲಿ ವಸಿಷ್ಠಗೆಣೆ ಶಾಂತಿಯಲಿ ॥ ೩೭

ಸಮತೆಯಲಿ ಸಾಕ್ಷಾತ್ತು ನೀನೇ
ಕಮಲಭವನೆಲೆ ಭೂಪ ಧರ್ಮದ
ಮಮತೆಯಲಿ ಯಮನಸ್ತ್ರಶಸ್ತ್ರಂಗಳಲಿ ಧರಣಿಜೆಯ |
ರಮಣನಖಿಳೈಶ್ವರ್ಯದಲಿ ಶಿವ
ನಮಲಶೌರ್ಯದ ಮಹಿಮೆಯಲಿ [2] ಸಂ
ಭ್ರಮದಲಿರೆ ಸಾಕ್ಷಾತ್ತು ನಾರಾಯಣನು ನೀನೆಂದ ॥ ೩೮

ರಾಜನು ಈತನ ಸ್ತುತಿಯನ್ನು ಕೇಳಿ ಬ್ರಾಹ್ಮಣನನ್ನು ಒಳಗೆ ಕರೆಯಲು ಮತ್ತು ಸ್ತುತಿಸುವಿಕೆ.

ಆರನಾರೋ ಸ್ತುತಿಸುವವ ನೀ
ಭೂರಿಮಖವನು ಋತ್ವಿಜರನಾ
ಘೋರಭೂಭುಜನೆನ್ನನೇತಕೆ ಶೌರ್ಯವೇನೆನುತ |
ಭೂರಮಣನಾತನನು ಕರೆ ಕರೆ
ಕಾರಣವ ಬೆಸಗೊಂಬೆನೆನಲಾ
ದ್ವಾರಪಾಲರು ಹುಗಿಸಿದರು ವಹಿಲದಲಿ ಭೂಸುರನ ॥ ೩೯

ಮೆಚ್ಚಿದೆನು ಮೆಚ್ಚಿದೆನು ಪೇಳಲಿ
ಸಚ್ಚರಿತ ಮನದಿಚ್ಛೆಯಾವುದು
ಮುಚ್ಚು ಮಱೆಯಕೀವೆನಭಿಮತಸಿದ್ಧಿಯನು ನಿನಗೆ |
ಅಚ್ಯುತಾಂಘ್ರಿಯೆ ಸಾಕ್ಷಿ ಬೇಡಿದ
ನೊಚ್ಚು ತೀವೆನು ತನ್ನ ಧರೆಯನು
ನಿಚ್ಚಯದಿ ಸರ್ವಸ್ವವನು ಪಿಗೆ ಚಿಂತೆ ಬೇಡೆಂದ ॥ ೪೦

---

[1] ವಾಲ್ಮೀಕಿಯ, ಕ. ಖ.

[2] ಶಮಗುಣವೀರ್ಯ ಶೌರ್ಯದ ಮಹಿಮೆಯಲಿ, ಕ, ಖ.

ವಸುಮತೀವಲ್ಲಭನೆ ನಿನಗಿದು
ಪೊಸತೆ ಪಾಂಡುನೃಪಾಲವಂಶ
ಪ್ರಸರಪುಣ್ಯಶ್ಲೋಕನಲ್ಲಾ ತಂದೆ ನೀ ದಿಟಕೆ ।
ಎಸೆವ ಗುಣವಿಸಿತಿಲ್ಲದಿರೆ ಸುರ
ವಿಸರಸನ್ನುತಪಾದಪೀಠನು
ವಶವಹನೆ ನಿತ್ಯಾತ್ಮನಾರಾಯಣನು ನಿಮಗೆಂದ ॥ ೪೧

ಹದಿನೇಳನೆಯ ಸಂಧಿ ಮುಗಿದುದು.

## ಹದಿನೆಂಟನೆಯ ಸಂಧಿ.

ಸೂಚನೆ.

ಲೋಕ ಬೆದರಲು ಮೊಬ್ಬಿ ಸರ್ಪಾ
ನೀಕಮುಖವನು ಮಾಣಿಸಿದನಾ
ಸ್ತೀಕಮುನಿ ಮುಂಕೊಂಡು ಸಲಹಿದ ಸಕಲಬಾಂಧವರ ॥

ವಿಪ್ರವಚನದಿಂದ ಸಂತೋಷಿಸಿ ವಿಪ್ರನನ್ನು ರಾಜನು ಸ್ತುತಿಸುವಿಕೆ.

ಕೇಳು ಶೌನಕ ವಿಪ್ರವಚನವ
ಕೇಳುತವೆ ಹಿಗ್ಗಿದನು ಲಕ್ಷ್ಮೀ
ಲೋಲನೊಲವಿನ ದಾಸರಹ ನಿಜಪಿತೃಪಿತಾಮಹರ ।
ಬಾಳಕೆಗೆ ಫಲವೇನು ಸಭ್ಯರ
ಜಾಲವನು ನೋಡುತ್ತ ಭೂಪತಿ
ಬಾಲನಲ್ಲಿವನಧಿಕವೃದ್ಧನೆ ಯಾಗಬೇಕೆಂದ ॥ ೧

ಇಲ್ಲದಿದ್ದರೆ ಪೂರ್ವಕಥನವ
ಬಲ್ಲನೆಂತೀ ಹಸುಳೆ ಲಕ್ಷ್ಮೀ
ವಲ್ಲಭನ ಕೀರ್ತಿಯನು ವಾರ್ತೆಯನರಿವಸಿವನೆಂತು ।

ಸೊಲ್ಲು ಸರಿಯಾಯಿತ್ತೆವೆನೇನನು
ವಲ್ಲಭನೆ ಹೇಳೆನುತ ಕರಪುಟ
ಪಲ್ಲವಕ್ಕೊ ಸರಿಸಿದನಂಗವ ವಿಪ್ರಪುಂಗವನ ॥ ೧

ಇತ್ತಲಾದ್ವಿಜನೊಡನೆ ಮಾತಾ
ಡುತ್ತ ಕಂಡನು ತಿರುಗಿ ವರಭೂ
ಪೋತ್ತಮನು ಬೆಸಗೊಂಡನಂದಾ ಚಂಡಕೌಶಿಕನ ।

ಜನಕ ರಾಜನು ಯಾವಯಾವ ಸರ್ಪಗಳು ಹುತವಾದವೆಂದು ಕೇಳಲು ಕೌಶಿಕರ ಉತ್ತರ.

ಮತ್ತೆ ಬೆಂದವರಾರು ಬಹುದು
ವೃತ್ತರತರೀ ಶಿಖಿಗೆ ಹೇಳಿದ
ತುತ್ತಲಾತಕ್ಷಕನು ತಡೆದನಿದೇನು ಹೇಳೆಂದ ॥ ೨

ಉತ್ತರದಲ್ಲಿ ಬೆಂದವರ ಹೆಸರುಗಳು.

ಎಂದೊಡೆಂದನು ಹೋತೃ ಲೆಕ್ಕಿಸ
ಲಿಂದುಧರಗರಿದನಲಮುಖದಲಿ
ಬೆಂದವರ ಸಂಖ್ಯೆಯನು ಮಿಕ್ಕವರಳವೆ ಮುಖ್ಯರನು ।
ತಂದೆ ಕೇಳಾವಾಸುಕಿಯ ನಿಜ
ನಂದನರು ಹದಿಮೂರುಲಕ್ಷದ
ಮಂದಿ ಬಿದ್ದರು ಗಿರಿಶಿಖರಸಂನಿಭರು ಕೇಳೆಂದ ॥ ೪

ಅಳಿದರಷ್ಟಾದಶಮಹೋರಗ
ಕುಲಪತಿಗಳಾ ತಕ್ಷಕಾತ್ಮಜ
ರಲಘುವಿಷವೀರ್ಯೋದ್ಭಟ[1]ರು ಗಿರಿಶೃಂಗಸಂನಿಭರು ।
ಬಲವದೈರಾವತಮಹೋರಗ
ಕುಲದಲೀರೈವರು ಹುತಾಶನ
ನೊಳಗೆ ಮುಗ್ಗಿದರುಗ್ರವಿಷದೋಷರು ಜಗತ್ರಯದಿ ॥ ೫

1 ರ್ದ್ಯೋತ್ಕಟ, ಗ.

ಹೊತ್ತಿದರು ಕೌರವ್ಯಕುಲದಲಿ
ಹತ್ತು ಹುತವಹಮುಖದಲಱಿವೊಡೆ
ಮತ್ತಗಜಸನ್ನಿಭರು ನಾನಾವರ್ಣಸಂಯುತರು |
ಮತ್ತೆ ಧೃತರಾಷ್ಟ್ರಾಂಕಕುಲ ಮೂ
ವತ್ತು ನಾಲಕು ನಾಗಪತಿಗಳು
ಮೃತ್ಯುವಿಗೆ ಮೊಱಿದರು ತನುವನು ಘೋರವಿಕ್ರಮರು || ೬

ಕನಕವರ್ಣದ ವಿನುತಪಿಂಗಲ
ದಿನಪತೇಜದ ರೂಪ್ಯವರ್ಣದ
ಘನತರಶ್ಯಾಮಾಕೃತಿಯ ಕಾಮಸ್ವರೂಪಿಗಳು |
ಅನಲನೆಱಿಕದ ಕಣ್ಣ ಕೆಂಪಿನ
ಕೊನರು ಗಿಡಿಗಳ ವಿಷದ ಹೊಗೆಗಳ
ಹೊನಲ ಹೊಗೆಗಳ ದುರುಳರೊಡೆ ಮುಗ್ಗಿದರು ಶಿಖಿಯೊಳಗೆ || ೭

ಎರಡುಯೋಜನದೀರ್ಘದೇಹರು
ನಿರುತ ಯೋಜನಗಳ ಶರೀರರು
ಗಿರಿನಿಭರು ಪಾವಕನಿಭರು ರವಿನಿಭರು ಶಶಿನಿಭರು |
ಎರಡು ಹೆಡೆಗಳ ಮೂರುಫಣೆಗಳ
ತರದೊಳೈದಾಱೇೞು ಹೆಡೆಗಳ
ದುರುಳದುಷ್ಟೋರಗರು ಮುಗ್ಗಿದರಗ್ನಿಯೊಳಗೆಂದ || ೮

ಲೆಕ್ಕವನು ತಾನೀಗಲಱಿಯೆನು
ಹೊಕ್ಕವರ ಹೊಗುವವರ ಬಾರಿಯ
ತೆಕ್ಕೆಯನು ಮಂಡಳಿಸಿ ನಭದಿಂದೊರಲುತಿಳಿಯುವರ |
ಮಕ್ಕಳನು ಮಱಿಮಕ್ಕಳನು ಹೆ
ಮ್ಮಕ್ಕಳನು ಹೋಮಿಸಿದೆವಾವುದ
ಶಕ್ಯವೆಮಗೆಲೆ ಭೂಪ ಕಾಣೆವು ತಕ್ಷಕನನೆಂದ || ೯

ರಾಜನು ಬೆಂದ ಸರ್ಪಗಳ ಹೆಸರನ್ನು ಕೇಳಿ ತಕ್ಷಕನು ಏಕೆ ಬೀಳಲಿ
ಲ್ಲವೆಂದು ಕೇಳಲು ಇಂದ್ರಾಶ್ರಯದಿಂದ ಬೀಳಲಿಲ್ಲವೆಂದು ಹೇಳುವಿಕೆ.

ಹಗೆಯ ಮೂಲಿಕೆ ಯುಟಿದುದೇತಕೆ
ಮಗುವುತನವೆನು ಮಾಟ್ವಿರಕಟಾ
ನಗೆಯಲಾ ಕೊಂದವನ ಕೊಲದಿರಲೇಕೆ ನೀವೆನಲು ।
ಮುಗುಧ ಭೂಪತಿ ಕೇಳುತೆಮ್ಮೊಲಿ
ಮಗುವುತನವಿಲ್ಲಿಂದ್ರನಾತನ
ತೆಗೆದು ಕೊಂಡಿರುತಿಹನು [1] ಬಿಡ ಶರಣಾಗತನನೆಂದ ॥ ೧೦

ಕೊಟ್ಟನಾತಂಗಾತನಭಯುವ
ಶಿಷ್ಟನವನೆಂದೊಲಿದು ಭೂಪತಿ
ಯಿಷ್ಟಿಯಲಿ ನೀ ಬೀಟಿದಿರು ತಾಸಿತ್ತ ವರವೆಂದು ।
ವಿಷ್ಟಪೇಶ್ವರನಾತನನು ಹಿಂ
ದಿಟ್ಟು ಕೊಂಡಿರುತಿಹ [2] ಸುಧರ್ಮಾ
ವಿಷ್ಟನನು ತಾವೆಳಿವೆವೆಂದರು ಋತ್ವಿಜರು ನೃಪಗೆ ॥ ೧೧

ರಾಜನು ಇದನ್ನು ಕೇಳಿ ಕೋಪದಿಂದ ಇಂದ್ರಸಹಿತನಾಗಿ ಬೆಂಕಿಯಲ್ಲಿ
ಬೀಳುವಂತೆ ವಿಧಿಸಿ ಎಂದು ಹೇಳುವಿಕೆ.

ಏಸಲೇ ತಪ್ಪೇನು ವರವೆನು
ಬಾಸೆ [3] ಕೊಟ್ಟನೆ ತಕ್ಷಕಂಗಾ
ವಾಸವನು ಲೇಸಾಯ್ತು ಲೇಸಾಯ್ತುದುವೆ ಲೇಸಾಯ್ತು [4] ।
ತಾ ಸಹಿತ ಬೀಟಿಲಿ ಸಮೃದ್ಧ ಹು
ತಾಶನನ ಮುಖಕೆನುತ ಭೂ
ಮೀಶನಾಋತ್ವಿಜರಿಗೆಂದನು ಹೋಮಿಸುವುದೆಂದು ॥ ೧೨

---

[1] ಜೈಧಾನೆ, ಕ. ಖ. ಗ.
[2] ಜೈಧಾನೆ, ಕ. ಖ. ಗ.
[3] ಹಾಸಿ, ಕ. ಖ.
[4] ಸೊಗಸಾಯ್ತು, ಗ.

ಅರೀತಿ ಮಾಡಲು ಇಂದ್ರನು ಭಯದಿಂದ ತಕ್ಷಕನನ್ನು ಬಿಡುವಿಕೆ.

ಅಹುದು ಭೂಪನ ಮಾತು ತಪ್ಪದು
ಕುಹಕಿಗಭಯವನಿತ್ತೊಡೇನಾ
ಯ್ತಹಿತನು ಫಡ ಮೃಡನ ಮರೆ ಹೊಗೆಯು ಕೊಲುವೆವೆಂದೆನುತ।
ವಹನದಲಿ ಬೇಳಿದಲಿ ಬರಲಾ
ಕುಹಕಿ ಮೇಣಲ್ಲದೊಡೆ ಸುರಪತಿ
ಸಹಿತ ಬೀಳುವುದೆನುತ ಕರೆದರು ಮಂತ್ರಕೋವಿದರು ॥ ೧೩

ನಡುಗಿದನು ದೇವೇಂದ್ರನೊಡಲೊಳ
ಗುಡಿದುದಲಗೆನೆ ಮೇಣು ಸುಣ್ಣವ
ನಿಡಿಯನುಂಗಿದವೋಲು ಬೆಂದನು ನೊಂದನಡಿಗಡಿಗೆ ।
ಹಿಡಿದು ನೂಕಿದವೋಲು ಸುರಸಭೆ
ನಡುಗಲೇಱದ ಸಿಂಹಪೀಠವ
ತಡೆದುರಗನನು ಬೀಳುಕೊಟ್ಟನು ತೊಡಕು ಬೇಡೆನುತ ॥ ೧೪

ಆಶ್ರಯ ತಪ್ಪಲು ತಕ್ಷಕನು ಸಂತಾಪದಿಂ ಅಗ್ನಿಯಲ್ಲಿ ಬೀಳಲು ಬರುವಿಕೆ.

ಸುಡು ಬದುಕಲೇಕಿನ್ನು ಮೂಜಗ
ಕೊಡೆಯ ನಾನೆಂದೆನ್ನ ಮಱೆ ಹೊ
ಕ್ಕೊಡೆ ಗತೋದಕಸೇತುವಾದುದು ತನ್ನ ಸಾಮರ್ಥ್ಯ।
ಪೊಡವಿಯಮರರು ಕೊಂದರೆನುತವೆ
ತಡೆಯದೇಱ ವಿಮಾನವನು ನಭ
ದೆಡೆಗೆ ಬಂದನು ಬಹಳಸಂತಾಪದಲಿ ಸುರನಾಥ ॥ ೧೫

ಇಂಬಿನಲಿ ಬೀಳುತ್ತ ನುಗ್ಗಿಯ
ಕೊಂಬ ಹಿಡಿದಂತಾಯ್ತು ಕೆಟ್ಟೆನು
ನಂಬಿ ನಯನಸಹಸ್ರನನು ತಾನೆನುತ ತಕ್ಷಕನು ।
ಅಂಬರಕ್ಕೆಯ್ತಂದನೊಡಲಲಿ
ತುಂಬಿದಂತಸ್ತಾಪ ಶಿಖಿಯಲಿ
ಬಂಬಲಿನ ಬಲುಗಿಡಿಯ ಧೂಮದ ಧಾಳಿಗಿದಿರಾಗಿ ॥ ೧೬

ಉರುಳುತುರುಳುತಜಾಂಡಮಂಡಲ
ಬಿರಿಯಲೆಂದರು ತನಿಯ ಹೊಗೆಗಳ
ಹೊರಳಿಯಲಿ ಹೊಡಕರಿಸಿ ಮಂಡಳಿಸುತ್ತ ನೀಗುರುತ ।
ಕರೆಕರೆದು ಬಸವೇಱದು ನೆಱೆ ಕಂ
ಡರಿಗೆ ಕಾರುಣ್ಯವೆನು ತೋಱು
ತ್ತುರಗರಾಜನು ಸಿಗುಳಿಕೆಯ ಸಸಿಯಾದನಭ್ರದಲಿ ॥ ೧೭

ಬೆಂಕಿಯ ಸಮೀಪಕ್ಕೆ ಬಂದು ಮೇಲೆ ಹೋಗಿ ಇಂದ್ರನನ್ನು ತಿರುಗಿ ಮರೆಹೋಗಲು ಆಸ್ತೀಕನು ತಕ್ಷಕನನ್ನು ನೋಡಿ ನಿಲ್ಲೆಂದು ಹೇಳುವಿಕೆ.

ಉರಿಯ ಸಮ್ಮುಖಕೀಱಯುತೀಱಯುತ
ಭರದಲಂಬರಗತಿಗೆ ಗಮಿಸುತ
ತಿರುಗಿ ಸುರನಾಥನನು ನೋಡುತ್ತ ಕಾಯ್ದುಕೊಳ್ಳನುತ ।
ಹೊರಳುತಿರ್ದನು ಹೊಗೆಯೊಳಗೆ ಖೇ
ಚರರು ಹಾ ಹಾ ಕೆಟ್ಟನುರಗೇ
ಶ್ವರನುರಿದನೆನೆ ಕಂಡನಾಸ್ತಿಕನಾದ ದುಸ್ಥಿತಿಯ ॥ ೧೮

ಹೋ ಹೊ ನಿಲುನಿಲ್ಲೆನುತಲಾನಿಜ
ಬಾಹುದಂಡವ ನೆಗಹಿದನು ಮುನಿ
ಸಾಹಸಿಗನೇತಕ್ಕೆ ಬಾರನು ಪಾವಕನ ಮುಖಕೆ ।

ತಕ್ಷಕನು ಏಕೆ ಉರಿಯಲ್ಲಿ ಇನ್ನು ಬೀಳಲಿಲ್ಲವೆಂದು ಕೇಳಲು ಯಾಚಕನಿಗೆ ದಾನಮಾಡಿದ ಬಳಿಕ ಬೀಳುವನೆಂದು ಪುರೋಹಿತರ ಉತ್ತರ.

ದ್ರೋಹಿ ತಕ್ಷಕನೆಂದು ನೃಪವರ
ನಾಹಿತಾಗ್ನಿಗಳಿಂಗೆ ಬೆಸಸಲು
ದೇಹಿಯೆಂಬವಗಿತ್ತ ಬೞಕಿನ್ನಹುದು ಖಳದಹನ ॥ ೧೯

ಸುಡುವುದರಿದಲ್ಲಹಿಪನನು ನಭ
ದೊಡೆಯನಲ್ಲಿಂ ಬಂದನಿದೆ ಯಿದೆ
ಕೊಡು ಕುಮಾರಂಗಿಷ್ಟವರವನು ಮುನ್ನ ನೀನೆನಲು ।

ಬ್ರಾಹ್ಮಣನನ್ನು ನಿನಗೇನಬೇಕೆಂದು ಕೇಳುವಿಕೆ.

ನುಡಿದನೇನಿಷ್ಟಾರ್ಥ ಹೇಳೆನೆ
ಸುಡದಿರಹಿಗಳ ನಿನ್ನ ಮುಖಕೀ
ತಡೆಯುದಿಹುದಿದಱಿಂ ಮದೀಪ್ಸಿತವರವಿದೇ ಯೆಂದ ॥ ೨೦

ಏನು ಹೇಳೇನೇನು ಹೇಱು ಮ
ಹಾನುಭಾವನೆ ಧರಣಿಯುಮರನ
ಸೂನುವಲ್ಲವೆ ನೀನು ಹೇಳ್ವೈ ತಂಗೆ ಏಂ ನಿನಗೆ।
ಹಾನಿ ಹೇಳಿನ್ನೊಂದ ಬೇಡೆನೆ
ತಾನಱಿಯೆನಿನ್ನೊಂದಗಿಂದನು
ಮಾನವೇಶ್ವರ ಸಲಿಸು ಕೃಪೆಯುಂಟಾದೊಡೆನಗೆಂದ ॥ ೨೧

ರಾಜನು ಋತ್ವಿಜರು ಮುಂತಾದವರಿಂದ ಹೇಳಿಸಲು ಯತ್ನಿಸಿ ಅವರೂ
ಅಸಾಧ್ಯವೆಂದು ಯಾಗ ಮುಗಿಸು ಎನ್ನುವಿಕೆ.

ಹೇಳಿರೈ ಋಷಿವರರು ಸಭ್ಯರು
ಹೇಳಿರೈ ಋತ್ವಿಜರು ವಿಪ್ರರು
ಹೇಳಿರೈ ಬುದ್ಧಿಯನು ವಿಪ್ರಕುಮಾರನಿಂಗೆಂದ ।
ಹೇಳಿದರು ಮುನ್ನವೆ ನೃಪೋತ್ತಮ
ಹೇಱಲೇಕಿನ್ನಾ ಮಹಾತ್ಮರ
ಕಾಲಧೂಳಿಯ ಶಿಷ್ಯನೆಂದನು ನಗುತ ಮುನಿನಾಥ ॥ ೨೨

ತಪ್ಪದೆಂದರು ಋತ್ವಿಜರು ನೃಪ
ಕಲ್ಪಿತವಿದೆಂದರು ಸಭಾಸದ
ರೊಪ್ಪುವುದು ನಿನಗೆಂದರಾಭೂಸುರರು [1] ಪಾವಕನ ।
ಉಪ್ಪರವ ಮಾಣೆಂದನಿಂದ್ರನು
ನೊಪ್ಪವಾಯ್ತು ಮಗೆಂದರಮರರು
ತಪ್ಪುದೈ ಪೂರ್ಣಾಹುತಿಯ ಮಾಡೆಂದರವನಿಪಗೆ ॥ ೨೩

1 ಭೂದ್ವಿಜರು, ಕ ಖ.

ರಾಜನು ಯಜ್ಞವು ನೆರವೇರಲಿಲ್ಲವೆಂದು ಚಿಂತಿಸಲು ಋತ್ವಿಜರು ಬ್ರಹ್ಮ
ದೇವರ ಸಂಕಲ್ಪವೇ ಇದೆಂದು ಪೂರ್ವಕಥೆಯನ್ನು ಹೇಳುವಿಕೆ.

ಬಂದೆ ಮತವಾಯ್ತೆಲ್ಲರಿಗೆ ನಾ
ನೆಂದು ಫಲವೇನೊಬ್ಬನಾನಕ
ಟಂದಗೆಡಿಸಿದನಧ್ವರವ ನೀ ಭೂಸುರೋತ್ತಮನ ।
ನಂದನನು ಹಾ ಯೆನುತ ಭೂಪತಿ
ನೊಂದು ಸುಯ್ಯುತ್ತಿರಲು ಪೇಳಿದ
ರೊಂದು ಕಥೆಯನು ಋತ್ವಿಜರು ಕೋವಿದರು ಭೂಪತಿಗೆ ॥ ೨೪

ಅಮೃತಮಥನಾಂತರದಲಂದಾ
ಯಮರರಿಗೆ ತಾ ಹೇಳಿದನು ತನ್ನಲಿ
ಮಮತೆಯುಳ್ಳೊಡೆ ತಾಯ ಶಾಪವ ಮಾಣಿಸುವುದೆಂದು ।
ಸುಮತಿ ವಾಸುಕಿ ಬೇಡಿಕೊಳಲಂ
ದಮರರೈದಿದರಾತ ಸಹಿತಾ
ಕಮಲಭವನೋಲಗಕೆ ಬಿನ್ನಹಮಾಡಿದರು ಹದನ ॥ ೨೫

ಜೀಯ ಬಿನ್ನಹವನ್ನ ಲಾಲಿಸು
ತಾಯ ಶಾಪವನುರಗಪತಿಯಿದ
ಬೀಯ್ಯಮಾಡುವೆನೆಂದು ಜನಮೇಜಯನು ಮಖವೆರವ ।
ಕಾಯಲರಿದೆಮಗೀತನನು ಕೈ
ಗಾಯಬೇಹುದು ಜಲಧಿಮಥನಸ
ಹಾಯನನು ನಿಮ್ಮತ್ತಿಗಳೆಂದರು ಸುರರು ಕಮಲಜಗೆ ॥ ೨೬

ಎಂದೊಡಾತನು ಬೆದಱಬೇಡೆಲೆ
ಕಂದ ಕಲ್ಪಾಂತರ ಬದುಕು ಕುಲ
ನಂದನ ಜರತ್ಕಾರು ನಂದನನಭಯವೆನು ನಿಮಗೆ ।
ಕಂದ ಮಾಪ್ಪನು ಮಖಕೆ ತಡೆಯುವ
ನಿಂದ ಜನಿಸುವುದಂಜಬೇಡುರ
ಗೇಂದ್ರಕುಲಕೀವಿಪ್ರ ವರ್ಧನನೆಂದಬುಜಭವ ॥ ೨೭

ವೀರ ತಗೆ ಕೇಳಮಸಿಪಿತ್ತ ಮ
ಹೋರಗರ ಕುಲರಕ್ಷಕ ಜರ
ತ್ಕಾರುನಂದನನೀತನಧ್ವರಘಾತಕನು ಪಥಿಯ ।
ಪ್ರೇರಣೆ ಯದಲ್ಲದೆ ತಳವೆಡೆವ್ರ
ದಾರವೇಶವೆಲೆ ತಂದೆ ಹೋಗಲಿ
ಬೇಋಗೊಲೆ ಬೇಡೆಂದು ಸಂತೈಸಿದರು ಋತ್ವಿಜರು ॥ ೨೮

ಸರ್ಪಸಂವುತವಾಗಿ ಯಾಗಸಮಾಪ್ತಿ ಮಾಡಿ ಬಂದವರ ಪೂಜಿಸುವಿಕೆ.

ಸತ್ತವನಲಾ ವುರಿಯೊಳಗೆ ಹೊರ
ಳುತ್ತಲೈದನೆಯಾಜ್ಞೆ ಯನು ತಾ
ನುತ್ತರಿಸಲಳವಲ್ಲವೈ ದ್ವಿಜಮಂತ್ರಶಕ್ತಿಯನು ।
ಹೊತ್ತಿ ಹೋಗದ ಮುನ್ನ ಸೇ ಸಿ
ಸಿತ್ತ ವರವನು ಪಾಲಿಸನೆ ಭೂ
ಪೋತ್ತಮನು ನಸು ನಗುತ ನುಡಿದನು ವರಸದಸ್ಯರಿಗೆ ॥ ೨೯

ಮೌನಭಂಗವೆಮರಣ ಹೋಗಲಿ
ದೀನನನು ಕೊಲಲೇಕೆ ಪಿಪ್ರನ
ಸೂನುವನು ಮನ್ನಿಸಿದೆಸಿಷ್ಟಾತಿಥಿಯುಲಾ ತನಗೆ ।
ಸಿನಸಿತ್ತು ದಧೀಚಿ ಮುಖ್ಯಾದ
ಹಾನುಭಾವರು ಪಡೆದರಭಯ
ಸ್ಥಾನವನು ಮಿಂದಿದು ಮಹಾಸಂಪೂರ್ಣವಾಯ್ತೆಂದ ॥ ೩೦

ಮಾಡಿ ಪೂರ್ಣಾಹುತಿಯನೆನಲಾ
ತೋಡಿಯೊಳಗಿಸಿತಿಲ್ಲ ಸುರಪನ
ಜೋಡು ಮಾಡಲದೇಕೆ ಮಾತನು ಮನ್ನಿಸಿದೆ ಯೆನಲು ।
ಕೂಡೆ ಬೇಸಂದಾಮಹಾಜನ
ಕಾಡಮರನೇ ಕಲ್ಪತರು ದಯ
ಮಾಡುತಿಷ್ಟಾರ್ಥವನೆನುತಲಿರ್ದರು ಸುರಸ್ತೋಮ ॥ ೩೧

ಎಸಗಿದರು ಪೂರ್ಣಾಹುತಿಯ ನಾ
ಋಷಿವರರನು ಸರ್ವರನು ಸಂತ
ರ್ಪಿಸಿದನಿಷ್ಟಧನಪ್ರದಾನದಲಾತಪೋಧನರ |
ವಸುಧೆಯರಸನು ಮುದದಲವಭೃಥ
ದೊಸಗೆ ಮಿಗೆ ಮಜ್ಜನವ ಮಾಡಿದ
ನಸಮವಿಭವದಲಖಿಳಜನ ನಿಜಬಂಧುಜನ ಸಹಿತ || ೩೨

ತಕ್ಷಕನು ಬದುಕಿ ಹೋಗಲು ರಾಜನು ಆಸ್ತೀಕನನ್ನು ಸನ್ಮಾನಿಸುವಿಕೆ.

ಹೋ ಹೋ ಬದುಕಿದೆನೊಮ್ಮೆಗೆನ್ನಯ
ದೇಹ ವುಳಿದುದೆನುತ್ತ ವೀರಮ
ಹಾಹಿ ತಕ್ಷಕ ತೊಲಗಿದನು ಪಾವಕನ ಮುಖದಿಂದ |
ಬೇಹ ಧನವನು ಕೊಟ್ಟನವನಿಪ
ನಾಹುತಿಯ ಶಾಲೆಯಲಿ ವಿಘ್ನವೆ
ನೂಹಿಸಿದ ಬಿನ್ನಾಣಿಗಧಿಕಮನೋನುರಾಗದಲಿ || ೩೩

ಕಳುಹಿದನು ಕೈಮುಗಿದು ಮುನಿಸಂ
ಕುಳವನುಚಿತೋಕ್ತಿಯಲಿ ಮನ್ನಿಸಿ
ಬಲದಲಾಸ್ತೀಕನನಭೀಷ್ಟಧನಪ್ರದಾನದಲಿ |
ಒಲವೆ ಮೆಱೆಯುದಿರ್ರೈ ತಹುದು ಮೇ
ಲಲಘುಹಯಮೇಧವನು ಮಾಪ್ಪೆನು
ಕೆಳೆಯ ಋತ್ವಿಜನಾಗಬೇಕೆಂದವನನವನೀಶ || ೩೪

ತಂದೆ ನಿನ್ನವರಾವೆನುತ ಮುನಿ
ನಂದನನ ಕಳುಹಿದನು ಧರ್ಮದ
ಲಂದು ಧರೆಯನು ಪಾಲಿಸುತಲಿರ್ದನು ಮಹೀಪಾಲ |
ಸಂದ ಪಿತೃಪೈತಾಮಹರ ಪದ
ದಿಂದ ಹರಿಪದಭಕ್ತನೆನಿಸಿ ಮು
ಕುಂದದಾಸನು ಮಾಡಿದನು ರಾಜ್ಯವನು ಮನವೊಲಿದು || ೩೫

ಈ ರೀತಿ ಕೃತಕಾರ್ಯನಾಗಿ ಬಂದ ಆಸ್ತೀಕನನ್ನು ಶ್ಲಾಘಿಸಲು ಸಂತೋಷ ದಿಂದಿರುವಿಕೆ.

ಅತ್ತಲಾಸ್ತೀಕಾಖ್ಯನೈದಿದ
ನುತ್ತಮೋರಗರಾಜಮಂದಿರ
ದತ್ತ ಪರಿಜನ ವಿದುರುಗೊಳಲತ್ಯಧಿಕವಿಭವದಲಿ ।
ಎತ್ತುಗನ್ನಡಿ ಗಳಶವಾದ್ಯದ
ಮೊತ್ತದೊಳಗಿಕ್ಕೆಲದಿ ಪಾಡಲು
ಹೆತ್ತ ತಾಯ್ಗಣ್ಣಂದಿರಂಘ್ರಿಗೆ ನಮಿಸಿದನು ಮುನಿಪ ॥ ೩೬

ತೆಗೆದು ಬಿಗಿದಪ್ಪಿದನು ಹರುಷಾಂ
ಬುಗಳ ನಯನದ ತಳೆದ ಪುಳಕದ
ಹೊಗರ ಹೊಳಹಿನ ನಗೆ ಮೊಗದ ನಾಗೇಂದ್ರನೈತಂದು ।
ಬಗೆಯ ಬಯಕೆಯನಿತ್ತೆ ಮುನಿಮೌ
ಳಿಗಳ ರತ್ನವೆ ತನ್ನ ಹೃದಯದ
ದಗೆಯ ಡಾವರವಡಗಿತೆಂದರು ಹರಸಿ ಬಾಲಕನ ॥ ೩೭

ಬದುಕಿದೆವೆಲ್ಲೈ ತಂದೆ ನಾವಿಂ
ದುದಿಸಿದೆವೆಲ್ಲೈ ಪಾವಕನೊಳಗೆ
ಕುದಿವುತಿರ್ದೆವೆ ಯಂತ್ಯಕಾಲದ ಭಯಮಹಾಗ್ನಿಯಲಿ ।
ಉದಕಸುರಿಸಿದುದಾಯ್ತು [1] ತಂಗಿಯ
ಮದುವೆಯು ಫಲಿಸಿತೆಮ್ಮವೋಲಾ
ವುದಿತಭಾಗ್ಯರದಾರೆನು [2] ತ ಕೊಂಡಾಡಿದರು ಮುನಿಯ ॥ ೩೮

ಬೇಡು ಬೇಡೆಲೆ ಮಗನೆ ವರವನು
ಬೇಡು ಮೆಚ್ಚಿದೆವೆಮ್ಮ ವಂಶದ
ಕೇಡ ತಪ್ಪಿಸಿದಧಿಕಕರುಣಾನಿಧಿಯೆ ಗುಣನಿಧಿಯೆ ।

1 ಉದಿಸಿದುದುಪಟುವಾ ಕ, ಖ.   2 ದಾರುಭಾಪೆನುತ, ಕ. ಖ.

ನೋಡಲಪ್ರತಿಯಲ್ಲವೇ ನೀ
ಮಾಡಿದುಪಕೃತಿ ತಂದೆ ಬಯಕೆಯ
ಬೇಡಿಕೊಳ್ಳು ತಡೆಯದಿರು ನೀನೆಂದರನುಪಮಗೆ ॥ ೩೯

ಈ ಕಥೆಯನ್ನು ಕೇಳಿ ಹೇಳಿದವರಿಗೆ ಸರ್ಪಗಳ ಬಾಧೆ ಕೂಡದೆಂದು ಆಸ್ತೀಕನಪ್ಪಣೆ.

ಆವನಿದನೋದುವನು ಕೇಳುವ
ನಾವನಿದ ಮಚ್ಚರಿತವನು ಸಂ
ಭಾವಿಸುವ ದಿನದಲುದಯಾಸ್ತಮಯದೊಳಗವರುಗಳ [1] ।
ನೀವು ನಮ್ಮಯ ಕುಲಜರೊಳಗಾ
ರಾವರಾಗಲಿ ಮುಟ್ಟಲಾಗದು
ಕಾವುದಾಪುಣ್ಯಾತ್ಮರನು ನೀವೆಂದನಾಮುನಿಪ ॥ ೪೦

ಐಸಲೇ ನೀ ಬೇಡಿಕೊಂಡುದಿ
ದೇಸು ಘನವೆಲೆ ತಂದೆ ನೆನೆವರ
ದೇಶದೊಳಗಿದ್ದವರ ಮುಟ್ಟುವ ಮಾತದೇಕೆನುತ ।
ಸಾಸಿಗನನಪ್ಪಿದರು ಹರುಷಾ
ವೇಶದಲಿ ಮನಮುಬ್ಬಿ ಘನಪರಿ
ತೋಷದಲಿ ಕೊಂಡಾಡಿದರು ಮುನಿವರಕುಮಾರಕನ ॥ ೪೧

ವರಜರತ್ಕಾರುವಿಗೆ ನಾಗೇ
ಶ್ವರಿಜರತ್ಕಾರುವಿನಲುದಿಸಿದ
ಪರಮಋಷಿ ಯಾಸ್ತೀಕನುನ್ನತಕೀರ್ತಿ ಸತ್ಯನಿಧಿ ।
ಉರಗನತ್ತಣಿವಹಿಯ ಭಯವಿ
ಲ್ಲುರುತರದಿ ರಕ್ಷಿಪುದು ಪಠಿಸುವ
ನರರಿಗಿಲ್ಲಹಿಬಾಧೆ ಯೆಂದನು ಶೌನಕಗೆ ಸೂತ ॥ ೪೨

---

1 ದಯಮಾಣಾಸ್ತಮಾಯಸಮಯದಲ್ಲಿ, ಕ. ಖ.

ಏನನೆಂಬೆನು ಪನ್ನಗರ ಸ
ನ್ಮಾನವನು ಸುಖದಿಂದ ತೆಂಗಿಯು
ಸೂಸುವನು ಮುಂದಿಟ್ಟುಕೊಂಡು ಮಹಾನುಭಾವನನು |
ಜ್ಞಾನವಂತರವೋಲು ಭಾವವ
ನೇನುವನು ತಾವೆಖಿಯುದಾನಂ
ದಾನುಭವದಲಿ ಚರಿಸುತಿರ್ದರು ಧರ್ಮನಿಷ್ಠೆಯಲಿ ‖ ೪೩

ಫಲಕಥನ.

ಇದು ಮಹಾಮಂಗಳಮಹೋದಯ
ವಿದು ಮಹಾಯುಃಕೀರ್ತಿವರ್ಧನ
ವಿದು ವಿಷಯುಭಯುರೋಗದಾರಿದ್ರ್ಯಾದಿದುಃಖಹರ |
ಇದನು ಶೌನಕ ಕೇಳು ಸಂಕ್ಷೇ
ಪದಲಿ ಹೇಳಿದೆನಿನ್ನು ತಾನಾ
ವುದನು ನಿನಗಭಿವರ್ಣಿಸುವುದೆಂದಖುಹಿದನು ಸೂತ ‖ ೪೪

ಲೇಸನಾಡಿದೆ ಸೂತ ನೀನವ
ನೀಶ ಜನಮೇಜಯಗೆ ಮುನಿಯುಂ
ದೈಸೆ ವೈಶಂಪಾಯನನೊರೆದ ಭಾರತಾಮೃತವ [1] |
ವಾಸುದೇವನ ಪುಣ್ಯಕೀರ್ತನ
ವಾ ಸಭಾಗ್ಯರ ಪಾಂಡವರ ಕಥೆ
ಯೇಸಹುದದನು ವರ್ಣಿಪುದೆಮಗೆ ಪುಣ್ಯಕಥನವನು ‖ ೪೫

ಮನ್ನಿಸಿದ ನಾಸೂತನವ ಸಂ
ಪನ್ನ ಗುಣನಿಧಿ ಪಾವನಕಥಾ
ಕರ್ಣನ ಸುಕೌತುಕರಸಾಸ್ವಾದನಸುಲಂಪಟರ |

---

1 ನುಸುರಿದಭಾರತವನಾದ್ಯಂತವನುತವುಗೆ, ಕ. ಖ.

ಧನ್ಯನಾದೆನೆನುತ್ತ ನೆನೆದನು
ತನ್ನ ಮನದಲಿ ಪರಮಕಾರು
ಣ್ಯಾರ್ಣವನ ನಿತ್ಯಾತ್ಮನಾರಾಯಣನ ಶ್ರೀಪದವ ‖ ೪೬

ಕರಿವದನವಾಗ್ದೇವಿನಾದದ
ಪರಮವೇದವ್ಯಾಸಷಣ್ಮುಖ
ಗಿರಿಜೆಸುರರಧಿನಾಥಸನಕಾದಿಗಳ ದಿಗಧಿಪರ ।
ಹರಿಹರರ ಕಮಲಜನ ರವಿಶಶಿ
ಧರಣಿಶುಕವಾಲ್ಮೀಕಿಗಳ ವರ
ಚರಣಗಳ ನೆನೆವುತ್ತ ಭಾರತಕಥೆಯ ಹೇಳಿದನು ‖ ೪೭

ಹದಿನೆಂಟನೆಯ ಸಂಧಿ ಮುಗಿದುದು.